ಶ್ರೀ ಭಗವಜ್ಜಿನಸೇನಾಚಾರ್ಯ — ಗುಣಭದ್ರಾಚಾರ್ಯ ವಿರಚಿತ

# ಮಹಾಪುರಾಣ

ಸಂಪುಟ ೨
ಪೂರ್ವಪುರಾಣ — ೫ ಪರ್ವಗಳು
ಉತ್ತರಪುರಾಣ — ೩೦ ಪರ್ವಗಳು

ಸಂಪಾದಕರು ಮತ್ತು ಅನುವಾದಕರು
ಶ್ರೀಮಾನ್ ಎತ್ತೂರು ಶಾಂತಿರಾಜಶಾಸ್ತ್ರಿಗಳವರು

ಪ್ರಕಾಶಕರು
ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್
ಬೆಂಗಳೂರು – ೫೬೦ ೦೮೨
(ದೂರವಾಣಿ : ೬೪ ೯೪ ೬೧)
೧೯೯೩

## MAHAPURANA

by **Bhagavajjinasenacharya & Gunabhadracharya** – Vol - 2 Original text with prose rendered and edited in Kannada by : **Panditaratna A. Shanthiraja Shastry , Mysore.**

Published by : **Panditaratna A. Shanthiraja Shastry Trust,** 369, 42nd Cross, 8th Block, Jayanagar, Bangalore – 560 082

Third Edition – February 1993

PP (xvi + 712) 1500 copies , Price : Rs. 1500/– (for Two Volumes)

No. of Colour Photographs : 36 & No. of pages : 30



ತೃತೀಯ ಮುದ್ರಣ : ಫೆಬ್ರವರಿ ೧೯೯೩
೧೫೦೦ ಪ್ರತಿಗಳು

ಬೆಲೆ : ರೂ. ೧೫೦೦/–
ಒಂದು ಸಾವಿರದ ಐದುನೂರು ರೂಪಾಯಿಗಳು (ಎರಡು ಸಂಪುಟಗಳಿಗೆ)

ರಕ್ಷಾಪುಟ ವಿನ್ಯಾಸ : ಶ್ರೀ ಆರ್. ಎಸ್. ಪದ್ಮರಾಜ್, ಬಿಂದು ಅಡ್ವರ್‌ಟೈಸರ್ಸ್, ಬೆಂಗಳೂರು

ಅಕ್ಷರ ಸಂಯೋಜನೆ : ಸುಧಾ ಮುದ್ರಣ, ಬಸವನಗುಡಿ, ಬೆಂಗಳೂರು – ೫೬೦ ೦೦೪

ಆಫ್‌ಸೆಟ್ ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ಹೊಸತರಗುಪೇಟೆ, ಬೆಂಗಳೂರು – ೫೬೦ ೦೦೨

ಬೈಂಡ್ ಮಾಡಿದವರು : ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು – ೫೬೦ ೦೫೩

# ಗ್ರಂಥ ಪ್ರವೇಶ

**ಮಹಾಪುರಾಣ**ವು ಮಹಾಸಾಗರದಂತೆ ಗಾತ್ರದಲ್ಲಿ ವಿಶಾಲವಾಗಿದೆ. ಮಹಾಸಾಗರದಲ್ಲಿ ಅಮೂಲ್ಯ ಮುತ್ತು ರತ್ನಗಳಿರುವಂತೆ **ಮಹಾಪುರಾಣ**ದಲ್ಲಿಯೂ ರತ್ನತ್ರಯಗಳ ವರ್ಣನೆ ಹಾಗೂ ನುಡಿಮುತ್ತುಗಳಿವೆ. ವಿಚಾರದಲ್ಲಿ ಅಗಾಧವಾಗಿದೆ. **ಮಹಾಪುರಾಣ**ದಲ್ಲಿ ಸರ್ವಸ್ವವೂ ಇದೆ.

ಇದುವರೆಗೂ **ಮಹಾಪುರಾಣ**ವನ್ನು ವ್ಯಕ್ತಿ ಚರಿತ್ರೆಯಂತೆ ಘಟನೆಗಳನ್ನು ಓದಿ, ಕೇಳಿ ಸಂತೋಷಪಡುತ್ತಿದ್ದರು. ಆದರೆ, **ಮಹಾಪುರಾಣ**ದಲ್ಲಿ ಸಂಶೋಧನೆಗೆ ವಿಪುಲವಾದ ಅವಕಾಶವಿದ್ದು, ನೂರಾರು ವಿಷಯಗಳನ್ನು ಪ್ರತ್ಯೇಕಿಸಿ, ಸಂಶೋಧನೆ ಮಾಡಬಹುದಾಗಿದೆ. ಸ್ವರ್ಗ–ನರಕ, ಮಂತ್ರ–ತಂತ್ರ, ಪೂಜೆ, ವೈರಾಗ್ಯ, ಸನ್ಯಾಸ, ತಪಸ್ಸು, ಧ್ಯಾನ, ಯೋಗ, ಕರ್ಮಸಿದ್ಧಾಂತ, ಪುನರ್ಜನ್ಮ, ಮೋಕ್ಷ, ಹಿಂಸೆ–ಅಹಿಂಸೆ, ವ್ಯಾಕರಣ, ಛಂದಸ್ಸು, ಕಾವ್ಯ, ತರ್ಕ, ನ್ಯಾಯ, ನೀತಿ, ಜ್ಞಾನಮೀಮಾಂಸೆ, ರಾಜನೀತಿ, ಯುದ್ಧನೀತಿ, ಅಸ್ತ್ರ–ಶಸ್ತ್ರ, ಸಮತಾವಾದ, ಗಜಶಾಸ್ತ್ರ, ವ್ಯಾಪಾರ, ವಿದೇಶನೀತಿ, ಭೂಗೋಳ, ನಗರರಚನೆ, ಗ್ರಹ, ನಕ್ಷತ್ರ, ವನಸ್ಪತಿ, ಜ್ಯೋತಿಷ್ಯ, ವಿಜ್ಞಾನ, ಗಣಿತ, ವೃಕ್ಷ,ಫಲ, ಪುಷ್ಪ, ಆಯುರ್ವೇದ, ಧಾತುವಿಜ್ಞಾನ, ನವರತ್ನ, ಕೃಷಿ, ದ್ವೀಪ, ಸಮುದ್ರ, ನೃತ್ಯ, ವಾಸ್ತುಸಾರ, ಕಲೆ, ಸಂಗೀತ, ವಾದ್ಯ, ಸ್ತ್ರೀ, ವಸ್ತ್ರವಿನ್ಯಾಸ, ಕೇಶವಿನ್ಯಾಸ, ಶರೀರದ ಲಕ್ಷಣ, ಕುಟುಂಬನೀತಿ, ಸಮಾಜನೀತಿ, ಕಾಮಶಾಸ್ತ್ರ, ಮಾತೃವಾತ್ಸಲ್ಯ, ಪಿತೃಭಕ್ತಿ, ಗುರುಭಕ್ತಿ, ಇತ್ಯಾದಿ ವಿಷಯಗಳನ್ನು ಪ್ರತ್ಯೇಕವಾಗಿ ಅಧ್ಯಯನ, ಸಂಶೋಧನೆ ಮಾಡುವವರಿಗೆ ವೈಜ್ಞಾನಿಕವಾಗಿ ವಿಷಯಗಳ ವರ್ಣನೆ ಇದರಲ್ಲಿ ದೊರೆಯುತ್ತದೆ.

ಈ ಗ್ರಂಥದಲ್ಲಿ ಪ್ರತಿಯೊಂದು ಶ್ಲೋಕವನ್ನು ಪ್ರತ್ಯೇಕವಾಗಿ ಅರ್ಥಸಹಿತ ಪ್ರಕಟಿಸಿರುವುದು ಸಂಶೋಧನೆಗೆ ಖಜಾನೆಯ ಬಾಗಿಲು ತೆರೆದಿರುವಂತೆ ಆಗಿದೆ. **ಮಹಾಪುರಾಣ**ವು ಒಂದು ಶಬ್ದಕೋಶದಂತಿದೆ. ಪ್ರತಿಯೊಂದು ಪದಗಳ ವಿವಿಧ ರೀತಿಯ ಅರ್ಥವನ್ನು ಗಮನಿಸಿದಾಗ ಇದೊಂದು ಸಂಸ್ಕೃತದ ವಿಶ್ವಕೋಶ ಎಂದರೆ ತಪ್ಪಾಗಲಾರದು. ಧರ್ಮ – ಅರ್ಥ – ಕಾಮ –ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೆ ಆಕರವಾಗಿರುವ ಗ್ರಂಥವಾಗಿದೆ. ಹಿಂದೆ, ಇಂದು ಮತ್ತು ಮುಂದೆಯೂ ಮಾನವ ಸಮಾಜಕ್ಕೆ ಅಹಿಂಸೆಯ ಮೂಲಕ ಶಾಂತಿಯ ಸಂದೇಶವನ್ನು ನೀಡುವ ಮಹಾ ಗ್ರಂಥವಾಗಿದೆ.

ಇದು ವಿಜ್ಞಾನಯುಗ, ಇಂದಿನ ಹಾಗೂ ಮುಂದಿನ ಪೀಳಿಗೆಗೆ ಇದೊಂದು ಕಾಲ್ಪನಿಕ ಪುರಾಣ ಮತ್ತು ಕಥೆಗಳಿಂದ ಕೂಡಿದ, ಮನರಂಜನೆಯ ಗ್ರಂಥವೆಂದು ಅಥವಾ ಧಾರ್ಮಿಕವಾಗಿ ಈ ಗ್ರಂಥವನ್ನು ಓದಿದರೆ ಪುಣ್ಯ ಲಭಿಸುತ್ತದೆ ಎಂದು ಹೇಳುವ ಬದಲು ಇದರಲ್ಲಿರುವ ವೈಜ್ಞಾನಿಕ ಸತ್ಯ ಸಂಗತಿಗಳನ್ನು ಇಂದಿನ ಜ್ವಲಂತ ಸಮಸ್ಯೆಗಳಾದ ವಿಶ್ವಶಾಂತಿ, ಪರಿಸರ ಸಂರಕ್ಷಣೆ, ವಿಶ್ವಭ್ರಾತೃತ್ವ, ಅಹಿಂಸೆ, ನಿಶ್ಶಸ್ತ್ರೀಕರಣಗಳಿಗೆ **ಮಹಾಪುರಾಣ**ವು ಮಾರ್ಗದರ್ಶನವೀಯಬಲ್ಲದೇ ಎಂಬುದನ್ನು ಪ್ರಯೋಗಾತ್ಮಕ ವಾಗಿ ಸಂಶೋಧನೆಮಾಡಲು ಯತ್ನಿಸುವುದು ನಮ್ಮೆಲ್ಲರ ಕರ್ತವ್ಯವೆಂದು ನಾವು ಭಾವಿಸುತ್ತೇವೆ.

**ಮಹಾಪುರಾಣ**ದಲ್ಲಿ ಸಂಪೂರ್ಣ ಪಾಂಡಿತ್ಯ ಪಡೆದವರು ಅತೀ ವಿರಳ. ಅಂತಹ ವಿರಳ ವ್ಯಕ್ತಿತ್ವದ ನಿಧಿಯಾದ ಸ್ವರ್ಗೀಯ ಶ್ರೀ ಎ. ಶಾಂತಿರಾಜ ಶಾಸ್ತ್ರಿಗಳವರಿಗೆ ಕನ್ನಡ ಜನತೆಯ ನಮನ. ಅವರಿಗೆ ಮೈಸೂರಿನ ಮಹಾರಾಜರು **''ಪಂಡಿತರತ್ನ''** ಪ್ರಶಸ್ತಿ ನೀಡಿ ಗೌರವಿಸಿರುವುದು ರಾಷ್ಟ್ರ ಪ್ರಶಸ್ತಿಯಂತೆ, ಭಾರತೀಯ ಜ್ಞಾನಪೀಠ ಪ್ರಶಸ್ತಿಯಂತೆ ಶ್ರೇಷ್ಠವಾದುದೆಂದರೆ ಅತಿಶಯೋಕ್ತಿಯೇನಲ್ಲ. ಕನ್ನಡಿಗರ ಪ್ರತಿನಿಧಿ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಸನ್ಮಾನಿಸಿರುವುದು ಅವರ ಅಗಾಧ ಪಾಂಡಿತ್ಯಕ್ಕೆ ಸಂದ ರಾಷ್ಟ್ರಗೌರವವಾಗಿದೆ.

ಈ ಗ್ರಂಥ ಅತ್ಯಂತ ಸುಂದರವಾಗಿ ಪ್ರಕಟವಾಗಿದೆ, ಈ ಹಿಂದೆ ಪ್ರಕಟಿಸಿದ ಆವೃತ್ತಿಗಳಿಗಿಂತ ಇದು ಬಹಳವಾಗಿ ವಿಭಿನ್ನ ರೀತಿಯದ್ದಾಗಿದೆ. ಈ ಸ್ತುತ್ಯ ಪ್ರಯತ್ನ ಮಾಡಿದ್ದಕ್ಕಾಗಿ ಸ್ವರ್ಗೀಯ ಶ್ರೀ ಎ. ಶಾಂತಿರಾಜ ಶಾಸ್ತ್ರಿಗಳ ಸುಪುತ್ರರಾದ ಶ್ರೀ ಎಸ್. ಜಿತೇಂದ್ರ ಕುಮಾರ್ ಅವರಿಗೆ ಎಷ್ಟು ಕೃತಜ್ಞತೆ ಹೇಳಿದರೂ ಕಡಿಮೆ. ಈ ಗ್ರಂಥದ ಪ್ರಕಾಶನಕ್ಕಾಗಿ ಪ್ರಯತ್ನಿಸಿದ ಶಾಸ್ತ್ರಿಗಳ ಎಲ್ಲ ಸುಪುತ್ರರಿಗೂ ಹಾಗೂ ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್, ಮೈಸೂರು –ಇದರ ಎಲ್ಲ ಧರ್ಮದರ್ಶಿಗಳಿಗೂ ಶುಭಾಶೀರ್ವಾದಗಳು.

**ಜಗದ್ಗುರು ಕರ್ಮಯೋಗಿ,**
**ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ,**
**ಶ್ರವಣಬೆಳಗೊಳ ಮಠ**

## ಮಂಗಲಕರ ಮಹಾಪುರಾಣ

ಪುರಾಣಮೃಷಿಭಿಃ ಪ್ರೋಕ್ತಂ ಪ್ರಮಾಣಂ ಸೂಕ್ತಮಾಂಜಸಂ ।
ತತಃ ಶ್ರದ್ಧೇಯಮಧ್ಯೇಯಂ ಧ್ಯೇಯಂ ಶ್ರೇಯೋರ್ಥಿನಾಮಿದಮ್ ॥
ಇದಂ ಪುಣ್ಯಮಿದಂ ಪೂತಮಿದಂ ಮಾಂಗಲ್ಯಮುತ್ತಮಂ ।
ಇದಮಾಯುಷ್ಯಮಗ್ರ್ಯಂ ಚ ಯಶಸ್ಯಂ ಸ್ವರ್ಗಮೇವ ಚ ॥

ಇದಮರ್ಚಯತಾಂ ಶಾಂತಿಸ್ತುಷ್ಟಿಃ ಪುಷ್ಟಿಶ್ಚ ಪೃಚ್ಛತಾಂ ।
ಪಠತಾಂ ಕ್ಷೇಮಮಾರೋಗ್ಯಂ ಶೃಣ್ವತಾಂ ಕರ್ಮನಿರ್ಜರಾ ॥
ಇತೋ ದುಃಸ್ವಪ್ನನಿರ್ನಾಶಃ ಸುಸ್ವಪ್ನಸ್ಯಾತಿರೇವ ಚ ।
ಇತೋಭೀಷ್ಟಫಲವ್ಯಕ್ತಿರ್ನಿಮಿತ್ತಮಭಿಪಶ್ಯತಾಮ್ ॥

– ಈ ಪುರಾಣವನ್ನು ಋಷಿಗಳು ಹೇಳಿರುವುದರಿಂದ ಇದು ಪ್ರಮಾಣವೂ ಸಂಪೂರ್ಣವಾಗಿ ಸತ್ಯವೂ ಆಗಿರುತ್ತದೆ. ಆದುದರಿಂದ ಆತ್ಮಕಲ್ಯಾಣವನ್ನಿಚ್ಛಿಸುವವರು ಇದನ್ನು ನಂಬಬೇಕು; ಅಧ್ಯಯನಮಾಡಬೇಕು; ಧ್ಯಾನಿಸಬೇಕು. ಈ ಪುರಾಣವು ಪುಣ್ಯದಾಯಕವೂ ಪವಿತ್ರವೂ ಉತ್ತಮವಾದ ಮಂಗಲಸ್ವರೂಪವೂ ಆಯುಷ್ಯವರ್ಧಕವೂ ಕೀರ್ತಿಯನ್ನುಂಟುಮಾಡುವುದೂ ಸ್ವರ್ಗದಾಯಕವೂ ಆಗಿರುತ್ತದೆ. ಈ ಪುರಾಣವನ್ನು ಪೂಜಿಸುವವರಿಗೆ ದುಃಖಶಾಂತಿಯೂ ಸಂದೇಹ ನಿವಾರಣೆಗೋಸುಗ ಪ್ರಶ್ನೆಮಾಡುವವರಿಗೆ ಆನಂದವೂ ಪುಷ್ಟಿ–ಜ್ಞಾನವೃದ್ಧಿಯೂ ಓದುವವರಿಗೆ ಕ್ಷೇಮವೂ ಆರೋಗ್ಯವೂ ಕೇಳುವವರಿಗೆ ಕರ್ಮನಿರ್ಜರೆಯೂ ಆಗುವುವು. ಈ ಪುರಾಣಪೂಜನ, ಪೃಚ್ಛನಾ, ಪಠನ, ಶ್ರವಣಾದಿಗಳಿಂದ ದುಃಸ್ವಪ್ನಗಳ ನಾಶವೂ ಸುಸ್ವಪ್ನಗಳವೃದ್ಧಿಯೂ ನಿಮಿತ್ತ–ಶಕುನವನ್ನು ನೋಡುವವರಿಗೆ ಇಷ್ಟಫಲ(ಶುಭಾಶುಭ ಶಕುನಫಲ) ಪ್ರಾಪ್ತಿಯೂ ಉಂಟಾಗುವುವು.'' ಇಂತಹ ಪವಿತ್ರಗ್ರಂಥವು ಮನೆಯಲ್ಲಿರುವುದು ಮಂಗಲಕರವೆಂದು ಭಾವಿಸಿ ಅನೇಕರು ಇದನ್ನು ತಮ್ಮ ಮನೆಗಳಲ್ಲಿಟ್ಟುಕೊಂಡು ಪೂಜಿಸುತ್ತಿರುವರು.

# ಮುನ್ನುಡಿ

**ಪಾಪಮಿದು ಪುಣ್ಯಮಿದು ಹಿತ**
**ರೂಪಮಿದು ಹಿತಪ್ರಕಾರಮಿದು ಸುಖಮಿದು ದುಃ**
**ಖೋಪಾತ್ತಮಿದೆಂದಱಿ ಪುಗಾ**
**ಮಾ ಪರಮಕವಿ ಪ್ರಧಾನರಾ ಕಾವ್ಯಂಗಳ್**

ಕವಿರಾಜಮಾರ್ಗಕಾರನ ಅಥವಾ ನೃಪತುಂಗನ ಈ ಕಂದಪದ್ಯ ಮಹಾಪುರಾಣವನ್ನು ಮತ್ತು ಜಿನಸೇನಾಚಾರ್ಯರನ್ನು ಕುರಿತು ರಚಿಸಿದ್ದೆಂದೇ ಹೇಳಬಹುದಾಗಿದೆ. ಈ ಮಹಾಪುರಾಣದ ಮಹತ್ವಕ್ಕೆ, ಔನ್ನತ್ಯಕ್ಕೆ ಹಾಗೂ ಶ್ರೇಷ್ಠತೆಗೆ ಅನ್ಯವ್ಯಾಖ್ಯಾನವಾಗಲಿ, ಅನ್ಯಪ್ರಮಾಣವಾಗಲಿ ಅನಗತ್ಯ. 'ಇಂದ್ರಪೂಜೆ, ಭುವನಸ್ತುತಮಪ್ಪನೆಗಟ್ಟೆ, ಮುಕ್ತಿ ಸಂಭವಿಸುವ ಲಾಭಂ ... ಜಿನೇಂದ್ರ ಸ್ತುತಿಯಿಂದೆ ತಾಮೆ ಸಾರವೆ' ಎಂಬ ಪಂಪನ ಮಾತುಗಳೂ ಈ ಮಹಾಕೃತಿಗೆ ಅನ್ವಯವಾಗುವಂತಿವೆ.

ರಾಮಾಯಣ, ಮಹಾಭಾರತ, ಭಾಗವತ, ಬೃಹತ್ಕಥಾಕೋಶಗಳಂತೆ ಮಹಾಪುರಾಣವೂ ಕವಿಗಳ ಕಲ್ಪತರುವಾಗಿದೆ, ಕೈವೊಕ್ಕ ನಿಧಿಯಾಗಿದೆ, ಭಾರತೀಯ ಭಾಷಾ ಸಾಹಿತ್ಯಗಳ ಅಕ್ಷಯ ಭಂಡಾರವಾಗಿದೆ. ಆದರಿಂದ ನಿರಂತರ ಸ್ಫೂರ್ತಿ, ಪ್ರೇರಣೆ, ಸತ್ತ್ವಗಳನ್ನು ಪಡೆಯದ ದೇಶಭಾಷೆಯೇ ಇಲ್ಲ. ಭಾರತೀಯ ಸಂಸ್ಕೃತಿಯ ವಿಕಾಸದಲ್ಲಿ, ಆದರ ಶ್ರೀಮಂತಿಕೆಯ ಮತ್ತು ವೈಭವೋನ್ನತಿಯ ಸಾಧನೆಯಲ್ಲಿ ಈ ಅಮರ ಕೃತಿಯ ಪಾತ್ರ ಅಸಾಮಾನ್ಯವಾದದ್ದು. ಇದು ತೀರ್ಥಂಕರರ ಅವತಾರಲೀಲೆಯ ಮತ್ತು ನಿತ್ಯಾವಾಸದ ಕ್ಷೇತ್ರವಾಗಿದ್ದು, ಸಾಧುಸಂತರ, ಸಾಧಕರ ಹಾಗೂ ಭಾವುಕರ ಅಪೂರ್ವ ಅವಿನಾಶಿ ಯಾತ್ರಾಕೇಂದ್ರವಾಗಿದೆ. ಭರತ ಬಾಹುಬಲಿಯರಂಥ ತ್ರಿಲೋಕವಂದ್ಯ ಮಹಾಪುರುಷರ ಆಡುಂಬೊಲವಾಗಿದೆ ಈ ಮಹಾಗ್ರಂಥ.

ಭಗವಜ್ಜಿನಸೇನಾಚಾರ್ಯರಿಂದ ರಚಿತವಾದ ಪೂರ್ವಪುರಾಣ ಮತ್ತು ಅವರ ಶಿಷ್ಯರಾದ ಶ್ರೀ ಗುಣಭದ್ರಾಚಾರ್ಯರಿಂದ ಮುಕ್ತಾಯಗೊಂಡ ಉತ್ತರಪುರಾಣಗಳೆರಡೂ ಸೇರಿ 'ಮಹಾಪುರಾಣ'ವೆಂದು ಖ್ಯಾತಿ ಪಡೆದು, ಸುಮಾರು ಹನ್ನೊಂದು ಶತಮಾನಗಳಿಗೂ ಮಿಕ್ಕಿದ ಕಾಲದಿಂದ ಭರತಖಂಡದಲ್ಲಿ ಧಾರ್ಮಿಕ ಸಂಪತ್ತನ್ನು ಪೋಷಿಸುತ್ತಿವೆ. ಜೈನಧರ್ಮದ ಪ್ರಕ್ರಿಯೆಗಳು ಮತ್ತು ತತ್ತ್ವಗಳು ಇದರಲ್ಲಿ ಉಲ್ಲೇಖಗೊಂಡಿರುವುದರಿಂದ ಇದೊಂದು ಮತೀಯ ಗ್ರಂಥವೆಂದು ತೋರಿ ಜೈನೇತರರ ನಿರ್ಲಕ್ಷ್ಯಕ್ಕೆ ಗುರಿಯಾಗುವ ಸಂಭವವುಂಟು. ಇದು ವೇದೋಪನಿಷತ್ತು ರಾಮಾಯಣ ಭಾರತ ಭಾಗವತಗಳ ನಾಡಾದ ಭರತಖಂಡದಲ್ಲಿಯೇ ಜನ್ಮವೆತ್ತಿ ವಿಕಾಸಗೊಂಡ ಕಾರಣದಿಂದಾಗಿ ಜೈನಧರ್ಮ ಭಾರತೀಯ ಧರ್ಮ, ಸರ್ವಭಾರತೀಯರ ಧರ್ಮ ಎಂದು ಹೇಳಿದರೆ ತಪ್ಪಾಗಲಾರದು. ಜಗತ್ತಿನ ಎಲ್ಲ ಧರ್ಮಗಳ ಉತ್ತಮಾಂಶಗಳನ್ನಿಲ್ಲಿ ಗುರುತಿಸುವ ಸಾಧ್ಯತೆಯಿದೆ. ಅಹಿಂಸಾ ಸಂದೇಶವನ್ನು ಜಗತ್ತಿಗೆ ನೀಡಿದ ಶ್ರೇಯಸ್ಸು ಮೊತ್ತಮೊದಲು ಜೈನಧರ್ಮಕ್ಕೆ ಸಲ್ಲಬೇಕಾಗಿದೆ. ತೀರ್ಥಂಕರರು ಇಡೀ ಜಗತ್ತಿಗೆ ಬೆಳಕು ನೀಡುವ ಸೂರ್ಯರಾಗಿದ್ದಾರೆ. ಜಗತ್ತಿನ ಸಾಹಿತ್ಯದಲ್ಲಿಯೇ ಭರತ ಬಾಹುಬಲಿಯರಂಥ ದೇವಮಾನವರು ಅಪರೂಪ; ಇಲ್ಲವೆಂದರೂ ಸಲ್ಲುತ್ತದೆ; ಅವರಿಲ್ಲದ ಜಗತ್ತು, ವಿಶೇಷವಾಗಿ ಭಾರತ ಕಡುರಿಕ್ತವಾಗುತ್ತದೆಂದೇ ಹೇಳಬೇಕಾಗುತ್ತವೆ. ಇಲ್ಲಿ ಬರುವ ಶಲಾಕಾಪುರುಷರು ಋತುಶಕ್ತಿಯ ಸಾಂಕೇತಿಕ ಪ್ರತಿಮೆಗಳಾಗಿ ಸರ್ವಾರಾಧ್ಯರಾಗಿದ್ದಾರೆ ; ಬಾಹ್ಯ ಪ್ರಕ್ರಿಯೆಗಳಿಂದ ಮುಕ್ತವಾದ ಧರ್ಮತತ್ತ್ವಗಳ ಒಳತಿರುಳು ಸರ್ವರ ಉಪಾಸನೆಗೆ ಯೋಗ್ಯವಾಗಿದೆ.

ಈಗ ಭರತಖಂಡದ ಐಕ್ಯಕ್ಕೆ, ಆದರ ಏಳ್ಗೆಗೆ ಬೇಕಾದ್ದು ಶ್ರೀ ರಾಮಕೃಷ್ಣ ಪರಮಹಂಸ ಪ್ರಣೀತ ಸರ್ವಧರ್ಮ ಸಮನ್ವಯ ಭಾವನೆ. ಸರ್ವಧರ್ಮಗಳ ಉತ್ತಮಾಂಶಗಳನ್ನು ಮಾನವ ತನ್ನ ಜೀವನದಲ್ಲಿ ಅಳವಡಿಸಿಕೊಂಡಾಗಲೇ ಜಗತ್ತಿನಲ್ಲಿ ಶಾಂತಿಸ್ಥಾಪನೆ ಸಾಧ್ಯವಾಗುತ್ತದೆ. ಭಾರತೀಯರಿಗಂತೂ ಇಂಥ ಸಾಧನೆ ಅನಿವಾರ್ಯ.

ಸಂಸ್ಕೃತ ಮತ್ತು ಸಂಸ್ಕೃತ ಸಾಹಿತ್ಯ ದೇಶಭಾಷೆಗಳ ಮೂಲಕ ಬದುಕಬೇಕಾಗಿದೆಯೆಂದು ಡಿವಿಜಿ ಎಂದೋ ಹೇಳಿದ್ದುಂಟು. ಮಹಾಪುರಾಣದಂತ ದಿವ್ಯಗ್ರಂಥ ರಾಷ್ಟ್ರದ ಮೂಲೆಮೂಲೆಯಲ್ಲಿ ಪಸರಿಸಿ, ಶ್ರೀ ಸಾಮಾನ್ಯನ ಮನವನ್ನು

ಪ್ರವೇಶಿಸಿದಾಗಲೇ ಅದಕ್ಕೆ ಸಾರ್ಥಕತೆ; ಭಾಷಾಂತರದ ಮೂಲಕವೇ ಅದು ಸಾಧ್ಯ. ಪಂಪರನ್ನಾದಿ ಮಹಾಕವಿಗಳು ಆ ಮಹಾರಣ್ಯದಿಂದ ತಮಗೆ ಬೇಕಾದ ಸಸಿಗಳನ್ನು ತಂದು ಕನ್ನಡದ ಉದ್ಯಾನವನ್ನು ಶೃಂಗಾರಗೊಳಿಸಿದ್ದಾರೆ, ಶ್ರೀಮಂತಗೊಳಿಸಿದ್ದಾರೆ, ನಿಜ. ಇಂಥ ಕೃತಿ ಎಲ್ಲ ದೇಶಭಾಷೆಗಳಲ್ಲಿ ಅವತರಿಸಿದಾಗ ಮಾತ್ರ, ಅದರ ಪ್ರಯೋಜನ ಶತಾಧಿಕವಾಗುತ್ತದೆ; ನೂತನ ಸಂತಾನದ ಜತೆಗೆ, ಸಂಶೋಧನೆ ಮತ್ತು ತೌಲನಿಕ ವ್ಯಾಸಂಗ ಸಾಧ್ಯವಾಗುತ್ತದೆ. ಸುಸಂಸ್ಕೃತರೂ, ಬಹುಶ್ರುತರೂ, ಬಹುಭಾಷಾವಿಶಾರದರೂ ಆದ ಶ್ರೀ ಎರ್ತೂರು ಶಾಂತಿರಾಜ ಶಾಸ್ತ್ರಿಗಳು ಈ ಮಹಾಕೃತಿಯನ್ನು ಕನ್ನಡಿಸಿ, ಭಗವಜ್ಜಿನಸೇನಾಚಾರ್ಯರ ಮತ್ತು ಗುಣ ಭದ್ರಾಚಾರ್ಯರ ಆಶೀರ್ವಾದವನ್ನು ಅವರ ದಿವ್ಯ ಸಂದೇಶವನ್ನು ಕನ್ನಡಿಗರಿಗೆ ದೊರಕಿಸಿ, ಪುಣ್ಯಭಾಜನರಾಗಿದ್ದಾರೆ; ಕನ್ನಡ ಸಾಹಿತ್ಯ ಈ ಮಹಾಕೃತಿಗೆ ಎಷ್ಟು ಋಣಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇಡೀ ಕನ್ನಡನಾಡು ಎಂದೆಂದಿಗೂ ಶ್ರೀ ಶಾಸ್ತ್ರಿಗಳಿಗೆ ಋಣಿಯಾಗಿರಬೇಕಾಗಿದೆ.

ಕೀರ್ತಿಶೇಷರಾದ ಶ್ರೀ ಶಾಂತಿರಾಜ ಶಾಸ್ತ್ರಿಗಳ ಜನ್ಮಶತಾಬ್ದ ಸಂದರ್ಭದಲ್ಲಿ ಅವರ ಮಕ್ಕಳು ಸರ್ವಶ್ರೀ ನಾಗ ಕುಮಾರರು, ಜಿತೇಂದ್ರ ಕುಮಾರರು, ಪ್ರಸನ್ನ ಕುಮಾರರು, ಗುಣವರ್ಮರು ಶ್ರೀ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟಿನ ಮೂಲಕ ಅವರ ಗ್ರಂಥಗಳನ್ನು ಸರ್ವಾಂಗ ಸುಂದರವಾಗಿ ಮುದ್ರಿಸಿ, ಪಿತೃಋಣ, ಭಾಷಾಋಣ, ಸಮಾಜಋಣ ಮತ್ತು ರಾಷ್ಟ್ರಋಣವನ್ನು ತೀರಿಸುವ ಮೂಲಕ ಪಿತೃವಾತ್ಸಲ್ಯವನ್ನು, ಕರ್ತವ್ಯನಿಷ್ಠೆಯನ್ನು ಮೆರೆದು, ಮುಂದಿನ ಪೀಳಿಗೆಗೆ ಆದರ್ಶರಾಗಿದ್ದಾರೆ, ಮಾರ್ಗ ದರ್ಶಕರಾಗಿದ್ದಾರೆ. ಅಸ್ತಂಗತನಾಗುತ್ತಿದ್ದ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ದಶರಥ ವಿಷ್ಣುವಿನ ಅವತಾರವೇ ಶ್ರೀರಾಮನೆಂದು ತಿಳಿದು "ನನ್ನ ಮಗನಾದುದಕೆ ನಿನಗಿದೋ ನಮಸ್ಕಾರಂ! ಧನ್ಯನಾದೆನ್" ಎಂದು ಉದ್ಗಾರ ತೆಗೆಯುತ್ತಾನೆ. ಅಂತೆಯೇ ಸೂಕ್ಷ್ಮ ಶರೀರಿಗಳಾಗಿ ಆಕಾಶದಲ್ಲಿ ಸಂಚರಿಸುತ್ತಿರುವ ಶ್ರೀ ಶಾಂತಿರಾಜ ಶಾಸ್ತ್ರಿಗಳು ಸಹ "ಮಕ್ಕಳಾದುದಕೆ ನಿಮಗಿದೋ ನಮಸ್ಕಾರಂ! ಧನ್ಯನಾದೆನ್" ಎಂದು ಆಶೀರ್ವದಿಸುತ್ತಿದ್ದಾರೆ. ಈ ಮಕ್ಕಳು ಧನ್ಯರು; ಕನ್ನಡಿಗರು ಕೃತಕೃತ್ಯರು.

ಮೈಸೂರು
೧೪–೬–೧೯೯೨

**ದೇಜಗೌ**

# ಪ್ರಕಾಶಕರ ವಿಜ್ಞಾಪನೆ

ಶ್ರೀ ಭಗವಜ್ಜಿನಸೇನ – ಗುಣಭದ್ರಾಚಾರ್ಯ ವಿರಚಿತ ಬೃಹತ್ ಕೃತಿ 'ಮಹಾಪುರಾಣ'ದ ಎರಡು ಭಾಗಗಳಲ್ಲಿ ಪೂರ್ವಪುರಾಣದ ೪೨ ಪರ್ವಗಳುಳ್ಳ ಪೂರ್ವಭಾಗವನ್ನು ಫೆಬ್ರವರಿ ೧೯೭೫ರಲ್ಲೂ ಇದರ ೫ ಪರ್ವಗಳ ಉತ್ತರ ಭಾಗವನ್ನು – ಅಂದರೆ ಸಂಪೂರ್ಣ ಪೂರ್ವಪುರಾಣ ಗ್ರಂಥವನ್ನು ಫೆಬ್ರವರಿ ೧೯೭೭ ರಲ್ಲೂ ೩೦ ಪರ್ವಗಳುಳ್ಳ ಉತ್ತರ ಪುರಾಣವನ್ನು ಜನವರಿ ೧೯೮೦ ರಲ್ಲೂ –ಶ್ರವಣ ಬೆಳ್ಗೊಳದ ಭಗವಾನ್ ಬಾಹುಬಲಿ ಮೂರ್ತಿಗೆ ಮಹಾಮಸ್ತಕಾಭಿಷೇಕ ನೆರವೇರಿದ ಸಂದರ್ಭದಲ್ಲಿ – ಸಂಪೂರ್ಣ 'ಮಹಾಪುರಾಣ'ವನ್ನು ಪಾಠಾಂತರದೊಂದಿಗೆ ಸಂಸ್ಕೃತದಲ್ಲಿ ಸಂಪಾದಿಸಿಕೊಟ್ಟಿರುವುದರ ಜೊತೆಗೆ ಸರಳ ಕನ್ನಡ ಗದ್ಯಾನುವಾದವನ್ನು ಪ್ರಪ್ರಥಮ ಬಾರಿಗೆ ಇಡೀ ಗ್ರಂಥಕ್ಕೆ ನೀಡಿ, ಸುಮಾರು ೨೦ – ೨೨ ವರ್ಷಗಳ ಕಾಲ ಹಗಲಿರುಳೆನ್ನದೆ, ಏಕಾಕಿಯಾಗಿ, ಅವಿರತವಾಗಿ, ಶಕ್ತಿಮೀರಿ ಶ್ರಮಿಸಿ ತಮ್ಮ ತಪಸ್ಸಿನ ಫಲವನ್ನು ಜೈನಸಮಾಜಕ್ಕೆ ಮತ್ತು ಕನ್ನಡದ ಜನತೆಗೆ ಧಾರೆಯೆರೆದು ಕೊಟ್ಟು ಮಹೋಪಕಾರ ಮಾಡಿದ್ದಾರೆ, ಪ್ರಾತಃಸ್ಮರಣೀಯರಾದ ಪಂಡಿತರತ್ನ ಎರ್ತೂರು ಶಾಂತಿರಾಜ ಶಾಸ್ತ್ರಿಗಳು. ಪರಮ ಧಾರ್ಮಿಕರಾದ ವೈನಾಡಿನ ಕೀರ್ತಿಶೇಷರಾದ ಶ್ರೀಮಾನ್ ಮಣಿಯಂಗೂಡು ಕೃಷ್ಣಯ್ಯಗೌಡರೂ ಅವರ ಸುಪುತ್ರ ಕೀರ್ತಿಶೇಷರಾದ ಶ್ರೀ ಎಂ. ಕೆ. ಸುಬ್ಬಯ್ಯಗೌಡರೂ ಉದಾರ ಧನಸಹಾಯಮಾಡಿ ಉಪಕರಿಸದಿದ್ದರೆ, ಅಂದು ಈ ಮಹೋನ್ನತ ಗ್ರಂಥಪ್ರಕಾಶನ ಕಾರ್ಯವು ಖಂಡಿತವಾಗಿಯೂ ಸಾಧ್ಯವಾಗುತ್ತಿರಲಿಲ್ಲ. ಅಂತೆಯೇ ಈ ಮಹತ್ಕಾರ್ಯಕ್ಕೆ ಸ್ವ॥ ಪೂಜ್ಯಶ್ರೀ ನೇಮಿಸಾಗರ ವರ್ಣೀಜಿಯವರು, ಶ್ರೀಯುತ ಎಂ. ಎಲ್. ವರ್ಧಮಾನಯ್ಯನವರು, ಎಂ. ಸಿ. ಲಕ್ಷ್ಮಿಪತಯ್ಯನವರು ಮತ್ತು ಡಿ. ಪುಟ್ಟಸ್ವಾಮಿಯವರು ಶಾಸ್ತ್ರಿಗಳಿಗೆ ಪ್ರೇರಕ ಶಕ್ತಿಯಾಗಿ ಪ್ರೋತ್ಸಾಹಿಸಿ ಉತ್ತೇಜನ ನೀಡಿದ್ದರು.

ಅನಂತರ ಫೆಬ್ರವರಿ ೧೯೮೧ರ ಶ್ರವಣಬೆಳಗೊಳದ ಬೃಹನ್ಮೂರ್ತಿ ಗೋಮಟೇಶ್ವರನಿಗೆ ಒಂದು ಸಾವಿರ ವರ್ಷದ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡ ಸಾಹಿತ್ಯ ಪರಿಷತ್ತು ಅಂದಿನ ಅಧ್ಯಕ್ಷರಾಗಿದ್ದ ಡಾ॥ ಹಂಪ. ನಾಗರಾಜಯ್ಯನವರ ಸಮರ್ಥ ನೇತೃತ್ವದಲ್ಲಿ ಪುನಃ ಈ ಮಹಾನ್ ಗ್ರಂಥವನ್ನು ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿ ಕನ್ನಡಾಭಿಮಾನಿಗಳಿಗೆ ಮಹದುಪಕಾರ ಮಾಡಿತು.

ಲೋಕಪ್ರಿಯವಾದ ಈ ಆದರಣೀಯ ಗ್ರಂಥದ ದ್ವಿತೀಯ ಮುದ್ರಣದ ಎಲ್ಲ ಪ್ರತಿಗಳೂ ಮುಗಿದುಹೋಗಿ, ತೃತೀಯ ಮುದ್ರಣಕ್ಕೆ ಅಪಾರ ಬೇಡಿಕೆ ದಿನೇ ದಿನೇ ಹೆಚ್ಚುತ್ತಿದ್ದುದರಿಂದ ಈ ಬಾರಿ ಈ ಗ್ರಂಥವನ್ನು ದ್ವಿವರ್ಣದಲ್ಲಿ, ಆಧುನಿಕ ತಂತ್ರಜ್ಞಾನವನ್ನು ಬಳಸಿ ಸರ್ವಾಂಗಸುಂದರವಾಗಿ ಆಬಾಲವೃದ್ಧರಿಗೂ ಮನಮೆಚ್ಚುವಂತೆ ೨೪ ತೀರ್ಥಂಕರರುಗಳ, ಭರತ ಬಾಹುಬಲಿ ಯುದ್ಧ ಪ್ರಸಂಗದ, ಹಲವು ಪ್ರಮುಖ ಘಟನೆಗಳ, ಪ್ರಮುಖ ತೀರ್ಥಕ್ಷೇತ್ರಗಳ ಹಾಗೂ ಪವಿತ್ರ ನಿರ್ವಾಣಕ್ಷೇತ್ರಗಳ ಅನೇಕ ವರ್ಣಚಿತ್ರಗಳನ್ನು ಉಚಿತರೀತಿಯಲ್ಲಿ ಅಳವಡಿಸಿ ಸೂಕ್ತ ಅನುಬಂಧದೊಡನೆ ರಾಯಲ್ ಆಕಾರದ ಎರಡು ಸಂಪುಟಗಳಲ್ಲಿ ಹೊರತರಲು ಈಗ್ಗೆ ಮೂರು ವರ್ಷಗಳ ಹಿಂದೆಯೇ ಟ್ರಸ್ಟ್ ನಿರ್ಧರಿಸಿತು. ಈ ಮೂರು ವರ್ಷಗಳ ಸತತ ಪರಿಶ್ರಮದ ಫಲವೇ ಈಗ ತಮ್ಮ ಕೈಯಲ್ಲಿರುವ ಈ ಮಹೋನ್ನತ ಪವಿತ್ರ ಗ್ರಂಥ.

ಈಗ ಪುನಃ ಅದೇ ಬೃಹನ್ಮೂರ್ತಿಯ ಮಹಾಮಸ್ತಕಾಭಿಷೇಕ ಮಹೋತ್ಸವ ಸಂದರ್ಭದಲ್ಲಿ – ೧೯೯೩ ರ ವೇಳೆಯಲ್ಲಿ ಈ ಮೇರುಕೃತಿಯನ್ನು ನಮ್ಮ ಶ್ರೀಮಠಗಳ, ಧರ್ಮಾಧಿಕಾರಿಗಳ, ಧರ್ಮಾಭಿಮಾನಿಗಳ ಮತ್ತು ಟ್ರಸ್ಟಿನ ಪೋಷಕರುಗಳ ಉದಾರ ಧನಸಹಾಯ, ಸಹಕಾರದಿಂದ ಹೊರತರಲಾಗುತ್ತಿರುವುದು ಒಂದು ಸುಯೋಗ. ಹೇಗೋ ಏನೋ ಅಂತೂ ಮಹಾಪುರಾಣದ ಪ್ರತಿ ಮರುಮುದ್ರಣಕ್ಕೂ ಶ್ರವಣಬೆಳಗೊಳದ ಭಗವಾನ್ ಬಾಹುಬಲಿಯ ಮಹಾಮಸ್ತಕಾಭಿಷೇಕಕ್ಕೂ ಏನೋ ಒಂದು ರೀತಿಯ ಬಿಡಿಸಲಾಗದ ನಂಟು.

ಈ ಮುದ್ರಣದ ಮೊದಲ ಸಂಪುಟದಲ್ಲಿ ಭಗವಜ್ಜಿನಸೇನಾಚಾರ್ಯ ವಿರಚಿತ ಪೂರ್ವಪುರಾಣದ ಪೂರ್ವಭಾಗದ ನಲವತ್ತೆರಡು ಪರ್ವಗಳಿರುತ್ತವೆ. ಎರಡನೆಯ ಸಂಪುಟದಲ್ಲಿ ಭಗವದ್ಗುಣಭದ್ರಾಚಾರ್ಯ ವಿರಚಿತ ಪೂರ್ವಪುರಾಣದ ಉತ್ತರ ಭಾಗದ ಐದು ಪರ್ವಗಳೂ, ಉತ್ತರಪುರಾಣದ ಮುವ್ವತ್ತು ಪರ್ವಗಳೂ ಇವೆ. ಮೊದಲ ಸಂಪುಟದಲ್ಲಿ ಶಾಂತಿರಾಜ ಶಾಸ್ತ್ರಿಗಳು ಪೂರ್ವಪುರಾಣ ಮತ್ತು ಉತ್ತರ ಪುರಾಣದ ಪ್ರಥಮ ಮುದ್ರಣಗಳಲ್ಲಿ ನೀಡಿದ್ದ ಎಲ್ಲ ಪ್ರಸ್ತಾವನೆ ಮತ್ತು ಮುನ್ನುಡಿಗಳನ್ನೂ ಕನ್ನಡ ಸಾಹಿತ್ಯ ಪರಷತ್ತಿನ ಅಂದಿನ ಅಧ್ಯಕ್ಷರೂ ಮಹಾಪುರಾಣದ ದ್ವಿತೀಯ ಮುದ್ರಣಕ್ಕೆ ಕಾರಣಕರ್ತರೂ ಆದ ಡಾ॥ ಹಂಪ. ನಾಗರಾಜಯ್ಯನವರು ನೀಡಿರುವ ಮುನ್ನುಡಿಯನ್ನೂ ಯಥಾವತ್ತಾಗಿ ಸಂಯೋಜಿಸಲಾಗಿದೆ. ಈ ಬಾರಿ ಪ್ರಥಮ ಮುದ್ರಣದಲ್ಲಿದ್ದ ಎಲ್ಲ ಮುದ್ರಣ ದೋಷಗಳನ್ನು ಹಾಗೂ ನಮ್ಮ ಗಮನಕ್ಕೆ ಬಂದ ಎಲ್ಲ ಅಶುದ್ಧಿಗಳನ್ನೂ ನಿವಾರಿಸಿ ಆದಷ್ಟು ಮಟ್ಟಿಗೆ ದೋಷಗಳೊಂದೂ ತಲೆದೋರದಂತೆ ಅದರಲ್ಲೂ ವಿಶೇಷವಾಗಿ ಉತ್ತರಪುರಾಣದಲ್ಲಿ ಶ್ಲೋಕ ಸಂಖ್ಯೆಗೂ ಭಾವಾರ್ಥದ ಸಂಖ್ಯೆಗೂ ಕಂಡು ಬಂದ ಹಲವಾರು ನ್ಯೂನತೆಗಳನ್ನೂ, ಭಾವಾರ್ಥದಲ್ಲಿದ್ದ ಕೆಲವು ನ್ಯೂನತೆಗಳನ್ನೂ, ಶ್ಲೋಕ ಸಂಖ್ಯೆಯಲ್ಲಿದ್ದ ನ್ಯೂನತೆಗಳನ್ನೂ ವಿವರವಾಗಿ ಪರಿಷ್ಕರಿಸಿ, ಎಲ್ಲ ಹಂತದಲ್ಲಿಯೂ ಅತ್ಯಂತ ಎಚ್ಚರಿಕೆ ವಹಿಸಿ ಈ ಗ್ರಂಥವನ್ನು ಹೊರ ತರಲಾಗಿದೆ.

ಪ್ರತಿ ಶ್ಲೋಕ ಮತ್ತು ಅದರ ಭಾವಾರ್ಥವನ್ನು ಪ್ರತ್ಯೇಕಿಸಿ ಶ್ಲೋಕದಡಿಯೇ ಭಾವಾರ್ಥ ಬರುವಂತೆ, ಪ್ರತಿ ಪುಟದ ವಿಷಯವನ್ನೂ ಎರಡು ಕಾಲಂಗಳಲ್ಲಿ ಮತ್ತು ಪ್ರತಿಪುಟದ ತಳಭಾಗದಲ್ಲಿ ಪಾಠಾಂತರ ಬರುವಂತೆ ಸಂಯೋಜಿಸಲಾಗಿದೆ. ಪ್ರತಿ ಪುಟಕ್ಕೂ ಕಾವಿ ವರ್ಣದ ೫ ಮಿ.ಮಿ. ಅಗಲದ ಬಳ್ಳಿ ವಿನ್ಯಾಸದ ಅಂಚನ್ನು (ಬಾರ್ಡರ್) ಅಳವಡಿಸಿ ಗ್ರಂಥದ ಅಂದವನ್ನೂ ಪಾವಿತ್ರ್ಯತೆಯನ್ನೂ ಹೆಚ್ಚಿಸಲಾಗಿದೆ. ಆಸಕ್ತಿಯುಳ್ಳ ವಾಚಕರಿಗೆ, ಸಂಶೋಧಕರಿಗೆ ಅನುಕೂಲವಾಗುವಂತೆ ಪ್ರತಿಪುಟದ ತಲೆಭಾಗದಲ್ಲಿ ಪರ್ವದ ಸಂಖ್ಯೆಯನ್ನೂ ಆ ಪುಟದಲ್ಲಿ ಬರುವ ಶ್ಲೋಕಗಳ ಸಂಖ್ಯೆಯನ್ನೂ ನಮೂದಿಸಲಾಗಿದೆ. ಎರಡನೆಯ ಸಂಪುಟದಲ್ಲಿಯೂ ಇದೇ ಕ್ರಮವನ್ನನುಸರಿಸಿರುವುದಲ್ಲದೆ, ವಿಸ್ತೃತ ಅನುಬಂಧ ಮತ್ತು ಈ ಮುದ್ರಣಕ್ಕೆ ಉದಾರಧನಸಹಾಯ ನೀಡಿರುವ ಎಲ್ಲ ದಾನಿಗಳ ಶುಭ ನಾಮಧೇಯಗಳನ್ನೂ ಉಲ್ಲೇಖಿಸಲಾಗಿದೆ. ಮೊದಲೆರಡು ಮುದ್ರಣದಲ್ಲಿದ್ದ ವಿಸ್ತೃತವಾದ ಮುನ್ನುಡಿ ಪುಟಗಳನ್ನು ಮೊದಲ ಸಂಪುಟದಲ್ಲಿ ಅಳವಡಿಸಿರುವುದರಿಂದ ಪುನಃ ಎರಡನೆಯ ಸಂಪುಟದಲ್ಲಿ ಚರ್ವಿತ ಚರ್ವಣವಾಗುವುದೆಂಬ ಭಯದಿಂದ ನೀಡಿರುವುದಿಲ್ಲ, ಆದರೆ ಉತ್ತರಪುರಾಣದ ಪ್ರಥಮ ಮುದ್ರಣದ ಮುನ್ನುಡಿಯನ್ನು ಮಾತ್ರ ಈ ಸಂಪುಟದಲ್ಲಿ ಅಳವಡಿಸಲಾಗಿದೆ.

ಈ ಮುದ್ರಣದ ಮೂಲ ಪ್ರೇರಕಶಕ್ತಿಯಾಗಿ, ಮಾರ್ಗದರ್ಶಕರಾಗಿ, ಪ್ರಕಟಣೆಯ ಪ್ರತಿಹಂತದಲ್ಲೂ ಅನುಗ್ರಹಪೂರ್ವಕವಾದ ಸೂಕ್ತಸೂಚನೆ, ಸಲಹೆಗಳನ್ನು ದಯೆಪಾಲಿಸಿ ಉದಾರಧನಸಹಾಯವನ್ನೂ ನೀಡಿ ಮಾರ್ಗದರ್ಶನ ಮಾಡಿ ಮುನ್ನಡೆಸಿದವರು ಶ್ರವಣ ಬೆಳಗೊಳದ ಪರಮಪೂಜ್ಯ ಜಗದ್ಗುರು ಕರ್ಮಯೋಗಿ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರು. ಅವರಿಗೆ ಟ್ರಸ್ಟ್ ತನ್ನ ಭಕ್ತಿಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ. ಅಲ್ಲದೆ, ಈ ಗ್ರಂಥದ ಮರುಮುದ್ರಣಕ್ಕೆ ಉದಾರ ಧನಸಹಾಯ ನೀಡಿ ಪ್ರೋತ್ಸಾಹಿಸಿರುವ ಭಗವಾನ್ ಬಾಹುಬಲಿಸ್ವಾಮಿ ಮಹಾಮಸ್ತಕಾಭಿಷೇಕ ಮಹೋತ್ಸವ ೧೯೯೩ – ಎಸ್. ಡಿ. ಜೆ. ಎಂ. ಐ. ನ ಆಡಳಿತ ಮಂಡಳಿಯ ಎಲ್ಲ ಸದಸ್ಯರಿಗೂ ಟ್ರಸ್ಟ್ ತನ್ನ ಅನಂತ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ.

ಈ ಮಹತ್ಕಾರ್ಯಕ್ಕೆ ಉಳಿದೆಲ್ಲ ಮಠಾಧೀಶರುಗಳು ನೀಡಿರುವ ಅನುಗ್ರಹ ಪೂರ್ವಕ ಆಶೀರ್ವಾದ ಮತ್ತು ಸಹಾಯ, ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಪೂಜ್ಯ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರ ಹಾಗೂ ಅವರ ಮಾತೃಶ್ರೀ ರತ್ನಮ್ಮನವರ ಉದಾರ ಧನಸಹಾಯ, ಮತ್ತು ಮಹಾಪುರಾಣದ ಮೂಲ ಪ್ರಕಾಶಕರುಗಳ ಮೊಮ್ಮಕ್ಕಳುಗಳೂ ವೈನಾಡಿನ ಧರ್ಮಾತ್ಮರೂ ಆಗಿರುವ ಶ್ರೀ ಎಂ. ಪಿ. ಧರ್ಮಪಾಲನ್ ಮತ್ತು ಶ್ರೀ ಎಂ. ಪಿ. ಶಾಂತಿವರ್ಮ ಜೈನ್ ಇವರುಗಳು ಈ ಪ್ರಕಾಶನಕ್ಕೂ ಒದಗಿಸಿರುವ ಅಪಾರ ಧನಸಹಾಯ ಹಾಗೂ ಬೆಂಗಳೂರಿನ ಧರ್ಮಾತ್ಮರಾದ ಮಾನ್ಯಶ್ರೀ ರತನ್ ಲಾಲ್ ಹಿರಾನ್ ಅವರ, ಮೆ॥ ರಂಕಾ

ಡೆವಲಪರ್ಸ್ ಮತ್ತು ಮಾನ್ಯಶ್ರೀ ಸಿ. ಬಿ. ಭಂಡಾರಿ ಅವರ ಧನಸಹಾಯ ವಿಶೇಷವಾಗಿ ಉಲ್ಲೇಖಾರ್ಹವಾಗಿವೆ. ಅಲ್ಲದೆ ಟ್ರಸ್ಟಿನ ಅನೇಕ ಪೋಷಕ ಮಹನೀಯರೂ ಧರ್ಮಾಭಿಮಾನಿಗಳೂ ಉದಾರ ಧನಸಹಾಯ ನೀಡಿ ಈ ಗ್ರಂಥ ಪ್ರಕಾಶನಕ್ಕೆ ಸಹಕರಿಸಿ ಉಪಕರಿಸಿದ್ದಾರೆ. ಇಷ್ಟೇ ಅಲ್ಲದೆ ಹಲವಾರು ಧರ್ಮಾತ್ಮರು ಈ ಗ್ರಂಥವನ್ನು ಪ್ರಕಟಣಾಪೂರ್ವ ಬೆಲೆಯಲ್ಲಿ ಪಡೆಯಲು ಮುಂದಾಗಿ ಹಣ ಪಾವತಿ ಮಾಡಿ ಖರೀದಿ ಆದೇಶ ನೀಡಿ ಸಹಕರಿಸಿರುತ್ತಾರೆ. ಈ ಎಲ್ಲ ಪವಿತ್ರಾತ್ಮರ ಉದಾರ ಸಹಾಯ, ಸಹಕಾರಕ್ಕಾಗಿ ಟ್ರಸ್ಟ್ ಅತ್ಯಂತ ಕೃತಜ್ಞವಾಗಿದೆ. ಈ ಎಲ್ಲ ಮಹನೀಯರ ಮಹೋಪಕಾರವನ್ನು ಸಮಾಜವು ಚಿರಕಾಲ ಸ್ಮರಿಸುತ್ತ ಕೃತಜ್ಞವಾಗಿರಬೇಕು. ಈ ಎಲ್ಲ ಪವಿತ್ರಾತ್ಮರ ಧಾರ್ಮಿಕ ವಂಶವು ಸಂಪತ್ಸಮೃದ್ಧಿಯಿಂದ ಉದಿತೋದಿತವಾಗಿ ಬೆಳೆಯಲೆಂದು ಟ್ರಸ್ಟ್ ಹಾರೈಸುತ್ತದೆ.

ಜೈನ ಸಾಹಿತ್ಯದ ತಲಸ್ಪರ್ಶಿಯಾದ ಅಧ್ಯಯನ ಮಾಡಿರುವವರೂ, ಜ್ಞಾನ ವೃದ್ಧರೂ, ಮೈಸೂರು ವಿಶ್ವವಿದ್ಯಾನಿಲಯದ ಪ್ರಖ್ಯಾತ ಕುಲಪತಿಗಳೂ ಆಗಿದ್ದ ಪ್ರೊ || ದೇ. ಜವರೇಗೌಡ ಅವರು ತಮ್ಮ ಬಿಡುವಿಲ್ಲದ ಅನೇಕ ಕಾರ್ಯಗಳ ಒತ್ತಡವಿದ್ದರೂ ಸಂತೋಷದಿಂದ ಸಕಾಲದಲ್ಲಿ ಈ ಮುದ್ರಣಕ್ಕೆ ತಮ್ಮ ಸ್ವಹಸ್ತದಲ್ಲಿ ಮುನ್ನುಡಿ ಬರೆದುಕೊಟ್ಟು ಉಪಕರಿಸಿ ಈ ಗ್ರಂಥವು ಹೆಚ್ಚು ಅರ್ಥಪೂರ್ಣ ವಾಗುವಂತೆಯೂ ಕಳೆಕಟ್ಟುವಂತೆಯೂ ಮಾಡಿದ್ದಾರೆ. ಅವರಿಗೆ ಟ್ರಸ್ಟ್ ಅನಂತ ಗೌರವಗಳನ್ನೂ ಕೃತಜ್ಞತೆಗಳನ್ನೂ ಸಮರ್ಪಿಸುತ್ತದೆ.

ಸಮಗ್ರ ಮಹಾಪುರಾಣ ಗ್ರಂಥಕ್ಕೆ ಅನುಬಂಧ ಸಿದ್ಧಪಡಿಸಿ ಕೊಡುವ ಕಾರ್ಯವನ್ನು ಯಾರಿಗೆ ವಹಿಸಬೇಕೆಂಬ ಜಿಜ್ಞಾಸೆ ನಡೆದಿದ್ದಾಗ, ಟ್ರಸ್ಟಿನ ಎಲ್ಲ ಪ್ರಕಾಶನಕಾರ್ಯಗಳಿಗೂ ಅವ್ಯಾಹತ ಸಲಹೆ, ಸಹಕಾರ ನೀಡುತ್ತ ಬಂದಿರುವ ಖ್ಯಾತ ಸಾಹಿತಿ ಮಾನ್ಯ ಡಾ || ಎಂ. ಎ. ಜಯಚಂದ್ರ ಅವರು ಸ್ವಸಂತೋಷದಿಂದ ಮುಂದೆ ಬಂದು ಈ ಕಾರ್ಯವನ್ನು ಶ್ರದ್ಧೆಯಿಂದ ತಮ್ಮೆಲ್ಲ ಸ್ವಂತ ಕೆಲಸ ಕಾರ್ಯಗಳನ್ನು ಬದಿಗೊತ್ತಿ ವಿಸ್ತೃತವಾದ ಅನುಬಂಧವನ್ನು ಬಹುಸಮರ್ಥ ರೀತಿಯಲ್ಲಿ ಸಿದ್ಧಪಡಿಸಿ ಕೊಟ್ಟಿರುವುದಲ್ಲದೆ, ಮುದ್ರಣ ಸಮಯದಲ್ಲಿ ಅನೇಕ ಸಲಹೆ ಸೂಚನೆಗಳನ್ನೂ ನೀಡಿ ವರ್ಣ ಚಿತ್ರಗಳನ್ನು ಚುನಾಯಿಸುವಲ್ಲಿ ಸಹಕರಿಸಿ, ಈ ಗ್ರಂಥವು ಉತ್ಕೃಷ್ಟ ರೀತಿಯಲ್ಲಿ ಹೊರಬರಲು ಸಹಕರಿಸಿದ್ದಾರೆ. ಇವರಿಗೆ ಟ್ರಸ್ಟ್ ಎಂದೆಂದಿಗೂ ಚಿರಋಣಿಯಾಗಿದೆ.

ಈ ಅನುಬಂಧವನ್ನು "ಮಹಾಪುರಾಣ ಸೂಚಿಗಳು" ಎಂಬ ಶೀರ್ಷಿಕೆಯಲ್ಲಿ ಈ ಎರಡನೇ ಸಂಪುಟದ ಅಂತ್ಯಭಾಗದಲ್ಲಿ ಸಂಯೋಜಿಸಲಾಗಿದೆ. ಇದರ ವಿಶೇಷತೆ ಏನೆಂದರೆ "ಮಹಾಪುರಾಣ"ದಲ್ಲಿ ಬರುವ ಹಲವಾರು ವಿಷಯಗಳಲ್ಲಿ ಪುರುಷ ನಾಮ, ಸ್ತ್ರೀನಾಮ, ದೇಶನಾಮ, ನಗರನಾಮ, ದ್ವೀಪನಾಮ, ನದಿನಾಮ, ಪರ್ವತನಾಮ, ವನನಾಮ, ಪ್ರಾಣಿನಾಮ ಇತ್ಯಾದಿ ೧೬ ಪ್ರಮುಖ ವಿಷಯಗಳನ್ನು ವಿಂಗಡಿಸಿ ಸೂಕ್ತ ವಿವರಣೆಯೊಡನೆ ನೀಡಿರುವುದು. ತೀರ್ಥಂಕರರ ಭವಾವಳಿ, ಪಂಚಕಲ್ಯಾಣದ ತಿಥಿಗಳು, ಜನ್ಮಸ್ಥಳ, ವರ್ಣ ಇತ್ಯಾದಿ ವಿವರಗಳನ್ನು ೭ ಪಟ್ಟಿಯಲ್ಲಿ ಅಳವಡಿಸಲಾಗಿದೆ. ಅಲ್ಲದೆ ಇಡೀ ಮಹಾಪುರಾಣದ ೨೦ ಸಹಸ್ರ ಶ್ಲೋಕಗಳ ಅಕಾರಾದಿಯನ್ನು – ಶ್ಲೋಕಸೂಚಿಯನ್ನು ಸಿದ್ಧಪಡಿಸಿ ಸೂಕ್ತ ವಿನ್ಯಾಸದೊಡನೆ ಸಂಯೋಜಿಸಲಾಗಿದೆ.

ಈ ಮುದ್ರಣದಲ್ಲಿ ಇಪ್ಪತ್ತೆರಡು ತೀರ್ಥಂಕರರ ಮತ್ತು ಸಮವಸರಣದ ಅಪೂರ್ವ ವರ್ಣಚಿತ್ರಗಳನ್ನು ಸಂಯೋಜಿಸಲು ಅನುಮತಿಸಿ ಇದೊಂದು ಅಪೂರ್ವ ದಾಖಲೆಯಾಗಿ ಉಳಿಯುವಂತೆ ಅವುಗಳ ಪ್ರತಿಗಳನ್ನು ಪಡೆಯಲು ಸಹಕರಿಸಿದ ಹಾಸನದ ಮಾನ್ಯಶ್ರೀ ಎ. ಜ್ವಾಲನಯ್ಯನವರಿಗೆ ಟ್ರಸ್ಟ್ ಚಿರಋಣಿಯಾಗಿದೆ. ಈ ವರ್ಣ ಚಿತ್ರಗಳನ್ನು ಮಾನ್ಯ ಶ್ರೀ ಜ್ವಾಲನಯ್ಯನವರ ಮುತ್ತಾತಂದಿರೂ ಧರ್ಮಾತ್ಮರೂ ಆದ ಸ್ವ || ಶ್ರೀ ಜೆ. ಸಿದ್ದಪ್ಪನವರು ಅತಿಶ್ರಮವಹಿಸಿ ಸಂಗ್ರಹಿಸಿ ಕಾಪಾಡಿಕೊಂಡು ಬಂದಿದ್ದುದಾಗಿ ತಿಳಿದು ಬಂದಿದೆ.

ಅಕ್ಷರ ಸಂಯೋಜನೆ ಮತ್ತು ಮುದ್ರಣ ಕಾರ್ಯದ ಬಗ್ಗೆ, ವರ್ಣಚಿತ್ರಗಳ ಮತ್ತು ಬಾರ್ಡರ್ ವಿನ್ಯಾಸ ರಚನೆಯಲ್ಲಿ ಅನೇಕ ಸಲಹೆ, ಸಹಕಾರಗಳನ್ನು ನೀಡಿರುವ ಶ್ರೀ ಅನ್‌ಷುಮಾಲಿನ್ ಡಿ. ಷಹ ಅವರಿಗೂ ; ೧೯೨೫ ಮತ್ತು ೧೯೩೩ ರಲ್ಲಿ ಪ್ರಕಾಶಿಸಲ್ಪಟ್ಟಿದ್ದ 'ಪೂರ್ವಪುರಾಣ' ಗ್ರಂಥದ ಪ್ರತಿಗಳನ್ನು ಒದಗಿಸಿಕೊಟ್ಟ ಬೆಂಗಳೂರಿನ ಧರ್ಮಾತ್ಮರಾದ ಶ್ರೀಮತಿ ದೊಡ್ಡರಾಜಮ್ಮ ಆದಿರಾಜಯ್ಯ ಅವರಿಗೂ; ಅತ್ಯಂತ ಶ್ರಮವಹಿಸಿ ಈ ಗ್ರಂಥಕ್ಕೆ ನಾಲ್ಕು ವರ್ಣಗಳ ಸುಂದರ ಜಾಕೆಟ್‌ನ ವಿನ್ಯಾಸ, ಕಡೆಯ ಪುಟಗಳ ವಿನ್ಯಾಸ ಮತ್ತು ವರ್ಣಚಿತ್ರಗಳನ್ನು ಸಿದ್ಧಪಡಿಸಿಕೊಟ್ಟು ಸಹಕರಿಸಿರುವ ಬೆಂಗಳೂರಿನ ಬಿಂದು ಗ್ರಾಫಿಕ್ಸ್‌ನ ಶ್ರೀ ಆರ್. ಎಸ್. ಪದ್ಮರಾಜ್ ಅವರಿಗೂ; ಮುದ್ರಣದ ಹಲವಾರು ಸಂದರ್ಭಗಳಲ್ಲಿ ಸಮಯೋಚಿತ ಸಲಹೆಗಳನ್ನು ನೀಡಿ ಸಹಕರಿಸಿರುವ ಸನ್ಮಾನ್ಯ ಡಾ || ಹಂಪ. ನಾಗರಾಜಯ್ಯನವರಿಗೂ ಶಮನೇವಾಡಿಯ ಡಾ || ಎ. ಆರ್. ಚೌಗುಲೆ ಅವರಿಗೂ; ಮೈಸೂರಿನ ಶ್ರೀ ಪ. ನಾಗರಾಜಯ್ಯನವರಿಗೂ; ಗೊಮ್ಮಟವಾಣಿಯ ಸಂಪಾದಕ ರಾದ ಶ್ರೀ ಎಸ್. ಎನ್. ಅಶೋಕ್ ಕುಮಾರ್ ಅವರಿಗೂ; ಹಲವಾರು ಬಾರಿ ಮುದ್ರಣದ ಕರಡು(ಪ್ರೂಫ್) ತಿದ್ದುವಲ್ಲಿ ಸತತವಾಗಿ ಶ್ರಮಿಸಿ ಸಹಕರಿಸಿರುವ ಶ್ರೀ ಎಸ್. ಬಿ. ಬ್ರಹ್ಮಾನಂದ್‌ರಿಗೂ; ಈ ಪ್ರಕಾಶನಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಶ್ರಮಿಸಿ ಸಹಕಾರ ನೀಡಿರುವ ಎಲ್ಲ ಮಹನೀಯರಿಗೂ ಟ್ರಸ್ಟ್ ಆಭಾರಿಯಾಗಿದೆ.

ಹಲವಾರು ಬಾರಿ ಕರಡುಗಳಲ್ಲಿ ಗುರ್ತುಮಾಡಿದ ಎಲ್ಲ ತಿದ್ದುಪಡಿಗಳನ್ನೂ, ಸೂಚನೆಗಳನ್ನೂ ಆಕಾರಗಳನ್ನೂ ಸ್ವಲ್ಪವೂ ಬೇಸರಿಸದೆ ಅಳವಡಿಸಿ ಈ ಬೃಹತ್ ಗ್ರಂಥದ ಸುಂದರ ಅಕ್ಷರ ಸಂಯೋಜನೆ ಮಾಡಿಕೊಟ್ಟ "ಸುಧಾ ಮುದ್ರಣ"ದ ಶ್ರೀ ಧನಂಜಯ ವರ್ಖೇಡ್‌ಕರ್ ಅವರನ್ನೂ ; ಅತಿಸ್ವಲ್ಪ ಕಾಲದಲ್ಲೇ ಸುಂದರವಾಗಿ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್‌ನ ಮಾಲಿಕರಾದ ಶ್ರೀ ವೆಂಕಟೇಶ ಬಾಬು ಅವರನ್ನೂ; ಈ ಗ್ರಂಥಕ್ಕೆ ಸೂಕ್ತವಾದ, ಹೆಚ್ಚು ಬಾಳಿಕೆ ಬರುವಂತಹ ಉತ್ತಮವಾದ ಮತ್ತು ಸುಂದರವಾದ ರಟ್ಟಿನ ಪೆಟ್ಟಿಗೆಗಳನ್ನು ಸಕಾಲದಲ್ಲಿ ತಯಾರಿಸಿಕೊಟ್ಟು ಸಹಕರಿಸಿದ ಸಮಾಜರತ್ನ ಮಾನ್ಯ ಶ್ರೀ ಜಿ. ಹೆಚ್. ಆದಿರಾಜಯ್ಯನವರ ಸುಪುತ್ರರುಗಳಾದ ಶ್ರೀಹರ್ಷ ಮತ್ತು ಶ್ರೀ ಸುಮಂತ್ (ಮೆ || ಹರ್ಷ ಪ್ಯಾಕೇಜಿಂಗ್ ಪ್ರೈವೇಟ್ ಲಿಮಿಟೆಡ್‌ನ ಮಾಲಿಕ)ರನ್ನೂ; ಈ ಮುದ್ರಣದ ವಿನ್ಯಾಸ, ರೂಪುರೇಷೆ ರಚನೆಯಲ್ಲಿ, ಮುದ್ರಣದ ಸಮಯದಲ್ಲಿ, ಸೂಕ್ತ ಕಾಗದ ಆರಿಸುವಲ್ಲಿ, ಸುಂದರ ಬೈಂಡಿಂಗ್ ಕೆಲಸದಲ್ಲಿ ಹೀಗೆ ಪ್ರತಿಯೊಂದು ಹಂತದಲ್ಲಿಯೂ ಅಭೂತಪೂರ್ವ, ಸೌಹಾರ್ದಯುತ ಸಹಕಾರ ನೀಡಿರುವ ಬೆಂಗಳೂರಿನ ಬಿ. ಬಿ. ಡಿ. ಪವರ್ ಪ್ರೆಸ್‌ನ ಸನ್ಮಾನ್ಯಶ್ರೀ ಮಲ್ಯ ಸಹೋದರರನ್ನೂ ಟ್ರಸ್ಟ್ ತುಂಬು ಕೃತಜ್ಞತೆಯಿಂದ ಸ್ಮರಿಸುತ್ತದೆ.

**ಪಂಡಿತರತ್ನ ಎತ್ತೂರು ಶಾಂತಿರಾಜ ಶಾಸ್ತ್ರಿ ಟ್ರಸ್ಟ್**

# ಪ್ರಸಿದ್ಧ ಪತ್ರಿಕೆ

## ಶ್ರೀಃ

ಶ್ರೀಮಚ್ಚಾಮುಂಡಿಕಾಂಬಾ ಚರಣಸರಸಿಜದ್ವಂದ್ವ ಸೇವಾಧುರೀಣ ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲದೇಶಾವತಂಸ ಕರ್ಣಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನ ನಿಖಿಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯ ರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲ ಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತರಾದ ಕರ್ಣಾಟಕ ಸಿಂಹಾಸನಾಧೀಶ್ವರ

ಶ್ರೀಮಜ್ಜಯ ಚಾಮರಾಜೇಂದ್ರ ಒಡೆಯರ್ ಬಹದೂರ್,
ಜಿ. ಸಿ. ಬಿ., ಜಿ. ಸಿ. ಎಸ್. ಐ., ಮಹಾಸ್ವಾಮಿಯವರು

ಶಾಲೀವಾಹನಶಕ ೧೮೬೮ನೆಯ ವ್ಯಯನಾಮ ಸಂವತ್ಸರದ ಆಷಾಢ ಬಹುಳ ಸಪ್ತಮೀ ಭಾನುವಾರದಲ್ಲು ವರ್ಧಂತಿ ಮಹೋತ್ಸವ ಪ್ರಯುಕ್ತವಾದ ದರ್ಬಾರಿನಲ್ಲಿ ನಮ್ಮ ಅನುಗ್ರಹಕ್ಕೆ ಪಾತ್ರರಾದ—

**ಬ್ರಂ ॥ ಶ್ರೀ ॥ ನ್ಯಾಯತೀರ್ಥ ಮಹಾವಿದ್ವಾನ್ ಎತ್ತೂರು**
**ಶಾಂತಿರಾಜ ಶಾಸ್ತ್ರಿಗಳವರಿಗೆ**

" ಪಂಡಿತರತ್ನ "

ಎಂಬ ಬಿರುದನ್ನು ತಕ್ಕ ಮರ್ಯಾದೆಗಳೊಡನೆ ದಯಪಾಲಿಸಿರುತ್ತೇವೆ.

ಶ್ರೀರಸ್ತು

**ಜೈನಶಾಸ್ತ್ರ ವಿಶಾರದ, ನ್ಯಾಯತೀರ್ಥ, ಪಂಡಿತರತ್ನ,**
**ಮೈಸೂರು ಶ್ರೀಮನ್ಮಹಾರಾಜಾಸ್ಥಾನ ಮಹಾವಿದ್ವಾನ್,**

# ಶ್ರೀಮಾನ್ ಎ. ಶಾಂತಿರಾಜಶಾಸ್ತ್ರಿಗಳವರಿಗೆ

**ಬೆಂಗಳೂರಿನಲ್ಲಿರುವ ನಿಖಿಲ ಕರ್ನಾಟಕ ವಿದ್ಯಾ ಸಂಸ್ಕೃತಿ ಸಂಸ್ಥೆಯಾದ**
**ಕನ್ನಡ ಸಾಹಿತ್ಯ ಪರಿಷತ್ತು ಅರ್ಪಿಸಿದ**

## ಸನ್ಮಾನಪತ್ರ

ಮಹಾಶಯರೇ,

ಕನ್ನಡ ಸಾಹಿತ್ಯವು ಆದಿಕಾಲದಿಂದಲೂ ಜೈನ ಕವಿಪಂಡಿತ ಪರಂಪರೆಯಿಂದ ಪೋಷಣೆಹೊಂದಿ ಪರಿಪುಷ್ಟವಾಗಿ ಬೆಳೆದು ಬಂದಿದೆ ಎಂಬುದು ಸರ್ವವಿದಿತವಾದ ಸಂಗತಿಯಾಗಿದೆ. ಪಂಪ ರನ್ನಾದಿ ಕವಿಪುಂಗವರೂ, ಕೇಶಿರಾಜ, ಭಟ್ಟಾಕಳಂಕ ಮೊದಲಾದ ಪಂಡಿತವರೇಣ್ಯರೂ, ಚಾವುಂಡರಾಯನಂಥ ಕಲಾಪೋಷಕರೂ ಕನ್ನಡದ ಕೀರ್ತಿಯನ್ನು ಎತ್ತಿ ಹಿಡಿದು, ಚಿರಸ್ಮರಣೀಯರಾಗಿ ಇಂದಿಗೂ ಕನ್ನಡಿಗರಿಗೆ ಮಾರ್ಗದರ್ಶಕ ರಾಗಿದ್ದಾರೆ. ಇಂಥ ಒಂದು ಪರಂಪರೆಯನ್ನು ಸಾರೋದ್ಧಾರವಾಗಿ ನಡಸಿಕೊಂಡು ಬರುವ ಕವಿಪಂಡಿತ ವರ್ಗವು ವಿರಳವಾಗುತ್ತಿರುವ ಈ ಕಾಲದಲ್ಲಿ ಅರ್ಧ ಶತಮಾನದಿಂದ ಜೈನಸಾಹಿತ್ಯ ಮತ್ತು ಧರ್ಮಗಳ ಸೇವೆಯನ್ನು ವಿವಿಧಕೃತಿಗಳಿಂದ ಮಾಡಿ ಆ ಪೂರ್ವಪಂಡಿತರನ್ನು ಸ್ಮರಣೆಗೆ ತರುತ್ತಿರುವ, ಉಭಯಭಾಷಾಸಾಹಿತ್ಯಗಳಲ್ಲಿ ಮಹಾ ವಿದ್ವಾಂಸರಾದ ತಮ್ಮಲ್ಲಿ ಕರ್ಣಾಟಕ ಮಹಾಜನರಿಗಿರುವ ಗೌರವಬುದ್ಧಿಯನ್ನೂ ಅಭಿಮಾನವನ್ನೂ ಈ ಸನ್ಮಾನಪತ್ರ ಮುಖೇನ ವ್ಯಕ್ತಪಡಿಸಲು ನಮಗೆ ದೊರೆತಿರುವ ಈ ಅವಕಾಶವನ್ನು ನಾವು ಒಂದು ಸುಯೋಗವೆಂದು ಭಾವಿಸಿದ್ದೇವೆ.

ಕನ್ನಡ ನಾಡಿನ ವಿದ್ವತ್ಪರಂಪರೆಗೆ ಸಹಜವಾಗಿರುವ ಉಭಯ ಭಾಷಾ ಪಾಂಡಿತ್ಯದ ಜೊತೆಗೆ ತಾವು ಆಧುನಿಕ ವಿಷಯಗಳಲ್ಲಿಯೂ ಪಾಂಡಿತ್ಯವನ್ನು ಸಂಪಾದಿಸಿ, ಸತತ ಪರಿಶ್ರಮದಿಂದಲೂ ಸೂಕ್ಷ್ಮವಿಮರ್ಶನಾಸಾಮರ್ಥ್ಯದಿಂದಲೂ ಪುರಾತನ ಸಂಸ್ಕೃತ ಕನ್ನಡ ಗ್ರಂಥಗಳನ್ನು ವ್ಯಾಖ್ಯಾನಗಳೊಡನೆ ಸಂಪಾದಿಸಿ ಪ್ರಕಟಿಸಿರುವಿರಲ್ಲದೆ ಸ್ವತಂತ್ರವಾಗಿಯೂ ಗ್ರಂಥರಚನೆಮಾಡಿ ಜೈನಧರ್ಮವನ್ನು ಪ್ರಕಾಶಪಡಿಸಿದ್ದೀರಿ. ಕನ್ನಡದ ಆದಿಕವಿ ಪಂಪನಿಗೆ ಕೀರ್ತಿತಂದ ಆದಿಪುರಾಣಕ್ಕೆ ಆಕರವಾದ ಜಿನಸೇನಾಚಾರ್ಯರ ''ಮಹಾಪುರಾಣ'', ಸಮಂತಭದ್ರ ಪೂಜ್ಯಪಾದಾದಿ ಜೈನಾಚಾರ್ಯರು ವ್ಯಾಖ್ಯಾನಮಾಡಿ ಕೊಂಡಾಡಿರುವ ಉಮಾಸ್ವಾತಿಪ್ರಣೀತವಾದ ''ತತ್ತ್ವಾರ್ಥಾಧಿಗಮ ಸೂತ್ರ'', ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಯ ''ದ್ರವ್ಯಸಂಗ್ರಹ'', ''ಅನ್ಯಯೋಗ ವ್ಯವಚ್ಛೇದಿಕಾ'' ಮೊದಲಾದ ಶಾಸ್ತ್ರಗ್ರಂಥಗಳನ್ನೂ, ''ದಶಭಕ್ತಿ'', ''ಜಿನಭಜನಸಾರ'' ಮೊದಲಾದ ಧರ್ಮಪ್ರಸಾರ ಸಾಧಕವಾದ ಸುಲಭ ಗ್ರಂಥಗಳನ್ನೂ, ''ನೇಮಿಜಿನೇಶಸಂಗತಿ'', ''ಶತಕತ್ರಯೀ'' ಮೊದಲಾದ ಕನ್ನಡ ಕಾವ್ಯ ಗ್ರಂಥಗಳನ್ನೂ ಇನ್ನೂ ಹಲವಾರು ಕನ್ನಡ ಸಂಸ್ಕೃತ ಗ್ರಂಥಗಳನ್ನೂ ಟೀಕೆ ಟಿಪ್ಪಣಿ ವ್ಯಾಖ್ಯಾನ ವಿವರಣಾದಿಗಳೊಡನೆ ಪರಿಶೋಧಿಸಿ ಪ್ರಕಟಿಸಿ ಅಭ್ಯಾಸಿಗಳಿಗೆ ಅತ್ಯಾವಶ್ಯಕವೂ ಅಮೂಲ್ಯವೂ ಆದ ಸಹಾಯವನ್ನು ಕಲ್ಪಿಸಿಕೊಟ್ಟಿದ್ದೀರಿ. ತಾವು ಜೈನ ಸಮಾಜಕ್ಕೆ ಮಾತ್ರವಲ್ಲದೆ ಒಟ್ಟು ನಾಡು ನುಡಿಗಳಿಗೇ ಈ ಮೂಲಕ ಅಮೋಘವಾದ ಸೇವೆ ಸಲ್ಲಿಸಿದ್ದೀರಿ.

ಮೈಸೂರು ಸರ್ಕಾರದ ಪ್ರಾಚ್ಯಸಂಶೋಧನಾಲಯದಲ್ಲಿಯೂ, ಪೌರಸ್ತ್ಯಗ್ರಂಥಭಂಡಾರದಲ್ಲಿಯೂ, ಹಲವು ವರ್ಷಗಳ ಕಾಲ ಪಂಡಿತರಾಗಿಯೂ, ಕೀರ್ತಿಶೇಷರಾದ ಶ್ರೀಮಾನ್ ವರ್ಧಮಾನಯ್ಯನವರ ಮೈಸೂರಿನ ವಿದ್ಯಾರ್ಥಿನಿಲಯದಲ್ಲಿ ಜೈನ ಧರ್ಮಾಚಾರ್ಯರಾಗಿಯೂ, ಚೈತ್ಯಾಲಯದಲ್ಲಿ ಜೈನಾಗಮ ಪುರಾಣಗಳನ್ನು ಶ್ರಾವಕರಿಗೆ ತಿಳಿನುಡಿಗಳಲ್ಲಿ ಹೇಳಿ ವಿವರಿಸುತ್ತಾ ಪೌರಾಣಿಕರಾಗಿಯೂ, ಅನೇಕ ಜೈನ ಸಂಸ್ಥೆಗಳಲ್ಲಿ ಮತ್ತು ಉತ್ಸವ ಸಮಾರಂಭಗಳಲ್ಲಿ ಪ್ರಮುಖಪಾತ್ರ ವಹಿಸಿ ಸಮಾಜ ಸೇವಕರಾಗಿಯೂ ದುಡಿದು ಮಹಾ ಜನರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದೀರಿ.

ತಮ್ಮ ಧರ್ಮಶ್ರದ್ಧೆ ಮತ್ತು ಶಾಸ್ತ್ರ ಪಾಂಡಿತ್ಯಗಳಿಗಾಗಿ ಶ್ರವಣಬೆಳುಗೊಳದ ಶ್ರೀ ಮಠದಿಂದ ''ಜೈನಶಾಸ್ತ್ರ ವಿಶಾರದ'' ಎಂಬ ಪ್ರಶಸ್ತಿಯನ್ನು ಪಡೆದಿದ್ದೀರಿ. ತಮ್ಮ ವಿದ್ಯಾ ವೈದುಷ್ಯಗಳಿಗೆ ಮೆಚ್ಚಿದ ಆಳಿದ ಮಹಾಸ್ವಾಮಿಯವರಿಂದ ''ಆಸ್ಥಾನ ಮಹಾವಿದ್ವಾನ್'' ಪದವಿಯನ್ನೂ, ಮತ್ತು ಈಗಿನ ಮಹಾಸ್ವಾಮಿಯವರಿಂದ ''ಪಂಡಿತರತ್ನ'' ಎಂಬ ಬಿರುದನ್ನೂ ಗಳಿಸಿದ್ದೀರಿ. ''ವಿವೇಕಾಭ್ಯುದಯ'', ''ವಿಶ್ವಬಂಧು'' ಪತ್ರಿಕಾ ಸಂಪಾದಕರಾಗಿ ಜನಮನವನ್ನು ಮೆಚ್ಚಿಸಿ ಅವರಿಂದಲೂ ಮನ್ನಣೆ ಪಡೆದಿದ್ದೀರಿ. ಹೀಗೆ ಗುರುಮನೆ ಅರಮನೆ ಸಮಾಜ–ಎಲ್ಲೆಡೆಗಳಿಂದಲೂ ಗೌರವ ವಿಶ್ವಾಸಗಳನ್ನು ಸಂಪಾದಿಸಿರುತ್ತೀರಿ. ಆಡಂಬರವಿಲ್ಲದ ಜೀವನ, ಸೌಜನ್ಯ, ಧರ್ಮಶ್ರದ್ಧೆ, ವಿದ್ಯಾ ವಿನಯ ಗುಣಗಳಿಂದ ಸರ್ವಮಾನ್ಯರೂ ಮಾಹಾಪಂಡಿತರೂ ಆದ ತಮಗೆ ಕನ್ನಡಿಗರೆಲ್ಲರ ಪ್ರತಿನಿಧಿ ಸಂಸ್ಥೆಯಾದ ಈ ಕನ್ನಡ ಸಾಹಿತ್ಯ ಪರಿಷತ್ತು ಮರ್ಯಾದೆ ಸಲ್ಲಿಸುವುದು ಉಚಿತವೇ ಆಗಿದೆ.

ನಮ್ಮ ಗೌರವ ವಿಶ್ವಾಸಗಳ ಕುರುಹಾಗಿ ಈ ಕಾಣಿಕೆಯನ್ನು ಅಂಗೀಕರಿಸುವುದಕ್ಕೆ ತಾವು ಒಪ್ಪಿದ್ದಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ತಮ್ಮ ಶಾಸ್ತ್ರ ಸಾಹಿತ್ಯ ಸೇವಾಕಾರ್ಯಗಳು ಇತೋಪ್ಯತಿಶಯವಾಗಿಯೂ ನಿರ್ವಿಘ್ನವಾಗಿಯೂ, ನಡೆಯುವಂತೆ ತಮಗೆ ಆಯುರಾರೋಗ್ಯಭಾಗ್ಯಗಳನ್ನು ಅನುಗ್ರಹಿಸಲೆಂದು ಅನನ್ಯಭಾವದಿಂದ ಭಗವಂತನನ್ನು ಪ್ರಾರ್ಥಿಸುತ್ತೇವೆ.

ಶ್ರೀ ಕೃಷ್ಣರಾಜ ಪರಿಷನ್ಮಂದಿರ,
ಬೆಂಗಳೂರು
ತಾ ॥ ೧೩ ಮೇ ೧೯೫೧

ಇಂತು

**ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು**

# ಮುನ್ನುಡಿ

## ( ಉತ್ತರಪುರಾಣಕ್ಕೆ ಬರೆದದ್ದು – ೧೯೪೦ )

ಗ್ರಂಥದಲ್ಲಿ ಮುನ್ನುಡಿಯೆಂದರೆ ಮೊತ್ತಮೊದಲು ಆ ಉದ್ದಿಷ್ಟಗ್ರಂಥದ ಸಾಮಾನ್ಯಪರಿಚಯವನ್ನು ಮಾಡಿಸುವ ನುಡಿಯೆಂದರ್ಥವು. ಉದ್ದಿಷ್ಟವಾಗಿರುವ ಗ್ರಂಥವು ಮಹಾಪುರಾಣ. ಇದರಲ್ಲೆಲ್ಲಿಯೂ ಪೂರ್ವಪುರಾಣವೆಂದೂ ಉತ್ತರಪುರಾಣವೆಂದೂ ಹೇಳಲ್ಪಟ್ಟಿಲ್ಲವಾದರೂ ಈ ಗ್ರಂಥದ ಪೂರ್ವೋತ್ತರ ಭಾಗಗಳ ಕರ್ತೃಗಳ ಭೇದದಿಂದ ಹಾಗೆ ವ್ಯವಹರಿಸಲ್ಪಡುತ್ತಿರುವುದರಿಂದ ತದನುಸಾರವಾಗಿ ಭಗವಜ್ಜಿನಸೇನಾಚಾರ್ಯವಿರಚಿತವಾದ ಪೂರ್ವಭಾಗಕ್ಕೆ ಪೂರ್ವಪುರಾಣವೆಂದೂ ಭಗವದ್ಗುಣಭದ್ರಾಚಾರ್ಯವಿರಚಿತವಾದ ಉತ್ತರಭಾಗಕ್ಕೆ ಉತ್ತರಪುರಾಣವೆಂದೂ ನಾಮಕರಣವನ್ನು ಮಾಡಿರುವುದಾಗಿದೆ. ಹೀಗೆ ಬೇರೆ ಬೇರೆ ನಾಮಕರಣವನ್ನು ಮಾಡಿರುವುದರಿಂದ ಪೂರ್ವಪುರಾಣಕ್ಕೆ ಮುನ್ನುಡಿಯಿರುವಂತೆ ಈ ಉತ್ತರಪುರಾಣಕ್ಕೂ ಒಂದು ಮುನ್ನುಡಿಯಿರಬೇಕಾಯ್ತು. ಪೂರ್ವಪುರಾಣದ ಮುನ್ನುಡಿಯಲ್ಲಿ ಈ ಉತ್ತರಪುರಾಣದ ಕೆಲವು ವಿಷಯಗಳೂ ಉಲ್ಲೇಖಿಸಲ್ಪಟ್ಟಿರುವುದರಿಂದ ಇಲ್ಲಿ ವಿಸ್ತೃತವಾದ ಮುನ್ನುಡಿಯ ಆವಶ್ಯಕತೆಯಿಲ್ಲ.

ಈ ಪೂರ್ವೋತ್ತರಪುರಾಣಗಳೆರಡೂ ಸೇರಿದ ಮಹಾಪುರಾಣವು "ಇದಂ ಪುಣ್ಯಮಿದಂ ಪೂತಮಿದಂ ಮಾಂಗಲ್ಯಮುತ್ತಮಂ" ಇತ್ಯಾದಿ ಪದ್ಯಗಳಲ್ಲಿ ಹೇಳಿರುವಂತೆ ಪುಣ್ಯಪ್ರದವೂ ಪವಿತ್ರವೂ ಉತ್ತಮಮಂಗಲಸ್ವರೂಪವೂ ಆಯುಷ್ಯಪ್ರದವೂ ಕೀರ್ತಿದಾಯಕವೂ ಆಗಿರುವುದು. ಈ ಪುರಾಣದ ಮಹತ್ತ್ವವೂ ಪವಿತ್ರತೆಯೂ ಈ ಗ್ರಂಥದ ಕೊನೆಯಲ್ಲಿರುವ ಪ್ರಶಸ್ತಿಯ ೨೨ ನೆಯ ಶ್ಲೋಕದಿಂದ ೨೭ ನೆಯ ಶ್ಲೋಕದವರೆಗೆ ಆರು ಶ್ಲೋಕಗಳಿಂದ ಚೆನ್ನಾಗಿ ವ್ಯಕ್ತವಾಗುವುದು. ಹೆಚ್ಚು ಬೆಲೆಬಾಳುವ ರತ್ನಗಳ ಉತ್ಪತ್ತಿಯು ಸಮುದ್ರದಿಂದಾಗುವಂತೆ ಸುಭಾಷಿತರತ್ನಗಳ ಉತ್ಪತ್ತಿಯು ಈ ಮಹಾಪುರಾಣದಿಂದಾಗುವುದೆಂದೂ ಬೇರೆ ಕಡೆಯಲ್ಲಿ ದುರ್ಲಭವಾಗಿರುವ ಸುಭಾಷಿತವು ಈ ಗ್ರಂಥದಲ್ಲಿ ಪದಪದದಲ್ಲಿ ಸುಲಭವಾಗಿರುವುದೆಂದೂ ಈ ಗ್ರಂಥವು "ಸಕಲಚ್ಛಂದೋಲಂಕೃತಿಲಕ್ಷ್ಯಂ" ಸಕಲಚ್ಛಂದಸ್ಸುಗಳಿಗೂ ಅಲಂಕಾರಗಳಿಗೂ ಲಕ್ಷ್ಯವಾಗಿರುವುದೆಂದೂ "ಅಪಹಸ್ತಿತಾನ್ಯಕಾವ್ಯಂ" ಇತರಕಾವ್ಯಗಳನ್ನು ಕೀಳುಮಾಡಿರುವುದೆಂದೂ ಈ ಗ್ರಂಥದ ಕರ್ತರು–ಆಚಾರ್ಯರು ಹೇಳಿರುವ ಮಾತು ಅಕ್ಷರಶಃ ಸತ್ಯವಾದುದೆಂದು ಈ ಗ್ರಂಥವನ್ನು ಪಠನ ಮಾಡುವವರಿಗೆ ಗೊತ್ತಾಗುವುದು. ಅಂದಮೇಲೆ ಸಂಸ್ಕೃತ ಭಾಷಾವ್ಯುತ್ಪತ್ತಿಗಾಗಿ ಪಠನಮಾಡುವವರಿಗೂ ಈ ಗ್ರಂಥಕ್ಕಿಂತ ಮಿಗಿಲಾದ ಕಾವ್ಯಗ್ರಂಥಗಳಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಕವಿತಾಶೈಲಿಯ ದೃಷ್ಟಿಯಿಂದಲೂ, ಕಾವ್ಯದೃಷ್ಟಿಯಿಂದಲೂ ಇದರಲ್ಲಿ ಮಹತ್ತ್ವವಿರುವುದಲ್ಲದೆ ಉತ್ತಮವಿಷಯಬಾಹುಳ್ಯದೃಷ್ಟಿಯಿಂದಲೂ ಮಹತ್ತ್ವವಿದೆ. ಪವಿತ್ರಾತ್ಮರಾದ ತೀರ್ಥಂಕರರೇ ಮೊದಲಾದವರು ಈ ಗ್ರಂಥದಲ್ಲಿ ವರ್ಣಿಸಲ್ಪಟ್ಟಿರುವುದರಿಂದ ಇದರಲ್ಲಿ ಪವಿತ್ರತೆಯೂ ಇದೆ.

### ಗ್ರಂಥಕರ್ತರು

ಭಗವದ್ಗುಣಭದ್ರಾಚಾರ್ಯರು ಈ ಉತ್ತರಪುರಾಣಗ್ರಂಥದ ಕರ್ತರು. ಇವರು ಭಗವಜ್ಜಿನಸೇನಾಚಾರ್ಯರ ಶಿಷ್ಯರು. ಭಗವಜ್ಜಿನಸೇನಾಚಾರ್ಯರು ತ್ರಿಷಷ್ಟಿಶಲಾಕಾಪುರುಷರ ಮಹಾಪುರಾಣವನ್ನು ರಚಿಸಬೇಕೆಂದು ಉದ್ದೇಶಿಸಿ ವೃಷಭತೀರ್ಥಂಕರರ ಮತ್ತು ಭರತಬಾಹುಬಲಿಗಳ ಪುರಾಣವನ್ನು ಪೂರ್ತಿಮಾಡುವಷ್ಟರಲ್ಲಿ ದೈವಾಧೀನರಾದುದರಿಂದ ಮುಂದಿನ ಅವಶಿಷ್ಟಭಾಗವನ್ನು ಪೂರ್ತಿಮಾಡಿ ತಮ್ಮ ಗುರುಗಳ ಉದ್ದೇಶವನ್ನು ಪೂರ್ತಿಗೊಳಿಸಿ ಕೀರ್ತಿಗಳಿಸಿದ ಮಹಾತ್ಮರೀ ಭಗವದ್ಗುಣಭದ್ರಾಚಾರ್ಯರು. ಇವರು ಭಗವಜ್ಜಿನಸೇನಾಚಾರ್ಯರ ಮತ್ತು ಅವರ ಸಧರ್ಮಿಗಳಾದ ದಶರಥಗುರುಗಳ ಶಿಷ್ಯರೆಂದೂ ತಮಗೆ ಲೋಕಸೇನರೆಂಬ ಮುಖ್ಯ ಶಿಷ್ಯಮುನಿಗಳಿದ್ದರೆಂದೂ ಅವರೂ ಈ ಪುರಾಣಕಾರ್ಯದಲ್ಲಿ ಸಹಾಯವನ್ನು ಮಾಡಿರುವರೆಂದೂ ಅಮೋಘವರ್ಷನ ಪುತ್ರನಾದ ಅಕಾಲವರ್ಷನ ರಾಜ್ಯಕಾಲದಲ್ಲಿ ಶಕ ೮೨೦ ನೆಯ ಪಿಂಗಲಸಂವತ್ಸರದ ಜ್ಯೇಷ್ಠ ಶುಕ್ಲಪಂಚಮಿಯಲ್ಲಿ (ಕ್ರಿ.ಶ. ೮೯೮) ಈ ಗ್ರಂಥವು ಪೂರ್ತಿಯಾಯಿತೆಂದೂ ಇದರ ಕೊನೆಯಲ್ಲಿರುವ ಪ್ರಶಸ್ತಿಯಿಂದ ಗೊತ್ತಾಗುವುದು. ಈ ಗ್ರಂಥವು ವಿರಚಿತವಾಗಿ ೧೦೪೨ ವರ್ಷಗಳಾಗಿವೆ.

ಅಮೋಘವರ್ಷನ ರಾಜ್ಯಕಾಲವು ಕ್ರಿಸ್ತಶಕ ೮೧೫ ರಿಂದ ೮೭೭ ವರ್ಷಗಳೆಂದು ಚರಿತ್ರಕಾರರಿಂದ ನಿಶ್ಚಯಿಸಲ್ಪಟ್ಟಿದೆ. ಈ ಉತ್ತರಪುರಾಣವು ಕ್ರಿ.ಶ. ೮೯೮ ರಲ್ಲಿ (ಶಕ ೮೨೦) ರಚಿತವಾದುದೆಂದು ಗ್ರಂಥಕರ್ತರೇ ಹೇಳಿರುವುದರಿಂದ ಭಗವಜ್ಜಿನಸೇನಾಚಾರ್ಯರು ಪೂರ್ವಪುರಾಣವನ್ನು ಕ್ರಿ.ಶ. ೮೩೮ರಲ್ಲಿ ರಚಿಸಿರಬಹುದೆಂದು ಊಹಿಸಿರುವುದು ಸರಿಯಾದರೆ ಪೂರ್ವಪುರಾಣ ರಚನಾಕಾಲಕ್ಕೂ ಉತ್ತರಪುರಾಣ ರಚನಾಕಾಲಕ್ಕೂ ಸುಮಾರು ೬೦ ವರ್ಷಗಳ ಅಂತರವು ತೋರುವುದು. ಅಮೋಘವರ್ಷನ ರಾಜ್ಯಾಂತಕಾಲಕ್ಕೂ ಹರಿವಂಶಪುರಾಣದ ರಚನಾಕಾಲಕ್ಕೂ (ಕ್ರಿ.ಶ. ೭೮೩) ೯೪ ವರ್ಷಗಳ ಅಂತರವಿದೆ. ಹರಿವಂಶಪುರಾಣದಲ್ಲಿ ಭಗವಜ್ಜಿನಸೇನಾಚಾರ್ಯರ ಜಿನಗುಣಸ್ತುತಿಯೂ ವರ್ಧಮಾನಪುರಾಣವೂ ಉಲ್ಲೇಖಿಸಲ್ಪಟ್ಟಿರುವುದರಿಂದ ಅದಕ್ಕಿಂತ ಹಿಂದೆಯೇ ಭಗವಜ್ಜಿನಸೇನಾಚಾರ್ಯರು ಸುಪ್ರಸಿದ್ಧಕವಿಗಳಾಗಿದ್ದರೆಂದು ವ್ಯಕ್ತವಾಗುವುದು. ಪೂರ್ವಪುರಾಣವು ಅಮೋಘವರ್ಷನ ರಾಜ್ಯಕಾಲದಲ್ಲಿ ರಚಿತವಾದುದು. ಉತ್ತರಪುರಾಣವು ಅಕಾಲವರ್ಷನ ರಾಜ್ಯಕಾಲದಲ್ಲಿ ರಚಿತವಾದುದು. ಆದುದರಿಂದ ಪೂರ್ವಪುರಾಣ ರಚನಾಕಾಲಕ್ಕೂ ಉತ್ತರಪುರಾಣ ರಚನಾಕಾಲಕ್ಕೂ ೬೦ ವರ್ಷಗಳ ಅಂತರವಿದ್ದಿತೆಂದು ನಿಷ್ಕರ್ಷೆಯಾಗಿ ಹೇಳಲಾಗದಿದ್ದರೂ, ದೀರ್ಘಕಾಲದ ಅಂತರವಿದ್ದಿತೆಂಬುದು ನಿಜ.

ಇನ್ನು ಈ ಗುರುಶಿಷ್ಯರ ಕವಿತೆಯ ವಿಚಾರವಾಗಿ ಹೇಳುವುದಾದರೆ ಭಗವಜ್ಜಿನಸೇನಾಚಾರ್ಯರ ಕವಿತೆಗೂ ಇವರ ಕವಿತೆಗೂ ವೈಲಕ್ಷಣ್ಯವಿದೆ. ಅವರ ಕವಿತಾಪ್ರವಾಹವು ಸ್ವಲ್ಪವೂ ತಡೆಯಿಲ್ಲದೆ ಹರಿಯುತ್ತದೆನ್ನುವಾಗ ಇವರ ಕವಿತಾಪ್ರವಾಹವು ಅದಕ್ಕೆ ಸ್ವಲ್ಪ ವಿಲಕ್ಷಣವಾಗಿದೆಯೆನ್ನಬೇಕಾಗುವುದು. ಅವರ ಕವಿತೆಯ ಅರ್ಥಬೋಧೆಯು ಸುಗಮವಾಗಿ ಆಗುವುದು. ಇವರ ಕವಿತೆಯ ಅರ್ಥಬೋಧೆಯು ಕೆಲವು ಕಡೆಗಳಲ್ಲಿ ಬಹು ಶ್ರಮಸಾಧ್ಯವಾಗಿರುವುದು. ಬೇರೆಯವರ ಕವಿತೆಯ ದೃಷ್ಟಿಯಿಂದ ಇವರ ಕವಿತೆಯು ಬಹು ಪ್ರೌಢವಾಗಿರುವುದೆಂದು ಹೇಳಬಹುದಾದರೂ ಭಗವಜ್ಜಿನಸೇನಾಚಾರ್ಯರ ಕವಿತೆಯನ್ನೂ ಇವರ ಕವಿತೆಯನ್ನೂ ತುಲನಾತ್ಮಕ ದೃಷ್ಟಿಯಿಂದ ನೋಡುವುದಾದರೆ ಅವರ ಕವಿತೆಯು ಕಳಿತ ಹಣ್ಣಿನಂತೆಯೂ ದ್ರಾಕ್ಷಾಪಾಕದಂತೆಯೂ ಇವರ ಕವಿತೆಯು ದೋರೆ ಹಣ್ಣಿನಂತೆಯೂ ನಾರಿಕೇಲಪಾಕದಂತೆಯೂ ಇರುವುದೆಂದು ಹೇಳಬೇಕಾಗುವುದು. ಹೀಗೆ ಹೇಳುವುದರಿಂದ ಗುರುಶಿಷ್ಯರಲ್ಲಿ ಸ್ವಲ್ಪ ಉತ್ಕರ್ಷತಾಪಕರ್ಷತೆಗಳು ತೋರಬಹುದಾದರೂ ಗುರುಶಿಷ್ಯಭಾವದ ದೃಷ್ಟಿಯಿಂದ ಅದು ಭೂಷಣವಾಗಬಹುದಲ್ಲದೆ ದೂಷಣವಾಗದು.

ಸರ್ವಸಂಗ ಪರಿತ್ಯಾಗಿಗಳೂ, ಜ್ಞಾನ ಧ್ಯಾನ ತಪೋನಿಷ್ಠರೂ ಮನನಶೀಲರೂ ಉದ್ದಾಮಕವಿಗಳೂ ಆದ ಆ ಉಭಯಾಚಾರ್ಯಪುಂಗವರುಗಳಿಂದ ನಿರ್ಮಿತಗಳಾದ ಪೂರ್ವೋತ್ತರಪುರಾಣಗಳ ಸಂಕಲನರೂಪವಾದ ಮಹಾಪುರಾಣವೆಂಬ ಮಹಾಸಾಗರವನ್ನು ಬುದ್ಧಿಯಿಂದ ಕೃಶನಾದ ನನ್ನಂಥವನು ವಾಖ್ಯೆಯೆಂಬ ನೌಕೆಯಿಂದ ದಾಂಟುವುದು ಅತಿ ಸಾಹಸದ ಮತ್ತು ಕೈಲಾಗದ ಕೆಲಸವಾಗಿದ್ದಿತಾದರೂ ಪರಮ ಪಾವನವಾದ ಜೈನಧರ್ಮದ ಮಹಿಮೆಯಿಂದಲೂ ಆ ಆಚಾರ್ಯವರ್ಯರುಗಳ ಚರಣಕಮಲಗಳಲ್ಲಿ ನನಗಿರುವ ಅವಿಚಲಿತವಾದ ಭಕ್ತಿಶ್ರದ್ಧಾತಿಶಯದಿಂದಲೂ ಸಾಧ್ಯವಾದುದಲ್ಲದೆ ನನ್ನ ಶಕ್ತಿಯಿಂದಲ್ಲ. ಆ ಜ್ಞಾನನಿಧಿಗಳಾದ ಆಚಾರ್ಯಪುಂಗವರೇ "ಆಳವಾದ ಪುರಾಣವೆಂಬ ಸಮುದ್ರವೆಲ್ಲಿ ? ಜ್ಞಾನದಿಂದ ಬಡವನಾದ ನಾನೆಲ್ಲಿ ?" ಎಂದು ಹೇಳಿರುವಾಗ ನನ್ನಂತಹ ಯಃಕಶ್ಚಿನ ಮನುಷ್ಯನ ಮಾತೇನು ?

ಇದೇ ಪ್ರಮಾಥಿಸಂವತ್ಸರದ ಮಾಘ ಶುಕ್ಲ ೩ ಭಾನುವಾರದಿಂದ ಮಾಘ ಕೃಷ್ಣ ೪ ಮಂಗಳವಾರದವರೆಗೆ ಶ್ರವಣಬೆಳಗೊಳದಲ್ಲಿ ನಡೆಯಲಿರುವ ಮಹಾಮಸ್ತಕಾಭಿಷೇಕ ನಿಮಿತ್ತವಾದ ಮಹೋತ್ಸವಗಳೊಳಗಾಗಿ ಈ ಗ್ರಂಥದ ವ್ಯಾಖ್ಯಾಲೇಖನವನ್ನೂ ಮುದ್ರಣವನ್ನೂ ಪೂರ್ತಿಮಾಡಿ ಪೂರ್ತಿಗ್ರಂಥವನ್ನು ಮೈಸೂರು ಸಂಸ್ಥಾನದ ಆಳುವ ಮಹಾಪ್ರಭುಗಳವರಾದ ನಾಲ್ವಡಿ ಶ್ರೀಮತ್ ಕೃಷ್ಣರಾಜ ಒಡೆಯರ್ ಬಹಾದುರ್‌ರವರ ಕರಕಮಲದಲ್ಲಿ, ಅವರ ಅಪ್ಪಣೆಯನ್ನು ಪಡೆದು, ಸಮರ್ಪಿಸ

ಬೇಕೆಂದೂ ಮಹಾಮಸ್ತಕಾಭಿಷೇಕ ಮಹೋತ್ಸವ ಸಂದರ್ಭದಲ್ಲಿ ಈ ಮಹಾಗ್ರಂಥದ ಉದ್ಘಾಟನೋತ್ಸವವನ್ನು ನೆರವೇರಿಸಿ ಪವಿತ್ರ ಜೈನಾಗಮದ ಪ್ರಭಾವನೆಯನ್ನು ಮಾಡಬೇಕೆಂದೂ ಉದ್ದೇಶಿಸಿ ಈ ಗ್ರಂಥಕ್ಕಾಗಿ ವರ್ಷಾನುಕಾಲ ದಿವಾರಾತ್ರಿ ಕೆಲಸಮಾಡಿದ್ದೇನೆ. ಈ ಗ್ರಂಥವು ಅಂದವಾಗಿಯೂ ಶುದ್ಧವಾಗಿಯೂ ಪ್ರಕಾಶಿತವಾಗಬೇಕೆಂಬ ಉದ್ದೇಶದಿಂದಲೂ ಉತ್ಸಾಹದಿಂದಲೂ, ಒಬ್ಬ ಪರಿಶ್ರಮಿಯಾದ ಮನುಷ್ಯನು ಸ್ವಶಕ್ತಿಯನ್ನು ಮರೆಮಾಚದೆ ಎಷ್ಟು ಶ್ರಮಪಡುವುದಕ್ಕೆ ಶಕ್ಯವಿರುವುದೋ ಅಷ್ಟೂ ಶ್ರಮಪಟ್ಟಿದ್ದೇನೆ. ಇದು ವಸ್ತುಸ್ಥಿತಿಯಲ್ಲದೆ ಆತ್ಮಪ್ರಶಂಸೆಯಲ್ಲ.

ಮುದ್ರಣಪ್ರತಿಯನ್ನು (Proof) ನೋಡಿ ಶುದ್ಧಮಾಡುವಾಗ ಆ ಪ್ರತಿಯನ್ನೂ ಬರೆದುಕೊಟ್ಟಿರುವ ಪ್ರತಿಯನ್ನೂ ಹೋಲಿಸಿ ನೋಡಿ ಶುದ್ಧಮಾಡಬೇಕಾಗುವುದು. ಹಾಗೆ ಮಾಡದಿದ್ದರೆ ಕೆಲವು ಶಬ್ದಗಳೂ ವಾಕ್ಯಗಳೂ ಬಿಟ್ಟುಹೋಗುವ ಸಂಭವವಿರುವುದು. ಆದರೆ ಎರಡೆರಡುಸಲ ಆ ಮುದ್ರಣಪ್ರತಿಗಳನ್ನು ನೋಡುವವನೂ ವ್ಯಾಖ್ಯೆಯನ್ನು ಬರೆಯುವವನೂ ನಾನೊಬ್ಬನೇ ಆಗಿದ್ದುದರಿಂದಲೂ ಮಹೋತ್ಸವವು ಸಮೀಪಿಸಿದುದರಿಂದಲೂ ಹೋಲಿಕೆಯನ್ನು ನೋಡಲು ಅವಕಾಶವಿಲ್ಲದೆ ಆದರಿಂದಲೂ ನನ್ನ ಪ್ರಮಾದದಿಂದಲೂ ಅಶುದ್ಧಿಗಳು ಉಳಿದಿರಬಹುದು. ಗ್ರಂಥವನ್ನು ಆದ್ಯಂತವಾಗಿ ನೋಡಿ ಅಶುದ್ಧಿಗಳನ್ನು ಕಂಡುಹಿಡಿದು ಪೂರ್ತಿಯಾಗಿ ಶುದ್ಧಾಶುದ್ಧಪತ್ರಿಕೆಯನ್ನು ಕೊಡುವುದಕ್ಕೂ ಅವಕಾಶವಿಲ್ಲದೆ ಈಗ ನೋಡಲು ಸಾಧ್ಯವಾದಷ್ಟು ಭಾಗಕ್ಕೆ ಮಾತ್ರ ಶುದ್ಧಾಶುದ್ಧಪತ್ರಿಕೆಯನ್ನು ಕೊಟ್ಟಿದೆ. ಮುಂದೆ ಮುಂದಿನ ಭಾಗವನ್ನು ಸಾವಧಾನವಾಗಿ ನೋಡಿ ಆದರಲ್ಲಿ ಅಶುದ್ಧಿಗಳು ಕಂಡುಬಂದರೆ ಅವುಗಳ ಶುದ್ಧಾಶುದ್ಧಪತ್ರಿಕೆಯನ್ನು ಕೊಡುವ ವ್ಯವಸ್ಥೆಮಾಡಲಾಗುವುದು.

ಸಂಸ್ಕೃತಭಾಷೆಯಲ್ಲಿ ಸಾಧಾರಣವಾದ ಪರಿಚಯವುಳ್ಳವರೂ ಪದಶಃ ಅರ್ಥಮಾಡಿಕೊಳ್ಳುವುದಕ್ಕೆ ಅನುಕೂಲವಾಗಬೇಕೆಂಬ ಉದ್ದೇಶದಿಂದ ಶ್ಲೋಕಗಳ ಪದಗಳಿಗನುಸಾರವಾಗಿಯೇ ಭಾವಾರ್ಥವನ್ನು ಬರೆದಿರುತ್ತೇನೆ. ಇದರಿಂದ ಕೆಲವು ಶ್ಲೋಕಗಳ ಭಾವವು ಶೀಘ್ರವಾಗಿ ಗೊತ್ತಾಗದೆಯೂ ಕ್ಲಿಷ್ಟವಾಗಿಯೂ ಇರಬಹುದು. ಅಂತಹ ಕಡೆಗಳಲ್ಲಿ ಎರಡು ಮೂರಾವೃತ್ತಿ ಸಾವಧಾನದಿಂದ ನೋಡಿದರೆ ಭಾವವು ಗೊತ್ತಾಗುವುದು. ಕೆಲವು ಕರ್ಮಣಿಪ್ರಯೋಗದಲ್ಲಿರುವ ವಾಕ್ಯಗಳ ಅರ್ಥವನ್ನು ಕನ್ನಡದಲ್ಲಿ ಕರ್ತರಿಪ್ರಯೋಗಕ್ಕೆ ಮಾರ್ಪಡಿಸಿದ್ದೇನೆ.

ತೀರ್ಥಕರಪರಮದೇವರುಗಳು ವಿರಕ್ತರಾಗಿ ದೀಕ್ಷೆಯನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಕೆಲವು ಉಪವಾಸಗಳನ್ನು ಕೈಕೊಳ್ಳುವರು. ಅಂತಹ ಸಂದರ್ಭದಲ್ಲಿ ಚತುರ್ಥೋಪವಾಸ ಷಷ್ಠೋಪವಾಸ ಇತ್ಯಾದಿ ಶಬ್ದಗಳು ಹಲವೆಡೆಗಳಲ್ಲಿ ಪ್ರಯೋಗಿಸಲ್ಪಟ್ಟಿವೆ. ಆ ಶಬ್ದಗಳ ಅರ್ಥವಿವರಣವನ್ನು ಅಲ್ಲಲ್ಲಿ ಹಲವೆಡೆಗಳಲ್ಲಿ ಮಾಡುವುದಕ್ಕೆ ಪ್ರತಿಯಾಗಿ ಎಲ್ಲಾಕಡೆಗಳಿಗೂ ಅನ್ವಯವಾಗುವಂತೆ ಇಲ್ಲಿ ಆ ಅರ್ಥವಿವರಣವು ಮಾಡಲ್ಪಡುವುದು:- ಏಕಭೋಜನವನ್ನು ಮಾಡುವವನು ಯೋಗಿಯೆಂದೂ ದ್ವಿಭೋಜನವನ್ನು ಮಾಡುವವನು ಭೋಗಿಯೆಂದೂ ಹೇಳುವುದುಂಟು. ಮಧ್ಯಮಶ್ರಾವಕನು ಸಾಮಾನ್ಯವಾಗಿ ದ್ವಿಭೋಜನವನ್ನು ಮಾಡುವವನಾಗಿರುತ್ತಾನೆ. ಈ ಮಧ್ಯಮಶ್ರಾವಕನ ಅಪೇಕ್ಷೆಯಿಂದ ಯೋಗಿಗೆ ಒಂದು ದಿವಸದಲ್ಲಿ ಒಂದು ಹೊತ್ತಿನ ಉಪವಾಸವಾಗುವುದು. ಚತುರ್ಥೋಪವಾಸವೆನ್ನುವಲ್ಲಿ ಚತುರ್ಥಶಬ್ದಕ್ಕೆ ''ನಾಲ್ಕನೆಯ'' ಎಂದರ್ಥವಾಗುವುದಾದರೂ ಆ ಶಬ್ದಕ್ಕೆ ಹಾಗೆ ಅರ್ಥವನ್ನು ಬರೆದರೆ ''ಯಾವುದರ ನಾಲ್ಕನೆಯ ? ಎಂಬ ಸಂದೇಹವುಂಟಾಗುವುದು. ಅಂತಹ ಕಡೆಗಳಲ್ಲೆಲ್ಲ ಅರ್ಥವಿವರಣವನ್ನು ಮಾಡಬೇಕು. ಇಲ್ಲಿ ಒಂದು ಕಡೆಯಲ್ಲಿ ಅರ್ಥವಿವರಣವನ್ನು ಮಾಡುವ ಉದ್ದೇಶವನ್ನಿಟ್ಟುಕೊಂಡು ಅಂತಹ ಕಡೆಗಳಲ್ಲೆಲ್ಲ ಚತುರ್ಥೋಪವಾಸಶಬ್ದಕ್ಕೆ ನಾಲ್ಕು ಉಪವಾಸವೆಂದೂ ಷಷ್ಠೋಪವಾಸಶಬ್ದಕ್ಕೆ ಆರು ಉಪವಾಸವೆಂದೂ ಉಲ್ಲೇಖಿಸಿದ್ದೇನಲ್ಲದೆ ''ನಾಲ್ಕು ದಿನ ಉಪವಾಸ. ಆರುದಿನ ಉಪವಾಸ'' ಎಂದು ಉಲ್ಲೇಖಿಸಿಲ್ಲ. ಮಧ್ಯಮಶ್ರಾವಕನ ದೃಷ್ಟಿಯಿಂದ ಯೋಗಿಗೆ ನಾಲ್ಕು ಉಪವಾಸಗಳೆಂದರೆ ಎರಡು ದಿನಗಳ ಉಪವಾಸವೆಂದರ್ಥವು. ಉದಾಹರಣೆಗಾಗಿ – ಸಪ್ತಮಿಯ ದಿವಸ ಯೋಗಿಯು ಮಧ್ಯಾಹ್ನ ಭೋಜನವನ್ನು ಮಾಡಿ ಅಷ್ಟಮಿಯ ಉಪವಾಸವನ್ನು ಕೈಕೊಂಡು ಅಷ್ಟಮಿಯ ದಿವಸ ನಿರಾಹಾರಿಯಾಗಿದ್ದು ನವಮಿಯ ದಿವಸ ಮಧ್ಯಾಹ್ನ ಏಕಭೋಜನವನ್ನು ಮಾಡುತ್ತಾನೆಂದು ತಿಳಿಯೋಣ. ಆಗ ಮಧ್ಯಮಶ್ರಾವಕನ ದೃಷ್ಟಿಯಿಂದ ಆ ಯೋಗಿಗೆ ಸಪ್ತಮಿಯ ದಿವಸ ಒಂದು ಹೊತ್ತಿನ ಉಪವಾಸ, ಅಷ್ಟಮಿಯ ದಿವಸ ಎರಡುಹೊತ್ತಿನ ಉಪವಾಸ, ನವಮಿಯ ದಿವಸ ಒಂದು ಹೊತ್ತಿನ ಉಪವಾಸ ಸೇರಿ ನಾಲ್ಕು ಉಪವಾಸಗಳೂ ಎರಡು ದಿನಗಳೂ ಆಗುವುವು. (ಸಪ್ತಮಿಯ ಮಧ್ಯಾಹ್ನದಿಂದ ಅಷ್ಟಮಿಯ ಮಧ್ಯಾಹ್ನಕ್ಕೆ ಒಂದು ದಿವಸ. ಅಷ್ಟಮಿಯ ಮಧ್ಯಾಹ್ನದಿಂದ ನವಮಿಯ ಮಧ್ಯಾಹ್ನಕ್ಕೆ ಒಂದು ದಿವಸ ಸೇರಿ ಎರಡು ದಿವಸಗಳು) ಇದಕ್ಕೆ ಪ್ರೋಷಧೋಪವಾಸವೆಂದೂ ಹೆಸರಿದೆ. ಹೀಗೆ ಆರು ಉಪವಾಸಗಳೆಂದರೆ ಮೂರು ದಿವಸಗಳ ಉಪವಾಸವೆಂದರ್ಥವು.

ಈ ಮಹಾಪುರಾಣಗ್ರಂಥದ ಪ್ರಕಾಶನಕ್ಕೆ ಮೊತ್ತಮೊದಲನೆಯವರಾಗಿ ನನಗೆ ಉತ್ತೇಜಕರೂ ಪ್ರೋತ್ಸಾಹಕರೂ ಆದ ಪೂಜ್ಯ ಶ್ರೀ ನೇಮಿಸಾಗರವರ್ಣೀಜಿಯವರಿಗೆ (ಈಗ ಶ್ರವಣಬೆಳಗೊಳದ ಮಠಾಧೀಶರಾಗಿರುವ ಸ್ವಸ್ತಿಶ್ರೀ ಚಾರುಕೀರ್ತಿಪಂಡಿತಾಚಾರ್ಯವರ್ಯ ಸ್ವಾಮಿಗಳವರಿಗೆ) ಗ್ರಂಥಪೂರ್ತಿಯಾದ ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ.

ವೈನಾಡಿನ ಧರ್ಮಾತ್ಮರಾದ ಶ್ರೀಮಾನ್ ಮಣಿಯಂಗೂಡು ಕೃಷ್ಣಯ್ಯಗೌಡರವರು ಈ ಮಹಾಪುರಾಣವನ್ನು ಪ್ರಕಾಶಪಡಿಸುವ ಸಂಕಲ್ಪವನ್ನು ಮಾಡಿ ಪೂರ್ವಪುರಾಣವನ್ನು ಮುದ್ರಣ ಮಾಡಿಸಿದರು. ಬಳಿಕ ಆ ಪುಣ್ಯಾತ್ಮರು ವಯೋಧರ್ಮದಿಂದ ಕೀರ್ತಿಶೇಷರಾದರೂ ಅವರ ಸುಪುತ್ರರೂ ಪರಮ ಧಾರ್ಮಿಕರೂ ಆದ ಶ್ರೀಮಾನ್ ಎಂ.ಕೆ. ಸುಬ್ಬಯ್ಯಗೌಡರವರು. ಈ ಉತ್ತರಪುರಾಣವನ್ನೂ ಮುದ್ರಣಮಾಡಿಸಿ ಪಿತೃಸಂಕಲ್ಪವನ್ನು ಪೂರ್ತಿ ಮಾಡಿರುತ್ತಾರೆ. ಈ ಉಭಯ ಮಹನೀಯರ ಮಹೋಪಕಾರವನ್ನು ಸಮಾಜವು ಚಿರಕಾಲಸ್ಮರಿಸುತ್ತ ಕೃತಜ್ಞವಾಗಿರಬೇಕು. ಇವರ ಧಾರ್ಮಿಕವಂಶವು ಸಂಪತ್ಸಮೃದ್ಧಿಯಿಂದ ಉದಿತೋದಿತವಾಗಿ ಬೆಳೆಯಲಿ.

**ರಾಜರ್ಷಿಗಳೆಂದು ಲೋಕವಿಖ್ಯಾತರಾಗಿರುವ ನಮ್ಮ ಮೈಸೂರು ಮಹಾಪ್ರಭುಗಳವರು ವಿವಿಧ ಕಲೆಗಳಲ್ಲಿಯೂ ಸಾಹಿತ್ಯಗಳಲ್ಲಿಯೂ ಅನುಪಮವಾದ ಅಭಿರುಚಿಯುಳ್ಳವರೂ ಉತ್ತೇಜಕರೂ ಸಕಲಮತಧರ್ಮಗಳಲ್ಲಿಯೂ ಪ್ರೀತಿ ಸಮದೃಷ್ಟಿಯುಳ್ಳವರೂ ತಾತ್ತ್ವಿಕವಿಷಯುಗಳಲ್ಲಿ ಮಹಾಪ್ರಾಜ್ಞರೂ ಆಗಿರುತ್ತಾರೆಂಬುದು ಜಗತ್ಪ್ರಸಿದ್ಧವಾಗಿರುವ ವಿಷಯವಾಗಿದೆ. ಮಹಾಪ್ರಭುಗಳವರು ಈ ಗ್ರಂಥವನ್ನು ಪರಾಮರ್ಶಿಸಿ ಇದರ ಸಮರ್ಪಣೆಗೆ ಅನುಗ್ರಹ ಪೂರ್ವಕವಾದ ಅಪ್ಪಣೆಯನ್ನು ದಯೆಪಾಲಿಸಿರುವುದೂ ಮೇಲೆ ಹೇಳಲ್ಪಟ್ಟ ಗುಣಗಳಿಗೊಂದು ನಿದರ್ಶನವಾಗಿದೆ. ನಮ್ಮ ಮಹಾಪ್ರಭುಗಳವರ ಈ ಘನಕೃಪೆಗಾಗಿ ನಿಖಿಲ ಜೈನಸಮಾಜವು ಎಂದೆಂದೂ ಹೃತ್ಪೂರ್ವಕವಾದ ಮತ್ತು ರಾಜಭಕ್ತಿಯುತವಾದ ಕೃತಜ್ಞತೆಯುಳ್ಳುದಾಗಿರುವುದು.**

**ಈ ಪುಣ್ಯಪುರಾಣವು ಆಚಂದ್ರಾರ್ಕವಾಗಿ ಜಗತ್ತಿನಲ್ಲಿ ಪ್ರಕಾಶಿಸಲಿ.**

ವೀರಶಕ ೨೪೬೬
ತಾ. ೩೧–೧–೧೯೪೦

ಪೂರ್ವಾಚಾರ್ಯ ಚರಣಚಂಚರೀಕ,
**ಎ. ಶಾಂತಿರಾಜಶಾಸ್ತ್ರಿ.**

## ಚಿತ್ರ ಪರಿಚಯ

ಸ್ಥಾಪನೆ: 1988 ದೂರವಾಣಿ: 64 94 61

## ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್(ರಿ),

'ಶಾಂತಿ' 369, 42 ನೇ ಅಡ್ಡರಸ್ತೆ, ಜಯನಗರ ೮ನೇ ಬ್ಲಾಕ್, ಬೆಂಗಳೂರು – 560 082

(ಆದಾಯ ತೆರಿಗೆ ಇಲಾಖೆಯ ದಿನಾಂಕ 27.6.1988 ರ ಪತ್ರಸಂಖ್ಯೆ Accts/718/10A/Vol/BII/S–291 ರಂತೆ ನೋಂದಾಯಿಸಲ್ಪಟ್ಟಿದೆ)



---

**ಈ ಸಂಸ್ಥೆಯ ಪ್ರಮುಖ ಧ್ಯೇಯೋದ್ದೇಶಗಳು:**

೧. ಇದೊಂದು ಛಾರಿಟಬಲ್ ಟ್ರಸ್ಟ್.

೨. ಧಾರ್ಮಿಕ ಪುರಾಣ, ತತ್ತ್ವ, ಪೂಜಾಪಾಠ, ಸ್ತೋತ್ರ, ಸಿದ್ಧಾಂತ, ನೀತಿ, ಆಚಾರ ಮತ್ತು ಸಾಹಿತ್ಯ ಗ್ರಂಥಗಳ ಪ್ರಕಾಶನ ಮಾಡಿಸಿ ಸಮಾಜಬಾಂಧವರಿಗೆ ಒದಗಿಸುವುದರ ಮೂಲಕ ಧರ್ಮಜಾಗೃತಿ ಮತ್ತು ಧರ್ಮಪ್ರಭಾವನೆ ಮಾಡುವುದು.

೩. ಈ ದಿಶೆಯಲ್ಲಿ ವಿತ್ತೂರು ಶಾಂತಿರಾಜಶಾಸ್ತ್ರಿಗಳ ಎಲ್ಲ ಕೃತಿಗಳನ್ನೂ ಲೇಖನಗಳನ್ನೂ ಭಾಷಣಗಳನ್ನೂ ಭಾಷಾಂತರಗಳನ್ನೂ ಸಂಗ್ರಹಿಸಿ ವ್ಯವಸ್ಥಿತ ರೀತಿಯಲ್ಲಿ ಸಂರಕ್ಷಿಸಿ ಪುನರ್ಮುದ್ರಣದ ಮತ್ತು ಪ್ರಕಾಶನದ ಕಾರ್ಯಗಳನ್ನು ಕೈಗೊಂಡು ಈ ಎಲ್ಲ ಕೃತಿಗಳನ್ನು ಜನಸಾಮಾನ್ಯರಿಗೆ ಸುಲಭಬೆಲೆಯಲ್ಲಿ ದೊರಕಿಸಿಕೊಡುವುದು, ಇದೇ ರೀತಿ ಇತರ ಖ್ಯಾತ ಲೇಖಕರ ಗ್ರಂಥ ಪ್ರಕಟಣಾ ಕಾರ್ಯ ಕೈಗೊಳ್ಳುವುದು.

೪. ದೇಶದ ಯಾವುದೇ ವಿಶ್ವವಿದ್ಯಾಲಯದಲ್ಲಿ ಜೈನಾಲಜಿ ಮತ್ತು ಪ್ರಾಕೃತ ವಿಷಯದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ಮತ್ತು/ಅಥವಾ ಎಮ್.ಎ. ಪದವಿಗಾಗಿ ಅಭ್ಯಸಿಸುವ ಅಥವಾ ಶಾಸ್ತ್ರಿಗಳ ಜೀವನ ಕುರಿತು, ಅವರ ಕೃತಿಗಳ ಬಗ್ಗೆ ಸಂಶೋಧನೆ ನಡೆಸುವ ಎಲ್ಲ ವಿದ್ಯಾರ್ಥಿಗಳಿಗೂ ಜಾತಿಭೇದವಿಲ್ಲದೆ ಸೂಕ್ತ ಧನಸಹಾಯ, ಪ್ರೋತ್ಸಾಹ ನೀಡುವುದು.

೫. ಪ್ರಾತಃಸ್ಮರಣೀಯರಾದ ಶಾಂತಿರಾಜಶಾಸ್ತ್ರಿಗಳ ಸಂಸ್ಮರಣೆಯ ಅಂಗವಾಗಿ ಹಾಗೂ ಇತರ ಲೇಖಕರ ವಿಷಯವಾಗಿ ಚರ್ಚಾಸ್ಪರ್ಧೆ, ಉಪನ್ಯಾಸ, ವಾಚನ, ಗೋಷ್ಠಿ ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸುವುದು.

೬. ಅರ್ಹ, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಬಹುಮಾನ, ವಿದ್ಯಾರ್ಥಿವೇತನ ನೀಡುವುದು.

೭. ಶಾಲಾ ಕಾಲೇಜುಗಳಲ್ಲಿ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೆ ಜಾತಿಭೇದವಿಲ್ಲದಂತೆ ಅವರ ವಿದ್ಯಾರ್ಜನೆಗೆ, ಸಂಶೋಧನಾ ಕಾರ್ಯಗಳಿಗೆ ಅನುಕೂಲವಾಗುವಂತೆ, ಶಾಲಾ ಕಾಲೇಜು ಹಾಸ್ಟೆಲ್‌ಗಳ ಅಭಿವೃದ್ಧಿಗೆ ಸಹಾಯ, ಸಹಕಾರ ನೀಡಿ ಶ್ರಮಿಸುವುದು.

೮. ಗ್ರಂಥಾಲಯಗಳಿಗೆ ಸಹಾಯ, ಸಹಕಾರ ಒದಗಿಸುವುದು, ಸ್ಥಾಪಿಸುವುದು, ಇತ್ಯಾದಿ, ಇತ್ಯಾದಿ.

**ಈ ಧ್ಯೇಯೋದ್ದೇಶಗಳನ್ನು ಈಡೇರಿಸಲು ಸಾರ್ವಜನಿಕರು ನೀಡಬಹುದಾದ ಸಹಕಾರ, ಸಹಾಯ ಈ ರೀತಿ ಇದೆ:**

೧. ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿಗಳು ಅವರ ಜೀವನ ಪರ್ಯಂತ ಶ್ರಮಿಸಿ ಕರ್ನಾಟಕದ ಜನತೆಗೆ ನೀಡಿರುವ ಮೇರುಕೃತಿ **"ಮಹಾಪುರಾಣ"** ಆದಿಯಾಗಿ ೫೨ಕ್ಕೂ ಮೀರಿದ ಗ್ರಂಥಗಳು ಮತ್ತು ಲೇಖನಗಳು ಸುಮಾರು ೧೧,೦೦೦ ಪುಟಗಳನ್ನೂ ಮೀರಿದೆ! ಈ ಗ್ರಂಥಗಳ ಪುನರ್ಮುದ್ರಣಕ್ಕೆ ಅಪಾರಹಣದ ಅವಶ್ಯಕತೆ ಇದೆ. ಈ ಪವಿತ್ರಕಾರ್ಯಕ್ಕೆ ಸಾರ್ವಜನಿಕರು ಸ್ವತಃ ಮುಂದೆ ಬಂದು ಯಾವುದೇ ಗ್ರಂಥದ ಪುನರ್ಮುದ್ರಣಕ್ಕೆ ಸಹಯೋಗ ನೀಡಿ ಟ್ರಸ್ಟಿನ ಪೋಷಕರಾಗಬಹುದು.

೨. ಟ್ರಸ್ಟಿನ ಧ್ಯೇಯೋದ್ದೇಶಗಳನ್ನು ನೆರವೇರಿಸಲು ಟ್ರಸ್ಟಿಗೆ ಕನಿಷ್ಠ ರೂ.೧೦೦೧ (ಒಂದು ಸಾವಿರದ ಒಂದು ರೂಪಾಯಿಗಳ) ಧನಸಹಾಯ ನೀಡಿ ಪೋಷಕರಾಗಬಹುದು.

೩. ಇಂತಹ ಎಲ್ಲ ದಾನಿಗಳಿಗೂ ಟ್ರಸ್ಟ್ ಪ್ರಕಟಿಸುವ ಶಾಸ್ತ್ರಿಗಳ ಎಲ್ಲ ಗ್ರಂಥಗಳ ಒಂದೊಂದು ಗೌರವ ಪ್ರತಿಯನ್ನು ಒದಗಿಸಲಾಗುವುದು.

೪. ಟ್ರಸ್ಟಿನ ವಿದ್ಯಾರ್ಥಿವೇತನ ನಿಧಿಗೆ ೧೦೧ ರೂಪಾಯಿಗಳಿಗೂ ಕಡಿಮೆ ಇಲ್ಲದಂತೆ ಯಾವ ಮಹನೀಯರಾದರೂ ಧನಸಹಾಯ ನೀಡಿ ಸಹಕರಿಸಬಹುದು.

೫. ಈಗಾಗಲೇ ಹಲವಾರು ದಾನಿಗಳು **'ಮಹಾಪುರಾಣ'**ವೂ ಸೇರಿದಂತೆ ೩೪ ಪವಿತ್ರ ಹಾಗೂ ಆದರಣೀಯ ಗ್ರಂಥಗಳ ಪ್ರಕಾಶನಕ್ಕೆ ಸಹಯೋಗ ನೀಡಿರುತ್ತಾರೆ. ಸಾಹಿತ್ಯ, ಧರ್ಮಾಭಿಮಾನಿಗಳು ಈ ಸದವಕಾಶವನ್ನು ಉಪಯೋಗಿಸಿಕೊಂಡು ಇನ್ನುಳಿದ ಗ್ರಂಥಗಳ ಪ್ರಕಾಶನಕ್ಕೆ ಉದಾರ ಧನಸಹಾಯ ನೀಡಿ ಪ್ರೋತ್ಸಾಹಿಸಬಹುದು.

೬. ಎಲ್ಲ ರೀತಿಯ ಧನಸಹಾಯವನ್ನು **"ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್"**ನ ಹೆಸರಿನಲ್ಲಿ ಬೆಂಗಳೂರಿನಲ್ಲಿ ಪಾವತಿಯಾಗುವಂತೆ ಬ್ಯಾಂಕ್ ಡ್ರಾಫ್ಟ್ ಅಥವಾ ಚೆಕ್ ಮೂಲಕ ಸಲ್ಲಿಸಲು ವಿನಂತಿಸಿದೆ. ಹೆಚ್ಚಿನ ವಿವರಗಳಿಗೆ ಟ್ರಸ್ಟಿನ ಕಾರ್ಯಾಲಯವನ್ನು ಸಂಪರ್ಕಿಸಬಹುದು.

॥ ಶ್ರೀ ವೃಷಭಜಿನಾಯ ನಮಃ ॥

ಶ್ರೀ ಭಗವಜ್ಜಿನಸೇನಾಚಾರ್ಯ - ಗುಣಭದ್ರಾಚಾರ್ಯ ವಿರಚಿತ

# ಮಹಾಪುರಾಣ

## ಅಥ ತ್ರಿಚತ್ವಾರಿಂಶತ್ತಮಂ ಪರ್ವ

### (ಅಥ ಗುಣಭದ್ರಾಚಾರ್ಯಕೃತ ಉತ್ತರಖಂಡವಮ್)

**ಶ್ರಿಯಂ ತನೋತು ವಃ ಶ್ರೀಮಾನ್ ವೃಷಭೋ ವೃಷಭಧ್ವಜಃ ।**
**ಯಸ್ಯೈಕಸ್ಯ [೧]ಗತೇರ್ಮುಕ್ತೇರ್ಮಾರ್ಗಶ್ಚಿತ್ರಂ [೨]ಮಹಾನಭೂತ್ ॥ ೧ ॥**

ಧ್ವಜದಲ್ಲಿ ವೃಷಭಚಿಹ್ನೆಯುಳ್ಳವನೂ ಬಾಹ್ಯಾಭ್ಯಂತರಸಂಪತ್ತಿಯುಳ್ಳವನೂ ಆದ ವೃಷಭಸ್ವಾಮಿಯು ನಮ್ಮಗಳಿಗೂ ನಿಮ್ಮಗಳಿಗೂ ಸಂಪತ್ತಿಯನ್ನು ವಿಸ್ತರಿಸಲಿ. ಯಾವ ವೃಷಭಸ್ವಾಮಿಯೊರ್ವರ ಮೋಕ್ಷಗಮನದಿಂದ ಮುಕ್ತಿಯ ಮಾರ್ಗವು ವಿಶಾಲವಾಗಿ ಆಯಿತು. ಆಶ್ಚರ್ಯ ! ಒಬ್ಬನ ಗಮನದಿಂದ ಮಾರ್ಗವು ವಿಶಾಲವಾದುದು ಆಶ್ಚರ್ಯವೆಂದೂ ಜೈನಮಾರ್ಗವೇ ನಿಜವಾದ ಮಾರ್ಗವೆಂದೂ ಭಾವವು.

**ವಿಕ್ರಮಂ [೩]ಕರ್ಮಚಕ್ರಸ್ಯ ಯಶ್ಶಕ್ರಾಭ್ಯರ್ಚಿತಕ್ರಮಃ ।**
**[೪]ಆಕ್ರಮ್ಯ ಧರ್ಮಚಕ್ರೇಣ [೫]ಚಕ್ರೇ ತ್ರೈಲೋಕ್ಯಚಕ್ರಿತಾಮ್ ॥ ೨ ॥**

ದೇವೇಂದ್ರನಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನಾದ ಯಾವ ವೃಷಭಸ್ವಾಮಿಯು ಕರ್ಮವೆಂಬ ರಾಜನ ಸೈನ್ಯದ ಪರಾಕ್ರಮವನ್ನು ಧರ್ಮವೆಂಬ ಚಕ್ರದಿಂದ ಜಯಿಸಿ ಮೂರು ಲೋಕಗಳ ಚಕ್ರವರ್ತಿತ್ವವನ್ನು ಪಡೆದನೋ

**[೬]ಯೋಽಸ್ಮಿಂಶ್ಚತುರ್ಥಕಾಲಾದೌ ದಿನಾದೌ [೭]ವಾ ದಿವಾಕರಃ ।**
**ಜಗದುದ್ಯೋತಯಾಮಾಸ ಪ್ರೋದ್ಗಚ್ಛ[೮]ದ್ವಾಗ್ಗಭಸ್ತಿಭಿಃ ॥ ೩ ॥**

ಯಾವ ವೃಷಭಸ್ವಾಮಿಯು ಪ್ರಾತಃಕಾಲದಲ್ಲಿ ಸೂರ್ಯನಂತೆ, ಈ ನಾಲ್ಕನೆಯ ಕಾಲದ ಆದಿಯಲ್ಲಿ ಆವಿರ್ಭವಿಸುತ್ತಿರುವ ವಚನಗಳೆಂಬ ಕಿರಣಗಳಿಂದ ಲೋಕವನ್ನು ಬೆಳಗಿದನೋ

**ನಷ್ಟಮಷ್ಟಾದಶಾಂಭೋಧಿಕೋಟೀಕೋಟೀಷು [೯]ಕಾಲಯೋಃ ।**
**ನಿರ್ವಾಣಮಾರ್ಗಂ [೧೦]ನಿರ್ದಿಶ್ಯ ಯೇನ ಸಿದ್ಧಾಶ್ಚ ವರ್ಧಿತಾಃ ॥ ೪ ॥**

ಉತ್ಸರ್ಪಿಣ್ಯವಸರ್ಪಿಣೀಕಾಲಗಳ ಹದಿನೆಂಟು ಸಾಗರ ಕೋಟೀಕೋಟೀಕಾಲಗಳಲ್ಲಿ (ಉತ್ಸರ್ಪಿಣಿಯ ದುಃಷಮಸುಷಮವೆಂಬ ಮೂರನೆಯ ಕಾಲದಿಂದ ಅವಸರ್ಪಿಣಿಯ ದುಃಷಮಸುಷಮವೆಂಬ ನಾಲ್ಕನೆಯ ಕಾಲದ ಆರಂಭದವರೆಗೆ) ನಷ್ಟವಾಗಿದ್ದ ಮುಕ್ತಿಮಾರ್ಗವನ್ನು ಉಪದೇಶಿಸಿ ಯಾವ ವೃಷಭಸ್ವಾಮಿಯಿಂದ ಸಿದ್ಧಪರಮೇಷ್ಠಿಗಳು ವೃದ್ಧಿಹೊಂದಿಸಲ್ಪಟ್ಟರೋ (ವೃಷಭಸ್ವಾಮಿಯ ಮುಕ್ತಿಮಾರ್ಗವನ್ನು ಹಿಡಿದು ಮುಕ್ತರಾದರೋ)

**[೧೧]ತೀರ್ಥಕೃತ್ಸು [೧೨]ಸ್ವತಃ [೧೩]ಪ್ರಾಗ್ಯೋ ನಾಮಾ[೧೪]ದಾನಪರಾಭವಃ ।**
**ಯ[೧೫]ಮಸ್ಮಿನ್ನಸ್ಪೃಶನ್ನಾಸೌ ಸ್ವಸೂನುಮಿವ ಚಕ್ರಿಷು ॥ ೫ ॥**

ಈ ನಾಲ್ಕನೆಯ ಕಾಲದ ಆದಿಯಲ್ಲಿ ಚಕ್ರವರ್ತಿಗಳಲ್ಲಿ ತನ್ನ (ವೃಷಭಸ್ವಾಮಿಯ) ಪುತ್ರನಾದ ಭರತಚಕ್ರೇಶ್ವರನನ್ನೋಪಾದಿಯಲ್ಲಿ ಅಜಿತಾದಿ ತೀರ್ಥಂಕರರಲ್ಲಿ ಯಾವ ವೃಷಭಸ್ವಾಮಿಯನ್ನು ತನಗಿಂತ(ವೃಷಭಸ್ವಾಮಿಗಿಂತ) ಮೊದಲು ಯಾವ ಆಹಾರಾದಿದಾನಗಳ ಅಭಾವವೆಂಬ ತಿರಸ್ಕಾರವಿದ್ದಿತೋ ಈ ತಿರಸ್ಕಾರವು ಸ್ಪರ್ಶಿಸಲಿಲ್ಲವು. ವೃಷಭಸ್ವಾಮಿಯ ಕಾಲದಲ್ಲಿಯೂ ಭರತೇಶ್ವರನ ಕಾಲದಲ್ಲಿಯೂ ಆಹಾರಾದಿದಾನಗಳಿಲ್ಲವೆಂಬ ಕೊರತೆಯಿರಲಿಲ್ಲವೆಂದು ಭಾವವು.

೧ ಗಮನಾತ್. ೨ ವಿಶಾಲಃ. ೩ ಕರ್ಮರಾಜಸೈನ್ಯಸ್ಯ. ೪ ಜಿತ್ವಾ. ೫ ಪ್ರಾಪ್ನೋತಿಸ್ಮ. ೬ ವೃಷಭಃ. ೭ ಇವ. ೮ ವಚನಕಿರಣೈಃ. ೯ ಉತ್ಸರ್ಪಿಣ್ಯವಸರ್ಪಿಣ್ಯೋಃ. ೧೦ ಉಪದಿಶ್ಯ. ೧೧ ಅಜಿತಾದಿಷು. ೧೨ ಪುರುಜಿನಾತ್. ೧೩ ಪೂರ್ವಸ್ಮಿನ್ಕಾಲೆ. ೧೪ ಆಹಾರಾದಿದಾನಾಭಾವ ಇತಿಪರಾಭವಃ. ೧೫ ಚತುರ್ಥಕಾಲಸ್ಯಾದೌ.

**[೧]ಯೇನ ಪ್ರಕಾಶಿತೇ ಮುಕ್ತೇರ್ಮಾರ್ಗೇ[೨]ಸ್ಮಿನ್ನಪರೇಷು [೩]ತತ್ ।**
**[೪]ಪ್ರಕಾಶಿತಪ್ರಕಾಶೋಕ್ತವೈಯರ್ಥ್ಯಂ ತೀರ್ಥಕೃತ್ಸ್ವಭೂತ್ ॥ ೬ ॥**

ಯಾವ ವೃಷಭಸ್ವಾಮಿಯಿಂದ ಈ ನಾಲ್ಕನೆಯ ಕಾಲದ ಆದಿಯಲ್ಲಿ ಮುಕ್ತಿಯ ಮಾರ್ಗವು ಪ್ರಕಾಶಿಸಲ್ಪಡುತ್ತಿರಲು ಇತರ ತೀರ್ಥಂಕರರಲ್ಲಿ ಆ ಮೋಕ್ಷಮಾರ್ಗ ಪ್ರಕಾಶನವು ಪ್ರಕಾಶಿಸಲ್ಪಟ್ಟುದರ ಪ್ರಕಾಶನದಲ್ಲಿ ಹೇಳಲ್ಪಟ್ಟ ವ್ಯರ್ಥತ್ವವು ಆಯಿತೋ (ಹೇಳಿದುದನ್ನೇ ಹೇಳಿದುದರಿಂದ ವ್ಯರ್ಥತ್ವವಾದುದೆಂದೂ ಕಾಲಭೇದದಿಂದ ವ್ಯರ್ಥತ್ವವಿಲ್ಲವೆಂದೂ ತಿಳಿಯಬೇಕು)

**[೫]ಯುಗಭಾರಂ ವಹನ್ನೇಕಶ್ಚಿರಂ ಧರ್ಮರಥಂ ಪೃಥುಮ್ ।**
**ವ್ರತಶೀಲಗುಣಾಪೂರ್ಣಂ ಚಿತ್ರಂ ವರ್ತಯತಿ ಸ್ಮ ಯಃ ॥ ೭ ॥**

ಯಾವ ವೃಷಭಸ್ವಾಮಿಯೊರ್ವನೇ ನಾಲ್ಕನೆಯ ಕಾಲದ ಪ್ರಜಾರಕ್ಷಣ ಭಾರವನ್ನೂ ದಂಡನೆಯ ಭೇದವನ್ನೂ ವಹಿಸಿದವನಾಗಿ ವ್ರತಗಳಿಂದಲೂ ಶೀಲಗಳಿಂದಲೂ ಗುಣಗಳಿಂದಲೂ ತುಂಬಿರುವುದೂ ದೊಡ್ಡದೂ ಆದ ಧರ್ಮವೆಂಬ ರಥವನ್ನು ಬಹುಕಾಲದವರೆಗೆ ನಡೆಸಿ ಆಶ್ಚರ್ಯವನ್ನುಂಟುಮಾಡಿರುವನೋ (ಒಬ್ಬನೇ ರಥವನ್ನು ನಡೆಸಿದುದು ಆಶ್ಚರ್ಯವೆಂದು ಭಾವವು)

**ತಮೇಕ[೬]ಮಕ್ಷರಂ ಧ್ಯಾತ್ವಾ ವ್ಯಕ್ತಮೇಕಮಿವಾ[೭]ಕ್ಷರಮ್ ।**
**ವಕ್ಷ್ಯೇ ಸಮೀಕ್ಷ್ಯ [೮]ಲಕ್ಷ್ಮಾಣಿ [೯]ತತ್ಪುರಾಣಸ್ಯ [೧೦]ಚೂಲಿಕಾಮ್ ॥ ೮ ॥**

ಸ್ಫುಟವೂ ಮುಖ್ಯವೂ ಆದ ಓಂಕಾರಾಕ್ಷರವನ್ನೋಪಾದಿಯಲ್ಲಿ ಮುಖ್ಯನೂ ನಾಶರಹಿತನೂ ಆದ ಅಂತಹ ವೃಷಭಸ್ವಾಮಿಯನ್ನು ಧ್ಯಾನಿಸಿ ಮೊದಲಿನ ಶಾಸ್ತ್ರಗಳನ್ನು ಚೆನ್ನಾಗಿ ವಿಮರ್ಶಿಸಿ ಆ ವೃಷಭಸ್ವಾಮಿಯ ಪುರಾಣದ ಚೂಲಿಕೆಯನ್ನು -ತುದಿ-ಮುಂದಿನ ಭಾಗವನ್ನು ಹೇಳುವೆನು.

**[೧೧]ಸ್ವೋಕ್ತೇ ಪ್ರಯುಕ್ತಾಃ ಸರ್ವೇ [೧೨]ನೋ ರಸಾ ಗುರುಭಿರೇವ ತೇ ।**
**[೧೩]ಸ್ನೇಹಾ[೧೪]ದಿಹ [೧೫]ತದುತ್ಸೃಷ್ಟಾನ್ ಭಕ್ತ್ಯಾ ತಾನು[೧೬]ಪಯುಂಜ್ಮಹೇ ॥**

ಆ ಎಲ್ಲ ಶೃಂಗಾರಾದಿರಸಗಳು ನಮ್ಮ (ಗುಣಭದ್ರಾಚಾರ್ಯರ) ಗುರುಗಳಿಂದ (ಜಿನಸೇನಾಚಾರ್ಯರಿಂದ) ತಮ್ಮಿಂದ ಹೇಳಲ್ಪಟ್ಟ ಪುರಾಣದಲ್ಲಿ ಪ್ರಯೋಗಿಸಲ್ಪಟ್ಟಿರುತ್ತವೆ. ನನ್ನಲ್ಲಿ (ಗುಣಭದ್ರರಲ್ಲಿ) ಪ್ರೀತಿಯಿಂದ ಆ ಜಿನಸೇನಾಚಾರ್ಯರಿಂದ ಬಿಡಲ್ಪಟ್ಟಿರುವ ಆ ರಸಗಳನ್ನು ಈ ಉತ್ತರಪುರಾಣದಲ್ಲಿ ಭಕ್ತಿಯಿಂದ ಪ್ರಯೋಗಿಸುತ್ತೇವೆ.

**ರಾಗಾದೀನ್ ದೂರತಸ್ತ್ಯಕ್ತ್ವಾ ಶೃಂಗಾರಾದಿರಸೋಕ್ತಿಭಿಃ ।**
**ಪುರಾಣಕಾರಕಾಃ ಶುದ್ಧಬೋಧಾಃ ಶುದ್ಧಾ ಮುಮುಕ್ಷವಃ ॥ ೧೦ ॥**

**ನಿರ್ಮಿತೋಽಸ್ಯ ಪುರಾಣಸ್ಯ ಸರ್ವಃ ಸಾರೋ [೧೭]ಮಹಾತ್ಮಕಃ ।**
**ತಚ್ಛೇಷೇ ಯತಮಾನಾನಾಂ [೧೮]ಪ್ರಾಸಾದಸ್ಯೇವ ನಃ ಶ್ರಮಃ ॥ ೧೧ ॥**

೧ ವೃಷಭೇಣ. ೨ ಚತುರ್ಥಕಾಲಸ್ಯಾದೌ. ೩ ಮೋಕ್ಷಮಾರ್ಗಪ್ರಕಾಶನಂ. ೪ ಪ್ರಕಾಶಿತಪ್ರಕಾಶನೇ ಪ್ರೋಕ್ತವ್ಯರ್ಥತ್ವಂ. ೫ ಚತುರ್ಥಕಾಲಧುರಂ, ದಂಡಭೇದಂ ಚ. ೬ ಅವಿನಶ್ವರಂ. ೭ ಓಂಕಾರಂ. ೮ ಪೂರ್ವೋಕ್ತಶಾಸ್ತ್ರಾಣಿ. ೯ ಪುರುನಾಥಪುರಾಣಸ್ಯ. ೧೦ ಅಗ್ರಂ. ೧೧ ಆತ್ಮನಾ ಪ್ರಣೀತೇ ಪುರಾಣೇ. ೧೨ ಅಸ್ಮಾಕಂ. ೧೩ ಮಯಿ ಪ್ರೇಮ್ಣಃ. ೧೪ ಉತ್ತರಪುರಾಣೆ. ೧೫ ಜಿನಸೇನಾಚಾರ್ಯೇಣಾವಶೇಷಿತಾನ್. ೧೬ ಪ್ರಯೋಗಂ ಕುರ್ಮಹೆ. ೧೭ ಮಹಾತ್ಮಭಿರಿತ್ಯಪಿ ಪಾಠಃ. ೧೮ ನಿರ್ಮಿತ ಪ್ರಾಸಾದಸ್ಯಾವಶೇಷೇ ಯತಮಾನಾನಾಮಿವ.

ರಾಗಾದಿವಿಕಾರಭಾವಗಳನ್ನು ದೂರದಲ್ಲಿ ಬಿಟ್ಟು ಶೃಂಗಾರಾದಿರಸಗಳ ವಚನಗಳಿಂದ-ವರ್ಣನೆಗಳಿಂದ ಪುರಾಣವನ್ನು ರಚಿಸಿದವರೂ ಮೋಕ್ಷವನ್ನು ಬಯಸುವವರೂ ಆದ ಗುರುಗಳು-ಜಿನಸೇನಾಚಾರ್ಯರು ಶುದ್ಧಜ್ಞಾನವುಳ್ಳವರಾಗಿ ಶುದ್ಧರೇ ಆಗಿದ್ದು ಅವರಿಂದ ಈ ಪುರಾಣದ ಮಹತ್ತ್ವವಾದ ಸಮಸ್ತಸಾರವು ನಿರ್ಮಿಸಲ್ಪಟ್ಟಿರುತ್ತದೆ. ಆ ಪುರಾಣದ ಉಳಿದ ಭಾಗದಲ್ಲಿ ಯತ್ನಿಸುವವರಾದ ನಮ್ಮ ಶ್ರಮವು ನಿರ್ಮಿತವಾದ ಅರಮನೆಯ ಉಳಿದ ಭಾಗದಲ್ಲಿ ಯತ್ನಿಸುವವರ ಶ್ರಮದಂತಿರುವುದು.

**ಪುರಾಣೇ ಪ್ರೌಢಶಬ್ದಾರ್ಥಸತ್ಪತ್ರಫಲಶಾಲಿನಿ ।**
**ವಚಾಂಸಿ ಪಲ್ಲವಾನೀವ ಕರ್ಣೇ ಕುರ್ವಂತು ಮೇ ಬುಧಾಃ ॥ ೧೨ ॥**

ಪ್ರೌಢವಾದ ಶಬ್ದ ಮತ್ತು ಅರ್ಥಗಳೆಂಬ ಶ್ರೇಷ್ಠವಾದ ಎಲೆಗಳಿಂದಲೂ ಫಲಗಳಿಂದಲೂ ಮನೋಹರವಾದ ಪುರಾಣದಲ್ಲಿ ನನ್ನ ವಚನಗಳನ್ನು ವಿದ್ವಾಂಸರು ತಳಿರುಗಳನ್ನೋಪಾದಿಯಲ್ಲಿ ಕಿವಿಯಲ್ಲಿ ಧರಿಸಲಿ. ಕೇಳಲೆಂದು ಭಾವವು.

**ಅರ್ಧಂ [೧]ಗುರುಭಿರೇವಾ[೨]ಸ್ಯ ಪೂರ್ವಂ ನಿಷ್ಪಾದಿತಂ [೩]ಪರೈಃ ।**
**[೪]ಪರಂ ನಿಷ್ಪಾದ್ಯಮಾನಂ ಸ[೫]ಚ್ಛಂದೋವನ್ನಾತಿಸುಂದರಮ್ ॥ ೧೩ ॥**

ಈ ಪುರಾಣದ ಪೂರ್ವಾರ್ಧವು ಗುರುಗಳಾದ ಜಿನಸೇನಾಚಾರ್ಯರಿಂದಲೇ-ಗುರು ಅಕ್ಷರಗಳಿಂದಲೇ ರಚಿಸಲ್ಪಟ್ಟಿರುವುದು. ನಮ್ಮಿಂದ-ಲಘು ಅಕ್ಷರಗಳಿಂದ ರಚಿಸಲ್ಪಡುವುದಾದ ಉತ್ತರಾರ್ಧವು ಉತ್ಕ್ರಾತ್ಯುತ್ಕ್ರಾದಿಚ್ಛಂದಸ್ಸಿನ ಭೇದಗಳಂತೆ ಅತಿಸುಂದರವಾಗಿ ಆಗಲಾರದು.

**ಇಕ್ಷೋರಿವಾ[೬]ಸ್ಯ ಪೂರ್ವಾರ್ಧಮೇವಾ[೭]ಭಾವಿ ರಸಾವಹಮ್ ।**
**ಯಥಾ ತಥಾಸ್ತು [೮]ನಿಷ್ಪತ್ತಿರಿತಿ ಪ್ರಾರಭ್ಯತೇ ಮಯಾ ॥ ೧೪ ॥**

ಕಬ್ಬಿನಂತೆ ಈ ಪುರಾಣದ ಪೂರ್ವಾರ್ಧವೇ ರಸವನ್ನುಂಟುಮಾಡುವುದಾಗಿರುತ್ತದೆ. ಇದು ನಿಶ್ಚಯವಾದ ಮಾತು. ಈ ಪುರಾಣದ ಪರಿಪೂರ್ತಿಯು ಹೇಗಾದರೂ ಆಗಬೇಕೆಂದು ಉತ್ತರಾರ್ಧವು ನನ್ನಿಂದ ಪ್ರಾರಂಭಿಸಲ್ಪಡುತ್ತದೆ.

**[೯]ಅನನ್ವಿಷ್ಯ ಮಯಿ ಪ್ರೌಢಿಂ ಧರ್ಮೋಯಮಿತಿ ಗೃಹ್ಯತಾಮ್ ।**
**[೧೦]ಚಾಟುಕೇ ಸ್ವಾದುಮಿಚ್ಛಂತಿ ನ ಭೋಕ್ತಾರಸ್ಸುಭೋಜನಮ್ ॥ ೧೫ ॥**

ನನ್ನಲ್ಲಿ ಪ್ರೌಢಿಮೆಯನ್ನು-ಪಾಂಡಿತ್ಯವನ್ನು ಹುಡುಕದೆ ಇದು ಧರ್ಮ (ಧರ್ಮಗ್ರಂಥ)ವೆಂದು ಸತ್ಪುರುಷರಿಂದ ಪರಿಗ್ರಹಿಸಲ್ಪಡಲಿ. ಊಟಮಾಡುವವರು ಪ್ರಿಯವಚನದಲ್ಲಿ ರುಚಿಕರವಾದ ಸುಖಭೋಜನವನ್ನು ಇಚ್ಛಿಸುವುದಿಲ್ಲ. ಸವಿಯಾದ ಮಾತನ್ನು ಕೇಳುತ್ತ ಊಟಮಾಡುವವರು ಒಳ್ಳೆಯ ಭೋಜನದ ರುಚಿಯನ್ನಿಚ್ಛಿಸುವುದಿಲ್ಲವೆಂದು ಭಾವವು.

**ಅಥವಾ[೧೧]ಗ್ರಂ ಭವೇದಸ್ಯ ವಿರಸಂ ನೇತಿ ನಿಶ್ಚಯಃ ।**
**ಧರ್ಮಾಗ್ರಂ ನನು ಕೇನಾಪಿ ನಾದರ್ಶಿ ವಿರಸಂ ಕ್ವಚಿತ್ ॥ ೧೬ ॥**

ಅಥವಾ ಈ ಪುರಾಣದ ಉತ್ತರಾರ್ಧವು ರಸವಿಲ್ಲದುದೆಂಬ ನಿಶ್ಚಯವಿಲ್ಲವು. ಧರ್ಮದ ಅಗ್ರಭಾಗವು-ತುದಿಯು ಎಲ್ಲಿಯೂ ಯಾರಿಂದಲೂ ರಸವಿಲ್ಲದುದಾಗಿ ನೋಡಲ್ಪಟ್ಟಿಲ್ಲವಲ್ಲವೇ ?

**ಗುರೂಣಾಮೇವ ಮಾಹಾತ್ಮ್ಯಂ ಯದಪಿ ಸ್ವಾದು ಮದ್ವಚಃ ।**
**ತರೂಣಾಂ ಹಿ [೧೨]ಸ್ವಭಾವೇನ ಯತ್ಫಲಂ ಸ್ವಾದು ಜಾಯತೇ ॥ ೧೭ ॥**

ನನ್ನ ಮಾತು ಏನಾದರೂ ಸಾರವಾಗಿದ್ದರೆ ಗುರುಗಳ ಮಹಿಮೆಯೇ ಆಗಿರುವುದು. ಹೇಗೆಂದರೆ, ಯಾವುದೊಂದು ಫಲವು ಮರಗಳ ಸ್ವಭಾವದಿಂದ ರುಚಿಯಾಗಿ ಆಗುತ್ತದೆ. ಮರದ ಸ್ವಭಾವದಿಂದ ಫಲವು ರುಚಿಯಾಗುವಂತೆ ಗುರುವಿನ ಪ್ರಭಾವದಿಂದ ಶಿಷ್ಯನ ವಚನವು ಸಾರವಾಗುವುದೆಂದು ಭಾವವು.

**ನಿರ್ಯಾಂತಿ ಹೃದಯಾದ್ವಾಚೋ ಹೃದಿ ಮೇ ಗುರವಃ ಸ್ಥಿತಾಃ ।**
**ತೇ ತತ್ರ ಸಂಸ್ಕರಿಷ್ಯಂತೇ ತಾ ನ ಮೇತ್ರ ಪರಿಶ್ರಮಃ ॥ ೧೮ ॥**

ವಚನಗಳು ಹೃದಯದಿಂದ ಹೊರಡುತ್ತವೆ. ನನ್ನ ಹೃದಯದಲ್ಲಿ ಗುರುಗಳಿರುತ್ತಾರೆ. ಆ ಗುರುಗಳು ಹೃದಯದಲ್ಲಿ ಆ ನನ್ನ ವಚನಗಳನ್ನು ಸರಿಮಾಡುವರು. ಈ ವಿಷಯದಲ್ಲಿ ನನಗೆ ಶ್ರಮವಿಲ್ಲವು.

**ಇದಂ ಶುಶ್ರೂಷವೋ ಭವ್ಯಾಃ ಕಥಿತಾರ್ಥಂ ಜಿನೇಶ್ವರೈಃ ।**
**ತಸ್ಯಾಭಿಧಾಯಕಾಃ ಶಬ್ದಾಸ್ತನ್ನ ನಿಂದಾತ್ರ ವರ್ತತೇ ॥ ೧೯ ॥**

ಜಿನೇಶ್ವರರಿಂದ ಹೇಳಲ್ಪಟ್ಟ ಅರ್ಥವುಳ್ಳುದಾದ ಈ ಪುರಾಣವನ್ನು ಕೇಳಬೇಕೆಂಬ ಇಚ್ಛೆಯುಳ್ಳವರು ಭವ್ಯರಾಗಿರುತ್ತಾರೆ. ನಮ್ಮ ಶಬ್ದಗಳು ಆ ಪುರಾಣಾರ್ಥವನ್ನು ಹೇಳತಕ್ಕುವಾಗಿರುತ್ತವೆ. ಆದುದರಿಂದ ಈ ವಿಷಯದಲ್ಲಿ ನಿಂದೆಯಿಲ್ಲವು. ನಿಂದೆಗವಕಾಶವಿಲ್ಲವೆಂದು ಭಾವವು.

**ದೋಷಾನ್[೧]ದೋಷಾನ್ಗುಣೀ ಗೃಹ್ಣನ್ ಗುಣಾನ್ ದೋಷಾಂಸ್ತು ದೋಷವಾನ್ ।**
**ಸದಸಜ್ಜ್ಞಾನಯೋಶ್ಚಿತ್ರಮತ್ರ ಮಾಹಾತ್ಮ್ಯಮೀದೃಶಮ್ ॥ ೨೦ ॥**

ದೋಷಗಳನ್ನು ದೋಷಗಳನ್ನಾಗಿ ಪರಿಗ್ರಹಿಸುವವನು ಗುಣವುಳ್ಳವನು, ಗುಣಗಳನ್ನು ದೋಷಗಳನ್ನಾಗಿ ಪರಿಗ್ರಹಿಸುವವನಾದರೋ ದೋಷವುಳ್ಳವನು. ಈ ಗುಣದೋಷ ಗ್ರಹಣದಲ್ಲಿ ಸುಜ್ಞಾನದುರ್ಜ್ಞಾನಗಳ ಮಹಿಮೆಯು ಇಂತಹದಾಗಿರುತ್ತದೆ. ಆಶ್ಚರ್ಯ !

**ಗುಣಿನಾಂ ಗುಣಮಾದಾಯ ಗುಣೀ ಭವತು ಸಜ್ಜನಃ ।**
**ಅಸದ್ದೋಷಸಮಾದಾನಾದ್ದೋಷವಾನ್ ದುರ್ಜನೋದ್ಭುತಮ್॥ ೨೧ ॥**

ಸಜ್ಜನನು ಗುಣವಂತರ ಗುಣವನ್ನು ತೆಗೆದುಕೊಂಡು ಗುಣವಂತನಾಗಲಿ. ದುರ್ಜನನು ಇಲ್ಲದಿರುವ ದೋಷಗಳನ್ನು ತೆಗೆದುಕೊಳ್ಳುವುದರಿಂದ ದೋಷವಂತನಾಗಲಿ. ಇದು ಆಶ್ಚರ್ಯಕರವು.

**ಸಜ್ಜನೇ ದುರ್ಜನಃ ಕೋಪಂ ಕಾಮಂ ಕರ್ತುಮಿಹಾರ್ಹತಿ ।**
**ತದ್ವೈರಿಣಾಮನಾಥಾನಾಂ ಗುಣಾನಾಮಾಶ್ರಯೋ ಯತಃ ॥ ೨೨ ॥**

ದೋಷಗಳಿಗೆ ವೈರಿಗಳೂ ಅನಾಥಗಳೂ ಆದ ಗುಣಗಳಿಗೆ ಸಜ್ಜನನು ಆಧಾರನಾಗಿರುವುದರಿಂದ ದುರ್ಜನನು ಈ ಸಜ್ಜನನಲ್ಲಿ ಕೋಪವನ್ನು ಯಥೇಚ್ಛವಾಗಿ ಮಾಡುವುದಕ್ಕೆ ಯೋಗ್ಯನಾಗಿರುತ್ತಾನೆ.

**ಯಥಾ [೨]ಸ್ವಾನುಗಮರ್ಹಂತಿ ಸದಾ ಸ್ತೋತುಂ ಕವೀಶ್ವರಾಃ ।**
**ತಥಾ ನಿಂದಿತುಮಸ್ವಾನುವೃತ್ತಂ ಕುಕವಯೋಪಿ ಮಾಮ್ ॥ ೨೩ ॥**

ಹೇಗೆ ಕವಿಶ್ರೇಷ್ಠರು ಯಾವಾಗಲೂ ತಮ್ಮನ್ನು ಅನುಸರಿಸಿದವನನ್ನು ಸ್ತುತಿಸುವುದಕ್ಕೆ ಅರ್ಹರಾಗಿರುತ್ತಾರೋ ಹಾಗೆ ತಮ್ಮನ್ನು ಅನುಸರಿಸದಿರುವವನಾದ ನನ್ನನ್ನು ಕುಕವಿಗಳು ನಿಂದಿಸುವುದಕ್ಕೂ ಅರ್ಹರಾಗಿರುತ್ತಾರೆ.

**ಕವಿರೇವ ಕವೇರ್ವೇತ್ತಿ ಕಾಮಂ ಕಾವ್ಯಪರಿಶ್ರಮಮ್ ।**
**ವಂಧ್ಯಾಸ್ತನಂಧಯೋತ್ಪತ್ತಿವೇದನಾಮಿವ ನಾಕವಿಃ ॥ ೨೪ ॥**

೧ ಜಿನಸೇನಾಚಾರ್ಯೈಃ, ಪಕ್ಷೇ ಗುರ್ವಕ್ಷರೈಃ. ೨ ಪುರಾಣಸ್ಯ. ೩ ಅಸ್ಮದಾದಿಭಿಃ, ಲಘ್ವಕ್ಷರೈಶ್ಚ. ೪ ಅಪರಾರ್ಧಂ. ೫ ಉತ್ಕ್ರಾತ್ಯುತ್ಕ್ರಾದಿಚ್ಛಂದೋಭೇದವತ್. ೬ ಪುರಾಣಸ್ಯ. ೭ ನಿಶ್ಚಿತಂ. ೮ ನಿಷ್ಠಾ. ೯ ಅಭಿಮೃಗ್ಯ. ೧೦ ಪ್ರಿಯವಚನೇ. ೧೧ ಉತ್ತರಾರ್ಧಂ. ೧೨ ಸ್ವಭಾವೋಯಮಿತ್ಯಪಿ ಪಾಠಃ.

೧ ಗುಣಾನಿತ್ಯಪಿ ಪಾಠಃ. ೨ ನಿಜಾನುವರ್ತಿನಂ.

ಕವಿಯೇ ಕವಿಯ ಕಾವ್ಯದ ಪರಿಶ್ರಮವನ್ನು ಚೆನ್ನಾಗಿ ತಿಳಿಯುತ್ತಾನೆ. ಬಂಜೆಯು ಶಿಶುವಿನ ಉತ್ಪತ್ತಿಯ ವೇದನೆಯನ್ನು ತಿಳಿಯದಿರುವಂತೆ, ಕವಿಯಲ್ಲದವನು ಕವಿಯ ಕಾವ್ಯದ ಪರಿಶ್ರಮವನ್ನು ತಿಳಿಯಲಾರನು.

**ಗೃಹಾಣೇ[೧]ಹಾಸ್ತಿ ಚೇದ್ದೋಷಂ ಸ್ವಂ ಧನಂ ನ ನಿಷಿಧ್ಯತೇ ।**
**ಖಲಾಸಿ ಪ್ರಾರ್ಥಿತೋ ಭೂಯಸ್ತ್ವಂ ಗುಣಾನ್ನ ಮಮಾಗ್ರಹೀಃ ॥ ೨೫ ॥**

ಎಲೈ ದುರ್ಜನನೆ! ತನ್ನ ಧನವು(ದೋಷವು) ಈ ಪುರಾಣದಲ್ಲಿದ್ದರೆ ಆ ದೋಷವನ್ನು ಪರಿಗ್ರಹಿಸು, ನೀನು ತಡೆಯಲ್ಪಡುವುದಿಲ್ಲ. ಬಾರಿಬಾರಿಗೆ ಪ್ರಾರ್ಥಿಸಲ್ಪಟ್ಟವನಾಗಿರುತ್ತಿ. ನೀನು ನನ್ನ ಗುಣಗಳನ್ನು ಪರಿಗ್ರಹಿಸಲಿಲ್ಲ. ಗುಣಗಳನ್ನು ಸ್ವೀಕರಿಸಬೇಡವೆಂದು ಪ್ರಾರ್ಥಿಸುತ್ತೇನೆಂದು ಭಾವವು.

**ಗುಣಾಗುಣಾನಭಿಜ್ಞೇನ ಕೃತಾ ನಿಂದಾಥವಾ ಸ್ತುತಿಃ ।**
**ಜಾತ್ಯಂಧಸ್ಯೇವ ಧೃಷ್ಟಸ್ಯ ರೂಪೇ ಹಾಸಾಯ ಕೇವಲಮ್ ॥ ೨೬ ॥**

ಗುಣಾಗುಣಗಳನ್ನು ತಿಳಿಯದಿರುವ ಮನುಷ್ಯನಿಂದ ಮಾಡಲ್ಪಟ್ಟ ನಿಂದೆಯಾಗಲಿ, ಸ್ತುತಿಯಾಗಲಿ, ಹುಟ್ಟುಕುರುಡನು ರೂಪವನ್ನು ನೋಡಿದಂತೆ, ಪರಿಹಾಸ್ಯಕ್ಕೆ ಮಾತ್ರ ಕಾರಣವಾಗುವುದು.

**ಅಥವಾ ಸೋಽನಭಿಜ್ಞೋಽಪಿ ನಿಂದತು ಸ್ತೌತು ವಾ ಕೃತಿಮ್ ।**
**ವಿದಗ್ಧಪರಿಹಾಸಾನಾಮನ್ಯಥಾ ಕ್ವಾಸ್ತು ವಿಶ್ರಮಃ ॥ ೨೭ ॥**

ಅಥವಾ ಆ ತಿಳಿವಳಿಕೆಯಿಲ್ಲದ ಮನುಷ್ಯನೂ ಕಾವ್ಯವನ್ನು ನಿಂದಿಸಲಿ ಅಥವಾ ಸ್ತುತಿಸಲಿ. ಹಾಗೆ ಅವನು ಮಾಡದಿದ್ದರೆ ವಿದ್ವಾಂಸರುಗಳ ಪರಿಹಾಸಗಳಿಗೆ ವಿಶ್ರಾಂತಿಯು ಎಲ್ಲಿರಬೇಕು? ಗುಣಾಗುಣಗಳನ್ನು ತಿಳಿಯಲಾರದ ಅಜ್ಞನ ನಿಂದೆಯನ್ನೂ ಸ್ತುತಿಯನ್ನೂ ನೋಡಿ ವಿದ್ವಾಂಸರು ಪರಿಹಾಸಮಾಡುತ್ತಾರೆಂದು ಭಾವವು.

**ಗಣಯಂತಿ ಮಹಾಂತಃ ಕಿಂ ಕ್ಷುದ್ರೋಪದ್ರವಮಲ್ಪವತ್ ।**
**ದಾಹ್ಯಂ ತೃಣಾಗ್ನಿನಾ ತೂಲಂ [೨]ಪತ್ಯುಸ್ತಾಪೋಽಪಿ ನಾಂಭಸಾಮ್ ॥ ೨೮ ॥**

ಮಹಾಪುರುಷರು ಅಲ್ಪವಾದ ಉಪದ್ರವವನ್ನು, ಅಲ್ಪಮನುಷ್ಯನಂತೆ, ಲಕ್ಷಿಸುತ್ತಾರೆಯೋ? ಹುಲ್ಲಿನ ಬೆಂಕಿಯಿಂದ ಹತ್ತಿಯು ದಹಿಸಲ್ಪಡುವುದಕ್ಕೆ ಯೋಗ್ಯವಾಗಿರುತ್ತದೆ. ಜಲಾಧಿಪತಿಯಾದ ಸಮುದ್ರಕ್ಕೆ ಅದರಿಂದ ತಾಪವೂ ಆಗುವುದಿಲ್ಲ.

**ಕಾಷ್ಠಜೋಽಪಿ ದಹತ್ಯಗ್ನಿಃ ಕಾಷ್ಠಂ ತಂ ತತ್ತು ವರ್ಧಯೇತ್ ।**
**ಪ್ರದೀಪಾಯಿತ[೩]ಮೇತಾಭ್ಯಾಂ [೪]ಸದಸದ್ಭಾವಭಾಸನೇ ॥ ೨೯ ॥**

ಕಟ್ಟಿಗೆಯಿಂದುಂಟಾದುದಾದರೂ ಬೆಂಕಿಯು ಕಟ್ಟಿಗೆಯನ್ನು ಸುಡುತ್ತದೆ. ಆ ಕಟ್ಟಿಗೆಯಾದರೋ ಆ ಬೆಂಕಿಯನ್ನು ವೃದ್ಧಿಮಾಡುವುದು. ಈ ಬೆಂಕಿ ಕಟ್ಟಿಗೆಗಳು ಸಜ್ಜನದುರ್ಜನರ ಮನೋಭಾವವನ್ನು ತಿಳಿಸುವುದರಲ್ಲಿ ಪ್ರದೀಪದಂತಿರುತ್ತವೆ.

**ಸ್ತುತಿನಿಂದೇ ಕೃತಿಂ ಶ್ರುತ್ವಾ ಕರೋತು ಗುಣದೋಷಯೋಃ ।**
**[೫]ತೇ [೬]ತಸ್ಯ ಕುರುತಃ ಕೀರ್ತಿ[೭]ಮಕರ್ತುರಪಿ ಸತ್ಕೃತೇಃ ॥ ೩೦ ॥**

ಕಾವ್ಯವನ್ನು ಕೇಳಿ ಗುಣದ ಸ್ತುತಿಯನ್ನೂ ದೋಷದ ನಿಂದೆಯನ್ನೂ ಮಾಡಲಿ. ಸತ್ಕಾವ್ಯವನ್ನು ಮಾಡದಿರುವವನಾದರೂ ಅವನಿಗೆ ಆ ಸ್ತುತಿನಿಂದೆಗಳು ಕೀರ್ತಿಯನ್ನುಂಟುಮಾಡುವುವು. ಸತ್ಕಾವ್ಯವನ್ನು ತಾನು ಮಾಡದಿದ್ದರೂ ಮಾಡಿರುವವರ ಕಾವ್ಯವನ್ನು ಕೇಳಿ ಗುಣಗಳನ್ನು ಸ್ತುತಿಸುವವನೂ ದೋಷಗಳನ್ನು ನಿಂದಿಸುವವನೂ ಆದ ಸಜ್ಜನನಿಗೂ ಆ ಸ್ತುತಿನಿಂದೆಗಳು ಕೀರ್ತಿಯನ್ನು ತರುತ್ತವೆಂದು ಭಾವವು.

೧ ಪುರಾಣೇ. ೨ ಸಮುದ್ರಸ್ಯ. ೩ ಅಗ್ನಿಕಾಷ್ಠಾಭ್ಯಾಂ. ೪ ಸಜ್ಜನದುರ್ಜನಚಿತ್ತಬೋಧನೇ. ೫ ಸ್ತುತಿನಿಂದೇ. ೬ ಸಜ್ಜನಸ್ಯ. ೭ ಕರ್ಮಣಿ ಷಷ್ಠೀ.

**ಸತ್ಕವೇರರ್ಜುನಸ್ಯೇವ ಶರಾಃ ಶಬ್ದಾಃ ಸುಯೋಜಿತಾಃ ।**
**ಕರ್ಣಂ ದುಸ್ಸಂಸ್ಕೃತಂ ಪ್ರಾಪ್ಯ ತುದಂತಿ ಹೃದಯಂ ಭೃಶಮ್ ॥ ೩೧ ॥**

ಅರ್ಜುನನ ಚೆನ್ನಾಗಿ ಜೋಡಿಸಲ್ಪಟ್ಟ ಬಾಣಗಳು ದುಷ್ಟಸಂಸ್ಕಾರವನ್ನು ಹೊಂದಿರುವ ಕರ್ಣನನ್ನು ಹೊಂದಿ ಹೃದಯವನ್ನು ಅಧಿಕವಾಗಿ ದುಃಖ ಪಡಿಸುವಂತೆ, ಚೆನ್ನಾಗಿ ಜೋಡಿಸಲ್ಪಟ್ಟ ಸತ್ಕವಿಯ ಶಬ್ದಗಳು ದುಷ್ಟಸಂಸ್ಕಾರವನ್ನು ಹೊಂದಿರುವ ಕಿವಿಯನ್ನು ತಲುಪಿ ಅದರ ಮಧ್ಯವನ್ನು ಅಧಿಕವಾಗಿ ನೋಯಿಸುವುವು.

**ಪ್ರವೃತ್ತೇಯಂ ಕೃತಿಃ [೧]ಕೃತ್ವಾ [೨]ಗುರೂನ್ ಪೂರ್ವಕವೀಶ್ವರಾನ್ ।**
**[೩]ಭಾವಿನೋದ್ಯತನಾಶ್ಚಾಸ್ಯಾ ವಿದಧ್ಯುಃ ಶುದ್ಧ್ಯನುಗ್ರಹಮ್ ॥ ೩೨ ॥**

ಪೂರ್ವಕವಿಶ್ರೇಷ್ಠರಾದ ಜಿನಸೇನರನ್ನು ಗುರುಗಳನ್ನಾಗಿ ತಿಳಿದು ಈ ಕಾವ್ಯವು ಪ್ರಾರಂಭಿಸಲ್ಪಟ್ಟಿತು. ಮುಂದಿನ ಕವಿಗಳೂ ಇಂದಿನ ಕವಿಗಳೂ ಈ ಕಾವ್ಯದ ಶುದ್ಧಿಯನ್ನು ಮಾಡುವ ಅನುಗ್ರಹವನ್ನು ಮಾಡಲಿ.

**ಮತಿರ್ಮೇ ಕೇವಲಂ ಸೂತೇ ಕೃತಿಂ ರಾಜ್ಞೀವ ಸತ್ಸುತಾಮ್ ।**
**ಧಿಯಸ್ತಾಂ ವರ್ಧಯಿಷ್ಯಂತಿ [೪]ಧಾತ್ರೀಕಲ್ಪಾಃ ಕವೀಶಿನಾಮ್ ॥ ೩೩ ॥**

ನನ್ನ ಬುದ್ಧಿಯು ಕಾವ್ಯವನ್ನು ಮಾತ್ರ, ಒಳ್ಳೆಯ ಪುತ್ರಿಯನ್ನು ರಾಜಪತ್ನಿಯಂತೆ, ಪಡೆದಿರುವುದು. ಕವೀಶ್ವರರ ಉಪಮಾತೆಯರಿಗೆ (ಸಾಕುವ ತಾಯಿಯರಿಗೆ) ಸಮಾನಗಳಾದ ಬುದ್ಧಿಗಳು ನನ್ನ ಆ ಕೃತಿಯನ್ನು ಬೆಳೆಸುವುವು.

**ಇದಂ ಬುಧಾ ಗೃಹಿಷ್ಯಂತಿ ಮಾ ಗೃಹೀಷುಃ ಪೃಥಗ್ಜನಾಃ ।**
**ಕಿಮಮೌಲ್ಯಾನಿ ರತ್ನಾನಿ ಕ್ರೀಣಂತ್ಯಕೃತಪುಣ್ಯಕಾಃ ॥ ೩೪ ॥**

ವಿದ್ವಾಂಸರು ಈ ಕಾವ್ಯವನ್ನು ಗ್ರಹಿಸುವರು. ಅಜ್ಞ ಜನರು ಗ್ರಹಿಸದಿರಲಿ. ಪುಣ್ಯವನ್ನು ಮಾಡದಿರುವವರು(ಪುಣ್ಯಹೀನರು) ಅಮೂಲ್ಯವಾದ ರತ್ನಗಳನ್ನು ಕ್ರಯಕ್ಕೆ ತೆಗೆದುಕೊಳ್ಳುವರೇ?

**ಹೃದಿ ಧರ್ಮಮಹಾರತ್ನಮಾಗಮಾಂಭೋಧಿಸಂಭವಮ್ ।**
**ಕೌಸ್ತುಭಾದಧಿಕಂ ಮತ್ವಾ ದಧಾತು ಪುರುಷೋತ್ತಮಃ ॥ ೩೫ ॥**

ಶ್ರೇಷ್ಠಪುರುಷನು ಆಗಮವೆಂಬ ಸಮುದ್ರದಿಂದುಂಟಾದ ಧರ್ಮವೆಂಬ ರತ್ನವನ್ನು ಕೃಷ್ಣನ ಕೌಸ್ತುಭರತ್ನಕ್ಕಿಂತಲೂ ಅಧಿಕವನ್ನಾಗಿ ತಿಳಿದು ಹೃದಯದಲ್ಲಿ ಧರಿಸಲಿ.

**ಶ್ರೋತ್ರಪಾತ್ರಾಂಜಲಿಂ ಕೃತ್ವಾ ಪ್ರೀತ್ಯಾ ಧರ್ಮರಸಾಯನಮ್ ।**
**ಅಜರಾಮರತಾಂ ಪ್ರಾಪ್ತು[೫]ಮುಪಯುಜ್ಧ್ವಮಿದಂ ಬುಧಾಃ ॥ ೩೬ ॥**

ಎಲೈ ವಿದ್ವಾಂಸರೇ! ಅಜರಾಮರತ್ವವನ್ನು ಹೊಂದುವುದಕ್ಕೋಸ್ಕರ ನಿಮ್ಮ ಗಳ ಕಿವಿಗಳೆಂಬ ಪಾತ್ರಗಳ ಬೊಗಸೆಯನ್ನು ಮಾಡಿ ಪ್ರೀತಿಯಿಂದ ಈ ಧರ್ಮವೆಂಬ ರಸಾಯನವನ್ನು ಉಪಯೋಗಿಸಿರಿ–ಸೇವಿಸಿರಿ.

**ನೂನಂ [೬]ಪುಣ್ಯಾತ್ಪುರಾಣಾಬ್ಧೇರ್ಮಧ್ಯಮಧ್ಯಾಸಿತಂ ಮಯಾ ।**
**ತತ್ಸುಭಾಷಿತರತ್ನಾನಿ ಸಂಚಿತಾನೀತಿ ನಿಶ್ಚಿತಿಃ ॥ ೩೭ ॥**

ನಾನು ಪುಣ್ಯದಿಂದ ಪುರಾಣವೆಂಬ ಸಮುದ್ರದ ಮಧ್ಯದಲ್ಲಿದ್ದು ಆ ಪುರಾಣದ ಸುಭಾಷಿತಗಳೆಂಬ ರತ್ನಗಳನ್ನು ಆಯ್ದುಕೊಂಡಿರುತ್ತೇನೆಂದು ನಿಶ್ಚಯವಿರುತ್ತದೆ. ಇದು ನಿಜ.

**ಸುದೂರಪಾರಗಂಭೀರಮಿತಿ ನಾತ್ರ ಭಯಂ ಮಮ ।**
**ಪುರೋಗಾ ಗುರವಃ ಸಂತಿ [೭]ಪ್ರಷ್ಠಾಃ ಸರ್ವತ್ರ ದುರ್ಲಭಾಃ ॥ ೩೮ ॥**

೧ ಮತ್ವಾ. ೨ ಜಿನಸೇನಾನ್. ೩ ಭಾವಿಕವಯಃ. ೪ ಉಪಮಾತೃಸದೃಶಾಃ. ೫ ಉಪಯುಂಜೇಧ್ವಂ. ೬ ಭಾಗ್ಯಾತ್. ೭ ಅಗ್ರೇಸರಾಃ.

ಈ ಪುರಾಣಸಮುದ್ರದ ದಡವು ದೂರವಾಗಿರುವುದೆಂದೂ ಈ ಸಮುದ್ರವು ಆಳವಾಗಿರುವುದೆಂದೂ ನನಗೆ ಈ ವಿಷಯಗಳಲ್ಲಿ ಹೆದರಿಕೆಯಿಲ್ಲವು. ಮುಂದೆ ಹೋಗುವವರು ಗುರುಗಳಾಗಿರುತ್ತಾರೆ. ಮುಂದೆ ಹೋಗುವವರು ಎಲ್ಲಾ ಕಡೆಯಲ್ಲಿಯೂ ದುರ್ಲಭರಾಗಿರುತ್ತಾರೆ. ಮುಂದೆ ಹೋಗುವವರಿಗೆ ಕಷ್ಟವು ಹೆಚ್ಚಾಗಿರುವುದರಿಂದ ಅಂಥವರು ದೊರೆಯುವುದು ದುರ್ಲಭವೆಂದು ಭಾವವು.

**ಪುರಾಣಸ್ಯಾಸ್ಯ ಸಂಸಿದ್ಧಿರ್ನಾಮ್ನಾ ಸ್ವೇನೈವ ಸೂಚಿತಾ ।**
**[1]ನಿರ್ವಕ್ಷ್ಯಾಮ್ಯತ್ರ ನೋ ವೇತಿ ತತೋ ನಾಸ್ಮ್ಯಹಮಾಕುಲಃ ॥ ೩೯ ॥**

ಈ ಪುರಾಣದ ಸಿದ್ಧಿಯು ತನ್ನ ಮಹಾಪುರಾಣವೆಂಬ ಹೆಸರಿನಿಂದಲೇ ಸೂಚಿತವಾಗಿರುತ್ತದೆ. ಆದುದರಿಂದ ನಾನು ಈ ಪುರಾಣದಲ್ಲಿ ನಿರ್ವಾಹ ಮಾಡುವೆನೋ ಇಲ್ಲವೋ ಎಂದು ಆಕುಲವಿಲ್ಲವು. ಈ ಮಹಾಪುರಾಣವನ್ನು ಕೊನೆಗಾಣಿಸುವೆನೋ ಇಲ್ಲವೋ ಎಂಬ ವಿಷಯದಲ್ಲಿ ತನಗೆ ಚಿಂತೆಯಿಲ್ಲವೆಂದು ಭಾವವು.

**ಪುರಾಣಮಾರ್ಗಮಾಸಾದ್ಯ ಜಿನಸೇನಾನುಗಾ ಧ್ರುವಮ್ ।**
**ಭವಾಬ್ಧೇಃ ಪಾರಮೃಚ್ಛಂತಿ ಪುರಾಣಸ್ಯ ಕಿಮುಚ್ಯತೇ ॥ ೪೦ ॥**

ಏತಕ್ಕೆಂದರೆ, ಜಿನಸೇನಾಚಾರ್ಯರನ್ನು ಹಿಂಬಾಲಿಸುವವರು ಪುರಾಣದ ಮಾರ್ಗವನ್ನು–ರೀತಿಯನ್ನು ಹೊಂದಿ ಭವವೆಂಬ ಸಮುದ್ರದ ಪಾರವನ್ನು ಹೊಂದುತ್ತಾರೆ. ಅಂದಮೇಲೆ ಪುರಾಣದ ಪಾರವನ್ನು ಹೊಂದುವ ವಿಷಯದಲ್ಲಿ ಹೇಳಲ್ಪಡತಕ್ಕುದೇನಿದೆ ?

**ಅರ್ಥೋ ಮನಸಿ ಜಿಹ್ವಾಗ್ರೇ ಶಬ್ದಃ ಸಾಲಂಕೃತಿಸ್ತಯೋಃ ।**
**ಅತಃ ಪುರಾಣಸಂಸಿದ್ಧೇರ್ನಾಸ್ತಿ ಕಾಲವಿಲಂಬನಮ್ ॥ ೪೧ ॥**

ಮನಸ್ಸಿನಲ್ಲಿ ಅರ್ಥವೂ ನಾಲಗೆಯ ತುದಿಯಲ್ಲಿ ಶಬ್ದವೂ ಆ ಶಬ್ದಾರ್ಥಗಳಲ್ಲಿ ಪ್ರಸಿದ್ಧವಾದ ಅಲಂಕಾರವೂ ಇರುತ್ತವೆ. ಆದುದರಿಂದ ಪುರಾಣದ ಪೂರ್ತಿಗೆ ಕಾಲವಿಳಂಬವಿಲ್ಲ.

**ಆಕರೇಷ್ವಿವ ರತ್ನಾನಾ[2]ಮೂಹಾನಾಂ ನಾ[3]ಶಯೇ ಕ್ಷಯಃ ।**
**ವಿಚಿತ್ರಾಲಂಕೃತೀಃ ಕರ್ತುಂ ದೌರ್ಗತ್ಯಂ ಕಿಂ ಕವೇಃ ಕೃತೀಃ ॥ ೪೨ ॥**

ಗಣಿಗಳಲ್ಲಿ ರತ್ನಗಳಿಗೆ ಹೇಗೆ ಕಡಮೆಯಿಲ್ಲವೋ ಹಾಗೆ ಮನಸ್ಸಿನಲ್ಲಿ ಊಹಾ ಪೋಹಗಳಿಗೆ ಕಡಮೆಯಿಲ್ಲವು. ಹೀಗಿರುವಾಗ ವಿಚಿತ್ರವಾದ ಅಲಂಕಾರಗಳುಳ್ಳ ಕೃತಿಗಳನ್ನು ಮಾಡುವುದಕ್ಕೆ ಕವಿಗೆ ಬಡತನವೇನು ?

**ವಿಚಿತ್ರಪದವಿನ್ಯಾಸಾ ರಸಿಕಾ ಸರ್ವಸುಂದರಾ ।**
**ಕೃತಿಃ [4]ಸಾಲಂಕೃತಿರ್ನ ಸ್ಯಾತ್ಕಸ್ಯೇಯಂ [5]ಕಾಮಸಿದ್ಧಯೇ ॥ ೪೩ ॥**

ವಿಚಿತ್ರವಾದ ಪದರಚನೆಯುಳ್ಳುದೂ ಶೃಂಗಾರಾದಿ ರಸಗಳುಳ್ಳುದೂ ಸರ್ವ ವಿಷಯಗಳಲ್ಲಿ ಸುಂದರವೂ ಶಬ್ದಾರ್ಥಾಲಂಕಾರಸಹಿತವೂ, ಶೃಂಗಾರಯುಕ್ತವೂ ಆದ ಈ ಕೃತಿ–ಕಾವ್ಯವು ಯಾರ ಅಭೀಷ್ಟಸಿದ್ಧಿಗೆ ಆಗುವುದಿಲ್ಲ ? (ಇಲ್ಲಿ ಸ್ತ್ರೀವ್ಯಕ್ತಿಯು ಧ್ವನ್ಯರ್ಥ).

**ಸಂಚಿತಸ್ಯೈನಸೋ [6]ಹಂತ್ರೀ [7]ನಿಯಂತ್ರೀ ಚಾಗಮಿಷ್ಯತಃ ।**
**[8]ಆಮಂತ್ರಿಣೀ ಚ ಪುಣ್ಯಾನಾಂ [9]ಧ್ಯಾತಿರ್ವೇಯಂ ಕೃತಿಃ ಶುಭಾ ॥ ೪೪ ॥**

ಮಂಗಲಕರವಾದ ಈ ಕಾವ್ಯವು, ಧ್ಯಾನದೋಪಾದಿಯಲ್ಲಿ, ಸಂಚಿತಕರ್ಮವನ್ನು ನಾಶಮಾಡುವುದೂ ಮುಂದೆ ಬರುವ ಕರ್ಮವನ್ನು ತಡೆಯುವುದೂ ಪುಣ್ಯಗಳನ್ನು ಆಕರ್ಷಿಸುವುದೂ ಆಗಿರುತ್ತದೆ.

೧ ವಹಿ ಪ್ರಾಪಣೇ ಲೃಟ್. ೨ ಊಹಾಪೋಹಾನಾಂ. ೩ ಮನಸಿ. ೪ ಶಬ್ದಾರ್ಥಾಲಂಕಾರಸಹಿತಾ, ಪಕ್ಷೇ ಶೃಂಗಾರಸಹಿತಾ. ೫ ಅಭೀಷ್ಟಸಿದ್ಧಯೇ. ೬ ವಿನಾಶಿನೀ. ೭ ಪ್ರತಿಷೇಧ್ರೀ. ೮ ಆಕರ್ಷಣಂ ಕುರ್ವತೀ. ೯ ಧ್ಯಾನಮಿವ.

**[1]ಸಂಸ್ಕೃತಾನಾಂ [2]ಹಿತೇ ಪ್ರೀತಿಃ [3]ಪ್ರಾಕೃತಾನಾಂ [4]ಪ್ರಿಯಂ [5]ಪ್ರಿಯಮ್ ।**
**[6]ಏತದ್ಧಿತಂ ಪ್ರಿಯಂ ಚಾತಃ ಸರ್ವಾನ್ ಸಂತೋಷಯತ್ಯಲಮ್॥ ೪೫ ॥**

ಉತ್ತಮಪುರುಷರಿಗೆ ಕೊನೆಯಲ್ಲಿ ಸುಖವನ್ನುಂಟುಮಾಡುವ ವಸ್ತುವಿನಲ್ಲಿ ಪ್ರೀತಿಯಿರುವುದು. ಸಾಧಾರಣಮನುಷ್ಯರಿಗೆ ತತ್ಕಾಲದಲ್ಲಿ ಸುಖವನ್ನುಂಟು ಮಾಡುವ ವಸ್ತುವು ಇಷ್ಟವಾಗಿರುವುದು. ಈ ಪುರಾಣವಾದರೋ ಹಿತಕರ ವಾಗಿಯೂ ಪ್ರಿಯವಾಗಿಯೂ ಅಂದರೆ ಕೊನೆಯಲ್ಲಿ ಸುಖಕರವಾಗಿಯೂ ಈಗ– ಕೇಳುವಾಗ ಪ್ರಿಯವಾಗಿಯೂ ಇರುವುದು. ಆದುದರಿಂದ ಇದು ಎಲ್ಲರನ್ನೂ ಚೆನ್ನಾಗಿ ಸಂತೋಷಪಡಿಸುತ್ತದೆ.

**ಇದಂ ನಿಷ್ಪನ್ನಮೇವಾತ್ರ ಸ್ಥಿತಮೇವಾಯುಗಾಂತರಮ್ ।**
**ಇತ್ಯಾವಿರ್ಭಾವಿತೋತ್ಸಾಹಃ ಪ್ರಸ್ತುವೇ ಪ್ರಸ್ತುತಾಂ ಕಥಾಮ್ ॥ ೪೬ ॥**
**॥ ಇತಿ ಪೀಠಿಕಾ ॥**

ಈ ಪುರಾಣವು ರಚಿಸಲ್ಪಟ್ಟುದೇ ಆಗಿರುತ್ತದೆಂದೂ ಯುಗಾಂತರದವರೆಗೂ ಇರುವುದೇ ಆಗಿರುತ್ತದೆಂದೂ ಈ ಪುರಾಣದಲ್ಲಿ ಉತ್ಸಾಹವುಳ್ಳವನಾಗಿ ಪ್ರಕೃತವಾದ ಕಥೆಯನ್ನು ಪ್ರಾರಂಭಿಸುತ್ತೇನೆ. ಪೀಠಿಕೆಯು ಪೂರ್ಣವಾದುದು.

**ಅಥಾತಃ ಶ್ರೇಣಿಕಃ ಪೀತ್ವಾ ಪುರೋಃ ಸಚ್ಚರಿತಾಮೃತಮ್ ।**
**[7]ಆಸಿಸ್ವಾದಯಿಷುಃ ಶೇಷಂ ಹಸ್ತಲಗ್ನಮಿವೋತ್ಸುಕಃ ॥ ೪೭ ॥**

**ಸಮುತ್ಥಾಯ ಸಭಾಮಧ್ಯೇ ಪ್ರಾಂಜಲಿಃ ಪ್ರಣತೋ [8]ಮನಾಕ್ ।**
**ಪುನರ್ವಿಜ್ಞಾಪಯಾಮಾಸ ಗೌತಮಂ ಗಣನಾಯಕಮ್ ॥ ೪೮ ॥**

ಅನಂತರದಲ್ಲಿ ಶ್ರೇಣಿಕಮಹಾಮಂಡಲೇಶ್ವರನು ವೃಷಭಸ್ವಾಮಿಯ ಉತ್ತಮ ಚರಿತ್ರವೆಂಬ ಅಮೃತವನ್ನು ಕುಡಿದು ಕೈಯಲ್ಲಿ ಅಂಟಿರುವಂತಿರುವ ಉಳಿದ ಭಾಗವನ್ನು ಆಸ್ವಾದನೆಮಾಡುವುದಕ್ಕೆ–ನೆಕ್ಕುವುದಕ್ಕೆ ಇಚ್ಛೆಯುಳ್ಳವನೂ ಕುತೂಹಲ ವುಳ್ಳವನೂ ಆಗಿ ಸಭೆಯ ಮಧ್ಯದಲ್ಲಿ ಎದ್ದು ಕೈಗಳನ್ನು ಜೋಡಿಸಿದವನಾಗಿಯೂ ಸ್ವಲ್ಪ ಬಗ್ಗಿದವನಾಗಿಯೂ ಗಣಾಧಿಪತಿಯಾದ ಗೌತಮನನ್ನು ಕುರಿತು ಪುನಃ ವಿಜ್ಞಾಪಿಸಿದನು.

**ತ್ವತ್ಪ್ರಸಾದಾಚ್ಛ್ರುತಂ ಸಮ್ಯಕ್ ಪುರಾಣಂ ಪರಮಂ ಗುರೋಃ ।**
**[9]ನಿರ್ವೃತೋಽಸೌ ಯಥಾ[10]ಸ್ಯಾಂತೇ ತಥಾಹಂ ಚಾ[11]ತಿನಿರ್ವೃತಃ॥ ೪೯ ॥**

''ಎಲೈ ಗೌತಮಸ್ವಾಮಿಯೇ ! ನಿನ್ನ ಅನುಗ್ರಹದಿಂದ ವೃಷಭಸ್ವಾಮಿಯ ಉತ್ಕೃಷ್ಟವಾದ ಪುರಾಣವು ಚೆನ್ನಾಗಿ ಕೇಳಲ್ಪಟ್ಟಿತು. ಈ ವೃಷಭಸ್ವಾಮಿಯು ಈ ಪುರಾಣದ ಅಂತ್ಯದಲ್ಲಿ ಹೇಗೆ ಮುಕ್ತಿಯನ್ನು ಪಡೆದರೋ ಹಾಗೆ ನಾನೂ ಅತಿಸುಖಿಯಾಗಿರುತ್ತೇನೆ.

**ಕಿಲ [12]ತಸ್ಮಿನ್ ಜಯೋ ನಾಮ ತೀರ್ಥೇಭೂತ್ಪಾರ್ಥಿವಾಗ್ರಣೀಃ ।**
**[13]ಯಸ್ಯಾದ್ಯಾಪಿ ಜಿತಾರ್ಕಸ್ಯ ಪ್ರತಾಪಃ ಪ್ರಥತೇ ಕ್ಷಿತೌ ॥ ೫೦ ॥**

ಆ ವೃಷಭಸ್ವಾಮಿಯ ತೀರ್ಥಕಾಲದಲ್ಲಿ–ಧರ್ಮೋಪದೇಶಕಾಲದಲ್ಲಿ ಜಯ ನೆಂಬ ರಾಜಶ್ರೇಷ್ಠನಿದ್ದನಂತೆ. ಸೂರ್ಯನನ್ನು–ಅರ್ಕಕೀರ್ತಿಕುಮಾರನನ್ನು ಜಯಿ ಸಿದ ಯಾವ ಜಯಕುಮಾರನ ಪ್ರತಾಪವು ಈಗಲೂ ಭೂಮಿಯಲ್ಲಿ ಪ್ರಸಿದ್ಧ ವಾಗಿರುತ್ತದೆ.

**ಯಸ್ಯ ದಿಗ್ವಿಜಯೇ ಮೇಘಕುಮಾರವಿಜಯೇ ಸ್ವಯಮ್ ।**
**ವೀರಪಟ್ಟಂ ಸಮುದ್ಧೃತ್ಯ ಬಬಂಧ ಭರತೇಶ್ವರಃ ॥ ೫೧ ॥**

ಭರತೇಶ್ವರನು ದಿಗ್ವಿಜಯದಲ್ಲಿಯೂ ಮೇಘಕುಮಾರನ ಜಯದಲ್ಲಿಯೂ ತಾನೇ ಯಾವ ಜಯಕುಮಾರನಿಗೆ ವೀರಪಟ್ಟವನ್ನು ಎತ್ತಿ ಕಟ್ಟಿದನು.

೧ ಉತ್ತಮಪುರುಷಾಣಾಂ. ೨ ಪರಿಣಮನಸುಖಾವಹೇ. ೩ ಸಾಧರಣಾನಾಂ. ೪ ಆಪಾತ ರಮಣೀಯಂ. ೫ ಇಷ್ಟಂ. ೬ ಪುರಾಣಂ. ೭ ಆಸ್ವಾದಯಿತುಮಿಚ್ಛುಃ. ೮ ಈಷತ್. ೯ ಮುಕ್ತೋಭೂತ್. ೧೦ ಪುರಾಣಸ್ಯ. ೧೧ ಅತಿಸುಖೀ. ೧೨ ಪುರುತೀರ್ಥಕಾಲೇ. ೧೩ ಜಯಸ್ಯ.

ಪುರುಸ್ತೀರ್ಥಕೃತಾಂ ಪೂರ್ವಶ್ಚಕ್ರಿಣಾಂ ಭರತೇಶ್ವರಃ ।
ದಾನತೀರ್ಥಕೃತಾಂ ಶ್ರೇಯಾನ್ ಕಿಲಾಸೌ ಚ ಸ್ವಯಂವರೇ ॥ ೫೨ ॥

ವೃಷಭಸ್ವಾಮಿಯು ಅಜಿತಾದಿತೀರ್ಥಂಕರರುಗಳಲ್ಲಿ ಮೊದಲನೆಯವರು. ಚಕ್ರವರ್ತಿಗಳಲ್ಲಿ ಭರತೇಶ್ವರನು ಮೊದಲನೆಯವನು. ದಾನವೆಂಬ ತೀರ್ಥವನ್ನು ಪ್ರಚಾರಮಾಡಿದವರಲ್ಲಿ ಶ್ರೇಯಾನ್‌ಕುಮಾರನು ಮೊದಲನೆಯವನು. ಈ ಜಯಕುಮಾರನು ಸ್ವಯಂವರದಲ್ಲಿ ಮೊದಲನೆಯವನು. ಸ್ವಯಂವರವಿವಾಹವನ್ನು ಮಾಡಿಕೊಂಡು ಅದನ್ನು ಮೊತ್ತಮೊದಲು ಪ್ರಚಾರಕ್ಕೆ ತಂದವನೆಂದು ಭಾವವು.

ಅರ್ಕಕೀರ್ತಿಂ ಪುರೋಃ ಪೌತ್ರಂ ಸಂಗರೇ [೧]ಕೃತಸಂಗರಃ ।
ಜಿತ್ವಾ [೨]ನಿಗಲಯಾಮಾಸ ಕಿಲೈಕಾಕೀ ಸಹೇಲಯಾ ॥ ೫೩ ॥

ಈ ಜಯಕುಮಾರನೋರ್ವನೇ ಯುದ್ಧದಲ್ಲಿ ಪ್ರತಿಜ್ಞೆಯನ್ನು ಮಾಡಿದವನಾಗಿ ವೃಷಭಸ್ವಾಮಿಯ ಮೊಮ್ಮಗನಾದ ಅರ್ಕಕೀರ್ತಿಯನ್ನು ಲೀಲೆಯಿಂದ ಜಯಿಸಿ ಕಟ್ಟಿಹಾಕಿದನಂತೆ.

[೩]ಸೇನಾಂತವೃಷಭಃ ಕುಂಭೋ ರಥಾಂತದೃಢಸಂಜ್ಞಕಃ ।
ಧನುರಂತಶತೋ ದೇವಶರ್ಮಾ ಭಾವಾಂತದೇವವಾಕ್ ॥ ೫೪ ॥

ನಂದನಃ ಸೋಮದತ್ತಾಹ್ವಃ ಶೂರದತ್ತೋ ಗುಣೈರ್ಗುರುಃ ।
ವಾಯುಶರ್ಮಾ ಯಶೋಬಾಹುರ್ದೇವಾಗ್ನಿಃ ಸಾಗ್ನಿದೇವವಾಕ್॥ ೫೫ ॥

ಅಗ್ನಿಗುಪ್ತೋಥ ಮಿತ್ರಾಗ್ನಿರ್ಹಲಭೃತ್ಸ ಮಹೀಧರಃ ।
ಮಹೇಂದ್ರೋ ವಸುದೇವಶ್ಚ ತತಃ ಪಶ್ಚಾದ್ವಸುಂಧರಃ ॥ ೫೬ ॥

ಅಚಲೋ ಮೇರುಸಂಜ್ಞಶ್ಚ ತತೋ ಮೇರುಧನಾಹ್ವಯಃ ।
ಮೇರುಭೂತಿ[೪]ರ್ಯಶೋಯಜ್ಞಪ್ರಾಂತಸರ್ವಾಭಿಧಾನಕೌ ॥ ೫೭ ॥

ಸರ್ವಗುಪ್ತಃ ಪ್ರಿಯಪ್ರಾಂತಸರ್ವೋ ದೇವಾಂತಸರ್ವವಾಕ್ ।
ಸರ್ವಾದಿವಿಜಯೋ ಗುಪ್ತೋ ವಿಜಯಾದಿಸ್ತತಃ ಪರಃ ॥ ೫೮ ॥

ವಿಜಯಮಿತ್ರೋ ವಿಜಯಿಲೋಪರಾಜಿತಸಂಜ್ಞಕಃ ।
ವಸುಮಿತ್ರಃ ಸ ವಿಶ್ವಾದಿಸೇನಃ ಸೇನಾಂತಸಾಧುವಾಕ್ ॥ ೫೯ ॥

ದೇವಾಂತಸತ್ಯಃ ಸತ್ಯಾಂತದೇವೋ ಗುಪ್ತಾಂತಸತ್ಯವಾಕ್ ।
ಸತ್ಯಮಿತ್ರಃ ಸತಾಂ ಜ್ಯೇಷ್ಠಃ ಶರ್ಮಿಲೋ ನಿರ್ಮಲೋ ಗುಣೈಃ ॥ ೬೦ ॥

ವಿನೀತಃ ಸಂವರೋ ಗುಪ್ತೋ ಮುನ್ಯಾದಿರ್ಮುನಿದತ್ತವಾಕ್ ।
ಮುನಿಯಜ್ಞೋ ಮುನಿರ್ದೇವಪ್ರಾಂತೋ ಯಜ್ಞಾಂತಗುಪ್ತವಾಕ್ ॥

ಮಿತ್ರಯಜ್ಞಃ ಸ್ವಯಂಭೂಶ್ಚ [೫]ದೇವದತ್ತಾಂತಗೌ ಭಗೌ ।
ಭಗಾದಿಫಲ್ಗುಃ ಫಲ್ಗ್ವಂತ ಗುಪ್ತೋ ಮಿತ್ರಾದಿಫಲ್ಗುಕಃ ॥ ೬೨ ॥

ಪ್ರಜಾಪತಿಃ [೬]ಸರ್ವಸಂಘೋ ವರುಣೋ ಧನಪಾಲಕಃ ।
ಮಘವಾನ್ ರಾಶ್ಯಂತತೇಜೋ ಮಹಾವೀರೋ ಮಹಾರಥಃ ॥ ೬೩ ॥

[೭]ವಿಶಾಲಾಕ್ಷೋ ಮಹಾಬಾಲಃ ಸುವಿಶಾಲಸ್ತತಃ ಪರಃ ।
ವಜ್ರಶ್ಚ ವಜ್ರಸಾರಶ್ಚ ಚಂದ್ರಚೂಲಸಮಾಹ್ವಯಃ ॥ ೬೪ ॥

ಜಯೋ ಮಹಾರಸಃ ಕಚ್ಛಮಹಾಕಚ್ಛಾವತುಚ್ಛಕೌ ।
ನಮಿರ್ವಿನಮಿರನ್ಯೌ ಚ ಬಲಾತಿಬಲಸಂಜ್ಞಕೌ ॥ ೬೫ ॥

೧ ಕೃತಪ್ರತಿಜ್ಞಃ. ೨ ಬಬಂಧ. ೩ ವೃಷಭಸೇನಃ. ೪ ಸರ್ವಯಶಾಃ, ಸರ್ವಯಜ್ಞಃ. ೫ ಭಗದೇವ ಭಗದತ್ತೌ. ೬ ಸರ್ವಸಂಗ ಇತ್ಯಪಿ ಪಾಠಃ. ೭ ವಿಶಾಲಾಖ್ಯ ಇತ್ಯಪಿ ಪಾಠಃ.

ಬಲಾಂತಭದ್ರೋ ನಂದೀ ಚ ಮಹಾಭಾಗೀ ಪರಸ್ತತಃ ।
ಮಿತ್ರಾಂತನಂದೀ ದೇವಾಂತಕಾಲೋನುಪಮಲಕ್ಷಣಃ ॥ ೬೬ ॥

ಚತುರ್ಭಿರಧಿಕಾಶೀತಿರಿತಿ ಸ್ರಷ್ಟುರ್ಗಣಾಧಿಪಾಃ ।
ಏತೇಸಪ್ತರ್ದ್ಧಿಸಂಯುಕ್ತಾ ಸರ್ವೇ [೧]ವೇದ್ಯನುವಾದಿನಃ ॥ ೬೭ ॥

೧ ವೃಷಭಸೇನ ೨ ಕುಂಭಸೇನ ೩ ದೃಢರಥ ೪ ಶತಧನುಃ ೫ ದೇವಶರ್ಮಾ ೬ ದೇವಭವ ೭ ನಂದನ ೮ ಸೋಮದತ್ತ ೯ ಗುಣಗಳಿಂದ ಉತ್ಕೃಷ್ಟನಾದ ಶೂರದತ್ತ ೧೦ ವಾಯುಶರ್ಮಾ ೧೧ ಯಶೋಬಾಹು ೧೨ ದೇವಾಗ್ನಿ ೧೩ ಅಗ್ನಿದೇವ ೧೪ ಅಗ್ನಿಗುಪ್ತ ೧೫ ಮಿತ್ರಾಗ್ನಿ ೧೬ ಹಲಭೃತ್ ೧೭ ಮಹೀಧರ ೧೮ ಮಹೇಂದ್ರ ೧೯ ವಸುದೇವ ೨೦ ವಸುಂಧರ ೨೧ ಅಚಲ ೨೨ ಮೇರುವೆಂಬ ಹೆಸರುಳ್ಳವನು ೨೩ ಮೇರುಧನನೆಂಬ ಹೆಸರುಳ್ಳವನು ೨೪ ಮೇರುಭೂತಿ ೨೫ ಸರ್ವಯಶ ೨೬ ಸರ್ವಯಜ್ಞ ೨೭ ಸರ್ವಗುಪ್ತ ೨೮ ಸರ್ವಪ್ರಿಯ ೨೯ ಸರ್ವದೇವ ೩೦ ಸರ್ವವಿಜಯ ೩೧ ವಿಜಯಗುಪ್ತ ೩೨ ವಿಜಯಮಿತ್ರ ೩೩ ವಿಜಯಿಲ ೩೪ ಅಪರಾಜಿತ ೩೫ ವಸುಮಿತ್ರ ೩೬ ವಿಶ್ವಸೇನ ೩೭ ಸಾಧುಷೇಣ ೩೮ ಸತ್ಯದೇವ ೩೯ ದೇವಸತ್ಯ ೪೦ ಸತ್ಯಗುಪ್ತ ೪೧ ಸತ್ಪುರುಷರಲ್ಲಿ ಶ್ರೇಷ್ಠನಾದ ಸತ್ಯಮಿತ್ರ ೪೨ ಗುಣಗಳಿಂದ ನಿರ್ಮಲನಾದ ಶರ್ಮಿಲ ೪೩ ವಿನೀತ ೪೪ ಸಂವರ ೪೫ ಮುನಿಗುಪ್ತ ೪೬ ಮುನಿದತ್ತ ೪೭ ಮುನಿಯಜ್ಞ ೪೮ ಮುನಿದೇವ ೪೯ ಗುಪ್ತಯಜ್ಞ ೫೦ ಮಿತ್ರಯಜ್ಞ ೫೧ ಸ್ವಯಂಭೂ ೫೨ ಭಗದೇವ ೫೩ ಭಗದತ್ತ ೫೪ ಭಗಫಲ್ಗು ೫೫ ಗುಪ್ತಫಲ್ಗು ೫೬ ಮಿತ್ರಫಲ್ಗು ೫೭ ಪ್ರಜಾಪತಿ ೫೮ ಸರ್ವಸಂಘ ೫೯ ವರುಣ ೬೦ ಧನಪಾಲಕ ೬೧ ಮಘವಾನ್ ೬೨ ತೇಜೋರಾಶಿ ೬೩ ಮಹಾವೀರ ೬೪ ಮಹಾರಥ ೬೫ ವಿಶಾಲಾಕ್ಷ ೬೬ ಮಹಾಬಾಲ ೬೭ ಬಳಿಕ ಸುವಿಶಾಲ ೬೮ ವಜ್ರ ೬೯ ವಜ್ರಸಾರ ೭೦ ಚಂದ್ರಚೂಲನೆಂದು ಹೆಸರುಳ್ಳವನು ೭೧ ಜಯ ೭೨ ಮಹಾರಸ ೭೩ ಕಚ್ಛ ೭೪ ಮಹಾಕಚ್ಛ ೭೫ ನಮಿ ೭೬ ವಿನಮಿ ೭೭ ಬಲ ೭೮ ಅತಿಬಲರೆಂಬ ಹೆಸರುಳ್ಳವರು ೭೯ ಭದ್ರಬಲ ೮೦ ನಂದೀ ೮೧ ಮಹಾಭಾಗೀ ೮೨ ನಂದಿಮಿತ್ರ ೮೩ ಕಾಮದೇವ ೮೪ ಅನುಪಮಲಕ್ಷಣ ಈ ಪ್ರಕಾರವಾಗಿ ಎಂಬತ್ತು ನಾಲ್ಕು ಮಂದಿಗಳು ಆದಿಬ್ರಹ್ಮನಿಗೆ ಗಣಧರರಾಗಿರುತ್ತಾರೆ. ಈ ಗಣಧರರುಗಳು ಏಳು ಪ್ರಕಾರವಾದ ತಪೋಮಹಿಮೆಗಳಿಂದ ಕೂಡಿದವರಾಗಿರುತ್ತಾರೆ. ಎಲ್ಲರೂ ಸರ್ವಜ್ಞಸದೃಶರಾಗಿರುತ್ತಾರೆ.

ಸ ಏವಾಸೀದ್ಗೃಹತ್ಯಾಗಾದೇತೇಷ್ವ[೨]ಭ್ಯುದಿತೋದಿತಃ ।
ಏಕಸಪ್ತತಿಸಂಖ್ಯಾನಸಂಪ್ರಾಪ್ತಗಣನೋ ಗಣೀ ॥ ೬೮ ॥

ಮೇಲೆ ಮೇಲೆ ಅಭ್ಯುದಯವುಳ್ಳವನಾದ ಆ ಜಯಕುಮಾರನೇ ಮನೆಯನ್ನು ತ್ಯಜಿಸಿದುದರಿಂದ–ಮುನಿಯಾದುದರಿಂದ ಈ ಮೇಲೆ ಹೇಳಿದ ಗಣಧರರಲ್ಲಿ ಎಪ್ಪತ್ತೊಂದನೆಯ ಸಂಖ್ಯೆಯನ್ನು ಹೊಂದಿದ ಗಣಧರನಾದನು.

ಪುರಾಣಂ ತಸ್ಯ ಮೇ ಬ್ರೂಹಿ ಮಹತ್ತತ್ರಾಸ್ತಿ ಕೌತುಕಮ್ ।
ಭವ್ಯಚಾತಕವೃಂದಸ್ಯ [೩]ಪ್ರಘಣೋ ಭಗವಾನಿತಿ[೪] ॥ ೬೯ ॥

ಅವನ ಪುರಾಣವನ್ನು ನನಗೆ ಹೇಳು. ಅದರಲ್ಲಿ ನನಗೆ ಹೆಚ್ಚಾದ ಕುತೂಹಲವಿರುತ್ತದೆ. ಭವ್ಯಜೀವಗಳೆಂಬ ಚಾತಕಪಕ್ಷಿಗಳ ಸಮೂಹಕ್ಕೆ ಪೂಜ್ಯನಾದ ನೀನು ಉತ್ಕೃಷ್ಟವಾದ ಮೇಘದಂತಿರುತ್ತಿ.'' ಈ ಪ್ರಕಾರವಾಗಿ ವಿಜ್ಞಾಪಿಸಿಕೊಂಡನು.

ತತಃ [೫]ಸ್ವಸ್ಯ ಸಮಾಲಕ್ಷ್ಯ ಗಣಾಧೀಶಾದನುಗ್ರಹಮ್ ।
ಅಲಂಚಕಾರ ಸ್ವಸ್ಥಾನಮಿಂಗಿತಜ್ಞಾ ಹಿ ಧೀಧನಾಃ ॥ ೭೦ ॥

ಬಳಿಕ ಗೌತಮಗಣಧರರಿಗೆ ತನ್ನಮೇಲೆ ಅನುಗ್ರಹವಿರುವುದನ್ನು ತಿಳಿದು ತನ್ನ ಉಚಿತಸ್ಥಾನವನ್ನು ಅಲಂಕರಿಸಿದನು. ಮನೋಗತವನ್ನು ತಿಳಿಯುವವರಲ್ಲವೇ ಬುದ್ಧಿಯೆಂಬ ಧನವುಳ್ಳವರು ?

೧ ಸರ್ವಜ್ಞಸದೃಶಾಃ. ೨ ಉಪರ್ಯುಪರಿ ಅಭ್ಯುದಯವಾನ್ ಪ್ರಖ್ಯಾತ ಇತ್ಯರ್ಥಃ. ೩ ಪ್ರಕೃಷ್ಟ ಮೇಘಃ. ೪ ಇತಿ ವಿಜ್ಞಾಪಯಾಮಾಸ. ೫ ಸ್ವಸ್ಯೋಪರಿ.

**ಯತ್ತ್ವಷ್ಟಮಿಷ್ಟಮಸ್ಮಾಭಿಃ ಪೃಷ್ಟಂ [೧]ಶಿಷ್ಟಂ ತ್ವಯೈವ ತತ್ ।**
**ಚೇತೋ ಜಿಹ್ವಾ ತ್ವಮಸ್ಮಾಕಮಿ[೨]ತ್ಯಸ್ತಾವೀತ್ಸಭಾ ಚ ತಮ್ ॥ ೭೧ ॥**

ಆಗ ಸಭಿಕರು ಆ ಶ್ರೇಣಿಕನನ್ನು ''ನಾವು ಯಾವುದನ್ನು ಕೇಳುವುದಕ್ಕೆ ಇಷ್ಟಪಟ್ಟಿದ್ದೆವೋ ಉಳಿದಿರುವ ಆ ವಿಷಯವನ್ನು ನೀನೇ ಕೇಳಿದೆ. ನೀನು ನಮ್ಮ ಚಿತ್ತವೂ ನಾಲಿಗೆಯೂ ಆಗಿರುತ್ತಿ. ಮನಸ್ಸಿಗೂ ನಾಲಿಗೆಗೂ ಸಮಾನನಾಗಿರುತ್ತಿ ಯೆಂದೂ ಭಾವವು.'' ಈ ಪ್ರಕಾರವಾಗಿ ಸ್ತುತಿಸಿದರು.

**ಗಣೀ ತೇನೇತಿ ಸಂಪೃಷ್ಟಃ [೩]ಪ್ರಹೃಷ್ಟಸ್ತದನುಗ್ರಹೇ ।**
**ನಾರ್ಥಿನೋ ವಿಮುಖಾನ್ ಸಂತಃ ಕುರ್ವಂತ್ಯೇ[೪]ತದ್ಧಿ [೫]ತದ್ವ್ರತಮ್ ॥**

ಆ ಶ್ರೇಣಿಕಮಹಾಮಂಡಲೇಶ್ವರನಿಂದ ಮೇಲೆ ಹೇಳಿದ ಪ್ರಕಾರವಾಗಿ ಪ್ರಶ್ನೆ ಮಾಡಲ್ಪಟ್ಟವನಾದ ಗೌತಮಗಣಧರನು ಅವನನ್ನು ಅನುಗ್ರಹಿಸುವುದರಲ್ಲಿ ಸಂತೋಷವುಳ್ಳವನಾದನು. ಸತ್ಪುರುಷರು ಯಾಚಕರನ್ನು ವಿಮುಖರನ್ನಾಗಿ ಮಾಡು ವುದಿಲ್ಲ. ಈ ಅನುಗ್ರಹವು ಆ ಸತ್ಪುರುಷರ ವ್ರತವಲ್ಲವೇ ?

**ಶೃಣು ಶ್ರೇಣಿಕ ಸಂಪ್ರಶ್ನಸ್ತ್ವಯಾತ್ರಾವಸರೇ ಕೃತಃ ।**
**ನಾ[೬]ರಾಧಯಂತಿ ಕಾನ್ವಾ ತೇ ಸಂತೋವಸರವೇದಿನಃ ॥ ೭೩ ॥**
**॥ ಇತಿ ಕಥಾಮುಖಮ್ ॥**

''ಎಲೈ ಶ್ರೇಣಿಕನೆ ! ಕೇಳು, ನೀನು ಇಲ್ಲಿ ಸಕಾಲದಲ್ಲಿ ಪ್ರಶ್ನೆಯನ್ನು ಮಾಡಿದೆ. ಅವಕಾಶವನ್ನು ತಿಳಿದಿರುವವರಾದ ಆ ಸತ್ಪುರುಷರು ಯಾರನ್ನು ತಾನೆ ಸ್ವಾಧೀನರನ್ನಾಗಿ ಮಾಡುವುದಿಲ್ಲ ?(ಕಥಾಮುಖವು ಪೂರ್ಣವಾದುದು).

**ಇಹ ಜಂಬೂಮತಿ ದ್ವೀಪೇ ದಕ್ಷಿಣೇ ಭರತೇ ಮಹಾನ್ ।**
**ವರ್ಣಾಶ್ರಮಸಮಾಕೀರ್ಣೋ ದೇಶೋಸ್ತಿ ಕುರುಜಾಂಗಲಃ ॥ ೭೪ ॥**

ಈ ಜಂಬೂದ್ವೀಪದಲ್ಲಿ ದಕ್ಷಿಣ ಭರತಖಂಡದಲ್ಲಿ ದೊಡ್ಡದೂ ವರ್ಣಾಶ್ರಮ ಧರ್ಮಗಳಿಂದ ಕೂಡಿರುವುದೂ ಆದ ಕುರುಜಾಂಗಲವೆಂಬ ದೇಶವಿರುತ್ತದೆ.

**ಧರ್ಮಾರ್ಥಕಾಮಮೋಕ್ಷಾಣಾಮೇಕೋ ಲೋಕೇಯಮಾಕರಃ ।**
**ಭಾತಿ ಸ್ವರ್ಗ ಇವ ಸ್ವರ್ಗೇ ವಿಮಾನಂ ವಾಮರೇಶಿತುಃ ॥ ೭೫ ॥**

ಲೋಕದಲ್ಲಿ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೆ ಮುಖ್ಯವಾದ ಉತ್ಪತ್ತಿಸ್ಥಾನವಾದ ಈ ದೇಶವು ಸ್ವರ್ಗದಂತೆಯೂ ಸ್ವರ್ಗದಲ್ಲಿ ದೇವೇಂದ್ರನ ವಿಮಾನದಂತೆಯೂ ಪ್ರಕಾಶಿಸುತ್ತದೆ.

**ಹಸ್ತಿನಾಖ್ಯಂ ಪುರಂ ತತ್ರ ವಿಚಿತ್ರಂ ಸರ್ವಸಂಪದಾ ।**
**[೭]ಸಂಭವಂ [೮]ಮೃಷಯದ್ವಾರ್ಧೇ ಲಕ್ಷ್ಮ್ಯಾಃ ಕುಲಗೃಹಾಯಿತಮ್ ॥**

ಆ ಕುರುಜಾಂಗಲದೇಶದಲ್ಲಿ ಸರ್ವಸಂಪತ್ತಿಯಿಂದ ಸಮುದ್ರದಲ್ಲಿ ಲಕ್ಷ್ಮಿಯ ಉತ್ಪತ್ತಿಯನ್ನು ಸುಳ್ಳುಮಾಡುವುದೂ ಲಕ್ಷ್ಮಿಗೆ ತವರುಮನೆಯಂತಿರುವುದೂ ಆಶ್ಚರ್ಯಕರವೂ ಆದ ಹಸ್ತಿನವೆಂದು ಹೆಸರುಳ್ಳ ಪಟ್ಟಣವಿರುತ್ತದೆ.

**ಪತಿಃ ಪತಿರ್ವಾ ತಾರಾಣಾಮಸ್ಯ ಸೋಮಪ್ರಭೋಭವತ್ ।**
**ಕುರ್ವನ್ [೯]ಕುವಲಯಾಹ್ಲಾದಂ ಸತ್ಕರೈಃ ಸ್ವೈ[೧೦]ರ್ಬುಧಾಶ್ರಯಃ ॥ ೭೭ ॥**

ನಕ್ಷತ್ರಾಧಿಪತಿಯೂ ಬುಧಗ್ರಹಕ್ಕೆ ಆಶ್ರಯನೂ ಆದ ಚಂದ್ರನು ತನ್ನ ಕಿರಣಗಳಿಂದ ಕನ್ನೈದಿಲೆಗೆ ಸಂತೋಷವನ್ನುಂಟುಮಾಡುವಂತೆ, ವಿದ್ವಾಂಸರಿಗೆ ಆಶ್ರಯನೂ ಪ್ರಜಾಬಾಧೆಯಿಲ್ಲದಿರುವ ತನ್ನ ಕಂದಾಯಗಳಿಂದ ಭೂಮಂಡಲಕ್ಕೆ ಸಂತೋಷವನ್ನು ಮಾಡುವವನೂ ಆದ ಸೋಮಪ್ರಭನೆಂಬ ರಾಜನು ಈ ಕುರುಜಾಂಗಲದೇಶದ ದೊರೆಯಾಗಿದ್ದನು.

೧ ಅವಶಿಷ್ಟಂ. ೨ ಸ್ತುತಿಮಕರೋತ್. ೩ ಪ್ರವೃತ್ತ ಇತ್ಯಪಿ ಪಾಠಃ. ೪ ಅನುಗ್ರಹಃ. ೫ ಸತಾಂ ನಿಯಮೋ ಹಿ. ೬ ಸ್ವಾಧೀನಾನ್ಕುರ್ವಂತಿ. ೭ ಉತ್ಪತ್ತಿಂ. ೮ ಅನೃತಂ ಕುರ್ವತ್. ೯ ಭೂವಲಯಾನಂದಂ ಪಕ್ಷೇ ಕೈರವಾನಂದಂ. ೧೦ ವಿದ್ವಜ್ಜನಾಶ್ರಯಃ ಸೋಮಸುತಾಶ್ರಯಶ್ಚ.

**[೧]ತಸ್ಯ ಲಕ್ಷ್ಮೀ[೨]ಮನಾಕ್ಷಿಪ್ಯ ವಕ್ಷಃಸ್ಥಲನಿವಾಸಿನೀಮ್ ।**
**ಲಕ್ಷ್ಮೀರಿಯಂ ದ್ವಿತೀಯೇತಿ [೩]ಪ್ರೇಕ್ಷ್ಯಾ ಲಕ್ಷ್ಮೀಮತೀ ಸತೀ ॥ ೭೮ ॥**

ಹೃದಯದಲ್ಲಿ ವಾಸಮಾಡುವ ಲಕ್ಷ್ಮಿಯನ್ನು ತಿರಸ್ಕರಿಸದೆ ಈಕೆಯು ಎರಡನೆಯ ಲಕ್ಷ್ಮಿಯೆಂದು ನೋಡುವುದಕ್ಕೆ ಯೋಗ್ಯಳಾದ ಲಕ್ಷ್ಮೀಮತಿಯು ಆ ಸೋಮಪ್ರಭನ ಪತ್ನಿಯಾಗಿದ್ದಳು. ಸೋಮಪ್ರಭನಿಗೆ ಎರಡನೆಯ ಲಕ್ಷ್ಮಿಯಂತಿದ್ದ ಳೆಂದು ಭಾವವು.

**ತಯೋರ್ಜಯೋಭವತ್ಸೂನುಃ ಪ್ರಜ್ಞಾವಿಕ್ರಮಯೋರಿವ ।**
**ತನ್ವನ್ನಾ[೪]ಜನ್ಮನಃ ಕೀರ್ತಿಂ ಲಕ್ಷ್ಮೀಮಿವ ಗುಣಾರ್ಜಿತಾಮ್ ॥ ೭೯ ॥**

ಜನನಕಾಲದಿಂದ ಮೊದಲುಗೊಂಡ ಸಂಪತ್ತಿಯನ್ನು ವಿಸ್ತರಿಸಿದಂತೆ ತನ್ನ ಗುಣಗಳಿಂದ ಸಂಪಾದಿಸಲ್ಪಟ್ಟ ಕೀರ್ತಿಯನ್ನು ವಿಸ್ತರಿಸುವವನಾದ ಜಯನೆಂಬವನು ಬುದ್ಧಿಪರಾಕ್ರಮಗಳಂತಿರುವ ಆ ಲಕ್ಷ್ಮೀಮತಿ ಸೋಮಪ್ರಭರಿಗೆ ಪುತ್ರನಾದನು. ಬುದ್ಧಿಪರಾಕ್ರಮಗಳಿಂದ ಜಯವುಂಟಾಗುವಂತೆ ಲಕ್ಷ್ಮೀಮತಿ ಸೋಮಪ್ರಭರಿಂದ ಜಯನೆಂಬ ಪುತ್ರನು ಉತ್ಪನ್ನನಾದನೆಂದು ಭಾವವು.

**ಸುತಾಶ್ಚತುರ್ದಶಾಸ್ಯಾನ್ಯೇ ಜಜ್ಞಿರೇ ವಿಜಯಾದಯಃ ।**
**ಗುಣೈರ್ಮನೂನ್ ವ್ಯತಿಕ್ರಾಂತಾಃ ಸಂಖ್ಯಯಾ ಸದೃಶೋಪಿ ತೇ ॥ ೮೦ ॥**

ಈ ಸೋಮಪ್ರಭರಾಜನಿಗೆ ವಿಜಯನೇ ಮೊದಲಾದ ಬೇರೆ ಹದಿನಾಲ್ಕುಜನ ಪುತ್ರರು ಜನಿಸಿದರು. ಅವರು ಸಂಖ್ಯೆಯಿಂದ ಮನುಗಳಿಗೆ ಸದೃಶರಾಗಿದ್ದರೂ ಗುಣಗಳಿಂದ ಮನುಗಳನ್ನು ಮೀರಿದವರಾಗಿದ್ದರು.

**ಪ್ರವೃದ್ಧನಿಜತೇಜೋಭಿಸ್ತೈಃ ಪಂಚದಶಭಿರ್ಭೃಶಮ್ ।**
**ಕಾಂತ್ಯೈಃ ಕಲಾವಿಶೇಷೈರ್ವಾ [೫]ರಾಜಾ ರಾಜಾ ರರಾಜ ಸಃ ॥ ೮೧ ॥**

ಮನೋಹರವಾದ ಕಲಾವಿಶೇಷಗಳಿಂದ ಚಂದ್ರನು ಪ್ರಕಾಶಿಸುವಂತೆ, ಹೆಚ್ಚಾಗಿ ವೃದ್ಧಿಹೊಂದುತ್ತಿರುವ ತಮ್ಮ ತೇಜಸ್ಸುಗಳುಳ್ಳವರಾದ ಆ ಹದಿನೈದುಮಂದಿ ಮಕ್ಕಳುಗಳಿಂದ ಅಧಿಕವಾಗಿ ಆ ಸೋಮಪ್ರಭರಾಜನು ಪ್ರಕಾಶಿಸಿದನು.

**ರಾಜಾ [೬]ರಾಜಪ್ರಭೋ ಲಕ್ಷ್ಮೀಮತೀ ದೇವೀ ಪ್ರಿಯಾನುಜಃ ।**
**ಶ್ರೇಯಾನ್ [೭]ಜ್ಯಾಯಾನ್ ಜಯಃ ಪುತ್ರಸ್ತದ್ರಾಜ್ಯಂ ಪೂಜ್ಯತೇ ನ ಕೈಃ ॥**

ಸೋಮಪ್ರಭನು ರಾಜನು, ಲಕ್ಷ್ಮೀಮತಿಯು ಆತನ ದೇವಿಯು– ಪಟ್ಟ ಮಹಿಷಿಯು, ಶ್ರೇಯಾನ್‌ಕುಮಾರನು ಆತನ ಪ್ರಿಯನಾದ ತಮ್ಮನು, ಜಯ ಕುಮಾರನು ಶ್ರೇಷ್ಠನಾದ ಮಗನು. ಸೋಮಪ್ರಭನ ರಾಜ್ಯವು ಯಾರಿಂದ ಪೂಜಿಸ ಲ್ಪಡುವುದಿಲ್ಲ ? ಎಲ್ಲರಿಂದಲೂ ಗೌರವಿಸಲ್ಪಡುವುದೆಂದು ಭಾವವು.

**ಸ ಪುತ್ರ[೮]ವಿಟಪಾಟೋಪಃ [೯]ಸೋಮಕಲ್ಪಾಂಘ್ರಿಪಶ್ಚಿರಮ್ ।**
**ಭೋಗ್ಯಃ ಸಂಭೃತಪುಣ್ಯಾನಾಂ ಸ್ವಸ್ಯ ಚಾಭೂತ್ತದದ್ಭುತಮ್ ॥ ೮೩ ॥**

ಪುತ್ರನೆಂಬ ಅತಿಶಯವಾದ ಕೊಂಬೆಯುಳ್ಳದಾದ ಆ ಸೋಮಪ್ರಭನೆಂಬ ಕಲ್ಪವೃಕ್ಷವು ಬಹುಕಾಲದವರೆಗೆ ಪುಣ್ಯಸಂಚಯವನ್ನು ಮಾಡಿರುವವರಿಗೂ ತನಗೂ (ಸೋಮಪ್ರಭನಿಗೂ)ಭೋಗಯೋಗ್ಯವಾಗಿದ್ದಿತು. ಅದು ಆಶ್ಚರ್ಯ ! ಸೋಮ ಪ್ರಭನು ತಾನೂ ಬಹುಕಾಲದವರೆಗೆ ಸುಖವನ್ನನುಭವಿಸಿದನೆಂದು ಭಾವವು.

**ಅಥಾನ್ಯದಾ ಜಗತ್ಕಾಯಭೋಗಬಂಧೂನ್ವಿಧುಪ್ರಭಃ ।**
**ಅನಿತ್ಯಾಶುಚಿದುಃಖಾನ್ಯಾನ್ಮತ್ವಾ ಯಾಥಾತ್ಮ್ಯವೀಕ್ಷಣಃ ॥ ೮೪ ॥**

೧ ಸೋಮಪ್ರಭಸ್ಯ. ೨ ತಿರಸ್ಕಾರಮಕೃತ್ವಾ. ೩ ದರ್ಶನೀಯಾ. ೪ ಜನನಕಾಲಾತ್ಪ್ರಾರಭ್ಯ. ೫ ಚಂದ್ರಃ. ೬ ಸೋಮಪ್ರಭಃ. ೭ ಶ್ರೇಷ್ಠಃ. ೮ ಶಾಖಾತಿಶಯಃ. ೯ ಸೋಮಪ್ರಭಃ.

**ವಿರಜ್ಯ ರಾಜ್ಯಂ ಸಂಯೋಜ್ಯ [೧]ಧುರ್ಯೇ ಶೌರ್ಯೋರ್ಜಿತೇ ಜಯೇ ।**
**[೨]ಅಜರ್ಯೌ[೩]ದಾರ್ಯವೀರ್ಯಾದಿ[೪]ಪ್ರಾಜ್ಯರಾಜ್ಯಸಮುತ್ಸುಕಃ ॥ ೮೫ ॥**

**ಅಭ್ಯೇತ್ಯ ವೃಷಭಾಭ್ಯಾಸಂ ದೀಕ್ಷಿತ್ವಾ ಮೋಕ್ಷಮನ್ವಭೂತ್ ।**
**[೫]ಶ್ರೇಯಸಾ ಸಹ [೬]ನಾರ್ಪತ್ಯಮನುಜೇನ ಯಥಾ [೭]ಪುರಾ ॥ ೮೬ ॥**

ಬಳಿಕ ಒಂದಾನೊಂದು ಕಾಲದಲ್ಲಿ ನಿಜಸ್ವರೂಪವನ್ನು ವಿಚಾರಮಾಡುವವನಾದ ಸೋಮಪ್ರಭರಾಜನು ಜಗತ್ತನ್ನು ಅನಿತ್ಯವನ್ನಾಗಿಯೂ ಶರೀರವನ್ನು ಅಶುಚಿಯನ್ನಾಗಿಯೂ ಭೋಗ – ಸುಖವನ್ನು ದುಃಖಮಿಶ್ರಿತವನ್ನಾಗಿಯೂ ಬಂಧುಗಳನ್ನು ಬೇರೆಯವರನ್ನಾಗಿಯೂ ತಿಳಿದು ವೈರಾಗ್ಯವನ್ನು ಹೊಂದಿ ಧುರಂಧರ – ಸಮರ್ಥನೂ ಅಧಿಕವಾದ ಶೌರ್ಯವುಳ್ಳವನೂ ಆದ ಜಯಕುಮಾರನಲ್ಲಿ ರಾಜ್ಯವನ್ನು ಸೇರಿಸಿ ನಾಶರಹಿತವೂ ಮಹತ್ತ್ವವುಳ್ಳದೂ ಶಕ್ತಿಯುಳ್ಳದೂ ಸರ್ವೋತ್ಕೃಷ್ಟವೂ ಆದ ಮುಕ್ತಿಸಾಮ್ರಾಜ್ಯದಲ್ಲಿ ಕುತೂಹಲವುಳ್ಳವನಾಗಿ ವೃಷಭಸ್ವಾಮಿಯ ಸಮೀಪವನ್ನು ಹೊಂದಿ ದೀಕ್ಷೆಯನ್ನು ಪಡೆದು ರಾಜ್ಯಕಾಲದಲ್ಲಿ ತಮ್ಮನಾದ ಶ್ರೇಯಃಕುಮಾರನೊಡನೆ ದೊರೆತನವನ್ನು ಹೇಗೆ ಅನುಭವಿಸಿದನೋ ಹಾಗೆ ಮೋಕ್ಷವನ್ನು ಅನುಭವಿಸಿದನು.

**ಪಿತುಃ ಪದ[೮]ಮಧಿಷ್ಠಾಯ ಜಯೋ[೯]ತಾಯಿ ಮಹೀಂ ಮಹಾನ್ ।**
**ಮಹತೋನುಭವನ್ ಭೋಗಾನ್ ಸಂವಿಭಜ್ಯಾನುಜೈಃ ಸಮಮ್ ॥**

ತಂದೆಯ ಸ್ಥಾನವನ್ನು ಆಶ್ರಯಿಸಿ ಮಹಾರಾಜನಾದ ಜಯಕುಮಾರನು ಮಹಾಭೋಗಗಳನ್ನು ವಿಭಾಗಿಸಿ ತಮ್ಮಂದಿರೊಡನೆ ಕೂಡಿ ಅನುಭವಿಸುವವನಾಗಿ ಭೂಮಿಯನ್ನು ಪಾಲಿಸಿದನು.

**ಏಕದಾಯಂ ವಿಹಾರಾರ್ಥಂ ಬಾಹ್ಯೋದ್ಯಾನಮುಪಾಗತಃ ।**
**ತತ್ರಾಸೀನಂ ಸಮಾಲೋಕ್ಯ ಶೀಲಗುಪ್ತಮಹಾಮುನಿಮ್ ॥ ೮೮ ॥**

**ತ್ರಿಃ ಪರೀತ್ಯ ನಮಸ್ಕೃತ್ಯ ನುತ್ವಾ ಭಕ್ತಿಭರಾನ್ವಿತಃ ।**
**ಶ್ರುತ್ವಾ ಧರ್ಮಂ ತಮಾಪೃಚ್ಛ್ಯ ಪ್ರೀತ್ಯಾ ಪ್ರತ್ಯಾವಿಶತ್ಪುರೀಮ್ ॥ ೮೯ ॥**

ಒಂದು ಕಾಲದಲ್ಲಿ ಈ ಜಯಕುಮಾರನು ವಿಹಾರಕ್ಕೋಸ್ಕರ ಹೊರಗಿನ ತೋಟವನ್ನು ಸೇರಿದವನಾಗಿ ಅಲ್ಲಿ ಕುಳಿತಿದ್ದ ಶೀಲಗುಪ್ತಮಹಾಮುನಿಯನ್ನು ನೋಡಿ ಮೂರಾವರ್ತಿ ಬಲಗೊಂಡು ನಮಸ್ಕರಿಸಿ ಭಕ್ತಿಭಾರದಿಂದ ಕೂಡಿದವನಾಗಿ ಸ್ತುತಿಸಿ ಪ್ರೀತಿಯಿಂದ ಧರ್ಮವನ್ನು ಕೇಳಿ ಆ ಮುನಿಯನ್ನು ಕೇಳಿ–ಬೀಳ್ಕೊಂಡು ತನ್ನ ಪಟ್ಟಣಕ್ಕೆ ಬಂದು ಪ್ರವೇಶಿಸಿದನು.

**ತಸ್ಮಿನ್ವನೇವಸನ್ನಾಗಮಿಥುನಂ ಸಹ ಭೂಭುಜಾ ।**
**ಶ್ರುತ್ವಾ ಧರ್ಮಂ ಸುಧಾಂ ಮತ್ವಾ ಪಪೌ ಪ್ರೀತ್ಯಾ ದಯಾರಸಮ್ ॥**

ಆ ವನದಲ್ಲಿ ವಾಸಮಾಡುವ ಎರಡು ಹಾವುಗಳು ಜಯಕುಮಾರಮಹಾರಾಜನೊಡನೆ ದಯಾರಸವುಳ್ಳ ಧರ್ಮವನ್ನು ಕೇಳಿ ಅದನ್ನು ಅಮೃತವನ್ನಾಗಿ ತಿಳಿದು ಪ್ರೀತಿಯಿಂದ ಪಾನಮಾಡಿದುವು. ಪ್ರೀತಿಯಿಂದ ಧರ್ಮಶ್ರವಣವನ್ನು ಮಾಡಿದುವೆಂದು ಭಾವವು.

**ಕದಾಚಿತ್ಪ್ರಾವೃಡಾರಂಭೇ ಪ್ರಚಂಡಾಶನಿತಾಡಿತಃ ।**
**ಮೃತ್ವಾಸೌ ಶಾಂತಿಮಾದಾಯ ನಾಗೋ ನಾಗಾಮರೋಭವತ್ ॥ ೯೧ ॥**

ಒಂದಾನೊಂದು ಕಾಲದಲ್ಲಿ ವರ್ಷಾಕಾಲದ ಆರಂಭದಲ್ಲಿ ತೀವ್ರವಾದ ಸಿಡಿಲಿನಿಂದ ಹೊಡೆಯಲ್ಪಟ್ಟ ಈ ಗಂಡು ಹಾವು ಶಾಂತಿಯನ್ನು ಹೊಂದಿ ಸತ್ತು ನಾಗದೇವನಾಗಿ ಆಯಿತು.

೧ ಧುರಂಧರೇ. ೨ ಅಕ್ಷಯ್ಯ. ೩ ಮಹತ್ತ್ವ. ೪ ಮುಕ್ತಿಸಾಮ್ರಾಜ್ಯಸಮುತ್ಸುಕಃ. ೫ ಅನುಜೇನ. ೬ ನೃಪತಿತ್ವಂ. ೭ ರಾಜ್ಯಕಾಲೇ. ೮ ಆಶ್ರಿತ್ಯ. ೯ ಪಾಲಯತಿ ಸ್ಮ.

**ಅನ್ಯೇದ್ಯುರಿಭಮಾರುಹ್ಯ ಪುನಸ್ತದ್ವನ[೧]ಮಾಪತನ್ ।**
**[೨]ನಾಗೀಂ [೩]ಶ್ರುತವತೀಂ ಧರ್ಮಂ ರಾಜಾತ್ರೈವ ಸಹಾತ್ಮನಾ ॥ ೯೨ ॥**

**ವೀಕ್ಷ್ಯ ಕಾಕೋದರೇಣಾಮಾ ಜಾತಕೋಪೋ ವಿಜಾತಿನಾ ।**
**ಲೀಲಾನೀಲೋತ್ಪಲೇನಾ[೪]ಹನ್ ದಂಪತೀ ತೌ ಧಿಗಿತ್ಯಸೌ ॥ ೯೩ ॥**

ಮರುದಿನ ಆನೆಯನ್ನು ಹತ್ತಿಕೊಂಡು ಪುನಃ ಆ ವನಕ್ಕೆ ಬಂದವನಾದ ಜಯಕುಮಾರರಾಜನು ಈ ವನದಲ್ಲಿಯೇ ತನ್ನೊಡನೆ ಧರ್ಮವನ್ನು ಕೇಳಿದ ಹೆಣ್ಣುಹಾವನ್ನು ಬೇರೆಯಾದ ಜಾತಿಯುಳ್ಳ ಹಾವಿನ(ಕೇರೆ ಹಾವಿನ)ಜತೆಯಲ್ಲಿ ನೋಡಿ ಕೋಪಗೊಂಡವನಾಗಿ ''ಈ ಹೆಣ್ಣುಹಾವು ದಂಪತಿಗಳಾಗಿದ್ದ ಆ ಹಾವುಗಳು, ಸುಡು'' ಹೀಗೆಂದು ವಿನೋದಾರ್ಥವಾದ ಕನ್ನೈದಿಲೆ ಹೂವಿನಿಂದ ಹೊಡೆದನು. ಮೊದಲನೆಯ ದಿವಸ ನೋಡಿದ್ದ ದಂಪತಿಗಳಲ್ಲಿ ಒಂದಾದ ಹೆಣ್ಣುಹಾವು ಬೇರೆಯಾದ ಜಾತಿಯ ಹಾವಿನೊಡನೆ ಸೇರಿಕೊಂಡಿರುವುದನ್ನು ನೋಡಿ ಅದರ ದುಶ್ಚರಿತ್ರಕ್ಕೋಸ್ಕರ ಕೋಪಗೊಂಡು ಕನ್ನೈದಿಲೆಯಿಂದ ಹೊಡೆದನೆಂದು ಭಾವವು.

**[೫]ಪಲಾಯಮಾನೌ ಪಾಷಾಣೈಃ ಕಾಷ್ಠೈರ್ಲೋಷ್ಟೈಃ ಪದಾತಯಃ ।**
**[೬]ಅಘ್ನನ್ ಸರ್ವೇ ನ ಕೋ ವಾತ್ರ ದುಶ್ಚರಿತ್ರಾಯ ಕುಪ್ಯತಿ ॥ ೯೪ ॥**

ಓಡಿಹೋದ ಆ ಹಾವುಗಳನ್ನು ಎಲ್ಲಾ ಕಾಲಾಳುಗಳೂ ಕಲ್ಲುಗಳಿಂದಲೂ ಕಟ್ಟಿಗೆಗಳಿಂದಲೂ ಮಣ್ಣಿನ ಹೆಂಟೆಗಳಿಂದಲೂ ಹೊಡೆದು ಕೊಂದರು. ಈ ಲೋಕದಲ್ಲಿ ಯಾವನು ತಾನೆ ಕೆಟ್ಟನಡತೆಯುಳ್ಳವನಿಗೆ (ಕೆಟ್ಟನಡತೆಯುಳ್ಳವನ ವಿಷಯದಲ್ಲಿ ) ಕೋಪಿಸಿಕೊಳ್ಳುವುದಿಲ್ಲ ?

**ಪಾಪಃ [೭]ಸತದ್ವ್ರಣೈರ್ಮೃತ್ವಾ ವೇದನಾಕುಲಧೀಸ್ತದಾ ।**
**ನಾಮ್ನಾಜಾಯತ ಗಂಗಾಯಾಂ ಕಾಲೀತಿ ಜಲದೇವತಾ ॥ ೯೫ ॥**

ಪಾತಕಿಯಾದ ಆ ಕೇರೆಹಾವು ಆ ಗಾಯಗಳಿಂದುಂಟಾದ ವೇದನೆಯಿಂದ ವ್ಯಾಕುಲವಾದ ಬುದ್ಧಿಯುಳ್ಳದಾಗಿ ಆಗ ಸತ್ತು ಗಂಗಾನದಿಯಲ್ಲಿ ಕಾಲಿಯೆಂಬ ಹೆಸರಿನ ಜಲದೇವತೆಯಾಗಿ ಹುಟ್ಟಿತು.

**ಸಂಜಾತಾ[೮]ನುಶಯಾ ಸಾಪಿ ಧೃತ್ವಾ ಧರ್ಮಂ ಹೃದಿ ಸ್ಥಿರಮ್ ।**
**ಭೂತ್ವಾ ಪ್ರಿಯಾ [೯]ಸ್ವನಾಗಸ್ಯ [೧೦]ರಾಜ್ಞಾ [೧೧]ಸ್ವಮೃತಿಮಬ್ರವೀತ್ ॥ ೯೬ ॥**

ಪಶ್ಚಾತ್ತಾಪವುಳ್ಳದಾದ ಆ ಹೆಣ್ಣುಹಾವೂ ಮನಸ್ಸಿನಲ್ಲಿ ಧರ್ಮವನ್ನು ಸ್ಥಿರವಾಗಿ ಧರಿಸಿ ಸತ್ತು ಹಿಂದೆ ತನ್ನ ಪತಿಯಾಗಿದ್ದವನಿಗೆ ಪತ್ನಿಯಾಗಿ ಹುಟ್ಟಿ ಜಯಕುಮಾರರಾಜನಿಂದ ತನಗಾದ ಮರಣವನ್ನು ಪತಿಗೆ ಹೇಳಿದಳು.

**ನಾಗಾಮರೋಪಿ ತಾಂ ಪಶ್ಯನ್ ಕೋಪಾದೇವಮಮನ್ಯತ ।**
**ದರ್ಪಾ[೧೨]ತ್ತೇನ ಖಲೇನೈಷಾ [೧೩]ವರಾಕೀ ಹಾ ಹತಾ ವೃಥಾ ॥ ೯೭ ॥**

ಆ ನಾಗದೇವನೂ ಆಕೆಯನ್ನು ನೋಡಿದವನಾಗಿ ಕೋಪದಿಂದ ಈ ಮುಂದೆ ಹೇಳುವ ರೀತಿಯಾಗಿ ತಿಳಿದನು. ''ಅಹಂಕಾರದಿಂದ ಆ ದುಷ್ಟನಾದ ಜಯಕುಮಾರನಿಂದ ಅನಾಥಳಾದ ಈಕೆಯು ವ್ಯರ್ಥವಾಗಿ ಕೊಲ್ಲಲ್ಪಟ್ಟಳು. ಹಾ–ಕಷ್ಟ !

**ವಿಧವೇತಿ ವಿವೇದಾ[೧೪]ಧೀರ್ನೇದೃಕ್ಷಂ ಮಾಮಿಮಂ [೧೫]ಧವಮ್ ।**
**[೧೬]ತತ್ಪ್ರಾಣಾನ್ನ [೧೭]ಹರೇ ಯಾವದ್ಭುಜಂಗಃ ಕೇನ ವಾಸ್ಮ್ಯಹಮ್ ॥ ೯೮ ॥**

ಅಜ್ಞನಾದ ಜಯಕುಮಾರನು ಈಕೆಯು ವಿಧವೆಯೆಂದು ತಿಳಿದನು. ಈ ಪ್ರಕಾರನಾದ ಈ ನನ್ನನ್ನು ಈಕೆಯ ಪತಿಯನ್ನಾಗಿ ತಿಳಿಯಲಿಲ್ಲ. ಎಷ್ಟರವರೆಗೆ ಆ ಜಯಕುಮಾರನ ಪ್ರಾಣಗಳನ್ನು ನಾನು ಅಪಹರಿಸುವುದಿಲ್ಲವೋ ಅಷ್ಟರವರೆಗೆ

೧ ಆಗಚ್ಛನ್. ೨ ಸರ್ಪಿಣೀಂ. ೩ ಆಕರ್ಣಿತವತೀಂ. ೪ ತಾಡಯಾಮಾಸ. ೫ ಪಲಾಯಿತವಂತೌ. ೬ ಘ್ನಂತಿ ಸ್ಮ. ೭ ಕಾಕೋದರಃ. ೮ ಪಶ್ಚಾತ್ತಾಪವತೀ. ೯ ನಿಜಭರ್ತೃಚರಸ್ಯ. ೧೦ ಜಯೇನ. ೧೧ ಜಾತನಿಜಮರಣಂ. ೧೨ ಜಯಕುಮಾರೇಣ. ೧೩ ಅಗತಿಕಾ. ೧೪ ಅಜ್ಞಃ. ೧೫ ಪತಿಂ. ೧೬ ಜಯಪ್ರಾಣಾನ್. ೧೭ ಯಾವದಹಂನಹರೇತಾವತ್.

ಯಾವಕಾರಣದಿಂದ ನಾನು ಸರ್ಪನಾಗಿರುತ್ತೇನೆ ?" ಪ್ರಾಣಗಳನ್ನು ಅಪಹರಿಸುವವರೆಗೂ ತಾನು ಸರ್ಪನಲ್ಲವೆಂದು ಸಂಕಲ್ಪಿಸಿದನೆಂದು ಭಾವವು.

**ಇತ್ಯತೋಸೌ[೧]ದಿದಂಕ್ಷುಸ್ತಂ ಜಯಂ ತದ್ಗೃಹಮಾಸದತ್ ।**
**ನ ಸಹಂತೇ ನನು ಸ್ತ್ರೀಣಾಂ ತಿರ್ಯಂಚೋಪಿ ಪರಾಭವಮ್ ॥ ೯೯ ॥**

ಈ ಪ್ರಕಾರವಾಗಿ ಯೋಚಿಸಿ ಬಳಿಕ ಈ ನಾಗದೇವನು ಆ ಜಯಕುಮಾರನನ್ನು ಕಚ್ಚಬೇಕೆಂಬ ಇಚ್ಛೆಯುಳ್ಳವನಾಗಿ ಅವನ ಮನೆಗೆ ಹೋದನು. ತಿರ್ಯಕ್ಪ್ರಾಣಿಗಳೂ ಸ್ತ್ರೀಯರ ತಿರಸ್ಕಾರವನ್ನು ಸಹಿಸುವುದಿಲ್ಲವಲ್ಲವೆ ? (ಇದು ಸರ್ಪಾವಸ್ಥೆಯನ್ನು ಕುರಿತು ಹೇಳುವ ಮಾತಾಗಿರುತ್ತದೆ).

**[೨]ವಾಸಗೇಹೇ ಜಯೋ ರಾತ್ರೌ ಶ್ರೀಮತ್ಯಾಃ ಕೌತುಕಂ ಪ್ರಿಯೇ ।**
**ಶೃಣ್ವೇಕಂ ದೃಷ್ಟಮಿತ್ಯಾ[೩]ಖ್ಯತ್ತದ್ಭುಜಂಗೀವಿಚೇಷ್ಟಿತಮ್ ॥ ೧೦೦ ॥**

ಜಯಕುಮಾರನು ಶಯ್ಯಾಗೃಹದಲ್ಲಿ ರಾತ್ರಿಯಲ್ಲಿ ತನ್ನ ಪತ್ನಿ ಶ್ರೀಮತಿಗೆ "ಎಲೈ ಪ್ರಿಯಳೆ ! ನಾನು ನೋಡಿದ ಒಂದು ಕುತೂಹಲವಿಷಯವನ್ನು ಕೇಳು" ಎಂದು ಆ ಹೆಣ್ಣುಹಾವಿನ ಚೇಷ್ಟೆಯನ್ನು ಹೇಳಿದನು.

**[೪]ಆಭಿಜಾತ್ಯಂ ವಯೋ ರೂಪಂ ವಿದ್ಯಾಂ ವೃತ್ತಂ ಯಶಃ ಶ್ರಿಯಮ್ ।**
**ವಿಭುತ್ವಂ ವಿಕ್ರಮಂ ಕಾಂತಿಮೈಹಿಕಂ ಪಾರಲೌಕಿಕಮ್ ॥ ೧೦೧ ॥**

**ಪ್ರೀತಿಮಪ್ರೀತಿಮಾದೇಯಮನಾದೇಯಂ ಕೃಪಾಂ ತ್ರಪಾಮ್ ।**
**ಹಾನಿಂ ವೃದ್ಧಿಂ ಗುಣಾನ್ ದೋಷಾನ್ ಗಣಯಂತಿ ನ ಯೋಷಿತಃ ॥**

"ಸ್ತ್ರೀಯರು ಸತ್ಕುಲದಲ್ಲಿ ಹುಟ್ಟಿರುವಿಕೆಯನ್ನೂ ವಯಸ್ಸನ್ನೂ ರೂಪವನ್ನೂ ವಿದ್ಯೆಯನ್ನೂ ನಡತೆಯನ್ನೂ ಯಶಸ್ಸನ್ನೂ ಸಂಪತ್ತಿಯನ್ನೂ ಪ್ರಭುತ್ವವನ್ನೂ ಪರಾಕ್ರಮವನ್ನೂ ಕಾಂತಿಯನ್ನೂ ಇಹಲೋಕಸುಖವನ್ನೂ ಪರಲೋಕಸುಖವನ್ನೂ ಪ್ರೀತಿಯನ್ನೂ ಅಪ್ರೀತಿಯನ್ನೂ ಗ್ರಾಹ್ಯವಿಷಯವನ್ನೂ ಅಗ್ರಾಹ್ಯವಿಷಯವನ್ನೂ ದಯೆಯನ್ನೂ ಲಜ್ಜೆಯನ್ನೂ ಹಾನಿಯನ್ನೂ ವೃದ್ಧಿಯನ್ನೂ ಗುಣಗಳನ್ನೂ ದೋಷಗಳನ್ನೂ ಎಣಿಸುವುದಿಲ್ಲ. ಹೇಯೋಪಾದೇಯಪರಿಜ್ಞಾನವಿಲ್ಲದೆ ಪರಪುರುಷನಲ್ಲಿ ಆಸಕ್ತರಾಗಿರುತ್ತಾರೆಂದು ಭಾವವು.

**ಧರ್ಮಃ ಕಾಮಶ್ಚ ಸಂಚೇಯೋ ವಿತ್ತೇನಾಯಂ ತು ಸತ್ಪಥಃ ।**
**ಕ್ರೀಣಂತ್ಯರ್ಥಂ ಸ್ತ್ರಿಯಸ್ತಾಭ್ಯಾಂ ಧಿಕ್ ತಾಸಾಂ ವೃದ್ಧ[೫]ಗೃಧ್ನುತಾಮ್ ॥**

ದ್ರವ್ಯದಿಂದ ಧರ್ಮವನ್ನೂ ಕಾಮವನ್ನೂ ಸಂಗ್ರಹಿಸಬೇಕು. ಇದಾದರೋ ಸನ್ಮಾರ್ಗವಾಗಿರುತ್ತದೆ. ಸ್ತ್ರೀಯರು ಆ ಧರ್ಮದಿಂದಲೂ ಕಾಮದಿಂದಲೂ ಅರ್ಥವನ್ನು ಬೆಲೆಗೆ ತೆಗೆದುಕೊಳ್ಳುತ್ತಾರೆ. ಆ ಸ್ತ್ರೀಯರ ಅಧಿಕವಾದ ದುರಭಿಲಾಷೆಯನ್ನು ನಿಂದಿಸಬೇಕು.

**ವೃಶ್ಚಿಕಸ್ಯ ವಿಷಂ ಪಶ್ಚಾತ್ಪನ್ನಗಸ್ಯ ವಿಷಂ ಪುರಃ ।**
**ಯೋಷಿತಾಂ ದೂಷಿತೇಚ್ಛಾನಾಂ ವಿಶ್ವತೋ ವಿಷಮಂ ವಿಷಮ್ ॥**

ಚೇಳಿಗೆ ವಿಷವು ಹಿಂದೆ–ಬಾಲದಲ್ಲಿರುತ್ತದೆ. ಹಾವಿನ ವಿಷವು ಮುಂದೆ–ಬಾಯಿಯಲ್ಲಿರುತ್ತದೆ. ದುಷ್ಟಾಭಿಲಾಷೆಯುಳ್ಳವರಾದ ಸ್ತ್ರೀಯರಿಗೆ ಎಲ್ಲಾ ಕಡೆಯಲ್ಲಿಯೂ ಅಧಿಕವಾದ ವಿಷವಿರುತ್ತದೆ.

**[೬]ಸತ್ಯಾಭಾಸೈರ್ನ ತೇ ಸ್ತ್ರೀಣಾಂ ವಂಚಿತಾ ಯೇ ನ ಧೀಧನಾಃ ।**
**[೭]ದುಃಶ್ರುತೀನಾಮಿವೈತಾಭ್ಯೋ ಮುಕ್ತಾಸ್ತೇ ಮುಕ್ತಿವಲ್ಲಭಾಃ ॥ ೧೦೪ ॥**

ದುಷ್ಟಶಾಸ್ತ್ರಗಳ ಮಿಥ್ಯಾಪ್ರಲಾಪಗಳಿಂದ ವಂಚಿಸಲ್ಪಡದಿರುವ ಬುದ್ಧಿಶಾಲಿಗಳು ಹೇಗೆ ಇಲ್ಲವೋ ಹಾಗೆ ಸ್ತ್ರೀಯರ ಮಿಥ್ಯಾಪ್ರಲಾಪಗಳಿಂದ ಯಾವ ಬುದ್ಧಿಶಾಲಿಗಳು ವಂಚಿಸಲ್ಪಡಲಿಲ್ಲವೋ ಅಂಥ ಬುದ್ಧಿಶಾಲಿಗಳಿಲ್ಲ. ವಂಚಿಸಲ್ಪಡದವರಿಲ್ಲವೆಂದು

೧ ದಂಶಿತುಮಿಚ್ಛುಃ. ೨ ಶಯ್ಯಾಗೃಹೇ. ೩ ಅವೋಚತ್. ೪ ಕುಲಜತ್ವಂ. ೫ ಅಭಿಲಾಷಿತಾಂ. ೬ ಮಿಥ್ಯಾಪ್ರಲಾಪೈಃ. ೭ ದುಷ್ಟಶಾಸ್ತ್ರಾಣಾಂ.

ಭಾವವು. ಈ ಸ್ತ್ರೀಯರಿಂದ ಯಾರು ಬಿಡಲ್ಪಟ್ಟಿರುತ್ತಾರೋ ಅವರು ಮುಕ್ತಿವಲ್ಲಭರಾಗಿರುತ್ತಾರೆ.

**ತಾಸಾಂ ಕಿಮುಚ್ಯತೇ ಕೋಪಃ ಪ್ರಸಾದೋಪಿ ಭಯಂಕರಃ ।**
**ಹಂತ್ಯಧೀರಾನ್ [೧]ಪ್ರವೇಶ್ಯಾಂ[೨]ತರಗಾಧಸರಿತಾಂ ಯಥಾ ॥ ೧೦೬ ॥**

ಆ ಸ್ತ್ರೀಯರ ಪ್ರಸನ್ನತೆಯೂ ಭಯಂಕರವಾದುದು. ಇನ್ನು ಅವರ ಕೋಪವನ್ನು ಕುರಿತು ಹೇಳುವುದೇನು ? ಆಳವಾದ ನದಿಗಳಂತೆ ಅಜ್ಞರನ್ನು ಒಳಗೆ– ಮನಸ್ಸಿನಲ್ಲಿ ಪ್ರವೇಶಮಾಡಿಸಿ ಕೊಲ್ಲುತ್ತಾರೆ.

**[೩]ಜಾಲಿಕೈರಿಂದ್ರಜಾಲೇನ ವಂಚ್ಯಾ [೪]ಗ್ರಾಮ್ಯಾ ಹಿ ಮಾಯಯಾ ।**
**ತಾಭಿಃ [೫]ಸೇಂದ್ರೋ [೬]ಗುರುರ್ವಂಚ್ಯಸ್ತನ್ಮಾಯಾಮಾತರಃ ಸ್ತ್ರಿಯಃ ॥**

ವಂಚಕರಿಂದ ಇಂದ್ರಜಾಲದಿಂದ ಮಾಯೆಯಿಂದ ಗ್ರಾಮೀಣರು–ಪರೀಕ್ಷೆಯನ್ನೂ ಶಾಸ್ತ್ರವನ್ನೂ ತಿಳಿಯದ ಅಜ್ಞರು ವಂಚಿಸಲ್ಪಡತಕ್ಕವರಾಗಿರುತ್ತಾರೆ. ಸ್ತ್ರೀಯರಿಂದಾದರೋ ಇಂದ್ರಸಹಿತನಾದ ಬೃಹಸ್ಪತಿಯೂ ವಂಚಿಸಲ್ಪಡತಕ್ಕವನಾಗಿದ್ದಾನೆ. ಆದುದರಿಂದ ಸ್ತ್ರೀಯರು ಮಾಯೆಯ ತಾಯಂದಿರಾಗಿರುತ್ತಾರೆ.

**ತಾಃ ಶ್ರಯಂತೇ ಗುಣಾ ನೈವ ನಾಶಭೀತ್ಯಾ ಯದಿ ಶ್ರಿತಾಃ ।**
**ತಿಷ್ಠಂತಿ ನ ಚಿರಂ ಪ್ರಾಂತೇ ನಶ್ಯಂತ್ಯಪಿ ಚ ತೇ ಸ್ಥಿತಾಃ ॥ ೧೦೮ ॥**

ಗುಣಗಳು ತಾವು ನಾಶವಾಗುತ್ತೇವೆಂಬ ಭೀತಿಯಿಂದ ಆ ಸ್ತ್ರೀಯರನ್ನು ಆಶ್ರಯಿಸುವುದೇ ಇಲ್ಲ. ಒಂದುವೇಳೆ ಆಶ್ರಯಿಸಿದುವುಗಳಾದರೂ ಬಹುಕಾಲದವರೆಗೆ ಇರುವುದಿಲ್ಲ. ಅವುಗಳು ಇದ್ದರೂ ಕೊನೆಯಲ್ಲಿ ನಾಶವಾಗುತ್ತವೆ.

**ದೋಷಾಃ ಕಿಂ ತನ್ಮಯಾಸ್ತಾಸು ದೋಷಾಣಾಂ ಕಿಂ ಸಮುದ್ಭವಃ ।**
**ತಾಸಾಂ ದೋಷೇಭ್ಯ ಇತ್ಯತ್ರ ನ ಕಸ್ಯಾಪಿ ವಿನಿಶ್ಚಯಃ ॥ ೧೦೯ ॥**

ದೋಷಗಳು ಸ್ತ್ರೀವಿಕಾರವನ್ನು ಹೊಂದಿರುತ್ತವೋ ? ಆ ಸ್ತ್ರೀಯರಲ್ಲಿ ದೋಷಗಳ ಉತ್ಪತ್ತಿಯಾಗಿರುವುದೋ ? ದೋಷಗಳಿಂದ ಆ ಸ್ತ್ರೀಯರ ಉತ್ಪತ್ತಿಯಾಗಿರುವುದೋ ? ಈ ವಿಷಯದಲ್ಲಿ ಯಾರಿಗೂ ನಿಶ್ಚಯವಿಲ್ಲ.

**ನಿರ್ಗುಣಾನ್ಗುಣಿನೋ ಮಂತುಂ ಗುಣಿನಃ ಖಲು ನಿರ್ಗುಣಾನ್ ।**
**ನಾಶಕತ್ಪರಮಾತ್ಮಾಪಿ ಮನ್ಯಂತೇ ತಾ ಹಿ ಹೇಲಯಾ ॥ ೧೧೦ ॥**

ಪರಮಾತ್ಮನು ಕೂಡ ನಿರ್ಗುಣರನ್ನು ಗುಣಗಳುಳ್ಳವರನ್ನಾಗಿಯೂ ಗುಣಗಳುಳ್ಳವರನ್ನು ನಿರ್ಗುಣರನ್ನಾಗಿಯೂ ಚೆನ್ನಾಗಿ ತಿಳಿಯುವುದಕ್ಕೆ ಸಮರ್ಥನಾಗಲಿಲ್ಲ. ಆ ಸ್ತ್ರೀಯರಾದರೋ ಲೀಲೆಯಿಂದ ತಿಳಿದುಬಿಡುತ್ತಾರೆ.

**ಮೋಕ್ಷೋ ಗುಣಮಯೋ ನಿತ್ಯೋ [೭]ದೋಷಮಯ್ಯಃ ಸ್ತ್ರಿಯಶ್ಚಲಾಃ ।**
**ತಾಸಾಂ ನೇಚ್ಛಂತಿ ನಿರ್ವಾಣಮತ ಏವಾಪ್ತಸೂಕ್ತಿಷು ॥ ೧೧೧ ॥**

ಮೋಕ್ಷವು ಗುಣಮಯವೂ ನಿತ್ಯವೂ ಸ್ತ್ರೀಯರು ದೋಷರೂಪರೂ ಚಂಚಲರೂ ಆಗಿರುತ್ತಾರೆ. ಈ ಕಾರಣದಿಂದಲೇ ಆಪ್ತ–ಜಿನವಚನಗಳಲ್ಲಿ ಆ ಸ್ತ್ರೀಯರಿಗೆ ಮೋಕ್ಷವನ್ನು ಇಚ್ಛಿಸುವುದಿಲ್ಲ. ಜೈನಸಿದ್ಧಾಂತದಲ್ಲಿ ಸ್ತ್ರೀಮುಕ್ತಿಯು ನಿಷೇಧಿಸಲ್ಪಟ್ಟಿರುತ್ತದೆಂದು ಭಾವವು.

**ಲಕ್ಷ್ಮೀಃ ಸರಸ್ವತೀ ಕೀರ್ತಿರ್ಮುಕ್ತಿಸ್ತ್ವಮಿತಿ [೮]ವಿಶ್ರುತಾಃ ।**
**ದುರ್ಲಭಾಸ್ತಾಸು ವಲ್ಲೀಷು ಕಲ್ಪವಲ್ಲ್ಯ ಇವ ಪ್ರಿಯೇ ॥ ೧೧೨ ॥**

ಪ್ರಿಯಳೆ ! ಲತೆಗಳಲ್ಲಿ ಕಲ್ಪಲತೆಗಳಂತೆ ಸ್ತ್ರೀಯರಲ್ಲಿ ಲಕ್ಷ್ಮಿ, ಸರಸ್ವತಿ ಕೀರ್ತಿಮುಕ್ತಿ ನೀನು (ಶ್ರೀಮತಿ) ಈ ಪ್ರಕಾರವಾಗಿ ಪ್ರಸಿದ್ಧರಾದ ಸ್ತ್ರೀಯರು ದುರ್ಲಭರು."

೧ ಪ್ರವೇಶಂ ಕಾರಯಿತ್ವಾ. ೨ ಚಿತ್ತಂ. ೩ ವಂಚಕೈಃ. ೪ ಪರೀಕ್ಷಾಶಾಸ್ತ್ರಬಹಿರ್ಭೂತಾಃ. ೫ ಇಂದ್ರಜಾಲಾದಿದೇವತಾಭೂತೇಂದ್ರಸಹಿತಃ. ೬ ತದಿಂದ್ರಮಂತ್ರೀ ಬೃಹಸ್ಪತಿಃ. ೭ ದೋಷರೂಪಾಃ. ೮ ಪ್ರಸಿದ್ಧಾಃ.

**ಇತ್ಯೇತಚ್ಚಾಹ ತಚ್ಛ್ರುತ್ವಾ ತಂ [೧]ಜಿಘಾಂಸುರಹಿಸ್ತದಾ ।**
**ಪಾಪಿನಾ ಚಿಂತಿತಂ ಪಾಪಂ ಮಯಾ [೨]ಪಾಪಾಪಲಾಪತಃ ॥ ೧೧೩ ॥**

ಆಗ ಆ ಜಯಕುಮಾರನನ್ನು ಕೊಲ್ಲಲಿಚ್ಛಿಸಿದ ನಾಗದೇವನು ಆ ಜಯಕುಮಾರನ ಮಾತನ್ನು ಕೇಳಿ ಈ ಮುಂದೆ ಹೇಳುವ ಮಾತನ್ನು ಹೇಳಿದನು. "ಎಲೈ ಜಯಕುಮಾರನೆ! ಪಾಪಿಯಾದ ನನ್ನಿಂದ ಪಾಪಿಷ್ಠಳ ತಿರಸ್ಕಾರದಿಂದ ಪಾಪ ಕಾರ್ಯವು ಯೋಚಿಸಲ್ಪಟ್ಟಿದ್ದಿತು. ತನ್ನ ಪತ್ನಿಯನ್ನು ಕೊಂದುದಕ್ಕಾಗಿ ಜಯ ಕುಮಾರನನ್ನು ಕೊಲ್ಲಬೇಕೆಂದು ಯೋಚಿಸಿದ್ದನೆಂದರ್ಥವು.

**ಆರ್ಯಾಣಾಮಪಿ ವಾಗ್ಭೂಯೋ ವಿಚಾರ್ಯಾ ಕಾರ್ಯವೇದಿಭಿಃ ।**
**ವರ್ಜ್ಯಾಯಾಃ ಕಿಂ ಪುನರ್ನಾರ್ಯಾಃ ಕಾಮಿನಾಂ ಕಾ ವಿಚಾರಣಾ ॥**

ಕಾರ್ಯವನ್ನು ತಿಳಿಯುವವರಿಂದ ಪೂಜ್ಯರ ವಚನವೂ ಪುನಃ ವಿಚಾರ ಮಾಡತಕ್ಕುದಾಗಿರುತ್ತದೆ. ಬಿಡುವುದಕ್ಕೆ ಯೋಗ್ಯಳಾದ ಸ್ತ್ರೀಯ ವಚನವಾದರೋ ಹೇಳತಕ್ಕುದೇನು? (ವಿಚಾರಮಾಡತಕ್ಕುದೇ ಆಗಿರುತ್ತದೆಂದು ಭಾವವು) ಆದರೆ ಕಾಮುಕರಿಗೆ ವಿಚಾರವಾವುದು? (ಕಾಮುಕರು ವಿಚಾರಶೂನ್ಯರಾಗಿರುತ್ತಾರೆಂದು ಭಾವವು)"

**ಭವೇಸ್ಮಿನ್ನೇವ ಭವ್ಯೋಯಂ ಭವಿಷ್ಯತಿ ಭವಾಂತಕಃ ।**
**ತನ್ನಾಸ್ಯ ಭಯಮನ್ಯೇಭ್ಯೋ ಭಯ[೩]ಮೇತದ್ವಯೈಷಿಣಾಮ್ ॥ ೧೧೪ ॥**

"ಈ ಭವ್ಯನು (ಜಯಕುಮಾರನು) ಈ ಭವದಲ್ಲೇ ಭವವನ್ನು ನಾಶಮಾಡು ವವನಾಗಿ–ಮುಕ್ತನಾಗಿ ಆಗುವನು. ಆದುದರಿಂದ ಇವನಿಗೆ ಬೇರೆಯವರಿಂದ ಭಯವಿಲ್ಲವು. ಈ ಜಯಕುಮಾರನಿಗೆ ಭಯವನ್ನುಂಟುಮಾಡಬೇಕೆಂದಿಚ್ಛಿಸು ವವರಿಗೆ ಭಯವಿರುವುದು.

**ಅಹಂ ಕುತಃ ಕುತೋ ಧರ್ಮಃ ಸಂಸರ್ಗಾದಸ್ಯ ಸೋಪ್ಯಭೂತ್ ।**
**ಮಮೇಹ ಮುಕ್ತಿಪರ್ಯಂತೋ ನಾನ್ಯತ್ಸತ್ಸಂಗಮಾದ್ಧಿತಮ್ ॥ ೧೧೫ ॥**

ನಾನೆಲ್ಲಿ? ಧರ್ಮವೆಲ್ಲಿ? ಈ ಜಯಕುಮಾರನ ಸಂಸರ್ಗದಿಂದ ನನಗೆ ಮುಕ್ತಿಯೇ ಕೊನೆಯಾಗಿರುವ ಆ ಧರ್ಮವೂ ಇಲ್ಲಿ ಪ್ರಾಪ್ತವಾಯಿತು. ಸಜ್ಜನರ ಸಂಬಂಧಕ್ಕಿಂತಲೂ ಬೇರೆ ಹಿತವಿಲ್ಲವು."

**ಇತ್ಯನುಧ್ಯಾಯ ನಿಷ್ಕೋಪಃ [೪]ಕೃತವೇದೀ ಜಯಂ ಸ್ವಯಮ್ ।**
**ರತ್ನೈರನರ್ಘ್ಯೈಃ ಸಂಪೂಜ್ಯ ಸ್ವಪ್ರಪಂಚಂ ನಿಗದ್ಯ ಚ ॥ ೧೧೬ ॥**

**ಮಾಂ ಸ್ವಕಾರ್ಯೇ ಸ್ಮರೇತ್ಯುಕ್ತ್ವಾ ಸ್ವಾವಾಸಂ ಪ್ರತ್ಯಸೌ ಗತಃ ।**
**[೫]ಹಂತಾಪ್ಯೂರ್ಜಿತಪುಣ್ಯಾನಾಂ ಭವತ್ಯಭ್ಯುದಯಾವಹಃ ॥ ೧೧೭ ॥**

ಈ ಪ್ರಕಾರವಾಗಿ ಯೋಚಿಸಿ ಕೋಪರಹಿತನೂ ಕೃತಜ್ಞನೂ ಆದ ಆ ನಾಗದೇವನು ಜಯಕುಮಾರನನ್ನು ಅನರ್ಘ್ಯವಾದ ರತ್ನಗಳಿಂದ ತಾನೇ ಪೂಜಿಸಿ ತನ್ನ ವೃತ್ತಾಂತವನ್ನು ಹೇಳಿಯೂ "ನನ್ನನ್ನು ನಿನ್ನ ಕಾರ್ಯದಲ್ಲಿ ಸ್ಮರಿಸು" ಎಂದು ಹೇಳಿ ಈ ದೇವನು ತನ್ನ ವಾಸಸ್ಥಾನವನ್ನು ಕುರಿತು ಹೋದನು. ಅಧಿಕವಾದ ಪುಣ್ಯವುಳ್ಳವರಿಗೆ ಘಾತಕನೂ ಅಭ್ಯುದಯವನ್ನುಂಟುಮಾಡುವವನಾಗಿ ಆಗುತ್ತಾನೆ.

**[೬]ಸ ಚಕ್ರಿಣಾ ಸಹಾಕ್ರಮ್ಯ ದಿಕ್ಚಕ್ರಂ ವ್ಯಕ್ತವಿಕ್ರಮಃ ।**
**ಕ್ರಮಾ[೭]ನ್ನಿಯಮ್ಯ ವ್ಯಾಯಾಮಂ ಸಂಯಮೀವ ಶಮಂ ಶ್ರಿತಃ॥ ೧೧೮ ॥**

ಆ ಜಯಕುಮಾರನು ಭರತಚಕ್ರೇಶ್ವರನೊಡನೆ ದಿಙ್ಮಂಡಲವನ್ನು ಆಕ್ರಮಿಸಿ ಪ್ರಕಟವಾದ ಪರಾಕ್ರಮವುಳ್ಳವನಾಗಿ ಕ್ರಮದಿಂದ ವಿವಿಧ ಸಂಚಾರವನ್ನು ತಡೆದು, ಯತಿಯಂತೆ, ಶಾಂತಿಯನ್ನು ಹೊಂದಿದನು.

೧ ಹಂತುಮಿಚ್ಛುಃ. ೨ ಪಾಪಿಷ್ಠಾಯಾನಿಹ್ನವಾತ್. ೩ ಜಯಸ್ಯಭಯಂಕುರ್ವತಾಮೇವ. ೪ ಕೃತಜ್ಞಃ. ೫ ಘಾತಕಃ. ೬ ಜಯಕುಮಾರಃ. ೭ ನಿರುಧ್ಯ.

**ಜ್ವಲತ್ಪ್ರತಾಪಃ [೧]ಸೌಮ್ಯೋಪಿ [೨]ನಿರ್ಗುಣೋಪಿ ಗುಣಾಕರಃ ।**
**ಸುಸರ್ವಾಂಗೋಪ್ಯನಂಗಾಭಃ ಸುಖೇನ ಸ್ವಪುರೇ ಸ್ಥಿತಃ ॥ ೧೨೦ ॥**

ಶಾಂತನಾಗಿದ್ದರೂ ಸೌಮ್ಯವಾದ ಶರೀರವುಳ್ಳವನಾಗಿದ್ದರೂ ಪ್ರಕಾಶಿಸುತ್ತಿರುವ ಪ್ರತಾಪವುಳ್ಳವನೂ ಗುಣರಹಿತನಾಗಿದ್ದರೂ ಪ್ರಧಾನರಹಿತನಾಗಿದ್ದರೂ ಗುಣಗಳಿಗೆ ಉತ್ಪತ್ತಿಸ್ಥಾನನೂ ಶ್ರೇಷ್ಠವಾದ ಸರ್ವಾಂಗಗಳುಳ್ಳವನಾಗಿದ್ದರೂ ಅಂಗವಿಲ್ಲದವ ನಿಗೆ–ಮನ್ಮಥನಿಗೆ ಸಮಾನನೂ ಆಗಿ ಜಯಕುಮಾರನು ಸುಖದಿಂದ ತನ್ನ ಪಟ್ಟಣ ದಲ್ಲಿದ್ದನು. (ಮೇಲಿನ ವಾಕ್ಯಗಳಲ್ಲಿ ಮೊದಮೊದಲನೆಯ ಶಬ್ದವು ವಿರೋಧವನ್ನೂ ಎರಡನೆಯ ಶಬ್ದವು ವಿರೋಧಪರಿಹಾರವನ್ನೂ ಸೂಚಿಸುವುವು).

**ಅಥ ದೇಶೋಸ್ತಿ ವಿಸ್ತೀರ್ಣಃ ಕಾಶಿಸ್ತ[೩]ತ್ರೈವ ವಿಶ್ರುತಃ ।**
**ಪಿಂಡೀಭೂತಾ ಭಯಾತ್ಕಾಲ[೪]ಲುಂಟಾಕಾದಿವ ಭೋಗಭೂಃ ॥ ೧೨೧ ॥**

ಅನಂತರದಲ್ಲಿ ದುಷ್ಕಾಲವೆಂಬ ಕಳ್ಳನಿಂದುಂಟಾದ ಭಯದಿಂದ ಪಿಂಡಾಕಾರ ವಾದ ಭೋಗಭೂಮಿಯೋ ಎಂಬಂತೆ ಆ ಭರತಕ್ಷೇತ್ರದಲ್ಲೇ ಪ್ರಖ್ಯಾತವಾದ ಕಾಶಿಯೆಂಬ ವಿಸ್ತಾರವಾದ ದೇಶವಿರುತ್ತದೆ.

**ತದಾಪಿ ಖಲು ವಿದ್ಯಂತೇ ಕಲ್ಪವಲ್ಲೀಪರಿಷ್ಕೃತಾಃ ।**
**ದ್ರುಮಾಃ ಕಲ್ಪದ್ರುಮಾಭಾಸಾಶ್ಚಿತ್ರಾಸ್ತತ್ರ ಕ್ವಚಿತ್ಕ್ವಚಿತ್ ॥ ೧೨೨ ॥**

ಆ ಕಾಲದಲ್ಲಿಯೂ ಆ ದೇಶದಲ್ಲಿ ಅಲ್ಲಲ್ಲಿ ಕಲ್ಪಲತೆಗಳಿಂದ ಕೂಡಿರುವುವೂ ಕಲ್ಪವೃಕ್ಷಗಳಂತೆ ತೋರುವುವೂ ನಾನಾಪ್ರಕಾರಗಳೂ ಆದ ವೃಕ್ಷಗಳು ಇದ್ದುವು.

**ತತ್ರೈವಾಭೀಷ್ಟ[೫]ಮಾವರ್ಜ್ಯ ಯ[೬]ತ್ತತ್ರೈವಾನುಭೂಯತೇ ।**
**[೭]ಸ ತಜ್ಜೇತೇತಿ ನಿಶ್ಶಂಕಂ ಶಂಕೇ ಸ್ವರ್ಗಾಪವರ್ಗಯೋಃ ॥ ೧೨೩ ॥**

ಆ ದೇಶದಲ್ಲೇ ಇಷ್ಟಾರ್ಥವನ್ನು ಸ್ವೀಕರಿಸಿ ಆ ದೇಶದಲ್ಲೇ ಅದು ಅನುಭವಿ ಸಲ್ಪಡುತ್ತಿದ್ದುದರಿಂದ ಆ ದೇಶವು ಸ್ವರ್ಗಮೋಕ್ಷಗಳನ್ನು ಜಯಿಸಿದುದೆಂದು ನಿಃಸಂದೇಹವಾಗಿ ಊಹಿಸುತ್ತೇನೆ.

**ವಾರಾಣಸೀಪುರೀ ತತ್ರ ಜಿತ್ವಾ ತಾಮಾಮರೀಂ ಪುರೀಮ್ ।**
**[೮]ಅಮಾನೈಸ್ತದ್ವಿಮಾನಾನಿ ಸ್ವಸೌಧೈರಿವ [೯]ಸಾಹಸತ್ ॥ ೧೨೪ ॥**

ಆ ದೇಶದಲ್ಲಿ ವಾರಾಣಸಿಯೆಂದು ಪ್ರಸಿದ್ಧವಾದ ನಗರವು ದೇವತೆಗಳ ಸಂಬಂಧವಾದ ನಗರವನ್ನು ಜಯಿಸಿ ಲೆಕ್ಕವಿಲ್ಲದ ಉಪ್ಪರಿಗೆಯ ಮನೆಗಳಿಂದ ಆ ಅಮರಾವತೀನಗರದ ವಿಮಾನಗಳನ್ನು ಪರಿಹಾಸ್ಯಮಾಡಿತೋ ಎಂಬಂತಿದ್ದಿತು.

**ಪ್ರಾಕ್ ಸಮುಚ್ಚಿತದುಷ್ಕರ್ಮಾ ನ [೧೦]ತತ್ರೋತ್ಪತ್ತುಮರ್ಹತಿ ।**
**ಪ್ರಮಾದಾದಪಿ [೧೧]ತಜ್ಜೋಪಿ ಕೋಪಿ ಪಾಪೀ ಮನಸ್ಯಪಿ ॥ ೧೨೫ ॥**

ಪೂರ್ವದಲ್ಲಿ ಸಂಪಾದಿಸಿದ ದುಷ್ಕರ್ಮವುಳ್ಳವನು ಆ ವಾರಾಣಸೀನಗರದಲ್ಲಿ ಹುಟ್ಟುವುದಕ್ಕೆ ಯೋಗ್ಯನಾಗುವುದಿಲ್ಲ. ಆ ನಗರದಲ್ಲಿ ಹುಟ್ಟಿದವನಾದರೂ ಯಾವನೂ ಅಜಾಗರೂಕತೆಯಿಂದಲೂ ಮನಸ್ಸಿನಲ್ಲಿಯೂ ಪಾಪಿಯಾಗಿರುವವನಿ ಲ್ಲವು.

**ಏವಂ ಭವತ್ರಯಶ್ರೇಯಃ ಸೂಚನೀ ಧರ್ಮವರ್ತ್ಮನಿ ।**
**[೧೨]ವಿನೇಯಾನ್ [೧೩]ಜಿನವಿದ್ಯೇವ ಸಾ[೧೪]ನ್ಯಸ್ಥಾನಸ್ಥ [೧೫]ವೀವೃತತ್ ॥**

ಈ ಪ್ರಕಾರವಾಗಿ ಭೂತಭವಿಷ್ಯದ್ವರ್ತಮಾನಕಾಲಸಂಬಂಧವಾದ ಮೂರು ಭವಗಳ ಪುಣ್ಯವನ್ನು ಸೂಚಿಸುವುದಾದ ಆ ವಾರಾಣಸೀನಗರಿಯು ದೇಶಾಂತರ ಗಳಲ್ಲಿರುವ ಭವ್ಯರನ್ನೂ, ಜಿನೇಶ್ವರನ ದಿವ್ಯಭಾಷೆಯಂತೆ, ಧರ್ಮಮಾರ್ಗದಲ್ಲಿ ನಡೆಯಿಸಿತು.

೧ ಶಾಂತೋಪಿ ಸೋಮಜೋಪಿ, ಸೋಮಸ್ಯಾಪತ್ಯಂ ಪುಮಾನ್ ಪಕ್ಷೇ ಸೌಮ್ಯಾಂಗಃ. ೨ ಪ್ರಧಾನರಹಿತೋಪಿ. ೩ ಭರತೇ. ೪ ಚೋರಾತ್ ಸಂಜಾತಾತ್. ೫ ಸ್ವೀಕೃತ್ಯ. ೬ ದೇಶೇ. ೭ ದೇಶಃ. ೮ ಪ್ರಮಾಣಾತೀತೈಃ. ೯ ಪುರೀ. ೧೦ ನಗರ್ಯಾಂ. ೧೧ ನಗರ್ಯಾಮುತ್ಪನ್ನೋಪಿ. ೧೨ ಭವ್ಯಾನ್. ೧೩ ದಿವ್ಯಭಾಷೇವ. ೧೪ ದೇಶಾಂತರಸ್ಥಾನ್. ೧೫ ವರ್ತಯತಿ ಸ್ಮ.

**ನಾಮ್ನೈವ ಕಂಪಿತಾರಾತಿಸ್ತಸ್ಯಾಃ ಪತಿರಕಂಪನಃ ।**
**ವಿನೀತ ಇವ ವಿದ್ಯಾಯಾಃ ಸ್ವಾಭಿಪ್ರೇತಾರ್ಥಸಂಪದಃ ॥ ೧೨೭ ॥**

ಹೆಸರಿನಿಂದಲೇ ಶತ್ರುಗಳನ್ನು ನಡುಗಿಸಿದವನಾದ ಅಕಂಪನರಾಜನು ತನಗೆ ಅಭೀಷ್ಟವಾದ ಸಂಪತ್ತಿಗುಳುಳ್ಳುದಾದ ಆ ವಾರಾಣಸೀನಗರಿಗೆ, ವಿದ್ಯೆಗೆ ವಿನಯ ಗುಣವುಳ್ಳವನು ಅಧಿಪತಿಯಾಗುವಂತೆ, ದೊರೆಯಾಗಿದ್ದನು.

**ಪುರೋಪಾರ್ಜಿತಪುಣ್ಯಸ್ಯ ವರ್ದ್ಧನೇ ರಕ್ಷಣೇ ಶ್ರಿಯಃ ।**
**ನ ನೀತಿಃ ಕಿಂತು ಕಾಮೇ ಚ ಧರ್ಮೇ ಚಾಸ್ಯೋ[1]ಪಯೋಗಿನೀ ॥**

ಪೂರ್ವಭವದಲ್ಲಿ ಸಂಪಾದಿಸಿದ ಪುಣ್ಯವುಳ್ಳವನಾದ ಈ ಅಕಂಪನರಾಜನ ನೀತಿಯು ಸಂಪತ್ತಿಯನ್ನು ವೃದ್ಧಿಮಾಡುವುದರಲ್ಲಿಯೂ ಕಾಪಾಡುವುದರಲ್ಲಿಯೂ ಉಪಯೋಗವುಳ್ಳುದಾಗಿರಲಿಲ್ಲ. ಆದರೆ ಕಾಮ–ಸುಖದಲ್ಲಿಯೂ ಧರ್ಮದಲ್ಲಿಯೂ ಉಪಯೋಗವುಳ್ಳುದಾಗಿದ್ದಿತು.

**ನ ಹರ್ತಾ ಕೇವಲಂ ದಾತಾ ನ ಹಂತಾ ಪಾತಿ ಕೇವಲಮ್ ।**
**ಸರ್ವಾಸ್ತತ್ಪಾಲಯಾಮಾಸ ಸ ಧರ್ಮವಿಜಯೀ ಪ್ರಜಾಃ ॥ ೧೨೯ ॥**

ಆ ಅಕಂಪನನು ಪರದ್ರವ್ಯವನ್ನು ಅಪಹರಿಸುವವನಾಗಿದ್ದುದೇ ಅಲ್ಲ, ದಾನ ಮಾಡುವವನಾಗಿಯೂ ಇದ್ದನು; ಅವನು ದುಷ್ಟರನ್ನು ಹಿಂಸಿಸುವವನಾಗಿದ್ದುದೇ ಅಲ್ಲ, ಶಿಷ್ಟರನ್ನು ರಕ್ಷಿಸುವವನೂ ಆಗಿದ್ದನು. ಆದುದರಿಂದ ಸಮಸ್ತ ಪ್ರಜೆಗಳನ್ನು ಆ ಅಕಂಪನರಾಜನು ಧರ್ಮದಿಂದ ಜಯಶೀಲನಾಗಿ ಪರಿಪಾಲಿಸಿದನು.

**ಪಾರಮಾತ್ಮಪದೇ ಪೂಜ್ಯೋ ಭರತೇನ ಯಥಾ [2]ಪುರುಃ ।**
**ಗೃಹಾಶ್ರಮೇ ತಥಾ ಸೋಽಪಿ ಸಾ ತಸ್ಯ ಕುಲವೃದ್ಧತಾ ॥ ೧೩೦ ॥**

ಭರತೇಶ್ವರನಿಂದ ವೃಷಭಸ್ವಾಮಿಯು ಪರಮಾತ್ಮಸಂಬಂಧವಾದ ಸ್ಥಾನದಲ್ಲಿ ಹೇಗೆ ಪೂಜಾರ್ಹರಾಗಿದ್ದರೋ ಹಾಗೆ ಗೃಹಸ್ಥಾಶ್ರಮದಲ್ಲಿ ಆ ಅಕಂಪನರಾಜನೂ ಪೂಜಾರ್ಹನಾಗಿದ್ದನು. ಅದು ಅವನ ಪರಂಪರೆಯಿಂದ ಬಂದ ಕುಲಾಚಾರವಾಗಿದ್ದಿತು.

**ತಸ್ಯಾಸೀತ್ಸುಪ್ರಭಾದೇವೀ ಶೀತಾಂಶೋರ್ವಾ ಪ್ರಭಾ ತಯಾ ।**
**ಮುಮುದೇ ಕುಮುದಾಬೋಧಂ ವಿದಧತ್ಸ ಕಲಾಶ್ರಯಃ ॥ ೧೩೧ ॥**

ಚಂದ್ರನಿಗೆ ಪ್ರಭೆಯಂತೆ ಆ ಅಕಂಪನನಿಗೆ ಪ್ರಭೆಯೆಂಬವಳು ಪತ್ನಿಯಾಗಿದ್ದಳು. ಕಲೆಗಳಿಗೆ ವಿದ್ಯೆಗಳಿಗೆ ಆಶ್ರಯನಾಗಿದ್ದ ಆ ಅಕಂಪನರಾಜನು ಭೂಮಿಗೆ ಜನರಿಗೆ ಸಂತೋಷವನ್ನುಂಟುಮಾಡುವವನಾಗಿ ಆ ಪ್ರಭಾದೇವಿಯೊಡನೆ ಸಂತೋಷಪಟ್ಟನು.

**ನ ಲಕ್ಷ್ಮೀರಪಿ ತತ್ಪ್ರೀತ್ಯೈ ಸತೀ ಸಾ ಸುಪ್ರಜಾ ಯಥಾ ।**
**ಸತ್ಫಲಾ ಇವ ಸದ್ವಲ್ಲ್ಯಃ ಪುತ್ರವತ್ಯಃ ಸ್ತ್ರಿಯಃ ಪ್ರಿಯಾಃ ॥ ೧೩೨ ॥**

ಆದ ಆ ಪ್ರಭಾದೇವಿಯು ಆ [illegible] ಪ್ರೀತಿಗೆ ಹೇಗೆ ಕಾರಣಳಾಗಿದ್ದಳೋ ಹಾಗೆ ಲಕ್ಷ್ಮಿಯೂ ಕಾರಣಳಾಗಿರಲಿಲ್ಲ. ಶ್ರೇಷ್ಠವಾದ ಫಲಗಳುಳ್ಳ ಶ್ರೇಷ್ಠವಾದ ಲತೆಗಳಂತೆ ಪುತ್ರವತಿಯರಾದ ಸ್ತ್ರೀಯರು ಪ್ರಿಯರಾಗಿರುತ್ತಾರೆ.

**ತಸ್ಯಾಂ ತನ್ನಾಥವಂಶಾಗ್ರಗಣ್ಯಸೇವಾಂಶವೋ ರವೇಃ ।**
**ಪ್ರಾಚ್ಯಾಂ ದೀಪ್ತ್ಯಾಪ್ತದಿಕ್ಚಕ್ರಾಃ ಸಹಸ್ರಮಭವನ್ಸುತಾಃ ॥ ೧೩೩ ॥**

**ಹೇಮಾಂಗದಸುಕೇತುಶ್ರೀಸುಕಾಂತಾದ್ಯಾಹ್ವಯಾಃ ಸ ತೈಃ ।**
**ವೇಷ್ಟಿತಃ ಸನ್ ವ್ಯದೀಪಿಷ್ಟ ಶಕ್ರಃ ಸಾಮಾನಿಕೈರಿವ ॥ ೧೩೪ ॥**

ಪೂರ್ವದಿಕ್ಕಿನಲ್ಲಿ ಸೂರ್ಯನ ಕಿರಣಗಳೋಪಾದಿಯಲ್ಲಿ ಆ ಪ್ರಭಾದೇವಿಯಲ್ಲಿ ಆ ನಾಥವಂಶಶ್ರೇಷ್ಠನಾದ ಆ ಅಕಂಪನನಿಗೆ ತೇಜಸ್ಸಿನಿಂದ ದಿಙ್ಮಂಡಲವನ್ನು ವ್ಯಾಪಿಸಿದವರೂ ಹೇಮಾಂಗದ ಸುಕೇತು ಶ್ರೀಕಾಂತ ಸುಕಾಂತ ಮೊದಲಾದ ಹೆಸರುಗಳುಳ್ಳವರೂ ಆದ ಸಾವಿರಮಂದಿ ಮಕ್ಕಳಾದರು. (ಕೃತಯುಗದ ಪ್ರಾರಂಭದಲ್ಲಿ ಪುರುಷರಿಗೂ ಸ್ತ್ರೀಯರಿಗೂ ಅತ್ಯಧಿಕವಾದ ಶಕ್ತಿಯಿದ್ದುದರಿಂದ ಸಹಸ್ರಪುತ್ರೋತ್ಪತ್ತಿಯು ಆಶ್ಚರ್ಯಕರವಲ್ಲವು). ಆ ಅಕಂಪನನು ಆ ಮಕ್ಕಳೊಡನೆ ಆವರಿಸಲ್ಪಟ್ಟವನಾಗಿ, ದೇವೇಂದ್ರನು ಸಾಮಾನಿಕರೆಂಬ ದೇವತೆಗಳಿಂದ ಪ್ರಕಾಶಿಸುವಂತೆ, ಪ್ರಕಾಶಿಸಿದನು.

**ಹಿಮವತ್ಪದ್ಮಯೋರ್ಗಂಗಾಸಿಂಧೂ ಇವ ತತಸ್ತಯೋಃ ।**
**ಸುತೇ ಸುಲೋಚನಾ ಲಕ್ಷ್ಮೀಮತೀ ಚಾಸ್ತಾಂ ಸುಲಕ್ಷಣೇ ॥ ೧೩೫ ॥**

ಅನಂತರದಲ್ಲಿ ಹಿಮವತ್ಪರ್ವತ ಪದ್ಮಸರೋವರಗಳಿಗೆ ಗಂಗಾ ಸಿಂಧುನದಿಗಳಿದ್ದಂತೆ ಆ ಅಕಂಪನನಿಗೂ ಪ್ರಭಾದೇವಿಗೂ ಶ್ರೇಷ್ಠವಾದ ಲಕ್ಷಣಗಳುಳ್ಳವರಾದ ಸುಲೋಚನಾ ಲಕ್ಷ್ಮೀಮತಿಯರೆಂಬ ಈರ್ವರು ಹೆಣ್ಣುಮಕ್ಕಳಿದ್ದರು.

**ಸುಲೋಚನಾಸೌ ಬಾಲೇವ ಲಕ್ಷ್ಮೀಃ ಸರ್ವಮನೋರಮಾ ।**
**ಕಲಾಗುಣೈರಭಾಸಿಷ್ಟ ಚಂದ್ರಿಕೇವ ಪ್ರವರ್ದ್ಧಿತಾ ॥ ೧೩೬ ॥**

ಬಾಲೆಯಾದ ಲಕ್ಷ್ಮಿಯೋಪಾದಿಯಲ್ಲಿ ಸರ್ವರಿಗೂ ಮನೋಹರಳಾದ ಈ ಸುಲೋಚನೆಯು, ಕಲಾಗುಣಗಳಿಂದ ವೃದ್ಧಿಯನ್ನು ಹೊಂದಿದ ಬೆಳದಿಂಗಳಿನಂತೆ, ಪ್ರಕಾಶಿಸಿದಳು.

**ಸುಮತ್ಯಾಖ್ಯಾಮಲಾ ಶುಕ್ಲನಿಶೇವಾವರ್ದ್ಧಯತ್ಕಲಾಃ ।**
**ಧಾತ್ರೀ ಶಶಾಂಕರೇಖಾಯಾಸ್ತಸ್ಯಾಃ ಸಾತಿಮನೋಹರಾ ॥ ೧೩೭ ॥**

ಶುಕ್ಲಪಕ್ಷದ ರಾತ್ರಿಯು ಚಂದ್ರನ ರೇಖೆಯ ಕಲೆಗಳನ್ನು ಹೆಚ್ಚಿಸುವಂತೆ, ಸುಮತಿಯೆಂದು ಹೆಸರುಳ್ಳವಳೂ ನಿರ್ಮಲಳೂ ಅತ್ಯಂತ ಮನೋಹರಳೂ ಆದ ದಾದಿಯು ಆ ಸುಲೋಚನೆಯ ವಿದ್ಯೆಗಳನ್ನೂ ಗುಣಗಳನ್ನೂ ವೃದ್ಧಿಮಾಡಿದಳು.

**ಅಭೂದ್ರಾಗೀ ಸ್ವಯಂ ರಾಗಸ್ತತ್ಕ್ರಮಾಬ್ಜಂ ಸಮಾಶ್ರಿತಃ ।**
**ರಾಗಾಯ ಕಸ್ಯ ವಾ ನ ಸ್ಯಾತ್ಸ್ವೋಚಿತಸ್ಥಾನಸಂಶ್ರಯಃ ॥ ೧೩೮ ॥**

ಆ ಸುಲೋಚನೆಯ ಪಾದಕಮಲವನ್ನು ಆಶ್ರಯಿಸಿದ ರಾಗ(ರಕ್ತವರ್ಣ)ವು ತಾನೇ ರಕ್ತವರ್ಣವುಳ್ಳುದಾಯಿತು. ಕಾಲಿನ ಸಂಬಂಧದಿಂದ ರಕ್ತವರ್ಣವು ರಕ್ತವರ್ಣವುಳ್ಳುದಾಯಿತೆಂದು ಭಾವವು. ತನಗೆ ಉಚಿತವಾದ ಸ್ಥಾನದ ಆಶ್ರಯವು ಯಾವನ ಅನುರಾಗಕ್ಕೆ ತಾನೆ ಕಾರಣವಾಗದು ?

**ನಖೇಂದುಚಂದ್ರಿಕಾ ತಸ್ಯಾಃ ಶಶ್ವತ್ಕುವಲಯಂ ಕಿಲ ।**
**ವಿಶ್ವ[1]ಮಾಹ್ಲಾದಯಚ್ಚಿತ್ರ[2]ಮನುವೃತ್ತ್ಯಾ ಕ್ರಮಾಬ್ಜಯೋಃ ॥ ೧೩೯ ॥**

ಆ ಸುಲೋಚನೆಯ ಕಾಲಿನ ಉಗುರೆಂಬ ಚಂದ್ರನ ಕಾಂತಿಯು ಆಕೆಯ ಪಾದಕಮಲದ ಅನುಸರಣೆಯಿಂದ ಬಾರಿಬಾರಿಗೆ ಸಮಸ್ತ ಭೂಮಂಡಲವನ್ನು (ಕನ್ನೈದಿಲೆಯನ್ನು) ಸಂತೋಷಪಡಿಸಿದ್ದಿತಂತೆ. ಆಶ್ಚರ್ಯ !

**ರೇಜುರಂಗುಲಯಸ್ತಸ್ಯಾಃ ಕ್ರಮಯೋರ್ನಖರೋಚಿಷಾ ।**
**ಇಯಂತ ಇತಿ [3]ಮದ್ವೇಗಾಃ ಸ್ಮರೇಣೇವ [4]ನಿವೇಶಿತಾಃ ॥ ೧೪೦ ॥**

ಆ ಸುಲೋಚನೆಯ ಪಾದಗಳ ಬೆರಳುಗಳು ಉಗುರುಗಳ ಕಾಂತಿಯಿಂದ, ''ನೋಡಬೇಕೆಂಬ ಇಚ್ಛೆಯೇ ಮೊದಲಾದ ನನ್ನ ಅವಸ್ಥೆಗಳು ಇಷ್ಟೇ (ಹತ್ತೇ)'' ಎಂದು ಮನ್ಮಥನಿಂದ ಸ್ಥಾಪಿಸಲ್ಪಟ್ಟಿವೆಯೋ ಎಂಬಂತೆ, ಶೋಭಿಸುತ್ತಿದ್ದುವು. ಸುಲೋಚನೆಯ ಹತ್ತು ಬೆರಳುಗಳ ಉಗುರುಗಳು ಮನ್ಮಥನ ಹತ್ತು ಅವಸ್ಥೆಗಳನ್ನು ಸೂಚಿಸುವಂತಿದ್ದುವೆಂದು ಭಾವವು.

---

೧ ಉಪಕಾರವತೀ. ೨ ವೃಷಭಃ.

೧ ಮೋದಯತಿ ಸ್ಮ. ೨ ಅನುಕೂಲವೃತ್ತ್ಯಾ. ೩ ಮಮ ದಿದೃಕ್ಷಾದ್ಯವಸ್ಥಾಃ. ೪ ಸ್ಥಾಪಿತಾಃ.

**ನತಾಶೇಷೋ [೧]ಜಯಃ ಸ್ನೇಹಾ[೨]ದನಂಸೀ[೩]ತ್ತೇ ತತಸ್ತಯೋಃ ।**
**ಯಾ ಶ್ರೀಃ ಕ್ರಮಾಬ್ಜಯೋಸ್ತಸ್ಯಾಃ ಸಾ ಕಿಮಸ್ತಿ ಸರೋರುಹೇ ॥ ೧೪೧ ॥**

ಸಮಸ್ತಜನರಿಂದ ನಮಸ್ಕಾರವನ್ನು ಮಾಡಿಸಿಕೊಂಡವನಾದ ಜಯಕುಮಾರನು ಸ್ನೇಹದಿಂದ ಆ ಸುಲೋಚನೆಯ ಪಾದಕಮಲಗಳನ್ನು ನಮಸ್ಕರಿಸಿದನು. ಆದುದರಿಂದ ಆ ಸುಲೋಚನೆಯ ಆ ಪಾದಕಮಲಗಳಲ್ಲಿ ಯಾವ ಶೋಭೆ ಯುಂಟೋ ಅದು ಕಮಲದಲ್ಲಿರುತ್ತದೇನು ?

**ನ ಸ್ಥೂಲೇ ನ ಕೃಶೇ ನರ್ಜೂ ನ ವಕ್ರೇ ನ ಚ [೪]ಸಂಕಟೇ ।**
**ವಿಕಟೇ ಚ ನ ತಜ್ಜಂಘೇ ಶೋಭಾ[೫]ನ್ಯೈವ ತಯೋರಸೌ ॥ ೧೪೨ ॥**

ಆ ಸುಲೋಚನೆಯ ಕಣಕಾಲುಗಳು ದಪ್ಪವಾಗಿರಲಿಲ್ಲ, ತೆಳುವಾಗಿರಲಿಲ್ಲ; ನೆಟ್ಟಗೂ ಇರಲಿಲ್ಲ, ವಕ್ರವಾಗಿಯೂ ಇರಲಿಲ್ಲ; ಸಂಕೀರ್ಣ–ಸಂಕೋಚವಾಗಿಯೂ ಇರಲಿಲ್ಲ, ವಿಶಾಲವಾಗಿಯೂ ಇರಲಿಲ್ಲ. ಆ ಕಣಕಾಲುಗಳ ಈ ಶೋಭೆಯು ವಿಲಕ್ಷಣವೇ ಆಗಿದ್ದಿತು. ನ್ಯೂನಾಧಿಕ್ಯವಿಲ್ಲದೆ ವಿಲಕ್ಷಣವಾದ ಶೋಭೆಯುಳ್ಳ ವಾಗಿದ್ದುವೆಂದು ಭಾವವು.

**[೬]ಕಾಂಚೀಸ್ಥಾನಂ ತ[೭]ದಾಲೋಚ್ಯ [೮]ವೋರೂ ಸ್ಥೂಲೇ ಸುಸಂಗತೇ ।**
**ಕಾಮಗರ್ಭಗೃಹದ್ವಾರಸ್ತಂಭಯಷ್ಟ್ಯಾಕೃತೀ ಕೃತೇ ॥ ೧೪೩ ॥**

ಆ ಕಟೀಪ್ರದೇಶವನ್ನು ನೋಡಿ ದಪ್ಪವೂ ಚೆನ್ನಾಗಿ ಸೇರಿರುವುವೂ ಆದ ತೊಡೆಗಳು ಮನ್ಮಥನ ಉತ್ಪತ್ತಿಗೃಹದ ಬಾಗಿಲಿನ ಕಂಬಗಳ ಆಕಾರವುಳ್ಳುವುಗಳಾಗಿ ಮಾಡಲ್ಪಟ್ಟಿರುತ್ತವೋ ಎಂಬಂತಿದ್ದುವು.

**ವೇದಿಕೇವ ಮನೋಜಸ್ಯ ಶಿರೋ ವಾ ಸ್ಮರದಂತಿನಃ ।**
**ಸಾನುರ್ವಾನಂಗಶೈಲಸ್ಯ ಶುಶುಭೇಸ್ಯಾಃ ಕಟೀತಟಮ್ ॥ ೧೪೪ ॥**

ಈ ಸುಲೋಚನೆಯ ಕಟೀಪ್ರದೇಶ(ಸೊಂಟ)ವು ಮನ್ಮಥನ ಹಸೆಯ ಜಗುಲಿ ಯಂತೆಯೂ ಕಾಮನೆಂಬ ಆನೆಯ ಮಸ್ತಕದಂತೆಯೂ ಮದನನೆಂಬ ಪರ್ವತದ ತಪ್ಪಲಿನಂತೆಯೂ ಪ್ರಕಾಶಿಸಿದ್ದಿತು.

**ಕೃತ್ವಾ ಕೃಶಂ ಭೃಶಂ ಮಧ್ಯಂ ಬದ್ಧಂ ಭಂಗಭಯಾದಿವ ।**
**ರಜ್ಜುಭಿಸ್ತಿಸೃಭಿರ್ಧಾತ್ರಾ ವಲಿಭಿರ್ಗಾಢಮಾಬಭೌ ॥ ೧೪೫ ॥**

ಬ್ರಹ್ಮನು ಅಧಿಕವಾಗಿ ತೆಳುವಾದ ನಡುವನ್ನು ಮಾಡಿ ಅದು ಮುರಿದು ಹೋಗುವುದೆಂಬ ಭಯದಿಂದ ಮೂರು ಹಗ್ಗಗಳಿಂದ ದೃಢವಾಗಿ ಅವನಿಂದ ಕಟ್ಟಲ್ಪಟ್ಟಿರುತ್ತದೋ ಎಂಬಂತೆ ತ್ರಿವಲಿ(ಮೂರು ರೇಖೆ)ಗಳಿಂದ ಬಹಳವಾಗಿ ಪ್ರಕಾಶಿಸುತ್ತಿದ್ದಿತು.

**ನಾಭಿಕೂಪಪ್ರವೃತ್ತಾ[೯]ಸ್ಯಾ [೧೦]ರಸಮಾರ್ಗಸಮುದ್ಗತಾ ।**
**ಶ್ಯಾಮಾ ಶಾದ್ವಲಮಾಲೇವ ರೋಮರಾಜಿರ್ವ್ಯರಾಜತ ॥ ೧೪೬ ॥**

ಈ ಸುಲೋಚನಾದೇವಿಯ ರೋಮಪಂಕ್ತಿಯು ನಾಭಿಯೆಂಬ ಬಾವಿಯಿಂದ ಹೊರಟುದುದಾಗಿ, ಜಲಮಾರ್ಗದಲ್ಲಿ ಉತ್ಪನ್ನವಾದುದೂ ಕಪ್ಪಾಗಿರುವುದೂ ಆದ ಹಸುರುಹುಲ್ಲುಗಳ ಮಾಲೆಯಂತೆ ಪ್ರಕಾಶಿಸುತ್ತಿದ್ದಿತು.

**ಭಿನ್ನೌ ಯುಕ್ತೌ ಮೃದೂ [೧೧]ಸ್ತಬ್ಧಾವುಷ್ಣೌ ಸಂತಾಪಹಾರಿಣೌ ।**
**ಸ್ತನೌ ವಿರುದ್ಧಧರ್ಮಾಣೌ ಸ್ಯಾದ್ವಾದಸ್ಥಿತಿಮೂಹತುಃ ॥ ೧೪೭ ॥**

ಬೇರೆಬೇರೆಯಾಗಿರುವುವೂ ಕೂಡಿಕೊಂಡಿರುವುವೂ ಕೋಮಲಗಳಾಗಿರು ವುವೂ ಕಠಿನಗಳಾಗಿರುವುವೂ ಉಷ್ಣವಾಗಿರುವುವೂ ಕಾಮಸಂತಾಪವನ್ನು ನಾಶ ಮಾಡುವುವೂ ಪರಸ್ಪರವಿರುದ್ಧಧರ್ಮಗಳುಳ್ಳುವೂ ಆದ ಆ ಸುಲೋಚನಾ

೧ ಜಯಕುಮಾರಃ. ೨ ನಮಸ್ಕರೋತಿ ಸ್ಮ. ೩ ಕ್ರಮಾಬ್ಜೇ. ೪ ಸಂಕೀರ್ಣೇ. ೫ ವಿಲಕ್ಷಣ್ಯೈವ. ೬ ಕಟೀತಟಂ. ೭ ಆಲೋಕ್ಯ. ೮ ಇವ. ೯ ಸುಲೋಚನಾಯಾಃ. ೧೦ ಜಲಮಾರ್ಗ. ೧೧ ಕಠಿನೌ.

ದೇವಿಯ ಕುಚಗಳು ಸ್ಯಾದಸ್ತಿ ಸ್ಯಾನ್ನಾಸ್ತೀತ್ಯಾದಿ ರೂಪವಾದ ಸ್ಯಾದ್ವಾದಮಾರ್ಗದ ಸ್ಥಿತಿಯನ್ನು ಧರಿಸಿದುವು.

**ಸಹ ವಕ್ಷೋನಿವಾಸಿನ್ಯಾ ಸಮಾಶ್ಲಿಷ್ಯ [೧]ಜಯಃ ಶ್ರಿಯಾ ।**
**ಸ್ವೀಕೃತೋ ಯದಿ ಚೇ[೨]ತ್ತಾಭ್ಯಾಂ ವರ್ಣ್ಯೇತೇ ತದ್ಭುಜೌ ಕಥಮ್ ॥**

ಒಂದು ಪಕ್ಕಕ್ಕೆ ಸುಲೋಚನೆಯ ಭುಜಗಳಿಂದ ಹೃದಯದಲ್ಲಿ ವಾಸಮಾಡು ವವಳಾದ ಲಕ್ಷ್ಮಿಯೊಡನೆ ಆಲಿಂಗಿಸಿ ಜಯಕುಮಾರನು ಪರಿಗ್ರಹಿಸಲ್ಪಟ್ಟನಾದರೆ ಆಕೆಯ ಭುಜಗಳು ಹೇಗೆ ವರ್ಣಿಸಲ್ಪಡುತ್ತವೆ ? ಹೃದಯಲಕ್ಷ್ಮಿಯ ಸಮಾಲಿಂಗನ ದಿಂದ ಭುಜಗಳ ವರ್ಣನೆಗೆಡೆಯಿಲ್ಲದಂತಾದುದೆಂದು ಭಾವವು.

**ವೀರಲಕ್ಷ್ಮೀಪರಿಷ್ವಕ್ತ[೩]ಜಯದಕ್ಷಿಣಬಾಹುನಾ ।**
**ಸವಾಮೇನ ಪರಿಷ್ವಕ್ತಸ್ತತ್ಕಂಠ[೪]ಸ್ತಸ್ಯ ಕೋಪಮಾ ॥ ೧೪೯ ॥**

ಎಡದ ಭುಜಸಹಿತವೂ ವೀರಲಕ್ಷ್ಮಿಯಿಂದ ಆಲಿಂಗಿಸಲ್ಪಟ್ಟದೂ ಆದ ಜಯಕುಮಾರನ ಬಲದ ಭುಜದಿಂದ ಆ ಸುಲೋಚನೆಯ ಕಂಠವು ಆಲಿಂಗಿಸ ಲ್ಪಟ್ಟಿದ್ದಿತು. ಆ ಕಂಠಕ್ಕೆ ಹೋಲಿಕೆಯಾವುದಿರುವುದು ? ಸುಲೋಚನೆಯ ಕಂಠವು ಉಪಮಾತೀತವಾಗಿದ್ದಿತೆಂದು ಭಾವವು.

**[೫]ನಿಷ್ಕೃಪೌ [೬]ಪೇಶಲೌ ಶ್ಲಕ್ಷ್ಣೌ ತತ್ಕಪೋಲೌ [೭]ವಿಲೇಸತುಃ ।**
**ಕಾಂತೌ ಕಲಭದಂತಾಭೌ ಜಯವಕ್ತ್ರಾಬ್ಜದರ್ಪಣೌ ॥ ೧೫೦ ॥**

ಜನರಿಗೆ ಕಾಮಸಂತಾಪವನ್ನುಂಟುಮಾಡುತ್ತಿದ್ದುದರಿಂದ ಕೃಪೆಯಿಲ್ಲದುವೂ ಕೋಮಲಗಳೂ ಕೃಶವಾಗಿರುವುವೂ ಆದ ಆ ಸುಲೋಚನೆಯ ಕೆನ್ನೆಗಳು ಮನೋಹರಗಳೂ ಆನೆಯ ಮರಿಯ ದಂತಗಳಿಗೆ ಸದೃಶಗಳೂ ಜಯಕುಮಾರನ ಮುಖಕಮಲಕ್ಕೆ ಕನ್ನಡಿಗಳಂತಿರುವುವೂ ಆಗಿ ಪ್ರಕಾಶಿಸಿದುವು.

**ವಟಬಿಂಬಪ್ರವಾಲಾದಿ ನೋಪಮೇಯಮುಪೇಕ್ಷ್ಯತೇ ।**
**ಅಧರಸ್ಯಾತಿದೂರತ್ವಾದ್ವರ್ಣಾಕಾರರಸಾದಿಭಿಃ ॥ ೧೫೧ ॥**

ವರ್ಣ ಆಕಾರ ರಸ ಮೊದಲಾದುವುಗಳಿಂದ ಅತಿದೂರ–ಅತಿಶಯವಾಗಿದ್ದು ದರಿಂದ ಆಲದ ಅಂಕುರ ತೊಂಡೆಯ ಹಣ್ಣು ತಳಿರು ಮೊದಲಾದುದು ಸುಲೋಚನೆಯ ಕೆಳದುಟಿಗೆ ಉಪಮೇಯವಾಗಿಯೂ ಅಂಗೀಕರಿಸಲ್ಪಡುವುದಿಲ್ಲ. ಉಪಮಾನದ ಮಾತಂತಿರಲಿ, ಉಪಮೇಯವಾಗಿಯೂ ಅಂಗೀಕರಿಸಲ್ಪಡುವುದಿಲ್ಲ ವೆಂದು ಭಾವವು.

**[೮]ಚಿತಾಃ ಸಿತಾಃ ಸಮಾಃ ಸ್ನಿಗ್ಧಾ ದಂತಾಃ ಕಾಂತಾಃ [೯]ಪ್ರಮಾನ್ವಿತಾಃ ।**
**ಅಂತಃಕರೋತಿ ತದ್ವಕ್ತ್ರಂ ತಾನೇವ ಕಥ[೧೦]ಮನ್ಯಥಾ ॥ ೧೫೨ ॥**

ಸುಲೋಚನೆಯ ಹಲ್ಲುಗಳು ರಂಧ್ರವಿಲ್ಲದಿರುವುವೂ ಶುಭ್ರಗಳೂ ಸಮ ವಾಗಿರುವುವೂ ಜಿಗಟಾಗಿರುವುವೂ ಮನೋಹರಗಳೂ ಸರಿಯಾದ ಅಳತೆ ಯುಳ್ಳುವೂ ಆಗಿರುತ್ತವೆ. ಈ ಗುಣಗಳಿಲ್ಲದಿದ್ದರೆ ಸುಲೋಚನೆಯ ಮುಖವು ಆ ಹಲ್ಲುಗಳನ್ನೇ ಹೇಗೆ ತನ್ನೊಳಗೆ ಮಾಡುತ್ತದೆ ? ಈ ಗುಣಗಳಿಲ್ಲದಿರುತ್ತಿದ್ದರೆ ಆಕೆಯ ಮುಖವು ಹಲ್ಲುಗಳಿಗೆ ತನ್ನಲ್ಲಿ ಪ್ರವೇಶಕ್ಕವಕಾಶಕೊಡುತ್ತಿರಲಿಲ್ಲವೆಂದು ಭಾವವು.

**[೧೧]ಕುತಃ ಕೃತಾ ಸಮುತ್ತುಂಗಾಸ್ವಾದಮಾನಾಸ್ಯ ಸೌರಭಮ್ ।**
**ಮಧ್ಯೇ ವಕ್ತ್ರಂ ಕಿಮಧ್ಯಾಸ್ತೇ ನ ಸತೀ [೧೨]ಯದಿ ನಾಸಿಕಾ ॥ ೧೫೩ ॥**

ಪ್ರಶಸ್ತವಾದ ಮೂಗು ಮುಖದ ಪರಿಮಳವನ್ನು ಆಸ್ವಾದಿಸು– ಅನುಭವಿಸು ವುದಿಲ್ಲವಾದರೆ ಉನ್ನತವಾಗಿ ಏತಕ್ಕೆ ಮಾಡಲ್ಪಟ್ಟಿತೆಂದು ಕೇಳಿದರೆ ಮುಖದ

೧ ಜಯಕುಮಾರಃ. ೨ ಸುಲೋಚನಾಭುಜಾಭ್ಯಾಂ. ೩ ಜಯಕುಮಾರಸ್ಯ. ೪ ತತ್ಕಂಠಸ್ಯ. ೫ ಜನಸಂತಾಪಹೇತುತ್ವಾತ್. ೬ ಕೋಮಲೌ. ೭ ರೇಜತುಃ. ೮ ನಿಶ್ಛಿದ್ರಾ ಇತ್ಯರ್ಥಃ. ೯ ಪ್ರಭಾನ್ವಿತಾ ಇತ್ಯಪಿ ಪಾಠಃ. ೧೦ ಉಕ್ತಗುಣಾ ನ ಸಂತಿ ಚೇತ್. ೧೧ ಕಿಂನಿಮಿತ್ತಂ ನಿರ್ಮಿತಾ ಇತ್ಯೇವಂ ಪೃಚ್ಛಸಿ. ೧೨ ಯದಿ ಸತೀ ನಾಸಿಕಾ ನ ಸ್ಯಾತ್ತರ್ಹಿ ಮಧ್ಯೇ ವಕ್ತ್ರಂ ಕಿಂ ವಾ ವಸ್ತ್ವಧ್ಯಾಸ್ತೇ.

ಮಧ್ಯದಲ್ಲಿ ಬೇರೆ ಯಾವ ವಸ್ತುವು ಇರುತ್ತದೆ ? ಮೂಗನ್ನು ಬಿಟ್ಟು ಬೇರೆ ಯಾವ ವಸ್ತುವೂ ಮುಖದ ಮಧ್ಯದಲ್ಲಿರುವುದಕ್ಕೆ ಯೋಗ್ಯವಾದುದಲ್ಲವೆಂದೂ ಮೂಗು ಬಹು ಸುಂದರವಾಗಿದ್ದಿತೆಂದೂ ಭಾವವು.

**[೧]ಕರ್ಣಾಂತಗಾಮಿನೀ ನೇತ್ರೇ ವೃದ್ಧ್ಯೈ ನ [೨]ಶರತೋಪಮೇ ।**
**[೩]ಸೋಮವಂಶಸ್ಯ ಕಃ [೪]ಕ್ಷೇಪಃ ಪದ್ಮೋತ್ಪಲಜಯೇ [೫]ತಯೋಃ ॥**

ಬಾಣದ ಗುಣದ ಸಾದೃಶ್ಯವುಳ್ಳವೂ ಕಿವಿಯವರೆಗೆ ವ್ಯಾಪ್ತವಾಗಿರುವವೂ (ಕರ್ಣನ ನಾಶದಲ್ಲಿರುವವೂ) ಆದ ಕಣ್ಣುಗಳು ಚಂದ್ರವಂಶೀಯನಾದ ಜಯಕುಮಾರನ (ಅರ್ಜುನನ) ವೃದ್ಧಿಗೋಸ್ಕರ ಆಗುವುದಿಲ್ಲವೋ ? ಆ ಕಣ್ಣುಗಳಿಗೆ ತಾವರೆಯ ಮತ್ತು ಕನ್ನೈದಿಲೆಯ ಜಯದಲ್ಲಿ ತಿರಸ್ಕಾರವಾವುದು ? ಕಣ್ಣುಗಳು ತಾವರೆಗಿಂತಲೂ ಕನ್ನೈದಿಲೆಗಿಂತಲೂ ಸುಂದರವಾಗಿದ್ದುವೆಂದು ಭಾವವು.

**ತತ್ಕರ್ಣಾವೇವ ಕರ್ಣೇಷು ಕೃತಪುಣ್ಯೌ ಪ್ರಿಯಾಜ್ಞಯಾ ।**
**ತತ್ಪ್ರೇಮಾಲಾಪಗೀತಾನಾಂ ಪಾತ್ರಂ ಪ್ರಾಗೇವ ತೌ ಯತಃ ॥ ೧೫೫ ॥**

ಮೊದಲೇ ಸುಲೋಚನೆಯ ಕಿವಿಗಳು ಪ್ರಿಯನ–ಜಯಕುಮಾರನ ಆಜ್ಞೆಯಿಂದ ಅವನ ಪ್ರೇಮಭಾಷಣಕ್ಕೂ ಗೀತೆಗಳಿಗೂ ಪಾತ್ರಗಳಾಗಿದ್ದುದರಿಂದ ಕಿವಿಗಳಲ್ಲೆಲ್ಲ ಆ ಸುಲೋಚನೆಯ ಕಿವಿಗಳೇ ಪುಣ್ಯವನ್ನು ಮಾಡಿದುವುಗಳಾಗಿರುತ್ತವೆ.

**ತದ್ಭ್ರೂಶರಾಸನಃ ಕಾಮಸ್ತತ್ಕಟಾಕ್ಷಾ[೬]ಶುಗಾವಲಿಃ ।**
**[೭]ಸ್ವರೂಪೇಣಾಜಿತಂ ಮತ್ವಾ [೮]ಜಯಂ ಮನ್ಯೇ ವ್ಯಜೇಷ್ಟ [೯]ಸಃ॥ ೧೫೬ ॥**

ಪ್ರಸಿದ್ಧನಾದ ಮನ್ಮಥನು ಜಯಕುಮಾರನನ್ನು ತನ್ನ ರೂಪದಿಂದ ಜಯಿಸಲ್ಪಡದಿರುವವನನ್ನಾಗಿ ತಿಳಿದು ಆ ಸುಲೋಚನೆಯ ಕಣ್ಣಿನ ಹುಬ್ಬೆಂಬ ಧನುಸ್ಸುಳ್ಳವನೂ ಆಕೆಯ ಕಡೆಗಣ್ಣಿನ ನೋಟಗಳೆಂಬ ಬಾಣಗಳ ಸಾಲುಳ್ಳವನೂ ಆಗಿ ಜಯಕುಮಾರನನ್ನು ಜಯಿಸಿದನೆಂದು ತಿಳಿಯುತ್ತೇನೆ. ಸುಲೋಚನೆಯ ಹುಬ್ಬುಗಳನ್ನೂ ಕಡೆಗಣ್ಣಿನ ನೋಟಗಳನ್ನೂ ನೋಡಿ ಜಯಕುಮಾರನು ಕಾಮವಶನಾದನೆಂದು ಭಾವವು.

**ತಸ್ಯಾ [೧೦]ಲಾಲಾಟಿಕೋ ನೈಕಃ ಕಾಮೋ ವೀರಾಗ್ರಣೀಃ ಸ್ವಯಮ್ ।**
**ಜಯೋಪಿ ನೋನ್ನತಿಃ ಕಸ್ಮಾಲ್ಲಲಾಟಸ್ಯ ಶ್ರಿತಶ್ರಿಯಃ ॥ ೧೫೭ ॥**

ಆ ಸುಲೋಚನೆಗೆ ಮನ್ಮಥನೊರ್ವನೇ ಹಣೆಯನ್ನು ನೋಡಿ ಇಂಗಿತಜ್ಞನಾದ ಸೇವಕನಲ್ಲ; ವೀರಾಗ್ರೇಸರನಾದ ಜಯಕುಮಾರನೂ ತಾನೇ ಸೇವಕನಾದನು. ಶೋಭೆಯನ್ನು ಹೊಂದಿರುವ ಹಣೆಗೆ ಯಾವ ಕಾರಣದಿಂದ ಉನ್ನತಿಯು, ಶ್ರೇಷ್ಠತೆಯು ಇರುವುದಿಲ್ಲ ? ಇದ್ದೇ ಇರುವುದೆಂದು ಭಾವವು.

**ಮೃದವಸ್ತನವಃ ಸ್ನಿಗ್ಧಾಃ ಕೃಷ್ಣಾಸ್ತಸ್ಯಾಃ ಸುಕುಂಚಿತಾಃ ।**
**ಕಾಮಿನಾಂ ಕೇವಲಂ [೧೧]ಕಾಲಬಾಲವ್ಯಾಲಾಃ ಶಿರೋರುಹಾಃ ॥ ೧೫೮ ॥**

ಆ ಸುಲೋಚನೆಯ ಚೆನ್ನಾಗಿ ಕುರುಳಾಗಿರುವುವೂ ಕೋಮಲಗಳೂ ಸೂಕ್ಷ್ಮಗಳೂ ಜಿಗಟಾದುವೂ ಕಪ್ಪಾದುವೂ ಆದ ತಲೆಗೂದಲುಗಳು ಕಾಮುಕರಿಗೆ ಮಾತ್ರ ಕೃಷ್ಣಸರ್ಪದ ಮರಿಗಳಂತಿದ್ದುವು. ಮೋಹವನ್ನುಂಟುಮಾಡುವುವುಗಳಾಗಿದ್ದುವೆಂದು ಭಾವವು.

**ಭಾತಿ ತಸ್ಯಾಃ ಪುರೋಭಾಗೋ ಭೂಷಿತೋ ನಯನಾದಿಭಿಃ ।**
**[೧೨]ಸುರೂಪ ಇವ ಪಾಶ್ಚಾತ್ಯೋ [೧೩]ವಾಭಾತಿ ಸ್ವಯಮೇವ ಸಃ ॥**

ಆ ಸುಲೋಚನೆಯ ಶರೀರದ ಮುಂದಿನ ಭಾಗವು ಕಣ್ಣು ಮೊದಲಾದುವುಗಳಿಂದ ಅಲಂಕೃತವಾಗಿ ಪ್ರಕಾಶಿಸುತ್ತಿದ್ದಿತು. ಆ ಹಿಂದಿನ ಭಾಗವಾದರೋ ಮನೋಹರವಾದ ಪದಾರ್ಥದಂತೆ ತಾನೇ ಪ್ರಕಾಶಿಸುತ್ತಿದ್ದಿತು. ಉಭಯ ಭಾಗಗಳೂ ಸುಂದರವಾಗಿದ್ದುವೆಂದು ಭಾವವು.

೧ ಕರ್ಣಸ್ಯ ವಿನಾಶೇ ವರ್ತಮಾನೇ ಇತಿ ಧ್ವನಿಃ. ೨ ಬಾಣಗುಣಸಮಾನೇ, ನರಶರತೋಪಮೇ ಇತ್ಯಪಿ ಪಾಠಃ. ೩ ಜಯಕುಮಾರಸ್ಯ, ಅರ್ಜುನಸ್ಯೇತಿ ಧ್ವನಿಃ. ೪ ತಿರಸ್ಕಾರಃ. ೫ ನೇತ್ರಯೋಃ. ೬ ಬಾಣಸಮೂಹಃ. ೭ ಆತ್ಮೀಯರೂಪೇಣ. ೮ ಜಯಕುಮಾರಂ. ೯ ಕಾಮಃ. ೧೦ ಭಾವದರ್ಶೀ ಸೇವಕಃ. ೧೧ ಕೃಷ್ಣಬಾಲಭುಜಂಗಾಃ. ೧೨ ಮನೋಜ್ಞಪದಾರ್ಥ ಇವ. ೧೩ ತು.

**ಯೇ ತಸ್ಯಾಸ್ತನುನಿರ್ಮಾಣೇ ವೇಧಸಾ [೧]ಸಾಧನೀಕೃತಾಃ ।**
**ಅಣವಸ್ತ್ವಣವಚ್ಛೇಷಾಸ್ತ ಏವ [೨]ಪರಮಾಣವಃ ॥ ೧೬೦ ॥**

ಆ ಸುಲೋಚನೆಯ ಶರೀರನಿರ್ಮಾಣದಲ್ಲಿ ಬ್ರಹ್ಮನಿಂದ ಯಾವ ಅಣುಗಳು ಮುಖ್ಯಕಾರಣಗಳಾಗಿ ಮಾಡಲ್ಪಟ್ಟುವೋ ಆ ಅಣುಗಳೇ ಉತ್ಕೃಷ್ಟವಾದ ಅಣುಗಳಾಗಿರುತ್ತವೆ. ಉಳಿದ ಅಣುಗಳು ಹುಲ್ಲಿನಂತೆ ವ್ಯರ್ಥವಾದುವುಗಳು.

**ಅತಿವೃದ್ಧಃ [೩]ಕ್ಷಯಾಸನ್ನಃ ಸ್ಪಷ್ಟಲಕ್ಷ್ಮಾ [೪]ಹಿಗೋಚರಃ ।**
**[೫]ಪೂರ್ಣಃ [೬]ಶೇಷೋಪ್ಯಸಂಪೂರ್ಣೋ ನ ತದ್ವಕ್ತ್ರೋಪಮೋ ವಿಧುಃ॥**

ಪೂರ್ಣಚಂದ್ರನು ಬಹಳವಾಗಿ ಬೆಳೆದವನೂ ಮುದುಕನೂ ಅಸ್ತಮಯಕ್ಕೆ ಸಮೀಪವಾಗಿರುವವನೂ ಕ್ಷಯರೋಗಕ್ಕೆ ಸಮೀಪವಾಗಿರುವವನೂ ಸ್ಪಷ್ಟವಾದ ಚಿಹ್ನೆಯುಳ್ಳವನೂ ರಾಹುವಿಗೆ ವಿಷಯನೂ ಆಗಿ ಆ ಸುಲೋಚನೆಯ ಮುಖದ ಸಾದೃಶ್ಯವುಳ್ಳವನಾಗಿರುವುದಿಲ್ಲವು. ಬಾಲಚಂದ್ರನೂ ಸಂಪೂರ್ಣನಲ್ಲದಿರುವವನಾಗಿ ಆಕೆಯ ಮುಖದ ಸಾದೃಶ್ಯವುಳ್ಳವನಾಗಿರುವುದಿಲ್ಲವು.

**ನ ಪಶ್ಚಾನ್ನ [೭]ಪುರೋ ಲಕ್ಷ್ಮೀ[೮]ರ್ಬೋಧಿ ಪದ್ಮೇ ಕ್ಷಣೇ ಕ್ಷಣೇ ।**
**ವಕ್ತ್ರಸ್ಯಾಂ ಗೃಹ್ಣತೀ ಶೋಭಾಂ ಸಾ [೯]ಸ್ಯಾದ್ವಾದಂ ತದಾನನೇ ॥ ೧೬೨ ॥**

ತಾವರೆಯಲ್ಲಿ ಪ್ರಸನ್ನಳಾಗಿರುವ ಲಕ್ಷ್ಮಿ(ಶೋಭೆ)ಯು ಮೊದಲಿರಲಿಲ್ಲ, ಮುಂದೆ ಇರುವುದಿಲ್ಲ. ಆ ಸುಲೋಚನೆಯ ಮುಖದಲ್ಲಿ ಆ ಲಕ್ಷ್ಮಿಯು ಕ್ಷಣಕ್ಷಣದಲ್ಲಿ ವಿಲಕ್ಷಣವಾದ ಶೋಭೆಯನ್ನು ಸ್ವೀಕರಿಸುವವಳಾಗಿ ಸ್ಯಾದ್ವಾದ ಪದ್ಧತಿಯನ್ನು ಹೇಳುತ್ತಾಳೆ. ಸುಲೋಚನೆಯ ಮುಖದಲ್ಲಿ ನೂತನ ನೂತನ ಶೋಭೆಯುಂಟಾಗುತ್ತಿದ್ದಿತೆಂದು ಭಾವವು.

**[೧೦]ಚಂದ್ರೇ [೧೧]ತೀವ್ರಕರೋಚ್ಛಿನ್ನಾ [೧೨]ಪದ್ಮೇ ಶೀತಕರಾಹತಾ ।**
**ಲಕ್ಷ್ಮೀಃ ಸಾನ್ಯೈವ ತದ್ವಕ್ತ್ರೇ ಜಯಲಕ್ಷ್ಮೀಕರಗ್ರಹಾತ್ ॥ ೧೬೩ ॥**

ಚಂದ್ರನಲ್ಲಿರುವ ಲಕ್ಷ್ಮಿಯು ಸೂರ್ಯನಿಂದ ನಾಶಮಾಡಲ್ಪಟ್ಟಿರುತ್ತಾಳೆ. ತಾವರೆಯಲ್ಲಿರುವ ಲಕ್ಷ್ಮಿಯು ಚಂದ್ರನಿಂದ ನಾಶಮಾಡಲ್ಪಟ್ಟಿರುತ್ತಾಳೆ. ಸೂರ್ಯನಿರುವಾಗ ಚಂದ್ರನ ಶೋಭೆಯೂ ಚಂದ್ರನಿರುವಾಗ ತಾವರೆಯ ಶೋಭೆಯೂ ನಷ್ಟವಾಗುವುವೆಂದು ಭಾವವು. ಆ ಸುಲೋಚನೆಯ ಮುಖದಲ್ಲಿರುವವಳಾದ ಆ ಲಕ್ಷ್ಮಿ(ಶೋಭೆ)ಯು ಜಯಕುಮಾರನ ಲಕ್ಷ್ಮಿಯ ಕೈಯನ್ನು ಹಿಡಿದಿರುವುದರಿಂದ ವಿಲಕ್ಷಣಳೇ ಆಗಿರುತ್ತಾಳೆ.

**[೧೩]ರಾತ್ರಾವಿಂದು[೧೪]ರ್ದಿವಾಂಭೋಜಂ [೧೫]ಕ್ಷಯೀಂದು[೧೬]ರ್ಗ್ಲಾನಿ ವಾರಿಜಮ್ ।**
**ಪೂರ್ಣಮೇವ ವಿಕಾಸ್ಯೇವ ತದ್ವಕ್ತ್ರಂ ಭಾತ್ಯಹರ್ದಿವಮ್ ॥ ೧೬೪ ॥**

ಚಂದ್ರನು ರಾತ್ರಿಯಲ್ಲಿ ಕಾಂತಿಯುಳ್ಳವನಾಗಿರುತ್ತಾನೆ. ತಾವರೆಯು ಹಗಲಿನಲ್ಲಿ ಅರಳುತ್ತದೆ. ಚಂದ್ರನು ಹಗಲಿನಲ್ಲಿ ಕ್ಷಯವನ್ನು ಹೊಂದುತ್ತಾನೆ. ತಾವರೆಯು ರಾತ್ರಿಯಲ್ಲಿ ಮುಚ್ಚಿಕೊಳ್ಳುತ್ತದೆ. ಪೂರ್ಣವೇ ಅರಳಿರುವುದೇ ಆದ ಆ ಸುಲೋಚನೆಯ ಮುಖವು ದಿವಾರಾತ್ರಿಯಲ್ಲಿಯೂ ಪ್ರಕಾಶಿಸುತ್ತದೆ.

**ಲಕ್ಷ್ಮೀಸ್ತಸ್ಯೇಕ್ಷಿತು[೧೭]ಸ್ತೇನ ವೀಕ್ಷಿತಸ್ಯಾಪಿ ನಿಶ್ಚಿತಾ ।**
**ಕಿಂ ಪದ್ಮೇ ತಾದೃಶಂ [೧೮]ಯೇನ ತದ್ವಕ್ತ್ರಮುಪಮೀಯತೇ ॥ ೧೬೫ ॥**

೧ ಉಪಾದಾನಕಾರಣೀಕೃತಾಃ. ೨ ಉತ್ಕೃಷ್ಟಾಣವಃ. ೩ ಅಸ್ತಮಯಾಸನ್ನಃ. ೪ ರಾಹುವಿಷಯಃ. ೫ ಚಂದ್ರಃ ಪೂರ್ಣೋಪಿ ನಾತದ್ವಕ್ತ್ರೋಪಮಃ ಸ್ಯಾದಿತಿ ವಿಕಲ್ಪ್ಯ ಉಭಾವಪಿ ನೇತ್ಯಾಹ. ೬ ಬಾಲಚಂದ್ರೋಪಿ. ೭ ಅಗ್ರೇ–ಭಾವಿ. ೮ ವಿಕಾಸಶೀಲಾ. ೯ ಸ್ಯಾದ್ವಾದಮಾರ್ಗಂ. ೧೦ ಚಂದ್ರೇಸ್ಥಿತಲಕ್ಷ್ಮೀಃ. ೧೧ ರವಿಹತಾ. ೧೨ ಪದ್ಮೇಸ್ಥಿತಲಕ್ಷ್ಮೀಃ. ೧೩ ರಾತ್ರೌ ಕಾಂತಿಮಾನ್. ೧೪ ದಿನೇ ವಿಕಾಸಿ. ೧೫ ದಿನೇ ಪರಿಕ್ಷಯೀ. ೧೬ ರಾತ್ರೌ ಗ್ಲಾನಿಮತ್. ೧೭ ವಕ್ತ್ರೇಣ. ೧೮ ಧರ್ಮೇಣ.

ಯಾವ ಧರ್ಮದಿಂದ ಆ ಸುಲೋಚನೆಯ ಮುಖವು ಹೋಲಿಸಲ್ಪಡುವುದೋ ಅಂತಹ ಧರ್ಮವು ಕಮಲದಲ್ಲಿರುತ್ತದೋ ? ಆಕೆಯ ಮುಖವನ್ನು ನೋಡುವವನಿಗೂ ಲಕ್ಷ್ಮಿಯು ನಿಶ್ಚಿತಳಾಗಿರುತ್ತಾಳೆ. ಆಕೆಯ ಮುಖದಿಂದ ನೋಡಲ್ಪಟ್ಟವನಿಗೂ ಲಕ್ಷ್ಮಿಯು ನಿಶ್ಚಿತಳಾಗಿರುತ್ತಾಳೆ. ಸುಲೋಚನೆಯ ಮುಖವನ್ನು ನೋಡುವವನಿಗೂ ಆಕೆಯ ಮುಖದಿಂದ ನೋಡಲ್ಪಟ್ಟವನಿಗೂ ಆನಂದವೂ ಮುಖದಲ್ಲಿ ಶೋಭೆಯೂ ಉಂಟಾಗುವುವೆಂದು ಭಾವವು.

**ಕುಮಾರ್ಯಾ ತ್ರಿಜಗಜ್ಜೇತಾ ಜಿತಃ ಪುಷ್ಪಶರಾಸನಃ ।**
**ಸ ವೀರಃ ಕಃ ಪರೋ ಲೋಕೇ ಯೋ ನ ಜಯ್ಯೋ[೧]ಗ್ರತೋನಯಾ ॥**

ಕುಮಾರಿಯಾದ ಸುಲೋಚನೆಯಿಂದ ಮೂರು ಲೋಕವನ್ನು ಜಯಿಸುವವನಾದ ಪುಷ್ಪಬಾಣನು ಜಯಿಸಲ್ಪಟ್ಟನು. ಯೌವನಕಾಲದಲ್ಲಿ ಈಕೆಯಿಂದ ಯಾವನು ಜಯಿಸಲ್ಪಡತಕ್ಕವನಾಗಿರಲಿಲ್ಲವೋ ಅಂಥ ವೀರನು ಲೋಕದಲ್ಲಿ ಬೇರೆ ಯಾವನಿದ್ದಾನೆ ? ಮನ್ಮಥನನ್ನೂ ಜಯಿಸಿರುವಾಗ ಅವನಿಗಿಂತ ಬೇರೆ ಯಾವ ವೀರನಿದ್ದಾನೆಂದು ಭಾವವು.

**ಕುಮಾರ್ಯೈವ ಜಿತಃ ಕಾಮೋ ವೀರಃ ಪಶ್ಚಾಜ್ಜಯೋ ಜಿತಃ ।**
**ಸ್ತ್ರೀಸೃಷ್ಟಿಃ ಕಿಯತೀ ನಾಮ ವಿಜಯೇಸ್ಯಾಃ ಸಹ ಶ್ರಿಯಾ ॥ ೧೬೭ ॥**

ಮನ್ಮಥನು ಸುಲೋಚನಾಕುಮಾರಿಯಿಂದಲೇ ಜಯಿಸಲ್ಪಟ್ಟನು. ಬಳಿಕ ವೀರನಾದ ಜಯಕುಮಾರನು ಜಯಿಸಲ್ಪಟ್ಟನು. ಈ ಸುಲೋಚನೆಯ ಜಯದಲ್ಲಿ ಲಕ್ಷ್ಮಿಯೊಡನೆ ಸ್ತ್ರೀಸೃಷ್ಟಿಯು ಎಷ್ಟರದು ? ಸುಲೋಚನೆಯು ಪುರುಷರನ್ನು ಜಯಿಸಿರುವಾಗ ಸ್ತ್ರೀಜಾತಿಯು ಎಷ್ಟರದೆಂದು ಭಾವವು.

**ಮೃಗಾಂಕಸ್ಯ ಕಲಂಕೋಯಂ ಮನ್ಯೇಹಂ ಕನ್ಯಯಾನಯಾ ।**
**ಸ್ವಕಾಂತ್ಯಾ ನಿರ್ಜಿತಸ್ಯಾಭೂ[೨]ದ್ರೋಗರಾಜಶ್ಚ [೩]ಚಿಂತಯಾ ॥ ೧೬೮ ॥**

ಈ ಸುಲೋಚನಾಕನ್ಯೆಯಿಂದ ತನ್ನ ಕಾಂತಿಯಿಂದ ಜಯಿಸಲ್ಪಟ್ಟವನಾದ ಚಂದ್ರನಿಗೆ ಇದು ಕಲಂಕವೆಂದೂ ಆ ಮನೋದುಃಖದಿಂದ ಇವನಿಗೆ ಕ್ಷಯರೋಗ ವುಂಟಾಗಿರುವುದೆಂದೂ ನಾನು ತಿಳಿಯುತ್ತೇನೆ.

**ಸಾರ್ಧಂ ಕುವಲಯೇನೇಂದುಃ ಸಹ ಲಕ್ಷ್ಮ್ಯಾ ಸರೋರುಹಮ್ ।**
**ತದ್ವಕ್ತ್ರೇಣ ಜಿತಂ ವ್ಯಕ್ತಂ ಕಿಮನ್ಯನ್ನೇಹ ಜೀಯತೇ ॥ ೧೬೯ ॥**

ಆ ಸುಲೋಚನೆಯ ಮುಖದಿಂದ ಕನ್ನೈದಿಲೆಯೊಡನೆ ಚಂದ್ರನೂ ಲಕ್ಷ್ಮಿಯೊಡನೆ ಕಮಲವೂ ಜಯಿಸಲ್ಪಟ್ಟುವು, ನಿಜ. ಈ ಲೋಕದಲ್ಲಿ ಇನ್ನಾವುದು ಜಯಿಸಲ್ಪಡುವುದಿಲ್ಲ ? ಎಲ್ಲವೂ ಜಯಿಸಲ್ಪಡುವುದೆಂದು ಭಾವವು.

**ಜಲಾಬ್ಜಂ ಜಲವಾಸೇನ ಸ್ಥಲಾಬ್ಜಂ ಸೂರ್ಯರಶ್ಮಿಭಿಃ ।**
**ಪ್ರಾಪ್ತುಂ ತದ್ವಕ್ತ್ರಜಾಂ ಶೋಭಾಂ ಮನ್ಯೇದ್ಯಾಪಿ ತಪಸ್ಯತಿ ॥ ೧೭೦ ॥**

ಆ ಸುಲೋಚನೆಯ ಮುಖದಲ್ಲಿರುವ ಶೋಭೆಯನ್ನು ಹೊಂದುವುದಕ್ಕೋಸ್ಕರ ತಾವರೆಯು ನೀರಿನಲ್ಲಿ ವಾಸದಿಂದಲೂ ನೆಲದಾವರೆಯು ಸೂರ್ಯಕಿರಣಗಳಿಂದಲೂ ಈಗಲೂ ತಪಸ್ಸನ್ನು ಮಾಡುತ್ತವೆಂದು ತಿಳಿಯುತ್ತೇನೆ.

**ಶನೈರ್ಬಾಲೇಂದುಲೇಖೇವ ಸಾ [೪]ಕಲಾಭಿರವರ್ಧತ ।**
**ವೃದ್ಧಾಸ್ತಸ್ಯಾಃ ಪ್ರವೃದ್ಧಾಯಾ [೫]ವಿಧುಭಾಸ್ಪರ್ಧಿನೋ ಗುಣಾಃ ॥ ೧೭೧ ॥**

ಬಾಲಚಂದ್ರನ ರೇಖೆಯಂತೆ ಆ ಸುಲೋಚನೆಯು ಅವಯವಗಳಿಂದ ಮೆಲ್ಲನೆ ಬೆಳೆದಳು. ಹಾಗೆ ಬೆಳೆದ ಆ ಸುಲೋಚನೆಯ ಚಂದ್ರಕಾಂತಿಯೊಡನೆ ಹೋರಾಡುವುವುಗಳಾದ ಗುಣಗಳೂ ಬೆಳೆದುವು.

೧ ಯೌವನಕಾಲೇ. ೨ ಕ್ಷಯವ್ಯಾಧಿಃ. ೩ ಮನೋದುಃಖೇನ. ೪ ಅವಯವೈಃ. ೫ ವಿಧುಭಿತ್ಯಪಿ ಪಾಠಃ.

**ಇತಿ ಸಂಪೂರ್ಣಸರ್ವಾಂಗಶೋಭಾಂ [೧]ಶುದ್ಧಾನ್ವಯಜಾಮ್ ।**
**ಸ್ಮರೋ [೨]ಜಯಭಯಾ[೩]ದ್ವೈತಾಂ ನ [೪]ತದಾಪ್ಯಕರೋತ್ಕರೇ ॥ ೧೭೨ ॥**

ಈ ಪ್ರಕಾರವಾಗಿ ಸಂಪೂರ್ಣವಾದ ಸಮಸ್ತಾವಯವಶೋಭೆಯುಳ್ಳವಳೂ ಶುದ್ಧವಂಶದಲ್ಲಿ ಹುಟ್ಟಿದವಳೂ ಆದ ಆ ಸುಲೋಚನೆಯನ್ನು ಮನ್ಮಥನು ಜಯಕುಮಾರನ ಭಯದಿಂದಲೋಪಾದಿಯಲ್ಲಿ ಆಕೆಯ ಯೌವನಕಾಲದಲ್ಲಿಯೂ ಕೈಯಲ್ಲಿ ಗ್ರಹಣವನ್ನು ಮಾಡಲಿಲ್ಲ. ಸುಲೋಚನೆಯು ಯೌವನಕಾಲದಲ್ಲಿಯೂ ಕಾಮವಿಕಾರವುಳ್ಳವಳಾಗಿರಲಿಲ್ಲವೆಂದು ಭಾವವು.

**ಕಾರಯಂತೀ ಜಿನೇಂದ್ರಾರ್ಚಾಶ್ಚಿತ್ರಾ ಮಣಿಮಯೀರ್ಬಹೂಃ ।**
**ತಾಸಾಂ ಹಿರಣ್ಮಯಾನ್ಯೇವ ವಿಶ್ವೋಪಕರಣಾನ್ಯಪಿ ॥ ೧೭೩ ॥**

**ತತ್ಪ್ರತಿಷ್ಠಾಭಿಷೇಕಾಂತೇ ಮಹಾಪೂಜಾಃ ಪ್ರಕುರ್ವತೀ ।**
**ಮುಹುಃ ಸ್ತುತಿಭಿ[೫]ರರ್ಥ್ಯಾಭಿಃ ಸ್ತುವತೀ ಭಕ್ತಿತೋ[೬]ಹರ್ತಃ ॥ ೧೭೪ ॥**

**ದದತೀ ಪಾತ್ರದಾನಾನಿ [೭]ಮಾನಯಂತೀ ಮಹಾಮುನೀನ್ ।**
**ಶೃಣ್ವತೀ ಧರ್ಮ[೮]ಮಾಕರ್ಣ್ಯ ಭಾವಯಂತೀ ಮುಹುರ್ಮುಹುಃ ॥**

**ಆಪ್ತಾಗಮಪದಾರ್ಥಾಂಶ್ಚ ಪ್ರಾಪ್ತಸಮ್ಯಕ್ತ್ವ ಶುದ್ಧಿಕಾ ।**
**ಅಥ ಫಾಲ್ಗುನನಂದೀಶ್ವರೇಸೌ ಭಕ್ತ್ಯಾ ಜಿನೇಶಿನಾಮ್ ॥ ೧೭೬ ॥**

**ವಿಧಾಯಾಷ್ಟಾಹ್ನಿಕೀಂ ಪೂಜಾಮಭ್ಯರ್ಚ್ಯಾರ್ಚಾ ಯಥಾವಿಧಿ ।**
**ಕೃತೋಪವಾಸಾ ತನ್ವಂಗೀ ಶೇಷಾನ್ ದಾತುಮುಪಾಗತಾ ॥ ೧೭೭ ॥**

**ನೃಪಂ ಸಿಂಹಾಸನಾಸೀನಂ ಸೋಪ್ಯುತ್ಥಾಯ ಕೃತಾಂಜಲಿಃ ।**
**ತದ್ದತ್ತಶೇಷಾಮಾದಾಯ ನಿಧಾಯ ಶಿರಸಿ ಸ್ವಯಮ್ ॥ ೧೭೮ ॥**

**ಉಪವಾಸಪರಿಶ್ರಾಂತಾ ಪುತ್ರಿಕೇ ತ್ವಂ ಪ್ರಯಾಹಿ ತೇ ।**
**[೯]ಶರಣಂ ಪಾರಣಾಕಾಲ ಇತಿ ಕನ್ಯಾಂ ವ್ಯಸರ್ಜಯತ್ ॥ ೧೭೯ ॥**

ನಾನಾಪ್ರಕಾರಗಳೂ ರತ್ನಮಯಗಳೂ ಬಹಳವೂ ಆದ ಜಿನೇಶ್ವರಬಿಂಬಗಳನ್ನೂ ಆ ಬಿಂಬಗಳಿಗೆ ಸುವರ್ಣಮಯಗಳೇ ಆದ ಸಮಸ್ತ ಉಪಕರಣಗಳನ್ನೂ ಮಾಡಿಸುವವಳೂ ಆ ಜಿನಬಿಂಬಗಳ ಪ್ರತಿಷ್ಠೆಯ ಮತ್ತು ಅಭಿಷೇಕದ ಕೊನೆಯಲ್ಲಿ ಮಹಾಪೂಜೆಗಳನ್ನು ಮಾಡುವವಳೂ ಬಾರಿಬಾರಿಗೆ ಭಕ್ತಿಯಿಂದ ಅರ್ಹತ್ಪರಮೇಶ್ವರರನ್ನು ಉತ್ತಮಧರ್ಮಯುಕ್ತಗಳಾದ ಸ್ತುತಿಗಳಿಂದ ಸ್ತುತಿಸುವವಳೂ ಸತ್ಪಾತ್ರಗಳಿಗೆ ದಾನಗಳನ್ನು ಕೊಡುವವಳೂ ಮಹಾಮುನಿಗಳನ್ನು ಪೂಜಿಸುವವಳೂ ಧರ್ಮಬೋಧೆಯನ್ನು ಕೇಳುವವಳೂ ಕೇಳಿಯೂ ಸಮ್ಯಕ್ತ್ವಶುದ್ಧಿಯನ್ನು ಹೊಂದಿದವಳಾಗಿ ಆಪ್ತಾಗಮಪದಾರ್ಥಗಳನ್ನೂ ಬಾರಿಬಾರಿಗೆ ಭಾವಿಸುವವಳೂ ಆದ ಈ ಸುಲೋಚನೆಯು ಬಳಿಕ ಫಾಲ್ಗುನಮಾಸದ ನಂದೀಶ್ವರಪರ್ವದಲ್ಲಿ ಭಕ್ತಿಯಿಂದ ಜಿನೇಶ್ವರರ ಅಷ್ಟಾಹ್ನಿಕಸಂಬಂಧವಾದ ಪೂಜೆಯನ್ನು ಮಾಡಿ ವಿಧಿಪ್ರಕಾರವಾಗಿ ಉಪವಾಸವನ್ನು ಮಾಡಿದವಳಾಗಿಯೂ ಜಿನಬಿಂಬಗಳನ್ನು ಪೂಜಿಸಿ ಕೃಶಾಂಗಿಯಾಗಿಯೂ ಸಿಂಹಾಸನದಲ್ಲಿ ಕುಳಿತಿರುವ ಅಕಂಪನರಾಜನನ್ನು ಕುರಿತು ಶೇಷ–ಪ್ರಸಾದಗಳನ್ನು ಕೊಡುವುದಕ್ಕೋಸ್ಕರ ಬಂದಳು. ಆ ಅಕಂಪನರಾಜನೂ ಎದ್ದು ಕೈಗಳನ್ನು ಜೋಡಿಸಿ ಆಕೆಯಿಂದ ಕೊಡಲ್ಪಟ್ಟ ಶೇಷೆಯನ್ನು (ಪ್ರಸಾದವನ್ನು) ತಾನೇ ತೆಗೆದುಕೊಂಡು ತಲೆಯಲ್ಲಿರಿಸಿ ''ಮಗಳೆ ! ನೀನು ಉಪವಾಸದಿಂದ ಬಳಲಿರುತ್ತಿ. ನಿನ್ನ ಮನೆಯನ್ನು ಕುರಿತು ಹೋಗು, ಪಾರಣೆಯ ಕಾಲವಾಗಿರುತ್ತದೆ'' ಎಂದು ಸುಲೋಚನಾಕನ್ಯೆಯನ್ನು ಬೀಳ್ಕೊಟ್ಟನು.

**ತಾಂ ವಿಲೋಕ್ಯ ಮಹೀಪಾಲೋ ಬಾಲಾಮಾಪೂರ್ಣಯೌವನಾಮ್ ।**
**ನಿರ್ವಿಕಾರಾಂ ಸಚಿಂತಃ ಸಂಸ್ತಸ್ಯಾಃ ಪರಿಣಯೋತ್ಸವೇ ॥ ೧೮೦ ॥**

೧ ಶುದ್ಧವಂಶಜಾತಾಂ. ೨ ಜಯಕುಮಾರಸ್ಯ ಭಯಾತ್. ೩ ಇವ. ೪ ಯೌವನಕಾಲೇಪಿ. ೫ ಸದ್ಧರ್ಮಯುಕ್ತಾಭಿಃ. ೬ ಅರ್ಹದ್ದೇವಾನ್. ೭ ಪೂಜಯಂತೀ. ೮ ಶ್ರುತ್ವಾಪಿ. ೯ ಗೃಹಂ.

ಶುಭೇ ಶ್ರುತಾರ್ಥಸಿದ್ಧಾರ್ಥಸರ್ವಾರ್ಥಸುಮತಿ[1]ಶ್ರುತೀನ್ ।
ಕೋಷ್ಠಾದಿಮತಿಭೇದಾ[2]ನ್ವಾ ದಿನೇಪ್ಯಾಹೂಯ ಮಂತ್ರಿಣಃ ॥ ೧೮೧ ॥

[3]ವೃಣ್ವತೇ ಸರ್ವಭೂಪಾಲಾಃ ಕನ್ಯಾಂ ನಃ ಕುಲಜೀವಿತಮ್ ।
ಬ್ರೂತ ಕಸ್ಮೈ ಪ್ರದಾಸ್ಯಾಮೋ [4]ವಿಮೃಶ್ಯೈಮಾಂ ಸುಲೋಚನಾಮ್ ॥

ಇ[5]ತ್ಯಪ್ರಾಕ್ಷೀತ್ತದಾ ಪ್ರಾಹ ಶ್ರುತಾರ್ಥಃ ಶ್ರುತಸಾಗರಃ ।
ಅತ್ರ ಸದ್ಬಂಧುಸಂಬಂಧೋ ಜಾಮಾತಾತ್ರ ಮಹಾನ್ವಯಃ ॥ ೧೮೩ ॥

ಸರ್ವಸ್ವಸ್ಯ ವ್ಯಯೋತ್ರಾತ್ರ ಜನ್ಮರಾಜ್ಯಫಲಂ ಚ ನಃ ।
ತತಃ [6]ಸಂಚಿಂತ್ಯಮೇವೈತತ್ಕಾರ್ಯಂ ನಯವಿಶಾರದೈಃ ॥ ೧೮೪ ॥

ಅಕಂಪನರಾಜನು ಪರಿಪೂರ್ಣಯೌವನವತಿಯೂ ವಿಕಾರರಹಿತಳೂ ಆದ ಆ ಬಾಲೆಯನ್ನು ನೋಡಿ ಆಕೆಯ ವಿವಾಹೋತ್ಸವವಿಷಯದಲ್ಲಿ ಚಿಂತೆಯುಳ್ಳವನಾಗಿ ಶುಭವಾದ ದಿನವಲ್ಲಿಯೂ (ಹಗಲಿನಲ್ಲಿಯೂ) ಕೋಷ್ಠಬುದ್ಧಿ ಬೀಜಬುದ್ಧಿ ಪದಾನುಸಾರಿ ಸಂಭಿನ್ನಶ್ರೋತೃಗಳೆಂಬ ಭೇದಗಳುಳ್ಳ ಮಹರ್ಷಿಗಳಂತಿರುವವರೂ ಶ್ರುತಾರ್ಥ ಸಿದ್ಧಾರ್ಥ ಸರ್ವಾರ್ಥ ಸುಮತಿಗಳೆಂದು ಹೆಸರುಗಳುಳ್ಳವರೂ ಆದ ಮಂತ್ರಿಗಳನ್ನು ಕರೆಯಿಸಿ ''ನಮ್ಮ ವಂಶದ ಜೀವನಪ್ರಾಯಳಾದ ಈ ಸುಲೋಚನಾಕನ್ಯೆಯನ್ನು ಸಮಸ್ತರಾಜರುಗಳು ಪ್ರಾರ್ಥಿಸುತ್ತಾರೆ. ಯಾವನಿಗೆ ಕೊಡುವೆವು ?(ಕೊಡಬೇಕು ?) ವಿಚಾರಮಾಡಿ ಹೇಳಿ'' ಎಂದು ಪ್ರಶ್ನೆಮಾಡಿದನು. ಆಗ ಶಾಸ್ತ್ರಕ್ಕೆ ಸಮುದ್ರಪ್ರಾಯನಾದ ಶ್ರುತಾರ್ಥನೆಂಬ ಮಂತ್ರಿಯು ''ಎಲೈ ಪ್ರಭುವೆ ! ಈ ವಿವಾಹದಲ್ಲಿ ಶ್ರೇಷ್ಠರಾದ ಬಂಧುಗಳ ಸಂಬಂಧವಿರಬೇಕು. ಇದರಲ್ಲಿ ಮಹಾವಂಶವುಳ್ಳವನಾದ ಅಳಿಯನಾಗಬೇಕು. ಇದರಲ್ಲಿ ಸಮಸ್ತದ್ರವ್ಯದ ವೆಚ್ಚ ವಾಗಬೇಕು. ಇದರಲ್ಲಿ ನಮ್ಮ ಜನ್ಮದ ಮತ್ತು ರಾಜ್ಯದ ಫಲವಿರುವುದು. ಆದುದರಿಂದ ಈ ಕಾರ್ಯವು ನ್ಯಾಯನಿಪುಣರೊಡನೆ ಯೋಚಿಸತಕ್ಕುದೇ ಆಗಿರುತ್ತದೆ.

ಬಂಧವಃ ಸ್ಯುರ್ನೃಪಾಃ ಸರ್ವೇ ಸಂಬಂಧಶ್ಚಕ್ರವರ್ತಿನಾ ।
ಇಕ್ಷ್ವಾಕುವಂಶವತ್ಪೂಜ್ಯೋ ಭವದ್ವಂಶಶ್ಚ ಜಾಯತೇ ॥ ೧೮೫ ॥

ಚಕ್ರವರ್ತಿಯೊಡನೆ ಸಂಬಂಧ(ನೆಂಟಸ್ತಿಕೆ–ಬಿಯಗತನ)ವಾಗುವುದು. ರಾಜರೆಲ್ಲರು ಬಂಧುಗಳಾಗುವರು. ಇಕ್ಷ್ವಾಕುವಂಶದಂತೆ ತಮ್ಮ ವಂಶವೂ ಪೂಜ್ಯವಾಗುತ್ತದೆ.

ಕುಲರೂಪವಯೋವಿದ್ಯಾವೃತ್ತಶ್ರೀಪೌರುಷಾದಿಕಮ್ ।
ಯದ್ವರೇಷು [7]ಸಮನ್ವೇಷ್ಯಂ ಸರ್ವಂ ತ[8]ತ್ತತ್ರ ಪಿಂಡಿತಮ್ ॥ ೧೮೬ ॥

ಯಾವ ವರರಲ್ಲಿ ಕುಲ ರೂಪ ವಯಸ್ಸು ವಿದ್ಯೆ ಆಚರಣೆ ಸಂಪತ್ತಿ ಪೌರುಷ ಮೊದಲಾದುದು ಹುಡುಕತಕ್ಕುದಾಗಿರುವುದೋ ಅವೆಲ್ಲವೂ ಅರ್ಕಕೀರ್ತಿಯಲ್ಲಿ ಸೇರಿರುತ್ತದೆ.

ತತೋ ನಾಸ್ತ್ಯತ್ರ ನ[9]ಶ್ಚರ್ಯಂ ದಿಗಂತವ್ಯಾಪ್ತಕೀರ್ತಯೇ ।
ಜಿತಾರ್ಕಮೂರ್ತಯೇ ದೇಯಾ ಕನ್ಯೈಷೇ[10]ತ್ಯರ್ಕಕೀರ್ತಯೇ॥ ೧೮೭ ॥

ಆದುದರಿಂದ ಈ ಅರ್ಕಕೀರ್ತಿಯ ವಿಷಯದಲ್ಲಿ ನಮಗೆ ವಿಚಾರಮಾಡಬೇಕಾದ ವಿಷಯವಿಲ್ಲವು. ದಿಕ್ಕುಗಳ ಕೊನೆಗಳವರೆಗೆ ವ್ಯಾಪ್ತವಾದ ಕೀರ್ತಿಯುಳ್ಳವನೂ ಸೂರ್ಯನ ಮೂರ್ತಿಯನ್ನು ಜಯಿಸಿರುವವನೂ(ಪ್ರತಾಪಿಯೂ) ಆದ ಅರ್ಕಕೀರ್ತಿಗೆ ಈ ಕನ್ನೆಯು ಕೊಡುವುದಕ್ಕೆ ಯೋಗ್ಯಳಾಗಿರುತ್ತಾಳೆ'' ಎಂಬುದಾಗಿ ಹೇಳಿದನು.

೧ ನಾಮಧೇಯಾನ್. ೨ ಇವ. ೩ ಪ್ರಾರ್ಥಯಂತೇ. ೪ ವಿಚಾರ್ಯ. ೫ ಪೃಚ್ಛತಿ ಸ್ಮ. ೬ ಮಹಾನ್ವಯೇ ಜಾತೋ ಮೃಗ್ಯ ಇತಿ ಸಮ್ಯಕ್ಚಿಂತಿತುಂ ಯೋಗ್ಯಂ. ೭ ಮೃಗ್ಯಂ. ೮ ಅರ್ಕಕೀರ್ತೌ. ೯ ವಿಚಾರಣೀಯಂ. ೧೦ ಇತಿ ಪ್ರಾಹೇತಿ ಸಂಬಂಧಃ.

ಸಿದ್ಧಾರ್ಥೋತ್ರಾಹ ತತ್ಸರ್ವಮಸ್ತು ಕಿಂಚ [1]ಪುರಾವಿದಃ ।
[2]ಕನೀಯಸೋಪಿ ಸಂಬಂಧಂ ನೇಚ್ಛಂತಿ [3]ಜ್ಯಾಯಸಾ ಸಹ ॥ ೧೮೮ ॥

ಎರಡನೆಯ ಮಂತ್ರಿಯಾದ ಸಿದ್ಧಾರ್ಥನು ''ಅದೆಲ್ಲವೂ ಇರಲಿ. ಮತ್ತೇನೆಂದರೆ, ಪೂರ್ವವಿಷಯವನ್ನು ತಿಳಿದವರು–ಹಿರಿಯರು ಅಲ್ಪನೊಡನೆಯೂ ದೊಡ್ಡವನೊಡನೆಯೂ ಸಂಬಂಧವನ್ನಿಚ್ಛಿಸುವುದಿಲ್ಲ. ತನಗಿಂತ ಅಲ್ಪನೊಡನೆಯೂ ದೊಡ್ಡವನೊಡನೆಯೂ ಬಿಯಗತನವನ್ನಿಚ್ಛಿಸುವುದಿಲ್ಲವೆಂದು ಭಾವವು.

ತತಃ [4]ಪ್ರತೀತಭೂಪಾಲಪುತ್ರಾ ವರಗುಣಾನ್ವಿತಾಃ ।
ಪ್ರಭಂಜನೋ ರಥವರೋ ಬಲಿರ್ವಜ್ರಾಯುಧಾಹ್ವಯಃ ॥ ೧೮೯ ॥

ಮೇಘಸ್ವರೋ ಭೀಮಭುಜಸ್ತಥಾನ್ಯೇಪ್ಯುದಿತೋದಿತಾಃ ।
ಕೃತಿನೋ ಬಹವಃ ಸಂತಿ ತೇಷು [5]ಯತ್ರಾಶಯೋತ್ಸವಃ ॥ ೧೯೦ ॥

ಶಿಷ್ಟಾನ್ ಪೃಷ್ಟ್ವಾ ಚ [6]ದೈವಜ್ಞಾನ್ನಿರೀಕ್ಷ್ಯ ಶಕುನಾನಿ ಚ ।
ಸ ಹಿ ನಃ ಸಮಸಂಬಂಧಸ್ತಸ್ಮೈ ಕನ್ಯೇತಿ ದೀಯತಾಮ್ ॥ ೧೯೧ ॥

ಆದುದರಿಂದ ಪ್ರಸಿದ್ಧರಾಜರುಗಳ ಪುತ್ರರೂ ವರನಲ್ಲಿರಬೇಕಾದ ಗುಣಗಳುಳ್ಳವರೂ ಆದ ಪ್ರಭಂಜನ ರಥವರ ಬಲಿ ವಜ್ರಾಯುಧನೆಂಬವನು ಮೇಘಸ್ವರ ಭೀಮಭುಜ ಇವರುಗಳೂ ಹಾಗೆಯೇ ಮೇಲೆ ಮೇಲೆ ಅಭ್ಯುದಯವುಳ್ಳವರೂ ನಿಪುಣರೂ ಆದ ಬಹುಜನರು ಬೇರೆಯವರೂ ಇರುತ್ತಾರೆ. ಅವರಲ್ಲಿ ಯಾವ ಪುರುಷನಲ್ಲಿ ಮನಸ್ಸಂತೋಷವಿರುತ್ತದೋ ಆ ಪುರುಷನು ತಮಗೆ ಸಮಾನವಾದ ಸಂಬಂಧವುಳ್ಳವನಾಗುವನು. ಅವಶ್ಯವಾಗಿ ಅಂಥವನಿಗೆ ಹಿರಿಯರನ್ನೂ ಜ್ಯೋತಿಷಿಕರನ್ನೂ ಕೇಳಿ ಶಕುನಗಳನ್ನು ನೋಡಿ ಕನ್ಯೆಯು ಕೊಡಲ್ಪಡಲಿ'' ಎಂದು ಹೇಳಿದನು.

ಶ್ರುತ್ವಾ ಸರ್ವಾರ್ಥವಿತ್ಸರ್ವಂ ಸರ್ವಾರ್ಥಃ ಪ್ರತ್ಯುವಾಚ ತತ್ ।
ಭೂಮಿಗೋಚರಸಂಬಂಧಃ ಸ ನಃ ಪ್ರಾಗಪಿ ವಿದ್ಯತೇ ॥ ೧೯೨ ॥

ಅಪೂರ್ವಲಾಭಃ ಶ್ಲಾಘ್ಯಶ್ಚ ವಿದ್ಯಾಧರಸಮಾಶ್ರಯಃ ।
ವಿಚಾರ್ಯ ತತ್ರ ಕಸ್ಮೈಚಿದ್ದೇಯೇಯಮಿತಿ ನಿಶ್ಚಿತಮ್ ॥ ೧೯೩ ॥

ಸಮಸ್ತವಿಷಯಗಳನ್ನು ತಿಳಿದವನಾದ ಸರ್ವಾರ್ಥನೆಂಬ ಮೂರನೆಯ ಮಂತ್ರಿಯು ಅದೆಲ್ಲವನ್ನೂ ಕೇಳಿ ''ನಮಗೆ ಮೊದಲಿನಿಂದಲೂ ಭೂಚರರ ಸಂಬಂಧವಿರುತ್ತದೆ. ವಿದ್ಯಾಧರರನ್ನಾಶ್ರಯಿಸಿದ ಹೊಸದಾದ ಸಂಬಂಧದ ಲಾಭವು ಸ್ತುತ್ಯವಾಗಿರುವುದು. ಆ ವಿದ್ಯಾಧರರಲ್ಲಿ ವಿಚಾರಮಾಡಿ ಯಾವನಿಗಾದರೂ ಈ ಕನ್ಯೆಯು ಕೊಡುವುದಕ್ಕೆ ಯೋಗ್ಯಳಾಗಿರುತ್ತಾಳೆ. ಇದು ನಿಶ್ಚಯವಾದ ಮಾತು'' ಎಂದು ಹೇಳಿದನು.

ಸುಮತಿಸ್ತಂ ನಿಶಮ್ಯಾರ್ಥಂ [7]ಯುಕ್ತಾನಾಮಾಹ ಯುಕ್ತಿವಿತ್ ।
ನ ಯುಕ್ತಂ ವಕ್ತುಮ[8]ಪ್ಯೇತತ್ಸರ್ವವೈರಾನುಬಂಧಕೃತ್ ॥ ೧೯೪ ॥

ಆ ಮಂತ್ರಿಗಳಲ್ಲಿ ಯುಕ್ತಿಯನ್ನು ತಿಳಿದಿರುವವನಾದ ಸುಮತಿಯೆಂಬ ನಾಲ್ಕನೆಯ ಮಂತ್ರಿಯು ಅಲ್ಲಿ ಸೇರಿರುವ ಶ್ರುತಾರ್ಥನೇ ಮೊದಲಾದ ಮಂತ್ರಿಗಳ ಆ ಅರ್ಥವನ್ನು (ಮಾತನ್ನು) ಕೇಳಿ ''ವಿದ್ಯಾಧರಸಂಬಂಧವನ್ನು ಮಾಡಬೇಕೆಂದು ಹೇಳಿದ ಈ ಮಾತು ಎಲ್ಲರೊಡನೆಯೂ ದ್ವೇಷಸಂಬಂಧವನ್ನುಂಟುಮಾಡುವುದಾಗಿರುವುದು. ಇದು ಹೇಳುವುದಕ್ಕೂ ಯುಕ್ತವಲ್ಲ.

ಕಿಂ ಭೂಮಿಗೋಚರೇಷ್ವಸ್ಯಾ ವರೋ ನಾಸ್ತೀತಿ ಚೇತಸಿ ।
ಚಕ್ರಿಣೋಪಿ ಭವೇತ್ಕಿಂಚಿ[9]ದ್ವೈರಸ್ಯಂ ಪ್ರಸ್ತುತಶ್ರುತೇಃ ॥ ೧೯೫ ॥

೧ ಪೂರ್ವವೇದಿನಃ. ೨ ಅಲ್ಪಸ್ಯಾಪಿ. ೩ ಮಹತಾ. ೪ ಪ್ರಸಿದ್ಧ. ೫ ಪುಂಸಿ. ೬ ಜ್ಯೋತಿಷಿಕಾನ್. ೭ ಮಿಲಿತಾನಾಂ. ೮ ವಿದ್ಯಾಧರಸಂಬಂಧಃ ಕರ್ತವ್ಯ ಇತಿ ಯದುಕ್ತಂ ತದೇತತ್. ೯ ವೈರತಾ.

ಈ ಸುಲೋಚನೆಗೆ ಭೂಚರರಲ್ಲಿ ವರನಿಲ್ಲವೇನು ? ಎಂದು ಚಕ್ರವರ್ತಿಗೂ ಮನಸ್ಸಿನಲ್ಲಿ ಪ್ರಕೃತವಿಷಯವನ್ನು ಕೇಳುವುದರಿಂದ ಸ್ವಲ್ಪ ವೈರತ್ವವಾಗಬಹುದು.

**ದೃಷ್ಟಃ ಸಮ್ಯಗುಪಾಯೋಽಯಂ ಮಯಾತ್ರೈಕೋಽವಿರೋಧಕಃ ।**
**ಶ್ರುತಪೂರ್ವಃ ಪುರಾಣೇಷು ಸ್ವಯಂವರವಿಧಿರ್ವರಃ ॥ ೧೯೬ ॥**

ನನ್ನಿಂದ ಈ ವಿಷಯದಲ್ಲಿ ವಿರೋಧವಿಲ್ಲದಿರುವ ಒಂದು ಒಳ್ಳೆಯ ಉಪಾಯ ವಿದು ನೋಡಲ್ಪಟ್ಟಿರುತ್ತದೆ:– ಪುರಾಣಗಳಲ್ಲಿ ಮೊದಲು ಕೇಳಲ್ಪಟ್ಟಿರುವ ಸ್ವಯಂ ವರವಿಧಿಯು ಶ್ರೇಷ್ಠವಾಗಿರುತ್ತದೆ.

**ಸಂಪ್ರ[೧]ತ್ಯಕಂಪನೋಪಕ್ರಮಂ [೨]ತದಸ್ತ್ವಾಯುಗಾವಧಿ ।**
**[೩]ಪುರುತತ್ಪುತ್ರವ[೪]ತ್ಸ್ರಷ್ಟೃಖ್ಯಾತಿರಸ್ಯಾಪಿ ಜಾಯತಾಮ್ ॥ ೧೯೭ ॥**

ಆ ಸ್ವಯಂವರನಿರ್ಮಾಣವು ಈಗ ಅಕಂಪನಮಹಾರಾಜನಿಂದ ಮೊದಲು ಪ್ರಾರಂಭಿಸಲ್ಪಟ್ಟುದಾಗಿ ಈ ಯುಗದ ಅಂತ್ಯದವರೆಗೂ ಇರಲಿ. ವೃಷಭಸ್ವಾಮಿ ಯಂತೆಯೂ ಅವರ ಪುತ್ರನಾದ ಭರತೇಶ್ವರನಂತೆಯೂ ಸ್ವಯಂವರವಿಧಿಯ ಸ್ರಷ್ಟ– ನಿರ್ಮಾಪಕನೆಂಬ ಪ್ರಸಿದ್ಧಿಯು ಈ ಅಕಂಪನಮಹಾರಾಜನಿಗೂ ಉಂಟಾಗಲಿ.

**ದೀಯತಾಂ ಕೃತಪುಣ್ಯಾಯ ಕಸ್ಮೈಚಿತ್ಕನ್ಯಕಾ ಸ್ವಯಮ್ ।**
**ವೇಧಸಾ [೫]ವಿಪ್ರಿಯಂ ನೋಮಾ ಮಾಭೂ[೬]ದ್ಭೂಭೃತ್ಸು ಕೇನಚಿತ್ ॥**

ಪುಣ್ಯವನ್ನು ಮಾಡಿರುವ ಯಾವನಿಗಾದರೂ ಕನ್ಯೆಯು ಬ್ರಹ್ಮನಿಂದ ಕೊಡ ಲ್ಪಡಲಿ. ನಮಗೆ ರಾಜರುಗಳಲ್ಲಿ ಯಾವನೊಡನೆಯೂ ವಿರುದ್ಧವು– ಅಪ್ರಿಯವು ಆಗಬಾರದು'' ಎಂದು ಹೇಳಿದನು.

**ಇತ್ಯೇವಮುಕ್ತಂ ತತ್ಸರ್ವೈಃ ಸಮ್ಮತಂ ಸಹ ಭೂಭುಜಾ ।**
**ನ ಹಿ ಮತ್ಸರಿಣಃ ಸಂತೋ ನ್ಯಾಯಮಾರ್ಗಾನುಸಾರಿಣಃ ॥ ೧೯೯ ॥**

ಈ ಪ್ರಕಾರವಾಗಿ ಹೇಳಲ್ಪಟ್ಟ ಆ ಮಾತು ಅಕಂಪನಮಹಾರಾಜನೊಡನೆ ಎಲ್ಲರಿಂದಲೂ ಸಮ್ಮತಿಸಲ್ಪಟ್ಟಿತು. ನ್ಯಾಯಮಾರ್ಗಾನುಸಾರಿಗಳಾದ ಸತ್ಪುರುಷರು ಮತ್ಸರವುಳ್ಳವರಾಗುವುದಿಲ್ಲವಲ್ಲವೇ ? ರಾಜನೂ ಎಲ್ಲರೂ, ಆ ಮಾತನ್ನು ಸಮ್ಮತಿಸಿದರೆಂದೂ ಮತ್ಸರವನ್ನು ಮಾಡಲಿಲ್ಲವೆಂದೂ ಭಾವವು.

**ತಾನ್ಸಂಪೂಜ್ಯ ವಿಸರ್ಜ್ಯಾಥ ಭೂ[೭]ದ್ಭೂಭೃತ್ತತ್ಕಾರ್ಯತತ್ಪರಃ ।**
**ಸ್ವಯಮೇವ ಗೃಹಂ ಗತ್ವಾ ಸರ್ವಂ [೮]ತತ್ಸಂವಿಧಾನಕಮ್ ॥ ೨೦೦ ॥**

**ನಿವೇದ್ಯ ಸುಪ್ರಭಾಯಾಶ್ಚ ಹೃಷ್ಟೋ [೯]ಹೇಮಾಂಗದಸ್ಯ ಚ ।**
**ವೃದ್ಧೈಃ ಕುಲಕ್ರಮಾಯಾತೈರಾಲೋಚ್ಯ ಚ [೧೦]ಸನಾಭಿಭಿಃ ॥ ೨೦೧ ॥**

**ಅತ್ರ್ಯ[೧೧]ಕೇಷಾಂ[೧೨]ನಿಸೃಷ್ಟಾರ್ಥಾನ್ ಮಿತಾರ್ಥಾನಪರಾನ್ಪತಿ ।**
**ಪರೇಷಾಂ ಪ್ರಾಭೃತಾಂತಃಸ್ಥಪತ್ರಾನ್ [೧೩]ಶಾಸನಹಾರಿಣಃ ॥ ೨೦೨ ॥**

**ಸ ದಾನಮಾನೈಃ ಸಂಪೂಜ್ಯ ನಿವೇದ್ಯೈ[೧೪]ತತ್ಪ್ರಯೋಜನಮ್ ।**
**ಸಮಾನೇತುಂ ಮಹೀಪಾಲಾ[೧೫]ನ್ಸರ್ವದಿಕ್ಕಂ ಸಮಾದಿಶತ್ ॥ ೨೦೩ ॥**

ಅಕಂಪನಮಹಾರಾಜನು ಮಂತ್ರಿಗಳನ್ನು ಸತ್ಕರಿಸಿ ಬಿಟ್ಟು ಸ್ವಯಂವರ ಕಾರ್ಯದಲ್ಲಿ ಆಸಕ್ತನಾದನು. ತಾನೇ ಮನೆಗೆ ಹೋಗಿ ಸ್ವಯಂವರವಿಧಿಯ ಪ್ರಕೃತ ಕಾರ್ಯವನ್ನೆಲ್ಲ ಸುಪ್ರಭಾದೇವಿಗೂ ತನ್ನ ಜ್ಯೇಷ್ಠಪುತ್ರನಾದ ಹೇಮಾಂಗದನಿಗೂ ತಿಳಿಸಿ ವಂಶಪರಂಪರೆಯಿಂದ ಬಂದವರೂ ವೃದ್ಧರೂ ಆದ ಬಂಧುಗಳೊಡನೆ ಆಲೋಚಿಸಿ ಅಕಂಪನಮಹಾರಾಜನು ಇಲ್ಲಿ ಕೆಲವು ರಾಜರುಗಳಿಗೆ ತಾವೇ ಕಾರ್ಯವನ್ನು ವಿಚಾರಮಾಡಿದವರಾದ ಭೃತ್ಯರನ್ನೂ ಇತರ ರಾಜರುಗಳನ್ನು ಕುರಿತು ಮಿತವಾದ (ಹೇಳಿದಷ್ಟು) ಕೆಲಸವನ್ನು ಮಾಡುವವರಾದ ಭೃತ್ಯರನ್ನೂ ಬೇರೆ ಕೆಲವು ರಾಜರುಗಳಿಗೆ ಕೈಗಾಣಿಕೆಗಳ ಮಧ್ಯದಲ್ಲಿ ಪತ್ರಗಳುಳ್ಳವರಾದ ಭೃತ್ಯರನ್ನೂ ದಾನಮಾನಗಳಿಂದ ಸತ್ಕರಿಸಿ ಈ ಸ್ವಯಂವರಕಾರ್ಯವನ್ನು ಅವರಿಗೆ ತಿಳಿಸಿ ರಾಜರುಗಳನ್ನು ಕರೆದುಕೊಂಡು ಬರುವುದಕ್ಕೋಸ್ಕರ ಸಮಸ್ತದಿಕ್ಕುಗಳಿಗೆ ಹೋಗು ವಂತೆ ಅಪ್ಪಣೆಮಾಡಿದನು.

೧ ಅಕಂಪನೇನ ಪ್ರಥಮೋಪಕ್ರಾಂತಂ. ೨ ಸ್ವಯಂವರನಿರ್ಮಾಣಂ. ೩ ಪುರುಜಿನಭರತರಾಜವತ್. ೪ ಸೃಷ್ಟಿರಿತ್ಯಪಿ ಪಾಠಃ. ೫ ವಿರುದ್ಧಂ, ಅಪ್ರಿಯಮಿತ್ಯರ್ಥಃ. ೬ ನೃಪೇಷು. ೭ ಅಕಂಪನಃ. ೮ ಸ್ವಯಂವರಕಾರ್ಯಪ್ರಸ್ತುತಕೃತ್ಯಂ. ೯ ನಿಜಜ್ಯೇಷ್ಠಪುತ್ರಸ್ಯ. ೧೦ ಬಂಧುಭಿಃ. ೧೧ ಕೇಷಾಂಚಿ ನ್ನೃಪಾಣಾಂ. ೧೨ ಸ್ವಯಮೇವ ವಿಚಾರಿತಕಾರ್ಯಾನ್. ೧೩ ವಚೋಹರಾನ್. ೧೪ ಸ್ವಯಂವರ ಕಾರ್ಯಂ. ೧೫ ಸರ್ವದಿಶಾಂ.

**ಜ್ಞಾತ್ವಾ ತದಾಶು [೧]ತದ್ಬಂಧುರ್ವಿಚಿತ್ರಾಂಗದಸಂಜ್ಞಕಃ ।**
**ಸೌಧರ್ಮಕಲ್ಪಾದಾಗತ್ಯ ದೇವೋಽವಧಿವಿಲೋಚನಃ ॥ ೨೦೪ ॥**

**ಅಕಂಪನಮಹಾರಾಜಮಾಲೋಕ್ಯ ವಯಮಾಗತಾಃ ।**
**ಸುಲೋಚನಾಯಾಃ ಪುಣ್ಯಾಯಾಃ ಸ್ವಯಂವರಮವೇಕ್ಷಿತುಮ್॥ ೨೦೫ ॥**

**ಇತ್ಯುಕ್ತ್ವೋ[೨]ಪಪುರೇ ಯೋಗ್ಯೇ ರಮ್ಯೇ ರಾಜಾಭಿಸಮ್ಮತಃ ।**
**[೩]ಬ್ರಹ್ಮಸ್ಥಾನೋತ್ತರೇ ಭಾಗೇ [೪]ಪ್ರಧೀರೇ [೫]ವರವಾಸ್ತುನಿ ॥ ೨೦೬ ॥**

**ಪ್ರಾಙ್ಮುಖಂ ಸರ್ವತೋಭದ್ರಂ ಮಂಗಲದ್ರವ್ಯಸಂಭೃತಮ್ ।**
**ವಿವಾಹಮಂಡಪೋಪೇತಂ ಪ್ರಾಸಾದಂ ಬಹುಭೂಮಿಕಮ್ ॥ ೨೦೭ ॥**

**ಚಿತ್ರ[೬]ಪ್ರತೋಲೀಪ್ರಾಕಾರ[೭]ಪರಿಕರ್ಮಗೃಹಾವೃತಮ್ ।**
**ಭಾಸ್ವರಂ ಮಣಿಭರ್ಮಾಭ್ಯಾಂ ವಿಧಾಯ ವಿಧಿವತ್ಸುಧೀಃ ॥ ೨೦೮ ॥**

**[೮]ತಂ ಪರೀತ್ಯ ವಿಶುದ್ಧೋರುಸುವಿಭಕ್ತಮಹೀತಲಮ್ ।**
**ಚತುರಸ್ರಂ ಚತುರ್ದ್ವಾರಂ ಸಾಲಗೋಪುರಸಂಯುತಮ್ ॥ ೨೦೯ ॥**

**ರತ್ನತೋರಣಸಂಕೀರ್ಣಕೇತುಮಾಲಾವಿಲಾಸಿತಮ್ ।**
**ಹಟತ್ಕೂಟಾಗ್ರನಿರ್ಭಾಸಿಭರ್ಮಕುಂಭಾಭಿಶೋಭಿತಮ್ ॥ ೨೧೦ ॥**

**ಸ್ಥೂಲನೀಲೋಪಲಾಬದ್ಧಸ್ಫುರದ್ದೀಪ್ತಿಧರಾತಲಮ್ ।**
**ವಿಚಿತ್ರನೇತ್ರವಿಸ್ತೀರ್ಣವಿತಾನಾತಿವಿರಾಜಿತಮ್ ॥ ೨೧೧ ॥**

**ಭೋಗೋಪಭೋಗಯೋಗ್ಯೋರುಸರ್ವವಸ್ತು[೯]ಸಮಾಚಿತಮ್ ।**
**ಯಥಾಸ್ಥಾನಗತಾಶೇಷರತ್ನಕಾಂಚನನಿರ್ಮಿತಮ್ ॥ ೨೧೨ ॥**

**ಮುದಾ ನಿಷ್ಪಾದಯಾಮಾಸ ಸ್ವಯಂವರ[೧೦]ಸಭಾಗೃಹಮ್ ।**
**ನ ಸಾಧಯಂತಿ ಕೇಭೀಷ್ಟಂ ಪುಂಸಾಂ ಶುಭವಿಪಾಕತಃ ॥ ೨೧೩ ॥**

ಆಗ ಅವಧಿಜ್ಞಾನವೆಂಬ ನೇತ್ರವುಳ್ಳವನೂ ಆ ಅಕಂಪನಮಹಾರಾಜನ ಮಿತ್ರನೂ ಆದ ವಿಚಿತ್ರಾಂಗದನೆಂಬ ದೇವನು ತಿಳಿದು ಶೀಘ್ರವಾಗಿ ಸೌಧರ್ಮಕಲ್ಪವೆಂಬ ಸ್ವರ್ಗದಿಂದ ಬಂದು ಅಕಂಪನಮಹಾರಾಜನನ್ನು ನೋಡಿ ''ನಾವು ಪವಿತ್ರಳಾದ ಸುಲೋಚನೆಯ ಸ್ವಯಂವರವನ್ನು ನೋಡುವುದಕ್ಕೋಸ್ಕರ ಬಂದಿರುತ್ತೇವೆ'' ಎಂದು ಹೇಳಿ ಅಕಂಪನಮಹಾರಾಜನ ಅನುಮತಿಯನ್ನು ಪಡೆದವನೂ ಬುದ್ಧಿ ಶಾಲಿಯೂ ಆದ ಆ ದೇವನು ಪಟ್ಟಣದ ಸಮೀಪದಲ್ಲಿ ಯೋಗ್ಯವೂ ರಮಣೀ ಯವೂ ಅತಿಗಂಭೀರವೂ ಶ್ರೇಷ್ಠವೂ ಆದ ಮನೆಯಲ್ಲಿ ಮಧ್ಯಪ್ರದೇಶದ ಉತ್ತರ ಭಾಗದಲ್ಲಿ ಪೂರ್ವಾಭಿಮುಖವೂ ಮಂಗಲದ್ರವ್ಯಗಳಿಂದ ತುಂಬಿರುವುದೂ ವಿವಾಹ ಮಂಡಪದಿಂದ ಕೂಡಿರುವುದೂ ಅನೇಕವಾದ ನೆಲೆಗಳುಳ್ಳುದೂ ನಾನಾಪ್ರಕಾರ ವಾದ ಗೋಪುರ ಅಥವಾ ಬೀದಿ ಕೋಟೆ ಅಲಂಕಾರಮಾಡುವ ಮನೆ ಇವುಗಳಿಂದ ಆವರಿಸಲ್ಪಟ್ಟುದೂ ರತ್ನಗಳಿಂದಲೂ ಬಂಗಾರದಿಂದಲೂ ಪ್ರಕಾಶಮಾನವೂ ಆದ ಸರ್ವತೋಭದ್ರವೆಂಬ ಉಪ್ಪರಿಗೆಯ ಮನೆಯನ್ನು ಶಾಸ್ತ್ರೋಕ್ತವಿಧಿಪ್ರಕಾರವಾಗಿ ಮಾಡಿ ಆ ಸರ್ವತೋಭದ್ರದ ಸುತ್ತಲೂ ಪರಿಶುದ್ಧವೂ ವಿಶಾಲವೂ ಚೆನ್ನಾಗಿ ವಿಭಾ

೧ ಅಕಂಪನಸ್ಯ ಮಿತ್ರಂ. ೨ ಪುರಸಮೀಪೇ. ೩ ಮಧ್ಯಭಾಗಸ್ಯೋತ್ತರೇ. ೪ ಅತಿಗಂಭೀರೇ. ೫ ವರಗೃಹೇ. ೬ ಗೋಪುರಂ, ರಥ್ಯಾ ವಾ. ೭ ಶೃಂಗಾರಗೃಹ. ೮ ಸರ್ವತೋಭದ್ರಂ. ೯ ಸಂಭೃತಂ. ೧೦ ಮಹಾಗೃಹಮಿತ್ಯಪಿ ಪಾಠಃ.

ಗಿಸಲ್ಪಟ್ಟಿರುವುದೂ ಆದ ಭೂಮಿಯುಳ್ಳದೂ ನಾಲ್ಕು ಮೂಲೆಗಳುಳ್ಳದೂ ನಾಲ್ಕು ಬಾಗಿಲುಗಳುಳ್ಳದೂ ಕೋಟೆಗಳಿಂದಲೂ ಗೋಪುರಗಳಿಂದಲೂ ಕೂಡಿರುವುದೂ ರತ್ನಮಯವಾದ ತೋರಣಗಳಿಂದ ವ್ಯಾಪ್ತವಾದ ಧ್ವಜಗಳ ಮಾಲೆಗಳಿಂದ ಪ್ರಕಾಶಮಾನವೂ ಪ್ರಕಾಶಮಾನವಾದ ಶಿಖರಗಳ ತುದಿಯಲ್ಲಿ ಹೆಚ್ಚಾಗಿ ಪ್ರಕಾಶಿಸುವ ಬಂಗಾರದ ಕಲಶಗಳಿಂದ ಶೋಭಿಸಲ್ಪಟ್ಟದೂ ದಪ್ಪವಾದ ನೀಲಮಣಿಗಳಿಂದ ಕಟ್ಟಲ್ಪಟ್ಟಿರುವುದೂ ಪ್ರಕಾಶಮಾನವಾದ ಕಾಂತಿಯುಳ್ಳದೂ ಆದ ಭೂಮಿಯುಳ್ಳದೂ ನಾನಾ ಪ್ರಕಾರವಾದ ವಸ್ತ್ರವಿಶೇಷಗಳ ವಿಸ್ತಾರವಾದ ಮೇಲುಕಟ್ಟಿನಿಂದ ಪ್ರಕಾಶಿಸಲ್ಪಟ್ಟುದೂ ಭೋಗೋಪಭೋಗಗಳಿಗೆ ಯೋಗ್ಯವೂ ಶ್ರೇಷ್ಠವೂ ಆದ ಸಮಸ್ತಪದಾರ್ಥಗಳಿಂದ ವ್ಯಾಪ್ತವೂ ಉಚಿತಸ್ಥಾನಗಳನ್ನು ಹೊಂದಿರುವ ಸಮಸ್ತ ರತ್ನಗಳಿಂದಲೂ ಬಂಗಾರದಿಂದಲೂ ನಿರ್ಮಿತವೂ ಆದ ಸ್ವಯಂವರ ಸಭಾಗೃಹವನ್ನು ನಿರ್ಮಾಣಮಾಡಿದನು. ಪುರುಷರಿಗೆ ಪುಣ್ಯಪರಿಪಾಕದಿಂದ ಯಾರುತಾನೆ ಇಷ್ಟಾರ್ಥವನ್ನೊದಗಿಸಿಕೊಡುವುದಿಲ್ಲ ?

**[1]ತನ್ನಿರೀಕ್ಷ್ಯ ಕ್ಷಿತೇರ್ಭರ್ತಾ ಲಕ್ಷ್ಮೀಲೀಲಾಗೃಹಾಯಿತಮ್ ।**
**[2]ನಾಸೀತ್ಸ್ವಾಂಗೇ ಸ ಸಂತೋಷಾತ್ಸನ್ಮಿತ್ರಾತ್ಕಿಂ ನ ಜಾಯತೇ ॥ ೨೧೪ ॥**

ಆ ಭೂಪತಿಯಾದ ಅಕಂಪನಮಹಾರಾಜನು ಲಕ್ಷ್ಮೀದೇವಿಯ ಲೀಲಾಗೃಹದಂತಿರುವ ಆ ಸ್ವಯಂವರಸಭಾಗೃಹವನ್ನು ನೋಡಿ ಸಂತೋಷದಿಂದ ತನ್ನ ಶರೀರದಲ್ಲಿ ಅಡಗಲಿಲ್ಲ. ಸಂತೋಷದಿಂದ ಹಿಗ್ಗಿದನೆಂದು ಭಾವವು.

**ಅಥ ಪ್ರಾದುರಭೂತ್ಕಾಲಃ [3]ಸುರಭಿರ್ಮತ್ತಮನ್ಮಥಃ ।**
**[4]ಮದಂ ಮುದಂ ಚ ಸಂಚಿನ್ವನ್ ಕಾಮಿಷು ಭ್ರಮರೇಷು ಚ ॥**

ಬಳಿಕ ಮತ್ತನಾದ ಮನ್ಮಥನುಳ್ಳುದಾದ ವಸಂತಕಾಲವು ಕಾಮುಕರಲ್ಲಿ ಮದವನ್ನೂ ಭ್ರಮರಗಳಲ್ಲಿ ಸಂತೋಷವನ್ನೂ ಉಂಟುಮಾಡುವುದಾಗಿ ಪ್ರಾದುರ್ಭವಿಸಿತು.

**ವವೌ ಮಂದಂ ಗಜೋದ್ಧೃಷ್ಟಚಂದನದ್ರವಸಾರಭೃತ್ ।**
**ಏಲಾಲವಂಗ[5]ಸಂಸಂಗ[6]ಪಂಗುಲೋ ಮಲಯಾನಿಲಃ ॥ ೨೧೬ ॥**

ಆನೆಗಳಿಂದ ಉಜ್ಜಲ್ಪಟ್ಟ ಶ್ರೀಗಂಧದ್ರವದ ಸಾರವನ್ನು ಹೊಂದಿರುವುದೂ ಏಲಕ್ಕಿ ಲವಂಗಗಳ ಗಿಡಗಳ ಸಂಬಂಧದಿಂದ ಕುಂಟಾಗಿರುವುದೂ (ತಡೆಯಲ್ಪಟ್ಟುದಾದ ಸಂಚಾರವುಳ್ಳುದೂ) ಆದ ಮಲಯಮಾರುತವು ಮಂದವಾಗಿ ಬೀಸಿತು.

**ಮಲಯಾನಿಲಮಾಶ್ಲೇಷ್ಟುಂ ಸಂಬಂಧಿನಮುಪಾಗತಮ್ ।**
**ಲತಾ ದ್ರುಮಾಃ ಸ್ವಶಾಖಾನಾಂ [7]ಪ್ರಸಾರಣಮಿವಾ[8]ದಧುಃ ॥ ೨೧೭ ॥**

ಸಮೀಪಕ್ಕೆ ಬಂದವನೂ ಸಂಬಂಧಿಯೂ ಆದ ಮಲಯಮಾರುತವನ್ನು ಆಲಿಂಗಿಸುವುದಕ್ಕೋಸ್ಕರ ಬಳ್ಳಿಗಳೂ ಮರಗಳೂ ತಮ್ಮ ಕೊಂಬೆಗಳ ಹರಡುವಿಕೆಯನ್ನು ಮಾಡಿದಂತಿದ್ದುವು. ತಮ್ಮ ಕೊಂಬೆಗಳೆಂಬ ಕೈಗಳನ್ನು ಹರಡಿದಂತಿದ್ದುವೆಂದು ಭಾವವು.

**[9]ಯಮಸಂಬಂಧಿದಿಕ್ತ್ಯಾಗಂ ರವಿರ್ಭೀತ ಇವಾಕರೋತ್ ।**
**ಮದೇನ ಕೋಕಿಲಾಃ ಕಾಲೇ ಕೂಜಂತಿ ಸ್ಮ ನಿರಂಕುಶಮ್ ॥ ೨೧೮ ॥**

ಸೂರ್ಯನು ಭಯಪಟ್ಟನೋ ಎಂಬಂತೆ ಯಮಸಂಬಂಧಿಯಾದ ದಿಕ್ಕಿನ ತ್ಯಾಗವನ್ನು ಮಾಡಿದನು. ಉತ್ತರಾಯಣವನ್ನು ಮಾಡಿದನೆಂದು ಭಾವವು. ಕೋಗಿಲೆಗಳೂ ವಸಂತಕಾಲದಲ್ಲಿ ತಡೆಯಿಲ್ಲದೆ ಕೂಗಿದುವು.

೧ ಸ್ವಯಂವರಗೃಹಂ. ೨ ಹರ್ಷೇಣ ನಿಜಶರೀರೇ ನಮಮಾವಿತ್ಯರ್ಥಃ. ೩ ವಸಂತಃ. ೪ ಮುದಂ ಮದಂ ಚೇತ್ಯಪಿ ಪಾಠಃ. ೫ ಸಂಸರ್ಗ ಇತ್ಯಪಿ ಪಾಠಃ. ೬ ಪದವೈಕಲ್ಯವಾನ್. ೭ ಕರಪ್ರಸಾರಣಂ. ೮ ಚಕ್ರಿರೇ. ೯ ಉತ್ತರಾಯಣಮಕರೋದಿತ್ಯರ್ಥಃ.

**ಪುಷ್ಪ[1]ಮಾರ್ತವಮಾಪ್ತಾ ನಃ ಶಾಖಾ ನ ಸ್ಪೃಶತೇತಿ [2]ತಾಃ ।**
**ಅಲೀ[3]ನ್ವಾ[4]ಸನ್ನಿಷಿಧ್ಯಂತಶ್ಚಂಪಕಾಶ್ಚಲಪಲ್ಲವೈಃ ॥ ೨೧೯ ॥**

"ನಮ್ಮ ಕೊಂಬೆಗಳು ಋತುಸಂಬಂಧಿಯಾದ ಪುಷ್ಪವನ್ನು ಹೊಂದಿರುತ್ತವೆ. ಆ ಕೊಂಬೆಗಳನ್ನು ಮುಟ್ಟಬೇಡಿರಿ" ಎಂಬುದಾಗಿ ಸಂಪಗೆಮರಗಳು ಚಂಚಲವಾದ ತಳಿರುಗಳಿಂದ ಭ್ರಮರಗಳನ್ನು ನಿಷೇಧಮಾಡುತ್ತವೋ ಎಂಬಂತಿದ್ದುವು.

**ವಸಂತಶ್ರೀವಿಯೋಗೇ ವಾ ಸಶೋಕೋಶೋಕಭೂರುಹಃ ।**
**ಸಪುಷ್ಪಪಲ್ಲವೋ ನಾಮ ಸಾರ್ಥಂ ತತ್ಸಂಗಮಾದ್ವ್ಯಧಾತ್ ॥ ೨೨೦ ॥**

ವಸಂತಲಕ್ಷ್ಮಿಯ ವಿಯೋಗದಲ್ಲಿ ಶೋಕಸಹಿತವಾಗಿರುತ್ತದೆಯೋ ಎಂಬಂತೆ ಅಶೋಕವೃಕ್ಷವು ವಸಂತಋತುವಿನ ಸಂಬಂಧದಿಂದ ಹೂವುಗಳೂ ತಳಿರುಗಳೂ ಉಳ್ಳುದಾಗಿ ತನ್ನ ಅಶೋಕವೆಂಬ(ಶೋಕವಿಲ್ಲದುದೆಂಬ)ಹೆಸರನ್ನು ಸಾರ್ಥಕವನ್ನಾಗಿ ಮಾಡಿತು.

**[5]ಮೂಲಸ್ಕಂಧಾಗ್ರಮಧ್ಯೇಷು ಚೂತಾದ್ಯೈರಿವ ಮತ್ಸರಾತ್ ।**
**ಸುರಭೀಣಿ ಪ್ರಸೂನಾನಿ [6]ಸುರಭಿಶ್ಚ ತದಾ ದಧೇ ॥ ೨೨೧ ॥**

ಆನೆಬೇಲದ ಮರವೂ ಆಗ ಮಾವಿನ ವೃಕ್ಷವೇ ಮೊದಲಾದುವುಗಳೊಡನೆ ಮತ್ಸರದಿಂದಲೋ ಎಂಬಂತೆ ಬೇರೆ ದಿಮ್ಮಿ ತುದಿ ನಡು ಈ ಪ್ರದೇಶಗಳಲ್ಲಿ ಪರಿಮಳವಾದ ಹೂವುಗಳನ್ನು ಧರಿಸಿತು.

**[7]ಆಕೃಷ್ಟದಿಗ್ಗಜಾಲೀನಿ ಬಕುಲಾನಿ ವನೇ ವನೇ ।**
**[8]ಹಾನೌ [9]ಗುಣಾಧಿಕಾನ್ಯಾಸಂ[10]ಸ್ತುಲಿತಾನಿ [11]ಕುಲೋದ್ಗತೈಃ ॥ ೨೨೨ ॥**

ಪ್ರತಿಯೊಂದು ವನದಲ್ಲಿಯೂ ದಿಗ್ಗಜಗಳ ಕೆನ್ನೆಗಳಲ್ಲಿರುವ ಭ್ರಮರಗಳನ್ನು ಆಕರ್ಷಿಸಿರುವ ಹವಳದ ಗಿಡಗಳು ಶುದ್ಧವಂಶದಲ್ಲಿ ಜನಿಸಿದವರೊಡನೆ ಹೋಲಿಸಲ್ಪಟ್ಟುವುಗಳಾಗಿ ಪುಷ್ಪಗಳ ಪರಿಮಳವು ಹಾನಿಯಾಗುತ್ತಿರಲು ಪರಿಮಳ ಗುಣಾಧಿಕಗಳಾಗಿ ಉಪಕಾರಾಧಿಕಗಳಾಗಿ ಆದುವು. ಪರಿಮಳವನ್ನು ಬೀರಿ ಉಪಕಾರವನ್ನು ಮಾಡುವುವುಗಳಾದುವೆಂದು ಭಾವವು.

**ಕ್ರೀಡನಾಸಕ್ತಕಾಂತಾಭಿರ್ಬಾಧ್ಯಮಾನಾಃ ಸಗೀತಿಭಿಃ ।**
**ಆಂದೋಲಾಃ ಸ್ತಂಭಸಂಭೂತ್ಯೈಃ [12]ಸಮಾಕ್ರೋಶನ್ನಿವ ಸ್ವನೈಃ ॥ ೨೨೩ ॥**

ಹಾಡುತ್ತಿರುವವರೂ ಕ್ರೀಡೆಯಲ್ಲಿ ಆಸಕ್ತರೂ ಆದ ಸ್ತ್ರೀಯರಿಂದ ಬಾಧೆಪಡಿಸಲ್ಪಟ್ಟುವುಗಳಾದ ಉಯ್ಯಾಲೆಗಳೂ ತಮ್ಮ ಕಂಬಗಳಿಂದುಂಟಾದ ಶಬ್ದಗಳಿಂದ ಆಕ್ರೋಶವನ್ನು ಮಾಡುತ್ತವೋ ಎಂಬಂತಿದ್ದುವು.

**ಸುಂದರೇಷ್ವಪಿ ಕುಂದೇಷು ಮಧುಪಾ ಮಂದತೃಪ್ತಯಃ ।**
**[13]ಮಾಧವೀಮಧುಪಾನೇನ ಮುದಾ ಮಧುರ[14]ಮಾರುವನ್ ॥**

ಭ್ರಮರಗಳು ಸುಂದರವಾದ ಕೋಲುಮಲ್ಲಿಗೆಯ ಹೂವುಗಳಲ್ಲಿ ಮಂದತೃಪ್ತಿ(ಸ್ವಲ್ಪತೃಪ್ತಿ)ಯುಳ್ಳುವುಗಳಾಗಿ ಮಲ್ಲಿಗೆಯ ಹೂವಿನರಸದ ಪಾನದಿಂದುಂಟಾದ ಸಂತೋಷದಿಂದ ಮಧುರವಾಗಿ ಧ್ವನಿಮಾಡಿದುವು.

**ಭವೇ[15]ದನ್ಯತ್ರ ಕಾಮಸ್ಯ [16]ರೂಪವಿತ್ತಾದಿ ಸಾಧನಮ್ ।**
**ಕಾಲೈಕಸಾಧನಃ ಸೋ[17]ಸ್ಮಿನ್ನಾ[18]ವನಸ್ಪತಿ ಜೃಂಭತೇ ॥ ೨೨೫ ॥**

ಇತರಕಾಲ–ಋತುಗಳಲ್ಲಿ ಮನ್ಮಥನಿಗೆ ಸ್ತ್ರೀಪುರುಷರ ರೂಪ ಧನ ಆಭರಣಾದಿಗಳು ಉದ್ದೀಪನಸಾಮಗ್ರಿಗಳಾಗುವುವು. ಈ ವಸಂತಋತುವಿನಲ್ಲಿ ಆ ಮನ್ಮಥನು

೧ ಪುಷ್ಪೋತ್ಪತ್ತಿನಿಮಿತ್ತಕಾಲವಿಶೇಷಂರಜೋನಿಮಿತ್ತಕಾಲವಿಶೇಷಂ ಚ. ೨ ಶಾಖಾಃ. ೩ ಇವ. ೪ ನಿವಾರಯಂತಃ. ೫ ಲತಾನಾಂ ಮೂಲಸ್ಕಂಧಾಗ್ರಮಧ್ಯಪ್ರದೇಶೇಷು. ೬ ಸಲ್ಲಕೀತರುಃ. ೭ ಆಕೃಷ್ಟಾದಿಗ್ಗಜಗಂಡವರ್ತ್ಯಲಯೋ ಯೇಷಾಂ ತಾನಿ. ೮ ಪುಷ್ಪಾಮೋದತ್ಯಾಗೇ ಸತಿ. ೯ ಗಂಧಗುಣಾಧಿಕಾನಿ, ಉಪಕಾರಾಧಿಕಾನಿ ಚ. ೧೦ ಸದೃಶೀಕೃತಾನಿ. ೧೧ ವಿಶುದ್ಧವಂಶೋದ್ಭವೈಃ. ೧೨ ಆಕ್ರೋಶಂ ಚಕ್ರಿರೇ. ೧೩ ಮಲ್ಲಿಕಾ. ೧೪ ಧ್ವನಂತಿ ಸ್ಮ. ೧೫ ಅನ್ಯಸ್ಮಿನ್ಕಾಲೇ. ೧೬ ಸ್ತ್ರೀಪುಂಸಾಂ ರೂಪಧನಭೂಷಣಾದಿ. ೧೭ ವಸಂತಕಾಲೇ. ೧೮ ಮನುಷ್ಯಾತ್ಪ್ರಭೃತಿವನಸ್ಪತಿಪರ್ಯಂತಂ.

ವಸಂತಋತುಕಾಲವೊಂದೇ ಸಾಮಗ್ರಿಯುಳ್ಳವನಾಗಿ ಮನುಷ್ಯರಿಂದ ಮೊದಲಾಗಿ ವನಸ್ಪತಿಗಳವರೆಗೂ ವೃದ್ಧಿಹೊಂದುತ್ತಾನೆ. ವಸಂತಋತುವಿನಲ್ಲಿ ವನಸ್ಪತಿಗಳೂ ಮದಿಸುತ್ತವೆಂದು ಭಾವವು.

**ನರವಿದ್ಯಾಧರಾಧೀಶಾನ್ ಗತ್ವಾ [೧]ತತ್ಕಾಲಸಾಧನಾಃ ।**
**ದೂತಾಃ [೨]ಸ್ವಯಂವರಾಲಾಪಂ ಸರ್ವಾಂಸ್ತಾನ್ ಸಮಬೋಧಯನ್ ॥**

ಭೃತ್ಯರು ವಸಂತಕಾಲವೇ ಸಾಧನವಾಗಿರುವವರಾಗಿ ಹೋಗಿ ಆ ಸಮಸ್ತರಾದ ನರಾಧೀಶರನ್ನೂ ವಿದ್ಯಾಧರಾಧೀಶರನ್ನೂ ಕುರಿತು ಸ್ವಯಂವರವಿಧಾನದ ಮಾತನ್ನು ತಿಳುಹಿದರು.

**ತತೋ ನಾನಾನಕಧ್ವಾನ[೩]ಪ್ರೋತ್ಕರ್ಣೀಕೃತದಿಗ್ದ್ವಿಪಾಃ ।**
**ನಿಜಾಂಗನಾನನಾಂಭೋಜಪರಿಮ್ಲಾನಿವಿಧಾಯಿನಃ ॥ ೨೨೭ ॥**

**[೪]ವಿಯದ್ವಿಭೂತಿಮಾಕ್ರಮ್ಯ ವಿಮಾನೈರ್ಗತಮಾನಕೈಃ ।**
**ಸದ್ಯೋ ವಿದ್ಯಾಧರಾಧೀಶಾ [೫]ದ್ಯೋತ್ಯಮಾನದಿಗಾನನಾಃ ॥ ೨೨೮ ॥**

**[೬]ಸುಲೋಚನಾಭಿಧಾಕೃಷ್ಟಿವಿದ್ಯಾಕೃಷ್ಟಾಃ ಸಮಾಪತನ್ ।**
**ಕಾಮಿನಾಂ ನಾಪರಾಕೃಷ್ಟಿವಿದ್ಯಾ ಮುಕ್ತ್ವೇಪ್ಸಿತಸ್ತ್ರಿಯಃ ॥ ೨೨೯ ॥**

ಬಳಿಕ ಅನೇಕಪ್ರಕಾರವಾದ ಭೇರಿಗಳ ಶಬ್ದಗಳನ್ನು ಕೇಳಿ ಕಿವಿಗಳನ್ನು ನೆಟ್ಟಗೆ ಮಾಡಿದುವುಗಳಾದ ದಿಗ್ಗಜಗಳುಳ್ಳವರೂ ತಮ್ಮ ಪತ್ನಿಯರ ಮುಖಕಮಲಗಳನ್ನು ಬಾಡಿಸುವವರೂ ಅಪರಿಮಿತವಾದ ವಿಮಾನಗಳಿಂದ ಆಕಾಶದ ಸಂಪತ್ತಿ–ವಿಸ್ತಾರವನ್ನು ಆಕ್ರಮಿಸಿ ದಿಙ್ಮುಖಗಳನ್ನು ಪ್ರಕಾಶಪಡಿಸುವವರೂ ಸುಲೋಚನೆಯ ಹೆಸರೆಂಬ ಆಕರ್ಷಣವಿದ್ಯೆಯಿಂದ ಆಕರ್ಷಿಸಲ್ಪಟ್ಟವರೂ ಆದ ವಿದ್ಯಾಧರಾಧಿಪತಿಗಳು ತತ್ಕ್ಷಣದಲ್ಲೇ ಬಂದರು. ಕಾಮುಕರಿಗೆ ತಮ್ಮಿಂದ ಇಚ್ಛಿಸಲ್ಪಟ್ಟ ಸ್ತ್ರೀಯರನ್ನು ಬಿಟ್ಟು ಆಕರ್ಷಣವಿದ್ಯೆಯು ಬೇರೆಯಿಲ್ಲ.

**ಅಭಿಗಮ್ಯ ನೃಪಃ ಕ್ಷಿಪ್ರಂ ಸ್ವಯಮಾವಿಷ್ಕೃತೋತ್ಸವಃ ।**
**ಚೇತಃ ಸೌಲೋಚನಂ ವೈತಾನ್ವಿತಾನ್ ಪ್ರಾವೇಶಯತ್ಪುರಮ್ ॥ ೨೩೦ ॥**

ತನ್ನ ಉತ್ಸವ–ಸಂತೋಷವನ್ನು ಪ್ರಕಟಪಡಿಸಿದವನಾದ ಅಕಂಪನಮಹಾರಾಜನು ಶೀಘ್ರವಾಗಿ ತಾನೇ ಇದಿರಾಗಿ ಹೋಗಿ, ಸುಲೋಚನೆಯ ವಿಷಯಕವಾದ ಮನವು ಪ್ರವೇಶಮಾಡಿಸಿತೋ ಎಂಬಂತೆ, ಸಂತುಷ್ಟರಾದ ಈ ವಿದ್ಯಾಧರಾಧಿಪತಿಗಳನ್ನು ಪಟ್ಟಣಕ್ಕೆ ಪ್ರವೇಶಮಾಡಿಸಿದನು.

**ಸ್ವಗೇಹಾದಿಷು ಸಂಪ್ರೀತ್ಯಾ ಸಮುದ್ಬದ್ಧೋತ್ಸವಧ್ವಜಃ ।**
**[೭]ಆಕಂಪನಿಭಿರಾವಿಷ್ಕೃತಾದರೈಃ ಪರಿವಾರಿತಃ ॥ ೨೩೧ ॥**

**ಸಾಂಶುಮರ್ಕಮಿವೋದ್ಯಂತಮರ್ಕಕೀರ್ತಿಂ ಸಹಾನುಜಮ್ ।**
**ಅಕಂಪನನೃಪೋಽಭ್ಯೇತ್ಯ ಭರತಂ ವಾನಯತ್ಪುರಮ್ ॥ ೨೩೨ ॥**

ತನ್ನ ಮನೆಯೇ ಮೊದಲಾದುವುಗಳಲ್ಲಿ ಪ್ರೀತಿಯಿಂದ ಉತ್ಸವಧ್ವಜಗಳನ್ನು ಕಟ್ಟಿಸಿದವನೂ ತಮ್ಮ ಪ್ರೀತಿಯನ್ನು ತೋರ್ಪಡಿಸಿದವರಾದ ಅಕಂಪನಮಹಾರಾಜನ ಪುತ್ರರಿಂದ ಆವರಿಸಲ್ಪಟ್ಟವನೂ ಆದ ಅಕಂಪನಮಹಾರಾಜನು ಕಿರಣಸಹಿತನೂ ಉದಯಿಸುವವನೂ ಆದ ಸೂರ್ಯನೋ ಎಂಬಂತೆ ತಮ್ಮಂದಿರೊಡನೆ ಕೂಡಿದ ಅರ್ಕಕೀರ್ತಿಕುಮಾರನನ್ನು, ಭರತೇಶ್ವರನನ್ನು ಕರೆದುಕೊಂಡು ಬರುವಂತೆ, ತನ್ನ ಪಟ್ಟಣಕ್ಕೆ ಪ್ರವೇಶಮಾಡಿಸಿದನು.

೧ ವಸಂತಕಾಲ. ೨ ಸ್ವಯಂವರವಿಧಾನಾಲಾಪಂ. ೩ ಉದ್ಗತಕರ್ಣೀಕೃತ. ೪ ಆಕಾಶವಿಸ್ತೃತಿಂ. ೫ ದ್ಯೋತಮಾನ ಇತ್ಯಪಿ ಪಾಠಃ. ೬ ಸುಲೋಚನಾನಾಮ್ನೈವ ಆಕರ್ಷಣವಿದ್ಯಾ ತಯಾ ಆಕರ್ಷಿತಾಃ. ೭ ಅಕಂಪನಸ್ಯಾಪತ್ಯೈಃ.

**[೧]ಸ್ವಾದರೇಣೈವ ಸಂಸಿದ್ಧಿಂ ಭಾವಿನೀಂ [೨]ತಸ್ಯ ಸೂಚಯನ್ ।**
**ನಾಥವಂಶಾಗ್ರಣೀ[೩]ರ್ಮೇಘಸ್ವರಂ ಚಾನೇತುಮಭ್ಯಯಾತ್ ॥ ೨೩೩ ॥**

ತನ್ನ ಪ್ರೀತಿಯಿಂದಲೇ ಆ ಜಯಕುಮಾರನಿಗೆ ಮುಂದಾಗುವ ಕಾರ್ಯಸಿದ್ಧಿಯನ್ನು ಸೂಚಿಸುವವನೂ ನಾಥವಂಶಾಗ್ರಗಣ್ಯನೂ ಆದ ಅಕಂಪನಮಹಾರಾಜನು ಮೇಘಸ್ವರ–ಜಯಕುಮಾರನನ್ನೂ ಕರೆದುಕೊಂಡು ಬರುವುದಕ್ಕೋಸ್ಕರ ಇದಿರಾಗಿ ಹೋದನು.

**ತತೋ ಮಹೀಭೃತಃ ಸರ್ವೇ ತ್ರಿಸಮುದ್ರಾಂತರಸ್ಥಿತಾಃ ।**
**[೪]ಪೂರಾ ಇವ ಪಯೋರಾಶಿಂ ಪ್ರಾಪುಃ [೫]ಸ್ಫೀತೀಕೃತಶ್ರಿಯಃ ॥ ೨೩೪ ॥**

ಬಳಿಕ ತಮ್ಮ ಸಂಪತ್ತಿಯನ್ನು ಹೆಚ್ಚಿಸಿದವರೂ ಪೂರ್ವ ದಕ್ಷಿಣ ಪಶ್ಚಿಮ ದಿಕ್ಕುಗಳಲ್ಲಿರುವ ಸಮುದ್ರಗಳ ಮಧ್ಯದ ಭೂಮಿಯಲ್ಲಿರುವವರೂ ಆದ ಎಲ್ಲಾ ರಾಜರುಗಳು, ಸಮುದ್ರವನ್ನು ಪ್ರವಾಹಗಳು ಹೊಂದುವಂತೆ, ಅಕಂಪನಮಹಾರಾಜನ ರಾಜಧಾನಿಯನ್ನು ಸೇರಿದರು.

**ಸ್ವಯಮರ್ಘಪಥಂ ಗತ್ವಾ ಕೇಷಾಂಚಿತ್ಸರ್ವಸಂಪದಾ ।**
**ಕೇಷಾಂಚಿದ್ಗಮಯಿತ್ವಾನ್ಯಾನ್ ಮಾನ್ಯಾನ್ ಹೇಮಾಂಗದಾದಿಕಾನ್ ॥**

**ಯೋ ಯೋ ಯಥಾ ಯಥಾ ಪ್ರಾಪ್ತಾಃ ಪುರೀಂ ತಾಂಸ್ತಾಂಸ್ತಥಾ ತಥಾ ।**
**ಆಹ್ವಯಂತೀಂ ಪತಾಕಾಭಿರ್ವೋಚ್ಛ್ರಿತಾಭಿ[೬]ರವೀವಿಶತ್ ॥ ೨೩೬ ॥**

ಕೆಲವು ರಾಜರುಗಳಿಗೆ ತನ್ನ ಸಮಸ್ತಸಂಪತ್ತಿಯೊಡನೆ ತಾನೇ ಅರ್ಘಮಾರ್ಗವನ್ನು ಕುರಿತು ಹೋಗಿ ಇನ್ನು ಕೆಲವು ರಾಜರುಗಳಿಗೆ ತನ್ನ ಜ್ಯೇಷ್ಠಪುತ್ರನಾದ ಹೇಮಾಂಗದನೇ ಮೊದಲಾದ ಇತರ ಮಾನ್ಯಪುರುಷರನ್ನು ಕಳುಹಿಸಿಕೊಟ್ಟು ಯಾರು ಯಾರು ಹೇಗೆ ಹೇಗೆ ದೊರೆತರೋ ಅವರವರನ್ನು ಹಾಗೆ ಹಾಗೆಯೇ ಎತ್ತರವಾದ ಪತಾಕೆಗಳಿಂದ ಕರೆಯುತ್ತದೋ ಎಂಬಂತಿರುವ ನಗರವನ್ನು ಪ್ರವೇಶಮಾಡಿಸಿದನು.

**ತದಾ [೭]ತಂ ರಾಜಗೇಹಸ್ಥಂ ನರವಿದ್ಯಾಧರಾಧಿಪೈಃ ।**
**ವೃತಂ ಸುಲೋಚನಾಕಾರ್ಷೀತ್ ಪಿತರಂ ಜಿತಚಕ್ರಿಣಮ್ ॥ ೨೩೭ ॥**

ಆಗ ಅರಮನೆಯಲ್ಲಿರುವವನೂ ನರಾಧಿಪರಿಂದಲೂ ವಿದ್ಯಾಧರಾಧಿಪರಿಂದಲೂ ಆವರಿಸಲ್ಪಟ್ಟವನೂ ಆದ ಆ ತಂದೆಯನ್ನು–ಅಕಂಪನಮಹಾರಾಜನನ್ನು ಸುಲೋಚನಾದೇವಿಯು ಚಕ್ರವರ್ತಿಯನ್ನು ಜಯಿಸಿದವನನ್ನಾಗಿ ಮಾಡಿದಳು. ನರಾಧಿಪತಿಗಳಿಂದಲೂ ವಿದ್ಯಾಧರಾಧಿಪತಿಗಳಿಂದಲೂ ಆವೃತನಾದ ಅಕಂಪನಮಹಾರಾಜನು ಆಗ ಚಕ್ರವರ್ತಿಯಂತೆ ತೋರುತ್ತಿದ್ದನೆಂದು ಭಾವವು.

**[೮]ವಾರಾಣಸೀ ಜಿತಾಯೋಧ್ಯಾ [೯]ಸ್ವನಾಮ್ನಾಸ್ತಾಂ ನಿರಾಕರೋತ್ ।**
**ಕನ್ಯಾರತ್ನಾ[೧೦]ತ್ಪರಂ ನಾ[೧೧]ನ್ಯದಿತ್ಯತ್ರಾಹುಃ [೧೨]ಪ್ರಭೃತ್ಯತಃ ॥ ೨೩೮ ॥**

ಅಯೋಧ್ಯೆಯನ್ನು ಜಯಿಸಿರುವುದಾದ ವಾರಾಣಸೀನಗರಿಯು ವರರುಗಳ ಸಂಬಂಧಿಯಾದ ಉಚ್ಛ್ವಾಸಗಳನ್ನುಂಟುಮಾಡುವುದೆಂಬ ತನ್ನ ಸಾರ್ಥಕವಾದ ಹೆಸರಿನಿಂದ ಆ ಅಯೋಧ್ಯೆಯನ್ನು ನಿರಾಕರಿಸಿತು. ಈ ಸ್ವಯಂವರವನ್ನು ಮಾಡಿದಂದಿನಿಂದ ಜನರು ''ಕನ್ಯಾರತ್ನಕ್ಕಿಂತ ಉತ್ಕೃಷ್ಟವಾದ ರತ್ನವಿಲ್ಲ'' ವೆಂದು ಹೇಳಿದರು. ಆಗ ಅಯೋಧ್ಯೆಗಿಂತಲೂ ವಾರಾಣಸಿಯು ಅಧಿಕವಾಗಿ ಶೋಭಿಸುತ್ತಿದ್ದಿತೆಂದೂ ಅದಕ್ಕೆ ಕನ್ಯಾರತ್ನ ನಿಮಿತ್ತವಾಗಿ ವರರ ಸೇರುವಿಕೆಯು ಕಾರಣವೆಂದೂ ಭಾವವು.

೧ ಅಕಂಪನಸ್ಯಾದರೇಣ. ೨ ಜಯಸ್ಯ. ೩ ಜಯಕುಮಾರಂ. ೪ ನದೀಪ್ರವಾಹಾಃ. ೫ ವೃದ್ಧೀಕೃತ. ೬ ಪ್ರಾವೇಶಯತ್. ೭ ಅಕಂಪನಂ. ೮ ವರಸಂಬಂಧಿನ ಆನಾನ್ ಸುನೋತಿ ಬಧ್ನಾತಿ ಸ್ಥಾಪಯತೀತಿ ವಾರಾಣಸೀ. ೯ ವಾರಾಣಸೀತಿ ಸ್ವನಾಮಧೇಯತ್ವಾಮಯೋಧ್ಯಾಂ. ೧೦ ಉತ್ಕೃಷ್ಟಂ. ೧೧ ರತ್ನಂ. ೧೨ ಸ್ವಯಂವರಕರಣಾದಾರಭ್ಯ.

ಶೂರತನವು ಶ್ಲಾಘ್ಯವಾಗಿರುವಂತೆ ಸ್ತ್ರೀಯರ ಸೌಭಾಗ್ಯ-ಸೌಂದರ್ಯವು ಶ್ಲಾಘ್ಯವಾದುದು.

**ತತಃ ಕಂಚುಕಿನಿರ್ದೇಶಾದ್ಬಾಲಾ ಲೀಲಾವಲೋಕಿತೈಃ ।**
**ಆಕೃಷ್ಯ ಹೃದಯಂ ತೇಷಾಂ ತತ್ಸೌಧಾ[೧]ತ್ಸಮವಾತರತ್ ॥ ೨೮೫ ॥**

ಬಳಿಕ ಕಂಚುಕಿಯ ಹೇಳಿಕೆಯಿಂದ ಆ ಬಾಲೆ-ಸುಲೋಚನೆಯು ಲೀಲೆಯಾದ ನೋಟಗಳಿಂದ ಆ ರಾಜಕುಮಾರರುಗಳ ಹೃದಯವನ್ನು ಆಕರ್ಷಿಸಿ ಆ ಸರ್ವತೋಭದ್ರವೆಂಬ ಉಪ್ಪರಿಗೆಯಿಂದ ಇಳಿದಳು.

**ಯಸ್ಯ [೨]ಯತ್ರ ಗತಾಸ್ಯಾ ದೃಕ್ ಸಾ ತತ್ರೈವೇವ ಕೀಲಿತಾ ।**
**ತ[೩]ತ್ತೇಸ್ಯಾ[೪]ಮವರೂಢಾಯಾಂ [೫]ವಿಗ್ನಾ ವಾ [೬]ತದನೀಕ್ಷಕಾಃ ॥ ೨೮೬ ॥**

ಯಾವನ ಕಣ್ಣು ಈ ಸುಲೋಚನೆಯ ಯಾವ ಅವಯವದಲ್ಲಿ ಸಂಬಂಧಿಸಿತೋ-ನೋಡಿತೋ ಅದು ಅಲ್ಲಿಯೇ ನಾಟಿದಂತಿದ್ದಿತು. ಆದುದರಿಂದ ಆ ರಾಜಕುಮಾರರು ಈ ಸುಲೋಚನೆಯು ಉಪ್ಪರಿಗೆಯಿಂದ ಇಳಿಯುತ್ತಿರಲಾಗಿ, ಭೀತಿಯನ್ನು ಹೊಂದಿದರೋ ಎಂಬಂತೆ, ಆ ಕನ್ಯೆಯನ್ನು ನೋಡುವುದಕ್ಕೆ ಅಸಮರ್ಥರಾದರು.

**ಕಿಂಕಿಣೀಕೃತಝುಂಕಾರಾರಾವರಮ್ಯಂ ರಥಂ ತತಃ ।**
**[೭]ವ್ಯೂಢಂ [೮]ರೂಢೈರ್ಹಯೈಃ ಸ್ವರ್ಣಕರ್ಣಚಾಮರಶೋಭಿಭಿಃ ॥ ೨೮೭ ॥**

**ಉತ್ಪತನ್ನಿಪತತ್ಕೇತುಬಾಹುಂ [೯]ನೀರೂಪರೂಪಿಣಾಮ್ ।**
**ಸಾಕ್ಷಾದಪಹ್ನವಾಹ್ವಾನೇ ಕುರ್ವಂತಮಿವ ಸಂತತಮ್ ॥ ೨೮೮ ॥**

**ಪುನರಧ್ಯಾಸ್ಯ [೧೦]ಹೃಜ್ಜನ್ಮವಿದ್ಯೇವ ಹೃದಯಪ್ರಿಯಾ ।**
**ಮುಕ್ತಾಭೂಷಾಪ್ರಭಾಮಧ್ಯೇ ಶಾರದೀವ ತಟಿಲ್ಲತಾ ॥ ೨೮೯ ॥**

**ವೀಜ್ಯಮಾನಾ ವಿಧುಸ್ಪರ್ಧಿಹಂಸಾಂ[೧೧]ಸಾಮಲಚಾಮರೈಃ ।**
**ಜನಾನಾಂ ದೃಷ್ಟಿದೋಷಾನ್ವಾ ಧುನ್ವದ್ಭಿರ್ದೂರತೋ ಮುಹುಃ॥ ೨೯೦ ॥**

ಬಳಿಕ ಗೆಜ್ಜೆಗಳಿಂದ ಮಾಡಲ್ಪಟ್ಟುದಾದ ಝುಂಕಾರಶಬ್ದದಿಂದ ರಮಣೀಯವೂ ಕಿವಿಯಲ್ಲಿ ಕಟ್ಟಿರುವ ಬಂಗಾರದ ಚಾಮರಗಳಿಂದ ಶೋಭಿಸುವುವೂ ಪ್ರಸಿದ್ಧಗಳೂ ಆದ ಕುದುರೆಗಳಿಂದ ಧರಿಸಲ್ಪಟ್ಟುದೂ ಯಾವಾಗಲೂ ಮೇಲಕ್ಕೂ ಕೆಳಕ್ಕೂ ಹಾರುತ್ತಿರುವ ಪತಾಕೆಗಳೆಂಬ ತೋಳುಗಳುಳ್ಳುದೂ ರೂಪ(ಸೌಂದರ್ಯ)ವಿಲ್ಲದವರನ್ನು ಸಾಕ್ಷಾತ್ತಾಗಿ ತಿರಸ್ಕರಿಸುವಂತೆಯೂ ರೂಪ(ಸೌಂದರ್ಯ)ವುಳ್ಳವರನ್ನು ಕರೆಯುವಂತೆಯೂ ಇರುವುದೂ ಆದ ರಥವನ್ನು ಸುಲೋಚನೆಯು ಪುನಃ ಹತ್ತಿ, ಕಾಮವಿದ್ಯೆಯೋ ಎಂಬಂತೆ, ಹೃದಯಕ್ಕೆ ಪ್ರಿಯಳೂ ಮುತ್ತಿನ ಆಭರಣಗಳ ಕಾಂತಿಯ ಮಧ್ಯದಲ್ಲಿ ಶರತ್ಕಾಲಸಂಬಂಧವಾದ ಮಿಂಚಿನ ಬಳ್ಳಿಯಂತಿರುವವಳೂ ಜನರ ದೃಷ್ಟಿದೋಷಗಳನ್ನು ದೂರದಿಂದ ಬಾರಿಬಾರಿಗೆ ಕೊಡಹುವಂತಿರುವುವುಗಳೂ ಚಂದ್ರನೊಡನೆ ಹೋರಾಡುವುವುಗಳಾದ ಹಂಸಪಕ್ಷಿಗಳ ರೆಕ್ಕೆಯಂತೆ ನಿರ್ಮಲಗಳೂ ಆದ ಚಾಮರಗಳಿಂದ ಬೀಸಲ್ಪಡುವವಳೂ ಆಗಿ ಶೋಭಿಸಿದಳು.

**[೧೨]ಅವಧೂತಃ ಪುರಾನಂಗಃ ಸಂಪ್ರತಿ ಸ್ವೀಕೃತೋನಯಾ ।**
**ಪ್ರಯೋಜನವಶಾತ್ಪ್ರಾಜ್ಞೈಃ [೧೩]ಪ್ರಾಸ್ತೋಪಿ ಪರಿಗೃಹ್ಯತೇ ॥ ೨೯೧ ॥**

ಮೊದಲು ಕಾಮನು ಈ ಸುಲೋಚನೆಯಿಂದ ನಿರಾಕರಿಸಲ್ಪಟ್ಟನು, ಈಗ ಸ್ವೀಕರಿಸಲ್ಪಟ್ಟನು. ಪ್ರಾಜ್ಞರು ಪ್ರಯೋಜನವಶದಿಂದ ತಿರಸ್ಕೃತನನ್ನೂ ಪರಿಗ್ರಹಿಸುತ್ತಾರೆ. ಸುಲೋಚನೆಯು ಮೊದಲು ಕಾಮವಿಕಾರವುಳ್ಳವಳಾಗಿರಲಿಲ್ಲವೆಂದೂ ಈಗ ಕಾಮಪರವಶಳಾದಳೆಂದೂ ಪ್ರಯೋಜನವು ಕಂಡುಬಂದರೆ ವಿವೇಕಿಗಳು ತಿರಸ್ಕೃತನನ್ನೂ ಪರಿಗ್ರಹಿಸುತ್ತಾರೆಂದೂ ಭಾವವು.

**ಅಸ್ಯಾ [೧]ಗ್ರಹ ಇವಾನಂಗಃ ಸದ್ಯಃ ಸರ್ವಾಂಗಸಂಗತಃ ।**
**ವಿಕಾರಮಕರೋತ್ಸ್ವೈರಂ ಭೂಯೋ ಭ್ರೂನೇತ್ರಪಂಕಜಮ್ ॥ ೨೯೨ ॥**

ಮನ್ಮಥನು ತತ್ಕ್ಷಣದಲ್ಲಿ ದುಷ್ಟವಾದ ಗ್ರಹದಂತೆ ಈ ಸುಲೋಚನೆಯ ಸಮಸ್ತವಾದ ಅವಯವಗಳಲ್ಲಿ ಸಂಬಂಧಿಸಿದವನಾಗಿ ಯಥೇಚ್ಛವಾಗಿ ಹುಬ್ಬುಗಳನ್ನೂ ನೇತ್ರಕಮಲವನ್ನೂ ಪುನಃ ವಿಕಾರವುಳ್ಳುವುಗಳನ್ನಾಗಿ ಮಾಡಿದನು.

**[೨]ಸಾಂಗೋ ಯದ್ಯೇತಯಾದ್ಯೈವಮೇಕೀಭಾವಂ ವ್ರಜಾಮಿ ಕಿಮ್ ।**
**ಇತ್ಯನಂಗೋಪ್ಯನಂಗತ್ವಂ ಸ್ವಂ ಮನ್ಯೇ ಸಾಧ್ವಬುಧ್ಯತ ॥ ೨೯೩ ॥**

"ಈ ದಿವಸ ಹೀಗೆ ನಾನು ಶರೀರವುಳ್ಳವನಾದರೆ ಈ ಸುಲೋಚನೆಯೊಡನೆ ಐಕ್ಯವನ್ನು ಹೊಂದುತ್ತೇನೆಯೋ?" ಹೀಗೆಂದು ಅನಂಗ(ಕಾಮ)ನೂ ತನ್ನ ಅಂಗವಿಲ್ಲದಿರುವಿಕೆಯನ್ನು ಒಳ್ಳೆಯದನ್ನಾಗಿ ತಿಳಿದನೆಂದು ತಿಳಿಯುತ್ತೇನೆ. ಅಶರೀರನಾದ ಕಾಮನು ಸುಲೋಚನೆಯ ಶರೀರದಲ್ಲಿ ಐಕ್ಯವನ್ನು ಹೊಂದಿದಂತೆ ತೋರುತ್ತಿದ್ದಳೆಂದು ಭಾವವು.

**ಲಕ್ಷ್ಮೀಃ ಸಾ ಸರ್ವಭೋಗ್ಯಾಭೂದ್ರತಿ[೩]ರ್ವ್ಯಂಗೇನ ಭುಜ್ಯತೇ ।**
**ಜಿತಾನಂಗಾನಿಮಾನೇಷಾ ನ್ಯಕ್ಕೃತ್ಯ ಜಯಮಾಪ್ಸ್ಯತಿ ॥ ೨೯೪ ॥**

ಆ ಪ್ರಸಿದ್ಧಳಾದ ಲಕ್ಷ್ಮಿಯು ಎಲ್ಲರಿಂದಲೂ ಭೋಗಿಸುವುದಕ್ಕೆ ಯೋಗ್ಯಳಾದಳು (ವ್ಯಭಿಚಾರಿಣಿಯಾದಳೆಂದು ಧ್ವನಿ) ರತಿಯು ಅನಂಗ(ಅಂಗಹೀನ)ನಿಂದ ಭೋಗಿಸಲ್ಪಡುತ್ತಾಳೆ. ಈ ಸುಲೋಚನೆಯು ತಮ್ಮ ರೂಪದಿಂದ ಮನ್ಮಥನನ್ನು ಜಯಿಸಿದವರಾದ ಈ ರಾಜರುಗಳನ್ನು ತಿರಸ್ಕರಿಸಿ ಜಯವನ್ನು-ಜಯಕುಮಾರನನ್ನು ಹೊಂದುವಳು. ಲಕ್ಷ್ಮೀರತಿಯರಿಂದ ಸುಲೋಚನೆಯು ಶ್ರೇಷ್ಠಳೆಂದು ಭಾವವು.

**ಕರಗ್ರಹೇಣ ಲಕ್ಷ್ಮೀವಾನ್ ಸ್ಯಾನ್ನ ವಾ [೪]ವಾರಿಧೇರ್ಭುವಃ ।**
**ಅಸ್ಯಾಃ ಕರಗ್ರಹೋ ಯಸ್ಯ ತಸ್ಯ ಲಕ್ಷ್ಮೀಃ ಕರೇ ಸ್ಥಿತಾ ॥ ೨೯೫ ॥**

ಸಮುದ್ರದಿಂದ ಹುಟ್ಟಿದವಳಾದ ಲಕ್ಷ್ಮಿಯ ಪಾಣಿಗ್ರಹಣದಿಂದ ಪುರುಷೋತ್ತಮನು ಲಕ್ಷ್ಮಿಯುಳ್ಳವನಾಗುತ್ತಾನೋ ಇಲ್ಲವೋ(ಹೇಳಲಾಗುವುದಿಲ್ಲ). ಯಾವನಿಗೆ ಈ ಸುಲೋಚನೆಯ ಪಾಣಿಗ್ರಹಣವಾಗುವುದೋ ಅವನಿಗೆ ಲಕ್ಷ್ಮಿಯು ಕೈಯಲ್ಲಿರುತ್ತಾಳೆ. ಶ್ರೀಕೃಷ್ಣನು ಕೊನೆಯಲ್ಲಿ ಲಕ್ಷ್ಮೀ(ಸಂಪತ್ತಿ)ರಹಿತನಾದನೆಂದೂ ಜಯಕುಮಾರನು ಲಕ್ಷ್ಮಿ(ಸಂಪತ್ತಿ)ಯುಳ್ಳವನಾಗಿಯೇ ಇದ್ದನೆಂದೂ ಭಾವವು.

**ಲಾವಣ್ಯಮಂಬುಧೌ [೫]ಪುಂಸು ಸ್ತ್ರೀಷ್ವಸ್ಯಾಮೇವ [೬]ಸಂಭೃತಮ್ ।**
**ಯತ್ಪ್ರಾಪ್ತಾಃ ಸರಿತಃ ಸರ್ವಾ[೭]ಸ್ತ[೮]ಮೇತಾಂ ಸರ್ವಪಾರ್ಥಿವಾಃ ॥ ೨೯೬ ॥**

ಸಮುದ್ರವನ್ನು ಸಮಸ್ತನದಿಗಳೂ ಈ ಸುಲೋಚನೆಯನ್ನು ಸಮಸ್ತರಾಜರುಗಳೂ ಹೊಂದಿರುವುದರಿಂದ ಪುರುಷರಲ್ಲೆಲ್ಲ ಸಮುದ್ರದಲ್ಲಿ ಲಾವಣ್ಯ(ಉಪ್ಪಿರುವಿಕೆ)ವಿರುತ್ತದೆ. ಸ್ತ್ರೀಯರಲ್ಲೆಲ್ಲ ಈ ಸುಲೋಚನೆಯಲ್ಲಿ ಲಾವಣ್ಯ(ಸೌಂದರ್ಯ)ವು ಪರಿಪೂರ್ಣವಾಗಿರುತ್ತದೆ. (ಇಲ್ಲಿ ಲಾವಣ್ಯವೆಂಬುದು ಶಬ್ದಚಮತ್ಕಾರವು).

**ಸಮಸ್ತನೇತ್ರಸಂಪೀತಮಪ್ಯಸ್ಯಾ ವರ್ಧತೇ ತರಾಮ್ ।**
**ಲಾವಣ್ಯಮಂಬುಧಿಸ್ತ್ಯಕ್ತಃ ಶ್ರಿಯಾ ವಹತು [೯]ತತ್ಕಥಮ್ ॥ ೨೯೭ ॥**

ಈ ಸುಲೋಚನೆಯ ಲಾವಣ್ಯವು ಸಮಸ್ತಜನರ ಕಣ್ಣುಗಳಿಂದ ಚೆನ್ನಾಗಿ ಪಾನಮಾಡಲ್ಪಟ್ಟರೂ ಹೆಚ್ಚಾಗಿ ವೃದ್ಧಿಯಾಗುತ್ತದೆ. ಲಕ್ಷ್ಮಿಯಿಂದ ತ್ಯಜಿಸಲ್ಪಟ್ಟುದಾದ

೧ ಅವತರತಿ ಸ್ಮ. ೨ ಅವಯವೇ. ೩ ನೃಪಾಃ. ೪ ಅವತೀರ್ಣಾಯಾಂ ಸತ್ಯಾಂ. ೫ ಭೀತಾ ಇವ. ೬ ಕನ್ಯಾಮೀಕ್ಷಿತುಮಸಮರ್ಥಾಬಭೂವುರಿತಿಭಾವಃ. ೭ ಧೃತಂ. ೮ ಪ್ರಸಿದ್ಧೈಃ. ೯ ರೂಪಹೀನಾನಾಂ ರೂಪವತಾಂ ಚ. ೧೦ ಕಾಮವಿದ್ಯಾ. ೧೧ ಪಕ್ಷ. ೧೨ ನಿರಾಕೃತಃ. ೧೩ ಪ್ರತಿಕ್ಷಿಪ್ತಃ.

೧ ದುಷ್ಟಗ್ರಹಃ. ೨ ಸಶರೀರಃ. ೩ ವಿಕಲಾಂಗೇನೇತಿ ಧ್ವನಿಃ. ೪ ಸಮುದ್ರಾತ್ ಸಂಭವಾಯಾಃ. ೫ ಪುರುಷೇಷು ಮಧ್ಯೇ. ೬ ಪರಿಪೂರ್ಣಂ. ೭ ಸಮುದ್ರಂ. ೮ ಸುಲೋಚನಾಂ. ೯ ಲಾವಣ್ಯಂ.

ಸಮುದ್ರವು(ಲಕ್ಷ್ಮಿಯು ವಿಷ್ಣುವಿಗೆ ಕೊಡಲ್ಪಟ್ಟನಂತರ)ಆ ಲಾವಣ್ಯ(ಸೌಂದರ್ಯ) ವನ್ನು ಹೇಗೆ ಧರಿಸಿರುವುದು ? ಸಮುದ್ರಕ್ಕಿಂತಲೂ ಸುಲೋಚನೆಯು ಶ್ರೇಷ್ಠಳೆಂದು ಭಾವವು.

**ರತ್ನಾಕರತ್ವದುರ್ಗರ್ವಮಂಬುಧಿ[೧]ರ್ಧ್ರಿಯತೇ ವೃಥಾ ।**
**ಕನ್ಯಾರತ್ನಮಿದಂ [೨]ಯತ್ರ [೩]ತಯೋರೇತದ್ವಿರಾಜತೇ ॥ ೧೯೮ ॥**

ಸಮುದ್ರವು ರತ್ನಗಳಿಗೆ ಉತ್ಪತ್ತಿಸ್ಥಾನವಾಗಿರುವಿಕೆಯ ದುರಹಂಕಾರವನ್ನು ವ್ಯರ್ಥವಾಗಿ ಧರಿಸಿರುತ್ತದೆ. ಯಾರಲ್ಲಿ ಈ ಸುಲೋಚನಾಕನ್ಯಾರತ್ನವಿರುವುದೋ ಆ ಅಕಂಪನ ಸುಪ್ರಭೆಯರಲ್ಲಿ ಈ ರತ್ನಾಕರತ್ವವು ಶೋಭಿಸುತ್ತದೆ.

**ಇತಿ ಸ್ತುತಾತ್ಮಸೌಭಾಗ್ಯ[೪]ಭಾಗ್ಯರೂಪಾದಿಸಂಭೃತಾ ।**
**ಜನ್ಯೈಃ ಸ್ವಯಂವರಾಗಾರಮಾಗಮ[೫]ದ್ಗೋಮಿನೀವ ಸಾ ॥ ೧೯೯ ॥**

ಈ ಪ್ರಕಾರವಾಗಿ ಜನರಿಂದ ಹೊಗಳಲ್ಪಟ್ಟ ಸೌಂದರ್ಯ ಪುಣ್ಯ ರೂಪ ಮೊದಲಾದುವುಗಳಿಂದ ಯುಕ್ತಳಾದ ಆ ಸುಲೋಚನೆಯು, ಲಕ್ಷ್ಮಿಯೋಪಾದಿ ಯಲ್ಲಿ, ಸ್ವಯಂವರಗೃಹಕ್ಕೆ ಬಂದಳು.

**[೬]ಪರಿಭೂತಿರ್ದ್ವಿಧಾ ಸಾ[೭]ತ್ರ [೮]ಭಾವಿನೀ ಕೇತಿ ವಾ ತದಾ ।**
**[೯]ಪ್ರೀತಿಶೋಕಾಂತರೇ ಕಂಚಿದ್ರಸಂ [೧೦]ರಾಜಕಮನ್ವಭೂತ್ ॥ ೨೦೦ ॥**

ಪರಿಭೂತಿಯು ಎರಡು ಪ್ರಕಾರವಾಗಿರುತ್ತದೆ–ತಿರಸ್ಕಾರ ಮತ್ತು ಸಂಪತ್ತಿ. ಈ ತಿರಸ್ಕಾರ ಸಂಪತ್ತಿಗಳಲ್ಲಿ ಮುಂದಾಗುವುದು ಅದಾವುದು ? ಎಂದರೆ, ಆ ಸುಲೋಚನಾಗಮನಕಾಲದಲ್ಲಿ ರಾಜರುಗಳ ಸಮೂಹವು ಪ್ರೀತಿಶೋಕಗಳ ಮಧ್ಯ ದಲ್ಲಿರುವ ಒಂದಾನೊಂದು ರಸ–ಭಾವವನ್ನು ಅನುಭವಿಸಿದ್ದಿತು. ಪ್ರತಿಯೋರ್ವ ರಾಜಕುಮಾರನಿಗೂ ಸುಲೋಚನೆಯು ತನ್ನನ್ನು ವರಿಸುತ್ತಾಳೆ ಅಥವಾ ಇಲ್ಲವೆಂಬ ನಿಶ್ಚಯವಿಲ್ಲದಿದ್ದುದರಿಂದ ಪ್ರೀತಿಶೋಕಗಳಿಗೆ ಅವಕಾಶವಿರಲಿಲ್ಲವೆಂದೂ ಮೂರನೆ ಯದಾದ ಒಂದು ಭಾವವುಂಟಾಗಿದ್ದಿತೆಂದೂ ಭಾವವು.

**ಸ್ಥಿತ್ವಾ ಮಹೇಂದ್ರದತ್ತೋಽಪಿ ರತ್ನಮಾಲಾಧರೋ [೧೧]ಧುರಿ ।**
**ರಥಂ ಪ್ರಚೋದಯಾಮಾಸ ಪ್ರತಿ ವಿದ್ಯಾಧರಾಧಿಪಾನ್ ॥ ೨೦೧ ॥**

ಮಹೇಂದ್ರದತ್ತನೆಂಬ ಕಂಚುಕಿಯಾದರೋ ರತ್ನಮಾಲೆಯನ್ನು ಹಿಡಿದು ಕೊಂಡು ರಥದ ಮುಂದಿದ್ದು ವಿದ್ಯಾಧರರಾಜರುಗಳ ಕಡೆಗೆ ರಥವನ್ನು ನಡೆಸಿದನು.

**ದಕ್ಷಿಣೋತ್ತರಯೋಃ ಶ್ರೇಣ್ಯೋರ್ನಮೇಶ್ಚ ವಿನಮೇಃ ಸುತೌ ।**
**ಪತಿಃ ಸುನಮಿರೇಷೋಯಮಿತಃ ಸುವಿನಮಿಃ ಶ್ರಿಯಃ ॥ ೨೦೨ ॥**

"ಎಲೈ ಮಗುವೆ! ವಿಜಯಾರ್ಧಗಿರಿಯ ದಕ್ಷಿಣಶ್ರೇಣಿಯ ದೊರೆಯಾದ ನಮಿಯ ಪುತ್ರನೂ ಸಂಪತ್ತಿಗೊಡೆಯನೂ ಆದ ಇವನು ಸುನಮಿಕುಮಾರನು. ಈ ಕಡೆಯಲ್ಲಿ ಉತ್ತರಶ್ರೇಣಿಯ ದೊರೆಯಾದ ವಿನಮಿಯ ಪುತ್ರನೂ ಸಂಪತ್ತಿ ಗೊಡೆಯನೂ ಆದ ಇವನು ಸುವಿನಮಿಕುಮಾರನು.

**ಅನ್ಯೇಮೀ ಚ ಖಗಾ [೧೨]ಮೋಮಾವಿದ್ಯಾವಿಕ್ರಮಶಾಲಿನಃ ।**
**ಪತಿಂ [೧೩]ವೃಣೀಷೇ ತ್ವಂ ಚೈಷು ಸ್ವೇಚ್ಛಾಮೇಕತ್ರ ಪೂರಯ ॥ ೨೦೩ ॥**

ಇತರರು ಇವರೂ ಲಕ್ಷ್ಮೀ ಕೀರ್ತಿ ವಿದ್ಯಾ ಪರಾಕ್ರಮಗಳಿಂದ ಶೋಭಿಸುವವ ರಾದ ಖೇಚರರಾಜರಾಗಿರುತ್ತಾರೆ. ನೀನು ಇವರಲ್ಲಿ ಪತಿಯನ್ನು ಅಪೇಕ್ಷಿಸುವೆಯಾ ದರೆ ಒಬ್ಬನಲ್ಲಿ ನಿನ್ನ ಇಚ್ಛೆಯನ್ನು ಪೂರ್ತಿಮಾಡು."

೧ ಧರತಿ. ೨ ಯಯೋಃ. ೩ ಅಕಂಪನಸುಪ್ರಭಯೋಃ. ೪ ಪುಣ್ಯ. ೫ ಲಕ್ಷ್ಮೀರಿವ. ೬ ಅವಜ್ಞಾ, ಸಂಪಚ್ಚ. ೭ ಅವಜ್ಞಾಸಂಪದೋಃ. ೮ ಭವಿಷ್ಯಂತೀ. ೯ ಪ್ರೀತಿಶೋಕಯೋರ್ಮಧ್ಯೇ. ೧೦ ರಾಜ ಸಮೂಹಂ. ೧೧ ರಥಮುಖೇ. ೧೨ ಮಾ ಲಕ್ಷ್ಮೀಃ, ಉಮಾ ಕೀರ್ತಿಃ. ೧೩ ಪ್ರಾರ್ಥಯಸೇ ಚೇತ್.

**ಇತಿ ಕಂಚುಕಿನಿರ್ದಿಷ್ಟಾನ್ ನಾಮಾದಾಯ ಪೃಥಕ್ ಪೃಥಕ್ ।**
**ಕರ್ಣೇಕೃತ್ವಾ[೧]ತ್ಯಯಾತ್ಸರ್ವಾನ್ ರುಚಿಶ್ಚಿತ್ರಾ ಹಿ ದೇಹಿನಾಮ್ ॥ ೨೦೪ ॥**

ಈ ಪ್ರಕಾರವಾಗಿ ಬೇರೆ ಬೇರೆಯಾಗಿ ಹೆಸರನ್ನು ತೆಗೆದುಕೊಂಡು–ಹೇಳಿ ಕಂಚುಕಿಯಿಂದ ನಾಮೋಚ್ಚಾರಮಾಡಲ್ಪಟ್ಟವರಾದ ಎಲ್ಲಾ ರಾಜಕುಮಾರರುಗಳನ್ನು (ಹೆಸರುಗಳನ್ನು) ಕಿವಿಯಿಂದ ಕೇಳಿ ಮುಂದೆ ನಡೆದಳು. ಏತಕ್ಕೆಂದರೆ, ಪ್ರಾಣಿಗಳ ಅಭಿರುಚಿಯು ನಾನಾಪ್ರಕಾರವಾಗಿರುವುದು.

**ಪಶ್ಚಾತ್ಸರ್ವಾನ್ನಿರೀಕ್ಷ್ಯೈಷಾ ಕಂಚಿತ್ತು [೨]ವಿವರೀಷತೇ ।**
**ತಥ್ಯೈವೇತಿ ಖಗಾಸ್ತಸ್ಥುಃ ಕಿಂ ವಾಶಾ ನಾವಲಂಬತೇ ॥ ೨೦೫ ॥**

"ಈ ಸುಲೋಚನೆಯು ಎಲ್ಲರನ್ನೂ ನೋಡಿ ಬಳಿಕ ಯಾವನೋ ಒಬ್ಬನನ್ನು ವರಿಸುವುದಕ್ಕೆ ಬಯಸುತ್ತಾಳೆ" ಎಂಬುದಾಗಿ ತಿಳಿದು ಖೇಚರರು ಹಾಗೆಯೇ ಕುಳಿತಿದ್ದರು. ಆಶೆಯು ಯಾವುದನ್ನು ತಾನೆ ಆಶ್ರಯಿಸುವುದಿಲ್ಲ ? ಸುಲೋ ಚನೆಯು ಮುಂದೆ ನಡೆದರೂ ಪುನಃ ಬಂದು ತಮ್ಮನ್ನು ವರಿಸಬಹುದೆಂಬ ಆಶೆ ಯಿಂದ ಖೇಚರರಾಜರು ಕದಲದೆ ಕುಳಿತಿದ್ದರೆಂದೂ ಆಶೆಯು ಅಸಾಧ್ಯವಸ್ತುವನ್ನೂ ಆಶ್ರಯಿಸುತ್ತದೆಂದೂ ಭಾವವು.

**ಪಶ್ಚಾ[೩]ಜ್ಜಗ್ಲುರ್ಮುಖಾಬ್ಜಾನಿ ತದ್ರಥಾದ್ವಿಕಸನ್ಪುರಃ ।**
**ರವೇರಿವೋದಯೇ ರಾಜ್ಞಾಂ ಸಂಸೃತೇಃ ಸ್ಥಿತಿರೀದೃಶೀ ॥ ೨೦೬ ॥**

ಸೂರ್ಯನ ಉದಯದಲ್ಲಿ ಕಮಲಗಳಂತೆ, ರಾಜರುಗಳ ಮುಖಕಮಲಗಳು ಆ ಸುಲೋಚನೆಯ ರಥದ ಮುಂದೆ ವಿಕಸಿತವಾದುವು. ಆ ರಥದ ಹಿಂದೆ ಬಾಡಿದುವು. ರಥವು ತಮಗೆ ಇದಿರಾಗಿ ಬರುವುದನ್ನು ನೋಡಿ ರಾಜರುಗಳು ಸಂತುಷ್ಟ ರಾದರೆಂದೂ ರಥವು ಮುಂದುವರಿದುದನ್ನು ನೋಡಿ ದುಃಖಿತರಾದರೆಂದೂ ಭಾವವು. ಸಂಸಾರದ ಸ್ಥಿತಿಯು ಈ ಪ್ರಕಾರವಾದುದು.

**[೪]ಉಚ್ಚಾದ್ವಾ[೫]ದುದ್ರುವನ್ನಿಮ್ನ[೬]ಮಭಿಭೂಮಿಚರಂ ರಥಃ ।**
**ಕಂಚುಕೀ ಕಥಯಾಮಾಸ ನಾಮಭಿಸ್ತಾನ್ನೃಪಾಂಸ್ತದಾ ॥ ೨೦೭ ॥**

ರಥವು ಉನ್ನತಪ್ರದೇಶದಿಂದ ತಗ್ಗಾದ ನೆಲವನ್ನು ಕುರಿತು ಹೋಗುವಂತೆ ಖೇಚರರ ಕಡೆಯಿಂದ ಭೂಚರರಾದ ರಾಜರುಗಳಿಗೆ ಇದಿರಾಗಿ ಹೋಯಿತು. ಆಗ ಕಂಚುಕಿಯು ಹೆಸರುಗಳಿಂದ ಆ ರಾಜರುಗಳನ್ನು ತಿಳುಹಿದನು. ಆ ರಾಜರುಗಳ ಹೆಸರುಗಳನ್ನು ಸುಲೋಚನೆಗೆ ಹೇಳಿದನೆಂದು ಭಾವವು.

**ನಿರಾಕೃತ್ಯಾರ್ಕಕೀರ್ತ್ಯಾದೀನ್ ಸಾಜೇಯಾ ಜಯಮಾಗಮತ್ ।**
**ಹಿತ್ವಾಶೇಷಾನ್ ದ್ರುಮಾಂಶ್ಚೂತಂ ಮಧೌ ಮಧುಕರೀ ಯಥಾ ॥**

ಹೆಣ್ಣುದುಂಬಿಯು ವಸಂತಋತುವಿನಲ್ಲಿ ಸಮಸ್ತವೃಕ್ಷಗಳನ್ನು ಬಿಟ್ಟು ಮಾವಿನ ಮರವನ್ನು ಹೇಗೆ ಹೊಂದುವುದೋ ಹಾಗೆ ಜಯಕುಮಾರನ ವಿನಾ ಇತರರಿಂದ ಜಯಿಸಲಶಕ್ಯಳಾದ ಆ ಸುಲೋಚನೆಯು ಅರ್ಕಕೀರ್ತಿ ಮೊದಲಾದವರನ್ನು ತಿರಸ್ಕರಿಸಿ ಜಯಕುಮಾರನನ್ನು ಹೊಂದಿದಳು.

**ಗೃಹೀತಪ್ರಗ್ರಹಸ್ತತ್ರ ಕಂಚುಕೀ ಚಿತ್ತವಿತ್ತದಾ ।**
**ವಚೋ ವ್ಯಾಪಾರಯಾಮಾಸ ಜಯವ್ಯಾವರ್ಣನಂ ಪ್ರತಿ ॥ ೨೦೯ ॥**

ಆಗ ಅಲ್ಲಿ ಸುಲೋಚನೆಯ ಮನಸ್ಸನ್ನು ತಿಳಿದವನೂ ಲಗಾಮನ್ನು ಎಳೆದು ಹಿಡಿದವನೂ ಆದ ಕಂಚುಕಿಯು ಜಯಕುಮಾರನ ವರ್ಣನೆಯನ್ನು ಕುರಿತು ಮಾತನಾಡಿದನು.

**ಪ್ರದೀಪಃ ಸ್ವಕುಲಸ್ಯಾಯಂ ಪ್ರಭುಃ ಸೋಮಪ್ರಭಾತ್ಮಜಃ ।**
**ಶ್ರೀಮಾ[೭]ನುತ್ಸಾಹಭೇದೈರ್ವಾ ಜಯೋಯಮನುಜೈರ್ವೃತಃ ॥ ೨೧೦ ॥**

೧ ಅತಿಕ್ರಾಂತವತೀ. ೨ ವರೀತುಮಿಚ್ಛತಿ. ೩ ಮ್ಲಾನಾನ್ಯಭವನ್. ೪ ಉನ್ನತಪ್ರದೇಶಾತ್ತು. ೫ ಅಗಮತ್. ೬ ಭೂಚರಾಣಾಮಭಿಮುಖಂ. ೭ ಶಕ್ತಿವಿಶೇಷೈಃ.

''ಈ ದೊರೆಯು ತನ್ನ ವಂಶಕ್ಕೆ ಪ್ರದೀಪನೂ ಸೋಮಪ್ರಭಮಹಾರಾಜನ ಪುತ್ರನೂ ಸಂಪತ್ತಿಯುಳ್ಳವನೂ, ಉತ್ಸಾಹ–ಶಕ್ತಿವಿಶೇಷಗಳಿಂದ ಆವೃತನಾಗಿರುವಂತೆ, ಅನುಜರಿಂದ ಆವರಿಸಲ್ಪಟ್ಟಿರುವವನೂ ಆದ ಇವನು ಜಯಕುಮಾರನು.

**ನ ರೂಪಮಸ್ಯ ವ್ಯಾವರ್ಣ್ಯಂ [೧]ತವೈತದತಿಮನ್ಮಥಮ್ ।**
**ಸ ದರ್ಪಣೋರ್ಪಣೀಯಃ ಕಿಂ ಕರಕಂಕಣದರ್ಶನೇ ॥ ೩೧೧ ॥**

ಇವನ ಮನ್ಮಥನನ್ನು ಮೀರಿದ ಈ ರೂಪವು ನಿನಗೆ ವರ್ಣಿಸತಕ್ಕುದಾಗಿಲ್ಲವು. ಪ್ರಸಿದ್ಧವಾದ ಕನ್ನಡಿಯು ಕೈಯ ಕಂಕಣವನ್ನು ನೋಡುವುದರಲ್ಲಿ ಕೊಡತಕ್ಕುದಾಗಿರುವುದೇ ? ಕೈಯ ಕಂಕಣವನ್ನು ನೋಡುವುದಕ್ಕೆ ಹೇಗೆ ಕನ್ನಡಿಯು ಬೇಕಾಗಿಲ್ಲವೋ ಹಾಗೆ ಪ್ರತ್ಯಕ್ಷವಾದ ಇವನ ರೂಪವನ್ನು ವರ್ಣಿಸಬೇಕಾಗಿಲ್ಲವೆಂದು ಭಾವವು.

**ಜಿತ್ವಾ ಮೇಘಕುಮಾರಾಖ್ಯಾ[೨]ನುತ್ತರೇ ಭರತೇ ಸುರಾನ್ ।**
**ಸಿಂಹನಾದಃ ಕೃತೋನೇನ ಜಿತತನ್ಮೇಘನಿಃಸ್ವನಃ ॥ ೩೧೨ ॥**

ಉತ್ತರಭರತದಲ್ಲಿ–ಮಧ್ಯಮ್ಲೇಚ್ಛಖಂಡದಲ್ಲಿ ಮೇಘಕುಮಾರರೆಂಬ ದೇವತೆಗಳನ್ನು ಜಯಿಸಿ ಈ ಜಯಕುಮಾರನು ಆ ಪ್ರಸಿದ್ಧವಾದ ಮೇಘಧ್ವನಿಯನ್ನು ಜಯಿಸಿದ ಸಿಂಹನಾದವನ್ನು ಮಾಡಿದನು.

**ವೀರಪಟ್ಟಂ ಪ್ರಬಧ್ಯಾಸ್ಯ ಸ್ವಭುಜಾಭ್ಯಾಂ ಸಮುದ್ಧೃತಮ್ ।**
**ನ್ಯಧಾಯಿ ನಿಧಿನಾಥೇನ ಹೃಷ್ಟ್ವಾ ಮೇಘಸ್ವರಾಭಿಧಾ ॥ ೩೧೩ ॥**

ನಿಧಿಪತಿಯಾದ ಭರತೇಶ್ವರನು ಸಂತೋಷಪಟ್ಟು, ಈ ಜಯಕುಮಾರನಿಗೆ ತನ್ನ ಭುಜಗಳಿಂದ ಎತ್ತಲ್ಪಟ್ಟುದಾದ ವೀರಪಟ್ಟವನ್ನು ಕಟ್ಟಿ ಮೇಘಸ್ವರನೆಂದು ಹೆಸರನ್ನಿಟ್ಟನು.

**ಆತ್ಮಸಂಪದ್ಗುಣೈರ್ಯುಕ್ತಃ ಸಮೇತಶ್ಚಾ[೩]ಭಿಗಾಮಿಕೈಃ ।**
**ಪ್ರಜ್ಞೋತ್ಸಾಹವಿಶೇಷೈಶ್ಚ ತತೋಽಯಮುದಿತೋದಿತಃ ॥ ೩೧೪ ॥**

ಇವನು ಆತ್ಮಸಂಪತ್ತಿಯ ಗುಣಗಳಿಂದ ಕೂಡಿರುವವನೂ ಆದರಣೀಯಗಳಾದ ಬುದ್ಧಿ ಉತ್ಸಾಹವಿಶೇಷಗಳಿಂದ ಕೂಡಿರುವವನೂ ಆಗಿರುತ್ತಾನೆ. ಆದುದರಿಂದ ಇವನು ಮೇಲೆ ಮೇಲೆ ವೃದ್ಧಿಯನ್ನು ಹೊಂದುತ್ತಿರುವವನಾಗಿರುತ್ತಾನೆ.

**ಚಿತ್ತಂ ಜಗತ್ತ್ರಯಸ್ಯಾಸ್ಯ ಗುಣಾಃ [೪]ಸಂರಜ್ಯ ಸಾಂಪ್ರತಮ್ ।**
**[೫]ವ್ಯಾಪೃತಾಃ [೬]ಸರ್ವಭಾವೇನ ತವ ಭಾವಾನುರಂಜನೇ ॥ ೩೧೫ ॥**

ಈ ಜಯಕುಮಾರನ ಗುಣಗಳು ಮೂರುಲೋಕದ (ಜನರ) ಮನಸ್ಸನ್ನೂ ತಮ್ಮಲ್ಲಿ ಅನುರಾಗಗೊಳಿಸಿ ಈಗ ನಿನ್ನ ಮನೋಭಾವವನ್ನು ಅನುರಾಗಗೊಳಿಸುವುದರಲ್ಲಿ ಸರ್ವರೂಪದಿಂದ ತೊಡಗಿದುವು.

**ಅಯಮೇಕೋಽಸ್ತಿ ದೋಷೋಽಸ್ಯ ಚತಸ್ರಃ ಸಂತಿ ಯೋಷಿತಃ ।**
**ಶ್ರೀಃ ಕೀರ್ತಿರ್ವೀರಲಕ್ಷ್ಮೀಶ್ಚ ವಾಗ್ದೇವೀ ಚಾತಿವಲ್ಲಭಾಃ ॥ ೩೧೬ ॥**

ಈ ಜಯಕುಮಾರನಿಗೆ ಲಕ್ಷ್ಮಿ, ಕೀರ್ತಿ ವೀರಲಕ್ಷ್ಮಿ, ವಾಗ್ದೇವಿಯರು ಬಹುಪ್ರಿಯರಾದ ನಾಲ್ಕುಮಂದಿ ಪತ್ನಿಯರಾಗಿರುತ್ತಾರೆ. ಇವನಲ್ಲಿ ಇದೊಂದು ದೋಷವಿರುತ್ತದೆ.

**ಜಿತಮೇಘಕುಮಾರೋಽಯಮೇಕಃ ಪ್ರಾಕ್ ತ್ವಜ್ಜಯೇಧುನಾ ।**
**ಚ್ಯುತಧೈರ್ಯ ಇವಾ[೭]ಲಕ್ಷ್ಯೋ ಯತ್ಸಹಾಯೀಕೃತಃ ಸ್ಮರಃ ॥ ೩೧೭ ॥**

ಇವನೊರ್ವನೇ ಮೊದಲು ಮೇಘಕುಮಾರನನ್ನು ಜಯಿಸಿರುತ್ತಾನೆ. ಈಗ ನಿನ್ನ ಜಯದಲ್ಲಿ ಮನ್ಮಥನು ಸಹಾಯಕನಾಗಿ ಮಾಡಲ್ಪಟ್ಟಿರುವುದರಿಂದ ಧೈರ್ಯವಿಲ್ಲದವನಂತೆ ನೋಡಲ್ಪಡತಕ್ಕವನಾಗಿರುತ್ತಾನೆ. ಮೊದಲು ಕಾಮುಕನಾಗಿರಲಿಲ್ಲವೆಂದೂ ಈಗ ಸುಲೋಚನೆಯ ರೂಪವನ್ನು ನೋಡಿ ಕಾಮುಕನಾದನೆಂದೂ ಭಾವವು.

**ಬಲಿನೋರ್ಯುವಯೋರ್ಮಧ್ಯೇ ವರ್ತಮಾನೋ ಜಿಗೀಷತೋಃ ।**
**[೧]ದ್ವೈಧೀಭಾವಂ ಸಮಾಪನ್ನಃ ಷಾಡ್ಗುಣ್ಯನಿಪುಣಃ ಸ್ಮರಃ ॥ ೩೧೮ ॥**

ಪರಸ್ಪರವಾಗಿ ಜಯಿಸಲಿಚ್ಛಿಸುವವರೂ ಬಲಿಷ್ಠರೂ ಆದ ನಿಮ್ಮೀರ್ವರ ಮಧ್ಯದಲ್ಲಿರುವವನೂ ಸಂಧಿ ವಿಗ್ರಹ ಮೊದಲಾದ ಆರು ಗುಣಸಮೂಹದಲ್ಲಿ ನಿಪುಣನೂ ಆದ ಕಾಮನು ದ್ವೈಧೀಭಾವವನ್ನು (ಗುಪ್ತನಾಗಿ ಈರ್ವರಿಗೂ ಅನುಕೂಲನಾಗಿರುವಿಕೆಯನ್ನು) ಹೊಂದಿರುತ್ತಾನೆ.

**ಕೀರ್ತಿಃ ಕುವಲಯಾಹ್ಲಾದೀ ಪದ್ಮಾಹ್ಲಾದೀ ಪ್ರಭಾಸ್ಯ ಹಿ ।**
**ಸೂರ್ಯಾಚಂದ್ರಮಸೌ ತಸ್ಮಾದನೇನ ಹತಶಕ್ತಿಕೌ ॥ ೩೧೯ ॥**

ಈ ಜಯಕುಮಾರನ ಕೀರ್ತಿಯು ಕುವಲಯವನ್ನು(ಕನ್ನೈದಿಲೆಯನ್ನು, ಭೂಮಂಡಲವನ್ನು) ಸಂತೋಷಪಡಿಸುವುದಾಗಿರುತ್ತದೆ. ಕಾಂತಿಯು ಪದ್ಮವನ್ನು (ತಾವರೆಯನ್ನು, ಲಕ್ಷ್ಮಿಯನ್ನು) ಸಂತೋಷಪಡಿಸುವುದಾಗಿರುತ್ತದೆ. ಆದುದರಿಂದ ಚಂದ್ರಸೂರ್ಯರು ಈ ಜಯಕುಮಾರನಿಂದ ನಾಶಮಾಡಲ್ಪಟ್ಟ ಶಕ್ತಿಯುಳ್ಳವರಾಗಿರುತ್ತಾರೆ.

**ಕೀರ್ತಿರ್ಬಹಿಶ್ಚರೀ ಲಕ್ಷ್ಮೀರತಿವೃದ್ಧಾ ಸರಸ್ವತೀ ।**
**ಜೀರ್ಣೇ[೨]ತರಾಪಿ ಶಾಂತೇವ ಲಕ್ಷ್ಯತೇ [೩]ಕ್ಷತವಿದ್ವಿಷಃ ॥ ೩೨೦ ॥**

ಶತ್ರುಗಳನ್ನು ನಾಶಮಾಡಿರುವವನಾದ ಜಯಕುಮಾರನ ಕೀರ್ತಿಯು ಹೊರಗಡೆಯಲ್ಲಿ ಸಂಚರಿಸುವವಳಾಗಿಯೂ ಲಕ್ಷ್ಮಿಯು ಅತಿವೃದ್ಧಳಾಗಿಯೂ (ಸಂಪತ್ತಿಯು ವೃದ್ಧಿಯಾಗಿಯೂ), ಸರಸ್ವತಿಯು ಶಿಥಿಲಳಾಗಿಯೂ ವೀರಲಕ್ಷ್ಮಿಯು ಶಾಂತಳಾಗಿರುವಂತೆಯೂ ಕಾಣಲ್ಪಡುತ್ತಾರೆ. ಕೃತಕಾರ್ಯನಾಗಿರುತ್ತಾನೆಂದು ಭಾವವು.

**ತತಸ್ತ್ವಯಿ ವಯೋರೂಪಶೀಲಾದಿಗುಣಭಾಜ್ಯಲಮ್ ।**
**ಪ್ರೀತಿರ್ಲತೇವ ದೃಕ್ಪುಷ್ಪಾ ಪ್ರವೃದ್ಧಾಸ್ಯ ಫಲಿಷ್ಯತಿ ॥ ೩೨೧ ॥**

ಆದುದರಿಂದ ವಯಸ್ಸು ರೂಪ ಶೀಲ ಮೊದಲಾದ ಗುಣಗಳನ್ನು ಹೊಂದಿರುವವಳಾದ ನಿನ್ನಲ್ಲಿ ದೃಷ್ಟಿಯೆಂಬ ಪುಷ್ಪವುಳ್ಳುದೂ ಬೆಳೆದಿರುವುದೂ ಆದ ಈ ಜಯಕುಮಾರನ ಪ್ರೀತಿಯು, ಲತೆಯಂತೆ, ಫಲಿಸುವುದು.

**ಯುವಾಭ್ಯಾಂ ನಿರ್ಜಿತಃ ಕಾಮಃ ಸಂಪ್ರತ್ಯಭ್ಯಂತರೀಕೃತಃ ।**
**ಸ ವಾಮುಪಜಯಾಯಾಭೂದರಿರ್ವಿಸ್ರಂಭಿತೋಽಪ್ಯರಿಃ ॥ ೩೨೨ ॥**

ನಿಮ್ಮೀರ್ವರಿಂದ ಜಯಿಸಲ್ಪಟ್ಟವನಾದ ಕಾಮನು ಈಗ ಒಳಕ್ಕೆ ಬರಮಾಡಲ್ಪಟ್ಟನು. ಅವನು ನಿಮ್ಮಗಳ ಅಪಜಯಕ್ಕೆ (ಒಬ್ಬರನ್ನೊಬ್ಬರು ಜಯಿಸುವುದಕ್ಕೆ–ಮೋಹಿತರಾಗುವುದಕ್ಕೆ) ಕಾರಣನಾದನು. ಶತ್ರುವು ವಿಶ್ವಾಸಮಾಡಲ್ಪಟ್ಟವನಾದರೂ ಶತ್ರುವೇ ಆಗಿರುತ್ತಾನೆ.

**ನಿಷ್ಠುರಂ [೪]ಜೃಂಭತೇಮುಷ್ಮಿನ್ನುಭಯಾರಿರಪಿ ಸ್ಮರಃ ।**
**ಮತ್ವೇವ ತ್ವಾಂ ಸ್ತ್ರಿಯಂ ಭೂಯೋ ಭಟೇಷು ಭಟಮತ್ಸರಃ ॥ ೩೨೩ ॥**

ಕಾಮನು ನಿಮ್ಮೀರ್ವರಿಗೂ ಶತ್ರುವಾಗಿದ್ದರೂ ನಿನ್ನನ್ನು ಹೆಂಗುಸನ್ನಾಗಿ ತಿಳಿದೋ ಎಂಬಂತೆ ಪುನಃ ಈ ಜಯಕುಮಾರನಲ್ಲಿ ಕಠೋರನಾಗಿ ವೃದ್ಧಿ ಹೊಂದುತ್ತಾನೆ.

೧ ತವೋಪರಿ. ೨ ಮಧ್ಯಮ್ಲೇಚ್ಛಖಂಡೇ. ೩ ಆದರಣೀಯೈಃ. ೪ ಆತ್ಮನ್ಯನುರಕ್ತಂ ವಿಧಾಯ. ೫ ವ್ಯಾಪಾರಮಕುರ್ವನ್. ೬ ಸಕಲಸ್ವರೂಪೇಣ. ೭ ದರ್ಶನೀಯಃ.

೧ ಬಲಿನೋರ್ದ್ವಿಷತೋರ್ಮಧ್ಯೇ ವಾಚಾತ್ಮಾನಂ ಸಮರ್ಪಯೇತ್ । ದ್ವೈಧೀಭಾವೇನ ವರ್ತೇತ ಕಾಕಾಕ್ಷಿವದಲಕ್ಷಿತಃ. ೨ ವೀರಲಕ್ಷ್ಮೀಃ. ೩ ಜಯಸ್ಯ. ೪ ವರ್ದ್ಧತೇ.

ಭಟರಲ್ಲಿ ಭಟರ ಮತ್ಸರವಿರುವುದು ಸಹಜವಾಗಿರುತ್ತದೆ. ಜಯಕುಮಾರನು ಅಧಿಕವಾಗಿ ಸುಲೋಚನೆಯಲ್ಲಿ ಆಸಕ್ತನಾಗಿರುತ್ತಾನೆಂದು ಭಾವವು.

**ಪ್ರಖ್ಯಾತವಿಜಯಃ ಶ್ರೀಮಾ[೧]ನ್ಯಾನಮಾತ್ರೇಣ ನಿರ್ಜಿತಃ ।**
**ತ್ವಯಾಯಮತ ಏವಾತ್ರ ಜಯೋ [೨]ನ್ಯಾಯಾಗತಸ್ತವ ॥ ೩೨೪ ॥**

ಪ್ರಖ್ಯಾತವಾದ ವಿಜಯವುಳ್ಳವನೂ ಸಂಪತ್ತಿಯುಳ್ಳವನೂ ಆದ ಈ ಜಯಕುಮಾರನು ನಿನ್ನಿಂದ ಗಮನಮಾತ್ರದಿಂದ ಜಯಿಸಲ್ಪಟ್ಟನು. ಆದುದರಿಂದಲೇ ಇಲ್ಲಿ–ಜಯವು ಜಯಕುಮಾರನು ನ್ಯಾಯಮಾರ್ಗದಿಂದ ಬಂದುದಾಗಿ–ಬಂದವನಾಗಿರುತ್ತಾನೆ.

**[೩]ಪ್ರಾಧ್ವಂಕೃತ್ಯ ಗಲೇ ರತ್ನಮಾಲಯಾ [೪]ದೃಕ್ಶರೈರ್ಜಿತಮ್ ।**
**ಜಯಲಕ್ಷ್ಮೀಸ್ತವೈವಾಸ್ತು ತತ್ತ್ವಮೇನಂ ಕರೇ ಕುರು ॥ ೩೨೫ ॥**

ಆದುದರಿಂದ ನೇತ್ರಗಳೆಂಬ ಬಾಣಗಳಿಂದ ಜಯಿಸಲ್ಪಟ್ಟವನಾದ ಈ ಜಯಕುಮಾರನನ್ನು ರತ್ನಮಾಲೆಯಿಂದ ಕೊರಳಿನಲ್ಲಿ ಬಂಧಿಸಿ ಕೈಯಲ್ಲಿ ಮಾಡು–ಕೈವಶ ಮಾಡಿಕೊ. ಜಯಲಕ್ಷ್ಮಿಯು ನಿನಗೇ ಇರಲಿ.''

**ಇತಿ ತಸ್ಯ ವಚಃ ಶ್ರುತ್ವಾ ಸ್ಮರಷಾಡ್ಗುಣ್ಯವೇದಿನಃ ।**
**ಶನೈರ್ವಿಗಲಿತ[೫]ವ್ರೀಲಾಲೋಲಲೀಲಾವಲೋಕನಾ ॥ ೩೨೬ ॥**

**ತದಾ ಜನ್ಮಾಂತರಸ್ನೇಹ[೬]ಶ್ಚಾಕ್ಷುಷೀ ಸುಂದರಾಕೃತಿಃ ।**
**[೭]ಕುಂದಭಾಸಾ ಗುಣಾಸ್ತಸ್ಯ [೮]ಶ್ರಾವಣಾಃ ಪುಷ್ಪಸಾಯಕಃ ॥ ೩೨೭ ॥**

**ಇ[೯]ತ್ಯೇಭಿಃ ಸ್ಯಂದನಾದೇಷಾ [೧೦]ಸಮುತ್ಕ್ಷಿಪ್ಯಾವರೋಪಿತಾ ।**
**ರತ್ನಮಾಲಾಂ ಸಮಾದಾಯ ಕನ್ಯಾ ಕಂಚುಕಿನಃ ಕರಾತ್ ॥ ೩೨೮ ॥**

**ಅಬಧ್ನಾದ್ಬಂಧುರಾಂ ತಸ್ಯ ಕಂಠೇತಿಪ್ರೇಮನಿರ್ಭರಾ ।**
**ಸಾ ಚಾಚಕಾತ್ಸಮಧ್ಯಾಸ್ಯ ವಕ್ಷೋ ಲಕ್ಷ್ಮೀರಿವಾಪರಾ ॥ ೩೨೯ ॥**

ಈ ಪ್ರಕಾರವಾಗಿ ಮನ್ಮಥನ ಷಡ್ಗುಣಸಮೂಹವನ್ನು ತಿಳಿದವನಾದ ಆ ಕಂಚುಕಿಯ ಮಾತನ್ನು ಕೇಳಿ ಮೆಲ್ಲನೆ ಆಗ ಶಿಥಿಲವಾದ ಲಜ್ಜೆಯಿಂದ ಚಂಚಲವೂ ಲೀಲೆಯುಳ್ಳದೂ ಆದ ನೋಟವುಳ್ಳವಳೂ ''ಜನ್ಮಾಂತರದ ಸ್ನೇಹ, ತನ್ನ ಕಣ್ಣುಗಳಿಂದ ಪರಿಗ್ರಹಿಸಲ್ಪಟ್ಟುದಾದ ಸುಂದರಾಕಾರ(ಜಯಕುಮಾರನ ಸೌಂದರ್ಯ ದರ್ಶನ), ಕಿವಿಗಳಿಗೆ ವಿಷಯವಾದುವೂ (ಕೇಳಲ್ಪಟ್ಟುವೂ) ಕುಂದಪುಷ್ಪದ ಕಾಂತಿಯುಳ್ಳುವೂ(ಶುಭ್ರವೂ) ಆದ ಆ ಜಯಕುಮಾರನ ಗುಣಗಳು, ಕಾಮ'' ಈ ಗುಣಗಳಿಂದ ಎತ್ತಲ್ಪಟ್ಟು ರಥದಿಂದ ಇಳುಹಲ್ಪಟ್ಟವಳೂ ಆದ ಈ ಸುಲೋಚನಾಕನ್ಯೆಯು ಕಂಚುಕಿಯ ಕೈಯಿಂದ ಮನೋಹರವಾದ ರತ್ನಮಾಲೆಯನ್ನು ತೆಗೆದುಕೊಂಡು ಆ ಜಯಕುಮಾರನ ಕೊರಳಿನಲ್ಲಿ ಅತ್ಯಂತ ಪ್ರೇಮಭರಿತಳಾಗಿ ಕಟ್ಟಿದಳು. ಜಯಕುಮಾರನ ಎದೆಯಲ್ಲಿದ್ದು ಆ ರತ್ನಮಾಲೆಯೂ ಬೇರೊಬ್ಬಳಾದ ಲಕ್ಷ್ಮಿಯಂತೆ ಪ್ರಕಾಶಿಸಿದ್ದಿತು.

**ಸಹಸಾ ಸರ್ವತೂರ್ಯಾಣಾ[೧೧]ಮುದತಿಷ್ಠನ್ಮಹಾಧ್ವನಿಃ ।**
**ಶ್ರಾವಯನ್ನಿವ ದಿಕ್ಕನ್ಯಾಃ ಕನ್ಯಾ[೧೨]ಸಾಮಾನ್ಯಮುತ್ಸವಮ್ ॥ ೩೩೦ ॥**

ಶೀಘ್ರವಾಗಿ ಸಮಸ್ತವಾದ್ಯಗಳ ಮಹಾಶಬ್ದವು, ಸುಲೋಚನಾಕನ್ಯೆಯ ಅಸಾಧಾರಣವಾದ ಉತ್ಸವವನ್ನು ದಿಕ್ಕನ್ಯೆಯರಿಗೆ ಕೇಳಿಸುತ್ತಿದೆಯೋ ಎಂಬಂತೆ, ಎದ್ದಿತು.

೧ ಗಮನಮಾತ್ರೇಣ. ೨ ನ್ಯಾಯಮಾರ್ಗಾನುಗತಃ. ೩ ಬಂಧಹೇತುಕಮಾನುಕೂಲ್ಯಂ ಕೃತ್ವಾ-ಬಧ್ವೇತ್ಯರ್ಥಃ. ೪ ದೃಶಾವೇವ ಚರಾ ಬಾಣಾಸ್ತೈರ್ಜಿತಂ. ೫ ಲಜ್ಜಾ. ೬ ಚಕ್ಷುಷಾಗೃಹ್ಯಮಾಣಾ. ೭ ಕುಂದವದ್ಭಾಸಮಾನಾಃ. ೮ ಶ್ರವಣಜ್ಞಾನವಿಷಯಾಃ. ೯ ಜನ್ಮಾಂತರಸ್ನೇಹಾದಿಗುಣೈಃ. ೧೦ ಸಮುದ್ಧೃತ್ಯ. ೧೧ ಉತ್ಥಿತೋಭೂತ್. ೧೨ ಅಸಾಧಾರಣಂ.

**ವಕ್ತ್ರವಾರಿಜವಾಸಿನ್ಯಾ ನರವಿದ್ಯಾಧರೇಶಿನಾಮ್ ।**
**ಶ್ರಿಯಾ ಜಯಮುಖಾಂಭೋಜಮಾಶ್ರಿತಂ ವಾ ತದಾತ್ಮಭಾತ್ ॥ ೩೩೧ ॥**

ಆಗ ನರಾಧಿಪತಿಗಳ ಮತ್ತು ವಿದ್ಯಾಧರಾಧಿಪತಿಗಳ ಮುಖಕಮಲದಲ್ಲಿ ವಾಸಮಾಡುವವಳಾದ ಲಕ್ಷ್ಮಿಯು ಜಯಕುಮಾರನ ಮುಖಕಮಲವನ್ನು ಆಶ್ರಯಿಸಿದಳೋ ಎಂಬಂತೆ ಶೋಭಿಸಿತು. ಇತರ ರಾಜರುಗಳ ಮುಖಗಳು ತೇಜೋಹೀನಗಳಾದುವೆಂದೂ ಜಯಕುಮಾರನ ಮುಖವು ತೇಜೋಯುಕ್ತವಾದುದೆಂದೂ ಭಾವವು.

**[೧]ಗತಾಸ್ತದಾರಯೋ ಮ್ಲಾನಮುಖಾಬ್ಜಾಕ್ಷ್ಯುತ್ಪಲಶ್ರಿಯಃ ।**
**ಖಭೂಚರನೃಪಾಃ ಕಷ್ಟಮಾಸನ್ ಶುಷ್ಕಸರಸ್ಸಮಾಃ ॥ ೩೩೨ ॥**

ನಷ್ಟವಾದ ಮುಖರಸ–ಕಾಂತಿಯುಳ್ಳವರೂ ಬಾಡಿದ ಮುಖಕಮಲಗಳ ಮತ್ತು ನೇತ್ರೋತ್ಪಲಗಳ ಶೋಭೆಯುಳ್ಳವರೂ ಆದ ಖೇಚರ ಭೂಚರ ರಾಜರುಗಳು ಒಣಗಿದ ಸರೋವರಕ್ಕೆ ಸಮಾನರಾಗಿ ಆದರು, ಕಷ್ಟ !

**ಅಭಿಮತಫಲಸಿದ್ಧ್ಯಾ ವರ್ಧಮಾನಪ್ರಮೋದೋ**
**ನಿಜದುಹಿತೃಸಮೇತಂ ಪ್ರಾ[೨]ಕ್ಪುರೋಧಾಯ ಪೂಜ್ಯಮ್ ॥**
**ಜಯಮಮರತರುಂ ವಾ ಕಲ್ಪವಲ್ಲೀಸನಾಥಂ**
**ನಗರಮವಿಶದುಚ್ಚೈರ್ನಾಥವಂಶಾಧಿನಾಥಃ ॥ ೩೩೩ ॥**

ಇಷ್ಟವಾದ ಫಲ–ಪ್ರಯೋಜನದ ಸಿದ್ಧಿಯಿಂದ ವೃದ್ಧಿಹೊಂದುತ್ತಿರುವ ಸಂತೋಷವುಳ್ಳವನೂ ನಾಥವಂಶಾಧಿಪತಿಯೂ ಆದ ಅಕಂಪನಮಹಾರಾಜನು ತನ್ನ ಪುತ್ರೀಸಮೇತನೂ ಪೂಜ್ಯನೂ ಆದ ಜಯಕುಮಾರನನ್ನು, ಕಲ್ಪಲತೆಯೊಡನೆ ಕೂಡಿರುವ ಕಲ್ಪವೃಕ್ಷವನ್ನೋಪಾದಿಯಲ್ಲಿ, ಶೀಘ್ರವಾಗಿ ಮುಂದೆ ಮಾಡಿಕೊಂಡು ಉತ್ಕೃಷ್ಟವಾದತನ್ನ ಪಟ್ಟಣವನ್ನು ಪ್ರವೇಶಿಸಿದನು.

**ಆದ್ಯೋಯಂ [೩]ಮಹಿತೇ ಸ್ವಯಂವರವಿಧೌ ಯ[೪]ದ್ಭಾಗ್ಯಸೌಭಾಗ್ಯಭಾಕ್**
**ಯಸ್ಮಾದ್ರಾಜಖಗೇಂದ್ರವಕ್ತ್ರವನಜಶ್ರೀವಾರಯೋಷಿದ್ವೃತಃ ॥**
**ಮಾಲಾವಮ್ಲಾನಗುಣಾ ಯತೋ[೫]ಸ್ಯ [೬]ಶರಣೇ ಮಂದಾರಮಾಲಾಯತೇ**
**ತತ್ಕಲ್ಪಾವಧಿ[೭]ವೀಧ್ರಮಸ್ಯ ವಿಪುಲಂ [೮]ವಿಶ್ವಂ ಯಶೋಪ್ಯಶ್ನುತೇ ॥**

ಪೂಜ್ಯವಾದ ಸ್ವಯಂವರವಿಧಿಯಲ್ಲಿ ಮೊದಲನೆಯವನಾದ ಈ ಜಯಕುಮಾರನು ಯಾವ ಕಾರಣದಿಂದ ಪುಣ್ಯವನ್ನೂ ಸೌಂದರ್ಯವನ್ನೂ ಹೊಂದಿದವನಾದನೋ ಯಾವ ಕಾರಣದಿಂದ ರಾಜರುಗಳ ಮತ್ತು ಖೇಚರಾಧಿಪತಿಗಳ ಮುಖಕಮಲಗಳಲ್ಲಿರುವ ಲಕ್ಷ್ಮಿಯರೆಂಬ ವಾರಸ್ತ್ರೀಯರಿಂದ ಆವರಿಸಲ್ಪಟ್ಟನೋ ಯಾವ ಕಾರಣದಿಂದ ಈ ಜಯಕುಮಾರನ ರಕ್ಷಣೆಯಲ್ಲಿ ಅಥವಾ ಮನೆಯಲ್ಲಿ ಬಾಡದಿರುವ ಗುಣವುಳ್ಳುದಾದ ರತ್ನಮಾಲಿಕೆಯು ಕಲ್ಪವೃಕ್ಷದ ಮಾಲಿಕೆಯಂತಾಗುತ್ತದೋ ಆ ಕಾರಣದಿಂದ ಕಲ್ಪಕಾಲದವರೆಗೆ ನಿರ್ಮಲವಾದ ಈ ಜಯಕುಮಾರನ ವಿಸ್ತಾರವಾದ ಕೀರ್ತಿಯು ಜಗತ್ತನ್ನು ವ್ಯಾಪಿಸುತ್ತದೆ.

**ಭಾಸ್ವತ್ಪ್ರಭಾಪ್ರಸರಣ[೯]ಪ್ರತಿಬುದ್ಧಪದ್ಮಃ**
**ಪ್ರಾಪ್ತೋದಯಃ [೧೦]ಪ್ರತಿವಿಧಾಯ [೧೧]ಪರಪ್ರಭಾವಮ್ ॥**
**[೧೨]ಬಂಧುಪ್ರಜಾಕುಮುದಬಂಧುರಚಿಂತ್ಯಕಾಂತಿಃ**
**ಭಾತಿ ಸ್ಮ ಭಾನುಶಶಿನೋರ್ವಿಜಯೀ ಜಯೋಯಮ್ ॥ ೩೩೫ ॥**

ಪ್ರಕಾಶಮಾನವಾದ ಕಾಂತಿಯ ಪ್ರಸಾರದಿಂದ ವೃದ್ಧಿಹೊಂದಿದ ಲಕ್ಷ್ಮಿಯುಳ್ಳವನೂ–ಅರಳಿದ ತಾವರೆಯುಳ್ಳವನೂ ಶತ್ರುಸಾಮರ್ಥ್ಯವನ್ನು– ನಕ್ಷತ್ರಾಧಿಪನಾದ ಚಂದ್ರನ ಸಾಮರ್ಥ್ಯವನ್ನು ನಿರಾಕರಿಸಿ ಆವಿರ್ಭಾವವನ್ನು ಹೊಂದಿದವನೂ ಬಂಧುಗಳೂ ಪ್ರಜೆಗಳೂ ಎಂಬ ಕುಮುದಪುಷ್ಪಗಳಿಗೆ ಚಂದ್ರನೂ

೧ ವಿಗತಮುಖರಸಾಃ. ೨ ಅಗ್ರೇ ಕೃತ್ವಾ. ೩ ಪೂಜ್ಯೇ. ೪ ಪುಣ್ಯ. ೫ ಜಯಸ್ಯ. ೬ [illegible] ಗೃಹೇ ವಾ. ೭ ವಿಮಲಂ. ೮ ಜಗತ್. ೯ ವೃದ್ಧಲಕ್ಷ್ಮೀಃ, ವಿಕಸಿತಕಮಲಃ. ೧೦ ನಿರಸ್ಯ. ೧೧ ಶತ್ರುಸಾಮರ್ಥ್ಯಂ, ನಕ್ಷತ್ರಾಧಿಪಸಾಮರ್ಥ್ಯಂ ಚ. ೧೨ ಬಂಧವಃ ಪ್ರಜಾಶ್ಚ ತಾ ಏವ ಕುಮುದಾನಿ ತೇಷಾಂ ಬಂಧುಶ್ಚಂದ್ರಃ.

ಚಿಂತಿಸಲಾಗದ ಕಾಂತಿಯುಳ್ಳವನೂ ಸೂರ್ಯ ಚಂದ್ರರನ್ನು ಜಯಿಸಿರುವವನೂ ಆದ ಈ ಜಯಕುಮಾರನು ಪ್ರಕಾಶಿಸಿದನು.

**ಪ್ರಿಯದುಹಿತರಮೇನಾಂ ನಾಥವಂಶಾಂಬರೇಂದೋ-**
**[೧]ರಮುಮುಪನಯತಿ ಸ್ಮ ಸ್ಪಷ್ಟಸೌಭಾಗ್ಯಲಕ್ಷ್ಮೀಃ ।**
**[೨]ಜ್ವಲಿತಮಹಸಮನ್ಯಾಂ ವೀರಲಕ್ಷ್ಮೀಶ್ಚ ಕೀರ್ತಿಂ**
**ಕಥಯತಿ ನಯತೀತಿ [೩]ಪ್ರಾತಿಭಜ್ಞಾನಮುಚ್ಚೈಃ ॥ ೩೩೬ ॥**

ಸ್ಫುಟವಾದ ಸೌಭಾಗ್ಯಲಕ್ಷ್ಮಿಯು(ಜಯಕುಮಾರನ ಸೌಂದರ್ಯವು) ನಾಥ ವಂಶವೆಂಬ ಆಕಾಶಕ್ಕೆ ಚಂದ್ರನಾದ ಅಕಂಪನಮಹಾರಾಜನ ಪ್ರಿಯಪುತ್ರಿಯಾದ ಈ ಸುಲೋಚನೆಯನ್ನು ಈ ಜಯಕುಮಾರನ ಸಮೀಪಕ್ಕೆ ಹೊಂದಿಸಿದಳು. ವೀರ ಲಕ್ಷ್ಮಿಯಾದರೋ ಬೇರೆಯಾದ ಕೀರ್ತಿಯನ್ನು ಪ್ರಕಾಶಮಾನವಾದ ತೇಜಸ್ಸುಳ್ಳ ಜಯಕುಮಾರನನ್ನು ಕುರಿತು ಹೊಂದಿಸಿದಳು. ಈ ಕಾರ್ಯವು ಪ್ರತಿಭೆಯುಳ್ಳ–ನೂತನವಿಚಾರವುಳ್ಳ ಜ್ಞಾನವನ್ನು ಚೆನ್ನಾಗಿ ಹೇಳುತ್ತದೆ. ಮೇಲೆಹೇಳಿದ ಸಂಯೋಜನೆಯು ಸೌಭಾಗ್ಯಲಕ್ಷ್ಮೀ ವೀರಲಕ್ಷ್ಮಿಯರ ವಿಚಾರಪರವಾದ ಜ್ಞಾನವನ್ನು ಸೂಚಿಸುವುದೆಂದು ಭಾವವು.

**ಏತತ್ಪುಣ್ಯಮಯಂ ಸುರೂಪಮಹಿಮಾ ಸೌಭಾಗ್ಯಲಕ್ಷ್ಮೀ[೪]ರಿಯಂ**
**[೫]ಜಾತೋ[೬]ಸ್ಮಿನ್ ಜನಕಃ ಸ ಯೋ[೭]ಸ್ಯ [೮]ಜನಿಕಾ ಸೈವಾಸ್ಯ ಯಾ ಸುಪ್ರಜಾಃ ।**
**ಪೂಜ್ಯೋಯಂ ಜಗದೇಕ[೯]ಮಂಗಲಮಣಿಶ್ಚೂಡಾಮಣಿಃ [೧೦]ಶ್ರೀಭೃತಾ-**
**ಮಿತ್ಯುಕ್ತಿರ್ಜಯಭಾಗ್ಜಯಂ ಪ್ರತಿಜನೈರ್ಜಾತೋತ್ಸವೈರ್ಜಲ್ಪಿತಾ॥ ೩೩೭ ॥**

"ಈ ಐಶ್ವರ್ಯವು ಪುಣ್ಯಮಯವಾದುದು, ಶ್ರೇಷ್ಠವಾದ ರೂಪಾತಿಶಯವುಳ್ಳವಳಾದ ಈ ಸುಲೋಚನೆಯು ಸೌಭಾಗ್ಯಲಕ್ಷ್ಮಿಯು, ಈ ಲೋಕದಲ್ಲಿ ಯಾವನು ಈ ಜಯಕುಮಾರನ ತಂದೆಯೋ ಅವನೇ ಜನಕವಾಗಿ ಪ್ರಾದುರ್ಭವಿಸಿದನು (ಜನಶಬ್ದಕ್ಕೆ ಅರ್ಹನು), ಯಾವಳು ಶ್ರೇಷ್ಠವಾದ ಮಕ್ಕಳುಳ್ಳವಳೋ ಅವಳೇ ಈ ಜಯಕುಮಾರನ ತಾಯಿಯು (ಧನ್ಯಳು), ಪೂಜ್ಯನಾದ ಈ ಜಯಕುಮಾರನು ಲೋಕಕ್ಕೆ ಮುಖ್ಯವೂ ಮಂಗಳವೂ ಆದ ಕನ್ನಡಿಯು, ಸಂಪತ್ತಿಯುಳ್ಳವರಾದ ರಾಜರುಗಳಿಗೆ ಕಿರೀಟದ ರತ್ನಪ್ರಾಯನು" ಜಯವನ್ನು ಹೊಂದಿದ–ಜಯಕುಮಾರವಿಷಯಕವಾದ ಈ ಪ್ರಕಾರವಾದ ವಚನವು ಜಯಕುಮಾರನನ್ನು ಕುರಿತು ಸಂತೋಷವುಳ್ಳವರಾದ ಜನರಿಂದ ಹೇಳಲ್ಪಟ್ಟಿತು.

**ಕುವಲಯಪರಿಬೋಧಂ ಸಂದಧಾನಃ ಸಮಂತಾತ್**
**ಸತತವಿತತದೀಪ್ತಿಃ [೧]ಸುಪ್ರತಿಷ್ಠಃ ಪ್ರಸನ್ನಃ ॥**
**ಪರಿಣತನಿಜಶೌರ್ಯೇಣಾರ್ಕಮಾಕ್ರಮ್ಯ ದಿಕ್ಷು**
**ಪ್ರಥಿತಪೃಥುಲಕೀರ್ತ್ಯಾ ವರ್ಧಮಾನೋ ಜಯಃ [೨]ಸ್ತಾತ್ ॥ ೩೩೮ ॥**

ಎಲ್ಲಾ ಕಡೆಯಲ್ಲಿ ಕುವಲಯಕ್ಕೆ(ಭೂಮಂಡಲಕ್ಕೆ, ನೈದಿಲೆಗೆ) ವಿಕಾಸವನ್ನು ಮಾಡುವವನೂ ಯಾವಾಗಲೂ ವಿಶಾಲವಾದ ತೇಜಸ್ಸುಳ್ಳವನೂ ಶ್ರೇಷ್ಠವಾದ ಸ್ಥೈರ್ಯ(ಸ್ಥಿರತ್ವ)ವುಳ್ಳವನೂ ಸಂತುಷ್ಟನೂ ಆದ ಜಯಕುಮಾರನು ವೃದ್ಧಿಯನ್ನು ಹೊಂದಿರುವ ತನ್ನ ಶೌರ್ಯದಿಂದ ಸೂರ್ಯನನ್ನು ಆಕ್ರಮಿಸಿ ದಿಕ್ಕುಗಳಲ್ಲಿ ಪ್ರಸಿದ್ಧವೂ ವಿಸ್ತಾರವೂ ಆದ ಕೀರ್ತಿಯಿಂದ ವೃದ್ಧಿಹೊಂದುವವನಾಗಲಿ.

**ಇತಿ ಸಮುಪಗತಾ ಶ್ರೀಃ ಸರ್ವಕಲ್ಯಾಣಭಾಜಂ**
**ಜಿನಪತಿಮತಭಾಕ್ತ್ವಾತ್ಪುಣ್ಯಭಾಜಂ ಜಯಂ ತಮ್ ।**
**ತದುರುಕೃಪಮುಪಾಧ್ವಂ ಹೇ ಬುಧಾಃ ಶ್ರದ್ದಧಾನಾಃ**
**ಪರಮಜಿನಪದಾಬ್ಜದ್ವಂದ್ವ[೩]ಮದ್ವಂದ್ವವೃತ್ತ್ಯಾ ॥ ೩೩೯ ॥**

ಈ ಪ್ರಕಾರವಾಗಿ ಜಿನೇಶ್ವರನ ಮತವನ್ನು ಅವಲಂಬಿಸಿರುವುದರಿಂದ ಸಮಸ್ತ ಮಂಗಲಗಳಿಗೆ ಪಾತ್ರನೂ ಪುಣ್ಯಭಾಜನನೂ ಆದ ಆ ಜಯಕುಮಾರನನ್ನು ಲಕ್ಷ್ಮಿಯು ಹೊಂದಿದಳು. ಸಕಲ ಸಂಪತ್ತಿಯು ಪ್ರಾಪ್ತವಾದುದೆಂದು ಭಾವವು. ಆದುದರಿಂದ ಎಲೈ ಪ್ರಾಜ್ಞರೇ ! ಹೆಚ್ಚಾದ ಕೃಪೆಯುಳ್ಳುದಾದ ಪರಮಜಿನೇಶ್ವರನ ಚರಣಕಮಲಯುಗಲವನ್ನು ನಂಬುವವರಾಗಿ ನಿಶ್ಚಿತ–ಅನನ್ಯಭಕ್ತಿಯಿಂದ ಸೇವಿಸಿರಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಸುಲೋಚನಾಸ್ವಯಂವರಮಾಲಾರೋಪಣಂ ನಾಮ ತ್ರಿಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಸುಲೋಚನಾಸ್ವಯಂವರಮಾಲಾರೋಪಣವೆಂಬ ನಲ್ವತ್ತಮೂರನೆಯ ಪರ್ವವು ಸಂಪೂರ್ಣವಾದುದು.

---

೧ ಜಯಂ. ೨ ಜ್ವಲಿತತೇಜಸ್ಕಂ. ೩ ಪ್ರತಿಭೈವ ಪ್ರಾತಿಭಂ ತಚ್ಚ ತತ್ ಜ್ಞಾನಂ ಚ–ಪ್ರತಿಪುರುಷಸಮುತ್ಪನ್ನಂ ಜ್ಞಾನಮಿತ್ಯರ್ಥಃ. ೪ ಸುಲೋಚನಾ. ೫ ಯಃ ಅಸ್ಯ ಜನಕಃ ಸ ಏವ ಜನಕೋ ಜಾತಃ. ೬ ಅಸ್ಮಿನ್ ಲೋಕೇ. ೭ ಜಯಸ್ಯ. ೮ ಮಾತಾ. ೯ ಮಂಗಲದರ್ಪಣಃ. ೧೦ ನೃಪಾಣಾಂ.

೧ ಸುಸ್ಥೈರ್ಯವಾನ್. ೨ ಭೂಯಾತ್. ೩ ನಿಶ್ಚಿತಭಕ್ತ್ಯಾ.

# ಅಥ ಚತುಶ್ಚತ್ವಾರಿಂಶತ್ತಮಂ ಪರ್ವ

**ಅಥ ದುರ್ಮರ್ಷಣೋ ನಾಮ ದುಷ್ಟ[೧]ಸ್ತಸ್ಯಾಸಹಿಷ್ಣುಕಃ ।**
**ಸರ್ವಾ[೨]ನುದ್ದೀಪಯನ್ ಪಾಪೀ ಸೋರ್ಕಕೀರ್ತ್ಯನುಜೀವಿಕಃ ॥ ೧ ॥**

**ಅಕಂಪನಃ ಖಲಃ ಕ್ಷುದ್ರೋ ವೃಥೈಶ್ವರ್ಯಮದೋದ್ಧತಃ ।**
**ಮೃಷಾ ಯುಷ್ಮಾನ್ಸಮಾಹೂಯ ಶ್ಲಾಘಮಾನಃ ಸ್ವಸಂಪದಮ್ ॥ ೨ ॥**

**ಪೂರ್ವಮೇವ ಸಮಾಲೋಚ್ಯ ಮಾಲಾಮಾಸಂಜಯಜ್ಜಯೇ ।**
**ಪರಾಭೂತಿಂ ವಿಧಿತ್ಸುರ್ವಃ ಸ್ಥಾಯಿನೀಮಾಯುಗಾಂತರಮ್ ॥ ೩ ॥**

ಸ್ವಯಂವರಮಾಲೆಯನ್ನು ಹಾಕಿದನಂತರದಲ್ಲಿ ಅಕಂಪನಮಹಾರಾಜನ ವಿಷಯದಲ್ಲಿ ಸಹನವಿಲ್ಲದಿರುವವನೂ ಪಾಪಿಯೂ ಅರ್ಕಕೀರ್ತಿಯ ಸೇವಕನೂ ದುಷ್ಟನೂ ಆದ ದುರ್ಮರ್ಷಣನೆಂಬವನು ಎಲ್ಲಾ ರಾಜರುಗಳ ಕೋಪಾಗ್ನಿಯನ್ನು ಪ್ರಜ್ವಲಿಸುವವನಾಗಿ ''ಅಕಂಪನನು ದುಷ್ಟನು, ನೀಚನು, ವ್ಯರ್ಥವಾಗಿ ಐಶ್ವರ್ಯಮದದಿಂದ ಕೊಬ್ಬಿದವನಾಗಿಯೂ ಅಸತ್ಯವಾಗಿ ನಿಮ್ಮಗಳನ್ನು ಕರೆಯಿಸಿ ತನ್ನ ಸಂಪತ್ತಿಯನ್ನು ಹೊಗಳುವವನಾಗಿಯೂ ಮೊದಲೇ ಪರ್ಯಾಲೋಚಿಸಿ ನಿಮ್ಮಗಳಿಗೆ ಯುಗಾಂತರದವರೆಗೆ ಸ್ಥಿರವಾಗಿರುವ ಅವಮಾನವನ್ನು ಮಾಡಬೇಕೆಂಬ ಇಚ್ಛೆಯುಳ್ಳವನಾಗಿಯೂ ಜಯಕುಮಾರನಲ್ಲಿ ಮಾಲೆಯನ್ನು ಸಂಯೋಜನೆ ಮಾಡಿಸಿದನು– ಹಾಕಿಸಿದನು.''

**ಇತಿ ಬ್ರುವಾಣಃ ಸಂಪ್ರಾಪ್ಯ [೩]ಸವ್ರೀಲಂ ಚಕ್ರಿಣಃ ಸುತಮ್ ।**
**ಇಹ ಷಟ್ಖಂಡರತ್ನಾನಾಂ ಸ್ವಾಮಿನೌ ತ್ವಂ ಪಿತಾ ಚ ವೈ ॥ ೪ ॥**

**ರತ್ನಂ ರತ್ನೇಷು ಕನ್ಯೈವ [೪]ತತ್ರಾಪ್ಯೇಷೈವ ಕನ್ಯಕಾ ।**
**ತಾಂ ತ್ವಾಂ ಸ್ವಗೃಹಮಾನೀಯ ದೌಷ್ಟ್ಯಂ ಪಶ್ಯಾಸ್ಯ ದುರ್ಮತೇಃ ॥ ೫ ॥**

**ಜಯೋ ನಾಮಾತ್ರ ಕಸ್ತಸ್ಮೈ ದತ್ತವಾನ್ಮೃತ್ಯುಚೋದಿತಃ ।**
**ತೇನಾಗತೋಸ್ಮಿ ದೌರ್ವೃತ್ತ್ಯಂ ತದೇತತ್ಸೋಢುಮಕ್ಷಮಃ ॥ ೬ ॥**

**[೫]ಪ್ರಾಕೃತೋಪಿ ನ ಸೋಢವ್ಯಃ [೬]ಪ್ರಾಕೃತೈರಪಿ ಕಿಂ ಪುನಃ ।**
**ತ್ವಾದೃಶೈಃ ಸ್ತ್ರೀಸಮುದ್ಭೂತೋ ಮಾನಭಂಗೋ ಮನಸ್ವಿಭಿಃ ॥ ೭ ॥**

ಈ ಪ್ರಕಾರವಾಗಿ ಹೇಳುವವನಾಗಿ ಲಜ್ಜಾಸಹಿತನಾದ ಚಕ್ರೇಶ್ವರನ ಪುತ್ರ– ಅರ್ಕಕೀರ್ತಿಯನ್ನು ಹೊಂದಿ ''ಈ ಜಗತ್ತಿನಲ್ಲಿ ಆರು ಖಂಡಗಳಲ್ಲಿರುವ ರತ್ನಗಳಿಗೆ ನೀನೂ ನಿನ್ನ ತಂದೆಯೂ ನಿಜವಾಗಿ ಅಧಿಪತಿಗಳು. ರತ್ನಗಳಲ್ಲೆಲ್ಲ ಉತ್ತಮರತ್ನವು ಕನ್ಯೆಯೇ. ಆ ಕನ್ಯಾರತ್ನಗಳಲ್ಲಿಯೂ ಈ ಸುಲೋಚನೆಯೇ ಉತ್ತಮವಾದ ಕನ್ಯಾರತ್ನವು. ದುರ್ಬುದ್ಧಿಯುಳ್ಳವನಾದ ಈ ಅಕಂಪನನ ದುಷ್ಟತ್ವವನ್ನು ನೋಡು, –ನಿನ್ನನ್ನು ತನ್ನ ಮನೆಗೆ ಕರೆದುಕೊಂಡು ಬಂದು ಆ ಕನ್ಯಾರತ್ನವನ್ನು, ಇಲ್ಲಿ ಜಯನೆಂಬವನು ಯಾರು ?ಆ ಜಯನಿಗೆ ಮೃತ್ಯುವಿನಿಂದ ಪ್ರೇರಿತನಾಗಿ, ಕೊಟ್ಟನು. ಆ ಕಾರಣದಿಂದ ನಾನು ಆ ಈ ದುರ್ವ್ಯಾಪಾರವನ್ನು ಸಹಿಸುವುದಕ್ಕೆ ಅಸಮರ್ಥನಾಗಿ ಬಂದಿರುತ್ತೇನೆ. ನೀಚರಿಂದಲೂ ಸ್ವಲ್ಪವಾದ ತಿರಸ್ಕಾರವೂ ಸಹಿಸತಕ್ಕುದಲ್ಲ. ಇನ್ನು ಮಾನಶಾಲಿಗಳಾದ ನಿನ್ನಂಥವರಿಂದ ಸ್ತ್ರೀಸಂಬಂಧವಾಗಿ ಉಂಟಾದ ಮಾನಭಂಗವು ಹೇಳುವುದೇನು ? ಸಹಿಸತಕ್ಕುದೇ ಅಲ್ಲವೆಂದು ಭಾವವು.

**ತದಾದಿಶ ದಿಶಾಮ್ಯಸ್ಮೈ ಪದಂ [೭]ವೈವಸ್ವತಾಸ್ಪದಮ್ ।**
**ದಿಶಾಮ್ಯಾದೇಶಮಾತ್ರೇಣ ಸಮಾಲಾಂ [೮]ತೇಪಿ ಕನ್ಯಕಾಮ್ ॥ ೮ ॥**

೧ ಅಕಂಪನಸ್ಯ. ೨ ಕೋಪಾಗ್ನಿಂ ಪ್ರಜ್ವಲಯನ್. ೩ ಲಜ್ಜಾಸಹಿತಂ. ೪ ಕನ್ಯಾರತ್ನೇಷ್ವಪಿ. ೫ ಪ್ರಕೃತೇಭವಃ ಪರಾಭವಃ, ತುಚ್ಛಕಾರ್ಯಂ ವಾ. ೬ ನೀಚೈರಪಿ. ೭ ಯಮಪುರಂ. ೮ ತುಭ್ಯಂ.

ಆದುದರಿಂದ ಆಜ್ಞೆಮಾಡು. ಇವನಿಗೆ ಯಮನ ಸಂಬಂಧವಾದ ಸ್ಥಾನವನ್ನು –ಯಮಪುರವನ್ನು ಕೊಡುತ್ತೇನೆ. ಆಜ್ಞೆಯಾದೊಡನೆಯೇ ನಿನಗೆ ಆ ಮಾಲೆಯನ್ನೂ ಕನ್ಯೆಯನ್ನೂ ತಂದು ಕೊಡುತ್ತೇನೆ.''

**ಇ[೧]ತ್ಯಸಾಧ್ವೀಂ ಕ್ರುಧಂ ಭರ್ತುಃ ಸ್ವವಾಚೈವಾಸೃಜತ್ಖಲಃ ।**
**ಸದಸತ್ಕಾರ್ಯ[೨]ನಿರ್ವೃತ್ತೌ ಶಕ್ತಿಃ [೩]ಸದಸತೋಃ ಸಮಾ ॥ ೯ ॥**

ಈ ಪ್ರಕಾರವಾಗಿ ದುಷ್ಟನಾದ ದುರ್ಮರ್ಷಣನು ತನ್ನ ಸ್ವಾಮಿಗೆ– ಅರ್ಕಕೀರ್ತಿಗೆ ಅಶುಭವಾದ ಕೋಪವನ್ನು ತನ್ನ ಮಾತಿನಿಂದಲೇ ಉಂಟುಮಾಡಿದನು. ಸಜ್ಜನ ದುರ್ಜನರಿಗೆ ಸತ್ಕಾರ್ಯಾಸತ್ಕಾರ್ಯಗಳನ್ನು ಮಾಡುವುದರಲ್ಲಿ ಶಕ್ತಿಯು ಸಮಾನವಾಗಿರುತ್ತದೆ.

**ತದ್ವಚಃಪವನ[೪]ಪ್ರೌಢಕ್ರೋಧಧೂಮಧ್ವಜಾರುಣಃ ।**
**ಭ್ರಮದ್ವಿಲೋಚನಾಂಗಾರಃ ಕ್ರುದ್ಧಾ[೫]ಗ್ನಿಸುರಸನ್ನಿಭಃ ॥ ೧೦ ॥**

**[೬]ಉಜ್ಜಗಾರ ಜ್ವಲತ್ಸ್ಥೂಲವಿಸ್ಫುಲಿಂಗೋಪಮಾ ಗಿರಃ ।**
**ಅರ್ಕಕೀರ್ತಿರ್ದ್ವಿಷೋಶೇಷಾನ್ ದಿಧಕ್ಷುರಿವ ಪಾವಕಃ ॥ ೧೧ ॥**

ಆ ದುರ್ಮರ್ಷಣನ ವಚನವೆಂಬ ಗಾಳಿಯಿಂದ ಚೆನ್ನಾಗಿ ವೃದ್ಧಿಹೊಂದಿದ ಕೋಪವೆಂಬ ಬೆಂಕಿಯಿಂದ ಕೆಂಪಾದವನೂ ತಿರುಗುತ್ತಿರುವ ಕಣ್ಣುಗಳೆಂಬ ಬೆಂಕಿಯ ಕೆಂಡಗಳುಳ್ಳವನೂ ಕೋಪಗೊಂಡಿರುವ ಅಗ್ನಿಕುಮಾರನಿಗೆ ಸಮಾನನೂ ಆದ ಅರ್ಕಕೀರ್ತಿಕುಮಾರನು ಸಮಸ್ತಶತ್ರುಗಳನ್ನು ದಹಿಸಬೇಕೆಂಬ ಇಚ್ಛೆಯುಳ್ಳುದಾದ ಬೆಂಕಿಯಂತೆ, ಜ್ವಲಿಸುತ್ತಿರುವುದೂ ಸ್ಥೂಲವೂ ಆದ ಬೆಂಕಿಯ ಕಿಡಿಗಳಿಗೆ ಸಮಾನಗಳಾದ ವಚನಗಳನ್ನು ಛರ್ದಿಮಾಡಿದನು–ಹೇಳಿದನು.

**ಮಾಮಧಿಕ್ಷಿಪ್ಯ ಕನ್ಯೇಯಂ ಯೇನ ದತ್ತಾ ದುರಾತ್ಮನಾ ।**
**ತೇನ ಪ್ರಾಗೇವ ಮೂಢೇನ ದತ್ತಃ ಸ್ವಸ್ಮೈ ಜಲಾಂಜಲಿಃ ॥ ೧೨ ॥**

''ಯಾವ ದುರಾತ್ಮನು ನನ್ನನ್ನು ತಿರಸ್ಕರಿಸಿ ಈ ಕನ್ಯೆಯನ್ನು ಕೊಟ್ಟನೋ ಆ ಮೂಢನು ತನಗೆ ಜಲಾಂಜಲಿಯನ್ನು (ಮೃತ್ಯುಪಾಲಾಗುವವನಾದ ತನಗೆ ತಿಲತರ್ಪಣವನ್ನು) ಮೊದಲೇ ಕೊಟ್ಟನು.

**ಅತಿಕ್ರಾಂತೇ ರಥೇ ತಸ್ಮಿನ್ನುತ್ಥಿತಃ ಕೋಪಪಾವಕಃ ।**
**ತದೈವ ಕಿಂತು ಕೋ ದಾಹ್ಯ ಇತ್ಯಜಾನನ್ನಹಂ ಸ್ಥಿತಃ ॥ ೧೩ ॥**

ಆ ರಥವು ನನ್ನನ್ನು ಮೀರಿ ಹೋದಾಗಲೇ ಕೋಪಾಗ್ನಿಯುಂಟಾಯಿತು. ಆದರೆ ಸುಡಲ್ಪಡತಕ್ಕವನಾರು ? ಎಂಬುದಾಗಿ ತಿಳಿಯದವನಾಗಿ ನಾನಿದ್ದೆನು.

**ನಾಮ್ನಾತಿಸಂಧಿತೋ ಮೂಢೋ ಮನ್ಯತೇ ಸ್ವ[೭]ಮಕಂಪನಮ್ ।**
**ಕ್ರುದ್ಧೇ ಮಯಿ ನ ವೇತ್ತೀತಿ ಕಂಪತೇ [೮]ಸಧರಾ ಧರಾ ॥ ೧೪ ॥**

ಅಕಂಪನನೆಂಬ ಹೆಸರಿನಿಂದ ವಂಚಿತನಾದ ಮೂಢನು ತನ್ನನ್ನು ಅಕಂಪನ– ಚಲಿಸದಿರುವವನನ್ನಾಗಿ ತಿಳಿಯುತ್ತಾನೆ. ನಾನು ಕೋಪಗೊಂಡರೆ ಪರ್ವತಸಹಿತವಾದ ಪೃಥಿವಿಯು ನಡುಗುತ್ತದೆಂಬುದನ್ನು ತಿಳಿಯುವುದಿಲ್ಲ.

**[೯]ಮತ್ಖಡ್ಗವಾರಿವಾರಾಶಿರಾಸ್ತಾಂ ತಾವದಗೋಚರಃ ।**
**ಸಂಹರತ್ಯಖಿಲಾನ್ ಶತ್ರೂನ್ [೧೦]ಬಲವೇಲೈವ ಹೇಲಯಾ ॥ ೧೫ ॥**

೧ ಅಶುಭಾಂ. ೨ ನಿಷ್ಪತ್ತೌ. ೩ ಸಜ್ಜನದುರ್ಜನಯೋಃ. ೪ ಪ್ರವೃದ್ಧ. ೫ ಅಗ್ನಿಕುಮಾರ. ೬ ಛರ್ದಿತವಾನ್ ಉವಾಚೇತ್ಯರ್ಥಃ. ೭ ನಿಶ್ಚಲಂ. ೮ ಪರ್ವತಸಹಿತಾ. ೯ ಅಸ್ಮದಾಯುಧಧಾರಾಜಲಮೇವ ವಾರ್ಧಿಃ. ೧೦ ಸೇನಾವೇಲಾ.

ಅಗೋಚರವಾದ-ಕಣ್ಣಿಗೆ ಕಾಣದಿರುವ ನನ್ನ ಖಡ್ಗಧಾರೆಯ ಜಲವೆಂಬ ಸಮುದ್ರವು ಹಾಗಿರಲಿ, ಸೈನ್ಯವೆಂಬ ದಡವೇ ಲೀಲೆಯಿಂದ ಸಮಸ್ತ ಶತ್ರುಗಳನ್ನು ಸಂಹರಿಸುವುದು.

**[೧]ಪ್ರರೂಢಶುಷ್ಕನಾಥೇಂದುದುರ್ವಂಶವಿಪುಲಾಟವೀ ।**
**ಮತ್ಕ್ರೋಧಪ್ರಸ್ಫುರದ್ವಹ್ನಿಭಸ್ಮಿತಾ[೨]ಸ್ಮಿನ್ನ [೩]ರೋಕ್ಷ್ಯತಿ ॥ ೧೬ ॥**

ನನ್ನ ಕೋಪವೆಂಬ ಜ್ವಲಿಸುತ್ತಿರುವ ಬೆಂಕಿಯಿಂದ ಬೂದಿಮಾಡಲ್ಪಟ್ಟಿದ್ದೂ ಬೆಳೆದಿರುವುದೂ ನಿಸ್ಸಾರವೂ ದುಷ್ಟವೂ ಆದ ನಾಥವಂಶ ಸೋಮವಂಶವೆಂಬ ದೊಡ್ಡಕಾಡು ಈ ಲೋಕದಲ್ಲಿ ಹುಟ್ಟದು.

**ವೀರಪಟ್ಟಸ್ತದಾ ಸೋಢೋ ಭುವೋ [೪]ಭರ್ತುರ್ಭಯಾನ್ಮಯಾ ।**
**ಕಥಮದ್ಯ ಸಹೇ ಮಾಲಾಂ ಸರ್ವಸೌಭಾಗ್ಯಲೋಪಿನೀಮ್ ॥ ೧೭ ॥**

ಆಗ ನಾನು ಭೂಮೀಶ್ವರನ-ಚಕ್ರವರ್ತಿಯ ಭಯದಿಂದ ವೀರಪಟ್ಟವನ್ನು ಸಹಿಸಿದೆನು. ಈ ದಿವಸ ಸಮಸ್ತಸೌಭಾಗ್ಯವನ್ನು ನಾಶಮಾಡುವುದಾದ ಸ್ವಯಂವರ ಮಾಲೆಯನ್ನು ಹೇಗೆ ಸಹಿಸುವೆನು ?

**ಮದ್ಯಶಃಕುಸುಮಾಮ್ಲಾನಮಾಲೈವಾಸ್ತ್ವಾಯುಗಾವಧಿ ।**
**ಜಯಲಕ್ಷ್ಮ್ಯಾ ಸಹಾದ್ಯೈತಾಂ ಹರೇಯಂ ಜಯವಕ್ಷಸಃ ॥ ೧೮ ॥**

ನನ್ನ ಯಶಸ್ಸೆಂಬ ಪುಷ್ಪಗಳ ಬಾಡದಿರುವ ಮಾಲೆಯೇ ಯುಗಾಂತದವರೆಗೆ ಇರಲಿ. ಈ ದಿವಸ ಜಯನ ಎದೆಯಿಂದ ಈ ಸ್ವಯಂವರಮಾಲೆಯನ್ನು ಜಯ ಲಕ್ಷ್ಮಿಯೊಡನೆ ಎಳೆದು ತೆಗೆದುಕೊಳ್ಳುವೆನು.

**[೫]ಜಲದಾನ್ [೬]ಪೇಲವಾನ್ ಜಿತ್ವಾ ಮರುನ್ಮಾತ್ರ[೭]ವಿಲಾಯಿನಃ ।**
**ಅದ್ಯ ಪಶ್ಯಾಮಿ ದೃಪ್ತಸ್ಯ ಜಯಸ್ಯ ಜಯಮಾಹವೇ ॥ ೧೯ ॥**

ಗಾಳಿಯಿಂದಲೇ ನಾಶವನ್ನು ಹೊಂದುವವರೂ ಕೋಮಲವಾಗಿರುವವರೂ ಆದ ಮೇಘಗಳನ್ನು-ಮೇಘಸ್ವರಾಮರರನ್ನು ಜಯಿಸಿ ಗರ್ವಿತನಾಗಿರುವ ಜಯನ ಜಯವನ್ನು ಈ ದಿವಸ ಯುದ್ಧದಲ್ಲಿ ನೋಡುತ್ತೇನೆ.''

**ಇತಿ ನಿರ್ಭಿನ್ನಮರ್ಯಾದಃ ಕಾರ್ಯಾಕಾರ್ಯವಿಮೂಢಧೀಃ ।**
**ಅನಿವಾರ್ಯೋ ವಿನಿರ್ಜಿತ್ಯ [೮]ಕಾಲಾಂತಜಲದಧ್ವನಿಮ್ ॥ ೨೦ ॥**

ಮರ್ಯಾದೆಯನ್ನು ಮೀರಿದವನೂ ಕಾರ್ಯ ಅಕಾರ್ಯಗಳ ವಿಷಯದಲ್ಲಿ ಮೂಢವಾದ ಬುದ್ಧಿಯುಳ್ಳವನೂ ತಡೆಯಲ್ಪಡುವುದಕ್ಕೆ ಅಶಕ್ಯನೂ ಆದ ಅರ್ಕಕೀರ್ತಿಯು ಪ್ರಳಯಕಾಲದ ಮೇಘಧ್ವನಿಯನ್ನು ಜಯಿಸಿ (ಗಟ್ಟಿಯಾಗಿ) ಮೇಲೆ ಹೇಳಿದಂತೆ ಮಾತುಗಳನ್ನಾಡಿದನು.

**ಅನಲಸ್ಯಾನಿಲೋ ವಾಸ್ಯ ಸಾಹಾಯ್ಯಮುಗಮಂಸ್ತದಾ ।**
**[೯]ಕೇಪಿ ಪಾಪಕ್ರಿಯಾರಂಭೇ ಸುಲಭಾಃ [೧೦]ಸಾಮವಾಯಿಕಾಃ ॥ ೨೧ ॥**

ಆಗ ಬೆಂಕಿಗೆ ಗಾಳಿಯಂತೆ, ಈ ಅರ್ಕಕೀರ್ತಿಗೆ ಕೆಲವು ಮಂದಿ ದೊರೆಗಳು ಸಾಹಾಯ್ಯವನ್ನು ಹೊಂದಿದರು-ಸಹಾಯಕರಾದರು. ಪಾಪಕಾರ್ಯದ ಆರಂಭ ದಲ್ಲಿ ಸಹಾಯ ಮಾಡುವವರು ಸುಲಭವಾಗಿರುತ್ತಾರೆ.

**ತದಾ ಸರ್ವೋ[೧೧]ಪಧಾಶುದ್ಧೋ ಮಂತ್ರೀ ಜಾನಪದಾದಿಭಿಃ ।**
**ಅನವದ್ಯಮತಿರ್ನಾಮ ಲಕ್ಷಿತೋ ಮಂತ್ರಿಲಕ್ಷಣೈಃ ॥ ೨೨ ॥**

**ಧರ್ಮ್ಯಮರ್ಥ್ಯಂ ಯಶಸ್ಸಾರಂ ಸಸೌಷ್ಠವಮನಿಷ್ಠುರಮ್ ।**
**ಸುವಿಚಾರ್ಯ ವಚೋ ನ್ಯಾಯ್ಯಂ ಪಥ್ಯಂ ವಕ್ತುಂ ಪ್ರಚಕ್ರಮೇ ॥ ೨೩ ॥**

ಆಗ ದೇಶವಾಸಿಗಳು ಪುರನಿವಾಸಿಗಳು ಮೊದಲಾದವರೊಡನೆ ಕೂಡಿದವನೂ ಸಮಸ್ತವಾದ ಧರ್ಮಾರ್ಥಕಾಮಗಳ ಪರೀಕ್ಷೆಯಿಂದ ಶುದ್ಧನಾಗಿರುವವನೂ ಮಂತ್ರಿಗಿರಬೇಕಾದ ಲಕ್ಷಣಗಳಿಂದ ಕೂಡಿರುವವನೂ ಆದ ಅನವದ್ಯಮತಿಯೆಂಬ ಮಂತ್ರಿಯು ಧರ್ಮದಿಂದ ಕೂಡಿದುದೂ ಪ್ರಯೋಜನವನ್ನುಂಟುಮಾಡುವುದೂ ಕೀರ್ತಿಗೆ ಸಾರವಾದ ಕಾರಣವೂ ಅಲಂಕಾರಯುಕ್ತವೂ ಕಠೋರವಲ್ಲದುದೂ ನ್ಯಾಯದಿಂದ ಕೂಡಿದುದೂ ಹಿತಕರವೂ ಆದ ವಚನವನ್ನು ಚೆನ್ನಾಗಿ ವಿಚಾರಮಾಡಿ ಹೇಳುವುದಕ್ಕೆ ತೊಡಗಿದನು.

**ಮಹೀ ವ್ಯೋಮ ಶಶೀ ಸೂರ್ಯಃ ಸರಿದೀಶೋನಿಲೋನಲಃ ।**
**ತ್ವಂ ತ್ವತ್ಪಿತಾ ಘನಾಃ ಕಾಲೋ ಜಗತ್ಕ್ಷೇಮವಿಧಾಯಿನಃ ॥ ೨೪ ॥**

''ಎಲೈ ಅರ್ಕಕೀರ್ತಿಕುಮಾರನೇ! ಭೂಮಿಯೂ ಆಕಾಶವೂ ಚಂದ್ರನೂ ಸೂರ್ಯನೂ ಸಮುದ್ರವೂ ಗಾಳಿಯೂ ಬೆಂಕಿಯೂ ನೀನೂ ನಿನ್ನ ತಂದೆಯೂ ಮೊಡಗಳೂ ಕಾಲವೂ ಲೋಕಕ್ಕೆ ಕ್ಷೇಮವನ್ನು ಮಾಡುವವರು.

**ವಿಪರ್ಯಾಸೇ [೧]ವಿಪರ್ಯೇತಿ ಭವತಾಮನುವರ್ತನಾತ್ ।**
**ವರ್ತತೇ [೨]ಸೃಷ್ಟಿರೇಷಾ ಹಿ ವ್ಯಕ್ತಂ [೩]ಯುಷ್ಮಾಸು ತಿಷ್ಠತೇ ॥ ೨೫ ॥**

ಜಗತ್ಸೃಷ್ಟಿಯು ನಿಮ್ಮಗಳ ಅನುಸರಣೆಯಿಂದ ಇರುತ್ತದೆ. ಈ ಸೃಷ್ಟಿಯು ಭೂಮಿಯೇ ಮೊದಲಾದ ನಿಮ್ಮಗಳಲ್ಲಿ ಸ್ಫುಟವಾಗಿ ನಿಂತಿರುತ್ತದೆ. ಆದುದರಿಂದ ನಿಮ್ಮಗಳ ವ್ಯಾಪಾರವು ವಿಪರೀತವಾದರೆ ಸೃಷ್ಟಿ-ಲೋಕವೂ ವಿಪರೀತಭಾವವನ್ನು ಹೊಂದುವುದು.

**ಗುಣಾಃ [೪]ಕ್ಷಮಾದಯಃ ಸರ್ವೇ [೫]ವ್ಯಸ್ತಾಸ್ತೇಷು [೬]ಕ್ಷಮಾದಿಷು ।**
**ಸಮಸ್ತಾಸ್ತೇ ಜಗದ್ವೃದ್ಧ್ಯೈ ಚಕ್ರಿಣಿ ತ್ವಯಿ ಚ ಸ್ಥಿತಾಃ ॥ ೨೬ ॥**

ಆ ಭೂಮಿ ಮೊದಲಾದುವುಗಳಲ್ಲಿ ಕ್ಷಮೆ ಅವಕಾಶದಾನ ಸಂತಾಪಹರಣ ಪ್ರಕಾಶನ ಮೊದಲಾದ ಎಲ್ಲಾ ಗುಣಗಳೂ ಒಂದೊಂದಾಗಿರುತ್ತವೆ. ಒಂದೊಂದರಲ್ಲಿ ಒಂದೊಂದು ಗುಣವಿರುತ್ತದೆಂದು ಭಾವವು. ಎಲ್ಲಾ ಆ ಗುಣಗಳೂ ಜಗತ್ತಿನ ವೃದ್ಧಿ-ಹಿತಕ್ಕೋಸ್ಕರ ಚಕ್ರವರ್ತಿಯಲ್ಲಿಯೂ ನಿನ್ನಲ್ಲಿಯೂ ಇರುತ್ತವೆ.

**[೭]ಚ್ಯವಂತೇ ಸ್ವಸ್ಥಿತೇಃ ಕಾಲೇ ಕ್ವಚಿತ್ತೇಪಿ [೮]ಕ್ಷಮಾದಯಃ ।**
**ನ ಸ ಕಾಲೋಸ್ತಿ ಯಃ ಕರ್ತಾ ಪ್ರಚ್ಯುತೇ[೯]ರ್ಯುವಯೋಃ ಸ್ಥಿತೇಃ ॥**

ಆ ಭೂಮಿ ಮೊದಲಾದುವುಗಳೂ ಒಂದು ಕಾಲದಲ್ಲಿ ತಮ್ಮ ಸ್ಥಿತಿಯಿಂದ ಜಾರುತ್ತವೆ. ಆದರೆ ನಿಮ್ಮೀರ್ವರ-ಭರತಾರ್ಕಕೀರ್ತಿಗಳ ಸ್ಥಿತಿಯ ಜಾರುವಿಕೆಗೆ ಕಾರಣವಾದ ಕಾಲವೇ ಇಲ್ಲ. ಭೂಮಿ ಮೊದಲಾದುವು ತಮ್ಮ ಗುಣಗಳಿಂದ ತಪ್ಪಿದರೂ ಭರತಾರ್ಕಕೀರ್ತಿಗಳು ತಪ್ಪಬಾರದೆಂದು ಭಾವವು.

**ಸೃಷ್ಟಿಃ [೧೦]ಪಿತಾಮಹೇನೇಯಂ ಸೃಷ್ಟ್ವೈನಾಂ ತತ್ಸಮರ್ಪಿತಾಮ್ ।**
**ಪಾತಿ ಸಮ್ರಾಟ್ ಪಿತಾ ತೇದ್ಯ [೧೧]ತಸ್ಯಾಸ್ತ್ವಮನುಪಾಲಕಃ ॥ ೨೮ ॥**

ನಿನ್ನ ತಾತಂದಿರಾದ ಆದಿಬ್ರಹ್ಮರಿಂದ ಈ ಸೃಷ್ಟಿಯು ಸೃಷ್ಟಿಸಲ್ಪಟ್ಟಿತು. ನಿನ್ನ ತಂದೆಯಾದ ಚಕ್ರೇಶ್ವರನು ಆದಿಬ್ರಹ್ಮರಿಂದ ಕೊಡಲ್ಪಟ್ಟಿರುವ ಈ ಸೃಷ್ಟಿಯನ್ನು ಕಾಪಾಡುತ್ತಾನೆ. ಈ ದಿವಸ ನೀನು ಆ ಸೃಷ್ಟಿಯ ಅನುಪಾಲನವನ್ನು ಮಾಡುವವನು.

**ದೈವಮಾನುಷಬಾಧಾಭ್ಯಃ ಕ್ಷತಿ[೧೨]ಸ್ತಸ್ಯಾಃ ಹಿ ಯಾ ಕ್ಷಿತೌ ।**
**ಮಮೈವೇಯಮಿತಿ ಸ್ಮೃತ್ವಾ ಸಮಾಧೇಯಾ ತ್ವಯೈವ ಸಾ ॥ ೨೯ ॥**

ಭೂಮಿಯಲ್ಲಿ ದೈವಮನುಷ್ಯರಿಂದುಂಟಾಗುವ ಬಾಧೆಗಳಿಂದ ಆ ಸೃಷ್ಟಿಗೆ ಯಾವುದೊಂದು ಹಾನಿಯುಂಟಾಗುವುದೋ ''ಈ ಹಾನಿಯು ನನಗೇ'' ಎಂದು ಸ್ಮರಿಸಿಕೊಂಡು ನಿನ್ನಿಂದಲೇ ಆ ಹಾನಿಯು ನಿವಾರಿಸಲ್ಪಡತಕ್ಕುದಾಗಿರುತ್ತದೆ.

೧ ಪ್ರವೃದ್ಧನಿಸ್ಸಾರ ದುಷ್ಟನಾಥವಂಶ ಸೋಮವಂಶ ವಿಶಾಲವಿಪಿನಂ. ೨ ಲೋಕೇ. ೩ ಜನಿಷ್ಯತೇ. ೪ ಚಕ್ರಿಣಃ. ೫ ಮೇಘಸ್ವರಾನ್. ೬ ಮೃದೂನ್. ೭ ವಿನಾಶಿನಃ. ೮ ಪ್ರಲಯಕಾಲ. ೯ ರಾಜಾನಃ. ೧೦ ಸಹಾಯಿನಃ. ೧೧ ಧರ್ಮಾದ್ಯೈರ್ಯತ್ಪರೀಕ್ಷಣಂ ಸಾ ಉಪಧಾ.

೧ ವಿಪರ್ಯಾಸಮೇತಿ. ೨ ಜಗತ್ಸೃಷ್ಟಿಃ. ೩ ಮಹೀಪ್ರಭೃತಿಷು. ೪ ಕ್ಷಾಂತ್ಯವಗಾಹನ ಸಂತಾಪಹರಣ ಪ್ರಕಾಶನಾದಿಗುಣಾಃ. ೫ ವಿಕಲಾಃ. ೬ ಮಹ್ಯಾದಿಷು. ೭ ಪ್ರಚ್ಯುತಾ ಭವಂತಿ ಚೇದ್ ಭವಂತು. ೮ ಮಹ್ಯಾದಯಃ. ೯ ಭರತಾರ್ಕಕೀರ್ತ್ಯೋಃ. ೧೦ ಆದಿಬ್ರಹ್ಮಣಾ. ೧೧ ಸೃಷ್ಟೇಃ. ೧೨ ಸೃಷ್ಟೇಃ.

**[೧]ಕ್ಷತಾತ್ತ್ರಾಯತ ಇತ್ಯಾಸೀತ್ಕ್ಷತ್ರೋಽಯಂ ಭರತೇಶ್ವರಃ ।**
**ಸುತಸ್ತಸ್ಯೌರಸೋ ಜ್ಯೇಷ್ಠಃ [೨]ಕ್ಷತ್ರಿಯಸ್ತ್ವಂ ತದಾದಿಮಃ ॥ ೩೦ ॥**

ಈ ಭರತೇಶ್ವರನು ಬಾಧೆಯ ದೆಸೆಯಿಂದ ಕಾಪಾಡುತ್ತಾನೆಂದು ಕ್ಷತ್ರನಾದನು. ಆ ಭರತೇಶ್ವರನ ಔರಸ ಮತ್ತು ಜ್ಯೇಷ್ಠಪುತ್ರನಾದ ನೀನು ಆ ಕಾರಣದಿಂದ ಮೊದಲನೆಯ ಕ್ಷತ್ರಿಯನಾಗಿರುತ್ತಿ.

**ತ್ವತ್ತೋ ನ್ಯಾಯಾಃ ಪ್ರವರ್ತಂತೇ ನೂತನಾ ಯೇ ಪುರಾತನಾಃ ।**
**ತೇಽಪಿ ತ್ವತ್ಪಾಲನಾದೇವ ಭವಂತ್ಯತ್ರ ಪುರಾತನಾಃ ॥ ೩೧ ॥**

ನಿನ್ನಿಂದ ಹೊಸದಾದ ಮತ್ತು ಹಳೆಯದಾದ ಯಾವ ನ್ಯಾಯಗಳು ಆಚರಣೆಯಲ್ಲಿ ಬರುತ್ತವೋ ಆ ಹೊಸದಾದ ನ್ಯಾಯಗಳೂ ನಿನ್ನ ಪರಿಪಾಲನೆಯಿಂದಲೇ ಈ ಲೋಕದಲ್ಲಿ ಪುರಾತನ ನ್ಯಾಯಗಳಾಗುತ್ತವೆ. ದೊಡ್ಡವರಿಂದ ಆಚರಿಸಲ್ಪಟ್ಟುದಾದ ನೂತನನ್ಯಾಯವೂ ಪುರಾತನನ್ಯಾಯವಾಗಿ ಭಾವಿಸಲ್ಪಡುವುದೆಂದು ಭಾವವು.

**[೩]ಸನಾತನೋಽಸ್ತಿ ಮಾರ್ಗೋಽಯಂ ಶ್ರುತಿಸ್ಮೃತಿಷು ಭಾಷಿತಃ ।**
**ವಿವಾಹವಿಧಿಭೇದೇಷು [೪]ವರಿಷ್ಠೋಽಯಂ ಸ್ವಯಂವರಃ ॥ ೩೨ ॥**

ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಈ ಮಾರ್ಗವು ನಿತ್ಯವಾದುದಾಗಿರುತ್ತದೆ. ವಿವಾಹವಿಧಿಯ ಭೇದಗಳಲ್ಲಿ ಈ ಸ್ವಯಂವರವಿಧಿಯು ಬಹು ಶ್ರೇಷ್ಠವಾಗಿರುತ್ತದೆ.

**ಯದಿ ಸ್ಯಾತ್ಸರ್ವಸಂಪ್ರಾರ್ಥ್ಯಾ ಕನ್ಯಕಾ ಪುಣ್ಯಭಾಜನಮ್ ।**
**ಅವಿರೋಧೋ ವ್ಯಧಾಯ್ಯತ್ರ ದೈವಾಯತ್ತೋ ವಿಧಿರ್ಬುಧೈಃ ॥ ೩೩ ॥**

ಪುಣ್ಯಕ್ಕೆ ಪಾತ್ರಳಾದ ಒಬ್ಬಳು ಕನ್ಯೆಯು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವುದಕ್ಕೆ–ವರಿಸಲ್ಪಡುವುದಕ್ಕೆ ಯೋಗ್ಯಳಾಗಿದ್ದರೆ ಈ ವಿಷಯದಲ್ಲಿ ಜ್ಞಾನಿಗಳಿಂದ ಅದೃಷ್ಟಾಧೀನವೂ ವಿರೋಧವಿಲ್ಲದುದೂ ಆದ ಸ್ವಯಂವರವಿಧಿಯು ಮಾಡಲ್ಪಟ್ಟಿರುತ್ತದೆ.

**ಮಧ್ಯೇ ಮಹಾಕುಲೀನೇಷು ಕಂಚಿದೇಕಮಭೀಪ್ಸಿತಮ್ ।**
**ಸಲಕ್ಷ್ಮೀಕಮಲಕ್ಷ್ಮೀಕಂ ಗುಣಿನಂ [೫]ಗುಣದುರ್ಗತಮ್ ॥ ೩೪ ॥**

**ವಿರೂಪಂ ರೂಪಿಣಂ ಚಾಪಿ ವೃಣೀತೇ[೬]ಸೌ ವಿಧೇರ್ವಶಾತ್ ।**
**ನ ತತ್ರ ಮತ್ಸರಃ ಕಾರ್ಯಃ ಶೇಷೈರ್ನ್ಯಾಯೋಽಯಮೀದೃಶಃ ॥ ೩೫ ॥**

ಈ ಕನ್ಯೆಯು ಅದೃಷ್ಟದ ವಶದಿಂದ ಮಹಾವಂಶೀಯರಾದ ಪುರುಷರುಗಳ ಮಧ್ಯದಲ್ಲಿ ತನ್ನಿಂದ ಇಚ್ಛಿಸಲ್ಪಟ್ಟವನಾದ ಐಶ್ವರ್ಯವುಳ್ಳವನನ್ನೋ ಬಡವನನ್ನೋ ಗುಣವುಳ್ಳವನನ್ನೋ ಗುಣಹೀನನ್ನೋ ಕುರೂಪಿಯನ್ನೋ ಸುಂದರನನ್ನೋ ಒಬ್ಬಾನೊಬ್ಬನನ್ನು ವರಿಸುತ್ತಾಳೆ. ಆ ವಿಷಯದಲ್ಲಿ ಉಳಿದವರಿಂದ ಮತ್ಸರವು ಮಾಡತಕ್ಕುದಲ್ಲವು. ಈ ಪ್ರಕಾರವಾದ ಇದು (ನಡೆವಳಿಕೆಯು) ನ್ಯಾಯವಾದುದು.

**ಲಂಘ್ಯತೇ ಯದಿ ಕೇನಾಪಿ ನ್ಯಾಯೋ ರಕ್ಷ್ಯಸ್ತ್ವಯೈವ ಸಃ ।**
**ನೇ[೭]ದಂ ತವೋಚಿತಂ ಕ್ವಾಪಿ ಪಾತಾ ಸ್ಯಾತ್ಪಾರಿಪಂಥಿಕಃ ॥ ೩೬ ॥**

ಯಾರಾದರೂ ನ್ಯಾಯವನ್ನು ಮೀರಿದರೆ ಆ ನ್ಯಾಯವನ್ನು ನೀನೇ ಕಾಪಾಡಬೇಕು. ನ್ಯಾಯವನ್ನು ಮೀರುವಿಕೆಯು ನಿನಗೆ ಉಚಿತವಾದುದಲ್ಲ. ರಕ್ಷಕನು ಎಲ್ಲಿಯಾದರೂ ವೈರವನ್ನು ಮಾಡುವವನಾಗುವನೇ ?

**ಭವತ್ಕುಲಾಚಲಸ್ಯೇಮೌ ನಾಥಸೋಮಾನ್ವಯೌ ಪುರಾ ।**
**ಮೇರೋರ್ನಿಷಧನೀಲೌ ವಾ [೮]ಸತ್ಪಕ್ಷೌ ಪುರುಣಾ ಕೃತೌ ॥ ೩೭ ॥**

ಪೂರ್ವದಲ್ಲಿ ವೃಷಭಸ್ವಾಮಿಯಿಂದ, ಮೇರುಪರ್ವತಕ್ಕೆ ಶ್ರೇಷ್ಠವಾದ ರೆಕ್ಕೆಗಳಂತಿರುವ ನಿಷಧ ನೀಲಪರ್ವತಗಳೋಪಾದಿಯಲ್ಲಿ, ನಿನ್ನ ವಂಶವೆಂಬ ಪರ್ವತಕ್ಕೆ

೧ ಬಾಧಾಯಾಃ ಸಕಾಶಾತ್. ೨ ಕ್ಷತ್ರಸ್ಯಾಪತ್ಯಂ ಕ್ಷತ್ರಿಯಃ. ೩ ನಿತ್ಯಃ. ೪ ಅತಿಶಯೇನ ವರಃ. ೫ ಗುಣದರಿದ್ರಂ. ೬ ಕನ್ಯಾ. ೭ ನ್ಯಾಯಲಂಘನಂ. ೮ ಸತ್ಸಹಾಯೌ, ಸತ್ಪಕ್ಷತೀಚ.

ಈ ನಾಥವಂಶ ಸೋಮವಂಶಗಳು ಶ್ರೇಷ್ಠವಾದ ಸಹಾಯವುಳ್ಳವುಗಳಾಗಿ ಮಾಡಲ್ಪಟ್ಟವು.

**ಸಕಲಕ್ಷತ್ರಿಯಜ್ಯೇಷ್ಠಃ ಪೂಜ್ಯೋಽಯಂ [೧]ರಾಜರಾಜವತ್ ।**
**ಅಕಂಪನಮಹಾರಾಜೋ ರಾಜೇವ ಜ್ಯೋತಿಷಾಂ ಗಣೈಃ ॥ ೩೮ ॥**

ಚಕ್ರೇಶ್ವರನಂತೆ, ಸಮಸ್ತ ಕ್ಷತ್ರಿಯರಿಗೆ ಹಿರಿಯನಾದ ಈ ಅಕಂಪನಮಹಾರಾಜನು, ಜ್ಯೋತಿರ್ದೇವತೆಗಳ ಸಮೂಹಗಳಿಂದ ಚಂದ್ರನು ಪೂಜ್ಯನಾಗಿರುವಂತೆ, ರಾಜರುಗಳಿಂದ ಪೂಜಿಸಲ್ಪಡುವುದಕ್ಕೆ ಯೋಗ್ಯನಾಗಿದ್ದಾನೆ.

**ನಿರ್ವಿಶೇಷಂ ಪುರೋರೇನಂ ಮನ್ಯತೇ ಭರತೇಶ್ವರಃ ।**
**ಪೂಜ್ಯಾತಿಲಂಘನಂ ಪ್ರಾಹುರುಭಯತ್ರಾಶುಭಾವಹಮ್ ॥ ೩೯ ॥**

ಭರತೇಶ್ವರನು ಈ ಅಕಂಪನಮಹಾರಾಜನನ್ನು ವೃಷಭಸ್ವಾಮಿಗೆ ಸಮಾನನನ್ನಾಗಿ ತಿಳಿಯುತ್ತಾನೆ. ಪೂಜ್ಯರನ್ನು ಮೀರುವಿಕೆಯು ಇಹಲೋಕ ಪರಲೋಕಗಳಲ್ಲಿ ಅಶುಭವನ್ನುಂಟುಮಾಡುವುದೆಂದು ಜ್ಞಾನಿಗಳು ಹೇಳುತ್ತಾರೆ.

**ಪಶ್ಯ [೨]ತಾದೃಶ ಏವಾತ್ರ ಸೋಮವಂಶೋಽಪಿ ಕಥ್ಯತೇ ।**
**ಧರ್ಮತೀರ್ಥಂ ಭವದ್ವಂಶಾದ್ದಾನತೀರ್ಥಂ ತತೋ ಯತಃ ॥ ೪೦ ॥**

ನೋಡು, ಈ ಲೋಕದಲ್ಲಿ ನಿನ್ನ ಇಕ್ಷ್ವಾಕುವಂಶದಿಂದ ಧರ್ಮತೀರ್ಥವೂ ಜಯಕುಮಾರನ ಸೋಮವಂಶದಿಂದ ದಾನತೀರ್ಥವೂ ಉಂಟಾಗಿರುವುದರಿಂದ ಸೋಮವಂಶವೂ ಅಂತಹದೇ–ಇಕ್ಷ್ವಾಕುವಂಶಸದೃಶವಾದುದೇ ಎಂದು ಹೇಳಲ್ಪಡುತ್ತದೆ.

**ಪುರಸ್ಸರಣಮಾತ್ರೇಣ ಶ್ಲಾಘ್ಯಂ ಚಕ್ರಂ ವಿಶಾಂ ಪ್ರಭೋಃ ।**
**ಪ್ರಾಯೋ ದುಸ್ಸಾಧಸಂಸಿದ್ಧೌ ಶ್ಲಾಘತೇ ಜಯಮೇವ ಸಃ ॥ ೪೧ ॥**

ಭರತೇಶ್ವರನ ಚಕ್ರವು ಮುಂದೆ ನಡೆದಮಾತ್ರದಿಂದಲೇ ಶ್ಲಾಘ್ಯವಾದುದು. ಚಕ್ರವರ್ತಿಯು ಬಹಳಮಟ್ಟಿಗೆ ಸಾಧಿಸುವುದಕ್ಕೆ ಕಷ್ಟವಾದ ಕಾರ್ಯದ ಸಿದ್ಧಿಯಲ್ಲಿ ಜಯಕುಮಾರನನ್ನೇ ಶ್ಲಾಘಿಸುತ್ತಾನೆ.

**ಏತಸ್ಯ ದಿಗ್ಜಯೇ ಸರ್ವೈರ್ದೃಷ್ಟಮೇವೇಹ ಪೌರುಷಮ್ ।**
**ಅನೇನ [೩]ವಃ ಕೃತಃ [೪]ಪ್ರೈಷಃ ಸ್ಮರ್ತವ್ಯೋ ನನು ಸ ತ್ವಯಾ ॥ ೪೨ ॥**

ದಿಗ್ವಿಜಯದಲ್ಲಿ ಈ ಜಯಕುಮಾರನ ಪೌರುಷ–ಪರಾಕ್ರಮವು ಎಲ್ಲರಿಂದಲೂ ನೋಡಲ್ಪಟ್ಟೇ ಇರುವುದಲ್ಲವೇ ? ನಿಮ್ಮ ಸೇವೆಯು ಇವನಿಂದ ಮಾಡಲ್ಪಟ್ಟಿರುತ್ತದೆ. ಆ ಸೇವೆಯು ನಿನ್ನಿಂದ ಸ್ಮರಿಸಲ್ಪಡತಕ್ಕುದಾಗಿರುತ್ತದಲ್ಲವೇ ?

**ಜ್ಞಾತ್ವಾ [೫]ಸಂಭಾವ್ಯಶೌರ್ಯೋಽಪಿ ಸಮ್ಮಾನ್ಯೋ ಭರ್ತೃಭಿರ್ಭಟಃ ।**
**[೬]ದೃಷ್ಟಸಾರಃ ಸ್ವಸಾಧ್ಯೇಽರ್ಥೇ ಸಾಧಿತಾರ್ಥಃ ಕಿಮುಚ್ಯತೇ ॥ ೪೩ ॥**

ಭಟನು ಮುಂದೆ ಶೌರ್ಯವುಳ್ಳವನಾಗುವನಾದರೂ ಅದನ್ನು ತಿಳಿದು ಪ್ರಭುಗಳಿಂದ ಗೌರವಿಸಲ್ಪಡತಕ್ಕವನಾಗಿರುತ್ತಾನೆ. ಇನ್ನು ತನ್ನಿಂದ ಸಾಧಿಸಲ್ಪಡತಕ್ಕ ವಿಷಯದಲ್ಲಿ ನೋಡಲ್ಪಟ್ಟ ಶೌರ್ಯವುಳ್ಳವನೂ ಕಾರ್ಯವನ್ನು ಸಾಧಿಸಿದವನೂ ಆದ ಭಟನು ಏನು ಹೇಳಲ್ಪಡುತ್ತಾನೆ ? ತಾನು ಮಾಡತಕ್ಕ ಕಾರ್ಯದಲ್ಲಿ ಶೌರ್ಯವನ್ನು ತೋರಿಸಿ ಕಾರ್ಯವನ್ನು ಸಾಧಿಸಿದ ಭಟನ ವಿಷಯದಲ್ಲಿ ಹೇಳತಕ್ಕುದೇನಿದೆಯೆಂದು ಭಾವವು.

**ವಿನಾ ಚಕ್ರಾದ್ವಿನಾ ರತ್ನೈರ್ಭೋಗ್ಯೇಯಂ ಶ್ರೀಸ್ತ್ವಯಾ [೭]ತದಾ ।**
**ಜಯಾ[೮]ತ್ತೇ [೯]ಮಾನುಷೀ ಸಿದ್ಧಿರ್ದೈವೀ ಪುಣ್ಯೋದಯಾದ್ಯಥಾ ॥ ೪೪ ॥**

೧ ಚಕ್ರಿವತ್. ೨ ಇಕ್ಷ್ವಾಕುವಂಶಸದೃಶ ಏವ. ೩ ಯಃ ಇತ್ಯಪಿ ಪಾಠಃ. ೪ ಸೇವಾ. ೫ ಭಾವಿಶೌರ್ಯ ಇತ್ಯರ್ಥಃ. ೬ ದೃಷ್ಟಶೌರ್ಯಃ. ೭ ಚಕ್ರಿಪರೋಕ್ಷೇ. ೮ ತವ. ೯ ಪುರುಷಕೃತಾ.

ಚಕ್ರವೂ ಇಲ್ಲದೆ ರತ್ನಗಳೂ ಇಲ್ಲದೆ ಈ ಸಂಪತ್ತಿಯು ನಿನ್ನಿಂದ ಭೋಗಿಸಲ್ಪಡುತ್ತಿರುವಾಗ ನಿನಗೆ ಪುಣ್ಯೋದಯದಿಂದ ಹೇಗೆ ದೈವಿಕವಾದ ಸಿದ್ಧಿಯುಂಟಾಗುವುದೋ ಹಾಗೆ ಜಯಕುಮಾರನಿಂದ ಪುರುಷಕೃತವಾದ ಸಿದ್ಧಿಯುಂಟಾಗುವುದು. ಅರ್ಕಕೀರ್ತಿಯ ಇಷ್ಟಸಿದ್ಧಿಗೆ ಅವನ ಅದೃಷ್ಟದಂತೆ ಜಯಕುಮಾರನೂ ಕಾರಣನೆಂದು ಭಾವವು.

**ತೃಣಕಲ್ಪೋಽಪಿ [೧]ಸಂವಾಹ್ಯಸ್ತವ ನೀತಿರಿಯಂ ಕಥಮ್ ।**
**ನಾಥೇಂದುವಂಶಾವುಚ್ಛೇದ್ಯೌ ಲಕ್ಷ್ಮ್ಯಾಃ ಸಾಕ್ಷಾದ್ಭುಜಾಯಿತೌ ॥ ೪೫ ॥**

ಹುಲ್ಲಿಗೆ ಸಮಾನನಾದ ಮನುಷ್ಯನೂ ರಕ್ಷಿಸಲ್ಪಡತಕ್ಕವನು, ಇದು ನಿನ್ನ ನೀತಿ. ಹೀಗಿರುವಾಗ, ಲಕ್ಷ್ಮಿಯ ಸಾಕ್ಷಾದ್ಭುಜಗಳಂತಿರುವ ನಾಥವಂಶ ಚಂದ್ರವಂಶಗಳು ಹೇಗೆ ನಾಶಮಾಡತಕ್ಕುವುಗಳಾಗಿರುತ್ತವೆ ?

**ಬಂಧುಭೃತ್ಯಕ್ಷಯಾದ್ಭೂಯಸ್ತುಭ್ಯಂ ಚಕ್ರ್ಯಪಿ ಕುಪ್ಯತಿ ।**
**ಅಯಶಶ್ಚಾಯುಗಸ್ಥಾಯಿ ತ್ವಯಾ ಸ್ಯಾತ್ಸಂಪ್ರವರ್ತಿತಮ್ ॥ ೪೬ ॥**

ಬಂಧುಗಳ ಮತ್ತು ಸೇವಕರ ನಾಶದಿಂದ ಹೆಚ್ಚಾಗಿ ನಿನ್ನಲ್ಲಿ ಚಕ್ರವರ್ತಿಯೂ ಕೋಪಮಾಡುವನು. ಯುಗಾಂತದವರೆಗಿರುವ ಅಪಕೀರ್ತಿಯೂ ನಿನ್ನಿಂದ ಸಂಪಾದಿಸಿದಂತಾಗುವುದು.

**ಪರದಾರಾಭಿಲಾಷಸ್ಯ [೨]ಪ್ರಾಥಮ್ಯಂ [೩]ಮಾ ವೃಥಾ ಕೃಥಾಃ ।**
**ಅವಶ್ಯ[೪]ಮಾಹೃತಾಪ್ಯೇಷಾ ನ ಕನ್ಯಾ ತೇ ಭವಿಷ್ಯತಿ ॥ ೪೭ ॥**

ಪರಸ್ತ್ರೀಯಭಿಲಾಷೆಯುಳ್ಳವನಿಗೆ ಪ್ರಥಮ ಭಾವವನ್ನು ವ್ಯರ್ಥವಾಗಿ ಮಾಡಬೇಡ. ಪರಸ್ತ್ರೀಯಭಿಲಾಷೆಯುಳ್ಳವರಲ್ಲಿ ಮೊದಲನೆಯವನಾಗಬೇಡವೆಂದು ಭಾವವು. ಅವಶ್ಯವಾಗಿ ಸ್ವೀಕರಿಸಿದರೂ ಅಥವಾ ತಂದರೂ ಈ ಕನ್ಯೆಯು ನಿನಗಾಗುವುದಿಲ್ಲ.

**ಸಪ್ರತಾಪಂ ಯಶಃ ಸ್ಥಾಸ್ನು ಜಯಸ್ಯ ಸ್ಯಾ[೫]ದಹರ್ಯಥಾ ।**
**ತವ ರಾತ್ರಿರಿವಾಕೀರ್ತಿಃ ಸ್ಥಾಯಿನ್ಯತ್ರ ಮಲೀಮಸಾ ॥ ೪೮ ॥**

ದಿವಸ–ಹಗಲಿನಂತೆ ಜಯಕುಮಾರನ ಪ್ರತಾಪಸಹಿತವಾದ ಕೀರ್ತಿಯು ಸ್ಥಿರವಾಗಿರುವುದು. ಈ ವಿಷಯಧಲ್ಲಿ, ರಾತ್ರಿಯಂತೆ, ಮಲಿನವಾದ ನಿನ್ನ ಅಪಕೀರ್ತಿಯು ಸ್ಥಿರವಾಗಿರುವುದು.

**ಸರ್ವಮೇತನ್ಮಮೈವೇತಿ ಮಾ ಮಂಸ್ಥಾಃ ಸಾಧನಂ [೬]ಯುಧಃ ।**
**ಬಹವೋಽಪ್ಯತ್ರ ಭೂಪಾಲಾಃ ಸಂತಿ ತತ್ಪಕ್ಷಪಾತಿನಃ ॥ ೪೯ ॥**

ಇದೆಲ್ಲವೂ ತನ್ನದೇ ಯುದ್ಧದ ಸಾಧನವೆಂದು ತಿಳಿಯಬೇಡ. ಇಲ್ಲಿ ಅನೇಕ ರಾಜರುಗಳೂ ಅವನ ಪಕ್ಷಪಾತಿಗಳಾಗಿರುತ್ತಾರೆ.

**ಪುರುಷಾರ್ಥತ್ರಯಂ ಪುಂಭಿರ್ದುಷ್ಪ್ರಾಪಂ ತತ್ತ್ವಯಾರ್ಜಿತಮ್ ।**
**ನ್ಯಾಯಮಾರ್ಗಂ ಸಮುಲ್ಲಂಘ್ಯ ವೃಥಾ ತತ್ಕಿಂ ವಿನಾಶಯೇಃ ॥ ೫೦ ॥**

ಪುರುಷರು ಹೊಂದಲು ಕಷ್ಟವಾದ ಆ ಧರ್ಮ ಅರ್ಥ ಕಾಮಗಳೆಂಬ ಪುರುಷಾರ್ಥತ್ರಯವನ್ನು ನೀನು ಸಂಪಾದಿಸಿರುತ್ತಿ. ನ್ಯಾಯಮಾರ್ಗವನ್ನು ಮೀರಿ ಆ ಪುರುಷಾರ್ಥತ್ರಯವನ್ನು ವ್ಯರ್ಥವಾಗಿ ಏತಕ್ಕೆ ನಾಶಮಾಡುತ್ತಿ ?

**ಅಂಕಪನಸ್ಯ ಸೇನೇಶೋ ಜಯಃ ಪ್ರಾಗಿವ ಚಕ್ರಿಣಃ ।**
**ವೀರಲಕ್ಷ್ಮ್ಯಾಸ್ತುಲಾರೋಹಂ ಮುಧಾ ತ್ವಂ ಕಿಂ ವಿಧಾಸ್ಯಸಿ ॥ ೫೧ ॥**

೧ ರಕ್ಷ್ಯಃ. ೨ ಪ್ರಥಮತ್ವಂ. ೩ ಮಾ ಕಾರ್ಷೀಃ. ೪ ಸ್ವೀಕೃತಾಪಿ ಆನೀತಾಪಿ ವಾ. ೫ ದಿವಸ ಇವ. ೬ ಯುದ್ಧಸ್ಯ.

ಮೊದಲು ಚಕ್ರವರ್ತಿಗೆ ಸೇನಾಪತಿಯಾಗಿದ್ದಂತೆ ಜಯಕುಮಾರನು ಈಗ ಅಕಂಪನಮಹಾರಾಜನಿಗೆ ಸೇನಾಪತಿಯಾಗುವನು. ನೀನು ನಿನ್ನ ವೀರಲಕ್ಷ್ಮಿಯ ತುಲಾರೋಹಣವನ್ನು(ತ್ರಾಸಿನಲ್ಲಿರಿಸುವಿಕೆಯನ್ನು)ವ್ಯರ್ಥವಾಗಿ ಏತಕ್ಕೆಮಾಡುವೆ ?

**ನನು ನ್ಯಾಯೇನ ಬಂಧೋಸ್ತೇ ಬಂಧುಪುತ್ರೀ ಸಮರ್ಪಿತಾ ।**
**ಉತ್ಸವೇ ಕಾ ಪರಾಭೂತಿ[೧]ರಕ್ಷಮಾತ್ರಪರಾಭವಃ ॥ ೫೨ ॥**

ಏನಯ್ಯಾ ! ನಿನ್ನ ಬಂಧುವಾದ ಅಕಂಪನಮಹಾರಾಜನ ಮಗಳು ನಿನ್ನ ಬಂಧುವಾದ ಜಯಕುಮಾರನಿಗೆ ನ್ಯಾಯದಿಂದ ಕೊಡಲ್ಪಟ್ಟಳು. ಈ ಉತ್ಸವದಲ್ಲಿ ತಿರಸ್ಕಾರವಾವುದು ? ನಿನಗೆ ಸಹನವಿಲ್ಲದಿರುವಿಕೆಯು ತಿರಸ್ಕಾರವಾಗಿರುತ್ತದೆ.

**ಕನ್ಯಾರತ್ನಾನಿ ಸಂತ್ಯೇವ ಬಹೂನ್ಯನ್ಯಾನಿ ಭೂಭುಜಾಮ್ ।**
**ಇಹ ತಾನಿ ಸರತ್ನಾನಿ ಸರ್ವಾಣ್ಯದ್ಯಾನಯಾನಿ ತೇ ॥ ೫೩ ॥**

ಲೋಕದಲ್ಲಿ ಬೇರೆ ಅನೇಕ ಕನ್ಯಾರತ್ನಗಳು ಇದ್ದೇ ಇರುತ್ತವೆ. ರಾಜರುಗಳ ರತ್ನಸಹಿತಗಳಾದ ಎಲ್ಲಾ ಕನ್ಯಾರತ್ನಗಳನ್ನು ಈ ದಿವಸ ನಿನಗೆ ತರುವೆನು.''

**ಇತಿ ನೀತಿಲತಾವೃದ್ಧಿವಿಧಾಯ್ಯಪಿ ವಚಃಪಯಃ ।**
**ವ್ಯಧಾತ್ತಚ್ಚೇತಸಃ ಕ್ಷೋಭಂ ತಪ್ತತೈಲಸ್ಯ ವಾ ಭೃಶಮ್ ॥ ೫೪ ॥**

ಈ ಪ್ರಕಾರವಾಗಿ ನೀತಿಯೆಂಬ ಲತೆಯ ಬೆಳವಣಿಗೆಯನ್ನು ಮಾಡುವುದಾಗಿದ್ದರೂ ವಚನವೆಂಬ ಜಲವು (ಮಂತ್ರಿಯ ಮಾತು) ಕುದಿಸಿದ ಎಣ್ಣೆಗೆ ಹಾಕಿದಂತೆ, ಅರ್ಕಕೀರ್ತಿಯ ಮನಸ್ಸಿಗೆ ಕ್ಷೋಭೆಯನ್ನು (ಅಸಮಾಧಾನವನ್ನು) ಅಧಿಕವಾಗಿ ಮಾಡಿತು.

**ಸರ್ವಮೇತತ್ಸಮಾಕರ್ಣ್ಯ ಬುದ್ಧಿಂ ಕರ್ಮಾನುಸಾರಿಣೀಮ್ ।**
**ಸ್ಪಷ್ಟಯನ್ನಿವ ದುರ್ಬುದ್ಧಿರಿತಿ ಪ್ರತ್ಯಾಹ ಭಾರತೀಮ್ ॥ ೫೫ ॥**

ಇದೆಲ್ಲವನ್ನೂ ಕೇಳಿ ದುರ್ಬುದ್ಧಿಯುಳ್ಳ ಅರ್ಕಕೀರ್ತಿಯು ಕರ್ಮಾನುಸಾರಿಣಿಯಾದ ತನ್ನ ಬುದ್ಧಿಯನ್ನು ಸ್ಪಷ್ಟಪಡಿಸುತ್ತಾನೋ ಎಂಬಂತೆ ಮುಂದೆ ಹೇಳುವ ಮಾತನ್ನು ಪ್ರತಿಯಾಗಿ ಹೇಳಿದನು.

**ಅಸ್ತು ಸ್ವಯಂವರಃ ಪಂಥಾಃ ಪರಿಣೀತೌ ಚಿರಂತನಃ ।**
**ಪಿತಾಮಹಕೃತೋ ಮಾನ್ಯೋ ವಯೋಜ್ಯೇಷ್ಠೋಽಸ್ತ್ವಕಂಪನಃ ॥ ೫೬ ॥**

ವಿವಾಹದಲ್ಲಿ ಪುರಾತನವೂ ತಾತನಿಂದ ಮಾಡಲ್ಪಟ್ಟುದೂ ಆದ ಸ್ವಯಂವರ ಪದ್ಧತಿಯು ಮಾನ್ಯವಾಗಿರಲಿ. ಅಕಂಪನನು ವಯಸ್ಸಿನಿಂದ ಹಿರಿಯನಾಗಿರಲಿ.

**ಕಿಂತು ಸೋಽಯಂ ಜಯಸ್ನೇಹಾತ್ತಸ್ಯೋತ್ಕರ್ಷಂ ಚಿಕೀರ್ಷುಕಃ ।**
**ಸ್ವಸುತಾಯಾಶ್ಚ ಸೌಭಾಗ್ಯಪ್ರತೀತಿಂ ಪ್ರವಿಧಿತ್ಸುಕಃ ॥ ೫೭ ॥**

**ಸರ್ವಭೂಪಾಲಸಂದೋಹಸಮಾ[೨]ವಿರ್ಭಾವಿತೋದಯಾತ್ ।**
**ಸ್ವಯಂ [೩]ಚಕ್ರೀಯಿತುಂ ಚೈವ ವ್ಯಧತ್ತ ಕಪಟಂ [೪]ಶಠಃ ॥ ೫೮ ॥**

ಆದರೆ ಜಯನಲ್ಲಿ ಪ್ರೀತಿಯಿಂದ ಅವನ ಉತ್ಕೃಷ್ಟತೆಯನ್ನು ಮಾಡಬೇಕೆಂಬ ಇಚ್ಛೆಯುಳ್ಳವನೂ ತನ್ನ ಮಗಳ ಸೌಭಾಗ್ಯದ ಪ್ರಸಿದ್ಧಿಯನ್ನು ಚೆನ್ನಾಗಿ ಮಾಡಬೇಕೆಂಬ ಇಚ್ಛೆಯುಳ್ಳವನೂ ಮಾಯಾವಿಯೂ ಆದ ಈ ಅಕಂಪನನು ಸಮಸ್ತ ರಾಜರುಗಳ ಸಮೂಹದಿಂದ (ಸೇರುವಿಕೆಯಿಂದ) ಪ್ರಕಟಮಾಡಲ್ಪಟ್ಟುದಾದ ಅಭ್ಯುದಯದಿಂದ ತಾನು ಚಕ್ರವರ್ತಿಯಂತೆ ಆಚರಿಸುವುದಕ್ಕಾಗಿಯೇ ಕಪಟವನ್ನು ಮಾಡಿದನು.

**ಪ್ರಾಕ್ಸಮರ್ಥಿತಮಂತ್ರೇಣ ಪ್ರದಾಯಾಸ್ಮೈ ಸ್ವಚೇತಸಾ ।**
**ಕೃತಸಂಕೇತಯಾ ಮಾಲಾ ಸುತಯಾರೋಪಿತಾ ಮೃಷಾ ॥ ೫೯ ॥**

೧ ಅಸಹಮಾನತ. ೨ ಅಭ್ಯುದಯಂ ಸಮಾಶ್ರಿತ್ಯ. ೩ ಚಕ್ರೀವಾಚರಿತುಂ. ೪ ಮಾಯಾವೀ.

ಮೊದಲು ಗೊತ್ತುಮಾಡಲ್ಪಟ್ಟ ಆಲೋಚನೆಯುಳ್ಳ ತನ್ನ ಮನಸ್ಸಿನಿಂದ ಈ ಜಯನಿಗೆ ಮಗಳನ್ನು ಕೊಟ್ಟು ಆಮೇಲೆ ಸಂಕೇತ–ಸಂಜ್ಞೆಮಾಡಲ್ಪಟ್ಟವಳಾದ ತನ್ನ ಪುತ್ರಿಯಿಂದ ಮಾಲೆಯು ಸುಳ್ಳಾಗಿ ಏರಿಸಲ್ಪಟ್ಟಿತು. (ಮಾಲೆಯನ್ನು ಹಾಕಿಸಿದನು)

**ಯುಗಾದೌ [೧]ಕುಲವೃದ್ಧೇನ ಮಾಯೇಯಂ ಸಂಪ್ರವರ್ತಿತಾ ।**
**ಮಯಾದ್ಯ ಯದ್ಯುಪೇಕ್ಷ್ಯೇತ ಕಲ್ಪಾಂತೇ ನೈವ ವಾರ್ಯತೇ ॥ ೬೦ ॥**

ಕೃತಯುಗದ ಆದಿಯಲ್ಲಿ ಕುಲವೃದ್ಧನಾದ ಅಕಂಪನನಿಂದ ಈ ಮಾಯೆಯು ಪ್ರಚಾರಮಾಡಲ್ಪಟ್ಟಿತು. ನನ್ನಿಂದ ಈ ದಿವಸ ಉಪೇಕ್ಷಿಸಲ್ಪಟ್ಟರೆ ಕಲ್ಪಕಾಲದ ಕೊನೆಯಲ್ಲಿ ತಡೆಯಲ್ಪಡುವುದೇ ಇಲ್ಲ.

**ನ ಚಕ್ರಿಣೋಪಿ ಕೋಪಾಯ ಸ್ಯಾದನ್ಯಾಯನಿಷೇಧನಮ್ ।**
**ಪ್ರವರ್ತಯತ್ಯಸೌ ದಂಡಂ ಮಯ್ಯಪ್ಯನ್ಯಾಯವರ್ತಿನಿ ॥ ೬೧ ॥**

ಅನ್ಯಾಯವನ್ನು ದೂರಮಾಡುವಿಕೆಯು ಚಕ್ರವರ್ತಿಗೂ ಕೋಪಕ್ಕೆ ಕಾರಣವಾಗಲಾರದು. ಅನ್ಯಾಯದಿಂದ ನಡೆಯುವ ನನ್ನಲ್ಲಿಯೂ ಈ ಚಕ್ರವರ್ತಿಯು ಶಿಕ್ಷೆಯನ್ನು ವಿಧಿಸುವನು.

**ಜಯೋ[೨]ಪ್ಯೇವಂ [೩]ಸಮುತ್ಸಿಕ್ತ[೪]ಸ್ತತ್ಪಟ್ಟೇನ ಚ ಮಾಲಯಾ ।**
**ಪ್ರತಿ [೫]ಸ್ವಂ [೬]ಲಬ್ಧರಂಧ್ರೋ ಮಾಂ ಕರೋತ್ಯಾರಂಭಕಂ ಪುರಾ ॥ ೬೨ ॥**

ಅಕಂಪನನಂತೆ ಆ ವೀರಪಟ್ಟದಿಂದಲೂ ಈ ಸ್ವಯಂವರಮಾಲೆಯಿಂದಲೂ ಗರ್ವಿತನಾದ ಜಯನೂ ಮುಂದೆ ಅವಕಾಶವನ್ನು ಹೊಂದಿದವನಾಗಿ ನನ್ನನ್ನು ನನ್ನ ಸೊತ್ತಿನ ಮೇಲೆಲ್ಲ ಆಕ್ರಮಣಮಾಡುವನು–ದಂಡೆತ್ತಿಬರುವನು.

**[೭]ಸಮೂಲತೂಲಮುಚ್ಛಿದ್ಯ [೮]ಸರ್ವದ್ವಿಷಮಮುಂ ಯುಧಿ ।**
**ಅನುರಾಗಂ ಜನಿಷ್ಯಾಮಿ ರಾಜನ್ಯಾನಾಂ ಮಯಿ ಸ್ಥಿರಮ್ ॥ ೬೩ ॥**

ಎಲ್ಲರಿಗೂ ಶತ್ರುವಾದ ಇವನನ್ನು ಯುದ್ಧದಲ್ಲಿ ಬುಡ–ಕಾರಣಸಹಿತವಾಗಿ ನಾಶಮಾಡಿ ರಾಜರುಗಳ ಅನುರಾಗವನ್ನು ನನ್ನಲ್ಲಿ ಸ್ಥಿರಪಡಿಸುವೆನು.

**ದ್ವಿಧಾ ಭವತು ವಾ ಮಾ ವಾ ಬಲಂ ತೇನ ಕಿಮಾಶುಗಾಃ ।**
**ಮಾಲಾಂ ಪ್ರತ್ಯಾನಯಿಷ್ಯಂತಿ ಜಯವಕ್ಷೋ ವಿಭಿದ್ಯ ಮೇ ॥ ೬೪ ॥**

ಸೈನ್ಯವು ಎರಡು ಪಾಲಾಗಿ ಆಗಲಿ ಅಥವಾ ಆಗದಿರಲಿ. ಅದರಿಂದ ನನಗೇನು ? ನನ್ನ ಬಾಣಗಳು ಜಯನ ಎದೆಯನ್ನು ಸೀಳಿ ಮಾಲೆಯನ್ನು ಹಿಂದಿರುಗಿ ತರುವುವು.

**ನಾಹಂ ಸುಲೋಚನಾರ್ಥ್ಯಸ್ಮಿ [೯]ಮತ್ಸರೀ [೧೦]ಮತ್ಸರೀ[೧೧]ರಯನ್ ।**
**[೧೨]ಪರಾಸುರಧುನೈವ ಸ್ಯಾತ್ಕಿಂ ಮೇ ವಿಧವಯಾ ತಯಾ ॥ ೬೫ ॥**

ನಾನು ಸುಲೋಚನೆಯನ್ನಿಚ್ಛಿಸುವವನೂ ಮತ್ಸರಿಯೂ ಆಗಿರುವುದಿಲ್ಲ, ನನ್ನ ಬಾಣಗಳನ್ನು ಹೊಂದುವವನಾಗಿ ಜಯನು ಈಗಲೇ ಸತ್ತುಹೋಗುವನು. ವಿಧವೆಯಾದ ಆ ಸುಲೋಚನೆಯಿಂದ ನನಗೇನಾಗಬೇಕು ?

**ದುರಾಚಾರನಿಷೇಧೇನ ತ್ರಯಂ ಧರ್ಮಾದಿ ವರ್ದ್ಧತೇ ।**
**ಕಾರಣೇ ಸತಿ ಕಾರ್ಯಸ್ಯ ಕಿಂ ಹಾನಿರ್ದೃಶ್ಯತೇ ಕ್ವಚಿತ್ ॥ ೬೬ ॥**

ದುರಾಚಾರದ ನಿಷೇಧದಿಂದ ಧರ್ಮಮೊದಲಾದ ಮೂರು (ಧರ್ಮ, ಅರ್ಥ, ಕಾಮ) ವೃದ್ಧಿಯಾಗುತ್ತದೆ. ಕಾರಣವಿರುತ್ತಿರಲು ಕಾರ್ಯದ ಹಾನಿಯು ಎಲ್ಲಿಯಾದರೂ ಕಾಣವುದೇನು ?

**ವ್ಯಯೋ ಮೇ ವಿಕ್ರಮಸ್ಯಾಸ್ತಾಂ ಶರಸ್ಯಾಪ್ಯತ್ರ ನ ವ್ಯಯಃ ।**
**ವಧೇ ಪ್ರತ್ಯುತ ಧರ್ಮಃ ಸ್ಯಾದ್ದುಷ್ಟಸ್ಯಾಂಹಃ ಕುತೋ ಭವೇತ್ ॥ ೬೭ ॥**

೧ ಅಕಂಪನೇನ. ೨ ಅಕಂಪನವತ್. ೩ ಗರ್ವಿತಃ. ೪ ವೀರಪಟ್ಟೇನ. ೫ ಸ್ವಕೀಯಂ. ೬ ಪ್ರಾಪ್ತಾವಸರಃ. ೭ ಕಾರಣಸಹಿತಂ. ೮ ಸರ್ವೇಷಾಂ ದ್ವಿಷಂ ಶತ್ರುಂ. ೯ ಮತ್ಸರವಾನ್. ೧೦ ಮಮ ಬಾಣಾನ್. ೧೧ ಗಚ್ಛನ್. ೧೨ ಗತಪ್ರಾಣಃ.

ಈ ಯುದ್ಧದಲ್ಲಿ ನನ್ನ ಪರಾಕ್ರಮದ ವ್ಯಯವಾಗಲಿ. ಆದರೆ ಬಾಣಗಳ ವ್ಯಯವಾಗುವುದಿಲ್ಲ. ಅದಕ್ಕೆ ಬದಲಾಗಿ ದುಷ್ಟನವಧೆಯಲ್ಲಿ ಧರ್ಮವು ಇರುವುದು. ಪಾಪವು ಏತರಿಂದಾಗುವುದು ?

**ಕೀರ್ತಿರ್ವಿಖ್ಯಾತಕೀರ್ತೇರ್ಮೇ ನಾರ್ಕಕೀರ್ತೇ[೧]ರ್ವಿನಂಕ್ಷ್ಯತಿ ।**
**ಅಕೀರ್ತಿರನಿವಾರ್ಯಾ ಸ್ಯಾದನ್ಯಾಯಸ್ಯಾನಿಷೇಧನಾತ್ ॥ ೬೮ ॥**

ಪ್ರಖ್ಯಾತವಾದ ಕೀರ್ತಿಯುಳ್ಳವನೂ ಅರ್ಕಕೀರ್ತಿಯೂ ಆದ ನನ್ನ ಕೀರ್ತಿಯು ನಾಶವನ್ನು ಹೊಂದುವುದಿಲ್ಲ. ಅನ್ಯಾಯದ ನಿಷೇಧವನ್ನು ಮಾಡಿದರೆ ತಡೆಯಲಾಗದ ಅಪಕೀರ್ತಿಯುಂಟಾಗುವುದು.

**[೨]ತಸ್ಯ ಮೇ ಯಶಸಃ ಕೀರ್ತೇರ್ಭವದ್ಭಿರ್ಯ[೩]ದುದಾಹೃತಮ್ ।**
**ಭವೇತ್ತತ್ಸತ್ಯಸಂವಾದಿ [೪]ಶೀತಕೋಸ್ಮ್ಯತ್ರ ಯದ್ಯಹಮ್ ॥ ೬೯ ॥**

ಈ ವಿಷಯದಲ್ಲಿ ನಾನು ಮಂದ–ಉದಾಸೀನನಾಗಿದ್ದರೆ ನನ್ನ ಅಪಯಶಸ್ಸಿಗೂ ಆ ಜಯನ ಯಶಸ್ಸಿಗೂ ನಿಮ್ಮಗಳಿಂದ(ಮಂತ್ರಿಗಳಿಂದ) ಯಾವ ಉದಾಹರಣೆಯು ಕೊಡಲ್ಪಟ್ಟಿತೋ ಅದು ಸತ್ಯವನ್ನು ನುಡಿಯುವುದಾಗಬಹುದು.

**ಯೂಯಮಾಧ್ವಮತಸ್ತೂಷ್ಣೀ[೫]ಮುಷ್ಣಕೋಹಮಿದಂ ಪ್ರತಿ ।**
**ಧರ್ಮ್ಯಮರ್ಥ್ಯಂ ಯಶಸ್ಯಂ ಚ ಮಾ [೬]ನಿಷೇಧಿ ಹಿತೈಷಿಭಿಃ ॥ ೭೦ ॥**

ಆದುದರಿಂದ ನೀವುಗಳು ಸುಮ್ಮನಿರಿ. ನಾನು ಈ ಯುದ್ಧವನ್ನು ಕುರಿತು ಪಟು–ಜಾಗರೂಕನಾಗಿರುತ್ತೇನೆ. ಹಿತವನ್ನಿಚ್ಛಿಸುವವರಿಂದ ಧರ್ಮಯುಕ್ತವೂ ಪ್ರಯೋಜನಕಾರಿಯೂ ಕೀರ್ತಿಯನ್ನುಂಟುಮಾಡುವುದೂ ಆದ ಕಾರ್ಯವು ನಿಷೇಧಿಸಲ್ಪಟ್ಟಿಲ್ಲವು.

**ಏವಂ ಮಂತ್ರಿಣಮುಲ್ಲಂಘ್ಯ ಕುಧೀರ್ವಾ ದುರ್ಗ್ರಹಾ[೭]ಹಿತಃ ।**
**ಸೇನಾಪತಿಂ ಸಮಾಹೂಯ ಪ್ರತ್ಯಾಸನ್ನಪರಾಭವಃ ॥ ೭೧ ॥**

**ಕಥಯಿತ್ವಾ ಮಹೀಶಾನಾಂ ಸರ್ವೇಷಾಂ ರಣನಿಶ್ಚಯಮ್ ।**
**ಭೇರೀಮಾಸ್ಫಾಲಯಾಮಾಸ ಜಗತ್ತ್ರಯಭಯಪ್ರದಾಮ್ ॥ ೭೨ ॥**

ಸಮೀಪಿಸಿರುವ ತಿರಸ್ಕಾರವುಳ್ಳವನೂ ದುಷ್ಟಬುದ್ಧಿಯುಳ್ಳವನೂ ಆದ ಅರ್ಕಕೀರ್ತಿಯು ದುಷ್ಟಗ್ರಹದಿಂದ ಸ್ವೀಕರಿಸಲ್ಪಟ್ಟವನಂತೆ ಮಂತ್ರಿಯನ್ನು ಹಿಂದೆ ಹೇಳಿದ ಪ್ರಕಾರವಾಗಿ ಮೀರಿ ಸೇನಾಪತಿಯನ್ನು ಕರೆದು ಎಲ್ಲಾರಾಜರುಗಳಿಗೆ ಯುದ್ಧದ ನಿಶ್ಚಯವನ್ನು ಹೇಳಿ ಮೂರು ಲೋಕಕ್ಕೆ ಭೀತಿಯನ್ನುಂಟುಮಾಡುವುದಾದ ಭೇರಿಯನ್ನು ಹೊಡೆಯಿಸಿದನು.

**ಅನುಭೇರೀರವಂ ಸದ್ಯಃ [೮]ಪ್ರತ್ಯಾವಾಸಂ ಮಹೀಭುಜಾಮ್ ।**
**ನಟದ್ಭಟಭುಜಾಸ್ಫೋಟ[೯]ಚಟುಲಾ[೧೦]ರಾಟನಿಷ್ಠುರಃ ॥ ೭೩ ॥**

**ಕರಿಕಂಠಸ್ಫುಟೋದ್ಘೋಷಘಂಟಾಟಂಕಾರಭೈರವಃ ।**
**ಜಿತಕಂಠೀರವಾರಾವಹಯಹೇಷಾವಿಭೀಷಣಃ ॥ ೭೪ ॥**

**ಚಲ[೧೧]ದ್ಧರಿಖುರಾಘಟ್ಟಕಠೋರಧ್ವಾನ[೧೨]ನಿರ್ಭರಃ ।**
**ಪದಾತಿ[೧೩]ಪದ್ಧತಿಪ್ರೋದ್ಯದ್ಭೂರಿ[೧೪]ಭೂರವಭೀವಹಃ ॥ ೭೫ ॥**

**ಸ್ಪಂದತ್ಸ್ಯಂದನಚಕ್ರೋತ್ಥಪೃಥುಚೀತ್ಕಾರಭೀಕರಃ ।**
**ಧನುಃಸಜ್ಜೀಕ್ರಿಯಾಸಕ್ತಗುಣಾಸ್ಫಾಲನಕರ್ಕಶಃ ॥ ೭೬ ॥**

೧ ವಿನಾಶಮೇಷ್ಯತಿ. ೨ ಜಯಸ್ಯ. ೩ ಉದಾಹರಣಂ. ೪ ಮಂದಃ. ೫ ಪಟುಃ. ೬ ನ ನಿಷಿಧ್ಯತೇ ಸ್ಮ. ೭ ಸ್ವೀಕೃತಃ. ೮ ಪ್ರತಿಶಿಬಿರಂ. ೯ ಅನವಸ್ಥಿತ. ೧೦ ಧ್ವನಿ. ೧೧ ತುರಗ. ೧೨ ನಿಷ್ಠುರಃ. ೧೩ ಪಾದಹತಿ. ೧೪ ಭೂಮೇರ್ಧ್ವನಿನಾಭಯಂಕರಃ.

**ಪ್ರತಿಧ್ವಾನಿತದಿಗ್ಭಿತ್ತಿಸರ್ವಾನಕಭಯಾನಕಃ ।**
**ಬಲಕೋಲಾಹಲಃ ಕಾಲಮಿವಾಹ್ವಾತುಂ ಸಮುದ್ಯತಃ ॥ ೭೭ ॥**

ಭೇರಿಧ್ವನಿಯಾದೊಡನೆಯೇ ರಾಜರುಗಳ ಪ್ರತಿಯೊಂದು ಶಿಬಿರ–ಸೈನ್ಯವು ನಿಲ್ಲುವ ಸ್ಥಾನದಲ್ಲಿ ಕುಣಿಯುತ್ತಿರುವ ಭಟರ ಭುಜಗಳ ತಟ್ಟುವಿಕೆಯಿಂದ ಚಂಚಲವಾದ ಧ್ವನಿಯಿಂದ ಕಠೋರವೂ ಆನೆಗಳ ಕಂಠದ ಸ್ಫುಟವಾದ ಘೋಷಣದಿಂದಲೂ ಘಂಟೆಗಳ ಟಂಕಾರದಿಂದಲೂ ಭಯಂಕರವೂ ಸಿಂಹನಾದವನ್ನು ಜಯಿಸಿರುವವುಗಳಾದ ಕುದುರೆಗಳ ಹೇಷಾಧ್ವನಿಯಿಂದ ಭಯಂಕರವೂ ಚಲಿಸುತ್ತಿರುವ ಕುದುರೆಗಳ ಗೊರಸುಗಳ ಹೊಡೆತದ ಕಠೋರಶಬ್ದದಿಂದ ಕಠಿನವೂ ಕಾಲುನಡೆಯ ಸೈನಿಕರ ಕಾಲುಗಳ ಹೊಡೆತದಿಂದ ಮೇಲಕ್ಕೆದ್ದಿರುವ ಅಧಿಕವಾದ ಭೂಮಿಯ ಶಬ್ದದಿಂದ ಭಯವನ್ನುಂಟುಮಾಡುವುದೂ ಚಲಿಸುತ್ತಿರುವ ರಥಗಳ ಚಕ್ರಗಳಿಂದುಂಟಾದ ಗಟ್ಟಿಯಾದ ಚೀತ್ಕಾರ–ಶಬ್ದದಿಂದ ಭಯಂಕರವೂ ಧನುಸ್ಸಿನ ಸಿದ್ಧತೆಯಲ್ಲಿ ಕೂಡಿದ ಸಿಂಜಿನಿಯ ಹೊಡೆತದಿಂದ ಕಠಿನವೂ ಪ್ರತಿಯಾಗಿ ಧ್ವನಿ ಮಾಡಿಸಲ್ಪಟ್ಟ ದಿಕ್ಕುಗಳೆಂಬ ಗೋಡೆಗಳುಳ್ಳವುಗಳಾದ ಸಮಸ್ತಭೇರಿಗಳಿಂದ ಭಯಂಕರವೂ ಆದ ಸೈನ್ಯದ ಕಲಕಲಧ್ವನಿಯು ಯಮನನ್ನು ಕರೆಯುವುದಕ್ಕೋಸ್ಕರವೋ ಎಂಬಂತೆ, ಎದ್ದಿತು.

**[೧]ಶಿಕ್ಷಿತಾ ಬಲಿನಃ ಶೂರಾಃ ಶೂರಾರೂಢಾಃ ಸಕೇತವಃ ।**
**ಗಜಾಃ ಸಮಂತಾ[೨]ತ್ಸನ್ನಾಹ್ಯಾಃ ಪ್ರಾಕ್ಚೇಲುರಚಲೋಪಮಾಃ ॥ ೭೮ ॥**

ಶಿಕ್ಷಣೆಯನ್ನು ಹೊಂದಿರುವುವೂ ಶಕ್ತಿಯುಳ್ಳವೂ ಪರಾಕ್ರಮವುಳ್ಳವೂ ಪರಾಕ್ರಮಿಗಳಿಂದ ಹತ್ತಲ್ಪಟ್ಟಿರುವುವೂ ಧ್ವಜಗಳುಳ್ಳವೂ ಯುದ್ಧಕ್ಕೆ ಯೋಗ್ಯವಾಗಿರುವುವೂ ಪರ್ವತಗಳಿಗೆ ಸಮಾನಗಳೂ ಆದ ಆನೆಗಳು ಎಲ್ಲಾಕಡೆಯಲ್ಲಿಯೂ ಮೊದಲು ನಡೆದುವು.

**ತುರಂಗಮಾಸ್ತರಂಗಾಭಾಃ ಸಂಗ್ರಾಮಾಬ್ಧೇಃ ಸವರ್ಮಕಾಃ ।**
**ಅನುದಂತಿ ನದಂತೋಽಯಾನ್ [೩]ವಿಕ್ರಾಮಂತಃ ಸಮಂತತಃ ॥ ೭೯ ॥**

ಯುದ್ಧವೆಂಬ ಸಮುದ್ರದ ಅಲೆಗಳಿಗೆ ಸಮಾನಗಳೂ ಕವಚಗಳುಳ್ಳವೂ ಧ್ವನಿ ಮಾಡುತ್ತಿರುವುವೂ ನೆಗೆಯುತ್ತಿರುವುವೂ ಆದ ಕುದುರೆಗಳು ಎಲ್ಲಾಕಡೆಯಲ್ಲಿಯೂ ಆನೆಗಳ ಹಿಂದೆ ಹೋದುವು.

**ಸಚಕ್ರಂ [೪]ಧೇಹಿ ಸಂಯೋಜ್ಯಂ [೫]ಸಧುರಂ [೬]ಪ್ರಾಜ ವಾಜಿನಃ ।**
**ಇತಿ ಸಂಭ್ರಮಿಣೋ[೭]ಽಪಪ್ತನ್ ರಥಾ[೮]ಸ್ತದನು ಸಧ್ವಜಾಃ ॥ ೮೦ ॥**

"ಭಟನೆ !ಚಕ್ರದೊಡನೆ ಸ್ವಲ್ಪಧರಿಸು, ನೊಗದೊಡನೆ ಸ್ವಲ್ಪಧರಿಸು, (ಹಿಡಿದಿರು) ಕುದುರೆಗಳನ್ನು ಸೇರಿಸಿ ಪ್ರೇರಿಸು" ಈ ಪ್ರಕಾರವಾದ ತ್ವರೆಯುಳ್ಳವೂ ಧ್ವಜಗಳುಳ್ಳವೂ ಆದ ರಥಗಳು ಕುದುರೆಗಳ ಹಿಂದೆ ಹೋದುವು.

**ಚಂಡಾಃ ಕೋದಂಡಕುಂತಾಸಿಪ್ರಾಸಚಕ್ರಾದಿಭೀಕರಾಃ ।**
**ಯಾಂತಿ ಸ್ಮಾನುರಥಂ ಕ್ರುದ್ಧಾ ರುದ್ಧದಿಕ್ಕಾಃ ಪದಾತಯಃ ॥ ೮೧ ॥**

ಕ್ರೂರಿಗಳೂ ಧನುಸ್ಸು, ಈಟಿ, ಕತ್ತಿ, ಬರ್ಜಿ, ಚಕ್ರ ಮೊದಲಾದ ಅಸ್ತ್ರಗಳಿಂದ ಭಯಂಕರರೂ ಕೋಪಿಷ್ಠರೂ ದಿಕ್ಕುಗಳನ್ನು ಆವರಿಸಿರುವವರೂ ಆದ ಕಾಲುನಡೆಯ ಸೈನಿಕರು ರಥಗಳ ಹಿಂದೆ ಹೋದರು.

**ಗಜಂ ಗಜಸ್ತದೋ[೯]ದ್ಘಟ್ಯ ವಾಹೋ ವಾಹಂ ರಥಂ ರಥಃ ।**
**ಪದಾತಯಶ್ಚ ಪಾದಾತಂ ಸಂಭ್ರಮಾನ್ನಿರ್ಯಯುರ್ಯುಧೇ ॥ ೮೨ ॥**

ಆಗ ಆನೆಯು ಆನೆಯನ್ನೂ ಕುದುರೆಯು ಕುದುರೆಯನ್ನೂ ರಥವು ರಥವನ್ನೂ ಕಾಲುನಡೆಯವರು ಕಾಲು ನಡೆಯವನನ್ನೂ ಸಂಭ್ರಮದಿಂದ ನಡೆಸಿ– ಮುಂದೆ ತಳ್ಳಿಕೊಂಡು ಯುದ್ಧಕ್ಕೋಸ್ಕರ ಹೊರಟರು.

೧ ಶಿಕ್ಷಾಂ ಪ್ರಾಪ್ತಾಃ. ೨ ಸಮರೋಚಿತಾಃ. ೩ ಲಂಘನಂ ಕುರ್ವತಃ. ೪ ಚಕ್ರೇಣ ಸಹ ಕಿಂಚಿದ್ಧಾರಯ. ೫ ಧುರಾಸಹ ಕಿಂಚಿದ್ಧಾರಯ. ೬ ಪ್ರೇರಯ. ೭ ಅಗಚ್ಛನ್. ೮ ತುರಗಾಣಾಂ ಪಶ್ಚಾತ್. ೯ ಚಲಯಿತ್ವಾ.

**ಆರೂಢಾನೇಕಪಾನೇಕಭೂಪಾಲಪರಿವಾರಿತಃ ।**
**ಭೇರೀನಿಷ್ಠುರನಿರ್ಘೋಷಭೀಷಿತಾಶೇಷದಿಗ್ದ್ವಿಪಃ ॥ ೮೩ ॥**

**ಚಕ್ರಧ್ವಜಂ ಸಮುತ್ಥಾಪ್ಯ ಸಮ್ಯಗಾವಿಷ್ಕೃತೋನ್ನತಿಃ ।**
**ಗಜಂ ವಿಜಯಘೋಷಾಖ್ಯಮಾರುಹ್ಯಾ[೧]ದ್ರಿಭವೋತ್ತಮಮ್ ॥ ೮೪ ॥**

**ಅರ್ಕಕೀರ್ತಿರ್ಬಹಿರ್ಭಾಸ್ವ[೨]ದಸ್ಯುದ್ಯತಭಟಾವೃತಃ ।**
**ಜ್ಯೋತಿಃಕುಲಾಚಲೈರ್ವಾರ್ಕಶ್ಚಚಾಲಾಭ್ಯ[೩]ಚಲಾಧಿಪಮ್ ॥ ೮೫ ॥**

ಆನೆಗಳನ್ನೇರಿದ ಅನೇಕ ರಾಜರುಗಳಿಂದ ಸುತ್ತಲ್ಪಟ್ಟವನೂ ಭೇರಿಗಳ ಕಠೋರಶಬ್ದದಿಂದ ಸಮಸ್ತದಿಗ್ಗಜಗಳನ್ನು ಹೆದರಿಸಿದವನೂ ಚಕ್ರದ ಚಿಹ್ನೆಯುಳ್ಳ ಧ್ವಜವನ್ನೆತ್ತಿ ಚೆನ್ನಾಗಿ ತನ್ನ ಉತ್ಕೃಷ್ಟತೆಯನ್ನು ಪ್ರಕಟಪಡಿಸಿದವನೂ ಹೊರಗೆ ಪ್ರಕಾಶಮಾನವಾದ ಕತ್ತಿಗಳನ್ನೆತ್ತಿರುವ ಭಟರಿಂದ ಆವರಿಸಲ್ಪಟ್ಟವನೂ ಆದ ಅರ್ಕಕೀರ್ತಿಯು ಪರ್ವತದಲ್ಲಿ ಹುಟ್ಟಿದ ಆನೆಗಳಲ್ಲೆಲ್ಲ ಶ್ರೇಷ್ಠವೂ ವಿಜಯಘೋಷವೆಂದು ಹೆಸರುಳ್ಳದೂ ಆದ ಆನೆಯನ್ನು ಹತ್ತಿ, ಜ್ಯೋತಿರ್ದೇವತೆಗಳಿಂದಲೂ ಕುಲಪರ್ವತಗಳಿಂದಲೂ ಆವೃತನಾದ ಸೂರ್ಯನು ಮೇರುಪರ್ವತವನ್ನು ಕುರಿತು ಹೋಗುವಂತೆ, ಅಕಂಪನಮಹಾರಾಜನನ್ನು ಕುರಿತು ಹೋದನು.

**ಕಿಂವದಂತೀಂ ವಿದಿತ್ವೈವಂ ಭೂಪೋ ಭೂತ್ವಾಕುಲಾಕುಲಃ ।**
**[೪]ಸ್ವಾಲೋಚಿತಂ ಚ [೫]ಕರ್ತವ್ಯಂ ವಿಧಿನಾ ಕ್ರಿಯತೇಽನ್ಯಥಾ ॥ ೮೬ ॥**

**ಇತಿ ಸ್ವಸಚಿವೈಃ ಸಾರ್ಧಮಾಲೋಚ್ಯ ಚ ಜಯಾದಿಭಿಃ ।**
**ಪ್ರತ್ಯರ್ಕಕೀರ್ತ್ಯಥಾ[೬]ದಿಕ್ಷದ್ದೂತಂ ಸ ಪ್ರಾಪ್ಯ ಸತ್ವರಮ್ ॥ ೮೭ ॥**

**ಕುಮಾರ ತವ ಕಿಂ ಯುಕ್ತಮೇವಂ ಸೀಮಾತಿಲಂಘನಮ್ ।**
**ಪ್ರಸೀದ ಪ್ರಲಯೋ ದೂರಸ್ತನ್ಮಾ ಕಾರ್ಷೀರ್ಮೃಷಾಗಮಮ್ ॥ ೮೮ ॥**

ಅಕಂಪನಮಹಾರಾಜನು ಈ ಜನವಾರ್ತೆಯನ್ನು ತಿಳಿದು ಅತ್ಯಂತ ವ್ಯಾಕುಲನಾಗಿ "ಚೆನ್ನಾಗಿ ಆಲೋಚಿಸಿದ ಕಾರ್ಯವೂ ದೈವದಿಂದ ವ್ಯತ್ಯಸ್ತವಾಗಿ ಮಾಡಲಾಗುತ್ತದೆ" ಎಂಬುದಾಗಿ ತನ್ನ ಮಂತ್ರಿಗಳೊಡನೆಯೂ ಜಯಕುಮಾರನೇ ಮೊದಲಾದವರೊಡನೆಯೂ ಆಲೋಚಿಸಿ ಬಳಿಕ ಅರ್ಕಕೀರ್ತಿಯ ಬಳಿಗೆ ದೂತನನ್ನು ಕಳುಹಿಸಿದನು. ಆ ದೂತನು ಶೀಘ್ರವಾಗಿ ಅರ್ಕಕೀರ್ತಿಯನ್ನು ಹೊಂದಿ "ಎಲೈ ಕುಮಾರನೆ ! ನಿನಗೆ ಈ ರೀತಿಯಾಗಿ ಮರ್ಯಾದೆ–ಎಲ್ಲೆಯನ್ನು ಮೀರುವಿಕೆಯು ಯುಕ್ತವಾದುದೇನು ? ಪ್ರಸನ್ನನಾಗು. ಪ್ರಳಯವು ದೂರವಾಗಿರುತ್ತದೆ. ಆದುದರಿಂದ ಶಾಸ್ತ್ರವನ್ನು ಸುಳ್ಳುಮಾಡಬೇಡ. ಪ್ರಳಯವು ದೂರವಾಗಿರುತ್ತದೆಂದು ಹೇಳುವ ಶಾಸ್ತ್ರವನ್ನು, ಈಗಲೇ ಪ್ರಳಯವನ್ನು ತಂದೊಡ್ಡಿ , ಸುಳ್ಳುಮಾಡಬೇಡವೆಂದು ಭಾವವು."

**ಇತಿ ಸಾಮಾದಿಭಿಃ ಸ್ವೋಕ್ತೈರಶಾಂತ[೭]ಮವಗಮ್ಯ ತಮ್ ।**
**ಪ್ರತ್ಯೇತ್ಯ ತತ್ತಥಾ ಸರ್ವಮಾಶ್ವ[೮]ವಾಜೀಗಮ[೯]ನ್ನೃಪಮ್ ॥ ೮೯ ॥**

ಈ ಪ್ರಕಾರವಾಗಿ ತನ್ನಿಂದ ಹೇಳಲ್ಪಟ್ಟ ಸಾಮಾದಿ ವಚನಗಳಿಂದ ಶಾಂತನಾಗದಿರುವ ಅರ್ಕಕೀರ್ತಿಯನ್ನು ತಿಳಿದು–ಅರ್ಕಕೀರ್ತಿಯು ಶಾಂತನಾಗಲಿಲ್ಲವೆಂದು ತಿಳಿದು ಹಿಂದಿರುಗಿ ಬಂದು ಅದೆಲ್ಲವನ್ನೂ ನಡೆದಹಾಗೆ ಶೀಘ್ರವಾಗಿ ಅಕಂಪನಮಹಾರಾಜನಿಗೆ ತಿಳುಹಿದನು.

**[೧೦]ಕಾಶೀರಾಜಸ್ತದಾಕರ್ಣ್ಯ ವಿಷಾದಚಲಿತಾಶಯಃ ।**
**ಮಹಾಮೋಹಾಹಿ[೧೧]ತೋ ವಾಸೀದ್ದುಷ್ಕಾರ್ಯೇ ಕೋ ನ ಮುಹ್ಯತಿ ॥**

ಕಾಶೀರಾಜನಾದ ಅಕಂಪನನು ಆ ಮಾತನ್ನು ಕೇಳಿ ಖೇದದಿಂದ ಚಂಚಲವಾದ ಮನಸ್ಸುಳ್ಳವನಾಗಿ ಮಹಾಮೂರ್ಛೆಯಿಂದ ವ್ಯಾಪ್ತನಾದವನಂತೆ ಆದನು.

೧ ಅದ್ರಿಭವೇಷೂತ್ತಮಂ. ೨ ಉದ್ಧೃತಾಸಿ. ೩ ಅಕಂಪನಂ ಪ್ರತಿ ಮೇರುಂ ಚ. ೪ ಸುಷ್ಠು ಆಲೋಚಿತಂ. ೫ ಕಾರ್ಯಂ. ೬ ಪ್ರಾಹಿಣೋತ್. ೭ ಜ್ಞಾತ್ವಾ. ೮ ಜ್ಞಾಪಿತವಾನ್. ೯ ಅಕಂಪನಂ. ೧೦ ಅಕಂಪನಃ. ೧೧ ಗ್ರಸ್ತಃ.

ದುಷ್ಕಾರ್ಯದಲ್ಲಿ ಯಾರುತಾನೆ ಮೋಹಗೊಳ್ಳುವುದಿಲ್ಲ ? ಎಲ್ಲರೂ ದುಷ್ಕಾರ್ಯದಿಂದ ವ್ಯಾಕುಲರಾಗುತ್ತಾರೆಂದು ಭಾವವು.

**ಅತ್ರ ಚಿಂತ್ಯಂ ನ ವಃ ಕಿಂಚಿನ್ನ್ಯಾಯಸ್ತೇನೈವ ಲಂಘಿತಃ ।**
**ತಿಷ್ಠತೇಹೈವ ಸಂರಕ್ಷ್ಯ [೧]ಸುನಿಯುಕ್ತಾಃ ಸುಲೋಚನಾಮ್ ॥ ೯೧ ॥**

ಆಗ ಜಯಕುಮಾರನು ''ಈ ವಿಷಯದಲ್ಲಿ ನಿಮಗೆ ಸ್ವಲ್ಪವೂ ಚಿಂತಿಸಬೇಕಾದುದಿಲ್ಲ. ಆ ಅರ್ಕಕೀರ್ತಿಯಿಂದಲೇ ನ್ಯಾಯವು ಮೀರಲ್ಪಟ್ಟಿದೆ. ಜಾಗರೂಕರಾಗಿದ್ದು ಸುಲೋಚನೆಯನ್ನು ಕಾಪಾಡಿಕೊಂಡು ಇಲ್ಲೇ ಇರಿ.

**ಇದಾನೀಮೇವ ದುರ್ವೃತ್ತಂ ಶೃಂಖಲಾಲಿಂಗನೋತ್ಸುಕಮ್ ।**
**ಶಾಖಾಮೃಗಮಿವಾನೇಷ್ಯೇ ಬಧ್ವಾ [೨]ದಾರಾತತಾಯಿನಮ್ ॥ ೯೨ ॥**

ದುರಾಚಾರಿಯೂ ಸರಪಣಿಯ ಆಲಿಂಗನೆಯಲ್ಲಿ ಕುತೂಹಲವುಳ್ಳವನೂ ಸ್ತ್ರೀನಿಮಿತ್ತವಾಗಿ ಬಂದವನೂ ಆದ ಆ ಅರ್ಕಕೀರ್ತಿಯನ್ನು ಈಗಲೇ ಕಟ್ಟಿ, ಕಪಿಯನ್ನು ತರುವಂತೆ, ತರುವೆನು.''

**ಇತ್ಯುದೀರ್ಯ ಜಯೋ ಮೇಘಕುಮಾರವಿಜಯಾರ್ಜಿತಾಮ್ ।**
**ಮೇಘಘೋಷಾಭಿಧಾಂ ಭೇರೀಂ [೩]ಪ್ರಷ್ಠೇನಾ[೪]ಸ್ಫೋಟಯದ್ರುಷಾ ॥**

ಈ ಪ್ರಕಾರವಾಗಿ ಹೇಳಿ ಮೇಘಕುಮಾರರನ್ನು ಜಯಿಸಿದ ಕಾಲದಲ್ಲಿ ಸಂಪಾದಿಸಲ್ಪಟ್ಟುದೂ ಮೇಘಘೋಷವೆಂದು ಹೆಸರುಳ್ಳುದೂ ಆದ ಭೇರಿಯನ್ನು ಕೋಪದಿಂದ ಅಗ್ರಗಣ್ಯನಾದ ಭೃತ್ಯನಿಂದ ಹೊಡೆಯಿಸಿದನು.

**[೫]ದ್ರೋಣಾದಿ[೬]ಪ್ರಕ್ಷಯಾರಂಭಘನಾಘನಘನಧ್ವನಿಮ್ ।**
**ತದ್ಧ್ವನಿ[೭]ರ್ವ್ಯಾಪ ನಿರ್ಜಿತ್ಯ ನಿರ್ಭಿದ್ಯ ಹೃದಯಂ ದ್ವಿಷಾಮ್ ॥ ೯೪ ॥**

ಆ ಭೇರಿಯ ಶಬ್ದವು ದ್ರೋಣ ಕಾಲ ಪುಷ್ಕಲಾವರ್ತ ಮೊದಲಾದ ಪ್ರಳಯಕಾಲಪ್ರಾರಂಭದ ಮೇಘದ ತೀವ್ರವಾದ ಧ್ವನಿಯನ್ನು ಜಯಿಸಿ ಶತ್ರುಗಳ ಎದೆಯನ್ನು ಭೇದಿಸಿ ವ್ಯಾಪಿಸಿತು.

**ತದ್ರವಾಕರ್ಣನಾದ್ಘೂರ್ಣಿತಾರ್ಣವಪ್ರತಿಮೇ ಬಲೇ ।**
**[೮]ಅತಿವೇಲೋತ್ಸವೋತ್ರಾಸೀದುತ್ಸವೋ [೯]ವಿಜಯೇ ಯಥಾ ॥ ೯೫ ॥**

ಆ ಶಬ್ದವನ್ನು ಕೇಳಿದುದರಿಂದ ಅಲ್ಲೋಲಕಲ್ಲೋಲವಾದ ಸಮುದ್ರಕ್ಕೆ ಸಮಾನವಾದ ಈ ಸೈನ್ಯದಲ್ಲಿ, ದಿಗ್ವಿಜಯದಲ್ಲಿ ಹೇಗೆ ಉತ್ಸವ–ಸಂತೋಷವುಂಟಾಗಿದ್ದಿತೋ ಹಾಗೆ, ಅಧಿಕವಾದ ಉತ್ಸವವುಂಟಾಯಿತು.

**ತದೋದ್ಭಿನ್ನಕಟಪ್ರಾಂತಪ್ರಕ್ಷರನ್ಮದಪಾಯಿನಃ ।**
**ಸ್ವಮದೇನೇವ ಮಾತಂಗಾಃ ಪ್ರೋತ್ತುಂಗಾಃ [೧೦]ಪ್ರೋನ್ಮದಿಷ್ಣವಃ ॥ ೯೬ ॥**

**ಸುಸ್ವನಂತಃ ಖನಂತಃ ಖಂ ವಾಜಿನೋ ವಾಯುರಂಹಸಃ ।**
**ಕೃತೋತ್ಸಾಹಾ ರಣೋತ್ಸಾಹಾದ್ರೇಜುಸ್ತೇಜಸ್ವಿತಾ ಹಿ ಸಾ ॥ ೯೭ ॥**

ಆಗ ಸೀಳಿದ ಕೆನ್ನೆಯ ಬಳಿಯಲ್ಲಿ ಸುರಿಯುತ್ತಿರುವ ಮದಜಲವನ್ನು ಕುಡಿಯುವುವೂ ಉನ್ನತಗಳೂ ಆದ ಆನೆಗಳು ತಮ್ಮ ಮದದಿಂದ ಮದಿಸಿದುವೋ ಎಂಬಂತೆಯೂ ಚೆನ್ನಾಗಿ ಧ್ವನಿಮಾಡುವುವೂ ಆಕಾಶವನ್ನು ಕೆದಕುವುವೂ ಗಾಳಿಯಂತೆ ವೇಗವುಳ್ಳುವೂ ಆದ ಕುದುರೆಗಳು ಯುದ್ಧೋತ್ಸಾಹದಿಂದ ಮಾಡಲ್ಪಟ್ಟ ಉತ್ಸಾಹವುಳ್ಳುವುಗಳಾಗಿಯೂ ಪ್ರಕಾಶಿಸಿದುವು. ಅದಲ್ಲವೇ ತೇಜಸ್ಸು ? ಮದೋನ್ಮತ್ತಗಳಾದ ಆನೆಗಳೂ ಕುದುರೆಗಳೂ ಶೋಭಿಸುತ್ತಿದ್ದುವೆಂದೂ ಕುದುರೆಗಳು ಮೇಲೆ ಹೇಳಿದ ಗುಣಗಳುಳ್ಳುವುಗಳಾಗಿರುವಿಕೆಯೇ ಆ ತೇಜಿ(ಕುದುರೆ)ಗಳ ತೇಜಸ್ವಿತೆಯೆಂದೂ ಭಾವವು.

**ರಥಾಃ ಪ್ರಾಗಿವ [೧]ಪರ್ಯಾಪ್ತಾಃ ಪೂರ್ಣಸರ್ವಾಯುಧಾ [೨]ಯುಧಃ ।**
**ಮಹಾ[೩]ವಾಹಸಮಾಯುಕ್ತಾಃ ಪ್ರನೃತ್ಯತ್ಕೇತುಬಾಹವಃ ॥ ೯೮ ॥**

ಯುದ್ಧದ ರಥಗಳು, ಮೊದಲು–ದಿಗ್ವಿಜಯಕಾಲದಲ್ಲಿ ಹೇಗೋ ಹಾಗೆ, ತುಂಬಿರುವ ಸಮಸ್ತವಾದ ಆಯುಧಗಳುಳ್ಳುವೂ ದೊಡ್ಡ ಕುದುರೆಗಳಿಂದ ಯುಕ್ತವಾಗಿರುವುವೂ ಚೆನ್ನಾಗಿ ಕುಣಿಯುತ್ತಿರುವ ಧ್ವಜಗಳೆಂಬ ಭುಜಗಳುಳ್ಳುವೂ ಆಗಿ ಎಲ್ಲಾ ಕಡೆಗಳಿಂದಲೂ ಪ್ರಾಪ್ತವಾದುವು.

**ಯೋಷಿತೋ[೪]ಪ್ಯಭಟಾಯಂತ ಪಾಟವಾತ್ಸಂಯುಗಂ ಪ್ರತಿ ।**
**ತತಃ ಪ್ರತಿಬಲಾ[೫]ತ್ತತ್ರ ಭೂಯಾಂಸೋ ವಾ ಪದಾತಯಃ ॥ ೯೯ ॥**

ಸ್ತ್ರೀಯರೂ ಜಾಣತನದಿಂದ ಯುದ್ಧವನ್ನು ಕುರಿತು ಭಟರಂತೆ ಆಚರಿಸಿದರು. ಯುದ್ಧಸನ್ನದ್ಧರಾದರೆಂದು ಭಾವವು. ಆದುದರಿಂದ ಜಯಕುಮಾರನ ಸೈನ್ಯದಲ್ಲಿ ಶತ್ರುಸೈನ್ಯಕ್ಕಿಂತ ಕಾಲುನಡೆಯ ಸೈನಿಕರು ಹೆಚ್ಚಾಗಿರುತ್ತಾರೋ ಎಂಬಂತಿದ್ದರು.

**ವರ್ಧಮಾನೋ ಧ್ವನಿಸ್ತೂರ್ಯೈರಣರಂಗೇ ಭವಿಷ್ಯತಃ ।**
**ವೀರಲಕ್ಷ್ಮೀಂ ಪ್ರನೃತ್ತಸ್ಯ ಪ್ರೋದ್ಯಯೌ [೬]ಗುಣಯನ್ನಿವ ॥ ೧೦೦ ॥**

ವಾದ್ಯಗಳಿಂದ ವೃದ್ಧಿಹೊಂದುತ್ತಿರುವ ಧ್ವನಿಯು, ಯುದ್ಧರಂಗದಲ್ಲಿ ಮುಂದಾಗುವ ಕುಣಿತಕ್ಕೆ ವೀರಲಕ್ಷ್ಮಿಯನ್ನು–ಬೆಳೆಯಿಸು–ಪ್ರೋತ್ಸಾಹಿಸುತ್ತದೋ ಎಂಬಂತೆ ಎದ್ದಿತು.

**ವನಾನ್ವಯವಯಶ್ಶಿಕ್ಷಾಲಕ್ಷಣೈ[೭]ರ್ವೀಕ್ಷ್ಯ ವಿಗ್ರಹಮ್ ।**
**ಸುವರ್ಮಾಣಂ [೮]ಸುಧರ್ಮಾಣಂ [೯]ಕಾಮವಂತಂ ಕ್ಷರನ್ಮದಮ್ ॥**

**ಸಾಮಜಂ ವಿಜಯಾರ್ಧಾಖ್ಯಂ ವಿಜಯಾರ್ಧಮಿವಾಪರಮ್ ।**
**ಬಹುಶೋ ದೃಷ್ಟಸಂಗ್ರಾಮಂ ಗಜಧ್ವಜವಿರಾಜಿತಮ್ ॥ ೧೦೨ ॥**

**ಅಧಿಷ್ಠಾಯ ಜಯಃ ಸರ್ವಸಾಧನೇನ ಸಹಾನುಜಃ ।**
**ನಿರ್ಜಗಾಮ ಯುಗಪ್ರಾಂತಕಾಲಲೀಲಾಂ ವಿಲಂಘಯನ್ ॥ ೧೦೩ ॥**

ತಮ್ಮಂದಿರೊಡನೆ ಸಹಿತನಾದ ಜಯಕುಮಾರನು ಆನೆಯು ಹುಟ್ಟಿದ ಕಾಡು ವಂಶ ವಯಸ್ಸು ಶಿಕ್ಷಣ ಲಕ್ಷಣ ಇವುಗಳಿಂದ ನೋಡುವುದಕ್ಕೆ ಯೋಗ್ಯವಾದ ದೇಹವುಳ್ಳುದೂ ಶ್ರೇಷ್ಠವಾದ ಕವಚವುಳ್ಳುದೂ ಒಳ್ಳೆಯ ಸ್ವಭಾವವುಳ್ಳುದೂ ತನ್ನಮೇಲೆ ಹತ್ತಿರುವವನ ಇಚ್ಛಾನುಸಾರವಾದ ಗಮನವುಳ್ಳುದೂ ಮದಜಲವನ್ನು ಸ್ರವಿಸುತ್ತಿರುವುದೂ ಅನೇಕಾವರ್ತಿ ಯುದ್ಧವನ್ನು ನೋಡಿರುವುದೂ ಆನೆಯ ಚಿಹ್ನೆಯುಳ್ಳ ಧ್ವಜದಿಂದ ಶೋಭಿಸಲ್ಪಡುವುದೂ ಬೇರೊಂದು ವಿಜಯಾರ್ಧ ಪರ್ವತವೋ ಎಂಬಂತಿರುವುದೂ ವಿಜಯಾರ್ಧವೆಂದು ಹೆಸರುಳ್ಳುದೂ ಆದ ಆನೆಯನ್ನು ಹತ್ತಿಕೊಂಡು ಸಮಸ್ತಸಾಧನದೊಡನೆ ಪ್ರಳಯಕಾಲದ ಲೀಲೆಯನ್ನು ಮೀರುವವನಾಗಿ ಹೊರಟನು.

**ಕುರ್ವಂತೀ ಶಾಂತಿಪೂಜಾಂ ತ್ವಂ ತಿಷ್ಠ [೧೦]ಮಾತ್ರೇತಿ ಸಾದರಮ್ ।**
**ಪ್ರವೇಶ್ಯ ಚೈತ್ಯಧಾಮಾ[೧೧]ಗ್ರ್ಯಂ ಸುತಾಂ ನಿತ್ಯಮನೋಹರಮ್ ॥ ೧೦೪ ॥**

**ಸಮಗ್ರಬಲಸಂಪತ್ತ್ಯಾ ಚಚಾಲ ಚಲಯ[೧೨]ನ್ನಿಲಾಮ್ ।**
**ಅಕಂಪ್ರಃ ಕಂಪಿತಾರಾತಿಃ [೧೩]ಸಾಕಂಪನಿರಕಂಪನಃ ॥ ೧೦೫ ॥**

---

೧ ಸಾವಧಾನಾ ಭೂತ್ವಾ. ೨ ದಾರೇಷು ಕೃತಾಗಮನಂ, ಸ್ತ್ರೀನಿಮಿತ್ತಮಾಗತಮಿತ್ಯರ್ಥಃ, ದಾರಾತತಾಯಿನಮಿತಿ ಪಾಠೇ ದಾರಾರ್ಥಂ ವಧೋದ್ಯತಂ. ೩ ಅಗ್ರಗಾಮಿನಾ ಪುರುಷೇಣ. ೪ ಆಸ್ಫಾಲಯತ್. ೫ ದ್ರೋಣಕಾಲಪುಷ್ಕಲಾವರ್ತಾದಿ. ೬ ಪ್ರಳಯಕಾಲಪ್ರಾರಂಭ. ೭ ವ್ಯಾಪ್ನೋತಿ ಸ್ಮ. ೮ ಭೃಶೋತ್ಸವಃ. ೯ ದಿಗ್ವಿಜಯೇ. ೧೦ ಮತ್ತಾಃ.

೧ ಸಮಂತಾತ್ಪ್ರಾಪ್ತಾಃ. ೨ ರಣಸ್ಯ. ೩ ಅಶ್ವ. ೪ ಭಟಾ ಇವಾಚರಿತಾಃ. ೫ ಜಯಬಲೇ. ೬ ಅತಿಶಯಂ ಕುರ್ವನ್ನಿವ. ೭ ದರ್ಶನೀಯಮೂರ್ತಿಂ. ೮ ಶೋಭನಸ್ವಭಾವಂ. ೯ ಆರೋಹಕಸ್ಯ ವಶವರ್ತಿಗಮನವಂತಂ. ೧೦ ಜನನ್ಯಾ ಸಹ. ೧೧ ಶ್ರೇಷ್ಠಂ. ೧೨ ಭೂಮಿಂ. ೧೩ ಅಕಂಪನಸ್ಯಾಪತ್ಯಾನಿ ಪುಮಾಂಸಸ್ತೈಃಸಹಿತಃ–ಸುಪುತ್ರಃ.

**ಸುಕೇತುಃ ಸೂರ್ಯಮಿತ್ರಾಖ್ಯಃ ಶ್ರೀಧರೋ ಜಯವರ್ಮಣಾ ।**
**ದೇವಕೀರ್ತಿರ್ಜಯಂ ಜಗ್ಮುರಿತಿ ಭೂಪಾಃ ಸಸಾಧನಾಃ ॥ ೧೦೬ ॥**

"ನೀನು ತಾಯಿಯೊಡನೆ ಪ್ರೀತಿಪೂರ್ವಕವಾಗಿ ಶಾಂತಿಪೂಜೆಯನ್ನು ಮಾಡಿಕೊಂಡಿರು" ಹೀಗೆಂದು ಮಗಳನ್ನು ನಿತ್ಯಮನೋಹರವೆಂಬ ಶ್ರೇಷ್ಠವಾದ ಚೈತ್ಯಾಲಯಕ್ಕೆ ಪ್ರವೇಶಮಾಡಿಸಿ ಸಂಪೂರ್ಣವಾದ ಸೈನ್ಯಸಂಪತ್ತಿಯೊಡನೆ ನಿಶ್ಚಲನೂ ಶತ್ರುಗಳನ್ನು ನಡುಗಿಸಿರುವವನೂ ಅಕಂಪನನ ಪುತ್ರರೊಡನೆ (ತನ್ನ ಮಕ್ಕಳೊಡನೆ) ಕೂಡಿರುವವನೂ ಆದ ಅಕಂಪನಮಹಾರಾಜನು ಭೂಮಿಯನ್ನು ನಡುಗಿಸುವವನಾಗಿ ನಡೆದನು. ಸುಕೇತು ಸೂರ್ಯಮಿತ್ರನೆಂಬುವನು ಶ್ರೀಧರ ಜಯವರ್ಮನೊಡನೆ ದೇವಕೀರ್ತಿ ಈ ರಾಜರುಗಳು ಸಾಧನಸಮೇತರಾಗಿ ಜಯಕುಮಾರನನ್ನು ಹೊಂದಿದರು.

**ಇಮೇ ಮುಕುಟಬದ್ಧೇಷು ಪಂಚ ವಿಖ್ಯಾತಕೀರ್ತಯಃ ।**
**ಪರೇ ಚ ಶೂರಾ ನಾಥೇಂದುವಂಶ[೧]ಗೃಹ್ಯಾಃ ಸಮಾಯಯುಃ ॥ ೧೦೭ ॥**

ಈ ಐದು ಮಂದಿಗಳು ಮುಕುಟಬದ್ಧರಾದ ರಾಜರುಗಳಲ್ಲಿ ಪ್ರಖ್ಯಾತವಾದ ಕೀರ್ತಿಯುಳ್ಳವರು. ಶೂರರೂ ನಾಥವಂಶ ಸೋಮವಂಶಗಳ ಪಕ್ಷದವರೂ ಆದ ಇತರ ರಾಜರುಗಳೂ ಬಂದರು.

**ಮೇಘಪ್ರಭಶ್ಚ ಚಂಡಾಸಿಪ್ರಭಾವ್ಯಾಪ್ತವಿಯತ್ತಲಃ ।**
**ವಿದ್ಯಾಬಲೋದ್ಧತಃ ಸಾರ್ಧಮರ್ಧೈರ್ವಿದ್ಯಾಧರೈರಯಾತ್ ॥ ೧೦೮ ॥**

ತೀಕ್ಷ್ಣವಾದ ಕತ್ತಿಯ ಪ್ರಭೆಯಿಂದ ವ್ಯಾಪ್ತವಾದ ಆಕಾಶಪ್ರದೇಶವುಳ್ಳವನೂ ವಿದ್ಯಾಬಲದಿಂದ ಮದಿಸಿರುವವನೂ ಆದ ಮೇಘಪ್ರಭನೂ ಅರ್ಧಭಾಗವಿದ್ಯಾಧರರೊಡನೆ ಬಂದನು. ವಿದ್ಯಾಧರರಲ್ಲಿ ಅರ್ಧಭಾಗ ವಿದ್ಯಾಧರರೊಡನೆ ಬಂದನೆಂದು ಭಾವವು.

**ಬಲಂ ವಿಭಜ್ಯ ಭೂಭಾಗೇ ವಿಶಾಲೇ ಸಕಲಂ ಸಮೇ ।**
**[೨]ಪ್ರಕೃತ್ಯ [೩]ಮಕರವ್ಯೂಹಂ ವಿರೋಧಿಬಲ[೪]ಘಸ್ಮರಃ ॥ ೧೦೯ ॥**

**ಉಚ್ಚೈರೂರ್ಜಿತತೂರ್ಯೌಘನಿರ್ಯನ್ನಿರ್ಘೋಷಭೀಷಣಮ್[೫] ।**
**ಜಿತಮೇಘಸ್ವರೋ ಗರ್ಜನ್ ರೇಜೇ ಮೇಘಸ್ವರಸ್ತದಾ ॥ ೧೧೦ ॥**

ಸಮಸ್ತಬಲವನ್ನು ಸಮತಲವೂ ವಿಶಾಲವೂ ಆದ ಭೂಭಾಗದಲ್ಲಿ ವಿಭಾಗಿಸಿ ಮೊಸಳೆಯ ಆಕಾರದ ರಚನಾವಿನ್ಯಾಸವನ್ನು ಮಾಡಿ ಶತ್ರುಸೈನ್ಯವನ್ನು ನಾಶಮಾಡುವವನೂ ಆದ ವಿಶೇಷವಾದ ವಾದ್ಯಗಳ ಸಮೂಹದಿಂದ ಹೊರಡುತ್ತಿರುವ ಶಬ್ದದಿಂದ ಭಯಂಕರವಾಗಿರುವ ಹಾಗೆ ಗಟ್ಟಿಯಾಗಿ ಗರ್ಜಿಸುವವನೂ ಆದ ಮೇಘಸ್ವರ–ಜಯಕುಮಾರನು ಮೇಘಧ್ವನಿಯನ್ನು ಜಯಿಸಿದವನಾಗಿ ಶೋಭಿಸಿದನು.

**ಚಕ್ರವ್ಯೂಹವಿಭಕ್ತಾತ್ಮಭೂರಿಸಾಧನಮಧ್ಯಗಃ ।**
**ಅರ್ಕಕೀರ್ತಿಶ್ಚ ಭಾತಿ ಸ್ಮ ಪರಿವೇಷಾ[೬]ಹಿತಾರ್ಕವತ್ ॥ ೧೧೧ ॥**

ಚಕ್ರಾಕಾರವಾದ ರಚನಾವಿನ್ಯಾಸದಿಂದ ವಿಭಾಗಿಸಲ್ಪಟ್ಟ ಅನೇಕ ಸಾಧನ (ಸೈನ್ಯ) ಮಧ್ಯವನ್ನು ಹೊಂದಿರುವವನಾದ ಅರ್ಕಕೀರ್ತಿಯು, ಪರಿಧಿಯಿಂದ ಹಿಡಿಯಲ್ಪಟ್ಟ ಸೂರ್ಯನಂತೆ, ಪ್ರಕಾಶಿಸಿದನು.

**ಕ್ರುದ್ಧಾಸ್ತೇ ಖೇಚರಾಧೀಶಾಃ ಸುನಮಿಪ್ರಮುಖಾಃ ಪೃಥಕ್ ।**
**ಗರುಡವ್ಯೂಹಮಾಪಾದ್ಯ ತಸ್ಥುಶ್ಚಕ್ರಿಸುತಾಜ್ಞಯಾ ॥ ೧೧೨ ॥**

ಕೋಪಗೊಂಡವರಾದ ಆ ಸುನಮಿಯೇ ಮೊದಲಾದ ಖೇಚರಾಧಿಪತಿಗಳು ಬೇರೆಯಾಗಿ ಗರುಡಾಕಾರದ ಸೇನಾರಚನೆಯನ್ನು ಮಾಡಿ ಚಕ್ರವರ್ತಿಯ ಪುತ್ರ–ಅರ್ಕಕೀರ್ತಿಯ ಆಜ್ಞೆಯಿಂದ ಸಿದ್ಧರಾಗಿದ್ದರು.

೧ ಪಕ್ಷ್ಯಾಃ. ೨ ಕೃತ್ವಾ. ೩ ಮಕರಾಕಾರರಚನಾವಿನ್ಯಾಸಂ. ೪ ಅದ್ಮರಃ, ವಿನಾಶಕ ಇತ್ಯರ್ಥಃ. ೫ ಯಥಾ ಭವತಿ ತಥಾ. ೬ ಸ್ವೀಕೃತ.

**[೧]ಅಷ್ಟಚಂದ್ರಾಃ ಖಗಾಃ ಖ್ಯಾತಾಶ್ಚಕ್ರಿಣಃ ಪರಿತಃ ಸುತಮ್ ।**
**[೨]ಶರೀರಾರಕ್ಷಕತ್ವೇನ ಭೇಜುರ್ವಿದ್ಯಾಮದೋದ್ಧುರಾಃ ॥ ೧೧೩ ॥**

ವಿದ್ಯಾಮದದಿಂದ ಕೊಬ್ಬಿದವರೂ ಖೇಚರರೂ ಪ್ರಸಿದ್ಧರೂ ಆದ ಅಷ್ಟಚಂದ್ರರೆಂಬವರು ಚಕ್ರವರ್ತಿಯ ಮಗನ ಸುತ್ತಲೂ ಅಂಗರಕ್ಷಕರೂಪದಿಂದ ಹೊಂದಿದರು–ಸೇವೆಗೈದರು.

**ಅಕಾಲಪ್ರಲಯಾರಂಭಜೃಂಭಿತಾಂಭೋದಗರ್ಜಿತಮ್ ।**
**ನಿರ್ಜಿತ್ಯ ತೂರ್ಣಂ ತೂರ್ಯಾಣಿ ದಧ್ವನುಃ ಸೇನಯೋಃ ಸಮಮ್ ॥**

ವಾದ್ಯಗಳು ಅಕಾಲಪ್ರಳಯದ ಪ್ರಾರಂಭದಲ್ಲಿ ಉಬ್ಬಿದ ಸಮುದ್ರದ ಗರ್ಜನೆಯನ್ನು ಜಯಿಸಿ ತ್ವರೆಯಾಗಿ ಎರಡು ಸೈನ್ಯಗಳಲ್ಲಿ ಏಕಕಾಲದಲ್ಲಿ ಧ್ವನಿಮಾಡಿದುವು.

**ಧಾನುಷ್ಕೈ[೩]ರ್ಮಾರ್ಗಣೈ[೪]ರ್ಮಾರ್ಗಃ ಸಮರಸ್ಯ ಪುರಸ್ಸರೈಃ ।**
**ಪ್ರವರ್ತಯಿತುಮಾರೇಭೇ ಘೋರಘೋಷೈಃ [೫]ಸವಲ್ಗಿತಮ್ ॥ ೧೧೫ ॥**

ಭಯಂಕರವಾದ ಘೋಷಣವುಳ್ಳವರೂ ಮುಂದೆ ಹೋಗುವವರೂ ಆದ ಧನುರ್ಧಾರಿಗಳಿಂದ ಬಾಣಗಳಿಂದ ಮೇಲೆ ಹಾರುವಿಕೆಯೊಡನೆ ಕೂಡಿರುವಂತೆ ಯುದ್ಧರಂಗದ ಮಾರ್ಗವು ನಡೆಯಿಸುವುದಕ್ಕೆ ಪ್ರಾರಂಭಿಸಲ್ಪಟ್ಟಿತು. ಧನುರ್ಧಾರಿಗಳು ತಮ್ಮ ಬಾಣಗಳನ್ನೆತ್ತಿ ಅವುಗಳಿಂದ ಯುದ್ಧರಂಗದ ಮಾರ್ಗವನ್ನು ಸರಿಪಡಿಸಿದರೆಂದು ಭಾವವು.

**ಸಂಗ್ರಾಮನಾಟಕಾರಂಭಸೂತ್ರಧಾರಾ ಧನುರ್ಧರಾಃ ।**
**ರಣರಂಗಂ ವಿಶಂತಿ ಸ್ಮ ಗರ್ಜತ್ತೂರ್ಯಪುರಸ್ಸರಮ್ ॥ ೧೧೬ ॥**

ಯುದ್ಧವೆಂಬ ನಾಟಕದ ಆರಂಭಕ್ಕೆ ಸೂತ್ರಧಾರರಾದ ಧನುರ್ಧಾರಿಗಳು ಗರ್ಜಿಸುತ್ತಿರುವ ವಾದ್ಯಪುರಸ್ಸರವಾಗಿ ರಣರಂಗವನ್ನು ಪ್ರವೇಶಿಸಿದರು.

**[೬]ಆಬಧ್ಯ [೭]ಸ್ಥಾನಕಂ ಪೂರ್ವಂ ರಣರಂಗೇ ಧನುರ್ಧರೈಃ ।**
**ಪುಷ್ಪಾಂಜಲಿರಿವ [೮]ವ್ಯಸ್ತೋ ಮುಕ್ತಃ [೯]ಶಿತಶರೋತ್ಕರಃ ॥ ೧೧೭ ॥**

ಮೊದಲು ರಣರಂಗದಲ್ಲಿ ಆಲೀಢ (ಬಲಗಾಲನ್ನು ಮುಂದಕ್ಕೆ ನೀಡಿ ಎಡಗಾಲನ್ನು ಹಿಂದಕ್ಕಿಟ್ಟು ಯುದ್ಧಕ್ಕೆ ನಿಲ್ಲುವ ಆಸನ) ಮೊದಲಾದ ಆಸನವನ್ನು ರಚಿಸಿ ಧನುರ್ಧಾರಿಗಳಿಂದ ಎರಚಲ್ಪಟ್ಟ ಪುಷ್ಪಾಂಜಲಿಯೋ ಎಂಬಂತೆ ಹರಿತವಾದ ಬಾಣಗಳ ಸಮೂಹವು ಬಿಡಲ್ಪಟ್ಟಿತು.

**ತೀಕ್ಷ್ಣಾ ಮರ್ಮಾಣ್ಯಭಿಘ್ನಂತಃ ಪೂರ್ವಂ ಕಲಹಕಾರಿಣಃ ।**
**ಪಶ್ಚಾ[೧೦]ತ್ಪ್ರವೇಶಿನಃ ಪಶ್ಚಾ[೧೧]ತ್ಖಲಕಲ್ಪಾ [೧೨]ಧನುರ್ಭೃತಾಃ ॥ ೧೧೮ ॥**

ಮೊದಲು ತೀಕ್ಷ್ಣಗಳೂ ಬಳಿಕ ಮರ್ಮಸ್ಥಾನಗಳನ್ನು ಹೊಡೆಯುವುವೂ ಆದ ಬಾಣಗಳು, ಮೊದಲು ಜಗಳವಾಡುವವರೂ ಬಳಿಕ ಶರೀರವನ್ನು ಪ್ರವೇಶಿಸುವವರೂ (ಕಪಟದಿಂದ ಒಳ ಹೋಗುವವರೂ) ಆದ ದುರ್ಜನರಿಗೆ ಸಮಾನಗಳಾಗಿದ್ದುವು.

**ಉಭಯೋಃ [೧೩]ಪಾರ್ಶ್ವಯೋರ್ಬದ್ಧ್ವಾ [೧೪]ಬಾಣಧೀ ಕೃತವಲ್ಗನಾಃ ।**
**ಧನ್ವಿನಃ [೧೫]ಖೇಚರಾಕಾರಾ ರೇಜುರಾಜೌ ಜಿತಶ್ರಮಾಃ ॥ ೧೧೯ ॥**

ಯುದ್ಧದಲ್ಲಿ ತಮ್ಮ ಶರೀರದ ಉಭಯಪಾರ್ಶ್ವಗಳಲ್ಲಿ ಎರಡು ಬತ್ತಳಿಕೆಗಳನ್ನು ಕಟ್ಟಿ ಹಾರಾಡುವವರೂ ಶ್ರಮವನ್ನು ಜಯಿಸಿರುವವರೂ ಪಕ್ಷಿಸದೃಶರೂ ಆದ ಧನುರ್ಧಾರಿಗಳು ಪ್ರಕಾಶಿಸುತ್ತಿದ್ದರು.

೧ ಅಷ್ಟಚಂದ್ರಾಖ್ಯಾಃ. ೨ ಅಂಗರಕ್ಷಕತ್ವೇನ. ೩ ಬಾಣೈಃ. ೪ ಸಂಗ್ರಾಮಮಾರ್ಗಃ. ೫ ಉತ್ಪ್ಲವನಸಹಿತಂ ಯಥಾ ಭವತಿ ತಥಾ. ೬ ರಚಯಿತ್ವಾ. ೭ ಆಲೀಢಪ್ರತ್ಯಾಲೀಢಾದಿ. ೮ ಕ್ಷಿಪ್ತಃ. ೯ ನಿಶಿತ. ೧೦ ಶರೀರಂ ಪ್ರವೇಶಿನಃ. ೧೧ ದುರ್ಜನಸದೃಶಾಃ. ೧೨ ಬಾಣಾಃ. ೧೩ ನಿಜಶರೀರಪಾರ್ಶ್ವಯೋಃ. ೧೪ ಇಷುಧೀದ್ವೌ. ೧೫ ಪಕ್ಷಿಸದೃಶಾಃ.

**ಋಜುತ್ವಾದ್ದೂರದರ್ಶಿತ್ವಾತ್ಸದ್ಯಃ ಕಾರ್ಯಪ್ರಸಾಧನಾತ್ ।**
**[೧]ಶಾಸ್ತ್ರಮಾರ್ಗಾನುಸಾರಿತ್ವಾ[೨]ಚ್ಛರವಃ [೩]ಸಚಿವೈಃ ಸಮಾಃ ॥ ೧೨೦ ॥**

ಬಾಣಗಳು ಸರಳವಾಗಿ (ನೆಟ್ಟಗೆ) ಇರುವುದರಿಂದಲೂ ದೂರದರ್ಶಿಗಳಾಗಿರುವುದರಿಂದಲೂ ತತ್ಕ್ಷಣದಲ್ಲಿ ಕಾರ್ಯವನ್ನು ಸಾಧಿಸುವುವುಗಳಾಗಿರುವುದರಿಂದಲೂ ಶಾಸ್ತ್ರ(ಧನುರ್ವೇದ)ಮಾರ್ಗವನ್ನು ಅನುಸರಿಸುವುದರಿಂದಲೂ ಮಂತ್ರಿಗಳೊಡನೆ ಸಮಾನಗಳಾಗಿದ್ದುವು. ಬಾಣಗಳು ಸರಳತ್ವ ದೂರದರ್ಶಿತ್ವ ಮೊದಲಾದ ಗುಣಗಳಿಂದ ಆ ಗುಣಗಳುಳ್ಳವರಾದ ಮಂತ್ರಿಗಳನ್ನು ಹೋಲುತ್ತಿದ್ದುವೆಂದು ಭಾವವು.

**[೪]ಕ್ರವ್ಯಾಸೃಕ್ಪ್ರಾಶಿನಃ [೫]ಪತ್ರವಾಹಿನೋ ದೂರಪಾತಿನಃ ।**
**ಲಕ್ಷ್ಯೇಷೂಡ್ಡೀಯ ತೀಕ್ಷ್ಣಾಸ್ಯಾಃ [೬]ಖಗಾಃ ಪೇತುಃ [೭]ಖಗೋಪಮಾಃ ॥**

ಹಸಿದಾದ ಮಾಂಸವನ್ನೂ ರಕ್ತವನ್ನೂ ತಿನ್ನುವುವೂ ಪತ್ರ(ಗರಿ)ಗಳೊಡನೆ ಹೋಗುವುವೂ ದೂರದಲ್ಲಿ ಹೋಗಿ ಬೀಳುವುವೂ ಹರಿತವಾದ ಮುಖವುಳ್ಳುವೂ ಪಕ್ಷಿಗಳಿಗೆ ಸದೃಶಗಳೂ ಆದ ಬಾಣಗಳು ಹಾರಿ ಲಕ್ಷ್ಯಗಳಲ್ಲಿ ಬಿದ್ದುವು.

**[೮]ಧರ್ಮೇಣ [೯]ಗುಣಯುಕ್ತೇನ ಪ್ರೇರಿತಾ ಹೃದಯಂ ಗತಾ ।**
**ಶೂರಾನ್ [೧೦]ಶುದ್ಧಿರಿವಾನೈಷೀ[೧೧]ದ್ಗತಿಂ [೧೨]ಪತ್ರಿಪರಂಪರಾ ॥ ೧೨೨ ॥**

ಸಿಂಜಿನಿಯಿಂದ, ಅತಿಶಯದಿಂದ ಕೂಡಿರುವ ಧನುಸ್ಸಿನಿಂದ (ಧರ್ಮದಿಂದ) ಪ್ರೇರಿತವೂ ಹೃದಯವನ್ನು ಹೊಂದಿದುದೂ ಆದ ಬಾಣಗಳ ಪರಂಪರೆಯು, ಶುದ್ಧ ಪರಿಣಾಮದಂತೆಯೂ ರತ್ನತ್ರಯಶುದ್ಧಿಯಂತೆಯೂ, ಶೂರರಿಗೆ ಗತಿಯನ್ನು–ಸ್ವರ್ಗವನ್ನು ಹೊಂದಿಸಿತು.

**ಪುಂಸಾಂ ಸಂಸ್ಪರ್ಶಮಾತ್ರೇಣ ಹೃದ್ಗತಾ [೧೩]ರಕ್ತವಾಹಿನೀ ।**
**ಕ್ಷಿಪ್ರಂ ನ್ಯಮೀಲಯನ್ನೇತ್ರೇ ವೇಶ್ಯೇವ ವಿಶಿಖಾವಲೀ ॥ ೧೨೩ ॥**

ಪುರುಷರುಗಳ ಸಂಸ್ಪರ್ಶಮಾತ್ರದಿಂದ ಅವರ ಹೃದಯವನ್ನು ಹೊಂದಿರುವುದೂ ರಕ್ತವನ್ನು ಹರಿಸುವುದೂ ಆದ ಬಾಣಗಳ ಸಮೂಹವು, ಪುರುಷರಿಗೆ ಸ್ಪರ್ಶಮಾತ್ರದಿಂದ ಮನಸ್ಸಿಗೆ ಪ್ರಿಯಳೂ ಅನುರಾಗವನ್ನುಂಟುಮಾಡುವವಳೂ ಆದ ವೇಶ್ಯೆಯಂತೆ, ಕಣ್ಣುಗಳನ್ನು ಶೀಘ್ರವಾಗಿ ಮುಚ್ಚಿಸಿತು. ಮರಣವನ್ನುಂಟುಮಾಡಿತೆಂದು ಭಾವವು.

**ತ್ಯಕ್ತ್ವೇಶಂ [೧೪]ಖಚರಾಸ್ರಾತಿವೃಷ್ಟೌ [೧೫]ಗೃಧ್ರತಮಸ್ತತೌ ।**
**ಪರೋಽನ್ವಿಷ್ಯ ಶರಾವಲ್ಯಾ ಜಾರಯೇವ ವಶೀಕೃತಃ ॥ ೧೨೪ ॥**

ಹದ್ದುಗಳೆಂಬ ಕತ್ತಲೆಯ ಸಮೂಹದಲ್ಲಿ ಮೇಲಿರುವ ಖೇಚರರ ರಕ್ತದ ಅತಿವೃಷ್ಟಿಯಲ್ಲಿ ಸ್ವಾಮಿಯನ್ನು (ಬಾಣಗಳನ್ನು ಬಿಡುವವನನ್ನು) ಬಿಟ್ಟು ಬಾಣಗಳ ಪಂಕ್ತಿಯು, ಕತ್ತಲೆಯಲ್ಲಿ ಮಳೆಯಲ್ಲಿ ಗಂಡನನ್ನು ಬಿಟ್ಟು ಜಾರಸ್ತ್ರೀಯು ಪರಪುರುಷನನ್ನು ಹುಡುಕಿ ವಶಮಾಡುವಂತೆ, ಶತ್ರುವನ್ನು ಹುಡುಕಿ ವಶಮಾಡಿತು.

**[೧೬]ಪ್ರಗುಣಾ [೧೭]ಮುಷ್ಟಿಸಂವಾಹ್ಯಾ ದೂರಂ [೧೮]ದೃಷ್ಟ್ಯನುವರ್ತಿನಃ ।**
**ಗತ್ವೇ[೧೯]ಷ್ಟಂ ಸಾಧಯಂತಿ ಸ್ಮ ಸದ್ಭೃತ್ಯಾ ಇವ ಸಾಯಕಾಃ ॥ ೧೨೫ ॥**

ಸರಳರೂ ಆಜ್ಞಾವಶವರ್ತಿಗಳೂ ದೂರದಲ್ಲೇ ನೋಟದಿಂದಲೇ ತಮ್ಮ ಯಜಮಾನನ ಅಭಿಪ್ರಾಯವನ್ನು ತಿಳಿಯುವವರೂ ಆದ ಉತ್ತಮಭೃತ್ಯರು ಸ್ವಾಮಿಕಾರ್ಯವನ್ನು ಸಾಧಿಸುವಂತೆ, ನೆಟ್ಟಗಿರುವುವೂ ಮುಷ್ಟಿಯಿಂದ ಹಿಡಿಯಲ್ಪಡುವುದಕ್ಕೆ ಯೋಗ್ಯಗಳೂ ದೂರದಲ್ಲೇ ದೃಷ್ಟಿಯನ್ನು (ನೋಟವನ್ನು) ಅನುಸರಿಸಿರುವುವೂ ಆದ ಬಾಣಗಳು ಲಕ್ಷ್ಯವನ್ನು ಹೊಂದಿ ಸಾಧಿಸಿದುವು.

೧ ಧನುರ್ವೇದೋಕ್ತ. ೨ ಬಾಣಾಃ. ೩ ಮಂತ್ರಿಭಿಃ. ೪ ಆಮಮಾಂಸರಕ್ತಭೋಜನಃ. ೫ ಪತ್ರೈರ್ವಹಂತಿ ಗಚ್ಛಂತೀತಿ. ೬ ಬಾಣಾಃ. ೭ ಪಕ್ಷಿಸದೃಶಾಃ. ೮ ಧನುಷಾ. ೯ ಜ್ಯಾಸಹಿತೇನ, ಅತಿಶಯಯುಕ್ತೇನ ಚ. ೧೦ ಶುದ್ಧಪರಿಣಾಮ ಇವ, ರತ್ನತ್ರಯಶುದ್ಧಿರಿವ. ೧೧ ಸ್ವರ್ಗಂ. ೧೨ ಶರಸಂತತಿಃ. ೧೩ ರಕ್ತಂ ಪ್ರಾಪಯಂತೀ ಆತ್ಮನ್ಯನುರಕ್ತಂ ಪ್ರಾಪಯಂತೀ ಚ. ೧೪ ಉಪರಿಸ್ಥಿತಖೇಚರರುಧಿರವರ್ಷೇ. ೧೫ ದಾಕ್ಷಾಯ್ಯಸಮೂಹೇ. ೧೬ ಅವಕ್ರಾಃ. ೧೭ ಮುಷ್ಟಿನಾ ಸಂವಾಹ್ಯಂತೇ ಗಮ್ಯಂತೇ, ಆಜ್ಞಾವಶವರ್ತಿನಶ್ಚ. ೧೮ ನಯನೈರನುವರ್ತಮಾನಾಃ, ಆಲೋಕನಮಾತ್ರೇಣ ಪ್ರಭೋಃ ಭಾವದರ್ಶಿನಶ್ಚ. ೧೯ ಕಾರ್ಯಂ.

**ಪ್ರಯೋಜ್ಯಾಭಿಮುಖಂ ತೀಕ್ಷ್ಣಾನ್ ಬಾಣಾನ್ ಪರಶರಾನ್ಪ್ರತಿ ।**
**[೧]ತತ್ರೈವ ಪಾತಯಂತಿ ಸ್ಮ ಧಾನುಷ್ಕಾಃ [೨]ಸಾ ಹಿ ಧೀ[೩]ರ್ಧಿಯಾಮ್ ॥**

ಧನುರ್ಧಾರಿಗಳಾದ ಭಟರು ಶತ್ರುಗಳ ಬಾಣಗಳಿಗೆ ಇದಿರಾಗಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಆ ಶತ್ರುಬಾಣಗಳಿದ್ದಲ್ಲೇ ಅವುಗಳನ್ನು ಕೆಡಹಿದುವು, ಬುದ್ಧಿಗಳಲ್ಲೆಲ್ಲ ಅದಲ್ಲವೇ ಬುದ್ಧಿ ?

**ಜಾತಾಶ್ಚಾಪಧೃತಃ ಕೇಚಿದನ್ಯೋನ್ಯಶರಖಂಡನೇ ।**
**ವ್ಯಾಪೃತಾಃ ಶ್ಲಾಘಿತಾಃ ಪೂರ್ವಂ ರಣೇ [೪]ಕಿಂಚಿತ್ಕರೋಪಮಾಃ॥ ೧೨೭ ॥**

ಮೊದಲು ಶ್ಲಾಘಿಸಲ್ಪಟ್ಟುವುಗಳೂ ಯುದ್ಧದಲ್ಲಿ ಒಂದಕ್ಕೊಂದು ಬಾಣದ ಖಂಡನೆಯಲ್ಲಿ ಉದ್ಯುಕ್ತಗಳೂ ಆದ ಕೆಲವು ಬಾಣಗಳು ಮೊದಲು ಹೊಗಳಲ್ಪಟ್ಟು ಕೆಲಸದಲ್ಲಿ ಒಬ್ಬರಿಗೊಬ್ಬರು ಜಗಳವಾಡುವ ಕಿಂಕರರಿಗೆ ಸಮಾನಗಳಾಗಿ ಆದುವು.

**ಹಸ್ತ್ಯಶ್ವರಥಪತ್ತ್ಯೋಘಮುದ್ಭಿದ್ಯಾಸ್ಪೃಷ್ಟಲಕ್ಷ್ಯವತ್ ।**
**ಶರಾಃ ಪೇತುಃ [೫]ಸ್ವಸಂಪಾತಮೇವಾ[೬]ಸ್ತಾ ದೃಢಮುಷ್ಟಿಭಿಃ ॥ ೧೨೮ ॥**

ದೃಢವಾದ ಮುಷ್ಟಿಯುಳ್ಳ ಭಟರಿಂದ ಎಸೆಯಲ್ಪಟ್ಟ ಬಾಣಗಳು ಆನೆಗಳನ್ನೂ, ಕುದುರೆಗಳನ್ನೂ, ರಥಗಳನ್ನೂ ಕಾಲುನಡೆಯ ಸೈನಿಕರ ಗುಂಪನ್ನೂ ಭೇದಿಸಿ, ಲಕ್ಷ್ಯವನ್ನು ಮುಟ್ಟಲಿಲ್ಲವೋ ಎನ್ನುವಂತೆ, ತಾವು ಬೀಳುವುದಕ್ಕೆ ಯೋಗ್ಯವಾದ ಸ್ಥಾನವನ್ನು ಹೊಂದಿಯೇ ಬಿದ್ದುವು.

**ಪೂರ್ವಂ [೭]ವಿಹಿತಸಂಧಾನಾಃ ಸ್ಥಿತ್ವಾ ಕಿಂಚಿ[೮]ಚ್ಚರಾಸನೇ ।**
**[೯]ಯಾನಮಧ್ಯಾಸ್ಯ ಮಧ್ಯಸ್ಥಾ [೧೦]ದ್ವೈಧೀಭಾವಮುಪಾಗತಾಃ ॥ ೧೨೯ ॥**

**[೧೧]ವಿಗ್ರಹೇ ಹತಶಕ್ತಿತ್ವಾ[೧೨]ದಗತ್ಯಾ ಶತ್ರುಸಂಶ್ರಯಾತ್ ।**
**ಬಾಣಾ [೧೩]ಗುಣಿತಷಡ್ಗುಣ್ಯಾ ಇವ ಸಿದ್ಧಿಂ ಪ್ರಪೇದಿರೇ ॥ ೧೩೦ ॥**

ಮೊದಲು ಧನುಸ್ಸಿನಲ್ಲಿ ಸಂಯೋಜನೆಮಾಡಲ್ಪಟ್ಟುವುಗಳೂ ಧನುಸ್ಸಿನಲ್ಲಿ ಸ್ವಲ್ಪಕಾಲದವರೆಗಿದ್ದು ಗಮನವನ್ನು ಹೊಂದಿ ಮಧ್ಯದಲ್ಲಿರುವುವುಗಳಾಗಿ ಎರಡು ಭಾಗವಾಗಿ ಮುರಿದುಹೋಗುವಿಕೆಯನ್ನು ಹೊಂದಿದುವುಗಳೂ ಆದ ಬಾಣಗಳು ಆಕಾರ–ದೇಹದಲ್ಲಿ ಶಕ್ತಿಯಿಲ್ಲದಿರುವುದರಿಂದ ಗಮನಾಭಾವದಿಂದ, ಅಶಕ್ತಿಯಿಂದ ಶತ್ರುಗಳನ್ನು ಹೊಂದಿರುವುದರಿಂದ ಸಂಧಿ ಮೊದಲಾದ ಆರು ಗುಣಗಳನ್ನು ಅಭ್ಯಾಸಮಾಡಿರುವುವುಗಳಂತೆ, ಸಿದ್ಧಿಯನ್ನು ಹೊಂದಿದುವು. ಬಾಣಗಳು ಶತ್ರುಗಳಲ್ಲಿ ಸಂಧಿ ವಿಗ್ರಹ ದ್ವೈಧೀಭಾವ ಮೊದಲಾದ ಷಡ್ಗುಣಗಳನ್ನು ಪ್ರಯೋಗಿಸುವವರಾದ ಮಧ್ಯಸ್ಥರಂತಾಚರಿಸಿದುವೆಂದು ಭಾವವು.

**ಧಾರಾ ವೀರರಸಸ್ಯೇವ ರೇಜೇ ರಕ್ತಸ್ಯ ಕಸ್ಯಚಿತ್ ।**
**ಪತಂತೀ ಸಂತತಂ ಧೈರ್ಯಾದಾಶ್ವ[೧೪]ನೂತ್ಪಾಟಿತಾಶುಗಮ್ ॥ ೧೩೧ ॥**

ಧೈರ್ಯದಿಂದ ಕೀಳಲ್ಪಟ್ಟ ಬಾಣದ ಹಿಂದೆ ಶೀಘ್ರವಾಗಿ ಎಡೆಬಿಡದೆ ಬೀಳುತ್ತಿರುವುದಾದ ಒಬ್ಬಾನೊಬ್ಬ ಭಟನ ರಕ್ತಧಾರೆಯು, ವೀರರಸದ ಧಾರೆಯೋ ಎಂಬಂತೆ, ಪ್ರಕಾಶಿಸಿತು.

**ಸಾಯಕಾದ್ಭಿನ್ನಮಾಲೋಕ್ಯ ಕಾಂತಸ್ಯ ಹೃದಯಂ ಪ್ರಿಯಾ ।**
**ಪರಾಸುರಾಸೀಚ್ಚಿತ್ತೇಽಸ್ಯ ವದಂತೀವಾತ್ಮನಃ ಸ್ಥಿತಿಮ್ ॥ ೧೩೨ ॥**

೧ ಯತ್ರ ಶತ್ರುಶರಾಃ ಸ್ಥಿತಾಸ್ತತ್ರೈವ. ೨ ಪರಶರಖಂಡನರೂಪಾ. ೩ ಮಧ್ಯೇ. ೪ ಕಿಂಕರಸಮಾಃ. ೫ ಸ್ವಯೋಗ್ಯಪತನಸ್ಥಾನಂ ಗತ್ವೇತ್ಯರ್ಥಃ. ೬ ಕ್ಷಿಪ್ತಾಃ. ೭ ಕೃತಸಂಯೋಜನಾಃ, ಕೃತಸಂಧಯಶ್ಚ. ೮ ಚಾಪೇ ಕ್ಷೇತ್ರೇ ಚ. ೯ ಗಮನಂ. ೧೦ ದ್ವಿಧಾ ಖಂಡನತ್ವಂ ಉಭಯತ್ರಾಶ್ರಯತ್ವಂ ಚ. ೧೧ ವಕ್ರೀಭಾವೇ ಶರೀರೇ ವಾ. ೧೨ ಗಮನಾಭಾವೇನ ಪಕ್ಷೇ ಅಶಕ್ತ್ಯಾ. ೧೩ ಅಭ್ಯಸ್ತ. ೧೪ ಶರೀರಸ್ಯ ಪಶ್ಚಾತ್.

ಒಬ್ಬಾನೊಬ್ಬ ಭಟನ ಪತ್ನಿಯು ಬಾಣದಿಂದ ಭೇದಿಸಲ್ಪಟ್ಟ ತನ್ನ ಪತಿಯ ಎದೆಯನ್ನು ನೋಡಿ ಇವನ ಮನಸ್ಸಿನಲ್ಲಿ ತನ್ನ ಸ್ಥಿತಿಯನ್ನು ಹೇಳುತ್ತಾಳೋ ಎಂಬಂತೆ, ಗತಪ್ರಾಣಳಾದಳು. ಬಾಣದಿಂದ ಭೇದಿಸಲ್ಪಟ್ಟುದಾದ ತನ್ನ ಪತಿಯ ಎದೆಯನ್ನು ನೋಡಿ ದುಃಖದಿಂದ ಸತ್ತುಹೋದಳೆಂದು ಭಾವವು.

**ಛಿನ್ನದಂಡೈಃ ಫಲೈಃ ಕಶ್ಚಿತ್ಸರ್ವಾಂಗೀಣೈರ್ಭಟಾಗ್ರಣೀಃ ।**
**ಕೀಲಿತಾಸುರಿವಾಕಂಪ್ರಸ್ತಥೈವ ಯುಯುಧೇ ಚಿರಮ್ ॥ ೧೩೩ ॥**

ಒಬ್ಬಾನೊಬ್ಬ ಭಟಶ್ರೇಷ್ಠನು ಸರ್ವಾಂಗಗಳಲ್ಲಿ ವ್ಯಾಪಿಸುವುವೂ ಮುರಿದು ಹೋದ ಬಾಣಗಳ ಹಿಡಿ–ಬಿದಿರುಗಳುಳ್ಳವೂ ಆದ ಅಲಗುಗಳಿಂದ ಕೀಲಿಸಲ್ಪಟ್ಟ ಪ್ರಾಣಗಳುಳ್ಳವನಂತೆ, ನಿಶ್ಚಲನಾಗಿ ಹಾಗೆಯೇ ಬಹುಕಾಲದ ವರೆಗೆ ಯುದ್ಧ ಮಾಡಿದನು.

**ವಿಲೋಕ್ಯ ವಿಲಯಜ್ವಾಲಿಜ್ವಾಲಾಲೋಲಶಿಖೋಪಮೈಃ ।**
**ಶಿಲೀಮುಖೈರ್ಬಲಂ [೧]ಛನ್ನಂ [೨]ಸ್ವಂ ವಿಪಕ್ಷಧನುರ್ಧರೈಃ ॥ ೧೩೪ ॥**

**ಗೃಹೀತ್ವಾ ವಜ್ರಕಾಂಡಾಖ್ಯಂ ಸಜ್ಜೀಕೃತ್ಯ ಶರಾಸನಮ್ ।**
**ಸ್ವಯಂ ಯೋದ್ಧುಂ ಸಮಾರಬ್ಧ ಸಕ್ರೋಧಃ ಸಾನುಜೋ ಜಯಃ ॥**

ಕೋಪಗೊಂಡಿರುವವನೂ ತಮ್ಮಂದಿರೊಡನೆ ಕೂಡಿರುವವನೂ ಆದ ಜಯ ಕುಮಾರನು ಶತ್ರುಪಕ್ಷದ ಧನುರ್ಧಾರಿಗಳಿಂದ ಪ್ರಳಯಕಾಲದ ಬೆಂಕಿಯ ಜ್ವಾಲೆಯ ಚಂಚಲವಾದ ಶಿಖೆಗೆ ಸಮಾನಗಳಾದ ಬಾಣಗಳಿಂದ ವ್ಯಾಪ್ತವಾದ ಅಥವಾ ಕತ್ತರಿಸಲ್ಪಟ್ಟ ತನ್ನ ಸೈನ್ಯವನ್ನು ನೋಡಿ ವಜ್ರಕಾಂಡವೆಂಬ ಧನುಸ್ಸನ್ನು ತೆಗೆದು ಕೊಂಡು ಸಿದ್ಧಮಾಡಿ ತಾನು ಯುದ್ಧಮಾಡುವುದಕ್ಕೆ ಪ್ರಾರಂಭಿಸಿದನು.

**[೩]ಕರ್ಣಾಭ್ಯರ್ಣೀಕೃತಾಸ್ತಸ್ಯ ಗುಣಯುಕ್ತಾಃ ಸುಯೋಜಿತಾಃ ।**
**[೪]ಪತ್ರೈರ್ಲಘುಸಮುತ್ಥಾನಾಃ ಕಾಲಕ್ಷೇಪಾವಿಧಾಯಿನಃ ॥ ೧೩೬ ॥**

**ಮಾರ್ಗೇ ಪ್ರಗುಣಸಂಚಾರಾಃ ಪ್ರವಿಶ್ಯ [೫]ಹೃದಯಂ ದ್ವಿಷಾಮ್ ।**
**ಕೃಚ್ಛ್ರಾರ್ಥಂ ಸಾಧಯಂತಿ ಸ್ಮ [೬]ನಿಸೃಷ್ಟಾರ್ಥಸಮಾಃ ಶರಾಃ ॥ ೧೩೭ ॥**

ಕಿವಿಯವರೆಗೆ ಎಳೆಯಲ್ಪಟ್ಟುವೂ (ಕಿವಿಯ ಹತ್ತಿರ ಮಾಡಲ್ಪಟ್ಟವರೂ) ಸಿಂಜಿನಿಯಿಂದ ಕೂಡಿರುವುವೂ ಗುಣಯುಕ್ತರೂ ರೆಕ್ಕೆ–ಗರಿಗಳಿಂದ (ಪತ್ರಗಳಿಂದ) ಚೆನ್ನಾಗಿ ಸೇರಿಸಲ್ಪಟ್ಟಿರುವುವೂ ಶೀಘ್ರವಾಗಿ ಎದ್ದುವೂ ಕಾಲವಿಲಂಬವನ್ನು ಮಾಡದಿರುವುವೂ ದಾರಿಯಲ್ಲಿ ಸರಳವಾದ ಸಂಚಾರವುಳ್ಳವೂ ಅನೇಕಾವರ್ತಿ ಕಾರ್ಯವನ್ನು ಸಾಧಿಸಿರುವ ದೂತನಿಗೆ ಸಮಾನಗಳೂ ಆದ ಆ ಜಯಕುಮಾರನ ಬಾಣಗಳು ಶತ್ರುಗಳ ಎದೆಯನ್ನು ಪ್ರವೇಶಿಸಿ ಕಷ್ಟವಾದ ಪ್ರಯೋಜನವನ್ನು–ಶತ್ರುಮರಣವನ್ನು (ಅಭಿಪ್ರಾಯವನ್ನು ) ಸಾಧಿಸಿದುವು.

**ಪತ್ರವಂತಃ [೭]ಪ್ರತಾಪೋಗ್ರಾಃ ಸಮಗ್ರಾ ವಿಗ್ರಹೇ ದ್ರುತಾಃ ।**
**[೮]ಅಜ್ಞಾನಘಾತಿನಶ್ಚಕ್ರುಃ [೯]ಕೂಟಯುದ್ಧಂ ಶಿಲೀಮುಖಾಃ ॥ ೧೩೮ ॥**

ರೆಕ್ಕೆಗಳುಳ್ಳವೂ ಚೆನ್ನಾಗಿ ಕಾದು ಭಯಂಕರವಾಗಿರುವುವೂ ಚೆನ್ನಾಗಿ ಮೊನೆಯಾಗಿರುವುವೂ ಯುದ್ಧದಲ್ಲಿ ತ್ವರೆಯಾಗಿರುವುವೂ ಮೂರ್ಛಿತರಾದ ಜನರನ್ನು ಕೊಲ್ಲುವುವೂ ಆದ ಬಾಣಗಳು ಕಪಟಯುದ್ಧವನ್ನು ಮಾಡಿದುವು. ಕಪಟಯುದ್ಧವನ್ನು ಮಾಡುವಂತೆ ತೋರುತ್ತಿದ್ದುವೆಂದು ಭಾವವು.

**ಪ್ರಸ್ಫುರದ್ಭಿಃ ಫಲೋಪೇತೈಃ ಸುಪ್ರಮಾಣೈಃ ಸುಕಲ್ಪಿತೈಃ ।**
**ವಿರೋಧೋದ್ಭಾವಿನಾ ವಿಶ್ವಗೋಚರೈರ್ವಿಜಯಾವಹೈಃ ॥ ೧೩೯ ॥**

೧ ಛಾದಿತಂ ಖಂಡಿತಂ ವಾ. ೨ ಆತ್ಮೀಯಂ, ಜಯಸಂಬಂಧಿ. ೩ ಆಕರ್ಣಮಾಕೃಷ್ಟಾಃ, ಕರ್ಣಸಮೀಪೇ ಕೃತಾಶ್ಚ. ೪ ಪಕ್ಷೈಃ ಸಂದೇಶಪತ್ರೈಶ್ಚ. ೫ ಅಭಿಪ್ರಾಯಂ ಚ. ೬ ಅಸಕೃತ್ಸಂಪಾದಿತಪ್ರಯೋಜನದೂತ ಸಮಾಃ. ೭ ಸಂತಪ್ತಾ ಇತ್ಯರ್ಥಃ. ೮ ಮೋಹಾವಿಷ್ಟಜನಘಾತಿನಃ. ೯ ಕಪಟಯುದ್ಧಂ.

**ವಾದಿನೇವ ಜಯೇನೋಚ್ಚೈಃ [೧]ಕೀರ್ತಿಂ ಕ್ಷಿಪ್ರಂ ಜಿಘೃಕ್ಷುಣಾ ।**
**ಪ್ರತಿಪಕ್ಷಃ ಪ್ರತಿಕ್ಷಿಪ್ತಃ ಶಸ್ತ್ರೈಃ ಶಾಸ್ತ್ರೈರ್ಜಿಗೀಷುಣಾ ॥ ೧೪೦ ॥**

ವಿರೋಧವನ್ನು ಉದ್ಭಾವನೆಮಾಡುವವನೂ ಜಯಿಸಬೇಕೆಂಬ ಇಚ್ಛೆಯುಳ್ಳವನೂ ಹೆಚ್ಚಾದ ಕೀರ್ತಿಯನ್ನು ಶೀಘ್ರವಾಗಿ ಗಳಿಸಬೇಕೆಂಬ ಇಚ್ಛೆಯುಳ್ಳವನೂ ಆದ ವಾದಿಯಿಂದ ಉಜ್ವಲಗಳೂ ಪ್ರಯೋಜನದಿಂದ ಕೂಡಿರುವುವೂ ಶ್ರೇಷ್ಠವಾದ ಪ್ರಮಾಣಗಳುಳ್ಳವೂ ಚೆನ್ನಾಗಿ ರಚಿಸಲ್ಪಟ್ಟಿರುವುವೂ ಎಲ್ಲರಿಗೂ ವಿಷಯವಾಗುವುವೂ ವಿಜಯವನ್ನುಂಟುಮಾಡುವುವೂ ಆದ ಶಾಸ್ತ್ರಗಳಿಂದ ಪ್ರತಿಪಕ್ಷವು ನಿರಾಕರಿಸಲ್ಪಡುವಂತೆ ವಿರೋಧವನ್ನು ಉದ್ಭಾವಿಸುವವನೂ ಜಯಿಸಬೇಕೆಂಬ ಇಚ್ಛೆಯುಳ್ಳವನೂ ಚೆನ್ನಾಗಿ ಅರ್ಕಕೀರ್ತಿಯನ್ನು ಶೀಘ್ರವಾಗಿ ಹಿಡಿಯಬೇಕೆಂಬ ಇಚ್ಛೆಯುಳ್ಳವನೂ ಆದ ಜಯಕುಮಾರನಿಂದ ಪ್ರಕಾಶಮಾನಗಳೂ ಅಲಗುಗಳಿಂದ ಕೂಡಿರುವುವೂ ಸರಿಯಾದ ಅಳತೆಯುಳ್ಳವೂ ಚೆನ್ನಾಗಿ ಮಾಡಲ್ಪಟ್ಟಿರುವುವೂ ಎಲ್ಲರಿಗೂ ಕಾಣುತ್ತಿರುವುವೂ ಜಯವನ್ನುಂಟುಮಾಡುವುವೂ ಆದ ಶಸ್ತ್ರಗಳಿಂದ ಶತ್ರುಸೈನ್ಯವು ದೂರಮಾಡಲ್ಪಟ್ಟಿತು. ಶತ್ರುಸೈನ್ಯವನ್ನು ಜಯಕುಮಾರನು ಆಕ್ರಮಿಸಿದನೆಂದು ಭಾವವು.

**ಖಗಾಃ ಖಗಾನ್ಪ್ರತಿ ಪ್ರಾಸ್ತಾಃ ಪ್ರೋದ್ಭಿದ್ಯ ಗಗನಂ ಗತಾಃ ।**
**ನಿವರ್ತಂತೇ ನ ಯಾವತ್ತೇ ತೇ ಭಿಯೇವಾಪತನ್ಮೃತಾಃ ॥ ೧೪೧ ॥**

ಖೇಚರರನ್ನು ಕುರಿತು ಎಸೆಯಲ್ಪಟ್ಟುವೂ ಆ ಖೇಚರರನ್ನು ಭೇದಿಸಿ ಆಕಾಶವನ್ನು ಹೊಂದಿದುವೂ ಆದ ಆ ಬಾಣಗಳು ಹಿಂದಿರುಗುವುದರೊಳಗಾಗಿ ಆ ಖೇಚರರು, ಭೀತಿಯಿಂದಲೋ ಎಂಬಂತೆ, ಸತ್ತುಬಿದ್ದರು.

**ಸುತೀಕ್ಷ್ಣಾ [೨]ವೀಕ್ಷಣಾಭೀಲಾಃ ಪ್ರಜ್ವಲಂತಃ ಸಮಂತತಃ ।**
**ಮೂರ್ಧಸ್ವಶನಿವತ್ಪೇತುಃ ಖಾದ್ವಿಮುಕ್ತಾಃ ಖಗೈಃ ಖಗಾಃ ॥ ೧೪೨ ॥**

ಖೇಚರರಿಂದ ಬಿಡಲ್ಪಟ್ಟುವೂ ಬಹಳವಾಗಿ ಹರಿತಗಳೂ ನೋಟದಲ್ಲಿ ಭಯಂಕರಗಳೂ ಅಧಿಕವಾಗಿ ಜ್ವಲಿಸುತ್ತಿರುವುವೂ ಆದ ಬಾಣಗಳು ಎಲ್ಲಾ ಕಡೆಯಿಂದಲೂ ತಲೆಗಳ ಮೇಲೆ ಸಿಡಿಲಿನಂತೆ ಬಿದ್ದುವು.

**ಶರಸಂಘಾತಸಂಛನ್ನಾತ್ ಗೃಧ್ರಪಕ್ಷಾಂಧಕಾರಿತಾತ್ ।**
**ಅದೃಷ್ಟಮುದ್ಗರಾಪಾತಂ ನಭೋಗಾ [೩]ನಭಸೋ [೪]ವ್ಯಧುಃ ॥ ೧೪೩ ॥**

ಬಾಣಗಳ ಸಮೂಹದಿಂದ ಮರೆಮಾಡಲ್ಪಟ್ಟುದೂ ಹದ್ದುಗಳ ರೆಕ್ಕೆಗಳಿಂದ ಕತ್ತಲೆಯಾಗಿ ಮಾಡಲ್ಪಟ್ಟುದೂ ಆದ ಆಕಾಶದಿಂದ ವಿದ್ಯಾಧರರು ಕಾಣಲ್ಪಡದಿರುವ ಕಬ್ಬಿಣದ ಹಾರೆಗಳ ಬೀಳಿಸುವಿಕೆಯನ್ನು ಮಾಡಿದರು. ಕಾಣದಂತೆ ಕಬ್ಬಿಣದ ಹಾರೆಗಳನ್ನು ಭೂಚರಸೈನಿಕರ ಮೇಲೆ ಬೀಳಿಸಿದರೆಂದು ಭಾವವು.

**ಚಂಡೈರಕಾಂಡವೃತ್ಯುಶ್ಚ [೫]ಕಾಂಡೈ[೬]ರಾಪಾದ್ಯತಾದಿಮೇ ।**
**ಯುಗೇಸ್ಮಿನ್ ಕಿಂ ಕಿ[೭]ಮಸ್ತ್ರಾಶುಗಾಶಿಭಿರ್ನಾಶುಭಂ ಭವೇತ್ ॥ ೧೪೪ ॥**

ಈ ಪ್ರಥಮ–ಕೃತಯುಗದಲ್ಲಿ ಭಯಂಕರಗಳಾದ ಬಾಣಗಳಿಂದ ಅಕಾಲ ಮರಣವೂ ಉಂಟುಮಾಡಲ್ಪಟ್ಟಿತು. ಅಸ್ತ್ರಗಳೆಂಬ ಪವನಾಶನ–ಸರ್ಪಗಳಿಂದ ಆವಾವ ಅಶುಭವು ಆಗುವುದಿಲ್ಲ ?

**ದೂರಾಪಾತಾಯ ನೋ ಕಿಂತು ದೃಢಘಾತಾಯ ಖೇಚರೈಃ ।**
**ಖಗಾಃ ಕರ್ಣಾಂತಮಾಕೃಷ್ಯ ಮುಕ್ತಾ [೮]ಹನ್ಯುರ್ದ್ವಿಪಾದಿಕಾನ್ ॥ ೧೪೫ ॥**

ದೂರದಲ್ಲಿ ಬೀಳುವುದಕ್ಕೋಸ್ಕರವಲ್ಲ, ಆದರೆ ದೃಢವಾದ ಗಾಯವಾಗುವುದಕ್ಕೋಸ್ಕರ ಖೇಚರ–ವಿದ್ಯಾಧರರಿಂದ ಕಿವಿಯವರೆಗೆ ಎಳೆದು ಬಿಟ್ಟ ಬಾಣಗಳು ಆನೆ ಮೊದಲಾದುವುಗಳನ್ನು ಕೊಂದುವು.

೧ ಅರ್ಕಕೀರ್ತಿಂ, ಯಶಶ್ಚ. ೨ ದರ್ಶನೇ ಭಯಂಕರಾಃ. ೩ ಗಗನಮಾಶ್ರಿತ್ಯ. ೪ ಚಕ್ರುಃ. ೫ ಬಾಣೈಃ. ೬ ಉತ್ಪಾದಿತಃ. ೭ ಅಸ್ತ್ರಾಣ್ಯೇವ ಆಶುಗಾಶಿನಃ ಪವನಾಶನಾಸ್ತೈಃ ಸರ್ಪೈರಿತ್ಯರ್ಥಃ. ೮ ಘ್ನಂತಿ ಸ್ಮ.

**ಅಧೋಮುಖಾಃ ಖಗೈರ್ಮುಕ್ತಾ ರಕ್ತಪಾನಾ[೧]ತ್ಪಲಾಶನಾತ್ ।**
**[೨]ಪೃಷತ್ಕಾಃ [೩]ಸಾಂಹಸೋ [೪]ವೇ[೫]ಯುರ್ನರಕಂ ವಾ[೬]ವನೇರಧಃ ॥**

ಖೇಚರರಿಂದ ಬಿಟ್ಟುವೂ ಕೆಳಕ್ಕೆ ಮುಖವಾಗಿರುವುವೂ ಆದ ಬಾಣಗಳು ರಕ್ತಪಾನದಿಂದಲೂ ಮಾಂಸಭಕ್ಷಣದಿಂದಲೂ ಪಾಪದಿಂದ ಕೂಡಿರುವುವುಗಳಾಗಿ ವೆಯೋ ಎನ್ನುವಂತೆ ನರಕವನ್ನೊ ಎನ್ನುವಂತೆ ಭೂಮಿಯ ಕೆಳಕ್ಕೆ ಹೋದುವು. ಭೂಮಿಯ ಕೆಳಕ್ಕೆ ಹೋಗುತ್ತಿರುವ ಬಾಣಗಳನ್ನು ನೋಡಿದರೆ ಪಾಪದಿಂದ ನರಕಕ್ಕೆ ಹೋಗುತ್ತವೋ ಎನ್ನುವಂತೆ ತೋರುತ್ತಿದ್ದಿತೆಂದು ಭಾವವು.

**ಭೂಮಿಷ್ಠೈರ್ನಿಷ್ಠುರಂ ಕ್ಷಿಪ್ತಾ [೭]ದ್ವಿಷ್ಟ್ವಾ[೮]ನುತ್ಕೃಷ್ಯ ಯಷ್ಟಯಃ ।**
**ಯಯುರ್ದೂರಂ ದಿವಂ ದೂತೀ[೯]ದೇಶೀಯಾ ದಿವ್ಯಯೋಷಿತಾಮ್ ॥**

ಭೂಮಿಯಲ್ಲಿರುವವರಿಂದ ನಿಷ್ಠುರವಾಗಿ ಎಸೆಯಲ್ಪಟ್ಟ ದಂಡಾಯುಧ–ಭರ್ಜಿಗಳು ಶತ್ರುಗಳನ್ನು ಭೇದಿಸಿ ದೇವಸ್ತ್ರೀಯರ ದಾದಿಯರಿಗೆ ಸದೃಶಗಳಾಗಿ ದೂರವಾಗಿ ಆಕಾಶವನ್ನು ಹೊಂದಿದುವು. ದೇವಸ್ತ್ರೀಯರ ದಾದಿಯರೋ ಎನ್ನುವಂತೆ ಮೇಲಕ್ಕೆ ಹೋದುವೆಂದು ಭಾವವು.

**ಚಕ್ರಿಣಶ್ಚಕ್ರಮೇಕಂ ತನ್ನ [೧೦]ತತಃ ಕಸ್ಯಚಿತ್ಕ್ಷತಿಃ ।**
**ಚಕ್ರೈ[೧೧]ರಾಕಾಲಚಕ್ರಾಭೈರ್ಬಹವಸ್ತತ್ರ [೧೨]ಜಘ್ನಿರೇ ॥ ೧೪೮ ॥**

ಚಕ್ರವರ್ತಿಯ ಆ ಪ್ರಸಿದ್ಧವಾದ ಚಕ್ರರತ್ನವು ಒಂದು. ಆದರಿಂದ ಯಾವನಿಗೂ ಹಾನಿಯಿಲ್ಲ. ಯಮನ ಸಮೂಹಕ್ಕೆ ಸಮಾನಗಳಾದ ಚಕ್ರಗಳಿಂದ–ಸೈನಿಕರ ಚಕ್ರಾಯುಧಗಳಿಂದ ಆ ಯುದ್ಧದಲ್ಲಿ ಅನೇಕರು ಕೊಲ್ಲಲ್ಪಟ್ಟರು.

**ಸಮವೇಗೈಃ [೧೩]ಸಮಂ ಮುಕ್ತೈಃ ಶರೈಃ ಖಚರಭೂಚರೈಃ ।**
**ವ್ಯೋಮ್ನ್ಯನ್ಯೋನ್ಯಮುಖಾಲಗ್ನೈಃ ಸ್ಥಿತಂ ಕತಿಪಯಕ್ಷಣೇ ॥ ೧೪೯ ॥**

ಒಬ್ಬರಿಗೊಬ್ಬರು ಮುಖವನ್ನು ಸಂಬಂಧಿಸಿದ–ಇದಿರಾದ ಖೇಚರ ಭೂಚರ ವೀರರಿಂದ ಒಂದೇ ಕಾಲದಲ್ಲಿ ಬಿಡಲ್ಪಟ್ಟುವೂ ಸಮಾನವಾದ ವೇಗವುಳ್ಳುವೂ ಆದ ಬಾಣಗಳಿಂದ ಆಕಾಶದಲ್ಲಿ ಕೆಲವು ಕ್ಷಣದಲ್ಲಿ ಇದ್ದಂತಾಯಿತು. ಬಾಣಗಳು ಪರಸ್ಪರವಾಗಿ ಸಂಬಂಧಿಸಿ ಸ್ವಲ್ಪಕಾಲದವರೆಗೆ ಬೀಳದೆ ಆಕಾಶದಲ್ಲಿದ್ದುವೆಂದು ಭಾವವು.

**ಖಭೂಚರಶರೈಶ್ಛನ್ನೇ ಖೇ ಪರಸ್ಪರರೋಧಿಭಿಃ ।**
**ಅನ್ಯೋನ್ಯಾ[೧೪]ನೀಕ್ಷಣಾತ್ತೇಷಾಮಭೂದ್ರಣನಿಷೇಧನಮ್ ॥ ೧೫೦ ॥**

ಒಂದನ್ನೊಂದು ತಡೆಯುವುವುಗಳಾದ ಖೇಚರ ಭೂಚರರ ಬಾಣಗಳಿಂದ ಮರೆಮಾಡಲ್ಪಟ್ಟಿರುವ ಆಕಾಶದಲ್ಲಿ ಒಬ್ಬರನ್ನೊಬ್ಬರು ನೋಡದಿರುವುದರಿಂದ ಆ ಖೇಚರ ಭೂಚರರ ಯುದ್ಧದ ನಿಷೇಧವಾಯಿತು.

**[೧೫]ಸ್ವಾನ್ಯೈಃ ಶಸ್ತ್ರೈರ್ನಭೋಗಾನಾಂ [೧೬]ಶವ್ಯೈಶ್ಚಾಬಾಧಿತಂ ಭೃಶಮ್ ।**
**ಸ್ವಸೈನ್ಯಂ ವೀಕ್ಷ್ಯ ಖಾ[೧೭]ತ್ಪತ್ಯೈರ್ವೀಕ್ಷಣೋ[೧೮]ಗ್ರಾಶುಶುಕ್ಷಣಿಃ ॥ ೧೫೧ ॥**

**ಸದ್ಯಃ [೧೯]ಸಂಹಾರಸಂಕ್ರುದ್ಧಸಮವರ್ತಿಸಮೋ ಜಯಃ ।**
**ಪ್ರಾರಬ್ಧ ಯೋದ್ಧುಂ ವಜ್ರೇಣ ವಜ್ರಕಾಂಡೇನ ವಜ್ರಿವತ್ ॥ ೧೫೨ ॥**

ತಮ್ಮ ಮತ್ತು ಬೇರೆಯವರ ಶಸ್ತ್ರಗಳಿಂದ ಆಕಾಶದಿಂದ ಬೀಳಿಸಲ್ಪಟ್ಟ ಖೇಚರರ ಹೆಣಗಳಿಂದ ಹೆಚ್ಚಾಗಿ ಬಾಧಿತವಾದ ತನ್ನ ಸೈನ್ಯವನ್ನು ನೋಡಿ ಆಗಲೇ ನೋಟವೆಂಬ ಭಯಂಕರವಾದ ಅಗ್ನಿಯುಳ್ಳವನೂ ಸಂಹರಿಸುವುದಕ್ಕೋಸ್ಕರ ಕೋಪಗೊಂಡಿರುವ ಯಮನಿಗೆ ಸಮಾನನೂ ಆದ ಜಯಕುಮಾರನು, ವಜ್ರಾಯುಧದಿಂದ ದೇವೇಂದ್ರನು ಯುದ್ಧಕ್ಕೆ ಪ್ರಾರಂಭಿಸುವಂತೆ, ವಜ್ರಕಾಂಡವೆಂಬ ಧನುಸ್ಸಿನಿಂದ ಯುದ್ಧಮಾಡುವುದಕ್ಕೆ ಪ್ರಾರಂಭಿಸಿದನು.

೧ ಮಾಂಸಾಶನಾತ್. ೨ ಬಾಣಾಃ. ೩ ಸಪಾಪಾಃ. ೪ ಇವ. ೫ ಗಚ್ಛಂತಿ ಸ್ಮ. ೬ ಭೂಮೇರಧಃ ಸ್ಥಿತಂ. ೭ ಶತ್ರೂನ್. ೮ ಉದ್ಭಿದ್ಯ. ೯ ಸದೃಶಾಃ. ೧೦ ಚಕ್ರಾತ್. ೧೧ ಕೃತಾಂತಸಮೂಹಸಮಾನೈಃ. ೧೨ ಹತಾಃ. ೧೩ ಯುಗಪತ್. ೧೪ ಅನಾಲೋಕನಾತ್. ೧೫ ಸ್ವಕೀಯಪರಕೀಯೈಃ. ೧೬ ಶರೈಶ್ಚಾವಧಿತಮಿತ್ಯಪಿ ಪಾಠಃ. ೧೭ ಪತಿತೈಃ, ೧೮ ರೌದ್ರಾಗ್ನಿಃ. ೧೯ ಸಂಹಾರಾರ್ಥಂ ಸಂಕ್ರುದ್ಧ.

**ನಿರ್ಜಿತಾಶನಿನಿರ್ಘೋಷಜಯಜ್ಯಾಘೋಷಭೀರುಕಾಃ ।**
**ಚಾಪಸಾಯಕಚೇತಾಂಸಿ ಪ್ರಾಕ್ಷಿಪನ್ ಸಹ ಶತ್ರವಃ ॥ ೧೫೩ ॥**

ಮೇಘಧ್ವನಿಯನ್ನು ಜಯಿಸಿರುವುದಾದ ಜಯಕುಮಾರನ ಸಿಂಜಿನಿಯ ಧ್ವನಿಯಿಂದ ಹೆದರಿದ ಶತ್ರುಗಳು ಏಕಕಾಲದಲ್ಲಿ–ಒಂದೇ ಸಲ ಧನುಸ್ಸನ್ನೂ ಬಾಣವನ್ನೂ ಮನಸ್ಸನ್ನೂ ತ್ಯಜಿಸಿದರು.

**ಚಾಪಮಾಕರ್ಣಮಾಕೃಷ್ಯ ಜ್ಯಾನಿವೇಶಿತಸಾಯಕಃ ।**
**ಲಘುಸಂಧಾನಮೋಕ್ಷಃ ಸೋ[೧]ವೈಕ್ಷ್ಯ[೨]ವಿಧ್ಯನ್ನಿವ ಕ್ಷಣಮ್ ॥ ೧೫೪ ॥**

ಧನುಸ್ಸನ್ನು ಕಿವಿಯವರೆಗೆ ಎಳೆದು ಸಿಂಜಿನಿಯಲ್ಲಿ (ಹುರಿಯಲ್ಲಿ) ಇರಿಸಲ್ಪಟ್ಟ ಬಾಣವುಳ್ಳವನೂ ಶೀಘ್ರವಾಗಿ ಸೇರಿಸಿ ಬಿಡುವವನೂ ಆದ ಆ ಜಯಕುಮಾರನು ಒಂದು ಕ್ಷಣಕಾಲದವರೆಗೆ ಬಾಣವನ್ನು ಬಿಡದಿರುವವನಂತೆ ಕಂಡನು.

**ನ ಮಧ್ಯೇ ನ ಶರೀರೇಷು ದೃಷ್ಟಾಸ್ತದ್ಯೋಜಿತಾಃ ಶರಾಃ ।**
**ದೃಷ್ಟಾ[೩]ಸ್ತೇ ಕೇವಲಂ ಸರ್ವೇ ಸವ್ರಣಾಃ ಪತಿತಾಃ ಪರೇ ॥ ೧೫೫ ॥**

ಆ ಜಯಕುಮಾರನಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಮಧ್ಯ–ಮಾರ್ಗದಲ್ಲಿ ಕಾಣಲಿಲ್ಲ, ಪ್ರತಿಪಕ್ಷದವರ ಶರೀರಗಳಲ್ಲಿಯೂ ಕಾಣಲಿಲ್ಲ. ಎಲ್ಲರೂ ಗಾಯವುಳ್ಳವರಾಗಿ ಬಿದ್ದ ಬೇರೆ ಪ್ರತಿಭಟರಾದರೋ ಕಾಣಲ್ಪಡುತ್ತಿದ್ದರು. ಪ್ರತಿಭಟರು ಗಾಯಗೊಂಡು ಬಿದ್ದುದು ಕಾಣುತ್ತಿದ್ದುದಲ್ಲದೆ ಬಾಣಗಳು ಹೋಗುತ್ತಿದ್ದುದೂ ಶರೀರವನ್ನು ಪ್ರವೇಶಿಸುತ್ತಿದ್ದುದೂ ಕಾಣುತ್ತಿರಲಿಲ್ಲವೆಂದೂ ಅಷ್ಟು ವೇಗವಾಗಿ ಹೋಗುತ್ತಿದ್ದುವೆಂದೂ ಭಾವವು.

**ನಿಮೀಲಯಂತಶ್ಚಕ್ಷೂಂಷಿ ಜ್ವಲಯಂತಃ ಶಿಲೀಮುಖಾಃ ।**
**ಮುಖಾನಿ ಕಕುಭೋ ವವ್ರುಃ [೪]ಖಾದುಲ್ಕಾಲಿವಿಭೀಷಣಾಃ ॥ ೧೫೬ ॥**

ಕಣ್ಣುಗಳನ್ನು ಮುಚ್ಚಿಸುವುವೂ ದಿಙ್ಮುಖಗಳನ್ನು ಪ್ರಕಾಶಪಡಿಸುವುವೂ ಆಕಾಶದಿಂದ ಹೊರಟ ಉಲ್ಕಾಸಮೂಹದಂತೆ ಭಯಂಕರಗಳೂ ಆದ ಬಾಣಗಳು ಆವರಿಸಿದುವು.

**ತಿರ್ಯಗ್ಗೋಷ್ಪಣಪಾಷಾಣೈರದೃಷ್ಟ್ವಾಜ್ಯಜಿರಾದ್ಬಹಿಃ ।**
**ಪಾತಿತಾನ್ ಖಚರಾನೂಚುಃ ಸತನೂನ್ ಸ್ವರ್ಗತಾನ್ ಜಡಾಃ॥ ೧೫೭ ॥**

ರಣಾಂಗಣದ ಹೊರಗೆ ಅಡ್ಡವಾಗಿ ಕವಣೆ ಕಲ್ಲುಗಳಿಂದ ಬೀಳಿಸಲ್ಪಟ್ಟವರಾದ ಖೇಚರರನ್ನು ಕಾಣದೆ ಮೂರ್ಖರು ಶರೀರಸಹಿತರಾದ ಅವರು ಸ್ವರ್ಗದವರೆಂದು ಹೇಳಿದರು.

**ಶರ[೫]ಸಂರುಗ್ಣವಿದ್ಯಾಧೃನ್ಮುಕುಟೇಭ್ಯೋ[೬]ಗಲನ್ ಸುರೈಃ ।**
**ಮಣಯೋ ಗುಣಗೃಹ್ಯೈರ್ವಾ ಜಯಸ್ಯೋಪಾಯನೀಕೃತಾಃ ॥ ೧೫೮ ॥**

ಬಾಣಗಳಿಂದ ಸೊಟ್ಟಾಗಿರುವ ವಿದ್ಯಾಧರರ ಕಿರೀಟಗಳಿಂದ ರತ್ನಗಳು, ಜಯಕುಮಾರನ ಗುಣಗ್ರಾಹಿಗಳಾದ ದೇವತೆಗಳಿಂದ ಕೈಗಾಣಿಕೆಯಾಗಿ ಮಾಡಲ್ಪಟ್ಟಿರುತ್ತವೋ ಎಂಬಂತೆ, ಸುರಿದುವು.

**ಪತ[೭]ನ್ಮೃತಖಗಾನ್ವೀತಪ್ರಿಯಾಭಿಃ ಸ್ವಾಶ್ರುವಾರಿಣಾ ।**
**[೮]ವಾರಿದಾನಮಿವಾ[೯]ಚರ್ಯ ಕೃಪಾಮಾಸಾದಿತೋ ಜಯಃ ॥ ೧೫೯ ॥**

ಸತ್ತು ಬೀಳುತ್ತಿರುವ ವಿದ್ಯಾಧರರನ್ನು ಅನುಸರಿಸಿರುವವರಾದ ಅವರ ಸ್ತ್ರೀಯರು ತಮ್ಮ ಕಣ್ಣೀರಿನಿಂದ ಜಲಾಂಜಲಿಯನ್ನೋಪಾದಿಯಲ್ಲಿ ಮಾಡಿ ಅವರಿಂದ

೧ ದೃಷ್ಟಃ. ೨ ನ ಮುಂಚನ್ನಿವ. ೩ ಪ್ರತಿಭಟಾಃ. ೪ ಗಗನಾನ್ನಿರ್ಗಚ್ಛಂತ ಇತ್ಯರ್ಥಃ. ೫ ಭುಗ್ನ. ೬ ಗಲಂತಿ ಸ್ಮ. ೭ ಗತಪ್ರಾಣವಿದ್ಯಾಧರಾನುಗತ. ೮ ಜಲಾಂಜಲಿಂ. ೯ ವಿಧಾಯ.

ಜಯಕುಮಾರನು ದಯೆಯನ್ನು ಹೊಂದಿಸಲ್ಪಟ್ಟನು. ಸತ್ತುಹೋದ ಶತ್ರುಗಳ ಪತ್ನಿಯರು ಅಳುತ್ತಿರುವುದನ್ನು ನೋಡಿ ಜಯಕುಮಾರನಿಗೆ ದಯೆಯುಂಟಾಯಿತೆಂದು ಭಾವವು.

**ಅಂತಕಃ ಸಮವರ್ತೀತಿ ತದ್ವಾರ್ತೈವ ನ ಚೇತ್ತಥಾ ।**
**ಕಥಂ ಚಕ್ರಿಸುತಸ್ಯೈವ ಬಲೇ ಪ್ರೇತಾಧಿಪೋ ಭವೇತ್ ॥ ೧೬೦ ॥**

ಯಮನು ಸಮವಾಗಿ–ನಿಷ್ಪಕ್ಷಪಾತವಾಗಿರುವವನೆಂಬುದು ಅದು ವಾರ್ತೆಯೇ –ಅಸತ್ಯವೇ. ಹಾಗಲ್ಲದಿದ್ದರೆ ಚಕ್ರವರ್ತಿಯ ಮಗನ ಸೈನ್ಯದಲ್ಲೇ ಪ್ರೇತಾಧಿಪನು –ಯಮನು ಹೇಗಿರುವನು ? ಅರ್ಕಕೀರ್ತಿಯ ಸೈನ್ಯದಲ್ಲೇ ಅನೇಕ ಸೈನಿಕರ ಮರಣಗಳಾದುವೆಂದು ಭಾವವು.

**ವಧಂ ವಿಧಾಯ ನ್ಯಾಯೇನ ಜಯೇನಾನ್ಯಾಯವರ್ತಿನಾಮ್ ।**
**ಯಮಸ್ತೀಕ್ಷ್ಣೋಽಪ್ಯಭೂ[1]ದ್ಧರ್ಮಸ್ತತ್ರ [2]ದಿವ್ಯಾನಲೋಪಮಃ ॥ ೧೬೧ ॥**

ಯಮನು ಕ್ರೂರನಾಗಿದ್ದರೂ ಜಯಕುಮಾರನಿಂದ ಅನ್ಯಾಯದಿಂದ ನಡೆಯುವವರ ವಧೆಯನ್ನು ನ್ಯಾಯದಿಂದ ಮಾಡಿಸಿ ಆ ವಿಷಯದಲ್ಲಿ ಶಪಥ ರೂಪವಾದ ಅಗ್ನಿಗೆ ಸಮಾನವಾದ ಧರ್ಮವುಳ್ಳವನಾದನು. ತೀವ್ರವಾದರೂ ಸುಡದಿರುವ ಶಾಪಾಗ್ನಿಯು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪಾಲಿಸುವಂತೆ, ಯಮನೂ ಶಿಷ್ಟನಾದ ಜಯಕುಮಾರನಿಂದ ದುಷ್ಟರನ್ನು ವಧೆಮಾಡಿಸಿ ಶಾಪಾಗ್ನಿಗೆ ಸಮಾನವಾದ ಧರ್ಮವುಳ್ಳವನಾದನೆಂದು ಭಾವವು.

**ತಾವದ್ಧೇಷಿತನಿರ್ಘೋಷೈರ್ಭೀಷಯಂತೋ ದ್ವಿಷೋ ಹಯಾಃ ।**
**ಬಲಮಾಶ್ವಾಸಯಂತಃ ಸ್ವಂ ಸ್ವೀಚಕ್ರು[3]ಶ್ಚಾಕ್ರಿಸೂನವಾಃ ॥ ೧೬೨ ॥**

ಅಷ್ಟರಲ್ಲಿ ಹೇಷಾಧ್ವನಿಗಳಿಂದ ಶತ್ರುಗಳನ್ನು ಹೆದರಿಸುವುವೂ ತಮ್ಮ ಸೈನ್ಯವನ್ನು ಸಮಾಧಾನಗೊಳಿಸುವುವೂ ಚಕ್ರವರ್ತಿಯ ಪುತ್ರನ ಸಂಬಂಧಿಗಳೂ ಆದ ಕುದುರೆಗಳೂ ತಮ್ಮ ಬಲವನ್ನು ಸ್ವೀಕರಿಸಿದುವು. ಆಗ ಕುದುರೆಗಳು ಉತ್ತೇಜನಗೊಂಡುವೆಂದು ಭಾವವು.

**ಪ್ರಾಸಾನ್ ಪ್ರಸ್ಫುರತಸ್ತೀಕ್ಷ್ಣಾನಭೀಕ್ಷ್ಣಂ [4]ವಾಹವಾಹಿನಃ ।**
**ಆವರ್ತಯಂತಃ ಸಂಪ್ರಾಪನ್ ಯಮಸ್ಯೇವಾಗ್ರಗಾ ಭಟಾಃ ॥ ೧೬೩ ॥**

ಕುದುರೆಯ ಸವಾರರು ಪ್ರಕಾಶಮಾನಗಳೂ ಹರಿತಗಳೂ ಆದ ಈಟಿಗಳನ್ನು ಬಾರಿಬಾರಿಗೆ ತಿರಿಗಿಸುವವರಾಗಿ ಯಮನ ಅಗ್ರಗಾಮಿಗಳಾದ ಭಟರೋ ಎಂಬಂತೆ, ಹೊಂದಿದರು. ಯುದ್ಧಕ್ಕೆ ಮುಂದೆಬಂದರೆಂದು ಭಾವವು.

**ಜಯೋಽಪಿ ಸ್ವಯಮಾರುಹ್ಯ ಜಯೀ ಜಯತುರಂಗಮಮ್ ।**
**ಕ್ರುದ್ಧಃ ಪ್ರಾಸಾನ್ ಸಮುದ್ಧೃತ್ಯ ಯೋದ್ಧುಮಶ್ವೀಯಮಾದಿಶತ್ ॥**

ಕೋಪಗೊಂಡವನೂ ಜಯಶೀಲನೂ ಆದ ಜಯಕುಮಾರನೂ ಜಯವೆಂಬ ಕುದುರೆಯನ್ನೇರಿ ಈಟಿಗಳನ್ನೆತ್ತಿ ಯುದ್ಧಮಾಡುವುದಕ್ಕೋಸ್ಕರ ಕುದುರೆಯ ಸವಾರರ ಸೈನ್ಯಕ್ಕೆ ಆಜ್ಞೆಮಾಡಿದನು.

**ಅಭೂತ್ಪ್ರಹತಗಂಭೀರಭಂಭಾದಿಧ್ವನಿಭೀಷಣಃ ।**
**ಬಲಾರ್ಣವಶ್ಚಲಸ್ಥೂಲಕಲ್ಲೋಲ ಇವ ವಾಜಿಭಿಃ ॥ ೧೬೫ ॥**

ಹೊಡೆಯಲ್ಪಟ್ಟುದೂ ಗಂಭೀರವೂ ಆದ ಭಂಭಾ ಮೊದಲಾದ ಧ್ವನಿಗಳಿಂದ ಭಯಂಕರವಾದ ಸೈನ್ಯವೆಂಬ ಸಮುದ್ರವು ಕುದುರೆಗಳಿಂದ ಚಂಚಲವೂ ಸ್ಥೂಲವೂ ಆದ ತೆರೆಗಳುಳ್ಳದಾಗಿರುತ್ತದೆಯೋ ಎಂಬಂತಾಯಿತು. ಸೈನ್ಯವೆಂಬ ಸಮುದ್ರದಲ್ಲಿ ಕುದುರೆಗಳು ತೆರೆಗಳಂತಿದ್ದುವೆಂದು ಭಾವವು.

೧ ಧರ್ಮವಾನ್. ೨ ಶಪಥಾಗ್ನಿಸಮಃ. ೩ ಚಕ್ರಿಸೂನೋಃ ಸಂಬಂಧಿನಃ. ೪ ಅಶ್ವಾರೋಹಾಃ.

**ಅಸಿಸಂಘಟ್ಟನಿಷ್ಠ್ಯೂತವಿಸ್ಫುಲಿಂಗೋ ರಣೇನಲಃ ।**
**ಭೀಷಣೇ ಶರಸಂಘಾತೇ ವ್ಯದೀಪಿಷ್ಟ [1]ಧರಾಚಿತೇ ॥ ೧೬೬ ॥**

ಭಯಂಕರವೂ ಬಾಣಗಳ ಸಮೂಹವುಳ್ಳುದೂ ಆದ ಯುದ್ಧದಲ್ಲಿ ಕತ್ತಿಗಳ ಹೊಡೆತದಿಂದ ಉಗುಳಲ್ಪಟ್ಟ ಕಿಡಿಗಳುಳ್ಳುದಾದ ಬೆಂಕಿಯು ಉಚಿತವಾದ ಭೂಮಿಯಲ್ಲಿ ಪ್ರಕಾಶಿಸಿತು.

**ವಾಜಿನಃ ಪ್ರಾಕ್ಕಶಾಘಾತಾದಧಾವನ್ನಭಿಸಾಯಕಮ್ ।**
**ಮ್ರಿಯಂತೇ ನ ಸಹಂತೇ ಹಿ ಪರಿಭೂತಿಂ ಸತೇಜಸಃ ॥ ೧೬೭ ॥**

ಕುದುರೆಗಳು ಚಾವಟಿಯ ಪೆಟ್ಟಿನಿಂದ ಮೊದಲು ಬಾಣಕ್ಕೆ ಇದಿರಾಗಿ ಓಡಿದುವು. ತೇಜಸ್ಸಿನೊಡನೆ ಕೂಡಿರುವ ಪ್ರಾಣಿಗಳು ಸಾಯುತ್ತವಲ್ಲದೆ ತಿರಸ್ಕಾರವನ್ನು ಸಹಿಸುವುದೇ ಇಲ್ಲ.

**ಸ್ಥಿತಾಃ ಪಶ್ಚಿಮಪಾದಾಭ್ಯಾಂ ಬದ್ಧಾಮರ್ಷಾಃ ಪರಸ್ಪರಮ್ ।**
**ಪತೀನ್ ಕೇಚಿದಿವಾ[2]ವಂತೋ ಯುಯುಧಂತೇ ಸ್ಮ ಚಿರಂ ಹಯಾಃ ॥**

ಕೆಲವು ಕುದುರೆಗಳು ಒಂದಕ್ಕೊಂದು ಕೋಪಗೊಂಡುವುಗಳಾಗಿ ತಮ್ಮ ಯಜಮಾನರುಗಳನ್ನು–ಸವಾರರುಗಳನ್ನು ರಕ್ಷಿಸುತ್ತವೋ ಎಂಬಂತೆ ಮುಂದಿನ ಕಾಲುಗಳಿಂದ ನಿಂತಿರುವುವುಗಳಾಗಿ ಬಹುಕಾಲದವರೆಗೆ ಯುದ್ಧಮಾಡಿದುವು.

**ಸಮುದ್ಧೃತಾಸೃಸಂಪೃಕ್ತಲಸಲ್ಲೋಲಾಸಿಪತ್ರಕೈಃ ।**
**ನಭಸ್ತರುರಭಾದ್ಭೂಯಸ್ತದಾ ಪಲ್ಲವಿತೋ ಯಥಾ ॥ ೧೬೯ ॥**

ಪುನಃ ಆಗ ಎತ್ತಲ್ಪಟ್ಟವುಗಳೂ ರಕ್ತದಿಂದ ಲಿಪ್ತವಾಗಿರುವುವೂ ಪ್ರಕಾಶಮಾನವೂ ಚಂಚಲವೂ ಆದ ಖಡ್ಗಗಳ ಪತ್ರಗಳಿಂದ ಆಕಾಶವೆಂಬ ವೃಕ್ಷವು, ಚಿಗುರಿದಂತೆ, ಪ್ರಕಾಶಿಸಿತು.

**ಪತಿತಾನ್ಯಸಿನಿರ್ಘಾತಾತ್ಸುದೂರಂ ಸ್ವಾಮಿನಾಂ ಕ್ವಚಿತ್ ।**
**[3]ಶೂನ್ಯಾಸನಾಃ ಶಿರಾಂಸ್ಯುಚ್ಚೈರನ್ವೇಷ್ಟುಂ ವಾಭ್ರಮನ್ ಹಯಾಃ॥ ೧೭೦ ॥**

ಕೆಲವು ಕಡೆಯಲ್ಲಿ ಬೆನ್ನಿನ ಮೇಲೆ ಸವಾರನಿಲ್ಲದಿರುವುವುಗಳಾದ ಕುದುರೆಗಳು ಖಡ್ಗದ ಪೆಟ್ಟಿನಿಂದ ಬಹುದೂರದಲ್ಲಿ ಬಿದ್ದಿರುವುವುಗಳಾದ ಯಜಮಾನ–ಸವಾರರುಗಳ ತಲೆಗಳನ್ನು ಚೆನ್ನಾಗಿ ಹುಡುಕುವುದಕ್ಕೋಸ್ಕರವೋ ಎನ್ನುವಂತೆ ಸುತ್ತಿದುವು.

**ಪಶೂನ್ವಿಶೃಂಗಾನ್ಮತ್ವಾಶ್ವಾನ್ ಕೃಪಯಾ ಕೋಽಪಿ ನಾವಧೀತ್ ।**
**ತೇ ಸ್ವದಂತಖುರೈರೇವ ಕ್ರುದ್ಧಾಃ ಪ್ರಾಘ್ನನ್ ಪರಸ್ಪರಮ್ ॥ ೧೭೧ ॥**

ಯಾವನೂ ಕುದುರೆಗಳನ್ನು ಕೊಂಬಿಲ್ಲದಿರುವ ಪಶುಗಳನ್ನಾಗಿ ತಿಳಿದು ದಯೆಯಿಂದ ಕೊಲ್ಲಲಿಲ್ಲ. ಕೋಪಗೊಂಡ ಆ ಕುದುರೆಗಳೇ ತಮ್ಮ ಹಲ್ಲುಗಳಿಂದಲೂ ಗೊರಸುಗಳಿಂದಲೂ ಒಂದನ್ನೊಂದು ಕೊಂದುವು.

**[4]ವಂಶಮಾತ್ರಾವಶಿಷ್ಟಾಂಗೈ[5]ರ್ಮಂಡಲಾಗ್ರೈಶ್ಚಿರಂ ಕ್ರುಧಾ ।**
**ಲೋಹದಂಡೈರಿವಾಖಂಡೈರ್ಧೀರಾ ಯುಯುಧಿರೇ ಯುಧಿ ॥ ೧೭೨ ॥**

ಯುದ್ಧದಲ್ಲಿ ಧೀರರು ಬಿದುರುಮಾತ್ರವೇ ಉಳಿದಿರುವ ಸ್ವರೂಪವುಳ್ಳುವುಗಳಾದ ಕತ್ತಿಗಳಿಂದ, ಮುರಿಯದಿರುವ ಕಬ್ಬಿಣದ ಕೋಲುಗಳಿಂದಲೋ ಪಾದಿಯಲ್ಲಿ, ಬಹುಕಾಲದವರೆಗೆ ಕೋಪದಿಂದ ಯುದ್ಧಮಾಡಿದರು.

**[6]ಶಿರಃಪ್ರಹರಣೇನಾನ್ಯೋ[7]ಪಶ್ಯನ್ನಾಂಧ್ಯಂ ಪ್ರಕುರ್ವತಾ ।**
**ಸರ್ವರೋಗಶಿರಾ[8]ವಿದ್ಧೋ ದೃಷ್ಟ್ವಾ [9]ಪಶ್ಚಾದಯುದ್ಧ ಸಃ ॥ ೧೭೩ ॥**

೧ ಭೂಮಾವುಪಚಿತೇ. ೨ ರಕ್ಷಂತಃ. ೩ ಸ್ವಾಮಿರಹಿತಪೃಷ್ಠಾಃ. ೪ ವೇಣುಮಾತ್ರಾವಶಿಷ್ಟಸ್ವರೂಪೈಃ. ೫ ಅಸಿಭಿಃ. ೬ ಮಸ್ತಕಾಭಿಘಾತೇನ. ೭ ಕಿಂಚಿದಪಿ ನಾಲೋಕಯನ್. ೮ ತಾಡಿತಃ. ೯ ಗಲಪಶ್ಚಿಮ ಭಾಗಂ ಕರಸ್ಪರ್ಶಾದಾಲೋಕ್ಯ.

ಮತ್ತೋರ್ವನು ಕುರುಡುತನವನ್ನುಂಟುಮಾಡುವುದಾದ ತಲೆಯ ಪೆಟ್ಟಿನಿಂದ ಮೊದಲು ಸ್ವಲ್ಪವೂ ಕಾಣದವನಾಗಿ ಬಳಿಕ ಹೆಡತಲೆಯ ನರದಲ್ಲಿ ಹೊಡೆಯಲ್ಪಟ್ಟವನಾದ ಅವನು ನೋಡಿ ಯುದ್ಧಮಾಡಿದನು.

**ಹಯಾನ್ [೧]ಪ್ರತಿಷ್ಕಶೀಕೃತ್ಯ [೨]ಧನುಸ್ತ [೩]ತ್ಕಪಿಶೀರ್ಷಕಮ್ ।**
**ಆಯುಧ್ಯತ ಪುನಃ ಸುಷ್ಠು ತದಾ ದ್ವಿಗುಣಯದ್ರಣಮ್ ॥ ೧೭೪ ॥**

ಕಪಿಶೀರ್ಷಕವೆಂದು ಹೆಸರುಳ್ಳುದೂ ಪ್ರಸಿದ್ಧವೂ ಆದ ಧನುಸ್ಸುಳ್ಳ ವೀರನೋರ್ವನು ಕುದುರೆಗಳನ್ನು ಸಹಾಯಕ್ಕೆ ತೆಗೆದುಕೊಂಡು ಮತ್ತೆ ಯುದ್ಧವನ್ನು ಎರಡರಷ್ಟು ಹೆಚ್ಚಿಸಿ ಆಗ ಚೆನ್ನಾಗಿ ಯುದ್ಧಮಾಡಿದನು.

**ಜಯೋಽಯಾತ್ತಾನುಜಸ್ತಾವದಾವಿಷ್ಕೃತಯಮಾಕೃತಿಃ ।**
**ಕಂಠೀರವಮಿವಾರುಹ್ಯ ಹಯ[೪]ಮಸ್ಕುದ್ಯತಃ ಕ್ರುಧಾ ॥ ೧೭೫ ॥**

ಅಷ್ಟರಲ್ಲಿ ಕತ್ತಿಯನ್ನೆತ್ತಿದವನೂ ತಮ್ಮಂದಿರೊಡನೆ ಕೂಡಿರುವವನೂ ಯಮಾಕೃತಿಯನ್ನು ತೋರಿಸುವವನೂ (ಭಯಂಕರಾಕಾರವುಳ್ಳವನೂ) ಆದ ಜಯಕುಮಾರನು, ಸಿಂಹವನ್ನೇರುವಂತೆ ಕುದುರೆಯನ್ನೇರಿ ಕೋಪದಿಂದ ಯುದ್ಧಕ್ಕೆ ಹೋದನು.

**[೫]ವಾಹಯಂತಂ ತಮಾಲೋಕ್ಯ [೬]ಕಾಲಾಂತಜ್ವಾಲಿಭೀಷಣಮ್ ।**
**ವಿವೇಶ [೭]ವಿದ್ವಿಡಶ್ವಾಲೀ ವೇಲೇವ ಸ್ವಬಲಾಂಬುಧಿಮ್ ॥ ೧೭೬ ॥**

ಕುದುರೆಯ ಮೇಲೆ ಕುಳಿತುಕೊಳ್ಳುತ್ತಿರುವವನೂ ಪ್ರಳಯಕಾಲದ ಬೆಂಕಿಯಂತೆ ಭಯಂಕರನೂ ಆದ ಆ ವೀರನನ್ನು ನೋಡಿ ಶತ್ರುಗಳ ಕುದುರೆಗಳ ಸಮೂಹವು ತರಂಗಮಾಲೆಯಂತೆ ತಮ್ಮ ಸೇನೆಯೆಂಬ ಸಮುದ್ರವನ್ನು ಪ್ರವೇಶಿಸಿತು.

**ಚಿರಾ[೮]ತ್ಪರ್ಯಾಯಮಾಸಾದ್ಯ ಪ್ರನೃತ್ಯತ್ಕೇತವೋ ರಥಾಃ ।**
**ಜವಿಭಿರ್ವಾಜಿಭಿರ್ವ್ಯೂಢಾಃ ಪ್ರಾಧಾವನ್ವಿದ್ವಿಷಃ ಪ್ರತಿ ॥ ೧೭೭ ॥**

ತ್ವರೆಯುಳ್ಳ ಕುದುರೆಗಳಿಂದ ಹೊರಲ್ಪಟ್ಟಿರುವುವೂ ಕುಣಿಯುತ್ತಿರುವ ಧ್ವಜಗಳುಳ್ಳುವೂ ಆದ ರಥಗಳು ಬಹುಕಾಲದಮೇಲೆ ಅವಕಾಶವನ್ನು ಪಡೆದು ಶತ್ರುಗಳನ್ನು ಕುರಿತು (ಇದಿರಾಗಿ) ಓಡಿದುವು.

**ನಿಶ್ಶೇಷ[೯]ಹೇತಿಪೂರ್ಣೇಷು ರಥೇಷು ರಥನಾಯಕಾಃ ।**
**[೧೦]ತುಲಾಂ ಜಗುರ್ಜರ್ಗಾರುಹ್ಯ [೧೧]ಪಿಂಜರೈಃ ಕುಂಜರಾರಿಭಿಃ ॥ ೧೭೮ ॥**

ಸಮಸ್ತವಾದ ಆಯುಧಗಳಿಂದ ತುಂಬಿರುವ ರಥಗಳಲ್ಲಿ ರಥಿಕರಾದ ವೀರರು ಸಿಂಹಗಳೊಡನೆ ಸಾದೃಶ್ಯವನ್ನು ಹೊಂದಿ ಒಂದು ಜಾತಿಯ ಕುದುರೆಗಳೊಡನೆ ಗರ್ಜಿಸಿದರು. ರಥಿಕರೂ ಕುದುರೆಗಳೂ ಗರ್ಜಿಸಿದುವೆಂದು ಭಾವವು (ಪಿಂಜರೈಃ ಎಂಬ ಶಬ್ದಕ್ಕೆ ಹೊಂಬಣ್ಣವಾದ ಎಂದು ಅರ್ಥಮಾಡಿ ಸಿಂಹಗಳಿಗೆ ವಿಶೇಷಣಮಾಡಬಹುದಾದರೂ ಸಿಂಹಗಳು ಸ್ವಾಭಾವವಾಗಿಯೇ ಹೊಂಬಣ್ಣವಾಗಿರುವುದರಿಂದ ಈ ವಿಶೇಷಣಕ್ಕೆ ಸಾರ್ಥಕ್ಯವಿಲ್ಲವೆಂದು ತಿಳಿದು ಪಿಂಜರಶಬ್ದಕ್ಕೆ ಅಶ್ವಭೇದಃ ಎಂದು ಅರ್ಥಮಾಡಿರುತ್ತೇವೆ).

**ಚಕ್ರಸಂಘಟ್ಟಸಂಪಿಷ್ಟೇ ಶವಾಸೃಜ್ಮಾಂಸಕರ್ದಮೇ ।**
**ರಥಕಟ್ಯಾಶ್ಚರಂತಿ ಸ್ಮ [೧೨]ತತ್ರಾಬ್ಧೌ ಮಂದಪೋತವತ್ ॥ ೧೭೯ ॥**

ರಥಗಳ ಸಮೂಹಗಳು ಚಕ್ರಗಳ ತಿಕ್ಕಾಟದಿಂದ ಚೂರ್ಣವಾಗಿರುವುದೂ ಹೆಣಗಳ ರಕ್ತಮಾಂಸಗಳಿಂದ ಕೆಸರಾಗಿರುವುದೂ ಆದ ಆ ರಣರಂಗವೆಂಬ ಸಮುದ್ರದಲ್ಲಿ ಚಿಕ್ಕ ಹಡಗಿನಂತೆ ಸಂಚರಿಸಿದುವು.

೧ ಸಹಾಯೀಕೃತ್ಯ. ೨ ಧನ್ವೀ ಇತ್ಯರ್ಥಃ. ೩ ಚಾಪವಿಶೇಷಃ. ೪ ಉದ್ಧೃತಾಸಿಃ. ೫ ಅಶ್ವಮಾರೋಹಯಂತಂ. ೬ ಕಲ್ಪಾಂತಾಗ್ನಿವದ್ಭಯಂಕರಂ. ೭ ಶತ್ರುವಾಜಿಸಮೂಹಃ. ೮ ಅವಸರಂ. ೯ ಆಯುಧ. ೧೦ ಸಾಮ್ಯಂ. ೧೧ ಪಾಂಜರೈರಿತ್ಯಪಿ ಪಾಠಃ. ೧೨ ರಣೇ.

**ಕುಂತಾಸಿಪ್ರಾಸಚಕ್ರಾದಿಸಂಕೀರ್ಣೇ [೧]ವ್ರಣಿತಕ್ರಮಾಃ ।**
**ಆಕ್ರಾಮನ್ ಕೃಚ್ಛ್ರಕೃಚ್ಛ್ರೇಣ ರಣೇ ರಥತುರಂಗಮಾಃ ॥ ೧೮೦ ॥**

ಕುಂತಾಯುಧ ಕತ್ತಿ ಈಟಿ ಚಕ್ರ ಮೊದಲಾದುವುಗಳಿಂದ ಇಕ್ಕಟ್ಟಾದ ಯುದ್ಧದಲ್ಲಿ ಗಾಯವಾದ ಕಾಲುಗಳುಳ್ಳುವುಗಳಾದ ರಥಗಳ ಕುದುರೆಗಳು ಬಹುಕಷ್ಟದಿಂದ ಆಕ್ರಮಿಸಿರುವುವು. ಶತ್ರುಗಳನ್ನು ಬಹುಕಷ್ಟದಿಂದ ಆಕ್ರಮಿಸಿದುವೆಂದು ಭಾವವು.

**ತದಾ [೨]ಸನ್ನದ್ಧಸಂಯುಕ್ತಸರ್ವಾಯುಧಭೃತಂ ರಥಮ್ ।**
**[೩]ಸಂಕ್ರಮ್ಯ [೪]ವೃಷಭಂ ವಾರ್ಕಃ ಸಮಾರೂಢಪರಾಕ್ರಮಃ ॥ ೧೮೧ ॥**

**ಪುರೋಜ್ವಲತ್ಸಮುತ್ಸರ್ಪಚ್ಛರತೀಕ್ಷ್ಣಾಂಶುಸಂತತಿಃ ।**
**ಶತ್ರುಸಂತಮಸಂ ಭಿಂದನ್ ಬಾಲಾರ್ಕಮಜಯಜ್ಜಯಃ ॥ ೧೮೨ ॥**

ಮುಂದುಗಡೆಯಲ್ಲಿ ಪ್ರಕಾಶಮಾನವೂ ಮೇಲೆ ಹಾರುತ್ತಿರುವುವೂ ಆದ ಬಾಣಗಳ ತೀಕ್ಷ್ಣವಾದ ಕಿರಣಪರಂಪರೆಯುಳ್ಳವನೂ ಶತ್ರುಗಳೆಂಬ ಗಾಢಾಂಧಕಾರವನ್ನು ಭೇದಿಸುವವನೂ ಆದ ಜಯಕುಮಾರನು ಕಳೆಯೇರಿದ ಪರಾಕ್ರಮವುಳ್ಳವನಾಗಿ ಸಿದ್ಧಮಾಡಲ್ಪಟ್ಟವೂ ಸೇರಿಸಲ್ಪಟ್ಟವೂ ಆದ ಸಮಸ್ತ ಆಯುಧಗಳಿಂದ ತುಂಬಿರುವ ರಥವನ್ನು ಆಗ, ಸೂರ್ಯನು ವೃಷಭರಾಶಿಯನ್ನೋಪಾದಿಯಲ್ಲಿ, ಹೊಂದಿ ಬಾಲಸೂರ್ಯನನ್ನು ಜಯಿಸಿದನು.

**[೫]ಮಂಡಲಾಗ್ರಸಮುತ್ಸೃಷ್ಟದುಷ್ಪ್ರಾಸೃಃ ಶಸ್ತ್ರಕರ್ಮವಿತ್ ।**
**ಜಯೋ ಭಿಷಜ[೬]ಮನ್ವೈಯಃ ಶತ್ರುಶಲ್ಯಂ [೭]ಸಮುದ್ಧರನ್ ॥ ೧೮೩ ॥**

ಖಡ್ಗದಿಂದ ದುಷ್ಪರ ರಕ್ತವನ್ನು ಬಿಡಿಸಿದವನೂ ಶಸ್ತ್ರಕ್ರಿಯೆಯನ್ನು ತಿಳಿದವನೂ ಶತ್ರುಗಳೆಂಬ ಶಲ್ಯವನ್ನು ನಾಶಮಾಡುವವನೂ ಆದ ಜಯಕುಮಾರನು ವೈದ್ಯನನ್ನು ಅನುಸರಿಸಿದನು. ಜಯಕುಮಾರನು ವೈದ್ಯನ ಸಾದೃಶ್ಯವುಳ್ಳವನಾದನೆಂದು ಭಾವವು.

**ಧ್ವಜಸ್ಯೋಪರಿ [೮]ಧೂಮೋ ವಾ ತೇನಾ[೯]ಕೃಷ್ಟೋ ನು ಸಾಯಕಃ ।**
**ಪಪಾತ ತಾಪ[೧೦]ಮಾಪಾದ್ಯ ಸೂಚಯನ್ನಶುಭಂ ದ್ವಿಷಾಮ್ ॥ ೧೮೪ ॥**

ಜಯಕುಮಾರನಿಂದ ಬಿಡಲ್ಪಟ್ಟ ಬಾಣವಾದರೋ, ಧೂಮಕೇತುವಿನೋಪಾದಿಯಲ್ಲಿ ತಾಪವನ್ನುಂಟುಮಾಡಿ ಅಶುಭವನ್ನು ಸೂಚಿಸುವುದಾಗಿ ಶತ್ರುಗಳ ಧ್ವಜದ ಮೇಲೆ ಬಿದ್ದಿತು.

**ಧ್ವಜದಂಡಾನ್ ಸಮಾಖಂಡ್ಯ ವಿದ್ವಿಷೋಽನ್ವೀತಪೌರುಷಾನ್ ।**
**ಕುರ್ವನ್ ಸರ್ವಾನ್ ಸ ನಿರ್ವಂಶಾನ್ ಸೋಮವಂಶಧ್ವಜಾಯತೇ ॥**

ಧ್ವಜದಂಡಗಳನ್ನು ಮುರಿದು ಬಳಿಕ ಪೌರುಷವಿಲ್ಲದವರಾದ ಸಮಸ್ತ ಶತ್ರುಗಳನ್ನು ನಿರ್ವಂಶರನ್ನಾಗಿ ಮಾಡಿ ಆ ಜಯಕುಮಾರನು ಚಂದ್ರವಂಶಧ್ವಜದಂತಾಚರಿಸಿದನು. ಸೋಮವಂಶಶ್ರೇಷ್ಠನಾದನೆಂದು ಭಾವವು.

**ಛಿನ್ನಕೇತವಃ ಕೇಚಿತ್ಕ್ಷಣಂ ತಸ್ಥುರ್ಮೃತಾ ಇವ ।**
**ಪ್ರಾಣೈ[೧೧]ರ್ನ ಪ್ರಾಣಿನಃ ಕಿಂತು ಮಾನಪ್ರಾಣಾ ಹಿ ಮಾನಿನಃ ॥ ೧೮೬ ॥**

ಮುರಿದುಹೋದ ಧ್ವಜಗಳುಳ್ಳವರಾದ ಕೆಲವರು ಸತ್ತವರಂತೆ ಇದ್ದರು. ಪ್ರಾಣಿಗಳು ಪ್ರಾಣಗಳಿಂದ ಬದುಕುವುದಿಲ್ಲ, ಆದರೆ ಮಾನವುಳ್ಳವರು ಮಾನವೇ ಪ್ರಾಣವಾಗಿರುವವರಾಗಿರುತ್ತಾರೆ.

**ಪ್ರಜ್ವಲಂತಂ [೧೨]ಜಯಂತಂ ತೇ ಜಯಂ ತಂ ಸೋಢುಮಕ್ಷಮಾಃ ।**
**ಸಹ ಸರ್ವೇಽಪಿ [೧೩]ಸಂಪೇತುರಭ್ಯಗ್ನಿ ಶಲಭಾ ಯಥಾ ॥ ೧೮೭ ॥**

೧ ಕ್ಷತಪಾದಾಃ. ೨ ಸಜ್ಜೀಕೃತ. ೩ ಸಂಪ್ರಾಪ್ಯ. ೪ ವೃಷಭರಾಶಿಮಿವ. ೫ ಕರವಾಲೇನ ಮುಕ್ತದುಷ್ಪರರಕ್ತಃ. ೬ ಅನುಗತವಾನ್. ೭ ಸಮ್ಯಕ್ ಹರನ್. ೮ ಧೂಮಕೇತುರಿವ. ೯ ಸಮುತ್ಸೃಷ್ಟಃ. ೧೦ ಆಸಾದ್ಯ ಇತ್ಯಪಿ ಪಾಠಃ. ೧೧ ನ ಜೀವಂತಿ. ೧೨ ಜಯತೀತಿ ಜಯನ್ ತಂ. ೧೩ ಅಭಿಮುಖಮಾಗತಾಃ.

ಪ್ರಜ್ವಲಿಸುವವನೂ ಜಯವುಳ್ಳವನೂ ಆದ ಆ ಜಯನನ್ನು ಸಹಿಸುವುದಕ್ಕೆ ಅಸಮರ್ಥರಾದ ಆ ಶತ್ರುಗಳೆಲ್ಲರೂ, ಬೆಂಕಿಗೆ ಇದಿರಾಗಿ ಪತಂಗಗಳಂತೆ, ಒಟ್ಟಿಗೆ ಇದಿರಾಗಿ ಬಂದರು.

**ಸನ್ನದ್ಧಸ್ಯಂದನಾಶ್ಚಂಡಾಸ್ತದಾ ಹೇಮಾಂಗದಾದಯಃ ।**
**ಕೋದಂಡಾಸ್ಫಾಲನಧ್ವಾನನಿರುದ್ಧಹರಿತಃ ಕ್ರುಧಾ ॥ ೧೮೮ ॥**

**ಪವೃಷುರ್ವಹ್ನಿವೃಷ್ಟಿಂ ವಾ ಬಾಣವೃಷ್ಟಿಂ ಪ್ರತಿ ದ್ವಿಷಃ ।**
**ಯಾವತ್ತೇ[೧] ಲಕ್ಷ್ಯತಾಂ[೨] ನೇಯುಸ್ತಾವದಾವಿಷ್ಕೃತೋದಯಾಃ ॥**

ಆಗ ಸಿದ್ಧಮಾಡಲ್ಪಟ್ಟ ರಥಗಳುಳ್ಳವರೂ ಭಯಂಕರರೂ ಧನುಸ್ಸನ್ನು ಹೊಡೆಯುವುದರಿಂದುಂಟಾದ ಶಬ್ದದಿಂದ ತಡೆಯಲ್ಪಟ್ಟ–ವ್ಯಾಪ್ತವಾದ ದಿಕ್ಕುಗಳುಳ್ಳವರೂ ಆದ ಹೇಮಾಂಗದನೇ ಮೊದಲಾದವರು ಕೋಪದಿಂದ ಎಷ್ಟರವರೆಗೆ ಆ ರಥಿಕರು ಇದಿರಾಗಿ ಬಂದು ಮುಖ್ಯತ್ವವನ್ನು ಹೊಂದಲಿಲ್ಲವೋ ಅಷ್ಟರವರೆಗೂ (ರಥಿಕರೆಲ್ಲರೂ ವಿಮುಖರಾಗುವವರೆಗೂ, ಎಂದು ಭಾವವು) ಕಾಣಿಸಿಕೊಂಡವರಾಗಿ, ಬೆಂಕಿಯ ಮಳೆಯನ್ನೋಪಾದಿಯಲ್ಲಿ ಶತ್ರುಗಳನ್ನು ಕುರಿತು ಬಾಣಗಳ ಮಳೆಯನ್ನು ವರ್ಷಿಸಿದರು.

**ನಿರುಧ್ಯಾ[೪]ನಂತಸೇನಾದಿಶರಜಾಲಂ ರಣಾರ್ಣವೇ ।**
**ಸ್ಯಂದನಾಂಶ್ಚೋದಯಾಮಾಸುಃ ಪೋತಾನ್ವಾ ವಾತರಂಹಸಃ ॥ ೧೯೦ ॥**

ಅರ್ಕಕೀರ್ತಿಯ ರಥಿಕನಾದ ಅನಂತಸೇನನೇ ಮೊದಲಾದವರ ಬಾಣಸಮೂಹವನ್ನು ತಡೆದು ಯುದ್ಧವೆಂಬ ಸಮುದ್ರದಲ್ಲಿ ಚಿಕ್ಕ ಹಡಗುಗಳನ್ನೋಪಾದಿಯಲ್ಲಿ ಗಾಳಿಯಂತೆ ವೇಗವುಳ್ಳವುಗಳಾದ ರಥಗಳನ್ನು ಮುಂದೆ ತಳ್ಳಿದರು.

**ಬಲದ್ವಯಾಸ್ತ್ರಸಂಘಟ್ಟಸಮುತ್ಪನ್ನಾಶುಶುಕ್ಷಣಿಮ್ ।**
**[೫]ಪೇತುರ್ವಾಹಾಃ [೬]ಪರಂ ತೇಜಸ್ತೇಜಸ್ವೀ ಸಹತೇ ಕಥಮ್ ॥ ೧೯೧ ॥**

ಕುದುರೆಗಳು ಎರಡು ಸೈನ್ಯಗಳ ಅಸ್ತ್ರಗಳ ಒಂದಕ್ಕೊಂದು ತಗುಲುವುದರಿಂದುಂಟಾದ ಬೆಂಕಿಯನ್ನು ಹೊಂದಿದುವು; ತೇಜಸ್ವಿಯಾದವನು ಇತರ ತೇಜಸ್ಸನ್ನು ಹೇಗೆ ಸಹಿಸುತ್ತಾನೆ?

**ಅನ್ಯೋನ್ಯಂ ಖಂಡಯಂತಿ ಸ್ಮ ತೇಷಾಂ ಶಸ್ತ್ರಾಣಿ [೭]ತದ್ರಣೇ ।**
**ನೈಕಮ[೮]ಪ್ಯಪರಾನ್ ಪ್ರಾಪಚ್ಚಿತ್ರಮಸ್ತ್ರೇಷು ಕೌಶಲಮ್ ॥ ೧೯೨ ॥**

ಜಯಕುಮಾರಾರ್ಕಕೀರ್ತಿಗಳ ಯುದ್ಧದಲ್ಲಿ ಆ ಸೈನಿಕರ ಶಸ್ತ್ರಗಳು ಒಂದನ್ನೊಂದು ಕತ್ತರಿಸಿದುವು. ಒಂದು ಅಸ್ತ್ರವೂ ಶತ್ರುಗಳನ್ನು ತಲುಪಲಿಲ್ಲ. ಅಸ್ತ್ರಗಳಲ್ಲಿ ಅಸ್ತ್ರಪ್ರಯೋಗಗಳಲ್ಲಿ ಕುಶಲತೆಯು ವಿಚಿತ್ರವಾದುದು.

**ನ ಮೃತಾ ವ್ರಣಿತಾ ನೈವ ನ ಜಯೋ ನ ಪರಾಜಯಃ ।**
**ಯುಧ್ಯಮಾನೇಷ್ವಹೋ ತೇಷು ನಾಹವೋಪ್ಯಾಹವಾಯತೇ ॥ ೧೯೩ ॥**

ಆ ವೀರರು ಯುದ್ಧಮಾಡುವವರಾಗಿರುತ್ತಿರಲು ಸಾಯಲೂ ಇಲ್ಲ, ಗಾಯವುಳ್ಳವರಾಗಲೂ ಇಲ್ಲ, ಜಯವೂ ಇಲ್ಲ, ಅಪಜಯವೂ ಇಲ್ಲ, ಯುದ್ಧವೂ ಅವರಲ್ಲಿ ಯುದ್ಧದಂತಾಚರಿಸಲಿಲ್ಲ. ಆಶ್ಚರ್ಯ? ಯುದ್ಧವಾದರೂ ಆದಂತೆ ತೋರಲಿಲ್ಲವೆಂದು ಭಾವವು.

**ಯುಧ್ವಾಪ್ಯೇವಂ ಚಿರಂ ಶೇಕುರ್ನ ಜೇತುಂ ತೇ ಪರಸ್ಪರಮ್ ।**
**ಜಯಃ ಸೇನಾದ್ವಯೇ ತಸ್ಮಿನ್ [೯]ಜಯಾದನ್ಯೇನ ದುರ್ಲಭಃ ॥ ೧೯೪ ॥**

ಆ ವೀರರು ಹೀಗೆ ಬಹುಕಾಲದವರೆಗೆ ಯುದ್ಧಮಾಡಿಯೂ ಒಬ್ಬರನ್ನೊಬ್ಬರು ಜಯಿಸುವುದಕ್ಕೆ ಸಮರ್ಥರಾಗಲಿಲ್ಲ. ಆ ಎರಡು ಸೈನ್ಯದಲ್ಲಿ ಜಯವು ಜಯಕುಮಾರನಿಂದಲ್ಲದೆ ಬೇರೆಯವನಿಂದ ದುರ್ಲಭವು. ಜಯವು ಜಯಕುಮಾರನಿಂದ ಸಾಧ್ಯವಲ್ಲದೆ ಬೇರೆಯವನಿಂದ ಸಾಧ್ಯವಲ್ಲವೆಂದು ಭಾವವು.

**ಅಂತರ್ಹಾಸೋ ಜಯಃ ಸರ್ವಂ ತತ್ತದಾಲೋಕ್ಯ ಲೀಲಯಾ ।**
**ಶರೈಃ ಸಂಛಾದಯಾಮಾಸ ಸೈನ್ಯಂ ಪುತ್ರಸ್ಯ ಚಕ್ರಿಣಃ ॥ ೧೯೫ ॥**

ಒಳಗೆ ನಗೆಯುಳ್ಳವನಾದ ಜಯಕುಮಾರನು ಆಗ ಅದೆಲ್ಲವನ್ನೂ ನೋಡಿ ಚಕ್ರವರ್ತಿಯ ಮಗನ ಸೈನ್ಯವನ್ನು ಲೀಲೆಯಿಂದ ಬಾಣಗಳಿಂದ ಮರೆಮಾಡಿದನು–ಹೊದಿಸಿದನು.

**ನಿಷ್ಪಂದೀಭೂತಮಾಲೋಕ್ಯ ಚಕ್ರಿಸೂನುಃ ಸ್ವಸಾಧನಮ್ ।**
**ರಕ್ತೋತ್ಪಲದಲಚ್ಛಾಯಾ[೧]ಮುಚ್ಛಿದ್ಯ ನಯನತ್ವಿಷಾ ॥ ೧೯೬ ॥**

**ಜಯಃ ಪರಸ್ಯ ನೋ ಮೇಧ್ಯ ಜಯೋ ಜಯಮಹಂ ರಣೇ ।**
**ವಿಧ್ವಸ್ಯ ಭುವನೇ ಶುದ್ಧಮಾಕಲ್ಪಂ ಸ್ಥಾಪಯೇ ಯಶಃ ॥ ೧೯೭ ॥**

ಚಕ್ರವರ್ತಿಯ ಪುತ್ರನು ನಿಶ್ಚಂಚಲವಾದ ತನ್ನ ಸೈನ್ಯವನ್ನು ನೋಡಿ ಕಣ್ಣಿನ ಕಾಂತಿಯಿಂದ ಕೆಂಪುನೈದಿಲೆಯ ಎಸಳಿನ ಕಾಂತಿಯನ್ನು ಮೀರಿ–ಕೋಪಗೊಂಡು "ಈ ದಿವಸ ಜಯವು ನನಗೆ, ಶತ್ರುವಿಗೆ ಜಯವಿಲ್ಲ. ನಾನು ಯುದ್ಧದಲ್ಲಿ ಜಯನನ್ನು ನಾಶಮಾಡಿ ಲೋಕದಲ್ಲಿ ಶುದ್ಧವಾದ ಯಶಸ್ಸನ್ನು ಕಲ್ಪಕಾಲದವರೆಗೆ ಸ್ಥಾಪಿಸುತ್ತೇನೆ.

**ವಿದಧಾಮ್ಯದ್ಯ ನಾಥೇಂದುಪ್ರಸರದ್ವಂಶ[೨]ವರ್ಧನಮ್ ।**
**[೩]ಜಯಲಕ್ಷ್ಮೀರ್ವಶೀಕೃತ್ಯ ವಿಧೇಯಾನ್ಮೇಧುನಾ [೪]ಸುಖಮ್ ॥ ೧೯೮ ॥**

ಈ ದಿವಸ ವಿಸ್ತರಿಸುತ್ತಿರುವ ನಾಥವಂಶ ಸೋಮವಂಶಗಳ ಭೇದನವನ್ನು ಮಾಡುತ್ತೇನೆ. ಜಯಲಕ್ಷ್ಮಿಯು ನನ್ನನ್ನು ವಶಮಾಡಿ ನನಗೆ ಈಗ ಸುಖವನ್ನು ಮಾಡಲಿ." ಇಲ್ಲಿ ನಾಥವಂಶ ಸೋಮವಂಶಗಳ ಪೋಷಣೆಯನ್ನು ಮಾಡುತ್ತೇನೆಂದೂ ಜಯಕುಮಾರನ ಲಕ್ಷ್ಮಿಯು ನನ್ನನ್ನು ವಶಮಾಡಿ ನನಗೆ ಅಸುಖ–ದುಃಖವನ್ನು ಮಾಡಲೆಂದೂ ಅನಿಷ್ಟಾರ್ಥವೂ ಸೂಚಿತವಾಗುವುದು.

**ಬ್ರುವನ್ ಸ [೫]ಕಲ್ಪನಾದುಷ್ಟಮಿತಿ ಸ್ವಾನಿಷ್ಟಸೂಚನಮ್ ।**
**ದ್ವಿಪಂ ಪ್ರಚೋದಯಾಮಾಸ ಕ್ರುಧೇವಾ[೬]ಜಯಮಾತ್ಮನಃ ॥ ೧೯೯ ॥**

ಈ ಪ್ರಕಾರವಾಗಿ ಅಭಿಪ್ರಾಯದಿಂದ ದುಷ್ಟವಾದ ತನ್ನ ಅನಿಷ್ಟಸೂಚನೆಯನ್ನು ಹೇಳುವವನಾದ ಆ ಅರ್ಕಕೀರ್ತಿಯು ಕೋಪದಿಂದ ತನ್ನ ಅಪಜಯವನ್ನು ಪ್ರೇರಿಸುವಂತೆ ಶತ್ರುವನ್ನು ಪ್ರೇರಿಸಿದನು.

**ಪ್ರತಿವಾತಸಮುದ್ಧೂತಪಶ್ಚಾದ್ಗತಪತಾಕಿಕಾಃ ।**
**ಮಂದಮಂದಕ್ವಣದ್ಘಂಟಾಕುಂಠಿತಸ್ವಬಲೋತ್ಸವಾಃ ॥ ೨೦೦ ॥**

**ಸಂಶುಷ್ಕದಾನನಿಷ್ಯಂದಕಟದೀನಾನನಶ್ರಿಯಃ ।**
**[೭]ನಿರ್ವಾಣಾಲಾತನಿರ್ಭಾಸನಿಶ್ಶೇಷಾಸ್ತ್ರಭರಾಕ್ಷಮಾಃ ॥ ೨೦೧ ॥**

**ಆಧೋರಣೈಃ [೮]ಕೃತೋತ್ಸಾಹೈಃ ಕೃಚ್ಛ್ರಾತ್ಕೃಚ್ಛ್ರೇಣ ಚೋದಿತಾಃ ।**
**ಆಕ್ರಂದಮಿವ ಕುರ್ವಂತಃ ಕುಂಠಿತೈಃ ಕಂಠಗರ್ಜಿತೈಃ ॥ ೨೦೨ ॥**

**ಭೀತಭೀತಾ ಯುಧೋನ್ಯೈಶ್ಚ ಚಿಹ್ನೈರಶುಭಸೂಚಿಭಿಃ ।**
**ಗಜಾ ಗತಜವಾಶ್ಶೈಲಾ ಅಚಲಾ ಇವ ಜಂಗಮಾಃ ॥ ೨೦೩ ॥**

ಇದಿರಾಗಿ ಬೀಸುವ ಗಾಳಿಯಿಂದ ಕೊಡಹಲ್ಪಟ್ಟ ಹಿಂದಕ್ಕೆ ಹೋದ ಧ್ವಜಗಳುಳ್ಳವೂ ಮೆಲ್ಲಮೆಲ್ಲನೆ ಶಬ್ದಮಾಡುತ್ತಿರುವ ಘಂಟೆಗಳಿಂದ ಕಡಿಮೆಯಾದ

---

೧ ರಥಿನಃ. ೨ ಮುಖ್ಯತಾಂ. ೩ ನ ಗಚ್ಛಂತಿ ಸ್ಮ. ೪ ಅರ್ಕಕೀರ್ತಿರಥಿಕಃ. ೫ ಜಗ್ಮುಃ. ೬ ಅನ್ಯತ್. ೭ ತಯೋಃ ರಣೇ. ೮ ಶತ್ರೂನ್. ೯ ಜಯಕುಮಾರಾತ್.

೧ ಅತಿಶಯ್ಯೇತ್ಯರ್ಥಃ. ೨ ಭೇದನಂ ಪೋಷಣಮಿತಿ ದುರ್ಧ್ವನಿಃ. ೩ ಜಯಸ್ಯಲಕ್ಷ್ಮೀರಿತಿ ಧ್ವನಿಃ. ೪ ಅಸುಖಮಿತಿ ದುರ್ಧ್ವನಿಃ. ೫ ಅಭಿಪ್ರಾಯದುಷ್ಟಂ. ೬ ಅಪಜಯಂ. ೭ ನಷ್ಟೋಲ್ಮುಕಸದೃಶಾಃ. ೮ ಕೃತೋದ್ಯೋಗೈಃ.

ತಮ್ಮ ಸೈನ್ಯದ ಉತ್ಸವವುಳ್ಳವೂ ಕೆನ್ನೆಗಳಲ್ಲಿ ಸುರಿಯುವ ಮದಜಲವು ಒಣಗಿಹೋಗಿರುವುದರಿಂದ ದೀನವಾದ ಮುಖದ ಶೋಭೆಯುಳ್ಳವೂ ಬೆಂಕಿಯು ಆರಿಹೋದ ಕೊಳ್ಳಿಗಳಿಗೆ ಸಮಾನಗಳಾದ ಸಮಸ್ತ ಅಸ್ತ್ರಗಳ ಭಾರವನ್ನು ಸಹಿಸದಿರುವುವೂ ಪ್ರಯತ್ನವನ್ನು ಮಾಡಿದವರಾದ ಮಾವಟಿಗರಿಂದ ಬಹಳ ಕಷ್ಟದಿಂದ ಪ್ರೇರಿಸಲ್ಪಟ್ಟುವೂ ಕುಂಠಿತವಾದ ಕಂಠಗರ್ಜನೆಗಳಿಂದ ರೋದನವನ್ನು ಮಾಡುತ್ತವೋ ಎಂಬಂತಿರುವುವೂ ಯುದ್ಧದಿಂದ ಅತ್ಯಂತಭಯಗೊಂಡಿರುವುವೂ ನಷ್ಟವಾದ ವೇಗವುಳ್ಳವೂ ಆದ ಆನೆಗಳು ಅಶುಭಸೂಚಕಗಳಾದ ಬೇರೆ ಚಿಹ್ನೆಗಳಿಂದಲೂ ಸಂಚರಿಸುವ ಬೆಟ್ಟಗಳೋಪಾದಿಯಲ್ಲಿ ನಡೆದುವು.

**ಮಂದಂ ಮಂದಂ ಪ್ರಕೃತ್ಯೈವ ಮಂದಾ ಯುದ್ಧಭಯಾನ್ಮೃಗಾಃ ।**
**ಜಗ್ಮುರ್ನಿರ್ಹೇತುಕಂ ಭದ್ರಾಸ್ತದತ್ರಾಶುಭಸೂಚನಮ್ ॥ ೨೦೪ ॥**

ಸ್ವಭಾವದಿಂದಲೇ ಜಡಮೃಗಗಳಾದ ಭದ್ರಗಜಗಳು ಯುದ್ಧಭಯದಿಂದ ಕಾರಣವಿಲ್ಲದೆ ಅತ್ಯಂತಮಂದವಾಗಿ–ಸಾವಕಾಶವಾಗಿ ನಡೆದುವು. ಅದು ಈ ಅರ್ಕಕೀರ್ತಿಯ ಪಕ್ಷದಲ್ಲಿ ಅಶುಭಸೂಚನೆಯಾಗಿರುತ್ತದೆ.

**ವಿಜಿಗೀಷೋರ್ವಿಪುಣ್ಯಸ್ಯ ವೃಥಾ [೧]ಪ್ರಣಿಧಯೋ ಯಥಾ ।**
**ತಥಾರ್ಕಕೀರ್ತಿ[೨]ಯಂತ್ರೂಣಾಂ [೩]ತೇ ಗಜೇಷು ಸುಯೋಜಿತಾಃ ॥**

ಜಯಿಸಬೇಕೆಂಬ ಇಚ್ಛೆಯುಳ್ಳವನೂ ಪುಣ್ಯಹೀನನೂ ಆದ ಮನುಷ್ಯನ ಅಭಿಲಾಷೆಗಳು ಹೇಗೆ ವ್ಯರ್ಥವಾಗುತ್ತವೋ ಹಾಗೆ ಅರ್ಕಕೀರ್ತಿಯ ಆನೆಗಳನ್ನೇರಿರುವ ಭಟರ ಆ ಅಭಿಲಾಷೆಗಳು ಆನೆಗಳಲ್ಲಿ ಚೆನ್ನಾಗಿ ಅನ್ವಯಿಸಿದುವು. ಜಯಿಸಬೇಕೆಂಬ ಮನೋರಥಗಳು ನಿಷ್ಫಲವಾಗುವುವೆಂಬುದು ಆನೆಗಳಿಂದ ವ್ಯಕ್ತವಾಗುತ್ತಿದ್ದಿತೆಂದು ಭಾವವು.

**ಲಂಘಯನ್ನೇತ್ರಯೋರ್ದೀಪ್ತ್ಯಾ [೪]ಪಾರಿಭದ್ರೋದ್ಗಮಚ್ಛವಿಮ್ ।**
**ಪ್ರಕಟಭ್ರುಕುಟೀಬಂಧಸ್ಸಂಧಾನಿತಶರಾಸನಃ ॥ ೨೦೬ ॥**

**ರಿಪುಂ ಕುಪಿತಭೋಗೀಂದ್ರಸ್ಫುಟಾಟೋಪಭಯಂಕರಃ ।**
**ಕುರ್ವನ್ವಿಲೋಕನಾತಪ್ತತೀವ್ರನಾರಾಚಗೋಚರಮ್ ॥ ೨೦೭ ॥**

**ಗಿರೀಂದ್ರಶಿಖರಾಕಾರಮಾರುಹ್ಯ ಹರಿವಿಕ್ರಮಃ ।**
**ಗಜೇಂದ್ರಂ ವಿಜಯಾರ್ಧಾಖ್ಯಂ ಗರ್ಜನ್ಮೇಘಸ್ವರಸ್ತದಾ ॥ ೨೦೮ ॥**

**ಅನುಕೂಲಾನಿಲೋತ್ಕ್ಷಿಪ್ತಪುರಸ್ಸರ್ಪದ್ಧ್ವಜಾಂಶುಕೈಃ ।**
**[೫]ಕ್ರಾಂತದ್ವಿಪಾರಿವಿಕ್ರಾಂತವಿಖ್ಯಾತಾರೂಢಯೋಧನೈಃ ॥ ೨೦೯ ॥**

**ಪ್ರಸ್ಫುರಚ್ಛಸ್ತ್ರಸಂಘಾತದೀಪ್ತಿದೀಪಿತದಿಙ್ಮುಖೈಃ ।**
**[೬]ಧೂತದುಂದುಭಿನಿಸ್ವಾನಬೃಹದ್ಬೃಂಹಿತಭೀಷಣೈಃ ॥ ೨೧೦ ॥**

**ಘಂಟಾಮಧುರನಿರ್ಘೋಷ[೭]ನಿರ್ಭಿನ್ನಭುವನತ್ರಯೈಃ ।**
**ಸದ್ಯಃ ಸಮುತ್ಸರದ್ದರ್ಪೈರಪಿ ಸಿಂಹಾನ್ ಜಿಗೀಷುಭಿಃ ॥ ೨೧೧ ॥**

**ಪ್ರಾಪದ್ಯುದ್ಧೋತ್ಸುಕಃ ಸಾರ್ಧಂ ಗಜೈರ್ವಿಜಯಸೂಚಿಭಿಃ ।**
**ಕ್ಷಯಕಾಲಾನಿಲೋದ್ಧೂತಸಿಂಧುವೇಲಾಂ ವಿಡಂಬಯನ್ ॥ ೨೧೨ ॥**

ಆಗ ಕಣ್ಣುಗಳ ಕಾಂತಿಯಿಂದ ಮಂದಾರಪುಷ್ಪದ ಕಾಂತಿಯನ್ನು ಮೀರುವವನೂ ಪ್ರಕಟವಾದ ಹುಬ್ಬುಗಳ ಗಂಟುಳ್ಳವನೂ ಧನುಸ್ಸಿನಲ್ಲಿ ಬಾಣಸಂಧಾನವನ್ನು ಮಾಡಿದವನೂ ಕುಪಿತವಾದ ದೊಡ್ಡಹಾವಿನಂತೆ ವ್ಯಕ್ತವಾದ ಕೋಪದಿಂದ ಭಯಂಕರನೂ ನೋಟಗಳೆಂಬ ಚೆನ್ನಾಗಿ ಕಾಯಿಸಲ್ಪಟ್ಟ ತೀಕ್ಷ್ಣವಾದ ಬಾಣಗಳಿಗೆ ವಿಷಯವನ್ನು (ಶತ್ರುವನ್ನು ವಿಷಯನನ್ನಾಗಿ) ಮಾಡುವವನೂ ಸಿಂಹಪರಾಕ್ರಮಿಯೂ ಗರ್ಜಿಸುವವನೂ ಆದ ಮೇಘಸ್ವರ–ಜಯಕುಮಾರನು ವಿಜಯಾರ್ಧವೆಂದು ಹೆಸರುಳ್ಳದೂ ದೊಡ್ಡದಾದ ಪರ್ವತದ ಶಿಖರದಂತೆ ಆಕಾರವುಳ್ಳದೂ ಆದ ಆನೆಯನ್ನು ಹತ್ತಿ ಅನುಕೂಲವಾದ ಗಾಳಿಯಿಂದ ಮೇಲಕ್ಕೆ ಎಸೆಯಲ್ಪಟ್ಟುವೂ ಮುಂದೆ ಹೋಗುತ್ತಿರುವುವೂ ಆದ ಧ್ವಜವಸ್ತ್ರಗಳುಳ್ಳವೂ ಆಕ್ರಮಿಸಿದ ಸಿಂಹದ ಪರಾಕ್ರಮದಿಂದ ಪ್ರಸಿದ್ಧರೂ ಹತ್ತಿರುವವರೂ ಆದ ಮಾವಟಿಗರುಳ್ಳವೂ ಹೊಳೆಯುತ್ತಿರುವ ಶಸ್ತ್ರಗಳ ಸಮೂಹದ ಕಾಂತಿಯಿಂದ ದಿಕ್ಕುಗಳನ್ನು ಪ್ರಕಾಶಿಸುವುವೂ ಹೊಡೆಯಲ್ಪಟ್ಟ ಭೇರಿಯ ಶಬ್ದದಂತೆ ಗಟ್ಟಿಯಾದ ಗರ್ಜನೆಯಿಂದ ಭಯಂಕರಗಳೂ ಘಂಟೆಗಳ ಮಧುರಧ್ವನಿಯಿಂದ ವ್ಯಾಪ್ತವಾದ ಮೂರುಲೋಕಗಳುಳ್ಳವೂ ತತ್ಕ್ಷಣದಲ್ಲಿ ಉಂಟಾದ ಗರ್ವಗಳಿಂದ ಸಿಂಹಗಳನ್ನು ಕೂಡ ಜಯಿಸಲಿಚ್ಛಿಸುವುವೂ ವಿಜಯವನ್ನು ಸೂಚಿಸುವುವೂ ಆದ ಆನೆಗಳೊಡನೆ ಪ್ರಳಯಕಾಲದ ಗಾಳಿಯಿಂದ ಹೊಡೆಯಲ್ಪಟ್ಟ ಸಮುದ್ರದ ಉಬ್ಬರವನ್ನು ಮೀರುವವನೂ ಯುದ್ಧದಲ್ಲಿ ಕುತೂಹಲವುಳ್ಳವನೂ ಆಗಿ ಶತ್ರುಸೈನ್ಯವನ್ನು ಹೊಂದಿದನು.

**ಮಹಾಹಾಸ್ತಿಕವಿಸ್ತಾರಸ್ಥೂಲನೀಲಬಲಾಹಕಃ ।**
**ಸಮಂತಾತ್ಸಂಪತ[೧]ಚ್ಛಂಕುಸಮೂಹಸಹಸಾನಕಃ ॥ ೨೧೩ ॥**

**ಪ್ರೋತ್ಖಾತಾಸಿಲತಾವಿದ್ಯು[೨]ತ್ಸಮುಲ್ಲಾಸಾತಿಭಾಸುರಃ ।**
**ನಾನಾನಕಮಹಾಧ್ವಾನಗಂಭೀರಘನಗರ್ಜಿತಃ ॥ ೨೧೪ ॥**

**ನವಲೋಹಿತಪೂರಾಂಬುನಿರುದ್ಧಧರಣೀತಲಃ ।**
**ನಿತಾಂತನಿಷ್ಠುರಾಪಾತಮುದ್ಗರಾಶನಿಸಂತತಿಃ ॥ ೨೧೫ ॥**

**ಚಲತ್ಸಿತಪತಾಕಾಲಿಬಲಾಕಾಚ್ಛಾದಿತಾಂಬರಃ ।**
**ಸಂಗ್ರಾಮಃ ಪ್ರಾವೃಷೋ ಲಕ್ಷ್ಮೀಮಶೇಷಾಮುಪುಷತ್ತದಾ ॥ ೨೧೬ ॥**

ಆಗ ದೊಡ್ಡ ಆನೆಗಳ ಸಮೂಹವೆಂಬ ವಿಸ್ತಾರವೂ ದಪ್ಪವೂ ಆದ ಕಪ್ಪುಮೋಡವುಳ್ಳದೂ ಎಲ್ಲಾಕಡೆಗಳಿಂದಲೂ ಬೀಳುತ್ತಿರುವ ಶಲ್ಯಾಯುಧಗಳ ಸಮೂಹವೆಂಬ ನವಿಲುಗಳೊಡನೆ ಕೂಡಿರುವುದೂ ಒರೆಗಳಿಂದ ಮೇಲಕ್ಕೆ ತೆಗೆಯಲ್ಪಟ್ಟುವೂ ಬಳ್ಳಿಯಂತಿರುವುವೂ ಆದ ಖಡ್ಗಗಳೆಂಬ ಮಿಂಚಿನ ಹೊಳೆಯುವಿಕೆಯಿಂದ ಅತ್ಯಂತ ಪ್ರಕಾಶಮಾನವೂ ನಾನಾಪ್ರಕಾರವಾದ ಭೇರಿಗಳ ಮಹಾಧ್ವನಿಯೆಂಬ ಗಂಭೀರವಾದ ಮೇಘಗರ್ಜನೆಯುಳ್ಳದೂ ನೂತನವಾದ ರಕ್ತಪ್ರವಾಹವೆಂಬ ನೀರಿನಿಂದ ತಡೆಯಲ್ಪಟ್ಟ–ವ್ಯಾಪ್ತವಾದ ಭೂತಲವುಳ್ಳದೂ ಬಹುಕಠೋರವಾಗಿ ಬೀಳುತ್ತಿರುವ ಮುದ್ಗರಾಯುಧಗಳೆಂಬ ಸಿಡಿಲುಗಳ ಪರಂಪರೆಯುಳ್ಳದೂ ಚಲಿಸುತ್ತಿರುವುವೂ ಶುಭ್ರವೂ ಆದ ಧ್ವಜ–ಪತಾಕೆಗಳ ಸಮೂಹವೆಂಬ ಬೆಳ್ಳಕ್ಕಿಗಳಿಂದ ಮರೆಮಾಡಲ್ಪಟ್ಟ ಆಕಾಶವುಳ್ಳದೂ ಆದ ಯುದ್ಧವು ಸಮಸ್ತವಾದ ವರ್ಷಾಕಾಲದ ಸಂಪತ್ತಿ–ಶೋಭೆಯನ್ನು ಹೆಚ್ಚಿಸಿತು.

**ಸುಚಿರಂ ಸರ್ವಸಂದೋಹಸಂವೃತ್ತಸಮರಾಂಗಣೇ ।**
**ಸೇನಯೋಃ ಸರ್ವಶಸ್ತ್ರಾಣಾಂ [೩]ವ್ಯತ್ಯಯೋ ಬಹುಶೋಭವತ್ ॥**

ಎರಡು ಸೈನ್ಯಗಳಿಗೂ ಬಹುಕಾಲದವರೆಗೆ ಸರ್ವಸಾಮಗ್ರಿಯಿಂದ ನಡೆದ ರಣಾಂಗಣದಲ್ಲಿ ಬಹಳಮಟ್ಟಿಗೆ ಸಮಸ್ತವಾದ ಶಸ್ತ್ರಗಳ ಸಂಪೂರ್ಣತೆ–ನಾಶವು ಆಯಿತು, ಬಹಳ ಶಸ್ತ್ರಗಳು ನಾಶವಾದುವೆಂದು ಭಾವವು.

**ನಿರುದ್ಧಮೂರ್ಧ್ವಂ ಗೃಧ್ರೌಘೈರ್ಮಧ್ಯಮುದ್ಯದ್ಧ್ವಜಾಂಶುಕೈಃ ।**
**ಸೇನಾದ್ವಯವಿನಿರ್ಮುಕ್ತೈಃ ಶಸ್ತ್ರೈರ್ಧಾತ್ರೀ ಚ ಸಾ [೪]ತತಾ ॥ ೨೧೮ ॥**

ಮೇಲ್ಗಡೆಯು ಹದ್ದುಗಳ ಸಮೂಹಗಳಿಂದ ಆವರಿಸಲ್ಪಟ್ಟಿತು, ಮಧ್ಯಭಾಗವು ಮೇಲಕ್ಕೆ ಹಾರಾಡುತ್ತಿರುವ ಧ್ವಜವಸ್ತ್ರಗಳಿಂದ ಆವರಿಸಲ್ಪಟ್ಟಿತು, ಉಭಯ ಸೈನ್ಯಗಳು ಬಿಟ್ಟ ಶಸ್ತ್ರಗಳಿಂದ ಆ ಯುದ್ಧಭೂಮಿಯು ವ್ಯಾಪ್ತವಾಯಿತು.

೧ ವಾಂಛಾಃ. ೨ ಗಜಾರೋಹಕಾಣಾಂ. ೩ ಮನೋರಥಾಃ. ೪ ಮಂದಾರಕುಸುಮಕಾಂತಿಂ. ೫ ಕ್ರಾಂತಸಿಂಹಪರಾಕ್ರಮಪ್ರಸಿದ್ಧಾರೋಹಕಾಧೋರಣೈಃ. ೬ ತಾಡಿತ. ೭ ವ್ಯಾಪ್ತ.

೧ ಶಲ್ಯಾಯುಧ ಸಮೂಹಮಯೂರಃ. ೨ ಸ್ಫುರಣ. ೩ ಸಂಪೂರ್ಣ. ೪ ವ್ಯಾಪ್ತಾ.

**ಜಯಲಕ್ಷ್ಮೀಂ ನವೋಢಾಯಾಃ ಸಪತ್ನೀಮಿಚ್ಛತಾ ನವಾಮ್ ।**
**ತದಾರ್ಕಕೀರ್ತಿಮುದ್ದಿಶ್ಯ ಜಯೇನಾ[೧]ಚೋದ್ಯತ ದ್ವಿಪಃ ॥ ೨೧೯ ॥**

ಹೊಸದಾಗಿ ಪರಿಗ್ರಹಿಸಲ್ಪಟ್ಟವಳಾದ ಸುಲೋಚನೆಗೆ ಜಯಲಕ್ಷ್ಮಿಯನ್ನು ಹೊಸಬಳಾದ ಸವತಿಯನ್ನಾಗಿ ಇಚ್ಛಿಸುವವನಾದ ಜಯಕುಮಾರನು ಆಗ ಅರ್ಕಕೀರ್ತಿಯನ್ನು ಕುರಿತು ಆನೆಯನ್ನು ಪ್ರೇರಿಸಿದನು. ಜಯಾಭಿಲಾಷೆಯಿಂದ ಜಯಕುಮಾರನು ತನ್ನ ಆನೆಯನ್ನು ಅರ್ಕಕೀರ್ತಿಗೆ ಇದಿರಾಗಿ ಪ್ರೇರಿಸಿದನೆಂದು ಭಾವವು.

**ಅಷ್ಟಚಂದ್ರಾಃ [೨]ಪುರೋಭೂಯ [೩]ಭೂಯಃ [೪]ಪ್ರಾಗ್ದೃಷ್ಟಶಕ್ತಯಃ ।**
**[೫]ಕ್ಷಪಕಂ ವಾಂಹಸಾಂ ಭೇದಾಂ ನ್ಯರುಂಧಂ[೬]ಸ್ತಂ [೭]ನಿನಂ ಕ್ಷವಃ॥ ೨೨೦ ॥**

ಪುನಃ ಪುನಃ ಮೊದಲು ಜಯಕುಮಾರನ ಪರಾಕ್ರಮವನ್ನು ನೋಡಿರುವವರಾದ ಅಷ್ಟಚಂದ್ರರು ಮುಂದಾಗಿ, ಕರ್ಮಗಳ ಭೇದಗಳು ನಾಶಹೊಂದಲಿಚ್ಛೆಯುಳ್ಳವಾಗಿ ವಿಶುದ್ಧಭಾವನೆಗಳ ತರಗತಿಯ ರೂಪವಾದ ಕ್ಷಪಕಶ್ರೇಣಿಯವನನ್ನು –ಕರ್ಮ ನಾಶಕನನ್ನು ಆವರಿಸುವಂತೆ, ನಾಶಹೊಂದಲಿಚ್ಛಿಸುವವರಾಗಿ ಆ ಜಯಕುಮಾರ ನನ್ನು ಮುತ್ತಿದರು.

**ಜಯೋಽಪಿ ಸುಚಿರಾತ್ಪ್ರಾಪ್ತಪ್ರತಿಪಕ್ಷೋ ವ್ಯದೀಪ್ಯಲವ್ ।**
**ಲಬ್ಧ್ವೇವ [೮]ರಂಧನಂ ವಹ್ನಿ[೯]ರುತ್ಸಾಹಾಗ್ನಿಸಖೋಚ್ಛ್ರಿತಃ ॥ ೨೨೧ ॥**

ಉತ್ಸಾಹವೆಂಬ ಗಾಳಿಯಿಂದ ಸಮೃದ್ಧಿಯನ್ನು ಹೊಂದಿದವನೂ ಬಹುಕಾಲದ ಮೇಲೆ ಪ್ರತಿಪಕ್ಷವನ್ನು ಹೊಂದಿದವನೂ ಆದ ಜಯಕುಮಾರನೂ, ಕಟ್ಟಿಗೆಯನ್ನು ಹೊಂದಿ ಬೆಂಕಿಯಂತೆ, ಅಧಿಕವಾಗಿ ಪ್ರಕಾಶಿಸಿದನು.

**ತದೋಭಯಬಲಖ್ಯಾತಗಜಾದ್ರಿಶಿಖರಸ್ಥಿತಾಃ ।**
**ಯೋದ್ಧುಮಾರೇಭಿರೇ [೧೦]ರಾಜರಾಜಸಿಂಹಾಃ ಪರಸ್ಪರವ್ ॥ ೨೨೨ ॥**

ಆಗ ಉಭಯಸೈನ್ಯಗಳಲ್ಲಿ ಪ್ರಸಿದ್ಧಗಳಾದ ಆನೆಗಳೆಂಬ ಬೆಟ್ಟಗಳ ಶಿಖರ ಗಳಲ್ಲಿರುವವರಾದ ರಾಜಾಧಿರಾಜರುಗಳಲ್ಲಿ ಶ್ರೇಷ್ಠರು ಒಬ್ಬರಿಗೊಬ್ಬರು ಯುದ್ಧ ಮಾಡುವುದಕ್ಕೆ ಪ್ರಾರಂಭಿಸಿದರು.

**ಅನ್ಯೋನ್ಯರದನೋದ್ಭಿನ್ನೌ ತತ್ರ ಕೌಚಿದ್ವ್ಯಸೂ ಗಜೌ ।**
**ಚಿರಂ ಪರಸ್ಪರಾಧಾರಾವಾಸ್ಥಾತಾಂ ಯಮಲಾದ್ರಿವತ್ ॥ ೨೨೩ ॥**

ಆ ಯುದ್ಧದಲ್ಲಿ ಒಂದಕ್ಕೊಂದು ಹಲ್ಲುಮುರಿದುಕೊಂಡುವೂ ಗತಪ್ರಾಣಗಳೂ ಆದ ಯಾವುವೋ ಎರಡು ಆನೆಗಳು ಒಂದಕ್ಕೊಂದು ಆಧಾರಗಳಾಗಿ ಯಮಕ ಗಿರಿಗಳಂತೆ ಬಹುಕಾಲದವರೆಗೆ ಇದ್ದುವು. ಎರಡು ಪರ್ವತಗಳಂತೆ ಬಿದ್ದಿದ್ದುವೆಂದು ಭಾವವು.

**ಸಮಂತತಃ ಶರೈಶ್ಛನ್ನಾ ರೇಜುರಾಜೌ [೧೧]ಗಜಾಧಿಪಾಃ ।**
**ಕ್ಷುದ್ರವೇಣುಗಣಾಕೀರ್ಣಸಂಚರದ್ಗಿರಿಸನ್ನಿಭಾಃ ॥ ೨೨೪ ॥**

ಯುದ್ಧದಲ್ಲಿ ಎಲ್ಲಾ ಕಡೆಗಳಲ್ಲಿಯೂ ಬಾಣಗಳಿಂದ ವ್ಯಾಪ್ತಗಳಾದ ದೊಡ್ಡ ಆನೆಗಳು ಸಣ್ಣ ಬಿದುರುಗಳ ಸಮೂಹದಿಂದ ವ್ಯಾಪ್ತಗಳೂ ಸಂಚರಿಸುವುವೂ ಆದ ಬೆಟ್ಟಗಳಿಗೆ ಸಮಾನಗಳಾಗಿ ಶೋಭಿಸುತ್ತಿದ್ದುವು.

**ದಾನಿನೋ ಮಾನಿನಸ್ತುಂಗಾಃ [೧೨]ಕಾಮವಂತೋಽಂತಕೋಪಮಾಃ ।**
**ಮಹಾಂತಃ ಸರ್ವಸತ್ತ್ವೇಭ್ಯೋ ನ ಯುದ್ಧ್ಯಂತಾಂ ಕಥಂ ಗಜಾಃ ॥**

ಎಲ್ಲಾ ಪ್ರಾಣಿಗಳಿಗಿಂತ ದೊಡ್ಡವೂ ದಾನಜಲ–ಮದಜಲವುಳ್ಳವೂ ಮಾನ– ಪರಿಮಾಣವುಳ್ಳವೂ ಉನ್ನತಗಳೂ ಸವಾರರಿಗೆ ಅನುಕೂಲಗಳೂ ಯಮನಿಗೆ ಸದೃಶಗಳೂ–ಉಗ್ರಸ್ವರೂಪವುಳ್ಳವೂ ಆದ ಆನೆಗಳು ಹೇಗೆ ಯುದ್ಧಮಾಡಿರು ವುದಿಲ್ಲ ? ಬಹು ತೀವ್ರವಾಗಿ ಯುದ್ಧಮಾಡಿದುವೆಂದು ಭಾವವು.

೧ ಪ್ರೇರಿತಃ. ೨ ಅಗ್ರೇ ಭೂತ್ವಾ. ೩ ಪುನಃಪುನಃ. ೪ ಪೂರ್ವಂ ದೃಷ್ಟಪರಾಕ್ರಮಾಃ. ೫ ಕ್ಷಪಕಶ್ರೇಣ್ಯಾ ರೂಢಂ. ೬ ಜಯಂ. ೭ ನಂಷ್ಟುಮಿಚ್ಛವಃ. ೮ ಇಂಧನಂ. ೯ ಉತ್ಸಾಹವಾಯುನಾ ಸಮೃದ್ಧಃ. ೧೦ ರಾಜರಾಜಮುಖ್ಯಾಃ. ೧೧ ಗಜಶ್ರೇಷ್ಠಾಃ. ೧೨ ಆರೋಹಕಾನುಕೂಲಾ ಇತ್ಯರ್ಥಃ.

**[೧]ಮೃಗೈ[೨]ರ್ಮೃಗೈರಿವಾಪಾತಮಾತ್ರಭಗ್ನೈರ್ಭಯಾದ್ದ್ವಿಪೈಃ ।**
**ಸ್ವಸೈನ್ಯಮೇವ [೩]ಸಂಕ್ಷುಣ್ಣಂ ಧಿಕ್ ಸ್ಥೌಲ್ಯಂ ಭೀತಚೇತಸಾಮ್ ॥ ೨೨೬ ॥**

ಭಯದಿಂದ ಜಿಂಕೆಗಳಿಂದಲೋಪಾದಿಯಲ್ಲಿ ಬೀಳುವಿಕೆಯಿಂದಲೇ ಭೇದಿಸ ಲ್ಪಟ್ಟುವೂ ಮೃಗಜಾತಿಗಳೂ ಆದ ಆನೆಗಳಿಂದ ತಮ್ಮ ಸೈನ್ಯವೇ ಚೆನ್ನಾಗಿ ಪುಡಿ ಯಾಯಿತು, ಭೀತವಾದ ಮನಸ್ಸುಳ್ಳ ಪ್ರಾಣಿಗಳ ಸ್ಥೂಲತ್ವವು–ದಪ್ಪವಾಗಿರು ವಿಕೆಯು ನಿಂದ್ಯವಾದುದು.

**[೪]ನಿಃಶಕ್ತೀನ್ [೫]ಶಕ್ತಿಭಿಃ [೬]ಶಕ್ತಾಃ [೭]ಶಕ್ತಾಂಶ್ಚಕ್ರುರಶಕ್ತಕಾನ್ ।**
**[೮]ಶಕ್ತಿಯುಕ್ತಾ[೯]ನಶಕ್ತಾಂಶ್ಚ ನಿಃಶಕ್ತೀನ್ ಧಿಗ್ಧಿ[೧೦]ಗೂನತಾಮ್ ॥ ೨೨೭ ॥**

ಸಮರ್ಥರಾದವರು ಶಕ್ತ್ಯಾಯುಧಗಳಿಂದ ಶಕ್ತ್ಯಾಯುಧರಹಿತರನ್ನೂ ಸಮರ್ಥ ರನ್ನೂ ಅಸಮರ್ಥರನ್ನಾಗಿ ಮಾಡಿದರು; ಶಕ್ತ್ಯಾಯುಧಸಹಿತರನ್ನೂ ಶಕ್ತ್ಯಾಯುಧ ರಹಿತರನ್ನೂ ಅಸಮರ್ಥರನ್ನಾಗಿ ಮಾಡಿದರು, ಸಾಮಗ್ರಿಯ ನ್ಯೂನತೆಯನ್ನು ಸುಡಬೇಕು–ನಿಂದಿಸಬೇಕು.

**ಶಸ್ತ್ರನಿರ್ಭಿನ್ನಸರ್ವಾಂಗಾ ನಿಮೀಲಿತವಿಲೋಚನಾಃ ।**
**ಸಮ್ಯಕ್ [೧೧]ಸಂಹೃತಸಂರಂಭಾಃ [೧೨]ಸಂಭಾವಿತಪರಾಕ್ರಮಾಃ ॥ ೨೨೮ ॥**

**ಬುದ್ಧ್ಯೈವ [೧೩]ಬದ್ಧಪಲ್ಯಂಕಾಸ್ತ್ಯಕ್ತಸರ್ವಪರಿಚ್ಛದಾಃ ।**
**[೧೪]ಸಮುತ್ಸಾಕ್ಷುರಸೂನ್ ಶೂರಾ ನಿಧಾಯ ಹೃದಯೇಽರ್ಹತಃ ॥ ೨೨೯ ॥**

ಶಸ್ತ್ರಗಳಿಂದ ಭೇದಿಸಲ್ಪಟ್ಟ ಸರ್ವಾಂಗಗಳುಳ್ಳವರೂ ಕಣ್ಣುಗಳನ್ನು ಮುಚ್ಚಿರು ವವರೂ ಚೆನ್ನಾಗಿ ಯುದ್ಧಾರಂಭವನ್ನು ಪರಿತ್ಯಜಿಸಿದವರೂ ಪರಾಕ್ರಮವನ್ನು ತೋರಿಸಿದವರೂ ಬುದ್ಧಿಯಿಂದಲೇ ಪಲ್ಯಂಕಾಸನವನ್ನು ಮಾಡಿರುವವರೂ ಸಮಸ್ತ ಪರಿಗ್ರಹಗಳನ್ನು ತ್ಯಜಿಸಿದವರೂ ಆದ ಶೂರರು ಹೃದಯದಲ್ಲಿ ಅರ್ಹತ್ಪರಮೇಶ್ವರ ರನ್ನು ಇರಿಸಿ ಪ್ರಾಣಗಳನ್ನು ಪರಿತ್ಯಜಿಸಿದರು.

**ಕಸ್ಯಚಿತ್ ಕ್ರೋಧಸಂಹಾರಃ ಸ್ಮೃತಿಶ್ಚ ಪರಮೇಷ್ಠಿನಿ ।**
**[೧೫]ನಿಷ್ಠಾಯಾಮಾಯುಷೋ[೧೬]ತ್ರಾಸೀದಭ್ಯಾಸಾತ್ಕಿಂ ನ [೧೭]ಸಾಧ್ಯತೇ ॥**

ಈ ಯುದ್ಧದಲ್ಲಿ ಆಯುಷ್ಯದ ಪರಿಸಮಾಪ್ತಿಯಾಗುತ್ತಿರಲು ಒಬ್ಬಾನೊಬ್ಬ ವೀರನ ಕೋಪದ ನಾಶವೂ ಅರ್ಹತ್ಪರಮೇಶ್ವರನಲ್ಲಿ ನೆನಹೂ ಆದುವು. ಅಭ್ಯಾಸದಿಂದ ಯಾವುದು ಸಾಧಿಸಲಾಗುವುದಿಲ್ಲ ?

**ಹೃದಿ ನಾರಾಚನಿರ್ಭಿನ್ನಾ ವಕ್ತ್ರಾತ್ಸ್ರವದಸೃಕ್ಪ್ಲವಾಃ ।**
**[೧೮]ಶಿವಾಕೃಷ್ಟಾಂತ್ರತಂತ್ರಾಂಗಾಃ ಪರ್ಯಂತವ್ಯಸ್ತ[೧೯]ಪತ್ಕರಾಃ ॥ ೨೩೧ ॥**

**ಗೃಧ್ರಪಕ್ಷಾನಿಲೋಚ್ಛಿನ್ನಮೂರ್ಛಾಸಂಪ್ರಾಪ್ತಸಂಜ್ಞಕಾಃ ।**
**ಸಮಾಧಾಯ ಹಿತೇ [೨೦]ಶ್ರದ್ಧಾಂ ಧೀರಾಃ [೨೧]ಶೂರಗತಿಂ ಗತಾಃ ॥**

ಹೃದಯದಲ್ಲಿ ಬಾಣದಿಂದ ಸೀಳಲ್ಪಟ್ಟವರೂ ಮುಖದಿಂದ ಸುರಿಯುತ್ತಿರುವ ರಕ್ತದ ಪ್ರವಾಹವುಳ್ಳವರೂ ನರಿಗಳಿಂದ ಎಳೆಯಲ್ಪಟ್ಟ ಕರುಳುಗಳ ಸಮೂಹದ ತುದಿಯುಳ್ಳವರೂ ಸಮೀಪದಲ್ಲಿ ಎಸೆಯಲ್ಪಟ್ಟ ಕಾಲುಕೈಗಳುಳ್ಳವರೂ ಆದ ಧೀರರು ಹದ್ದುಗಳ ರೆಕ್ಕೆಗಳ ಗಾಳಿಯಿಂದ ಮೂರ್ಛೆ ಹೋಗಿ ಚೇತನವನ್ನು ಹೊಂದಿದವರಾಗಿ ಆತ್ಮಹಿತದಲ್ಲಿ ಇಚ್ಛೆಯನ್ನಿಟ್ಟು ವೀರಸ್ವರ್ಗವನ್ನು ಹೊಂದಿದರು.

೧ ಮೃಗಜಾತಿಭಿಃ. ೨ ಹರಿಣೈರಿವ. ೩ ಸಂಚೂರ್ಣಮಭವತ್. ೪ ಶಕ್ತ್ಯಾಯುಧರಹಿತಾನ್. ೫ ಶಕ್ತ್ಯಾಯುಧೈಃ. ೬ ಸಮರ್ಥಾಃ. ೭ ಸಮರ್ಥಾನ್. ೮ ಶಕ್ತ್ಯಾಯುಧಯುಕ್ತಾನ್. ೯ ಶಕ್ತ್ಯಾಯುಧರಹಿತಾನ್. ೧೦ ಸಾಮಗ್ರೀವಿಕಲತಾಂ. ೧೧ ಉತ್ಸೃಷ್ಟಸಮರಾರಂಭಾಃ. ೧೨ ದರ್ಶಿತ. ೧೩ ಪಲ್ಯಂಕಾಸನಾಃ. ೧೪ ತ್ಯಕ್ತವಂತಃ. ೧೫ ಪರಿಸಮಾಪ್ತೌ ಸತ್ಯಾಂ. ೧೬ ರಣೇ. ೧೭ ಜಾಯತೇ ಇತ್ಯಪಿ ಪಾಠಃ. ೧೮ ಜಂಬುಕಾಕೃಷ್ಟಪುರೀತತ್ಸಮೂಹಾಗ್ರಾಃ. ೧೯ ವಿಕ್ಷಿಪ್ತಪಾದಪಾಣಯಃ. ೨೦ ಸ್ಪೃಹಾಂ. ೨೧ ಸ್ವರ್ಗಂ.

**ಛಿನ್ನೈಶ್ಚಕ್ರೇಣ ಶೂರಾಣಾಂ ಶಿರೋಂಭೋಜೈರ್ವಿಕಾಸಿಭಿಃ ।**
**ರಣಾಂಗಣೋರ್ಚಿತೋ ಪಾಭಾತ್ [೧]ನೃತ್ಯೈ [೨]ಜಯಜಯಶ್ರಿಯಃ ॥**

ಚಕ್ರದಿಂದ ಕತ್ತರಿಸಲ್ಪಟ್ಟಿರುವುವೂ ವಿಕಸಿತಗಳೂ ಆದ ಶೂರರ ಶಿರಗಳೆಂಬ ತಾವರೆಗಳಿಂದ ರಣಾಂಗಣವು, ಜಯಕುಮಾರನ ಜಯಲಕ್ಷ್ಮಿಯ ನರ್ತನಕ್ಕೋಸ್ಕರ ಪೂಜಿಸಲ್ಪಟ್ಟಿತೋ ಎಂಬಂತೆ, ಪ್ರಕಾಶಿಸಿತು.

**ಸ್ವಾಮಿಸನ್ಮಾನದಾನಾದಿ[೩]ಮಹೋಪಕೃತಿನಿರ್ಭರಾಃ ।**
**ಪ್ರಾಪ್ಯ[೪]ಧಮರ್ಣತಾಂ ಪ್ರಾಣೈಃ ಸೇವಾಂ ಸಂಪಾದ್ಯ ಸೇವಕಾಃ ॥ ೨೩೪ ॥**

**ಸ್ವಪ್ರಾಣವ್ಯಯಸಂತುಷ್ಟೈ[೫]ಸ್ತದ್ಭೂಭೃದ್ಭಿಃ [೬]ಸ್ವಭೂಭೃತಃ ।**
**ಲಬ್ಧಪೂಜಾನ್ವಿಧಾಯಾನ್ಯೇ ಧನ್ಯಾ ನೈಋರ್ಣ್ಯಮಾಗಮನ್ ॥ ೨೩೫ ॥**

ತಮ್ಮ ಪ್ರಭುಗಳ ಸನ್ಮಾನ ದಾನ ಮೊದಲಾದ ಮಹೋಪಕಾರಾತಿಶಯವುಳ್ಳವರೂ ಧನ್ಯರೂ ಆದ ಬೇರೆ ಕೆಲವರು ಸೇವಕರು ಋಣದ ಭಾವವನ್ನು (ಸಾಲಗಾರರಾಗಿರುವಿಕೆಯನ್ನು) ಹೊಂದಿ ತಮ್ಮ ಪ್ರಾಣಗಳಿಂದ (ಪ್ರಾಣಾರ್ಪಣೆಯಿಂದ) ಸೇವೆಯನ್ನು ಮಾಡಿ ಆ ತಮ್ಮ ಪ್ರಾಣಗಳ ವ್ಯಯ–ನಾಶದಿಂದ ಸಂತುಷ್ಟರಾದ ಶತ್ರುರಾಜರುಗಳಿಂದ ತಮ್ಮ ರಾಜರುಗಳನ್ನು ಪೂಜಾ–ಸತ್ಕಾರಗಳನ್ನು ಹೊಂದಿದವರುಗಳನ್ನಾಗಿ ಮಾಡಿ ಋಣವಿಮುಕ್ತತೆಯನ್ನು ಪಡೆದರು.

**ಜಯಮುಕ್ತಾ ದ್ರುತಂ ಪೇತು[೭]ರವಿಮುಕ್ತಜಯಾಃ ಶರಾಃ ।**
**ಅಷ್ಟಚಂದ್ರಾನ್ಪ್ರತಿ ಪ್ರೋಚ್ಚೈಃ ಪ್ರದೀಪ್ತೋಲ್ಕೋಪಮಾಃ [೮]ಸಮಮ್ ॥**

ಅಷ್ಟಚಂದ್ರರೆಂಬ ವಿದ್ಯಾಧರರನ್ನು ಕುರಿತು ಜಯಕುಮಾರನಿಂದ ಬಿಡಲ್ಪಟ್ಟುವೂ ಜಯವನ್ನು ಬಿಡದಿರುವುವೂ ಆದ ಬಾಣಗಳು ಚೆನ್ನಾಗಿ ಪ್ರಕಾಶಮಾನವಾದ ಉಲ್ಕಾಪಾತಕ್ಕೆ ಸಮಾನಗಳಾಗಿ ವಿಶೇಷವಾಗಿ ಏಕಕಾಲದಲ್ಲಿ ಬಿದ್ದುವು.

**[೯]ಜಯಪ್ರಹಿತಶಸ್ತ್ರಾಲಿ[೧೦]ಸ್ತೈರ್ನಿಷಿದ್ಧಾಸ್ವವಿದ್ಯಯಾ ।**
**ಜ್ವಲಂತೀ ಪರಿತಶ್ಚಂದ್ರಾನ್ ಪರಿವೇಷಾಕೃತಿರ್ಬಭೌ ॥ ೨೩೭ ॥**

ಜಯಕುಮಾರನಿಂದ ಹೊಡೆಯಲ್ಪಟ್ಟ ಶಸ್ತ್ರಗಳ ಸಮೂಹವು ಆ ಶತ್ರುಗಳಿಂದ ತಮ್ಮ ವಿದ್ಯೆಯಿಂದ ತಡೆಯಲ್ಪಟ್ಟುದೂ ಆ ಅಷ್ಟಚಂದ್ರರ ಸುತ್ತಲೂ ಪ್ರಕಾಶಿಸುವುದೂ ಪರಿಧಿಯ ಆಕಾರವುಳ್ಳುದೂ ಆಗಿ ಪ್ರಕಾಶಿಸಿತು.

**ವಿಶ್ವವಿದ್ಯಾಧರಾಧೀಶಮಾದಿರಾಜಾತ್ಮಜಸ್ತದಾ ।**
**ದ್ವಿಷೋ [೧೧]ನಿಃಶೇಷಯಾಶೇಷಾನಿತ್ಯಾಹ ಸುನಮಿಂ ರುಷಾ ॥ ೨೩೮ ॥**

ಆಗ ಭರತೇಶ್ವರನ ಪುತ್ರನಾದ ಅರ್ಕಕೀರ್ತಿಯು ಕೋಪದಿಂದ ಸಮಸ್ತ ವಿಧ್ಯಾಧರಾಧಿಪತಿಯಾದ ಸುನಮಿಯನ್ನು ಕುರಿತು "ಸಮಸ್ತ ಶತ್ರುಗಳನ್ನು ನಾಶಮಾಡು" ಎಂದು ಹೇಳಿದನು.

**ಸೋಽಪಿ ಸರ್ವೈಃ ಖಗೈಃ ಸಾರ್ಧಂ ನಿರ್ಧೂತಾರಾತಿವಿಕ್ರಮಃ ।**
**ವಹ್ನಿವೃಷ್ಟಿಮಿವಾಕಾಶೇ ವವರ್ಷ ಶರಸಂತತಿಮ್ ॥ ೨೩೯ ॥**

ಶತ್ರುಗಳ ಪರಾಕ್ರಮವನ್ನು ನಾಶಮಾಡಿರುವವನಾದ ಆ ಸುನಮಿರಾಜನೂ ಎಲ್ಲಾ ಖೇಚರರೊಡನೆ ಆಕಾಶದಲ್ಲಿ ಬಾಣಗಳ ಪರಂಪರೆಯನ್ನು, ಬೆಂಕಿಯ ಮಳೆಯನ್ನೋಪಾದಿಯಲ್ಲಿ ವರ್ಷಿಸಿದನು–ಸುರಿದನು.

**ಭೀಕರಾಃ [೧೨]ಕಿಂಕರಾಕಾರಾ ರುವಂತೋ ರುದ್ಧದಿಙ್ಮುಖಾಃ ।**
**ಕಾಂಸ್ಕಾನ್ [೧೩]ಶೃಣಾಮ ನೇತೀವ ಸುತೀಕ್ಷ್ಣಾಃ [೧೪]ಶರವೋಽಪತನ್ ॥**

ಭಯಂಕರಗಳೂ ಕಿಂಕರರ ಸ್ವಭಾವವುಳ್ಳುವೂ ದಿಕ್ಕುಗಳನ್ನು ಆವರಿಸಿರುವುವೂ ಹರಿತಗಳೂ ಆದ ಬಾಣಗಳು, "ಯಾರ್ಯಾರನ್ನು ಕೊಲ್ಲಬಾರದು ?" ಎಂಬುದಾಗಿ ಶಬ್ದವನ್ನು ಮಾಡುತ್ತವೋ ಎಂಬಂತೆ, ಬಿದ್ದುವು. ಶತ್ರುಗಳ ಮೇಲೆ ಬಾಣಗಳು ಬಿದ್ದುವೆಂದು ಭಾವವು.

**ಮೇಘಪ್ರಭೋ ಜಯಾದೇಶಾದಿಭೇಂದ್ರಂ ವಾ [೧]ಗಜಾಧಿಪಃ ।**
**ಆಕ್ರಮ್ಯ ವಿಕ್ರಮೀ ಶಸ್ತ್ರೈ[೨]ರರೌತ್ಸೀತ್ತಂ ವಿಹಾಯಸಿ ॥ ೨೪೧ ॥**

ಪರಾಕ್ರಮಿಯಾದ ಮೇಘಪ್ರಭನೆಂಬ ವಿದ್ಯಾಧರನು ಜಯಕುಮಾರನ ಆಜ್ಞೆಯಿಂದ, ದೊಡ್ಡ ಆನೆ–ಸಲಗವು ಮತ್ತೊಂದು ಸಲಗವನ್ನು ಆಕ್ರಮಿಸುವಂತೆ, ಆ ವಿರೋಧಿಸೈನ್ಯವನ್ನು ಆಕ್ರಮಿಸಿ ಶಸ್ತ್ರಗಳಿಂದ ಅದನ್ನು ಆಕಾಶದಲ್ಲಿ ತಡೆದನು.

**ತಮೋಗ್ನಿಗಜಮೇಘಾದಿವಿದ್ಯಾಃ ಸುನಮಿಯೋಜಿತಾಃ ।**
**[೩]ತುಚ್ಛೀಕೃತ್ಯ ಸ ವಿಚ್ಛಿದ್ಯ ಸಹಸಾ ಭಾಸ್ಕರಾದಿಭಿಃ ॥ ೨೪೨ ॥**

**ಜಯಪುಣ್ಯೋದಯಾತ್ಸದ್ಯೋ ವಿಜಿಗ್ಯೇ ಖಚರಾಧಿಪಮ್ ।**
**ಸಂಗ್ರಾಮೇ[೪]ನುಗುಣೇ ದೈವೇ [೫]ಕ್ಷೋದಿಮಾ [೬]ಬಂಹಿಮೇತಿ ನ ॥**

ಆ ಮೇಘಪ್ರಭನು ಸುನಮಿಯಿಂದ ಪ್ರಯೋಗಿಸಲ್ಪಟ್ಟ ತಮಸ್ಸು ಅಗ್ನಿ ಗಜ ಮೇಘವೇ ಮೊದಲಾದ ವಿದ್ಯೆಗಳನ್ನು ಅಸಾರಗಳನ್ನಾಗಿ ಮಾಡಿ ಶೀಘ್ರವಾಗಿ ಸೂರ್ಯ, ಜಲ, ಸಿಂಹ, ವಾಯು ಮೊದಲಾದ ವಿದ್ಯೆಗಳಿಂದ ನಾಶಮಾಡಿ ಜಯಕುಮಾರನ ಪುಣ್ಯೋದಯದಿಂದ ತತ್ಕ್ಷಣದಲ್ಲಿ ಯುದ್ಧದಲ್ಲಿ ಖೇಚರಾಧಿಪತಿಯಾದ ಸುನಮಿಯನ್ನು ಜಯಿಸಿದನು. ಅದೃಷ್ಟವು ಸಹಾಯವಾಗಿರುತ್ತಿರಲು ಕ್ಷುದ್ರತ್ವವೆಂಬುದೂ ಮಹತ್ವವೆಂಬುದೂ ಇಲ್ಲ. ಸಣ್ಣದಾಗಿರುವಿಕೆಯೂ ದೊಡ್ಡದಾಗಿರುವಿಕೆಯೂ ಫಲಕಾರಿಯಾಗುವುದಿಲ್ಲವೆಂದು ಭಾವವು.

**ಪ್ರವೃದ್ಧಪ್ರಾವೃಡಾರಂಭಸಂಭೂತಾಂಭೋಧರಾವಲಿಮ್ ।**
**[೭]ವಿಲಂಘ್ಯಾನೇಕಪಾನೀಕಂ [೮]ಕೌಮಾರಂ [೯]ಜಯಮಾರುಣತ್ ॥ ೨೪೪ ॥**

ಅರ್ಕಕೀರ್ತಿಕುಮಾರನ ಸಂಬಂಧಿಯಾದ ಆನೆಗಳ ಸೈನ್ಯವು ವೃದ್ಧಿಯಾದ ವರ್ಷಾಕಾಲದ ಆರಂಭದಲ್ಲಿ ಉಂಟಾದ ಮೇಘಗಳ ಸಮೂಹವನ್ನು ಮೀರಿ ಅತಿಶಯವಾಗಿ ಜಯಕುಮಾರನನ್ನು ಮುತ್ತಿತು.

**ಜಯೋಽಪ್ಯಭಿಮುಖೀಕೃತ್ಯ ವಿಜಯಾರ್ಧಂ ಗಜಾಧಿಪಮ್ ।**
**[೧೦]ಧೀರೋದ್ಧತಂ ರುಷಾ ಪ್ರಾಪ್ತಂ ಧೀರೋದಾತ್ತೋಽಬ್ರವೀದಿದಮ್ ॥**

ಧೀರೋದಾತ್ತನಾಯಕನಾದ ಜಯಕುಮಾರನೂ ವಿಜಯಾರ್ಧವೆಂಬ ತನ್ನ ದೊಡ್ಡ ಆನೆಯನ್ನು ಇದಿರಾಗಿ ಮಾಡಿ ಕೋಪದಿಂದ ಧೀರೋದ್ಧತನಾಯಕನಾದ ಅರ್ಕಕೀರ್ತಿಯನ್ನು ಕುರಿತು ಈ ಮಾತನ್ನು ಹೇಳಿದನು.

**ನ್ಯಾಯಮಾರ್ಗಾಃ ಪ್ರವರ್ತ್ಯಂತೇ ಸಮ್ಯಕ್ ಸರ್ವೇಽಪಿ ಚಕ್ರಿಣಾ ।**
**ತೇಷಾಮೇಭಿರ್ದುರಾಚಾರೈಃ ಕೃತಸ್ತ್ವಂ [೧೧]ಪಾರಿಪಂಥಿಕಃ ॥ ೨೪೬ ॥**

"ಚಕ್ರವರ್ತಿಯು ಎಲ್ಲಾ ನ್ಯಾಯಮಾರ್ಗಗಳನ್ನೂ ಚೆನ್ನಾಗಿ ನಡೆಯಿಸಿದನು–ಪ್ರಾರಂಭಿಸಿದನು. ಈ ದುರಾಚಾರಗಳಿಂದ ನ್ಯಾಯಮಾರ್ಗಗಳಿಗೆ ನೀನು ವಿರೋಧಿಯಾಗಿ ಮಾಡಲ್ಪಟ್ಟಿರುತ್ತಿ.

**ಬುದ್ಧಿಮಾಂಸ್ತ್ವಂ ತವಾ[೧೨]ಹಾರ್ಯಬುದ್ಧಿತ್ವಮಪಿ ದೂಷಣಮ್ ।**
**ಕುಮಾರ ನೀಯಸೇ [೧೩]ಪಾಪೈ[೧೪]ಸ್ತೃತೀಯಾಂ [೧೫]ಸದ್ವಿಗರ್ಹಿತಮ್ ॥**

೧ ನರ್ತನಾಯ. ೨ ಜಯಕುಮಾರಸ್ಯ ಜಯಲಕ್ಷ್ಮ್ಯಾಃ. ೩ ಮಹೋಪಕಾರಾತಿಶಯಾಃ. ೪ ಋಣಪ್ರಾಪ್ತಿತಾಂ. ೫ ಶತ್ರುನೃಪೈಃ. ೬ ನಿಜನೃಪತೀನ್. ೭ ಅತ್ಯಕ್ತಜಯಾಃ. ೮ ಯುಗಪತ್. ೯ ಜಯೇನಾವಿದ್ಧ. ೧೦ ಶತ್ರುಭಿಃ. ೧೧ ವಿನಾಶಯ. ೧೨ ಕಿಂಕರಸ್ವಭಾವಾಃ. ೧೩ ಹನ್ಮಃ. ೧೪ ಬಾಣಾಃ.

೧ ಅನೇನ ಸಮಬಲತ್ವಂ ಸೂಚಿತಂ, ಮೃಗಾಧಿಪ ಇತ್ಯಪಿ ಪಾಠಃ. ೨ ರುಣದ್ಧಿ ಸ್ಮ. ೩ ಅಸಾರಾಃ ಕೃತ್ವಾ. ೪ ಸಹಾಯೇ ಸತಿ. ೫ ಕ್ಷುದ್ರತ್ವಂ. ೬ ಮಹತ್ತ್ವಂ. ೭ ಅತಿಶಯ್ಯ. ೮ ಅರ್ಕಕೀರ್ತಿಕುಮಾರಸಂಬಂಧಿ. ೯ ಜಯಕುಮಾರಂ. ೧೦ ಅರ್ಕಕೀರ್ತಿಂ. ೧೧ ವಿರೋಧೀಭೂತ್ವಾ. ೧೨ ಪ್ರೇರಕೋಪನೀತಬುದ್ಧಿತ್ವಂ. ೧೩ ಪಾಪಿಷ್ಠೈಃ. ೧೪ ಮೋಹನೀಯಂ ಕಾಮಂ ವಾ. ೧೫ ಸದ್ಭಿರ್ನಿಂದಿತಂ ತದ್ವಿಗರ್ಹಿತಮಿತ್ಯಪಿ ಪಾಠಃ.

ಎಲೈ ಅರ್ಕಕೀರ್ತಿಕುಮಾರನೆ! ನೀನು ಬುದ್ಧಿಯುಳ್ಳವನು. ನಿನಗೆ ಪ್ರೇರಕರಿಂದುಂಟಾದ ಬುದ್ಧಿಯ ಭಾವವಾದರೋ ದೂಷಣವು. ನಿನ್ನನ್ನು ಪಾಪಿಷ್ಠರು ಸತ್ಪುರುಷರಿಂದ ನಿಂದಿತವಾದ ಮೋಹನೀಯಕರ್ಮದಲ್ಲಿ ಅಥವಾ ಕಾಮವಿಕಾರದಲ್ಲಿ–ಪರಸ್ತ್ರೀಹರಣದಲ್ಲಿ ಕರೆದುಕೊಂಡು ಹೋಗುತ್ತಾರೆ.

**ಅಂತಃಕೋಪೋಪ್ಯಯಂ ಪಾಪೈರ್ವರ್ಧಮಾನುತ್ಥಾಪಿತೋ ವೃಥಾ ।**
**ಸರ್ವ[1]ತಂತ್ರಕ್ಷಯೋ ಭರ್ತುಃ ಸಹಸಾ [2]ಯೇನ ತಾದೃಶಃ ॥ ೨೪೮ ॥**

ಯಾವ ಕೋಪದಿಂದ ಶೀಘ್ರವಾಗಿ ಚಕ್ರವರ್ತಿಯ ಸಮಸ್ತಸೈನ್ಯಗಳ ನಾಶವಾಗುವುದೋ ಅಂಥಾ ಈ ಅಂತರಂಗ ಮಹಾಕೋಪವನ್ನೂ ಪಾಪಿಷ್ಠರು ವ್ಯರ್ಥವಾಗಿ ಉಂಟುಮಾಡಿದರು.

**ಆಹವಃ ಪರಿಹಾರ್ಯೋಽಯಂ ಮಮಾದ್ಯ ಭವತಾ ಸಹ ।**
**ಅಕೀರ್ತಿರಾವಯೋಶ್ಚಾಸ್ಮಿನ್ನಾಕಲ್ಪಸ್ಥಾಯಿನೀ ಧ್ರುವಮ್ ॥ ೨೪೯ ॥**

ಈ ದಿವಸ ನನಗೆ ನಿನ್ನೊಡನೆ ಈ ಯುದ್ಧವು ಪರಿಹರಿಸತಕ್ಕುದಾಗಿದೆ. ನಮ್ಮೀರ್ವರಿಗೂ ಈ ಯುದ್ಧದಲ್ಲಿ ಕಲ್ಪಕಾಲದವರೆಗೂ ಇರುವ ಅಪಕೀರ್ತಿಯುಂಟಾಗುವುದು ನಿಶ್ಚಯ.

**ಚಕ್ರೀ ಸುತೇಷು ರಾಜ್ಯಸ್ಯ ಯೋಗ್ಯಂ ತ್ವಾಮೇವ ಮನ್ಯತೇ ।**
**ಸ್ಯಾ[3]ತ್ತಸ್ಯಾಪಿ ಮನಃಪೀಡಾ ತವೇತ್ಯನ್ಯಾಯವರ್ತನಾತ್ ॥ ೨೫೦ ॥**

ಚಕ್ರವರ್ತಿಯು ತನ್ನ ಪುತ್ರರಲ್ಲಿ ರಾಜ್ಯಕ್ಕೆ ನಿನ್ನನ್ನೇ ಯೋಗ್ಯನನ್ನಾಗಿ ತಿಳಿಯುತ್ತಾನೆ. ನಿನ್ನ ಈ ಪ್ರಕಾರವಾದ ಅನ್ಯಾಯವರ್ತನದಿಂದ ಆ ಚಕ್ರವರ್ತಿಗೂ ಮನಃಪೀಡೆಯಾಗುವುದು.

**[4]ದ್ರೋಗ್ಧೄನ್ನ್ಯಾಯಸ್ಯ ಭೂಭರ್ತುಸ್ತವ ಚೈ[5]ತಾಂಸ್ತತಃ ಕ್ಷಣಾತ್ ।**
**ದುಷ್ಟಾನ್ ಸಖಚರಾನ್ ಸರ್ವಾನ್ ಬಧ್ವಾದ್ಯ ಭವತೋಽರ್ಪಯೇ ॥**

ಆದುದರಿಂದ ಕ್ಷಣಕಾಲದಿಂದ ಭರತೇಶ್ವರನ ನ್ಯಾಯವನ್ನು ನಾಶಮಾಡುವವರನ್ನೂ ನಿನ್ನ ಈ ದುರ್ಮರ್ಷಣಾದಿಗಳನ್ನೂ ಖೇಚರಸಹಿತರಾದ ಸಮಸ್ತ ದುಷ್ಟರನ್ನೂ ಬಂಧಿಸಿ ಈ ದಿವಸ ನಿನಗೆ ಅರ್ಪಿಸುತ್ತೇನೆ.

**ನಾಗಮಾರುಹ್ಯ ತಿಷ್ಠ ತ್ವಂ [6]ಕಾಷ್ಠಾಂತಂ ಪ್ರಾರ್ಥಿತೋ ಮಯಾ ।**
**ಅನ್ಯಾಯೋ ಹಿ ಪರಾಭೂತಿರ್ನ [7]ತತ್ತ್ಯಾಗೋ [8]ಮಹೀಯಸಃ ॥**

ನೀನು ಆನೆಯನ್ನೇರಿ ನನ್ನಿಂದ ಪ್ರಾರ್ಥಿಸಲ್ಪಟ್ಟವನಾಗಿ ಒಂದು ಕ್ಷಣಕಾಲದವರೆಗೆ ಇರು. ಮಹಾತ್ಮನಾದವನಿಗೆ ಅನ್ಯಾಯವಲ್ಲವೇ ತಿರಸ್ಕಾರ? ಆ ಅನ್ಯಾಯ ತ್ಯಾಗವು ತಿರಸ್ಕಾರವಲ್ಲ. ಮಹಾತ್ಮನು ಅನ್ಯಾಯಾಚರಣೆಯನ್ನು ತಿರಸ್ಕಾರದಂತೆ ತಿಳಿಯುತ್ತಾನೆಂದು ಭಾವವು.

**ಕುಮಾರ ಸಮರೇ ಹಾನಿಸ್ತವೈವ ಮಹತೀ ಮಯಾ ।**
**ಹಂತ್ಯಾತ್ಮಾನ[9]ಮನುನ್ಮತ್ತಃ ಕಃ ಸ ತೀಕ್ಷ್ಣಾಸಿನಾ ಸ್ವಯಮ್ ॥ ೨೫೩ ॥**

ಅರ್ಕಕೀರ್ತಿ ಕುಮಾರನೇ! ಯುದ್ಧದಲ್ಲಿ ನನ್ನಿಂದ ನಿನಗೇ ಮಹಾಹಾನಿಯುಂಟಾಗುವುದು. ಬುದ್ಧಿಶಾಲಿಯಾದ ಅವನಾವನು ಹರಿತವಾದ ಕತ್ತಿಯಿಂದ ತಾನೇ ತನ್ನನ್ನು ಕೊಲ್ಲುವನು?"

**ಅಭವ್ಯ ಇವ ಸದ್ಧರ್ಮ[10]ಮಪಕರ್ಣ್ಯೇ[11]ತ್ಯುದೀರಿತಮ್ ।**
**ಆಘಾತಯಿತುಮಾರೇಭೇ ಗಜೇನ [12]ಸ ಗಜಾಧಿಪಮ್ ॥ ೨೫೪ ॥**

ಸದ್ಧರ್ಮವನ್ನು ಅಭವ್ಯನು ಕೇಳದಿರುವಂತೆ ಈ ಪ್ರಕಾರವಾಗಿ ಜಯಕುಮಾರನು ಹೇಳಿದ ಮಾತನ್ನು ಕೇಳದೆ ಆ ಅರ್ಕಕೀರ್ತಿಕುಮಾರನು ತನ್ನ ಆನೆಯಿಂದ ಜಯಕುಮಾರನ ದೊಡ್ಡ ಆನೆಯನ್ನು ಹೊಡೆಯಿಸುವುದಕ್ಕೆ ಪ್ರಾರಂಭಿಸಿದನು.

೧ ಸೈನ್ಯ. ೨ ಕೋಪೇನ. ೩ ಚಕ್ರಿಣಃ. ೪ ಹಂತ್ರೄನ್. ೫ ದುರ್ಮರ್ಷಣಾದೀನ್. ೬ ಕ್ಷಣಪರ್ಯಂತಂ. ೭ ಅನ್ಯಾಯತ್ಯಾಗಃ. ೮ ಮಹಾತ್ಮನಃ. ೯ ಬುದ್ಧಿಮಾನ್. ೧೦ ಅನುಪಶ್ರುತ್ಯ. ೧೧ ಏವಮುಕ್ತವಚನಂ. ೧೨ ಅರ್ಕಕೀರ್ತಿಃ.

**ತದಾ ಜಯೋಽಪ್ಯತಿಕ್ರುದ್ಧೋ ಗಜಯುದ್ಧವಿಶಾರದಃ ।**
**ನವಭಿರ್ವಿಜಯಾರ್ಧೇನ [1]ದಂತಪಾತ್ರೈರಪಾತಯತ್ ॥ ೨೫೫ ॥**

ಆಗ ಬಹಳವಾಗಿ ಕೋಪಗೊಂಡವನೂ ಗಜಯುದ್ಧದಲ್ಲಿ ನಿಪುಣನೂ ಆದ ಜಯಕುಮಾರನೂ ತನ್ನ ವಿಜಯಾರ್ಧಗಜದಿಂದ ಹಲ್ಲುಗಳ ಒಂಬತ್ತು ಪೆಟ್ಟುಗಳಿಂದ ಕೆಡಹಿದನು.

**ನವಾಪಿ ಕುಪಿತೇಭೇಂದ್ರನವದಂತಾಹತಿಕ್ಷತಾಃ ।**
**ಅಷ್ಟಚಂದ್ರಾರ್ಕಕೀರ್ತೀನಾಂ ಪ್ರಪೇತುರ್ಹತದಂತಿನಃ ॥ ೨೫೬ ॥**

ಕೋಪಗೊಂಡ ದೊಡ್ಡ ಆನೆಯ ಹಲ್ಲುಗಳ ಒಂಬತ್ತು ಪೆಟ್ಟುಗಳಿಂದ ಗಾಯಗಳನ್ನು ಹೊಂದಿದುವುಗಳಾದ ಅಷ್ಟಚಂದ್ರರ ಮತ್ತು ಅರ್ಕಕೀರ್ತಿಯ ಒಂಬತ್ತು ಹತವಾದ ಆನೆಗಳೂ ಬಿದ್ದುವು.

**ಚಕ್ರಿಸೂನೋಃ ಪುನಃ ಸೇನಾ ಪರಿತೋಽಯಾದ್ಯುಯುತ್ಸಯಾ ।**
**ತದಾ [2]ತದಾಯುರ್ವಾ ರಕ್ಷ[3]ದಹಃ ಕ್ಷಯಮುಪಾದ್ಯತ ॥ ೨೫೭ ॥**

ಚಕ್ರವರ್ತಿಯ ಪುತ್ರನಾದ ಅರ್ಕಕೀರ್ತಿಯ ಸೇನೆಯು ಯುದ್ಧಮಾಡುವುದಕ್ಕೋಸ್ಕರ ಇಚ್ಛೆಯಿಂದ ಸುತ್ತಲೂ ಪುನಃ ಹೋಯಿತು. ಆಗ ಅರ್ಕಕೀರ್ತಿಯ ಆಯುಷ್ಯವನ್ನು ರಕ್ಷಿಸುತ್ತದೋ ಎಂಬಂತೆ ದಿವಸವು ನಾಶವನ್ನು ಹೊಂದಿತು. ಆಗ ಸಾಯಂಕಾಲವಾದುದರಿಂದ ಅರ್ಕಕೀರ್ತಿಯು ಬದುಕಿಕೊಂಡನೆಂದು ಭಾವವು.

**ಸೋಢುಮರ್ಕಃ ಖಲಸ್ತೇಜೋ ಜಯಸ್ಯಾಶಕ್ನುವನ್ನಿವ ।**
**ಜಯನ್ ಜಪೋ[4]ದ್ಗಮಚ್ಛಾಯಾಂ ಸಂಹೃತಾಶೇಷದೀಧಿತಿಃ ॥ ೨೫೮ ॥**

**ಶರ್ಧೈರಿವೋ[5]ಸ್ರೈರಾರಕ್ತೈರ್ವಿಮುಕ್ತೈಃ ಖಚರಾನ್ ಪ್ರತಿ ।**
**[6]ಜಯೀಯೈಃ ಸ್ವಾಂಗಸಂಲಗ್ನೈಃ ಕ್ಷರತ್ಕ್ಷತಜರಂಜಿತೈಃ ॥ ೨೫೯ ॥**

**ಗತಪ್ರತಾಪಃ [7]ಕೃಚ್ಛ್ರಾತ್ಮಾ ಸರ್ವನೇತ್ರಾಪ್ರಿಯಸ್ತದಾ ।**
**ಪಪಾತ ಕಾತರೀಭೂಯ ಕರಾಲಂಬಿತ[8]ಭೂಧರಃ ॥ ೨೬೦ ॥**

ದುಷ್ಟನಾದ ಸೂರ್ಯನು ಜಯಕುಮಾರನ ತೇಜಸ್ಸನ್ನು ಸಹಿಸುವುದಕ್ಕೆ ಅಸಮರ್ಥನಾಗಿರುವವನಂತೆ ದಾಸವಾಳದ ಹೂವಿನ ಕಾಂತಿಯನ್ನು ಜಯಿಸುವವನೂ ಸಮಸ್ತಕಿರಣಗಳನ್ನು ಸಂಕೋಚಮಾಡಿಕೊಂಡಿರುವವನೂ ಖೇಚರರನ್ನು ಕುರಿತು ಬಿಡಲ್ಪಟ್ಟವೂ ಜಯಕುಮಾರನ ಸಂಬಂಧಿಗಳೂ ತಮ್ಮ ಶರೀರದಲ್ಲಿ ಸಂಬಂಧಿಸಿದುವೂ ಸುರಿಯುತ್ತಿರುವ ರಕ್ತದಿಂದ ಕೆಂಪಾಗಿರುವುವೂ ಆದ ಬಾಣಗಳಿಂದಲೋಪಾದಿಯಲ್ಲಿ ಬಿಡಲ್ಪಟ್ಟವೂ ಚೆನ್ನಾಗಿ ಕೆಂಪಾಗಿರುವುವೂ ಆದ ಕಿರಣಗಳಿಂದ ಪ್ರತಾಪರಹಿತನೂ ದುಃಖವನ್ನುಂಟುಮಾಡುವ ಸ್ವಭಾವವುಳ್ಳವನೂ ಸಮಸ್ತಜನರ ಕಣ್ಣುಗಳಿಗೆ ಅಪ್ರಿಯನೂ ಆಗ ವ್ಯಾಕುಲಗೊಂಡು ಕರ(ಕಿರಣ)ಗಳಿಂದ ಅಸ್ತಪರ್ವತವನ್ನು ಆಶ್ರಯಿಸಿದವನೂ ಆಗಿ ಬಿದ್ದನು. ಆಗ ಸೂರ್ಯನು ಅಸ್ತಂಗತನಾದನೆಂದೂ ಅರ್ಕಕೀರ್ತಿಯು ಬಿದ್ದುಹೋದನೆಂದೂ ಭಾವವು.

**ಅರ್ಕಕೀರ್ತಿಂ [9]ಸ್ವಕೀರ್ತಿಂ ವಾ ಮತ್ವಾ[10]ತೋಷೇಣ ಭಾಸ್ಕರಃ ।**
**ಅಸ್ತಂ [11]ಜಯಜಯಸ್ಯಾಯಾತ್ಕುರ್ವನ್ನಾಲ ವಿಲಂಬನಮ್ ॥ ೨೬೧ ॥**

ಸೂರ್ಯನು ಅರ್ಕಕೀರ್ತಿಯನ್ನು ತನ್ನ ಹೆಸರು (ಅರ್ಕ–ಸೂರ್ಯ) ಉಳ್ಳವನನ್ನಾಗಿ ತಿಳಿದೋ ಎಂಬಂತೆ ವಿಷಾದದಿಂದ ಜಯಕುಮಾರನ ಜಯಕ್ಕೆ ಕಾಲವಿಳಂಬವನ್ನು ಮಾಡುವವನಾಗಿ ಅಸ್ತವನ್ನು ಹೊಂದಿದನು. ಸೂರ್ಯನು ಅಸ್ತಂಗತನಾದುದರಿಂದ ಜಯಕುಮಾರನ ಜಯಕ್ಕೆ ಸಾವಕಾಶವಾಯಿತೆಂದು ಭಾವವು.

೧ ದಂತಘಾತೈರಘಾತಯದಿತ್ಯಪಿ ಪಾಠಃ. ೨ ಅರ್ಕಕೀರ್ತ್ಯಾಯು. ೩ ದಿವಸಕ್ಷಯಂ. ೪ ಪುಷ್ಪಕಾಂತಿಂ. ೫ ಕಿರಣೈಃ. ೬ ಜಯಕುಮಾರಸಂಬಂಧಿಭಿಃ. ೭ ದುಃಖಕಾರಿಸ್ವಭಾವಃ. ೮ ಅಸ್ತಾಚಲಃ. ೯ ಸ್ವನಾಮಧೇಯಂ. ೧೦ ಪೀಡಯಾ. ೧೧ ಜಯಕುಮಾರಜಯಸ್ಯ.

[೧]ಸ್ಫುಟಾಲೋಕೋಽಪಿ ಸದ್ವೃತ್ತೋಽಪ್ಯಗಾದಸ್ತಮಹರ್ಪತಿಃ ।
ಆಶ್ರಿತ್ಯ ವಾರುಣೀಂ ರಕ್ತಃ ಕೋ ನ ಗಚ್ಛತ್ಯಧೋಗತಿಮ್ ॥ ೨೬೨ ॥

ವ್ಯಕ್ತವಾದ ಪ್ರಕಾಶವುಳ್ಳವನಾದರೂ ವರ್ತುಲಾಕಾರನಾಗಿರುವವನಾದರೂ ದಿನಾಧಿಪತಿ–ಸೂರ್ಯನು ಪಶ್ಚಿಮದಿಕ್ಕನ್ನು ಸೇರಿ ಅಸ್ತವನ್ನು ಹೊಂದಿದನು. ಅನುರಾಗವುಳ್ಳವನು ಯಾವನು ಅಧೋಗತಿಯನ್ನು ಹೊಂದುವುದಿಲ್ಲ? ಸ್ಫುಟವಾದ ನೋಟವುಳ್ಳವನಾದರೂ ಸದಾಚಾರವುಳ್ಳವನಾದರೂ ಮದ್ಯವನ್ನು ಸೇವಿಸಿ ಯಾವನು ತಾನೇ ಅಧೋಗತಿಯನ್ನು ಹೊಂದುವುದಿಲ್ಲ? (ಎರಡನೆಯ ಅರ್ಥವು ಶ್ಲೇಷೆಯಿಂದ ತೋರುವ ಧ್ವನಿ).

ಉದಯೇ ವರ್ಧಿತಚ್ಛಾಯೋ ವ್ಯಾಪ್ಯ ವಿಶ್ವಂ ಪ್ರತಾಪವಾನ್ ।
ದಿನೇನೇನೋ[೨]ಽಪ್ಯನಶ್ಯತ್ಕಸ್ತಿಷ್ಠೇತ್ತೀವ್ರಕರಃ ಪರಃ ॥ ೨೬೩ ॥

ಉದಯದಲ್ಲಿ ವೃದ್ಧಿಮಾಡಲ್ಪಟ್ಟ ನೆರಳುಳ್ಳವನೂ ಪ್ರತಾಪವುಳ್ಳವನೂ ಆದ ಸೂರ್ಯನೂ ದಿವಸದಿಂದ ಲೋಕವನ್ನು ವ್ಯಾಪಿಸಿ ಅದೃಶ್ಯನಾದನು. ತೀಕ್ಷ್ಣವಾದ ಕಿರಣವುಳ್ಳ ಬೇರೆ ಯಾವನು ನಿಲ್ಲುವನು? (ಲಂಚದಲ್ಲಿ ಆಳಿಕೆಯನ್ನು ಬೆಳೆಸಿದವನೂ ಪ್ರತಾಪವುಳ್ಳವನೂ ಆದ ಪ್ರಭುವೂ ಲೋಕವನ್ನುವ್ಯಾಪಿಸಿ ಹೆಚ್ಚು ಕಂದಾಯವನ್ನು ವಿಧಿಸಿ ನಾಶವಾದನು. (ಇದು ಶ್ಲೇಷೆಯಿಂದ ತೋರುವ ಧ್ವನಿ).

ಇನಂ ಸ್ವಚ್ಛಾನಿ ವಿಚ್ಛಾಯಂ ತಾಪಹಾರೀಣಿ ವಾ ಭೃಶಮ್ ।
ದ್ರಷ್ಟುಂ ಸರಾಂಸ್ಯ[೩]ನಿಚ್ಛಂತಿ [೪]ಕಂಜಾಕ್ಷೀಣಿ ಶುಚಾ [೫]ವ್ಯಧುಃ ॥ ೨೬೪ ॥

ಸ್ವಚ್ಛಗಳೂ ಅಧಿಕವಾಗಿ ತಾಪವನ್ನು ನಾಶಮಾಡುವುವೂ ಆದ ಸರೋವರಗಳು ಕಾಂತಿಹೀನನಾದ ಸೂರ್ಯನನ್ನು ದುಃಖದಿಂದ ನೋಡುವುದಕ್ಕೆ ಇಚ್ಛಿಸದಿರುವುವುಗಳಂತಿರುವ ಕಮಲಗಳೆಂಬ ಕಣ್ಣುಗಳನ್ನು ಧರಿಸಿದುವು. ಸೂರ್ಯನು ಅಸ್ತಂಗತನಾದ ಬಳಿಕ ಸರೋವರಗಳ ಕಮಲಗಳು ಮುಚ್ಚಿದುವೆಂದು ಭಾವವು. (ಸಜ್ಜನರು ಕಾಂತಿಹೀನನಾದ ಪ್ರಭುವನ್ನು ದುಃಖದಿಂದ ನೋಡಲಿಚ್ಛಿಸುವುದಿಲ್ಲವೆಂದು ಧ್ವನಿತವಾಗುವುದು).

[೬]ಜಯನಿಸ್ತ್ರಿಂಶನಿಸ್ತ್ರಿಂಶನಿಪಾತಪತಿತಾನ್ ಖಗಾನ್ ।
ಪ್ರಾವಿಶನ್ನಿಜನೀಡಾನಿ ವೀಕ್ಷಿತುಂ ವಾಕ್ಷಮಾಃ ಖಗಾಃ ॥ ೨೬೫ ॥

ಪಕ್ಷಿಗಳು ಜಯಕುಮಾರನ ಹರಿತವಾದ ಅಸ್ತ್ರಗಳ ಪೆಟ್ಟಿನಿಂದ ಬಿದ್ದುಹೋದ ಖೇಚರರನ್ನು ನೋಡುವುದಕ್ಕೆ ಅಸಮರ್ಥಗಳಾದುವೋ ಎಂಬಂತೆ ತಮ್ಮ ಗೂಡುಗಳನ್ನು ಪ್ರವೇಶಿಸಿದುವು.

ಸ ಪ್ರತಾಪಃ ಪ್ರಭಾ ಸಾಸ್ಯ ಸಾ ಹಿ ಸರ್ವೈಕಪೂಜ್ಯತಾ ।
ಪಾತಃ ಪ್ರತ್ಯಹಮರ್ಕಸ್ಯಾಪ್ಯತರ್ಕ್ಯಃ ಕರ್ಕಶೋ ವಿಧಿಃ ॥ ೨೬೬ ॥

ಈ ಸೂರ್ಯನ ಆ ಪ್ರತಾಪ, ಆ ಪ್ರಭೆ, ಸ್ಫುಟವಾಗಿ ಸರ್ವರಿಗೂ ಮುಖ್ಯವಾದ ಆ ಪೂಜ್ಯತೆ. ಈ ಸೂರ್ಯನಿಗೂ ಪ್ರತಿದಿನವೂ ಊಹಿಸಲಾಗದ ಪತನ. ದೈವವು ಕ್ರೂರವಾದುದು. ಬಲಶಾಲಿಯಾದ ಮನುಷ್ಯನಿಗೂ ದುರ್ದೈವದಿಂದ ಅರ್ಕಕೀರ್ತಿಗಾದಂತೆ ಪತನವಾಗುವುದೆಂದು ಸೂಚಿತವಾಗುವುದು.

ಕೀರ್ತ್ಯೋಪಮಾನತಾಂ ಯಾತೋ ಯಾತೋಽರ್ಕಶ್ಚೇದದೃಶ್ಯತಾಮ್ ।
[೭]ಉಪಮೇಯಸ್ಯ ಕಾ ವಾರ್ತೇತ್ಯವಾದೀದ್ವಿದುಷಾಂ ಗಣಃ ॥ ೨೬೭ ॥

"ಕೀರ್ತಿಗುಣದಿಂದ ಉಪಮಾನತ್ವವನ್ನು ಹೊಂದಿದವನಾದ ಸೂರ್ಯನೂ ಈ ಪ್ರಕಾರವಾದ ಪರಿಸ್ಥಿತಿಯನ್ನು ಹೊಂದಿದನಾದರೆ ಉಪಮೇಯನಾದ ಅರ್ಕಕೀರ್ತಿಯ ವಾರ್ತೆಯನ್ನು ಹೇಳುವುದೇನು?" ಎಂದು ವಿದ್ವಾಂಸರ ಸಮೂಹವು ಮಾತನಾಡಿತು.

೧ ವ್ಯಕ್ತೋದ್ಯೋತಃ. ೨ ಅದೃಶ್ಯೋಽಭೂತ್. ೩ ಅನಿಚ್ಛೂನಿ. ೪ ಪದ್ಮನೇತ್ರಾಣಿ. ೫ ದಧತಿ ಸ್ಮ. ೬ ಜಯಕುಮಾರಸ್ಯ ನಿಶಿತಾಸ್ತ್ರಘಾತೇನ ಪತಿತಾನ್. ೭ ಅರ್ಕಕೀರ್ತೇಃ.

ದುರ್ನಿರೀಕ್ಷ್ಯಃ ಕರೈಸ್ತೀಕ್ಷ್ಣೈಃ ಸಂತಪ್ತನಿಜಮಂಡಲಃ ।
ಅಲಂ ಕುವಲಯಧ್ವಂಸೀ [೧]ದುಸ್ಸುತೋ ದುರ್ಮತಿಸ್ತುತಃ ॥ ೨೬೮ ॥

ನಿಸ್ಸಹಾಯೋ ನಿರಾಲಂಬೋ [೨]ವ್ಯಸೋಢಾ [೩]ಪರತೇಜಸಾಮ್ ।
[೪]ಸಿಂಹರಾಶಿಶ್ಚಲಃ ಕ್ರೂರಃ ಸಹಸೋ[೫]ಚ್ಚೈತ್ಯ [೬]ಮೂರ್ಧಗಃ ॥ ೨೬೯ ॥

[೭]ಪಾಪರೋಗೀ [೮]ಪರಪ್ರೇರ್ಯೋ ರವಿರ್ವಿಷಮಮಾರ್ಗಗಃ ।
[೯]ರಕ್ತರುಕ್ [೧೦]ಸಕಲದ್ವೇಷೀ [೧೧]ವರ್ಧಿತಾಶೋ[೧೨]ಕ್ರಮಾಗ್ರಗಃ ॥ ೨೭೦ ॥

[೧೩]ಸತಾ [೧೪]ಬುಧೇನ ಮಿತ್ರೇಣ [೧೫]ಗುರುಣಾಪ್ಯಸ್ತಮಾಶ್ರಯತ್ ।
[೧೬]ಬಹುದೋಷೋ ಭಿಷಗ್ವರ್ಯೈರ್ದುಶ್ಚಿಕಿತ್ಸ್ಯ ಇವಾತುರಃ ॥ ೨೭೧ ॥

ಕಷ್ಟದಿಂದ ನೋಡಲ್ಪಡುವುದಕ್ಕೆ ಯೋಗ್ಯನೂ ತೀಕ್ಷ್ಣವಾದ ಕಿರಣಗಳಿಂದ (ಕಂದಾಯಗಳಿಂದ) ಚೆನ್ನಾಗಿ ಕಾಯಿಸಲ್ಪಟ್ಟ ತನ್ನ ಮಂಡಲವುಳ್ಳವನೂ (ಪೀಡಿಸಲ್ಪಟ್ಟ ತನ್ನ ದೇಶವುಳ್ಳವನೂ) ಅಧಿಕವಾಗಿ ನೈದಿಲೆಯನ್ನು (ಭೂಮಂಡಲವನ್ನು) ನಾಶಮಾಡುವವನೂ ದುಷ್ಟಪುತ್ರ–ಶನಿಯುಳ್ಳವನೂ (ತಾಯಿಗೆ ಕಷ್ಟಕರವಾದ ಉತ್ಪತ್ತಿಯುಳ್ಳವನೂ) ಮಿಥ್ಯಾದೃಷ್ಟಿಗಳಿಂದ, ದುಷ್ಟಬುದ್ಧಿಯುಳ್ಳವರಿಂದ ಹೊಗಳಲ್ಪಟ್ಟವನೂ ಸಹಾಯವಿಲ್ಲದವನೂ ಆಶ್ರಯವಿಲ್ಲದವನೂ ದೀಪವೇ ಮೊದಲಾದುವುಗಳ (ಶತ್ರುಗಳ) ತೇಜಸ್ಸುಗಳನ್ನು ಸಹಿಸದಿರುವವನೂ ಸಿಂಹರಾಶಿಯುಳ್ಳವನೂ ಚಂಚಲನೂ ಕ್ರೂರನೂ ಶೀಘ್ರವಾಗಿ ಮೇಲೆ ಹೋಗಿ (ವೃದ್ಧಿಯನ್ನುಹೊಂದಿ) ತಲೆಯ ಮೇಲೆ ಹೋಗುವವನೂ ಕುಷ್ಠರೋಗವುಳ್ಳವನೂ ಅರುಣನಿಂದ, ಸಾರಥಿಯಿಂದ ಪ್ರೇರಿಸಲ್ಪಡತಕ್ಕವನೂ ವಕ್ರವಾದ ದಾರಿಯಲ್ಲಿ ಹೋಗುವವನೂ ರಕ್ತಕಿರಣ(ರಕ್ತರೋಗ)ವುಳ್ಳವನೂ ಚಂದ್ರನ (ಸಮಸ್ತ ಜನರ) ದ್ವೇಷಿಯೂ ವೃದ್ಧಿಮಾಡಲ್ಪಟ್ಟ ದಿಕ್ಕುಗಳುಳ್ಳವನೂ (ಅಭಿಲಾಷೆಯುಳ್ಳವನೂ) ಮುಂದೆ ನಡೆಯುವ ಅರುಣನುಳ್ಳವನೂ (ಕ್ರಮವಿಲ್ಲದವರಲ್ಲಿ ಮುಂದಾಳೂವೂ) ನಕ್ಷತ್ರದೊಡನೆಯೂ (ಸತ್ಪುರುಷನೊಡನೆಯೂ) ಬುಧಗ್ರಹದೊಡನೆಯೂ (ವಿದ್ವಾಂಸನೊಡನೆಯೂ) ಮಿತ್ರನಾದ ಬೃಹಸ್ಪತಿಯೊಡನೆಯೂ (ಉಪದೇಶಕನೊಡನೆಯೂ) ಇದ್ದರೂ ನಿಬಿಡವಾದ ರಾತ್ರಿಯುಳ್ಳವನೂ (ವಾತಾದಿದೋಷಗಳುಳ್ಳವನೂ) ಆದ ಸೂರ್ಯನು, ವೈದ್ಯಶ್ರೇಷ್ಠರಿಂದ ಕಷ್ಟದಿಂದ ಚಿಕಿತ್ಸೆಮಾಡಲ್ಪಡತಕ್ಕವನಾದ ರೋಗಿಯಂತೆ, ಅಸ್ತವನ್ನು ಹೊಂದಿದನು. (ಮೇಲಿನ ವಾಕ್ಯಗಳಲ್ಲಿ ಎರಡನೆಯ ಅರ್ಥವು ರೋಗಿಗೆ ಅನ್ವಯಿಸುವುದೆಂದು ತಿಳಿಯಬೇಕು).

ತದಾ ಬಲದ್ವಯಾಮಾತ್ಯಾಃ ಶ್ರಿತ್ವಾ ಬದ್ಧರುಷೌ ನೃಪೌ ।
ಇತ್ಯಧರ್ಮಂ ನಿಶಾಯುದ್ಧ[೧೭]ಮನುಬಧ್ಯ ನ್ಯಷೇಧಯನ್ ॥ ೨೭೨ ॥

ಆಗ ಕ್ರೋಧಿತರಾದ ಜಯಕುಮಾರ ಅರ್ಕಕೀರ್ತಿ–ರಾಜರುಗಳನ್ನು ಹೊಂದಿ ರಾತ್ರಿಯುದ್ಧವು ಅಧರ್ಮವೆಂದು ನಿರ್ಬಂಧವನ್ನು ಮಾಡಿ ಎರಡು ಸೈನ್ಯಗಳ ಮಂತ್ರಿಗಳು ತಡೆದರು.

ತಾಭ್ಯಾಂ ತತ್ರೈವ ಸಾ ರಾತ್ರಿರ್ನೇತುಮಿಷ್ಟಾ ರಣಾಂಗಣೇ ।
ಭಟತೀವ್ರವ್ರಣಾಸಹ್ಯವೇದನಾರಾವಭೀಷಣೇ ॥ ೨೭೩ ॥

ಆ ಜಯಕುಮಾರ ಅರ್ಕಕೀರ್ತಿಕುಮಾರರು ಆ ರಾತ್ರಿಯನ್ನು ಭಟರುಗಳ ತೀವ್ರವಾದ ಗಾಯಗಳ ಸಹಿಸಲಾಗದ ವೇದನೆಯ ಶಬ್ದದಿಂದ ಭಯಂಕರವಾದ ಆ

೧ ಕಷ್ಟೋತ್ಪತ್ತಿಃ ದುಷ್ಪುತ್ರಶ್ಚ. ೨ ಅಸಹಮಾನಃ. ೩ ಪ್ರದೀಪಾನಾಂ ಶತ್ರೂಣಾಂ ಚ ತೇಜಸಾಂ. ೪ ಸಿಂಹರಾಶಿಸ್ಥಿತಃ. ೫ ಊರ್ಧ್ವಗೋ ಭೂತ್ವಾ. ೬ ಶಿರಸಾಗಚ್ಛನ್. ೭ ಕುಷ್ಠರೋಗೀ. ೮ ಸಾರಥಿನಾ ಪ್ರೇರ್ಯಃ. ೯ ರಕ್ತಕಿರಣಃ, ರಕ್ತರೋಗೀ ಚ. ೧೦ ಚಂದ್ರದ್ವೇಷೀ ಸಕಲಜನದ್ವೇಷೀ ಚ. ೧೧ ವರ್ಧಿತದಿಕ್ ವರ್ಧಿತಾಭಿಲಾಷಶ್ಚ. ೧೨ ಅನೂರ್ವಗ್ರಗಾಮೀ ಅಕ್ರಮಾಗ್ರಗಾಮೀ ಚ. ೧೩ ನಕ್ಷತ್ರೇಣ, ಉತ್ಕೃಷ್ಟೇನ ಚ. ೧೪ ಸೋಮಸುತೇನ ವಿದುಷಾ ಚ. ೧೫ ಬೃಹಸ್ಪತಿನಾ, ಉಪದೇಶಕೇನ ಚ. ೧೬ ಪ್ರಚುರರಾತ್ರಿಃ, ವಾತಾದಿದೋಷವಾಂಶ್ಚ. ೧೭ ನಿರ್ಬಂಧಂ ಕೃತ್ವಾ.

ರಣಾಂಗಣದಲ್ಲೇ ಕಳೆಯುವುದಕ್ಕೆ ಇಷ್ಟಪಟ್ಟರು. ಆ ದಿವಸ ರಾತ್ರಿ ರಣಾಂಗಣದಲ್ಲೇ ಇರುವುದಕ್ಕೆ ಇಚ್ಛೆಪಟ್ಟರೆಂದು ಭಾವವು.

**ಪ್ರತೀಚೀ [೧]ಯೇನ [೨]ಜಾಯೇ[೩]ಹಮುಗಿಲತ್ತಮಹಸ್ಕರಮ್ ।**
**ಇತಿ ಸಂಧ್ಯಾಛಲೇನಾ[೪]ಹ[೫]ಸ್ತತ್ರ ಕೋಪಮಿವಾಗತಮ್ ॥ ೨೭೪ ॥**

''ಯಾವನಿಂದ ನಾನು(ದಿವಸವು)ಪ್ರಾದುರ್ಭವಿಸುತ್ತೇನೋ ಅಂಥ ಅಹಸ್ಕರ–ಸೂರ್ಯನನ್ನು ಪಶ್ಚಿಮದಿಕ್ಕು ನುಂಗಿತು'' ಈ ಪ್ರಕಾರವಾಗಿ ದಿವಸವು (ಹಗಲು) ಆ ಪಶ್ಚಿಮದಿಕ್ಕಿನಲ್ಲಿ ಕೋಪವನ್ನು ಹೊಂದಿರುವಂತಿದ್ದಿತು.

**ಲಜ್ಜೇ ಸಂಪರ್ಕಮರ್ಕೇಣ ಕರ್ತುಂ [೬]ಲೋಚನಗೋಚರೇ ।**
**ಇಯಂ ವೇಲೇತಿ ವಾ ಸಂಧ್ಯಾಪ್ಯನ್ವಗಾದಾತ್ತವಿಗ್ರಹಾ ॥ ೨೭೫ ॥**

''ಕಣ್ಣಿಗೆ ಕಾಣುವ ಪ್ರದೇಶದಲ್ಲಿ ಸೂರ್ಯನೊಡನೆ ಸಂಪರ್ಕವನ್ನು ಮಾಡುವುದಕ್ಕೋಸ್ಕರ ನಾಚಿಕೆಪಡುತ್ತೇನೆ. ಇದು ಸಮಯವಾಗಿರುತ್ತದೆ'' ಎಂಬುದಾಗಿ ಸಂಧ್ಯೆಯೂ ಶರೀರವನ್ನು ಸ್ವೀಕರಿಸಿ ಸೂರ್ಯನನ್ನು ಹಿಂಬಾಲಿಸಿ ಹೋದಂತಿದ್ದಿತು. ಸಂಧ್ಯಾಕಾಲವೂ ಕಳೆಯಿತೆಂದು ಭಾವವು.

**ಆಯಾದಹಃ ಪುರಸ್ಕೃತ್ಯ ಮಾಮರ್ಕೋ ರಾತ್ರಿಗಾಮಿನಾ ।**
**ತೇನ ಪಶ್ಚಾತ್ಕೃತೇತೀವ ಶೋಕಾತ್ಸಂಧ್ಯಾ ವ್ಯಲೀಯತ ॥ ೨೭೬ ॥**

''ಸೂರ್ಯನು ದಿವಸವನ್ನು ಮುಂದೆಮಾಡಿಕೊಂಡು ನನ್ನನ್ನು ಕುರಿತು ಬಂದನು. ರಾತ್ರಿಯನ್ನು ಹೊಂದುತ್ತಿರುವ ಆ ಸೂರ್ಯನಿಂದ ನಾನು ಹಿಂದೆ ಮಾಡಲ್ಪಟ್ಟೆನು'' ಎಂಬುದಾಗಿ ಸಂಧ್ಯೆಯು ಶೋಕದಿಂದಲೋ ಎಂಬಂತೆ ನಾಶವನ್ನು ಹೊಂದಿತು.

**ತಮಃ ಸರ್ವಂ ತದಾ ವ್ಯಾಪತ್ಕ್ವಚಿಲ್ಲೀನಂ ಗುಹಾದಿಷು ।**
**ಶತ್ರುಶೇಷಂ ನ ಕುರ್ವಂತಿ ತತ ಏವ ವಿಚಕ್ಷಣಾಃ ॥ ೨೭೭ ॥**

ಕೆಲವು ಕಡೆಗಳಲ್ಲಿ ಗುಹೆ ಮೊದಲಾದುವುಗಳಲ್ಲಿ ಅಡಗಿಕೊಂಡಿದ್ದ ಕತ್ತಲೆಯು ಆಗ ಎಲ್ಲವನ್ನೂ ವ್ಯಾಪಿಸಿತು. ಆದುದರಿಂದಲೇ ವಿದ್ವಾಂಸರು ಶತ್ರುಶೇಷವನ್ನು ಮಾಡುವುದಿಲ್ಲ–ಶತ್ರುಗಳನ್ನು ಉಳಿಸುವುದಿಲ್ಲ.

**ಅವಕಾಶಂ ಪ್ರಕಾಶಸ್ಯ ಯಥಾತ್ಮಾನಮಧಾತ್ಪುರಾ ।**
**ತಥೈವ ತಮಸಃ ಪಶ್ಚಾದ್ಧಿಙ್ಮಹತ್ತ್ವಂ ವಿಹಾಯಸಃ ॥ ೨೭೮ ॥**

ಆಕಾಶವು ಹೇಗೆ ಮೊದಲು ತನ್ನನ್ನು ಪ್ರಕಾಶಕ್ಕೆ ಅವಕಾಶವನ್ನಾಗಿ ಧರಿಸಿತೋ–ಮಾಡಿತೋ ಹಾಗೆಯೇ ಬಳಿಕ ಕತ್ತಲೆಗೆ ತನ್ನನ್ನು ಅವಕಾಶವನ್ನಾಗಿ ಮಾಡಿತು. ಆಕಾಶದ ಮಹತ್ತ್ವವು–ದೊಡ್ಡಸ್ತಿಕೆಯು ನಿಂದ್ಯವಾದುದು. ಸಜ್ಜನನಿಗೆ ಅವಕಾಶವನ್ನು ಕೊಡುವಂತೆ ದುರ್ಜನನಿಗೆ ಕೊಡುವುದು ನಿಂದ್ಯವಾದುದೆಂದು ಸೂಚಿತವಾಗುವುದು.

**ತಮೋಬಲಾತ್ಪದೀಪಾದಿಪ್ರಕಾಶಾಃ ಪ್ರದಿದೀಪಿರೇ ।**
**ಜಿನೇನೇವ ವಿನೇನೇನ ಕಲೌ ಕಷ್ಟಂ ಕುಲಿಂಗಿನಃ ॥ ೨೭೯ ॥**

ಕಲಿಯುಗದಲ್ಲಿ ಜಿನನಿಲ್ಲದೆ ಅಜ್ಞಾನಬಲದಿಂದ ಕುಲಿಂಗಿಗಳು–ಮಿಥ್ಯಾಮತೀಯರು ಪ್ರಕಾಶಿಸುವಂತೆ ಸೂರ್ಯನಿಲ್ಲದೆ ಕತ್ತಲೆಯ ಪ್ರಾಬಲ್ಯದಿಂದ ದೀಪವೇ ಮೊದಲಾದುವುಗಳ ಪ್ರಕಾಶಗಳು ಪ್ರಕಾಶಿಸಿದುವು. ಕಷ್ಟ !

**ತಮೋವಿಮೋಹಿತಂ ವಿಶ್ವಂ ಪ್ರಬೋಧಯಿತುಮುದ್ಧೃತಃ ।**
**ವಿಧಿನೇವ ಸುಧಾಕುಂಭೋ ದೌರ್ವಣೋ ವಿಧುರುದ್ಯಯೌ ॥ ೨೮೦ ॥**

ಕತ್ತಲೆಯಿಂದ(ಅಜ್ಞಾನದಿಂದ) ಮೋಹಗೊಳಿಸಲ್ಪಟ್ಟ ಲೋಕವನ್ನು ಎಚ್ಚರಿಸುವುದಕ್ಕೋಸ್ಕರ ಬ್ರಹ್ಮನಿಂದ ಎತ್ತಲ್ಪಟ್ಟ ಅಮೃತದ ಕುಂಭವೋ ಎಂಬಂತೆ ಬೆಳ್ಳಿಯ ಬಣ್ಣವುಳ್ಳವನಾದ ಚಂದ್ರನು ಉದಯಿಸಿದನು.

**ಚಂದ್ರಮಾಃ ಕರನಾಲೀಭಿರಪಿಬದ್ಬಹುಲಂ ತಮಃ ।**
**ವೃದ್ಧಕಾಸಂ [೧]ಕ್ಷಯಂ [೨]ಹಂತುಂ ಧೂಮಪಾನಮಿವಾಚರನ್ ॥ ೨೮೧ ॥**

ಚಂದ್ರನು ಹೆಚ್ಚಾಗಿ ಕೆಮ್ಮುಳ್ಳುದಾದ ಕ್ಷಯರೋಗವನ್ನು ಬಿಡುವುದಕ್ಕೋಸ್ಕರ ಧೂಮಪಾನವನ್ನು(ಬತ್ತಿಯ ಸೇದುವಿಕೆಯನ್ನು) ಆಚರಿಸುತ್ತಾನೋ ಎನ್ನುವಂತೆ ಕಿರಣಗಳೆಂಬ ಕೊಳವೆಗಳಿಂದ ಬಹಳವಾದ ಕತ್ತಲೆಯನ್ನು ಪಾನಮಾಡಿದನು. ಚಂದ್ರೋದಯದಿಂದ ಕತ್ತಲೆಯು ದೂರವಾಯಿತೆಂದು ಭಾವವು.

**ನಿಃಶೇಷಂ ನಾಶಕದ್ಧಂತುಂ ಧ್ವಾಂತಂ ಹರಿಣಲಾಂಛನಃ ।**
**[೩]ಅಶುದ್ಧಮಂಡಲೋ ಹನ್ಯಾನ್ನಿಷ್ಟತಾಪಃ ಕಥಂ ರಿಪೂನ್ ॥ ೨೮೨ ॥**

ಹರಿಣಲಾಂಛನನಾದ ಚಂದ್ರನು ಸಮಸ್ತವಾದ ಕತ್ತಲೆಯನ್ನು ನಾಶಮಾಡುವುದಕ್ಕೆ ಸಮರ್ಥನಾಗಲಿಲ್ಲ. ಕಲಂಕಯುಕ್ತವಾದ ಮಂಡಲ(ದೇಹ)ವುಳ್ಳವನೂ (ಶತ್ರುಸಹಿತವಾದ ದೇಶವುಳ್ಳವನೂ) ಪ್ರತಾಪವಿಲ್ಲದಿರುವವನೂ ಶತ್ರುಗಳನ್ನು ಹೇಗೆ ಕೊಲ್ಲುವನು ?

**ವಿಧುಂ ತತ್ಕರಸಂಸ್ಪರ್ಶಾದ್ವ್ಯಶಮಾಸನ್ವಿಕಾಸಿಭಿಃ ।**
**ಸರಸ್ಯೋ ಹ್ಲಾದಯಂತ್ಯೋ ವಾ ಮುದಾ ಕುಮುದಲೋಚನೈಃ ॥**

ಚಂದ್ರನ ಕಿರಣ(ಹಸ್ತ)ಗಳ ಸ್ಪರ್ಶದಿಂದ ಅರಳಿದ ಕುಮುದಪುಷ್ಪಗಳೆಂಬ ಕಣ್ಣುಗಳಿಂದ ಸರೋವರಗಳು ಚಂದ್ರನನ್ನು ಸಂತೋಷದಿಂದ ಆನಂದಗೊಳಿಸುತ್ತವೋ ಎಂಬಂತೆ ಚೆನ್ನಾಗಿದ್ದುವು.

**ಉತ್ಥಿತಃ [೪]ಪಿಟಕೋಸ್ಮಾಕಂ ವಿಧುರ್ಗಂಡಸ್ಯ ವೋಪರಿ ।**
**ಕಾ ಜೀವಿಕೇತಿ ನಿರ್ವಿಣ್ಣಾಃ ಪ್ರಾಯಃ ಪ್ರೋಷಿತಯೋಷಿತಃ ॥ ೨೮೪ ॥**

''ನಮಗೆ ಗಂಡಮಾಲೆಯ ಮೇಲೆ ಬೊಕ್ಕೆ(ಬೊಬ್ಬೆ )ಯಂತೆ, ಚಂದ್ರನು ಉದಯಿಸಿದನು. ಏನು ಗತಿ ?'' ಎಂಬುದಾಗಿ ವಿರಹವತಿಯರಾದ ಹೆಂಗಸರು ಹೆಚ್ಚಾಗಿ ಖೇದಗೊಂಡರು.

**ಲಬ್ಧಚಂದ್ರಬಲಸ್ಯೋಚ್ಚೈಃ ಸ್ಮರಸ್ಯ ಪರಿತೋಷಿಣಃ ।**
**ಅಟ್ಟಹಾಸ ಇವಾಶೇಷಂ ಸಾಂದ್ರಶ್ಚಂದ್ರಾತಪೋ[೫]ತತ ॥ ೨೮೫ ॥**

ಚಂದ್ರನ ಬಲವನ್ನು ಹೊಂದಿದವನೂ ಅಧಿಕವಾಗಿ ಸಂತೋಷಗೊಂಡಿರುವವನೂ ಆದ ಮನ್ಮಥನ ಅಟ್ಟಹಾಸವೋ ಎನ್ನುವಂತೆ ನಿಬಿಡವಾದ ಬೆಳದಿಂಗಳು ಎಲ್ಲವನ್ನೂ ವ್ಯಾಪಿಸಿತು.

**ರೂಢೋ ರಾಗಾಂಕುರಶ್ಚಿತ್ತೇ ಪ್ರಮ್ಲಾನೋ ಭಾನುಭಾನುಭಿಃ ।**
**ತದಾ ಚಂದ್ರಿಕಯಾ ಪ್ರಾಚ್ಯವೃಷ್ಟ್ಯೇವಾವರ್ಧತಾಂಗಿನಾಮ್ ॥ ೨೮೬ ॥**

ಪ್ರಾಣಿಗಳ ಮನಸ್ಸಿನಲ್ಲಿ ಉತ್ಪನ್ನವಾದ ರಾಗ–ಪ್ರೀತಿಯೆಂಬ ಅಂಕುರವು ಸೂರ್ಯಕಿರಣಗಳಿಂದ ಅಧಿಕವಾಗಿ ಬಾಡಿಹೋಗಿದ್ದಿತು, ಆಗ ಬೆಳದಿಂಗಳಿನಿಂದ, ಮುಂಗಾರುಮಳೆಯಿಂದಲೋಪಾದಿಯಲ್ಲಿ, ಆ ಅಂಕುರವು ಬೆಳೆಯಿತು.

**[೬]ಖಂಡಿತಾನಾಂ ತಥಾ ತಾಪೋ ನಾಭೂದ್ಭಾಸ್ಕರರಶ್ಮಿಭಿಃ ।**
**ಯಥಾಂಶುಭಿಸ್ತುಷಾರಾಂಶೋರ್ವಿಚಿತ್ರಾ ದ್ರವ್ಯಶಕ್ತಯಃ ॥ ೨೮೭ ॥**

೧ ಅಹಸ್ಕರೇಣ. ೨ ಪ್ರಾದುರ್ಭವಾಮಿ. ೩ ದಿವಸಃ. ೪ ದಿವಸಃ. ೫ ಪ್ರತೀಚ್ಯಾಂ. ೬ ದೃಷ್ಟಿಗೋಚರಪ್ರದೇಶೇ.

೧ ಕ್ಷಯವ್ಯಾಧಿಂ. ೨ ಹಾತುಮಿತ್ಯಪಿ ಪಾಠಃ. ೩ ಕಲಂಕಯುತಮಂಡಲಃ, ಶತ್ರುಸಹಿತದೇಶಶ್ಚ. ೪ ಸ್ಫೋಟಕಃ. ೫ ವ್ಯಾಪ್ನೋತಿ ಸ್ಮ. ೬ ವಿರಹಿಣೀನಾಂ.

ವಿರಹವತಿಯರಾದ ಸ್ತ್ರೀಯರಿಗೆ ಚಂದ್ರನ ಕಿರಣಗಳಿಂದ ಹೇಗೆ ತಾಪವಾಯಿತೋ ಹಾಗೆ ಸೂರ್ಯಕಿರಣಗಳಿಂದ ತಾಪವಾಗಲಿಲ್ಲ. ದ್ರವ್ಯದ ಶಕ್ತಿಗಳು ವಿಚಿತ್ರ ವಾದುವುಗಳು.

**[1]ಖಂಡನಾದೇವ [2]ಕಾಂತಾನಾಂ ಜ್ವಲಿತೋ ಮದನಾನಲಃ ।**
**ಜಾಜ್ವಲೀತ್ಯಯಮೇತೇನೇತ್ಯತ್ಯಜನ್ಮಧು ಕಾಶ್ಚನ ॥ ೨೮೮ ॥**

ಪುರುಷರ ವಿಯೋಗದಿಂದಲೇ ಕಾಮಾಗ್ನಿಯು ಪ್ರಜ್ವಲಿತವಾಯಿತು. ಈ ಮಧುವಿನಿಂದ ಮಾಗ್ನಿಯು ಜ್ವಲಿಸುತ್ತದೆಂಬುದಾಗಿ ಕೆಲವು ಹೆಂಗಸರು ಮಧು–ಪುಷ್ಪರಸವನ್ನು ತ್ಯಜಿಸಿದರು.

**ವೃಥಾಭಿಮಾನವಿಧ್ವಂಸಿ ನಾಪರಂ ಮಧುನಾ ವಿನಾ ।**
**[3]ಕಲಹಾಂತರಿತಾಃ ಕಾಶ್ಚಿತ್ಸಖೀಭಿರಿತಿ ಪಾಯಿತಾಃ ॥ ೨೮೯ ॥**

ಮಧುವಲ್ಲದೆ ವ್ಯರ್ಥವಾದ ಅಭಿಮಾನವನ್ನು ನಾಶಮಾಡುವ ವಸ್ತುವು ಮತ್ತೊಂದಿಲ್ಲವೆಂದು ಪತಿಯೊಡನೆ ಕಲಹದಿಂದ ಮರೆಯಾಗಿದ್ದ ಕೆಲವು ಹೆಂಗಸರು ಸಖಿಯರಿಂದ ಮಧುಪಾನಮಾಡಿಸಲ್ಪಟ್ಟರು.

**ಪ್ರೇಮ ನಃ ಕೃತ್ರಿಮಂ ನೈತತ್ಕಿಮನೇನೇತಿ ಕಾಶ್ಚನ ।**
**ದೂರಾದೇವಾತ್ಯಜನ್ ಸ್ನಿಗ್ಧಾಃ ಶ್ರಾವಿಕಾ [4]ವಾಸವಾದಿಕಮ್ ॥ ೨೯೦ ॥**

"ನಮ್ಮಗಳ ಈ ಪ್ರೇಮವು ಕೃತ್ರಿಮವಾದುದಲ್ಲ. ಈ ಮಧುವಿನಿಂದೇನು ?" ಎಂಬುದಾಗಿ ಕೆಲವು ಸ್ನೇಹವುಳ್ಳವರಾದ ಶ್ರಾವಕಿಯರು ಮದ್ಯವೇ ಮೊದಲಾದು ದನ್ನು ದೂರದಿಂದಲೇ ಪರಿತ್ಯಜಿಸಿದರು.

**ಮಧು ದ್ವಿಗುಣಿತಸ್ವಾದು ಪೀತಂ ಕಾಂತಕರಾರ್ಪಿತಮ್ ।**
**ಕಾಂತಾಭಿಃ [5]ಕಾಮದುರ್ವಾರಮಾತಂಗಮದವರ್ಧನಮ್ ॥ ೨೯೧ ॥**

ಕಾಮನೆಂಬ ಕಷ್ಟದಿಂದ ತಡೆಯಲ್ಪಡತಕ್ಕುದಾದ ಆನೆಯ ಮದವನ್ನು ಹೆಚ್ಚಿಸುವುದೂ ಪತಿಯ ಕೈಯಿಂದ ಕೊಡಲ್ಪಟ್ಟುದೂ ಆದ ಮಧುವು ಪತ್ನಿಯರಿಂದ ದ್ವಿಗುಣಿತವಾದ ರುಚಿಯುಳ್ಳುದಾಗಿ ಪಾನಮಾಡಲ್ಪಟ್ಟಿತು.

**ಇತ್ಯಾವಿರ್ಭಾವಿತಾನಂಗರಸಾಸ್ತಾಃ ಪ್ರಿಯಸಂಗಮಾತ್ ।**
**ಪ್ರೀತಿಂ ವಾಗ್ಗೋಚರಾತೀತಾಂ ಸ್ವೀಚಕ್ರು[6]ರ್ವಕ್ರವೀಕ್ಷಣಾಃ ॥ ೨೯೨ ॥**

ಈ ಪ್ರಕಾರವಾಗಿ ಹೊರಗೆಡಹಿದ ಭೋಗೇಚ್ಛೆಯುಳ್ಳವರಾದ ಆ ವಾಮ ಲೋಚನೆಯರು ಪ್ರಾಣಕಾಂತನ ಸಂಗಮದಿಂದ ಮಾತಿನಿಂದ ಹೇಳಲಾಗದ ಪ್ರೀತಿ ಯನ್ನು ಸ್ವೀಕರಿಸಿದರು.

**ತತ್ರ ಕಾಚಿತ್ಪ್ರಿಯಂ ವೀಕ್ಷ್ಯ [7]ಕಥಾಶೇಷಂ ದ್ವಿಷಚ್ಛರೈಃ ।**
**ಸ್ವಯಂ ಕಾಮಶರೈರಕ್ಷತಾಂಗೀ ಚಿತ್ರಮಭೂದ್ವ್ಯಸುಃ ॥ ೨೯೩ ॥**

ಆ ಹೆಂಗಸರಲ್ಲಿ ಒಬ್ಬಾಳೊಬ್ಬಳು ಶತ್ರುಬಾಣಗಳಿಂದ ವಾರ್ತೆಯಿಂದಲೇ ಉಳಿದಿರುವವನಾದ( ನಾಮಾವಶಿಷ್ಟನಾದ) ಪತಿಯನ್ನು ನೋಡಿ ತಾನು ಕಾಮ ಬಾಣಗಳಿಂದ ಗಾಯಮಾಡಲ್ಪಡದಿರುವ ದೇಹವುಳ್ಳವಳಾಗಿಯೇ ಪ್ರಾಣರಹಿತಳಾಗಿ ಆದಳು. ಆಶ್ಚರ್ಯ ! ಪತಿವಿಯೋಗದುಃಖದಿಂದ ಸತ್ತುಹೋದಳೆಂದು ಭಾವವು.

**[8]ಕ್ಷತೈರನುಪಲಕ್ಷ್ಯಾಂಗಂ ವೀಕ್ಷ್ಯ ಕಾಂತಮಜಾನತೀ ।**
**ಪರಾ [9]ಪರಾಸುತಾಂ ಪ್ರಾಪತ್ ಜ್ಞಾತ್ವಾ[10]ತ್ಮವಿಹಿತವ್ರಣೈಃ ॥ ೨೯೪ ॥**

ಗಾಯಗಳಿಂದ ಕಾಣಲ್ಪಡದಿರುವ ದೇಹವುಳ್ಳವನಾದ ಪತಿಯನ್ನು ನೋಡಿ ತಿಳಿವಳಿಕೆಯಿಲ್ಲದ ಮತ್ತೋರ್ವಳು ತನ್ನ ಉಗುರುಗಳಿಂದಲೂ ಹಲ್ಲುಗಳಿಂದಲೂ

೧ ವಿಯೋಗಾತ್. ೨ ಪುಂಸಾಂ. ೩ ಕಲಹೇನ ಅಂತರ್ಧಾನಯುಕ್ತಾಃ. ೪ ಮದ್ಯಾದಿಕಂ. ೫ ಕಾಮದುಷ್ಪೂರ ಇತ್ಯಪಿ ಪಾಠಃ. ೬ ವಾಮಲೋಚನಾಃ. ೭ ವಾರ್ತಯೈವಾವಶಿಷ್ಟಂ. ೮ ವ್ರಣೈಃ. ೯ ಮರಣಂ. ೧೦ ಆತ್ಮನಾ ನಖದಂತಕೃತವ್ರಣೈಃ.

ಮಾಡಲ್ಪಟ್ಟ ಗಾಯಗಳಿಂದ ಹಾಗಾಗಿರುವನೆಂದು ತಿಳಿದು ಮರಣವನ್ನು ಹೊಂದಿದಳು.

**ಮಯಾ ನಿವಾರಿತೋ[1]ಪ್ಯಾಯಾ ವೀರಲಕ್ಷ್ಮೀಪ್ರಿಯಃ ಪ್ರಿಯ ।**
**ತತ್ಕಠೋರವ್ರಣೈರೇವಂ ಜಾತೋಸೀತ್ಯಮೃತಾಪರಾ ॥ ೨೯೫ ॥**

"ಎಲೈ ಪ್ರಿಯನೆ !ನನ್ನಿಂದ ತಡೆಯಲ್ಪಟ್ಟವನಾದರೂ ವೀರಲಕ್ಷ್ಮಿಯ ಪ್ರಿಯನಾಗಿ ಆದೆ(ಮೃತನಾದೆ). ಆದುದರಿಂದ ಆಕೆಯ ತೀಕ್ಷ್ಣವಾದ ಗಾಯಗಳಿಂದ ಹೀಗಾದೆ" ಎಂಬುದಾಗಿ ಹೇಳಿ ಮತ್ತೋರ್ವಳು ಮೃತಳಾದಳು.

**ಮಾಂ ನಿವಾರ್ಯ ಸಹಾಯಾಂತೀಂ ಕೀರ್ತಿಂ ಸ್ವೀಕರ್ತುಮಾಗಮಃ ।**
**ನಿರ್ಮಲೇತಿ [2]ವಿಪರ್ಯಸ್ತೋ ಜಾನನ್ನಪಿ ಬಹಿಶ್ಚರೀಮ್ ॥ ೨೯೬ ॥**

**ಸ್ಥಿತಾ [3]ತೇತ್ರೈವ ಸಾ ಕೀರ್ತಿಃ ಕಿಂ ವದಂತಿ [4]ನರೋಂತರಮ್ ।**
**ಇತಿ ಸಾಸೂಯಮುಕ್ತ್ವಾನ್ಯಾ ಪ್ರಾಯಾಸೀತ್ಪ್ರಿಯಪದ್ಧತಿಮ್ ॥ ೨೯೭ ॥**

"ಜತೆಯಲ್ಲಿ ಬರುತ್ತಿರುವವಳಾದ ನನ್ನನ್ನು ತಡೆದು, ಕೀರ್ತಿಯು ಹೊರಗೆ ಸಂಚರಿಸುವವಳೆಂದು ತಿಳಿದವನಾದರೂ ನಿರ್ಮಲಳೆಂದು ವಂಚಿತನಾಗಿ ಆ ಕೀರ್ತಿಯನ್ನು ಸ್ವೀಕರಿಸುವುದಕ್ಕೆ ಬಂದಿರುತ್ತಿ. ನಿನ್ನ ಆ ಕೀರ್ತಿಯು ಇಲ್ಲೇ ಇದ್ದು ಬಿಟ್ಟಳು. ಮನುಷ್ಯರು ಮನೋಗತವನ್ನು ಹೇಳುತ್ತಾರೆಯೋ ?" ಈ ಪ್ರಕಾರವಾಗಿ ಅಸೂಯೆಯೊಡನೆ ಕೂಡಿರುವಂತೆ ಹೇಳಿ ಮತ್ತೋರ್ವಳು ವಲ್ಲಭನ ಮಾರ್ಗವನ್ನು ಕುರಿತು ಹೋದಳು(ಸತ್ತಳು).

**ನ ಕಿಂ ನು ವಾರಿತಾಪ್ಯಾ[5]ಯಾಂ ತ್ವಯಾ ಸಾರ್ಧಂ [6]ವಿಚೇತನಾ ।**
**ಸನ್ನಿಧೌ ಮೇ ಕಿಮೇವಂ ತ್ವಾಂ ನಯಂತಿ [7]ಗಣಿಕಾಧಮಾಃ ॥ ೨೯೮ ॥**

**ಅಸ್ತು ಕಿಂ [8]ಯಾತಮದ್ಯಾಪಿ [9]ತತ್ರ ತ್ವಾಂ ನ [10]ಹರಾಣಿ ಕಿಮ್ ।**
**ವಿಲಪ್ಯೈವಂ ಕಲಾಲಾಪಾ ಕಾಚಿತ್ಕಾಂತಾನುಗಾಭವತ್ ॥ ೨೯೯ ॥**

"ದೀನಳಾದ ನಾನು ನಿನ್ನಿಂದ ತಡೆಯಲ್ಪಟ್ಟವಳಾದರೂ ನಿನ್ನೊಡನೆ ಬರ ಲಿಲ್ಲವೇನು ? ನನ್ನ ಬಳಿಯಲ್ಲಿ ಸಾಧಾರಣವಾದ ದೇವಸ್ತ್ರೀಯರು ಹೀಗೆ ನಿನ್ನನ್ನು ಒಯ್ಯುತ್ತಾರೆಯೇ ? ಗಮನವು ಆಗಲಿ. ಈಗಲೂ ಆ ಸ್ವರ್ಗದಲ್ಲೇನು ನಾನು ನಿನ್ನನ್ನು ಸ್ವೀಕರಿಸಲಿಲ್ಲವೇನು ?" ಈ ಪ್ರಕಾರವಾಗಿ ಮಧುರಭಾಷಣವುಳ್ಳವಳಾದ ಒಬ್ಬಾಳೊಬ್ಬ ಸ್ತ್ರೀಯು ಅತ್ತು ಪತಿಯನ್ನು ಹಿಂಬಾಲಿಸಿದವಳಾದಳು. ಪತಿಯ ಮರಣದಿಂದ ದುಃಖಿತಳಾಗಿ ಪತ್ನಿಯು ಮರಣವನ್ನೈದಿದಳೆಂದು ಭಾವವು.

**ಶರನಿರ್ಭಿನ್ನಸರ್ವಾಂಗಃ ಕೀಲಿತಾಸುರಿವಾಪರಃ ।**
**[11]ಕಾಂತಾಗಮಂ [12]ಪ್ರತೀಕ್ಷ್ಯಾ[13]ಸ್ತ ಲೋಚನಸ್ಥಿತಜೀವಿತಃ ॥ ೩೦೦ ॥**

ಬಾಣಗಳಿಂದ ಭೇದಿಸಲ್ಪಟ್ಟ ಸರ್ವಾವಯವಗಳುಳ್ಳವನೂ ಬೆಣೆ ಹಾಕಲ್ಪಟ್ಟ ಪ್ರಾಣಗಳುಳ್ಳಂತಿರುವವನೂ ಆದ ಮತ್ತೋರ್ವ ವೀರನು ಕಣ್ಣುಗಳಲ್ಲಿ ಪ್ರಾಣ ವುಳ್ಳವನಾಗಿ ಪತ್ನಿಯ ಬರುವಿಕೆಯನ್ನು ಹಾರೈಸಿದ್ದನು.

**ಕೋಪದಷ್ಟವಿಮುಕ್ತೋಷ್ಠಂ ಕಾಂತಮಾಲೋಕ್ಯ ಕಾಮಿನೀ ।**
**ವೀರಲಕ್ಷ್ಮ್ಯಾಂ ಕೃತಾಸೂಯಾ ಕ್ಷಣಕೋಪಾಸುಮತ್ಯಜತ್ ॥ ೩೦೧ ॥**

ಕೋಪದಿಂದ ಕಚ್ಚಿ ಬಿಡಲ್ಪಟ್ಟ ತುಟಿಯುಳ್ಳವನಾದ ಪತಿಯನ್ನು ನೋಡಿ ಕಾಮುಕಳಾದ ಸ್ತ್ರೀಯು ವೀರಲಕ್ಷ್ಮಿಯಲ್ಲಿ ಅಸೂಯೆಯನ್ನು ಮಾಡಿದವಳಾ ಗಿಯೂ ಕ್ಷಣಕಾಲದವರೆಗೆ ಕೋಪವುಳ್ಳವಳಾಗಿಯೂ ಪ್ರಾಣವನ್ನು ಬಿಟ್ಟಳು.

**ಹೃದಿ ನಿರ್ಭಿನ್ನನಾರಾಚೋ ಮತ್ವಾ ಕಾಂತಾಂ ಹೃದಿ ಸ್ಥಿತಾಮ್ ।**
**ಹಾ ಮೃತೇಯಂ [14]ವರಾಕೀತಿ ಪ್ರಾಣಾನ್ ಕಶ್ಚಿದ್ವ್ಯಸರ್ಜಯತ್ ॥**

೧ ಆಗಮಃ. ೨ ವಂಚಿತ ಇತ್ಯರ್ಥಃ. ೩ ತವ. ೪ ಮನುಷ್ಯಾಃ. ೫ ಆಗಚ್ಛಂ. ೬ ವರಾಕ್ಯಹಂ. ೭ ಅಮುಖ್ಯದೇವಸ್ತ್ರಿಯಃ. ೮ ಗಮನಂ. ೯ ಸ್ವರ್ಗೇ. ೧೦ ಸ್ವೀಕುರ್ಯಾಂ. ೧೧ ವಲ್ಲಭಾಯಾ ಆಗಮನಂ. ೧೨ ಪ್ರತಿಪಾಲ್ಯ. ೧೩ ತಿಷ್ಠತಿ ಸ್ಮ. ೧೪ ಅಗತಿಕಾ.

ಎದೆಯಲ್ಲಿ ಸೀಳಲ್ಪಟ್ಟ ಬಾಣವುಳ್ಳವನಾದ ಒಬ್ಬಾನೊಬ್ಬ ವೀರನು ಪತ್ನಿಯನ್ನು ಹೃದಯದಲ್ಲಿರುವವಳನ್ನಾಗಿ (ಎದೆಯಲ್ಲಿರುತ್ತಾಳೆಂದು) ತಿಳಿದು ''ಈ ದೀನಳು ಸತ್ತಳು ಹಾ – ಕಷ್ಟ !'' ಎಂದು ಪ್ರಾಣಗಳನ್ನು ಬಿಟ್ಟನು.

**ಶಸ್ತ್ರನಿರ್ಭಿನ್ನಸರ್ವಾಂಗಮಂತಕೋ ನೇತುಮಾಗತಃ ।**
**ಕಾಂತಾಚಿಂತಾಪರಂ [೧]ಕಂತುಸ್ತದ್ಧಸ್ತಾ[೨]ದಹೃತಾಪರಮ್ ॥ ೩೦೩ ॥**

ಶಸ್ತ್ರಗಳಿಂದ ಭೇದಿಸಲ್ಪಟ್ಟ ಸರ್ವಾವಯವಗಳುಳ್ಳವನೂ ಪತ್ನಿಯ ಚಿಂತೆಯಲ್ಲಿ ಆಸಕ್ತನೂ ಆದ ಮತ್ತೋರ್ವ ವೀರನನ್ನು ಒಯ್ಯುವುದಕ್ಕಾಗಿ ಯಮನು ಬಂದನು. ಅವನ ಕೈಯಿಂದ ಕಾಮನು ಆ ವೀರನನ್ನು ಬಲಾತ್ಕಾರದಿಂದ ಸ್ವೀಕರಿಸಿದನು. ಆ ವೀರನು ಪತ್ನಿಯ ಸ್ಮರಣೆಯಿಂದ ಕಾಮಪರವಶನಾದನೆಂದು ಭಾವವು.

**ಕಂಠೇ ಚಾಲಿಂಗಿತಃ ಪ್ರೇಮಶೋಕಾಭ್ಯಾಂ ಪ್ರಿಯಯಾ ಪರಃ ।**
**ಧ್ಯಾತ್ವಾ ತಾಂ ತ್ಯಕ್ತದೇಹೋಗಾ[೩]ನ್ನಿರ್ವಾಣಂ ಸವ್ರಣಸ್ತಯಾ ॥ ೩೦೪ ॥**

ಪತ್ನಿಯಿಂದ ಪ್ರೇಮದಿಂದಲೂ ಶೋಕದಿಂದಲೂ ಕಂಠದಲ್ಲಿ ಆಲಿಂಗಿಸಲ್ಪಟ್ಟವನಾದ ಮಗದೋರ್ವ ವೀರನು ಆ ಪತ್ನಿಯನ್ನು ಧ್ಯಾನಿಸಿ ಗಾಯವುಳ್ಳವನಾಗಿಯೂ ಆಕೆಯೊಡನೆ ದೇಹವನ್ನು ತ್ಯಜಿಸಿದವನಾಗಿಯೂ ಮರಣವನ್ನು ಹೊಂದಿದನು.

**ಶ್ವಃ ಸ್ವರ್ಗೇ ಕಿಂ ಕಿಮತ್ರೈವ ಸಂಗಮೋ [೪]ನೌ ನ ಸಂಶಯಃ ।**
**ತತ್ರ ತ್ವಂ ಬಹುಕಾಂತೋದ್ಯ ರಮೇನ್ಯೇತ್ಯಾಹ ಸವ್ರಣಮ್ ॥ ೩೦೫ ॥**

''ನಮ್ಮೀರ್ವರಿಗೆ ನಾಳೆ ಸ್ವರ್ಗದಲ್ಲಿ ಏನೇನಾಗುವುದೆಂದು ತಿಳಿಯೆ. ಇಲ್ಲೇ ನಮ್ಮಗಳ ಸಂಬಂಧವು ಸಂಶಯವಿಲ್ಲದುದಾಗಿರುತ್ತದೆ. ಅಲ್ಲಿ–ಸ್ವರ್ಗದಲ್ಲಿ ನೀನು ಬಹುಪತ್ನಿಯರುಳ್ಳವನಾಗುವೆ. ಈ ದಿವಸ ನಿನ್ನೊಡನೆ ಕ್ರೀಡಿಸುತ್ತೇನೆ'' ಎಂದು ಬೇರೊಬ್ಬಳು ಸ್ತ್ರೀಯು ಗಾಯವುಳ್ಳವನಾದ ತನ್ನ ಪತಿಯನ್ನು ಕುರಿತು ಹೇಳಿದಳು.

**ಅತ್ರ ವಾಮುತ್ರ [೫]ವಾ ಶ್ವೋಸ್ತು ಕಿಂ ತಯಾ ಚಿಂತಯಾವಯೋಃ ।**
**ವಿಯೋಗಃ ಕೋಪಿ ನಾಸ್ತೀತಿ ಕಾಂತಾ ಕಾಂತಮತರ್ಪಯತ್ ॥ ೩೦೬ ॥**

''ಇಲ್ಲಾಗಲಿ ಪರಲೋಕದಲ್ಲಾಗಲಿ, ಸಂಬಂಧವು ನಾಳೆಯಾಗಲಿ. ಆ ಚಿಂತೆಯಿಂದೇನು ? ನಮಗೆ ಯಾವ ವಿಯೋಗವೂ ಇಲ್ಲ'' ಎಂದು ಪತ್ನಿಯು ಪತಿಯನ್ನು ತೃಪ್ತಿಪಡಿಸಿದಳು.

**ಸವ್ರತೋ ವೀರಲಕ್ಷ್ಮೀಂ ಚ ಕೀರ್ತಿಂ ಚೈಹಿ ಚಿರಾಯುಷಾ ।**
**ಹಂತು ಮಾಮೇವ ಕಾಮೋಯಮಿತಿ ಕಾಂತಾವದದ್ರುಷಾ ॥ ೩೦೭ ॥**

''ಪ್ರಿಯನೆ ! ನೀನು ವ್ರತ–ನಿಯಮವುಳ್ಳವನಾಗಿ ದೀರ್ಘಾಯುಷ್ಯದಿಂದ ವೀರಲಕ್ಷ್ಮಿಯನ್ನೂ ಕೀರ್ತಿಯನ್ನೂ ಹೊಂದು, ಈ ಮನ್ಮಥನು ನನ್ನನ್ನೇ ಕೊಲ್ಲಲಿ'' ಎಂದು ಪತ್ನಿಯು ಕೋಪದಿಂದ ಹೇಳಿದಳು.

**ಜಯಸ್ಯ ವಿಜಯಃ ಪ್ರಾಣೈಸ್ತವೈವೈತದ್ವಿನಿಶ್ಚಿತಮ್ ।**
**ಸವ್ರತಾವದ್ಯ ಯಾಸ್ಯಾವೋ ದಿವಮಿತ್ಯಬ್ರವೀತ್ಪರಾ ॥ ೩೦೮ ॥**

''ಜಯಕುಮಾರನ ವಿಜಯವು ನಿನ್ನ ಪ್ರಾಣಗಳಿಂದಲೇ; ಇದು ನಿಶ್ಚಿತವಾದುದು. ಈ ದಿವಸ ವ್ರತ–ನಿಯಮವುಳ್ಳವರಾದ ನಾವುಗಳು ಸ್ವರ್ಗಕ್ಕೆ ಹೋಗುವೆವು'' ಎಂದು ಮತ್ತೋರ್ವಳು ಹೇಳಿದಳು.

**ಶರಾಃ ಪೌಷ್ಪಾಸ್ತವ ತ್ವಂ ಚ ಸಂಯುಕ್ತೇ[೬]ಷ್ವತಿಶೀತಲಃ ।**
**ತತ್ರ ವಿಜ್ಞಾತಸಾರೋಸಿ [೭]ಪುರುಷೇಭ್ಯೋ ಭಯಂ ತವ ॥ ೩೦೯ ॥**

೧ ಮನಃ. ೨ ಹಠಾತ್ಕಾರೇಣ ಸ್ವೀಕೃತವಾನ್ ಕಾಂತಾಸ್ಮರಣೇನ ಸ್ಮರವಶೋಭೂದಿತ್ಯರ್ಥಃ. ೩ ಮರಣಂ. ೪ ಆವಯೋಃ. ೫ ವಾಸೋಸ್ತು ಇತ್ಯಪಿ ಪಾಠಃ. ೬ ಅತಿಸುಖಿ. ೭ ಅಸ್ಮದ್ವಲ್ಲಭೇಭ್ಯಃ.

**ಆಯಸಾಃ ಸಾಯಕಾಃ ಕಾಮ ತ್ವಮಪ್ಯಸ್ಮಾಕಮಂತಕಃ ।**
**ಇತಿ ಕಾಮಂ ಸಮುದ್ದಿಶ್ಯ [೧]ಖಂಡಿತಾಃ ಸ್ವಮತಂ ಜಗುಃ ॥ ೩೧೦ ॥**

''ಎಲೈ ಕಾಮನೆ ! ನಿನ್ನ ಬಾಣಗಳು ಸಂಯುಕ್ತರಾಗಿರುವ ಸ್ತ್ರೀಪುರುಷರಲ್ಲಿ ಪುಷ್ಪಗಳಿಂದುಂಟಾದುವುಗಳು, ನೀನೂ ಅವರಲ್ಲಿ ಅತಿಶಯವಾಗಿ ಸುಖವುಳ್ಳವನು. ನೀನು ಆ ಸಂಯುಕ್ತರಾದ ಸ್ತ್ರೀಪುರುಷರಲ್ಲಿ ಗೊತ್ತಾದ ಶಕ್ತಿಯುಳ್ಳವನಾಗಿರುತ್ತಿ, ನಿನಗೆ ನಮ್ಮಗಳ ವಲ್ಲಭರಿಂದ ಭಯವಿರುತ್ತದೆ, ನಿನ್ನ ಬಾಣಗಳು ನಮ್ಮಗಳಿಗೆ ಕಬ್ಬಿಣದಿಂದ ನಿರ್ಮಿತಗಳಾಗಿರುತ್ತವೆ. ನೀನೂ ನಮ್ಮಗಳಿಗೆ ಯಮನಾಗಿರುತ್ತಿ'' ಎಂದು ಪುರುಷವಿಯೋಗವನ್ನು ಹೊಂದಿದ ಸ್ತ್ರೀಯರು ಕಾಮನನ್ನು ಕುರಿತು ತಮ್ಮ ಅಭಿಪ್ರಾಯವನ್ನು ಹೇಳಿದರು.

**ಸಾ ರಾತ್ರಿರಿತಿ ಸಲ್ಲಾಪೈಃ ಪ್ರೇಮಪ್ರಾಣೈರನೀಯತ ।**
**ತಾವತ್ಸಂಧ್ಯಾಗತಾ ರಾಗಾದ್ರಾಕ್ಷಸೀವೇಕ್ಷಿತುಂ ರಣಮ್ ॥ ೩೧೧ ॥**

ಆ ರಾತ್ರಿಯು ಈ ಪ್ರಕಾರವಾದ ಪ್ರೇಮವೇ ಪ್ರಾಣವಾಗಿರುವ ಪರಸ್ಪರ ಭಾಷಣಗಳಿಂದ ಕಳೆಯಲ್ಪಟ್ಟಿತು. ಅಷ್ಟರಲ್ಲಿ ಪ್ರೀತಿಯಿಂದ ಯುದ್ಧವನ್ನು ನೋಡುವುದಕ್ಕೋಸ್ಕರ ರಾಕ್ಷಸಿಯಂತೆ ಸಂಧ್ಯೆಯು ಬಂದಿತು. ಪ್ರಾತಃಕಾಲವು ಬಂದಿತೆಂದು ಭಾವವು.

**ಪ್ರಾಭಾತಾನಕಕೋಟೀನಾಂ ನಿಃಸ್ವಾನಃ ಸೇನಯೋಃ ಸಮಮ್ ।**
**ಆಕ್ರಾಮತಿ ಸ್ಮ ದಿಕ್ಚಕ್ರಮಕ್ರಮೇಣೋಚ್ಚರಂಸ್ತದಾ ॥ ೩೧೨ ॥**

ಆಗ ಉಭಯಸೈನ್ಯಗಳಲ್ಲಿ ಏಕಕಾಲದಲ್ಲಿ ಪ್ರಾತಃಕಾಲದ ಅನೇಕಭೇರಿಗಳ ಶಬ್ದವು ಕ್ರಮವಿಲ್ಲದೆ–ಒಟ್ಟಿಗೆ ಉಚ್ಚರಿಸುವುದಾಗಿ ದಿಙ್ಮಂಡಲವನ್ನು ವ್ಯಾಪಿಸಿತು.

**ಪ್ರತೀಚ್ಯಾ [೨]ವಿಯುತಶ್ಚಂದ್ರೋ ಮಯ್ಯೇವೋದೇತಿ ಭಾಸ್ಕರಃ ।**
**ಇತಿ ಸ್ನೇಹಾದಿವ ಪ್ರಾಚೀ ಪ್ರಾಗಭಾದುದಯಾದ್ರವೇಃ ॥ ೩೧೩ ॥**

''ಚಂದ್ರನು ಪಶ್ಚಿಮದಿಕ್ಕಿನಿಂದ ವಿಯೋಗವನ್ನು ಹೊಂದಿದನು. ಸೂರ್ಯನು ನನ್ನಿಂದಲೇ ಉದಯಿಸುತ್ತಾನೆ'' ಹೀಗೆಂಬ ಸ್ನೇಹದಿಂದಲೋ ಎಂಬಂತೆ, ಪೂರ್ವದಿಕ್ಕು ಸೂರ್ಯನ ಉದಯಕ್ಕಿಂತ ಮೊದಲು ಪ್ರಕಾಶಿಸಿತು.

**[೩]ಸರಸಾಂ ಕಮಲಾಕ್ಷಿಭ್ಯಃ ಪ್ರಬುದ್ಧಾನಾಂ ತದಾ ಮುದಾ ।**
**ನಿರ್ಯಯೌ ಸ್ವಾರ್ಥಮಾದಾಯ ನಿದ್ರೇವ ಭ್ರಮರಾವಲೀ ॥ ೩೧೪ ॥**

ಆಗ ಸಂತೋಷದಿಂದ ಅರಳಿದ ಸರೋವರಗಳ ಕಮಲಗಳೆಂಬ ಕಣ್ಣುಗಳಿಂದ ಭ್ರಮರಗಳ ಸಾಲು ನಿದ್ರೆಯು ಹೊರಟಂತೆ ತನ್ನ ಪದಾರ್ಥ(ಮಕರಂದ)ವನ್ನು ತೆಗೆದುಕೊಂಡು ಹೊರಟಿತು.

**ಗತಾಯಾಂ ಸ್ವೇನ ಸಂಕೋಚಂ ಪದ್ಮಿನ್ಯಾಂ ಸೋದಯೋ ರವಿಃ ।**
**[೪]ಲಕ್ಷ್ಮೀಂ ನಿಜಕರೇಣೋಚ್ಚೈರ್ವಿದಧೇ ಸಾ ಹಿ ಮಿತ್ರತಾ ॥ ೩೧೫ ॥**

ಉದಯಯುಕ್ತನಾದ ಸೂರ್ಯನು ತನ್ನೊಡನೆ ಸಂಕೋಚವನ್ನು ಹೊಂದಿರುವ ಕಮಲಲತೆಯಲ್ಲಿ ತನ್ನ ಕಿರಣದಿಂದ ಶೋಭೆಯನ್ನು ಹೆಚ್ಚಾಗಿ ಮಾಡಿದನು. ಮಿತ್ರತೆಯು ಅದಲ್ಲವೇ ? ತನಗೆ ಅಭ್ಯುದಯವು ಪ್ರಾಪ್ತವಾದಾಗ ತನ್ನೊಡನೆ ಕಷ್ಟಕ್ಕೀಡಾಗಿದ್ದವರಿಗೆ ತನ್ನ ಕೈಯಿಂದ ಸಂಪತ್ತಿಯನ್ನು ಕೊಡುವುದು ಮಿತ್ರತೆಯ ಲಕ್ಷಣವೆಂಬುದೂ ಈ ಪದ್ಯದಿಂದ ಸೂಚಿತವಾಗುವುದು.

**[೫]ರಕ್ತಃ ಕರೈಃ ಸಮಾಶ್ಲಿಷ್ಯ ಸಂಧ್ಯಾಂ ಸದ್ಯೋ [೬]ವ್ಯರಜ್ಯತ ।**
**ವದನ್ನಿವ ರವಿರ್ಭೋಗಾನ್ಪರ್ಯಂತವಿರಸಾನ್ ಸ್ಫುಟಮ್ ॥ ೩೧೬ ॥**

೧ ಪುರುಷವಿಯುಕ್ತಾಃ. ೨ ವಿಯುಕ್ತೋಭೂದಿತ್ಯರ್ಥಃ. ೩ ಸರೋವರಾಣಾಂ. ೪ ಶೋಭಾಂ. ೫ ಅರುಣಃ, ಅನುರಕ್ತಶ್ಚ. ೬ ವಿರಕ್ತೋಭೂತ್.

ಕೆಂಪಾದ(ಅನುರಕ್ತನಾದ) ಸೂರ್ಯನು ಕಿರಣಗಳಿಂದ ಸಂಧ್ಯೆಯನ್ನು ಆಲಿಂಗಿಸಿ, ಭೋಗಗಳನ್ನು ಕೊನೆಯಲ್ಲಿ ವಿರಸಗಳನ್ನಾಗಿ ಸ್ಫುಟವಾಗಿ ಹೇಳುತ್ತಾನೋ ಎಂಬಂತೆ ತತ್ಕ್ಷಣದಲ್ಲಿ ವಿರಕ್ತನಾದನು. ಕೆಂಪುಬಣ್ಣವು ಹೋಯಿತೆಂದು ಭಾವವು.

**[೧]ಪರ್ಯಷ್ವಂಜೀತ್ಪುರಸ್ತಾನ್ಮೇ ಸ್ವಾಂ ಸಂಧ್ಯಾಮಿತಿ ವೇರ್ಷಯಾ ।**
**ರವಿಂ [೨]ರಕ್ತಮಪಿ [೩]ಸ್ಥಿತ್ಯೈ ಪ್ರಾಚ್ಯಕ್ಷಮತ ನ ಕ್ಷಣಮ್ ॥ ೩೧೭ ॥**

''ನನ್ನ ಇದಿರಿನಲ್ಲಿ ತನ್ನ ಸಂಧ್ಯೆಯನ್ನು ಆಲಿಂಗಿಸಿದನು'' ಎಂದು ಈರ್ಷೆಯಿಂದಲೋ ಎಂಬಂತೆ ಸೂರ್ಯನನ್ನು ಅನುರಕ್ತನಾಗಿದ್ದರೂ ಇರುವುದಕ್ಕೆ ಪೂರ್ವದಿಕ್ಕು ಒಂದು ಕ್ಷಣಕಾಲವೂ ಸಹಿಸಲಿಲ್ಲ. ಇದರಿಂದ ತಾಯಿಯು ಮಗನ ಅವಿನಯವನ್ನು ಸಹಿಸದಿರುವ ಭಾವವು ಸೂಚಿತವಾಗುವುದು

**ಶಯಿತ್ವಾ ವೀರಶಯ್ಯಾಯಾಂ ನಿಶಾಂ ನೀತ್ವಾ [೪]ನಿಯಾಮಿನಃ ।**
**ಸ್ನಾತ್ವಾ ಸಂತರ್ಪಿತಾಶೇಷದೀನಾನಾಥವನೀಪಕಾಃ ॥ ೩೧೮ ॥**

**ಅಂಚಿತ್ವಾ ವಿಧಿನಾ ಸ್ತುತ್ವಾ ಜಿನೇಂದ್ರಾಂಸ್ತ್ರಿಜಗನ್ನುತಾನ್ ।**
**ಅತಿಷ್ಠನ್ನಾಯಕಾಃ ಸರ್ವೇ [೫]ಪರಿಚ್ಛಿದ್ಯ ರಣೋನ್ಮುಖಾಃ ॥ ೩೧೯ ॥**

ನಿಯಮವುಳ್ಳವರಾದ ಸಮಸ್ತನಾಯಕರುಗಳು ವೀರಶಯ್ಯೆಯಲ್ಲಿ ಮಲಗಿ ರಾತ್ರಿಯನ್ನು ಕಳೆದು ಸ್ನಾನಮಾಡಿ ಮೂರುಲೋಕಗಳಿಂದ ಸ್ತುತಿಸಲ್ಪಟ್ಟವರಾದ ಜಿನೇಶ್ವರರನ್ನು ವಿಧಿಯಿಂದ ಪೂಜಿಸಿ ಸ್ತುತಿಸಿ ಸಮಸ್ತರಾದ ಬಡವರನ್ನೂ ಅನಾಥರನ್ನೂ ಯಾಚಕರನ್ನೂ ತೃಪ್ತಿಪಡಿಸಿದವರಾಗಿ ಸೈನ್ಯಗಳನ್ನು ವಿಭಾಗಮಾಡಿ ಯುದ್ಧಾಭಿಮುಖರಾಗಿ ನಿಂತರು.

**ಅರಿಂಜಯಾಖ್ಯಮಾರುಹ್ಯ ರಥಂ ಶ್ವೇತಾಶ್ವಯೋಜಿತಮ್ ।**
**ಗೃಹೀತ್ವಾ ವಜ್ರಕಾಂಡಂ ಚ ದತ್ತಂ ಯಚ್ಚಕ್ರಿಣಾ [೬]ದ್ವಯಮ್ ॥ ೩೨೦ ॥**

**ವಂದಿಮಾಗಧವೃಂದೇನ ವಂದ್ಯಮಾನಾಂಕಮಾಲಿಕಃ ।**
**ಗಜಧ್ವಜಂ ಸಮುತ್ಥಾಪ್ಯ ಜಯಲಕ್ಷ್ಮೀಸಮುತ್ಸುಕಃ ॥ ೩೨೧ ॥**

**ಜಯೋ ಜ್ಯಾಸ್ಫಾಲನಂ ಕುರ್ವನ್ ಕೃತಾಂತವಿಕೃತಾಕೃತಿಃ ।**
**ದ್ವಿಪಾನಾಂ ಭೀಷಣಸ್ತಸ್ಥೌ [೭]ದ್ವಿಷಾಮಪ್ಯಾಹರನ್ಮದಮ್ ॥ ೩೨೨ ॥**

ಚಕ್ರವರ್ತಿಯಿಂದ ಕೊಡಲ್ಪಟ್ಟಿದ್ದುದೂ ಬಿಳೀಕುದುರೆಗಳು ಕಟ್ಟಲ್ಪಟ್ಟಿದ್ದುದೂ ಆದ ಅರಿಂಜಯವೆಂಬ ರಥವನ್ನು ಹತ್ತಿ ವಜ್ರಕಾಂಡವೆಂಬ ಧನುಸ್ಸನ್ನು ತೆಗೆದುಕೊಂಡು ಆನೆಯ ಗುರುತುಳ್ಳ ಧ್ವಜವನ್ನು ಎತ್ತಿ ಜಯಲಕ್ಷ್ಮಿಯಲ್ಲಿ ಕುತೂಹಲವುಳ್ಳವನೂ ವಂದಿಮಾಗಧರ ಸಮೂಹದಿಂದ ಹೊಗಳಲ್ಪಟ್ಟ ಬಿರುದಾವಲಿಯುಳ್ಳವನೂ ಯಮನಂತೆ ವಿಕಾರವಾದ ಆಕೃತಿಯುಳ್ಳವನೂ ಭಯಂಕರನೂ ಆದ ಜಯಕುಮಾರನು ಸಿಂಜಿನಿಯನ್ನು ಹೊಡೆಯುವವನಾಗಿ (ಧನುಷ್ಟಂಕಾರವನ್ನು ಮಾಡುವವನಾಗಿ) ಆನೆಗಳ ಶತ್ರುಗಳ–ಸಿಂಹಗಳ ಮದವನ್ನೂ ದೂರಮಾಡುಫವನಾಗಿದ್ದನು.

**[೮]ಉಪೋದಯಾಯಶಸ್ಕೀರ್ತಿರರ್ಕಕೀರ್ತಿಶ್ಚ್ಯುತಚ್ಛವಿಃ ।**
**ಕಾರಾಗಾರಮಿವಾಧ್ಯಾಸ್ಯ ಸ್ಯಂದನಂ ಮಂದವಾಜಿನಮ್ ॥ ೩೨೩ ॥**

**ಅಷ್ಟಚಂದ್ರಾನ್ ಸಖೀಕುರ್ವನ್ ನಷ್ಟಚಂದ್ರೋಪಮಾನ್ [೯]ಯುಧಃ ।**
**[೧೦]ಸ್ವೋತ್ಪಾತಕೇತುಸಂಕಾಶಚಕ್ರಕೇತೂಪಲಕ್ಷಿತಃ ॥ ೩೨೪ ॥**

**[೧೧]ಪ್ರತ್ಯಾಯಾತಮಹಾವಾತವಿಹತಸ್ವಜವೈಃ ಶರೈಃ ।**
**ವಿಧ್ಯನ್ಮಧ್ಯಂದಿನಾರ್ಕಂ ವಾ ಸ್ವಮನಃಕ್ಷತಹೇತುಭಿಃ ॥ ೩೨೫ ॥**

೧ ಆಲಿಲಿಂಗ. ೨ ಅನುರಕ್ತಂ. ೩ ನಿವಸನಾಯ. ೪ ನಿಯಮವಂತಃ. ೫ ಪರಿಚ್ಛೇದಂ ಕೃತ್ವಾ. ೬ ರಥಚಾಪದ್ವಯಂ. ೭ ಸಿಂಹಾನಾಂ. ೮ ಉದಯಪ್ರಾಪ್ತಾಪಕೀರ್ತಿಃ. ೯ ಯುದ್ಧಸ್ಯ. ೧೦ ನಿಜನಾಶಹೇತುಗ್ರಹಸಮಾನ. ೧೧ ಪ್ರತಿಕೂಲಮಾಯತ.

**ಜಯಂ ಶತ್ರುದುರಾಲೋಕಂ ಜ್ವಲತ್ತೇಜೋಮಯಂ ಸ್ಮಯಾತ್ ।**
**ಕಲಭೋ ವಾಗಮ[೧]ದ್ವಾರಿಂ ಪ್ರೇರಿತಃ ಖಲಕರ್ಮಣಾ ॥ ೩೨೬ ॥**

ಉದಯಪ್ರಾಪ್ತವಾದ ಅಪಕೀರ್ತಿಯುಳ್ಳವನೂ ಕಡಮೆಯಾದ ಕಾಂತಿಯುಳ್ಳವನೂ ಆದ ಅರ್ಕಕೀರ್ತಿಯು ಸೆರೆಮನೆಯಲ್ಲಿ ಕುಳಿತುಕೊಳ್ಳುವಂತೆ, ಮಂದಗಮನವುಳ್ಳ ಕುದುರೆಗಳುಳ್ಳುದಾದ ರಥದಲ್ಲಿ ಕುಳಿತು ಎಂಟುಮಂದಿ ಚಂದ್ರರಿಗೆ ಸಮಾನರಾದ ಅಷ್ಟಚಂದ್ರರೆಂಬ ವಿದ್ಯಾಧರರನ್ನು ಯುದ್ಧಕ್ಕೆ ಸಹಾಯಕರನ್ನಾಗಿ ಮಾಡಿಕೊಳ್ಳುವವನೂ ತನ್ನ ನಾಶಕ್ಕೆ ಕಾರಣವಾದ ಗ್ರಹಕ್ಕೆ ಸಮಾನವಾದ ಚಕ್ರಧ್ವಜದಿಂದ ಯುಕ್ತನೂ ಪ್ರತಿಕೂಲವಾಗಿ ಬಂದ ದೊಡ್ಡ ಗಾಳಿಯಿಂದ ಹೊಡೆಯಲ್ಪಟ್ಟ ತಮ್ಮ ವೇಗವುಳ್ಳುವೂ ತನ್ನ ಮನಃಖೇದಕ್ಕೆ ಕಾರಣಗಳೂ ಆದ ಬಾಣಗಳಿಂದ ಮಧ್ಯಾಹ್ನದ ಸೂರ್ಯನನ್ನು ಹೊಡೆಯುವಂತೆ, (ನಡುನೆತ್ತಿಯ ಮೇಲಿರುವ ಸೂರ್ಯನಿಗೆ ಬಿಟ್ಟ ಅಂಬುಗಳು ತನ್ನ ನೆತ್ತಿಯ ಮೇಲೆ ಬೀಳುವಂತೆ) ಗುರಿಯಿಟ್ಟು ಹೊಡೆಯುವವನೂ, ಪ್ರಕಾಶಮಾನವಾದ ತೇಜೋಮಯನೂ ಶತ್ರುಗಳಿಗೆ ದುಃಖಕರವಾದ ನೋಟವುಳ್ಳವನೂ ಆದ ಜಯಕುಮಾರನನ್ನು ಗರ್ವದಿಂದ, ಆನೆಯ ಮರಿಯು ತನ್ನನ್ನು ಬಂಧಿಸುವ ಸ್ಥಾನವನ್ನು(ಹಳ್ಳವನ್ನು)ಕುರಿತು ಹೋಗುವಂತೆ, ದುಷ್ಟವಾದ ಕರ್ಮದಿಂದ ಪ್ರೇರಿತನೂ ಆಗಿ ಹೋದನು. ಜಯಕುಮಾರನನ್ನು ಇದಿರಿಸಿ ಯುದ್ಧಕ್ಕೆ ಹೋದನೆಂದರ್ಥವು.

**ಜಯೋಽಪಿ ಶರಸಂತಾನ[೨]ಘನೀಕೃತಘನಾಘನಃ ।**
**ಸಹಾರ್ಕಕೀರ್ತಿಮರ್ಕೇಣ ಕುರ್ವನ್ ವಿನಿಹತಪ್ರಭಮ್ ॥ ೩೨೭ ॥**

**[೩]ಪ್ರತೀಯಾಯಾಂತರೇ ಛಿಂದನ್ ರಿಪುಪ್ರಹಿತಸಾಯಕಾನ್ ।**
**ಶರಾಶ್ಚಾಸ್ಯ ಪುರೋಧಾವನ್ ಬ್ರಧ್ನಸ್ಯೇವೋದಯೇಂಶವಃ ॥ ೩೨೮ ॥**

ಜಯಕುಮಾರನೂ ಬಾಣಗಳ ಪರಂಪರೆಯಿಂದ ಮೋಡವನ್ನು ದಟ್ಟವಾಗಿ ಮಾಡಿದವನಾಗಿ ಸೂರ್ಯನೊಡನೆ ಅರ್ಕಕೀರ್ತಿಯನ್ನು(ಮೋಡಗಳನ್ನು ನಿಬಿಡವಾಗಿ ಮಾಡಿದ ಬಾಣಗಳಿಂದ ಸೂರ್ಯನನ್ನೂ ಅರ್ಕಕೀರ್ತಿಯನ್ನೂ) ಕಾಂತಿಹೀನನನ್ನಾಗಿ ಮಾಡುವವನೂ ಶತ್ರುಗಳಿಂದ ಕಳುಹಲ್ಪಟ್ಟ(ಬಿಡಲ್ಪಟ್ಟ) ಬಾಣಗಳನ್ನು ಮಧ್ಯದಲ್ಲಿ ಕತ್ತರಿಸುವವನೂ ಆಗಿ ಇದಿರಾಗಿ ಹೋದನು. ಸೂರ್ಯನ ಉದಯದಲ್ಲಿ ಕಿರಣಗಳು ಮುಂದೆ ಓಡುವಂತೆ, ಈ ಜಯಕುಮಾರನ ಬಾಣಗಳೂ ಮುಂದೆ ಓಡಿದುವು.

**ಅಚ್ಛೈತ್ಸೀಚ್ಛತ್ರಮಸ್ತ್ರಾಣಿ ವೈಜಯಂತೀಂ ಚ ದುರ್ಜಯಃ ।**
**ಜಯೋಽರ್ಕಕೀರ್ತೇರೌದ್ಧತ್ಯಂ ವಿಹತ್ಯ [೪]ವಿನಿನೀಷಯಾ ॥ ೩೨೯ ॥**

ದುರ್ಜಯನಾದ ಜಯಕುಮಾರನು ಅರ್ಕಕೀರ್ತಿಯ ಗರ್ವಿಷ್ಠತ್ವವನ್ನು ನಾಶಮಾಡಿ ಅವನನ್ನು ವಿನಯವುಳ್ಳವನನ್ನಾಗಿ ಮಾಡುವುದಕ್ಕೋಸ್ಕರ ಅವನ ಛತ್ರವನ್ನೂ ಅಸ್ತ್ರಗಳನ್ನೂ ಧ್ವಜಗಳನ್ನೂ ಕತ್ತರಿಸಿದನು.

**ಅಷ್ಟಚಂದ್ರಾಸ್ತದಾಭ್ಯೇತ್ಯ ವಿದ್ಯಾಬಲವಿಜೃಂಭಣಾತ್ ।**
**ನ್ಯಷೇಧಯನ್ ಜಯಸ್ಯೇಷೂನಂಭೋದಾ ವಾ ರವೇಃ ಕರಾನ್ ॥**

ಆಗ ವಿದ್ಯಾಬಲದ ವ್ಯಾಪಕತೆಯಿಂದ(ಗರ್ವದಿಂದ) ಅಷ್ಟಚಂದ್ರರು ಜಯಕುಮಾರನಿಗೆ ಇದಿರಾಗಿ ಬಂದು ಅವನ ಬಾಣಗಳನ್ನು, ಮೇಘಗಳು ಸೂರ್ಯನ ಕಿರಣಗಳನ್ನು ನಿಷೇಧಿಸುವಂತೆ, ನಿಷೇಧಿಸಿದರು.

**[೫]ಭುಜಬಲ್ಯಾದಯೋ[೬]ಭ್ಯೇಯುರ್ಯೋದ್ಧುಂ ಹೇಮಾಂಗದಂ ಕ್ರುಧಾ ।**
**[೭]ಸಾನುಜಂ ಸಿಂಹಸಂಘಾತಂ ಸಿಂಹಸಂಘ ಇವಾಪರಃ ॥ ೩೩೧ ॥**

೧ ನಿಜಪತನಹೇತುಗರ್ತ. ೨ ನಿಬಿಡೀಕೃತ. ೩ ಅಭಿಮುಖಂ ಜಗಾಮ. ೪ ವಿನೇತುಮಿಚ್ಛಯಾ, ವಿನೀತಂ ಕರ್ತುಮಿಚ್ಛಯೇತ್ಯರ್ಥಃ. ೫ ಅರ್ಕಕೀರ್ತಿಸಂಬಂಧಿನಃ. ೬ ಅಭಿಮುಖಮಾಜಗ್ಮುಃ. ೭ ಸುಕೇತುಪ್ರಭೃತಿ ಏಕೋನಸಹಸ್ರಾನುಜೈಃ ಸಹಿತಂ.

ಅರ್ಕಕೀರ್ತಿಯಕಡೆಯ ಭುಜಬಲಿ ಮೊದಲಾದವರು ಸುಕೇತು ಮೊದಲಾದ ಒಂಬೈನೂರು ತೊಂಬತ್ತೊಂಬತ್ತು ಮಂದಿ ತಮ್ಮಂದಿರೊಡನೆ ಕೂಡಿರುವ ಹೇಮಾಂಗದನನ್ನು ಕೋಪದಿಂದ ಯುದ್ಧಮಾಡುವುದಕ್ಕೋಸ್ಕರ, ಮತ್ತೊಂದು ಸಿಂಹಗಳ ಗುಂಪು ಸಿಂಹಗಳ ಗುಂಪನ್ನು ಇದಿರಿಸುವಂತೆ, ಇದಿರಾಗಿ ಬಂದರು.

**ಸಾನುಜೋಽನಂತಸೇನೋಽಪಿ ಪ್ರಾಪನ್ಮೇಘಸ್ವರಾನುಜಾನ್ ।**
**[೧]ಆಂಗರೇಯೋ ಯಥಾ ಯೂಥಃ ಕಲಿಂಗಜಮತಂಗಜಾನ್ ॥ ೩೩೨ ॥**

**ಅನ್ಯೇಪ್ಯನ್ಯಾಂಶ್ಚ ಭೂಪಾಲಾ ಭೂಪಾಲಾನ್ಕೋಪಿನಸ್ತದಾ ।**
**ಆನಿಪೇತುಃ ಕುಲಾದ್ರೀನ್ವಾ ಸಂಚಲಂತಃ ಕುಲಾಚಲಾಃ ॥ ೩೩೩ ॥**

ಅನುಜಸಹಿತನಾದ ಅನಂತಸೇನನೂ ಮೇಘಸ್ವರನ ತಮ್ಮಂದಿರನ್ನೂ ಅಂಗರದೇಶದಲ್ಲಿ ಜನಿಸಿದ ವೀರರ ಸಮೂಹವು ಕಲಿಂಗದೇಶದಲ್ಲಿ ಜನಿಸಿದ ವೀರರೆಂಬ ಆನೆಗಳನ್ನೂ ಹೇಗೆ ಹೊಂದಿದರೋ ಹಾಗೆ ಬೇರೆ ರಾಜರುಗಳೂ ಆಗ ಕೋಪವುಳ್ಳವರಾಗಿ ಇತರ ರಾಜರುಗಳನ್ನು, ಸಂಚರಿಸುವ ಕುಲಪರ್ವತಗಳು ಕುಲಪರ್ವತಗಳನ್ನು ಹೊಂದುವಂತೆ, ಹೊಂದಿದರು.

**ನಾಸ್ತ್ಯೇಷಾಮೀದೃಶೀ ಶಕ್ತಿರ್ವಿದ್ಯೇಯಮಿತಿ ವಿದ್ಯಯಾ ।**
**ಜಯೋ ಯುದ್ಧಾಯ ಸನ್ನದ್ಧಸ್ತದಾ [೨]ಮಿತ್ರಭುಜಂಗಮಃ ॥ ೩೩೪ ॥**

**ವಿದಿತ್ವಾ ವಿಷ್ಟರಾಕಂಪಾಜ್ಜಯಂ ಸಂಪ್ರಾಪ್ಯ ಸಾದರಃ ।**
**ನಾಗಪಾಶಂ ಶರಂ ಚಾರ್ಧಚಂದ್ರಂ ದತ್ವಾ ಯಯಾವಸೌ ॥ ೩೩೫ ॥**

''ಇವರಿಗೆ ಈ ಪ್ರಕಾರವಾದ ಶಕ್ತಿಯಿಲ್ಲ, ಇದು ವಿದ್ಯೆ'' ಎಂದು ತಿಳಿದು ವಿದ್ಯೆಯಿಂದ ಜಯಕುಮಾರನು ಯುದ್ಧಕ್ಕೆ ಸಿದ್ಧನಾದನು. ಆಗ ಮೊದಲು ವನದಲ್ಲಿ ಧರ್ಮಶ್ರವಣವನ್ನು ಮಾಡುವ ಸಂದರ್ಭದಲ್ಲಿ ಜಯಕುಮಾರನಿಗೆ ಮಿತ್ರನಾದ ನಾಗದೇವನು ತನ್ನ ಆಸನಕಂಪದಿಂದ ಯುದ್ಧವಿಷಯವನ್ನು ತಿಳಿದು ಬಂದು ಜಯಕುಮಾರನನ್ನು ಹೊಂದಿ ಪ್ರೀತಿಯುಳ್ಳವನಾಗಿ ಇವನಿಗೆ ನಾಗಪಾಶವನ್ನೂ ಅರ್ಧಚಂದ್ರವೆಂಬ ಬಾಣವನ್ನೂ ಕೊಟ್ಟು ಹೋದನು.

**[೩]ತಂ [೪]ಸಹಸ್ರಸಹಸ್ರಾಂಶುಸ್ಫುರದಂಶುಪ್ರಭಾಸ್ವರಮ್ ।**
**[೫]ಕೌರವಃ ಶರಮಾದಾಯ ವಜ್ರಕಾಂಡೇ ಪ್ರಯೋಜಯತ್ ॥ ೩೩೬ ॥**

ಜಯಕುಮಾರನು ಸಹಸ್ರಸೂರ್ಯರುಗಳ ಪ್ರಕಾಶಮಾನವಾದ ಕಿರಣಗಳಂತೆ ಪ್ರಕಾಶಮಾನವಾದ ಆ ಅರ್ಧಚಂದ್ರಬಾಣವನ್ನು ತೆಗೆದುಕೊಂಡು ವಜ್ರಕಾಂಡ ಧನುಸ್ಸಿನಲ್ಲಿ ಪ್ರಯೋಗಿಸಿದನು.

**ಹತ ಏವ ಸುತೋ ಭರ್ತುರ್ಭರ್ವೋನೇನೇತಿ [೬]ಸಂಭ್ರಮಮ್ ।**
**ನರವಿದ್ಯಾಧರಾಧೀಶಾಂ ಮಹಾಂತ[೭]ಮುದಪಾದಯನ್ ॥ ೩೩೭ ॥**

**ರಥಾನ್ನವ ತಥಾ ದುಷ್ಟಾನಷ್ಟಚಂದ್ರಾನ್ ಸ ಸಾರಥೀನ್ ।**
**ಸ ಶರೋ ಭಸ್ಮಯಾಮಾಸ ಶಸ್ತ್ರಾಣಿ ಚ ಯಥಾಶನಿಃ ॥ ೩೩೮ ॥**

''ಭೂಮಿಗೊಡೆಯನ–ಚಕ್ರವರ್ತಿಯ ಪುತ್ರನು ಈ ಜಯಕುಮಾರನಿಂದ ಕೊಲ್ಲಲ್ಪಟ್ಟನು'' ಎಂಬುದಾಗಿ ನರಾಧಿಪತಿಗಳಿಗೂ ವಿದ್ಯಾಧರಾಧಿಪತಿಗಳಿಗೂ ಮಹಾಭ್ರಮೆಯನ್ನುಂಟುಮಾಡುವುದಾದ ಆ ಅರ್ಧಚಂದ್ರಬಾಣವು, ಸಿಡಿಲಿನಂತೆ, ಒಂಬತ್ತು ರಥಗಳನ್ನೂ ದುಷ್ಟರಾದ ಮತ್ತು ಸಾರಥಿಸಹಿತರಾದ ಅಷ್ಟಚಂದ್ರರನ್ನೂ ಶಸ್ತ್ರಗಳನ್ನೂ ಬೂದಿಮಾಡಿತು.

**ಛಿನ್ನದಂತಕರೋ ದಂತೀವಾಂತಕೋ ವಾ ಹೃತಾಯುಧಃ ।**
**ಭಗ್ನಮಾನಃ ಕುಮಾರೋಽಸ್ಥಾದ್ಧಿಕ್ಕಷ್ಟಂ ಚೇಷ್ಟಿತಂ ವಿಧೇಃ ॥ ೩೩೯ ॥**

೧ ಅಂಗರದೇಶೇ ಭವಃ. ೨ ನಾಗದೇವಃ. ೩ ಅರ್ಧಚಂದ್ರಶರಂ. ೪ ಸಹಸ್ರರವಿ. ೫ ಜಯಃ. ೬ ಸಂಭ್ರಾಂತಂ. ೭ ಉಪಪಾದಯನ್ನಿತ್ಯಪಿ ಪಾಠಃ.

ಕತ್ತರಿಸಲ್ಪಟ್ಟ ಹಲ್ಲುಗಳೂ ಸೊಂಡಿಲೂ ಉಳ್ಳ ಆನೆಯಂತೆಯೂ ಅಪಹರಿಸಲ್ಪಟ್ಟ ಆಯುಧವುಳ್ಳ ಯಮನಂತೆಯೂ ಅರ್ಕಕೀರ್ತಿಕುಮಾರನು ಮಾನಭಂಗವನ್ನು ಹೊಂದಿದವನಾಗಿದ್ದನು. ವಿಧಿಯ ಚೇಷ್ಟೆಯು ಕಷ್ಟಕರವಾದುದು. ಧಿಕ್ಕಾರವಿರಲಿ.

**ಇತಿ [೧]ದತ್ತಗ್ರಹಂ ವೀರಂ ಗಜಂ ವಾ [೨]ಪಾದಪಾಶಿಕೈಃ ।**
**[೩]ಅಪಾಯುಧೈರುಪಾಯಜ್ಞೈರ್ವಿಧಿಜ್ಞ [೪]ಸ್ತ[೫]ಮಜೀಗ್ರಹತ್ ॥ ೩೪೦ ॥**

ಈ ಪ್ರಕಾರವಾಗಿ ಹಿಡಿಯಲ್ಪಟ್ಟವನಾದ ಆ ವೀರನನ್ನು–ಅರ್ಕಕೀರ್ತಿಯನ್ನು, ಆನೆಯನ್ನು ಕಟ್ಟುವುದರಲ್ಲಿ ಕುಶಲರಾದವರಿಂದ ಆನೆಯನ್ನು ಹಿಡಿಸುವಂತೆ, ಶಸ್ತ್ರಗಳಿಲ್ಲದವರೂ ಉಪಾಯವನ್ನು ತಿಳಿದವರೂ ಆದ ಭಟರಿಂದ ವಿಧಿಯನ್ನು ತಿಳಿದವನಾದ ಜಯಕುಮಾರನು ಹಿಡಿಸಿದನು.

**ತಚ್ಛೌರ್ಯಂ ಯತ್ಪರಾಭೂತೇಃ ಪ್ರಾಕ್ ಪ್ರಾಪ್ತಪರಿಭೂತಿಭಿಃ ।**
**ಯತ್ಪಶ್ಚಾ[೬]ತ್ಸಾಹಸಂ [೭]ಧಾರ್ಷ್ಟ್ಯಾತ್ ಸ ದ್ವಿತೀಯಃ ಪರಾಭವಃ॥ ೩೪೧ ॥**

ತಿರಸ್ಕಾರಕ್ಕಿಂತ ಮೊದಲು ಯಾವ ಸಾಹಸವಿರುವುದೋ ಅದು ಶೌರ್ಯವು. ತಿರಸ್ಕಾರವನ್ನು ಹೊಂದಿದವರಿಂದ ಅನಂತರದಲ್ಲಿ ಧೃಷ್ಟತ್ವದಿಂದ–ದುರಹಂಕಾರದಿಂದ ಯಾವ ಸಾಹಸವು ತೋರಿಸಲ್ಪಡುವುದೋ ಅದು ಎರಡನೆಯ ತಿರಸ್ಕಾರವು.

**ಸೋಽನ್ವಯಃ ಸ ಪಿತಾ ತಾದೃಕ್ ಪದಂ ಸಾ ಸೈನ್ಯಸಂಹತಿಃ ।**
**ತಸ್ಯಾಪ್ಯಾಸೀದವಸ್ಥೇಯಮುನ್ಮಾರ್ಗಃ ಕಂ ನ ಪೀಡಯೇತ್ ॥ ೩೪೨ ॥**

ಅರ್ಕಕೀರ್ತಿಯ ಆ ವಂಶ, ಆ ತಂದೆ, ಅಂಥಾ ಪದವಿ, ಆ ಸೈನ್ಯಸಮೂಹ, ಅವನಿಗೂ ಈ ಅವಸ್ಥೆಯಾಯಿತು. ಕೆಟ್ಟದಾರಿಯು–ನಡತೆಯು ಯಾರನ್ನು ತಾನೆ ಪೀಡಿಸುವುದಿಲ್ಲ ?

**ವೀರಪಟ್ಟೇನ ಬದ್ಧೋಽಯಂ ಚಕ್ರಿಣಾನೇನ ತತ್ಸುತಃ ।**
**ವ್ರಣಪಟ್ಟಪದಂ ನೀತಃ ಪಶ್ಯ ಕಾರ್ಯವಿಪರ್ಯಯಮ್ ॥ ೩೪೩ ॥**

ಈ ಜಯಕುಮಾರನಿಗೆ ಭರತಚಕ್ರವರ್ತಿಯು ವೀರಪಟ್ಟವನ್ನು ಕಟ್ಟಿದನು. ಇವನು ಆ ಚಕ್ರವರ್ತಿಯ ಮಗನಿಗೆ ವ್ರಣಪಟ್ಟದ ಸ್ಥಾನವನ್ನು ಹೊಂದಿಸಿದನು. ಕಾರ್ಯದ ವಿಪರೀತತ್ವ(ವ್ಯತ್ಯಾಸ)ವನ್ನು ನೋಡು.

**ಪತ[೮]ತ್ಪತಂಗಸಂಕಾಶಮರ್ಕಕೀರ್ತಿಮನಾಯುಧಮ್ ।**
**ಸ್ವರಥೇ ಸ್ಥಾಪಯಿತ್ವೋಚ್ಚೈರಾರುಹ್ಯಾನೇಕಪಂ ಸ್ವಯಮ್ ॥ ೩೪೪ ॥**

**ವಿಪಕ್ಷಖಗಭೂಪಾಲಾನ್ ನಾಗಪಾಶೇನ [೯]ಪಾಶಿವತ್ ।**
**ನಿಷ್ಪಂದಂ ನಿರ್ಜಿತಾರಾತಿ[೧೦]ರ್ನ್ಯಯಂಸೀತ್ಸಿಂಹವಿಕ್ರಮಾನ್ ॥ ೩೪೫ ॥**

ಅಸ್ತಂಗತನಾಗುವ ಸೂರ್ಯನಿಗೆ ಸಮಾನನೂ(ನಿಸ್ತೇಜಸ್ಕನೂ) ಆಯುಧವಿಲ್ಲದಿರುವವನೂ ಆದ ಅರ್ಕಕೀರ್ತಿಯನ್ನು ಶತ್ರುಗಳನ್ನು ಜಯಿಸಿದವನಾದ ಜಯಕುಮಾರನು ತನ್ನ ರಥದಲ್ಲಿರಿಸಿ ತಾನು ಉನ್ನತವಾದ ಆನೆಯನ್ನೇರಿ ಸಿಂಹಪರಾಕ್ರಮಿಗಳೂ ಶತ್ರುಪಕ್ಷದವರೂ ಆದ ಖೇಚರರಾಜರುಗಳನ್ನು, ವರುಣನಂತೆ ನಾಗಪಾಶದಿಂದ ಅಳ್ಳಾಡದಂತೆ, ಕಟ್ಟಿಸಿದನು.

**ಇತಿ [೧೧]ಸೌಲೋಚನೇ ಯುದ್ಧೇ [೧೨]ಸಮಿದ್ಧೇ ಶಮಿತೇ ತದಾ ।**
**ಪಪಾತ ಪಂಚ[೧೩]ಭೂಜೇಭ್ಯೋ ವೃಷ್ಟಿಃ ಸುಮನಸಾಂ ದಿವಃ ॥ ೩೪೬ ॥**

ಈ ಪ್ರಕಾರವಾಗಿ ಬೆಳೆದ ಸುಲೋಚನಾಪ್ರಯೋಜನಾರ್ಥವಾದ ಯುದ್ಧವು ಶಾಂತವಾಗುತ್ತಿರಲು ಆಗ ಸ್ವರ್ಗದಿಂದ ಮಂದಾರಮೊದಲಾದ ಐದು ಮರಗಳಿಂದ ಪುಷ್ಪಗಳ ವೃಷ್ಟಿಯು ಬಿದ್ದಿತು.

೧ ಕೃತಗ್ರಹಣ. ೨ ಗಜಬಂಧನಕುಶಲೈಃ. ೩ ಅಪಗತಶಸ್ತ್ರೈಃ. ೪ ಅರ್ಕಕೀರ್ತಿಂ. ೫ ಗ್ರಾಹಯತಿ ಸ್ಮ. ೬ ಅನಾಯುಧೋಽಪಿ ಯತ್ಸಾಹಸಂ ಕೃತಂ. ೭ ಧೃಷ್ಟತ್ವಾತ್. ೮ ಸೂರ್ಯ. ೯ ವರುಣವತ್. ೧೦ ಅಬಧ್ನಾತ್. ೧೧ ಸುಲೋಚನಾಪ್ರಯೋಜನಮಸ್ಯೇತಿ. ೧೨ ಪ್ರವೃದ್ಧೇ. ೧೩ ವೃಕ್ಷೇಭ್ಯಃ.

ಜಯಶ್ರೀರ್ದುರ್ಜಯಸ್ವಾಮಿತನೂಜವಿಜಯಾರ್ಜಿತಾ ।
ನೋತ್ಸೇಕಾಯೇತಿ ನಾ[1]ಸ್ಯೈ[2]ನಂ ತ್ರಪೈವ [3]ಪ್ರತ್ಯುತಾಶ್ರಯತ್ ॥ ೩೪೭ ॥

ಜಯಿಸುವುದಕ್ಕೆ ಕಠಿನನಾದ ಭರತೇಶ್ವರನ ಪುತ್ರನ ವಿಜಯದಿಂದ ಸಂಪಾದಿಸಲ್ಪಟ್ಟವಳಾದ ಜಯಲಕ್ಷ್ಮಿಯು ಈ ಜಯಕುಮಾರನ ಗರ್ವಕ್ಕೆ ತಾನು ಕಾರಣಗಳಾಗುವುದಿಲ್ಲವೆಂದು ಈ ಜಯಕುಮಾರನನ್ನು ಆಶ್ರಯಿಸಲಿಲ್ಲ. ಮತ್ತೇನೆಂದರೆ, ಲಜ್ಜೆಯೇ ಇವನನ್ನಾಶ್ರಯಿಸಿತು. ಜಯಕುಮಾರನು ಜಯಿಸಿ ಅಹಂಕಾರಪಡಲಿಲ್ಲವೆಂದೂ ಚಕ್ರವರ್ತಿಯ ಪುತ್ರನನ್ನು ಜಯಿಸಿದೆನಲ್ಲಾ ಎಂದು ನಾಚಿಕೆಪಟ್ಟನೆಂದೂ ಭಾವವು.

ಜಯೇನಾ[4]ಸ್ಥಾನಸಂಗ್ರಾಮಜಯಾಯಾತೇತಿ ಲಜ್ಜಯಾ ।
ದೂರೇ ಕೃತೇವ ತತ್ಕೀರ್ತಿರ್ದಿಗಂತಮಗಮತ್ತದಾ ॥ ೩೪೮ ॥

ಆಗ ಅನುಚಿತಸ್ಥಾನದಲ್ಲಿ(ಅರ್ಕಕೀರ್ತಿಯಲ್ಲಿ) ಮಾಡಲ್ಪಟ್ಟ ಯುದ್ಧದ ಜಯದಿಂದ ಪ್ರಾಪ್ತವಾದ ಲಜ್ಜೆಯಿಂದ ಜಯಕುಮಾರನಿಂದ ದೂರದಲ್ಲಿ ಮಾಡಲ್ಪಟ್ಟಿತೋ ಎಂಬಂತೆ, ಅವನ ಕೀರ್ತಿಯು ದಿಕ್ಕುಗಳ ಕೊನೆಯನ್ನು ಹೊಂದಿತು.

ಅಕಂಪನಮಹೀಶಸ್ಯ ಯೂಥೇಶಂ ವಾ ವನದ್ವಿಪೈಃ ।
ಭೂಪೈಃ [5]ಸಂಯುಮಿತ್ಯೈಃ ಸಾರ್ಧಮರ್ಕಕೀರ್ತಿಂ ಸಮರ್ಪ್ಯ ಸಃ॥ ೩೪೯ ॥

ವಿಜಯಾರ್ಧಮಹಾಗಂಧಸಿಂಧುರಸ್ಕಂಧಸಂಧೃತಃ ।
ನಿರ್ಭರ್ತ್ಸಿತೋದಯಕ್ಷ್ಮಾಧ್ರಮೂರ್ಧಸ್ಥಬ್ರಧ್ನಮಂಡಲಃ ॥ ೩೫೦ ॥

ರಣಭೂಮಿಂ ಸಮಾಲೋಕ್ಯ ಸಮಂತಾದ್ಬಹುವಿಸ್ಮಯಃ ।
ಮೃತಾನಾಂ ಪ್ರೇತಸಂಸ್ಕಾರಂ ಜೀವತಾಂ ಜೀವಿಕಾಕ್ರಿಯಾಮ್ ॥ ೩೫೧ ॥

ಕಾರಯಿತ್ವಾ ಪುರೀಂ ಸರ್ವಸಂಪದಾವಿಷ್ಕೃತೋದಯಾಮ್ ।
ಪ್ರಾವಿಶತ್ಪ್ರಕಟೈಶ್ವರ್ಯಃ ಸಹ ಮೇಘಪ್ರಭಾದಿಭಿಃ ॥ ೩೫೨ ॥

ಆ ಜಯಕುಮಾರನು, ಕಾಡಾನೆಗಳೊಡನೆ ಸಲಗವನ್ನು ಸಮರ್ಪಿಸುವಂತೆ, ನಾಗಪಾಶದಿಂದ ಕಟ್ಟಲ್ಪಟ್ಟ ರಾಜರುಗಳೊಡನೆ ಅರ್ಕಕೀರ್ತಿಯನ್ನು ಅಕಂಪನಮಹಾರಾಜನಿಗೆ ಸಮರ್ಪಿಸಿ ತಾನು ವಿಜಯಾರ್ಧವೆಂಬ ದೊಡ್ಡದಾದ ಮದಗಜದ ಹೆಗಲಿನಲ್ಲಿ ಧರಿಸಲ್ಪಟ್ಟವನೂ ಉದಯಪರ್ವತದ ಮಸ್ತಕದಲ್ಲಿರುವ ಸೂರ್ಯಮಂಡಲವನ್ನು ತಿರಸ್ಕರಿಸುವವನೂ ಸುತ್ತಲೂ ರಣಭೂಮಿಯನ್ನು ನೋಡಿ ಬಹುವಿಸ್ಮಯವುಳ್ಳವನೂ ಸತ್ತವರ ಶವಸಂಸ್ಕಾರವನ್ನೂ ಬದುಕಿರುವವರ ಜೀವನೋಪಾಯವನ್ನೂ ಮಾಡಿಸಿ ಪ್ರಕಟವಾದ ಸಂಪತ್ತಿಯುಳ್ಳವನೂ ಆಗಿ ಮೇಘಪ್ರಭನೇ ಮೊದಲಾದವರೊಡನೆ ಸರ್ವಸಂಪತ್ತಿಯಿಂದ ಪ್ರಕಟಿತವಾದ ವೃದ್ಧಿಯುಳ್ಳ ಪುರವನ್ನು ಪ್ರವೇಶಿಸಿದನು.

ಅಕಂಪನೋಪ್ಯನುಪ್ರಾಪ್ಯ ವೃತ್ತೈರಂತಃ ಸಮಾಕುಲಃ ।
ರಾಜಕಂಠೀರವೈರ್ವಾಮಾ ರಾಜಪುತ್ರ[6]ಶತೈಃ ಪುರಮ್ ॥ ೩೫೩ ॥

ಸರಕ್ಷಾನ್ [7]ಧೃತಭೂಪಾಲಾನ್ ಕುಮಾರಂ ಚ ನಿಯೋಗಿಭಿಃ ।
ಆಶ್ವಾಸ್ಯಾಶ್ವಾಸಕುಶಲೈರ್ಯಥಾಸ್ಥಾನಮವಾಪಯತ್ ॥ ೩೫೪ ॥

ಅಕಂಪನಮಹಾರಾಜನೂ ಮನಸ್ಸಿನಲ್ಲಿ ವಿಷಾದವುಳ್ಳವನಾಗಿ ಸುತ್ತಲ್ಪಟ್ಟ ರಾಜಶ್ರೇಷ್ಠರುಗಳಿಂದಲೋಪಾದಿಯಲ್ಲಿ ರಾಜಪುತ್ರರುಗಳ ಸಮೂಹಗಳೊಡನೆ ಪಟ್ಟಣವನ್ನು ಸೇರಿ ಕಾವಲುಗಾರರುಳ್ಳವರೂ ನಾಗಪಾಶದಿಂದ ಕಟ್ಟಲ್ಪಟ್ಟವರೂ ಆದ ರಾಜರುಗಳನ್ನೂ ಅರ್ಕಕೀರ್ತಿಕುಮಾರನನ್ನೂ ಸಮಾಧಾನಪಡಿಸುವುದರಲ್ಲಿ ಕುಶಲರಾದ ನಿಯೋಗಿಮನುಷ್ಯರಿಂದ (ತನ್ನಕಡೆಯವರಿಂದ) ಸಮಾಧಾನಪಡಿಸಿ ಅವರವರ ಸ್ಥಾನಕ್ಕೆ ಹೊಂದಿಸಿದನು–ಕಳುಹಿಸಿಕೊಟ್ಟನು.

೧ ಜಯಸ್ಯ. ೨ ಜಯಂ. ೩ ಪುನಃ ಕಿಮಿತಿ ಚೇತ್. ೪ ಅನುಚಿತಸ್ಥಾನಕೃತಯುದ್ಧವಿಜಯಾತ್ ಸಮುಪಾಗತಾ. ೫ ಬದ್ಧೈಃ. ೬ ಸಮೂಹೈಃ. ೭ ಪಾಶಬದ್ಧಭೂಪಾಲಾನ್.

ವಿಚಿಂತ್ಯ ವಿಶ್ವವಿಘ್ನಾನಾಂ ವಿನಾಶೋರ್ಹತ್ಪ್ರಸಾದತಃ ।
ಇತಿ ವಂದಿತುಮಾಜಗ್ಮುಃ ಸರ್ವೇ ನಿತ್ಯಮನೋಹರಮ್ ॥ ೩೫೫ ॥

ಸಮಸ್ತವಿಘ್ನಗಳ ನಾಶವು ಅರ್ಹತ್ಪರಮೇಶ್ವರನ ಅನುಗ್ರಹದಿಂದ ಎಂಬುದಾಗಿ ಯೋಚಿಸಿ ಎಲ್ಲರೂ ವಂದಿಸುವುದಕ್ಕೋಸ್ಕರ ನಿತ್ಯಮನೋಹರವೆಂಬ ಚೈತ್ಯಾಲಯಕ್ಕೆ ಬಂದರು.

ದೂರಾದೇವಾವರುಹ್ಯಾತ್ಮ[1]ವಾಹೇಭ್ಯಃ ಶಾಂತಚೇತಸಃ ।
ಪರೀತ್ಯಾರ್ಥ್ಯಾಭಿರಾಗಮ್ಯ ತುಷ್ಟುವುಃ ಸ್ತುತಿಭಿರ್ಜಿನಾನ್ ॥ ೩೫೬ ॥

ಶಾಂತವಾದ ಮನಸ್ಸುಳ್ಳವರಾಗಿ ದೂರದಿಂದಲೇ ತಮ್ಮ ವಾಹನಗಳಿಂದ ಇಳಿದು ಪ್ರದಕ್ಷಿಣೆಮಾಡಿ ಬಂದು ಜಿನೇಶ್ವರರನ್ನು ಅರ್ಥಯುಕ್ತವಾದ ಸ್ತುತಿಗಳಿಂದ ಸ್ತೋತ್ರಮಾಡಿದರು.

ಜಯೋಪಿ ಜಗದೀಶಾನಮಿತ್ಯಾಪ್ತವಿಜಯೋದಯಃ ।
ಅಸ್ತಾವೀದ್ಧ್ವಸ್ತಕರ್ಮಾಣಂ ಭಕ್ತಿನಿರ್ಭರಚೇತಸಾ ॥ ೩೫೭ ॥

ಈ ಪ್ರಕಾರವಾಗಿ ಜಯವನ್ನು ಹೊಂದಿದ ಜಯಕುಮಾರನೂ ಭಕ್ತಿಭರಿತವಾದ ಮನಸ್ಸಿನಿಂದ ಕರ್ಮಗಳನ್ನು ನಾಶಮಾಡಿದ ಜಗತ್ಪ್ರಭು–ಜಿನೇಶ್ವರನನ್ನು ಸ್ತುತಿಸಿದನು.

ಶಮಿತಾಖಿಲವಿಘ್ನಸಂಸ್ತವಸ್ತ್ವಯಿತುಚ್ಛೋಪ್ಯುಪಯಾತ್ಯತುಚ್ಛತಾಮ್ ।
ಶುಚಿಶುಕ್ತಿಪುಟೇಂಬುಸಂಭೃತಂ ನನು ಮುಕ್ತಾಫಲತಾಂ ಪ್ರಪದ್ಯತೇ ॥

“ಸಮಸ್ತವಿಘ್ನಗಳನ್ನು ಶಾಂತಮಾಡಿದ ಜಿನೇಶ್ವರನೆ! ನಿನ್ನಲ್ಲಿ ಸ್ತೋತ್ರವು ತುಚ್ಛವಾಗಿದ್ದರೂ ಶ್ರೇಷ್ಠತ್ವವನ್ನು ಹೊಂದುತ್ತದೆ. ನಿರ್ಮಲವಾದ ಮುತ್ತಿನ ಚಿಪ್ಪಿನಲ್ಲಿ ತುಂಬಲ್ಪಟ್ಟ ನೀರು ಮುಕ್ತಾಫಲದ ರೂಪವನ್ನು ಹೊಂದುತ್ತದಲ್ಲವೇ ?

ಘಟಯಂತಿ ನ ವಿಘ್ನಕೋಟಯೋ
ನಿಕಟೇ ತ್ವತ್ಕ್ರಮಯೋರ್ನಿವಾಸಿನಾಮ್ ।
ಪಟವೋಪಿ ಫಲಂ ದವಾಗ್ನಿಭಿ-
ರ್ಭಯ[2]ಮಸ್ತ್ಯಂಬುಧಿಮಧ್ಯವರ್ತಿನಾಮ್ ॥ ೩೫೯ ॥

ನಿನ್ನ ಪಾದಗಳ ಸಮೀಪದಲ್ಲಿ ವಾಸಮಾಡುವವರಿಗೆ ಅನೇಕವಿಘ್ನಗಳು ಸಮರ್ಥಗಳಾಗಿದ್ದರೂ ಫಲವನ್ನುಂಟುಮಾಡುವುದಿಲ್ಲ. ಸಮುದ್ರಮಧ್ಯದಲ್ಲಿರುವವರಿಗೆ ಕಾಡ್ಗಿಚ್ಚುಗಳಿಂದ ಭಯವಿರುತ್ತದೆಯೇ ?

ಹೃದಯೇ ತ್ವಯಿ [3]ಸನ್ನಿಧಾಪಿತೇರಿಪವಸ್ತೇಭಿಭವಂ ವಿಧಿತ್ಸವಃ ।
ಅಮೃತಾಶಿಷು ಸತ್ಸು ಸಂತತಂ ವಿಷಭೇದಾರ್ಪಿತವಿಪ್ಲವಃ ಕುತಃ ॥

ಹೃದಯದಲ್ಲಿ ನೀನು ಸಮೀಪಸ್ಥನಾಗಿ ಮಾಡಲ್ಪಡುತ್ತಿರಲು ತಿರಸ್ಕಾರವನ್ನು ಮಾಡಲಿಚ್ಛಿಸುವವರಾದ ಶತ್ರುಗಳು ಯಾರಿರುತ್ತಾರೆ ?ಯಾವಾಗಲೂ ಅಮೃತವನ್ನು ಭುಂಜಿಸುವ ಸ್ವಭಾವವುಳ್ಳವರಾದ ಸತ್ಪುರುಷರಲ್ಲಿ ವಿಷಭೇದಗಳಿಂದ ಮಾಡಲ್ಪಡುವ ಲೂಟಿ–ಬಾಧೆಯು ಎಲ್ಲಿಂದ ಬರುವುದು ?

ಉಪಯಾಂತಿ ಸಮಸ್ತಸಂಪದೋ
ವಿಪದೋ ವಿಚ್ಯುತಿಮಾಪ್ನುವಂತ್ಯಲಮ್ ।
ವೃಷಭಂ ವೃಷಮಾರ್ಗದೇಶಿನಂ
ಝಷಕೇತುದ್ವಿಷ[4]ಮಾಪುಷಾಂ ಸತಾಮ್ ॥ ೩೬೧ ॥

ಧರ್ಮಮಾರ್ಗೋಪದೇಶಕನೂ ಮನ್ಮಥನ ಶತ್ರುವೂ ಆದ ವೃಷಭಸ್ವಾಮಿಯನ್ನು ಹೊಂದಿರುವವರಾದ ಸತ್ಪುರುಷರಿಗೆ ಸಕಲಸಂಪತ್ತಿಗಳು ಹತ್ತಿರಕ್ಕೆ ಬರುತ್ತವೆ. ವಿಪತ್ತಿಗಳು ಸಂಪೂರ್ಣವಾಗಿ ನಾಶವನ್ನು ಹೊಂದುತ್ತವೆ.

೧ ವಾಹನೇಭ್ಯಃ. ೨ ಅಸ್ತಿ ಕಿಂ. ೩ ಸನ್ನಿಧಾನೀಕೃತೇ. ೪ ಪ್ರಾಪ್ತವತಾಂ.

**ಇತ್ಥಂ ಭವಂತಮತಿಭಕ್ತಿಪಥಂ ನಿನೀಷೋಃ**
**ಪ್ರಾಗೇವ [೧]ಬಂಧಕಲಯಃ ಪ್ರಲಯಂ ವ್ರಜಂತಿ ।**
**ಪಶ್ಚಾದನಶ್ವರಮಯಾಚಿತಮಪ್ಯವಶ್ಯಂ**
**ಸಂಪತ್ಸ್ಯತೇಸ್ಯ ವಿಲಸದ್ಗುಣಭದ್ರ [೨]ಭದ್ರಮ್ ॥ ೩೬೨ ॥**

ಪ್ರಕಾಶಮಾನಗಳಾದ ಗುಣಗಳಿಂದ ಮಂಗಲಸ್ವರೂಪನಾಗಿರುವ ಭಗವಂತನೆ! ಈ ಪ್ರಕಾರವಾಗಿ ನಿನ್ನನ್ನು ಅಧಿಕವಾದ ಭಕ್ತಿಗೆ ಮಾರ್ಗಸ್ವರೂಪನನ್ನಾಗಿ ಹೊಂದಿಸಬೇಕೆಂಬ ಇಚ್ಛೆಯುಳ್ಳವನಾದ ಈ ಮನುಷ್ಯನಿಗೆ(ಗುಣಭದ್ರನಿಗೆ) ಮೊದಲೇ ಬಂಧವಾದ ದೋಷಗಳು ನಾಶವನ್ನು ಹೊಂದುತ್ತವೆ. ಬಳಿಕ ನಾಶರಹಿತವಾದ ಮಂಗಲವು(ಮೋಕ್ಷಸುಖವು) ಪ್ರಾರ್ಥಿಸಲ್ಪಡದಿದ್ದರೂ ಅವಶ್ಯವಾಗಿ ಹೊಂದಲ್ಪಡುವುದು.

**ಪರಿಣತಪರಿತಾಪಾತ್ಸ್ವೇದಧಾರೀ ವಿಲಕ್ಷೋ**
**ವಿಗಲಿತವಿಭುಭಾವೋ ವಿಹ್ವಲೀಭೂತಚೇತಾಃ ।**
**[೩]ಅಧಿತ ವಿಧಿವಿಧಾನಂ ಚಿಂತಯಂಶ್ಚಕ್ರಿಸೂನು-**
**ರ್ವಿರಹವಿಧುರವೃತ್ತಿಂ ವೀರಲಕ್ಷ್ಮೀವಿಯೋಗೇ ॥ ೩೬೩ ॥**

ಚಕ್ರವರ್ತಿಯ ಪುತ್ರನಾದ ಅರ್ಕಕೀರ್ತಿಯು ವೀರಸ್ತ್ರೀಯ ವಿಯೋಗವಾಗುತ್ತಿರಲು(ತಾನು ಸೋಲುತ್ತಿರಲು) ಪರಿಪಕ್ವವಾದ ಸಂತಾಪದಿಂದ ಬೆವರನ್ನು ಧರಿಸಿದವನೂ ವಿಸ್ಮಯದಿಂದ ಕೂಡಿದವನೂ ಜಾರಿಹೋದ-ನಷ್ಟವಾದ ಪ್ರಭುಭಾವವುಳ್ಳವನೂ(ತಾನು ಪ್ರಭುವೆಂಬ ಗರ್ವವನ್ನು ಬಿಟ್ಟವನೂ) ಬೆಂಡಾದ ಮನಸ್ಸುಳ್ಳವನೂ ದೈವವಿಲಾಸವನ್ನು ಚಿಂತಿಸುವವನೂ ಆಗಿ ವಿರಹದಿಂದ ವಿಹ್ವಲನಾದವನ ವ್ಯಾಪಾರವನ್ನು ಧರಿಸಿದನು.

**ಯೇಷಾ[೪]ಮಯಂ ಜಿತಸುರಃ ಸಮರೇ ಸಹಾಯ-**
**ಸ್ತಾನಪ್ಯಹಂ ಕೃತನತಿಃ ಸಮುಪಾಶ್ರಯಾಮಿ ।**
**ಧುರ್ಯೋಯಮೇವ ಯದಿ ಕಾತ್ರ ವಿಲಂಬನೇತಿ**
**ಮತ್ವೇವ ಮಂಕ್ಷು ಸಮಿಯಾಯ ಜಯಂ ಜಯಶ್ರೀಃ ॥ ೩೬೪ ॥**

"ಮೊದಲು ಮಧ್ಯಮಮ್ಲೇಚ್ಛಖಂಡದಲ್ಲಿ ವ್ಯಂತರದೇವತೆಗಳನ್ನು ಜಯಿಸಿದವನಾದ ಈ ಜಯಕುಮಾರನು ಯಾರಿಗೆ ಯುದ್ಧದಲ್ಲಿ ಸಹಾಯಕನಾದನೋ ಅವರನ್ನು ನಾನು ಪ್ರೀತಿಸಿದವಳಾಗಿ ಆಶ್ರಯಿಸುತ್ತೇನೆ, ಅವರಲ್ಲಿ ಈ ಜಯಕುಮಾರನೇ ಧುರಂಧರನಾಗಿರುವ ಪಕ್ಷದಲ್ಲಿ ಇವನ ವಿಷಯದಲ್ಲಿ ಸಾವಕಾಶವೇನು ?" ಎಂದು ತಿಳಿದೋ ಎಂಬಂತೆ ಶೀಘ್ರವಾಗಿ ಜಯಲಕ್ಷ್ಮಿಯು ಜಯಕುಮಾರನನ್ನು ಹೊಂದಿದಳು.

**[೧]ಸ ಬಹುತರಮರಾಜ[೨]ತ್ಸ್ನೋಚ್ಛಿತಾನ್ ಶತ್ರುಪಾಂಸೂನ್**
**ದ್ರುತಮಿತಿ ಶಮಯಿತ್ವಾ ವೃಷ್ಟಿಭಿಃ ಸಾಯಕಾನಾಮ್ ।**
**[೩]ಉಪಗತಹರಿಭೂಮಿಃ ಪ್ರಾಪ್ಯ ಭೂರಿ[೪]ಪ್ರತಾಪಂ**
**ದಿನಕರ ಇವ [೫]ಕನ್ಯಾಸಂಪ್ರಯೋಗಾಭಿಲಾಷೀ ॥ ೩೬೫ ॥**

ಆ ಜಯಕುಮಾರನು ಮೇಲಕ್ಕೆ ಎದ್ದ ಶತ್ರುಗಳೆಂಬ ಧೂಳುಗಳನ್ನು ಬಾಣಗಳ ಮಳೆಗಳಿಂದ ಶೀಘ್ರವಾಗಿ ಈ ಪ್ರಕಾರವಾಗಿ ಶಾಂತಮಾಡಿ, (ಮಳೆಯನ್ನು ಸುರಿದು ಧೂಳನ್ನು ಶಮನಮಾಡಿದ ಧರ್ಮದಿಂದ) ಇಂದ್ರಪದವಿಯನ್ನು ಹೊಂದಿದವನೂ ಸುಲೋಚನೆಯ ಸಂಬಂಧವನ್ನಿಚ್ಛಿಸುವವನೂ ಆಗಿ ಅಧಿಕವಾದ ಪ್ರಭಾವವನ್ನು ಹೊಂದಿ, ಸಿಂಹರಾಶಿಸ್ಥಾನದಲ್ಲಿರುವವನೂ ಕನ್ಯಾರಾಶಿಯ ಸಂಬಂಧವನ್ನಿಚ್ಛಿಸುವವನೂ ಆದ ಸೂರ್ಯನು ಅಧಿಕವಾದ ತಾಪವನ್ನು ಹೊಂದಿ ವಿಶೇಷವಾಗಿ ಪ್ರಕಾಶಿಸುವಂತೆ, ಅಧಿಕವಾಗಿ ಪ್ರಕಾಶಿಸಿದನು.

**ಸೌಭಾಗ್ಯೇನ ಯದಾ ಸ್ವವಕ್ಷಸಿ ಧೃತಾ ಮಾಲಾ ತದೈವಾಪರಂ**
**ವೀರೋ ವೀಧ್ರಮವಾರ್ಯವೀರ್ಯವಿಭವೋ [೬]ವಿಭ್ರಸ್ಯ ವಿಶ್ವದ್ವಿಷಃ ।**
**ವೀರಶ್ರೀವಿಹಿತಂ ದಧೌ ಸ ಶಿರಸಾಮ್ಲಾನಂ ಯಶಃಶೇಖರಂ**
**ಲಕ್ಷ್ಮೀವಾನ್ ವಿದಧಾತಿ [೭]ಸಾಹಸಸಖಃ ಕಿಂ ವಾ ನ ಪುಣ್ಯೋದಯೇ ॥**

ಯಾವಾಗ ತನ್ನ ಎದೆಯಲ್ಲಿ ಪುಣ್ಯದಿಂದ ಸ್ವಯಂವರಮಾಲೆಯು ಧರಿಸಲ್ಪಟ್ಟಿತೋ ಆಗಲೇ ತಡೆಯಲಾಗದ ಪರಾಕ್ರಮದ ಸಂಪತ್ತಿಯುಳ್ಳವನೂ ವೀರನೂ ಆದ ಜಯಕುಮಾರನು ಸಮಸ್ತ ಶತ್ರುಗಳನ್ನು ಕೆಳಕ್ಕೆ ಬೀಳಿಸಿ ವೀರಲಕ್ಷ್ಮಿಯಿಂದ ಮಾಡಲ್ಪಟ್ಟುದೂ ನಿರ್ಮಲವೂ ಬಾಡದಿರುವುದೂ ಆದ ಬೇರೊಂದು ಯಶಸ್ಸೆಂಬ ಕಿರೀಟವನ್ನು ಧರಿಸಿದನು. ಐಶ್ವರ್ಯವಂತನೂ ಸಾಹಸವೇ ಸ್ನೇಹಿತನಾಗಿರುವವನೂ ಆದ ಮನುಷ್ಯನು ಪುಣ್ಯಕರ್ಮದ ಉದಯವಿರುತ್ತಿರಲು ಏನನ್ನು ತಾನೆ ಮಾಡುವುದಿಲ್ಲ ?

**[೮]ಜಯೋ[೯]ಯಾತ್ಸೋ[೧೦]ಯಶ್ಚ ಪ್ರಭವತಿ ಗುಣೇಭ್ಯೋ ಗುಣಗಣಃ**
**ಸದಾಚಾರಾತ್ಸೋಪಿ ಶ್ರುತವಿಹಿತವೃತ್ತಿಃ ಶ್ರುತಮಪಿ ।**
**ಪ್ರಣೀತಂ ಸರ್ವಜ್ಞೈರ್ವಿದಿತಸಕಲಾಸ್ತೇ ಖಲು ಜಿನಾ-**
**ಸ್ತತಸ್ತಾನ್ ವಿದ್ವಾನ್ ಸಂಶ್ರಯತು ಜಯಮಿಚ್ಛನ್ ಜಯ ಇವ ॥**

ಪುಣ್ಯದಿಂದ ವಿಜಯವುಂಟಾಗುವುದು. ಗುಣಗಳಿಂದ ಪುಣ್ಯವುಂಟಾಗುವುದು. ಗುಣಗಳ ಸಮೂಹವು ಸದಾಚಾರದಿಂದುಂಟಾಗುವುದು. ಸದಾಚಾರವು ಶಾಸ್ತ್ರದಿಂದ ಮಾಡಲ್ಪಟ್ಟ ವರ್ತನವಾಗಿರುವುದು. ಶಾಸ್ತ್ರವಾದರೋ ಸರ್ವಜ್ಞರಿಂದ ರಚಿಸಲ್ಪಟ್ಟುದಾಗಿರುತ್ತದೆ. ಸಮಸ್ತ ವಿಷಯಗಳನ್ನು ತಿಳಿದಿರುವವರಾದ ಆ ಸರ್ವಜ್ಞರೇ ಜಿನರು. ಆದುದರಿಂದ, ಜಯಕುಮಾರನಂತೆ, ಜಯವನ್ನಿಚ್ಛಿಸುವವನಾದ ಆ ವಿದ್ವಾಂಸನು ಆ ಜಿನರನ್ನು ಹೊಂದಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಜಯವಿಜಯವರ್ಣನಂ ನಾಮ ಚತುಶ್ಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
"ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಜಯಕುಮಾರನ ವಿಜಯವರ್ಣನವೆಂಬ
ನಲ್ವತ್ತನಾಲ್ಕನೆಯ ಪರ್ವವು ಸಂಪೂರ್ಣವಾದುದು

---

೧ ಬಂಧದೋಷಾಃ. ೨ ಕಲ್ಯಾಣಂ. ೩ ಧರತಿ ಸ್ಮ. ೪ ಜಯಕುಮಾರಃ.

೧ ಜಯಕುಮಾರಃ. ೨ ಸಮುನ್ನತಾನ್. ೩ ಪ್ರಾಪ್ತಶಕ್ರಪದಃ ಪ್ರಾಪ್ತಸಿಂಹರಾಶಿಸ್ಥಾನಶ್ಚ. ೪ ಪ್ರಭಾವಂ. ೫ ಸುಲೋಚನಾ ಕನ್ಯಾರಾಶಿ ಸಂಪ್ರಯೋಗಶ್ಚ. ೬ ಅಧಃಪಾತಯಿತ್ವಾ. ೭ ಸಾಹಸಮೇವ ಸಖಾ ಯಸ್ಯ ಸಃ. ೮ ವಿಜಯಃ. ೯ ಪುಣ್ಯಾತ್. ೧೦ ಪುಣ್ಯಂ.

# ಅಥ ಪಂಚಚತ್ವಾರಿಂಶತ್ತಮಂ ಪರ್ವ

**ಅಥ ಮೇಘಸ್ವರೋ ಗತ್ವಾ [೧]ಪ್ರಥಮಾನಪರಾಕ್ರಮಃ ।**
**ಮಥಿತಾರಾತಿದುರ್ಗರ್ವಃ ಪೃಥುಂ ಸ್ವಾವಾಸಮಾಸ್ಥಿತಃ ॥ ೧ ॥**

ಅನಂತರದಲ್ಲಿ ಪ್ರಕಾಶಮಾನವಾದ ಪರಾಕ್ರಮವುಳ್ಳವನೂ ಶತ್ರುಗಳ ದುರಹಂಕಾರವನ್ನು ನಾಶಮಾಡಿದವನೂ ಆದ ಮೇಘಸ್ವರನು ವಿಶಾಲವಾದ ತನ್ನ ಮನೆಗೆ ಹೋಗಿ ಅಲ್ಲಿದ್ದನು.

**ಸ್ವಯಂ ಚ ಸಂಚಿತಾಘಾನಿ ಹಂತುಂ ಸ್ತುತ್ವಾ ಜಿನೇಶಿನಃ ।**
**ಅಕಂಪನಮಹಾರಾಜಃ ಸಮಾಲೋಕ್ಯ ಸುಲೋಚನಾಮ್ ॥ ೨ ॥**

**ಕೃತಾಹಾರಪರಿತ್ಯಾಗನಿಯೋಗಾಮಾ [೨]ಯುಧಸ್ತದಾ ।**
**[೩]ಸುಪ್ರಭಾಕೃತಪರ್ಯಾಪ್ತಿಂ ಕಾಯೋತ್ಸರ್ಗೇಣ ಸುಸ್ಥಿತಾಮ್ ॥ ೩ ॥**

**ಸರ್ವಶಾಂತಿಕರೀಂ ಧ್ಯಾತಿಂ ಧ್ಯಾಯಂತೀಂ ಸ್ಥಿರಚೇತಸಾ ।**
**ಧರ್ಮ್ಯಾ[೪]ಮೈಕಾಗ್ರ್ಯನಿಷ್ಪಂದಾಂ ಜಿನೇಂದ್ರಾಭಿಮುಖೀಂ ಮುದಾ ॥ ೪ ॥**

**ಸಮಭ್ಯರ್ಚ್ಯ ಸಮಾಶ್ವಾಸ್ಯ ಪ್ರಶಸ್ಯ ಬಹುಶೋ ಗುಣಾನ್ ।**
**ಭವನ್ಮಾಹಾತ್ಮ್ಯತಃ ಪುತ್ರಿ ಶಾಂತಂ ಸರ್ವಮಮಂಗಲಮ್ ॥ ೫ ॥**

**ಪ್ರತಿಧ್ವಸ್ತಾನಿ ಪಾಪಾನಿ [೫]ನಿಯಾಮಮುಪಸಂಹರ ।**
**ಇತ್ಯುಕ್ತ್ವಾ ಕ್ಲಿಪ್ತಕರಾಮುಕ್ತ್ವಾ ಪುರಸ್ಕೃತ್ಯ ಸುತಾಂ ಸುತೈಃ ॥ ೬ ॥**

**ಹೃಷ್ಟಃ ಸುಪ್ರಭಯಾ ಚಾಮಾ ರಾಜಗೇಹಂ ಪ್ರವಿಶ್ಯ [೬]ಸಃ ।**
**ಯಾಹಿ ಪುತ್ರಿ ನಿಜಾಗಾರಂ ವಿಸರ್ಜ್ಯೇತಿ ಸುಲೋಚನಾಮ್ ॥ ೭ ॥**

ಅಕಂಪನಮಹಾರಾಜನು ತಾನೂ ಸಂಚಿತಕರ್ಮಗಳನ್ನು ನಾಶಮಾಡುವುದಕ್ಕೋಸ್ಕರ ಜಿನೇಶ್ವರರನ್ನು ಸ್ತುತಿಸಿ ಆಗ ಯುದ್ಧವು ಪೂರ್ತಿಯಾಗುವವರೆಗೂ ಆಹಾರಪರಿತ್ಯಾಗದ ನಿಯಮವನ್ನು ಮಾಡಿದವಳೂ ಸುಲೋಚನೆಯ ತಾಯಿಯಾದ ಸುಪ್ರಭಾದೇವಿಯಿಂದ ಮಾಡಲ್ಪಟ್ಟ ಶುಶ್ರೂಷೆಯುಳ್ಳವಳೂ ಕಾಯೋತ್ಸರ್ಗದಿಂದ ನಿಂತಿರುವವಳೂ ಧರ್ಮದಿಂದ ತಪ್ಪದಿರುವುದೂ ಏಕಾಗ್ರತೆಯಿಂದ ಚಲಿಸದಿರುವುದೂ ಸರ್ವರಿಗೂ ಶಾಂತಿಯನ್ನುಂಟುಮಾಡುವುದೂ ಆದ ಧ್ಯಾನವನ್ನು ಸ್ಥಿರಮನಸ್ಸಿನಿಂದ ಮಾಡುವವಳೂ ಜಿನೇಶ್ವರನಿಗೆ ಅಭಿಮುಖಳೂ ಆದ ಸುಲೋಚನೆಯನ್ನು ನೋಡಿ ಸಂತೋಷದಿಂದ ಪೂಜಿಸಿ ಸಮಾಧಾನಪಡಿಸಿ ಆಕೆಯ ಗುಣಗಳನ್ನು ಬಹಳವಾಗಿ ಹೊಗಳಿ ''ಎಲೈ ಮಗಳೆ! ನಿನ್ನ ಮಹಿಮೆಯಿಂದ ಸಮಸ್ತವಾದ ಅಮಂಗಲವು ಶಾಂತವಾಯಿತು. ಪಾಪಗಳು ನಾಶಮಾಡಲ್ಪಟ್ಟುವು. ನಿಯಮವನ್ನು ಮುಗಿಸು–ಬಿಡು,'' ಎಂದು ಕೈಗಳನ್ನೆತ್ತಿರುವವಳಾದ ಮಗಳನ್ನು ಕುರಿತು ಹೇಳಿ ಪುರಸ್ಕರಿಸಿ ಮಕ್ಕಳೊಡನೆಯೂ ಸುಪ್ರಭಾದೇವಿಯೊಡನೆಯೂ ಸಂತುಷ್ಟನಾದ ಆ ಅಕಂಪನಮಹಾರಾಜನು ಅರಮನೆಯನ್ನು ಪ್ರವೇಶಿಸಿ ''ಮಗಳೆ! ನಿನ್ನ ಮನೆಗೆ ಹೋಗು'' ಎಂದು ಸುಲೋಚನೆಯನ್ನು ಬಿಟ್ಟು

**ಅನ್ಯಥಾ ಚಿಂತಿತಂ ಕಾರ್ಯಂ ದೈವೇನ ಕೃತಮನ್ಯಥಾ ।**
**ಇತಿ ಕರ್ತವ್ಯತಾಮೂಢಃ [೭]ಸುಶ್ರುತಾದಿಭಿರಿದ್ಧಧೀಃ ॥ ೮ ॥**

**[೮]ಔತ್ಪತ್ತಿಕ್ಯಾದಿಧೀಭೇದೈರ್ವಾಲೋಚ್ಯ ಸಚಿವೋತ್ತಮೈಃ ।**
**ವಿದ್ಯಾಧರಧರಾಧೀಶಾನ್ [೯]ವಿಪಾಶೀಕೃತ್ಯ ಕೃತ್ಯವಿತ್ ॥ ೯ ॥**

೧ ಪ್ರಕಾಶಮಾನ. ೨ ಯುದ್ಧಪರ್ಯಂತಂ. ೩ ನಿಜಜನನೀವಿಹಿತರಕ್ಷಾಜಿನಪೂಜಾದಿಪರಿಚರ್ಯಾಂ. ೪ ಏಕಾಗ್ರತ್ವೇನ ನಿಶ್ಚಲಾಂ. ೫ ನಿಯಮಂ. ೬ ಅಕಂಪನಃ. ೭ ಸುಶ್ರುತಪ್ರಮುಖಮಂತ್ರಿಭಿಃ. ೮ ಜನ್ಮವ್ರತನಿಯಮೌಷಧತಪೋಭಿಃ ಉತ್ಪನ್ನಜ್ಞಾನಭೇದ್ಯೈರಿವ. ೯ ನಾಗಪಾಶಬಂಧನಂ ಮೋಚಯಿತ್ವಾ.

**ವಿಶ್ವಾನಾಶ್ವಾಸ್ಯ ತದ್ಯೋಗ್ಯೈಃ [೧]ಸಾಮಸಾರೈ[೨]ರುದೀರಿತೈಃ ।**
**ಸಮ್ಯಗ್ವಿಹಿತಸತ್ಕಾರಃ ಸ್ನಾನ[೩]ವಸ್ತ್ರಾಶನಾದಿಭಿಃ ॥ ೧೦ ॥**

''ಬೇರೆ ವಿಧವಾಗಿ ಯೋಚಿಸಲ್ಪಟ್ಟ ಕಾರ್ಯವು ದೈವದಿಂದ ಇನ್ನೊಂದು ವಿಧವಾಗಿ ಮಾಡಲ್ಪಟ್ಟಿತು'' ಎಂದು ಮಾಡಬೇಕಾದ ಕಾರ್ಯವನ್ನು ತಿಳಿಯದವನೂ ಜನ್ಮವ್ರತ ನಿಯಮ ಔಷಧ ತಪಸ್ಸುಗಳಿಂದುಂಟಾದ ಜ್ಞಾನಭೇದಗಳಂತಿರುವ ಸುಶ್ರುತನೇ ಮೊದಲಾದ ಮಂತ್ರಿಶ್ರೇಷ್ಠರುಗಳೊಡನೆ ಆಲೋಚಿಸಿ ಪ್ರಕಾಶಮಾನವಾದ ಬುದ್ಧಿಯುಳ್ಳವನೂ ನಾಗಪಾಶಬಂಧನವನ್ನು ಬಿಡಿಸಿ ಮಾಡಬೇಕಾದ ಕಾರ್ಯವನ್ನು ತಿಳಿದವನೂ ಸಮಸ್ತ ವಿದ್ಯಾಧರಾಧಿಪತಿಗಳನ್ನು ಅವರಿಗೆ ಯೋಗ್ಯಗಳೂ ಪ್ರಿಯವಚನಗಳಿಂದ ಸಾರಭೂತವಾದುವುಗಳೂ ಆದ ವಚನಗಳಿಂದ ಸಮಾಧಾನಪಡಿಸಿ ಸ್ನಾನ ವಸ್ತ್ರ ಭೋಜನಾದಿಗಳಿಂದ ಚೆನ್ನಾಗಿ ಸತ್ಕಾರವನ್ನು ಮಾಡಿದವನೂ

**[೪]ಕುಮಾರ ವಂಶೌ ಯುಷ್ಮಾಭಿರ್ವಿಹಿತೌ ವರ್ಧಿತೌ ಚ ನಃ ।**
**ತರು[೫]ರ್ಗರಮಯೋಪ್ಯೇತಿ ಯತೋಭೂನ್ನ ತತಃ ಕ್ಷಯಮ್ ॥ ೧೧ ॥**

''ಅರ್ಕಕೀರ್ತಿಕುಮಾರನೆ! ನಮ್ಮಗಳ ನಾಥ ಸೋಮವಂಶಗಳೂ ನಿಮ್ಮಿಂದ ಮಾಡಲ್ಪಟ್ಟಿರುತ್ತವೆ ಮತ್ತು ಬೆಳೆಸಲ್ಪಟ್ಟಿರುತ್ತವೆ. ವೃಕ್ಷವು ವಿಷಮಯವಾಗಿದ್ದರೂ ಯಾವ ಕಾರಣದಿಂದಾದುದೋ ಅದರಿಂದ ನಾಶವನ್ನು ಹೊಂದುವುದಿಲ್ಲ.

**ಪುತ್ರಬಂಧುಪದಾತೀನಾಮಪರಾಧಶತಾನ್ಯಪಿ ।**
**ಕ್ಷಮಂತೇ ಹಿ ಮಹಾತ್ಮಾನಸ್ತದ್ಧಿ ತೇಷಾಂ ವಿಭೂಷಣಮ್ ॥ ೧೨ ॥**

ಮಹಾತ್ಮರು ಪುತ್ರರ ಬಂಧುಗಳ ಮತ್ತು ಕಾಲಾಳುಗಳ ನೂರಾರು ತಪ್ಪುಗಳನ್ನೂ ಮನ್ನಿಸುತ್ತಾರಲ್ಲವೇ ? ಅದು ಅವರಿಗೆ ಭೂಷಣವಲ್ಲವೆ ?

**ಭವೇದ್ದೈವಾದಪಿ ಸ್ವಾಮಿನ್ಯಪರಾಧವಿಧಾಯಿನಾಮ್ ।**
**ಆಕಲ್ಪಮಯಶಃ ಪಾಪಂ ಚಾ[೬]ನುಬಂಧನಿಬಂಧನಮ್ ॥ ೧೩ ॥**

ದುರದೃಷ್ಟದಿಂದಲೂ ಪ್ರಭುವಿನಲ್ಲಿ ತಪ್ಪು ಮಾಡಿದವರಿಗೆ ಪಡೆಯಲ್ಪಡದಿರುವ ವಸ್ತುಗಳ ಲಾಭ ಪಡೆಯಲ್ಪಟ್ಟ ವಸ್ತುಗಳ ರಕ್ಷಣ ರಕ್ಷಿಸಲ್ಪಟ್ಟ ವಸ್ತುಗಳ ವೃದ್ಧಿಮಾಡುವಿಕೆಯೆಂಬೀ ರೂಪವಾದ ಅನುಬಂಧವೇ ಕಾರಣವಾಗಿರುವ ಅಪಕೀರ್ತಿಯೂ ಪಾಪವೂ ಕಲ್ಪಕಾಲದವರೆಗೆ ಉಂಟಾಗುವುವು.

**ಅಪರಾಧಃ ಕೃತೋಽಸ್ಮಾಭಿರೇಕೋಽಯಮವಿವೇಕಿಭಿಃ ।**
**ವಯಂ [೭]ವೋ ಬಂಧುಭೃತ್ಯಾಸ್ತತ್ಕುಮಾರ ಕ್ಷಂತುಮರ್ಹಸಿ ॥ ೧೪ ॥**

ಅರ್ಕಕೀರ್ತಿಕುಮಾರನೆ! ಅವಿವೇಕಿಗಳಾದ ನಮ್ಮಗಳಿಂದ ಈ ಒಂದು ಅಪರಾಧವು ಮಾಡಲ್ಪಟ್ಟಿತು. ನಾವುಗಳು ನಿಮಗೆ ಬಂಧುಗಳೂ ಭೃತ್ಯರೂ ಆಗಿರುವುದರಿಂದ ಕ್ಷಮಿಸುವುದಕ್ಕೆ ಅರ್ಹನಾಗಿರುತ್ತಿ.

**ಏಷಾ ಕೀರ್ತಿರಘಂ ಚೈತತ್ಪ್ರಸಾದಾತ್ತೇ ಪ್ರಶಾಮ್ಯತಿ ।**
**ಶಾಪಾನುಗ್ರಹಯೋಃ ಶಕ್ತಸ್ತ್ವಂ ವಿಶುದ್ಧಿಂ ವಿಧೇಹಿ ನಃ ॥ ೧೫ ॥**

ಈ ಅಪಕೀರ್ತಿಯೂ ಈ ಪಾಪವೂ ನಿನ್ನ ಅನುಗ್ರಹದಿಂದ ಶಾಂತವಾಗುವುವು. ಶಾಪಾನುಗ್ರಹಗಳಲ್ಲಿ ಸಮರ್ಥನಾದ ನೀನು ನಮಗೆ ವಿಶೇಷವಾದ ಶುದ್ಧಿಯನ್ನು ಕೊಡು.

೧ ಸಾಮ್ನಾ ಸಾರೈಃ. ೨ ವಚನೈಃ. ೩ ವಸ್ತ್ರಾಸನಾದಿಭಿರಿತ್ಯಪಿ ಪಾಠಃ. ೪ ಅರ್ಕಕೀರ್ತೇ. ೫ ವಿಷಮಯಃ. ೬ ಅಲಬ್ಧಲಾಭಃ ಲಬ್ಧಪರಿರಕ್ಷಣಂರಕ್ಷಿತವರ್ಧನಂ ಚೇತ್ಯನುಬಂಧಾಸ್ತೇ ಏವ ನಿಬಂಧನಂ ಕಾರಣಂ ಯಸ್ಯ ತತ್. ೭ ಯುಷ್ಮಾಕಂ.

ತಮ್ಮ ದುರ್ನೀತಿಯಿಂದಲೂ ನಾಚಿಕೆಯಿಂದಲೂ ದೂರಮಾಡಲ್ಪಟ್ಟ ವೈರವುಳ್ಳವರಾದ ಆ ರಾಜರುಗಳು ತಂತಮ್ಮ ಪಟ್ಟಣವನ್ನು ಕುರಿತು ಹೋದರು. ದೈವದಿಂದುಂಟಾದ ಅಪರಾಧಕ್ಕೆ ಶೀಘ್ರವಾಗಿ ಯಾವುದು ಪ್ರತೀಕಾರವನ್ನು ಮಾಡುವುದೋ ಅದಲ್ಲವೇ ಬುದ್ಧಿ ?

**ತದಾ [೧]ಪೂರ್ವೋದಿತೋ ದೇವಃ ಸಮಾಗತ್ಯ ಸ್ವಸಂಪದಾ ।**
**ಸುಲೋಚನಾವಿವಾಹೋರುಕಲ್ಯಾಣಂ [೨]ಸಮುಪಾದಯತ್ ॥ ೩೨ ॥**

ಆಗ ಮೊದಲು ಸ್ವಯಂವರನಿರ್ಮಾಣದಲ್ಲಿ ಹೇಳಲ್ಪಟ್ಟ ಚಿತ್ರಾಂಗದದೇವನು ಬಂದು ತನ್ನ ಸಂಪತ್ತಿಯಿಂದ ಸುಲೋಚನೆಯ ವಿವಾಹದ ಉತ್ಕೃಷ್ಟವಾದ ಮಂಗಳವನ್ನು ಸಮಾಪ್ತಿಮಾಡಿದನು.

**ಮೇಘಪ್ರಭಸುಕೇತ್ವಾದಿಸತ್ಸಹಾಯಾನ್ ಸಹಾನುಜಃ ।**
**ಜಯೋಪ್ಯಗಮಯತ್ಸರ್ವಾನ್ ಸಂತರ್ಪ್ಯಾರ್ಘ್ಯೈ[೩]ರ್ಬಹುಪ್ರಿಯಃ ॥ ೩೩ ॥**

ಅನೇಕಮಿತ್ರರುಳ್ಳವನೂ ತಮ್ಮಂದಿರೊಡನೆ ಕೂಡಿರುವವನೂ ಆದ ಜಯಕುಮಾರನು ಮೇಘಪ್ರಭ ಸುಕೇತು ಮೊದಲಾದ ಉತ್ತಮಸಹಾಯಕರಾದ ಎಲ್ಲರನ್ನೂ ಉತ್ತಮಪದಾರ್ಥಗಳಿಂದ ತೃಪ್ತಿಪಡಿಸಿ ಕಳುಹಿಸಿದನು.

**ನಾಥವಂಶಾಗ್ರಣೀಶ್ಚಾಮಾ ಜಾಮಾತ್ರಾಲೋಚ್ಯ ಸತ್ವರಮ್ ।**
**ಸುಧೀಃ ಸ್ವಗೃಹಸಾರಾಣಿ ಬಧ್ವಾ ರತ್ನಾನ್ಯುಪಾಯನಮ್ ॥ ೩೪ ॥**

**ವಿದಿತಪ್ರಸ್ತುತಾರ್ಥೋಸಿ ಯಥಾ[೪]ಸೌ ನಃ ಪ್ರಸೀದತಿ ।**
**ತಥಾ ಕುರ್ವಿತಿ ಚಕ್ರೇಶಂ ಸುಮುಖಾಖ್ಯಮಜೀಗಮತ್ ॥ ೩೫ ॥**

ನಾಥವಂಶಶ್ರೇಷ್ಠನೂ ಶ್ರೇಷ್ಠವಾದ ಬುದ್ಧಿಯುಳ್ಳವನೂ ಆದ ಅಕಂಪನ ಮಹಾರಾಜನು ಅಳಿಯನಾದ ಜಯಕುಮಾರನೊಡನೆ ಆಲೋಚಿಸಿ ಶೀಘ್ರವಾಗಿ ತನ್ನಮನೆಯ ಸಾರವಾದ ರತ್ನಗಳನ್ನು ಕೈಗಾಣಿಕೆಯನ್ನಾಗಿ ಕಟ್ಟಿ ''ಪ್ರಕೃತಕಾರ್ಯವನ್ನು ತಿಳಿದವನಾಗಿರುತ್ತಿ. ಹೇಗೆ ಚಕ್ರವರ್ತಿಯು ನಮಗೆ ಪ್ರಸನ್ನನಾಗುತ್ತಾನೋ ಹಾಗೆ ಮಾಡು'' ಎಂಬುದಾಗಿ ಹೇಳಿ ಸುಮುಖನೆಂಬ ದೂತನನ್ನು ಚಕ್ರೇಶ್ವರನ ಬಳಿಗೆ ಆ ಕೈಗಾಣಿಕೆಯೊಡನೆ ಕಳುಹಿಸಿದನು.

**ಆಶು ಗತ್ವಾ ನಿವೇದ್ಯಾಸೌ ದೃಷ್ಟ್ವೇಶಂ ಧರಣೌ ತನುಮ್ ।**
**ಕ್ಷಿಪ್ತ್ವಾ ಪ್ರಣಮ್ಯ ದತ್ವಾ ಚ ಪ್ರಾಭೃತಂ [೫]ನಿಭೃತಾಂಜಲಿಃ ॥ ೩೬ ॥**

ಈ ಸುಮುಖನು ಶೀಘ್ರವಾಗಿ ಹೋಗಿ ತಿಳುಹಿ ಭರತೇಶ್ವರನನ್ನು ನೋಡಿ ಭೂಮಿಯಲ್ಲಿ ಶರೀರವನ್ನು ಪ್ರೇರಿಸಿ(ಬಿದ್ದು)ನಮಸ್ಕರಿಸಿ ಕೈಗಾಣಿಕೆಯನ್ನು ಕೊಟ್ಟು ಸ್ಥಿರವಾದ ಬೊಗಸೆಯುಳ್ಳವನಾಗಿ–ಕೈಮುಗಿದು

**ದೇವಸ್ಯಾನುಚರೋ ದೇವ ಪ್ರಣಮ್ಯಾಕಂಪನೋ ಭಯಾತ್ ।**
**ದೇವಂ ವಿಜ್ಞಾಪಯತ್ಯೇವಂ ಪ್ರಸಾದಂ ಕುರು ತಚ್ಛೃಣು ॥ ೩೭ ॥**

''ಎಲೈ ಪ್ರಭುವೆ ! ಸ್ವಾಮಿಯ ಸೇವಕನಾದ ಅಕಂಪನನು ಪ್ರಭುವನ್ನು ನಮಸ್ಕರಿಸಿ ಭಯದಿಂದ ಹೀಗೆ ವಿಜ್ಞಾಪಿಸುತ್ತಾನೆ:–ಅನುಗ್ರಹವನ್ನು ಮಾಡು, ಆ ವಿಜ್ಞಾಪನೆಯನ್ನು ಕೇಳು.

**ಸುಲೋಚನೇತಿ ನಃ [೬]ಕನ್ಯಾಸಾರಸ್ತದ್ವಿಹಿತಶ್ರಿಯೇ ।**
**ಸ್ವಯಂವರವಿಧಾನೇನ ಸಂಪ್ರಾದಾಯಿ ಜಯಾಯ ಸಾ ॥ ೩೮ ॥**

ಪ್ರಸಿದ್ಧಳಾದ ಸುಲೋಚನೆಯೆಂಬ ನಮ್ಮ ಕನ್ಯೆಯರಲ್ಲಿ ಶ್ರೇಷ್ಠಳಾದವಳು ನಿನ್ನಿಂದ ಐಶ್ವರ್ಯವುಳ್ಳವನಾಗಿ ಮಾಡಲ್ಪಟ್ಟಿರುವ ಜಯಕುಮಾರನಿಗೆ ಸ್ವಯಂವರ ವಿಧಿಯಿಂದ ಕೊಡಲ್ಪಟ್ಟಳು.

೧ ಸ್ವಯಂವರನಿರ್ಮಾಣೇ ಪ್ರೋಕ್ತವಿಚಿತ್ರಾಂಗದದೇವಃ. ೨ ಸಮಾಪ್ತಮಕಾರ್ಷೀತ್. ೩ ಬಹವಃ ಪ್ರಿಯಾಃ ಮಿತ್ರಾಣಿ ಯಸ್ಯ ಸಃ. ೪ ಚಕ್ರೀ. ೫ ಸ್ಥಿರಾಂಜಲಿಃ. ೬ ಕನ್ಯಾಸೂತ್ಕೃಷ್ಟಾ.

**ತತ್ರಾಗತ್ಯ ಕುಮಾರೋಪಿ ಪ್ರಾಕ್ ಸರ್ವಮನುಮತ್ಯ [೧]ತತ್ ।**
**ವಿದ್ಯಾಧರಧರಾಧೀಶೈಃ ಸುಪ್ರಸನ್ನೈಃ ಸಹ ಸ್ಥಿತಃ ॥ ೩೯ ॥**

ಆ ಸ್ವಯಂವರದಲ್ಲಿ ಅರ್ಕಕೀರ್ತಿಕುಮಾರನು ಬಂದು ಮೊದಲು ಆ ಸ್ವಯಂವರವಿಧಾನವನ್ನೆಲ್ಲ ಅನುಮತಿಸಿ–ಒಪ್ಪಿ ಸಂತುಷ್ಟನಾಗಿ ವಿದ್ಯಾಧರರಾಜರೊಡನೆಯೂ ಪೃಥ್ವೀಪತಿಗಳೊಡನೆಯೂ ಇದ್ದನು.

**ಪಶ್ಚಾತ್ಕೋಪಿ ಗ್ರಹಃ ಕ್ರೂರಃ ಸ್ಥಿತ್ವಾ ಸಹ ಶುಭಗ್ರಹಮ್ ।**
**ಖಲೋ ಬಲಾದ್ಯಥಾಸ್ಮಭ್ಯಂ ವೃಥಾ ಕೋಪಯತಿ ಸ್ಮ ತಮ್ ॥ ೪೦ ॥**

ಬಳಿಕ ಯಾವನೋ ದುಷ್ಟನು ಬಲತ್ಕಾರದಿಂದ, ಕ್ರೂರವಾದ ಗ್ರಹವು ಜತೆಯಲ್ಲಿದ್ದು ಶುಭಗ್ರಹವನ್ನು ಕ್ರೂರವನ್ನಾಗಿ ಮಾಡುವಂತೆ, ನಮ್ಮಗಳ ಮೇಲೆ ವ್ಯರ್ಥವಾಗಿ ಅರ್ಕಕೀರ್ತಿಗೆ ಕೋಪವನ್ನುಂಟುಮಾಡಿದನು.

**ವಿಜ್ಞಾತಮೇವ ದೇವೇನ ಸರ್ವಂ ತ[೨]ತ್ಸಂವಿಧಾನಕಮ್ ।**
**[೩]ಚಾರಚಕ್ಷುಶ್ಚ ವೇತ್ತ್ಯೇತತ್ಕಿಂ ಪುನಃ ಸಾವಧಿರ್ಭವಾನ್ ॥ ೪೧ ॥**

ಆ ವೃತ್ತಾಂತವೆಲ್ಲವೂ ಪ್ರಭುವಿನಿಂದ ತಿಳಿಯಲ್ಪಟ್ಟೇ ಇರುವುದು. ಗೂಢಚಾರರೆಂಬ ಕಣ್ಣುಗಳುಳ್ಳವನು ಈ ವಿಷಯವನ್ನು ತಿಳಿಯುತ್ತಾನೆಂದಮೇಲೆ ಅವಧಿಜ್ಞಾನವುಳ್ಳವನಾದ ನೀನು ತಿಳಿಯುವುದೇನಾಶ್ಚರ್ಯ ?

**ಕುಮಾರೋ ಹಿ ಕುಮಾರೋಸೌ ನಾಪರಾಧೋಸ್ತಿ ಕಶ್ಚನ ।**
**[೪]ತತ್ರ ತಸ್ಯ ಸದೋಷಾಃ ಸ್ಮೋ ವಯಮೇವ ಪ್ರಮಾದಿನಃ ॥ ೪೨ ॥**

ಈ ಅರ್ಕಕೀರ್ತಿಕುಮಾರನು ಬಾಲಕನಲ್ಲವೆ ? ಆ ಕಾರ್ಯದಲ್ಲಿ ಅವನ ಯಾವ ತಪ್ಪೂ ಇಲ್ಲ, ಅಪರಾಧವುಳ್ಳವರಾದ ನಾವೇ ಅಜಾಗರೂಕರಾಗಿರುತ್ತೇವೆ.

**[೫]ತಸ್ಮೈ ಕನ್ಯಾಂ ಗೃಹಾಣೇತಿ ನಾಸ್ಮಾಭಿಃ ಸಾ ಸಮರ್ಪಿತಾ ।**
**ಆರಾಧಕಸ್ಯ ದೋಷೋಸೌ ಯತ್ಪ್ರಕುಪ್ಯಂತಿ ದೇವತಾಃ ॥ ೪೩ ॥**

''ಕನ್ಯೆಯನ್ನು ಪರಿಗ್ರಹಿಸು'' ಎಂಬುದಾಗಿ ಜಯಕುಮಾರನಿಗೆ ಆ ಕನ್ಯೆಯನ್ನು ನಾವು ಕೊಡಲಿಲ್ಲ. ದೇವತೆಗಳು ಕೋಪಿಸಿಕೊಳ್ಳುತ್ತಾರೆನ್ನುವುದಿದು ಆರಾಧಕನ ದೋಷ. ಆರಾಧಕನ ದೋಷದಿಂದ ದೇವತೆಗಳು ಕೋಪಿಸಿಕೊಳ್ಳುವಂತೆ ತಮ್ಮ ತಪ್ಪಿನಿಂದ ಅರ್ಕಕೀರ್ತಿಯು ಕೋಪಿಸಿಕೊಂಡನೆಂದು ಭಾವವು.

**ಮಯೈವ ವಿಹಿತಾಃ ಸಮ್ಯಗ್ವರ್ಧಿತಾ ಬಂಧವೋಪಿ ನಃ ।**
**[೬]ಸ್ನಿಗ್ಧಾಶ್ಚ ಕಥಮೇತೇಷಾಂ ವಿದಧಾಮಿ ವಿನಿಗ್ರಹಮ್ ॥ ೪೪ ॥**

**ಇತ್ಯೇತದ್ದೇವ ಮಾ ಮಂಸ್ಥಾಃ ಸ್ಯಾತ್ಸದೋಷೋ ಯದಿ ತ್ವಯಾ ।**
**ಕುಮಾರೋಪಿ ನಿಗೃಹ್ಯೇತ ನ್ಯಾಯೋಯಂ ತ್ವದುಪಕ್ರಮಃ ॥ ೪೫ ॥**

ಎಲೈ ಪ್ರಭುವೆ ! ''ಇವರು ನನ್ನಿಂದಲೇ ಪ್ರಿಯರಾಗಿ ಮಾಡಲ್ಪಟ್ಟವರೂ ಚೆನ್ನಾಗಿ ಬೆಳಸಲ್ಪಟ್ಟವರೂ ನನಗೆ ಬಂಧುಗಳೂ ಸ್ನೇಹಿತರೂ ಆಗಿರುತ್ತಾರೆ. ಇವರಿಗೆ ಶಿಕ್ಷೆಯನ್ನು ಹೇಗೆಮಾಡುತ್ತೇನೆ ?'' ಈ ಪ್ರಕಾರವಾಗಿ ಈ ತಪ್ಪನ್ನು ತಿಳಿಯಬೇಡ. ''ಅರ್ಕಕೀರ್ತಿಕುಮಾರನು ಅಪರಾಧವುಳ್ಳವನಾದರೂ ನನ್ನಿಂದ ಶಿಕ್ಷಿಸಲ್ಪಡುವನು'' ಎಂಬೀ ನ್ಯಾಯವು ನಿನ್ನಿಂದ ಮೊತ್ತಮೊದಲು ಪ್ರಾರಂಭಿಸಲ್ಪಟ್ಟುದಾಗಿದೆ.

**ತದಾದಿಶ ವಿಧೇಯೋ[೭]ತ್ರ ಕೋದಂಡಸ್ತ್ರಿವಿಧೇಪಿ ನಃ ।**
**ಕಿಂ ವಧಃ ಕಿಂ ಪರಿಕ್ಲೇಶಃ ಕಿಂ ವಾರ್ಥಹರಣಂ ಪ್ರಭೋ ॥ ೪೬ ॥**

ಎಲೈ ಪ್ರಭುವೆ ! ಆದುದರಿಂದ ಆಜ್ಞೆಮಾಡು, ನಮಗೆ ಮೂರುವಿಧವಾದ ದಂಡದಲ್ಲಿ ಈ ದೋಷಕ್ಕೆ ಯಾವ ಶಿಕ್ಷೆಯು ಮಾಡಲ್ಪಡತಕ್ಕುದು ? ಏನು ವಧೆಯೋ ? ದುಃಖಪಡಿಸುವಿಕೆಯೋ ? ಅಥವಾ ದ್ರವ್ಯಾಪಹಾರವೋ ?

೧ ಸ್ವಯಂವರವಿಧಾನಂ. ೨ ವೃತ್ತಾಂತಂ. ೩ ಚಾರಾ ಗೂಢಪುರುಷಾ ಏವ ಚಕ್ಷುರ್ಯಸ್ಯ. ೪ ಸಂವಿಧಾನೇ. ೫ ಜಯಾಯ. ೬ ಸ್ನೇಹಿತಾಃ. ೭ ದೋಷೇ.

**ತವಾದೇಶವಿಧಾನೇನ ನಿತರಾಂ ಕೃತಿನೋ ವಯಮ್ ।**
**ಇಹಾಮುತ್ರ ಚ ತದ್ದೇವ ಯಥಾರ್ಥ[೧]ಮನುಶಾಧಿ ನಃ ॥ ೪೭ ॥**

ಎಲೈ ದೇವನೆ! ನಾವು ಈ ಲೋಕದಲ್ಲಿಯೂ ನಿನ್ನ ಆಜ್ಞಾವಿಧಾನದಿಂದ ಅಧಿಕವಾಗಿ ಪುಣ್ಯಶಾಲಿಗಳು. ಆದುದರಿಂದ ಯಥಾರ್ಥ–ದಂಡವನ್ನು ನಮಗೆ ವಿಧಿಸು.''

**ಇತಿ ಪ್ರಶ್ರಯಿಣೀಂ ವಾಣೀಂ ನಿಗದ್ಯ ಹೃದಯಪ್ರಿಯಾಮ್ ।**
**ಸುಮುಖೋ ರಾಜರಾಜಸ್ಯ ವ್ಯರಂಸೀತ್ಕರಸಂಜ್ಞಯಾ ॥ ೪೮ ॥**

ಈ ಪ್ರಕಾರವಾಗಿ ವಿನಯವುಳ್ಳುದೂ ಮನಸ್ಸಿಗೆ ಪ್ರಿಯವೂ ಆದ ಮಾತನ್ನು ಹೇಳಿ ಸುಮುಖನು ಚಕ್ರವರ್ತಿಯ ಕೈಯ ಸಂಜ್ಞೆಯಿಂದ ವಿರಾಮವನ್ನು ಹೊಂದಿದನು– ಸುಮ್ಮನಾದನು.

**ಸತಾಂ ವಚಾಂಸಿ ಚೇತಾಂಸಿ ಹರಂತ್ಯಪಿ ಹಿ [೨]ರಕ್ಷಸಾಮ್ ।**
**ಕಿಂ ಪುನಃ ಸಾಮಸಾರಾಣಿ[೩] [೪]ತಾದೃಶಾಂ [೫]ಸಮತಾದೃಶಾಮ್ ॥ ೪೯ ॥**

ಸತ್ಪುರುಷರ ವಚನಗಳು ರಾಕ್ಷಸರುಗಳ ಮನಸ್ಸುಗಳನ್ನೂ ಹರಣ ಮಾಡುತ್ತವೆ. ಸಂತೋಷಪಡಿಸುತ್ತವೆಂದು ಭಾವವು. ಸಮತ್ವವೆಂಬ ನೇತ್ರವುಳ್ಳವರಾದ ಅಂಥಾ ಸತ್ಪುರುಷರ ವಚನಗಳು ಪ್ರಿಯವಚನಗಳಿಂದ ಸಾರವುಳ್ಳುವಾಗಿದ್ದರೆ ಹೇಳುವುದೇನು ?

**ಇಹ್ಯೆಹೀತಿ ಪ್ರಸನ್ನೋಕ್ತ್ಯಾ ಪ್ರಫುಲ್ಲವದನಾಂಬುಜಃ ।**
**ಉಪಸಿಂಹಾಸನಂ ಚಕ್ರೀ [೬]ನಿಸೃಷ್ಟಾರ್ಥಂ ನಿವೇಶ್ಯ ತಮ್ ॥ ೫೦ ॥**

''ಇಲ್ಲಿ ಬಾ'' ಎಂಬ ಪ್ರಸನ್ನವಾದ ವಚನದಿಂದ ವಿಕಸಿತವಾದ ಮುಖ ಕಮಲವುಳ್ಳವನಾದ ಚಕ್ರವರ್ತಿಯು ಸಿಂಹಾಸನದ ಸಮೀಪದಲ್ಲಿ ಆ ಮುಖ್ಯ ದೂತನನ್ನು ಕುಳ್ಳಿರಿಸಿ

**ಅಕಂಪನೈಃ ಕಿಮಿತ್ಯೇವಮುದೀರ್ಯ ಪ್ರಹಿತೋ ಭವಾನ್ ।**
**[೭]ಪುರುಭ್ಯೋ ನಿರ್ವಿಶೇಷಾಸ್ತೇ ಸರ್ವಜ್ಯೇಷ್ಠಾಶ್ಚ ಸಂಪ್ರತಿ ॥ ೫೧ ॥**

''ಅಕಂಪನರಿಂದ ಈ ಪ್ರಕಾರವಾಗಿ ಹೇಳಲ್ಪಟ್ಟು ನೀನು ಕಳುಹಲ್ಪಟ್ಟಿರುವೆಯಾ ? ಎಲ್ಲರಿಗೂ ಹಿರಿಯರಾದ ಆ ಅಕಂಪನರು ಈಗ ಪುರು–ವೃಷಭಜಿನೇಶ್ವರರಿಗೆ ಸಮಾನರಾಗಿರುತ್ತಾರೆ.

**ಗೃಹಾಶ್ರಮೇ ತ ಏವಾರ್ಚ್ಯಾಸ್ತೈರೇವಾಹಂ ಚ ಬಂಧುಮಾನ್ ।**
**ನಿಷೇದ್ಧಾರಃ ಪ್ರವೃತ್ತಸ್ಯ ಮಮಾಪ್ಯನ್ಯಾಯವರ್ತ್ಮನಿ ॥ ೫೨ ॥**

ಗ್ರಹಸ್ಥಾಶ್ರಮದಲ್ಲಿ ಅಕಂಪನರೇ ಪೂಜಿಸಲ್ಪಡತಕ್ಕವರು. ಅವರಿಂದಲೇ ನಾನೂ ಬಂಧುಗಳುಳ್ಳವನು. ಅನ್ಯಾಯಮಾರ್ಗದಲ್ಲಿ ಪ್ರವೃತ್ತನಾಗುವ ನನಗೂ ತಡೆಯುವವರು ಅವರೇ ಆಗಿರುತ್ತಾರೆ.

**ಪುರವೋ ಮೋಕ್ಷಮಾರ್ಗಸ್ಯ ಗುರವೋ ದಾನಸಂತತೇಃ ।**
**ಶ್ರೇಯಾಂಸಶ್ಚಕ್ರಿಣಾಂ ವೃತ್ತೇರ್ಯಥೇಹಾಸ್ಮ್ಯಹಮಗ್ರಣೀಃ ॥ ೫೩ ॥**

**ತಥಾ ಸ್ವಯಂವರಸ್ಯೇಮೇ ನಾಭೂವನ್ಯದ್ಯಕಂಪನಾಃ ।**
**ಕಃ ಪ್ರವರ್ತಯಿತಾನ್ಯೋಽಸ್ಯ ಮಾರ್ಗೋಽಸ್ತ್ಯೇಷ ಸನಾತನಃ ॥ ೫೪ ॥**

ಪುರುಪರಮೇಶರು ಮೋಕ್ಷಮಾರ್ಗಕ್ಕೆ ಗುರುಗಳಾಗಿರುತ್ತಾರೆ. ದಾನ ಪರಂಪರೆಗೆ ಶ್ರೇಯಾಂಸರು ಗುರುಗಳಾಗಿರುತ್ತಾರೆ. ಚಕ್ರವರ್ತಿಗಳ ವರ್ತನಕ್ಕೆ– ವ್ಯವಹಾರಕ್ಕೆ ನಾನು ಹೇಗೆ ಮುಖ್ಯನಾಗಿರುತ್ತೇನೋ ಹಾಗೆ ಸ್ವಯಂವರವಿವಾಹಕ್ಕೆ ಈ ಅಕಂಪನರು ಮುಖ್ಯರಾಗದಿದ್ದರೆ ಈ ಮಾರ್ಗದ–ವಿಧಿಯ ಪ್ರವರ್ತಕನು ಬೇರೆ ಯಾವನು ? ಇದು ನಿತ್ಯವಾದ ಮಾರ್ಗವಾಗಿರುತ್ತದೆ.

**ಮಾರ್ಗಾಂಶ್ಚಿರಂತನಾನ್ಯೇತ್ರ ಭೋಗಭೂಮಿತಿರೋಹಿತಾನ್ ।**
**ಕುರ್ವಂತಿ ನೂತನಾನ್ ಸಂತಃ ಸದ್ಭಿಃ ಪೂಜ್ಯಾಸ್ತ ಏವ ಹಿ ॥ ೫೫ ॥**

ಯಾರು ಭೋಗಭೂಮಿಗಳಿಂದ ಮರೆಯಾದ ಪುರಾತನಮಾರ್ಗಗಳನ್ನು ಈ ಕ್ಷೇತ್ರದಲ್ಲಿ ನೂತನಗಳನ್ನಾಗಿ ಮಾಡುತ್ತಾರೋ ಅವರೇ ಅಲ್ಲವೇ ಸತ್ಪುರುಷರಿಂದ ಪೂಜಿಸಲ್ಪಡತಕ್ಕವರು ?

**ನ ಚಕ್ರೇಣ ನ ರತ್ನೈಶ್ಚ ಶೇಷೈರ್ನ ನಿಧಿಭಿಸ್ತಥಾ ।**
**ಬಲೇನ ನ ಷಡಂಗೇನ ನಾಪಿ ಪುತ್ರೈರ್ಮಯಾ ಚ ನ ॥ ೫೬ ॥**

**[೧]ಯದೇತತ್ಸಾರ್ವಭೌಮತ್ವಂ ಜಯೇನೈಕೇನ ಕೇವಲಮ್ ।**
**ಸರ್ವತ್ರ ಶೌರ್ಯಕಾರ್ಯೇಷು ತೇನೈವ ವಿಜಯೋ ಮಮ ॥ ೫೭ ॥**

ಚಕ್ರವರ್ತಿಪದವಿಯಾವುದುಂಟೋ ಇದು ಜಯಕುಮಾರನೊಬ್ಬನಿಂದಲೇ ಪ್ರಾಪ್ತವಾಗಿರುವುದು. ಚಕ್ರದಿಂದಲೂ ಅಲ್ಲ, ರತ್ನಗಳಿಂದಲೂ ಅಲ್ಲ, ಉಳಿದ ನಿಧಿಗಳಿಂದಲೂ ಅಲ್ಲ, ಹಾಗೆಯೇ ಷಡಂಗಸೈನ್ಯದಿಂದಲೂ ಅಲ್ಲ, ಮಕ್ಕಳಿಂದಲೂ ಅಲ್ಲ, ನನ್ನಿಂದಲೂ ಅಲ್ಲ ಎಲ್ಲಾ ಕಡೆಗಳಲ್ಲಿಯೂ ಪರಾಕ್ರಮಕಾರ್ಯಗಳಲ್ಲಿ ಆ ಜಯಕುಮಾರನಿಂದಲೇ ನನಗೆ ಜಯವಾಗಿರುವುದು.

**ಮ್ಲೇಚ್ಛರಾಜಾನ್ ವಿನಿರ್ಜಿತ್ಯ ನಾಭಿಶೈಲೇ ಯಶೋಮಯಮ್ ।**
**ಮನ್ನಾಮ ಸ್ಥಾಪಿತಂ ತೇನ ಕಿಮತ್ರಾನ್ಯೇನ ಕೇನಚಿತ್ ॥ ೫೮ ॥**

ಮ್ಲೇಚ್ಛರಾಜರನ್ನು ಜಯಿಸಿ ವೃಷಭಾದ್ರಿಯಲ್ಲಿ ಕೀರ್ತಿಮಯವಾದ ನನ್ನ ಹೆಸರು ಆ ಜಯಕುಮಾರನಿಂದ ಸ್ಥಾಪಿಸಲ್ಪಟ್ಟಿತು. ಇಲ್ಲಿ ಬೇರೆ ಯಾರಿಂದಲೂ ಸ್ಥಾಪಿಸಲ್ಪಟ್ಟುದಲ್ಲ.

**ಅರ್ಕಕೀರ್ತಿರಕೀರ್ತಿಂ ಮೇ ಕೀರ್ತನೀಯಾಮಕೀರ್ತಿಷು ।**
**ಆಶಶಾಂಕಮಿಹಾಕಾರ್ಷೀನ್ಮಷೀಮಾಷಮಲೀಮಸಾಮ್ ॥ ೫೯ ॥**

ಈ ಲೋಕದಲ್ಲಿ ಅರ್ಕಕೀರ್ತಿಯು ನನಗೆ ಅಪಕೀರ್ತಿಯುಳ್ಳವರಲ್ಲಿ ಹೇಳುವುದಕ್ಕೆ ಯೋಗ್ಯವೂ ಮಷಿ(ಮಸಿ)ಯಂತೆಯೂ ಉದ್ದಿನಂತೆಯೂ ಮಲಿನವೂ ಆದ ಅಪಕೀರ್ತಿಯನ್ನು ಚಂದ್ರನಿರುವವರೆಗೂ ಉಂಟುಮಾಡಿದನು.

**ಅಮುನಾನ್ಯಾಯವರ್ತ್ಮೈವ ಪ್ರಾವರ್ತೀತಿ ನ ಕೇವಲಮ್ ।**
**ಇಹ ಸ್ವಯಂ ಚ ದಂಡ್ಯಾನಾಂ ಪ್ರಥಮಃ ಪರಿಕಲ್ಪಿತ ॥ ೬೦ ॥**

ಈ ಅರ್ಕಕೀರ್ತಿಯಿಂದ ಈ ಪ್ರಕಾರವಾಗಿ ಕೇವಲ ಅನ್ಯಾಯಮಾರ್ಗವೇ ಪ್ರವರ್ತಿಸಲ್ಪಟ್ಟುದಲ್ಲ, ಈ ಲೋಕದಲ್ಲಿ ತಾನೂ ಶಿಕ್ಷಿಸಲ್ಪಡುವುದಕ್ಕೆ ಯೋಗ್ಯರಾದವರಲ್ಲಿ ಮೊದಲನೆಯವನಾಗಿ ಮಾಡಲ್ಪಟ್ಟಿರುತ್ತಾನೆ. ಅರ್ಕಕೀರ್ತಿಯು ಮೊತ್ತಮೊದಲು ಶಿಕ್ಷೆಗೆ ಅರ್ಹನಾಗಿರುತ್ತಾನೆಂದು ಭಾವವು.

**ಅಭೂದಯಶಸೋ ರೂಪಂ ಮತ್ತ್ವದೀಪಾದಿವಾಂಜನಮ್ ।**
**ನಾರ್ಕಕೀರ್ತಿರಸೌ ಸ್ಪಷ್ಟಮಯಶಸ್ಕೀರ್ತಿರೇವ ಹಿ ॥ ೬೧ ॥**

ಉತ್ಕೃಷ್ಟವಾದ ದೀಪದಿಂದ ಅಂಜನವು–ಮಸಿಯು ಹೊರಡುವಂತೆ, ನನ್ನ ದೆಸೆಯಿಂದ ಅಪಕೀರ್ತಿಯ ರೂಪವು ಉಂಟಾಯಿತು. ಅವನು ಅರ್ಕಕೀರ್ತಿ (ಸೂರ್ಯನಂತೆ ಕೀರ್ತಿ)ಯಲ್ಲ. ವ್ಯಕ್ತವಾಗಿ ಅಪಕೀರ್ತಿಯೇ ಅಲ್ಲವೇ ?

**ಜಯ ಏವ ಮದಾದೇಶಾದೀದೃಶೋಽನ್ಯಾಯವರ್ತಿನಃ ।**
**[೨]ಸಮೀಕುರ್ಯಾತ್ತತಸ್ತೇನ ಸ ಸಾಧು ದಮಿತೋ ಯುಧಿ ॥ ೬೨ ॥**

೧ ನಿಯಾಮಯ. ೨ ರಾಕ್ಷಸಾನಾಂ. ೩ ಚೇತ್. ೪ ಸತಾಂ. ೫ ಸಮತ್ವನೇತ್ರಾಣಾಂ. ೬ ದೂತಮುಖ್ಯಂ. ೭ ಪುರುಜಿನೇಭ್ಯಃ.

೧ ತದೇತದಿತ್ಯಪಿ ಪಾಠಃ. ೨ ಸಮದಂಡಂ ಕುರ್ಯಾತ್.

ಇಂಥ ಅನ್ಯಾಯವರ್ತನೆಯುಳ್ಳವನಿಗೆ ನನ್ನ ಆಜ್ಞೆಯಿಂದ ಜಯಕುಮಾರನೇ ಸಮಾನ–ಉಚಿತವಾದ ಶಿಕ್ಷೆಯನ್ನು ಮಾಡುವನು. ಆದುದರಿಂದ ಆ ಜಯ ಕುಮಾರನಿಂದ ಅರ್ಕಕೀರ್ತಿಯು ಯುದ್ಧದಲ್ಲಿ ಚೆನ್ನಾಗಿ ದಂಡಿಸಲ್ಪಟ್ಟನು.

**ಸದೋಷೋ ಯದಿ ನಿಗ್ರಾಹ್ಯೋ ಜ್ಯೇಷ್ಠಪುತ್ರೋಪಿ ಭೂಭುಜಾ ।**
**ಇತಿ ಮಾರ್ಗಮಹಂ [೧]ತಸ್ಮಿನ್ನದ್ಯ ವರ್ತಯಿತುಂ ಸ್ಥಿತಃ ॥ ೬೩ ॥**

''ಹಿರಿಯ ಮಗನಾದರೂ ದೋಷವುಳ್ಳವನಾದರೆ ರಾಜನಿಂದ ಶಿಕ್ಷಿಸಲ್ಪಡು ವುದಕ್ಕೆ ಯೋಗ್ಯನಾಗಿರುತ್ತಾನೆ'' ಈ ಪ್ರಕಾರವಾದ ನ್ಯಾಯ– ಮಾರ್ಗವನ್ನು ನಾನು ಈ ದಿವಸ ಅರ್ಕಕೀರ್ತಿಯಲ್ಲಿ ನಡೆಯಿಸುವುದಕ್ಕೆ ಇರುತ್ತೇನೆ. ಮೊದಲು ಆಚರಣೆಗೆ ತರುವವನಾಗಿರುತ್ತೇನೆಂದು ಭಾವವು.

**ಅಕ್ಷಮಾಲಾ ಕಿಲ [೨]ಪ್ರತ್ತಾ ತಸ್ಮೈ ಕನ್ಯಾ[೩]ವಲೇಪಿನೇ ।**
**ಭವದ್ಭಿರವಿಚಾರ್ಯೈತ[೪]ದ್ವಿರೂಪಕಮನುಷ್ಠಿತಮ್ ॥ ೬೪ ॥**

ಗರ್ವಿತನಾದ ಆ ಅರ್ಕಕೀರ್ತಿಗೆ ಅಕ್ಷಮಾಲಾಕನ್ಯೆಯು ವಿಚಾರಮಾಡದೆ ಕೊಡಲ್ಪಟ್ಟಳಂತೆ. ಇದು ಕಷ್ಟವು ಆಚರಿಸಲ್ಪಟ್ಟಿತು. ಈ ಕಾರ್ಯವು ಉಚಿತವಾದು ದಲ್ಲವೆಂದು ಭಾವವು.

**ಪುರಸ್ಕೃತ್ಯೇಹ ತಾಮೇತಾಂ ನೀತಃ ಸೋಪಿ [೫]ಪ್ರತೀಕ್ಷ್ಯತಾಮ್ ।**
**ಸಕಲಂಕೇತಿ ಕಿಂ ಮೂರ್ತಿಃ ಪರಿಹರ್ತುಂ ಭವೇದ್ವಿಧೋಃ ॥ ೬೫ ॥**

ಇಲ್ಲಿ ಈ ಅಕ್ಷಮಾಲೆಯನ್ನು ಪುರಸ್ಕರಿಸಿ–ಮುಂದಿಟ್ಟು ಆ ಅರ್ಕಕೀರ್ತಿಯೂ ನಿಮ್ಮಿಂದ ಪೂಜ್ಯತೆಯನ್ನು ಹೊಂದಿಸಲ್ಪಟ್ಟನು. ಚಂದ್ರನಮೂರ್ತಿಯು ಕಲಂಕ ಸಹಿತವಾದುದೆಂದು ಬಿಡುವುದಕ್ಕಾಗುವುದೇ ?

**[೬]ಅಪೇಕ್ಷಿತಃ ಸದೋಷೋಪಿ ಸ್ವಪುತ್ರಶ್ಚಕ್ರವರ್ತಿನಾ ।**
**ಇತೀದಮಯಶಃ ಸ್ಥಾಯಿ ವ್ಯಧಾಯಿ ತದಕಂಪನೈಃ ॥ ೬೬ ॥**

''ಚಕ್ರವರ್ತಿಯಿಂದ ತನ್ನ ಮಗನು ದೋಷಸಹಿತನಾಗಿದ್ದರೂ ಅಪೇಕ್ಷಿ ಸಲ್ಪಟ್ಟನು.'' ಈ ಪ್ರಕಾರವಾದ ಈ ಅಪಕೀರ್ತಿಯು ಅಕಂಪನರಿಂದ ಸ್ಥಿರವಾಗಿ ಮಾಡಲ್ಪಟ್ಟಿತು. ತಪ್ಪನ್ನು ಮಾಡಿದ ಪುತ್ರನನ್ನು ಮನ್ನಿಸಿದನೆಂಬ ಅಪಕೀರ್ತಿಯು ಸ್ಥಿರವಾಯಿತೆಂದು ಭಾವವು.

**ಇತಿ ಸಂತೋಷ್ಯ ವಿಶ್ವೇಶಃ ಸೌಮುಖ್ಯಂ ಸುಮುಖಂ ನಯನ್ ।**
**ಹಿತ್ವಾ ಜ್ಯೇಷ್ಠಂ [೭]ತುಜಂ [೮]ತೋಕಮಕರೋನ್ನ್ಯಾಯಮೌರಸಮ್ ॥**

ಚಕ್ರವರ್ತಿಯು ಸುಮುಖನನ್ನು ಈ ಪ್ರಕಾರವಾಗಿ ಸಂತೋಷಪಡಿಸಿ ಒಳ್ಳೆಯ ಮುಖದ ಭಾವವನ್ನು ಹೊಂದಿಸುವವನಾಗಿ–ಹಸನ್ಮುಖಿಯನ್ನಾಗಿ ಮಾಡುವ ವನಾಗಿ ಜ್ಯೇಷ್ಠನಾದ ಔರಸಪುತ್ರ–ಅರ್ಕಕೀರ್ತಿಯನ್ನು ಬಿಟ್ಟು ನ್ಯಾಯವನ್ನು ಪುತ್ರ ನನ್ನಾಗಿ ಮಾಡಿದನು. ಅನ್ಯಾಯವನ್ನು ಖಂಡಿಸಿ ನ್ಯಾಯವನ್ನು ಪರಿಗ್ರಹಿಸಿದನೆಂದು ಭಾವವು.

**ಸುಮುಖಸ್ತದ್ದಯಾಭಾರಮಿವ ವೋಢುಂ ತದಾಕ್ಷಮಃ ।**
**ಸಜಯೋಕಂಪನೋ ದೇವ ದೇವಸ್ಯ ನಮತಿ ಕ್ರಮೌ ॥ ೬೮ ॥**

**ಲಬ್ಧಪ್ರಸಾದ ಇತ್ಯುಕ್ತ್ವಾ ಕ್ಷಿಪ್ತ್ವಾಂಗಾನಿ ಪ್ರಣಮ್ಯ ತಮ್ ।**
**ವಿಕಸದ್ವದನಾಂಭೋಜಃ ಸಮುತ್ಥಾಯ ಕೃತಾಂಜಲಿಃ ॥ ೬೯ ॥**

**ಇತ ಏವೋನ್ಮುಖೌ ತೌ [೯]ತ್ವತ್ತ[೧೦]ತೀಚ್ಛಂತೌ [೧೧]ಮದಾಗತಿಮ್ ।**
**ಆಸ್ಥಾತಾಂ ಚಾತಕೌ ವೃಷ್ಟಿಂ ಪ್ರಾವೃಷೋ ವಾದಿವಾಮ್ಮುಚಃ ॥ ೭೦ ॥**

೧ ಅರ್ಕಕೀರ್ತೌ. ೨ ದತ್ತಾ. ೩ ಗರ್ವಿತಾಯ. ೪ ಕಷ್ಟಂ. ೫ ಪೂಜ್ಯತಾಂ. ೬ ಉಪೇಕ್ಷಿತ ಇತ್ಯಪಿ ಪಾಠಃ. ೭ ಪುತ್ರಂ. ೮ ಪುತ್ರಂ. ೯ ತ್ವತ್ತಃ. ೧೦ ವಾಂಛಂತೌ. ೧೧ ಮಮಾಗಮನಂ.

**ಇತಿ ವಿಜ್ಞಾಪ್ಯ [೧]ಚಕ್ರೇಶಾ ಕೃತಾನುಜ್ಞಃ ಕೃತತ್ವರಃ ।**
**ಸಂಪ್ರಾಪ್ಯಾಕಂಪನಂ ನತ್ವಾ ಸಜಯಂ ವಿಹಿತಾದರಮ್ ॥ ೭೧ ॥**

**[೨]ಗೋಭಿಃ ಪ್ರಕಾಶ್ಯ ರಕ್ತಸ್ಯ ಪ್ರಸಾದಂ ಚಕ್ರವರ್ತಿನಃ ।**
**ರವೇರ್ವಾ [೩]ವಾಸರಾರಂಭ[೪]ಸ್ತದ್ವಕ್ತ್ರಾಬ್ಜಂ ವ್ಯಕಾಸಯತ್ ॥ ೭೨ ॥**

ಆಗ ಸುಮುಖನು ಭರತಚಕ್ರೇಶ್ವರನ ಕೃಪೆಯ ಭಾರವನ್ನು ಹೊರುವುದಕ್ಕೆ ಅಸಮರ್ಥನಾಗಿರುತ್ತಾನೋ ಎನ್ನುವಂತೆ ''ಎಲೈ ಸ್ವಾಮಿಯೆ ! ಜಯಕುಮಾರ ಸಹಿತನಾದ ಅಕಂಪನನು ಸ್ವಾಮಿಯ ಪಾದಗಳನ್ನು ನಮಸ್ಕರಿಸುತ್ತಾನೆ'' ಎಂದು ಹೇಳಿ ಚಕ್ರವರ್ತಿಯ ಅನುಗ್ರಹವನ್ನು ಪಡೆದವನೂ ಅಂಗಗಳನ್ನು ಪ್ರೇರಿಸಿ (ಸಾಷ್ಟಾಂಗವಾಗಿ) ಭರತೇಶ್ವರನನ್ನು ನಮಸ್ಕರಿಸಿ ಎದ್ದು ಕೈಗಳನ್ನು ಜೋಡಿಸಿ ವಿಕಸಿತವಾದ ಮುಖಕಮಲವುಳ್ಳವನೂ ''ವರ್ಷಾಕಾಲದ ಮೊದಲನೆಯ ಮೇಘದ ದೆಸೆಯಿಂದ ಚಾತಕಪಕ್ಷಿಗಳು ಮಳೆಯನ್ನಿಚ್ಛಿಸಿರುವಂತೆ, ಇತ್ತಗಡೆಯೇ ಮುಖವನ್ನು ಎತ್ತಿಕೊಂಡಿರುವವರಾದ ಅಕಂಪನ ಜಯಕುಮಾರರು ನನ್ನ ಬರುವಿಕೆಯನ್ನಿಚ್ಛಿಸು ವವರಾಗಿರುವರು'' ಈ ಪ್ರಕಾರವಾಗಿ ವಿಜ್ಞಾಪಿಸಿ ಚಕ್ರವರ್ತಿಯಿಂದ ಹೋಗುವುದಕ್ಕೆ ಆಜ್ಞೆಮಾಡಲ್ಪಟ್ಟವನೂ ತ್ವರೆಮಾಡಿದವನೂ ಆಗಿ ಅರಮನೆಯನ್ನು ತಲುಪಿ ತನ್ನಲ್ಲಿ ಪ್ರೀತಿಯನ್ನು ಮಾಡಿದವನೂ ಜಯಕುಮಾರನೊಡನೆ ಕೂಡಿರುವವನೂ ಆದ ಅಕಂಪನಮಹಾರಾಜನನ್ನು ನಮಸ್ಕರಿಸಿ ಅನುರಾಗವುಳ್ಳವನಾದ ಭರತ ಚಕ್ರ ವರ್ತಿಯ ಅನುಗ್ರಹವನ್ನು ವಚನಗಳಿಂದ ಪ್ರಕಾಶಪಡಿಸಿ–ಹೇಳಿ, ಸೂರ್ಯನ ಕಿರಣ ಗಳಿಂದ ದಿವಸಾರಂಭವು ಕಮಲವನ್ನು ಅರಳಿಸುವಂತೆ, ಅಕಂಪನಮಹಾರಾಜನ ಮುಖಕಮಲವನ್ನು ಅರಳಿಸಿದನು. ಅಕಂಪನನು ಸಂತುಷ್ಟನಾದನೆಂದು ಭಾವವು.

**ಸಾಧುವಾದ್ಯೈಃ ಸದಾನೈಶ್ಚ ಸಮ್ಮಾನೈಸ್ತೌ ಚ ತಂ ತದಾ ।**
**[೫]ಆನಿನ್ಯತುರತಿಪ್ರೀತಿಂ ಕೃತಜ್ಞಾ ಹಿ ಮಹೀಭೃತಃ ॥ ೭೩ ॥**

ಆಗ ಅಕಂಪನ ಜಯಕುಮಾರರೂ ಆ ಸುಮುಖನನ್ನು ''ಚೆನ್ನಾಯ್ತು'' ಎನ್ನುವ ಸಾಧುವಾದಗಳಿಂದಲೂ ದಾನಸಹಿತವಾದ ಸನ್ಮಾನಗಳಿಂದಲೂ ಅತಿ ಪ್ರೀತಿಯನ್ನು ಹೊಂದಿಸಿದರು. ಸುಮುಖನನ್ನು ಬಹಳವಾಗಿ ಸಂತೋಷವುಳ್ಳವನನ್ನಾಗಿ ಮಾಡಿ ದರೆಂದು ಭಾವವು. ರಾಜರುಗಳು ಕೃತಜ್ಞರಾಗಿರುತ್ತಾರಲ್ಲವೇ ?

**ಇತ್ಯತರ್ಕ್ಯೋದಯಾವಾಪ್ತಿರ್ವಿಭಾಸಿತಶುಭೋದಯಃ ।**
**[೬]ಅನೂಷಿವಾನ್ ಜಯಃ ಶ್ರೀಮಾನ್ ಸುಖೇನ [೭]ಶ್ವಾಶುರಂ ಕುಲಮ್ ॥**

ಈ ಪ್ರಕಾರವಾಗಿ ಊಹಿಸಲಾಗದ ಅಭ್ಯುದಯಪ್ರಾಪ್ತಿಯುಳ್ಳವನೂ ಪ್ರಕಾ ಶಿತವಾದ ಪುಣ್ಯದ ಉದಯವುಳ್ಳವನೂ ಸಂಪತ್ತಿಯುಳ್ಳವನೂ ಆದ ಜಯ ಕುಮಾರನು ಸುಖದಿಂದ ಮಾವನ ಸಂಬಂಧವಾದ ಮನೆಯಲ್ಲಿ ವಾಸಮಾಡಿದನು.

**ಸುಲೋಚನಾಮುಖಾಂಭೋಜಷಟ್ಪದಾಯಿತಲೋಚನಃ ।**
**ಅನಂಗಾನಣುಬಾಣೈಕತೂಣೀರಾಯಿತವಿಗ್ರಹಃ ॥ ೭೫ ॥**

**ತಥಾ ಪ್ರವೃತ್ತೇ ಸಂಗ್ರಾಮೇ ಸಾಯಕೈರಕ್ಷತಃ [೮]ಕ್ಷತಃ ।**
**[೯]ಪೇಲವೈಃ [೧೦]ಕೌಸುಮೈರೇಭಿರ್ವಿಚಿತ್ರಾ ವಿಧಿವೃತ್ತಯಃ ॥ ೭೬ ॥**

ಸುಲೋಚನೆಯ ಮುಖವೆಂಬ ಕಮಲದಲ್ಲಿ ಭ್ರಮರದಂತಾಚರಿಸಿದ ಕಣ್ಣು ಗಳುಳ್ಳವನೂ ಕಾಮನ ದೊಡ್ಡದಾದ ಬಾಣಗಳಿಗೆ ಮುಖ್ಯವಾದ ಬತ್ತಳಿಕೆಯಂತಾ ಚರಿಸಿದ ದೇಹವುಳ್ಳವನೂ ಆ ರೀತಿಯಾಗಿ ಉಂಟಾದ ಯುದ್ಧದಲ್ಲಿ ಬಾಣಗಳಿಂದ ಗಾಯವನ್ನು ಹೊಂದದಿರುವವನೂ ಆಗಿದ್ದು ಕೋಮಲಗಳೂ ಪುಷ್ಪ ಸಂಬಂಧಿ ಗಳೂ ಆದ ಈ ಕಾಮಬಾಣಗಳಿಂದ ಪೀಡಿತನಾದನು. ವಿಧಿಯ ವ್ಯಾಪಾರಗಳು– ವಿಧಿವಿಲಾಸಗಳು ವಿಚಿತ್ರವಾಗಿರುತ್ತವೆ.

೧ ಚಕ್ರವರ್ತಿನಾ. ೨ ವಾಗ್ಭಿಃ ಕಿರಣೈಶ್ಚ. ೩ ದಿವಸಾರಂಭಃ. ೪ ಅಕಂಪನಮುಖಾಬ್ಜಂ, ಪಕ್ಷೇ ಕಮಲಂ. ೫ ನೀತವಂತೌ. ೬ ಸ್ಥಿತವಾನ್. ೭ ಮಾತುಲಸಂಬಂಧಿ ಗೃಹಂ. ೮ ಪೀಡಿತಃ. ೯ ಮೃದುಭಿಃ. ೧೦ ಕುಸುಮಸಂಬಂಧಿಭಿಃ.

**ಅಸ್ಮಿತಾಂ ಸಸ್ಮಿತಾಂ ಕುರ್ವನ್ನ ಹಸಂತೀಂ ಸಹಾಸಿಕಾಮ್ ।**
**ಸಭಯಾಂ ನಿರ್ಭಯಾಂ ಬಾಲಾಮಾಕುಲಾಂ ತಾಮನಾಕುಲಾಮ್ ॥**

**ಅನಾಲಪಂತೀಮಾಲಾಪ್ಯ ಲೋಕಮಾನೋವಿಲೋಕಿನೀಮ್ ।**
**ಅಸ್ಪೃಶಂತೀಂ ಸಮಾಸ್ಪೃಶ್ಯ ವ್ಯಧಾದ್ವ್ರೀಲಾವಿಲೋಪನಮ್ ॥ ೭೮ ॥**

ಆ ಬಾಲೆಯನ್ನು–ಸುಲೋಚನೆಯನ್ನು ಮುಗುಳ್ನಗೆಯಿಲ್ಲದಿರುವವಳನ್ನು ಮುಗುಳ್ನಗೆಯಿರುವವಳನ್ನಾಗಿಯೂ ನಗದಿರುವವಳನ್ನು ನಗುವವಳನ್ನಾಗಿಯೂ ಭಯವುಳ್ಳವಳನ್ನು ನಿರ್ಭಯಳನ್ನಾಗಿಯೂ ಆಕುಲಳಾದವಳನ್ನು ಆಕುಲವಿಲ್ಲದವಳನ್ನಾಗಿಯೂ ಮಾಡುವವನೂ ಮಾತನಾಡದಿರುವವಳನ್ನು ಮಾತನಾಡಿಸಿ ನೋಡದಿರುವವಳನ್ನು ನೋಡುವವನೂ ಆದ ಜಯಕುಮಾರನು ಮುಟ್ಟದಿರುವವಳನ್ನು ಚೆನ್ನಾಗಿ ಮುಟ್ಟಿ ನಾಚಿಕೆಯ ಲೋಪವನ್ನು ಮಾಡಿದನು. ನಾಚಿಕೆಯನ್ನು ಹೋಗಲಾಡಿಸಿದನೆಂದು ಭಾವವು.

**ಕೃತೋ ಭವಾಂತರಾಬದ್ಧತತ್ಸ್ನೇಹಬಲಶಾಲಿನಾ ।**
**ಸುಲೋಚನಾಯಾಃ ಕೌರವ್ಯಃ [೧]ಕಾಮಂ ಕಾಮೇನ [೨]ಕಾಮುಕಃ ॥ ೭೯ ॥**

ಕುರುವಂಶೋತ್ಪನ್ನನಾದ ಜಯಕುಮಾರನು ಭವಾಂತರಸಂಬದ್ಧವಾದ ಆ ದಂಪತಿಸ್ನೇಹದಲ್ಲಿ ಸಾಮರ್ಥ್ಯಶಾಲಿಯಾದ ಮನ್ಮಥನಿಂದ ಅಧಿಕವಾಗಿ ಸುಲೋಚನೆಯ ಇಚ್ಛೆಯುಳ್ಳವನಾಗಿ ಮಾಡಲ್ಪಟ್ಟನು. ಜಯಕುಮಾರನು ಕಾಮದಿಂದ ಸುಲೋಚನೆಯನ್ನು ಬಹಳವಾಗಿ ಇಚ್ಛಿಸಿದನೆಂದು ಭಾವವು.

**ಸುಲೋಚನಾಮನೋವೃತ್ತೀ [೩]ರಾಗಾಮೃತಕರೋದ್ಧುರಾ ।**
**ಕ್ರಮಾಚ್ಚಚಾಲ ವೇಲೇವ ಕಾಮನಾಮಮಹಾಂಬುಧೇಃ ॥ ೮೦ ॥**

ಅನುರಾಗವೆಂಬ ಚಂದ್ರನಿಂದ ವೃದ್ಧಿಯಾದ ಸುಲೋಚನೆಯ ಮನೋವ್ಯಾಪಾರವು ಕಾಮವೆಂಬ ಮಹಾಸಮುದ್ರದ ಉಬ್ಬರದಂತೆ ಅಥವಾ ದಡದಂತೆ ಕ್ರಮದಿಂದ ಚಲಿಸಿತು..

**ಮುಕುಲೇ ವಾ ಮುಖೇ ಚಕ್ರೇ ವಿಕಾಸೋಸ್ಯಾಃ ಕ್ರಮಾ[೪]ತ್ಪದಮ್ ।**
**[೫]ಆಕ್ರಾಂತಶೂರ್ಪಕಾರಾತಿಗ್ರಹಾನಕ್ಷರಸೂಚನಃ ॥ ೮೧ ॥**

ಆಕ್ರಮಿಸಿದ ಕಾಮನೆಂಬ ಗ್ರಹವನ್ನು ಅಕ್ಷರವಿಲ್ಲದೆ ಸೂಚಿಸುವುದಾದ ವಿಕಸನ–ಅರಳುವಿಕೆಯು, ಮೊಗ್ಗಿನಲ್ಲಿ ಅವಕಾಶವನ್ನು ಹೊಂದುವಂತೆ, ಈ ಸುಲೋಚನೆಯ ಮುಖದಲ್ಲಿ ಕ್ರಮದಿಂದ ಸ್ಥಾನವನ್ನು ಮಾಡಿತು, ಮುಖವು ವಿಕಸಿತವಾಯಿತೆಂದು ಭಾವವು.

**ಸಖೀ ಮುಖಾನಿ ಸಂವೀಕ್ಷ್ಯ [೬]ಜಂಜಪಿತ್ವಾ ದಿಶಾಮಸೌ ।**
**ಸ್ವೈರಂ ಹಸಿತುಮಾರಬ್ಧ ಗೃಹೀತಮದನಗ್ರಹಾ ॥ ೮೨ ॥**

ಈ ಸಖಿಯು(ಜಯಕುಮಾರನ ಪ್ರಿಯೆಯು) ಕಾಮನೆಂಬ ಗ್ರಹದಿಂದ ಹಿಡಿಯಲ್ಪಟ್ಟವಳಾಗಿ ದಿಙ್ಮುಖಗಳನ್ನು ಚೆನ್ನಾಗಿ ನೋಡಿ ನಿರರ್ಥಕವಾದ ಮಾತನ್ನಾಡಿ ಯಥೇಚ್ಛವಾಗಿ ನಗುವುದಕ್ಕಾರಂಭಿಸಿದಳು.

**[೭]ಸಿತಾಸಿತಾಸಿತಾಲೋಲಕಟಾಕ್ಷೇಕ್ಷಣತೋಮರೈಃ ।**
**ಜಯಂ ತದಾ ಜಿತಾನಂಗಂ ಕೃತ್ವಾನಂಗಂ [೮]ಪ್ರತಿಷ್ಕಶಮ್ ॥ ೮೩ ॥**

**ಸಸಾಧ್ವಸಾ ಸಲಜ್ಜಾ ಸಾ ವಿವ್ಯಾಧ ವಿವಿಧೈರ್ಮನಾಕ್ ।**
**ಅನಾಲೋಕನವೇಲಾಯಾ[೯]ಮತಿಸಂಧಿತ್ಸಯೇವ ತಮ್ ॥ ೮೪ ॥**

ಆಗ ಭಯದಿಂದ ಕೂಡಿದವಳೂ ಲಜ್ಜೆಯಿಂದ ಕೂಡಿದವಳೂ ಆದ ಆ ಸುಲೋಚನೆಯು ಕಾಮನನ್ನು ಜಯಿಸಿದ(ಬಹು ಸುಂದರನಾದ)ಆ ಜಯಕುಮಾರನನ್ನು, ಅವನು ನೋಡದಿರುವ ಸಮಯದಲ್ಲಿ ವಂಚಿಸಬೇಕೆಂಬ ಇಚ್ಛೆಯಿಂದಲೋ ಎನ್ನುವಂತೆ, ಕಾಮನನ್ನು ಸಹಾಯಕನನ್ನಾಗಿ ಮಾಡಿಕೊಂಡು, ನಾನಾಪ್ರಕಾರಗಳಾದ ಶ್ವೇತಕೃಷ್ಣವರ್ಣಗಳಿಂದ ರಚಿಸಲ್ಪಟ್ಟಿರುವುವೂ ಚಂಚಲಗಳೂ ಆದ ಕಡೆಗಣ್ಣಿನ ನೋಟಗಳೆಂಬ ತೋಮರಾಯುಧಗಳಿಂದ (ಮರದಿಂದ ಮಾಡಿದ ಆಯುಧ ವಿಶೇಷಗಳಿಂದ)ಸ್ವಲ್ಪ ಎಸೆದಳು. ಜಯಕುಮಾರನು ನೋಡದಿರುವಾಗ ತಾನು ನೋಡಿದಳೆಂದು ಭಾವವು.

**ನ ಭುಜಂಗಮಸಂದಷ್ಟಾ ನಾಪಿ ಸಂಸೇವಿತಾಸವಾ ।**
**ನ [೧]ಶ್ರಮೇಣ ಸಮಾಕ್ರಾಂತಾ ತಥಾಪಿ ಸ್ವಿದ್ಯತಿ ಸ್ಮ ಸಾ ॥ ೮೫ ॥**

ಆ ಸುಲೋಚನೆಯು ಭುಜಂಗಮದಿಂದ (ಹಾವಿನಿಂದ, ವಿಟಪುರುಷನಿಂದ) ಕಚ್ಚಲ್ಪಡಲಿಲ್ಲ, ಮದ್ಯವನ್ನೂ ಸೇವಿಸಲಿಲ್ಲ, ಶ್ರಮದಿಂದ ವ್ಯಾಪ್ತಳಾಗಲಿಲ್ಲ. ಆದರೂ ಬೆವರುತ್ತಾಳೆ. ಕಾಮವಿಕಾರದಿಂದ ಬೆವರುತ್ತಾಳೆಂದು ಭಾವವು.

**ಸ್ಖಲಂತಿ ಸ್ಮ [೨]ಕಲಾಲಾಪಾಶ್ಚಕಂಪೇ ಹೃದಯಂ ಭೃಶಮ್ ।**
**ಚಲಾನ್ಯಾಲೋಕಿತಾನ್ಯಾಸ[೩]ನ್ನವಶೇವಾತ್ಮನಶ್ಚ ಸಾ ॥ ೮೬ ॥**

ಮನೋಹರವಾದ ಮಾತುಗಳು ತಪ್ಪುತ್ತವೆ. ಹೃದಯವು ಹೆಚ್ಚಾಗಿ ನಡುಗಿತು. ತನಗೂ ವಶವಾಗಿಲ್ಲದವಳಂತೆ(ಮೈಮರೆತಂತೆ) ನೋಟಗಳು ಚಂಚಲವಾದುವು.

**ಪ್ರಕ್ಷಾಲಿತೇವ ಲಜ್ಜಾಗಾತ್ಸುದತ್ಯಾಃ ಸ್ವೇದವಾರಿಭಿಃ ।**
**ವಾಗಿಂಧನೈರ್ವ್ಯದೀಪಿಷ್ಟ ವಿಚಿತ್ರಶ್ಚಿತ್ತಜಾನಲಃ ॥ ೮೭ ॥**

ಶ್ರೇಷ್ಠವಾದ ಹಲ್ಲುಗಳಿರುವವಳಾದ ಸುಲೋಚನೆಯ ಬೆವರಿನ ನೀರುಗಳಿಂದ ನಾಚಿಕೆಯು, ತೊಳೆಯಲ್ಪಟ್ಟಂತೆ ಹೋಯಿತು. ವಿಚಿತ್ರವಾದ ಕಾಮನೆಂಬ ಬೆಂಕಿಯು ಮಾತುಗಳೆಂಬ ಕಟ್ಟಿಗೆಗಳಿಂದ ಪ್ರಕಾಶಿಸಿತು.

**ತಾವತ್ತ್ರಪಾ ಭಯಂ ತಾವತ್ತಾವತ್ಕೃತ್ಯವಿಚಾರಣಾ ।**
**ತಾವದೇವ ಧೃತಿರ್ಯಾವಜ್ಜೃಂಭತೇ ನ ಸ್ಮರಜ್ವರಃ ॥ ೮೮ ॥**

ಕಾಮಜ್ವರವು ಯಾವವರೆಗೆ ವೃದ್ಧಿಯಾಗುವುದಿಲ್ಲವೋ ಅವರೆಗೆ ನಾಚಿಕೆಯೂ ಭಯವೂ ಮಾಡತಕ್ಕ ಕೆಲಸದ ವಿಚಾರವೂ ಧೈರ್ಯವೂ ಇರುತ್ತವೆ. ಕಾಮಜ್ವರವು ವೃದ್ಧಿಯಾದಮೇಲೆ ನಾಚಿಕೆ ಮೊದಲಾದುವೆಲ್ಲ ದೂರವಾಗುತ್ತವೆಂದು ಭಾವವು.

**ವಿಷಯೀಕೃತ್ಯ ಸರ್ವೇಷಾಮಿಂದ್ರಿಯಾಣಾಂ ಪರಸ್ಪರಮ್ ।**
**ಪರಾಮವಾಪತುಃ ಪ್ರೀತಿಂ ದಂಪತೀ ತೌ ಪೃಥಕ್ ಪೃಥಕ್ ॥ ೮೯ ॥**

ದಂಪತಿಗಳಾದ ಆ ಜಯಕುಮಾರ ಸುಲೋಚನೆಯರು ಎಲ್ಲಾ ಇಂದ್ರಿಯಗಳಿಗೆ ಪರಸ್ಪರವಾಗಿ ವಿಷಯೀಕರಿಸಿ (ಒಬ್ಬರನ್ನೊಬ್ಬರು ಆಲಿಂಗಿಸಿ, ಚುಂಬಿಸಿ, ಆಘ್ರಾಣಿಸಿ, ನೋಡಿ, ಪ್ರೇಮವಚನವನ್ನು ಕೇಳಿ) ಬೇರೆಬೇರೆಯಾಗಿ– ಪ್ರತಿಯೊಬ್ಬರೂ ಅಧಿಕವಾದ ಪ್ರೀತಿಯನ್ನು ಹೊಂದಿದರು.

**[೪]ಅತ್ಯಾಸಂಗಾ[೫]ತ್ಕ್ರಮಗ್ರಾಹಿಕರಣೈಸ್ತಾವತರ್ಪಿತೌ ।**
**[೬]ಅನಿಂದತಾ[೭]ಮಶೇಷೈಕಕರಣಾಕಾರಿಣಂ ವಿಧಿಮ್ ॥ ೯೦ ॥**

ಪರಸ್ಪರವಾಗಿ ಅತ್ಯಾಸಕ್ತಿಯಿದ್ದುದರಿಂದ, ಕ್ರಮವೃತ್ತಿಯಿಂದ–ಒಂದಾದಮೇಲೊಂದು ಪದಾರ್ಥವನ್ನು ಗ್ರಹಿಸುವ ಇಂದ್ರಿಯಗಳಿಂದ ತೃಪ್ತಿಯನ್ನು ಹೊಂದದಿರುವ ಆ ದಂಪತಿಗಳು ಎಲ್ಲಾ ಇಂದ್ರಿಯಗಳನ್ನು ಸೇರಿಸಿ ಒಂದು ಇಂದ್ರಿಯವನ್ನು ಮಾಡದಿರುವ ಬ್ರಹ್ಮನನ್ನು ನಿಂದಿಸಿದರು.

---

೧ ಅತ್ಯರ್ಥಂ. ೨ ಇಚ್ಛುಃ. ೩ ಅನುರಾಗಚಂದ್ರೇಣೋತ್ಕಟಾ. ೪ ಸ್ಥಾನಂ. ೫ ಪ್ರಾಪ್ತಕಾಮಗ್ರಹಮಕ್ಷರೇಣ ವಿನಾ ಸೂಚಕಃ. ೬ ನಿರರ್ಥಕತ್ವಾದಿದೋಷದುಷ್ಟಮುಕ್ತ್ವಾ. ೭ ಶ್ವೇತಕೃಷ್ಣವರ್ಣಾಭ್ಯಾಮಾಬದ್ಧ. ೮ ಸಹಾಯಂ. ೯ ವಂಚನೇಚ್ಛಯಾ.

೧ ಭ್ರಮೇಣೇತ್ಯಪಿಪಾಠಃ. ೨ ಮನೋಜ್ಞವಚನಾನಿ. ೩ ಅವಶೇವ ಪರಾಧೀನೇವ, ವಶೇ ಅಧೀನೇವಾ. ೪ ಅತ್ಯಾಸಕ್ತಿತಃ. ೫ ಕ್ರಮವೃತ್ತ್ಯಾ ಪದಾರ್ಥಗ್ರಾಹೀಂದ್ರಿಯೈಃ. ೬ ನಿಂದಾಂ ಚಕ್ರತುಃ. ೭ ಸಕಲೇಂದ್ರಿಯವಿಷಯಾಣಾಂ ಏಕಮೇವೇಂದ್ರಿಯಮಕುರ್ವಂತಂ.

**ಅನ್ಯೋನ್ಯವಿಷಯಂ ಸೌಖ್ಯಂ ತ್ಯಕ್ತ್ವಾ ಶೇಷಾನ್ಯಗೋಚರಮ್ ।**
**[೧]ಸ್ತೋಕೇನ ಸುಖಮುಪ್ರಾಪ್ತಂ ಪ್ರಾಪತುಃ [೨]ಪರಮಾತ್ಮನಃ ॥ ೯೧ ॥**

ಸಮಸ್ತವಾದ ಪರಪದಾರ್ಥವಿಷಯಕವೂ(ಪರಸ್ಪರಾವಲಂಬನದಿಂದುಂಟಾಗುವುದೂ) ಆದ ಸೌಖ್ಯವನ್ನು ಬಿಟ್ಟು ಸಾಮಾನ್ಯಪುರುಷನಿಂದ ಹೊಂದಲ್ಪಡದಿರುವ ಆತ್ಮನ ಉತ್ಕೃಷ್ಟಸುಖವನ್ನು ಹೊಂದಿದರು. ಪರಮಾತ್ಮನ ಸುಖವನ್ನು ಹೊಂದಿದರೆಂದು ಧ್ವನಿತವಾಗುವುದು. ಅಸಾಧಾರಣವಾದ ಸುಖವನ್ನು ಹೊಂದಿದರೆಂದು ಭಾವವು.

**ಸಂಪ್ರಾಪ್ತ[೩]ಭಾವಪರ್ಯಂತೌ ವಿದತುರ್ನ ಸ್ವಯಂ ಚ ತೌ ।**
**ಮುಕ್ತ್ವೈಕಂ ಶಂ [೪]ಸಹೈವೋದ್ಯತ್ಸ್ವಕ್ರಿಯೋದ್ರೇಕಸಂಭವಮ್ ॥ ೯೨ ॥**

ಒಬ್ಬರಿಗೊಬ್ಬರಲ್ಲಿ ಏಕಕಾಲದಲ್ಲಿ ಉಂಟಾದ ತಮ್ಮ ಚುಂಬನಾದಿಕ್ರಿಯೆಗಳ ಆಧಿಕ್ಯದಿಂದಾದ ಒಂದು ಸುಖವನ್ನು ಬಿಟ್ಟು ಲೀಲೆಯ ತುತ್ತತುದಿಯನ್ನು ಹೊಂದಿದವರಾದ ಆ ದಂಪತಿಗಳು ತಮ್ಮನ್ನೂ ತಿಳಿಯಲಿಲ್ಲ. ಸುಖಪರವಶತೆಯಿಂದ ಮೈಮರೆತರೆಂದು ಭಾವವು.

**ರತಾವಸಾನೇ ನಿಃಶಕ್ತ್ಯೋರ್ಗಾಢೌತ್ಸುಕ್ಯಾತ್ಪಪಶ್ಯತೋಃ ।**
**ತಯೋರನ್ಯೋನ್ಯಮಾಭಾತಾಂ ನೇತ್ರಯೋರಿವ ಪುತ್ರಿಕೇ ॥ ೯೩ ॥**

ರತಿಕ್ರೀಡೆಯ ಕೊನೆಯಲ್ಲಿ ಶಕ್ತಿಹೀನರೂ ದೃಢವಾದ ಕುತೂಹಲದಿಂದ ಒಬ್ಬರನ್ನೊಬ್ಬರು ನೋಡುವವರೂ ಆಗುತ್ತಿರಲು ಆ ದಂಪತಿಗಳ ಪ್ರತಿಮೆಗಳು ಪರಸ್ಪರವಾಗಿ, ಕಣ್ಣುಗಳ ಬೊಂಬೆಗಳಂತೆ, ಪ್ರಕಾಶಿಸಿದುವು.

**ಅವಾಪಿ ಯಾ ತಯಾ ಪ್ರೀತಿಸ್ತಸ್ಮಾತ್ತೇನ ಚ ಯಾ [೫]ತತಃ ।**
**[೬]ತಯೋರನ್ಯೋನ್ಯಮೇವಾಸೀದುಪಮಾನೋಪಮೇಯತಾ ॥ ೯೪ ॥**

ಆ ಜಯಕುಮಾರನ ದೆಸೆಯಿಂದ ಯಾವ ಪ್ರೀತಿಯನ್ನು ಸುಲೋಚನೆಯು ಕುಡಿದಳೋ–ಅನುಭವಿಸಿದಳೋ ಜಯಕುಮಾರನು ಸುಲೋಚನೆಯಿಂದ ಯಾವ ಪ್ರೀತಿಯನ್ನು ಅನುಭವಿಸಿದನೋ ಆ ಪ್ರೀತಿಗಳಿಗೆ ಒಂದಕ್ಕೊಂದಕ್ಕೇ– ಪರಸ್ಪರವೇ ಉಪಮಾನೋಪಮೇಯತ್ವವಾಯಿತು. ಆ ಪ್ರೀತಿಗಳೇ ಒಂದಕ್ಕೊಂದು ಹೋಲಿಸಲ್ಪಡತಕ್ಕುವಾಗಿದ್ದುವೆಂದು ಭಾವವು.

**ಭುಕ್ತಮಾತ್ಮಂಭರಿತ್ವೇನ ಯತ್ಸುಖಂ ಪರಮಾತ್ಮನಾ ।**
**ತತೋಽಪ್ಯಧಿಕಮಾಸೀದ್ವಾ [೭]ಸಂವಿಭಾಗೇನ [೮]ತತ್ತಯೋಃ ॥ ೯೫ ॥**

ತನ್ನ ಹೊಟ್ಟೆಯ ತುಂಬುವಿಕೆಯಿಂದ(ಉದರಪೂರ್ತಿಯಾಗಿ) ಪರಮಾತ್ಮನು ಅನುಭವಸಿದ ಸುಖಕ್ಕಿಂತಲೂ ಆ ದಂಪತಿಗಳ ಆ ಸುಖವು ವಿಭಾಗದಿಂದ (ಒಂದೊಂದೇ) ಹೆಚ್ಚಾಗಿರುತ್ತದೋ ಎಂಬಂತಿದ್ದಿತು.

**ಇತ್ಯನ್ಯೋನ್ಯಸಮುದ್ಭೂತಪ್ರೀತಿಸ್ಫೀತಾಮೃತಾಂಭಸಿ ।**
**ಕಾಮಾಂಭೋಧೌ ನಿಮಗ್ನೌ ತೌ ಸ್ವೈರಂ ಚಿಕ್ರೀಡತುಶ್ಚಿರಮ್ ॥ ೯೬ ॥**

ಹೀಗೆ ಪರಸ್ಪರವಾಗಿ ಉಂಟಾದ ಪ್ರೀತಿಯೆಂಬ ಹೆಚ್ಚಾದ ಅಮೃತಜಲವುಳ್ಳುದಾದ ಕಾಮ–ರತಿಸುಖವೆಂಬ ಸಮುದ್ರದಲ್ಲಿ ಮುಳುಗಿದ ಆ ದಂಪತಿಗಳು ಯಥೇಚ್ಛವಾಗಿ ಬಹುಕಾಲದವರೆಗೆ ಕ್ರೀಡಿಸಿದರು.

**ತದಾ ಸ್ವಮಂತ್ರಿಪ್ರಹಿತಗೂಢಪತ್ರಾರ್ಥಚೋದಿತಃ ।**
**ಜಯೋ ಜಿಗಮಿಷುಸ್ತೂರ್ಣಂ ಸ್ವಂ ಸ್ಥಾನೀಯಂ [೯]ಧಿಯೋ ವಶಃ ॥ ೯೭ ॥**

**ಭವದ್ಭಿರ್ಭಾವಿತೈಶ್ವರ್ಯಂ ಮಾಂ ಮದೀಯಾ ದಿದೃಕ್ಷವಃ ।**
**ಇತಿ ಮಾಮಂ ಸಮಭ್ಯೇತ್ಯ [೧೦]ಪ್ರಸ್ಥಾನಾರ್ಥಮಬೂಬುಧತ್ ॥ ೯೮ ॥**

ಆಗ ತನ್ನ ಮಂತ್ರಿಯಿಂದ ಕಳುಹಿಸಲ್ಪಟ್ಟ ಗುಪ್ತವಾದ ಪತ್ರದ ಅರ್ಥದಿಂದ ಪ್ರೇರಿತನೂ ವಿವೇಕಕ್ಕೆ ಅಧೀನನೂ ಆದ ಜಯಕುಮಾರನು ಶೀಘ್ರವಾಗಿ ತನ್ನ ಪಟ್ಟಣಕ್ಕೆ ಹೋಗಬೇಕೆಂಬ ಇಚ್ಛೆಯುಳ್ಳವನಾಗಿ "ತಮ್ಮಗಳಿಂದ ಪ್ರಕಟಮಾಡಲ್ಪಟ್ಟ ಐಶ್ವರ್ಯವುಳ್ಳವನಾದ ನನ್ನನ್ನು ನನ್ನ ಬಂಧುಮಿತ್ರರು ಮೊದಲಾದವರು ನೋಡಬೇಕೆಂಬ ಇಚ್ಛೆಯುಳ್ಳವರಾಗಿರುತ್ತಾರೆ" ಎಂದು ಮಾವನನ್ನು–ಅಕಂಪನಮಹಾರಾಜನನ್ನು ಹೊಂದಿ ತನ್ನ ಹೊರಡುವಿಕೆಯ ಪ್ರಯೋಜನವನ್ನು ತಿಳುಹಿದನು.

**ತದ್ಬುಧ್ವಾ ನಾಥವಂಶೇಶಃ ಕಿಂಚಿದಾಸೀತ್ಸಸಂಭ್ರಮಃ ।**
**ಜಯೇ ಜಿಗಮಿಷೌ ಸ್ವಸ್ಮಾನ್ನ ಸ್ಯಾತ್ಕಸ್ಯಾಕುಲಂ ಮನಃ ॥ ೯೯ ॥**

ನಾಥವಂಶಾಧಿಪತಿಯಾದ ಅಕಂಪನಮಹಾರಾಜನು ಆ ವಿಷಯವನ್ನು ತಿಳಿದು ಸ್ವಲ್ಪ ಖೇದದಿಂದ ಕೂಡಿದವನಾದನು. ತನ್ನ ಸ್ಥಾನದಿಂದ ಜಯಕುಮಾರನು (ವಿಜಯವು ಧ್ವನಿತಾರ್ಥ) ಹೋಗಬೇಕೆಂಬ ಇಚ್ಛೆಯುಳ್ಳವನಾಗುತ್ತಿರಲು ಯಾರ ಮನಸ್ಸು ಆಕುಲವಾಗಿ ಆಗದು ?

**ವಿಚಾರ್ಯ ಕಾರ್ಯ[೧]ಪರ್ಯಾಯಂ ತಥಾಸ್ತ್ವಿತ್ಯಾಹ ತಂ ನೃಪಃ ।**
**ಸ್ನೇಹಾನುವರ್ತಿನೀಂ ನೈತಿ[೨] ದೀಪಿಕಾಂ ವಾ ಧಿಯಂ ಸುಧೀಃ ॥ ೧೦೦ ॥**

ಅಕಂಪನಮಹಾರಾಜನು ಕಾರ್ಯಕ್ರಮವನ್ನು ವಿಚಾರಮಾಡಿ "ತಥಾಸ್ತು–ಹಾಗಾಗಲಿ" ಎಂದು ಜಯಕುಮಾರನಿಗೆ ಹೇಳಿದನು. ಬುದ್ಧಿಶಾಲಿಯು, ಎಣ್ಣೆಯನ್ನು ಹಿಂಬಾಲಿಸುವ ದೀಪದಂತೆ, ಪ್ರೀತಿಯನ್ನು ಹಿಂಬಾಲಿಸುವ ಬುದ್ಧಿಯನ್ನು ಹೊಂದಿರುವುದಿಲ್ಲವೇ ?

**ಪ್ರಾದಾತ್ಪ್ರಾಗೇವ ಸರ್ವಸ್ವಂ ತಸ್ಮೈ ದತ್ತಸುಲೋಚನಃ ।**
**ತಥಾಪಿ ಲೌಕಿಕಾಚಾರಂ ಪರಿಪಾಲಯಿತುಂ ಪ್ರಭುಃ ॥ ೧೦೧ ॥**

**ದತ್ವಾ ಕೋಶಾದಿ ಸರ್ವಸ್ವಂ ಸ್ವೀಕೃತ್ಯ ಪ್ರೀತಿಮಾತ್ಮನಃ ।**
**ಅನುಗಮ್ಯ ಸ್ವಯಂ ದೂರಂ [೩]ಶುಭೇಹನಿ ವಧೂವರಮ್ ॥ ೧೦೨ ॥**

**ಕಥಂ ಕಥಮಪಿ ತ್ಯಕ್ತ್ವಾ ಸ ಸಜಾನಿರ್ಜನಾಗ್ರಣೀಃ ।**
**ನ್ಯವರ್ತತ ತತಃ ಶೋಕೀ ತುಗ್ವಿಯೋಗೋ ಹಿ [೪]ದುಷ್ಕರಃ ॥ ೧೦೩ ॥**

ಸುಲೋಚನೆಯನ್ನು ಕೊಟ್ಟಿರುವ ಪ್ರಭು–ಅಕಂಪನಮಹಾರಾಜನು ಮೊದಲೇ ಸರ್ವಸ್ವವನ್ನು ಜಯಕುಮಾರನಿಗೆ ಕೊಟ್ಟಿದ್ದನು. ಹಾಗಾದರೂ ಲೌಕಿಕಾಚಾರವನ್ನು ಪರಿಪಾಲಿಸುವುದಕ್ಕೋಸ್ಕರ ಕೋಶವೇ ಮೊದಲಾದ ಸರ್ವಸ್ವವನ್ನು (ಕೊಡತಕ್ಕುದೆಲ್ಲವನ್ನು) ಕೊಟ್ಟು ತನ್ನ ಪ್ರೀತಿಯೊಂದನ್ನೇ ಸ್ವೀಕರಿಸಿ ಶುಭ ದಿನದಲ್ಲಿ ವಧೂವರರನ್ನು, ತಾನು ಸ್ವಲ್ಪದೂರದವರೆಗೆ ಹಿಂಬಾಲಿಸಿ ಹೋಗಿ, ಬಹುಕಷ್ಟದಿಂದ ಬಿಟ್ಟು ಪತ್ನೀಸಹಿತನಾದ ಆ ಜನಾಗ್ರೇಸರ–ಅಕಂಪನಮಹಾರಾಜನು ಶೋಕವುಳ್ಳವನಾಗಿ ಅಲ್ಲಿಂದ ಹಿಂದಿರುಗಿದನು. ಪುತ್ರ ವಿಯೋಗವು ದುಃಖಕರವಾದುದಲ್ಲವೇ ?

**ವಿಜಯಾರ್ಧಂ ಸಮಾರುಹ್ಯ ಜಯೋಽಪಿ ಸ ಸುಲೋಚನಃ ।**
**ಆರೂಢಸಾಮಜೈಃ ಸರ್ವೈಃ ಸ್ವಾನುಜೈರ್ವಿಜಯಾದಿಭಿಃ ॥ ೧೦೪ ॥**

**ಹೇಮಾಂಗದಕುಮಾರೇಣ ಸಾನುಜೇನ ಚ ಸೋತ್ಸವಃ ।**
**ಪ್ರವರ್ತಯನ್ಕಥಾಃ [೫]ಪಥ್ಯಾಃ ಪರಿಹಾಸಮನೋಹರಾಃ ॥ ೧೦೫ ॥**

**ವೃತಃ ಶಶೀವ ನಕ್ಷತ್ರೈರನುಗಂಗಂ ಯಯೌ ಶನೈಃ ।**
**ಇಲಾಂ ಸಂಚಾಲಯನ್ [೬]ಪ್ರಾಗ್ವಾ ಶ್ರೀಮಾನ್ ಸ ಜಯಸಾಧನಃ ॥**

ಸುಲೋಚನಾಸಹಿತನಾದ ಜಯಕುಮಾರನೂ ವಿಜಯಾರ್ಧಗಜವನ್ನೇರಿ, ಆನೆಗಳನ್ನೇರಿದವರೂ ವಿಜಯ ಮೊದಲಾದವರೂ ಆದ ಎಲ್ಲಾ ತಮ್ಮಂದಿರೊಡನೆಯೂ ಅನುಜಸಹಿತನಾದ ಹೇಮಾಂಗದಕುಮಾರನೊಡನೆಯೂ ಆವರಿಸ

೧ ಸಾಮಾನ್ಯಪುರುಷೇಣ. ೨ ಉತ್ತಮಂ. ೩ ಲೀಲಾ. ೪ ಸಹೈವ ಪ್ರಾದುರ್ಭವಚ್ಚುಂಬನಾದಿಸಮುತ್ಕಟಸಂಭೂತಂ. ೫ ಸುಲೋಚನಾಯಾಃ. ೬ ಪ್ರೀತ್ಯೋಃ. ೭ ವಿಭಜನೇನ. ೮ ಸುಖಂ. ೯ ವಿವೇಕಸ್ವಾಧೀನಃ. ೧೦ ಗಮನಪ್ರಯೋಜನಂ.

೧ ಕ್ರಮಂ. ೨ ಕಿಮಿತ್ಯಧ್ಯಾಹಾರ್ಯಂ, ನ ಗಚ್ಛತಿ ಕಿಂ. ೩ ಶುದ್ಧೇಹನಿ ಇತ್ಯಪಿ ಪಾಠಃ. ೪ ದುಸ್ಸಹ ಇತ್ಯಪಿ ಪಾಠಃ. ೫ ಪಥಿಹಿತಾಃ. ೬ ದಿಗ್ವಿಜಯೇ ಯಥಾ.

ಲ್ಪಟ್ಟವನೂ ನಕ್ಷತ್ರಗಳೊಡನೆ ಚಂದ್ರನಂತೆ, ಉತ್ಸವವುಳ್ಳವನೂ ಮಾರ್ಗದಲ್ಲಿ ಹಿತಕರವೂ ಪರಿಹಾಸದಿಂದ ಮನೋಹರವೂ ಆದ ಕಥೆಗಳನ್ನು ನಡೆಸಿದವನೂ ಮೊದಲು ದಿಗ್ವಿಜಯದಲ್ಲಿ ಹೇಗೋ ಹಾಗೆ ಸಂಪತ್ತಿಯುಳ್ಳವನೂ ಜಯದ ಸಾಧನೆಗಳೊಡನೆ ಕೂಡಿದವನೂ ಭೂಮಿಯನ್ನು ನಡುಗಿಸುವವನೂ ಆಗಿ ಮೆಲ್ಲನೆ ಆಘುಗಂಗಾನದಿಯನ್ನನುಸರಿಸಿ ಹೋದನು.

[1]ಸ್ಕಂಧಾವಾರಂ ಯಥಾಸ್ಥಾನಂ [2]ಪಾರೇಗಂಗಂ ನ್ಯವೀವಿಶತ್ ।
ವೀಕ್ಷ್ಯ ಕಂಕಪುಟತ್ವೇನ [3]ಪ್ರಶಾಸ್ತಾ ಶಾಸ್ತ್ರವಿತ್ತದಾ ॥ ೧೦೭ ॥

ಆಗ ಶಾಸ್ತ್ರಜ್ಞನೂ ಆಳುವವನೂ ಆದ ಜಯಕುಮಾರನು ಗಂಗಾನದಿಯ ದಡದಲ್ಲಿ ಉಚಿತಸ್ಥಾನವನ್ನು ನೋಡಿ ಬಾಚುಹಣಿಗೆಯ ರೂಪದಿಂದ ಶಿಬಿರ-ಸೈನ್ಯಸ್ಥಾನವನ್ನು ಮಾಡಿಸಿದನು.

[4]ಘುಟತ್ಪಟಕುಟೀಕೋಟಿನಿಕಟಾಟೋಪನಿರ್ಗಮಃ ।
ಬಭಾಸೇ ಶಿಬಿರಾವಾಸಃ ಸ್ವರ್ಗಾವಾಸ ಇವಾಪರಃ ॥ ೧೦೮ ॥

ಹೆಣೆದಿರುವ ವಸ್ತ್ರಶಾಲೆ-ಗುಡಿಗಳ ಸಮೂಹಗಳ ಸಮೀಪದಲ್ಲಿ ವಿಸ್ತಾರವಾದ ದಾರಿಯುಳ್ಳದಾದ ಶಿಬಿರಸ್ಥಾನವು, ಮತ್ತೊಂದು ಸ್ವರ್ಗವೋ ಎಂಬಂತೆ ಪ್ರಕಾಶಿಸಿತು.

ತತ್ರಾಪ್ಯ ಸಿಂಧುರಂ ರುಧ್ವಾ ಸ ರಾಜದ್ವಾರಿ [5]ರಾಜಕಮ್ ।
ವಿಸರ್ಜ್ಯೋಚ್ಚೈಃ ಪ್ರವಿಶ್ಯಾಂತರವತೀರ್ಯ [6]ನಿಷಾದ್ಯ [7]ತಮ್ ॥ ೧೦೯ ॥

ರಾಜಾ ಸುಲೋಚನಾಂ ಚಾವರೋಪ್ಯ ಸ್ವಭುಜಲಂಬಿನೀಮ್ ।
ನಿವಿಶ್ಯ ಸ್ವೋಚಿತಸ್ಥಾನೇ ಮೃದುಶಯ್ಯಾತಲೇ ಸುಖಮ್ ॥ ೧೧೦ ॥

ಆ ಜಯಕುಮಾರನು ಆ ಶಿಬಿರಾವಾಸವನ್ನು ಸೇರಿ ರಾಜದ್ವಾರದಲ್ಲಿ ಆನೆಯನ್ನು ತಡೆದು ರಾಜರುಗಳ ಸಮೂಹವನ್ನು ಚೆನ್ನಾಗಿ ಒಳಕ್ಕೆ ಪ್ರವೇಶಮಾಡಿಸಿ ಬಿಟ್ಟು ಆನೆಯನ್ನು ಕುಳ್ಳಿರಿಸಿ ಇಳಿದು ರಾಜನು-ಜಯಕುಮಾರನು ತನ್ನ ಭುಜವನ್ನಾಶ್ರಯಿಸಿರುವವಳಾದ ಸುಲೋಚನೆಯನ್ನು ಇಳಿಸಿ ತನಗೆ ಉಚಿತವಾದ ಸ್ಥಾನದಲ್ಲಿ ಮೃದುವಾದ ಹಾಸಿಗೆಯಲ್ಲಿ ಸುಖವಾಗಿ ಕುಳಿತು

ತತ್ಕಾಲೋಚಿತವೃತ್ತಜ್ಞಃ ಪ್ರಿಯಾಂ ಸಂತರ್ಪಯನ್ ಪ್ರಿಯೈಃ ।
ಸ್ನಾನಭೋಜನವಾಗ್ವಾದ್ಯಗೀತನೃತ್ಯವಿನೋದನೈಃ ॥ ೧೧೧ ॥

ನೀತ್ವಾ ರಾತ್ರಿಂ ಸುಖಂ ತತ್ರ [8]ಪ್ರತ್ಯಾಯ್ಯ [9]ಪ್ರತ್ಯಯಂ ಸ್ಥಿತೇಃ ।
ತಾಂ ನಿವೇಶ್ಯ ಸಮಾಶ್ವಾಸ್ಯ ಹೇಮಾಂಗದಪುರಸ್ಸರಾನ್ ॥ ೧೧೨ ॥

ನಿಯೋಜ್ಯ ಸ್ವಾನುಜಾನ್ ಸರ್ವಾನ್ ಸಮ್ಯಕ್ಕಟಕರಕ್ಷಣೇ ।
ಆಪ್ತೈಃ ಕತಿಪಯೈರೇವ [10]ಪ್ರತ್ಯಯೋಧ್ಯಮಿಯಾಯ ಸಃ ॥ ೧೧೩ ॥

ತತ್ಕಾಲೋಚಿತವಾದ ಆಚಾರವನ್ನು ತಿಳಿದವನೂ ಪ್ರಿಯವಾದ ಸ್ನಾನ ಭೋಜನ ವಚನ ವಾದ್ಯ ಗೀತ ನೃತ್ಯಗಳ ವಿನೋದಗಳಿಂದ ಪ್ರಿಯೆ-ಸುಲೋಚನೆಯನ್ನು ತೃಪ್ತಿಪಡಿಸುವವನೂ ಆಗಿ ಅಲ್ಲಿ ಸುಖವಾಗಿ ರಾತ್ರಿಯನ್ನು ಕಳೆದು ಅಲ್ಲಿ ನಿಲ್ಲುವುದಕ್ಕೆ ಕಾರಣವನ್ನು ತಿಳಿಸಿ ಸುಲೋಚನೆಯನ್ನು ಇರಿಸಿ ಹೇಮಾಂಗದನೇ ಮೊದಲಾದವರನ್ನು ಸಮಾಧಾನಪಡಿಸಿ ತನ್ನ ಎಲ್ಲಾ ತಮ್ಮಂದಿರನ್ನು ಸೈನ್ಯಸ್ಥಾನದ ರಕ್ಷಣೆಯ ಮೇಲೆ ನೇಮಿಸಿ ಜಯಕುಮಾರನು ಕೆಲವು ಮಂದಿ ಆಪ್ತರೊಡನೆಯೇ ಅಯೋಧ್ಯೆಯನ್ನು ಕುರಿತು ಹೋದನು.

ಅರ್ಕಕೀರ್ತ್ಯಾದಿಭಿಃ [11]ಮುಖ್ಯೈಃ ಪ್ರತ್ಯಾಗತ್ಯ [12]ಪ್ರತೀಕ್ಷಿತಃ ।
ಸಸ್ನೇಹಂ ಸಾದರಂ ಭೂಯಃ ಕುಮಾರೇಣಾಲಪನ್ ಪುರೀಮ್ ॥
ಸಾನುರಾಗಾಂ ಸ್ವಯಂ ರಾಗಾತ್ಪ್ರಾವಿಶದ್ವಾ ವಿಶಾಂಪತಿಃ ।
ನ ಪೂಜಯಂತಿ ಕೇ ವಾನ್ಯೇ ಪುರುಷಂ ರಾಜಪೂಜಿತಮ್ ॥ ೧೧೪ ॥

ಅರ್ಕಕೀರ್ತಿಯೇ ಮೊದಲಾದ ಪ್ರಮುಖರಿಂದ ಇದಿರ್ಗೊಂಡು ಪೂಜಿಸಲ್ಪಟ್ಟವನಾಗಿಯೂ ಅರ್ಕಕೀರ್ತಿಕುಮಾರನೊಡನೆ ಸ್ನೇಹವಾಗಿಯೂ ಪ್ರೀತಿಯಾಗಿಯೂ ಪುನಃ ಪುನಃ ಮಾತನಾಡುವವನಾಗಿಯೂ ಅನುರಾಗಸಹಿತವಾದ ಅಯೋಧ್ಯಾನಗರವನ್ನು ತಾನು ಅನುರಾಗದಿಂದ, ಚಕ್ರವರ್ತಿಯಂತೆ, ಪ್ರವೇಶಿಸಿದನು. ರಾಜಪೂಜಿತನಾದ ಪುರುಷನನ್ನು ಬೇರೆ ಯಾರು ತಾನೆ ಪೂಜಿಸುವುದಿಲ್ಲ?

ಇಂದ್ರೋ ವೇಭಾದ್ವಹಿರ್ದ್ವಾರಾಜ್ಜಿನಸ್ಯೇತ್ತೀರ್ಯ ಭೂಪತೇಃ ।
ಸಭಾಗೇಹಂ ಸಮಾಸಾದ್ಯ ಮಣಿಕುಟ್ಟಿಮಭೂತಲಮ್ ॥ ೧೧೫ ॥

ಮಧ್ಯೇ ತಸ್ಯ ಸ್ಫುರದ್ರತ್ನಖಚಿತಸ್ತಂಭಸಂಭೃತೇ ।
[1]ವಿಚಿತ್ರನೇತ್ರವಿನ್ಯಸ್ತಸದ್ವಿತಾನವಿರಾಜಿತೇ ॥ ೧೧೬ ॥

ಮಣಿಮುಕ್ತಾಫಲಪ್ರೋತಲಂಬ[2]ಲಂಬೂಷಭೂಷಿತೇ ।
ಪರಾರ್ಧ್ಯರತ್ನಭಾಜಾಲಜಟಿಲೇ ಮಣಿಮಂಡಪೇ ॥ ೧೧೭ ॥

ವಿಧುಂ ಜ್ಯೋತಿರ್ಗಣೇನೇವ ರಾಜಕೇನ ವಿರಾಜಿತಮ್ ।
ಸ್ವಕೀರ್ತಿನಿರ್ಮಲೈರ್ವೀಜ್ಯಮಾನಂ ಚಮರಜನ್ಮಭಿಃ ॥ ೧೧೮ ॥

ವೇಷ್ಟಿತಂ ವೇಂದ್ರಧನುಷಾ ನಾನಾಭರಣರೋಚಿಷಾ ।
ರೋಚಿಷೇವ ಕೃತಾಕಾರಂ ಪೂಜ್ಯಂ ಪುಣ್ಯೈ[3]ಶ್ಚತುರ್ವಿಧೈಃ ॥ ೧೧೯ ॥

ತುಂಗಸಿಂಹಾಸನಾಸೀನಂ ಭಾಸ್ವಂತಂ ವೋದಯಾದ್ರಿಗಮ್ ।
ರಾಜರಾಜಂ ಸಮಾಲೋಕ್ಯ ಬಹುಶೋ ಭಕ್ತಿನಿರ್ಭರಃ ॥ ೧೨೦ ॥

ಸ ವಾ ಪ್ರಣಮ್ಯ ತೀರ್ಥೇಶಂ ಸ್ಪೃಷ್ಟ್ವಾಷ್ಟಾಂಗೈರ್ಧರಾತಲಮ್ ।
ಕರಂ ಪ್ರಸಾರ್ಯ ಸಂಭಾವ್ಯ ರಾಜ್ಞಾ ವಾಸನ್ನಮಾಸನಮ್ ॥ ೧೨೧ ॥

ನಿಜಹಸ್ತೇನ ನಿರ್ದಿಷ್ಟಂ [4]ದಿಷ್ಟ್ಯಾಲಂಕೃತ್ಯ ತುಷ್ಟವಾನ್ ।
ವ್ಯಭಾಸಿಷ್ಟ ಸಭಾಮಧ್ಯೇ [5]ಸ ತದಾನ್ಯೇನ ತೇಜಸಾ ॥ ೧೨೨ ॥

ಬಾಗಿಲಿನಿಂದ ಹೊರಗೆ ಐರಾವತ ಗಜದಿಂದ ಇಂದ್ರನು ಇಳಿದು ಜಿನೇಶ್ವರನ ಸಮವಸರಣವನ್ನು ತಲುಪುವಂತೆ, ಜಯಕುಮಾರನು ರಾಜಗೃಹದ್ವಾರದಿಂದ ಹೊರಗೆ ಆನೆಯಿಂದಿಳಿದು ಭರತೇಶ್ವರನ ರತ್ನಖಚಿತವಾದ ನೆಲವುಳ್ಳ ಸಭಾಗೃಹವನ್ನು ಸೇರಿ ಅದರ ಮಧ್ಯದಲ್ಲಿ ಪ್ರಕಾಶಮಾನವಾದ ರತ್ನಗಳಿಂದ ಖಚಿತವಾದ ಕಂಬಗಳಿಂದ ಧರಿಸಲ್ಪಟ್ಟುದೂ ನಾನಾಪ್ರಕಾರವಾದ ಪಟ್ಟೆವಸ್ತ್ರದಿಂದ ಮಾಡಲ್ಪಟ್ಟುದೂ ಶ್ರೇಷ್ಠವೂ ಆದ ಮೇಲ್ಕಟ್ಟಿನಿಂದ ಪ್ರಕಾಶಿಸಲ್ಪಟ್ಟುದೂ ರತ್ನಗಳಿಂದಲೂ ಮುಕ್ತಾಫಲಗಳಿಂದಲೂ ಪೋಣಿಸಲ್ಪಟ್ಟು ತೂಗುತ್ತಿರುವ ಹಾರಗಳಿಂದ ಅಲಂಕೃತವೂ ಉತ್ಕೃಷ್ಟವಾದ ರತ್ನಗಳ ಕಿರಣಗಳ ಸಮೂಹದಿಂದ ನಿಬಿಡವೂ ಆದ ರತ್ನಮಂಡಪದಲ್ಲಿ, ಜ್ಯೋತಿರ್ಗಣದಿಂದ ಚಂದ್ರನು ಶೋಭಿಸುವಂತೆ, ರಾಜರುಗಳ ಸಮೂಹದಿಂದ ಪ್ರಕಾಶಿಸಲ್ಪಟ್ಟವನೂ ತನ್ನ ಕೀರ್ತಿಯಂತೆ ನಿರ್ಮಲಗಳಾದ ಚಾಮರಗಳಿಂದ ಬೀಸಲ್ಪಡುತ್ತಿರುತ್ತಿರುವವನೂ ಇಂದ್ರಧನುಸ್ಸಿನಿಂದ ಸುತ್ತಲ್ಪಟ್ಟಿರುತ್ತಾನೋ ಎಂಬಂತೆ, ನಾನಾಪ್ರಕಾರವಾದ ಆಭರಣಗಳ ಕಾಂತಿಯಿಂದ ಸುತ್ತಲ್ಪಟ್ಟವನೂ ಕಾಂತಿಯಿಂದ ಮಾಡಲ್ಪಟ್ಟ ಆಕಾರವುಳ್ಳವನಂತಿರುವವನೂ ಶುಭಾಯುಷ್ಯ ಶುಭನಾಮ ಶುಭಗೋತ್ರ ಸಾತಾವೇದನೀಯಗಳೆಂಬ ನಾಲ್ಕು ಪ್ರಕಾರವಾದ ಪುಣ್ಯಗಳಿಂದ ಪೂಜ್ಯನೂ ಉದಯಪರ್ವತವನ್ನು ಹೊಂದಿರುವ ಸೂರ್ಯನಂತೆ, ಉನ್ನತವಾದ ಸಿಂಹಾಸನದಲ್ಲಿ ಕುಳಿತಿರುವವನೂ ಆದ ರಾಜರಾಜ-ಚಕ್ರವರ್ತಿಯನ್ನು ನೋಡಿ ಭಕ್ತಿಭರಿತವಾದ ಆ ಜಯಕುಮಾರನು ತೀರ್ಥಂಕರರನ್ನು ನಮಸ್ಕರಿಸುವಂತೆ, ಭೂತಲವನ್ನು ಅವಯವಗಳಿಂದ ಮುಟ್ಟಿ-ಸಾಷ್ಟಾಂಗವಾಗಿ ಅನೇಕಾವರ್ತಿ ನಮಸ್ಕರಿಸಿ ಚಕ್ರವರ್ತಿ

೧ ಶಿಬಿರಂ. ೨ ಗಂಗಾತೀರೇ. ೩ ಜಯಕುಮಾರಃ. ೪ ಗ್ರಥ್ನದ್ವಸ್ತ್ರಕುಟೀಸಮೂಹಾಸನ್ನವಿಸ್ತೃತನಿರ್ಗಮಃ. ೫ ರಾಜಸಮೂಹಂ. ೬ ಉಪವಿಶ್ಯ. ೭ ಗಜಂ. ೮ ಪ್ರತಿಬೋಧ್ಯ. ೯ ಕಾರಣಂ. ೧೦ ಆಯೋಧ್ಯಾಂ ಪ್ರತಿ. ೧೧ ಮುಖ್ಯೈಃ. ೧೨ ಪೂಜಿತಃ.

೧ ವಿಚಿತ್ರಪಟ್ಟವಸ್ತ್ರಕೃತ. ೨ ದಾಮ. ೩ ಶುಭಾಯುರ್ನಾಮಗೋತ್ರಸದ್ವೇದ್ಯಲಕ್ಷಣೈಃ. ೪ ಪ್ರೀತ್ಯಾ. ೫ ಜಯಃ.

ಯಿಂದಲೇ ಕೈಯನ್ನು ನೀಡಿ ಸತ್ಕರಿಸಲ್ಪಟ್ಟು ತನ್ನ ಕೈಯಿಂದ ತೋರಿಸಲ್ಪಟ್ಟ ಸಮೀಪಸ್ಥವಾದ ಆಸನವನ್ನು ಜಯಕುಮಾರನು ಪ್ರೀತಿಯಿಂದ ಅಲಂಕರಿಸಿ ಸಂತುಷ್ಟನಾಗಿ ಆಗ ಸಭಾಮಧ್ಯದಲ್ಲಿ ವಿಲಕ್ಷಣವಾದ ತೇಜಸ್ಸಿನಿಂದ ಪ್ರಕಾಶಿಸಿದನು.

**ಪ್ರಸನ್ನವದನೇಂದೂದ್ಯದಾಹ್ಲಾದಿವಚನಾಂಶುಭಿಃ ।**
**ವಧೂಃ ಕಿಮಿತಿ ನಾನೀತಾ ತಾಂ ದ್ರಷ್ಟುಂ ವಯಮುತ್ಸುಕಾಃ ॥ ೧೨೪ ॥**

**ವಯಂ ಕಿಮಿತಿ ನಾಹೂತಾಸ್ತ್ವದ್ವಿವಾಹೋತ್ಸವೇ ನವೇ ।**
**ಅಕಂಪನೈರಿದಂ ಯುಕ್ತಂ ಸನಾಭಿಭ್ಯೋ ಬಹಿಷ್ಕೃತಾಃ ॥ ೧೨೫ ॥**

ಭರತೇಶ್ವರನು ಪ್ರಸನ್ನನಾದ ಮುಖಚಂದ್ರನಿಂದುಂಟಾದುದೂ ಆನಂದವನ್ನುಂಟುಮಾಡುವುದೂ ಆದ ವಚನಗಳೆಂಬ ಕಿರಣಗಳಿಂದ ''ವಧುವನ್ನೇಕೆ ಕರೆದುಕೊಂಡು ಬರಲಿಲ್ಲ? ನಾವು ಆಕೆಯನ್ನು ನೋಡುವುದಕ್ಕೆ ಕುತೂಹಲವುಳ್ಳವರಾಗಿದ್ದೇವೆ. ನೂತನವಾದ ನಿನ್ನ ವಿವಾಹೋತ್ಸವದಲ್ಲಿ ಅಕಂಪನರು ನಮ್ಮನ್ನೇಕೆ ಕರೆಯಲಿಲ್ಲ? ಬಂಧುಗಳಿಂದ ನಾವು ಬಹಿಷ್ಕೃತರಾಗಿರುವುದು ಇದು ಯುಕ್ತವಾಗಿರುತ್ತದೆ.

**[೧]ನನ್ವಹಂ ತ್ವತ್ಪಿತೃಸ್ಥಾನೇ ಮಾಂ ಪುರಸ್ಕೃತ್ಯ ಕನ್ಯಕಾ ।**
**ತ್ವಯಾಸೌ ಪರಿಣೇತವ್ಯಾ ತ್ವಂ ತದ್ವಿಸ್ಮೃತವಾನಸಿ ॥ ೧೨೬ ॥**

ಆಶ್ಚರ್ಯ! ನಾನು ನಿನಗೆ ತಂದೆಯ ಸ್ಥಾನದಲ್ಲಿರುತ್ತೇನೆ. ನನ್ನನ್ನು ಮುಂದೆ ಮಾಡಿ ಈ ಕನ್ಯೆಯು ನಿನ್ನಿಂದ ವಿವಾಹಮಾಡಿಕೊಳ್ಳಲ್ಪಡುವುದಕ್ಕೆ ಯೋಗ್ಯಳಾಗಿರುತ್ತಾಳೆ. ನೀನು ಅದನ್ನು ಮರೆತವನಾಗಿರುತ್ತಿ.''

**ಇತ್ಯಕೃತ್ರಿಮಸಾಮೋಕ್ತ್ಯಾ ತರ್ಪಿತಶ್ಚಕ್ರವರ್ತಿನಾ ।**
**ತದಾವಿರ್ಭಾವಯನ್ ಭಕ್ತಿಂ ಸ್ವವಕ್ತ್ರಂ ಮಣಿಕುಟ್ಟಿಮೇ ॥ ೧೨೭ ॥**

**ನತ್ವಾ ಪಶ್ಯ[೨]ನ್ಪ್ರಸಾದೀವ ಪ್ರತಿಗೃಹ್ಯ ಪ್ರಭೋರ್ದಯಾಮ್ ।**
**ಜಯಃ ಪ್ರಾಂಜಲಿರುತ್ಥಾಯ ರಾಜರಾಜಂ ವ್ಯಜಿಜ್ಞಪತ್ ॥ ೧೨೮ ॥**

ಈ ಪ್ರಕಾರವಾಗಿ ಅಕೃತ್ರಿಮವಾದ ಸಾಮವಚನದಿಂದ ಚಕ್ರವರ್ತಿಯಿಂದ ಜಯಕುಮಾರನು ಸಂತೋಷಪಡಿಸಲ್ಪಟ್ಟನು. ಆಗ ಪ್ರಸನ್ನನೂ ಭಕ್ತಿಯನ್ನು ತೋರ್ಪಡಿಸುವವನೂ ಆಗಿ ತನ್ನ ಮುಖವನ್ನು ರತ್ನಖಚಿತವಾದ ನೆಲಗಟ್ಟಿನಲ್ಲಿ ನೋಡುತ್ತಾನೋ ಎಂಬಂತೆ ನಮಸ್ಕರಿಸಿ ಭರತೇಶ್ವರನ ದಯೆಯನ್ನು ಪರಿಗ್ರಹಿಸಿ ಜಯಕುಮಾರನು ಕೈಗಳನ್ನು ಜೋಡಿಸಿದವನಾಗಿ ಎದ್ದು ಚಕ್ರವರ್ತಿಯನ್ನು ವಿಜ್ಞಾಪಿಸಿಕೊಂಡನು.

**ಕಾಶೀದೇಶೇಶಿನಾ ದೇವ ದೇವಸ್ಯಾಜ್ಞಾವಿಧಾಯಿನಾ ।**
**ವಿವಾಹವಿಧಿಭೇದೇಷು ಪ್ರಾಗಭ್ಯಸ್ತಿ ಸ್ವಯಂವರಃ ॥ ೧೨೯ ॥**

**ಇತಿ ಸರ್ವೈಃ ಸಮಾಲೋಚ್ಯ ಸಚಿವೈಃ ಶಾಸ್ತ್ರವೇದಿಭಿಃ ।**
**ಕಲ್ಯಾಣಂ ತತ್ಸಮಾರಬ್ಧಂ ದೈವೇನ ಕೃತಮನ್ಯಥಾ ॥ ೧೩೦ ॥**

''ಸ್ವಾಮಿಯೆ! ಪ್ರಭುವಿನ(ತಮ್ಮ)ಆಜ್ಞೆಯನ್ನು ಪಾಲಿಸುವವನಾದ ಕಾಶೀದೇಶದರಾಜ–ಅಕಂಪನಮಹಾರಾಜನಿಂದ ವಿವಾಹವಿಧಿಯ ಭೇದಗಳಲ್ಲಿ ಮೊದಲು ಸ್ವಯಂವರ ವಿವಾಹವಿರುತ್ತದೆಂದು ಶಾಸ್ತ್ರಜ್ಞರಾದ ಸಮಸ್ತ ಮಂತ್ರಿಗಳೊಡನೆ ಆಲೋಚಿಸಿ ಆ ಶುಭಕಾರ್ಯವು ಪ್ರಾರಂಭಿಸಲ್ಪಟ್ಟಿತು. ಅದು ದೈವದಿಂದ ಬೇರೆ ವಿಧವಾಗಿ ಮಾಡಲ್ಪಟ್ಟಿತು.

**ಶಾಂತಂ ತತ್ತ್ವತ್ಪ್ರಸಾದೇನ ಮನ್ಮೂಲೋಚ್ಛೇದಕಾರಣಮ್ ।**
**ಸುರಖೇಚರಭೂಪಾಲಾಸ್ತ್ವತ್ಪದಾಂಬುರುಹಾಲಿನಃ ॥ ೧೩೧ ॥**

**ಚಕ್ರೇಣಾಕ್ರಾಂತದಿಕ್ಚಕ್ರ ಕಿಂಕರಾಸ್ತತ್ರ ಕೋಸ್ಮ್ಯಹಮ್ ।**
**ದೇವೇನಾನನ್ಯಸಾಮಾನ್ಯಮಾನನಾಂ ಮಮ ಕುರ್ವತಾ ॥ ೧೩೨ ॥**

**[೧]ಸ್ವೃಣೀಕೃತಃ ಕ್ವಾ[೨]ನೃಣ್ಯಂ ಭವಾಂತರಶತೇಷ್ವಪಿ ।**
**ನಾಥೇಂದುವಂಶಸಂರೋಹೌ ಪುರುಣಾ ವಿಹಿತೌ ತ್ವಯಾ ॥ ೧೩೩ ॥**

**ವರ್ಧಿತೌ ಪಾಲಿತೌ ಸ್ಥಾಪಿತೌ ಚ ಯಾವದ್ಧರಾತಲಮ್ ।**
**ಇತಿ ಪ್ರಶ್ರಯಿಣೀಂ ವಾಣೀಂ ಶ್ರುತ್ವಾ ತಸ್ಯ ನಿಧೀಶ್ವರಃ ॥ ೧೩೪ ॥**

**ತುಷ್ಟ್ವಾ ಸಂಪೂಜ್ಯ ಪೂಜಾವಿದ್ವಸ್ತ್ರಾಭರಣವಾಹನೈಃ ।**
**ದತ್ವಾ ಸುಲೋಚನಾಯೈ ಚ ತದ್ಯೋಗ್ಯಂ ವಿಸಸರ್ಜ ತಮ್ ॥ ೧೩೫ ॥**

ನನ್ನ ಮೂಲೋಚ್ಛೇದಕ್ಕೆ ಕಾರಣವಾದ ಆ ಕಾರ್ಯವು–ಯುದ್ಧವು ನಿನ್ನ ಅನುಗ್ರಹದಿಂದ ಶಾಂತವಾಯಿತು. ಚಕ್ರದಿಂದ ಆಕ್ರಮಿಸಲ್ಪಟ್ಟ ದಿಙ್ಮಂಡಲವುಳ್ಳವನಾದ ಸ್ವಾಮಿಯೆ! ನಿನ್ನ ಪಾದಕಮಲಗಳಲ್ಲಿ ಭ್ರಮರಗಳಂತಿರುವವರಾದ ದೇವತೆಗಳೂ ಖೇಚರರಾಜರೂ ಭೃತ್ಯರಾಗಿರುತ್ತಾರೆ. ಅವರಲ್ಲಿ ನಾನು ಯಾವನಾಗಿದ್ದೇನೆ? (ಎಷ್ಟರವನು?) ನನಗೆ ಬೇರೆಯವರಿಗೆ ಸಾಧಾರಣವಲ್ಲದ ಮರ್ಯಾದೆಯನ್ನು ಮಾಡುತ್ತಿರುವ ಸ್ವಾಮಿಯಿಂದ ನಾನು ಉತ್ತಮವಾದ ಋಣವುಳ್ಳವನಾಗಿ ಮಾಡಲ್ಪಟ್ಟಿರುತ್ತೇನೆ. ನೂರಾರು ಭವಗಳಲ್ಲಿಯೂ ಋಣವಿಲ್ಲದಿರುವಿಕೆಯು ಎಲ್ಲಿಯಾಗುವುದು? ಋಣವಿಮುಕ್ತತೆಯಾಗಲಾರದೆಂದು ಭಾವವು. ಪುರುಪರಮೇಶ್ವರರಿಂದ ನಾಥವಂಶ ಚಂದ್ರವಂಶಗಳ ಉತ್ಪತ್ತಿಗಳು (ಮೊಳಕೆಗಳು) ಮಾಡಲ್ಪಟ್ಟುವು. ನಿನ್ನಿಂದ ಬೆಳೆಸಲ್ಪಟ್ಟುವು, ಕಾಪಾಡಲ್ಪಟ್ಟುವು ಮತ್ತು ಭೂತಲವಿರುವವರೆಗೂ ಸ್ಥಾಪಿಸಲ್ಪಟ್ಟುವು'' ಈ ಪ್ರಕಾರವಾದ ಜಯಕುಮಾರನ ವಿನಯವಚನವನ್ನು ನಿಧೀಶ್ವರನಾದ ಭರತೇಶ್ವರನು ಕೇಳಿ ಸಂತೋಷಪಟ್ಟು ಪೂಜೆಯನ್ನು ತಿಳಿದವರಿಂದ ವಸ್ತ್ರ ಆಭರಣ ವಾಹನಗಳಿಂದ ಪೂಜಿಸಿ ಸುಲೋಚನೆಗೂ ಯೋಗ್ಯವಾದ ವಸ್ತುವನ್ನು ಕೊಟ್ಟು ಜಯಕುಮಾರನನ್ನು ಬೀಳ್ಕೊಟ್ಟನು.

**ಮಹೀಂ ಪ್ರಿಯಾಮಿವಾಲಿಂಗ್ಯ ತಂ ಪ್ರಣಮ್ಯ ಯಯೌ ಜಯಃ ।**
**ಸಂಪತ್ಸಂಪನ್ನಪುಣ್ಯಾನಾಮನುಬಧ್ನಾತಿ ಸಂಪದಮ್ ॥ ೧೩೬ ॥**

ಜಯಕುಮಾರನು, ಪ್ರಿಯಕಾಂತೆಯನ್ನಾಲಿಂಗಿಸುವಂತೆ, ಭೂಮಿಯನ್ನಾಲಿಂಗಿಸಿ ಭರತೇಶ್ವರನನ್ನು ನಮಸ್ಕರಿಸಿ ಹೊರಟುಹೋದನು. ಸಂಪತ್ತಿಯು ಪುಣ್ಯಸಂಪನ್ನರಿಗೆ ಸಂಪತ್ತಿಯನ್ನು ಒದಗಿಸುತ್ತದೆ. ಪುಣ್ಯಶಾಲಿಗಳಿಗೆ ಮೇಲೆ ಮೇಲೆ ಸಂಪತ್ತಿಯು ಪ್ರಾಪ್ತವಾಗುವುದೆಂದು ಭಾವವು.

**ಪೌರೈರ್ವನೀಪಕಾನೀಕೈಃ ಸ್ತೂಯಮಾನಸ್ವಸಾಹಸಃ ।**
**ಪುರಾದ್ಗಜಂ ಸಮಾರುಹ್ಯ ನಿಷ್ಕ್ರಮ್ಯೇಪ್ಸುರ್ಮನಃಪ್ರಿಯಾಮ್ ॥ ೧೩೭ ॥**

**ಸದ್ಯೋ ಗಂಗಾಂ ಸಮಾಸನ್ನಃ ಸ್ವಮನೋವೇಗಚೋದಿತಃ ।**
**ಶುಷ್ಕಭೂರುಹಶಾಖಾಗ್ರೇ ಸಮ್ಮುಖೀಭೂಯ ಭಾಸ್ವತಃ ॥ ೧೩೮ ॥**

**ರುವಂತಂ ಧ್ವಾಂಕ್ಷಮಾಲೋಕ್ಯ ಕಾಂತಾಯಾಶ್ಚಿಂತಯನ್ಭಯಮ್ ।**
**ಮೂರ್ಛಿತಃ ಪ್ರೇಮಸದ್ಭಾವಾತ್ತಾದೃಶೋ ಧಿಕ್ ಸುಖಂ ರತೇಃ ॥**

ಪುರನಿವಾಸಿಗಳಿಂದಲೂ ಯಾಚಕರ ಸಮೂಹಗಳಿಂದಲೂ ಹೊಗಳಲ್ಪಟ್ಟ ತನ್ನ ಸಾಹಸವುಳ್ಳವನೂ ಮನಸ್ಸಿಗೆ ಪ್ರಿಯಳಾದ ಸುಲೋಚನೆಯನ್ನು ಹೊಂದಬೇಕೆಂಬ ಇಚ್ಛೆಯುಳ್ಳವನೂ ಆನೆಯನ್ನೇರಿ ಪಟ್ಟಣದಿಂದ ಹೊರಟು ತನ್ನ ಮನಸ್ಸಿನ ವೇಗದಿಂದ ಪ್ರೇರಿತನೂ ಆಗಲೇ ಗಂಗಾನದಿಯನ್ನು ಹೊಂದಿದವನೂ ಒಣಗಿದ ಮರದ ಕೊಂಬೆಯ ತುದಿಯಲ್ಲಿ ಸೂರ್ಯನಿಗೆ ಇದಿರಾಗಿ ಕೂಗುತ್ತಿರುವ ಕಾಗೆಯನ್ನು ನೋಡಿ ಪತ್ನಿಗೆ ಭಯವನ್ನು ಚಿಂತಿಸುವವನೂ(ಪತ್ನಿಗೆ ಅಪಾಯ

೧ ಅಹೋ. ೨ ಪ್ರಸನ್ನಂ, ಪ್ರಸನ್ನವಾನ್ವಾ.

೧ ಶೋಭನೇನ ಋಣೇನ ತದ್ವಾನ್ ಕೃತಃ, ಸುಷ್ಠು ಋಣವಾನ್ ಕೃತೋ ವಾ. ೨ ಅನೃಣತ್ವಂ ಭವಿಷ್ಯತಿ.

ವಾಗುವುದೆಂಬ ಭಯದಿಂದ ಚಿಂತಿಸುವವನೂ)ಆಗಿ ಪ್ರೇಮವಿದ್ದುದರಿಂದ ಮೂರ್ಛೆಯನ್ನು ಹೊಂದಿದನು. ಅಂಥಾ ರತಿಯ ಸುಖವು ನಿಂದ್ಯವಾದುದು. ದುಃಖವನ್ನುಂಟುಮಾಡುವ ರತಿಸುಖಕ್ಕೆ ಧಿಕ್ಕಾರವಿರಲೆಂದು ಭಾವವು.

**ಸಮಾಶ್ವಾಸ್ಯ ತದೋಪಾಯೈಃ ಸುಖಮಾಸ್ತೇ ಸುಲೋಚನಾ ।**
**ಜಲಾದ್ಭಯಂ ಭವೇತ್ಕಿಂಚಿದಸ್ಮಾಕಂ ಶಕುನಾದಿತಃ ॥ ೧೪೦ ॥**

**ಇತ್ಯುದೀರ್ಯೇಂಗಿತಜ್ಞೇನ ಶಕುನಜ್ಞೇನ ಸಾಂತ್ವಿತಃ ।**
**[೧]ಸುರದೇವಸ್ಯ ತದ್ವಾಕ್ಯಂ ಕೃತ್ವಾ ಪ್ರಾಣಾವಲಂಬನಮ್ ॥ ೧೪೧ ॥**

**ವ್ರಜನ್ಸ ಸತ್ವರಂ ಮೋಹಾ[೨]ದತೀರ್ಥೇ ಚೋದಯದ್ಗಜಮ್ ।**
**ಹೇಯೋಪೇಯವಿವೇಕಃ ಕಃ ಕಾಮಿನಾಂ ಮುಗ್ಧಚೇತಸಾಮ್ ॥ ೧೪೨ ॥**

ಆಗ ಉಪಾಯಗಳಿಂದ ಸಮಾಧಾನಪಡಿಸಿ ಸುಲೋಚನೆಯು ಸುಖವಾಗಿದ್ದಳು. ''ಈ ಶಕುನದಿಂದ ನಮಗೆ ನೀರಿನಿಂದ ಸ್ವಲ್ಪ ಭಯವುಂಟಾಗುವುದು'' ಎಂದು ಇಂಗಿತಜ್ಞನಾದ ಶಕುನವನ್ನು ತಿಳಿದವನಿಂದ ಹೇಳಲ್ಪಟ್ಟು ಸಮಾಧಾನಪಡಿಸಲ್ಪಟ್ಟವನೂ ಸುರದೇವನೆಂಬ ಆ ಶಕುನಜ್ಞಾನಿಯ ಆ ವಾಕ್ಯವನ್ನು ಪ್ರಾಣಾವಲಂಬನವನ್ನಾಗಿ ಮಾಡಿ ಶೀಘ್ರವಾಗಿ ಹೊರಟವನೂ ಆದ ಆ ಜಯಕುಮಾರನು ಮೋಹ-ಪ್ರಮಾದದಿಂದ ನೀರನ್ನು-ಹೊಳೆಯನ್ನು ದಾಟತಕ್ಕುದಲ್ಲದ- ತಪ್ಪು ದಾರಿಯಲ್ಲಿ ಆನೆಯನ್ನು ಪ್ರೇರಿಸಿದನು. ಮೋಹಿತವಾದ ಮನಸ್ಸುಳ್ಳ ಕಾಮುಕರ ಹೇಯೋಪಾದೇಯವಿವೇಕವು ಯಾವುದು ?

**ಉತ್ಪುಷ್ಕರಂ ಸ್ಫುರದ್ದಂತಂ [೩]ಪ್ರೋದ್ಧೃತ್ತತ್ಪತಿಮಾನಕಮ್ ।**
**ತರಂತಂ ಮಕರಾಕಾರಂ ಮಧ್ಯೇಹ್ರದಮಿಭಾಧಿಪಮ್ ॥ ೧೪೩ ॥**

**ದೇವೀ ಕಾಲೀತಿ ಪೂರ್ವೋಕ್ತಾ [೪]ಸರಯ್ವಾಃ [೫]ಸಂಗಮೇಗ್ರಹೀತ್ ।**
**ನಕ್ರಾಕೃತ್ಯಾ ಸ್ವದೇಶಸ್ಥಃ ಕ್ಷುದ್ರೋಽಪಿ ಮಹತಾಂ ಬಲೀ ॥ ೧೪೪ ॥**

ಸೊಂಡಿಲನ್ನು ಮೇಲಕ್ಕೆ ಎತ್ತಿರುವುದೂ ಪ್ರಕಾಶಮಾನವಾದ ಹಲ್ಲುಗಳುಳ್ಳದೂ ಕುಂಭಸ್ಥಲದ ಕೆಳಗಿನ ಭಾಗವನ್ನು ಎತ್ತಿರುವುದೂ ಮೊಸಳೆಯ ಆಕಾರವುಳ್ಳದೂ ಮಡುವಿನ ಮಧ್ಯದಲ್ಲಿ ದಾಟುತ್ತಿರುವುದೂ ಆದ ದೊಡ್ಡ ಆನೆಯನ್ನು ಕಾಲಿಯೆಂದು ಹಿಂದೆ ಹೇಳಲ್ಪಟ್ಟ ದೇವಿಯು (ಕೇರೆಯ ಹಾವಿನ ಆತ್ಮವು) ಮೊಸಳೆಯ ಆಕಾರದಿಂದ ಸರಯೂನದಿಯ ಸಂಗಮ-ಗಂಗಾಪ್ರವೇಶ ಸ್ಥಾನದಲ್ಲಿ ಹಿಡಿದಳು. ಸ್ವದೇಶದಲ್ಲಿರುವ ಕ್ಷುದ್ರನೂ ದೊಡ್ಡವರಿಗೆ ಬಲಶಾಲಿಯಾಗಿರುತ್ತಾನೆ.

**ದೃಷ್ಟ್ವಾ ಗಜಂ ನಿಮಜ್ಜಂತಂ [೬]ಪ್ರತ್ಯಾಗತ್ಯ ತಟೇ ಸ್ಥಿತಾಃ ।**
**ಸಸಂಭ್ರಮಂ ಸಹಾ[೭]ಪೇತುರ್ಹ್ರದಂ ಹೇಮಾಂಗದಾದಯಃ ॥ ೧೪೫ ॥**

ಮುಳುಗುತ್ತಿರುವ ಆನೆಯನ್ನು ನೋಡಿ ಇದಿರಾಗಿ ಬಂದು ದಡದಲ್ಲಿರುವ ಹೇಮಾಂಗದನೇ ಮೊದಲಾದವರು ಆತುರದೊಡನೆ ಕೂಡಿರುವಂತೆ ಮಡುವನ್ನು ಜತೆಯಲ್ಲಿ (ಎಲ್ಲರೂ ಒಟ್ಟಿಗೆ) ಪ್ರವೇಶಿಸಿದರು.

**ಸುಲೋಚನಾಪಿ ತಾನ್ವೀಕ್ಷ್ಯ ಕೃತಪಂಚನಮಸ್ಕೃತಿಃ ।**
**ಮಂತ್ರಮೂರ್ತಿಂ ಸಮಾಧಾಯ ಹೃದಯೇ ಭಕ್ತಿತೋಽರ್ಹತಃ ॥ ೧೪೬ ॥**

**[೮]ಉಪಸರ್ಗಾಪಸರ್ಗಾಂತಂ ತ್ಯಕ್ತಾಹಾರ[೯]ಶರೀರಿಕಾ ।**
**ಪ್ರಾವಿಶದ್ಬಹುಭಿಃ ಸಾರ್ಧಂ ಗಂಗಾಂ ಗಂಗೇವ ದೇವತಾ ॥ ೧೪೭ ॥**

ಸುಲೋಚನೆಯೂ ಅವರನ್ನು ನೋಡಿ ಪಂಚನಮಸ್ಕಾರವನ್ನು ಮಾಡಿದವಳಾಗಿಯೂ ಮನಸ್ಸಿನಲ್ಲಿ ಅರ್ಹತ್ಪರಮೇಶ್ವರನ ಮಂತ್ರರೂಪವಾದ ಮೂರ್ತಿಯನ್ನು ಭಕ್ತಿಯಿಂದ ಧರಿಸಿ ಉಪಸರ್ಗವು-ಆಪತ್ತಿಯು ನಿವಾರಣೆಯಾಗುವವರೆಗೆ ಆಹಾರವನ್ನೂ ಶರೀರಮಮಕಾರವನ್ನೂ ತ್ಯಜಿಸಿದವಳಾಗಿಯೂ ಅನೇಕರೊಡನೆ, ಗಂಗಾನದಿಯೋ ಎಂಬಂತೆ, ಗಂಗಾನದಿಯನ್ನು ಪ್ರವೇಶಿಸಿದಳು.

೧ ಶಾಕುನಿಕಸ್ಯ. ೨ ಅಜಲೋತ್ತಾರಪ್ರದೇಶೇ. ೩ ಪ್ರೋದ್ಗತಕುಂಭಸ್ಥಲಸ್ಯಾಧೋಭಾಗಪ್ರದೇಶಕಂ. ೪ ಸರಯೂನದ್ಯಾಃ. ೫ ಗಂಗಾಪ್ರವೇಶಸ್ಥಾನೇ. ೬ ಅಭಿಮುಖಮಾಗತ್ಯ. ೭ ಪ್ರವಿಷ್ಟವಂತಃ. ೮ ಉಪಸರ್ಗಾವಸಾನಪರ್ಯಂತಂ. ೯ ಶರೀರಕಾಂಕ್ಷತ್ಯಪಿಪಾಠಃ.

**[೧]ಗಂಗಾಪಾತಪ್ರತಿಷ್ಠಾನಗಂಗಾಕೂಟಾಧಿದೇವತಾ ।**
**ವಿಬುಧ್ಯಾಸನಕಂಪೇನ ಕೃತಜ್ಞಾಗತ್ಯ ಸತ್ವರಮ್ ॥ ೧೪೮ ॥**

**ತಾನಾನಯತ್ತಟಂ ಸರ್ವಾನ್ ಸಂತರ್ಜ್ಯ ಖಲಕಾಲಿಕಾಮ್ ।**
**ಸ್ವಯಮಾಗತ್ಯ ಕೇ ನಾತ್ರ ರಕ್ಷಂತಿ ಕೃತಪುಣ್ಯಕಾನ್ ॥ ೧೪೯ ॥**

ಆಗ ಮಹಾಗಂಗಾನದಿಯ ಗಂಗಾಪತನಕುಂಡದಲ್ಲಿ ವಾಸಮಾಡುವವಳಾದ ಗಂಗಾಕೂಟದ ಅಧಿದೇವತೆಯು ತನ್ನ ಆಸನಕಂಪದಿಂದ ಈ ವಿಷಯವನ್ನು ತಿಳಿದು ಕೃತಜ್ಞಳಾಗಿ ತ್ವರೆಯಾಗಿ ಬಂದು ಆ ದುಷ್ಟಳಾದ ಕಾಲಿಕಾದೇವಿಯನ್ನು ಬೆದರಿಸಿ ಅವರೆಲ್ಲರನ್ನೂ ದಡಕ್ಕೆ ತಂದಳು. ಈ ಲೋಕದಲ್ಲಿ ಪುಣ್ಯವನ್ನು ಮಾಡಿರುವವರನ್ನು ಯಾರುತಾನೆ ತಾವಾಗಿ ಬಂದು ರಕ್ಷಿಸುವುದಿಲ್ಲ ?

**ಗಂಗಾತಟೇ [೨]ವಿಕೃತ್ಯಾಶು ಭವನಂ ಸರ್ವಸಂಪದಾ ।**
**ಮಣಿಪೀಠೇ ಸಮಾಸ್ಥಾಪ್ಯ ಪೂಜಯಿತ್ವಾ ಸುಲೋಚನಾಮ್ ॥ ೧೫೦ ॥**

**[೩]ತವ ದತ್ತನಮಸ್ಕಾರಾ[೪]ಜ್ಜಜ್ಞೇ ಗಂಗಾಧಿದೇವತಾ ।**
**ತ್ವತ್ಪ್ರಸಾದಾದಿದಂ ಸರ್ವ[೫]ಮವರುದ್ಧಾಮರೇಶಿನಃ ॥ ೧೫೧ ॥**

**ತಯೇತ್ಯುಕ್ತಾಂ ಜಯೋಪ್ಯೇತತ್ಕಿಮಿತ್ಯಾಹ ಸುಲೋಚನಾಮ್ ।**
**[೬]ಉಪವಿಂಧ್ಯಾದ್ರಿ ವಿಖ್ಯಾತೋ ವಿಂಧ್ಯಪುರ್ಯಾಮಭೂದ್ವಿಭುಃ ॥ ೧೫೨ ॥**

**ವಿಂಧ್ಯಕೇತುಃ ಪ್ರಿಯಾ ತಸ್ಯ ಪ್ರಿಯಂಗುಶ್ರೀಸ್ತಯೋಃ ಸುತಾ ।**
**ವಿಂಧ್ಯಶ್ರೀಸ್ತಾಂ ಪಿತಾ ತಸ್ಯಾಃ ಶಿಕ್ಷಿತುಂ ಸಕಲಾನ್ ಗುಣಾನ್ ॥ ೧೫೩ ॥**

**[೭]ಮಯಾ ಸಹ ಮಯಿ ಸ್ನೇಹಾ[೮]ನ್ಮಹೀಶಸ್ಯ ಸಮರ್ಪಯತ್ ।**
**ವಸಂತತಿಲಕೋದ್ಯಾನೇ ಕ್ರೀಡಂತೀ ಸೈಕದಾಹಿನಾ ॥ ೧೫೪ ॥**

**ದಷ್ಟಾ ತತ್ರ ಮಯಾ ದತ್ತನಮಸ್ಕಾರಪದಾನ್ಯಲಮ್ ।**
**ಭಾವಯಂತೀ ಮೃತಾತ್ರೇಯಂ ಭೂತ್ವಾಯಾತ್ಸ್ನೇಹಿನೀ ಮಯಿ ॥**

ಬಳಿಕ ಶೀಘ್ರವಾಗಿ ಸಮಸ್ತ ಸಂಪತ್ತಿಯಿಂದ ಗಂಗಾನದಿಯ ದಡದಲ್ಲಿ ಒಂದು ಗೃಹವನ್ನು ನಿರ್ಮಿಸಿ ರತ್ನಪೀಠದಲ್ಲಿ ಸುಲೋಚನೆಯನ್ನು ಸ್ಥಾಪಿಸಿ-ಕುಳ್ಳಿರಿಸಿ ಪೂಜಿಸಿ ''ಎಲೈ ಸುಲೋಚನೆಯೆ ! ನಿನ್ನಿಂದ ಕೊಡಲ್ಪಟ್ಟ ಪಂಚನಮಸ್ಕಾರದಿಂದ ನಾನು ದೇವೇಂದ್ರನ ಪತ್ನಿಯಾದ ಗಂಗಾಧಿದೇವತೆಯಾದೆನು. ಇದೆಲ್ಲವೂ ನಿನ್ನ ಅನುಗ್ರಹದಿಂದಾದುದು'' ಈ ಪ್ರಕಾರವಾಗಿ ಗಂಗಾಧಿದೇವತೆಯಿಂದ ಹೇಳಲ್ಪಟ್ಟವಳಾದ ಸುಲೋಚನೆಯನ್ನು ಕುರಿತು ಜಯಕುಮಾರನೂ ''ಇದೇನು ?'' ಎಂದನು. ಸುಲೋಚನೆಯು ''ವಿಂಧ್ಯಪರ್ವತದ ಸಮೀಪದಲ್ಲಿರುವ ವಿಂಧ್ಯಪುರದಲ್ಲಿ ಪ್ರಸಿದ್ಧನಾದ ವಿಂಧ್ಯಕೇತುವೆಂಬ ದೊರೆಯಿದ್ದನು. ಆತನಿಗೆ ಪ್ರಿಯಂಗುಶ್ರೀಯೆಂಬವಳು ಪತ್ನಿಯಿದ್ದಳು. ಆ ದಂಪತಿಗಳಿಗೆ ವಿಂಧ್ಯಶ್ರೀಯೆಂಬ ಮಗಳಿದ್ದಳು. ಆಕೆಯ ತಂದೆಯು ಆಕೆಯನ್ನು ಸಮಸ್ತಗುಣಗಳನ್ನು ನನ್ನೊಡನೆ ಕಲಿಯುವುದಕ್ಕೋಸ್ಕರ ನನ್ನಲ್ಲಿ ಪ್ರೀತಿಯಿಂದ ಅಕಂಪನಮಹಾರಾಜನಿಗೆ ಸಮರ್ಪಿಸಿದನು. ವಸಂತತಿಲಕವೆಂಬ ಉದ್ಯಾನದಲ್ಲಿ ಕ್ರೀಡಿಸುತ್ತಿದ್ದ ಆ ವಿಂಧ್ಯಶ್ರೀಯನ್ನು ಒಂದಾನೊಂದು ಕಾಲದಲ್ಲಿ ಹಾವು ಕಚ್ಚಿತು. ಅಲ್ಲಿ ನಾನು ಕೊಟ್ಟ ಪಂಚನಮಸ್ಕಾರದ ಪದಗಳನ್ನು ಚೆನ್ನಾಗಿ ಭಾವಿಸುವವಳಾಗಿ ಸತ್ತು ಇಲ್ಲಿ ಈ ದೇವತೆಯಾಗಿ ನನ್ನಲ್ಲಿ ಸ್ನೇಹವುಳ್ಳವಳಾಗಿ ಬಂದಳು.''

೧ ಮಹಾಗಂಗಾ ಗಂಗಾಪತನಕುಂಡಸ್ಥಾನ. ೨ ನಿರ್ಮಾಯ. ೩ ತ್ವಯಾ ದತ್ತ. ೪ ಅಭೂವಂ. ೫ ವಿಲಾಸಿನೀ. ೬ ವಿಂಧ್ಯಾಚಲಸಮೀಪೇ. ೭ ಸುಲೋಚನಯಾ. ೮ ಅಕಂಪನಸ್ಯ.

**ಇತ್ಯಬ್ರವೀ[೧]ದಸೌ ಸೋಪಿ ಜ್ಞಾತ್ವಾ ಸಂತುಷ್ಟಚೇತಸಾ ।**
**ತತ್ಕಾಲೋಚಿತಸಾಮೋಕ್ತ್ಯಾ ಗಂಗಾದೇವೀಂ ವಿಸರ್ಜ್ಯ ತಾಮ್ ॥**

**[೨]ಸಬಲಾಕಂ ಪ್ರಕುರ್ವಂತಂ ಖಂ ಚಲತ್ಕೇತುಮಾಲಯಾ ।**
**ಸ್ವಾವಾಸಂ ಸಂಪ್ರವಿಶ್ಯೋಚ್ಚೈಃ ಸಪ್ರಿಯಃ ಸಹ ಬಂಧುಭಿಃ ॥ ೧೫೭ ॥**

**ಸಸ್ನೇಹಂ ರಾಜರಾಜೋಕ್ತಮುಕ್ತ್ವಾ ತತ್ಪ್ರಹಿತಂ ಸ್ವಯಮ್ ।**
**ಪೃಥಕ್ ಪೃಥಕ್ ಪ್ರದಾಯಾತಿಮುದ[೩]ಮಾಸಾದ್ಯ ವಲ್ಲಭಾಮ್ ॥**

**ನೀತ್ವಾ [೪]ತತ್ರೈವ ತಾಂ ರಾತ್ರಿಂ ಪ್ರಾತರುತ್ಥಾಯ ಭಾನುವತ್ ।**
**ವಿಧಾತುಮನುರಕ್ತಾನಾಂ [೫]ಭಕ್ತಿ [೬]ಮುದ್ಯೋತಿತಾಖಿಲಃ ॥ ೧೫೯ ॥**

**ಅನುಗಂಗಂ ಪ್ರಯಾನ್ ಪ್ರೇಮ್ಣಾ ಕಾಮಿನ್ಯಾಃ ಕುರುವಲ್ಲಭಃ ।**
**ಕಮನೀಯೈರತಿಪ್ರೀತಿಮಾಲಾಪೈರತನೋತ್ತರಾಮ್ ॥ ೧೬೦ ॥**

ಈ ಪ್ರಕಾರವಾಗಿ ಹೇಳಿದಳು. ಜಯಕುಮಾರನೂ ಆ ವಿಷಯವನ್ನು ತಿಳಿದು ಸಂತುಷ್ಟವಾದ ಮನಸ್ಸಿನಿಂದ ಆ ಕಾಲಕ್ಕೆ ಉಚಿತವಾದ ಸಾಮವಚನದಿಂದ ಆ ಗಂಗಾದೇವಿಯನ್ನು ಬೀಳ್ಕೊಟ್ಟು ಚಲಿಸುತ್ತಿರುವ ಪತಾಕೆಗಳ ಮಾಲೆಯಿಂದ ಆಕಾಶವನ್ನು ಬೆಳ್ಳಕ್ಕಿಗಳುಳ್ಳುದನ್ನಾಗಿ ಮಾಡುವುದೂ ಉನ್ನತವೂ ಆದ ತನ್ನ ವಾಸಸ್ಥಾನವನ್ನು ಪ್ರವೇಶಿಸಿ ಪತ್ನೀಸಹಿತನಾಗಿ ಬಂಧುಗಳೊಡನೆ ಸ್ನೇಹಪೂರ್ವಕವಾಗಿ ಚಕ್ರವರ್ತಿಯು ಹೇಳಿದ ವಿಷಯವನ್ನು ಹೇಳಿ ಅವನಿಂದ ಕಳುಹಲ್ಪಟ್ಟುದನ್ನು (ಉಡುಗೊರೆಯನ್ನು) ತಾನು ಬೇರೆ ಬೇರೆಯಾಗಿ ಕೊಟ್ಟು ಪ್ರಾಣಕಾಂತೆಗೆ ಅತಿಸಂತೋಷವನ್ನುಂಟುಮಾಡಿ ಶಿಬಿರದಲ್ಲೇ ಆ ರಾತ್ರಿಯನ್ನು ಕಳೆದು, ಸೂರ್ಯನಂತೆ, ಪ್ರಾತಃಕಾಲದಲ್ಲಿ ಎದ್ದು ಸಮಸ್ತ ಜನರನ್ನು ಪ್ರಕಾಶಪಡಿಸಿದವನಾಗಿ (ಎಚ್ಚರಗೊಳಿಸಿದವನಾಗಿ) ತನ್ನಲ್ಲಿ ಅನುರಾಗವುಳ್ಳವರಿಗೆ ಅಸಿ ಮಷಿ ಕೃಷಿ ಮೊದಲಾದ ವ್ಯಾಪಾರಗಳ ವಿಭಾಗವನ್ನು ಮಾಡುವುದಕ್ಕೋಸ್ಕರ ಕುರುಪತಿಯಾದ ಜಯಕುಮಾರನು ಗಂಗಾನದಿಯನ್ನನುಸರಿಸಿ ಹೋಗುವವನಾಗಿ ಪ್ರೀತಿಯಿಂದ ಪತ್ನಿಗೆ ಮನೋಹರಗಳಾದ ಭಾಷಣಗಳಿಂದ ಅತ್ಯಂತ ಪ್ರೀತಿಯನ್ನು ಬಹಳವಾಗಿ ವಿಸ್ತರಿಸಿದನು.

**ಜಾಹ್ನವೀದರ್ಶಿತಾವರ್ತನಾಭಿಃ ಕೂಲನಿತಂಬಿಕಾ ।**
**[೭]ಚಟುಲೋಜ್ಜ್ವಲಪಾಠೀನಲೋಚನಾ [೮]ರಮಣೋನ್ಮುಖೀ ॥ ೧೬೧ ॥**

**ತರಂಗಬಾಹುಭಿರ್ಗಾಢಮಾಲಿಂಗನಸಮುತ್ಸುಕಾ ।**
**ಸ್ವಭಾವಸುಭಗಾ ದೃಷ್ಟಹೃದಯಾ ಸ್ವಚ್ಛತಾಗುಣಾತ್ ॥ ೧೬೨ ॥**

**ತಟದ್ವಯವನೋತ್ಫುಲ್ಲಸುಮನೋಮಾಲಭಾರಿಣೀ ।**
**ಅತಿವೃದ್ಧ[೯]ರಸಾವೇಗಂ ಸಂಧರ್ತುಮಸಹಾ ದ್ರುತಮ್ ॥ ೧೬೩ ॥**

**ಪಶ್ಯ ಕಾಂತೇ ಪ್ರಿಯಂ ಯಾತಿ ಸ್ವಾನುರೂಪಂ ಪಯೋನಿಧಿಮ್ ।**
**ರತೇಃ ಕಾಮಾದ್ವಿನಾ ನೇಚ್ಛಾ ನ ನೀಚೇಷೂತ್ತಮಸ್ಪೃಹಾ ॥ ೧೬೪ ॥**

''ಎಲೈ ಪ್ರಿಯಳೆ! ಸುಳಿಯೆಂಬ ನಾಭಿಯನ್ನು ತೋರಿಸುವವಳೂ ದಡಗಳೆಂಬ ತ್ರಿವಲಿಗಳುಳ್ಳವಳೂ ಚಂಚಲವೂ ಪ್ರಕಾಶಮಾನವೂ ಆದ ತುರಿಮುಳ್ಳು ಮೀನುಗಳೆಂಬ ಕಣ್ಣುಗಳುಳ್ಳವಳೂ ತನ್ನ ಪತಿಯಾದ ಸಮುದ್ರದೊಡನೆ ಕ್ರೀಡಿಸುವುದಕ್ಕೆ ಅಭಿಮುಖಳಾಗಿರುವವಳೂ ಅಥವಾ ತನ್ನ ಪತಿಯಾದ ಸಮುದ್ರಕ್ಕೆ ಅಭಿಮುಖಳಾಗಿರುವವಳೂ ಅಲೆಗಳೆಂಬ ಭುಜಗಳಿಂದ ದೃಢವಾದ ಆಲಿಂಗನದಲ್ಲಿ ಕುತೂಹಲವುಳ್ಳವಳೂ ಸ್ವಭಾವದಿಂದ ಮನೋಹರಳೂ ಸ್ವಚ್ಛತೆಯೆಂಬ ಗುಣದಿಂದ ನೋಡಲ್ಪಟ್ಟ ಹೃದಯ–ಮಧ್ಯಪ್ರದೇಶವುಳ್ಳವಳೂ ಎರಡು ದಡಗಳಲ್ಲಿರುವ ವನಗಳಲ್ಲಿ ಅರಳಿರುವ ಪುಷ್ಪಮಾಲೆಗಳನ್ನು ಧರಿಸಿರುವವಳೂ ಹೆಚ್ಚಾಗಿ ವೃದ್ಧಿಯನ್ನು

೧ ಸುಲೋಚನಾ. ೨ ಬಿಸಕಂಠಿಕಾಸಹಿತಂ. ೩ ಪ್ರಾಪಯ್ಯ. ೪ ಸ್ಕಂಧಾವಾರೇ. ೫ ಅಸಿಮಷ್ಯಾದಿವ್ಯಾಪಾರವಿಭಜನಂ. ೬ ಪ್ರಕಾಶಿತಸಕಲಲೋಕಃ. ೭ ಚಂಚಲ. ೮ ಸಮುದ್ರೇಣಸಹ ಕ್ರೀಡೋನ್ಮುಖೀ, ನಿಜಪತಿಸಮುದ್ರಾಭಿಮುಖೀ ವಾ. ೯ ಜಲಸ್ಯಾಸಮಂತಾದ್ವೇಗಂ, ರಾಗೋದ್ವೇಗಂ ಚ.

ಹೊಂದಿದ ನೀರಿನ ವೇಗವನ್ನು(ರಾಗೋದ್ರೇಕವನ್ನು) ಧರಿಸುವುದಕ್ಕೆ ಅಸಮರ್ಥಳೂ ಆದ ಗಂಗೆಯು ತನಗೆ ಅನುರೂಪನೂ ಪತಿಯೂ ಆದ ಜಲನಿಧಿಯನ್ನು ಕುರಿತು ಶೀಘ್ರವಾಗಿ ಹೋಗುತ್ತಾಳೆ, ನೋಡು. ರತಿದೇವಿಗೆ ಕಾಮನನ್ನು ಬಿಟ್ಟು ಬೇರೆಯವರಲ್ಲಿ ಇಚ್ಛೆಯಿಲ್ಲ. ನೀಚರಲ್ಲಿ ಉತ್ತಮರ ಇಚ್ಛೆಯಿರುವುದಿಲ್ಲ.

**ಸಂಗಮೇ [೧]ತನ್ಮಯೀ ಜಾತಾ ಪ್ರೇಮ ನಾಮೇದೃಶಂ ಮತಮ್ ।**
**ಸಾಫಲ್ಯಮೇತಯಾ ನಿತ್ಯಮೇತಿ ಲಾವಣ್ಯಮಂಬುಧೇಃ ॥ ೧೬೫ ॥**

ಸಂಗಮದಲ್ಲಿ ಗಂಗೆಯು ಸಮುದ್ರಸ್ವರೂಪಳಾಗಿ ಆದಳು. ಪ್ರೇಮವೆಂಬುದು ಈ ಪ್ರಕಾರವಾದುದೆಂದು ತಿಳಿಯಲ್ಪಟ್ಟಿದೆ. ಸಮುದ್ರದ ಲಾವಣ್ಯವು ಈ ಗಂಗೆಯಿಂದ ಯಾವಾಗಲೂ ಸಾಫಲ್ಯವನ್ನು ಹೊಂದುತ್ತದೆ.

**ಉತ್ಪತ್ತಿರ್ಭೂಭೃತಾಂ [೨]ಪತ್ಯುರ್ಧರಣ್ಯಾ ವರ್ಧಿತಾ [೩]ಸತೀ ।**
**ವಾರ್ಧಿರೇವ ಪತಿಸ್ತಸ್ಮಾದೇಷಾಭೂತ್ಪಾಪನಾಶಿನೀ ॥ ೧೬೬ ॥**

ಪರ್ವತಗಳ ಅಧಿಪತಿಯಾದ ಲಘುಹಿಮವತ್ಪರ್ವತದಿಂದ ಈ ಗಂಗೆಯ ಉತ್ಪತ್ತಿ. ಭೂಮಿಯಿಂದ ಬೆಳೆಸಲ್ಪಟ್ಟವಳೂ ಪ್ರಶಸ್ತಳೂ ಆಗಿರುತ್ತಾಳೆ. ಸಮುದ್ರವೇ ಈ ಗಂಗೆಯ ಪತಿಯು. ಆದುದರಿಂದ ಈಕೆಯು ಪಾಪವನ್ನು ನಾಶಮಾಡುವವಳಾದಳು.

**ಧವಲಾ ಧಾರ್ಮಿಕೈರ್ಮಾನ್ಯಾ ಸತೀನಾಮುಪಮಾನತಾಮ್ ।**
**ಗತಾ ಕವೀಶ್ವರೈಃ ಸರ್ವೈಃ ಸ್ತೂಯತೇ ದೇವತೇತಿ ಚ ॥ ೧೬೭ ॥**

ಶುಭ್ರಳೂ ಧಾರ್ಮಿಕರಿಂದ ಮಾನ್ಯಳೂ ಪತಿವ್ರತೆಯರಿಗೆ ಉಪಮಾನತ್ವವನ್ನು ಹೊಂದಿರುವವಳೂ ಆದ ಈ ಗಂಗೆಯು ಕವೀಶ್ವರರೆಲ್ಲರಿಂದಲೂ ದೇವತೆಯೆಂಬುದಾಗಿ ಹೊಗಳಲ್ಪಡುತ್ತಾಳೆ.

**ಗುಣಿನಶ್ಚ ನ ಕೇ [೪]ನಾಂಧಾಃ ಸಂಸ್ತುವಂತಿ ಗುಣಪ್ರಿಯಾಃ ।**
**ಇತಿ ಗಂಗಾಗತೈಃ ಶ್ರವ್ಯೈರನ್ಯೈಶ್ಚಾತಿಮನೋಹರೈಃ ॥ ೧೬೮ ॥**

ಕುರುಡರಲ್ಲದವರೂ ಗುಣಗಳಲ್ಲಿ ಪ್ರೀತಿಯುಳ್ಳವರೂ ಆದ ಯಾರುತಾನೆ ಗುಣಯುಕ್ತರಾಗಿರುವವರನ್ನು ಹೊಗಳುವುದಿಲ್ಲ?'' ಈ ಪ್ರಕಾರವಾಗಿ ಗಂಗಾ ಸಂಬಂಧಿಗಳಾದ ಭಾಷಣಗಳಿಂದಲೂ ಕೇಳುವುದಕ್ಕೆ ಯೋಗ್ಯಗಳೂ ಅತಿ ಮನೋಹರಗಳೂ ಆದ ಬೇರೆ ಭಾಷಣಗಳಿಂದಲೂ ಅಧಿಕವಾದ ಪ್ರೀತಿಯನ್ನು ಹೆಚ್ಚಾಗಿ ವಿಸ್ತರಿಸಿದನು.

**ತತಃ ಕತಿಪಯೈರೇವ ಪ್ರಯಾಣೈಃ ಕುರುಜಾಂಗಲಮ್ ।**
**ಪ್ರಾಪ್ಯ ತದ್ವರ್ಣನಾವ್ಯಾಜಾನ್ಮೋದಯನ್ಕಾಶಿಪಾತ್ಮಜಾಮ್ ॥ ೧೬೯ ॥**

**[೫]ಆಪ್ತಜಾನಪದಾನೀತಫಲಪುಷ್ಪಾದಿಭಿಶ್ಚ ಸಃ ।**
**ವಿಕಸನ್ನೀಲನೀರೇಜಸರೋಜಾತಿವಿರಾಜಿತೈಃ ॥ ೧೭೦ ॥**

**[೬]ಪ್ರತ್ಯೇತ್ಯೇವ ಪ್ರಪಶ್ಯಂತೀಂ ಸರೋನೇತ್ರೈರ್ವಧೂವರಮ್ ।**
**[೭]ಸದ್ವಪ್ರಜಘನಾಭೋಗಾಂ ವಾಪೀಕೂಪೋರುನಾಭಿಕಾಮ್ ॥ ೧೭೧ ॥**

**ಪರೀತಜಾತರೂಪೋಚ್ಚಪ್ರಾಕಾರಕಟಿಸೂತ್ರಿಕಾಮ್ ।**
**ಅಲಂಕೃತಮಹಾವೀಥಿವಿಲಸದ್ಬಾಹುವಲ್ಲರೀಮ್ ॥ ೧೭೨ ॥**

**ಸೌಧೋತ್ತುಂಗಕುಚಾಂ ಭಾಸ್ವದ್ಗೋಪುರಾನನಶೋಭಿನೀಮ್ ।**
**ಕುಂಕುಮಾಗರುಕರ್ಪೂರಕರ್ದಮಾರ್ದ್ರಿತಗಾತ್ರಿಕಾಮ್ ॥ ೧೭೩ ॥**

೧ ಸಮುದ್ರಸ್ವರೂಪಾ. ೨ ಲಘುಹಿಮವದ್ಗಿರೇಃ, ಸಪಾದಲಕ್ಷಪರ್ವತಸ್ಯೇತ್ಯರ್ಥಃ. ೩ ಪ್ರಶಸ್ತಾ. ೪ ಅನಂಧಾಃ. ೫ ಸಂಪ್ರಾಪ್ತ. ೬ ಅಭಿಮುಖಮಾಗತ್ಯ. ೭ ಪ್ರಶಸ್ತಧೂಲಿಕುಟ್ಟಿಮಜಘನವಿಸ್ತಾರಾಂ.

**ನಾನಾಪ್ರಸವಸಂದೃಬ್ಧಮಾಲಾಧಮ್ಮಿಲ್ಲಧಾರಿಣೀಮ್ ।**
**ತೋರಣೋದ್ಬದ್ಧರತ್ನಾದಿಮಾಲಾಲಂಕೃತವಿಗ್ರಹಾಮ್ ॥ ೧೭೪ ॥**

**ಆಹ್ವಯಂತೀಮಿವೋರ್ಧ್ವಾಧಃ ಪತತ್ಕೇತ್ವಗ್ರಹಸ್ತಕೈಃ ।**
**[1]ದ್ವಾರಾಸಂವೃತಿವಿಸ್ರಂಭನೇತ್ರಾಂ [2]ವಾಸಾಂತರುತ್ಸುಕಾಮ್ ॥ ೧೭೫ ॥**

**ಪುರೋಹಿತೈಃ ಪುರಂಧ್ರೀಭಿರ್ಮಂತ್ರಿಭಿರ್ವೈಶ್ಯವಿಶ್ರುತೈಃ ।**
**ದತ್ತಶೇಷಃ ಪುರಃ ಸ್ಥಿತ್ವಾ ಸಾಶೀರ್ವಾದ್ಯೈಃ ಸಮುತ್ಸುಕೈಃ ॥ ೧೭೬ ॥**

**ತೂರ್ಯಮಂಗಲನಿರ್ಘೋಷೈಃ ಪುರಂದರ ಇವಾಪರಃ ।**
**ಸುಲೋಚನಾಮಿವಾನ್ಯಾಂ ಸ್ವಾಂ ಪ್ರವಿಶ್ಯ ನಗರೀಂ ಜಯಃ ॥ ೧೭೭ ॥**

**ರಾಜಗೇಹಂ ಮಹಾನಂದವಿಧಾಯಿ ವಿವಿಧರ್ದ್ಧಿಭಿಃ ।**
**ಆವಸತ್ಕಾಂತಯಾ ಸಾರ್ಧಂ [3]ನಗರ್ಯಾ ಹೃದಯಂ ಮುದಾ ॥ ೧೭೮ ॥**

ಬಳಿಕ ಕೆಲವೇ ಪ್ರಯಾಣಗಳಿಂದ ಕುರುಜಾಂಗಲದೇಶವನ್ನು ತಲುಪಿ ಆ ದೇಶದ ವರ್ಣನೆಯ ನೆವದಿಂದಲೂ ಅಲ್ಲಲ್ಲಿ ಪ್ರಾಪ್ತರಾದ ದೇಶವಾಸಿಗಳಿಂದ ತರಲ್ಪಟ್ಟ ಫಲಪುಷ್ಪಾದಿಗಳಿಂದಲೂ ಕಾಶೀರಾಜನ ಪುತ್ರಿ-ಸುಲೋಚನೆಯನ್ನು ಸಂತೋಷಪಡಿಸುವವನಾದ ಆ ಜಯಕುಮಾರನು ಇದಿರಾಗಿ ಬಂದು ಅರಳಿದಕನ್ನೈದಿಲೆಗಳಿಂದಲೂ ಕಮಲಗಳಿಂದಲೂ ಅಧಿಕವಾಗಿ ಪ್ರಕಾಶಿಸುತ್ತಿರುವ ಸರೋವರಗಳೆಂಬ ನೇತ್ರಗಳಿಂದ ವಧೂವರರನ್ನು ನೋಡುತ್ತದೋ ಎಂಬಂತಿರುವುದೂ ಶ್ರೇಷ್ಠವಾದ ಅಗಳುಗಳೆಂಬ ವಿಸ್ತಾರವಾದ ಜಘನ(ಪಿರ್ರೆ)ಗಳುಳ್ಳುದೂ ಸುತ್ತಿಕೊಂಡಿರುವ ಬಂಗಾರದ ಎತ್ತರವಾದ ಕೋಟೆಯೆಂಬ ಉಡುದಾರವುಳ್ಳುದೂ ಅಲಂಕರಿಸಲ್ಪಟ್ಟ ದೊಡ್ಡದಾದ ಬೀದಿಗಳೆಂಬ ಪ್ರಕಾಶಮಾನವಾದ ಭುಜಗಳುಳ್ಳುದೂ ಎತ್ತರವಾದ ಉಪ್ಪರಿಗೆಯ ಮನೆಗಳೆಂಬ ಸ್ತನಗಳುಳ್ಳುದೂ ಪ್ರಕಾಶಮಾನವಾದ ಗೋಪುರವೆಂಬ ಮುಖದಿಂದ ಶೋಭಿಸುತ್ತಿರುವುದೂ ಕುಂಕುಮ ಕಾಲಾಗರು ಕರ್ಪೂರ ಇವುಗಳ ಕೆಸರಿನಿಂದ-ಗಂಧದಿಂದ ನೆನೆಸಲ್ಪಟ್ಟ ದೇಹವುಳ್ಳುದೂ ನಾನಾವಿಧವಾದ ಪುಷ್ಪಗಳಿಂದ ಪೋಣಿಸಲ್ಪಟ್ಟ ಮಾಲೆಗಳುಳ್ಳ ಮುಡಿಯನ್ನು ಧರಿಸಿರುವುದೂ ತೋರಣಗಳಲ್ಲಿ ಎತ್ತಿ ಕಟ್ಟಲ್ಪಟ್ಟ ರತ್ನವೇ ಮೊದಲಾದುವುಗಳ ಮಾಲೆಗಳಿಂದ ಅಲಂಕೃತವಾದ ದೇಹವುಳ್ಳುದೂ ಮೇಲೆಯೂ ಕೆಳಗೂ ಆಡುತ್ತಿರುವ ಪತಾಕೆಗಳೆಂಬ ಮುಂಗೈಗಳಿಂದ ಕರೆಯುತ್ತದೆಯೋ ಎಂಬಂತಿರುವುದೂ ತೆರೆದಿರುವ ಬಾಗಿಲುಗಳೆಂಬ ವಿಶ್ವಾಸವುಳ್ಳ ಕಣ್ಣುಗಳುಳ್ಳುದೂ ಮನೆಗಳೊಳಗೆ ಉತ್ಸವವುಳ್ಳುದೂ ಮತ್ತೊಬ್ಬಳು ಸುಲೋಚನೆಯೋ ಎಂಬಂತಿರುವುದೂ ಆದ ತನ್ನ ಪಟ್ಟಣವನ್ನು, ವಾದ್ಯಗಳ ಮಂಗಲಧ್ವನಿಗಳೊಡನೆ ಕುತೂಹಲವುಳ್ಳವರೂ ಆಶೀರ್ವಾದಗಳುಳ್ಳವರೂ ಆದ ಪುರೋಹಿತರುಗಳಿಂದಲೂ ಸತಿಯರುಗಳಿಂದಲೂ ಮಂತ್ರಿಗಳಿಂದಲೂ ಪ್ರಸಿದ್ಧರಾದ ವೈಶ್ಯರುಗಳಿಂದಲೂ ಮುಂದೆ ನಿಂತು ಕೊಡಲ್ಪಟ್ಟ ಶೇಷೆಯುಳ್ಳವನೂ (ದೇವಪ್ರಸಾದವುಳ್ಳವನೂ)ಆಗಿ, ಮತ್ತೋರ್ವ ದೇವೇಂದ್ರನೋ ಎಂಬಂತೆ, ಪ್ರವೇಶಿಸಿ ನಗರಿಯ ಜನರ ಮನಸ್ಸಿಗೆ ನಾನಾವಿಧವಾದ ಸಂಪತ್ತಿಗಳಿಂದ ಮಹಾನಂದವನ್ನುಂಟುಮಾಡುವುದಾದ ಅರಮನೆಯಲ್ಲಿ ಪತ್ನಿಯೊಡನೆ ಸಂತೋಷದಿಂದ ವಾಸಮಾಡಿದನು.

**ತಿಥ್ಯಾದಿಪಂಚಭಿಃ ಶುದ್ಧೈಃ ಶುದ್ಧೇ ಲಗ್ನೇ ಮಹೋತ್ಸವೇ ।**
**ಸರ್ವಸಂತೋಷಣಂ ಕೃತ್ವಾ ಜಿನಪೂಜಾಪುರಃಸರಮ್ ॥ ೧೭೯ ॥**

**ವಿಶ್ವಮಂಗಲಸಂಪತ್ತ್ಯಾ ಸ್ವೋಚಿತಾಸನಸುಸ್ಥಿತಾಮ್ ।**
**ಹೇಮಾಂಗದಾದಿಸಾನ್ನಿಧ್ಯೇ ರಾಜಾ ಜಾತಮಹೋದಯಃ ॥ ೧೮೦ ॥**

**ಸುಲೋಚನಾಂ ಮಹಾದೇವೀಂ ಪಟ್ಟಬದ್ಧಾಂ ವ್ಯಧಾನ್ಮುದಾ ।**
**ಸ್ತ್ರೀಷು ಸಂಚಿತಪುಣ್ಯಾಸು ಪತ್ಯುರೇತಾವತೀ ರತಿಃ ॥ ೧೮೧ ॥**

೧ ಕವಾಟಪಿಧಾನರಹಿತದ್ವಾರನಯನಾಮಿತ್ಯರ್ಥಃ. ೨ ಗೃಹಮಧ್ಯೇ ಸೋತ್ಸವಾಂ. ೩ ನಗರೀಜನಚೇತ ಇತ್ಯರ್ಥಃ.

ಶುದ್ಧವಾದ ತಿಥಿ ಗ್ರಹ ನಕ್ಷತ್ರ ಯೋಗ ಕರಣಗಳಿಂದ ಶುದ್ಧವಾದ ಲಗ್ನದಲ್ಲಿ ಜಿನಪೂಜಾಪೂರ್ವಕವೂ ಸರ್ವರಿಗೂ ಸಂತೋಷವನ್ನುಂಟುಮಾಡುವುದೂ ಆದ ಮಹೋತ್ಸವವನ್ನು ಮಾಡಿ ಅಭ್ಯುದಯವುಳ್ಳವನಾದ ರಾಜ-ಜಯಕುಮಾರನು ಸಮಸ್ತಮಂಗಲಗಳ ಸಂಪತ್ತಿಯಿಂದ ತನಗೆ ಉಚಿತವಾದ ಆಸನದಲ್ಲಿ ಕುಳಿತಿರುವವಳಾದ ಸುಲೋಚನಾಮಹಾದೇವಿಯನ್ನು ಹೇಮಾಂಗದನೇ ಮೊದಲಾದವರ ಸಾನ್ನಿಧ್ಯದಲ್ಲಿ ಸಂತೋಷದಿಂದ ಪಟ್ಟಬದ್ಧಳನ್ನಾಗಿ ಮಾಡಿದನು. ಸುಲೋಚನೆಗೆ ಪಟ್ಟವನ್ನು ಕಟ್ಟಿ ಪಟ್ಟಮಹಿಷಿಯನ್ನಾಗಿ ಮಾಡಿದನೆಂದು ಭಾವವು. ಪುಣ್ಯವನ್ನು ಗಳಿಸಿರುವ ಹೆಂಗಸರಲ್ಲಿ ಪತಿಯ ಪ್ರೀತಿಯು ಇಷ್ಟಿರುವುದು.

**ಹೇಮಾಂಗದಂ ಸಸೋದರ್ಯಮುಪಚರ್ಯ ಸಸಂಭ್ರಮಮ್ ।**
**ಪುರೋಭೂಯ ಸ್ವಯಂ ಸರ್ವೈರ್ಭೋಗೈಃ [1]ಪ್ರಾಘೂರ್ಣಿಕೋಚಿತೈಃ ॥**

**ನೃತ್ಯಗೀತಸುಖಾಲಾಪೈರ್ವಾರಣಾರೋಹಣಾದಿಭಿಃ ।**
**ವನವಾಪೀಸರಃಕ್ರೀಡಾಕಂದುಕಾದಿವಿನೋದನೈಃ ॥ ೧೮೩ ॥**

**ಅಹಾನಿ ಸ್ಥಾಪಯಿತ್ವೈವಂ ಸುಖೇನ ಕತಿಚಿತ್ಕೃತೀ ।**
**ತದೀಪ್ಸಿತಗಜಾಶ್ವಾಸ್ತ್ರಗಣಿಕಾಭೂಷಣಾದಿಕಮ್ ॥ ೧೮೪ ॥**

**ಪ್ರದಾಯ ಪರಿವಾರಂ ಚ ತೋಷಯಿತ್ವಾ ಯಥೋಚಿತಮ್ ।**
**ಚತುರ್ವಿಧೇನ ಕೋಶೇನ ತತ್ಪುರೀಂ ತಮಜೀಗಮತ್ ॥ ೧೮೫ ॥**

ಪುಣ್ಯಶಾಲಿಯಾದ ಜಯಕುಮಾರನು ಸಹೋದರರೊಡನೆ ಕೂಡಿರುವ ಹೇಮಾಂಗದನನ್ನು ಆತುರವಾಗಿ ಉಪಚರಿಸಿ ತಾನು ಅತಿಥಿಗಳಿಗೆ ಉಚಿತಗಳಾದ ಸಮಸ್ತ ಭೋಗಗಳಿಂದ ಮುಂದಾಗಿ ನೃತ್ಯ ಗೀತ ಸುಖಭಾಷಣಗಳಿಂದಲೂ ಆನೆಯನ್ನು ಹತ್ತಿಸುವಿಕೆಯೇ ಮೊದಲಾದುವುಗಳಿಂದಲೂ ವನಗಳಲ್ಲಿಯೂ ಇಳಿಯುವ ಬಾವಿಗಳಲ್ಲಿಯೂ ಸರೋವರಗಳಲ್ಲಿಯೂ ಕ್ರೀಡೆ ಚೆಂಡಿನಾಟ ಮೊದಲಾದ ವಿನೋದಗಳಿಂದಲೂ ಕೆಲವು ದಿವಸಗಳವರೆಗೆ ಹೀಗೆ ಸುಖದಿಂದ ಇರಿಸಿಕೊಂಡು ಆ ಹೇಮಾಂಗದನಿಂದ ಇಚ್ಛಿಸಲ್ಪಟ್ಟ ಆನೆಗಳು ಕುದುರೆಗಳು ಅಸ್ತ್ರಗಳು ಗಣಿಕಾಸ್ತ್ರೀಯರು ಆಭರಣಗಳು ಇವೇ ಮೊದಲಾದುವುಗಳನ್ನು ಕೊಟ್ಟು ಅವನ ಪರಿವಾರದವರನ್ನೂ ಉಚಿತಾನುಸಾರವಾಗಿ ಸಂತೋಷಪಡಿಸಿ ರತ್ನ ಸುವರ್ಣ ರಜತ ವ್ಯವಹಾರಯೋಗ್ಯವಾದ ನಾಣ್ಯಗಳೆಂಬ ನಾಲ್ಕುಪ್ರಕಾರವಾದ ಕೋಶದೊಡನೆ ಆ ಹೇಮಾಂಗದನನ್ನು ವಾರಾಣಸೀನಗರಕ್ಕೆ ಪ್ರಯಾಣಮಾಡಿಸಿದನು.

**ಸುಖಪ್ರಯಾಣೈಃ ಸಂಪ್ರಾಪ್ಯ ದೃಷ್ಟ್ವಾ ಭೂಪಂ ಸಸುಪ್ರಭಮ್ ।**
**ಪ್ರಣಮ್ಯ ಹ್ಲಾದಯನ್ನಸ್ಥಾತ್ಸ ವಧೂವರವಾರ್ತಯಾ ॥ ೧೮೬ ॥**

ಹೇಮಾಂಗದನು ಸುಖವಾದ ಪ್ರಯಾಣಗಳಿಂದ ವಾರಾಣಸಿಯನ್ನು ತಲುಪಿ ಸುಪ್ರಭಾದೇವೀಸಹಿತನಾದ ಅಕಂಪನಮಹಾರಾಜನನ್ನು ನೋಡಿ ನಮಸ್ಕರಿಸಿ ಆ ವಧೂವರರ ವಾರ್ತೆಯಿಂದ ಸಂತೋಷಪಡಿಸುವವನಾಗಿ ಇದ್ದನು.

**ಸುಖಂ ಕಾಲೇ ಗಲತ್ಯೇವಮಕಂಪನಮಹೀಪತಿಃ ।**
**ತದಾ ಸಂಚಿಂತಯಾಮಾಸ ವಿರಕ್ತಃ ಕಾಮಭೋಗಯೋಃ ॥ ೧೮೭ ॥**

ಈ ಪ್ರಕಾರವಾಗಿ ಸುಖವಾಗಿ ಕಾಲವು ಕಳೆಯುತ್ತಿರಲು ಆಗ ಅಕಂಪನ ಮಹಾರಾಜನು ಕಾಮಭೋಗಗಳಲ್ಲಿ ವಿರಕ್ತನಾಗಿ ಚೆನ್ನಾಗಿ ಚಿಂತಿಸಿದನು.

**ಅಹೋ ಮಯಾ ಪ್ರಮತ್ತೇನ ವಿಷಯಾಂಧೇನ ನೇಕ್ಷಿತಾ ।**
**ಕಷ್ಟಂ ಶರೀರಸಂಸಾರಭೋಗನಿಸ್ಸಾರತಾ ಚಿರಮ್ ॥ ೧೮೮ ॥**

'ವಿಷಯಗಳಿಂದ ಅಂಧ-ವಿವೇಕಶೂನ್ಯನೂ ಪ್ರಮಾದವುಳ್ಳವನೂ ಆದ ನಾನು ಬಹುಕಾಲದಿಂದ ಶರೀರ ಸಂಸಾರ ಭೋಗಗಳ ನಿಸ್ಸಾರತ್ವವನ್ನು ನೋಡಲಿಲ್ಲ. ಕಷ್ಟ! ಆಶ್ಚರ್ಯ !!

೧ ಅತಿಥೀನಾಂ.

**ಆದಾ[1]ವಶುಚ್ಯುಪಾದಾನಮಶುಚ್ಯವಯವಾತ್ಮಕಮ್ ।**
**ವಿಶ್ವಾಶುಚಿಕರಂ ಪಾಪದುಃಖದುಶ್ಚೇಷ್ಟಿತಾಲಯಮ್ ॥ ೧೮೯ ॥**

**ನಿರಂತರಸ್ರವ[2]ತ್ಕೋಥನವದ್ವಾರಂ ಶರೀರಕಮ್ ।**
**[3]ಕ್ರಿಮಿಪುಂಜಚಿತಾಭಸ್ಮವಿಷ್ಠಾನಿಷ್ಠಂ ವಿನಶ್ವರಮ್ ॥ ೧೯೦ ॥**

ಶರೀರವು ಮೊದಲು ಅಶುಚಿಯಾದ ಶುಕ್ಲಶೋಣಿತಗಳೇ ಮುಖ್ಯ ಕಾರಣಗಳುಳ್ಳದಾಗಿರುವುದು; ಅಶುಚಿಯಾದ ಅವಯವಸ್ವರೂಪವುಳ್ಳದಾಗಿರುವುದು; ತನ್ನನ್ನು ಸಂಬಂಧಿಸಿದ ಸಮಸ್ತವಸ್ತುಗಳನ್ನು ಅಶುಚಿಗಳನ್ನಾಗಿ ಮಾಡುವುದು; ಪಾಪಗಳಿಗೂ ದುಃಖಗಳಿಗೂ ದುರ್ವ್ಯಾಪಾರಗಳಿಗೂ ಮನೆಯಾಗಿರುವುದು, ಎಡೆಬಿಡದೆ ಸೋರುತ್ತಿರುವ ದುರ್ಗಂಧವುಳ್ಳ ನವದ್ವಾರಗಳುಳ್ಳದು; ಕ್ರಿಮಿಗಳ ರಾಶಿಯು, ಚಿತಿಯಲ್ಲಿ ಬೂದಿಯು ಅಂತ್ಯದಲ್ಲಿ ಮಲರೂಪವಾದುದು; ನಾಶವನ್ನು ಹೊಂದುವುದು.

**ತದಧ್ಯುಷ್ಯ ಜಡೋ ಜಂತುಸ್ತಪ್ತಃ ಪಂಚೇಂದ್ರಿಯಾಗ್ನಿಭಿಃ ।**
**[4]ವಿಶ್ವೇಂಧನೈಃ ಕುಲಿಂಗೀವ ಭೂಯೋಯಾತ್ಯಕೃತ್ಸಿತಾಂ ಗತಿಮ್ ॥**

ಮೂರ್ಖವಾದ ಜಂತುವು ಆ ಶರೀರದಲ್ಲಿದ್ದು ಸಮಸ್ತ ವಿಷಯಗಳೆಂಬ ಕಟ್ಟಿಗೆಗಳುಳ್ಳ ಪಂಚೇಂದ್ರಿಯಗಳೆಂಬ ಬೆಂಕಿಗಳಿಂದ ಕಾಯಿಸಲ್ಪಟ್ಟುದಾಗಿ, ಮಿಥ್ಯಾದೃಷ್ಟಿಯಂತೆ, ಪುನಃ ಕೆಟ್ಟುದಾದ ಗತಿಯನ್ನು ಹೊಂದುವುದು.

**ಸಾ[5]ಶಾಖನಿಃ ಕಿಲಾತ್ರೈವ ಯತ್ರ ವಿಶ್ವಮಣೂಪಮಮ್ ।**
**ತಾಂ ಪುಪೂರ್ಷುಃ ಕಿಲಾದ್ಯಾಹಂ ಧನೈಃ [6]ಸಂಖ್ಯಾನಿಬಂಧನೈಃ ॥ ೧೯೨ ॥**

ಯಾವ ಆಶೆಯೆಂಬ ಗಣಿಯಲ್ಲಿ ಲೋಕವು ಅಣುಸದೃಶವಾಗಿರುವುದೋ ಅಂಥಾ ಗಣಿಯಾದರೋ ಈ ಶರೀರದಲ್ಲೇ ಇರುತ್ತದೆ. ಅದನ್ನು ನಾನು ಈ ದಿವಸ ಸಂಖ್ಯಾವಿಶೇಷಗಳುಳ್ಳ(ಪರಿಮಿತವಾದ)ಧನಗಳಿಂದ ತುಂಬಬೇಕೆಂಬ ಇಚ್ಛೆಯುಳ್ಳವನಾಗಿರುತ್ತೇನಲ್ಲವೇ ?

**[7]ಯದಾದಾಯ ಭವೇಜ್ಜನ್ಮೀ ಯನ್ಮುಕ್ತ್ವಾ ಮುಕ್ತಿಭಾಗಯಮ್ ।**
**[8]ತದ್ಯಾಥಾತ್ಮ್ಯಮಿತಿ ಜ್ಞಾತ್ವಾ ಕಥಂ [9]ಪುಷ್ಣಾತು ಧೀಧನಃ ॥ ೧೯೩ ॥**

ಯಾವುದನ್ನು ಹೊಂದಿ ಆತ್ಮನು ಸಂಸಾರಿಯಾಗುವನೋ ಯಾವುದನ್ನು ಬಿಟ್ಟು ಮುಕ್ತಿಯನ್ನು ಪಡೆಯುವನೋ ಈ ಪ್ರಕಾರವಾಗಿ ಅಂತಹ ಶರೀರದ ನಿಜಸ್ವರೂಪವನ್ನು ತಿಳಿದು ಬುದ್ಧಿಯೇ ಧನವಾಗಿರುವವನಾದ ಈ ಆತ್ಮನು ಹೇಗೆ ಅದನ್ನು ಬೆಳೆಯಿಸುವನು ?

**ಹಾ ಹತೋಽಸಿ ಚಿರಂ ಜಂತೋ ಮೋಹೇನಾ[10]ದ್ಯಾಪಿ ತೇ ಯತಃ ।**
**ನಾಸ್ತಿ ಕಾಯಾಶುಚಿಜ್ಞಾನಂ [11]ತತ್ತ್ಯಾಗಃ [12]ಕ್ವಾತಿದುರ್ಲಭಃ ॥ ೧೯೪ ॥**

ಎಲೈ ಜಂತುವೆ! ಮೋಹದಿಂದ ಬಹುಕಾಲದಿಂದ ಹಾಳಾಗಿರುತ್ತಿ. ಅಯ್ಯೋ! ಆದರಿಂದ ಈಗಲೂ ನಿನಗೆ ಶರೀರದ ಅಶುಚಿಯ ಜ್ಞಾನವಿಲ್ಲ. ಅತ್ಯಂತ ದುರ್ಲಭವಾದ ಆ ಶರೀರದ ತ್ಯಾಗವು ಎಲ್ಲಿದೆ? ಶರೀರದ ಅಶುಚಿಜ್ಞಾನವಿಲ್ಲದಿರುವುದರಿಂದ ಅದರ ತ್ಯಾಗಬುದ್ಧಿಯೂ ಇಲ್ಲವೆಂದು ಭಾವವು.

**ದುಃಖೀ ಸುಖೀ ಸುಖೀ ದುಃಖೀ ದುಃಖೀ ದುಃಖ್ಯೇವ ಕೇವಲಮ್ ।**
**ಧನ್ಯೋಽಧನ್ಯೋಽಧನೋ ಧನ್ಯೋ ನಿರ್ಧನೋ ನಿರ್ಧನಃ ಸದಾ ॥**

ಸಂಸಾರದಲ್ಲಿ ದುಃಖಿಯಾಗಿರುವವನು ಸುಖವುಳ್ಳವನಾಗುತ್ತಾನೆ. ಸುಖಿಯಾಗಿರುವವನು ದುಃಖವುಳ್ಳವನಾಗುತ್ತಾನೆ. ದುಃಖಿಯಾಗಿರುವವನು ಕೇವಲ ದುಃಖಿಯಾಗಿಯೇ ಇರುತ್ತಾನೆ. ಧನವುಳ್ಳವನು ಧನವಿಲ್ಲದವ–ಬಡವನಾಗುತ್ತಾನೆ. ಧನವಿಲ್ಲದವನು ಧನವುಳ್ಳವನಾಗುತ್ತಾನೆ. ಯಾವಾಗಲೂ ನಿರ್ಧನನಾಗಿರುವವನು ನಿರ್ಧನನಾಗಿಯೇ ಇರುತ್ತಾನೆ.

**ಏವಂವಿಧೈಸ್ತ್ರಿಭಿರ್ಜಂತುರೀಪ್ಸಿತಾನೀಪ್ಸಿತೈಶ್ಚಿರಮ್ ।**
**[1]ಚತುರ್ಥಭಂಗಮಪ್ರಾಪ್ಯ ಬಂಭ್ರಮೀತಿ ಭವಾರ್ಣವೇ ॥ ೧೯೬ ॥**

ಪ್ರಾಣಿಯು ಇಚ್ಛಿಸಲ್ಪಟ್ಟ ಮತ್ತು ಇಚ್ಛಿಸಲ್ಪಡದಿರುವ ಈ ಪ್ರಕಾರವಾದ ಮೂರು ಅವಸ್ಥೆಗಳಿಂದ ಬಹುಕಾಲದವರೆಗೆ ಸುಖೀ ಸುಖೀ ಧನೀ ಧನೀ ಎಂಬೀ ರೂಪವಾದ ನಾಲ್ಕನೆಯ ಅವಸ್ಥೆಯನ್ನು ಹೊಂದದೆ ಭವಸಾಗರದಲ್ಲಿ ಚೆನ್ನಾಗಿ ತಿರುಗುತ್ತಿರುತ್ತದೆ.

**ಯಾಂ [2]ವಷ್ಟ್ಯ[3]ಯಮಸೌ ವಷ್ಟಿ ಪರಂ ವಷ್ಟಿ ಸ ಚಾಪರಾಮ್ ।**
**ಸಾಪಿ ವಷ್ಟ್ಯಪರಂ ಕಷ್ಟ[4]ಮನಿಷ್ಟೇಷ್ಟಿಪರಂಪರಾ ॥ ೧೯೭ ॥**

ಈ ಪುರುಷನು ಯಾವ ಸ್ತ್ರೀಯನ್ನಿಚ್ಛಿಸುತ್ತಾನೋ ಈ ಸ್ತ್ರೀಯು ಬೇರೋರ್ವನನ್ನು ಇಚ್ಛಿಸುತ್ತಾಳೆ. ಅವನು ಮತ್ತೋರ್ವಳನ್ನು ಇಚ್ಛಿಸುತ್ತಾನೆ. ಅವಳೂ ಇನ್ನೋರ್ವನನ್ನು ಇಚ್ಛಿಸುತ್ತಾಳೆ. ಈ ಅನಿಷ್ಟವಾಂಛೆಯ ಪರಂಪರೆಯು ಕಷ್ಟಕರವಾದುದು.

**ಯದಿಷ್ಟಂ ತದನಿಷ್ಟಂ ಸ್ಯಾದ್ಯದನಿಷ್ಟಂ ತ[5]ದಿಷ್ಯತೇ ।**
**ಇಹೇಷ್ಟಾನಿಷ್ಟಯೋರಿಷ್ಟಾ ನಿಯಮೇನ ನ ಹಿ ಸ್ಥಿತಿಃ ॥ ೧೯೮ ॥**

ಯಾವುದು ಇಷ್ಟವಾಗಿರುವುದೋ ಅದು ಅನಿಷ್ಟವಾಗುವುದು. ಯಾವುದು ಅನಿಷ್ಟವಾಗಿರುವುದೋ ಅದು ಇಷ್ಟವಾಗುವುದು. ಈ ಸಂಸಾರದಲ್ಲಿ ಇಷ್ಟಾನಿಷ್ಟಗಳ ಸ್ಥಿತಿಯು ನಿಯಮ–ನಿಶ್ಚಯದಿಂದ ಇಷ್ಟವಾಗಿರುವುದೇ ಇಲ್ಲ.

**ಸ ಸಾ ಷಾ ತತ್ತದೇವೈಷಾ ಸಾ ಸ ಸ್ಯಾತ್ಸೋಽಪಿ ತತ್ಪುನಃ ।**
**ತತ್ಸ ಸ್ಯಾತ್ತತ್ತದೇವಾತ್ರ ಚಕ್ರಕೇ ವಕ್ರಸಂಕ್ರಮಃ ॥ ೧೯೯ ॥**

ಒಂದು ಜನ್ಮದಲ್ಲಿ ಪುರುಷನಾಗಿರುವವನು ಇನ್ನೊಂದು ಜನ್ಮದಲ್ಲಿ ಸ್ತ್ರೀಯಾಗುವನು. ಸ್ತ್ರೀಯಾಗಿರುವವಳು ಇನ್ನೊಂದು ಜನ್ಮದಲ್ಲಿ ನಪುಂಸಕನಾಗುವಳು. ಆ ನಪುಂಸಕನೇ ಈ ಸ್ತ್ರೀಯಾಗುವನು. ಆ ಸ್ತ್ರೀಯು ಪುರುಷನಾಗುವಳು. ಆ ಪುರುಷನೂ ಪುನಃ ನಪುಂಸಕನಾಗುವನು. ನಪುಂಸಕನು ಪುರುಷನಾಗುವನು. ನಪುಂಸಕನು ನಪುಂಸಕನೇ ಆಗುವನು. ಈ ಚಕ್ರದಂತಿರುವ ಸಂಸಾರದಲ್ಲಿ ವಕ್ರವಾದ ಜೋಡಣೆಯಾಗಿರುವುದು.

**ಅಂತಮಸ್ಯ ವಿಧಾಸ್ಯಾಮಿ ಚಿಂತಯಿತ್ವಾ ಜಿನೋದಿತಮ್ ।**
**ಸಂತತಂ ಜನ್ಮಕಾಂತಾರಭ್ರಾಂತೌ ಭೀತೋ[6]ಹಮಂತಕಾತ್ ॥ ೨೦೦ ॥**

ಯಾವಾಗಲೂ ಜನ್ಮವೆಂಬ ಕಾಡಿನ ಸಂಚಾರದಲ್ಲಿ ಯಮನಿಂದ ಹೆದರಿರುವವನಾದ ನಾನು ಜಿನೇಶ್ವರನ ವಚನವನ್ನು ಚಿಂತಿಸಿ ಈ ಯಮನ ನಾಶವನ್ನು ಮಾಡುವೆನು.

**[7]ಭೋಗಾಯ [8]ಭೋಗಿನೋ [9]ಭೋಗೋ [10]ಭೋಗಿನೋ [11]ಭೋಗಿನಾಮಕೃತ್ ।**
**ತಾವನ್ಮಾತ್ರೋಽಪಿ ನಾಸ್ಮಾಕಂ ಭೋಗೋ ಭೋಗೇಷ್ವಿತಿ ಧ್ರುವಮ್ ॥**

ಸರ್ಪದ ಶರೀರವು ಅದರ ಭೋಗಕ್ಕೆ ಕಾರಣವಾಗಿ ಸರ್ಪಕ್ಕೆ ''ಭೋಗಿ–ಸರ್ಪ''ವೆಂಬ ಹೆಸರನ್ನುಂಟುಮಾಡುವುದಾಗಿರುತ್ತದೆ. ಭೋಗಗಳಲ್ಲಿ ನಮಗೆ ''ಭೋಗಿ'' ಎಂಬ ಹೆಸರು ಕೂಡ ಇಲ್ಲವೆಂಬುದು ನಿಶ್ಚಯ. ಸರ್ಪಕ್ಕೆ ಅದರ ಶರೀರದ

೧ ಅಶುಚಿಶುಕ್ಲಶೋಣಿತಮುಖ್ಯಕಾರಣಂ. ೨ ಪೂತಿಗಂಧಿತ್ವಂ. ೩ ಕ್ರಿಮೀಣಾಂ ಪುಂಜಃ, ಚಿತಾಯಾಂ ಭಸ್ಮ, ವಿಷ್ಠಾಪುರೀಷಂನಿಷ್ಠಾಯಾಮಂತೇ ಯಸ್ಮಿನ್ ತತ್. ೪ ಸಕಲವಿಷಯೇಂಧನೈಃ. ೫ ಅಭಿವೇಶಾಕರಃ. ೬ ಸಂಖ್ಯಾವಿಶೇಷೈಃ. ೭ ಶರೀರಂ. ೮ ತಚ್ಛರೀರಸ್ಯಯಥಾಸ್ವರೂಪಂ. ೯ ಪುಷ್ಟಿಂ ನಯತು. ೧೦ ವೈರಾಗ್ಯೋತ್ಪತ್ತಿಕಾಲೇಽಪಿ. ೧೧ ಶರೀರತ್ಯಾಗಃ. ೧೨ ಕುತ್ರಾಸ್ತಿ.

೧ ಸುಖೀಸುಖೀತಿ ಧನೀಧನೀತಿ. ೨ ಇಚ್ಛತಿ. ೩ ಪುಮಾನ್. ೪ ಅನಿಷ್ಟವಾಂಛಾಸಂತತಿಃ. ೫ ಇಷ್ಟಂಭವತಿ. ೬ ಮಹಾಂತಕಾದಿತ್ಯಪಿಪಾಠಃ. ೭ ಭೋಗಕಾರಣಂ. ೮ ಸರ್ಪಸ್ಯ. ೯ ಶರೀರಂ. ೧೦ ಸರ್ಪಸ್ಯ. ೧೧ ಸರ್ಪನಾಮಕೃತ್.

ಸಂಬಂಧದಿಂದ ಭೋಗಿಯೆಂಬ ಹೆಸರಿರುವುದೆಂದೂ ಮನುಷ್ಯರಿಗೆ ಭೋಗ ವಸ್ತುಗಳ ಸಂಬಂಧದಿಂದ ಭೋಗಿಯೆಂಬ ಹೆಸರು ಕೂಡ ಇಲ್ಲವೆಂದೂ ಭಾವವು.

**ಭುಜ್ಯತೇ [೧]ಯಃ ಸ ಭೋಗಃ ಸ್ಯಾದ್ಭುಕ್ತಿರ್ವಾ ಭೋಗ ಇಷ್ಯತೇ ।**
**ತದ್ದ್ವಯಂ ನರಕೇಪ್ಯಸ್ತಿ ತಸ್ಮಾದ್ಭೋಗೇತ್ರ ಕಾ ರತಿಃ ॥ ೨೦೨ ॥**

ಯಾವ ಪದಾರ್ಥವು ಭೋಗಿಸಲ್ಪಡುತ್ತದೋ ಅದು ಭೋಗವಾಗುವುದು. ಅನುಭವಿಸುವಿಕೆಯಾದರೂ ಭೋಗವೆನ್ನಿಸುವುದು. ಅನುಭವಿಸಲ್ಪಡುವ ಪದಾರ್ಥವು ಅನುಭವಿಸುವಿಕೆಯೂ ನರಕದಲ್ಲಿಯೂ ಇರುತ್ತವೆ. ಆದುದರಿಂದ ಈ ಭೋಗದಲ್ಲಿ ಪ್ರೀತಿಯಾವುದು ? ಪ್ರೀತಿಮಾಡುವುದಕ್ಕೆ ಕಾರಣವಿಲ್ಲವೆಂದು ಭಾವವು.

**ಭೋಗಾಸ್ತೃಷ್ಣಾಗ್ನಿಸಂವೃದ್ಧ್ಯೈ [೨]ದೀಪನೀಯೌಷಧೋಪಮಾಃ ।**
**[೩]ಏಭಿಃ ಪ್ರವೃದ್ಧತೃಷ್ಣಾಗ್ನೇಃ [೪]ಶಾಂತ್ಯೈ ಚಿಂತ್ಯಮಿಹಾ[೫]ಪರಮ್ ॥ ೨೦೩ ॥**

ಉದ್ದೀಪನಕ್ಕೆ ಕಾರಣವಾದ ಔಷಧಿಗೆ ಸಮಾನಗಳಾದ ಭೋಗಗಳು ಆಶೆಯೆಂಬ ಬೆಂಕಿಯ ವೃದ್ಧಿಗೆ ಕಾರಣಗಳಾಗಿರುತ್ತವೆ. ಈ ಭೋಗಗಳಿಂದ ಚೆನ್ನಾಗಿ ವೃದ್ಧಿಯಾದ ಆಶೆಯೆಂಬ ಬೆಂಕಿಯ ಉಪಶಾಂತಿಗೋಸ್ಕರ ಈ ಸಂಸಾರದಲ್ಲಿ ಬೇರೊಂದು–ಜಿನೇಶ್ವರನ ತತ್ತ್ವವು ಚಿಂತಿಸತಕ್ಕುದಾಗಿದೆ.''

**ಇತ್ಯತೋ ನು ಸುಧೀಃ ಸದ್ಯೋ ವಾಂತತೃಷ್ಣಾವಿಷೋ ಭೃಶಮ್ ।**
**ಹೇಮಾಂಗದಂ ಸಮಾಹೂಯ ಪೂಜ್ಯಪೂಜಾಪುರಸ್ಸರಮ್ ॥ ೨೦೪ ॥**

**ಅಭಿಷಿಚ್ಯ ಚಲಾಂ ಮತ್ವಾ ಬಧ್ವಾ ಪಟ್ಟೇನ ವಾಚಲಮ್ ।**
**ಲಕ್ಷ್ಮೀಂ ಸಮರ್ಪ್ಯ ಗತ್ವೋಚ್ಚೈರಭ್ಯಾಸಂ ವೃಷಭೇಶಿತುಃ ॥ ೨೦೫ ॥**

**ಪ್ರವ್ರಜ್ಯ ಬಹುಭಿಃ ಸಾರ್ಧಂ [೬]ಮೂರ್ಧನ್ಯೈಃ ಸ ಸಸುಪ್ರಭಃ ।**
**ಕ್ರಮಾಚ್ಛ್ರೇಣೀಂ ಸಮಾರುಹ್ಯ ಕೈವಲ್ಯಮುದಪಾದಯತ್ ॥ ೨೦೬ ॥**

ಈ ಪ್ರಕಾರವಾಗಿ ಚಿಂತಿಸಿದ ಬಳಿಕ ಆ ಬುದ್ಧಿಶಾಲಿಯಾದ ಅಕಂಪನ ಮಹಾರಾಜನು ತತ್ಕ್ಷಣದಲ್ಲಿ ಅಧಿಕವಾಗಿ ವಿಷಯಾಭಿಲಾಷೆಯೆಂಬ ವಿಷವನ್ನು ವಾಂತಿಮಾಡಿ–ತ್ಯಜಿಸಿ ಹೇಮಾಂಗದನನ್ನು ಕರೆದು ಪೂಜ್ಯರಾದ ಅರ್ಹತ್ಪರಮೇಶ್ವರರ ಪೂಜಾಪೂರ್ವಕವಾಗಿ ಪಟ್ಟಾಭಿಷೇಕವನ್ನುಮಾಡಿ ರಾಜ್ಯಲಕ್ಷ್ಮಿಯನ್ನು ಚಂಚಲಳನ್ನಾಗಿ ತಿಳಿದು ಪಟ್ಟದಿಂದ ನಿಶ್ಚಂಚಲವಾಗಿರುವಂತೆ ಕಟ್ಟಿಯೋ ಎಂಬಂತೆ, ಸಮರ್ಪಿಸಿ ವೃಷಭಸ್ವಾಮಿಯ ಬಳಿಗೆ ಹೋಗಿ ಚೆನ್ನಾಗಿ ಅನೇಕ ಕ್ಷತ್ರಿಯರೊಡನೆ ಸುಪ್ರಭಾದೇವೀಸಹಿತನಾಗಿ ಅವನು ದೀಕ್ಷೆಯನ್ನು ಸ್ವೀಕರಿಸಿ ಕ್ರಮದಿಂದ ಕರ್ಮವನ್ನು ನಾಶಮಾಡುವ ಕ್ಷಪಕಶ್ರೇಣಿಯನ್ನೇರಿ ಕೈವಲ್ಯವನ್ನು ಹೊಂದಿದನು.

**ಅಥ ಜನ್ಮಾಂತರಾಯಾತಮಹಾಸ್ನೇಹಾತಿನಿರ್ಭರಃ ।**
**ಸುಲೋಚನಾನನಾ[೭]ನಂದನೇಂದುಬಿಂಬಾತ್ಸ್ರುತಾಂ [೮]ಸುಧಾಮ್॥ ೨೦೭ ॥**

**ಉನ್ಮೀಲನ್ನೀಲನೀರೇಜರಾಜಿಭಿರ್ಲೋಚನೈಃ ಪಿಬನ್ ।**
**ಪೂರಯನ್ ಶ್ರೋತ್ರಪಾತ್ರಾಭ್ಯಾಂ [೯]ತದ್ಗೀರ್ಗೀತರಸಾಯನಮ್ ॥**

**[೧೦]ಹರನ್ ಕರಿಕರಾಕಾರಕರಾಲಿಂಗನಸಂಗತಃ ।**
**[೧೧]ತದ್ಗಾತ್ರಕೂಪಿಕಾಂತಃಸ್ಥಂ ರಸಂ ಸ್ಪರ್ಶನವೇದಿನಮ್ ॥ ೨೦೯ ॥**

**ತದ್ಬಿಂಬಾಧರಸಂಭಾವಿತಾಮೃತಾಸ್ವಾದನೋತ್ಸುಕಃ ।**
**ತದ್ವಕ್ತ್ರವಾರಿಜಾಮೋದಾನ್ಮೋದಮಾನೋನಿಶಂ ಭೃಶಮ್ ॥ ೨೧೦ ॥**

೧ ಪದಾರ್ಥಃ. ೨ ದೀಪನಹೇತು. ೩ ಭೋಗ್ಯೈಃ. ೪ ಉಪಶಾಂತಿಕಾರಣಂ. ೫ ಜಿನತತ್ತ್ವಂ. ೬ ಕ್ಷತ್ರಿಯ್ಯೈಃ. ೭ ಆನಂದಹೇತುಚಂದ್ರ. ೮ ಕಾಂತಿಂ. ೯ ಸುಲೋಚನಾವಚನರೂಪಗೀತ. ೧೦ ಸ್ವೀಕುರ್ವನ್. ೧೧ ಸುಲೋಚನಾಶರೀರರಸಕೂಪಮಧ್ಯಸ್ಥಿತ.

**[೧]ಅತ್ರೈವ ನ [೨]ಪುನರ್ವೇತಿ ಮಮ ವಾಮಾಸಮಾಗಮಃ ।**
**ಸ ಸುಲೋಚನಯಾ ಸ್ವಾನಿ ಚಕ್ಷುರಾದೀನ್ಯತರ್ಪಯತ್ ॥ ೨೧೧ ॥**

ಬಳಿಕ ಜನ್ಮಾಂತರದಿಂದ ಬಂದ ಮಹಾಸ್ನೇಹದಿಂದ ಪರಿಪೂರ್ಣನೂ ಸುಲೋಚನೆಯ ಮುಖವೆಂಬ ಆನಂದಹೇತುವಾದ ಚಂದ್ರಬಿಂಬದಿಂದ ಹೊರಟಿರುವ ಅಮೃತ–ಕಾಂತಿಯನ್ನು ಅರಳುತ್ತಿರುವ ಕನ್ನೈದಿಲೆಗಳಂತೆ ಶೋಭಿಸುತ್ತಿರುವ ನೇತ್ರಗಳಿಂದ ಪಾನಮಾಡುವವನೂ ಸುಲೋಚನೆಯ ವಚನರೂಪವಾದ ಗೀತವೆಂಬ ರಸಾಯನವನ್ನು ಕಿವಿಗಳೆಂಬ ಪಾತ್ರಗಳಿಂದ ತುಂಬುವವನೂ ಆನೆಯ ಸೊಂಡಲಿನ ಆಕಾರವುಳ್ಳ ಕೈಗಳಿಂದ ಆಲಿಂಗನದ ಸಂಬಂಧದಿಂದ ಸ್ಪರ್ಶನವನ್ನು ತಿಳಿಯುವುದೂ ಆ ಸುಲೋಚನೆಯ ಶರೀರವೆಂಬ ಬಾವಿಯ ಮಧ್ಯದಲ್ಲಿರುವುದೂ ಆದ ರಸ(ಪ್ರೇಮ)ವನ್ನು ಸ್ವೀಕರಿಸುವವನೂ ಸುಲೋಚನೆಯ ತೊಂಡೆ ಹಣ್ಣಿನಂತಿರುವ ಕೆಳದುಟಿಯಿಂದುಂಟಾದ ಅಮೃತವನ್ನು ಆಸ್ವಾದಿಸುವುದರಲ್ಲಿ ಕುತೂಹಲವುಳ್ಳವನೂ ಸುಲೋಚನೆಯ ಮುಖವೆಂಬ ಕಮಲದ ಪರಿಮಳದಿಂದ ಯಾವಾಗಲೂ ಅಧಿಕವಾಗಿ ಸಂತೋಷಪಡುವವನೂ ಆದ ಜಯಕುಮಾರನು ''ಈ ಜನ್ಮದಲ್ಲೇ ನನಗೆ ಸ್ತ್ರೀಸಮಾಗಮವು, ಉತ್ತರಭವದಲ್ಲಿಲ್ಲ'' ಎನ್ನುವಂತೆ ಸುಲೋಚನೆಯೊಡನೆ ತನ್ನ ನೇತ್ರಾದಿ ಇಂದ್ರಿಯಗಳನ್ನು ತೃಪ್ತಿಪಡಿಸಿದನು.

**[೩]ಪ್ರಮಾಣಕಾಲಭಾವೇಭ್ಯೋ ಯದ್ರತೇಃ ಸಮತಾ ತಯೋಃ ।**
**ತತಃ ಸಂಭೋಗಶೃಂಗಾರಪಾರಾವಾರಾಂತಗೌ ಹಿ ತೌ ॥ ೨೧೨ ॥**

ಜಯಕುಮಾರ ಸುಲೋಚನೆಯರಲ್ಲಿ ಯೋನಿ ಶಿಶ್ನ ಮೊದಲಾದುವುಗಳ ಪರಿಮಾಣದಿಂದಲೂ ಸಮರತಿ ಮೊದಲಾದ ಕಾಲದಿಂದಲೂ ಪರಸ್ಪರಾನುರಾಗಾದಿ ಭಾವದಿಂದಲೂ ರತಿಕ್ರೀಡೆಯು ಸಮಾನವಾಗಿದ್ದುದರಿಂದ(ಸಮರತಿಯಿದ್ದುದರಿಂದ) ಅವರು ನಿಜವಾಗಿ ಸಂಭೋಗಶೃಂಗಾರವೆಂಬ ಸಮುದ್ರದ ಪಾರವನ್ನು ಹೊಂದಿದರು.

**[೪]ಅತಿಪರಿಣತರತ್ಯಾ ಲೋಪಿತಾಲೇಪನಾದಿಃ**
**ಸ ಸಕಲಕರಣಾನಾಂ ಗೋಚರೀಭೂಯ ತಸ್ಯಾಃ ॥**
**[೫]ಹಿತಪರವಿಷಯಾಣಾಂ ಸಾಪಿ ತಸ್ಯೈವಮೇತೌ**
**ಸಮರತಿಕೃತಸಾರಾಣ್ಯನ್ವಭೂತಾಂ ಸುಖಾನಿ ॥ ೨೧೩ ॥**

ಹೆಚ್ಚಾಗಿ ವೃದ್ಧಿಯಾದ ರತಿಕ್ರೀಡೆಯಿಂದ ಗಂಧಲೇಪನವೇ ಮೊದಲಾದುವುಗಳನ್ನು ಚೆನ್ನಾಗಿ ತೊಡೆದವನಾದ ಆ ಜಯಕುಮಾರನು ಇಷ್ಟವಾದ ಪುಷ್ಪಮಾಲೆ ಗಂಧ ಮೊದಲಾದ ವಿಷಯಗಳುಳ್ಳ ಸಮಸ್ತವಾದ ಇಂದ್ರಿಯಗಳಿಗೆ ಸುಲೋಚನೆಗೆ (ಸುಲೋಚನೆಯ ಇಂದ್ರಿಯಗಳಿಗೆ) ವಿಷಯನಾಗಿ, ಹಾಗೆಯೇ ಸುಲೋಚನೆಯೂ ಜಯಕುಮಾರನ ಸಕಲೇಂದ್ರಿಯಗಳಿಗೆ ವಿಷಯಳಾಗಿ (ಸಂತೋಷಪಡಿಸುವವಳಾಗಿ) ಈ ದಂಪತಿಗಳು ಸಮರತಿಯಿಂದ ಮಾಡಲ್ಪಟ್ಟ ಸುಖಗಳನ್ನು ಅನುಭವಿಸಿದರು.

**ಮನಸಿ ಮನಸಿಜಸ್ಯಾವಾಪಿ ಸೌಖ್ಯಂ ನ ತಾಭ್ಯಾಂ**
**ಪೃಥ[೬]ಗನುಗತಭಾವೈಃ ಸಂಗತಾಭ್ಯಾಂ ನಿತಾಂತಮ್ ॥**
**[೭]ಕರಣಮುಖಸುಖೈಸ್ತೈಸ್ತನ್ಮನಃಪ್ರೀತಿಮಾಪತ್**
**ಭವತಿ [೮]ಪರಮುಖಂ ಚ ಕ್ವಾಪಿ ಸೌಖ್ಯಂ ಸುತೃಪ್ತ್ಯೈ ॥ ೨೧೪ ॥**

ಅಧಿಕವಾಗಿ ಬೇರೆ ಬೇರೆಯಾಗಿ ಅನುಕೂಲವಾದ ಪುಷ್ಪಮಾಲೆ ಗಂಧ ಮೊದಲಾದ ಪದಾರ್ಥಗಳಿಂದ ಸಂಬಂಧಿಸಿರುವವರಾದ ಆ ದಂಪತಿಗಳು ಮನಸ್ಸಿನಲ್ಲಿ ಕಾಮಸುಖವನ್ನು ಹೊಂದಲಿಲ್ಲ. ಆ ಇಂದ್ರಿಯೋಪಾಯಗಳಿಂದುಂಟಾದ ಸುಖಗಳಿಂದ ಅವರುಗಳ ಮನಸ್ಸು ಪ್ರೀತಿಯನ್ನು ಹೊಂದಿತು. ಕೆಲವೆಡೆಯಲ್ಲಿ ಪರವಸ್ತುಮೂಲಕವಾದ ಸುಖವೂ ಚೆನ್ನಾಗಿ ತೃಪ್ತಿಗೆ ಕಾರಣವಾಗುವುದು. ಮನಸ್ಸು

೧ ಇಹಜನ್ಮನ್ಯೇವ. ೨ ಉತ್ತರಭವೇ ನಾಸ್ತೀತಿ ವಾ. ೩ ಯೋನಿಶೇಫಪ್ರಭೃತಿಪ್ರಮಾಣಾತ್, ಸಮರತಿಪ್ರಭೃತಿಕಾಲಾತ್, ಅನ್ಯೋನ್ಯಾನುರಾಗಾದಿಭಾವಶ್ಚ. ೪ ಅತಿವೃದ್ಧ. ೫ ಇಷ್ಟಸ್ರಕ್ಚಂದನಾದಿ ವಿಷಯಾಣಾಂ. ೬ ಅನುಕೂಲಸ್ರಕ್ಚಂದನಾದಿಪದಾರ್ಥೈಃ. ೭ ಇಂದ್ರಿಯೋಪಾಯಜನಿತಸುಖೈಃ. ೮ ಅನ್ಯವಸ್ತುದ್ವಾರಂ.

ಪುಷ್ಪಮಾಲೆ ಮೊದಲಾದ ಪದಾರ್ಥಗಳಿಂದಲೇ ಸುಖವನ್ನು ಹೊಂದಲಿಲ್ಲವೆಂದು ಅವುಗಳನ್ನು ಇಂದ್ರಿಯಗಳಿಂದ ಅನುಭವಿಸಿ ಅವುಗಳ ಮೂಲಕವಾಗಿ ಸುಖವನ್ನು ಹೊಂದಿತೆಂದೂ ಆ ದಂಪತಿಗಳು ಸಕಲೇಂದ್ರಿಯಸುಖಗಳನ್ನನುಭವಿಸಿದರೆಂದೂ ಭಾವವು.

**ಶಿಶಿರಸುರಭಿಮಂದೋಚ್ಛ್ವಾಸಜೈಃ ಸ್ವೈಃ ಸಮೀರೈ-**
**ರ್ಮೃದುಮಧುರವಚೋಭಿಃ [1]ಸ್ವಾದನೀಯಪ್ರದೇಶೈಃ ॥**
**ಲಲಿತತನುಲತಾಭ್ಯಾಂ ಮಾರ್ದವೈಕಾಕರಾಭ್ಯಾ-**
**ಮಖಿಲಮನಯತಾಂ ತೌ ಸೌಖ್ಯಮಾತ್ಮೇಂದ್ರಿಯಾಣಿ ॥ ೨೧೫ ॥**

ಶೈತ್ಯ ಸೌರಭ ಮಾಂದ್ಯಗುಣಯುಕ್ತವಾದ ಉಚ್ಛ್ವಾಸಗಳಿಂದುಂಟಾದ ತಮ್ಮ ಗಾಳಿಗಳಿಂದಲೂ ಮೃದು ಮಧುರ ವಚನಗಳಿಂದಲೂ ಆಸ್ವಾದಿಸು(ಚೀಬು)ವುದಕ್ಕೆ ಯೋಗ್ಯಗಳಾದ ಅಧರಪ್ರದೇಶಗಳಿಂದಲೂ ಕೋಮಲತ್ವಕ್ಕೆ ಮುಖ್ಯವಾದ ಉತ್ಪತ್ತಿ ಸ್ಥಾನಗಳೂ ಮನೋಹರಗಳೂ ಆದ ಲತೆಯಂತಿರುವ ಶರೀರಗಳಿಂದಲೂ ಆ ದಂಪತಿಗಳು ತಮ್ಮ ಇಂದ್ರಿಯಗಳಿಗೆ ಸಕಲಸೌಖ್ಯವನ್ನು ಹೊಂದಿಸಿದರು. ತಮ್ಮ ಇಂದ್ರಿಯಗಳಿಗೆ ಸಕಲಸುಖವನ್ನುಂಟುಮಾಡಿದರೆಂದು ಭಾವವು.

**[2]ಹೃತಸರಸಿಜಸಾರೈರಿಷ್ಟಚೇಟೀಯಮಾನೈಃ**
**ಸತತರತಿನಿಮಿತ್ತೈ[3]ರ್ಜಾಲಮಾರ್ಗಪ್ರವೃತ್ತೈಃ ॥**
**ಮೃದುಶಿಶಿರತರೈಃ ಸಂಪ್ರಾಪತುಸ್ತೌ ಸಮೀರೈಃ**
**[4]ಸುರತವಿರತಿಜಾತಸ್ವೇದವಿಚ್ಛೇದಸೌಖ್ಯಮ್ ॥ ೨೧೬ ॥**

ತಾವರೆಗಳ ಸಾರವನ್ನು ಸ್ವೀಕರಿಸಿರುವುವೂ ಇಷ್ಟಳಾದ ಚಾಕರಳಂತೆ ಆಚರಿಸುವುವೂ ಅವಿಚ್ಛಿನ್ನವಾದ ರತಿ–ಸುಖಕ್ಕೆ ಕಾರಣಗಳೂ ಕಿಟಿಕಿಗಳ ಮಾರ್ಗದಿಂದ ಪ್ರವೃತ್ತಿ–ಪ್ರವೇಶವುಳ್ಳುವೂ ಅಧಿಕವಾಗಿ ಕೋಮಲಗಳೂ ತಂಪಾಗಿರುವುವೂ ಆದ ಗಾಳಿಗಳಿಂದ ಆ ದಂಪತಿಗಳು ಸುರತಕ್ರೀಡೆಯ ಅಂತ್ಯದಲ್ಲುಂಟಾದ ಬೆವರನ್ನು ಹೋಗಲಾಡಿಸುವುದರ ಸೌಖ್ಯವನ್ನು ಹೊಂದಿದರು.

**ತಾಂ ತಸ್ಯ ವೃತ್ತಿರನುವರ್ತಯತಿ ಸ್ಮ ತಸ್ಯಾ-**
**ಶ್ಚೈನಂ ತದೇವ ರತಿತೃಪ್ತಿನಿಮಿತ್ತಮಾಸೀತ್ ॥**
**ಪ್ರೇಮಾ[5]ಪದ[6]ತ್ರ ನಿಜಭಾವಮಚಿಂತ್ಯ[7]ಮಂತ್ಯ-**
**ಸಾತೋದಯಶ್ಚ [8]ಭವಭೂತಿಫಲಂ ತದೇವ ॥ ೨೧೭ ॥**

ಜಯಕುಮಾರನ ವೃತ್ತಿ–ವ್ಯಾಪಾರವು ಸುಲೋಚನೆಯನ್ನು ಅನುಸರಿಸಿತು. ಸುಲೋಚನೆಯ ವೃತ್ತಿಯು ಈ ಜಯಕುಮಾರನನ್ನು ಅನುಸರಿಸಿತು. ಆ ಪರಸ್ಪರಾನುಸರಣವೇ ಅವರ ರತಿಕ್ರೀಡೆಯ ತೃಪ್ತಿಗೆ ಕಾರಣವಾಯಿತು. ಈ ಜಯಕುಮಾರ ಸುಲೋಚನೆಯರಲ್ಲಿ ಅಚಿಂತ್ಯವಾದ ತಮ್ಮ ದಾಂಪತ್ಯಪ್ರೇಮವು ಅವಕಾಶವನ್ನು ಹೊಂದಿತು. ಅದೇ ಜನ್ಮವನ್ನು ಹೊಂದಿರುವುದರ ಫಲವು. ಸಂಸಾರದಲ್ಲಿ ಕೊನೆಯದಾದ ಸುಖದ ಪ್ರಾಪ್ತಿಯೂ ಅದೇ ಪ್ರೇಮವೇ.

**ಕಾಮೋಗಮತ್ಸುರತವೃತ್ತಿಷು ತಸ್ಯ ಶಿಷ್ಯ-**
**ಭಾವಂ ಸುಧೀರಿತಿ ರತಿಶ್ಚ ಸುಲೋಚನಾಯಾಃ ॥**
**ಕೋ ಗರ್ವಮುದ್ವಹತಿ ಚೇನ್ನ ವೃಥಾಭಿಮಾನೀ**
**ಸ್ವೇಷ್ಟಾರ್ಥಸಿದ್ಧಿವಿಷಯೇಷು ಗುಣಾಧಿಕೇಷು ॥ ೨೧೮ ॥**

ಆ ಜಯಕುಮಾರನ ಸುರತಕ್ರೀಡೆಯ ವ್ಯಾಪಾರಗಳಲ್ಲಿ ಅವನು ಬುದ್ಧಿಶಾಲಿಯೆಂದು ಕಾಮನು ಅವನ ಶಿಷ್ಯತ್ವವನ್ನು ಹೊಂದಿದನು. ರತಿದೇವಿಯಾದರೋ ಸುಲೋಚನೆಯ ಶಿಷ್ಯತ್ವವನ್ನು ಹೊಂದಿದಳು. ವ್ಯರ್ಥವಾದ ಅಭಿಮಾನವುಳ್ಳವನಲ್ಲದಿರುವ ಪಕ್ಷದಲ್ಲಿ ತನ್ನ ಇಷ್ಟಾರ್ಥಸಿದ್ಧಿಯ ವಿಷಯಗಳಲ್ಲಿ ಗುಣಾಧಿಕರಲ್ಲಿ ಯಾವನು ಗರ್ವವನ್ನು ಧರಿಸುವನು ? ಗುಣಗ್ರಾಹಿಯು ಗುಣಾಧಿಕರಲ್ಲಿ ಗರ್ವವನ್ನು ತೋರಿಸದೆ ತನ್ನ ಇಷ್ಟಸಿದ್ಧಿಯನ್ನು ಮಾಡಿಕೊಳ್ಳುತ್ತಾನೆಂದು ಭಾವವು.

**ಏವಂ ಸುಖಾನಿ ತನುಜಾನ್ಯನುಭೂಯ ತೌ ಚ**
**ನೈವೇಯತು[1]ಶ್ಚಿರರತೇಷ್ವಭಿಲಾಷ[2]ಕೋಟಿಮ್ ॥**
**ಧಿಕ್ಕಷ್ಟಮಿಷ್ಟವಿಷಯೋತ್ಥಸುಖಂ ಸುಖಾಯ**
**ತದ್ವೀತವಿಶ್ವವಿಷಯಾಯ ಬುಧಾ ಯತಧ್ವಮ್ ॥ ೨೧೯ ॥**

ಬಹುಕಾಲದವರೆಗೆ ಶರೀರಜನ್ಯವಾದ ಸುಖಗಳನ್ನು ಈ ಪ್ರಕಾರವಾಗಿ ಅನುಭವಿಸಿಯೂ ಆ ಜಯಕುಮಾರ ಸುಲೋಚನೆಯರು ಅಭಿಲಾಷೆಯ ಅಂತವನ್ನು ಹೊಂದಲೇ ಇಲ್ಲ. ಇಷ್ಟವಿಷಯಗಳಿಂದುಂಟಾದ ಸುಖವನ್ನು ಸುಡು. ಅದು ಕಷ್ಟಕರವಾದುದು. ಆದುದರಿಂದ ಎಲೈ ವಿದ್ವಾಂಸರೆ ! ಸಮಸ್ತವಿಷಯಗಳಿಂದ ದೂರವಾದ ಸುಖಕ್ಕೋಸ್ಕರ(ಮೋಕ್ಷಸುಖಕ್ಕೋಸ್ಕರ) ಯತ್ನಿಸಿರಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಜಯಕುಮಾರಸುಲೋಚನಾಸುಖಾನುಭವವ್ಯಾವರ್ಣನಂ ನಾಮ ಪಂಚಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಜಯಕುಮಾರ ಸುಲೋಚನೆಯರ ಸುಖಾನುಭವವ್ಯಾವರ್ಣನವೆಂಬ ನಲ್ವತ್ತೈದನೆಯ ಪರ್ವವು ಸಂಪೂರ್ಣವಾದುದು.

---

೧ ಆಸ್ವಾದಿತುಂಯೋಗ್ಯಾಧರಪ್ರದೇಶೈಃ. ೨ ಸ್ವೀಕೃತ. ೩ ಗವಾಕ್ಷಮಾರ್ಗ. ೪ ಸುರತಾವಸಾನಜನಿತ. ೫ ಪ್ರಾಪತ್. ೬ ಜಯಕುಮಾರಸುಲೋಚನಯೋಃ. ೭ ಪಶ್ಚಿಮಸುಖೋದಯಶ್ಚ. ೮ ಜನ್ಮ ಪ್ರಾಪ್ತಿಫಲಂ.

೧ ಚಿರರತೇ ಇತ್ಯಪಿ ಪಾಠಃ. ೨ ಅಂತಂ.

# ಅಥ ಷಟ್ಚತ್ವಾರಿಂಶತ್ತಮಂ ಪರ್ವ

**ಜಯಃ ಪ್ರಾಸಾದಮಧ್ಯಾಸ್ಯ [೧]ದಂತಾವಲಗತೋ ಮುದಾ ।**
**ಯದೃಚ್ಛಯಾನ್ಯದಾಲೋಕ್ಯ ಗಚ್ಛಂತೌ [೨]ಖಗದಂಪತೀ ॥ ೧ ॥**

**ಹಾ ಮೇ ಪ್ರಭಾವತೀತ್ಯೇತದಾಲಪನ್ನತಿವಿಹ್ವಲಃ ।**
**[೩]ರತಿಮೇವಾ[೪]ಹಿತಃ ಸದ್ಯಃ ಸಹಾಯೀಕೃತ್ಯ ಮೂರ್ಛಯಾ ॥ ೨ ॥**

ಮತ್ತೊಂದು ಕಾಲದಲ್ಲಿ ಜಯಕುಮಾರನು ಅರಮನೆಯಲ್ಲಿದ್ದು ಶೋಭೆಗೋಸ್ಕರ ಮಾಡಿದ ಕೃತ್ರಿಮವಾದ ಆನೆಯನ್ನು ಹೊಂದಿದವನೂ ಸಂತೋಷದಿಂದ ಮನಸ್ಸುಬಂದಹಾಗೆ ಹೋಗುತ್ತಿರುವ ಖೇಚರದಂಪತಿಗಳನ್ನು ನೋಡಿ ಅತ್ಯಂತ ಖಿನ್ನನೂ ''ನನ್ನ ಪ್ರಭಾವತಿಯೆ ! ಹಾ'' ಎಂದು ಮಾತನಾಡುವವನೂ ಆಗಿ ಪ್ರೀತಿಯನ್ನೇ ಸಹಾಯವನ್ನಾಗಿ ಮಾಡಿ ತತ್ಕ್ಷಣದಲ್ಲೇ ಮೂರ್ಛೆ ಹೊಂದಿದನು. ಮೂರ್ಛಿತನಾದನೆಂದು ಭಾವವು.

**ತಥಾ ಪಾರಾವತದ್ವಂದ್ವಂ [೫]ತತ್ರೈವಾಲೋಕ್ಯ ಕಾಮಿನೀ ।**
**ಹಾ ಮೇ ರತಿವರೇತ್ಯುಕ್ತ್ವಾ ಸಾಪಿ ಮೂರ್ಛಾಮುಪಾಗತಾ ॥ ೩ ॥**

ಆ ಉಪ್ಪರಿಗೆಯಲ್ಲೇ ಕಾಮಿನಿ–ಸುಲೋಚನೆಯು ಹಾಗೆಯೇ ಎರಡು ಹಾಲವಾಣ(ಪಾರಿವಾಳ) ಹಕ್ಕಿಗಳನ್ನು ನೋಡಿ ''ಹಾ ! ನನ್ನ ರತಿವರನೆ !'' ಎದು ಹೇಳಿ ಆಕೆಯೂ ಮೂರ್ಛೆಯನ್ನು ಹೊಂದಿದಳು.

**[೬]ದಕ್ಷಚೇಟೀಜನಕ್ಷಿಪ್ರಕೃತಶೀತಕ್ರಿಯಾ ಕ್ರಮಾತ್ ।**
**ಸದ್ಯಃ ಕುಮುದಿನೀವಾಪ ಪ್ರಬೋಧಂ ಶೀತದೀಧಿತೇಃ ॥ ೪ ॥**

ಸಮರ್ಥಳಾದ ಚಾಕರಳಿಂದ ಶೀಘ್ರವಾಗಿ ಮಾಡಲ್ಪಟ್ಟ ಶೀತಕ್ರಿಯೆಯಕ್ರಮದಿಂದ, ಚಂದ್ರನಿಂದ ಕುಮುದಲತೆಯು ಅರಳುವಂತೆ, ತತ್ಕ್ಷಣದಲ್ಲಿ ಎಚ್ಚರಿಕೆಯನ್ನು ಹೊಂದಿದಳು.

**[೭]ಹಿಮಚಂದನಸಂಮಿಶ್ರವಾರಿಭಿರ್ಮಂದಮಾರುತೈಃ ।**
**ಸೋಪ್ಯಮೂರ್ಛೋ ದಿಶಃ ಪಶ್ಯನ್ ಮಂದಮಂದಂ [೮]ತನುತ್ರಪಃ ॥**

ಜಯಕುಮಾರನೂ ಕರ್ಪೂರ ಶ್ರೀಗಂಧಮಿಶ್ರವಾದ ನೀರುಗಳಿಂದಲೂ ಮಂದ ಮಾರುತಗಳಿಂದಲೂ ಮೂರ್ಛೆಯಿಲ್ಲದವನೂ ಸ್ವಲ್ಪ ಸ್ವಲ್ಪ ದಿಕ್ಕುಗಳನ್ನು ನೋಡುವವನೂ ಸ್ವಲ್ಪ ಲಜ್ಜೆಯುಳ್ಳವನೂ ಆಗಿ

**ಯೂಯಂ ಸರ್ವೇಪಿ [೯]ಸಾಯಂತನಾಂಭೋಜಾನುಕೃತಾನನಾಃ ।**
**ಕಿಮೇತದಿತಿ ತತ್ಸರ್ವಂ ಜಾನಾನೋಪಿ ಸ [೧೦]ನಾಗರಃ ॥ ೬ ॥**

**ಅನೇಕಾನುನಯೋಪಾಯೈ [೧೧]ರ್ಗೋತ್ರಸ್ಖಲನದುಃಖಿತಾಮ್ ।**
**ಸುಲೋಚನಾಂ ಸಮಾಶ್ವಾಸ್ಯ ಸ್ಮರನ್ ಜನ್ಮಾಂತರಪ್ರಿಯಾಮ್ ॥ ೭ ॥**

**[೧೨]ಆಕಾರಸಂವೃತಿಂ ಕೃತ್ವಾ ತಾಮೇವಾಲಪಯನ್ಸ್ಥಿತಃ ।**
**ವಂಚನಾ[೧೩]ಚುಂಚವಃ ಸರ್ವೇ ಪ್ರಾಯಃ ಕಾಂತಾಸು ಕಾಮಿನಃ ॥ ೮ ॥**

ಆ ನಿಪುಣನಾದ ಜಯಕುಮಾರನು ''ನೀವೆಲ್ಲರೂ ಸೂರ್ಯಾಸ್ತಮಯಕಾಲದ ಕಮಲವನ್ನು ಹೋಲುವ ಮುಖಗಳುಳ್ಳವರಾಗಿರುತ್ತೀರಿ. ಇದೇನು ?'' ಎಂದು ಅದೆಲ್ಲವನ್ನೂ ತಿಳಿಯುವವನಾದರೂ ಹೆಸರನ್ನು ತಪ್ಪುವುದರಿಂದ– ಪ್ರಭಾವತಿಯೆಂಬ ಮತ್ತೊಂದು ಹೆಸರನ್ನು ಹೇಳುವುದರಿಂದ ದುಃಖಿತಳಾದ ಸುಲೋಚನೆಯನ್ನು ಅನೇಕವೂ ಸ್ನೇಹಯುಕ್ತವೂ ಆದ ಉಪಾಯಗಳಿಂದ ಸಮಾಧಾನಪಡಿಸಿ ಜನ್ಮಾಂತರದ–ಹಿಂದಿನ ಜನ್ಮದ ಪತ್ನಿಯನ್ನು ಸ್ಮರಿಸುವವ ನಾಗಿಯೂ ಆ ಸ್ಮರಣೆಯಿಂದುಂಟಾದ ರೋಮಾಂಚ ಮೊದಲಾದ ಆಕಾರಗಳನ್ನು ಮರೆಮಾಡಿ ಆಕೆಯನ್ನೇ ಮಾತನಾಡಿಸುವವನಾಗಿಯೂ ಇದ್ದನು. ಎಲ್ಲಾ ಕಾಮುಕರು ಪತ್ನಿಯರಲ್ಲಿ ಬಹಳಮಟ್ಟಿಗೆ ವಂಚನೆಯಲ್ಲಿ ಪ್ರಸಿದ್ಧರಾಗಿರುತ್ತಾರೆ. ಕಾಮುಕರು ಪತ್ನಿಯರಲ್ಲಿ ವಂಚಕರಾಗಿರುತ್ತಾರೆಂದು ಭಾವವು.

೧ ಶೋಭಾಯೈವಿನ್ಯಸ್ತಕೃತ್ರಿಮಗಜ. ೨ ವಿದ್ಯಾಧರದಂಪತೀ. ೩ ಪ್ರೀತಿಂ. ೪ ಪ್ರಾಪ್ತಃಸ್ವೀಕೃತೋವಾ. ೫ ಸೌಧಾಗ್ರೇ. ೬ ಚತುರ. ೭ ಕರ್ಪೂರಶ್ರೀಗಂಧ. ೮ ಈಷಲ್ಲಜ್ಜಃ. ೯ ಅಸ್ತಮಯಕಾಲ. ೧೦ ನಿಪುಣಃ. ೧೧ ಪ್ರಭಾವತೀನಾಮಾಂತರಗ್ರಹಣ. ೧೨ ಜನ್ಮಾಂತರಪ್ರಿಯಾಸ್ಮರಣಜಾತ ರೋಮಾಂಚ ಪ್ರಭೃತ್ಯಾಕಾರಪ್ರಾವರಣಂ. ೧೩ ಪ್ರತೀತಾಃ.

**ತಯೋರ್ಜನ್ಮಾಂತರಾತ್ಮೀಯವೃತ್ತಾಂತಸ್ಮೃತ್ಯನಂತರಮ್ ।**
**ಸ್ವರ್ಗಾದನುಗತೋ ಬೋಧಸ್ತೃತೀಯೋ ವ್ಯಕ್ತಿಮೀಯಿವಾನ್ ॥ ೯ ॥**

ಆ ಜಯಕುಮಾರ ಸುಲೋಚನೆಯರ ಜನ್ಮಾಂತರದ ತಮ್ಮ ಸ್ಮರಣೆಯ ನಂತರದಲ್ಲಿ ಸ್ವರ್ಗದಿಂದ–ಹಿಂದಿನ ಭವದಿಂದ ಅನುಸರಿಸಿದ ಮೂರನೆಯದಾದ ಅವಧಿಜ್ಞಾನವು ವ್ಯಕ್ತಿಯನ್ನು ಹೊಂದಿತು–ಆವಿರ್ಭವಿಸಿತು.

**[೧]ತದ್ವಿಲೋಕ್ಯ ಸಪತ್ನ್ಯೋಸ್ಯಾಃ ಶ್ರೀಮತೀ ಸಶಿವಂಕರಾ ।**
**ಪರಾಶ್ಚ ಮತ್ಸರೋದ್ರೇಕಾದಿತ್ಯನ್ಯೋನ್ಯಂ ತದಾಬ್ರುವನ್ ॥ ೧೦ ॥**

ಆ ಮೂರ್ಛಾವಸ್ಥೆಯನ್ನು ನೋಡಿ ಶಿವಶಂಕರೆಯೆಂಬ ಸವತಿಯೊಡಗೂಡಿದ ಶ್ರೀಮತಿಯೂ ಸುಲೋಚನೆಯ ಇತರ ಸವತಿಯರೂ ಅಧಿಕವಾದ ಮತ್ಸರದಿಂದ ಮುಂದೆ ಹೇಳುವಂತೆ ಆಗ ಒಬ್ಬರಿಗೊಬ್ಬರು ಮಾತನಾಡಿಕೊಂಡರು.

**ಸ್ತ್ರೀಷು ಮಾಯೇತಿ ಯಾ ವಾರ್ತಾ ಸತ್ಯಾಂ ತಾಮದ್ಯ ಕುರ್ವತೀ ।**
**ಪತಿಮೂರ್ಛಾಂ ಸ್ವಮೂರ್ಛಾಯಾಃ [೨]ಪ್ರತ್ಯಯೀಕೃತ್ಯ ಮಾಯಯಾ ॥**

**ಪಶ್ಯ ಕೃತ್ರಿಮಮೂರ್ಛಾತ್ತಭಾವನಾವ್ಯಕ್ತಸಂವೃತಿಃ ।**
**ಸಂತತಾಂತಸ್ಥಿತಪ್ರೌಢಪ್ರೇಮಪ್ರೇರಿತಚೇತನಾ ॥ ೧೨ ॥**

**ಕನ್ಯಾವ್ರತವಿಲೋಪಾತ್ತಗೋತ್ರಸ್ಖಲನದೂಷಿತಾ ।**
**ಪತಿಂ ರತಿವರೇತ್ಯುಕ್ತ್ವಾ [೩]ಯಾನ್ಮೂರ್ಛಾಂ ಕುಲದೂಷಿಣೀ ॥ ೧೩ ॥**

''ಸ್ತ್ರೀಯರಲ್ಲಿ ಮಾಯೆಯೆಂಬ ಯಾವ ವಾರ್ತೆಯಿರುತ್ತದೋ ಅದನ್ನು ಈ ದಿವಸ ಸತ್ಯವನ್ನಾಗಿ ಮಾಡುವವಳೂ ಪತಿಯ ಮೂರ್ಛೆಯನ್ನು ತನ್ನ ಮೂರ್ಛೆಗೆ ಕಾರಣವನ್ನಾಗಿ ಮಾಡಿ ವಂಚನೆಯಿಂದ ಕೃತ್ರಿಮವಾದ ಮೂರ್ಛೆಯಿಂದ ಸ್ವೀಕರಿಸಲ್ಪಟ್ಟ ಭಾವನೆಯಿಂದ ತೋರುವ ಆವರಣ–ಹೊದಿಕೆಯುಳ್ಳವಳೂ ಯಾವಾಗಲೂ ಅಂತಃಕರಣದಲ್ಲಿರುವ ಪ್ರೌಢವಾದ ಪ್ರೇಮದಿಂದ ಪ್ರೇರಿತವಾದ ಚಿತ್ತವುಳ್ಳವಳೂ ಕನ್ಯೆಯ ವ್ರತವನ್ನು ಲೋಪಮಾಡಿರುವುದರಿಂದ(ವಿವಾಹಕ್ಕಿಂತ ಮೊದಲು ಪರಪುರುಷಸಂಗದಿಂದ ಕನ್ಯಾವ್ರತವನ್ನು ಲೋಪಮಾಡಿರುವುದರಿಂದ) ಉಂಟಾದ ಹೆಸರಿನ ತಪ್ಪುವಿಕೆಯಿಂದ–ತಪ್ಪಾದ ಹೆಸರನ್ನು ಹೇಳುವುದರಿಂದ ದೂಷಿತಳೂ ಕುಲದೂಷಿಣಿಯೂ ಆದ ಈ ಸುಲೋಚನೆಯು ಪತಿಯನ್ನು ''ರತಿವರ'' ಎಂದು ಹೇಳಿ ಮೂರ್ಛೆಯನ್ನು ಹೊಂದಿದಳು, ನೋಡು.

**ಇಯಂ ಶೀಲವತೀತ್ಯೇನಾಂ [೪]ನಿಸ್ತನನ್ವರ್ಣಯತ್ಯಯಮ್ ।**
**ಪ್ರಾಯೋ [೫]ರಕ್ತಸ್ಯ ದೋಷೋಪಿ ಗುಣವತ್ಪ್ರತಿಭಾಸತೇ ॥ ೧೪ ॥**

೧ ಅವಧಿಜ್ಞಾನಂ. ೨ ಕಾರಣೀಕೃತ್ಯ. ೩ ಅಗಚ್ಛತ್. ೪ ಬ್ರುವನ್. ೫ ಅನುರಕ್ತಸ್ಯ.

ಈಕೆಯು ಶೀಲವತಿಯೆಂದು ಹೇಳುವವನಾದ ಇವನು–ಜಯಕುಮಾರನು ಇವಳನ್ನು ವರ್ಣಿಸುತ್ತಾನೆ. ಸಾಧಾರಣವಾಗಿ ಅನುರಾಗವುಳ್ಳವನ ದೊಷವೂ ಗುಣದಂತೆ ತೋರುತ್ತದೆ.

**ಪ್ರಭಾವತೀತಿ [೧]ಸಮ್ಮುಹ್ಯ ಕಿತವಃ ಕೋಪಿನೀಮಿಮಾಮ್ ।**
**[೨]ಪ್ರಸಿಸಾದಯಿಷುಃ ಶೋಕಂ ತತ್ಪ್ರೀತ್ಯಾ ವಿದಧಾತಿ ನಃ ॥ ೧೫ ॥**

ಪ್ರಭಾವತಿಯೆಂದು ಮೂರ್ಛೆಯನ್ನು ಹೊಂದಿ ಧೂರ್ತನು(ಜಯಕುಮಾರನು) ಕೋಪವುಳ್ಳವಳಾದ ಈಕೆಯನ್ನು ಪ್ರಸನ್ನಳನ್ನಾಗಿ ಮಾಡುವುದಕ್ಕೋಸ್ಕರ ಇಚ್ಛೆಯುಳ್ಳವನಾಗಿ ಆಕೆಯ ಪ್ರೀತಿಯಿಂದ ನಮಗೆ ಶೋಕವನ್ನುಂಟುಮಾಡುತ್ತಾನೆ.''

**ವಿತಾನ್ ಸರ್ವಾಂಸ್ತದಾಲಾಪಾನ್ ಜಯೋವಧಿವಿಲೋಚನಃ ।**
**ವಿದಿತ್ವಾ ಸಸ್ಮಿತಂ ಪಶ್ಯನ್ ಪ್ರಿಯಾಯಾಃ ಸ್ಮೇರಮಾನನಮ್ ॥ ೧೬ ॥**

**ಕಾಂತೇ ಜನ್ಮಾಂತರಾವಾಪ್ತಂ ವಿಶ್ವಂ ವೃತ್ತಾಂತಮಾವಯೋಃ ।**
**ವ್ಯಾವರ್ಣ್ಯೇಮಾಂ ಸಭಾಂ [೩]ತುಷ್ಟಿಕೌತುಕೋಪಹೃತಾಂ ಕುರು ॥ ೧೭ ॥**

ಅವಧಿಜ್ಞಾನವೆಂಬ ವಿಶಿಷ್ಟವಾದ ನೇತ್ರವುಳ್ಳವನಾದ ಜಯಕುಮಾರನು ಈ ಎಲ್ಲಾ ಸವತಿಯರ ಮಾತುಗಳನ್ನು ತಿಳಿದು ಮುಗುಳ್ನಗೆಯಿಂದ ಕೂಡಿರುವಂತೆ ಸುಲೋಚನೆಯ ನಗುಮೊಗವನ್ನು ನೋಡುವವನಾಗಿ ''ಕಾಂತೆಯೆ ! ನಮ್ಮೀರ್ವರ ಜನ್ಮಾಂತರದಲ್ಲಿ ಹೊಂದಲ್ಪಟ್ಟ ಎಲ್ಲಾ ವೃತ್ತಾಂತವನ್ನು ಚೆನ್ನಾಗಿ ವರ್ಣಿಸಿ ಈ ಸಭೆಯನ್ನು ಸಂತೋಷಾಶ್ಚರ್ಯಯುಕ್ತವನ್ನಾಗಿ ಮಾಡು.''

**ಇತಿ [೪]ಪ್ರಾಚೋದಯತ್ಸಾಪಿ ಪ್ರಿಯಾ ತದ್ಭಾವವೇದಿನೀ ।**
**ಕಥಾಂ ಕಥಯಿತುಂ ಕೃತ್ಸ್ನಾಂ [೫]ಪ್ರಾಕ್ರಂಸ್ತ ಕಲಭಾಷಿಣೀ ॥ ೧೮ ॥**

ಈ ಪ್ರಕಾರವಾಗಿ ಹೇಳಿದನು. ಕಿವಿಗಳಿಗೆ ಇಂಪಾಗಿ ಮಾತನಾಡುವವಳೂ ಜಯಕುಮಾರನ ಭಾವವನ್ನು ತಿಳಿದವಳೂ ಆದ ಆ ಪ್ರಿಯೆ–ಸಲೋಚನೆಯೂ ಸಮುಸ್ತವಾದ ಕಥೆಯನ್ನು ಹೇಳುವುದಕ್ಕೆ ಆರಂಭಿಸಿದಳು.

**ಇಹ ಜಂಬೂಮತಿ ದ್ವೀಪೇ ವಿದೇಹೇ ಪ್ರಾಚಿ ಪುಷ್ಕಲಾ ।**
**ವತೀವಿಷಯಮಧ್ಯಸ್ಥಾ ನಗರೀ ಪುಂಡರೀಕಿಣೀ ॥ ೧೯ ॥**

**ತತ್ರಾಭವತ್ಪ್ರಜಾಪಾಲಃ ಪ್ರಜಾ ರಾಜಾ ಪ್ರಪಾಲಯನ್ ।**
**ಫಲಂ ಧರ್ಮಾರ್ಥಕಾಮಾನಾಂ ಸ್ವೀಕೃತ್ಯ ಕೃತಿನಾಂ ವರಃ ॥ ೨೦ ॥**

''ಈ ಜಂಬೂದ್ವೀಪದಲ್ಲಿ ಪೂರ್ವವಿದೇಹದಲ್ಲಿ ಪುಷ್ಕಲಾವತೀದೇಶದ ಮಧ್ಯದಲ್ಲಿರುವ ಪುಂಡರೀಕಿಣೀನಗರಿಯಲ್ಲಿ ನಿಪುಣರಲ್ಲಿ ಶ್ರೇಷ್ಠನಾದ ಪ್ರಜಾಪಾಲನು ಪ್ರಜೆಗಳನ್ನು ಪರಿಪಾಲಿಸುವವನಾಗಿ ಧರ್ಮ ಅರ್ಥ ಕಾಮಪುರುಷಾರ್ಥಗಳ ಫಲವನ್ನು ಸ್ವೀಕರಿಸಿ ದೊರೆಯಾಗಿದ್ದನು.

**ಕುಬೇರಮಿತ್ರಸ್ತಸ್ಯಾಸೀದ್ರಾಜಶ್ರೇಷ್ಠೀ ಪ್ರತಿಷ್ಠಿತಃ ।**
**ದ್ವಾತ್ರಿಂಶದ್ಧನವತ್ಯಾದ್ಯಾ ಭಾರ್ಯಾಸ್ತಸ್ಯ ಮನಃಪ್ರಿಯಾಃ ॥ ೨೧ ॥**

ಪ್ರಜಾಪಾಲಮಹಾರಾಜನಿಗೆ ಶ್ರೀಮಂತನಾದ ಕುಬೇರಮಿತ್ರನೆಂಬ ರಾಜಶ್ರೇಷ್ಠಿಯಿದ್ದನು. ಅವನ ಮನಸ್ಸಿಗೆ ಪ್ರಿಯರೂ ಧನವತಿಯೇ ಮೊದಲಾದವರೂ ಆದ ಮೂವತ್ತೆರಡು ಜನ ಪತ್ನಿಯರಿದ್ದರು.

**ಗೃಹೇ ತಸ್ಯ ಸಮುತ್ತುಂಗೇ ನಾನಾಭವನವೇಷ್ಟಿತೇ ।**
**ವಸನ್ ರತಿವರೋ ನಾಮ್ನಾ ಧೀಮಾನ್ಪಾರಾವತೋತ್ತಮಃ ॥ ೨೨ ॥**

೧ ಮೂರ್ಛಾಂಗತ್ವಾ. ೨ ಪ್ರಸಾದಯಿತುಮಿಚ್ಛುಃ. ೩ ಸಂತೋಷಾಶ್ಚರ್ಯಸಹಿತಾಂ. ೪ ಅವಾದೀತ್. ೫ ಉಪಕ್ರಾಂತವತೀ.

**ಕದಾಚಿದ್ರಾಜಗೇಹಾಗತೇನ ವೈಶ್ಯೇಶಿನಾ ಸ್ವಯಮ್ ।**
**ಸ್ನೇಹೇನ ಸಸ್ಮಿತಾಲಾಪೈಃ ಸ್ವಹಸ್ತೇನ ಸಮುದ್ಧೃತಃ ॥ ೨೩ ॥**

ಅವನ ಉನ್ನತವೂ ನಾನಾಗೃಹಗಳಿಂದ ಸುತ್ತಲ್ಪಟ್ಟದ್ದೂ ಆದ ಮನೆಯಲ್ಲಿ ವಾಸಮಾಡುವುದೂ ಹೆಸರಿನಿಂದ ರತಿವರನೆಂಬುದೂ ಬುದ್ಧಿಶಾಲಿಯೂ ಶ್ರೇಷ್ಠವೂ ಆದ ಹಾಲವಾಣ(ಪಾರಿವಾಳ)ದ ಹಕ್ಕಿಯು ಇದ್ದಿತು. ಒಂದಾನೊಂದು ಕಾಲದಲ್ಲಿ ಅರಮನೆಯಿಂದ ಬಂದ ವೈಶ್ಯಶ್ರೇಷ್ಠ–ಕುಬೇರಮಿತ್ರನಿಂದ ತಾನು–ಆಹಕ್ಕಿಯು ಪ್ರೀತಿಯಿಂದ ಶ್ರೇಷ್ಠಿಯ ಕೈಯಿಂದ ಎತ್ತಲ್ಪಟ್ಟದಾಗಿಯೂ

**ಕದಾಚಿತ್ಕಾಮಿನೀಕಾಂತಕರಾಬ್ಜಾರ್ಪಿತಶರ್ಕರಾ ।**
**ಸಂಮಿಶ್ರಿತಾನ್ ಸುಶಾಲೀಯತಂಡುಲಾನಭಿಭಕ್ಷಯನ್ ॥ ೨೪ ॥**

ಒಂದಾನೊಂದು ಕಾಲದಲ್ಲಿ ಕಾಮಿನಿಯ–ಶ್ರೇಷ್ಠಿಪತ್ನಿಯ ಮನೋಹರವಾದ ಅಥವಾ ಪತಿಯ ಕರಕಮಲಗಳಿಂದ ಕೊಡಲ್ಪಟ್ಟವೂ ಸಕ್ಕರೆಯಿಂದ ಮಿಶ್ರಿತವೂ ಆದ ಒಳ್ಳೆಯ ಭತ್ತದ ಅಕ್ಕಿಗಳನ್ನು ತಿನ್ನುವುದಾಗಿಯೂ

**ಕದಾಚಿಚ್ಛ್ರೇಷ್ಠಿನೋದ್ದಿಷ್ಟಹೇತುದೃಷ್ಟಾಂತಪೂರ್ವಕಮ್ ।**
**ಅಹಿಂಸಾಲಕ್ಷಣಂ ಧರ್ಮಂ ಭಾವಯನ್ ಪ್ರಾಣಿನೇ ಹಿತಮ್ ॥ ೨೫ ॥**

ಒಂದಾನೊಂದು ಕಾಲದಲ್ಲಿ ಹೇತು ದೃಷ್ಟಾಂತಪೂರ್ವಕವಾಗಿ ಶ್ರೇಷ್ಠಿಯಿಂದ ಉದ್ದೇಶಿಲ್ಪಟ್ಟದ್ದೂ ಪ್ರಾಣಿಗೆ ಹಿತವೂ ಅಹಿಂಸಾಲಕ್ಷಣವುಳ್ಳದ್ದೂ ಆದ ಧರ್ಮವನ್ನು ಭಾವಿಸುವುದಾಗಿಯೂ

**ಕದಾಚಿದ್ಭವನಾಯಾತಯತಿಪಾದಸರೋಜಜಮ್ ।**
**ರೇಣುಜಾಲಂ ನಿರಾಕುರ್ವನ್ ಪಕ್ಷಾಭ್ಯಾಂ ಪ್ರತ್ಯುಪಾಗತಃ ॥ ೨೬ ॥**

**ಸ ಕದಾಚಿದ್ಗತಿಃ ಕಾ ಸ್ಯಾತ್ಪಾಪಾಪಾತ್ಮನಾಮಿತಿ ।**
**ಕುತೂಹಲೇನ ಪೃಷ್ಟಃ ಸನ್ ಜನೈಸ್ತುಂಡೇನ ನಿರ್ದಿಶನ್ ॥ ೨೭ ॥**

**ಅಧೋಭಾಗಮಥೋರ್ಧ್ವಂ ಚ ಮೌನೀವಾಗಮಪಾರಗಃ ।**
**ಕ್ಷಯೋಪಶಮಮಾಹಾತ್ಮ್ಯಾತ್ತಿರ್ಯಂಚೋಪಿ ವಿವೇಕಿನಃ ॥ ೨೮ ॥**

ಒಂದಾನೊಂದು ಕಾಲದಲ್ಲಿ ಮನೆಗೆ ಬಂದ ಯತಿಯ ಪಾದಕಮಲಗಳಲ್ಲುಂಟಾದ ಧೂಳಿಯ ಸಮೂಹವನ್ನು ರೆಕ್ಕೆಗಳಿಂದ ಹೋಗಲಾಡಿಸುವುದಾಗಿಯೂ ಯತಿಯನ್ನು ಇದಿರ್ಗೊಂಡಿತು. ಒಂದಾನೊಂದು ಕಾಲದಲ್ಲಿ ಆ ಹಕ್ಕಿಯು ''ಅಧಾರ್ಮಿಕರಿಗೂ ಧಾರ್ಮಿಕರಿಗೂ ಯಾವ ಗತಿಯಾಗುವುದು ? '' ಎಂದು ಜನರಿಂದ ಕುತೂಹಲದಿಂದ ಪ್ರಶ್ನೆಮಾಡಲ್ಪಟ್ಟದಾಗಿ ತನ್ನ ಕೊಕ್ಕಿನಿಂದ ಕೆಳಗಿನ ಭಾಗವನ್ನೂ ಮೇಲಿನ ಭಾಗವನ್ನೂ, ಆಗಮದ ಪಾರವನ್ನು ಹೊಂದಿರುವವನೂ ಮೌನವ್ರತವುಳ್ಳವನೂ ಆದ ಮುನಿಯಂತೆ, ತೋರಿಸುವುದಾಗಿದ್ದಿತು. ತಿರ್ಯಕ್ಪ್ರಾಣಿಗಳು ಕೂಡ ಕರ್ಮದ ಕ್ಷಯೋಪಶಮದ ಮಹಿಮೆಯಿಂದ ವಿವೇಕಿಗಳಾಗಿರುತ್ತವೆ.

**ಕ್ರೀಡನ್ನಾನಾಪ್ರಕಾರೇಣ ಕಾಂತಯಾ ರತಿಷೇಣಯಾ ।**
**ಸಾರ್ಧಮೇವಂ ಚಿರಂ ತತ್ರ ಸುಖಂ ಕಾಲಮಜೀಗಮತ್ ॥ ೨೯ ॥**

ರತಿಷೇಣೆಯೆಂಬ ಪತ್ನಿಯೊಡನೆ ಅದು ನಾನಾ ಪ್ರಕಾರದಿಂದ ಕ್ರೀಡಿಸುವುದಾಗಿ ಅಲ್ಲಿ ಸುಖವಾಗಿ ಹೀಗೆ ಬಹುಕಾಲವನ್ನು ಕಳೆಯಿತು.

**ಅಸೌ ರತಿವರಃ ಕಾಂತಸ್ತ್ವಮಹಂ ಸಾ ತವ ಪ್ರಿಯಾ ।**
**ರತಿಷೇಣಾ ಭವಾವರ್ತೇ ಜಂತುಃ ಕಿಂ ಕಿಂ ನ ಜಾಯತೇ ॥ ೩೦ ॥**

ಈ ರತಿವರವೇ ಪತಿಯಾದ ನೀನು. ನಾನು (ಸುಲೋಚನೆಯು) ಆ ರತಿಷೇಣೆಯಾಗಿದ್ದ ನಿನ್ನ ಪತ್ನಿಯು. ಭವವೆಂಬ ಸುಳಿಯಲ್ಲಿ ಪ್ರಾಣಿಯು ಏನೇನಾಗಿ ಹುಟ್ಟುವುದಿಲ್ಲ ?

**ಸುತಃ ಕುಬೇರಮಿತ್ರಸ್ಯ ಧನವತ್ಯಾಶ್ಚ ಪುಣ್ಯವಾನ್ ।**
**ಜಾತಃ ಕುಬೇರಕಾಂತಾಖ್ಯಃ ಕುಬೇರೋ ವಾ ಪರಃ ಸುಧೀಃ ॥ ೩೧ ॥**

ಆ ಕುಬೇರಮಿತ್ರನಿಗೂ ಧನವತಿಗೂ ಪುಣ್ಯವಂತನೂ ಕುಬೇರಕಾಂತನೆಂದು ಹೆಸರುಳ್ಳವನೂ ಬೇರೊಬ್ಬ ಕುಬೇರನಂತಿರುವವನೂ ಬುದ್ಧಿಶಾಲಿಯೂ ಆದ ಪುತ್ರನು ಜನಿಸಿದನು.

**ದ್ವಿತೀಯ ಇವ ತಸ್ಯಾಸೀತ್ಪ್ರಾಣಃ ಸೋನುಚರಾಗ್ರಣೀಃ ।**
**ಪ್ರಿಯಸೇನಾಹ್ವಯೋ ಬಾಲ್ಯಾದಾರಭ್ಯ ಕೃತಸಂಗತಿಃ ॥ ೩೨ ॥**

ಆ ಕುಬೇರಕಾಂತನಿಗೆ ಎರಡನೆಯ ಪ್ರಾಣದಂತೆ ಬಾಲ್ಯದಿಂದ ಮೊದಲುಗೊಂಡು ಸಹವಾಸವನ್ನು ಮಾಡಿರುವವನೂ ಪ್ರಸಿದ್ಧನೂ ಆದ ಪ್ರಿಯಸೇನನೆಂಬವನು ಅಗ್ರಗಣ್ಯನಾದ ಮಿತ್ರನಾದನು.

**ಆಜನ್ಮನಃ ಕುಮಾರಸ್ಯ ಕಾಮಧೇನುರನುತ್ತಮಾ ।**
**ಮನೋಭಿಲಷಿತಂ ದುಗ್ಧೇ ಸಮಸ್ತಸುಖಸಾಧನಮ್ ॥ ೩೩ ॥**

ಜನನಕಾಲದಿಂದ ಮೊದಲುಗೊಂಡು ಕುಬೇರಕಾಂತಕುಮಾರನಿಗೆ ಅನುಪಮವಾದ ಕಾಮಧೇನುವು ಮನಸ್ಸಿಗೆ ಇಷ್ಟವಾದ ಸಮಸ್ತಸುಖಸಾಧನವನ್ನು ಕರೆಯುತ್ತದೆ–ಉಂಟುಮಾಡುತ್ತದೆ.

**ಕ್ಷೇತ್ರಂ ನಿಷ್ಪಾದಯತ್ಯೇಕಂ ಗಂಧಶಾಲಿಮನಾರತಮ್ ।**
**ಇಕ್ಷೂನಮೃತದೇಶೀಯಾನನ್ಯತ್ಸ್ಥೂಲಾಂಸ್ತನುತ್ವಚಃ ॥ ೩೪ ॥**

ಒಂದು ಕ್ಷೇತ್ರವು ಯಾವಾಗಲೂ ಗಂಧಶಾಲಿ–ಭತ್ತವನ್ನುಂಟುಮಾಡುತ್ತದೆ–ಬೆಳೆಯುತ್ತದೆ. ಮತ್ತೊಂದು ಕ್ಷೇತ್ರವು ದಪ್ಪವೂ ತೆಳುವಾದ ಸಿಪ್ಪೆಯುಳ್ಳವೂ ಅಮೃತಸದೃಶಗಳೂ ಆದ ಕಬ್ಬುಗಳನ್ನು ಬೆಳೆಯುತ್ತದೆ.

**ಸ್ವಯಂ ಮನೋಹರಂ ವೀಣಾ ದಂಧ್ವನೀತಿ ನಿರಂತರಮ್ ।**
**ತತ್ಸ್ನಾನಸಮಯೇ ಸರ್ವರೋಗಸ್ವೇದಮಲಾಪಹಮ್ ॥ ೩೫ ॥**

**ಸುಗಂಧಿಸಲಿಲಂ ಗಾಂಗಂ ಗಂಭೀರಂ ಮಧುರಂ ಧ್ವನನ್ ।**
**ಅಂಭೋಧರೋ ನಭೋಭಾಗಾದಾಸನ್ನಾದವಮುಂಚತಿ ॥ ೩೬ ॥**

ವೀಣೆಯು ತಾನೇ ಮನೋಹರವಾಗಿ ಯಾವಾಗಲೂ ಅಧಿಕವಾಗಿ ಧ್ವನಿ ಮಾಡುತ್ತದೆ. ಆ ಕುಬೇರಕಾಂತನ ಸ್ನಾನಕಾಲದಲ್ಲಿ ಮೇಘವು ಗಂಭೀರವಾಗಿಯೂ ಮನೋಹರವಾಗಿಯೂ ಶಬ್ದಮಾಡುವುದಾಗಿ ಸಮಸ್ತರೋಗಗಳನ್ನೂ ಬೆವರನ್ನೂ ಕೊಳೆಯನ್ನೂ ನಾಶಮಾಡುವುದೂ ಗಂಗಾನದಿಸಂಬಂಧಿಯೂ ಪರಿಮಳವುಳ್ಳದೂ ಆದ ನೀರನ್ನು ಸಮೀಪವಾದ ಆಕಾಶಭಾಗದಿಂದ ಬಿಡುತ್ತದೆ.

**ಕಲ್ಪದ್ರುಮದ್ವಯಂ ವಸ್ತ್ರಭೂಷಣಾನಿ ಪ್ರಯಚ್ಛತಿ ।**
**ಅನ್ನಪಾನಂ ದದಾತ್ಯನ್ಯದ್ದ್ವಯಂ ಕಲ್ಪಮಹೀರುಹಃ ॥ ೩೭ ॥**

ಎರಡು ಕಲ್ಪವೃಕ್ಷಗಳು ವಸ್ತ್ರಗಳನ್ನೂ ಆಭರಣಗಳನ್ನೂ ಕೊಡುತ್ತವೆ. ಇನ್ನೆರಡು ಕಲ್ಪವೃಕ್ಷಗಳು ಅನ್ನವನ್ನೂ ಪಾನವನ್ನೂ ಕೊಡುತ್ತವೆ.

**ಏವಮನ್ಯಚ್ಚ ಭೋಗಾಂಗಮಶೇಷಂ ದೈವನಿರ್ಮಿತಮ್ ।**
**ಶಶ್ವನ್ನಿರ್ವಿಶತಸ್ತಸ್ಯ ಪೂರ್ಣಂ ಪ್ರಾಥಮಿಕಂ ವಯಃ ॥ ೩೮ ॥**

ಈ ಪ್ರಕಾರವಾಗಿ ಬೇರೆಯೂ ಭೋಗಕ್ಕೆ ಸಾಧನವೂ ದೈವನಿರ್ಮಿತವೂ ಆದ ಸಮಸ್ತವಿಷಯವನ್ನು ಬಾರಿಬಾರಿಗೆ ಅನುಭವಿಸುವ ಆ ಕುಬೇರಕಾಂತನಿಗೆ ಬಾಲ್ಯವಯಸ್ಸು ಪೂರ್ತಿಯಾಯಿತು.

**ತದ್ವೀಕ್ಷ್ಯ ಪಿತಾರಾವೇಷ ಕಿಮೇಕಾಮಭಿಲಾಷುಕಃ ।**
**ಕಿಂ ಬಹ್ವೀರಿತಿ ಚಿತ್ತೇನ ಸಂದಿಹಾನೌ ಸಮಾಕುಲೌ ॥ ೩೯ ॥**

ತಾಯಿತಂದೆಗಳು ಅದನ್ನು–ತಾರುಣ್ಯವನ್ನು ನೋಡಿ "ಇವನೇನು ಒಬ್ಬಳನ್ನು ಅಪೇಕ್ಷಿಸುವವನೇ ?ಅಥವಾ ಅನೇಕ ಪತ್ನಿಯರನ್ನು ಅಪೇಕ್ಷಿಸುವವನೇ ?" ಎಂದು ಮನಸ್ಸಿನಿಂದ ಸಂದೇಹಪಡುವವರಾಗಿ ವ್ಯಾಕುಲವುಳ್ಳವರಾದರು.

**ಪ್ರಿಯಸೇನಂ ಸಮಾಹೂಯ ತತ್ಪ್ರಶ್ನಾತ್ತನ್ಮನೋಗತಮ್ ।**
**ಅವಾದೀಧರತಾಂ ಮೈತ್ರೀ ಸೈವ ಯಾ ತ್ವೇಕಚಿತ್ತತಾ ॥ ೪೦ ॥**

ಆಗ ಕುಬೇರಕಾಂತನ ಮಿತ್ರನಾದ ಪ್ರಿಯಸೇನನನ್ನು ಕರೆದು ಅವನ ಪ್ರಶ್ನೆಯಿಂದ ಆ ಕುಬೇರಮಿತ್ರನ ಅಭಿಪ್ರಾಯವನ್ನು–ಏಕಪತ್ನೀವ್ರತವುಳ್ಳವನಾಗಿರುತ್ತಾನೆಂಬುದನ್ನು ನಿಶ್ಚಯಿಸಿದರು. ಒಂದೇ ಮನಸ್ಸಿರುವಿಕೆಯೇ ಮಿತ್ರತೆಯಾಗಿರುತ್ತದೆ.

**ತತಃ ಸಮುದ್ರದತ್ತಾಖ್ಯೋ ಧನವತ್ಯಾ [೧]ಸಹಾಭವತ್ ।**
**[೨]ಸ್ವಸಾ ಕುಬೇರಮಿತ್ರಸ್ಯ [೩]ತನ್ನಾಮ್ನ್ಯೈವ [೪]ತಯೋಃ ಸುತಾ ॥ ೪೧ ॥**

**ಪ್ರಿಯದತ್ತಾಹ್ವಯಾ ತಸ್ಯಾ [೫]ಶ್ಚೇಟಿಕಾ ರತಿಕಾರಿಣೀ ।**
**ಕನ್ಯಕಾಸ್ತಾಂ ವಿಧಾಯಾದಿಂ ದ್ವಾತ್ರಿಂಶತ್ಸುಂದರಾಕೃತೀಃ ॥ ೪೨ ॥**

**ಶ್ರೇಷ್ಠೀ ಕದಾಚಿದುದ್ಯಾನೇ ಯಕ್ಷಪೂಜಾವಿಧೌ ಸುಧೀಃ ।**
**ಸುಪರೀಕ್ಷ್ಯ ನಿಮಿತ್ತೇನ ಪ್ರಿಯದತ್ತಾಂ ಗುಣಾನ್ವಿತಾಮ್ ॥ ೪೩ ॥**

**ಅವಧಾರ್ಯ ಸ್ವಪುತ್ರಸ್ಯ ಪಂಚತಾರಾಬಲಾನ್ವಿತೇ ।**
**ದಿನೇ ಮಹಾವಿಭೂತ್ಯ [೬]ನಾಂ ಕಲ್ಯಾಣವಿಧಿನಾಗ್ರಹೀತ್ ॥ ೪೪ ॥**

ಬಳಿಕ ಧನವತಿಯೊಡನೆ ಜನಿಸಿದ ಸಮುದ್ರದತ್ತನೆಂಬವನಿದ್ದನು. ಕುಬೇರಮಿತ್ರನಿಗೆ ಅದೇ ಹೆಸರಿನ–ಕುಬೇರಮಿತ್ರಳೆಂಬ ಸಹೋದರಿಯಿದ್ದಳು. ಆ ಸಮುದ್ರದತ್ತ ಕುಬೇರಮಿತ್ರಾದಂಪತಿಗಳಿಗೆ ಪ್ರಿಯದತ್ತೆಯೆಂಬವಳು ಮಗಳಿದ್ದಳು. ಆಕೆಯ ಸಖಿಯು ರತಿಕಾರಿಣಿಯೆಂಬವಳು. ಆ ಪ್ರಿಯದತ್ತೆಯನ್ನು ಮೊದಲುಮಾಡಿ ಸುಂದರಾಕಾರವುಳ್ಳವರಾದ ಮೂವತ್ತೆರಡುಮಂದಿ ಕನ್ನಿಕೆಯರನ್ನು ಬುದ್ಧಿಶಾಲಿಯಾದ ಆ ಕುಬೇರಮಿತ್ರಶ್ರೇಷ್ಠಿಯು ಒಂದಾನೊಂದು ಕಾಲದಲ್ಲಿ ಉದ್ಯಾನದಲ್ಲಿ ಯಕ್ಷಪೂಜೆಯ ವಿಧಿಯಲ್ಲಿ ನಿಮಿತ್ತದಿಂದ ಚೆನ್ನಾಗಿ ಪರೀಕ್ಷಿಸಿ(ಮೂವತ್ತೊಂದು ಪಾತ್ರಗಳಲ್ಲಿ ವಿವಿಧಭಕ್ಷ್ಯಾದಿಗಳನ್ನೂ ಒಂದು ಪಾತ್ರದಲ್ಲಿ ರತ್ನಗಳನ್ನೂ ತುಂಬಿ ಯಕ್ಷದೇವನ ಮುಂದಿಟ್ಟು ಪೂಜಿಸಿ ಒಂದೊಂದು ಪಾತ್ರವನ್ನು ಒಬ್ಬೊಬ್ಬ ಕನ್ಯೆಗೆ ಕೊಟ್ಟು ಭೋಜನಮಾಡಿಸಿ ರತ್ನಗಳು ತುಂಬಿರುವ ಪಾತ್ರವುಳ್ಳವಳು ತನ್ನ ಮಗನಿಗೆ ಪತ್ನಿಯಾಗುವಳೆಂದು ಪರೀಕ್ಷಿಸಿ) ಪ್ರಿಯದತ್ತೆಯನ್ನು ಗುಣಯುಕ್ತಳನ್ನಾಗಿ ನಿಶ್ಚಯಿಸಿ ತಿಥಿಯೇ ಮೊದಲಾದ ಐದು ತಾರಾಬಲದಿಂದ ಕೂಡಿದ–ಶುಭದಿನದಲ್ಲಿ ಮಹಾವೈಭವದಿಂದ ಈಕೆಯನ್ನು ತನ್ನಪುತ್ರ–ಕುಬೇರಕಾಂತನಿಗೆ ಕಲ್ಯಾಣವಿಧಿಯಿಂದ ಗ್ರಹಣಮಾಡಿದನು.

**ತನ್ನಿಮಿತ್ತಪರೀಕ್ಷಾಯಾಮವಲೋಕಿತುಮಾಗತೇ ।**
**ಸುತೇ ಗುಣವತೀ [೭]ರಾಜ್ಞೋ ಯಶಸ್ವತ್ಯಭಿಧಾ ಪರಾ ॥ ೪೫ ॥**

ಆ ನಿಮಿತ್ತಪರೀಕ್ಷೆಯಲ್ಲಿ ನೋಡುವುದಕ್ಕೋಸ್ಕರ ಪ್ರಜಾಪಾಲರಾಜನ ಗುಣವತೀ ಯಶಸ್ವತಿಯರೆಂಬೀರ್ವರು ಪುತ್ರಿಯರು ಬಂದಿದ್ದರು.

**ಭಾಜನಂ ಭಕ್ಷ್ಯಸಂಪೂರ್ಣಮದತ್ತವತಿ ಮಾತುಲೇ ।**
**ಸ್ವಾಭ್ಯಾಂ ಲಜ್ಜಾಭರಾನಮ್ರವದನೇ ಜಾತನಿರ್ವಿದೇ ॥ ೪೬ ॥**

**ಅಮಿತಾನಂತಮತ್ಯಾರ್ಯಿಕಾಭ್ಯಾಶೇ ಸಂಯಮಂ ಪರಮ್ ।**
**ಆದದಾತೇ ಸ್ಮ ಯಾತ್ಯೇವಂ ಕಾಲೇ ತಸ್ಮಿನ್ಮಹೀಪತೌ ॥ ೪೭ ॥**

೧ ಕುಬೇರಮಿತ್ರಸ್ಯಭಾರ್ಯಾಧನವತ್ಯಾಸಹೋತ್ಪನ್ನಃ. ೨ ಭಗಿನೀ. ೩ ಕುಬೇರಮಿತ್ರಾಹ್ವಯಾ. ೪ ಸಮುದ್ರದತ್ತಕುಬೇರಮಿತ್ರಯೋಃ. ೫ ಸಖೀ. ೬ ಪ್ರಿಯದತ್ತಾಂ. ೭ ಪ್ರಜಾಪಾಲನೃಪಸ್ಯ.

**ಲೋಕಪಾಲಾಯ ದತ್ವಾತ್ಮಲಕ್ಷ್ಮೀಂ ಸಂಯಮಮಾಗತೇ ।**
**ಶೀಲಗುಪ್ತಗುರೋಃ ಪಾರ್ಶ್ವೇ ಶಿವಂಕರವನಾಂತರೇ ॥ ೪೮ ॥**

**ದೇವ್ಯಃ ಕನಕಮಾಲಾದ್ಯಾಃ ಪರೇ ಚೋಪಾಯಯುಸ್ತಪಃ ।**
**ದುರ್ಗಮಂ ಚ ವ್ರಜಂತ್ಯಲ್ಪಾಃ ಪ್ರಭುರ್ಯಾದಿ ಪುರಸ್ಸರಃ ॥ ೪೯ ॥**

ತಮ್ಮ(ರಾಜಪುತ್ರಿಯರ)ಸೋದರಮಾವನಾದ ಕುಬೇರಮಿತ್ರನು ಭಕ್ಷ್ಯಗಳಿಂದ ತುಂಬಿದ ಪಾತ್ರವನ್ನು ತಮಗೆ ಕೊಡದಿರುತ್ತಿರಲು ತಾವು ಲಜ್ಜೆಯ ಭಾರದಿಂದ ನಮ್ರವಾದ ಮುಖವುಳ್ಳವರೂ ಉತ್ಪನ್ನವಾದ ವೈರಾಗ್ಯವುಳ್ಳವರೂ ಆಗಿ ಅಮಿತ ಮತಿ ಅನಂತಮತಿಯರೆಂಬ ಆರ್ಯಿಕೆಯರ ಬಳಿಯಲ್ಲಿ ಉತ್ಕೃಷ್ಟವಾದ ವ್ರತವನ್ನು ತೆಗೆದುಕೊಂಡರು. ಹೀಗೆ ಕಾಲವು ಕಳೆಯುತ್ತಿರಲು ಆ ಪ್ರಜಾ ಪಾಲಮಹಾರಾಜನು ತನ್ನ ರಾಜ್ಯಲಕ್ಷ್ಮಿಯನ್ನು ಲೋಕಪಾಲನೆಂಬ ಪುತ್ರನಿಗೆ ಕೊಟ್ಟು ಶಿವಂಕರವೆಂಬ ವನಾಂತರದಲ್ಲಿ ಶೀಲಗುಪ್ತನೆಂಬ ಗುರುವಿನ ಸಮೀಪದಲ್ಲಿ ವ್ರತವನ್ನು-ದೀಕ್ಷೆಯನ್ನು ಹೊಂದುತ್ತಿರಲು ಕನಕಮಾಲೆಯೇ ಮೊದಲಾದ ಆತನ ದೇವಿಯರೂ ಬೇರೆಯವರೂ ತಪಸ್ಸನ್ನು ಹೊಂದಿದರು. ಪ್ರಭುವು ಮುಂದಾಳಾದರೆ ಅಲ್ಪರು-ಶಕ್ತಿಹೀನರು ಕಷ್ಟವಾದುದನ್ನೂ ಹೊಂದುತ್ತಾರೆ (ಮಾಡುತ್ತಾರೆ).

**ಲೋಕಪಾಲೋಪಿ ಸಂಪ್ರಾಪ್ತರಾಜ್ಯಶ್ರೀರ್ವಿಶ್ರುತೋದಯಃ ।**
**ಕುಬೇರಮಿತ್ರಬುದ್ಧ್ಯೈವ ಧರಿತ್ರೀಂ ಪ್ರತ್ಯಪಾಲಯತ್ ॥ ೫೦ ॥**

ಕುಬೇರಮಿತ್ರಶ್ರೇಷ್ಠಿಯ ಬುದ್ಧಿ-ಬಲದಿಂದಲೇ ಲೋಕಪಾಲನು ರಾಜ್ಯ ಸಂಪತ್ತಿಯನ್ನು ಹೊಂದಿದವನೂ ಪ್ರಸಿದ್ಧವಾದ ಉನ್ನತಿಯುಳ್ಳವನೂ ಆಗಿ ಪೃಥ್ವಿಯನ್ನು ಪರಿಪಾಲಿಸಿದನು.

**ಮಂತ್ರೀಚಪಲಮತ್ಯಾಖ್ಯೋ ಬಾಲೋಸಭ್ಯವಚಃ ಪ್ರಿಯಃ ।**
**[೧]ಸವಯಸ್ಯೋ [೨]ನೃಪಶ್ಚಾನ್ಯಃ ಪ್ರಕೃತ್ಯಾ [೩]ಚಪಲಃ ಖಲಃ ॥ ೫೧ ॥**

**ತತ್ಸಮೀಪೇ ನೃಪೇಣಾಮಾ ಯದ್ವಾತದ್ವಾ ಮುಖಾಗತಮ್ ।**
**ಶಂಕಮಾನೋ ವಚೋ ವಕ್ತುಂ ಶ್ರೇಷ್ಠ್ಯಪಾಯಂ ವಿಚಿಂತ್ಯ ಸಃ ॥ ೫೨ ॥**

**[೪]ಸ್ವೀಕೃತ್ಯ ಶಯನಾಧ್ಯಕ್ಷಂ ಸಾಮದಾನೈಸ್ತ್ವಯಾ ನಿಶಿ ।**
**ದೇವತಾವತ್ತಿರೋಭೂಯ ರಾಜನ್ ಪಿತೃಸಮಂ ಗುರುಮ್ ॥ ೫೩ ॥**

**ವಿನಯಾದ್ವಿಚ್ಯುತೋ ರಾಜಶ್ರೇಷ್ಠಿನಂ ತವ ಸನ್ನಿಧೌ ।**
**ವಿಧಾಯ ಸರ್ವದಾ ಮಾ ಸ್ಥಾಃ ಕಾರ್ಯಕಾಲೇ ಸ[೫] ಹೂಯತಾಮ್ ॥**

**ಇತಿ ವಕ್ತವ್ಯಮಿತ್ಯಾಖ್ಯತ್ಸೋಪಿ ಸರ್ವಂ ತಥಾಕರೋತ್ ।**
**ಅರ್ಥಾರ್ಥಿಭಿರಕರ್ತವ್ಯಂ ನ ಲೋಕೇ ನಾಮ ಕಿಂಚನ ॥ ೫೫ ॥**

ಚಪಲಮತಿಯೆಂಬ ಮಂತ್ರಿಯು ಬಾಲ-ಹುಡುಗನೂ ಅಸಭ್ಯವಾದ ಮಾತುಗಳುಳ್ಳವನೂ ರಾಜನಿಗೆ-ಲೋಕಪಾಲನಿಗೆ ಪ್ರಿಯನೂ ಸಮಾನವಾದ ವಯಸ್ಸುಳ್ಳವನೂ ಎರಡನೆಯ ದೊರೆಯೂ(ಮಂತ್ರಿಯೂ) ಸ್ವಭಾವದಿಂದ ಅಸಮರ್ಥನೂ ದುಷ್ಟನೂ ಆ ಕುಬೇರಮಿತ್ರಶ್ರೇಷ್ಠಿಯ ಬಳಿಯಲ್ಲಿ ರಾಜನೊಡನೆ ಯದ್ವಾತದ್ವಾ-ಏನೇನೋ ಬಾಯಿಗೆ ಬಂದ ಮಾತನ್ನಾಡುವುದಕ್ಕೆ ಸಂದೇಹ ಪಡುವವನೂ ಆಗಿ ಅವನು ಶ್ರೇಷ್ಠಿಗೆ ಅಪಾಯವನ್ನು ಯೋಚಿಸಿ ದೊರೆಯ ಶಯ್ಯಾಗೃಹದ ಯಜಮಾನನನ್ನು ಪ್ರಿಯವಚನಗಳಿಂದಲೂ ಸುವರ್ಣ ರತ್ನ ಮೊದಲಾದುವುಗಳ ದಾನಗಳಿಂದಲೂ ವಶಮಾಡಿ ''ನೀನು ರಾತ್ರಿಯಲ್ಲಿ ದೇವತೆ ಯಂತೆ ಮರೆಯಾಗಿದ್ದು 'ರಾಜನೆ! ತಂದೆಗೆ ಸಮಾನನೂ ಪೂಜ್ಯನೂ ಆದ ರಾಜ ಶ್ರೇಷ್ಠಿಯನ್ನು ನಿನ್ನ ಸನ್ನಿಧಿಯಲ್ಲಿ ಮಾಡಿಕೊಂಡು ವಿನಯದಿಂದ ಚ್ಯುತನಾಗಿ-ವಿನಯವಿಲ್ಲದವನಾಗಿ ಯಾವಾಗಲೂ ಇರಬೇಡ. ಕೆಲಸದ ಕಾಲದಲ್ಲಿ ಅವನನ್ನು ಕರೆಯಿಸು'-ಎಂದು

೧ ಸಮಾನವಯಸ್ಕಃ. ೨ ದ್ವಿತೀಯೋನೃಪಃ ಮಂತ್ರೀತ್ಯರ್ಥಃ. ೩ ಅಸಮರ್ಥಃ. ೪ ಸ್ವವಶಂಕೃತ್ವಾ. ೫ ಆಹೂಯತಾಂ.

ಹೇಳಬೇಕು'' ಎಂಬುದಾಗಿ ಆ ಶಯ್ಯಾಗೃಹಾಧ್ಯಕ್ಷನಿಗೆ ಹೇಳಿದನು. ಅವನೂ ಎಲ್ಲವನ್ನೂ ಹಾಗೆಯೇ ಮಾಡಿದನು. ಅರ್ಥವನ್ನಿಚ್ಛಿಸುವವರು-ಅರ್ಥಾತುರರು ಲೋಕದಲ್ಲಿ ಯಾವುದೂ ಮಾಡಬಾರದ ಕೆಲಸವಿಲ್ಲ. ಅರ್ಥಾತುರರು ಎಲ್ಲಾ ಅನರ್ಥಗಳನ್ನೂ ಮಾಡುತ್ತಾರೆಂದು ಭಾವವು.

**ಶ್ರುತ್ವಾ ತದ್ವಚನಂ ರಾಜಾ ಸಭೀರಾಹೂಯ ಮಾತುಲಮ್ ।**
**ನಾಗಂತವ್ಯಮನಾಹೂತೈರಿತ್ಯನಾಲೋಚ್ಯ ಸೋಬ್ರವೀತ್ ॥ ೫೬ ॥**

ಲೋಕಪಾಲರಾಜನು ಆ ಮಾತನ್ನು ಕೇಳಿ ಭಯವುಳ್ಳವನಾಗಿ ಸೋದರ ಮಾವನಾದ ಶ್ರೇಷ್ಠಿಯನ್ನು ಕರೆದು ''ಕರೆಯದೆ ತಾವು ಬರಬೇಡಿ'' ಎಂದು ಆ ಲೋಕಪಾಲನು ಆಲೋಚಿಸದೆ ಹೇಳಿದನು.

**ಪಶ್ಚಾ[೧]ದ್ವಿಷವಿಪಾಕಿನ್ಯಃ ಪ್ರಾಗನಾಲೋಚಿತೋಕ್ತಯಃ ।**
**ಶ್ರೇಷ್ಠೀ ತದ್ವಚನಾತ್ಸದ್ಯಃ ಸೋದ್ವೇಗಃ ಸ್ವಗೃಹಂ ಯಯೌ ॥ ೫೭ ॥**

ಮೊದಲು ಪರ್ಯಾಲೋಚಿಸದಿರುವ ಮಾತುಗಳು ಆಮೇಲೆ ವಿಷದಂತೆ ಪಾಕವುಳ್ಳವಾಗಿರುತ್ತವೆ. ಅನಿಷ್ಟಫಲಗಳನ್ನುಂಟುಮಾಡುತ್ತವೆಂದು ಭಾವವು. ಶ್ರೇಷ್ಠಿಯು ದೊರೆಯ ಆ ಮಾತಿನಿಂದ ತತ್ಕ್ಷಣದಲ್ಲೇ ಭಯ, ವಿಷಾದವುಳ್ಳವನಾಗಿ ತನ್ನ ಮನೆಗೆ ಹೋದನು.

**ರಾಜಾ ಕದಾಚಿ[೨]ದವ್ರಾಜೇದ್ಘಟಯಾ ಲಲಿತಾಖ್ಯಯಾ ।**
**ವಿಹಾರಾರ್ಥಂ ವನಂ ತತ್ರ ವಾಪ್ಯಾಮಾಲೋಕ್ಯ ವಿಸ್ಮಯಾತ್ ॥ ೫೮ ॥**

**ತಟಶುಷ್ಕಾಂಘ್ರಿಪಾಸನ್ನಶಾಖಾಗ್ರಸ್ಥಪರಿಸ್ಫುರತ್-**
**ಪರಾರ್ಧ್ಯವಾಯಸಾನೀತಪದ್ಮರಾಗಮಣಿಪ್ರಭಾಮ್ ॥ ೫೯ ॥**

**ಮಣಿಂ ಮತ್ವಾ ಪ್ರವಿಶ್ಯಾಂತರ್ನೈಷು ಕೇನಾ[೩]ಪ್ಯಲಭ್ಯಸೌ ।**
**ಭ್ರಾಂತ್ಯಾ ಪ್ರವರ್ತಮಾನಾನಾಂ ಕುತಃ ಕ್ಲೇಶಾದ್ವಿನಾ ಫಲಮ್ ॥ ೬೦ ॥**

ದೊರೆಯು ಒಂದಾನೊಂದು ಕಾಲದಲ್ಲಿ ಲಲಿತಘಟವೆಂಬ ಸಮಾನವಯಸ್ಕರೂ ಕ್ರೀಡೆಗೆ ಯೋಗ್ಯರೂ ಆದ ಜನರ ಗುಂಪಿನೊಡನೆ ವಿಹಾರನಿಮಿತ್ತವಾಗಿ ವನಕ್ಕೆ ಹೋದನು. ಅಲ್ಲಿ ಒಂದು ಬಾವಿ-ಕೊಳದಲ್ಲಿ ದಡದಲ್ಲಿ ಒಣಗಿದ ಮರದ ಬಳಿಯ ಕೊಂಬೆಯ ತುದಿಯಲ್ಲಿರುವುದೂ ಪ್ರಕಾಶಮಾನವೂ ಶ್ರೇಷ್ಠವೂ ಕಾಗೆಯಿಂದ ತಂದುದೂ ಆದ ಪದ್ಮರಾಗ(ಕೆಂಪು) ಮಣಿಯ ಪ್ರಭೆಯನ್ನು ಆಶ್ಚರ್ಯದಿಂದ ನೋಡಿ (ಕೊಳದ ನೀರಿನಲ್ಲಿ ನೋಡಿ) ಅದನ್ನು ರತ್ನವನ್ನಾಗಿ ತಿಳಿದು ಆ ಕೊಳದೊಳಕ್ಕೆ ಪ್ರವೇಶಿಸಿ ಈ ಲಲಿತಘಟೆಯ ಜನರಲ್ಲಿ ಯಾರಿಂದಲೂ ಈ ರತ್ನವು ಹೊಂದಲ್ಪಡಲಿಲ್ಲ. ಭ್ರಮೆಯಿಂದ ಪ್ರವರ್ತಿಸುವವರಿಗೆ ಕ್ಲೇಶವಲ್ಲದೆ ಫಲವೆಲ್ಲಿಂದ ಬರುವುದು ?

**ಚಿರಂ ನಿರೀಕ್ಷ್ಯ ನಿರ್ವಿಣ್ಣಾಃ ಸರ್ವೇ ತೇ ಪುರಮಾಗಮನ್ ।**
**ಬುದ್ಧಿರ್ನಾಗ್ರೇಸರೀ ಯಸ್ಯ ನ [೪]ನಿರ್ಬಂಧಃ ಫಲತ್ಯಸೌ ॥ ೬೧ ॥**

ಅವರೆಲ್ಲರೂ ಬಹುಕಾಲದವರೆಗೆ ನೋಡಿ ಖಿನ್ನರಾಗಿ ಪಟ್ಟಣಕ್ಕೆ ಬಂದರು. ಯಾವನ ಬುದ್ಧಿಯು ಮುಂದುವರಿಯುವುದಿಲ್ಲವೋ(ವಿಚಾರಶಕ್ತಿಯುಳ್ಳದಾಗಿರುವುದಿಲ್ಲವೋ) ಅವನ ಈ ನಿರ್ಬಂಧವು-ಹಟಯೋಗವು ಫಲಿಸುವುದಿಲ್ಲ. ವಿಚಾರಶಕ್ತಿಯಿಲ್ಲದವನ ಪ್ರಯತ್ನವು ನಿಷ್ಫಲವೆಂದು ಭಾವವು.

**ಕದಾಚಿದ್ಭೂಪತಿಃ [೫]ಶ್ರೇಷ್ಠಿಸುತಯಾ ರಕ್ತಚಿತ್ತಯಾ ।**
**ವಸುಮತ್ಯಾ ವಿಭಾವರ್ಯಾಮಾತ್ಮಸೌಭಾಗ್ಯಸೂಚಿನ ॥ ೬೨ ॥**

**ಕ್ರಮೇಣ ಕುಂಕುಮಾರ್ದ್ರೇಣ ಲಲಾಟೇ ಸ್ಫುಟ[೬]ಮಂಕಿತಃ ।**
**ಕಾಂತಾಃ ಕಿಂ ಕಿಂ ನ ಕುರ್ವಂತಿ ಸ್ವಭೋಗಪತಿತೇ ನರೇ ॥ ೬೩ ॥**

೧ ವಿಷವದ್ವಿಪಾಕವತ್ಯಃ. ೨ ಆಗಮತ್. ೩ ಲಬ್ಧಃ. ೪ ತಸ್ಯನಿರ್ಬಂಧಃ. ೫ ನಿಜಭಾರ್ಯಯಾ. ೬ ತಾಡಿತಃ.

ಒಂದಾನೊಂದು ಕಾಲದಲ್ಲಿ ಲೋಕಪಾಲಮಹಾರಾಜನು ಅನುರಾಗವುಳ್ಳವಳೂ ಶ್ರೇಷ್ಠಿಪುತ್ರಿಯೂ ಆದ ವಸುಮತಿಯಿಂದ ರಾತ್ರಿಯಲ್ಲಿ ತನ್ನ (ದೊರೆಯ) ಸೌಭಾಗ್ಯವನ್ನು ಸೂಚಿಸುವುದೂ ಕುಂಕುಮದಿಂದ ಲೇಪಿಸಲ್ಪಟ್ಟಿರುವುದೂ ಆದ ಪಾದದಿಂದ ಹಣೆಯಲ್ಲಿ ಸ್ಫುಟವಾಗಿ ಹೊಡೆಯಲ್ಪಟ್ಟನು. ರೂಪವತಿಯರಾದ ಸ್ತ್ರೀಯರು ತಮ್ಮ ಭೋಗದಲ್ಲಿ ಆಸಕ್ತನಾದ ಮನುಷ್ಯನಲ್ಲಿ ಏನೇನನ್ನು ಮಾಡುವುದಿಲ್ಲ ?

**ಪಟ್ಟಬಂಧಾತ್ಪರಂ ಮತ್ವಾ ತತ್ಕ್ರಮಾಂಕಂ ಮಹೀಪತಿಃ ।**
**ಪ್ರಾತರಾಸ್ಥಾನಮಧ್ಯಾಸ್ಯ ಮಂತ್ರ್ಯಾದೀನಿತ್ಯಬೂಬುಧತ್ ॥ ೬೪ ॥**

ಲೋಕಪಾಲಮಹಾರಾಜನು ಆ ಪಾದದ ಗುರುತನ್ನು ಪಟ್ಟಬಂಧಕ್ಕಿಂತ ಉತ್ಕೃಷ್ಟವನ್ನಾಗಿ ತಿಳಿದು ಪ್ರಾತಃಕಾಲದಲ್ಲಿ ಆಸ್ಥಾನದಲ್ಲಿದ್ದು ಮಂತ್ರಿಯೇ ಮೊದಲಾದವರನ್ನು ಕುರಿತು ಮುಂದೆ ಹೇಳುವಂತೆ ತಿಳಿಸಿದನು.

**ಲಲಾಟೇ ಯದಿ ಕೇನಾಪಿ ರಾಜಾ ಪಾದೇನ ತಾಡಿತಃ ।**
**ಕರ್ತವ್ಯಂ ತಸ್ಯ ಕಿಂ [೧]ವಾಚ್ಯಂ ತತೋ ಮಂತ್ರ್ಯಬ್ರವೀದಿದಮ್ ॥ ೬೫ ॥**

"ದೊರೆಯು ಯಾರಿಂದಾದರೂ ಪಾದದಿಂದ ಹಣೆಯಲ್ಲಿ ಹೊಡೆಯಲ್ಪಟ್ಟರೆ ಅದಕ್ಕೇನುಮಾಡಬೇಕು ?ಎಂಬುದನ್ನು ನೀವುಗಳು ಹೇಳಬೇಕು" ಎಂದನು. ಬಳಿಕ ಮಂತ್ರಿಯು ಮುಂದೆ ಹೇಳುವ ಮಾತನ್ನು ಹೇಳಿದನು.

**ಪಟ್ಟಾಲ್ಲಲಾಟೋ ನಾನ್ಯೇನ ಸ್ಪೃಶ್ಯಃ ಸ ಯದಿ ತಾಡಿತಃ ।**
**ಪಾದೇನ ಕೇನಚಿದ್ವಧ್ಯಃ ಸ ಪ್ರಾಣಾಂತಮಿತಿ ಸ್ಫುಟಮ್ ॥ ೬೬ ॥**

"ಹಣೆಯು ಪಟ್ಟದ ದೆಸೆಯಿಂದ ಬೇರೆಯವನಿಂದ ಮುಟ್ಟಲ್ಪಡತಕ್ಕುದಲ್ಲವು. ಅಂತಹ ಹಣೆಯು ಯಾವನಿಂದಾದರೂ ಪಾದದಿಂದ ಹೊಡೆಯಲ್ಪಟ್ಟರೆ ಅವನು ಪ್ರಾಣಾಂತವಾಗಿ ವಧಿಸಲ್ಪಡುವುದಕ್ಕೆ ಯೋಗ್ಯನೆಂಬುದು ವ್ಯಕ್ತವಾಗಿರುತ್ತದೆ."

**ತದಾಕರ್ಣ್ಯಾ[೨]ವಧೂಯ್ಯೈನಂ ಸ್ಮಿತೇನಾಹೂಯ ಮಾತುಲಮ್ ।**
**ನೃಪೋಪ್ರಾಕ್ಷೀತ್ಸ ಚಾಹೈತತ್ಪ್ರಸ್ತುತಂ ಪ್ರಸ್ತುತಾರ್ಥವಿತ್ ॥ ೬೭ ॥**

**ತಸ್ಯ ಪೂಜಾ ವಿಧಾತವ್ಯಾ ಸರ್ವಾಲಂಕಾರಸಂಪದಾ ।**
**ಇತಿ ತದ್ವಚನಾತ್ತುಷ್ಟ್ವಾ ಮಣಿವಾರ್ತಾಂ ನ್ಯವೇದಯತ್ ॥ ೬೮ ॥**

ಆ ಮಾತನ್ನು ಕೇಳಿ ಈ ಮಂತ್ರಿಯನ್ನು ಮುಗುಳ್ನಗೆಯಿಂದ ತಿರಸ್ಕರಿಸಿ ಮಾವನನ್ನು–ಶ್ರೇಷ್ಠಿಯನ್ನು ಕರೆಯಿಸಿ ದೊರೆಯು ಪ್ರಶ್ನೆಮಾಡಿದನು. ಪ್ರಕೃತಾರ್ಥವನ್ನು ತಿಳಿದವನಾದ ಆ ಶ್ರೇಷ್ಠಿಯಾದರೋ "ಆ ಪಾದಕ್ಕೆ ಸಮಸ್ತವಾದ ಅಲಂಕಾರವೈಭವದಿಂದ ಪೂಜೆಯನ್ನುಮಾಡಬೇಕು. ಇದು ಪ್ರಸ್ತುತವಾದುದು–ಉಚಿತವಾದುದು" ಎಂದನು. ಈ ಪ್ರಕಾರವಾದ ಅವನ ಮಾತಿನಿಂದ ಸಂತೋಷಪಟ್ಟು ಬಾವಿಯಲ್ಲಿ ನೋಡಿದ ಪದ್ಮರಾಗರತ್ನದ ಸಮಾಚಾರವನ್ನು ತಿಳುಹಿದನು.

**ಮಣಿರ್ನ ಜಲಮಧ್ಯೇಸ್ತಿ ತಟಸ್ಥತರುಸಂಶ್ರಿತಃ ।**
**ಪ್ರಭಾ ವಾಪ್ಯಾಮಿತಿ ಪ್ರಾಹ ತದ್ವಿಚಿಂತ್ಯ ವಣಿಗ್ವರಃ ॥ ೬೯ ॥**

ವೈಶ್ಯಶ್ರೇಷ್ಠನು ಆ ವಿಷಯವನ್ನು ಯೋಚಿಸಿ "ನೀರಿನ ಮಧ್ಯದಲ್ಲಿ ರತ್ನವಿಲ್ಲ. ಅದು ಬಾವಿಯ ದಡದಲ್ಲಿರುವ ಮರವನ್ನಾಶ್ರಯಿಸಿರುತ್ತದೆ. ಬಾವಿಯಲ್ಲಿ ಅದರ ಕಾಂತಿಯಿರುತ್ತದೆ" ಎಂದು ಹೇಳಿದನು.

**ತದಾ ಕುಬೇರಮಿತ್ರಸ್ಯ ಪ್ರಜ್ಞಾಮಜ್ಞಾನಮಾತ್ಮನಃ ।**
**ದೌಷ್ಟ್ಯಂ ಚ ಮಂತ್ರಿಣೋ ಜ್ಞಾತ್ವಾ [೩]ಪಶ್ಚಾತ್ತಾಪಾನ್ಮಹೀಪತಿಃ ॥ ೭೦ ॥**

೧ ಭವದ್ಭಿರ್ವಕ್ತವ್ಯಂ. ೨ ಪರಿತ್ಯಜ್ಯ, ತಿರಸ್ಕೃತ್ಯ. ೩ ಪಶ್ಚಾತ್ತಾಪಂಯಥಾಭವತಿತಥಾ.

**ಪಶ್ಯ ಧೂರ್ತೈರಹಂ ಮೂಢೋ ವಂಚಿತೋಸ್ಮೀತಿ ಸರ್ವದಾ ।**
**ಶ್ರೇಷ್ಠಿನಂ ಪ್ರಾಪ್ತಸನ್ಮಾನಂ ಪ್ರತ್ಯಾಸನ್ನಂ ವ್ಯಧಾತ್ಸುಧೀಃ ॥ ೭೧ ॥**

ಬುದ್ಧಿಶಾಲಿಯಾದ ದೊರೆಯು ಆಗ ಕುಬೇರಮಿತ್ರಶ್ರೇಷ್ಠಿಯ ಬುದ್ಧಿಯನ್ನೂ ತನ್ನ ಅಜ್ಞಾನವನ್ನೂ ಮಂತ್ರಿಯ ದುಷ್ಟತನವನ್ನೂ ತಿಳಿದು ಪಶ್ಚಾತ್ತಾಪದಿಂದ "ಮೂರ್ಖನಾದ ನಾನು ಧೂರ್ತರಿಂದ ವಂಚಿಸಲ್ಪಟ್ಟವನಾಗಿರುತ್ತೇನೆ. ನೋಡು" ಎಂಬುದಾಗಿ ಸನ್ಮಾನವನ್ನು ಹೊಂದಿದವನಾದ ಕುಬೇರಮಿತ್ರಶ್ರೇಷ್ಠಿಯನ್ನು ಯಾವಾಗಲೂ ಸಮೀಪದಲ್ಲಿರುವವನನ್ನಾಗಿ ಮಾಡಿದನು.

**[೧]ತಂತ್ರಾವಾಪಮಹಾಭಾರಂ ತತಃ ಪ್ರಭೃತಿ ಭೂಪತಿಃ ।**
**ತಸ್ಮಿನ್ನಾರೋಪ್ಯ ನಿರ್ವ್ಯಗ್ರಃ ಸ ಧರ್ಮಂ ಕಾಮಮನ್ವಭೂತ್ ॥ ೭೨ ॥**

ಆ ಮೊದಲುಗೊಂಡು ಆ ಲೋಕಪಾಲಮಹಾರಾಜನು ಸ್ವರಾಷ್ಟ್ರ, ಪರರಾಷ್ಟ್ರಚಿಂತೆಯ ಮಹಾಭಾರವನ್ನು ಆ ಕುಬೇರಮಿತ್ರಶ್ರೇಷ್ಠಿಯಲ್ಲಿ ವಹಿಸಿ ನಿಶ್ಚಿಂತನಾಗಿ ಧರ್ಮವನ್ನೂ ಕಾಮ–ಸುಖವನ್ನೂ ಅನುಭವಿಸಿದನು.

**ಕದಾಚಿತ್ಕಾಂತಯಾ ದೃಷ್ಟಪಲಿತೋ ನಿಜಮೂರ್ಧನಿ ।**
**ಶ್ರೇಷ್ಠೀ ತಾಂ ಸತ್ಯಮದ್ಯ ತ್ವಂ ಧರ್ಮಪತ್ನೀತ್ಯಭಿಷ್ಟುವನ್ ॥ ೭೩ ॥**

**ಹೃಷ್ಟ್ವಾ ವಿಮೋಚ್ಯ ರಾಜಾನಂ ವರಧರ್ಮಗುರೋಸ್ತಪಃ ।**
**ಸಾರ್ಧಂ ಸಮುದ್ರದತ್ತಾದ್ಯೈರಾದಾಯ [೨]ಸುರಭೂಧರೇ ॥ ೭೪ ॥**

**[೩]ತಾವುಭೌ ಬ್ರಹ್ಮಲೋಕಾಂತೇಭೂತಾಂ ಲೌಕಾಂತಿಕೌ ಸುರೌ ।**
**ಕಿಂ ನ ಸಾಧ್ಯಂ [೪]ಯಥಾಕಾಲಪರಿಚ್ಛಿತ್ಯಾ ಮನೀಷಿಭಿಃ ॥ ೭೫ ॥**

ಒಂದಾನೊಂದು ಕಾಲದಲ್ಲಿ ತನ್ನ ತಲೆಯಲ್ಲಿ ಪತ್ನಿಯಿಂದ ನೋಡಲ್ಪಟ್ಟ ನರೆಗೂದಲುಳ್ಳವನಾದ ಕುಬೇರಮಿತ್ರಶ್ರೇಷ್ಠಿಯು ಆಕೆಯನ್ನು ಕುರಿತು "ಈ ದಿವಸ ನೀನು ನಿಜವಾಗಿಯೂ ಧರ್ಮಪತ್ನಿಯು" ಎಂದು ಹೊಗಳುವವನಾಗಿ ಸಂತೋಷಪಟ್ಟು ರಾಜನನ್ನು ಬಿಡಿಸಿ(ತಾನು ರಾಜನಿಂದ ಬಿಡುಗಡೆಯನ್ನುಹೊಂದಿ) ಸಮುದ್ರದತ್ತನೇ ಮೊದಲಾದವರೊಡನೆ ಸುರವೆಂಬ ಒಂದಾನೊಂದು ಪರ್ವತದಲ್ಲಿ ವರಧರ್ಮಗುರುವಿನಿಂದ ತಪಸ್ಸನ್ನು ಸ್ವೀಕರಿಸಿ ಆ ಕುಬೇರಮಿತ್ರ ಸಮುದ್ರದತ್ತರೀರ್ವರು ಬ್ರಹ್ಮಲೋಕವೆಂಬ ಐದನೆಯ ಸ್ವರ್ಗದ ಕೊನೆಯಲ್ಲಿ ಲೌಕಾಂತಿಕ ದೇವತೆಗಳಾಗಿ ಹುಟ್ಟಿದರು. ಬುದ್ಧಿಶಾಲಿಗಳಿಂದ ಕಾಲಾನುಸಾರವಾದ ಜ್ಞಾನದಿಂದ ಸಾಧಿಸಲ್ಪಡುವುದಕ್ಕೆ ಯೋಗ್ಯವಲ್ಲದಿರುವುದಾವುದು ?

**ಅನ್ಯೇದ್ಯುಃ [೫]ಪ್ರಿಯದತ್ತಾಸೌ ದತ್ವಾ ದಾನಂ ಮುನೀಶಿನೇ ।**
**ಭಕ್ತ್ಯಾ ವಿಪುಲಮತ್ಯಾಖ್ಯಚಾರಣಾಯ ಯಥೋಚಿತಮ್ ॥ ೭೬ ॥**

**ಸಂಪ್ರಾಪ್ಯ ನವಧಾ ಪುಣ್ಯಂ ತಪಸಃ ಸನ್ನಿಧಿರ್ಮಮ ।**
**ಕಿಮಸ್ತೀತ್ಯಬ್ರವೀದ್ವ್ಯಕ್ತವಿನಯಾನ್ಮುನಿಪುಂಗವಮ್ ॥ ೭೭ ॥**

ಮತ್ತೊಂದು ದಿವಸ ಕುಬೇರಕಾಂತನ ಪತ್ನಿಯಾದ ಈ ಪ್ರಿಯದತ್ತೆಯು ವಿಪುಲಮತಿಯೆಂಬ ಚಾರಣಮುನೀಶ್ವರನಿಗೆ ಯಥೋಚಿತವಾಗಿ ಭಕ್ತಿಯಿಂದ ಆಹಾರದಾನವನ್ನು ಕೊಟ್ಟು ಒಂಬತ್ತು ವಿಧವಾದ ಪುಣ್ಯವನ್ನು ಹೊಂದಿ "ತಪಸ್ಸಿನ ಸನ್ನಿಧಿಯು(ಫಲವು) ಇರುತ್ತದೆಯೇ ?" ಎಂದು ಪ್ರಕಟವಾದ ವಿನಯದಿಂದ ಆ ಮುನಿಶ್ರೇಷ್ಠನನ್ನು ಕೇಳಿದಳು.

**ಪುತ್ರಲಾಭಾರ್ಥಿ ತಚ್ಚಿತ್ತಂ ವಿದಿತ್ವಾವಧಿಲೋಚನಃ ।**
**ವಾಮೇತರಕರೇ ಧೀಮಾನ್ ಸ್ಪಷ್ಟಮಂಗುಲಿಪಂಚಕಮ್ ॥ ೭೮ ॥**

**ಕನಿಷ್ಠಾಮಂಗುಲಿಂ ವಾಮಹಸ್ತೇಸೌ ಸಮದರ್ಶಯತ್ ।**
**ಪುತ್ರಾನ್ ಕಾಲಾಂತರೇ ಪಂಚ ಸಾಪ್ಯೈಕಾಮಾತ್ಮಜಾಮಪಿ ॥ ೭೯ ॥**

೧ ಸ್ವರಾಷ್ಟ್ರಪರರಾಷ್ಟ್ರಚಿಂತಾಮಹಾಧುರಂ. ೨ ಸುರನಾಮ್ನಿಕಸ್ಮಿಂಶ್ಚಿದ್ಗಿರೌ. ೩ ಕುಬೇರಮಿತ್ರ ಸಮುದ್ರದತ್ತೌ. ೪ ಕಾಲಾನುರೂಪೇಣಜ್ಞಾನೇನ. ೫ ಕುಬೇರಕಾಂತಪ್ರಿಯಾ.

ಬುದ್ಧಿಶಾಲಿಯೂ ಅವಧಿಜ್ಞಾನವೆಂಬ ನೇತ್ರವುಳ್ಳವನೂ ಆದ ಆ ವಿಪುಲಮತಿ ಮುನಿಯು ಆಕೆಯ ಚಿತ್ತವು ಪುತ್ರಲಾಭವನ್ನಿಚ್ಛಿಸುತ್ತದೆಂದು ತಿಳಿದು ಬಲಗೈಯಲ್ಲಿ ಸ್ಪಷ್ಟವಾದ ಐದು ಬೆರಳುಗಳನ್ನೂ ಎಡಗೈಯಲ್ಲಿ ಈ ಮುನಿಯು ಕಿರಿಬೆರಳನ್ನೂ ತೋರಿದನು. ಕಾಲಾಂತರದಲ್ಲಿ ಆಕೆಯು ಐದು ಜನ ಪುತ್ರರನ್ನೂ ಒಬ್ಬಳು ಪುತ್ರಿಯನ್ನೂ ಪಡೆದಳು.

**[೧]ತೇ ಕದಾಚಿಜ್ಜಗತ್ಪಾಲಚಕ್ರೇಶಸ್ಯ ಸುತೇ ಸಮಮ್ ।**
**ಅಮಿತಾನಂತಮತ್ಯಾಖ್ಯೇ [೨]ಗುಣಜ್ಞೇ ಗುಣಭೂಷಣೇ ॥ ೮೦ ॥**

**ಪ್ರಜಾಪಾಲತನೂಜಾಭ್ಯಾಂ ಯಶಸ್ವತ್ಯಾ ತಪೋಭೃತಾ ।**
**ಗುಣವತ್ಯಾ ಚ ಸಂಪ್ರಾಪ್ತೇ [೩]ಪುರಂ ತತ್ಪರಮರ್ದ್ಧಿಕಮ್ ॥ ೮೧ ॥**

ಒಂದಾನೊಂದು ಕಾಲದಲ್ಲಿ ಆ ಪ್ರಸಿದ್ಧರೂ ಗುಣವನ್ನು ತಿಳಿಯುವವರೂ ಗುಣಗಳೇ ಭೂಷಣಗಳಾಗಿರುವವರೂ ಆದ ಅಮಿತಮತಿ ಅನಂತಮತಿಯರೆಂಬ ಲೋಕಪಾಲಚಕ್ರೇಶ್ವರನ ಪುತ್ರಿಯರು ಪ್ರಜಾಪಾಲಮಹಾರಾಜನ ಈರ್ವರು ಪುತ್ರಿಯರೂ ತಪಸ್ಸನ್ನು ಧರಿಸಿದವರೂ ಆದ ಯಶಸ್ವತಿಗುಣವತಿಯರೊಡನೆ ಅಧಿಕ ಸಂಪತ್ತಿಯುಳ್ಳುದಾದ ಆ ಪುಂಡರೀಕಿಣೀನಗರವನ್ನು ಪ್ರವೇಶಿಸಿದರು.

**[೪]ರಾಜಾ ಸಾಂತಃಪುರಃ [೫]ಶ್ರೇಷ್ಠೀ ಚಾ[೬]ನಯೋರ್ನಿಕಟೇ ಚಿರಮ್ ।**
**ಶ್ರುತ್ವಾ ಸದ್ಧರ್ಮಸದ್ಭಾವಂ ದಾನಾದ್ಯುದ್ಯೋಗಮಾಯಯೌ ॥ ೮೨ ॥**

ಅಂತಃಪುರಸಹಿತನಾದ ಲೋಕಪಾಲರಾಜನೂ ಕುಬೇರಕಾಂತಶ್ರೇಷ್ಠಿಯೂ ಅಮಿತಮತಿ ಅನಂತಮತಿಯರ ಸಮೀಪದಲ್ಲಿ ಬಹುಕಾಲದವರೆಗೆ ಶ್ರೇಷ್ಠವಾದ ಧರ್ಮದ ಸ್ವರೂಪವನ್ನು ಕೇಳಿ ದಾನ ಮೊದಲಾದ ಉದ್ಯೋಗವನ್ನು–ಸತ್ಕಾರ್ಯವನ್ನು ಹೊಂದಿದರು.

**ಕದಾಚಿಚ್ಛ್ರೇಷ್ಠಿನೋ ಗೇಹಂ ಜಂಘಾಚಾರಣಯೋರ್ಯುಗಮ್ ।**
**ಪ್ರಾವಿಶದ್ಭಕ್ತಿತೋಸ್ಥಾಪಯತಾಂ ತೌ [೭]ದಂಪತೀ [೮]ಮುದಾ ॥ ೮೩ ॥**

ಒಂದಾನೊಂದು ಕಾಲದಲ್ಲಿ ಕುಬೇರಕಾಂತಶ್ರೇಷ್ಠಿಯ ಮನೆಯನ್ನು ಈರ್ವರು ಜಂಘಾಚಾರಣ (ಕಣಕಾಲು ಎತ್ತರದ ಮೇಲೆ ಆಕಾಶದಲ್ಲಿ ನಡೆಯುವ) ಮುನಿಗಳು ಪ್ರವೇಶಿಸಿದರು. ಆಗ ಪ್ರಿಯದತ್ತಾ ಕುಬೇರಕಾಂತರೆಂಬ ದಂಪತಿಗಳು ಭಕ್ತಿಯಿಂದ ಆ ಮುನಿಗಳನ್ನು ಆಹಾರಕ್ಕಾಗಿ ನಿಲ್ಲಿಸಿದರು.

**[೯]ತದ್ದೃಷ್ಟಿಮಾತ್ರವಿಜ್ಞಾತಪ್ರಾಗ್ಭವಂ ತತ್ಪದಾಂಬುಜಮ್ ।**
**ಕಪೋತಮಿಥುನಂ ಪಕ್ಷೈಃ ಪರಿಸ್ಪೃಶ್ಯಾಭಿನತ್ಯ ತತ್ ॥ ೮೪ ॥**

**[೧೦]ಗಲಿತಾನ್ಯೋನ್ಯಸಂಪ್ರೀತಿ ಬಭೂವಾಲೋಕ್ಯ [೧೧]ತನ್ಮುನೀ ।**
**ಜಾತಸಂಸಾರನಿರ್ವೇಗೌ ನಿರ್ಗತ್ಯಾಪಗತೌ ಗೃಹಾತ್ ॥ ೮೫ ॥**

ಆ ಮುನಿಗಳನ್ನು ನೋಡಿದ ಮಾತ್ರದಿಂದಲೇ ತಮ್ಮ ಪೂರ್ವಭವವನ್ನು ತಿಳಿದ ಆ ಹಾಲವಾಣದ ಹಕ್ಕಿಗಳು(ರತಿವರ ರತಿಷೇಣಾ)ಆ ಮುನಿಗಳ ಪಾದಕಮಲವನ್ನು ರೆಕ್ಕೆಗಳಿಂದ ಚೆನ್ನಾಗಿ ಸ್ಪರ್ಶಿಸಿ(ಪಾದಧೂಳನ್ನು ಕೊಡಹಿ) ನಮಸ್ಕರಿಸಿ ಪರಸ್ಪರವಾಗಿದ್ದ ಅತ್ಯಂತಸ್ನೇಹವನ್ನು ಬಿಟ್ಟುವು. ಆ ಕಪೋತ ಪಕ್ಷಿಯುಗಲವನ್ನು ಮುನಿಗಳು ನೋಡಿ ಸಂಸಾರದಲ್ಲಿ ವೈರಾಗ್ಯೋತ್ಪತ್ತಿಯುಳ್ಳವರಾಗಿ ಆ ಶ್ರೇಷ್ಠಿಯ ಮನೆಯಿಂದ ಹೊರಟು ಹೋದರು.

**ಪ್ರಿಯದತ್ತೇಂಗಿತಜ್ಞೈ[೧೨]ತದವಗಮ್ಯಾನ್ಯದಾ ತು [೧೩]ತಾಮ್ ।**
**ರತಿಷೇಣಾಮಪೃಚ್ಛತ್ತೇ ನಾಮ ಪ್ರಾಗ್ಜನ್ಮನೀತಿ ಕಿಮ್ ॥ ೮೬ ॥**

ಮತ್ತೊಂದು ಕಾಲದಲ್ಲಿ ಇಂಗಿತ–ಮನೋಗತವನ್ನು ತಿಳಿಯುವವಳಾದ ಪ್ರಿಯದತ್ತೆಯು ಈ ವಿಷಯವನ್ನು(ಪಕ್ಷಿಗಳ ಪರಸ್ಪರ ಪ್ರೀತಿತ್ಯಾಗವನ್ನು) ತಿಳಿದು ರತಿಷೇಣೆಯೆಂಬ ಆ ಹೆಣ್ಣುಹಕ್ಕಿಯನ್ನು "ಪೂರ್ವಜನ್ಮದಲ್ಲಿ ನಿನ್ನ ಹೆಸರೇನು ?" ಎಂದು ಕೇಳಿದಳು.

**ಸಾ ತುಂಡೇನಾಲಿಖನ್ನಾಮ ರತಿವೇಗೇತಿ ವೀಕ್ಷ್ಯ [೧]ತತ್ ।**
**ಮಮೈಷಾ ಪೂರ್ವಭಾರ್ಯೇತಿ ಕಪೋತಃ ಪ್ರೀತಿಮೀಯಿವಾನ್ ॥ ೮೭ ॥**

ಆ ಪಕ್ಷಿಯು ಕೊಕ್ಕಿನಿಂದ "ರತಿವೇಗಾ" ಎಂದು ಹೆಸರನ್ನು ಬರೆಯಿತು. ಅದನ್ನು ನೋಡಿ "ನನಗೆ ಈಕೆಯು(ರತಿಷೇಣೆಯು) ಮೊದಲಿನ ಭವದ ಹೆಂಡತಿಯು" ಎಂದು ತಿಳಿದು ರತಿವರನೆಂಬ ಗಂಡುಪಾರಿವಾಳವು ಪ್ರೀತಿಯನ್ನು ಹೊಂದಿತು.

**ತಥಾ ರತಿವರಃ ಪೃಷ್ಟಃ [೨]ಸ್ವನಾಮ ಪ್ರಿಯದತ್ತಯಾ ।**
**ಸುಕಾಂತಾಸ್ಯಹಮಿತ್ಯೇಷೋಪ್ಯಕ್ಷರಾಣ್ಯಾಲಿಖದ್ಭುವಿ ॥ ೮೮ ॥**

ಹಾಗೆಯೇ ರತಿವರಪಕ್ಷಿಯೂ ಪ್ರಿಯದತ್ತೆಯಿಂದ ಅದರ ಪೂರ್ವಭವದ ಹೆಸರು ಕೇಳಲ್ಪಟ್ಟಿತು. "ನಾನು ಸುಕಾಂತನಾಗಿರುತ್ತೇನೆ" ಎಂದು ಈ ಪಕ್ಷಿಯೂ (ರತಿವರನೂ) ಕೊಕ್ಕಿನಿಂದ ಭೂಮಿಯಲ್ಲಿ ಅಕ್ಷರಗಳನ್ನು ಬರೆಯಿತು.

**ತನ್ನಿರೀಕ್ಷ್ಯ ಮಮೈವಾಯಂ ಪತಿರಿತ್ಯಭಿಲಾಷುಕಾ ।**
**ರತಿಷೇಣಾಪ್ಯಗಾ[೩]ತ್ತೇನ ಸಂಗಮಂ ವಿಧ್ಯನುಗ್ರಹಾತ್ ॥ ೮೯ ॥**

ರತಿಷೇಣಾಪಕ್ಷಿಯೂ ಆ ಹೆಸರನ್ನು ನೋಡಿ "ಇವನೇ ನನ್ನ ಪತಿಯು" ಎಂದು ತಿಳಿದು ಅಭಿಲಾಷೆಯುಳ್ಳುದಾಗಿ ಮೊದಲು ಸುಕಾಂತನಾಗಿದ್ದ ಆ ರತಿವರಪಕ್ಷಿಯೊಡನೆ ವಿಧಿಯ ಅನುಕೂಲತೆಯಿಂದ ಸಂಬಂಧವನ್ನು ಹೊಂದಿತು" ಎಂದು ಸುಲೋಚನೆಯು ಹೇಳಿದಳು.

**[೪]ತತ್ಸಭಾವರ್ತಿನಾಮೇತಚ್ಛ್ರುತ್ವಾ ಪ್ರೀತಿರಭೂದಲಮ್ ।**
**ಪುನಃ ಶುಶ್ರೂಷವಶ್ಚಾಸನ್ [೫]ಕಥಾಶೇಷಂ ಸಕೌತುಕಾಃ ॥ ೯೦ ॥**

ಈ ವರ್ಣನವನ್ನು ಕೇಳಿ ಜಯಕುಮಾರನ ಸಭೆಯಲ್ಲಿರುವವರಿಗೆ ಅಧಿಕವಾಗಿ ಪ್ರೀತಿಯುಂಟಾಯಿತು. ಪುನಃ ಕುತೂಹಲವುಳ್ಳವರಾದ ಸಭಿಕರು ಉಳಿದ ಕಥೆಯನ್ನು ಕೇಳಬೇಕೆಂಬ ಇಚ್ಛೆಯುಳ್ಳವರಾಗಿಯೂ ಆದರು.

**ಅನ್ಯಚ್ಚಾಕರ್ಣಿತಂ ದೃಷ್ಟಮಾವಾಭ್ಯಾಂ ಯದಿ ಚೇತ್ತ್ವಯಾ ।**
**ಜ್ಞಾಯತೇ ತಚ್ಚ ವಕ್ತವ್ಯಮಿತ್ಯುಕ್ತವತಿ ಕೌರವೇ ॥ ೯೧ ॥**

**ನಿಜವಾಗಮೃತಾಂಭೋಭಿಃ ಸಿಂಚಂತೀ ತಾಂ ಸಭಾಂ ಶುಭಾ ।**
**ಸುಲೋಚನಾಬ್ರವೀತ್ಸಮ್ಯಜ್ಜ್ಞಾಯತೇ ಶ್ರೂಯತಾಮಿತಿ ॥ ೯೨ ॥**

"ನಿಮ್ಮೀರ್ವರಿಂದ ಬೇರೆಯೂ ಕೇಳಿರುವುದೂ ನೋಡಿರುವುದೂ ಆದ ವಿಷಯವು ನಿನಗೆ ಗೊತ್ತಿದ್ದರೆ ಅದನ್ನೂ ಹೇಳಬೇಕು" ಎಂದು ಜಯಕುಮಾರನು ಹೇಳುತ್ತಿರಲು ತನ್ನ ವಚನಾಮೃತವೆಂಬ ಜಲಗಳಿಂದ ಆ ಸಭೆಯನ್ನು ಸೇಚಿಸುವವಳೂ ಮಂಗಲಸ್ವರೂಪಳೂ ಆದ ಸುಲೋಚನೆಯು "ಚೆನ್ನಾಗಿ ತಿಳಿಯುತ್ತದೆ, ಕೇಳೋಣವಾಗಲಿ" ಎಂಬುದಾಗಿ ಮುಂದೆ ಹೇಳುವಂತೆ ಹೇಳಿದಳು.

**ತದಾ ಮುನೇರ್ಗೃಹಾದ್ಭಿಕ್ಷಾಂ ತ್ಯಕ್ತ್ವಾ[೬] ಗಮನಕಾರಣಮ್ ।**
**ಅಜ್ಞಾತ್ವಾ [೭]ಭೂಪತೇಃ ಪ್ರಶ್ನಾದಾಹಾಮಿತಮತಿಃ [೮]ಶ್ರುತಮ್ ॥ ೯೩ ॥**

"ಆಗ ಭಿಕ್ಷೆಯನ್ನು ಬಿಟ್ಟು ಮನೆಯಿಂದ ಹೋದ ಮುನಿಯ ಗಮನ ಕಾರಣವನ್ನು ತಿಳಿಯದೆ ಲೋಕಪಾಲರಾಜನ ಪ್ರಶ್ನೆಯಿಂದ ಅಮಿತಮತಿಯೆಂಬ

೧ ಪ್ರಸಿದ್ಧೇ. ೨ ಗುಣಸ್ಯೌ ಇತ್ಯಪಿಪಾಠಃ. ೩ ಪುಂಡರೀಕಿಣೀಂ. ೪ ಲೋಕಪಾಲಃ. ೫ ಕುಬೇರಕಾಂತಃ. ೬ ಅಮಿತಾನಂತಮತ್ಯೋಃ. ೭ ಪ್ರಿಯದತ್ತಾಕುಬೇರಕಾಂತೌ. ೮ ತದಾ ಇತ್ಯಪಿಪಾಠಃ. ೯ ಜಂಘಾಚಾರಣದ್ವಯಾವಲೋಕನಮಾತ್ರ. ೧೦ ವಿಗಲಿತಪರಸ್ಪರಾತ್ಯಂತಸ್ನೇಹವದಿತ್ಯರ್ಥಃ. ೧೧ ಕಪೋತಮಿಥುನಂ. ೧೨ ಸ್ಖಲಿತಮೋಹಮಿತಿಜ್ಞಾತ್ವಾ. ೧೩ ರತಿಷೇಣಾಂಪಕ್ಷಿಣೀಂ.

೧ ಲಿಖಿತನಾಮಾಕ್ಷರಂ. ೨ ನಿಜಪೂರ್ವಜನ್ಮನಾಮ. ೩ ಸುಕಾಂತಚರರತಿವರೇಣಕಪೋತೇನಸಹ. ೪ ಜಯಕುಮಾರಸಭಾವರ್ತಿನಾಂ. ೫ ಜಾತನಿರ್ವೇಗಾತ್ ಭಿಕ್ಷಾಮಗೃಹೀತ್ವಾನಿರ್ಗತ್ಯಗತಚಾರಣಾದಿಶೇಷಕಥಾಂ. ೬ ಲೋಕಪಾಲಸ್ಯ. ೭ ಸ್ವಯಂಪೂರ್ವೋಕ್ತಜಂಘಾಚಾರಣಮುನಿನಿಕಟೇಆಕರ್ಣಿತಂ.

ಆರ್ಯಿಕೆಯು ತಾನು ಮೊದಲು ಜಂಘಾಚಾರಣಮುನಿಯ ಸಮೀಪದಲ್ಲಿ ಕೇಳಿದ ವಿಷಯವನ್ನು ಹೇಳಿದಳು.

**ವಿಷಯೇಽಸ್ಮಿನ್ [೧]ಖಗಕ್ಷ್ಮಾಭೃತ್ಪ್ರತ್ಯಾಸನ್ನಂ ವನಂ ಮಹತ್ ।**
**ಅಸ್ತಿ ಧಾನ್ಯಕಮಾಲಾಖ್ಯಂ ತದಭ್ಯರ್ಣೇ ಪುರಂ ಪರಮ್ ॥ ೯೪ ॥**

''ಪುಷ್ಕಲಾವತೀದೇಶದಲ್ಲಿ ವಿಜಯಾರ್ಧಗಿರಿಯ ಸಮೀಪದಲ್ಲಿ ಧಾನ್ಯಕಮಾಲವೆಂಬ ದೊಡ್ಡ ಕಾಡಿರುತ್ತದೆ. ಅದರ ಸಮೀಪದಲ್ಲಿ ಶ್ರೇಷ್ಠವಾದ ಶೋಭಾನಗರವೆಂಬ ಪುರವಿರುತ್ತದೆ.

**ಶೋಭಾನಗರಮಸ್ಯೇಶಃ ಪ್ರಜಾಪಾಲಮಹೀಪತಿಃ ।**
**ದೇವಶ್ರೀಸ್ತಸ್ಯ ದೇವ್ಯಾಸೀತ್ಸುಖದಾ ಶ್ರೀರಿವಾಪರಾ ॥ ೯೫ ॥**

ಈ ಶೋಭಾನಗರಕ್ಕೆ ಪ್ರಜಾಪಾಲರಾಜನು ದೊರೆಯಾಗಿದ್ದನು. ಅವನಿಗೆ ದೇವಶ್ರೀಯೆಂಬ ದೇವಿಯು, ಬೇರೊಬ್ಬಳು ಲಕ್ಷ್ಮಿಯಂತೆ, ಸುಖವನ್ನು ಕೊಡುವವಳಾಗಿದ್ದಳು.

**ಶಕ್ತಿಷೇಣೋಽಸ್ಯ [೨]ಸಾಮಂತಸ್ತಸ್ಯಾಭೂತ್ಪ್ರೀತಿದಾಯಿನೀ ।**
**ಅಟವೀಶ್ರೀಸ್ತಯೋಃ [೩]ಸತ್ಯದೇವಃ ಸೂನು[೪]ರಿಮೇ ಸಮಮ್ ॥ ೯೬ ॥**

**ಸರ್ವೇಽಪ್ಯಾಸನ್ನಭವ್ಯತ್ವಾ[೫]ದಸ್ಮತ್ಪಾದಸಮಾಶ್ರಯಾತ್ ।**
**ಶ್ರುತ್ವಾ ಧರ್ಮಂ ನೃಪೇಣಾಮಾ ಸಮಾಪನ್ಮದ್ಯಮಾಂಸಯೋಃ ॥ ೯೭ ॥**

**ತ್ಯಾಗಂ ಪರ್ವೋಪವಾಸಂ ಚ ಶಕ್ತಿಷೇಣೋಽಪಿ ಭಕ್ತಿಮಾನ್ ।**
**[೬]ಮುನಿವೇಲಾತ್ಯಯೇ ಭುಕ್ತಿಮಗ್ರಹೀತ್ಸ ಗೃಹೀ ವ್ರತಮ್ ॥ ೯೮ ॥**

ಈ ಪ್ರಜಾಪಾಲರಾಜನಿಗೆ ಶಕ್ತಿಷೇಣನೆಂಬ ಸಾಮಂತರಾಜನಿದ್ದನು. ಅವನಿಗೆ ಅಟವೀಶ್ರೀಯೆಂಬವಳು ಪ್ರೀತಿದಾಯಿನೀ–ಪತ್ನಿಯಾಗಿದ್ದಳು. ಆ ದಂಪತಿಗಳಿಗೆ ಸತ್ಯದೇವನೆಂಬ ಸ್ವೀಕೃತಪುತ್ರನಿದ್ದನು. ಈ ದೇವಶ್ರೀದೇವಿ ಮೊದಲಾದವರೆಲ್ಲರೂ ಏಕಕಾಲದಲ್ಲಿ–ಒಟ್ಟಿಗೆ ಆಸನ್ನಭವ್ಯರಾಗಿದ್ದುದರಿಂದ ನಮ್ಮ (ಅಮಿತಮತಿಯ) ಪಾದಾಶ್ರಯದಿಂದ ರಾಜನೊಡನೆ ಧರ್ಮವನ್ನು ಕೇಳಿ ಮದ್ಯಮಾಂಸಗಳ ತ್ಯಾಗವನ್ನೂ ಪರ್ವತಿಥಿಗಳಲ್ಲಿ ಉಪವಾಸವನ್ನೂ ಹೊಂದಿದರು. ಭಕ್ತಿಯುಳ್ಳವನೂ ಗೃಹಸ್ಥನೂ ಆದ ಆ ಶಕ್ತಿಷೇಣನೂ ಮುನಿಗಳು ಭಿಕ್ಷೆಗೆ ಬರುವ ಸಮಯವು ಕಳೆದ ಮೇಲೆ ಭೋಜನಮಾಡುತ್ತೇನೆಂಬ ವ್ರತವನ್ನು ಸ್ವೀಕರಿಸಿದನು.

**[೭]ತತ್ಪತ್ನೀ ಶುಕ್ಲಪಕ್ಷಾದಿದಿನೇಷ್ವಷ್ಟಮ್ಯಾಮಥಾ[೮]ಪರೇ ।**
**ಪಕ್ಷೇ ಪಂಚಸಮಾಸ್ತ್ಯಾಗಮಾಹಾರಸ್ಯ ಸಮಗ್ರಹೀತ್ ॥ ೯೯ ॥**

**ಅನುಪ್ರವೃದ್ಧಕಲ್ಯಾಣನಾಮಧೇಯಮುಪೋಷಿತಮ್ ।**
**ಸತ್ಯದೇವಶ್ಚ [೯]ಸಾಧೂನಾಂ ಸ್ತವನಂ [೧೦]ಪ್ರತ್ಯಪದ್ಯತ ॥ ೧೦೦ ॥**

ಆ ಶಕ್ತಿಷೇಣನ ಪತ್ನಿಯಾದ ಅಟವೀಶ್ರೀಯು ಶುಕ್ಲಪಕ್ಷದಲ್ಲಿ ಮೊದಲನೆಯ–ಪಾಡ್ಯದ ದಿನದಲ್ಲಿಯೂ ಕೃಷ್ಣಪಕ್ಷದಲ್ಲಿ ಅಷ್ಟಮೀತಿಥಿಯಲ್ಲಿಯೂ ಐದು ವರ್ಷಗಳ ವರೆಗೆ ಆಹಾರದ ತ್ಯಾಗರೂಪವಾದ ಅನುಪ್ರವೃದ್ಧಕಲ್ಯಾಣವೆಂಬ ಉಪವಾಸವ್ರತವನ್ನು ಸ್ವೀಕರಿಸಿದಳು. ಸತ್ಯದೇವನೂ ಅರ್ಹದಾದಿ ಪಂಚಪರಮೇಷ್ಠಿಗಳ ಸ್ತೋತ್ರವನ್ನು ಮಾಡುವ ವ್ರತವನ್ನು ಸ್ವೀಕರಿಸಿದನು.

**ಇತ್ಯಭೂವನ್ನಮೀ ಶ್ರದ್ಧಾವಿಹೀನವ್ರತಭೂಷಣಾಃ ।**
**[೧೧]ಸ ಮೃಣಾಲವತೀಂ ನೇತುಂ ಕದಾಚಿದಟವೀಶ್ರಿಯಮ್ ॥ ೧೦೧ ॥**

೧ ವಿಜಯಾರ್ಧಗಿರಿಸಮೀಪೇ. ೨ ನಾಯಕಃ. ೩ ಸತ್ಯದೇವನಾಮಾಸ್ವೀಕೃತಪುತ್ರಃ. ೪ ಇಮೇಸರ್ವೇ ದೇವಶ್ರೀದೇವ್ಯಾದಯಃ. ೫ ಅಮಿತಮತಿನಾಮಾಸ್ಮತ್ಪಾದಸಮಾಶ್ರಯಾತ್. ೬ ಮುನಿಚರ್ಯಾಕಾಲೇ ಅತಿಕ್ರಾಂತೇಸತಿ. ೭ ಶಕ್ತಿಷೇಣಭಾರ್ಯಾಅಟವೀಶ್ರೀಃ. ೮ ಕೃಷ್ಣಪಕ್ಷೇ. ೯ ಪರಮೇಷ್ಠಿನಾಂ. ೧೦ ಗೃಹೀತವಾನ್. ೧೧ ಶಕ್ತಿಷೇಣಃ.

**[೧]ಪಿತ್ರೋಃ ಪುರೀಂ ಪ್ರವೃತ್ತಃ ಸನ್ ಶಕ್ತಿಷೇಣಃ ಸಸೈನ್ಯಕಃ ।**
**ವನೇ ಧಾನ್ಯಕಮಾಲಾಖ್ಯೇ ಪ್ರಾಪ್ಯ ಸರ್ಪ[೨]ಸರೋವಣಮ್ ॥ ೧೦೨ ॥**

**ನಿವಿಷ್ಟವಾನಿದಂ ಚಾನ್ಯತ್ಪ್ರಕೃತಂ ತತ್ರ ಕಥ್ಯತೇ ।**
**ಪತಿರ್ಮೃಣಾಲವತ್ಯಾಖ್ಯನಗರ್ಯಾ ಧರಣೀಪತಿಃ ॥ ೧೦೩ ॥**

**ಸುಕೇತು[೩]ಸ್ತತ್ರ ವೈಶ್ಯೇಶಸ್ತನೂಜೋ ರತಿವರ್ಮಣಃ ।**
**ಭವದೇವೋಽಭವತ್ತಸ್ಯ ವಿಪುಣ್ಯಃ ಕನಕಶ್ರಿಯಾಮ್ ॥ ೧೦೪ ॥**

ಈ ಪ್ರಕಾರವಾಗಿ ಇವರು ಶ್ರದ್ಧೆಯಿಲ್ಲದ ವ್ರತವೇ ಭೂಷಣವಾಗಿರುವವರಾಗಿದ್ದರು. ಸೈನ್ಯಸಹಿತನಾದ ಆ ಶಕ್ತಿಷೇಣನು ಒಂದಾನೊಂದು ಕಾಲದಲ್ಲಿ ಅಟವೀಶ್ರೀಯನ್ನು ಆಕೆಯ ತಂದೆತಾಯಿಗಳ ಮೃಣಾಲವತಿಯೆಂಬ ಪುರಕ್ಕೆ ಕರೆದುಕೊಂಡು ಹೋಗುವುದಕ್ಕೋಸ್ಕರ ಪ್ರವರ್ತಿಸಿದನು. ಆಗ ಧಾನ್ಯಕಮಾಲವನದಲ್ಲಿ ಸರ್ಪಸರೋವಣವನ್ನು ಹೊಂದಿ ಅಲ್ಲಿ ಕುಳಿತಿದ್ದನು. ಅಲ್ಲಿ ಇದೊಂದು ಬೇರೆಯಾದ ಪ್ರಕೃತವಿಷಯವು ಹೇಳಲಾಗುತ್ತದೆ. ಸುಕೇತುವೆಂಬುವನು ಮೃಣಾಲವತಿಯೆಂಬ ನಗರದ ಅಧಿಪತಿಯಾದ ದೊರೆಯು. ಅಲ್ಲಿ ಸುಕೇತುವಿನ ರಾಜಶ್ರೇಷ್ಠಿಯಾದ ರತಿವರ್ಮನೆಂಬ ವೈಶ್ಯಶ್ರೇಷ್ಠನಿಗೆ ಕನಕಶ್ರೀಯೆಂಬ ಪತ್ನಿಯಲ್ಲಿ ಪುಣ್ಯಹೀನನಾದ ಭವದೇವನೆಂಬವನು ಪುತ್ರನಾದನು.

**[೪]ತತ್ರೈವ ದುಹಿತಾ ಜಾತಾ ಶ್ರೀದತ್ತಸ್ಯಾತಿವಲ್ಲಭಾ ।**
**ವಿಮಲಾದಿಶ್ರಿಯಾ ಖ್ಯಾತಾ ರತಿವೇಗಾಖ್ಯಯಾ ಸತೀ ॥ ೧೦೫ ॥**

ಅದೇ ಮೃಣಾಲವತಿಯಲ್ಲಿ ಶ್ರೀದತ್ತಶ್ರೇಷ್ಠಿಗೆ ಅತ್ಯಂತ ಪ್ರಿಯಳೂ ಪತಿವ್ರತೆಯೂ ಆತನ ಪತ್ನಿಯಾದ ವಿಮಲಶ್ರೀಯಲ್ಲಿ ರತಿವೇಗೆಯೆಂಬ ಹೆಸರಿನಿಂದ ಪ್ರಸಿದ್ಧಳೂ ಆದ ಮಗಳು ಹುಟ್ಟಿದಳು.

**ಸುಕಾಂತೋಽಶೋಕದೇವೇಷ್ಟಜಿನದತ್ತಾಸುತೋಽಜನಿ ।**
**ಭವದೇವಸ್ಯ ದುರ್ವೃತ್ತ್ಯಾ ದುರ್ಮುಖಾಖ್ಯಾಪ್ಯಜಾಯತ ॥ ೧೦೬ ॥**

ಅಶೋಕದೇವನ ಪ್ರಿಯಪತ್ನಿಯಾದ ಜಿನದತ್ತೆಗೆ ಸುಕಾಂತನೆಂಬ ಪುತ್ರನು ಜನಿಸಿದನು. ಭವದೇವನ ದುರ್ವ್ಯಾಪಾರದಿಂದ ಅವನಿಗೆ ದುರ್ಮುಖನೆಂಬ ಹೆಸರೂ ಉಂಟಾಯಿತು.

**[೫]ಸ ಏಷ ದ್ರವ್ಯಮಾವರ್ಜ್ಯ ರತಿವೇಗಾಂ ಜಿಘೃಕ್ಷುಕಃ ।**
**ವಾಣಿಜ್ಯಾರ್ಥಂ ಗತಸ್ತಸ್ಮಾನ್ನಾಯಾತ ಇತಿ ಸಾ ತದಾ ॥ ೧೦೭ ॥**

**ಮಾತಾ ಪಿತೃಭ್ಯಾಂ ಪ್ರಾದಾಯಿ ಸುಕಾಂತಾಯ ಸುತೇಜಸೇ ।**
**ದೇಶಾಂತರಾತ್ಸಮಾಗತ್ಯ ತದ್ವಾರ್ತಾಶ್ರವಣಾದ್ಭೃಶಮ್ ॥ ೧೦೮ ॥**

**ದುರ್ಮುಖೇ ಕುಪಿತೇ ಭೀತ್ವಾ ತದಾನೀಂ ತದ್ವಧೂವರಮ್ ।**
**ವ್ರಜಿತ್ವಾ ಶಕ್ತಿಷೇಣಸ್ಯ ಶರಣಂ ಸಮುಪಾಗಮತ್ ॥ ೧೦೯ ॥**

(ಈ ದುರ್ಮುಖನು ತನ್ನ ಸೋದರಮಾವನಾದ ಶ್ರೀದತ್ತನಲ್ಲಿ ರತಿವೇಗೆಯನ್ನು ತನಗೆ ಕೊಡಬೇಕೆಂದು ಕೇಳಿದನು. ಇವನು ನಿರುದ್ಯೋಗಿಯೆಂದು ಶ್ರೀದತ್ತನು ಪುತ್ರಿಯನ್ನು ಕೊಡುವುದಕ್ಕೆ ಸಮ್ಮತಿಸಲಿಲ್ಲ. ದುರ್ಮುಖನು ತಾನು ದ್ವೀಪಾಂತರಕ್ಕೆ ಹೋಗಿ ದ್ರವ್ಯವನ್ನು ಸಂಪಾದಿಸಿಕೊಂಡು ಬರುತ್ತೇನೆಂದೂ ಆ ವರೆಗೆ–ಹನ್ನೆರಡು ವರುಷಗಳವರೆಗೆ ರತಿವೇಗೆಯನ್ನು ಬೇರೆಯಾರಿಗೂ ಕೊಡದೆ ಕಾದಿಡಬೇಕೆಂದೂ ಹೇಳಿದನು) ಈ ದುರ್ಮುಖನು ದ್ರವ್ಯವನ್ನು ಸಂಪಾದಿಸಿ ರತಿವೇಗೆಯನ್ನು ಪರಿಗ್ರಹಿಸಬೇಕೆಂದು ಇಚ್ಛೆಯುಳ್ಳವನಾಗಿ ವ್ಯಾಪಾರಕ್ಕೋಸ್ಕರ ಹೋದನು. ಆ ಹನ್ನೆರಡು ವರ್ಷಗಳ ಅವಧಿಯಲ್ಲಿ ಅವನು ಬರಲಿಲ್ಲವೆಂದು ಆಗ ತಾಯಿ ತಂದೆಗಳು ರತಿವೇಗೆಯನ್ನು ಶ್ರೇಷ್ಠವಾದ ತೇಜಸ್ಸುಳ್ಳವನಾದ ಸುಕಾಂತನಿಗೆ ಕೊಟ್ಟರು. ದುರ್ಮುಖನು ದೇಶಾಂತರದಿಂದ ಬಂದು ಆ ಸುದ್ದಿಯನ್ನು ಕೇಳಿ ಬಹಳವಾಗಿ

೧ ಅಟವೀಶ್ರಿಯಃ ಪಿತ್ರೋಃ. ೨ ಸರೋವರಮಿತ್ಯಪಿಪಾಠಃ. ೩ ಮೃಣಾಲವತ್ಯಾಂ. ೪ ಮೃಣಾಲವತ್ಯಾಂ. ೫ ದುರ್ಮುಖಃ.

ಕೋಪಗೊಂಡವನಾಗಿರಲು ಆಗ ಆ ವಧೂವರರು ಹೆದರಿ ಹೊರಟು ಹೋಗಿ ಶಕ್ತಿಷೇಣನ ಶರಣವನ್ನು ಹೊಂದಿದರು.

**ತದ್ದುರ್ಮುಖೋಽಪಿ [೧]ನಿರ್ಬಂಧಾದನುಗತ್ಯ ವಧೂವರಮ್ ।**
**ಶಕ್ತಿಷೇಣಭಯಾದ್ಬದ್ಧವೈರೋ ನಿವವೃತೇ [೨]ತತಃ ॥ ೧೧೦ ॥**

ದುರ್ಮುಖನೂ ಆ ವಧೂವರರನ್ನು ನಿರ್ಬಂಧದಿಂದ ಹಿಂಬಾಲಿಸಿ ಹೋಗಿ ಶಕ್ತಿಷೇಣನ ಭಯದಿಂದ ವೈರವನ್ನು ಕಟ್ಟಿಕೊಂಡು ಆ ಸರ್ಪಸರೋವಣದಲ್ಲಿದ್ದ ಶಕ್ತಿಷೇಣನ ಶಿಬಿರದಿಂದ ಹಿಂದಿರುಗಿದನು.

**[೩]ತತ್ರೈಕಸ್ಮೈ ವಿಯಚ್ಚಾರಣದ್ವಂದ್ವಾಯ [೪]ಸಮಾಪುಷೇ ।**
**ಶಕ್ತಿಷೇಣೋ ದದಾವನ್ನಂ ಪಾಥೇಯಂ ಪರಜನ್ಮನಃ ॥ ೧೧೧ ॥**

ಆ ಸರ್ಪಸರೋವಣದಲ್ಲಿ ಶಕ್ತಿಷೇಣನು ಅಲ್ಲಿಗೆ ಬಂದ ಈರ್ವರು ಆಕಾಶಚಾರಣಮುನಿಗಳಿಗೆ ಉತ್ತರಜನ್ಮಕ್ಕೆ ಬುತ್ತಿಯಾದ ಅನ್ನವನ್ನು ಕೊಟ್ಟನು. ಉತ್ತರಜನ್ಮದ ಸುಖಕ್ಕೆ ಕಾರಣವಾದ ಆಹಾರದಾನವನ್ನು ಮಾಡಿದನೆಂದು ಭಾವವು.

**ತತ್ರೈವಾಗತ್ಯ ಸಾರ್ಥೇಶೋ ನಿವಿಷ್ಟೋ ಬಹುಭಿಃ ಸಮಮ್ ।**
**ವಿಭುರ್ಮೇರುಕದತ್ತಾಖ್ಯಃ ಶ್ರೇಷ್ಠೀ ಭಾರ್ಯಾಸ್ಯ ಧಾರಿಣೀ ॥ ೧೧೨ ॥**

ವರ್ತಕರ ಸಂಘಾಧಿಪತಿಯೂ ಪ್ರಭುವೂ(ದೊರೆಯೂ) ಮೇರುದತ್ತನೆಂದು ಹೆಸರುಳ್ಳವನೂ ಆದ ಶ್ರೇಷ್ಠಿಯು ಅನೇಕರೊಡನೆ ಬಂದು ಆ ಸರ್ಪ ಸರೋವಣದಲ್ಲೇ ತಂಗಿದನು. ಆ ಮೇರುದತ್ತನ ಪತ್ನಿಯು ಧಾರಿಣಿಯೆಂಬವಳು.

**ಮಂತ್ರಿಣ[೫]ಸ್ತಸ್ಯ ಭೂತಾರ್ಥಃ ಶಕುನಿಃ ಸಬೃಹಸ್ಪತಿಃ ।**
**ಧನ್ವಂತರಿಶ್ಚ ಚತ್ವಾರಃ ಸರ್ವಶಾಸ್ತ್ರವಿಶಾರದಾಃ ॥ ೧೧೩ ॥**

ಆ ಮೇರುದತ್ತನಿಗೆ ಸಕಲಶಾಸ್ತ್ರಗಳಲ್ಲಿ ವಿದ್ವಾಂಸರಾದ ಭೂತಾರ್ಥ ಶಕುನಿ ಬೃಹಸ್ಪತಿ ಧನ್ವಂತರಿಯೆಂದು ನಾಲ್ಕುಮಂದಿ ಮಂತ್ರಿಗಳಿದ್ದರು.

**ಏಭಿಃ [೬]ಪರಿವೃತಃ ಶ್ರೇಷ್ಠೀ ಹೀನಾಂಗಂ ಕಂಚಿದಾಗತಮ್ ।**
**ಸಮೀಕ್ಷ್ಯೈನಂ ಕುತೋ ಹೇತೋರ್ಜಾತೋಽಯಮಿತಿ ತಾನ್ ಜಗೌ ॥**

**ಶಕುನಿಃ ಶಕುನಾದ್ದುಷ್ಟಾದ್ಗ್ರಹಾತ್ಪಾಪಾದ್ಬೃಹಸ್ಪತಿಃ ।**
**ಧನ್ವಂತರಿಸ್ತ್ರಿದೋಷೇಭ್ಯೋ ಜನ್ಮನೀತಿ ಸಮಾದಿಶತ್ ॥ ೧೧೫ ॥**

ಈ ಮಂತ್ರಿಗಳಿಂದ ಆವರಿಸಲ್ಪಟ್ಟವನಾದ ಮೇರುದತ್ತಶ್ರೇಷ್ಠಿಯು ಅಲ್ಲಿಗೆ ಬಂದ ಒಬ್ಬಾನೊಬ್ಬ ಅಂಗಹೀನನನ್ನು ನೋಡಿ " ಇವನು ಯಾವ ಕಾರಣದಿಂದ ಹೀಗೆ ಹುಟ್ಟಿದನು" ಎಂದು ಕೇಳಿದನು. ಮೇರುದತ್ತನನ್ನು ಕುರಿತು ಶಕುನಿಯು "ಜನನ ಕಾಲದಲ್ಲಿ ದುಷ್ಟಶಕುನದಿಂದ" ಎಂದೂ ಬೃಹಸ್ಪತಿಯು "ಪಾಪಗ್ರಹದಿಂದ" ಎಂದೂ ಹೇಳಿದರು. ಧನ್ವಂತರಿಯು "ತ್ರಿದೋಷ–ವಾತಪಿತ್ತಶ್ಲೇಷ್ಮಗಳಿಂದ" ಎಂದು ಹೇಳಿದನು. ಈ ಕಾರಣಗಳಿಂದ ಅಂಗಹೀನನಾಗಿ ಹುಟ್ಟಿರುತ್ತಾನೆಂದು ಹೇಳಿದರೆಂದರ್ಥವು.

**ಭೂತಾರ್ಥಸ್ತ್ವಸ್ತು ತತ್ಸರ್ವಂ ಕರ್ಮ ಹಿಂಸಾದ್ಯುಪಾರ್ಜಿತಮ್ ।**
**ಪ್ರಧಾನಕಾರಣಂ [೭]ತೇನ ಹೀನಾಂಗ ಇತಿ ಸೂಕ್ತವಾನ್ ॥ ೧೧೬ ॥**

"ಅದೆಲ್ಲವೂ ಇರಲಿ. ಹಿಂಸೆಯೇ ಮೊದಲಾದ ಪಾಪಕಾರ್ಯಗಳಿಂದ ಸಂಪಾದಿಸಿದ ಕರ್ಮವು ಇದರ ಮುಖ್ಯಕಾರಣ. ಆ ಕಾರಣದಿಂದ ಅಂಗಹೀನನಾಗಿ ಹುಟ್ಟಿರುತ್ತಾನೆ" ಈ ಪ್ರಕಾರವಾಗಿ ಭೂತಾರ್ಥನಾದರೋ ಸರಿಯಾಗಿ ಹೇಳಿದನು.

**[೧]ಶಕ್ತಿಷೇಣಮಹೀಪಾಲಪ್ರತಿಪನ್ನತುಜಃ [೨]ಪಿತಾ ।**
**ಸತ್ಯದೇವಸ್ಯ ದೃಷ್ಟ್ವಾ [೩]ಸ್ಮಿಂಸ್ತ[೪]ಮನ್ವಿಷ್ಯನ್ಯದೃಚ್ಛಯಾ ॥ ೧೧೭ ॥**

**ತದಾ ಕೃತ್ವಾ ಮಹದ್ದುಃಖಂ ಸಭ್ಯೈರಾಕರ್ಣ್ಯತಾಮಿದಮ್ ।**
**ಚ್ಯುತಂ ಪಯೋಽತಿಪಾಕೇನ ಭಾಜನಾತ್ತಂಡುಲಾನಪಿ ॥ ೧೧೮ ॥**

**ಭಕ್ಷ್ಯಮಾಣಾನ್ಕಪೋತಾದ್ಯೈಃ ಪಶ್ಯಂಸ್ತೂಷ್ಣೀಮಯಂ ಸ್ಥಿತಃ ।**
**ಕ್ರೋಧಾ[೫]ನ್ಮಾತುಃ ಕನೀಯಸ್ಯಾ ಭರ್ತ್ಸನಾದಾಗತೋಽಸಹಃ ॥ ೧೧೯ ॥**

ಶಕ್ತಿಷೇಣರಾಜನಿಂದ ಸ್ವೀಕರಿಸಲ್ಪಟ್ಟ ಪುತ್ರನಾದ ಸತ್ಯದೇವನ ತಂದೆಯಾದ ಸತ್ಯಕನು ಸತ್ಯದೇವನನ್ನು ಹುಡುಕುವವನಾಗಿ ಅಕಸ್ಮಾತ್ ಈ ಸರ್ಪಸರೋವಣದಲ್ಲಿ ಅವನನ್ನು ನೋಡಿ ಆಗ ಬಹಳದುಃಖವನ್ನು ಮಾಡಿ "ಸಭಿಕರು ಈ ಮಾತು ಕೇಳಲಿ. ಹೆಚ್ಚಾದ ಪಾಕದಿಂದ ಪಾತ್ರದಿಂದ ಜಾರಿದ(ಉಕ್ಕಿದ) ಹಾಲನ್ನೂ ಹಾಲವಾಣವೇ ಮೊದಲಾದುವುಗಳಿಂದ ತಿನ್ನಲ್ಪಡುತ್ತಿರುವ ಅಕ್ಕಿಗಳನ್ನೂ ನೋಡುವವನಾಗಿ ಇವನು(ಸತ್ಯದೇವನು) ಸುಮ್ಮನಿದ್ದನು. ಇವನ ತಾಯಿಯ ತಂಗಿಯ ಬೆದರಿಸು ವಿಕೆಯಿಂದುಂಟಾದ ಕೋಪದಿಂದ ಸಹಿಸದಿರುವವನಾಗಿ ಬಂದಿರುತ್ತಾನೆ.

**ಅಧಸ್ತಾದ್ವಕ್ತ್ರವಿವರಂ ಘ್ರಾಣಸ್ಯೇತ್ಯೇತದಪ್ಯಯಮ್ ।**
**ಕ್ಷಮತೇ ನೇತಿ [೬]ಸರ್ವೇಷಾಂ ತದಕರ್ಮಣ್ಯತಾಂ ಬ್ರುವನ್ ॥ ೧೨೦ ॥**

**ಗಂತುಂ ಸಹಾತ್ಮನಾ ತಸ್ಯಾನಭಿಲಾಷಾದ್ವಿಷಣ್ಣವಾನ್ ।**
**ಪರಸ್ಮಿನ್ನಪಿ ಭೂಯಾಸಂ ಭವೇ ತೇ ಸ್ನೇಹಗೋಚರಃ ॥ ೧೨೧ ॥**

**ಇತಿ ಕೃತ್ವಾ ನಿದಾನಂ ಸ ದ್ರವ್ಯಸಂಯಮಮಾಶ್ರಿತಃ ।**
**ಪ್ರಪೇದೇ [೭]ಲೋಕಪಾಲತ್ವಂ ತದ್ಗತಸ್ನೇಹಮೋಹಿತಃ ॥ ೧೨೨ ॥**

ಮೂಗಿನ ಕೆಳಗೆ ಮುಖದ ರಂಧ್ರವೆಂದರೆ ಇದನ್ನೂ ಇವನು ಸಹಿಸುವುದಿಲ್ಲ" ಎಂದು ಸಭಾಜನರಿಗೆಲ್ಲರಿಗೂ ಆ ಸತ್ಯದೇವನ ಕಾರ್ಯದಲ್ಲಿ ಅಸಮನತ್ವವನ್ನು (ಸೋಮಾರಿತನವನ್ನು) ಹೇಳುವವನಾಗಿ ತನ್ನೊಡನೆ ಹೋಗುವುದಕ್ಕೆ ಸತ್ಯ ದೇವನಿಗೆ ಸಮ್ಮತಿಯಿಲ್ಲದಿದ್ದುದರಿಂದ ಖಿನ್ನನೂ "ಮುಂದಿನ ಭವದಲ್ಲಾದರೂ ನಿನ್ನ ಪ್ರೀತಿಗೆ ವಿಷಯನಾಗಿ ಆಗುವೆನು" ಎಂದು ನಿದಾನ–ಅಭಿಲಾಷೆಯನ್ನು ಮಾಡಿ ದ್ರವ್ಯಸಂಯಮವನ್ನು ಆಶ್ರಯಿಸಿದವನೂ(ಭಾವದಿಂದಲ್ಲ, ಬಾಹ್ಯ ವೇಷದಿಂದ ಮುನಿಯೂ) ಆದ ಆ ಸತ್ಯಕನು ಆ ಸತ್ಯದೇವನಲ್ಲಿರುವ ಪ್ರೀತಿಯಿಂದ ಮೋಹಿತನಾಗಿ ಸತ್ತು ಲೋಕಪಾಲನೆಂಬ ಹೆಸರನ್ನು ಹೊಂದಿದನು. ವ್ಯಂತರ ದೇವನಾಗಿ ಹುಟ್ಟಿದನೆಂದು ಭಾವವು.

**ಕದಾಚಿಚ್ಛುಕ್ಲಪಕ್ಷಸ್ಯ ದಿನಾದೌ ಭಾರ್ಯಯಾ ಸಹ ।**
**ಕೃತೋಪವಾಸಯಾ ಶಕ್ತಿಷೇಣೋ ಭಕ್ತಿಪುರಸ್ಸರಮ್ ॥ ೧೨೩ ॥**

**ಮುನಿಭ್ಯಾಂ ದತ್ತದಾನೇನ ಪಂಚಾಶ್ಚರ್ಯಾಣ್ಯವಾಪ್ತವಾನ್ ।**
**ದೃಷ್ಟ್ವಾ ತಚ್ಛ್ರೇಷ್ಠಿಧಾರಿಣ್ಯಾವಾವಯೋರನ್ಯಜನ್ಮನಿ ॥ ೧೨೪ ॥**

**[೮]ಏತಾವಪತ್ಯೇ ಭೂಯಾಸ್ತಾಂ ನಿದಾನಂ [೯]ಕುರುತಾಮಿತಿ ।**
**ಮಂತ್ರಿಣ[೧೦]ಸ್ತಸ್ಯ ಚತ್ವಾರೋಽಪ್ಯಸ್ತಸರ್ವಪರಿಗ್ರಹಾಃ ॥ ೧೨೫ ॥**

**ತಪೋ ವಿಧಾಯ ಕಾಲಾಂತೇ ಸಮಾಪನ್ [೧೧]ಲೋಕಪಾಲತಾಮ್ ।**
**ವಧೂವರಂ ಚ ದಾನಾನುಮೋದಪುಣ್ಯಮವಾಪ್ತವತ್ ॥ ೧೨೬ ॥**

ಒಂದಾನೊಂದು ಕಾಲದಲ್ಲಿ ಶುಕ್ಲಪಕ್ಷದ ಮೊದಲನೆಯ ದಿನದಲ್ಲಿ–ಪಾಡ್ಯದಲ್ಲಿ ಉಪವಾಸವನ್ನು ಮಾಡಿದವಳಾದ ಪತ್ನಿಯೊಡನೆ ಶಕ್ತಿಷೇಣನು ಈರ್ವರು

೧ ಅವಿಚ್ಛೇದೇನ. ೨ ಸರ್ಪಸರೋವಣಸ್ಥಿತಶಕ್ತಿಷೇಣಶಿಬಿರಾತ್. ೩ ಸರ್ಪಸರೋವಣೇ. ೪ ಆಗತಾಯ, ಸಮೀಯುಷೇ ಇತ್ಯಪಿಪಾಠಃ. ೫ ಮೇರುದತ್ತಸ್ಯ. ೬ ಪರಿಷ್ಕೃತ ಇತ್ಯಪಿಪಾಠಃ. ೭ ಕರ್ಮಕಾರಣೇನ.

೧ ಶಕ್ತಿಷೇಣನಾಮಸಾಮಂತೇನಾಯಂಮಮಪುತ್ರ ಇತಿಸ್ವೀಕೃತಪುತ್ರಸ್ಯ. ೨ ಸತ್ಯಕನಾಮಜನಕಃ. ೩ ಸರ್ಪಸರೋವಣೇ. ೪ ಗವೇಷಯನ್, ಅನ್ವಿಚ್ಛನ್ನಿತ್ಯಪಿಪಾಠಃ. ೫ ಸತ್ಯದೇವಸ್ಯಜನನ್ಯಾಃ. ೬ ಸಭಾಜನಾನಾಂ. ೭ ಲೋಕಪಾಲನಾಮ. ೮ ಅಟವೀಶ್ರೀಶಕ್ತಿಷೇಣೌ. ೯ ಅಕುರುತಾಂ. ೧೦ ಮೇರುದತ್ತಸ್ಯ. ೧೧ ಲೋಕಪಾಲಸುರತ್ವಂ.

ಮುನಿಗಳಿಗೆ ಭಕ್ತಿಪೂರ್ವಕವಾಗಿ ಕೊಟ್ಟ ದಾನದಿಂದ ಪಂಚಾಶ್ಚರ್ಯಗಳನ್ನು ಪಡೆದನು. ಅದನ್ನು ಮೇರುದತ್ತಶ್ರೇಷ್ಠಿಯೂ ಆತನ ಪತ್ನಿಯಾದ ಧಾರಿಣಿಯೂ ನೋಡಿ ''ನಮಗೆ ಮುಂದಿನ ಜನ್ಮದಲ್ಲಿ ಇವರು–ಅಟವೀಶ್ರೀಶಕ್ತಿಷೇಣರು ಮಕ್ಕಳಾಗಲಿ'' ಎಂದು ನಿದಾನಶಲ್ಯವನ್ನು ಮಾಡಿದರು. ಆ ಮೇರುದತ್ತನ ನಾಲ್ಕು ಜನ ಮಂತ್ರಿಗಳೂ ಸಮಸ್ತಪರಿಗ್ರಹಗಳನ್ನು ತ್ಯಜಿಸಿದವರಾಗಿ ತಪಸ್ಸನ್ನು ಮಾಡಿ ಸತ್ತು ಲೋಕಪಾಲರೆಂಬ ದೇವತೆಗಳ ಭಾವವನ್ನು ಹೊಂದಿದರು. ಲೋಕಪಾಲರೆಂಬ ವ್ಯಂತರದೇವತೆಗಳಾದರೆಂದು ಭಾವವು. ವಧೂವರರೂ–ಅಟವೀಶ್ರೀಶಕ್ತಿಷೇಣರೂ ಆಹಾರದಾನವನ್ನು ಅನುಮೋದಿಸಿದ ಪುಣ್ಯವನ್ನು ಪಡೆದರು.

**ತದಾಕರ್ಣ್ಯ [1]ಮಹೀಶಸ್ಯ ದೇವೀ ವಸುಮತೀ ತದಾ ।**
**ಸ್ವಜನ್ಮಾಂತರಸಂಬೋಧಮೂರ್ಛಾನಂತರಬೋಧಿತಾ ॥ ೧೨೭ ॥**

**ಅಹಂ ಪೂರ್ವೋಕ್ತದೇವಶ್ರೀಸ್ತ್ವತ್ಪ್ರಸಾದಾದಿಮಾಂ ಶ್ರಿಯಮ್ ।**
**ಪ್ರಾಪ್ತಾ ತದಾತನೋ ರಾಜಾ ವದ ಕ್ವಾದ್ಯ ಪ್ರವರ್ತತೇ ॥ ೧೨೮ ॥**

**ಇತಿ ತಸ್ಯಾಃ ಪರಿಪ್ರಶ್ನೇ ಸ ಪ್ರಜಾಪಾಲಭೂಪತಿಃ ।**
**ಲೋಕಪಾಲೋಯಮಿತ್ಯುಕ್ತೇ ಪ್ರಿಯದತ್ತಾ ಸ್ವಪೂರ್ವಜಮ್ ॥ ೧೨೯ ॥**

**ಜನ್ಮಾವಬುಧ್ಯ ವಂದಿತ್ವಾ ಸಾಟವೀಶ್ರೀರಿಯಂ ತ್ವಹಮ್ ।**
**ಶಕ್ತಿಷೇಣೋ ಮಮ ಪ್ರೇಯಾನಸೌ ಕ್ವಾದ್ಯ ಪ್ರವರ್ತತೇ ॥ ೧೩೦ ॥**

**ಇತಿ ಪೃಷ್ಟವತೀಶಕ್ತಿಷೇಣ[2]ಸ್ತೇಯಂ ಮನೋರಮಃ ।**
**ಕುಬೇರದಯಿತಃ ಸತ್ಯದೇವೋಭೂತ್ತನುಜಸ್ತವ ॥ ೧೩೧ ॥**

ಆಗ ಪ್ರಜಾಪಾಲಮಹಾರಾಜನ ಪುತ್ರನಾದ ಲೋಕಪಾಲಮಹಾರಾಜನ ಪತ್ನಿಯಾದ ವಸುಮತೀದೇವಿಯು(ಕುಬೇರಮಿತ್ರನ ಪುತ್ರಿಯು) ಆ ಮಾತನ್ನು ಕೇಳಿ ತನ್ನಭವಾಂತರ–ಪೂರ್ವಭವವ ಪರಿಜ್ಞಾನದಿಂದ ಮೂರ್ಛೆಯನ್ನು ಹೊಂದಿ ಅನಂತರದಲ್ಲಿ ಎಚ್ಚರಿಸಲ್ಪಟ್ಟವಳಾಗಿ ''ನಾನು ಹಿಂದೆ ಹೇಳಲ್ಪಟ್ಟ– ಶೋಭಾ ನಗರಾಧಿಪತಿಯಾದ ಪ್ರಜಾಪಾಲರಾಜನ ಪತ್ನಿಯಾದ ದೇವಶ್ರೀಯು. ನಿನ್ನ (ಅಮಿತಮತ್ಯಾರ್ಯಿಕೆಯ) ಅನುಗ್ರಹದಿಂದ ಈ ಸಂಪತ್ತಿಯನ್ನು ಪಡೆದೆನು. ಆಗ ಇದ್ದ ಶೋಭಾನಗರದ ಪ್ರಜಾಪಾಲರಾಜನು ಈಗ ಎಲ್ಲಿರುತ್ತಾನೆ ? ಹೇಳು.'' ಈ ಪ್ರಕಾರವಾಗಿ ಆ ವಸುಮತಿಯ ಪ್ರಶ್ನೆಯುಂಟಾಗುತ್ತಿರಲು ''ಆ ಪ್ರಜಾಪಾಲರಾಜನೇ ಈ ಮುಂದಿರುವವನಾದ ಲೋಕಪಾಲರಾಜನು'' ಎಂದು ಅಮಿತಮತ್ಯಾರ್ಯಿಕೆಯು ಹೇಳಿದಳು. ಆಗ ಪ್ರಿಯದತ್ತೆಯು ತನ್ನ ಪೂರ್ವಜನ್ಮವನ್ನು ತಿಳಿದು ವಂದಿಸಿ ''ಅಟವೀಶ್ರೀಯು ಈ ನಾನೇ ಆಗಿರುತ್ತೇನೆ. ನನ್ನ ಪ್ರಿಯಪತಿಯಾಗಿದ್ದ ಈ ಶಕ್ತಿಷೇಣನು ಈಗ ಎಲ್ಲಿರುತ್ತಾನೆ ? '' ಎಂದು ಅಮಿತಮತ್ಯಾರ್ಜಿಕೆಯನ್ನು ಕೇಳಿದಳು. ''ನಿನ್ನ ಮುಂದಿರುವ ಮನೋಹರನಾದವನೇ– ಕುಬೇರಕಾಂತನೇ ಆ ಶಕ್ತಿಷೇಣನು. ಸ್ವೀಕೃತಪುತ್ರನಾಗಿದ್ದ ಆ ಸತ್ಯದೇವನು ಕುಬೇರದಯಿತ(ಕುಬೇರ ದತ್ತ)ನೆಂಬ ನಿನ್ನ ಪುತ್ರನಾದನು.

**ದೇವಭೂಯಂ ಗತಾಃ ಶ್ರೇಷ್ಠಿಸಚಿವಾ[3]ಸ್ತ್ವತ್ಪತೇರ್ಭೃಶಮ್ ।**
**ಆರಭ್ಯ ಜನ್ಮನಃ ಸ್ನೇಹಾತ್ಪರಿಚರ್ಯಾಂ ಪ್ರಕುರ್ವತೇ ॥ ೧೩೨ ॥**

ದೇವತ್ವವನ್ನು ಹೊಂದಿದವರಾದ ಮೇರುದತ್ತಶ್ರೇಷ್ಠಿಯ ನಾಲ್ಕು ಜನ ಮಂತ್ರಿಗಳು ನಿನ್ನ ಪತಿಯಾದ ಕುಬೇರಕಾಂತನ ಜನನಕಾಲದ ಮೊದಲುಗೊಂಡು (ಮೊದಲು ಹೇಳಿದ ಕಾಮಧೇನು ಕಲ್ಪವೃಕ್ಷ ಮೊದಲಾದ ರೂಪದಿಂದ) ಅಧಿಕವಾಗಿ ಸ್ನೇಹದಿಂದ ಸೇವೆಯನ್ನು ಮಾಡುತ್ತಾರೆ.

೧ ಪ್ರಜಾಪಾಲಪುತ್ರಲೋಕಪಾಲಸ್ಯ. ೨ ಪ್ರಿಯದತ್ತಾಯಾಸ್ತವ. ೩ ತವಭರ್ತ್ತುಃ ಕುಬೇರಕಾಂತಸ್ಯ.

**ಕುಬೇರದಯಿತಸ್ಯಾಪಿ ಪಿತಾ [1]ಪ್ರಾಚ್ಯಃ ಸ ಸತ್ಯಕಃ ।**
**ಪಾತಾ ಗತ್ಯಂತರಸ್ಥಾಶ್ಚ ಪುಣ್ಯಾತ್ಪ್ರೀಣ್ಯಂತಿ ದೇಹಿನಃ ॥ ೧೩೩ ॥**

ಕುಬೇರಕಾಂತನ ಪೂರ್ವಭವಸಂಬಂಧಿಯೂ ತಂದೆಯೂ ಆದ ಆ ಸತ್ಯಕನು ಈಗ ರಕ್ಷಕನಾಗಿರುತ್ತಾನೆ. ಬೇರೆಯಾದ ಗತಿ–ದೇವಗತಿಯಲ್ಲಿರುವ ಪ್ರಾಣಿಗಳೂ ಪುಣ್ಯದಿಂದ ಪ್ರೀತಿಸುತ್ತಾರೆ.

**[2]ಭವದೇವೇನ ನಿರ್ದಗ್ಧಂ [3]ದ್ವಿಜಾವೇತೌ ವಧೂವರಮ್ ।**
**ಸಾರ್ಥೇಶೋ ಧಾರಿಣೀ ಚೇಹ[4]ಪತ್ಯುಸ್ತೇ ಪಿತಾರಾ[5]ವಿಮೌ ॥ ೧೩೪ ॥**

ಶಕ್ತಿಷೇಣನ ಕಾಲಾನಂತರದಲ್ಲಿ ಭವದೇವನಿಂದ ಸುಡಲ್ಪಟ್ಟ ಆ ವಧೂವರರೇ (ರತಿವೇಗ ಸುಕಾಂತರೇ) ಈ ಹಾಲವಾಣದ ಹಕ್ಕಿಗಳು. ಮೇರುದತ್ತನೂ ಧಾರಿಣಿಯೂ ಈ ನಗರದಲ್ಲಿ ನಿನ್ನ ಪತಿಯಾಗಿರುವ ಕುಬೇರಕಾಂತನ ಈ ತಾಯಿತಂದೆಗಳಾಗಿರುತ್ತಾರೆ( ಧನವತೀ ಕುಬೇರಮಿತ್ರರಾಗಿರುತ್ತಾರೆ).''

**ಇತ್ಯುಕ್ತ್ವಾ [6]ಸೇದಮಪ್ಯಾಹ ಖಗಾಚಲಸಮೀಪಗೇ ।**
**ವಸಂತೌ ಚಾರಣಾವದ್ರೌ ಮುನೀ ಮಲಯಕಾಂಚನೇ ॥ ೧೩೫ ॥**

**ಪೂರ್ವಂ [7]ವನನಿವೇಶೇ ತೌ ಭಿಕ್ಷಾರ್ಥಂ ಸಮುಪಾಗತೌ ।**
**[8]ತವ ಪುತ್ರಸಮುತ್ಪತ್ತಿಮುಪದಿಶ್ಯ ಗತೌ ತತಃ ॥ ೧೩೬ ॥**

ಈ ಪ್ರಕಾರವಾಗಿ ಹೇಳಿ ಆ ಅಮಿತಮತ್ಯಾರ್ಯಿಕೆಯು ಈ ಮುಂದೆ ಹೇಳುವ ವಿಷಯವನ್ನೂ ಹೇಳಿದಳು. ''ವಿಜಯಾರ್ಧಪರ್ವತದ ಸಮೀಪದಲ್ಲಿರುವ ಮಲಯಕಾಂಚನವೆಂಬ ಗಿರಿಯಲ್ಲಿ ವಾಸಮಾಡುವವರಾದ ಚಾರಣಮುನಿಗಳು ಮೊದಲು ಸರ್ಪಸರೋವಣದ ಪ್ರದೇಶದಲ್ಲಿ ಭಿಕ್ಷೆಗೋಸ್ಕರ ಬಂದ ಆ ಮುನಿಗಳು ಅಲ್ಲಿ ನಿನ್ನ(ಪ್ರಿಯದತ್ತೆಯ) ಪುತ್ರೋತ್ಪತ್ತಿಯನ್ನು ಉಪದೇಶಿಸಿ ಹೊರಟು ಹೋದರು.

**ಅನ್ಯೇದ್ಯುರ್ವಸುಧಾರಾದಿಹೇತುಭೂತೌ ಕಪೋತಕೌ ।**
**ದೃಷ್ಟ್ವಾ ಸಕರುಣೌ ಭಿಕ್ಷಾಮನಾದಾಯ ವನಂ ಗತೌ ॥ ೧೩೭ ॥**

ಮತ್ತೊಂದು ದಿವಸ ವಸುಧಾರೆಯೇ ಮೊದಲಾದುವುಗಳಿಗೆ ಕಾರಣಗಳಾದ ಹಾಲವಾಣದ ಹಕ್ಕಿಗಳನ್ನು ನೋಡಿ ದಯೆಯುಳ್ಳವರಾಗಿ ಭಿಕ್ಷೆಯನ್ನು ತೆಗೆದುಕೊಳ್ಳದೆ ವನಕ್ಕೆ ಹೋದರು.

**[9]ಗುರ್ವೋರ್ಗುರುತ್ವಂ [10]ಯುವಯೋರುಪಯಾತೌ [11]ತಯೋರಿದಮ್ ।**
**ಉಪದೇಶಾತ್ಸಮಾಕರ್ಣ್ಯ ಸರ್ವಮುಕ್ತಂ ಯಥಾಶ್ರುತಮ್ ॥ ೧೩೮ ॥**

ನಿಮ್ಮೀರ್ವರ(ಕುಬೇರಕಾಂತ ಪ್ರಿಯದತ್ತೆಯರ) ಈರ್ವರು ಗುರುಗಳಲ್ಲಿ (ಕುಬೇರಮಿತ್ರ ಸಮುದ್ರದತ್ತರಲ್ಲಿ) ಯಾರು ಈರ್ವರು ಗುರುಭಾವವನ್ನು ಹೊಂದಿದರೋ ಅಂತಹ ಚಾರಣಮುನಿಗಳ ಉಪದೇಶದಿಂದ ಈ ಎಲ್ಲಾ ವಿಷಯವನ್ನು ಕೇಳಿ ಅದರಂತೆಯೇ ಹೇಳಲ್ಪಟ್ಟಿತು.''

**ಇತಿ [12]ತೇಮಿತಮತ್ಯುಕ್ತಕಥಾವಗಮತತ್ಪರಾಃ ।**
**ಸ್ವರೂಪಂ ಸಂಸೃತೇಃ ಸಮ್ಯಕ್ ಮುಹುರ್ಮುಹುರಭಾವಯನ್ ॥**

ಈ ಪ್ರಕಾರವಾಗಿ ಅಮಿತಮತ್ಯಾರ್ಯಿಕೆಯಿಂದ ಹೇಳಿದ ಕಥೆಯನ್ನು ತಿಳಿಯುವುದರಲ್ಲಿ ಆಸಕ್ತರಾದ ಆ ಲೋಕಪಾಲನೇ ಮೊದಲಾದವರು ಸಂಸಾರದ ಸ್ವರೂಪವನ್ನು ಚೆನ್ನಾಗಿ ಬಾರಿಬಾರಿಗೆ ಭಾವಿಸಿದರು.

೧ ಪೂರ್ವಭವಸಂಬಂಧೀ. ೨ ರತಿವರ್ಮಕನಕಶ್ರಿಯೋಸ್ಸೂನುನಾಭವದೇವೇನಕ್ರೋಧಾತ್ ಶಕ್ತಿಷೇಣ ಕಾಲಾಂತರೇಣನಿರ್ದಗ್ಧಂ. ೩ ಕಪೋತಪಕ್ಷಿಣೌ. ೪ ಕುಬೇರಕಾಂತಸ್ಯ. ೫ ಧನವತೀಕುಬೇರಮಿತ್ರೌ. ೬ ಅಮಿತಮತ್ಯಾರ್ಯಿಕಾ. ೭ ಸರ್ಪಸರೋವಣನಿವೇಶೇ. ೮ ಪ್ರಿಯದತ್ತಾಯಸ್ತೇ. ೯ ಕುಬೇರ ಮಿತ್ರಸಮುದ್ರದತ್ತಯೋಃ. ೧೦ ಕುಬೇರಕಾಂತಪ್ರಿಯದತ್ತಯೋಃ. ೧೧ ಚಾರಣಯೋಃ. ೧೨ ಲೋಕಪಾಲಾದಯಃ.

**ಏವಂ ಪ್ರಯಾತಿ ಕಾಲೇಸೌ ಪ್ರಿಯದತ್ತಾ ಪ್ರಸಂಗತಃ ।**
**ಯಶಸ್ವತೀಗುಣವತ್ಯಾ ಯುವಾಭ್ಯಾಂ ಕೇನ ಹೇತುನಾ ॥ ೧೪೦ ॥**

**ಇಯಂ ದೀಕ್ಷಾ ಗೃಹೀತೇತಿ ಪಪ್ರಚ್ಛೋತ್ಪನ್ನಕೌತುಕಾ ।**
**[1]ತೇ ಚ ತತ್ಕಾರಣಂ ಸ್ಪಷ್ಟಂ ಯಥಾವೃತ್ತಮವೋಚತಾಮ್ ॥ ೧೪೧ ॥**

ಹೀಗೆ ಕಾಲವು ಕಳೆಯುತ್ತಿರಲು ಆ ಪ್ರಿಯದತ್ತೆಯು ಸಂದರ್ಭಾನುಸಾರದಿಂದ ಯಶಸ್ವತೀ ಗುಣವತಿಯರನ್ನು ಕುರಿತು "ನೀವು ಯಾವ ಕಾರಣದಿಂದ ಈ ದೀಕ್ಷೆಯನ್ನು ಸ್ವೀಕರಿಸಿದಿರಿ ? " ಎಂದು ಕುತೂಹಲವುಳ್ಳವಳಾಗಿ ಕೇಳಿದಳು. ಅವರೀರ್ವರೂ ಅದರ ಕಾರಣವನ್ನು ಸ್ಪಷ್ಟವಾಗಿ ಹೇಗೆ ನಡೆಯಿತೋ ಹಾಗೆ (ಸೋದರಮಾವನಾದ ಕುಬೇರದತ್ತನ ವಿವಿಧಭಕ್ಷ್ಯಗಳನ್ನು ತುಂಬಿದ ಪಾತ್ರಗಳ ಮತ್ತು ರತ್ನಗಳನ್ನು ತುಂಬಿದ ಪಾತ್ರದ ಪರೀಕ್ಷೆಯಿಂದುಂಟಾದ ಲಜ್ಜೆಯಿಂದ ದೀಕ್ಷಿತರಾದ ವಿಷಯವನ್ನು) ಹೇಳಿದರು.

**ತತೋ ಧನವತೀ ದೀಕ್ಷಾಂ ಗಣಿನ್ಯಾಃ ಸನ್ನಿಧೌ ಯಯೌ ।**
**ಮಾತಾ ಕುಬೇರಸೇನಾ ಚ ತ[2]ಯೋರಾರ್ಯಿಕಯೋರ್ದ್ವಯೋಃ ॥**

ಬಳಿಕ ಧನವತಿಯೂ(ಕುಬೇರಮಿತ್ರನ ಪತ್ನಿಯೂ) ಆ ಈರ್ವರು ಅಮಿತಮತಿ ಅನಂತಮತಿಯರೆಂಬ ಆರ್ಜಿಕೆಯರ ತಾಯಿಯಾದ ಕುಬೇರಸೇನೆಯೂ ಅಮಿತ ಮತ್ಯಾರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ಪಡೆದರು.

**ತಾವನ್ನೇದ್ಯುಃ ಕಪೋತೌ ಚ [3]ಗ್ರಾಮಾಂತರಮುಪಾಶ್ರಿತೌ ।**
**ತಂಡುಲಾದ್ಯುಪಭೋಗಾಯ ಸಮವರ್ತಿಪ್ರಚೋದಿತೌ ॥ ೧೪೩ ॥**

**ಭವದೇವಚರೇಣಾನುಬದ್ಧವೈರೇಣ ಪಾಪಿನಾ ।**
**ದೃಷ್ಟಮಾತ್ರೋತ್ಥಕೋಪೇನ ಮಾರಿತೌ [4]ಪುರುದಂಶಸಾ ॥ ೧೪೪ ॥**

ಮತ್ತೊಂದು ದಿವಸ ಆ ಪಾರಿವಾಳಗಳು ಅಕ್ಕಿಯೇ ಮೊದಲಾದುವುಗಳನ್ನು ತಿನ್ನುವುದಕ್ಕೋಸ್ಕರ ಜಂಬೂಗ್ರಾಮವನ್ನು ಹೊಂದಿದುವುಗಳೂ ಯಮನಿಂದ ಪ್ರೇರಿತಗಳೂ ಆಗಿ ಪೂರ್ವಭವದಲ್ಲಿ ಭವದೇವನಾಗಿದ್ದುದೂ ವೈರಸಂಬಂಧ ವುಳ್ಳುದೂ ಪಾಪಿಯೂ ನೋಡಿದೊಡನೆಯೇ ಉತ್ಪನ್ನವಾದ ಕೋಪವುಳ್ಳುದೂ (ಜಂಬೂಗ್ರಾಮದ ಬಾಳೆಯ ತೋಟದಲ್ಲಿದ್ದುದೂ) ಆದ ದೊಡ್ಡ ಬೆಕ್ಕಿನಿಂದ ಕೊಲ್ಲಲ್ಪಟ್ಟುವು.

**ತದ್ರಾಷ್ಟ್ರವಿಜಯಾರ್ಧಸ್ಯ ದಕ್ಷಿಣಶ್ರೇಣಿಮಾಶ್ರಿತೇ ।**
**ಗಾಂಧಾರವಿಷಯೋಶೀರವತ್ಯಾಖ್ಯನಗರೇಧಿಪಃ ॥ ೧೪೫ ॥**

**ಆದಿತ್ಯಗತಿರಸ್ಯಾಸೀನ್ಮಹಾದೇವೀ ಶಶಿಪ್ರಭಾ ।**
**ತಯೋರ್ಹಿರಣ್ಯವರ್ಮಾಖ್ಯಃ ಸುತೋ ರತಿವರೋಭವತ್ ॥ ೧೪೬ ॥**

ಆ ಪುಷ್ಕಲಾವತೀದೇಶದಲ್ಲಿರುವ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯನ್ನು ಹೊಂದಿರುವ ಗಾಂಧಾರದೇಶದ ಉಶೀರವತಿಯೆಂಬ ನಗರದಲ್ಲಿ ದೊರೆಯು ಆದಿತ್ಯಗತಿಯೆಂಬವನು. ಇವನಿಗೆ ಶಶಿಪ್ರಭೆಯು ಮಹಾದೇವಿಯಾಗಿದ್ದಳು. ಆ ದಂಪತಿಗಳಿಗೆ ರತಿವರನಾಗಿದ್ದ ಪಾರಿವಾಳವು ಹಿರಣ್ಯವರ್ಮನೆಂಬ ಪುತ್ರನಾಗಿ ಆಯಿತು.

**ತಸ್ಮಿನ್ನೇವೋತ್ತರಶ್ರೇಣ್ಯಾಂ ಗೌರೀವಿಷಯವಿಶ್ರುತೇ ।**
**ಪುರೇ ಭೋಗಪುರೇ ವಾಯುರಥೋ ವಿದ್ಯಾಧರಾಧಿಪಃ ॥ ೧೪೭ ॥**

ಅದೇ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿ ಗೌರೀದೇಶದಲ್ಲಿ ಪ್ರಸಿದ್ಧ ವಾದ ಭೋಗಪುರವೆಂಬ ನಗರದಲ್ಲಿ ವಾಯುರಥನೆಂಬ ವಿದ್ಯಾಧರ ರಾಜನಿದ್ದನು.

**ತಸ್ಯ ಸ್ವಯಂಪ್ರಭಾದೇವ್ಯಾಂ ರತಿಷೇಣಾ ಪ್ರಭಾವತೀ ।**
**ಬಭೂವ ಜೈನಧರ್ಮಾಂಶೋಹ್ಯಭ್ಯುದ್ಧರತಿ ದೇಹಿನಃ ॥ ೧೪೮ ॥**

ಅವನಿಗೆ ಸ್ವಯಂಪ್ರಭಾದೇವಿಯು ಪಟ್ಟಮಹಿಷಿಯಾಗಿದ್ದಳು. ಅವರಿಗೆ ರತಿ ಷೇಣೆಯಾಗಿದ್ದ ಪಾರಿವಾಳವು ಪ್ರಭಾವತಿಯೆಂಬ ಪುತ್ರಿಯಾಗಿ ಆಯಿತು. ಜೈನ ಧರ್ಮದ ಅಂಶ–ಭಾಗವೂ ಪ್ರಾಣಿಗಳನ್ನು ಮೇಲಕ್ಕೆ ಎತ್ತುವುದಲ್ಲವೆ ?

**ಮಾತಾ ಪಿತಾ ಚ ಯಾ ಯಶ್ಚ ಸುಕಾಂತರತಿವೇಗಯೋಃ ।**
**ಜನ್ಮನ್ಯಸ್ಮಿನ್ನಿಲಾ[1]ಭೂತಾಂ ಚಿತ್ರಾ [2]ತಾವೇವ ಸಂಸೃತಿಃ ॥ ೧೪೯ ॥**

ಸುಕಾಂತ ರತಿವೇಗೆಯರ ಜನ್ಮದಲ್ಲಿ ಯಾವಳು ತಾಯಿಯೋ ಯಾವನು ತಂದೆಯೋ ಅವರೇ ಇನ್ನೊಂದು ಜನ್ಮದಲ್ಲಿ ಶಶಿಪ್ರಭಾದಿತ್ಯಗತಿಯರೂ ಸ್ವಯಂ ಪ್ರಭಾವಾಯುರಥರೂ(ಉಭಯಮಾತಾಪಿತೃಗಳು) ಆದರಂತೆ. ಸಂಸಾರವು ವಿಚಿತ್ರವಾದುದು.

**ಹಾ ಮೇ ಪ್ರಭಾವತೀತ್ಯಾಹ ಜಯಶ್ಚೇತ್ಸಸುಲೋಚನಃ ।**
**ರೂಪಾದಿವರ್ಣನಂ ತಸ್ಯಾಃ ಕಿಂ ಪುನಃ ಕ್ರಿಯತೇ ಪೃಥಕ್ ॥ ೧೫೦ ॥**

ಸುಲೋಚನೆಯೊಡನಿರುವ ಜಯಕುಮಾರನು"ಹಾ ! ನನ್ನ ಪ್ರಭಾವತಿ !!" ಎಂದು ಹೇಳಿದನೆಂದರೆ ಇನ್ನು ಆಕೆಯ(ಪ್ರಭಾವತಿಯ) ರೂಪವೇ ಮೊದಲಾ ದುವುಗಳ ವರ್ಣನವನ್ನು ಮತ್ತೇಕೆ ಬೇರೆಮಾಡುವುದು ? ಬೇರೆ ವರ್ಣನವನ್ನೇಕೆ ಮಾಡಬೇಕೆಂದು ಭಾವವು.

**ಯೌವನೇನ ಸಮಾಕ್ರಾಂತಾಂ ಕನ್ಯಾಂ ದೃಷ್ಟ್ವಾ ಪ್ರಜಾವತೀಮ್ ।**
**ಕಸ್ಮೈ ದೇಯೇಯಮಿತ್ಯಾಹ ಖಗೇಶೋ ಮಂತ್ರಿಣಸ್ತವ ॥ ೧೫೧ ॥**

**ಶಶಿಪ್ರಭಾ [3]ಸ್ವಸಾ [4]ದೇವ್ಯಾ ಭ್ರಾತಾದಿತ್ಯಗತಿಸ್ತಥಾ ।**
**ಪರೇ ಚ ಖೇಚರಾಧೀಶಾಃ [5]ಪ್ರತ್ಯಾಯಾಚಂತ ಕನ್ಯಕಾಮ್ ॥ ೧೫೨ ॥**

**ತತಃ ಸ್ವಯಂವರೋ ಯುಕ್ತೋ ವಿರೋಧಸ್ತನ್ನ ಕೇನಚಿತ್ ।**
**ಇತ್ಯಭಾಷಂತ ನಿಶ್ಚಿತ್ಯ ತದ್ಭೂಪೋಪ್ಯಭ್ಯುಪಾಗಮತ್ ॥ ೧೫೩ ॥**

ಖೇಚರಾಧಿಪತಿಯಾದ ವಾಯುರಥನು ಯೌವನದಿಂದ ವ್ಯಾಪ್ತಳಾದ ಆ ಪ್ರಭಾವತಿಯನ್ನು ನೋಡಿ " ಈಕೆಯನ್ನು ಯಾವನಿಗೆ ಕೊಡಬೇಕು ?" ಎಂದು ಮಂತ್ರಿಗಳನ್ನು ಕುರಿತು ಹೇಳಿದನು. ಆಗ ಮಂತ್ರಿಗಳು "ನಿನ್ನ ಸಹೋದರಿಯಾದ ಶಶಿಪ್ರಭೆಯೂ ನಿನ್ನ ಪತ್ನಿಯಾದ ಸ್ವಯಂಪ್ರಭಾದೇವಿಯ ಸಹೋದರನಾದ ಆದಿತ್ಯಗತಿಯೂ ಹಾಗೆಯೇ ಬೇರೆಯವರಾದ ಖೇಚರರಾಜರೂ ಕನ್ಯೆಯನ್ನು ಬೇಡಿರುತ್ತಾರೆ. ಆದುದರಿಂದ ಸ್ವಯಂವರವು ಉಚಿತವಾಗಿರುತ್ತದೆ. ಅದರಿಂದ ಯಾರೊಡನೆಯೂ ವಿರೋಧವಿಲ್ಲ" ಎಂಬುದಾಗಿ ನಿಶ್ಚಯಿಸಿ ಮಾತನಾಡಿದರು. ವಾಯುರಥರಾಜನೂ ಆ ಮಾತನ್ನು ಅಂಗೀಕರಿಸಿದನು.

**ತತಃ ಸರ್ವೇಪಿ ತದ್ವಾರ್ತಾಕರ್ಣನಾದಾಗಮನ್ನೃಪಾಃ ।**
**ಕಮಪ್ಯೇತೇಷು ಸಾ ಕನ್ಯಾ ನಾಗ್ರಹೀದ್ರತ್ನಮಾಲಯಾ ॥ ೧೫೪ ॥**

ಅನಂತರದಲ್ಲಿ ಎಲ್ಲಾರಾಜರುಗಳೂ ಸ್ವಯಂವರದ ವಾರ್ತೆಯ ಶ್ರವಣದಿಂದ ಬಂದರು. ಆ ಕನ್ಯೆಯು ಈ ರಾಜರುಗಳಲ್ಲಿ ಯಾವನನ್ನೂ ರತ್ನಮಾಲೆಯಿಂದ ಪರಿಗ್ರಹಿಸಲಿಲ್ಲ.

**ಮಾತಾಪಿತೃಭ್ಯಾಂ ತದ್ದೃಷ್ಟ್ವಾ ಸಂಪೃಷ್ಟಾ ಪ್ರಿಯಕಾರಿಣೇ ।**
**ಯೋ ಜಯೇದ್ಗತಿಯುದ್ಧೇ ಮಾಂ ಮಾಲಾಂ ಸಂಯೋಜಯಾ**
**ಮ್ಯಹಮ್ ॥ ೧೫೫ ॥**

೧ ಯಶಸ್ವತೀಗುಣವತ್ಯೌ. ೨ ಜಗತ್ಪಾಲಚಕ್ರವರ್ತಿಪುತ್ರ್ಯೋರಮಿತಾನಂತಮತ್ಯೋರ್ಜನನೀ. ೩ ಜಂಬೂಗ್ರಾಮಂ. ೪ ಜಂಬೂಗ್ರಾಮಸ್ಯ ಕದಳೀವನಸ್ಥ ಮಾರ್ಜಾರೇಣ.

೧ ಶಶಿಪ್ರಭಾದಿತ್ಯಗತೀಚ ಸ್ವಯಂಪ್ರಭಾದೇವೀ ವಾಯುರಥೌಚಪಿತ ರಾವಭೂತಾಂ. ೨ ಜಿನದತ್ತಾ ಶೋಕದೇವೌದ್ವೌ, ವಿಮಲಶ್ರೀ ಶ್ರೀದತ್ತೌದ್ವೌಚ. ೩ ತವಶಶಿಪ್ರಭೇತಿಭಗಿನೀ. ೪ ತವ ಭಾರ್ಯಾಯಾಃ ಸ್ವಯಂಪ್ರಭಾದೇವ್ಯಾಃ ಭ್ರಾತಾಆದಿತ್ಯಗತಿಃ ಸೋಪಿ ಸ್ವಪುತ್ರಾಯಯಾಚಿತವಾನಿತ್ಯರ್ಥಃ. ೫ ಪ್ರೀತ್ಯಾಇತ್ಯಪಿಪಾಠಃ.

**ಕಂಠೇ ತಸ್ಯೇತಿ ವಕ್ತ್ಯೇಷಾ ಪ್ರಾಗಿತ್ಯಾಹ ಸಖೀ [೧]ತಯೋಃ ।**
**ಶ್ರುತ್ವಾ ತತ್ತದ್ದಿನೇ ಸರ್ವಾನುಚಿತೋಕ್ತ್ಯಾ ವ್ಯಸರ್ಜಯತ್ ॥ ೧೫೬ ॥**

**ಅನ್ಯೇದ್ಯುಃ ಖಚರಾಧೀಶೋ ಘೋಷಯಿತ್ವಾ ಸ್ವಯಂವರಮ್ ।**
**ಸಿದ್ಧಕೂಟಾಖ್ಯಚೈತ್ಯಾಲಯಸ್ಯ ಮಾಲಾಂ ಪುರಃ ಸ್ಥಿತಾಮ್ ॥ ೧೫೭ ॥**

**[೨]ಅಪಾತಯನ್ಮಹಾಮೇರುಂ ತ್ರಿಃಪರೀತ್ಯ ಮಹೀತಲಮ್ ।**
**ಅಸ್ಪೃಷ್ಟಾಂ ಖೇಚರಾಃ ಕೇಚಿತ್ತಾಂ ಗೃಹೀತುಮನೀಶ್ವರಾಃ ॥ ೧೫೮ ॥**

ಅದನ್ನು ನೋಡಿ ತಾಯಿತಂದೆಗಳಿಂದ ಕೇಳಲ್ಪಟ್ಟ ಪ್ರಿಯಕಾರಿಣಿಯು (ಆ ಕನ್ಯೆಯ ಸಖಿಯು) ''ನನ್ನನ್ನು ಗತಿಯುದ್ಧದಲ್ಲಿ ಯಾವನು ಜಯಿಸುತ್ತಾನೋ ಅವನ ಕೊರಳಿನಲ್ಲಿ ನಾನು ಮಾಲೆಯನ್ನು ಸೇರಿಸುತ್ತೇನೆ'' ಎಂಬುದಾಗಿ ಈಕೆಯು–ಕನ್ಯೆಯು ಮೊದಲು ಹೇಳುತ್ತಾಳೆಂದು ಸ್ವಯಂಪ್ರಭಾವಾಯುರಥರಿಗೆ ಸಖಿಯು ಹೇಳಿದಳು. ಆ ಮಾತನ್ನು ಕೇಳಿ ಖೇಚರಾಧಿಪತಿಯಾದ ವಾಯುರಥನು ''ಇನ್ನೊಂದು ದಿವಸ ಸ್ವಯಂವರವನ್ನು ಮಾಡುತ್ತೇವೆ'' ಎಂದು ಡಂಗೂರಹೊಯ್ಸಿ ಆ ದಿನದಲ್ಲಿ ಎಲ್ಲರನ್ನೂ ಉಚಿತವಚನದಿಂದ ವಿಸರ್ಜಿಸಿದನು. ಸಮಾಧಾನಪಡಿಸಿ ಕಳುಹಿದನೆಂದು ಭಾವವು. ಬಳಿಕ ಸಿದ್ಧಕೂಟವೆಂಬ ಚೈತ್ಯಾಲಯದ ಮುಂದಿರುವ ಆ ಸ್ವಯಂವರಮಾಲೆಯನ್ನು ಕೆಲವು ಖೇಚರರು ಮಹಾಮೇರುಪರ್ವತವನ್ನು ಮೂರಾವರ್ತಿ ಸುತ್ತಿ ಬಂದು ಭೂತಲವನ್ನು ಮುಟ್ಟದಿರುವುದನ್ನಾಗಿ(ಅದು ಭೂತಲವನ್ನು ಮುಟ್ಟುವುದಕ್ಕೆ ಮೊದಲು) ಹಿಡಿಯಲು ಅಸಮರ್ಥರಾಗಿ ಅದನ್ನು ಕೆಡಹಿದರು.

**ತ್ರಪಾಂ ಗತಾಃ [೩]ಸಮಾದಾಯ ಪ್ರಭಾವತ್ಯಾ ವಿನಿರ್ಜಿತಾಃ ।**
**ಸಮೋ ನನು ನ ಮೃತ್ಯುಶ್ಚ ಮಾನಭಂಗೇನ ಮಾನಿನಾಮ್ ॥ ೧೫೯ ॥**

ಪ್ರಭಾವತಿಯಿಂದ ಜಯಿಸಲ್ಪಟ್ಟವರು (ಅಪಜಯವನ್ನು ಹೊಂದಿದವರು) ಲಜ್ಜೆಯನ್ನು ತೆಗೆದುಕೊಂಡು (ಹೊಂದಿ) ಹೊರಟು ಹೋದರು. ಮಾನವುಳ್ಳವರಿಗೆ ಮಾನಭಂಗದೊಡನೆ ಮೃತ್ಯುವೂ ಸಮಾನವಾದುದಲ್ಲವಲ್ಲವೇ ?

**ತತೋ ಹಿರಣ್ಯವರ್ಮಾಯಾದ್ಗತಿಯುದ್ಧವಿಶಾರದಃ ।**
**ಮಾಲಾ[೪]ಮಾಸಂಜಯಾಮಾಸ ತತ್ಕಂಠೇ ತೇನ ನಿರ್ಜಿತಾ ॥ ೧೬೦ ॥**

ಆಮೇಲೆ ಗತಿಯುದ್ಧದಲ್ಲಿ ನಿಪುಣನಾದ ಹಿರಣ್ಯವರ್ಮನು ಹೊಂದಿದನು. ಮಾಲೆಯು ಭೂತಲಕ್ಕೆ ಬೀಳುವುದಕ್ಕೆ ಮೊದಲು ಮೇರುವನ್ನು ಮೂರಾವರ್ತಿ ಸುತ್ತಿ ಬಂದು ಅದನ್ನು ಹೊಂದಿದನೆಂದು ಭಾವವು. ಆ ಹಿರಣ್ಯವರ್ಮನಿಂದ ಜಯಿಸಲ್ಪಟ್ಟವಳಾದ ಪ್ರಭಾವತಿಯು ಅವನ ಕೊರಳಿನಲ್ಲಿ ಮಾಲೆಯನ್ನು ಸೇರಿಸಿದಳು(ಹಾಕಿದಳು).

**ತಯೋರ್ಜನ್ಮಾಂತರಸ್ನೇಹಸಮೃದ್ಧಸುಖಸಂಪದಾ ।**
**ಕಾಲೇ ಗಚ್ಛತಿ ಕಸ್ಮಿಂಶ್ಚಿತ್ಕಪೋತದ್ವಂದ್ವದರ್ಶನಾತ್ ॥ ೧೬೧ ॥**

**ಜ್ಞಾತಪ್ರಾಗ್ಭವಸಂಬಂಧಾ ಸುವಿರಕ್ತಾ ಪ್ರಭಾವತೀ ।**
**ಸ್ಥಿತಾ ಶೋಕಾಕುಲೈಕೈವ ಚಿಂತಯಂತೀ ಕಿಮಪ್ಯಸೌ ॥ ೧೬೨ ॥**

ಆ ಪ್ರಭಾವತೀ ಹಿರಣ್ಯವರ್ಮರ ಜನ್ಮಾಂತರ ಸ್ನೇಹದಿಂದ ಬೆಳೆದ ಸುಖ ಸಂಪತ್ತಿಯಿಂದ ಕಾಲವು ಕಳೆಯುತ್ತಿರಲು ಒಂದಾನೊಂದು ಕಾಲದಲ್ಲಿ ಎರಡು ಪಾರಿವಾಳಗಳನ್ನು ನೋಡಿದುದರಿಂದ ಪೂರ್ವಭವದ ಸಂಬಂಧವನ್ನು ತಿಳಿದವಳೂ ಚೆನ್ನಾಗಿ ವಿರಕ್ತಳೂ ಆದ ಈ ಪ್ರಭಾವತಿಯು ಶೋಕಾಕುಲಳೂ ಓರ್ವಳೇ ಏನನ್ನೋ ಚಿಂತಿಸುವವಳೂ ಆಗಿದ್ದಳು.

**ಹಿರಣ್ಯವರ್ಮಣಾ ಜ್ಞಾತಜನ್ಮನಾ ಲಿಖಿತಂ ಸ್ಫುಟಮ್ ।**
**ಪಟ್ಟಕಂ [೫]ಪ್ರಿಯಕಾರಿಣ್ಯಾ ಹಸ್ತೇ ಸಮವಲೋಕ್ಯ ತಾಮ್ ॥ ೧೬೩ ॥**

೧ ಸ್ವಯಂಪ್ರಭಾವಾಯುರಥಯೋಃ. ೨ ಭೂಮೌಪಾತಯಂತಿಸ್ಮ. ೩ ಗೃಹೀತ್ವಾ. ೪ ಸಂಯೋಜಯತಿಸ್ಮ. ೫ ಪ್ರಭಾವತ್ಯಾಸ್ಸಖ್ಯಾಹಸ್ತೇ ಸ್ಥಿತಂ.

**ಕ್ವ ಲಬ್ಧಮಿದಮಿತ್ಯಾಖ್ಯತ್ ಪ್ರಾಹ ಸಾಪಿ ಪ್ರಿಯೇಣ ತೇ ।**
**ಲಿಖಿತಂ [೧]ಚೇಟಕ[೨]ಸ್ತಸ್ಯ ಸುಕಾಂತೋ ಮೇ ಸಮಾರ್ಪಯತ್॥ ೧೬೪ ॥**

**ಇತಿ ತದ್ವಚನಂ ಶ್ರುತ್ವಾ ಸ್ವಯಮಪ್ಯಾತ್ಮವೃತ್ತಕಮ್ ।**
**ಪ್ರಾಕ್ತನಂ ಪಟ್ಟಕೇ ತಸ್ಯಾ ಲಿಖಿತ್ವಾ[೩]ಸೌ ಕರೇ ದದೌ ॥ ೧೬೫ ॥**

ತನ್ನ ಪೂರ್ವಜನ್ಮವನ್ನು ತಿಳಿದವನಾದ ಹಿರಣ್ಯವರ್ಮನು ಸ್ಫುಟವಾಗಿ ಬರೆದ ಒಂದು ಪಟ್ಟಕ–ಪಟವನ್ನು ಪ್ರಭಾವತಿಯು ತನ್ನ ಸಖಿಯಾದ ಪ್ರಿಯಕಾರಿಣಿಯ ಕೈಯಲ್ಲಿ ನೋಡಿ ''ಇದನ್ನು ಎಲ್ಲಿ ಪಡೆದೆ ?'' ಎಂಬುದಾಗಿ ಆಕೆಯನ್ನು ಕೇಳಿದಳು. ಆ ಸಖಿಯು ''ನಿನ್ನ ಪ್ರಿಯನಿಂದ ಬರೆಯಲ್ಪಟ್ಟುದು. ಅವನ ಭೃತ್ಯನಾದ ಸುಕಾಂತನು ನನಗೆ ಕೊಟ್ಟನು'' ಎಂದು ಹೇಳಿದಳು. ಆಕೆಯ ಮಾತನ್ನು ಕೇಳಿ ಈ ಪ್ರಭಾವತಿಯು ತಾನು ಪೂರ್ವ ಜನ್ಮಸಂಬಂಧವಾದ ತನ್ನ ಸಮಾಚಾರವನ್ನು ಆ ಪಟದಲ್ಲಿ ಬರೆದು ಪ್ರಿಯಕಾರಿಣಿಯ ಕೈಯಲ್ಲಿ ಕೊಟ್ಟಳು.

**ತದ್ವಿಲೋಕ್ಯ ಕುಮಾರೋಭೂತ್ಪ್ರಭಾವತ್ಯಾಂ ಪ್ರಸಕ್ತಧೀಃ ।**
**ಸಾಪಿ ತಸ್ಮಿಂಸ್ತಯೋಃ ಪ್ರೀತಿಃ ಪ್ರಾಕ್ತನ್ಯಾ ದ್ವಿಗುಣಾಭವತ್ ॥ ೧೬೬ ॥**

ಅದನ್ನು ನೋಡಿ ಹಿರಣ್ಯವರ್ಮಕುಮಾರನು ಪ್ರಭಾವತಿಯಲ್ಲಿ ಚೆನ್ನಾಗಿ ಆಸಕ್ತವಾದ ಮನಸ್ಸುಳ್ಳವನಾದನು. ಆಕೆಯೂ ಅವನಲ್ಲಿ ಚೆನ್ನಾಗಿ ಆಸಕ್ತವಾದ ಮನಸ್ಸುಳ್ಳವಳಾದಳು. ಅವರಲ್ಲಿ ಮೊದಲಿದ್ದ ಪ್ರೀತಿಯು ದ್ವಿಗುಣವಾಯಿತು.

**ಸಂಭೂಯ ಬಾಂಧವಾಃ ಸರ್ವೇ ಕಲ್ಯಾಣಾಭಿಷವಂ ತಯೋಃ ।**
**ಅಕುರ್ವನ್ನಿವ ಕಲ್ಯಾಣಂ [೪]ದ್ವಿತೀಯಂ ತೇ ಚಿಕೀರ್ಷವಃ ॥ ೧೬೭ ॥**

ಎಲ್ಲಾ ಬಾಂಧವರೂ ಸೇರಿ ಮಾಲಾರೋಪಣಕಲ್ಯಾಣದಿಂದ ಎರಡನೆಯದಾದ ಕಲ್ಯಾಣ–ಪಾಣಿಗ್ರಹಣವನ್ನು ಮಾಡಬೇಕೆಂಬ ಇಚ್ಛೆಯುಳ್ಳವರಂತೆ ಆ ಪ್ರಭಾವತೀ ಹಿರಣ್ಯವರ್ಮರಿಗೆ ಮಂಗಲಾಭಿಷೇಕವನ್ನು ಮಾಡಿದರು. ಮಂಗಲಸ್ನಾನವನ್ನು ಮಾಡಿಸಿದರೆಂದು ಭಾವವು.

**[೫]ದಶಮ್ಯಾಂ ಸಿದ್ಧಕೂಟಾಗ್ರೇ [೬]ಸ್ನಾನಪೂಜಾವಿಧೌ [೭]ಸುವಿತ್ ।**
**ಹಿರಣ್ಯವರ್ಮಣಾ ವೀಕ್ಷ್ಯ ಪರಮೌಷಧಿಚಾರಣಃ ॥ ೧೬೮ ॥**

**ಪ್ರಭಾವತ್ಯಾ ಚ ಪೃಷ್ಟೋಸೌ [೮]ಸ್ವಪೂರ್ವಭವವೃತ್ತಕಮ್ ।**
**ಅಭಾಷತ ಮುನಿಶ್ಚೈವಮನುಗ್ರಹಧಿಯಾ ತಯೋಃ ॥ ೧೬೯ ॥**

ವಿವಾಹವಾದ ಹತ್ತನೆಯ ದಿನದಲ್ಲಿ ಸಿದ್ಧಕೂಟಚೈತ್ಯಾಲಯದಲ್ಲಿ ಅಭಿಷೇಕ ಪೂಜಾವಿಧಾನದಲ್ಲಿ ಆ ದಂಪತಿಗಳಿರುವ ಕಾಲದಲ್ಲಿ ಪ್ರತ್ಯಕ್ಷಜ್ಞಾನಿಯೂ ಪರಮೌಷಧಿಋದ್ಧಿಯೆಂಬ ತಪೋತಿಶಯವನ್ನು ಹೊಂದಿದವನೂ ಆದ ಚಾರಣ ಮುನಿಯನ್ನು ಹಿರಣ್ಯವರ್ಮನೂ ಪ್ರಭಾವತಿಯೂ ನೋಡಿ ಅವನನ್ನು ಕುರಿತು ತಮ್ಮ ಪೂರ್ವಭವವೃತ್ತಾಂತವನ್ನು ಕೇಳಿದರು. ಅವರಲ್ಲಿ ಅನುಗ್ರಹಬುದ್ಧಿಯಿಂದ ಮುನಿಯು ಈ ರೀತಿಯಾಗಿ ಮಾತನಾಡಿದನು.

**ತೃತೀಯಜನ್ಮನೀತೋತ್ರ ಸಂಭೂತೌ ವಣಿಜಾಂ ಕುಲೇ ।**
**ರತಿವೇಗಾ ಸುಕಾಂತಶ್ಚ ಪ್ರಾಕ್ ಮೃಣಾಲವತೀಪುರೇ ॥ ೧೭೦ ॥**

''ಇಲ್ಲಿಂದ ಹಿಂದೆ ಮೂರನೆಯ ಜನ್ಮದಲ್ಲಿ ಮೊದಲು ಈ ಮೃಣಾಲವತೀ ನಗರದಲ್ಲಿ ವೈಶ್ಯರ ಕುಲದಲ್ಲಿ ನೀವುಗಳು ರತಿವೇಗೆಯೆಂದೂ ಸುಕಾಂತನೆಂದೂ ಜನಿಸಿದ್ದಿರಿ.

೧ ಅನುಚರಃ. ೨ ಹಿರಣ್ಯವರ್ಮಣಃ. ೩ ಪ್ರಭಾವತೀ. ೪ ಗತಿಯುದ್ಧೇಮಾಲಾರೋಪಣಂ, ಅದ್ಯಪಾಣಿಗ್ರಹಣಂ. ೫ ವಿವಾಹಾದ್ದಶಮೇದಿನೇ. ೬ ಅಭಿಷೇಕಪೂಜಾವಿಧೌ. ೭ ಪ್ರತ್ಯಕ್ಷಜ್ಞಾನೀ. ೮ ಸ್ವಮಿತ್ಯಪಿಪಾಠಃ.

ಭರ್ತೃಭಾರ್ಯಾಭಿಸಂಬಂಧಂ ಸಂಪ್ರಾಪ್ಯಾರಿಭಯಾದ್ಗತೌ ।
ಕೃತ್ವಾನುಮೋದನಂ ಶಕ್ತಿಷೇಣದಾನೇ ಸಪುಣ್ಯಕೌ ॥ ೧೭೧ ॥

ಪಾರಾವತಭವೇ ಚಾಪ್ಯ ಧರ್ಮಂ ಜಾತೌ ಯುವಾಮಿತಿ ।
ವಿಧಾಯ ಪಿತರೌ ವೈಶ್ಯಜನ್ಮನೋ [೧]ಯಾ[೨]ವಿಹಾಪಿ ತೌ ॥ ೧೭೨ ॥

ನೀವುಗಳು ಪತಿಪತ್ನೀಸಂಬಂಧವನ್ನು ಹೊಂದಿ ಶತ್ರುವಿನ-ಭವದೇವನ ಭಯದಿಂದ ಹೊರಟು ಹೋಗಿ ಶಕ್ತಿಷೇಣನು ಮುನಿಗಳಿಗೆ ಕೊಟ್ಟ ಆಹಾರದಾನದಲ್ಲಿ ಅನುಮೋದನವನ್ನು ಮಾಡಿ ಪುಣ್ಯವುಳ್ಳವರಾಗಿ ಪಾರಿವಾಳದ ಭವದಲ್ಲಿಯೂ ಧರ್ಮವನ್ನು ಹೊಂದಿ ನಿಮಗೆ ವೈಶ್ಯಜನ್ಮದಲ್ಲಿ ಯಾರು ತಂದೆತಾಯಿಗಳಾಗಿದ್ದರೋ ಅವರು(ವಿಮಲಶ್ರೀ ಶ್ರೀದತ್ತರು, ಜಿನದತ್ತಾ ಅಶೋಕದೇವರು) ಈ ಮೂರನೆಯ ಜನ್ಮದಲ್ಲಿಯೂ ತಂದೆತಾಯಿಗಳನ್ನಾಗಿ ಮಾಡಿಕೊಂಡು ಈ ರೀತಿಯಾಗಿ ಹುಟ್ಟಿರುತ್ತೀರಿ.

ತೃತೀಯಜನ್ಮನೋ [೩]ಯುಷ್ಮದ್ಗುರವೋ[೪]ಹಂ ಚ ಸಂಗತಾಃ ।
ರತಿಷೇಣಗುರೋಃ ಪಾರ್ಶ್ವೇ ಗೃಹೀತಪ್ರೋಷಧಾಶ್ಚಿರಮ್ ॥ ೧೭೩ ॥

ಜಿನೇಂದ್ರಭವನೇ ಭಕ್ತ್ಯಾ ನಾನೋಪಕರಣೈಃ ಸದಾ ।
ವಿಧಾಯ ಪೂಜಾಂ [೫]ಸಮಜಾಯಾಮಹೀಹ ಖಗಾಧಿಪಾಃ ॥ ೧೭೪ ॥

ಮೂರನೆಯ ಭವದ ನಿಮ್ಮ ತಂದೆತಾಯಿಗಳು ವಿಮಲಶ್ರೀ ಶ್ರೀದತ್ತ, ಜಿನದತ್ತಾ ಅಶೋಕದೇವರೂ ನಾನೂ ಜತೆಯಾಗಿ ರತಿಷೇಣಗುರುವಿನ ಸಮೀಪದಲ್ಲಿ ಪ್ರೋಷಧೋಪವಾಸವ್ರತವನ್ನು ಗ್ರಹಣಮಾಡಿ ಬಹುಕಾಲದವರೆಗೆ ಜಿನೇಶ್ವರನ ಮಂದಿರದಲ್ಲಿ ಭಕ್ತಿಯಿಂದ ಅನೇಕವಿಧವಾದ ಉಪಕರಣ-ಸಾಮಗ್ರಿಗಳಿಂದ ಯಾವಾಗಲೂ ಪೂಜೆಯನ್ನು ಮಾಡಿ ಇಲ್ಲಿ ಖೇಚರರಾಜರಾಗಿ ಹುಟ್ಟಿದೆವು.

ಪಿತಾಹಂ ಭವದೇವಸ್ಯ ರತಿವರ್ಮಾಭಿಧಸ್ತದಾ ।
ಭೂತ್ವಾ ಶ್ರೀವರ್ಮನಾಮಾತಃ ಸಂಯಮಂ ಪ್ರಾಪ್ಯ ಶುದ್ಧಧೀಃ॥ ೧೭೫ ॥

ಚಾರಣತ್ವಂ ತೃತೀಯಂ ಚ ಜ್ಞಾನಂ ಪ್ರಾಪಮಿಹೇತ್ಯದಃ ।
ಶ್ರುತ್ವಾ ಮುನಿವಚಃ ಪ್ರೀತಿಮಾಪದ್ಯೇತಾಂ ತರಾಂ ಚ ತೌ ॥ ೧೭೬ ॥

ಆಗ ಭವದೇವನ ತಂದೆಯಾಗಿದ್ದ ನಾನು-ರತಿವರ್ಮನೆಂಬವನು ಶ್ರೀವರ್ಮನೆಂಬ ಹೆಸರುಳ್ಳವನಾಗಿ ಹುಟ್ಟಿ ಇಲ್ಲಿ ಶುದ್ಧವಾದ ಬುದ್ಧಿಯುಳ್ಳವನಾಗಿ ಸಂಯಮ-ವರ್ತವನ್ನು ಹೊಂದಿ ಇಲ್ಲಿ ಚಾರಣತ್ವವನ್ನೂ(ಆಕಾಶದಲ್ಲಿ ಸಂಚರಿಸುವ ಶಕ್ತಿಯನ್ನೂ) ಮೂರನೆಯದಾದ ಅವಧಿಜ್ಞಾನವನ್ನೂ ಹೊಂದಿದೆನು'' ಎಂದನು. ಈ ಮುನಿವಚನವನ್ನು ಕೇಳಿ ಆ ಪ್ರಭಾವತೀಹಿರಣ್ಯವರ್ಮರು ಅಧಿಕವಾಗಿ ಪ್ರೀತಿಯನ್ನು ಹೊಂದಿದರು.

ಏವಂ ಸುಖೇನ ಯಾತ್ಯೇಷಾಂ ಕಾಲೇ ವಾಯುರಥಃ ಪೃಥುಮ್ ।
ವಿಶರಾರುಂ ಸಮಾಲೋಕ್ಯ ಸ್ತನಯಿತ್ನುಂ ಪ್ರತಿಕ್ಷಣಮ್ ॥ ೧೭೭ ॥

ವಿಶ್ವಂ ವಿನಶ್ವರಂ ಪಶ್ಯನ್ ಶಶ್ವಚ್ಛಾಶ್ವತಿಕೀಂ ಮತಿಮ್ ।
ಜನಃ ಕರೋತಿ ಸರ್ವತ್ರ ದುಸ್ತರಂ ಕಿಮಿದಂ ತಮಃ ॥ ೧೭೮ ॥

ಇತಿ ಯಾಥಾತ್ಮ್ಯಮಾಸಾದ್ಯ ದತ್ವಾ ರಾಜ್ಯಂ ವಿರಜ್ಯ ಸಃ ।
ಮನೋರಥಾಯ ನೈಸ್ಸಂಗ್ಯಂ [೬]ಪ್ರಪಿತ್ಸುರಭವತ್ತದಾ ॥ ೧೭೯ ॥

ಈ ಪ್ರಕಾರವಾಗಿ ಆ ವಾಯುರಥನೇ ಮೊದಲಾದವರ ಕಾಲವು ಸುಖದಿಂದ ಕಳೆಯುತ್ತಿರಲು ಒಂದು ದಿನ ವಾಯುರಥನು ದೊಡ್ಡದೂ ಪ್ರತಿಕ್ಷಣದಲ್ಲಿಯೂ ನಾಶಶೀಲವೂ ಆದ ಮೇಘವನ್ನು ನೋಡಿ ಪುತ್ರಮಿತ್ರಕಳತ್ರಾದಿ ಸಕಲವನ್ನೂ ನಾಶಶೀಲವನ್ನಾಗಿ ನೋಡುವವನಾಗಿ''ಜನರು ಎಲ್ಲಾವಸ್ತುಗಳಲ್ಲಿ ಬಾರಿಬಾರಿಗೆ ಶಾಶ್ವತವಾದುದೆಂಬ ಬುದ್ಧಿಯನ್ನು ಮಾಡುತ್ತಾರೆ. ದುಸ್ತರವಾದ ಏನಿದು ಅಜ್ಞಾನ ?'' ಎಂಬುದಾಗಿ ಯಥಾಸ್ವರೂಪವನ್ನು ಹೊಂದಿ-ತಿಳಿದು ಆಗ ಅವನು ವೈರಾಗ್ಯವನ್ನು ಹೊಂದಿ ಮನೋರಥನೆಂಬ ಪುತ್ರನಿಗೆ ರಾಜ್ಯವನ್ನು ಕೊಟ್ಟು ನಿಸ್ಸಂಗತ್ವ-ನಿಷ್ಪರಿಗ್ರಹತ್ವವನ್ನು ಹೊಂದಬೇಕೆಂಬ ಇಚ್ಛೆಯುಳ್ಳವನಾದನು.

ಆದಿತ್ಯಗತಿಮಭ್ಯೇತ್ಯ ಪ್ರೀತ್ಯಾ ಸರ್ವೇಽಪಿ ಬಾಂಧವಾಃ ।
ಪ್ರಭಾವತೀಸುತಾ ದೇಯಾ ಭವತೇಯಂ ರತಿಪ್ರಭಾ ॥ ೧೮೦ ॥

ಮನೋರಥಸ್ಯ ಪುತ್ರಾಯ ಕನ್ಯಾ ಚಿತ್ರರಥಾಯ ಸಾ ।
ಇತ್ಯಾಹುಃ ಸೋಽಪ್ಯನುಜ್ಞಾಯ ಕೃತ್ವಾ ಬಂಧುವಿಸರ್ಜನಮ್ ॥ ೧೮೧ ॥

ಹಿರಣ್ಯವರ್ಮಣಃ ಸರ್ವಖಗರಾಜ್ಯಾಭಿಷೇಚನಮ್ ।
ವಿಧಾಯ ಬಹುಭಿಃ ಸಾರ್ಧಂ ಸಂಪ್ರಾಪ್ಯ ಮುನಿಪುಂಗವಮ್ ॥ ೧೮೨ ॥

ಸಂಯಮಂ ಪ್ರತಿಪನ್ನಃ ಸನ್ ಸಹವಾಯುರಥಃ ಸ್ವಯಮ್ ।
ತಪೋ ದ್ವಾದಶಧಾ ಪ್ರೋಕ್ತಂ ಯಥಾವಿಧಿ ಸಮಾಚರತ್ ॥ ೧೮೩ ॥

ಆಗ ವಾಯುರಥನ ಎಲ್ಲಾ ಬಂಧುಗಳೂ ಪ್ರೀತಿಯಿಂದ ಆದಿತ್ಯಗತಿಯನ್ನು ಹೊಂದಿ ''ನೀನು ಪ್ರಭಾವತಿಯ ಪುತ್ರಿಯಾದ ರತಿಪ್ರಭಾಕನ್ಯೆಯನ್ನು ಮನೋರಥನ ಪುತ್ರನಾದ ಚಿತ್ರರಥನಿಗೆ ಕೊಡಬೇಕು'' ಎಂದು ಹೇಳಿದರು. ಆದಿತ್ಯಗತಿಯೂ ಅನುಮತಿಸಿ ಆ ಬಂಧುಗಳನ್ನು ಬೀಳ್ಕೊಟ್ಟು ಹಿರಣ್ಯವರ್ಮನಿಗೆ ಸಮಸ್ತ ಖೇಚರರಾಜ್ಯಾಭಿಷೇಕವನ್ನು ಮಾಡಿ ಅನೇಕರೊಡನೆ ಮುನಿಶ್ರೇಷ್ಠರನ್ನು ಹೊಂದಿ ವಾಯುರಥಸಹಿತನಾಗಿ ತಾನು-ಆದಿತ್ಯಗತಿಯು ವ್ರತವನ್ನು ಹೊಂದಿದವನಾಗಿ ಹನ್ನೆರಡು ವಿಧವಾಗಿ ಹೇಳಲ್ಪಟ್ಟಿರುವ ತಪಸ್ಸನ್ನು(ಅನಶನ ಅವಮೋದರ್ಯ ವೃತ್ತಿಪರಿಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ್ಯಾಸನ ಕಾಯಕ್ಲೇಶರೂಪವಾದ ಆರು ಬಾಹ್ಯತಪಸ್ಸುಗಳನ್ನೂ ಪ್ರಾಯಶ್ಚಿತ್ತ ವಿನಯ ವೈಯಾವೃತ್ಯ ಸ್ವಾಧ್ಯಾಯ ವ್ಯುತ್ಸರ್ಗ ಧ್ಯಾನಗಳೆಂಬ ಆರು ಅಭ್ಯಂತರತಪಸ್ಸುಗಳನ್ನೂ) ಶಾಸ್ತ್ರೋಕ್ತವಿಧಿಪ್ರಕಾರವಾಗಿ ಆಚರಿಸಿದನು.''

ಇತ್ಯುಕ್ತ್ವಾ ರತಿವೇಗಾಹಂ ರತಿಷೇಣಾ ಪ್ರಭಾವತೀ ।
ಚಾಹಮೇವೇತಿ ಸಭ್ಯಾನಾಂ ನಿಜಗಾದ ಸುಲೋಚನಾ ॥ ೧೮೪ ॥

ಈ ಪ್ರಕಾರವಾಗಿ ಹೇಳಿ ''ನಾನೇ ರತಿವೇಗೆಯೂ ರತಿಷೇಣೆಯೂ ಪ್ರಭಾವತಿಯೂ ಆಗಿರುತ್ತೇನೆ'' ಎಂಬುದಾಗಿ ಸುಲೋಚನೆಯು ಸಭಿಕರಿಗೆ ಹೇಳಿದಳು.

ತದಾಕರ್ಣ್ಯ ಜಯೋಽಪ್ಯಾಹ ಪತಿಸ್ತಾಸಾಮಹಂ ಕ್ರಮಾತ್ ।
ಜಾಯೇ ಸ್ಮ ತತ್ರ ತತ್ರೇತಿ ವಿಶ್ವವಿಸ್ಮಯಕೃದ್ವಚಃ ॥ ೧೮೫ ॥

ಆ ಮಾತನ್ನು ಕೇಳಿ ಜಯಕುಮಾರನೂ ''ಆ ರತಿವೇಗೆ ಮೊದಲಾದವರಿಗೆ ನಾನು ಕ್ರಮದಿಂದ ಅಲ್ಲಲ್ಲಿ ಪತಿಯಾಗಿದ್ದೆನು'' ಎಂದು ಆಶ್ಚರ್ಯವನ್ನುಂಟುಮಾಡುವ ಮಾತನ್ನು ಹೇಳಿದನು.

ಪುನಃ ಪ್ರಿಯಾಂ ಜಯಃ ಪ್ರಾಹ ಪ್ರಕೃತಂ ಕಿಂಚಿದಸ್ತ್ಯತಃ ।
ಅವಶಿಷ್ಟಂ ತದಪ್ಯುಚ್ಚೈಸ್ತ್ವಯಾ ಕಾಂತೇ ನಿಗದ್ಯತಾಮ್ ॥ ೧೮೬ ॥

ಇತಿ ಪತ್ಯುಃ ಪರಿಪ್ರಶ್ನಾದ್ದಶನಜ್ಯೋತ್ಸ್ನಯಾ ಸಭಾಮ್ ।
ಮೂರ್ತಿಃ ಕುಮುದ್ವತೀಂ ವೇಂದೋರ್ವಿಕಾಸಮುಪನೀಯ ತಾಮ್ ॥

ಸಾಬ್ರವೀದಿತಿ ತದ್ವೃತ್ತಂ ಸ್ವಪುಣ್ಯಪರಿಪಾಕಜಮ್ ।
ಸುಖಂ ರಾಜ್ಯಸಮುದ್ಭೂತಂ ಯಥೇಷ್ಟಮಭಿನಿರ್ವಿಶನ್ ॥ ೧೮೮ ॥

೧ ವಿಮಲಶ್ರೀ ಶ್ರೀದತ್ತೌ ಜಿನದತ್ತಾಶೋಕದೇವೌಚ. ೨ ತೃತೀಯಜನ್ಮನಿತಾವೇವಪಿತರೌ. ೩ ಯುವಯೋಃ ಪಿತರಃ ವಿಮಲಶ್ರೀಶ್ರೀದತ್ತಜಿನಧತ್ತಾಶೋಕದೇವಾಃ. ೪ ಭವದೇವಸ್ಯಪಿತಾರತಿವರ್ಮಾ. ೫ ಜಾತಾಃ ಸ್ಮಃ. ೬ ಪ್ರಾಪ್ತುಮಿಚ್ಛುಃ.

**ಪರೇದ್ಯುಃ ಕಾಂತಯಾ ಸಾರ್ಧಂ ಸ್ವೇಚ್ಛಯಾ ವಿಹರನ್ವನಮ್ ।**
**ಸರೋ ಧಾನ್ಯಕಮಾಲಾಖ್ಯಂ ವೀಕ್ಷ್ಯಾದಿತ್ಯಗತೇಃ ಸುತಃ ॥ ೧೮೯ ॥**

**ಸ್ವಪ್ರಾಚ್ಯಭವಸಂಬಂಧಂ ಪ್ರತ್ಯಕ್ಷಮಿವ ಲಕ್ಷಯನ್ ।**
**ಕಾಲಲಬ್ಧಿಬಲಾಲ್ಲಬ್ಧನಿರ್ವೇದೋ ವಿದುಷಾಂ ವರಃ ॥ ೧೯೦ ॥**

**ಭಂಗುರಃ ಸಂಗಮಃ ಸರ್ವೋಽಪ್ಯಂಗಿನಾಮಭಿವಾಂಛಿತಃ ।**
**ಕಿಂ ನಾಮ ಸುಖಮತ್ರೇದಮಲ್ಪಂ ಸಂಕಲ್ಪಸಂಭವಮ್ ॥ ೧೯೧ ॥**

ಜಯಕುಮಾರನು ಮತ್ತೆ ಸುಲೋಚನೆಯನ್ನು ಕುರಿತು ಹೇಳಿದನು. ''ಪ್ರಕೃತವರ್ಣನವು ಸ್ವಲ್ಪ ಉಳಿದಿದೆ. ಆದುದರಿಂದ ಎಲೈ ಪ್ರಿಯಳೆ! ಉಳಿದಿರುವ ಅದೂ ಚೆನ್ನಾಗಿ ನಿನ್ನಿಂದ ಹೇಳಲ್ಪಡಲಿ'' ಈ ಪ್ರಕಾರವಾದ ಪತಿಯ ಪ್ರಶ್ನೆಯಿಂದ ತನ್ನ ಹಲ್ಲುಗಳ ಕಾಂತಿಯಿಂದ ಚಂದ್ರನ ಮೂರ್ತಿಯು ಬಿಳೀನೈದಿಲೆಯನ್ನು ಅರಳಿಸುವಂತೆ, ಆ ಸಭೆಯನ್ನು ವಿಕಾಸ–ಪ್ರಸನ್ನಗೊಳಿಸಿ ಉಳಿದಿರುವ ಸಮಾಚಾರವನ್ನು ಮುಂದೆ ಹೇಳುವಪ್ರಕಾರವಾಗಿ ಆಕೆಯು ಹೇಳಿದಳು. ''ತನ್ನ ಪುಣ್ಯದ ಉದಯದಿಂದುಂಟಾದುದೂ ರಾಜ್ಯದಿಂದುಂಟಾದುದೂ ಆದ ಸುಖವನ್ನು ಯಥೇಷ್ಟವಾಗಿ ಅನುಭವಿಸುವವನೂ ಪತ್ನಿಯೊಡನೆ ಸ್ವೇಚ್ಛೆಯಿಂದ ಮತ್ತೊಂದು ದಿವಸ ಧಾನ್ಯಕಮಾಲವೆಂಬ ವನವನ್ನು(ವನದಲ್ಲಿ ) ವಿಹರಿಸುವವನೂ ಅಲ್ಲಿ ಸರ್ಪಸರೋವಣವನ್ನು ನೋಡಿ ತನ್ನ ಪೂರ್ವಭವದ ಸಂಬಂಧವನ್ನು ಪ್ರತ್ಯಕ್ಷವಾಗಿಯೋ ಎಂಬಂತೆ ನೋಡುವವನೂ ಕಾಲಲಬ್ಧಿಯ ಬಲದಿಂದ ವೈರಾಗ್ಯವನ್ನು ಹೊಂದಿದವನೂ ವಿದ್ವಾಂಸರಲ್ಲಿ ಶ್ರೇಷ್ಠನೂ ಆದ ಆದಿತ್ಯಗತಿಯ ಪುತ್ರ–ಹಿರಣ್ಯವರ್ಮನು 'ಪ್ರಾಣಿಗಳಿಂದ ಇಚ್ಛಿಸಲ್ಪಟ್ಟ ಸಮಸ್ತವಸ್ತುಸಂಬಂಧವೂ ನಾಶಶೀಲವಾದುದು. ಇವರಲ್ಲಿ ಈ ಅಲ್ಪವೂ ಸಂಕಲ್ಪದಿಂದುಂಟಾಗುವುದೂ ಆದ ವಿಷಯಸುಖವು ಎಷ್ಟರದು ?

**ಆಯುರ್ವಾಯುಚಲಂ ಕಾಯೋ ಹೇಯ ವಿವಾಮಯಾಲಯಃ ।**
**ಸಾಮ್ರಾಜ್ಯಂ ಭುಜ್ಯತೇ [1]ಲೋಲೈ[2]ರ್ಬಾಲಿಶೈ[3]ರ್ಬಹುದೋಷಲವಮ್ ॥**

ಆಯುಷ್ಯವು ಗಾಳಿಯಂತೆ ಚಂಚಲವಾದುದು. ದೇಹವು ರೋಗಗಳ ಬೀಡೂ ಹೇಯವೂ ಆಗಿರುತ್ತದೆ. ಅನೇಕದೋಷಗಳನ್ನೀಯುವ ಸಾಮ್ರಾಜ್ಯವು ಆಸಕ್ತಿಯುಳ್ಳವರಾದ ಮೂರ್ಖರಿಂದ ಅನುಭವಿಸಲ್ಪಡುತ್ತದೆ.

**ಅದೂರಪಾರಃ ಕಾಯೋಽಯಮಸಾರೋ ದುರಿತಾಶ್ರಯಃ ।**
**ತಾದಾತ್ಮ್ಯಮಾತ್ಮನೋಽನೇನ ಧಿ[4]ಗೇನಮಶುಚಿಪ್ರಿಯಮ್ ॥ ೧೯೩ ॥**

ಈ ಶರೀರವು ಸಮೀಪವಾಗಿರುವ ಅವಸಾನವುಳ್ಳುದೂ ಅಸಾರವೂ ಪಾಪಕ್ಕೆ ಆಶ್ರಯವೂ ಆಗಿರುತ್ತದೆ. ಈ ಶರೀರದೊಡನೆ ಆತ್ಮನಿಗೆ ತತ್ಸ್ವರೂಪತ್ವ(ಶರೀರ ಸ್ವರೂಪತ್ವ)ವುಂಟಾಗಿರುತ್ತದೆ. ಅಶುಚಿವಸ್ತುವನ್ನು ಪ್ರೀತಿಸುವವನಾದ ಈ ಆತ್ಮನನ್ನು ಸುಡು–ನಿಂದಿಸು.

**ದೇಹವಾಸೋ ಭಯಂ ನಾಸ್ಯ ಯಾನಮಸ್ಮಾನ್ಮಹದ್ಭಯಮ್ ।**
**ದೇಹಿನಃ ಕಿಲ ಮಾರ್ಗಸ್ಯ ವಿಪರ್ಯಾಸೋಽ[5]ತ್ರ ನಿರ್ವೃತೇಃ ॥ ೧೯೪ ॥**

ಈ ದೇಹಿಗೆ–ಆತ್ಮನಿಗೆ ದೇಹದಲ್ಲಿ ವಾಸವು ಭಯವನ್ನುಂಟುಮಾಡುವುದಾಗಿಲ್ಲ. ಈ ದೇಹದಿಂದ(ದೇಹವನ್ನು ಬಿಟ್ಟು)ಹೋಗುವಿಕೆಯು ಮಹಾಭಯವನ್ನುಂಟುಮಾಡುವುದಾಗಿದೆ. ಈ ದೇಹಿಯಲ್ಲಿ ಮೋಕ್ಷದ ಮಾರ್ಗದ ವ್ಯತ್ಯಾಸವಲ್ಲವೇ ಇದು ?

**[6]ನೀರೂಪೋಽಯಂ ಸ್ವರೂಪೇಣ ರೂಪೀ ದೇಹೈರರೂಪಿತಾ ।**
**ನಿರ್ವಾಣಾಪ್ತಿರತೋ ಹೇಯೋ ದೇಹ ಏವ [7]ಯಥಾತಥಾ ॥ ೧೯೫ ॥**

[1] ಆಸಕ್ತೈಃ. [2] ಮೂರ್ಖೈಃ. [3] ಬಹುದೋಷಪ್ರದಂ. [4] ಆತ್ಮಾನಂ. [5] ದೇಹಿನಿ. [6] ರೂಪರಹಿತಃ. [7] ಯೇನಕೇನಪ್ರಕಾರೇಣ.

ಈ ಆತ್ಮನು ಸ್ವಭಾವದಿಂದ ರೂಪರಹಿತನು–ಅಮೂರ್ತನು. ಶರೀರಗಳಿಂದ ರೂಪವುಳ್ಳವನಾಗಿರುತ್ತಾನೆ. ಮುಕ್ತಿಪ್ರಾಪ್ತಿಯು ಅರೂಪಿಯಾದ ಆತ್ಮನ ಸ್ವರೂಪವಾಗಿರುತ್ತದೆ. ಈ ಕಾರಣದಿಂದ ದೇಹವೇ ಯಾವ ಪ್ರಕಾರದಿಂದಲಾದರೂ ತ್ಯಾಜ್ಯವಾಗಿರುತ್ತದೆ.

**ಬಂಧಃ ಸರ್ವೋಽಪಿ ಸಂಬಂಧೋ ಭೋಗೋ ರೋಗೋ ರಿಪುರ್ವಪುಃ ।**
**ದೀರ್ಘಮಾಯಾಸಯತ್ಯಾಯುಸ್ತೃಷ್ಣಾಗ್ನೇರಿಂಧನಂ ಧನಮ್ ॥ ೧೯೬ ॥**

ಸಮಸ್ತವಾದ ಸಂಬಂಧವೂ ಬಂಧನವಾಗಿರುತ್ತದೆ. ಭೋಗವು ರೋಗವಾಗಿರುತ್ತದೆ. ಶರೀರವು ಶತ್ರುವಾಗಿರುತ್ತದೆ. ಆಯುಷ್ಯವು ದೀರ್ಘವಾಗಿ ಆಯಾಸಪಡಿಸುತ್ತದೆ. ಧನವು ಆಶೆಯೆಂಬ ಬೆಂಕಿಗೆ ಇಂಧನವು–ಸೌದೆಯಾಗಿರುತ್ತದೆ.

**ಆದೌ ಜನ್ಮ ಜರಾ ರೋಗಾ ಮಧ್ಯೇಂತೇಽಪ್ಯಂತಕಃ ಖಲಃ ।**
**ಇತಿ ಚಕ್ರಕಸಂಭ್ರಾಂತಿರ್ಜಂತೋರ್ಮಧ್ಯೇಭವಾರ್ಣವಮ್ ॥ ೧೯೭ ॥**

ಭವಸಮುದ್ರದ ಮಧ್ಯದಲ್ಲಿ ಪ್ರಾಣಿಗೆ ಮೊದಲು ಜನ್ಮವು, ಮಧ್ಯದಲ್ಲಿ ವೃದ್ಧಾಪ್ಯ ಮತ್ತು ರೋಗಗಳು, ಅಂತದಲ್ಲಾದರೋ ದುಷ್ಟನಾದ ಯಮನು, ಹೀಗೆ ಚಕ್ರದಂತೆ ಸುತ್ತುವಿಕೆಯಾಗುವುದು.

**ಭೋಗಿನೋ ಭೋಗವದ್ಭೋಗಾ ನ ಭೋಗಾ ನಾಮ ಭೋಗ್ಯಕಾಃ ।**
**ಏವಂ ಭಾವಯತೋ ಭೋಗಾನ್ ಭೂಯೋಭೂವನ್**
**ಭಯಾವಹಾಃ ॥ ೧೯೮ ॥**

ಭೋಗಗಳೆಂಬುವು ನಿಜವಾದ ಭೋಗಗಳಲ್ಲ; ಅವು ಭೋಗಿಯ ಭೋಗದಂತೆ (ಸರ್ಪದಹೆಡೆ ಅಥವಾ ಪೊರೆಯಂತೆ) ಭೋಗಿಸಲ್ಪಡತಕ್ಕುವು. ಅಸ್ಥಿರಗಳೆಂದು ಭಾವವು. ಈ ಪ್ರಕಾರವಾಗಿ ಭೋಗಗಳನ್ನು ಬಾರಿಬಾರಿಗೆ ಭಾವಿಸುವವನಾದ ಹಿರಣ್ಯವರ್ಮನಿಗೆ ಭೋಗಗಳು ಭಯವನ್ನುಂಟುಮಾಡುವುವುಗಳಾದುವು.

**ನಿಷೇವ್ಯಮಾಣಾ ವಿಷಯಾ ವಿಷಮಾ ವಿಷಸನ್ನಿಭಾಃ ।**
**[1]ದೇದೀಪ್ಯಂತೇ ಬುಭುಕ್ಷಾಭಿ[2]ರ್ದೀಪನೀಯೈರಿವೌಷಧೈಃ ॥ ೧೯೯ ॥**

ವಿಷಮಗಳೂ ವಿಷಕ್ಕೆ ಸಮಾನಗಳೂ ಹೆಚ್ಚಾಗಿ ಸೇವಿಸಲ್ಪಡುವುವೂ ಆದ ವಿಷಯಗಳು ಭೋಗಿಸುವುದಕ್ಕೆ ಇಚ್ಛೆಯುಳ್ಳವರಿಂದ, ದೀಪನಕ್ಕೆ ಕಾರಣಗಳಾದ–ಉದರಾಗ್ನಿಯನ್ನು ಹೆಚ್ಚಿಸುವ ಔಷಧಿಗಳಿಂದಲೋಪಾದಿಯಲ್ಲಿ, ಅಧಿಕವಾಗಿ ದಹಿಸಲ್ಪಡುತ್ತವೆ.

**ನ ತೃಪ್ತಿ[3]ರೇಭಿರಿತ್ಯೇಷ ಏವ ದೋಷೋ ನ ಪೋಷಕಾಃ ।**
**ತೃಷಶ್ಚ ವಿಷವಲ್ಲರ್ಯಾಃ ಸಂಸೃತೇಶ್ಚಾವಲಂಬನಮ್ ॥ ೨೦೦ ॥**

ಈ ಭೋಗಗಳಿಂದ ತೃಪ್ತಿಯೂ ಇಲ್ಲ. ಈ ಪ್ರಕಾರವಾದ ಈ ದೋಷವೇ ಅಲ್ಲ. ಈ ಭೋಗಗಳು ಆಶೆಯನ್ನೂ ಬೆಳೆಸುತ್ತವೆ. ಇವುಗಳಿಂದ ಸಂಸಾರವೆಂಬ ವಿಷಲತೆಯ ಆಶ್ರಯವೂ ಉಂಟಾಗುವುದು.

**ವನಿತಾತನುಸಂಭೂತಕಾಮಾಗ್ನಿಃ ಸ್ನೇಹಸೇಚನೈಃ ।**
**ಕಾಮಿನಾಂ ಭಸ್ಮಸಾದ್ಭಾವಮನೀತ್ವಾ ನ ನಿವರ್ತತೇ ॥ ೨೦೧ ॥**

ಸ್ತ್ರೀಯ ಶರೀರದಿಂದುಂಟಾಗುವ ಕಾಮವೆಂಬ ಬೆಂಕಿಯು ಸ್ನೇಹದ (ಪ್ರೀತಿಯ, ಎಣ್ಣೆಯ) ಸೇಚನೆಗಳಿಂದ ಕಾಮುಕರ ಭಸ್ಮಕ್ಕೆ ಅಧೀನವಾದ ಭಾವವನ್ನು (ಭಸ್ಮರೂಪವನ್ನು) ಹೊಂದಿಸದೆ ಹಿಂದಿರುಗುವುದಿಲ್ಲ. ಕಾಮುಕರನ್ನು ದಹಿಸದೆ ಬಿಡುವುದಿಲ್ಲವೆಂದು ಭಾವವು.

[1] ಭೃಶಂದಂಹತಿ. [2] ದೀಪನಹೇತುಭಿಃ. [3] ಭೋಗ್ಯೈಃ.

**ಜಂತೋರ್ಭೋಗೇಷು ಭೋಗಾಂತೇ [೧]ಸರ್ವತ್ರ [೨]ವಿರತಿರ್ಧ್ರುವಾ ।**
**ಸ್ಥೈರ್ಯೇ [೩]ತಸ್ಯಾಃ ಪ್ರಯತ್ನೋಸ್ಯ ಕ್ರಿಯಾಶೇಷೋ ಮನೀಷಿಣಃ ॥**

ಪ್ರಾಣಿಗೆ ಭೋಗಗಳಲ್ಲಿಯೂ(ಭೋಗಿಸುವಾಗಲೂ) ಭೋಗದ ಕೊನೆಯಲ್ಲಿಯೂ ಎಲ್ಲಾವಿಷಯಗಳಲ್ಲಿಯೂ ಅಪ್ರೀತಿಯು ನಿಶ್ಚಿತವಾಗಿರುತ್ತದೆ. ಆ ಅಪ್ರೀತಿಯ ಸ್ಥಿರತೆಯಲ್ಲಿ ಪ್ರಯತ್ನವು ಈ ವಿವೇಕಿಯಾದ ಮನುಷ್ಯನ ಕಾರ್ಯಶೇಷವಾಗಿರುತ್ತದೆ. ವಿರಕ್ತಿಯನ್ನು ಸ್ಥಿರಪಡಿಸುವುದಕ್ಕೆ ಪ್ರಯತ್ನಿಸುವುದು ಉಳಿದಿದೆಯೆಂದು ಭಾವವು.

**ಪ್ರಾಪಿತೋಪ್ಯಸಕೃದ್ದುಃಖಂ ಭೋಗೈಸ್ತಾನೇವ ಯಾಚತೇ ।**
**ಧತ್ತೇವತಾಡಿತೋಪ್ಯಂಘ್ರೀ ಮಾತ್ರಾ[೪]ಸ್ಯಾ ಏವ ಬಾಲಕಃ ॥ ೨೦೩ ॥**

ಭೋಗಗಳಿಂದ ಬಾರಿಬಾರಿಗೆ ದುಃಖವನ್ನು ಹೊಂದಿದರೂ ಪ್ರಾಣಿಯು ಆ ಭೋಗಗಳನ್ನೇ ಬೇಡುತ್ತದೆ. ತಾಯಿಯು ಹೊಡೆದರೂ ಬಾಲಕನು ಇವಳ ಕಾಲುಗಳನ್ನೇ ಧಾರಣಮಾಡುವುದಿಲ್ಲವೇ ? ತಾಯಿಯು ಒದೆದರೂ ಬಾಲಕನು ಆಕೆಯ ಕಾಲನ್ನು ಹಿಡಿಯುತ್ತಾನೆಂದು ಭಾವವು.

**ಅಧ್ರುವತ್ವಂ ಗುಣಂ ಮನ್ಯೇ ಭೋಗಾಯುಃಕಾಯಸಂಪದಾಮ್ ।**
**ಧ್ರುವೇಷ್ವೇ[೫]ಷು ಕುತೋ ಮುಕ್ತಿರ್ವಿನಾ ಮುಕ್ತೇಃ ಕುತಃ ಸುಖಮ್ ॥**

ಭೋಗ ಆಯುಷ್ಯ ಶರೀರ ಸಂಪತ್ತಿಗಳ ಅಸ್ಥಿರತ್ವವನ್ನು ಗುಣವನ್ನಾಗಿ ತಿಳಿಯುತ್ತೇನೆ. ಇವುಗಳು ಸ್ಥಿರಗಳಾಗಿದ್ದರೆ ಮುಕ್ತಿಯು ಏತರಿಂದಾಗುವುದು ? ಮುಕ್ತಿಯಾಗದೆ ಸುಖವು ಏತರಿಂದಾಗುವುದು ?

**[೬]ವಿಸ್ರಂಭಜನನೈಃ ಪೂರ್ವಂ ಪಶ್ಚಾತ್ಪ್ರಾಣಾರ್ಥಹಾರಿಭಿಃ ।**
**ಪಾರಿಪಂಥಿಕಸಂಕಾಶೈರ್ವಿಷಯೈಃ ಕಸ್ಯ ನಾಪದಃ ॥ ೨೦೫ ॥**

ಮೊದಲು ವಿಶ್ವಾಸವನ್ನುಂಟುಮಾಡುವುವೂ ಬಳಿಕ ಪ್ರಾಣಗಳನ್ನೂ ಅರ್ಥವನ್ನೂ ಅಪಹರಣಮಾಡುವುವೂ ಶತ್ರುಸದೃಶಗಳೂ ಆದ ವಿಷಯಗಳಿಂದ ಯಾವನಿಗೆ ವಿಪತ್ತಿಗಳಿಲ್ಲ ?

**ತದ್ದುಃಖಸ್ಯೈವ ಮಾಹಾತ್ಮ್ಯಂ ಸ್ಯಾತ್ಸುಖಂ ವಿಷಯೈಶ್ಚ ಯತ್ ।**
**ಯತ್ಕಾರವೇಲ್ಲಕಂ ಸ್ವಾದು ಪ್ರಾಭವಂ ನನು ತತ್ಕ್ಷುಧಃ ॥ ೨೦೬ ॥**

ವಿಷಯಗಳಿಂದ ಯಾವ ಸುಖವುಂಟಾಗುವುದೋ ಅದು ದುಃಖದ ಮಹಿಮೆಯೇ ಆಗಿರುವುದು. ಹಾಗಲಕಾಯಿಯು ರುಚಿಯಾಗಿರುವುದು ಯಾವುದುಂಟೋ ಅದು ಹೊಟ್ಟೆಹಸಿವಿನ ಸಾಮರ್ಥ್ಯವಲ್ಲವೆ ?

**ಸಂಕಲ್ಪಸುಖಸಂತೋಷಾದ್ವಿಮುಖಃ ಸ್ವಾತ್ಮಜಾತ್ಸುಖಾತ್ ।**
**ಗುಂಜಾಗ್ನಿತಾಪಸಂತುಷ್ಟಶಾಖಾಮೃಗಸಮೋ ಜನಃ ॥ ೨೦೭ ॥**

ಸಂಕಲ್ಪದಿಂದುಂಟಾಗುವ ಸುಖದ ಸಂತೋಷದಿಂದ(ಸಂತುಷ್ಟವಾಗಿ) ತನ್ನ ಆತ್ಮನಲ್ಲಿ ಉಂಟಾಗುವ ಸುಖದಿಂದ ವಿಮುಖವಾಗುವ ಜನವು, ಗುಲಗುಂಜಿಯನ್ನು ಬೆಂಕಿಯೆಂದು ತಿಳಿದು ಅದರ ತಾಪದಿಂದ ಸಂತುಷ್ಟವಾಗುವ ಕಪಿಗೆ ಸಮಾನವಾಗಿರುವುದು.

**ಸದಾಸ್ತಿ ನಿರ್ಜರಾ ನಾಸೌ ಮುಕ್ತ್ಯೈ ಬಂಧಚ್ಯುತೇರ್ವಿನಾ ।**
**ತಚ್ಚ್ಯುತಿಶ್ಚ ಹತೇರ್ಬಂಧಹೇತೋಸ್ತತ್ತದ್ಧತೌ ಯತೇ ॥ ೨೦೮ ॥**

ಕರ್ಮಗಳ ನಿರ್ಜರೆಯು ಯಾವಾಗಲೂ ಇರುತ್ತದೆ. ಆದರೆ ನೂತನ ಕರ್ಮಗಳ ಬಂಧವು ನಾಶವಾದಹೊರತು ಈ ನಿರ್ಜರೆಯು ಮುಕ್ತಿಗೆ ಕಾರಣವಾಗುವುದಿಲ್ಲ. ಕರ್ಮಬಂಧದ ಹೇತುವಿನ ನಾಶದಿಂದ ಆ ಬಂಧದ ನಾಶವೂ ಆಗುವುದು. ಆದುದರಿಂದ ಆ ಬಂಧಹೇತುವಿನ ನಾಶದಲ್ಲಿ ಯತ್ನಿಸುತ್ತೇನೆ.

೧ ಸರ್ವೇಷು. ೨ ಅಪ್ರೀತಿಃ. ೩ ವಿರತೇಃ. ೪ ಮಾತುಃ. ೫ ಭೋಗೇಷು ಧ್ರುವೇಷು ಸತ್ಸು. ೬ ವಿಶ್ವಾಸಜನಕೈಃ.

**ಕೇನ ಮೋಕ್ಷಃ ಕಥಂ [೧]ಜೀವ್ಯಂ ಕುತಃ ಸೌಖ್ಯಂ ಕ್ವ ವಾ ಮತಿಃ ।**
**[೨]ಪರಿಗ್ರಹಗ್ರಹಗ್ರಾಹಗೃಹೀತಸ್ಯ ಭವಾರ್ಣವೇ ॥ ೨೦೯ ॥**

ಭವವೆಂಬ ಸಮುದ್ರದಲ್ಲಿ ಪರಿಗ್ರಹ ಸ್ವೀಕಾರವೆಂಬ ಮೊಸಳೆಯಿಂದ ಹಿಡಿಯಲ್ಪಟ್ಟವನಿಗೆ ಯಾವುದರಿಂದ ಬಿಡುಗಡೆಯಾಗಬೇಕು ? ಹೇಗೆ ಬದುಕಬೇಕು ? ಸೌಖ್ಯವು ಏತರಿಂದ ? ಬುದ್ಧಿಯು ಎಲ್ಲಿರುವುದು ?

**ಕಿಂ [೩]ಭವ್ಯಃ ಕಿಮಭವ್ಯೋಯಮಿತಿ ಸಂಶೇರತೇ ಬುಧಾಃ ।**
**ಜ್ಞಾತ್ವಾಪ್ಯನಿತ್ಯತಾಂ ಲಕ್ಷ್ಮ್ಯಾ [೪]ಕಟಾಕ್ಷಶರಶಾಯಿತೇ ॥ ೨೧೦ ॥**

ಅನಿತ್ಯತ್ವವನ್ನು ತಿಳಿದೂ ಲಕ್ಷ್ಮಿಯ ಕಡೆಗಣ್ಣಿನ ನೋಟವೆಂಬ ಬಾಣದಿಂದ ಕೃಶವಾಗಿ ಮಾಡಲ್ಪಟ್ಟ ಶರೀರವುಳ್ಳವನಾದ ಪುರುಷನಲ್ಲಿ ವಿದ್ವಾಂಸರು "ಇವನು ವಿಶಿಷ್ಟವೂ ಇಷ್ಟವೂ ಆದ ಪರಿಣಾಮದಿಂದ ಕೂಡಿದವನಾಗುವನೋ ?(ಭವ್ಯನೋ) ಅಭವ್ಯನೊ ?" ಎಂಬುದಾಗಿ ಸಂದೇಹಪಡುತ್ತಾರೆ.

**ಅಯಂ ಕಾಯದ್ರುಮಃ ಕಾಂತಾವ್ರತತೀತತಿವೇಷ್ಟಿತಃ ।**
**[೫]ಜರಿತ್ವಾ ಜನ್ಮಕಾಂತಾರೇ [೬]ಕಾಲಾಗ್ನಿಗ್ರಾಸಮಾಪ್ಸ್ಯತಿ ॥ ೨೧೧ ॥**

ಈ ಶರೀರವೆಂಬ ವೃಕ್ಷವು ಪತ್ನಿಯೆಂಬ ಬಳ್ಳಿಯ ಸಮೂಹದಿಂದ ಸುತ್ತಲ್ಪಟ್ಟು ಭವವೆಂಬ ಕಾಡಿನಲ್ಲಿ ಜೀರ್ಣವಾಗಿ–ಒಣಗಿ ಯಮನೆಂಬ ಕಾಡ್ಗಿಚ್ಚಿಗೆ ತುತ್ತಾಗುವುದು.

**ಯದಿ ಧರ್ಮಕಣಾದಿತ್ಥಂ ನಿದಾನವಿಷದೂಷಿತಾತ್ ।**
**ಸುಖಂ ಧರ್ಮಾಮೃತಾಂಭೋಧಿಮಜ್ಜನೇನ ಕಿಮುಚ್ಯತೇ ॥ ೨೧೨ ॥**

ಉತ್ತರಭವದಲ್ಲಿ ವಿಷಯಸುಖೇಚ್ಛಾರೂಪವಾದ ನಿದಾನಶಲ್ಯವೆಂಬ ವಿಷದಿಂದ ದೂಷಿತವಾದ ಧರ್ಮದ ಲೇಶವೂ ಹೀಗೆ ಸುಖವನ್ನುಂಟುಮಾಡುತ್ತದೆಂದಮೇಲೆ ಧರ್ಮವೆಂಬ ಅಮೃತಸಮುದ್ರದಲ್ಲಿ ಮುಳುಗುವುದರಿಂದ ಸುಖವಾಗುವುದೆಂದು ಏನು ಹೇಳುವುದು ?

**ಅಬೋಧದ್ವೇಷರಾಗಾತ್ಮಾ ಸಂಸಾರಸ್ತದ್ವಿಪರ್ಯಯಃ ।**
**ಮೋಕ್ಷಶ್ಚೇದ್ವೀಕ್ಷಿತೋ ವಿದ್ಭಿಃ ಕಃ [೭]ಕ್ಷೇಪೋ ಮೋಕ್ಷಸಾಧನೇ ॥ ೨೧೩ ॥**

ಸಂಸಾರವು ಅಜ್ಞಾನ ದ್ವೇಷ ರಾಗಸ್ವರೂಪವೂ ಮೋಕ್ಷವು ಸಂಸಾರಕ್ಕೆ ವಿಪರೀತಸ್ವರೂಪವುಳ್ಳುದೂ ಆಗಿರುವುದಾದರೆ ಜ್ಞಾನಿಗಳು ನೋಡಿರುವ ಮೋಕ್ಷಸಾಧನದಲ್ಲಿ ಕಾಲಹರಣ–ಸಾವಕಾಶವೇನು ?

**ಯದಿ ದೇಶಾದಿಸಾಕಲ್ಯೇ ನ ತಪಸ್ತತ್ಪುನಃ ಕುತಃ ।**
**ಮಧ್ಯೇರ್ಣವಂ [೮]ಯತೋ ವೇಗಾತ್ಕರಾಗ್ರಚ್ಯುತರತ್ನವತ್ ॥ ೨೧೪ ॥**

ದೇಶ ಕಾಲ ಕುಲ ಜಾತಿ ಮೊದಲಾದ ಸಾಧನಗಳ ಸಮಗ್ರತೆಯಿದ್ದರೂ ತಪಸ್ಸಿಲ್ಲದಿದ್ದರೆ, ಸಮುದ್ರದ ಮಧ್ಯದಲ್ಲಿ ತ್ವರೆಯಿಂದ ಹೋಗುವವನ ಕೈಯ ತುದಿಯಿಂದ ಜಾರಿದ ರತ್ನದಂತೆ, ಆ ತಪಸ್ಸು ಮತ್ತೆ ಎಲ್ಲಿ ದೊರೆಯಬೇಕು ? ಅನುಕೂಲಸಾಧನಗಳ ಮತ್ತು ತಪಸ್ಸಿನ ಪ್ರಾಪ್ತಿಯು ದುರ್ಲಭವೆಂದು ಭಾವವು.

**ಆತ್ಮಂಸ್ತ್ವಂ ಪರಮಾತ್ಮಾನಮಾತ್ಮನ್ಯಾತ್ಮಾನಮಾತ್ಮನಾ ।**
**ಹಿತ್ವಾ ದುರಾತ್ಮತಾ[೯]ಮಾತ್ಮನೀನೇಧ್ವನಿ ಚರನ್ಕುರು ॥ ೨೧೫ ॥**

ಎಲೈ ಆತ್ಮನೇ ! ಆತ್ಮಹಿತಕರವಾದ ಮಾರ್ಗದಲ್ಲಿ ಸಂಚರಿಸುವವನಾದ ನೀನು ದುರಾತ್ಮತ್ವವನ್ನು ಬಿಟ್ಟು ಆತ್ಮನಿಂದ(ತನ್ನಿಂದ) ಆತ್ಮನಲ್ಲಿ(ತನ್ನಲ್ಲಿ) ಆತ್ಮನನ್ನು (ತನ್ನನ್ನು) ಪರಮಾತ್ಮನನ್ನಾಗಿ ಮಾಡು."

೧ ಜೀವನಂ. ೨ ಪರಿಗ್ರಹಸ್ವೀಕಾರನಕ್ರಸ್ವೀಕೃತಸ್ಯ. ೩ ವಿಶಿಷ್ಟೇಷ್ಟ ಪರಿಣಾಮೇನಕಿಂಭವಿಷ್ಯತಿ. ೪ ಅಪಾಂಗದರ್ಶನಬಾಣತನೂಕೃತಶರೀರೇಪುಂಸಿ. ೫ ಜರೀಭೂತ್ವಾ. ೬ ಯಮದಾವಾಗ್ನಿ. ೭ ಕಾಲಯಾಪನಾ. ೮ ಗಚ್ಛತಃ. ೯ ಆತ್ಮಹಿತೇ.

ಇತಿ ಸಂಚಿಂತಯನ್ ಗತ್ವಾ ಪುರಂ ಪರಮತತ್ತ್ವವಿತ್ ।
ಸುವರ್ಣವರ್ಮಣೇ ರಾಜ್ಯಂ ಸಾಭಿಷೇಕಂ ವಿತೀರ್ಯ ಸಃ ॥ ೨೧೬ ॥

ಅವತೀರ್ಯ ಮಹೀಂ ಪ್ರಾಪ್ಯ ಶ್ರೀಪುರಂ ಶ್ರೀನಿಕೇತನಮ್ ।
ದೀಕ್ಷಾಂ ಜೈನೇಶ್ವರೀಂ ಪ್ರಾಪ ಶ್ರೀಪಾಲಗುರುಸನ್ನಿಧೌ ॥ ೨೧೭ ॥

ಈ ಪ್ರಕಾರವಾಗಿ ಚಿಂತಿಸುವವನಾಗಿ ಪರಮತತ್ತ್ವಜ್ಞಾನಿಯಾದ ಆ ಹಿರಣ್ಯವರ್ಮನು ಧಾನ್ಯಕಮಾಲವನದಿಂದ ತನ್ನ ನಗರಕ್ಕೆ ಹೋಗಿ ಸುವರ್ಣವರ್ಮನಿಗೆ ರಾಜ್ಯಾಭಿಷೇಕಸಹಿತವಾದ ರಾಜ್ಯವನ್ನು ಕೊಟ್ಟು, ವಿಜಯಾರ್ಧಪರ್ವತದಿಂದ ಭೂಮಿಗಿಳಿದು ಲಕ್ಷ್ಮಿಗೆ ಗೃಹವಾಗಿರುವ ಶ್ರೀಪುರವನ್ನು ಸೇರಿ ಶ್ರೀಪಾಲಗುರುವಿನ ಬಳಿಯಲ್ಲಿ ಜಿನೇಶ್ವರನ ಸಂಬಂಧವಾದ ದೀಕ್ಷೆಯನ್ನು ಪಡೆದನು.

ಪರಿಗ್ರಹಗ್ರಹಾನ್ಮುಕ್ತೋ ದೀಕ್ಷಿತ್ವಾ ಸ ತಪೋಂಶುಭಿಃ ।
ಹಿರಣ್ಯವರ್ಮಘರ್ಮಾಂಶುರ್ನಿರ್ಮಲೋ ವ್ಯದ್ಯುತತ್ತರಾಮ್ ॥ ೨೧೮ ॥

ಪರಿಗ್ರಹವೆಂಬ ಗ್ರಹದಿಂದ ಬಿಟ್ಟ ಆ ಹಿರಣ್ಯವರ್ಮನೆಂಬ ಸೂರ್ಯನು ನಿರ್ಮಲನಾಗಿ ದೀಕ್ಷೆಯನ್ನು ತೆಗೆದುಕೊಂಡು ತಪಸ್ಸುಗಳೆಂಬ ಕಿರಣಗಳಿಂದ ಅಧಿಕವಾಗಿ ಪ್ರಕಾಶಿಸಿದನು.

ಪ್ರಭಾವತೀ ಚ [೧]ತನ್ಮಾತ್ರಾ [೨]ಗುಣವತ್ಯಾಸ್ತಪೋಗಮತ್ ।
ಕುತಶ್ಚಂದ್ರಮಸಂ ಮುಕ್ತ್ವಾ ಚಂದ್ರಿಕಾಯಾಃ ಸ್ಥಿತಿಃ ಪೃಥಕ್ ॥ ೨೧೯ ॥

ಪ್ರಭಾವತಿಯು ಹಿರಣ್ಯವರ್ಮನ ತಾಯಿ–ಶಶಿಪ್ರಭೆಯೊಡನೆ ಗುಣವತಿಯೆಂಬ ಆರ್ಜಿಕೆಯ ಬಳಿಯಲ್ಲಿ ತಪಸ್ಸನ್ನು ಪಡೆದಳು. ಚಂದ್ರನನ್ನು ಬಿಟ್ಟು ಬೇರೆಯಾಗಿ ಬೆಳದಿಂಗಳಿನ ಇರುವಿಕೆಯು ಯಾವ ಕಾರಣದಿಂದಾಗುವುದು ?

ಸದ್ವೃತ್ತಸ್ತಪಸಾ ದೀಪ್ತೋ ದಿಗಂಬರವಿಭೂಷಣಃ ।
ನಿಸ್ಸಂಗೋ ವ್ಯೋಮಗಾಮ್ಯೇಕವಿಹಾರೀ ವಿಶ್ವವಂದಿತಃ ॥ ೨೨೦ ॥

[೩]ನಿತ್ಯೋದಯೋ ಬುಧಾಧೀಶೋ [೪]ವಿಶ್ವದೃಶ್ವಾ [೫]ವಿರೋಚನಃ ।
ಸ ಕದಾಚಿತ್ಸಮಾಗಚ್ಛನ್ಮೋದಯನ್ ಪುಂಡರೀಕಿಣೀಮ್ ॥ ೨೨೧ ॥

ವರ್ತುಲಾಕಾರನೂ ಪ್ರಕಾಶಮಾನನೂ ದಿಕ್ಕುಗಳನ್ನೂ ಆಕಾಶವನ್ನೂ ಅಲಂಕರಿಸುವವನೂ ಸಂಬಂಧರಹಿತನೂ ಆಕಾಶಸಂಚಾರಿಯೂ ಒಬ್ಬನೇ ವಿಹರಿಸುವವನೂ ಲೋಕವಂದಿತನೂ ಸರ್ವಕಾಲದಲ್ಲಿ ಉದಯವುಳ್ಳವನೂ ಬುಧನಅಧಿಪತಿಯೂ ಜಗಚ್ಚಕ್ಷುವೂ ಆದ ಸೂರ್ಯನು ಶ್ವೇತಕಮಲವನ್ನು ಅರಳಿಸುತ್ತ ಬರುವಂತೆ ಸದಾಚಾರಸಂಪನ್ನನೂ ತಪಸ್ಸಿನಿಂದ ಪ್ರಕಾಶಮಾನನೂ ನಗ್ನತ್ವವೇ ಭೂಷಣವಾಗಿರುವವನೂ ಪರಿಗ್ರಹರಹಿತನೂ ಆಕಾಶದಲ್ಲಿ ಸಂಚರಿಸುವವನೂ ಒಬ್ಬನೇ ವಿಹರಿಸುವವನೂ ಎಲ್ಲರಿಂದ ವಂದಿಸಲ್ಪಟ್ಟವನೂ ಸರ್ವಕಾಲದಲ್ಲಿ ಉತ್ಕೃಷ್ಟ ಜ್ಞಾನವುಳ್ಳವನೂ ವಿದ್ವಾಂಸರಿಗೆ ಅಧಿಪತಿಯೂ ಲೋಕಕ್ಕೆ ಕಣ್ಣಿನಂತಿರುವವನೂ ಆದ ಆ ಹಿರಣ್ಯವರ್ಮಮುನಿಯು ಒಂದಾನೊಂದು ಕಾಲದಲ್ಲಿ ಪುಂಡರೀಕಿಣೀ ನಗರವನ್ನು ಸಂತೋಷಪಡಿಸುವವನಾಗಿ ಬಂದನು.

ಸಪ್ರಭಾ ಚಂದ್ರಲೇಖೇವ ಸಹ [೬]ತತ್ರ ಪ್ರಭಾವತೀ ।
ಗುಣವತ್ಯಾ [೭]ಸಮಾಗಂಸ್ತ ಸಂಗತಿಃ ಸ್ಯಾದ್ಯದೃಚ್ಛಯಾ ॥ ೨೨೨ ॥

ಪ್ರಭಾವತಿಯು ಗುಣವತ್ಯಾರ್ಯಿಕೆಯೊಡನೆ, ಪ್ರಭೆಯೊಡನೆ ಕೂಡಿರುವ ಚಂದ್ರನ ಕಲೆಯಂತೆ, ಆ ಪುಂಡರೀಕಿಣೀನಗರದಲ್ಲಿ ಬಂದಳು ಅಥವಾ ಸಂಧಿಸಿದಳು. ಹೀಗೆ ಆಕಸ್ಮಾತ್ ಸಮಾಗಮವಾಗುವುದುಂಟು.

೧ ಹಿರಣ್ಯವರ್ಮಣೋಜನನ್ಯಾ ಶಶಿಪ್ರಭಯಾಸಹ. ೨ ಗುಣವತ್ಯಾರ್ಯಿಕಾಯಾಃ ಸಕಾಶಾತ್. ೩ ಸರ್ವಕಾಲೋತ್ಕೃಷ್ಟಬೋಧಃ. ೪ ಜಗಚ್ಚಕ್ಷುಃ. ೫ ರವಿಃ. ೬ ಪುಂಡರೀಕಿಣ್ಯಾಂ. ೭ ಸಮಾಗತವತೀ ಸಂಗತವತೀವಾ.

ಗುಣವತ್ಯಾರ್ಯಿಕಾ ದೃಷ್ಟ್ವಾ ನತ್ವೋಕ್ತಾ ಪ್ರಿಯದತ್ತಯಾ ।
[೧]ಕುತೋ[೨]ಸೌ ಗಣಿನೀತ್ಯಾಖ್ಯತ್ಸ್ವರ್ಗತೇತಿ ಪ್ರಭಾವತೀ ॥ ೨೨೩ ॥

ಪ್ರಿಯದತ್ತೆಯು ಗುಣವತ್ಯಾರ್ಯಿಕೆಯನ್ನು ನೋಡಿ ನಮಸ್ಕರಿಸಿ ''ಈ ಯಶಸ್ವತ್ಯಾರ್ಯಿಕೆಯು ಎಲ್ಲಿರುತ್ತಾಳೆ ?'' ಎಂದು ಕೇಳಿದಳು. ''ಸ್ವರ್ಗಕ್ಕೆ ಹೋದಳು'' ಎಂದು ಪ್ರಭಾವತಿಯು ಹೇಳಿದಳು.

ತಚ್ಛ್ರುತ್ವಾ ನೇತ್ರಭೂತಾ [೩]ನೌ ಸೈವೇತಿ ಶುಚಮಾಗತಾ ।
ಕುತಃ ಪ್ರೀತಿಸ್ತ್ವಯೇತ್ಯುಕ್ತಾ ಸಾಬ್ರವೀತ್ಪ್ರಿಯದತ್ತಯಾ ॥ ೨೨೪ ॥

ನ ಸ್ಮರಿಷ್ಯಸಿ ಕಿಂ ಪಾರಾವತದ್ವಂದ್ವಂ ಭವದ್ಗೃಹೇ ।
[೪]ತತ್ರಾಹಂ ರತಿಷೇಣೇತಿ ತಚ್ಛ್ರುತ್ವಾ ವಿಸ್ಮಿತಾವದತ್ ॥ ೨೨೫ ॥

ಕ್ವಾಸೌ ರತಿವರೋದ್ಯೇತಿ ಸೋಪಿ ವಿದ್ಯಾಧರಾಧಿಪಃ ।
ಹಿರಣ್ಯವರ್ಮಾ ಕರ್ಮಾರಿರ್ಯತಿ[೫]ರತ್ರೇತಿ ಸಾಬ್ರವೀತ್ ॥ ೨೨೬ ॥

ಆ ಮಾತನ್ನು ಕೇಳಿ ''ಆಕೆಯೇ ನಮಗೆ(ಹಿಂದೆ ರತಿವರ ರತಿಷೇಣೆಯರಾಗಿದ್ದವರಿಗೆ) ಕಣ್ಣಿಗೆ ಸಮಾನಳಾದವಳು'' ಎಂದು ದುಃಖವನ್ನು ಹೊಂದಿದವಳೂ '' ಆಕೆಯೊಡನೆ ಪ್ರೀತಿಯು ಯಾವ ಕಾರಣದಿಂದ ?'' ಎಂದು ಪ್ರಿಯದತ್ತೆಯಿಂದ ಕೇಳಲ್ಪಟ್ಟವಳೂ ಆದ ಆ ಪ್ರಭಾವತಿಯು ಪ್ರಿಯದತ್ತೆಯನ್ನು ಕುರಿತು ''ನಿನ್ನ ಮನೆಯಲ್ಲಿದ್ದ ಎರಡು ಪಾರಿವಾಳಗಳನ್ನು ಸ್ಮರಿಸುವುದಿಲ್ಲವೇನು ? ಆ ಎರಡು ಪಾರಿವಾಳಗಳಲ್ಲಿ ನಾನು ರತಿಷೇಣೆಯಾಗಿರುತ್ತೇನೆ'' ಎಂದು ಹೇಳಿದಳು. ಆ ಮಾತನ್ನು ಕೇಳಿ ವಿಸ್ಮಿತಳಾದ ಈ ಪ್ರಿಯದತ್ತೆಯು ''ಈ ರತಿವರನು ಈಗ ಎಲ್ಲಿರುತ್ತಾನೆ ?'' ಎಂದು ಹೇಳಿದಳು. ಪ್ರಭಾವತಿಯು ''ಆ ವಿದ್ಯಾಧರಾಧಿಪತಿಯಾದ ಹಿರಣ್ಯವರ್ಮನು ಕರ್ಮಗಳಿಗೆ ಶತ್ರುವಾದ ಯತಿಯಾಗಿ ಈ ನಗರದಲ್ಲಿರುತ್ತಾನೆ'' ಎಂದು ಹೇಳಿದಳು.

ಪ್ರಿಯದತ್ತಾಪಿ ತಂ ಗತ್ವಾ ವಂದಿತ್ವೈತ್ಯ ಮಹಾಮುನಿಮ್ ।
ಪ್ರಭಾವತೀ ಪರಿಪೃಷ್ಟಾ[೬]ತ್ಪತ್ಯುರಿತ್ಯಾಹ ವೃತ್ತಕಮ್ ॥ ೨೨೭ ॥

ಪ್ರಿಯದತ್ತೆಯೂ ಹೋಗಿ ಆ ಮಹಾಮುನಿಯನ್ನು ವಂದಿಸಿ ಹಿಂದಿರುಗಿ ಬಂದು ಪ್ರಭಾವತಿಯ ಪ್ರಶ್ನೆಯಿಂದ ತನ್ನ ಪತಿ–ಕುಬೇರಕಾಂತನ ಸಮಾಚಾರವನ್ನು ಇಂತೆಂದಳು.

ವಿಜಯಾರ್ಧಗಿರೇರಸ್ಯ ಗಾಂಧಾರನಗರಾ[೭]ದಿಹ ।
ವಿಹರ್ತುಂ ರತಿಷೇಣೋಮಾ ಗಾಂಧಾರ್ಯಾ ಪ್ರಿಯಯಾಗಮತ್ ॥

''ವಿಜಯಾರ್ಧಪರ್ವತದ ಗಾಂಧಾರನಗರದಿಂದ ರತಿಷೇಣನು ತನ್ನ ಪತ್ನಿಯಾದ ಗಾಂಧಾರಿಯೊಡನೆ ಈ ಪುಂಡರೀಕಿಣಿಯಲ್ಲಿ ವಿಹರಿಸುವುದಕ್ಕಾಗಿ ಬಂದನು.

ಗಾಂಧಾರೀ ಸರ್ಪದಷ್ಟಾಹಮಿತಿ ತತ್ರ ಮೃಷಾ ಸ್ಥಿತಾ ।
ಮಂತ್ರೌಷಧೀಃ ಪ್ರಯೋಜ್ಯಾಸ್ಯಾಃ [೮]ಶ್ರೇಷ್ಠೀ ವಿದ್ಯಾಧರಶ್ಚ ಸಃ ॥ ೨೨೯ ॥

ಮಾಯಯಾ ನಾಸ್ಮಿ ಶಾಂತೇತಿ ತದ್ವ್ಯಾಕ್ಯಾತ್ತೇದವಾಗತೇ ।
ಆಹರ್ತುಂ ಸ್ವಪತೌ ಯಾತೇ [೯]ವನಂ [೧೦]ಶಕ್ತಿಮದೌಷಧಮ್ ॥ ೨೩೦ ॥

ಗಾಂಧಾರೀಂ [೧೧]ಬಂಧಕೀಭಾವಮುಪೇತ್ಯ ಸ್ಮರವಿಕ್ರಿಯಾಮ್ ।
ದರ್ಶಯಂತೀಂ ನಿರೀಕ್ಷ್ಯಾಹ ವಣಿಗ್ವರ್ಯೋ ದೃಢವ್ರತಃ ॥ ೨೩೧ ॥

೧ ಕ್ವಾಸ್ತೇ. ೨ ಯಶಸ್ವತೀ. ೩ ಪೂರ್ವಂರತಿವರ ರತಿಷೇಣಯೋರಾವಯೋಃ. ೪ ಪಾರಾವತದ್ವಂದ್ವೇ. ೫ ಅಸ್ಮಿನ್ಪುರೇ. ೬ ಪ್ರಿಯದತ್ತಾನಿಜವಲ್ಲಭಸ್ಯ ಕುಬೇರಕಾಂತಸ್ಯ. ೭ ಪುಂಡರೀಕಿಣ್ಯಾಂ. ೮ ಕುಬೇರಕಾಂತಃ. ೯ ವಿಜಯಾರ್ಧವನಂ. ೧೦ ವಿಷಾಪಹರಣೌಷಧಂ. ೧೧ ಕುಲಟಾತ್ವಂ.

**ಅಹಂ [೧]ವರ್ಷಧರೋ ವೇತ್ಸಿ ನ ಕಿಂ ಮಾಮಿತ್ಯುಪಾಯವಿತ್ ।**
**ವ್ಯಧಾದ್ವಿರಕ್ತಚಿತ್ತಾಂ ತಾಂ ತದೇವ ಹಿ ಧಿಯಃ ಫಲಮ್ ॥ ೨೩೨ ॥**

ಗಾಂಧಾರಿಯು ''ನನಗೆ ಹಾವು ಕಚ್ಚಿತು'' ಎಂದು ಸುಳ್ಳುಹೇಳಿ ಅಲ್ಲಿದ್ದಳು. ಕುಬೇರಕಾಂತಶ್ರೇಷ್ಠಿಯೂ ಆ ರತಿಷೇಣವಿದ್ಯಾಧರನೂ ಈ ಗಾಂಧಾರಿಗೆ ಮಂತ್ರಗಳನ್ನೂ ಔಷಧಿಗಳನ್ನೂ ಪ್ರಯೋಗಿಸಿದರು. ''ನಿಮ್ಮ ಈ ಕಪಟದಿಂದ ನಾನು ಶಾಂತಳಾಗುವುದಿಲ್ಲ'' ಎಂಬ ಗಾಂಧಾರಿಯ ಮಾತಿನಿಂದ ಖೇದವನ್ನು ಹೊಂದಿದವನಾದ ಆಕೆಯ ಪತಿ–ರತಿಷೇಣನು ವಿಷಾಪಹರಣಶಕ್ತಿಯುಳ್ಳ ಔಷಧವನ್ನು ತರುವುದಕ್ಕಾಗಿ ವಿಜಯಾರ್ಧಪರ್ವತದ ವನವನ್ನು ಕುರಿತು ಹೋಗುತ್ತಿರಲು ವ್ಯಭಿಚಾರಿಣಿಯ ಭಾವವನ್ನು ಹೊಂದಿ ಕಾಮವಿಕಾರವನ್ನು ತೋರಿಸುವವಳಾದ ಗಾಂಧಾರಿಯನ್ನು ದೃಢವ್ರತವುಳ್ಳವನಾದ ವೈಶ್ಯೋತ್ತಮನು ನೋಡಿ ''ನಾನು ನಪುಂಸಕನು. ನನ್ನನ್ನು ನೀನು ತಿಳಿಯುವುದಿಲ್ಲವೇನು ?'' ಎಂದು ಹೇಳಿದನು. ಉಪಾಯವನ್ನು ತಿಳಿದವನಾದ ಕುಬೇರಕಾಂತನು ಆ ಗಾಂಧಾರಿಯನ್ನು ವಿರಕ್ತವಾದ ಮನಸ್ಸುಳ್ಳವಳನ್ನಾಗಿ ಮಾಡಿದನು. ಅದಲ್ಲವೇ ಬುದ್ಧಿಯ ಫಲ ?

**ತದಾನೀಮಾಗತೇ ಪತ್ಯೌ ಸ್ವೇ ಸ್ವಾಸ್ಥ್ಯಮಹಮಾಗತಾ ।**
**ಪೂರ್ವೌಷಧಪ್ರಯೋಗೇಣೇತ್ಯುಕ್ತ್ವಾಗಾ[೨]ತ್ಸಪತಿಃ ಪುರಮ್ ॥ ೨೩೩ ॥**

ಆಗ ತನ್ನ ಪತಿಯು ಬರುತ್ತಿರಲು ''ಮೊದಲಿನ ಔಷಧದ ಪ್ರಯೋಗದಿಂದ ನಾನು ಸ್ವಾಸ್ಥ್ಯ–ಆರೋಗ್ಯವನ್ನು ಹೊಂದಿರುತ್ತೇನೆ'' ಎಂದು ಹೇಳಿ ಪತಿಸಹಿತಳಾಗಿ ತನ್ನ ಪಟ್ಟಣಕ್ಕೆ ಹೋದಳು.

**ದಯಿತಾಂತಕುಬೇರಾಖ್ಯೋ ಮಿತ್ರಾಂತಶ್ಚ ಕುಬೇರವಾಕ್ ।**
**ಪರಃ ಕುಬೇರದತ್ತಶ್ಚ [೩]ಕುಬೇರಶ್ಚಾಂತ್ಯದೇವವಾಕ್ ॥ ೨೩೪ ॥**

**ಕುಬೇರಾದಿಪ್ರಿಯಶ್ಚಾನ್ಯಃ ಪಂಚೈತೇ ಸಂಚಿತಶ್ರುತಾಃ ।**
**ಕಲಾಕೌಶಲಮಾಪನ್ನಾಃ ಸಂಪನ್ನನವಯೌವನಾಃ ॥ ೨೩೫ ॥**

**ಏತೈಃ ಸ್ವಸೂನುಭಿಃ ಸಾರ್ಧಮಾರುಹ್ಯ ಶಿಬಿಕಾಂ ವನಮ್ ।**
**ಧೃತ್ವಾ [೪]ಕುಬೇರಶ್ರೀಗರ್ಭಂ ಮಾಂ ವಿಹರ್ತುಂ ಸಮಾಗತಾಮ್ ॥**

**ದೃಷ್ಟ್ವಾ ಕದಾಚಿದ್ಗಾಂಧಾರೀ [೫]ಪೃಥಕ್ ಪೃಷ್ಟವತೀ ಪುಮಾನ್ ।**
**ತ್ವಚ್ಛ್ರೇಷ್ಠೀ ನೇತಿ ತತ್ಸತ್ಯಮುತ ನೇತ್ಯ[೬]ನ್ವವಾದಿಷಮ್ ॥ ೨೩೭ ॥**

**ತತ್ಸತ್ಯಮೇವ ಮತ್ತೋನ್ಯಾಂ ಪ್ರತ್ಯಸೌ ನ ಪುಮಾನಿತಿ ।**
**ತದಾಕರ್ಣ್ಯ ವಿರಜ್ಯಾ[೭]ಸೌ ಸಪತಿಃ ಸಂಯಮಂ ಶ್ರಿತಾ ॥ ೨೩೮ ॥**

ದಯಿತಪದವೇ ಅಂತದಲ್ಲಿರುವವನಾದ ಕುಬೇರ–ಕುಬೇರದಯಿತನೆಂಬವನು, ಮಿತ್ರಪದವೇ ಅಂತದಲ್ಲಿರುವವನಾದ ಕುಬೇರ–ಕುಬೇರಮಿತ್ರನು, ಮತ್ತೋರ್ವ ಕುಬೇರದತ್ತನು, ಅಂತದಲ್ಲಿ ದೇವವಚನವುಳ್ಳವನಾದ ಕುಬೇರ– ಕುಬೇರದೇವನು, ಇನ್ನೋರ್ವ ಕುಬೇರಪ್ರಿಯನು ಈ ಐದುಮಂದಿಗಳು ಶಾಸ್ತ್ರಜ್ಞರೂ ಕಲಾಕೌಶಲವನ್ನು ಹೊಂದಿದವರೂ ನವಯೌವನವನ್ನು ಹೊಂದಿರುವವರೂ ಆಗಿದ್ದರು. ಕುಬೇರಶ್ರೀಯ ಸಂಬಂಧಿಯಾದ ಗರ್ಭವನ್ನುಧರಿಸಿ(ಕುಬೇರ ಶ್ರೀಯೆಂಬ ಪುತ್ರಿಯನ್ನು ಗರ್ಭದಲ್ಲಿ ಧರಿಸಿ–ಗರ್ಭಿಣಿಯಾಗಿ) ಈ ಮಕ್ಕಳೊಡನೆ ಪಲ್ಲಕ್ಕಿಯನ್ನೇರಿ ವನದಲ್ಲಿ ವಿಹರಿಸುವುದಕ್ಕಾಗಿ ಬಂದಿರುವ ನನ್ನನ್ನು ನೋಡಿ ಒಂದಾನೊಂದು ಕಾಲದಲ್ಲಿ ಗಾಂಧಾರಿಯು ಗುಟ್ಟಾಗಿ ''ನಿನ್ನ ಶ್ರೇಷ್ಠಿಯು ಪುರುಷನಲ್ಲವೆಂಬುದು ನಿಜವೋ ?ಸುಳ್ಳೋ ?'' ಎಂದು ಕೇಳಿದಳು. ''ಅದು ನಿಜವೇ, ನನ್ನಿಂದ ಬೇರೆಯಾದ ಹೆಂಗಸನ್ನು ಕುರಿತು ಇವನು ಪುರುಷನಲ್ಲ'' ಎಂದು ಉತ್ತರವನ್ನು ಹೇಳಿದೆನು. ಈ ಗಾಂಧಾರಿಯು ಆ ಮಾತನ್ನು ಕೇಳಿ ವೈರಾಗ್ಯವನ್ನು ಹೊಂದಿ ಪತಿಸಹಿತಳಾಗಿ ವ್ರತವನ್ನು–ದೀಕ್ಷೆಯನ್ನು ಹೊಂದಿದಳು.

೧ ಷಂಡಃ. ೨ ಪತಿಸಹಿತಾ. ೩ ಕುಬೇರದೇವಃ. ೪ ಕುಬೇರಶ್ರಿಯಃ ಸಂಬಂಧಿಗರ್ಭಂ. ೫ ಏಕಾಂತೇ. ೬ ಅವೋಚಂ. ೭ ಗಾಂಧಾರೀ.

**ಪುನಸ್ತತ್ರಾಗತಾ ದೃಷ್ಟ್ವಾ ದೀಕ್ಷೇಯಂ ಕೇನ ಹೇತುನಾ ।**
**ತವೇತಿ ಸಾ ಮಯಾ ಪೃಷ್ಟಾ ಪ್ರಪ್ರಣಮ್ಯ ಪ್ರಿಯೋಕ್ತಿಭಿಃ ॥ ೨೩೯ ॥**

ಪುನಃ ಆ ವನಕ್ಕೆ ಬಂದ ಆ ಗಾಂಧಾರಿಯನ್ನು ನಾನು ನೋಡಿ ''ನಿನಗೆ ಈ ದೀಕ್ಷೆಯು ಯಾವ ಕಾರಣದಿಂದ ?'' ಎಂದು ಚೆನ್ನಾಗಿ ನಮಸ್ಕರಿಸಿ ಪ್ರಿಯವಚನಗಳಿಂದ ಕೇಳಿದೆನು.

**ಶ್ರೇಷ್ಠ್ಯೇವ ತೇ ತಪೋಹೇತುರಿತಿ ಪ್ರತ್ಯಬ್ರವೀದಸೌ ।**
**ನಿಗೂಢಂ ತದ್ವಚಃ ಶ್ರೇಷ್ಠೀ ಶ್ರುತ್ವಾಗತ್ಯ ಪುರಃ ಸ್ಥಿತಃ ॥ ೨೪೦ ॥**

**ಮಾಮುಜ್ಜೈಷೀಃ ಸಖಾ[೧]ಸೌ ಮೇ ಕ್ವಾದ್ಯೇತಿ ಪರಿಪೃಷ್ಟವಾನ್ ।**
**ಸೋಪಿ ಮತ್ಕಾರಣೇನೈವ ಗೃಹೀತ್ವೇಹಾಗತಸ್ತಪಃ ॥ ೨೪೧ ॥**

**ಇತಿ ತದ್ವಚನಾಚ್ಛ್ರೇಷ್ಠೀ ನೃಪಶ್ಚಾಭ್ಯೇತ್ಯ ತಂ ಮುನಿಮ್ ।**
**ವಂದಿತ್ವಾ ಧರ್ಮಮಾಪೃಚ್ಛ್ಯ ಕಾಲಲಬ್ಧ್ಯಾ ಮಹೀಪತಿಃ ॥ ೨೪೨ ॥**

**ಗುಣಪಾಲಾಯ ತದ್ರಾಜ್ಯಂ ದತ್ವಾ ಸಂಯಮಮಾದದೇ ।**
**ನಿಕಟೇ ರತಿಷೇಣಸ್ಯ ವಿದ್ಯಾಧರಮುನೀಶಿತುಃ ॥ ೨೪೩ ॥**

''ನಿನ್ನ ಶ್ರೇಷ್ಠಿಯೇ ತಪಸ್ಸಿಗೆ ಕಾರಣನು'' ಎಂದು ಈ ಗಾಂಧಾರಿಯು ಉತ್ತರವನ್ನು ಹೇಳಿದಳು. ಶ್ರೇಷ್ಠಿ–ಕುಬೇರಕಾಂತನು ಗುಟ್ಟಾಗಿ ಆ ಮಾತನ್ನು ಕೇಳಿ ಬಂದು ಆಕೆಯ ಮುಂದೆ ನಿಂತವನಾಗಿ ''ನೀನು ನನ್ನನ್ನು ಜಯಿಸಿದೆ–ನನಗಿಂತ ಮೊದಲು ದೀಕ್ಷಿತಳಾದೆ. ನನ್ನ ಮಿತ್ರನಾದ ಈ ರತಿಷೇಣನು ಈಗ ಎಲ್ಲಿರುತ್ತಾನೆ ?'' ಎಂದು ಗಾಂಧಾರಿಯನ್ನು ಪ್ರಶ್ನೆಮಾಡಿದನು. ಗಾಂಧಾರಿಯು ''ಅವನೂ ನನ್ನ ನಿಮಿತ್ತದಿಂದಲೇ ತಪಸ್ಸನ್ನು ಸ್ವೀಕರಿಸಿ ಇಲ್ಲಿ ಬಂದಿರುತ್ತಾನೆ'' ಎಂದಳು. ಈ ಪ್ರಕಾರವಾದ ಆಕೆಯ ಮಾತಿನಿಂದ ಕುಬೇರಕಾಂತ ಶ್ರೇಷ್ಠಿಯೂ ರಾಜನೂ ಮುಂದೆ ಹೋಗಿ ಆ ಮುನಿಯನ್ನು ವಂದಿಸಿ ಧರ್ಮವನ್ನು ಕೇಳಿ ಕಾಲಲಬ್ಧಿಯಿಂದ ಲೋಕಪಾಲರಾಜನೂ ಗುಣಪಾಲನೆಂಬ ಪುತ್ರನಿಗೆ ಅವನ ರಾಜ್ಯವನ್ನು ಕೊಟ್ಟು ವಿದ್ಯಾಧರಮುನೀಶ್ವರನಾದ ರತಿಷೇಣನ ಸಮೀಪದಲ್ಲಿ ವ್ರತವನ್ನು ತೆಗೆದುಕೊಂಡನು.

**[೨]ಪಂಚಮಂ ಸ್ವಪದೇ ಸೂನುಂ ನಿಯೋಜ್ಯಾನ್ಯೈಃ ಸಹಾತ್ಮಜೈಃ ।**
**ಯಯೌ ಶ್ರೇಷ್ಠೀ ಚ ತತ್ರೈವ ದೀಕ್ಷಾಂ ಮೋಕ್ಷಾಭಿಲಾಷುಕಃ ॥ ೨೪೪ ॥**

ಮೋಕ್ಷವನ್ನಿಚ್ಛಿಸುವವನಾದ ಶ್ರೇಷ್ಠಿಯೂ ತನ್ನ ಶ್ರೇಷ್ಠಿಪದವಿಯಲ್ಲಿ ಐದನೆಯ ಪುತ್ರನನ್ನು ನೇಮಿಸಿ ಕುಬೇರದಯಿತನೇ ಮೊದಲಾದ ಬೇರೆ ಮಕ್ಕಳೊಡನೆ ಆ ರತಿಷೇಣವಿದ್ಯಾಧರಮುನಿಯ ಬಳಿಯಲ್ಲೇ ದೀಕ್ಷೆಯನ್ನು ಹೊಂದಿದನು.''

**ತಥೋಕ್ತ್ವಾ ಕಾಂತವೃತ್ತಾಂತಂ [೩]ಸಾ ಸಮುತ್ಪನ್ನಸಂವಿದಾ ।**
**ವಿರಜ್ಯ ಗೃಹವಾಸಾತ್ಸ್ವಾತ್ಕುಬೇರಾದಿಶ್ರಿಯಂ ಸತೀಮ್ ॥ ೨೪೫ ॥**

**[೪]ಗುಣಪಾಲಾಯ ದತ್ವಾ ಸ್ವಾಂ ಸುತಾಂ [೫]ಗುಣವತೀಂ ಶ್ರಿತಾ ।**
**ಪ್ರಭಾವತ್ಯುಪದೇಶೇನ ಪ್ರಿಯದತ್ತಾಪ್ಯದೀಕ್ಷತ ॥ ೨೪೬ ॥**

ಪ್ರಿಯದತ್ತೆಯು ಹಾಗೆ ತನ್ನ ಪತಿಯ–ಕುಬೇರಕಾಂತನ ಸಮಾಚಾರವನ್ನು ಹೇಳಿ ಜ್ಞಾನೋದಯವಾದುದರಿಂದ ತನ್ನ ಗೃಹವಾಸದಿಂದ ವೈರಾಗ್ಯವನ್ನು ಹೊಂದಿ ಶೀಲವತಿಯಾದ ತನ್ನ ಪುತ್ರಿ–ಕುಬೇರಶ್ರೀಯನ್ನು ಗುಣಪಾಲರಾಜಪುತ್ರನಿಗೆ ಕೊಟ್ಟು ಪ್ರಭಾವತಿಯ ಉಪದೇಶದಿಂದ ಗುಣವತ್ಯಾರ್ಜಿಕೆಯನ್ನು ಹೊಂದಿ ಪ್ರಿಯದತ್ತೆಯೂ ದೀಕ್ಷೆಯನ್ನು ಪಡೆದಳು.

೧ ರತಿಷೇಣಃ. ೨ ಕುಬೇರಪ್ರಿಯಂ. ೩ ಪ್ರಿಯದತ್ತಾ. ೪ ಲೋಕಪಾಲಸುತಾಯ. ೫ ಗುಣವತ್ಯಾರ್ಯಿಕಾಂ.

ಮುನಿಂ ಹಿರಣ್ಯವರ್ಮಾಣಂ ಕದಾಚಿತ್ಪ್ರೇತಭೂತಲೇ ।
ದಿನಾನಿ ಸಪ್ತ [೧]ಸಂಗೀರ್ಯ ಪ್ರತಿಮಾಯೋಗಧಾರಿಣಮ್ ॥ ೨೪೭ ॥

ವಂದಿತ್ವಾ ನಾಗರಾಃ ಸರ್ವೇ [೨]ತತ್ಪೂರ್ವಭವಸಂಕಥಾಮ್ ।
ಕುರ್ವಾಣಾಃ ಪುರಮಾಗಚ್ಛನ್ ವಿದ್ಯುಚ್ಚೋರೋ[೩]ಪ್ಯುದೀರಿತಾತ್ ॥

ಚೇಟಿಕ್ಯಾಃ ಪ್ರಿಯದತ್ತಾಯಾಸ್ತನ್ಮುನೇಃ ಪ್ರಾಕ್ತನಂ ಭವಮ್ ।
ವಿದಿತ್ವಾ ತದ್ಗತಕ್ರೋಧಾತ್ತದೋತ್ಪನ್ನವಿಭಂಗಕಃ ॥ ೨೪೯ ॥

ಮುನಿಂ [೪]ಪ್ರತ್ಯಕ್ಪ್ರದೇಶಸ್ಥಾಂ ಪ್ರತಿಮಾಯೋಗಮಾಸ್ಥಿತಾಮ್ ।
ಪ್ರಭಾವತೀಂ ಚ ಸಂಯೋಜ್ಯ [೫]ಚಿತಿಕಾಯಾಂ ದುರಾಶಯಃ ॥ ೨೫೦ ॥

ಏಕಸ್ಯಾಮೇವ ನಿಕ್ಷಿಪ್ಯಾಧಾಕ್ಷೀದಘಜಿಘೃಕ್ಷಯಾ ।
ಸೋಢ್ವಾ ತದುಪಸರ್ಗಂ ತೌ ವಿಶುದ್ಧಪರಿಣಾಮತಃ ॥ ೨೫೧ ॥

ಸ್ವರ್ಗೇ ಸಮುದಪದ್ಯೇತಾಂ ಕ್ಷಮಯಾ ಕಿಂ ನ ಜಾಯತೇ ।
ಸುವರ್ಣವರ್ಮಾ ತಜ್ಜ್ಞಾತ್ವಾ ವಿದ್ಯುಚ್ಚೋರಸ್ಯ ನಿಗ್ರಹಮ್ ॥ ೨೫೨ ॥

ಕರಿಷ್ಯಾಮೀತಿ ಕೋಪೇನ ಪಾಪಿನಃ ಸಂಗರಂ ವ್ಯಧಾತ್ ।
ವಿದಿತ್ವಾವಧಿಬೋಧೇನ ತತ್ತೌ ಸ್ವರ್ಗನಿವಾಸಿನೌ ॥ ೨೫೩ ॥

ಪ್ರಾಪ್ಯ [೬]ಸಂಯಮಿರೂಪೇಣ ಸುತಂ ಧರ್ಮಕಥಾದಿಭಿಃ ।
ತತ್ತ್ವಂ [೭]ಶ್ರದ್ಧಾಪ್ಯ ತಂ ಕೋಪಾದಪಾಸ್ಯ ಕೃಪಯಾ[೮]ಹಿತೌ ॥ ೨೫೪ ॥

ದಿವ್ಯಂ ರೂಪಂ ಸಮಾದಾಯ ನಿಗದ್ಯ ನಿಜವೃತ್ತಕಮ್ ।
ಪ್ರದಾಯಾಭರಣಂ ತಸ್ಮೈ ಪರಾರ್ಧ್ಯಂ ಸ್ವಪದಂ ಗತೌ ॥ ೨೫೫ ॥

ಒಂದಾನೊಂದು ಕಾಲದಲ್ಲಿ ಏಳು ದಿನಗಳವರೆಗೆ ಪ್ರತಿಜ್ಞೆಯನ್ನು ಮಾಡಿ ಶ್ಮಶಾನಭೂಮಿಯಲ್ಲಿ ಪ್ರತಿಮಾಯೋಗ(ಪ್ರತಿಮೆಯಂತೆ ನಿಂತು ಧ್ಯಾನಮಾಡುವುದೆಂಬ ಯೋಗ)ವನ್ನು ಧಾರಣಮಾಡಿದ ಹಿರಣ್ಯವರ್ಮಮುನಿಯನ್ನು ಎಲ್ಲಾ ಪುರನಿವಾಸಿಗಳು ವಂದಿಸಿ ಆ ಮುನಿಯ ಪೂರ್ವಭವವಿಷಯಗಳ ಭಾಷಣಗಳನ್ನು ಮಾಡುವವರಾಗಿ ಪಟ್ಟಣಕ್ಕೆ ಬಂದರು. ಹಿಂದೆ ಬೆಕ್ಕಿನ ಭವವನ್ನು ಹೊಂದಿದವನಾಗಿದ್ದ ವಿದ್ಯುಚ್ಚೋರನೂ ಪ್ರಿಯದತ್ತೆಯೆಂಬ ದಾಸಿಯ ವಚನದಿಂದ ಆ ಮುನಿಯ ಪೂರ್ವಭವವನ್ನು ತಿಳಿದು ಆಗ ಉತ್ಪನ್ನವಾದ ವಿಭಂಗವೆಂಬ ಅತೀಂದ್ರಿಯಜ್ಞಾನವುಳ್ಳವನಾಗಿ ಆ ಮುನಿಯಲ್ಲಿ ತನಗಿರುವ ಕೋಪದಿಂದ ಮುನಿಯನ್ನೂ ಚೈತ್ಯಾಲಯದ ಮುಂದಿರುವವಳೂ ಪ್ರತಿಮಾಯೋಗದಲ್ಲಿರುವವಳೂ ಆದ ಪ್ರಭಾವತಿಯನ್ನೂ ಸೇರಿಸಿ ದುಷ್ಟಾಭಿಪ್ರಾಯವುಳ್ಳವನಾಗಿ ಒಂದೇ ಚಿತಿಯಲ್ಲಿರಿಸಿ ಪಾಪವನ್ನು ಹಿಡಿಯಬೇಕೆಂಬ ಇಚ್ಛೆಯಿಂದ ಸುಟ್ಟುಬಿಟ್ಟನು. ಆ ಹಿರಣ್ಯವರ್ಮಮುನಿಯೂ ಪ್ರಭಾವತ್ಯಾರ್ಯಿಕೆಯೂ ಪರಿಶುದ್ಧವಾದ ಪರಿಣಾಮದಿಂದ ಆ ಉಪಸರ್ಗವನ್ನು ಸಹಿಸಿ ಮೃತರಾಗಿ ಸ್ವರ್ಗದಲ್ಲಿ ಜನಿಸಿದರು. ಕ್ಷಮೆಯಿಂದ ಏನುತಾನೆ ಉಂಟಾಗುವುದಿಲ್ಲ? ಸುವರ್ಣವರ್ಮನು ಆ ವಿಷಯವನ್ನು ತಿಳಿದು ಕೋಪದಿಂದ ''ಪಾಪಿಯಾದ ವಿದ್ಯುಚ್ಚರನ ವಧೆಯನ್ನು ಮಾಡುವೆನು'' ಎಂಬುದಾಗಿ ಪ್ರತಿಜ್ಞೆಯನ್ನು ಮಾಡಿದನು. ಸ್ವರ್ಗನಿವಾಸಿಗಳಾದ ಆ ದೇವದೇವಿಯರು ಅವಧಿಜ್ಞಾನದಿಂದ ಆ ವಿಷಯವನ್ನು ತಿಳಿದು ವ್ರತಿಗಳ ರೂಪವನ್ನು ಧರಿಸಿ ತತ್ತ್ವವನ್ನು ನಂಬುವಂತೆ ಮಾಡಿ ಆ ಪುತ್ರ–ಸುವರ್ಣವರ್ಮನನ್ನು ಧರ್ಮಕಥೆಯೇ ಮೊದಲಾದುವುಗಳಿಂದ ಕೋಪದಿಂದ ದೂರಮಾಡಿ (ಅವನ ಕೋಪವನ್ನು ಹೋಗಲಾಡಿಸಿ) ದಯೆಯಿಂದ ಸ್ವೀಕರಿಸಲ್ಪಟ್ಟವರಾಗಿ(ಕೂಡಿದವರಾಗಿ) ತಮ್ಮ ದಿವ್ಯರೂಪವನ್ನು ಸ್ವೀಕರಿಸಿ ತಮ್ಮ ಸಮಾಚಾರವನ್ನು ತಿಳಿಸಿ ಅವನಿಗೆ ಉತ್ಕೃಷ್ಟವಾದ ಆಭರಣವನ್ನು ಕೊಟ್ಟು ತಮ್ಮ ಸ್ಥಾನಕ್ಕೆ ಹೋದರು.

೧ ಪ್ರತಿಜ್ಞಾಂಕೃತ್ವಾ. ೨ ಮಾರ್ಜಾರಚರ. ೩ ವಚನಾತ್. ೪ ಚೈತ್ಯಾಲಯಸ್ಯಪುರಃ ಪ್ರತಿಮಾಯೋಗಸ್ಥಿತಾಂ, ಪೃಕ್ಥಪ್ರದೇಶಸ್ಥಾಮಿತ್ಯಪಿಪಾಠಃ. ೫ ಶವಶಯ್ಯಾಯಾಂ. ೬ ಸಂಯಮರೂಪೇಣ ಇತ್ಯಪಿಪಾಠಃ. ೭ ವಿಶ್ವಾಸಂನೀತ್ವಾ. ೮ ಸ್ವೀಕೃತೌ.

ಕದಾಚಿದ್ವತ್ಸವಿಷಯೇ ಸುಸೀಮಾನಗರೇ ಮುನೇಃ ।
ಶಿವಘೋಷಸ್ಯ ಕೈವಲ್ಯಮುದಪಾದ್ಯಸ್ತ ಘಾತಿನಃ ॥ ೨೫೬ ॥

ಒಂದಾನೊಂದು ಕಾಲದಲ್ಲಿ ವತ್ಸದೇಶದ ಸುಸೀಮಾನಗರದಲ್ಲಿ ಘಾತಿಕರ್ಮವನ್ನು ನಾಶಮಾಡಿದ ಶಿವಘೋಷಮುನಿಗೆ ಕೇವಲಜ್ಞಾನವು ಉತ್ಪನ್ನವಾಯಿತು.

ಶಕ್ರಪ್ರಿಯೇ ಶಚೀ ಮೇನಕಾ ಚ ನತ್ವಾ ಜಿನೇಶ್ವರಮ್ ।
ಸಮಾಶ್ರಿತ್ಯ ಸುರಾಧೀಶಂ ಸ್ಥಿತೇ ಪ್ರಶ್ನಾತ್ಸುರೇಶಿತುಃ ॥ ೨೫೭ ॥

ಅತ್ರೈವಾ[೧]ಸಪ್ತಮೇಹ್ನಿ [೨]ಪ್ರಾಕ್ [೩]ಸಮಾತ್ತಶ್ರಾವಕವ್ರತೇ ।
ನಾಮ್ನಾ ಪುಷ್ಪವತೀ ಸಾಂತ್ಯಾ ಪ್ರಥಮಾ ಪುಷ್ಪಪಾಲಿತಾ ॥ ೨೫೮ ॥

ಕುಸುಮಾಪಚಯಾಸಕ್ತೇ ವನೇ [೪]ಸರ್ಪಾಗ್ನಿಹೇತುನಾ ।
ಮೃತೇ ದೇವ್ಯಾವಜಾಯೇತಾಮಿತ್ಯಾಹಾಸೌ ಸ್ಮ ತೀರ್ಥಕೃತ್ ॥ ೨೫೯ ॥

ಅಲ್ಲಿ ಕೇವಲಜ್ಞಾನಪೂಜೆಗೆ ಬಂದಿದ್ದ ಶಚೀ ಮೇನಕೆಯರೆಂಬ ಇಂದ್ರನ ಪತ್ನಿಯರು ಜಿನೇಶ್ವರನನ್ನು ನಮಸ್ಕರಿಸಿ ಇಂದ್ರನನ್ನು ಹೊಂದಿ ನಿಂತರು. ಪೂರ್ವಜನ್ಮದಲ್ಲಿ ಈ ದೇವಿಯರು ಯಾರಾಗಿದ್ದರೆಂಬ ಇಂದ್ರನ ಪ್ರಶ್ನೆಯಿಂದ ಈ ಶಿವಘೋಷತೀರ್ಥಂಕರರು ''ಇಲ್ಲಿಯೇ ಪೂರ್ವಜನ್ಮದಲ್ಲಿ ಶ್ರಾವಕವ್ರತವನ್ನು ಚೆನ್ನಾಗಿ ಸ್ವೀಕರಿಸಿದವರಾದ ಮೊದಲನೆಯವಳು ಪುಷ್ಪಪಾಲಿತಳೂ ಕೊನೆಯವಳು ಹೆಸರಿನಿಂದ ಪುಷ್ಪವತಿಯೂ ಹೂವುಗಳನ್ನು ಕೀಳುವುದರಲ್ಲಿ ಆಸಕ್ತರಾಗಿದ್ದು ವನದಲ್ಲಿ ಹಾವಿನ ವಿಷದ ಬೆಂಕಿಯ ಕಾರಣದಿಂದ ಸತ್ತು ದೇವಿಯರಾಗಿ ಹುಟ್ಟಿರುತ್ತಾರೆ'' ಎಂದು ಹೇಳಿದರು.

ಪ್ರಭಾವತೀಚರೀ ದೇವೀ ಶ್ರುತ್ವಾ ದೇವಶ್ಚ ತತ್ಪತಿಃ ।
ಸ್ವಪೂರ್ವಭವಸಂಬಂಧಂ ತತ್ರಾಗಾತಾಂ ಸಭಾವನೇಃ ॥ ೨೬೦ ॥

ಹಿಂದಿನ ಜನ್ಮದಲ್ಲಿ ಪ್ರಭಾವತಿಯಾಗಿದ್ದ ದೇವಿಯೂ ಆಕೆಯ ಪತಿಯಾದ ದೇವನೂ ತಮ್ಮ ಪೂರ್ವಭವಸಂಬಂಧವನ್ನು ಕೇಳಿ ಆ ಸಮವಸರಣದಿಂದ ಹೊರಟುಹೋದರು.

ನಿಜಾನ್ಯಜನ್ಮಸೌಖ್ಯಾನುಭೂತದೇಶಾನ್ನಿಜೇಚ್ಛಯಾ ।
ಆಲೋಕಯಂತೌ ತತ್ಸರ್ಪಸರೋವಣಸಮೀಪಗೌ ॥ ೨೬೧ ॥

ಸಹ ಸಾರ್ಥೇನ ಭೀಮಾಖ್ಯಸಾಧುಂ ದೃಷ್ಟ್ವಾ ಸಮಾಗತಮ್ ।
ವಿನಯೇನಾಭಿವಂದ್ಯೈನಂ ಧರ್ಮಂ ತೌ ಸಮಪೃಚ್ಛತಾಮ್ ॥ ೨೬೨ ॥

ತಮ್ಮ ಪೂರ್ವಜನ್ಮದಲ್ಲಿ ಸುಖವನ್ನನುಭವಿಸಿದ ದೇಶಗಳನ್ನು ಸ್ವೇಚ್ಛೆಯಿಂದ ನೋಡುವವರೂ ಆ ಸರ್ಪಸರೋವಣದ ಸಮೀಪವನ್ನು ಹೊಂದಿದವರೂ ಆದ ಆ ದೇವದಂಪತಿಗಳು ವರ್ತಕರ ಸಮೂಹದೊಡನೆ ಬಂದ ಭೀಮನೆಂಬ ಸಾಧುವನ್ನು ನೋಡಿ ವಿನಯದಿಂದ ವಂದಿಸಿ ಅವನಲ್ಲಿ ಧರ್ಮವನ್ನು ಕೇಳಿದರು.

ಮುನಿಸ್ತದ್ವಚನಂ ಶ್ರುತ್ವಾ ನಾಹಂ ಧರ್ಮೋಪದೇಶನೇ ।
ಸರ್ವಾಗಮಾರ್ಥವಿತ್ಕಾರ್ಯೇ ಸಮರ್ಥೋ ನವಸಂಯತಃ ॥ ೨೬೩ ॥

ಪ್ರರೂಪಯಿಷ್ಯತೇ ಕಿಂಚಿತ್ಸ ಯುಷ್ಮದನುರೋಧತಃ ।
ಮಯಾ [೫]ತಥಾಪಿ ಶ್ರೋತವ್ಯಂ ಯಥಾಶಕ್ತ್ಯವಧಾನವತ್ ॥ ೨೬೪ ॥

ಮುನಿಯು ಆ ಮಾತನ್ನು ಕೇಳಿ ''ಸಮಸ್ತವಾದ ಆಗಮವನ್ನು ತಿಳಿದವನು ಮಾಡತಕ್ಕ ಧರ್ಮೋಪದೇಶದಲ್ಲಿ ನೂತನವಾಗಿ ದೀಕ್ಷಿತನಾದ ನಾನು ಸಮರ್ಥ

೧ ಆಸಪ್ತದಿನಾತ್ಪೂರ್ವಮಿತ್ಯರ್ಥಃ. ೨ ಪೂರ್ವಜನ್ಮನಿ. ೩ ಸಮ್ಯಕ್ಸ್ವೀಕೃತ. ೪ ಅಹಿವಿಷಾಗ್ನಿಕಾರಣೇನ. ೫ ಅಸಮರ್ಥೋಪಿ.

ನಲ್ಲ. ಹಾಗಿದ್ದರೂ ನಿಮ್ಮಗಳ ನಿರ್ಬಂಧದಿಂದ ನಾನು ಯಥಾಶಕ್ತಿಯಾಗಿ ಆ ಧರ್ಮವನ್ನು ಸ್ವಲ್ಪ ಹೇಳುವೆನು. ಲಕ್ಷ್ಯವಿಟ್ಟು ಕೇಳಬೇಕು.''

**ಇತಿ ಸಮ್ಯಕ್ತ್ವಸತ್ಪಾತ್ರದಾನಾದಿ ಶ್ರಾವಕಾಶ್ರಯಮ್ ।**
**[೧]ಯಮಾದಿಯತಿಸಂಬಂಧಂ ಧರ್ಮಂ ಗತಿಚತುಷ್ಟಯಮ್ ॥ ೨೬೫ ॥**

**ತದ್ಧೇತುಫಲಪರ್ಯಂತಂ ಭುಕ್ತಿಮುಕ್ತಿನಿಬಂಧನಮ್ ।**
**ಜೀವಾದಿದ್ರವ್ಯತತ್ತ್ವಂ ಚ ಯಥಾವತ್ಸ್ಯಪಾದಯತ್ ॥ ೨೬೬ ॥**

ಈ ಪ್ರಕಾರವಾಗಿ ಸಮ್ಯಕ್ತ್ವ ಸತ್ಪಾತ್ರದಾನವೇ ಮೊದಲಾದ ಶ್ರಾವಕರನ್ನು ಹೊಂದಿರುವ ಧರ್ಮವನ್ನೂ ಇಂದ್ರಿಯನಿಗ್ರಹ ಪ್ರಾಣಿರಕ್ಷಣವೇ ಮೊದಲಾದ ಯತಿಗಳ ಸಂಬಂಧವಾದ ಧರ್ಮವನ್ನೂ ನರಕಾದಿಗತಿಚತುಷ್ಟಯವನ್ನೂ ಅವುಗಳಿಗೆ ಕಾರಣವಾದ ಕರ್ಮ ಅದರ ಫಲ ಅದರ ನಾಶ ಇವುಗಳನ್ನೂ ವಿಷಯಭೋಗವನ್ನೂ ಮುಕ್ತಿಯ ಕಾರಣವನ್ನೂ ಜೀವಾದಿದ್ರವ್ಯಗಳ ಸ್ವರೂಪವನ್ನೂ ಅವು ಇರುವ ಹಾಗೆಯೇ ಪ್ರತಿಪಾದಿಸಿದನು.

**ತಚ್ಛ್ರುತ್ವಾ ಪುನರಪ್ಯಾಭ್ಯಾಂ ಭವತಾಂ ಕೇನ ಹೇತುನಾ ।**
**ಪ್ರವ್ರಜ್ಯೇತ್ಯನುಯುಕ್ತೋಽಸೌ ವಕ್ತುಂ ಪ್ರಕ್ರಾಂತವಾನ್ಮುನಿಃ ॥ ೨೬೭ ॥**

ಆ ಮಾತನ್ನು ಕೇಳಿ ಮತ್ತೂ ಈ ದೇವದಂಪತಿಗಳಿಂದ '' ತಮ್ಮ ದೀಕ್ಷೆಯು ಯಾವ ಕಾರಣದಿಂದ'' ಎಂದು ಕೇಳಲ್ಪಟ್ಟ ಈ ಮುನಿಯು ಹೇಳುವುದಕ್ಕೆ ಪ್ರಾರಂಭಿಸಿದನು.

**ವಿದೇಹೇ ಪುಷ್ಕಲಾವತ್ಯಾಂ ನಗರೀ ಪುಂಡರೀಕಿಣೀ ।**
**ತತ್ರಾಹಂ ಭೀಮನಾಮಾಸಂ ಸ್ವಪಾಪಾದ್ದುರ್ಗತೇ ಕುಲೇ ॥ ೨೬೮ ॥**

''ವಿದೇಹಕ್ಷೇತ್ರದಲ್ಲಿ ಪುಷ್ಕಲಾವತೀದೇಶದಲ್ಲಿ ಪುಂಡರೀಕಿಣಿಯೆಂಬ ನಗರವಿರುವುದು. ಅಲ್ಲಿ ನಾನು ನನ್ನ ಪಾಪದಿಂದ ದರಿದ್ರವಂಶದಲ್ಲಿ ಭೀಮನೆಂಬ ಹೆಸರುಳ್ಳವನಾದೆನು.

**ಅನ್ಯೇದ್ಯುರ್ಯತಿಮಾಸಾದ್ಯ ಕಂಚಿತ್ಕಾಲಾದಿಲಬ್ಧಿತಃ ।**
**ಶ್ರುತ್ವಾ ಧರ್ಮಂ ತತೋ ಲೇಭೇ ಗೃಹಿಮೂಲಗುಣಾಷ್ಟಕಮ್॥ ೨೬೯ ॥**

ಮತ್ತೊಂದು ದಿವಸ ಒಬ್ಬಾನೊಬ್ಬ ಯತಿಯನ್ನು ಹೊಂದಿ ಕಾಲವೇ ಮೊದಲಾದ ಲಬ್ಧಿಯಿಂದ ಧರ್ಮವನ್ನು ಕೇಳಿ ಅವನಿಂದ ಗೃಹಸ್ಥನ ಮದ್ಯಮಾಂಸ ಮಧುಗಳ ತ್ಯಾಗ, ಅಹಿಂಸಾದಿ ಪಂಚಾಣುವ್ರತಗಳ ಸ್ವೀಕಾರರೂಪವಾದ ಎಂಟು ಮೂಲಗುಣಗಳನ್ನು ಹೊಂದಿದೆನು.

**ತಜ್ಜ್ಞಾತ್ವಾ ಮತ್ಪಿತಾ ಪುತ್ರ ಕಿಮೇಭಿರ್ದುಷ್ಕರೈರ್ವೃಥಾ ।**
**ದಾರಿದ್ರ್ಯ ಕರ್ದಮಾಲಿಪ್ತದೇಹಾನಾಂ ನಿಷ್ಫಲೈರಿಹ ॥ ೨೭೦ ॥**

ಅದನ್ನು ತಿಳಿದು ನಮ್ಮ ತಂದೆಯು ''ಮಗನೆ ! ಬಡತನವೆಂಬ ಕೆಸರಿನಿಂದ ಬಳಿಯಲ್ಪಟ್ಟ ಮೈಯುಳ್ಳವರ–ಸನ್ಯಾಸಿಗಳ ನಿಷ್ಫಲಗಳೂ ಇಲ್ಲಿ ಮಾಡುವುದಕ್ಕೆ ಕಠಿನಗಳೂ ಆದ ಈ ವ್ರತಗಳಿಂದ ವ್ಯರ್ಥವಾಗಿ ಫಲವೇನು ?

**ವ್ರತಾನ್ಯೇತಾನಿ ದಾಸ್ಯಾಮಸ್ತಸ್ಮೈ ಸ್ವರ್ಲೋಕಕಾಂಕ್ಷಿಣೇ ।**
**ಐಹಿಕಂ ಫಲಮಿಚ್ಛಾಮೋ ಭವೇದ್ಯೇನೇಹ ಜೀವಿಕಾ ॥ ೨೭೧ ॥**

ಸ್ವರ್ಗಲೋಕವನ್ನಿಚ್ಛಿಸುವವನಾದ ಆ ಮುನಿಗೆ ಈ ವ್ರತಗಳನ್ನು ಕೊಡೋಣ. ಯಾವುದರಿಂದ ಇಹಲೋಕದ ಜೀವನವಾಗುವುದೋ ಅಂತಹ ಐಹಿಕಫಲವನ್ನಿಚ್ಛಿಸುತ್ತೇವೆ.

**ವ್ರತಂ ದತ್ತವತಃ ಸ್ಥಾನಂ ತಸ್ಯ ಮೇ ದರ್ಶಯೇತ್ಯಸೌ ।**
**ಮಾಮುವಾದೀದ್ಗೃಹೀತ್ವೈನ[೧]ಮಾವ್ರಜನ್ನಹಮಂತರೇ ॥ ೨೭೨ ॥**

**ವಜ್ರಕೇತೋರ್ಮಹಾವೀಥ್ಯಾಂ ದೇವತಾಗೃಹಕುಕ್ಕುಟಮ್ ।**
**ಭಾಸ್ವತ್ಕಿರಣಶಂಶೋಷ್ಯಮಾಣಧಾ[೨]ನ್ಯೋಪಯೋಗಿನಮ್ ॥ ೨೭೩ ॥**

**ಪುಂಸೋ ಹತವತೋ ದಂಡಂ ಜಿನದೇವಾರ್ಪಿತಂ ಧನಮ್ ।**
**ಲೋಭಾ[೩]ದಪಹ್ನುವಾನಸ್ಯ ಧನದೇವಸ್ಯ ದುರ್ಮತೇಃ ॥ ೨೭೪ ॥**

**ರಸನೋತ್ಪಾಟನಂ ಹಾರಮನರ್ಘಮಣಿನಿರ್ಮಿತಮ್ ।**
**ಶ್ರೇಷ್ಠಿನಃ ಪ್ರಾಪ್ಯ ಚೌರ್ಯೇಣ ಗಣಿಕಾಯೈ ಸಮರ್ಪಣಾತ್ ॥ ೨೭೫ ॥**

**ರತಿಪಿಂಗಲಸಂಜ್ಞಸ್ಯ ಶೂಲೇ [೪]ತಲವರಾರ್ಪಣಮ್ ।**
**ನಿಶಿ ಮಾತುಃ ಕನೀಯಸ್ಯಾಃ ಕಾಮು[೫]ನಿರ್ಲುಪ್ತಸಂವಿದಃ ॥ ೨೭೬ ॥**

**ಪುತ್ರ್ಯಾ ಗೇಹಂ ಗತಸ್ಯಾಂಗಚ್ಛೇದನಂ ಪುರರಕ್ಷಿಣಃ ।**
**ಕ್ಷೇತ್ರಲೋಭಾನ್ನಿಜೇ ಜ್ಯೇಷ್ಠೇ ಮೃತೇ [೬]ದಂಡಹತೇ ಸತಿ ॥ ೨೭೭ ॥**

**ಲೋಹಸ್ಯಾನ್ವರ್ಥಸಂಜ್ಞಸ್ಯ ವಿಲಾಪಂ [೭]ನೈಕನಿಗ್ರಹೇ ।**
**ದ್ಯೂತೇ ಸಾಗರದತ್ತೇನ ಪ್ರಭೂತೇ ನಿರ್ಜಿತೇ ಧನೇ ॥ ೨೭೮ ॥**

**ದಾತುಂ ಸಮುದ್ರದತ್ತಸ್ಯ ನಿಶ್ಯಕ್ತೇರಾತಪೇ ಕ್ರುಧಾ ।**
**ಪರಿವರ್ಧಿತದುರ್ಗಂಧಧೂಮಾಂತರ್ವರ್ತಿನಶ್ಚಿರಮ್ ॥ ೨೭೯ ॥**

**ನಿರೋಧಮುಭಯೋರ್ದ್ಘೋಷಣಾಯಾ[೮]ಮಾನಂದದೇಶನಾತ್ ।**
**[೯]ಅಂಗಕಸ್ಯ ನೃಪೋರಭ್ರಘಾತಿನಃ ಕರಖಂಡನಮ್ ॥ ೨೮೦ ॥**

**ಆನಂದರಾಜಪುತ್ರಸ್ಯ ತದ್ರುಕ್ತ್ಯಾ [೧೦]ವಸ್ಕರಾಶನಮ್ ।**
**ಮದ್ಯವಿಕ್ರಯಣೇ ಬಾಲಂ ಕಿಂಚಿದಾಭರಣೇಚ್ಛಯಾ ॥ ೨೮೧ ॥**

**ಹತ್ವಾ ಭೂಮೌ ವಿನಿಕ್ಷಿಪ್ತವತ್ಯಾ[೧೧]ಸ್ತತ್ಸಂವಿಧಾನಕಮ್ ।**
**ಪ್ರಕಾಶಿತವತಿ [೧೨]ಸ್ವಾತ್ಮಜೇ [೧೩]ಶುಂಡಾಯಾಶ್ಚ ನಿಗ್ರಹಮ್ ॥ ೨೮೨ ॥**

**ಪಾಪಾನ್ಯೇತಾನಿ ಕರ್ಮಾಣಿ ಪಶ್ಯನ್ ಹಿಂಸಾದಿದೋಷತಃ ।**
**ಅತ್ರಾಮುತ್ರ ಚ ಪಾಪಸ್ಯ ಪರಿಪಾಕಂ ದುರುತ್ತರಮ್ ॥ ೨೮೩ ॥**

**ಅವಧಾರ್ಯಾ[೧೪]ನಭಿಪ್ರೇತವ್ರತತ್ಯಾಗೋ ಭವಾದ್ಭಯಾತ್ ।**
**[೧೫]ದ್ವೇಷಮೋಷಮೃಷಾಯೋಷಾಶ್ಲೇಷದೋಷಾದಿದೂಷಿತಾಃ ॥ ೨೮೪ ॥**

**ನಾತ್ರೈವ ಕಿಂತ್ವಮುತ್ರಾಪಿ [೧೬]ಪಿತಶ್ಚಿತ್ರವಧೋಚಿತಾಃ ।**
**ಅಸ್ಮಾಕಮಪಿ ದೌರ್ಗತ್ಯಂ ಪ್ರಾಕ್ತನಾತ್ಪಾಪಕರ್ಮಣಃ ॥ ೨೮೫ ॥**

**ಇದಂ ತಸ್ಮಾತ್ಸಮುಚ್ಛೇಯಂ ಪುಣ್ಯಂ ಸಚ್ಚೇಷ್ಟಿತೈಃ ಪುರು ।**
**ಇತಿ ತಂ ಮೋಚಯಿತ್ವಾಗ್ರಹೀಷಂ ದೀಕ್ಷಾಂ ಮುಮುಕ್ಷಯಾ ॥ ೨೮೬ ॥**

ವ್ರತವನ್ನು ಕೊಟ್ಟವನ ಸ್ಥಾನವನ್ನು ನನಗೆ ತೋರು'' ಎಂದು ಇವನು ನನಗೆ ಹೇಳಿದನು. ಈ ತಂದೆಯನ್ನು ಕರೆದುಕೊಂಡು ನಾನು ಬರುವವನಾಗಿ ಮಧ್ಯದಲ್ಲಿ ದೊಡ್ಡಬೀದಿಯಲ್ಲಿ ಸೂರ್ಯನ ಕಿರಣಗಳಿಂದ ಒಣಗಿಸಲ್ಪಡುತ್ತಿರುವ ಕಾಳುಗಳನ್ನು ತಿನ್ನುತ್ತಿರುವ ದೇವಾಲಯದ ಕೋಳಿಯನ್ನು ಕೊಂದ ವಜ್ರಕೇತುವೆಂಬ ಪುರುಷನ

೧ ಸಂಯಮಾದಿ.

೧ ಪಿತರಂ. ೨ ಭಕ್ಷಯಂತಂ. ೩ ವಂಚಯತಃ. ೪ ತಲವರಾರ್ಪಣಾತ್ ಇತ್ಯಪಿಪಾಠಃ. ೫ ನಿರಸ್ತಜ್ಞಾನಸ್ಯ. ೬ ಲೋಹೇನಹತೇ. ೭ ಅನೇಕನಿಗ್ರಹೇ. ೮ ಆನಂದಾಖ್ಯನೃಪನಿದೇಶಾತ್. ೯ ಪುತ್ರಸ್ಯ. ೧೦ ಗೂಥಭಕ್ಷಣಂ. ೧೧ ಬಾಲಹನನಾದಿವೃತ್ತಕಂ. ೧೨ ಬಾಲಘಾತಿನ್ಯಾಃ ಸುತೇ. ೧೩ ಮದ್ಯಪಾಯಿನ್ಯಾಃ. ೧೪ ಅನಿಷ್ಟೋವ್ರತತ್ಯಾಗೋಯಸ್ಯ ಅನನುಮತವ್ರತತ್ಯಾಗ ಇತ್ಯರ್ಥಃ. ೧೫ ಹಿಂಸಾಸ್ತೇಯಾನೃತಭಾಷಾಬ್ರಹ್ಮಪರಿಗ್ರಹ. ೧೬ ಭೋತಾತ.

ಶಿಕ್ಷೆಯನ್ನೂ ಜಿನದೇವನೆಂಬವನಿಂದ ಕೊಡಲ್ಪಟ್ಟದ್ರವ್ಯವನ್ನು ಲೋಭದಿಂದ ಅಪಹರಿಸುವವನೂ ದುರ್ಬುದ್ಧಿಯುಳ್ಳವನೂ ಆದ ಧನದೇವನ ನಾಲಗೆಯ ಕೀಳುವಿಕೆಯನ್ನೂ ವೈಶ್ಯನ ಉತ್ತಮವಾದ ರತ್ನಗಳಿಂದ ನಿರ್ಮಿತವಾದ ಹಾರವನ್ನು ಚೌರ್ಯದಿಂದ ಹೊಂದಿ ವೇಶ್ಯೆಗೆ ಕೊಟ್ಟಿರುವುದರಿಂದ ರತಿಪಿಂಗಲನೆಂಬವನನ್ನು ತಳವಾರನು ಶೂಲಕ್ಕೇರಿಸುವುದನ್ನೂ ರಾತ್ರಿಯಲ್ಲಿ ಕಾಮವಿಕಾರದಿಂದ ಜ್ಞಾನಶೂನ್ಯನೂ ತಾಯಿಯ ಚಿಕ್ಕಮಗಳ ಮನೆಗೆ ಹೋದವನೂ ಆದ ನಗರರಕ್ಷಕನ–ತಳವಾರನ ಅಂಗಚ್ಛೇದನವನ್ನೂ ಕ್ಷೇತ್ರ–ಭೂಮಿಯ ಲೋಭದಿಂದ ತನ್ನ ಅಣ್ಣನು ಲೋಹದಂಡದಿಂದ ಹೊಡೆಯಲ್ಪಟ್ಟು ಮೃತನಾಗುತ್ತಿರಲು ಅನ್ವರ್ಥವಾದ ಹೆಸರುಳ್ಳ ಲೋಹನೆಂಬವನನ್ನು ಅನೇಕವಿಧವಾಗಿ ನಿಗ್ರಹಿಸುತ್ತಿರಲು (ಹಿಂಸಿಸುತ್ತಿರಲು) ಅವನ ಅಳುವಿಕೆಯನ್ನೂ ಜೂಜಿನಲ್ಲಿ ಸಾಗರದತ್ತನು ಹೆಚ್ಚಾದ ದ್ರವ್ಯವನ್ನು ಜಯಿಸುತ್ತಿರಲು ಕೊಡುವುದಕ್ಕೆ ಶಕ್ತಿಯಿಲ್ಲದುದರಿಂದ ಕೋಪದಿಂದ ಹೆಚ್ಚಿಸಲ್ಪಟ್ಟ ದುರ್ಗಂಧವುಳ್ಳ ಹೊಗೆಯ ಮಧ್ಯದಲ್ಲಿರುವ ಸಮುದ್ರದತ್ತನ ಹೆಚ್ಚುಹೊತ್ತಿನವರೆಗೆ ಬಿಸಿಲಿನಲ್ಲಿ ತಡೆದಿರಿಸಿರುವಿಕೆಯನ್ನೂ ಆನಂದನೆಂಬ ರಾಜನ ಆಜ್ಞೆಯಿಂದ ಪ್ರಾಣಿಗಳಿಗೆ ಅಭಯಘೋಷಣೆಯಾಗುತ್ತಿರಲು ರಾಜನ ಕುರಿಯನ್ನು ವಧಿಸಿದ ಅವನ ಪುತ್ರನ ಕೈಗಳ ಕತ್ತರಿಸುವಿಕೆಯನ್ನೂ ಆ ಕುರಿಯ ಮಾಂಸವನ್ನು ಭಕ್ಷಿಸಿದುದರಿಂದ ಆನಂದರಾಜನ ಪುತ್ರನು ಅಮೇಧ್ಯಭಕ್ಷಣಮಾಡುವುದನ್ನೂ ಹೆಂಡವನ್ನು ಕ್ರಯಕ್ಕೆ ತೆಗೆದುಕೊಳ್ಳುವುದರಲ್ಲಿ(ತೆಗೆದುಕೊಳ್ಳುವುದಕ್ಕಾಗಿ) ಆಭರಣದ ಇಚ್ಛೆಯಿಂದ ಒಬ್ಬಾನೊಬ್ಬ ಹುಡುಗನನ್ನು ಕೊಂದು ಭೂಮಿಯಲ್ಲಿ ಹೂತಿಟ್ಟ ಹೆಂಡಕುಡುಕ ಳೋರ್ವಳ ಆ ಬಾಲಕವಧೆಯೇ ಮೊದಲಾದ ಸಮಾಚಾರವನ್ನು ಆಕೆಯ ಮಗನು ಪ್ರಕಾಶಪಡಿಸುತ್ತಿರಲು ಆ ಹೆಂಡಕುಡುಕಳಿಗೆ ಆಗುತ್ತಿದ್ದ ಹಿಂಸೆಯನ್ನೂ ಈ ಪಾಪಕಾರ್ಯಗಳನ್ನು ನೋಡುವವನಾಗಿಯೂ ಹಿಂಸಾದಿ ದೋಷಗಳಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ದಾಟುವುದಕ್ಕೆ ಕಷ್ಟವಾದ ಪಾಪದ ಪರಿಪಾಕವನ್ನು (ಅನುಭವಿಸುವುದಕ್ಕೆ ಕಷ್ಟವಾದ ಫಲವನ್ನು) ನಿಶ್ಚಯಿಸಿ ಭವಭಯದಿಂದ ವ್ರತಗಳನ್ನು ಬಿಡುವುದಕ್ಕೆ ಅನುಮತಿಯಿಲ್ಲದವನಾಗಿಯೂ "ಎಲೈ ತಂದೆಯೇ ! ಕೊಲೆ ಕಳ್ಳತನ ಸುಳ್ಳುಮಾತು–ಸಟೆ ಸ್ತ್ರೀಸೇವನ (ಅಬ್ರಹ್ಮ ) ಪರಿಗ್ರಹರೂಪವಾದ ದೋಷಗಳಿಂದ ದೂಷಿತಗಳಾದ ಕೆಲಸಗಳು ನಾನಾಪ್ರಕಾರವಾದ ವಧೆಗೆ(ಬಾಧೆಯನ್ನುಂಟು ಮಾಡುವುದಕ್ಕೆ) ಉಚಿತಗಳಾಗಿ ಈ ಲೋಕದಲ್ಲೇ ಅಲ್ಲ, ಪರಲೋಕದಲ್ಲಿಯೂ ಪೂರ್ವಕೃತವಾದ ಪಾಪಕರ್ಮದಿಂದ ನಮ್ಮಗಳಿಗೂ ಇದು(ವ್ರತತ್ಯಾಗವು) ದಾರಿದ್ರ್ಯಕ್ಕೆ ಕಾರಣವು. ಆದುದರಿಂದ ಸದ್ವ್ಯಾಪಾರಗಳಿಂದ ಅಧಿಕವಾದ ಪುಣ್ಯವು ಗಳಿಸತಕ್ಕುದಾಗಿರುತ್ತದೆ." ಈ ಪ್ರಕಾರವಾಗಿ ಹೇಳಿ ಅವನನ್ನು–ತಂದೆಯನ್ನು ಬಿಡಿಸಿಕೊಂಡು(ತಂದೆಯಿಂದ ತಾನು ಬಿಡಿಸಿಕೊಂಡು) ಮೋಕ್ಷವನ್ನು ಹೊಂದುವುದಕ್ಕೆ ಇಚ್ಛೆಯಿಂದ ದೀಕ್ಷೆಯನ್ನು ಸ್ವೀಕರಿಸಿದೆನು.

**ಸದ್ಯೋ ಗುರುಪ್ರಸಾದೇನ ಸರ್ವಶಾಸ್ತ್ರಾಬ್ಧಿಪಾರಗಃ ।**
**ವಿಶುದ್ಧಮತಿರನ್ಯೇದುಃ ಸಮೀಪೇ ಸರ್ವವೇದಿನಃ ॥ ೨೮೭ ॥**

**ಮದ್ದುಷ್ಟಪೂರ್ವಜನ್ಮಾನಿ ಸಮಶ್ರೌಷಂ ಯಥಾಶ್ರುತಮ್ ।**
**ಕಥಯಿಷ್ಯಾಮ್ಯಹಂ ತಾನಿ ಕರ್ತುಂ ವಾಂ ಕೌತುಕಂ ಮಹತ್ ॥ ೨೮೮ ॥**

ತತ್ಕ್ಷಣದಲ್ಲೇ ಗುರುವಿನ ಅನುಗ್ರಹದಿಂದ ಸಮಸ್ತಶಾಸ್ತ್ರವೆಂಬ ಸಮುದ್ರದ ಪಾರವನ್ನು ಹೊಂದಿದವನೂ ವಿಶುದ್ಧವಾದ ಬುದ್ಧಿಯುಳ್ಳವನೂ ಆಗಿ ಮತ್ತೊಂದು ದಿವಸ ಸರ್ವಜ್ಞ–ಜಿನೇಶ್ವರನ ಸಮೀಪದಲ್ಲಿ ನನ್ನ ದುಷ್ಟವಾದ ಪೂರ್ವಜನ್ಮಗಳನ್ನು ಕೇಳಿದೆನು. ನಿಮ್ಮಗಳಿಗೆ(ದೇವದಂಪತಿಗಳಿಗೆ) ಬಹಳ ಕುತೂಹಲವನ್ನುಂಟು ಮಾಡುವುದಕ್ಕೋಸ್ಕರ ನಾನು ಅವುಗಳನ್ನು ಕೇಳಿದ ಹಾಗೆಯೇ ಹೇಳುವೆನು.

**ಇಹೈವ ಪುಷ್ಕಲಾವತ್ಯಾಂ ವಿಷಯೇ ಪುಂಡರೀಕಿಣೀಮ್ ।**
**ಪರಿಪಾಲಯತಿ ಪ್ರೀತ್ಯಾ ವಸುಪಾಲಮಹೀಭುಜಿ ॥ ೨೮೯ ॥**

**[1]ವಿದ್ಯುದ್ವೇಗಾಹ್ವಯಂ ಚೋರ[2]ಮವಷ್ಟಭ್ಯ ಕರಸ್ಥಿತಮ್ ।**
**ಧನಂ ಸ್ವೀಕೃತ್ಯ ಶೇಷಂ ಚ ಭವತಾ ದೀಯತಾಮಿತಿ ॥ ೨೯೦ ॥**

೧ ಕದಲೀವನಮಾರ್ಜಾರಚರಃ. ೨ ಬಲಾತ್ಕಾರೇಣಾಗೃಹೀತ್ವಾ.

**[1]ಆರಕ್ಷಿಕೋ ನಿಗೃಹ್ಣೀಯುರ್ದತ್ತಂ [2]ವಿಮತಯೇ ಧನಮ್ ।**
**ಇತ್ಯಬ್ರವೀ[3]ತ್ಸ ಸೋಪ್ಯಾಹ ಗೃಹೀತಂ ನ ಮಯೇತಿ ತತ್ ॥ ೨೯೧ ॥**

ಇಲ್ಲೇ ಪುಷ್ಕಲಾವತೀ ದೇಶದಲ್ಲಿ ಪುಂಡರೀಕಿಣೀನಗರವನ್ನು ವಸುಪಾಲರಾಜನು (ಗುಣಪಾಲರಾಜನ ಪುತ್ರನು) ಪ್ರೀತಿಯಿಂದ ಕಾಪಾಡುತ್ತಿರಲು ವಿದ್ಯುದ್ವೇಗನೆಂಬ ಕಳ್ಳನನ್ನು ಬಲಾತ್ಕಾರದಿಂದ ಹಿಡಿದು ಅವನ ಕೈಯಲ್ಲಿದ್ದ ದ್ರವ್ಯವನ್ನು ಸ್ವೀಕರಿಸಿ 'ಉಳಿದುದನ್ನೂ ನೀನು ಕೊಡು' ಎಂದು ತಳವಾರರು ಬಾಧೆಪಡಿಸಿದರು. "ವಿಮತಿಗೆ ದ್ರವ್ಯವನ್ನು ಕೊಟ್ಟೆನು" ಎಂದು ಆ ಕಳ್ಳನು ಹೇಳಿದನು. ಆ ವಿಮತಿಯೂ "ನಾನು ಆ ದ್ರವ್ಯವನ್ನು ತೆಗೆದುಕೊಳ್ಳಲಿಲ್ಲ" ಎಂದನು.

**ವಿಮತೇರೇವ ತದ್ಗೇಹೇ ದೃಷ್ಟ್ವೋಪಾಯೇನ ಕೇನಚಿತ್ ।**
**ದಂಡಂ [4]ಕಾರಣಿಕೈಃ ಪ್ರೋಕ್ತಂ ಕಾಂಸ್ಯಪಾತ್ರೀತ್ರಯೋನ್ಮಿತಮ್ ॥ ೨೯೨ ॥**

**[5]ಶಕೃತೋ ಭಕ್ಷಣಂ ಮಲ್ಲೈಸ್ತ್ರಿಂಶನ್ಮುಷ್ಟ್ಯಭಿತಾಡನಮ್ ।**
**ಸರ್ವಸ್ವಹರಣಂ ಚೈತತ್ತ್ರಯಂ ಜೀವಿತವಾಂಛಯಾ ॥ ೨೯೩ ॥**

**[6]ಸ ಸರ್ವಮನುಭೂಯಾಯಾತ್ಪ್ರಾಣಾಂತೇ ನಾರಕೀಂ ಗತಿಮ್ ।**
**ವಿದ್ಯುಚ್ಚೋರಸ್ತ್ವಯಾ ಹನ್ಯತಾಮಿತ್ಯಾರಕ್ಷಕೋ ನೃಪಾತ್ ॥ ೨೯೪ ॥**

**ಲಬ್ಧಾದೇಶೋಪ್ಯಹಂ ಹನ್ಮಿ ನೈನಂ ಹಿಂಸಾದಿವರ್ಜನಮ್ ।**
**ಪ್ರತಿಜ್ಞಾತಂ ಮಯಾ ಸಾಧೋರಿತ್ಯಾಜ್ಞಾಂ ನಾಕರೋದಸೌ ॥ ೨೯೫ ॥**

ಆ ದ್ರವ್ಯವನ್ನು ವಿಮತಿಯ ಮನೆಯಲ್ಲೇ ಯಾವುದೋ ಉಪಾಯದಿಂದ ನೋಡಿ ಕಾರಣವನ್ನು ತಿಳಿದವರಾದ ಧರ್ಮಾಧಿಕಾರಿಗಳು ಅವನಿಗೆ ಮೂರು ಕಂಚಿನಪಾತ್ರಗಳ ಅಳತೆಯುಳ್ಳ ಅಮೇಧ್ಯಭಕ್ಷಣ, ಜಟ್ಟಿಗಳಿಂದ ಮೂವತ್ತು ಗುದ್ದುಗಳ ಹೊಡೆಯುವಿಕೆ, ಸರ್ವಸ್ವಹರಣ ಈ ಮೂರು ಶಿಕ್ಷೆಯನ್ನು ಹೇಳಿದರು. ಎಲ್ಲಾ ಶಿಕ್ಷೆಯನ್ನೂ ವಿಮತಿಯು ಬದುಕಬೇಕೆಂಬ ಇಚ್ಛೆಯಿಂದ ಅನುಭವಸಿ ಪ್ರಾಣಾಂತದಲ್ಲಿ ನರಕಗತಿಯನ್ನು ಹೊಂದಿದನು. "ವಿದ್ಯುಚ್ಚೋರನನ್ನು ನೀನು ಕೊಲ್ಲು" ಎಂದು ರಾಜನಿಂದ ಆಜ್ಞೆಯನ್ನು ಪಡೆದವನಾದರೂ ಈ ತಳವಾರನು "ನಾನು ಇವನನ್ನು ಕೊಲ್ಲುವುದಿಲ್ಲ. ನಾನು ಸಾಧುವಿನಿಂದ ಹಿಂಸಾದಿಕಾರ್ಯಗಳ ತ್ಯಾಗವನ್ನು ಪ್ರತಿಜ್ಞೆಮಾಡಿರುತ್ತೇನೆ" ಎಂದು ರಾಜನ ಆಜ್ಞೆಯನ್ನು ನಡೆಸಲಿಲ್ಲ.

**ಗೃಹೀತೋತ್ಕೋಚ ಇತ್ಯೇಷ ಚೋರಾರಕ್ಷಕಯೋರ್ನೃಪಃ ।**
**ಶೃಂಖಲಾಬಂಧನಂ ರುಷ್ಟ್ವಾ ಕಾರಯಾಮಾಸ ನಿರ್ಘೃಣಮ್ ॥ ೨೯೬ ॥**

"ಈ ತಳವಾರನು ಲಂಚವನ್ನು ತೆಗೆದುಕೊಂಡವನಾಗಿರುತ್ತಾನೆ" ಎಂಬುದಾಗಿ ದೊರೆಯು ಕೋಪಗೊಂಡು ಕಳ್ಳನಿಗೂ ತಳವಾರನಿಗೂ ನಿರ್ದಯನಾಗಿ ಸಂಕಲೆಯ ಬಂಧನವನ್ನು ಮಾಡಿಸಿದನು.

**ತ್ವಯಾಹಂ ಹೇತುನಾ ಕೇನ ಹತೋ ನೇತ್ಯನುಯುಕ್ತವಾನ್ ।**
**ಪ್ರತುಷ್ಯಾರಕ್ಷಕಂ ಚೋರಃ ಸೋಪ್ಯೇವಂ ಪ್ರತ್ಯಪಾದಯತ್ ॥ ೨೯೭ ॥**

ಕಳ್ಳನು ತಳವಾರನನ್ನು ಕುರಿತು "ನನ್ನನ್ನು ಯಾವ ಕಾರಣದಿಂದ ನೀನು ಹಿಂಸಿಸಲಿಲ್ಲ ?" ಎಂದು ಬಹುಸಂತೋಷದಿಂದ ತಳವಾರನನ್ನು ಪ್ರಶ್ನೆಮಾಡಿದನು. ಆ ತಳವಾರನೂ ಹೀಗೆ ಹೇಳಿದನು.

**ಏತತ್ಪುರಮಮುಷ್ಯೈವ ರಾಜ್ಞಃ ಪಿತರಿ ರಕ್ಷತಿ ।**
**ಗುಣಪಾಲೇ ಮಹಾಶ್ರೇಷ್ಠೀ ಕುಬೇರಪ್ರಿಯಸಂಜ್ಞಯಾ ॥ ೨೯೮ ॥**

೧ ಪುರರಕ್ಷಕಾಃ ತಲವರಾಃ. ೨ ವಿಮತಿನಾಮಧೇಯಾಯ. ೩ ಚೋರಃ. ೪ ಕಾರಣಜ್ಞೈಃ ಪುರೋಹಿತಾದಿಧರ್ಮಾಧಿಕಾರಿಭಿರಿತ್ಯರ್ಥಃ. ೫ ಗೂಥಸ್ಯ. ೬ ವಿಮತಿಃ.

"ಈ ಪಟ್ಟಣವನ್ನು ಇದೇ ರಾಜನ ತಂದೆಯಾದ ಗುಣಪಾಲಮಹಾರಾಜನು ಕಾಪಾಡುತ್ತಿರಲು ಇಲ್ಲಿ ಕುಬೇರಪ್ರಿಯನೆಂಬ ಹೆಸರಿನಿಂದ ಮಹಾವೈಶ್ಯನೋರ್ವನು ಇದ್ದನು.

**ಅತ್ರೈವ ನಾಟಕಾಚಾರ್ಯತನೂಜಾ ನಾಟ್ಯಮಾಲಿಕಾ ।**
**[೧]ಆಸ್ಥಾಯಿಕಾಯಾಂ ಭಾವೇನ ಸ್ಥಾಯಿನಾನೃತ್ಯ[೨]ದುದ್ರಸಮ್ ॥ ೨೯೯ ॥**

ಇದೇ ಪಟ್ಟಣದಲ್ಲಿ ನಾಟಕಾಚಾರ್ಯನ ಮಗಳಾದ ನಾಟ್ಯಮಾಲಿಕೆಯೆಂಬವಳು ರಾಜಾಸ್ಥಾನದಲ್ಲಿ ಸ್ಥಾಯಿಭಾವದಿಂದ ಅಧಿಕವಾದ ರಸವು(ಶೃಂಗಾರರಸವು) ಬರುವಂತೆ ಕುಣಿದಳು.

**ತದಾಲೋಕ್ಯ ಮಹೀಪಾಲೋ ಬಹುವಿಸ್ಮಯಮಾಗಮತ್ ।**
**ಗಣಿಕೋತ್ಪಲಮಾಲಾ[೩]ಖ್ಯಾ ಕಿಮತ್ರಾಶ್ಚರ್ಯಮೀಶ್ವರ ॥ ೩೦೦ ॥**

**ಶ್ರೇಷ್ಠಿನೋಽಸ್ಯ ಮಿಥೋಽನ್ಯೇದ್ಯುಃ ಪ್ರತಿಮಾಯೋಗಧಾರಿಣಃ ।**
**ಸೋಪವಾಸಸ್ಯ ಪೂಜ್ಯಸ್ಯ ಗತ್ವಾ ಚಾಲಯಿತುಂ ಮನಃ ॥ ೩೦೧ ॥**

**ನಾಶಕಂ ತದಿಹಾಶ್ಚರ್ಯಮಿತ್ಯಾಖ್ಯದ್ಭೂಭುಜಾಪಿ ಸಾ ।**
**ಗುಣಪ್ರಿಯೇ ವೃಣೀಷ್ವೇತಿ ಪ್ರೋಕ್ತಾ ಶೀಲಾಭಿರಕ್ಷಣಮ್ ॥ ೩೦೨ ॥**

**ಅಭೀಷ್ಟಂ ಮಮ ದೇಹೀತಿ ತದ್ದತ್ತಂ ವ್ರತಮಗ್ರಹೀತ್ ।**
**ಅನ್ಯದಾ [೪]ತದ್ಗೃಹಂ ಸರ್ವರಕ್ಷಿತಾಖ್ಯಃ ಸಮಾಗಮತ್ ॥ ೩೦೩ ॥**

ಗುಣಪಾಲಮಹಾರಾಜನು ಆ ನಾಟ್ಯವನ್ನು ನೋಡಿ ಬಹಳ ಆಶ್ಚರ್ಯವನ್ನು ಹೊಂದಿದನು. ಆಗ ಉತ್ಪಲಮಾಲೆಯೆಂಬ ವೇಶ್ಯೆಯು "ಪ್ರಭುವೆ! ಇದರಲ್ಲೇನು ಆಶ್ಚರ್ಯವಿರುತ್ತದೆ? ಶ್ರೇಷ್ಠಿಯು ವ್ರತವನ್ನು ತೆಗೆದುಕೊಂಡ ಮರುದಿವಸ ಏಕಾಂತದಲ್ಲಿ ಪ್ರತಿಮಾಯೋಗವನ್ನು ಧರಿಸಿದವನೂ ಉಪವಾಸಸಹಿತನೂ ಪೂಜ್ಯನೂ ಆದ ಈ ಕುಬೇರಪ್ರಿಯಶ್ರೇಷ್ಠಿಯ ಮನಸ್ಸನ್ನು ಚಂಚಲವನ್ನಾಗಿ ಮಾಡುವುದಕ್ಕೋಸ್ಕರ ಹೋಗಿ ನಾನು ಸಮರ್ಥಳಾಗಲಿಲ್ಲ. ಅದು ಇಲ್ಲಿ ಆಶ್ಚರ್ಯವು" ಎಂದಳು. ಆಗ ರಾಜನಿಂದ ಆ ಉತ್ಪಲಮಾಲೆಯು "ಗುಣಗಳಲ್ಲಿ ಪ್ರೀತಿಯುಳ್ಳವಳೆ! ಮೆಚ್ಚಿಕೆಯನ್ನು ಬೇಡಿಕೊ" ಎಂದು ಹೇಳಲ್ಪಟ್ಟವಳಾಗಿ "ನನಗೆ ಅಭೀಷ್ಟವಾದ ಶೀಲರಕ್ಷಣವನ್ನು ನನಗೆ ಕೊಡು" ಎಂದು ದೊರೆಯಿಂದ ಕೊಡಲ್ಪಟ್ಟ ವ್ರತವನ್ನು ಗ್ರಹಣಮಾಡಿದಳು. ಮತ್ತೊಂದು ದಿವಸ ರಾತ್ರಿಯಲ್ಲಿ ಆ ಉತ್ಪಲಮಾಲೆಯ ಮನೆಗೆ ಸರ್ವರಕ್ಷಿತನೆಂಬ ತಳವಾರನು ಬಂದನು.

**ರಾತ್ರೌ ತಲವರೋ ದೃಷ್ಟ್ವಾ ತಂ ಯಾಹ್ಯದ್ಯೇತಿ [೫]ತೇನ [೬]ತತ್ ।**
**ಪ್ರತಿಪಾದನವೇಲಾಯಾಮೇವಾಯಾನ್ಮಂತ್ರಿಣಃ ಸುತಃ ॥ ೩೦೪ ॥**

**ನೃಪತೇರ್ಮೈಥುನೋ ನಾಮ್ನಾ ಪೃಥುಧೀಸ್ತಂ ನಿರೀಕ್ಷ್ಯ ಸಾ ।**
**ಮಂಜೂಷಾಯಾಂ ವಿನಿಕ್ಷಿಪ್ಯ ಗಣಿಕಾ ಸರ್ವರಕ್ಷಿತಮ್ ॥ ೩೦೫ ॥**

**ತ್ವಯಾ ಮದೀಯಾಭರಣಂ ಸತ್ಯವತ್ಯೈ ಸಮರ್ಪಿತಮ್ ।**
**ತ್ವದ್ಭಗಿನ್ಯೈತದಾನೇಯಮಿತ್ಯಾಹ ನೃಪಮೈಥುನಮ್ ॥ ೩೦೬ ॥**

ಅವನನ್ನು ನೋಡಿ "ಈ ದಿವಸ ಹೋಗು" ಎಂದು ಆ ತಳವಾರನೊಡನೆ ಆ ಮಾತನ್ನು ಹೇಳುವ ಸಮಯದಲ್ಲೇ ಮಂತ್ರಿಯ ಮಗನೂ ರಾಜನ ಮೈದುನನೂ ಆದ ಹೆಸರಿನಿಂದ ಪೃಥುಧೀಯೆಂಬವನು ಬಂದನು. ಆಗ ಆ ವೇಶ್ಯೆಯು ಅವನನ್ನು ನೋಡಿ ಸರ್ವರಕ್ಷಿತನನ್ನು ಒಂದು ಪೆಟ್ಟಿಗೆಯಲ್ಲಿರಿಸಿ ದೊರೆಯ ಮೈದುನನಾದ ಪೃಥುಧೀಯನ್ನು ಕುರಿತು "ನೀನು ನನ್ನ ಸಂಬಂಧವಾದ ಆಭರಣವನ್ನು ನಿನ್ನ ಸಹೋದರಿಯಾದ ಸತ್ಯವತಿಗೆ ಕೊಟ್ಟಿರುತ್ತಿ. ಅದನ್ನು ತಂದು ಕೊಡಬೇಕು." ಎಂದಳು.

೧ ಆಸ್ಥಾನೇ. ೨ ಉತ್ಕಟರಸಂ. ೩ ಆಖ್ಯತ್ ಇತ್ಯಪಿಪಾಠಃ. ೪ ಉತ್ಪಲಮಾಲಾಗೃಹಂ. ೫ ತಲವರೇಣಸಹ. ೬ ಅದ್ಯಯಾಹೀತ್ಯೇತತ್ಪ್ರತಿಪಾದನಂ.

**ಸೋಽಪಿ ಪ್ರಾಕ್ [೧]ಪ್ರತಿಪದ್ಯೈತ[೨]ದ್ವ್ರತಗ್ರಹಣಸಂಶ್ರುತೇಃ ।**
**ಪ್ರಾತಿಕೂಲ್ಯಮಗಾದೀರ್ಷ್ಯಾವಾನ್ ದ್ವಿತೀಯದಿನೇ ಪುನಃ ॥ ೩೦೭ ॥**

**ಸಾಕ್ಷಿಣಂ ಪರಿಕಲ್ಪ್ಯೈನಂ ಮಂಜೂಷಾಸ್ಥಂ ಮಹೀಪತೇಃ ।**
**ಸನ್ನಿಧೌ ಯಾಚಿತೋ ವಿತ್ತಮಸಾವುತ್ಪಲಮಾಲಯಾ ॥ ೩೦೮ ॥**

ಆ ಪೃಥುಧೀಯೂ ಮೊದಲು ತರುತ್ತೇನೆಂದು ಅನುಮತಿಸಿ ಬಳಿಕ ಆಕೆಯು ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸಿರುತ್ತಾಳೆಂದು ಕೇಳಿದುದರಿಂದ ಈರ್ಷ್ಯೆಯುಳ್ಳವನಾಗಿ ವಿರೋಧಭಾವವನ್ನು ಹೊಂದಿದನು. ಆಗ ಆಕೆಯು ಪೆಟ್ಟಿಗೆಯಲ್ಲಿದ್ದ ಈ ಸರ್ವರಕ್ಷಿತನನ್ನು ಸಾಕ್ಷಿಯನ್ನಾಗಿ ಮಾಡಿ ಎರಡನೆಯ ದಿವಸದಲ್ಲಿ ಪುನಃ ದೊರೆಯ ಬಳಿಯಲ್ಲಿ ಉತ್ಪಲಮಾಲೆಯು ಪೃಥುಧೀಯನ್ನು ಕುರಿತು ದ್ರವ್ಯವನ್ನು ಬೇಡಿದಳು.

**ನ ಗೃಹೀತಂ ಮಯೇತ್ಯಸ್ಮಿನ್ಮಿಥ್ಯಾವಾದಿನಿ ಭೂಭುಜಾ ।**
**ಪೃಷ್ಟಾ ಸತ್ಯವತೀ ತಸ್ಯ ಪುರಸ್ತಾನ್ನ್ಯಕ್ಷಿಪದ್ಧನಮ್ ॥ ೩೦೯ ॥**

"ನಾನು ತೆಗೆದುಕೊಂಡಿಲ್ಲ" ಎಂದು ಈ ಪೃಥುಧೀಯು ಸಟೆಯನ್ನು ನುಡಿಯುತ್ತಿರಲು ಆಗ ರಾಜನಿಂದ ಕೇಳಲ್ಪಟ್ಟ ಸತ್ಯವತಿಯು(ಪೃಥುಧೀಯ ಅಕ್ಕ–ದೊರೆಯ ಹೆಂಡತಿಯು) ಅವನ ಮುಂದೆ ಆ ದ್ರವ್ಯವನ್ನಿರಿಸಿದಳು.

**ಮೈಥುನಾಯ ನೃಪಃ ಕ್ರುಧ್ವಾ ಖಲೋಽಯಂ ಹನ್ಯತಾಮಿತಿ ।**
**ಆಜ್ಞಾಪಯತ್ಪದಾತೀನ್ ಸ್ವಾನ್ ಯುಕ್ತಂ ತನ್ನ್ಯಾಯವರ್ತಿನಃ ॥ ೩೧೦ ॥**

ಆಗ ದೊರೆಯು ಮೈದುನನ ಮೇಲೆ ಕೋಪಮಾಡಿ "ದುಷ್ಟನಾದ ಇವನಿಗೆ ಶಿಕ್ಷೆಯಾಗಲಿ" ಎಂದು ತನ್ನ ಕಾಲಾಳುಗಳಿಗೆ ಆಜ್ಞೆಮಾಡಿದನು. ನ್ಯಾಯಮಾರ್ಗದಲ್ಲಿರುವವನಿಗೆ ಅದು(ದುಷ್ಟನಾದ ಬಂಧುವಿಗೂ ಶಿಕ್ಷೆಯನ್ನು ವಿಧಿಸುವಿಕೆಯು) ಯುಕ್ತವಾಗಿರುತ್ತದೆ.

**ಪಠನ್ಮುನೀಂದ್ರಸದ್ಧರ್ಮಶಾಸ್ತ್ರಸಂಶ್ರವಣಾದ್ದ್ರುತಮ್ ।**
**ಅನ್ಯೇದ್ಯುಃ ಪ್ರಾಕ್ತನಂ ಜನ್ಮ ವಿದಿತ್ವಾ ಶಮಮಾಗತೇ ॥ ೩೧೧ ॥**

**ಯಾಗಹಸ್ತಿನಿ ಮಾಂಸಸ್ಯ ಪಿಂಡಾದಾನಮನಿಚ್ಛತಿ ।**
**ತದ್ವೀಕ್ಷ್ಯೋಪಾಯವಿಚ್ಛ್ರೇಷ್ಠೀ ವಿಬುಧ್ಯಾನೇಕಪೇಂಗಿತಮ್ ॥ ೩೧೨ ॥**

**ಸರ್ಪಿರ್ಗುಡಪಯೋಮಿಶ್ರಂ ಶಾಲ್ಯೋದನ[೩]ಸಮರ್ಥಿತಮ್ ।**
**ಪಿಂಡಂ ಪ್ರಾಯೋಜಯತ್ಸೋಽಪಿ ದ್ವಿರದಸ್ತಮುಪಾಹರತ್ ॥ ೩೧೩ ॥**

ಮತ್ತೊಂದು ದಿವಸ ಓದುತ್ತಿರುವ ಮುನೀಶ್ವರರ ಶ್ರೇಷ್ಠವಾದ ಧರ್ಮಶಾಸ್ತ್ರವನ್ನು ಕೇಳಿದುದರಿಂದ ಶೀಘ್ರವಾಗಿ ಪೂರ್ವಜನ್ಮವನ್ನು ತಿಳಿದು ಶಾಂತಿಯನ್ನು ಹೊಂದಿದ ಪಟ್ಟದಾನೆಯು ಮಾಂಸದ ಮುದ್ದೆಯನ್ನು ತಿನ್ನುವುದಕ್ಕೆ ಇಚ್ಛಿಸದಿರಲು ಅದನ್ನು ನೋಡಿ ಉಪಾಯವನ್ನು ತಿಳಿದವನಾದ ಕುಬೇರಪ್ರಿಯಶ್ರೇಷ್ಠಿಯು ಆನೆಯ ಮನೋಗತವನ್ನು ತಿಳಿದು ತುಪ್ಪ ಬೆಲ್ಲಗಳಿಂದ ಮಿಶ್ರವಾದ ಅಕ್ಕಿಯ ಅನ್ನದಿಂದ ಮಾಡಲ್ಪಟ್ಟ ಮುದ್ದೆಯನ್ನು ಕೊಟ್ಟನು. ಆ ಆನೆಯು ಆ ಮುದ್ದೆಯನ್ನು ತಿಂದಿತು.

**ತದಾ ತುಷ್ಟ್ವಾ ಮಹೀನಾಥೋ ವೃಣೀಷ್ವೇಷ್ಟಂ ತವೇತಿ [೪]ತಮ್ ।**
**ಪ್ರಾಹ ಪಶ್ಚಾದ್ಗೃಹೀಷ್ಯಾಮೀತ್ಯಭ್ಯುಪೇತ್ಯ ಸ್ಥಿತಃ ಸ ತು ॥ ೩೧೪ ॥**

**ಸಚಿವಸ್ಯ ಸುತಂ ದೃಷ್ಟ್ವಾ ನೀಯಮಾನಂ ಶುಚಾ ನೃಪಾತ್ ।**
**ವರಮಾದಾಯ ತದ್ಘಾತಾದ್ದುರ್ವೃತ್ತಂ ತಂ ವ್ಯಮೋಚಯತ್ ॥ ೩೧೫ ॥**

ಆಗ ದೊರೆಯು ಸಂತುಷ್ಟನಾಗಿ "ನಿನಗೆ ಇಷ್ಟವಾದುದನ್ನು ಬೇಡಿಕೊ" ಎಂದು ಆ ಕುಬೇರಪ್ರಿಯನಿಗೆ ಹೇಳಿದನು. ಆ ಶ್ರೇಷ್ಠಿಯಾದರೋ "ಆಮೇಲೆ ತೆಗೆದು

೧ ಆನಯಾಮೀತ್ಯನುಮತ್ಯ. ೨ ಬ್ರಹ್ಮಚರ್ಯಂ. ೩ ಸಮರ್ಪಿತಮಿತ್ಯಪಿಪಾಠಃ. ೪ ಕುಬೇರಪ್ರಿಯಂ.

ಕೊಳ್ಳುತ್ತೇನೆ'' ಎಂದು ಅಂಗೀಕರಿಸಿ ನಿಂತಿರುವವನಾಗಿ ಶೋಕದಿಂದ ರಾಜನಿಂದ ವರವನ್ನು ತೆಗೆದುಕೊಂಡು ಕಾಲಾಳುಗಳು ಕರೆದುಕೊಂಡು ಹೋಗುತ್ತಿದ್ದ ಮಂತ್ರಿ ಪುತ್ರ–ಪೃಥುಧೀಯನ್ನು ನೋಡಿ ದುರ್ವ್ಯಾಪಾರಿಯಾದ ಅವನನ್ನು ಆ ವಧೆಯಿಂದ ಬಿಡಿಸಿದನು. ಕುಬೇರಪ್ರಿಯಶ್ರೇಷ್ಠಿಯು ತಾನು ಪಡೆದವರದಿಂದ ಆ ಮಂತ್ರಿಪುತ್ರ ನನ್ನು ಬಿಡಿಸಿದನೆಂದು ಭಾವವು.

**ಶ್ರೇಷ್ಠಿನೈವ ನಿಕಾರೋಽಯಂ ಮಮಾಕಾರೀತ್ಯಮಂಸ್ತ ಸಃ ।**
**ಪಾಪಿನಾಮುಪಕಾರೋಽಪಿ ಸ ಭುಜಂಗಪಯಾಯತೇ ॥ ೨೧೬ ॥**

''ನನಗೆ ಶ್ರೇಷ್ಠಿಯಿಂದಲೇ ಈ ತಿರಸ್ಕಾರವು ಮಾಡಿಸಲ್ಪಟ್ಟಿತು'' ಎಂಬುದಾಗಿ ಆ ಪೃಥುಧೀಯು ತಿಳಿದನು. ಪಾಪಿಗಳಿಗೆ ಆ ಉಪಕಾರವೂ ಹಾವಿಗೆ ಹಾಲೆರೆ ದಂತಾಗುತ್ತದೆ.

**ಅನ್ಯೇದ್ಯುರ್ಮೈಥುನೋ ರಾಜ್ಞಃ ಸ್ವೇಚ್ಛಯಾ ವಿಹರನ್ವನೇ ।**
**ಖೇಚರಾನ್ಮುದ್ರಿಕಾಮಾಪತ್ಕಾಮರೂಪವಿಧಾಯಿನೀಮ್ ॥ ೨೧೭ ॥**

ಮರುದಿವಸ ರಾಜನ ಮೈದುನನು ಸ್ವೇಚ್ಛೆಯಿಂದ ವನದಲ್ಲಿ ವಿಹರಿಸುವವನಾಗಿ ಅಲ್ಲಿ ಖೇಚರನಿಂದ ಇಷ್ಟವಾದ ರೂಪವನ್ನು ಮಾಡುವುದಾದ ಮುದ್ರಿಕೆಯನ್ನು ಪಡೆದನು.

**ಕರಾಂಗುಲೌ ವಿನಿಕ್ಷಿಪ್ಯ ತಾಂ [೧]ವಸೋಃ ಸ್ವಕನೀಯಸಃ ।**
**ಸಂಕಲ್ಪ್ಯ ಶ್ರೇಷ್ಠಿನೋ ರೂಪಂ [೨]ಸತ್ಯವತ್ಯಾ ನಿಕೇತನಮ್ ॥ ೨೧೮ ॥**

**ಪ್ರವೇಶ್ಯ ಪಾಪಧೀ ರಾಜಸಮೀಪಂ ಸ್ವಯ[೩]ಮಾಸ್ಥಿತಃ ।**
**ವಸುಂ ಗೃಹೀತಶ್ರೇಷ್ಠಿಸ್ವರೂಪಂ ವೀಕ್ಷ್ಯ ಮಹೀಪತಿಃ ॥ ೨೧೯ ॥**

**ಶ್ರೇಷ್ಠೀ ಕಿಮರ್ಥಮಾಯಾತೋಽಕಾಲ ಇತ್ಯವದತ್ತದಾ ।**
**ಅನಾತ್ಮಜ್ಞೋಽಯಮಾಯಾತಃ ಪಾಪೀ ಸತ್ಯವತೀಂ ಪ್ರತಿ ॥ ೨೨೦ ॥**

**ಮದನಾನಲಸಂತಪ್ತ ಇತಿ ಮೈಥುನಕೋಽಬ್ರವೀತ್ ।**
**ತದ್ವಾಕ್ಯಾದಪರೀಕ್ಷ್ಯೈವ ತಮೇವಾಹ ಪ್ರಹನ್ಯತಾಮ್ ॥ ೨೨೧ ॥**

**ಶ್ರೇಷ್ಠೀ ತ್ವಯೇತಿ ಶ್ರೇಷ್ಠೀ ಚ ತಸ್ಮಿನ್ನೇವ ದಿನೇ ನಿಶಿ ।**
**ಸ್ವಗೃಹೇ ಪ್ರತಿಮಾಯೋಗಧಾರಕೋ ಭಾವಯನ್ ಸ್ಥಿತಃ ॥ ೨೨೨ ॥**

ತನ್ನ ತಮ್ಮನಾದ ವಸುವಿನ ಕೈಬೆರಳಿನಲ್ಲಿ ಆ ಮುದ್ರಿಕೆಯನ್ನಿಟ್ಟು ಕುಬೇರಪ್ರಿಯಶ್ರೇಷ್ಠಿಯ ರೂಪವನ್ನು ಸಂಕಲ್ಪಿಸಿ ಸತ್ಯವತಿಯ–ರಾಜಪತ್ನಿಯ ಮನೆಗೆ ಪ್ರವೇಶಮಾಡಿಸಿ ಪಾಪಬುದ್ಧಿಯುಳ್ಳವನಾಗಿ ರಾಜನ ಸಮೀಪವನ್ನು ಆಶ್ರಯಿಸಿದನು. ಶ್ರೇಷ್ಠಿಯ ಸ್ವರೂಪವನ್ನು ಸ್ವೀಕರಿಸಿದ ವಸುವನ್ನು ನೋಡಿ ರಾಜನು 'ಅವೇಳೆಯಲ್ಲಿ ಶ್ರೇಷ್ಠಿಯು ಏತಕ್ಕೆ ಬಂದನು ? ' ಎಂದನು. ಆಗ 'ತನ್ನ ಸ್ವರೂಪವನ್ನು ತಿಳಿಯದವನಾದ ಈ ಪಾಪಿಯು ಸತ್ಯವತಿಯನ್ನು ಕುರಿತು ಕಾಮಾಗ್ನಿ ಸಂತಪ್ತನಾಗಿ ಬಂದನು' ಎಂದು ದೊರೆಯ ಮೈದುನನು ಹೇಳಿದನು. ಅವನ ವಾಕ್ಯದಿಂದ ಪರೀಕ್ಷಿಸದೆಯೇ ದೊರೆಯು ''ನಿನ್ನಿಂದ ಶ್ರೇಷ್ಠಿಯು ಕೊಲ್ಲಲ್ಪಡಲಿ'' ಎಂದು ಆ ಪೃಥುಧೀಗೇ ಹೇಳಿದನು, ಶ್ರೇಷ್ಠಿಯಾದರೋ ಅದೇ ದಿವಸ ರಾತ್ರಿಯಲ್ಲಿ ತನ್ನ ಮನೆಯಲ್ಲಿ ಪ್ರತಿಮಾಯೋಗವನ್ನು ಧರಿಸಿದವನೂ ಆತ್ಮಭಾವನೆಯನ್ನು– ಧ್ಯಾನವನ್ನು ಮಾಡುವವನೂ ಆಗಿದ್ದನು.

**ಪೃಥುಧೀಸ್ತಮವಷ್ಟಭ್ಯ ಗೃಹೀತ್ವಾ ಘೋಷಯನ್ ಜನೇ ।**
**ಅಪರಾಧಮಸಂತಂ ಚ ನೀತ್ವಾ ಪ್ರೇತಮಹೀತಲಮ್ ॥ ೨೨೩ ॥**

೧ ವಸುನಾಮಧೇಯಸ್ಯ. ೨ ರಾಜ್ಞಃ ಪತ್ನ್ಯಾಃ, ಸ್ವಸ್ಯಅಗ್ರಜಾಯಾಃ. ೩ ಆಶ್ರಿತಃ.

**ಆರಕ್ಷಕಕರೇ ಹಂತುಮರ್ಪಯಾಮಾಸ ಪಾಪಭಾಕ್ ।**
**ಸೋಽಪಿ ರಾಜನಿದೇಶೋಽಯಮಿತ್ಯಹನ್ನಸಿನಾ ದೃಢಮ್ ॥ ೨೨೪ ॥**

**ತಸ್ಯ ವಕ್ಷಸ್ಥಲಂ ತತ್ರ ಪ್ರಹಾರೋ ಮಣಿಹಾರತಾಮ್ ।**
**ಪ್ರಾಪ ಶೀಲವತೋ ಭಕ್ತ ಸ್ಯಾರ್ಹತ್ಪರಮದೈವತೇ ॥ ೨೨೫ ॥**

ಪೃಥುಧೀಯು ಆ ಶ್ರೇಷ್ಠಿಯನ್ನು ಬಲಾತ್ಕಾರದಿಂದ ಹಿಡಿದು ಇಲ್ಲದಿರುವ– ಅಸತ್ಯವಾದ ತಪ್ಪನ್ನು ಜನರಲ್ಲಿ ಘೋಷಿಸುವವನಾಗಿ ಶ್ಮಶಾನಕ್ಕೆ ಕರೆದೊಯ್ದು ಪಾಪಭಾಜನನಾಗಿ ತಳವಾರನ ಕೈಯಲ್ಲಿ ಕೊಲ್ಲುವುದಕ್ಕೋಸ್ಕರ ಕೊಟ್ಟನು. ಆ ತಳವಾರನೂ ''ಇದು ದೊರೆಯ ಆಜ್ಞೆ'' ಎಂದು ಆ ಶ್ರೇಷ್ಠಿಯ ಎದೆಯನ್ನು ಖಡ್ಗದಿಂದ ದೃಢವಾಗಿ ಹೊಡೆದನು. ಆ ಹೊಡೆತವು ಅರ್ಹತ್ಪರಮದೈವದಲ್ಲಿ ಭಕ್ತನೂ ಶೀಲ–ಸದಾಚಾರವುಳ್ಳವನೂ ಆದ ಆ ಶ್ರೇಷ್ಠಿಯ ಎದೆಯಲ್ಲಿ ರತ್ನಗಳ ಹಾರದ ರೂಪವನ್ನು ಹೊಂದಿತು.

**ದಂಡನಾದಪರೀಕ್ಷ್ಯಾಸ್ಯ ಮಹೋತ್ಪಾತಃ ಪುರೇಜನಿ ।**
**ಕ್ಷಯಃ ಸ ಯೇನ ಸರ್ವೇಷಾಂ ಕಿಂ ನಾ[೧]ದುಷ್ಟವಧಾದ್ಭವೇತ್॥ ೨೨೬ ॥**

ಪರೀಕ್ಷಿಸದೆ ಈ ಶ್ರೇಷ್ಠಿಯ ಶಿಕ್ಷೆಯಿಂದ ಪಟ್ಟಣದಲ್ಲಿ ಎಲ್ಲರ ನಾಶಕ್ಕೆ ಕಾರಣವಾದ ಮಹೋತ್ಪಾತವುಂಟಾಯಿತು. ಸತ್ಪುರುಷನ ವಧೆಯಿಂದ ಏನುತಾನೆ ಆಗದು ?

**ನರೇಶೋ ನಾಗರಾಶ್ಚೈತದಾಲೋಕ್ಯ ಭಯವಿಹ್ವಲಾಃ ।**
**ತಮೇವ ಶರಣಂ ಗಂತುಂ ಶ್ಮಶಾನಾಭಿಮುಖಂ ಯಯುಃ ॥ ೨೨೭ ॥**

ಆಗ ದೊರೆಯೂ ಪುರನಿವಾಸಿಗಳೂ ಈ ಮಹೋತ್ಪಾತವನ್ನು ನೋಡಿ ಭಯದಿಂದ ಖಿನ್ನರಾಗಿ ಆ ಶ್ರೇಷ್ಠಿಯ ಶರಣಾಗತರಾಗುವುದಕ್ಕೋಸ್ಕರ ಶ್ಮಶಾನಾ ಭಿಮುಖರಾಗಿ ಹೋದರು.

**ತದೋಪಸರ್ಗನಿರ್ನಾಶೇ ವಿಸ್ಮಯಾನ್ನಾಕವಾಸಿನಃ ।**
**ಶೀಲಪ್ರಭಾವಂ ವ್ಯಾವರ್ಣ್ಯ ವಣಿಗ್ವರ್ಯಮಪೂಜಯನ್ ॥ ೨೨೮ ॥**

ಆಗ ಉಪಸರ್ಗದ ನಾಶವಾಗುತ್ತಿರಲು ಆಶ್ಚರ್ಯದಿಂದ ಸ್ವರ್ಗನಿವಾಸಿಗಳು –ದೇವತೆಗಳು ಶೀಲಮಹಿಮೆಯನ್ನು ವರ್ಣಿಸಿ ವೈಶ್ಯೋತ್ತಮನನ್ನು ಪೂಜಿಸಿದರು.

**ಅಪರೀಕ್ಷಿತಕಾರ್ಯಾಣಾಮಸ್ಮಾಕಂ ಕ್ಷಂತುಮರ್ಹಸಿ ।**
**ಇತಿ ತೇಷು ಭಯತ್ರಸ್ತಮಾನಸೇಷು ನೃಪಾದಿಷು ॥ ೨೨೯ ॥**

**ಅಸ್ಮದಾರ್ಜಿತದುಷ್ಕರ್ಮಪರಿಪಾಕಾದಭೂದಿದಮ್ ।**
**ವಿಷಾದಸ್ತತ್ರಕರ್ತವ್ಯೋ ನ ಭವದ್ಭಿರಿತಿ ಬ್ರುವನ್ ॥ ೨೩೦ ॥**

**ವೈಮನಸ್ಯಂ ನಿರಸ್ಯೈಷಾಂ ಶ್ರೇಷ್ಠೀ [೨]ಪ್ರಷ್ಠಃ ಕ್ಷಮಾವತಾಮ್ ।**
**ಸರ್ವೈಃ ಪುರಸ್ಕೃತಃ ಪೂಜ್ಯೋ ವಿಭೂತ್ಯಾ ಪ್ರಾವಿಶತ್ಪುರೀಮ್ ॥ ೨೩೧ ॥**

''ಪರೀಕ್ಷಿಸದೆ ಕೆಲಸವನ್ನು ಮಾಡುವವರಾದ ನಮ್ಮಗಳನ್ನು ಕ್ಷಮಿಸುವುದಕ್ಕೆ ಅರ್ಹನಾಗಿರುತ್ತಿ'' ಎಂದು ಆ ದೊರೆಯೇ ಮೊದಲಾದವರು ಭಯದಿಂದ ಖಿನ್ನವಾದ ಮನಸ್ಸುಳ್ಳವರಾಗಿರುತ್ತಿರಲು ''ನಾವು ಸಂಪಾದಿಸಿದ ದುಷ್ಕರ್ಮದ ಉದಯದಿಂದ ಇದಾಯಿತು. ಆ ವಿಷಯದಲ್ಲಿ ನೀವುಗಳು ವಿಷಾದವನ್ನು ಮಾಡಬಾರದು'' ಎಂದು ಹೇಳುವವನೂ ಮುಖ್ಯನೂ ಆದ ಶ್ರೇಷ್ಠಿಯು ಕ್ಷಮೆ ಯುಳ್ಳವರಾದ ಈ ದೊರೆಯೇ ಮೊದಲಾದವರ ವೈಮನಸ್ಯವನ್ನು ಹೋಗಲಾಡಿಸಿ ಎಲ್ಲರಿಂದಲೂ ಪುರಸ್ಕೃತನೂ ಪೂಜ್ಯನೂ ಆಗಿ ವೈಭವದಿಂದ ಪಟ್ಟಣವನ್ನು ಪ್ರವೇಶಿಸಿದನು.

೧ ಸತ್ಪುರುಷವಧಾತ್. ೨ ಮುಖ್ಯಃ.

ಏವಂ ಪ್ರಯಾತಿ ಕಾಲೇಸ್ಯ ವಾರಿಷೇಣಾಂ ಸುತಾಂ ನೃಪಃ ।
ವಸುಪಾಲಾಯ ಪುತ್ರಾಯ ಸ್ವಸ್ಯಾದತ್ತ ವಿಭೂತಿಮಾನ್ ॥ ೩೩೨ ॥

ಹೀಗೆ ಕಾಲವು ಕಳೆಯುತ್ತಿರಲು ಈ ಕುಬೇರಪ್ರಿಯಶ್ರೇಷ್ಠಿಯ ವಾರಿಷೇಣೆಯೆಂಬ ಪುತ್ರಿಯನ್ನು ಸಂಪತ್ತಿಯುಳ್ಳವನಾದ ಗುಣಪಾಲಮಹಾರಾಜನು ತನ್ನ ಪುತ್ರನಾದ ವಸುಪಾಲನಿಗೋಸ್ಕರ ಸ್ವೀಕರಿಸಿದನು.

ಅಥಾನ್ಯೇದ್ಯುಃ ಸಭಾಮಧ್ಯೇ ಪೃಷ್ಟವಾನ್ ಶ್ರೇಷ್ಠಿನಂ ನೃಪಃ ।
ವಿರುದ್ಧಂ ಕಿಂ ನ ವಾನ್ಯೋನ್ಯಂ ಧರ್ಮಾದೀತಿ ಚತುಷ್ಟಯಮ್ ॥

ಅನಂತರದಲ್ಲಿ ಮರುದಿನ ಸಭೆಯ ಮಧ್ಯದಲ್ಲಿ 'ಧರ್ಮವೇ ಮೊದಲಾದ ನಾಲ್ಕು–ಧರ್ಮ ಅರ್ಥ ಕಾಮ ಮೋಕ್ಷಗಳು ಒಂದಕ್ಕೊಂದು ವಿರುದ್ಧಗಳಾಗಿಲ್ಲವೇ ?' ಎಂದು ರಾಜನು ಶ್ರೇಷ್ಠಿಯನ್ನು ಕೇಳಿದನು.

ಪರಸ್ಪರಾನುಕೂಲಾಸ್ತೇ ಸಮ್ಯಗ್ದೃಷ್ಟಿಷು [೧]ಸಾಧುಷು ।
ನ ಮಿಥ್ಯಾದೃಕ್ಷ್ವಿತಿ ಪ್ರಾಹ ಶ್ರೇಷ್ಠೀ ಧರ್ಮಾದಿತತ್ತ್ವವಿತ್ ॥ ೩೩೪ ॥

ಆಗ 'ಸಮ್ಯಗ್ದೃಷ್ಟಿಗಳಾದ ಸಜ್ಜನರಲ್ಲಿ ಆ ಧರ್ಮಾದಿಗಳು ಒಂದಕ್ಕೊಂದು ಅನುಕೂಲಗಳಾಗಿರುತ್ತವೆ. ಮಿಥ್ಯಾದೃಷ್ಟಿಗಳಲ್ಲಿ ಅನುಕೂಲಗಳಾಗಿರುವುದಿಲ್ಲ' ಎಂದು ಧರ್ಮಾದಿಗಳ ಸ್ವರೂಪವನ್ನು ತಿಳಿದವನಾದ ಶ್ರೇಷ್ಠಿಯು ಹೇಳಿದನು.

ಇತಿ ತದ್ವಚನಾದ್ರಾಜಾ ತುಷ್ಟ್ವಾಭೀಷ್ಟಂ ತ್ವಯೋಚ್ಯತಾಮ್ ।
ದಾಸ್ಯಾಮೀತ್ಯಾಹ ಸೋಪ್ಯಾಖ್ಯ[೨]ಜ್ಜಾತಿಮೃತ್ಯುಕ್ಷಯಾವಿತಿ ॥ ೩೩೫ ॥

ಈ ಪ್ರಕಾರವಾಗಿ ಶ್ರೇಷ್ಠಿಯ ಮಾತಿನಿಂದ ದೊರೆಯು ಸಂತುಷ್ಟನಾಗಿ 'ನೀನು ಇಷ್ಟವಾದ ವಸ್ತುವನ್ನು ಕೇಳು. ಕೊಡುವೆನು' ಎಂದು ಹೇಳಿದನು. ಆ ಶ್ರೇಷ್ಠಿಯು 'ಜನನಮರಣಗಳ ನಾಶಗಳೆರಡು ಇಷ್ಟವಾದ ವಸ್ತುಗಳು' ಎಂದು ಹೇಳಿದನು.

ನ ಮಯಾ ತದ್ದ್ವಯಂ ಸಾಧ್ಯಮಿತಿ ಪ್ರತ್ಯಾಹ ಭೂಪತಿಃ ।
ಮಾಂ ಮುಂಚ ಸಾಧಯಾಮೀತಿ ತಮವೋಚದ್ವಣಿಗ್ವರಃ ॥ ೩೩೬ ॥

'ಅವೆರಡು ನನ್ನಿಂದ ಸಾಧ್ಯವಲ್ಲ' ಎಂದು ದೊರೆಯು ಉತ್ತರವನ್ನು ಹೇಳಿದನು. ವೈಶ್ಯೋತ್ತಮನಾದ ಕುಬೇರಪ್ರಿಯನು 'ನನ್ನನ್ನು ಬಿಡು' ನಾನು ಅವೆರಡನ್ನು ಸಾಧಿಸುತ್ತೇನೆ' ಎಂದು ದೊರೆಗೆ ಹೇಳಿದನು.

ತದಾಕರ್ಣ್ಯ ಗೃಹತ್ಯಾಗಮಹಂ ಚ ಸಹ [೩]ತೇಧುನಾ ।
ಕರೋಮಿ ಕಿಂತು ಮೇ ಪುತ್ರಾ ಬಾಲಕಾ ಇತಿ ಚಿಂತಯನ್ ॥ ೩೩೭ ॥

[೪]ಸದ್ಯೋ ಭಿನ್ನಾಂಡಕೋದ್ಭೂತಾನ್ ಮಕ್ಷಿಕಾದಾನತತ್ಪರಾನ್ ।
ಕ್ಷುಧಾಪೀಡಾಹತಾನ್ವೀಕ್ಷ್ಯ ಸಹಸಾ ಗೃಹಕೋಕಿಲಾನ್ ॥ ೩೩೮ ॥

ಸರ್ವೇಪಿ [೫]ಜೀವಿಕೋಪಾಯಂ ಜಂತವೋ ಜಾನತೇ ತರಾಮ್ ।
ಸ್ವೇಷಾಂ ವಿನೋಪದೇಶೇನ ತತ್ಕಿಂ ಮೇ ಬಾಲಚಿಂತಯಾ ॥ ೩೩೯ ॥

ಇತ್ಯಸೌ ವಸುಪಾಲಾಯ ದತ್ವಾ ರಾಜ್ಯಂ ಯಥಾವಿಧಿ ।
ವಿಧಾಯ ಯೌವರಾಜ್ಯಂ ಚ ಶ್ರೀಪಾಲಸ್ಯ ಸಪಟ್ಟಕಮ್ ॥ ೩೪೦ ॥

ಗುಣಪಾಲಮಹಾರಾಜಃ ಸಕುಬೇರಪ್ರಿಯೋಗ್ರಹೀತ್ ।
ಬಹುಭಿರ್ಭೂಭುಜೈಃ ಸಾರ್ಧಂ ತಪೋ ಯತಿವರಂ ಶ್ರಿತಃ ॥ ೩೪೧ ॥

ಆ ಮಾತನ್ನು ಕೇಳಿ ದೊರೆಯು ' ನಾನೂ ಈಗ ನಿನ್ನೊಡನೆ ಗೃಹತ್ಯಾಗವನ್ನು ಮಾಡುತ್ತೇನೆ, ಆದರೆ ನನ್ನ ಪುತ್ರರು ಬಾಲಕರು(ಚಿಕ್ಕವರು)' ಎಂದು ಚಿಂತಿಸುವವನಾಗಿ ಆಗಲೇ ಒಡೆದ ಮೊಟ್ಟೆಗಳಿಂದ ಹುಟ್ಟಿದುವೂ ಹಸಿವಿನ ಬಾಧೆಯಿಂದ ಕೂಡಿದುವೂ ನೊಣಗಳನ್ನು ತೆಗೆದುಕೊಳ್ಳುವುದರಲ್ಲಿ (ತಿನ್ನುವುದರಲ್ಲಿ) ಆಸಕ್ತಗಳೂ ಆದ ಮನೆಯ ಕೋಗಿಲೆಗಳನ್ನು ಶೀಘ್ರವಾಗಿ ನೋಡಿ 'ಎಲ್ಲಾ ಪ್ರಾಣಿಗಳು ಉಪದೇಶವಿಲ್ಲದೆ ತಮ್ಮ ಜೀವನೋಪಾಯವನ್ನು ಚೆನ್ನಾಗಿ ತಿಳಿಯುತ್ತವೆ. ಆದುದರಿಂದ ನನಗೆ ಬಾಲಕರ ಚಿಂತೆಯಿಂದೇನು ?' ಎಂಬುದಾಗಿ ಈ ದೊರೆಯು ವಸುಪಾಲನೆಂಬ ಮಗನಿಗೆ ವಿಧಿಪ್ರಕಾರವಾಗಿ ರಾಜ್ಯವನ್ನು ಕೊಟ್ಟು ಶ್ರೀಪಾಲನಿಗೆ ಪಟ್ಟಸಹಿತವಾದ ಯುವರಾಜಪದವಿಯನ್ನೂ ಮಾಡಿ–ಕೊಟ್ಟು ಕುಬೇರಪ್ರಿಯಶ್ರೇಷ್ಠಿಸಹಿತನಾಗಿ ಗುಣಪಾಲಮಹಾರಾಜನು ಅನೇಕ ರಾಜರುಗಳೊಡನೆ ಯತಿಶ್ರೇಷ್ಠನನ್ನು ಹೊಂದಿದವನಾಗಿ ತಪಸ್ಸನ್ನು ಸ್ವೀಕರಿಸಿದನು.

ಶ್ರೇಷ್ಠ್ಯಹಿಂಸಾಫಲಾಲೋಕಾ[೧]ನ್ಮಯಾಪ್ಯಗ್ರಾಹಿ ತದ್ವ್ರತಮ್ ।
ತಸ್ಮಾತ್ತ್ವಂ ನ ಹತೋಸೀತಿ ತತಸ್ತುಷ್ಟಾವ ಸೋಪಿ ತತ್ ॥ ೩೪೨ ॥

ಕುಬೇರಪ್ರಿಯಶ್ರೇಷ್ಠಿಯ ಅಹಿಂಸೆಯ ಫಲವನ್ನು ನೋಡಿದುದರಿಂದ ನಾನೂ ಆ ವ್ರತವನ್ನು ಸ್ವೀಕರಿಸಿದೆನು. ಆದುದರಿಂದ ನಿನ್ನನ್ನು ಕೊಲ್ಲಲಿಲ್ಲ'' ಎಂದು ತಳವಾರನು ಹೇಳಿದನು. ಬಳಿಕ ಆ ವಿದ್ಯುಚ್ಚರನೂ ಆ ವ್ರತವನ್ನು ಹೊಗಳಿದನು.''

ಇತ್ಯುಕ್ತ್ವಾ [೨]ಸೋಬ್ರವೀದೇವಂ ಪ್ರಾಙ್ಮೃಣಾಲವತೀಪುರೇ ।
ಭೂತ್ವಾ ತ್ವಂ ಭವದೇವಾಖ್ಯೋ ರತಿವೇಗಾಸುಕಾಂತಯೋಃ ॥ ೩೪೩ ॥

ಬದ್ಧವೈರೋ ನಿಹಂತಾಭೂಃ ಪಾರಾವತಭವೇಪ್ಯನು ।
ಮಾರ್ಜಾರಃ ಸನ್ಮೃತಿಂ ಗತ್ವಾ ಪುನಃ ಖಚರಜನ್ಮನಿ ॥ ೩೪೪ ॥

ವಿದ್ಯುಚ್ಚೋರತ್ವಮಾಸಾದ್ಯ ಸೋಪಸರ್ಗಾಂ ಮೃತಿಂ ವ್ಯಧಾಃ ।
ತತ್ಪಾಪಾನ್ನರಕೇ ದುಃಖಮನುಭೂಯಾಗತಸ್ತತಃ ॥ ೩೪೫ ॥

ಅತ್ರೇತ್ಯಖಿಲವೇದ್ಯುಕ್ತಂ ವ್ಯಕ್ತವಾಗ್ವಿಸರಃ ಸ್ಫುಟಮ್ ।
ವ್ಯಧಾತ್ಸುಧೀಃ ಸ್ವವೃತ್ತಾಂತಂ ಭೀಮಸಾಧುಃ ಸುಧಾಶಿನೋಃ ॥ ೩೪೬ ॥

ಈ ಪ್ರಕಾರವಾಗಿ ಭೀಮಮುನಿಯು ಹೇಳಿ ಪುನಃ ''ಆ ಸರ್ವಜ್ಞಜಿನೇಶ್ವರನು ಮೊದಲು ಮೃಣಾಲವತೀನಗರದಲ್ಲಿ ನೀನು(ಭೀಮಮುನಿಯು) ಭವದೇವನೆಂಬ ಹೆಸರುಳ್ಳವನಾಗಿ ರತಿವೇಗಾಸುಕಾಂತರಲ್ಲಿ ವೈರವನ್ನು ಕಟ್ಟಿಕೊಂಡು ಅವರನ್ನು ಕೊಲ್ಲುವವನಾದೆ. ಬಳಿಕ ಪಾರಿವಾಳಗಳ ಭವದಲ್ಲಿಯೂ ಬೆಕ್ಕಾಗಿದ್ದು ಪುನಃ ಮೃತನಾಗಿ ಖೇಚರಜನ್ಮದಲ್ಲಿ ವಿದ್ಯುಚ್ಚೋರತ್ವವನ್ನು ಹೊಂದಿ ಉಪಸರ್ಗಸಹಿತವಾದ ಮರಣವನ್ನುಂಟುಮಾಡಿದೆ(ಪ್ರಭಾವತೀ ಹಿರಣ್ಯವರ್ಮರನ್ನು ಒಂದೇ ಚಿತಿಯಲ್ಲಿಟ್ಟು ಸುಟ್ಟು ಕೊಂದೆ) ಆ ಪಾಪದಿಂದ ನರಕದಲ್ಲಿ ದುಃಖವನ್ನನುಭವಿಸಿ ಅಲ್ಲಿಂದ ಇಲ್ಲಿ ಬಂದವನಾಗಿರುತ್ತಿ' ಎಂದು ಹೇಳಿದನು'' ಈ ಪ್ರಕಾರವಾಗಿ ಸರ್ವಜ್ಞ–ಜಿನೇಶ್ವರನಿಂದ ಹೇಳಲ್ಪಟ್ಟ ತನ್ನ ಸಮಾಚಾರವನ್ನು ಬುದ್ಧಿಶಾಲಿಯಾದ ಭೀಮಮುನಿಯು ಆ ದೇವತೆಗಳಿಗೆ ವ್ಯಕ್ತವಾದ ವಚನವಿಸ್ತಾರವುಳ್ಳವನಾಗಿ (ವ್ಯಕ್ತವೂ ವಿಸ್ತಾರವೂ ಆದ ವಚನದಿಂದ) ಸ್ಫುಟಮಾಡಿದನು.

ತ್ರಿಃ ಪ್ರಾಕ್ ತ್ವನ್ಮಾರಿತಾವಾವಾಮಿತಿ ಶುದ್ಧಿತ್ರಯಾನ್ವಿತೌ ।
ಜಾತಸದ್ಧರ್ಮಸದ್ಭಾವಾವಭಿವಂದ್ಯ ಮುನಿಂ ಗತೌ ॥ ೩೪೭ ॥

ಇತಿ ವ್ಯಾಹೃತ್ಯ ಹೇಮಾಂಗದಾನುಜೇದಂ ಚ ಸಾಬ್ರವೀತ್ ।
ಭೀಮಸಾಧುಃ ಪುರೇ ಪುಂಡರೀಕಿಣ್ಯಾಂ ಘಾತಿಘಾತನಾತ್ ॥ ೩೪೮ ॥

ರಮ್ಯೇ ಶಿವಂಕರೋದ್ಯಾನೇ ಪಂಚಮಜ್ಞಾನಪೂಜಿತಃ ।
ತಸ್ಥಿವಾಂಸ್ತಂ ಸಮಾಗತ್ಯ ಚತಸ್ರೋ ದೇವಯೋಷಿತಃ ॥ ೩೪೯ ॥

ವಂದಿತ್ವಾ ಧರ್ಮಮಾಕರ್ಣ್ಯ ಪಾಪಾದಸ್ಮತ್ಪತಿರ್ಮೃತಃ ।
ತ್ರಿಲೋಕೇಶ ವದಾಸ್ಮಾಕಂ ಪತಿಃ ಕೋನ್ಯೋ ಭವಿಷ್ಯತಿ ॥ ೩೫೦ ॥

೧ ಸಜ್ಜನೇಷು. ೨ ಜನನಮರಣವಿನಾಶೌ. ೩ ತ್ವಯಾಸಹ-ತೇಮೇ ಶಬ್ದೌ ತ್ವಯಾ ಮಯಾ ಇತ್ಯರ್ಥೇ. ೪ ತತ್ಕ್ಷಣೇಸ್ಫುಟಿತಕೋಶಜಾತಾನ್. ೫ ಜೀವನೋಪಾಯಮಿತ್ಯಪಿಪಾಠಃ.

೧ ತಲವರೇಣ. ೨ ಭೀಮಮುನಿಃ.

**ಇತ್ಯಪೃಚ್ಛ[೧]ನ್ನಸೌ ಚಾಹ ಪುರೇಸ್ಮಿನ್ನೇವ [೨]ಭೋಜಕಃ ।**
**ಸುರದೇವಾಹ್ವಯಸ್ತಸ್ಯ ವಸುಷೇಣಾ ವಸುಂಧರಾ ॥ ೩೫೧ ॥**

**ಧಾರಿಣೀ ಪೃಥಿವೀ ಚೇತಿ ಚತಸ್ರೋ ಯೋಷಿತಃ ಪ್ರಿಯಾಃ ।**
**ಶ್ರೀಮತೀ ವೀತಶೋಕಾಖ್ಯಾ ವಿಮಲಾ ಸವಸಂತಿಕಾ ॥ ೩೫೨ ॥**

**ಚತಸ್ರಶ್ಚೇಟಿಕಾಸ್ತಾ ಸಾಮನ್ಯೇದ್ಯುಸ್ತಾ ವನಾಂತರೇ ।**
**ಸರ್ವಾ ಯತಿವರಾಭ್ಯಾಸೇ ಧರ್ಮಂ ದಾನಾದಿ[೩]ಮಾದಧುಃ ॥ ೩೫೩ ॥**

"ನಾವು(ದೇವದಂಪತಿಗಳು) ಮೊದಲು ಮೂರಾವರ್ತಿ ನಿನ್ನಿಂದ ಕೊಲ್ಲಲ್ಪಟ್ಟವರಾಗಿರುತ್ತೇವೆ" ಎಂದು ಮನೋವಾಕ್ಕಾಯಶುದ್ಧಿತ್ರಯದಿಂದ ಕೂಡಿದವರೂ ಸದ್ಧರ್ಮದ ಸದ್ಭಾವನೆಯುಂಟಾಗಿರುವವರೂ ಆಗಿ ಮುನಿಯನ್ನು ವಂದಿಸಿ ಹೊರಟು ಹೋದರು" ಈ ಪ್ರಕಾರವಾಗಿ ಆ ಹೇಮಾಂಗದನ ತಂಗಿ-ಸುಲೋಚನೆಯು ಹೇಳಿ ಇದನ್ನೂ ಹೇಳಿದಳು "ಭೀಮಮುನಿಯು ಪುಂಡರೀಕಿಣೀ ನಗರದಲ್ಲಿ ರಮಣೀಯವಾದ ಶಿವಂಕರವೆಂಬ ಉದ್ಯಾನದಲ್ಲಿ ಘಾತಿಕರ್ಮಗಳನ್ನು ನಾಶಮಾಡಿರುವುದರಿಂದ ಐದನೆಯ ಜ್ಞಾನ(ಕೇವಲಜ್ಞಾನ)ದಿಂದ ಪೂಜಿತನಾಗಿದ್ದನು. ಅವನನ್ನು ಕುರಿತು ನಾಲ್ಕುಮಂದಿ ದೇವಸ್ತ್ರೀಯರು ಬಂದು ವಂದಿಸಿ ಧರ್ಮವನ್ನು ಕೇಳಿ 'ತ್ರಿಲೋಕಾಧಿಪತಿಯೆ ! ನಮ್ಮ ಪತಿಯು ಪಾಪದಿಂದ ಸತ್ತುಹೋದನು. ನಮಗೆ ಬೇರೆಯಾವನು ಪತಿಯಾಗುವನು ? ಹೇಳು' ಎಂದು ಕೇಳಿದರು. ಈ ಭೀಮಕೇವಲಿಯು "ಈ ಪುಂಡರೀಕಿಣೀನಗರದಲ್ಲೇ ಸುರದೇವನೆಂಬವನು ರಕ್ಷಕನು-ರಾಜನು. ಅವನಿಗೆ ವಸುಷೇಣಾ, ವಸುಂಧರಾ, ಧಾರಿಣೀ, ಪೃಥಿವೀ ಎಂದು ನಾಲ್ಕುಜನ ಪ್ರಿಯಪತ್ನಿಯರು. ಅವರಿಗೆ ಶ್ರೀಮತೀ, ವೀತಶೋಕೆಯೆಂಬವಳು, ವಿಮಲಾ, ವಸಂತಿಕಾ ಎಂದು ನಾಲ್ಕುಜನ ದಾಸಿಯರಿದ್ದರು. ಮತ್ತೊಂದು ದಿವಸ ಅವರೆಲ್ಲರೂ ವನಾಂತರದಲ್ಲಿ ಯತಿಶ್ರೇಷ್ಠನ ಬಳಿಯಲ್ಲಿ ದಾನವೇ ಮೊದಲಾದ ಧರ್ಮವನ್ನು ಸ್ವೀಕರಿಸಿದರು.

**ತತ್ಫಲೇನಾಚ್ಯುತೇ ಕಲ್ಪೇ ಪ್ರತೀಂದ್ರಸ್ಯ ಪ್ರಿಯಾಃ ಕ್ರಮಾತ್ ।**
**ರತಿಷೇಣಾ ಸುಸೀಮಾಖ್ಯಾ ಮುಖ್ಯಾನ್ಯಾ ಚ ಸುಖಾವತೀ ॥ ೩೫೪ ॥**

**ಸುಭಗೇತಿ ಚ ದೇವ್ಯಸ್ತಾ ಯೂಯಂ ತಾಶ್ಚೇಟಿಕಾಃ ಪುನಃ ।**
**ಚಿತ್ರಸೇನಾ ಕ್ರಮಾಚ್ಚಿತ್ರವೇಗಾ ಧನವತೀ ಸತೀ ॥ ೩೫೫ ॥**

**ಧನಶ್ರೀರಿತ್ಯಜಾಯಂತ [೪]ವನದೇವೇಷು ಕನ್ಯಕಾಃ ।**
**[೫]ಸುರದೇವೋಪ್ಯಭೂನ್ಮೃತ್ವಾ ಪಿಂಗಲಃ [೬]ಪುರರಕ್ಷಕಃ ॥ ೩೫೬ ॥**

ಅದರ ಫಲದಿಂದ ಅಚ್ಯುತಕಲ್ಪವೆಂಬ ಹದಿನಾರನೆಯ ಸ್ವರ್ಗದಲ್ಲಿ ಕ್ರಮದಿಂದ ರತಿಷೇಣಾ, ಮುಖ್ಯಳಾದ ಸುಸೀಮೆಯೆಂಬವಳು, ಮತ್ತೊಬ್ಬಳು ಸುಖಾವತಿಯು, ಸುಭಗಾ ಎಂಬುದಾಗಿ ನಾಲ್ಕುಜನ ದೇವಿಯರು. ಅವರೇ ನೀವುಗಳು ಪ್ರತೀಂದ್ರನ ಪತ್ನಿಯರು. ಆ ದಾಸಿಯರಾದರೋ ಕ್ರಮದಿಂದ ಚಿತ್ರಸೇನಾ, ಚಿತ್ರವೇಗಾ, ಧನವತೀ, ಸಾಧ್ವಿಯಾದ ಧನಶ್ರೀಯೆಂಬುದಾಗಿ ವ್ಯಂತರದೇವತೆಗಳಲ್ಲಿ ಕನ್ಯೆಯರಾಗಿ ಹುಟ್ಟಿದರು. ಪುಂಡರೀಕಿಣಿಯ ದೊರೆಯಾದ ಆ ಸುರದೇವನೂ ಸತ್ತು ಪಿಂಗಲನೆಂಬ ತಳವಾರನಾದನು.

**ಸ ತತ್ರ ನಿಜದೋಷೇಣ ಪ್ರಾಪನ್ನಿಗಲಬಂಧನಮ್ ।**
**ಮಾತುಸ್ತತ್ಸುರದೇವಸ್ಯ ಪ್ರಾಪ್ತಾಯಾ [೭]ರಾಜಸೂನುತಾಮ್ ॥ ೩೫೭ ॥**

**ಶ್ರೀಪಾಲಾಖ್ಯಕುಮಾರಸ್ಯ [೮]ಗ್ರಹಣೇ ಬಂಧಮೋಕ್ಷಣೇ ।**
**ಸರ್ವೇಷಾಂ ಪಿಂಗಲಾಖ್ಯೋಪಿ ಮುಕ್ತಃ ಸನ್ನ್ಯಸ್ಯ ಸಂಪ್ರತಿ ॥ ೩೫೮ ॥**

೧ ಭೀಮಕೇವಲೀ. ೨ ಪಾಲಕಃ. ೩ ಸ್ವೀಕರ್ವಂತಿಸ್ಮ. ೪ ವ್ಯಂತರದೇವೇಷು. ೫ ಪುಂಡರೀಕಿಣೀಪತಿಃ. ೬ ತಲವರಃ. ೭ ಸುರದೇವಸ್ಯಮಾತಾ ಮೃತ್ವಾ ಕಸ್ಮಿಂಶ್ಚಿದ್ರಾಜವಂಶೇ ರಾಜಕುಮಾರೀಜಾತಾ ತಾಂಶ್ರೀಪಾಲಃ ಪರಿಣಯತಿಸ್ಮೇತಿಭಾವಃ. ೮ ವಿವಾಹಸಮಯೇ.

**ಭೂತ್ವಾ [೧]ಬುಧವಿಮಾನೇಸಾವಿಹಾಗತ್ಯ ಭವಿಷ್ಯತಿ ।**
**ಸ್ವಾಮೀ ಯುಷ್ಮಾಕಮಿತ್ಯೇತತ್ತಚ್ಚೇತೋಹರಣಂ ತದಾ ॥ ೩೫೯ ॥**

**ಪರಮಾರ್ಥಂ ಕೃತಂ [೨]ತೇನ [೩]ತಥಾಗತ್ಯ [೪]ಮುನೇರ್ವಚಃ ।**
**ಪೃಷ್ಟ್ವಾ [೫]ನು ಕನ್ಯಕಾಶ್ಚೈನಮಾತ್ಮನೋ ಭಾವಿನಂ ಪತಿಮ್ ॥ ೩೬೦ ॥**

**ಪೂರ್ವೋಕ್ತಪಿಂಗಲಾಖ್ಯಸ್ಯ ಸೂನುರ್ನಾಮ್ನಾತಿಪಿಂಗಲಃ ।**
**ಸೋಪಿ ಸನ್ನ್ಯಸ್ಯ ಯುಷ್ಮಾಕಂ ರತಿದಾಯೀ ಭವಿಷ್ಯತಿ ॥ ೩೬೧ ॥**

ಅವನು ಅಲ್ಲಿ ತನ್ನ ದೋಷದಿಂದ(ತಪ್ಪು ಮಾಡಿದುದರಿಂದ ಸರಪಣಿಯಲ್ಲಿ ಬಂಧನವನ್ನು ಹೊಂದಿದನು. ರಾಜಪುತ್ರೀತ್ವವನ್ನು ಹೊಂದಿದ ಆ ಸುರದೇವನ ತಾಯಿಗೂ(ಪುಂಡರೀಕಿಣಿಯ ರಾಜನಾಗಿದ್ದ ಸುರದೇವನ ತಾಯಿಯು ಸತ್ತು ಒಂದಾನೊಂದು ರಾಜವಂಶದಲ್ಲಿ ರಾಜಪುತ್ರಿಯಾಗಿ ಹುಟ್ಟಿದ್ದಳು. ಅವಳಿಗೂ ) ಶ್ರೀಪಾಲನೆಂಬ ರಾಜಕುಮಾರನಿಗೂ ನಡೆದ ವಿವಾಹಸಮಯದಲ್ಲಿ ಎಲ್ಲಾ ಕೈದಿಗಳ ಬಂಧವಿಮೋಚನೆಯಾಗುತ್ತಿರಲು ಪಿಂಗಲನೆಂಬವನೂ ಬಿಡಲ್ಪಟ್ಟನು. ಅವನು ದೀಕ್ಷೆಯನ್ನು ತೆಗೆದುಕೊಂಡು ಸತ್ತು ಈಗ ಇವನು ಬುಧವಿಮಾನವೆಂಬ ವಿಮಾನದಲ್ಲಿ ಅದರ ಅಧಿಪತಿಯಾಗಿದ್ದು ಇಲ್ಲಿ ಬಂದು ನಿಮ್ಮಗಳಿಗೆ ಪತಿಯಾಗುವನು' ಎಂಬ ಅವರಿಗೆ ಮನೋಹರವಾದ ಈ ಸರ್ವಜ್ಞವಚನವನ್ನು ಆಗ ಆ ಪಿಂಗಲನಾಗಿದ್ದ ದೇವನು ಬಂದು ಕೇವಲಿಯು ಹೇಳಿದಂತೆಯೇ ಯಥಾರ್ಥವನ್ನಾಗಿ ಮಾಡಿದನು. ಕೇವಲಿವಚನದಂತೆ ಬಂದು ಹುಟ್ಟಿದನೆಂದು ಭಾವವು. ಅನಂತರದಲ್ಲಿ ಆ ವ್ಯಂತರಕನ್ಯೆಯರೂ(ಹಿಂದೆ ದಾಸಿಯರಾಗಿದ್ದವರೂ) ಈ ಭೀಮಕೇವಲಿಯನ್ನು ಕುರಿತು ತಮ್ಮ ಮುಂದಿನ -ಭವಿಷ್ಯತ್ಕಾಲದ ಪತಿಯನ್ನು ಕೇಳಿ ಹಿಂದೆ ಹೇಳಲ್ಪಟ್ಟ ಪಿಂಗಲನೆಂಬವನ ಪುತ್ರನು ಅತಿಪಿಂಗಲನೆಂಬ ಹೆಸರುಳ್ಳವನು. ಅವನೂ ದೀಕ್ಷೆಯನ್ನು ತೆಗೆದುಕೊಂಡು ನಿಮ್ಮಗಳಿಗೆ ಸಂತೋಷವನ್ನು ಕೊಡುವ ಪುರುಷನಾಗುವನು."

**ಇತಿ ತತ್ಪ್ರೋಕ್ತಮಾಕರ್ಣ್ಯ [೬]ಗತ್ವಾ [೭]ತತ್ಪೂಜನಾವಿಧೌ ।**
**[೮]ಸ್ತಾಸಾಂ ನಿರೀಕ್ಷಣಾ[೯]ತ್ಕಾಮಸಮ್ಮೋಹಪ್ರಕೃತಂ ಮಹತ್ ॥ ೩೬೨ ॥**

**ರತಿಕೂಲಾಭಿಧಾನಸ್ಯ [೧೦]ಸಂವಿಧಾನಂ [೧೧]ಮುನೇಃ ಶ್ರುತಮ್ ।**
**[೧೨]ತತ್ಪಿತುರ್ಮಣಿನಾಗಾದಿದತ್ತಸ್ಯ [೧೩]ಪ್ರಕೃತಂ ತಥಾ ॥ ೩೬೩ ॥**

**[೧೪]ಸುಕೇತೋಶ್ಚಾಖಿಲೇ ತಸ್ಮಿ[೧೫]ನ್ಸತ್ಯೀಭೂತೇ ಮುನೀಶ್ವರಮ್ ।**
**ತಾಃ ಸರ್ವಾಃ ಪರಿತೋಷೇಣ ಗತಾಃ ಸಮಭಿವಂದ್ಯ ತಮ್ ॥ ೩೬೪ ॥**

ಈ ಪ್ರಕಾರವಾಗಿ ಆ ಭೀಮಕೇವಲಿಯಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಅತಿಪಿಂಗಲನ ಸಮೀಪಕ್ಕೆ ಹೋಗಿ ಅವನ ಅವಸಾನಕಾಲದಲ್ಲಿ ಸೇವೆಯನ್ನು ಮಾಡುವ ಕಾಲದಲ್ಲಿ ತಮ್ಮ(ದೇವಕನ್ಯೆಯರ) ನಿರೀಕ್ಷಣೆಯಿಂದ(ಕನ್ಯೆಯರನ್ನು ನೋಡಿದುದರಿಂದ) ರತಿಕೂಲನೆಂಬ ಮನುಷ್ಯನ ಕಾಮವಿಕಾರದಿಂದ ಹೆಚ್ಚಾಗಿ ಮಾಡಲ್ಪಟ್ಟ ಮಹಾವ್ಯಾಪಾರವೂ(ರತಿಕೂಲನ ಕಾಮಚೇಷ್ಟೆಯು) ಭೀಮಕೇವಲಿಯ ದೆಸೆಯಿಂದ ಕೇಳಲ್ಪಟ್ಟ ಆ ರತಿಕೂಲನ ತಂದೆಯಾದ ಮಣಿನಾಗದತ್ತನ ವ್ಯಾಪಾರ-ಚೇಷ್ಟೆಯೂ ಹಾಗೆಯೇ ಮೃಣಾಲವತೀನಗರಾಧಿಪತಿಯಾದ ಸುಕೇತುವಿನ ವ್ಯಾಪಾರವೂ ಅವನಲ್ಲಿ ಎಲ್ಲವೂ ನಿಜವಾಗುತ್ತಿರಲು ಆ ಮುನೀಶ್ವರನನ್ನು ಅವರೆಲ್ಲರೂ ವಂದಿಸಿ ಸಂತೋಷದಿಂದ ಹೊರಟುಹೋದರು.

೧ ಬುಧವಿಮಾನನಾಮ ವಿಮಾನಾಧಿಪತಿಃ. ೨ ಪಿಂಗಲಚರದೇವೇನ. ೩ ಕೇವಲ್ಯುಕ್ತಕ್ರಮೇಣ. ೪ ಸರ್ವಜ್ಞಸ್ಯ. ೫ ಅನಂತರಂ. ೬ ಅತಿಪಿಂಗಲಸ್ಯಸಮೀಪಂಪ್ರಾಪ್ಯ. ೭ ಅತಿಪಿಂಗಲಸ್ಯಪರಿಚರ್ಯಾವಿಧೌ ಸನ್ನ್ಯಸನಸಮಯೇ. ೮ ತಾಸಾಮಿತ್ಯಪಿಪಾಠಃ. ೯ ಕಾಮಸಮ್ಮೋಹೇನ ಪ್ರಕರ್ಷೇಣಕೃತಂ. ೧೦ ವ್ಯಾಪಾರಂ. ೧೧ ಭೀಮಕೇವಲಿನಃ ಸಕಾಶಾತ್. ೧೨ ರತಿಕೂಲಸ್ಯಜನಕಸ್ಯ. ೧೩ ಚೇಷ್ಟಿತಂ. ೧೪ ಮೃಣಾಲವತೀಪುರಪತೇಃ. ೧೫ ಸತ್ಯಭೂತೇಇತ್ಯಪಿಪಾಠಃ.

**[೧]ಆವಾಮಪಿ ತದಾ ವಂದನಾಯ ತತ್ರ ಗತಾವಿದವ್ ।**
**ಶ್ರುತ್ವಾ ದೃಷ್ಟ್ವಾಗತೌ ಪ್ರೀತಿಪರೀತಹೃದಯೌ ದಿವವ್ ॥ ೩೬೫ ॥**

ಪ್ರಭಾವತಿಯೂ ಹಿರಣ್ಯವರ್ಮನೂ ಆಗಿದ್ದು ದೇವದಂಪತಿಗಳಾದ ನಾವೀರ್ವರೂ ಆಗ ವಂದನೆಗೋಸ್ಕರ ಅಲ್ಲಿಗೆ ಹೋದೆವು. ಇದನ್ನೆಲ್ಲ ಕೇಳಿ ನೋಡಿ ಪ್ರೀತಿಯಿಂದ ವ್ಯಾಪ್ತವಾದ ಹೃದಯವುಳ್ಳವರಾಗಿ ಸ್ವರ್ಗಕ್ಕೆ ಬಂದೆವು.''

**ಇತ್ಯಾತ್ಮೀಯಭವಾವಲೀಮನುಗತೈರ್ವಾನ್ಯೈರ್ಮನೋರಂಜನೈಃ**
**ಸ್ಪಷ್ಟೈರಸ್ಖಲಿತೈಃ [೨]ಕಲ್ಪೈ[೩]ರವಿರಲೈರವ್ಯಾಕುಲೈರ್ಜಲ್ಪಿತೈಃ ॥**
**ಆತ್ಮೋಪಾತ್ತಶುಭಾಶುಭೋದಯವಶೋದ್ಭೂತೋಚ್ಚನೀಚಸ್ಥಿತಿಂ**
**ಸಂಸರ್ಪದ್ದಶನಾಂಶುಭೂಷಿತಸಭಾ[೪]ಸಭ್ಯಾ[೫]ನಸಾವಭ್ಯಧಾತ್ ॥ ೩೬೬ ॥**

ವಿಸ್ತರಿಸುತ್ತಿರುವ ಹಲ್ಲುಗಳ ಕಿರಣಗಳಿಂದ ಸಭೆಯನ್ನು ಅಲಂಕರಿಸಿದವಳಾದ ಈ ಸುಲೋಚನೆಯು ತಮ್ಮಿಂದ ಸಂಪಾದಿಸಲ್ಪಟ್ಟ ಶುಭಾಶುಭಕರ್ಮಗಳ ಉದಯವಶದಿಂದುಂಟಾದ ಉಚ್ಚನೀಚಸ್ಥಿತಿಯನ್ನು ತನ್ನ ಸಂಬಂಧವಾದ ಭವಾವಲಿಯನ್ನು ಮೇಲೆಹೇಳಿದಂತೆ ಅನುಸರಿಸಿರುವುವೂ ಮಾನ್ಯಗಳೂ(ಒಪ್ಪತಕ್ಕುವೂ) ಮನಸ್ಸಿಗೆ ಸಂತೋಷವನ್ನುಂಟುಮಾಡುವುವೂ ಸ್ಪಷ್ಟವೂ ತಪ್ಪದಿರುವುವೂ ಸುಂದರಗಳೂ ಸಂಪೂರ್ಣಗಳೂ ಮನೋವ್ಯಾಕುಲರಹಿತಗಳೂ ಆದ ಮಾತುಗಳಿಂದ ಸಭಿಕರಿಗೆ ಹೇಳಿದಳು.

**ಶ್ರುತ್ವಾ ತಾಂ ಹೃದಯಪ್ರಿಯೋಕ್ತಿಮತುಷ[೬]ತ್ಕಾಂತೋ ರತಾಂತೇಯಥಾ**
**ಸಂಸಚ್ಚ ವ್ಯಕಸತ್ತರಾಂ ಶರದಿ ವಾ ಲಕ್ಷ್ಮೀಃ ಸರಃ[೭]ಸಂಶ್ರಯೀ ॥**
**[೮]ಕಾಂತಾನಾಂ ವದನೇಂದುಕಾಂತಿರಗಲತ್ತದ್ವಾಗ್ವಿನೇಶೋದ್ಗತೇ**
**ರಸ್ಥಾನೇ ಕೃತಮತ್ಸರೋಽಸುಖಕರಸ್ತ್ಯಾಜ್ಯಸ್ತತೋಽಸೌ ಬುಧೈಃ ॥ ೩೬೭ ॥**

ಸುಲೋಚನೆಯ ಪತಿಯಾದ ಜಯಕುಮಾರನು, ಸಂಭೋಗ–ರತಿಕ್ರೀಡೆಯ ಕೊನೆಯಲ್ಲಿ ಸಂತೋಷಪಡುವಂತೆ, ಆ ಹೃದಯಕ್ಕೆ ಪ್ರಿಯವಾದ ಆ ವಚನವನ್ನು ಕೇಳಿ ಸಂತೋಷಪಟ್ಟನು. ಸಭೆಯೂ ಶರತ್ಕಾಲದಲ್ಲಿ ಸರೋವರವನ್ನಾಶ್ರಯಿಸಿರುವ ಲಕ್ಷ್ಮೀ–ಶೋಭೆಯಂತೆ, ಅಧಿಕವಾಗಿ ಪ್ರಸನ್ನವಾಯಿತು, ಸುಲೋಚನೆಯ ವಚನವೆಂಬ ಸೂರ್ಯನ ಉದಯದಿಂದ ಶ್ರೀಮತೀ ಶಿವಂಕರಾ ಮೊದಲಾದ ಸುಲೋಚನೆಯ ಸವತಿಯರ ಮುಖವೆಂಬ ಚಂದ್ರನ ಕಾಂತಿಯು ನಷ್ಟವಾಯಿತು. ಮಾತ್ಸರ್ಯಕ್ಕೆ ಸ್ಥಾನವಲ್ಲದ ಸ್ಥಾನದಲ್ಲಿ(ವ್ಯಕ್ತಿಯಲ್ಲಿ) ಮಾಡಲ್ಪಟ್ಟ ಮತ್ಸರವು ದುಃಖವನ್ನುಂಟುಮಾಡುವುದು. ಆದುದರಿಂದ ಈ ಮತ್ಸರವು ವಿದ್ವಾಂಸರಿಂದ ಬಿಡತಕ್ಕುದಾಗಿರುತ್ತದೆ.

**ಕಾಂತೋಽಭೂದ್ರತಿವೇಗಯಾ ವಣಿಗಸೌ ಪೂರ್ವಂ ಸುಕಾಂತಸ್ತತಃ**
**ಸಂಜಾತೋ ರತಿಷೇಣಯಾ ರತಿವರೋ ಗೇಹೇ ಕಪೋತೋ**
**ವಿಶಾವ್ ॥**
**[೧]ವತ್ಸಂತಪ್ರಭಯಾಽಭವತ್ಖಗಪತಿರ್ವರ್ಮಾ [೨]ಹಿರಣ್ಯಾದಿವಾಕ್**
**ದೇವಃ ಕಲ್ಪಗತೋ [೩]ಮಯಾ ಸಹ ಮಹಾದೇವ್ಯಾಜನೀಡ್ಯೋ**
**[೪]ಭವಾನ್ ॥ ೩೬೮ ॥**

''ಈ ನೀನು (ಜಯಕುಮಾರನು) ಮೊದಲು ರತಿವೇಗೆಯೊಡನೆ ಪತಿಯಾದ ಸುಕಾಂತನೆಂಬ ವೈಶ್ಯನಾದೆ. ಬಳಿಕ ವೈಶ್ಯರ ಮನೆಯಲ್ಲಿ ರತಿಷೇಣೆಯೊಡನೆ ರತಿವರನೆಂಬ ಪಾರಿವಾಳವಾಗಿ ಹುಟ್ಟಿದೆ. ಆಮೇಲೆ ಪ್ರಭಾವತಿಯೊಡನೆ ಹಿರಣ್ಯವೆಂದು ಮೊದಲನೆಯ ವಚನವುಳ್ಳ ವರ್ಮ(ಹಿರಣ್ಯವರ್ಮ)ನೆಂಬ ಖೇಚರಾಧಿಪತಿಯಾದೆ ಅನಂತರದಲ್ಲಿ ನನ್ನೊಡನೆ ಕಲ್ಪ–ಸ್ವರ್ಗವನ್ನು ಹೊಂದಿದದೇವನಾಗಿ ಸ್ತುತ್ಯನಾದ ನೀನು ಮಹಾದೇವಿಯೊಡನೆ(ಸುಲೋಚನೆಯೊಡನೆ) ಪ್ರಾದುರ್ಭವಿಸಿದೆ'' ಎಂದು ಸುಲೋಚನೆಯು ಜಯಕುಮಾರನಿಗೆ ಹೇಳಿದಳು.

**ಸಕಲಮವಿಕಲಂ ತಂ ಸ್ವಪ್ರಪಂಚಂ ರಮಣ್ಯಾ**
**ಮುಖಕಮಲ[೫]ರಸಾಕ್ತಂ ಶ್ರೋತ್ರಪಾತ್ರೇ ನಿಧಾಯ ॥**
**ತದುದಿತಮಪರಂ ಚ ಶ್ರೋತುಕಾಮೋ ಜಯೋಽಭೂ**
**ನ್ನ [೬]ರಸಿಕದಯಿತೋಕ್ತ್ಯಾ ಕಾಮುಕಾಸ್ತೃಪ್ನುವಂತಿ ॥ ೩೬೯ ॥**

ಜಯಕುಮಾರನು ಪತ್ನಿಯ ಮುಖಕಮಲದ ರಸದಿಂದ ಸಂಬದ್ಧವೂ (ಅಂಟಿರುವುದೂ) ಸಕಲವೂ ಸಂಪೂರ್ಣವೂ ಆದ ಆ ತನ್ನ ಪ್ರಪಂಚವನ್ನು (ವಿಸ್ತೃತ ವಿಷಯವನ್ನು) ಕಿವಿಯೆಂಬ ಪಾತ್ರದಲ್ಲಿರಿಸಿ ಆಕೆಯಿಂದುಂಟಾದ ಬೇರೆ ವಿಷಯವನ್ನೂ ಕೇಳಬೇಕೆಂಬ ಇಚ್ಛೆಯುಳ್ಳವನಾದನು. ಕಾಮುಕರು ರಸಿಕಳಾದ ಪತ್ನಿಯ ವಚನಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಜಯಕುಮಾರ ಸುಲೋಚನಾಭವಾಂತರವರ್ಣನಂ ನಾಮ ಷಟ್ಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೋಳ್'' ಜಯಕುಮಾರ ಸುಲೋಚನಾಭವಾಂತರವರ್ಣನವೆಂಬ
ನಲ್ವತ್ತಾರನೆಯ ಪರ್ವವು ಸಂಪೂರ್ಣವಾದುದು.

---

೧ ಪ್ರಭಾವತೀಚರೀಹಿರಣ್ಯವರ್ಮಚರಸುರದಂಪತೀ. ೨ ಸುಂದರೈಃ. ೩ ಸಂಪೂರ್ಣೈಃ. ೪ ಸಭ್ಯಾಮಿತ್ಯಪಿಪಾಠಃ. ೫ ಸುಲೋಚನಾ. ೬ ಜಯಕುಮಾರಃ. ೭ ಸಂಶ್ರಯೇತ್ಯಪಿಪಾಠಃ. ೮ ಜಯಸ್ಯ ಶ್ರೀಮತೀಶಿವಂಕರಾದಿಯೋಷಿತಾಂ.

೧ ಪ್ರಭಾವತ್ಯಾಸಹ. ೨ ಹಿರಣ್ಯಾದಿಮಾನಿತ್ಯಪಿಪಾಠಃ. ೩ ಸುಲೋಚನಯಾ ಸಹ. ೪ ಜಯಃ. ೫ ರಸಸಂಬದ್ಧಂ. ೬ ರಸಜ್ಞೇ ಪ್ರಿಯವನಿತಾವಚನೈಃ.

# ಅಥ ಸಪ್ತಚತ್ವಾರಿಂಶತ್ತಮಂ ಪರ್ವ

**ಕಾಂತೇ ತತ್ರಾನ್ಯದಪ್ಯಸ್ತಿ ಪ್ರಸ್ತುತಂ ಸ್ಮರ್ಯತೇ ತ್ವಯಾ ।**
**ಶ್ರೀಪಾಲಚಕ್ರಿಸಂಬಂಧಮಿತ್ಯಪ್ರಾಕ್ಷೀತ್ಸ ತಾಂ ಪುನಃ** ॥ ೧ ॥

ಮತ್ತೆ ಆ ಜಯಕುಮಾರನು ಸುಲೋಚನೆಯನ್ನು ಕುರಿತು ''ಪ್ರಿಯಳೆ! ಆ ಪುಂಡರೀಕಿಣಿಯಲ್ಲಿ ಬೇರೆಯೂ ಪ್ರಕೃತವಾದುದು(ಹೇಳಬೇಕಾದ ವಿಷಯವು) ಇರುತ್ತದೆ. ನೀನು ಸ್ಮರಿಸುವೆಯಾ ?''ಎಂದು ಶ್ರೀಪಾಲಚಕ್ರವರ್ತಿಯ ಸಂಬಂಧ ವನ್ನು ಕೇಳಿದನು.

**ಬಾಢಂ ಸ್ಮರಾಮಿ ಸೌಭಾಗ್ಯ[೧]ಭೋಗಿನಸ್ತಸ್ಯ ವೃತ್ತಕಮ್ ।**
**[೨]ತವ್ಯೆವಾದ್ಯೇಕ್ಷಿತಂ ವೇತಿ ಸಾ ಪ್ರವಕ್ತುಂ ಪ್ರಚಕ್ರಮೇ** ॥ ೨ ॥

ಸುಲೋಚನೆಯು '' ಈ ದಿವಸ ನೀನು ನೋಡೇ ಇರುವೆಯೋ ಎಂಬಂತೆ ಸೌಭಾಗ್ಯವನ್ನು ಅನುಭವಿಸುವವನಾದ ಆ ಶ್ರೀಪಾಲಚಕ್ರವರ್ತಿಯ ಸಮಾಚಾರ ವನ್ನು ಚೆನ್ನಾಗಿ ಸ್ಮರಿಸುತ್ತೇನೆ'' ಎಂದು ಹೇಳುವುದಕ್ಕೆ ಪ್ರಾರಂಭಿಸಿದಳು.

**ಜಂಬೂದ್ವೀಪೇ ವಿದೇಹೇಸ್ಮಿನ್ ಪೂರ್ವಸ್ಮಿನ್ಪುಂಡರೀಕಿಣೀ ।**
**ನಗರೀ ನಗರೀವಾಸೌ ವಾಸವಸ್ಯಾತಿವಿಶ್ರುತಾ** ॥ ೩ ॥

''ಜಂಬೂದ್ವೀಪದಲ್ಲಿ ಈ ಪೂರ್ವವಿದೇಹದಲ್ಲಿ ಈ ಪುಂಡರೀಕಿಣೀನಗರವು, ದೇವೇಂದ್ರನ ನಗರ–ಅಮರಾವತಿಯಂತೆ, ಬಹುಪ್ರಸಿದ್ಧವಾಗಿರುತ್ತದೆ.

**ಶ್ರೀಪಾಲವಸುಪಾಲಾಖ್ಯೌ ಸೂರ್ಯಾಚಂದ್ರಮಸೌ [೩]ಚಿತೌ ।**
**ಜಿತ್ವಾ ಮಹೀಂ ಸಹೈವಾ[೪]ವತಃ ಸ್ಮೇವ ನಯವಿಕ್ರಮೌ** ॥ ೪ ॥

ಶ್ರೀಪಾಲವಸುಪಾಲರೆಂಬವರು–ಸಹೋದರರು ಸಮ್ಮಿಲಿತರಾಗಿ ಸೂರ್ಯ ಚಂದ್ರರನ್ನು ಜಯಿಸಿ ಪೃಥ್ವಿಯನ್ನು ಜತೆಯಾಗಿಯೇ ನೀತಿಪರಾಕ್ರಮಗಳು ರಕ್ಷಿಸು ತ್ತವೋ ಎಂಬಂತೆ, ರಕ್ಷಿಸಿದರು. ಸೂರ್ಯಚಂದ್ರರಿಂದ ಮಿಗಿಲಾಗಿ ಭೂಮಿಯನ್ನು ರಕ್ಷಿಸಿದರೆಂದು ಭಾವವು.

**ಜನನೀ ವಸುಪಾಲಸ್ಯ ಕುಬೇರಶ್ರೀರ್ದಿನೇನ್ಯದಾ ।**
**ವನಪಾಲೇ ಸಮಾಗತ್ಯ ಕೇವಲಾವಗಮೋಭವತ್** ॥ ೫ ॥

**ಗುಣಪಾಲಮುನೀಶೋಸ್ಯತ್ಪತೇಃ ಸುರಗಿರಾವಿತಿ ।**
**ನಿವೇದಿತವತಿ ಕ್ರಾಂತ್ವಾ ಪುರಃ ಸಪ್ತಪದಾಂತರಮ್** ॥ ೬ ॥

**ಪ್ರಣಮ್ಯ ವನಪಾಲಾಯ ದತ್ವಾಸೌ ಪಾರಿತೋಷಿಕಮ್ ।**
**ಪೌರಾಃ ಸಪರ್ಯಯಾಃ ಸರ್ವೇಪ್ಯಾಯಾಯುರಿತಿ ಘೋಷಣಾಮ್** ॥

**ವಿಧಾಯ ಪ್ರಾಕ್ ಸ್ವಯಂ ಪ್ರಾಪ್ಯ ಭಗವಂತಮವಂದತ ।**
**ಶ್ರೀಪಾಲವಸುಪಾಲೌ ಚ ತತೋನು ಸಮುದೌ ಗತೌ** ॥ ೮ ॥

ಮತ್ತೊಂದು ದಿನವಲ್ಲಿ ವನಪಾಲನು ಬಂದು 'ನಮ್ಮ ಪ್ರಭುವಾದ ಗುಣಪಾಲ (ಲೋಕಪಾಲರಾಜನ ಪುತ್ರ, ಶ್ರೀಪಾಲ ವಸುಪಾಲರ ತಂದೆ) ಮುನೀಶ್ವರನಿಗೆ ಸುರಗಿರಿಯಲ್ಲಿ ಕೇವಲಜ್ಞಾನೋತ್ಪತ್ತಿಯಾಯಿತು' ಎಂದು ಹೇಳುತ್ತಿರಲು ವಸು ಪಾಲನ ತಾಯಿಯಾದ ಕುಬೇರಶ್ರೀಯು(ಕುಬೇರಕಾಂತ ಶ್ರೇಷ್ಠಿಯ ಪುತ್ರಿ, ಗುಣ ಪಾಲರಾಜನ ಪತ್ನಿ) ಮುಂದೆ ಏಳು ಹಜ್ಜೆಗಳ ದೂರದವರೆಗೆ ನಡೆದು ನಮಸ್ಕರಿಸಿ ಈಕೆಯು ವನಪಾಲನಿಗೆ ಬಹುಮಾನವನ್ನು ಕೊಟ್ಟು 'ಸಮಸ್ತಪುರನಿವಾಸಿಗಳು

೧ ಭಾಗಿನಃಇತ್ಯಪಿಪಾಠಃ. ೨ ಯಥೇವೇತ್ಯಪಿಪಾಠಃ. ೩ ಸಂಯುಕ್ತೌ. ೪ ಅರಕ್ಷತಾಂ.

ಪೂಜಾಸಾಮಗ್ರಿಗಳುಳ್ಳವರಾಗಿ ಬರಲಿ' ಎಂದು ಘೋಷಣ(ಡಂಗುರ)ವನ್ನು ಮಾಡಿಸಿ ತಾನು ಮೊದಲು ಹೋಗಿ ಭಗವಂತನನ್ನು ವಂದಿಸಿದಳು. ಬಳಿಕ ಸಂತೋಷಸಹಿತರಾದ ಶ್ರೀಪಾಲ, ವಸುಪಾಲರೂ ಹೋದರು.

**ಪ್ರಮದಾಖ್ಯಂ ವನಂ ಪ್ರಾಪ್ಯ ಸದ್ರುಮ್ಯೆ ರಮ್ಯಮಂತರೇ ।**
**ಪ್ರಾಗ್ಜಗತ್ಪಾಲಚಕ್ರೇಶೋ ಯಸ್ಮಿನ್ನ್ಯಗ್ರೋಧಪಾದಪೇ** ॥ ೯ ॥

**ದೇವತಾಪ್ರತಿಮಾಲಕ್ಷ್ಯೇ ಸ್ಥಿತ್ವಾ ಜಗ್ರಾಹ ಸಂಯಮಮ್ ।**
**ತಸ್ಯಾಧಸ್ತಾತ್ಸಮೀಕ್ಷ್ಯೇಕ್ಷ್ಯಂ ಪ್ರವೃತ್ತಂ ನೃತ್ತಮಾದರಾತ್** ॥ ೧೦ ॥

**ತಯೋಃ ಕುಮಾರಃ ಶ್ರೀಪಾಲಃ ಪುರುಷೋ ನರ್ತಯತ್ಯಯಮ್ ।**
**ಅಸ್ತು ಸ್ತ್ರೀವೇಷಧಾರ್ಯತ್ರ ಸ್ತ್ರೀ ಚೇತ್ಪುಂರೂಪಧಾರಿಣೀ** ॥ ೧೧ ॥

**ಸ್ಯಾದೇವ ಸ್ತ್ರೀ ಪ್ರನೃತ್ಯಂತೀ ನೃತ್ತಂ ಯುಕ್ತಮಿದಂ ಭವೇತ್ ।**
**ಇತ್ಯಾಹ ತದ್ವಚಃ ಶ್ರುತ್ವಾ ನಟೀ ಮೂರ್ಛಾಮುಪಾಗತಾ** ॥ ೧೨ ॥

ಮಧ್ಯದಲ್ಲಿ ಶುಭ್ರವಾದ ವೃಕ್ಷಗಳಿಂದ ರಮಣೀಯವಾದ ಪ್ರಮದವೆಂಬ ವನವನ್ನು ತಲುಪಿ ಮೊದಲು ಜಗತ್ಪಾಲಚಕ್ರವರ್ತಿಯು ದೇವತಾಪ್ರತಿಮೆಯಿಂದ ಕೂಡಿದ ಯಾವ ಆಲದ ಮರದಲ್ಲಿ(ಬುಡದಲ್ಲಿ) ಇದ್ದು ದೀಕ್ಷೆಯನ್ನು ತೆಗೆದು ಕೊಂಡಿದ್ದನೋ ಆ ಮರದ ಕೆಳಗೆ ಪ್ರಾರಂಭಿಸಲ್ಪಟ್ಟಿರುವುದೂ ನೋಡುವುದಕ್ಕೆ ಯೋಗ್ಯವೂ ಆದ ನರ್ತನವನ್ನು ಪ್ರೀತಿಯಿಂದ ನೋಡಿ ಆ ಶ್ರೀಪಾಲ ವಸುಪಾಲರಲ್ಲಿ ಶ್ರೀಪಾಲಕುಮಾರನು 'ಇಲ್ಲಿ ಸ್ತ್ರೀವೇಷಧಾರಿಯಾದ ಈ ಪುರುಷನು ನರ್ತನ ಮಾಡು ತ್ತಿದ್ದಾನೆ, ಇರಲಿ. ಕುಣಿಯುವವಳು ಪುರುಷರೂಪಧಾರಿಣಿಯಾದ ಸ್ತ್ರೀಯಾದರೆ ಸ್ತ್ರೀಯಾಗಿಯೇ ಇರುವಳು. ಈ ನರ್ತನವು ಯುಕ್ತವಾಗುವುದು' ಎಂದನು. ಆ ಮಾತನ್ನು ಕೇಳಿ ನಟಿಯು ಮೂರ್ಛೆಯನ್ನು ಹೊಂದಿದಳು.

**ಉಪಾಯೈಃ ಪ್ರತಿಬೋಧ್ಯೈನಾಂ ತದಾ ಪ್ರಶ್ರಯಪೂರ್ವಕಮ್ ।**
**ಇತಿ ವಿಜ್ಞಾಪಯಾಮಾಸ ಕಾಚಿತ್ತಂ ಭಾವಿಚಕ್ರಿಣಮ್** ॥ ೧೩ ॥

ಈ ನಟಿಯನ್ನು ಉಪಾಯಗಳಿಂದ ಎಚ್ಚರಗೊಳಿಸಿ ಆಗ ವಿನಯಪೂರ್ವಕವಾಗಿ ಒಬ್ಬಾಳೊಬ್ಬಳು ಮುಂದೆ ಚಕ್ರವರ್ತಿಯಾಗುವ ಆ ಶ್ರೀಪಾಲನನ್ನು ಕುರಿತು ಮುಂದೆ ಹೇಳುವಂತೆ ವಿಜ್ಞಾಪಿಸಿದಳು.

**ಸುರಮ್ಯವಿಷಯೇ ಶ್ರೀಪುರಾಧಿಪಃ ಶ್ರೀಧರಾಹ್ವಯಃ ।**
**ತದ್ದೇವೀ ಶ್ರೀಮತೀ ತಸ್ಯಾಃ ಸುತಾ ಜಯವತೀತ್ಯಭೂತ್** ॥ ೧೪ ॥

''ಸುರಮ್ಯದೇಶದಲ್ಲಿರುವ ಶ್ರೀಪುರದ ದೊರೆಯು ಶ್ರೀಧರನೆಂಬವನು. ಆತನ ಪಟ್ಟಮಹಿಷಿಯು ಶ್ರೀಮತಿಯು. ಆಕೆಯ ಮಗಳು ಜಯವತಿಯೆಂಬವಳಿದ್ದಳು.

**[೧]ತಜ್ಜಾತೌ ಚಕ್ರಿಣೋ ದೇವೀ ಭಾವಿನೀತ್ಯಾದಿಶ[೨]ನ್ವಿದಃ ।**
**ಅಭಿಜ್ಞಾನಂ ಚ ತಸ್ಯೇದಂ ನಟನಟ್ಯೋ[೩]ರ್ವಿವೇತ್ತಿ ಯಃ** ॥ ೧೫ ॥

**ಭೇದಂ ಸ ಚಕ್ರವರ್ತೀತಿ ತತ್ಪರೀಕ್ಷಿತುಮಾಗತಾಃ ।**
**ಪುಣ್ಯಾದ್ದೃಷ್ಟಸ್ತ್ವಮಸ್ಮಾಭಿರ್ನಿಧಿಕಲ್ಪೋ ಯದೃಚ್ಛಯಾ** ॥ ೧೬ ॥

೧ ಜಯವತ್ಯಾಜನನಸಮಯೇ. ೨ ವಿದ್ವಾಂಸಃ. ೩ ವಿಶೇಷೇಣಜಾನಾತಿ.

ಆಕೆಯ ಜನನಕಾಲದಲ್ಲಿ 'ಚಕ್ರವರ್ತಿಗೆ ಮುಂದೆ ದೇವಿ – ಪಟ್ಟಮಹಿಷಿಯಾಗುವಳು' ಎಂದು ವಿದ್ವಾಂಸರು ಹೇಳಿದರು. 'ಯಾವನು ನಟನ ಮತ್ತು ನಟಿಯ ಭೇದವನ್ನು ಚೆನ್ನಾಗಿ ತಿಳಿಯುತ್ತಾನೋ ಅವನು ಚಕ್ರವರ್ತಿಯೆಂಬುದಕ್ಕೆ ಇದು (ಭೇದಜ್ಞಾನವು)ಗುರುತು' ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ ನಾವು ಬಂದವರಾಗಿರುತ್ತೇವೆ. ಪುಣ್ಯದಿಂದ ನಮ್ಮಿಂದ ನಿಧಿಗೆ ಸಮಾನನಾದ ನೀನು (ಶ್ರೀಪಾಲನು) ಅಕಸ್ಮಾತ್ ನೋಡಲ್ಪಟ್ಟೆ.

**ಅಹಂ ಪ್ರಿಯರತಿರ್ನಾಮ್ನಾ ಸುತೇಯಂ ನರ್ತಕೀ ಮಮ ।**
**ಜ್ಞೇಯಾ ಮದನವೇಗಾಖ್ಯಾ ಪುರುಷಾಕಾರಧಾರಿಣೀ ॥ ೧೭ ॥**

ನಾನು ಹೆಸರಿನಿಂದ ಪ್ರಿಯರತಿಯು. ನನ್ನ ಮಗಳೂ ನರ್ತಕಿಯೂ ಆದ ಈಕೆಯು ಮದನವೇಗೆಯೆಂಬವಳೆಂದು ತಿಳಿಯಬೇಕು.

**ನಟೋಯಂ ವಾಸವೋ ನಾಮ ಖ್ಯಾತಃ ಸ್ತ್ರೀವೇಷಧಾರಕಃ ।**
**ತಚ್ಛ್ರುತ್ವಾ ನೃಪತಿಸ್ತುಷ್ಟ್ವಾ [೧]ತಾನ್ ಸಂತರ್ಪ್ಯ ಯಥೋಚಿತಮ್॥ ೧೮ ॥**

**ಗುರುಂ ವಂದಿತುಮಾತ್ಮೀಯಂ ಗಚ್ಛನ್ ಸುರಗಿರಿಂ [೨]ತತಃ ।**
**ಅಶ್ವಂ ಕೇನಚಿದಾನೀತಮಾರುಹ್ಯಾರಕ್ತಚೇತಸಾ ॥ ೧೯ ॥**

ಸ್ತ್ರೀವೇಷವನ್ನು ಧರಿಸಿದ ಪ್ರಸಿದ್ಧನಾದ ಈ ನಟನು ವಾಸವನೆಂಬವನು'' ಎಂದಳು. ಆ ಮಾತನ್ನು ಕೇಳಿ ರಾಜನು(ಶ್ರೀಪಾಲನು) ಸಂತುಷ್ಟನಾಗಿ ಆ ನರ್ತಕರನ್ನು ಉಚಿತಾನುಸಾರವಾಗಿ ಸಂತೋಷಪಡಿಸಿ ತನ್ನ ಗುರುವನ್ನು ವಂದಿಸುವುದಕ್ಕೋಸ್ಕರ ಆ ವನದಿಂದ ಸುರಗಿರಿಗೆ ಹೋಗುವವನಾಗಿ ಒಬ್ಬಾನೊಬ್ಬನು ತಂದ ಒಂದು ಕುದುರೆಯನ್ನು ಹತ್ತಿ ಅನುರಾಗವಿಶಿಷ್ಟವಾದ ಮನಸ್ಸುಳ್ಳವನಾಗಿ ಇದ್ದನು.

**ಅಧಾವಯ[೩]ದಸೌ ಕಿಂಚಿದಂತರಂ ಧರಣೀತಲೇ ।**
**ಗತ್ವಾ ಗಗನಮಾರುಹ್ಯ ವ್ಯಕ್ತೀಕೃತ[೪]ಖಗಾಕೃತಿಃ ॥ ೨೦ ॥**

ಈ ಕುದುರೆಯು ಭೂತಲದಲ್ಲಿ ಸ್ವಲ್ಪದೂರದವರೆಗೆ ಹೋಗಿ ಆಕಾಶಕ್ಕೆ ಹಾರಿ ಖೇಚರನ ಆಕಾರವನ್ನು ತೋರಿಸಿ ಓಡಿತು.

**ನ್ಯಗ್ರೋಧಪಾದಪಾಧಸ್ತಾತ್ಪ್ರತಿಮಾವಾಸಿನಾ ಭೃಶಮ್ ।**
**ದೇವೇನ ತರ್ಜಿತೋ ಭೀತ್ವಾಶನಿವೇಗೋಮುಚತ್ ಖಗಃ ॥ ೨೧ ॥**

ಆಲದ ಮರದ ಕೆಳಗೆ ಪ್ರತಿಮೆಯ ಬಳಿಯಲ್ಲಿ ಓರ್ವ ದೇವನಿಂದ ಅಧಿಕವಾಗಿ ತಿರಸ್ಕರಿಸಲ್ಪಟ್ಟವನಾಗಿ ಹೆದರಿ ಅಶನಿವೇಗನೆಂಬ ಆ ಖೇಚರನು ಶ್ರೀಪಾಲನನ್ನು ಬಿಟ್ಟನು.

**ಕುಮಾರಂ ಪರ್ಣಲಘ್ವಾಖ್ಯವಿದ್ಯಯಾ ಸ್ವನಿಯುಕ್ತಯಾ ।**
**ರತ್ನಾವರ್ತಗಿರೇರ್ಮೂರ್ಧ್ನಿ ಸ್ಥಿತಂ ತಂ ಸಂತಿ ಭಾವಿನಃ ॥ ೨೨ ॥**

**ಬಹವೋಽಸ್ಯ [೫]ಲಂಭಾ ಇತ್ಯಗೃಹೀತ್ವಾ ನಿವೃತ್ತವಾನ್ ।**
**ದೇವಃ ಸರಸಿ ಕಸ್ಮಿಂಶ್ಚಿತ್ಸ್ನಾನಾದಿವಿಧಿನಾ ಶ್ರಮಮ್ ॥ ೨೩ ॥**

**ಮಾರ್ಗಜಂ ಸ್ಥಿತಮುದ್ಧೂಯ ತಮೇತಸ್ಮಾತ್ಸುಧಾಗೃಹಾತ್ ।**
**ಆಗತ್ಯ ರಾಜಪುತ್ರೋಯಮಿತಿ ಜ್ಞಾತ್ವಾ ಯಥೋಚಿತಮ್ ॥ ೨೪ ॥**

**ದೃಷ್ಟ್ವಾ ಷಡ್ರಾಜಕನ್ಯಾಸ್ತಾಃ ಸ್ವವೃತ್ತಾಂತಂ ನ್ಯವೇದಯನ್ ।**
**ಸ್ವಗೋತ್ರಕುಲನಾಮಾದಿ ನಿರ್ದಿಶ್ಯ ಖಚರೇಶಿನಾ ॥ ೨೫ ॥**

**ಬಲಾದಶನಿವೇಗೇನ ವಯಮಸ್ಮಿನ್ನಿವೇಶಿತಾಃ ।**
**ಇತಿ ತತ್ಪ್ರೋಕ್ತಮಾಕರ್ಣ್ಯ ಕುಮಾರಸ್ಯಾನುಕಂಪಿನಃ ॥ ೨೬ ॥**

೧ ನರ್ತಕೀಜನಾನ್. ೨ ವನಾತ್. ೩ ಮಾಯಾಶ್ವಃ. ೪ ವಿದ್ಯಾಧರಾಕಾರಃ. ೫ ಪ್ರಾಪ್ತಯಃ.

**ನಿಜಾಗಮನವೃತ್ತಾಂತಕಥನಾವಸರೇ ಪರಾ ।**
**ವಿದ್ಯುದ್ವೇಗಾಭಿಧಾ ವಿದ್ಯಾಧರೀ ತತ್ರ ಸಮಾಗತಾ ॥ ೨೭ ॥**

**ಪಾಪಿನಾಶನಿವೇಗೇನ ಹಂತುಮೇನಂ ಪ್ರಯೋಜಿತಾ ।**
**ಸಮೀಕ್ಷ್ಯ ಮದನಾಕ್ರಾಂತಾಭೂಚ್ಚಿತ್ರಾಶ್ಚಿತ್ತವೃತ್ತಯಃ ॥ ೨೮ ॥**

ಆಗ ತನ್ನಿಂದ(ದೇವನಿಂದ) ನೇಮಿಸಲ್ಪಟ್ಟ ಪರ್ಣಲಘುವೆಂಬ ವಿದ್ಯೆಯಿಂದ ರತ್ನಾವರ್ತವೆಂಬ ಪರ್ವತದ ಮಸ್ತಕದಲ್ಲಿರಿಸಲ್ಪಟ್ಟವನಾದ ಆ ಶ್ರೀಪಾಲಕುಮಾರನನ್ನು 'ಇವನಿಗೆ ಮುಂದಾಗುವ ಅನೇಕ ಪ್ರಾಪ್ತಿಗಳಿರುತ್ತವೆ(ಮುಂದೆ ಅನೇಕ ಪದಾರ್ಥಗಳು ಪ್ರಾಪ್ತವಾಗುತ್ತವೆ)' ಎಂದು ಅವನನ್ನು ಕರೆದುಕೊಂಡು ಹೋಗದೆ ದೇವನು ಹಿಂದಿರುಗಿದನು. ಒಂದಾನೊಂದು ಸರೋವರದಲ್ಲಿ ಸ್ನಾನಾದಿ ವಿಧಿಯಿಂದ ಮಾರ್ಗದಲ್ಲಿ ಉಂಟಾದ ಶ್ರಮವನ್ನು ಹೋಗಲಾಡಿಸಿ ಕುಳಿತಿದ್ದ ಆ ಶ್ರೀಪಾಲಕುಮಾರನನ್ನು ಸುಣ್ಣವನ್ನು ಲೇಪಿಸಿದ್ದ ಒಂದು ಮನೆಯಿಂದ ಆರುಮಂದಿ ರಾಜಕನ್ಯೆಯರು ಬಂದು 'ಇವನು ರಾಜಪುತ್ರನು' ಎಂದು ಯಥೋಚಿತವಾಗಿ ಅವನನ್ನು ನೋಡಿ ತಮ್ಮ ಗೋತ್ರ, ಕುಲ, ಹೆಸರು ಮೊದಲಾದುದನ್ನು ಹೇಳಿ 'ಖೇಚರಾಧಿಪತಿಯಾದ ಅಶನಿವೇಗನಿಂದ ನಾವು ಈ ಮನೆಯಲ್ಲಿ ಬಲಾತ್ಕಾರದಿಂದ ಇರಿಸಲ್ಪಟ್ಟಿರುತ್ತೇವೆ' ಎಂದು ಆ ರಾಜಕನ್ಯೆಯರು ತಮ್ಮ ಸಮಾಚಾರವನ್ನು ತಿಳಿಸಿದರು. ಅವರು ಹೇಳಿದ ವಿಷಯವನ್ನು ಕೇಳಿ ದಯೆಯುಳ್ಳವನಾದ ಶ್ರೀಪಾಲಕುಮಾರನು ತನ್ನ ಬರುವಿಕೆಯ ಸಮಾಚಾರವನ್ನು ಹೇಳುವ ಸಮಯದಲ್ಲಿ ಪಾಪಿಯಾದ ಅಶನಿವೇಗನಿಂದ ಈ ಶ್ರೀಪಾಲಕುಮಾರನನ್ನು ಕೊಲ್ಲುವುದಕ್ಕೋಸ್ಕರ ಗೊತ್ತುಮಾಡಲ್ಪಟ್ಟವಳಾದ ಮತ್ತೋರ್ವ ವಿದ್ಯುದ್ವೇಗೆಯೆಂಬ ಹೆಸರುಳ್ಳ ವಿದ್ಯಾಧರಿಯು ಅಲ್ಲಿಗೆ ಬಂದು ಈ ಶ್ರೀಪಾಲಕುಮಾರನನ್ನು ನೋಡಿ ಕಾಮವಿಕಾರದಿಂದ ಕೂಡಿದವಳಾದಳು. ಮನೋವೃತ್ತಿಗಳು ನಾನಾಪ್ರಕಾರವಾಗಿರುತ್ತವೆ.

**ಸೂನುಃ ಸ್ತನಿತವೇಗಸ್ಯ ರಾಜ್ಞೋ [೧]ರಾಗಪುರೇಶಿತುಃ ।**
**ಖಗೇಶೋಶನಿವೇಗಾಖ್ಯೋ [೨]ಜ್ಯೋತಿರ್ವೇಗಾಖ್ಯಮಾತೃಕಃ ॥ ೨೯ ॥**

**ತ್ವಮತ್ರ ತೇನ ಸೌಹಾರ್ದಾದಾನೀತಃ ಸ ಮಮಾಗ್ರಜಃ ।**
**ವಿದ್ಯುದ್ವೇಗಾಹ್ವಯಾಹಂ ಚ ಪ್ರೇಷಿತಾ ತೇ ಸ ಮೈಥುನಃ ॥ ೩೦ ॥**

**ರತ್ನಾವರ್ತಗಿರಿಂ ಯಾಹಿ ಸ್ಥಿತಸ್ತತ್ರೇತಿ ಸಾದರಮ್ ।**
**ಭವತ್ಸಮೀಪಂ ಪ್ರಾಪ್ತೈವಮಿತಿ ರಕ್ತವಿಚೇಷ್ಟಿತಮ್ ॥ ೩೧ ॥**

**ದರ್ಶಯಂತೀ ಸಮೀಪಸ್ಥಂ ಯಾವತ್ಸೌಧಗೃಹಾಂತರಮ್ ।**
**ಇತ್ಯುಕ್ತ್ವಾನಭಿಲಾಷಂ ಸಾ ಜ್ಞಾತ್ವಾ ತಸ್ಯ ಮಹಾತ್ಮನಃ ॥ ೩೨ ॥**

**ತತ್ರೈವ ವಿದ್ಯಯಾ ಸೌಧಗೇಹಂ ನಿರ್ಮಾಪ್ಯ ನಿಸ್ತ್ರಪಾ ।**
**ಸ್ಥಿತಾ ತದ್ರಾಜಕನ್ಯಾಭಿಃ ಸಹ ಕಾ ಕಾಮಿನಾಂ ತ್ರಪಾ ॥ ೩೩ ॥**

''ರಾಗಪುರವೆಂಬ ನಗರದ ಪ್ರಭುವಾದ ಸ್ತನಿತವೇಗರಾಜನ ಪುತ್ರನೂ ಜ್ಯೋತಿರ್ವೇಗೆಯೆಂಬವಳನ್ನು ತಾಯಿಯಾಗಿ ಪಡೆದಿರುವವನೂ (ಜ್ಯೋತಿರ್ವೇಗೆಯ ಪುತ್ರನೂ) ಆದ ಅಶನಿವೇಗನೆಂಬ ಖೇಚರಾಧಿಪತಿಯು ಇರುತ್ತಾನೆ. ಅವನಿಂದ ನೀನು ಇಲ್ಲಿಗೆ ಸೌಹಾರ್ದದಿಂದ ಕರೆತರಲ್ಪಟ್ಟಿರುತ್ತಿ. ಆ ಅಶನಿವೇಗನು ನನ್ನ ಅಣ್ಣನು. ನಾನೂ ವಿದ್ಯುದ್ವೇಗೆಯೆಂಬವಳು. ನಿನ್ನ ಆ ಮೈದುನನು– ಅಶನಿವೇಗನು 'ರತ್ನಾವರ್ತಗಿರಿಗೆ ಹೋಗು, ಅಲ್ಲಿರುತ್ತಾನೆ' ಎಂದು ಪ್ರೀತಿಪೂರ್ವಕವಾಗಿ ಕಳುಹಲ್ಪಟ್ಟು ನಾನು ಹೀಗೆ ನಿನ್ನ ಸಮೀಪವನ್ನು ಹೊಂದಿದವಳಾಗಿರುತ್ತೇನೆ'' ಎಂದು ಅನುರಾಗವುಳ್ಳ ವ್ಯಾಪಾರವನ್ನು ತೋರಿಸುವವಳಾಗಿ ''ಸಮೀಪದಲ್ಲಿರುವ ಅರಮನೆಯೊಳಕ್ಕೆ ಹೋಗೋಣ'' ಎಂದು ಹೇಳಿ ಆ ವಿದ್ಯುದ್ವೇಗೆಯು ಮಹಾತ್ಮನಾದ ಆ ಶ್ರೀಪಾಲಕುಮಾರನ ಅಭಿಲಾಷೆಯಿಲ್ಲದಿರುವಿಕೆಯನ್ನು ತಿಳಿದು ಅಲ್ಲೇ ವಿದ್ಯೆಯಿಂದ

೧ ರಾಜಪುರೇಶಿತುರಿತ್ಯಪಿಪಾಠಃ. ೨ ಜ್ಯೋತಿರ್ವೇಗಾಖ್ಯಾ ಮಾತಾಯಸ್ಯಾಸೌ.

ಅರಮನೆಯನ್ನು ನಿರ್ಮಿಸಿ ಆ ರಾಜಕನ್ಯೆಯರೊಡನೆ ನಾಚಿಕೆಯಿಲ್ಲದವಳಾಗಿದ್ದಳು. ಕಾಮುಕರಿಗೆ ನಾಚಿಕೆಯಾವುದು ?

**ಏತ್ಯಾನಂಗಪತಾಕಾಸ್ಯಾಸ್ತಂ ಸಖೀತ್ಥಮುವೋಚತ ।**
**ತ್ವತ್ಪಿತುರ್ಗುಣಪಾಲಸ್ಯ ಸನ್ನಿಧಾನೇ ಜಿನೇಶಿತುಃ ॥ ೩೪ ॥**

**ಜ್ಯೋತಿರ್ವೇಗಾಗುರುಂ ಪ್ರೀತ್ಯಾ ಕುಬೇರಶ್ರೀಃ ಸಮಾದಿಶತ್ ।**
**ನಿಜಜಾಮಾತರಂ ಕ್ವಾಪಿ ಶ್ರೀಪಾಲಸ್ವಾಮಿನಂ ಮಮ ॥ ೩೫ ॥**

**ಸ್ವಯಂ ಸ್ತನಿತವೇಗೋಸೌ ಸುತಮನ್ವೇಷಯೇದಿತಿ ।**
**ಪ್ರತಿಪನ್ನಃ [೧]ಸ [೨]ತತ್ಪ್ರೋಕ್ತಂ [೩]ಭವಂತಂ [೪]ಮೈಥುನಸ್ತವ ॥ ೩೬ ॥**

**ಆನೀತವಾ[೫]ನಿಹೇತ್ಯೇತದವಬುಧ್ಯಾತ್ಮನೋ ದ್ವಿಷಮ್ ।**
**ಪತಿಂ ಮತ್ವೋತ್ತರಶ್ರೇಣೇರಾಶಂಕ್ಯಾ[೬]ನಿಲವೇಗಕಮ್ ॥ ೩೭ ॥**

**ಸ್ವಯಂ ತದಾ ಸಮಾಲೋಚ್ಯ ನಿವಾರ್ಯ [೭]ಖಚರಾಧಿಪಮ್ ।**
**ಉದೀರ್ಯಾನ್ವೇಷಣೋಪಾಯಂ ತ್ವತ್ಸ್ನೇಹಾಹಿತಚೇತಸಃ ॥ ೩೮ ॥**

**ಆನೀಯತಾಂ ಪ್ರಯತ್ನೇನ ಕುಮಾರ ಇತಿ ಬಾಂಧವಾಃ ।**
**[೮]ಆವಾಂ ಪ್ರಿಯ ಸಕಾಶಂ ತೇ ಪ್ರಾಹೈಷುಸ್ತದಿಹಾಗತೇ ॥ ೩೯ ॥**

**ವಿದ್ಯುದ್ವೇಗಾವಲೋಕ್ಯ ತ್ವಾಮನುರಕ್ತಾಭವತ್ತ್ವಯಾ ।**
**ನ ತ್ಯಾಜ್ಯೇತಿ ತದಾಕರ್ಣ್ಯ ಸ ವಿಚಿಂತ್ಯೋಚಿತಂ ವಚಃ ॥ ೪೦ ॥**

ಈ ವಿದ್ಯುದ್ವೇಗೆಯ ಅನಂಗಪತಾಕೆಯೆಂಬ ಸಖಿಯು ಶ್ರೀಪಾಲಕುಮಾರನನ್ನು ಹೊಂದಿ ''ನಿನ್ನ ತಂದೆಯಾದ ಗುಣಪಾಲಜಿನೇಶ್ವರನ ಸನ್ನಿಧಿಯಲ್ಲಿ ಪ್ರೀತಿಯಿಂದ ಕುಬೇರಶ್ರೀಯು(ಶ್ರೀಪಾಲನ ತಾಯಿಯು) ಅಶನಿವೇಗನ ತಾಯಿಯಾದ ಜ್ಯೋತಿರ್ವೇಗೆಯ ತಂದೆಯನ್ನು ಕುರಿತು 'ತನ್ನ ಅಳಿಯನೂ ನನ್ನ ಮಗನೂ ಆದ ಶ್ರೀಪಾಲ ರಾಜನನ್ನು ಈ ಸ್ತನಿತವೇಗನು ಎಲ್ಲಿಯೋ ತಾನು ಹುಡುಕುವನು' ಎಂದು ಹೇಳಿದಳು. ಆ ಕುಬೇರಶ್ರೀಯ ಮಾತನ್ನು ಜ್ಯೋತಿರ್ವೇಗೆಯ ತಂದೆಯು ಒಪ್ಪಿದನು. ನಿನ್ನ ಮೈದುನನು–ಅಶನಿವೇಗನು ನಿನ್ನನ್ನು ಈ ರತ್ನಾವರ್ತಗಿರಿಗೆ ತಂದನೆಂಬ ವಿಷಯವನ್ನು ತಿಳಿದು ಉತ್ತರಶ್ರೇಣಿಯ ಪ್ರಭುವಾದ ಅನಿಲವೇಗನನ್ನು ತನ್ನ (ಶ್ರೀಪಾಲನ) ಶತ್ರುವನ್ನಾಗಿ ತಿಳಿದು ಸಂದೇಹಗೊಂಡು ಆಗ ತಾವು(ಬಂಧುಗಳು) ಆಲೋಚಿಸಿ ಅಶನಿವೇಗನನ್ನು ತಡೆದು(ಹೋಗಬೇಡವೆಂದು) ನಿನ್ನ ಸ್ನೇಹದಿಂದ ಕೂಡಿದ ಮನಸ್ಸುಳ್ಳವರಾದ ಬಂಧುಗಳು ನಿನ್ನನ್ನು ಹುಡುಕುವ ಉಪಾಯವನ್ನು ಹೇಳಿ 'ಶ್ರೀಪಾಲಕುಮಾರನು ಪ್ರಯತ್ನದಿಂದ ತರಲ್ಪಡಲಿ' ಎಂದು ಎಲೈ ಪ್ರಿಯನೆ! ನಿನ್ನ ಸಮೀಪಕ್ಕೆ ನಮ್ಮನ್ನು ಕಳುಹಿಸಿದರು. ಆದುದರಿಂದ ನಾವೀರ್ವರು ಇಲ್ಲಿಗೆ ಬಂದಿರುತ್ತೇವೆ. ವಿದ್ಯುದ್ವೇಗೆಯು ನಿನ್ನನ್ನು ನೋಡಿ ಅನುರಾಗವುಳ್ಳವಳಾದಳು. ನೀನು ಆಕೆಯನ್ನು ಬಿಡಬಾರದು'' ಎಂದು ಹೇಳಿದಳು. ಅನಂಗಪತಾಕೆಯು ಶ್ರೀಪಾಲನನ್ನು ಕುರಿತು ಹೇಳಿದಳೆಂದು ಭಾವವು.

**ಮಯೋಪನಯನೇಗ್ರಾಹಿ ವ್ರತಂ ಗುರುಭಿರರ್ಪಿತಮ್ ।**
**ಮುಕ್ತ್ವಾ ಗುರುಜನಾನೀತಾಂ ಸ್ವೀಕರೋಮಿ ನ ಚಾಪರಾಮ್ ॥ ೪೧ ॥**

ಆ ಮಾತನ್ನು ಕೇಳಿ ಶ್ರೀಪಾಲನು ಉಚಿತವಾದ ಮಾತನ್ನು ಯೋಚಿಸಿ ''ಗುರುಜನರಿಂದ–ತಂದೆತಾಯಿಗಳಿಂದ ತರಲ್ಪಟ್ಟ ಕನ್ಯೆಯನ್ನು ಬಿಟ್ಟು ಬೇರೆಯವಳನ್ನು ಸ್ವೀಕರಿಸುವುದಿಲ್ಲವೆಂದು ನಾನು ಉಪನಯನ ಕಾಲದಲ್ಲಿ ಗುರುಗಳು ಕೊಟ್ಟವ್ರತವನ್ನು ಸ್ವೀಕರಿಸಿರುತ್ತೇನೆ.''

೧ ಜ್ಯೋತಿರ್ವೇಗಾಪಿತಾ. ೨ ಕುಬೇರಶ್ರೀಪ್ರೋಕ್ತಂ. ೩ ಶ್ರೀಪಾಲಂತ್ವಾಂ. ೪ ಅಶನಿವೇಗಃ. ೫ ರತ್ನಾವರ್ತಗಿರೌ. ೬ ಅನಲವೇಗಕಮಿತ್ಯಪಿಪಾಠಃ. ೭ ಅಶನಿವೇಗಂ. ೮ ವಿದ್ಯುದ್ವೇಗಾನಂಗಪತಾಕೇ.

**ಇತ್ಯವೋಚತ್ತತಸ್ತಾಶ್ಚ ಶೃಂಗಾರರಸಚೇಷ್ಟಿತೈಃ ।**
**ನಾನಾವಿಧೈರಂಜಯಿತುಂ ಪ್ರವೃತ್ತಾ ನಾಶಕಂಸ್ತದಾ ॥ ೪೨ ॥**

ಈ ಪ್ರಕಾರವಾಗಿ ಹೇಳಿದನು. ಅನಂತರದಲ್ಲಿ ಆ ಆರುಮಂದಿ ರಾಜಕನ್ಯೆಯರೂ ವಿದ್ಯುದ್ವೇಗಾನಂಗಪತಾಕೆಯರೂ ಆಗ ಅನೇಕವಿಧವಾದ ಶೃಂಗಾರರಸಚೇಷ್ಟೆಗಳಿಂದ ಪ್ರೀತಿಪಡಿಸುವುದಕ್ಕೋಸ್ಕರ ಪ್ರವರ್ತಿಸಿದವರಾಗಿ ಸಮರ್ಥರಾಗಲಿಲ್ಲ.

**ವಿದ್ಯುದ್ವೇಗಾ ತತೋಗಚ್ಛತ್ಸ್ವಮಾತೃಪಿತೃಸನ್ನಿಧಿಮ್ ।**
**ಪಿಧಾಯ ದ್ವಾರಮಾರೋಪ್ಯ ಸೌಧಾಗ್ರಂ ಪ್ರಾಣವಲ್ಲಭಮ್ ॥ ೪೩ ॥**

**ತಾವಾನೇತುಂ ಕುಮಾರೋಪಿ ಸುಪ್ತವಾನ್ ರಕ್ತಕಂಬಲಮ್ ।**
**ಪ್ರಾವೃತ್ಯ ತಂ ಸಮಾಲೋಕ್ಯ ಭೇರುಂಡಃ ಪಿಶಿತೋಚ್ಚಯಮ್ ॥ ೪೪ ॥**

**ಮತ್ವಾ ನೀತ್ವಾ ದ್ವಿಜಃ ಸಿದ್ಧಕೂಟಾಗ್ರೇ ಖಾದಿತುಂ ಸ್ಥಿತಃ ।**
**ಚಲಂತಂ ವೀಕ್ಷ್ಯ ಸೋತ್ಯಾಕ್ಷೀತ್ಸ ತೇಷಾಂ ಜಾತಿಜೋ ಗುಣಃ ॥ ೪೫ ॥**

ವಿದ್ಯುದ್ವೇಗೆಯು ಪ್ರಾಣವಲ್ಲಭ–ಶ್ರೀಪಾಲನನ್ನು ಅರಮನೆಯ ಮೇಲೆ ಹತ್ತಿಸಿ ಬಾಗಿಲನ್ನು ಮುಚ್ಚಿ ತನ್ನ ತಂದೆತಾಯಿಗಳನ್ನು ಕರೆದುಕೊಂಡು ಬರುವುದಕ್ಕೋಸ್ಕರ ರತ್ನಾವರ್ತಗಿರಿಯಿಂದ ಅವರ ಬಳಿಗೆ ಹೋದಳು. ಶ್ರೀಪಾಲಕುಮಾರನೂ ಕೆಂಪು ಕಂಬಳಿಯನ್ನು ಹೊದ್ದುಕೊಂಡು ಮಲಗಿದನು. ಹಾಗೆ ಮಲಗಿರುವ ಶ್ರೀಪಾಲನನ್ನು ನೋಡಿ ಒಂದು ಭೇರುಂಡಪಕ್ಷಿಯು ಮಾಂಸದಪಿಂಡವೆಂದು ತಿಳಿದು ಸಿದ್ಧಕೂಟದ ತುದಿಗೆ ತೆಗೆದುಕೊಂಡು ಹೋಗಿ ತಿನ್ನುವುದಕ್ಕೆ ಕುಳಿತುಕೊಂಡಿತು. ಆಗ ಚಲಿಸುತ್ತಿರುವ ಆ ಶ್ರೀಪಾಲನನ್ನು ನೋಡಿ ಆ ಪಕ್ಷಿಯು ಅವನನ್ನು ಬಿಟ್ಟಿತು. ಅದು (ಸಜೀವತ್ಯಾಗವು) ಆ ಪಕ್ಷಿಗಳ ಜಾತಿಯಿಂದುಂಟಾದ ಗುಣವಾಗಿರುತ್ತದೆ.

**[೧]ತತೋವತೀರ್ಯ ಶ್ರೀಪಾಲಃ ಸ್ನಾತ್ವಾ ಸರಸಿ ಭಕ್ತಿಮಾನ್ ।**
**ಸುಪುಷ್ಪಾಣಿ ಸುಗಂಧೀನಿ ಸಮಾದಾಯ ಜಿನಾಲಯಮ್ ॥ ೪೬ ॥**

**ಪರೀತ್ಯ ಸ್ತೋತುಮಾರೇಭೇ [೨]ವಿವೃತ್ತಂ [೩]ದ್ವಾಸ್ತದಾ ಸ್ವಯಮ್ ।**
**ತನ್ನಿರೀಕ್ಷ್ಯ ಪ್ರಸನ್ನಸ್ಸನ್ನಭ್ಯರ್ಚ್ಯ ಜಿನಪುಂಗವಾನ್ ॥ ೪೭ ॥**

**ಅಭಿವಂದ್ಯ ಯಥಾಕಾಮಂ ವಿಧಿವತ್ತತ್ರ ಸುಸ್ಥಿತಃ ।**
**ತಮಭ್ಯೇತ್ಯ ಖಗಃ ಕಶ್ಚಿತ್ಸಮುದ್ಧೃತ್ಯ ನಭಃಪಥೇ ॥ ೪೮ ॥**

**ಗಚ್ಛನ್ಮನೋರಮೇ ರಾಷ್ಟ್ರೇ ಶಿವಂಕರಪುರೇಶಿತುಃ ।**
**ನೃಪಸ್ಯಾನಿಲವೇಗಸ್ಯ ಕಾಂತಾ ಕಾಂತವತೀತ್ಯಭೂತ್ ॥ ೪೯ ॥**

**ತಯೋಃ ಸುತಾಂ ಭೋಗವತೀಮಾಕಾಶಸ್ಫಟಿಕಾಲಯೇ ।**
**ಮೃದುಶಯ್ಯಾತಲೇ ಸುಪ್ತಾಂ ಕಾ ಕುಮಾರೀಯಮಿ[೪]ತ್ಯಸೌ ॥ ೫೦ ॥**

**ಅಪೃಚ್ಛ[೫]ತ್ಸೋಬ್ರವೀದೇಷಾ ಭುಜಂಗೀ ವಿಷಮೇತಿ ಚ ।**
**[೬]ತದುಕ್ತೇಃ ಸ ಕ್ರುಧಾ ಕೃತ್ವಾ ಕನ್ಯಾಪಿತೃಸಮೀಪಗಮ್ ॥ ೫೧ ॥**

**ತಮುಸ್ಮತ್ಕನ್ಯಕಾಮೇಷ ಭುಜಂಗೀತಿ ಖಲೋಬ್ರವೀತ್ ।**
**ಇತ್ಯುವಾಚ [೭]ತತಃ ಕ್ರುಧ್ವಾ ದುರ್ಧೀರ್ನಿಕ್ಷಿಪ್ಯತಾ[೮]ಮಯಮ್ ॥ ೫೨ ॥**

**ದುರ್ಧರೋರುತಪೋಭಾರಧಾರಿಯೋಗ್ಯೇ ವನೇ ಘನೇ ।**
**ಇತ್ಯಭ್ಯಧಾನ್ನೃಪಸ್ತಸ್ಯ ವಚನಾನುಗಮಾ[೯]ದಸೌ ॥ ೫೩ ॥**

೧ ಸಿದ್ಧಕೂಟಾಗ್ರಾತ್. ೨ ಉದ್ಘಾಟಿತಂ. ೩ ದ್ವಾರಂ. ೪ ವಿದ್ಯಾಧರಃ. ೫ ಶ್ರೀಪಾಲಃ. ೬ ಶ್ರೀಪಾಲವಚನಾತ್. ೭ ತದ್ವಚನಾಕರ್ಣನಾನಂತರಂ. ೮ ಶ್ರೀಪಾಲಃ. ೯ ಖಗಃ.

**ವಿಜಯಾರ್ಧೋತ್ತರಶ್ರೇಣೀಮನೋಹರಪುರಾಂತಿಕೇ ।**
**ಶ್ಮಶಾನೇ ಶೀತವೇತಾಲೀವಿದ್ಯಯಾ [೧]ತಂ ಶುಭಾಕೃತೀವಮ್ ॥ ೫೪ ॥**

**ನೀತ್ವಾ [೨]ವಿನ್ಯಕ್ಷಿಪತ್ಪಾಪೀ ಜರತೀರೂಪಧಾರಿಣಮ್ ।**
**[೩]ತತ್ರಾಸ್ಪೃಶ್ಯಕುಲೇ ಜಾತಾ ಕಾಪಿ ಜಾಮಾತರಂ ಸ್ವಯಮ್ ॥ ೫೫ ॥**

**ಸ್ವಂ [೪]ಗ್ರಾಮಮೃಗರೂಪೇಣ ಸ್ವಸುತಾಚರಣದ್ವಯೇ ।**
**ಸಮಂತಾಲ್ಲುಠಿತಂ ಕೃತ್ವಾ ತಾಂ ಪ್ರಸಾದ್ಯ ಭೃಶಂ ತತಃ ॥ ೫೬ ॥**

**[೫]ತಂ ಪುರಾತನರೂಪೇಣ ಸಮವಸ್ಥಾಪಯತ್ತಲಾ ।**
**[೬]ತದ್ವಿಲೋಕ್ಯ ಕುಮಾರೋಽಸೌ ಖಗಾಃ ಸ್ವಾಭಿಮತಾಕೃತಿಮ್ ॥ ೫೭ ॥**

**ವಿನಿವರ್ತಯಿತುಂ ಶಕ್ತಾ ಇತ್ಯಾಶಂಕ್ಯ ವಿಚಿಂತಯನ್ ।**
**[೭]ಯಮಾಗ್ರಯಾಯಿಸಂಕಾಶಕಾಶಪ್ರಸವಹಾಸಿಭಿಃ ॥ ೫೮ ॥**

**ಶಿರೋರುಹೈರ್ಜರಾಂಭೋಧಿತರಂಗಾಭತನುತ್ವಚಾ ।**
**ಸಮೇತ[೮]ಮಾತ್ಮನೋ ರೂಪಂ ದೃಷ್ಟ್ವಾ [೯]ದುಷ್ಟವಿಭಾವಿತಮ್ ॥ ೫೯ ॥**

**ಲಜ್ಜಾಶೋಕಾಭಿಭೂತಃ ಸನ್ನ್ಯಂಕ್ಷು ಗಚ್ಛಂಸ್ತತಃ ಪರಮ್ ।**
**ತತ್ರ ಭೋಗವತೀಭ್ರಾತುರ್ಹರಿಕೇತೋಃ ಸುಸಿದ್ಧಯಾ ॥ ೬೦ ॥**

**ವಿದ್ಯಯಾ ಶಬರೂಪೇಣ ಸದ್ಯಃ ಪ್ರೋತ್ಥಿತಯಾ ಕರೇ ।**
**ಕುಮಾರಸ್ಯ [೧೦]ಸಮುದ್ವಮ್ಯ ನಿರ್ವಾಂತ[೧೧]ಮವಿಚಾರಯನ್ ॥ ೬೧ ॥**

**ಉದ್ಧೃತ್ಯೇದಂ ವಿಶಂಕಸ್ತ್ವಂ ಪಿಬೇತ್ಯುಕ್ತಃ ಪ್ರಪೀತವಾನ್ ।**
**[೧೨]ತಂ ದೃಷ್ಟ್ವಾ ಹರಿಕೇತುಸ್ತ್ವಾಂ ಸರ್ವವ್ಯಾಧಿವಿನಾಶಿನೀ ॥ ೬೨ ॥**

**[೧೩]ವಿದ್ಯಾಶ್ರಿತೇತಿ ಸಂಪ್ರೀತಃ [೧೪]ಪ್ರಯುಜ್ಯ ವಚನಂ ಗತಃ ।**
**ತತಃ [೧೫]ಸ್ವಂ ರೂಪಮಾಪನ್ನಃ ಕುಮಾರೋ [೧೬]ವಟಭೂರುಹಃ ॥ ೬೩ ॥**

**ಗಚ್ಛನ್ ಸ್ಥಿತಮಧೋಭಾಗೇ ದೃಷ್ಟ್ವಾ ಕಂಚಿನ್ನಭಶ್ಚರಮ್ ।**
**ಪ್ರದೇಶಃ ಕೋಽಯಮಿತ್ಯೇತದಪೃಚ್ಛತ್ಸೋಽಬ್ರವೀದಿಮಮ್ ॥ ೬೪ ॥**

ಆ ಸಿದ್ಧಕೂಟದ ತುದಿಯಿಂದಿಳಿದು ಶ್ರೀಪಾಲನು ಸರೋವರದಲ್ಲಿ ಸ್ನಾನಮಾಡಿ ಭಕ್ತಿಯುಳ್ಳವನಾಗಿ ಪರಿಮಳವುಳ್ಳ ಉತ್ತಮಪುಷ್ಪಗಳನ್ನು ತೆಗೆದುಕೊಂಡು ಜಿನ ಮಂದಿರವನ್ನು ಸುತ್ತಿಬಂದು ಸ್ತೋತ್ರಮಾಡುವುದಕ್ಕೆ ಪ್ರಾರಂಭಿಸಿದನು. ಆಗ ಬಾಗಿಲು ತಾನಾಗಿ ತೆರೆಯಿತು. ಅದನ್ನು ನೋಡಿ ಪ್ರಸನ್ನನಾಗಿ ಜಿನೋತ್ತಮರನ್ನು ಪೂಜಿಸಿ ಯಥೇಚ್ಛವಾಗಿ ವಿಧಿಪ್ರಕಾರವಾಗಿ ವಂದಿಸಿ ಅಲ್ಲಿ ಸುಖದಿಂದಿದ್ದನು. ಒಬ್ಬಾನೊಬ್ಬ ವಿದ್ಯಾಧರನು ಬಂದು ಆ ಶ್ರೀಪಾಲನನ್ನು ಎತ್ತಿಕೊಂಡು ಆಕಾಶ ಮಾರ್ಗದಲ್ಲಿ ಹೋಗುವವನಾಗಿ ಮನೋರಮವೆಂಬ ದೇಶದಲ್ಲಿ ಶಿವಂಕರವೆಂಬ ಪಟ್ಟಣದ ದೊರೆಯಾದ ಅನಿಲವೇಗರಾಜನಿಗೆ ಕಾಂತವತಿಯೆಂಬ ಕಾಂತಾ–ಪತ್ನಿಯಿದ್ದಳು. ಆ ದಂಪತಿಗಳ ಪುತ್ರಿಯೂ ಆಕಾಶಸ್ಫಟಿಕಶಿಲೆಯಿಂದ ನಿರ್ಮಿತವಾದ ಮನೆಯಲ್ಲಿ ಮೃದುವಾದ ಹಾಸಿಗೆಯಲ್ಲಿ ಮಲಗಿರುವವಳೂ ಆದ ಭೋಗವತಿಯನ್ನು "ಈ ಕುಮಾರಿಯು ಯಾರು ?" ಎಂದು ಈ ವಿದ್ಯಾಧರನು ಶ್ರೀಪಾಲನನ್ನು ಕೇಳಿದನು. ಶ್ರೀಪಾಲನು "ಈಕೆಯು ಅಸದೃಶಳಾದ ಭುಜಂಗಿಯು–ಹೆಣ್ಣು ಹಾವು" ಎಂದನು. ಶ್ರೀಪಾಲನ ಮಾತಿನಿಂದ ಆ ಖೇಚರನು ಕೋಪದಿಂದ ಅವನನ್ನು ಕನ್ಯೆಯ ತಂದೆಯ–ಅನಿಲವೇಗನ ಸಮೀಪಸ್ಥನನ್ನಾಗಿ ಮಾಡಿ "ಈ ದುಷ್ಟನು ನಮ್ಮ ಕನ್ಯೆಯನ್ನು ಭುಜಂಗಿಯೆಂದು ಹೇಳಿದನು" ಎಂದನು. ಅವನ ಮಾತನ್ನು ಕೇಳಿದನಂತರದಲ್ಲಿ ಕೋಪಗೊಂಡು "ದುರ್ಬುದ್ಧಿಯುಳ್ಳವನಾದ ಇವನನ್ನು (ಶ್ರೀಪಾಲನು) ನಿಬಿಡವೂ ಧರಿಸುವುದಕ್ಕೆ ಕಠಿನವಾದ ಮಹಾತಪೋಭಾರವನ್ನು ಧರಿಸುವವರಿಗೆ ಯೋಗ್ಯವೂ ಆದ ವನದಲ್ಲಿ ಹಾಕಿರಿ" ಎಂದು ಅನಿಲವೇಗರಾಜನು ಹೇಳಿದನು. ಪಾಪಿಯಾದ ಈ ಖೇಚರನು ಆ ಅನಿಲವೇಗನ ವಚನಾನುಸರಣದಿಂದ (ವಚನಾನುಸಾರವಾಗಿ) ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಮನೋಹರಪುರದ ಸಮೀಪದಲ್ಲಿ ಸುಡುಗಾಡಿನಲ್ಲಿ ಶೀತವೇತಾಲಿಯೆಂಬ ವಿದ್ಯೆಯಿಂದ ಶುಭಾಕಾರವುಳ್ಳವನಾದ ಆ ಶ್ರೀಪಾಲನನ್ನು ಮುದುಕಿಯ ರೂಪವನ್ನು ಧರಿಸಿದವನನ್ನಾಗಿ ಮಾಡಿಸಿ ಹಾಕಿದನು. ಆ ಸುಡುಗಾಡಿನಲ್ಲಿ ಅಸ್ಪೃಶ್ಯವಂಶದಲ್ಲಿ ಹುಟ್ಟಿದವಳಾದ ಒಬ್ಬಾಳೊಬ್ಬ ದುಷ್ಟಳು(ವಿದ್ಯಾಧರಳು) ತನ್ನ ಅಳಿಯನನ್ನು ತಾನು (ವಿದ್ಯಾಬಲದಿಂದ) ನಾಯಿಯ ರೂಪದಿಂದ ತನ್ನ ಮಗಳ ಎರಡು ಕಾಲುಗಳಲ್ಲಿ ಸುತ್ತಲೂ ಹೊರಳಾಡುವವನನ್ನಾಗಿ ಮಾಡಿ ಆಕೆಯನ್ನು–ಪುತ್ರಿಯನ್ನು ಅಧಿಕವಾಗಿ ಪ್ರಸನ್ನಗೊಳಿಸಿ ಬಳಿಕ ಅವನನ್ನು(ಅಳಿಯನನ್ನು) ಮೊದಲಿನ ರೂಪದಲ್ಲಿ ಇರಿಸಿದಳು. ಆ ಮಾಯಾಸ್ವರೂಪವನ್ನು ನೋಡಿ ಈ ಶ್ರೀಪಾಲಕುಮಾರನು "ಖೇಚರರು ತಮಗಿಷ್ಟವಾದ ಆಕಾರವನ್ನು ಮಾಡಿಕೊಳ್ಳುವುದಕ್ಕೆ ಸಮರ್ಥರಾಗಿರುತ್ತಾರೆ" ಎಂದು ಸಂದೇಹಗೊಂಡು ಯೋಚಿಸುವವನಾಗಿ ದುಷ್ಟನಾದ ವಿದ್ಯಾಧರನಿಂದ ಉಂಟುಮಾಡಲ್ಪಟ್ಟುದೂ ಯಮನ ಮುಂದೆ ಹೋಗುವವನಿಗೆ (ವೃದ್ಧನಿಗೆ) ಸಮಾನವೂ ಕಾಚಿಹುಲ್ಲಿನ ಹೂವುಗಳನ್ನು ಪರಿಹಾಸ್ಯಮಾಡುವುವುಗಳೂ ಆದ ಕೂದಲುಗಳಿಂದಲೂ ವಾರ್ಧಕ್ಯವೆಂಬ ಸಮುದ್ರದ ತೆರೆಗೆ ಸಮಾನವಾದ ಚರ್ಮದಿಂದಲೂ ಕೂಡಿರುವುದೂ ಆದ ತನ್ನ(ಶ್ರೀಪಾಲನ) ರೂಪವನ್ನು ನೋಡಿ ನಾಚಿಕೆಯಿಂದಲೂ ಶೋಕದಿಂದಲೂ ವ್ಯಾಪ್ತನಾಗಿ ಶೀಘ್ರವಾಗಿ ಆ ಪ್ರದೇಶದಿಂದ ಹೊರಟು ಹೋಗುವವನಾಗಿ ಅಲ್ಲಿ ಶ್ಮಶಾನದಲ್ಲಿ ಭೋಗವತಿಯ(ಹಿಂದೆ ಶ್ರೀಪಾಲನಿಂದ ಭುಜಂಗಿಯೆಂದು ಹೇಳಿಸಿಕೊಂಡವಳ) ಸಹೋದರನಾದ ಹರಿಕೇತುವಿನ ಚೆನ್ನಾಗಿ ಸಿದ್ಧವಾಗಿರುವುದೂ ಹೆಣದ ರೂಪದಿಂದ ಆಗಲೇ ಎದ್ದಿರುವುದೂ ಆದ ವಿದ್ಯೆಯು ಶ್ರೀಪಾಲಕುಮಾರನ ಕೈಯಲ್ಲಿ ವಾಂತಿಮಾಡಿ ಆ ವಿದ್ಯೆಯಿಂದ "ಈ ವಾಂತಿ ಮಾಡಲ್ಪಟ್ಟುದನ್ನು ವಿಚಾರಮಾಡದೆ–ಜಿಗುಪ್ಸೆಪಡದೆ ಎತ್ತಿ ನೀನು ಸಂಶಯವಿಲ್ಲದವನಾಗಿ ಕುಡಿ" ಎಂದು ಹೇಳಲ್ಪಟ್ಟವನಾಗಿ ಕುಡಿದನು. ಶ್ರೀಪಾಲನನ್ನು ನೋಡಿ ಹರಿಕೇತುವು "ಸಮಸ್ತವ್ಯಾಧಿಗಳನ್ನು ನಾಶಮಾಡುವ ವಿದ್ಯೆಯು ನಿನ್ನನ್ನು ಆಶ್ರಯಿಸಿರುತ್ತದೆ" ಎಂದು ಬಹಳ ಸಂತುಷ್ಟನಾಗಿ ಪ್ರಿಯವಚನವನ್ನು ಪ್ರಯೋಗಿಸಿ–ಹೇಳಿ ಹೊರಟುಹೋದನು. ಅನಂತರದಲ್ಲಿ ನಿಜರೂಪವನ್ನು ಹೊಂದಿದವನಾದ ಶ್ರೀಪಾಲ ಕುಮಾರನು ಹೋಗುವವನಾಗಿ ಆಲದ ಮರದ ಕೆಳಗಿನ ಭಾಗದಲ್ಲಿರುವ ಒಬ್ಬಾನೊಬ್ಬ ಖೇಚರನನ್ನು ನೋಡಿ "ಇದು ಯಾವ ಪ್ರದೇಶ ?" ಎಂದು ಕೇಳಿದನು. ಅವನು ಈ ಕೆಳಗೆ ಹೇಳುವ ವಿಷಯವನ್ನು ಹೇಳಿದನು.

**ಖಗಾದ್ರೇಃ ಪೂರ್ವದಿಗ್ಭಾಗೇ ನೀಲಾದ್ರೇರಪಿ ಪಶ್ಚಿಮೇ ।**
**ಸುಸೀಮಾಖ್ಯೋಽಸ್ತಿ ದೇಶೋಽತ್ರ ಮಹಾನಗರಮುಷ್ಯದಃ ॥ ೬೫ ॥**

"ವಿಜಯಾರ್ಧಪರ್ವತದ ಪೂರ್ವದಿಗ್ಭಾಗದಲ್ಲಿ ನೀಲಪರ್ವತದ ಪಶ್ಚಿಮ ದಿಕ್ಕಿನಲ್ಲಿ ಸುಸೀಮವೆಂಬ ದೇಶವಿರುತ್ತದೆ. ಈ ದೇಶದಲ್ಲಿ ಈ ಮಹಾನಗರವೆಂಬ ಪಟ್ಟಣವಿರುತ್ತದೆ.

**ತದ್ಭೂತವನ[೧]ಮೇತತ್ತ್ವಂ ಸಮ್ಯಕ್ ಚಿತ್ತೇಽವಧಾರಯ ।**
**ಅಸ್ಮಿನ್ನೇತಾಃ ಶಿಲಾಃ ಸಪ್ತ [೨]ಪರಸ್ಪರಧೃತಾಃ ಕೃತಾಃ ॥ ೬೬ ॥**

**ಯೇನಾಸೌ ಚಕ್ರವರ್ತಿತ್ವಂ [೩]ಪ್ರಾಪ್ತೇತ್ಯಾದೇಶ ಈ ದೃಶಃ ।**
**ಇತಿ ತದ್ವಚನಾದೇಷ [೪]ತಾಸ್ತಥಾ ಕೃತವಾಂಸ್ತದಾ ॥ ೬೭ ॥**

ಪ್ರಸಿದ್ಧವಾದ ಇದು ಭೂತವನವು. ನೀನು ಮನಸ್ಸಿನಲ್ಲಿ ಚೆನ್ನಾಗಿ ನೆನಪಿಡು. ಈ ಭೂತವನದಲ್ಲಿ ಈ ಏಳು ಕಲ್ಲುಗಳು ಯಾವನಿಂದ ಒಂದರಮೇಲೊಂದು ಸ್ಥಾಪಿಸಲ್ಪಡುತ್ತವೋ ಇವನು ಚಕ್ರವರ್ತಿಪದವಿಯನ್ನು ಹೊಂದುವನೆಂಬೀ ಪ್ರಕಾರ

೧ ಶ್ರೀಪಾಲಂ. ೨ ವ್ಯತ್ಯಕ್ಷಿಪದಿತ್ಯಪಿಪಾಠಃ. ೩ ಶ್ಮಶಾನೇ. ೪ ಸಾರಮೇಯರೂಪೇಣ. ೫ ಜಾಮಾತರಂ. ೬ ಮಾಯಾಸ್ವರೂಪಂ. ೭ ಕೃತಾಂತಸ್ಯಪುರೋಗಾಮಿಸದೃಶ. ೮ ಶ್ರೀಪಾಲಸ್ಯಸ್ವಸ್ಯ. ೯ ದುಷ್ಟ ವಿದ್ಯಾಧರೇಣಸಮುತ್ಪಾದಿತಂ. ೧೦ ವಮನಂಕೃತ್ವಾನಿರ್ಗತಂ. ೧೧ ಜುಗುಪ್ಸಾಮಕುರ್ವನ್. ೧೨ ಶ್ರೀಪಾಲಂ. ೧೩ ಮಮಸಾಧ್ಯಾ. ೧೪ ಕುಮಾರಸ್ಯ ಪ್ರಿಯವಚನಂ ಪ್ರಯುಜ್ಯ. ೧೫ ನಿಜರೂಪಂ ಪ್ರಾಪ್ತಂ. ೧೬ ನ್ಯಗ್ರೋಧವೃಕ್ಷಸ್ಯ.

೧ ವಕ್ಷಮಾಣಂ. ೨ ಏಕೈಕಸ್ಯಾಃ ಉಪರ್ಯುಪರಿಸ್ಥಾಪಿತಾಃ. ೩ ಪ್ರಾಪ್ಸ್ಯತಿ. ೪ ಶಿಲಾಃ.

ವಾದ ನಿಮಿತ್ತಜ್ಞಾನಿಯ ವಚನವಿರುತ್ತದೆ'' ಈ ಪ್ರಕಾರವಾಗಿ ಆ ಖೇಚರನ ವಚನದಿಂದ ಈ ಶ್ರೀಪಾಲನು ಆಗ ಕಲ್ಲುಗಳನ್ನು ಹಾಗೆ ಮಾಡಿದನು–ಒಂದರ ಮೇಲೊಂದನ್ನಿಟ್ಟನು.

ದೃಷ್ಟ್ವಾ ತತ್ಸಾಹಸಂ ವಕ್ತುಂ ಸೋಗಮನ್ನಗರೇಶಿನಃ ।
ಕುಮಾರೋಽಪಿ ವಿನಿರ್ಗತ್ಯ [೧]ತತೋ ನಿರ್ವಿಣ್ಣಚೇತಸಾ ॥ ೬೮ ॥

ಕಾಂಚಿಜ್ಜರಾವತೀಂ [೨]ಕುತ್ಸ್ಯಶರೀರಾಂ ಕಸ್ಯಚಿತ್ತರೋಃ ।
ಅವಸ್ಥಿತಾಮಧೋಭಾಗೇ ವಿಷಯಂ ಪುಷ್ಕಲಾವತೀಮ್ ॥ ೬೯ ॥

ವದ ಪ್ರಯಾತಿ ಕಃ ಪಂಥಾ ಇತ್ಯಪ್ರಾಕ್ಷೀತ್ಪ್ರಿಯಂ ವದನ್ ।
ವಿನಾ ಗಗನಮಾರ್ಗೇಣ ಪ್ರಯಾತುಂ ನೈವ ಶಕ್ಯತೇ ॥ ೭೦ ॥

ಸ ಗವ್ಯೂತಿಶತೋತ್ಸೇಧವಿಜಯಾರ್ಧಗಿರೇರಪಿ ।
[೩]ಪರಸ್ಮಿನ್ನಿತ್ಯ[೪]ಸಾವಾಹ ತದಾಕರ್ಣ್ಯ ನೃಪಾತ್ಮಜಃ ॥ ೭೧ ॥

ಬ್ರೂಹಿ ತತ್ಪ್ರಾಪಣೋಪಾಯಮಿತಿ ತಾಂ ಪ್ರತ್ಯಭಾಷತ ।
ಇಹ ಜಂಬೂಮತಿ ದ್ವೀಪೇ ವಿಷಯೋ ವತ್ಸಕಾವತೀ ॥ ೭೨ ॥

ತತ್ಖೇಚರಗಿರೌ ರಾಜಪುರೇ ಖೇಚರಚಕ್ರಿಣಃ ।
ದೇವೀ ಧರಣಿಕಂಪಸ್ಯ ಸುಪ್ರಭಾ ವಾ ಪ್ರಭಾಕರೀ ॥ ೭೩ ॥

ಆ ಖೇಚರನು ಶ್ರೀಪಾಲನ ಸಾಹಸವನ್ನು ನೋಡಿ ನಗರಾಧಿಪತಿಗೆ ಹೇಳುವುದಕ್ಕೋಸ್ಕರ ಹೋದನು. ಅವನ ಮಾತಿನಿಂದ ಶ್ರೀಪಾಲಕುಮಾರನೂ ಹೊರಟು ಖಿನ್ನವಾದ ಮನಸ್ಸಿನಿಂದ ಒಂದಾನೊಂದು ಮರದ ಕೆಳಗಿನ ಭಾಗದಲ್ಲಿ ಕುಳಿತಿರುವವಳೂ ನಿಂದ್ಯವಾದ ಶರೀರವುಳ್ಳವಳೂ ಆದ ಒಬ್ಬಾಳೊಬ್ಬ ಮುದುಕಿಯನ್ನು ಕುರಿತು ''ಪುಷ್ಕಲಾವತೀದೇಶಕ್ಕೆ ಯಾವ ದಾರಿಯು ಹೋಗುತ್ತದೆ ? ಹೇಳು'' ಎಂದು ಪ್ರಿಯವಚನವನ್ನು ಮಾತನಾಡುವವನಾಗಿ ಕೇಳಿದನು. ಈ ಮುದುಕಿಯು ''ಆ ಪುಷ್ಕಲಾವತೀದೇಶಕ್ಕೆ ಆಕಾಶಮಾರ್ಗದಿಂದಲ್ಲದೆ ಹೋಗುವುದಕ್ಕೆ ಸಾಧ್ಯವಿಲ್ಲ. ನೂರು ಹರಿದಾರಿ ಎತ್ತರವಾದ ವಿಜಯಾರ್ಧಪರ್ವತದಿಂದಲೂ ಅದು ಆಚೆಯ ಭಾಗದಲ್ಲಿರುತ್ತದೆ'' ಎಂದಳು. ರಾಜಪುತ್ರ–ಶ್ರೀಪಾಲನು ಆ ಮಾತನ್ನು ಕೇಳಿ ''ಅದನ್ನು ಸೇರುವ ಉಪಾಯವನ್ನು ಹೇಳು'' ಎಂದು ಆಕೆಯನ್ನು ಕೇಳಿದನು. ಆಕೆಯು ''ಈ ಜಂಬೂದ್ವೀಪದಲ್ಲಿ ವತ್ಸಕಾವತೀದೇಶವು ವಿಜಯಾರ್ಧಪರ್ವತದಲ್ಲಿರುತ್ತದೆ. ಅಲ್ಲಿ ರಾಜಪುರವೆಂಬ ಪಟ್ಟಣದಲ್ಲಿ ವಿದ್ಯಾಧರ ಚಕ್ರವರ್ತಿಯಾದ ಧರಣಿಕಂಪನಿಗೆ ಶ್ರೇಷ್ಠವಾದ ಪ್ರಭೆಯಂತಿರುವ ಪ್ರಭಾಕರಿಯೆಂಬವಳು ದೇವಿಯು.

ತಯೋರಹಂ ತನೂಜಾಸ್ಮಿ ವಿಖ್ಯಾತಾಖ್ಯಾ ಸುಖಾವತೀ ।
[೫]ತ್ರಿಪ್ರಕಾರೋರುವಿದ್ಯಾನಾಂ ಪಾರಗಾನ್ಯೇದ್ಯುರಾಗತಾಮ್ ॥ ೭೪ ॥

ವಿಷಯೇ [೬]ಕಚ್ಛಕಾವತ್ಯಾಂ ವಿಜಯಾರ್ಧಮಹೀಧರೇ ।
ಅಕಂಪನಸುತಾಂ ಪಿಪ್ಪಲಾಖ್ಯಾಂ ಪ್ರಾಣಸಮಾಂ ಸಖೀಮ್ ॥ ೭೫ ॥

ಮಮಾಭಿವೀಕ್ಷಿತುಂ [೭]ತತ್ರ ಚಿತ್ರಮಾಲೋಕ್ಯ ಕಂಬಲಮ್ ।
ಕಥಯಾಯಂ ಕುತಸ್ತ್ಯಸ್ತೇ ತನ್ವೀತಿ ಪ್ರಶ್ನತೋ ಮಮ ॥ ೭೬ ॥

ಜಗಾದ ಸಾಪಿ ಮಾಮೇಷ ಪ್ರಾಪಾದೇಶವಶಾದಿತಿ ।
ಕಂಬಲಾವಾಪ್ತಿ ತಸ್ತದ್ವಂತಂ ಸಮಾಧ್ಯಾಯ ವಿಹ್ವಲಾಮ್ ॥ ೭೭ ॥

[೮]ಏತಾಂ ತಸ್ಯಾಃ ಸಖೀ ಶ್ರುತ್ವಾ [೯]ತಮನ್ವೇಷ್ಟುಂ ಸಮಾಗತಾ ।
ಕಾಂಚನಾಖ್ಯಪುರಾನ್ನಾಮ್ನಾ ಮದನಾದಿವತೀ ತದಾ ॥ ೭೮ ॥

೧ ವಚನಾತ್. ೨ ನಿಂದ್ಯ. ೩ ಅಪರಭಾಗೇ. ೪ ಜರತೀ. ೫ ಜಾತಿಕುಲಸಾಧಿತಮಹಾವಿದ್ಯಾನಾಂ. ೬ ವತ್ಸಕಾವತ್ಯಾಮಿತ್ಯಪಿಪಾಠಃ. ೭ ಪಿಪ್ಪಲಾಯಾಂ. ೮ ಪಿಪ್ಪಲಾಂ. ೯ ಆದೇಶಪುರುಷಂ ಶ್ರೀಪಾಲಂ.

ದೃಷ್ಟ್ವಾ ತತ್ಕಂಬಲಸ್ಯಾಂತೇ ನಿಬದ್ಧಾಂ ರತ್ನಮುದ್ರಿಕಾಮ್ ।
ತತ್ರ ಶ್ರೀಪಾಲನಾಮಾಕ್ಷರಾಣಿ ಚಾದೇಶಸಂಸ್ಮೃತೇಃ ॥ ೭೯ ॥

ಅಕಾಯಸಾಯಕೋದ್ಭಿನ್ನಹೃದಯಾಭೂ[೧]ದಹಂ ತತಃ ।
ಕಥಂ ವೈದ್ಯಾಧರಂ ಲೋಕಮಿಮಂ ಶ್ರೀಪಾಲನಾಮಭೃತ್ ॥ ೮೦ ॥

ಸಮಾಗತಃ ಸ ಇತ್ಯೇತನ್ನಿಶ್ಚೇತುಂ ಪುಂಡರೀಕಿಣೀಮ್ ।
ಉಪಗತ್ಯ ಜಿನಾಗಾರೇ ವಂದಿತ್ವಾ ಸಮುಪಸ್ಥಿತಾ ॥ ೮೧ ॥

ಆ ದಂಪತಿಗಳಿಗೆ ಜಾತಿ ಕುಲ ಸಾಧಿತಗಳೆಂಬ ಮೂರು ಪ್ರಕಾರವಾದ ಮಹಾವಿದ್ಯೆಗಳ ಪಾರವನ್ನು ಹೊಂದಿದವಳೂ ಸುಖಾವತಿಯೆಂದು ಪ್ರಸಿದ್ಧಳೂ ಆದ ನಾನು ಮಗಳಾಗಿರುತ್ತೇನೆ. ಒಂದಾನೊಂದು ದಿವಸ ಕಚ್ಛಕಾವತೀದೇಶದಲ್ಲಿ ವಿಜಯಾರ್ಧಗಿರಿಯಲ್ಲಿ ನೋಡುವುದಕ್ಕೋಸ್ಕರ ಬಂದವಳೂ ನನ್ನ ಪ್ರಾಣಗಳಿಗೆ ಸಮಾನಳಾದ ಗೆಳತಿಯೂ ಅಕಂಪನರಾಜನ ಪುತ್ರಿಯೂ ಆದ ಪಿಪ್ಪಲೆಯೆಂಬವಳನ್ನು ನೋಡಿ ಆಕೆಯಲ್ಲಿ ಚಿತ್ರಕಂಬಲವನ್ನು(ಕಂಬಳಿಯನ್ನು) ನೋಡಿ 'ಎಲೈ ಸುಂದರಿಯೆ ! ಇದು (ಕಂಬಳಿಯು) ಎಲ್ಲಿಯದು ? ಹೇಳು' ಎಂಬ ನನ್ನ ಪ್ರಶ್ನೆಯಿಂದ ಆಕೆಯು ''ಈ ಕಂಬಲವು ನನಗೆ ಶಕುನ–ನಿಮಿತ್ತವಶದಿಂದ ಪ್ರಾಪ್ತವಾದುದು'' ಎಂದಳು. ಕಂಬಳಿಯು ಪ್ರಾಪ್ತವಾದುದರಿಂದ ಆ ಕಂಬಳಿಯುಳ್ಳವನನ್ನು(ಆ ಕಂಬಳಿಯನ್ನು ಕಳೆದುಕೊಂಡವನನ್ನು) ಚಿಂತಿಸಿ ಖಿನ್ನಳಾದ ಈ ಪಿಪ್ಪಲೆಯನ್ನು ಆ ಈಕೆಯ ಸಖಿಯೂ ಕಾಂಚನವೆಂಬ ಪುರದಿಂದ ಬಂದವಳೂ ಆದ ಮದನಾವತಿಯೆಂಬವಳು ಕೇಳಿ ಆಗ ಆ ಕಂಬಳಿಯ ಕೊನೆ–ಸೆರಗಿನಲ್ಲಿ ಕಟ್ಟಲ್ಪಟ್ಟಿದ್ದ ರತ್ನದ ಮುದ್ರಿಕೆಯನ್ನೂ ಅದರಲ್ಲಿ ಶ್ರೀಪಾಲನ ಹೆಸರಿನ ಅಕ್ಷರಗಳನ್ನೂ ನೋಡಿ ಶಕುನದ ಸ್ಮರಣೆಯಿಂದ ಕಾಮಬಾಣದಿಂದ ಸೀಳಲ್ಪಟ್ಟುದಾದ ಹೃದಯವುಳ್ಳವಳಾದಳು. ಕಾಮವಿಕಾರವುಳ್ಳವಳಾದಳೆಂದು ಭಾವವು. ಅನಂತರದಲ್ಲಿ ನಾನು '' ಈ ವಿದ್ಯಾಧರಸಂಬಂಧವಾದ ಲೋಕಕ್ಕೆ ಆ ಶ್ರೀಪಾಲನೆಂಬ ಹೆಸರುಳ್ಳವನು (ಭೂಚರನು) ಹೇಗೆ ಬಂದನು ?'' ಎಂದು ಇದನ್ನು ನಿಶ್ಚಯಿಸುವುದಕ್ಕೋಸ್ಕರ ಪುಂಡರೀಕಿಣಿಗೆ ಬಂದು ಜಿನಮಂದಿರದಲ್ಲಿ ವಂದಿಸಿ ಕುಳಿತುಕೊಂಡೆನು.

[೨]ತ್ವತ್ಪ್ರವಾಸಕಥಾಂ ಸರ್ವಾಂ ತವ ಮಾತುಃ ಪ್ರಜಲ್ಪನಾತ್ ।
ವಿದಿತ್ವಾ ವಿಸ್ತರೇಣ ತ್ವಾಮಾನೇಷ್ಯಾಮೀತಿ ನಿಶ್ಚಯಾತ್ ॥ ೮೨ ॥

ಆಗಚ್ಛಂತೀ ಭವದ್ವಾರ್ತಾಂ ವಿದ್ಯುದ್ವೇಗಾಮುಖೋದ್ಗತಾಮ್ ।
ಅವಗತ್ಯ ತ್ವಯಾ ಸಾರ್ಧಂ ಯೋಜಯಿಷ್ಯಾಮಿ ತೇ ಪ್ರಿಯಮ್॥ ೮೩ ॥

ನ ವಿಷಾದೋ ವಿಧಾತವ್ಯ ಇತ್ಯಾಶ್ವಾಸ್ಯ ಭವತ್ಪ್ರಿಯಾಮ್ ।
ವಿನಿರ್ಗತ್ಯ ತತೋಽಭ್ಯೇತ್ಯ ಸಿದ್ಧಕೂಟಜಿನಾಲಯಮ್ ॥ ೮೪ ॥

ಅಭಿವಂದ್ಯಾ[೩]ಗತಾಸ್ಮ್ಯೇಹಿ ಮಯಾಮಾ ಪುಂಡರೀಕಿಣೀಮ್ ।
ಮಾತರಂ ಭ್ರಾತರಂ ಚಾನ್ಯಾಂಸ್ತ್ವದ್ಬಂದೂಂಶ್ಚ ಸಮೀಕ್ಷಿತುಮ್ ॥ ೮೫ ॥

ಯದೀಚ್ಛಾಸ್ತಿ ತವೇತ್ಯಾಹ ಸಾ [೪]ತಚ್ಛ್ರುತ್ವಾ ಪುನಃ ಕುತಃ ।
ತ್ವಮೇವಂ ಜರತೀ ಜಾತೇತ್ಯಬ್ರವೀ[೫]ತ್ಸ ಸುಖಾವತೀಮ್ ॥ ೮೬ ॥

ಅಲ್ಲಿ ನಿನ್ನ ತಾಯಿಯ ಮಾತಿನಿಂದ ಸಮಸ್ತವಾದ ನಿನ್ನ ಪ್ರವಾಸದ ಕಥೆಯನ್ನು ವಿಸ್ತಾರದಿಂದ ತಿಳಿದು ನಿನ್ನನ್ನು ಕರೆದುಕೊಂಡು ಬರುವೆನೆಂದು ನಿಶ್ಚಯದಿಂದ ಬರುತ್ತಿರುವವಳಾಗಿ ವಿದ್ಯುದ್ವೇಗೆಯ ಮುಖದಿಂದುಂಟಾದ ನಿನ್ನ ಸಮಾಚಾರವನ್ನು ತಿಳಿದು ''ನಿನ್ನೊಡನೆ ನಿನ್ನ ಪ್ರಿಯನನ್ನು ಸೇರಿಸುವೆನು. ವಿಷಾದವು ಮಾಡತಕ್ಕುದಲ್ಲ'' ಎಂದು ನಿನ್ನ (ಶ್ರೀಪಾಲನ) ಪ್ರಿಯೆಯನ್ನು ಸಮಾಧಾನಪಡಿಸಿ ಅಲ್ಲಿಂದ ಹೊರಟು ಸಿದ್ಧಕೂಟಜಿನಮಂದಿರವನ್ನು ಸೇರಿ ವಂದಿಸಿ ಇಲ್ಲಿಗೆ ಬಂದಿರುತ್ತೇನೆ. ನಿನಗೆ ನಿನ್ನ ತಾಯಿಯನ್ನೂ ಸಹೋದರನನ್ನೂ ಇತರ ಬಂಧುಗಳನ್ನೂ ನೋಡು

೧ ಸುಖಾವತೀ. ೨ ಭವದ್ದೇಶಾಂತರಕಥಾಂ. ೩ ಅತ್ರಾಗತಾಹಂ. ೪ ಸುಖಾವತೀವಚನಮಾಕರ್ಣ್ಯ. ೫ ಶ್ರೀಪಾಲಃ.

ವುದಕ್ಕೆ ಇಚ್ಛೆಯಿದ್ದರೆ ನನ್ನೊಡನೆ ಪುಂಡರೀಕಿಣಿಗೆ ಬಾ.'' ಎಂದು ಆ ಸುಖಾವತಿಯು ಹೇಳಿದಳು. ಸುಖಾವತಿಯ ಮಾತನ್ನು ಕೇಳಿ ಮತ್ತೆ ಆ ಶ್ರೀಪಾಲನು ''ನೀನು ಯಾವ ಕಾರಣದಿಂದ ಹೀಗೆ ಮುದುಕಿಯಾಗಿರುವೆ ?'' ಎಂದು ಸುಖಾವತಿಯನ್ನು ಕುರಿತು ಕೇಳಿದನು.

**ಕುಮಾರವಚನಾಕರ್ಣನೇನ ವಾರ್ಧಕ್ಯಮಾಗತಮ್ ।**
**ಭವತಶ್ಚ ನ ಕಿಂ ವೇತ್ಸೀತ್ಯಪಹಸ್ಯ ತಯೋದಿತಮ್ ॥ ೮೭ ॥**

ಶ್ರೀಪಾಲಕುಮಾರನ ಮಾತನ್ನು ಕೇಳಿದುದರಿಂದ ''ನಿನಗೂ ಬಂದಿರುವ ವಾರ್ಧಕ್ಯವನ್ನು ನೀನು ತಿಳಿಯುವುದಿಲ್ಲವೇನು ?'' ಎಂದು ನಕ್ಕು ಅವಳು ಹೇಳಿದಳು.

**ಜರಾಭಿಭೂತಮಾಲೋಕ್ಯ ಸ್ವಶರೀರಮಿದಂ ತ್ವಯಾ ।**
**ಕೃತಮೇವಂ ವಿಧಂ ಕೇನ ಹೇತುನೇತ್ಯನುಯುಕ್ತವಾನ್ ॥ ೮೮ ॥**

**ತಚ್ಛ್ರುತ್ವಾ ಸಾಬ್ರವೀದೇವಂ ಪಿಪ್ಪಲೇತ್ಯಾಖ್ಯಯೋದಿತಾ ।**
**ಮದನಾದಿವತೀ ಯಾ ಚ ಮೈಥುನೌ ವಿಶ್ರುತೌ ತಯೋಃ ॥ ೮೯ ॥**

**ಬಲವಾನ್ ಧೂಮವೇಗಾಖ್ಯಸ್ತಾದೃಗ್ಘರಿವರೋಽಪಿ ಚ ।**
**[೧]ತದ್ಭಯಾತ್ತ್ವಾಂ ತಿರೋಧಾಯ[೨]ಪುರಂ ಪ್ರಾಪಯಿತುಂ [೩]ಮಯಾ ॥**

**[೪]ಮಾಯಾರೂಪದ್ವಯಂ ವಿದ್ಯಾಪ್ರಭಾವಾತ್ಪ್ರಕಟೀಕೃತಮ್ ।**
**ಕುಮಾರ ಮತ್ಕರಸ್ಥಾಮೃತಾಸ್ವಾದಫಲಭಕ್ಷಣಾತ್ ॥ ೯೧ ॥**

**ವಿಗತಕ್ಷುಚ್ಛ್ರಮಃ ಶೀಘ್ರಂ ಮಾಮಾರುಹ್ಯಪುರಂ ಪ್ರತಿ ।**
**ವ್ರಜೇತಿ ಸೋಽಪಿ ತಚ್ಛ್ರುತ್ವಾ ಸ್ತ್ರಿಯೋ ರೂಪ[೫]ಮಮಾಮುಕಮ್ ॥ ೯೨ ॥**

**ನ ಸ್ಪೃಶಾಮಿ ಕಥಂ ವಾಹಮಾರೋಹಾಮಿ [೬]ಪುರಾ ಗುರೋಃ ।**
**ಸನ್ನಿಧಾ[೭]ವಾದದಾಮೀದೃಗ್ವ್ರತಮಿತ್ಯಬ್ರವೀದಿದಮ್ ॥ ೯೩ ॥**

ವಾರ್ಧಕ್ಯದಿಂದ ತಿರಸ್ಕೃತವಾದ ಈ ತನ್ನ ಶರೀರವನ್ನು ನೋಡಿ ಶ್ರೀಪಾಲನು ''ಈ ಪ್ರಕಾರವಾದ ಶರೀರವು ನಿನ್ನಿಂದ ಯಾವ ಕಾರಣದಿಂದ ಮಾಡಲ್ಪಟ್ಟಿತು ?'' ಎಂದು ಸುಖಾವತಿಯನ್ನು ಕೇಳಿದನು. ಆ ಮಾತನ್ನು ಕೇಳಿ ಸುಖಾವತಿಯು ''ಪಿಪ್ಪಲೆ ಯೆಂಬ ಹೆಸರಿನಿಂದ ಹೇಳಲ್ಪಟ್ಟವಳೂ ಮದನವತಿಯೂ ಯಾರಿರುತ್ತಾರೋ ಅವರೀರ್ವರ ಪ್ರಖ್ಯಾತರೂ ಬಲವುಳ್ಳವರೂ ಆದ ಧೂಮವೇಗ ಹರಿವರರೆಂಬ ಮೈದುನರೀರ್ವರು ಇರುತ್ತಾರೆ. ಅವರ ಭಯದಿಂದ ನಿನ್ನನ್ನು ಮರೆಮಾಡಿ ಪುಂಡರೀಕಿಣಿಯನ್ನು ತಲುಪಿಸುವುದಕ್ಕೋಸ್ಕರ ನನ್ನಿಂದ ವಿದ್ಯೆಯ ಪ್ರಭಾವದಿಂದ ಎರಡು ಮಾಯಾರೂಪಗಳು ಪ್ರಕಟಿಸಲ್ಪಟ್ಟುವು. ಎಲೈ ಕುಮಾರನೆ! ನನ್ನ ಕೈಯಲ್ಲಿರುವುದೂ ಅಮೃತದಂತೆ ರುಚಿಯುಳ್ಳದೂ ಆದ ಫಲದ ಭಕ್ಷಣದಿಂದ ಹಸಿವೂ ಶ್ರಮವೂ ಇಲ್ಲದವನಾಗಿ ನನ್ನನ್ನು ಹತ್ತಿ ಪಟ್ಟಣಕ್ಕೆ ಶೀಘ್ರವಾಗಿ ನಡೆ'' ಎಂದು ಹೇಳಿದಳು. ಆ ಶ್ರೀಪಾಲಕುಮಾರನೂ ಸುಖಾವತಿಯ ಮಾತನ್ನು ಕೇಳಿ ''ವಾಹನವೂ ನನ್ನ ಸಂಬಂಧಿಯಲ್ಲದಿರುವುದೂ ಆದ ಸ್ತ್ರೀರೂಪವನ್ನು ನಾನು ಮುಟ್ಟುವುದಿಲ್ಲ. ಹೇಗೆ ಹತ್ತುವೆನು ? ಮೊದಲು ಗುರುವಿನ ಸನ್ನಿಧಿಯಲ್ಲಿ ಈ ವ್ರತವನ್ನು ತೆಗೆದುಕೊಂಡಿರುತ್ತೇನೆ'' ಎಂದು ಹೇಳಿದನು.

**ಸಾ ತದಾಕರ್ಣ್ಯ ಸಂಚಿಂತ್ಯ ಕಿಂಜಾತಮಿತಿ ವಿದ್ಯಯಾ ।**
**ಗೃಹೀತ್ವಾ ಪುರುಷಾಕಾರಮುದ್ವಹಂತೀ [೮]ತ್[೯]ಮಿತ್ವರೀ ॥ ೯೪ ॥**

**ವಂದಿತ್ವಾ ಸಿದ್ಧಕೂಟಾಖ್ಯಂ ತತ್ರ ವಿಶ್ರಾಂತಯೇ ಸ್ಥಿತಾ ।**
**ತಸ್ಮಿನ್ನೇವ ದಿನೇ ಭೋಗವತೀ ಶಶಿನಮಾತ್ಮನಃ ॥ ೯೫ ॥**

೧ ಧೂಮವೇಗಹರಿವರಭಯಾತ್. ೨ ಪುಂಡರೀಕಿಣೀಂ. ೩ ಸುಖಾವತ್ಯಾ. ೪ ಮಮಜರತೀರೂಪಂ ಭವತಶ್ಚವಾರ್ಧಕ್ಯಂ. ೫ ಮಮಸಂಬಂಧಿಸ್ತ್ರೀರೂಪಂ ಮುಕ್ತ್ವಾ ಅನ್ಯಸ್ತ್ರೀರೂಪಂ. ೬ ಪೂರ್ವಸ್ಮಿನ್ ಕಾಲೇ. ೭ ಸ್ವೀಕರೋಮಿಸ್ಮ. ೮ ಶ್ರೀಪಾಲಂ. ೯ ಗಮ.

**ಪ್ರವಿಶ್ಯ ಭವನಂ ಕಾಂತ್ಯಾ ಕಲಾಭಿಶ್ಚಾಭಿವರ್ಧಿತಮ್ ।**
**ನಿವರ್ತಮಾನಮಾಲೋಕ್ಯ ಸ್ವಪ್ನೇಮಾಂಗಲ್ಯಶಾಂತಯೇ ॥ ೯೬ ॥**

**ತತ್ಸಿದ್ಧಕೂಟಪೂಜಾರ್ಥಂ ಕಾಂತಾ ಕಾಂತವತೀ ಸತೀ ।**
**ರತ್ನವೇಗಾ ಸುವೇಗಾಮಿತಮತೀ ರತಿಕಾಂತಯಾ ॥ ೯೭ ॥**

**ಸಹಿತಾ ಚಿತ್ತವೇಗಾಖ್ಯಾ ಪಿಪ್ಪಲಾ ಮದನಾವತೀ ।**
**ವಿದ್ಯುದ್ವೇಗಾ ತಥೈವಾನ್ಯಾಸ್ತಾಭಿಃ [೧]ಸಾ ಪರಿವಾರಿತಾ ॥ ೯೮ ॥**

**ಸಮಾಗತ್ಯ ಮಹಾ[೨]ಭಕ್ತ್ಯಾ ಪರೀತ್ಯ ಜಿನಮಂದಿರಮ್ ।**
**ಯಥಾವಿಧಿ [೩]ಪ್ರವಿಶ್ಯೇಶಂ ಸಂಪೂಜ್ಯ ಸ್ತೋತುಮುದ್ಯತಾ ॥ ೯೯ ॥**

**[೪]ತಾಶ್ಚ ತಾಸಾಂ ತದಾ ವ್ಯಾಕುಲೀಭಾವಮಪಿ ಚೇತಸಃ ।**
**ತಸ್ಮಿನ್ ಶಿವಕುಮಾರಸ್ಯ ವಕ್ರತಾಕ್ರಾಂತಮಾನನಮ್ ॥ ೧೦೦ ॥**

**[೫]ಆದಿಷ್ಟಸನ್ನಿಧಾನೇನ ವಿಲೋಕ್ಯ ಪ್ರಕೃತಿಂ ಗತಮ್ ।**
**ಸುಖಾವತೀ [೬]ತದುದ್ದೇಶಾದಪನೀಯ ಕುಮಾರಕಮ್ ॥ ೧೦೧ ॥**

**ಸ್ಥಾನೇನ್ಯಸ್ಮಿನ್ನ್ಯಧಾದೇನಂ ತತ್ರಾಪ್ಯಂಬುನಿ ಮುದ್ರಯಾ ।**
**ಸ್ವರೂಪಂ ಕಾಮರೂಪಿಣ್ಯಾ ಪ್ರೇಕ್ಷಮಾಣಂ ಯದೃಚ್ಛಯಾ ॥ ೧೦೨ ॥**

**ದೃಷ್ಟ್ವಾ ಹರಿವರಸ್ತಸ್ಮಾನ್ನೀತ್ವಾ ಕೋಪಾತ್ಸ ಪಾಪಭಾಕ್ ।**
**ನಿಚಿಕ್ಷೇಪ ಮಹಾಕಾಲಗುಹಾಯಾಂ [೮]ವಿಹಿತಾಯುಕಮ್ ॥ ೧೦೩ ॥**

**ವಸಂಸ್ತತ್ರ ಮಹಾನಾಗಸ್ತಂ ಗೃಹೀತುಮುಪಾಗತಃ ।**
**ತಸ್ಯ ಪುಣ್ಯಪ್ರಭಾವೇನ ಸೋಽಪ್ಯಕಿಂಚಿತ್ಕರೋ ಗತಃ ॥ ೧೦೪ ॥**

**ತತ್ರ ಶಯ್ಯಾತಲೇ ಸುಪ್ತ್ವಾ ಶುಚೌ ಮೃದುನಿ ವಿಸ್ತೃತೇ ।**
**ಪರೇದ್ಯುರ್ನಿರ್ಗತಂ [೭]ತಸ್ಯಾಃ ಸುಪ್ರಯುಕ್ತ್ಯೈಃ ಪರೀಕ್ಷಿತುಮ್ ॥ ೧೦೫ ॥**

**ಆದಿಷ್ಟಪುರುಷಂ ಭೃತ್ಯೈರ್ಜ್ಞಾತ್ವಾಭ್ಯೇತ್ಯ ನಿವೇದಿತಮ್ ।**
**ಗೃಹೀತಸ್ಥವಿರಾಕಾರಂ ಕೋಪಪಾವಕದೀಪಿತಃ ॥ ೧೦೬ ॥**

**ತಂ ವೀಕ್ಷ್ಯ ಧೂಮವೇಗಾಖ್ಯಃ ಖಗಶ್ಚಂದ್ರಪುರಾದ್ಬಹಿಃ ।**
**ಶ್ಮಶಾನಮಧ್ಯೇ ಪಾಷಾಣ[೯]ನಿಶಾತವಿವಿಧಾಯುಧೈಃ ॥ ೧೦೭ ॥**

**[೧೦]ನ್ಯಗೃಹ್ಣಾತ್ತಾನಿ ಚಾಸ್ಯಾಸನ್ ಪತಂತಿ ಕುಸುಮಾನಿ ವಾ ।**
**ಪರೋಽಪಿ ಖೇಚರಸ್ತತ್ರ ನರೇಶೋತಿಬಲಾಹ್ವಯಃ ॥ ೧೦೮ ॥**

**ಸ್ವದೇವ್ಯಾಂ ಚಿತ್ರಸೇನಾಯಾಂ ಭೃತ್ಯೇ ದುಷ್ಟತರೇ ಸತಿ ।**
**ತಂ [೧೧]ನಿಹತ್ಯಾದಹ[೧೨]ತ್ತಸ್ಮಿನ್ ಧೂಮವೇಗೋ ನಿಧಾಯ ತಮ್ ॥**

**ಕುಮಾರಂ ಚಾಗಮತ್ತತ್ರ [೧೩]ಮಹೌಷಧಿಜಶಕ್ತಿತಃ ।**
**ನಿರಾಕೃತಜ್ವಲದ್ವಹ್ನಿಶಕ್ತಿಸ್ತಸ್ಮಾತ್ಸ ನಿರ್ಗತಃ ॥ ೧೧೦ ॥**

ಸುಖಾವತಿಯು ಆ ಮಾತನ್ನು ಕೇಳಿ ಆಲೋಚಿಸಿ ''ಏನಾಯ್ತು ?'' ಎಂದು ತನ್ನ ವಿದ್ಯೆಯಿಂದ ಪುರುಷಾಕಾರವನ್ನು ಸ್ವೀಕರಿಸಿ ಶ್ರೀಪಾಲನನ್ನು ಹೊತ್ತುಕೊಂಡು ಹೋಗುವವಳಾಗಿ ಸಿದ್ಧಕೂಟಚೈತ್ಯಾಲಯವನ್ನು ವಂದಿಸಿ ಅಲ್ಲಿ ವಿಶ್ರಾಂತಿಗೋಸ್ಕರ ಕುಳಿತಳು. ಅದೇ ದಿನದಲ್ಲಿ ಭೋಗವತಿಯು (ಶ್ರೀಪಾಲನಿಂದ ಭುಜಂಗಿಯೆಂದು

೧ ಭೋಗವತೀ. ೨ ಭಕ್ತ್ಯಾಇತ್ಯಪಿಪಾಠಃ. ೩ ಪ್ರಣಮ್ಯೇತ್ಯಪಿಪಾಠಃ. ೪ ಸಹಾಗತಕನ್ಯಕಾಃ. ೫ ಆದೇಶಪುರುಷಸಾಮಿಪ್ಯೇನ. ೬ ತತ್ಪ್ರದೇಶಾತ್. ೭ ಕೃತಪುಣ್ಯಂ. ೮ ಗುಹಾಯಾಃ ಸಕಾಶಾತ್. ೯ ನಿಶಿತ. ೧೦ ನಿಗ್ರಹಂಚಕಾರ. ೧೧ ಹತ್ವಾ. ೧೨ ಚಿತಾಗ್ನೌ. ೧೩ ಪುರಾಶ್ಮಶಾನೇ ಹರಿಕೇತೋರ್ವಿದ್ಯಯಾ ನಿರ್ವಾಂತಂ ಪೀತ್ವಾಜಾತಮಹೌಷಧಶಕ್ತಿತಃ.

ಹೇಳಲ್ಪಟ್ಟವಳು) ಕಾಂತಿಯಿಂದಲೂ ಕಲೆಗಳಿಂದಲೂ ವೃದ್ಧಿಹೊಂದಿಸಲ್ಪಟ್ಟವನೂ ತನ್ನ(ಭೋಗವತಿಯ) ಮನೆಯನ್ನು ಪ್ರವೇಶಿಸಿ ಹಿಂದಿರುಗುವವನೂ ಆದ ಚಂದ್ರನನ್ನು ಕನಸಿನಲ್ಲಿ ಕಂಡು ಅಮಂಗಲದ ಶಾಂತಿಗೋಸ್ಕರ ಆ ಸಿದ್ಧಕೂಟ ಚೈತ್ಯಾಲಯದಲ್ಲಿ ಪೂಜೆಗೋಸ್ಕರ ಸುಂದರಳೂ ಸಾಧ್ವಿಯೂ ಆದ ಕಾಂತವತೀ (ಭೋಗವತಿಯ ತಾಯಿ) ರತ್ನವೇಗಾ, ಸುವೇಗಾ, ಅಮಿತಮತೀ, ರತಿಕಾಂತೆಯೊಡನೆ ಕೂಡಿದವಳಾದ ಚಿತ್ರವೇಗೆಯೆಂಬವಳು, ಪಿಪ್ಪಲಾ, ಮದನಾವತೀ, ವಿದ್ಯುದ್ವೇಗಾ ಹಾಗೆಯೇ ಬೇರೆ ಹೆಂಗಸರು ಅವರುಗಳೊಡನೆ ಆವರಿಸಲ್ಪಟ್ಟವಳಾದ ಆಕೆಯು ಬಂದು ಮಹಾಭಕ್ತಿಯಿಂದ ಜಿನಾಲಯವನ್ನು ಪ್ರದಕ್ಷಿಣೆಮಾಡಿ ವಿಧಿ ಪ್ರಕಾರವಾಗಿ ಪ್ರವೇಶಿಸಿ ಜಿನೇಶ್ವರನನ್ನು ಪೂಜಿಸಿ ಸ್ತೋತ್ರಮಾಡುವುದಕ್ಕೆ ಉದ್ಯುಕ್ತಳಾದಳು. ಜತೆಯಲ್ಲಿ ಬಂದ ಕನ್ಯೆಯರೂ ಸ್ತೋತ್ರಮಾಡುವುದಕ್ಕೆ ಉದ್ಯುಕ್ತರಾದರು. ಆಗ ಆ ಸ್ತ್ರೀಯರ ಮನಸ್ಸಿನ ವ್ಯಾಕುಲತೆಯನ್ನೂ ಆ ಪ್ರದೇಶದಲ್ಲಿ ಶಿವಕುಮಾರನೆಂಬ ರಾಜಪುತ್ರನ ವಕ್ರತೆಯಿಂದ ವ್ಯಾಪ್ತವಾದ ಮುಖವನ್ನು ಸಿದ್ಧಪುರುಷನ–ಶ್ರೀಪಾಲನ ಸಾಮೀಪ್ಯದಿಂದ ಪೂರ್ವಸ್ಥಿತಿಯನ್ನು ಹೊಂದಿದುದನ್ನಾಗಿ ನೋಡಿ ಸುಖಾವತಿಯು ಶ್ರೀಪಾಲಕುಮಾರನನ್ನು ಆ ಪ್ರದೇಶದಿಂದ ಹೊರಡಿಸಿ ಮತ್ತೊಂದು ಸ್ಥಾನದಲ್ಲಿರಿಸಿದಳು. ಕಾಮರೂಪಿಣಿಯೆಂಬ ಮುದ್ರಿಕೆಯಿಂದ ಅಲ್ಲಿಯೂ ನೀರಿನಲ್ಲಿ ಅಕಸ್ಮಾತ್ ತನ್ನ ರೂಪವನ್ನು ನೋಡುತ್ತಿರುವವನಾದ ಆ ಶ್ರೀಪಾಲನನ್ನು ನೋಡಿ ಪಾಪವನ್ನು ಹೊಂದಿರುವ ಆ ಪರಿವಾರನು ಆ ಸ್ಥಾನದಿಂದ ಪುಣ್ಯಶಾಲಿಯಾದ ಇವನನ್ನು ತೆಗೆದುಕೊಂಡು ಹೋಗಿ ಕೋಪದಿಂದ ಮಹಾಕಾಲವೆಂಬ ಗುಹೆಯಲ್ಲಿರಿಸಿದನು. ಅಲ್ಲಿ ವಾಸಮಾಡುವ ಒಂದು ದೊಡ್ಡಹಾವು ಶ್ರೀಪಾಲನನ್ನು ಹಿಡಿಯುವುದಕ್ಕೋಸ್ಕರ ಬಂದಿತು. ಶ್ರೀಪಾಲನ ಪುಣ್ಯಪ್ರಭಾವದಿಂದ ಆ ಹಾವು ಏನೂ ಮಾಡದಿರುವುದಾಗಿ ಹೊರಟು ಹೋಯಿತು. ಅಲ್ಲಿ ಮರುದಿವಸ ನಿರ್ಮಲವೂ ಕೋಮಲವೂ ವಿಸ್ತಾರವೂ ಆದ ಹಾಸಿಗೆಯಲ್ಲಿ ಮಲಗಿ ಆ ಗುಹೆಯಿಂದ ಹೊರಟವನೂ ಮುದುಕನ ಆಕಾರವನ್ನು ಸ್ವೀಕರಿಸಿರುವವನೂ ಆದ ಈ ಶ್ರೀಪಾಲನನ್ನು ಪರೀಕ್ಷಿಸುವುದಕ್ಕೋಸ್ಕರ ಚೆನ್ನಾಗಿ ನೇಮಿಸಲ್ಪಟ್ಟವರಾದ ಭೃತ್ಯರು ಮೊದಲು ಪುರುಷನನ್ನು(ಶ್ರೀಪಾಲನನ್ನು) ತಿಳಿದು ಬಳಿಕ ಧೂಮವೇಗ ವಿದ್ಯಾಧರನ ಸಮೀಪಕ್ಕೆ ಹೋಗಿ ತಿಳುಹಿದರು. ಕೋಪವೆಂಬ ಬೆಂಕಿಯಿಂದ ಪ್ರಕಾಶಿಸುವವನಾದ ಧೂಮವೇಗನೆಂಬ ಖೇಚರನು ಶ್ರೀಪಾಲನನ್ನು ನೋಡಿ ಚಂದ್ರಪುರದ ಹೊರಗೆ ಸುಡುಗಾಡಿನ ನಡುವಿನಲ್ಲಿ ಕಲ್ಲಿನ ಹರಿತವಾದ ಆಯುಧಗಳಿಂದ ನಿಗ್ರಹಿಸಿದನು–ಹೊಡೆದನು. ಆ ಆಯುಧಗಳಾದರೋ ಈ ಶ್ರೀಪಾಲನಿಗೆ ಬೀಳುತ್ತಿರುವ ಪುಷ್ಪಗಳಂತಾದುವು. ಅಲ್ಲಿ ದೊರೆಯಾದ ಅತಿಬಲನೆಂಬ ಮತ್ತೊರ್ವ ಖೇಚರನೂ ತನ್ನ ಪತ್ನಿಯಾದ ಚಿತ್ರಸೇನೆಯಲ್ಲಿ ಸೇವಕನೋರ್ವನು ಬಹು ದುಷ್ಟನಾಗಿರುತ್ತಿರಲು ಅವನನ್ನು ಕೊಂದು ಸುಟ್ಟನು. ಆ ಚಿತೆಯ ಬೆಂಕಿಯಲ್ಲಿ ಧೂಮವೇಗನು ಆ ಶ್ರೀಪಾಲಕುಮಾರನನ್ನು ಇಟ್ಟು ಹೊರಟು ಹೋದನು. ಅಲ್ಲಿ ಹಿಂದೆ ಸುಡುಗಾಡಿನಲ್ಲಿ ಹರಿಕೇತುವಿನ ವಿದ್ಯೆಯು ವಾಂತಿ ಮಾಡಿದುದನ್ನು ಕುಡಿದುದರಿಂದುಂಟಾದ ಮಹೌಷಧಿ ಸಾಮರ್ಥ್ಯದಿಂದ ಉರಿಯುತ್ತಿರುವ ಬೆಂಕಿಯ ಶಕ್ತಿಯನ್ನು ದೂರಮಾಡಿದವನಾಗಿ ಅಲ್ಲಿಂದ ಶ್ರೀಪಾಲನು ಹೊರಟುಹೋದನು.

**ಹತಾನುಚರಭಾರ್ಯಾತ್ರ ಕಾಚನ್ನಿರಪರಾಧಕಃ ।**
**ಹತೋ ನೃಪೇಣ ಮದ್ಭರ್ತ್ರೇ [1]ತಸ್ಯ ಶುದ್ಧಿಪ್ರಕಾಶಿನೀ ॥ ೧೧೧ ॥**

ಈ ಸುಡುಗಾಡಿನಲ್ಲಿ ಕೊಲ್ಲಲ್ಪಟ್ಟ ಆ ಅತಿಬಲನ ಸೇವಕನ ಹೆಂಡತಿಯೋರ್ವಳು ''ನಿರಪರಾಧಿಯಾದ ನನ್ನ ಗಂಡನನ್ನು ದೊರೆಯು ಕೊಂದನು'' ಎಂದು ಈ ತನ್ನ ಪತಿಯ ಶುದ್ಧಿ–ನಿರ್ದೋಷತ್ವವನ್ನು ಪ್ರಕಾಶಪಡಿಸುವವಳಾಗಿದ್ದಳು.

**ತತ್ಕುಮಾರಸ್ಯ ಸಂಸ್ಪರ್ಶಾನ್ನಿಶ್ಶಕ್ತಿಂ ಸಾ ಹುತಾಶನಮ್ ।**
**ವಿದಿತ್ವಾ ಪ್ರಾವಿಶದ್ದೃಷ್ಟ್ವಾ ಕುಮಾರಸ್ತಾಂ ಸಕೌತುಕಃ ॥ ೧೧೨ ॥**

೧ ಸ್ವಭರ್ತುಃ.

**ಅಭೇದ್ಯಮಪಿ ವಜ್ರೇಣ ಸ್ತ್ರೀಣಾಂ ಮಾಯಾವಿನಿರ್ಮಿತಮ್ ।**
**[1]ಕವಚಂ [2]ದಿವಿಜೇಶಾ ಚ ನೀರಂಧ್ರಮಿತಿ ನಿರ್ಭಯಃ ॥ ೧೧೩ ॥**

**ಸ್ಥಿತಸ್ತತ್ರ ಸ್ಮರನ್ನೇವಂ ಸುತಾ ತನ್ನಗರೇಶಿನಃ ।**
**ರಾಜ್ಞೋ ವಿಮಲಸೇನಸ್ಯ ವತ್ಯಂತಕಮಲಾಹ್ವಯಾ ॥ ೧೧೪ ॥**

**ಕಾಮಗ್ರಹಾಹಿತಾ ತಸ್ಯಾಸ್ತದ್ಗ್ರಹಾಪಜಿಹೀರ್ಷಯಾ ।**
**ಜನೇ ಸಮುದಿತೇ ಸದ್ಯಃ ಕುಮಾರಸ್ತಮಪಾಹರತ್ ॥ ೧೧೫ ॥**

ಆ ಶ್ರೀಪಾಲಕುಮಾರನ ಸ್ಪರ್ಶದಿಂದ ಬೆಂಕಿಯನ್ನು ಶಕ್ತಿಯಿಲ್ಲದುದನ್ನಾಗಿ ತಿಳಿದು ಆಕೆಯು ಆ ಬೆಂಕಿಯಲ್ಲಿ ಪ್ರವೇಶಮಾಡಿದಳು. ಶ್ರೀಪಾಲಕುಮಾರನು ಕುತೂಹಲವುಳ್ಳವನಾಗಿ ಆಕೆಯನ್ನು ನೋಡಿ ''ರಂಧ್ರವಿಲ್ಲದುದೂ ದಟ್ಟವಾದುದೂ ಸ್ತ್ರೀಯರ ಮಾಯೆಯಿಂದ ನಿರ್ಮಿತವೂ ಆದ ಕವಚವು(ಕಪಟವು) ದೇವೇಂದ್ರನಿಂದಲೂ ವಜ್ರಾಯುಧದಿಂದಲೂ ಅಭೇದ್ಯವಾಗಿರುತ್ತದೆ'' ಎಂದು ನಿರ್ಭಯವಾಗಿ ಅಲ್ಲಿ ಹೀಗೆ ಯೋಚಿಸುವವನಾಗಿದ್ದನು. ಆ ನಗರದ ದೊರೆಯಾದ ವಿಮಲಸೇನರಾಜನ ಮಗಳಾದ ಕಮಲಾವತಿಯೆಂಬವಳು ಕಾಮವೆಂಬ ಗ್ರಹದಿಂದ ಪೀಡಿತಳಾಗಿದ್ದಳು. ಆಕೆಯ ಆ ಗ್ರಹವನ್ನು ದೂರಮಾಡುವ ಇಚ್ಛೆಯಿಂದ ಜನರು ಸೇರಿರುತ್ತಿರಲು ಶ್ರೀಪಾಲಕುಮಾರನು ಅದನ್ನು ತತ್ಕ್ಷಣದಲ್ಲಿ ದೂರಮಾಡಿದನು.

**ಸತ್ಯೋಽಭೂತ್ಸಾಕ್ತನಾದೇಶ ಇತಿ ತಸ್ಮೈ ಮಹೀಪತಿಃ ।**
**ತುಷ್ಟ್ವಾ ತಾಂ ಕನ್ಯಕಾಂ ದಿತ್ಸುಸ್ತಸ್ಯಾನಿಚ್ಛಾಂ ವಿಬುಧ್ಯ ಸಃ ॥ ೧೧೬ ॥**

**ಅಭ್ಯರ್ಣಂ ಬಂಧುವರ್ಗಸ್ಯ ನೇಯೋಽಯಂ ಭವತಾ ದ್ರುತಮ್ ।**
**ಯತ್ನೇನೇತ್ಯಾತ್ಮಜಂ ಸ್ವಸ್ಯ ವರಸೇನಂ ಸಮಾದಿಶತ್ ॥ ೧೧೭ ॥**

''ಮೊದಲಿನ ಆದೇಶವು–ಸಿದ್ಧಪುರುಷನೆಂಬ ತಿಳಿವಳಿಕೆಯು ಸತ್ಯವಾಯಿತು'' ಎಂದು ವಿಮಲಸೇನರಾಜನು ಸಂತುಷ್ಟನಾಗಿ ಆ ಕನ್ಯೆಯನ್ನು ಶ್ರೀಪಾಲನಿಗೆ ಕೊಡಬೇಕೆಂಬ ಇಚ್ಛೆಯುಳ್ಳವನಾಗಿ ಶ್ರೀಪಾಲನ ಅನಿಚ್ಛೆಯನ್ನು(ಶ್ರೀಪಾಲನಿಗೆ ಇಚ್ಛೆಯಿಲ್ಲವೆಂಬುದನ್ನು) ತಿಳಿದು ಅವನು ''ಇವನನ್ನು ನೀನು ಶೀಘ್ರವಾಗಿ ಯತ್ನದಿಂದ ಬಂಧುಗಳ ಗುಂಪಿನ ಸಮೀಪಕ್ಕೆ ಕರೆದುಕೊಂಡು ಹೋಗಬೇಕು'' ಎಂದು ತನ್ನ ಮಗನಾದ ವರಸೇನನಿಗೆ ಆಜ್ಞೆಮಾಡಿದನು.

**ನೀತ್ವಾ ಸೋಽಪಿ ಕುಮಾರಂ ತಂ [3]ವಿಮಲೇತಿಪುರೋ ಬಹಿಃ ।**
**ವನೇ ತೃಷ್ಣೋಪಸಂತಪ್ತಂ ಸ್ಥಾಪಯಿತ್ವಾ ಗತೋಂ[4]ಬುನೇ ॥ ೧೧೮ ॥**

ಆ ವರಸೇನನೂ ಆ ಶ್ರೀಪಾಲಕುಮಾರನನ್ನು ಕರೆದೊಯ್ದು ವಿಮಲವೇ... ಪಟ್ಟಣದಿಂದ ಹೊರಗಿರುವ ವನದಲ್ಲಿ ಬಾಯಾರಿಕೆಯಿಂದ ಬಾಧಿತನಾದ ಅವನನ್ನು ಕುಳ್ಳಿರಿಸಿ ನೀರಿಗೋಸ್ಕರ ಹೋದನು.

**ತದಾ ಸುಖಾವತೀ ಕುಬ್ಜಾ ಭೂತ್ವಾ ಕುಸುಮಮಾಲಯಾ ।**
**ಪರಿಸ್ಪೃಶ್ಯ ತೃಷಾಂ [5]ನೀತ್ವಾ ಕನ್ಯಕಾಂ [6]ತಂ ಚಕಾರ ಸಾ ॥ ೧೧೯ ॥**

ಆಗ ಆ ಸುಖಾವತಿಯು ಗಿಡ್ಡಳಾಗಿ ಪುಷ್ಪಮಾಲೆಯಿಂದ ಅವನನ್ನು ಸ್ಪರ್ಶಿಸಿ ಬಾಯಾರಿಕೆಯನ್ನು ಹೋಗಲಾಡಿಸಿ ಶ್ರೀಪಾಲನನ್ನು ಕನ್ಯೆಯನ್ನಾಗಿ ಮಾಡಿದಳು.

**ಧೂಮವೇಗೋ ಹರಿವರಶ್ಚೈತಾಂ ವೀಕ್ಷ್ಯಾಭಿಲಾಷಿಣೌ ।**
**ಅಭೂತಾಂ ಬದ್ಧಮಾತ್ಸರ್ಯೌ ತಸ್ಯಾಃ ಸ್ವೀಕರಣಂ ಪ್ರತಿ ॥ ೧೨೦ ॥**

ಧೂಮವೇಗನೂ ಹರಿವರನೂ ಈ ಕನ್ಯೆಯನ್ನು(ವಿಕೃತಕನ್ಯೆಯನ್ನು) ನೋಡಿ ಅಭಿಲಾಷೆಯುಳ್ಳವರೂ ಆಕೆಯ ಪರಿಗ್ರಹಣವನ್ನು ಕುರಿತು ಪರಸ್ಪರವಾಗಿ ಮಾತ್ಸರ್ಯವುಳ್ಳವರೂ ಆದರು.

೧ ಕಪಟಮಿತ್ಯರ್ಥಃ. ೨ ಇಂದ್ರೇಣ. ೩ ವಿಮಲೇತಿಪುರಾತ್. ೪ ಜಲಮಾನೇತುಂ. ೫ ಅಪಸಾರ್ಯ. ೬ ಶ್ರೀಪಾಲಂ.

**ದ್ವೇಷವಂತೌ ತದಾಲೋಕ್ಯ ಯುವಯೋರ್ವಿಗ್ರಹೋ ವೃಥಾ ।**
**ಪತಿರ್ಭವತ್ವಸಾವಸ್ಯಾ ಯಮೇಷಾಭಿಲಷಿಷ್ಯತಿ ॥ ೧೨೧ ॥**

**ಇತಿ ಬಂಧುಜನೈರ್ವಾರ್ಯಮಾಣೌ ವೈರಾದ್ವಿರೇಮತುಃ ।**
**ಸ್ತ್ರೀಹೇತೋಃ ಕಸ್ಯ ವಾ ನ ಸ್ಯಾತ್ಪ್ರತಿಘಾತಃ ಪರಸ್ಪರಮ್ ॥ ೧೨೨ ॥**

ಆಗ ಪರಸ್ಪರದ್ವೇಷವುಳ್ಳವರಾದ ಆ ಧೂಮವೇಗ ಹರಿವರರನ್ನು ನೋಡಿ "ನಿಮ್ಮಗಳ ಕಲಹವು ವ್ಯರ್ಥವಾಗಿರುತ್ತದೆ. ಈಕೆಯು ಯಾವನನ್ನು ಇಚ್ಛಿಸುವಳೋ ಅವನು ಈಕೆಯ ಪತಿಯಾಗಲಿ" ಎಂದು ಬಂಧುಜನರಿಂದ ತಡೆಯಲ್ಪಟ್ಟವರಾಗಿ ವೈರದಿಂದ ವಿರಾಮವನ್ನು ಹೊಂದಿದರು–ವೈರವನ್ನು ಬಿಟ್ಟರು. ಯಾರಿಗೆತಾನೆ ಸ್ತ್ರೀಯನಿಮಿತ್ತದಿಂದ ಪರಸ್ಪರವಾಗಿ ಹೊಡೆದಾಟವಾಗದು ?

**ಕನ್ಯಾಕೃತ್ಯೈವ ಗತ್ವಾತಃ ಕಾಂತಯಾ ಸ ಸುಕಾಂತಯಾ ।**
**ರತಿಕಾಂತಾಖ್ಯಯಾ ಕಾಂತವತ್ಯಾ ಚ ಸಹಿತಃ ಪುನಃ ॥ ೧೨೩ ॥**

**ಸ್ಥಿತಃ ಪ್ರಾಕ್ತನರೂಪೇಣ ಕಾಚಿತ್ತಂ ವೀಕ್ಷ್ಯ ಲಜ್ಜಿತಾ ।**
**ರತಿಂ ಸಮಾಗಮತ್ಕಾಚಿನ್ನೈಕಭಾವಾ ಹಿ ಯೋಷಿತಃ ॥ ೧೨೪ ॥**

ಶ್ರೀಪಾಲಕುಮಾರನು ಈ ಪ್ರದೇಶದಿಂದ ಹೋಗಿ ಕನ್ಯಾಕಾರಣದಿಂದಲೇ (ಆ ನಗರದ ದೊರೆಯಾದ ರತಿವೇಗನ ಮತ್ತು ಕಾಂಚನಮಾಲೆಯ ಪುತ್ರಿಯರಾದ) ಕಾಂತೆ ಸುಕಾಂತೆ ರತಿಕಾಂತೆ ಕಾಂತವತಿಯರೆಂಬ ನಾಲ್ಕು ಮಂದಿ ಕನ್ಯೆಯರೊಡನೆ ಕೂಡಿದವನಾಗಿ ಮತ್ತೆ ಮೊದಲಿನ–ಕುಮಾರರೂಪದಿಂದ ಇದ್ದನು. ಒಬ್ಬಾಕೊಬ್ಬಳು ಅವನನ್ನು ನೋಡಿ ನಾಚಿದಳು. ಒಬ್ಬಾಕೊಬ್ಬಳು ಅನುರಾಗವನ್ನು ಹೊಂದಿದಳು. ಸ್ತ್ರೀಯರು ಅನೇಕಭಾವಗಳುಳ್ಳವರಾಗಿರುತ್ತಾರಲ್ಲವೆ ?

**ಪ್ರಸುಪ್ತವಂತಂ ತಂ ತತ್ರ ಪ್ರತ್ಯೂಷೇಥ ಸುಖಾವತೀ ।**
**ಯತ್ನೇನೋದ್ಧೃತ್ಯ ಗಚ್ಛಂತೀ ತೇನೋನ್ಮೀಲಿತಚಕ್ಷುಷಾ ॥ ೧೨೫ ॥**

**ವಿಹಾಯ ಮಾಮಿಹೈಕಾಕಿನಂ ತ್ವಂ ಕ್ವ ಪ್ರಸ್ಥಿತೇತಿ ಸಾ ।**
**ಪೃಷ್ಟಾ ನ ಕ್ವಾಪಿ ಯಾತಾಹಂ ತ್ವತ್ಸಮೀಪಗತಾ ಸದಾ ॥ ೧೨೬ ॥**

**ಆದಿಷ್ಟವನಿತಾರತ್ನಲಾಭೋ ನೈವಾತ್ರ ತೇ ಭಯಮ್ ।**
**ಇ[1]ತ್ಯಂತರ್ಹಿತಮಾಪಾದ್ಯ ಸ್ವರೂಪೇಣ [2]ಸಮಾಗಮಮ್ ॥ ೧೨೭ ॥**

ಅಲ್ಲಿ ಮಲಗಿರುವವನಾದ ಆ ಕುಮಾರನನ್ನು ಬಳಿಕ ಬೆಳಗಿನ ಜಾವದಲ್ಲಿ ಸುಖಾವತಿಯು ಯತ್ನದಿಂದ ಎತ್ತಿಕೊಂಡು ಹೋಗುವವಳಾಗಿ ಕಣ್ಣುಗಳನ್ನು ತೆರೆದು ನೋಡಿದ ಆ ಶ್ರೀಪಾಲಕುಮಾರನಿಂದ "ಏಕಾಕಿಯಾದ ನನ್ನನ್ನು ಇಲ್ಲಿ ಬಿಟ್ಟು ನೀನು ಎಲ್ಲಿ ಹೊರಟು ಹೋದೆ ?" ಎಂದು ಕೇಳಲ್ಪಟ್ಟವಳಾಗಿ ಆಕೆಯು "ನಾನು ಎಲ್ಲಿಗೂ ಹೋಗಲಿಲ್ಲ. ಯಾವಾಗಲೂ ನಿನ್ನ ಸಮೀಪದಲ್ಲಿ ಇರುತ್ತೇನೆ. ಸಿದ್ಧ ಪುರುಷನಿಂದ ಹೇಳಲ್ಪಟ್ಟ ಸ್ತ್ರೀರತ್ನದ ಲಾಭವಾಗುವುದು. ನಿನಗೆ ಇಲ್ಲಿ ಭಯವಿಲ್ಲವೆಂದು ಸ್ವರೂಪದಿಂದ ಮರೆಯಾಗಿರುವುದು ಹೇಗೋ ಹಾಗೆ ಇದ್ದು ಬಂದೆನು."

**ಇತ್ಯಾಹ ತದ್ವಚಃ ಶ್ರುತ್ವಾ [3]ಪ್ರಮುದ್ಯೈತ್ಯ ಖಗಾಚಲೇ ।**
**ಪುರಂ ದಕ್ಷಿಣಭಾಗಸ್ಥಂ [4]ಗಜಾದಿಂ ತತ್ಸಮೀಪಗಮ್ ॥ ೧೨೮ ॥**

**ಕಂಚಿದ್ಗಜಪತಿಂ ಸ್ತಂಭಮುನ್ಮೂಲ್ಯಾರೂಢದರ್ಪಕಮ್ ।**
**[5]ದ್ವಾತ್ರಿಂಶದುಕ್ತಕ್ರೀಡಾಭಿಃ ಕ್ರೀಡಿತ್ವಾ ವಶಮಾನಯತ್ ॥ ೧೨೯ ॥**

ಎಂದು ಹೇಳಿದಳು. ಆಕೆಯ ಮಾತನ್ನು ಕೇಳಿ ಸಂತೋಷಪಟ್ಟು ವಿಜಯಾರ್ಧ ಪರ್ವತದಲ್ಲಿ ದಕ್ಷಿಣಭಾಗದಲ್ಲಿರುವ ಗಜಪುರವನ್ನು ಪ್ರವೇಶಿಸಿ ಅದರ ಸಮೀಪದಲ್ಲಿರುವುದೂ ಒಂದು ಕಂಬವನ್ನು ಕಿತ್ತು ಮದವೇರಿದುದೂ ಆದ ಒಂದಾನೊಂದು ದೊಡ್ಡ ಆನೆಯನ್ನು ಮೂವತ್ತೆರಡು ಪ್ರಕಾರವಾದ ಗಜಪರೀಕ್ಷೆಗಳಿಂದ ಆಟವಾಡಿ ವಶಪಡಿಸಿದನು.

[1] ಆಚ್ಛಾದಿತಂಯಥಾಭವತಿತಥಾ. [2] ಆಗತಾಸ್ಮಿ. [3] ಸಂತುಷ್ಯ. [4] ಗಜಪುರಂ. [5] ದ್ವಾತ್ರಿಂಶದುಕ್ತ ಗಜಪರೀಕ್ಷಾಭಿಃ.

**ತತಃ ಸಮುದಿತೇ ಚಂಡದೀಧಿತೌ ನಿರ್ಜಿತಾದ್ಗಜಾತ್ ।**
**ಕುಮಾರಾಗಮನಂ ಪೌರಾ ಬುಧ್ವಾ ಸಂತುಷ್ಟಚೇತಸಃ ॥ ೧೩೦ ॥**

**ಪ್ರತಿಕೇತನಮುದ್ಧದ್ಧಚಲತ್ಕೇತುಪತಾಕಿಕಾಃ ।**
**[1]ಪ್ರತ್ಯುದ್ಗಮಮಕುರ್ವಂಸ್ತೇ ತತ್ಪುಣ್ಯೋದಯಚೋದಿತಾಃ ॥ ೧೩೧ ॥**

ಅನಂತರದಲ್ಲಿ ಸೂರ್ಯನು ಉದಯಿಸುತ್ತಿರಲು ಜಯಿಸಲ್ಪಟ್ಟ ಆನೆಯಿಂದ (ಆನೆಯನ್ನು ಜಯಿಸಿದುದರಿಂದ) ಶ್ರೀಪಾಲಕುಮಾರನ ಆಗಮನವನ್ನು ಪುರನಿವಾಸಿಗಳು ತಿಳಿದು ಸಂತುಷ್ಟವಾದ ಮನಸ್ಸುಳ್ಳವರೂ ಪ್ರತಿಯೊಂದು ಮನೆಯಲ್ಲಿ ಮೇಲೆ ಕಟ್ಟಲ್ಪಟ್ಟುದೂ ಚಲಿಸುತ್ತಿರುವುದೂ ಆದ ಧ್ವಜಪತಾಕೆಗಳುಳ್ಳವರೂ ಆಗಿ ಅವರು(ಪುರನಿವಾಸಿಗಳು) ಶ್ರೀಪಾಲಕುಮಾರನ ಪುಣ್ಯೋದಯದಿಂದ ಪ್ರೇರಿತರಾಗಿ ಅಭಿಮುಖಾಗಮನವನ್ನು ಮಾಡಿದರು. ಇದಿರ್ಗೊಂಡರೆಂದರ್ಥವು.

**ತತೋ ನಭಸ್ಯಸೌ ಗಚ್ಛನ್ ಕಂಚಿದ್ಧಯಪುರೇ ಹಯಮ್ ।**
**ಸ್ಥಿತಂ ಪ್ರದಕ್ಷಿಣೀಕೃತ್ಯ ಸ್ವಂ ಪಶ್ಯನ್ನಾತ್ತವಿಸ್ಮಯಃ ॥ ೧೩೨ ॥**

ಅನಂತರದಲ್ಲಿ ಆಕಾಶದಲ್ಲಿ ಈ ಶ್ರೀಪಾಲನು ಹೋಗುವವನಾಗಿ ಹಯಪುರವೆಂಬ ಪಟ್ಟಣದಲ್ಲಿ ತನ್ನನ್ನು ಪ್ರದಕ್ಷಿಣೆಮಾಡಿ ನಿಂತಿರುವ ಒಂದಾನೊಂದು ಕುದುರೆಯನ್ನು ನೋಡಿ ಆಶ್ಚರ್ಯವುಳ್ಳವನಾದನು.

**ತತ್ರಾಪಿ ವಿದಿತಾದೇಶೈರ್ನಾಗರೈಃ ಪ್ರಾಪ್ತಪೂಜನಃ ।**
**ಪುನಸ್ತತೋ ವಿನಿಷ್ಕ್ರಮ್ಯ ಸಮಾಗಚ್ಛನ್ನಿಜೇಚ್ಛಯಾ ॥ ೧೩೩ ॥**

**[2]ಚತುರ್ಜನಪದಾಭ್ಯಂತರಸ್ಥಸೀಮಮಹಾಚಲೇ ।**
**ಜನೇ ಮಹತಿ ಸಂಭೂಯ ಸ್ಥಿತೇ ಕೇನಾಪಿ ಹೇತುನಾ ॥ ೧೩೪ ॥**

**ಕಸ್ಯಚಿ[3]ತ್ಕೋಶತಃ ಖಡ್ಗಂ ಕಸ್ಮಿಂಶ್ಚಿದಪಿ ಯತ್ನತಃ ।**
**ಸತ್ಯಶಕ್ತೇ ಸಮುತ್ಖಾತುಂ [4]ತಂ [5]ಸಮುದ್ಗೀರ್ಯ ಹೇಲಯಾ ॥ ೧೩೫ ॥**

**ಕುಮಾರಃ [6]ಪ್ರಾಹರ[7]ದ್ವಂಶಸ್ತಂಬಂ [8]ಸಂಭೃತವಂಶಕಮ್ ।**
**ತದಾಲೋಕ್ಯ ಜನಃ ಸರ್ವಃ ಪ್ರಮೋದಾ[9]ದಾರವಂ ವ್ಯಧಾತ್ ॥ ೧೩೬ ॥**

ಅಲ್ಲಿಯೂ ಈ ಕುಮಾರನ ವಿಷಯವನ್ನು ತಿಳಿದವರಾದ ಪುರನಿವಾಸಿಗಳಿಂದ ಪೂಜಾ–ಸತ್ಕಾರವನ್ನು ಹೊಂದಿದವನಾಗಿ ಪುನಃ ಅಲ್ಲಿಂದ ಹೊರಟು ಸ್ವೇಚ್ಛೆಯಿಂದ ಬರುವವನಾಗಿ ನಾಲ್ಕು ದೇಶಗಳ ಮಧ್ಯದಲ್ಲಿರುವ ಸೀಮವೆಂಬ ಮಹಾಪರ್ವತದಲ್ಲಿ ಬಹಳ ಜನರು ಯಾವುದೋ ಕಾರಣದಿಂದ ಸೇರಿರುತ್ತಿರಲು ಒಬ್ಬಾನೊಬ್ಬನ ಖಡ್ಗವನ್ನು ಒರೆಯಿಂದ ಯತ್ನದಿಂದ ಯಾವನೂ ಕೀಳಲು ಸಮರ್ಥನಾಗದಿರುತ್ತಿರಲು ಶ್ರೀಪಾಲಕುಮಾರನು ಆ ಖಡ್ಗವನ್ನು ಲೀಲೆಯಿಂದ ಕಿತ್ತು–ತೆಗೆದು ಸುತ್ತಿಕೊಂಡಿರುವ ಬಿದಿರುಗಳುಳ್ಳ ಒಂದು ಬಿದಿರಿನ ಹಿಂಡಲನ್ನು ಹೊಡೆದನು. ಅದನ್ನು ಎಲ್ಲಾ ಜನರು ನೋಡಿ ಸಂತೋಷದಿಂದ ಕಲಕಲಧ್ವನಿಯನ್ನು ಮಾಡಿದರು.

**[10]ತತ್ರ ಕಶ್ಚಿತ್ಸಮಾಗತ್ಯ ಮೂಕಃ ಸಮುಪವಿಷ್ಟವಾನ್ ।**
**ಪ್ರಪ್ರಣಮ್ಯ ಕುಮಾರಂ ತಂ ಜಯಶಬ್ದಪುರಸ್ಸರಮ್ ॥ ೧೩೭ ॥**

[1] ಸಮ್ಮುಖಾಗಮನಂ. [2] ಚತುರ್ದೇಶಮಧ್ಯಸ್ಥಿತಸೀಮಾಖ್ಯಮಹಾಗಿರೌ. [3] ಖಡ್ಗಪಿಧಾನತಃ. [4] ಖಡ್ಗಂ. [5] ಉತ್ಪಾತಂಕೃತ್ವಾ. [6] ಪ್ರಹರತಿಸ್ಮ. [7] ವೇಣುಗುಲ್ಮಂ. [8] ಪರಿವೇಷ್ಟಿತವೇಣುಕಂ. [9] ಕಲಕಲಂ. [10] ಸೀಮಾಖ್ಯಗಿರೌ.

ಆ ಸೀಮಗಿರಿಯಲ್ಲಿ ಒಬ್ಬಾನೊಬ್ಬ ಮೂಗನು ಬಂದು ಆ ಶ್ರೀಪಾಲಕುಮಾರನನ್ನು ಚೆನ್ನಾಗಿ ನಮಸ್ಕರಿಸಿ ಜಯಜಯವೆಂಬ ಶಬ್ದಪುರಸ್ಸರವಾಗಿ ಕುಳಿತುಕೊಂಡನು.

**[೧]ಕುಣಿಶ್ಚ ಕಶ್ಚಿದಂಗುಲ್ಯಾ ಪ್ರಸಾರಿತಕರಾಂಗುಲಿಃ ।**
**ಅಂಜಲಿಂ ಮುಕುಲೀಕೃತ್ಯ ಸಮೀಪೇ ಸಮವಸ್ಥಿತಃ ॥ ೧೩೮ ॥**

ಬೆರಳಿನಿಂದ ಮುರುಟಿದ ಕೈಯುಳ್ಳವನೋರ್ವನು ನೀಡಿದ ಬೆರಳುಗಳುಳ್ಳವನಾಗಿ ಕೈಮುಗಿದು ಸಮೀಪದಲ್ಲಿ ಬಂದು ನಿಂತನು.

**ಯೋ [೨]ವಜ್ರಮಣಿಪಾಕಾಯ ಸಮುದ್ಯುಕ್ತಸ್ತದಾ ಮುದಾ ।**
**ತೇಷಾಂ ಪಾಕೇ ವ್ಯಲೋಕಿಷ್ಟ ಕುಮಾರಂ ವಿನಯೇನ ಸಃ ॥ ೧೩೯ ॥**

ಯಾವನು ವಜ್ರರತ್ನಗಳ ಪಾಕಕ್ಕೋಸ್ಕರ ಉದ್ಯುಕ್ತನಾಗಿದ್ದನೋ ಅವನು ಆಗ (ಮೊದಲು ಪಾಕವಾಗದೆ ಶ್ರೀಪಾಲನು ಬಂದಾಗ) ಅವುಗಳ ಪಾಕವಾಗುತ್ತಿರಲು ಸಂತೋಷದಿಂದ ಶ್ರೀಪಾಲಕುಮಾರನನ್ನು ವಿನಯದಿಂದ ನೋಡಿದನು.

**ಪ್ರಾಗುಕ್ತಕರವಾಲೇಶಃ ಪುರೇಭೂದ್ವಿಜಯಾಹ್ವಯೇ ।**
**ಸೋಸ್ಯ ಸೇನಾಪತಿರ್ಭಾವೀ ಭವಿಷ್ಯಚ್ಚಕ್ರವರ್ತಿನಃ ॥ ೧೪೦ ॥**

ಮೊದಲು ಹೇಳಲ್ಪಟ್ಟ ಖಡ್ಗದ ಯಜಮಾನನು ಜಯವೆಂಬ ಪುರದಲ್ಲಿದ್ದನು. ಅವನು ಭವಿಷ್ಯಚ್ಚಕ್ರವರ್ತಿಯಾದ ಈ ಶ್ರೀಪಾಲನಿಗೆ ಸೇನಾಪತಿಯಾಗುವನು.

**ತತ್ಪುರೇ [೩]ವರಕೀರ್ತೇಃಪ್ಯಕೀರ್ತಿಮತ್ಯಾತ್ಮಜಾಪನೇ ।**
**ಖಡ್ಗೋತ್ಪಾಟನಮಾದೇಶಸ್ತಸ್ಯ ಶ್ರೀಪಾಲಚಕ್ರಿಣಃ ॥ ೧೪೧ ॥**

ಆ ಪಟ್ಟಣದಲ್ಲಿ ವರಕೀರ್ತಿರಾಜನ ಪ್ರಿಯಪತ್ನಿಯಾದ ಕೀರ್ತಿಮತಿಯ ಪುತ್ರಿಯ ವಿವಾಹದಲ್ಲಿ ಆ ಶ್ರೀಪಾಲಚಕ್ರವರ್ತಿಯ ಖಡ್ಗವನ್ನು ಕೀಳುವಿಕೆಯ ಆದೇಶ ವಚನ ವಿದ್ದಿತು. ಆ ವಿವಾಹಕಾಲದಲ್ಲಿ ಶ್ರೀಪಾಲನು ಖಡ್ಗವನ್ನು ಕೀಳುವನೆಂದು ಸಿದ್ಧಪುರುಷನ ವಚನವಾಗಿದ್ದಿತೆಂದು ಭಾವವು.

**ಮೂಕಃ ಶ್ರೇಯಃಪುರೇ ಜಾತಸ್ತಸ್ಯ ಭಾವೀ ಪುರೋಹಿತಃ ।**
**ಶಿವಸೇನಮಹೀಪಾಲಃ ಶ್ರೀಮಾಂಸ್ತನ್ನಗರೇಶ್ವರಃ ॥ ೧೪೨ ॥**

ಶ್ರೇಯಃಪುರದಲ್ಲಿ ಮೂಗನೋರ್ವನು ಹುಟ್ಟಿದನು. ಅವನು ಶ್ರೀಪಾಲಚಕ್ರವರ್ತಿಗೆ ಭವಿಷ್ಯತ್ಕಾಲದ ಪುರೋಹಿತನಾಗುವನು. ಸಂಪತ್ತಿಯುಳ್ಳವನಾದ ಆ ಶ್ರೇಯಃಪುರದ ದೊರೆಯು ಶಿವಸೇನರಾಜನು.

**ವೀತಶೋಕಾಹ್ವಯಾ ತಸ್ಯ ತನೂಜಾ ವನಜೇಕ್ಷಣಾ ।**
**ಮೂಕಭಾಷಣಮಾದೇಶಃ ಕುಮಾರಸ್ಯ [೪]ತದಾಪನೇ ॥ ೧೪೩ ॥**

ಆತನ ಪುತ್ರಿಯು ಕಮಲದಂತೆ ಕಣ್ಣುಳ್ಳವಳಾದ ವೀತಶೋಕೆಯೆಂಬವಳು. ಆಕೆಯ ವಿವಾಹದಲ್ಲಿ ಮೂಗನ ಭಾಷಣವು ಶ್ರೀಪಾಲಕುಮಾರನಿಗೆ ಆಜ್ಞೆಯಾಗಿರುವುದು. ಶ್ರೀಪಾಲನ ದರ್ಶನದಿಂದ ಮೂಗನು ಮಾತನಾಡುವ ವಿಧಿಯಿರುವುದೆಂದು ಭಾವವು.

**ಕುಣಿಃ ಶಿಲ್ಪಿಪುರೋತ್ಪನ್ನಃ ಸ್ಥಪತಿಸ್ತಸ್ಯ ಭಾವ್ಯಸೌ ।**
**ನಾಮ್ನಾ ನರಪತೇಸ್ತತ್ಪುರೇಶೋ ನರಪತೇಃ ಸುತಾ ॥ ೧೪೪ ॥**

**ರತ್ಯಾದಿವಿಮಲಾ ಸಾರ್ಧಂ ತಯೈತಸ್ಯ ಸಮಾಗಮಃ ।**
**ಅಂಗುಲಿಪ್ರಸರಾದೇಶಾ[೫]ತ್ಸ್ಮರವ್ಯಯದಯಾ ಚಿರಮ್ ॥ ೧೪೫ ॥**

೧ ವಿಗತಕರಃ. ೨ ಪೂರ್ವಂವಜ್ರರತ್ನಾನಾಂ ಪಚ್ಯಮಾನಾನಾಂ ಪಾಕೋನಜಾತಃ ಪಶ್ಚಾತ್ ಶ್ರೀಪಾಲದರ್ಶನೇನ ಜಾತಇತ್ಯರ್ಥಃ. ೩ ವರಕೀರ್ತಿನೃಪತೇಃ ಪ್ರಿಯಾಯಾಃ ಕೀರ್ತಿಮತ್ಯಾಃ ಸುತಾಯಾಃ ಆಪನೇ ಪರಿಣಯನೇ. ೪ ವೀತಶೋಕಾಯಾಃ ಪರಿಣಯನೇ. ೫ ಕಾಮವಿಶಿಷ್ಟಧರ್ಮಪ್ರದಯಾ ಅಥವಾ ಕಾಮವಿವಿಧಗಮನಪ್ರದಯಾ.

ಶಿಲ್ಪಿಪುರದಲ್ಲಿ ಹುಟ್ಟಿರುವವನೂ ಕೈಯಿಲ್ಲದವನೂ ಆದ ಈ ಪುರುಷನು ಶ್ರೀಪಾಲಕುಮಾರನಿಗೆ ಮುಂದೆ ಮರಗೆಲಸದವನಾಗುವನು. ಆ ನಗರಾಧಿಪತಿಯಾದ ನಗರಪತಿಯೆಂಬ ಹೆಸರಿನ ದೊರೆಯ ಮಗಳು ರತಿವಿಮಲೆಯೆಂಬವಳು. ಬೆರಳುಗಳ ವಿಸ್ತರಿಸುವಿಕೆಯ ಆಜ್ಞೆಯಿಂದ–ಸಿದ್ಧಪುರುಷಾದೇಶದಿಂದ ಕಾಮಪುರುಷಾರ್ಥವಿಶಿಷ್ಟವಾದ ಧರ್ಮಪುರುಷಾರ್ಥವನ್ನು ಕೊಡುವವಳಾದ ಆ ರತಿವಿಮಲೆಯೊಡನೆ ಈ ಶ್ರೀಪಾಲಕುಮಾರನಿಗೆ ಬಹುಕಾಲದವರೆಗೆ ಸಮಾಗಮವಾಗುವುದು.

**ಸ [೧]ವಜ್ರಮಣಿಪಾ[೨]ಕ್ಯಸ್ಯ [೩]ಪ್ರಧಾನಪುರುಷೋ ಭವೇತ್ ।**
**[೪]ತಸ್ಯ ಧಾನ್ಯಪುರೇ [೫]ಜಾತಿರ್ವಿಶಾಲಸ್ತತ್ಪುರಾಧಿಪಃ ॥ ೧೪೬ ॥**

ವಜ್ರರತ್ನದ ಪಾಕವನ್ನು ಮಾಡಿದ ಆ ಪುರುಷನು ಈ ಶ್ರೀಪಾಲಚಕ್ರವರ್ತಿಗೆ ಮುಖ್ಯಮಂತ್ರಿಯಾಗುವನು. ಧಾನ್ಯಪುರದಲ್ಲಿ ಆ ವಜ್ರಮಣಿಪಾಕಿಯ ಉತ್ಪತ್ತಿ. ಆ ಧಾನ್ಯಪುರದ ದೊರೆಯು ವಿಶಾಲನೆಂಬವನು.

**ಸುತಾ ವಿಮಲಸೇನಾಸ್ಯ ಶ್ರೀಪಾಲಸ್ಯ [೬]ತದಾಪ್ತಯೇ ।**
**ಆದೇಶಸ್ತತ್ರ ತದ್ವಜ್ರಮಣಿಪಾಕೋ ಮಹೌಜಸಃ ॥ ೧೪೭ ॥**

ಈ ದೊರೆಯ ಪುತ್ರಿಯು ವಿಮಲಸೇನೆಯೆಂಬವಳು. ಆಕೆಯ ಪ್ರಾಪ್ತಿಗೋಸ್ಕರ ಮಹಾತೇಜಸ್ಸುಳ್ಳವನಾದ ಶ್ರೀಪಾಲನಿಗೆ ಆ ನಗರದಲ್ಲಿ ವಜ್ರಮಣಿಯ ಪಾಕವು ಆಜ್ಞೆಯಾಗಿರುತ್ತದೆ.

**ಇ[೭]ತ್ಯಾದೇಶವರಂ ಜ್ಞಾತ್ವಾ ಸರ್ವೇ ಸ್ವಂ ಸ್ವಂ ಪುರಂ ಯಯುಃ ।**
**ತದಾ ಕುಮಾರಮೂಢ್ವಾಯಾನ್ನಭೋಭಾಗೇ ಸುಖಾವತೀ ॥ ೧೪೮ ॥**

ಈ ಪ್ರಕಾರವಾಗಿ ಎಲ್ಲರೂ ಆದೇಶಪುರುಷನಾದ ವರನನ್ನು(ಅಳಿಯನನ್ನು) ತಿಳಿದು ತಮ್ಮ ತಮ್ಮ ಪಟ್ಟಣಕ್ಕೆ ಹೋದರು. ಆಗ ಸುಖಾವತಿಯು ಶ್ರೀಪಾಲಕುಮಾರನನ್ನು ಹೊತ್ತುಕೊಂಡು ಆಕಾಶಮಾರ್ಗದಲ್ಲಿ ಹೋದಳು.

**ಧೂಮವೇಗೋ ವಿಲೋಕ್ಯೈನಂ ವಿದ್ವಿಷೋ ಭೀಷಣಾರವಃ ।**
**ಅಭಿತರ್ಜ್ಯ ಸ್ಥಿತೋ ರುದ್ಧ್ವಾ ಖೇ ಖೇಟಕಯುತಾಸಿಭೃತ್ ॥ ೧೪೯ ॥**

ಧೂಮವೇಗನು ಈ ಶ್ರೀಪಾಲನನ್ನು ನೋಡಿ ಶತ್ರುವಿಗೆ ಭಯಂಕರವಾದ ಧ್ವನಿಯುಳ್ಳವನಾಗಿ ಹೆದರಿಸಿ ಆಕಾಶದಲ್ಲಿ ಗುರಾಣಿಯೊಡಗೂಡಿದ ಖಡ್ಗವನ್ನು ಧರಿಸಿದವನಾಗಿ ಮಾರ್ಗವನ್ನು ತಡೆದು ನಿಂತನು.

**ತದಾ [೮]ಪೂರ್ವೋದಿತಾರ್ಚಾಯಾಂ ದೇವತಾ ಯಾ[೯]ಸ್ಯ [೧೦]ಪಾಲಿಕಾ ।**
**ಸಾ ವಿದ್ಯಾಧರರೂಪೇಣ ಸಮುಪೇತ್ಯ ಸುಖಾವತೀಮ್ ॥ ೧೫೦ ॥**

**ಮುಕ್ತ್ವಾ ಕುಮಾರಮಭ್ಯೇತ್ಯ ವಿಭೀರ್ವಿದ್ಯಾಧರಾಧಮುವಮ್ ।**
**ನಿಯುಧ್ಯ ವಿಜಯಸ್ವೇತಿ ನಿಜಗಾದ ನಿರಾಕುಲಮ್ ॥ ೧೫೧ ॥**

ಆಗ ಹಿಂದೆ ಹೇಳಲ್ಪಟ್ಟ ಪ್ರಮದವನದ ಆಲದ ಮರದಡಿಯಲ್ಲಿರುವ ಬಿಂಬದಲ್ಲಿ ಈ ಶ್ರೀಪಾಲನ ರಕ್ಷಕಳಾದ ಯಾವ ದೇವತೆಯಿದ್ದಳೋ ಅವಳು ವಿದ್ಯಾಧರರೂಪದಿಂದ ಸಮೀಪಕ್ಕೆ ಬಂದು "ಕುಮಾರನನ್ನು ಬಿಟ್ಟು ಅಧಮನಾದ ವಿದ್ಯಾಧರನ ಮುಂದೆ ಹೋಗಿ ಭಯವಿಲ್ಲದವಳಾಗಿ ಯುದ್ಧಮಾಡಿ ಜಯವನ್ನು ಹೊಂದು" ಎಂಬುದಾಗಿ ವ್ಯಾಕುಲವಿಲ್ಲದಿರುವುದು ಹೇಗೋ ಹಾಗೆ ಸುಖಾವತಿಗೆ ಹೇಳಿದಳು.

**ಸಾಪಿ ಮುಕ್ತ್ವಾ ಕುಮಾರಂ ತಂ ಧೂಮವೇಗಂ ರಣಾಂಗಣೇ ।**
**ಚಿರಂ ಯುಧ್ವಾ ಸ್ವವಿದ್ಯಾಭಿರ್ನ್ಯರೌತ್ಸೀಚ್ಛೌರ್ಯಶಾಲಿನೀ ॥ ೧೫೨ ॥**

೧ ವಜ್ರರತ್ನಪಾಕವಾನ್. ೨ ಶ್ರೀಪಾಲಸ್ಯ. ೩ ಮಂತ್ರಿಮುಖ್ಯಃ. ೪ ವಜ್ರಮಣಿಪಾಕಿನಃ. ೫ ಉತ್ಪತ್ತಿಃ. ೬ ವಿಮಲಸೇನಾಯಾಃ ಪ್ರಾಪ್ತ್ಯೈ. ೭ ಆದೇಶೇನಜಾಮಾತರಂ. ೮ ಪೂರ್ವೋಕ್ತಪ್ರಮದ ವನಸ್ಥವಟಸ್ಥಿತಪ್ರತಿಮಾಯಾಂ. ೯ ಶ್ರೀಪಾಲಸ್ಯ. ೧೦ ರಕ್ಷಿಕಾ.

ಸುಖಾವತಿಯೂ ಆ ಶ್ರೀಪಾಲಕುಮಾರನನ್ನು ಬಿಟ್ಟು ಶೌರ್ಯಶಾಲಿನಿಯಾಗಿ ರಣಾಂಗಣದಲ್ಲಿ ಬಹುಕಾಲದವರೆಗೆ ಯುದ್ಧವನ್ನು ಮಾಡಿ ತನ್ನ ವಿದ್ಯೆಗಳಿಂದ ಧೂಮವೇಗನನ್ನು ಮುತ್ತಿದಳು.

**ಕುಮಾರೋಪಿ [1]ಸಮೀಪಸ್ಥಶಿಲಾಯಾಂ ಧರಣೀಧರೇ ।**
**ಶನೈಃ [2]ಸಮಾಪತ[3]ತ್ತಸ್ಯ ದೇವಶ್ರೀ[4]ರ್ಜನನೀ ಪುರಾ ॥ ೧೫೩ ॥**

**ಯಕ್ಷೀಭೂತಾ ತದಾಗತ್ಯ ಸಂಸ್ಪೃಶಂತೀ ಕರೇಣ ತಮ್ ।**
**ಅಪಾಸ್ಯಾಸ್ಯ ಶ್ರಮಂ ಮಂಕ್ಷು ಕುಮಾರಂ [5]ಪ್ರವಿಶ ಹ್ರದಮ್ ॥ ೧೫೪ ॥**

**ಜಗಾದೈನಮಿತಿ ಶ್ರುತ್ವಾ ಸೋಪಿ ವಿಶ್ವಸ್ಯ ತದ್ವಚಃ ।**
**ಪ್ರವಿಶ್ಯ [6]ತಂ ಶಿಲಾಸ್ತಂಭಸ್ಯೋಪರಿ ಸ್ಥಿತವಾನ್ನಿಶಿ ॥ ೧೫೫ ॥**

**ಕುರ್ವನ್ಪಂಚನಮಸ್ಕಾರಪದಾನಾಂ [7]ಪರಿವರ್ತನಮ್ ।**
**ಪ್ರಭಾತೇ [8]ತದುದಗ್ಭಾಗೇ ಜಿನೇಂದ್ರಪ್ರತಿಬಿಂಬಕಮ್ ॥ ೧೫೬ ॥**

**ವಿಲೋಕ್ಯ ಕೃತಪುಷ್ಪಾದಿಸಂಪೂಜನನಮಸ್ಕ್ರಿಯಃ ।**
**ಸಹಸ್ರಪತ್ರಮಂಭೋಜಂ ಚಕ್ರರತ್ನಂ ಸಕೂರ್ಮಕಮ್ ॥ ೧೫೭ ॥**

**ಆತಪತ್ರಂ ಸಹಸ್ರೋರುಫಣಂ ಚ ಫಣಿನಾಂ ಪತಿಮ್ ।**
**ದಂಡರತ್ನಂ ಸಮಂಡೂಕಂ ನಕ್ರಂ ಚೂಡಾಮಹಾಮಣಿಮ್ ॥ ೧೫೮ ॥**

ಶ್ರೀಪಾಲಕುಮಾರನೂ ಪರ್ವತದಲ್ಲಿ ಪುಂಡರೀಕಿಣಿಯ ಸಮೀಪದಲ್ಲಿರುವ ಕಲ್ಲಿನಲ್ಲಿ ಮೆಲ್ಲನೆ ಬಂದು ಸೇರಿದನು. ಶ್ರೀಪಾಲನ ದೊಡ್ಡತಾಯಿಯಾದ ದೇವಶ್ರೀಯು ಯಕ್ಷಿಯಾಗಿ ಹುಟ್ಟಿದ್ದು ಆಗ ಬಂದು ಶ್ರೀಪಾಲನನ್ನು ಕೈಯಿಂದ ಮುಟ್ಟುವವಳಾಗಿ ಇವನ ಶ್ರಮವನ್ನು ಶೀಘ್ರವಾಗಿ ಹೋಗಲಾಡಿಸಿ ''ಕುಮಾರನೆ ! ಮಡುವನ್ನು ಪ್ರವೇಶಿಸು'' ಎಂದು ಇವನಿಗೆ ಹೇಳಿದಳು. ಶ್ರೀಪಾಲನೂ ಕೇಳಿ ಆಕೆಯ ಮಾತನ್ನು ನಂಬಿ ಆ ಮಡುವನ್ನು ಪ್ರವೇಶಿಸಿ ರಾತ್ರಿಯಲ್ಲಿ ಕಲ್ಲಿನ ಕಂಬದ ಮೇಲೆ ಪಂಚನಮಸ್ಕಾರಪದಗಳ ಪುನಃ ಪುನಃ ಚಿಂತನೆಯನ್ನು ಮಾಡುವವನಾಗಿ ಕುಳಿತಿದ್ದನು. ಪ್ರಾತಃಕಾಲದಲ್ಲಿ ಆ ಮಡುವಿನ ಉತ್ತರದಿಗ್ಭಾಗದಲ್ಲಿ ಜಿನೇಶ್ವರನ ಪ್ರತಿಬಿಂಬವನ್ನು ನೋಡಿ ಪುಷ್ಪವೇ ಮೊದಲಾದುವುಗಳಿಂದ ಪೂಜೆಯನ್ನೂ ನಮಸ್ಕಾರವನ್ನೂ ಮಾಡಿದವನೂ ಪುಣ್ಯಾತ್ಮನೂ ಆದ ಆ ಶ್ರೀಪಾಲನು ಆ ಮಡುವಿನಲ್ಲಿ ಯಕ್ಷಿಯ ಉಪದೇಶದಿಂದ ಸಾಸಿರ ಎಸಳುಗಳುಳ್ಳ ಕಮಲವನ್ನೂ ಆಮೆಯಿಂದ ಕೂಡಿದ ಚಕ್ರರತ್ನವನ್ನೂ ಛತ್ರಿಯನ್ನೂ ದೊಡ್ಡದಾದ ಸಾಸಿರ ಹೆಡೆಗಳುಳ್ಳ ನಾಗೇಂದ್ರ–ಆದಿಶೇಷನನ್ನೂ ಕಪ್ಪೆಗಳಿಂದ ಯುಕ್ತವಾದ ದಂಡರತ್ನವನ್ನೂ ಮೊಸಳೆಯನ್ನೂ ಕಿರೀಟದ ದೊಡ್ಡದಾದ ರತ್ನವನ್ನೂ ಹೊಳೆಯುತ್ತಿರುವ ಕೆಂಪಾದ ಚೇಳುಗಳುಳ್ಳ ಚರ್ಮರತ್ನವನ್ನೂ ಕಾಕಿಣೀರತ್ನವನ್ನೂ ನೋಡಿದನು.

**ಚರ್ಮರತ್ನಂ ಸ್ಫುರದ್ರಕ್ತವೃಶ್ಚಿಕಂ ಕಾಕಿಣೀಮಣಿಮ್ ।**
**ಈಕ್ಷಾಂಚಕ್ರೇ ಸ ಪುಣ್ಯಾತ್ಮಾ ತತ್ರ ಯಕ್ಷ್ಯುಪದೇಶತಃ ॥ ೧೫೯ ॥**

**ತದಾ ಮುದಿತಚಿತ್ತಃ ಸನ್ ಛತ್ರಮುದ್ಯಮ್ಯ ದಂಡಭೃತ್ ।**
**ಪ್ರದ್ಯೋತಮಾನರತ್ನೋಪಾನತ್ಕೋ ಯಕ್ಷೀಸಮರ್ಪಿತೈಃ ॥ ೧೬೦ ॥**

**ಸರ್ವರತ್ನಮಯೈರ್ದಿವ್ಯೈರ್ಭೂಷಾಭೇದೈರ್ವಿಭೂಷಿತಃ ।**
**ನಿರ್ಜಗಾಮ ಗುಹಾತೋಸೌ ತದೈವೈತ್ಯ ಸುಖಾವತೀ ॥ ೧೬೧ ॥**

**ಧೂಮವೇಗಂ ವಿನಿರ್ಜಿತ್ಯ [9]ಪ್ರತಿಪದ್ವಾ [10]ಹಿಮದ್ಯುತಿಮ್ ।**
**ವೃದ್ಧ್ಯೈ ಕುಮಾರಮಾಪನ್ನಾ [11]ಸಕಲಾಸಿಲತಾನ್ವಿತಾ ॥ ೧೬೨ ॥**

೧ ಪುಂಡರೀಕಿಣೀಸಮೀಪಸ್ಥ. ೨ ಸಂಪ್ರಾಪ್ತಃ. ೩ ಶ್ರೀಪಾಲಸ್ಯ. ೪ ಜನನ್ಯಾಅಗ್ರಜಾ. ೫ ಪ್ರವೇಶಂಕುರು. ೬ ಹ್ರದಂ. ೭ ಮುಹುರ್ಮುಹುರನುಚಿಂತನಂ. ೮ ಹ್ರದಸ್ಯೋತ್ತರದಿಗ್ಭಾಗೇ. ೯ ಪ್ರತಿಪದ್ದಿನಶ್ರೀರಿವ. ೧೦ ಚಂದ್ರಂ, ಮಹೀಪತಿಮಿತ್ಯಪಿಪಾಠಃ. ೧೧ ಚಂದ್ರಕಲಾನ್ವಿತಾ.

ಆಗ ಸಂತುಷ್ಟವಾದ ಮನಸ್ಸುಳ್ಳವನೂ ಛತ್ರವನ್ನು ಎತ್ತಿ ದಂಡವನ್ನು ಧರಿಸಿದವನೂ ಪ್ರಕಾಶಮಾನವಾದ ರತ್ನದ ಪಾದರಕ್ಷೆಯುಳ್ಳವನೂ ಯಕ್ಷಿಯಿಂದ ಕೊಡಲ್ಪಟ್ಟುವೂ ಸಮಸ್ತ ರತ್ನಮಯಗಳೂ ದೇವಲೋಕಸಂಬಂಧಿಗಳೂ ಆದ ಆಭರಣಭೇದಗಳಿಂದ ಅಲಂಕೃತನೂ ಆಗಿ ಗುಹೆಯಿಂದ ಹೊರಹೊರಟನು. ಆಗಲೇ ಈ ಸುಖಾವತಿಯು ಬಂದು ಧೂಮವೇಗನನ್ನು ಜಯಿಸಿ, ಚಂದ್ರಕಲೆಗಳೊಡನೆ ಕೂಡಿದ ಪ್ರತಿಪದ್ದಿನದ–ಪಾಡ್ಯದ ಶೋಭೆಯು ಚಂದ್ರನನ್ನು ವೃದ್ಧಿಗೋಸ್ಕರ ಹೊಂದುವಂತೆ, ಖಡ್ಗದಿಂದ ಕೂಡಿದವಳಾಗಿ ಶ್ರೀಪಾಲಕುಮಾರನನ್ನು ಸೇರಿದಳು.

**ಏತಯಾ ಸಹ ಗತ್ವಾತಃ ಸಂಪ್ರಾಪ್ಯ ಸುರಭೂಧರಮ್ ।**
**ಗುಣಪಾಲಜಿನಾಧೀಶಸಭಾಮಂಡಲಮಾಪ್ತವಾನ್ ॥ ೧೬೩ ॥**

ಬಳಿಕ ಶ್ರೀಪಾಲಕುಮಾರನು ಈ ಸುಖಾವತಿಯೊಡನೆ ಹೋಗಿ ಸುರಗಿರಿಯನ್ನು ತಲುಪಿ ಗುಣಪಾಲಜಿನೇಶ್ವರರ ಸಭಾಮಂಡಲವನ್ನು ಸೇರಿದನು.

**ತತ್ರ ತಂ ಸುಚಿರಂ ಸ್ತುತ್ವಾ ಮನೋವಾಕ್ಕಾಯಶುದ್ಧಿಭಾಕ್ ।**
**ಮಾತರಂ ಭ್ರಾತರಂ ಚೋಚಿತೋಪಚಾರೋ ವಿಲೋಕ್ಯ ತೌ ॥ ೧೬೪ ॥**

**ತದಾಶೀರ್ವಾದಸಂತುಷ್ಟಃ ಸಂವಿಷ್ಟೋ ಮಾತೃಸನ್ನಿಧೌ ।**
**ಸುಖಾವತೀಪ್ರಭಾವೇನ ಯುಷ್ಮದಂತಿಕಮಾಪ್ತವಾನ್ ॥ ೧೬೫ ॥**

**ಕ್ಷೇಮೇಣೇತಿ ತಯೋರಗ್ರೇ ಪ್ರಾಶಂಸತ್ತಾಂ [1]ನೃಪಾನುಜಃ ।**
**ಸತಾಂ ಸ ಸಹಜೋ ಭಾವೋ ಯತ್ಸ್ತುವಂತ್ಯುಪಕಾರಿಣಃ ॥ ೧೬೬ ॥**

ಅಲ್ಲಿ ಆ ಗುಣಪಾಲಜಿನೇಶ್ವರನನ್ನು ಬಹುಕಾಲದವರೆಗೆ ಮನೋವಾಕ್ಕಾಯಶುದ್ಧಿಯನ್ನು ಹೊಂದಿದವನಾಗಿ ಸ್ತುತಿಸಿ ಆ ತಾಯಿಯನ್ನೂ ಸಹೋದರ– ವಸುಪಾಲನನ್ನೂ ಉಚಿತವಾದ ಉಪಚಾರಮಾಡಿ ಆಗ ಅವರುಗಳ ಆಶೀರ್ವಾದದಿಂದ ಸಂತುಷ್ಟನಾಗಿ ತಾಯಿಯ ಸನ್ನಿಧಿಯಲ್ಲಿ ಕುಳಿತು ''ಸುಖಾವತಿಯ ಸಾಮರ್ಥ್ಯದಿಂದ ನಿಮ್ಮಗಳ ಸಮೀಪವನ್ನು ಕ್ಷೇಮದಿಂದ ಸೇರಿದವನಾಗಿರುತ್ತೇನೆ'' ಎಂದು ತಾಯಿಯ ಮತ್ತು ಸಹೋದರನ ಮುಂದೆ ಶ್ರೀಪಾಲನು ಸುಖಾವತಿಯನ್ನು ಹೊಗಳಿದನು. ಉಪಕಾರಮಾಡಿದವರನ್ನು ಹೊಗಳುವುದು ಸತ್ಪುರುಷರ ಸಹಜವಾದ ಭಾವವಾಗಿರುತ್ತದೆ.

**ವಸುಪಾಲಮಹೀಪಾಲಪ್ರಶ್ನಾದ್ಭಗವತೋದಿತೈಃ ।**
**ಸ್ಥಿತ್ವಾ ವಿದ್ಯಾಧರಶ್ರೇಣ್ಯಾಂ ಬಹೂನ್ ಲಂಭಾನ್ ಸಮಾಪಿವಾನ್ ॥**

**ತತಃ ಸಪ್ತದಿನೈರೇವ ಸುಖೇನ ಪ್ರಾವಿಶತ್ಪುರಮ್ ।**
**ಸಂಚಿತೋರ್ಜಿತಪುಣ್ಯಾನಾಂ ಭವೇದಾಪಚ್ಚ ಸಂಪದೇ ॥ ೧೬೮ ॥**

ವಸುಪಾಲರಾಜನ ಪ್ರಶ್ನೆಯಿಂದ ಭಗವಂತನಿಂದ(ಗುಣಪಾಲಜಿನೇಶ್ವರನಿಂದ) ಹೇಳಲ್ಪಟ್ಟ ಏಳು ದಿವಸಗಳಿಂದಲೇ(ಏಳು ದಿನಗಳವರೆಗೇ) ಶ್ರೀಪಾಲನು ವಿದ್ಯಾಧರರ ಶ್ರೇಣಿಯಲ್ಲಿದ್ದು ಕನ್ಯಾ ಮೊದಲಾದ ಅನೇಕ ಪ್ರಾಪ್ತಿಗಳನ್ನು ಹೊಂದಿದವನಾಗಿ ಬಳಿಕ ಸುಖದಿಂದ ಪಟ್ಟಣವನ್ನು ಪ್ರವೇಶಮಾಡಿದನು. ಸಂಗ್ರಹಿಸಲ್ಪಟ್ಟ ಉತ್ಕೃಷ್ಟವಾದ ಪುಣ್ಯವುಳ್ಳವರಿಗೆ ಆಪತ್ತಿಯೂ ಸಂಪತ್ತಿಗೆ ಕಾರಣವಾಗುವುದು.

**ವಸುಪಾಲಕುಮಾರಸ್ಯ ವಾರಿಷೇಣಾದಿಭಿಃ ಸಮಮ್ ।**
**ಕನ್ಯಾಭಿರಭವತ್ಕಲ್ಯಾಣವಿಧಿರ್ವಿವಿಧರ್ದ್ಧಿಕಃ ॥ ೧೬೯ ॥**

ವಸುಪಾಲಕುಮಾರನಿಗೆ ವಾರಿಷೇಣೆಯೇ ಮೊದಲಾದ ಕನ್ಯೆಯರೊಡನೆ ನಾನಾಪ್ರಕಾರವಾದ ವೈಭವವುಳ್ಳ ವಿವಾಹವಿಧಿಯಾಯಿತು–ವಿವಾಹವು ನಡೆಯಿತು.

೧ ನೃಪಾತ್ಮಜ ಇತ್ಯಪಿಪಾಠಃ.

ಸ ಶ್ರೀಪಾಲಕುಮಾರಶ್ಚ ಜಯವತ್ಯಾದಿಭಿಃ ಕೃತೀ ।
ತದಾ ಚತುರಶೀತೀಷ್ಟಕನ್ಯಕಾಭಿರಲಂಕೃತಃ ॥ ೧೭೦ ॥

ಪುಣ್ಯಶಾಲಿಯಾದ ಆ ಶ್ರೀಪಾಲಕುಮಾರನೂ ಆಗ ಜಯವತಿಯೇ ಮೊದಲಾದ ಎಂಬತ್ತುನಾಲ್ಕು ಮಂದಿ ಇಷ್ಟಕನ್ಯೆಯರಿಂದ ಅಲಂಕೃತನಾದನು. ವಿವಾಹಿತನಾದನೆಂದು ಭಾವವು.

ಸೂರ್ಯಾಚಂದ್ರಮಸೌ ವಾ ತೌ ಸ್ವಪ್ರಭಾವ್ಯಾಪ್ತದಿಕ್ತಟೌ ।
ಪಾಲಯಂತೌ ಧರಾಚಕ್ರಂ ಚಿರಂ ನಿರ್ವಿಶತಃ ಸ್ಮ ಶಮ್ ॥ ೧೭೧ ॥

ತಮ್ಮ ಪ್ರಭಾ–ಪ್ರತಾಪದಿಂದ ದಿಕ್ಕುಗಳನ್ನು ವ್ಯಾಪಿಸಿದವರಾದ ಆ ವಸುಪಾಲ ಶ್ರೀಪಾಲಕುಮಾರರು, ಸೂರ್ಯ ಚಂದ್ರರಂತೆ, ಭೂಮಂಡಲವನ್ನು ಪರಿಪಾಲಿಸುವವರಾಗಿ ಬಹುಕಾಲದವರೆಗೆ ಸುಖವನ್ನನುಭವಿಸಿದರು.

ಜಯವತ್ಯಾಂ ಸಮುತ್ಪನ್ನೋ ಗುಣಪಾಲೋ ಗುಣೋಜ್ಜ್ವಲಃ ।
ಶ್ರೀಪಾಲಸ್ಯಾಯುಧಾಗಾರೇ ಚಕ್ರಂ ಚ ಸಮಜಾಯತ ॥ ೧೭೨ ॥

ಶ್ರೀಪಾಲನ ಆಯುಧಶಾಲೆಯಲ್ಲಿ ಚಕ್ರವು ಉದ್ಭವಿಸಿತು. ಜಯವತಿಯಲ್ಲಿ ಗುಣಗಳಿಂದ ಪ್ರಕಾಶಮಾನನಾದ ಗುಣಪಾಲನೆಂಬವನು ಪುತ್ರನಾಗಿ ಹುಟ್ಟಿದನು.

ಸ ಸರ್ವಾಂಶ್ಚಕ್ರವರ್ತ್ಯುಕ್ತಭೋಗಾನನುಭವನ್ ಭೃಶಮ್ ।
ಶಕ್ರಲೀಲಾಂ [೧]ವ್ಯಡಂಬಿಷ್ಟ [೨]ಲಕ್ಷ್ಮ್ಯಾಲಕ್ಷಿತವಿಗ್ರಹಃ ॥ ೧೭೩ ॥

ಲಕ್ಷ್ಮಿಯಿಂದ ನೋಡಲ್ಪಟ್ಟ ಶರೀರವುಳ್ಳವನಾದ(ಸುಂದರನಾದ) ಆ ಶ್ರೀಪಾಲನು ಚಕ್ರವರ್ತಿಗೆ ಹೇಳಲ್ಪಟ್ಟಿರುವ ಸಮಸ್ತ ಭೋಗಗಳನ್ನು ಅಧಿಕವಾಗಿ ಅನುಭವಿಸುವವನಾಗಿ ದೇವೇಂದ್ರನ ಲೀಲೆಯನ್ನು ತಿರಸ್ಕರಿಸಿದನು.

ಆಭೂಜ್ಜಯವತೀಭ್ರಾತುಸ್ತನೂಜಾ ಜಯವರ್ಮಣಃ ।
ಜಯಸೇನಾಹ್ವಯಾ [೩]ಕಾಂತೇಃ ಸಾ ಸೇನೇವ ವಿಜಿತ್ವರೀ ॥ ೧೭೪ ॥

ಜಯವತಿಯ ಸಹೋದರನಾದ ಜಯವರ್ಮನಿಗೆ ಜಯಸೇನೆಯೆಂಬ ಮಗಳಿದ್ದಳು. ಆಕೆಯು ಕಾಂತಿಯ ಜಯಶೀಲವಾದ ಸೇನೆಯೋ ಎಂಬಂತಿದ್ದಳು.

ಮನೋವೇಗೋಶನಿವರಃ ಶಿವಾಖ್ಯೋಶನಿವೇಗವಾಕ್ ।
ಹರಿಕೇತುಃ ಪರೇ ಚೋಚ್ಚೈಃ ಕ್ಷ್ಮಾಭುಜಃ ಖಗನಾಯಕಾಃ ॥ ೧೭೫ ॥

ಮನೋವೇಗ, ಅಶನಿವರ, ಶಿವನೆಂಬವನು, ಅಶನಿವೇಗ, ಹರಿಕೇತು ಮೊದಲಾದ ಬೇರೆಯೂ ದೊಡ್ಡ ದೊರೆಗಳಾದ ವಿದ್ಯಾಧರರಾಜರುಗಳಿದ್ದರು.

ಜಯಸೇನಾಖ್ಯಮುಖ್ಯಾಭಿ[೪]ಸ್ತೇಷಾಂ [೫]ತುಗ್ಭಿಃ ಸಹಾಭವತ್ ।
ವಿವಾಹೋ ಗುಣಪಾಲಸ್ಯ ಸ ತಾಭಿಃ ಪ್ರಾಪ್ತಸಮ್ಮದಃ ॥ ೧೭೬ ॥

ಕದಾಚಿತ್ಕಾಲಲಬ್ಧ್ಯಾದಿಚೋದಿತೋಭ್ಯರ್ಣನಿರ್ವೃತಿಃ ।
ವಿಲೋಕಯನ್ನಭೋಭಾಗಮಕಸ್ಮಾದಂಧಕಾರಿತಮ್ ॥ ೧೭೭ ॥

ಚಂದ್ರಗ್ರಹಣಮಾಲೋಕ್ಯ ಧಿಗೇತಸ್ಯಾಪಿ ಚೇದಿಯಮ್ ।
ಅವಸ್ಥಾ ಸಂಸೃತೌ ಪಾಪಗ್ರಸ್ತಸ್ಯಾನ್ಯಸ್ಯ ಕಾ ಗತಿಃ ॥ ೧೭೮ ॥

ಇತಿ ನಿರ್ವಿದ್ಯ ಸಂಜಾತಜಾತಿಸ್ಮೃತಿರುದಾರಧೀಃ ।
ಸ್ವಪೂರ್ವಭವಸಂಬಂಧಂ ಪ್ರತ್ಯಕ್ಷಮಿವ ಸಂಸ್ಮರನ್ ॥ ೧೭೯ ॥

ಪುಷ್ಕರಾರ್ಧೇಪರೇ ಭಾಗೇ ವಿದೇಹೇ ಪದ್ಮಕಾಹ್ವಯೇ ।
ವಿಷಯೇ ವಿಶ್ರುತೇ ಕಾಂತಪುರಾಧೀಶೋವನೀಶ್ವರಃ ॥ ೧೮೦ ॥

ರಥಾಂತಕನಕಸ್ತಸ್ಯ ವಲ್ಲಭಾ ಕನಕಪ್ರಭಾ ।
ತಯೋರ್ಭೂತ್ವಾ ಪ್ರಭಾಪಾಸ್ತಭಾಸ್ಕರಃ ಕನಕಪ್ರಭಃ ॥ ೧೮೧ ॥

ತಸ್ಮಿನ್ನನ್ಯೇದ್ಯುರುದ್ಯಾನೇ ದಷ್ಟಾ ಸರ್ಪೇಣ ಮತ್ಪ್ರಿಯಾ ।
ವಿದ್ಯುತ್ಪ್ರಭಾಹ್ವಯಾ ತಸ್ಯಾ ವಿಯೋಗೇನ ವಿಷಣ್ಣವಾನ್ ॥ ೧೮೨ ॥

ಸಾರ್ಧಂ ಸಮಾಧಿಗುಪ್ತಸ್ಯ ಸಮೀಪೇ ಸಂಯಮಂ ಪರಮ್ ।
ಸಂಪ್ರಾಪ್ತವಾನತಿಸ್ನಿಗ್ಧೈಃ ಪಿತೃಮಾತೃಸನಾಭಿಭಿಃ ॥ ೧೮೩ ॥

ಗುಣಪಾಲನಿಗೆ ಆ ಮನೋವೇಗ ಮೊದಲಾದವರ ಜಯಸೇನೆಯೇ ಮೊದಲಾದ ಪುತ್ರಿಯರೊಡನೆ ವಿವಾಹವಾಯಿತು. ಗುಣಪಾಲನು ಆ ಪತ್ನಿಯರೊಡನೆ ಸಂತೋಷವನ್ನು ಹೊಂದಿದವನೂ ಒಂದಾನೊಂದು ಕಾಲದಲ್ಲಿ ಕಾಲಲಬ್ಧಿಯೇ ಮೊದಲಾದುವುಗಳಿಂದ ಪ್ರೇರಿತನೂ ಸಮೀಪವಾಗಿರುವ ಮೋಕ್ಷವುಳ್ಳವನೂ ಆಕಾಶಭಾಗವನ್ನು ನೋಡುವವನೂ ಆಗಿ ಅಕಸ್ಮಾತ್ತಾಗಿ ಕತ್ತಲೆಯಾಗಿ ಮಾಡಲ್ಪಟ್ಟ ಚಂದ್ರಗ್ರಹಣವನ್ನು ನೋಡಿ ''ಈ ಚಂದ್ರನಿಗೂ ಸಂಸಾರದಲ್ಲಿ ಈ ಅವಸ್ಥೆಯಾದರೆ ಪಾಪದಿಂದ ನುಂಗಲ್ಪಟ್ಟವನಾದ ಇತರ ಮನುಷ್ಯನ ಗತಿಯಾವುದು ? ಧಿಕ್–ಸುಡು'' ಎಂದು ವೈರಾಗ್ಯವನ್ನು ಹೊಂದಿ ಉತ್ಪನ್ನವಾದ ಜಾತಿಸ್ಮರಣವುಳ್ಳವನೂ ಉದಾರವಾದ ಬುದ್ಧಿಯುಳ್ಳವನೂ ತನ್ನ ಪೂರ್ವಭವಸಂಬಂಧವನ್ನು, ಪ್ರತ್ಯಕ್ಷವಾಗಿಯೋ ಎಂಬಂತೆ, ಸ್ಮರಿಸುವವನೂ ಆಗಿ (ಸತ್ತು) ಪ್ರಸಿದ್ಧವಾದ ಪುಷ್ಕರಾರ್ಧದ್ವೀಪದಲ್ಲಿ ಅಪರವಿದೇಹದಲ್ಲಿ ಪದ್ಮಕವೆಂಬ ದೇಶದಲ್ಲಿ ಕಾಂತಪುರವೆಂಬ ನಗರದ ಪ್ರಭುವಾದ ಕನಕರಥನೆಂಬವನಿಗೂ ಆತನ ಪತ್ನಿಯಾದ ಕನಕಪ್ರಭೆಗೂ ತನ್ನಪ್ರಭೆಯಿಂದ ಸೂರ್ಯನನ್ನು ದೂರಮಾಡಿದವನಾದ ಕನಕಪ್ರಭನೆಂಬ ಪುತ್ರನಾಗಿ ಜನಿಸಿ ಮತ್ತೊಂದು ದಿವಸ ಆ ನಗರೋದ್ಯಾನದಲ್ಲಿ ವಿದ್ಯುತ್ಪ್ರಭೆಯೆಂಬ ತನ್ನ ಪತ್ನಿಯು ಹಾವಿನಿಂದ ಕಚ್ಚಲ್ಪಟ್ಟು(ಸತ್ತಳು) ಆಕೆಯ ವಿಯೋಗದಿಂದ ಖೇದವುಳ್ಳವನಾಗಿ ಅತ್ಯಂತಪ್ರಿಯರಾದ ತಂದೆ ತಾಯಿ ಮತ್ತು ಬಂಧುಗಳೊಡನೆ ಸಮಾಧಿಗುಪ್ತಮುನಿಯ ಸಮೀಪದಲ್ಲಿ ಉತ್ಕೃಷ್ಟವಾದ ಸಂಯಮ–ವ್ರತವನ್ನು ಹೊಂದಿದನು.

ತತ್ರ ಸಮ್ಯಕ್ತ್ವ ಶುದ್ಧ್ಯಾದಿಷೋಡಶ ಪ್ರತ್ಯಯಾನ್ ಭೃಶಮ್ ।
ಭಾವಯಿತ್ವಾ ಭವಸ್ಯಾಂತೇ ಜಯಂತಾಖ್ಯವಿಮಾನಜಃ ॥ ೧೮೪ ॥

ಪ್ರಾಂತೇ ತತೋಹಮಾಗತ್ಯ ಜಾತೋತ್ರೈವಮಿತಿಸ್ಫುಟಮ್ ।
ಸಮುದ್ರದತ್ತೇನಾದಿತ್ಯಗತಿರ್ವಾಯುರಥಾಹ್ವಯಃ ॥ ೧೮೫ ॥

ಶ್ರೇಷ್ಠೀ ಕುಬೇರಕಾಂತಶ್ಚ ಲೌಕಾಂತಿಕಪದಂ ಗತಾಃ ।
ಬೋಧಿತಸ್ತೈಃ ಸಮಾಗತ್ಯ ಗುಣಪಾಲಃ ಪ್ರಬುದ್ಧವಾನ್ ॥ ೧೮೬ ॥

ಮೋಹಪಾಶಂ ಸಮುಚ್ಛಿಂದತ್ತಪ್ತವಾಂಶ್ಚ ತಪಸ್ತತಃ ।
ಘಾತಿಕರ್ಮಾಣಿ ನಿರ್ಮೂಲ್ಯ ಸಯೋಗಿಪದಮಾಗಮತ್ ॥ ೧೮೭ ॥

ಅಲ್ಲಿ ಸಮ್ಯಗ್ದರ್ಶನಶುದ್ಧಿಯೇ ಮೊದಲಾದ ಹದಿನಾರು ಕಾರಣಗಳನ್ನು ಅಧಿಕವಾಗಿ ಭಾವಿಸಿ ಆಯುಷ್ಯಾವಸಾನದಲ್ಲಿ ಜಯಂತವೆಂಬ ಅನುತ್ತರವಿಮಾನದಲ್ಲಿ ಅಹಮಿಂದ್ರನಾಗಿ ಜನಿಸಿದನು. ಅಲ್ಲಿಯ ಸ್ವರ್ಗಾಯುಷ್ಯಾವಸಾನದಲ್ಲಿ ಚ್ಯುತನಾಗಿ ಬಂದು ಇಲ್ಲಿಯೇ ನಾನು(ಗುಣಪಾಲನು) ಜನಿಸಿದೆನೆಂಬುದು ವ್ಯಕ್ತವಾಗಿರುತ್ತದೆ. ಪ್ರಿಯದತ್ತೆಯ ತಂದೆಯಾದ ಸಮುದ್ರದತ್ತನೊಡನೆ ಹಿರಣ್ಯವರ್ಮನ ತಂದೆಯಾದ ಆದಿತ್ಯಗತಿಯೂ ಪ್ರಭಾವತಿಯ ತಂದೆಯಾದ ವಾಯುರಥನೆಂಬವನೂ ಕುಬೇರಕಾಂತಶ್ರೇಷ್ಠಿಯೂ ಲೌಕಾಂತಿಕ ಸ್ಥಾನವನ್ನು ಹೊಂದಿದರು. ಐದನೆಯ ಸ್ವರ್ಗದಲ್ಲಿ ಲೌಕಾಂತಿಕರೆಂಬ ದೇವತೆಗಳಾಗಿ ಜನಿಸಿದರೆಂದು ಭಾವವು. ಆ ಲೌಕಾಂತಿಕದೇವತೆಗಳಿಂದ ಬಂದು ಬೋಧಿಸಲ್ಪಟ್ಟವನಾದ ಗುಣಪಾಲನು ಎಚ್ಚರಗೊಂಡವನಾಗಿ–ಜ್ಞಾನೋದಯವುಳ್ಳವನಾಗಿ ಮೋಹವೆಂಬ ಪಾಶವನ್ನು ಕತ್ತರಿಸಿದನು. ತಪಸ್ಸನ್ನು ಮಾಡಿದನು. ಬಳಿಕ ಘಾತಿಕರ್ಮಗಳನ್ನು ನಾಶಮಾಡಿ ಸಯೋಗಿ ಕೇವಲಿಗುಣಸ್ಥಾನವನ್ನು ಹೊಂದಿದನು.

೧ ತಿರಸ್ಕರೋತಿಸ್ಮ, ವ್ಯಲಂಭೀಷ್ಟಇತ್ಯಪಿಪಾಠಃ. ೨ ಕಾಂತ್ಯಾ. ೩ ಕಾಂತ್ಯಾಇತ್ಯಪಿಪಾಠಃ. ೪ ಮನೋವೇಗಾದೀನಾಂ. ೫ ಪುತ್ರೀಭಿಃ.

ಯಶಃಪಾಲಃ ಸುಖಾವತ್ಯಾಸ್ತನೂಜಸ್ತೇನ ಸಂಯಮಮ್ ।
ಗೃಹೀತ್ವಾ ಸಹ ತಸ್ಯೈವ ಗಣಭೃತ್ಪ್ರಥಮೋಽಭವತ್ ॥ ೧೮೮ ॥

ಸುಖಾವತಿಯ ಪುತ್ರನಾದ ಯಶಃಪಾಲನು(ಶ್ರೀಪಾಲನ ಪುತ್ರನು) ಗುಣಪಾಲನೊಡನೆ ವ್ರತವನ್ನು–ದೀಕ್ಷೆಯನ್ನು ಗ್ರಹಣಮಾಡಿ ಆ ಗುಣಪಾಲ ಕೇವಲಿಗೇ ಮೊದಲನೆಯ ಗಣಧರನಾದನು.

ರಾಜರಾಜಸ್ತದಾ ಭೂರಿವಿಭೂತ್ಯಾಭ್ಯೇತ್ಯ ತಂ ಮುದಾ ।
ಶ್ರೀಪಾಲಃ ಪೂಜಯಿತ್ವಾ ತು ಶ್ರುತ್ವಾ ಧರ್ಮಂ ದ್ವಯಾತ್ಮಕಮ್ ॥

ತತಃ ಸ್ವಭವಸಂಬಂಧಮಪ್ರಾಕ್ಷೀತ್ಪ್ರಶ್ರಯಾಶ್ರಯಃ ।
ಭಗವಾಂಶ್ಚೇತ್ಯುವಾಚೇತಿ ಕುರುರಾಜಂ ಸುಲೋಚನಾ ॥ ೧೯೦ ॥

ನಿವೇದಿತವತೀ ಸ್ಪಷ್ಟಮೃಷ್ಟವಾಕ್ ಸೌಷ್ಟವಾನ್ವಿತಾ ।
ವಿದೇಹೇ ಪುಂಡರೀಕಿಣ್ಯಾಂ ಯಶಃಪಾಲೋ ಮಹೀಪತಿಃ ॥ ೧೯೧ ॥

ಚಕ್ರವರ್ತಿಯಾದ ಶ್ರೀಪಾಲನು ಆಗ ಬಹು ವೈಭವದಿಂದ ಬಂದು ಗುಣಪಾಲ ಕೇವಲಿಯನ್ನು ಸಂತೋಷದಿಂದ ಪೂಜಿಸಿ ವ್ಯವಹಾರ ನಿಶ್ಚಯರೂಪ ವಾದ ಧರ್ಮವನ್ನು ಕೇಳಿ ಬಳಿಕ ವಿನಯವುಳ್ಳವನಾಗಿ ತನ್ನ ಭವಗಳ ಸಂಬಂಧವನ್ನು ಕೇಳಿದನು. ಗುಣಪಾಲಕೇವಲಿಯು ಮುಂದೆ ಹೇಳುವ ಪ್ರಕಾರವಾಗಿ ಹೇಳಿದನು'' ಎಂದು ಸ್ಪಷ್ಟವೂ ಮಧುರವೂ ಆದ ವಚನವುಳ್ಳವಳೂ ಸೌಷ್ಟವದಿಂದ ಕೂಡಿದವಳೂ ಆದ ಸುಲೋಚನೆಯು ಜಯಕುಮಾರನಿಗೆ ಹೇಳುವವಳಾದಳು. ಗುಣಪಾಲಕೇವಲಿಯು ಶ್ರೀಪಾಲನಿಗೆ ಹೇಳಿದ ವಿಷಯವನ್ನು ಸುಲೋಚನೆಯು ಜಯಕುಮಾರನಿಗೆ ಮುಂದೆ ಹೇಳುವಂತೆ ಹೇಳಿದಳೆಂದು ಭಾವವು. ''ವಿದೇಹಕ್ಷೇತ್ರದಲ್ಲಿ ಪುಂಡರೀಕಿಣೀ ನಗರದಲ್ಲಿ ಯಶಃಪಾಲನೆಂಬವನು ದೊರೆಯಾಗಿದ್ದನು.

ತತ್ರ ಸರ್ವಸಮೃದ್ಧಾಖ್ಯೋ ವಣಿಕ್ ತಸ್ಯ ಮನಃಪ್ರಿಯಾ ।
ಧನಂಜಯಾನುಜಾತಾಸೌ ಧನಶ್ರೀರ್ಧನವರ್ಧಿನೀ ॥ ೧೯೨ ॥

ಆ ನಗರದಲ್ಲಿ ಸರ್ವಸಮೃದ್ಧನೆಂಬವನು ವರ್ತಕನಿದ್ದನು. ಧನಂಜಯನ ತಂಗಿಯೂ ಧನವನ್ನು ವೃದ್ಧಿಗೊಳಿಸುವವಳೂ ಆದ ಧನಶ್ರೀಯು ಆತನ ಮನಃಪ್ರಿಯಳು–ಪತ್ನಿಯಾಗಿದ್ದಳು.

ತಯೋಸ್ಸುತ್ ಸರ್ವದಯಿತಃ ಶ್ರೇಷ್ಠೀ ತದ್ಭಗಿನೀ ಸತೀ ।
ಸಂಜ್ಞಯಾ ಸರ್ವದಯಿತಾ ಶ್ರೇಷ್ಠಿನಶ್ಚಿತ್ತವಲ್ಲಭೇ ॥ ೧೯೩ ॥

ಸುತಾ ಸಾಗರಸೇನಸ್ಯ ಜಯಸೇನಾಸಮಾಹ್ವಯಾ ।
ಧನಂಜಯವಣೀಶಶ್ಚ ಜಯದತ್ತಾಭಿಧಾಪರಾ ॥ ೧೯೪ ॥

ಆ ದಂಪತಿಗಳ ಸರ್ವದಯಿತನೆಂಬ ಪುತ್ರನು ರಾಜಶ್ರೇಷ್ಠಿಯಾಗಿದ್ದನು. ಆತನ ಸಹೋದರಿಯು ಸಾಧ್ವಿಯಾದ ಸರ್ವದಯಿತೆಯೆಂಬವಳು. ಆ ಸರ್ವದಯಿತ ಶ್ರೇಷ್ಠಿಗೆ ಸಾಗರಸೇನನ ಪುತ್ರಿಯಾದ ಜಯಸೇನೆಯೆಂಬವಳೂ ಧನಂಜಯನೆಂಬ ವೈಶ್ಯೋತ್ತಮನ ಪುತ್ರಿಯಾದ ಮತ್ತೋರ್ವಳು ಜಯದತ್ತೆಯೆಂಬವಳೂ ಮನಃಪ್ರಿಯರಾದ ಪತ್ನಿಯರಾಗಿದ್ದರು.

ದೇವಶ್ರೀರನುಜಾ ಶ್ರೇಷ್ಠಿಪಿತುಸ್ತಸ್ಯಾಂ ತನೂದ್ಭವೌ ।
ಜಾತೌ ಸಾಗರಸೇನಸ್ಯ ಸಾಗರೋ ದತ್ತವಾಕ್ಪರಃ ॥ ೧೯೫ ॥

ತತಃ ಸಮುದ್ರದತ್ತಶ್ಚ ಸಹ ಸಾಗರದತ್ತಯಾ ।
ಸುತೌ ಸಾಗರಸೇನಾನುಜಾಯಾಂ ಜಾತಮಹೋದಯೌ ॥ ೧೯೬ ॥

ಜಾತೌ ಸಾಗರಸೇನಾಯಾಂ ದತ್ತೋ ವೈಶ್ರವಣಾದಿವಾಕ್ ।
ದತ್ತಾ ವೈಶ್ರವಣಾದಿಶ್ಚ ದಾಯಾದಃ ಶ್ರೇಷ್ಠಿನಃ ಸ ತು ॥ ೧೯೭ ॥

ಸರ್ವದಯಿತಶ್ರೇಷ್ಠಿಯ ತಂದೆಯಾದ ಸರ್ವಸಮೃದ್ಧನ ತಂಗಿಯು ದೇವಶ್ರೀಯೆಂಬವಳು. ಆಕೆಯಲ್ಲಿ ಸಾಗರಸೇನನಿಗೆ ಸಾಗರದತ್ತೆಯೊಡನೆ ದತ್ತ ವಚನವು ಪರದಲ್ಲಿರುವ ಸಾಗರನೂ ಆಮೇಲೆ ಸಮುದ್ರದತ್ತನೂ ಮಕ್ಕಳುಗಳಾಗಿ ಹುಟ್ಟಿದರು. ದೇವಶ್ರೀ ಸಾಗರಸೇನ ದಂಪತಿಗಳಿಗೆ ಸಾಗರದತ್ತ ಸಮುದ್ರದತ್ತರೆಂಬ ಈರ್ವರು ಗಂಡುಮಕ್ಕಳೂ ಸಾಗರದತ್ತೆಯೆಂಬ ಹೆಣ್ಣು–ಮಗಳೂ ಹುಟ್ಟಿದರೆಂದು ಭಾವವು. ಸಾಗರಸೇನನ ತಂಗಿಯಾದ ಸಾಗರಸೇನೆಯಲ್ಲಿ (ಸರ್ವಸಮೃದ್ಧನಿಗೆ) ವೈಶ್ರವಣ ಶಬ್ದವು ಪೂರ್ವದಲ್ಲಿ ಉಳ್ಳವನಾದ ದತ್ತ–ವೈಶ್ರವಣದತ್ತನೂ ವೈಶ್ರವಣದತ್ತೆಯೂ ಎಂಬ ಮಹೋನ್ನತಿಯನ್ನು ಹೊಂದಿರುವ ಮಕ್ಕಳು ಹುಟ್ಟಿದರು. ವೈಶ್ರವಣದತ್ತನಾದರೋ ಸರ್ವದಯಿತಶ್ರೇಷ್ಠಿಯ ಜ್ಞಾತಿಯು–ತಾಯಿಯ ಸವತಿಯ ಮಗನು.

ಭಾರ್ಯಾ ಸಾಗರದತ್ತಸ್ಯ ದತ್ತಾ ವೈಶ್ರವಣಾದಿಕಾ ।
ಸತೀ ಸಮುದ್ರದತ್ತಸ್ಯ ಸಾ ಸರ್ವದಯಿತಾ ಪ್ರಿಯಾ ॥ ೧೯೮ ॥

ಸಾ ವೈಶ್ರವಣದತ್ತೇಷ್ಟಾ ದತ್ತಾಂತಾ ಸಾಗರಾಹ್ವಯಾ ।
[1]ತೇಷಾಂ [2]ಸುಖಸುಖೇನೈವಂ ಕಾಲೇ ಗಚ್ಛತಿ ಸಂತತಮ್ ॥ ೧೯೯ ॥

ಯಶಃಪಾಲಮಹೀಪಾಲ[3]ಮಾವರ್ಜಿತಮಹಾಧನಃ ।
ವಣಿಗ್ಧನಂಜಯೋಽನ್ಯೇದ್ಯುಃ ಸದ್ರತ್ನೈ[4]ರ್ದರ್ಶನೀಕೃತೈಃ ॥ ೨೦೦ ॥

ವ್ಯಲೋಕಿಷ್ಟ ಸ ಭೂಪೋಽಪಿ ತಸ್ಮೈ ಸನ್ಮಾನಪೂರ್ವಕಮ್ ।
ಪ್ರೀತ್ಯಾ ಧನಂ ಹಿರಣ್ಯಾದಿ ಪ್ರಭೂತ[5]ಮದಿತೋಚಿತಮ್ ॥ ೨೦೧ ॥

ಸಾಗರದತ್ತನ ಪತ್ನಿ ವೈಶ್ರವಣದತ್ತೆ. ಸಮುದ್ರದತ್ತನ ಪ್ರಿಯಪತ್ನಿಯು ಆ ಸರ್ವದಯಿತೆ. ಆ ಸಾಗರದತ್ತೆಯು ವೈಶ್ರವಣದತ್ತನ ಪತ್ನಿ. ಆ ಸರ್ವಸಮೃದ್ಧನೇ ಮೊದಲಾದವರ ಕಾಲವು ಹೀಗೆ ಯಾವಾಗಲೂ ಅತ್ಯಂತಸುಖದಿಂದ ಕಳೆಯುತ್ತಿರಲು ಮತ್ತೊಂದು ದಿವಸ ಧನಂಜಯನೆಂಬ ವರ್ತಕನು ಕೈಗಾಣಿಕೆಯಾಗಿ ಮಾಡಲ್ಪಟ್ಟ ಶ್ರೇಷ್ಠವಾದ ರತ್ನಗಳಿಂದ ಯಶಃಪಾಲರಾಜನನ್ನು ಕುರಿತು (ರಾಜನಿಗೆ) ಅಧಿಕವಾದ ಧನವನ್ನು ತೆಗೆದುಕೊಂಡು ಬಂದವನಾಗಿ ನೋಡಿದನು. ಧನಂಜಯನು ಶ್ರೇಷ್ಠವಾದ ರತ್ನಗಳ ಕೈಗಾಣಿಕೆಯನ್ನು ಕೊಟ್ಟು ಯಶಃಪಾಲರಾಜನನ್ನು ನೋಡಿದನೆಂದು ಭಾವವು. ಆ ರಾಜನೂ ಪ್ರೀತಿಯಿಂದ ಧನಂಜಯನಿಗೆ ಸನ್ಮಾನ ಪೂರ್ವಕವಾಗಿ ಅಧಿಕವೂ ಉಚಿತವೂ ಆದ ಸುವರ್ಣವೇ ಮೊದಲಾದ ಧನವನ್ನು ಕೊಟ್ಟನು.

ವಿಲೋಕ್ಯ ತಂ ವಣಿಕ್ಸುತಾಃ ಸರ್ವೇಽಪಿ ಧನಮಾರ್ಜಿತುಮ್ ।
ಗ್ರಾಮೇ ಪುರೋಪಕಂಠಸ್ಥೇ ಸಂಭೂಯ [6]ವಿನಿವೇಶಿರೇ ॥ ೨೦೨ ॥

ಎಲ್ಲಾ ವೈಶ್ಯಪುತ್ರರೂ ಧನಂಜಯ ಶ್ರೇಷ್ಠಿಯನ್ನು ರಾಜಪೂಜಿತನಾದನೆಂದು ನೋಡಿ ಧನವನ್ನು ಸಂಪಾದಿಸುವುದಕ್ಕೋಸ್ಕರ ಪಟ್ಟಣದ ಸಮೀಪದಲ್ಲಿರುವ ಗ್ರಾಮದಲ್ಲಿ ಸೇರಿ ಬಿಡಾರವನ್ನು ಮಾಡಿದರು.

[7]ತನ್ನಿವೇಶಾದಥಾನ್ಯೇದ್ಯುಃ ಸ ಸಮುದ್ರಾದಿದತ್ತಕಃ ।
ರಾತ್ರೌ ಸ್ವಗೃಹಮಾಗತ್ಯ ಭಾರ್ಯಾಸಂಪರ್ಕಪೂರ್ವಕಮ್ ॥ ೨೦೩ ॥

ಕೇನಾಪ್ಯವಿದಿತೋ ರಾತ್ರಾವೇವ [8]ಸಾರ್ಥಮುಪಾಗತಃ ।
ಕಾಲೇ ಗರ್ಭಂ ವಿದಿತ್ವಾ[9]ಸ್ಯಾಃ ಪಾಪೋ ದುಶ್ಚರಿತೋಽಭವತ್ ॥ ೨೦೪ ॥

ಇತಿ ಸಾಗರದತ್ತಾಖ್ಯಸ್ತಯಾ [10]ಭರ್ತೃಸಮಾಗಮಮ್ ।
ಬೋಧಿತೋ[11]ಪ್ಯನಿರೀಕ್ಷ್ಯೋಽಸೌ ಸ್ವಗೇಹಾತ್ತಾಮಪಾಕರೋತ್ ॥ ೨೦೫ ॥

೧ ಸರ್ವಸಮೃದ್ಧಾದೀನಾಂ. ೨ ಅತ್ಯಂತಸುಖೇನ. ೩ ಆನೀತ. ೪ ಉಪಾಯನೀಕೃತೈಃ. ೫ ದದೌ. ೬ ಪರಸ್ಥಾನಂಕೃತವಂತಃ, ನಿವಿವೇಶಿರೇ ಇತ್ಯಪಿಪಾಠಃ. ೭ ತಚ್ಛಿಬಿರಾತ್. ೮ ಶಿಬಿರಂ. ೯ ಸರ್ವದಯಿತಾಯಾಃ. ೧೦ ನಿಜಪುರುಷಾಗಮನಂ. ೧೧ ಅವಿಚಾರಕಃ ಸನ್.

ಬಳಿಕ ಮರುದಿವಸ ಆ ದೇವಶ್ರೀ ಸಾಗರಸೇನರ ಪುತ್ರನಾದ ಸಮುದ್ರದತ್ತನು ಆ ಬೀಡಾರದಿಂದ ರಾತ್ರಿಯಲ್ಲಿ ತನ್ನ ಮನೆಗೆ ಬಂದು ಪತ್ನೀಸಂಪರ್ಕಪೂರ್ವಕವಾಗಿ ಯಾರಿಗೂ ತಿಳಿಯದಂತೆ ರಾತ್ರಿಯಲ್ಲಿಯೇ ಬೀಡಾರಕ್ಕೆ ಬಂದನು. ಯಾರಿಗೂ ತಿಳಿಯದಂತೆ ರಾತ್ರಿಯಲ್ಲಿ ಮನೆಗೆ ಹೋಗಿ ಪತ್ನೀಸಂಪರ್ಕವನ್ನು ಮಾಡಿ ಬೀಡಾರಕ್ಕೆ ಬಂದು ಸೇರಿದನೆಂದರ್ಥವು. ಯೋಗ್ಯಕಾಲದಲ್ಲಿ ಈ ಸರ್ವದಯಿತೆಯ (ಸಮುದ್ರ ದತ್ತನ ಪತ್ನಿಯ) ಗರ್ಭವನ್ನು ತಿಳಿದು ''ದುರ್ವ್ಯಾಪಾರವುಳ್ಳ ಯಾವನೋ ಜಾರನು (ಈಕೆಯಲ್ಲಿ) ಪಾಪವ್ಯವಹಾರವುಳ್ಳವನಾದನು'' ಎಂದು ಸಾಗರದತ್ತನು (ಸಮುದ್ರ ದತ್ತನ ಅಣ್ಣನು) ಆ ಸರ್ವದಯಿತೆಯಿಂದ ಆಕೆಯ ಪತಿಯು ಬಂದಿದ್ದ ವಿಷಯ ವನ್ನು ಹೇಳಲ್ಪಟ್ಟವನಾದರೂ ವಿಚಾರಶೂನ್ಯನಾದ ಇವನು ತನ್ನ ಮನೆಯಿಂದ ಆಕೆಯನ್ನು ಹೊರಡಿಸಿದನು.

ತತಃ [೧]ಶ್ರೇಷ್ಠಿಗೃಹಂ ಯಾತಾ ತೇನಾಪಿ ತ್ವಂ [೨]ದುರಾಚರಃ ।
ನಾಸ್ಮದ್ಗೃಹಂ ಸಮಾಗಚ್ಛೇತ್ಯಜ್ಞಾನಾತ್ಸಾ ನಿವಾರಿತಾ ॥ ೨೦೬ ॥

ಅನಂತರದಲ್ಲಿ ತನ್ನ ಅಣ್ಣನಾದ ಸರ್ವದಯಿತಶ್ರೇಷ್ಠಿಯ ಮನೆಗೆ ಹೋದವಳಾಗಿ ಅವನಿಂದಲೂ ''ನೀನು ದುರಾಚಾರವನ್ನು ಮಾಡಿದೆ. ನಮ್ಮ ಮನೆಗೆ ಬರಬೇಡ'' ಎಂದು ಅಜ್ಞಾನದಿಂದ ಆಕೆಯು ತಡೆಯಲ್ಪಟ್ಟಳು.

ಸಮೀಪವರ್ತಿನ್ಯೇಕಸ್ಮಿನ್ಯೇ[೩]ತನೇ ವಿಹಿತಸ್ಥಿತಿಃ ।
ನವಮಾಸಾವಧೌ ಪುತ್ರಮಲಬ್ಧಾನಲ್ಪಪುಣ್ಯಕಮ್ ॥ ೨೦೭ ॥

ಆಗ ಸಮೀಪದಲ್ಲಿರುವ ಒಂದು ಮನೆಯಲ್ಲಿರುವವಳಾಗಿ ಒಂಬತ್ತುತಿಂಗಳಿನ ಅವಧಿಯಲ್ಲಿ ಅಧಿಕಪುಣ್ಯವುಳ್ಳವನಾದ ಪುತ್ರನನ್ನು ಪಡೆದಳು.

ತದ್ವಿದಿತ್ವಾ ಕುಲಸ್ಯೈ[೪]ಷಃ ಸಮುತ್ಪನ್ನಃ ಪರಾಭವಃ ।
[೫]ಯತ್ರ ಕ್ವಚನ ನೀತ್ವೈನಂ ನಿಕ್ಷಿಪೇ[೬]ತ್ಯನುಜೀವಿಕಃ ॥ ೨೦೮ ॥

[೭]ಪ್ರತ್ಯೇಯಃ ಶ್ರೇಷ್ಠಿನಾ ಪ್ರೋಕ್ತಃ ಶ್ರೇಷ್ಠಿಮಿತ್ರಸ್ಯ ಬುದ್ಧಿಮಾನ್ ।
ಶ್ಮಶಾನೇ ಸಾಧಿತುಂ ವಿದ್ಯಾಮಾಗತಸ್ಯ [೮]ಖಯಾಯಿನಃ ॥ ೨೦೯ ॥

ಬಾಲಂ ಸೋಽರ್ಪಯಾಮಾಸ ವಿಚಿತ್ರೋ ದುರಿತೋದಯಃ ।
ಖಗೋಽಸೌ [೯]ಜಯಧಾಮಾಖ್ಯೋ [೧೦]ಜಯಭಾಮಾಸ್ಯ ವಲ್ಲಭಾ ॥

ಆ ವಿಷಯವನ್ನು ತಿಳಿದು ''ವಂಶಕ್ಕೆ ಈ ಶಿಶುವು ಅವಮಾನವನ್ನುಂಟು ಮಾಡು ವುದಾಗಿ ಜನಿಸಿತು. ಎಲ್ಲಿಯಾದರೂ ತೆಗೆದುಕೊಂಡು ಹೋಗಿ ಈ ಶಿಶುವನ್ನಿರಿಸು'' ಎಂದು ನಂಬಿಕೆಗೆ ಪಾತ್ರನಾದ ಭೃತ್ಯನಿಗೆ ಶ್ರೇಷ್ಠಿ–ಸರ್ವದಯಿತನು ಹೇಳಿದನು. ಬುದ್ಧಿಶಾಲಿಯಾದ ಆ ಭೃತ್ಯನೂ ಸುಡುಗಾಡಿನಲ್ಲಿ ವಿದ್ಯೆಯನ್ನು ಸಾಧಿಸುವುದ ಕ್ಕೋಸ್ಕರ ಬಂದವನೂ ಶ್ರೇಷ್ಠಿಯ ಮಿತ್ರನೂ ಆದ ಓರ್ವ ಖೇಚರನಿಗೆ ಬಾಲಕನನ್ನು ಕೊಟ್ಟನು. ಪಾಪದ ಉದಯವು ವಿಚಿತ್ರವಾದುದು ! ಈ ಖೇಚರನು ಜಯಧಾಮ ನೆಂಬವನು. (ಮುಂದೆ ವಸುಪಾಲನಾಗುವವನು.) ಈತನ ಪತ್ನಿ ಜಯಭಾಮೆ ಯೆಂಬವಳು (ಮುಂದೆ ಶ್ರೀಪಾಲನ ಪಟ್ಟಮಹಿಷಿಯಾಗುವ ಜಯವತಿಯು).

ತೌ ಭೋಗಪುರವಾಸ್ತವ್ಯೌ ಜಿತಶತ್ರುಸಮಾಹ್ವಯಮ್ ।
ಕೃತ್ವಾವರ್ಧಯತಾಂ ಪುತ್ರಮಿವ ಮತ್ವೌರಸಂ ಮುದಾ ॥ ೨೧೧ ॥

ಭೋಗಪುರನಿವಾಸಿಗಳಾದ ಆ ಖೇಚರದಂಪತಿಗಳು ಬಾಲಕನಿಗೆ ಜಿತಶತ್ರುವೆಂಬ ನಾಮಕರಣವನ್ನು ಮಾಡಿ, ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಕಾಪಾಡು ವಂತೆ, ಪ್ರೀತಿಯಿಂದ ಕಾಪಾಡಿದರು.

೧ ನಿಜಾಗ್ರಜಸರ್ವದಯಿತಗೃಹಂ. ೨ ದುಷ್ಟಮಾಚರಸಿಸ್ತ್ವಂ. ೩ ಗೃಹೇ. ೪ ಶಿಶುಃ. ೫ ಯತ್ರಕುತ್ರಾಪಿ. ೬ ಭೃತ್ಯಃ. ೭ ವಿಶ್ವಾಸ್ಯಃ. ೮ ವಿದ್ಯಾಧರಸ್ಯ. ೯ ಭವಿಷ್ಯದ್ವಸುಪಾಲೋಽಯಂ. ೧೦ ಶ್ರೀಪಾಲಸ್ಯ ಜಯವತೀನಾಮಪಟ್ಟಮಹಿಷೀಭವಿಷ್ಯತಿ.

ತದಾ ಪುತ್ರವಿಯೋಗೇನ ಸಾ ಸರ್ವದಯಿತಾಚಿರಾತ್ ।
ಸ್ತ್ರೀವೇದನಿಂದನಾನ್ಮೃತ್ವಾ ಸಂಪ್ರಾಪಜ್ಜನ್ಮ ಪೌರುಷಮ್ ॥ ೨೧೨ ॥

ಆಗ ಆ ಸರ್ವದಯಿತೆಯು ಪುತ್ರವಿಯೋಗದಿಂದ ಶೀಘ್ರವಾಗಿ ಸ್ತ್ರೀವೇದ (ಸ್ತ್ರೀ ಲಿಂಗ)ದ ನಿಂದನೆಯಿಂದ(ನಿಂದಿಸುತ್ತ) ಸತ್ತು ಪುರುಷಜನ್ಮವನ್ನು ಹೊಂದಿದಳು.

ತತಃ ಸಮುದ್ರದತ್ತೋಽಪಿ ಸಾರ್ಥೇನಾಮಾ ಸಮಾಗತಃ ।
ಶ್ರುತ್ವಾ ಸ್ವಭಾರ್ಯಾವೃತ್ತಾಂತಂ ನಿಂದಿತ್ವಾ ಭ್ರಾತರಂ ನಿಜಮ್ ॥ ೨೧೩ ॥

[೧]ಶ್ರೇಷ್ಠಿನೇನಪರಾಧಾಯಾ ಗೃಹವೇಶನಿವಾರಣಾತ್ ।
ಅಕುಪ್ಯನ್ನಿತರಾಂ ಕೃತ್ಯಂ ಕಃ ಸಹೇತಾವಿಚಾರಿತಮ್ ॥ ೨೧೪ ॥

ಬಳಿಕ ಸಮುದ್ರದತ್ತನೂ ವರ್ತಕರ ಗುಂಪಿನೊಡನೆ ಬಂದವನಾಗಿ ತನ್ನ ಪತ್ನಿಯ ಸಮಾಚಾರವನ್ನು ಕೇಳಿ ತನ್ನ ಸಹೋದರನಾದ ಸಾಗರದತ್ತನನ್ನು ನಿಂದಿಸಿ ತಪ್ಪಿಲ್ಲ ದಿರುವವಳಿಗೆ ಮನೆಯ ಪ್ರವೇಶವನ್ನು ತಡೆದುದರಿಂದ ಸರ್ವದಯಿತನಿಗೂ (ಸರ್ವ ದಯಿತನ ಮೇಲೆಯೂ) ಬಹಳವಾಗಿ ಕೋಪಗೊಂಡನು. ಅವಿಚಾರಿತವಾದ ಕೃತ್ಯ ವನ್ನು ಯಾವನುತಾನೆ ಸಹಿಸುವನು ?

ಜ್ಯೇಷ್ಠೇನ್ಯಾಯಾಗತಂ ಯೋಗ್ಯೇ ಮಯಿ ಸ್ಥಿತವತಿ ಸ್ವಯಮ್ ।
ಶ್ರೇಷ್ಠಿತ್ವಮಯಮಧ್ಯಾಸ್ತ ಇತಿ [೨]ಶ್ರೇಷ್ಠಿನಿ ಕೋಪವಾನ್ ॥ ೨೧೫ ॥

[೩]ವೈ ವೈಶ್ರವಣದತ್ತೋಽಪಿ ಸ ಸಸಾಗರದತ್ತಕಃ ।
ಸಾರ್ಧಂ ಸಮುದ್ರದತ್ತೇನ ಮಾತ್ಸರ್ಯಾಚ್ಛ್ರೇಷ್ಠಿನಿ ಸ್ಥಿತಃ ॥ ೨೧೬ ॥

ದುಸ್ಸಹೇ ತಪಸಿ ಶ್ರೇಯಾನ್ಮತ್ಸರೋಽಪಿ ಕ್ವಚಿನ್ನೃಣಾಮ್ ।
ಅನ್ಯೇದ್ಯುರ್ಜಿತಶತ್ರುಂ ತಂ ದೃಷ್ಟ್ವಾ ಶ್ರೇಷ್ಠೀ ಕುತೋ ಭವಾನ್ ॥

ಸಮುದ್ರದತ್ತಸಾರೂಪ್ಯಂ ದಧತ್ಸಂಸದಮಾಗತಃ ।
ಇತಿ ಪಪ್ರಚ್ಛ ಸೋಽಪ್ಯಾತ್ಮಾಗಮನಕ್ರಮಮಬ್ರವೀತ್ ॥ ೨೧೮ ॥

''ಹಿರಿಯನೂ ಯೋಗ್ಯನೂ ಆದ ನಾನಿರುತ್ತಿರಲು ಇವನು (ಸರ್ವದಯಿತನು) ಅನ್ಯಾಯದಿಂದ ಬಂದ ಶ್ರೇಷ್ಠಿಪದವಿಯಲ್ಲಿರುತ್ತಾನೆ'' ಎಂದು ಚೆನ್ನಾಗಿ ಸರ್ವ ದಯಿತ ಶ್ರೇಷ್ಠಿಯಲ್ಲಿ ಕೋಪವುಳ್ಳವನಾದ ಆ ವೈಶ್ರವಣದತ್ತನೂ ಸಾಗರದತ್ತ ಸಹಿತ ನಾಗಿ ಸಮುದ್ರದತ್ತನೊಡನೆ ಸರ್ವದಯಿತನಲ್ಲಿ ಮಾತ್ಸರ್ಯದಿಂದ ಸಹಿಸುವುದಕ್ಕೆ ಕಷ್ಟವಾದ ತಪಸ್ಸಿನಲ್ಲಿದ್ದನು. ಕೆಲವೆಡೆಯಲ್ಲಿ ಮನುಷ್ಯರ ಮತ್ಸರವೂ ಒಳ್ಳೆಯ ದಾಗಿರುತ್ತದೆ. ಮತ್ತೊಂದು ದಿವಸ ಸರ್ವದಯಿತಶ್ರೇಷ್ಠಿಯು ಆ ಜಿತಶತ್ರುವನ್ನು ನೋಡಿ ''ಸಮುದ್ರದತ್ತನ ಸಾದೃಶ್ಯವನ್ನು ಧರಿಸಿದವನಾಗಿ ಸಭೆಗೆ ಬಂದ ನೀನು ಎಲ್ಲಿಂದ ಬಂದೆ ?'' ಎಂದು ಪ್ರಶ್ನೆಮಾಡಿದನು. ಅವನೂ ತನ್ನ ಆಗಮನದ ಕ್ರಮ ವನ್ನು ಹೇಳಿದನು.

ನಾನ್ಯೋ ಮದ್ಭಾಗಿನೇಯೋಽಯಮಿತಿ ತದ್ಧಸ್ತಸಂಸ್ಥಿತಾಮ್ ।
ಮುದ್ರಿಕಾಂ ವೀಕ್ಷ್ಯ ನಿಶ್ಚಿತ್ಯ [೪]ನಿಷ್ಪರೀಕ್ಷಕತಾಂ ನಿಜಾಮ್ ॥ ೨೧೯ ॥

[೫]ಮೈಥುನಸ್ಯ ಚ ಸಂಸ್ಕೃತ್ಯ [೬]ತಸ್ಮೈ ಸರ್ವಶ್ರಿಯಂ ಸುತಾಮ್ ।
ಧನಂ ಶ್ರೇಷ್ಠಿಪದಂ ಚಾ[೭]ಸೌ ದತ್ವಾ ನಿರ್ವಿಣ್ಣಮಾನಸಃ ॥ ೨೨೦ ॥

ಜಯಧಾಮಾ ಜಯಭಾಮಾ ಜಯಸೇನಾ ತಥಾ[೮]ಪರಾ ।
ಜಯದತ್ತಾಭಿಧಾನಾ ಚ ಪರಾ[೯]ಸಾಗರದತ್ತಿಕಾ ॥ ೨೨೧ ॥

೧ ಸರ್ವದಯಿತಾಯ. ೨ ಸರ್ವದಯಿತೇ. ೩ ಸವೈಶ್ರವಣದತ್ತೋಽಪೀತ್ಯಪಿಪಾಠಃ. ೪ ವಿಚಾರ ಶೂನ್ಯತಾಂ. ೫ ಸಾಗರದತ್ತಸ್ಯವಿಚಾರಶೂನ್ಯತಾಂಚ. ೬ ನಿಜಭಾಗಿನೇಯಜಿತಶತ್ರವೇ. ೭ ಸರ್ವದಯಿತ ಶ್ರೇಷ್ಠೀ. ೮ ಸರ್ವದಯಿತಸ್ಯಭಾರ್ಯಾ. ೯ ವೈಶ್ರವಣದತ್ತಸ್ಯಭಾರ್ಯಾ.

**ಸಾ [೧]ವೈಶ್ರವಣದತ್ತಾ ಚ ಪರೇ ಚೋತ್ಪನ್ನಬೋಧಿಕಾಃ ।**
**ಸಂಜಾತಾಸ್ತೈಃ ಸಹ ಶ್ರೇಷ್ಠೀ ಸಂಯಮಂ ಪ್ರತ್ಯಪದ್ಯತ ॥ ೨೨೨ ॥**

**ಮುನಿಂ ರತಿವರಂ ಪ್ರಾಪ್ಯ ಚಿರಂ ವಿಹಿತಸಂಯಮಾಃ ।**
**ಏತೇ ಸರ್ವೇಽಪಿ ಕಾಲಾಂತೇ ಸ್ವರ್ಗಲೋಕಂ ಸಮಾಗಮನ್ ॥ ೨೨೩ ॥**

''ನನ್ನ ಸಹೋದರಿಯ ಮಗನಿವನು–ಸೋದರ ಅಳಿಯನು. ಬೇರೆಯವನಲ್ಲ'' ಎಂದು ಆತನ ಕೈಯಲ್ಲಿದ್ದ ಮುದ್ರಿಕೆಯನ್ನು ನೋಡಿ ತನ್ನ ವಿಚಾರಶೂನ್ಯತೆಯನ್ನೂ ಮೈದುನನಾದ ಸಾಗರದತ್ತನ ವಿಚಾರಶೂನ್ಯತೆಯನ್ನೂ ತಿದ್ದಿ ನಿಶ್ಚಯಿಸಿ ಆ ಜಿತ ಶತ್ರುವಿಗೆ ಸರ್ವಶ್ರೀಯೆಂಬ ತನ್ನ ಮಗಳನ್ನೂ ದ್ರವ್ಯವನ್ನೂ ಶ್ರೇಷ್ಠಿಪದವಿಯನ್ನೂ ಕೊಟ್ಟು ಈ ಸರ್ವದಯಿತಶ್ರೇಷ್ಠಿಯು ವಿರಕ್ತವಾದ ಮನಸ್ಸುಳ್ಳವನಾಗಿ ಜಯಧಾಮ, ಜಯಭಾಮಾ, ಜಯಸೇನಾ, ಹಾಗೆಯೇ ಮತ್ತೋರ್ವಳು– ಸರ್ವದಯಿತನ ಪತ್ನಿ, ಜಯದತ್ತೆಯೆಂಬವಳು, ವೈಶ್ರವಣದತ್ತನ ಪತ್ನಿಯಾದ ಸಾಗರದತ್ತೆ , ಸಾಗರದತ್ತನ ಪತ್ನಿಯಾದ ಆ ವೈಶ್ರವಣದತ್ತೆ ಇವರುಗಳೂ ಬೇರೆಯವರೂ ಸಮ್ಯಜ್ಞಾನೋದಯ ವುಳ್ಳವರಾದರು. ಅವರುಗಳೊಡನೆ ಸರ್ವದಯಿತ ಶ್ರೇಷ್ಠಿಯು ರತಿವರನೆಂಬ ಮುನಿ ಯನ್ನು ಹೊಂದಿ ಸಂಯಮ–ದೀಕ್ಷೆಯನ್ನು ತೆಗೆದುಕೊಂಡನು. ಇವರೆಲ್ಲರೂ ಬಹು ಕಾಲದವರೆಗೆ ತಪಸ್ಸನ್ನು ಮಾಡಿದವರಾಗಿ ಕಾಲಾಂತದಲ್ಲಿ (ಸತ್ತು) ಸ್ವರ್ಗಲೋಕಕ್ಕೆ ಹೋದರು.

**ಪ್ರಾಂತೇ ಸ್ವರ್ಗಾದಿಹಾಗತ್ಯ ಜಯಧಾಮಾ [೨]ತದಾತನಃ ।**
**ವಸುಪಾಲೋತ್ರ ಸಂಜಾತೋ ಜಯಭಾಮಾಪ್ಯಜಾಯತ ॥ ೨೨೪ ॥**

**ಜಯವತ್ಯಾತ್ತಸೌಂದರ್ಯಾ ಜಯಸೇನಾಜನಿಷ್ಟ ಸಾ ।**
**ಪಿಪ್ಪಲಾ ಜಯದತ್ತಾತ್ರ ವತ್ಕಂತಮದನಾಭವತ್ ॥ ೨೨೫ ॥**

**ವಿದ್ಯುದ್ವೇಗಾಭವದ್ವೈಶ್ರವಣದತ್ತಾ [೩]ಕಲಾಖಿಲಾ ।**
**ಜಾತಾ ಸಾಗರದತ್ತಾಪಿ ಸ್ವರ್ಗಾದೇತ್ಯ ಸುಖಾವತೀ ॥ ೨೨೬ ॥**

ಕೊನೆಯಲ್ಲಿ(ಆಯುಷ್ಯಾವಸಾನದಲ್ಲಿ ) ಆ ಕಾಲದವನಾದ(ಹಿಂದಿನ ಭವದ) ಜಯಧಾಮನು ಸ್ವರ್ಗದಿಂದ ಇಲ್ಲಿಗೆ ಬಂದು ಇಲ್ಲಿ–ಪುಂಡರೀಕಿಣಿಯಲ್ಲಿ ವಸು ಪಾಲನಾಗಿ ಜನಿಸಿದನು. ಜಯಭಾಮೆಯೂ ಸೌಂದರ್ಯವನ್ನು ಹೊಂದಿರುವವ ಳಾದ ಜಯವತಿಯಾಗಿ ಜನಿಸಿದಳು. ಆ ಜಯಸೇನೆಯು ಪಿಪ್ಪಲೆಯಾಗಿ ಜನಿಸಿ ದಳು. ಜಯದತ್ತೆಯು ಇಲ್ಲಿ ಮದನವತಿಯಾದಳು. ಸಂಪೂರ್ಣಕಲೆಯುಳ್ಳವಳಾದ ವೈಶ್ರವಣದತ್ತೆಯು ವಿದ್ಯುದ್ವೇಗೆಯಾದಳು. ಸಾಗರದತ್ತೆಯೂ ಸ್ವರ್ಗದಿಂದ ಬಂದು ಸುಖಾವತಿಯಾಗಿ ಹುಟ್ಟಿದಳು.

**ತದಾ ಸಾಗರದತ್ತಾಖ್ಯಃ ಸ್ವರ್ಗಲೋಕಾತ್ಸಮಾಗತಃ ।**
**ಪುತ್ರೋ ಹರಿವರೋ ಜಾತಃ ಸ [೪]ಪುರೂರವಸಃ ಪ್ರಿಯಃ ॥ ೨೨೭ ॥**

ಆಗ ಸಾಗರದತ್ತನಾಗಿದ್ದವನು ಸ್ವರ್ಗಲೋಕದಿಂದ ಬಂದವನಾಗಿ ಪುರೂರವ ನೆಂಬವನಿಗೆ ಪ್ರಿಯನಾದ ಆ ಹರಿವರನೆಂಬ ಪುತ್ರನಾಗಿ ಹುಟ್ಟಿದನು.

**ಸಮುದ್ರದತ್ತೋ ಜ್ವಲನವೇಗಸ್ಯಾಜನಿ ವಿಶ್ರುತಃ ।**
**ತನೂಜೋ ಧೂಮವೇಗಾಖ್ಯೋ ವಿದ್ಯಾವಿಹಿತಪೌರುಷಃ ॥ ೨೨೮ ॥**

ಸಮುದ್ರದತ್ತನು ಜ್ವಲನವೇಗನ ಪುತ್ರನೂ ಪ್ರಸಿದ್ಧನೂ ವಿದ್ಯೆಯಿಂದ ಪರಾಕ್ರಮ ವನ್ನು ವ್ಯಕ್ತಪಡಿಸಿದವನೂ ಆದ ಧೂಮವೇಗನೆಂಬವನಾಗಿ ಜನಿಸಿದನು.

**ಸ ವೈಶ್ರವಣದತ್ತೋಽಪಿ ಭೂತೋತ್ರಾಶನಿವೇಗಕಃ ।**
**ಶ್ರೇಷ್ಠೀ ಸ ಸರ್ವದಯಿತಃ ಶ್ರೀಪಾಲಸ್ತ್ವಮಿಹಾಭವಃ ॥ ೨೨೯ ॥**

೧ ಸಾಗರದತ್ತಸ್ಯಭಾರ್ಯಾ. ೨ ತತ್ಕಾಲಭವಃ. ೩ ಸಂಪೂರ್ಣಕಲಾ. ೪ ಇತಿವಿದ್ಯಾಧರಸ್ಯ.

ಆ ವೈಶ್ರವಣದತ್ತನೂ ಇಲ್ಲಿ ಅಶನಿವೇಗನಾದನು. ಆ ಸರ್ವದಯಿತ ಶ್ರೇಷ್ಠಿಯು ನೀನಾದೆ.

**ತ್ವಂ [೧]ಜಾಮಾತುರ್ನಿರಾಕೃತ್ಯಾ ಸನಾಭಿಭ್ಯೋ ವಿಯೋಜಿತಃ ।**
**[೨]ತದಾ ತ್ವದ್ದ್ವೇಷಿಣೋಽಸ್ಮಿಂಶ್ಚ ತವ ದ್ವೇಷಿಣ ಏವ ತೇ ॥ ೨೩೦ ॥**

ನಿನ್ನ ಸಹೋದರಿಯ ಪುತ್ರನಾದ ಜಿತಶತ್ರುವಿನ ನಿರಾಕರಣದಿಂದ(ಮಾತೃ ಬಂಧು ವಿಯೋಗವನ್ನು ಮಾಡಿದುದರಿಂದ) ನೀನು ಬಂಧುಗಳಿಂದ ಅಗಲಿಸಲ್ಪಟ್ಟೆ. ಆಗ ನಿನಗೆ ಶತ್ರುಗಳಾಗಿದ್ದವರೇ ಈ ಭವದಲ್ಲಿಯೂ ನಿನಗೆ ದ್ವೇಷಿಗಳಾಗಿರುತ್ತಾರೆ.

**ತದಾ ಪ್ರಿಯಾಸ್ತವಾತ್ರಾಪಿ ಸಂಜಾತಾ ನಿತರಾಂ ಪ್ರಿಯಾಃ ।**
**ಅಹಿಂಸಯಾ [೩]ರ್ಭಕಸ್ಯಾಸೀದ್ಬಂಧುಭಿಸ್ತವ ಸಂಗಮಃ ॥ ೨೩೧ ॥**

ನಿನಗೆ ಆಗ ಪ್ರಿಯರಾಗಿದ್ದವರು ಇಲ್ಲಿಯೂ ಬಹಳವಾಗಿ ಪ್ರಿಯರಾಗಿ ಜನಿಸಿ ದರು. ನಿನ್ನ ಸಹೋದರಿಯ ಶಿಶುವಿನ–ಜಿತಶತ್ರುವಿನ ಅಹಿಂಸೆಯಿಂದ (ಶಿಶುವನ್ನು ಕೊಲ್ಲಿಸದಿದ್ದುದರಿಂದ) ಬಂಧುಗಳೊಡನೆ ನಿನಗೆ ಪುನಃ ಸಮಾಗಮವಾಯಿತು.

**ತತ್ತಪಃಫಲತೋ ಜಾತಂ ಚಕ್ರಿತ್ವಂ ಸಕಲಕ್ಷಿತೇಃ ।**
**ಸರ್ವಸಂಗಪರಿತ್ಯಾಗಾನ್ಮಂಕ್ಷು ಮೋಕ್ಷಂ ಗಮಿಷ್ಯಸಿ ॥ ೨೩೨ ॥**

ಆ ತಪಸ್ಸಿನ ಫಲದಿಂದ ಸಮಸ್ತಪೃಥ್ವಿಯ ಚಕ್ರವರ್ತಿತ್ವವುಂಟಾಯಿತು. ಸಮಸ್ತ ಪರಿಗ್ರಹತ್ಯಾಗದಿಂದ ಶೀಘ್ರವಾಗಿ ಮೋಕ್ಷಕ್ಕೆ ಹೋಗುವೆ.''

**ಅಥೋದೀರಿತತೀರ್ಥೇಶವಚನಾಕರ್ಣನೇನ ತೇ ।**
**ಸರ್ವೇ ಪರಸ್ಪರದ್ವೇಷಾದ್ವಿರಮಂತಿ ಸ್ಮ ವಿಸ್ಮಯಾತ್ ॥ ೨೩೩ ॥**

ಅನಂತರದಲ್ಲಿ ಅವರೆಲ್ಲರೂ ತೀರ್ಥೇಶ್ವರರಿಂದ ಹೇಳಲ್ಪಟ್ಟ ವಚನವನ್ನು ಕೇಳಿ ದುದರಿಂದ ಆಶ್ಚರ್ಯದಿಂದ ಕೂಡಿದವರಾಗಿ ಪರಸ್ಪರ ವೈರವನ್ನು ತೊರೆದರು.

**ಜನ್ಮರೋಗಜರಾಮೃತ್ಯೂನ್ನಿಹಂತುಂ ಸಂತತಾನುಗಾನ್ ।**
**ಸನ್ನಿಧಾಯ ಧಿಯಂ ಧನ್ಯೋ [೪]ಧಾತ್ಸದ್ಧರ್ಮಾಮೃತಂ ತತಃ ॥ ೨೩೪ ॥**

ಎಡೆಬಿಡದೆ ಹಿಂಬಾಲಿಸಿರುವ ಜನ್ಮ ರೋಗ ವಾರ್ಧಕ್ಯ ಮರಣಗಳನ್ನು ನಾಶ ಮಾಡುವುದಕ್ಕೋಸ್ಕರ ಬುದ್ಧಿಯನ್ನಿಟ್ಟು ಪುಣ್ಯಶಾಲಿಯಾದ ಶ್ರೀಪಾಲಚಕ್ರೇಶ್ವರನು ಗುಣಪಾಲತೀರ್ಥೇಶ್ವರರಿಂದ ಧರ್ಮವೆಂಬ ಅಮೃತವನ್ನು ಪಾನಮಾಡಿದನು.

**ಧಿಗಿದಂ ಚಕ್ರಿಸಾಮ್ರಾಜ್ಯಂ ಕುಲಾಲಸ್ಯೇವ ಜೀವಿತಮ್ ।**
**ಭುಕ್ತಿಶ್ಚಕ್ರಂ ಪರಿಭ್ರಾಮ್ಯ [೫]ಮೃದುತ್ಪನ್ನಫಲಾಪ್ತಿತಃ ॥ ೨೩೫ ॥**

''ಕುಂಬಾರನ ಜೀವನೋಪಾಯದಂತಿರುವ ಈ ಚಕ್ರವರ್ತಿಯ ಸಾಮ್ರಾಜ್ಯ ವನ್ನು ಸುಡು. ಚಕ್ರವನ್ನು ತಿರುಗಿಸಿ ಮಣ್ಣಿನಿಂದುಂಟಾದ, ಕ್ಷೇತ್ರದಿಂದುಂಟಾದ ಫಲ–ಪ್ರಯೋಜನದ ಪ್ರಾಪ್ತಿಯಿಂದ ಭೋಜನಕ್ರಿಯೆಯಾಗಿರುತ್ತದೆ. ಕುಂಬಾರನು ಚಕ್ರವನ್ನು ತಿರುಗಿಸಿ ಮಣ್ಣಿನ ಪಾತ್ರೆಗಳನ್ನು ಮಾಡಿ ಅವುಗಳಿಂದ ಜೀವಿಸುವಂತೆ, ತಾನು ಚಕ್ರರತ್ನವನ್ನು ತಿರುಗಿಸಿ ಕ್ಷೇತ್ರಗಳಿಂದುಂಟಾಗುವ ಫಲ–ಕಂದಾಯದಿಂದ ಜೀವಿಸುವುದಾಗಿರುತ್ತದೆಂದು ಭಾವವು.

**ಆಯುರ್ವಾಯುರಯಂ [೬]ಮೇಘೋ ಭೋಗೋ ಭಂಗೀ ಹಿ [೭]ಸಂಗಮಃ ।**
**ವಪುಃ ಪಾಪಸ್ಯ ದುಷ್ಪಾತ್ರಂ ವಿದ್ಯುಲ್ಲೋಲಾ ವಿಭೂತಯಃ ॥ ೨೩೬ ॥**

ಆಯುಷ್ಯವು ಗಾಳಿಯಂತೆ ವೇಗವುಳ್ಳದಾಗಿರುತ್ತದೆ. ಭೋಗವು ಮೋಡದಂತೆ ಲಯವಾಗುವುದಾಗಿರುತ್ತದೆ. ಇಷ್ಟಪದಾರ್ಥಗಳ ಸಮಾಗಮವು ನಾಶವಾಗುವು

೧ ಭಗಿನೀಪುತ್ರಸ್ಯ. ೨ ತತ್ಕಾಲೇ. ೩ ತವಭಗಿನೀಶಿಶೋಃ. ೪ ಧೇಟ್‌ಪಾನೇ, ಪಪೌ. ೫ ಕ್ಷೇತ್ರೋತ್ಪನ್ನಫಲಪ್ರಾಪ್ತಿತಃ. ೬ ಮೋಹಃಇತ್ಯಪಿಪಾಠಃ. ೭ ಇಷ್ಟಸಂಯೋಗಃ.

ದಾಗಿರುತ್ತದೆ. ಶರೀರವು ಪಾಪದ ದುಷ್ಟಪಾತ್ರವಾಗಿರುತ್ತದೆ. ಸಂಪತ್ತಿಗಳು ಮಿಂಚಿನಂತೆ ಚಂಚಲವಾಗಿರುತ್ತವೆ.

**ಮಾರ್ಗ ವಿಭ್ರಂಶಹೇತುತ್ವಾದ್ಯೌವನಂ ಗಹನಂ ವನಮ್ ।**
**ಯಾ ರತಿರ್ವಿಷಯೇಷ್ವೇಷಾ ಗವೇಷಯತಿ ಚಾರತಿಮ್ ॥ ೨೩೭ ॥**

ಸನ್ಮಾರ್ಗದಿಂದ ತಪ್ಪುವುದಕ್ಕೆ ಕಾರಣವಾಗಿರುವುದರಿಂದ ಯೌವನವು ದಟ್ಟವಾದ ಅರಣ್ಯವಾಗಿರುತ್ತದೆ. ಭೋಗೋಪಭೋಗವಿಷಯಗಳಲ್ಲಿ ಯಾವ ಪ್ರೀತಿಯಿರುತ್ತದೋ ಇದು ಅಪ್ರೀತಿಯನ್ನು ಹುಡುಕುತ್ತಿರುತ್ತದೆ.

**ಸರ್ವ[1]ಮೇತತ್ಸುಖಾಯ ಸ್ಯಾದ್ಯಾವನ್ನತಿವಿಪರ್ಯಯಃ ।**
**ಪ್ರಗುಣಾಯಾಂ ಮತೌ ಸತ್ಯಾಂ ಕಿಂ ತತ್ತ್ಯಾಜ್ಯ[2]ಮತಃ [3]ಪರಮ್ ॥**

ಎಲ್ಲಿಯವರೆಗೆ ಬುದ್ಧಿಯ ವಿಪರೀತತೆಯಿರುತ್ತದೋ(ತಪ್ಪು ತಿಳಿವಳಿಕೆಯಿರುತ್ತದೋ) ಅಲ್ಲಿಯವರೆಗೆ ಪುಷ್ಪಮಾಲಿಕೆ ಚಂದನ ಮೊದಲಾದುದೆಲ್ಲವೂ ಸುಖಕ್ಕೆ ಕಾರಣವಾಗುವುದು. ಬುದ್ಧಿಯು ನೆಟ್ಟಗಾಗುತ್ತಿರಲು(ಸರಿಯಾದ ತಿಳಿವಳಿಕೆಯುಳ್ಳುದಾಗುತ್ತಿರಲು) ಈ ಇಷ್ಟವಾದ ಪುಷ್ಪಮಾಲಿಕೆ ಕಾಮಿನಿ ಮೊದಲಾದುದಕ್ಕಿಂತ ಬೇರೆ ತ್ಯಜಿಸುವುದಕ್ಕೆ ಯೋಗ್ಯವಾದುದಾವುದು ?

**ಚಿತ್ತದ್ರುಮಸ್ಯ ಚೇದ್ವೃದ್ಧಿರಭಿಲಾಷವಿಷಾಂಕುರೈಃ ।**
**ಕಥಂ ದುಃಖಫಲಾನಿ ಸ್ಯುಃ ಸಂಭೋಗವಿಟಪೇಷು ನ ॥ ೨೩೯ ॥**

ಚಿತ್ತವೆಂಬ ವೃಕ್ಷದ ಬೆಳವಣಿಗೆಯು ಅಭಿಲಾಷೆಗಳೆಂಬ ವಿಷದ ಅಂಕುರಗಳಿಂದಾಗುವುದಾದರೆ ಸಂಭೋಗಗಳೆಂಬ ಕೊಂಬೆಗಳಲ್ಲಿ ದುಃಖಗಳೆಂಬ ಫಲಗಳು ಹೇಗೆ ಆಗಲಾರವು ?

**ಭುಕ್ತೋ ಭೋಗೋ ದಶಾಂಗೋಪಿ ಯಥೇಷ್ಟಂ ಸುಚಿರಂ ಮಯಾ ।**
**[4]ಮಾತ್ರಾ ಮಾತ್ರೇಪಿ ನಾತ್ರಾಸೀತ್ತೃಪ್ತಿಸ್ತೃಷ್ಣಾವಿಘಾತಿನೀ ॥ ೨೪೦ ॥**

ಯಥೇಷ್ಟವಾಗಿ ಬಹುಕಾಲದವರೆಗೆ ನನ್ನಿಂದ ಹತ್ತು ಪ್ರಕಾರವಾದ ಭೋಗವೂ ಅನುಭವಿಸಲ್ಪಟ್ಟಿತು. ಅಲ್ಪವಾದ ಕಾಲದಲ್ಲಿಯೂ ಈ ಭೋಗದಲ್ಲಿ ಆಶೆಯನ್ನು ನಾಶಮಾಡುವ ತೃಪ್ತಿಯು ಆಗಲಿಲ್ಲ.

**ಅಸ್ತು ವಸ್ತು ಸಮಸ್ತಂ ಚ ಸಂಕಲ್ಪವಿಷಯೀಕೃತಮ್ ।**
**ಇಷ್ಟಮೇವ ತಥಾಪ್ಯಸ್ಮಾನ್ನಾಸ್ತಿ [5]ಸ್ವಲ್ಪಾಪಿ [6]ನಿರ್ವೃತಿಃ ॥ ೨೪೧ ॥**

ಸಂಕಲ್ಪದಿಂದ ವಿಷಯೀಕರಿಸಿದ(ಸಂಕಲ್ಪಮಾತ್ರದಿಂದ ಪರಿಗ್ರಹಿಸಿದ) ಸಮಸ್ತ ವಸ್ತುವೂ ಇಷ್ಟವಾಗಿರಲಿ, ಹಾಗಾದರೂ ಇದರಿಂದ ಸ್ವಲ್ಪವೂ ಸುಖವಿಲ್ಲ.

**ಕಿಲ ಸ್ತ್ರೀಭ್ಯಃ ಸುಖಾವಾಪ್ತಿಃ ಪೌರುಷಂ ಕಿಮತಃ ಪರಮ್ ।**
**ದೈನ್ಯಮಾತ್ಮನಿ [6]ಸಂಭಾವ್ಯ ಸೌಖ್ಯಂ ಸ್ಯಾಂ ಪರಮಃ ಪುಮಾನ್ ॥ ೨೪೨ ॥**

ಸ್ತ್ರೀಯರಿಂದ ಸುಖಪ್ರಾಪ್ತಿಯಾಗುವುದಂತೆ ! ಇದರಿಂದ ಪೌರುಷವಾವುದು ? ಸ್ತ್ರೀಯರಿಂದ ಸುಖವು ಪ್ರಾಪ್ತವಾಗುವುದಾದರೆ ಪೌರುಷವು ವ್ಯರ್ಥವಾದುದೆಂದು ಭಾವವು. ಆತ್ಮನಲ್ಲಿ ಉತ್ಪನ್ನವಾದ ದೀನತೆಯಿಂದುಂಟಾದ ಸುಖವಿದೆಂದು ಸಂಕಲ್ಪಿಸಿ(ಬಿಟ್ಟು) ನಾನು ಪರಮಪುರುಷ-ಪರಮಾತ್ಮನಾಗುವೆನು."

**ಇತಿ ಶ್ರೀಪಾಲಚಕ್ರೇಶಃ ಸಂತ್ಯಜನ್ ವಕ್ರತಾಂ ಧಿಯಃ ।**
**ಅಕ್ರಮೇಣಾಖಿಲಂ ತ್ಯಕ್ತುಂ ಸಚಕ್ರಂ ಮತಿಮಾತನೋತ್ ॥ ೨೪೩ ॥**

ಈ ಪ್ರಕಾರವಾಗಿ ಶ್ರೀಪಾಲಚಕ್ರೇಶ್ವರನು ಬುದ್ಧಿಯ ವಕ್ರತೆಯನ್ನು ಪರಿತ್ಯಜಿಸುವವನಾಗಿ ಚಕ್ರಸಹಿತವಾದ ಎಲ್ಲವನ್ನೂ ಅಕ್ರಮದಿಂದ-ಏಕಕಾಲದಲ್ಲಿ ಬಿಡುವುದಕ್ಕೆ ಮನಸ್ಸನ್ನು ಮಾಡಿದನು.

೧ ಪ್ರಕ್ಚಂದನಾದಿ. ೨ ಇಷ್ಟಸ್ರಕ್ಕಾಮಿನ್ಯಾದಿಕಾತ್. ೩ ಅನ್ಯತ್. ೪ ಅಲ್ಪಾ. ೫ ಅಲ್ಪಾಪಿ. ೬ ಸುಖಂ. ೭ ಸಂಕಲ್ಪ್ಯ.

**ತತಃ ಸುಖಾವತೀಪುತ್ರಂ ನರಪಾಲಾಭಿಧಾನಕಮ್ ।**
**[1]ಕೃತ್ವಾಭಿಷೇಕಮಾರೋಪ್ಯ ಸಮುತ್ತುಂಗಂ ನಿಜಾಸನಮ್ ॥ ೨೪೪ ॥**

**ಜಯವತ್ಯಾದಿಭಿಃ ಸ್ವಾಭಿರ್ದೇವೀಭಿರ್ಧರಣೀಶ್ವರೈಃ ।**
**ವಸುಪಾಲಾದಿಭಿಶ್ಚಾಮಾ ಸಂಯಮಂ ಪ್ರತ್ಯಪದ್ಯತ ॥ ೨೪೫ ॥**

ಬಳಿಕ ಸುಖಾವತಿಯ- ಪತ್ನಿಯಮಗನಾದ ನರಪಾಲನೆಂಬವನಿಗೆ ಪಟ್ಟಾಭಿಷೇಕವನ್ನು ಮಾಡಿ ಉನ್ನತವಾದ ತನ್ನ ಪೀಠವನ್ನು ಹತ್ತಿಸಿ ಜಯವತಿಯೇ ಮೊದಲಾದ ತನ್ನ ದೇವಿಯರೊಡನೆಯೂ ವಸುಪಾಲನೇ ಮೊದಲಾದ ರಾಜರುಗಳೊಡನೆಯೂ ದೀಕ್ಷೆಯನ್ನು ಹೊಂದಿದನು.

**ಸ ಬಾಹ್ಯಮಂತರಂಗಂ ಚ ತಪಸ್ತಪ್ತ್ವಾ ಯಥಾವಿಧಿ ।**
**ಕ್ಷಪಕಶ್ರೇಣಿಮಾರುಹ್ಯ ಮಾಸೇನ ಹತಮೋಹಕಃ ॥ ೨೪೬ ॥**

**ಯಥಾಖ್ಯಾತಮವಾಪ್ಯೋರುಚಾರಿತ್ರಂ ನಿಷ್ಕಷಾಯಕಮ್ ।**
**ಧ್ಯಾಯನ್ ದ್ವಿತೀಯಶುಕ್ಲೇನ [2]ವೀಚಾರರಹಿತಾತ್ಮನಾ ॥ ೨೪೭ ॥**

**ಘಾತಿಕರ್ಮತ್ರಯಂ ಹತ್ವಾ ಸಂಪ್ರಾಪ್ತನವಕೇವಲಃ ।**
**ಸಯೋಗಸ್ಥಾನಮಾಕ್ರಮ್ಯ ವಿಯೋಗೋ ವೀತಕಲ್ಮಷಃ ॥ ೨೪೮ ॥**

**ಶರೀರತ್ರಿತಯಾಪಾಯಾದಾವಿಷ್ಕೃತಗುಣೋತ್ಕರಃ ।**
**ಅನಂತಂ ಶಾಂತ[3]ಮಪ್ರಾಯಮವಾಪ ಸುಖಮುತ್ತಮಮ್ ॥ ೨೪೯ ॥**

ಶ್ರೀಪಾಲನು ಶಾಸ್ತ್ರವಿಧಿಪ್ರಕಾರವಾಗಿ ಒಂದು ತಿಂಗಳ ಕಾಲ ಅನಶನಾದಿ ಬಾಹ್ಯತಪಸ್ಸನ್ನೂ ಪ್ರಾಯಶ್ಚಿತ್ತಾದಿ ಅಂತರಂಗತಪಸ್ಸನ್ನೂ ಮಾಡಿ ಕ್ಷಪಕಶ್ರೇಣಿಯನ್ನು ಹತ್ತಿ ಮೋಹನೀಯಕರ್ಮವನ್ನು ನಾಶಮಾಡಿದವನೂ ಕ್ರೋಧಾದಿ ಕಷಾಯರಹಿತವಾದ ಯಥಾಖ್ಯಾತವೆಂಬ ಉತ್ತಮ ಚಾರಿತ್ರವನ್ನು ಹೊಂದಿ ಅರ್ಥ ಮತ್ತು ವ್ಯಂಜನಗಳ ಸಂಕ್ರಮ-ಸಂಬಂಧರಹಿತವಾದ ಏಕತ್ವವಿತರ್ಕವೆಂಬ ದ್ವಿತೀಯ ಶುಕ್ಲಧ್ಯಾನದಿಂದ ಧ್ಯಾನಿಸುವವನೂ ಜ್ಞಾನಾವರಣ ದರ್ಶನಾವರಣ ಅಂತರಾಯಗಳೆಂಬ ಮೂರು ಘಾತಿಕರ್ಮಗಳನ್ನು ನಾಶಮಾಡಿ ಸಮ್ಯಕ್ತ್ವ, ಚಾರಿತ್ರ, ಜ್ಞಾನ, ದರ್ಶನ, ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳೆಂಬ ನವಕೇವಲಲಬ್ಧಿಗಳನ್ನು ಹೊಂದಿದವನೂ ಸಯೋಗಸ್ಥಾನವೆಂಬ ಹದಿಮೂರನೆಯ ಗುಣಸ್ಥಾನವನ್ನು ಆಕ್ರಮಿಸಿ-ಹೊಂದಿ ಯೋಗ-ಮನೋವಾಕ್ಕಾಯವ್ಯಾಪಾರರಹಿತನೂ ಕಲ್ಮಷ-ಕರ್ಮರಹಿತನೂ ಔದಾರಿಕ, ತೈಜಸ, ಕಾರ್ಮಣಗಳೆಂಬ ಮೂರು ಶರೀರಗಳ ನಾಶದಿಂದ ಪ್ರಕಟಮಾಡಲ್ಪಟ್ಟ ಗುಣಸಮೂಹವುಳ್ಳವನೂ ಆಗಿ ಅನಂತವೂ ಶಾಂತವೂ ಅನುಪಮವೂ ಆದ ಉತ್ತಮಸುಖವನ್ನು ಹೊಂದಿದನು. ಮೋಕ್ಷಸುಖವನ್ನು ಹೊಂದಿದನೆಂದು ಭಾವವು.

**ತಸ್ಯ ರಾಜ್ಞ್ಯಶ್ಚ ತಾಃ ಸರ್ವಾ ವಿಧಾಯ ವಿವಿಧಂ ತಪಃ ।**
**ಸ್ವರ್ಗಲೋಕೇ ಸ್ವಯೋಗ್ಯೋರುವಿಮಾನೇಷ್ವಭವನ್ ಸುರಾಃ ॥ ೨೫೦ ॥**

ಶ್ರೀಪಾಲನ ಆ ಎಲ್ಲ ರಾಜ್ಞಿ-ದೇವಿಯರೂ ನಾನಾಪ್ರಕಾರವಾದ ತಪಸ್ಸನ್ನು ಮಾಡಿ ಸ್ವರ್ಗಲೋಕದಲ್ಲಿ ತಮಗೆ ಯೋಗ್ಯವಾದ ಮತ್ತು ದೊಡ್ಡದಾದ ವಿಮಾನಗಳಲ್ಲಿ ದೇವತೆಗಳಾದರು.

**ಆವಾಂ ಚಾಕರ್ಣ್ಯ [4]ತಂ ನತ್ವಾ ಗತ್ವಾ ನಾಕಂ [5]ನಿಜೋಚಿತಮ್ ।**
**ಅನುಭೂಯ ಸುಖಂ [6]ಪ್ರಾಂತೇ ಶೇಷಪುಣ್ಯವಿಶೇಷತಃ ॥ ೨೫೧ ॥**

**ಇಹಾಗತಾವಿತಿ ವ್ಯಕ್ತಂ ವ್ಯಾಜಹಾರ ಸುಲೋಚನಾ ।**
**ಜಯೋಽಪಿ ಸ್ವಪ್ರಿಯಾಪ್ರಜ್ಞಾಪ್ರಭಾವಾದತುಷತ್ತರಾಮ್ ॥ ೨೫೨ ॥**

೧ ಕೃತಾಭಿಷೇಕಮಿತ್ಯಪಿಪಾಠಃ. ೨ ಅರ್ಥವ್ಯಂಜನಸಂಕ್ರಮರಹಿತೇನ. ೩ ಪ್ರಾಯಶ್ಚಾನಶನೇಮೃತ್ಯೌ ತುಲ್ಯಬಾಹುಲ್ಯಯೋರಪಿ. ೪ ಗುಣಪಾಲಕೇವಲಿನಂ. ೫ ಯಥೋಚಿತಮಿತ್ಯಪಿಪಾಠಃ. ೬ ಆಯುರಂತೇ.

ನಾವುಗಳೂ(ದೇವದಂಪತಿಗಳಾಗಿದ್ದ ನಾವೀರ್ವರೂ–ಜಯಕುಮಾರ ಸುಲೋಚನೆಯರೂ) ಧರ್ಮೋಪದೇಶವನ್ನು ಕೇಳಿ ಗುಣಪಾಲಕೇವಲಿಯನ್ನು ನಮಸ್ಕರಿಸಿ ನಮಗೆ ಉಚಿತವಾದ ಸ್ವರ್ಗಕ್ಕೆ ಹೋಗಿ ಸುಖವನ್ನನುಭವಿಸಿ ಆಯುಷ್ಯಾವಸಾನದಲ್ಲಿ ಉಳಿದಿರುವ ಪುಣ್ಯವಿಶೇಷದಿಂದ ಇಲ್ಲಿ ಬಂದೆವು'' ಎಂದು ಸುಲೋಚನೆಯು ಸ್ಫುಟವಾಗಿ ಹೇಳಿದಳು. ಜಯಕುಮಾರನೂ ತನ್ನ ಪ್ರಾಣಕಾಂತೆಯ ಬುದ್ಧಿಯ ಪ್ರಭಾವದಿಂದ ಬಹಳವಾಗಿ ಸಂತೋಷಪಟ್ಟನು.

**ತದಾ ಸದ[1]ಸ್ಸದಃ ಸರ್ವೇ [2]ಪ್ರತೀಯು[3]ಸ್ತದುದಾಹೃತಮ್ ।**
**ಕಃ ಪ್ರತ್ಯೇತಿ ನ ದುಷ್ಟಶ್ಚೇತ್ಸದ್ಭಿರ್ನಿಗದಿತಂ ವಚಃ ॥ ೨೫೩ ॥**

ಆಗ ಸಭೆಯ ಸಭಿಕರೆಲ್ಲರೂ ಸುಲೋಚನೆಯ ವಚನವನ್ನು ನಂಬಿದರು. ಸತ್ಪುರುಷರಿಂದ ಹೇಳಲ್ಪಟ್ಟ ವಚನವು ದುಷ್ಟವಚನವಲ್ಲದಿದ್ದರೆ ಯಾರು ನಂಬುವುದಿಲ್ಲ ?

**ಏವಂ ಸುಖೇನ ಸಾಮ್ರಾಜ್ಯಭೋಗಸಾರಂ ನಿರಂತರಮ್ ।**
**ಭುಂಜಾನೌ ರಂಜಿತಾನ್ಯೋನ್ಯೌ ಕಾಲಂ ಗಮಯತಃ ಸ್ಮ ತೌ ॥ ೨೫೪ ॥**

ಈ ಪ್ರಕಾರವಾಗಿ ಸುಖದಿಂದ ಸಾಮ್ರಾಜ್ಯಭೋಗಗಳ ಸಾರವನ್ನು ಎಡೆಬಿಡದೆ ಅನುಭವಿಸುವವರೂ ಒಬ್ಬರಿಗೊಬ್ಬರು ಅನುರಾಗವನ್ನುಂಟುಮಾಡುವವರೂ ಆದ ಆ ಜಯಕುಮಾರ ಸುಲೋಚನೆಯರು ಕಾಲವನ್ನು ಕಳೆದರು.

**ತದಾ [4]ಖಗಭವಾವಾಪ್ತಪ್ರಜ್ಞಪ್ತಿಪ್ರಮುಖಾಃ ಶ್ರಿತಾಃ ।**
**ವಿದ್ಯಾ[5]ಸ್ತಾಂ ಚ [6]ಮಹೀಶಂ ಚ ಸಂಪ್ರೀತ್ಯಾ [7]ತೌ ನನಂದತುಃ ॥**

ಆಗ ಪ್ರಭಾವತೀ ಹಿರಣ್ಯವರ್ಮರಾಗಿದ್ದ ಖೇಚರಭವದಲ್ಲಿ ಪ್ರಾಪ್ತವಾಗಿದ್ದ ಪ್ರಜ್ಞಪ್ತಿ ಮೊದಲಾದ ವಿದ್ಯೆಗಳು ಸುಲೋಚನೆಯನ್ನೂ ಜಯಕುಮಾರನನ್ನೂ ಆಶ್ರಯಿಸಿದುವು. ಬಹು ಪ್ರೀತಿಯಿಂದ ಆ ದಂಪತಿಗಳು ಆನಂದಪಡುತ್ತಿದ್ದರು.

**[8]ತದ್ಬಲಾತ್ಕಾಂತಯಾ ಸಾರ್ಧಂ ವಿಹರ್ತುಂ ಸುರಗೋಚರಾನ್ ।**
**ವಾಂಛನ್ ದೇಶಾನ್ ನಿಜಂ ರಾಜ್ಯಂ [9]ಸಂಯೋಜ್ಯ ವಿಜಯೇನುಜೇ ॥**

**ಯಥೇಷ್ಟಂ ಸಪ್ರಿಯೋ ವಿದ್ಯಾವಾಹನಃ ಸರಿತಾಂ ಪತೀನ್ ।**
**ಕುಲಶೈಲಾನ್ನದೀರಮ್ಯವನಾನಿ ವಿವಿಧಾನ್ಯಪಿ ॥ ೨೫೭ ॥**

**ವಿಹರನ್ನನ್ಯದಾ ಮೇಘಸ್ವರಃ ಕೈಲಾಸಶೈಲಜೇ ।**
**ವನೇ ಸುಲೋಚನಾಭ್ಯರ್ಣಾದಸೌ ಕಿಂಚಿದಪಾಸರತ್ ॥ ೨೫೮ ॥**

ಆ ವಿದ್ಯೆಗಳ ಬಲದಿಂದ ಜಯಕುಮಾರನು ಪತ್ನಿಯೊಡನೆ ದೇವತೆಗಳಿಗೆ ವಿಷಯವಾದ ದೇಶಗಳನ್ನು ವಿಹರಿಸುವುದಕ್ಕೋಸ್ಕರ ಇಚ್ಛಿಸಿ ತನ್ನ ರಾಜ್ಯವನ್ನು ತಮ್ಮನಾದ ವಿಜಯನಲ್ಲಿ ಸೇರಿಸಿ ಯಥೇಚ್ಛವಾಗಿ ಪ್ರಿಯೆಯೊಡನೆ ಕೂಡಿರುವವನೂ ವಿದ್ಯಾರೂಪವಾದ ವಾಹನವುಳ್ಳವನೂ ಸಮುದ್ರಗಳನ್ನೂ ಕುಲಪರ್ವತಗಳನ್ನೂ ನದಿಗಳನ್ನೂ ನಾನಾಪ್ರಕಾರವೂ ರಮಣೀಯವೂ ಆದ ವನಗಳನ್ನೂ ವಿಹರಿಸುವವನೂ ಆಗಿ ಮತ್ತೊಂದು ಕಾಲದಲ್ಲಿ ಕೈಲಾಸಪರ್ವತದಲ್ಲಿ ಉಂಟಾಗಿರುವ ವನದಲ್ಲಿ ಸುಲೋಚನೆಯ ಸಮೀಪದಿಂದ ಈ ಮೇಘಸ್ವರನು ಸ್ವಲ್ಪಕಾಲವನ್ನು ಕಳೆದನು.

**ಅಮರೇಂದ್ರೇ ಸಭಾಮಧ್ಯೇ ಶೀಲಮಾಹಾತ್ಮ್ಯಶಂಸನಮ್ ।**
**ಜಯಸ್ಯ ತತ್ಪ್ರಿಯಾಯಾಶ್ಚ ಪ್ರಕುರ್ವತಿ ಕದಾಚನ ॥ ೨೫೯ ॥**

**ಶ್ರುತ್ವಾ ತದಾದಿಮೇ ಕಲ್ಪೇ [10]ರವಿಪ್ರಭವಿಮಾನಜ ।**
**ಶ್ರೀಶಾ ರವಿಪ್ರಭಾಖ್ಯೇನ ತಚ್ಛೀಲಾನ್ವೇಷಣಂ ಪ್ರತಿ ॥ ೨೬೦ ॥**

**ಪ್ರೇಷಿತಾ ಕಾಂಚನಾ ನಾಮ ದೇವೀ ಪ್ರಾಪ್ಯ ಜಯಂ ಸುಧೀಃ ।**
**ಕ್ಷೇತ್ರೇಸ್ಮಿನ್ಭಾರತೇ ಖೇಚರಾದ್ರೇರುತ್ತರದಿಕ್ತಟೇ ॥ ೨೬೧ ॥**

**ಮನೋಹರಾಖ್ಯವಿಷಯೇ ರಾಜಾ ರತ್ನಪುರಾಧಿಪಃ ।**
**ಅಭೂತ್ಪಿಂಗಲಗಾಂಧಾರಃ ಸುಖದಾ ತಸ್ಯ ಸುಪ್ರಭಾ ॥ ೨೬೨ ॥**

ಒಂದಾನೊಂದು ಕಾಲದಲ್ಲಿ ದೇವೇಂದ್ರನು ಜಯಕುಮಾರನ ಮತ್ತು ಆತನ ಪ್ರಿಯೆಯ ಶೀಲಮಹಿಮೆಯ ಪ್ರಶಂಸೆಯನ್ನು ಸಭಾಮಧ್ಯದಲ್ಲಿ ಮಾಡುತ್ತಿರಲು ಅದನ್ನು ಕೇಳಿ ಸ್ವರ್ಗದ ಮೊದಲನೆಯ ಕಲ್ಪದಲ್ಲಿ ರವಿಪ್ರಭವಿಮಾನೋತ್ಪನ್ನಳಾದ ಲಕ್ಷ್ಮಿಯ ಪತಿಯಾದ ರವಿಪ್ರಭನೆಂಬ ದೇವನಿಂದ ಅವರ ಶೀಲವನ್ನು ಹುಡುಕು–ಪರೀಕ್ಷಿಸುವುದಕ್ಕೋಸ್ಕರ ಕಳುಹಲ್ಪಟ್ಟವಳೂ ಬುದ್ಧಿಶಾಲಿನಿಯೂ ಆದ ಕಾಂಚನಾದೇವಿಯೆಂಬವಳು ಜಯಕುಮಾರನನ್ನು ಹೊಂದಿ'' ಈ ಭರತಕ್ಷೇತ್ರದಲ್ಲಿ ವಿಜಯಾರ್ಧಪರ್ವತದ ಉತ್ತರದಿಕ್ಪ್ರದೇಶದಲ್ಲಿ ಮನೋಹರವೆಂಬ ದೇಶದಲ್ಲಿ ರತ್ನಪುರಾಧಿಪತಿಯಾದ ಪಿಂಗಲಗಾಂಧಾರನೆಂಬ ದೊರೆಯಿದ್ದನು. ಆತನಿಗೆ ಸುಪ್ರಭೆಯೆಂಬವಳು ಸುಖವನ್ನು ಕೊಡುವವಳು (ಪತ್ನಿಯು).

**ತಯೋರ್ವಿದ್ಯುತ್ಪ್ರಭಾ ಪುತ್ರೀ ನಮೇರ್ಭಾರ್ಯಾ ಯದೃಚ್ಛಯಾ ।**
**ತ್ವಾಂ ನಂದನೇ ಮಹಾಮೇರೌ ಕ್ರೀಡಂತಂ ವೀಕ್ಷ್ಯ ಸೋತ್ಸುಕಾ॥ ೨೬೩ ॥**

ಆ ದಂಪತಿಗಳ ಪುತ್ರಿಯೂ ನಮಿರಾಜನ ಪತ್ನಿಯೂ ಆದ ವಿದ್ಯುತ್ಪ್ರಭೆಯು–ನಾನು ಆಕಸ್ಮಾತ್ ಮಹಾಮೇರುಪರ್ವತದ ನಂದನವನದಲ್ಲಿ ಕ್ರೀಡಿಸುತ್ತಿರುವ ನಿನ್ನನ್ನು ನೋಡಿ ಕುತೂಹಲವುಳ್ಳವಳಾದೆನು.

**ತದಾ ಪ್ರಭೃತಿ ಮಚ್ಚಿತ್ತೇಭವಸ್ತ್ವಂ ಲಿಖಿತಾಕೃತಿಃ ।**
**ತ್ವತ್ಸಮಾಗಮಮೇವಾಹಂ ಧ್ಯಾಯಂತೀ ದೈವಯೋಗತಃ ॥ ೨೬೪ ॥**

**ದೃಷ್ಟವತ್ಯಸ್ಮಿ ಕಾಂತಾಸ್ಮಿ[1]ನ್ನಿವೇಗಂ ಸೋಢುಮಕ್ಷಮಾ ।**
**ಇತ್ಯಪಾಸ್ಯೋಪಕಂಠಸ್ಥಾ[2]ನ್ಸ್ವಕೀಯಾನ್ಸ್ಮರವಿಹ್ವಲಾ ॥ ೨೬೫ ॥**

**ಸ್ವಾನುರಾಗಂ ಜಯೇ ವ್ಯಕ್ತಮಕರೋದ್ವಿಕೃತೇಕ್ಷಣಾತ್ ।**
**ತದ್ದುಷ್ಟಚೇಷ್ಟಿತಂ ದೃಷ್ಟ್ವಾ ಮಾ ಮಂಸ್ಥಾಃ ಪಾಪಮೀದೃಶಮ್ ॥**

**ಸೋದರ್ಯಾ ತ್ವಂ ಮಮಾದಾಯಿ ಮಯಾ ಮುನಿವರಾದ್ವ್ರತಮ್ ।**
**ಪರಾಂಗನಾಂಗಸಂಸರ್ಗಸುಖಂ ಮೇ ವಿಷಭಕ್ಷಣಮ್ ॥ ೨೬೭ ॥**

ಅಂದಿನಿಂದ ನನ್ನ ಚಿತ್ತದಲ್ಲಿ ನೀನು ಬರೆಯಲ್ಪಟ್ಟ ಆಕಾರವುಳ್ಳವನಾದೆ. ನಾನು ನಿನ್ನ ಸಮಾಗಮವನ್ನೇ ಧ್ಯಾನಿಸುವವಳಾಗಿ ದೈವಯೋಗದಿಂದ ನಿನ್ನನ್ನು ನೋಡುವವಳಾಗಿರುತ್ತೇನೆ. ಪ್ರಿಯನೆ ! ಈ ಪ್ರದೇಶದಲ್ಲಿ ಕಾಮವೇಗವನ್ನು ಸಹಿಸುವುದಕ್ಕೆ ಅಸಮರ್ಥಳಾಗಿರುತ್ತೇನೆ'' ಎಂದು ಸಮೀಪದಲ್ಲಿರುವ ಸ್ವಜನರನ್ನು ಬಿಟ್ಟು ಕಾಮವಿಕಾರದಿಂದ ಬಳಲಿದವಳಾಗಿ ತನ್ನ ಅನುರಾಗವನ್ನು ವಿಕಾರವಾಗಿ ಮಾಡಲ್ಪಟ್ಟ ನೋಟದಿಂದ ಜಯಕುಮಾರನಲ್ಲಿ ವ್ಯಕ್ತಪಡಿಸಿದಳು. ಆ ದುಷ್ಟಚೇಷ್ಟೆಯನ್ನು ನೋಡಿ ''ಈ ಪ್ರಕಾರವಾದ ಪಾಪವನ್ನು ತಿಳಿಯಬೇಡ– ಯೋಚಿಸಬೇಡ. ನೀನು ನನಗೆ ಸಹೋದರಿಯು. ನಾನು ಮುನೀಶ್ವರರಿಂದ ವ್ರತವನ್ನು ತೆಗೆದುಕೊಂಡಿರುತ್ತೇನೆ. ಪರಸ್ತ್ರೀಯ ಶರೀರಸಂಸರ್ಗದಿಂದುಂಟಾಗುವ ಸುಖವು ನನಗೆ ವಿಷಭಕ್ಷಣವಾಗಿರುವುದು(ವಿಷಭಕ್ಷಣಕ್ಕೆ ಸಮಾನವಾದುದು).''

**ಮಹೀಶೇನೇತಿ ಸಂಪ್ರೋಕ್ತಾ ಮಿಥ್ಯಾ ಸಾ [3]ಪಾಪವೇಪಿನೀ ।**
**ಉಪಾತ್ತರಾಕ್ಷಸೀವೇಷಾ ತಂ ಸಮುದ್ಧೃತ್ಯ ಗತ್ವರೀ ॥ ೨೬೮ ॥**

**ಪುಷ್ಪಾಪಚಯಸಂಸಕ್ತನೃಪಕಾಂತಾಭಿತರ್ಜಿತಾ ।**
**ಭೀತ್ವಾ ತಚ್ಛೀಲಮಾಹಾತ್ಮ್ಯಾತ್ಕಾಂಚನಾದೃಶ್ಯತಾಂ ಗತಾ ॥ ೨೬೯ ॥**

೧ ಸಭ್ಯಾಃ. ೨ ವಿಶ್ವಸ್ತವಂತಃ. ೩ ಸುಲೋಚನಾವಚನಂ. ೪ ಪ್ರಭಾವತೀ ಹಿರಣ್ಯವರ್ಮಭವೇಪ್ರಾಪ್ತ. ೫ ಸುಲೋಚನಾಂ. ೬ ಜಯಕುಮಾರಂ. ೭ ವರ್ದ್ಧಿತಶ್ರಿಯಇತ್ಯಪಿಪಾಠಃ. ೮ ಪ್ರಜ್ಞಪ್ತ್ಯಾದಿಬಲಾತ್. ೯ ನಿಯೋಜ್ಯೇತ್ಯಪಿಪಾಠಃ. ೧೦ ರವಿಪ್ರಭವಿಮಾನೋತ್ಪನ್ನಲಕ್ಷ್ಮೀಪತಿನಾ.

೧ ಕಾಮವೇಗಂ. ೨ ಸ್ವಜನಾನ್. ೩ ಅಶೋಭನಂಕಂಪನೀ.

ಈ ಪ್ರಕಾರವಾಗಿ ದೊರೆಯಿಂದ–ಜಯಕುಮಾರನಿಂದ ಹೇಳಲ್ಪಟ್ಟವಳೂ ಸುಳ್ಳಾದ ರೂಪವುಳ್ಳವಳೂ ಅಶುಭವಾದ ನಡುಗುವಿಕೆಯುಳ್ಳವಳೂ ರಾಕ್ಷಸೀವೇಷವುಳ್ಳವಳೂ ಜಯಕುಮಾರನನ್ನು ಎತ್ತಿಕೊಂಡು ಗಮನಶೀಲಳೂ ಹೂವುಗಳನ್ನು ಕೊಯ್ಯುವುದರಲ್ಲಿ ಆಸಕ್ತಳಾದ ಸುಲೋಚನೆಯಿಂದ ತಿರಸ್ಕರಿಸಲ್ಪಟ್ಟವಳೂ ಆದ ಆ ಕಾಂಚನಾದೇವಿಯು ಸುಲೋಚನೆಯ ಶೀಲದ ಮಹಿಮೆಯಿಂದ ಹೆದರಿ ಅದೃಶ್ಯತ್ವವನ್ನು ಹೊಂದಿದಳು.

**ಅಬಿಭ್ಯನ್ದೇವತಾಶ್ಚೈವಂ ಶೀಲವತ್ಯಾಃ ಪರೇ ನ ಕೇ ।**
**ಜ್ಞಾತ್ವಾ ತಚ್ಛೀಲಮಾಹಾತ್ಮ್ಯಂ ಗತ್ವಾ ಸ್ವಸ್ವಾಮಿನಂ ಪ್ರತಿ ॥ ೨೭೦ ॥**

**ಪ್ರಾಶಂಸತ್ಸಾ ತಯೋಸ್ತಾದೃಜ್ಮಾಹಾತ್ಮ್ಯಂ ಸೋಪಿ ವಿಸ್ಮಯಾತ್ ।**
**ರವಿಪ್ರಭಃ ಸಮಾಗತ್ಯ ತಾವುಭೌ ತದ್ಗುಣಪ್ರಿಯಃ ॥ ೨೭೧ ॥**

**ಸ್ವವೃತ್ತಾಂತಂ ಸಮಾಖ್ಯಾಯ ಯುವಾಭ್ಯಾಂ ಕ್ಷಮ್ಯತಾಮಿತಿ ।**
**ಪೂಜಯಿತ್ವಾ ಮಹಾರತ್ನೈರ್ನಾಕಲೋಕಂ ಸಮೀಯಿವಾನ್ ॥ ೨೭೨ ॥**

ದೇವತೆಗಳೂ ಶೀಲವತಿಗೆ ಹೀಗೆ ಹೆದರಿದರೆಂದಮೇಲೆ ಬೇರೆಯವರು ಯಾರು ಹೆದರುವುದಿಲ್ಲ? ಆ ಕಾಂಚನಾದೇವಿಯು ಅವರ ಶೀಲಮಹಿಮೆಯನ್ನು ತಿಳಿದು ತನ್ನ ಪತಿಯನ್ನು ಕುರಿತು(ಪತಿಯ ಬಳಿಗೆ) ಹೋಗಿ ಆ ದಂಪತಿಗಳ ಅಂಥಾ ಮಹಿಮೆಯನ್ನು ಹೊಗಳಿದಳು. ಆ ರವಿಪ್ರಭದೇವನೂ ಆಶ್ಚರ್ಯದಿಂದ ಆ ಜಯಕುಮಾರ ಸುಲೋಚನೆಯರನ್ನು ಕಂಡು ಅವರ ಗುಣಗಳಲ್ಲಿ ಪ್ರೀತಿಯುಳ್ಳವನಾಗಿ ತನ್ನ ಸಮಾಚಾರವನ್ನು ತಿಳಿಸಿ ''ನಿಮ್ಮಗಳಿಂದ ಕ್ಷಮಿಸಲ್ಪಡಲಿ'' ಎಂದು ಮಹಾರತ್ನಗಳಿಂದ ಪೂಜಿಸಿ ಸ್ವರ್ಗಲೋಕಕ್ಕೆ ಹೋದನು.

**ತಥಾ ಚಿರಂ ವಿಹೃತ್ಯಾತ್ತಸಂಪ್ರೀತಿಃ ಕಾಂತಯಾ ಸಮಮ್ ।**
**ನಿವೃತ್ಯ ಪುರಮಾಗತ್ಯ ಸುಖಸಾರಂ ಸಮನ್ವಭೂತ್ ॥ ೨೭೩ ॥**

ಹಾಗೆಯೇ ಪತ್ನಿಯೊಡನೆ ಬಹುಕಾಲದವರೆಗೆ ವಿಹರಿಸಿ ಪ್ರೀತಿಯನ್ನು ಹೊಂದಿದವನಾಗಿ ಹಿಂದಿರುಗಿ ಪಟ್ಟಣಕ್ಕೆ ಬಂದು ಸುಖದ ಸಾರವನ್ನು ಅನುಭವಿಸಿದನು.

**ಅಥಾನ್ಯದಾ ಸಮುತ್ಪನ್ನಬೋಧಿರ್ಮೇಘಸ್ವರಾಧಿಪಃ ।**
**ತೀರ್ಥಾಧಿನಾಥಮಾಸಾದ್ಯ ವಂದಿತ್ವಾ [1]ಭಂದಭಾಜನಮ್ ॥ ೨೭೪ ॥**

**ಕೃತ್ವಾ ಧರ್ಮಪರಿಪ್ರಶ್ನಂ ಶ್ರುತ್ವಾ ತಸ್ಮಾದ್ಯಥೋದಿತಮ್ ।**
**[2]ಆಕ್ಷೇಪಿಣ್ಯಾದಿಕಾಃ ಸಮ್ಯಕ್ಕಥಾ ಬಂಧೋದಯಾದಿಕಮ್ ॥ ೨೭೫ ॥**

**ಕರ್ಮನಿರ್ಮುಕ್ತಸಂಪ್ರಾಪ್ಯಂ ಶರ್ಮಸಾರಂ ಪ್ರಬುದ್ಧಧೀಃ ।**
**ಶಿವಂಕರಮಹಾದೇವ್ಯಾಸ್ತನೂಜೋ ಜಗತಾಂ ಪ್ರಿಯಃ ॥ ೨೭೬ ॥**

**ಅವಾರ್ಯೋನಂತವೀರ್ಯಾಖ್ಯಃ ಶತ್ರುಭಿಃ ಶಸ್ತ್ರಶಾಸ್ತ್ರವಿತ್ ।**
**ಆಕುಮಾರಂ ಯಶಸ್ತಸ್ಯ ಶೌರ್ಯಂ ಶತ್ರುಜಯಾವಧಿ ॥ ೨೭೭ ॥**

**ತ್ಯಾಗಃ ಸರ್ವಾರ್ಥಿಸಂತರ್ಪೀ ಸತ್ಯಂ ಸ್ವಪ್ನೇ[3]ಪ್ಯವಿಪ್ಲುತಮ್ ।**
**ವಿಧಾಯಾಭಿಷವಂ ತಸ್ಮೈ ಪ್ರದಾಯಾತ್ಮೀಯಸಂಪದಮ್ ॥ ೨೭೮ ॥**

**ಪದಂ ಪರಂ ಪರಿಪ್ರಾಪ್ತುಮವ್ಯಗ್ರಮಭಿಲಾಷುಕಃ ।**
**ವಿಸರ್ಜಿತಸಗೋತ್ರಾದಿರ್ವಿನಿರ್ಜಿತ[4]ರಿಪುದ್ವಯಃ ॥ ೨೭೯ ॥**

೧ ಭದುಬ್ಬುಖಕಲ್ಯಾಣಯೋರಿತಿಧಾತೋರ್ಭಾವೇಘಞ್ಸುಖಭಾಜನಂಕಲ್ಯಾಣಭಾಜನಂವಾ. ೨ ಆಕ್ಷೇಪಿಣೀವಿಕ್ಷೇಪಿಣೀಸಂವೇದಿನೀನಿರ್ವೇದಿನೀಚೇತಿಚತಸ್ರಃ. ೩ ಅವಿಚ್ಯುತಂ ನಿರ್ಬಾಧಂವಾ. ೪ ರಾಗದ್ವೇಷಶತ್ರುಯುಗಃ.

**ವಿತರ್ಜಿತಮಹಾಮೋಹಃ ಸಮರ್ಜಿತ[1]ಶುಭಾಶಯಃ ।**
**ವಿಜಯೇನ ಜಯಂತೇನ ಸಂಜಯಂತೇನ ಚಾನುಜೈಃ ॥ ೨೮೦ ॥**

**ಅನ್ಯೈಶ್ಚ ನಿಶ್ಚಿತತ್ಯಾಗೈ ರಾಗದ್ವೇಷಾವಿದೂಷಿತೈಃ ।**
**ರವಿಕೀರ್ತಿರಿಪುಜಯೋರಿಂದಮೋರಿಂಜಯಾಹ್ವಯಃ ॥ ೨೮೧ ॥**

**ಸಂಜಯಃ ಸಸುಕಾಂತಶ್ಚ ಸಪ್ತಮಶ್ಚಾಜಿತಂಜಯಃ ।**
**ಮಹಾಜಯೋರಿವೀರ್ಯಶ್ಚ ವೀರಂಜಯಸಮಾಹ್ವಯಃ ॥ ೨೮೨ ॥**

**ರವಿವೀರ್ಯಸ್ತಥಾನ್ಯೇ ಚ ತನೂಜಾಶ್ಚಕ್ರವರ್ತಿನಃ ।**
**ತೈಶ್ಚ ಸಾರ್ಧಂ ಸುನಿರ್ವಿಣ್ಣೈಶ್ಚರಮಾಂಗೋ ವಿಶುದ್ಧಿಭಾಕ್ ॥ ೨೮೩ ॥**

**[2]ವಿಷ ಪಾತ್ರವಿಶೇಷಸ್ತೇ ಸಂವೋಢುಂ ಶಾಸನಂ ಮಹತ್ ।**
**ಇತಿ [3]ವಿಶ್ವಮಹೀಶೇನ [4]ದೇವದೇವಸ್ಯ [5]ಸೋರ್ಪಿತಃ ॥ ೨೮೪ ॥**

**ಕೃತಗ್ರಂಥಪರಿತ್ಯಾಗಃ ಪ್ರಾಪ್ತಗ್ರಂಥಾರ್ಥಸಂಗ್ರಹಃ ।**
**ಪ್ರಕೃಷ್ಟಸಂಯಮಂ ಪ್ರಾಪ್ಯ ಸಿದ್ಧಸಪ್ತರ್ದ್ಧಿವರ್ದ್ಧಿತಃ ॥ ೨೮೫ ॥**

**ಚತುರ್ಜ್ಞಾನಾಮಲಜ್ಯೋತಿರ್ಹತಾತತತಮಸ್ತಮಾಃ ।**
**ಅಭೂದ್ಗಣಧರೋ ಭರ್ತುರೇಕಸಪ್ತತಿಪೂರಕಃ ॥ ೨೮೬ ॥**

ಅನಂತರದಲ್ಲಿ ಮತ್ತೊಂದು ಕಾಲದಲ್ಲಿ ಉತ್ಪನ್ನವಾದ ಆತ್ಮಜ್ಞಾನವುಳ್ಳವನಾದ ಮೇಘಸ್ವರ–ಜಯಕುಮಾರರಾಜನು ಸುಖಕ್ಕೆ ಅಥವಾ ಮಂಗಲಕ್ಕೆ ಪಾತ್ರನಾದ ತೀರ್ಥೇಶ್ವರ–ವೃಷಭಸ್ವಾಮಿಯನ್ನು ಕಂಡು ವಂದಿಸಿ ಧರ್ಮಸಂಬಂಧವಾದ ಪ್ರಶ್ನೆಯನ್ನು ಮಾಡಿ ಆಕ್ಷೇಪಿಣೀ ವಿಕ್ಷೇಪಿಣಿ ಸಂವೇದಿನೀ ನಿರ್ವೇದಿನೀಕಥೆಗಳನ್ನೂ ಕರ್ಮಬಂಧ ಉದಯ ಮೊದಲಾದುದನ್ನೂ ಕರ್ಮಬಂಧನದಿಂದ ಬಿಡಲ್ಪಟ್ಟವರಿಂದ ಹೊಂದಲ್ಪಡುವುದಕ್ಕೆ ಯೋಗ್ಯವಾದ ಸುಖದ ಸಾರವನ್ನೂ ಹೇಳಲ್ಪಟ್ಟ ಹಾಗೆಯೇ ಆ ವೃಷಭಸ್ವಾಮಿಯ ದೆಸೆಯಿಂದ ಚೆನ್ನಾಗಿ ಕೇಳಿ ಜಾಗೃತವಾದ ಬುದ್ಧಿಯುಳ್ಳವನಾಗಿ ಶಿವಂಕರಮಹಾದೇವಿಯ ಪುತ್ರನೂ ಜಗತ್ತುಗಳಿಗೆ ಪ್ರಿಯನೂ ಶತ್ರುಗಳಿಂದ ತಡೆಯಲ್ಪಡದಿರತಕ್ಕವನೂ ಶಸ್ತ್ರಗಳನ್ನೂ ಶಾಸ್ತ್ರಗಳನ್ನೂ ತಿಳಿದವನೂ ಆದ ಅನಂತವೀರ್ಯನೆಂಬ ಪುತ್ರನಿದ್ದನು. ಆತನ ಕೀರ್ತಿಯು ಆತನ ಕುಮಾರಕಾಲದಿಂದ ಪ್ರಾರಂಭವಾಗಿದ್ದಿತು. ಪರಾಕ್ರಮವು ಶತ್ರುಗಳ ಜಯವೇ ಎಲ್ಲೆಯಾಗಿದ್ದಿತು. ತ್ಯಾಗವು ಎಲ್ಲಾ ಯಾಚಕರನ್ನು ತೃಪ್ತಿಪಡಿಸುವುದಾಗಿದ್ದಿತು. ಸತ್ಯವು ಸ್ವಪ್ನದಲ್ಲಿಯೂ ತಪ್ಪದಿರುವುದಾಗಿ, ನಿರ್ಬಾಧವಾಗಿದ್ದಿತು. ಆ ಅನಂತವೀರ್ಯನಿಗೆ ಜಯಕುಮಾರನು ಪಟ್ಟಾಭಿಷೇಕವನ್ನು ಮಾಡಿ ತನ್ನ ಸಂಪತ್ತಿಯನ್ನು ಕೊಟ್ಟು ಉತ್ಕೃಷ್ಟವಾದ ಸ್ಥಾನವನ್ನು(ಮೋಕ್ಷವನ್ನು) ಹೊಂದುವುದಕ್ಕೋಸ್ಕರ ಇತರ ವಿಷಯಗಳಲ್ಲಿ ಆಸಕ್ತಿಯಿಲ್ಲದಿರುವಂತೆ ಅಭಿಲಾಷೆಯುಳ್ಳವನೂ ಬಂಧುಗಳೇ ಮೊದಲಾದವರನ್ನು ಪರಿತ್ಯಜಿಸಿದವನೂ ರಾಗದ್ವೇಷಗಳೆಂಬ ಶತ್ರುಗಳನ್ನು ಜಯಿಸಿದವನೂ ಮಹಾಮೋಹವನ್ನು ತಿರಸ್ಕರಿಸಿದವನೂ ಶುಭಪರಿಣಾಮವನ್ನು ಸಂಪಾದಿಸಿದವನು ಆಗಿ ವಿಜಯನೊಡನೆಯೂ ಜಯಂತನೊಡನೆಯೂ ಸಂಜಯಂತನೊಡನೆಯೂ ತಮ್ಮಂದಿರೊಡನೆಯೂ ನಿಶ್ಚಿತವಾದ ಪರಿತ್ಯಾಗವುಳ್ಳವರೂ–ಪರಿಗ್ರಹಗಳನ್ನು ಸಂಪೂರ್ಣವಾಗಿ ತ್ಯಜಿಸಿದವರೂ ರಾಗದ್ವೇಷಗಳಿಂದ ದೂಷಿತರಲ್ಲದವರೂ ಆದ ಬೇರೆಯವರೊಡನೆಯೂ ರವಿಕೀರ್ತಿ, ರಿಪುಜಯ, ಅರಿಂದಮ, ಅರಿಂಜಯ, ಸುಕಾಂತಸಹಿತನಾದ ಸಂಜಯ, ಏಳನೆಯವನಾದ ಅಜಿತಂಜಯ, ಮಹಾಜಯ, ಅರಿವೀರ್ಯ, ವೀರಂಜಯನೆಂಬವನು, ರವಿವೀರ್ಯ ಹಾಗೆಯೇ ಬೇರೆಯವರಾದ ಚಕ್ರವರ್ತಿಯ ಪುತ್ರರೂ ಚೆನ್ನಾಗಿ ವೈರಾಗ್ಯವನ್ನು ಹೊಂದಿದವರಾಗುತ್ತಿರಲು ಅವರುಗಳೊಡನೆಯೂ ''ಕೊನೆಯದಾದ ಶರೀರವುಳ್ಳವನೂ ವಿಶುದ್ಧಿಯನ್ನು (ಆತ್ಮಪರಿಣಾಮಶುದ್ಧಿಯನ್ನು) ಹೊಂದಿದವನೂ ಆದ ಈ ಜಯಕುಮಾರನು ನಿನ್ನ

೧ ಶುಭಾಪ್ರವಣಇತ್ಯಪಿಪಾಠಃ. ೨ ಜಯಃ. ೩ ಭರತೇಶ್ವರೇಣ. ೪ ವೃಷಭನಾಥಸ್ಯ. ೫ ಜಯಃ.

(ಆದೀಶ್ವರಸ್ವಾಮಿಯ) ಮಹಾಶಾಸನ–ಆಜ್ಞೆಯನ್ನು ಧರಿಸುವುದಕ್ಕೆ ವಿಶೇಷವಾದ ಪಾತ್ರನಾಗಿರುತ್ತಾನೆ'' ಎಂದು ಸಮಸ್ತಪೃಥ್ವೀಪತಿಯಾದ ಭರತೇಶ್ವರನಿಂದ ವೃಷಭ ಸ್ವಾಮಿಗೆ ಕೊಡಲ್ಪಟ್ಟವನಾದ ಆ ಜಯಕುಮಾರನು ಪರಿಗ್ರಹಗಳ ಪರಿತ್ಯಾಗವನ್ನು ಮಾಡಿದವನೂ ಶಾಸ್ತ್ರಗ್ರಂಥಗಳ ಅರ್ಥದ ಸಂಗ್ರಹವನ್ನು ಹೊಂದಿದವನೂ(ಶಾಸ್ತ್ರ ಗ್ರಂಥಗಳ ಅರ್ಥವನ್ನು ತಿಳಿದವನೂ) ಉತ್ಕೃಷ್ಟವಾದ ಸಂಯಮ–ವ್ರತವನ್ನು ಹೊಂದಿ ಸಿದ್ಧವಾದ ಏಳು ಋದ್ಧಿ–ತಪೋಮಹಿಮೆಗಳಿಂದ ವೃದ್ಧಿಯನ್ನು ಹೊಂದಿದವನೂ ಮತಿ ಶ್ರುತಾವಧಿ ಮನಃಪರ್ಯಯಜ್ಞಾನಗಳೆಂಬ ನಿರ್ಮಲವಾದ ಜ್ಯೋತಿಯಿಂದ ನಾಶಮಾಡಲ್ಪಟ್ಟ ಬಹುವಿಸ್ತೃತವಾದ ಮನಸ್ಸಿನ ಅಂಧಕಾರ (ಅಜ್ಞಾನ)ವುಳ್ಳವನೂ ವೃಷಭಸ್ವಾಮಿಗೆ ಎಪ್ಪತ್ತೊಂದನೆಯ ಸಂಖ್ಯೆಯನ್ನು ಪೂರ್ತಿ ಮಾಡುವವನಾದ ಗಣಧರನೂ ಆದನು.

ಸುಲೋಚನಾಪ್ಯಸಂಹಾರ್ಯಶೋಕಾ ಪತಿವಿಯೋಗತಃ ।
ಗಲಿತಾ ಕಲ್ಪವಲ್ಲೀವ ಪ್ರವ್ಲಾನಾಮರಭೂರುಹಾತ್ ॥ ೨೮೭ ॥

ಸುಲೋಚನೆಯೂ ಕಲ್ಪವೃಕ್ಷದಿಂದ ಜಾರಿದುದೂ ಹೆಚ್ಚಾಗಿ ಬಾಡಿದುದೂ ಆದ ಕಲ್ಪಲತೆಯಂತೆ ಪತಿವಿಯೋಗದಿಂದ ನಾಶಮಾಡಲಾಗದ ಶೋಕವುಳ್ಳವಳಾದಳು.

ಶಮಿತಾ ಚಕ್ರವರ್ತೀಷ್ಟಕಾಂತಯಾಶು ಸುಭದ್ರಯಾ ।
ಬ್ರಾಹ್ಮೀಸಮೀಪೇ ಪ್ರವ್ರಜ್ಯ ಭಾವಿಸಿದ್ಧಿಶ್ಚಿರಂ ತಪಃ ॥ ೨೮೮ ॥

ಕೃತ್ವಾ ವಿಮಾನೇ ಸಾನುತ್ತರೇಭೂತ್ಕಲ್ಪೇಚ್ಯುತೇಮರಃ ।
ಆದಿತೀರ್ಥಾಧಿನಾಥೋಪಿ ಮೋಕ್ಷಮಾರ್ಗಂ ಪ್ರವರ್ತಯನ್ ॥ ೨೮೯ ॥

ಚತುರುತ್ತರಯಾಶೀತ್ಯಾ ವಿವಿಧರ್ದ್ಧಿವಿಭೂಷಿತೈಃ ।
ಚಿರಂ ವೃಷಭಸೇನಾದಿಗಣೇಶೈಃ ಪರಿವೇಷ್ಟಿತಃ ॥ ೨೯೦ ॥

ಖಪಂಚಸಪ್ತವಾರಾಶಿಮಿತಪೂರ್ವಧರಾನ್ವಿತಃ ।
ಖಪಂಚೈಕಚತುರ್ಮೇಯಶಿಕ್ಷಕೈರ್ಮುನಿಭಿರ್ವೃತಃ ॥ ೨೯೧ ॥

ತೃತೀಯಜ್ಞಾನಸನ್ನೇತ್ರೈಃ ಸಹಸ್ರೈರ್ನವಭಿರ್ಯುತಃ ।
ಕೇವಲಾವಗಮೈರ್ವಿಂಶತಿಸಹಸ್ರೈಃ ಸಮನ್ವಿತಃ ॥ ೨೯೨ ॥

ಖದ್ವಯರ್ತುಖಪಕ್ಷೋಕ್ತವಿಕ್ರಿಯರ್ದ್ಧಿವಿವರ್ದ್ಧಿತಃ ।
ಖಪಂಚಸಪ್ತಪಕ್ಷೈಕಮಿತತುರ್ಯವಿದನ್ವಿತಃ ॥ ೨೯೩ ॥

ತಾವದ್ಭಿರ್ವಾದಿಭಿರ್ವಂದ್ಯೋ ನಿರಸ್ತಪರವಾದಿಭಿಃ ।
ಚತುರಷ್ಟಖವಾರ್ಧ್ಯಷ್ಟಮಿತೈಃ ಸರ್ವೈಶ್ಚ ಪಿಂಡಿತೈಃ ॥ ೨೯೪ ॥

ಸಂಯಮಸ್ಥಾನಸಂಪ್ರಾಪ್ತಸಂಪದ್ಭಿಸ್ಸದ್ಭಿರರ್ಚಿತಃ ।
ಖಚತುಷ್ಕೇಂದ್ರಿಯಾಗ್ನ್ಯುಕ್ತಪೂಜ್ಯಬ್ರಾಹ್ಮ್ಯಾರ್ಯಿಕಾದಿಭಿಃ ॥ ೨೯೫ ॥

ಆರ್ಯಿಕಾಭಿರಭಿಷ್ಟೂಯಮಾನನಾನಾಗುಣೋದಯಃ ।
ದೃಢವ್ರತಾದಿಭಿರ್ಲಕ್ಷತ್ರಯೋಕ್ತೈಃ [೧]ಶ್ರಾವಕಾದಿಭಿಃ ॥ ೨೯೬ ॥

ಶ್ರಾವಿಕಾಭಿಃ ಸ್ತುತಃ ಪಂಚಲಕ್ಷಾಭಿಃ ಸುವ್ರತಾದಿಭಿಃ ।
ಭವನಾದಿಚತುರ್ಭೇದದೇವದೇವೀಡಿತಕ್ರಮಃ ॥ ೨೯೭ ॥

ಚತುಷ್ಪದಾದಿಭಿಸ್ತಿರ್ಯಗ್ಜಾತಿಭಿಶ್ಚಾಭಿಷೇವಿತಃ ।
ಚತುಸ್ತ್ರಿಂಶ[೨]ದತೀಶೇಷವಿಶೇಷೈರ್ಲಕ್ಷಿತೋದಯಃ ॥ ೨೯೮ ॥

೧ ಶ್ರಾವಕಮುಖ್ಯೈಃ. ೨ ಅತಿಶಯ.

[೧]ಆತ್ಮೋಪಾಧಿವಿಶಿಷ್ಟಾವಬೋಧದೃಕ್ಸುಖವೀರ್ಯ[೨]ಸ ।
ದ್ದೇಹಸೌಂದರ್ಯ[೩]ವಾಸೋಕ್ತಸಪ್ತಸತ್ಸ್ಥಾನಸಂಗತಃ ॥ ೨೯೯ ॥

ಪ್ರಾತಿಹಾರ್ಯಾಷ್ಟಕೋದ್ದಿಷ್ಟನಷ್ಟಘಾತಿಚತುಷ್ಟಯಃ ।
ವೃಷಭಾದ್ಯನ್ವಿತಾರ್ಥಾಷ್ಟಸಹಸ್ರಾಹ್ವಯಭಾಷಿತಃ ॥ ೩೦೦ ॥

ವಿಕಾಸಿತವಿನೇಯಾಂಬುಜಾವಲಿರ್ವಚನಾಂಶುಭಿಃ ।
ಸಂವೃತಾಂಜಲಿಪಂಕೇಜಮುಕುಲೇನಾಖಿಲೇಶಿನಾ ॥ ೩೦೧ ॥

ಭರತೇನ ಸಮಭ್ಯರ್ಚ್ಯ ಪೃಷ್ಟೋ ಧರ್ಮಮಭಾಷತ ।
ಧ್ರಿಯತೇ ಧಾರಯ[೪]ತ್ಯುಚ್ಚೈ[೫]ರ್ವಿನೇಯಾನ್ [೬]ಕುಗತೇಸ್ತತಃ ॥ ೩೦೨ ॥

ಧರ್ಮ ಇತ್ಯುಚ್ಯತೇ ಸದ್ಭಿಶ್ಚತುರ್ಭೇದಂ ಸಮಾಶ್ರಿತಃ ।
ಸಮ್ಯಗ್ದೃಜ್ಞಾನಚಾರಿತ್ರತಪೋರೂಪಃ [೭]ಕೃಪಾಪರಃ ॥ ೩೦೩ ॥

ಚಕ್ರವರ್ತಿಯ ಇಷ್ಟಪತ್ನಿಯಾದ ಸುಭದ್ರೆಯಿಂದ ಶೀಘ್ರವಾಗಿ ಉಪಶಾಂತಿಯನ್ನು ಹೊಂದಿಸಲ್ಪಟ್ಟವಳಾದ ಆಕೆಯು ಬ್ರಾಹ್ಮಿ–ಆರ್ಜಿಕೆಯ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಭವಿಷ್ಯತ್ಕಾಲದಲ್ಲಿ ಸಿದ್ಧಿ–ಮುಕ್ತಿಪ್ರಾಪ್ತಿಯುಳ್ಳವಳಾಗಿ ಬಹುಕಾಲದವರೆಗೆ ತಪಸ್ಸನ್ನು ಮಾಡಿ ಮಡಿದು ಅಚ್ಯುತಕಲ್ಪವೆಂಬ ಹದಿನಾರನೆಯ ಸ್ವರ್ಗದಲ್ಲಿ ಅನುತ್ತರವಿಮಾನದಲ್ಲಿ ದೇವನಾಗಿ ಹುಟ್ಟಿದಳು. ಆದಿತೀರ್ಥೇಶ್ವರರೂ ಮೋಕ್ಷಮಾರ್ಗವನ್ನು ಪ್ರವರ್ತಿಸುವವರೂ ನಾನಾಪ್ರಕಾರವಾದ ಋದ್ಧಿ–ತಪೋತಿಶಯಗಳಿಂದ ಅಲಂಕೃತರಾದ ವೃಷಭಸೇನರೇ ಮೊದಲಾದ ಎಂಬತ್ತುನಾಲ್ಕುಮಂದಿ ಗಣಧರರಿಂದ ಬಹುಕಾಲದವರೆಗೆ ಆವರಿಸಲ್ಪಟ್ಟವರೂ ನಾಲ್ಕುಸಾವಿರದೇಳುನೂರೈವತ್ತು(೪೭೫೦)ಮಂದಿ ಚತುರ್ದಶಪೂರ್ವಗಳೆಂಬ ಶಾಸ್ತ್ರಗಳನ್ನು ಧರಿಸಿ–ತಿಳಿದವರಿಂದ ಕೂಡಿರುವವರೂ ನಾಲ್ಕುಸಾವಿರದನೂರೈವತ್ತು (೪೧೫೦) ಸಂಖ್ಯೆಯುಳ್ಳ ಶಿಕ್ಷಕರೆಂಬ ಮುನಿಗಳಿಂದ ಆವರಿಸಲ್ಪಟ್ಟವರೂ ಒಂಭತ್ತುಸಾವಿರಮಂದಿ ಮೂರನೆಯ ಜ್ಞಾನ– ಅವಧಿಜ್ಞಾನವೆಂಬ ಶ್ರೇಷ್ಠವಾದ ನೇತ್ರಗಳುಳ್ಳವರಿಂದ ಕೂಡಿರುವವರೂ ಇಪ್ಪತ್ತುಸಾವಿರ ಕೇವಲಜ್ಞಾನಿಗಳಿಂದ ಕೂಡಿರುವವರೂ ಇಪ್ಪತ್ತುಸಾವಿರದಆರುನೂರು ಮಂದಿ ವಿಕ್ರಿಯರ್ದ್ಧಿಯುಳ್ಳ ಮುನಿಗಳಿಂದ ವೃದ್ಧಿಹೊಂದಿಸಲ್ಪಟ್ಟಿರುವವರೂ ಹನ್ನೆರಡುಸಾವಿರದೇಳುನೂರೈವತ್ತುಮಂದಿ ಮನಃಪರ್ಯಯಜ್ಞಾನಿಗಳಿಂದ ಕೂಡಿರುವವರೂ ಪರವಾದಿಗಳನ್ನು ಸೋಲಿಸಿದ ಅಷ್ಟೇ–ಹನ್ನೆರಡು ಸಾವಿರದೇಳುನೂರೈವತ್ತುಮಂದಿ ವಾದಿಗಳಿಂದ ವಂದ್ಯರೂ ಒಟ್ಟು ಎಂಬತ್ತುನಾಲ್ಕು ಸಾವಿರದೆಂಬತ್ತುನಾಲ್ಕು ಸಂಖ್ಯೆಯ ಪರಿಮಿತಿಯುಳ್ಳವರೂ ಸಂಯಮ–ವ್ರತಗಳ ಸ್ಥಾನಗಳಿಂದ ಹೊಂದಲ್ಪಟ್ಟ ತಪಸ್ಸಂಪತ್ತಿಯುಳ್ಳವರೂ ಎಲ್ಲಾ ಸತ್ಪುರುಷರಿಂದ (ಮೇಲೆ ಹೇಳಲ್ಪಟ್ಟ ಎಲ್ಲಾ ಸಾಧುಗಳಿಂದ) ಪೂಜಿಸಲ್ಪಟ್ಟವರೂ ಮೂರುಲಕ್ಷ ಐವತ್ತುಸಾವಿರಮಂದಿ ಪೂಜ್ಯರಾದ ಬ್ರಾಹ್ಮ್ಯಾರ್ಜಿಕೆಯೇ ಮೊದಲಾದ ಆರ್ಜಿಕೆಯರಿಂದ ಹೊಗಳಲ್ಪಟ್ಟ ನಾನಾಪ್ರಕಾರವಾದ ಗುಣಗಳ ಆವಿರ್ಭಾವವುಳ್ಳವರೂ ದೃಢವ್ರತನೇ ಮೊದಲಾದ ಮೂರುಲಕ್ಷ ಶ್ರಾವಕ ಮುಖ್ಯರಿಂದಲೂ ಸುವ್ರತೆಯೇ ಮೊದಲಾದ ಐದುಲಕ್ಷ ಶ್ರಾವಿಕೆಯರಿಂದಲೂ ಸ್ತುತಿಸಲ್ಪಟ್ಟವರೂ ಭವನ ವ್ಯಂತರ ಜ್ಯೋತಿಷ್ಕ ಕಲ್ಪವಾಸಿಗಳೆಂಬ ನಾಲ್ಕು ವಿಧವಾದ ದೇವತೆಗಳಿಂದಲೂ ದೇವಿಯರಿಂದಲೂ ಸ್ತುತಿಸಲ್ಪಟ್ಟ ಪಾದಗಳುಳ್ಳವರೂ ನಾಲ್ಕು ಕಾಲುಗಳುಳ್ಳವುಗಳಾದ ಪ್ರಾಣಿಗಳೇ ಮೊದಲಾದ ತಿರ್ಯಗ್ಜಾತಿಯ ಪ್ರಾಣಿಗಳಿಂದ ಸೇವಿಸಲ್ಪಟ್ಟವರೂ ಮೂವತ್ತುನಾಲ್ಕು ಅತಿಶಯವಿಶೇಷಗಳಿಂದ ಕೂಡಿದ ಉನ್ನತಿಯುಳ್ಳವರೂ ಆತ್ಮಧರ್ಮಚಿಂತನೆಯಿಂದ ವಿಶಿಷ್ಟವಾದ ಜ್ಞಾನ, ದರ್ಶನ, ಸುಖ, ವೀರ್ಯ–ಬಲ, ಪ್ರಶಸ್ತವಾದ ಶರೀರಸೌಂದರ್ಯ, ವಾಸ–ಸಮವಸರಣಗಳೆಂದು ಹೇಳಲ್ಪಟ್ಟ ಏಳು ಶ್ರೇಷ್ಠವಾದ ಸ್ಥಾನಗಳಿಂದ ಕೂಡಿರುವವರೂ ಅಷ್ಟಮಹಾಪ್ರಾತಿಹಾರ್ಯಗಳಿಂದ ಸೂಚಿಸಲ್ಪಟ್ಟ ಜ್ಞಾನಾವರಣ ದರ್ಶನಾವರಣ, ಮೋಹನೀಯ, ಅಂತರಾಯಗಳೆಂಬ ನಾಲ್ಕು ಕರ್ಮಗಳ ನಾಶವುಳ್ಳವರೂ ವೃಷಭ ಮೊದಲಾದ

೧ ಆತ್ಮಾಉಪಾಧಿರ್ಯಸ್ಯ. ೨ ಪ್ರಶಸ್ತದೇಹಸೌಂದರ್ಯ. ೩ ಸಮವಸರಣ. ೪ ಅಭ್ಯುದಯ ನಿಶ್ರೇಯಸರೂಪೋನ್ನತಸ್ಥಾನೇ. ೫ ಭವ್ಯಾನ್. ೬ ದುರ್ಗತೇಃ ಸಕಾಶಾದಪಸಾರ್ಯ. ೭ ದಯ ಪ್ರದಾನಃ.

ಸಾರ್ಥಕವಾದ ಸಾವಿರದೆಂಟು ಹೆಸರುಗಳಿಂದ ಹೇಳಲ್ಪಟ್ಟವರೂ ವಚನಗಳೆಂಬ ಕಿರಣಗಳಿಂದ ಶಿಷ್ಯರೆಂಬ ಕಮಲಗಳ ಸಾಲುಗಳನ್ನು ಅರಳಿಸಿದವರೂ ಮುಚ್ಚಲ್ಪಟ್ಟ ಅಂಗೈಗಳೆಂಬ ಕಮಲದ ಮೊಗ್ಗುಳ್ಳವನೂ ಸಕಲಪ್ರಜೆಗಳಿಗೆ ಪ್ರಭುವೂ ಆದ ಭರತನಿಂದ ಪೂಜಿಸಲ್ಪಟ್ಟು ಪ್ರಶ್ನೆಮಾಡಲ್ಪಟ್ಟವರೂ ಆಗಿ ಧರ್ಮವನ್ನು ಹೇಳಿದರು. ಭರತೇಶ್ವರನ ಪ್ರಶ್ನಾನುಸಾರವಾಗಿ ವೃಷಭಸ್ವಾಮಿಯು ಧರ್ಮವನ್ನುಪದೇಶಿಸಿದ ರೆಂದು ಭಾವವು. ''ದುರ್ಗತಿಯಿಂದ ತಪ್ಪಿಸಿ ಭವ್ಯಾತ್ಮರನ್ನು ಅಭ್ಯುದಯನಿಶ್ರೇಯ ಸರೂಪವಾದ ಉನ್ನತಸ್ಥಾನದಲ್ಲಿ ಧರಿಸಲ್ಪಡುತ್ತದೆ ಅಥವಾ ಧರಿಸುತ್ತದೆ. (ಯಾವುದರಿಂದ ಪ್ರಾಣಿಯು ಧರಿಸಲ್ಪಡುತ್ತದೋ ಅಥವಾ ಯಾವುದು ಪ್ರಾಣಿ ಯನ್ನು ಧರಿಸುತ್ತದೋ) ಆದುದರಿಂದ ಧರ್ಮವು'' ಎಂದು ಸತ್ಪುರುಷರಿಂದ (ಅನಾದಿಪರಂಪರಾಗತರಾದ ತೀರ್ಥಂಕರರಿಂದ) ಹೇಳಲ್ಪಡುತ್ತದೆ. ಆ ಧರ್ಮವು ಸಮ್ಯಗ್ದರ್ಶನ ಜ್ಞಾನ ಚಾರಿತ್ರ ತಪೋರೂಪವಾಗಿ ನಾಲ್ಕು ಭೇದವನ್ನು ಹೊಂದಿರು ವುದೂ ದಯೆಯೇ ಪ್ರಧಾನವಾಗಿರುವುದೂ ಆಗಿರುತ್ತದೆ.

**ಜೀವಾದಿಸಪ್ತಕೇ ತತ್ತ್ವೇ ಶ್ರದ್ಧಾನಂ ಯತ್ಸ್ವತೋಽಂಜಸಾ ।**
**ಪರಪ್ರಣಯನಾದ್ವಾ ತತ್ಸಮ್ಯಗ್ದರ್ಶನಮುಚ್ಯತೇ ॥ ೨೦೪ ॥**

**ಶಂಕಾದಿದೋಷನಿರ್ಮುಕ್ತಂ [೧]ಭಾವತ್ರಯವಿವೇಚಿತಮ್ ।**
**ತೇಷಾಂ ಜೀವಾದಿಸಪ್ತಾನಾಂ ಸಂಶಯಾದಿವಿವರ್ಜನಾತ್ ॥ ೨೦೫ ॥**

**ಯಾಥಾತ್ಮ್ಯೇನ ಪರಿಜ್ಞಾನಂ ಸಮ್ಯಗ್ಜ್ಞಾನಂ ಸಮಾದಿಶೇತ್ ।**
**ಯಥಾ ಕರ್ಮಾಸ್ರವೋ ನ ಸ್ಯಾಚ್ಚಾರಿತ್ರಂ ಸಂಯಮಸ್ತಥಾ ॥ ೨೦೬ ॥**

ಸ್ವಭಾವದಿಂದಾಗಲಿ ಪರಪ್ರೇರಣೆಯಿಂದಾಗಲಿ ಜೀವ ಅಜೀವ ಆಸ್ರವ ಬಂಧ ಸಂವರ ನಿರ್ಜರಾ ಮೋಕ್ಷರೂಪವಾದ ಸಪ್ತತತ್ತ್ವದಲ್ಲಿ ಯಾವ ನಂಬಿಕೆಯಿದೆಯೋ ಶಂಕಾ, ಕಾಂಕ್ಷಾ, ವಿಚಿಕಿತ್ಸಾ, ಅನ್ಯದೃಷ್ಟಿಪ್ರಶಂಸಾ, ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ, ಅಪ್ರಭಾವನಾರೂಪವಾದ ದೋಷಗಳಿಂದ ಬಿಡಲ್ಪಟ್ಟುದೂ ಔಪಶಮಿಕ ಕ್ಷಾಯಿಕ ಕ್ಷಾಯೋಪಶಮಿಕಭಾವಗಳಿಂದ ನಿಶ್ಚಿತವೂ ಆದ ಅದು ಸಮ್ಯಗ್ದರ್ಶನ ವೆಂದು ಹೇಳಲ್ಪಡುತ್ತದೆ. ಆ ಜೀವ ಮೊದಲಾದ ಏಳು ತತ್ತ್ವಗಳಲ್ಲಿ ಸಂಶಯ ಮೊದಲಾದುವುಗಳ ತ್ಯಾಗದಿಂದ ಯಥಾರ್ಥಸ್ವರೂಪದಿಂದ ತಿಳಿಯುವಿಕೆಯನ್ನು ಸಮ್ಯಗ್ಜ್ಞಾನವನ್ನಾಗಿ ಹೇಳಬೇಕು. ಕರ್ಮಗಳ ಆಸ್ರವವಾಗದಂತೆ ಆಚರಿಸುವಿಕೆಯು ಸಮ್ಯಕ್ಚಾರಿತ್ರವಾಗಿರುತ್ತದೆ.

**ನಿರ್ಜರಾ ಕರ್ಮಣಾಂ ಯೇನ ತೇನ ವೃತ್ತಿಸ್ತಪೋ ಮತಮ್ ।**
**ಚತ್ವಾರ್ಯೇತಾನಿ ಮಿಶ್ರಾಣಿ ಕಷಾಯೈಃ ಸ್ವರ್ಗಹೇತವಃ ॥ ೨೦೭ ॥**

ಯಾವುದರಿಂದ ಕರ್ಮಗಳ ನಿರ್ಜರೆಯಾಗುವುದೋ (ಏಕದೇಶಕ್ಷಯವಾಗು ವುದೋ) ಅದರಿಂದ ಇರುವಿಕೆಯು–ಉದ್ಯೋಗಶೀಲನಾಗಿರುವಿಕೆಯು ತಪ ಸ್ಸೆಂದು ತಿಳಿಯಲ್ಪಟ್ಟಿರುತ್ತದೆ. ಕ್ರೋಧ ಮಾನ ಮಾಯಾದಿಕಷಾಯಗಳಿಂದ ಮಿಶ್ರ ಗಳಾದ ಈ ನಾಲ್ಕು–ಸಮ್ಯಗ್ದರ್ಶನ ಜ್ಞಾನ ಚಾರಿತ್ರ ತಪಸ್ಸುಗಳು ಸ್ವರ್ಗಕ್ಕೆ ಕಾರಣ ಗಳಾಗುತ್ತವೆ.

**ನಿಷ್ಕಷಾಯಾಣಿ ನಾಕಸ್ಯ ಮೋಕ್ಷಸ್ಯ ಚ ಹಿತೈಷಿಣಾಮ್ ।**
**ಚತುಷ್ಟಯಮಿದಂ ವರ್ತ್ಮ ಮುಕ್ತೇರ್ದುಷ್ಪ್ರಾಪ[೨]ಮಂಗಿಭಿಃ ॥ ೨೦೮ ॥**

ಕಷಾಯರಹಿತವಾದುವುಗಳು–ಈ ನಾಲ್ಕು ಹಿತವನ್ನು ಬಯಸುವವರಿಗೆ ಸ್ವರ್ಗಕ್ಕೂ ಮೋಕ್ಷಕ್ಕೂ ಕಾರಣಗಳಾಗುತ್ತವೆ. ಈ ನಾಲ್ಕು ಪ್ರಕಾರವಾದ ಮುಕ್ತಿಯ ಮಾರ್ಗವು ಅಭವ್ಯಪ್ರಾಣಿಗಳಿಂದ ಹೊಂದಲಶಕ್ಯವಾಗಿರುತ್ತದೆ.

**ಮಿಥ್ಯಾತ್ವಮವ್ರತಾಚಾರಃ ಪ್ರಮಾದಾಃ ಸಕಷಾಯತಾ ।**
**ಯೋಗಾಃ ಶುಭಾಶುಭಾ ಜಂತೋಃ ಕರ್ಮಣಾಂ ಬಂಧಹೇತವಃ ॥**

೧ ಔಪಶಮಿಕಕ್ಷಾಯಿಕಕ್ಷಾಯೋಪಶಮಿಕೈರ್ನಿರ್ಣೀತಂ. ೨ ಅಭವ್ಯೈಃ.

ಮಿಥ್ಯಾತ್ವವೂ ವ್ರತರಹಿತವಾದ ಆಚರಣೆಯೂ ಪ್ರಮಾದಗಳೂ ಕಷಾಯತ್ವವೂ ಶುಭಾಶುಭ ಮನೋವಾಕ್ಕಾಯಯೋಗಗಳೂ ಪ್ರಾಣಿಗೆ ಕರ್ಮಗಳ ಬಂಧಕ್ಕೆ ಕಾರಣಗಳಾಗಿರುತ್ತವೆ.

**ಮಿಥ್ಯಾತ್ವಂ ಪಂಚಧಾ ಸಾಷ್ಟಶತಂ ಚಾವಿರತಿರ್ಮತಾ ।**
**ಪ್ರಮಾದಾಃ ಪಂಚದಶ ಚ ಕಷಾಯಾಸ್ತೇ ಚತುರ್ವಿಧಾಃ ॥ ೨೧೦ ॥**

ಮಿಥ್ಯಾತ್ವವು ಅಜ್ಞಾನ ವಿನಯ ಏಕಾಂತ ವಿಪರೀತ ಸಂಶಯಭೇದಗಳಿಂದ ಐದು ಪ್ರಕಾರವಾಗಿರುತ್ತದೆ. ಅವಿರತಿಯು(ಅವ್ರತವು) ನೂರೆಂಟು ಪ್ರಕಾರವಾಗಿ ತಿಳಿಯ ಲ್ಪಟ್ಟಿರುತ್ತದೆ. ವಿಕಥೆಗಳೈದು, ಕಷಾಯಗಳು ನಾಲ್ಕು, ಇಂದ್ರಿಯಗಳೈದು, ನಿದ್ರಾ, ಪ್ರಣಯ–ಸ್ನೇಹಭೇದಗಳಿಂದ ಪ್ರಮಾದಗಳು ಹದಿನೈದು ಪ್ರಕಾರವಾಗಿರುತ್ತವೆ. ಆ ಕಷಾಯಗಳು ಕ್ರೋಧ ಮಾನ ಮಾಯಾ ಲೋಭಭೇದಗಳಿಂದ ನಾಲ್ಕು ಪ್ರಕಾರ ವಾಗಿರುತ್ತವೆ.

**ಯೋಗಾಃ ಪಂಚದಶ ಜ್ಞೇಯಾಃ ಸಮ್ಯಗ್ಜ್ಞಾನವಿಲೋಚನೈಃ ।**
**ಸಮೂಲೋತ್ತರಭೇದೇನ ಕರ್ಮಾಣ್ಯುಕ್ತಾನಿ ಕೋವಿದೈಃ ॥ ೨೧೧ ॥**

ಸಮ್ಯಗ್ಜ್ಞಾನವೆಂಬ ವಿಶೇಷವಾದ ನೇತ್ರವುಳ್ಳವರಿಂದ ಯೋಗಗಳು ಹದಿನೈದು ಪ್ರಕಾರವಾಗಿರುತ್ತವೆಂದು (ಸತ್ಯಮನ, ಅಸತ್ಯಮನ, ಉಭಯಮನ, ಅನುಭಯ ಮನ, ಸತ್ಯವಚನ, ಅಸತ್ಯವಚನ, ಉಭಯವಚನ, ಅನುಭಯವಚನ, ಔದಾರಿಕ ಕಾಯ, ವೈಕ್ರಿಯಕಕಾಯ, ಕಾರ್ಮಣಕಾಯ) ತಿಳಿಯತಕ್ಕುವಾಗಿರುತ್ತವೆ. ಕರ್ಮ ಗಳು ಮೂಲೋತ್ತರಭೇದಗಳಿಂದ ಎರಡು ಪ್ರಕಾರವಾಗಿಯೂ ಉತ್ತರ ಭೇದಗಳು ಸೇರಿ ಮೂರು ಪ್ರಕಾರವಾಗಿಯೂ ವಿದ್ವಾಂಸರಿಂದ ಹೇಳಲ್ಪಟ್ಟಿರುತ್ತವೆ.

**ಬಂಧಶ್ಚತುರ್ವಿಧೋ ಜ್ಞೇಯಃ ಪ್ರಕೃತ್ಯಾದಿವಿಕಲ್ಪಿತಃ ।**
**ಕರ್ಮಾಣ್ಯುದಯಸಂಪ್ರಾಪ್ತ್ಯಾ ಹೇತವಃ ಫಲಬಂಧಯೋಃ ॥ ೨೧೨ ॥**

ಕರ್ಮಗಳ ಬಂಧವು ಪ್ರಕೃತಿ ಸ್ಥಿತಿ ಅನುಭಾಗ ಪ್ರದೇಶಭೇದಗಳಿಂದ ನಾಲ್ಕು ಪ್ರಕಾರವಾಗಿರುತ್ತದೆಂದು ತಿಳಿಯತಕ್ಕುದಾಗಿರುತ್ತದೆ. ಕರ್ಮಗಳು ಉದಯ ಪ್ರಾಪ್ತಿ ಯಿಂದ–ಉದಯಕ್ಕೆ ಬರುವುದರಿಂದ ಫಲವನ್ನು ಕೊಡುವುದಕ್ಕೂ ನವೀನ ಕರ್ಮ ಗಳ ಬಂಧಕ್ಕೂ ಕಾರಣಗಳಾಗಿರುತ್ತವೆ.

**ತ[೧]ದ್ಯೂಯಂ ಸಂಸೃತೇರ್ಹೇತುಂ ಪರಿತ್ಯಜ್ಯ ಗೃಹಾಶ್ರಮಮ್ ।**
**ದೋಷದುಃಖಜರಾಮೃತ್ಯುಪಾಪಪ್ರಾಯಂ ಭಯಾವಹಮ್ ॥ ೨೧೩ ॥**

**ಭಕ್ತಿಮಂತ[೨]ಸ್ಸಮಾಸನ್ನವಿನೇಯಾ ವಿದಿತಾಗಮಾಃ ।**
**[೩]ಗುಪ್ತ್ಯಾದಿಷಡ್ವಿಧಂ ಸಮ್ಯ[೪]ಗನುಗತ್ಯ ಯಥೋಚಿತಮ್ ॥ ೨೧೪ ॥**

**ಪ್ರೋಕ್ತೋ[೫]ಪೇಕ್ಷಾದಿಭೇದೇಷು ವೀತರಾಗಾದಿಕೇಷು ಚ ।**
**[೬]ಪುಲಾಕಾದಿಪ್ರಕಾರೇಷು ವ್ಯಪೇತಾಗಾರಕಾದಿಷು ॥ ೨೧೫ ॥**

**ಪ್ರಮತ್ತಾದಿಗುಣಸ್ಥಾನವಿಶೇಷೇಷು ಚ ಸುಸ್ಥಿತಾಃ ।**
**ನಿಶ್ಚಯವ್ಯವಹಾರೋಕ್ತಮುಪಾಧ್ವಂ ಮೋಕ್ಷಮುತ್ತಮಮ್ ॥ ೨೧೬ ॥**

ಆದುದರಿಂದ ಭಕ್ತಿಯುಳ್ಳವರೂ ಅತ್ಯಂತಸಮೀಪಭವ್ಯರೂ ಆಗಮವನ್ನು ತಿಳಿದ ವರೂ ಆದ ನೀವುಗಳು(ಭರತನೇ ಮೊದಲಾದವರು) ಸಂಸಾರಕ್ಕೆ ಕಾರಣವೂ ದೋಷ ದುಃಖ ವಾರ್ಧಕ್ಯ ಮರಣ ಪಾಪಗಳ ಆಧಿಕ್ಯವುಳ್ಳುದೂ ಭಯಂಕರವೂ ಆದ ಗೃಹಾಶ್ರಮವನ್ನು ಬಿಟ್ಟು ಚೆನ್ನಾಗಿ ತ್ರಿಗುಪ್ತಿ, ಪಂಚಸಮಿತಿ, ದಶಧರ್ಮ, ದ್ವಾದಶಾನುಪ್ರೇಕ್ಷೆ, ದ್ವಾವಿಂಶತಿಪರೀಷಹಜಯ, ತ್ರಯೋದಶಚಾರಿತ್ರಗಳೆಂಬ ಆರು ಭೇದಗಳನ್ನು ಯಥೋಚಿತವಾಗಿ ಹೊಂದಿ ಆಗಮದಲ್ಲಿ ಹೇಳಲ್ಪಟ್ಟಿರುವ ಮೈತ್ರೀ ಪ್ರಮೋದ ಕಾರುಣ್ಯ ಮಾಧ್ಯಸ್ಥಭೇದಗಳಲ್ಲಿಯೂ ವೀತರಾಗ ಮೊದಲಾದ ಭೇದಗಳ

೧ ಭರತಾದಯಃ. ೨ ಅತ್ಯಾಸನ್ನಭವ್ಯಾಃ. ೩ ಗುಪ್ತಿಸಮಿತಿಧರ್ಮಾನುಪ್ರೇಕ್ಷಾಪರೀಶಹಜಯಚಾರಿತ್ರ ಭೇದೈಃ. ೪ ಸಂಪ್ರಾಪ್ಯ. ೫ ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥ್ಯಾದೀನಿ. ೬ ಪುಲಾಕವಕುಶ ಕುಶೀಲನಿರ್ಗ್ರಂಥಸ್ನಾತಕಭೇದೇಷು.

ಲ್ಲಿಯೂ ಮನೆಯನ್ನು ಪರಿತ್ಯಜಿಸಿದವರಾದ ಪುಲಾಕ ವಕುಶ ಕುಶೀಲ ನಿರ್ಗ್ರಂಥ ಸ್ನಾತಕರೆಂಬ ಮುನಿಗಳ ಭೇದಗಳಲ್ಲಿಯೂ ಪ್ರಮತ್ತ ಅಪ್ರಮತ್ತ ಅಪೂರ್ವಕರಣ ಮೊದಲಾದ ಗುಣಸ್ಥಾನವಿಶೇಷಗಳಲ್ಲಿಯೂ ಚೆನ್ನಾಗಿ ಇರುವವರಾಗಿ (ಕ್ರಮವಾಗಿ ಆತ್ಮ ಭಾವಶುದ್ಧಿಯನ್ನು ಹೊಂದುತ್ತ ಹೊಗುವವರಾಗಿ) ನಿಶ್ಚಯ ವ್ಯವಹಾರ ಭೇದಗಳಿಂದ ಹೇಳಲ್ಪಟ್ಟ ಉತ್ತಮವಾದ ಮೋಕ್ಷವನ್ನು ಆಶ್ರಯಿಸಿರಿ.

**ತಥಾ ಗೃಹಾಶ್ರಮಸ್ಥಾಶ್ಚ ಸಮ್ಯಗ್ದರ್ಶನಪೂರ್ವಕಮ್ ।**
**ದಾನಶೀಲೋಪವಾಸಾರ್ಹದಾದಿಪೂಜೋಪಲಕ್ಷಿತಾಃ ॥ ೩೧೭ ॥**

**ಆಶ್ರಿತೈಕಾದಶೋಪಾಸಕವ್ರತಾಃ ಸುಶುಭಾಶಯಾಃ ।**
**ಸಂಪ್ರಾಪ್ತಪರಮಸ್ಥಾನಸಪ್ತಕಾಃ ಸಂತು ಧೀಧನಾಃ ॥ ೩೧೮ ॥**

ಹಾಗೆಯೇ ಗೃಹಸ್ಥಾಶ್ರಮದಲ್ಲಿರುವವರೂ ಸಮ್ಯಗ್ದರ್ಶನಪೂರ್ವಕವಾಗಿ ದಾನ ಶೀಲ ಉಪವಾಸ ಅರ್ಹತ್ಪರಮೇಶ್ವರರೇ ಮೊದಲಾದವರ ಪೂಜೆ ಇವುಗಳಿಂದ ಕೂಡಿದವರೂ ಶ್ರಾವಕರ ಹನ್ನೊಂದು ವ್ರತ–ನೆಲೆಗಳನ್ನು ಆಶ್ರಯಿಸಿದವರೂ ಚೆನ್ನಾಗಿ ಶುಭವಾದ ಅಭಿಪ್ರಾಯವುಳ್ಳವರೂ ಸಜ್ಜಾತಿ ಸದ್ಗೃಹಸ್ಥತ್ವಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯ ಆರ್ಹಂತ್ಯ ನಿರ್ವಾಣಗಳೆಂಬ ಸಪ್ತಪರಮಸ್ಥಾನಗಳನ್ನು ಹೊಂದಿದವರೂ ಬುದ್ಧಿಯೇ ಧನವಾಗಿರುವವರೂ ಆಗಿರಲಿ.''

**ಇತಿ ತತ್ತತ್ತ್ವಸಂದರ್ಭಗರ್ಭವಾಗ್ವಿಭವಾದ್ವಿಭೋಃ ।**
**ಸಸಭೋ ಭರತಾಧೀಶಃ ಸರ್ವಂ ಹೇಯಮಮನ್ಯತ ॥ ೩೧೯ ॥**

ಈ ಪ್ರಕಾರವಾದ ಆಯಾ ತತ್ತ್ವಗಳ ಸಂದರ್ಭಗಳು ಗರ್ಭಿತವಾಗಿರುವ ವಚನ ಸಂಪತ್ತಿಯುಳ್ಳವನಾದ ವೃಷಭಸ್ವಾಮಿಯ ದೆಸೆಯಿಂದ ಸಭಾಸಹಿತನಾದ ಭರತೇಶ್ವರನು ಎಲ್ಲವನ್ನೂ ಹೇಯವನ್ನಾಗಿ ತಿಳಿದನು.

**ತ್ರಿಜ್ಞಾನನೇತ್ರಸಮ್ಯಕ್ತ್ವಶುದ್ಧಿಭಾಗ್ದೇಶಸಂಯುತಃ ।**
**ಸ್ರಷ್ಟಾರಮಭಿವಂದ್ಯಾಯಾತ್ಕೈಲಾಸಾನ್ನಗರೋತ್ತಮಮ್ ॥ ೩೨೦ ॥**

ಮತಿಶ್ರುತಾವಧಿಜ್ಞಾನಗಳೆಂಬ ಮೂರುಕಣ್ಣುಗಳನ್ನೂ ಸಮ್ಯಗ್ದರ್ಶನಶುದ್ಧಿಯನ್ನೂ ಹೊಂದಿದವನೂ ದೇಶಸಂಯತ–ಅಣುವ್ರತಿಯೂ ಆದ ಭರತೇಶ್ವರನು ಸೃಷ್ಟಿಕರ್ತ–ವೃಷಭಸ್ವಾಮಿಯನ್ನು ವಂದಿಸಿ ಕೈಲಾಸಪರ್ವತದಿಂದ ಉತ್ತಮವಾದ ನಗರಕ್ಕೆ–ಅಯೋಧ್ಯೆಗೆ ಹೊರಟು ಹೋದನು.

**ಜಗತ್ತ್ರಿತಯನಾಥೋಽಪಿ ಧರ್ಮಕ್ಷೇತ್ರೇಷ್ವನಾರತಮ್ ।**
**ಉಪ್ತ್ವಾ ಸದ್ಧರ್ಮಬೀಜಾನಿ ನ್ಯಷಿಂಚದ್ಧರ್ಮವೃಷ್ಟಿಭಿಃ ॥ ೩೨೧ ॥**

**ಸತಾಂ ಸತ್ಫಲಸಂಪ್ರಾಪ್ತ್ಯೈ ವಿಹರನ್ಸ್ವಗಣೈಃ ಸಮಮ್ ।**
**ಚತುರ್ದಶದಿನೋಪೇತಸಹಸ್ರಾಬ್ದೋನಪೂರ್ವಗಮ್ ॥ ೩೨೨ ॥**

**ಲಕ್ಷಂ ಕೈಲಾಸಮಾಸಾದ್ಯ ಶ್ರೀಸಿದ್ಧಶಿಖರಾಂತರೇ ।**
**ಪೌರ್ಣಮಾಸೀದಿನೇ ಪೌಷೇ ನಿರಿಚ್ಛಃ ಸಮುಪಾವಿಶತ್ ॥ ೩೨೩ ॥**

ತ್ರಿಲೋಕಾಧಿಪತಿಯಾದ ವೃಷಭಸ್ವಾಮಿಯೂ ಯಾವಾಗಲೂ ಆರ್ಯಕ್ಷೇತ್ರದಲ್ಲಿ ಸದ್ಧರ್ಮಗಳೆಂಬ ಬೀಜಗಳನ್ನು ಬಿತ್ತಿ ಸತ್ಪುರುಷರಿಗೆ ಸತ್ಫಲಪ್ರಾಪ್ತಿಗೋಸ್ಕರ ಧರ್ಮಗಳೆಂಬ ಮಳೆಗಳಿಂದ ಸೇಚನೆಮಾಡುವವನೂ ತನ್ನ ಗಣ–ಸಮವಸರಣ ಸಭಾಸಮೂಹದೊಡನೆ ಒಂದು ಸಾವಿರ ವರುಷಗಳ ಮೇಲೆ ಹದಿನಾಲ್ಕುದಿವಸಗಳು ಕಡಮೆಯಾದ ಒಂದು ಲಕ್ಷ ಪೂರ್ವವರ್ಷಗಳವರೆಗೆ ವಿಹರಿಸುವವನೂ ಆಗಿ ಕೈಲಾಸಪರ್ವತವನ್ನು ಸೇರಿ ಇಚ್ಛಾರಹಿತನಾಗಿ ಪುಷ್ಯಮಾಸದ ಪೌರ್ಣಮೀದಿನದಲ್ಲಿ ಶೋಭಾಯಮಾನವಾದ ಕೈಲಾಸಪರ್ವತದ ಸಿದ್ಧಶಿಖರದ ಮಧ್ಯದಲ್ಲಿ ಕುಳಿತುಕೊಂಡನು.

**ತದಾ ಭರತರಾಜೇಂದ್ರೋ ಮಹಾಮಂದರಭೂಧರಮ್ ।**
**[೧]ಆಪ್ರಾಗ್ಭಾರಂ ವ್ಯಲೋಕಿಷ್ಟ ಸ್ವಪ್ನೇ ದೈರ್ಘ್ಯೇಣ ಸಂಸ್ಥಿತಮ್ ॥ ೩೨೪ ॥**

ಆಗ ಭರತರಾಜೇಂದ್ರನು ಸ್ವಪ್ನದಲ್ಲಿ ಸಿದ್ಧಕ್ಷೇತ್ರದವರೆಗೆ ದೀರ್ಘವಾಗಿರುವ ಮಹಾಮೇರುಪರ್ವತವನ್ನು ನೋಡಿದನು.

**ತದ್ವೈವ [೨]ಯುವರಾಜೋಽಪಿ ಸ್ವರ್ಗಾದೇತ್ಯ ಮಹೌಷಧಿ ।**
**ದ್ರುಮಂ ಛಿತ್ವಾ ನೃಣಾಂ ಜನ್ಮರೋಗಂ [೩]ಸ್ವರ್ಯಾಂತಮೈಕ್ಷತ ॥ ೩೨೫ ॥**

ಆಗಲೇ ಯುವರಾಜ–ಅರ್ಕಕೀರ್ತಿಯೂ ಸ್ವರ್ಗದಿಂದ ಬಂದು ಮನುಷ್ಯರ ಜನ್ಮರೋಗವನ್ನು ನಾಶಮಾಡಿ ಸ್ವರ್ಗಕ್ಕೆ ಹೋಗುವ ಮಹೌಷಧಿವೃಕ್ಷವನ್ನು ನೋಡಿದನು.

**ಕಲ್ಪದ್ರುಮಮಭೀಷ್ಟಾರ್ಥಂ ದತ್ವಾ ನೃಭ್ಯೋ ನಿರಂತರಮ್ ।**
**[೪]ಗೃಹೇ[೫]ಡ್ಡಿಶಾಮಯಾಮಾಸ ಸ್ವರ್ಗಪ್ರಾಪ್ತಿಸಮುದ್യತಮ್ ॥ ೩೨೬ ॥**

ಮನುಷ್ಯರಿಗೆ ಯಾವಾಗಲೂ ಅಭೀಷ್ಟಾರ್ಥವನ್ನು ಕೊಟ್ಟು ಸ್ವರ್ಗವನ್ನು ಹೊಂದುವುದಕ್ಕೆ ಉದ್ಯುಕ್ತವಾದ ಕಲ್ಪವೃಕ್ಷವನ್ನು ಕಾಮವೃಷ್ಟಿಯೆಂಬ ಗೃಹಪತಿರತ್ನನು ಕಂಡನು.

**ರತ್ನದ್ವೀಪಂ ಜಿಘೃಕ್ಷುಭ್ಯೋ ನಾನಾರತ್ನಕದಂಬಕಮ್ ।**
**ಪ್ರದಾಯಾಗ್ರಗವೋದ್ಯುಕ್ತಮದ್ರಾಕ್ಷೀತ್ಸಚಿವಾಗ್ರಿಮಃ ॥ ೩೨೭ ॥**

ತೆಗೆದುಕೊಳ್ಳುವುದಕ್ಕೆ ಇಚ್ಛೆಯುಳ್ಳವರಿಗೆ ನಾನಾರತ್ನಗಳ ಸಮೂಹವನ್ನು ಕೊಟ್ಟು ಮೇಲಕ್ಕೆ ಹೋಗುಲುದ್ಯುಕ್ತವಾದ ರತ್ನದ್ವೀಪವನ್ನು ಮುಖ್ಯಮಂತ್ರಿಯು ಸ್ವಪ್ನದಲ್ಲಿ ಕಂಡನು.

**ವಜ್ರಪಂಜರಮುದ್ಭಿದ್ಯ ಕೈಲಾಸಂ ಗಜವೈರಿಣಮ್ ।**
**ಉಲ್ಲಂಘಯಿತುಮುದ್ಯಂತಂ ಸೇನಾಪತಿರಪಶ್ಯತ ॥ ೩೨೮ ॥**

ಸೇನಾಪತಿಯು ವಜ್ರಪಂಜರವನ್ನು ಭೇದಿಸಿ ಕೈಲಾಸಪರ್ವತಕ್ಕೆ ಹಾರುವುದಕ್ಕೆ ಪ್ರಯತ್ನಿಸುತ್ತಿರುವ ಸಿಂಹವನ್ನು ಕಂಡನು.

**ಆಲುಲೋಕೇ ಬುಧೋಽನಂತವೀರ್ಯಃ ಶ್ರೀವಾನ್ ಜಯಾತ್ಮಜಃ ।**
**ಯಾಂತಂ [೬]ನೃಲೋಕಮಾಭಾಸ್ಯ ಸತಾರಂ ತಾರಕೇಶ್ವರಮ್ ॥ ೩೨೯ ॥**

ಬುದ್ಧಿಶಾಲಿಯೂ ಐಶ್ವರ್ಯವಂತನೂ ಜಯಕುಮಾರನ ಪುತ್ರನೂ ಆದ ಅನಂತವೀರ್ಯನು ಮನುಷ್ಯಲೋಕವನ್ನು ಪ್ರಕಾಶಪಡಿಸಿ ಆಕಾಶಕ್ಕೆ ಹೋಗುತ್ತಿರುವವನೂ ನಕ್ಷತ್ರಸಹಿತನೂ ಆದ ತಾರಕೇಶ್ವರ–ಚಂದ್ರನನ್ನು ನೋಡಿದನು.

**ಯಶಸ್ವತೀಸುನಂದಾಭ್ಯಾಂ ಸಾರ್ಧಂ [೭]ಶಕ್ರಮನಃಪ್ರಿಯಾಃ ।**
**ಶೋಚಂತೀಶ್ಚಿರಮದ್ರಾಕ್ಷೀತ್ಸುಭದ್ರಾ ಸ್ವಪ್ನಗೋಚರಾಃ ॥ ೩೩೦ ॥**

ಯಶಸ್ವತೀ ಸುನಂದೆಯರೊಡನೆ ಬಹುಕಾಲದವರೆಗೆ ಶೋಕಪಡುವವರೂ ಸ್ವಪ್ನದಲ್ಲಿ ಗೋಚರರಾದವರೂ ಆದ ಇಂದ್ರನ ಶಚೀದೇವಿ ಮೊದಲಾದವರನ್ನು ಸುಭದ್ರೆಯು ಕಂಡಳು.

**ವಾರಾಣಸೀಪತಿಶ್ಚಿತ್ರಾಂಗದೋಽಪ್ಯಾಲೋಕತಾಕುಲಃ ।**
**ಖಮುತ್ಪತಂತಂ ಭಾಸ್ವಂತಂ ಪ್ರಕಾಶ್ಯ ಧರಣೀತಲಮ್ ॥ ೩೩೧ ॥**

ವಾರಾಣಸಿಯ ದೊರೆಯಾದ ಚಿತ್ರಾಂಗದನೂ(ಅಕಂಪನಮಹಾರಾಜನ ಪುತ್ರನೂ) ವ್ಯಾಕುಲನಾಗಿ ಭೂತಲವನ್ನು ಪ್ರಕಾಶಪಡಿಸಿ ಆಕಾಶಕ್ಕೆ ಹಾರುತ್ತಿರುವ ಸೂರ್ಯನನ್ನು ನೋಡಿದನು.

---

೧ ಸಿದ್ಧಕ್ಷೇತ್ರಪರ್ಯಂತಂ. ೨ ಅರ್ಕಕೀರ್ತಿಃ. ೩ ಸ್ವರ್ಗಂಗತಂ. ೪ ಕಾಮವೃಷ್ಟಿನಾಮಗೃಹಪತಿರತ್ನಂ. ೫ ದದರ್ಶ. ೬ ತ್ರೈಲೋಕ್ಯಮಿತ್ಯಪಿಪಾಠಃ. ೭ ಶಚೀದೇವ್ಯಾದಯಃ.

ಏವಮಾಲೋಕಿತಸ್ವಪ್ನಾ ರಾಜರಾಜಪುರಸ್ಸರಾಃ ।
ಪುರೋಧಸಂ ಫಲಂ ತೇಷಾಮಪೃಚ್ಛನ್ನರ್ಯಮೋದಯೇ ॥ ೩೩೨ ॥

ಈ ಪ್ರಕಾರವಾಗಿ ಸ್ವಪ್ನಗಳನ್ನು ನೋಡಿದವರಾದ ಭರತೇಶ್ವರನೇ ಮೊದಲಾದವರು ಸೂರ್ಯೋದಯಕಾಲದಲ್ಲಿ ಆ ಸ್ವಪ್ನಗಳ ಫಲವನ್ನು ಪುರೋಹಿತನನ್ನು ಕುರಿತು ಕೇಳಿದರು.

ಕರ್ಮಾಣಿ ಹತ್ವಾ ನಿರ್ಮೂಲಂ ಮುನಿಭಿರ್ಬಹುಭಿಃ ಸಹ ।
ಪುರೋಃ ಸರ್ವೇಪಿ ಶಂಸಂತಿ ಸ್ವಪ್ನಾಃ ಸ್ವರ್ಗಾಗ್ರಗಾಮಿತಾಮ್ ॥ ೩೩೩ ॥

''ಕರ್ಮಗಳನ್ನು ನಿರ್ಮೂಲವಾಗಿ ನಾಶಮಾಡಿ ಅನೇಕ ಮುನಿಗಳೊಡನೆ ಎಲ್ಲಾ ಸ್ವಪ್ನಗಳೂ ವೃಷಭಸ್ವಾಮಿಯ ಸ್ವರ್ಗದ ಅಗ್ರಭಾಗ(ಮೋಕ್ಷ)ಕ್ಕೆ ಹೋಗುವಿಕೆಯನ್ನು ಸ್ತುತಿಸುತ್ತವೆ.''

ಇತಿ ಸ್ವಪ್ನಫಲಂ ತೇಷಾಂ ಭಾಷಮಾಣೇ ಪುರೋಹಿತೇ ।
ತದೈವಾನಂದನಾಮೈತ್ಯ ಭರ್ತುಃ ಸ್ಥಿತಿಮವೇದಯತ್ ॥ ೩೩೪ ॥

ಈ ಪ್ರಕಾರವಾಗಿ ಭರತೇಶ್ವರನೇ ಮೊದಲಾದವರಿಗೆ ಸ್ವಪ್ನಗಳ ಫಲವನ್ನು ಪುರೋಹಿತನು ಹೇಳುತ್ತಿರಲು ಆಗಲೇ ಆನಂದನೆಂಬವನು ಬಂದು ವೃಷಭಸ್ವಾಮಿಯ ಪರಿಸ್ಥಿತಿಯನ್ನು ತಿಳಿಸಿದನು.

ಧ್ವನೌ ಭಗವತಾ ದಿವ್ಯೇ ಸಂಹೃತೇ ಮುಕುಲೀಭವ ।
ತ್ಕರಾಂಬುಜಾ ಸಭಾ ಯಾತೇ ಪೂಷ್ಣೀವ ಸರಸೀತ್ಯಸೌ ॥ ೩೩೫ ॥

ತದಾಕರ್ಣನಮಾತ್ರೇಣ ಸತ್ವರಃ ಸರ್ವಸಂಗತಃ ।
ಚಕ್ರವರ್ತೀ ತಮಭ್ಯೇತ್ಯ ತ್ರಿಃಪರೀತ್ಯ ಕೃತಸ್ತುತಿಃ ॥ ೩೩೬ ॥

ಮಹಾಮಹಮಹಾಪೂಜಾಂ ಭಕ್ತ್ಯಾ ನಿರ್ವರ್ತಯನ್ ಸ್ವಯಮ್ ।
ಚತುರ್ದಶ ದಿನಾನ್ಯೇವಂ ಭಗವಂತಮಸೇವತ ॥ ೩೩೭ ॥

''ಸೂರ್ಯನು ಅಸ್ತಂಗತನಾಗಿ ಹೋಗುತ್ತಿರಲು ಮುಚ್ಚುತ್ತಿರುವ ಕಮಲಗಳುಳ್ಳ ಸರೋವರದೋಪಾದಿಯಲ್ಲಿ ಪೂಜ್ಯನಾದ ವೃಷಭಸ್ವಾಮಿಯಿಂದ ದಿವ್ಯಧ್ವನಿಯು ನಿಲ್ಲಿಸಲ್ಪಡುತ್ತಿರಲು ಸಭೆಯು ಮೊಗ್ಗಾದ–ಜೋಡಿಸಲ್ಪಟ್ಟ ಕರಕಮಲವುಳ್ಳುದಾಯಿತು.'' ಈ ಚಕ್ರವರ್ತಿಯು ಆ ಮಾತನ್ನು ಕೇಳಿದ ಮಾತ್ರದಿಂದ ತ್ವರೆಯುಳ್ಳವನೂ ಸಮಸ್ತರೊಡನೆ ಕೂಡಿದವನೂ ಆ ವೃಷಭಸ್ವಾಮಿಯನ್ನು ಹೊಂದಿ ಮೂರು ಸುತ್ತು ಪ್ರದಕ್ಷಿಣೆಮಾಡಿ ಸ್ತುತಿಯನ್ನು ಮಾಡಿದವನೂ ಭಕ್ತಿಯಿಂದ ತಾನು ಮಹಾಮಹವೆಂಬ ಪೂಜೆಯನ್ನು ನಡೆಸಿದವನೂ ಆಗಿ ಹೀಗೆ ಹದಿನಾಲ್ಕು ದಿನಗಳವರೆಗೆ ಭಗವಂತನನ್ನು ಭಜಿಸಿದನು.

ಮಾಘೇ ಕೃಷ್ಣಚತುರ್ದಶ್ಯಾಂ ಭಗವಾನ್ ಭಾಸ್ಕರೋದಯೇ ।
ಮುಹೂರ್ತೇಭಿಜಿತಿ ಪ್ರಾಪ್ತಪಲ್ಯಂಕೋ ಮುನಿಭಿಃ ಸಮಮ್ ॥ ೩೩೮ ॥

ಪ್ರಾಗ್ದಿಙ್ಮುಖಸ್ತೃತೀಯೇನ ಶುಕ್ಲಧ್ಯಾನೇನ ರುದ್ಧವಾನ್ ।
ಯೋಗತ್ರಿತಯಮಂತ್ಯೇನ ಧ್ಯಾನೇನಾಘಾತಿಕರ್ಮಣಾಮ್ ॥ ೩೩೯ ॥

ಪಂಚಹ್ರಸ್ವಸ್ವರೋಚ್ಚಾರಣಪ್ರಮಾಣೇನ ಸಂಕ್ಷಯಮ್ ।
ಕಾಲೇನ ವಿದಧತ್ಯಾಂತಗುಣಸ್ಥಾನಮಧಿಷ್ಠಿತಃ ॥ ೩೪೦ ॥

ಶರೀರತ್ರಿತಯಾಪಾಯೇ ಪ್ರಾಪ್ಯ ಸಿದ್ಧತ್ವಪರ್ಯಾಯಮ್ ।
ನಿಜಾಷ್ಟಗುಣಸಂಪೂರ್ಣಾಂ ಕ್ಷಣಾಪ್ತತನುವಾತಕಃ ॥ ೩೪೧ ॥

ನಿತ್ಯೋ ನಿರಂಜನಃ ಕಿಂಚಿದೂನೋ ದೇಹಾದಮೂರ್ತಿಭಾಕ್ ।
ಸ್ಥಿತಃ ಸ್ವಸುಖಸಾದ್ಭೂತಃ ಪಶ್ಯನ್ವಿಶ್ವಮನಾರತಮ್ ॥ ೩೪೨ ॥

ಭಗವಂತನು ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಸೂರ್ಯೋದಯಕಾಲದಲ್ಲಿ ಅಭಿಜಿನ್ಮುಹೂರ್ತದಲ್ಲಿ ಮುನಿಗಳೊಡನೆ ಪಲ್ಯಂಕಾಸನವನ್ನು ಹೊಂದಿದವನೂ ಪೂರ್ವಾಭಿಮುಖನೂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಮೂರನೆಯ ಶುಕ್ಲಧ್ಯಾನದಿಂದ ಮನೋವಾಕ್ಕಾಯಯೋಗಗಳನ್ನು ತಡೆದವನೂ ಕೊನೆಯದಾದ ವ್ಯುಪರತ ಕ್ರಿಯಾನಿವೃತ್ತಿಯೆಂಬ ಧ್ಯಾನದಿಂದ ಐದು ಹ್ರಸ್ವಸ್ವರಾಕ್ಷರಗಳನ್ನು ಉಚ್ಚರಿಸುವಷ್ಟು ಕಾಲದಿಂದ ಅಘಾತಿಕರ್ಮಗಳ ನಾಶವನ್ನು ಮಾಡುವವನೂ ಕೊನೆಯದಾದ–ಹದಿನಾಲ್ಕನೆಯ ಅಯೋಗಿಕೇವಲಿಗುಣಸ್ಥಾನವನ್ನು ಹೊಂದಿದವನೂ ಪರಮೌದಾರಿಕ ತೈಜಸ ಕಾರ್ಮಣಗಳೆಂಬ ಮೂರು ಶರೀರಗಳ ನಾಶವಾಗುತ್ತಿರಲು ಕ್ಷಾಯಿಕಸಮ್ಯಕ್ತ್ವ ಜ್ಞಾನ ದರ್ಶನ ವೀರ್ಯ ಸೂಕ್ಷ್ಮತ್ವ ಅವಗಹನ ಅಗುರುಲಘುತ್ವ ಅವ್ಯಾಬಾಧತ್ವಗಳೆಂಬ ತನ್ನ ಎಂಟು ಗುಣಗಳಿಂದ ಪರಿಪೂರ್ಣವಾದ ಸಿದ್ಧತ್ವಾವಸ್ಥೆಯನ್ನು ಹೊಂದಿ ಕ್ಷಣಕಾಲದಲ್ಲಿ ತನುವಾತವನ್ನು– ಸಿದ್ಧಲೋಕದ ತುತ್ತತುದಿಯನ್ನು ಹೊಂದಿದವನೂ ನಿತ್ಯನೂ ನಿರಂಜನ– ಕರ್ಮರಜೋರಹಿತನೂ ಪೂರ್ವಶರೀರದಿಂದ ಸ್ವಲ್ಪ ನ್ಯೂನವಾದ ಪರಿಮಾಣವುಳ್ಳವನೂ ಅಮೂರ್ತಿತ್ವ–ರೂಪರಸಗಂಧಸ್ಪರ್ಶರಾಹಿತ್ಯವನ್ನು ಹೊಂದಿದವನೂ ಲೋಕಾಲೋಕವನ್ನು ಯಾವಾಗಲೂ ನೋಡುವವನೂ ಆತ್ಮಸುಖಪರವಶನೂ ಆಗಿದ್ದನು.

ತದಾಗತ್ಯ ಸುರಾಃ ಸರ್ವೇ ಪ್ರಾಂತಪೂಜಾಚಿಕೀರ್ಷಯಾ ।
ಪವಿತ್ರಂ ಪರಮಂ ಮೋಕ್ಷಸಾಧನಂ ಶುಚಿ ನಿರ್ಮಲಮ್ ॥ ೩೪೩ ॥

ಶರೀರಂ ಭರ್ತುರಸ್ಯೇತಿ ಪರಾರ್ಧ್ಯಶಿಬಿಕಾರ್ಪಿತಮ್ ।
ಅಗ್ನೀಂದ್ರರತ್ನಭಾಭಾಸಿಪ್ರೋತ್ತುಂಗಮುಕುಟೋದ್ಭವಾ ॥ ೩೪೪ ॥

ಚಂದನಾಗರುಕರ್ಪೂರಪಾರೀಕಾಶ್ಮೀರಜಾದಿಭಿಃ ।
ಘೃತಕ್ಷೀರಾದಿಭಿಶ್ಚಾಪ್ತವೃದ್ಧಿನಾ ಹುತಭೋಜಿನಾ ॥ ೩೪೫ ॥

ಜಗದ್ಗೃಹಸ್ಯ ಸೌಗಂಧ್ಯಂ ಸಂಪಾದ್ಯಾಭೂತಪೂರ್ವಕಮ್ ।
ತದಾಕಾರೋಪಮರ್ದೇನ ಪರ್ಯಾಯಾಂತರಮಾನಯನ್ ॥ ೩೪೬ ॥

ಆಗ ಎಲ್ಲಾ ದೇವತೆಗಳೂ ಕೊನೆಯ–ನಿರ್ವಾಣಕಲ್ಯಾಣಪೂಜೆಯನ್ನು ಮಾಡಬೇಕೆಂಬ ಇಚ್ಛೆಯಿಂದ ಬಂದು ''ಈ ಸ್ವಾಮಿಯ ಶರೀರವು ಪವಿತ್ರವೂ ಉತ್ಕೃಷ್ಟವಾದ ಮೋಕ್ಷಸಾಧನವೂ ಪರಿಶುದ್ಧವೂ ನಿರ್ಮಲವೂ ಆಗಿರುತ್ತದೆ'' ಎಂದು ಉತ್ಕೃಷ್ಟವಾದ ಪಲ್ಲಕ್ಕಿಯಲ್ಲಿರಿಸಿ ಅಗ್ನೀಂದ್ರನ ರತ್ನಪ್ರಭೆಯಿಂದ ಪ್ರಕಾಶಮಾನವೂ ಉನ್ನತವೂ ಆದ ಕಿರೀಟದಿಂದುಂಟಾದುದೂ ಶ್ರೀಗಂಧ ಅಗರು ಕರ್ಪೂರದ ಪ್ರವಾಹ ಕುಂಕುಮ ಕೇಸರಿ ಮೊದಲಾದುವುಗಳಿಂದಲೂ ತುಪ್ಪ ಹಾಲು ಮೊದಲಾದುವುಗಳಿಂದಲೂ ವೃದ್ಧಿಯನ್ನು ಹೊಂದಿರುವುದೂ ಆದ ಬೆಂಕಿಯಿಂದ ಲೋಕವೆಂಬ ಮನೆಗೆ ಅಭೂತಪೂರ್ವವಾದ ಪರಿಮಳವನ್ನುಂಟುಮಾಡಿ ಆಗ ಶರೀರಾಕಾರವನ್ನು ಹೋಗಲಾಡಿಸಿ ಮತ್ತೊಂದು ರೂಪವನ್ನು ಹೊಂದಿಸಿದರು. ಸ್ವಾಮಿಯ ಪರಮೌದಾರಿಕದಿವ್ಯ ದೇಹವನ್ನು ಭಸ್ಮಮಾಡಿದರೆಂದು ಭಾವವು.

ಅಭ್ಯರ್ಚಿತಾಗ್ನಿಕುಂಡಸ್ಯ ಗಂಧಪುಷ್ಪಾಕ್ಷತಾದಿಭಿಃ ।
ತಸ್ಯ ದಕ್ಷಿಣಭಾಗೇಭೂದ್ಗಣಭೃತ್ಸಂಸ್ಕ್ರಿಯಾನಲಃ ॥ ೩೪೭ ॥

ಗಂಧ ಪುಷ್ಪ ಅಕ್ಷತವೇ ಮೊದಲಾದುವುಗಳಿಂದ ಆ ಪೂಜಿಸಲ್ಪಟ್ಟ ಅಗ್ನಿಕುಂಡದ ದಕ್ಷಿಣಭಾಗದಲ್ಲಿ ಗಣಧರಪರಮೇಷ್ಠಿಗಳ ದೇಹಸಂಸ್ಕಾರವನ್ನು ಮಾಡುವ ಬೆಂಕಿಯಿದ್ದಿತು.

ತಸ್ಯಾಪರಸ್ಮಿನ್ ದಿಗ್ಭಾಗೇ ಶೇಷಕೇವಲಿಕಾಯಗಃ ।
ಏವಂ ವಹ್ನಿತ್ರಯಂ ಭೂಮಾವವಸ್ಥಾಪ್ಯಾಮರೇಶ್ವರಾಃ ॥ ೩೪೮ ॥

ತತೋ ಭಸ್ಮ ಸಮಾದಾಯ ಪಂಚಕಲ್ಯಾಣಭಾಗಿನಃ ।
ವಯಂ ಚೈವಂ ಭವಾಮೇತಿ ಸ್ವಲಲಾಟೇ ಭುಜದ್ವಯೇ ॥ ೩೪೯ ॥

ಕಂಠೇ ಹೃದಯದೇಶೇ ಚ ತೇನ ಸಂಸ್ಪೃಶ್ಯ ಭಕ್ತಿತಃ ।
ತತ್ಪವಿತ್ರತಮಂ ಮತ್ವಾ ಧರ್ಮರಾಗರಸಾಹಿತಾಃ ॥ ೩೫೦ ॥

ತೋಷಾತ್ಸಂಪಾದಯಾಮಾಸುಃ ಸಂಭೂಯಾನಂದನಾಟಕಮ್ ।
ಸಪ್ತಮೋಪಾಸಕಾದ್ಯಾಸ್ತೇ ಸರ್ವೇಽಪಿ ಬ್ರಹ್ಮಚಾರಿಣಃ ॥ ೩೫೧ ॥

ಗಾರ್ಹಪತ್ಯಾಭಿಧಂ ಪೂರ್ವಂ ಪರಮಾಹವನೀಯಕಮ್ ।
ದಕ್ಷಿಣಾಗ್ನಿಂ ತತೋ ನ್ಯಸ್ಯ ಸಂಧ್ಯಾಸು ತಿಸೃಷು ಸ್ವಯಮ್ ॥ ೩೫೨ ॥

ತಚ್ಛಿಖಿತ್ರಯಸಾನ್ನಿಧ್ಯೇ ಚಕ್ರಮಾತಪವಾರಣಮ್ ।
ಜಿನೇಂದ್ರಪ್ರತಿಮಾಶ್ಚೈವಾಸ್ಥಾಪ್ಯ ಮಂತ್ರಪುರಸ್ಸರಮ್ ॥ ೩೫೩ ॥

[1]ತಾಂಸ್ತ್ರಿಕಾಲಂ ಸಮಭ್ಯರ್ಚ್ಯ [2]ಗೃಹಸ್ಥೈರ್ವಿಹಿತಾದರಾಃ ।
ಭವತಾ[3]ತಿಥಯೋ ಯೂಯಮಿತ್ಯಾಖ್ಯಚಕ್ರ್ಯು[4]ಪಾಸಕಾನ್ ॥ ೩೫೪ ॥

ಆ ಅಗ್ನಿಕುಂಡದ ಎಡದ ದಿಗ್ಭಾಗದಲ್ಲಿ ಇತರ ಕೇವಲಿಗಳ ದೇಹಸಂಸ್ಕಾರವನ್ನು ಮಾಡುವ ಬೆಂಕಿಯಿದ್ದಿತು. ಈ ಪ್ರಕಾರವಾಗಿ ದೇವೇಂದ್ರರು ಭೂಮಿಯಲ್ಲಿ ಮೂರು ಬೆಂಕಿಗಳನ್ನು ಸ್ಥಾಪಿಸಿ ಬಳಿಕ "ನಾವೂ ಹೀಗೆ ಪಂಚಕಲ್ಯಾಣಗಳಿಗೆ ಭಾಗಿಗಳಾಗಿ ಆಗಬೇಕು" ಎಂದು ಭಸ್ಮವನ್ನು ತೆಗೆದುಕೊಂಡು ಹಣೆಯಲ್ಲಿಯೂ ಎರಡು ಭುಜಗಳಲ್ಲಿಯೂ ಕಂಠದಲ್ಲಿಯೂ ಹೃದಯಪ್ರದೇಶದಲ್ಲಿಯೂ ಆ ಭಸ್ಮದಿಂದ ಭಕ್ತಿಯಿಂದ ಮುಟ್ಟಿ ಅದನ್ನು ಅತ್ಯಂತಪವಿತ್ರವನ್ನಾಗಿ ತಿಳಿದು ಧರ್ಮದಲ್ಲಿ ಅನುರಾಗವೆಂಬ ರಸದಿಂದ ಯುಕ್ತರಾಗಿ ಸಂತೋಷದಿಂದ ಸೇರಿ ಆನಂದನಾಟಕವನ್ನು ಮಾಡಿದರು. ಏಳನೆಯ ನೆಲೆಯ ಶ್ರಾವಕ–ಬ್ರಹ್ಮಚಾರಿ ಮೊದಲಾದವರೆಲ್ಲಾ (೭ ಬ್ರಹ್ಮಚಾರಿ ೮ ಆರಂಭವಿರತ ೯ ಪರಿಗ್ರಹವಿರತ ೧೦ ಅನುಮತಿವಿರತ ೧೧ ಉದ್ದಿಷ್ಟವಿರತ) ಬ್ರಹ್ಮಚಾರಿಗಳೂ ಮೊದಲು ಗಾರ್ಹಪತ್ಯವೆಂಬ ಅಗ್ನಿಯನ್ನೂ ಬಳಿಕ ಉತ್ಕೃಷ್ಟವಾದ ಆಹವನೀಯಾಗ್ನಿಯನ್ನೂ ತಾವು ಮೂರು ಸಂಧ್ಯಾಕಾಲಗಳಲ್ಲಿ ಸಂಸ್ಥಾಪಿಸಿ ಆ ಮೂರು ಬೆಂಕಿಗಳ ಸನ್ನಿಧಿಯಲ್ಲಿ ಚಕ್ರವನ್ನೂ ಛತ್ರವನ್ನೂ ಜಿನೇಶ್ವರಪ್ರತಿಮೆಗಳನ್ನೂ ಮಂತ್ರಪುರಸ್ಸರವಾಗಿ ಸ್ಥಾಪಿಸಿ ಆ ಬೆಂಕಿಗಳನ್ನು ತ್ರಿಸಂಧ್ಯಾಕಾಲಗಳಲ್ಲಿಯೂ ಅರ್ಚಿಸಿ ಇತರ ಗೃಹಸ್ಥರೊಡನೆ ಪ್ರೀತಿಯನ್ನು ಮಾಡಿದವರಾದ ನೀವುಗಳ ಅತಿಥಿ–ಉತ್ತಮಪಾತ್ರರಾದ ಭಿಕ್ಷುಗಳಾಗಿ ಆಗಿರಿ,' ಎಂದು ಭರತಚಕ್ರೇಶ್ವರನು ಶ್ರಾವಕ–ಬ್ರಾಹ್ಮಣರಿಗೆ ಹೇಳಿದನು.

ಸ್ನೇಹಾದಿಷ್ಟವಿಯೋಗೋತ್ಥಃ ಪ್ರದೀಪ್ತಃ ಶೋಕಪಾವಕಃ ।
ತದಾ ಪ್ರಬುದ್ಧಮ[5]ಪ್ಯಸ್ಯ ಚೇತೋಧಾಕ್ಷೀದಧೀಶಿತುಃ ॥ ೩೫೫ ॥

ಆಗ ಈ ಪ್ರಭುವಾದ ಭರತೇಶ್ವರನ ತಿಳಿವಳಿಕೆಯುಳ್ಳ ಮನಸ್ಸನ್ನೂ ಇಷ್ಟವಸ್ತುವಿನ(ವೃಷಭಸ್ವಾಮಿಯ)ವಿಯೋಗದಿಂದುಂಟಾದುದೂ ಸ್ನೇಹದಿಂದ (ಎಣ್ಣೆಯಿಂದ, ಪ್ರೀತಿಯಿಂದ) ಜ್ವಲಿಸಲ್ಪಟ್ಟುದೂ ಆದ ಶೋಕವೆಂಬ ಬೆಂಕಿಯು ಸುಟ್ಟಿತು.

ಗಣೀ ವೃಷಭಸೇನಾಖ್ಯಸ್ತಚ್ಛೋಕಾಪನಿನೀಷಯಾ ।
[6]ಪ್ರಾಕ್ರಂಸ್ತ ವಕ್ತುಂ ಸರ್ವೇಷಾಂ ಸ್ವೇಷಾಂ ವ್ಯಕ್ತಾಂ ಭವಾವಲೀಮ್ ॥

ವೃಷಭಸೇನನೆಂಬ ಗಣಧರನು ಭರತೇಶ್ವರನ ಶೋಕವನ್ನು ಹೋಗಲಾಡಿಸುವುದಕ್ಕೋಸ್ಕರ ಇಚ್ಛೆಯಿಂದ ತಮ್ಮೆಲ್ಲರ ಸ್ಫುಟವಾದ ಭವಪರಂಪರೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

ಜಯವರ್ಮಾ ಭವೇ ಪೂರ್ವೇ ದ್ವಿತೀಯೇಭೂನ್ಮಹಾಬಲಃ ।
ತೃತೀಯೇ ಲಲಿತಾಂಗಾಖ್ಯೋ ವಜ್ರಜಂಘಶ್ಚತುರ್ಥಕೇ ॥ ೩೫೭ ॥

ಪಂಚಮೇ ಭೋಗಭೂಜೋಭೂತ್ ಷಷ್ಠೇಯಂ ಶ್ರೀಧರೋಮರಃ ।
ಸಪ್ತಮೇಸುವಿಧಿಕ್ಷ್ಮಾಭೃದಷ್ಟಮೇಚ್ಯುತನಾಯಕಃ ॥ ೩೫೮ ॥

ನವಮೋ ವಜ್ರನಾಭೀಶೋ ದಶಮೇನುತ್ತರಾಂತ್ಯಜಃ ।
ತತೋವತೀರ್ಯ ಸರ್ವೇಂದ್ರವಂದಿತೋ ವೃಷಭೋಭವತ್ ॥ ೩೫೯ ॥

"ವೃಷಭಸ್ವಾಮಿಯು–ಪೂರ್ವಭವದಲ್ಲಿ ಜಯವರ್ಮನೂ ಎರಡನೆಯ ಭವದಲ್ಲಿ ಮಹಾಬಲನೂ ಆದನು. ಮೂರನೆಯ ಭವದಲ್ಲಿ ಲಲಿತಾಂಗನೆಂಬವನೂ ನಾಲ್ಕನೆಯ ಭವದಲ್ಲಿ ವಜ್ರಜಂಘನೂ ಐದನೆಯ ಭವದಲ್ಲಿ ಭೋಗಭೂಮಿಜನೂ ಆದನು. ಆರನೆಯ ಭವದಲ್ಲಿ ಇವನು(ಸ್ವಾಮಿಯು) ಶ್ರೀಧರನೆಂಬ ದೇವನೂ ಏಳನೆಯ ಭವದಲ್ಲಿ ಸುವಿಧಿಯೆಂಬ ರಾಜನೂ ಎಂಟನೆಯ ಭವದಲ್ಲಿ ಅಚ್ಯುತಸ್ವರ್ಗದ ದೇವೇಂದ್ರನೂ ಒಂಬತ್ತನೆಯ ಭವದಲ್ಲಿ ವಜ್ರನಾಭಿರಾಜನೂ ಹತ್ತನೆಯ ಭವದಲ್ಲಿ ಕೊನೆಯದಾದ ಅನುತ್ತರವಿಮಾನ–ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನೂ ಅಲ್ಲಿಂದ ಅವತರಿಸಿ ಸಮಸ್ತ ದೇವೇಂದ್ರರಿಂದ ವಂದಿತನಾದ ವೃಷಭಸ್ವಾಮಿಯೂ ಆದನು.

ಧನಶ್ರೀರಾಜಿಮೇ ಜನ್ಮನ್ಯತೋ ನಿರ್ನಾಮಿಕಾ ತತಃ ।
ಸ್ವಯಂಪ್ರಭಾ ತತಸ್ತಸ್ಮಾಚ್ಛ್ರೀಮತ್ಯಾರ್ಯಾ ತತೋಭವತ್ ॥ ೩೬೦ ॥

ಸ್ವಯಂಪ್ರಭಃ ಸುರಸ್ತಸ್ಮಾದಸ್ಮಾದಪಿ ಚ ಕೇಶವಃ ।
ತತಃ ಪ್ರತೀಂದ್ರಸ್ತಸ್ಮಾಚ್ಚ ಧನದತ್ತೋಹಮಿಂದ್ರತಾಮ್ ॥ ೩೬೧ ॥

ಗತಸ್ತತಸ್ತತಃ ಶ್ರೇಯಾನ್ದಾನತೀರ್ಥಸ್ಯ ನಾಯಕಃ ।
ಆಶ್ಚರ್ಯಪಂಚಕಸ್ಯಾಪಿ ಪ್ರಥಮೋಭೂತ್ಪ್ರವರ್ತಕಃ ॥ ೩೬೨ ॥

ಶ್ರೇಯಾಂಸನು–ಮೊದಲನೆಯ ಜನ್ಮದಲ್ಲಿ ಧನಶ್ರೀಯೂ ಬಳಿಕ ನಿರ್ನಾಮಿಕೆಯೂ ಆಮೇಲೆ ಸ್ವಯಂಪ್ರಭೆಯೂ ಅನಂತರ ಆ ಭವದಿಂದ ಶ್ರೀಮತಿಯೆಂಬ ಆರ್ಯಳೂ (ಭೋಗ ಭೂಮಿಜಳೂ) ತರುವಾಯ ಸ್ವಯಂಪ್ರಭದೇವನೂ ಆ ಈ ಭವದಿಂದ ಕೇಶವರಾಜನೂ ಬಳಿಕ ಸ್ವರ್ಗದಲ್ಲಿ ಪ್ರತೀಂದ್ರನೂ ಆ ಭವದಿಂದ ಧನದತ್ತಶ್ರೇಷ್ಠಿಯೂ ಆಮೇಲೆ ಅಹಮಿಂದ್ರತ್ವವನ್ನು ಹೊಂದಿದವನೂ ಅನಂತರದಲ್ಲಿ ದಾನತೀರ್ಥಕ್ಕೆ ಪ್ರಭುವಾದ ಶ್ರೇಯಾನ್– ರಾಜನೂ ಆಗಿ ಪಂಚಾಶ್ಚರ್ಯಗಳಿಗೆ ಮೊದಲನೆಯ ಪ್ರವರ್ತಕನಾದನು.

ಅತಿಗೃಧ್ನಃ ಪುರಾ ಪಶ್ಚಾನ್ನಾರಕೋನು ಚಮೂರಕಃ ।
ದಿವಾಕರಪ್ರಭೋ ದೇವಸ್ತಥಾ ಮತಿವರಾಹ್ವಯಃ ॥ ೩೬೩ ॥

ತತೋಹಮಿಂದ್ರಸ್ತಸ್ಮಾಚ್ಚ ಸುಬಾಹುರಹಮಿಂದ್ರತಾಮ್ ।
ಪ್ರಾಪ್ಯ ತ್ವಂ ಭರತೋ ಜಾತಃ ಷಟ್ಖಂಡಾಖಂಡಪಾಲಕಃ ॥ ೩೬೪ ॥

ಭರತನು–ಮೊದಲು ಅತಿಗೃಧ್ನನೆಂಬ ರಾಜನೂ ಬಳಿಕ ನಾರಕನೂ ಆಮೇಲೆ ಹುಲಿಯೂ ಅನಂತರ ದಿವಾಕರಪ್ರಭನೆಂಬ ದೇವನೂ ಹಾಗೆಯೇ ಮತಿವರನೆಂಬ ಮಂತ್ರಿಯೂ ತರುವಾಯ ಸ್ವರ್ಗದಲ್ಲಿ ಅಹಮಿಂದ್ರದೇವನೂ ಆ ಭವದಿಂದ ಸುಬಾಹುವೆಂಬ ರಾಜಪುತ್ರನೂ ಆಗಿ ಬಳಿಕ ಅಹಮಿಂದ್ರತ್ವವನ್ನು ಹೊಂದಿ ನೀನು ಷಟ್ಖಂಡರಕ್ಷಕನಾದ ಭರತನಾಗಿ ಹುಟ್ಟಿದೆ.

ಆದ್ಯಃ ಸೇನಾಪತಿಃ ಪಶ್ಚಾದಾರ್ಯಸ್ತಸ್ಮಾತ್ಪ್ರಭಂಕರಃ ।
ತತೋಕಂಪನಭೂಪಾಲಃ ಕಲ್ಪಾತೀತಸ್ತತಸ್ತತಃ ॥ ೩೬೫ ॥

ಮಹಾಬಾಹುಸ್ತತಶ್ಚಾಭೂದಹಮಿಂದ್ರಸ್ತತಶ್ಚ್ಯುತಃ ।
ಏಷ ಬಾಹುಬಲೀ ಜಾತೋ ಜಾತಪೂರ್ವಮಹೋದಯಃ ॥ ೩೬೬ ॥

ಬಾಹುಬಲಿಯು–ಮೊದಲನೆಯವನು ಸೇನಾಪತಿಯೂ ಬಳಿಕ ಭೋಗಭೂಮಿಯಲ್ಲಿ ಆರ್ಯನೂ ಆ ಭವದಿಂದ ಪ್ರಭಂಕರನೆಂಬ ದೇವನೂ ತರುವಾಯ ಅಕಂಪನನೆಂಬ ರಾಜನೂ ಆಮೇಲೆ ಕಲ್ಪಾತೀತದೇವನೂ ಅನಂತರದಲ್ಲಿ ಮಹಾಬಾಹುವೆಂಬ ರಾಜನೂ ಬಳಿಕ ಅಹಮಿಂದ್ರನೂ ಅಲ್ಲಿಂದ ಚ್ಯುತನಾಗಿ ಅಪೂರ್ವವಾದ ಮಹಾಭ್ಯುದಯವುಳ್ಳವನಾದ ಈ ಬಾಹುಬಲಿಯೂ ಆಗಿ ಜನಿಸಿದನು.

೧ ಗಾರ್ಹಪತ್ಯಾದ್ಯಗ್ನೀನ್. ೨ ಅನ್ಯೈರ್ಗೃಹಸ್ಥೈಃ. ೩ ಪಾತ್ರತಮಾಃಭಿಕ್ಷವಃ. ೪ ಬ್ರಾಹ್ಮಣಾನ್. ೫ ಚಕ್ರಿಣಃ. ೬ ಪ್ರಾರಭತೇಸ್ಮ.

**ಮಂತ್ರೀ ಪ್ರಾಗ್ಭೋಗಭೂಜೋಽನು ಸುರೋಽನು ಕನಕಪ್ರಭಃ ।**
**ಆನಂದೋಽನ್ವಹಮಿಂದ್ರೋಽನು ತತಃ ಪೀಠಾಹ್ವಯಸ್ತತಃ ॥ ೩೬೭ ॥**

**ಅಹಮಿಂದ್ರೋಽಗ್ರಿಮೋಽಭೂವಮಹಮದ್ಯ ಗಣಾಧಿಪಃ ।**
**ಪುರೋಹಿತಸ್ತತಶ್ಚಾರ್ಯೋಽ ಬಭೂವಾಸ್ಮಾತ್ಪ್ರಭಂಜನಃ ॥ ೩೬೮ ॥**

**ಧನಮಿತ್ರಸ್ತತಸ್ತಸ್ಮಾದಹಮಿಂದ್ರಸ್ತತಶ್ಚ್ಯುತಃ ।**
**ಮಹಾಪೀಠೋಽಹಮಿಂದ್ರೋಽಸ್ಮಾದನಂತವಿಜಯೋಽಭವತ್ ॥ ೩೬೯ ॥**

ವೃಷಭಸೇನಗಣಧರನು–ಮೊದಲು ಮಂತ್ರಿಯೂ ಆಮೇಲೆ ಭೋಗಭೂಮಿಜನೂ ಬಳಿಕ ಕನಕಪ್ರಭನೆಂಬ ದೇವನೂ ಅನಂತರದಲ್ಲಿ ಆನಂದನೆಂಬ ಪುರೋಹಿತನೂ ತರುವಾಯ ಅಹಮಿಂದ್ರದೇವನೂ ಆಗಿ ಈಗ ನಾನು ಮೊದಲನೆಯ ಗಣಧರನಾದೆನು. ಅನಂತವಿಜಯನು–(ಭರತನ ತಮ್ಮನು) ಮೊದಲು ಪುರೋಹಿತನೂ ಆಮೇಲೆ ಭೋಗಭೂಮಿಯಲ್ಲಿ ಆರ್ಯನೂ ಆದನು. ಈ ಭವದಿಂದ ಪ್ರಭಂಜನನೆಂಬ ದೇವನೂ ಅನಂತರದಲ್ಲಿ ಧನಮಿತ್ರನೆಂಬ ಶ್ರೇಷ್ಠಿಯೂ ಬಳಿಕ ಆ ಭವದಿಂದ ಅಹಮಿಂದ್ರದೇವನೂ ಅಲ್ಲಿಂದ ಚ್ಯುತನಾಗಿ ಮಹಾಪೀಠನೆಂಬ ರಾಜಪುತ್ರನೂ ಆಮೇಲೆ ಅಹಮಿಂದ್ರದೇವನೂ ಆಗಿ ಇಲ್ಲಿಂದ ಅನಂತವಿಜಯ (ಗಣಧರ)ನಾದನು.

**ಉಗ್ರಸೇನಶ್ಚಮೂರೋಽತೋ ಭೋಗಭೂಮಿಸಮುದ್ಭವಃ ।**
**ತತಶ್ಚಿತ್ರಾಂಗದಸ್ತಸ್ಮಾದ್ವರದತ್ತಃ ಸುರೋ ಜಯಃ ॥ ೩೭೦ ॥**

**ತತೋ ಗತ್ವಾಹಮಿಂದ್ರೋಽಭೂತ್ತಸ್ಮಾಚ್ಚಾಗತ್ಯ ಭೂತಲಮ್ ।**
**ಮಹಾಸೇನೋಽಭವತ್ಕರ್ಮಮಹಾಸೇನಾಜಯೋರ್ಜಿತಃ ॥ ೩೭೧ ॥**

ಮಹಾಸೇನನು–(ಅನಂತವೀರ್ಯನು) ಮೊದಲು ಉಗ್ರಸೇನನೆಂಬ ವೈಶ್ಯನೂ ಬಳಿಕ ಹುಲಿಯೂ ಆಮೇಲೆ ಭೋಗಭೂಮಿಜನೂ ಅನಂತರದಲ್ಲಿ ಚಿತ್ರಾಂಗದನೆಂಬ ದೇವನೂ ಅಲ್ಲಿಂದ ವರದತ್ತನೆಂಬ ರಾಜಪುತ್ರನೂ ತರುವಾಯ ಸ್ವರ್ಗದಲ್ಲಿ ದೇವನೂ ಬಳಿಕ ವಿಜಯನೆಂಬ ರಾಜಪುತ್ರನೂ ಅನಂತರದಲ್ಲಿ ಹೋಗಿ ಅಹಮಿಂದ್ರನೂ ಆದನು. ಅಲ್ಲಿಂದ ಭೂತಲಕ್ಕೆ ಬಂದು ಕರ್ಮವೆಂಬ ಮಹಾಸೈನ್ಯದ ಜಯದಿಂದ ವೃದ್ಧಿಯನ್ನು ಹೊಂದಿದವನಾದ ಮಹಾಸೇನ(ಗಣಧರ)ನಾದನು.

**ಹರಿವಾಹನನಾಮಾಢ್ಯೋ ವರಾಹಾರ್ಯಸ್ತತೋಽಭವತ್ ।**
**ಮಣಿಕುಂಡಲ್ಯತಸ್ತಸ್ಮಾದ್ವರಸೇನಃ ಸುರೋತ್ತಮಃ ॥ ೩೭೨ ॥**

**ತತೋಽಸ್ಮಾದ್ವಿಜಯಸ್ತಸ್ಮಾದಹಮಿಂದ್ರೋ ದಿವಶ್ಚ್ಯುತಃ ।**
**ಅಜನಿಷ್ಟ ವಿಶಿಷ್ಟೇಷ್ಟಃ ಶ್ರೀಶೇಣಃ ಸೇವಿತಃ ಶ್ರಿಯಾ ॥ ೩೭೩ ॥**

ಶ್ರೀಷೇಣನು–ಮೊದಲನೆಯವನಾದ ಹರಿವಾಹನನೆಂಬ ರಾಜಪುತ್ರನು ಆಮೇಲೆ ಹಂದಿಯಾದ ಭೋಗಭೂಮಿಜನಾದನು. ಬಳಿಕ ಸ್ವರ್ಗದಲ್ಲಿ ಮಣಿಕುಂಡಲಿಯೆಂಬ ದೇವನೂ ಅಲ್ಲಿಂದ ವರಸೇನನೆಂಬ ರಾಜಪುತ್ರನೂ ತರುವಾಯ ಸ್ವರ್ಗದಲ್ಲಿ ದೇವನೂ ಅನಂತರದಲ್ಲಿ ಈ ಭವದಿಂದ ವಿಜಯನೆಂಬ ರಾಜಪುತ್ರನೂ ಆ ಭವದಿಂದ ಸ್ವರ್ಗದಲ್ಲಿ ಅಹಮಿಂದ್ರನೂ ಆಗಿ ಸ್ವರ್ಗದಿಂದ ಚ್ಯುತನಾಗಿ ಸತ್ಪುರುಷರಿಗೆ ಮಾನ್ಯನೂ ಲಕ್ಷ್ಮಿಯಿಂದ ಸೇವಿಸಲ್ಪಟ್ಟವನೂ ಆದ ಶ್ರೀಷೇಣ (ಗಣಧರ)ನಾಗಿ ಜನಿಸಿದನು.

**ನಾಗದತ್ತಸ್ತತೋ ವಾನರಾರ್ಯೋಽಸ್ಮಾಚ್ಚ ಮನೋಹರಃ ।**
**ದೇವಶ್ಚಿತ್ರಾಂಗದಸ್ತಸ್ಮಾದಭೂತ್ಸಾಮಾನಿಕಃ ಸುರಃ ॥ ೩೭೪ ॥**

**ತತಶ್ಚ್ಯುತೋ ಜಯಂತೋಽಭೂದಹಮಿಂದ್ರಸ್ತತಸ್ತತಃ ।**
**ಮಹೀತಲಂ ಸಮಾಸಾದ್ಯ ಗುಣಸೇನೋಽಭವದ್ಗಣೀ ॥ ೩೭೫ ॥**

ಗುಣಸೇನನು–ಮೊದಲು ನಾಗದತ್ತನೆಂಬ ವೈಶ್ಯನೂ ಆಮೇಲೆ ಕಪಿಯಾದ ಭೋಗಭೂಮಿಜನೂ ಈ ಭವದಿಂದಲೂ ಸ್ವರ್ಗದಲ್ಲಿ ಮನೋಹರನೆಂಬ ದೇವನೂ ಆಗಿ ಅಲ್ಲಿಂದ ಚಿತ್ರಾಂಗದನೆಂಬ ರಾಜನಾದನು. ಬಳಿಕ ಸ್ವರ್ಗದಲ್ಲಿ ಸಾಮಾನಿಕ ದೇವನೂ ಅಲ್ಲಿಂದ ಚ್ಯುತನಾಗಿ ಜಯಂತನೆಂಬ ರಾಜಪುತ್ರನೂ ಆದನು. ಆಮೇಲೆ ಸ್ವರ್ಗದಲ್ಲಿ ಅಹಮಿಂದ್ರನಾಗಿ ಅಲ್ಲಿಂದ ಭೂತಲವನ್ನು ಹೊಂದಿ ಗುಣಸೇನ ಗಣಧರನಾದನು.

**ಲೋಲುಪೋ ನಕುಲಾರ್ಯೋಽಸ್ಮಾದೇತಸ್ಮಾತ್ಸ ಮನೋರಥಃ ।**
**ತತೋಽಪಿ ಶಾಂತಮದನಸ್ತತಃ ಸಾಮಾನಿಕೋಽಮರಃ ॥ ೩೭೬ ॥**

**ರಾಜಾಪರಾಜಿತಸ್ತಸ್ಮಾದಹಮಿಂದ್ರಸ್ತತೋಽಜನಿ ।**
**ತತೋ ಮಮಾನುಜೋ ಜಾತೋ ಜಯಸೇನೋಽಯಮೂರ್ಜಿತಃ ॥**

ಜಯಸೇನನು–ಮೊದಲು ಲೋಲುಪನೆಂಬ ವರ್ತಕನೂ ಆಮೇಲೆ ಮುಂಗುಸಿಯಾದ ಭೋಗಭೂಮಿಜನೂ ಈ ಭವದಿಂದ ಆ ಮನೋರಥನೆಂಬ ದೇವನೂ ಅಲ್ಲಿಂದಲೂ ಶಾಂತಮದನನೆಂಬ ರಾಜಪುತ್ರನೂ ಸ್ವರ್ಗದಲ್ಲಿ ಸಾಮಾನಿಕದೇವನೂ ಅಲ್ಲಿಂದ ಅಪರಾಜಿತನೆಂಬ ರಾಜಪುತ್ರನೂ ಅನಂತರ ಸ್ವರ್ಗದಲ್ಲಿ ಅಹಮಿಂದ್ರನೂ ಆಗಿ ಆಮೇಲೆ ನನ್ನ ತಮ್ಮನೂ ಭಾಗ್ಯಶಾಲಿಯೂ ಆದ ಇವನು ಜಯಸೇನನಾಗಿ ಜನಿಸಿದನು.

**ಇತ್ಯಸ್ಮಿನ್ಭವಸಂಕಟೇ ಭವಭೃತಃ ಸ್ವೇಷ್ಟೈರನಿಷ್ಟೈಸ್ತಥಾ**
**ಸಂಯೋಗಃ ಸಹಸಾ ವಿಯೋಗಚರಮಃ ಸರ್ವಸ್ಯ ನನ್ವೀದೃಶಮ್ ॥**
**ತ್ವಂ ಜಾನನ್ನಪಿ ಕಿಂ ವಿಷಣ್ಣಹೃದಯೋ ವಿಶ್ಲಿಷ್ಟಕರ್ಮಾಷ್ಟಕೋ**
**ನಿರ್ವಾಣಂ ಭಗವಾನವಾಪದತುಲಂ ತೋಷೇ ವಿಷಾದಃ ಕುತಃ ॥**

ಈ ಪ್ರಕಾರವಾದ ಭವವೆಂಬ ಸಂಕಟದಲ್ಲಿ–ಇಕ್ಕಟ್ಟಿನಲ್ಲಿ ಸಮಸ್ತಸಂಸಾರಿ–ಪ್ರಾಣಿಗೆ ಹಾಗೆ ಇಷ್ಟವಸ್ತುಗಳೊಡನೆಯೂ ಅನಿಷ್ಟವಸ್ತುಗಳೊಡನೆಯೂ ಸಂಯೋಗವೂ ಶೀಘ್ರವಾಗಿ ವಿಯೋಗದ ಕೊನೆಯೂ ಇಂತಹದಲ್ಲವೆ ? ನೀನು ತಿಳಿಯುವವನಾದರೂ ಏತಕ್ಕೆ ವಿಷಾದವುಳ್ಳ ಮನಸ್ಸುಳ್ಳವನಾಗಿರುತ್ತಿ ?ಭಗವಂತನು –ವೃಷಭಸ್ವಾಮಿಯು ಎಂಟುಕರ್ಮಗಳಿಂದ ಬಿಡುಗಡೆಯನ್ನು ಹೊಂದಿದವನಾಗಿ ಅನುಪಮವಾದ ಕೈವಲ್ಯವನ್ನು ಹೊಂದಿದನು. ಸಂತೋಷದಲ್ಲಿ ವಿಷಾದವು ಎಲ್ಲಿಂದ ಬಂದಿತು ?

**ವಯಮಪಿ ಚರಮಾಂಗಾಃ ಸಂಗಮಾಚ್ಛುದ್ಧಬುದ್ಧೇಃ**
**ಸಕಲಮಲವಿಲೋಪಾಪಾದಿತಾತ್ಮಸ್ವರೂಪಾಃ ॥**
**ನಿರುಪಮಸುಖಸಾರಂ ಚಕ್ರವರ್ತಿಂಸ್ತದೀಯಂ**
**ಪದಮಚಿರತರೇಣ ಪ್ರಾಪ್ನುಮೋ ನಾಪ್ಯಮನ್ಯೈಃ ॥ ೩೭೯ ॥**

ಎಲೈ ಚಕ್ರವರ್ತಿಯೇ !ಅಂತ್ಯಶರೀರಧಾರಿಗಳಾಗಿರುವ ನಾವುಗಳೂ (ವೃಷಭಸೇನ ಭರತ ಭುಜಬಲಿ ಮೊದಲಾದವರೂ) ಶುದ್ಧವಾದ ಬುದ್ಧಿಯ ಸಮಾಗಮದಿಂದ ಸಮಸ್ತವಾದ ಕರ್ಮಮಲದ ನಾಶದಿಂದುಂಟುಮಾಡಲ್ಪಟ್ಟುದಾದ ಆತ್ಮಸ್ವರೂಪವುಳ್ಳವರಾಗಿ ಅಸದೃಶವಾದ ಸುಖದ ಸಾರವುಳ್ಳುದೂ ಅಭವ್ಯರಿಂದ ಹೊಂದುವುದಕ್ಕೆ ಯೋಗ್ಯವಲ್ಲದುದೂ ಆ ವೃಷಭಸ್ವಾಮಿಯ ಸಂಬಂಧಿಯೂ ಆದ ಸ್ಥಾನವನ್ನು ಬಹುಶೀಘ್ರವಾಗಿ ಹೊಂದುತ್ತೇವೆ.

**ಭವತು ಸುಹೃದಾಂ ಮೃತ್ಯೋಃ ಶೋಕಃ ಶುಭಾಶುಭಕರ್ಮಭಿ**
**ರ್ಭವತಿ ಹಿ ಸ ಚೇತ್ತೇಷಾಮಸ್ಮಿನ್ಪುನರ್ಜನನಾವಹಃ ॥**
**ವಿನಿಹತಭವೇ ಪ್ರಾರ್ಥ್ಯೇ ತಸ್ಮಿನ್ಸ್ವಯಂ ಸಮುಪಾಗತೇ**
**ಕಥಮಯಮಹೋ ದೀಮಾನ್ಕುರ್ಯಾಚ್ಛುಚಂ ಯದಿ ನೋ ರಿಪುಃ ॥**

ಮರಣವು ಸಂಸಾರಿಪ್ರಾಣಿಗಳಿಗೆ ಈ ಸಂಸಾರದಲ್ಲಿ ಶುಭಾಶುಭಕರ್ಮಗಳಿಂದ ಪುನರ್ಜನ್ಮವನ್ನುಂಟುಮಾಡುವುದಾದರೆ ಆ ಬಂಧುಗಳ ಮರಣದಿಂದ ಶೋಕವು ಆಗಲಿ. ಆದರೆ ಭವವನ್ನು ನಾಶಮಾಡಿದ ಆತ್ಮನಲ್ಲಿ ಪ್ರಾರ್ಥಿಸಲ್ಪಡುವುದಕ್ಕೆ ಯೋಗ್ಯವಾದ ಆ ಮೃತ್ಯುವು ತಾನಾಗಿ ಬಂದರೆ (ಆ ಮೃತ್ಯುವಿಗಾಗಿ) ಶತ್ರುವಲ್ಲದಿದ್ದರೆ ಬುದ್ಧಿಶಾಲಿಯಾದ ಈ ಮನುಷ್ಯನು ಶೋಕವನ್ನು ಹೇಗೆ ಮಾಡುವನು ? ಆಶ್ಚರ್ಯ ! ಬಂಧುವಿಗೆ ಪುನರ್ಜನ್ಮವನ್ನುಂಟುಮಾಡುವ ಮೃತ್ಯುವಿಗಾಗಿ ಶೋಕಪಡಬಹುದಾದರೂ ಮುಕ್ತಿಯನ್ನು ಹೊಂದುವ– ಪುನರ್ಜನ್ಮವನ್ನು ದೂರ

ಮಾಡಿದ ಆತ್ಮನಲ್ಲಿ ಆ ಮೃತ್ಯುವು ತಾನಾಗಿ ಬಂದರೆ ಶತ್ರುವು ದುಃಖಪಡಬೇಕಲ್ಲದೆ ಬುದ್ಧಿಶಾಲಿಯು ದುಃಖಪಡಲಾರನೆಂದು ಭಾವವು.

**ಅಷ್ಟಾಪಿ ದುಷ್ಟರಿಪವೋಽಸ್ಯ [1]ಸಮೂಲತೂಲಂ**
**ನಷ್ಟಾ ಗುಣೈರ್ಗುರುಭಿರಷ್ಟಭಿರೇಷ ಜುಷ್ಟಃ ॥**
**ಕಿಂ ನಷ್ಟಮತ್ರ ನಿಧಿನಾಥ ಜಹೀಹಿ ಮೋಹಂ**
**[2]ಸಂಧೇಹಿ ಶೋಕವಿಜಯಾಯ ಧಿಯಂ ವಿಶುದ್ಧಾಮ್ ॥ ೩೮೧ ॥**

ಎಲೈ ನಿಧೀಶ್ವರನೇ ! ಈ ವೃಷಭಸ್ವಾಮಿಯ ಎಂಟು ಪ್ರಕಾರವಾದ ದುಷ್ಟ ಕರ್ಮಶತ್ರುಗಳೂ ಕಾರಣಸಹಿತವಾಗಿ ನಾಶವಾದರು. ಈ ಸ್ವಾಮಿಯು ಶ್ರೇಷ್ಠವಾದ ಕ್ಷಾಯಿಕಸಮ್ಯಕ್ತ್ವ ಜ್ಞಾನವೇ ಮೊದಲಾದ ಎಂಟು ಗುಣಗಳಿಂದ ಸೇವಿಸಲ್ಪಡುತ್ತಾನೆ. ಇಲ್ಲೇನು ನಷ್ಟವಾಗಿರುತ್ತದೆ ? ಮೋಹವನ್ನು ಬಿಡು. ಶೋಕವನ್ನು ಜಯಿಸುವುದಕ್ಕೋಸ್ಕರ ವಿಶುದ್ಧವಾದ ಬುದ್ಧಿಯನ್ನು ಚೆನ್ನಾಗಿ ಧರಿಸು.

**ದೇಹಚ್ಯುತೌ ಯದಿ ಗುರೋರ್ಗುರು ಶೋಚಸಿ ತ್ವಂ**
**ತಂ ಭಸ್ಮಸಾತ್ಕೃತಿಮವಾಪ್ಯ ವಿವೃದ್ಧರಾಗಾಃ ॥**
**ಪ್ರಾಗ್ಜನ್ಮನೋಽಪಿ [3]ಪರಿಕರ್ಮಕೃತೋಽಸ್ಯ ಕಸ್ಮಾ**
**ದಾನಂದನೃತ್ತಮಧಿಕಂ ವ್ಯದಧುರ್ದ್ಯುನಾಥಾಃ ॥ ೩೮೨ ॥**

ಸ್ವಾಮಿಯ ಶರೀರನಾಶವಾಗುತ್ತಿರಲು ನೀನು ಬಹಳವಾಗಿ ಶೋಕಪಡುವುದಾದರೆ ಈ ಸ್ವಾಮಿಯ ಜನ್ಮಕ್ಕಿಂತಲೂ ಮೊದಲು ಸೇವೆಯನ್ನು ಮಾಡಿದವರಾದ ಸ್ವರ್ಗಾಧಿಪತಿಗಳು–ಇಂದ್ರರು ಆ ದೇಹವನ್ನು ಭಸ್ಮಾಧೀನವನ್ನಾಗಿ ಹೊಂದಿಸಿ ವೃದ್ಧಿಯನ್ನು ಹೊಂದಿದ ಅನುರಾಗವುಳ್ಳವರಾಗಿ ಯಾವ ಕಾರಣದಿಂದ ಅಧಿಕವಾಗಿ ಆನಂದನರ್ತನವನ್ನು ಮಾಡಿದರು ?

**ನೇಕ್ಷೇ ವಿಶ್ವದೃಶಂಶೃಣೋಮಿ ನ ವಚೋ ದಿವ್ಯಂ ತದಂಘ್ರಿದ್ವಯೇ**
**ನಮ್ರಸ್ತನ್ನಖಭಾವಿಭಾಸಿಮುಕುಟಂ ಕರ್ತುಂ ಲಭೇ ನಾಧುನಾ ॥**
**ತಸ್ಮಾತ್ಸ್ನೇಹವಶೋಽಸ್ಮ್ಯಹಂ ಬಹುತರಂ ಶೋಕೀತಿ ಚೇದಸ್ತ್ವಿದಮ್**
**ಕಿಂತು ಭ್ರಾಂತಿರಿಯಂ ವ್ಯತೀತವಿಷಯಪ್ರಾಪ್ತ್ಯೈ ಭವತ್ಪ್ರಾರ್ಥನಾ ॥ ೩೮೩ ॥**

“ವಿಶ್ವಲೋಚನನಾದ–ಎಲ್ಲವನ್ನೂ ನೋಡುವವನಾದ ಸ್ವಾಮಿಯನ್ನು ಈಗ ನೋಡುವುದಿಲ್ಲ. ಅವನ ದಿವ್ಯವಚನವನ್ನು ಕೇಳುವುದಿಲ್ಲ. ಅವನ ಪಾದಯುಗಲದಲ್ಲಿ ನಮ್ರನಾಗಿ ಕಿರೀಟವನ್ನು ಆ ಪಾದಗಳ ಉಗುರುಗಳ ಕಾಂತಿಯಿಂದ ಹೆಚ್ಚಾದ ಪ್ರಕಾಶವುಳ್ಳುದನ್ನಾಗಿ ಮಾಡುವುದಕ್ಕೆ ಆ ಪಾದಯುಗಲವನ್ನು ಹೊಂದುವುದಿಲ್ಲ. ಆದುದರಿಂದ ನಾನಾ ಸ್ನೇಹಪರವಶನಾಗಿರುತ್ತೇನೆ. ಬಹಳವಾಗಿ ಶೋಕವುಳ್ಳವನಾಗಿರುತ್ತೇನೆ.” ಈ ಪ್ರಕಾರವಾದ ದುಃಖವಿರುವುದಾರೆ ಇರಲಿ. ಆದರೆ ಕಳೆದು ಹೋದ ವಿಷಯದ ಪ್ರಾಪ್ತಿಗೋಸ್ಕರ ಈ ನಿನ್ನ ಪ್ರಾರ್ಥನೆಯು ಭ್ರಮೆಯಾಗಿರುತ್ತದೆ.

**ತ್ರಿಜ್ಞಾನದೃಕ್ ತ್ರಿಭುವನೈಕಗುರುರ್ಗುರುಸ್ತೇ**
**ಸ್ನೇಹೇನ ಮೋಹವಿಹಿತೇನ ವಿನಾಶಯೇಃ ಕಿಮ್ ॥**
**ಸ್ವೋದಾತ್ತತಾಂ ಶತಮುಖಸ್ಯ ನ ಲಜ್ಜಸೇ ಕಿಂ**
**ತಸ್ಮಾತ್ತವ ಪ್ರಥಮಮುಕ್ತಿಗತಿಂ ನ ವೇತ್ಸಿ ॥ ೩೮೪ ॥**

ಮತಿ ಶ್ರುತಾವಧಿಜ್ಞಾನಗಳೆಂಬ ನೇತ್ರಗಳುಳ್ಳವನಾದ ಭರತೇಶ್ವರನೆ ! ನಿನ್ನ ತಂದೆಯು ಮೂರು ಲೋಕಗಳಿಗೆ ಮುಖ್ಯನಾದ ತಂದೆಯಾಗಿರುತ್ತಾನೆ. ಅಜ್ಞಾನದಿಂದ ಮಾಡಲ್ಪಟ್ಟುದಾದ ಸ್ನೇಹದಿಂದ ತನ್ನ ಉದಾತ್ತಗುಣವನ್ನೇಕೆ ನಾಶಮಾಡುವೆ ? ದೇವೇಂದ್ರನಿಗೆ ನೀನು ನಾಚಿಕೆಪಡುವುದಿಲ್ಲವೆ ? (ದೇವೇಂದ್ರನು ಶೋಕಿಸದಿರುವಾಗ ನೀನು ಶೋಕಪಡುವುದು ನಾಚಿಕೆಗೇಡಲ್ಲವೆ ?) ನಿನಗೆ ಆ ದೇವೇಂದ್ರನಿಗಿಂತ ಮೊದಲು ಮೋಕ್ಷಗಮನವೆಂಬುದನ್ನು ತಿಳಿಯೆಯಾ ?

೧ ಕಾರಣಸಹಿತಂ. ೨ ಸಮ್ಯಗ್ಧಾರಯ. ೩ ಪರಿಚರ್ಯಾಕರಾಃ.

**ಇಷ್ಟಂ ಕಿಂ ಕಿಮನಿಷ್ಟಮತ್ರ ವಿತಥಂ ಸಂಕಲ್ಪ್ಯ ಜಂತುರ್ಜಡಃ**
**ಕಿಂಚಿದ್ದ್ವೇಷ್ಟ್ಯಪಿ ವಷ್ಟಿ ಕಿಂಚಿದನಯೋಃ ಕುರ್ಯಾದಪಿ ವ್ಯತ್ಯಯಮ್ ॥**
**ತೇನೈನೋಽನುಗತಿಸ್ತತೋ ಭವವನೇ ಭವ್ಯೋಽಪ್ಯಭವ್ಯೋಽಪಮೋ**
**ಭ್ರಾಮ್ಯತ್ಯೇಷ ಕುಮಾರ್ಗವೃತ್ತಿರಧನೋ ವಾತಂಕಭೀದುಃಖಿತಃ ॥ ೩೮೫ ॥**

ಮೂರ್ಖಪ್ರಾಣಿಯು ಈ ಸಂಸಾರದಲ್ಲಿ “ಇಷ್ಟವಸ್ತುವಾವುದು ? ಅನಿಷ್ಟ ವಸ್ತುವಾವುದು ?” ಎಂದು ಸೆಟೆಯಾಗಿ ಸಂಕಲ್ಪಿಸಿ ಅನಿಷ್ಟವಸ್ತುವನ್ನು ದ್ವೇಷಿಸುತ್ತದೆ ಇಷ್ಟವಸ್ತುವನ್ನು ಇಚ್ಛಿಸುತ್ತದೆ. ಈ ಇಷ್ಟಾನಿಷ್ಟವಸ್ತುಗಳಲ್ಲಿ ವ್ಯತ್ಯಾಸ ಉದಾಸೀನತೆಯನ್ನೂ ಮಾಡುವುದು. ಆ ಕಾರಣದಿಂದ ಪಾಪದ ಅನುಸರಣೆಯಾಗುವುದು–ಪಾಪವು ಹಿಂಬಾಲಿಸುವುದು. ಆದರಿಂದ ನಿರ್ಧನನಂತೆ ಕೆಟ್ಟದಾರಿಯಲ್ಲಿ ನಡೆಯುವವನೂ ರೋಗಭಯವುಳ್ಳವನೂ ದುಃಖಿತನೂ ಆದ ಈ ಪ್ರಾಣಿಯು ಭವ್ಯನಾದರೂ ಅಭವ್ಯನಂತೆ ಭವವೆಂಬ ವನದಲ್ಲಿ ತಿರುಗುತ್ತದೆ.

**ಭವ್ಯಸ್ಯಾಪಿ ಭವೋಽಭವದ್ಭವಗತಃ ಕಾಲಾದಿಲಬ್ಧೇರ್ವಿನಾ**
**ಕಾಲೋಽನಾದಿರಚಿಂತ್ಯದುಃಖನಿಚಿತೋ ಧಿಗ್ಧಿಗ್ಸ್ಥಿತಿಂ ಸಂಸೃತೇಃ ॥**
**ಇತ್ಯೇತದ್ವಿದುಷಾತ್ರ ಶೋಚ್ಯಮಥವಾ ನೈತಚ್ಚ ಯದ್ದೇಹಿನಾಂ**
**ಭವ್ಯತ್ವಂ ಬಹುಧಾ ಮಹೀಶ ಸಹಜಾ ವಸ್ತು ಸ್ಥಿತಿಸ್ತಾದೃಶೀ ॥ ೩೮೬ ॥**

ಭವ್ಯನಿಗೂ ಕಾಲವೇ ಮೊದಲಾದ ಲಬ್ಧಿಯ ವಿನಾ (ಲಬ್ಧಿಯು ದೊರೆಯದೆ) ಸಂಸಾರವನ್ನು ಅನುಸರಿಸಿರುವ ಭವವುಂಟಾಗಿರುವುದು. ಚಿಂತಿಸಲಾಗದ ದುಃಖದಿಂದ ನಿಬಿಡವಾದ ಕಾಲವು ಅನಾದಿಯಾಗಿರುತ್ತದೆ. ಸಂಸಾರದ ಸ್ಥಿತಿಯನ್ನು ಸುಡು ಸುಡು. ಈ ವಿಷಯವು ಸಂಸಾರದಲ್ಲಿ ವಿದ್ವಾಂಸನಿಂದ ಶೋಕಪಡುವುದಕ್ಕೆ ಯೋಗ್ಯವಾಗಿದೆ. ಅಥವಾ ಪ್ರಾಣಿಗಳಿಗೆ ಯಾವ ಈ ಭವ್ಯತ್ವವೆಂಬುದಿಲ್ಲವೋ ಎಲೈ ದೊರೆಯೆ ! ಅನೇಕ ಪ್ರಕಾರವಾದ ಅಂಥಾ ವಸ್ತುಸ್ಥಿತಿಯು ಸ್ವಾಭಾವಿಕವಾಗಿರುತ್ತದೆ. ಭವ್ಯತ್ವಗುಣವಿಲ್ಲದಿರುವುದೂ ವಸ್ತುಸ್ವಭಾವವೆಂದು ಭಾವವು.

**ಗತಾನಿ ಸಂಬಂಧಶತಾನಿ ಜಂತೋರನಂತಕಾಲಂ ಪರಿವರ್ತನೇನ ॥**
**ತಾನ್ಯೈಹಿ ಕಿಂ ತ್ವಂ ಹಿ ವಿಬುದ್ಧವಿಶ್ವೋ । ವೃಥೈವ ಮುಹ್ಯೇಃ ಕಿಮಿಹೇ**
**ತರೋ ವಾ ॥ ೩೮೭ ॥**

ಪ್ರಾಣಿಗೆ ಅನಂತಕಾಲಪರಿವರ್ತನದಿಂದ ಅಪರಿಮಿತವಾದ ಮಾತೃಪಿತ್ರಾದಿ ಸಂಬಂಧಗಳು ಕಳೆದು ಹೋದುವು. ಸಮಸ್ತ ವಿಷಯಗಳನ್ನು ತಿಳಿದವನಾದ ನೀನು ತಿಳಿಯುವುದಿಲ್ಲವೇನು ? ತಿಳಿವಳಿಕೆಯಿಲ್ಲದ ಪ್ರಾಣಿಯಂತೆ ಇಲ್ಲಿ ವ್ಯರ್ಥವಾಗಿ ಏತಕ್ಕೆ ಮೋಹಪಡುವೆ ?

**ಕರ್ಮಭಿಃ ಕೃತಮಸ್ಯಾಪಿ ನ ಸ್ಥಾಸ್ನು ತ್ರಿಜಗತ್ಪತೇಃ ।**
**ಶರೀರಾದಿ ತತಸ್ತ್ಯಾಜ್ಯಂ ಮನ್ವತೇ ತನ್ಮನೀಷಿಣಃ ॥ ೩೮೮ ॥**

ಮೂರುಲೋಕಾಧಿಪತಿಯಾದ ಈ ವೃಷಭಸ್ವಾಮಿಗೂ ಕರ್ಮಗಳಿಂದ ಮಾಡಲ್ಪಟ್ಟ ಶರೀರವೇ ಮೊದಲಾದುದು ಸ್ಥಿರವಾದುದಲ್ಲ. ಆದುದರಿಂದ ಜ್ಞಾನಿಗಳು ಆ ಶರೀರವೇ ಮೊದಲಾದುದು ತ್ಯಾಜ್ಯವೆಂದು ತಿಳಿಯುತ್ತಾರೆ.

**ಪ್ರಾಗಕ್ಷಿಗೋಚರಃ ಸಂಪ್ರತ್ಯೇಷ ಚೇತಸಿ ವರ್ತತೇ ।**
**ಭಗವಾಂಸ್ತತ್ರ ಕಃ ಶೋಕಃ ಪಶ್ಯೈನಂ ತತ್ರ ಸರ್ವದಾ ॥ ೩೮೯ ॥**

ಪೂಜ್ಯನಾದ ಈ ವೃಷಭಸ್ವಾಮಿಯು ಮೊದಲು ಕಣ್ಣಿಗೆ ಗೋಚರನಾಗಿದ್ದನು. ಈಗ ಮನಸ್ಸಿನಲ್ಲಿರುತ್ತಾನೆ. ಮನಸ್ಸಿನಲ್ಲಿ ಶೋಕವೇನು ? ಈ ಸ್ವಾಮಿಯನ್ನು ಮನಸ್ಸಿನಲ್ಲಿ ಯಾವಾಗಲೂ ನೋಡು.

**ಇತಿ ಮನಸಿ ಯಥಾರ್ಥಂ ಚಿಂತಯನ್ ಶೋಕವಹ್ನಿಂ**
**ಶಮಯ ವಿಮಲಬೋಧಾಂಭೋಭಿರಿತ್ಯಾಬಭಾಷೇ ॥**
**ಗಣಭೃದಥ ಸ ಚಕ್ರೀ ದಾವದಗ್ಧೋ ಮಹೀಧ್ರೋ**
**ನವಜಲದಜಲೈರ್ವಾ ತದ್ವಚೋಭಿಃ ಪ್ರಶಾಂತಃ ॥ ೩೯೦ ॥**

ಈ ಪ್ರಕಾರವಾಗಿ ಮನಸ್ಸಿನಲ್ಲಿ ಯಥಾರ್ಥವನ್ನು ಚಿಂತಿಸುವವನಾಗಿ ನಿರ್ಮಲವಾದ ಜ್ಞಾನಗಳೆಂಬ ಜಲಗಳಿಂದ ಶೋಕವೆಂಬ ಬೆಂಕಿಯನ್ನು ಆರಿಸು" ಎಂದು ವೃಷಭಸೇನಗಣಧರನು ಮಾತನಾಡಿದನು. ಅನಂತರದಲ್ಲಿ ಆ ಚಕ್ರವರ್ತಿಯು, ಕಾಡ್ಗಿಚ್ಚಿನಿಂದ ಸುಡಲ್ಪಟ್ಟ ಪರ್ವತವು ನೂತನವಾದ ಮೇಘದ ಜಲಗಳಿಂದ ಶಾಂತವಾಗುವಂತೆ, ಆ ಗಣಧರವಚನಗಳಿಂದ ಶಾಂತನಾದನು.

**ಚಿಂತಾಂ ವ್ಯಪಾಸ್ಯ ಗುರುಶೋಕಕೃತಾಂ ಗಣೇಶ**
**ಮಾನಮ್ಯ ನಮ್ರಮುಕಟೋ ನಿಕಟಾತ್ಮಬೋಧಿಃ ॥**
**ನಿಂದನ್ನಿತಾಂತವಿರಸಾಂ ನಿಜಭೋಗತೃಷ್ಣಾಂ**
**[೧]ಮೋಕ್ಷೋತ್ಸುಕಃ ಸ್ವನಗರಂ ವ್ಯವಿಶದ್ವಿಭೂತ್ಯಾ ॥ ೩೯೧ ॥**

ಅಧಿಕವಾದ ಶೋಕದಿಂದ ಮಾಡಲ್ಪಟ್ಟ ಚಿಂತೆಯನ್ನು ಬಿಟ್ಟು ನಮ್ರವಾದ ಕಿರೀಟವುಳ್ಳವನಾಗಿ ಗಣಧರಪರಮೇಷ್ಠಿಯನ್ನು ನಮಸ್ಕರಿಸಿ ಸಮೀಪವಾದ ಆತ್ಮಜ್ಞಾನವುಳ್ಳವನೂ ಅಧಿಕವಾಗಿ ವಿರಸವಾದ ತನ್ನ ಭೋಗಾಭಿಲಾಷೆಯನ್ನು ನಿಂದಿಸುವವನೂ ಮುಕ್ತಿಯ ಉದ್ಯೋಗದಲ್ಲಿ ದಕ್ಷನೂ ಆಗಿ ತನ್ನ ಪಟ್ಟಣವನ್ನು ವೈಭವದಿಂದ ಪ್ರವೇಶಿಸಿದನು.

**ಅಥ ಕದಾಚಿದಸೌ ವದನಾಂಬುಜಮ್ ।**
**ಸಮಭಿವೀಕ್ಷ್ಯ ಸಮುಜ್ಜ್ವಲದರ್ಪಣೇ ॥**
**ಪಲಿತಮೈಕ್ಷತ ದೂತಮಿವಾಗತಂ ।**
**ಪರಮಸೌಖ್ಯಪದಾತ್ಪುರುಸನ್ನಿಧೇಃ ॥ ೩೯೨ ॥**

ಅನಂತರದಲ್ಲಿ ಒಂದಾನೊಂದು ಕಾಲದಲ್ಲಿ ಈ ಭರತೇಶ್ವರನು ಪ್ರಕಾಶಮಾನವಾದ ಕನ್ನಡಿಯಲ್ಲಿ ತನ್ನ ಮುಖಕಮಲವನ್ನು ನೋಡಿ, ಪರಮಸೌಖ್ಯ ಸ್ಥಾನವಾದ ವೃಷಭಸ್ವಾಮಿಯ ಸನ್ನಿಧಿಯಿಂದ ಬಂದಿರುವ ದೂತನೋ ಎಂಬಂತಿರುವ ನರೆಗೂದಲನ್ನು ನೋಡಿದನು.

**ಆಲೋಕ್ಯ ತಂ ಗಲಿತಮೋಹರಸಃ ಸ್ವರಾಜ್ಯಂ**
**ಮತ್ವಾ ಜರತ್ತೃಣಮಿವೋದ್ಗತಬೋಧಿರುದ್ಯನ್ ॥**
**ಆದಾತುಮಾತ್ಮಹಿತಮಾತ್ಮಜಮರ್ಕಕೀರ್ತಿಮ್**
**ಲಕ್ಷ್ಮ್ಯಾ ಸ್ವಯಾ ಸ್ವಯಮಯೋಜಯದೂರ್ಜಿತೇಚ್ಛಃ ॥ ೩೯೩ ॥**

ಅದನ್ನು ನೋಡಿ ಸೋರಿಹೋದ ಮೋಹರಸವುಳ್ಳವನೂ ಪ್ರಾದುರ್ಭವಿಸಿದ ಆತ್ಮಜ್ಞಾನವುಳ್ಳವನೂ ಆಗಿ ಆತ್ಮಹಿತವನ್ನು ಸ್ವೀಕರಿಸುವುದಕ್ಕೋಸ್ಕರ ಉತ್ಸಾಹವುಳ್ಳವನೂ ತನ್ನ ರಾಜ್ಯವನ್ನು ಹಣ್ಣಾದ ಹುಲ್ಲನ್ನೋಪಾದಿಯಲ್ಲಿ ತಿಳಿದು ವೃದ್ಧಿಯಾದ ಇಚ್ಛೆಯುಳ್ಳವನೂ ಆಗಿ ಪುತ್ರನಾದ ಅರ್ಕಕೀರ್ತಿಯನ್ನು ತನ್ನ ರಾಜ್ಯಲಕ್ಷ್ಮಿಯೊಡನೆ ತಾನು ಸೇರಿಸಿದನು. ತನ್ನ ರಾಜ್ಯಭಾರವನ್ನು ಅರ್ಕಕೀರ್ತಿಗೆ ವಹಿಸಿದನೆಂದು ಭಾವವು.

**ವಿದಿತಸಕಲತತ್ತ್ವಃ ಸೋಽಪವರ್ಗಸ್ಯ ಮಾರ್ಗಂ**
**ಜಿಗಮಿಷು[೨]ರಪಸತ್ತ್ವೈರ್ದುರ್ಗಮಂ ನಿಷ್ಪ್ರಯಾಸಮ್ ॥**
**[೩]ಯಮಸಮಿತಿಸಮಗ್ರಂ ಸಂಯಮಂ [೪]ಶಂ ಬಲಂ ವಾ**
**[೫]ದಿತ ವಿದಿತಸಮರ್ಥಾಃ ಕಿಂ ಪರಂ ಪ್ರಾರ್ಥಯಂತೇ ॥ ೩೯೪ ॥**

ಸಮಸ್ತ ತತ್ತ್ವಗಳನ್ನು ತಿಳಿದವನಾದ ಆ ಭರತೇಶ್ವರನು ಬಲಹೀನರಿಂದ ಹೋಗುವುದಕ್ಕೆ ಕಷ್ಟವಾದ ಮೋಕ್ಷದ ಮಾರ್ಗವನ್ನು ಪ್ರಯಾಸವಿಲ್ಲದೆ ಗಮನಮಾಡುವುದಕ್ಕೆ ಇಚ್ಛೆಯುಳ್ಳವನಾಗಿ ಬಲವುಳ್ಳುದೂ ಮೂಲಗುಣಗಳ ಸಮೂಹದಿಂದ ಪರಿಪೂರ್ಣವೂ ಆದ ಸಂಯಮ–ಮಹಾವ್ರತವನ್ನು, ಬುತ್ತಿಯನ್ನೋಪಾದಿಯಲ್ಲಿ ಸ್ವೀಕರಿಸಿದನು. ಉತ್ತಮವಾದ ವಿಷಯವನ್ನು ತಿಳಿದವರು ಅಥವಾ ಅರ್ಥಕ್ರಿಯೆಯನ್ನು ತಿಳಿದ ಸಮರ್ಥರು ಮತ್ತೋರ್ವನನ್ನು ಪ್ರಾರ್ಥಿಸುತ್ತಾರೇನು ?

೧ ಮುಕ್ತ್ಯುದ್ಯೋಗೇ ದಕ್ಷಃ, ಮೋಕ್ಷೋತ್ಸುಕಇತ್ಯಪಿಪಾಠಃ. ೨ ಅಪಗತಬಲೈಃ. ೩ ಮೂಲಗುಣಸಮೂಹಂ. ೪ ಪಾಥೇಯಂ. ೫ ಸ್ವೀಕೃತವಾನ್.

**ಮನಃಪರ್ಯಯಜ್ಞಾನಮಪ್ಯಸ್ಯ ಸದ್ಯಃ**
**[೧]ಸಮುತ್ಪನ್ನವತ್ ಕೇವಲಂ ಚಾ[೨]ನು [೩]ತಸ್ಮಾತ್ ॥**
**ತದೈವಾಭವದ್ಭವ್ಯತಾ ತಾದೃಶೀ ಸಾ**
**ವಿಚಿ[೪]ತ್ರಾಂಗಿನಾಂ ನಿರ್ವೃತೇಃ ಪ್ರಾಪ್ತಿರತ್ರ ॥ ೩೯೫ ॥**

ಈ ಭರತೇಶ್ವರನಿಗೆ ಆ ಸಂಯಮದಿಂದ ತತ್ಕ್ಷಣದಲ್ಲೇ ಮನಃಪರ್ಯಯವೆಂಬ ನಾಲ್ಕನೆಯ ಜ್ಞಾನವೂ ಉಂಟಾಯಿತು. ಬಳಿಕ ಕೇವಲಜ್ಞಾನವೂ ಆಗಲೇ ಉಂಟಾಯಿತು. ಈ ಲೋಕದಲ್ಲಿ ಆಸನ್ನಭವ್ಯರ ಮೋಕ್ಷಪ್ರಾಪ್ತಿಯೂ ಅಂಥಾ ಪ್ರಸಿದ್ಧವಾದ ಭವ್ಯತ್ವವೂ ವಿಚಿತ್ರವಾಗಿರುತ್ತವೆ.

**[೫]ಸ್ವದೇಶೋದ್ಭವೈರೇವ ಸಂಪೂಜಿತೋಽಸೌ**
**ಸುರೇಂದ್ರಾದಿಭಿಃ ಸಾಂಪ್ರತಂ ವಂದ್ಯಮಾನಃ ॥**
**ತ್ರಿಲೋಕಾಧಿನಾಥೋಽಭವತ್ಕಿಂ ನ ಸಾಧ್ಯಂ**
**ತಪೋ ದುಷ್ಕರಂ ಚೇತ್ಸಮಾದಾತು[೬]ಮೀಶಃ ॥ ೩೯೬ ॥**

ತನ್ನ ಷಟ್ಖಂಡದೇಶೋದ್ಭವರಾದ ಜನರಿಂದಲೇ ಪೂಜಿಸಲ್ಪಟ್ಟವನಾದ ಈ ಭರತೇಶ್ವರನು ಈಗ ದೇವೇಂದ್ರನೇ ಮೊದಲಾದವರಿಂದ ವಂದಿಸಲ್ಪಡುವವನಾಗಿ ತ್ರಿಲೋಕಾಧಿಪತಿಯಾದನು. ಮಾಡುವುದಕ್ಕೆ ಕಠಿನವಾದ ತಪಸ್ಸನ್ನು ಸ್ವೀಕರಿಸುವುದಕ್ಕೆ ಸಮರ್ಥನಾದರೆ ಯಾವುದುತಾನೆ ಸಾಧ್ಯವಾಗುವುದಿಲ್ಲ ?

**[೭]ಪರಿಚಿತಯತಿಹಂಸೋ ಧರ್ಮವೃಷ್ಟಿಂ ನಿಷಿಂಚ**
**ನ್ನಭಸಿ ಕೃತನಿವೇಶೋ ನಿರ್ಮಲಸ್ತುಂಗವೃತ್ತಿಃ ॥**
**ಫಲಮವಿಕಲಮಗ್ರ್ಯಂ [೮]ಭವ್ಯಸಸ್ಯೇಷು ಕುರ್ವನ್**
**ವ್ಯಹರದಖಿಲದೇಶಾನ್ ಶಾರದೋ ವಾ ಸ ಮೇಘಃ ॥ ೩೯೭ ॥**

ಆ ಭರತಮುನಿಯು, ಶರತ್ಕಾಲಸಂಬಂಧವಾದ ಮೇಘದಂತೆ, ಮುಖ್ಯರಾದ ಯತಿಗಳಿಂದ ಆವರಿಸಲ್ಪಟ್ಟವನೂ ಧರ್ಮವೆಂಬ ಮಳೆಯನ್ನು ಸುರಿಯುವವನೂ ಆಕಾಶದಲ್ಲಿ ವಾಸವನ್ನು ಮಾಡಿರುವವನೂ ನಿರ್ಮಲನೂ ಶ್ರೇಷ್ಠವಾದ ವ್ಯಾಪಾರವುಳ್ಳವನೂ ಆಗಿ ಭವ್ಯರೆಂಬ ಸಸ್ಯ(ಪೈರು)ಗಳಲ್ಲಿ ಸಂಪೂರ್ಣವೂ ಶ್ರೇಷ್ಠವೂ ಆದ ಫಲವನ್ನುಂಟುಮಾಡುವವನಾಗಿ ಸಮಸ್ತ ದೇಶಗಳನ್ನು ವಿಹರಿಸಿದನು.

**ವಿಹೃತ್ಯ ಸುಚಿರಂ [೯]ವಿನೇಯಜನತೋಪಕೃತ್ಸ್ವಾಯುಷೋ**
**[೧೦]ಮುಹೂರ್ತಪರಿಮಾಸ್ಥಿತೌ ವಿಹಿತಸತ್ಕ್ರಿಯೋ ವಿಚ್ಯುತೌ ॥**
**ತನುತ್ರಿತಯಬಂಧನಸ್ಯ [೧೧]ಗುಣಸಾರಮೂರ್ತಿಃ ಸ್ಫುರನ್**
**ಜಗತ್ತ್ರಯಶಿಖಾಮಣಿಃ ಸುಖನಿಧಿಃ ಸ್ವಧಾಮ್ನಿ ಸ್ಥಿತಃ ॥ ೩೯೮ ॥**

ಭರತಮುನಿಯು ಭವ್ಯಜನಸಮೂಹಕ್ಕೆ ಉಪಕಾರವನ್ನು ಮಾಡುವವನೂ ಬಹುಕಾಲದವರೆಗೆ ವಿಹರಿಸಿ ತನ್ನ ಆಯುಷ್ಯದ ಒಂದು ಮುಹೂರ್ತಪ್ರಮಾಣ ಸ್ಥಿತಿಯಿರುತ್ತಿರಲು ಶ್ರೇಷ್ಠವಾದ ಧ್ಯಾನಕ್ರಿಯೆಯನ್ನು ಮಾಡಿದವನೂ ಔದಾರಿಕತೈಜಸಕಾರ್ಮಣಗಳೆಂಬ ಮೂರು ಶರೀರಬಂಧನದ ಬಿಡುಗಡೆಯಾಗುತ್ತಿರಲು ಕ್ಷಾಯಿಕ ಸಮ್ಯಕ್ತ್ವವೇ ಮೊದಲಾದ ಅಷ್ಟಗುಣಗಳಿಂದ ಸಾರವಾದ ಆಕಾರವುಳ್ಳವನೂ ಪ್ರಕಾಶಮಾನನೂ ಮೂರು ಲೋಕಕ್ಕೆ ಶಿಖಾಮಣಿಯೂ ಸುಖದ ನಿಧಿಯೂ ಆಗಿ ತನ್ನ ಸ್ಥಾನದಲ್ಲಿ–ಮೋಕ್ಷದಲ್ಲಿರುವವನಾದನು.

**ಸರ್ವೇಽಪಿ ತೇ ವೃಷಭಸೇನಮುನೀಶಮುಖ್ಯಾಃ**
**ಸಖ್ಯಂ ಗತಾಃ ಸಕಲಜಂತುಷು ಶಾಂತಚಿತ್ತಾಃ ॥**
**ಕಾಲಕ್ರಮೇಣ ಯಮಶೀಲಗುಣಾಭಿಪೂರ್ಣಾ**
**ನಿರ್ವಾಣಮಾಪುರಮಿತಂ ಗುಣಿನೋ [೧೨]ಗಣೇಂದ್ರಾಃ ॥ ೩೯೯ ॥**

೧ ಸಮುದ್ಭೂತಂ. ೨ ಪಶ್ಚಾತ್. ೩ ಸಂಯಮಾತ್. ೪ ಆಸನ್ನಭವ್ಯಾನಾಂ. ೫ ಷಟ್ಖಂಡಜೈಃ. ೬ ಸಮರ್ಥಃ. ೭ ಪರಿವೇಷ್ಟಿಯತಿಮುಖ್ಯಃ. ೮ ಪಕ್ಷೇಶಾಲಿಸಸ್ಯೇಷು. ೯ ಭವ್ಯಜನಸಮೂಹಸ್ಯೋಪಕಾರೀ. ೧೦ ಮುಹೂರ್ತಪ್ರಮಾಣಸ್ಥಿತೌ ಸತ್ಯಾಂ. ೧೧ ಸಮ್ಯಕ್ತ್ವಾದ್ಯಷ್ಟಗುಣ. ೧೨ ಗಣೀಂದ್ರಾ ಇತ್ಯಪಿಪಾಠಃ.

ಸಮಸ್ತ ಪ್ರಾಣಿಗಳಲ್ಲಿ ಮಿತ್ರತ್ವವನ್ನು ಹೊಂದಿದವರೂ ಶಾಂತಚಿತ್ತರೂ ಇಂದ್ರಿಯ ನಿಗ್ರಹ ಶೀಲಗುಣಗಳಿಂದ ಪರಿಪೂರ್ಣರೂ ಗುಣವಂತರೂ ವೃಷಭಸೇನರೇ ಮೊದಲಾದ ಮುನಿಶ್ರೇಷ್ಠರೂ ಆದ ಆ ಗಣಧರರೆಲ್ಲರೂ ಕಾಲಕ್ರಮದಿಂದ ಪರಿಮಿತಿರಹಿತವಾದ ನಿರ್ವಾಣವನ್ನು ಹೊಂದಿದರು.

**ಯೋ [1]ನೇತೇವ ಪೃಥುಂ ಜಘಾನ ದುರಿತಾರಾತಿಂ [2]ಚತುಸ್ಸಾಧನೋ**
**ಯೇನಾಪ್ತಂ ಕನಕಾಶ್ಮನೇವ ವಿಮಲಂ ರೂಪಂ [3]ಸ್ವಮಾಭಾಸ್ವರಮ್ ॥**
**ಆಭೇಜುಶ್ಚರಣೌ ಸರೋಜಜಯಿನೌ ಯಸ್ಯಾಲಿನೋ ವಾಮರಾ**
**ಸ್ತಂತ್ರೈಲೋಕ್ಯಗುರುಂ ಪುರುಂ ಶ್ರಿತವತಾಂ ಶ್ರೇಯಾಂಸಿ ವಃ ಸ**
**ಕ್ರಿಯಾತ್ ॥ ೪೦೦ ॥**

ಯಾವನು, ಸೇನಾಪತಿಯಂತೆ, ಜ್ಞಾನ ದರ್ಶನ ಚಾರಿತ್ರ ತಪೋರೂಪವಾದ ಚತುರ್ವಿಧಾರಾಧನೆಗಳೆಂಬ(ಚತುರಂಗ ಬಲವೆಂಬ) ಸಾಧನವುಳ್ಳವನಾಗಿ ಅಧಿಕ ವಾದ ಪಾಪವೆಂಬ ಶತ್ರುವನ್ನು ನಾಶಮಾಡಿದನೋ ಯಾವನಿಂದ, ಸುವರ್ಣಶಿಲೆ ಯಿಂದಲೋಪಾದಿಯಲ್ಲಿ, ದ್ರವ್ಯಭಾವಕರ್ಮಮಲರಹಿತವೂ ಸುತ್ತಲೂ ಪ್ರಕಾಶ ಮಾನವೂ ಆತ್ಮಜನ್ಯವೂ ಆದ ರೂಪವು ಹೊಂದಲ್ಪಟ್ಟಿತೋ ಯಾವನ ಕಮಲ ಗಳನ್ನು ಜಯಿಸುವ ಪಾದಗಳನ್ನು, ಭ್ರಮರಗಳಂತೆ ದೇವ‌ಗಳು ಹೊಂದಿದರೋ ಮೂರುಲೋಕಗಳಿಗೆ ಗುರುವಾದ ಆ ಪುರು–ವೃಷಭಸ್ವಾಮಿಯನ್ನು ಆಶ್ರಯಿಸಿದ ವರಾದ ನಮ್ಮಗಳಿಗೂ ನಿಮ್ಮಗಳಿಗೂ ಆ ಸ್ವಾಮಿಯು ಮಂಗಲಗಳನ್ನು ಮಾಡಲಿ.

**ಯೋಽಭೂತ್ಪಂಚದಶೋ ವಿಭುಃ ಕುಲಧೃತಾಂ ತೀರ್ಥೇಶಿನಾಂ ಚಾಗ್ರಿಮೋ**
**ದೃಷ್ಟೋ ಯೇನ ಮನುಷ್ಯ[4]ಜೀವನವಿಧಿರ್ಮುಕ್ತೇಶ್ಚ ಮಾರ್ಗೋ**
**ಮಹಾನ್ ॥**
**ಬೋಧೋ [5]ರೋಧವಿಮುಕ್ತವೃತ್ತಿರಖಿಲೋ ಯಸ್ಯೋ[6]ದಪಾದ್ಯಂತಿಮಃ**
**ಸ ಶ್ರೀಮಾನ್ ಜನಕೋಽಖಿಲಾವನಿಪತೇರಾದ್ಯಃ ಸ ದದ್ಯಾಚ್ಛ್ರಿಯಮ್ ॥**

ಯಾವ ಪ್ರಭುವು ಕುಲಧರರಲ್ಲಿ–ಮನುಗಳಲ್ಲಿ ಹದಿನೈದನೆಯವನೂ ತೀರ್ಥಂ ಕರರಲ್ಲಿ ಮೊದಲನೆಯವನೂ ಆದನೋ ಯಾವನಿಂದ ಮನುಷ್ಯರ ಜೀವನೋ ಪಾಯಗಳ ಭೇದವೂ ಮುಕ್ತಿಯ ದೊಡ್ಡದಾರಿಯೂ ನೋಡಲ್ಪಟ್ಟುವೋ ಯಾವನಿಗೆ ಆವರಣದಿಂದ ಬಿಡಲ್ಪಟ್ಟ ವ್ಯಾಪಾರವುಳ್ಳುದೂ ಕೊನೆಯದೂ ಆದ ಜ್ಞಾನ–ಕೇವಲಜ್ಞಾನವು ಉತ್ಪನ್ನವಾಯಿತೋ ಆ ಸಂಪದ್ಯುಕ್ತನೂ ಸಮಸ್ತ ಪೃಥ್ವೀಪತಿಯಾದ ಭರತಚಕ್ರೇಶ್ವರನ ತಂದೆಯೂ ಮೊದಲನೆಯ ತೀರ್ಥೇಶ್ವರನೂ ಆದ ವೃಷಭಸ್ವಾಮಿಯು ಸಂಪತ್ತಿಯನ್ನು ಕೊಡಲಿ.

**ಸಾಕ್ಷಾತ್ಕೃತಪ್ರಥಿತಸಪ್ತಪದಾರ್ಥಸಾರ್ಥಃ**
**ಸದ್ಧರ್ಮತೀರ್ಥಪಥಪಾಲನಮೂಲಹೇತುಃ ॥**
**ಭವ್ಯಾತ್ಮನಾಂ ಭವಭೃತಾಂ [1]ಸ್ವಪರಾರ್ಥಸಿದ್ಧಿ**
**ಮಿಕ್ಷ್ವಾಕುವಂಶ[2]ವೃಷಭೋ ವೃಷಭೋ ವಿದಧ್ಯಾತ್ ॥ ೪೦೨ ॥**

ಪ್ರಸಿದ್ಧವಾದ ಜೀವಾಜೀವಾದಿ ಸಪ್ತಪದಾರ್ಥಗಳ ಸಮೂಹವನ್ನು ಪ್ರತ್ಯಕ್ಷವಾಗಿ ನೋಡಿದವನೂ ಸದ್ಧರ್ಮವೆಂಬ ತೀರ್ಥದ ಮಾರ್ಗದ ರಕ್ಷಣೆಗೆ ಮೂಲಕಾರಣನೂ ಇಕ್ಷ್ವಾಕುವಂಶಶ್ರೇಷ್ಠನೂ ಆದ ವೃಷಭಸ್ವಾಮಿಯು ಭವವನ್ನೈತ್ತಿರುವ ಭವ್ಯಾತ್ಮರು ಗಳಿಗೆ ಸ್ವಾರ್ಥಪರಾರ್ಥಸಿದ್ಧಿಯನ್ನು–ಸಮ್ಯಗ್ಜ್ಞಾನವನ್ನು ಕೊಡಲಿ.

**ಯೋ ನಾಭೇಸ್ತನಯೋಽಪಿ ವಿಶ್ವವಿದುಷಾಂ ಪೂಜ್ಯಃ ಸ್ವಯಂಭೂರಿತಿ**
**ತ್ಯಕ್ತಾಶೇಷಪರಿಗ್ರಹೋಽಪಿ [3]ಸಕಲಸ್ಸ್ವಾಮೀತಿ ಯಃ ಶಬ್ದ್ಯತೇ ॥**
**ಮಧ್ಯಸ್ಥೋಽಪಿ ವಿನೇಯಸತ್ತ್ವಸಮಿತೇರೇವೋಪಕಾರೀ ಮತೋ**
**[4]ನಿರ್ದಾನೋಽಪಿ ಬುಧೈರುಪಾಸ್ಯಚರಣೋ ಯಃ ಸೋಽಸ್ತು [5]ವಃ**
**[6]ಶಾಂತಯೇ ॥ ೪೦೩ ॥**

ಯಾವನು ನಾಭಿರಾಜಮನುವಿನ ಪುತ್ರನಾದರೂ ಸ್ವಯಂಭುವೆಂಬವನಾಗಿ ಸಮಸ್ತವಿದ್ವಾಂಸರುಗಳಿಗೆ ಪೂಜ್ಯನಾದನೋ ಯಾವನು ಸಮಸ್ತಪರಿಗ್ರಹಗಳನ್ನು ತ್ಯಜಿಸಿದವನಾದರೂ ಸಕಲಪ್ರಾಣಿಗಳ ಸ್ವಾಮಿಯೆಂದು ಹೇಳಲ್ಪಡುತ್ತಾನೋ ಮಧ್ಯಸ್ಥ–ರಾಗದ್ವೇಷರಹಿತನಾಗಿದ್ದರೂ ಭವ್ಯಪ್ರಾಣಿಗಳ ಸಮೂಹಕ್ಕೆ ಉಪಕಾರಿ ಯೆಂದು ತಿಳಿಯಲ್ಪಟ್ಟಿರುತ್ತಾನೋ ಯಾವನು ದಾನರಹಿತನಾಗಿದ್ದರೂ (ಅಧಿಕ ವಾದ ದಾನವುಳ್ಳವನಾಗಿದ್ದರೂ ನಿತ್ಯನಾಗಿದ್ದರೂ) ವಿದ್ವಾಂಸರಿಂದ ಸೇವಿಸಲ್ಪಟ್ಟ ಆ ಪಾದಗಳುಳ್ಳವನಾಗಿರುತ್ತಾನೋ ಆ ವೃಷಭಸ್ವಾಮಿಯು ನಮ್ಮಗಳ ನಿಮ್ಮಗಳ ಕರ್ಮೋಪಶಾಂತಿಗೋಸ್ಕರ ಕಾರಣನಾಗಿರಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಣಸಂಗ್ರಹೇ**
**ಪ್ರಥಮತೀರ್ಥಂಕರ ಚಕ್ರಧರಪುರಾಣಂ ಸಪ್ತಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಪ್ರಥಮತೀರ್ಥಕರ ಚಕ್ರಧರಪುರಾಣವೂ
ನಲ್ವತ್ತೇಳನೆಯ ಪರ್ವವೂ ಸಂಪೂರ್ಣವಾದುವು.

---

ಸ್ವಸ್ತಿಶ್ರೀಮನ್ಮಹಾವೀರಶಕಾಬ್ದ ೨೪೫೫ ಕ್ಕೆ ಸರಿಪೋಲುವ ಶಾಲಿವಾಹನಶಕಾಬ್ದ ೧೮೫೫ನೆಯ ಅಂಗಿರಸನಾಮಸಂ
ವತ್ಸರದ ಪುಷ್ಯ ಕೃಷ್ಣಪಕ್ಷತೃತೀಯೆಯೊಳ್ ಶ್ರೀಮನ್ಮಹೀಶೂರಜನಪದಾಧೀಶ ಶ್ರೀಕೃಷ್ಣಭೂಪಾಲಕೃಪಾಕಟಾಕ್ಷ
ಪಾತ್ರನುಂ ತದೀಯಾಸ್ಥಾನವಿದ್ವಾಂಸನುಂ ಧರಣಪ್ಪಾರ್ಯತನೂಜನುಂ ನ್ಯಾಯತೀರ್ಥಪ್ರಶಸ್ತಿಪ್ರಾಪ್ತನು
ಮಾದ ಶಾಂತಿರಾಜಶಾಸ್ತ್ರಿಯಿಂ ವಿರಚಿತಮಾದ ಈ ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯುಂ ಈ
ಪುಣ್ಯಪುರಾಣದ ಮುದ್ರಣಕಾರ್ಯಮುಂ ಸಮಾಪ್ತಮಾದುವು.

---

೧ ಸೇನಾಪತಿರಿವ. ೨ ಚತುರ್ವಿಧಾರಾಧನಾಸಾಧನಃ ಪಕ್ಷೇಚತುರ್ವಿಧಬಲಸಾಧನಃ. ೩ ಆತ್ಮೋತ್ಥಂ. ೪ ಜೀವಿತವಿಕಲ್ಪಃ. ೫ ಆವರಣವಿಮುಕ್ತ. ೬ ಉತ್ಪನ್ನವಾನ್.

೧ ಸ್ವಪರಾರ್ಥಜ್ಞಾನಂ. ೨ ಶ್ರೇಷ್ಠಃ. ೩ ಸುಧಿಯಾಮಿತ್ಯಪಿಪಾಠಃ. ೪ ದಾನರಹಿತೋಽಪಿ ಪಕ್ಷೇ ನಿತರಾಂದಾನಂಯಸ್ಯಸಃ ಅಥವಾ ನಿರ್ಗತಂದಾನಂ ಖಂಡನಂ ಯಸ್ಮಾತ್ಸಃ ನಿತ್ಯ ಇತ್ಯರ್ಥಃ. ೫ ಭವ್ಯಜನಾನಾಂ. ೬ ಕರ್ಮೋಪಶಮನಿಮಿತ್ತಂ.

**ಶ್ರೀಮದ್ಭವ್ಯಾಬ್ಜಿನೀನಾಂ ಹೃದಯಮುಕುಲಿತಂ ಧುನ್ವದಾಧಾಯ ಬೋಧಮ್**
**ಮಿಥ್ಯಾವಾದಾಂಧಕಾರಸ್ಥಿತಿಮಪಘಟಯದ್ವಾಙ್ಮಯೂಖಪ್ರತಾನೈಃ ॥**
**ಸದ್ವೃತ್ತಂ ಶುದ್ಧಮಾರ್ಗಪ್ರಕಟನಮಹಿಮಾಲಂಬಿ ಯುದ್ವೃದ್ಧಬಿಂಬ**
**ಪ್ರಸ್ಪರ್ಧೀದ್ಧರ್ದ್ಧಿ ಜೈನಂ ಜಗತಿ ವಿಜಯತಾಂ ಪುಣ್ಯಮೇತತ್ಪುರಾಣಮ್ ॥**

ಭಾವಾರ್ಥ:-(ತಾವರೆಯ ಬಳ್ಳಿಗಳ ಮೊಗ್ಗುಗಳನ್ನು ಕೊಡಹಿ ಅರಳಿಸುವುದೂ ಕಿರಣಸಮೂಹಗಳಿಂದ ಕತ್ತಲೆಯ ಇರುವಿಕೆಯನ್ನು ಹೋಗಲಾಡಿಸುವುದೂ) ಚೆನ್ನಾಗಿ ದುಂಡಾಗಿರುವುದೂ ಸ್ವಚ್ಛವಾದ ದಾರಿಯನ್ನು ತೋರಿಸುವ ಮಹಿಮೆಯನ್ನು ಹೊಂದಿರುವುದೂ ಆದ ಸೂರ್ಯಬಿಂಬದೊಡನೆ ಚೆನ್ನಾಗಿ ಸ್ಪರ್ಧೆಯನ್ನು(ಹೋರಾಟವನ್ನು) ಮಾಡುವುದೂ ಪ್ರಕಾಶಮಾನವಾದ ಮಹಿಮೆಯುಳ್ಳುದೂ ಸಂಪದ್ಯುಕ್ತರಾದ ಭವ್ಯರೆಂಬ ತಾವರೆಯ ಬಳ್ಳಿಗಳ ಹೃದಯವೆಂಬ ಮೊಗ್ಗನ್ನು ಕೊಡಹಿ ಜ್ಞಾನವನ್ನುಂಟುಮಾಡಿ ವಚನಗಳೆಂಬ ಕಿರಣಸಮೂಹಗಳಿಂದ ಮಿಥ್ಯಾವಾದವೆಂಬ ಕತ್ತಲೆಯ ಇರುವಿಕೆಯನ್ನು ಹೋಗಲಾಡಿಸುವುದೂ ಸದಾಚಾರಗಳ ಉಪದೇಶಗಳನ್ನೊಳಗೊಂಡಿರುವುದೂ ಶುದ್ಧವಾದ ಮೋಕ್ಷಮಾರ್ಗವನ್ನು ಪ್ರಕಟಿಸುವ ಮಹಿಮೆಯನ್ನು ಹೊಂದಿರುವುದೂ ಜಿನೇಶ್ವರಸಂಬಂಧಿಯೂ ಆದ

**ಈ ಪುಣ್ಯಪುರಾಣವು ಜಗತ್ತಿನಲ್ಲಿ ಜಯಶೀಲವಾಗಿರಲಿ.**

**ಜಯತು ಜಿನಶಾಸನಂ.**

☆ ☆ ☆ ☆ ☆ ☆



ಸೌಜನ್ಯ : ಭ. ಆದಿನಾಥ ದಿಗಂಬರ ಜೈನಮಂದಿರ ಬಳೇಪೇಟೆ, ಬೆಂಗಳೂರು

**ವಿಷಯಾಶಾವಶಾತೀತೋ ನಿರಾರಂಭೋಪರಿಗ್ರಹಃ । ಜ್ಞಾನಧ್ಯಾನತಪೋರಕ್ತಸ್ತಪಸ್ವೀ ಸಪ್ರಶಸ್ಯತೇ ॥**

— ಆವಮನುಷ್ಯನು ಇಂದ್ರಿಯವಿಷಯಗಳ ಆಸೆಗೆ ಅಧೀನನಲ್ಲದವನೂ(ಆ ಜೀವಿಕೆಗೋಸ್ಕರ) ಆರಂಭ - ಕೆಲಸವನ್ನು ಮಾಡದಿರುವವನೂ ಕ್ಷೇತ್ರಧನಧಾನ್ಯವಸ್ತ್ರ ಮೊದಲಾದ ಪರಿಗ್ರಹಗಳನ್ನು ತೊರೆದವನೂ ಜ್ಞಾನ ಧ್ಯಾನ ತಪಸ್ಸು ಇವುಗಳಲ್ಲಿ ಆಸಕ್ತನೂ ಆಗಿರುವನೋ ಅವನು ತಪಸ್ವಿಯೆಂದು ಪ್ರಶಂಸಿಲ್ಪಡುತ್ತಾನೆ (ಇಂತಹವನೇ ನಿಜವಾದ ತಪಸ್ವಿಯು).

ಶ್ರೀ ಭಗವದ್ಗುಣಭದ್ರಾಚಾರ್ಯ ವಿರಚಿತ

# ಉತ್ತರಪುರಾಣ

## ಶ್ರೀಮದಜಿತತೀರ್ಥಕರಪುರಾಣಂ

**ಶ್ರೀಮಾನ್ ಜಿನೋಜಿತೋ ಜೀಯಾದ್ಯದ್ವಚಾಂಸ್ಯಮಲಾನ್ಯಲಮ್ ।**
**ಕ್ಷಾಲಯಂತಿ ಜಲಾನೀವ ವಿನೇಯಾನಾಂ ಮನೋಮಲಮ್ ॥ ೧ ॥**

ಶ್ರೀಮದಜಿತತೀರ್ಥಕರರ ನಿರ್ಮಲವಾದ ವಚನಗಳು, ನೀರು ಕೊಳೆಯನ್ನು ತೊಳೆಯುವಂತೆ, ಭವ್ಯಾತ್ಮರ ಮನದಲ್ಲಿರುವ ರಾಗ ದ್ವೇಷ ಮದ ಮಾತ್ಸರ್ಯಾದಿ ರೂಪವಾದ ಕೊಳೆಯನ್ನು ತೊಳೆಯುತ್ತವೆ. ಕೇವಲಜ್ಞಾನದರ್ಶನಾದ್ಯಂತರಂಗ ಸಂಪತ್ತಿಯುಳ್ಳವರೂ ಅಷ್ಟಮಹಾಪ್ರಾತಿಹಾರ್ಯ ಸಮವಸರಣಾದಿ ಬಾಹ್ಯಸಂಪತ್ತಿಯುಳ್ಳವರೂ ದುರ್ಜಯವಾದ ಜ್ಞಾನಾವರಣಾದಿ ಕರ್ಮಶತ್ರುಗಳನ್ನು ಜಯಿಸಿರುವವರೂ ಆದ ಅಜಿತತೀರ್ಥಂಕರರು ಜಯಶೀಲರಾಗಿರಲಿ.

**ಪುರಾಣಂ ತಸ್ಯ ವಕ್ಷ್ಯೇಹಂ ಮೋಕ್ಷಲಕ್ಷ್ಮೀಸಮಾಗಮಃ ।**
**ಶ್ರುತೇನ ಯೇನ ಭವ್ಯಾನಾಮವ್ಯಾಹತಮಹೋದಯಃ ॥ ೨ ॥**

ನಾನು ಆ ಅಜಿತತೀರ್ಥಂಕರರ ಪುರಾಣವನ್ನು ಹೇಳುವೆನು. ಆ ಪುರಾಣವನ್ನು ಕೇಳುವುದರಿಂದ ಭವ್ಯಾತ್ಮರಿಗೆ ನಿರ್ಬಾಧವಾದ ಅಭ್ಯುದಯವುಳ್ಳ ಮೋಕ್ಷಲಕ್ಷ್ಮಿಯ ಸಮಾಗಮವಾಗುವುದು–ಮುಕ್ತಿಪ್ರಾಪ್ತಿಯಾಗುವುದು.

**ಇಹ ಜಂಬೂಮತಿ ದ್ವೀಪೇ ವಿದೇಹೇ ಪ್ರಾಚಿ ವಿಶ್ರುತೇ ।**
**ಸೀತಾಸರಿದವಾಗ್ಭಾಗೇ ವತ್ಸಾಖ್ಯೋ ವಿಷಯೋ ಮಹಾನ್ ॥ ೩ ॥**

ಈ ಜಂಬೂದ್ವೀಪದಲ್ಲಿ ಪ್ರಸಿದ್ಧವಾದ ಪೂರ್ವವಿದೇಹಕ್ಷೇತ್ರದಲ್ಲಿ ಸೀತಾನದಿಯ ದಕ್ಷಿಣದಿಕ್ಕಿನಲ್ಲಿ ದೊಡ್ಡದಾದ ವತ್ಸವೆಂಬ ದೇಶವಿದೆ.

**ಸುಸೀಮಾನಗರಂ ತಸ್ಮಿನ್ ವಿಭೂತ್ಯಾ ವಿಸ್ಮಯಾವಹಮ್ ।**
**ನಾಮ್ನಾಸ್ಯನೃಪತಿಃ ಪ್ರಾಭೂತ್ ಪ್ರಭುರ್ವಿಮಲವಾಹನಃ ॥ ೪ ॥**

ಆ ದೇಶದಲ್ಲಿ ಧನಧಾನ್ಯಾದಿಸಂಪತ್ತಿಯಿಂದ ವಿಸ್ಮಯವನ್ನುಂಟುಮಾಡುವ ಸುಸೀಮವೆಂಬ ನಗರವಿದೆ. ಇದಕ್ಕೆ ವಿಮಲವಾಹನನೆಂಬ ರಾಜನು ದೊರೆಯಾಗಿದ್ದನು.

**ಗುಣಾ ಗುಣಾರ್ಥಿಭಿಃ ಪ್ರಾರ್ಥ್ಯಾ ನ್ಯಾಯೋಯಂ ಚಿತ್ರಮತ್ರ ತತ್ ।**
**ಗುಣಾಃ ಪ್ರಣಯಿನಃ ಸರ್ವೇ ಸ್ವಯಂ ತಂ ವೃಣ್ವತೇ ಸ್ಮ ಯತ್ ॥ ೫ ॥**

ಲೋಕದಲ್ಲಿ ಗುಣಗಳನ್ನಿಚ್ಛಿಸುವವರು ಗುಣಗಳನ್ನು ಪ್ರಾರ್ಥಿಸುತ್ತಾರೆ–ಸಂಪಾದಿಸುತ್ತಾರೆ. ಇದು ನ್ಯಾಯವಾಗಿದೆ. ಈ ವಿಮಲವಾಹನನಲ್ಲಾದರೋ ಎಲ್ಲಾ ಗುಣಗಳು ಇವನಲ್ಲಿ ಪ್ರೀತಿಯುಳ್ಳವಾಗಿ ತಾವು ಅವನನ್ನು ವರಿಸಿದುವು. ಅದು ಆಶ್ಚರ್ಯ.

**ಶಕ್ತಿಸಿದ್ಧಿತ್ರಯೋಪೇತೋ ಯಥಾನ್ಯಾಯಮತಂದ್ರಿತಃ ।**
**ಪ್ರಜಾಃ ಸಂಪಾಲಯಾಮಾಸ ವಿಧಾಯ ಸ್ವಪ್ರಜಾಸಮಾಃ ॥ ೬ ॥**

ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿಗಳೆಂಬ ಮೂರು ಶಕ್ತಿಗಳುಳ್ಳವನೂ ಧರ್ಮಸಿದ್ಧಿ ರತ್ನಸಿದ್ಧಿ ಕಾಮಸಿದ್ಧಿಗಳೆಂಬ ಅಥವಾ ಪ್ರಭುಶಕ್ತಿಸಿದ್ಧಿ ಮಂತ್ರಶಕ್ತಿಸಿದ್ಧಿ ಉತ್ಸಾಹಶಕ್ತಿಸಿದ್ಧಿಗಳೆಂಬ ಮೂರು ಸಿದ್ಧಿಗಳುಳ್ಳವನೂ ಆಲಸ್ಯವಿಲ್ಲದವನೂ ಆದ ಆ ವಿಮಲವಾಹನನು ಪ್ರಜೆಗಳನ್ನು ತನ್ನ ಮಕ್ಕಳಿಗೆ ಸಮಾನರನ್ನಾಗಿ ಮಾಡಿ ನ್ಯಾಯಾನುಸಾರವಾಗಿ ಪರಿಪಾಲಿಸಿದನು.

**ಧರ್ಮಾದಯಸ್ತತೋಥೋರ್ಥಾತ್ಕಾಮೋಯೇನಿಷ್ಠಿತೇ ನ ತೌ ।**
**ಇತಿ ಸ್ಮರನ್ ಬಭೂವಾಸೌ ಜೈನಧರ್ಮೇಣ ಧಾರ್ಮಿಕಃ ॥ ೭ ॥**

ಧರ್ಮದಿಂದ ಸುದೈವ–ಪುಣ್ಯವೂ ಅದರಿಂದ ಅರ್ಥವೂ ಅರ್ಥದಿಂದ ಕಾಮ–ಸುಖವೂ ಉಂಟಾಗುವುವು. ಪುಣ್ಯವು ಕೈಗೂಡದಿದ್ದರೆ ಅರ್ಥ ಕಾಮಗಳಿರುವುದಿಲ್ಲ. ಈ ಪ್ರಕಾರವಾಗಿ ಯೋಚಿಸಿ ಈ ವಿಮಲವಾಹನನು ಜೈನಧರ್ಮದಿಂದ ಧಾರ್ಮಿಕನಾದನು. ಜೈನಧರ್ಮಪರಿಪಾಲಕನಾದನೆಂದು ಭಾವವು.

**ಸ ಕದಾಚಿತ್ಸಮುತ್ಪನ್ನಬೋಧಿಃ ಸಂಜ್ವಲನೋದಯೀ ।**
**ಸ್ವಗತಂ ಜಾತಸಂವೇದೋ ರಹಸ್ಯೇವಮಚಿಂತಯತ್ ॥ ೮ ॥**

ಒಂದಾನೊಂದು ಕಾಲದಲ್ಲಿ ಜ್ಞಾನೋದಯವುಳ್ಳವನೂ ಸಂಜ್ವಲನಕಷಾಯೋದಯವುಳ್ಳವನೂ ಆದ ಆ ವಿಮಲವಾಹನನಿಗೆ ವೈರಾಗ್ಯವುಂಟಾಗಿ ಏಕಾಂತದಲ್ಲಿ ತನ್ನ ಮನೋಗತವನ್ನು ಮುಂದೆ ಹೇಳುವ ಪ್ರಕಾರವಾಗಿ ವಿಚಾರಮಾಡಿದನು.

**ಆಯುಷೋ ವಸತಿಃ ಕಾಯೋ ಕಾಯಸ್ಥಸ್ಯ ಮಮಾಪ್ಯಲಮ್ ।**
**ಆಯುರ್ಜಲಂ ಗಲತ್ಯಾಶು ಮಿತಕಾಲಘಟೀಧೃತಮ್ ॥ ೯ ॥**

''ದೇಹದಲ್ಲಿ ಆಯುಷ್ಯದ ವಾಸ. ದೇಹದಲ್ಲಿರುವ ನನ್ನ ಪರಿಮಿತವಾದ ಕಾಲವೆಂಬ ಪಾತ್ರದಲ್ಲಿ ತುಂಬಿರುವ ಆಯುಷ್ಯವೆಂಬ ನೀರು ಚೆನ್ನಾಗಿ ಶೀಘ್ರವಾಗಿ ಸೋರಿಹೋಗುತ್ತಿದೆ.

**ತತೋ ಗಲತಿ ನಿಃಶೇಷಂ ನ ಯಾವತ್ತಾವದೇವ ಹಿ ।**
**ವತ್ಸ್ಯಾಮ್ಯುತ್ಸಹ್ಯ ಸನ್ಮಾರ್ಗೇ ಜೈನೇ ಸ್ವರ್ಗಾಪವರ್ಗಯೋಃ ॥ ೧೦ ॥**

ಆದುದರಿಂದ ನಾನು ಆ ಆಯುಷ್ಯವೆಂಬ ನೀರು ನಿಃಶೇಷವಾಗಿ ಸೋರಿಹೋಗುವುದರೊಳಗಾಗಿ ಸ್ವರ್ಗಮೋಕ್ಷಗಳಿಗೆ ದಾರಿಯಾದ ಜೈನಸನ್ಮಾರ್ಗದಲ್ಲಿ ಉತ್ಸಾಹವುಳ್ಳವನಾಗಿರುವೆನು.''

**ಇತ್ಯಾಶಾಪಾಶಮಾಛಿದ್ಯ ಬಹುಭಿಃ ಸಹ ನಿಸ್ಪೃಹಃ ।**
**ರಾಜ್ಯಲಕ್ಷ್ಮ್ಯಾಂ ಸ್ವತಂತ್ರೋಪಿ ದೀಕ್ಷಾಲಕ್ಷ್ಮ್ಯಾ ವಶೀಕೃತಃ ॥ ೧೧ ॥**

**ತಪಸ್ಯನ್ ಸುಚಿರಂ ತೀವ್ರಂ ವಿಸ್ಪಷ್ಟೈಕಾದಶಾಂಗಕಃ ।**
**ನಾಮ್ನೋಂತ್ಯಮೇಷ ಪುಣ್ಯಾತ್ಮಾ ಸ್ವಕಾರ್ಷೀದ್ಭಾವನಾಪರಃ ॥ ೧೨ ॥**

ಈ ಪ್ರಕಾರವಾಗಿ ಆಶೆಯೆಂಬ ಪಾಶವನ್ನು ಕತ್ತರಿಸಿ ರಾಜ್ಯಲಕ್ಷ್ಮಿಯಲ್ಲಿ ಸ್ವತಂತ್ರನಾಗಿದ್ದರೂ ನಿಸ್ಪೃಹನೂ ದೀಕ್ಷಾಲಕ್ಷ್ಮಿಯಿಂದ ವಶೀಕೃತನೂ ಆಗಿ ಅನೇಕರೊಡನೆ ದೀಕ್ಷೆಯನ್ನು ತೆಗೆದುಕೊಂಡು ಬಹುಕಾಲದವರೆಗೆ ಕಠಿನತಪಸ್ಸನ್ನು ಮಾಡಿ ಏಕಾದಶಾಂಗಶಾಸ್ತ್ರಗಳನ್ನು ತಿಳಿದವನೂ ದರ್ಶನವಿಶುದ್ಧಿ ಮೊದಲಾದ ಷೋಡಶ ಭಾವನೆಗಳಲ್ಲಿ ತತ್ಪರನೂ ಆಗಿ ಈ ಪುಣ್ಯಾತ್ಮನಾದ ವಿಮಲವಾಹನನು ನಾಮಕರ್ಮದ ಕೊನೆಯದಾದ ತೀರ್ಥಕರತ್ವವೆಂಬ ಶುಭಕರ್ಮಬಂಧವನ್ನು ಮಾಡಿಕೊಂಡನು.

**ಆಯುಷೋಂತೇ ಸಮಾಧಾನಂ ವಿಧಾಯ ಪರಮೇಷ್ಠಿಷು ।**
**ತ್ರಯಸ್ತ್ರಿಂಶತ್ಸಮುದ್ರಾಯುರಭೂತ್ಸ ವಿಜಯಂ ಜಯೀ ॥ ೧೩ ॥**

ಜಯಶೀಲನಾದ ಆ ವಿಮಲವಾಹನತಪಸ್ವಿಯು ತನ್ನ ಆಯುಷ್ಯದ ಕೊನೆಯಲ್ಲಿ ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯಸಾಧುಗಳೆಂಬ ಪಂಚಪರಮೇಷ್ಠಿಗಳಲ್ಲಿ ಮನಸ್ಸನ್ನಿಟ್ಟು ದೇಹವನ್ನು ಬಿಟ್ಟು ಮೂವತ್ತುಮೂರು ಸಾಗರೋಪಮ ಪರಮಾಯುಷ್ಯವುಳ್ಳವನಾಗಿ ವಿಜಯವೆಂಬ ಅನುತ್ತರವಿಮಾನವನ್ನು ಹೊಂದಿದನು. ಸ್ವರ್ಗದ ತುದಿಯಲ್ಲಿರುವ ಪಂಚಾನುತ್ತರವಿಮಾನಗಳಲ್ಲೊಂದಾದ ವಿಜಯ ವಿಮಾನದಲ್ಲಿ ಜನಿಸಿದನೆಂದು ಭಾವವು.

**ತತ್ರಾದಾಯಾದ್ಯಸಂಸ್ಥಾನಂ ಶುಕ್ಲಲೇಶ್ಯಾದ್ವಯಾನ್ವಿತಃ ।**
**ಹಸ್ತೋಚ್ಛ್ರಾಯಂ ಶುಭಂ ದೇಹಂ ಸದ್ವರ್ಣಾದಿಚತುಷ್ಟಯಮ್ ॥ ೧೪ ॥**

ಅಲ್ಲಿ ದ್ರವ್ಯಶುಕ್ಲಲೇಶ್ಯಾ ಭಾವಶುಕ್ಲಲೇಶ್ಯಗಳಿಂದ ಕೂಡಿದವನಾಗಿ ಅಂದರೆ ಶುಭ್ರವಾದ ದೇಹವೂ ನಿರ್ಮಲವಾದ ಮನೋಭಾವವೂ ಉಳ್ಳವನಾಗಿ ಸಮಚತುರಸ್ರಸಂಸ್ಥಾನವೆಂಬ ಮೊದಲನೆಯ ಶರೀರಾಕೃತಿಯನ್ನೂ ಒಂದು ಮೊಳದಷ್ಟು ಎತ್ತರವೂ ಶ್ರೇಷ್ಠವಾದ ವರ್ಣ ರಸ ಗಂಧ ಸ್ಪರ್ಶಗಳುಳ್ಳುದೂ ಆದ ಶುಭದೇಹವನ್ನೂ ಹೊಂದಿ

**ಮಾಸೈಃ ಷೋಡಶಭಿಃ ಪಂಚದಶಭಿಶ್ಚೋಚ್ಛ್ವಸನ್ ದಿನೈಃ ।**
**ತ್ರಯಸ್ತ್ರಿಂಶತ್ಸಹಸ್ರಾಬ್ದೈರ್ಮನಸಾಹಾರಮಾಹರನ್ ॥ ೧೫ ॥**

ಹದಿನಾರು ತಿಂಗಳು ಹದಿನೈದು ದಿನಗಳಿಗೊಮ್ಮೆ ಅಂದರೆ ೧೬½ ತಿಂಗಳಿಗೊಂದಾವರ್ತಿ ಶ್ವಾಸೋಚ್ಛ್ವಾಸವನ್ನು ಬಿಡುವವನೂ ಮೂವತ್ತುಮೂರು ಸಹಸ್ರ ವರ್ಷಗಳಿಗೊಂದಾವರ್ತಿ ಮನಸ್ಸಿನಿಂದ ಆಹಾರವನ್ನು ತೆಗೆದುಕೊಳ್ಳುವವನೂ

**ನಿಜತೇಜೋವಧಿವ್ಯಾಪ್ತಲೋಕನಾಡಿರ್ನಿಜಾವಧಿಃ ।**
**ಕ್ಷೇತ್ರೋತ್ಥಾಪಿ ಬಲಸ್ತತ್ಪೂರಕಕಾಯಜವಿಕ್ರಿಯಃ ॥ ೧೬ ॥**

ತನ್ನ ತೇಜಸ್ಸಿನಿಂದಲೂ ಅವಧಿಜ್ಞಾನದಿಂದಲೂ ಲೋಕನಾಡಿಯವರೆಗೆ ವ್ಯಾಪಿಸಿರುವವನೂ ಆ ಕ್ಷೇತ್ರದಲ್ಲುಂಟಾದ ತನ್ನ ಅವಧಿಜ್ಞಾನವುಳ್ಳವನೂ ಆ ಕ್ಷೇತ್ರವನ್ನು ತುಂಬುವಷ್ಟು ಶರೀರಜನ್ಯವಾದ ವಿಕ್ರಿಯಾಬಲವುಳ್ಳವನೂ

**ಸಾತಪಂಚಶುಭೈಃ ಸೌಖ್ಯಮಪ್ರವೀಚಾರಮನ್ವಭೂತ್ ।**
**ಸಪ್ರವೀಚಾರಸತ್ಸೌಖ್ಯಾತ್ತದನಂತಗುಣಾಧಿಕಮ್ ॥ ೧೭ ॥**

ಶುಭವಾದ ಜ್ಞಾನ, ಲಾಭ, ಭೋಗ, ಉಪಭೋಗ, ವೀರ್ಯಗಳಿಂದಲೂ ಐದು ಶುಭೇಂದ್ರಿಯಗಳಿಂದಲೂ ಅಪ್ರವೀಚಾರ (ಸ್ತ್ರೀಸಂಸರ್ಗಜನ್ಯವಲ್ಲದ) ಸೌಖ್ಯವನ್ನನುಭವಿಸಿದನು. ಅಂತಹ ಶ್ರೇಷ್ಠವಾದ ಪ್ರವೀಚಾರಸುಖಕ್ಕಿಂತಲೂ ಆ ಅಪ್ರವೀಚಾರ ಸುಖವು ಅನಂತಗುಣಾಧಿಕವಾಗಿರುತ್ತದೆ.

**ತಸ್ಮಾನ್ಮಹೀಂ ಮಹಾಭಾಗಸ್ಯಾಗ್ರಾದ್ಯೋರಾಗಮಿಷ್ಯತಃ ।**
**ಪ್ರಾಗೇವ ಭಾವನೋಪಾತ್ತತೀರ್ಥಕೃನ್ನಾಮಪುಣ್ಯತಃ ॥ ೧೮ ॥**

ಮೊದಲೇ ಷೋಡಶಭಾವನೆಗಳಿಂದ ದೊರಕಿಸಿದ ತೀರ್ಥಕೃತ್ತ್ವವೆಂಬ ಪುಣ್ಯದಿಂದ ಆ ಪುಣ್ಯಶಾಲಿಯಾದ ವಿಮಲವಾಹನನು ಆ ವಿಜಯಸ್ವರ್ಗದಿಂದ ಭೂಮಿಗೆ ಬರುವವನಾದನು.

**ದ್ವೀಪೇಸ್ಮಿನ್ ಭಾರತೇ ವರ್ಷೇ ಸಾಕೇತನಗರಾಧಿಪಃ ।**
**ಇಕ್ಷ್ವಾಕುರ್ಜಿತಶತ್ರ್ವಾಖ್ಯಃ ಖ್ಯಾತೋ ಗೋತ್ರೇಣ ಕಾಶ್ಯಪಃ ॥ ೧೯ ॥**

ಈ ಜಂಬೂದ್ವೀಪದಲ್ಲಿ ಭಾರತವರ್ಷದಲ್ಲಿರುವ ಅಯೋಧ್ಯಾನಗರಕ್ಕೆ ಅಧಿಪತಿಯು ಇಕ್ಷ್ವಾಕುವಂಶಜನೂ ಪ್ರಖ್ಯಾತವಾದ ಕಾಶ್ಯಪಗೋತ್ರಜನೂ ಆದ ಜಿತಶತ್ರುವೆಂಬವನು.

**ತಸ್ಯ ಶಕ್ರಾಜ್ಞಯಾ ಗೇಹೇ ಷಣ್ಮಾಸಾನ್ಪ್ರತ್ಯಹಂ ಮುಹುಃ ।**
**ರತ್ನಾನ್ಯೈಲಬಿಲಸ್ತಿಸ್ರಃ ಕೋಟೀಃ ಸಾರ್ಧಾನ್ಯಪೀಪತತ್ ॥ ೨೦ ॥**

ಅವನ ಮನೆಯ ಮೇಲೆ ಕುಬೇರನು ದೇವೇಂದ್ರನ ಆಜ್ಞೆಯಿಂದ ಆರು ತಿಂಗಳವರೆಗೆ ಪ್ರತಿದಿವಸ ಬಾರಿಬಾರಿಗೆ ಮೂರುವರೆ ಕೋಟಿ ರತ್ನಗಳನ್ನು ಸುರಿಸಿದನು.

**ಜ್ಯೇಷ್ಠೇ ಮಾಸಿ ಕಲಾಶೇಷಶಶಿರೋಹಿಣ್ಯುಪಾಗಮೇ ।**
**ಮುಹೂರ್ತಾದ್ಬ್ರಹ್ಮಣಃ ಪೂರ್ವಂ ದರನಿದ್ರಾವಿಲೇಕ್ಷಣಾಮ್ ॥ ೨೧ ॥**

**ದೇವೀಂ ವಿಜಯಸೇನಾಖ್ಯಾಂ ಷೋಡಶಸ್ವಪ್ನಪೂರ್ವಕಮ್ ।**
**ಪ್ರವಿಶಂತಂ ವಿಲೋಕ್ಯಾತ್ಮವಕ್ತ್ರಾಬ್ಜಂ ಗಂಧಸಿಂಧುರಮ್ ॥ ೨೨ ॥**

**ಪ್ರಾತಃ ಪೃಷ್ಟವತೀಂ ಸ್ವಸ್ಯ ದೇಶಾವಧಿವಿಲೋಚನಃ ।**
**ಜಿತಶತ್ರುಮಹಾರಾಜಃ ಫಲಾನ್ಯೇಷಾಮಬೂಬುಧತ್ ॥ ೨೩ ॥**

ಜ್ಯೇಷ್ಠಮಾಸದಲ್ಲಿ ಅಮಾವಾಸ್ಯೆಯ ದಿವಸದಲ್ಲಿ ರೋಹಿಣೀನಕ್ಷತ್ರದಲ್ಲಿ ಬ್ರಾಹ್ಮಮುಹೂರ್ತಕ್ಕಿಂತ ಮೊದಲು ಸ್ವಲ್ಪ ನಿದ್ರೆಯಿಂದ ಕೂಡಿದ ಕಣ್ಣುಗಳುಳ್ಳವಳೂ ಮೊದಲು ಹದಿನಾರು ಸ್ವಪ್ನಗಳಾಗಿ ಬಳಿಕ ತನ್ನ ಮುಖಕಮಲವನ್ನು ಪ್ರವೇಶಿಸುತ್ತಿರುವ ಮದಗಜವನ್ನು ಸ್ವಪ್ನದಲ್ಲಿ ನೋಡಿ ಪ್ರಾತಃಕಾಲದಲ್ಲಿ ಅವುಗಳ ಫಲಗಳನ್ನು ಕೇಳುವವಳೂ ಆದ ವಿಜಯಸೇನೆಯೆಂಬ ದೇವಿಯನ್ನು ಕುರಿತು ತನಗೆ ದೇಶಾವಧಿಜ್ಞಾನವೆಂಬ ನೇತ್ರವುಳ್ಳ ಜಿತಶತ್ರುಮಹಾರಾಜನು ಈ ಸ್ವಪ್ನಗಳ ಫಲಗಳನ್ನು ತಿಳಿಸಿದನು.

**ವಿಜಯಾದಾಗತಂ ದೇವಂ ತದ್ಗರ್ಭಸ್ಫಟಿಕಾಲಯಮ್ ।**
**ವಿಮಲಾನುಗಸದ್ಜ್ಞಾನನೇತ್ರತ್ರಿತಯಭಾಸ್ವರಮ್ ॥ ೨೪ ॥**

**ದಶಮ್ಯಾಂ ಮಾಘಮಾಸಸ್ಯ ಶುಕ್ಲಪಕ್ಷೇ ಪ್ರಜೇಶ್ವರಮ್ ।**
**ಪ್ರಜೇಶಯೋಗೇ ನಿರ್ವಾತಮಹೋದಯಮಸೂತ ಸಾ ॥ ೨೫ ॥**

ವಿಜಯವಿಮಾನದಿಂದ ಬಂದವನೂ ವಿಜಯಸೇನೆಯ ಗರ್ಭವೆಂಬ ಸ್ಫಟಿಕಗೃಹವುಳ್ಳವನೂ ನಿರ್ಮಲವೂ ಅನುಸರಿಸಿ ಬಂದಿರುವುವೂ ಆದ ಮತಿಶ್ರುತಾವಧಿಗಳೆಂಬ ಮೂರು ಸಮ್ಯಜ್ಞಾನಗಳಿಂದ ಪ್ರಕಾಶಮಾನನೂ ಪ್ರಜೆಗಳಿಗೆ ಸ್ವಾಮಿಯೂ ಕೇಡಿಲ್ಲದ ಅಭ್ಯುದಯವುಳ್ಳವನೂ ಆದ ದೇವನನ್ನು ಮಾಘಮಾಸದ ಶುಕ್ಲಪಕ್ಷದ ದಶಮಿಯಲ್ಲಿ ಬ್ರಹ್ಮಯೋಗದಲ್ಲಿ ಆಕೆಯು ಹೆತ್ತಳು.

**ಸಾಗರೋಪಮಕೋಟೀನಾಂ ಲಕ್ಷಾಃ ಪಂಚಾಶದುತ್ತರೇ ।**
**ಮುಕ್ತಿಮಾದ್ಯೇ ಜಿನೇ ಯಾತೇ ತದಭ್ಯಂತರಜೀವಿನಃ ॥ ೨೬ ॥**

**ತದಾ ವಿಧಾಯ ದೇವೇಂದ್ರಾ ಮಂದರೇ ಸುಂದರಾಕೃತೇಃ ।**
**ಜನ್ಮಾಭಿಷೇಕಕಲ್ಯಾಣಮಜಿತಾಖ್ಯಾಮಕುರ್ವತ ॥ ೨೭ ॥**

ಆದಿಜಿನೇಶ್ವರರು ಮುಕ್ತಿಯನ್ನು ಹೊಂದಿ ಐವತ್ತು ಲಕ್ಷ ಕೋಟಿ ಸಾಗರವರ್ಷಕಾಲವಾದ ಮೇಲೆ ಹುಟ್ಟಿದವನೂ ಸುಂದರವಾದ ಆಕಾರವುಳ್ಳವನೂ ಆದ ಬಾಲಕನಿಗೆ ಆಗ ದೇವೇಂದ್ರರು ಮಹಾಮೇರುಪರ್ವತದಲ್ಲಿ ಜನ್ಮಾಭಿಷೇಕ ಕಲ್ಯಾಣವನ್ನು ಮಾಡಿ ''ಅಜಿತ''ನೆಂದು ಹೆಸರನ್ನಿಟ್ಟರು.

**ದ್ವಾಸಪ್ತತಿಗುಣಾ ಲಕ್ಷಾಃ ಪೂರ್ವಾಣಾಮಸ್ಯ ಜೀವಿತಮ್ ।**
**ಚತುಃಶತಾನಿ ಪಂಚಾಶದುತ್ಸೇಧೋ ಧನುಷಾಂ ಮತಃ ॥ ೨೮ ॥**

ಈ ಅಜಿತನಾಥನ ಜೀವಿತ–ಆಯುಷ್ಯವು ಎಪ್ಪತ್ತೆರಡು ಲಕ್ಷಪೂರ್ವವರ್ಷಕಾಲವಾಗಿದ್ದಿತು. ಅವನ ಶರೀರವು ನಾಲ್ಕು ನೂರೈವತ್ತು ಬಿಲ್ಲುಗಳಷ್ಟು ಉನ್ನತವಾಗಿದ್ದಿತು.

**ಭರ್ತುಃ ಸುವರ್ಣವರ್ಣಸ್ಯ ಪಾದೇ ಸ್ವಸ್ಯಾಯುಷೋ ಗತೇ ।**
**ಅಜಿತಸ್ಯ ಗತಾಶೇಷಬಾಹ್ಯಾಭ್ಯಂತರವಿದ್ವಿಷಃ ॥ ೨೯ ॥**

**ಪೂರ್ವಾಣಾಂ ಲಕ್ಷಯಾ ಹೀನಂ ಭಾಗತ್ರಿತಯಮಾಯುಷಃ ।**
**ಪೂರ್ವಾಂಗಮಪಿ ನಾರ್ಪತ್ಯಂ ನಿರ್ಜಿತಾದಿತ್ಯತೇಜಸಃ ॥ ೩೦ ॥**

ಬಂಗಾರದಂತೆ ಶರೀರದ ಬಣ್ಣವುಳ್ಳವನೂ ಬಾಹ್ಯಾಭ್ಯಂತರಶತ್ರುಗಳಿಲ್ಲದವನೂ ಆದ ಅಜಿತನಾಥನ ಆಯುಷ್ಯದಲ್ಲಿ ಕಾಲುಪಾಲು–೧೮ ಲಕ್ಷ ಪೂರ್ವವರ್ಷ ಅಂದರೆ ಕೌಮಾರಕಾಲವು ಕಳೆದಮೇಲೆ ಸೂರ್ಯತೇಜಸ್ಸನ್ನು ಜಯಿಸಿದವನಾದ ಆ ಅಜಿತನಾಥನ ಆಯುಷ್ಯದ ಒಂದು ಲಕ್ಷ ಪೂರ್ವವರ್ಷಕಾಲವು ಕಡಮೆಯಾದ ಮೂರು ಭಾಗಗಳು ಅಂದರೆ ಐವತ್ತು ಮೂರು ಲಕ್ಷಪೂರ್ವವರ್ಷ ಪೂರ್ವಾಂಗ ಕಾಲದವರೆಗೆ ದೊರೆತನವನ್ನು ಮಾಡಿದನು.

**ತಯಾ ಸಂಭೋಗಸೌಖ್ಯಸ್ಯ ಪರ್ಯಂತೋಽಯಂ ಮಮೇತಿ ವಾ ।**
**ರಾಜ್ಯಲಕ್ಷ್ಮ್ಯಾ ಪರಿಷ್ವಕ್ತಃ ಶ್ಲಾಘ್ಯಾನ್ ಭೋಗಾನಭುಂಕ್ತ ಸಃ ॥ ೩೧ ॥**

ಇದು ಸಂಭೋಗಸೌಖ್ಯದ ಕೊನೆಯೆನ್ನುವಂತೆ ಅಜಿತನಾಥನು ಆ ರಾಜ್ಯ ಲಕ್ಷ್ಮಿಯಿಂದ ಆಲಿಂಗಿತನಾಗಿ ಶ್ಲಾಘ್ಯವಾದ ಭೋಗಗಳನ್ನು ಅನುಭವಿಸಿದನು.

**ಸ ಕದಾ ಚಿತ್ಸುಖಾಸೀನಃ ಸೌಧಪೃಷ್ಠೇ ಸತಾಂ ಪತಿಃ ।**
**ಉಲ್ಕಾಮಲೋಕತಾನಲ್ಪಾಂ ಜಲ್ಪಂತೀಂ ಪಾಧ್ರುವಾಂ ಶ್ರಿಯಮ್ ॥**

ಸತ್ಪುರುಷರಿಗೆ ಸ್ವಾಮಿಯಾದ ಆ ಅಜಿತನಾಥನು ಒಂದಾನೊಂದು ಕಾಲದಲ್ಲಿ ಉಪ್ಪರಿಗೆಯ ಮೇಲೆ ಸುಖವಾಗಿ ಕುಳಿತಿರುವಾಗ ದೊಡ್ಡದಾದ ಉಲ್ಕಾಪಾತವನ್ನು ನೋಡಿದನು. ಅದು ಸಂಪತ್ತಿಯು ಅಸ್ಥಿರವೆಂದು ಹೇಳುವಂತಿದ್ದಿತು.

**ವಿಷಯೇಷು ತದೈವಾಸೌ ವಿದಾಂ ನಿರ್ವಿವಿದೇ ವರಃ ।**
**ಲಕ್ಷ್ಮೀಮಭ್ಯರ್ಣಮೋಕ್ಷಾಣಾಂ ಕ್ಷೇಪ್ತುಂ ಕಿಂ ವಾ ನ ಕಾರಣಮ್॥ ೩೩ ॥**

ಜ್ಞಾನಿಗಳಲ್ಲಿ ಶ್ರೇಷ್ಠನಾದ ಈ ಅಜಿತನಾಥನು ಆಗಲೇ ವಿಷಯಗಳಲ್ಲಿ ವೈರಾಗ್ಯ ವನ್ನು ಹೊಂದಿದನು. ಸಮೀಪವಾದ ಮೋಕ್ಷವುಳ್ಳವರಿಗೆ ಸಂಪತ್ತಿಯನ್ನು ದೂರ ಮಾಡುವುದಕ್ಕೆ ಯಾವುದುತಾನೆ ಕಾರಣವಲ್ಲ ?

**ಬ್ರಹ್ಮಲೋಕಾತ್ತದಾಭ್ಯೇತ್ಯ ಸೌರಾಃ ಸಾರಸ್ವತಾದಯಃ ।**
**ಮುನೀಶ್ವರಾಃ ಪ್ರಶಸ್ಯೋಚ್ಚೈಸ್ತಂ ತದೇವಾನ್ವವಾದಿಷುಃ ॥ ೩೪ ॥**

ಆಗ ಬ್ರಹ್ಮಲೋಕದಿಂದ ಸಾರಸ್ವತ ಮೊದಲಾದ ದೇವರ್ಷಿಗಳು ಬಂದು ಅಜಿತನಾಥನನ್ನು ಬಹಳವಾಗಿ ಹೊಗಳಿ ಆ ವೈರಾಗ್ಯವನ್ನೇ ಸಮರ್ಥನಮಾಡಿದರು.

**ತೈಷಾಂ ತದುದಿತಂ ತಸ್ಯ ಲೋಕಸ್ಯೇವಾಂಶುಮಾಲಿನಃ ।**
**ಸಚಕ್ಷುಷೋ ಯಥಾರ್ಥಾವಲೋಕೇಗಾತ್ಸಹಕಾರಿತಾಮ್ ॥ ೩೫ ॥**

ಅವರ ಆ ಮಾತು ಅಜಿತನಾಥನಿಗೆ, ಕಣ್ಣುಳ್ಳ ಜನಕ್ಕೆ ಯಥಾರ್ಥವಿಷಯವನ್ನು ನೋಡುವುದರಲ್ಲಿ ಸೂರ್ಯನ ಉದಯದಂತೆ, ಸಹಾಯವನ್ನು ಪಡೆಯಿತು.

**ಸುತಾಯಾಜಿತಸೇನಾಯ ರಾಜ್ಯಾಭಿಷವಪೂರ್ವಕಮ್ ।**
**ದತ್ವಾ ವಿವೇಕಿನಾಂ ತ್ಯಾಜ್ಯಂ ರಾಜ್ಯಂ ಭೋಜ್ಯಮಿವೋಜ್ಝಿತಮ್ ॥ ೩೬ ॥**

**ಲಬ್ಧನಿಷ್ಕ್ರಾಂತಿಕಲ್ಯಾಣಮಹಾಭಿಷವಸಮ್ಮದಃ ।**
**ಸುಪ್ರಭಾಶಿಬಿಕಾರೂಢೋ ವ್ಯೂಢೋ ನರಖಗಾಮರೈಃ ॥ ೩೭ ॥**

**ಮಾಘೇ ಮಾಸಿ ಸಿತೇ ಪಕ್ಷೇ ರೋಹಿಣ್ಯಾಂ ನವಮೀದಿನೇ ।**
**ಸಹೇತುಕವನೇ ಸಪ್ತಪರ್ಣದ್ರುಮಸಮೀಪಗಃ ॥ ೩೮ ॥**

**ಅಪರಾಹ್ಣೇ ಸಹಸ್ರೇಣ ರಾಜ್ಞಾಮಾಜ್ಞಾವಿಧಾಯಿನಾಮ್ ।**
**ಸಾರ್ಧಂ ಷಷ್ಠೋಪವಾಸೇನ ಸಮಾಸ್ಥಿತ ಸ ಸಂಯಮಮ್ ॥ ೩೯ ॥**

ತಿಂದು ಬಿಸುಟ ಭೋಜ್ಯವಸ್ತುವಿನಂತೆ, ವಿವೇಕಿಗಳಿಗೆ ತ್ಯಾಜ್ಯವಾದ ರಾಜ್ಯವನ್ನು ಅಜಿತಸೇನನೆಂಬ ಪುತ್ರನಿಗೆ ರಾಜ್ಯಾಭಿಷೇಕಪೂರ್ವಕವಾಗಿ ಕೊಟ್ಟು ಪರಿನಿಷ್ಕ್ರಾಂತಿ ಕಲ್ಯಾಣಮಹಾಭಿಷೇಕದ ಸಂತೋಷವನ್ನು ಹೊಂದಿದವನೂ ಸುಪ್ರಭೆಯೆಂಬ ಪಲ್ಲಕ್ಕಿಯನ್ನೇರಿದವನೂ ಮನುಷ್ಯರಿಂದಲೂ ಖೇಚರರಿಂದಲೂ ದೇವತೆಗಳಿಂದ ಲೂ ಹೊರಲ್ಪಟ್ಟವನೂ ಮಾಘಮಾಸದ ಶುಕ್ಲಪಕ್ಷದ ನವಮೀದಿವಸದಲ್ಲಿ ಸಾಯಂ ಕಾಲ ರೋಹಿಣೀನಕ್ಷತ್ರದಲ್ಲಿ ಸಹೇತುಕವೆಂಬ ವನದಲ್ಲಿ ಏಳೆಲೆ ಬಾಳೆಯ ಮರದ ಸಮೀಪವನ್ನು ಹೊಂದಿದವನೂ ಆದ ಅಜಿತನಾಥನು ತನ್ನ ಆಜ್ಞಾನುವರ್ತಿಗಳಾದ ಸಾವಿರಮಂದಿ ದೊರೆಗಳೊಡನೆ ಆರು ಉಪವಾಸಗಳನ್ನು ಮಾಡಿ ಸಂಯಮ ದಲ್ಲಿದ್ದನು. ದೀಕ್ಷೆಯನ್ನು ತೆಗೆದುಕೊಂಡು ಆರು ಉಪವಾಸಗಳನ್ನು ಮಾಡಿದ ನೆಂದು ಭಾವವು.

**ಚತುರ್ಥಜ್ಞಾನಸಂಪೂರ್ಣೋ ದ್ವಿತೀಯೇಽಹ್ನಿ ಪ್ರವಿಷ್ಟವಾನ್ ।**
**ಸಾಕೇತಂ ದಾನಿನಾಂ ತೋಷಮಪೂರ್ವಮುದಪಾದಯನ್ ॥ ೪೦ ॥**

ಮನಃಪರ್ಯಯವೆಂಬ ನಾಲ್ಕನೆಯ ಜ್ಞಾನಪರಿಪೂರ್ಣನೂ ದಾನಿಗಳಿಗೆ ಅಪೂ ರ್ವವಾದ ಸಂತೋಷವನ್ನುಂಟುಮಾಡುವವನೂ ಆದ ಆ ಅಜಿತನಾಥನು ಎರಡ ನೆಯ ದಿವಸದಲ್ಲಿ ಅಯೋಧ್ಯಾನಗರವನ್ನು ಪ್ರವೇಶಿಸಿದನು.

**ತತ್ರ ಬ್ರಹ್ಮಾ ಮಹೀಪಾಲಸ್ತಸ್ಮೈ ದಾನಂ ಯಥಾಕ್ರಮಮ್ ।**
**ದತ್ವಾ ಸಾತಾದಿಭಿಃ ಪುಣ್ಯೈಃ ಸಹಾಪಾಶ್ಚರ್ಯಪಂಚಕಮ್ ॥ ೪೧ ॥**

ಅಲ್ಲಿ ಬ್ರಹ್ಮನೆಂಬ ದೊರೆಯು ಶಾಸ್ತ್ರೋಕ್ತಕ್ರಮಾನುಸಾರವಾಗಿ ಆ ಅಜಿತ ನಾಥನಿಗೆ ಆಹಾರದಾನವನ್ನು ಕೊಟ್ಟು ಸಾತಾವೇದನೀಯ ಶುಭಾಯುಷ್ಯ ಶುಭ ನಾಮ ಶುಭಗೋತ್ರಗಳೆಂಬ ಪುಣ್ಯಕರ್ಮಗಳನ್ನೂ ರತ್ನವೃಷ್ಟಿ, ಪುಷ್ಪವೃಷ್ಟಿ, ಶೈತ್ಯ ಸೌರಭಯುಕ್ತವಾದ ಮಂದಮಾರುತ, ದೇವದುಂದುಭಿ, ದೇವತಾಪ್ರಶಂಸಾ ಈ ಪಂಚಾಶ್ಚರ್ಯಗಳನ್ನೂ ಪಡೆದನು.

**ಛಾದ್ಮಸ್ಥ್ಯೇನ ನಯನ್ನಬ್ದಾನ್ ಪೌಷೇ ದ್ವಾದಶ ಶುದ್ಧಧೀಃ ।**
**ಶುಕ್ಲೈಕಾದಶ್ಯಹಃಪ್ರಾಂತೇ ರೋಹಿಣ್ಯಾಮಾಪ್ತತಾಮಗಾತ್ ॥ ೪೨ ॥**

ಅಜಿತನಾಥನು ಛದ್ಮಸ್ಥಾವಸ್ಥೆಯಲ್ಲಿ ಹನ್ನೆರಡು ವರ್ಷಗಳನ್ನು ಕಳೆದು ಶುದ್ಧ ವಾದ ಬುದ್ಧಿಯುಳ್ಳವನಾಗಿ ಪುಷ್ಯಮಾಸದ ಶುಕ್ಲಪಕ್ಷದ ಏಕಾದಶಿಯ ಸಾಯಂಕಾಲ ದಲ್ಲಿ ರೋಹಿಣೀನಕ್ಷತ್ರದಲ್ಲಿ ಆಪ್ತತ್ವವನ್ನು ಪಡೆದನು. ಘಾತಿಕರ್ಮಗಳನ್ನು ನಾಶ ಮಾಡಿ ಕೇವಲಜ್ಞಾನಿ–ಸರ್ವಜ್ಞಪರಮಾತ್ಮನಾದನೆಂದು ಭಾವವು.

**ಸಿಂಹಸೇನಾದಯಸ್ತಸ್ಯ ನವತಿಃ ಸ್ಯುರ್ಗಣಾಧಿಪಾಃ ।**
**ಖಪಂಚಸಪ್ತವಹ್ನ್ಯುಕ್ತಪ್ರಮಾಣಾಃ ಪೂರ್ವಧಾರಿಣಃ ॥ ೪೩ ॥**

ಆ ಅಜಿತಜಿನನಿಗೆ (ಸಮವಸರಣದಲ್ಲಿ) ಸಿಂಹಸೇನನೇ ಮೊದಲಾದ ತೊಂಬತ್ತು ಮಂದಿ ಗಣಧರರಿದ್ದರು. ಮೂರುಸಾವಿರದೇಳುನೂರೈವತ್ತುಮಂದಿ ಪೂರ್ವಶಾಸ್ತ್ರ ಜ್ಞಾನಧಾರಿಗಳಿದ್ದರು.

**ಶಿಕ್ಷಕಾಃ ಖದ್ವಯತ್ರ್ಯೇಕದ್ವಿಪ್ರಮಾಗಣನಾಃ ಕ್ರಮಾತ್ ।**
**ಶೂನ್ಯದ್ವಯಚತುರಂಧ್ರಮಿತಾಸ್ತ್ರಿಜ್ಞಾನಲೋಚನಾಃ ॥ ೪೪ ॥**

ಕ್ರಮವಾಗಿ ಇಪ್ಪತ್ತೊಂದುಸಾವಿರದ ಆರುನೂರು ಮಂದಿ ಶಿಕ್ಷಕರಿದ್ದರು. ಮತಿ ಶ್ರುತಾವಧಿಜ್ಞಾನಗಳೆಂಬ ನೇತ್ರಗಳುಳ್ಳವರು ಒಂಬತ್ತು ಸಾವಿರದ ನಾಲ್ಕುನೂರು ಮಂದಿಗಳಿದ್ದರು.

**ಕೇವಲಾವಗಮಾಸ್ತತ್ರ ತೇ ಸಹಸ್ರಾಣಿ ವಿಂಶತಿಃ ।**
**ಚತುಃಶತ್ಯಃ ಸಹಸ್ರಾಣಾಂ ವಿಂಶತಿರ್ವಿಕ್ರಿಯರ್ದ್ಧಯಃ ॥ ೪೫ ॥**

ಇಪ್ಪತ್ತುಸಾವಿರಮಂದಿ ಕೇವಲಜ್ಞಾನಿಗಳಿದ್ದರು. ಇಪ್ಪತ್ತುಸಾವಿರದ ನಾಲ್ಕು ನೂರು ಮಂದಿಗಳು "ವಿಕ್ರಿಯರ್ದ್ಧಿ"ಎಂಬ ತಪಶ್ಶಕ್ತಿಧಾರಿಗಳಿದ್ದರು.

**ಶೂನ್ಯಪಂಚಚತುರ್ದ್ವ್ಯೇಕೈರ್ಮನಃಪರ್ಯಯವೀಕ್ಷಣಾಃ ।**
**ಶೂನ್ಯದ್ವಯಚತುರ್ದ್ವ್ಯೇಕೈಸ್ತಸ್ಯಾನುತ್ತರವಾದಿನಃ ॥ ೪೬ ॥**

ಹನ್ನೆರಡು ಸಾವಿರದ ನಾಲ್ಕುನೂರೈವತ್ತು ಮಂದಿಗಳು ಮನಃಪರ್ಯಯ ಜ್ಞಾನಿಗಳಿದ್ದರು. ಹನ್ನೆರಡು ಸಾವಿರದ ನಾಲ್ಕುನೂರು ಮಂದಿ ಅನುತ್ತರವಾದಿ ಗಳೆಂಬ ಮುನಿಗಳಿದ್ದರು.

ಸರ್ವೇ ತೇ ಪಿಂಡಿತಾಃ ಸಂತೋ ಲಕ್ಷಮೇಕಂ ತಪೋಧನಾಃ ।
ಪ್ರಾಕುಬ್ಜಾದ್ಯಾರ್ಯಿಕಾಃ ಶೂನ್ಯಚತುಷ್ಕದ್ವ್ಯಗ್ನಿಸಮ್ಮಿತಾಃ ॥ ೪೭ ॥

ಸಪ್ತವಿಧರಾದ ಆ ತಪೋಧನರೆಲ್ಲ ಸೇರಿ ಒಂದು ಲಕ್ಷ ಜನರಿದ್ದರು. ಪ್ರಾಕುಬ್ಜಾ ಮೊದಲಾದ ಆರ್ಯಿಕೆಯರು ಮೂರುಲಕ್ಷದ ಇಪ್ಪತ್ತುಸಾವಿರಮಂದಿಗಳಿದ್ದರು.

ಶ್ರಾವಕಾಸ್ತ್ರೀಣಿ ಲಕ್ಷಾಣಿ ಶ್ರಾವಿಕಾಃ ಪಂಚಲಕ್ಷಕಾಃ ।
ದೇವಾ ದೇವ್ಯಸ್ತ್ವಸಂಖ್ಯಾತಾಃ ಸಂಖ್ಯಾತೋ ದ್ವಾದಶೋ ಗಣಃ ॥ ೪೮ ॥

ಮೂರು ಲಕ್ಷಜನರು ಶ್ರಾವಕರಿದ್ದರು. ಐದುಲಕ್ಷಶ್ರಾವಿಕೆಯರಿದ್ದರು. ದೇವ ಮತ್ತು ದೇವಿಯರು ಅಸಂಖ್ಯಾತರಾಗಿದ್ದರು. ಗಣಗಳ ಸಂಖ್ಯೆಯು ಹನ್ನೆರಡು. ಅಜಿತತೀರ್ಥಂಕರರ ಸಮವಸರಣದಲ್ಲಿ ತಪಸ್ವಿಗಳು ಮೊದಲಾದವರ ಹನ್ನೆರಡು ಸಮೂಹಗಳಿದ್ದುವೆಂದು ಭಾವವು.

ಏವಂ ದ್ವಾದಶಭಿರ್ದೇವೋ ಗಣೈರೇಭಿಃ ಪರಿಷ್ಕೃತಃ ।
ಸಂಸಾರಮೋಕ್ಷತದ್ಧೇತುಫಲಭೇದಾನ್ಪ್ರಪಂಚಯನ್ ॥ ೪೯ ॥

ಸಮವಸರಣಲಕ್ಷ್ಮ್ಯಾ ವೀಕ್ಷ್ಯಮಾಣಃ ಕಟಾಕ್ಷೈಃ ।
ಸುಕೃತವಿಕೃತಚಿಹ್ನೈರಷ್ಟಭಿಃ ಪ್ರಾತಿಹಾರ್ಯೈಃ ॥
ಅವಿಹತವಿಹತಾರಿಃ ಪ್ರೌಢವೈರಾಗ್ಯಭಾವಃ ।
ಸ್ವಪರಗುರುಕೃತಾರ್ಥಃ ಪ್ರಾರ್ಥ್ಯಸಂಪತ್ಸಮೃದ್ಧಃ ॥ ೫೦ ॥

ಪಾಪೈಃ ಕ್ವಾಪಿ ನ ಜೀಯತೇಯಮಿತಿ ವಾ ದುರ್ವಾದಿಭಿಶ್ಚಾಖಿಲೈ- ।
ರ್ನಾಮಾನ್ವರ್ಥಮವಾಪ್ತವಾನಿತಿ ವಿದಾಂ ಸ್ತೋತ್ರಸ್ಯ ಪಾತ್ರಂ ಭವನ್ ॥
ಆರ್ಯಕ್ಷೇತ್ರಮಶೇಷಮೇಷ ವಿಹರನ್ ಸಂಪ್ರಾಪ್ಯ ಸಮ್ಮೇದಕಮ್ ।
ಸ್ಥಿತ್ವಾ ದಿವ್ಯನಿನಾದಯೋಗರಹಿತಸ್ತತ್ರೈವ ಪಕ್ಷದ್ವಯಮ್ ॥ ೫೧ ॥

ಕುರ್ವಾಣಃ ಸಮಯಂ ಪ್ರತಿಪ್ರಕೃತಿಷು ಸ್ರಾವಂ ಗುಣಾಸಂಖ್ಯಯಾ ।
ಸ್ಥಿತ್ಯಾದಿಂ ಚ ವಿಘಾತಯನ್ ಸ್ವಮಿತಿಕಂ ದಂಡಾದಿಕಂ ವರ್ತಯನ್ ॥
ಸೂಕ್ಷ್ಮಧ್ಯಾನನಿರುದ್ಧಯೋಗವಿಭವೋ ವಿಶ್ಲಿಷ್ಟದೇಹತ್ರಯಃ ।
ತುರ್ಯಧ್ಯಾನಸಮಾಶ್ರಯಾತ್ಸಮುಪಯನ್ ಸ್ವಾಷ್ಟೌ ಗುಣಾನ್
ಶುದ್ಧಿಭಾಕ್ ॥ ೫೨ ॥

ಚೈತ್ರಜ್ಯೋತ್ಸ್ನಾ ಪಕ್ಷೇ ಪಂಚಮ್ಯಾಂ ರೋಹಿಣೀಂ ಗತೇ ಚಂದ್ರೇ ।
ಪ್ರತಿಮಾಯೋಗಂ ಭಿಭ್ರತ್ಪೂರ್ವಾಹ್ಣೇವಾಪ ಮುಕ್ತಿಪದಮ್ ॥ ೫೩ ॥
(ಚತುರ್ಭಿಃ ಕುಲಕಂ)

ಈ ಪ್ರಕಾರವಾಗಿ ಈ ದ್ವಾದಶಗಣಗಳಿಂದ ಸುತ್ತಲ್ಪಟ್ಟವನೂ ಸಂಸಾರದ ಮತ್ತು ಮೋಕ್ಷದ ಸ್ವರೂಪವನ್ನೂ ಅವುಗಳಿಗೆ ಕಾರಣಗಳನ್ನೂ ಅವುಗಳ ಫಲಗಳನ್ನೂ ವಿವರಿಸುವವನೂ ಸಮವಸರಣಲಕ್ಷ್ಮಿಯ ಕಡೆಗಣ್ಣುಗಳಿಂದ ನೋಡಲ್ಪಡುವವನೂ ಪುಣ್ಯದಿಂದ ವಿಶೇಷವಾಗಿ ಮಾಡಲ್ಪಟ್ಟ ಗುರುತುಗಳಿಂದ ಅಶೋಕವೃಕ್ಷ ಮೊದಲಾದ ಎಂಟು ಪ್ರಾತಿಹಾರ್ಯಗಳಿಂದ ಯುಕ್ತನೂ ನಾಶಮಾಡಲ್ಪಡದ ಕರ್ಮಶತ್ರುವನ್ನು ಚೆನ್ನಾಗಿ ನಾಶಮಾಡಿದವನೂ ಪ್ರೌಢವಾದ ವೈರಾಗ್ಯಭಾವವುಳ್ಳವನೂ ತನಗೂ ಪರರಿಗೂ ಗುರುವೂ ಕೃತಾರ್ಥನೂ ಬಯಸುವುದಕ್ಕೆ ಯೋಗ್ಯವಾದ ಬಾಹ್ಯಾಭ್ಯಂತರಸಂಪತ್ತಿಯಿಂದ ಪರಿಪೂರ್ಣನೂ ಆದ ಈ ಅಜಿತದೇವನು ''ಪಾಪಗಳು ಇವನನ್ನು ಎಲ್ಲಿಯೂ ಜಯಿಸುವುದಿಲ್ಲವೆಂದೋ ಸಮಸ್ತದುರ್ವಾದಿಗಳಿಂದ ಅನ್ವರ್ಥವಾದ ಹೆಸರನ್ನು ಪಡೆದನು'' ಎಂದು ವಿದ್ವಾಂಸರ ಸ್ತೋತ್ರಕ್ಕೆ ಪಾತ್ರನಾಗಿ ಆರ್ಯಕ್ಷೇತ್ರವನ್ನೆಲ್ಲ ವಿಹರಿಸಿ ಸಮ್ಮೇದಪರ್ವತವನ್ನು ಹೊಂದಿ ದಿವ್ಯಧ್ವನಿಯನ್ನು ನಿಲ್ಲಿಸಿ ಅಲ್ಲೇ ಒಂದು ತಿಂಗಳವರೆಗೆ ಇದ್ದು ಪ್ರತಿಸಮಯದಲ್ಲಿ ಕರ್ಮಪ್ರಕೃತಿಗಳನ್ನು ಅಸಂಖ್ಯಾತಗುಣಿತಕ್ರಮದಿಂದ ನಿರ್ಜರೆಯನ್ನು ಮಾಡಿ ಕರ್ಮಗಳ ಪರಿಮಿತವಾದ ಸ್ಥಿತಿ ಮೊದಲಾದುವುಗಳನ್ನು ನಾಶಮಾಡಿ ದಂಡ ಕವಾಟ ಪ್ರತರ ಲೋಕಪೂರಣ ರೂಪವಾದ ಕೇವಲಸಮುದ್ಘಾತವೆಂಬ ಯೋಗವನ್ನು ಮಾಡಿ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಮೂರನೆಯ ಶುಕ್ಲಧ್ಯಾನದಿಂದ ಮನೋ ವಾಕ್ಕಾಯವ್ಯಾಪಾರರೂಪವಾದ ಯೋಗವನ್ನು ತಡೆದು ಪರಮೌದಾರಿಕ ತೈಜಸ ಕಾರ್ಮಣಗಳೆಂಬ ಮೂರು ದೇಹಗಳಿಂದ ಬೇರೆಯಾಗಿ ವ್ಯುಪರತಕ್ರಿಯಾನಿವೃತ್ತಿಯೆಂಬ ನಾಲ್ಕನೆಯ ಶುಕ್ಲಧ್ಯಾನದಿಂದ ಶುದ್ಧಿಯನ್ನು ಹೊಂದಿ ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ, ಸೂಕ್ಷ್ಮತ್ವ, ಅವಗಹನ, ಅಗುರುಲಘುತ್ವ, ಅವ್ಯಾಬಾಧತ್ವಗಳೆಂಬ ಎಂಟು ಗುಣಗಳನ್ನು ಪಡೆದು ಚೈತ್ರಮಾಸದಲ್ಲಿ ಶುಕ್ಲಪಕ್ಷದಲ್ಲಿ ಪಂಚಮೀತಿಥಿಯಲ್ಲಿ ಚಂದ್ರನು ರೋಹಿಣೀನಕ್ಷತ್ರವನ್ನು ಹೊಂದಿದಾಗ ಪ್ರತಿಮಾಯೋಗವನ್ನು ಧರಿಸಿ ಪ್ರಾತಃಕಾಲದಲ್ಲಿ ಮುಕ್ತಿಯನ್ನು ಹೊಂದಿದರು.

ವಿಮಲವಾಹನಮಾಹವದುರ್ಧರಮ್ ।
ದುರಿತದೂರತಪಶ್ಚರಣೋದ್ಯತಮ್ ॥
ಸುಖನಿಧಿಂ ವಿಜಯೇ ಸುರಸತ್ತಮಮ್ ।
ನಮತ ಭಕ್ತಿಭರಾದಜಿತಂ ಜಿನಮ್ ॥ ೫೪ ॥

ಯುದ್ಧದಲ್ಲಿ ದುರ್ಧರನಾದ ವಿಮಲವಾಹನನಾಗಿದ್ದವನೂ ಪಾಪವನ್ನು ದೂರ ಮಾಡುವ ತಪಶ್ಚರಣದಲ್ಲಿ ಉದ್ಯತನಾಗಿ ವಿಜಯಸ್ವರ್ಗದಲ್ಲಿ ಸುಖನಿಧಿಯಾದ ಶ್ರೇಷ್ಠದೇವನಾಗಿದ್ದವನೂ ಆದ ಅಜಿತಜಿನನನ್ನು ವಿಶೇಷವಾದ ಭಕ್ತಿಯಿಂದ ನಮಸ್ಕರಿಸಿರಿ.

ಇತ್ಥಂ ಷೋಡಶಭಾವನಾಹಿತಮಹಾಪುಣ್ಯೋದಯಾಪಾದಕಃ ।
ಸದ್ಧ್ಯಾನಾತ್ಸಕಲಕರ್ಮಜಾಲಮಖಿಲಂ ನಿರ್ಮೂಲಯನ್ನಿರ್ಮಲಃ ॥
ಧರ್ಮಃ ಶರ್ಮಪರಂಪರಾಂ ಪ್ರವಿಧದ್ವತ್ತೇ ಶಿವೇ ಶಾಶ್ವತೇ ।
ತಸ್ಮಾದ್ಧರ್ಮಮುಪಾಧ್ವಮುಜ್ಝಿತಮದಾಃ ಶುದ್ಧಾಪ್ತಬುದ್ಧಂ ಬುಧಾಃ ॥

ಹೀಗೆ ಷೋಡಶಭಾವನೆಗಳಿಂದ ಮಹಾಪುಣ್ಯೋದಯವನ್ನು ಉಂಟುಮಾಡುವುದೂ ಶ್ರೇಷ್ಠವಾದ ಧ್ಯಾನದಿಂದ ಸಮಸ್ತ ದುಷ್ಕರ್ಮಸಮೂಹವನ್ನು ನಿರ್ಮೂಲ ಮಾಡುವುದೂ ನಿರ್ಮಲವೂ ಆದ ಧರ್ಮವು ಸುಖಪರಂಪರೆಯನ್ನುಂಟುಮಾಡಿ ನಿತ್ಯವಾದ ಮುಕ್ತಿಯಲ್ಲಿರಿಸುವುದು. ಆದುದರಿಂದ ವಿದ್ವಾಂಸರೆ! ಪವಿತ್ರರಾದ ಆಪ್ತರಿಂದ ಪ್ರಕಾಶಿತವಾದ ಧರ್ಮವನ್ನು ನಿರಹಂಕಾರಿಗಳಾಗಿ ಸೇವಿಸಿರಿ.

ತೀರ್ಥಕೃತ್ಸು ದ್ವಿತೀಯೋಪಿ ಯೋದ್ವಿತೀಯಃ ಪಥಿ ಸ್ತುತೇಃ ।
ಸ ವಿಧೇಯಾತ್ಪುರಾಣೋರುಮಾರ್ಗನಿರ್ವಹಣಂ ಕವೇಃ ॥ ೫೬ ॥

ತೀರ್ಥಂಕರರಲ್ಲಿ ದ್ವಿತೀಯರಾದರೂ ಸ್ತುತಿಪದ್ಧತಿಯಲ್ಲಿ ಅದ್ವಿತೀಯರಾದ ಆ ಅಜಿತತೀರ್ಥಂಕರರು ಪುರಾಣದ ದೊಡ್ಡದಾದ ಮಾರ್ಗವನ್ನು ನಿರ್ವಾಹಮಾಡಲು ಕವಿಗೆ ಸಹಾಯಕರಾಗಲಿ.

ತತ್ತೀರ್ಥೇ ಸಗರಾಭಿಖ್ಯೋ ದ್ವಿತೀಯಶ್ಚಕ್ರವರ್ತಿನಾಮ್ ।
ಅಭೂತ್ಪುರಾಣಮೇತಸ್ಯ ಶೃಣು ಶ್ರೇಣಿಕ ಧೀಧನ ॥ ೫೭ ॥

ಆ ಅಜಿತತೀರ್ಥಂಕರರ ತೀರ್ಥಕಾಲದಲ್ಲಿ ಚಕ್ರವರ್ತಿಗಳಲ್ಲಿ ಎರಡನೆಯವನಾದ ಸಗರನೆಂಬವನಿದ್ದನು. ಬುದ್ಧಿಶಾಲಿಯಾದ ಶ್ರೇಣಿಕನೆ! ಈ ಸಗರಚಕ್ರವರ್ತಿಯ ಪುರಾಣವನ್ನು ಕೇಳು.

ದ್ವೀಪೇತ್ರ ಪ್ರಾಗ್ವಿದೇಹಸ್ಯ ಸೀತಾವಾಗ್ಭಾಗಭೂಷಣೇ ।
ವಿಷಯೇ ವತ್ಸಕಾವತ್ಯಾಂ ಪೃಥುವೀನಗರಾಧಿಪಃ ॥ ೫೮ ॥

ಜಯಸೇನೋ ಜಿನೈಸ್ಸೇನೋ ಜಯಸೇನಾಸ್ಯ ವಲ್ಲಭಾ ।
ರತಿಷೇಣಸ್ತಯೋಸ್ಸೂನುರ್ಧೃತಿಷೇಣಶ್ಚ ತಾವುಭೌ ॥ ೫೯ ॥

ಈ ಜಂಬೂದ್ವೀಪದಲ್ಲಿ ಪೂರ್ವವಿದೇಹಕ್ಷೇತ್ರದ ಸೀತಾನದಿಯ ದಕ್ಷಿಣದಿಗ್ಭಾಗಕ್ಕೆ ಭೂಷಣವಾದ ವತ್ಸಕಾವತಿಯೆಂಬ ದೇಶದಲ್ಲಿರುವ ಪೃಥ್ವಿವಿಯೆಂಬ ನಗರಕ್ಕೆ ಅಧಿಪತಿಯಾದ ಜಯಸೇನನು ಜಿನರಿಂದ ಸ್ವಾಮಿಸಹಿತನಾಗಿದ್ದನು. ಜಿನಭಕ್ತ

ನಾಗಿದ್ದನೆಂದು ಭಾವವು. ಈ ಜಯಸೇನನಿಗೆ ಜಯಸೇನೆಯೆಂಬವಳು ಪತ್ನಿಯಾಗಿದ್ದಳು. ಆ ದಂಪತಿಗಳಿಗೆ ರತಿಷೇಣ ಧೃತಿಷೇಣರೆಂಬಿಬ್ಬರು ಪುತ್ರರಿದ್ದರು.

**ಸೂರ್ಯಾಚಂದ್ರಮಸೌ ಜಿತ್ವಾ ಸದಾಭಾತಃ ಕೃತೋದಯೌ ।**
**ಪಿತರೌ ಚ ಮರುನ್ಮಾರ್ಗಪೃಥಿವ್ಯೌ ವಾ ತತಃ ಪೃಥಕ್ ॥ ೬೦ ॥**

ಅಭ್ಯುದಯವನ್ನು ಹೊಂದುತ್ತಿರುವ ಆ ಪುತ್ರರು ಸೂರ್ಯಚಂದ್ರರನ್ನು ಜಯಿಸಿ ಯಾವಾಗಲೂ ಪ್ರಕಾಶಿಸುತ್ತಿದ್ದರು. ತಂದೆ ತಾಯಿಗಳಾದರೋ ಆಕಾಶಭೂಮಿಗಳನ್ನು ಜಯಿಸಿ ಪ್ರಕಾಶಿಸುತ್ತಿದ್ದರು. ಪ್ರತಿಯೊಬ್ಬರೂ ತೇಜಸ್ವಿಗಳಾಗಿದ್ದರು.

**ಕದಾಚಿದ್ರತಿಷೇಣೋಭೂತ್ಕೃತಾಂತಮುಖಗಹ್ವರೇ ।**
**ಕೇನಾಪಿ ಹೇತುನಾ ಕಿಂ ವಾ ನ ಮೃತ್ಯೋರ್ಹೇತುತಾಂ ವ್ರಜೇತ್ ॥**

ಒಂದಾನೊಂದು ಕಾಲದಲ್ಲಿ ಏನೋ ಕಾರಣದಿಂದ ರತಿಷೇಣನು ಯಮನ ಮುಖವೆಂಬ ಗುಹೆಯಲ್ಲಿ ಹೊಕ್ಕನು–ಸತ್ತನು. ಮೃತ್ಯುವಿಗೆ ಯಾವುದು ತಾನೆ ಕಾರಣತ್ವವನ್ನು ಹೊಂದುವುದಿಲ್ಲ? ಯಾವುದಾದರೂ ಕಾರಣದಿಂದ ಮರಣವಾಗುವುದೆಂದು ಭಾವವು

**ಸಜಾನಿಂ ಜಯಸೇನಾಖ್ಯಂ ಸಲತಂ ವಾಮರದ್ರುಮವಮ್ ।**
**ಶೋಕಾಶನಿರಬಾಧಿಷ್ಟ ತನ್ಮೃತ್ಯುಘನನಿರ್ಗತಃ ॥ ೬೨ ॥**

ರತಿಷೇಣನ ಮರಣವೆಂಬ ಮೇಘದಿಂದ ಹೊರಟ ಶೋಕವೆಂಬ ಸಿಡಿಲು, ಲತಾಸಹಿತವಾದ ಕಲ್ಪವೃಕ್ಷವನ್ನು ಬಾಧಿಸುವಂತೆ, ಪತ್ನೀಸಹಿತನಾದ ಜಯಸೇನನನ್ನು ಬಾಧಿಸಿತು.

**ಪ್ರಲಯಃ ಪ್ರಾಪ್ತಕಾಲಸ್ತಾವಾಲಿಲಿಂಗ ಯಮಾಗ್ರಗಃ ।**
**ಲಬ್ಧರಂಧ್ರಾ ನ ತಿಷ್ಠೇಯುರಕೃತ್ವಾಪಕೃತಿಂ ದ್ವಿಷಃ ॥ ೬೩ ॥**

ಯಮನ ಅಗ್ರಗಾಮಿ–ದೂತನಾದ ಮೂರ್ಛೆಯು ಅವಕಾಶವನ್ನು ಪಡೆದು ಆ ರಾಜದಂಪತಿಗಳನ್ನು ಅಪ್ಪಿಕೊಂಡಿತು. ಮೂರ್ಛಿತರಾದರೆಂದು ಭಾವವು. ಅವಕಾಶವನ್ನು ಹೊಂದಿದ ಶತ್ರುಗಳು ಅಪಕಾರವನ್ನು ಮಾಡದೆ ಬಿಡಲಾರರು.

**ಭಿಷಕ್ಪ್ರಯೋಜಿತೋಪಾಯೈಃ ಶನೈಃ ಸಂಲಬ್ಧಚೇತನೌ ।**
**ಗುರುಣಾಗುರುಣೇವೈಷ ತೇನ ದುಃಖೇನ ಬೋಧಿತಃ ॥ ೬೪ ॥**

ವೈದ್ಯನು ಪ್ರಯೋಗಿಸಿದ ಉಪಾಯಗಳಿಂದ ಮೆಲ್ಲನೆ ಅವರು ಎಚ್ಚತ್ತುಕೊಂಡರು. ಈ ಜಯಸೇನನು, ಆಚಾರ್ಯನಿಂದ ಬೋಧಿಸಲ್ಪಟ್ಟವನಂತೆ ಆ ಮಹದ್ದುಃಖದಿಂದ ಬೋಧಿಸಲ್ಪಟ್ಟನು. ಆ ದುಃಖಾನುಭವದಿಂದ ಜಯಸೇನನಿಗೆ ವಿವೇಕೋದಯವಾಯಿತೆಂದು ಭಾವವು.

**ವಿಗ್ರಹಂ ತದ್ಗೃಹಂ ಮತ್ವಾ ನಿಗೃಹೀತುಂ ಕೃತಾಗ್ರಹಃ ।**
**ಹಂತುಂ ಯಮಂ ಸಮುದ್ಯುಕ್ತಸ್ತದ್ಧಿ ಯುಕ್ತಂ ಮನಸ್ವಿನಾಮ್ ॥ ೬೫ ॥**

**ಜೀರ್ಣಪರ್ಣವದಾಗಣ್ಯ ಪ್ರಾಣಪ್ರಾಂತಾನ್ ಪರಿಗ್ರಹಾನ್ ।**
**ರಾಜ್ಯಭೋಗೇ ನಿಯೋಜ್ಯಾರ್ಯಂ ಧೃತಿಷೇಣಂ ಧೃತಾಯುತಿಮ್ ॥**

**ಯಶೋಧರಗುರೂದ್ದಿಷ್ಟಂ ಶುದ್ಧಮಧ್ವಾನಮಾಪ ಸಃ ।**
**ನೃಪೈರ್ಮಹಾರುತಾಖ್ಯೇನ ಬಹುಭಿರ್ಮೈಥುನೇನ ಚ ॥ ೬೭ ॥**

ಆ ಜಯಸೇನನು ದೇಹವನ್ನು ದುಃಖಕ್ಕೆ ನಿವಾಸವನ್ನಾಗಿ ತಿಳಿದು ಅದನ್ನು ನಿಗ್ರಹಿಸುವುದಕ್ಕೆ ಆಗ್ರಹವನ್ನು ಮಾಡಿದವನಾಗಿ ಯಮನನ್ನು ಕೊಲ್ಲುವುದಕ್ಕೆ ಚೆನ್ನಾಗಿ ಉದ್ಯುಕ್ತನಾದನು. ಬುದ್ಧಿಶಾಲಿಗಳಿಗೆ ಅದು ಯುಕ್ತವೇ ಆಗಿದೆ. ಜೀರ್ಣವಾದ ಎಲೆಗಳನ್ನು ತಿಳಿಯುವಂತೆ ಪ್ರಾಣನಾಶಕಗಳಾದ ಪರಿಗ್ರಹಗಳನ್ನು ತಿಳಿದು ಧೈರ್ಯಧಾರಿಯೂ ಉತ್ತಮನೂ ಆದ ಧೃತಿಷೇಣನನ್ನು ರಾಜ್ಯಭೋಗದಲ್ಲಿರಿಸಿ ತಾನು ಅನೇಕ ರಾಜರುಗಳೊಡನೆಯೂ ಮಹಾರುತನೆಂಬ ಮೈದುನನೊಡನೆಯೂ ಯಶೋಧರಗುರುಗಳಿಂದ ಉಪದೇಶಿಸಲ್ಪಟ್ಟ ಶುದ್ಧವಾದ ಮಾರ್ಗವನ್ನು ಅಂದರೆ ಮುನಿದೀಕ್ಷೆಯನ್ನು ಪಡೆದನು.

**ಕಾಲಾಂತೇ ಕೃತಸನ್ನ್ಯಾಸವಿಧಿಃ ಕಲ್ಪೇಂತಿಮೇಚ್ಯುತೇ ।**
**ದೇವೋ ಮಹಾಬಲೋ ನಾಮ ಜಯಸೇನೋಜನಿಷ್ಟಸಃ ॥ ೬೮ ॥**

ಅವಸಾನಕಾಲದಲ್ಲಿ ಆ ಜಯಸೇನನು ಸನ್ನ್ಯಾಸವಿಧಿಯನ್ನು ಮಾಡಿ–ಸತ್ತು ಹದಿನಾರನೆಯದಾದ ಅಚ್ಯುತಕಲ್ಪದಲ್ಲಿ ಮಹಾಬಲನೆಂಬ ದೇವನಾಗಿ ಹುಟ್ಟಿದನು.

**ಮಹಾರುತೋಪಿ ತತ್ರೈವ ಮಣಿಕೇತುಃ ಸುರೋಜನಿ ।**
**ಆವಯೋರ್ಯೋವತೀರ್ಣಃ ಪ್ರಾಕ್ ತಸ್ಯಾನ್ಯೋ ಬೋಧಕೋ ಭವೇತ್ ॥ ೬೯ ॥**

**ಇತಿ ತತ್ರ ತಯೋರಾಸೀದನ್ಯೋನ್ಯಂ ಸಂಪ್ರಧಾರಣಮ್ ।**
**ತತ್ರ ದ್ವಾವಿಂಶತಿಂ ಸಾಗರೋಪಮಾಣ್ಯಾಮರಂ ಸುಖಮ್ ॥ ೭೦ ॥**

**ಅನುಭೂಯಾತ್ರ ಸಾಕೇತನಗರೇ ಕೌಸಲೇ ನೃಪಃ ।**
**ಸಮುದ್ರವಿಜಯಸ್ತಸ್ಯ ಸುಬಾಲಾ ರಮಣೀ ತಯೋಃ ॥ ೭೧ ॥**

**ಮಹಾಬಲೋಭವತ್ಸೂನುರಿಕ್ಷ್ವಾಕುಃ ಸಗರಾಹ್ವಯಃ ।**
**ಪೂರ್ವಾಣಾಂ ಸಪ್ತತಿರ್ಲಕ್ಷಾಸ್ತಸ್ಯಾಯುಃಪರಮಾವಧಿಃ ॥ ೭೨ ॥**

ಮಹಾರುತನೂ ಅದೇ ಕಲ್ಪದಲ್ಲಿ ಮಣಿಕೇತುವೆಂಬ ದೇವನಾಗಿ ಜನಿಸಿದನು. "ನಮ್ಮಿಬ್ಬರಲ್ಲಿ ಮೊದಲು ಭೂಲೋಕಕ್ಕಿಳಿಯುವವನಿಗೆ ಮತ್ತೊಬ್ಬನು ಧರ್ಮವನ್ನು ಬೋಧಿಸುವವನಾಗಬೇಕು" ಎಂದು ಆ ಸ್ವರ್ಗದಲ್ಲಿ ಮಹಾಬಲದೇವ ಮಣಿಕೇತುದೇವರೊಳಗೆ ನಿರ್ಣಯವಾಯಿತು. ಮಹಾಬಲದೇವನು ಆ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರೋಪಮವರ್ಷಾಯುಷ್ಯಪರ್ಯಂತ ದೇವಸುಖವನ್ನನುಭವಿಸಿ ಬಂದು ಈ ಜಂಬೂದ್ವೀಪದಲ್ಲಿ ಕೋಸಲದೇಶದಲ್ಲಿ ಅಯೋಧ್ಯಾ ನಗರದಲ್ಲಿ ಸಮುದ್ರವಿಜಯನೆಂಬ ರಾಜನಿಗೂ ಆತನ ಪತ್ನಿಯಾದ ಸುಬಾಲಾ ದೇವಿಗೂ ಇಕ್ಷ್ವಾಕುವಂಶೀಯನಾದ ಸಗರನೆಂಬ ಮಗನಾಗಿ ಜನಿಸಿದನು. ಅವನ ಆಯುಷ್ಯದ ಪರಮಾವಧಿಯು ಎಪ್ಪತ್ತು ಲಕ್ಷ ಪೂರ್ವ.

**ಚತುಃಶತಾನಿ ಪಂಚಾಶದುತ್ಸೇಧೋಪಿ ಧನೂಂಷಿ ಸಃ ।**
**ಸರ್ವಲಕ್ಷಣಸಂಪನ್ನಃ ಶ್ರೀಮಾಂಶ್ಚಾಮೀಕರಚ್ಛವಿಃ ॥ ೭೩ ॥**

ಅವನು ನಾಲ್ಕುನೂರೈವತ್ತು ಧನುಸ್ಸುಗಳಷ್ಟು ಶರೀರದ ಉತ್ಸೇಧವುಳ್ಳವನೂ ಸರ್ವಲಕ್ಷಣ ಸಂಪನ್ನನೂ ಶ್ರೀಮಂತನೂ ಬಂಗಾರದಂತೆ ಕಾಂತಿಯುಳ್ಳವನೂ ಆಗಿದ್ದನು.

**ಕುಮಾರತ್ವೇ ದಶಾಷ್ಟೌ ಚ ಲಕ್ಷಾಃ ಪೂರ್ವಾಣ್ಯಯುಸ್ತತಃ ।**
**ಮಹಾಮಂಡಲಿಕತ್ವಂ ಚ ತಸ್ಯ ತಾವತ್ತ್ವಮಾಮಿತಮ್ ॥ ೭೪ ॥**

ಅವನ ಕೌಮಾರಾವಸ್ಥೆಯಲ್ಲಿ ಹದಿನೆಂಟು ಲಕ್ಷ ಪೂರ್ವವರ್ಷಾಯುಷ್ಯವು ಕಳೆಯಿತು. ಬಳಿಕ ಹದಿನೆಂಟು ಲಕ್ಷಪೂರ್ವ ವರ್ಷಕಾಲದವರೆಗೆ ಮಹಾಮಂಡಲಿಕ ರಾಜನಾಗಿದ್ದನು.

**ತತೋದಪಾದಿ ಷಟ್ಖಂಡಭೂಚಕ್ರಾಕ್ರಣಮಕ್ಷಮಮ್ ।**
**ಚಕ್ರಂ ಕೀರ್ತಿಶ್ಚ ದಿಕ್ಚಕ್ರಮಾಕ್ರಾಮಂತ್ಯಾತ್ತವಿಕ್ರಮಾ ॥ ೭೫ ॥**

ಅನಂತರದಲ್ಲಿ ಅವನಿಗೆ ಷಟ್ಖಂಡಭೂಮಂಡಲವನ್ನು ಆಕ್ರಮಿಸುವುದರಲ್ಲಿ ಸಮರ್ಥವಾದ ಚಕ್ರವೂ ಅವನ ಪರಾಕ್ರಮಜನ್ಯವಾದ ಮತ್ತು ದಿಕ್ಚಕ್ರವನ್ನು ಆಕ್ರಮಿಸುವ ಕೀರ್ತಿಯೂ ಉದ್ಭವಿಸಿದುವು.

**ಆದ್ಯಚಕ್ರಿವದೇಷೋಪಿ ಕೃತ್ವಾ ದಿಗ್ವಿಜಯಂ ಚಿರಮ್ ।**
**ಗೃಹ್ಣನ್ ತತ್ಸಾರವಸ್ತೂನಿ ಸರ್ವಾನ್ ಸ್ವಾಜ್ಞಾಮಜೀಗ್ರಹತ್ ॥ ೭೬ ॥**

ಮೊದಲನೆಯ–ಭರತಚಕ್ರವರ್ತಿಯಂತೆ ಈ ಸಗರನೂ ಬಹುಕಾಲದವರೆಗೆ ದಿಗ್ವಿಜಯವನ್ನು ಮಾಡಿ ಅಲ್ಲಿಯ ಸಾರವಸ್ತುಗಳನ್ನು ತೆಗೆದುಕೊಂಡು ಎಲ್ಲರನ್ನು ತನ್ನ ಆಜ್ಞಾನುವರ್ತಿಗಳನ್ನಾಗಿ ಮಾಡಿದನು.

**ತತೋ ನಿವೃತ್ಯ ಸಾಕೇತಂ ಸಾಮ್ರಾಜ್ಯಶ್ರೀನಿಕೇತನಮ್ ।**
**ಭೋಗಾನ್ ದಶಾಂಗಾನ್ನಿರ್ಭಂಗಂ ನಿರ್ವಿಶನ್ನಾವಸತ್ಸುಖಮ್ ॥ ೭೭ ॥**

ಬಳಿಕ ಸಾಮ್ರಾಜ್ಯಲಕ್ಷ್ಮೀನಿಲಯವಾದ ಅಯೋಧ್ಯಾನಗರಕ್ಕೆ ಹಿಂದಿರುಗಿ ಬಂದು ದಶಾಂಗಭೋಗಗಳನ್ನು ಭಂಗವಿಲ್ಲದೆ ಅನುಭವಿಸುತ್ತ ಸುಖವಾಗಿದ್ದನು.

**ತಸ್ಯ ಷಷ್ಟಿಸಹಸ್ರಾಣಿ ಪುತ್ರಾಣಾಂ ಕೃತಿನೋಭವನ್ ।**
**ತದಾಕಾರೇಣ ವಾ ತಸ್ಯ ವೇಧಸಾ ವ್ಯಂಜಿತಾ ಗುಣಾಃ ॥ ೭೮ ॥**

ಪುಣ್ಯಶಾಲಿಯಾದ ಆ ಸಗರನಿಗೆ ಅರುವತ್ತು ಸಾವಿರಮಂದಿ ಪುತ್ರರಾದರು. ಬ್ರಹ್ಮನಿಂದ ಸಗರನ ಗುಣಗಳು ಆ ಪುತ್ರರ ಆಕಾರದಿಂದ ಪ್ರಕಟಮಾಡಲ್ಪಟ್ಟಂತಿದ್ದರು.

**ತಸ್ಮಿನ್ ಸಿದ್ಧವನೇ ಶ್ರೀನಾಮ್ನಶ್ಚತುರ್ಮುಖಯೋಗಿನಃ ।**
**ಅನ್ಯದಾಖಿಲಭಾಸ್ಯಾಸೀತ್ಕೇವಲಾವಗಮಸ್ತದಾ ॥ ೭೯ ॥**

**ತತ್ಕಲ್ಯಾಣಸ್ಯ ದೇವೇಂದ್ರೈರ್ಮಣಿಕೇತುಃ ಸಹಾಗತಃ ।**
**ಮಹಾಬಲೋಜನಿ ಕ್ವೇತಿ ಸೋಪಯೋಗೋವಧಿತ್ವಿಷಾ ॥ ೮೦ ॥**

ಆ ಅಯೋಧ್ಯಾನಗರದಲ್ಲಿ ಸಿದ್ಧವನದಲ್ಲಿ ಚತುರ್ಮುಖಪ್ರತಿಮಾಯೋಗಧಾರಿಯಾದ ಶ್ರೀಧರಮುನಿಗೆ ಒಂದು ಕಾಲದಲ್ಲಿ ಸಕಲಪದಾರ್ಥಗಳನ್ನು ಪ್ರಕಾಶಪಡಿಸುವ ಕೇವಲಜ್ಞಾನವುಂಟಾಯಿತು. ಆಗ ಆ ಕೇವಲಜ್ಞಾನಕಲ್ಯಾಣಕ್ಕೆ ದೇವೇಂದ್ರರೊಡನೆ ಮಣಿಕೇತುದೇವನು ಬಂದನು. ಅವನು ಅವಧಿಜ್ಞಾನವೆಂಬ ತೇಜಸ್ಸನ್ನು ಉಪಯೋಗಿಸಿ "ಮಹಾಬಲದೇವನು ಎಲ್ಲಿ ಜನಿಸಿದನು ?" ಎಂದು ನೋಡಿದನು.

**ಸಗರಶ್ಚಕ್ರವರ್ತ್ಯೇಷ ಶೇಷೈಃ ಪುಣ್ಯೈರಭೂದಸೌ ।**
**ಇತಿ ಬುಧ್ವಾ ವಿಶಾಂ ನಾಥಮುಪಗಮ್ಯೇದಮಬ್ರವೀತ್ ॥ ೮೧ ॥**

**ಸ್ಮರಸ್ಯಾವಾಂ ವದಿಷ್ಯಾವಸ್ತತ್ತ್ವಂ ಕಲ್ಪೇಚ್ಯುತಾಹ್ವಯೇ ।**
**ಪ್ರಾಙ್ಮಹೀಂ ಗತಮತ್ರಸ್ಥೋ ಬೋಧಯತ್ವಾವಯೋರಿತಿ ॥ ೮೨ ॥**

**ಮನುಷ್ಯಜನ್ಮನಃ ಸಾರಂ ಸಾಮ್ರಾಜ್ಯಂ ಚಿರಮನ್ವಭೂಃ ।**
**ಕಿಂ ಭೋಗೈರ್ಭೋಗಿಭೋಗಾಭೈರ್ಭೋ ಭವ್ಯೈಭಿರ್ಭಯಾವಹೈಃ ॥**

ಇವನು ಮಹಾಬಲದೇವನು. ಸಶೇಷವಾದ ಪುಣ್ಯಗಳಿಂದ ಈ ಸಗರಚಕ್ರವರ್ತಿಯಾಗಿದ್ದಾನೆ" ಎಂದು ತಿಳಿದು ಆ ಸಗರಚಕ್ರವರ್ತಿಯ ಹತ್ತಿರಕ್ಕೆ ಹೋಗಿ "ನಮ್ಮಿಬ್ಬರಲ್ಲಿ ಮೊದಲು ಭೂಮಿಯನ್ನು ಹೊಂದಿದವನಿಗೆ ಇಲ್ಲಿರುವವನು ಬೋಧಿಸಬೇಕೆಂದು ಅಚ್ಯುತಕಲ್ಪದಲ್ಲಿ ನಾವಿಬ್ಬರು ಮಾತನಾಡಿಕೊಂಡಿದ್ದೆವು. ಅದು ನಿನಗೆ ನೆನಪಿದೆಯೋ ?ಎಲೈ ಭವ್ಯನೆ !ಮನುಷ್ಯಜನ್ಮದ ಸಾರವಾದ ಸಾಮ್ರಾಜ್ಯವನ್ನು ಬಹುಕಾಲದವರೆಗೆ ಅನುಭವಿಸಿದೆ. ಭಯವನ್ನುಂಟುಮಾಡುವ ಹಾವಿನ ಹೆಡೆಗೆ ಸಮಾನವಾದ ಈ ಭೋಗಗಳಿಂದ ಪ್ರಯೋಜನವೇನು ?

**ಉತ್ತಿಷ್ಠಸ್ವವಿಭೋ ಮುಕ್ತಾವಿತ್ಯಸ್ಯ ವಿಮುಖೋಭವತ್ ।**
**ಚಕ್ರವರ್ತೀ ಸ ಸಿದ್ಧ್ಯಧ್ವಾ ಕಾಲಲಬ್ಧ್ಯಾ ವಿನಾ ಕುತಃ ॥ ೮೪ ॥**

ಎಲೈ ಪ್ರಭುವೆ ! ಮುಕ್ತಿಯ ವಿಷಯದಲ್ಲಿ ಪ್ರಯತ್ನಪರನಾಗು" ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ಸಗರಚಕ್ರವರ್ತಿಯು ಮಣಿಕೇತುವಿಗೆ ವಿಮುಖನಾದನು. ಕಾಲಲಬ್ಧಿಯ ಹೊರತು ಮೋಕ್ಷಮಾರ್ಗವು ಎಲ್ಲಿ ದೊರೆಯುವುದು ? ಸಗರನು ಮಣಿಕೇತುವಿನ ಕಡೆಯಿಂದ ಮುಖವನ್ನು ತಿರಿಗಿಸಿದನೆಂದೂ ಕಾಲವು ಬಾರದೆ ಮೋಕ್ಷಮಾರ್ಗವು ದೊರೆಯುವುದಿಲ್ಲವೆಂದೂ ಭಾವವು.

**ಜ್ಞಾತ್ವಾ ತತ್ತಸ್ಯವೈಮುಖ್ಯಮನ್ಯಾಲಾಪೈರ್ನ್ಯವರ್ತಯತ್ ।**
**ಹಿತೇನಾಪಿ ನ ಕುರ್ವಂತಿ ವಿಪ್ರಿಯಂ ಕ್ರಮವೇದಿನಃ ॥ ೮೫ ॥**

ಸಗರಚಕ್ರವರ್ತಿಯ ಆ ವಿಮುಖತ್ವವನ್ನು ತಿಳಿದು ಮಣಿಕೇತುದೇವನು ಬೇರೆ ಮಾತುಗಳಿಂದ ಅವನನ್ನು ತಿರುಗಿಸಿದನು. ಕ್ರಮವನ್ನು ತಿಳಿದವರು ಹಿತವಚನದಿಂದಲೂ ಅಪ್ರಿಯವನ್ನು ಮಾಡುವುದಿಲ್ಲ.

**ಧಿಗ್ಭೋಗಾನೀದೃಶಾಂಶ್ಚೋಕ್ತ್ವೇರೇವಂ ಚ್ಯಾವಯತೋ ಘಟಾನ್ ।**
**ದುಸ್ತ್ಯಜಾನಿತಿ ನಿರ್ವಿಣ್ಣೋ ಮಣಿಕೇತುರಗಾದ್ದಿವಮ್ ॥ ೮೬ ॥**

"ಕೊಟ್ಟಮಾತಿನಿಂದ ಈ ರೀತಿಯಾಗಿ ತಪ್ಪಿಸುತ್ತಿರುವುವೂ ದುರ್ಘಟವೂ ಕಷ್ಟದಿಂದ ಬಿಡಲ್ಪಡತಕ್ಕುವೂ ಆದ ಇಂತಹ ಭೋಗಗಳನ್ನು ಸುಡು" ಈ ಪ್ರಕಾರವಾಗಿ ವಿರಕ್ತನಾದ ಮಣಿಕೇತುವು ಸ್ವರ್ಗಕ್ಕೆ ಹೊರಟುಹೋದನು.

**ಉಪಾಯಮೇಕಮಾಲೋಚ್ಯ ತಪೋ ಗ್ರಾಹಯಿತುಂ ಪುನಃ ।**
**ಮಣಿಕೇತುರ್ಮಹೀಪಾಲಮವತೀರ್ಯ ಮಹೀತಲಮ್ ॥ ೮೭ ॥**

**ಮಾನುಷ್ಯಲಕ್ಷಣೈರ್ಲಕ್ಷ್ಯಃ ಕಾಂತ್ಯೇಂದುಂ ಭಾನುಮಾಭಯಾ ।**
**ವಾಮೇನ ವಪುಷಾ ಕಾಮಂ ನಿರ್ಜಿತ್ಯ ವಿಜಿತೇಂದ್ರಿಯಃ ॥ ೮೮ ॥**

**ಚಾರಣತ್ವಂ ಸಮಾಪಾದ್ಯ ಭಾವಯನ್ ಸಂಯಮಂ ಪರಮ್ ।**
**ತಸ್ಥೌ ಜಿನೇಂದ್ರಾನ್ ವಂದಿತ್ವಾ ಸಗರಸ್ಯ ಜಿನಾಲಯೇ ॥ ೮೯ ॥**

ಮಣಿಕೇತುದೇವನು ಸಗರಚಕ್ರವರ್ತಿಯಿಂದ ತಪಸ್ಸನ್ನು ಗ್ರಹಣಮಾಡಿಸುವುದಕ್ಕೆ ಮತ್ತೊಂದು ಉಪಾಯವನ್ನು ಯೋಚಿಸಿ ಭೂಮಿಗಿಳಿದು ಮನುಷ್ಯಸಂಬಂಧಿಯಾದ ಲಕ್ಷಣಗಳಿಂದ ಕೂಡಿರುವವನೂ ಕಾಂತಿಯಿಂದ ಚಂದ್ರನನ್ನೂ ಹೋಲಿಕೆಯಿಂದ ಸೂರ್ಯನನ್ನೂ ಮನೋಹರವಾದ ಶರೀರದಿಂದ ಕಾಮನನ್ನೂ ಜಯಿ:ಽ ಜಿತೇಂದ್ರಿಯನೂ ಚಾರಣಮುನಿವೇಷವನ್ನು ಹೊಂದಿ ಉತ್ಕೃಷ್ಟವಾದ ಸಂಯಮವನ್ನು ಭಾವಿಸುವವನೂ ಆಗಿ ಸಗರಚಕ್ರವರ್ತಿಯ ಜಿನಾಲಯದಲ್ಲಿ ಜಿನೇಂದ್ರರನ್ನು ವಂದಿಸಿ ಅಲ್ಲಿದ್ದನು.

**ದೃಷ್ಟ್ವಾ ತಂ ವಿಸ್ಮಯಾಪನ್ನೋ ವಯಸ್ಯಸ್ಮಿನ್ನಿದಂ ಕುತಃ ।**
**ತಪಸ್ತವೇತಿ ಪಪ್ರಚ್ಛ ನೃಪಃ ಸೋಪೀತ್ಯಥಾಬ್ರವಿತ್ ॥ ೯೦ ॥**

**ಯೌವನಂ ಜರಸಾ ಗ್ರಾಸ್ಯಂ ಗಲತ್ಯಾಯುಃ ಪ್ರತಿಕ್ಷಣಮ್ ।**
**ಹೇಯಃ ಕಾಯೋಶುಚಿಃ ಪಾಪೀ ದುರ್ಧರೋ ದುಃಖಭಾಜನಮ್ ॥**

**ಸರ್ವದಾನಿಷ್ಟಸಂಯೋಗೋ ವಿಯೋಗಶ್ಚೇಷ್ಟವಸ್ತುಭಿಃ ।**
**ಗತೋನಾದಿರ್ಭವಾವರ್ತಃ ಪುನಶ್ಚಾನಂತ ಏವ ಸಃ ॥ ೯೨ ॥**

**ಕರ್ಮಾರಿಭಿರಿದಂ ಸರ್ವಂ ದಗ್ಧ್ವಾ ತಾವತ್ತಪೋಗ್ನಿನಾ ।**
**ಯಾಸ್ಯಾಮ್ಯನಶ್ವರೀಂ ಶುದ್ಧಿಂ ಯಥಾಹಂ ಕನಕೋಪಲಃ ॥ ೯೩ ॥**

ಅವನನ್ನು ನೋಡಿ ಆಶ್ಚರ್ಯಯುಕ್ತನಾದ ಸಗರಚಕ್ರವರ್ತಿಯು "ಈ ವಯಸ್ಸಿನಲ್ಲಿ ನಿನಗೆ ಈ ತಪಸ್ಸು ಯಾವ ಕಾರಣದಿಂದ ?" ಎಂದು ಪ್ರಶ್ನೆ ಮಾಡಿದನು. ಬಳಿಕ ಆ ಮಣಿಕೇತುವೂ "ಯೌವನವು ಮುಪ್ಪಿಗೆ ತುತ್ತಾಗಿದೆ. ಆಯುಷ್ಯವು ಪ್ರತಿಕ್ಷಣದಲ್ಲಿ ಕಳೆದುಹೋಗುತ್ತಿದೆ. ಹೇಯವಾದ ಕಾಯವು ಅಶುಚಿಯೂ ಪಾಪಕರವೂ ಕಷ್ಟದಿಂದ ಧರಿಸಲ್ಪಡತಕ್ಕುದೂ ದುಃಖಕ್ಕೆ ಪಾತ್ರವೂ ಆಗಿದೆ. ಯಾವಾಗಲೂ ಅನಿಷ್ಟವಸ್ತುಗಳ ಸಂಯೋಗವಾಗುವುದು. ಇಷ್ಟವಸ್ತುಗಳಿಂದ ವಿಯೋಗವಾಗುವುದು. ಭವವೆಂಬ ಸುಳಿಯು ಅನಾದಿಯಾಗಿ ಕಳೆದುಹೋಗಿದೆ. ಅದೇ ಮತ್ತೆ ಅನಂತವಾಗಿದೆ. ಕರ್ಮಶತ್ರುಗಳಿಂದ ವ್ಯಾಪ್ತವಾದ ಇದೆಲ್ಲವನ್ನೂ ತಪಸ್ಸೆಂಬ ಬೆಂಕಿಯಿಂದ ಸುಟ್ಟು, ಸುವರ್ಣಶಿಲೆಯಂತೆ, ನಾನು ನಾಶರಹಿತವಾದ ಶುದ್ಧಿಯನ್ನು ಹೊಂದುವೆನು" ಎಂದು ಹೇಳಿದನು.

**ಇತ್ಯುಕ್ತಸಂಸೃತೇರ್ಭೂಪೋ ವೇಪಮಾನೋಽಪಿ ನಾಪತತ್ ।**
**ಪಂಥಾನಂ ನಿರ್ವೃತೇರ್ಬದ್ಧಃ ಪುತ್ರಶೃಂಖಲಯಾ ದೃಢಮ್ ॥ ೯೪ ॥**

ಈ ಪ್ರಕಾರವಾಗಿ ಹೇಳಲ್ಪಟ್ಟಿರುವ ಸಂಸಾರದಿಂದ ಸಗರಚಕ್ರವರ್ತಿಯು ಕಂಪಿತನಾದರೂ ಪುತ್ರರೆಂಬ ಸರಪಣಿಯಿಂದ ಬಲವಾಗಿ ಕಟ್ಟಲ್ಪಟ್ಟವನಾಗಿ ಮೋಕ್ಷದ ಮಾರ್ಗವನ್ನು ಹೊಂದಲಿಲ್ಲ.

**ನಾತಿ ಹ್ರಸ್ವೋಽಸ್ಯ ಸಂಸಾರ ಇತ್ಯಯಾತ್ಸ ವಿಷಾದವಾನ್ ।**
**ಉಪಾಯೋ ನಿಷ್ಫಲಃ ಕಸ್ಯ ನ ವಿಷಾದಾಯ ಧೀಮತಃ ॥ ೯೫ ॥**

''ಇವನ ಸಂಸಾರವು ಬಹಳ ಹ್ರಸ್ವವಾಗಿ–ಗಿಡ್ಡಾಗಿಲ್ಲ'' ಎಂದು ಆ ಮಣಿಕೇತುದೇವನು ವಿಷಾದವುಳ್ಳವನಾಗಿ ಹೊರಟುಹೋದನು. ಉಪಾಯವು ನಿಷ್ಫಲವಾದರೆ ಯಾವ ವಿವೇಕಿಗೆ ತಾನೆ ವಿಷಾದಕ್ಕೆ ಕಾರಣವಾಗುವುದಿಲ್ಲ ?

**ವಶೀಕೃತೇನ ಸಾಮ್ರಾಜ್ಯತುಚ್ಛಲಕ್ಷ್ಮ್ಯಾ ನಿಧೀಶಿನಾ ।**
**ವಿಸ್ಮೃತಾಚ್ಯುತಲಕ್ಷ್ಮೀಶ್ಚ ಕಾಮಿನಾಂ ಕ್ವಾಂತರಜ್ಞತಾ ॥ ೯೬ ॥**

ತುಚ್ಛವಾದ ಸಾಮ್ರಾಜ್ಯಸಂಪತ್ತಿಯಿಂದ ವಶೀಕೃತನಾದ ನಿಧೀಶ್ವರ– ಚಕ್ರವರ್ತಿಯು ಅಚ್ಯುತಸ್ವರ್ಗದ ಸಂಪತ್ತಿಯನ್ನೂ ಮರೆತನು. ಕಾಮುಕರಿಗೆ ತಾರತಮ್ಯ ಜ್ಞಾನವೆಲ್ಲಿ ಬರುವುದು ?

**ಲಾಭೋ ಲಾಭೇಷು ಪುತ್ರಾಣಾಂ ಲಾಭಃ ಸ್ವರ್ಗಾಪವರ್ಗಯೋಃ ।**
**ಲಕ್ಷ್ಮ್ಯೋರ್ನಾಸಾವಿತಿ ಸ್ಮೃತ್ವಾ ಮನ್ಯೇಽಸ್ಯಾಂ ಸೋಽನುಷಕ್ತವಾನ್ ॥ ೯೭ ॥**

ಆ ಈ ಸಗರಚಕ್ರವರ್ತಿಯು ಪುತ್ರರ ಪ್ರಾಪ್ತಿಯು ಲಾಭವೆಂದೂ ಸ್ವರ್ಗ ಮೋಕ್ಷಲಕ್ಷ್ಮಿಯರ ಪ್ರಾಪ್ತಿಯು ಲಾಭವಲ್ಲವೆಂದೂ ಯೋಚಿಸಿ ಈ ಸಾಮ್ರಾಜ್ಯ ಲಕ್ಷ್ಮಿಯಲ್ಲಿ ಆಸಕ್ತನಾಗಿದ್ದಾನೆಂದು ತಿಳಿಯುತ್ತೇನೆ.

**ಕದಾಚಿತ್ತೇ ಸುತಾ ದೃಪ್ತಾಃ ಸಿಂಹಪೋತಾ ಇವೋದ್ಧತಾಃ ।**
**ಇತಿ ವಿಜ್ಞಾಪಯಾಮಾಸುಃ ಸಭಾಸ್ಥಂ ಚಕ್ರವರ್ತಿನಮ್ ॥ ೯೮ ॥**

ಒಂದಾನೊಂದು ಕಾಲದಲ್ಲಿ ಸಿಂಹದ ಮರಿಗಳಂತೆ ಸೊಕ್ಕಿದ ಆ ಮಕ್ಕಳು ಸಭೆಯಲ್ಲಿದ್ದ ಸಗರಚಕ್ರವರ್ತಿಯ ಬಳಿಗೆ ಹೋಗಿ ಮುಂದೆ ಹೇಳುವಂತೆ ವಿಜ್ಞಾಪಿಸಿಕೊಂಡರು.

**ಯದಿ ಕ್ಷತ್ರಿಯಪುತ್ರಾಣಾಂ ಶೌರ್ಯಸಾಹಸಶಾಲಿನಾಮ್ ।**
**ಯೌವನಂ ನ ಪಿತುಃ ಪ್ರೈಷೇ ದುಃಸಾಧ್ಯೇ ಸಾಧಿತೇಪ್ಸಿತಮ್ ॥ ೯೯ ॥**

**ಕಿಂ ತೇನ ಜನ್ಮನಾ ತೇನ ಜನ್ಮಿನೋ ಜೀವಿತೇನ ವಾ ।**
**ನನು ತತ್ಸರ್ವಸಾಮಾನ್ಯಂ ಜನ್ಮಜೀವಿತಯೋರ್ದ್ವಯಮ್ ॥ ೧೦೦ ॥**

**ತದಾದಿಶ ದಿಶಾಮೀಶ ಪ್ರೈಷಂ ನಃ ಸಾಹಸಾವಹಮ್ ।**
**ಪಾತ್ರೇ ಸಮಿತತಾದೈನ್ಯಂ ಯೇನೈನೋ ವಾ ನಿರಸ್ಯತೇ ॥ ೧೦೧ ॥**

''ಶೌರ್ಯದಿಂದಲೂ ಸಾಹಸದಿಂದಲೂ ಶೋಭಿಸುವ ಕ್ಷತ್ರಿಯಪುತ್ರರ ಯೌವನವು ತಂದೆಯ ಕಷ್ಟಸಾಧ್ಯವಾದ ಆಜ್ಞೆಯಲ್ಲಿ ಇಷ್ಟಾರ್ಥವನ್ನು ಸಾಧಿಸದಿದ್ದರೆ ಆ ಜನ್ಮದಿಂದೇನು ಪ್ರಯೋಜನ ? ಆ ಜನನಮರಣಗಳೆರಡು ಸರ್ವಪ್ರಾಣಿಗಳಿಗೂ ಸಾಧಾರಣವಾದುದಲ್ಲವೇ ? ಆದುದರಿಂದ ದಿಕ್ಕುಗಳಿಗೆ ಪ್ರಭುವಾದ–ಸ್ವಾಮಿಯೇ ! ನಮ್ಮಗಳಿಗೆ ಸಾಹಸವನ್ನುಂಟುಮಾಡುವ ಕೆಲಸವನ್ನು ಆಜ್ಞಾಪಿಸು. ಅದರಿಂದ ನಮಗೆ ಭೋಜನಪಾತ್ರದಲ್ಲಿ ಪ್ರಾಪ್ತವಾಗಿರುವ ದೈನ್ಯವು ಅಥವಾ ಪಾಪವು ದೂರವಾಗುವುದು. ಕೆಲಸವಿಲ್ಲದೆ ಊಟಮಾಡುವ ದೀನತೆಯೂ ದೋಷವೂ ದೂರವಾಗುವುವೆಂದು ಭಾವವು.''

**ತದಾಕರ್ಣ್ಯ ಮುದಾ ಪುತ್ರಾಃ ಸರ್ವಂ ಚಕ್ರೇಣ ಸಾಧಿತಮ್ ।**
**ಭೋಃ ಕಿಂ ತದ್ಯನ್ನ ಮೇ ಸಿದ್ಧಂ ಮಧ್ಯೇ ಹಿಮಸಮುದ್ರಯೋಃ ॥**

ಆ ಮಾತನ್ನು ಕೇಳಿ ಸಗರಚಕ್ರವರ್ತಿಯು ಸಂತೋಷದಿಂದ ''ಎಲೈ ಪುತ್ರರೆ ! ಎಲ್ಲವೂ ಚಕ್ರದಿಂದ ಸಾಧಿಸಲ್ಪಟ್ಟಿದೆ. ಹಿಮವತ್ಪರ್ವತಕ್ಕೂ ಸಮುದ್ರಕ್ಕೂ ಮಧ್ಯದಲ್ಲಿ ನನಗೆ ಸಿದ್ಧವಾಗದಿರುವುದಾವುದು ?

**ಏಷ ಏವ ಭವತ್ಪ್ರೇಷೋ ರಾಜ್ಯಲಕ್ಷ್ಮೀಮಿಮಾಂ ಮಮ ।**
**ಸಂಭೂಯ ಭೂಯಸೀಂ ಯೂಯಮನುಭುಙ್ಧ್ವಂ**
**ಯಥೋಚಿತಮ್ ॥ ೧೦೩ ॥**

ಅಧಿಕವಾದ ನನ್ನ ಈ ರಾಜ್ಯಸಂಪತ್ತಿಯನ್ನು ನೀವೆಲ್ಲರೂ ಸೇರಿ ಯಥೋಚಿತವಾಗಿ ಅನುಭವಿಸಿರಿ. ಇದೇ ನಿಮ್ಮಗಳ ಸೇವೆ.''

**ಇತಿ ಭೂಯೋ ನೃಪೇಂದ್ರೇಣ ತೇನ ತೇ ಸುನಿವಾರಿತಾಃ ।**
**ಜೋಷಮಾಸ್ಥುರ್ವಿಧೇಯಾ ಹಿ ಪಿತೄಣಾಂ ಶುದ್ಧವಂಶಜಾಃ ॥ ೧೦೪ ॥**

ಈ ಪ್ರಕಾರವಾಗಿ ಮತ್ತೆ ಮತ್ತೆ ಹೇಳಿ ಆ ಸಗರಚಕ್ರವರ್ತಿಯು ಮಕ್ಕಳನ್ನು ತಡೆದನು. ಅವರು ಸುಮ್ಮನಾದರು. ಶುದ್ಧವಂಶಜರು ತಂದೆಗಳಿಗೆ ವಿಧೇಯರಾಗಿಯೇ ಇರುತ್ತಾರೆ.

**ತೇನ್ಯೇದ್ಯುಃ ಪುನರಾಸಾದ್ಯ ನೃಪಂ ವ್ಯಜ್ಞಾಪಯನ್ನಿದಮ್ ।**
**ನ ಭುಂಜ್ಮಹೇ ನ ಚೇತ್ಪ್ರೈಷ ಇತ್ಯಭ್ಯರ್ಣಾತ್ಮಶುದ್ಧಯಃ ॥ ೧೦೫ ॥**

ಸಮೀಪಿಸಿದ ಆತ್ಮಶುದ್ಧಿಯುಳ್ಳ ಆ ಪುತ್ರರು ಮತ್ತೊಂದು ದಿವಸ ಮತ್ತೆ ಸಗರಚಕ್ರವರ್ತಿಯನ್ನು ಹೊಂದಿ ''ಸೇವೆಯಿಲ್ಲದಿದ್ದರೆ ನಾವು ಭೋಜನ ಮಾಡುವುದಿಲ್ಲ'' ಎಂದು ವಿಜ್ಞಾಪಿಸಿಕೊಂಡರು.

**ತಚ್ಛ್ರುತ್ವೈಷಾಂ ಸ ಕಃ ಪ್ರೈಷ ಇತಿ ಚಿಂತಯತಾ ಮನಾಕ್ ।**
**ನನ್ವಸ್ತಿ ಕಾರ್ಯಶೇಷೋಽಯಂ ಧರ್ಮ್ಯ ಇತ್ಯಾತ್ತಹೃಷ್ಟಿನಾ ॥ ೧೦೬ ॥**

**ರಾಜ್ಞಾಪ್ಯಾಜ್ಞಾಪಿತಾ ಯೂಯಂ ಕೈಲಾಸೇ ಭರತೇಶಿನಾ ।**
**ಗೃಹಾಃ ಕೃತಾ ಮಹಾರತ್ನೈಶ್ಚತುರ್ವಿಂಶತಿರರ್ಹತಾಮ್ ॥ ೧೦೭ ॥**

**ತೇಷಾಂ ಗಂಗಾಂ ಪ್ರಕುರ್ಯಾತ ಪರಿಖಾಂ ಪರಿತೋ ಗಿರಿಮ್ ।**
**ಇತಿ ತೇಽಪಿ ತಥಾಕುರ್ವನ್ ದಂಡರತ್ನೇನ ಸತ್ವರಮ್ ॥ ೧೦೮ ॥**

ಆ ಮಾತನ್ನು ಕೇಳಿ ''ಇವರಿಗೆ ಅದಾವುದು ಸೇವೆ ?'' ಎಂದು ಸ್ವಲ್ಪ ಚಿಂತಿಸುವವನೂ ''ಧರ್ಮಸಂಬಂಧವಾದ ಈ ಕಾರ್ಯವು ಉಳಿದಿದೆ'' ಎಂದು ಸಂತೋಷವನ್ನು ಹೊಂದಿದವನೂ ಆದ ಸಗರಚಕ್ರವರ್ತಿಯು ''ಕೈಲಾಸಪರ್ವತದಲ್ಲಿ ಭರತೇಶ್ವರನು ಇಪ್ಪತ್ತುನಾಲ್ಕುಮಂದಿ ಅರ್ಹಂತರ ಮಂದಿರಗಳನ್ನು ಮಾಡಿಸಿದ್ದಾನೆ. ನೀವುಗಳು ಆ ಮಂದಿರಗಳಿಗೆ ಪರ್ವತದ ಸುತ್ತಲೂ ಗಂಗಾನದಿಯನ್ನು ಕಂದಕವನ್ನಾಗಿ ಮಾಡಿರಿ'' ಎಂದು ಆಜ್ಞೆಮಾಡಿದನು. ಆ ಪುತ್ರರೂ ದಂಡರತ್ನದಿಂದ ಶೀಘ್ರವಾಗಿ ಹಾಗೆ–ಕಂದಕವನ್ನು ಮಾಡಿದರು.

**ಮಣಿಕೇತುಃ ಪುನಶ್ಚಾಸ್ಯ ಸ್ನೇಹಸೌಜನ್ಯಚೋದಿತಃ ।**
**ಸಚಿವೈರ್ಬೋಧನೋಪಾಯಂ ಸ ಸಹೈವ ವಿಚಿಂತಯನ್ ॥ ೧೦೯ ॥**

ಮಣಿಕೇತುದೇವನು ಈ ಸಗರಚಕ್ರವರ್ತಿಯ ಸ್ನೇಹದಿಂದಲೂ ಸೌಜನ್ಯದಿಂದಲೂ ಮತ್ತೆ ಪ್ರೇರಿತನಾಗಿ ಅವನಿಗೆ ಬೋಧಿಸುವ ಉಪಾಯವನ್ನು ತನ್ನ ಮಂತ್ರಿಗಳೊಡನೆ ಪರ್ಯಾಲೋಚಿಸಿದನು.

**ಕಿಂಚಿದ್ಧಿತಂ ಪ್ರಿಯಂ ಚೋಕ್ತಂ ಕಿಂಚಿಚ್ಚ ಹಿತಮಪ್ರಿಯಮ್ ।**
**ಕಿಂಚಿತ್ಪ್ರಿಯಂ ಸದಹಿತಂ ಪರಂ ಚಾಹಿತಮಪ್ರಿಯಮ್ ॥ ೧೧೦ ॥**

''ಕೆಲವು ಮಾತು ಹಿತವೂ ಪ್ರಿಯವೂ ಆಗಿರುವುದು. ಕೆಲವು ಮಾತು ಹಿತವೂ ಅಪ್ರಿಯವೂ ಆಗಿರುವುದು. ಇನ್ನು ಕೆಲವು ಮಾತು ಪ್ರಿಯವಾಗಿದ್ದು ಅಹಿತವಾಗಿರುವುದು. ಮತ್ತೆ ಕೆಲವು ಮಾತು ಅಹಿತವೂ ಅಪ್ರಿಯವೂ ಆಗಿರುವುದು.

**ಅಂತ್ಯದ್ವಯಂ ಪರಿತ್ಯಜ್ಯ ಶೇಷಾಭ್ಯಾಂ ಭಾಷ್ಯತಾಂ ಹಿತಮ್ ।**
**ಇತಿ ನಿಶ್ಚಿತ್ಯ ಕೈಲಾಸಂ ತದ್ಯೈವಾಗಮ್ಯ ದರ್ಪಿಣಃ ॥ ೧೧೧ ॥**

**ಕುಮಾರಾನ್ ಭಸ್ಮರಾಶಿಂ ವಾ ವ್ಯಧಾತ್ಕ್ರೂರೋರಗಾಕೃತಿಃ ।**
**ಕುರ್ವಂತಿ ಸುಹೃದೋಗತ್ವಾ ಹಿತಂ ಚೇದಪ್ರಿಯಂ ಚ ತತ್ ॥ ೧೧೨ ॥**

ಆ ನಾಲ್ಕುವಿಧವಾದ ಮಾತುಗಳಲ್ಲಿ ಕೊನೆಯ ಎರಡು ಮಾತುಗಳನ್ನು ಬಿಟ್ಟು ಉಳಿದ ಎರಡು ವಿಧವಾದ ಮಾತುಗಳಿಂದ ಹಿತವನ್ನು ಮಾತನಾಡಬೇಕು'' ಎಂದು ನಿಶ್ಚಯಿಸಿ ಆಗಲೇ ಕೈಲಾಸಪರ್ವತಕ್ಕೆ ಬಂದು ಕ್ರೂರಸರ್ಪಾಕಾರವುಳ್ಳವನಾಗಿ ಅಹಂಕಾರಿಗಳಾದ ಸಗರಪುತ್ರರನ್ನು ಬೂದಿಯ ರಾಶಿಯಂತೆ ಮಾಡಿದನು. ಸ್ನೇಹಿತರು ಹೋಗಿ ತಮ್ಮ ಮಿತ್ರನಿಗೆ ಹಿತವಾಗಿದ್ದರೆ ಅಪ್ರಿಯವಾದ ಕಾರ್ಯವನ್ನಾದರೂ ಮಾಡುತ್ತಾರೆ.

**ಜ್ಞಾತ್ವಾಪಿ ತನ್ಮೃತಿಂ ಭೂಪಮಾಕರ್ಣಯಿತುಮಕ್ಷಮಾಃ ।**
**ತತ್ಸ್ನೇಹಂ ತೇಷು ಜಾನಾನಾಃ ಸಂವೃತ್ಯ ಸಚಿವಾಃ ಸ್ಥಿತಾಃ ॥ ೧೧೩ ॥**

ಸಗರಚಕ್ರವರ್ತಿಗೆ ಆ ಪುತ್ರರಲ್ಲಿದ್ದ ಪ್ರೀತಿಯನ್ನು ತಿಳಿದಿದ್ದ ಅವನ ಮಂತ್ರಿಗಳು ಆ ಪುತ್ರರ ಮರಣವನ್ನು ತಿಳಿದರೂ ದೊರೆಗೆ ತಿಳಿಸುವುದಕ್ಕೆ ಅಸಮರ್ಥರಾಗಿ ಮರೆಮಾಚಿಕೊಂಡಿದ್ದರು.

**ತದಾ ಬ್ರಾಹ್ಮಣರೂಪೇಣ ಮಣಿಕೇತುರುಪೇತ್ಯ ತಮ್ ।**
**ಮಹಾಶೋಕಸಮಾಕ್ರಾಂತೋ ವಾವೇದಯದಿದಂ ವಚಃ ॥ ೧೧೪ ॥**

ಆಗ ಮಣಿಕೇತುದೇವನು ಬ್ರಾಹ್ಮಣರೂಪದಿಂದ ಸಗರನ ಸಮೀಪಕ್ಕೆ ಬಂದು ಬಹಳ ಶೋಕದಿಂದ ಕೂಡಿದವನಂತೆ ಈ ಮಾತನ್ನು ಹೇಳಿದನು.

**ದೇವದೇವೇ ಧರಾಚಕ್ರಂ ರಕ್ಷತಿ ಕ್ಷೇಮಮತ್ರ ನಃ ।**
**ಕಿಂತ್ವಂತಕೇನ ಮತ್ಪುತ್ರೋಹಾರ್ಯಾರಾಜ್ಜೀವಿತಾವಧೇಃ ॥ ೧೧೫ ॥**

''ರಾಜಾಧಿರಾಜನಾದ ನೀನು ಭೂಮಂಡಲವನ್ನು ರಕ್ಷಿಸುತ್ತಿರಲಾಗಿ ಇಲ್ಲಿ ನಮ್ಮಗಳಿಗೆ ಕ್ಷೇಮವಿದೆ. ಆದರೆ ಯಮನು ನನ್ನ ಮಗನನ್ನು ಜೀವಿತಾವಧಿಯು ದೂರವಿರುವಾಗ ಅಪಹರಿಸಿದನು.

**ಪ್ರೇಯಾನ್ ಮಮೈಕ ಏವಾಸೌ ನಾಯುಷಾ ತೇನ ಜೀವಿತಮ್ ।**
**ನಾನೀತಶ್ಚೇತ್ತ್ವಯಾ ಸೋದ್ಯ ತೇನ ಮಾಮಪಿ ಪಶ್ಯತಃ ॥ ೧೧೬ ॥**

**ತವ ವಿದ್ಧ್ಯಗ್ರತೋ ನೀತಂ ಕಿಂ ಕುರ್ವಂತಿ ನ ಗರ್ವಿತಾಃ ।**
**ಶಲಾಟುಭಕ್ಷಣೇ ಲೋಲಃ ಕಿಂ ಪಕ್ವಂ ತತ್ಯಜೇದಿತಿ ॥ ೧೧೭ ॥**

ನನಗೆ ಪ್ರಿಯನಾದ ಇವನೊಬ್ಬನೇ ಮಗ. ಅವನು ಆಯುಷ್ಯದಿಂದ (ಪೂರ್ತಿಯಾಗಿ) ಜೀವಿಸಲಿಲ್ಲ. ನೀನು ಅವನನ್ನು ತೆಗೆದುಕೊಂಡುಬಾರದಿದ್ದರೆ ನೋಡುತ್ತಿರುವ ನಿನ್ನಿದಿರಲ್ಲಿ ನನ್ನನ್ನೂ ಆ ಯಮನು ತೆಗೆದುಕೊಂಡು ಹೋದನೆಂದು ತಿಳಿ. ಆತ್ಮಘಾತಮಾಡಿಕೊಳ್ಳುವೆನೆಂದು ಭಾವವು. ಗರ್ವಿಷ್ಠರು ಏನನ್ನು ತಾನೆ ಮಾಡುವುದಿಲ್ಲ ? ಅಪಕ್ವಫಲವನ್ನು ತಿನ್ನುವುದರಲ್ಲಿ ಆಸಕ್ತಿಯುಳ್ಳವನು ಪಕ್ವಫಲವನ್ನು ಬಿಟ್ಟಾನೇ ?''

**ತದಾಕರ್ಣ್ಯ ಹಸನ್ರಾಜಾ ದ್ವಿಜ ಕಿಂ ವೇತ್ಸಿ ನಾಂತಕಃ ।**
**ಸಿದ್ಧೈರೇವ ಸ ವಾರ್ಯೋನ್ಯೈರ್ನೇತ್ಯಾಗೋಪಾಲವಿಶ್ರುತಮ್ ॥ ೧೧೮ ॥**

ಈ ಪ್ರಕಾರವಾದ ಆ ಮಾತನ್ನು ಕೇಳಿ ನಕ್ಕು ಸಗರಚಕ್ರವರ್ತಿಯು ''ಬ್ರಾಹ್ಮಣನೆ ! ಆ ಯಮನು ಸಿದ್ಧರಿಂದಲೇ ತಡೆಯಲ್ಪಡತಕ್ಕವನಲ್ಲದೆ ಬೇರೆಯವರಿಂದಲ್ಲವೆಂದು ಗೋಪಾಲರವರೆಗೂ ಪ್ರಸಿದ್ಧವಾಗಿರುವ ವಿಷಯವನ್ನು ನೀನು ತಿಳಿಯೆಯಾ ?

**ಅಪವರ್ತ್ಯಾಯುಷಃ ಕೇಚಿದ್ಪದ್ಧಾಯುರ್ಜೀವಿನಃ ಪರೇ ।**
**ತಾನ್ ಸರ್ವಾನ್ ಸಂಹರತ್ಯೇಷ ನಾಸ್ತಿ ಮೃತ್ಯೋರಗೋಚರಃ ॥ ೧೧೯ ॥**

ಆಯುಷ್ಯವು ಪೂರ್ತಿಯಾಗದೆ ಸಾಯುವವರು ಕೆಲವರು. ಕಟ್ಟಿದ ಆಯುಷ್ಯವು ಪೂರ್ತಿಯಾಗುವವರೆಗೆ ಜೀವಿಸುವವರು ಬೇರೆ ಕೆಲವರು. ಈ ಯಮನು ಅವರೆಲ್ಲರನ್ನೂ ಸಂಹರಿಸುತ್ತಾನೆ. ಮೃತ್ಯುವಿಗೆ ಗೋಚರನಾಗದಿರುವವನಿಲ್ಲ.

**ತಸ್ಮಿನ್ವಹಸಿ ಚೇದ್ವೈರಂ ಜೀರ್ಣೋ ಮಾಭೂರ್ಗೃಹೇ ವೃಥಾ ।**
**ಮೋಕ್ಷದೀಕ್ಷಾಂ ಗೃಹಾಣಾಶು ಶೋಕಂ ಹಿತ್ವೇತ್ಯುವಾಚ ತಮ್ ॥ ೧೨೦ ॥**

ಆ ಯಮನಲ್ಲಿ ವೈರವನ್ನು ಹೊಂದುವೆಯಾದರೆ ಮನೆಯಲ್ಲಿ ವ್ಯರ್ಥವಾಗಿ ಶಿಥಿಲನಾಗಬೇಡ. ಶೋಕವನ್ನು ಬಿಟ್ಟು ಶೀಘ್ರವಾಗಿ ಮೋಕ್ಷಕ್ಕೆ ಮಾರ್ಗವಾದ ದೀಕ್ಷೆಯನ್ನು ಪರಿಗ್ರಹಿಸು'' ಎಂದು ಆ ಬ್ರಾಹ್ಮಣನಿಗೆ ಹೇಳಿದನು.

**ಇತ್ಯುಕ್ತೇ ದೇವ ಕಿಂ ಸತ್ಯಮೇತದ್ಯನ್ನಾಂತಕಾತ್ಪರಃ ।**
**ಬಲೀತಿ ತನ್ನ ಭೇತವ್ಯಂ ಮಯಾ ಕಿಂಚಿದ್ಗದಿಷ್ಯತಾ ॥ ೧೨೧ ॥**

ಹೀಗೆ ಸಗರನು ಹೇಳುತ್ತಿರಲಾಗಿ ಆ ಬ್ರಾಹ್ಮಣನು ''ದೇವಾ ! ಯಮನಿಗಿಂತ ಬಲಿಷ್ಠನಿಲ್ಲವೆಂಬುದು ಸತ್ಯವೋ ? ಹಾಗಾದರೆ ಏನಾದರೂ ಹೇಳುವುದಕ್ಕೆ ನಾನು ಭಯಪಡಬೇಕಾದುದಿಲ್ಲ.

**ತೇನಾಂತಕೇನ ತೇ ನೀತಾಃ ಸರ್ವೇಪಿ ಸ್ವಾಂತಿಕಂ ಸುತಾಃ ।**
**ತಸ್ಮಾತ್ತ್ವದುಕ್ತಮಾರ್ಗೇಣ ವಹ ವೈರಂ ಖಲೇಂತಕೇ ॥ ೧೨೨ ॥**

ಆ ಯಮನು ನಿನ್ನ ಎಲ್ಲಾ ಪುತ್ರರನ್ನು ತನ್ನ ಬಳಿಗೆ ಒಯ್ದನು. ಆದುದರಿಂದ ದುಷ್ಟನಾದ ಯಮನಲ್ಲಿ ನೀನು ಹೇಳಿದ ಮಾರ್ಗದಿಂದ ವೈರವನ್ನು ಹೊಂದು.''

**ಇತ್ಯಾಹ ಸೋಪಿ ತದ್ವಾಕ್ಯವಜ್ರನಿರ್ಭಿನ್ನಮಾನಸಃ ।**
**ಗತಾಸುರಿವ ನಿಷ್ಪಂದೋ ಬಭೂವ ನೃಪತಿಃ ಕಿಲ ॥ ೧೨೩ ॥**

ಈ ಪ್ರಕಾರವಾಗಿ ಹೇಳಿದನು. ಆ ಬ್ರಾಹ್ಮಣನ ವಾಕ್ಯವೆಂಬ ಸಿಡಿಲಿನಿಂದ ಸೀಳಿದ ಮನಸ್ಸುಳ್ಳ ಆ ಸಗರನರಪತಿಯೂ ಪ್ರಾಣಗಳು ಹೋದವನಂತೆ ನಿಶ್ಚಲನಾದನು !

**ಚಂದನೋಶೀರಸಮ್ಮಿಶ್ರಸಲಿಲೈಃ ಸುಹೃದುಕ್ತಿಭಿಃ ।**
**ಉತ್ಕ್ಷೇಪೈಶ್ಚ ಮೃದೂತ್ಕ್ಷೇಪೈಃ ಪುನರಾಗತ್ಯ ಚೇತನಾಮ್ ॥ ೧೨೪ ॥**

**ಮಾ ಮಾಯಾ ಮಾ ವೃಥಾಯಾಮಾ ಭೀಮಃ ಕಾಮೋ ಯಮೋಧಮಃ ।**
**ಭಂಗುರಃ ಸಂಗಮಃ ಪ್ರೇಮ್ಣಃ ಕಾಯೋಶ್ರೇಯೋಶುಚಿಃ ಕ್ಷಯೀ ॥**

ಚಂದನದಿಂದಲೂ ಲಾವಂಚದಿಂದಲೂ ಮಿಶ್ರವಾದ ನೀರುಗಳಿಂದಲೂ ಸ್ನೇಹಿತರ ಮಾತಗಳಿಂದಲೂ ಮೃದುವಾದ ಸೇಚನೆಯುಳ್ಳ ತುಂತುರುಹನಿಗಳಿಂದಲೂ ಮತ್ತೆ ಎಚ್ಚತ್ತು ''ಮಾಯಾಸ್ವರೂಪಳೂ ವ್ಯರ್ಥವಾಗಿ ದೀರ್ಘಗಳೂ ಆದ ಲಕ್ಷ್ಮೀ–ಸಂಪತ್ತಿಯು ಬೇಡ. ಕಾಮನು ಭಯಂಕರನು. ಯಮನು ನೀಚನು. ಪ್ರೇಮದ ಸಂಬಂಧವು ಅನಿತ್ಯವಾದುದು. ಶರೀರವು ಅಮಂಗಲವೂ ಅಶುಚಿಯೂ ನಾಶಶೀಲವೂ ಆಗಿದೆ.

**ವಾರ್ಮುಕ್ಕಾರ್ಮುಕನಿರ್ಭಾಸಿ ಯೌವನಂ ತದ್ಯಯೌ ವನವ್ ।**
**ಜಾನನ್ ಜನೋಯಮದ್ಯಾಪಿ ಮೂಢೋತ್ರೈವೇತಿ ಚಿಂತಯನ್ ॥**

**ಭವ್ಯೇ ಭಗಲಿದೇಶೇಶಸಿಂಹವಿಕ್ರಮರಾಡ್ಭುವಃ ।**
**ವಿದರ್ಭಾಯಾಃ ಸುತೇ ರಾಜ್ಯಂ ನಿಯೋಜ್ಯಾಸೌ ಭಗೀರಥೇ ॥ ೧೨೭ ॥**

**ರಾಜತೇ ಸ್ಮ ತಪೋರಾಜ್ಯೇ ದೃಢಧರ್ಮಜಿನಾಂತಿಕೇ ।**
**ತಾವದೇವ ಗೃಹೇ ಸಂತೋ ನ ಹೇತುರ್ಯಾವದೀಕ್ಷ್ಯತೇ ॥ ೧೨೮ ॥**

ಯೌವನವು ಇಂದ್ರಧನುಸ್ಸಿಗೆ ಸಮಾನವಾದುದು. ಆದುದರಿಂದ ಈ ವಿಷಯಗಳನ್ನು ತಿಳಿದ ಜನವು ವನವನ್ನು ಸೇರಿತು. ಈ ಮೂಢನಾದ ನಾನು ಈಗಲೂ ಇಲ್ಲೇ ಇದ್ದೇನೆ'' ಈ ಪ್ರಕಾರವಾಗಿ ಯೋಚಿಸಿ ಭಗಲಿದೇಶದ ದೊರೆಯಾದ ಸಿಂಹವಿಕ್ರಮ ರಾಜನ ಪುತ್ರಿಯಾದ ವಿದರ್ಭೆಯ ಮಗನೂ ಭವ್ಯನೂ ಆದ ಭಗೀರಥನಲ್ಲಿ ರಾಜ್ಯವನ್ನು ವಹಿಸಿ ಈ ಸಗರಚಕ್ರವರ್ತಿಯು ದೃಢಧರ್ಮರೆಂಬ ಜಿನರ ಬಳಿಯಲ್ಲಿ ತಪೋರಾಜ್ಯದಲ್ಲಿ ಪ್ರಕಾಶಿಸಿದನು. ಸತ್ಪುರುಷರು ವೈರಾಗ್ಯಕ್ಕೆ ಕಾರಣವನ್ನು ಕಾಣುವವರೆಗೇ ಮನೆಯಲ್ಲಿರುತ್ತಾರೆ. ಕಾರಣವನ್ನು ಕಂಡನಂತರ ತಪಸ್ಸಿಗೆ ಹೋಗುತ್ತಾರೆಂದು ಭಾವವು.

**ಕೋಪಿ ಗತ್ವಾ ಭವದ್ವಾರ್ತಾಂ ಮಹೀಪತಿಮಬೂಬುಧತ್ ।**
**ಅನಾಕರ್ಣ್ಯಾಮಸೌ ಶ್ರುತ್ವಾ ಗಾಢಶೋಕಾಗ್ನಿದೀಪಿತಃ** ॥ ೧೨೯ ॥

**ಕೃತ್ವಾ ಭಗೀರಥೇ ರಾಜ್ಯಂ ತಪೋಯಾದಹಮಪ್ಯತಃ ।**
**ಇಹಾನ್ವೇಷ್ಟುಂ ಸಮಾಯಾತಃ ಶೋಕಾದ್ಯುಷ್ಮತ್ಕುಲದ್ವಿಜಃ** ॥ ೧೩೦ ॥

''ಯಾವನೋ ಹೋಗಿ ನಿಮ್ಮಗಳ ಸಮಾಚಾರವನ್ನು ಸಗರಚಕ್ರವರ್ತಿಗೆ ತಿಳಿಸಿದನು. ಈ ಸಗರನು ಕೇಳಬಾರದ ಆ ಸಮಾಚಾರವನ್ನು ಕೇಳಿ ಗಾಢವಾದ ಶೋಕಾಗ್ನಿಯಿಂದ ಉರಿದು ಭಗೀರಥನಲ್ಲಿ ರಾಜ್ಯಭಾರವನ್ನಿರಿಸಿ ತಪಸ್ಸನ್ನು ಹೊಂದಿದನು. ಆದುದರಿಂದ ನಿಮ್ಮಗಳ ವಂಶದ ಬ್ರಾಹ್ಮಣ–ಕುಲಪುರೋಹಿತನಾದ ನಾನು ಕೂಡ ಶೋಕದಿಂದ ನಿಮ್ಮಗಳನ್ನು ಹುಡುಕುವುದಕ್ಕಾಗಿ ಇಲ್ಲಿಗೆ ಬಂದೆನು.''

**ಇತಿ ದೇವಃ ಸಮುಭ್ಯೇತ್ಯ ಮಾಯಾಭಸ್ಮಾವಗುಂಠಿತಾನ್ ।**
**ಕುಮಾರಾನ್ ಬೋಧಯಾಮಾಸ ಮಾಯಾಪಿ ಸುಹೃದಾಂ ಹಿತಾ** ॥

ಬ್ರಾಹ್ಮಣವೇಷಧಾರಿಯಾಗಿದ್ದ ಮಣಿಕೇತುದೇವನು ಸಗರಪುತ್ರರಲ್ಲಿಗೆ ಹೋಗಿ ಮಾಯಾಭಸ್ಮದಿಂದ ಮುಚ್ಚಲ್ಪಟ್ಟಿದ್ದ ಆ ಕುಮಾರರಿಗೆ ಮೇಲೆ ಹೇಳಿದಂತೆ ಬೋಧಿಸಿದನು. ಸ್ನೇಹಿತರ ಮಾಯೆಯೂ ಹಿತಕರವಾಗಿರುವುದು.

**ತೇಪಿ ತದ್ವಚನಾದಾಪಂಸ್ತಪಸ್ತಜ್ಜಿನಸಂಶ್ರಯಾತ್ ।**
**ಚರಮಾಂಗಧರಾ ಯುಕ್ತಂ ತದೇವೌಚಿತ್ಯವೇದಿನಾಮ್** ॥ ೧೩೨ ॥

ಚರಮಶರೀರಧಾರಿಗಳಾದ ಆ ಸಗರಪುತ್ರರೂ ದೃಢಧರ್ಮಜಿನರನ್ನು ಹೊಂದಿ ತಪಸ್ಸನ್ನು ಗ್ರಹಣಮಾಡಿದರು. ಔಚಿತ್ಯವನ್ನು ತಿಳಿದವರಿಗೆ ಅದೇ ಯುಕ್ತವಾದುದು.

**ಭಗೀರಥೋಪಿ ತಾನ್ ಗತ್ವಾ ಕೃತ್ವಾ ಭಕ್ತ್ಯಾ ನಮಸ್ಕ್ರಿಯಾಮ್ ।**
**ಧರ್ಮಮಾಕರ್ಣ್ಯ ಜೈನೇಂದ್ರಮಾದತ್ತ ಶ್ರಾವಕವ್ರತಮ್** ॥ ೧೩೩ ॥

ಭಗೀರಥನೂ ಆ ತಪಸ್ವಿಗಳ ಬಳಿಗೆ ಹೋಗಿ ಭಕ್ತಿಯಿಂದ ಅವರಿಗೆ ನಮಸ್ಕಾರವನ್ನು ಮಾಡಿ ಜೈನಧರ್ಮದ ಉಪದೇಶವನ್ನು ಕೇಳಿ ಶ್ರಾವಕವ್ರತವನ್ನು ತೆಗೆದುಕೊಂಡನು.

**ಪ್ರಕಟೀಕೃತತನ್ಮಾಯೋ ಮಣಿಕೇತುಶ್ಚ ತಾನ್ ಮುನೀನ್ ।**
**ಕ್ಷಂತವ್ಯಮಿತ್ಯುವಾಚೇತ್ಯಾ ಸಗರಾದೀನ್ ಸುಹೃದ್ವರಃ** ॥ ೧೩೪ ॥

ಮಿತ್ರಶ್ರೇಷ್ಠನಾದ ಮಣಿಕೇತುದೇವನು ತನ್ನ ಮಾಯೆಯನ್ನು ಪ್ರಕಟಮಾಡಿ–ನಿಜರೂಪವನ್ನು ತೋರಿಸಿ ಸಗರನೇ ಮೊದಲಾದ ಆ ಮುನಿಗಳನ್ನು ಹೊಂದಿ ''ಕ್ಷಮಿಸಬೇಕು'' ಎಂದು ಹೇಳಿದನು.

**ಕೋಪರಾಧಸ್ತವೇದಂ ನಸ್ತ್ವಯಾ ಪ್ರಿಯಮನುಷ್ಠಿತಮ್ ।**
**ಹಿತಂ ಚೇತಿ ಪ್ರಸನ್ನೋಕ್ತ್ಯಾ ತದಾ ತೇ ತಮಸಾಂತ್ವಯನ್** ॥ ೧೩೫ ॥

ಆಗ ಆ ಸಗರಮುನಿಯೇ ಮೊದಲಾದವರು ''ನಿನ್ನ ತಪ್ಪೇನು ? ನೀನು ನಮಗೆ ಪ್ರಿಯವೂ ಹಿತವೂ ಆದ ಈ ಕಾರ್ಯವನ್ನು ಮಾಡಿದೆ'' ಎಂದು ಒಳ್ಳೆಯ ಮಾತಿನಿಂದ ಆ ದೇವನನ್ನು ಸಮಾಧಾನ ಪಡಿಸಿದರು.

**ಸೋಪಿ ಸಂತುಷ್ಯ ಸಿದ್ಧಾರ್ಥೋ ದೇವೋ ದಿವಮುಪಾಗಮತ್ ।**
**ಪರಾರ್ಥಸಾಧನಂ ಪ್ರಾಯೋ ಜ್ಯಾಯಸಾಂ ಪರಿತುಷ್ಟಯೇ** ॥ ೧೩೬ ॥

ಕೃತಾರ್ಥನಾದ ಆ ಮಣಿಕೇತುದೇವನೂ ಸಂತೋಷಪಟ್ಟು ಸ್ವರ್ಗವನ್ನು ಸೇರಿದನು. ದೊಡ್ಡವರಿಗೆ ಪ್ರಾಯಿಕವಾಗಿ ಪರಪ್ರಯೋಜನಸಾಧನವು ಸಂತೋಷಕ್ಕೆ ಕಾರಣವಾಗುವುದು.

**ಸರ್ವೇ ತೇ ಸುಚಿರಂ ಕೃತ್ವಾ ಸತ್ತಪೋ ವಿಧಿವದ್ಬುಧಾಃ ।**
**ಶುಕ್ಲಧ್ಯಾನೇನ ಸಮ್ಮೇದೇ ಸಂಪ್ರಾಪನ್ ಪರಮಂ ಪದಮ್** ॥ ೧೩೭ ॥

ಪ್ರಾಜ್ಞರಾದ ಅವರೆಲ್ಲರೂ ಬಹುಕಾಲದವರೆಗೆ ವಿಧಿಪ್ರಕಾರವಾಗಿ ಉತ್ತಮ ತಪಸ್ಸನ್ನು ಮಾಡಿ ಸಮ್ಮೇದಪರ್ವತದಲ್ಲಿ ಶುಕ್ಲಧ್ಯಾನದಿಂದ ಪರಮಪದ– ಮುಕ್ತಿಯನ್ನು ಹೊಂದಿದರು.

**ನಿರ್ವಾಣಗಮನಂ ಶ್ರುತ್ವಾ ತೇಷಾಂ ನಿರ್ವಿಣ್ಣಮಾನಸಃ ।**
**ವರದತ್ತಾಯ ದತ್ವಾತ್ಮರಾಜ್ಯಲಕ್ಷ್ಮೀಂ ಭಗೀರಥಃ** ॥ ೧೩೮ ॥

**ಕೈಲಾಸಪರ್ವತೇ ದೀಕ್ಷಾಂ ಶಿವಗುಪ್ತಮಹಾಮುನೇಃ ।**
**ಆದಾಯ ಪ್ರತಿಮಾಯೋಗಧಾರ್ಯಭೂತ್ಸ್ವರ್ಧುನೀತಟೇ** ॥ ೧೩೯ ॥

ಅವರ ಮೋಕ್ಷಗಮನವನ್ನು ಕೇಳಿ ವಿರಕ್ತವಾದ ಮನಸ್ಸುಳ್ಳ ಭಗೀರಥನು ವರದತ್ತನಿಗೆ ತನ್ನ ರಾಜ್ಯಸಂಪತ್ತಿಯನ್ನು ಕೊಟ್ಟು ಕೈಲಾಸಪರ್ವತದಲ್ಲಿ ಶಿವಗುಪ್ತ ಮಹಾಮುನಿಯಿಂದ ದೀಕ್ಷೆಯನ್ನು ತೆಗೆದುಕೊಂಡು ಗಂಗಾನದೀತೀರದಲ್ಲಿ ಪ್ರತಿಮಾಯೋಗಧಾರಿಯಾದನು. ಪ್ರತಿಮೆಯಂತೆ ನಿಶ್ಚಲನಾಗಿ ನಿಂತು ಧ್ಯಾನಾರೂಢನಾದನೆಂದು ಭಾವವು.

**ಸುರೇಂದ್ರೇಣಾಸ್ಯ ದುಗ್ಧಾಬ್ಧಿಪಯೋಭಿರಭಿಷೇಚನಾತ್ ।**
**ಕ್ರಮಯೋಸ್ತತ್ಪ್ರವಾಹಸ್ಯ ಗಂಗಯಾ ಸಂಗಮೇ ಸತಿ** ॥ ೧೪೦ ॥

**ತದಾ ಪ್ರಭೃತಿ ತೀರ್ಥತ್ವಂ ಗಂಗಾಪ್ಯಸ್ಮಿನ್ನುಪಾಗತಾ ।**
**ಕೃತ್ವೋತ್ಕೃಷ್ಟಂ ತಪೋ ಗಂಗಾತಟೇಸೌ ನಿರ್ವೃತಿಂ ಗತಃ** ॥ ೧೪೧ ॥

ದೇವೇಂದ್ರನು ಈ ಭಗೀರಥಮುನಿಯ ಪಾದಗಳಿಗೆ ಕ್ಷೀರಸಮುದ್ರದ ಜಲಗಳಿಂದ ಅಭಿಷೇಕವನ್ನು ಮಾಡಿದುದರಿಂದ ಆ ಪ್ರವಾಹದ ಸಂಗಮವು ಗಂಗೆಯೊಡನೆ ಆಗಿ ಅಂದಿನಿಂದ ಗಂಗೆಯೂ ಈ ಲೋಕದಲ್ಲಿ ತೀರ್ಥತ್ವವನ್ನು ಹೊಂದಿತು. ಈ ಭಗೀರಥಮಹಾಮುನಿಯು ಗಂಗಾನದೀತೀರದಲ್ಲಿ ಉತ್ಕೃಷ್ಟವಾದ ತಪಸ್ಸನ್ನು ಮಾಡಿ ಕೈವಲ್ಯವನ್ನು ಹೊಂದಿದನು.

**ಅತ್ರಾಮುತ್ರ ಚ ಮಿತ್ರವನ್ನ ಹಿತಕೃತ್ಕೋಪ್ಯಸ್ತಿ ಬಂಧುಃ ಪರೋ ।**
**ಗುಹ್ಯಾದ್ಗುಹ್ಯತರಂ ಗುರೋರಪಿ ನ ತದ್ವಾಚ್ಯಂ ಯದಸ್ಮೋಚ್ಯತೇ ।**
**ದುಸ್ಸಾಧಾನ್ಯಪಿ ಸಾಧಯಂತ್ಯಗಣಯನ್ ಪ್ರಾಣಾಂಶ್ಚ ತತ್ರ ಸ್ಫುಟೋ ।**
**ದೃಷ್ಟಾಂತೋ ಮಣಿಕೇತುರೇವ ಕುರುತಾಂ ತನ್ಮಿತ್ರಮೀದೃಗ್ವಿಧಮ್** ॥

ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಮಿತ್ರನಂತೆ ಹಿತವನ್ನು ಮಾಡುವ ಬಂಧುವು ಬೇರೆ ಯಾರೂ ಇಲ್ಲ. ಗುರುವಿಗೂ ಹೇಳತಕ್ಕುದಲ್ಲದ ಗುಟ್ಟಿಗಿಂತಲೂ ಹೆಚ್ಚು ಗುಟ್ಟಾದ ವಿಷಯವು ಮಿತ್ರನಿಗೆ ಹೇಳಲ್ಪಡುವುದು. ಪ್ರಾಣಗಳನ್ನೂ ಪರಿಗಣಿಸದೆ ಕಷ್ಟಸಾಧ್ಯವಾದ ಕಾರ್ಯಗಳನ್ನೂ ಮಿತ್ರರು ಸಾಧಿಸುತ್ತಾರೆ. ಆ ವಿಷಯದಲ್ಲಿ ಮಣಿಕೇತು ದೇವನೇ ಸ್ಫುಟವಾದ ದೃಷ್ಟಾಂತ. ಆದುದರಿಂದ ಇಂತಹ ಮಿತ್ರನನ್ನು ದೊರಕಿಸಬೇಕು.

**ಸ ಜಯತಿ ಜಯಸೇನೋ ಯೋ ಜಿತಾರಾತಿಸೇನಃ ।**
**ಶ್ರುತಯತಿ ಮಹದಾದಿರ್ಯೋ ಬಲಃ ಪ್ರಾಂತಕಲ್ಪೇ ।**
**ಸಗರಸಕಲಚಕ್ರೀ ಯೋ ಜಿನೋ ಯಶ್ಚ ಯಶ್ಚ ।**
**ಪ್ರಹತಚರಮದೇಹೋ ದೇಹಮಾತ್ರಾತ್ಮದೇಹಃ** ॥ ೧೪೩ ॥

ಯಾವನು ಶತ್ರುಸೈನ್ಯವನ್ನು ಜಯಿಸಿದ್ದಾನೋ ಯಾವನು ಕೊನೆಯದಾದ– ಅಚ್ಯುತಕಲ್ಪದಲ್ಲಿ ಮಹಾಬಲದೇವನೆಂದು ಹೆಸರನ್ನು ಪಡೆದನೋ ಯಾವನು ಸಗರಚಕ್ರವರ್ತಿಯಾದನೋ ಯಾವನು ಜಿನೇಶ್ವರನಾದನೋ ಯಾವನು ಕೊನೆಯ ದೇಹವನ್ನು ನಾಶಮಾಡಿ ಶರೀರಪರಿಮಿತನಾದ ಆತ್ಮನೇ ದೇಹವಾಗಿರುವನೋ ಅಂತಹ ಜಯಸೇನನು ಜಯಶಾಲಿಯಾಗಿದ್ದಾನೆ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಅಜಿತತೀರ್ಥಕರ ಸಗರಚಕ್ರವರ್ತಿಪುರಾಣಂ ನಾಮಾಷ್ಟಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಅಜಿತತೀರ್ಥಕರ ಸಗರಚಕ್ರವರ್ತಿಪುರಾಣವೆಂಬ ನಲ್ವತ್ತೆಂಟನೆಯ ಪರ್ವವು ಸಮಾಪ್ತವಾದುದು.

---



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಸಾಕೇತಪಟ್ಟಣದೊಳ್ ಜಿತಾರಿನೃಪತಿಗಂ ವಿಜಯಾದೇವಿಗಂ ರೋಹಿಣೀನಕ್ಷತ್ರದೊಳುದಯಿಸಿದ ಸುವರ್ಣ ವರ್ಣಮನುಳ್ಳ ನಾಲ್ಕುನೂರೈವತ್ತು ಬಿಲ್ಲುದ್ದಮನುಳ್ಳ ಆನೆಯ ಲಾಂಛನಮನುಳ್ಳ ಮಹಾಯಕ್ಷರೋಹಿಣೀ – ಯಕ್ಷಯಕ್ಷಿಯರನುಳ್ಳ ಎಪ್ಪತ್ತೆರಡು ಲಕ್ಷ ಪೂರ್ವಾಯುಷ್ಯಮನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ಸಿದ್ಧವರಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಅಜಿತತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

|| ಶ್ರೀ ಶಂಭವಜಿನಾಯ ನಮಃ ||

# ಅಥ ಶಂಭವತೀರ್ಥಕರಪುರಾಣಂ

**ಶ್ರಿಯಂ ಕ್ರಿಯಾತ್ಸ ಮೇ ನಿಘ್ನನ್ ಶಂಭವೋ ದಂಭಜೃಂಭಣಮ್ ।**
**ಸಮ್ಮುಖೀನಾಯತೇ ಯಸ್ಯ ಸದ್ಬೋಧಃ ಸಮ್ಮುಖೇಖಿಲೇ ॥ ೧ ॥**

ಯಾವ ಶಂಭವತೀರ್ಥಕರ ಸಮ್ಯಗ್ಜ್ಞಾನ–ಕೇವಲಜ್ಞಾನವು ಪ್ರಶಸ್ತವಾದ ಮುಖದಲ್ಲೆಲ್ಲ (ಇದಿರಾಗಿರುವ ವಸ್ತುವಿನಲ್ಲೆಲ್ಲ) ಕನ್ನಡಿಯಂತೆ ಆಚರಿಸುವುದೋ ಅಂತಹ ಶಂಭವನಾಥಸ್ವಾಮಿಯು ಕಪಟವೃದ್ಧಿಯನ್ನು ನಾಶಮಾಡಿ ನನಗೆ ಸಂಪತ್ತಿಯನ್ನುಂಟುಮಾಡಲಿ.

**ದ್ವೀಪೇಸ್ಮಿನ್ನಾದಿಮೇ ಪೂರ್ವವಿದೇಹೇ ನದ್ಯುದಕ್ತಟೇ ।**
**ಕಚ್ಛಾಖ್ಯೇ ವಿಷಯೇ ಕ್ಷೇಮಪುರೇ ವಿಮಲವಾಹನಃ ॥ ೨ ॥**

**ನಾಮ್ನಾ ನರಪತಿಸ್ತಸ್ಯ ಸದ್ಯಃ ಕೇನಾಪಿ ಹೇತುನಾ ।**
**ಸತಿ ತ್ರಿಭೇದೇ ನಿರ್ವೇದೇ ಸ ಸಮಾಸನ್ನನಿರ್ವೃತಿಃ ॥ ೩ ॥**

**ಜಂತುರಂತಕದಂತಸ್ಥೋ ಹಂತ ಜೀವಿತುಮೀಹತೇ ।**
**ಮೋಹಾತ್ತನ್ನಿರ್ಗಮೋಪಾಯಂ ನ ಚಿಂತಯತಿ ಧಿಕ್ತಮಃ ॥ ೪ ॥**

**ಆಯುಃ ಪರಮಸಂಖ್ಯಾತಾಃ ಕ್ಷಣಾಸ್ತೇ ಶರಣೀಕೃತಾಃ ।**
**ಪ್ರಾಣಿಭಿರ್ಹಾ ತ ಏವೇಮಾನರ್ಪಯಂತ್ಯಂತಕಪ್ರಭೋಃ ॥ ೫ ॥**

**ಅಭಿಲಾಷಾತಪಾತ್ತಪ್ತಾಃ ಛಾಯಾಂ ಭೋಗ್ಯಸ್ಯ ಸಂಶ್ರಿತಾಃ ।**
**ಜೀರ್ಣಕೂಲಸ್ಯ ವಾ ಸಾಮ್ಯಂ ನ ಹಿ ಕ್ಷೇಮೇಣ ಯಾಪಯೇತ್ ॥ ೬ ॥**

ಈ ಮೊದಲನೆಯ–ಜಂಬೂದ್ವೀಪದ ಪೂರ್ವವಿದೇಹದಲ್ಲಿ ಸೀತಾನದಿಯ ಉತ್ತರದಿಕ್ಕಿನ ದಡದಲ್ಲಿರುವ ಕಚ್ಛದೇಶದ ಕ್ಷೇಮಪುರದಲ್ಲಿ ವಿಮಲವಾಹನನೆಂಬ ರಾಜನಿದ್ದನು. ಅವನಿಗೆ ಯಾವುದೋ ಕಾರಣದಿಂದ ಅಕಸ್ಮಾತ್ ಸಂಸಾರ ಶರೀರ ಭೋಗವೈರಾಗ್ಯವುಂಟಾಗಲಾಗಿ ಅವನು ಸಮೀಪಸ್ಥವಾದ ಮುಕ್ತಿಪದವಿಯುಳ್ಳವನಾಗಿ "ಯಮನ ಹಲ್ಲುಗಳಲ್ಲಿ ಸಿಕ್ಕಿರುವ ಜಂತುವು ಮೋಹದಿಂದ ಜೀವಿಸುವುದಕ್ಕೆ ಇಚ್ಛಿಸುತ್ತದೆ. ಆಶ್ಚರ್ಯ !ಆ ಯಮನ ಹಲ್ಲುಗಳಿಂದ ಹೊರಟುಬರುವ ಉಪಾಯವನ್ನು ಯೋಚಿಸುವುದಿಲ್ಲ. ಅಜ್ಞಾನಕ್ಕೆ ಧಿಕ್ಕಾರವಿರಲಿ, ಪ್ರಾಣಿಗಳು ತಮ್ಮ ಆಯುಷ್ಯದ ಉತ್ಕೃಷ್ಟಸಂಖ್ಯಾತ ಕ್ಷಣಗಳು ತಮ್ಮ ರಕ್ಷಕಗಳೆಂದು ತಿಳಿದುಕೊಂಡಿದ್ದಾರೆ. ಆ ಆಯುಃಕ್ಷಣಗಳೇ ಈ ಪ್ರಾಣಿಗಳನ್ನು ಯಮರಾಜನಿಗೆ ಅರ್ಪಿಸಿಬಿಡುತ್ತವೆ. ಕಷ್ಟ ! ಅಭಿಲಾಷೆಯೆಂಬ ಬಿಸಿಲಿನಿಂದ ಸಂತಾಪವನ್ನು ಹೊಂದಿರುವ ಜೀವಗಳು ಭೋಗ್ಯಪದಾರ್ಥದ ಆಶ್ರಯವನ್ನು ಶಿಥಿಲವಾದ ದಡದಲ್ಲಿರುವ ಮರದ ನೆರಳನ್ನೋಪಾದಿಯಲ್ಲಿ ಹೊಂದುತ್ತಾರೆ. ಆ ನೆರಳು ಕ್ಷೇಮದಿಂದ ಸಾಮ್ಯವನ್ನು ಹೊಂದಿಸಲಾರದು. ಕ್ಷೇಮವನ್ನುಂಟುಮಾಡಲಾರದೆಂದು ಭಾವವು."

**ಇತ್ಯಾದಿ ಚಿಂತಯನ್ ರಾಜ್ಯಂ ದತ್ವಾ ವಿಮಲಕೀರ್ತಯೇ ।**
**ಸ್ವಯಂಪ್ರಭಜಿನಸ್ಯಾಂತೇವಾಸಿತ್ವಂ ಪ್ರತಿಪನ್ನವಾನ್ ॥ ೭ ॥**

ಇವೇ ಮೊದಲಾದ ವಿಷಯಗಳನ್ನು ಯೋಚಿಸುವವನಾಗಿ ವಿಮಲಕೀರ್ತಿಗೆ ರಾಜ್ಯವನ್ನು ಕೊಟ್ಟು ಸ್ವಯಂಪ್ರಭಜಿನರ ಶಿಷ್ಯತ್ವವನ್ನು ಹೊಂದಿದನು. ಶಿಷ್ಯನಾದನೆಂದರ್ಥವು.

**ಏಕಾದಶಾಂಗಧಾರೀ ಸನ್ ತ್ರೈಲೋಕ್ಯಕ್ಷೋಭಕಾರಣಮ್ ।**
**ಭಾವನಾಭಿರ್ನಿಬದ್ಧ್ವಾಂತ್ಯನಾಮ ತೀರ್ಥಂಕರಾಹ್ವಯಮ್ ॥ ೮ ॥**

**ಸನ್ನ್ಯಾಸವಿಧಿನಾ ತ್ಯಕ್ತದೇಹೋ ಗ್ರೈವೇಯಕಾದಿಮೇ ।**
**ಸುದರ್ಶನೇ ವಿಮಾನೇಭೂದಹಮಿಂದ್ರೋ ಮಹರ್ದ್ಧಿಕಃ ॥ ೯ ॥**

ಏಕಾದಶಾಂಗಶಾಸ್ತ್ರಧಾರಿಯಾಗಿ ದರ್ಶನವಿಶುದ್ಧ್ಯಾದಿಶೋಡಷಭಾವನೆಗಳಿಂದ ಮೂರು ಲೋಕಗಳಲ್ಲಿ ಕ್ಷೋಭೆಗೆ ಕಾರಣವಾದ ತೀರ್ಥಕರವೆಂಬ ಕೊನೆಯ ಶುಭ ನಾಮಕರ್ಮವನ್ನು ಬಂಧಿಸಿಕೊಂಡು ಸನ್ನ್ಯಾಸವಿಧಿಯಿಂದ ದೇಹತ್ಯಾಗವನ್ನು ಮಾಡಿ ನವಗ್ರೈವೇಯಕವಿಮಾನಗಳಲ್ಲಿ ಮೊದಲನೆಯದಾದ ಸುದರ್ಶನವಿಮಾನದಲ್ಲಿ ಮಹಾಮಹಿಮೆಯುಳ್ಳ ಅಹಮಿಂದ್ರದೇವನಾದನು.

**ತ್ರಯೋವಿಂಶತಿವಾರ್ಧ್ಯಾಯುಃ ಸ ಷಷ್ಟ್ಯಂಗುಲಮಾನಭಾಕ್ ।**
**ಶರೀರೋ ಲೇಶ್ಯಯಾ ಶುಕ್ಲಃ ಶ್ವಸನ್ ಪಕ್ಷೋನವತ್ಸರೇ ॥ ೧೦ ॥**

**ಖತ್ರಯಾಗ್ನಿದ್ವಿವರ್ಷಾಂತೇ ಭೋಜನಂ ಮನಸಾ ಸ್ಮರನ್ ।**
**ನಿಷ್ಪ್ರವೀಚಾರಭೋಗೋಂತ್ಯನರಕಾಂತಗತಾವಧಿಃ ॥ ೧೧ ॥**

**ಸ್ವಾವಧಿಕ್ಷೇತ್ರಸಂಧಾರಸಮರ್ಥಸ್ತತ್ಸಮಪ್ರಭಃ ।**
**ಪ್ರಾಗ್ದೇಹೋತ್ಥತನುವ್ಯಾಪ್ತ್ಯಾ ಸ್ವಾವಧಿಕ್ಷೇತ್ರಪೂರಕಃ ॥ ೧೨ ॥**

**ಅಣಿಮಾದಿಗುಣೋಪೇತಂ ಪಂಚಪುಣ್ಯೋದಯಾರ್ಪಿತಮ್ ।**
**ಅಹಮಿಂದ್ರಸುಖಂ ಶ್ರೀಮಾನನ್ವಭೂದಮರೋತ್ತಮಃ ॥ ೧೩ ॥**

ಇಪ್ಪತ್ತುಮೂರು ಸಾಗರವರ್ಷಾಯುಷ್ಯವುಳ್ಳವನೂ ಅರುವತ್ತಂಗುಲಗಳ ಅಳತೆಯುಳ್ಳ ಶರೀರವುಳ್ಳವನೂ ಶುಕ್ಲಲೇಶ್ಯೆಯುಳ್ಳವನೂ ಹನ್ನೊಂದುವರೆತಿಂಗಳಿಗೊಂದುಸಲ ಉಸಿರಾಡಿಸುವವನೂ ಇಪ್ಪತ್ತುಮೂರು ಸಾವಿರ ವರುಷಗಳಿಗೊಮ್ಮೆ ಮನಸ್ಸಿನಿಂದ ಭೋಜನವನ್ನು ಸ್ಮರಿಸುವವನೂ ಮೈಥುನ ಸಂಬಂಧವಿಲ್ಲದ ಭೋಗವುಳ್ಳವನೂ ಕೊನೆಯ ನರಕದವರೆಗೆ ತಿಳಿಯುವ ಅವಧಿಜ್ಞಾನವುಳ್ಳವನೂ ತನ್ನ ಅವಧಿಕ್ಷೇತ್ರವನ್ನು ಧಾರಣಮಾಡುವ ಸಾಮರ್ಥ್ಯವುಳ್ಳವನೂ ಆ ಅವಧಿಕ್ಷೇತ್ರದವರೆಗೆ ತೇಜಸ್ಸುಳ್ಳವನೂ ಮೂಲಶರೀರದಿಂದ ಉತ್ಪನ್ನವಾದ ಶರೀರಕಾಂತಿಯಿಂದ ತನ್ನ ಅವಧಿಕ್ಷೇತ್ರವನ್ನು ವ್ಯಾಪಿಸುವವನೂ ಶ್ರೀಮಂತನೂ ಆದ ಆ ಅಹಮೀಂದ್ರದೇವೋತ್ತಮನು ಅಣಿಮಾದ್ಯಷ್ಟಗುಣಗಳಿಂದ ಯುಕ್ತವೂ ಪೂರ್ವೋಕ್ತವಾದ ಐದು ಪುಣ್ಯಗಳ ಉದಯದಿಂದುಂಟಾದುದೂ ಆದ ಅಹಮಿಂದ್ರ ಸುಖವನ್ನು ಅನುಭವಿಸಿದನು.

**ದ್ವೀಪೇಸ್ಮಿನ್ ಭಾರತೇ ವರ್ಷೇ ಶ್ರಾವಸ್ತಿನಗರೇಶಿನಃ ।**
**ರಾಜ್ಞಃ ಕಾಶ್ಯಪಗೋತ್ರಸ್ಯ ದೃಢರಾಜಸ್ಯ ಸದ್ದ್ಯುತೇಃ ॥ ೧೪ ॥**

**ವಲ್ಲಭೇಕ್ಷ್ವಾಕುವಂಶಸ್ಯ ಸುಷೇಣಾ ತತ್ಸುರಾಗಮೇ ।**
**ಷಣ್ಮಾಸಾನ್ ವಸುಧಾರಾದಿಮಾಹಾತ್ಮ್ಯಪದವೀಂ ಗತಾ ॥ ೧೫ ॥**

**ಶುಕ್ಲಫಾಲ್ಗುನಜಾಷ್ಟಮ್ಯಾಂ ಸ್ವಪ್ನಾನ್ ಷೋಡಶ ಪಂಚಮೇ ।**
**ಪ್ರಭಾತಸಮಯೇಪಶ್ಯನ್ನಕ್ಷತ್ರೇ ಸುಕೃತೋದಯಾತ್ ॥ ೧೬ ॥**

ಈ ಜಂಬೂದ್ವೀಪದ ಭಾರತವರ್ಷದಲ್ಲಿ ಶ್ರಾವಸ್ತಿ (ಸ್ವಾವಸ್ತಿ, ಶ್ರಾವಂತೀ) ನಗರಾಧಿಪತಿಯೂ ಕಾಶ್ಯಪಗೋತ್ರಜನೂ ಶ್ರೇಷ್ಠವಾದ ಕಾಂತಿಯುಳ್ಳವನೂ ಇಕ್ಷ್ವಾಕುವಂಶಜನೂ ಆದ ದೃಢರಾಜನೆಂಬ ದೊರೆಯ ಪತ್ನಿಯಾದ ಸುಷೇಣಾದೇವಿಯು ತನ್ನ ಗರ್ಭಕ್ಕೆ ಆ ಅಹಮಿಂದ್ರದೇವನ ಆಗಮನಕಾಲದಲ್ಲಿ ಆರು ತಿಂಗಳುಗಳವರೆಗೆ ರತ್ನವೃಷ್ಟಿ ಮೊದಲಾದುವುಗಳ ಮಹಿಮೆಯ ಸ್ಥಾನವನ್ನು ಹೊಂದಿದವಳಾಗಿ ಫಾಲ್ಗುನಮಾಸದ ಶುಕ್ಲಪಕ್ಷದ ಅಷ್ಟಮಿಯ ದಿವಸ ಪ್ರಾತಃಕಾಲದಲ್ಲಿ ಮೃಗಶಿರ ನಕ್ಷತ್ರದಲ್ಲಿ ಪುಣ್ಯೋದಯದಿಂದ ಹದಿನಾರು ಸ್ವಪ್ನಗಳನ್ನು ಕಂಡಳು.

**ತತೋನುವದನಂ ತಸ್ಯಾಃ ಸ್ವಪ್ನೇ ಪ್ರಾವಿಶದಗ್ರಿಮಃ ।**
**ಗಿರೀಂದ್ರಶಿಖರಾಕಾರೋ ವಾರಣಶ್ಚಾರುಲಕ್ಷಣಃ ॥ ೧೭ ॥**

ಬಳಿಕ ಬಲಿಷ್ಠವೂ ಮಹಾಮೇರುಪರ್ವತದ ಶಿಖರದಂತೆ ಆಕಾರವುಳ್ಳದ್ದೂ ಸುಂದರವಾದ ಲಕ್ಷಣಗಳುಳ್ಳದ್ದೂ ಆದ ಆನೆಯು ಸ್ವಪ್ನದಲ್ಲಿ ಆ ಸುಷೇಣಾ ದೇವಿಯ ಮುಖದಲ್ಲಿ ಪ್ರವೇಶಿಸಿತು. ಮುಖದಲ್ಲಿ ಆನೆಯು ಪ್ರವೇಶಿಸುವ ಸ್ವಪ್ನ ವನ್ನು ಕಂಡಳೆಂದು ಭಾವವು.

**ಸಾ ತೇಷಾಂ ಫಲಮಾಕರ್ಣ್ಯ ಸ್ವಪತೇರ್ಮುದಮಾಗತಾ ।**
**ನವಮೇ ಮಾಸಿ ನಕ್ಷತ್ರೇ ಪಂಚಮೇ ಸೌಮ್ಯಯೋಗಗೇ ॥ ೧೮ ॥**

**ಪೌರ್ಣಮಾಸ್ಯಾಮವಾಪಾರ್ಚ್ಯಮಹಮಿಂದ್ರಂ ತ್ರಿವಿದ್ಯುತಮ್ ।**
**ಸ ಜನ್ಮೋತ್ಸವಕಲ್ಯಾಣಪ್ರಾಂತೇ ಶಂಭವ ಇತ್ಯಭೂತ್ ॥ ೧೯ ॥**

ಆಕೆಯು ತನ್ನ ಪತಿಯಿಂದ ಆ ಸ್ವಪ್ನಗಳ ಫಲವನ್ನು ಕೇಳಿ ಸಂತೋಷವನ್ನು ಹೊಂದಿದಳು. ಒಂಬತ್ತನೆಯ ತಿಂಗಳಲ್ಲಿ ಸೌಮ್ಯಯೋಗವನ್ನು ಹೊಂದಿರುವ ಮೃಗ ಶೀರ್ಷನಕ್ಷತ್ರದಲ್ಲಿ ಪೂರ್ಣಿಮಾತಿಥಿಯಲ್ಲಿ ಮತಿಶ್ರುತಾವಧಿಜ್ಞಾನಯುಕ್ತನೂ ಪೂಜ್ಯನೂ ಆದ ಅಹಮಿಂದ್ರನನ್ನು ಹಡೆದಳು. ಅಹಮಿಂದ್ರದೇವನು ಬಂದು ಸುಷೇಣಾದೇವಿಗೆ ಪುತ್ರನಾಗಿ ಜನಿಸಿದನೆಂದು ಭಾವವು. ಅವನು ಜನ್ಮೋತ್ಸವ ಕಲ್ಯಾಣದ ಕೊನೆಯಲ್ಲಿ ''ಶಂಭವ'' ಎಂಬ ಹೆಸರುಳ್ಳವನಾದನು.

**ಸಂಭವೇ ತವ ಲೋಕಾನಾಂ ಶಂ ಭವತ್ಯದ್ಯ ಶಂಭವ ।**
**ವಿನಾಪಿ ಪರಿಪಾಕೇನ ತೀರ್ಥಕೃನ್ನಾಮಕರ್ಮಣಃ ॥ ೨೦ ॥**

''ಎಲೈ ಶಂಭವನೇ ! ತೀರ್ಥಕರನಾಮಕರ್ಮದ ಪರಿಪಾಕವಿಲ್ಲದಿದ್ದರೂ ನಿನ್ನ ಉತ್ಪತ್ತಿಯಲ್ಲಿ ಈಗ ಜನಗಳಿಗೆ ಸುಖವುಂಟಾಗುತ್ತಿದೆ.

**ತವಾಂಗಭೂಜೇ ಪ್ರೀಣಂತೇ ಲಕ್ಷಣವ್ಯಂಜನೋದ್ಗಮೇ ।**
**ಪ್ರಲಂಬಬಾಹುವಿಟಪೇ ಸುರದೃಗ್ಭ್ರಮರಾಶ್ಚಿರಮ್ ॥ ೨೧ ॥**

ಲಕ್ಷಣ ಮತ್ತು ವ್ಯಂಜನಗಳೆಂಬ ಪುಷ್ಪಗಳುಳ್ಳದ್ದೂ ಜೋಲುತ್ತಿರುವ ತೋಳು ಗಳೆಂಬ ಕೊಂಬೆಗಳುಳ್ಳದ್ದೂ ಆದ ನಿನ್ನ ಶರೀರವೆಂಬ ಕಲ್ಪವೃಕ್ಷದಲ್ಲಿ ದೇವತೆಗಳ ಕಣ್ಣುಗಳೆಂಬ ಭ್ರಮರಗಳು ಬಹುಕಾಲ ಪ್ರೀತಿಸುತ್ತವೆ.

**ಪರತೇಜಾಂಸಿ ತೇ ತೇಜೋ ಭಾತಿ ದೇವ ತಿರೋದಧತ್ ।**
**ಮತಾನಿ ಕಪಿಲಾದೀನಾಂ ಸ್ಯಾದ್ವಾದಸ್ಯೇವ ನಿರ್ಮಲಮ್ ॥ ೨೨ ॥**

ಎಲೈ ಸ್ವಾಮಿಯೆ ! ಕಪಿಲರ್ಷಿ ಮೊದಲಾದವರ ಮತಗಳನ್ನು ಮರೆಮಾಡುವ ಸ್ಯಾದ್ವಾದದ ಮತದಂತೆ, ಬೇರೆಯವರ ತೇಜಸ್ಸುಗಳನ್ನು ಮರೆಮಾಡುವ ನಿರ್ಮಲ ವಾದ ನಿನ್ನ ತೇಜಸ್ಸು ಪ್ರಕಾಶಿಸುತ್ತಿದೆ.

**ಸಮುಸ್ತಾಹ್ಲಾದಕೇನಾಸೀದಾಮೋದೇನೇವ ಚಂದನಃ ।**
**ಬೋಧೇನ ಸಹಜಾತೇನ ತ್ರಿವಿಧೇನ ಜಗದ್ಧಿತಃ ॥ ೨೩ ॥**

ಎಲ್ಲರಿಗೂ ಆಹ್ಲಾದವನ್ನುಂಟುಮಾಡುವ ಪರಿಮಳದಿಂದ ಚಂದನವು ಜಗತ್ತಿಗೆ ಹಿತಕಾರಿಯದಂತೆ ಸಮಸ್ತರಿಗೂ ಆಹ್ಲಾದವನ್ನುಂಟುಮಾಡುವುದೂ ಜೊತೆಯ ಲ್ಲುಂಟಾಗಿರುವುದೂ ಆದ ಮತಿಶ್ರುತಾವಧಿಗಳೆಂಬ ತ್ರಿವಿಧಜ್ಞಾನದಿಂದ ನೀನು ಜಗತ್ತಿಗೆ ಹಿತಕಾರಿಯಾದೆ.

**ತ್ವಾಂ ಲೋಕಃ ಸ್ನೇಹಸಂವೃದ್ಧೋ ನಿರ್ಹೇತುಹಿತಕಾರಣಮ್ ।**
**ಪ್ರದೀಪವನ್ನಮತ್ಯೇಷ ನಿದಾನಮಿವ ಭಾಸ್ವರಮ್ ॥ ೨೪ ॥**

ಎಣ್ಣೆಯಿಂದ ವೃದ್ಧಿಯನ್ನು ಹೊಂದಿದ ಪ್ರದೀಪವು ಪ್ರಕಾಶಮಾನವಾದ ನಿಕ್ಷೇಪಕ್ಕೆ ಬಗ್ಗುವಂತೆ, ಸ್ನೇಹದಿಂದ ವೃದ್ಧಿಯನ್ನು ಹೊಂದಿರುವ ಈ ಲೋಕವು ನಿರ್ಹೇತು ಕವಾಗಿ ಹಿತಕಾರಣನಾದ ನಿನಗೆ ಬಗ್ಗುತ್ತದೆ. ನಮಸ್ಕರಿಸುತ್ತದೆಂದು ಭಾವವು.''

**ಇತಿ ಸ್ತುತ್ವಾದಿಕಲ್ಪೇಶೋ ವಿಹಿತಾನಂದನಾಟಕಃ ।**
**ಪಿತ್ರೋಸ್ತಮರ್ಪಯಿತ್ವಾಮಾ ಸ್ವರ್ಲೋಕಮಗಮತ್ಸುರೈಃ ॥ ೨೫ ॥**

ಈ ಪ್ರಕಾರವಾಗಿ ಸೌಧರ್ಮಕಲ್ಪೇಂದ್ರನು ಸ್ತುತಿಸಿ ಆನಂದನಾಟಕವನ್ನು ಮಾಡಿ ಆ ಬಾಲಕನನ್ನು ತಂದೆತಾಯಿಗಳಿಗೆ ಕೊಟ್ಟು ದೇವತೆಗಳೊಡನೆ ಸ್ವರ್ಗಲೋಕಕ್ಕೆ ಹೋದನು.

**ದ್ವಿತೀಯತೀರ್ಥಸಂತಾನಸಮಯೇ ಸಾಗರೋಪಮೈಃ ।**
**ತ್ರಿಂಶಚ್ಛತಸಹಸ್ರೋಕ್ತಕೋಟಿಭಿಃ ಪ್ರಾಂತಮೀಯುಷಿ ॥ ೨೬ ॥**

**ಶಂಭವಾಖ್ಯೋಽಭವತ್ಸ್ವಾಮೀ ತದಭ್ಯಂತರಜೀವಿತಃ ।**
**ಸ ಪೂರ್ವಷಷ್ಠಿಲಕ್ಷಾಯುಶ್ಚತುಃಶತಧನುಷ್ಟಮಃ ॥ ೨೭ ॥**

**ಆಯುಷೀತೇ ಚತುರ್ಭಾಗೇ ಪ್ರಾಪ್ತ ರಾಜ್ಯಮಹೋದಯಃ ।**
**ಸುಖಾನ್ಯನ್ವಭವದ್ದೇವೈರುಪನೀತಾನ್ಯನುಕ್ಷಣಮ್ ॥ ೨೮ ॥**

ಮೂವತ್ತುಲಕ್ಷ ಕೋಟಿ ಸಾಗರೋಪಮವರ್ಷಗಳಿಂದ ಎರಡನೆಯ ಅಜಿತ ತೀರ್ಥಂಕರರ ಸಂತಾನಕಾಲವು ಕೊನೆಯನ್ನು ಹೊಂದುತ್ತಿರಲಾಗಿ ಅಂದರೆ ಅಜಿತ ತೀರ್ಥಂಕರರು ಮುಕ್ತರಾಗಿ ಅಷ್ಟು ಕಾಲವು ಕಳೆಯುತ್ತಿರಲಾಗಿ ಆ ಮಧ್ಯದಲ್ಲಿ ಜೀವಿಸಿದ ಶಂಭವಸ್ವಾಮಿಯು ಹುಟ್ಟಿದರು. ಅವರು ಅರುವತ್ತುಲಕ್ಷ ಪೂರ್ವಾ ಯುಷ್ಯವುಳ್ಳವರೂ ನಾಲ್ಕುನೂರು ಬಿಲ್ಲು ಶರೀರೋತ್ಸೇಧವುಳ್ಳವರೂ ನಾಲ್ಕನೆಯ ಒಂದು ಭಾಗ– ಹದಿನೈದು ಲಕ್ಷಪೂರ್ವ ಆಯುಷ್ಯವು ಕಳೆಯುತ್ತಿರಲಾಗಿ ರಾಜ್ಯಾ ಭ್ಯುದಯವನ್ನು ಹೊಂದಿದವರೂ ಆಗಿ ದೇವತೆಗಳು ಪ್ರತಿಕ್ಷಣದಲ್ಲಿ ತಂದೊದಗಿಸಿದ ಸುಖಗಳನ್ನು ಅನುಭವಿಸಿದರು.

**ಚತ್ವಾರಿಂಶಚ್ಚತುರ್ಲಕ್ಷಾ ಪೂರ್ವಾಣಾಂ ಸಮತಿಕ್ರಮೇ ।**
**ಚತುಃಪೂರ್ವಾಂಗಯುಕ್ತಾನಾಮಭ್ರವಿಭ್ರಮದರ್ಶನಾತ್ ॥ ೨೯ ॥**

**ಲಬ್ಧಬೋಧಿಃ ಸಮುತ್ಪನ್ನವೈರಾಗ್ಯೋಜೀವಿತಾದಿಕಮ್ ।**
**ಸ್ವಗತಂ ಸ್ಮರತಿ ಸ್ಮೇತಿ ಶಂಭವಃ ಸ ಭವಾಂತಕಃ ॥ ೩೦ ॥**

ನಾಲ್ಕು ಪೂರ್ವಾಂಗಯುಕ್ತಗಳಾದ ನಾಲ್ವತ್ತುನಾಲ್ಕು ಲಕ್ಷ ಪೂರ್ವಗಳ ಆಯುಷ್ಯ ಸ್ಥಿತಿಯು ಕಳೆಯುತ್ತಿರಲಾಗಿ ಒಂದು ದಿವಸ ಮೇಘಚಲನೆಯನ್ನು ನೋಡಿದುದರಿಂದ ಅವರಿಗೆ ಆತ್ಮಜ್ಞಾನವುಂಟಾಗಿ ಆ ಭವವಿನಾಶಕರಾದ ಶಂಭವ ತೀರ್ಥಂಕರರು ವೈರಾಗ್ಯವನ್ನು ಹೊಂದಿ ಜೀವಿತ ಮೊದಲಾದುದನ್ನು ತಮ್ಮ ಮನಸ್ಸಿನಲ್ಲಿ ಈ ರೀತಿಯಾಗಿ ವಿಚಾರ ಮಾಡುತ್ತಾರೆ.

**ಆಯುರೇವಾಂತಕೋಂತಸ್ಥಂ ಭ್ರಾಂತ್ಯೋಕ್ತೋನ್ಯೋಂತಕಃ ಪರೈಃ ।**
**ಜಂತವಸ್ತದಜಾನಂತೋಽಮ್ರಿಯಂತಾನಂತಶೋಂತಕಾತ್ ॥ ೩೧ ॥**

''ಒಳಗಿರುವ ಆಯುಷ್ಯಕರ್ಮವೇ ಯಮನು. ಬೇರೆಯವರು ಭ್ರಾಂತಿಯಿಂದ ಮತ್ತೊಬ್ಬ ಯಮನಿದ್ದಾನೆಂದು ಹೇಳಿರುತ್ತಾರೆ. ಆ ವಿಷಯವನ್ನು ತಿಳಿಯದ ಪ್ರಾಣಿಗಳು ಯಮನ ದೆಸೆಯಿಂದ ಅನಂತಾವೃತ್ತಿ ಮಡಿದರು.

**ಅಧ್ಯಾಸ್ಯ ಕಾಯಮೇವಾಯಮಂತಕೇನಾಭಿಭೂಯತೇ ।**
**ಭೂಯೋ ಜಂತುರಿದಂ ಜಾಡ್ಯಮತ್ರೈವ ವಸತೀತಿ ಯತ್ ॥ ೩೨ ॥**

ಈ ಯಮನು ದೇಹದಲ್ಲೇ ವಾಸಮಾಡಿಕೊಂಡಿದ್ದು ಇವನಿಂದ ಪ್ರಾಣಿಯು ಮತ್ತೆ ತಿರಸ್ಕೃತವಾಗುತ್ತಿದೆ. ಈ ದೇಹದಲ್ಲೇ ಪ್ರಾಣಿಯು ವಾಸಮಾಡುವುದಿದು ಮೂಢತ್ವ.

**ವಿರಸಾನ್ ಸುರಸಾನ್ ಮತ್ವಾ ವಿಷಯಾನ್ ವಿಷಸನ್ನಿಭಾನ್ ।**
**ಭುಙ್ಕ್ತೇರಾಗರಸಾವಿದ್ಧೋ ಧಿಗ್ಧಿಯೋನಾದಿವಿಪ್ಲವಮ್ ॥ ೩೩ ॥**

ವಿರಸಗಳೂ ವಿಷಕ್ಕೆ ಸಮಾನಗಳೂ ಆದ ವಿಷಯಗಳನ್ನು ಒಳ್ಳೆಯ ರಸವುಳ್ಳವು ಗಳನ್ನಾಗಿ ತಿಳಿದು ರಾಗರಸದಿಂದ ಕೂಡಿದ ಜಂತುವು ಅವುಗಳನ್ನು ಅನುಭವಿಸುತ್ತದೆ. ಬುದ್ಧಿಗೆ ಅನಾದಿಕಾಲದಿಂದ ಪ್ರಾಪ್ತವಾಗಿರುವ ಉಪದ್ರವಕ್ಕೆ ಧಿಕ್ಕಾರವಿರಲಿ.

**ಆತ್ಮೇಂದ್ರಿಯಾಯುರಿಷ್ಟಾರ್ಥಸನ್ನಿಧಿಃ ಸಂಸೃತೌ ಸುಖಮ್ ।**
**ಸ ಸನ್ನಿಧಿರಿಹ ಸ್ಥೇಯಾನ್ ಕಿಂ ನ ವೇತಿ ನ ತರ್ಕ್ಯತೇ ॥ ೩೪ ॥**

ಸಂಸಾರದಲ್ಲಿ ಆತ್ಮ ಇಂದ್ರಿಯ ಆಯುಷ್ಯ ಇಷ್ಟವಸ್ತು ಇವುಗಳ ಸಾನ್ನಿಧ್ಯವು ಸುಖವಾಗಿದೆ. ಆದರೆ ಆ ಸಾನ್ನಿಧ್ಯವು ಸ್ಥಿರವಾದುದೇ ? ಅಲ್ಲವೇ ? ಎಂದು ವಿಚಾರ ಮಾಡುವುದಿಲ್ಲ.

**ವಿದ್ಯುದುದ್ದ್ಯುತಿವಲ್ಲಕ್ಷ್ಮೀರ್ನೇಯಂ ಸ್ಥೇಮಾನಮೃಚ್ಛತಿ ।**
**ವಿಚ್ಛಿನ್ನೇಚ್ಛಃ ಶ್ರಯೇ ಸ್ಥಾಸ್ನುಂ ಸ್ವಚ್ಛಸದ್ಬೋಧದೀಧಿತಿಮ್ ॥ ೩೫ ॥**

ಈ ಸಂಪತ್ತಿಯು ಮಿಂಚಿನ ಪ್ರಕಾಶದಂತೆ ಸ್ಥಿರವಾದುದಲ್ಲ. ಇದರಲ್ಲಿ ಇಚ್ಛೆಯನ್ನು ತೊರೆದವನಾಗಿ ಸ್ಥಿರವಾಗಿರುವ ಸ್ವಚ್ಛವಾದ ಸಮ್ಯಗ್ಜ್ಞಾನವೆಂಬ ಕಿರಣವನ್ನು ಆಶ್ರಯಿಸುವೆನು.''

**ಇತ್ಯಾತ್ತತತ್ತ್ವಸಾರಂ ತಂ ಸ್ತುತ್ವಾ ಲೌಕಾಂತಿಕಾ ಗತಾಃ ।**
**ದತ್ವಾ ರಾಜ್ಯಂ ಸ್ವಪುತ್ರಾಯ ಪ್ರಾಪ್ತನಿಷ್ಕ್ರಮಣೋತ್ಸವಃ ॥ ೩೬ ॥**

**ಸಿದ್ಧಾರ್ಥಶಿಬಿಕಾಮೂಢಾಂ ದೇವೈರಾರುಹ್ಯ ನಿರ್ಗತಃ ।**
**ಸಹೇತುಕವನೇ ರಾಜ್ಞಾಂ ಸಹಸ್ರೇಣಾಪ ಸಂಯಮಮ್ ॥ ೩೭ ॥**

ಈ ಪ್ರಕಾರವಾಗಿ ತತ್ತ್ವಗಳ ಸಾರವನ್ನು ಗ್ರಹಣಮಾಡಿದ ಆ ಶಂಭವ ತೀರ್ಥಂಕರರನ್ನು ಸ್ತುತಿಸಿ ಲೌಕಾಂತಿಕದೇವತೆಗಳು ಹೊರಟುಹೋದರು. ಸ್ವಾಮಿಯು ತಮ್ಮ ಪುತ್ರನಿಗೆ ರಾಜ್ಯವನ್ನು ಕೊಟ್ಟು ಪರಿನಿಷ್ಕ್ರಮಣಕಲ್ಯಾಣೋತ್ಸವವನ್ನು ಹೊಂದಿ ದೇವತೆಗಳಿಂದ ಹೊರಲ್ಪಟ್ಟ ಸಿದ್ಧಾರ್ಥವೆಂಬ ಪಲ್ಲಕ್ಕಿಯನ್ನೇರಿ ಹೊರಟುಹೋಗಿ ಸಹೇತುಕವನದಲ್ಲಿ ಸಹಸ್ರ ರಾಜರುಗಳೊಡನೆ ದೀಕ್ಷೆಯನ್ನು ಹೊಂದಿದರು.

**ಮನಃಪರ್ಯಯಸಂಜ್ಞಾನಃ ಶ್ರಾವಸ್ತಿನಗರಂ ಮುನಿಃ ।**
**ಭಿಕ್ಷಾಹೇತೋರ್ದ್ವಿತೀಯೇಹ್ನಿ ಪ್ರಾವಿಶತ್ಕನಕಪ್ರಭಃ ॥ ೩೮ ॥**

ಮನಃಪರ್ಯಯಜ್ಞಾನವುಳ್ಳವನೂ ಬಂಗಾರದಂತೆ ಕಾಂತಿಯುಳ್ಳವನೂ ಆದ ಆ ಮಹಾಮುನಿಯು ಎರಡನೆಯ ದಿವಸ ಭಿಕ್ಷೆಗೋಸ್ಕರ ಶ್ರಾವಸ್ತಿನಗರವನ್ನು ಪ್ರವೇಶಿಸಿದನು.

**ನೃಪಃ ಸುರೇಂದ್ರದತ್ತಾಖ್ಯಃ ಸುವರ್ಣಾಭಃ ಪ್ರತೀಕ್ಷ್ಯ ತಮ್ ।**
**ದತ್ವಾ ದಾನಂ ಸ್ಫುರದ್ರತ್ನಮಾಪದಾಶ್ಚರ್ಯಪಂಚಕಮ್ ॥ ೩೯ ॥**

ಬಂಗಾರದಂತೆ ಪ್ರಭೆಯುಳ್ಳ ಸುರೇಂದ್ರದತ್ತನೆಂಬ ದೊರೆಯು ಆ ಮುನಿಪುಂಗವರನ್ನು ಇದಿರ್ಗೊಂಡು ಅವರಿಗೆ ಆಹಾರದಾನವನ್ನು ಕೊಟ್ಟು ಪ್ರಕಾಶಮಾನವಾದ ರತ್ನಗಳುಳ್ಳ ಪಂಚಾಶ್ಚರ್ಯಗಳನ್ನು ಹೊಂದಿದನು.

**ಅಥ ಮೌನವ್ರತೇನಾಸ್ಯ ಛ್ಯಾದ್ಮಸ್ಥ್ಯೇಬ್ದೇಷು ಶುದ್ಧಧೀಃ ।**
**ದ್ವಿಸಪ್ತಸು ಗತೇ ದೀಕ್ಷಾವನೇ ಸಾಲತರೋರಧಃ ॥ ೪೦ ॥**

**ಜನ್ಮರ್ಕ್ಷೇ ಕಾರ್ತ್ತಿಕೇ ಕೃಷ್ಣೇ ಚತುರ್ಥ್ಯಾಮಪರಾಹ್ಣಗಃ ।**
**ಷಷ್ಠೋಪವಾಸೋ ಹತ್ವಾಘಾನ್ಯಾಪಾನಂತಚತುಷ್ಟಯಮ್ ॥ ೪೧ ॥**

ಅನಂತರದಲ್ಲಿ ಈ ಮುನೀಶ್ವರರಿಗೆ ಹದಿನಾಲ್ಕು ವರ್ಷಗಳಲ್ಲಿ ಛದ್ಮಸ್ಥಾವಸ್ಥೆಯು ಮೌನವ್ರತದಿಂದ ಕಳೆಯುತ್ತಿರಲಾಗಿ ದೀಕ್ಷಾವನದಲ್ಲಿ ಮತ್ತಿಮರದ ಕೆಳಗೆ ಆರು ಉಪವಾಸಗಳುಳ್ಳವರಾಗಿ ಕಾರ್ತ್ತಿಕಮಾಸದ ಕೃಷ್ಣಪಕ್ಷದ ಚತುರ್ಥೀತಿಥಿಯಲ್ಲಿ ಮೃಗಶಿರನಕ್ಷತ್ರದಲ್ಲಿ ಸಾಯಂಕಾಲ ಘಾತಿಕರ್ಮಗಳನ್ನು ನಾಶಮಾಡಿ ಅನಂತಚತುಷ್ಟಯಗಳನ್ನು ಪಡೆದರು.

**ಕಲ್ಪಾಮರೈಃ ಸಮಂ ಸರ್ವೈಸ್ತ್ರಿವಿಧೈರ್ಜ್ಯೋತಿಷಾದಿಭಿಃ ।**
**ವ್ಯಧಾತ್ಕೈವಲ್ಯಕಲ್ಯಾಣಂ ತದೈವೈತ್ಯಾಮರಾಧಿಪಃ ॥ ೪೨ ॥**

ಆಗಲೇ ದೇವೇಂದ್ರನು ಎಲ್ಲಾ ಕಲ್ಪಾಮರರೊಡನೆಯೂ ಭವನ ವ್ಯಂತರ ಜ್ಯೋತಿಷಾಮರರೊಡನೆಯೂ ಬಂದು ಕೇವಲಜ್ಞಾನಕಲ್ಯಾಣಪೂಜೆಯನ್ನು ಮಾಡಿದನು.

**ಪಂಚೋತ್ತರಶತೋದ್ದಿಷ್ಟೈರ್ಗಣೇಶೈಃ ಪರಿವಾರಿತಃ ।**
**ಚಾರುಷೇಣಾದಿಭಿಃ ಸೋಭಾದ್ಗಿರೀಂದ್ರೋ ಗಿರಿಭಿರ್ಯಥಾ ॥ ೪೩ ॥**

ಚಾರುಷೇಣನೇ ಮೊದಲಾದ ನೂರೈದು ಮಂದಿ ಗಣಧರರಿಂದ ಆವರಿಸಲ್ಪಟ್ಟ ಸ್ವಾಮಿಯು ಪರ್ವತಗಳಿಂದ ಆವರಿಸಿದ ಮಹಾಮೇರುವಿನಂತೆ, ಪ್ರಕಾಶಿಸಿದನು.

**ಶೂನ್ಯಪಂಚೈಕಪಕ್ಷೋಕ್ತ ಚಾರುಪೂರ್ವಧರಾವೃತಃ ।**
**ಶೂನ್ಯದ್ವಯತ್ರಿರಂಧ್ರದ್ವ್ಯೇಕೋಕ್ತಶಿಕ್ಷಕಲಕ್ಷಿತಃ ॥ ೪೪ ॥**

**ಶೂನ್ಯದ್ವಿತಯಷಡ್ರಂಧ್ರಮಿತಾವಧಿವಿಲೋಚನಃ ।**
**ಶೂನ್ಯತ್ರಯೇಂದ್ರಿಯೈಕೋಕ್ತಕೇವಲಾವಗಮಾನ್ವಿತಃ ॥ ೪೫ ॥**

**ಶೂನ್ಯದ್ವಯಾಷ್ಟರಂಧ್ರೈಕಜ್ಞಾತವೈಕ್ರಿಯಕಾನುಗಃ ।**
**ಶೂನ್ಯಪಂಚೈಕಪಕ್ಷೈಕಜ್ಞಾತತುರ್ಯಾವಬೋಧಕಃ ॥ ೪೬ ॥**

**ಶೂನ್ಯತ್ರಿತಯಪಕ್ಷೈಕಸಂಖ್ಯಾವಾದಿವಿಭೂಷಿತಃ ।**
**ಪಿಂಡಿತಾಶೇಷದಿಗ್ವಾಸೋಲಕ್ಷದ್ವಯಪರಿಷ್ಕೃತಃ ॥ ೪೭ ॥**

**ಖಚತುಷ್ಕತ್ರಿವಹ್ನ್ಯುಕ್ತ ಧರ್ಮಾರ್ಯಾದ್ಯಾರ್ಯಿಕಾಗಣಃ ।**
**ತ್ರಿಲಕ್ಷೋಪಾಸಕೋಪೇತಃ ಶ್ರಾವಿಕಾಪಂಚಲಕ್ಷಗಃ ॥ ೪೮ ॥**

**ಅಸಂಖ್ಯದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸಂಸ್ತುತಃ ।**
**ಏವಂ ದ್ವಾದಶಭೇದೋಕ್ತಧರ್ಮಭುದ್ಗಣನಾಯಕಃ ॥ ೪೯ ॥**

**ಚತುಸ್ತ್ರಿಂಶದತೀಶೇಷಪ್ರಾತಿಹಾರ್ಯಾಷ್ಟಕಪ್ರಭುಃ ।**
**ದಿವ್ಯವಾಗ್ಜ್ಯೋತ್ಸ್ನಯಾ ಕೃತ್ಸ್ನಮಾಹ್ಲಾದ್ಯಾನಮಿತಾಂಶುಮಾನ್ ॥ ೫೦ ॥**

**ಶುದ್ಧ ಏವ ಚರನ್ ಪಕ್ಷೇ ಮೋಕ್ಷಲಕ್ಷ್ಮ್ಯಾ ಸಹೋದ್ಗತಃ ।**
**ನಿಷ್ಕಲಂಕೋ ನಿರಾತಂಕೋ ನಿರ್ಧೂತಾರಿಃ ಕುಪಕ್ಷಹೃತ್ ॥ ೫೧ ॥**

**ಮುನಿತಾರಾಗಣಾಕೀರ್ಣಃ ಕಾಮದ್ವೇಷೀ ಮಹೋಷ್ಮಧೃತ್ ।**
**ಸದ್ವೃತ್ತಃ ಸರ್ವದಾ ಪೂರ್ಣಃ ಸದಾಭ್ಯರ್ಣಬುಧೋದಯಃ ॥ ೫೨ ॥**

**ಸದಾ ತ್ರಿಭುವನಾಸೇವ್ಯೋ ಭವ್ಯಪದ್ಮಾವಬೋಧನಃ ।**
**ನಿತ್ಯಧ್ವಸ್ತೋಭಯಧ್ವಾಂತೋ ಲೋಕಾಲೋಕಂ ಪ್ರಕಾಶಯನ್ ॥ ೫೩ ॥**

**ವಿಧುಂ ಸೋಧೋ ವಿಧಾಯೈವ ವ್ಯಹರದ್ಧರ್ಮವೃಷ್ಟಯೇ ।**
**ಪರ್ಜನ್ಯವತ್ಸತಾಂ ಚೇಷ್ಟಾ ವಿಶ್ವಲೋಕಸುಖಪ್ರದಾ ॥ ೫೪ ॥**

ಎರಡು ಸಾವಿರದ ನೂರೈವತ್ತುಮಂದಿ ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಧಾರಿಗಳಾದ ಮುನಿಗಳಿಂದ ಸುತ್ತಲ್ಪಟ್ಟವನೂ ಒಂದು ಲಕ್ಷದ ಇಪ್ಪತ್ತೊಂಬತ್ತು ಸಾವಿರದಮೂರುನೂರು ಮಂದಿ ಶಿಕ್ಷಕಮುನಿಗಳಿಂದ ಯುಕ್ತನೂ ಒಂಬತ್ತು ಸಾವಿರದಆರುನೂರು ಮಂದಿ ಅವಧಿಜ್ಞಾನಿಗಳುಳ್ಳವನೂ ಹದಿನೈದುಸಾವಿರ ಮಂದಿ ಕೇವಲಜ್ಞಾನಿಗಳೊಡನೆ ಕೂಡಿರುವವನೂ ಹತ್ತೊಂಬತ್ತು ಸಾವಿರದ ಎಂಟುನೂರು ಮಂದಿ ವೈಕ್ರಿಯಿಕ ಮಹಿಮೆಯುಳ್ಳ ಮುನಿಗಳಿಂದ ಹಿಂಬಾಲಿಸಲ್ಪಟ್ಟವನೂ ಹನ್ನೆರಡು ಸಾವಿರದ ನೂರೈವತ್ತು ಮಂದಿ ಮನಃಪರ್ಯಯ ಜ್ಞಾನಿಗಳುಳ್ಳವನೂ ಹನ್ನೆರಡು ಸಾವಿರ ಮಂದಿ ವಾದಿಗಳಿಂದ ವಿಭೂಷಿತನೂ ಗಣಧರರ ಹೊರತು ಎಲ್ಲಾ ಒಟ್ಟು ಎರಡು ಲಕ್ಷ ದಿಗಂಬರಮುನಿಗಳಿಂದ ಸುತ್ತಲ್ಪಟ್ಟವನೂ ಮೂರುಲಕ್ಷದ ಮೂವತ್ತು ಸಾವಿರಮಂದಿ ಧರ್ಮಾರ್ಯೆಯೇ ಮೊದಲಾದ ಆರ್ಯಿಕಾಸಮೂಹವುಳ್ಳವನೂ ಮೂರು ಲಕ್ಷ ಶ್ರಾವಕರಿಂದ ಯುಕ್ತನೂ ಐದು ಲಕ್ಷ ಶ್ರಾವಿಕೆಯರುಳ್ಳವನೂ ಅಸಂಖ್ಯದೇವದೇವಿಯರಿಂದ ಸ್ತುತಿಸಲ್ಪಡತಕ್ಕವನೂ ಸಂಖ್ಯಾತ ತಿರ್ಯ

ಕ್ರಾಣಿಗಳಿಂದ ಸ್ತುತಿಸಲ್ಪಟ್ಟವನೂ ಹೀಗೆ ಹನ್ನೆರಡು ಪ್ರಕಾರವಾಗಿ ಹೇಳಲ್ಪಟ್ಟ ಧರ್ಮವನ್ನು ತಿಳಿದಿರುವವರ ಸಮೂಹಕ್ಕೆ ನಾಯಕನೂ ಮೂವತ್ತುನಾಲ್ಕು ಅತಿಶಯಗಳಿಗೂ ಎಂಟು ಪ್ರಾತಿಹಾರ್ಯಗಳಿಗೂ ಪ್ರಭುವೂ ದಿವ್ಯ ವಚನವೆಂಬ ಬೆಳದಿಂಗಳಿನಿಂದ ವಿಶ್ವವನ್ನು ಸಂತೋಷಪಡಿಸಿ ಸೂರ್ಯನನ್ನು ಕೀಳುಮಾಡಿರುವವನೂ ಮೋಕ್ಷಲಕ್ಷ್ಮಿಯೊಡನೆ ಉದಯವುಳ್ಳವನಾಗಿ ಶುಕ್ಲಪಕ್ಷದಲ್ಲೇ ಶುದ್ಧವಾದ ಮತದಲ್ಲೇ ವಿಹರಿಸುವವನೂ ನಿಷ್ಕಲಂಕನೂ ನಿರಾಂತಕನೂ ಶತ್ರುವನ್ನು ದೂರ ಮಾಡಿರುವವನೂ ದುಷ್ಟಪಕ್ಷವನ್ನು ನಾಶಮಾಡುವವನೂ ಮುನಿಗಳೆಂಬ ನಕ್ಷತ್ರ ಸಮೂಹದಿಂದ ವ್ಯಾಪ್ತನೂ ಕಾಮನನ್ನು ದ್ವೇಷಿಸುವವನೂ ಮಹಾತೇಜೋಧಾರಿಯೂ ದುಂಡಾಗಿರುವವನೂ ಸಮ್ಯಕ್ಚಾರಿತ್ರವುಳ್ಳವನೂ ಯಾವಾಗಲೂ ಪರಿಪೂರ್ಣನಾಗಿರುವವನೂ ಸಮೀಪದಲ್ಲಿರುವ ಸಮ್ಯಗ್ಜ್ಞಾನಿಗಳ ಅಭ್ಯುದಯವುಳ್ಳವನೂ ಯಾವಾಗಲೂ ಮೂರು ಲೋಕಗಳಿಂದ ಸೇವಿಸಲ್ಪಡತಕ್ಕವನೂ ಭವ್ಯರೆಂಬ ತಾವರೆಗಳನ್ನು ಅರಳಿಸುವವನೂ ಬಾಹ್ಯಾಭ್ಯಂತರಾಂಧಕಾರವನ್ನು ಹೋಗಲಾಡಿಸಿರುವವನೂ ಲೋಕವನ್ನೂ ಅಲೋಕವನ್ನೂ ಪ್ರಕಾಶಪಡಿಸುವವನೂ ಆದ ಆ ಶಂಭವತೀರ್ಥಂಕರನು ಚಂದ್ರನನ್ನು ಕೀಳುಮಾಡಿಯೇ ಧರ್ಮವರ್ಷಣಕ್ಕೋಸ್ಕರ ವಿಹರಿಸಿದನು. ಸತ್ಪುರುಷರ ವ್ಯಾಪಾರವು, ಮೇಘದಂತೆ, ಸಮಸ್ತಲೋಕಕ್ಕೆ ಸುಖವನ್ನುಂಟುಮಾಡುವುದಾಗಿದೆ.

**ಸಮ್ಮೇದಪರ್ವತಂ ಪ್ರಾಪ್ಯ ತ್ಯಕ್ತಮಾಸವಿಹಾರಕಃ ।**
**ಸಹಸ್ರಮುನಿಭಿಃ ಸಾರ್ಧಂ ಪ್ರತಿಮಾಯೋಗಮಾಗತಃ ॥ ೫೫ ॥**

**ಚೈತ್ರೇ ಮಾಸಿ ಸಿತೇ ಪಕ್ಷೇ ಷಷ್ಠ್ಯಾಮರ್ಕೇಸ್ತಸಮ್ಮುಖೇ ।**
**ಸ್ವಕೀಯಜನ್ಮನಕ್ಷತ್ರೇ ಮೋಕ್ಷಲಕ್ಷ್ಮೀಂ ಸಮಾಗಮತ್ ॥ ೫೬ ॥**

ಶಂಭವತೀರ್ಥಂಕರರು ತಮ್ಮ ಆಯುಷ್ಯಸ್ಥಿತಿಯು ಒಂದು ತಿಂಗಳು ಉಳಿದಿರುವಾಗ ವಿಹಾರವನ್ನು ಬಿಟ್ಟು ಸಮ್ಮೇದಪರ್ವತವನ್ನು ಹೊಂದಿ ಸಾವಿರ ಮುನಿಗಳೊಡನೆ ಪ್ರತಿಮಾಯೋಗವನ್ನು ಧರಿಸಿ ಚೈತ್ರಮಾಸದ ಶುಕ್ಲಪಕ್ಷದ ಷಷ್ಠೀ ತಿಥಿಯಲ್ಲಿ ಸೂರ್ಯಾಸ್ತಮಾನಸಮಯದಲ್ಲಿ ಮೃಗಶೀರ್ಷನಕ್ಷತ್ರದಲ್ಲಿ ಮೋಕ್ಷಲಕ್ಷ್ಮಿಯನ್ನು ಪಡೆದರು.

**ಪಂಚಮಾವಗಮೇಶಂ ತಂ ಪಂಚಮೀಂ ಗತಿಮಾಸ್ಥಿತಮ್ ।**
**ಪಂಚಮೇಭ್ಯರ್ಚ್ಯ ಕಲ್ಯಾಣೇ ಸಂಚಿತಾಯಾ ಯಯುಃಸುರಾಃ ॥ ೫೭ ॥**

ಐದನೆಯದಾದ ಕೇವಲಜ್ಞಾನಕ್ಕೆ ಅಧಿಪತಿಯೂ ಐದನೆಯ ಗತಿಯಾದ ಮೋಕ್ಷವನ್ನು ಹೊಂದಿದವರೂ ಆದ ಶಂಭವತೀರ್ಥಂಕರರನ್ನು ಐದನೆಯದಾದ ನಿರ್ವಾಣ ಕಲ್ಯಾಣದಲ್ಲಿ ಪೂಜಿಸಿ ದೇವತೆಗಳು ಪುಣ್ಯವನ್ನು ಗಳಿಸಿಕೊಂಡು ಹೊರಟು ಹೋದರು.

**ಅಷ್ಟೌ ಶಿಷ್ಟತಮಾನಿ ಸಂಯಮಗುಣಸ್ಥಾನಾನ್ಯತೀತ್ಯ ಕ್ರಮಾ- ।**
**ದಷ್ಟೌ ದುಷ್ಟತಮಾನುಪಾಯನಿಪುಣೋ ನಿರ್ಮಥ್ಯ ಕರ್ಮದ್ವಿಷಃ ॥**
**ಅಷ್ಟಾವಿಷ್ಟತಮಾನ್ ಗುಣಾನವಿಕಲಾನ್ ಕೃತ್ವಾ ತನುಂ ಶಾಶ್ವತೀ- ।**
**ಮಷ್ಟವ್ಯಾಮವನೌ ಸ ಶಂಭವವಿಭುಃ ಶುಂಭತ್ಸುಖಃ ಶೋಭತೇ ॥**

ಉಪಾಯದಲ್ಲಿ ಚತುರನಾದ ಆ ಶಂಭವತೀರ್ಥಂಕರನು ಹನ್ನೊಂದನೆಯ– ಉಪಶಾಂತಕಷಾಯಗುಣಸ್ಥಾನವು ಹೊರತಾಗಿ ಆರನೆಯ– ಪ್ರಮತ್ತಗುಣಸ್ಥಾನ ಮೊದಲುಗೊಂಡು ಹದಿನಾಲ್ಕನೆಯ ಅಯೋಗಿಕೇವಲಿಗುಣಸ್ಥಾನದವರೆಗೆ ಬಹು ಶಿಷ್ಟಗಳಾದ ಎಂಟು ಸಂಯಮಗುಣಸ್ಥಾನಗಳನ್ನು ಕ್ರಮವಾಗಿ ದಾಟಿ ಅತ್ಯಂತ ದುಷ್ಟಗಳಾದ ಜ್ಞಾನಾವರಣ ಮೊದಲಾದ ಎಂಟು ಕರ್ಮ ಶತ್ರುಗಳನ್ನು ನಾಶಮಾಡಿ ಅತ್ಯಂತಪ್ರಿಯಗಳೂ ಪರಿಪೂರ್ಣಗಳೂ ಆದ ಎಂಟು ಗುಣಗಳನ್ನು ಶಾಶ್ವತವಾದ ದೇಹವನ್ನಾಗಿ ಮಾಡಿ ಎಂಟನೆಯ ಭೂಮಿಯಲ್ಲಿ ಪ್ರಕಾಶಮಾನವಾದ ಸುಖವುಳ್ಳವನಾಗಿ ಶೋಭಿಸುತ್ತಾನೆ.

**ವಿಪುಲವಿಮಲಲಕ್ಷ್ಮೀರ್ವೀಕ್ಷಿತಾನಂಗಲಕ್ಷ್ಮೀ- ।**
**ರಿಹ ಭುವಿ ವಿಮಲಾದಿರ್ವಾಹನೋ ದೇಹದೀಪ್ತ್ಯಾ ॥**
**ಜಿತರವಿರಹಮಿಂದ್ರೋ ರುಂದ್ರಕಲ್ಯಾಣಲಕ್ಷ್ಮ್ಯಾ ।**
**ಪ್ರಕಟಿತಪರಿರಂಭಃ ಶಂಭವಃ ಶಂ ಕ್ರಿಯಾದ್ವಃ ॥ ೫೯ ॥**

ಈ ಭೂಮಿಯಲ್ಲಿ–ಮನುಷ್ಯಲೋಕದಲ್ಲಿ ವಿಶಾಲವೂ ನಿರ್ಮಲವೂ ಆದ ಸಂಪತ್ತಿಯುಳ್ಳವನೂ ದೀಕ್ಷಾಲಕ್ಷ್ಮಿಯನ್ನು ನೋಡಿದವನೂ ಆದ ವಿಮಲ ವಾಹನನೂ ಶರೀರಕಾಂತಿಯಿಂದ ಸೂರ್ಯನನ್ನು ಜಯಿಸಿದ ಅಹಮಿಂದ್ರನೂ ಆಗಿದ್ದು ವಿಶೇಷವಾದ ಪಂಚಕಲ್ಯಾಣಲಕ್ಷ್ಮಿಯಿಂದ ಪ್ರಕಟಿತವಾದ ಆಲಿಂಗನವುಳ್ಳ ಶಂಭವತೀರ್ಥಂಕರನು ನಿಮ್ಮಗಳಿಗೆ ಸುಖವನ್ನುಂಟುಮಾಡಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣ ಮಹಾಪುರಾಣಸಂಗ್ರಹೇ**
**ಶಂಭವತೀರ್ಥಕರಪುರಾಣಂ ನಾಮೈಕೋನಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಶಂಭವತೀರ್ಥಕರಪುರಾಣವೆಂಬ
ನಲ್ವತ್ತೊಂಬತ್ತನೆಯ ಪರ್ವವು ಸಮಾಪ್ತವಾದುದು.

---



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಶ್ರಾವಂತಿಯೆಂಬ ಪಟ್ಟಣದೊಳ್ ಜಿತಾರಿ–ದೃಢರಥಮಹಾರಾಜಂಗಂ ಸುಷೇಣಾದೇವಿಗಂ ಮೃಗಶಿರಾನಕ್ಷತ್ರದೊಳುದಯಿಸಿದ ಸುವರ್ಣವರ್ಣಮನುಳ್ಳ ನಾಲ್ಕುನೂರು ಬಿಲ್ಲುತ್ಸೇಧಮನುಳ್ಳ ಕುದುರೆಯ ಲಾಂಛನಮನುಳ್ಳ ತ್ರಿಮುಖಪ್ರಜ್ಞಪ್ತಿ–ಯಕ್ಷಯಕ್ಷಿಯರನುಳ್ಳ ಅರುವತ್ತು ಲಕ್ಷಪೂರ್ವಾಯುಷ್ಯಮನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ದತ್ತಧವಳಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಶಂಭವತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

# ಅಥ ಅಭಿನಂದನತೀರ್ಥಕರಪುರಾಣಂ

**ಅರ್ಥೇ ಸತ್ಯೇ ವಚಃ ಸತ್ಯಂ ಸದ್ವಕ್ತುರ್ವಕ್ತಿ ಸತ್ಯತಾಮ್ ।**
**ಯಸ್ಯಾಸೌ ಪಾತು ವಂದಾರೂನ್ನಂದಯನ್ನಭಿನಂದನಃ ॥ ೧ ॥**

ಪದಾರ್ಥವು ಸತ್ಯವಾಗಿದ್ದರೆ ಅದನ್ನು ಹೇಳುವ ವಚನವು ಸತ್ಯವಾಗಿರುವುದು. ಯಾವ ಸತ್ಯವಕ್ತೃವಿನ ವಚನವು ಅವನ ಸತ್ಯತೆಯನ್ನು ಹೇಳುವುದೋ ಅಂತಹ ಈ ಅಭಿನಂದನಸ್ವಾಮಿಯು ಭವ್ಯರನ್ನು ಸಂತೋಷಪಡಿಸುವವನಾಗಿ ಕಾಪಾಡಲಿ.

**ಜಂಬೂಪಲಕ್ಷಿತೇ ದ್ವೀಪೇ ವಿದೇಹೇ ಪ್ರಾಚಿ ದಕ್ಷಿಣೇ ।**
**ಸೀತಾಯಾ ವಿಷಯೋ ಭಾಗೇ ವ್ಯಭಾಸೀನ್ಮಂಗಲಾವತೀ ॥ ೨ ॥**

ಜಂಬೂದ್ವೀಪದ ಪೂರ್ವವಿದೇಹಕ್ಷೇತ್ರದಲ್ಲಿ ಸೀತಾನದಿಯ ದಕ್ಷಿಣಭಾಗದಲ್ಲಿ ಮಂಗಲಾವತಿಯೆಂಬ ದೇಶವು ಪ್ರಕಾಶಿಸುತ್ತಿರುವುದು.

**ರಾಜಾ ಮಹಾಬಲಸ್ತತ್ರ ನಗರೇ ರತ್ನಸಂಚಯೇ ।**
**ಸ್ವಾಮಿಸಂಪತ್ಸಮೇತೋಽಭೂಚ್ಚತುರ್ವರ್ಣಾಶ್ರಮಾಶ್ರಯಃ ॥ ೩ ॥**

ಅಲ್ಲಿಯ ರತ್ನಸಂಚಯನಗರದಲ್ಲಿ ರಾಜಸಂಪತ್ತಿಯಿಂದ ಕೂಡಿರುವವನೂ ನಾಲ್ಕು ವರ್ಣಾಶ್ರಮಗಳಿಗೆ ಆಶ್ರಯನೂ ಆದ ಮಹಾಬಲನೆಂಬ ರಾಜನಿದ್ದನು.

**ಪಾತಿ ತಸ್ಮಿನ್ ಮಹೀಂ ನಾಸೀದ್ಧ್ವನಿರನ್ಯಾಯ ಇತ್ಯಯಮ್ ।**
**ಪ್ರಾವರ್ತಂತ ಪ್ರಜಾಃ ಸ್ವೇಷು ಸ್ವೇಷು ಮಾರ್ಗೇಷ್ವನರ್ಗಲಾಃ ॥ ೪ ॥**

ಅವನು ಭೂಮಿಯನ್ನು ಪಾಲಿಸುತ್ತಿರಲಾಗಿ ಅನ್ಯಾಯವೆಂಬೀ ಶಬ್ದವೇ ಅಲ್ಲಿರಲಿಲ್ಲ. ಪ್ರಜೆಗಳು ತಂತಮ್ಮ ಮಾರ್ಗಗಳಲ್ಲಿ ತಡೆಯಿಲ್ಲದವರಾಗಿ ಪ್ರವರ್ತಿಸುತ್ತಿದ್ದರು.

**ಷಾಡ್ಗುಣ್ಯಂ ತತ್ರ ನೈರ್ಗುಣ್ಯಮಗಾದ್ವಿಗತವಿದ್ವಿಷಿ ।**
**ನಿರ್ಗುಣೋಽಪಿ ಗುಣೈಸ್ತ್ಯಾಗಸತ್ಯಾದಿ ಭಿರಸೌ ಗುಣೀ ॥ ೫ ॥**

ಶತ್ರುರಹಿತನಾದ ಆ ಮಹಾಬಲರಾಜನಲ್ಲಿ ಸಂಧಿ ವಿಗ್ರಹ ಯಾನ ಆಸನ ದ್ವೈಧ ಆಶ್ರಯಗಳೆಂಬ ಆರು ಗುಣಗಳ ಭಾವವು ನಿರ್ಗುಣತ್ವವನ್ನು ಹೊಂದಿತು–ಅವನಲ್ಲಿ ಆ ಆರು ಗುಣಗಳಿರಲಿಲ್ಲ. ಇವನು ಈ ಗುಣಗಳ ದೃಷ್ಟಿಯಿಂದ ನಿರ್ಗುಣನಾಗಿದ್ದರೂ ತ್ಯಾಗ ಸತ್ಯ ಮೊದಲಾದ ಗುಣಗಳಿಂದ ಗುಣಗಳುಳ್ಳವನಾಗಿದ್ದನು.

**ನಿಸ್ಸಪತ್ನಃ ಶ್ರಿಯಃ ಸೋಽಭೂತ್ಪತಿಸ್ತಸ್ಯಾಃ ಸರಸ್ವತೀ– ।**
**ಕೀರ್ತಿವೀರಶ್ರಿಯೋಽಭೂವನ್ ಸಪತ್ನ್ಯಃ ಪ್ರೀತಚೇತಸಃ ॥ ೬ ॥**

**ಅನ್ಯವಾಕ್ ಶ್ರೋತ್ರಯೋಃ ಕೀರ್ತಿಸ್ತಸ್ಯ ವಾಚಿ ಸರಸ್ವತೀ ।**
**ವೀರಲಕ್ಷ್ಮೀರಸೌ ವಕ್ಷಸ್ಯಹಮಿತ್ಯತುಷತ್ತಮಾಮ್ ॥ ೭ ॥**

ಶತ್ರುರಹಿತನಾದ ಆ ಮಹಾಬಲನು ಲಕ್ಷ್ಮಿಗೆ ಪತಿಯಾಗಿದ್ದನು. ಆ ಲಕ್ಷ್ಮಿಗೆ ಸರಸ್ವತಿ ಕೀರ್ತಿ ವೀರಶ್ರೀಯರು ಸವತಿಯರಾಗಿದ್ದರು. "ಪ್ರೀತಿಯುಕ್ತವಾದ ಮನಸ್ಸುಳ್ಳ ಆ ಮಹಾಬಲನ ಕೀರ್ತಿಯು ಬೇರೆಯವರ ಮಾತಿನಲ್ಲಿಯೂ ಕಿವಿಗಳಲ್ಲಿಯೂ ವಾಸಮಾಡುತ್ತಾಳೆ. ದೂರದಲ್ಲಿರುತ್ತಾಳೆಂದು ಭಾವವು. ಅವನ ಮಾತಿನಲ್ಲಿ ಸರಸ್ವತಿಯು ವಾಸಮಾಡುತ್ತಾಳೆ. ಅಶುಚಿಸ್ಥಾನದಲ್ಲಿರುತ್ತಾಳೆಂದು ಭಾವವು. ನಾನು ಅವನ ಎದೆಯಲ್ಲಿ ವಾಸಮಾಡುತ್ತೇನೆ" ಎಂದು ಈ ವೀರಲಕ್ಷ್ಮಿಯು ಬಹಳವಾಗಿ ಸಂತೋಷಪಟ್ಟಳು.

**ಕಾಂತಾಕಲ್ಪಲತಾರಮ್ಯೋ ನಿಜಕಾಯಾಮರದ್ರುಮಃ ।**
**ಫಲತಿ ಸ್ಮ ಸುಖಂ ತಸ್ಯ ಯದ್ಯತ್ತೇನಾಭಿವಾಂಛಿತಮ್ ॥ ೮ ॥**

ಪತ್ನಿಯರೆಂಬ ಕಲ್ಪಲತೆಗಳಿಂದ ರಮಣೀಯವಾಗಿರುವ ತನ್ನ ಶರೀರವೆಂಬ ಕಲ್ಪವೃಕ್ಷವು ಅವನು ಇಚ್ಛಿಸಿದ ಸುಖವನ್ನೆಲ್ಲ ಅವನಿಗೆ ಕೊಟ್ಟಿತು.

**ರಮ್ಯರಾಮಾಮುಖಾಂಭೋಜಸೇವಾಲೋಲಾಕ್ಷಿಷಟ್ಪದಃ ।**
**ಸುಖೇನ ಸೋಽನಯದ್ದೀರ್ಘಂ ಕಾಲಂ ಕಾಲಕಲಾಮಿವ ॥ ೯ ॥**

ರಮಣೀಯವಾದ ರಮಣೀಮುಖಕಮಲದ ಸೇವೆಯಲ್ಲಿ ಆಸಕ್ತವಾದ ನೇತ್ರಗಳೆಂಬ ದುಂಬಿಗಳುಳ್ಳವನಾದ ಆ ಮಹಾಬಲನು, ಕಾಲದ ಒಂದು ಅಂಶವನ್ನು ಕಳೆಯುವಂತೆ, ದೀರ್ಘವಾದ ಕಾಲವನ್ನು ಸುಖದಿಂದ ಕಳೆದನು.

**ಕದಾಚಿಜ್ಜಾತವೈರಾಸ್ಯಃ ಕಾಮೇ ಭೋಗೇಷ್ವತರ್ಪಣಾತ್ ।**
**ಸೂನವೇ ಧನಪಾಲಾಯ ದತ್ವಾ ರಾಜ್ಯಂ ಮಹಾಮನಾಃ ॥ ೧೦ ॥**

**ಆಧಾತ್ಸಂಯಮಮಾಸಾದ್ಯ ಗುರುಂ ವಿಮಲವಾಹನಮ್ ।**
**ಏಕಾದಶಾಂಗಧಾರ್ಯೇಷ ಭಾವಿತದ್ವ್ಯಷ್ಟಕಾರಣಃ ॥ ೧೧ ॥**

**ತೀರ್ಥಕೃನ್ನಾಮ ಸಂಪ್ರಾಪತ್ಫಲಕಲ್ಯಾಣಪಂಚಕಮ್ ।**
**ಯೇನ ತೀರ್ಥಕರೋಽಯಂ ಸ್ಯಾತ್ಕಿಂ ನಾಪ್ನುವಂತಿ ಮನಸ್ವಿನಃ ॥ ೧೨ ॥**

ಉದಾರಮನಸ್ಸಿನವನಾದ ಈ ಮಹಾಬಲನು ಒಂದಾನೊಂದು ಕಾಲದಲ್ಲಿ ಇಷ್ಟವಾದ ಭೋಗದಲ್ಲಿಯೂ ತೃಪ್ತಿಯುಂಟಾಗದಿರುವುದರಿಂದ ವಿರಸತ್ವ–ವೈರಾಗ್ಯವುಳ್ಳವನಾಗಿ ಧನಪಾಲನೆಂಬ ಪುತ್ರನಿಗೆ ರಾಜ್ಯವನ್ನು ಕೊಟ್ಟು ವಿಮಲವಾಹನನೆಂಬ ಗುರುವನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡು ಏಕಾದಶಾಂಗಶಾಸ್ತ್ರವನ್ನು ತಿಳಿದು ಷೋಡಶಭಾವನೆಗಳನ್ನು ಭಾವಿಸಿ ಪಂಚಕಲ್ಯಾಣಫಲಗಳುಳ್ಳ ತೀರ್ಥಕರನಾಮಕರ್ಮವನ್ನು ಹೊಂದಿದನು. ಅದರಿಂದ ಇವನು ತೀರ್ಥಕರನಾಗುವನು. ಮನಸ್ಸನ್ನು ಸ್ವಾಧೀನಪಡಿಸಿರುವವರು ಏನನ್ನುತಾನೆ ಹೊಂದುವುದಿಲ್ಲ ?

**ಆಯುಷೋಂತೇ ಸ ಸನ್ನ್ಯಸ್ಯ ವಿಜಯೇನುತ್ತರಾದಿಮೇ ।**
**ತ್ರಯಸ್ತ್ರಿಂಶತ್ಸಮುದ್ರಾಯುರಹಮಿಂದ್ರತ್ವಮಾಯಯೌ ॥ ೧೩ ॥**

ಆ ಮಹಾಬಲಮುನಿಯು ತನ್ನ ಆಯುಷ್ಯದ ಕೊನೆಯಲ್ಲಿ ಸನ್ಯಾಸವಿಧಿಯಿಂದ ಮಡಿದು ಪಂಚಾನುತ್ತರವಿಮಾನಗಳಲ್ಲಿ ಮೊದಲನೆಯದಾದ ವಿಜಯವಿಮಾನದಲ್ಲಿ ಮೂವತ್ತುಮೂರು ಸಾಗರೋಪಮವರ್ಷಾಯುಷ್ಯವುಳ್ಳ ಅಹಮಿಂದ್ರತ್ವವನ್ನು ಹೊಂದಿದನು.

**ತತ್ರೋಕ್ತದೇಹಲೇಶ್ಯಾವಿದ್ಗುಣೋಚ್ಛ್ವಾಸಾದಿಸಂಯುತಃ ।**
**ಪಂಚಸಾತಸುಖಾಸ್ವಾದೀ ಭವಾಂತೇ ಶಾಂತಮಾನಸಃ ॥ ೧೪ ॥**

**ಧ್ಯಾಯನ್ ವೈರಾಗ್ಯಸಂಪತ್ತ್ಯಾ ತತ್ರಾಸ್ಥಾದ್ಭಕ್ತಿತೋಽರ್ಹತಃ ।**
**ಕೃತ್ಸ್ನಕರ್ಮಕ್ಷಯಂ ಕರ್ತುಂ ತಸ್ಮಿನ್ನತ್ರಾಗಮಿಷ್ಯತಿ ॥ ೧೫ ॥**

ಆ ವಿಜಯವಿಮಾನದ ದೇವತೆಗಳಿಗೆ ಹೇಳಲ್ಪಟ್ಟಿರುವ ಶರೀರ ಲೇಶ್ಯಾ ಜ್ಞಾನ ಗುಣ ಉಚ್ಛ್ವಾಸ ಮೊದಲಾದುವುಗಳಿಂದ ಕೂಡಿದವನೂ ಶುಭವಾದ ಜ್ಞಾನ ಲಾಭ ಭೋಗ ಉಪಭೋಗ ವೀರ್ಯಗಳಿಂದಲೂ ಪಂಚ ಶುಭೇಂದ್ರಿಯಗಳಿಂದಲೂ ಉಂಟಾದ ಸುಖವನ್ನನುಭವಿಸುವವನೂ ಜೀವಿತಾಂತ್ಯದಲ್ಲಿ ಶಾಂತವಾದ ಮನಸ್ಸುಳ್ಳವನೂ ವೈರಾಗ್ಯಸಂಪತ್ತಿಯಿಂದ ಅರ್ಹತ್ಪರಮೇಶ್ವರರನ್ನು ಭಕ್ತಿಯಿಂದ ಧ್ಯಾನಿಸುವವನೂ ಆಗಿ ಅಲ್ಲಿದ್ದನು. ಸಕಲಕರ್ಮಗಳನ್ನು ನಾಶಮಾಡುವುದಕ್ಕೋಸ್ಕರ ಆ ಅಹಮಿಂದ್ರದೇವನು ಇಲ್ಲಿಗೆ ಬರುವನು.

**ದ್ವೀಪೇಸ್ಮಿನ್ ಭಾರತೇ ಕ್ಷೇತ್ರೇ ಸಾಕೇತನಗರಾಧಿಪಃ ।**
**ಇಕ್ಷ್ವಾಕುಃ ಕಾಶ್ಯಪೋ ವಂಶಗೋತ್ರಾಭ್ಯಾಮಧ್ಭುತೋದಯಃ ॥ ೧೬ ॥**

**ರಾಜಾ ಸ್ವಯಂವರೋ ನಾಮ್ನಾ ಸಿದ್ಧಾರ್ಥಾಸ್ಯಾಗ್ರವಲ್ಲಭಾ ।**
**ಷಣ್ಮಾಸಾನ್ ವಸುಧಾರಾದಿಪೂಜಾಮಾಪ್ನುವತೀ ಸತೀ ॥ ೧೭ ॥**

**ವೈಶಾಖಸ್ಯ ಸಿತೇ ಪಕ್ಷೇ ಷಷ್ಠ್ಯಾಂ ಭೇ ಸಪ್ತಮೇ ಶುಭೇ ।**
**ಸ್ವಪ್ನೇಕ್ಷಾನಂತರಂ ವಕ್ತ್ರಂ ವಿಶಂತಂ ವೀಕ್ಷ್ಯ ಸಾ ಗಜಮ್ ॥ ೧೮ ॥**

**ನೃಪಾತ್ಸ್ವಪ್ನಫಲೈಸ್ತುಷ್ಟಾ ದಿಷ್ಟ್ಯಾಸೂತ ತಮುತ್ತಮಮ್ ।**
**ಮಾಘೇ ಮಾಸ್ಯತಿಥೌ ಯೋಗೇ ಧವಳದ್ವಾದಶೀದಿನೇ ॥ ೧೯ ॥**

ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಅಯೋಧ್ಯಾನಗರಾಧಿಪತಿಯೂ ಇಕ್ಷ್ವಾಕುವಂಶಜನೂ ಕಾಶ್ಯಪಗೋತ್ರಜನೂ ಆಶ್ಚರ್ಯಕರವಾದ ಅಭ್ಯುದಯವುಳ್ಳವನೂ ಆದ ಸ್ವಯಂವರನೆಂಬ ರಾಜನಿದ್ದನು. ಇವನ ಮುಖ್ಯಪತ್ನಿಯು ಸಿದ್ಧಾರ್ಥಳೆಂಬವಳು. ಆಕೆಯು ಆರುತಿಂಗಳವರೆಗೆ ವಸುಧಾರೆ ಮೊದಲಾದ ಪೂಜೆಯನ್ನು ಮಾಡಿದವಳಾಗಿ ವೈಶಾಖ ಮಾಸದ ಶುಕ್ಲಪಕ್ಷದ ಷಷ್ಠೀತಿಥಿಯಲ್ಲಿ ಶುಭವಾದ ಏಳನೆಯ–ಪುನರ್ವಸುನಕ್ಷತ್ರದಲ್ಲಿ ಹದಿನಾರು ಸ್ವಪ್ನಗಳನ್ನು ಕಂಡಬಳಿಕ ಮುಖವನ್ನು ಪ್ರವೇಶಿಸುತ್ತಿರುವ ಆನೆಯನ್ನು ನೋಡಿ ಪ್ರಾತಃಕಾಲದಲ್ಲಿ ರಾಜನಿಂದ ಸ್ವಪ್ನಫಲಗಳನ್ನು ತಿಳಿದು ಸಂತುಷ್ಟಳಾಗಿ ಮಾಘಮಾಸದ ಶುಕ್ಲಪಕ್ಷದ ದ್ವಾದಶೀ ದಿನದಲ್ಲಿ ಬ್ರಹ್ಮಯೋಗದಲ್ಲಿ ಆ ಉತ್ತಮಪುತ್ರನನ್ನು ಪ್ರಸವಿಸಿದಳು.

**ತತ್ಪ್ರಭಾವವಿಶೇಷೇಣ ಪ್ರಕಂಪಿತನಿಜಾಸನಃ ।**
**ತ್ರೈಲೋಕ್ಯೇಶಸಮುದ್ಭೂತಿಮವಬುದ್ಧ್ಯಾವಧೇಃ ಸುಧೀಃ ॥ ೨೦ ॥**

**ತಂ ತದಾವಾಪ್ಯ ದೇವೇಂದ್ರಃ ಸ್ವದೇವ್ಯಾ ದಿವ್ಯಮಾನವಮ್ ।**
**ದೇವಾವೃತೋ ದ್ರುತದ್ರಾವೀ ದೇವಾದ್ರೌ ದಿವ್ಯವಿಷ್ಟರೇ ॥ ೨೧ ॥**

**ಬಾಲಾರ್ಕಸನ್ನಿಭಂ ಬಾಲಂ ಜಲೈಃ ಕ್ಷೀರಾಪಗಾಪತೇಃ ।**
**ಸ್ನಾಪಯಿತ್ವಾ ವಿಭೂಷ್ಯಾಖ್ಯಾಂ ಪ್ರಖ್ಯಾಪ್ಯಾಸ್ಯಾಭಿನಂದನಮ್ ॥ ೨೨ ॥**

**ಬಹುಬಾಹುಃ ಸಹಸ್ರಾಕ್ಷೋ ಬಹುಭಾವರಸಾನ್ವಿತಃ ।**
**ವಿಚಿತ್ರಕರಣಾರಬ್ಧೈರಂಗಹಾರೈರ್ನಭೋಂಗಣೇ ॥ ೨೩ ॥**

**ಉದ್ಧತಾಭಿನಯಪ್ರಾಯಂ ಭಕ್ತ್ಯಾನೃತ್ಯತ್ಸ ತಾಂಡವಮ್ ।**
**ಗತೋ ರಾಗಃ ಪರಾಂ ಕೋಟೀಂ ಧೀರೋದಾತ್ತಾಂಶ್ಚ ನಾಟಯೇತ್ ॥**

ಆ ಪುತ್ರನ ಪ್ರಭಾವವಿಶೇಷದಿಂದ ನಡುಗಿದ ತನ್ನ ಪೀಠವುಳ್ಳವನೂ ಬುದ್ಧಿಶಾಲಿಯೂ ಆದ ದೇವೇಂದ್ರನು ಅವಧಿಜ್ಞಾನದಿಂದ ತ್ರಿಲೋಕಾಧಿಪತಿಯ ಉತ್ಪತ್ತಿಯನ್ನು ತಿಳಿದು ಆಗ ಆ ಸ್ವಾಮಿಯನ್ನು ಹೊಂದಿ ತನ್ನ ದೇವಿಯ ಕೈಯಿಂದ ಆ ದಿವ್ಯ ಮಾನವನನ್ನು ತೆಗೆದುಕೊಂಡು ದೇವತೆಗಳಿಂದ ಸುತ್ತಲ್ಪಟ್ಟು ಶೀಘ್ರಗಮನವುಳ್ಳವನಾಗಿ ದೇವಗಿರಿ–ಮೇರುವಿನಲ್ಲಿ ದಿವ್ಯಪೀಠದಲ್ಲಿ ಬಾಲಸೂರ್ಯನಿಗೆ ಸಮಾನನಾದ ಬಾಲಕನನ್ನು ಕ್ಷೀರಸಮುದ್ರದ ಜಲಗಳಿಂದ ಸ್ನಾನಮಾಡಿಸಿ ದಿವ್ಯಾಭರಣಗಳಿಂದ ಅಲಂಕರಿಸಿ ಇವನಿಗೆ ಅಭಿನಂದನನೆಂಬ ಹೆಸರನ್ನು ಪ್ರಕಟಿಸಿ ಅನೇಕ ಬಾಹುಗಳುಳ್ಳವನೂ ಸಹಸ್ರನೇತ್ರಗಳುಳ್ಳವನೂ ಅನೇಕಭಾವಗಳಿಂದಲೂ ರಸಗಳಿಂದಲೂ ಕೂಡಿದವನೂ ಆಗಿ ವಿಚಿತ್ರವಾದ ಸಂಗೀತನರ್ತನಗಳಿಂದ ಆರಂಭಿಸಲ್ಪಟ್ಟ ಅಂಗ ವಿಕ್ಷೇಪಗಳಿಂದ ಆಕಾಶವೆಂಬ ಅಂಗಣದಲ್ಲಿ ಉದ್ಧತಾಭಿನಯ ಪ್ರಚುರವಾದ ತಾಂಡವ ನರ್ತನವನ್ನು ಭಕ್ತಿಯಿಂದ ಮಾಡಿದನು. ತುತ್ತ ತುದಿಯನ್ನು ಹೊಂದಿದ ಪ್ರೀತಿಯು ಧೀರೋದಾತ್ತನಾಯಕರನ್ನೂ ಕುಣಿಸುವುದು. ಧೀರೋದಾತ್ತನಾದ ದೇವೇಂದ್ರನೂ ಭಕ್ತಿಪ್ರೀತ್ಯತಿಶಯದಿಂದ ಕುಣಿದನೆಂದು ಭಾವವು.

**ನಿವೃತ್ತ್ಯಾಗತ್ಯ ಸಾಕೇತಂ ನಿಷ್ಕೃಷ್ಯ ಕೃತಕಾರ್ಭಕಮ್ ।**
**ಪಿತ್ರೋಃ ಪುರೋ ನಿಧಾಯ್ಯೈನಂ ಸುರೇಡಾರಾಮರಾಸ್ಪದಮ್ ॥ ೨೫ ॥**

ಹಿಂದಿರುಗಿ ಅಯೋಧ್ಯಾನಗರಕ್ಕೆ ಬಂದು ಮಾಯಾಶಿಶುವನ್ನು ಹೋಗಲಾಡಿಸಿ ಈ ಜಿನಬಾಲಕನನ್ನು ತಂದೆತಾಯಿಗಳ ಮುಂದಿರಿಸಿ ದೇವೇಂದ್ರನು ದೇವತೆಗಳ ಸ್ಥಾನಕ್ಕೆ–ಸ್ವರ್ಗಕ್ಕೆ ಹೋದನು.

**ಶಂಭವಸ್ಯಾಂತರೇ ಯಾತೇ ದಶಲಕ್ಷಾಬ್ಧಿಕೋಟಿಭಿಃ ।**
**ತದಭ್ಯಂತರವರ್ತ್ಯಾಯುರಾಬಭಾಸೇ ವಿಧಾಂ ತ್ರಿಭಿಃ ॥ ೨೬ ॥**

ಹತ್ತು ಲಕ್ಷಕೋಟಿ ಸಾಗರವರ್ಷಗಳಿಂದ ಶಂಭವತೀರ್ಥಂಕರರ ಅಂತರ–ಮಧ್ಯ ಕಾಲವು ಕಳೆಯುತ್ತಿರಲಾಗಿ ಅದರ ಮಧ್ಯಗತವಾದ ಆಯುಷ್ಯವುಳ್ಳ ಅಭಿನಂದನ ತೀರ್ಥಕರನು ಮತಿಶ್ರುತಾವಧಿಜ್ಞಾನಗಳಿಂದ ಪ್ರಕಾಶಿಸಿದನು.

**ಪಂಚಾಶಲ್ಲಕ್ಷಪೂರ್ವಾಯುಃ ಸಾರ್ಧತ್ರಿಶತಚಾಪಮಃ ।**
**ಬಾಲೇಂದುರಿವ ಸಜ್ಯೋತ್ಸ್ನಃ ಪುಣ್ಯೌಘೋ ವಾ ಸ್ಫುರದ್ರುಸಃ ॥ ೨೭ ॥**

**ಸಶ್ರೀರ್ವೃದ್ಧಿಂ ಸ ಸಂಪ್ರಾಪತ್ಸರ್ವಾನಾಹ್ಲಾದಯನ್ ಗುಣೈಃ ।**
**ಚಾಮೀಕರಚ್ಛವಿರ್ಯಾತೇ ಕೌಮಾರೇ ಕಾಮಸಾರಥೌ ॥ ೨೮ ॥**

**ಪೂರ್ವದ್ವಾದಶಲಕ್ಷೇಷು ಸಾರ್ಧೇಷು ಪ್ರಾಪ್ತವಾನ್ ಸ ತತ್ ।**
**ರಾಜ್ಯಂ ನಿಯೋಜ್ಯ ಭುಂಕ್ಷ್ವೇತಿ ಪಿತರ್ಯಾಪ್ತೇ ತಪೋವನಮ್॥ ೨೯ ॥**

ಐವತ್ತುಲಕ್ಷ ಪೂರ್ವಯುಷ್ಯವುಳ್ಳವನೂ ಮುನ್ನೂರೈವತ್ತು ಬಿಲ್ಲುತ್ಸೇಧವುಳ್ಳವನೂ ಬೆಳದಿಂಗಳಿನೊಡನೆ ಕೂಡಿರುವ ಬಾಲಚಂದ್ರನಂತಿರುವವನೂ ಪುಣ್ಯ ರಾಶಿಯಂತೆ ಪ್ರಕಾಶಮಾನವಾದ ಅನುರಾಗವುಳ್ಳವನೂ ಸಂಪತ್ತಿಯುಕ್ತನೂ ಬಂಗಾರದಂತೆ ಶರೀರಕಾಂತಿಯುಳ್ಳವನೂ ಆದ ಆ ಅಭಿನಂದನನು ಗುಣಗಳಿಂದ ಎಲ್ಲರನ್ನೂ ಸಂತೋಷಪಡಿಸುವವನಾಗಿ ವೃದ್ಧಿಯನ್ನು ಹೊಂದಿದನು. ಕಾಮನೇ ಸಾರಥಿಯಾಗಿರುವ ಕೌಮಾರವು ಹನ್ನೆರಡುವರೆ ಲಕ್ಷ ಪೂರ್ವವರ್ಷಗಳಲ್ಲಿ ಕಳೆಯುತ್ತಿರಲಾಗಿ ''ಪಸರಿಸುತ್ತಿರುವ ರಾಜ್ಯವನ್ನು ಅನುಭವಿಸು'' ಎಂದು ಗೊತ್ತು ಮಾಡಿ ತಂದೆಯು ತಪೋವನವನ್ನು ಹೊಂದುತ್ತಿರಲಾಗಿ ಅಭಿನಂದನತೀರ್ಥಕರನು ರಾಜ್ಯವನ್ನು ಹೊಂದಿದನು.

**ಇಂದುಃ ಕಾಮ್ಯಯತೇ ಕಾಂತಿಂ ದೀಪ್ತಿಮೀಪ್ಸ್ಯತ್ಯಹರ್ಪತಿಃ ।**
**ವಾಂಛತ್ಯೈಶ್ವರ್ಯಮಸ್ಯೇಂದ್ರಃ ಶಮಮಾಶಾಸತೇಸ್ಪೃಹಾಃ ॥ ೩೦ ॥**

ಚಂದ್ರನು ಈ ಅಭಿನಂದನತೀರ್ಥಕರನ ಕಾಂತಿಯನ್ನು ಇಚ್ಛಿಸುತ್ತಾನೆ. ಸೂರ್ಯನು ತೇಜಸ್ಸನ್ನು ಹೊಂದಲಿಚ್ಛಿಸುತ್ತಾನೆ. ಇಂದ್ರನು ಇವನ ಐಶ್ವರ್ಯವನ್ನಿಚ್ಛಿಸುತ್ತಾನೆ. ಆಶೆಯಿಲ್ಲದ–ತಪಸ್ವಿಗಳು ಇವನ ಶಮ–ಶಾಂತಿಯನ್ನಿಚ್ಛಿಸುತ್ತಾರೆ.

**ನಿಜೋತ್ಕೃಷ್ಟಾನುಭಾಗಾನಾಮನಂತಗುಣವೃದ್ಧಿತಃ ।**
**ತಸ್ಯ ಪುಣ್ಯಾಣವಃ ಸರ್ವೇ ಫಲಂತಿ ಸ್ಮ ಪ್ರತಿಕ್ಷಣಮ್ ॥ ೩೧ ॥**

ತನ್ನ ಉತ್ಕೃಷ್ಟಫಲದಾನಶಕ್ತಿಗಳ ಅನಂತಗುಣ ವೃದ್ಧಿಯಿಂದ ಅವನ ಎಲ್ಲಾ ಪುಣ್ಯ ಪರಮಾಣುಗಳು ಪ್ರತಿಕ್ಷಣದಲ್ಲಿ ಫಲಿಸುತ್ತಿದ್ದುವು. ಪುಣ್ಯಪರಮಾಣುಗಳ ಫಲದಾನ ಶಕ್ತಿಯು ಅನಂತಗುಣವೃದ್ಧಿಯಾಗಿ ಪ್ರತಿಕ್ಷಣದಲ್ಲಿ ಸುಖವನ್ನುಂಟುಮಾಡುತ್ತಿದ್ದಿತೆಂದು ಭಾವವು.

**ಅಭಿಭೂಯಾನ್ಯತೇಜಾಂಸಿ ಸರ್ವಪ್ರಕೃತಿರಂಜನಾತ್ ।**
**ತಾರೇಶಮಂಶುಮಂತಂ ಚ ಜಿತ್ವಾರಾಜತ್ಸ್ವ ತೇಜಸಾ ॥ ೩೨ ॥**

ಅನ್ಯವಸ್ತುಗಳ ತೇಜಸ್ಸುಗಳನ್ನು ತಿರಸ್ಕರಿಸಿ ಸಮಸ್ತ ಪ್ರಜೆಗಳನ್ನು ಸಂತೋಷಪಡಿಸಿರುವುದರಿಂದ ಚಂದ್ರನನ್ನೂ ಸೂರ್ಯನನ್ನೂ ತನ್ನ ತೇಜಸ್ಸಿನಿಂದ ಜಯಿಸಿ ಪ್ರಕಾಶಿಸಿದನು.

**ನಮಿತಾಖಿಲಭೂಪಾಲಮೌಲಿರಿತ್ಯತ್ರ ಕಾ ಸ್ತುತಿಃ ।**
**ಪುಣ್ಯಾತ್ಮಾ ಜನ್ಮನೋಯಂ ಚೇದಮರೇಂದ್ರಾರ್ಚಿತಕ್ರಮಃ ॥ ೩೩ ॥**

ಹುಟ್ಟಿದಂದಿನಿಂದ ಈ ಪುಣ್ಯಾತ್ಮನು ದೇವೇಂದ್ರನಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೆಂದಮೇಲೆ ಸಮಸ್ತರಾಜರ ಕಿರೀಟಗಳನ್ನು ಬಗ್ಗಿಸಿದವನೆನ್ನುವುದರಲ್ಲಿ ಸ್ತುತಿಯಾವುದು ?

**ನೇಯಾ ಶ್ರೀ ರಾಗಿಣೀವಾಸ್ಯಾಭೂದ್ರಕ್ತಾ ಕೋತ್ರ ವಿಸ್ಮಯಃ ।**
**ಮೋಕ್ಷಲಕ್ಷ್ಮ್ಯಾ ಚ ಚೇದೇಷ ಕಟಾಕ್ಷೈರ್ಗೋಚರೀಕೃತಃ ॥ ೩೪ ॥**

ಇವನು ಮೋಕ್ಷಲಕ್ಷ್ಮಿಯಿಂದಲೂ ಕಡೆಗಣ್ಣಿನ ನೋಟಗಳಿಂದ ನೋಡಲ್ಪಟ್ಟನೆಂದಮೇಲೆ ಹೊಂದುವುದಕ್ಕೆ ಯೋಗ್ಯಳಾದ ಇವನ ರಾಜ್ಯಲಕ್ಷ್ಮಿಯು ಅನುರಾಗವುಳ್ಳ ಸ್ತ್ರೀಯಂತಾದಳೆನ್ನುವುದರಲ್ಲಿ ಆಶ್ಚರ್ಯವೇನು ?

**ಶುದ್ಧಶ್ರದ್ಧಾನಮಕ್ಷಯ್ಯಮಯಸ್ತೀರ್ಥಕರಾಹ್ವಯಃ ।**
**ಆತ್ಮಸಂಪದಿತಃ ಕಾನ್ಯಾ ಜಗತ್ತ್ರಯಜಯೈಷಿಣಃ ॥ ೩೫ ॥**

ನಾಶರಹಿತವಾದ ಶುದ್ಧಶ್ರದ್ಧಾನ–ಕ್ಷಾಯಿಕಸಮ್ಯಕ್ತ್ವವೂ ತೀರ್ಥಕರತ್ವವೆಂಬ ಪುಣ್ಯವೂ ಮೂರು ಲೋಕಗಳನ್ನು ಜಯಿಸಲಿಚ್ಛಿಸುವ ಈ ಅಭಿನಂದನನ ಆತ್ಮಸಂಪತ್ತುಗಳಾಗಿರುತ್ತವೆ. ಇವುಗಳಿಗಿಂತಲೂ ಬೇರೆಯಾದ ಆತ್ಮಸಂಪತ್ತಾವುದು ?

**ಸ ಧೀರಲಲಿತಃ ಪೂರ್ವಂ ರಾಜ್ಯೇ ಧೀರೋದ್ಧತೋ ಯಮೀ ।**
**ಧೀರಪ್ರಶಾಂತಃ ಪರ್ಯಂತೇ ಧೀರೋದಾತ್ತತ್ವಮೇಯಿವಾನ್ ॥ ೩೬ ॥**

ಆ ಅಭಿನಂದನನು ಮೊದಲು–ಕೌಮಾರಾವಸ್ಥೆಯಲ್ಲಿ ಧೀರಲಲಿತನಾಯಕನೂ ರಾಜ್ಯಕಾಲದಲ್ಲಿ ಧೀರೋದ್ಧತನಾಯಕನೂ ತಪಸ್ವಿಯಾಗಿ ಧೀರಪ್ರಶಾಂತನಾಯಕನೂ ಆಗಿ ಕೊನೆಯಲ್ಲಿ ಧೀರೋದಾತ್ತನಾಯಕತ್ವವನ್ನು ಹೊಂದಿದನು.

**ಅಫಲನ್ ಶಕ್ತಯಸ್ತಿಸ್ರಃ ಸಿದ್ಧಿರ್ಧರ್ಮಾನುಬಂಧಿನೀ ।**
**ತಾ ಏವ ಶಕ್ತಯೋ ಯಾ ಹಿ ಲೋಕದ್ವಯಹಿತಾವಹಾಃ ॥ ೩೭ ॥**

ಅವನ ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿಗಳು ಫಲಿಸಿದುವು. ಆ ಶಕ್ತಿತ್ರಯದಿಂದುಂಟಾದ ಫಲಗಳ ಸಮೃದ್ಧಿಯು ಧರ್ಮವನ್ನು ಅನುಸರಿಸಿದುದಾಗಿದ್ದಿತು. ಇಹಪರಲೋಕಗಳಲ್ಲಿ ಹಿತವನ್ನುಂಟುಮಾಡುವ ಶಕ್ತಿಗಳೇ ನಿಜವಾದ ಶಕ್ತಿಗಳು.

**ಕೀರ್ತೌ ಶ್ರುತಿಸ್ತುತೀ ತಸ್ಯ ಗೀತಿರ್ವರ್ಣಾಕ್ಷರಾಂಕಿತಾ ।**
**ಪ್ರೀತಿರ್ದೃಷ್ಟೌ ಜನಸ್ಯಾಸೀತ್ಸ್ಮೃತಿಶ್ಚ ಗುಣಗೋಚರಾ ॥ ೩೮ ॥**

ಅಭಿನಂದನಸ್ವಾಮಿಯ ಕೀರ್ತಿಯಲ್ಲಿ ಜನರ ಶ್ರವಣಸಂಕೀರ್ತನಗಳು ಆಸಕ್ತವಾಗಿದ್ದುವು. ಜನರ ಗಾನವು ಅಭಿನಂದನಸ್ವಾಮಿಯ ವರ್ಣಾಕ್ಷರಾಂಕಿತವಾಗಿದ್ದಿತು. ಅವನನ್ನು ನೋಡುವುದರಲ್ಲಿ ಜನರಿಗೆ ಪ್ರೀತಿಯಿದ್ದಿತು. ಅವನ ಗುಣವಿಷಯಕವಾದ ಸ್ಮರಣವಿದ್ದಿತು. ಜನರು ಅವನ ಕೀರ್ತಿಯನ್ನು ಕೇಳುತ್ತಲೂ ಹೊಗಳುತ್ತಲೂ ವರ್ಣಾಕ್ಷರಗಳಿಂದ ಗುಣಗಾನವನ್ನು ಮಾಡುತ್ತಲೂ ಪ್ರೀತಿಯಿಂದ ಅವನನ್ನು ನೋಡುತ್ತಲೂ ಅವನ ಗುಣಸ್ಮರಣವನ್ನು ಮಾಡುತ್ತಲೂ ಇದ್ದರೆಂದು ಭಾವವು.

**ಗುಣೈಃ ಪ್ರಾಗೇವ ಸಂಪೂರ್ಣಃ ಸ ಸರ್ವೈ ರಾಭಿಗಾಮಿಕೈಃ ।**
**ನ ಚೇತ್ಕಿಂ ಸೇವಿತುಂ ಗರ್ಭೇ ನಿಲಿಂಪಾಃ ಕಂಪಿತಾಸನಾಃ ॥ ೩೯ ॥**

ಆ ಅಭಿನಂದನಸ್ವಾಮಿಯು ಆದರಣೀಯಗಳಾದ ಸಮಸ್ತಗುಣಗಳಿಂದ ಮೊದಲೇ ಪರಿಪೂರ್ಣನಾಗಿದ್ದನು. ಹಾಗಿಲ್ಲದಿದ್ದರೆ ಕಂಪಿತವಾದ ಆಸನವುಳ್ಳ ದೇವತೆಗಳು ಮಾತೃಗರ್ಭದಲ್ಲಿ ಅವನ ಸೇವೆಯನ್ನು ಮಾಡುವುದಕ್ಕೆ ಕಾರಣವೇನು ?

**ಪುಷ್ಕಲಂ ಪ್ರಾಗ್ಭವಾಯಾತಂ ಬೋಧತ್ರಿತಯಮುತ್ತಮಮ್ ।**
**ತಸ್ಯ ಪ್ರಜ್ಞಾಗುಣಾಃ ಕೇನ್ಯೇ ವರ್ಣನೀಯಾ ಮನೀಷಿಭಿಃ ॥ ೪೦ ॥**

ವಿಶಿಷ್ಟವೂ ಉತ್ತಮವೂ ಆದ ಮತಿಶ್ರುತಾವಧಿಜ್ಞಾನತ್ರಯವು ಪೂರ್ವಭವದಿಂದ ಅನುಸರಿಸಿ ಬಂದಿದೆ. ವಿದ್ವಾಂಸರಿಂದ ವರ್ಣನೀಯವಾದ ಅವನ ಪ್ರಜ್ಞಾಗುಣಗಳು ಮಾತ್ರಾವುವು ? ಆ ಗುಣಗಳು ಸಾಲವೇ ? ಎಂದು ಭಾವವು.

**ನ ವಾಚ್ಯಃ ಪೃಥಗುತ್ಸಾಹೋ ಯದ್ಯಯಂ ಹಂತುಮೀಹತೇ ।**
**ಮೋಹಶತ್ರುಂ ಸಶೇಷಾಘಂ ಖಲಂ ತ್ರೈಲೋಕ್ಯಕಂಟಕಮ್ ॥ ೪೧ ॥**

ಇತರಕರ್ಮಗಳೊಡನೆ ಕೂಡಿರುವವನೂ ದುಷ್ಟನೂ ಮೂರು ಲೋಕಗಳಿಗೆ ಕಂಟಕನೂ ಆದ ಮೋಹವೆಂಬ ಶತ್ರುವನ್ನು ಕೊಲ್ಲುವುದಕ್ಕೆ ಈ ಅಭಿನಂದನಸ್ವಾಮಿಯು ಇಚ್ಛಿಸುತ್ತಾನೆಂದಮೇಲೆ ಬೇರೆ ವ್ಯವಸಾಯವು ಹೇಳತಕ್ಕುದಿಲ್ಲ.

**ಉದ್ಗಮೇಪಿ ಪ್ರತಾಪೋಸ್ಯ ಮಧ್ಯಂದಿನದಿನಾಧಿಪಮ್ ।**
**ನಿಷ್ಪ್ರತಾಪಂ ಕರೋತ್ಯದ್ಯ ತಮನ್ಯಃ ಸಹತೇ ನು ಕಃ ॥ ೪೨ ॥**

ಈ ಅಭಿನಂದನಸ್ವಾಮಿಯ ಪ್ರಾದುರ್ಭಾವದಲ್ಲಿಯೂ ಇವನ ಪ್ರತಾಪವು ಮಧ್ಯಾಹ್ನದ ಸೂರ್ಯನನ್ನು ಪ್ರತಾಪರಹಿತನನ್ನಾಗಿ ಮಾಡುತ್ತದೆ. ಈಗಂತು ಅವನನ್ನು ಮತ್ತಾವನು ಸಹಿಸುವನು ?

**ವಿಲಂಘ್ಯಯಿಷವೋನ್ಯೋನ್ಯಂ ವರ್ಧಂತೇ ಸ್ಮಾಖಿಲಾ ಗುಣಾಃ ।**
**ಸಮಾನಂ ವರ್ಧಮಾನಾನಾಂ ಸ್ಪರ್ಧಾ ಕೇನ ನಿಷಿಧ್ಯತೇ ॥ ೪೩ ॥**

ಈ ಅಭಿನಂದನಸ್ವಾಮಿಯ ಸಮಸ್ತಗುಣಗಳು ಒಂದನ್ನೊಂದು ಮೀರಬೇಕೆಂಬ ಇಚ್ಛೆಯುಳ್ಳುವಾಗಿ ಬೆಳೆಯುತ್ತಿವೆ. ಸಮಾನವಾಗಿ ಬೆಳೆಯುವವರ ಹೋರಾಟವನ್ನು ತಡೆಯುವವರಾರು ?

**ಏವಂ ಸಂಸಾರಸಾರೋರುವಿಸರದ್ಭೋಗಭಾಗಿನಃ ।**
**ಪ್ರಾಂತಬೋಧದಿನಾಧೀಶಪ್ರೋದ್ಗಮೋದಯಭೂಭೃತಃ ॥ ೪೪ ॥**

**ಖಚತುಷ್ಕೇಂದ್ರಿಯರ್ತ್ವಗ್ನಿಮಿತಪೂರ್ವೇಷು ನಿಷ್ಠಿತೇ ।**
**ರಾಜ್ಯಕಾಲೇ ಜಗದ್ಭರ್ತುರಷ್ಟಪೂರ್ವಾಂಗಗೇಷ್ವತಃ ॥ ೪೫ ॥**

**ಪ್ರಾದುರ್ಭೂತಕ್ಷಣಪ್ರಾಂತವಿನಶ್ಯತ್ಸೌಧವಿಭ್ರಮೇ ।**
**ಗಂಧರ್ವನಗರೇ ಸಾಕ್ಷಾಜ್ಜಾತೇ ಸಂಜಾತಬೋಧಿಕಃ ॥ ೪೬ ॥**

**ಅವಶ್ಯಂ ಭಂಗುರಾ ಭೋಗಾ ಭಂಜಯಂತ್ಯತ್ರ ಮಾಂ ಸ್ಥಿತಮ್ ।**
**ನ ಪಾತಯತಿ ಕಿಂ ಸ್ವಸ್ಥಂ ಭಂಗುರೋ ವಿಟಪಃ ಸ್ಫುಟಮ್ ॥ ೪೭ ॥**

**ತನುರ್ಮಯೇಪ್ಸಿತೈಃ ಸರ್ವೈಃ ಸ್ವೀಕೃತಾಪಿ ತ್ಯಜೇದ್ಧ್ರುವಮ್ ।**
**ಪ್ರಾಯಃ ಪಣ್ಯಾಂಗನೇವೇತಿ ವಿರಕ್ತಃ ಸ್ವತನಾವಭೂತ್ ॥ ೪೮ ॥**

ಈ ಪ್ರಕಾರವಾಗಿ ಸಂಸಾರದಲ್ಲಿ ಸಾರವೂ ಅಧಿಕವೂ ಪಸರಿಸುತ್ತಿರುವುದೂ ಆದ ಭೋಗವನ್ನು ಹೊಂದಿರುವವನೂ ಕೊನೆಯಲ್ಲಿ ಕೇವಲಜ್ಞಾನವೆಂಬ ಸೂರ್ಯನ ಆವಿರ್ಭಾವಕ್ಕೆ ಉದಯಪರ್ವತರೂಪನೂ ಆದ ಜಗದ್ಭರ್ತ–ಅಭಿನಂದನಸ್ವಾಮಿಗೆ ಎಂಟು ಪೂರ್ವಾಂಗಸಹಿತವಾದ ೩೬ ॥ ಲಕ್ಷ ಪೂರ್ವವರ್ಷಗಳಲ್ಲಿ ರಾಜ್ಯಕಾಲವು ಕಳೆಯುತ್ತಿರಲು(ಅಷ್ಟುಕಾಲ ರಾಜ್ಯವಾಳಿ) ಬಳಿಕ ಪ್ರಾದುರ್ಭವಿಸಿದ ಕ್ಷಣದ ಕೊನೆಯಲ್ಲಿ ನಾಶವಾಗುತ್ತಿರುವುದೂ ಉಪ್ಪರಿಗೆ ಮನೆಯಂತಿರುವುದೂ ದೇವನ ಇಂದ್ರಜಾಲದಿಂದಾದುದೂ ಆದ ನಗರವನ್ನು ನೋಡಿ ಆತ್ಮಜ್ಞಾನಾವಿರ್ಭಾವವುಳ್ಳವನಾದ ಅಭಿನಂದನಸ್ವಾಮಿಯು ''ಭೋಗಗಳು ಅವಶ್ಯವಾಗಿ ಅನಿತ್ಯಗಳು. ಈ ಭೋಗಗಳಲ್ಲಿರುವ ನನ್ನನ್ನು ಇವು ನಾಶಮಾಡುತ್ತವೆ. ನಾಶಶೀಲವಾದ ಮರವು ತನ್ನಲ್ಲಿರುವವನನ್ನು ನಿಜವಾಗಿ ಬೀಳಿಸುವುದಿಲ್ಲವೇ ? ನಾನು ಇಚ್ಛಿಸಿದ ವಸ್ತುಗಳೆಲ್ಲ ಈ ಶರೀರವನ್ನು ಹೊಂದಿದರೂ ಇದು ಪ್ರಾಯಿಕವಾಗಿ, ಪಣ್ಯಸ್ತ್ರೀಯಂತೆ, ನಿಶ್ಚಯವಾಗಿ ನನ್ನನ್ನು ತ್ಯಜಿಸುವುದು'' ಎಂದು ತನ್ನ ಶರೀರದಲ್ಲಿ ವಿರಕ್ತಿಯುಳ್ಳವನಾದನು.

**ಸತ್ಯಾಯುಷಿ ಮೃತಿಸ್ತಸ್ಮಿನ್ನಸತ್ಯತ್ರಾಸ್ತಿ ಸಾಪಿ ನ ।**
**ಬಿಭೇತಿ ಚೇನ್ಮೃತೇಸ್ತೇನ ಭೇತವ್ಯಂ ಪೂರ್ವಮಾಯುಷಃ ॥ ೪೯ ॥**

“ಆತ್ಮನಲ್ಲಿ ಆಯುಷ್ಯಕರ್ಮವಿದ್ದರೆ ಮರಣವಿರುವುದು. ಅದಿಲ್ಲದಿದ್ದರೆ ಮರಣವೂ ಇರುವುದಿಲ್ಲ. ಮರಣಕ್ಕೆ ಹೆದರುವವನು ಅದಕ್ಕೆ ಕಾರಣವಾದ ಆಯುಷ್ಯಕರ್ಮಕ್ಕೆ ಮೊದಲು ಹೆದರಬೇಕು.

**ಗಂಧರ್ವನಗರೇಣೈವ ಸಂವಾದಃ ಸರ್ವಸಂಪದಾಮ್ ।**
**ವ್ಯಥಾಯ್ಯಭ್ರವಿಲಾಯಿತ್ವವಿಧೇರಪಧಿಯಾಮಪಿ ॥ ೫೦ ॥**

ಸಕಲಸಂಪತ್ತುಗಳಿಗೆ ಗಂಧರ್ವನಗರದೊಡನೆಯೇ ಸದೃಶತೆಯ ಬುದ್ಧಿಯಿಲ್ಲದವರಿಗೂ ಮೇಘವಿನಾಶದರೀತಿಯಿಂದ ತೋರಿಸಲ್ಪಟ್ಟಿದೆ.”

**ಇತ್ಯಪಶ್ಯತ್ತ ದೈವೈನಮಾನರ್ಚುರಮರದ್ವಿಜಾಃ ।**
**ಸುರೈಃ ಸಂಪ್ರಾಪ್ತನಿಷ್ಕ್ರಾಂತಿಕಲ್ಯಾಣಃ ಶಮಿತೇಂದ್ರಿಯಃ ॥ ೫೧ ॥**

**ಹಸ್ತಚಿತ್ರಾಖ್ಯಯಾನಾಧಿರೂಢೋಗ್ರೋದ್ಯಾನಮಾಗತಃ ।**
**ಮಾಘೇ ಸಿತೇ ಸ್ವಗರ್ಭರ್ಕ್ಷೇ ದ್ವಾದಶ್ಯಾಮಪರಾಹ್ಣಗಃ ॥ ೫೨ ॥**

**ದೀಕ್ಷಾಂ ಷಷ್ಠೋಪವಾಸೇನ ಜೈನೀಂ ಜಗ್ರಾಹ ರಾಜಭಿಃ ।**
**ಸಹಸ್ರಸಂಖ್ಯೈರ್ವಿಖ್ಯಾತೈಸ್ತದಾಪ್ತಜ್ಞಾನತುರ್ಯಕಃ ॥ ೫೩ ॥**

**ದ್ವಿತೀಯೇಹನಿ ಸಾಕೇತಂ ಬುಭುಕ್ಷುಃ ಪ್ರಾವಿಶನ್ನೃಪಃ ।**
**ತಂ ಪ್ರತೀಕ್ಷ್ಯೇಂದ್ರದತ್ತೋನ್ನಂ ದತ್ವಾಪಾಶ್ಚರ್ಯಪಂಚಕಮ್ ॥ ೫೪ ॥**

ಹೀಗೆ ಮನಸ್ಸಿನಿಂದ ವಿಚಾರಮಾಡಿದನು. ಆಗಲೇ ದೇವರ್ಷಿಗಳು ಈ ಸ್ವಾಮಿಯನ್ನು ಪೂಜಿಸಿದರು. ದೇವತೆಗಳಿಂದ ಪರಿನಿಷ್ಕ್ರಮಣಕಲ್ಯಾಣವನ್ನು ಹೊಂದಿದವನೂ ಇಂದ್ರಿಯಗಳನ್ನು ಶಮನಮಾಡಿದವನೂ ಹಸ್ತಚಿತ್ರವೆಂಬ ಪಲ್ಲಕ್ಕಿಯನ್ನು ಹತ್ತಿ ಅಗ್ರೋದ್ಯಾನಕ್ಕೆ ಬಂದು ಮಾಘಮಾಸದ ಶುಕ್ಲಪಕ್ಷದ ದ್ವಾದಶೀತಿಥಿಯಲ್ಲಿ ಪುನರ್ವಸುನಕ್ಷತ್ರದಲ್ಲಿ ಸಾಯಂಕಾಲ ಸಾವಿರಮಂದಿ ಪ್ರಸಿದ್ಧರಾಜರುಗಳೊಡನೆ ಆರು ಉಪವಾಸಗಳನ್ನು ಮಾಡಿ ಜೈನದೀಕ್ಷೆಯನ್ನು ತೆಗೆದುಕೊಂಡನು. ಆಗ ನಾಲ್ಕನೆಯದಾದ ಮನಃಪರ್ಯಯಜ್ಞಾನವನ್ನು ಹೊಂದಿದವನೂ ಭೋಜನ ಮಾಡಬೇಕೆಂಬ ಇಚ್ಛೆಯುಳ್ಳವನೂ ಆಗಿ ಎರಡನೆಯ ದಿವಸದಲ್ಲಿ ಅಯೋಧ್ಯಾ ನಗರವನ್ನು ಪ್ರವೇಶಿಸಿದನು. ಇಂದ್ರದತ್ತನೆಂಬ ರಾಜನು ಅವನನ್ನು ಇದಿರ್ಗೊಂಡು ಆಹಾರವನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಪಡೆದನು.

**ಅಥ ಮೌನವ್ರತೇನೇತೇ ಛಾದ್ಮಸ್ಥ್ಯೇಷ್ಟಾದಶಾಬ್ದಕೇ ।**
**ದೀಕ್ಷಾವನೇಸನಕ್ಷ್ಮಾಜಮೂಲೇ ಷಷ್ಠೋಪವಾಸಿನಃ ॥ ೫೫ ॥**

**ಸಿತೇ ಪೌಷೇ ಚತುರ್ದಶ್ಯಾಂ ಸಾಯಾಹ್ನೇ ಭೇಸ್ಯ ಸಪ್ತಮೇ ।**
**ಕೇವಲಾವಗಮೋ ಜಜ್ಞೇ ವಿಶ್ವಾಮರಸಮರ್ಚಿತಃ ॥ ೫೬ ॥**

ಬಳಿಕ ಮೌನವ್ರತದಿಂದ ಹನ್ನೆರಡು ವರ್ಷ ಛದ್ಮಸ್ಥಕಾಲವು ಕಳೆಯುತ್ತಿರಲು ದೀಕ್ಷಾವನದಲ್ಲಿ ಕಕ್ಕೆಮರದ ಬುಡದಲ್ಲಿ ಆರು ಉಪವಾಸಗಳುಳ್ಳ ಈ ಅಭಿನಂದನ ಸ್ವಾಮಿಗೆ ಪುಷ್ಯಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ಸಾಯಂಕಾಲ ಪುನರ್ವಸು ನಕ್ಷತ್ರದಲ್ಲಿ ಸಮಸ್ತದೇವತೆಗಳಿಂದ ಪೂಜಿತವಾದ ಕೇವಲಜ್ಞಾನವು ಪ್ರಾದುರ್ಭವಿಸಿತು.

**ತ್ರಿಖೈಕೋಕ್ತೈರ್ಗಣಾಧೀಶೈರ್ವಜ್ರನಾಭ್ಯಾದಿನಾಮಭಿಃ ।**
**ಖದ್ವಯೇಂದ್ರಿಯಪಕ್ಷೋಕ್ತೈಸ್ತ್ಯಕ್ತಾಂಗೈಃ ಪೂರ್ವಧಾರಿಭಿಃ ॥ ೫೭ ॥**

**ಖಾಕ್ಷಖದ್ವಯವಹ್ನಿದ್ವಿಪ್ರಮಾಲಕ್ಷಿತಶಿಕ್ಷಕೈಃ ।**
**ಖದ್ವಯಾಷ್ಟನವಜ್ಞೇಯೈಃ ಪ್ರಾಜ್ಞೈಸ್ತ್ರಿಜ್ಞಾನಲೋಚನೈಃ ॥ ೫೮ ॥**

**ಖತ್ರಯರ್ತ್ವೇಕಸಂಖ್ಯಾನೈಃ ಕೇವಲಜ್ಞಾನಮಾನಿತೈಃ ।**
**ಶೂನ್ಯತ್ರಿತಯರಂಧ್ರೈಕಮಿತವೈಕ್ರಿಯಿಕರ್ಷಿಭಿಃ ॥ ೫೯ ॥**

**ಶೂನ್ಯಪಂಚರ್ತುರುದ್ರೋಕ್ತ ಮನಃಪರ್ಯಯಬೋಧನೈಃ ।**
**ಏಕಾದಶಸಹಸ್ರೇಡ್ಯವಾದಿಭಿರ್ವಂದಿತಕ್ರಮಃ ॥ ೬೦ ॥**

**ಲಕ್ಷತ್ರಿತಯಸಂಪಿಂಡಿತಾಶೇಷಯತಿನಾಯಕಃ ।**
**ಖದ್ವಯರ್ತುಖವಹ್ನ್ಯಗ್ನಿಸಂಖ್ಯಾಭಿರಭಿತೋ ನುತಃ ॥ ೬೧ ॥**

**ಪೌರುಷೇಣಾರ್ಯಿಕಾದ್ಯಾರ್ಯಿಕಾಭಿರ್ಜಗದಧೀಶ್ವರಃ ।**
**ಲಕ್ಷತ್ರಯೋದಿತೋಪಾಸಕಾಭ್ಯರ್ಚಿತಪದದ್ವಯಃ ॥ ೬೨ ॥**

**ಲಕ್ಷಪಂಚಪ್ರಮಾಪ್ರೋಕ್ತಶ್ರಾವಿಕಾಲೋಕಸಂಸ್ತುತಃ ।**
**ಅಸಂಖ್ಯದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸೇವಿತಃ ॥ ೬೩ ॥**

**ಇತಿ ದ್ವಾದಶನಿರ್ದಿಷ್ಟಶಿಷ್ಟಭವ್ಯಗಣಾಗ್ರಣೀಃ ।**
**ಧರ್ಮವೃಷ್ಟಿಂ ಕಿರನ್ ದೂರಂ ವಿಹೃತ್ಯಾರ್ಯಾವನೀತಲಮ್ ॥ ೬೪ ॥**

**ಯದೃಚ್ಛಯಾಪ್ಯ ಸಮ್ಮೇದಂ ಸ್ಥಿತ್ವಾ ಮಾಸಂ ವಿನಾ ಧ್ವನೇಃ ।**
**ತಾತ್ಕಾಲಿಕಕ್ರಿಯಾಯುಕ್ತೋ ಧ್ಯಾನದ್ವಯಮಯೋಮಲಃ ॥ ೬೫ ॥**

**ಮುನಿಭಿರ್ಬಹುಭಿಃ ಪ್ರಾಹ್ಣೇ ಪ್ರತಿಮಾಯೋಗವಾನಗಾತ್ ।**
**ಭೇ ಸಿತೇ ಸಪ್ತ ಮೇ ಷಷ್ಠ್ಯಾಂ ವೈಶಾಖೇಯಂ ಪರಂ ಪದಮ್॥ ೬೬ ॥**

ವಜ್ರನಾಭಿ ಮೊದಲಾದ ಹೆಸರುಗಳುಳ್ಳ ನೂರಮೂರುಮಂದಿ ಗುಣಧರರಿಂದಲೂ ಪರಿಗ್ರಹತ್ಯಾಗಿಗಳಾದ ಎರಡು ಸಾವಿರದ ಐದುನೂರು ಮಂದಿ ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಜ್ಞರಾದ ಮುನಿಗಳಿಂದಲೂ ಎರಡು ಲಕ್ಷದ ಮೂವತ್ತುಸಾವಿರದ ಐವತ್ತುಮಂದಿ ಶಿಕ್ಷಕಮುನಿಗಳಿಂದಲೂ ಒಂಬತ್ತುಸಾವಿರದ ಎಂಟುನೂರು ಮಂದಿ ಪ್ರಾಜ್ಞರಾದ ಮತಿಶ್ರುತಾವಧಿಜ್ಞಾನಿಗಳಿಂದಲೂ ಹದಿನಾರು ಸಾವಿರ ಮಂದಿ ಕೇವಲಜ್ಞಾನಿಗಳಿಂದಲೂ ಹತ್ತೊಂಬತ್ತು ಸಾವಿರಮಂದಿ ವಿಕ್ರಿಯರ್ದ್ಧಿಧಾರಿಗಳಾದ ಮುನಿಗಳಿಂದಲೂ ಹನ್ನೊಂದು ಸಾವಿರದ ಆರು ನೂರೈವತ್ತು ಮಂದಿ ಮನಃಪರ್ಯಯಜ್ಞಾನಿಗಳಿಂದಲೂ ಹನ್ನೊಂದು ಸಾವಿರಮಂದಿ ಸ್ತುತ್ಯರಾದ ವಾದಿಗಳಿಂದಲೂ ಪಾದಗಳಿಗೆ ನಮಸ್ಕಾರವನ್ನು ಮಾಡಿಸಿಕೊಳ್ಳುವವನೂ ಒಟ್ಟು ಮೂರುಲಕ್ಷ ಯತಿಗಳಿಗೆಲ್ಲ ಸ್ವಾಮಿಯೂ ೩೩೦೬೦೦ ಮಂದಿ ಪೌರುಷೇಣ ಮೊದಲಾದ ಆರ್ಯಿಕೆಯರಿಂದ ಸ್ತುತಿಸಲ್ಪಟ್ಟವನೂ ಜಗತ್ತಿಗೆ ಪ್ರಭುವೂ ೩ ಲಕ್ಷ ಶ್ರಾವಕರಿಂದ ಪೂಜಿಸಲ್ಪಟ್ಟ ಎರಡು ಪಾದಗಳುಳ್ಳವನೂ ೫ ಲಕ್ಷ ಶ್ರಾವಿಕೆಯರಿಂದ ಸ್ತುತಿಸಲ್ಪಟ್ಟವನೂ ಅಸಂಖ್ಯಾತ ದೇವದೇವಿಯರಿಂದ ಸ್ತುತಿಸಲ್ಪಟ್ಟವನೂ ಸಂಖ್ಯಾತ ತಿರ್ಯಕ್ಪ್ರಾಣಿಗಳಿಂದ ಭಜಿಸಲ್ಪಟ್ಟವನೂ ಹೀಗೆ ೧೨ ಪ್ರಕಾರವಾದ ಶಿಷ್ಯಭವ್ಯ ಸಮೂಹಗಳಿಗೆ ಅಗ್ರೇಸರನೂ ಆದ ಶ್ರೀಅಭಿನಂದನಸ್ವಾಮಿಯು ಧರ್ಮವರ್ಷಣವನ್ನು ಮಾಡುತ್ತ ಆರ್ಯಾವರ್ತಭೂತಲವನ್ನು ಬಹುದೂರ ವಿಹರಿಸಿ ಯದೃಚ್ಛೆಯಿಂದ ಸಮ್ಮೇದಪರ್ವತವನ್ನು ಹೊಂದಿ ದಿವ್ಯಧ್ವನಿಯಿಲ್ಲದೆ ಒಂದು ತಿಂಗಳವರೆಗೆ ಇದ್ದು ಆ ಕಾಲದಲ್ಲುಂಟಾದ ಕ್ರಿಯೆಯುಳ್ಳವನೂ ಸೂಕ್ಷ್ಮ ಕ್ರಿಯಾಪ್ರತಿಪಾತಿ ವ್ಯುಪರತಕ್ರಿಯಾನಿವೃತ್ತಿಗಳೆಂಬ ಎರಡು ಶುಕ್ಲಧ್ಯಾನಮಯನೂ ಮಲರಹಿತನೂ ಅನೇಕ ಮುನಿಗಳೊಡನೆ ಪ್ರತಿಮಾಯೋಗವುಳ್ಳವನೂ ಆಗಿ ವೈಶಾಖಮಾಸದ ಶುಕ್ಲಪಕ್ಷದ ಷಷ್ಠೀತಿಥಿಯಲ್ಲಿ ಪ್ರಾತಃಕಾಲದಲ್ಲಿ ಪುನರ್ವಸು ನಕ್ಷತ್ರದಲ್ಲಿ ಮುಕ್ತಿಯನ್ನು ಹೊಂದಿದನು.

**ತದಾ ಭಕ್ತ್ಯಾನತಾಷ್ಟಾಂಗಾಃ ಸುರೇಂದ್ರಾಃ ಕೃತಪೂಜನಾಃ ।**
**ನುತ್ವಾ ತಮಗಮನ್ನಾಕಂ ತ್ರೈಲೋಕ್ಯೇಶಂ ಯಥಾಯಥಮ್ ॥ ೬೭ ॥**

ಆಗ ಭಕ್ತಿಯಿಂದ ದೇವೇಂದ್ರರು ಸಾಷ್ಟಾಂಗನಮಸ್ಕಾರವನ್ನೂ ನಿರ್ವಾಣ ಕಲ್ಯಾಣಪೂಜೆಯನ್ನೂ ಮಾಡಿ ತ್ರಿಲೋಕಾಧಿಪತಿಯಾದ ಆ ಸ್ವಾಮಿಯನ್ನು ಸ್ತುತಿಸಿ ಬಂದಹಾಗೆ ಸ್ವರ್ಗಕ್ಕೆ ಹೊರಟು ಹೋದರು.

**ಯೇನಾಪ್ತಾನಿಮಿಷೇಶ್ವರೈರಯಮಯೀ ಶ್ರೀಃ ಪಂಚಕಲ್ಯಾಣಜಾ ।**
**ಯಸ್ಯಾನಂತಚತುಷ್ಟಯೋಜ್ಜ್ವಲತರಾ ಶ್ರೀರಕ್ಷಯಾ ಕ್ಷಾಯಿಕೀ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಸಾಕೇತಪಟ್ಟಣದಲ್ಲಿ ಸ್ವಯಂವರಮಹಾರಾಜಂಗಂ ಸಿದ್ಧಾರ್ಥಾಮಹಾದೇವಿಗಂ ಪುನರ್ವಸುನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಮುನ್ನೂರೈವತ್ತು ಬಿಲ್ಲುತ್ಸೇಧಮನುಳ್ಳ ಕಪಿಲಾಂಛನಮನುಳ್ಳ ಯಕ್ಷೇಶ್ವರ ವಜ್ರಶೃಂಖಲೆಯೆಂಬ–ಯಕ್ಷಯಕ್ಷಿಯರನುಳ್ಳ ಐವತ್ತುಲಕ್ಷ ಪೂರ್ವಾಯುಷ್ಯಮನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ಆನಂದಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಅಭಿನಂದನತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಯೋ ರೂಪೇಣ ವಿನಾಪಿ ನಿರ್ಮಲಗುಣಃ ಸಿದ್ಧಿಶ್ರಿಯಾಲಿಂಗಿತಃ ।**
**ಸ ತ್ರಿಶ್ರೀರಭಿನಂದನೋ ಜಿನಪತಿರ್ಜೀಯಾದನಸ್ತೋದಯಃ ॥ ೬೮ ॥**

ದೇವೇಂದ್ರರಿಂದ ಪಂಚಕಲ್ಯಾಣಗಳಿಂದುಂಟಾದ ಪುಣ್ಯಮಯವಾದ ಸಂಪತ್ತಿಯನ್ನು ಹೊಂದಿದವನೂ ಅನಂತಚತುಷ್ಟಯಗಳಿಂದ ದೇದೀಪ್ಯಮಾನವೂ ನಾಶರಹಿತವೂ ಆದ ಕ್ಷಾಯಿಕಸಂಪತ್ತಿಯನ್ನು ಹೊಂದಿದವನೂ ರೂಪವಿಲ್ಲದಿದ್ದರೂ ನಿರ್ಮಲಗುಣಗಳುಳ್ಳವನೂ ಸಿದ್ಧಿ–ಮುಕ್ತಿಲಕ್ಷ್ಮಿಯಿಂದ ಆಲಿಂಗಿತನೂ ಪಂಚಕಲ್ಯಾಣಶ್ರೀ ಅನಂತಚತುಷ್ಟಯಶ್ರೀ ಸಿದ್ಧಿಶ್ರೀಯರೆಂಬ ಮೂರು ಶ್ರೀಯರುಳ್ಳವನೂ ಮರಣೋತ್ಪತ್ತಿರಹಿತನೂ ಅಥವಾ ನಾಶರಹಿತವಾದ ಐಶ್ವರ್ಯವುಳ್ಳವನೂ ಆದ ಆ ಅಭಿನಂದನಜಿನೇಶ್ವರನು ಜಯಶೀಲನಾಗಲಿ.

**ಯೋ ರತ್ನಸಂಚಯಪುರೇಶಮಹಾಬಲಾಖ್ಯೋ ।**
**ಯೋನುತ್ತರೇಷು ವಿಜಯೀ ವಿಜಯೇಹಮಿಂದ್ರಃ ॥**
**ಯಶ್ಚಾಭಿನಂದನನೃಪೋ ವೃಷಭೇಶವಂಶೇ ।**
**ಸಾಕೇತಪತ್ತನಪತಿಃ ಸ ಜಿನೋವತಾದ್ವಃ ॥ ೬೯ ॥**

ರತ್ನಸಂಚಯಪುರಾಧಿಪತಿಯಾದ ಮಹಾಬಲನಾಗಿದ್ದವನೂ ಪಂಚಾನುತ್ತರ ವಿಮಾನಗಳಲ್ಲಿ ಮೊದಲನೆಯದಾದ ವಿಜಯವಿಮಾನದಲ್ಲಿ ವಿಜಯಿಯಾದ ಅಹಮಿಂದ್ರನಾಗಿದ್ದವನೂ ವೃಷಭಸ್ವಾಮಿಯ ವಂಶದಲ್ಲಿ ಅಭಿನಂದನರಾಜನಾಗಿದ್ದವನೂ ಅಯೋಧ್ಯಾನಗರಾಧಿಪತಿಯೂ ಆದ ಆ ಅಭಿನಂದನನು ನಿಮ್ಮಗಳನ್ನು ಕಾಪಾಡಲಿ.

**ಉಭಯನಯಭೇದಾಭ್ಯಾಂ ವಿಶ್ವಂ ವಿಭಿದ್ಯ ವಿಭಾವಯನ್ ।**
**ಸ್ವಭವವಿಭವಭ್ರಷ್ಟ್ಯೈ ಭಕ್ತ್ಯಾ ದ್ಯುಭೂಭಿರಭಿಷ್ಟುತಃ ॥**
**ತ್ರಿಭುವನವಿಭುರ್ಭೂಯೋ ಭವ್ಯಾ ಭವದ್ಭವತಾವಮ್ ।**
**ಭವಾದ್ಭಯಮಭಿಭವನ್ ಭೂತ್ಯೈ ಭೂಯಾದಭೀರಭಿನಂದನಃ ॥ ೭೦ ॥**

ದ್ರವ್ಯಾರ್ಥಿಕನಯ ಪರ್ಯಾಯಾರ್ಥಿಕನಯಭೇದಗಳಿಂದ ವಿಶ್ವವನ್ನು ಭೇದಿಸಿ ವಿಚಾರ ಮಾಡುವವನೂ ತಮ್ಮ ಭವಸಂಪತ್ತಿ–ಪರಂಪರೆಯ ವಿನಾಶಕ್ಕೋಸ್ಕರ ದೇವತೆಗಳಿಂದ ಭಕ್ತಿಯಿಂದ ಸ್ತುತಿಸಲ್ಪಟ್ಟವನೂ ತ್ರಿಲೋಕಾಧಿಪತಿಯೂ ನಿಮ್ಮಗಳಿಗೆ ಮತ್ತೆ ಸಂಸಾರದ ದೆಸೆಯಿಂದುಂಟಾಗುವ ಭಯವನ್ನು ನಿರಾಕರಿಸುವವನೂ ಭಯರಹಿತನೂ ಆದ ಅಭಿನಂದಸ್ವಾಮಿಯು ಎಲೈ ಭವ್ಯರೆ ! ನಿಮ್ಮಗಳ ಸಂಪತ್ತಿಗೋಸ್ಕರ ಇರಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಅಭಿನಂದನತೀರ್ಥಕರಪುರಾಣಂ ನಾಮ ಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಅಭಿನಂದನತೀರ್ಥಕರಪುರಾಣವೆಂಬ
ಐವತ್ತನೆಯ ಪರ್ವವು ಸಮಾಪ್ತವಾದುದು.

---

3

# ಅಥ ಸುಮತಿತೀರ್ಥಕರಪುರಾಣಂ

**ಲಕ್ಷ್ಮೀರನಶ್ವರೀ ತೇಷಾಂ ಯೇಷಾಂ ಯಸ್ಯ ಮತಿರ್ಮತಿಃ ।**
**ದೇಯಾದಾದೇಯವಾಕ್ಸದ್ಭಿಃ ಸೋಸ್ಮಭ್ಯಂ ಸುಮತಿರ್ಮತಿಮ್ ॥ ೧ ॥**

ಯಾವ ಸುಮತಿತೀರ್ಥಂಕರರ ಬುದ್ಧಿಯು ಯಾರಿಗೆ ಬುದ್ಧಿದಾಯಕವಾಗಿ ದೆಯೋ ಅವರ ಸಂಪತ್ತಿಯು ನಾಶರಹಿತವಾದುದು. ಸತ್ಪುರುಷರಿಂದ ಆದರಣೀಯ ವಾದ ವಚನವುಳ್ಳ ಆ ಸುಮತಿತೀರ್ಥಂಕರರು ನಮಗೆ ಬುದ್ಧಿಯನ್ನುನೀಡಲಿ.

**ಅಖಂಡೇ ಧಾತಕೀಖಂಡೇ ಮಂದರೇ ಪ್ರಾಚಿ ಪೂರ್ವಗೇ ।**
**ವಿದೇಹೇ ನದ್ಯುದಕ್ಕೂಲೇ ಸುರಾಷ್ಟ್ರಂ ಪುಷ್ಕಲಾವತೀ ॥ ೨ ॥**

ನಿತ್ಯವಾದ ಧಾತಕೀಖಂಡದ ಪೂರ್ವದಿಕ್ಕಿನಲ್ಲಿರುವ ಮೇರುವಿನ ಪೂರ್ವವಿದೇಹ ದಲ್ಲಿ ಸೀತಾನದಿಯ ಉತ್ತರದಿಕ್ಕಿನ ದಡದಲ್ಲಿ ಪುಷ್ಕಲಾವತಿಯೆಂಬ ದೇಶವಿದೆ.

**ಪುರೇಸ್ಮಿನ್ ಪುಂಡರೀಕಿಣ್ಯಾಂ ರತಿಷೇಣೋ ಮಹೀಪತಿಃ ।**
**ಪ್ರಾಗ್ಜನ್ಮೋಪಾರ್ಜಿತೋದೀರ್ಣಪುಣ್ಯಪಣ್ಯಾತ್ಮಸಾತ್ಕೃತಮ್ ॥ ೩ ॥**

**ರಾಜ್ಯಂ ವಿನಿರ್ಜಿತಾರಾತಿರ್ನಿಷ್ಕೋಪಂ ನಿತ್ಯವೃದ್ಧಿಕಮ್ ।**
**ಸ್ವಾಮಿಸಂಪತ್ಸಮೇತಃ ಸನ್ನೀತ್ಯಾ ನಿರ್ವ್ಯಸನೋನ್ವಭೂತ್ ॥ ೪ ॥**

ಅಲ್ಲಿರುವ ಪುಂಡರೀಕಿಣೀನಗರದಲ್ಲಿ ರತಿಷೇಣನೆಂಬ ರಾಜನು ಪೂರ್ವಜನ್ಮೋ ಪಾರ್ಜಿತವೂ ಉದಯಕ್ಕೆ ಬಂದಿರುವುದೂ ಆದ ಪುಣ್ಯವೆಂಬ ಬೆಲೆಯಿಂದ ಸ್ವಾಧೀನಪಡಿಸಲ್ಪಟ್ಟಿರುವುದೂ ನಿತ್ಯವೃದ್ಧಿಯುಳ್ಳುದೂ ಆದ ರಾಜ್ಯವನ್ನು ಶತ್ರು ಗಳನ್ನು ಜಯಿಸಿದವನೂ ಸ್ವಾಮಿ ಅಮಾತ್ಯ ಸುಹೃತ್ ಕೋಶಾದಿ ಸಂಪತ್ತುಳ್ಳವನೂ ವ್ಯಸನವಿಲ್ಲದವನೂ ಆಗಿ ಕೋಪವಿಲ್ಲದಿರುವಿಕೆ ಹೇಗೋ ಹಾಗೆ ನೀತಿಯಿಂದ ಅನುಭವಿಸಿದನು.

**ಯಾ ಸ್ವಸ್ಯೈವಾಸ್ಯ ಸಾ ವಿದ್ಯಾ ಚತುರ್ಥೀ ನ ಪ್ರಯೋಗಿಣೀ ।**
**ಯದೇಕಸ್ಯಾಪಿ ದಂಡೇಷು ವರ್ತಂತೇ ನ ಪಥಿ ಪ್ರಜಾಃ ॥ ೫ ॥**

ಈ ರತಿಷೇಣರಾಜನ ಆನ್ವೀಕ್ಷಿಕೀ, ತ್ರಯೀ, ವಾರ್ತಾ, ದಂಡನೀತಿರೂಪವಾದ ರಾಜವಿದ್ಯೆಯು ತನಗೇ ಸಂಬಂಧಿಸಿದುದಾಗಿದ್ದಿತು–ಬೇರೆಯವರಿಗೆ ಸಂಬಂಧಿಸಿ ರಲಿಲ್ಲ. ವಧಾದಿದಂಡಗಳಲ್ಲಿ ಒಂದರಲ್ಲಿಯೂ ಪ್ರಜೆಗಳು ಪ್ರವರ್ತಿಸದಿರುವುದರಿಂದ ಅಂದರೆ ದಂಡಯೋಗ್ಯವಾದ ಅಪರಾಧಗಳನ್ನು ಮಾಡದಿರುವುದರಿಂದ ಆ ನಾಲ್ಕನೆಯದಾದ ದಂಡವಿದ್ಯೆಯು ಪ್ರಯೋಗದಲ್ಲಿರಲಿಲ್ಲ. ತರ್ಕಶಾಸ್ತ್ರಕ್ಕೆ ಆನ್ವೀಕ್ಷಿಕಿ ಯೆಂದೂ ವೇದ–ಆಗಮಕ್ಕೆ ತ್ರಯಿಯೆಂದೂ ಲೋಕನೀತಿಗೆ ವಾರ್ತೆಯೆಂದೂ ವಧಪರಿಕ್ಲೇಶ ಸರ್ವಸ್ವಾಪಹರಣ ಶಿಕ್ಷೆಗೆ ದಂಡನೀತಿಯೆಂದೂ ಅರ್ಥ.

**ರಕ್ತಸ್ಯ ಮನಸಾ ತೃಪ್ತಿಃ ಕಾಮಃ ಕರಣಗೋಚರೇ ।**
**ಸ್ವೇಷ್ಟಾಶೇಷಾರ್ಥಸಂಪತ್ತೇಃ ಕಾಮಸ್ತಸ್ಯ ನ ದುರ್ಲಭಃ ॥ ೬ ॥**

ವಿಷಯಗಳಲ್ಲಿ ಅನುರಾಗವುಳ್ಳವನಿಗೆ ಆ ವಿಷಯಗಳು ಇಂದ್ರಿಯಗೋಚರ ವಾದರೆ ಮನಸ್ಸಿನಲ್ಲಿ ತೃಪ್ತಿಯುಂಟಾಗುವುದು. ಅದೇ ಕಾಮವೆನಿಸುವುದು. ತನ ಗಿಷ್ಟವಾದ ಸಮಸ್ತಪದಾರ್ಥಸಂಪತ್ತಿಯುಳ್ಳ ಆ ರತಿಷೇಣನಿಗೆ ಕಾಮವು ದುರ್ಲಭ ವಾಗಿರಲಿಲ್ಲ.

**ಅರ್ಥೇ ಚತುಷ್ಟಯೀ ವೃತ್ತಿರಾರ್ಜನಾದಿರ್ಯಥಾಗಮಮ್ ।**
**ದೇವೋರ್ಹನ್ನರ್ಥಧರ್ಮೌ ಚ ತದನೀಷಲ್ಲಭೌ ಮತೌ ॥ ೭ ॥**

ಅರ್ಥದಲ್ಲಿ ಆರ್ಜನ ರಕ್ಷಣ ವರ್ಧನ ವ್ಯಯ ರೂಪವಾದ ನಾಲ್ಕು ವೃತ್ತಿಯೂ ಆಗಮಾನುಸಾರವಾಗಿದ್ದಿತು. ರತಿಷೇಣನು ಆಗಮಾನುಸಾರವಾಗಿ ದ್ರವ್ಯವನ್ನು ಆರ್ಜನ ರಕ್ಷಣ ವರ್ಧನ ವ್ಯಯ ಮಾಡುತ್ತಿದ್ದನೆಂದು ಭಾವವು. ಅರ್ಹತ್ಪರ ಮೇಶ್ವರನೇ ದೇವನು. ಅರ್ಥವೂ ಧರ್ಮವೂ ಕಾಮಕ್ಕಿಂತ ಅಧಿಕವಾಗಿದ್ದುವು. ರತಿಷೇಣನು ಅರ್ಹತ್ಪರಮೇಶ್ವರನನ್ನೇ ದೇವನೆಂದು ನಂಬಿದ್ದನೆಂದೂ ಕಾಮ ಕ್ಕಿಂತಲೂ ಅರ್ಥ ಧರ್ಮಗಳು ಹೆಚ್ಚೆಂದು ಭಾವಿಸಿದ್ದನೆಂದೂ ಭಾವವು.

**ಗಚ್ಛತ್ಯೇವಂ ಚಿರಂ ಕಾಲೇ ಹೇಲಯಾ ಪಾಲಿತಕ್ಷಿತೇಃ ।**
**ಪರಸ್ಪರಾನುಕೂಲ್ಯೇನ ವರ್ಗತ್ರಿತಯವರ್ಧಿನಃ ॥ ೮ ॥**

**ಜಂತೋಃ ಕಿಂ ಕುಶಲಂ ಕಸ್ಮಾತ್ ಸುಖಮೇಷೋಧಿತಿಷ್ಠತಿ ।**
**ಪರ್ಯಾಯಾವರ್ತದುರ್ಜನ್ಮದುರ್ಮೃತ್ಯುರಗದೂರಗಃ ॥ ೯ ॥**

ಪರಸ್ಪರಾನುಕೂಲತೆಯಿಂದ ಧರ್ಮಾರ್ಥಕಾಮಗಳನ್ನು ಹೆಚ್ಚಿಸುತ್ತಿರುವವನೂ ಲೀಲೆಯಿಂದ ಪೃಥ್ವಿಯನ್ನು ಪಾಲಿಸುವವನೂ ಆದ ರತಿಷೇಣನಿಗೆ ಹೀಗೆ ಬಹು ಕಾಲವು ಕಳೆಯುತ್ತಿರಲು ''ಪ್ರಾಣಿಗೆ ಕ್ಷೇಮವಾವುದು ? ಈ ಪ್ರಾಣಿಯು ಪರ್ಯಾಯ ಗಳೆಂಬ ಸುಳಿಗಳಲ್ಲಿ ದುರ್ಜನ್ಮದುರ್ಮರಣಗಳೆಂಬ ಸರ್ಪಗಳಿಂದ ದೂರವಾಗಿ ಯಾವುದರಿಂದ ಸುಖದಲ್ಲಿರುವುದು ?

**ನ ತಾವದರ್ಥಕಾಮಾಭ್ಯಾಂ ಸುಖಂ ಸಂಸಾರವರ್ಧನಾತ್ ।**
**ನಾಮುಷ್ಮಾದಪಿ ಮೇ ಧರ್ಮಾದ್ಯಸ್ಮಾತ್ಸಾವದ್ಯಸಂಭವಃ ॥ ೧೦ ॥**

ಅರ್ಥ ಕಾಮಗಳಿಂದಾದರೋ ಸಂಸಾರವು ವೃದ್ಧಿಯಾಗುವುದರಿಂದ ಸುಖವಿಲ್ಲ. ಯಾವುದರಿಂದ ಸ್ವಲ್ಪ ದೋಷದ ಸಂಭವವಿರುವುದೋ ಅಂತಹ ಈ ಧರ್ಮದಿಂದಲೂ ನನಗೆ ಸುಖವಿಲ್ಲ.

**ನಿಸ್ಸಾವದ್ಯೋಸ್ತಿ ಧರ್ಮೋನ್ಯಸ್ತತಸ್ಸುಖಮನುತ್ತರಮ್ ।**
**ಇತ್ಯುದರ್ಕೋ ವಿತರ್ಕೋಸ್ಯ ವಿರಕ್ತಸ್ಯಾಭವತ್ತತಃ ॥ ೧೧ ॥**

**ರಾಜ್ಯಸ್ಯ ದುರ್ಭರಂ ಭಾರಂ ನಿವೇಶ್ಯಾತಿರಥೇ ತುಜಿ ।**
**ಸುಭರಂ ತಪಸೋ ಭಾರಂ ಬಭಾರ ಸ ಭವಾಂತಕೃತ್ ॥ ೧೨ ॥**

ದೋಷರಹಿತವಾದ ಮತ್ತೊಂದು ಧರ್ಮವಿದೆ. ಅದರಿಂದ ಸರ್ವೋತ್ಕೃಷ್ಟವಾದ ಸುಖವಿದೆ'' ಈ ಪ್ರಕಾರವಾಗಿ ಉತ್ತರಕಾಲದಲ್ಲಿ ಫಲವುಳ್ಳ ಊಹೆಯು ವಿರಕ್ತನಾದ ಈ ರತಿಷೇಣನಿಗುಂಟಾಯಿತು. ಆದುದರಿಂದ ದುರ್ಭರವಾದ ರಾಜ್ಯದ ಭಾರವನ್ನು ಅತಿರಥನೆಂಬ ಪುತ್ರನಲ್ಲಿರಿಸಿ ಆ ರತಿಷೇಣನು ಭವವನ್ನು ಕೊನೆಗಾಣಿಸುವ ಸುಲಭ ವಾದ ಭಾರವುಳ್ಳ ತಪೋಭಾರವನ್ನು ತಾನು ಧರಿಸಿದನು.

**ಜಿನಾರ್ಹನ್ನಂದನಾಭ್ಯಾಸೇ ವಿದಿತೈಕಾದಶಾಂಗಕಃ ।**
**ಉದಾಸೀನಃ ಸ್ವದೇಹೇಪಿ ಮೋಹಾರಾತಿಜಯೇಚ್ಛಯಾ ॥ ೧೩ ॥**

ಅರ್ಹನ್ನಂದನಜಿನರ ಬಳಿಯಲ್ಲಿ ಏಕಾದಶಾಂಗಶಾಸ್ತ್ರವನ್ನು ತಿಳಿದವನೂ ಮೋಹ ವೆಂಬ ಶತ್ರುವನ್ನು ಜಯಿಸಬೇಕೆಂಬ ಇಚ್ಛೆಯಿಂದ ತನ್ನ ದೇಹದಲ್ಲಿಯೂ ಉದಾಸೀನನೂ ಆದನು.

**ಯತೋಭೀಷ್ಟಾರ್ಥಸಂಸಿದ್ಧಿಸ್ತಚ್ಚರಂತಿ ಸುಮೇಧಸಃ ।**
**ಶ್ರದ್ಧಾನವಿನಯಾದ್ಯುಕ್ತಕಾರಣೋಪಾತ್ತತೀರ್ಥಕೃತ್ ॥ ೧೪ ॥**

**ಪ್ರಾಂತೇ ಸನ್ನ್ಯಸ್ಯ ಬಧ್ವಾಯುರುತ್ಕೃಷ್ಟಮಹಮಿಂದ್ರತಾಮ್ ।**
**ವೈಜಯಂತೇನುಸಂಪ್ರಾಪದೇಕಾರತ್ನಿ ಶರೀರಕಃ ॥ ೧೫ ॥**

ಪ್ರಾಜ್ಞರು ಯಾವುದರಿಂದ ತಮಗೆ ಅಭೀಷ್ಟವಾದ ಪ್ರಯೋಜನದ ಸಿದ್ಧಿಯಾಗುವುದೋ ಅದನ್ನು ಆಚರಿಸುತ್ತಾರೆ. ರತಿಷೇಣನು ದರ್ಶನವಿಶುದ್ಧಿ ವಿನಯ ಸಂಪನ್ನತಾ ಮೊದಲಾದ ಷೋಡಷಕಾರಣಗಳಿಂದ ತೀರ್ಥಕರತ್ವಪುಣ್ಯವನ್ನು ಗಳಿಸಿದವನಾಗಿ ಕೊನೆಯಲ್ಲಿ ಸನ್ನ್ಯಾಸವಿಧಿಯಿಂದ ಮಡಿದು ಉತ್ಕೃಷ್ಟವಾದ ಆಯುಷ್ಯವನ್ನು ಬಂಧಿಸಿ ವೈಜಯಂತವಿಮಾನದಲ್ಲಿ ಒಂದು ಗುಡ್ಡುಮೊಳ ಅಳತೆಯ ಶರೀರವುಳ್ಳವನಾಗಿ ಅಹಮಿಂದ್ರತ್ವವನ್ನು ಹೊಂದಿದನು.

**ಮಾಸೈಃ ಷೋಡಶಭಿಃ ಪಂಚದಶಭಿಶ್ಚ ದಿನೈಃ ಶ್ವಸನ್ ।**
**ತ್ರಯಸ್ತ್ರಿಂಶತ್ಸಹಸ್ರಾಬ್ದೈರಂಧೋ ಮಾನಸಮಾಹರನ್ ॥ ೧೬ ॥**

**ಶುಕ್ಲಲೇಶ್ಯಃ ಸ್ವತೇಜೋವಧೀತವಿಷ್ಟಪನಾಲಿಕಃ ।**
**ತತ್ಕ್ಷೇತ್ರವಿಕ್ರಿಯರ್ದ್ಧೀಶಸ್ತದುದ್ಧಾರಿಬಲಾನ್ವಿತಃ ॥ ೧೭ ॥**

**ಅಹಮಿಂದ್ರಸುಖಂ ಮುಖ್ಯಮಂಗಿನಾಮಾಜವಂಜವೇ ।**
**ನಿರ್ದ್ವಂದ್ವಂ ನಿಷ್ಪ್ರವೀಚಾರಂ ಚಿರಂ ನೀರೋಗವಮಾಗಮತ್ ॥ ೧೮ ॥**

ಆ ಅಹಮಿಂದ್ರದೇವನು ೧೬ ॥ ತಿಂಗಳಿಗೊಂದು ಸಲ ಉಸಿರಾಡಿಸುವವನೂ ಮೂವತ್ತುಮೂರು ಸಾವಿರ ವರುಷಗಳಿಗೊಂದು ಸಲ ಮಾನಸಾಹಾರವನ್ನು ತೆಗೆದುಕೊಳ್ಳುವವನೂ ಶುಕ್ಲಲೇಶ್ಯೆಯುಳ್ಳವನೂ ಲೋಕನಾಡಿಯವರೆಗೆ ವ್ಯಾಪ್ತವಾದ ತೇಜಸ್ಸೂ ಅವಧಿಜ್ಞಾನವೂ ಉಳ್ಳವನೂ ಆ ಕ್ಷೇತ್ರದವರೆಗೆ ವಿಕ್ರಿಯೆಯನ್ನು ಮಾಡಿಕೊಳ್ಳಬಲ್ಲವನೂ ಆ ಕ್ಷೇತ್ರವನ್ನು ಎತ್ತುವಷ್ಟು ಶಕ್ತಿಯುಳ್ಳವನೂ ಆಗಿ ಸಂಸಾರದಲ್ಲಿ ಪ್ರಾಣಿಗಳಿಗೆ ಮುಖ್ಯವೂ ಉಪದ್ರವ–ದುಃಖಸಂಬಂಧವಿಲ್ಲದುದೂ ಸ್ತ್ರೀಸಂಬಂಧರಹಿತವೂ ರೋಗರಹಿತವೂ ಆದ ಅಹಮಿಂದ್ರಸುಖವನ್ನು ಬಹುಕಾಲದವರೆಗೆ ಪಡೆದನು. ಅನುಭವಿಸಿದನೆಂದು ಭಾವವು.

**ಆಯುರಂತೇ ಸಮಾಧಾನಾತ್ತಸ್ಮಿನ್ನತ್ರಾಗಮಿಷ್ಯತಿ ।**
**ದ್ವೀಪೇಸ್ಮಿನ್ ಭಾರತೇ ವರ್ಷೇ ಸಾಕೇತೇ ವೃಷಭಾನ್ವಯೇ ॥ ೧೯ ॥**

**ತದ್ಗೋತ್ರೇ ಕ್ಷತ್ರಿಯೋಸ್ತಾರಿಃ ಶ್ಲಾಘ್ಯೋ ಮೇಘರಥೋಭವತ್ ।**
**ಮಂಗಲಾಸ್ಯ ಮಹಾದೇವೀ ವಸುಧಾರಾದಿಪೂಜಿತಾ ॥ ೨೦ ॥**

ಆಯುಷ್ಯದ ಕೊನೆಯಲ್ಲಿ ಆ ದೇವನು ಸಮಾಧಾನದಿಂದ ಈ ಮಧ್ಯಲೋಕಕ್ಕೆ ಬರುವನು. ಈ ಜಂಬೂದ್ವೀಪದ ಭಾರತವರ್ಷದಲ್ಲಿ ಅಯೋಧ್ಯಾನಗರದಲ್ಲಿ ವೃಷಭಸ್ವಾಮಿಯ ವಂಶದಲ್ಲಿ ಅವರ ಗೋತ್ರದಲ್ಲಿ ಕ್ಷತ್ರಿಯನೂ ಶತ್ರುರಹಿತನೂ ಶ್ಲಾಘ್ಯನೂ ಆದ ಮೇಘರಥನೆಂಬ ದೊರೆಯಿದ್ದನು. ಅವನ ಪತ್ನಿಯಾದ ಮಂಗಲಾದೇವಿಯು ರತ್ನವೃಷ್ಟಿ ಮೊದಲಾದುವುಗಳಿಂದ ಪೂಜಿಸಲ್ಪಟ್ಟಳು.

**ಮಘಾಯಾಂ ಶ್ರಾವಣೇ ಮಾಸಿ ದೃಷ್ಟ್ವಾ ಸ್ವಪ್ನಾನ್ಗಜಾದಿಕಾನ್ ।**
**ಆಸ್ಯಂ ಸಿತದ್ವಿತೀಯಾಯಾಮೈಕ್ಷಿಷ್ಟಾಗಾಮುಕಂ ದ್ವಿಪಮ್ ॥ ೨೧ ॥**

ಆಕೆಯು ಶ್ರಾವಣಮಾಸದ ಶುಕ್ಲಪಕ್ಷದ ಬಿದಿಗೆಯಲ್ಲಿ ಮಘಾನಕ್ಷತ್ರದಲ್ಲಿ ಆನೆಯೇ ಮೊದಲಾದ ಹದಿನಾರು ಸ್ವಪ್ನಗಳನ್ನೂ ತನ್ನ ಮುಖವನ್ನು ಪ್ರವೇಶಿಸುತ್ತಿರುವ ಆನೆಯನ್ನೂ ನೋಡಿದಳು.

**ತತ್ಫಲಾನ್ಯವಬುಧ್ಯಾತ್ಮಪತೇಃ ಸಂಪ್ರಾಪ್ಯ ಸಮ್ಮದಮ್ ।**
**ನವಮೇ ಮಾಸಿ ಚಿತ್ರಾಯಾಂ ಸಜ್ಯೋತ್ಸ್ನೈಕಾದಶೀದಿನೇ ॥ ೨೨ ॥**

**ತ್ರಿಜ್ಞಾನಧಾರಿಣಂ ದಿವ್ಯಂ ಪಿತೃಯೋಗೇ ಸತಾಂ ಪತಿಮ್ ।**
**ಜಗತ್ತ್ರಯಸ್ಯ ಭರ್ತಾರಮಹಮಿಂದ್ರಮಲಬ್ಧ ಸಾ ॥ ೨೩ ॥**

ಆ ಮಂಗಲಾದೇವಿಯು ಪ್ರಾತಃಕಾಲದಲ್ಲಿ ಆ ಸ್ವಪ್ನಗಳ ಫಲಗಳನ್ನು ತನ್ನ ಪತಿಯಿಂದ ತಿಳಿದು ಸಂತೋಷವನ್ನು ಹೊಂದಿ ಒಂಬತ್ತನೆಯ ತಿಂಗಳಲ್ಲಿ ಚೈತ್ರಶುಕ್ಲ ಏಕಾದಶೀದಿನದಲ್ಲಿ ಬ್ರಹ್ಮಯೋಗದಲ್ಲಿ ಮತಿಶ್ರುತಾವಧಿಜ್ಞಾನಧಾರಿಯೂ ದಿವ್ಯನೂ ಸತ್ಪುರುಷರಿಗೆ ಸ್ವಾಮಿಯೂ ಮೂರು ಲೋಕಗಳಿಗೆ ಸ್ವಾಮಿಯೂ ಆದ ಆ ಅಹಮಿಂದ್ರನನ್ನು ಪಡೆದಳು. ಅಹಮಿಂದ್ರದೇವನು ವಿಜಯಸ್ವರ್ಗದಿಂದ ಚ್ಯುತನಾಗಿ ಬಂದು ಮಂಗಲಾದೇವಿಯ ಪುತ್ರನಾಗಿ ಜನಿಸಿದನೆಂದು ಭಾವವು.

**ದೇವೇಂದ್ರಾಸ್ತಂ ತದಾ ನೀತ್ವಾ ಮೇರೌ ಜನ್ಮಸವೋತ್ಸವಮ್ ।**
**ಕೃತ್ವಾ ಸುಮತಿಸಂಜ್ಞಾಂ ಚ ಪುನಸ್ತದ್ಗೇಹಮಾನಯನ್ ॥ ೨೪ ॥**

ಆಗ ದೇವೇಂದ್ರರು ಆ ಮಗುವನ್ನು ಮೇರುಗಿರಿಯ ಮೇಲೆ ತೆಗೆದುಕೊಂಡು ಹೋಗಿ ಜನ್ಮಾಭಿಷೇಕೋತ್ಸವವನ್ನು ಮಾಡಿ ಸುಮತಿಯೆಂದು ಹೆಸರನ್ನಿಟ್ಟು ಮತ್ತೆ ಆ ಮೇಘರಥನ ಅರಮನೆಗೆ ಕರೆದುಕೊಂಡು ಬಂದರು.

**ನವಲಕ್ಷಾಬ್ಧಿಕೋಟೀಷು ಪ್ರಯಾತೇನಂತರಾಂತರೇ ।**
**ತದಭ್ಯಂತರವರ್ತ್ಯಾಯುರುದಪಾದ್ಯುದಿತೋದಿತಃ ॥ ೨೫ ॥**

**ಶೂನ್ಯಷಟ್ಕಾಬ್ಧಿಪೂರ್ವಾಯುಃ ಶರಾಸತ್ರಿಶತೋಚ್ಛ್ರಿತಿಃ ।**
**ಸಂತಪ್ತತಪನೀಯಾಭಃ ಸ್ವಭಾವಸುಭಗಾಕೃತಿಃ ॥ ೨೬ ॥**

ಅಭಿನಂದನಸ್ವಾಮಿಯು ಮುಕ್ತರಾದ ಬಳಿಕ ೯ ಲಕ್ಷಸಾಗರಕೋಟಿವರ್ಷಗಳಲ್ಲಿ ಅಂತರ–ಮಧ್ಯಕಾಲವು ಕಳೆಯುತ್ತಿರಲು ಅದರ ಮಧ್ಯದ ಆಯುಷ್ಯವುಳ್ಳವನೂ ಮಹಾಭ್ಯುದಯವುಳ್ಳವನೂ ನಾಲ್ವತ್ತು ಲಕ್ಷ ಪೂರ್ವಾಯುಷ್ಯವುಳ್ಳವನೂ ಮೂರುನೂರು ಬಿಲ್ಲುತ್ಸೇಧವುಳ್ಳವನೂ ಕಾಯಿಸಿದ ಬಂಗಾರಕ್ಕೆ ಸಮಾನನೂ ಸ್ವಭಾವದಿಂದ ಸುಂದರವಾದ ಆಕೃತಿಯುಳ್ಳವನೂ ಆದ ಸುಮತಿತೀರ್ಥಂಕರನು ಜನಿಸಿದನು.

**ಶೈಶವೋಚಿತಸರ್ವಾರ್ಥೈರ್ದೇವಾನೀತೈಃ ಸದ್ಧೈಧಿತುಃ ।**
**ಅಂಶವೋ ವಾ ಶಿಶೋರಿಂದೋರ್ವ್ಯಕ್ತ್ಯಾಸ್ಯಾವಯವಾ ಬಭುಃ ॥ ೨೭ ॥**

ಯಾವಾಗಲೂ ದೇವತೆಗಳಿಂದ ತರಲ್ಪಟ್ಟುವೂ ಶೈಶವಾವಸ್ಥೆಗೆ ಯೋಗ್ಯವೂ ಆದ ಸಮಸ್ತ ಪದಾರ್ಥಗಳಿಂದ ವೃದ್ಧಿಯನ್ನು ಹೊಂದುತ್ತಿರುವ ಈ ಸುಮತಿಕುಮಾರನ ಅವಯವಗಳು, ಚಂದ್ರನ ಅಂಶಗಳೋ ಎಂಬಂತೆ, ಸ್ಫುಟವಾಗಿ ಪ್ರಕಾಶಿಸಿದುವು.

**ತನವಃ ಕುಂಚಿತಾಃ ಸ್ನಿಗ್ಧಾ ಮೂರ್ಧಜಾ ಜಾಂಬವತ್ವಿಷಃ ।**
**ಮುಖಂ ಪಂಕಜಮಾಶಂಕ್ಯ ಮಿಲಿತಾ ವಾಸ್ಯ ಷಟ್ಪದಾಃ ॥ ೨೮ ॥**

ಸೂಕ್ಷ್ಮಗಳೂ ಸುರುಳಿಸುತ್ತಿಕೊಂಡಿರುವುವೂ ನುಣುಪಾಗಿರುವುವೂ ನೇರಳೆಯ ಹಣ್ಣಿನಕಾಂತಿಯುಳ್ಳುವೂ ಆದ ಕೂದಲುಗಳು, ಈ ಸುಮತಿಕುಮಾರನ ಮುಖವನ್ನು ಕಮಲವನ್ನಾಗಿ ಸಂದೇಹಪಟ್ಟು ಸೇರಿದ ದುಂಬಿಗಳೋ ಎಂಬಂತೆ ಪ್ರಕಾಶಿಸಿದುವು.

**ಮಯಾ ತ್ರೈಲೋಕ್ಯರಾಜ್ಯಸ್ಯ ಸ್ನಪನಾಂತೇ ಸುರೋತ್ತಮೈಃ ।**
**ಪಟ್ಟೋಲಂಬೀತಿ ವಾಸ್ಯಾಧಾಲ್ಲಲಾಟತಟಮುನ್ನತಿಮ್ ॥ ೨೯ ॥**

"ನಾನು ಜನ್ಮಾಭಿಷೇಕದ ಕೊನೆಯಲ್ಲಿ ದೇವೇಂದ್ರರಿಂದ ತ್ರೈಲೋಕ್ಯರಾಜ್ಯದ ಪಟ್ಟವನ್ನು ಹೊಂದಿದೆನು" ಹೀಗೋ ಎಂಬಂತೆ ಈ ಸುಮತಿಕುಮಾರನ ಹಣೆಯು ಉನ್ನತಿಯನ್ನು ಹೊಂದಿತು.

**ಕರ್ಣೌ ಲಕ್ಷಣಸಂಪೂರ್ಣೌ ನಾಸ್ಯ ತ್ರಿಜ್ಞಾನಧಾರಿಣಃ ।**
**ಪಂಚವರ್ಷೋರ್ಧ್ವಶಿಷ್ಯತ್ವಪರಿಭೂತಿಂ ಪ್ರತೇನತುಃ ॥ ೩೦ ॥**

ಮತಿಶ್ರುತಾವಧಿಜ್ಞಾನತ್ರಯಧಾರಿಯಾದ ಈ ಸುಮತಿಕುಮಾರನ ಸಂಪೂರ್ಣ ಲಕ್ಷಣಗಳುಳ್ಳ ಕಿವಿಗಳು ಐದು ವರ್ಷಗಳ ಮೇಲೆ ಶಿಷ್ಯತ್ವದ ತಿರಸ್ಕಾರವನ್ನು ಮಾಡಲಿಲ್ಲ. ಸುಮತಿಕುಮಾರನಿಗೆ ಐದು ವರ್ಷಗಳನಂತರ ಬೇರೆಯವರನ್ನು ಶಿಷ್ಯರನ್ನಾಗಿ ಮಾಡಿಕೊಳ್ಳುವ ಯೋಗ್ಯತೆಯುಂಟಾದುದೆಂಬುದು ಅವನ ಕಿವಿಗಳಿಂದ ಸೂಚಿತವಾಗುತ್ತಿದ್ದಿತೆಂದು ಭಾವವು.

**ಸುಭ್ರುವೋ ನ ಭ್ರುವೋರ್ವಾಚ್ಯೋ ವಿಭ್ರಮೋಸ್ಯ ಪೃಥಗ್ವಿದಾಮ್ ।**
**ಭ್ರೂತ್ಕ್ಷೇಪಮಾತ್ರದತ್ತಾರ್ಥಸಾರ್ಥಸಂತರ್ಪಿತಾರ್ಥಿನಃ ॥ ೩೧ ॥**

ಹುಬ್ಬಿನ ಚಲನೆಯಿಂದಲೇ ಯಾಚಕರಿಗೆ ದ್ರವ್ಯರಾಶಿಯನ್ನು ಕೊಡಿಸಿ ಅವರನ್ನು ತೃಪ್ತಿಪಡಿಸಿದವನೂ ಶ್ರೇಷ್ಠವಾದ ಹುಬ್ಬುಗಳುಳ್ಳವನೂ ಆದ ಈ ಸುಮತಿ ಕುಮಾರನ ಹುಬ್ಬಿನಚಲನೆಯು ಪ್ರಾಜ್ಞರಿಗೆ ಹೇಳತಕ್ಕುದಾಗಿರಲಿಲ್ಲ. ಪ್ರಾಜ್ಞರು ಸುಮತಿಕುಮಾರನ ಹುಬ್ಬಿನ ಚಲನೆಯಿಂದಲೇ ಅವನ ಇಂಗಿತವನ್ನು ತಿಳಿಯುತ್ತಿದ್ದರೆಂದು ಭಾವವು.

**ನೇತ್ರೇ ವಿಲಾಸಿನೀ ಸ್ನಿಗ್ಧೇ ತ್ರಿವರ್ಣೇ ತಸ್ಯ ರೇಜತುಃ ।**
**ಇಷ್ಟಾಖಿಲಾರ್ಥಸಂಪ್ರೇಕ್ಷಾಸುಖಪರ್ಯಂತಗಾಮಿನೀ ॥ ೩೨ ॥**

ವಿಲಾಸವುಳ್ಳುವೂ ಸ್ನೇಹವುಳ್ಳುವೂ ಕಪ್ಪು ಕೆಂಪು ಬಿಳಿ ಬಣ್ಣಗಳುಳ್ಳುವೂ ಆದ ಅವನ ಕಣ್ಣುಗಳು ಇಷ್ಟವಾದ ಸಮಸ್ತಪದಾರ್ಥಗಳ ನೋಟದಿಂದ ಸುಖದ ಮೇರೆಯನ್ನು ಹೊಂದಿದುವಾಗಿ ಪ್ರಕಾಶಿಸುತ್ತಿದ್ದುವು.

**ಮಯಾ ವಿನಾಸ್ಯ ಶೋಭಾಸ್ಯ ನೇತ್ಯಸೌ ನಾಸಿಕಾ ಸ್ಮಯಮ್ ।**
**ಉನ್ನತಾ ದಧತೀವಾಭಾದ್ವಕ್ತ್ರಾಬ್ಜಾಮೋದಪಾಯಿನೀ ॥ ೩೩ ॥**

ಉನ್ನತವೂ ಮುಖಕಮಲದ ಪರಿಮಳವನ್ನು ಮೂಸುವುದೂ ಆದ ಇವನ ಈ ಮೂಗು ''ನಾನಿಲ್ಲದಿದ್ದರೆ ಇವನಿಗೆ ಶೋಭೆಯಿಲ್ಲ'' ಎಂದು ಅಹಂಕಾರವನ್ನು ಧರಿಸಿದೆಯೋ ಎಂಬಂತೆ ಪ್ರಕಾಶಿಸಿತು.

**ಲಕ್ಷ್ಮ್ಯೌ ಕಪೋಲಯೋರ್ಲಕ್ಷ್ಮೀಂ ವಕ್ಷಸ್ಥಲಸಮಾಶ್ರಿತಾಮ್ ।**
**ಉತ್ತಮಾಂಗಾಶ್ರಯಾದ್ದ್ವಿತ್ವಾಜ್ಜಿತ್ವಯೌ ವಾಸ್ಯ ರೇಜತುಃ ॥ ೩೪ ॥**

ಈ ಸುಮತಿಕುಮಾರನ ಕೆನ್ನೆಗಳ ಲಕ್ಷ್ಮಿ–ಶೋಭೆಗಳು ಮಸ್ತಕದ ಆಶ್ರಯದಿಂದಲೂ ಎರಡಿರುವುದರಿಂದಲೂ ಅವನ ಎದೆಯನ್ನು ಆಶ್ರಯಿಸಿರುವ ಲಕ್ಷ್ಮಿಯನ್ನು ಜಯಿಸುವ ಸ್ವಭಾವವುಳ್ಳುವಾಗಿವೆಯೋ ಎಂಬಂತೆ ಶೋಭಿಸಿದುವು.

**ಜಿತ್ವಾಸ್ಯ ಕುಂದಸೌಂದರ್ಯಂ ದ್ವಿಜರಾಜಿರ್ವ್ಯರಾಜತ ।**
**ವಕ್ತ್ರಾಬ್ಜವಾಸಸಂತುಷ್ಟಾ ಸಹಾಸೇವ ಸರಸ್ವತೀ ॥ ೩೫ ॥**

ಮುಖಕಮಲದಲ್ಲಿ ವಾಸದಿಂದ ಸಂತುಷ್ಟಳೂ ನಗೆಯುಳ್ಳವಳೂ ಆದ ಸರಸ್ವತಿಯೋ ಎಂಬಂತೆ, ಇವನ ಹಲ್ಲುಗಳ ಸಾಲು ಮೊಲ್ಲೆಹೂವಿನ ಸೌಂದರ್ಯವನ್ನು ಜಯಿಸಿ ಶೋಭಿಸಿತು.

**ನಾಧರಸ್ಯಾಧರಾಖ್ಯಾ ಸ ಸಪ್ತ ಮಸ್ವಾದಶಾಲಿನಃ ।**
**ಅಧರೀಕೃತವಿಶ್ವಾಮರಾಧರಸ್ಯಾಭಿಶೋಭಿನಃ ॥ ೩೬ ॥**

ತಿಕ್ತ ಕಟು ಕಷಾಯ ಆಮ್ಲ ಮಧುರ ಲವಣಗಳೆಂಬ ಷಡ್ರಸಗಳನ್ನಲ್ಲದೆ ಏಳನೆಯದಾದ–ಅಲೌಕಿಕಸುಖರಸದ ಸ್ವಾದದಿಂದ ಶೋಭಿಸುವುದೂ ಸಮಸ್ತ ದೇವತೆಗಳ ಅಧರ–ಕೆಳದುಟಿಯನ್ನು ಕೀಳುಮಾಡಿರುವುದೂ ಸುತ್ತಲೂ ಶೋಭಿಸುವುದೂ ಆದ ಈ ಸುಮತಿಕುಮಾರನ ಅಧರಕ್ಕೆ(ಕೆಳದುಟಿಗೆ) ಅಧರ(ಕೀಳು) ಎಂಬ ಹೆಸರು ಸಲ್ಲದು. ಬಹುಸುಂದರವಾಗಿದ್ದಿತೆಂದು ಭಾವವು.

**ನಾಲಪ್ಯತೇ ಲಪಸ್ಯಾಸ್ಯ ಶೋಭಾ ವಾಕ್ಪಲ್ಲವೋಜ್ಜ್ವಲಾ ।**
**ಯದಿ ದಿವ್ಯಧ್ವನಿರ್ವಿಶ್ವವಾಚಕೋಸ್ಮಾದ್ವಿನಿಃಸೃತಃ ॥ ೩೭ ॥**

ಸಕಲ ವಿಷಯಗಳನ್ನು ಪ್ರತಿಪಾದಿಸುವ ದಿವ್ಯಧ್ವನಿಯು ಈ ಸುಮತಿಕುಮಾರನ ಮುಖದಿಂದ ಹೊರಟಿತೆಂದಮೇಲೆ ವಚನವೆಂಬ ತಳಿರಿನಿಂದ ಪ್ರಕಾಶಮಾನವಾದ ಇವನ ಮುಖದ ಶೋಭೆಯನ್ನು ಹೇಳಬೇಕಾದುದಿಲ್ಲ–ಬಹು ಶೋಭೆಯುಳ್ಳುದಾಗಿದ್ದಿತು.

**ಭಾವೋ ವಕ್ತ್ರಾಂಬುಜಸ್ಯಾಸ್ಯ ಕಿಂ ಪುನರ್ವರ್ಣ್ಯತೇ ತರಾಮ್ ।**
**ಯದಿ ಲೋಲಾಲಿತಾಂ ಜಗ್ಮುರ್ನಿಲಿಂಪೇಶಾಃ ಸವಲ್ಲಭಾಃ ॥ ೩೮ ॥**

ಪತ್ನೀಸಹಿತರಾದ ದೇವೇಂದ್ರರು ಈ ಸುಮತಿಕುಮಾರನ ಮುಖದ ಭಾವವನ್ನು ನೋಡಿ ಚಂಚಲವಾದ ದುಂಬಿಯ ಭಾವವನ್ನು ಹೊಂದಿದರೆಂದ ಮೇಲೆ ಮತ್ತೆ ಅದನ್ನು ಹೆಚ್ಚಾಗಿ ವರ್ಣಿಸುವುದೇನು ?ಚಂಚಲವಾದ ದುಂಬಿಗಳು ಸುತ್ತಾಡುವಂತೆ ಸುಮತಿಕುಮಾರನ ಮುಖಭಾವವನ್ನು ನೋಡಿ ದೇವೇಂದ್ರರು ಸಂತೋಷದಿಂದ ನರ್ತನಮಾಡಿದರೆಂದು ಭಾವವು.

**ಕಂಠಸ್ಯ ಕಸ್ಸ್ತವೋಸ್ಯ ಸ್ಯಾದ್ಯದಿ ತ್ರೈಲೋಕ್ಯಕಂಠಿಕಾ ।**
**ಬದ್ಧಾಮರೇಶೈಃ ಸ್ಯಾದ್ವಾದಕುಂಠಿತಾಖಿಲವಾದಿನಃ ॥ ೩೯ ॥**

ಸ್ಯಾದ್ವಾದದಿಂದ ಸಮಸ್ತವಾದಿಗಳನ್ನು ಕುಂಠಿತರನ್ನಾಗಿ ಮಾಡಿದ ಈ ಸುಮತಿನಾಥನ ಕಂಠಕ್ಕೆ ದೇವೇಂದ್ರರು ತ್ರೈಲೋಕ್ಯಕಂಠಿಕೆಯನ್ನು ಕಟ್ಟಿದರೆಂದಮೇಲೆ ಇದಕ್ಕಿಂತ ಬೇರೆ ಇದರ ಸ್ತುತಿಯಾವುದು ?

**ತದ್ಬಾಹುಶಿಖರೇ ಮನ್ಯೇ ಶಿರಸೋಪ್ಯತಿಲಂಘಿನೀ ।**
**ವಕ್ಷಸ್ಥಲವಿಲಾಸಿನ್ಯಾ ಲಕ್ಷ್ಮ್ಯಾಃ ಕ್ರೀಡಾಚಲಾಯಿತೇ ॥ ೪೦ ॥**

ಮಸ್ತಕಕ್ಕಿಂತಲೂ ಉನ್ನತವಾಗಿರುವ ಅವನ ಭುಜಶಿಖರಗಳು ವಕ್ಷಸ್ಥಲದಲ್ಲಿ ಆಟವಾಡುವ ಲಕ್ಷ್ಮಿಗೆ ಕ್ರೀಡಾಪರ್ವತಗಳಂತಿದ್ದುವೆಂದು ತಿಳಿಯುತ್ತೇನೆ.

**ಧರಾಲಕ್ಷ್ಮೀಂ ಸಮಾಹರ್ತುಂ ವೀರಲಕ್ಷ್ಮ್ಯಾ ಪ್ರಸಾರಿತೌ ।**
**ಭ್ರಾಜೇತೇ ಜಯಿನಸ್ತಸ್ಯ ಭುಜಾವಾಜಾನುಲಂಬಿನೌ ॥ ೪೧ ॥**

ಜಯಶೀಲನಾದ ಆ ಸುಮತಿನಾಥನ ಮೊಳಕಾಲಿನವರೆಗೆ ಜೋಲುತ್ತಿರುವ ತೋಳುಗಳು ಭೂಮಿಲಕ್ಷ್ಮಿಯನ್ನು ಎಳೆದು ತರುವುದಕ್ಕೋಸ್ಕರ ವೀರಲಕ್ಷ್ಮಿಯಿಂದ ಹರಡಲ್ಪಟ್ಟವುಗಳಾಗಿ ಶೋಭಿಸುತ್ತಿವೆ.

**ಪೃಥಕ್ಪೃಥುತ್ವಂ ನಾಖ್ಯೇಯಂ ರಮ್ಯತ್ವಂ ಚಾಸ್ಯ ವಕ್ಷಸಃ ।**
**ಮೋಕ್ಷಾಭ್ಯುದಯಲಕ್ಷ್ಮ್ಯೌ ಚೇತ್ತದೇವಾವಸತಸ್ಸಮಮ್ ॥ ೪೨ ॥**

ಈ ಸುಮತಿನಾಥನ ಎದೆಯಲ್ಲಿ ಮೋಕ್ಷಲಕ್ಷ್ಮಿಯೂ ಸ್ವರ್ಗಲಕ್ಷ್ಮಿಯೂ (ಸ್ವರ್ಗ ಮೋಕ್ಷ ಸಂಪತ್ತಿಗಳು) ಜೊತೆಯಾಗಿ ವಾಸಮಾಡುತ್ತಿದ್ದರೆಂದ ಮೇಲೆ ಅದರ ವಿಶಾಲತೆಯನ್ನೂ ರಮಣೀಯತೆಯನ್ನೂ ಬೇರೆ ಹೇಳಬೇಕಾಗಿಲ್ಲ. ಅದೇ ಸಾಕು.

**ಕೃಶಮಪ್ಯಕೃಶಂ ಮಧ್ಯಂ ಲಕ್ಷ್ಮೀದ್ವಯಸಮಾಶ್ರಿತಮ್ ।**
**ಊರ್ಧ್ವದೇಹಂ ಮಹಾಭಾರಂ ವಹದೇತಸ್ಯ ಹೇಲಯಾ ॥ ೪೩ ॥**

ಅಭ್ಯುದಯನಿಃಶ್ರೇಯಸಲಕ್ಷ್ಮಿಯರಿಂದ ಆಶ್ರಯಿಸಲ್ಪಟ್ಟಿರುವುದೂ ಹೆಚ್ಚು ತೂಕವುಳ್ಳುದೂ ಆದ ಇವನ ಮೇಲ್ಮೈಯನ್ನು ಲೀಲೆಯಿಂದ ಹೊತ್ತಿರುವ ನಡು–ಸೊಂಟವು ತೆಳುವಾಗಿದ್ದರೂ ತೆಳುವಾಗಿಲ್ಲ. ಬಲಶಾಲಿಯಾಗಿದೆಯೆಂದು ಭಾವವು.

**ನಾಭಿಃ ಪ್ರದಕ್ಷಿಣಾವರ್ತಾ ಗಂಭೀರೇತಿ ನ ಕಥ್ಯತೇ ।**
**ಸಾ ಚೇನ್ನ ತಾದೃಶೀ ತಸ್ಮಿನ್ನ ಸ್ಯಾದೇವ ಸುಲಕ್ಷಣಾ ॥ ೪೪ ॥**

ಪ್ರದಕ್ಷಿಣವಾದ ಸುಳಿಯುಳ್ಳ ನಾಭಿಯು ಆಳವಾಗಿದೆಯೆಂದು ಹೇಳುವುದಿಲ್ಲ. ಅವನಲ್ಲಿ ಆ ನಾಭಿಯು ಹಾಗೆ ಆಳವಾಗಿಲ್ಲದಿರುತ್ತಿದ್ದರೆ ಅದು ಒಳ್ಳೆಯ ಲಕ್ಷಣಗಳುಳ್ಳುದಾಗಿರುತ್ತಲೇ ಇರಲಿಲ್ಲ.

**ರೂಪಶೋಭಾಂ ವಿನಾ ನೇಮಃ ಸ್ವಾಶ್ರಯಾನಿತಿ ವಾಣವಃ ।**
**ಸಂತಃ ಸರ್ವೇಪಿ ತತ್ರಾಸನ್ ರಮ್ಯಸ್ತತ್ತತ್ಕಟೀತಟಃ ॥ ೪೫ ॥**

''ರೂಪಶೋಭೆಯಿಲ್ಲದೆ ನಮ್ಮ ಆಶ್ರಯಗಳನ್ನು ನಾವು ಹೊಂದುವುದಿಲ್ಲ'' ಹೀಗೆ ಯೋಚಿಸಿಯೋ ಎಂಬಂತೆ ಶ್ರೇಷ್ಠವಾದ ಎಲ್ಲಾ ಅಣುಗಳೂ ಆ ಸುಮತಿನಾಥನಲ್ಲಿದ್ದುವು. ಆದುದರಿಂದ ಅವನ ಕಟೀಪ್ರದೇಶ(ಸೊಂಟ)ವು ರಮಣೀಯವಾಗಿದ್ದಿತು.



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಅಯೋಧ್ಯಾಪುರಿಯಲ್ಲಿ ಮೇಘಪ್ರಭಮಹಾರಾಜಂಗಂ ಸುಮಂಗಲಾದೇವಿಗಂ ಮಘಾನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಮುನ್ನೂರು ಬಿಲ್ಲುತ್ಸೇಧಮನುಳ್ಳ ನಾಲ್ವತ್ತುಲಕ್ಷಪೂರ್ವಾಯುಷ್ಯಮನುಳ್ಳ ಚಕ್ರವಾಕ ಲಾಂಛನಮನುಳ್ಳ ತುಂಬುರುವಜ್ರಾಂಕುಶಾ–ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ಅವಿಚಲಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಸುಮತಿತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ರಂಭಾಸ್ತಂಭಾದಯೋಽನ್ಯೇಷಾಮೂರ್ವೋರ್ಯಯಾಂತೂಪಮಾನತಾಮ್ ।**
**ಉಪಮೇಯಾಸ್ತದೂರುಭ್ಯಾಂ ತೇ ವೃತ್ತತ್ವಾದಿಭಿರ್ಗುಣೈಃ ॥ ೪೬ ॥**

ಬಾಳೆಯ ಕಂಬ ಮೊದಲಾದುವು ಬೇರೆಯವರ ತೊಡೆಗಳಿಗೆ ಉಪಮಾನತ್ವವನ್ನು ಹೊಂದುತ್ತವೆ. ಅವು ವರ್ತುಲಾಕಾರ ಮೊದಲಾದ ಗುಣಗಳಿಂದ ಆ ಸುಮತಿನಾಥನ ತೊಡೆಗಳೊಡನೆ ಉಪಮೇಯತೆಯನ್ನು ಹೊಂದಿದುವು. ಬಾಳೆಯ ಕಂಬ ಮೊದಲಾದುವುಗಳಿಗಿಂತಲೂ ಸುಮತಿನಾಥನ ತೊಡೆಗಳು ಚೆನ್ನಾಗಿದ್ದುವೆಂದು ಭಾವವು.

**ಕುತೋ ಜಾನುಕ್ರಿಯೇತ್ಯೇತದ್ವೇದ್ಮಿ ನಾನ್ಯೇಷು ವೇಧಸಃ ।**
**ವೇದ್ಮ್ಯಸ್ಮಿನ್ನೂರುಜಂಘಾನಾಂ ಶೋಭಾಸ್ಪರ್ಧಾ ನಿಷಿದ್ಧಯೇ ॥ ೪೭ ॥**

ಬ್ರಹ್ಮನು ಸುಮತಿನಾಥನ ಮೊಳಕಾಲಿನಲ್ಲಿ ಮಾಡಿರುವ ಕ್ರಿಯೆಯು ಬೇರೆಯವರಲ್ಲಿ ಏತಕ್ಕಿಲ್ಲವೆಂಬುದನ್ನು ಬಲ್ಲೆನು. ತೊಡೆಗಳಿಗೂ ಕಣಕಾಲುಗಳಿಗೂ ಶೋಭೆಯ ಹೋರಾಟವನ್ನು ತಡೆಯುವುದಕ್ಕೋಸ್ಕರ ಈ ಸುಮತಿನಾಥನಲ್ಲಿ ಆ ಕ್ರಿಯೆಯನ್ನು ಮಾಡಿದನೆಂದು ತಿಳಿಯುತ್ತೇನೆ. ತೊಡೆಗಳಿಗೂ ಕಣಕಾಲುಗಳಿಗೂ ಮಧ್ಯದಲ್ಲಿರುವ ಮೊಳಕಾಲೂ ಶೋಭೆಯುಳ್ಳುದಾಗಿದ್ದಿತೆಂದೂ ಅವು ಮೂರೂ ಅನನ್ಯಸಾಧಾರಣವಾದ ಶೋಭೆಯುಳ್ಳುವಾಗಿದ್ದುವೆಂದೂ ಭಾವವು.

**ವಜ್ರೇಣ ಘಟಿತೇ ಜಂಘೇ ವೇಧಸಾಸ್ಯಾನ್ಯಥಾ ಕಥಮ್ ।**
**ಜಗತ್ತ್ರಯಗುರೋರ್ಭಾರಂ ಬಿಭ್ರಾತೇ ತೇ ತನೋಸ್ತನೂಃ ॥ ೪೮ ॥**

ಬ್ರಹ್ಮನು ಈ ಸುಮತಿನಾಥನ ಕಣಕಾಲುಗಳನ್ನು ವಜ್ರದಿಂದ ನಿರ್ಮಿಸಿದನು. ಹಾಗಿಲ್ಲದಿದ್ದರೆ ಜಗತ್ತ್ರಯಗುರುವಾದ ಸುಮತಿನಾಥನ ಶರೀರದ ಭಾರವನ್ನು ತೆಳುವಾದ ಆ ಕಣಕಾಲುಗಳು ಹೇಗೆ ಧರಿಸುತ್ತವೆ ?

**ಧರೇಯಂ ಸರ್ವಭಾವೇನ ಲಗ್ನಾ ತತ್ತಲಯೋರಿತಿ ।**
**ತತ್ಕೃವಮೌಪ್ರಮುದೇನೇವ ಕೂರ್ಮಪೃಷ್ಠೌ ಶುಭಚ್ಛವೀ ॥ ೪೯ ॥**

''ಈ ಪೃಥ್ವಿಯು ಸರ್ವಭಾವದಿಂದ ಸುಮತಿನಾಥನ ಅಂಗಾಲುಗಳಲ್ಲಿ ಸಂಬಂಧಿಸಿದೆ'' ಎಂದು ಸಂತೋಷದಿಂದಲೋ ಎಂಬಂತೆ ಅವನ ಪಾದಗಳು ಆಮೆಯ ಬೆನ್ನಿನಂತಿರುವುವೂ ಶುಭವಾದ ಕಾಂತಿಯುಳ್ಳುವೂ ಆಗಿದ್ದುವು.

**ಇಯಂತೋಽಸ್ಮಿನ್ನಿವಿಷ್ಯಂತಿ ಧರ್ಮಾಃ ಕರ್ಮನಿಬರ್ಹಣಾಃ ।**
**ಇತ್ಯಾಖ್ಯಾತುಮಿವಾಭಾಂತಿ ವಿಧಿನಾಂಗುಲಯಃ ಕೃತಾಃ ॥ ೫೦ ॥**

''ಕರ್ಮಗಳನ್ನು ನಾಶಮಾಡುವ ಧರ್ಮಗಳು ಈ ಸುಮತಿನಾಥನಲ್ಲಿ ಇಷ್ಟಿರುವುವು'' ಎಂದು ಹೇಳುವುದಕ್ಕೋಸ್ಕರವೂ ಎಂಬಂತೆ ವಿಧಾತನಿಂದ ಮಾಡಲ್ಪಟ್ಟ ಬೆರಲ್ಗಳು ಶೋಭಿಸುತ್ತಿವೆ.

**ವಿಧಾಯ ದಶಧಾತ್ಮಾನಂ ವಿಧುರಂಘ್ರೀ ನಿಷೇವತೇ ।**
**ಕಾಂತಿಮಾಭ್ಯಾಂ ಪರಾಂ ಪ್ರಾಪ್ತುಮಿತ್ಯಾಶಂಕಾವಹಾ ನಖಾಃ ॥ ೫೧ ॥**

''ಚಂದ್ರನು ಸುಮತಿನಾಥನ ಪಾದಗಳಿಂದ ಅಧಿಕವಾದ ಕಾಂತಿಯನ್ನು ಹೊಂದುವುದಕ್ಕೋಸ್ಕರ ತನ್ನನ್ನು ಹತ್ತು ಪ್ರಕಾರವಾಗಿ ಮಾಡಿಕೊಂಡು ಅವನ ಪಾದಗಳನ್ನು ಸೇವಿಸುತ್ತಾನೆ'' ಎಂದು ಉಗುರುಗಳು ಸಂದೇಹವನ್ನುಂಟುಮಾಡುವುವಾಗಿದ್ದುವು.

**ಏವಂ ಸರ್ವಾಂಗಶೋಭಾಸ್ಯ ಲಕ್ಷಣೈರ್ವ್ಯಂಜನೈಶ್ಶುಭಾ ।**
**ಸ್ವೀಕರಿಷ್ಯತಿ ಮುಕ್ತ್ಯಂಗನಾಂ ಚೈತ್ಯತ್ರ ನ ಸಂಶಯಃ ॥ ೫೨ ॥**

ಹೀಗೆ ಮಹಾಲಕ್ಷಣಗಳಿಂದಲೂ ವ್ಯಂಜನ(ಕ್ಷುಲ್ಲಕಲಕ್ಷಣ)ಗಳಿಂದಲೂ ಶುಭವಾದ ಈ ಸುಮತಿನಾಥನ ಸರ್ವಾಂಗಶೋಭೆಯು ಮುಕ್ತಿಸ್ತ್ರೀಯನ್ನೂ ಸ್ವೀಕರಿಸುವುದು ಎಂಬೀ ವಿಷಯದಲ್ಲಿ ಸಂಶಯವಿಲ್ಲ.

**ಕೌಮಾರಮಿತಿ ರೂಪೇಣ ಸಂಧತ್ತೇ ರಾಮಣೀಯಕಮ್ ।**
**ಅನಾಪ್ತಯೌವನಸ್ಯಾಸ್ಯ ತದ್ವಿನಾಪಿ ಮನೋಭವಾತ್ ॥ ೫೩ ॥**

ಯೌವನಾವಸ್ಥೆಯನ್ನು ಹೊಂದದಿರುವ ಈ ಸುಮತಿಕುಮಾರನ ಈ ಪ್ರಕಾರವಾದ ಕೌಮಾರಾವಸ್ಥೆಯು ಆ ಯೌವನಾವಸ್ಥೆಯಿಲ್ಲದಿದ್ದರೂ ರೂಪ–ಸೌಂದರ್ಯದಿಂದ ಮನ್ಮಥನಿಗಿಂತ ರಮಣೀಯತೆಯನ್ನು ಧರಿಸಿರುತ್ತದೆ.

**ತತೋ ಯೌವನಮಾಲಂಬ್ಯ ಕಾಮೋಽಪ್ಯಸ್ಮಿನ್ಕೃತಾಸ್ಪದಃ ।**
**ಸಂಪ್ರಾಪ್ತ ಸಾಧನಾಃ ಸ್ಥಾನಂ ನಾಧಿತಿಷ್ಠಂತಿ ಕೇ ಸ್ವಯಮ್ ॥ ೫೪ ॥**

ಬಳಿಕ ಈ ಸುಮತಿನಾಥನ ಯೌವನಾವಸ್ಥೆಯನ್ನು ಆಶ್ರಯಿಸಿ ಮನ್ಮಥನೂ ಇವನಲ್ಲಿ ಮನೆ ಮಾಡಿಕೊಂಡಿದ್ದಾನೆ. ಯಾವ ಸಾಧುಪುರುಷರು ತಾನೆ ಸ್ಥಾನವನ್ನು ಹೊಂದಿ ತಾವಾಗಿ ವಾಸ ಮಾಡುವುದಿಲ್ಲ ?

**ಕುಮಾರಕಾಲೇ ಪೂರ್ವಾಣಾಂ ದಶಲಕ್ಷೇಷು ನಿಷ್ಠಿತೇ ।**
**ಭುಂಜನ್ಸ್ವರ್ಲೋಕಸಾಮ್ರಾಜ್ಯಂ ನೃರಾಜ್ಯಂ ಚಾಪ ಸ ಕ್ರಮಾತ್॥ ೫೫ ॥**

ಹತ್ತು ಲಕ್ಷ ಪೂರ್ವಗಳಲ್ಲಿ ಕುಮಾರಕಾಲವು ಕಳೆಯುತ್ತಿರಲು, ಸ್ವರ್ಗಲೋಕಸಾಮ್ರಾಜ್ಯವನ್ನನುಭವಿಸಿರುವ ಆ ಸುಮತಿನಾಥನು ಕ್ರಮದಿಂದ ಮಾನವಸಾಮ್ರಾಜ್ಯವನ್ನು ಹೊಂದಿದನು.

**ನ ಹಿಂಸಾ ನ ಮೃಷಾ ತಸ್ಯ ಸ್ತೇಯಸಂರಕ್ಷಣೇ ನ ಚ ।**
**ಸ್ವಪ್ನೇಪಿ ತದ್ಗತಾನಂದಃ ಶುಕ್ಲಲೇಶ್ಯಸ್ಯ ತೇನ ಸಃ ॥ ೫೬ ॥**

ಶುಕ್ಲಲೇಶ್ಯೆಯುಳ್ಳವನಾದ ಆ ಸುಮತಿನಾಥನ ಸ್ವಪ್ನದಲ್ಲಿಯೂ ಹಿಂಸೆಯಿಲ್ಲ, ಅಸತ್ಯವಿಲ್ಲ, ಚೌರ್ಯವಿಲ್ಲ, ಪ್ರಾಣಿಗಳನ್ನು ಬಂಧನದಲ್ಲಿಟ್ಟು ಸಂರಕ್ಷಿಸುವಿಕೆಯಿಲ್ಲ. ಆ ಹಿಂಸಾದಿಗಳಿಂದುಂಟಾಗುವ ಆನಂದವು ಯಾರೊಡನಿರುವುದು ? ಹಿಂಸಾನಂದಾದಿ ರೌದ್ರಧ್ಯಾನಗಳು ಸುಮತಿನಾಥನಲ್ಲಿರಲಿಲ್ಲವೆಂದು ಭಾವವು.

**ತಥಾ ನಾನಿಷ್ಟಸಂಯೋಗೋ ವಿಯೋಗೋ ನೇಷ್ಟವಸ್ತುಭಿಃ ।**
**ನಾಸಾತಂ ನ ನಿದಾನಂ ಚ ತತ್ಸಂಕ್ಲೇಶೋ ನ ತದ್ಗತಃ ॥ ೫೭ ॥**

ಹಾಗೆಯೇ ಅವನಿಗೆ ಅನಿಷ್ಟವಸ್ತುಗಳ ಸಂಯೋಗವಿರಲಿಲ್ಲ. ಇಷ್ಟವಸ್ತುಗಳಿಂದ ವಿಯೋಗವಿರಲಿಲ್ಲ. ದುಃಖವಿರಲಿಲ್ಲ. ನಿದಾನ–ಉತ್ತರಭವದ ಸುಖಕಾಂಕ್ಷೆಯಿರಲಿಲ್ಲ. ಅನಿಷ್ಟಸಂಯೋಗಾದಿಗಳನ್ನು ಹೊಂದಿರುವ ಆ ಸಂಕ್ಲೇಶವೂ ಅವನಲ್ಲಿರಲಿಲ್ಲ.

**ಗುಣಾನಾಮ್ವೃದ್ಧಿಮಾತನ್ವನ್ ಸಂಚಯಂ ಪುಣ್ಯಕರ್ಮಣಾಮ್ ।**
**ವಿಪಾಕಂ ವಿಶ್ವಪುಣ್ಯಾನಾಂ ಗುಣಪುಣ್ಯಸುಖಾತ್ಮಕಃ ॥ ೫೮ ॥**

**ಸೇವ್ಯಮಾನಃ ಸದಾರಕ್ತೈಃ ಸುರಖೇಚರಭೂಚರೈಃ ।**
**ನಿರಾಕೃತೈಹಿಕಾರಂಭಃ ಸಂಭೃತಃ ಸರ್ವಸಂಪದಾ ॥ ೫೯ ॥**

**ನಿಶ್ಚಿಂತಂ ಕಾಮಭೋಗೇಷು ನಿತ್ಯಂ ನೃಸುರಭಾವಿಷು ।**
**ನ್ಯಾಯ್ಯಾರ್ಥಪಥ್ಯಧರ್ಮೇಷು ಶರ್ಮಸಾರಂ ಸಮಾಪ ಸಃ ॥ ೬೦ ॥**

ಗುಣಗಳ ಅಭಿವೃದ್ಧಿಯನ್ನೂ ಪುಣ್ಯಕರ್ಮಗಳ ಸಂಗ್ರಹವನ್ನೂ ಸಮಸ್ತಪುಣ್ಯಗಳ ಪರಿಪಾಕ–ಸುಖಾನುಭವವನ್ನೂ ಮಾಡುವವನೂ ಗುಣಪುಣ್ಯಸುಖಸ್ವರೂಪನೂ ಅನುರಾಗವುಳ್ಳವರಾದ ದೇವತೆಗಳಿಂದಲೂ ಖೇಚರ–ವಿದ್ಯಾಧರರಿಂದಲೂ, ಭೂಚರ–ಮನುಷ್ಯರಿಂದಲೂ ಯಾವಾಗಲೂ ಸೇವಿಸಲ್ಪಡುವವನೂ ಇಹಲೋಕಸಂಬಂಧವಾದ ಕೆಲಸವನ್ನು ಬಿಟ್ಟಿರುವವನೂ ಸಕಲಸಂಪತ್ತಿನಿಂದ ಪರಿಪೂರ್ಣನೂ ಆದ ಸುಮತಿನಾಥನು ಮನುಷ್ಯರಲ್ಲಿಯೂ ದೇವತೆಗಳಲ್ಲಿಯೂ ಉಂಟಾಗುವ ಇಷ್ಟಭೋಗಗಳಲ್ಲಿಯೂ ನ್ಯಾಯಯುಕ್ತವಾದ ಅರ್ಥದಲ್ಲಿಯೂ ಹಿತಕರವಾದ ಧರ್ಮದಲ್ಲಿಯೂ ಯಾವಾಗಲೂ ನಿಶ್ಚಿಂತೆಯಾಗಿ ಸುಖದ ಸಾರವನ್ನು ಹೊಂದಿದನು.

**ಕಾಂತಾಭಿಃ ಕಮನೀಯಾಭಿಃ ಸವಯೋಭಿಃ ಸಮೀಪ್ಸುಭಿಃ ।**
**ದಿವ್ಯಾಂಗರಾಗಸ್ರಗ್ವಸ್ತ್ರಭೂಷಾಭೀ ರಮತೇ ಸ್ಮ ಸಃ ॥ ೬೧ ॥**

ಮನೋಹರರೂ ಸಮಾನವಯಸ್ಸಿನವರೂ ಪತಿಯನ್ನು ಹೊಂದಲಿಚ್ಛೆಯುಳ್ಳವರೂ ದಿವ್ಯವಾದ ಅಂಗಲೇಪನ ಪುಷ್ಪಮಾಲಿಕೆ ವಸ್ತ್ರ ಭೂಷಣಗಳುಳ್ಳವರೂ ಆದ ಪತ್ನಿಯರೊಡನೆ ಸುಮತಿನಾಥನು ಕ್ರೀಡಿಸಿದನು.

**ದಿವ್ಯಶ್ರೀರ್ಮಾನುಷೀ ಚ ಶ್ರೀಃ ಸಮಪ್ರೇಮಪ್ರತೋಷಿತೇ ।**
**ಸುಖಂ ವಿದಧತುಸ್ತಸ್ಯ ಮಧ್ಯಸ್ಥಃ ಕಸ್ಯ ನ ಪ್ರಿಯಃ ॥ ೬೨ ॥**

ಸುಖವನ್ನುಂಟುಮಾಡುವ ಆ ಸುಮತಿನಾಥನ ಸ್ವರ್ಗಲಕ್ಷ್ಮಿಯೂ ಮಾನುಷ ಲಕ್ಷ್ಮಿಯೂ (ಸ್ವರ್ಗಮರ್ತ್ಯಸಂಪತ್ತಿಗಳು) ಸಮಾನವಾದ ಪ್ರೇಮದಿಂದ ಸಂತೋಷಪಡಿಸಲ್ಪಟ್ಟರು. ಮಧ್ಯಸ್ಥನು ಯಾರಿಗೆ ಪ್ರಿಯನಲ್ಲ ?

**ಸುಖಂ ನಾಮ ತದೇವಾತ್ರ ಯದಸ್ಯೇಂದ್ರಿಯಗೋಚರಮ್ ।**
**ಸ್ವವಂದ್ಯಸಾರಭೋಗ್ಯಂ ಚೇತ್ಸುರೇಶಾಸ್ಯೈವ ರಕ್ಷಿತಮ್ ॥ ೬೩ ॥**

ದೇವೇಂದ್ರನು ತನಗೆ ವಂದ್ಯನಾದ ಸುಮತಿನಾಥನಿಗೋಸ್ಕರ ಸಾರವಾದ ಭೋಗ್ಯವಸ್ತುವನ್ನು ಇವನಿಗೇ ಕಾದಿಟ್ಟಿದ್ದನಾದರೆ ಈ ಲೋಕದಲ್ಲಿ ಈ ಸುಮತಿನಾಥನ ಇಂದ್ರಿಯಗೋಚರವಾದ ಸುಖವೇ ಸುಖ–ಅದಕ್ಕಿಂತ ಮಿಗಿಲಾದ ಸುಖವಿಲ್ಲವೆಂದು ಭಾವವು.

**ಏವಂ ಸ ಗಮಯನ್ಕಾಲಂ ದಿವ್ಯರಾಜ್ಯಶ್ರಿಯೋರ್ದ್ವಯೋಃ ।**
**ವ್ಯರಂಸೀತ್ಸಂಸೃತೇಃ ಸಾ ಹಿ ಪ್ರತ್ಯಾಸನ್ನವಿನೇಯತಾ ॥ ೬೪ ॥**

ಈ ಪ್ರಕಾರವಾಗಿ ಸುಮತಿನಾಥನು ದಿವ್ಯಸಂಪತ್ತಿ ರಾಜ್ಯಸಂಪತ್ತಿಗಳಲ್ಲಿ ಕಾಲವನ್ನು ಕಳೆಯುವವನಾಗಿ ಸಂಸಾರದಿಂದ ವಿರಕ್ತನಾದನು. ಅದಲ್ಲವೇ ಆಸನ್ನಭವ್ಯತ್ವವೆಂಬುದು ?

**ಸುಧೀಃ ಕಥಂ ಸುಖಾಂಶೇಪ್ಸುರ್ವಿಷಯಾಮಿಷಗೃದ್ಧಿಮಾನ್ ।**
**ನ ಪಾಪಬಡಿಶಂ ಪಶ್ಯೇನ್ನ ಚೇದನಿಮಿಷಾಯತೇ ॥ ೬೫ ॥**

“ಪ್ರಾಜ್ಞನು ವಿಷಯವೆಂಬ ಮಾಂಸದಲ್ಲಿ ಆಸಕ್ತಿಯುಳ್ಳವನಾಗಿ ಹೇಗೆ ಸುಖಲೇಶವನ್ನು ಹೊಂದಲಿಚ್ಛಿಸುವನು ? ಅವನು ಮೀನಿನಂತೆ ಆಚರಿಸದಿದ್ದರೆ ಪಾಪವೆಂಬ ಬಲೆಯನ್ನು ನೋಡಲಾರನು. ವಿಷಯಾಸಕ್ತನಾಗದಿದ್ದರೆ ಪಾಪಬಂಧವನ್ನು ಮಾಡಿಕೊಳ್ಳಲಾರನೆಂದು ಭಾವವು.”

**ಮೂಢಃ ಪ್ರಾಣೀ ಪರಃ ಪ್ರೌಢಿಮಪ್ರಾಪ್ತೋಽಸ್ವಾಹಿತಾಹಿತಃ ।**
**ಅಹಿತೇನಾಹಿತೋಽಹಂ ಚ ಕಥಂ ಬೋಧತ್ರಯಾಹಿತಃ ॥ ೬೬ ॥**

ಪ್ರೌಢಿಮೆಯನ್ನು ಹೊಂದದಿರುವ ಬೇರೆ ಮೂರ್ಖಪ್ರಾಣಿಯು ತನ್ನದಲ್ಲದ ಮತ್ತು ಅಹಿತಕರವಾದ ವಿಷಯಾಸಕ್ತಿಯುಳ್ಳುದಾಗಿ ಅಹಿತದಿಂದ ವ್ಯಾಪ್ತವಾಗಿರುವುದು. ಮತಿಶ್ರುತಾವಧಿಜ್ಞಾನತ್ರಯದಿಂದ ಕೂಡಿದ ನಾನೂ ಅಹಿತದಿಂದ ವ್ಯಾಪ್ತನಾಗಿರುವುದು ಹೇಗೆ ?

**ನಿರಂಕುಶಂ ನ ವೈರಾಗ್ಯಂ ಯಾವದ್ಜ್ಞಾನಂ ಚ ತಾದೃಶಮ್ ।**
**ಕುತಃ ಸ್ಯಾದಾತ್ಮನಃ ಸ್ವಾಸ್ಥ್ಯಮಸ್ವಸ್ಥಸ್ಯ ಕುತಃ ಸುಖಮ್ ॥ ೬೭ ॥**

ನಿರರ್ಗಳವಾದ ವೈರಾಗ್ಯವೂ ಅಂತಹ ಜ್ಞಾನವೂ ಉಂಟಾಗುವವರೆಗೆ ಆತ್ಮನಿಗೆ ಸ್ವಸ್ಥತೆಯು ಎಲ್ಲಿಂದಾಗುವುದು ? ಅಸ್ವಸ್ಥನಿಗೆ ಸುಖವೆಲ್ಲಿಂದ ?”

**ಖಪಂಚಕನವದ್ವ್ಯಕ್ತೈಃ ಪೂರ್ವೈರಾಜ್ಯೇವಸಾಯಿತೇ ।**
**ಸಹ ದ್ವಾದಶಪೂರ್ವಾಂಗೈಃ ಸ್ವಸ್ಮಿನ್ನೇವೇತ್ಯಚಿಂತಯತ್ ॥ ೬೮ ॥**

ಹನ್ನೆರಡು ಪೂರ್ವಾಂಗವರ್ಷಸಹಿತವಾದ ಇಪ್ಪತ್ತೊಂಬತ್ತು ಲಕ್ಷಪೂರ್ವ ವರ್ಷಗಳಿಂದ ರಾಜ್ಯವು ಕೊನೆಗಾಣುತ್ತಿರಲು ಸುಮತಿನಾಥನು ತನ್ನಲ್ಲೇ ಮೇಲೆ ಹೇಳಿದಂತೆ ಭಾವಿಸಿದನು.

**ಸ್ತುತಸ್ತದೈವ ಸಂಸ್ತೋತ್ರೈಃ ಸರ್ವೈಃ ಸಾರಸ್ವತಾದಿಭಿಃ ।**
**ಅಭಿಷೇಕಂ ಸುರೈರಾಪ್ಯ ದೇವೋಢಾಭಯಯಾನತಃ ॥ ೬೯ ॥**

**ದೀಕ್ಷಾಂ ಷಷ್ಠೋಪವಾಸೇನ ಸಹೇತುಕವನೇಗ್ರಹೀತ್ ।**
**ಸಿತೇ ರಾಜ್ಞಾಂ ಸಹಸ್ರೇಣ ಸುಮತಿರ್ನವಮೀದಿನೇ ॥ ೭೦ ॥**

**ಮಘಾಶಶಿನಿ ವೈಶಾಖೇ ಪೂರ್ವಾಹ್ಣೇ ಸಂಯಮಾಶ್ರಯಮ್ ।**
**ತದೈವಾವಿರಭೂದಸ್ಯ ಮನಃಪರ್ಯಯಸಂಜ್ಞಕಮ್ ॥ ೭೧ ॥**

ಆಗಲೇ ಸಾರಸ್ವತ ಮೊದಲಾದ ಎಲ್ಲಾ ಲೌಕಾಂತಿಕದೇವತೆಗಳಿಂದ ಒಳ್ಳೆಯ ಸ್ತೋತ್ರಗಳಿಂದ ಸ್ತುತಿಸಲ್ಪಟ್ಟವನೂ ದೇವತೆಗಳಿಂದ ಅಭಿಷೇಕವನ್ನು ಹೊಂದಿ ದೇವತೆಗಳಿಂದ ಅಭಯವೆಂಬ ಪಲ್ಲಕ್ಕಿಯಲ್ಲಿ ಹೊರಲ್ಪಟ್ಟವನೂ ಆದ ಸುಮತಿನಾಥನು ಸಹೇತುಕವನದಲ್ಲಿ ವೈಶಾಖಮಾಸದ ಶುಕ್ಲಪಕ್ಷದ ನವಮೀದಿನದ ಪ್ರಾತಃಕಾಲದಲ್ಲಿ ಮಘಾನಕ್ಷತ್ರದಲ್ಲಿ ಸಾವಿರಮಂದಿ ರಾಜರೊಡನೆ ಆರು ಉಪವಾಸನಿಯಮಪೂರ್ವಕವಾಗಿ ದೀಕ್ಷೆಯನ್ನು ತೆಗೆದುಕೊಂಡನು. ಆಗಲೇ ಇವನಿಗೆ ಸಂಯಮಾಶ್ರಯವಾದ ಮನಃಪರ್ಯಯಜ್ಞಾನವು ಆವಿರ್ಭವಿಸಿತು.

**ಪುರಂ ಸೌಮನಸಂ ನಾಮ ಭಿಕ್ಷಾಯೈ ಪಶ್ಚಿಮೇ ದಿನೇ ।**
**ಪ್ರಾಪ್ತಂ ಪ್ರತೀಕ್ಷ್ಯ ಪದ್ಮೋಗಾತ್ಪೂಜಾಂ ದ್ಯುಮ್ನದ್ಯುತಿರ್ನೃಪಃ ॥ ೭೨ ॥**

ಅವನು ಎರಡನೆಯ ದಿವಸ ಭಿಕ್ಷೆಗೋಸ್ಕರ ಸೌಮನಸವೆಂಬ ನಗರವನ್ನು ಪ್ರವೇಶಿಸಿದನು. ಬಂಗಾರದಂತೆ ಕಾಂತಿಯುಳ್ಳ ಪದ್ಮನೆಂಬ ದೊರೆಯು ಅವನನ್ನು ಇದಿರ್ಗೊಂಡು ಕರೆದೊಯ್ದು ಆಹಾರದಾನವನ್ನು ಕೊಟ್ಟು ದೇವತೆಗಳಿಂದ ಪಂಚಾಶ್ಚರ್ಯಪೂಜಾಸತ್ಕಾರವನ್ನು ಪಡೆದನು.

**ಸಾಮಾಯಿಕಂ ಸಮಾದಾಯ ಸಮೌನಶ್ಶಾಂತಕಲ್ಮಷಃ ।**
**ತಪಸ್ತೇಪೇ ಸಮಾಧಾನಾತ್ ಸಹಿಷ್ಣುರ್ದುಸ್ಸಹಂ ಪರೈಃ ॥ ೭೩ ॥**

ಸುಮತಿಮುನಿಯು ಸಾಮಾಯಿಕವೆಂಬ ಚಾರಿತ್ರವನ್ನು ಹೊಂದಿ ಮೌನವುಳ್ಳವನೂ ಶಾಂತವಾದ ಕಲ್ಮಷವುಳ್ಳವನೂ ಸಮಾಧಾನದಿಂದ ಕ್ಷುಧಾತೃಷಾದಿ ಬಾಧೆಗಳನ್ನು ಸಹಿಸುವವನೂ ಆಗಿ ಬೇರೆಯವರಿಂದ ದುಃಸಹವಾದ ತಪಸ್ಸನ್ನು ಮಾಡಿದನು.

**ವಿಂಶತಿಂ ವತ್ಸರಾನ್ನೀತ್ವಾ ಛಾದ್ಮಸ್ಥ್ಯೇ ಪ್ರಾಕ್ತನೇ ವನೇ ।**
**ಪ್ರಿಯಂಗುಭೂರುಹೋಧಸ್ತಾದುಪವಾಸದ್ವಯಂ ಶ್ರಿತಃ ॥ ೭೪ ॥**

**ಮಘಾಯಾಂ ಚೈತ್ರಮಾಸಸ್ಯ ಧವಳೈಕಾದಶೀದಿನೇ ।**
**ಪಶ್ಚಿಮಾಭಿಮುಖೇ ಭಾನೌ ಕೈವಲ್ಯಮುದಪಾದಯತ್ ॥ ೭೫ ॥**

ಮೇಲೆ ಹೇಳಿದ ಸಹೇತುಕವನದಲ್ಲಿ ಛದ್ಮಸ್ಥಾವಸ್ಥೆಯಲ್ಲಿ ಇಪ್ಪತ್ತು ವರ್ಷಗಳನ್ನು ಕಳೆದು ಪ್ರಿಯಂಗುವೃಕ್ಷದ (ಪ್ರೇಂಕಣಗಿಡದ) ಕೆಳಗೆ ಎರಡು ಉಪವಾಸಗಳನ್ನು ಮಾಡಿ ಚೈತ್ರಮಾಸದ ಶುಕ್ಲಪಕ್ಷದ ಏಕಾದಶೀದಿನದಲ್ಲಿ ಮಘಾನಕ್ಷತ್ರದಲ್ಲಿ ಸೂರ್ಯನು ಪಶ್ಚಿಮಾಭಿಮುಖನಾಗಿರುವಾಗ ಕೇವಲಜ್ಞಾನವನ್ನು ಪಡೆದನು.

**ಸುರೈಸ್ಸಂಪ್ರಾಪ್ತಸಂಪೂಜೋ ಗಣೇಶೈಶ್ಚಮರಾದಿಭಿಃ ।**
**ಸುಸಪ್ತರ್ದ್ಧಿಭಿರಭ್ಯರ್ಚ್ಯಃ ಸ ಷೋಡಶಶತೋನ್ಮಿತೈಃ ॥ ೭೬ ॥**

**ಶೂನ್ಯದ್ವಯಚತುಃಪಕ್ಷಮಿತಪೂರ್ವಧರಾನುಗಃ ।**
**ಖಪಂಚತ್ರಿಚತುಃಪಂಚಪಕ್ಷೋಕ್ತೈಃ ಶಿಕ್ಷಕೈರ್ಯುತಃ ॥ ೭೭ ॥**

**ಏಕಾದಶಸಹಸ್ರಾವಧೀದ್ಧಬೋಧವಿದೀಡಿತಃ ।**
**ತ್ರಯೋದಶಸಹಸ್ರಾತ್ಮಸಮಾನಜ್ಞಾನಸಂಯುತಃ ॥ ೭೮ ॥**

**ಶೂನ್ಯದ್ವಯಯುಗಾಷ್ಟೈಕಮಿತವೈಕ್ರಿಯಿಕಸ್ತುತಃ ।**
**ಶೂನ್ಯದ್ವಯಚತುಃಖೈಕಪ್ರಮಿತೋಪಾಂತವಿದ್ವೃತಃ ॥ ೭೯ ॥**

**ಶೂನ್ಯಪಂಚಚತುಃಖ್ಯೇಕಮಿತವಾದ್ಯಭಿವಂದಿತಃ ।**
**ಪಿಂಡಿತೈಃ ಖಚತುಷ್ಕದ್ವಿತ್ರಿಮಿತೈಸ್ತ್ರ್ಯರ್ವಿಭೂಷಿತಃ ॥ ೮೦ ॥**

**ಖಚತುಷ್ಕತ್ರಿವಹ್ನ್ಯುಕ್ತಾನಂತಾರ್ಯಾದ್ಯಾರ್ಯಿಕಾನುಗಃ ।**
**ತ್ರಿಲಕ್ಷಶ್ರಾವಕಾಭ್ಯರ್ಚ್ಯಃ ಶ್ರಾವಿಕಾಪಂಚಲಕ್ಷವಾನ್ ॥ ೮೧ ॥**

**ಸ ದೇವದೇವ್ಯಸಂಖ್ಯಾತತಿರ್ಯಕ್ಸಂಖ್ಯಾತವೇಷ್ಟಿತಃ ।**
**ವಿಹೃತ್ಯಾಷ್ಟಾದಶಕ್ಷೇತ್ರವಿಶೇಷೇಷ್ವಮರಾರ್ಚಿತಃ ॥ ೮೨ ॥**

**ಪ್ರಶಸ್ತಾಶಸ್ತಭಾಷಾಸು ಭವ್ಯಾನಾಂ ದಿವ್ಯಮಾಕ್ಷಿಪತ್ ।**
**ಧ್ವನಿಂ ಬೀಜವಿಶೇಷಂ ವಾ ಸುಭೂಮಿಷು ಮಹಾಫಲಮ್ ॥ ೮೩ ॥**

ದೇವತೆಗಳಿಂದ ಕೇವಲಜ್ಞಾನಕಲ್ಯಾಣಪೂಜೆಯನ್ನು ಹೊಂದಿದವನೂ ಶ್ರೇಷ್ಠವಾದ ಏಳು ಋದ್ಧಿ–ತಪೋತಿಶಯಗಳುಳ್ಳ ಚಮರ ಮೊದಲಾದ ನೂರ ಹದಿನಾರು ಮಂದಿ ಗಣಧರರಿಂದ ಪೂಜಿಸಲ್ಪಡತಕ್ಕವನೂ ಎರಡು ಸಾವಿರದ ನಾಲ್ಕು ನೂರು ಮಂದಿ ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಜ್ಞರಾದ ಮುನಿಗಳಿಂದ ಅನುಸರಿಸಲ್ಪಟ್ಟವನೂ ಎರಡು ಲಕ್ಷದ ಐವತ್ತುನಾಲ್ಕು ಸಾವಿರದ ಮೂರು ನೂರೈವತ್ತುಮಂದಿ ಶಿಕ್ಷಕಮುನಿಗಳಿಂದ ಯುಕ್ತನೂ ಹನ್ನೊಂದುಸಾವಿರಮಂದಿ ಅವಧಿಜ್ಞಾನಿಗಳಾದ ಮುನಿಗಳಿಂದ ಸ್ತುತಿಸಲ್ಪಟ್ಟವನೂ ಹದಿಮೂರು ಸಾವಿರಮಂದಿ ತನಗೆ ಸಮಾನರಾದ ಜ್ಞಾನಿಗಳೊಡನೆ–ಕೇವಲಿಗಳೊಡನೆ ಕೂಡಿರುವವನೂ ಹದಿನೆಂಟು ಸಾವಿರದ ನಾಲ್ಕುನೂರುಮಂದಿ ವಿಕ್ರಿಯರ್ದ್ಧಿಸಂಪನ್ನರಾದ ಮುನಿಗಳಿಂದ ಸ್ತುತಿಸಲ್ಪಟ್ಟವನೂ ಹತ್ತುಸಾವಿರದ ನಾಲ್ಕು ನೂರುಮಂದಿ ಮನಃಪರ್ಯಯಜ್ಞಾನಿಗಳಿಂದ ಆವರಿಸಲ್ಪಟ್ಟವನೂ ಹತ್ತುಸಾವಿರದ ನಾಲ್ಕುನೂರಐವತ್ತುಮಂದಿ ವಾದಿಗಳಿಂದ ವಂದಿಸಲ್ಪಟ್ಟವನೂ ಒಟ್ಟು ಮೂರು ಲಕ್ಷ ಇಪ್ಪತ್ತು ಸಾವಿರಮಂದಿ ಆ ತಪೋಧನರಿಂದ ಅಲಂಕೃತನೂ ಮೂರು ಲಕ್ಷ ಮೂವತ್ತು ಸಾವಿರಮಂದಿ ಅನಂತಾರ್ಯೆ ಮೊದಲಾದ ಆರ್ಯಿಕೆಯರಿಂದ ಅನುಸರಿಸಲ್ಪಟ್ಟವನೂ ಮೂರು ಲಕ್ಷ ಶ್ರಾವಕರಿಂದ ಪೂಜ್ಯನೂ ಐದು ಲಕ್ಷ ಶ್ರಾವಿಕೆಯರುಳ್ಳವನೂ ಅಸಂಖ್ಯಾತ ದೇವದೇವಿಯರಿಂದಲೂ ಸಂಖ್ಯಾತ ತಿರ್ಯಕ್ಪ್ರಾಣಿಗಳಿಂದಲೂ ಸುತ್ತಲ್ಪಟ್ಟವನೂ ದೇವತೆಗಳಿಂದ ಪೂಜಿಸಲ್ಪಟ್ಟವನೂ ಆದ ಆ ಸುಮತಿತೀರ್ಥಂಕರನು ಹದಿನೆಂಟು ವಿಶೇಷಕ್ಷೇತ್ರಗಳಲ್ಲಿ ವಿಹರಿಸಿ, ಒಳ್ಳೆಯ ಭೂಮಿಗಳಲ್ಲಿ ಮಹಾಫಲವನ್ನು ಕೊಡುವ ಬೀಜವಿಶೇಷವನ್ನು ಬಿತ್ತುವಂತೆ, ಭವ್ಯರಿಗೆ ಅವರವರ ಪ್ರಶಸ್ತಾಪ್ರಶಸ್ತಭಾಷೆಗಳಲ್ಲಿ ದಿವ್ಯಧ್ವನಿಯನ್ನು ಪ್ರೇರೇಪಿಸಿದನು.

**ವಿಮುಕ್ತ ವಿಹೃತಿರ್ಮಾಸಂ ಸಹಸ್ರಮುನಿಭಿಃ ಸಹ ।**
**ಪ್ರತಿಮಾಯೋಗಮಾಸ್ಥಾಯ ಸಮ್ಮೇದೇ ನಿರ್ವೃತಿಂ ಯಯೌ ॥ ೮೪ ॥**

**ಏಕಾದಶ್ಯಾಂ ಸಿತೇ ಚೈತ್ರೇ ಮಘಾಯಾಮಪರಾಹ್ಣಗಃ ।**
**ಅಮರ್ತ್ಯೈರಂತ್ಯಕಲ್ಯಾಣಮವಾಪ ಸುಮತೀಶ್ವರಃ ॥ ೮೫ ॥**

ಬಳಿಕ ಸುಮತೀಶ್ವರನು ವಿಹಾರವನ್ನು ತ್ಯಜಿಸಿ ಸಾವಿರ ಮುನಿಗಳೊಡನೆ ಒಂದು ತಿಂಗಳವರೆಗೆ ಸಮ್ಮೇದಪರ್ವತದಲ್ಲಿ ಪ್ರತಿಮಾಯೋಗವನ್ನು ಧಾರಣೆಮಾಡಿ ಚೈತ್ರ ಮಾಸದ ಶುಕ್ಲಪಕ್ಷದಏಕಾದಶೀತಿಥಿಯಲ್ಲಿ ಸಾಯಂಕಾಲ ಮಘಾನಕ್ಷತ್ರದಲ್ಲಿ ಮೋಕ್ಷವನ್ನು ಪಡೆದನು. ದೇವತೆಗಳಿಂದ ಕೊನೆಯದಾದ–ನಿರ್ವಾಣಕಲ್ಯಾಣವನ್ನು ಪಡೆದನು.

**ರಿಪುನೃಪಯಮದಂಡಃ ಪುಂಡರೀಕಿಣ್ಯಧೀಶೋ ।**
**ಹರಿರಿವ ರತಿಷೇಣೋ ವೈಜಯಂತೇಹಮಿಂದ್ರಃ ॥**
**ಸುಮತಿರಮಿತಲಕ್ಷ್ಮೀಸ್ತೀರ್ಥಕೃದ್ಯಃ ಕೃತಾರ್ಥಃ ।**
**ಸಕಲಗುಣಸಮೃದ್ಧೋ ವಃ ಸ ಸಿದ್ಧಿಂ ವಿದಧ್ಯಾತ್ ॥ ೮೬ ॥**

ಯಾವನು ಶತ್ರುರಾಜರುಗಳಿಗೆ ಯಮನ ದಂಡಸ್ವರೂಪನೂ ಇಂದ್ರನಂತಿರುವವನೂ ಪುಂಡರೀಕಿಣೀನಗರಾಧಿಪತಿಯೂ ಆದ ರತಿಷೇಣನೂ ವೈಜಯಂತವಿಮಾನದಲ್ಲಿ ಅಹಮಿಂದ್ರನೂ ಅಪಾರವಾದ ಸಂಪತ್ತಿಯುಳ್ಳವನೂ ಕೃತಾರ್ಥನೂ ಆದ ಸುಮತಿತೀರ್ಥಕರನೂ ಆದನೋ ಸಕಲಗುಣಸಮೃದ್ಧಿಯುಳ್ಳ ಆ ಪವಿತ್ರಾತ್ಮನು ನಿಮ್ಮಗಳಿಗೆ ಸಿದ್ಧಿಯನ್ನು ಕೊಡಲಿ.

**ಸದ್ಯೋಜಾತಂ ಜಿನೇಂದ್ರಂ ಸ್ವರವತರಣಸಂಪ್ರಾಪ್ತಕಲ್ಯಾಣಕಾರ್ಯೇ ।**
**ವಾಮಂ ಜನ್ಮಾಭಿಷೇಕೇ ಸುರಪತಿರಚಿತೈರ್ಭೂಷಣೈರಿದ್ಧಶೋಭಮ್ ॥**
**ಸ ನಿಷ್ಕ್ರಾಂತಾವಘೋರಂ ಸುಮತಿಮತಿಮತಂ ಕೇವಲಜ್ಞಾನಸಿದ್ಧಾ ।**
**ವೀಶಾನಂ ನಿರ್ವೃತೌ ತತ್ಪುರುಷಮಪುರುಷಂ ಶಾಂತಯೇ**
**ಸಂಶ್ರಯಧ್ವಮ್ ॥ ೮೭ ॥**

ಸ್ವರ್ಗಾವತರಣಕಾಲದಲ್ಲಿ ಪಡೆದ ಕಲ್ಯಾಣಕಾರ್ಯದಲ್ಲಿ (ಗರ್ಭಾವತರಣ ಕಲ್ಯಾಣದಲ್ಲಿ) ಸದ್ಯೋಜಾತನೆನ್ನಿಸಿಕೊಂಡವನೂ ಜನ್ಮಾಭಿಷೇಕದಲ್ಲಿ ದೇವೇಂದ್ರನಿಂದ ರಚಿತವಾದ ಆಭರಣಗಳಿಂದ ಶೋಭೆಯನ್ನು ಪಡೆದ ವಾಮ–ಸುಂದರನೆನ್ನಿಸಿಕೊಂಡವನೂ ಪರಿನಿಷ್ಕ್ರಾಂತಿಕಲ್ಯಾಣದಲ್ಲಿ ಅಘೋರನೆನ್ನಿಸಿಕೊಂಡವನೂ ಕೇವಲಜ್ಞಾನಪ್ರಾಪ್ತಿಕಾಲದಲ್ಲಿ ಈಶಾನನೆನ್ನಿಸಿಕೊಂಡವನೂ ಮುಕ್ತಿಪ್ರಾಪ್ತಿಕಾಲದಲ್ಲಿ ಕಾಠಿನ್ಯವಿಲ್ಲದ ತತ್ಪುರುಷನೆನ್ನಿಸಿಕೊಂಡವನೂ ವಿಶೇಷವಾದ ಜ್ಞಾನವುಳ್ಳವನೂ ಆದ ಸುಮತಿಜಿನೇಂದ್ರನನ್ನು ಶಾಂತಿಗೋಸ್ಕರ ಆಶ್ರಯಿಸಿರಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಸುಮತಿತೀರ್ಥಕರಪುರಾಣಂ ನಾಮ ಏಕಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಸುಮತಿತೀರ್ಥಕರಪುರಾಣವೆಂಬ
ಐವತ್ತೊಂದನೆಯ ಪರ್ವವು ಸಮಾಪ್ತವಾದುದು.

# ಅಥ ಪದ್ಮಪ್ರಭತೀರ್ಥಂಕರಪುರಾಣಂ

**ಪದ್ಮೇ ಸ್ಥಾಸ್ನುರ್ನ ಭಾತೀವ ಪ್ರಭಾಸ್ಮಿನ್ನಿತಿ ವಾ ಶ್ರಿತಾ ।**
**ತ್ಯಕ್ತ್ವಾ ತಂ ಯಂ ಸ ಪದ್ಮಾಸ್ಮಾನ್ಪಾತು ಪದ್ಮಪ್ರಭಃ ಪ್ರಭುಃ ॥ ೧ ॥**

"ಪ್ರಭೆಯು ಕಮಲದಲ್ಲಿ ಸ್ಥಿರವಾಗಿ ಪ್ರಕಾಶಿಸುವಂತಿಲ್ಲ. ಈ ಪದ್ಮಪ್ರಭನಲ್ಲಾದರೋ ಪ್ರಕಾಶಿಸುವುದು" ಎಂದು ಯೋಚಿಸಿಯೋ ಎಂಬಂತೆ ಲಕ್ಷ್ಮಿಯು ಕಮಲವನ್ನು ಬಿಟ್ಟು ಯಾವನನ್ನು ಆಶ್ರಯಿಸಿದಳೋ ಅಂತಹ ಪ್ರಭುವಾದ ಪದ್ಮಪ್ರಭನು ನಮ್ಮನ್ನು ಕಾಪಾಡಲಿ.

**ದ್ವಿತೀಯೇ ಧಾತಕೀಖಂಡೇ ದ್ವೀಪೇ ಪ್ರಾಗ್ಭಾಗಪೂರ್ವಜೇ ।**
**ವಿದೇಹೇ ದಕ್ಷಿಣೇ ಕೂಲೇ ಸೀತಾಯಾ ವತ್ಸದೇಶಜಮ್ ॥ ೨ ॥**

**ಸುಸೀಮಾನಗರಂ ತಸ್ಮಿನ್ಮಹಾರಾಜೋಽಪರಾಜಿತಃ ।**
**ನ ಪರೈರ್ಜೀಯತೇ ಜೇತಾ ಸ ಬಾಹ್ಯಾಭ್ಯಂತರದ್ವಿಷಾಮ್ ॥ ೩ ॥**

ಎರಡನೆಯದಾದ ಧಾತಕೀಖಂಡದ್ವೀಪದ ಪೂರ್ವಭಾಗದ ಪೂರ್ವವಿದೇಹ ಕ್ಷೇತ್ರದಲ್ಲಿ ಸೀತಾನದಿಯ ದಕ್ಷಿಣತೀರದಲ್ಲಿ ವತ್ಸದೇಶದಲ್ಲಿರುವ ಸುಸೀಮಾನಗರದಲ್ಲಿ ಅಪರಾಜಿತನೆಂಬ ಮಹಾರಾಜನಿದ್ದನು. ಅವನು ಬೇರೆಯವರಿಂದ ಜಯಿಸಲ್ಪಡುವುದಿಲ್ಲ. ಬಾಹ್ಯಾಭ್ಯಂತರಶತ್ರುಗಳನ್ನು ಜಯಿಸುವವನಾಗಿದ್ದನು.

**ವಿಕ್ರಮೇಣೈವ ವಕ್ರಾಣಾಂ ಜೇತುರ್ಬಾಹ್ಯಪರಿಚ್ಛದಃ ।**
**ಸಪ್ತಾಂಗಪೂರಣಂ ತಸ್ಯ ಬಲಂ ದೋರ್ಬಲಶಾಲಿನಃ ॥ ೪ ॥**

ಕುಟಿಲಮನುಷ್ಯರನ್ನು ಪರಾಕ್ರಮದಿಂದಲೇ ಜಯಿಸುವವನೂ ಬಾಹುಬಲಶಾಲಿಯೂ ಆದ ಆ ಅಪರಾಜಿತನಿಗೆ ಸಪ್ತಾಂಗಗಳನ್ನು ಪೂರ್ತಿಮಾಡುವ ಸೈನ್ಯವು ಬಾಹ್ಯಸಾಮಗ್ರಿಯಾಗಿದ್ದಿತು. ಶತ್ರುಗಳನ್ನೇನೋ ಪರಾಕ್ರಮದಿಂದಲೇ ಜಯಿಸುತ್ತಿದ್ದನೆಂದು ಭಾವವು.

**ತಸ್ಯ ಸತ್ಯೇನ ವರ್ಷಂತಿ ಜೀಮೂತಾಃ ಕರ್ಷಕೇಚ್ಛಯಾ ।**
**ಆದಿಮಧ್ಯಾಂತವಾಪಾಶ್ಚ ಧಾನ್ಯಭೇದಾಃ ಫಲಪ್ರದಾಃ ॥ ೫ ॥**

ಅವನ ಸತ್ಯದಿಂದ ಮೇಘಗಳು ರೈತರ ಇಚ್ಛಾನುಸಾರವಾಗಿ ಮಳೆಯನ್ನು ಸುರಿಯುತ್ತವೆ. ಆದಿ ಮಧ್ಯಾಂತಗಳಲ್ಲಿ ಬಿತ್ತನೆಯುಳ್ಳ ವಿವಿಧಧಾನ್ಯಗಳು ಫಲಗಳನ್ನು ಕೊಡುತ್ತಿದ್ದುವು.

**ತ್ಯಾಗೇನ ತಸ್ಯ ದಾರಿದ್ರ್ಯಶಬ್ದಃ ಖಕುಸುಮಾಯತೇ ।**
**ಭುವಿ ಪ್ರಾಗ್ಯೇಷು ದಾರಿದ್ರ್ಯಂ ತೈರದ್ಯ ಧನದಾಯಿತವಮ್ ॥ ೬ ॥**

ಆ ಅಪರಾಜಿತರಾಜನ ತ್ಯಾಗದಿಂದ ದಾರಿದ್ರ್ಯಶಬ್ದವು ಆಕಾಶಪುಷ್ಪದಂತಾಚರಿಸುತ್ತದೆ. ಭೂಮಿಯಲ್ಲಿ ಮೊದಲು ಯಾರಲ್ಲಿ ದಾರಿದ್ರ್ಯವಿದ್ದಿತೋ ಅವರು ಈಗ ಕುಬೇರರಂತಿದ್ದಾರೆ.

**ರಾಜ್ಞಾಂ ಮಹಾಗುಣಾಸ್ತಸ್ಮಿನ್ಸುಕ್ಷೇತ್ರೋಪ್ತಸುಬೀಜವತ್ ।**
**ತ್ರಯೋಽಪ್ಯೇತೇ ಫಲಂತಿ ಸ್ಮ ಸಜಾತೀಯಾನ್ಪರಾನ್ಗುಣಾನ್ ॥ ೭ ॥**

ರಾಜರುಗಳ ವಿಕ್ರಮ ಸತ್ಯ ತ್ಯಾಗ ಈ ಮೂರು ಮಹಾಗುಣಗಳೂ ಅಪರಾಜಿತನಲ್ಲಿ, ಒಳ್ಳೆಯ ಭೂಮಿಯಲ್ಲಿ ಬಿತ್ತಲ್ಪಟ್ಟ ಬೀಜಗಳಂತೆ, ಸಜಾತೀಯವಾದ ಬೇರೆ ಗುಣಗಳನ್ನುಂಟುಮಾಡುತ್ತಿದ್ದುವು.

**ಪರೇಷಾಂ ವಾಸ್ಯ ರೂಪಾದಿಸಂಪನ್ನೋನ್ಮಾರ್ಗವೃತ್ತಯೇ ।**
**ತರೂತ್ಪಾಟಿಮರುನ್ಮೇರುಂ ಕ್ಷಮಃ ಕಂಪಯಿತುಂ ಚ ಕಿಮ್ ॥ ೮ ॥**

ಈ ಅಪರಾಜಿತನ ರೂಪಾದಿ ಸಂಪತ್ತಿಯು, ಬೇರೆಯವರಂತೆ, ಕೆಟ್ಟ ದಾರಿಯಲ್ಲಿ ನಡೆಯುವುದಕ್ಕೆ ಕಾರಣವಾಗಿರಲಿಲ್ಲ. ಮರಗಳನ್ನು ಕೀಳುವ ಗಾಳಿಯು ಮೇರುಪರ್ವತವನ್ನು ಅಳ್ಳಾಡಿಸುವುದಕ್ಕೆ ಸಮರ್ಥವಾಗುತ್ತದೇನು ?

**ಸ ಷಟ್ಪ್ರಕೃತಿಭಿರ್ಭೂಷ್ಯಸ್ತಾಶ್ಚ ತೇನ ತತೋಽಭವತ್ ।**
**ತದ್ರಾಜ್ಯಂ ನ ಪರೈರ್ಧೃಷ್ಯಂ ಪರೇಷಾಂ ಧರ್ಷಕಂ ಸ್ವಯಮ್ ॥ ೯ ॥**

ಆ ಅಪರಾಜಿತರಾಜನು ಆರು ಸ್ವಭಾವ (ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ)ಗಳಿಂದ ಅಲಂಕರಿಸಲ್ಪಡತಕ್ಕವನಾಗಿದ್ದನು. ಅವನಿಂದ ಆ ಸ್ವಭಾವಗಳೂ ಅಲಂಕರಿಸಲ್ಪಡತಕ್ಕುವಾಗಿದ್ದುವು. ಆದುದರಿಂದ ಅವನ ರಾಜ್ಯವು ಬೇರೆಯವರಿಂದ ತಿರಸ್ಕರಿಸಲ್ಪಡತಕ್ಕುದಾಗಿರಲಿಲ್ಲ. ತಾನೇ ಬೇರೆಯವರಿಗೆ ತಿರಸ್ಕಾರ ಮಾಡುವುದಾಗಿದ್ದಿತು.

**ಏವಂ ಭವಾಂತರಾವರ್ಜಿತೋರ್ಜಿತಾಯೋದಯಾರ್ಪಿತಮ್ ।**
**ನಾರ್ಪತ್ಯಂ ಸುಚಿರಂ ಭುಕ್ತ್ವಾ ಸಂವಿಭಕ್ತಂ ಸುಹೃದ್ವರೈಃ ॥ ೧೦ ॥**

**ಕ್ಷಣಿಕಾಃ ಸರ್ವಪರ್ಯಾಯಾಃ ಪರ್ಯಾಯೈಶ್ಚಾನುಭೂಯತೇ ।**
**ಸುಖಂ ಕಾರಣವಿಧ್ವಂಸೇ ಕಾರ್ಯೇ ಕೌತಸ್ಕುತೀ ಸ್ಥಿತಿಃ ॥ ೧೧ ॥**

ಈ ಪ್ರಕಾರವಾಗಿ ಭವಾಂತರದಿಂದ ಸಂಪಾದಿಸಲ್ಪಟ್ಟ ಪುಣ್ಯೋದಯದಿಂದಾದುದೂ ಉತ್ತಮಮಿತ್ರರಿಂದ ವಿಭಾಗಿಸಲ್ಪಟ್ಟುದೂ ಆದ ದೊರೆತನವನ್ನು ಬಹುಕಾಲ ಅನುಭವಿಸಿ "ಸಮಸ್ತಪರ್ಯಾಯಗಳು ಕ್ಷಣಿಕಗಳು. ಆ ಪರ್ಯಾಯಗಳಿಂದ ಸುಖವು ಅನುಭವಿಸಲ್ಪಡುತ್ತದೆ. ಕಾರಣವು ನಾಶವಾದರೆ ಕಾರ್ಯದಲ್ಲಿ ಸ್ಥಿತಿಯೆಲ್ಲಿರುವುದು ? ಕಾರಣವಾದ ಪರ್ಯಾಯವು ನಾಶವಾದರೆ ತಜ್ಜನ್ಯ ಕಾರ್ಯವಾದ ಆ ಅನಿತ್ಯಸುಖವೂ ನಾಶವಾಗುವುದೆಂದು ಭಾವವು."

**ಇತ್ಯರ್ಜುಸೂತ್ರಭಾವೇನ ಸ ಸರ್ವಂ ಭಂಗುರಂ ಸ್ಮರನ್ ।**
**ದತ್ವಾ ರಾಜ್ಯಂ ಸುಮಿತ್ರಾಯ ಸುತಾಯ ವಿಜಿತಾತ್ಮನೇ ॥ ೧೨ ॥**

**ಗತ್ವಾ ತಪೋಗುರುಂ ಕೃತ್ವಾ ಜಿನೇಂದ್ರಂ ಪಿಹಿತಾಸ್ರವಮ್ ।**
**ಏಕಾದಶಾಂಗವಿದ್ಬದ್ಧ್ವಾ ನಾಮ ತೀರ್ಥಕರಾಹ್ವಯಮ್ ॥ ೧೩ ॥**

**ಸನ್ಯಸ್ಯಾಂತೇ ಪರಿತ್ಯಕ್ತದೇಹೋಽಯಾದಹಮಿಂದ್ರತಾಮ್ ।**
**ಊರ್ಧ್ವಗ್ರೈವೇಯಕೇ ರಮ್ಯೇ ಪ್ರೀತಿಂಕರವಿಮಾನಜಃ ॥ ೧೪ ॥**

ಈ ಪ್ರಕಾರವಾಗಿ ಅಪರಾಜಿತನು ವರ್ತಮಾನಕ್ಷಣಪರ್ಯಾಯವನ್ನು ಮಾತ್ರ ಗ್ರಹಣಮಾಡುವ ಋಜುಸೂತ್ರನಯದ ರೀತಿಯಿಂದ ಎಲ್ಲವನ್ನೂ ನಶ್ವರವನ್ನಾಗಿ ಭಾವಿಸುವವನಾಗಿ ರಾಜ್ಯವನ್ನು ವಶೀಕೃತಾತ್ಮನಾದ ಸುಮಿತ್ರನೆಂಬ ಪುತ್ರನಿಗೆ ಕೊಟ್ಟು ಹೋಗಿ ಪಿಹಿತಾಸ್ರವಜಿನೇಶ್ವರರನ್ನು ತನ್ನ ತಪೋಗುರುವನ್ನಾಗಿ ಮಾಡಿ–ಅವರಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಏಕಾದಶಾಂಗಶಾಸ್ತ್ರಗಳನ್ನು ತಿಳಿದು ತೀರ್ಥಕರನಾಮವೆಂಬ ಪುಣ್ಯಕರ್ಮವನ್ನು ಬಂಧಿಸಿಕೊಂಡು ಅವಸಾನಕಾಲದಲ್ಲಿ ಸನ್ಯಾಸ ವಿಧಿಯಿಂದ ದೇಹತ್ಯಾಗವನ್ನು ಮಾಡಿ ರಮಣೀಯವಾದ ಊರ್ಧ್ವಗ್ರೈವೇಯಕದ ಪ್ರೀತಿಂಕರ ವಿಮಾನದಲ್ಲಿ ಜನಿಸಿ ಅಹಮಿಂದ್ರತ್ವವನ್ನು ಪಡೆದನು.

**ಏಕತ್ರಿಂಶತ್ಸಮುದ್ರಾಯುರ್ಹಸ್ತದ್ವಯಶರೀರಕಃ ।**
**ಶುಕ್ಲಲೇಶ್ಯೋ ದಿನೈಃ ಪಂಚಷಟ್ಕತುಃಸಮಿತ್ಯೈಃ ಶ್ವಸನ್ ॥ ೧೫ ॥**

**ಏಕತ್ರಿಂಶತ್ಸಹಸ್ರಾಬ್ದೈರ್ಮಾನಸಾಹಾರತರ್ಪಿತಃ ।**
**ತೇಜೋಬಲಾವಧಿಜ್ಞಾನವ್ಯಾಪ್ತಸಪ್ತಮಭೂತಲಃ ॥ ೧೬ ॥**

**ತತ್ಕ್ಷೇತ್ರವಿಕ್ರಿಯರ್ದ್ಧೀಶಃ ಸುಖಮಾಪಾಹಮಿಂದ್ರಜಮ್ ।**
**ಆಯುರಂತೇ ತತಸ್ತಸ್ಮಿನ್ನವನೀಮಾಗಮಿಷ್ಯತಿ ॥ ೧೭ ॥**

**ಜಂಬೂದ್ವೀಪೇತ್ರ ಕೌಶಂಬ್ಯಾಂ ಪತಿರಿಕ್ಷ್ವಾಕುವಂಶಜಃ ।**
**ಗೋತ್ರೇಣ ಕಾಶ್ಯಪೋ ರಾಜಾ ಧರಣಾಖ್ಯೋ ಮಹಾನಭೂತ್ ॥ ೧೮ ॥**

ಮೂವತ್ತೊಂದು ಸಾಗರೋಪಮವರ್ಷಾಯುಷ್ಯವುಳ್ಳವನೂ ಎರಡು ಮೊಳ ಶರೀರಪರಿಮಾಣವುಳ್ಳವನೂ ಶುಕ್ಲಲೇಶ್ಯೆಯುಳ್ಳವನೂ ನಾಲ್ಕುನೂರಅರುವತ್ತೈದು ದಿನಗಳಿಂದ–ಹದಿನೈದುವರೆ ತಿಂಗಳಿಗೊಂದು ಸಲ ಶ್ವಾಸೋಚ್ಛ್ವಾಸವನ್ನು ಮಾಡುವವನೂ ಮೂವತ್ತೊಂದು ಸಾವಿರ ವರ್ಷಗಳಿಗೊಮ್ಮೆ ಮಾನಸಾಹಾರದಿಂದ ತೃಪ್ತಿಯನ್ನು ಹೊಂದುವವನೂ ಏಳನೆಯ ಭೂತಲದವರೆಗೆ ವ್ಯಾಪಿಸುವ ತೇಜಸ್ಸು ಬಲ ಅವಧಿಜ್ಞಾನಗಳುಳ್ಳವನೂ ಆ ಕ್ಷೇತ್ರದವರೆಗೆ ವಿಕ್ರಿಯರ್ದ್ಧಿಯುಳ್ಳವನೂ ಆಗಿ ಅಹಮಿಂದ್ರಸುಖವನ್ನು ಹೊಂದಿದನು. ಅವನು ತನ್ನ ಆಯುಷ್ಯಾವಸಾನದಲ್ಲಿ ಅಲ್ಲಿಂದ ಭೂತಲಕ್ಕೆ ಬರುವಾಗ ಈ ಜಂಬೂದ್ವೀಪದ ಕೌಶಂಬೀನಗರದಲ್ಲಿ ಇಕ್ಷ್ವಾಕು ವಂಶಜನೂ ಕಾಶ್ಯಪಗೋತ್ರಜನೂ ಆದ ಧರಣನೆಂಬ ಮಹಾರಾಜನಿದ್ದನು.

**ತಸ್ಯ ದೇವೀ ಸುಷೀಮಾಖ್ಯಾ ರತ್ನವೃಷ್ಟ್ಯಾದಿಮಾನಿತಾ ।**
**ಪ್ರಭಾತೇ ಮಾಘಕೃಷ್ಣಾಯಾಃ ಷಷ್ಠ್ಯಾಂಶ್ಚಿತ್ರೇಂದುಸಂಗಮೇ ॥ ೧೯ ॥**

**ಗಜಾದಿಷೋಡಶಸ್ವಪ್ನವೀಕ್ಷಣಾನಂತರಾಸ್ಯಗಮ್ ।**
**ನಿರೀಕ್ಷ್ಯ ವಾರಣಂ ಜ್ಞಾತ್ವೈಸ್ತತ್ಫಲೈಃ ಪ್ರಮದಾನ್ವಿತಾ ॥ ೨೦ ॥**

**ಕೃಷ್ಣಪಕ್ಷೇ ತ್ರಯೋದಶ್ಯಾಂ ತ್ವಷ್ಟ್ರ ಯೋಗೇಪರಾಜಿತಮ್ ।**
**ಕಾರ್ತ್ತಿಕೇ ಮಾಸ್ಯಸೂತೈಷಾ ರಕ್ತಾಂಭೋಜದಲಚ್ಛವಿಮ್ ॥ ೨೧ ॥**

ಆ ಧರಣರಾಜನ ಪತ್ನಿಯಾದ ಸುಷೀಮಾದೇವಿಯು ದೇವತೆಗಳಿಂದ ರತ್ನವೃಷ್ಟಿ ಮೊದಲಾದುವುಗಳಿಂದ ಪೂಜಿಸಲ್ಪಟ್ಟು ಮಾಘಮಾಸದ ಕೃಷ್ಣಪಕ್ಷದಲ್ಲಿ ಚಿತ್ರಾ ನಕ್ಷತ್ರದ ಮತ್ತು ಚಂದ್ರನ ಸಂಯೋಗದಲ್ಲಿ ಷಷ್ಠೀತಿಥಿಯ ಬೆಳಗಿನ ಜಾವದಲ್ಲಿ ಆನೆ ಮೊದಲಾದ ಹದಿನಾರು ಸ್ವಪ್ನಗಳನ್ನು ಕಂಡ ಬಳಿಕ ಮುಖವನ್ನು ಪ್ರವೇಶಿಸಿದ ಆನೆಯನ್ನು ನೋಡಿ ಪ್ರಾತಃಕಾಲದಲ್ಲಿ ಪತಿಯಿಂದ ಆ ಸ್ವಪ್ನಗಳ ಫಲಗಳನ್ನು ತಿಳಿದು ಸಂತುಷ್ಟಳಾಗಿ ಈಕೆಯು ಕಾರ್ತ್ತಿಕಮಾಸದ ಕೃಷ್ಣಪಕ್ಷದ ತ್ರಯೋದಶೀತಿಥಿಯಲ್ಲಿ ಬ್ರಹ್ಮಯೋಗದಲ್ಲಿ ಕೆಂದಾವರೆಯ ಕಾಂತಿಯುಳ್ಳ ಆ ಅಪರಾಜಿತನನ್ನು ಪ್ರಸವಿಸಿದಳು. ಮೊದಲು ಅಪರಾಜಿತನಾಗಿದ್ದು ಸ್ವರ್ಗದಲ್ಲಿ ಅಹಮಿಂದ್ರನಾಗಿದ್ದವನನ್ನು ಈಗ ಸುಷೀಮಾದೇವಿಯು ಪುತ್ರನನ್ನಾಗಿ ಪಡೆದಳೆಂದು ಭಾವವು.

**ಅಸ್ಯೋತ್ಪತ್ತೌ ಸಮುತ್ಪತ್ತಿರ್ಗುಣಾನಾಂ ದೋಷಸಂತತೇಃ ।**
**ಧ್ವಂಸೋಜಾತ ಸಮಃ ಶೋಕಃ ಪ್ರಮೋದಾತ್ಸರ್ವದೇಹಿನಾಮ್ ॥**

ಈ ಪುತ್ರನ ಉತ್ಪತ್ತಿಯಲ್ಲಿ ಸಮಸ್ತಪ್ರಾಣಿಗಳಿಗೆ ಗುಣಗಳ ಉತ್ಪತ್ತಿಯಾಯಿತು. ದೋಷಪರಂಪರೆಯ ನಾಶವಾಯಿತು. ಶೋಕವು ಸಮವಾಯಿತು–ಅಳಿದು ಹೋಯಿತೆಂದು ಭಾವವು.

**ಮೋಹಶತ್ರುರ್ಹತೋತ್ಸಾಹೋ ನಷ್ಟೋಹಂ ವೇತಿ ಕಂಪತೇ ।**
**ಸ್ವರ್ಗಾಪವರ್ಗಯೋರ್ಮಾರ್ಗೌ ವಾಹಕೇಸ್ಮಿನ್ನಿವಕ್ಷ್ಯತಿ ॥ ೨೩ ॥**

"ಸ್ವರ್ಗ ಮೋಕ್ಷಗಳ ಮಾರ್ಗಗಳನ್ನು ಧರಿಸಿರುವ ಈ ಪುತ್ರನು ಆ ಮಾರ್ಗಗಳನ್ನು ಹೇಳಲಿಚ್ಛಿಸುತ್ತಿರಲು ನಾನು ನಾಶವನ್ನು ಹೊಂದಿದೆನು" ಹೀಗೆ ತಿಳಿದೋ ಎಂಬಂತೆ ಮೋಹವೆಂಬ ವೈರಿಯು ಉತ್ಸಾಹವನ್ನು ಕಳೆದುಕೊಂಡು ನಡುಗುತ್ತಾನೆ.

**ಮೋಹನಿದ್ರಾಂ ವಿಹಾಸ್ಯಂತಿ ಬಹವೋಸ್ಮಿನ್ಪ್ರಬೋಧಕೇ ।**
**ಜನ್ಮನಾ ಜಾತಿಸಂಬದ್ಧವಿರೋಧಶ್ಚ ವಿನಂಕ್ಷ್ಯತಿ ॥ ೨೪ ॥**

**ಲಕ್ಷ್ಮೀರ್ವಿಕಾಸಮಾಪ್ಸ್ಯಾಯಾತ್ಯಾಯಾತ್ಕೀರ್ತಿರ್ಜಗತ್ತ್ರಯಮ್ ।**
**ಅಭೂದಿತ್ಯಾದಿಸಲ್ಲಾಪೋ ವಿದುಷಾಮಿತರೇತರಮ್ ॥ ೨೫ ॥**

"ಇವನು ಬೋಧಿಸುವವ–ಎಚ್ಚರಿಸುವವನಾಗುತ್ತಿರಲು ಅನೇಕರು ಮೋಹವೆಂಬ ನಿದ್ರೆಯನ್ನು ಬಿಡುವರು. ಪ್ರಾಣಿಗಳಲ್ಲಿ ಜನ್ಮದಿಂದ ಜಾತಿಸಂಬದ್ಧವಾದ ವಿರೋಧವೂ ನಾಶವಾಗುವುದು. ಇವನ ಸಂಪತ್ತಿಯು ವಿಕಾಸ–ವೃದ್ಧಿಯನ್ನು ಹೊಂದುವುದು. ಇವನ ಕೀರ್ತಿಯು ಮೂರು ಲೋಕವನ್ನು ಹೊಂದುವುದು" ಎಂಬೀ ಮೊದಲಾದ ಸಂಭಾಷಣೆಯು ವಿದ್ವಾಂಸರಲ್ಲಿ ಪರಸ್ಪರವಾಗಿ ಉಂಟಾಯಿತು.

**ತದಾನೀಮೇವ ದೇವೇಂದ್ರಾಸ್ತಂ ಮೇರೌ ಕ್ಷೀರವಾರಿಭಿಃ ।**
**ಸ್ನಾಪಯಿತ್ವಾ ವಿಧಾಯಾನುಮುದಾ ಪದ್ಮಪ್ರಭಾಭಿಧಾಮ್ ॥ ೨೬ ॥**

**ಅಭಿಷ್ಟುತ್ಯ ಪುನರ್ನೀತ್ವಾ ಮಾತುರಂಕೇ ಮಹಾದ್ಯುತಿಮ್ ।**
**ನಿಧಾಯ ಮುದಿತಾ ನೃತ್ತಂ ವಿಧಾಯ ಪ್ರಾಯಯುರ್ದಿವಮ್ ॥ ೨೭ ॥**

ಆಗಲೇ ದೇವೇಂದ್ರರು ಆ ಶಿಶುವನ್ನು ಮೇರುಪರ್ವತದಲ್ಲಿ ಕ್ಷೀರಸಮುದ್ರದ ಜಲಗಳಿಂದ ಸ್ನಾನ ಮಾಡಿಸಿ ಸಂತೋಷದಿಂದ "ಪದ್ಮಪ್ರಭ" ಎಂಬ ಹೆಸರನ್ನಿಟ್ಟು ಸ್ತುತಿಸಿ ಮತ್ತೆ ತೆಗೆದುಕೊಂಡು ಹೋಗಿ ಮಹಾಕಾಂತಿಯುಳ್ಳ ಆ ಶಿಶುವನ್ನು ತಾಯಿಯ ತೊಡೆಯ ಮೇಲಿರಿಸಿ ಸಂತುಷ್ಟರಾಗಿ ನರ್ತನವನ್ನು ಮಾಡಿ ಸ್ವರ್ಗಕ್ಕೆ ಹೋದರು.

**ಸಮಸ್ತೈಃ ಶೈಶವಂ ತಸ್ಯ ಮುದೇಂದೋರಿವ ವಂದ್ಯತೇ ।**
**ಕಃ ಸ ಯಃ ಸರ್ವಮಾಹ್ಲಾದ್ಯ ವರ್ಧಮಾನೇ ಪರಾಙ್ಮುಖಃ ॥ ೨೮ ॥**

ಆ ಬಾಲಕನ ಶೈಶವಾವಸ್ಥೆಯು, ಚಂದ್ರನ ಶೈಶವಾವಸ್ಥೆಯಂತೆ, ಎಲ್ಲರಿಂದಲೂ ಸಂತೋಷದಿಂದ ವಂದಿಸಲ್ಪಡುತ್ತದೆ. ಎಲ್ಲರನ್ನೂ ಸಂತೋಷಪಡಿಸಿ ಬೆಳೆಯುವವನಲ್ಲಿ ಯಾವನು ತಾನೆ ವಿಮುಖನಾಗುತ್ತಾನೆ ?

**ನ ಕಾಮನೀಯಕಂ ಕಾಮೇ ವಿಕಾಯೇನ್ಯತ್ರ ಚೇದೃಶಮ್ ।**
**ತತ್ಕಾಮನೀಯಕಂ ತಸ್ಯ ನ ಕೇನಾಪ್ಯುಪಮೀಯತೇ ॥ ೨೯ ॥**

ಪದ್ಮಪ್ರಭನಲ್ಲಿರುವ ಇಂತಹ ಮನೋಹರತೆಯು ಶರೀರರಹಿತನಾದ ಕಾಮನಲ್ಲಿಲ್ಲ. ಬೇರೆಯವರಲ್ಲಿಯೂ ಇಲ್ಲ. ಅವನ ಮನೋಹರತೆಯನ್ನು ಯಾರೊಡನೆಯೂ ಹೋಲಿಸಲಾಗುವುದಿಲ್ಲ.

**ತಥೈವ ರೂಪಮಪ್ಯಸ್ಯ ಕಥ್ಯತೇ ಕಿಂ ಪೃಥಕ್ಪೃಥಕ್ ।**
**ಯದ್ಯತ್ತಸ್ಮಿನ್ನ ತತ್ತದ್ಜ್ಞೈರನ್ಯಸ್ಥೈರುಪಮೀಯತೇ ॥ ೩೦ ॥**

ಹಾಗೆಯೇ ಈ ಪದ್ಮಪ್ರಭನ ರೂಪವನ್ನೂ ಬೇರೆ ಬೇರೆಯಾಗಿ ಹೇಳುವುದೇನು ? ಅವನಲ್ಲಿ ಯಾವ ಯಾವ ರೂಪಸೌಂದರ್ಯವಿದೆಯೋ ಅದನ್ನು ತಿಳಿದವರು ಬೇರೆಯವರಲ್ಲಿರುವ ರೂಪಸೌಂದರ್ಯಗಳೊಡನೆ ಹೋಲಿಸುವುದಿಲ್ಲ.

**ಕಾಮಯಂತೇ ಸ್ತ್ರಿಯಃ. ಪುಂಸಃ ಪುಮಾಂಸಸ್ತಾ ಇಮಂ ಪುನಃ ।**
**ತಾಶ್ಚ ತೇ ಚಾಸ್ಯ ಸೌಭಾಗ್ಯಂ ನಾಲ್ಪಭಾಗ್ಯೈರವಾಪ್ಯತೇ ॥ ೩೧ ॥**

ಸ್ತ್ರೀಯರು ಪುರುಷರನ್ನು ಬಯಸುತ್ತಾರೆ. ಪುರುಷರು ಸ್ತ್ರೀಯರನ್ನು ಬಯಸುತ್ತಾರೆ. ಈ ಪದ್ಮಪ್ರಭನನ್ನಾದರೋ ಸ್ತ್ರೀಯರೂ ಪುರುಷರೂ ಬಯಸುತ್ತಾರೆ. ಇವನ ಸೌಭಾಗ್ಯವು ಸ್ವಲ್ಪ ಭಾಗ್ಯವುಳ್ಳವರಿಂದ ಪಡೆಯಲಾಗುವುದಿಲ್ಲ.

**ತತ್ತನಾವೇವ ಸರ್ವೇಷಾಂ ದೃಷ್ಟಿಸ್ತೃಪ್ತಿಂ ಪರಾಮಿತಾ ।**
**ಸಂತತಂ ಚೂತಮಂಜರ್ಯಾಂ ಮತ್ತಾಲೀನಾಮಿವಾವಲೀ ॥ ೩೨ ॥**

ಮದಿಸಿದ ದುಂಬಿಗಳ ಸಮೂಹವು ಯಾವಾಗಲೂ ಮಾವಿನಹೂವಿನ ಗೊಂಚಲಿನಲ್ಲಿ ಅಧಿಕವಾದ ತೃಪ್ತಿಯನ್ನು ಹೊಂದುವಂತೆ, ಎಲ್ಲರ ದೃಷ್ಟಿಯೂ ಆ ಪದ್ಮಪ್ರಭನ ದೇಹದಲ್ಲೇ ಅಧಿಕವಾದ ತೃಪ್ತಿಯನ್ನು ಹೊಂದಿತು.

**ಸರ್ವೇಂದ್ರಿಯಸಮಾಹ್ಲಾದಸ್ತಸ್ಮಿಂಶ್ಚೇನ್ನ ಭೃಶಾಯತೇ ।**
**ಪರತ್ರಾಪೂರ್ಣಪುಣ್ಯೇಷು ನ ಕ್ವಾಪೀತಿ ವಯಂ ಸ್ಥಿತಾಃ ॥ ೩೩ ॥**

''ಸಮಸ್ತ ಇಂದ್ರಿಯಗಳ ಆಹ್ಲಾದವು ಆ ಪದ್ಮಪ್ರಭನಲ್ಲಿ ಅಧಿಕವಾಗಿಲ್ಲದಿದ್ದರೆ ಸ್ವಲ್ಪಪುಣ್ಯವುಳ್ಳ ಬೇರೆಯವರಲ್ಲಿ ಎಲ್ಲಿಯೂ ಇಲ್ಲವೆಂದು ನಾವು ಅವನಲ್ಲಿದ್ದೇವೆ'' ಹೀಗೆ ಸರ್ವೇಂದ್ರಿಯಾಹ್ಲಾದವಿಷಯಗಳು ಪದ್ಮಪ್ರಭನಲ್ಲಿದ್ದುವು. ಪದ್ಮಪ್ರಭನಲ್ಲಿ ಸರ್ವೇಂದ್ರಿಯಾಹ್ಲಾದವು ಸಂಪೂರ್ಣವಾಗಿಲ್ಲದಿದ್ದರೆ ಮತ್ತಾರಲ್ಲಿಯೂ ಇರುವುದಿಲ್ಲವೆಂದುದರಿಂದ ಅವನಲ್ಲಿ ಆ ಆನಂದವು ಸರ್ವೋತ್ಕೃಷ್ಟವಾಗಿದ್ದಿತೆಂದು ಭಾವವು.

**ಖಚತುಷ್ಕೋನ್ಯಕೋಟೀನಾಂ ನವಭಿಶ್ಶೋಕ್ತವಾರ್ಧಿಭಿಃ ।**
**ಮಿತೇ ಸುಮತಿಸಂತಾನೇ ಪದ್ಮಪ್ರಭಜಿನಸ್ಥಿತಿಃ ॥ ೩೪ ॥**

ಸುಮತಿತೀರ್ಥಂಕರರು ಮುಕ್ತರಾಗಿ ತೊಂಬತ್ತು ಸಾವಿರ ಕೋಟಿ ವರ್ಷಗಳು ಕಳೆದ ಬಳಿಕ ಅವರ ಪರಂಪರೆಯಲ್ಲಿ ಪದ್ಮಪ್ರಭಜಿನನ ಸ್ಥಿತಿಯುಂಟಾಯಿತು.

**ಷಟ್ಕೋನ್ಯವಹ್ನಿಪೂರ್ವಾಯುಃ ಶೂನ್ಯಪಂಚದ್ವಿಚಾಪಭಾಕ್ ।**
**ಜೀವಿತಸ್ಯ ಚತುರ್ಭಾಗೇ ಕುಮಾರತ್ವೇನ ನಿಷ್ಠಿತೇ ॥ ೩೫ ॥**

**ಅಲಬ್ಧ ರಾಜ್ಯಂ ಪ್ರಾಪ್ತಾಮರೇಜ್ಯಂ ದ್ವೈರಾಜ್ಯವರ್ಜಿತಮ್ ।**
**ಕ್ರಮಾಯಾತಂ ನ ಹೀಚ್ಛಂತಿ ಸಂತಸ್ತಚ್ಚಾನ್ಯಥಾಗತಮ್ ॥ ೩೬ ॥**

ಅವನು ಮೂವತ್ತು ಲಕ್ಷ ಪೂರ್ವ ಆಯುಷ್ಯವುಳ್ಳವನೂ ಇನ್ನೂರೈವತ್ತು ಬಿಲ್ಲುತ್ಸೇಧವುಳ್ಳವನೂ ಆಗಿದ್ದನು. ಆಯುಷ್ಯದ ನಾಲ್ಕನೆಯ ಒಂದು ಭಾಗ– ಏಳುವರೆ ಲಕ್ಷ ಪೂರ್ವಾಯುಷ್ಯವು ಕಳೆಯುತ್ತಿರಲು ದೇವತೆಗಳಿಂದ ಪೂಜಿಸಲ್ಪಟ್ಟುದೂ ಶತ್ರುರಾಜತ್ವವಿಲ್ಲದಿರುವುದೂ ಸಂತಾನಪರಂಪರೆಯಾಗಿ ಬಂದಿರುವುದೂ ಆದ ರಾಜ್ಯವನ್ನು ಹೊಂದಿದನು. ಸತ್ಪುರುಷರು ಅನ್ಯಾಯವಾಗಿ ಬಂದ ರಾಜ್ಯವನ್ನು ಇಚ್ಛಿಸುವುದೇ ಇಲ್ಲ.

**ಪಟ್ಟಬಂಧೋಸ್ಯ ಸರ್ವಸ್ಯ ಸ್ವಸ್ಯ ಸ್ವಸ್ಯೈವ ಸಮ್ಮತಃ ।**
**ಮಹಾಭಯಾನಿ ತದ್ದೇಶೇ ನಷ್ಟಾನ್ಯಷ್ಟೌ ನಿರನ್ವಯಮ್ ॥ ೩೭ ॥**

ಈ ಪದ್ಮಪ್ರಭಸ್ವಾಮಿಯ ಪಟ್ಟಬಂಧವನ್ನು ಅಂದರೆ ಪಟ್ಟಾಭಿಷೇಕ ಮಹೋತ್ಸವವನ್ನು ಎಲ್ಲರೂ ತಮತಮಗೇ ಪಟ್ಟಬಂಧವಾದಂತೆ ತಿಳಿದರು. ಪದ್ಮಪ್ರಭಸ್ವಾಮಿಯ ದೇಶದಲ್ಲಿ ಕ್ಷಾಮ ಅತಿವೃಷ್ಟಿ ಅನಾವೃಷ್ಟಿ ಚೌರ್ಯ ಮೊದಲಾದ ಎಂಟು ಮಹಾಭಯಗಳು ಸಂಪೂರ್ಣವಾಗಿ ನಾಶವಾದುವು.

**ದಾರಿದ್ರ್ಯಂ ವಿದ್ರುತಂ ದೂರಂ ಸ್ವೈರಂ ಶಂ ಸ್ಮ ಪ್ರವರ್ತತೇ ।**
**ಸರ್ವಾಣಿ ಮಂಗಲಾನ್ಯಾಸನ್ ಸಂಗಮಸ್ಸರ್ವಸಂಪದಾಮ್ ॥ ೩೮ ॥**

ಬಡತನವು ದೂರ ಓಡಿತು. ಸುಖವು ಯಥೇಚ್ಛವಾಗಿ ಉಂಟಾಯಿತು. ಎಲ್ಲಾ ಮಂಗಲಗಳುಂಟಾದುವು. ಸಮಸ್ತ ಸಂಪತ್ತುಗಳು ಸೇರಿದುವು.

**ಕಸ್ಯ ಕಸ್ಮಿನ್ನಮೀಪ್ಸೇತಿ ವದಾನ್ಯೇಷ್ವಭವದ್ವಚಃ ।**
**ಕಸ್ಯ ಚಿನ್ನೈವ ಕಸ್ಮಿಂಶ್ಚಿದರ್ಥಿತೇತ್ಯವದಜ್ಜನಃ ॥ ೩೯ ॥**

''ಯಾರಿಗೆ ಯಾರಲ್ಲಿ ಪಡೆಯಲಿಚ್ಛೆ?'' ಎಂದು ದಾನಶೀಲರು ಮಾತನಾಡಿಕೊಳ್ಳುತ್ತಿದ್ದರು. ''ಯಾರಿಗೂ ಯಾರಲ್ಲಿಯೂ ಬೇಡಬೇಕಾದ ಆವಶ್ಯಕತೆಯಿಲ್ಲ'' ಎಂದು ಜನರು ಹೇಳುತ್ತಿದ್ದರು.

**ಇತ್ಯಸ್ಯ ರಾಜ್ಯಸಂಪ್ರಾಪ್ತೌ ಜಗತ್ಸುಪ್ತಮಿವೋತ್ಥಿತಮ್ ।**
**ತದೇವ ರಾಜ್ಯಂ ರಾಜ್ಯೇಷು ಪ್ರಜಾನಾಂ ಯತ್ಸುಖಾವಹಮ್ ॥ ೪೦ ॥**

ಈ ಪ್ರಕಾರವಾಗಿ ಈ ಪದ್ಮಪ್ರಭಸ್ವಾಮಿಯ ರಾಜ್ಯಪ್ರಾಪ್ತಿಯಲ್ಲಿ ಮಲಗಿದ್ದ ಜಗತ್ತು ಎಚ್ಚತ್ತು–ಎದ್ದಂತಿದ್ದಿತು. ಪ್ರಜೆಗಳಿಗೆ ಸುಖವನ್ನುಂಟುಮಾಡುವ ರಾಜ್ಯವೇ ರಾಜ್ಯಗಳಲ್ಲೆಲ್ಲ ಶ್ರೇಷ್ಠವಾದುದು.

**ಹೀನೇ ಷೋಡಶಪೂರ್ವಾಂಗೈಃ ಪೂರ್ವಲಕ್ಷಾಯುಷಿ ಸ್ಥಿತೇ ।**
**ಕದಾಚಿದ್ವಾರಿಬಂಧಸ್ಥಗಜಪ್ರಕೃತಸಂಶ್ರುತೇಃ ॥ ೪೧ ॥**

**ಜ್ಞಾತಾತ್ಮಾನ್ಯಭವೋ ಧಿಗ್ಧಿಕ್ಸಂಸಾರಮಿತಿ ತತ್ತ್ವವಿತ್ ।**
**ವಿರಕ್ತಃ ಕಾಮಭೋಗೇಷು ಪಾಪದುಃಖಪ್ರದಾಯಿಷು ॥ ೪೨ ॥**

**ಅದೃಷ್ಟಂ ಕಿಂ ಕಿಮಸ್ಪೃಷ್ಟಮನಾಘ್ರಾತಂ ಕಿಮಶ್ರುತಮ್ ।**
**ಕಿಂ ಕಿಮಸ್ವಾದಿತಂ ಯೇನ ಪುನರ್ನವಮಿವೇಷ್ಯತೇ ॥ ೪೩ ॥**

**ಭುಕ್ತಮೇವ ಪುನರ್ಭುಕ್ತಂ ಜಂತುನಾನಂತಶೋ ಭವೇ ।**
**ಮಧ್ಯಮಪ್ಯಭಿಲಾಷಾಬ್ಧೇರಿತಂ ವದತ ಕಿಂ ತತಃ ॥ ೪೪ ॥**

**ನೇಂದ್ರಿಯೈರಾತ್ಮನಸ್ತೃಪ್ತಿರ್ಮಿಥ್ಯಾತ್ವಾದಿವಿದೂಷಿತೈಃ ।**
**ವೀತಘಾತ್ಯುಪಯೋಗಸ್ಯ ವಿಶ್ವಂ ಯಾವನ್ನ ಗೋಚರಮ್ ॥ ೪೫ ॥**

**ರೋಗೋರಗಾಣಾಂ ವಿಜ್ಞೇಯಂ ಶರೀರಂ ವಾಮಲೂರುಕಮ್ ।**
**ದಷ್ಟಾನ್ ದೃಷ್ಟ್ವಾಪಿ ತೈರೇವ ಕಿಮಿಷ್ಯಾನ್ನಷ್ಟಜೀವಿತಾನ್ ॥ ೪೬ ॥**

**ಆಹಿತೋ ದೇಹಿನೋ ದೇಹೇ ಮೋಹೋನೇನಾವಿನಶ್ವರಃ ।**
**ಸಹವಾಸಃ ಕೃತಃ ಕ್ವಾಪಿ ಕೇನಾಪ್ಯಸ್ಯಾಯುಷಾ ಕಿಮು ॥ ೪೭ ॥**

**ಹಿಂಸಾದಿಪಂಚಕಂ ಧರ್ಮಃ ಸುಖಂ ಯಸ್ಯೇಂದ್ರಿಯಾರ್ಥಜಮ್ ।**
**ಸಂಸೃತೀ ರೋಚತೇ ತಸ್ಮೈ ವಿಪರೀತಾರ್ಥದರ್ಶಿನೇ ॥ ೪೮ ॥**

**ಪಾಪಾಪಾಪೋಪಲೇಪೋಪಕ್ಷೇಪೋ ಯೇನೋಪಪದ್ಯತೇ ।**
**ತದ್ಧ್ಯೇಯಂ ತದನುಷ್ಠೇಯಂ ತದಧ್ಯೇಯಂ ಸದಾ ಬುಧೈಃ ॥ ೪೯ ॥**

ಪದ್ಮಪ್ರಭಸ್ವಾಮಿಯ ಆಯುಷ್ಯವು ಹದಿನಾರು ಪೂರ್ವಾಂಗಗಳು ಕಡಮೆಯಾದ ಒಂದು ಲಕ್ಷ ಪೂರ್ವಾಯುಷ್ಯವು ಉಳಿದಿರುವಾಗ ಒಂದಾನೊಂದು ಕಾಲದಲ್ಲಿ ಆನೆಯು ನೀರಿನಲ್ಲಿ ಬಂಧನದಲ್ಲಿದೆ ಎಂದು ಕೇಳಿದುದರಿಂದ ತನ್ನ ಪೂರ್ವಭವವನ್ನು ತಿಳಿದವನೂ ತತ್ತ್ವಜ್ಞಾನಿಯೂ ಆದ ಸ್ವಾಮಿಯು ಸಂಸಾರಕ್ಕೆ ಧಿಕ್ಕಾರ ಧಿಕ್ಕಾರ'' ಎಂದು ಪಾಪವನ್ನೂ ದುಃಖವನ್ನೂ ಕೊಡುವ ಕಾಮ ಭೋಗಗಳಲ್ಲಿ ವಿರಕ್ತನಾಗಿ ''ನೋಡಲ್ಪಡದಿರುವುದಾವುದು ? ಮುಟ್ಟಲ್ಪಡದಿರುವುದಾವುದು ? ಮೂಸಲ್ಪಡದಿರುವುದಾವುದು ? ಕೇಳಲ್ಪಡುದಿರುವುದಾವುದು ? ರುಚಿನೋಡಲ್ಪಡದಿರುವುದಾವುದು ? ಅಂಥದಿದ್ದರೆ ಮತ್ತೆ ಅದನ್ನು ಹೊಸದೆನ್ನುವಂತೆ ಬಯಸಬಹುದು. ಪಂಚೇಂದ್ರಿಯಗಳಿಂದ ಅನುಭವಿಸಲ್ಪಡದಿರುವ ನೂತನವಸ್ತುವೇ ಇಲ್ಲವೆಂದು ಭಾವವು. ಭವದಲ್ಲಿ ಪ್ರಾಣಿಯು ಅನಂತಾವೃತ್ತಿ ಅನುಭವಿಸಿರುವುದನ್ನೇ ಮತ್ತೆ ಅನು ಭವಿಸುತ್ತದೆ. ಅಭಿಲಾಷೆಯೆಂಬ ಸಮುದ್ರದ ಮಧ್ಯವನ್ನೂ ಹೊಂದಲಿಲ್ಲ. ಅದರಿಂದೇನು ಪ್ರಯೋಜನ ? ಹೇಳಿರಿ. ಆತ್ಮನು ಘಾತಿಕರ್ಮಗಳ ಉಪಯೋಗವನ್ನು ದೂರಮಾಡಿ ಅವನಿಗೆ ಪ್ರಪಂಚವೆಲ್ಲವೂ ಗೋಚರವಾಗುವವರೆಗೆ ಮಿಥ್ಯಾತ್ವ ಮೊದಲಾದುವುಗಳಿಂದ ಬಹಳವಾಗಿ ದೂಷಿತವಾಗಿರುವ ಇಂದ್ರಿಯಗಳಿಂದ ತೃಪ್ತಿಯಿಲ್ಲ. ರೋಗಗಳೆಂಬ ಸರ್ಪಗಳಿಗೆ ಶರೀರವು ಹುತ್ತವೆಂದು ತಿಳಿಯಬೇಕು. ಆ ಸರ್ಪಗಳಿಂದಲೇ ಕಚ್ಚಲ್ಪಟ್ಟು ಜೀವಿತವನ್ನು ಕಳೆದುಕೊಂಡ ಜೀವಗಳನ್ನು ನೋಡಿಯೂ ಆತ್ಮನು ಆ ಶರೀರವನ್ನು ಬಯಸಬಹುದೇ ? ಪ್ರಾಣಿಯ ದೇಹದಲ್ಲಿ ಮೋಹವು ಸೇರಿಕೊಂಡಿದೆ. ಈ ದೇಹವು ಯಾವ ಆಯುಷ್ಯಕರ್ಮದೊಡನೆಯಾದರೂ ನಾಶ ರಹಿತವಾದ ಸಹವಾಸವನ್ನು ಎಲ್ಲಿಯಾದರೂ ಮಾಡಿದೆಯೇ ? ಯಾವನಿಗೆ ಹಿಂಸಾದಿ ಪಂಚಪಾಪವು ಧರ್ಮವೆಂದೂ ಇಂದ್ರಿಯ ವಿಷಯಗಳಿಂದುಂಟಾದುದು ಸುಖವೆಂದೂ ತೋರುವುದೋ ಅಂತಹ ವಿಪರೀತಾರ್ಥದರ್ಶಿಗೆ ಸಂಸಾರವು ಇಷ್ಟವಾಗುತ್ತದೆ. ಯಾವುದರಿಂದ ಪಾಪಪುಣ್ಯಕರ್ಮಗಳ ಲೇಪದ ನಾಶವುಂಟಾಗುವುದೋ ಅದನ್ನು ವಿದ್ವಾಂಸರು ಯಾವಾಗಲೂ ಧ್ಯಾನಿಸಬೇಕು. ಅದನ್ನು ಅನುಸರಿಸಬೇಕು. ಅದನ್ನು ಅಧ್ಯಯನ ಮಾಡಬೇಕು.''

**ಇತಿ ತ್ರಿವಿಧನಿರ್ವೇದಭೂತಬೋಧಿಸ್ಸುರೋತ್ತಮೈಃ ।**
**ಪ್ರೋತ್ಸಾಹಿತಸ್ಸುರೈಃ ಪ್ರಾಪ್ತನಿಷ್ಕ್ರಾಂತಿಸ್ನಾನಸಮ್ಮದಃ ॥ ೫೦ ॥**

**ನಿರ್ವೃತ್ಯಾಖ್ಯಾಂ ಸಮಾರುಹ್ಯ ಶಿಬಿಕಾಂ ಸ ಮನೋಹರೇ ।**
**ವನೇ ಷಷ್ಠೋಪವಾಸೇನ ದೀಕ್ಷಾಂ ಶಿಕ್ಷಾಮಿವಾಗ್ರಹೀತ್ ॥ ೫೧ ॥**

**ಕಾರ್ತಿಕೇ ಕಾಲಪಕ್ಷಸ್ಯ ತ್ರಯೋದಶ್ಯಪರಾಹ್ಣಗಃ ।**
**ಚಿತ್ರಾಯಾಂ ಭೂಭುಜಾಂ ಸಾರ್ಧಂ ಸಹಸ್ರೇಣಾಹಿತಾದರಃ ॥ ೫೨ ॥**

ಈ ಪ್ರಕಾರವಾಗಿ ಸಂಸಾರ ಶರೀರ ಭೋಗಗಳಲ್ಲಿ ವಿರಕ್ತಿಯನ್ನು ಹೊಂದಿದವರೂ ದೇವೋತ್ತಮರಾದ ಲೌಕಾಂತಿಕದೇವತೆಗಳಿಂದ ಪ್ರೋತ್ಸಾಹಿಸಲ್ಪಟ್ಟವರೂ ದೇವತೆಗಳು ಮಾಡಿದ ಪರಿನಿಷ್ಕ್ರಮಣಕಲ್ಯಾಣಾಭಿಷೇಕದ ಸಂತೋಷವನ್ನು ಹೊಂದಿದವರೂ ಆದ ಆ ಪದ್ಮಪ್ರಭಸ್ವಾಮಿಯು ನಿರ್ವೃತಿಯೆಂಬ ಪಲ್ಲಕ್ಕಿಯನ್ನೇರಿ ಹೋಗಿ ಮನೋಹರವೆಂಬ ವನದಲ್ಲಿ ಆರು ಉಪವಾಸಗಳನ್ನು ಮಾಡಿ, ಶಿಕ್ಷಣವನ್ನು ಹೊಂದುವಂತೆ, ಕಾರ್ತಿಕಮಾಸದ ಕೃಷ್ಣಪಕ್ಷದ ತ್ರಯೋದಶೀತಿಥಿಯಲ್ಲಿ ಸಾಯಂಕಾಲ ಚಿತ್ರಾನಕ್ಷತ್ರದಲ್ಲಿ ಸಾವಿರಮಂದಿ ದೊರೆಗಳೊಡನೆ ದೀಕ್ಷೆಯನ್ನು ತೆಗೆದುಕೊಂಡರು.

**ಚತುರ್ಥಜ್ಞಾನಸಂಪನ್ನಶ್ಚರ್ಯಾಯೈ ಪಶ್ಚಿಮೇ ದಿನೇ ।**
**ನಗರಂ ವರ್ಧಮಾನಾಖ್ಯಂ ಪ್ರಾವಿಶದ್ವಿದುಷಾಂ ವರಃ ॥ ೫೩ ॥**

ವಿದ್ವಾಂಸರಲ್ಲಿ ಶ್ರೇಷ್ಠರಾದ ಆ ಪದ್ಮಪ್ರಭಸ್ವಾಮಿಯು ತಪೋಬಲದಿಂದ ಮನಃಪರ್ಯಯವೆಂಬ ನಾಲ್ಕನೆಯ ಜ್ಞಾನವನ್ನು ಪಡೆದು ಮರುದಿವಸ ಆಹಾರಕ್ಕೋಸ್ಕರ ವರ್ಧಮಾನವೆಂಬ ನಗರಕ್ಕೆ ಪ್ರವೇಶಮಾಡಿದರು.

**ಸೋಮದತ್ತೋ ನೃಪಸ್ತಸ್ಮೈ ದಾನಾದಾಪಾರ್ಜುನಚ್ಛವಿಃ ।**
**ಆಶ್ಚರ್ಯಪಂಚಕಂ ಕಿಂವಾ ಪಾತ್ರದಾನಾನ್ನ ಜಾಯತೇ ॥ ೫೪ ॥**

ಬೆಳ್ಳಿಯಂತೆ ದೇಹಕಾಂತಿಯುಳ್ಳ ಸೋಮದತ್ತನೆಂಬ ರಾಜನು ಆ ಪದ್ಮಪ್ರಭಸ್ವಾಮಿಗೆ ಆಹಾರವನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಪಡೆದನು. ಸತ್ಪಾತ್ರದಾನದಿಂದ ಯಾವ ಆಶ್ಚರ್ಯವು ತಾನೆ ಉಂಟಾಗುವುದಿಲ್ಲ?

**ಚಿನ್ವನ್ ಶುಭಾಸ್ರವೈಃ ಪುಣ್ಯಂ ಸಂವರಂ ಕರ್ಮಸಂಹತೇಃ ।**
**ಕುರ್ವನ್ಗುಪ್ತ್ಯಾದಿಷಟ್ಕೇನ ತಪಸಾ ನಿರ್ಜರಾಂ ಚ ಸಃ ॥ ೫೫ ॥**

**ಷಣ್ಮಾಸೈರ್ಮೌನಮಾಸ್ಥಾಯ ಛಾದ್ಮಸ್ಥ್ಯಮಪನೀತವಾನ್ ।**
**ಕ್ಷಪಕಶ್ರೇಣಿಮಾರುಹ್ಯ ನಷ್ಟಘಾತಿಚತುಷ್ಟಯಃ ॥ ೫೬ ॥**

ಪದ್ಮಪ್ರಭಸ್ವಾಮಿಯು ಶುಭಾಸ್ರವಗಳಿಂದ ಪುಣ್ಯಕರ್ಮಸಂಚಯವನ್ನು ಮಾಡಿಕೊಳ್ಳುವವರೂ ಕರ್ಮಸಮೂಹವು ಬಾರದಂತೆ ಮನೋಗುಪ್ತಿ ಮೊದಲಾದ ಆರು ವಿಧಾನಗಳಿಂದ ತಡೆಯುವವರೂ ತಪಸ್ಸಿನಿಂದ ಕರ್ಮವನ್ನು ನಿರ್ಜರೆಮಾಡುವವರೂ ಆಗಿ ಆರು ತಿಂಗಳು ಮೌನವನ್ನು ಧಾರಣಮಾಡಿ ಕ್ಷಪಕಶ್ರೇಣಿಯನ್ನು ಹತ್ತಿ ಜ್ಞಾನಾವರಣ ದರ್ಶನಾವರಣ ಮೋಹನೀಯ ಅಂತರಾಯಗಳೆಂಬ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ ಛದ್ಮಸ್ಥಾವಸ್ಥೆಯನ್ನು ಕಳೆದರು.

**ಪೌರ್ಣಮಾಸ್ಯಾಂ ಸಿತೇ ಚೈತ್ರೇ ಮಧ್ಯಮಹ್ನೋ ರವೌ ಗತೇ ।**
**ಚಿತ್ರಾಯಾಂ ಕೇವಲಜ್ಞಾನಂ ಪ್ರತಿಪೇದೇ ಪರಾರ್ಥಕೃತ್ ॥ ೫೭ ॥**

ಪರರಿಗೆ ಪ್ರಯೋಜನವನ್ನು ಮಾಡುವವರಾದ ಪದ್ಮಪ್ರಭಸ್ವಾಮಿಯು ಚೈತ್ರಮಾಸದ ಶುಕ್ಲಪಕ್ಷದ ಹುಣ್ಣಿಮೆಯ ತಿಥಿಯಲ್ಲಿ ಚಿತ್ರಾನಕ್ಷತ್ರದಲ್ಲಿ ಸೂರ್ಯನು ದಿನದ ಮಧ್ಯವನ್ನು ಹೊಂದಿದಾಗ–ಮಧ್ಯಾಹ್ನದಲ್ಲಿ ಕೇವಲಜ್ಞಾನವನ್ನು ಹೊಂದಿದರು.

**ಸಮರ್ಪಿತಮಹೋ ದೇವೈಶ್ಶತೇನೇತೋ ಗಣೇಶಿನಾಮ್ ।**
**ಸ ವಜ್ರಚಮರಾದೀನಾಂ ದಶಭಿಶ್ಚ ಜಗದ್ಧಿತಃ ॥ ೫೮ ॥**

ಜಗತ್ತಿಗೆ ಹಿತಕಾರಿಯಾದ ಆ ಪದ್ಮಪ್ರಭಸ್ವಾಮಿಯು ದೇವತೆಗಳಿಂದ ಸಮರ್ಪಿತವಾದ ಉತ್ಸವವುಳ್ಳವರಾಗಿಯೂ ವಜ್ರಚಮರ ಮೊದಲಾದ ನೂರಹತ್ತು ಮಂದಿ ಗಣಧರರುಳ್ಳವರಾಗಿಯೂ ಆದರು.

**ಶೂನ್ಯದ್ವಯಾಗ್ನಿಪಕ್ಷೋಕ್ತಸರ್ವಪೂರ್ವಧರಾನ್ವಿತಃ ।**
**ಶೂನ್ಯತ್ರಿಕನವರ್ತುದ್ವಿಪ್ರೋಕ್ತಶಿಕ್ಷಕಲಕ್ಷಿತಃ ॥ ೫೯ ॥**

ಎರಡು ಸಾವಿರದ ಮೂರುನೂರು ಮಂದಿ ಅಂಗ ಮತ್ತು ಪೂರ್ವ ಶಾಸ್ತ್ರಜ್ಞರುಳ್ಳವರಾದರು. ಎರಡು ಲಕ್ಷದ ಅರುವತ್ತೊಂಬತ್ತು ಸಾವಿರ ಶಿಕ್ಷಕಮುನಿಗಳಿಂದ ಪರಿವೃತರಾದರು.

**ಶೂನ್ಯತ್ರಿಕದಶಜ್ಞೇಯವಿವಿಧಾವಧಿವೀಕ್ಷಣಃ ।**
**ಖತ್ರಯದ್ವಾದಶಾಲಕ್ಷ್ಯಕೇವಲಾವಗಮಾಶ್ರಿತಃ ॥ ೬೦ ॥**

ಹತ್ತುಸಾವಿರ ಮಂದಿ ನಾನಾವಿಧವಾದ ಅವಧಿಜ್ಞಾನಿಮುನಿಗಳುಳ್ಳವರಾದರು. ಹನ್ನೆರಡುಸಾವಿರ ಮಂದಿ ಕೇವಲಜ್ಞಾನಿಗಳಿಂದ ಆಶ್ರಯಿಸಲ್ಪಟ್ಟರು.

**ಖದ್ವಯಾಷ್ಟಷಡೇಕಾಂಕವಿಕ್ರಿಯರ್ದ್ಧಿಸಮೃದ್ಧಿಮಾನ್ ।**
**ಶೂನ್ಯದ್ವಯತ್ರಿಶೂನ್ಯೈಕಪ್ರೋಕ್ತತುರ್ಯಾವಬೋಧನಃ ॥ ೬೧ ॥**

ಹದಿನಾರುಸಾವಿರದ ಎಂಟುನೂರು ಮಂದಿ ವಿಕ್ರಿಯರ್ದ್ಧಿಸಂಪನ್ನರಾದ ಮುನಿಗಳುಳ್ಳವರಾದರು. ಹತ್ತುಸಾವಿರದ ಮೂರುನೂರು ಮಂದಿ ಮನಃಪರ್ಯಯ ಜ್ಞಾನಿಮುನಿಗಳುಳ್ಳವರಾದರು.

**ಶೂನ್ಯದ್ವಯರ್ತುರಂಧ್ರೋಕ್ತಖ್ಯಾತಾನುತ್ತರವಾದಿನಃ ।**
**ಖಚತುಷ್ಕಾಗ್ನಿವಹ್ನ್ಯುಕ್ತಸಂಪಿಂಡಿತಯತೀಶ್ವರಃ ॥ ೬೨ ॥**

ಒಂಬತ್ತು ಸಾವಿರದ ಆರು ನೂರು ಮಂದಿ ಉತ್ತರವಾದಿಮುನಿಗಳನ್ನು ಹೊಂದಿದ್ದರು. ಒಟ್ಟು ಮೂರು ಲಕ್ಷ ಮೂವತ್ತು ಸಾವಿರ ಮುನೀಶ್ವರರುಳ್ಳವರಾದರು.

**ಖಚತುಷ್ಕದ್ವಿವಾರಾಶಿಪ್ರಮಿತಾಭಿರಭಿಷ್ಟುತಃ ।**
**ರತಿಷೇಣಾಭಿಮುಖ್ಯಾಭಿರಾರ್ಯಿಕಾಭಿಸ್ಸಮಂತತಃ ॥ ೬೩ ॥**

ನಾಲ್ಕು ಲಕ್ಷದ ಇಪ್ಪತ್ತು ಸಾವಿರ ಮಂದಿ ರತಿಷೇಣಾ ಮೊದಲಾದ ಆರ್ಯಿಕೆಯರಿಂದ ಎಲ್ಲಾ ಕಡೆಯಲ್ಲಿಯೂ ಸ್ತುತಿಸಲ್ಪಟ್ಟರು.

**ತ್ರಿಲಕ್ಷಶ್ರಾವಕೋಪೇತಃ ಶ್ರಾವಿಕಾಪಂಚಲಕ್ಷವಾನ್ ।**
**ಸ ದೇವದೇವ್ಯಸಂಖ್ಯಾತಸ್ತಿರ್ಯಕ್ಸಂಖ್ಯಾತಸಂಯುತಃ ॥ ೬೪ ॥**

ಆ ಪದ್ಮಪ್ರಭಸ್ವಾಮಿಯು ಮೂರು ಲಕ್ಷ ಶ್ರಾವಕರೊಡನೆ ಕೂಡಿದವರೂ ಐದು ಲಕ್ಷ ಶ್ರಾವಿಕೆಯರುಳ್ಳವನೂ ಅಸಂಖ್ಯಾತ ದೇವ ಮತ್ತು ದೇವಿಯರುಳ್ಳವರೂ ಸಂಖ್ಯಾತತಿರ್ಯಕ್ಪ್ರಾಣಿಗಳುಳ್ಳವರೂ ಆದರು. ಪದ್ಮಪ್ರಭಸ್ವಾಮಿಸಮವಸರಣದಲ್ಲಿ ಮೇಲೆ ಹೇಳಿದಂತೆ ಗಣಧರರು ಮುನಿಗಳು ಮೊದಲಾದವರಿದ್ದರೆಂದು ಭಾವವು.

**ಕುರ್ವನ್ ಧರ್ಮೋಪದೇಶೇನ ಮೋಕ್ಷಮಾರ್ಗೇ ತನೂಭೃತಃ ।**
**ಭವ್ಯಾನ್ಪುಣ್ಯೋದಯೇನೇವ ಧರ್ಮಸ್ತಸ್ಮಾನ್ ಸುಖೋದಯೇ॥ ೬೫ ॥**

**ಸಮ್ಮೇದಪರ್ವತೇ ಮಾಸಂ ಸ್ಥಿತ್ವಾ ಯೋಗಂ ನಿರುದ್ಧವಾನ್ ।**
**ಸಾರ್ಧಂ ಯತಿಸಹಸ್ರೇಣ ಪ್ರತಿಮಾಯೋಗಮಾಸ್ಥಿತಃ ॥ ೬೬ ॥**

ಧರ್ಮವು ಭವ್ಯಜೀವಗಳನ್ನು ಪುಣ್ಯೋದಯದಿಂದ ಸುಖದ ಅಭ್ಯುದಯದಲ್ಲಿರಿಸುವಂತೆ, ಪದ್ಮಪ್ರಭಸ್ವಾಮಿಯು ಪ್ರಾಣಿಗಳನ್ನು ಧರ್ಮೋಪದೇಶದಿಂದ ಮೋಕ್ಷಮಾರ್ಗದಲ್ಲಿರಿಸುವವರಾಗಿ ಸಮ್ಮೇದಪರ್ವತದಲ್ಲಿ ಒಂದು ತಿಂಗಳವರೆಗೆ ಇದ್ದು ಯೋಗವನ್ನು ತಡೆದು ಸಾವಿರಮಂದಿ ಯತಿಗಳೊಡನೆ ಪ್ರತಿಮಾಯೋಗದಲ್ಲಿದ್ದರು. ಧ್ಯಾನಾರೂಢರಾಗಿ ಪ್ರತಿಮೆಯಂತಿದ್ದರೆಂದು ಭಾವವು.

**ಫಾಲ್ಗುನೇ ಮಾಸಿ ಚಿತ್ರಾಯಾಂ ಚತುರ್ಥ್ಯಾಮಪರಾಹ್ಣಗಃ ।**
**ಕೃಷ್ಣಪಕ್ಷೇ ಚತುರ್ಥೇನ ಸಮುಚ್ಛಿನ್ನಕ್ರಿಯಾತ್ಮನಾ ॥ ೬೭ ॥**

**ತ್ರಿಲಕ್ಷಶ್ರಾವಕಃ ಪಂಚಲಕ್ಷಸಚ್ಛ್ರಾವಿಕಾರ್ಚಿತಃ ।**
**ಅಸಂಖ್ಯದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸಂಮತಃ ॥ ೫೧ ॥**

ಮೂರುಲಕ್ಷ ಶ್ರಾವಕರುಳ್ಳವನೂ ಐದು ಲಕ್ಷ ಉತ್ತಮಶ್ರಾವಿಕೆಯರಿಂದ ಪೂಜಿಸಲ್ಪಟ್ಟವನೂ ಆದನು. ಅಸಂಖ್ಯಾತ ದೇವದೇವಿಯರಿಂದ ಸ್ತುತಿಸಲ್ಪಡತಕ್ಕವನೂ ಸಂಖ್ಯಾತತಿರ್ಯಕ್ಪ್ರಾಣಿಗಳಿಗೆ ಅಭಿಮತನೂ ಆದನು.

**ಧರ್ಮಾಮೃತಮಯೀಂ ವಾಣೀಂ ಗ್ರಾಹಯನ್ವ್ಯಹರನ್ಮಹೀಮ್ ।**
**ಪಶ್ಚಾತ್ಸಂಹೃತ್ಯ ಸಮ್ಮೇದೇ ವಿಹಾರಂ ಮಾಸಮುದ್ವಹನ್ ॥ ೫೨ ॥**

**ಪ್ರತಿಮಾಯೋಗಮಾಪಾಪ್ಯಂ ಸಹಸ್ರಮುನಿಭಿಃ ಸಮಮ್ ।**
**ಫಾಲ್ಗುನೇ ಕೃಷ್ಣಸಪ್ತಮ್ಯಾಂ ರಾಧಾಯಾಂ ದಿನಪೋದಯೇ ॥ ೫೩ ॥**

ಧರ್ಮಾಮೃತಮಯವಾದ ವಚನವನ್ನು ಭವ್ಯಾತ್ಮರುಗಳಿಗೆ ಗ್ರಹಣಮಾಡಿಸುವವನಾಗಿ ಭೂಮಿಯಲ್ಲಿ ವಿಹರಿಸಿದನು. ಬಳಿಕ ವಿಹಾರವನ್ನು ಬಿಟ್ಟು ಸಮ್ಮೇದ ಪರ್ವತದಲ್ಲಿ ಒಂದು ತಿಂಗಳವರೆಗೆ ಪ್ರತಿಮಾಯೋಗವನ್ನು ಧಾರಣಮಾಡಿ ಫಾಲ್ಗುನ ಮಾಸದ ಕೃಷ್ಣಪಕ್ಷದ ಸಪ್ತಮೀತಿಥಿಯಲ್ಲಿ ವಿಶಾಖಾನಕ್ಷತ್ರದಲ್ಲಿ ಸೂರ್ಯೋದಯ ಸಮಯದಲ್ಲಿ ಸಾವಿರ ಮುನಿಗಳೊಡನೆ ಮುಕ್ತಿಯನ್ನು ಪಡೆದನು.

**ಕೃತಪಂಚಮಕಲ್ಯಾಣಕಲ್ಯಪುಣ್ಯಾಸ್ಸುರೋತ್ತಮಾಃ ।**
**ನಿರ್ವಾಣಕ್ಷೇತ್ರಮತ್ರೇತಿ ಪರಿಕಲ್ಪ್ಯಾಗಮನ್ ದಿವಮ್ ॥ ೫೪ ॥**

ಆಗ ಐದನೆಯ–ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಪುಣ್ಯವನ್ನು ಗಳಿಸಿಕೊಂಡ ಉತ್ತಮದೇವತೆಗಳು ''ಇಲ್ಲಿ ಸುಪಾರ್ಶ್ವನಾಥನ ನಿರ್ವಾಣಕ್ಷೇತ್ರ''ವೆಂದು ಪರಿಕಲ್ಪನೆಮಾಡಿ ಸ್ವರ್ಗಕ್ಕೆ ಹೊರಟುಹೋದರು.

**ದುರ್ವಾರಾಂ ದುರಿತೋರುಶತ್ರುಸಮಿತಿಂ ನಿಷ್ಪನ್ನಧೀರ್ನಿಷ್ಕ್ರಿಯ- ।**
**ಸ್ತೂಷ್ಣೀಂ ಯುದ್ಧಮಧಿಷ್ಠಿತಃ ಕತಿಪಯಾಃ ಕಾಷ್ಠಾಃ ಪ್ರತಿಷ್ಠಾಂ**
**ಗತಾಮ್ ।**
**ನಿಷ್ಠಾಂ ದುಷ್ಪತಮಾಂ ನಿನಾಯ ನಿಪುಣೋ ನಿರ್ವಾಣಕಾಷ್ಠಾಮಿತಃ ।**
**ಪುಷ್ಟೋ ದ್ರಾಕ್ಕುರುತಾಚ್ಚಿರಂ ಪರಿಚಿತಾನ್ಪಾರ್ಶ್ವೇ ಸುಪಾರ್ಶ್ವಸ್ಸ ನಃ ॥**

ಪರಿಪೂರ್ಣವಾದ ಬುದ್ಧಿಯುಳ್ಳವನೂ ನಿಪುಣನೂ ನಿಷ್ಕ್ರಿಯನಾಗಿ ಅಂದರೆ ಬಾಹ್ಯದಲ್ಲಿ ಕಾರ್ಯವನ್ನು ಮಾಡದಿರುವವನಾಗಿ ಸುಮ್ಮನೆ–ಮೌನವಾಗಿ ಯುದ್ಧವನ್ನು ಕೈಕೊಂಡು ತಡೆಯುವುದಕ್ಕೆ ಕಷ್ಟವಾದುದೂ ಬಹುದುಷ್ಟವೂ ಬಹು ದಿಕ್ಕುಗಳನ್ನು ಆಕ್ರಮಿಸಿರುವುದೂ ಆದ ಕರ್ಮವೆಂಬ ಮಹಾಶತ್ರುಸಮೂಹವನ್ನು ಕೊನೆಗಾಣಿಸಿ ನಿರ್ವಾಣವೆಂಬ ದಿಕ್ಕನ್ನು ಹೊಂದಿರುವವನೂ ಬಹುಪ್ರಿಯನೂ ಆದ ಆ ಸುಪಾರ್ಶ್ವನಾಥನು ಬಹುಕಾಲದಿಂದ ಪರಿಚಿತರಾದ ನಮ್ಮಗಳನ್ನು ಶೀಘ್ರವಾಗಿ ತನ್ನ ಸಮೀಪದಲ್ಲಿ ಮಾಡಲಿ–ಮುಕ್ತಿಯನ್ನು ಹೊಂದಿಸಲಿ.

**ಕ್ಷೇಮಾಖ್ಯಪತ್ತನಪತಿರ್ನುತನಂದಿಷೇಣಃ ।**
**ಕೃತ್ವಾ ತಪೋ ನವಸು ಮಧ್ಯಗತೋಹಮಿಂದ್ರಃ ।**
**ವಾರಾಣಸೀಪುರಿ ಸುಪಾರ್ಶ್ವನೃಪೋ ಜಿತಾರಿ- ।**
**ರಿಕ್ಷ್ವಾಕುವಂಶತಿಲಕೋವತು ತೀರ್ಥಕೃದ್ವಃ ॥ ೫೬ ॥**

ಮೊದಲು ಕ್ಷೇಮಪುರದ ದೊರೆಯೂ ಬಳಿಕ ಸ್ತುತ್ಯನಾದ ನಂದಿಷೇಣನಾಗಿ ತಪಸ್ಸನ್ನು ಮಾಡಿ ನವಗ್ರೈವೇಯಕಗಳಲ್ಲಿ ಮಧ್ಯದ ವಿಮಾನದಲ್ಲಿ ಅಹಮಿಂದ್ರನೂ ತರುವಾಯ ವಾರಾಣಸೀಪಟ್ಟಣದಲ್ಲಿ ಶತ್ರುಗಳನ್ನು ಜಯಿಸಿದವನೂ ಇಕ್ಷ್ವಾಕುವಂಶತಿಲಕನೂ ಆದ ಸುಪಾರ್ಶ್ವತೀರ್ಥಕರನು ನಿಮ್ಮಗಳನ್ನು ರಕ್ಷಿಸಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಸುಪಾರ್ಶ್ವಸ್ವಾಮಿನಃ ಪುರಾಣಂ ಪರಿಸಮಾಪ್ತಮ್ ತ್ರಿಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣ ಸಂಗ್ರಹದಲ್ಲಿ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಸುಪಾರ್ಶ್ವತೀರ್ಥಕರಪುರಾಣವೆಂಬ
ಐವತ್ತಮೂರನೆಯ ಪರ್ವವು ಸಮಾಪ್ತವಾದುದು.

---

|| ಶ್ರೀ ಚಂದ್ರಪ್ರಭಜಿನಾಯ ನಮಃ ||

# ಅಥ ಚಂದ್ರಪ್ರಭತೀರ್ಥಕರಪುರಾಣಂ

**ನೀತ್ವೈಕವರ್ಣತಾಂ ಸರ್ವಾಂ ಸಭಾಂ ಯಃ ಪ್ರಭಯಾ ಸ್ವಯಾ ।**
**ಶುದ್ಧಿಂ ತಾಮನಯಚ್ಛುದ್ಧಃ ಶುದ್ಧ್ಯೈ ಚಂದ್ರಪ್ರಭೋಽಸ್ತು ನಃ || ೧ ||**

ಯಾವನು ತನ್ನ ಪ್ರಭೆಯಿಂದ ಸಮವಸರಣಸಭೆಯನ್ನೆಲ್ಲ ಒಂದೇ ವರ್ಣವುಳ್ಳದನ್ನಾಗಿ ಮಾಡಿ ಆ ಆತ್ಮಶುದ್ಧಿಯನ್ನು ಹೊಂದಿಸಿದನೋ ಶುದ್ಧನಾದ ಆ ಚಂದ್ರಪ್ರಭನು ನಮ್ಮ ಶುದ್ಧಿಗೋಸ್ಕರ ಇರಲಿ.

**ದೇಹಪ್ರಭೇವ ವಾಗ್ಯಸ್ಯ ಹ್ಲಾದಿನ್ಯಪಿ ಚ ಬೋಧಿನೀ ।**
**ತಂ ನಮಾಮಿ ನಭೋಭಾಗೇ ಸುರತಾರಾಪರಿಷ್ಕೃತಮ್ || ೨ ||**

ಯಾವನ ಶರೀರದ ಪ್ರಭೆಯಂತೆ ವಚನವು ಸಂತೋಷವನ್ನುಂಟುಮಾಡುವುದೂ ಬೋಧೆಯನ್ನು ಮಾಡುವುದೂ ಆಗಿದೆಯೋ ಆಕಾಶಮಾರ್ಗದಲ್ಲಿ ದೇವತೆಗಳೆಂಬ ನಕ್ಷತ್ರಗಳಿಂದ ಆವರಿಸಲ್ಪಟ್ಟ ಆ ಚಂದ್ರಪ್ರಭನನ್ನು ನಮಸ್ಕರಿಸುತ್ತೇನೆ.

**ನಾಮಗ್ರಹೋಽಪಿ ಯಸ್ಯಾಘಂ ನಿಹಂತ್ಯಖಿಲಮಂಗಿನಾಮ್ ।**
**ನ ಹನ್ಯಾತ್ಕಿಂ ನು ತಸ್ಯಾರ್ಚ್ಯಂ ಚರಿತಂ ಶ್ರುತಿಗೋಚರಮ್ || ೩ ||**

ಯಾವ ಚಂದ್ರಪ್ರಭಸ್ವಾಮಿಯ ಹೆಸರಿನ ಉಚ್ಚಾರವೂ ಪ್ರಾಣಿಗಳ ಸಮಸ್ತ ಪಾಪವನ್ನು ನಾಶಮಾಡುವುದೋ ಅಂತಹ ಸ್ವಾಮಿಯ ಪೂಜ್ಯವಾದ ಚರಿತವನ್ನು ಕೇಳಿದರೆ ಅದು ಪಾಪವನ್ನು ನಾಶಮಾಡಲಾರದೇನು ?

**ತತ್ಪುರಾಣಂ ತತೋ ವಕ್ಷ್ಯೇ ಭವಾದಾಸಪ್ತಮಾದಹಮ್ ।**
**ಶ್ರೋತವ್ಯಂ ಭವ್ಯ ತೇ ಶ್ರದ್ಧಾಂ ನಿಧಾಯ ಮಗಧಾಧಿಪ || ೪ ||**

ಆದುದರಿಂದ ಮಗಧಾಧಿಪತಿಯಾದ ಎಲೈ ಭವ್ಯನೇ ? ನಾನು(ಗೌತಮನು) ನಿನಗೆ ಆ ಚಂದ್ರಪ್ರಭಸ್ವಾಮಿಯ ಪುರಾಣವನ್ನು ಅವನ ಏಳು ಭವಗಳಿಂದ ಹೇಳುವೆನು. ಶ್ರದ್ಧೆಯನ್ನಿಟ್ಟು ಕೇಳತಕ್ಕುದಾಗಿದೆ.

**ದಾನಂ ಪೂಜಾ ತಥಾನ್ಯಚ್ಚ ಮುಕ್ತ್ಯೈ ಜ್ಞಾನೇನ ಸಂಸ್ಕೃತಮ್ ।**
**ತತ್ಪುರಾಣಶ್ರುತೇಃ ಶ್ರವ್ಯಂ ತತ್ತದೇವ ಹಿತೈಷಿಭಿಃ || ೫ ||**

ಜ್ಞಾನದಿಂದ ಸಂಸ್ಕಾರವನ್ನು ಹೊಂದಿರುವ ದಾನವೂ ಪೂಜೆಯೂ ಹಾಗೆಯೇ ಇತರ ಕಾರ್ಯವೂ ಮುಕ್ತಿಗೆ ಕಾರಣವಾಗುತ್ತವೆ. ಅಂತಹ ಜ್ಞಾನವು ಪುರಾಣ ಶ್ರವಣದಿಂದುಂಟಾಗುವುದು. ಆದುದರಿಂದ ಹಿತವನ್ನಿಚ್ಛಿಸುವವರು ಆ ಪುರಾಣವನ್ನೇ ಕೇಳಬೇಕು.

**ಅರ್ಹದ್ಭಿರ್ಭಾಷಿತಂ ಸೂಕ್ತಮನುಯೋಗೈಶ್ಚತುಷ್ಟಯಮ್ ।**
**ತೇಷು ಪೂರ್ವಂ ಪುರಾಣಾನು ತಸ್ಮಾತ್ತಾಕ್ತಚ್ಛ್ರುತಿಕ್ರಮಃ || ೬ ||**

ಅರ್ಹತ್ಪರಮೇಶ್ವರರು ಹೇಳಿರುವ ಸತ್ಯವಚನವು ಅನುಯೋಗಗಳಿಂದ ನಾಲ್ಕು ಪ್ರಕಾರವಾಗಿರುತ್ತದೆ. ಆ ಅನುಯೋಗಗಳಲ್ಲಿ ಮೊದಲನೆಯವು ಪುರಾಣಗಳು. ಆದುದರಿಂದ ಮೊದಲು ಆ ಪುರಾಣಶ್ರವಣವನ್ನು ಮಾಡುವುದು ಕ್ರಮವಾಗಿರುತ್ತದೆ.

**ಸಾ ಜಿಹ್ವಾ ತೌ ಮನಃಕರ್ಣಾ ಯೈರುಕ್ತಿಶ್ರುತಿಚಿಂತನಾಃ ।**
**ಪೂರ್ವಾದೀನಾಂ ಪುರಾಣಾನಾಂ ಪುರುಷಾರ್ಥೋಪದರ್ಶಿನಾಮ್ || ೭ ||**

ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರಾಷಾರ್ಥಚತುಷ್ಟಯವನ್ನು ಪ್ರತಿಪಾದನಮಾಡುವ ಆದಿತೀರ್ಥಂಕರರು ಮೊದಲಾದವರ ಪುರಾಣಗಳನ್ನು ಪಠನಮಾಡುವ ನಾಲಗೆಯೂ ಕೇಳುವ ಕಿವಿಯೂ ಚಿಂತನೆಮಾಡುವ ಮನವೂ ಸಾರ್ಥಕವಾದುವುಗಳು.

**ಅಸ್ತ್ಯತ್ರ ಪುಷ್ಕರದ್ವೀಪಸ್ತನ್ಮಧ್ಯೇ ಮಾನುಷೋತ್ತರಃ ।**
**ನೃಸಂಚಾರಸ್ಯ ಸೀಮಾಸೌ ಸರ್ವತೋ ವಲಯಾಕೃತಿಃ || ೮ ||**

ಈ ಮಧ್ಯಮಲೋಕದಲ್ಲಿ ಪುಷ್ಕರದ್ವೀಪವೆಂಬುದಿದೆ. ಅದರ ಮಧ್ಯದಲ್ಲಿ ಮಾನುಷೋತ್ತರವೆಂಬ ಪರ್ವತವಿದೆ. ಎಲ್ಲ ಕಡೆಯಲ್ಲಿ ವರ್ತುಲಾಕಾರವಾಗಿರುವ ಈ ಮಾನುಷೋತ್ತರಪರ್ವತವು ಮಾನವವರ್ಗಕ್ಕೆ ಎಲ್ಲೆಯಾಗಿದೆ. ಈ ಪರ್ವತದ ಆಚೆಯಲ್ಲಿ ಮನುಷ್ಯರ ಉತ್ಪತ್ತಿಯಿಲ್ಲವೆಂದು ಭಾವವು.

**ತದಭ್ಯಂತರಭಾಗೇ ಸ್ತೋ ಮಂದರೌ ಪೂರ್ವಪಶ್ಚಿಮೌ ।**
**ಪೂರ್ವಸ್ಮಿನ್ಮಂದರೇ ದೇಶೋ ವಿದೇಹೇ ಪಶ್ಚಿಮೋ ಮಹಾನ್ || ೯ ||**

**ಸೀತೋದೋದಕ್ತಟೇ ದುರ್ಗವನಖನ್ಯಾಕರರೋಚಿತೈಃ ।**
**ಅಕೃಷ್ಟಪಚ್ಯಸಸ್ಯಾಢ್ಯೈಸ್ಸುಗಂಧಿರ್ಭೂಗುಣೈರಭಾತ್ || ೧೦ ||**

ಆ ಪರ್ವತದ ಮಧ್ಯಭಾಗದಲ್ಲಿ ಪೂರ್ವಪಶ್ಚಿಮಮೇರುಪರ್ವತಗಳಿರುತ್ತವೆ. ಪೂರ್ವಮೇರುಪರ್ವತದ ಪಶ್ಚಿಮವಿದೇಹಕ್ಷೇತ್ರದಲ್ಲಿ ಸೀತೋದಾನದಿಯ ಉತ್ತರ ತೀರದಲ್ಲಿ ಉಚಿತವಾದ ದುರ್ಗಗಳಿಂದಲೂ ವನಗಳಿಂದಲೂ ಗಣಿಗಳಿಂದಲೂ ರತ್ನೋತ್ಪತ್ತಿಸ್ಥಾನಗಳಿಂದಲೂ ಉತ್ತುಬಿತ್ತಿ ಬೆಳೆಯದೆ ಪಕ್ವವಾದ ಸಸ್ಯಗಳಿಂದ ಪರಿಪೂರ್ಣವಾದ ಭೂಗುಣಗಳಿಂದಲೂ ಕೂಡಿದ ದೊಡ್ಡದಾದ ಸುಗಂಧಿಯೆಂಬ ದೇಶವು ಪ್ರಕಾಶಿಸುತ್ತಿದ್ದಿತು.

**ತಸ್ಮಿನ್ ದೇಶೇ ಜನಾಃ ಸರ್ವೇ ವರ್ಣತ್ರಯವಿಕಲ್ಪಿತಾಃ ।**
**ಸ್ನಿಗ್ಧಾಃ ಸೂಕ್ಷ್ಮೇಕ್ಷಣಾಃ ಪ್ರೇಕ್ಷ್ಯಾ ವಿಲೋಚನವಿಶೇಷವತ್ || ೧೧ ||**

ಆ ದೇಶದಲ್ಲಿ ಎಲ್ಲಾ ಜನರು ಮೂರು ವರ್ಣಗಳಲ್ಲಿ ವಿಭಾಗಿಸಲ್ಪಟ್ಟಿದ್ದರು. ವಿಶೇಷವಾದ ನೇತ್ರಗಳಂತೆ ಅವರು ಸ್ನೇಹಪರರೂ ಸೂಕ್ಷ್ಮದೃಷ್ಟಿಯುಳ್ಳವರೂ ನೋಟಕ್ಕೆ ಯೋಗ್ಯರೂ ಆಗಿದ್ದರು.

**ಋಜವೋ ಧಾರ್ಮಿಕಾ ವೀತದೋಷಾಃ ಕ್ಲೇಶಸಹಿಷ್ಣವಃ ।**
**ಕರ್ಷಕಾಸ್ಸಫಲಾರಂಭಾಸ್ತಪಸ್ಥಾಂಶ್ಚಾತಿಶೇರತೇ || ೧೨ ||**

ಸರಳರೂ ಧಾರ್ಮಿಕರೂ ದೋಷರಹಿತರೂ ಕಷ್ಟಗಳನ್ನು ಸಹಿಸುವವರೂ ಸಫಲವಾದ ಕೃಷಿ–ಆರಂಭವುಳ್ಳವರೂ ಆದ ರೈತರು ತಪೋನಿಷ್ಠರನ್ನೂ ಮೀರುತ್ತಿದ್ದರು.

**ಜಲಾಶಯಾಶ್ಚ ಸುಸ್ವಚ್ಛಾಃ ಸುಖಭೋಗ್ಯಾಃ ಸಪದ್ಮಕಾಃ ।**
**ಸಂತಾಪಚ್ಛೇದಿನೋಽಗಾಧಾ ಮನೋನಯನಹಾರಿಣಃ || ೧೩ ||**

ಬಹುಸ್ವಚ್ಛವೂ ಸುಖದಿಂದ ಅನುಭವಿಸುವುದಕ್ಕೆ ಯೋಗ್ಯಗಳೂ ತಾವರೆಗಳುಳ್ಳವೂ ಸಂತಾಪವನ್ನು ನಾಶಮಾಡುವುವೂ ಆಳವೂ ಆದ ಜಲಾಶಯಗಳು ನಯನ ಮನೋಹರಗಳಾಗಿದ್ದುವು.

**ಕ್ಷೇತ್ರಾಣಿ ಸರ್ವಧಾನ್ಯಾನಿ ಸರ್ವತರ್ಪೀಣಿ ಸರ್ವದಾ ।**
**ಸಂಪನ್ನಾನಿ ಮಹೀಭರ್ತುಃ ಕೋಷ್ಠಾಗಾರಾಣಿ ವಾ ಬಭುಃ || ೧೪ ||**

ಎಲ್ಲಾ ಧಾನ್ಯಗಳುಳ್ಳವೂ ಯಾವಾಗಲೂ ಎಲ್ಲರನ್ನು ತೃಪ್ತಿಪಡಿಸುವುವೂ ಆದ ಹೊಲಗದ್ದೆಗಳು, ರಾಜನ ತುಂಬಿದ ಉಗ್ರಾಣಗಳಂತೆ, ಶೋಭಿಸುತ್ತಿದ್ದುವು.

**ಗ್ರಾಮಾಃ ಕುಕ್ಕುಟಸಂಪಾತ್ಯಾಃ ಸಾರಾ ಬಹುಕೃಷೀವಲಾಃ ।**
**ಪಶುಧಾನ್ಯಧನಾಪೂರ್ಣಾ ನಿತ್ಯಾರಂಭಾ ನಿರಾಕುಲಾಃ ॥ ೧೫ ॥**

ಕೋಳಿಯು ಹಾರಿಕುಳಿತುಕೊಳ್ಳುವಷ್ಟು ದೂರದಲ್ಲಿರುವುವೂ ಸಾರವೂ ಹಲವು ಮಂದಿ ರೈತರುಳ್ಳವೂ ಆದ ಗ್ರಾಮಗಳು ಪಶುಗಳಿಂದಲೂ ಧಾನ್ಯಗಳಿಂದಲೂ ಧನದಿಂದಲೂ ತುಂಬಿರುವುವೂ ಯಾವಾಗಲೂ ಆರಂಭವುಳ್ಳವೂ ವ್ಯಾಕುಲವಿಲ್ಲದುವೂ ಆಗಿದ್ದುವು.

**ವೀತದಂಡಾದಿಬಾಧತ್ವಾನ್ನಿಗಮಾಃ ಸರ್ವಸಂಪದಃ ।**
**ವರ್ಣಾಶ್ರಮಸಮಾಕೀರ್ಣಾಸ್ತೇ ಸ್ಥಾನೀಯಾನುಕಾರಿಣಃ ॥ ೧೬ ॥**

ಸಕಲ ಸಂಪತ್ತುಗಳುಳ್ಳವೂ ವರ್ಣಾಶ್ರಮಗಳಿಂದ ಕೂಡಿರುವುವೂ ಆದ ಆ ಗ್ರಾಮಗಳು ಶಿಕ್ಷೆಯೇ ಮೊದಲಾದ ಬಾಧೆಗಳಿಲ್ಲದಿರುವುದರಿಂದ ಆ ಸ್ಥಾನದ ಜನರನ್ನು ಅನುಕರಣಮಾಡುವುವುಗಳಾಗಿದ್ದುವು. ಆ ದೇಶದ ಜನರಂತೆ ನಿರ್ದುಷ್ಟಗಳಾಗಿದ್ದುವೆಂದು ಭಾವವು.

**ಅಂಸವಾರಿಪಥೋಪೇತಸ್ಸಫಲಾಕಂಟಕದ್ರುಮಃ ।**
**ಅದೃಷ್ಟಾಷ್ಟಭಯಃ ಪ್ರಾಂತವೀಥೀತಸ್ತ್ರೀವನಾಶ್ರಯಃ ॥ ೧೭ ॥**

**ಯದ್ಯದ್ಜನಪದಸ್ಯೋಕ್ತಂ ನೀತಿಶಾಸ್ತ್ರವಿಶಾರದೈಃ ।**
**ಲಕ್ಷಣಂ ತಸ್ಯ ತಸ್ಯಾಯಂ ದೇಶೋ ಲಕ್ಷ್ಯತ್ವಮೇಯಿವಾನ್ ॥ ೧೮ ॥**

ಭುಜಶಿರಸ್ಸಿನವರೆಗೆ ಜಲಮಾರ್ಗದಿಂದ ಕೂಡಿರುವುದೂ ಫಲಸಹಿತಗಳೂ ಮುಳ್ಳುಗಳಿಲ್ಲದುವೂ ಆದ ಮರಗಳುಳ್ಳುದೂ ಎಂಟು ವಿಧವಾದ ಭಯಗಳಿಲ್ಲದುದೂ ಸಮೀಪದ ಬೀದಿಗಳಲ್ಲಿರುವ ಸ್ತ್ರೀಸಮೂಹಕ್ಕೆ ಆಶ್ರಯವೂ ಆದ ಈ ಸುಗಂಧಿದೇಶವು ನೀತಿ ಶಾಸ್ತ್ರವಿಶಾರದರು ದೇಶಕ್ಕೆ ಯಾವ ಯಾವ ಲಕ್ಷಣವಿರಬೇಕೆಂದು ಹೇಳಿದ್ದಾರೋ ಆಯಾ ಲಕ್ಷಣಕ್ಕೆ ಲಕ್ಷ್ಯವಾಯಿತು.

**ಹಾನಿರ್ಧನಸ್ಯ ಸತ್ಪಾತ್ರೇ ಸತ್ಕ್ರಿಯಾಯಾಃ ಫಲಾವಧೌ ।**
**ಉನ್ನತೇರ್ವಿನಯಸ್ಥಾನೇ ಪ್ರಾಣಸ್ಯ ಪರಮಾಯುಷಿ ॥ ೧೯ ॥**

ಆ ದೇಶದಲ್ಲಿ ಧನದ ಹಾನಿಯು ಸತ್ಪಾತ್ರದಲ್ಲಿ ಆಗುತ್ತಿದ್ದಿತು. ಸತ್ಕ್ರಿಯೆಯ ಹಾನಿಯು ಅದರ ಫಲಪ್ರಾಪ್ತಿಯ ಕೊನೆಯಲ್ಲಿದ್ದಿತು. ಉನ್ನತಿಯ ಹಾನಿಯು ವಿನಯದ ಸ್ಥಳದಲ್ಲಿ ಆಗುತ್ತಿದ್ದಿತು. ಪ್ರಾಣದ ಹಾನಿಯು ಆಯುಷ್ಯವು ಪೂರ್ತಿಯಾದ ಮೇಲೆ ಆಗುತ್ತಿದ್ದಿತು.

**ತುಂಗೇಷು ಕುಚಯೋರೇವ ಕಾಠಿನ್ಯಮತಿವರ್ತಿತಾ ।**
**ಗಜೇಷ್ವೇವ ಪ್ರಪಾತೋಽಪಿ ತರುಷ್ವೇವ ದರೀರಿಷು ॥ ೨೦ ॥**

**ದಂಡಶ್ಛತ್ರೇ ತುಲಾಯಾಂ ಚ ನಾಗರಾದಿಷು ತೀಕ್ಷ್ಣತಾ ।**
**ರೋಧನಂ ಸೇತುಬಂದೇಷು ಶಬ್ದಶಾಸ್ತ್ರೇಽಪವಾದವಾಕ್ ॥ ೨೧ ॥**

**ನಿಸ್ತ್ರಿಂಶಶಬ್ದಃ ಖಡ್ಗೇಷು ವಿಶ್ವಾಶಿತ್ವಂ ಹುತಾಶನೇ ।**
**ತಾಪಕತ್ವಂ ಖರಾಭೀಷೌ ಮಾರಕತ್ವಂ ಯಮಾಹ್ವಯೇ ॥ ೨೨ ॥**

ಉನ್ನತವಾದ ಪದಾರ್ಥಗಳಲ್ಲಿ ಕಾಠಿನ್ಯವಿರುವುದು. ಕಾಠಿನ್ಯವಿರುವುದು ಕುಚಗಳಲ್ಲಿ ಮಾತ್ರ. ಮೀರಿಹೋಗುವಿಕೆಯು ಆನೆಗಳಲ್ಲಿ ಮಾತ್ರವಿದ್ದಿತು. ಪತನವು ಬೆಟ್ಟದ ಕಣಿವೆಯ ಮರಗಳಲ್ಲಿ ಮಾತ್ರವಿದ್ದಿತು. ದಂಡವು (ಕೋಲು) ಛತ್ರದಲ್ಲಿಯೂ ತ್ರಾಸಿನಲ್ಲಿಯೂ ಇದ್ದಿತು. ತೀಕ್ಷ್ಣತ್ವವು ಒಣಶುಂಠಿ ಮೊದಲಾದುವುಗಳಲ್ಲಿದ್ದಿತು. ತಡೆಯೆಂಬುದು ಸೇತುಬಂಧನಗಳಲ್ಲಿದ್ದಿತು. ಅಪವಾದವಚನವು ವ್ಯಾಕರಣಶಾಸ್ತ್ರದಲ್ಲಿದ್ದಿತು. ನಿಸ್ತ್ರಿಂಶ (ತೀಕ್ಷ್ಣತೆ) ಶಬ್ದವು ಖಡ್ಗಗಳಲ್ಲಿದ್ದಿತು. ಎಲ್ಲವನ್ನೂ ಭುಂಜಿಸುವಿಕೆಯು ಬೆಂಕಿಯಲ್ಲಿದ್ದಿತು. ತಾಪವನ್ನುಂಟುಮಾಡುವಿಕೆಯು ತೀಕ್ಷ್ಣಕಿರಣನಾದ ಸೂರ್ಯನಲ್ಲಿದ್ದಿತು. ಕೊಲ್ಲುವಿಕೆಯು ಯಮನಲ್ಲಿದ್ದಿತು. ಮೇಲೆ ಹೇಳಲ್ಪಟ್ಟ ವಿಷಯಗಳು ಆ ದೇಶದ ಜನರಲ್ಲಿರಲಿಲ್ಲವೆಂದು ಭಾವವು.

**ಧರ್ಮೋ ಜೈನೇಂದ್ರ ಏವಾಸ್ಮಿನ್ದಿವಸೇ ವಾ ದಿವಾಕರಃ ।**
**ತತೋ ನೈಕಾಂತವಾದಾನಾಮುಲೂಕಾನಾಮಿವೋದ್ಗಮಃ ॥ ೨೩ ॥**

ಈ ಸುಗಂಧಿದೇಶದಲ್ಲಿ, ಹಗಲಿನಲ್ಲಿ ಸೂರ್ಯನು ಹೇಗೋ ಹಾಗೆ ಜಿನೇಶ್ವರ ಸಂಬಂಧವಾದ ಧರ್ಮವು ಒಂದೇ ಇದ್ದಿತು. ಆದುದರಿಂದ ಸೂರ್ಯನಿರುವಾಗ ಗೂಬೆಗಳ ಹಾರಾಟವಿಲ್ಲದಿರುವಂತೆ, ಜೈನಧರ್ಮದ ಮುಂದೆ ಏಕಾಂತವಾದಗಳ ಆವಿರ್ಭಾವವಿಲ್ಲ.

**ದುರ್ಗಾಣ್ಯಷ್ಟ ಯಥಾಸ್ಥಾನಂ ಸಾತತ್ಯೇನಾನುಸಂಧಿತೈಃ ।**
**ಭೃತಾನಿ ಯಂತ್ರಶಸ್ತ್ರಾಂಬುಯವಸೇಂಧನರಕ್ಷಕೈಃ ॥ ೨೪ ॥**

ಉಚಿತವಾದ ಸ್ಥಾನಗಳಲ್ಲಿ ಯಾವಾಗಲೂ ಸಂಗ್ರಹಿಸಲ್ಪಟ್ಟ ಯಂತ್ರ, ಶಸ್ತ್ರ, ಬಾಣ, ದನಗಳು ತಿನ್ನುವ ಹುಲ್ಲು, ಕಟ್ಟಿಗೆ, ಕಾವಲುಗಾರರು ಇವರುಗಳಿಂದ ತುಂಬಲ್ಪಟ್ಟಿರುವ ಎಂಟು ದುರ್ಗಗಳಿದ್ದುವು.

**ತಸ್ಯ ಮಧ್ಯೇ ಶುಭಸ್ಥಾನೇ ಲಲಾಟೇ ವಾ ವಿಶೇಷಕಮ್ ।**
**ವಿಶೇಷ್ಯೈಃ ಸರ್ವರಮ್ಯಾಣಾಂ ಶ್ರೀಪುರಂ ವಾಮರಂ ಪುರಮ್ ॥ ೨೫ ॥**

ಆ ದೇಶದ ಮಧ್ಯದಲ್ಲಿ, ಹಣೆಯಲ್ಲಿ ತಿಲಕವಿರುವಂತೆ, ಶುಭವಾದ ಸ್ಥಾನದಲ್ಲಿ ವಿಶೇಷವಸ್ತುಗಳಿಂದ ರಮಣೀಯವಾದ ಪದಾರ್ಥಗಳಲ್ಲಿ ಉತ್ಕೃಷ್ಟವಾದ ಶ್ರೀಪುರವೆಂಬ ನಗರವು, ಸ್ವರ್ಗದ ನಗರದಂತೆ, ಶೋಭಿಸುತ್ತಿದ್ದಿತು.

**ವಿಕಸನ್ನೀಲನೀರೇಜಸರೋಜಾಲಿವಿಲೋಚನೈಃ ।**
**ಸ್ವಚ್ಛವಾರಿಸರೋವಕ್ತ್ರೈರ್ಹಸತ್ಸುರಪುರಶ್ರಿಯಮ್ ॥ ೨೬ ॥**

ಅರಳಿದ ನೀಲಕಮಲಗಳ ಮತ್ತು ಕಮಲಗಳ ಮೇಲೆ ಕುಳಿತಿರುವ ಭ್ರಮರಗಳೆಂಬ ನೇತ್ರಗಳಿಂದಲೂ ಸ್ವಚ್ಛವಾದ ನೀರುಳ್ಳ ಸರೋವರಗಳೆಂಬ ಮುಖಗಳಿಂದಲೂ ಆ ಶ್ರೀಪುರವು ಸ್ವರ್ಗನಗರದ ಶೋಭೆಯನ್ನು ನೋಡಿ ನಗುವುದಾಗಿದ್ದಿತು.

**ನಾನಾಪ್ರಸೂನಸುಸ್ವಾದಕೇಸರಾಸವಪಾಯಿನಃ ।**
**ತತ್ರಾಲಿನೋಲಿನೀವೃಂದೈಃ ಪ್ರಯಾಂತ್ಯಾಪಾನಕೋತ್ಸವಮ್ ॥ ೨೭ ॥**

ಆ ಶ್ರೀಪುರದಲ್ಲಿ ವಿವಿಧಪುಷ್ಪಗಳ ಉತ್ತಮರುಚಿಯುಳ್ಳ ಕುಸುರುಗಳ ಮಕರಂದವನ್ನು ಪಾನಮಾಡುವ ದುಂಬಿಗಳು ಹೆಣ್ಣುದುಂಬಿಗಳ ಸಮೂಹಗಳೊಡನೆ ಪಾನಕದ ಉತ್ಸವಕ್ಕೆ ಹೋಗುವಂತಿರುತ್ತವೆ.

**ತದುತ್ತುಂಗಮಹಾಸೌಧಗೇಹೈಸ್ಸಮುರಾವಾರವೈಃ ।**
**ವಿಶ್ರಾಮ್ಯಂತು ಭವಂತೋತ್ರೇತ್ಯಾಹ್ವಯದ್ವಾ ಘನಾಘನಾನ್ ॥ ೨೮ ॥**

ಆ ಶ್ರೀಪುರವು ಮೃದಂಗಧ್ವನಿಯೊಡನೆ ಕೂಡಿರುವ ಎತ್ತರವಾದ ದೊಡ್ಡ ಉಪ್ಪರಿಗೆ ಮನೆಗಳಿಂದ ''ತಾವುಗಳು ಇಲ್ಲಿ ವಿಶ್ರಮಿಸಿಕೊಳ್ಳಿರಿ'' ಎಂದು ಮೇಘಗಳನ್ನು ಕರೆಯುವಂತಿದ್ದಿತು.

**ತದೇವ ಸರ್ವವಸ್ತೂನಾಮಾಕರೀಭೂತಮನ್ಯಥಾ ।**
**ತಾನಿ ನಿಷ್ಠಾಂ ನ ಕಿಂ ಯಾಂತಿ ತಥಾ ಭೋಗೈರ್ನಿರಂತರಮ್ ॥ ೨೯ ॥**

ಆ ಶ್ರೀಪುರವೇ ಸಕಲವಸ್ತುಗಳಿಗೆ ಉತ್ಪತ್ತಿಸ್ಥಾನವಾಗಿದ್ದಿತು. ಹಾಗಲ್ಲದಿದ್ದರೆ ಈ ರೀತಿಯಾಗಿ ಯಾವಾಗಲೂ ಭೋಗಿಸಿದರೂ ಆ ವಸ್ತುಗಳು ಮುಗಿಯುವುದಿಲ್ಲವೇಕೆ ?

**ಯದ್ಯದಾಲೋಕ್ಯತೇ ತತ್ತತ್ಸವರ್ಗೀಯೇಷು ಸತ್ತಮಮ್ ।**
**ಭ್ರಾಂತಿಂ ಸ್ವರ್ಗೋಯಮೇವೇತಿ ಕರೋತಿ ಮರುತಾಮಪಿ ॥ ೩೦ ॥**

ಆ ಶ್ರೀಪುರದಲ್ಲಿ ಯಾವ ಯಾವ ವಸ್ತುವು ದೃಷ್ಟಿಗೋಚರವಾಗುವುದೋ ಆಯಾ ವಸ್ತುವು ಸ್ವಜಾತಿಯ ವಸ್ತುಗಳಲ್ಲಿ ಪರಮೋತ್ಕೃಷ್ಟವಾಗಿದ್ದಿತು. ಅದು ದೇವತೆಗಳಿಗೂ ''ಇದೇ ಸ್ವರ್ಗ'' ವೆಂಬ ಭ್ರಾಂತಿಯನ್ನುಂಟುಮಾಡುತ್ತದೆ.

**ಸತ್ಕುಲೇಷು ಸಮುದ್ಭೂತಾಸ್ತತ್ರ ಸರ್ವೇಪಿ ಸವ್ರತಾಃ ।**
**ಉತ್ಪದ್ಯಂತೇ ಯತಃ ಪ್ರೇತ್ಯ ಸ್ವರ್ಗಜಾಃ ಶುದ್ಧದೃಷ್ಟಯಃ ॥ ೩೧ ॥**

ಸ್ವರ್ಗದಲ್ಲಿ ಹುಟ್ಟಿರುವವರು ಸತ್ತು ಆ ನಗರದಲ್ಲಿ ಶುದ್ಧಸಮ್ಯಗ್ದೃಷ್ಟಿಗಳಾಗಿ ಜನಿಸುವುದರಿಂದ ಆ ನಗರದಲ್ಲಿ ಎಲ್ಲರೂ ಸತ್ಕುಲಗಳಲ್ಲಿ ಹುಟ್ಟಿ ಉತ್ತಮ ವ್ರತಗಳುಳ್ಳವರಾಗಿರುತ್ತಾರೆ.

**ಸ್ವರ್ಗಃ ಕಿಮೀದೃಶೋ ವೇತಿ ತತ್ರಸ್ಥಾಶ್ಚಾರುದರ್ಶನಾಃ ।**
**ಮುಕ್ತ್ಯರ್ಥಮೇವ ಕುರ್ವಂತಿ ಧರ್ಮಂ ನ ಸ್ವರ್ಗಮೇಧಯಾ ॥ ೩೨ ॥**

ಆ ನಗರವನ್ನೂ ಅಲ್ಲಿಯ ನಿವಾಸಿಗಳನ್ನೂ ನೋಡಿ ಜನರು ''ಸ್ವರ್ಗವು ಇಂಥಾದ್ದೇನು ? ಸ್ವರ್ಗದಲ್ಲಿರುವ ಸುಂದರಾಕೃತಿಯುಳ್ಳವರು ಇಂಥವರೆಯೋ ?'' ಎಂದು ತಿಳಿದು ಮುಕ್ತಿಗೋಸ್ಕರ ಧರ್ಮವನ್ನು ಮಾಡುತ್ತಿದ್ದರಲ್ಲದೆ ಸ್ವರ್ಗವುಂಟಾಗಲೆಂಬ ಬುದ್ಧಿಯಿಂದ ಧರ್ಮವನ್ನು ಮಾಡುತ್ತಿರಲಿಲ್ಲ.

**ತತ್ರೋತ್ಸವೇ ಜನಾಃ ಪೂಜಾಂ ಮಂಗಲಾರ್ಥಂ ಪ್ರಕುರ್ವತೇ ।**
**ಶೋಕೇ ತದಪನೋದಾರ್ಥಮಂತೇ ಜೈನೀಂ ವಿವೇಕಿನಃ ॥ ೩೩ ॥**

ಆ ಶ್ರೀಪುರದಲ್ಲಿ ವಿವೇಕಿಗಳಾದ ಜನರು ಉತ್ಸವದಲ್ಲಿ ಮಂಗಲಕ್ಕೋಸ್ಕರವೂ ಶೋಕದಲ್ಲಿ ಅದರ ನಿವಾರಣೆಗೋಸ್ಕರವೂ ಕೊನೆಯಲ್ಲಿ ಜಿನಪೂಜೆಯನ್ನು ಮಾಡುತ್ತಾರೆ.

**ಸಾಧ್ಯಾರ್ಥಾ ಇವ ಸಾಧ್ಯಂತೇ ಜೈನವಾದ್ಯೈಃ ಸಹೇತುಭಿಃ ।**
**ಧರ್ಮಾರ್ಥಕಾಮಾಸ್ತಜ್ಜಾತೈರಮೇಯಸುಖದಾಯಿನಃ ॥ ೩೪ ॥**

ಅಲ್ಲಿಯ ಜನರು ಅಪಾರವಾದ ಸುಖವನ್ನು ಕೊಡುವ ಧರ್ಮ ಅರ್ಥ ಕಾಮ ಪುರುಷಾರ್ಥಗಳನ್ನು ಕಾರಣಸಹಿತವಾದ ಜೈನವಾದಗಳಿಂದ ಸಾಧಿಸಲ್ಪಡತಕ್ಕ ಅರ್ಥಗಳನ್ನೋಪಾದಿಯಲ್ಲಿ ಸಾಧಿಸುತ್ತಾರೆ.

**ದ್ವೀಪಾರ್ಧಂ ಚಕ್ರವಾಲೋ ವಾ ಪ್ರಾಕಾರೋ ಯತ್ಪರೀತವಾನ್ ।**
**ಭಿಯೇವ ರವಿಸಂತಾಪಾಲ್ಲೀನೋಭೂನ್ಮಣಿರಶ್ಮಿಷು ॥ ೩೫ ॥**

ಅರ್ಧದ್ವೀಪವನ್ನು ಆವರಿಸಿರುವ ದುಂಡಾದ ಮಾನುಷೋತ್ತರಪರ್ವತವೋ ಎಂಬಂತೆ ಕೋಟೆಯು ಶ್ರೀಪುರವನ್ನು ಆವರಿಸಿರುತ್ತದೆ. ಅದು, ಸೂರ್ಯನ ಸಂತಾಪದ ಭಯದಿಂದಲೋ ಎಂಬಂತೆ, ರತ್ನಗಳ ಕಿರಣಗಳಲ್ಲಿ ಅಡಗಿಕೊಂಡಿತು.

**ಶ್ರೀಷೇಣೋ ನಾಮ ತಸ್ಯಾಸೀತ್ಪತಿಃ ಸುರಪತಿದ್ಯುತಿಃ ।**
**ನತಾರಿಮೌಲಿರತ್ನಾಂಶುವಾರ್ವಿಕಾಸಿಕ್ರಮಾಂಬುಜಃ ॥ ೩೬ ॥**

ಆ ಶ್ರೀಪುರಕ್ಕೆ ದೇವೇಂದ್ರನಂತೆ ಕಾಂತಿಯುಳ್ಳವನೂ ನಮಸ್ಕರಿಸುತ್ತಿರುವ ಶತ್ರುಗಳ ಕಿರೀಟಗಳಲ್ಲಿರುವ ರತ್ನಗಳ ಕಿರಣವೆಂಬ ಜಲದಿಂದ ಪ್ರಕಾಶಮಾನವಾದ ಪಾದಕಮಲಗಳುಳ್ಳವನೂ ಆದ ಶ್ರೀಷೇಣನೆಂಬವನು ದೊರೆಯಾಗಿದ್ದನು.

**ಪಾತಿ ಯಸ್ಮಿನ್ಭುವಂ ಜಿಷ್ಣೌ ದುಷ್ಟಾ ವಿಗತವಿಕ್ರಿಯಾಃ ।**
**ಅಭೂವನ್ ಶಕ್ತಿಮನ್ಮಂತ್ರಸನ್ನಿಧೌ ವಾ ಭುಜಂಗಮಾಃ ॥ ೩೭ ॥**

ಜಯಶೀಲನಾದ ಆ ಶ್ರೀಷೇಣರಾಜನು ಪೃಥ್ವಿಯನ್ನು ಪಾಲಿಸುತ್ತಿರುವಾಗ, ಶಕ್ತಿಯುಳ್ಳ ಮಂತ್ರದ ಸಾನ್ನಿಧ್ಯದಲ್ಲಿ ಬಲಹೀನಗಳಾದ ಸರ್ಪಗಳಂತೆ, ದುಷ್ಟರು ಬಲಹೀನರಾದರು.

**ಉಪಾಯಾ ಯೇನ ಸಂಚಿಂತ್ಯ ಯಥಾಸ್ಥಾನಂ ಪ್ರಯೋಜಿತಾಃ ।**
**ದದುಃ ಫಲಮತಿಸ್ಫೀತಂ ಸಮಾಹರ್ತ್ಯವದರ್ಥಿತವಮ್ ॥ ೩೮ ॥**

ಆ ಶ್ರೀಷೇಣನು ಉಪಾಯಗಳನ್ನು ಯೋಚಿಸಿ ಉಚಿತಸ್ಥಾನದಲ್ಲಿ ಪ್ರಯೋಗಿಸುತ್ತಿದ್ದನು. ಅವು, ಕೇಳಿದುದನ್ನು ತಂದುಕೊಡುವಂತೆ, ವಿಶೇಷವಾದ ಫಲವನ್ನು ಕೊಟ್ಟುವು.

**ಶ್ರೀಕಾಂತಾ ನಾಮ ತಸ್ಯಾಸೀದ್ವನಿತಾ ವಿನಯಾನ್ವಿತಾ ।**
**ಸತೀ ಮೃದುಪದನ್ಯಾಸಾ ಸತ್ಕವೇರಿವ ಭಾರತೀ ॥ ೩೯ ॥**

ವಿಶಿಷ್ಟವಾದ ನಯಗಳಿಂದ ಕೂಡಿರುವುದೂ ಶ್ರೇಷ್ಠವೂ ಮೃದುವಾದ ಪದಗಳ ರಚನೆಯುಳ್ಳುದೂ ಆದ ಸತ್ಕವಿಯ ವಾಣಿಯಂತೆ, ಆ ಶ್ರೀಷೇಣನಿಗೆ ವಿನಯವತಿಯೂ ಪತಿವ್ರತೆಯೂ ಕೋಮಲವಾದ ಪಾದಗಳ ರಚನೆಯುಳ್ಳವಳೂ ಆದ ಶ್ರೀಕಾಂತೆಯೆಂಬವಳು ಪತ್ನಿಯಾಗಿದ್ದಳು.

**ರೂಪಾದ್ಯಾಃ ಸ್ತ್ರೀಗುಣಾಸ್ತಸ್ಯಾಃ ಸಮುತ್ಪನ್ನಾಃ ಸುಖಾವಹಾಃ ।**
**ಸುತಾ ಇವ ಸದಾ ಪಾಲ್ಯಾ ವಂದ್ಯಾಶ್ಚ ಗುರುವತ್ಸತಾಮ್ ॥ ೪೦ ॥**

ಆ ಶ್ರೀಕಾಂತಾದೇವಿಗೆ ಸುಖವನ್ನುಂಟುಮಾಡುವ ರೂಪವೇ ಮೊದಲಾದ ಸ್ತ್ರೀಗುಣಗಳೆಲ್ಲವೂ ಉಂಟಾದುವು. ಆ ಗುಣಗಳು ಮಕ್ಕಳಂತೆ ಯಾವಾಗಲೂ ರಕ್ಷಿಸಲ್ಪಡತಕ್ಕುವೂ ಸತ್ಪುರುಷರಿಗೆ, ಗುರುವಿನಂತೆ, ಪೂಜ್ಯಗಳೂ ಆಗಿದ್ದುವು.

**ಅರೀರಮನ್ನೃಪಃ ಪತ್ಯುಸ್ತಸ್ಯಾ ರೂಪಾದಯೋ ಗುಣಾಃ ।**
**ಸ್ಯಾದೇವಕಾರಸಂಯುಕ್ತಾ ನಯಾ ಇವ ಮನೀಷಿಣಃ ॥ ೪೧ ॥**

ವಿದ್ವಾಂಸನ ಸ್ಯಾತ್ಕಾರದಿಂದಲೂ ಏವಕಾರದಿಂದಲೂ ಕೂಡಿರುವ ನಯಗಳಂತೆ, ಆ ಶ್ರೀಕಾಂತಾದೇವಿಯ ರೂಪವೇ ಮೊದಲಾದ ಗುಣಗಳು ಆ ಶ್ರೀಷೇಣನ ಮನಸ್ಸನ್ನು ಸಂತೋಷಪಡಿಸಿದುವು.

**ಪ್ರತಿಚ್ಛಂದಃ ಪರಸ್ತ್ರೀಣಾಂ ವೇಧಸೈಷಾ ವಿನಿರ್ಮಿತಾ ।**
**ಗುಣಾನಾಮಿವ ಮಂಜೂಷಾ ಸ್ವಮತಿಪ್ರತಿಪತ್ತಯೇ ॥ ೪೨ ॥**

ನಾಮಕರ್ಮವೆಂಬ ಬ್ರಹ್ಮನು ತನ್ನ ಬುದ್ಧಿಯನ್ನು ಪ್ರಕಾಶಪಡಿಸುವುದಕ್ಕಾಗಿ ಗುಣಗಳಿಗೆ ಪೆಟ್ಟಿಗೆಯಂತಿರುವವಳೂ ಇತರಸ್ತ್ರೀಯರ ಪ್ರತಿಬಿಂಬದಂತಿರುವವಳೂ ಆದ ಈ ಶ್ರೀಕಾಂತಾದೇವಿಯನ್ನು ನಿರ್ಮಿಸಿದನು.

**ಅಪಾಪಂ ಸುಖಮುಚ್ಛಿನ್ನಂ ಸಸ್ನೇಹಂ ಸಮತೃಪ್ತಿದಮ್ ।**
**ಮಿಥುನಂ ತತ್ಸಮಾಪೋಚ್ಚೈರ್ಮಿಥುನಂ ವಾಮರಂ ಪರಮ್ ॥ ೪೩ ॥**

ಉತ್ಕೃಷ್ಟವಾದ ದೇವಸ್ತ್ರೀಪುರುಷಯುಗ್ಮದಂತೆ, ಪಾಪರಹಿತವೂ ಸ್ನೇಹವುಳ್ಳುದೂ ಸಮಾನವಾದ ತೃಪ್ತಿಯನ್ನುಂಟುಮಾಡುವುದೂ ಆದ ಆ ಸ್ತ್ರೀಪುರುಷಯುಗ್ಮವು (ಶ್ರೀಕಾಂತಾ ಶ್ರೀಷೇಣರು) ಅವಿಚ್ಛಿನ್ನವಾದ ಅಧಿಕಸುಖವನ್ನು ಹೊಂದಿತು.

**ಸ ಕದಾಚಿನ್ಮಹೀನಾಥೋ ನಿಷ್ಪುತ್ರತ್ವಾಚ್ಛುಚಾಹಿತಃ ।**
**ಇತಿ ಸ್ವಗತಮೇಕಾಕೀ ಸಂತತ್ಯರ್ಥಮಚಿಂತಯತ್ ॥ ೪೪ ॥**

ಆ ಶ್ರೀಷೇಣಮಹಾರಾಜನು ಪುತ್ರರಹಿತನಾಗಿದ್ದುದರಿಂದ ಒಂದಾನೊಂದು ಕಾಲದಲ್ಲಿ ಶೋಕಾಕ್ರಾಂತನಾಗಿ ಒಬ್ಬನೇ ತನ್ನ ಮನಸ್ಸಿನಲ್ಲಿ ಸಂತತಿಗೋಸ್ಕರ ಮುಂದೆ ಹೇಳುವಂತೆ ಚಿಂತಿಸಿದನು.

**ಸ್ತ್ರಿಯಃ ಸಂಸಾರವಲ್ಲರ್ಯಃ ಸತ್ಪುತ್ರಾಸ್ತತ್ಫಲಾಯಿತಾಃ ।**
**ನ ಚೇತ್ತೇ ತಸ್ಯ ರಾಮಾಭಿಃ ಪಾಪಾಭಿಃ ಕಿಂ ನೃಪಾಪಿನಃ ॥ ೪೫ ॥**

''ಸ್ತ್ರೀಯರು ಸಂಸಾರಕ್ಕೆ ಬಳ್ಳಿಯಂತಿರುವರು. ಸತ್ಪುತ್ರರು ಆ ಬಳ್ಳಿಗಳ ಫಲಗಳಂತಿರುವರು. ಅಂತಹ ಪುತ್ರರಿಲ್ಲದಿದ್ದರೆ ಆ ಪಾಪಿಮನುಷ್ಯನಿಗೆ ಪಾಪಿಗಳಾದ ಸ್ತ್ರೀಯರಿಂದೇನು ಪ್ರಯೋಜನ ?

**ಯಃ ಪುತ್ರವದನಾಂಭೋಜಂ ನಾಪಶ್ಯದ್ದೈವಯೋಗತಃ ।**
**ಷಟ್ಖಂಡಶ್ರೀಮುಖಾಬ್ಜೇನ ದೃಷ್ಟೇನಾಪ್ಯಸ್ಯ ತೇನ ಕಿಮ್ ॥ ೪೬ ॥**

ಯಾವನು ದೈವಯೋಗದಿಂದ ಪುತ್ರಮುಖಕಮಲವನ್ನು ನೋಡಲಿಲ್ಲವೋ ಅಂಥವನು ಷಡ್ಖಂಡರಾಜ್ಯಲಕ್ಷ್ಮಿಯ ಮುಖವನ್ನು ನೋಡಿದರೂ ಅದರಿಂದ ಅವನಿಗೇನು ಪ್ರಯೋಜನ ?''

**ತತಃ ಪುರೋಧಸಃ ಪ್ರಾಪ್ತುಂ ಸುತಂ ಸದುಪದೇಶತಃ ।**
**ಅನರ್ಘ್ಯೈರ್ಮಣಿಭಿಃ ಪಂಚವರ್ಣೈರಂಚಿತಕಾಂಚನೈಃ ॥ ೪೭ ॥**

**ವಿಧಾಯ ಜಿನಬಿಂಬಾನಿ ಪ್ರಾತಿಹಾರ್ಯೈಸ್ಸಹಾಷ್ಟಭಿಃ ।**
**ಭೃಂಗಾರಾದಿವಿನಿರ್ದಿಷ್ಟೈಸ್ಸಂಗತಾನ್ಯಷ್ಟಮಂಗಲೈಃ ॥ ೪೮ ॥**

ಬಳಿಕ ಅವನು ಪುತ್ರಪ್ರಾಪ್ತಿಗೋಸ್ಕರ ಪುರೋಹಿತನ ಸದುಪದೇಶದಿಂದ ಪಂಚ ವರ್ಣಗಳುಳ್ಳ ಅನರ್ಘ್ಯವಾದ ಬಂಗಾರದಿಂದ ಖಚಿತವಾದ ರತ್ನಗಳಿಂದ ಜಿನಬಿಂಬ ಗಳನ್ನೂ ಅಷ್ಟಮಹಾಪ್ರಾತಿಹಾರ್ಯಗಳನ್ನೂ ಗಿಂಡಿಯೇ ಮೊದಲಾದ ಅಷ್ಟ ಮಂಗಲದ್ರವ್ಯಗಳನ್ನೂ ಮಾಡಿಸಿ,

**ಪ್ರತಿಷ್ಠಾಕಲ್ಪಸಂಪ್ರೋಕ್ತೈಃ ಪ್ರತಿಷ್ಠಾಪ್ಯ ಕ್ರಿಯಾಕ್ರಮೈಃ ।**
**ಕೃತ್ವಾ ಮಹಾಭಿಷೇಕಂ ಚ ಜಿನಸಂಗಮಮಂಗಲೈಃ ॥ ೪೯ ॥**

**ಗಂಧೋದಕೈಃ ಸ್ವಯಂ ದೇವ್ಯಾ ಸಹೈವ ಸ್ನಾನ್ ಸ್ತುವನ್ ಜಿನಾನ್ ।**
**ವ್ಯಧಾದಾಷ್ಟಾಹ್ನಿಕೀಂ ಪೂಜಾಮೈಹಿಕಾಮುತ್ರಿಕೋದಯಾಮ್ ॥ ೫೦ ॥**

ಪ್ರತಿಷ್ಠಾಕಲ್ಪದಲ್ಲಿ ಹೇಳಲ್ಪಟ್ಟಿರುವ ಕ್ರಿಯೆಗಳ ಕ್ರಮಗಳಿಂದ ಪ್ರತಿಷ್ಠಿಸಿ ಮಹಾ ಭಿಷೇಕವನ್ನೂ ಮಾಡಿ ಜಿನೇಶ್ವರನ ಸಂಬಂಧದಿಂದ ಶ್ರೇಯಸ್ಕರವಾದ ಗಂಧೋ ದಕಗಳಿಂದ ದೇವಿಯೊಡನೆಯೇ ತಾನು ಸ್ನಾನಮಾಡಿ ಜಿನೇಶ್ವರನನ್ನು ಸ್ತುತಿಸುವವ ನಾಗಿ ಇಹಪರಗಳಲ್ಲಿ ಅಭ್ಯುದಯವನ್ನುಂಟುಮಾಡುವ ಅಷ್ಟಾಹ್ನಿಕಪೂಜೆಯನ್ನು ಮಾಡಿದನು.

**ಯಾತೈಃ ಕತಿಪಯೈರ್ದೇವೀ ದಿನೈಃ ಸ್ವಪ್ನಾನ್ವ್ಯಲೋಕತ ।**
**ಗಜಸಿಂಹೇಂದುಪದ್ಮಾಭಿಷೇಕಾನೀಷದ್ವಿನಿದ್ರಿತಾ ॥ ೫೧ ॥**

ಕೆಲವು ದಿನಗಳು ಕಳೆದನಂತರ ಅರೆನಿದ್ದೆಯುಳ್ಳ ಆ ಶ್ರೀಕಾಂತಾದೇವಿಯು ಆನೆ, ಸಿಂಹ, ಚಂದ್ರ, ಲಕ್ಷ್ಮಿಯ ಅಭಿಷೇಕ ಈ ಕನಸುಗಳನ್ನು ಕಂಡಳು.

**ತದೈವ ಗರ್ಭಸಂಕ್ರಾತಿರಭೂತ್ತಸ್ಯಾಸ್ತತಃ ಕ್ರಮಾತ್ ।**
**ಆಲಸ್ಯಮರುಚಿಸ್ತಂದ್ರಾ ಜುಗುಪ್ಸಾ ಚಾನಿಮಿತ್ತಿಕಾ ॥ ೫೨ ॥**

ಆಗಲೇ ಅವಳಿಗೆ ಗರ್ಭೋತ್ಪತ್ತಿಯಾಗಿ ಬಳಿಕ ದಿನಕ್ರಮದಿಂದ ಆಲಸ್ಯವೂ ಅರುಚಿಯೂ ನಿದ್ರೆಯೂ ಅಕಾರಣವಾದ ಜಿಗುಪ್ಸೆಯೂ ಉಂಟಾದುವು.

**ಅಶಕ್ತಯೋರಿವಾನ್ಯೋನ್ಯಂ ನಿರ್ಜೇತುಂ ಸುಚಿರಾನ್ಮುಖಮ್ ।**
**ಕುಚಯೋರಾದಧೌ ತಸ್ಯಾಃ ಕಾಲಿಮಾನಂ ದಿನೇದಿನೇ ॥ ೫೩ ॥**

ಬಹುಕಾಲ ಹೋರಾಡಿ ಒಂದನ್ನೊಂದು ಜಯಿಸುವುದಕ್ಕೆ ಶಕ್ತಿಯಿಲ್ಲದೆಯೋ ಎನ್ನುವಂತೆ ಆಕೆಯ ಸ್ತನಗಳ ಮುಖವು(ತೊಟ್ಟು) ದಿನೇ ದಿನೇ ಕಪ್ಪಾಗುತ್ತ ಬಂದಿತು.

**ಯೋಷಿತಾಂ ಭೂಷಣಂ ಲಜ್ಜಾ ಶ್ಲಾಘ್ಯಂ ನಾನ್ಯದ್ವಿಭೂಷಣಮ್ ।**
**ಇತಿ ಸ್ಪಷ್ಟಯಿತುಂ ವೈವ ಸರ್ವಚೇಷ್ಟಾಸ್ಥಿತಾ ಹ್ರಿಯಾ ॥ ೫೪ ॥**

''ಸ್ತ್ರೀಯರಿಗೆ ಲಜ್ಜೆಯು ಭೂಷಣ. ಶ್ಲಾಘ್ಯವಾದ ಬೇರೆ ಭೂಷಣವಿಲ್ಲ'' ಈ ಪ್ರಕಾರವಾಗಿ ಸ್ಪಷ್ಟಪಡಿಸುವುದಕ್ಕೋಸ್ಕರವೋ ಎನ್ನುವಂತೆ ಆಕೆಗೆ ಎಲ್ಲಾ ಕೆಲಸಗಳಲ್ಲಿ ಲಜ್ಜೆಯುಂಟಾಯಿತು.

**ತಸ್ಯಾ ಭಾರಾಕ್ಷಮತ್ವೇನ ಭೂಷಣಾನ್ಯುಚಿತಾನ್ಯಪಿ ।**
**ದಿವಸ್ತಾರಾಕುಲಾನೀವ ನಿಶಾಂತೇ ಸ್ವಲ್ಪತಾಂ ಯಯುಃ ॥ ೫೫ ॥**

ರಾತ್ರಿಯ ಕೊನೆಯಲ್ಲಿ ಆಕಾಶದಲ್ಲಿ ನಕ್ಷತ್ರಗಳು ಕಡಿಮೆಯಾಗುವಂತೆ ಭಾರವನ್ನು ಹೊರಲಾಗದಿದ್ದುದರಿಂದ ಆಕೆಯ ಉಚಿತವಾದ ಆಭರಣಗಳು ಕೂಡ ಕಡಿಮೆಯಾದುವು.

**ವಾಚಃ ಪರಿಮಿತಾಃ ಸ್ವಲ್ಪವಿತ್ತಸ್ಯೇವ ವಿಭೂತಯಃ ।**
**ಚಿರಂ ವಿರಮ್ಯ ಶ್ರವ್ಯತ್ವಾನ್ನವಾಂಭೋದಾವಲೇರಿವ ॥ ೫೬ ॥**

**ಕುರ್ಯುಃ ಕುತೂಹಲೋತ್ಪತ್ತಿಂ ಬಾಢಮಭ್ಯರ್ಣವರ್ತಿನಾಮ್ ।**
**ಏವಂ ತದ್ಗರ್ಭಚಿಹ್ನಾನಿ ವ್ಯಕ್ತಾನ್ಯನ್ಯಾನಿ ಚಾಭವನ್ ॥ ೫೭ ॥**

ಸ್ವಲ್ಪ ಧನವುಳ್ಳವನ ಸಂಪತ್ತಿಗಳಂತೆ, ಆಕೆಯ ಮಾತುಗಳು ಪರಿಮಿತಗಳಾದುವು. ಬಹುಕಾಲ ವಿರಾಮವನ್ನುಹೊಂದಿ ಹೊರಡುತ್ತಿದ್ದ ಆ ಮಾತುಗಳು, ನೂತನವಾದ ಮೇಘಸಮೂಹದಂತೆ, ಕೇಳುವುದಕ್ಕೆ ಇಂಪಾಗಿದ್ದು ಸಮೀಪದಲ್ಲಿರುವವರಿಗೆ ಬಹು ಕುತೂಹಲವನ್ನುಂಟುಮಾಡುವುವು. ಈ ರೀತಿಯಾಗಿ ಆಕೆಯ ಬೇರೆ ಗರ್ಭ ಚಿಹ್ನೆಗಳೂ ವ್ಯಕ್ತವಾದುವು.

**ಪ್ರಮೋದಾತ್ಪ್ರಾಪ್ಯ ರಾಜಾನಂ ಪ್ರಣಮ್ಯಾನನಸೂಚಿತಮ್ ।**
**ಇತೀತೀತ್ಯಬ್ರುವನ್ಕರ್ಣೇ ತನ್ಮಹತ್ತರಿಕಾಸ್ತದಾ ॥ ೫೮ ॥**

ಆಗ ಆ ಶ್ರೀಕಾಂತಾದೇವಿಯ ಸೇವಕಿಯರು ಸಂತೋಷದಿಂದ ರಾಜನ ಬಳಿಗೆ ಹೋಗಿ ನಮಸ್ಕರಿಸಿ ತಮ್ಮ ಮುಖಭಾವದಿಂದ ಸೂಚಿತವಾದ ವಿಷಯವನ್ನು ಹೀಗೆ ಹೀಗೆಂದು ಅವನ ಕಿವಿಯಲ್ಲಿ ಹೇಳಿದರು.

**ಸರೋಜಂ ವೋದಯಾದ್ಭಾನೋಃ ಕುಮುದಂ ವಾ ಹಿಮದ್ಯುತೇಃ ।**
**ವ್ಯಕಸತ್ತನ್ಮುಖಾಂಭೋಜಂ ಶ್ರುತಗರ್ಭಮಹೋದಯಾತ್ ॥ ೫೯ ॥**

ಗರ್ಭೋತ್ಪತ್ತಿಯ ವಿಷಯವನ್ನು ಕೇಳಿದುದರಿಂದ ಆ ಶ್ರೀಷೇಣಮಹಾರಾಜನ ಮುಖಕಮಲವು, ಸೂರ್ಯನ ಉದಯದಿಂದ ಕಮಲದಂತೆಯೂ ಚಂದ್ರನ ಉದಯದಿಂದ ಕುಮುದಪುಷ್ಪದಂತೆಯೂ ಅರಳಿತು.

**ಚಂದ್ರೋದಯೋಽನ್ವಯಾಂಭೋಧೇಃ ಕುಲಸ್ಯ ತಿಲಕಾಯಿತಃ ।**
**ಪ್ರಾದುರ್ಭಾವಸ್ತನೂಜಸ್ಯ ನ ಪ್ರತೋಷಾಯ ಕಸ್ಯ ವಾ ॥ ೬೦ ॥**

ವಂಶವೆಂಬ ಸಮುದ್ರಕ್ಕೆ ಚಂದ್ರೋದಯದಂತೆಯೂ ಕುಲಕ್ಕೆ ತಿಲಕದಂತೆಯೂ ಇರುವ ಪುತ್ರನ ಪ್ರಾದುರ್ಭಾವವು ಯಾವನಿಗೆ ತಾನೆ ಸಂತೋಷಕ್ಕೆ ಕಾರಣ ವಾಗುವುದಿಲ್ಲ ?

**ಅದೃಷ್ಟವದನಾಂಭೋಜಮಪತ್ಯಂ ಗರ್ಭಗಂ ಚ ಮಾಮ್ ।**
**ಏವಂ ಪ್ರತೋಷಯತ್ಯೇತದ್ದೃಷ್ಟವಕ್ತ್ರಂ ಕಿಮುಚ್ಯತೇ ॥ ೬೧ ॥**

**ಮತ್ವೇತಿ ತಾಭ್ಯೋ ದತ್ವೇಷ್ಟಂ ಸ್ವಾಪ್ತೈಃ ಕತಿಪಯೈರ್ವೃತಃ ।**
**ಮಹಾದೇವೀಗೃಹಂ ಗತ್ವಾ ದ್ವಿಗುಣೀಭೂತಸಮ್ಮದಃ ॥ ೬೨ ॥**

**ಅಭ್ರಿತಾಂ ವಾಭ್ರಪದವೀಂ ರತ್ನಗರ್ಭಾಮಿವ ಕ್ಷಿತಿಮ್ ।**
**ಉಪೋದಯಾರ್ಕಾಂ ಪ್ರಾಚೀಂ ವಾ ತಾಂ ದದರ್ಶ ದೃಶಸ್ಸುಖಮ್ ॥**

''ಮುಖಕಮಲವನ್ನು ತೋರಿಸದಿರುವುದೂ ಗರ್ಭದಲ್ಲಿರುವುದೂ ಆದ ಈ ಮಗುವು ಹೀಗೆ ನನ್ನನ್ನು ಸಂತೋಷಪಡಿಸುತ್ತದೆಂದಮೇಲೆ ಇನ್ನು ಮುಖವನ್ನು ತೋರಿಸುವ ಮಗುವಿನ ವಿಷಯವನ್ನು ಹೇಳುವುದೇನು ?'' ಈ ರೀತಿಯಾಗಿ ತಿಳಿದು ಆ ಸೇವಕಿಯರಿಗೆ ಇಷ್ಟವಸ್ತುವನ್ನು ಕೊಟ್ಟು ತನ್ನ ಕೆಲವು ಆಪ್ತರೊಡನೆ ಶ್ರೀಕಾಂತಾಮಹಾದೇವಿಯ ಮನೆಗೆ ಹೋಗಿ ದ್ವಿಗುಣವಾದ ಸಂತೋಷವುಳ್ಳವನಾಗಿ ಮೇಘವ್ಯಾಪ್ತವಾದ ಆಕಾಶದಂತೆಯೂ ಮಧ್ಯದಲ್ಲಿ ರತ್ನಗಳುಳ್ಳ ಭೂಮಿಯಂತೆ ಯೂ ಉದಯಿಸುತ್ತಿರುವ ಸೂರ್ಯನುಳ್ಳ ಪೂರ್ವದಿಕ್ಕಿನಂತೆಯೂ ಇರುವವಳೂ ಕಣ್ಣಿಗೆ ಸುಖವನ್ನುಂಟುಮಾಡುವವಳೂ ಆದ ಆ ಶ್ರೀಕಾಂತಾದೇವಿಯನ್ನು ನೋಡಿದನು.



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಚಂದ್ರಪುರೀಪಟ್ಟಣದಲ್ಲಿ ಮಹಾಸೇನಮಹಾರಾಜಂಗಂ ಲಕ್ಷ್ಮೀಮತಿ(ಲಕ್ಷ್ಮಣಾ)ಮಹಾದೇವಿಗಂ ಅನುರಾಧಾ ನಕ್ಷತ್ರದಲ್ಲುದಯಿಸಿದ ಶುಭ್ರವರ್ಣಮನುಳ್ಳ ಚಂದ್ರಲಾಂಛನಮನುಳ್ಳ ನೂರೈವತ್ತು ಬಿಲ್ಲುತ್ಸೇಧಮನುಳ್ಳ ಹತ್ತುಲಕ್ಷ ಪೂರ್ವಾಯುಷ್ಯಮನುಳ್ಳ ಶ್ಯಾಮಯಕ್ಷಜ್ವಾಲಾಮಾಲಿನೀ–ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದ ಪರ್ವತದ ಲಲಿತವರಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಚಂದ್ರಪ್ರಭತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಸಾಪಿ ದೃಷ್ಟ್ವಾ ಮಹೀನಾಥಮಭ್ಯುತ್ಥಾತುಂ ಕೃತೋದ್ಯಮಾ ।**
**ತದೈವ ದೇವಿ ತಿಷ್ಠೇತಿ ಸ್ಥಿತಾ ರಾಜ್ಞಾ ನಿವಾರಿತಾ ॥ ೬೪ ॥**

ಆಕೆಯೂ ರಾಜನನ್ನು ನೋಡಿ ಏಳುವುದಕ್ಕೆ ಉದ್ಯುಕ್ತಳಾದಳು. ಆಗಲೇ ರಾಜನು ''ದೇವಿಯೆ ! ಇರು'' ಎಂದು ತಡೆದುದರಿಂದ ಏಳದಿದ್ದಳು.

**ನೃಪಸ್ತಯೈಕಶಯ್ಯಾಯಾಮುಪವಿಶ್ಯ ಚಿರಂ ಮುದಾ ।**
**ಸಲಜ್ಜಯಾ ಸಹಾಲಾಪ್ಯ ಯಯೌ ತದುಚಿತೋಕ್ತಿಭಿಃ ॥ ೬೫ ॥**

ಶ್ರೀಷೇಣಮಹಾರಾಜನು ಲಜ್ಜಾಯುಕ್ತಳಾದ ಆ ಶ್ರೀಕಾಂತಾದೇವಿಯೊಡನೆ ಬಹುಸಮಯದವರೆಗೆ ಸಂತೋಷದಿಂದ ಒಂದೇ ಹಾಸಿಗೆಯಲ್ಲಿ ಕುಳಿತು ಆಕೆಗೆ ಉಚಿತವಾದ ಮಾತುಗಳಿಂದ ಮಾತನಾಡಿಸಿ ಹೊರಟುಹೋದನು.

**ದಿನೇಷು ಕೇಷು ಚಿತ್ಪಶ್ಚಾದ್ಯಾತೇಷು ಪ್ರಕಟೀಭವತ್ ।**
**ಪ್ರಾಕ್ಪುಣ್ಯಾದ್ಗುರುಶುಕ್ರಾದಿಶುಭಗ್ರಹನಿರೀಕ್ಷಣಾತ್ ॥ ೬೬ ॥**

**ಹರೇರ್ಹರಿದಿವಾದಿತ್ಯಂ ಸಸ್ಯಪಾಕಂ ಯಥಾ ಶರತ್ ।**
**ಮಹೋದಯಮಿವ ಧ್ಯಾತಿಸ್ಸಾಸೂತ ಸುತಮುತ್ತಮಮ್ ॥ ೬೭ ॥**

ಕೆಲವು ದಿನಗಳು ಕಳೆದ ನಂತರದಲ್ಲಿ ಪ್ರಕಟವಾದ ಪೂರ್ವಪುಣ್ಯದಿಂದ ಗುರು ಶುಕ್ರಾದಿಶುಭಗ್ರಹಗಳ ನಿರೀಕ್ಷಣೆಯಿಂದ, ಇಂದ್ರದಿಕ್ಕು ಸೂರ್ಯನನ್ನು ಪಡೆಯುವಂತೆಯೂ ಶರತ್ಕಾಲವು ಹಣ್ಣಾದ ಬೆಳೆಯನ್ನು ಪಡೆಯುವಂತೆಯೂ ಧ್ಯಾನವು ಅಭ್ಯುದಯವನ್ನು ಪಡೆಯುವಂತೆಯೂ ಆ ಶ್ರೀಕಾಂತಾದೇವಿಯು ಉತ್ತಮ ಪುತ್ರನನ್ನು ಹಡೆದಳು.

**ಪ್ರವರ್ಧಮಾನಭಾಗ್ಯಸ್ಯ ಯೋಗ್ಯಸ್ಯ ಸಕಲಶ್ರಿಯಃ ।**
**ಶ್ರೀವರ್ಮೇತಿ ಶುಭಂ ನಾಮ ತಸ್ಯ ಬಂಧುಜನೋ ವ್ಯಧಾತ್ ॥ ೬೮ ॥**

ವೃದ್ಧಿಯನ್ನು ಹೊಂದುತ್ತಿರುವ ಭಾಗ್ಯವುಳ್ಳವನೂ ಯೋಗ್ಯನೂ ಸಕಲಸಂಪತ್ತಿಯುಳ್ಳವನೂ ಆದ ಆ ಪುತ್ರನಿಗೆ ಅವನ ಬಂಧುಜನರು ಶ್ರೀವರ್ಮನೆಂದು ಶುಭ ನಾಮವನ್ನಿಟ್ಟರು.

**ಪ್ರಬೋಧೋ ಮೂರ್ಛಿತಸ್ಯೇವ ದುರ್ವಿಧಸ್ಯೇವ ವಾ ನಿಧಿಃ ।**
**ಜಯೋ ವಾತ್ಯಲ್ಪಸೈನ್ಯಸ್ಯ ರಾಜ್ಞಸ್ತೋಷಂ ಚಕಾರ ಸಃ ॥ ೬೯ ॥**

ಮೂರ್ಛಿತನಾದವನಿಗೆ ಜ್ಞಾನೋದಯವೂ ದರಿದ್ರನಿಗೆ ನಿಧಿಯೂ ಅತ್ಯಲ್ಪವಾದ ಸೈನ್ಯವುಳ್ಳವನಿಗೆ ಜಯವೂ ಸಂತೋಷವನ್ನುಂಟುಮಾಡುವಂತೆ ಆ ಶ್ರೀವರ್ಮನು ಶ್ರೀಷೇಣಮಹಾರಾಜನಿಗೆ ಸಂತೋಷವನ್ನುಂಟುಮಾಡಿದನು.

**ತಸ್ಯಾಂಗತೇಜಸಾ ರತ್ನದೀಪಿಕಾ ವಿಹತತ್ವಿಷಃ ।**
**ವಿಭಾವರ್ಯಾಂ ಸಭಾಸ್ಥಾನೇ ನೈರರ್ಥಕ್ಯಂ ಪ್ರಪೇದಿರೇ ॥ ೭೦ ॥**

ರತ್ನದೀಪಗಳು ಆ ಶ್ರೀವರ್ಮನ ಶರೀರತೇಜಸ್ಸಿನಿಂದ ಕಾಂತಿಹೀನಗಳಾಗಿ ರಾತ್ರಿ ಕಾಲದಲ್ಲಿ ಸಭಾಸ್ಥಾನದಲ್ಲಿ ನಿಷ್ಪ್ರಯೋಜನತ್ವವನ್ನು ಹೊಂದಿದುವು.

**ಶರೀರವೃದ್ಧಿಸ್ತಸ್ಯಾಸೀದ್ಭಿಷಕ್‌ಶಾಸ್ತ್ರೋಕ್ತವೃತ್ತಿತಃ ।**
**ಶಬ್ದಶಾಸ್ತ್ರಾದಿಭಿಃ ಪ್ರಜ್ಞಾವೃದ್ಧಿಸ್ಸುವಿಹಿತಕ್ರಿಯಾ ॥ ೭೧ ॥**

ವೈದ್ಯಶಾಸ್ತ್ರೋಕ್ತರೀತಿಯಿಂದ ಆ ಶ್ರೀವರ್ಮನ ದೇಹವು ಬೆಳೆಯಿತು. ವ್ಯಾಕರಣ ಶಾಸ್ತ್ರವೇ ಮೊದಲಾದುವುಗಳಿಂದ ಬುದ್ಧಿಯು ಸುಸಂಸ್ಕೃತವಾಗಿ ಬೆಳೆಯಿತು.

**ಸ ರಾಜಾ ತೇನ ಪುತ್ರೇಣ ದ್ವೀಪೋಯಮಿವ ಮೇರುಣಾ ।**
**ತುಂಗೇನ ಸಂಗತಃ ಶ್ರೀಮಾನ್ಪಾಲಯನ್ವಲಯಂ ಕ್ಷಿತೇಃ ॥ ೭೨ ॥**

ಉನ್ನತವಾದ ಮೇರುಪರ್ವತದೊಡನೆ ಸೇರಿಕೊಂಡಿರುವ ಈ ಜಂಬೂ ದ್ವೀಪದಂತೆ, ಭೂಮಂಡಲವನ್ನು ಪಾಲಿಸುವವನೂ ಶ್ರೀಮಂತನೂ ಆದ ಆ ಶ್ರೀಷೇಣಮಹಾರಾಜನು ಆ ಶ್ರೀವರ್ಮಪುತ್ರನೊಡನೆ ಸೇರಿಕೊಂಡಿದ್ದನು.

**ಜಿನಂ ಶ್ರೀಪ್ರಭನಾಮಾನಮವತೀರ್ಣಂ ಯದೃಚ್ಛಯಾ ।**
**ಶಿವಂಕರವನೋದ್ಯಾನೇ ಕದಾಚಿದ್ವನಪಾಲತಃ ॥ ೭೩ ॥**

**ಶ್ರುತ್ವಾ ಸಪ್ತಪದಾನೀತ್ವಾ ತಾಂ ದಿಶಂ ಶಿರಸಾ ನಮನ್ ।**
**ತದಾನೀಮೇವ ಸಂಪ್ರಾಪ್ಯ ವಿಶ್ವೇಶಂ ಪ್ರಶ್ರಯಾಶ್ರಯಃ ॥ ೭೪ ॥**

**ತ್ರಿಃಪರೀತ್ಯ ನಮಸ್ಕೃತ್ಯ ತಂ ಯಥಾಸ್ಥಾನಮಾಸ್ಥಿತಃ ।**
**ಕೃತ್ವಾ ಧರ್ಮಪರಿಪ್ರಶ್ನಂ ಬುಧ್ವಾ ವಸ್ತು ಯಥೋದಿತಮ್ ॥ ೭೫ ॥**

**ಭೋಗತೃಷ್ಣಾಮಪಾಸ್ಯಾಶು ಧರ್ಮತೃಷ್ಣಾತ್ತಮಾನಸಃ ।**
**ದತ್ವಾ ಶ್ರೀವರ್ಮಣೇ ರಾಜ್ಯಂ ಪ್ರಾವ್ರಾಜೀತ್ತಜ್ಜಿನಾಂತಿಕೇ ॥ ೭೬ ॥**

ಒಂದಾನೊಂದು ಕಾಲದಲ್ಲಿ ರಾಜನು ಶಿವಂಕರವೆಂಬ ಉದ್ಯಾನವನದಲ್ಲಿ ಆಕಸ್ಮಾತ್ ಶ್ರೀಪ್ರಭಜಿನರು ಅವತರಿಸಿರುತ್ತಾರೆಂದು ವನಪಾಲಕನಿಂದ ತಿಳಿದು ಆ ದಿಕ್ಕಿಗೆ ಏಳು ಹಜ್ಜೆ ನಡೆದು ವಿನಯಪರನಾಗಿ ತಲೆಬಾಗಿಸಿ ಲೋಕಾಧಿಪತಿಯಾದ ಸ್ವಾಮಿಯನ್ನು ಆಗಲೇ ಹೊಂದಿ ಮೂರು ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ ಉಚಿತವಾದ ಸ್ಥಾನದಲ್ಲಿ ಕುಳಿತು ಧಾರ್ಮಿಕವಿಷಯಗಳನ್ನು ಪ್ರಶ್ನೆಮಾಡಿ ಯಥೋಕ್ತವಾದ ವಸ್ತುಸ್ವರೂಪವನ್ನು ತಿಳಿದು ಭೋಗಾಸಕ್ತಿಯನ್ನು ಶೀಘ್ರವಾಗಿ ತೊರೆದು ಧರ್ಮದಲ್ಲಿ ಕಾಂಕ್ಷೆಯುಳ್ಳ ಮನಸ್ಸುಳ್ಳವನಾಗಿ ಶ್ರೀವರ್ಮನಿಗೆ ರಾಜ್ಯವನ್ನು ಕೊಟ್ಟು ತಾನು ಆ ಶ್ರೀಪ್ರಭಜಿನರ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡನು.

**ಶ್ರೀವರ್ಮಾಪಿ ಜಿನೇಂದ್ರೋಕ್ತ್ಯಾ ಧೂತಮಿಥ್ಯಾಮಹಾತಮಾಃ ।**
**ಆಸ್ಥಾತ್ತುರ್ಯಗುಣಸ್ಥಾನಮಾದ್ಯಂ ಸೋಪಾನಮಚ್ಯುತೇಃ ॥ ೭೭ ॥**

ಶ್ರೀವರ್ಮನೂ ಜಿನೇಶ್ವರವಚನದಿಂದ ಮಿಥ್ಯೆಯೆಂಬ ಮಹಾಂಧಕಾರವನ್ನು ದೂರಮಾಡಿ ಮುಕ್ತಿಗೆ ಮೊದಲನೆಯ ಮೆಟ್ಟಿಲಾದ ಅವಿರತವೆಂಬ ನಾಲ್ಕನೆಯ ಗುಣಸ್ಥಾನವನ್ನು ಹೊಂದಿದನು.

**ಸನ್ನಿಧಾನೇ ಚ ತಸ್ಯಾಯುಸ್ಸನ್ನಿಧಾಪಯತಿ ಸ್ವಯಮ್ ।**
**ಯಥಾಕಾಮಮಶೇಷಾರ್ಥಾಂಸ್ತೈಸ್ಸಂಪ್ರಾಪೇಪ್ಸಿತಂ ಸುಖಮ್ ॥ ೭೮ ॥**

ಆ ಗುಣಸ್ಥಾನವಿರುವಲ್ಲಿ ಪುಣ್ಯಕರ್ಮವು ತಾನಾಗಿ ಯಥೇಚ್ಛವಾಗಿ ಸಮಸ್ತ ಪದಾರ್ಥಗಳನ್ನು ಒದಗಿಸಿಕೊಡುವುದು. ಅವುಗಳಿಂದ ಶ್ರೀವರ್ಮನು ಇಷ್ಟ ಸುಖವನ್ನು ಹೊಂದಿದನು.

**ಅಸೌ ಕದಾಚಿದಾಷಾಢಪೌರ್ಣಮಾಸೀದಿನೇ ಜಿನಾನ್ ।**
**ಉಪೋಷ್ಯಾಭ್ಯರ್ಚ್ಯ ಸತ್ಯಾಪ್ತೈ ರಾತ್ರೌ ಹರ್ಮ್ಯತಲೇ ಸ್ಥಿತಃ ॥ ೭೯ ॥**

ಒಂದಾನೊಂದು ಕಾಲದಲ್ಲಿ ಈ ಶ್ರೀವರ್ಮನು ಆಷಾಢಮಾಸದ ಹುಣ್ಣಿಮೆಯ ದಿವಸ ಉಪವಾಸವನ್ನು ಮಾಡಿ ಜಿನೇಶ್ವರನನ್ನು ಪೂಜಿಸಿ ಉತ್ತಮರಾದ ತನ್ನ ಆಪ್ತ-ಮಿತ್ರರೊಡನೆ ರಾತ್ರಿಯಲ್ಲಿ ಉಪ್ಪರಿಗೆಯ ಮೇಲಿದ್ದನು.

**ವಿಲೋಕ್ಯ ಪಾತಮುಲ್ಕಾಯಾ ಭೋಗಸಾರೇ ವಿರಕ್ತವಾನ್ ।**
**ದ್ರಾಗ್ವಿಶ್ರಾಣಿತಸಾಮ್ರಾಜ್ಯಃ ಶ್ರೀಕಾಂತಾಯಾಗ್ರಸೂನವೇ ॥ ೮೦ ॥**

**ಅಭ್ಯಾಸೇ ಶ್ರೀಪ್ರಭೇಶಸ್ಯ ದೀಕ್ಷಿತ್ವಾ ಸುಚಿರಂ ತಪಃ ।**
**ವಿಧಾಯ ವಿಧಿವತ್ಪ್ರಾಂತೇ ಸನ್ನ್ಯಸ್ಯ ಶ್ರೀಪ್ರಭೇ ಗಿರೌ ॥ ೮೧ ॥**

**ಶ್ರೀಪ್ರಭೇ ಪ್ರಥಮೇ ಕಲ್ಪೇ ವಿಮಾನೇ ಸಾಗರೋಪಮ- ।**
**ದ್ವಿತ್ವಾಯುಃ ಶ್ರೀಧರೋ ನಾಮ್ನಾ ದೇವಸ್ಸ ಸ್ಮೋಪಪದ್ಯತೇ ॥ ೮೨ ॥**

ಅವನು ಉಲ್ಕಾಪಾತವನ್ನು ನೋಡಿ ಸಾರವಾದ ಭೋಗದಲ್ಲಿ ವಿರಕ್ತನಾಗಿ ತನ್ನ ಜ್ಯೇಷ್ಠಪುತ್ರನಾದ ಶ್ರೀಕಾಂತನಿಗೆ ಶೀಘ್ರವಾಗಿ ಸಾಮ್ರಾಜ್ಯವನ್ನಿತ್ತು ತಾನು ಶ್ರೀಪ್ರಭ ಜಿನರ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಬಹುಕಾಲದವರೆಗೆ ವಿಧಿಯಂತೆ ತಪಸ್ಸನ್ನು ಮಾಡಿ ಕೊನೆಯಲ್ಲಿ ಶ್ರೀಪ್ರಭವೆಂಬ ಪರ್ವತದಲ್ಲಿ ದೇಹತ್ಯಾಗವನ್ನು ಮಾಡಿ ಪ್ರಥಮಸ್ವರ್ಗದಲ್ಲಿ ಶ್ರೀಪ್ರಭವೆಂಬ ವಿಮಾನದಲ್ಲಿ ಎರಡು ಸಾಗರೋಪಮಾಯುಷ್ಯವುಳ್ಳ ಶ್ರೀಧರನೆಂಬ ದೇವನಾಗಿ ಹುಟ್ಟಿದನು.

**ಅಣಿಮಾದಿಗುಣಸ್ಸಪ್ತಹಸ್ತೋ ವೈಕ್ರಿಯಿಕಾಂಗಭಾಕ್ ।**
**ಚತುರ್ಥಲೇಶ್ಯೋ ಮಾಸೇನ ನಿಃಶ್ವಸನ್ ಮನಸಾಹರನ್ ॥ ೮೩ ॥**

**ವರ್ಷದ್ವಯಸಹಸ್ರೇಣ ಪುದ್ಗಲಾನಮೃತಾತ್ಮಕಾನ್ ।**
**ತೃಪ್ತಃ ಕಾಯಪ್ರವೀಚಾರಾದ್ವ್ಯಾಪ್ತಾದ್ಯಕ್ಷ್ಮಾತಲಾವಧಿಃ ॥ ೮೪ ॥**

**ಬಲತೇಜೋ ಮಹಾವಿಕ್ರಿಯಾಭಿಃ ಸ್ವಾವಧಿಸಮ್ಮಿತಃ ।**
**ಸುಸ್ಥಿತೋನುಭವನ್ಸೌಖ್ಯಂ ಸ್ವಪುಣ್ಯಪರಿಪಾಕಜಮ್ ॥ ೮೫ ॥**

ಅವನು ಅಣಿಮಾ ಮಹಿಮಾ ಮೊದಲಾದ ಎಂಟು ಗುಣಗಳುಳ್ಳವನೂ ಏಳು ಮೊಳ ದೇಹಪರಿಮಾಣವುಳ್ಳವನೂ ವೈಕ್ರಿಯಿಕಶರೀರವುಳ್ಳವನೂ ಪೀತಲೇಶ್ಯೆಯುಳ್ಳವನೂ ತಿಂಗಳಿಗೊಮ್ಮೆ ಶ್ವಾಸವನ್ನು ತೆಗೆದುಕೊಳ್ಳುವವನೂ ಎರಡು ಸಾವಿರ ವರುಷಗಳಿಗೊಮ್ಮೆ ಅಮೃತಸ್ವರೂಪವಾದ ಪುದ್ಗಲಗಳನ್ನು ಮನಸ್ಸಿನಿಂದ ಆಹಾರ ಮಾಡುವವನೂ ಶರೀರದಿಂದ ಕಾಮಸೇವೆಯನ್ನು ಮಾಡಿ ತೃಪ್ತನಾಗಿರುವವನೂ ಮೊದಲನೆಯ ನರಕದವರೆಗೆ ವ್ಯಾಪ್ತವಾದ ಅವಧಿಜ್ಞಾನವುಳ್ಳವನೂ ಆ ಜ್ಞಾನದಷ್ಟು ವ್ಯಾಪಕವಾದ ಬಲವೂ ತೇಜಸ್ಸೂ ಮಹಾವಿಕ್ರಿಯೆಯೂ ಉಳ್ಳವನೂ ತನ್ನ ಪುಣ್ಯಪರಿಪಾಕದಿಂದುಂಟಾದ ಸೌಖ್ಯವನ್ನನುಭವಿಸುವವನೂ ಆಗಿದ್ದನು.

**ದಕ್ಷಿಣಾದ್ಧಾತಕೀಖಂಡೇ ಪ್ರಾಚೀಷ್ವಾಕಾರಪರ್ವತಾತ್ ।**
**ಭಾರತೇ ವಿಷಯೇ ಶ್ರೀಮದಲಕಾಖ್ಯೇ ಪುರೋತ್ತಮಮ್ ॥ ೮೬ ॥**

**ಅಯೋಧ್ಯಾಖ್ಯಂ ನೃಪಸ್ತಸ್ಮಿನ್ನಾಬಭಾವಜಿತಂಜಯಃ ।**
**ಆಸೀದಜಿತಸೇನಾಸ್ಯ ದೇವೀ ಸುತಸುಖಪ್ರದಾ ॥ ೮೭ ॥**

ಧಾತಕೀಖಂಡದ ದಕ್ಷಿಣಭಾಗದಲ್ಲಿರುವ ಇಷ್ವಾಕಾರಪರ್ವತದ ಪೂರ್ವದಿಕ್ಕಿನ ಭರತಕ್ಷೇತ್ರದಲ್ಲಿರುವ ಸಂಪತ್ತಿಯುಕ್ತವಾದ ಅಲಕವೆಂಬ ದೇಶದಲ್ಲಿ ಅಯೋಧ್ಯೆಯೆಂಬ ಉತ್ತಮವಾದ ನಗರವಿದೆ. ಅದರಲ್ಲಿ ಅಜಿತಂಜಯನೆಂಬ ರಾಜನು ಶೋಭಿಸುತ್ತಿದ್ದನು. ಅವನಿಗೆ ಪುತ್ರಸುಖವನ್ನು ಕೊಡುವವಳಾದ ಅಜಿತಸೇನೆಯೆಂಬವಳು ಪಟ್ಟಮಹಿಷಿಯಾಗಿದ್ದಳು.

**ಸಾ ಕದಾಚಿತ್ತನೂಜಾರ್ಥೇ ಪರಿಪೂಜ್ಯ ಜಿನೇಶ್ವರಾನ್ ।**
**ಸುಪ್ತಾ ತಚ್ಚಿಂತಯಾ ಸ್ವಪ್ನಾನ್ವಿಲೋಕ್ಯಾಷ್ಟೌ ಶುಭಾನಿಮಾನ್ ॥ ೮೮ ॥**

**ಗಜೇಂದ್ರವೃಷಸಿಂಹೇಂದುರವಿಪದ್ಮಸರೋವರಾನ್ ।**
**ಶಂಖಂ ಪೂರ್ಣಘಟಂ ಚೈತತ್ಫಲಾನ್ಯಪ್ಯಜಿತಂಜಯಾತ್ ॥ ೮೯ ॥**

**ಗಜಾತ್ಪುತ್ರಂ ಗಭೀರಂ ಗೋಃ ಸಿಂಹೇನಾನಂತವೀರ್ಯಕಮ್ ।**
**ಚಂದ್ರೇಣ ತರ್ಪಕಂ ತೇಜಃಪ್ರತಾಪಾಢ್ಯಂ ದಿವಾಕರಾತ್ ॥ ೯೦ ॥**

**ಸರಸಾ ಶಂಖಚಕ್ರಾದಿದ್ವಾತ್ರಿಂಶಲ್ಲಕ್ಷಣಾನ್ವಿತಮ್ ।**
**ಶಂಖೇನ ಚಕ್ರಿಣಂ ಪೂರ್ಣಕುಂಭಾತ್ ಜ್ಞಾತ್ವಾ ನಿಧೀಶಿನಮ್ ॥ ೯೧ ॥**

**ತುಷ್ಟಾ ಕತಿಪಯೈರ್ಮಾಸೈಸ್ತಂ ಶ್ರೀಧರಮಜೀಜನತ್ ।**
**ವ್ಯಧಾದಜಿತಸೇನಾಖ್ಯಾಂ ರಾಜಾಸ್ಯ ಜಿತವಿದ್ವಿಷಃ ॥ ೯೨ ॥**

ಆಕೆಯು ಒಂದಾನೊಂದು ಕಾಲದಲ್ಲಿ ಪುತ್ರಪ್ರಾಪ್ತಿಗೋಸ್ಕರ ಜಿನೇಶ್ವರರನ್ನು ಪೂಜಿಸಿ ಅದೇ ಯೋಚನೆಯಿಂದ ಮಲಗಿದ್ದು ದೊಡ್ಡ ಆನೆ, ಎತ್ತು, ಸಿಂಹ, ಚಂದ್ರ, ಸೂರ್ಯ, ಕಮಲಸರೋವರ, ಶಂಖ, ಪೂರ್ಣಕುಂಭಗಳೆಂಬೀ ಎಂಟು ಶುಭ ಸ್ವಪ್ನಗಳನ್ನು ಕಂಡು ಆನೆಯ ಸ್ವಪ್ನದಿಂದ ಪುತ್ರಲಾಭವೂ ಎತ್ತಿನ ಸ್ವಪ್ನದಿಂದ ಪುತ್ರನು ಗಂಭೀರನೂ ಸಿಂಹದ ಸ್ವಪ್ನದಿಂದ ಅನಂತಶಕ್ತಿಯುಳ್ಳವನೂ ಚಂದ್ರನ ಸ್ವಪ್ನದಿಂದ ತೃಪ್ತಿಪಡಿಸುವವನೂ ಸೂರ್ಯನ ಸ್ವಪ್ನದಿಂದ ತೇಜಃಪ್ರತಾಪಗಳುಳ್ಳವನೂ ಕಮಲಸರೋವರದ ಸ್ವಪ್ನದಿಂದ ಶಂಕಚಕ್ರ ಮೊದಲಾದ ಮೂವತ್ತೆರಡು ಲಕ್ಷಣಗಳುಳ್ಳವನೂ ಶಂಖದ ಸ್ವಪ್ನದಿಂದ ಚಕ್ರವರ್ತಿಯೂ ಪೂರ್ಣಕುಂಭದ ಸ್ವಪ್ನದಿಂದ ಪದ್ಮಾದಿ ನಿಧಿಗಳಿಗೆ ಅಧಿಪತಿಯೂ ಆದ ಪುತ್ರನು ಜನಿಸುವನೆಂದು ಅಜಿತಂಜಯನಿಂದ ಈ ಸ್ವಪ್ನಫಲಗಳನ್ನು ತಿಳಿದು ಸಂತೋಷಪಟ್ಟಳು. ಕೆಲವು ತಿಂಗಳುಗಳು ಕಳೆದನಂತರ ಗಂಡುಮಗುವನ್ನು ಪ್ರಸವಿಸಿದಳು. ಅದು ಸ್ವರ್ಗದಿಂದ ಚ್ಯುತನಾಗಿ ಬಂದ ಆ ಶ್ರೀಧರದೇವನ ಆತ್ಮವಾಗಿದ್ದಿತು. ಶತ್ರುಗಳನ್ನು ಜಯಿಸುವವನಾದ ಈ ಮಗುವಿಗೆ ರಾಜನು ಅಜಿತಸೇನನೆಂದು ಹೆಸರನ್ನಿಟ್ಟನು.

**ತೇನ ತೇಜಸ್ವಿನಾ ರಾಜಾ ಸದಾಭಾತ್ ಭಾಸ್ಕರೇಣ ವಾ ।**
**ದಿವಸೋ ವಿರಜಾಸ್ತಾದೃಕ್ತನೂಜಃ ಕುಲಭೂಷಣಮ್ ॥ ೯೩ ॥**

ಸೂರ್ಯನಿಂದ ದಿವಸವು ಶೋಭಿಸುವಂತೆ ಯಾವಾಗಲೂ ರಾಜನು ಆ ತೇಜಸ್ವಿಯಾದ ಅಜಿತಸೇನನಿಂದ ಶೋಭಿಸಿದನು. ಪಾಪರಹಿತನಾದ ಅಂತಹ ಪುತ್ರನು ಕುಲಕ್ಕೆ ಭೂಷಣನಾಗಿರುತ್ತಾನೆ.

**ಸ್ವಯಂಪ್ರಭಾಖ್ಯತೀರ್ಥೇಶಮಶೋಕವನಮಾಗತಮ್ ।**
**ಪರೇದ್ಯುಃ ಸಪರೀವಾರಃ ಸಂಪ್ರಾಪ್ಯಾಭ್ಯರ್ಚ್ಯ ಸನ್ನತಃ ॥ ೯೪ ॥**

**ಶ್ರುತ್ವಾ ಧರ್ಮಂ ಸತಾಂ ತ್ಯಾಜ್ಯಂ ರಾಜ್ಯಂ ನಿರ್ಜಿತಶತ್ರವೇ ।**
**ಪ್ರದಾಯಾಜಿತಸೇನಾಯ ಸಂಯಮ್ಯಾಸೀತ್ಸ ಕೇವಲೀ ॥ ೯೫ ॥**

ಒಂದು ದಿವಸ ಅಜಿತಂಜಯನು ಅಶೋಕವನಕ್ಕೆ ದಯೆಮಾಡಿದ ಸ್ವಯಂಪ್ರಭ ತೀರ್ಥೇಶ್ವರರ ಬಳಿಗೆ ಪರಿವಾರಸಮೇತನಾಗಿ ಹೋಗಿ ಅವರನ್ನು ಪೂಜಿಸಿ ನಮಸ್ಕರಿಸಿ ಅವರಿಂದ ಧರ್ಮೋಪದೇಶವನ್ನು ಕೇಳಿ ಸತ್ಪುರುಷರಿಗೆ ತ್ಯಾಜ್ಯವಾದ ರಾಜ್ಯವನ್ನು ಶತ್ರುವಿಜಯಿಯಾದ ಅಜಿತಸೇನನಿಗೆ ಕೊಟ್ಟು ತಾನು ದೀಕ್ಷೆಯನ್ನು ತೆಗೆದುಕೊಂಡು ಕೇವಲಿಯಾದನು.

**ರಾಜ್ಯಲಕ್ಷ್ಮ್ಯಾ ಕುಮಾರೋಪಿ ರಕ್ತಯಾ ಸ ವಶೀಕೃತಃ ।**
**ಪ್ರೌಢಯೇವ ಯುವಾ ಕಾಮಂ ಮುಖ್ಯಂ ಸೌಖ್ಯಮುಪೇಯಿವಾನ್ ॥**

ಯುವತಿಯಿಂದ ಯುವಕನು ವಶೀಕೃತನಾಗುವಂತೆ ಅನುರಕ್ತಳಾದ ರಾಜ್ಯಲಕ್ಷ್ಮಿಯಿಂದ ವಶೀಕೃತನಾದ ಆ ಅಜಿತಸೇನಕುಮಾರನೂ ಮುಖ್ಯವಾದ ಸುಖವನ್ನು ಯಥೇಷ್ಟವಾಗಿ ಅನುಭವಿಸಿದನು.

**ತತ್ಪುಣ್ಯಪರಿಪಾಕೇನ ಚಕ್ರರತ್ನಾದಿ ಚಕ್ರಿಣಃ ।**
**ಯದ್ಯತ್ತತ್ತತ್ಸಮುತ್ಪನ್ನಂ ಚೇತನೇತರಭೇದಕಮ್ ॥ ೯೭ ॥**

ಅವನ ಪುಣ್ಯಪರಿಪಾಕದಿಂದ ಚಕ್ರವರ್ತಿಗೆ ಜೀವರತ್ನ ಅಜೀವರತ್ನಗಳೆಂಬ ಭೇದಗಳುಳ್ಳ ಚಕ್ರರತ್ನವೇ ಮೊದಲಾದ ಯಾವ ಯಾವ ಲಕ್ಷಣಗಳಿವೆಯೋ ಅವೆಲ್ಲವೂ ಉಂಟಾದುವು.

**ಚಕ್ರಮಾಕ್ರಾಂತದಿಕ್ಚಕ್ರಮಸ್ಯ ತಸ್ಯೋದ್ಭವೇ ಭವೇತ್ ।**
**ಪುನರ್ದಿಗ್ವಿಜಯೋ ಜೇತುಃ ಪುರಬಾಹ್ಯವಿಹಾರವತ್ ॥ ೯೮ ॥**

ಜಯಶೀಲನಾದ ಈ ಅಜಿತಸೇನನಿಗೆ ದಿಕ್ಚಕ್ರವನ್ನು ಆಕ್ರಮಿಸುವ ಚಕ್ರರತ್ನವುಂಟಾದ ಬಳಿಕ ದಿಗ್ವಿಜಯವಾದರೋ ಪಟ್ಟಣದ ಹೊರಗೆ ವಿಹರಿಸಿದಂತಿರುವುದು.

**ನಾಸುಖೋನೇನ ಕೋಪ್ಯಾಸೀನ್ನ ಪರಿಗ್ರಹಮೂರ್ಛನಾ ।**
**ಷಟ್ಖಂಡಾಧೀಶಿನೋಪ್ಯಸ್ಯ ಪುಣ್ಯಂ ಪುಣ್ಯಾನುಬಂಧಿ ತತ್ ॥ ೯೯ ॥**

ಷಟ್ಖಂಡಾಧಿಪತಿಯಾದರೂ ಈ ಅಜಿತಸೇನನಿಗೆ ಈ ಪುಣ್ಯದಿಂದ ಯಾವುದೊಂದು ದುಃಖವೂ ಉಂಟಾಗಲಿಲ್ಲ. ಪರಿಗ್ರಹಗಳಲ್ಲಿ ಆಸಕ್ತಿಯೂ ಇರಲಿಲ್ಲ. ಆ ಪುಣ್ಯವು ಅವನಿಗೆ ಪುಣ್ಯವನ್ನೇ ಉಪಾರ್ಜಿಸಿ ಕೊಡುವುದಾಗಿದ್ದಿತು.

**ದುಃಖಂ ಸ್ವಕರ್ಮಪಾಕೇನ ಸುಖಂ ತದನುಪಾಲನಾತ್ ।**
**ಪ್ರಜಾನಾಂ ತಸ್ಯ ಸಾಮ್ರಾಜ್ಯೇ ತತ್ತಾಭಿಃ ಸೋಭಿನಂದ್ಯತೇ ॥ ೧೦೦ ॥**

ಅವನ ಸಾಮ್ರಾಜ್ಯದಲ್ಲಿ ಪ್ರಜೆಗಳಿಗೆ ದುಃಖವು ತಮ್ಮ ಕರ್ಮಪರಿಪಾಕದಿಂದುಂಟಾಗುತ್ತಿದ್ದಿತಲ್ಲದೆ ಅವನಿಂದಲ್ಲ. ಅವನ ಪರಿಪಾಲನೆಯಿಂದ ಪ್ರಜೆಗಳಿಗೆ ಸುಖವುಂಟಾಗುತ್ತಿದ್ದಿತು. ಆದುದರಿಂದ ಪ್ರಜೆಗಳು ಅವನನ್ನು ಕೊಂಡಾಡುತ್ತಿದ್ದರು.

**ದೇವವಿದ್ಯಾಧರಾಧೀಶಮುಕುಟಾಗ್ರೇಷು ಸದ್ಯುತೀನ್ ।**
**ವಿಚ್ಛಾಯೀಕೃತ್ಯ ರತ್ನಾಂಶೂಂಸ್ತದಾಜ್ಞೈವೋಚ್ಛಿಖಾ ಬಭೌ ॥ ೧೦೧ ॥**

ದೇವತೆಗಳ ಮತ್ತು ವಿದ್ಯಾಧರರಾಜರ ಕಿರೀಟಗಳಲ್ಲಿ ಪ್ರಕಾಶಿಸುತ್ತಿರುವ ರತ್ನಗಳ ಕಿರಣಗಳನ್ನು ಮಸಕುಮಾಡಿ ಅವನ ಆಜ್ಞೆಯೇ ಮೇಲಾಗಿ ಪ್ರಕಾಶಿಸಿತು.

**ನಿತ್ಯೋದಯಸ್ಯ ಚೇನ್ನಸ್ಯಾತ್ಪದ್ಮಾನಂದಕೃತೋ ಬಲವ್ ।**
**ಚಂಡದ್ಯುತೇಃ ಕಥಂ ಪಾತಿ ಶಕ್ರೋಧ್ಯಕ್ಷಃ ಸ್ವಯಂ ದಿಶವ್ ॥ ೧೦೨ ॥**

"ನಿತ್ಯೋದಯವುಳ್ಳವನೂ ಕಮಲವನ್ನು ಅರಳಿಸುವವನೂ ಆದ ಸೂರ್ಯನ ದೆಸೆಯಿಂದ ಇಂದ್ರನಿಗೆ ಬಲವುಂಟಾಗದಿದ್ದರೆ ಅವನು ಪೂರ್ವದಿಕ್ಕಿಗೆ ಅಧಿಪತಿಯಾಗಿ ತಾನೇ ಅದನ್ನು ಹೇಗೆ ಕಾಪಾಡುತ್ತಾನೆ ?

**ವಿಧೀರ್ವೇಧಾ ನ ಚೇದಗ್ನಿಂ ಸ್ಥಾಪಯೇದ್ರಕ್ಷಿತುಂ ದಿಶವ್ ।**
**ಸ್ವಯೋನಿದಾಹಿನಾ ಕೋಪಿ ಕ್ವಚಿತ್ಕೇನಾಭಿರಕ್ಷಿತಃ ॥ ೧೦೩ ॥**

ಬ್ರಹ್ಮನು ಬುದ್ಧಿಯಿಲ್ಲದವನಲ್ಲದಿದ್ದರೆ ಅಗ್ನಿದಿಕ್ಕನ್ನು ಕಾಪಾಡುವುದಕ್ಕೆ ಅಗ್ನಿಯನ್ನು ಹೇಗೆ ಗೊತ್ತುಮಾಡುತ್ತಿದ್ದನು ? ತನ್ನನ್ನು ಹುಟ್ಟಿಸಿದ ಪದಾರ್ಥವನ್ನೂ ಸುಡುವವನು ಯಾವನು ಎಂದಾದರೂ ಯಾವನನ್ನಾದರೂ ಕಾಪಾಡಿದ್ದಾನೋ ?

**ಪಾಲಕೋ ಮಾರಕೋ ವೇತಿ ನಾಂತಕಂ ಸರ್ವಭಕ್ಷಿಣವ್ ।**
**ಕಿಂ ವೇತ್ತಿ ವೇಧಾಸ್ತಂ ಪಾತುಂ ಪಾಪಿನಂ ಪರಿಕಲ್ಪಯನ್ ॥ ೧೦೪ ॥**

ಎಲ್ಲರನ್ನು ಭಕ್ಷಿಸುವವನೂ ಪಾಪಿಯೂ ಆದ ಆ ಯಮನನ್ನು ದಕ್ಷಿಣದಿಕ್ಕನ್ನು ಕಾಪಾಡುವುದಕ್ಕೆ ನೇಮಿಸಿದ ಬ್ರಹ್ಮನು ಈ ಯಮನು ಪಾಲಕನೋ ? ಮಾರಕನೋ ? ಎಂದೇಕೆ ತಿಳಿಯುವುದಿಲ್ಲ ?

**ಶುನಃ ಸ್ಥಾನೇ ಸ್ಥಿತೋ ದೀನೋ ನಿತ್ಯಂ ಯಮಸಮೀಪಗಃ ।**
**ಸ್ವಜೀವಿತೇಪಿ ಸಂದೇಹ್ಯೋ ನಿರೃತಿಃ ಕಸ್ಯ ಪಾಲಕಃ ॥ ೧೦೫ ॥**

ನಾಯಿಯ ಸ್ಥಾನದಲ್ಲಿರುವವನೂ ದರಿದ್ರನೂ ಯಾವಾಗಲೂ ಯಮನ ಸಮೀಪದಲ್ಲಿರುವವನೂ ತನ್ನ ಬದುಕಿನಲ್ಲಿಯೂ ಸಂದೇಹವುಳ್ಳವನೂ ಆದ ನೈರ್ಋತನು ಯಾವನ ರಕ್ಷಕನು ?

**ಕಾಲಲೀಲಾಂ ವಿಲಂಬ್ಯಾಲಂ ಪಾಶಹಸ್ತೋ ಜಲಪ್ರಿಯಃ ।**
**ಸ ನದೀನಾಶ್ರಯಃ ಪಾಶೀ ಪ್ರಜಾನಾಂ ಕೇನ ಪಾಲಕಃ ॥ ೧೦೬ ॥**

ಕಾಲದ ಲೀಲೆಯನ್ನು ವಿಳಂಬಮಾಡಿ ಕೈಯಲ್ಲಿ ಪಾಶವನ್ನು ಹಿಡಿದಿರುವವನೂ ಜಲ ಮತ್ತು ಜಡಪ್ರಿಯನೂ ದೀನಾಶ್ರಯನಲ್ಲದೆ ನದೀಪತಿಯಾದ ಸಮುದ್ರದ ಆಶ್ರಯವುಳ್ಳವನೂ ಆದ ಆ ವರುಣನು ಯಾವ ಕಾರಣದಿಂದ ಪ್ರಜೆಗಳ ರಕ್ಷಕನಾಗುತ್ತಾನೆ ?

**ಧೂಮಧ್ವಜಸಖೋಸ್ಥಾಸ್ನುಃ ಸ್ವಯಮನ್ಯಾಂಶ್ಚ ಚಾಲಯನ್ ।**
**ಪಾಲಕಃ ಸ್ಥಾಪಿತಸ್ತಾದೃಕ್ಷ ಕಿಮೇಕತ್ರ ತಿಷ್ಠತಿ ॥ ೧೦೭ ॥**

ಒಂದು ಕಡೆಯಲ್ಲಿ ತಾನು ನಿಲ್ಲದಿರುವವನೂ ಇತರಪದಾರ್ಥಗಳನ್ನೂ ಚಲನೆ ಮಾಡಿಸುವವನೂ ಧೂಮಧ್ವಜನಾದ ಅಗ್ನಿಯ ಮಿತ್ರನೂ ಆದ ಅಂತಹ ವಾಯುವು ರಕ್ಷಕನಾಗಿ ಸ್ಥಾಪಿಸಲ್ಪಟ್ಟಿದ್ದಾನೆ. ಅವನೇನು ಒಂದು ಕಡೆಯಲ್ಲಿ ನಿಲ್ಲುತ್ತಾನೆಯೇ ?

**ಲುಬ್ಧೋ ನ ಲಭತೇ ಪುಣ್ಯಂ ವಿಪುಣ್ಯಃ ಕೇನ ಪಾಲಕಃ ।**
**ಧನೇನ ಚೇದದಾತಾ ತದ್ಗುಹ್ಯಕೋಪಿ ನ ಪಾಲಕಃ ॥ ೧೦೮ ॥**

ಲೋಭಿಯು ಧನದಿಂದ ದಾನವನ್ನು ಮಾಡದಿದ್ದರೆ ಪುಣ್ಯವನ್ನು ಗಳಿಸುವುದಿಲ್ಲ. ಪುಣ್ಯಹೀನನು ಯಾವುದರಿಂದ ರಕ್ಷಕನಾಗುತ್ತಾನೆ ? ಆದುದರಿಂದ ಲೋಭಿಯಾದ ಕುಬೇರನೂ ಪಾಲಕನಾಗುವುದಿಲ್ಲ.

**ಈಶಾನೋಂತ್ಯಾಂ ದಶಾಂ ಯಾತೋ ಗಣನೇ ಸರ್ವಪಶ್ಚಿಮಃ ।**
**ಪಿಶಾಚಾವೇಷ್ಟಿತೋ ದುಷ್ಟಃ ಕಥಮೇಷ ದಿಶಃ ಪತಿಃ ॥ ೧೦೯ ॥**

ಈಶಾನನು ಅಂತ್ಯಾವಸ್ಥೆಯನ್ನು ಹೊಂದಿದ್ದಾನೆ. ಎಣಿಕೆಯಲ್ಲಿ ಎಲ್ಲರಿಗಿಂತಲೂ ಕೊನೆಯವನೂ ಸುತ್ತಲೂ ಪಿಶಾಚಗಳುಳ್ಳವನೂ ದುಷ್ಟನೂ ಆದ ಇವನು ದಿಕ್ಕಿಗೆ ಹೇಗೆ ಒಡೆಯನಾಗುವನು ?

**ಕೃತ್ವೈತಾನ್ಬುದ್ಧಿವೈಕಲ್ಯಾತ್ತತ್ತ್ವಮಾರ್ಷ್ಟುಂ ಪ್ರಜಾಪತಿಃ ।**
**ವ್ಯಧಾದೇಕಮಿಮಂ ಮನ್ಯೇ ವಿಶ್ವದಿಕ್ಪಾಲನಕ್ಷಮವ್ ॥ ೧೧೦ ॥**

ಬ್ರಹ್ಮನು ಬುದ್ಧಿಯಿಲ್ಲದೆ ಈ ಇಂದ್ರಾದಿದೇವತೆಗಳನ್ನು ಸೃಷ್ಟಿಸಿದ ತಪ್ಪನ್ನು ಹೋಗಲಾಡಿಸುವುದಕ್ಕೋಸ್ಕರ ಸಕಲದಿಕ್ಕುಗಳನ್ನು ರಕ್ಷಿಸುವುದರಲ್ಲಿ ಸಮರ್ಥನಾದ ಈ ಒಬ್ಬ ಅಜಿತಸೇನನನ್ನು ಸೃಷ್ಟಿಸಿದನೆಂದು ತಿಳಿಯುತ್ತೇನೆ."

**ಇತ್ಯುದಾತ್ತವಚೋಮಾಲಾ ವಿರಚಯ್ಯಾಭಿಸಂಸ್ತುತಃ ।**
**ವಿಕ್ರಮಾಕ್ರಾಂತದಿಕ್ಚಕ್ರಃ ಶಕ್ರಾದೀನ್ಸೋತಿಲಂಘತೇ ॥ ೧೧೧ ॥**

ಹೀಗೆ ಉದಾತ್ತವಾದ ವಚನಪರಂಪರೆಯನ್ನು ರಚಿಸಿ ಪ್ರಜೆಗಳಿಂದ ಸ್ತುತಿಸಲ್ಪಟ್ಟವನೂ ಪರಾಕ್ರಮದಿಂದ ದಿಙ್ಮಂಡಲವನ್ನು ಆಕ್ರಮಿಸಿರುವವನೂ ಆದ ಆ ಅಜಿತಸೇನನು ಇಂದ್ರಾದಿ ದಿಕ್ಪಾಲಕರನ್ನು ಮೀರುತ್ತಾನೆ.

**ಧನಂ ದಾನೇ ಮತಿರ್ಧರ್ಮೇ ಶೌರ್ಯಂ ಭೂತಾಭಿರಕ್ಷಣೇ ।**
**ಆಯುಸ್ಸುಖೇ ತನುರ್ಭೋಗೇ ತಸ್ಯ ವೃದ್ಧಿಮಯಾಚ್ಚಿರವ್ ॥ ೧೧೨ ॥**

ಆ ಅಜಿತಸೇನನ ಧನವು ದಾನದಲ್ಲಿಯೂ ಬುದ್ಧಿಯು ಧರ್ಮದಲ್ಲಿಯೂ ಶೌರ್ಯವು ಪ್ರಾಣಿರಕ್ಷಣೆಯಲ್ಲಿಯೂ ಆಯುಷ್ಯವು ಸುಖದಲ್ಲಿಯೂ ಶರೀರವು ಭೋಗದಲ್ಲಿಯೂ ಬಹುಕಾಲದವರೆಗೆ ವೃದ್ಧಿಯನ್ನು ಹೊಂದಿದುವು.

**ಅಪರಾಯತ್ತಮಚ್ಛಿನ್ನಮಬಾಧಮಘವರ್ಧನವ್ ।**
**ಗುಣಾನ್ಪುಷ್ಣದ್ವಿತೃಷಸ್ಸನ್ಸುಖೇನ ಸುಖಮಾಪಿವಾನ್ ॥ ೧೧೩ ॥**

ಅಜಿತಸೇನನು ಪರಾಧೀನವಲ್ಲದುದೂ ನಾಶರಹಿತವೂ ಬಾಧೆಯಿಲ್ಲದುದೂ ಪುಣ್ಯವನ್ನು ಹೆಚ್ಚಿಸುವುದೂ ಗುಣಗಳನ್ನು ಪುಷ್ಟೀಕರಿಸುವುದೂ ಆದ ಸುಖವನ್ನು ಆಸಕ್ತಿಯಿಲ್ಲದವನಾಗಿ ಸುಖದಿಂದ ಅನುಭವಿಸಿದನು.

**ಋತಂ ವಾಚಿ ದಯಾ ಚಿತ್ತೇ ಧರ್ಮಕರ್ಮಣಿ ನಿರ್ಮಲಃ ।**
**ಸ್ವಾನ್ಗುಣಾನ್ವಾ ಪ್ರಜಾಃ ಪಾತಿ ರಾಜರ್ಷಿಃ ಕೇನ ನ ಸ್ತುತಃ ॥ ೧೧೪ ॥**

ವಚನದಲ್ಲಿ ಸತ್ಯವೂ ಹೃದಯದಲ್ಲಿ ದಯೆಯುಳ್ಳವನೂ ಧರ್ಮಕಾರ್ಯದಲ್ಲಿ ನಿರ್ಮಲನೂ ಆದ ಅಜಿತಸೇನನು ತನ್ನ ಗುಣಗಳನ್ನು ಕಾಪಾಡಿಕೊಳ್ಳುವಂತೆ, ಪ್ರಜೆಗಳನ್ನು ಕಾಪಾಡುತ್ತಾನೆ. ರಾಜರ್ಷಿಯನ್ನು ಯಾವನು ತಾನೆ ಸ್ತುತಿಸುವುದಿಲ್ಲ ?

**ಮನ್ಯೇ ನೈಸರ್ಗಿಕಂ ತಸ್ಯ ಸೌಜನ್ಯಂ ಕಥಮನ್ಯಥಾ ।**
**ಪ್ರಾಣಹಾರಿಣಿ ಪಾಪೇಪಿ ರಿಪೌ ನೋಪೈತಿ ವಿಕ್ರಿಯಾವ್ ॥ ೧೧೫ ॥**

ಅಜಿತಸೇನನ ಸೌಜನ್ಯವು ಸ್ವಾಭಾವಿಕವಾದುದೆಂದು ತಿಳಿಯುತ್ತೇನೆ. ಹಾಗಲ್ಲದಿರುವ ಪಕ್ಷದಲ್ಲಿ ಪ್ರಾಣಾಪಹಾರಕನೂ ಪಾಪಿಯೂ ಆದ ಶತ್ರುವಿನಲ್ಲಿಯೂ ಅವನು ವಿಕಾರವನ್ನೇಕೆ ಹೊಂದುವುದಿಲ್ಲ ?

**ನ ಹಿ ಮೂಲಹರಃ ಕೋಽಪಿ ನಾಪಿ ಕೋಽಪಿ ಕದರ್ಯಕಃ ।**
**ತಾದಾತ್ವಿಕೋ ವಾ ತದ್ರಾಜ್ಯೇ ಸರ್ವೇ ಸದ್ವ್ಯಯಕಾರಿಣಃ ॥ ೧೧೬ ॥**

ಅವನ ರಾಜ್ಯದಲ್ಲಿ ಯಾವನೂ ಹಿರಿಯರುಗಳಿಸಿರುವ ಮೂಲಧನವನ್ನು ಹಾಳು ಮಾಡುವವನಿಲ್ಲ; ಯಾವನೂ ಕೃಪಣನೂ ಇಲ್ಲ; ಮುಂದಾಲೋಚನೆಯಿಲ್ಲದೆ ತತ್ಕಾಲದ ಸುಖಕ್ಕೋಸ್ಕರವೇ ಧನವನ್ನು ವೆಚ್ಚಮಾಡುವವನೂ ಇಲ್ಲ. ಎಲ್ಲರೂ ಸತ್ಕಾರ್ಯಗಳಲ್ಲಿ ಧನವನ್ನು ವೆಚ್ಚಮಾಡುವವರಾಗಿದ್ದರು.

**ಇತಿ ತಸ್ಮಿನ್ಮಹೀಂ ಪಾತಿ ಸೌರಾಜ್ಯೇ ಸತಿ ಭೂಪತೌ ।**
**ಪ್ರಜಾಃ ಪ್ರಜಾಪತಿಂ ಮತ್ವಾ ತಮೈಧಂತ ಸುಮೇಧಸಮ್ ॥ ೧೧೭ ॥**

ಈ ರೀತಿಯಾಗಿ ಆ ಅಜಿತಸೇನಮಹಾರಾಜನು ಪೃಥ್ವಿಯನ್ನು ಪಾಲಿಸುತ್ತಿರಲು ಪ್ರಜೆಗಳು ಉತ್ತಮರಾಜ್ಯದಲ್ಲಿ ಒಳ್ಳೆಯ ಪ್ರಾಜ್ಞನಾದ ಆ ಅಜಿತಸೇನನನ್ನು ಬ್ರಹ್ಮನನ್ನಾಗಿ ತಿಳಿದು ವೃದ್ಧಿಹೊಂದುತ್ತಿದ್ದರು.

**ರತ್ನಾನಿ ನಿಧಯಶ್ಚಾಸ್ಯ ಚತುರ್ದಶ ನವಾಭವನ್ ।**
**ನವಯೌವನಸಂಪ್ರಾಪ್ತೌ ಪ್ರಾಪ್ತಪುಣ್ಯೋದಯಾತ್ಮಭೋಃ ॥ ೧೧೮ ॥**

ಆ ಅಜಿತಸೇನಮಹಾರಾಜನಿಗೆ ನವಯೌವನವು ಪ್ರಾಪ್ತವಾದಾಗ ಪುಣ್ಯೋದಯದಿಂದ ಹದಿನಾಲ್ಕು ರತ್ನಗಳೂ ಒಂಬತ್ತು ನಿಧಿಗಳೂ ಉಂಟಾದುವು.

**ಭಾಜನಂ ಭೋಜನಂ ಶಯ್ಯಾ ಚಮೂರ್ವಾಹನಮಾಸನಮ್ ।**
**ನಿಧಿರತ್ನಂ ಪುರಂ ನಾಟ್ಯಮಿತಿ ಭೋಗಾನ್ದಶಾನ್ವಭೂತ್ ॥ ೧೧೯ ॥**

ಅವನು ಭಾಜನ, ಭೋಜನ, ಶಯ್ಯಾ, ಸೇನಾ, ವಾಹನ, ಆಸನ, ನಿಧಿ, ರತ್ನ, ನಗರ, ನಾಟ್ಯಗಳೆಂಬ ದಶವಿಧ ಭೋಗಗಳನ್ನು ಅನುಭವಿಸಿದನು.

**ಶ್ರದ್ಧಾದಿಗುಣಸಂಪನ್ನಃ ಸ ಕದಾಚಿನ್ಮಹೀಪತಿಃ ।**
**ಅರಿಂದಮಾಯ ದತ್ವಾನ್ನಂ ಸತೇ ಮಾಸೋಪವಾಸಿನೇ ॥ ೧೨೦ ॥**

**ಗೃಹೀತನವಪುಣ್ಯಾತ್ಮಾ ವಸುಧಾರಾದಿಪಂಚಕಮ್ ।**
**ಪ್ರಾಪಾಶ್ಚರ್ಯಮನಾಪ್ಯಂ ಕಿಂ ಸದನುಷ್ಠಾನತತ್ಪರೈಃ ॥ ೧೨೧ ॥**

ಶ್ರದ್ಧಾದಿಗುಣಸಂಪನ್ನನಾದ ಆ ಅಜಿತಸೇನಮಹಾರಾಜನು ಒಂದಾನೊಂದು ಕಾಲದಲ್ಲಿ ಮಾಸೋಪವಾಸಿಯೂ ಸತ್ಪುರುಷನೂ ಆದ ಅರಿಂದಮಮುನಿಗೆ ಆಹಾರವನ್ನು ಕೊಟ್ಟು ನೂತನಪುಣ್ಯಕರ್ಮವನ್ನು ಗ್ರಹಣಮಾಡಿದವನಾಗಿ ರತ್ನವೃಷ್ಟಿ ಮೊದಲಾದ ಪಂಚಾಶ್ಚರ್ಯಗಳನ್ನು ಹೊಂದಿದನು. ಉತ್ತಮ ಕಾರ್ಯವನ್ನು ಅನುಷ್ಠಿಸುವುದರಲ್ಲಿ ಆಸಕ್ತರಾದವರಿಗೆ ದೊರೆಯದಿರುವುದಾವುದಿದೆ ?

**ಅಸೌ ಮನೋಹರೋದ್ಯಾನೇ ಗುಣಪ್ರಭಜಿನೇಶ್ವರಮ್ ।**
**ಪರೇದ್ಯುಃ ಪ್ರಾಪ್ಯ ತತ್ಪ್ರೋಕ್ತಂ ಧರ್ಮಸಾರಂ ರಸಾಯನಮ್ ॥ ೧೨೨ ॥**

**ಪೀತ್ವಾ ಸ್ವಭವಸಂಬಂಧಶ್ರುತಿಬಂಧುಪ್ರಚೋದಿತಃ ।**
**ಸದ್ಯೋ ನಿರ್ವಿದ್ಯ ಸಾಮ್ರಾಜ್ಯಂ ವಿತೀರ್ಯ ಜಿತಶತ್ರವೇ ॥ ೧೨೩ ॥**

**ತ್ರೈಲೋಕ್ಯಜಯಿನಂ ಜೇತುಂ ಮೋಹರಾಜಂ ಕೃತೋದ್ಯಮಃ ।**
**ರಾಜಭಿರ್ಬಹುಭಿಃ ಸಾರ್ಧಂ ಗೃಹೀತ್ವಾ ಸಾಧನಂ ತಪಃ ॥ ೧೨೪ ॥**

**ಚರಿತ್ವಾ ನಿರತೀಚಾರಂ ತನುಂ ತ್ಯಕ್ತ್ವಾಯುಷಾವಧೌ ।**
**ನಭಸ್ತಿಲಕಗಿರ್ಯಗ್ರೇ ಸಾತಂಕರವಿಮಾನಗಃ ॥ ೧೨೫ ॥**

**ಅಚ್ಯುತೇಂದ್ರೋಜನಿಷ್ಟಾಪ್ತವಾರ್ಧಿದ್ವಾವಿಂಶತಿಸ್ಥಿತಿಃ ।**
**ಹಸ್ತತ್ರಯಪ್ರಮಾಣಾಪ್ತನಿರ್ಧಾತುತನುಭಾಸ್ವರಃ ॥ ೧೨೬ ॥**

**ಶುಕ್ಲಲೇಶ್ಯಃ ಶ್ವಸನ್ಮಾಸೈರೇಕಾದಶಭಿರಾಹರನ್ ।**
**ದ್ವಾವಿಂಶತಿಸಹಸ್ರಾಬ್ದೈರ್ಮಾನಸಾಹಾರಮಾಮರಮ್ ॥ ೧೨೭ ॥**

**ತಮಃಪ್ರಭಾವಧಿವ್ಯಾಪ್ತದೇಶಾವಧಿವಿಲೋಚನಃ ।**
**ತತ್ಕ್ಷೇತ್ರವ್ಯಾಪಿಸತ್ತೇಜೋಬಲೋತ್ತರಶರೀರಭಾಕ್ ॥ ೧೨೮ ॥**

ಈ ಅಜಿತಸೇನನು ಮತ್ತೊಂದು ದಿವಸ ಮನೋಹರೋದ್ಯಾನದಲ್ಲಿ ಗುಣಪ್ರಭಜಿನೇಶ್ವರನನ್ನು ಹೊಂದಿ ಅವರು ಹೇಳಿದ ಧರ್ಮದ ಸಾರವೆಂಬ ರಸಾಯನವನ್ನು ಪಾನಮಾಡಿ ತನ್ನ ಪೂರ್ವಭವಸಂಬಂಧಶ್ರವಣವೆಂಬ ಬಂಧುವಿನಿಂದ ಪ್ರೇರಿತನಾಗಿ ಆಗಲೇ ವೈರಾಗ್ಯವನ್ನು ಹೊಂದಿ ಜಿತಶತ್ರುವಿಗೆ ಸಾಮ್ರಾಜ್ಯವನ್ನು ಕೊಟ್ಟು ತ್ರೈಲೋಕ್ಯವನ್ನು ಜಯಿಸಿರುವ ಮೋಹರಾಜನನ್ನು ಜಯಿಸುವುದಕ್ಕೋಸ್ಕರ ಉದ್ಯುಕ್ತನಾಗಿ ಅದಕ್ಕೆ ಸಾಧನವಾದ ತಪಸ್ಸನ್ನು ಅನೇಕ ರಾಜರುಗಳೊಡನೆ ಪರಿಗ್ರಹಿಸಿ ಅತಿಚಾರವಿಲ್ಲದೆ ನಡೆಸಿ ಆಯುಷ್ಯಾವಸಾನದಲ್ಲಿ ನಭಸ್ತಿಲಕವೆಂಬ ಪರ್ವತದ ಶಿಖರದಲ್ಲಿ ದೇಹವನ್ನು ತ್ಯಜಿಸಿ ಹದಿನಾರನೆಯ ಸ್ವರ್ಗದಲ್ಲಿ ಸಾತಂಕರವೆಂಬ ವಿಮಾನವನ್ನು ಹೊಂದಿದವನೂ ಇಪ್ಪತ್ತೆರಡು ಸಾಗರೋಪಮಾಯುಷ್ಯವುಳ್ಳವನೂ ಮೂರು ಮೊಳದ ಅಳತೆಯುಳ್ಳದೂ ಸಪ್ತಧಾತುರಹಿತವೂ ಆದ ಶರೀರದಿಂದ ಪ್ರಕಾಶಿಸುವವನೂ ಶುಕ್ಲಲೇಶ್ಯೆಯುಳ್ಳವನೂ ಹನ್ನೊಂದು ತಿಂಗಳಿಗೊಮ್ಮೆ ಉಸಿರಾಡಿಸುವವನೂ ಇಪ್ಪತ್ತೆರಡು ಸಾವಿರವರುಷಗಳಿಗೊಮ್ಮೆ ಮನಸ್ಸಿನಿಂದ ದೇವತೆಗಳ ಸಂಬಂಧವಾದ ಆಹಾರವನ್ನು ತೆಗೆದುಕೊಳ್ಳುವವನೂ ತಮಃಪ್ರಭೆಯೆಂಬ ಆರನೆಯ ನರಕದವರೆಗೆ ವ್ಯಾಪಕವಾದ ದೇಶಾವಧಿಜ್ಞಾನವೆಂಬ ನೇತ್ರವುಳ್ಳವನೂ ಆ ಕ್ಷೇತ್ರದವರೆಗೆ ವ್ಯಾಪಕವಾದ ಉತ್ತಮ ತೇಜಸ್ಸು ಬಲದೇಹಕಾಂತಿಗಳುಳ್ಳವನೂ ಆದ ಅಚ್ಯುತೇಂದ್ರನಾಗಿ ಜನಿಸಿದನು.

**ದಿವ್ಯಭೋಗಾಂಶ್ಚಿರಂ ಭುಕ್ತ್ವಾ ಸ್ವಾಯುರಂತೇ ವಿಶುದ್ಧದೃಕ್ ।**
**ಪ್ರಾಗ್ಭಾಗೇ ಧಾತಕೀಖಂಡೇ ಸೀತಾದಕ್ಷಿಣಕೂಲಗೇ ॥ ೧೨೯ ॥**

**ವಿಷಯೇ ಮಂಗಲಾವತ್ಯಾಂ ರತ್ನಸಂಚಯಪೂಃಪತಿಃ ।**
**ದೇವ್ಯಾಃ ಕನಕಮಾಲಾಯಾ ವಲ್ಲಭಃ ಕನಕಪ್ರಭಃ ॥ ೧೩೦ ॥**

**ಪದ್ಮನಾಭಃ ಸುತೋ ಜಾತಸ್ತಯೋಃ ಸುಸ್ವಪ್ನಪೂರ್ವಕಮ್ ।**
**ಬಾಲಾನುಕೂಲಪರ್ಯಾಪ್ತಿವಿಶೇಷೈಸ್ಸೋಽಭ್ಯವರ್ಧತ ॥ ೧೩೧ ॥**

ಬಹುಕಾಲದವರೆಗೆ ದಿವ್ಯಭೋಗಗಳನ್ನನುಭವಿಸಿ ತನ್ನ ಆಯುಷ್ಯದ ಕೊನೆಯಲ್ಲಿ ವಿಶುದ್ಧವಾದ ಸಮ್ಯಗ್ದರ್ಶನವುಳ್ಳವನಾಗಿ ಧಾತಕೀಖಂಡದ್ವೀಪದ ಪೂರ್ವದಿಕ್ಕಿನ ಸೀತಾನದಿಯ ದಕ್ಷಿಣತೀರದಲ್ಲಿರುವ ಮಂಗಲಾವತೀದೇಶದಲ್ಲಿ ರತ್ನಸಂಚಯನಗರದ ದೊರೆಯಾದ ಕನಕಪ್ರಭನಿಗೂ ಆತನ ಪತ್ನಿಯಾದ ಕನಕಮಾಲೆಗೂ ಶುಭಸ್ವಪ್ನಪೂರ್ವಕವಾಗಿ ಪದ್ಮನಾಭನೆಂಬ ಪುತ್ರನಾಗಿ ಜನಿಸಿ ಬಾಲಕರಿಗೆ ಅನುಕೂಲವಾದ ವಿಶೇಷೋಪಚಾರಗಳಿಂದ ಅವನು ಬೆಳೆದನು.

**ಉಪಯೋಗಕ್ಷಮಾಶೇಷಪರ್ಯಾಪ್ತಿಪರನಿಷ್ಠಿತಮ್ ।**
**ಆರೋಪ್ಯ ತಂ ವ್ರತಂ ರಾಜಾ ವಿದ್ಯಾಗೃಹಮವೀವಿಶತ್ ॥ ೧೩೨ ॥**

ಉಪಯೋಗ ಕ್ಷಮೆ ಮೊದಲಾದ ಸಕಲಗುಣಪರಿಪೂರ್ಣನಾದ ಆ ಪುತ್ರನಿಗೆ ವ್ರತವನ್ನು ಕೊಟ್ಟು ರಾಜನು ಅವನನ್ನು ವಿದ್ಯಾಗೃಹಕ್ಕೆ ಪ್ರವೇಶ ಮಾಡಿಸಿದನು.

**ಅಭಿಜಾತಪರೀವಾರೋ ದಾಸಹಸ್ತಿಪಕಾದಿಕಾನ್ ।**
**ದೂರೀಕೃತ್ಯ ಸ ನಿಶ್ಶೇಷಾ ವಿದ್ಯಾಃ ಶಿಕ್ಷಿತುಮುದ್ಯಯೌ ॥ ೧೩೩ ॥**

ಆ ಪದ್ಮನಾಭನು ಭೃತ್ಯರನ್ನೂ ಆನೆಮಾವಟಿಗರನ್ನೂ ದೂರಮಾಡಿ ಉತ್ತಮ ಪರಿವಾರವುಳ್ಳವನಾಗಿ ಸಕಲವಿದ್ಯೆಗಳನ್ನು ಕಲಿಯುವುದಕ್ಕೆ ಉದ್ಯುಕ್ತನಾದನು.

**ತಥೇಂದ್ರಿಯತತಿಸ್ತೇನ ಪರಾಜೀಯತ ಸಾ ಯಥಾ ।**
**ನಿಜಾರ್ಥೈಃ ಸರ್ವಭಾವೇನ ತನೋತಿ ಪ್ರೀತಿಮಾತ್ಮನಃ ॥ ೧೩೪ ॥**

ಇಂದ್ರಿಯಗಳು ತಮ್ಮ ವಿಷಯಗಳೊಡನೆ ಸಂಪೂರ್ಣವಾಗಿ ತನ್ನನ್ನು ಪ್ರೀತಿಸುವಂತೆ ಮಾಡಿ ಅವುಗಳನ್ನು ಜಯಿಸಿದನು. ಇಂದ್ರಿಯಗಳು ತನಗೆ ಅಧೀನವಾಗಿದ್ದುವಲ್ಲದೆ ತಾನು ಅವುಗಳಿಗೆ ಅಧೀನನಾಗಿರಲಿಲ್ಲವೆಂದು ಭಾವವು.

**ಸ ಧೀಮಾನ್ವೃದ್ಧಸಂಯೋಗಂ ವ್ಯಧಾದ್ವಿನಯವೃದ್ಧಯೇ ।**
**ವಿನಯಃ ಶಾಸ್ತ್ರನಿರ್ಣೀತಿಃ ಕೃತ್ರಿಮಃ ಸಹಜೋಪರಃ ॥ ೧೩೫ ॥**

ಪ್ರಾಜ್ಞನಾದ ಆ ಪದ್ಮನಾಭನು ವಿನಯವೃದ್ಧಿಗೋಸ್ಕರ ವೃದ್ಧರ ಸಹವಾಸವನ್ನು ಮಾಡಿದನು. ಶಾಸ್ತ್ರಾಭ್ಯಾಸವನ್ನು ಮಾಡಿ ಅದರ ನಿರ್ಣಯವುಳ್ಳ ವಿನಯವು ಕೃತ್ರಿಮವಾದುದು. ವೃದ್ಧರ ಸಹವಾಸದಿಂದುಂಟಾಗುವ ಸ್ವಾಭಾವಿಕವಾದ ವಿನಯವು ಅಕೃತ್ರಿಮವಾದುದು.

**ತಂ ಸಂಪೂರ್ಣಕಲಂ ಪ್ರಾಪ್ಯ ಕಾಂತೌ ಸಹಜಕೃತ್ರಿಮೌ ।**
**ರಾಜಾನಂ ಗುರುಶುಕ್ರೌ ವಾ ರೇಜತುರ್ವಿನಯೌ ಭೃಶಮ್ ॥ ೧೩೬ ॥**

ಸಂಪೂರ್ಣವಾದ ಕಲೆಗಳುಳ್ಳ ಚಂದ್ರನನ್ನು ಹೊಂದಿ ಬೃಹಸ್ಪತಿಯೂ ಶುಕ್ರನೂ ಶೋಭಿಸುವಂತೆ, ಸಂಪೂರ್ಣವಾದ ವಿದ್ಯೆಗಳುಳ್ಳ ಆ ಪದ್ಮನಾಭನನ್ನು ಹೊಂದಿ ಮನೋಹರಗಳಾದ ಆ ಸ್ವಾಭಾವಿಕವಿನಯವೂ ಕೃತ್ರಿಮವಿನಯವೂ ಅಧಿಕವಾಗಿ ಶೋಭಿಸಿದುವು.

**ಸ ಧೀಮಾನ್ಷೋಡಶೇ ವರ್ಷೇ ವಿರೇಜೇ ಪ್ರಾಪ್ಯ ಯೌವನಮ್ ।**
**ವನಂ ಸುಷ್ಠು ವಿನೀತಾತ್ಮಾ ಸಂಯತೋ ವಾ ಜಿತೇಂದ್ರಿಯಃ ॥ ೧೩೭ ॥**

ವಿನಯಪರನೂ ಜಿತೇಂದ್ರಿಯನೂ ಆದ ಯತಿಯು ಒಳ್ಳೆಯ ವನವನ್ನು ಪ್ರವೇಶಿಸಿ ಪ್ರಕಾಶಿಸುವಂತೆ ಪ್ರಾಜ್ಞನಾದ ಆ ಪದ್ಮನಾಭನು ಹದಿನಾರನೆಯ ವರ್ಷದಲ್ಲಿ ಯೌವನವನ್ನು ಹೊಂದಿ ಪ್ರಕಾಶಿಸಿದನು.

**ರೂಪಾನ್ವಯವಯಃಶಿಕ್ಷಾಸಂಪನ್ನಂ ತಮವಿಕ್ರಿಯಮ್ ।**
**ಭದ್ರಂ ಗಜಂ ವಿನೇತಾ ವಾ ಸಮಾಲೋಕ್ಯ ಮುದಾ ಪಿತಾ ॥ ೧೩೮ ॥**

**ವಿದ್ಯಾಪೂಜಾಂ ವಿಧಾಯಾಸ್ಯ ಜಿನಪೂಜಾಪುರಸ್ಸರಮ್ ।**
**ಸಂಸ್ಕೃತಸ್ಯೇವ ರತ್ನಸ್ಯ ವ್ಯಧಾದ್ಬುದ್ಧಿಂ ಕ್ರಿಯಾಂತರೇ ॥ ೧೩೯ ॥**

ಮಾವಟಿಗನು ರೂಪ, ವಂಶ, ವಯಸ್ಸು, ಶಿಕ್ಷಣಗಳುಳ್ಳುದೂ ವಿಕಾರವಿಲ್ಲದುದೂ ಆದ ಭದ್ರಗಜವನ್ನು ನೋಡಿ ಸಂತೋಷಪಡುವಂತೆ ತಂದೆಯು ರೂಪ, ವಂಶ, ವಯಸ್ಸು, ಶಿಕ್ಷಣಗಳುಳ್ಳವನೂ ವಿಕಾರವಿಲ್ಲದವನೂ ಭದ್ರಪರಿಣಾಮಿಯೂ ಆದ ಆ ಪದ್ಮನಾಭನನ್ನು ನೋಡಿ ಸಂತೋಷದಿಂದ ಮೊದಲು ಜಿನಪೂಜೆಯನ್ನೂ ಬಳಿಕ ವಿದ್ಯಾಪೂಜೆಯನ್ನೂ ಮಾಡಿ, ಸಂಸ್ಕಾರವನ್ನು ಹೊಂದಿದ ರತ್ನದಂತೆ, ವಿದ್ಯಾಸಂಸ್ಕಾರವನ್ನು ಹೊಂದಿದ ಈ ಪದ್ಮನಾಭನ ಬುದ್ಧಿಯನ್ನು ಬೇರೆ ಕಾರ್ಯದಲ್ಲಿ ಸಂಯೋಜಿಸಿದನು.

**ಕಲಾಭಿರಿವ ಬಾಲೇಂದುಂ ಶುದ್ಧಪಕ್ಷಸಮಾಶ್ರಯಾತ್ ।**
**ರಮ್ಯಂ ರಾಜಾ ತಮೂರ್ಜೋ ವಾ ಪ್ರಮದಾಭಿರಪೂರಯತ್ ॥**

ಶುಕ್ಲಪಕ್ಷದ ಆಶ್ರಯದಿಂದ ರಮಣೀಯನಾದ ಬಾಲಚಂದ್ರಮನನ್ನು ಕಲೆಗಳಿಂದ ಪೂರ್ಣನನ್ನಾಗಿ ಮಾಡುವಂತೆ ತೇಜಸ್ವಿಯಾದ ಕನಕಪ್ರಭರಾಜನು ಶುದ್ಧವಾದ ಪಕ್ಷದವರ ಸಹವಾಸದಿಂದ ರಮಣೀಯನಾದ ಆ ಪದ್ಮನಾಭನನ್ನು ಕಾಂತೆಯರಿಂದ ಪೂರ್ಣಗೊಳಿಸಿದನು. ಪದ್ಮನಾಭನಿಗೆ ಕನ್ಯೆಯರನ್ನು ತಂದು ವಿವಾಹಮಾಡಿದನೆಂದು ಭಾವವು.

**ತಸ್ಯ ಸೋಮಪ್ರಭಾದೀನಾಂ ದೇವೀನಾಮಭವನ್ಸುತಾಃ ।**
**ಸುತಾಸ್ಸುವರ್ಣನಾಭಾದ್ಯಾ ಭಾಸ್ಕರಸ್ಯೇವ ಭಾನವಃ ॥ ೧೪೧ ॥**

ಸೂರ್ಯನಿಗೆ ಕಿರಣಗಳುಂಟಾಗುವಂತೆ ಆ ಪದ್ಮನಾಭನಿಗೆ ಸೋಮಪ್ರಭಾದೇವಿ ಮೊದಲಾದ ಪತ್ನಿಯರಲ್ಲಿ ಸ್ತುತ್ಯರಾದ ಸುವರ್ಣನಾಭನೇ ಮೊದಲಾದ ಪುತ್ರರು ಜನಿಸಿದರು.

**ಪುತ್ರಪೌತ್ರಾದಿಭಿಃ ಶ್ರೀಮಾನ್ಪರೀತಃ ಕನಕಪ್ರಭಃ ।**
**ಸ್ವರಾಜ್ಯಂ ಪಾಲಯನ್ನೇವಂ ಸುಖೇನಾನ್ಯೇದ್ಯುರುದ್ಧಧೀಃ ॥ ೧೪೨ ॥**

**ಮನೋಹರವನೇ ಧರ್ಮಂ ಶ್ರೀಧರಾಜ್ಜಿನಪುಂಗವಾತ್ ।**
**ಶ್ರುತ್ವಾ ಸಂಯೋಜ್ಯ ಸಾಮ್ರಾಜ್ಯಂ ಸೂನೌ ಸಂಯಮ್ಯ ನಿರ್ವೃತಃ ॥**

ಪುತ್ರ ಪೌತ್ರಾದಿಗಳಿಂದ ಪರಿವೃತನೂ ಶ್ರೀಮಂತನೂ ಆದ ಕನಕಪ್ರಭ ಮಹಾರಾಜನು ಈ ರೀತಿಯಾಗಿ ಸುಖದಿಂದ ತನ್ನ ರಾಜ್ಯವನ್ನು ಪಾಲಿಸುತ್ತಿದ್ದನು. ಮತ್ತೊಂದು ದಿವಸ ಪವಿತ್ರವಾದ ಬುದ್ಧಿಯುಳ್ಳವನಾಗಿ ಮನೋಹರೋದ್ಯಾನದಲ್ಲಿ ಶ್ರೀಧರಜಿನೇಶ್ವರರಿಂದ ಧರ್ಮಶ್ರವಣವನ್ನು ಮಾಡಿ ಸಂಸಾರ ಶರೀರ ಭೋಗಗಳಲ್ಲಿ ವಿರಕ್ತನಾಗಿ ಪುತ್ರನಲ್ಲಿ ಸಾಮ್ರಾಜ್ಯಭಾರವನ್ನಿರಿಸಿ ದೀಕ್ಷೆಯನ್ನು ತೆಗೆದುಕೊಂಡು ತಪಸ್ಸನ್ನು ಮಾಡಿ ಮುಕ್ತನಾದನು.

**ಪದ್ಮನಾಭಶ್ಚ ತತ್ರೈವ ಗೃಹೀತೋಪಾಸಕವ್ರತಃ ।**
**ತಂತ್ರಾವಾಪಗತವ್ಯಾಪ್ತಿಮಮಾತ್ಯೈಃ ಸಂಪ್ರವರ್ತಯನ್ ॥ ೧೪೪ ॥**

**ವಿಸ್ರಂಭಹಾಸಸಂಸ್ಪರ್ಶವಿನೋದೈರತಿಪೇಶಲೈಃ ।**
**ಕಾಮಿನೀನಾಂ ಕಲಾಲಾಪೈಃ ಸವಿಲಾಸೈರ್ವಿಲೋಕನೈಃ ॥ ೧೪೫ ॥**

**ಅನಂಗಪೂರ್ವರಂಗಸ್ಯ ಪುಷ್ಪಾಂಜಲಿನಿಭೈಃ ಶುಭೈಃ ।**
**ಸಮಪ್ರೇಮಸಮುತ್ಪನ್ನೈಃ ಪ್ರಸಾದಂ ಪ್ರಾಪ ಚೇತಸಃ ॥ ೧೪೬ ॥**

ಪದ್ಮನಾಭನೂ ಜಿನೇಶ್ವರರ ಬಳಿಯಲ್ಲಿಯೇ ಶ್ರಾವಕವ್ರತವನ್ನು ಸ್ವೀಕರಿಸಿ ಮಂತ್ರಿಗಳಿಂದ ರಾಜ್ಯತಂತ್ರವನ್ನೂ ಆಯವ್ಯಯವಿಷಯಗಳನ್ನೂ ನಡೆಯಿಸುವವನಾಗಿ ದಂಪತಿಗಳ ಸಮಾನಪ್ರೇಮದಿಂದುಂಟಾದುವೂ ಮನ್ಮಥನ ಪೂರ್ವರಂಗದ ಪುಷ್ಪಾಂಜಲಿಗಳಂತಿರುವುವೂ ಮಂಗಲಕರಗಳೂ ಅತ್ಯಂತಮನೋಹರಗಳೂ ಆದ ವಿಶ್ವಾಸ ಹಾಸ್ಯ ಸ್ಪರ್ಶವಿನೋದಗಳಿಂದಲೂ ಕಾಮಿನಿಯರ ಮಧುರಾಲಾಪಗಳಿಂದಲೂ ವಿಲಾಸಯುಕ್ತವಾದ ನೋಟಗಳಿಂದಲೂ ಮನಸ್ಸಂತೋಷವನ್ನು ಹೊಂದಿದನು.

**ಕಾಮಕಲ್ಪದ್ರುಮೋದ್ಭೂತಂ ಪರಿಪಕ್ವಂ ಫಲೋತ್ತಮಮ್ ।**
**ರಾಮಾಪ್ರೇಮೋಪನೀತಂ ಸತ್ಸೀಮಾಸೀತ್ತಸ್ಯ ನಿರ್ವೃತೇಃ ॥ ೧೪೭ ॥**

ಕಾಮವೆಂಬ ಕಲ್ಪವೃಕ್ಷದಿಂದುಂಟಾದುದೂ ಪರಿಪಕ್ವವೂ ಆದ ಉತ್ತಮ ಫಲ (ಸುಖ)ವು ಸ್ತ್ರೀಪ್ರೇಮದಿಂದುಂಟಾಗಿ ಅದು ಆ ಪದ್ಮನಾಭನ ವಿರಕ್ತಿಯ ಎಲ್ಲೆಯಾಯಿತು. ವಿಷಯಸುಖಾನುಭವವು ವಿರಕ್ತಿಗೆ ಕಾರಣವಾಯಿತೆಂದು ಭಾವವು.

**ಪ್ರಾಕ್ತನೋಪಾತ್ತಪುಣ್ಯಸ್ಯ ಫಲಮೇತದಿತಿ ಸ್ಫುಟಮ್ ।**
**ಪ್ರಬೋಧಯನ್ನಸೌ ಮೂಢಾನೂಢದೀಪ್ತಿರಭೂತ್ಸುಖೀ ॥ ೧೪೮ ॥**

ಪೂರ್ವೋಪಾರ್ಜಿತವಾದ ಪುಣ್ಯದ ಫಲವಿದೆಂದು ಸ್ಫುಟವಾಗಿ ಬೋಧಿಸುವವನೂ ಕಾಂತಿಯುಕ್ತನೂ ಆದ ಈ ಪದ್ಮನಾಭನು ಸುಖಿಯಾಗಿದ್ದನು.

**ಸೋಽಪಿ ಶ್ರೀಧರಸಾನ್ನಿಧ್ಯೇ ಬುಧ್ವಾ ಧರ್ಮಂ ಬುಧೋತ್ತಮಃ ।**
**ಸಂಸಾರಮೋಕ್ಷಯಾಥಾತ್ಮ್ಯಮಾತ್ಮನ್ಯೇವಮಚಿಂತಯತ್ ॥ ೧೪೯ ॥**

ಶ್ರೇಷ್ಠವಿದ್ವಾಂಸನಾದ ಆ ಪದ್ಮನಾಭನೂ ಶ್ರೀಧರಜಿನೇಶ್ವರರ ಸಾನ್ನಿಧ್ಯದಲ್ಲಿ ಧರ್ಮವನ್ನು ತಿಳಿದು ಸಂಸಾರದ ಮತ್ತು ಮೋಕ್ಷದ ಯಥಾರ್ಥಸ್ವರೂಪವನ್ನು ತನ್ನಲ್ಲಿ ಮುಂದೆಹೇಳುವ ರೀತಿಯಾಗಿ ಚಿಂತಿಸಿದನು.

**ಯಾವದೌದಯಿಕೋ ಭಾವಸ್ತಾವತ್ಸಂಸೃತಿರಾತ್ಮನಃ ।**
**ಸ ಚ ಕರ್ಮಾಣಿ ತತ್ಕರ್ಮ ತಾವದ್ಯಾವತ್ಸಕಾರಣಮ್ ॥ ೧೫೦ ॥**

ಆತ್ಮನಿಗೆ ಕರ್ಮಗಳ ಉದಯದಲ್ಲುಂಟಾಗುವ ಔದಾಯಿಕಭಾವವಿರುವವರೆಗೆ ಸಂಸಾರವಿರುವುದು. ಆ ಕರ್ಮಗಳು ಆತ್ಮನಲ್ಲಿರುವವರೆಗೆ ಔದಾಯಿಕಭಾವವಿರುವುದು. ಕರ್ಮದ ಕಾರಣವಿರುವವರೆಗೆ ಕರ್ಮವಿರುವುದು.

**ಕಾರಣಾನ್ಯಪಿ ಪಂಚೈವ ಮಿಥ್ಯಾತ್ವಾದೀನಿ ಕರ್ಮಣಃ ।**
**ಮಿಥ್ಯಾತ್ವೇ ಸತ್ಯವಶ್ಯಂ ಸ್ಯಾತ್ತತ್ರ ಶೇಷಚತುಷ್ಟಯಮ್ ॥ ೧೫೧ ॥**

ಆತ್ಮನಲ್ಲಿ ಕರ್ಮಗಳು ಬಂದು ಸೇರುವುದಕ್ಕೆ ಕಾರಣಗಳೂ ಮಿಥ್ಯಾತ್ವ, ಅವ್ರತ, ಪ್ರಮಾದ, ಕಷಾಯ, ಯೋಗಗಳು ಐದೇ ಇರುತ್ತವೆ. ಅವುಗಳಲ್ಲಿ ಮೊದಲ ನೆಯದಾದ ಮಿಥ್ಯಾತ್ವವಿದ್ದರೆ ಉಳಿದ ನಾಲ್ಕು ಇದ್ದೇ ಇರುತ್ತವೆ.

**ಅಸಂಯಮೋ ತ್ರಯಂ ದ್ವೇ ಸ್ತಃ ಪ್ರಮಾದೇ ಯೋಗಸಂಜ್ಞಕಮ್ ।**
**ಕಷಾಯೇ ನಿಷ್ಕಷಾಯಸ್ಯ ಯೋಗ ಏವ ಹಿ ಬಂಧಕೃತ್ ॥ ೧೫೨ ॥**

ಅಸಂಯಮ–ಅವ್ರತದಲ್ಲಿ ಎಂದರೆ ಅವಿರತಸಮ್ಯಗ್ದೃಷ್ಟಿ ಗುಣಸ್ಥಾನದಲ್ಲಿ ಅವ್ರತವೂ ಮುಂದಿನ ಮೂರು–ಪ್ರಮಾದ ಕಷಾಯ ಯೋಗಗಳೂ ಇರುತ್ತವೆ. ಪ್ರಮಾದದಲ್ಲಿ ಎಂದರೆ ಪ್ರಮತ್ತಗುಣಸ್ಥಾನದಲ್ಲಿ ಪ್ರಮಾದವೂ ಮುಂದಿನ ಎರಡು ಕಷಾಯ ಯೋಗಗಳೂ ಇರುತ್ತವೆ. ಕಷಾಯದಲ್ಲಿ ಎಂದರೆ ಅಪ್ರಮತ್ತ, ಅಪೂರ್ವಕರಣ, ಅನಿವೃತ್ತಿಕರಣ, ಸೂಕ್ಷ್ಮಸಾಂಪರಾಯಗಳೆಂಬ ನಾಲ್ಕು ಗುಣಸ್ಥಾನಗಳಲ್ಲಿ ಕಷಾಯವೂ ಮುಂದಿನ ಯೋಗವೂ ಇರುತ್ತವೆ. ಯೋಗದಲ್ಲಿ ಎಂದರೆ ಉಪಶಾಂತಕಷಾಯ, ಕ್ಷೀಣಕಷಾಯಗಳೆಂಬ ಹನ್ನೊಂದನೆಯ ಹನ್ನೆರಡನೆಯ ಗುಣಸ್ಥಾನಗಳಲ್ಲಿ ಯೋಗವೊಂದೇ ಕರ್ಮಬಂಧಕ್ಕೆ ಕಾರಣವಾಗಿರುವುದು.

**ಸ್ವಸ್ಮಿನ್ಸ್ವಸ್ಮಿನ್ಗುಣಸ್ಥಾನೇ ಮಿಥ್ಯಾತ್ವಾದೇರ್ವಿನಾಶನಾತ್ ।**
**ಸ್ವಹೇತೋಸ್ತತ್ಕೃತೋ ಬಂಧಸ್ತತ್ರ ತತ್ರ ವಿನಶ್ಯತಿ ॥ ೧೫೩ ॥**

ಮಿಥ್ಯಾತ್ವ ಮೊದಲಾದುವುಗಳ ಕಾರಣಗಳು ಆಯಾ ಗುಣಸ್ಥಾನದಲ್ಲಿ ನಾಶವಾಗುವುದರಿಂದ ಆ ಕಾರಣಗಳಿಂದುಟಾಗುವ ಕರ್ಮಬಂಧವು ಅಲ್ಲಲ್ಲಿ ನಾಶವಾಗುವುದು.

**ಸದಾದಿತ್ರಿತಯಂ ನಂಕ್ಷ್ಯತ್ಯಶ್ಚಾತ್ತಚ್ಚ ಸ್ವಕಾಲತಃ ।**
**ಆಪರ್ಯಂತಗುಣಸ್ಥಾನಾತ್ತತ್ಕ್ಷಯಾತ್ ಸಂಸೃತೇಃ ಕ್ಷಯಃ ॥ ೧೫೪ ॥**

ಮೊದಲು ಕರ್ಮದ ಇರುವಿಕೆಯೂ ಬಂಧವೂ ಉದಯವೂ ನಷ್ಟವಾಗುತ್ತವೆ. ಬಳಿಕ ಹದಿನಾಲ್ಕನೆಯ ಗುಣಸ್ಥಾನದವರೆಗೆ ಅಲ್ಲಲ್ಲಿಯ ಕಾಲಕ್ಕನುಸಾರವಾಗಿ ಕರ್ಮವು ನಾಶವಾಗುವುದು. ಅದರಿಂದ ಸಂಸಾರವು ನಷ್ಟವಾಗುವುದು.

**ಸಂಸಾರೇ ಪ್ರಲಯಂ ಯಾತೇ ಪಾಪೇ ಜನ್ಮಾದಿಲಕ್ಷಣೇ ।**
**ಕ್ಷಾಯಿಕೈರಾತ್ಮನೋ ಭಾವೈರಾತ್ಮನ್ಯಾತ್ಮಾ ಸಮೇಧತೇ ॥ ೧೫೫ ॥**

ಪಾಪರೂಪವಾದ ಮತ್ತು ಜನ್ಮಜರಾಮರಣಗಳು ಲಕ್ಷಣವಾಗಿರುವ ಸಂಸಾರವು ನಾಶವಾದಮೇಲೆ ಆತ್ಮನು ತನ್ನ ಕ್ಷಾಯಿಕಭಾವಗಳಿಂದ ತನ್ನಲ್ಲಿ ತಾನು ವೃದ್ಧಿಯನ್ನು ಹೊಂದುತ್ತಾನೆ.

**ಇತಿ ತತ್ತ್ವಂ ಜಿನೋದ್ದಿಷ್ಟಮಜಾನಾನೋಂಧವಚ್ಚಿರಮ್ ।**
**ಭ್ರಾಂತಃ ಸಂಸಾರಕಾಂತಾರೇ ದುರ್ಗೇ ದುಃಖೀ ದುರಂತಕೇ ॥ ೧೫೬ ॥**

ಈ ಪ್ರಕಾರವಾಗಿ ಜಿನೇಶ್ವರನಿಂದ ಉಪದೇಶಿಸಲ್ಪಟ್ಟಿರುವ ವಸ್ತುಸ್ವರೂಪವನ್ನು ಬಹುಕಾಲದಿಂದ ತಿಳಿಯದೆ ಭ್ರಾಂತನಾಗಿ ದುರಂತವಾದ ದುರ್ಗದಲ್ಲಿ ಕುರುಡನು ದುಃಖಪಡುವಂತೆ ದುರಂತವಾದ ಸಂಸಾರಾರಣ್ಯದಲ್ಲಿ ದುಃಖಿಯಾಗಿದ್ದೇನೆ.

**ಅಸಂಯಮಾದಿಕಂ ಸರ್ವಮುಜ್ಝಿತ್ವಾ ಕರ್ಮಕಾರಣಮ್ ।**
**ಶುದ್ಧಶ್ರದ್ಧಾದಿಮೋಕ್ಷಾಂಗಪಂಚಕಂ ಸಮುಪೈಮ್ಯಹಮ್ ॥ ೧೫೭ ॥**

ನಾನು ಕರ್ಮಕ್ಕೆ ಕಾರಣವಾದ ಅಸಂಯಮ–ಅವ್ರತ ಮೊದಲಾದುದೆಲ್ಲವನ್ನೂ ಬಿಟ್ಟು ಮೋಕ್ಷಕ್ಕೆ ಅಂಗವಾದ ಶುದ್ಧಶ್ರದ್ಧೆ ಮೊದಲಾದ ಐದು ಕಾರಣಗಳನ್ನು ಹೊಂದುವೆನು.''

**ಇತ್ಯತಸ್ತತ್ತ್ವತೋ ಜ್ಞಾತ್ವಾ ಪದ್ಮನಾಭೋ ಹಿತಾಹಿತೇ ।**
**ದತ್ವಾ ಸುವರ್ಣನಾಭಾಯ ಪ್ರಾಭವಂ ರಾಜ್ಯಸಂಪದಃ ॥ ೧೫೮ ॥**

**ರಾಜಭಿರ್ಬಹುಭಿಃ ಸಾರ್ಧಂ ಸಂಯಮಂ ಪ್ರತಿಪದ್ಯ ಸಃ ।**
**ಸಮಾಚರಂಶ್ಚತುರ್ಭೇದೇ ಪ್ರಸಿದ್ಧೇ ಮುಕ್ತಿಸಾಧನೇ ॥ ೧೫೯ ॥**

**ದೃಷ್ಟಕಾರಣಸಂಪ್ರಾಪ್ತಭಾವನೋ ನಾಮ ತೀರ್ಥಕೃತ್ ।**
**ಸ್ವೀಕೃತ್ಯೈಕಾದಶಾಂಗಾಬ್ಧಿಪಾರಗಃ ಪರಮಂ ತಪಃ ॥ ೧೬೦ ॥**

**ಸಿಂಹನಿಷ್ಕ್ರೀಡಿತಾದ್ಯುಗ್ರಂ ವಿಧಾಯಾಬುಧದುಸ್ತರಮ್ ।**
**ಕಾಲಾಂತೇ ಸಮ್ಯಗಾರಾಧ್ಯ ಸಮುತ್ಸೃಷ್ಟಶರೀರಕಃ ॥ ೧೬೧ ॥**

**ವೈಜಯಂತೇ ತ್ರಯಸ್ತ್ರಿಂಶತ್ಸಾಗರಾಯುರಜಾಯತ ।**
**ಪೂರ್ವೋಕ್ತದೇಹಲೇಶ್ಯಾದಿವಿಶೇಷೋ ದಿವ್ಯಸೌಖ್ಯಭಾಕ್ ॥ ೧೬೨ ॥**

ಈ ಪ್ರಕಾರವಾಗಿ ಪದ್ಮನಾಭನು ತತ್ತ್ವರೂಪದಿಂದ ಹಿತಾಹಿತಗಳನ್ನು ತಿಳಿದು ರಾಜ್ಯಸಂಪತ್ತಿಯ ಪ್ರಭುತ್ವವನ್ನು ತನ್ನ ಜ್ಯೇಷ್ಠಪುತ್ರನಾದ ಸುವರ್ಣನಾಭನಿಗೆ ಕೊಟ್ಟು ಅನೇಕ ರಾಜರುಗಳೊಡನೆ ಮುನಿವ್ರತವನ್ನು ಗ್ರಹಣಮಾಡಿ ಪ್ರಸಿದ್ಧವಾದ ಜ್ಞಾನಾರಾಧನಾ, ದರ್ಶನಾರಾಧನಾ ಮೊದಲಾದ ನಾಲ್ಕು ಮುಕ್ತಿಸಾಧನಗಳನ್ನು ಆಚರಿಸುವವನೂ ಏಕಾದಶಾಂಗಶಾಸ್ತ್ರವೆಂಬ ಸಮುದ್ರದ ಪಾರವನ್ನು ಹೊಂದಿದವನೂ ದರ್ಶನವಿಶುದ್ಧಿ ವಿನಯಸಂಪನ್ನತಾ ಮೊದಲಾದ ಷೋಡಶ ಕಾರಣಗಳಿಂದುಂಟಾದ ಭಾವನೆಯುಳ್ಳವನೂ ತೀರ್ಥಕರನಾಮವೆಂಬ ಪುಣ್ಯಕರ್ಮವನ್ನು ಸ್ವೀಕರಿಸಿ ಅಜ್ಞರಿಗೆ ದುಸ್ತರವೂ ಉತ್ಕೃಷ್ಟವೂ ಆದ ಸಿಂಹನಿಷ್ಕ್ರೀಡಿತವೇ ಮೊದಲಾದ ಕಠಿನತಪಸ್ಸನ್ನು ಮಾಡಿ ಅವಸಾನಕಾಲದಲ್ಲಿ ಚೆನ್ನಾಗಿ ಜ್ಞಾನಾದ್ಯಾರಾಧನೆಗಳನ್ನು ಆರಾಧಿಸಿ ದೇಹತ್ಯಾಗವನ್ನು ಮಾಡಿದವನೂ ಆಗಿ ವೈಜಯಂತವೆಂಬ ವಿಮಾನದಲ್ಲಿ ಮೂವತ್ತು ಮೂರು ಸಾಗರವರ್ಷ ಪರಮಾಯುಷ್ಯವುಳ್ಳ ಅಹಮಿಂದ್ರದೇವನಾಗಿ ಜನಿಸಿದನು. ಆ ವಿಮಾನದಲ್ಲಿ ದೇಹರಚನೆ ಲೇಶ್ಯಾ ಮೊದಲಾದ ಪೂರ್ವೋಕ್ತ ವಿಶೇಷಗಳುಳ್ಳವನಾಗಿ ದಿವ್ಯಸುಖವನ್ನನುಭವಿಸಿದನು.

**ತಸ್ಮಿನ್ ಷಣ್ಮಾಸಶೇಷಾಯುಷ್ಯಾಗಮಿಷ್ಯತಿ ಭೂತಲಮ್ ।**
**ದ್ವೀಪೇಸ್ಮಿನ್ಭಾರತೇ ವರ್ಷೇ ನೃಪಶ್ಚಂದ್ರಪುರಾಧಿಪಃ ॥ ೧೬೩ ॥**

**ಇಕ್ಷ್ವಾಕುಃ ಕಾಶ್ಯಪೋ ವಂಶಗೋತ್ರಾಭ್ಯಾಮುದ್ಭೂತೋದಯಃ ।**
**ಮಹಾಸೇನೋ ಮಹಾದೇವೀ ಲಕ್ಷ್ಮಣಾ ಸ್ವಗೃಹಾಂಗಣೇ ॥ ೧೬೪ ॥**

**ವಸುಧಾರಾಂ ಸುರೈಃ ಪ್ರಾಪ್ತಾ ದೇವೀಭಿಃ ಪರಿವಾರಿತಾ ।**
**ದಿವ್ಯವಸ್ತ್ರಸ್ರಗಾಲೇಪಶಯನಾದಿಸುಖೋಚಿತಾ ॥ ೧೬೫ ॥**

**ಚೈತ್ರಸ್ಯ ಕೃಷ್ಣಪಂಚಮ್ಯಾಂ ಸ್ವಪ್ನಾನ್ಯಾಮೇ ಮನೋಹರೇ ।**
**ದೃಷ್ಟ್ವಾ ಷೋಡಶ ಸಂತುಷ್ಯ ಸಮುತ್ಥಾಯೋದಿತೇ ರವೌ ॥ ೧೬೬ ॥**

**ಪುಣ್ಯಪ್ರಸಾಧನೋಪೇತಾ ಸ್ವವಕ್ತ್ರಾರ್ಪಿತಸಮ್ಮದಾ ।**
**ಸ್ವಪ್ನಾನ್ ಸಿಂಹಾಸನಾಸೀನಂ ಸ್ನಾತಂ ಚಾಜೀಗಮತ್ಪತಿಮ್ ॥ ೧೬೭ ॥**

ಅವನು ಭೂತಲಕ್ಕೆ ಬರುವ ಮೊದಲು ಆರು ತಿಂಗಳ ಆಯುಷ್ಯವುಳಿದಿರುವಾಗ ಈ ಜಂಬೂದ್ವೀಪದ ಭಾರತವರ್ಷದಲ್ಲಿ ಚಂದ್ರಪುರದ ದೊರೆಯೂ ಇಕ್ಷ್ವಾಕು ವಂಶಜನೂ ಕಾಶ್ಯಪಗೋತ್ರಜನೂ ಅದ್ಭುತವಾದ ಅಭ್ಯುದಯವುಳ್ಳವನೂ ಆದ ಮಹಾಸೇನಮಹಾರಾಜನು ರಾಜ್ಯವಾಳುತ್ತಿದ್ದನು. ಲಕ್ಷ್ಮಣಾದೇವಿಯು ಅವನ ಪತ್ನಿಯಾಗಿದ್ದಳು. ಆಕೆಯು ತನ್ನ ಮನೆಯ ಅಂಗಣದಲ್ಲಿ ದೇವತೆಗಳಿಂದ ಸುರಿಯಲ್ಪಟ್ಟ ಧನರಾಶಿಯನ್ನು ಹೊಂದಿದವಳೂ ದೇವಸ್ತ್ರೀಯರಿಂದ ಸುತ್ತಲ್ಪಟ್ಟವಳೂ ದಿವ್ಯವಾದ ವಸ್ತ್ರ, ಮಾಲಿಕೆ, ಲೇಪನ, ಶಯನ ಮೊದಲಾದ ಉಚಿತಸುಖಸಾಮಗ್ರಿಗಳುಳ್ಳವಳೂ ಆಗಿ ಚೈತ್ರಮಾಸದ ಕೃಷ್ಣಪಕ್ಷದ ಪಂಚಮೀತಿಥಿಯಲ್ಲಿ ಮನೋಹರಜಾವದಲ್ಲಿ ಹದಿನಾರು ಸ್ವಪ್ನಗಳನ್ನು ಕಂಡು ಸಂತೋಷಪಟ್ಟು ಸೂರ್ಯೋದಯವಾದಾಗ ಎದ್ದು ಪುಣ್ಯಕರವಾದ ಅಲಂಕಾರಯುಕ್ತಳೂ ತನ್ನ ಮುಖಭಾವದಿಂದ ಸಂತೋಷವನ್ನು ಸೂಚಿಸುವವಳೂ ಆಗಿ ಸ್ನಾನವನ್ನು ಮಾಡಿ ಸಿಂಹಾಸನದಲ್ಲಿ ಕುಳಿತಿದ್ದ ಪತಿಗೆ ಸ್ವಪ್ನಗಳನ್ನು ತಿಳಿಸಿದಳು.

**ಸೋಪಿ ಸ್ವಾವಧಿಬೋಧೇನ ತತ್ಫಲಾನಿ ಪೃಥಕ್ಪೃಥಕ್ ।**
**ರಾಜ್ಞ್ಯೈ ನಿವೇದಯಾಮಾಸ ಸಾಪಿ ಸಂತೋಷಸಂಭೃತಾ ॥ ೧೬೮ ॥**

ಆ ಮಹಾಸೇನಮಹಾರಾಜನೂ ತನ್ನ ಅವಧಿಜ್ಞಾನದಿಂದ ಆ ಸ್ವಪ್ನಫಲಗಳನ್ನು ತಿಳಿದು ಬೇರೆಬೇರೆಯಾಗಿ ರಾಣಿಗೆ ತಿಳಿಸಿದನು. ಅದನ್ನು ಕೇಳಿ ಆಕೆಯೂ ಆನಂದ ತುಂದಿಲಳಾದಳು.

**ಕಾಂತಿಂ ಲಜ್ಜಾಂ ಧೃತಿಂ ಕೀರ್ತಿಂ ಬುದ್ಧಿಂ ಸೌಭಾಗ್ಯಸಂಪದವ್ ।**
**ಶ್ರೀಹ್ರೀಧೃತ್ಯಾದಿದೇವೀಷು ವರ್ಧಯಂತೀಷು ಸಂತತವ್ ॥ ೧೬೯ ॥**

**ಪೌಷಾಸಿತೈಕಾದಶ್ಯಾಂ ತಂ ಶಕ್ರಯೋಗೇ ಸುರಾರ್ಚಿತವ್ ।**
**ಅಹಮಿಂದ್ರಮತರ್ಕ್ಯಾಭಂ ತ್ರಿಬೋಧಮುದಪಾದಯತ್ ॥ ೧೭೦ ॥**

ಶ್ರೀ ಹ್ರೀ ಧೃತಿ ಕೀರ್ತಿ ಮೊದಲಾದ ದೇವಿಯರು ಲಕ್ಷ್ಮಣಾದೇವಿಗೆ ಯಾವಾಗಲೂ ಕಾಂತಿಯನ್ನೂ ಲಜ್ಜೆಯನ್ನೂ ಧೈರ್ಯವನ್ನೂ ಕೀರ್ತಿಯನ್ನೂ ಬುದ್ಧಿಯನ್ನೂ ಸೌಭಾಗ್ಯಸಂಪತ್ತಿಯನ್ನೂ ಹೆಚ್ಚಿಸುತ್ತಿರಲು ಪುಷ್ಯಮಾಸದ ಕೃಷ್ಣ ಪಕ್ಷದ ಏಕಾದಶೀತಿಥಿಯಲ್ಲಿ ಶಕ್ರಯೋಗದಲ್ಲಿ ಸುರಪೂಜಿತನೂ ಊಹಿಸಲಾಗದ ಕಾಂತಿಯುಳ್ಳವನೂ ಮತಿಶ್ರುತಾವಧಿಜ್ಞಾನತ್ರಯಧಾರಿಯೂ ಆದ ಆ ಅಹಮಿಂದ್ರ ನನ್ನು ಹಡೆದಳು.

**ತದೈವಾಭ್ಯೇತ್ಯ ನಾಕೀಶೋ ಮಹಾಮಂದರಮಸ್ತಕೇ ।**
**ಸಿಂಹಾಸನಂ ಸಮಾರೋಪ್ಯ ಸುಸ್ನಾಪ್ಯ ಕ್ಷೀರವಾರಿಭಿಃ ॥ ೧೭೧ ॥**

**ವಿಭೂಷ್ಯ ಭೂಷಣೈಃ ಸರ್ವೈರ್ಬಧ್ವಾ ತ್ರೈಲೋಕ್ಯಕಂಠಿಕಾವ್ ।**
**ಮುದಾ ವೀಕ್ಷ್ಯ ಸಹಸ್ರಾಕ್ಷೋ ವ್ಯವಹಾರಪ್ರಸಿದ್ಧಯೇ ॥ ೧೭೨ ॥**

**ಕುಲಂ ಕುವಲಯಸ್ಯಾಸ್ಯ ಸಂಭವಾದ್ವಿಕಸತ್ತರಾವ್ ।**
**ಯತಸ್ತತಶ್ಚಕಾರಾಖ್ಯಾಂ ಸಾರ್ಥಂ ಚಂದ್ರಪ್ರಭಂ ಪ್ರಭೋಃ ॥ ೧೭೩ ॥**

ಆಗಲೇ ದೇವೇಂದ್ರನು ಬಂದು ಆ ಶಿಶುವನ್ನು ಮಹಾಮೇರುಪರ್ವತದ ಮಸ್ತಕಕ್ಕೆ ತೆಗೆದುಕೊಂಡು ಹೋಗಿ ಸಿಂಹಾಸನದಲ್ಲಿರಿಸಿ ಕ್ಷೀರಸಮುದ್ರದ ಜಲದಿಂದ ಚೆನ್ನಾಗಿ ಸ್ನಾನಮಾಡಿಸಿ ಸರ್ವಾಭರಣಗಳಿಂದ ಅಲಂಕರಿಸಿ ತ್ರೈಲೋಕ್ಯಕಂಠಿಕೆಯೆಂಬ ಕಂಠಾಭರಣವನ್ನು ಕಟ್ಟಿ ಸಂತೋಷದಿಂದ ಜಿನಬಾಲಕನನ್ನು ನೋಡಿ ನೋಡಿ ಈ ಬಾಲಕನ ಉತ್ಪತ್ತಿಯಿಂದ ಪೃಥ್ವೀಮಂಡಲದ ಸಮೂಹವು ಕುಮುದಪುಷ್ಪಗಳ ಸಮೂಹವು ಅಧಿಕವಾಗಿ ಪ್ರಕಾಶಿಸಿದುದರಿಂದ ವ್ಯವಹಾರದಲ್ಲಿ ಪ್ರಸಿದ್ಧಿಗೋಸ್ಕರ ಸ್ವಾಮಿಗೆ ಸಾರ್ಥಕವಾದ ''ಚಂದ್ರಪ್ರಭ'' ಎಂಬ ಹೆಸರನ್ನಿಟ್ಟನು.

**ಆನಂದನಾಟಕಂ ಚಾಸ್ಯ ನಿರ್ವರ್ತ್ಯಾಗ್ರೇ ಶಚೀಪತಿಃ ।**
**ಪುನರಾನೀಯ ತತ್ಪಿತ್ರೋರರ್ಪಯಿತ್ವಾ ಜಗತ್ಪತಿವ್ ॥ ೧೭೪ ॥**

**ಭೋಗೋಪಭೋಗಯೋರ್ಯೋಗ್ಯೈರುವಸ್ತುಭಿಃ ಪರಿಚರ್ಯತಾವ್ ।**
**ಭಗವಾನಿತಿ ಸನ್ದಿಶ್ಯ ಯಕ್ಷೇಶಂ ಸ್ವಾಶ್ರಯಂ ಯಯೌ ॥ ೧೭೫ ॥**

ಶಚೀಪತಿಯಾದ ದೇವೇಂದ್ರನು ಚಂದ್ರಪ್ರಭಸ್ವಾಮಿಯ ಮುಂದೆ ಆನಂದ ನರ್ತನವನ್ನು ನೆರವೇರಿಸಿ ಆ ಜಗತ್ಪತಿಯನ್ನು ಹಿಂದಿರುಗಿ ತಂದು ತಂದೆತಾಯಿ ಗಳಿಗರ್ಪಿಸಿ ''ಯೋಗ್ಯವಾದ ಭೋಗೋಪಭೋಗವಸ್ತುಗಳಿಂದ ಭಗವಂತನನ್ನು ಉಪಚರಿಸು'' ಎಂದು ಯಕ್ಷೇಶ್ವರನಿಗೆ ಆಜ್ಞೆಮಾಡಿ ತನ್ನ ಸ್ಥಾನಕ್ಕೆ ಹೊರಟು ಹೋದನು.

**ಪ್ರಬೋಧಮಹತಾಂ ಸ್ತ್ರೀತ್ವಮಪಿ ನಿಂದ್ಯಂ ಜಗತ್ಪತೇಃ ।**
**ಲೋಕೋಪಕಾರಿಣಃ ಪ್ರಾಪ್ತೇಸ್ಸಪುಣ್ಯಾಂ ಲಕ್ಷ್ಮಣಾಮಿಮಾವ್॥ ೧೭೬ ॥**

**ಪಾವನೀಂ ಸ್ತುತ್ಯತಾಂ ನೀತ್ವಾ ದೇವಾಶ್ಚಾಪನ್ ಸಮಾಶ್ರಯವ್ ।**
**ಸ್ತ್ರೀತೇದೃಶೀ ವರಿಷ್ಠೇತಿ ಮೇನಿರೇನಿಮಿಷಾಂಗನಾಃ ॥ ೧೭೭ ॥**

ಪ್ರಾಜ್ಞರಿಗೆ ಸ್ತ್ರೀತ್ವವೂ ನಿಂದ್ಯವಾದುದು. ಆದರೆ ಲೋಕೋಪಕಾರಿಯಾದ ಜಗತ್ಪತಿ–ಚಂದ್ರಪ್ರಭಸ್ವಾಮಿಯನ್ನು ಪಡೆದುದರಿಂದ ಪಾವನಳೂ ಪುಣ್ಯವತಿಯೂ ಆದ ಈ ಲಕ್ಷ್ಮಣಾದೇವಿಯನ್ನು ಸ್ತುತಿಸಿ ದೇವರ್ಕಳೂ ತಂತಮ್ಮ ಸ್ಥಾನಕ್ಕೆ ಹೊರಟುಹೋದರು. ''ಇಂತಹ ಸ್ತ್ರೀತ್ವವು ಶ್ರೇಷ್ಠವಾದುದು'' ಎಂದು ದೇವಸ್ತ್ರೀಯರು ತಿಳಿದರು.

**ಗತೇನಂತರಸಂತಾನೇ ಸಾಗರೋಪಮಕೋಟಿಭಿಃ ।**
**ಶತೈರ್ನವಭಿರೇಷೋಭೂತ್ತದಭ್ಯಂತರಜೀವಿತಃ ॥ ೧೭೮ ॥**

ಸುಪಾರ್ಶ್ವತೀರ್ಥಂಕರರು ಮುಕ್ತರಾಗಿ ಒಂಬೈನೂರು ಕೋಟಿ ಸಾಗರೋಪಮ ಕಾಲವು ಕಳೆಯುವಾಗ ಆ ಚಂದ್ರಪ್ರಭಸ್ವಾಮಿಯು ಕೊನೆಯಲ್ಲಿ– ಆ ಕಾಲದ ಅವಧಿಯಲ್ಲಿ ಅವತರಿಸಿದರು.

**ಶೂನ್ಯಷಟ್ಕೈಕಪೂರ್ವಾಯುಃ ಸಾರ್ಧಚಾಪಶತೋಚ್ಛ್ರಿತಿಃ ।**
**ಅವರ್ಧತೇವ ಶೀತಾಂಶುಃ ಕಲಾಶೇಷೋ ಜಗನ್ನುತಃ ॥ ೧೭೯ ॥**

ಹತ್ತು ಲಕ್ಷಪೂರ್ವಾಯುಷ್ಯವುಳ್ಳವರೂ ನೂರೈವತ್ತು ಧನುಸ್ಸುಗಳಷ್ಟು ಉನ್ನತರೂ ಜಗನ್ನುತರೂ ಆದ ಚಂದ್ರಪ್ರಭಸ್ವಾಮಿಯು, ಕಲೆಗಳ ಶೇಷವುಳ್ಳ–ಶುಕ್ಲ ಪಕ್ಷದ ಬಿದಿಗೆಯ ಚಂದ್ರನಂತೆ ಬೆಳೆದರು.

**ಇತಃ ಸ್ವಾಮಿಂಸ್ತ್ವಮೇಹೀತಿ ಕುತೂಹಲವಿಲಾಸಿನೀ– ।**
**ಪ್ರಸಾರಿತಕರನ್ಯಸ್ತತಲಾಂಭೋಜಸಮಾಶ್ರಯಃ ॥ ೧೮೦ ॥**

**ಅಕಾರಣಸಮುದ್ಭೂತಸ್ಮಿತಕಾಂತಮುಖಾಂಬುಜಃ ।**
**ಕದಾಚಿತ್ಪಸ್ಖಲತ್ಪಾದವಿನ್ಯಾಸೋ ಮಣಿಕುಟ್ಟಿಮೇ ॥ ೧೮೧ ॥**

**ಇತ್ಯಾದಿತದ್ವಯೋಯೋಗ್ಯಮುಗ್ಧಮುಗ್ಧವಿಚೇಷ್ಟಿತೈಃ ।**
**ನೀತ್ವಾ ಬಾಲ್ಯಂ ಸ ಕೌಮಾರಮಾಪ ಪ್ರಾರ್ಥ್ಯಂ ಸುಖಾರ್ಥಿಭಿಃ॥ ೧೮೨ ॥**

''ಸ್ವಾಮಿಯೇ ! ನೀನು ಇತ್ತ ಬಾ'' ಎಂದು ಕುತೂಹಲವುಳ್ಳ ವಿಲಾಸವತೀ ಸ್ತ್ರೀಯರು ನೀಡಿದ ಕೈಗಳಲ್ಲಿ ತನ್ನ ಕಮಲದಂತಿರುವ ಅಂಗೈಯನ್ನಿರಿಸಿ ಆಶ್ರಯ ವುಳ್ಳವನೂ ಅಕಾರಣವಾಗಿ ಉಂಟಾದ ನಗುವಿನಿಂದ ಮನೋಹರವಾದ ಮುಖ ಕಮಲವುಳ್ಳವನೂ ಎಂದಾದರೂ ಮಣಿಮಯವಾದ ನೆಲಗಟ್ಟುಗಳಲ್ಲಿ ಜಾರು ತ್ತಿರುವ ಹೆಜ್ಜೆಗಳನ್ನಿಡುವವನೂ ಆದ ಈ ಜಿನಬಾಲಕನು ಇವೇ ಮೊದಲಾದ ಅವನ ವಯಸ್ಸಿಗೆ ಯೋಗ್ಯವಾದ ಮುದ್ದು ಮುದ್ದಾದ ಚೇಷ್ಟೆಗಳಿಂದ ಬಾಲ್ಯವನ್ನು ಕಳೆದು ಸುಖವನ್ನು ಬಯಸುವವರು ಪ್ರಾರ್ಥಿಸುವುದಕ್ಕೆ ಯೋಗ್ಯವಾದ ಕೌಮಾರವನ್ನು ಹೊಂದಿದನು.

**ಅಮೃತೈಸ್ತನುಮೇತಸ್ಯ ಕೃತಾಂ ಮನ್ಯಾಮಹೇ ವಯವ್ ।**
**ವೇಧಸೇತಿ ಜನಾಲಾಪಾಃ ಪ್ರವರ್ತಂತೇ ಸ್ಮ ಕೌತುಕಾತ್ ॥ ೧೮೩ ॥**

''ಬ್ರಹ್ಮನು ಇವನ ದೇಹವನ್ನು ಅಮೃತಗಳಿಂದ ನಿರ್ಮಿಸಿದನೆಂದು ನಾವು ತಿಳಿಯುತ್ತೇವೆ'' ಎಂದು ಕುತೂಹಲದಿಂದ ಜನರ ಮಾತುಗಳುಂಟಾದುವು.

**ಆಧಿಕ್ಯಾದ್ಭಾವಲೇಶ್ಯೈವ ನಿರ್ಗತೇವೇಕ್ಷಣಪ್ರಿಯಾ ।**
**ದ್ರವ್ಯಲೇಶ್ಯಾ ವ್ಯಭಾಸಿಷ್ಟ ಜಿತ್ವಾ ಪೂರ್ಣೇಂದುಜದ್ಯುತಿವ್ ॥ ೧೮೪ ॥**

ಇವನ ದ್ರವ್ಯಲೇಶ್ಯೆಯು–ಮೈಬಣ್ಣವು ಚಂದ್ರನಲ್ಲುಂಟಾದ ಕಾಂತಿಯನ್ನು ಜಯಿಸಿ, ನೋಡಬೇಕೆಂದು ಪ್ರೀತಿಯುಳ್ಳ ಭಾವಲೇಶ್ಯೆಯೇ ಹೆಚ್ಚಾಗಿ ಹೊರ ಹೊರಟಿರುವಂತೆ, ಶೋಭಿಸಿತು.

**ಯಶಸಾ ಲೇಶ್ಯಯಾ ಚಾಸ್ಯ ಜ್ಯೋತಿಷಾಂ ಛಾದಿತಾ ದ್ಯುತಿಃ ।**
**ಭೋಗಭೂಮಿರ್ನಿವೃತ್ತೇತಿ ಪ್ರತೋಷಮಕರೋಜ್ಜನಃ ॥ ೧೮೫ ॥**

ಈ ಸ್ವಾಮಿಯ ಯಶಸ್ಸಿನಿಂದಲೂ ಶುಕ್ಲಲೇಶ್ಯೆಯಿಂದಲೂ ಜ್ಯೋತಿರ್ದೇವತೆಗಳ ಕಾಂತಿಯು ಮರೆಯಾಯಿತು. ಆಗ ಜನರು ಭೋಗಭೂಮಿಯುಂಟಾಯಿತೆಂದು ಸಂತೋಷವನ್ನು ಹೊಂದಿದರು.

**ಆಬಾಲ್ಯಾದೇಷ ಪೀಯೂಷಭೋಜಿತೇನ ತನುದ್ಯುತಿಃ ।**
**ಅಮಾನುಷೀ ಹತಾಶೇಷದ್ಯುತಿರಿತ್ಯಬ್ರುವೀಜ್ಜನಃ ॥ ೧೮೬ ॥**

(ಬಾಲ್ಯದಿಂದಲೂ ಇವನು ಅಮೃತಾಹಾರದಿಂದ ಬೆಳೆದನು. ಆದುದರಿಂದ ಅಮಾನುಷವಾದ ದೇಹಕಾಂತಿಯು ಇತರ ಕಾಂತಿಗಳನ್ನೆಲ್ಲ ನಾಶಮಾಡಿತು ಎಂದು ಜನರು ಹೇಳುತ್ತಿದ್ದರು).

**ದ್ಯುತಿಸ್ತಸ್ಯ ದ್ಯುತಿರ್ವಾಭಾನ್ಮಿಶ್ರಿತಾ ರವಿಚಂದ್ರಯೋಃ ।**
**ತಸ್ಯಾ ವ್ಯಕಸನ್ನಸ್ಯೇ ಪದ್ಮಾನಿ ಕುಮುದಾನ್ಯಪಿ ॥ ೧೮೭ ॥**

ಚಂದ್ರಪ್ರಭಸ್ವಾಮಿಯ ಕಾಂತಿಯು ಸೂರ್ಯಚಂದ್ರರ ಮಿಶ್ರವಾದ ಕಾಂತಿಯಂತೆ ಪ್ರಕಾಶಿಸಿತು. ಆದುದರಿಂದಲೇ ಕಮಲಗಳೂ ಕುಮುದಪುಷ್ಪಗಳೂ ಅವನ ಬಳಿಯಲ್ಲಿ ಯಾವಾಗಲೂ ಅರಳಿದ್ದುವೆಂದು ತಿಳಿಯುತ್ತೇನೆ.

**ಕುಂದಭಾಸೋ ಗುಣಾಸ್ತಸ್ಯ ಚಂದ್ರಸ್ಯೇವಾಂಶವೋಮಲಾಃ ।**
**ವಿಕಾಸಯಂತಿ ಭವ್ಯಾನಾಂ ಮನಃಕುವಲಯಾವಲಿಮ್ ॥ ೧೮೮ ॥**

ಮಲ್ಲಿಗೆಯ ಹೂವಿನಂತೆ ಕಾಂತಿಯುಳ್ಳವೂ ಚಂದ್ರನ ಕಿರಣಗಳಂತೆ ನಿರ್ಮಲಗಳೂ ಆದ ಆ ಚಂದ್ರಪ್ರಭಸ್ವಾಮಿಯ ಗುಣಗಳು ಭವ್ಯರ ಮನಸ್ಸುಗಳೆಂಬ ಕುಮುದ ಪುಷ್ಪಗಳ ಸಮೂಹವನ್ನು ಅರಳಿಸುತ್ತವೆ.

**ಸಹೋತ್ಪತ್ತೇಃ ಶ್ರಿಯೋನೇನ ಸೋದರ್ಯೇಂದೋರಿತಿ ಶ್ರುತಿಃ ।**
**ಅಜಾನದ್ಭಿರ್ಜನೈರೇತದನ್ಯಥಾ ಪರಿಕಲ್ಪಿತಮ್ ॥ ೧೮೯ ॥**

ಲಕ್ಷ್ಮಿಗೆ ಚಂದ್ರನ ಸಹೋದರಿಯೆಂಬ ಪ್ರಸಿದ್ಧಿಯು ಈ ಚಂದ್ರಪ್ರಭಸ್ವಾಮಿಯೊಡನೆ ಹುಟ್ಟಿರುವುದರಿಂದುಂಟಾಗಿದೆ. ಈ ವಿಷಯವನ್ನು ತಿಳಿಯದಿರುವ ಜನರು ಚಂದ್ರನ ಸಹೋದರಿಯೆಂದು ಬೇರೆ ರೀತಿಯಾಗಿ ಕಲ್ಪಿಸಿದ್ದಾರೆ.

**ಚಂದ್ರಸ್ಯೇವೋದಯೇಸ್ಯಾಪಿ ಸರ್ವಸಂತಾಪಹಾರಿಣಃ ।**
**ಹ್ಲಾದತೇ ಭಾಸತೇ ವರ್ಧತೇ ಸ್ಮ ಲೋಕೋ ನಿರಾಕುಲಃ ॥ ೧೯೦ ॥**

ಸರ್ವಪ್ರಾಣಿಗಳ ಸಂತಾಪವನ್ನು ನಾಶಮಾಡುವ ಚಂದ್ರನಂತೆ ಸರ್ವಪ್ರಾಣಿಗಳ ಸಂತಾಪವನ್ನು ನಾಶಮಾಡುವ ಈ ಚಂದ್ರಪ್ರಭಸ್ವಾಮಿಯ ಆವಿರ್ಭಾವದಲ್ಲಿಯೂ ಲೋಕವು ನಿರಾಕುಲವಾಗಿ ಸಂತೋಷಪಟ್ಟಿತು, ಪ್ರಕಾಶಿಸಿತು ಮತ್ತು ವೃದ್ಧಿ ಹೊಂದಿತು.

**ಏತಸ್ಯೈವ ಗುಣೈರ್ಲಕ್ಷ್ಮೀಂ ಮನ್ಯೇ ಕೀರ್ತಿಂ ಚ ನಿರ್ಮಲಾಮ್ ।**
**ಕಾರಣಾನುಗುಣಂ ಕಾರ್ಯಮಿತಿ ಸತ್ಯಂ ಭವೇದ್ಯದಿ ॥ ೧೯೧ ॥**

ಕಾರಣಕ್ಕನುಸಾರವಾಗಿ ಕಾರ್ಯವೆಂಬುದು ಸತ್ಯವಾಗಿರುವ ಪಕ್ಷದಲ್ಲಿ ಈ ಚಂದ್ರಪ್ರಭಸ್ವಾಮಿಯ ಗುಣಗಳಿಂದಲೇ ಲಕ್ಷ್ಮಿಯೂ ಕೀರ್ತಿಯೂ ನಿರ್ಮಲರಾಗಿರುತ್ತಾರೆಂದು ತಿಳಿಯುತ್ತೇನೆ.

**ಮಹಾವಿಭೂತಿಸಂಪನ್ನಮಾನ್ಯಮಜ್ಜನಮಂಗಲಃ ।**
**ಸಾಲಂಕಾರಕ್ರಿಯೋ ವೇಲಾಂ ಕದಾಚಿದನಯತ್ಕೃತೀ ॥ ೧೯೨ ॥**

**ವೀಣಾವಾದ್ಯೇನ ಹೃದ್ಯೇನ ಗೀತೈರ್ಮುರವವಾದನೈಃ ।**
**ಕದಾಚಿದ್ಧನದಾನೀತಭೂಷಾವಸ್ತ್ರಾವಲೋಕನೈಃ ॥ ೧೯೩ ॥**

**ವಾದಿಪ್ರವಾದ್ಯುಪನ್ಯಸ್ತಪಕ್ಷಾದಿಸುಪರೀಕ್ಷಣೈಃ ।**
**ಕುತೂಹಲೇಕ್ಷಣಾಯಾತಭವ್ಯಲೋಕಾತ್ಮದರ್ಶನೈಃ ॥ ೧೯೪ ॥**

ಒಂದಾನೊಂದು ಕಾಲದಲ್ಲಿ ಮಹಾವೈಭವಯುಕ್ತವೂ ಮಾನ್ಯವೂ ಆದ ಮಂಗಲಸ್ನಾನವುಳ್ಳವನೂ ಅಲಂಕಾರಕ್ರಿಯೆಯುಳ್ಳವನೂ ಪುಣ್ಯಶಾಲಿಯೂ ಆದ ಚಂದ್ರಪ್ರಭಸ್ವಾಮಿಯು ಮನೋಹರವಾದ ವೀಣಾವಾದ್ಯದಿಂದಲೂ ಗೀತಗಳಿಂದಲೂ ಮೃದಂಗವಾದನಗಳಿಂದಲೂ ಕುಬೇರನು ತಂದ ವಸ್ತ್ರಾಭರಣಗಳನ್ನು ನೋಡುವುದರಿಂದಲೂ ವಾದಿಪ್ರತಿವಾದಿಗಳು ಉಪನ್ಯಾಸಮಾಡಿದ ಪಕ್ಷಪ್ರತಿಪಕ್ಷಗಳನ್ನು ಪರೀಕ್ಷಿಸುವುದರಿಂದಲೂ ಕುತೂಹಲದಿಂದ ನೋಡುವುದಕ್ಕೆ ಬಂದ ಭವ್ಯಜನರಿಗೆ ತನ್ನ ದರ್ಶನವನ್ನು ಕೊಡುವುದರಿಂದಲೂ ಸುಖವಾಗಿ ಕಾಲವನ್ನು ಕಳೆಯುತ್ತಿದ್ದನು.

**ಧರ್ಮಾದಯೋಪ್ಯವರ್ಧಂತ ಗುಣಾಃ ಪಾಪಾದ್ಯಯಾತ್ಕ್ಷಯಮ್ ।**
**ಕೌಮಾರೇಸ್ಮಿನ್ನಿತೀಪ್ಯೇವಂ ಕಿಂ ವಾಚ್ಯಂ ಸಂಯಮೇ ಸತಿ ॥ ೧೯೫ ॥**

ಈ ರೀತಿಯಾಗಿ ಆ ಚಂದ್ರಪ್ರಭಸ್ವಾಮಿಯು ಕೌಮಾರಾವಸ್ಥೆಯಲ್ಲಿದ್ದರೂ ಅವನು ಬೆಳೆದಂತೆ ಅವನ ಧರ್ಮಾದಿಗುಣಗಳೂ ಬೆಳೆದುವು. ಪಾಪವೇ ಮೊದಲಾದುವು ನಾಶವನ್ನು ಹೊಂದಿತು. ಇನ್ನು ಇವನಲ್ಲಿ ಸಂಯಮ–ವ್ರತವುಂಟಾದಾಗ ಹೇಳುವುದೇನು ?

**ಇತಿ ದ್ವಿಲಕ್ಷಪಂಚಾಶತ್ಸಹಸ್ರಪ್ರಮಿತೈರ್ಗತೈಃ ।**
**ಪೂರ್ವೈ ರಾಜ್ಯಾಭಿಷೇಕಾಪ್ತ್ಯಾ ಪರಮಾನಂದಸುಂದರಃ ॥ ೧೯೬ ॥**

ಈ ರೀತಿಯಾಗಿ ಎರಡುವರೆ ಲಕ್ಷ ಪೂರ್ವವರ್ಷಗಳು ಕಳೆದನಂತರ ರಾಜ್ಯಾಭಿಷೇಕಪ್ರಾಪ್ತಿಯಿಂದ ಸ್ವಾಮಿಯು ಪರಮಾನಂದವುಳ್ಳವನೂ ಸುಂದರನೂ ಆದನು.

**ನಾವತೋ ಮಂಡಲಂ ರಾಹೋಃ ಸ್ವಹಸ್ತತಲಸಮ್ಮಿತಮ್ ।**
**ಕಿಂ ತೇಜೋರ್ಕಸ್ಯ ತೇಜೋಸ್ಯ ತೇಜಸ್ತ್ರೈಲೋಕ್ಯರಕ್ಷಿಣಃ ॥ ೧೯೭ ॥**

ರಾಹುವಿನ ದೆಸೆಯಿಂದ ತನ್ನ ಅಂಗೈಯಷ್ಟು ಮಂಡಲವನ್ನು ರಕ್ಷಿಸದಿರುವ ಸೂರ್ಯನ ತೇಜಸ್ಸು ಎಷ್ಟರದು ?ತ್ರೈಲೋಕ್ಯರಕ್ಷಕನಾದ ಈ ಸ್ವಾಮಿಯ ತೇಜಸ್ಸೇ ತೇಜಸ್ಸು.

**ಶಕ್ರಾದಯೋಸ್ಯ ಕೈಂಕರ್ಯಂ ಜನ್ಮನಃ ಪ್ರಾಗ್ವಹಂತಿ ಚೇತ್ ।**
**ಐಶ್ವರ್ಯಾದಿಭಿರೇಷೋನ್ಯೈರ್ಬ್ರೂತ ಕೈರುಪಮೀಯತಾಮ್ ॥ ೧೯೮ ॥**

ಈ ಸ್ವಾಮಿಯು ಹುಟ್ಟುವುದಕ್ಕಿಂತ ಮೊದಲು ಇಂದ್ರಾದಿದೇವರುಗಳು ಇವನ ಸೇವೆಯನ್ನು ಮಾಡುತ್ತಾರೆಂದಮೇಲೆ ಐಶ್ವರ್ಯ ಮೊದಲಾದುವುಗಳಿಂದ ಇವನನ್ನು ಯಾರೊಡನೆ ಹೋಲಿಸುವುದು ? ಹೇಳಿ.

**ತಲೇ ಕಪೋಲಯೋಃ ಸ್ತ್ರೀಣಾಂ ಭೇದೇ ವಾ ದಂತಿದಂತಯೋಃ ।**
**ಸ ವಿಲೋಕ್ಯ ಸ್ಮರಸ್ಮೇರಂ ಸ್ವಮುಖಂ ಸುಖಮೀಯಿವಾನ್ ॥ ೧೯೯ ॥**

ಸ್ವಾಮಿಯು ಕಾಮವಿಕಾರದಿಂದ ನಗೆಯುಳ್ಳದಾದ ತನ್ನ ಮುಖವನ್ನು ಸ್ತ್ರೀಯರ ಕೆನ್ನೆಗಳಲ್ಲಿ ಅಥವಾ ಆನೆಯ ದಂತಗಳ ತುಂಡಿನಲ್ಲಿ ನೋಡಿ ಸುಖವನ್ನು ಹೊಂದಿದನು.

**ವಿಲೋಕಿನೀನಾಂ ಕಾಂತಾನಾಮುತ್ಸುಕಾನಾಂ ವಿಲಾಸವತ್ - ।**
**ತ್ಯಾಗೀವ ಸ ಸುಖೀ ಜಾತಃ ಸ್ವವಕ್ತ್ರರಸತರ್ಪಣಾತ್ ॥ ೨೦೦ ॥**

ವಿಲಾಸವುಳ್ಳ ತ್ಯಾಗಿಯು ದಾನವನ್ನು ಮಾಡಿ ಸಂತೋಷಪಟ್ಟು ಸುಖಿಯಾಗಿರುವಂತೆ ಆ ಚಂದ್ರಪ್ರಭಸ್ವಾಮಿಯು ಕುತೂಹಲವುಳ್ಳವರೂ ತನ್ನನ್ನು ನೋಡುತ್ತಿರುವವರೂ ಆದ ಪತ್ನಿಯರಿಗೆ ತನ್ನ ಬಾಯಿಯ ರಸವನ್ನು ಕೊಟ್ಟು ತೃಪ್ತಿಪಡಿಸುವುದರಿಂದ ಸುಖಿಯಾದನು.

**ನಾಂತರಾಯಃ ಪರಸ್ತಸ್ಯ ಕಾಂತಾವಕ್ತ್ರಾಬ್ಜವೀಕ್ಷಣೇ ।**
**ಜಾತಪಂಕೇರುಹಾಶಂಕೈರ್ಭ್ರಮದ್ಭಿರ್ಭ್ರಮರೈರ್ವಿನಾ ॥ ೨೦೧ ॥**

ತಾವರೆಯೆಂಬ ಸಂದೇಹವುಳ್ಳವೂ ಸುತ್ತುತ್ತಿರುವುವೂ ಆದ ದುಂಬಿಗಳ ಹೊರತು ಆ ಸ್ವಾಮಿಗೆ ಮುಖಕಮಲವನ್ನು ನೋಡುವುದಕ್ಕೆ ಮತ್ತಾವ ವಿಘ್ನವೂ ಇರಲಿಲ್ಲ.

**ಮಧುಪೈಶ್ಚಪಲೈರ್ಲೋಲೈರ್ಯುಕ್ತಾಯುಕ್ತಾವಿಚಾರಕೈಃ ।**
**ಮಲಿನೈಃ ಕಿಮಕರ್ತವ್ಯಂ ಪ್ರವೇಶೋ ಯದಿ ಲಭ್ಯತೇ ॥ ೨೦೨ ॥**

ಮಧುಪಾಯಿಗಳೂ ಚಪಲರೂ ಲೋಲರೂ ಯುಕ್ತಾಯುಕ್ತವಿಚಾರವಿಲ್ಲದವರೂ ಮಲಿನರೂ ಆಗಿರುವವರಿಗೆ ಪ್ರವೇಶವು ಸಿಕ್ಕಿದರೆ ಅವರು ಮಾಡದಿರತಕ್ಕ ಕೆಲಸವಾವುದು ?

**ಖಚತುಷ್ಕೇಂದ್ರಿಯತರ್ಕೋಕ್ತೈಃ ಪೂರ್ವೈಸ್ಸಾಮ್ರಾಜ್ಯಸಂಪದಃ ।**
**ಚತುರ್ವಿಂಶತಿಪೂರ್ವಾಂಗೈಸ್ಸಮಿತೌ ಕ್ಷಣವತ್ಸುಖಮ್ ॥ ೨೦೩ ॥**

**ಸತ್ಯಾಂ ಪ್ರಯಾತಿ ಕಾಲೇಸಾವಲಂಕಾರಗೃಹೇನ್ಯದಾ ।**
**ಪ್ರಪಶ್ಯನ್ವದನಾಂಭೋಜಂ ದರ್ಪಣೇ ಗತಮಾತ್ಮನಃ ॥ ೨೦೪ ॥**

**ತತ್ರಾವಧಾರ್ಯ ನಿರ್ವೇದಹೇತುಂ ಕಂಚಿನ್ಮುಖೇ ಸ್ಥಿತಮ್ ।**
**ಪಾತುಕಃ ಪಶ್ಯ ಕಾಯೋಯಮೀತಯಃ ಪ್ರೀತಯೋಪ್ಯಮೂಃ ॥ ೨೦೫ ॥**

**ಕಿಂ ಸುಖಂ ಯದಿ ನ ಸ್ವಸ್ಮಾತ್ಕಾ ಲಕ್ಷ್ಮೀಶ್ಚೇದಿಯಂ ಚಲಾ ।**
**ಕಿಂ ಯೌವನಂ ಯದಿ ಧ್ವಂಸಿ ಕಿಮಾಯುರ್ಯದಿ ಸಾವಧಿ ॥ ೨೦೬ ॥**

**ಸಂಬಂಧೋ ಬಹುಭಿಃ ಕೋಸೌ ಚೇದ್ವಿಯೋಗಪುರಸ್ಸರಃ ।**
**ಸ ಏವಾಹಂ ತ ಏವಾರ್ಥಾಸ್ತಾನ್ಯೇವ ಕರಣಾನ್ಯಪಿ ॥ ೨೦೭ ॥**

**ಪ್ರೀತಿಃ ಸೈವಾನುಭೂತಿಶ್ಚ ತೃಪ್ತಿಶ್ಚಾಸ್ಯಾಂ ಭವಾವಲೌ ।**
**ಪರಿವೃತ್ತಮಿದಂ ಸರ್ವಂ ಪುನಃ ಪುನರನಂತಶಃ ॥ ೨೦೮ ॥**

**ತತ್ರ ಕಿಂ ಜಾತಮಪ್ಯೇಷ್ಯತ್ಕಾಲೇ ವಾ ಕಿಂ ಭವಿಷ್ಯತಿ ।**
**ಇತಿ ಜಾನನ್ನಹಂ ಚಾಸ್ಮಿನ್ಮೋಮುಹೀಮಿ ಮುಹುರ್ಮುಹುಃ ॥ ೨೦೯ ॥**

ಆರು ಲಕ್ಷ ಐವತ್ತು ಸಾವಿರ ಪೂರ್ವಗಳಿಂದಲೂ ಇಪ್ಪತ್ತುನಾಲ್ಕು ಪೂರ್ವಾಂಗಗಳಿಂದಲೂ ಸಾಮ್ರಾಜ್ಯಸಂಪತ್ತಿಯ ಸುಖವು ಕ್ಷಣದಂತೆ ಮಿತವಾಗಿ ಕಾಲವು ಕಳೆಯುತ್ತಿರುವಾಗ ಮತ್ತೊಂದು ಕಾಲದಲ್ಲಿ ಈ ಚಂದ್ರಪ್ರಭಸ್ವಾಮಿಯು ಅಲಂಕಾರವನ್ನು ಮಾಡಿಕೊಳ್ಳುವ ಕೋಣೆಯಲ್ಲಿದ್ದ ಕನ್ನಡಿಯಲ್ಲಿ ಪ್ರತಿಫಲಿಸಿದ್ದ ತನ್ನ ಮುಖಕಮಲವನ್ನು ನೋಡುವವನಾಗಿ ಆ ಮುಖಕಮಲದಲ್ಲಿದ್ದ ಯಾವುದೋ ಪದಾರ್ಥವನ್ನು ವೈರಾಗ್ಯ ಕಾರಣವನ್ನಾಗಿ ನಿರ್ಧರಿಸಿ ''ನೋಡು, ಈ ದೇಹವು ಅಳಿದುಹೋಗುವುದು. ಈ ಪ್ರಿಯವಸ್ತುಗಳು ಈತಿಬಾಧೆಗಳುಳ್ಳವಾಗಿದೆ. ಆತ್ಮನಿಂದುಂಟಾಗದಿರುವ ಸುಖವು ಸುಖವೇ ? ಈ ಸಂಪತ್ತಿಯು ಚಂಚಲವಾಗಿರುವುದಾದರೆ ಅದೆಂತಹ ಸಂಪತ್ತಿ ? ಯೌವನವು ನಾಶವಾಗುವುದಾದರೆ ಅದೆಂತಹ ಯೌವನ ? ಆಯುಷ್ಯಕ್ಕೆ ಮೇರೆಯಿರುವುದಾದರೆ ಅದೆಂತಹ ಆಯುಷ್ಯ ? ಅನೇಕರೊಡನಿರುವ ಸಂಬಂಧವು ವಿಯೋಗಪುರಸ್ಸರವಾಗಿರುವುದಾದರೆ ಇದೆಂತಹ ಸಂಬಂಧ ? ಅವನೇ ನಾನು. ಆ ಪದಾರ್ಥಗಳೇ ಇವು. ಇಂದ್ರಿಯಗಳೂ ಅವೇ. ಅದೇ ಪ್ರೀತಿ. ಅನುಭವವೂ ತೃಪ್ತಿಯೂ ಅವೇ. ಈ ಭವಮಾಲೆಯಲ್ಲಿ ಅನಂತಾವೃತ್ತಿ ಇದೆಲ್ಲವೂ ಮತ್ತೆ ಮತ್ತೆ ಸುತ್ತುತ್ತದೆ. ಆ ಭವಮಾಲೆಯಲ್ಲಿ ಇದುವರೆಗೆ ಏನಾಯಿತು ? ಮುಂದಿನ ಕಾಲದಲ್ಲಾದರೂ ಏನಾಗುವುದು ? ಈ ರೀತಿಯಾಗಿ ತಿಳಿಯುವವನಾಗಿಯೂ ನಾನು ಇದರಲ್ಲಿ ಮತ್ತೆ ಮತ್ತೆ ಮೋಹಪಡುತ್ತೇನೆ.

**ಅನಿತ್ಯೇ ನಿತ್ಯಬುದ್ಧಿರ್ಮೇ ದುಃಖೇ ಸುಖಮಿತಿ ಸ್ಮೃತಿಃ ।**
**ಅಶುಚೌ ಶುಚಿರಿತ್ಯಾಸ್ಥಾ ಪರತ್ರಾತ್ಮಮತಿರ್ವೃಥಾ ॥ ೨೧೦ ॥**

ನನಗೆ ಅನಿತ್ಯವಸ್ತುವಿನಲ್ಲಿ ನಿತ್ಯವೆಂಬ ಬುದ್ಧಿಯಿದೆ. ದುಃಖದಲ್ಲಿ ಸುಖವೆಂಬ ಬುದ್ಧಿಯಿದೆ. ಅಶುಚಿವಸ್ತುವಿನಲ್ಲಿ ಶುಚಿಯೆಂಬ ನಂಬಿಕೆಯಿದೆ. ಪರವಸ್ತುವಿನಲ್ಲಿ ವ್ಯರ್ಥವಾಗಿ ನನ್ನದೆಂಬ ಬುದ್ಧಿಯಿದೆ.

**ಅವಿದ್ಯಯೈವಮಾಕ್ರಾಂತೇ ದುರಂತೇ ಭವವಾರಿಧೌ ।**
**ಚತುರ್ವಿಧೋರುದುಃಖೋಗ್ರದುರ್ಗ್ರಾಹೈರ್ಗ್ರಾಹಿತಶ್ಚಿರಮ್ ॥ ೨೧೧ ॥**

ಅಜ್ಞಾನದಿಂದ ಈ ರೀತಿಯಾಗಿ ಆಕ್ರಮಿಸಲ್ಪಟ್ಟಿರುವ ದುರಂತವಾದ ಭವಸಮುದ್ರದಲ್ಲಿ ಬಹುಕಾಲದಿಂದ ನಾಲ್ಕು ಪ್ರಕಾರವಾದ–ಸಹಜ ಶಾರೀರ ಮಾನಸ ಆಗಂತುಕಮಹಾದುಃಖಗಳೆಂಬ ಭಯಂಕರವಾದ ಮತ್ತು ದುಷ್ಟವಾದ ಮೊಸಳೆಗಳಿಂದ ಹಿಡಿಯಲ್ಪಟ್ಟಿದ್ದೇನೆ.''

**ಇತ್ಯಯೇನಾಯತೇನೈವಮಾಯಾಸಿತ ಇವಾಕುಲಃ ।**
**ಕಾಲಲಬ್ಧಿಂ ಪರಿಪ್ರಾಪ್ಯ ಕ್ಷುಣ್ಣಮಾರ್ಗಜಿಹಾಸಯಾ ॥ ೨೧೨ ॥**

ಈ ರೀತಿಯಾಗಿ ಸ್ವಾಮಿಯು ಕಾಲಲಬ್ಧಿಯನ್ನು ಹೊಂದಿ ಕೊರಕಲು ದಾರಿಯನ್ನು ಬಿಡಬೇಕೆಂಬ ಇಚ್ಛೆಯಿಂದ ಆಕುಲನಾದವನಂತೆ ದೀರ್ಘವಾದ ಪುಣ್ಯದಿಂದ ಆಯಾಸಗೊಳಿಸಲ್ಪಟ್ಟನು. ಸ್ವಾಮಿಗೆ ಭೋಗಸುಖದಲ್ಲಿ ಅರುಚಿಯುಂಟಾಯಿತೆಂದು ಭಾವವು.

**ಗುಣಾಢ್ಯಂ ಭಾವುಕೋ ಭಾವಿಕೇವಲಾವಗಮಾದಿಭಿಃ ।**
**ಸ್ಮರನ್ನಿತ್ಯಾಪಿ ಸನ್ಮತ್ಯಾ ಶಂಫಲ್ಯೇವ ಸಮಾಗಮೇ ॥ ೨೧೩ ॥**

ಮುಂದೆ ಉದ್ಭವಿಸುವ ಕೇವಲಜ್ಞಾನಾದಿಗಳಿಂದ ಗುಣಾಢ್ಯನಾಗುವ ಸ್ವಾಮಿಯು ಕಾಲಲಬ್ಧಿಯ ಸಮಾಗಮದಲ್ಲಿ ಈ ರೀತಿಯಾಗಿ ಸ್ಮರಿಸುವವನಾಗಿ ಸುಖವನ್ನುಂಟುಮಾಡುವಂತಿರುವ ಸದ್ಬುದ್ಧಿಯಿಂದ ಹೊಂದಲ್ಪಟ್ಟನು. ಸ್ವಾಮಿಗೆ ವಿರಕ್ತಬುದ್ಧಿಯುಂಟಾಯಿತೆಂದು ಭಾವವು.

**ದೀಕ್ಷಾಲಕ್ಷ್ಮ್ಯಾಃ ಸ್ವಯಂ ಪ್ರಾಪ್ತಾ ಸದ್ಬುದ್ಧಿಸ್ಸಿದ್ಧಿದಾಯಿನೀ ।**
**ಇತಿ ಪ್ರಬುದ್ಧತತ್ತ್ವಂ ತಂ ಪ್ರಪದ್ಯ ಸುರಸಂಯುತಾಃ ॥ ೨೧೪ ॥**

**ಯಥೋಚಿತಮಭಿಷ್ಟುತ್ಯ ಬ್ರಹ್ಮಲೋಕಂ ಪುನರ್ಯಯುಃ ।**
**ನೃಪೋಪಿ ವರಚಂದ್ರಸ್ಯ ಕೃತ್ವಾ ರಾಜ್ಯಾಭಿಷೇಚನಮ್ ॥ ೨೧೫ ॥**

**ವಿನಿಷ್ಕ್ರಮಣಕಲ್ಯಾಣಪೂಜಾಂ ಪ್ರಾಪ್ಯ ಸುರೇಶ್ವರೈಃ ।**
**ಆರುಹ್ಯ ಸುರಸಂಧಾರ್ಯಾಂ ಶಿಬಿಕಾಂ ವಿಮಲಾಹ್ವಯಾಮ್ ॥ ೨೧೬ ॥**

**ದಿನದ್ವಯೋಪವಾಸಿತ್ವಾ ವನೇ ಸರ್ವತುರ್ಕಾಹ್ವಯೇ ।**
**ಪೌಷೇ ಮಾಸ್ಯನುರಾಧಾಯಾಮೇಕಾದಶ್ಯಾಂ ಮಹೀಭುಜಾಮ್॥೨೧೭ ॥**

**ಸಹಸ್ರೇಣಾಪ್ಯ ನೈರ್ಗ್ರಂಥ್ಯಂ ಮನಃಪರ್ಯಯಮಾಪ್ತವಾನ್ ।**
**ದ್ವಿತೀಯದಿವಸೇ ತಸ್ಮೈ ಪುರೇ ನಲಿನನಾಮನಿ ॥ ೨೧೮ ॥**

**ಸೋಮದತ್ತೋ ನೃಪೋ ಗೌರಃ ಪ್ರದಾಯಾಹಾರಮುತ್ತಮಮ್ ।**
**ಪುಣ್ಯಾನಿ ನವ ಸಂಪ್ರಾಪ್ಯ ವಸುಧಾರಾದಿಪಂಚಕಮ್ ॥ ೨೧೯ ॥**

**ಸುರೈಸ್ತದ್ದಾನಸಂತುಷ್ಟೈರಾಪಿತಂ ಸ್ವೀಚಕಾರ ಸಃ ।**
**ಧೃತ್ವಾ ವ್ರತಾನಿ ಸಂಪಾಲ್ಯ ಸಮಿತೀಸ್ತ್ಯಕ್ತದಂಡಕಃ ॥ ೨೨೦ ॥**

**ನಿಗೃಹೀತಕಷಾಯಾರಿರ್ವರ್ಧಮಾನವಿಶುದ್ಧಿಭಾಕ್ ।**
**ತ್ರಿಗುಪ್ತಃ ಶೀಲಸಂಪನ್ನೋ ಗುಣೀ ಪ್ರೋಕ್ತತಪೋದ್ವಯಃ ॥ ೨೨೧ ॥**

**ವಸ್ತುವೃತ್ತಿವಚೋಭೇದಾನ್ನೈರಂತರ್ಯೇಣ ಭಾವಯನ್ ।**
**ದಶಪ್ರಕಾರಧರ್ಮಸ್ಥಃ ಸೋಢಾಶೇಷಪರೀಷಹಃ ॥ ೨೨೨ ॥**

**ಅನಿತ್ಯಾಶುಚಿದುಃಖಾನ್ಯತ್ಸ್ಮರನ್ನ್ಯಾಯಾದಿಕಂ ಮುಹುಃ ।**
**ಗತ್ವಾ ಸರ್ವತ್ರ ಮಾಧ್ಯಸ್ಥ್ಯಂ ಪರಮಂ ಯೋಗಮಾಶ್ರಿತಃ ॥ ೨೨೩ ॥**

**ಷಣ್ಮಾಸಾನ್ದಿನಕಲ್ಪೇನ ನೀತ್ವಾ ದೀಕ್ಷಾವನಾಂತರೇ ।**
**ಅಧಸ್ತಾನ್ನಾಗವೃಕ್ಷಸ್ಯ ಸ್ಥಿತ್ವಾ ಷಷ್ಠೋಪವಾಸಭೃತ್ ॥ ೨೨೪ ॥**

**ಫಾಲ್ಗುನೇ ಕೃಷ್ಣಸಪ್ತಮ್ಯಾಮನುರಾಧಾಪರಾಹ್ಣಕೇ ।**
**ಪ್ರಾಗೇವ ನಿಹತಾಶೇಷಶ್ರದ್ಧಾನಪ್ರತಿಪಕ್ಷಕಃ ॥ ೨೨೫ ॥**

**ಕರಣತ್ರಯಸಂಯೋಗಾತ್ಕ್ಷಪಕಶ್ರೇಣಿಮಾಶ್ರಿತಃ ।**
**ಸ್ಫುರತ್ತುರೀಯಚಾರಿತ್ರೋ ದ್ರವ್ಯಭಾವವಿಕಲ್ಪಿತಮ್ ॥ ೨೨೬ ॥**

**ಧರ್ಮಧ್ಯಾನೇದ್ಧಸದ್ಧ್ಯಾತ್ಮಾ ಮೋಹಾರಾತಿಂ ನಿಹತ್ಯ ಸಃ ।**
**ಸಾವಗಾಢದೃಗಂತೇಯೋ ವಿಚ್ಚತುಷ್ಕಾತಿಭಾಸ್ವರಃ ॥ ೨೨೭ ॥**

**ದ್ವಿತೀಯಶುಕ್ಲಧ್ಯಾನೇನ ಘಾತಿತ್ರಿತಯಘಾತಕಃ ।**
**ಜೀವಸ್ಯೈವೋಪಯೋಗಾಖ್ಯೋ ಗುಣಶ್ಯೇಷೇಷ್ವಸಂಭವಾತ್ ॥ ೨೨೮ ॥**

**ಘಾತೀತಿ ನಾಮ ತದ್ಘಾತಾದಭೂದಘಚತುಷ್ಟಯೇ ।**
**ಅಘಾತಿಷ್ವಪಿ ಕೇಷಾಂಚಿದೇವ ತತ್ರ ವಿಲೋಪನಾತ್ ॥ ೨೨೯ ॥**

**ಪರಾವಗಾಢಂ ಸಮ್ಯಕ್ತ್ವಂ ಚರ್ಯಾಂತ್ಯಂ ಜ್ಞಾನದರ್ಶನೇ ।**
**ದಾನಾದಿಪಂಚಕಂ ಚಾಪ್ಯ ಸಯೋಗಸ್ಸಕಲೋ ಜಿನಃ ॥ ೨೩೦ ॥**

**ಸರ್ವಜ್ಞಃ ಸರ್ವಲೋಕೇಶಃ ಸಾರ್ವಸ್ಸರ್ವೈಕರಕ್ಷಕಃ ।**
**ಸರ್ವದೃಕ್ಸರ್ವದೇವೇಂದ್ರವಂದ್ಯಸ್ಸರ್ವಾರ್ಥದೇಶಕಃ ॥ ೨೩೧ ॥**

**ಚತುಸ್ತ್ರಿಂಶದತೀಶೇಷವಿಶೇಷವಿಭವೋದಯಃ ।**
**ಪ್ರಾತಿಹಾರ್ಯಾಷ್ಟಕವ್ಯಕ್ತೀಕೃತತೀರ್ಥಕರೋದಯಃ ॥ ೨೩೨ ॥**

**ದೇವದೇವಸ್ಸಮಸ್ತೇಂದ್ರಮುಕುಟೋಢಾಂಘ್ರಿಪಂಕಜಃ ।**
**ಸ್ವಪ್ರಭಾಹ್ಲಾದಿಕಾಶೇಷೋ ವಿಶ್ವಲೋಕವಿಭೂಷಣಃ ॥ ೨೩೩ ॥**

**ಗತಿಜೀವಗುಣಸ್ಥಾನನಯಮಾನಾದಿವಿಸ್ತೃತೇಃ ।**
**ಪ್ರಬೋಧಕಃ ಸ್ಥಿತೋ ವ್ಯೋಮ್ನಿ ಶ್ರೀಮಾಂಶ್ಚಂದ್ರಪ್ರಭೋ ಜಿನಃ ॥**

ದೀಕ್ಷಾಲಕ್ಷ್ಮೀಯ ದೆಸೆಯಿಂದ ಮುಕ್ತಿದಾಯಕವಾದ ಸದ್ಬುದ್ಧಿಯು ಸ್ವಾಮಿಗೆ ತಾನಾಗಿ ಪ್ರಾಪ್ತವಾಯಿತು. ಈ ರೀತಿಯಾಗಿ ತತ್ತ್ವಗಳನ್ನು ತಿಳಿದ ಆ ಸ್ವಾಮಿಯನ್ನು ದೇವರ್ಷಿಗಳಾದ ಲೌಕಾಂತಿಕದೇವರ್ಕಳು ಹೊಂದಿ ಯಥೋಚಿತವಾಗಿ ಸ್ವಾಮಿಯನ್ನು ಸ್ತುತಿಸಿ ಬ್ರಹ್ಮಲೋಕಕ್ಕೆ ಹಿಂದಿರುಗಿ ಹೋದರು. ಚಂದ್ರಪ್ರಭಸ್ವಾಮಿಯೂ ವರಚಂದ್ರನೆಂಬ ಪುತ್ರನಿಗೆ ರಾಜ್ಯಾಭಿಷೇಕವನ್ನು ಮಾಡಿ ದೇವೇಂದ್ರರಿಂದ ಪರಿನಿಷ್ಕ್ರಮಣಕಲ್ಯಾಣಪೂಜೆಯನ್ನು ಪಡೆದು ದೇವರ್ಕಳಿಂದ ಧರಿಸಲ್ಪಟ್ಟ ವಿಮಲವೆಂಬ ಪಲ್ಲಕ್ಕಿಯನ್ನೇರಿ ಸರ್ವರ್ತುಕವೆಂಬ ವನದಲ್ಲಿ ಎರಡು ದಿನಗಳವರೆಗೆ ಉಪವಾಸವಿದ್ದು ಪುಷ್ಯಮಾಸದ ಅನುರಾಧಾನಕ್ಷತ್ರದಲ್ಲಿ ಏಕಾದಶೀತಿಥಿಯಲ್ಲಿ ಸಾವಿರಮಂದಿ ರಾಜರುಗಳೊಡನೆ ನಿರ್ಗ್ರಂಥದೀಕ್ಷೆಯನ್ನು ಹೊಂದಿ ಮನಃಪರ್ಯಯಜ್ಞಾನವನ್ನು ಪಡೆದನು. ಅವನಿಗೆ ಎರಡನೆಯ ದಿವಸದಲ್ಲಿ ನಳಿನಪುರದಲ್ಲಿ ಶುಭ್ರನಾದ ಸೋಮದತ್ತಮಹಾರಾಜನು ನವವಿಧಪುಣ್ಯಗಳನ್ನು ಹೊಂದಿ ಉತ್ತಮವಾದ ಆಹಾರವನ್ನು ಕೊಟ್ಟು ಅವನು ಆ ದಾನದಿಂದ ಸಂತುಷ್ಟರಾದ ದೇವರ್ಕಳಿಂದ ಹೊಂದಿಸಲ್ಪಟ್ಟ ವಸುಧಾರಾದಿ ಪಂಚಾಶ್ಚರ್ಯಗಳನ್ನು ಸ್ವೀಕರಿಸಿದನು. ಅಹಿಂಸಾದಿ ವ್ರತಗಳನ್ನು ಧರಿಸಿ ಸಮಿತಿಗಳನ್ನು ಪಾಲಿಸಿ ಮನೋವಾಕ್ಕಾಯದಂಡಗಳನ್ನು ತ್ಯಜಿಸಿದವನೂ ಕ್ರೋಧಾದಿಕಷಾಯಭಾವಗಳೆಂಬ ಶತ್ರುಗಳನ್ನು ನಿಗ್ರಹಿಸಿದವನೂ ವೃದ್ಧಿಯನ್ನು ಹೊಂದುತ್ತಿರುವ ವಿಶುದ್ಧಿಯನ್ನು ಹೊಂದಿದವನೂ ಮನೋವಾಕ್ಕಾಯಗುಪ್ತಿಗಳುಳ್ಳವನೂ ಶೀಲಸಂಪನ್ನನೂ ಗುಣಗಳುಳ್ಳವನೂ ಬಾಹ್ಯಾಭ್ಯಂತರತಪಸ್ಸುಗಳುಳ್ಳವನೂ ದ್ರವ್ಯಪರ್ಯಾಯರೂಪವಾದ ವಸ್ತುಸ್ವರೂಪವನ್ನೂ ಸ್ಯಾದ್ವಾದರೂಪವಾದ ವಚನಭೇದಗಳನ್ನೂ ನಿರಂತರವಾಗಿ ಭಾವಿಸುವವನೂ ಉತ್ತಮಕ್ಷಮಾದಿ ದಶಧರ್ಮಗಳಲ್ಲಿರುವವನೂ ಸಮಸ್ತಪರೀಷಹಗಳನ್ನು ಜಯಿಸಿದವನೂ ಶರೀರ ಮೊದಲಾದುದು ಅನಿತ್ಯವೆಂದೂ ಅಶುಚಿಯೆಂದೂ ದುಃಖರೂಪವಾದುದೆಂದೂ ಆತ್ಮನಿಂದ ಬೇರೆಯಾದುದೆಂದೂ ಪದೇ ಪದೇ ಸ್ಮರಿಸುವವನೂ ಎಲ್ಲಾ ಕಡೆಗಳಲ್ಲಿಯೂ ಮಾಧ್ಯಸ್ಥಭಾವವನ್ನು ಹೊಂದಿ ಉತ್ಕೃಷ್ಟಯೋಗವನ್ನು ಹೊಂದಿದವನೂ ಜಿನಕಲ್ಪದಲ್ಲಿದ್ದು ಆರು ತಿಂಗಳುಗಳನ್ನು ಕಳೆದು ದೀಕ್ಷಾವನದ ಮಧ್ಯದಲ್ಲಿ ನಾಗವೃಕ್ಷದ ಕೆಳಗೆ ಆರು ಉಪವಾಸಗಳ ನಿಯಮವನ್ನು ಧರಿಸಿದವನಾಗಿದ್ದು ಸಮ್ಯಕ್ತ್ವಕ್ಕೆ ಪ್ರತಿಪಕ್ಷಗಳಾದ ಕರ್ಮಗಳನ್ನು ಮೊದಲೇ ನಾಶಮಾಡಿರುವವನೂ ಫಾಲ್ಗುನಮಾಸದ ಕೃಷ್ಣಪಕ್ಷದ ಸಪ್ತಮೀತಿಥಿಯಲ್ಲಿ ಅನುರಾಧಾನಕ್ಷತ್ರದಲ್ಲಿ ಸಾಯಂಕಾಲ ಅಧಃಪ್ರವೃತ್ತಿಕರಣ, ಅಪೂರ್ವಕರಣ, ಅನಿವೃತ್ತಿಕರಣಗಳೆಂಬ ಕರಣತ್ರಯಸಂಬಂಧದಿಂದ ಕ್ಷಪಕಶ್ರೇಣಿಯನ್ನು ಹೊಂದಿದವನೂ ದ್ರವ್ಯಭಾವಭೇದದಿಂದ ಎರಡು ಪ್ರಕಾರವಾದ ಸೂಕ್ಷ್ಮಸಾಂಪರಾಯವೆಂಬ ಪ್ರಕಾಶಮಾನವಾದ ನಾಲ್ಕನೆಯ ಚಾರಿತ್ರವುಳ್ಳವನೂ ಶ್ರೇಷ್ಠವಾದ ಧರ್ಮಧ್ಯಾನದಿಂದ ಮೋಹವೆಂಬ ಶತ್ರುವನ್ನು ನಾಶಮಾಡಿ ಅವಗಾಢಸಮ್ಯಕ್ತ್ವದ ಕೊನೆಯನ್ನು ಹೊಂದಿದ ಜ್ಞಾನಚತುಷ್ಟಯದಿಂದ ವಿಶೇಷವಾಗಿ ಪ್ರಕಾಶಮಾನನೂ ಏಕತ್ವವಿತರ್ಕವೆಂಬ ಎರಡನೆಯ ಶುಕ್ಲಧ್ಯಾನದಿಂದ ಜ್ಞಾನಾವರಣ ದರ್ಶನಾವರಣ ಅಂತರಾಯಗಳೆಂಬ ಮೂರು ಘಾತಿಕರ್ಮಗಳನ್ನು ನಾಶಮಾಡಿದವನೂ ಉಪಯೋಗವೆಂಬುದು ಇತರ ಪದಾರ್ಥಗಳಲ್ಲಿ ಅಸಂಭವವಾಗಿರುವುದರಿಂದ ಜೀವದ ಗುಣವೇ ಆದ ಆ ಉಪಯೋಗವನ್ನು ಘಾತಮಾಡುವುದರಿಂದ ನಾಲ್ಕು ಕರ್ಮಗಳಿಗೆ ಘಾತಿಕರ್ಮಗಳೆಂದು ಹೆಸರಾಗಿದೆ. ಅಘಾತಿಕರ್ಮಗಳಲ್ಲಿಯೂ ಕೆಲವಕ್ಕೆ ಅಲ್ಲಿ ನಾಶವಿರುವುದುರಿಂದ ಪರಮಾವಗಾಢಸಮ್ಯಕ್ತ್ವವನ್ನೂ ಯಥಾಖ್ಯಾತವೆಂಬ ಕೊನೆಯ ಚಾರಿತ್ರವನ್ನೂ ಕೇವಲಜ್ಞಾನದರ್ಶನಗಳನ್ನೂ ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳನ್ನೂ ಹೊಂದಿ ಶರೀರದೊಡನೆ ಕೂಡಿರುವ ಸಯೋಗ ಜಿನನೂ ಸರ್ವಜ್ಞನೂ ಸರ್ವಲೋಕೇಶನೂ ಸರ್ವಪ್ರಾಣಿಗಳಿಗೆ ಹಿತಕರನೂ ಸರ್ವಪ್ರಾಣಿಗಳಿಗೆ ಮುಖ್ಯರಕ್ಷಕನೂ ಸರ್ವದರ್ಶಿಯೂ ಸರ್ವದೇವೇಂದ್ರವಂದ್ಯನೂ ಸಕಲಪದಾರ್ಥಗಳನ್ನು ಬೋಧಿಸುವವನೂ ಮೂವತ್ತುನಾಲ್ಕು ಅತಿಶಯ ವಿಶೇಷಗಳೆಂಬ ಸಂಪತ್ತಿಯುಳ್ಳವನೂ ಅಶೋಕವೃಕ್ಷಸುರಪುಷ್ಪವೃಷ್ಟಿ ಮೊದಲಾದ ಎಂಟು ಪ್ರಾತಿಹಾರ್ಯಗಳಿಂದ ಪ್ರಕಟವಾದ ತೀರ್ಥಕರನಾಮಕರ್ಮದ ಉದಯವುಳ್ಳವನೂ ದೇವರ್ಕಳಿಗೆಲ್ಲ ದೇವನೂ ಸಮಸ್ತದೇವೇಂದ್ರರ ಕಿರೀಟಗಳಲ್ಲಿ ಧರಿಸಲ್ಪಟ್ಟ ಪಾದಕಮಲಗಳುಳ್ಳವನೂ ತನ್ನ ಪ್ರಭೆಯಿಂದ ಎಲ್ಲರನ್ನೂ ಸಂತೋಷಪಡಿಸಿರುವವನೂ ಸಕಲಲೋಕಭೂಷಣನೂ ಗತಿ ಜೀವ ಗುಣಸ್ಥಾನ ನಯ ಪ್ರಮಾಣ ಮೊದಲಾದುವುಗಳ ವಿವರವನ್ನು ಬೋಧಿಸುವವನೂ ಶ್ರೀಮಂತನೂ ಆದ ಚಂದ್ರಪ್ರಭಜಿನನು ಆಕಾಶದಲ್ಲಿ ವಿರಾಜಮಾನನಾದನು.

**ಕ್ರೌರ್ಯಧುರ್ಯೇಣ ಶೌರ್ಯೇಣ ಯದಂಹಸ್ಸಂಚಿತಂ ಚಿರವ್ ।**
**ಸಿಂಹೈರ್ಹಂತುಂ ಸ್ವಜಾತೇರ್ವಾ ವ್ಯೂಢಂ ತಸ್ಯಾಸನಂ ವ್ಯಭಾತ್॥ ೨೩೫ ॥**

ಸಿಂಹಗಳು ಬಹುಕಾಲದಿಂದ ಕ್ರೂರತ್ವವೇ ಮುಂದಾಗಿರುವ ಶೌರ್ಯದಿಂದ ಸಂಚಿತವಾದ ತಮ್ಮ ಜಾತಿಯ ಪಾಪವನ್ನು ನಾಶಮಾಡುವುದಕ್ಕೋಸ್ಕರ ಹೊತ್ತುಕೊಂಡಿರುತ್ತವೋ ಎನ್ನುವಂತೆ, ಆ ಚಂದ್ರಪ್ರಭಸ್ವಾಮಿಯ ಆಸನವು ಪ್ರಕಾಶಿಸಿತು.

**ಕೇವಲದ್ಯುತಿರೇವೈವಂ ಮೂರ್ತಿಂ ಯಾತೇವ ಭಾಸ್ವರಾ ।**
**ದೇಹಪ್ರಭಾ ದಿಶೋ ವಿಶ್ವಾ ಭಾಸಯಂತ್ಯಸ್ಯ ಶೋಭತೇ ॥ ೨೩೬ ॥**

ಕೇವಲಜ್ಞಾನದ ಕಾಂತಿಯೇ ಆಕಾರವನ್ನು ಹೊಂದಿತೋ ಎನ್ನುವಂತೆ ಪ್ರಕಾಶಮಾನವಾದ ಈ ಚಂದ್ರಪ್ರಭಸ್ವಾಮಿಯ ದೇಹಕಾಂತಿಯು ಸಕಲದಿಕ್ಕುಗಳನ್ನು ಪ್ರಕಾಶಪಡಿಸುತ್ತ ಶೋಭಿಸುತ್ತದೆ.

**ಚಾಮರೈರಾಮರೈರೇಷಃ ಪ್ರಭಾಪ್ರಕಟಿತಾಯತಿಃ ।**
**ಹಂಸಾಂಸಧವಳೈರ್ಗಂಗಾತರಂಗೈರಿವ ಸೇವ್ಯತೇ ॥ ೨೩೭ ॥**

ಹಂಸಪಕ್ಷಿಗಳ ರೆಕ್ಕೆಗಳಂತೆ ಶುಭ್ರವೂ ದೇವರ್ಕಳ ಸಂಬಂಧಿಯೂ ಆದ ಚಾಮರಗಳು ದೂರದವರೆಗೆ ಪ್ರಕಟವಾದ ಪ್ರಭೆಯುಳ್ಳ ಈ ಚಂದ್ರಪ್ರಭಸ್ವಾಮಿಯನ್ನು, ಗಂಗಾನದಿಯ ಅಲೆಗಳೋ ಎನ್ನುವಂತೆ, ಸೇವಿಸುತ್ತವೆ. ದೇವತೆಗಳು ಸ್ವಾಮಿಗೆ ಬೀಸುತ್ತಿದ್ದ ಚಾಮರಗಳು ಗಂಗಾನದಿಯ ಅಲೆಗಳಂತಿದ್ದುವೆಂದು ಭಾವವು.

**ಧ್ವನಿರೇಕೋಪಿ ದಿವ್ಯೋಸ್ಯ ಪ್ರಕಾಶೋ ವಾಂಶುಮಾಲಿನಃ ।**
**ದ್ರಷ್ಟೄಣಾಂ ಸರ್ವಭಾವಾನಾಂ ಸಂಶ್ರೋತೄಣಾಂ ಪ್ರಕಾಶಕಃ॥ ೨೩೮ ॥**

ಈ ಚಂದ್ರಪ್ರಭಸ್ವಾಮಿಯ ದಿವ್ಯಧ್ವನಿಯು ಒಂದೇ ಆದರೂ, ಸೂರ್ಯನ ಪ್ರಕಾಶದಂತೆ, ನೋಡುವವರಿಗೂ ಕೇಳುವವರಿಗೂ ಸಮಸ್ತಪದಾರ್ಥಗಳನ್ನು ಪ್ರಕಾಶಪಡಿಸುವುದಾಗಿದೆ.

**ತ್ರಿಭಿಃ ಶಿವಪದಂ ಪ್ರಾಪ್ಯಮಸ್ಮಾಭಿರಿತಿ ವಾ ವದತ್ ।**
**ಮೋಕ್ಷಮಾರ್ಗಃ ಪೃಥಗ್ಭೂತೋ ಭಾತಿ ಚ್ಛತ್ರತ್ರಯಂ ವಿಭೋಃ॥ ೨೩೯ ॥**

ಸಮ್ಯಗ್ದರ್ಶನಜ್ಞಾನಚಾರಿತ್ರ ರೂಪದಿಂದ ಬೇರೆಬೇರೆಯಾಗಿರುವ ಮೋಕ್ಷ ಮಾರ್ಗವೂ ಮುಕ್ತಿಸ್ಥಾನವೂ ನಮ್ಮಿಂದ ಮೂವರಿಂದ ಹೊಂದಲ್ಪಡತಕ್ಕುದಾಗಿದೆಯೆಂದು ಹೇಳುತ್ತದೋ ಎನ್ನುವಂತೆ ಸ್ವಾಮಿಯ ಛತ್ರತ್ರಯವು ಪ್ರಕಾಶಿಸುತ್ತದೆ.

**ಭಾತಿ ಪಿಂಡಿದ್ರುಮೋ ಭರ್ತುರಶೋಕಸ್ಸಂಶ್ರಯಾದಹಮ್ ।**
**ಇತ್ಯಾವಿಷ್ಕೃತರಾಗೋ ವಾ ಪಲ್ಲವೈಃ ಪ್ರಸವೈರಪಿ ॥ ೨೪೦ ॥**

ಸ್ವಾಮಿಯ ಆಶ್ರಯದಿಂದ ನಾನು ಅಶೋಕ(ಶೋಕರಹಿತ)ನಾಗಿದ್ದೇನೆಂದು ರಾಗ–ಪ್ರೀತಿ(ರಕ್ತಿಮೆ)ಯನ್ನು ಪ್ರಕಟಪಡಿಸಿರುತ್ತದೋ ಎನ್ನುವಂತೆ ಅಶೋಕ ವೃಕ್ಷವು ತಳಿರುಗಳಿಂದಲೂ ಪುಷ್ಪಗಳಿಂದಲೂ ಶೋಭಿಸುತ್ತದೆ.

**ಅಭಾತ್ಸುಮನಸಾಂ ವೃಷ್ಟಿಃ ಪತಂತೀ ನಭಸೋ ವಿಭುಮ್ ।**
**ತಾರಾವಲಿರಿವಾಯಾಂತೀ ಸೇವಿತುಂ ಭಕ್ತಿನಿರ್ಭರಾ ॥ ೨೪೧ ॥**

ಆಕಾಶದಿಂದ ಬೀಳುತ್ತಿರುವ ಪುಷ್ಪವೃಷ್ಟಿಯು, ಸ್ವಾಮಿಯನ್ನು ಸೇವಿಸುವುದಕ್ಕೋಸ್ಕರ ಬರುತ್ತಿರುವ ಭಕ್ತಿಭರಿತವಾದ ನಕ್ಷತ್ರಗಳ ಸಾಲೋ ಎನ್ನುವಂತೆ, ಪ್ರಕಾಶಿಸಿತು.

**ದೇವದುಂದುಭಯೋ ಬಾಢಂ ದಧ್ವನುಸ್ತರ್ಜಿತಾಬ್ಧಯಃ ।**
**ದಿಶಃ ಶ್ರಾವಯಿತುಂ ವಾಸ್ಯ ಮೋಹಾರಾತಿಜಯಂ ವಿಭೋಃ ॥ ೨೪೨ ॥**

ಸಮುದ್ರವನ್ನು ಬೆದರಿಸಿದ ದೇವದುಂದುಭಿಗಳು, ಈ ಸ್ವಾಮಿಯ ಮೋಹ ಕರ್ಮವೆಂಬ ಶತ್ರುವಿನ ಜಯವನ್ನು ದಿಕ್ಕುಗಳಿಗೆ ಕೇಳಿಸುವುದಕ್ಕೋಸ್ಕರವೋ ಎನ್ನುವಂತೆ, ಹೆಚ್ಚಾಗಿ ಶಬ್ದಮಾಡಿದುವು.

**ಅಭಾದಸ್ಯ ಪ್ರಭಾಮಧ್ಯೇ ಪ್ರಸನ್ನಂ ವಕ್ತ್ರಮಂಡಲಮ್ ।**
**ನಾಕನದ್ಯಾಮಿವಾಂಭೋಜಮಿವ ವಾ ಬಿಂಬಮೈಂದವಮ್ ॥ ೨೪೩ ॥**

ಪ್ರಭೆಯ ಮಧ್ಯದಲ್ಲಿ ಈ ಸ್ವಾಮಿಯ ಪ್ರಸನ್ನವಾದ ಮುಖಮಂಡಲವು, ದೇವ ನದಿಯಲ್ಲಿ ಕಮಲದಂತೆಯೂ ಚಂದ್ರಬಿಂಬದಂತೆಯೂ ಪ್ರಕಾಶಿಸಿತು.

**ಶ್ರೀಮಾನ್ಗಂಧಕುಟೀಮಧ್ಯೇ ಚತುರ್ಭಿಸ್ತ್ರಿಗುಣೈರ್ಗಣೈಃ ।**
**ತಾರಾಗಣೈಶ್ಶರಚ್ಚಂದ್ರ ಇವ ಸೇವ್ಯೋ ವ್ಯರಾಜತ ॥ ೨೪೪ ॥**

ದ್ವಾದಶಗಣ–ಸಮೂಹಗಳಿಂದ ಸೇವಿಸಲ್ಪಡತಕ್ಕ ಶ್ರೀ ಚಂದ್ರಪ್ರಭಸ್ವಾಮಿಯು, ನಕ್ಷತ್ರಸಮೂಹಗಳಿಂದ ಸೇವಿಸಲ್ಪಡತಕ್ಕ ಶರತ್ಕಾಲದ ಚಂದ್ರನಂತೆ, ಗಂಧಕುಟಿಯ ಮಧ್ಯದಲ್ಲಿ ಪ್ರಕಾಶಿಸಿದರು.

**ದತ್ತಾದಿತ್ರಿನವತ್ಯುಕ್ತಗಣೇಶಃ ಖತ್ರಯದ್ವಿಸಂ– ।**
**ಪ್ರೋಕ್ತಪೂರ್ವಧರಃ ಶೂನ್ಯತ್ರಿಕಾಷ್ಟಾವಧಿಲೋಚನಃ ॥ ೨೪೫ ॥**

**ಶೂನ್ಯದ್ವಿಕಚತುಃಶೂನ್ಯದ್ವಯಪಕ್ಷೋಕ್ತಶಿಕ್ಷಕಃ ।**
**ಖಚತುಷ್ಕೈಕನಿರ್ದಿಷ್ಟಕೇವಲಾವಗಮಾಗ್ರಣೀಃ ॥ ೨೪೬ ॥**

**ಚತುರ್ದಶಸಹಸ್ರೋಕ್ತವಿಕ್ರಿಯರ್ದ್ಧಿವಿಭೂಷಿತಃ ।**
**ಖತ್ರಯಾಷ್ಟಚತುರ್ಜ್ಞಾನಪರಿಷತ್ಪರಿವಾರಿತಃ ॥ ೨೪೭ ॥**

**ಖದ್ವಯರ್ತ್ವದ್ರಿವಾದೀಶಃ ಸರ್ವಸಾರ್ಧದ್ವಿಲಕ್ಷಕಃ ।**
**ಖಚತುಷ್ಕಾಷ್ಟವಹ್ನ್ಯುಕ್ತವರುಣಾದ್ಯಾರ್ಯಿಕಾಸ್ತುತಃ ॥ ೨೪೮ ॥**

**ತ್ರಿಲಕ್ಷಶ್ರಾವಕಾಭ್ಯರ್ಚ್ಯಃ ಶ್ರಾವಿಕಾಪಂಚಲಕ್ಷಕಃ ।**
**ಅಸಂಖ್ಯದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸನ್ನತಃ ॥ ೨೪೯ ॥**

ಸ್ವಾಮಿಯು ದತ್ತನೇ ಮೊದಲಾದ ತೊಂಬತ್ತುಮೂರು ಮಂದಿ ಗಣಧರರುಳ್ಳವರೂ ಎರಡು ಸಾವಿರ ಮಂದಿ ಏಕಾದಶಾಂಗ ಚತುರ್ದಶಪೂರ್ವ ಶಾಸ್ತ್ರಜ್ಞರುಳ್ಳವರೂ ಎಂಟು ಸಾವಿರ ಮಂದಿ ಅವಧಿಜ್ಞಾನಿಗಳುಳ್ಳವರೂ ಎರಡು ಲಕ್ಷದ ನಾಲ್ಕುನೂರು ಮಂದಿ ಶಿಕ್ಷಕರುಳ್ಳವರೂ ಹತ್ತು ಸಾವಿರ ಮಂದಿ ಕೇವಲ ಜ್ಞಾನಿಗಳಲ್ಲಿ ಪ್ರಮುಖರೂ ಹದಿನಾಲ್ಕು ಸಾವಿರ ಮಂದಿ ವಿಕ್ರಿಯರ್ದ್ಧಿಮುನಿಗಳಿಂದ ವಿಭೂಷಿತರೂ ಎಂಟುಸಾವಿರ ಮಂದಿ ಮನಃಪರ್ಯಯಜ್ಞಾನಿಗಳ ಸಮೂಹದಿಂದ ಸುತ್ತಲ್ಪಟ್ಟವರೂ ಏಳುಸಾವಿರದ ಆರುನೂರು ಮಂದಿ ವಾದಿಗಳಿಗೆ ಸ್ವಾಮಿಯೂ ಎಲ್ಲಾ ಸೇರಿ ಎರಡುವರೆ ಲಕ್ಷ ಸಂಖ್ಯೆಯುಳ್ಳವರೂ ಮೂರು ಲಕ್ಷದ ಎಂಬತ್ತುಸಾವಿರ ವರುಣಾ ಮೊದಲಾದ ಆರ್ಯಿಕೆಯರಿಂದ ಸ್ತುತಿಸಲ್ಪಟ್ಟವರೂ ಮೂರುಲಕ್ಷ ಶ್ರಾವಕರಿಂದ ಪೂಜಿಸಲ್ಪಡತಕ್ಕವರೂ ಐದು ಲಕ್ಷ ಶ್ರಾವಿಕೆಯರುಳ್ಳವರೂ ಅಸಂಖ್ಯಾತ ದೇವದೇವಿಯರಿಂದ ಸ್ತುತಿಸಲ್ಪಡತಕ್ಕವರೂ ಸಂಖ್ಯಾತ ತಿರ್ಯಕ್ಪ್ರಾಣಿಗಳಿಂದ ಚೆನ್ನಾಗಿ ನಮಸ್ಕರಿಸಲ್ಪಟ್ಟವರೂ ಆಗಿದ್ದರು.

**ಪ್ರಾದಕ್ಷಿಣ್ಯೇನ ಭವ್ಯೇಶಂ ಪರೀತ್ಯೈತೇ ಗಣಾಃ ಪೃಥಕ್ ।**
**ಸ್ವಕೋಷ್ಠೇಷ್ವವತಿಷ್ಠಂತೇ ವಿಹಿತಾಂಜಲಿಕುಡ್ಮಲಾಃ ॥ ೨೫೦ ॥**

ಈ ಸಮೂಹಗಳು ಕೈಗಳನ್ನು ಜೋಡಿಸಿ ತಾವರೆಯ ಮೊಗ್ಗುಗಳಂತೆ ಮಾಡಿಕೊಂಡು ಭವ್ಯರಿಗೆ ಪ್ರಭುವಾದ ಚಂದ್ರಪ್ರಭಸ್ವಾಮಿಗೆ ಪ್ರದಕ್ಷಿಣೆಯಾಗಿ ಸುತ್ತಿ ತಮ್ಮ ಕೋಷ್ಠಗಳಲ್ಲಿರುತ್ತವೆ.

**ತತ್ರಾಕೃತ್ರಿಮಸಂಭೂತಭಕ್ತಿಭಾರಾನತಃ ಸ್ಫುರ– ।**
**ನ್ಮುಕುಟಾಗ್ರಮಣಿಃ ಸ್ತೋತ್ರಂ ದ್ವಿತೀಯೇಂದ್ರೋಭ್ಯಧಾದಿದಮ್॥ ೨೫೧ ॥**

ಅಲ್ಲಿ ಅಕೃತ್ರಿಮವಾಗಿ ಉಂಟಾದ ಭಕ್ತಿಯ ಭಾರದಿಂದ ಬಗ್ಗಿದವನೂ ಪ್ರಕಾಶಮಾನವಾದ ಕಿರೀಟದ ತುದಿಯ ರತ್ನಗಳುಳ್ಳವನೂ ಆದ ಎರಡನೆಯ–ಈಶಾನೇಂದ್ರನು ಈ–ಮುಂದಿನ ಸ್ತೋತ್ರವನ್ನು ಹೇಳಿದನು.

**ರತ್ನತ್ರಯೇಣ ಯೇನಾಪ್ತಂ ರತ್ನತ್ರಯಮನುತ್ತರಮ್ ।**
**ತ್ವಂ ದೇಹ್ಯಸ್ಮಭ್ಯಮುಚ್ಚೈಃ ಸ ರತ್ನತ್ರಯಸಂಪದಮ್ ॥ ೨೫೨ ॥**

"ಸ್ವಾಮಿಯೇ! ಯಾವನು ಯಾವ ರತ್ನತ್ರಯದಿಂದ ಸರ್ವೋತ್ಕೃಷ್ಟವಾದ ರತ್ನತ್ರಯವನ್ನು ಪಡೆದನೋ ಅಂತಹ ನೀನು ನಮ್ಮಗಳಿಗೂ ಆ ಉತ್ಕೃಷ್ಟವಾದ ರತ್ನತ್ರಯಸಂಪತ್ತಿಯನ್ನು ಕೊಡು.

**ಸ್ವಾರ್ಥಃ ಸಾಗರಮೇರೂಣಾಂ ಪರಾರ್ಥಃ ಕಲ್ಪಭೂರುಹಾಮ್ ।**
**ದೇವ ಸ್ವಾರ್ಥಃ ಪರಾರ್ಥಶ್ಚ ಮಹಿಮಾ ಮಹಿತಸ್ತವ ॥ ೨೫೩ ॥**

ದೇವಾ! ಸಮುದ್ರದ ಮಹಿಮೆಯೂ ಮಹಾಮೇರುಪರ್ವತದ ಮಹಿಮೆಯೂ ಸ್ವಪ್ರಯೋಜನಾರ್ಥವಾಗಿದೆ. ಕಲ್ಪವೃಕ್ಷಗಳ ಮಹಿಮೆಯು ಪರಪ್ರಯೋಜನಾರ್ಥವಾಗಿದೆ. ಲೋಕಪೂಜಿತವಾದ ನಿನ್ನ ಮಹಿಮೆಯಾದರೋ ಸ್ವಪರಪ್ರಯೋಜನಾರ್ಥವಾಗಿದೆ.

**ದದಾಸಿ ಪರಮಂ ಸೌಖ್ಯಮಿತ್ಯಸ್ತು ಭವತಃ ಸ್ತವಃ ।**
**ನ ದತ್ಸ ಇತಿ ದೇವಸ್ಯ ಸಾಧಿತಾತ್ಮಾರ್ಥಸಂಪದಃ ॥ ೨೫೪ ॥**

ನೀನು ಪರಮಸುಖವನ್ನು ಕೊಡುತ್ತಿಯೆಂಬ ನಿನ್ನ ಸ್ತುತಿಯು ಹಾಗಿರಲಿ. ಆತ್ಮಪ್ರಯೋಜನಕಾರಿಯಾದ ಸಂಪತ್ತಿಯನ್ನು ಸಾಧಿಸಿರುವ ಸ್ವಾಮಿಯ–ನಿನ್ನ "ನೀನು ಸುಖವನ್ನು ಕೊಡುವುದಿಲ್ಲ" ಎಂಬ ಸ್ತುತಿಯೂ ಪರಮಸುಖವನ್ನು ಕೊಡುವುದು.

**ತ್ವದ್ವಚೋ ವಾಚಿ ಧರ್ಮಸ್ತೇ ಹೃದಿ ವೃತ್ತಿಸ್ತನೌ ಭವೇತ್ ।**
**ಯಸ್ಯ ಸ ತ್ವಾದೃಶೋ ಭೂತ್ವಾ ಪರಮಾನಂದಮಶ್ನುತೇ ॥ ೨೫೫ ॥**

ಯಾವನ ಮಾತಿನಲ್ಲಿ ನಿನ್ನ ವಚನವೂ ಹೃದಯದಲ್ಲಿ ನಿನ್ನ ಧರ್ಮವೂ ಶರೀರದಲ್ಲಿ ನಿನ್ನ ನಡೆಯೂ ಇರುವುವೋ ಆವನು ನಿನ್ನಂತಾಗಿ ಪರಮಾನಂದವನ್ನು ಹೊಂದುತ್ತಾನೆ.

**ತ್ವಯ್ಯೈವೈಕೇನ ಕರ್ಮಾರೀನ್ಭುವನತ್ರಯವಿದ್ವಿಷಃ ।**
**ಶುಕ್ಲಧ್ಯಾನಾಸಿನಾ ಹತ್ವಾ ಮುಕ್ತಿಸಾಮ್ರಾಜ್ಯಮರ್ಜಿತಮ್ ॥ ೨೫೬ ॥**

ಮೂರು ಲೋಕಗಳಿಗೆ ಶತ್ರುಗಳಾದ ಕರ್ಮಶತ್ರುಗಳನ್ನು ಶುಕ್ಲಧ್ಯಾನವೆಂಬ ಖಡ್ಗದಿಂದ ಕೊಂದು ನೀನೊಬ್ಬನೇ ಮುಕ್ತಿಸಾಮ್ರಾಜ್ಯವನ್ನು ಗಳಿಸಿದವನು.

**ತ್ವತ್ಪಾದಪಾದಪೋದ್ಭೂತಸಾಂದ್ರಚ್ಛಾಯಾಂ ಸಮಾಶ್ರಿತಾಃ ।**
**ಪಾಪಾರ್ಕರೋಗಘರ್ಮೋಗ್ರದುಃಖಸಂತಾಪದೂರಗಾಃ ॥ ೨೫೭ ॥**

ಸ್ವಾಮಿಯೆ ! ನಿನ್ನ ಚರಣವೆಂಬ ವೃಕ್ಷದಿಂದುಂಟಾದುದೂ ನಿಬಿಡವೂ ಆದ ನೆರಳನ್ನು ಆಶ್ರಯಿಸಿರುವವರು ಪಾಪವೆಂಬ ಸೂರ್ಯನಿಂದುಂಟಾದ ರೋಗದ ಮತ್ತು ಬೆವರಿನ ಭಯಂಕರವಾದ ದುಃಖದಿಂದಲೂ ಸಂತಾಪದಿಂದಲೂ ದೂರ ರಾಗುತ್ತಾರೆ.

**ಸಾಗರೋಽನಂತಕಾಂತಾರಂ ಸಂಸಾರಸ್ಸರ್ವದೇಹಿನಾಮ್ ।**
**ತ್ವನ್ಮತಾಶ್ರಿತಭವ್ಯಾನಾಂ ಗೋಷ್ಪದಂ ನಂದನಂ ವನಮ್ ॥ ೨೫೮ ॥**

ಸಮಸ್ತ ಪ್ರಾಣಿಗಳಿಗೆ ಸಂಸಾರವು ಸಮುದ್ರವಾಗಿಯೂ ಅನಂತವಾದ ಅರಣ್ಯ ವಾಗಿಯೂ ಇರುವುದು. ನಿನ್ನ ಮತವನ್ನು ಆಶ್ರಯಿಸಿದ ಭವ್ಯರಿಗೆ ಸಂಸಾರಸಾಗರವು ಗೋವಿನ ಹೆಜ್ಜೆಯಾಗಿಯೂ ಸಂಸಾರಾರಣ್ಯವು ನಂದನವನವಾಗಿಯೂ ಇರುವುದು.

**ಫಲಂ ತ್ರೈಲೋಕ್ಯಸಾಮ್ರಾಜ್ಯಂ ಕ್ಲೇಶಸ್ತ್ವಚ್ಚರಣಸ್ಮೃತಿಃ ।**
**ಲೋಕಸ್ತಥಾಪಿ ಮಂದೇಚ್ಛೋ ನ ವೇತ್ತಿ ಹಿತಮಾತ್ಮನೇ ॥ ೨೫೯ ॥**

ನಿನ್ನ ಚರಣಸ್ಮರಣವು ಕ್ಲೇಶಕರವಾದರೂ ತ್ರೈಲೋಕ್ಯಸಾಮ್ರಾಜ್ಯವು ಅದರ ಫಲವಾಗಿರುತ್ತದೆ. ಮಂದವಾದ ಇಚ್ಛೆಯುಳ್ಳ ಜನರು ತಮ್ಮ ಹಿತವನ್ನು ತಿಳಿಯುವುದಿಲ್ಲ. ಸ್ವಾಮಿಯ ಚರಣಸ್ಮರಣದಿಂದ ತಮಗೆ ಹಿತವಾಗುವುದೆಂದು ತಿಳಿಯದಿರುವುದರಿಂದ ಜನರು ಅದರಲ್ಲಿ ಪ್ರವೃತ್ತರಾಗುವುದಿಲ್ಲವೆಂದು ಭಾವವು.

**ಆಧಾರಾಧೇಯಭಾವೋಯಮನನ್ಯಸದೃಶಸ್ತವ ।**
**ಅಧಸ್ಥಂ ಜಗದಾಧೇಯಮಾಧಾರಸ್ತ್ವಂ ತದಗ್ರಗಃ ॥ ೨೬೦ ॥**

ನಿನ್ನ ಆಧಾರಾಧೇಯಭಾವವು ಅಸದೃಶವಾಗಿರುತ್ತದೆ. ಆಧೇಯವಾದ ಜಗತ್ತು ಕೆಳಗಿದೆ. ಜಗತ್ತಿಗೆ ಆಧಾರನಾದ ನೀನು ಅದರ ಮೇಲಿರುತ್ತಿ. ಆಧಾರವು ಕೆಳಗೂ ಆಧೇಯವು ಮೇಲೆಯೂ ಇರುವುದು ಸ್ವಭಾವ. ಆದರೆ ಇಲ್ಲಿ ಆಧೇಯವಾದ ಜಗತ್ತು ಕೆಳಗೂ ಆಧಾರನಾದ ಸ್ವಾಮಿಯು ಅದರ ಮೇಲೆಯೂ ಇರುವುದು ವಿಲಕ್ಷಣವಾಗಿರುತ್ತವೆಂದು ಭಾವವು.

**ವೇದಕೋಽಸಿ ನ ವೇದ್ಯೋಽಸಿ ನ ಪಾಲ್ಯೋಽಸ್ಯಸಿ ಪಾಲಕಃ ।**
**ಕರ್ತಾಸಿ ನಾಸಿ ಕಾರ್ಯಸ್ತ್ವಂ ನ ಪೋಷ್ಯೋಽಸ್ಯಸಿ ಪೋಷಕಃ ॥ ೨೬೧ ॥**

ಸ್ವಾಮಿಯೆ ! ನೀನು ತಿಳಿಯುವವನಾಗಿರುತ್ತಿ, ಬೇರೆಯವರಿಂದ ತಿಳಿಯಲ್ಪಡ ತಕ್ಕವನಾಗಿಲ್ಲ. ನೀನು ರಕ್ಷಕನಾಗಿರುತ್ತಿ, ಬೇರೆಯವರಿಂದ ರಕ್ಷಿಸಲ್ಪಡತಕ್ಕವನಾಗಿಲ್ಲ. ನೀನು ಕರ್ತನಾಗಿರುತ್ತಿ, ಕಾರ್ಯರೂಪನಾಗಿಲ್ಲ. ನೀನು ಪೋಷಕನಾಗಿರುತ್ತಿ, ಬೇರೆಯವರಿಂದ ಪೋಷಿಸಲ್ಪಡತಕ್ಕವನಾಗಿಲ್ಲ.

**ತ್ವಾಂ ನಮನ್ನುನ್ನತಸ್ತೋತಾ ಗುರುಶ್ಚ ಗುಣಗೌರವಾತ್ ।**
**ಅನಮನ್ನಮ್ಯತೇ ಪಾಪೈರಸ್ತುವನ್ ಶಪ್ಯತೇ ಸದಾ ॥ ೨೬೨ ॥**

ನಿನ್ನನ್ನು ನಮಸ್ಕರಿಸುವವನು ಉನ್ನತನಾಗುತ್ತಾನೆ. ಸ್ತುತಿಸುವವನು ಗುಣ ಗೌರವದಿಂದ ಗುರುವಾಗಿರುತ್ತಾನೆ. ನಿನ್ನನ್ನು ನಮಸ್ಕರಿಸದಿರುವವನು ಯಾವಾಗ ಲೂ ಪಾಪಗಳಿಂದ ಬಗ್ಗಿಸಲ್ಪಡುತ್ತಾನೆ. ಸ್ತುತಿಸದಿರುವವನೂ ಶಪಿಸಲ್ಪಡುತ್ತಾನೆ.

**ನಾಸ್ತಿಕಾಃ ಪಾಪಿನಃ ಕೇಚಿದ್ದೈಷ್ಟಿಕಾಶ್ಚ ಹತೋದ್ಯಮಾಃ ।**
**ತ್ವದೀಯಾಸ್ತ್ವಾಸ್ತಿಕಾ ಧರ್ಮ್ಯಾಃ ಪರತ್ರ ವಿಹಿತೋದ್ಯಮಾಃ ॥ ೨೬೩ ॥**

ಕೆಲವರು ನಾಸ್ತಿಕರೂ ಪಾಪಿಗಳೂ ದೈವವಿದೆಯೆಂಬ ಬುದ್ಧಿಯುಳ್ಳವರೂ ಉದ್ಯಮಶೂನ್ಯರಾಗಿರುತ್ತಾರೆ. ನಿನ್ನವರಾದ ಆಸ್ತಿಕರು ಧಾರ್ಮಿಕರೂ ಪರಲೋಕ ವಿಷಯದಲ್ಲಿ ಉದ್ಯಮಶೀಲರೂ ಆಗಿರುತ್ತಾರೆ.

**ಸರ್ವತ್ರ ಸರ್ವದಾ ಸರ್ವಾನ್ ಸರ್ವೇಸ್ತ್ವಂ ಸಾರ್ವ ಸರ್ವವಿತ್ ।**
**ಪ್ರಕಾಶಯಸಿ ನೈವೇಂದುರ್ಭಾನುರ್ವಾನ್ಯೇಷು ಕಾ ಕಥಾ ॥ ೨೬೪ ॥**

ಸರ್ವಪ್ರಾಣಿಗಳಿಗೆ ಹಿತಕರನಾದ ಸ್ವಾಮಿಯೆ ! ಸರ್ವಜ್ಞನಾದ ನೀನು ಎಲ್ಲಾ ಕಡೆಯಲ್ಲಿ ಯಾವಾಗಲೂ ಎಲ್ಲಾ ಪದಾರ್ಥಗಳನ್ನು ಸರ್ವವಿಧಗಳಿಂದ ಪ್ರಕಾಶ ಪಡಿಸುತ್ತಿ. ಹಾಗೆ ಚಂದ್ರನೂ ಸೂರ್ಯನೂ ಪ್ರಕಾಶಪಡಿಸುವುದೇ ಇಲ್ಲವೆಂದ ಮೇಲೆ ಬೇರೆಯವರ ಕತೆಯೇನು ?

**ನ ಸ್ಥಿರಂ ಕ್ಷಣಿಕಂ ಜ್ಞಾನಮಾತ್ರಂ ಶೂನ್ಯಮವೀಕ್ಷಣಾತ್ ।**
**ವಸ್ತು ಪ್ರತಿಕ್ಷಣಂ ತತ್ತ್ವಾನ್ಯತ್ವರೂಪಂ ತವೇಕ್ಷಣಾತ್ ॥ ೨೬೫ ॥**

ನಿನ್ನ ದೃಷ್ಟಿಯಿಂದ ವಸ್ತುವು ಸರ್ವಥಾ ಸ್ಥಿರವೂ ಅಲ್ಲ, ಕ್ಷಣಿಕವೂ ಅಲ್ಲ, ಜ್ಞಾನ ಮಾತ್ರವೂ ಅಲ್ಲ, ಕಾಣದಿರುವುದರಿಂದ ಶೂನ್ಯವೂ ಅಲ್ಲ, ಪ್ರತಿಕ್ಷಣದಲ್ಲಿ ಸ್ವರೂಪ ಪರರೂಪಗಳಿಂದ ಅಸ್ತಿ ನಾಸ್ತಿ ನಿತ್ಯಾನಿತ್ಯಾದಿ ರೂಪವಾಗಿದೆ.

**ಅಸ್ತ್ಯಾತ್ಮಾ ಬೋಧಸದ್ಭಾವಾತ್ಪರಜನ್ಮಾಸ್ತಿ ತತ್ಸ್ಮೃತೇಃ ।**
**ಸರ್ವವಿಚ್ಚಾಸ್ತಿ ಧೀವೃದ್ಧೇಸ್ತ್ವದುಪಜ್ಞಮಿದಂ ತ್ರಯಮ್ ॥ ೨೬೬ ॥**

ಜ್ಞಾನವಿರುವುದರಿಂದ ಆತ್ಮನಿದ್ದಾನೆ. ಪೂರ್ವಭವಸ್ಮರಣೆಯುಂಟಾಗುವುದರಿಂದ ಪರಜನ್ಮವಿರುತ್ತದೆ. ಬುದ್ಧಿಯ ವೃದ್ಧಿಯಾಗುವುದರಿಂದ ಸರ್ವಜ್ಞನೂ ಇರುತ್ತಾನೆ. ಇವು ಮೂರು ನಿನ್ನ ಆದ್ಯಜ್ಞಾನಗಳಾಗಿರುತ್ತವೆ.

**ದ್ರವ್ಯಾದ್ದ್ರವ್ಯಸ್ಯ ವಾ ಭೇದಂ ಗುಣಸ್ಯಾಪ್ಯವದದ್ವಿಧೀಃ ।**
**ಗುಣೈಃ ಪರಿಣತಿಂ ದ್ರವ್ಯಸ್ಯಾವಾದೀಸ್ತ್ವಂ ಯಥಾರ್ಥದೃಕ್ ॥ ೨೬೭ ॥**

ಸ್ವಾಮಿಯೆ ! ಬುದ್ಧಿಯಿಲ್ಲದವನು ಒಂದು ದ್ರವ್ಯದಿಂದ ಮತ್ತೊಂದು ದ್ರವ್ಯಕ್ಕೂ ದ್ರವ್ಯದಿಂದ ಗುಣಕ್ಕೂ ಭೇದವನ್ನು ಹೇಳುತ್ತಾನೆ. ಯಥಾರ್ಥದರ್ಶಿಯಾದ ನೀನಾದ ರೋ ಗುಣಗಳಿಂದ ದ್ರವ್ಯಕ್ಕೆ ಪರಿಣಾಮವುಂಟಾಗುವುದೆಂದು ಹೇಳಿದೆ. ದ್ರವ್ಯವೂ ಗುಣವೂ ಬೇರೆಬೇರೆಯಲ್ಲವೆಂದೂ ಗುಣಗಳ ಪರಿಣಮನವೇ ದ್ರವ್ಯವೆಂದೂ ಭಾವವು.

**ಅಪ್ರತೀಪಾ ಪ್ರಭಾ ಭಾತಿ ದೇವ ದೇಹಸ್ಯ ತೇಽನಿಶಮ್ ।**
**ಚಂದ್ರಪ್ರಭೇತಿ ನಾಮೇದಮುಪರೀಕ್ಷ್ಯ ಹರಿರ್ವ್ಯಧಾತ್ ॥ ೨೬೮ ॥**

ದೇವನೆ ನಿನ್ನ ದೇಹದ ಪ್ರಭೆಯು ಯಾವಾಗಲೂ ತಡೆಯಿಲ್ಲದುದಾಗಿ ಪ್ರಕಾಶಿ ಸುತ್ತದೆ. ದೇವೇಂದ್ರನು ನಿನಗೆ ''ಚಂದ್ರಪ್ರಭ'' ಎಂಬೀ ಹೆಸರನ್ನು ಪರೀಕ್ಷಿಸದೆ ಇಟ್ಟನು.

**ಇತಿ ಶಬ್ದಾರ್ಥಗಂಭೀರಸ್ತವನೇನ ಸುರಾಧಿಪಃ ।**
**ಚಿರಂ ಸುಪುಣ್ಯಮಾತ್ಮಾನಂ ಬಹುಮೇನೇ ಸ ಹೃಷ್ಟಧೀಃ ॥ ೨೬೯ ॥**

ಈ ಪ್ರಕಾರವಾಗಿ ಆ ದೇವೇಂದ್ರನು ಸಂತುಷ್ಟವಾದ ಮನಸ್ಸುಳ್ಳವನಾಗಿ ಶಬ್ದ ದಿಂದಲೂ ಅರ್ಥದಿಂದಲೂ ಗಂಭೀರವಾದ ಸ್ತೋತ್ರದಿಂದ ಬಹುಕಾಲದವರೆಗೆ ತನ್ನನ್ನು ಉತ್ತಮವಾದ ಪುಣ್ಯವುಳ್ಳವನನ್ನಾಗಿ (ತಾನು ಪುಣ್ಯಶಾಲಿಯೆಂದು) ತಿಳಿದನು.

**ಅಥ ಚಂದ್ರಪ್ರಭಃ ಸ್ವಾಮೀ ಧರ್ಮತೀರ್ಥಂ ಪ್ರವರ್ತಯನ್ ।**
**ಸರ್ವಾನ್ದೇಶಾನ್ವಿಹೃತ್ಯಾರ್ಯಾನ್ ಸಮ್ಮೇದತಲಮಾಪ್ತವಾನ್ ॥ ೨೭೦ ॥**

ಚಂದ್ರಪ್ರಭಸ್ವಾಮಿಯು ಧರ್ಮತೀರ್ಥವನ್ನು ಪ್ರಚಾರಮಾಡಿ ಎಲ್ಲಾ ಆರ್ಯ ದೇಶಗಳಲ್ಲಿ ವಿಹರಿಸಿ ಬಳಿಕ ಸಮ್ಮೇದಶಿಖರವನ್ನು ಹೊಂದಿದರು.

**ವಿಹಾರಮುಪಸಂಹೃತ್ಯ ಮಾಸಂ ಸಿದ್ಧಶಿಲಾತಲೇ ।**
**ಪ್ರತಿಮಾಯೋಗಮಾಸ್ಥಾಯ ಸಹಸ್ರಮುನಿಭಿಸ್ಸಹ ॥ ೨೭೧ ॥**

**ಫಾಲ್ಗುನೇ ಶುಕ್ಲಸಪ್ತಮ್ಯಾಂ ಜ್ಯೇಷ್ಠಾಚಂದ್ರಾಪರಾಹ್ಣಕೇ ।**
**ತೃತೀಯಶುಕ್ಲಧ್ಯಾನೇನ ಕೃತಯೋಗನಿರೋಧಕಃ ॥ ೨೭೨ ॥**

**ಅಯೋಗಪದಮಾಸಾದ್ಯ ತುರ್ಯಶುಕ್ಲೇನ ನಿರ್ಹರನ್ ।**
**ಶೇಷಕರ್ಮಾಣಿ ನಿರ್ಲುಪ್ತಶರೀರಃ ಪರಮೋಭವತ್ ॥ ೨೭೩ ॥**

ಸ್ವಾಮಿಯು ವಿಹಾರವನ್ನು ಉಪಸಂಹರಿಸಿ ಒಂದು ತಿಂಗಳವರೆಗೆ ಸಿದ್ಧಶಿಲೆಯ ಮೇಲೆ ಪ್ರತಿಮಾಯೋಗದಲ್ಲಿದ್ದು ಸಾವಿರ ಮುನಿಗಳೊಡನೆ ಫಾಲ್ಗುನಮಾಸದ ಶುಕ್ಲಪಕ್ಷದ ಸಪ್ತಮಿಯ ತಿಥಿಯಲ್ಲಿ ಜ್ಯೇಷ್ಠಾನಕ್ಷತ್ರದ ಚಂದ್ರಹೋರೆಯಲ್ಲಿ ಸಾಯಂಕಾಲ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ತೃತೀಯಶುಕ್ಲಧ್ಯಾನದಿಂದ ಯೋಗವನ್ನು ನಿರೋಧಿಸಿದವರಾಗಿ ಅಯೋಗಪದವಿಯನ್ನು ಹೊಂದಿ ವ್ಯುಪರತಕ್ರಿಯಾನಿವೃತ್ತಿಯೆಂಬ ಚತುರ್ಥಶುಕ್ಲಧ್ಯಾನದಿಂವ ಉಳಿದ ಕರ್ಮಗಳನ್ನು ನಾಶಮಾಡಿ ದೇಹ ಮುಕ್ತರಾಗಿ ಪರಮಾತ್ಮರಾದರು.

**ಸುರಾ ನಿರ್ವಾಣಕಲ್ಯಾಣಪೂಜಾವಿಧಿವಿಧಾಯಿನಃ ।**
**ಪುಣ್ಯಪಣ್ಯಂ ಸಮಾದಾಯ ತದೇಯುಃ ಸ್ವಂ ಸ್ವಮಾಸ್ಪದಮ್ ॥ ೨೭೪ ॥**

ಆಗ ದೇವರ್ಕಳು ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಪುಣ್ಯವೆಂಬ ಬೆಲೆಯ ವಸ್ತುವನ್ನು ತೆಗೆದುಕೊಂಡು ತಂತಮ್ಮ ಸ್ಥಾನಗಳಿಗೆ ಹೊರಟುಹೋದರು.

**ಸಂಪೂರ್ಣಃ ಕಿಮಯಂ ಶರಚ್ಛಶಧರಃ ಕಿಂ ವಾರ್ಪಿತೋ ದರ್ಪಣಃ ।**
**ಸರ್ವಾರ್ಥಾವಗತೇಃ ಕಿಮೇಷ ವಿಲಸನ್ಪೀಯೂಷಪಿಂಡಃ ಪೃಥುಃ ।**
**ಕಿಂ ಪುಣ್ಯಾಣುಮಯಶ್ಚಯೋಯಮಿತಿ ಯದ್ವಕ್ತ್ರಾಂಬುಜಂ ಶಂಕ್ಯತೇ ।**
**ಸೋಯಂ ಚಂದ್ರಜಿನಸ್ತಮೋ ವ್ಯಪಹರನ್ನಂಹೋಭಯಾದ್ವಂಘ ತಾತ್ ॥**

"ಇವನು ಸಂಪೂರ್ಣನಾದ ಶರಚ್ಚಂದ್ರನೋ ? ಇದು ಎಲ್ಲಾ ವಸ್ತುಗಳನ್ನು ತಿಳಿಯುವುದಕ್ಕಾಗಿ ಕೊಡಲ್ಪಟ್ಟಕನ್ನಡಿಯೋ ? ಇದು ದೊಡ್ಡದಾದ ಮತ್ತು ಪ್ರಕಾಶಮಾನವಾದ ಅಮೃತದ ಪಿಂಡವೋ ? ಅಥವಾ ಇದು ಪುಣ್ಯದ ಅಣುಗಳ ಮಯವಾದ ರಾಶಿಯೋ ? ಎಂದು ಯಾವನ ಮುಖಕಮಲವು ಶಂಕಿಸಲ್ಪಡುವುದೋ ಆ ಈ ಚಂದ್ರಜಿನನು ಅಜ್ಞಾನಾಂಧಕಾರವನ್ನು ನಾಶಮಾಡಿ ಪಾಪಭೀತಿಯ ದೆಸೆಯಿಂದ ರಕ್ಷಿಸಲಿ.

**ಲೇಶ್ಯಾ ಯಸ್ಯ ಮೃಣಾಲನಾಲಧವಲಾ ಶ್ಲಾಘ್ಯೋಭಯೀ ಶೋಭತೇ ।**
**ಯಸ್ಯಾಸ್ಯೇಂದುರಹರ್ದಿವಂ ಕುವಲಯಾಹ್ಲಾದಂ ವಿಧತ್ತೇ ಧ್ರುವಮ್ ।**
**ಯದ್ಬೋಧೋಜ್ಜ್ವಲದರ್ಪಣೇ ತ್ರಿಸಮಯಂ ಜೀವಾದಿಕಂ ಲಕ್ಷ್ಯತೇ ।**
**ಸ ಶ್ರೀಮಾನ್ದಿಶತಾಚ್ಛ್ರಿಯಂ ಜಿನಪತಿರ್ನಷ್ಟಾಷ್ಟಕರ್ಮಾಷ್ಟಕಃ ॥ ೨೭೬ ॥**

ಯಾವನ ಶ್ಲಾಘ್ಯವಾದ ದ್ರವ್ಯಲೇಶ್ಯೆಯು ತಾವರೆಯ ದಂಟಿನಂತೆ ಶುಭ್ರವಾಗಿ ಶೋಭಿಸುತ್ತದೋ ಯಾವನ ಮುಖವೆಂಬ ಚಂದ್ರನು ದಿವಾರಾತ್ರಿ ಭೂಮಂಡಲಕ್ಕೆ ಕುಮುದಪುಷ್ಪಸಮೂಹಕ್ಕೆ ಸ್ಥಿರವಾದ ಆನಂದವನ್ನುಂಟುಡುತ್ತಾನೋ ಯಾವನ ಜ್ಞಾನವೆಂಬ ಪ್ರಕಾಶಮಾನವಾದ ಕನ್ನಡಿಯಲ್ಲಿ ತ್ರಿಕಾಲದಲ್ಲಿ ಜೀವಾದಿವಸ್ತುವು ನೋಡಲ್ಪಡುವುದೋ ಅಷ್ಟಕರ್ಮಗಳನ್ನು ನಾಶಮಾಡಿರುವವನೂ ಮುಕ್ತಿಶ್ರೀಮಂತನೂ ಆದ ಅಂತಹ ಜಿನಪತಿಯು ಸಂಪತ್ತಿಯನ್ನು ಕೊಡಲಿ.

**ಶ್ರೀವರ್ಮಾ ಶ್ರೀಧರೋ ದೇವೋಜಿತಸೇನೋಚ್ಯುತಾಧಿಪಃ ।**
**ಪದ್ಮನಾಭೋಹಮಿಂದ್ರೋಸ್ಮಾನ್ಪಾತು ಚಂದ್ರಪ್ರಭಃ ಪ್ರಭುಃ ॥ ೨೭೭ ॥**

ಯಥಾಕ್ರಮವಾಗಿ ಶ್ರೀವರ್ಮನೂ ಶ್ರೀಧರದೇವನೂ ಅಜಿತಸೇನನೂ ಅಚ್ಯುತೇಂದ್ರನೂ ಪದ್ಮನಾಭನೂ ಅಹಮಿಂದ್ರನೂ ಆದ ಚಂದ್ರಪ್ರಭಸ್ವಾಮಿಯು ನಮ್ಮನ್ನು ಕಾಪಾಡಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಚಂದ್ರಪ್ರಭಪುರಾಣಂ ಚತುಷ್ಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
"ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಚಂದ್ರಪ್ರಭತೀರ್ಥಕರಪುರಾಣವೆಂಬ
ಐವತ್ತನಾಲ್ಕನೆಯ ಪರ್ವವು ಸಮಾಪ್ತವಾದುದು.

---

# ಅಥ ಪುಷ್ಪದಂತತೀರ್ಥಂಕರಪುರಾಣಂ

**ವಿಧಾಯ ವಿಪುಲೇ ಮಾರ್ಗೇ ವಿನೇಯಾಂಶ್ಚಾಮಲೇ ಸ್ವಯಮ್ ।**
**ಸ್ವಯಂ ಚ ಸುವಿಧಿರ್ಯೋಽಭೂದ್ವಿದೇಯಾನ್ನಸ್ಸ ತಂ ವಿಧಿಮ್ ॥ ೧ ॥**

ಯಾವನು ವಿಶಾಲವೂ ನಿರ್ಮಲವೂ ಆದ ಮೋಕ್ಷಮಾರ್ಗದಲ್ಲಿ ಭವ್ಯ–ಶಿಷ್ಯರನ್ನು ಹೊಂದಿಸಿ ತಾನೂ ಆ ಮಾರ್ಗವನ್ನು ಹೊಂದಿ ತಾನು ಅದಕ್ಕೆ ಶ್ರೇಷ್ಠನಾದ ವಿಧಿರೂಪನಾದನೋ ಅಂತಹ ಸುವಿಧಿ–ಪುಷ್ಪದಂತತೀರ್ಥಂಕರರು ನಮ್ಮಗಳಿಗೆ ಆ ಮೋಕ್ಷಮಾರ್ಗವಿಧಿಯನ್ನು ಕೊಡಲಿ.

**ಪುಷ್ಕರಾರ್ಧೇಂದ್ರದಿಗ್ಭಾಗಮಂದರಪ್ರಾಗ್ವಿದೇಹಭಾಕ್ ।**
**ಸೀತಾಸರಿದುದಕ್ಕೂಲೇ ವಿಷಯಃ ಪುಷ್ಕಲಾವತೀ ॥ ೨ ॥**

ಪುಷ್ಕರಾರ್ಧದ್ವೀಪದ ಪೂರ್ವಮೇರುವಿನ ಪೂರ್ವವಿದೇಹದಲ್ಲಿರುವ ಸೀತಾ ನದಿಯ ಉತ್ತರದಿಕ್ಕಿನ ದಡದಲ್ಲಿ ಪುಷ್ಕಲಾವತಿಯೆಂಬ ದೇಶವಿದೆ.

**ತತ್ರಾಭೂತ್ಪುಂಡರೀಕಿಣ್ಯಾಂ ಮಹಾಪದ್ಮೋ ಮಹೀಪತಿಃ ।**
**ದೋರ್ದಂಡಖಂಡಿತಾರಾತಿಮಂಡಲಶ್ಚಂಡವಿಕ್ರಮಃ ॥ ೩ ॥**

ಅಲ್ಲಿ ಪುಂಡರೀಕಿಣಿಯೆಂಬ ನಗರದಲ್ಲಿ ಶತ್ರುಸಮೂಹವನ್ನು ಭುಜದಂಡದಿಂದ ಖಂಡಿಸಿದವನೂ ತೀಕ್ಷ್ಣವಾದ ಪರಾಕ್ರಮವುಳ್ಳವನೂ ಆದ ಮಹಾಪದ್ಮನೆಂಬ ರಾಜ ನಿದ್ದನು.

**ಪುರಾಣಮಪಿ ಸನ್ಮಾರ್ಗಂ ಸ ಸ್ವವೃತ್ತ್ಯಾಕರೋನ್ನವಮ್ ।**
**ಪಾಶ್ಚಾತ್ಯಾನಾಂ ತು ತದ್ವೃತ್ತ್ಯಾ ಪುರಾಣಃ ಸೋಽಭವತ್ಪುನಃ ॥ ೪ ॥**

ಅವನು ಪುರಾತನವಾದ ಸನ್ಮಾರ್ಗವನ್ನೂ ತನ್ನ ನಡೆವಳಿಕೆಯಿಂದ ನೂತನ ಮಾರ್ಗವನ್ನಾಗಿ ಮಾಡಿದನು. ಅವನ ಈಚೆಗಿನವರಿಗಾದರೋ ಆ ಮಾರ್ಗವು ಅವನ ಆಚರಣೆಯಿಂದ ಪುರಾತನವಾಗಿಯೇ ಇದ್ದಿತು.

**ಸಂಪೋಷ್ಯ ಪಾಲಯಾಮಾಸ ಗಾಂ ಸ ಸಾ ಚ ಸ್ವಯಂ ಮುದಾ ।**
**ಪ್ರಸ್ನುತಾ ನಿಜಸಾರೇಣ ತಂ ಸದಾ ಸಮತರ್ಪಯತ್ ॥ ೫ ॥**

ಅವನು ಪೃಥ್ವಿಯನ್ನು ಚೆನ್ನಾಗಿ ಪೋಷಿಸಿ ಕಾಪಾಡಿದನು. ಆ ಪೃಥ್ವಿಯೂ ತಾನು ಸಂತೋಷದಿಂದ ತನ್ನಲ್ಲಾದ ಸಾರವಸ್ತುವಿನಿಂದ ಅವನನ್ನು ಯಾವಾಗಲೂ ಸಂತೃಪ್ತಿಗೊಳಿಸಿತು.

**ಸ್ವಾನುರಕ್ತಾನ್ ಜನಾನ್ ಸರ್ವಾನ್ ಸ್ವಗುಣೈಸ್ಸ ವ್ಯಧಾತ್ಸುಧೀಃ ।**
**ತೇ ಚ ತಂ ಪ್ರೀಣಯಂತಿ ಸ್ಮ ಪ್ರತ್ಯಹಂ ಸರ್ವಭಾವತಃ ॥ ೬ ॥**

ಪ್ರಾಜ್ಞನಾದ ಆ ಮಹಾಪದ್ಮರಾಜನು ತನ್ನ ಗುಣಗಳಿಂದ ಎಲ್ಲಾ ಜನರನ್ನು ತನ್ನಲ್ಲಿ ಅನುರಾಗವುಳ್ಳವರನ್ನಾಗಿ ಮಾಡಿದನು. ಆ ಜನರೂ ಅವನನ್ನು ಪ್ರತಿದಿವಸ ಸರ್ವವಿಧ ದಿಂದಲೂ ಸಂತೋಷಪಡಿಸಿದರು.

**ಶೇಷಾಃ ಪ್ರಕೃತಯಸ್ತೇನ ವಿಹಿತಾ ವರ್ಧಿತಾಶ್ಚ ಯಾಃ ।**
**ಸ್ವೇನ ಸ್ವೇನೋಪಕಾರೇಣ ತಾಶ್ಚೈನಂ ವೃದ್ಧಿಮಾನಯನ್ ॥ ೭ ॥**

ಆ ಮಹಾಪದ್ಮರಾಜನಿಂದ ಉಳಿದ ಯಾವ ಪ್ರಜೆಗಳು ವಿಹಿತವಾಗಿ ಬೆಳೆಯಿಸಲ್ಪಟ್ಟರೋ ಆ ಪ್ರಜೆಗಳೂ ತಂತಮ್ಮ ಉಪಕಾರದಿಂದ ಇವನನ್ನು ಬೆಳೆಯಿಸಿದರು.

**ಅವರ್ಧಂತ ಗುಣಾಸ್ತಸ್ಮಿನ್ಸದ್ವೃತ್ತೇ ಶಾಸ್ತ್ರಶಾಲಿನಿ ।**
**ಮುನಿವಲ್ಲಬ್ಧಸಂಸ್ಕಾರಾ ಬಭುಶ್ಚ ಮಣಯೋ ಯಥಾ ॥ ೮ ॥**

ಗುಣಗಳು ಮುನಿಯಲ್ಲಿ ವೃದ್ಧಿಯನ್ನು ಹೊಂದುವಂತೆ ಸದಾಚಾರಿಯೂ ಶಾಸ್ತ್ರಜ್ಞನೂ ಆದ ಆ ಮಹಾಪದ್ಮರಾಜನಲ್ಲಿ, ಸಂಸ್ಕಾರವನ್ನು ಹೊಂದಿದ ರತ್ನಗಳು ಪ್ರಕಾಶಿಸುವಂತೆ, ಗುಣಗಳು ವೃದ್ಧಿಯನ್ನು ಹೊಂದಿದುವು ಮತ್ತು ಪ್ರಕಾಶಿಸಿದುವು.

**ವಿಭಜ್ಯ ರಾಜ್ಯಲಕ್ಷ್ಮೀಂ ಸ್ವಾಂ ಯಥಾಸ್ವಂ ಸ್ವಸಮಾಶ್ರಿತೈಃ ।**
**ಸೋಽನ್ವಭೂಚ್ಚಿರಮಚ್ಛಿನ್ನಂ ಸಂತಃ ಸಾಧಾರಣಶ್ರಿಯಃ ॥ ೯ ॥**

ಆ ಮಹಾಪದ್ಮರಾಜನು ತನ್ನ ರಾಜ್ಯಸಂಪತ್ತಿಯನ್ನು ತನಗೂ ತನ್ನನ್ನು ಆಶ್ರಯಿಸಿದವರಿಗೂ ವಿಭಾಗಿಸಿ ಬಹುಕಾಲದವರೆಗೆ ಅವಿಚ್ಛಿನ್ನವಾಗಿ ಅನುಭವಿಸಿದನು. ಸತ್ಪುರುಷರ ಸಂಪತ್ತಿಯು ಸರ್ವಸಾಧಾರಣಜನರಿಗೂ ಉಪಭೋಗ್ಯವಾಗಿರುತ್ತದೆ.

**ವದಂತೀಂದ್ರಯಮಸ್ಥಾನಂ ರಾಜಾನಂ ನೀತಿವೇದಿನಃ ।**
**ಕೃತೀಂದ್ರಸ್ಥಾನಮೇವಾಯಂ ದಂಡ್ಯಾಭಾವಾತ್ಪ್ರಜಾಗುಣಾತ್ ॥ ೧೦ ॥**

ರಾಜನು ಇಂದ್ರನ ಸ್ಥಾನವುಳ್ಳವನೆಂದೂ ಯಮನ ಸ್ಥಾನವುಳ್ಳವನೆಂದೂ ನೀತಿಜ್ಞರು ಹೇಳುತ್ತಾರೆ. ಪ್ರಜೆಗಳ ಗುಣಾತಿಶಯದಿಂದ ಶಿಕ್ಷಿಸಲ್ಪಡತಕ್ಕವರಿಲ್ಲದುದರಿಂದ ಈ ಪುಣ್ಯಶಾಲಿಯಾದ ಮಹಾಪದ್ಮರಾಜನು ಇಂದ್ರನ ಸ್ಥಾನವುಳ್ಳವನೇ ಆಗಿದ್ದನು. ಮಹಾಪದ್ಮರಾಜನು ಇಂದ್ರನಂತಿದ್ದನೆಂದೂ ಯಮನಂತಿರಲಿಲ್ಲವೆಂದೂ ಭಾವವು.

**ರತಿರಚ್ಛಿನ್ನಸಂತಾನಾ ತಸ್ಯ ಭೋಗ್ಯಾಶ್ಚ ತಾದೃಶಾಃ ।**
**ತಸ್ಮಾತ್ಸ್ವಸುಖವಿಚ್ಛೇದಂ ನಾವೈದಕ್ಷೂಣಪುಣ್ಯಕಃ ॥ ೧೧ ॥**

ಅವನ ಸುಖವು ಅವಿಚ್ಛಿನ್ನವಾದ ಪರಂಪರೆಯುಳ್ಳುದಾಗಿದ್ದಿತು. ಆದುದರಿಂದ ನಾಶವಾಗದ ಪುಣ್ಯವುಳ್ಳವನಾದ ಆ ಮಹಾಪದ್ಮರಾಜನು ತನ್ನ ಸುಖದ ವಿಚ್ಛಿತ್ತಿಯನ್ನು ತಿಳಿಯಲಿಲ್ಲ.

**ಇತಿ ಸ್ವಪುಣ್ಯಮಾಹಾತ್ಮ್ಯಸಂಪಾದಿತಮಹೋದಯಃ ।**
**ಸ ಕದಾಚಿನ್ಮಹೈಶ್ವರ್ಯಂ ಶ್ರುತ್ವಾ ಸ್ವವನಪಾಲಕಾತ್ ॥ ೧೨ ॥**

**ಜಿನಂ ಮನೋಹರೋದ್ಯಾನೇ ಸ್ಥಿತಂ ಭೂತಹಿತಾಹ್ವಯಮ್ ।**
**ಗತ್ವಾ ವಿಭೂತ್ಯಾ ಭೂತೇಶಂ ತ್ರಿಃಪರೀತ್ಯ ಕೃತಾರ್ಚನಃ ॥ ೧೩ ॥**

**ವಂದಿತ್ವಾ ಸ್ವೋಚಿತಸ್ಥಾನೇ ಸ್ಥಿತ್ವಾ ಮುಕುಲಿತಾಂಜಲಿಃ ।**
**ಆಕರ್ಣ್ಯ ಧರ್ಮಮುತ್ಪನ್ನಬೋಧಿರೇವಮಚಿಂತಯತ್ ॥ ೧೪ ॥**

ಈ ರೀತಿಯಾಗಿ ತನ್ನ ಪುಣ್ಯದ ಮಹಿಮೆಯಿಂದ ಸಂಪಾದಿತವಾದ ಮಹೋನ್ನತಿಯುಳ್ಳವನಾದ ಆ ರಾಜನು ಒಂದಾನೊಂದು ದಿವಸ ತನ್ನ ವನಪಾಲಕನಿಂದ ಮನೋಹರೋದ್ಯಾನದಲ್ಲಿ ಭೂತಹಿತರೆಂಬ ಜಿನರಿರುವುದನ್ನೂ ಆ ಉದ್ಯಾನದ ಮಹಾಸಂಪತ್ತಿಯನ್ನೂ ಕೇಳಿ ವೈಭವದಿಂದ ಅಲ್ಲಿಗೆ ಹೋಗಿ ಜಿನರಿಗೆ ಮೂರು ಪ್ರದಕ್ಷಿಣವನ್ನೂ ಪೂಜೆಯನ್ನೂ ಮಾಡಿ ವಂದಿಸಿ ತನಗೆ ಉಚಿತವಾದ ಸ್ಥಾನದಲ್ಲಿದ್ದು ಕೈಮುಗಿದು ಧರ್ಮಶ್ರವಣವನ್ನು ಮಾಡಿ ಜ್ಞಾನೋದಯವುಳ್ಳವನಾಗಿ ಮುಂದೆ ಹೇಳುವಂತೆ ಚಿಂತಿಸಿದನು.

**ಆತ್ಮಾಯಮಾತ್ಮನಾತ್ಮಾನಮಾತ್ಮನ್ಯಾವಿಷ್ಕೃತಾಸುಖಮ್ ।**
**ವಿಧಾಯಾನಾದಿಕಾಲೀನಮಿಥ್ಯಾತ್ವೋದಯದೂಷಿತಃ ॥ ೧೫ ॥**

**ಉನ್ಮಾದೀವ ಮದೀವಾಂಧೋ ವಾವೇಶೀವಾವಿಚಾರಕಃ ।**
**ಯದ್ಯದಾತ್ಮಾಹಿತಂ ಮೋಹಾತ್ತತ್ತದೇವಾಚರಂಶ್ಚಿರಮ್ ॥ ೧೬ ॥**

**ಭ್ರಮಿತ್ವಾ ಭವಕಾಂತಾರೇ ಪ್ರಭ್ರಷ್ಟೋ ನಿರ್ವೃತೇಃ ಪಥಃ ।**
**ಇತ್ಯತೋನುಭವಾದ್ಭೀತ್ವಾ ಮುಕ್ತಿಮಾರ್ಗಪ್ರಪಿತ್ಸಯಾ ॥ ೧೭ ॥**

**ಸೂನವೇ ಧನದಾಖ್ಯಾಯ ವಿತೀರ್ಯೈಶ್ವರ್ಯಮಾತ್ಮನಃ ।**
**ಪ್ರಾವ್ರಾಜೀದ್ಬಹುಭಿಃ ಸಾರ್ಧಂ ರಾಜಭಿರ್ಭವಭೀರುಭಿಃ ॥ ೧೮ ॥**

''ಅನಾದಿಕಾಲದ ಮಿಥ್ಯಾತ್ವದ ಉದಯದಿಂದ ದೂಷಿತನಾದ ಈ ಆತ್ಮನು ತಾನು ತನ್ನಿಂದ ತನ್ನಲ್ಲಿ ದುಃಖವನ್ನುಂಟುಮಾಡಿಕೊಂಡು ಹುಚ್ಚನಂತೆಯೂ ಮತ್ತನಂತೆಯೂ ಕುರುಡನಂತೆಯೂ ಆವೇಶವುಳ್ಳವನಂತೆಯೂ ವಿಚಾರವಿಲ್ಲದವನಾಗಿಯೂ ಅಜ್ಞಾನದಿಂದ ಆತ್ಮನಿಗೆ ಯಾವಯಾವುದು ಅಹಿತವಾದುದೋ ಅದನ್ನು ಬಹುಕಾಲ ಆಚರಿಸುವವನಾಗಿಯೂ ಭವಕಾನನದಲ್ಲಿ ಸುತ್ತಿ ಮೋಕ್ಷಮಾರ್ಗದಿಂದ ಚ್ಯುತನಾದನು.'' ಈ ರೀತಿಯಾದ ಅನುಭವದಿಂದ ಭೀತನಾಗಿ ಮೋಕ್ಷಮಾರ್ಗವನ್ನು ಹೊಂದಬೇಕೆಂಬ ಇಚ್ಛೆಯಿಂದ ಧನದನೆಂಬ ಪುತ್ರನಿಗೆ ತನ್ನ ಸಂಪತ್ತಿಯನ್ನು ಕೊಟ್ಟು ಭವಭೀತರಾದ ಅನೇಕ ರಾಜರೊಡನೆ ದೀಕ್ಷೆಯನ್ನು ತೆಗೆದುಕೊಂಡನು.

**ಕ್ರಮಾದೇಕಾದಶಾಂಗಾಬ್ಧಿಪಾರಗೋ ಭಾವನಾಪರಃ ।**
**ಬಧ್ವಾ ತೀರ್ಥಕರಂ ನಾಮ ಪ್ರಾಂತೇ ಸ್ವಾರಾಧನಾವಿಧಿಃ ॥ ೧೯ ॥**

**ವಿಂಶತ್ಯಬ್ಧ್ಯುಪಮಾತ್ತಾಯುಃ ಸಾರ್ಧಹಸ್ತತ್ರಯೋಚ್ಛ್ರಿತಿಃ ।**
**ಶುಕ್ಲಲೇಶ್ಯಃ ಶ್ವಸನ್ಮಾಸೈರ್ದಶಭಿರ್ದಶಭಿರ್ಬಲೀ ॥ ೨೦ ॥**

**ಸ್ಮರನ್ ಸಹಸ್ರವಿಂಶತ್ಯಾಂ ವತ್ಸರಾಣಾಂ ತನುಸ್ಥಿತಿಮ್ ।**
**ಮಾನಸೋದ್ಭ್ರವೀಚಾರಃ ಪ್ರಾಪ್ತಧೂಮಪ್ರಭಾವಧಿಃ ॥ ೨೧ ॥**

**ವಿಕ್ರಿಯಾಬಲತೇಜೋಭಿಃ ಸ್ವಾವಧಿಕ್ಷೇತ್ರಸಮ್ಮಿತಃ ।**
**ಉತ್ಕೃಷ್ಟಾಷ್ಟಗುಣೈಶ್ವರ್ಯಃ ಪ್ರಾಣತೇಂದ್ರೋಜನಿಷ್ಟ ಸಃ ॥ ೨೨ ॥**

ಕ್ರಮದಿಂದ ಹನ್ನೊಂದಂಗಶಾಸ್ತ್ರವೆಂಬ ಸಮುದ್ರದಪಾರವನ್ನು ಹೊಂದಿದವನೂ ಷೋಡಶಭಾವನೆಗಳಲ್ಲಿ ಆಸಕ್ತನೂ ಆದ ಆ ಮಹಾಪದ್ಮನು ತೀರ್ಥಕರನಾಮವೆಂಬ ಪುಣ್ಯಕರ್ಮವನ್ನು ಕಟ್ಟಿಕೊಂಡು ಅವಸಾನಕಾಲದಲ್ಲಿ ಶ್ರೇಷ್ಠವಾದ ಜ್ಞಾನಾದ್ಯಾರಾಧನೆಗಳನ್ನು ಆರಾಧಿಸಿ ಸತ್ತು ಹದಿನಾಲ್ಕನೆಯ ಸ್ವರ್ಗದಲ್ಲಿ ಇಪ್ಪತ್ತು ಸಾಗರೋಪಮಾಯುಷ್ಯವುಳ್ಳವನೂ ಮೂರುವರೆ ಮೊಳದಷ್ಟು ಉನ್ನತನೂ ಶುಕ್ಲಲೇಶ್ಯೆಯುಳ್ಳವನೂ ಹತ್ತುಹತ್ತು ತಿಂಗಳಿಗೊಮ್ಮೆ ಉಸಿರಾಡಿಸುವವನೂ ಬಲಶಾಲಿಯೂ ಇಪ್ಪತ್ತುಸಾವಿರ ವರುಷಗಳಿಗೊಮ್ಮೆ ಆಹಾರವನ್ನು ಸ್ಮರಿಸುವವನೂ ಮನಸ್ಸಿನಿಂದಲೇ ಕಾಮಸುಖವುಳ್ಳವನೂ ಧೂಮಪ್ರಭೆಯೆಂಬ ಐದನೆಯ ನರಕದವರೆಗೆ ಅವಧಿಜ್ಞಾನವುಳ್ಳವನೂ ತನ್ನ ಅವಧಿಜ್ಞಾನದ ಕ್ಷೇತ್ರದವರೆಗೆ ಪರಿಮಿತವಾದ ವಿಕ್ರಿಯಾ ಬಲ ತೇಜಸ್ಸುಗಳುಳ್ಳವನೂ ಆದ ಪ್ರಾಣತೇಂದ್ರನಾಗಿ ಜನಿಸಿದನು.

**ದೀರ್ಘಂ ತತ್ರ ಸುಖಂ ಭುಕ್ತ್ವಾ ತಸ್ಮಿನ್ನತ್ರಾಗಮಿಷ್ಯತಿ ।**
**ದ್ವೀಪೇಸ್ಮಿನ್ಭಾರತೇ ಕ್ಷೇತ್ರೇ ಕಾಕಂದೀನಗರಾಧಿಪಃ ॥ ೨೩ ॥**

**ಇಕ್ಷ್ವಾಕುಃ ಕಾಶ್ಯಪೋ ವಂಶಗೋತ್ರಾಭ್ಯಾಂ ಕ್ಷತ್ರಿಯಾಗ್ರಿಮಃ ।**
**ಸುಗ್ರೀವೋಸ್ಯ ಮಹಾದೇವೀ ಜಯರಾಮೇತಿ ವಲ್ಲಭಾ ॥ ೨೪ ॥**

ಆ ಪ್ರಾಣತೇಂದ್ರನು ಅಲ್ಲಿ ದೀರ್ಘಕಾಲದವರೆಗೆ ಸುಖವನ್ನನುಭವಿಸಿ ಈ ಮನುಷ್ಯಕ್ಷೇತ್ರಕ್ಕೆ ಬರುವವನಾಗಿರಲು ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕಾಕಂದೀನಗರಾಧಿಪತಿಯೂ ಇಕ್ಷ್ವಾಕುವಂಶಜನೂ ಕಾಶ್ಯಪಗೋತ್ರೋದ್ಭವನೂ ಆದ ಸುಗ್ರೀವನೆಂಬವನು ರಾಜನಾಗಿದ್ದನು. ಇವನಿಗೆ ಜಯರಾಮಾ ಮಹಾದೇವಿಯು ಪತ್ನಿಯಾಗಿದ್ದಳು.

**ಸಾ ದೇವೈರ್ವಸುಧಾರಾದಿಪೂಜಾಂ ಪ್ರಾಪ್ಯ ಮಹರ್ದ್ಧಿಕಾಮ್ ।**
**ಫಾಲ್ಗುನೇ ಮೂಲನಕ್ಷತ್ರೇ ತಾಮಸೇ ನವಮೀದಿನೇ ॥ ೨೫ ॥**

**ಪ್ರಾಭಾತೇ ಷೋಡಶಸ್ವಪ್ನಾನ್ವರನಿದ್ರಾವಿಲೇಕ್ಷಣಾ ।**
**ವಿಲೋಕ್ಯ ತತ್ಫಲಾನ್ಯಾತ್ಮಪತೇರ್ಜ್ಞಾತ್ವಾ ಪ್ರಮೋದಿನೀ ॥ ೨೬ ॥**

**ಮಾರ್ಗಶೀರ್ಷೇ ಸಿತೇ ಪಕ್ಷೇ ಚೈತ್ರಯೋಗೇ ತಮುತ್ತಮಮ್ ।**
**ಪ್ರಾಸೂತ ಪ್ರತಿಪದ್ಯಾಶು ತದೈತ್ಯೇಂದ್ರಾಃ ಸಹಾಮರೈಃ ॥ ೨೭ ॥**

**ಕ್ಷೀರಾಭಿಷೇಕಭೂಷಾಂತೇ ಪುಷ್ಪದಂತಾಖ್ಯಮಬ್ರುವನ್ ।**
**ಕುಂದಪುಷ್ಪಪ್ರಭಾಭಾಸಿದೇಹದೀಪ್ತ್ಯಾ ವಿರಾಜಿತಮ್ ॥ ೨೮ ॥**

ಆಕೆಯು ದೇವರ್ಕಳಿಂದ ಅಧಿಕವಾದ ಸಂಪತ್ತಿಯುಳ್ಳ ರತ್ನವೃಷ್ಟಿಯೇ ಮೊದಲಾದ ಪೂಜೆಯನ್ನು ಹೊಂದಿ ಫಾಲ್ಗುನಮಾಸದ ಕೃಷ್ಣಪಕ್ಷದ ನವಮೀ ದಿನದಲ್ಲಿ ಮೂಲನಕ್ಷತ್ರದಲ್ಲಿ ಪ್ರಾತಃಕಾಲದಲ್ಲಿ ಅರ್ಧನಿದ್ರೆಯಿಂದ ಕೂಡಿದ ನೇತ್ರಗಳುಳ್ಳವಳಾಗಿ ಹದಿನಾರು ಸ್ವಪ್ನಗಳನ್ನು ಕಂಡು ಅವುಗಳ ಫಲಗಳನ್ನು ತನ್ನ ಪತಿಯಿಂದ ತಿಳಿದು ಸಂತೋಷವುಳ್ಳವಳಾಗಿ ಮಾರ್ಗಶಿರಮಾಸದ ಶುಕ್ಲಪಕ್ಷದ ಚೈತ್ರ ಯೋಗದಲ್ಲಿ ಆ ಉತ್ತಮನಾದ ಪುತ್ರನನ್ನು ಹಡೆದಳು. ಆ ವಿಷಯವನ್ನು ತಿಳಿದು ಆಗ ದೇವೇಂದ್ರರು ದೇವರ್ಕಳೊಡನೆ ಶೀಘ್ರವಾಗಿ ಬಂದು ಆ ಶಿಶುವನ್ನು ಮಹಾಮೇರುವಿನ ಪಾಂಡುಕಶಿಲೆಗೊಯ್ದು ಕ್ಷೀರಾಭಿಷೇಕವನ್ನು ಮಾಡಿ ಆಭರಣಗಳಿಂದ ಭೂಷಿಸಿ ಬಳಿಕ ಮೊಲ್ಲೆಯ ಹೂವಿನ ಕಾಂತಿಯಂತೆ ಪ್ರಕಾಶಮಾನವಾದ ದೇಹಕಾಂತಿಯಿಂದ ಪ್ರಕಾಶಮಾನವಾದ ಆ ಬಾಲಕನನ್ನು ಪುಷ್ಪದಂತನೆಂದು ಕರೆದರು.

**ಸಾಗರೋಪಮಕೋಟೀನಾಂ ನವತ್ಯಾಮಂತರೇ ಗತೇ ।**
**ಏಷ ಚಂದ್ರಪ್ರಭಸ್ಯಾಭೂತ್ತದಭ್ಯಂತರಜೀವಿತಃ ॥ ೨೯ ॥**

ಚಂದ್ರಪ್ರಭಸ್ವಾಮಿಯು ಮುಕ್ತರಾಗಿ ತೊಂಬತ್ತುಕೋಟಿ ಸಾಗರೋಪಮ ಕಾಲವು ಕಳೆಯುವಾಗ ಆ ಕಾಲಪರಿಮಿತಿಯಲ್ಲಿಯೇ ಕೊನೆಯಲ್ಲಿ ಪುಷ್ಪದಂತ ತೀರ್ಥಂಕರರು ಜೀವಿಸಿದವರಾದರು.

**ಪೂರ್ವಲಕ್ಷದ್ವಯಾತ್ಮಾಯುಃ ಶತಚಾಪಸಮುಚ್ಛ್ರಿತಿಃ ।**
**ಲಕ್ಷಾರ್ಧಪೂರ್ವಕಾಲೇಸ್ಯ ಕೌಮಾರಮಗಮತ್ಸುಖಮ್ ॥ ೩೦ ॥**

ಪುಷ್ಪದಂತತೀರ್ಥಂಕರರು ಎರಡು ಲಕ್ಷಪೂರ್ವಾಯುಷ್ಯವುಳ್ಳವರೂ ನೂರು ಧನುಸ್ಸುಗಳಷ್ಟು ಉನ್ನತವಾದ ದೇಹವುಳ್ಳವರೂ ಆಗಿದ್ದರು. ಅರ್ಧಲಕ್ಷಪೂರ್ವ ಕಾಲದಲ್ಲಿ ಇವರ ಕೌಮಾರಾವಸ್ಥೆಯು ಸುಖವಾಗಿ ಕಳೆಯಿತು.

**ಅಥಾಪ್ಯ ಪೂಜ್ಯಂ ಸಾಮ್ರಾಜ್ಯಮಚ್ಯುತೇಂದ್ರಾದಿಭಿರ್ವಿಭುಃ ।**
**ಅನ್ವಭೂತ್ಸುಖಮಕ್ಲಿಷ್ಟಮಿಷ್ಟೈಃ ಶಿಷ್ಟೈರಭಿಷ್ಟುತಃ ॥ ೩೧ ॥**

ಬಳಿಕ ಸ್ವಾಮಿಯು ಅಚ್ಯುತೇಂದ್ರನೇ ಮೊದಲಾದ ದೇವರ್ಕಳಿಂದಲೂ ಪೂಜ್ಯವಾದ ಸಾಮ್ರಾಜ್ಯವನ್ನು ಹೊಂದಿ ಇಷ್ಟಜನರಿಂದಲೂ ಶಿಷ್ಟಜನರಿಂದಲೂ ಸ್ತುತಿಸಲ್ಪಟ್ಟವರಾಗಿ ಕ್ಲೇಶವಿಲ್ಲದ ಸುಖವನ್ನನುಭವಿಸಿದರು.

**ಕಾಂತಾಭಿಃ ಕರಣೈಃ ಸರ್ವೈರಮುಷ್ಮಾದಾಪಿ ಯತ್ಸುಖಮ್ ।**
**ತಾಭ್ಯೋನೇನ ತಯೋಃ ತಸ್ಯ ಬಹುತ್ವಂ ಕಥ್ಯತಾಂ ಬುಧೈಃ ॥ ೩೨ ॥**

ಸ್ತ್ರೀಯರಿಂದಲೂ ಎಲ್ಲಾ ಇಂದ್ರಿಯಗಳಿಂದಲೂ ಈ ಸಾಮ್ರಾಜ್ಯದಿಂದಲೂ ಪುಷ್ಪದಂತರು ಯಾವ ಸುಖವನ್ನನುಭವಿಸಿದರೋ ಇವರಿಂದ ಆ ಸ್ತ್ರೀಯರಿಗೆ ಯಾವ ಸುಖವುಂಟಾಗಿದ್ದಿತೋ ಅವರಿಬ್ಬರಲ್ಲಿ ಯಾರ ಸುಖವು ಹೆಚ್ಚೆಂದು ವಿದ್ವಾಂಸರು ಹೇಳಲಿ.

**ಪುಣ್ಯವಾನಸ್ತ್ವಯಂ ಕಿಂ ತು ಮನ್ಯೇ ತಾ ಬಹುಪುಣ್ಯಕಾಃ ।**
**ಯಾಃ ಸಮುಭ್ಯರ್ಣನಿರ್ವಾಣಸುಖಮೇನಮರೀರಮನ್ ॥ ೩೩ ॥**

ಈ ಪುಷ್ಪದಂತರು ಪುಣ್ಯವಂತರಾಗಿರಲಿ. ಆದರೆ ಯಾವ ಸ್ತ್ರೀಯರು ಸಮೀಪವಾದ ಮುಕ್ತಿಸುಖವುಳ್ಳ ಪುಷ್ಪದಂತರನ್ನು ಸಂತೋಷಪಡಿಸಿದರೋ ಆ ಸ್ತ್ರೀಯರು ಬಹುಪುಣ್ಯವುಳ್ಳವರೆಂದು ತಿಳಿಯುತ್ತೇನೆ.

**ಯಸ್ಸ್ವರ್ಗಸಾರಸೌಖ್ಯಾಬ್ಧಿಮಗ್ನಸ್ಸನ್ಭುವಮಾಗತಃ ।**
**ತಾನ್ಯೇವ ಭೋಗವಸ್ತೂನಿ ಯಾನಿ ತಂ ಚಾಭ್ಯಲಾಷಯನ್ ॥ ೩೪ ॥**

ಯಾವನು ಸ್ವರ್ಗದ ಸಾರವಾದ ಸೌಖ್ಯವೆಂಬ ಸಮುದ್ರದಲ್ಲಿ ಮುಳುಗಿ ಭೂಮಿಗೆ ಬಂದನೋ ಅಲ್ಲಿ ಯಾವ ಭೋಗವಸ್ತುಗಳಿದ್ದುವೋ ಆ ವಸ್ತುಗಳೇ ಅವನನ್ನು ಅಭಿಲಾಷೆಯುಳ್ಳವನನ್ನಾಗಿ ಮಾಡಿದುವು.

**ಅನಂತಶೋಹಮಿಂದ್ರತ್ವಂ ಪ್ರಾಪ್ಯ ತೇನಾಪ್ಯತೃಪ್ತವಾನ್ ।**
**ಸುಖೇನಾನೇನ ಚೇದೇಷ ತೃಪ್ತಸ್ಸೌಖ್ಯೇಷ್ವಿದಂ ಸುಖಮ್ ॥ ೩೫ ॥**

ಅನಂತಾವೃತ್ತಿ ಅಹಮಿಂದ್ರತ್ವವನ್ನು ಹೊಂದಿ ಆದರಿಂದಲೂ ತೃಪ್ತಿಯನ್ನು ಹೊಂದದಿರುವ ಈ ಸ್ವಾಮಿಯು ಈ ಸುಖದಿಂದ ತೃಪ್ತಿಯನ್ನು ಹೊಂದಿದನಾದರೆ ಸೌಖ್ಯಗಳಲ್ಲೆಲ್ಲ ಇದು ಶ್ರೇಷ್ಠಸುಖವೆಂದು ಹೇಳಬೇಕು.

**ಅಷ್ಟಾವಿಂಶತಿಪೂರ್ವಾಂಗಯುತಲಕ್ಷಾರ್ಧಪೂರ್ವಕೇ ।**
**ರಾಜ್ಯಕಾಲೇ ಗತೇ ಪ್ರೀತ್ಯಾ ಕುರ್ವತೋ ದಿಗ್ವಿಲೋಕನಮ್ ॥ ೩೬ ॥**

**ಆಪತಂತೀಂ ವಿಲೋಕ್ಯೋಲ್ಕಾಮಸ್ಯಾಸೀದೀದೃಶೀ ಮತಿಃ ।**
**ದೀಪಿಕೇಯಂ ಮಮಾನಾದಿಮಹಾಮೋಹತಮೋಪಹಾ ॥ ೩೭ ॥**

**ಇತಿ ತದ್ಧೇತುಸಂಭೂತವಿಮಲಾವಗಮಾತ್ಮಕಃ ।**
**ಸ್ವಯಂ ಬುದ್ಧೋ ವಿಬುದ್ಧಸ್ಸಂಸ್ತತ್ತ್ವಮೇವಂ ವಿಭಾವಯನ್ ॥ ೩೮ ॥**

ಇಪ್ಪತ್ತೆಂಟು ಪೂರ್ವಾಂಗಸಹಿತವಾದ ಅರ್ಧಲಕ್ಷಪೂರ್ವ ರಾಜ್ಯಕಾಲವು ಪ್ರೀತಿಯಿಂದ ಕಳೆಯುವಾಗ ಒಂದು ದಿವಸ ದಿಕ್ಕುಗಳನ್ನು ನೋಡುತ್ತಿರುವ ಸ್ವಾಮಿಯು ಉಲ್ಕಾಪಾತವನ್ನು ನೋಡಿ ಅವರ ಮನಸ್ಸಿನಲ್ಲಿ ಈ ಮುಂದೆ ಹೇಳಲ್ಪಡುವ ಭಾವನೆಯುಂಟಾಯಿತು. ''ನನ್ನ ಅನಾದಿಮಹಾಮೋಹವೆಂಬ ಕತ್ತಲೆಯನ್ನು ನಾಶ ಮಾಡುವ ದೀಪವಿದು'' ಎಂದು ಆ ಉಲ್ಕಾಪಾತದರ್ಶನದಿಂದುಂಟಾದ ನಿರ್ಮಲಬುದ್ಧಿಯುಳ್ಳವರಾಗಿ ತಾವೇ ತಿಳಿದು–ಎಚ್ಚತ್ತು ಈ ಮುಂದೆ ಹೇಳುವಂತೆ ತತ್ತ್ವವನ್ನು ಭಾವಿಸಿದರು.

**ಸ್ಪಷ್ಟಮದ್ಯ ಮಯಾ ದೃಷ್ಟಂ ವಿಶ್ವಮೇತದ್ವಿಡಂಬನಮ್ ।**
**ಕರ್ಮೇಂದ್ರಜಾಲಕೇನೈವ ವಿಪರ್ಯಸ್ಯ ಪ್ರದರ್ಶಿತಮ್ ॥ ೩೯ ॥**

**ಕಾಮಶೋಕಭಯೋನ್ಮಾದಸ್ವಪ್ನಚೌರ್ಯಾದ್ಯುಪದ್ರುತಾಃ ।**
**ಅಸತ್ಸದಿತಿ ಪಶ್ಯಂತಿ ಪುರತೋ ವಾ ವ್ಯವಸ್ಥಿತಮ್ ॥ ೪೦ ॥**

**ನ ಸ್ಥಾಸ್ನು ನ ಶುಭಂ ಕಿಂಚಿನ್ನ ಸುಖಂ ಮೇ ನ ಕಿಂಚನ ।**
**ಮಮಾಹಮೇವ ಮತ್ತೋನ್ಯದನ್ಯದೇವಾಖಿಲಂ ಜಗತ್ ॥ ೪೧ ॥**

''ಕರ್ಮವೆಂಬ ಇಂದ್ರಜಾಲಿಕನಿಂದಲೇ ವಿಪರೀತವಾಗಿ ತೋರಿಸಲ್ಪಟ್ಟ ಈ ವಿಶ್ವವು ವಿಡಂಬನವೆಂದು ಈ ದಿವಸ ನಾನು ಸ್ಪಷ್ಟವಾಗಿ ಕಂಡೆನು. ಕಾಮ ಶೋಕ ಭಯ ಮೂರ್ಛೆ ಸ್ವಪ್ನ ಚೌರ್ಯ ಮೊದಲಾದುವುಗಳಿಂದ ಪೀಡಿತರಾದವರು ಅಸತ್ತನ್ನು ಮುಂದಿರುವ ಸತ್ಪದಾರ್ಥವೆಂದು ಕಾಣುತ್ತಾರೆ. ಅಸತ್ಪದಾರ್ಥವನ್ನು ಕಣ್ಣಮುಂದಿರುವ ಸತ್ಪದಾರ್ಥವನ್ನಾಗಿ ತಿಳಿಯುತ್ತಾರೆಂದು ಭಾವವು. ಜಗತ್ತಿನಲ್ಲಿ ಸ್ಥಿರವಾಗಿರುವ ವಸ್ತುವೂ ಶುಭವಾಗಿರುವ ವಸ್ತುವೂ ನನಗೆ ಸ್ವಲ್ಪವಾದರೂ ಸುಖವೂ ಇಲ್ಲ. ನನಗೆ ನಾನೇ. ಜಗತ್ತೆಲ್ಲವೂ ನನಗಿಂತ ಬೇರೆಯೇ ಆಗಿರುತ್ತದೆ.

**ಅಹಮನ್ಯದಿತಿ ದ್ವಾಭ್ಯಾಂ ಶಬ್ದಾಭ್ಯಾಂ ಸತ್ಯಮರ್ಪಿತಮ್ ।**
**ತಥಾಪಿ ಕೋಪ್ಯಯಂ ಮೋಹಾದಾಗ್ರಹೋ ವಿಗ್ರಹಾದಿಷು ॥ ೪೨ ॥**

ನಾನೊಂದು. ಇತರ ವಸ್ತುವೊಂದು. ಈ ಎರಡು ಶಬ್ದಗಳಿಂದ ಉಲ್ಲೇಖಿಸಲ್ಪಡುವುದೇ ಸತ್ಯವು. ಆದರೂ ಮೋಹದಿಂದ ಶರೀರಾದಿಗಳಲ್ಲಿ ಯಾವುದೋ ಈ ಆಗ್ರಹ–ಆಸಕ್ತಿಯುಂಟಾಗುವುದು.

**ಅಹಂ ಮಮ ಶುಭಂ ನಿತ್ಯಂ ಸುಖಮಿತ್ಯತಥಾತ್ಮಸು ।**
**ಅಸ್ಮಾದೇವ ವಿಪರ್ಯಾಸಾದ್ಭ್ರಾಂತೋಹಂ ಭವವಾರಿಧೌ ॥ ೪೩ ॥**

**ಜನ್ಮದುಃಖಜರಾಮೃತ್ಯುಮಹಾಮಕರಭೀಕರೇ ।**
**ಇತಿ ಸಾಮ್ರಾಜ್ಯಲಕ್ಷ್ಮೀಂ ಸ ತ್ಯಕ್ತುಸ್ಸರಭವತ್ತದಾ ॥ ೪೪ ॥**

**ಕ್ಷಿಪ್ತ್ವಾ ಲೌಕಾಂತಿಕಾವಾಪ್ತಪೂಜೋ ರಾಜ್ಯಭರಂ ಸುತೇ ।**
**ಸುಮತೌ ಪ್ರಾಪ್ತಕಲ್ಯಾಣಸ್ಸುರೇಂದ್ರೈಃ ಪರಿವಾರಿತಃ ॥ ೪೫ ॥**

**ಆರುಹ್ಯ ಶಿಬಿಕಾಂ ಸೂರ್ಯಪ್ರಭಾಖ್ಯಾಂ ಪುಷ್ಪಕೇ ವನೇ ।**
**ಮಾರ್ಗಶೀರ್ಷೇ ಸಿತೇ ಪಕ್ಷೇ ಪ್ರತಿಪದ್ಯಪರಾಹ್ಣಕೇ ॥ ೪೬ ॥**

**ದೀಕ್ಷಾಂ ಷಷ್ಠೋಪವಾಸೇನ ಸಸಹಸ್ರನೃಪೋಗ್ರಹೀತ್ ।**
**ಮನಃಪರ್ಯಾಯಸಂಜ್ಞಾನೋ ದ್ವಿತೀಯೇಹ್ನಿ ಪ್ರವಿಷ್ಟವಾನ್ ॥ ೪೭ ॥**

**ಚರ್ಯಾಂ ಶೈಲಪುರೇ ಪುಷ್ಯಮಿತ್ರಶ್ಚಾಮೀಕರಚ್ಛವಿಃ ।**
**ತತ್ರ ತಂ ಭೋಜಯಿತ್ವಾಪ ಪಂಚಾಶ್ಚರ್ಯಾಣಿ ಪಾರ್ಥಿವಃ ॥ ೪೮ ॥**

ಆತ್ಮನಿಂದ ಬೇರೆಯಾಗಿರುವ ವಸ್ತುಗಳಲ್ಲಿ ನಾನೆಂದೂ ಯಾವಾಗಲೂ ನನ್ನ ಸುಖವು ಶುಭವಾದುದೆಂದೂ ವ್ಯತ್ಯಸ್ತವಾಗಿ ತಿಳಿದಿರುವುದರಿಂದಲೇ ನಾನು ಜನ್ಮ, ದುಃಖ, ಜರಾ, ಮರಣಗಳೆಂಬ ದೊಡ್ಡ ಮೊಸಳೆಗಳಿಂದ ಭಯಂಕರವಾದ ಸಂಸಾರವೆಂಬ ಸಮುದ್ರದಲ್ಲಿ ತಿರುಗಿದೆನು'' ಈ ಪ್ರಕಾರವಾಗಿ ವಿಚಾರಮಾಡಿ ಸ್ವಾಮಿಯು ಸಾಮ್ರಾಜ್ಯಸಂಪತ್ತಿಯನ್ನು ತ್ಯಜಿಸಬೇಕೆಂಬ ಇಚ್ಛೆಯುಳ್ಳವರಾಗಿ ರಾಜ್ಯಭಾರವನ್ನು ಸುಮತಿಯೆಂಬ ಪುತ್ರನಲ್ಲಿರಿಸಿದರು. ಆಗ ಲೌಕಾಂತಿಕದೇವರ್ಕಳು ಬಂದು ಸ್ವಾಮಿಯನ್ನು ಪೂಜಿಸಿದರು. ದೇವೇಂದ್ರರು ಬಂದು ಸ್ವಾಮಿಯನ್ನು ಸುತ್ತಿಕೊಂಡು ಪರಿನಿಷ್ಕ್ರಮಣಕಲ್ಯಾಣವನ್ನು ನಡೆಸಿದರು. ಸ್ವಾಮಿಯು ಸೂರ್ಯಪ್ರಭೆಯೆಂಬ ಪಲ್ಲಕ್ಕಿಯನ್ನೇರಿ ಹೋಗಿ ಪುಷ್ಪಕವೆಂಬ ವನದಲ್ಲಿ ಮಾರ್ಗಶಿರಮಾಸದ ಶುಕ್ಲಪಕ್ಷದ ಪ್ರಥಮೆಯದಿವಸ ಸಾಯಂಕಾಲದಲ್ಲಿ ಆರು ಉಪವಾಸಗಳ ನಿಯಮವನ್ನು ಕೈಗೊಂಡು ಸಾವಿರ ಮಂದಿ ರಾಜರುಗಳೊಡನೆ ದೀಕ್ಷೆಯನ್ನು ಗ್ರಹಣ ಮಾಡಿದರು. ಮರುದಿವಸ ಮನಃಪರ್ಯಯವೆಂಬ ಜ್ಞಾನವನ್ನು ಪಡೆದವರಾಗಿ ಆಹಾರಕ್ಕೋಸ್ಕರ ಶೈಲಪುರವನ್ನು ಪ್ರವೇಶಿಸಿದರು. ಅಲ್ಲಿ ಬಂಗಾರದಂತೆ ದೇಹಕಾಂತಿಯುಳ್ಳ ಪುಷ್ಯಮಿತ್ರರಾಜನು ಅವರಿಗೆ ಆಹಾರವನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಪಡೆದನು.

**ಏವಂ ತಪಸ್ಯತೋ ಯಾತಾಃ ಛಾದ್ಮಸ್ಥ್ಯೇನ ಚತುಸ್ಸಮಾಃ ।**
**ಮೂಲರ್ಕ್ಷೇ ಕಾರ್ತಿಕೇ ಶುದ್ಧದ್ವಿತೀಯಾಯಾಂ ದಿನಕ್ಷಯೇ ॥ ೪೯ ॥**

**ದಿನದ್ವಯೋಪವಾಸಸ್ಸನ್ನಧಸ್ತಾನ್ನಾಗಭೂರುಹಃ ।**
**ದೀಕ್ಷಾವನೇ ವಿಧೂತಾಘಃ ಪ್ರಾಪ್ತಾನಂತಚತುಷ್ಟಯಃ ॥ ೫೦ ॥**

**ಚತುರ್ವಿಧಾಮರಾಧೀಶವಿಹಿತಾತರ್ಕ್ಯವೈಭವಃ ।**
**ಸುನಿರೂಪಿತವಿಶ್ವಾರ್ಥದಿವ್ಯಧ್ವನಿವಿರಾಜಿತಃ ॥ ೫೧ ॥**

**ವಿದರ್ಭನಾಮಮುಖ್ಯಾಷ್ಟಾಶೀತಿಸಪ್ತರ್ದ್ಧಿಸಂಯುತಃ ।**
**ಶೂನ್ಯದ್ವಯೇಂದ್ರಿಯೈಕೋಕ್ತಶ್ರುತಕೇವಲಿನಾಯಕಃ ॥ ೫೨ ॥**

**ಖದ್ವಯೇಂದ್ರಿಯಪಂಚೇಂದ್ರಿಯೈಕಶಿಕ್ಷಕರಕ್ಷಕಃ ।**
**ಶೂನ್ಯದ್ವಯಾಬ್ಧಿಕರ್ಮೋಕ್ತತ್ರಿಜ್ಞಾನಧರಸೇವಿತಃ ॥ ೫೩ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಕಾಕಂದೀಪಟ್ಟಣದಲ್ಲಿ ಸುಗ್ರೀವಮಹಾರಾಜಂಗಂ ಜಯರಾಮಾದೇವಿಗಂ ಮೂಲಾನಕ್ಷತ್ರದಲ್ಲುದಯಿಸಿದ ಶುಭ್ರವರ್ಣಮನುಳ್ಳ ನೂರುಬಿಲ್ಲುತ್ಸೇಧಮನುಳ್ಳ ಎರಡುಲಕ್ಷ ಪೂರ್ವಾಯುಷ್ಯಮನುಳ್ಳ ನೆಗಳೆಯ ಲಾಂಛನ ಮನುಳ್ಳ ಅಜಿತಯಕ್ಷಮಹಾಕಾಳೀ–ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ಸುಪ್ರಭಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಪುಷ್ಪದಂತತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಖದ್ವಯೇಂದ್ರಿಯಮುನ್ಮುಕ್ತಕೇವಲಜ್ಞಾನಲೋಚನಃ ।**
**ಖತ್ರಯತ್ರ್ಯೃಕನಿರ್ಣೀತವಿಕ್ರಿಯರ್ದ್ಧಿವಿವೇಷ್ಟಿತಃ ॥ ೫೪ ॥**

**ಶೂನ್ಯದ್ವಯೇಂದ್ರಿಯರ್ದ್ಧ್ಯುಕ್ತ ಮನಃಪರ್ಯಯಬೋಧನಃ ।**
**ಶೂನ್ಯದ್ವಯರ್ತುಷಟ್ಪ್ರೋಕ್ತವಾದಿವಂದ್ಯಾಂಘ್ರಿಮಂಗಲಃ ॥ ೫೫ ॥**

**ಪಿಂಡಿತರ್ಷಿದ್ವಿಲಕ್ಷೇಶಃ ಖಚತುಷ್ಕಾಷ್ಟವಹ್ನಿಮಾ– ।**
**ಘೋಷಾರ್ಯಾದ್ಯಾರ್ಯಿಕೋಪೇತೋ ದ್ವಿಲಕ್ಷಶ್ರಾವಕಾರ್ಚಿತಃ ॥ ೫೬ ॥**

**ಶ್ರಾವಿಕಾಪಂಚಲಕ್ಷಾರ್ಚ್ಯಃ ಸಂಖ್ಯಾತೀತಮರುದ್ಗಣಃ ।**
**ತಿರ್ಯಕ್ಸಂಖ್ಯಾತಸಂಪನ್ನೋ ಗಣೈರಿತ್ಯೇಭಿರನ್ವಿತಃ ॥ ೫೭ ॥**

**ವಿಹೃತ್ಯ ವಿಷಯಾನ್ಪ್ರಾಪ್ಯ ಸಮ್ಮೇದಂ ರುದ್ಧಯೋಗಕಃ ।**
**ಮಾಸೇ ಭಾದ್ರಪದೇಷ್ಟಮ್ಯಾಂ ಶುಕ್ಲೇ ಮೂಲೇಪರಾಹ್ಣಕೇ ॥ ೫೮ ॥**

**ಸಹಸ್ರಮುನಿಭಿಃ ಸಾರ್ಧಂ ಮುಕ್ತಿಂ ಸುವಿಧಿರಾಪ್ತವಾನ್ ।**
**ನಿಲಿಂಪಾಃ ಪರಿನಿರ್ವಾಣಕಲ್ಯಾಣಾಂತೇ ದಿವಂ ಯಯುಃ ॥ ೫೯ ॥**

ಈ ರೀತಿಯಾಗಿ ತಪಸ್ಸನ್ನು ಮಾಡುತ್ತ ಛದ್ಮಸ್ಥಾವಸ್ಥೆಯಲ್ಲಿ ನಾಲ್ಕು ವರ್ಷಗಳನ್ನು ಕಳೆದು ಕಾರ್ತಿಕಮಾಸದ ಶುಕ್ಲಪಕ್ಷದ ದ್ವಿತೀಯೆಯಲ್ಲಿ ಸಾಯಂಕಾಲದಲ್ಲಿ ಮೂಲನಕ್ಷತ್ರದಲ್ಲಿ ಎರಡು ದಿನಗಳ ಉಪವಾಸವನ್ನು ಕೈಗೊಂಡು ದೀಕ್ಷಾವನದಲ್ಲಿ ನಾಗವೃಕ್ಷದಕೆಳಗೆ ಘಾತಿಕರ್ಮಗಳನ್ನು ನಾಶಮಾಡಿ ಅನಂತಜ್ಞಾನ ದರ್ಶನ ವೀರ್ಯ ಸುಖಗಳೆಂಬ ಅನಂತಚತುಷ್ಟಯವನ್ನು ಪಡೆದು ಭವನ ವ್ಯಂತರ ಜ್ಯೋತಿಷ್ಕಲ್ಪ ವಾಸಿಗಳೆಂಬ ಚತುರ್ವಿಧಾಮರೇಂದ್ರರಿಂದ ಮಾಡಲ್ಪಟ್ಟ ಊಹಿಸಲಾಗದ ವೈಭವವುಳ್ಳವರೂ ಸಕಲಪದಾರ್ಥಗಳನ್ನು ಚೆನ್ನಾಗಿ ನಿರೂಪಣಮಾಡುವ ದಿವ್ಯಧ್ವನಿಯಿಂದ ವಿರಾಜಿಸುವವರೂ ವಿದರ್ಭನೇ ಮೊದಲಾದ ಎಂಬತ್ತೆಂಟು ಮಂದಿ ಸಪ್ತರ್ದ್ಧಿ ಸಂಪನ್ನರಾದ ಗಣಧರ – ಮುನಿಗಳುಳ್ಳವರೂ ಸಾವಿರದೈನೂರು ಮಂದಿ ಶ್ರುತ ಕೇವಲಿಮುನಿಗಳಿಗೆ ನಾಯಕರೂ ೧ ಲಕ್ಷ ೫೫ ಸಾವಿರದ ಐದುನೂರು ಮಂದಿ ಶಿಕ್ಷಕರೆಂಬ ಮುನಿಗಳಿಗೆ ರಕ್ಷಕರೂ ಎಂಟು ಸಾವಿರದ ನಾಲ್ಕುನೂರು ಮಂದಿ ಮತಿ ಶ್ರುತಾವಧಿಜ್ಞಾನತ್ರಯಧಾರಿಗಳಾದ ಮುನಿಗಳಿಂದ ಸೇವಿಸಲ್ಪಡುವವರೂ ಏಳು ಸಾವಿರದ ಐದುನೂರು ಮಂದಿ ಕೇವಲಜ್ಞಾನವೆಂಬ ನೇತ್ರವುಳ್ಳ ಕೇವಲಿಗಳುಳ್ಳವರೂ ೧೩ ಸಾವಿರ ಮಂದಿ ವಿಕ್ರಿಯರ್ದ್ಧಿಸಂಪನ್ನರಾದ ಮುನಿಗಳಿಂದ ಸ್ತುತಿಸಲ್ಪಟ್ಟವರೂ ಏಳು ಸಾವಿರದ ಐದುನೂರು ಮಂದಿ ಮನಃಪರ್ಯಯಜ್ಞಾನಿಗಳುಳ್ಳವರೂ ಆರು ಸಾವಿರದ ಆರು ನೂರು ಮಂದಿ ವಾದಿಮುನಿಗಳಿಂದ ವಂದಿಸಲ್ಪಡತಕ್ಕ ಮಂಗಲಕರವಾದ ಚರಣಗಳುಳ್ಳವರೂ ಒಟ್ಟು ಎರಡು ಲಕ್ಷ ಋಷಿಗಳಿಗೆ ಸ್ವಾಮಿಯೂ ಘೋಷಾರ್ಯಾ ಮೊದಲಾದ ಮೂರು ಲಕ್ಷ ಎಂಭತ್ತು ಸಾವಿರ ಮಂದಿ ಆರ್ಯಿಕೆಯರುಳ್ಳವರೂ ಎರಡು ಲಕ್ಷ ಶ್ರಾವಕರಿಂದ ಪೂಜಿಸಲ್ಪಡುವವರೂ ಐದು ಲಕ್ಷ ಶ್ರಾವಿಕೆಯರಿಂದ ಪೂಜಿಸಲ್ಪಡತಕ್ಕವರೂ ಅಸಂಖ್ಯಾತ ದೇವದೇವೀ ಸಮೂಹವುಳ್ಳವರೂ ಸಂಖ್ಯಾತತಿರ್ಯಕ್ಪ್ರಾಣಿಗಳುಳ್ಳವರೂ ಈ ಸಮೂಹಗಳಿಂದ ಪರಿವೇಷ್ಟಿತರೂ ದೇಶಗಳಲ್ಲಿ ವಿಹರಿಸಿ ಕೊನೆಗೆ ಸಮ್ಮೇದಪರ್ವತವನ್ನು ಹೊಂದಿ ಯೋಗನಿರೋಧವನ್ನು ಮಾಡಿದವರೂ ಆದ ಸುವಿಧಿ–ಪುಷ್ಪದಂತತೀರ್ಥಂಕರರು ಭಾದ್ರಪದಮಾಸದ ಶುಕ್ಲಪಕ್ಷದ ಅಷ್ಟಮೀತಿಥಿಯಲ್ಲಿ ಮೂಲನಕ್ಷತ್ರದಲ್ಲಿ ಸಾಯಂ ಕಾಲ ಸಹಸ್ರಮುನಿಗಳೊಡನೆ ಮುಕ್ತಿಯನ್ನು ಹೊಂದಿದರು. ಆಗ ದೇವರ್ಕಳು ಬಂದು ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಬಳಿಕ ಸ್ವರ್ಗಕ್ಕೆ ತೆರಳಿದರು.

**ದುರ್ಗಂ ಮಾರ್ಗಂ ಪರೇಷಾಂ ಸುಗಮಮಭಿಗಮಾತ್ಸ್ವಸ್ಯ ಶುದ್ಧಂ ವ್ಯಧಾದ್ಯಃ ।**
**ಪ್ರಾಪ್ತುಂ ಸ್ವರ್ಗಾಪವರ್ಗೌ ಸುವಿಧಿರುಪಶಮಂ ಚೇತಸಾ ಬಿಭ್ರತಾಂ ತಮ್ ।**
**ಭಕ್ತಾನಾಂ ಮೋಕ್ಷಲಕ್ಷ್ಮೀಪತಿಮತಿವಿಕಸತ್ಪುಷ್ಪದಂತಂ ಭದಂತಮ್ ।**
**ಭಾಸ್ವಂತಂ ದಂತಕಾಂತ್ಯಾ ಪ್ರಹಸಿತವದನಂ ಪುಷ್ಪದಂತಂ ನಮಾಮಃ ॥**

ಬೇರೆಯವರಿಗೆ ದುರ್ಗಮವಾದ ಮುಕ್ತಿಮಾರ್ಗವನ್ನು ತನ್ನ ಜ್ಞಾನಬಲದಿಂದ ಗಮನದಿಂದ ಯಾವನು ಸುಗಮವನ್ನಾಗಿಯೂ ಶುದ್ಧವನ್ನಾಗಿಯೂ ಮಾಡಿದನೋ ಸ್ವರ್ಗಮೋಕ್ಷಗಳನ್ನು ಪಡೆಯುವುದಕ್ಕೋಸ್ಕರ ಮನಸ್ಸಿನಿಂದ ಉಪಶಮವನ್ನು ಧರಿಸಿರುವ ಭಕ್ತರಿಗೆ ಶ್ರೇಷ್ಠವಾದ ವಿಧಿರೂಪನಾಗಿರುತ್ತಾನೋ ಅಂತಹ ಮೋಕ್ಷ ಲಕ್ಷ್ಮಿಯ ಪತಿಯು ಅರಳಿದ ಹೂವಿನಂತೆ ಹಲ್ಲುಗಳುಳ್ಳವನೂ ದಿಗಂಬರನೂ ದಂತ ಕಾಂತಿಯಿಂದ ಪ್ರಕಾಶಮಾನನೂ ನಗುಮೊಗವುಳ್ಳವನೂ ಆದ ಪುಷ್ಪದಂತನನ್ನು ನಮಸ್ಕರಿಸುತ್ತೇವೆ.

**ಶಾಂತಂ ವಪುಃ ಶ್ರವಣಹಾರಿ ವಚಶ್ಚರಿತ್ರಮ್ ।**
**ಸರ್ವೋಪಕಾರಿ ತವ ದೇವ ತತೋ ಭವಂತಮ್ ।**
**ಸಂಸಾರಮಾರವಮಹಾಸ್ಥಲರುಂದ್ರಸಾಂದ್ರ– ।**
**ಚ್ಛಾಯಾಮಹೀರುಹಮಿಮೇ ಸುವಿಧಿಂ ಶ್ರಯಾಮಃ ॥ ೬೧ ॥**

ಸ್ವಾಮಿಯೆ! ನಿನ್ನ ದೇಹವು ಶಾಂತವಾದುದು. ವಚನವು ಶ್ರೋತ್ರಗಳಿಗೆ ಇಂಪಾದುದು. ಚರಿತ್ರವು ಎಲ್ಲರಿಗೂ ಉಪಕಾರಿಯಾದುದು. ಆದುದರಿಂದ ಈ ನಾವು ಸಂಸಾರವೆಂಬ ದೊಡ್ಡ ಮರುಸ್ಥಲದಲ್ಲಿ ದಪ್ಪವೂ ವಿಶಾಲವೂ ಆದ ನೆರಳುಳ್ಳ ಮರದಂತಿರುವವನೂ ಸುವಿಧಿಯೂ ಆದ ತಮ್ಮನ್ನು ಆಶ್ರಯಿಸುತ್ತೇವೆ.

**ಯೋಜಾಯತ ಕ್ಷಿತಿಭೃದತ್ರ ಮಹಾದಿಪದ್ಮಃ– ।**
**ಪಶ್ಚಾದಭೂದ್ದಿವಿ ಚತುರ್ದಶಕಲ್ಪನಾಥಃ ।**
**ಪ್ರಾಂತೇ ಬಭೂವ ಭರತೇ ಸುವಿಧಿರ್ನೃಪೇಂದ್ರ– ।**
**ಸ್ತೀರ್ಥೇಶ್ವರಸ್ಸ ನವಮಃ ಕುರುತಾಚ್ಛ್ರಿಯಂ ವಃ ॥ ೬೨ ॥**

ಯಾವನು ಮೊದಲು ಈ ಮನುಷ್ಯಲೋಕದಲ್ಲಿ ಮಹಾಪದ್ಮರಾಜನಾಗಿ ಜನಿಸಿದನೋ ಬಳಿಕ ಯಾವನು ಸ್ವರ್ಗದಲ್ಲಿ ಹದಿನಾಲ್ಕನೆಯದಾದ ಪ್ರಾಣತಕಲ್ಪಕ್ಕೆ ಇಂದ್ರನಾದನೋ ಕೊನೆಯಲ್ಲಿ ಭರತ ಕ್ಷೇತ್ರದಲ್ಲಿ ಯಾವನು ಸುವಿಧಿರಾಜನಾದನೋ ಅಂತಹ ಒಂಬತ್ತನೆಯ ತೀರ್ಥಂಕರರಾದ ಪುಷ್ಪದಂತಸ್ವಾಮಿಯು ನಿಮ್ಮಗಳಿಗೆ ಸಂಪತ್ತಿಯನ್ನುಂಟುಮಾಡಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಪುಷ್ಪದಂತಪುರಾಣಾವಸ್ಥಿತಿಃ ಪಂಚಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಪುಷ್ಪದಂಥತೀರ್ಥಕರಪುರಾಣವೆಂಬ
ಐವತ್ತೈದನೆಯ ಪರ್ವವು ಸಮಾಪ್ತವಾದುದು.

---

# ಅಥ ಶೀತಲತೀರ್ಥಕರಪುರಾಣಂ

**ಶೀತಲೋ ಯಸ್ಯ ಸದ್ಧರ್ಮಃ ಕರ್ಮಘರ್ಮಾಂಶುಭೀಷುಭಿಃ ।**
**ಸಂತಪ್ತಾನಾಂ ಶಶೀವಾಸೌ ಶೀತಲಃ ಶೀತಲೋಸ್ತು ನಃ ॥ ೧ ॥**

ಯಾವನ ಸದ್ಧರ್ಮವು ಕರ್ಮವೆಂಬ ಸೂರ್ಯನ ಕಿರಣಗಳಿಂದ ಸಂತಪ್ತರಾದವರಿಗೆ, ಚಂದ್ರನಂತೆ, ಶೀತಲವಾಗಿದೆಯೋ ಅಂತಹ ಈ ಶೀತಲತೀರ್ಥಂಕರನು ನಮ್ಮಗಳಿಗೆ ಶೀತಲನಾಗಿರಲಿ.

**ಪುಷ್ಕರದ್ವೀಪಪೂರ್ವಾರ್ಧಮಂದರಪ್ರಾಗ್ವಿದೇಹಭಾಕ್ ।**
**ಸೀತಾವಾಕ್ತಟವತ್ಸಾಖ್ಯಸುಸೀಮಾನಗರಾಧಿಪಃ ॥ ೨ ॥**

**ಭೂಪತಿಃ ಪದ್ಮಗುಲ್ಮಾಖ್ಯೋ ದೃಷ್ಟೋಪಾಯಚತುಷ್ಟಯಃ ।**
**ಪಂಚಾಂಗಮಂತ್ರನಿರ್ಣೀತಸಂಧಿವಿಗ್ರಹತತ್ತ್ವವಿತ್ ॥ ೩ ॥**

**ಪ್ರಜ್ಞಾವಾರಿಪರೀಷೇಕವೃದ್ಧಿಮದ್ರಾಜ್ಯಭೂರುಹಃ ।**
**ಸಪ್ತಪ್ರಕೃತಿಶಾಖಾಭಿಃ ಫಲತ್ಯಸ್ಯ ಫಲತ್ರಯಮ್ ॥ ೪ ॥**

ಪುಷ್ಕರಾರ್ಧದ್ವೀಪದ ಪೂರ್ವಮೇರುಪರ್ವತದ ಪೂರ್ವವಿದೇಹವನ್ನು ಹೊಂದಿರುವ ಸೀತಾನದಿಯ ಪಶ್ಚಿಮತೀರದಲ್ಲಿರುವ ವತ್ಸದೇಶದ ಸುಸೀಮಾ ನಗರದ ದೊರೆಯಾದ ಪದ್ಮಗುಲ್ಮನೆಂಬ ರಾಜನು ಸಾಮ ದಾನ ಭೇದ ದಂಡಗಳೆಂಬ ಉಪಾಯಚತುಷ್ಟಯವನ್ನು ಕಂಡವನೂ ಪಂಚಾಂಗಮಂತ್ರಗಳಿಂದ ನಿರ್ಣಯಿಸಲ್ಪಟ್ಟ ಸಂಧಿ ವಿಗ್ರಹತತ್ತ್ವಗಳನ್ನು ತಿಳಿದವನೂ ಆಗಿದ್ದನು. ಅವನ ಪ್ರಜ್ಞೆಯೆಂಬ ಜಲದ ಸೇಚನೆಯಿಂದ ವೃದ್ಧಿಯನ್ನು ಹೊಂದಿರುವ ರಾಜ್ಯವೆಂಬ ವೃಕ್ಷವು ಸ್ವಾಮಿ, ಮಂತ್ರಿ, ಪ್ರಾಕಾರ, ಕೋಶ, ಮಿತ್ರ, ದೇಶ, ಸೇನೆಗಳೆಂಬ ಕೊಂಬೆಗಳಿಂದ ಧರ್ಮ ಅರ್ಥ ಕಾಮಗಳೆಂಬ ಮೂರು ಫಲಗಳನ್ನು ಕೊಡುತ್ತದೆ.

**ಪ್ರತಾಪಬಾಡವಾಲೋಲಜ್ವಾಲಾಮಾಲಾಪರಿಸ್ಫುರ- ।**
**ಚ್ಚಂಡಾಸಿಧಾರಾವಾರಾರ್ಧಿಮಗ್ನಾರಾತಿಮಹೀಧರಃ ॥ ೫ ॥**

**ಸ್ವಯಮುತ್ಪಾದ್ಯ ದೈವೇನ ಲಕ್ಷ್ಮೀಂ ಬುದ್ಧ್ಯೋದ್ಯಮೇನ ಚ ।**
**ವಿಧಾಯ ಸರ್ವಸಂಭೋಗ್ಯಾಂ ಭೋಕ್ತಾಪಿ ಗುಣವಾನಸೌ ॥ ೬ ॥**

ಪ್ರತಾಪವೆಂಬ ಬಡಬಾಗ್ನಿಯ ಚಂಚಲವಾದ ಜ್ವಾಲೆಗಳ ಮಾಲೆಯಿಂದ ಪ್ರಕಾಶಿಸುತ್ತಿರುವ ತೀಕ್ಷ್ಣವಾದ ಖಡ್ಗಧಾರೆಯ ಜಲವೆಂಬ ಸಮುದ್ರದಲ್ಲಿ ಮುಳುಗಿದ ಶತ್ರುಗಳೆಂಬ ಪರ್ವತಗಳುಳ್ಳವನೂ ಗುಣವಂತನೂ ಆದ ಈ ಪದ್ಮಗುಲ್ಮರಾಜನು ದೈವದಿಂದಲೂ ಬುದ್ಧಿಯಿಂದಲೂ ಉದ್ಯಮದಿಂದಲೂ ತಾನೇ ಸಂಪತ್ತಿಯನ್ನು ಗಳಿಸಿ ತಾನು ಭೋಗಿಸುವವನಾದರೂ ಅದನ್ನು ಎಲ್ಲರೂ ಭೋಗಿಸುವಂತೆ ಮಾಡಿದನು.

**ನ್ಯಾಯಾರ್ಜಿತಾರ್ಥಸಂತರ್ಪಿತಾರ್ಥಿಸಾರ್ಥೇ ನಿರಾಕುಲಮ್ ।**
**ಪಾತಿ ತಸ್ಮಿನ್ಧರಾಚಕ್ರಂ ಸರ್ವರ್ತುಸುಖಶಾಲಿನಿ ॥ ೭ ॥**

**ಕೋಕಿಲಾಲಿಕುಲಾಲಾಪಾ ವಿಲಸತ್ಪಲ್ಲವಾಧರಾ ।**
**ಸೌಗಂಧ್ಯಾಂಧಿತಮತ್ತಾಲಿಕಲಿತೋತ್ಪಲಲೋಚನಾ ॥ ೮ ॥**

**ವೀತನೀಹಾರಸಜ್ಜ್ಯೋತ್ಸ್ನಾಭಾಸಾಸ್ವಚ್ಛಾಂಬರಾಂಬರಾ ।**
**ಸಂಪೂರ್ಣಚಂದ್ರಬಿಂಬಾಸ್ಯಾ ವಕುಲಾಮೋದವಾಸಿತಾ ॥ ೯ ॥**

**ಮಲಯಾನಿಲನಿಃಶ್ವಾಸಾ ಕರ್ಣಿಕಾರತನುಚ್ಛವಿಃ ।**
**ವಸಂತಶ್ರೀರಿವಾಯಾತಾ ತತ್ಸಂಗಮಸಮುತ್ಸುಕಾ ॥ ೧೦ ॥**

ನ್ಯಾಯದಿಂದ ಸಂಪಾದಿಸಿದ ಧನದಿಂದ ಯಾಚಕರ ಸಮೂಹವನ್ನು ಸಂತೃಪ್ತಿಗೊಳಿಸಿದವನೂ ಎಲ್ಲಾ ಋತುಗಳಲ್ಲಿ ಸುಖವನ್ನನುಭವಿಸುವವನೂ ಆದ ಆ ಪದ್ಮಗುಲ್ಮರಾಜನು ನಿರಾಕುಲವಾಗಿ ಭೂಮಂಡಲವನ್ನು ಪಾಲಿಸುತ್ತಿರುವಾಗ ಕೋಗಿಲೆಗಳ ಮತ್ತು ದುಂಬಿಗಳ ಸಮೂಹದ ಭಾಷಣವುಳ್ಳವಳೂ ಪ್ರಕಾಶಮಾನವಾದ ತಳಿರೆಂಬ ತುಟಿಯುಳ್ಳವಳೂ ಪರಿಮಳದಿಂದ ಕುರುಡಾಗಿ ಮಾಡಲ್ಪಟ್ಟ ಮದಿಸಿರುವ ದುಂಬಿಗಳಿಂದ ಕೂಡಿರುವ ನೈದಿಲೆಗಳೆಂಬ ಕಣ್ಣುಗಳುಳ್ಳವಳೂ ಹಿಮವಿಲ್ಲದಿರುವುದೂ ಬೆಳದಿಂಗಳಿನಿಂದ ಕೂಡಿರುವುದೂ ಆದ ಕಾಂತಿಯಿಂದ ಸ್ವಚ್ಛವಾದ ಆಕಾಶವೆಂಬ ವಸ್ತ್ರವುಳ್ಳವಳೂ ಸಂಪೂರ್ಣಚಂದ್ರಬಿಂಬವೆಂಬ ಮುಖವುಳ್ಳವಳೂ ವಕುಲಪುಷ್ಪಗಳ ಪರಿಮಳಯುಕ್ತಳೂ ಮಲಯಪರ್ವತದ ಗಾಳಿಯೆಂಬ ನಿಃಶ್ವಾಸವುಳ್ಳವಳೂ ಬೆಟ್ಟತಾವರೆಯೆಂಬ ದೇಹಕಾಂತಿಯುಳ್ಳವಳೂ ಆದ ವಸಂತಲಕ್ಷ್ಮಿಯು ಆ ಪದ್ಮಗುಲ್ಮರಾಜನ ಸಂಗಮದಲ್ಲಿ ಕುತೂಹಲವುಳ್ಳವಳಾಗಿ ಬಂದಳೋ ಎಂಬಂತೆ ವಸಂತಋತುವು ಪ್ರಾಪ್ತವಾಯಿತು.

**ಅನಂಗಸ್ತದ್ಬಲೇನೈನಂ ಪಂಚಬಾಣೋಪಿ ನಿಷ್ಠುರಮ್ ।**
**ಅವಿಧ್ಯದ್ಬಹುಬಾಣೋ ವಾ ಕೋ ನ ಕಾಲಬಲೇ ಬಲೀ ॥ ೧೧ ॥**

ಕಾಮನು ಐದು ಬಾಣಗಳುಳ್ಳವನಾದರೂ ಆ ವಸಂತಲಕ್ಷ್ಮಿಯ ಬಲದಿಂದ ಈ ಪದ್ಮಗುಲ್ಮರಾಜನನ್ನು ತೀವ್ರವಾಗಿ ಹೊಡೆದನು. ಬಹುಬಾಣಗಳುಳ್ಳ ಯಾವನು ತಾನೆ ಕಾಲದ ಬಲವು ದೊರೆತರೆ ಬಲಿಷ್ಠನಾಗಿರುವುದಿಲ್ಲ?

**ಸುಸುಖೇಪ್ಸುರ್ವಸಂತಶ್ರೀವಿವಶೀಕೃತಮಾನಸಃ ।**
**ತಯಾ ಪ್ರವೃದ್ಧಸಂಪ್ರೀತಿರಾಕ್ರೀಡತ ನಿರಂತರಮ್ ॥ ೧೨ ॥**

ಉತ್ತಮವಾದ ಸುಖವನ್ನು ಹೊಂದಬೇಕೆಂಬ ಇಚ್ಛೆಯುಳ್ಳವನೂ ವಸಂತಲಕ್ಷ್ಮಿಯಿಂದ ಪರವಶವಾಗಿ ಮಾಡಲ್ಪಟ್ಟ ಮನಸ್ಸುಳ್ಳವನೂ ಆದ ಆ ಪದ್ಮಗುಲ್ಮರಾಜನು ಆಕೆಯಿಂದ ವೃದ್ಧಿಯನ್ನು ಹೊಂದಿದ ಪ್ರೀತಿಯುಳ್ಳವನಾಗಿ ಎಡೆಬಿಡದೆ ಕ್ರೀಡಿಸಿದನು.

**ಸಾಪಿ ಕಾಲಾನಿಲೋದ್ಧೂತಾ ಘನಾಲೀವ ವ್ಯಲೀಯತ ।**
**ತದಪಾಯಸಮುದ್ಭೂತಶೋಕವ್ಯಾಕುಲಿತಾಶಯಃ ॥ ೧೩ ॥**

**ಕಾಮೋ ನಾಮ ಖಲಃ ಕೋಪಿ ತಾಪಯತ್ಯಖಿಲಂ ಜಗತ್ ।**
**ಪಾಪೀ ಸ ಕಿಲ ಚಿತ್ತಸ್ಥೋ ವಿಗ್ರಹೀ ವಿಗ್ರಹಾದ್ವಿನಾ ॥ ೧೪ ॥**

**ತಂ ಧ್ಯಾನಾನಲನಿರ್ದಗ್ಧಮದ್ಯೈವ ವಿದಧಾಮ್ಯಹಮ್ ।**
**ಇತ್ಯಾವಿರ್ಭೂತವೈರಾಗ್ಯಶ್ಚಂದನೇ ನಿಜನಂದನೇ ॥ ೧೫ ॥**

**ರಾಜ್ಯಭಾರಂ ಸಮಾರೋಪ್ಯ ಮುನಿಮಾನಂದನಾಮಕಮ್ ।**
**ಸಂಪ್ರಾಪ್ಯ ಸರ್ವಸಂಗಾಂಗವೈಮುಖ್ಯಂ ಸ ಸಮೀಯಿವಾನ್ ॥ ೧೬ ॥**

ಆ ವಸಂತಶ್ರೀಯೂ ಕಾಲವೆಂಬ ಗಾಳಿಯಿಂದ ನೂಕಲ್ಪಟ್ಟು, ಮೇಘಗಳ ಸಾಲಿನಂತೆ, ನಾಶವಾದಳು–ವಸಂತಋತುವು ಕಳೆಯಿತು. ಅದು ಕಳೆದುದರಿಂದುಂಟಾದ ಶೋಕದಿಂದ ವ್ಯಾಕುಲವಾದ ಚಿತ್ತವುಳ್ಳ ಪದ್ಮಗುಲ್ಮ ಮಹಾರಾಜನು "ಯಾವನೋ ಕಾಮನೆಂಬ ದುಷ್ಟನು ನಿಖಿಲಜಗತ್ತನ್ನು ತಾಪ ಗೊಳಿಸುತ್ತಾನೆ. ಆ ಪಾಪಿಯಾದರೋ ದೇಹವಿಲ್ಲದೆ ಮನಸ್ಸಿನಲ್ಲಿದ್ದು ಕಲಹವುಳ್ಳವನಾಗಿರುತ್ತಾನೆ. ಅವನನ್ನು ಈ ದಿವಸವೇ ನಾನು ಧ್ಯಾನವೆಂಬ ಬೆಂಕಿಯಿಂದ ಸುಟ್ಟುಬಿಡುತ್ತೇನೆ." ಈ ರೀತಿಯಾದ ವೈರಾಗ್ಯವುಳ್ಳವನಾಗಿ ಚಂದನನೆಂಬ ತನ್ನ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ಆ ಪದ್ಮಗುಲ್ಮನು ಆನಂದನೆಂಬ ಮುನಿಯನ್ನು ಹೊಂದಿ ಸಕಲಪರಿಗ್ರಹಗಳಲ್ಲಿಯೂ ದೇಹದಲ್ಲಿಯೂ ವಿಮುಖತ್ವವನ್ನು ಹೊಂದಿದನು.

**ವಿಪಾಕಸೂತ್ರಪರ್ಯಂತಸಕಲಾಂಗಧರಃ ಶಮೀ ।**
**ಸ್ವೀಕೃತ್ಯ ತೀರ್ಥಕೃನ್ನಾಮ ವಿಧಾಯ ಸುಚಿರಂ ತಪಃ ॥ ೧೭ ॥**

**ಸಂಪ್ರಾಪ್ಯ ಜೀವಿತಸ್ಯಾಂತಂ ತ್ರಿಧಾರಾಧನಸಾಧನಃ ।**
**ಆರಣಾಖ್ಯೇಭವತ್ಕಲ್ಪೇ ಸುರೇಂದ್ರೋ ರುಂದ್ರವೈಭವಃ ॥ ೧೮ ॥**

ವಿಪಾಕಸೂತ್ರಪರ್ಯಂತವಾದ ಸಕಲಾಂಗಶಾಸ್ತ್ರಧಾರಿಯೂ ಶಾಂತಿಯುಳ್ಳವನೂ ಆದ ಆ ಪದ್ಮಗುಲ್ಮನು ಬಹುಕಾಲದವರೆಗೆ ತಪಸ್ಸನ್ನು ಮಾಡಿ ತೀರ್ಥಕರನಾಮ ವೆಂಬ ಪುಣ್ಯಕರ್ಮವನ್ನು ಸ್ವೀಕರಿಸಿ ಮನೋವಾಕ್ಕಾಯಗಳಿಂದ ಜ್ಞಾನಾದ್ಯಾರಾಧನೆ ಗಳನ್ನು ಆರಾಧಿಸಿದವನಾಗಿ ಸತ್ತು ಆರಣವೆಂಬ ಹದಿನೈದನೆಯ ಸ್ವರ್ಗ-ಕಲ್ಪದಲ್ಲಿ ಅಧಿಕಸಂಪತ್ತಿಯುಳ್ಳ ದೇವೇಂದ್ರನಾಗಿ ಹುಟ್ಟಿದನು.

**ದ್ವಾವಿಂಶತ್ಯಬ್ಧಿಮಾನಾಯುರ್ಹಸ್ತತ್ರಿತಯವಿಗ್ರಹಃ ।**
**ಶುಕ್ಲಲೇಶ್ಯಾದ್ವಯೋ ಮಾಸೈಃ ಸದ್ಯೈಕಾದಶಭಿಃ ಶ್ವಸನ್ ॥ ೧೯ ॥**

**ದ್ವಾವಿಂಶತಿಸಹಸ್ರಾಬ್ದೈರ್ಮಾನಸಾಹಾರತರ್ಪಿತಃ ।**
**ಶ್ರೀಮಾನ್ಮನಃಪ್ರವೀಚಾರಃ ಪ್ರಾಕಾಮ್ಯಾದ್ಯಷ್ಟಧಾಗುಣಃ ॥ ೨೦ ॥**

**ಪ್ರಾಕ್‌ಷಷ್ಠನರಕಾದ್ವ್ಯಾಪ್ತತೃತೀಯಜ್ಞಾನಭಾಸ್ವರಃ ।**
**ತತ್ಪ್ರಮಾಣಬಲಸ್ತಾವತ್‌ಪ್ರಕಾಶತನುವಿಕ್ರಿಯಃ ॥ ೨೧ ॥**

**ವೀತಬಾಹ್ಯವಿಕಾರೋರುವರಸೌಖ್ಯಾಬ್ಧಿಪಾರಗಃ ।**
**ಕಲಾಮಿವ ಕಿಲಾಸಂಖ್ಯಮಯಮಾಯುರಜೀಗಮತ್ ॥ ೨೨ ॥**

ಇಪ್ಪತ್ತೆರಡು ಸಾಗರ ಪರಿಮಿತವಾದ ಆಯುಷ್ಯವುಳ್ಳವನೂ ಮೂರು ಮೊಳ ದಷ್ಟು ಶರೀರವುಳ್ಳವನೂ ದ್ರವ್ಯಶುಕ್ಲ ಭಾವಶುಕ್ಲಲೇಶ್ಯೆಗಳುಳ್ಳವನೂ ಯಾವಾಗಲೂ ಹದಿನೈದು ತಿಂಗಳಿಗೊಮ್ಮೆ ಉಸಿರಾಡಿಸುವವನೂ ಇಪ್ಪತ್ತೆರಡು ಸಾವಿರ ವರುಷ ಗಳಿಗೊಮ್ಮೆ ಮಾನಸಾಹಾರದಿಂದ ತೃಪ್ತಿಯುಳ್ಳವನೂ ಶ್ರೀಮಂತನೂ ಮನಸ್ಸಿ ನಿಂದಲೇ ಕಾಮಸೇವನೆಯುಳ್ಳವನೂ ಪ್ರಾಕಾಮ್ಯ ಮೊದಲಾದ ಎಂಟು ಗುಣಗಳು ಳ್ಳವನೂ ಆರನೆಯ ನರಕದವರೆಗೆ ವ್ಯಾಪಕವಾದ ಅವಧಿಜ್ಞಾನದಿಂದ ಪ್ರಕಾಶ ಮಾನನೂ ಅಲ್ಲಿಯವರೆಗೆ ವ್ಯಾಪಕವಾದ ಬಲ ಪ್ರಕಾಶ ದೇಹವಿಕ್ರಿಯೆಗಳುಳ್ಳವನೂ ಬಾಹ್ಯವಿಕಾರಗಳಿಲ್ಲದೆ ಅಧಿಕವೂ ಶ್ರೇಷ್ಠವೂ ಆದ ಸೌಖ್ಯವೆಂಬ ಸಮುದ್ರದ ಪಾರವನ್ನು ಹೊಂದಿದವನೂ ಆದ ಈ ದೇವೇಂದ್ರನು ಒಂದು ಕಲೆಯನ್ನು- ಅಂಶವನ್ನು ಕಳೆಯುವಂತೆ ತನ್ನ ಅಸಂಖ್ಯವಾದ ಆಯುಷ್ಯವನ್ನು ಕಳೆದನು.

**ತಸ್ಮಿನ್ ಭುವಂ ಸಮಾಯಾತಿ ಷಣ್ಮಾಸಸ್ಥಿತಿಜೀವಿತೇ ।**
**ದ್ವೀಪೇಸ್ಮಿನ್ಭಾರತೇ ವರ್ಷೇ ವಿಷಯೇ ಮಲಯಾಹ್ವಯೇ ॥ ೨೩ ॥**

**ರಾಜಾ ಭದ್ರಪುರೇ ವಂಶೇ ಪುರೋರ್ದೃಢರಥೋಭವತ್ ।**
**ಮಹಾದೇವೀ ಸುನಂದಾಸ್ಯ ತದ್ಗೃಹಂ ಧನದಾಜ್ಞಯಾ ॥ ೨೪ ॥**

**ರತ್ನೈರಪೂರಯನ್ದೇವಾಃ ಷಣ್ಮಾಸಾನ್ಗುಹ್ಯಕಾಹ್ವಯಾಃ ।**
**ಸಾಪಿ ಸ್ವಪ್ನಾನ್ನಿಶೋಪಾಂತೇ ಷೋಡಶಾಲೋಕ್ಯ ಮಾನಿನೀ ॥ ೨೫ ॥**

**ಪ್ರಾವಿಶಂತಂ ಗಜಂ ಚಾಸ್ಯಂ ಭೂಪತೇಸ್ತತ್ಫಲಾನ್ಯವೈತ್ ।**
**ತದಾದ್ಯಾಷಾಢನಕ್ಷತ್ರೇ ಕೃಷ್ಣಾಷ್ಟಮ್ಯಾಂ ದಿವಶ್ಚ್ಯುತಃ ॥ ೨೬ ॥**

**ಚೈತ್ರೇ ಸ ದೇವಃ ಸ್ವರ್ಗಾಗ್ರಾದ್ಗುಣ್ಯೈಃ ಸದ್ವೈತ್ತತಾದಿಭಿಃ ।**
**ಭಾವೀ ಶುಕ್ತಿಪುಟೇ ತಸ್ಯಾ ವಾರ್ಬಿಂದುರ್ವೋದರೇಭವತ್ ॥ ೨೭ ॥**

ಆರು ತಿಂಗಳ ಆಯುಷ್ಯವುಳಿದಿರುವ ಆ ದೇವೇಂದ್ರನು ಭೂಮಿಗೆ ಅವತರಿಸು ವನಾಗಿರುವಾಗ ಈ ಜಂಬೂದ್ವೀಪದ ಭಾರತವರ್ಷದ ಮಲಯದೇಶದಲ್ಲಿರುವ ಭದ್ರಪುರದಲ್ಲಿ ಇಕ್ಷ್ವಾಕುವಂಶದಲ್ಲಿ ದೃಢರಥನೆಂಬ ರಾಜನಿದ್ದನು. ಸುನಂದೆಯೆಂಬ ವಳು ಅವನ ಮಹಾದೇವಿ. ಅವನ ಮನೆಯನ್ನು ಕುಬೇರನ ಆಜ್ಞೆಯಿಂದ ಗುಹ್ಯಕ ರೆಂಬ ದೇವರ್ಕಳು ರತ್ನಗಳಿಂದ ತುಂಬಿದರು. ಆ ಸುನಂದಾದೇವಿಯೂ ಬೆಳಗಿನ ಜಾವದಲ್ಲಿ ಹದಿನಾರು ಕನಸುಗಳನ್ನೂ ಮುಖವನ್ನು ಪ್ರವೇಶಿಸುತ್ತಿರುವ ಆನೆಯ ಕನಸನ್ನೂ ಕಂಡು ಪತಿಯಿಂದ ಅವುಗಳ ಫಲಗಳನ್ನು ತಿಳಿದಳು. ಆಗ ಪೂರ್ವಾ ಷಾಢನಕ್ಷತ್ರದಲ್ಲಿ ಚೈತ್ರಮಾಸದ ಕೃಷ್ಣಪಕ್ಷದ ಅಷ್ಟಮೀತಿಥಿಯಲ್ಲಿ ಸ್ವರ್ಗದಿಂದ ಚ್ಯುತನಾದ ಆ ದೇವನು, ಮುತ್ತಿನ ಚಿಪ್ಪಿನಲ್ಲಿ ಚೆನ್ನಾಗಿ ದುಂಡಾಗಿರುವಿಕೆಯೇ ಮೊದಲಾದ ಗುಣಗಳಿಂದ ಮುಂದಾಗುವ ಜಲಬಿಂದುವಿನಂತೆ, ಆ ಸುನಂದಾ ದೇವಿಯ ಗರ್ಭದಲ್ಲಿ ಸಮಾವಿಷ್ಟನಾದನು.

**ಆದಿಕಲ್ಯಾಣಸಂಪೂಜಾಂ ಪ್ರೀತ್ಯೇತ್ಯ ವಿದಧುಃ ಸುರಾಃ ।**
**ದ್ವಾದಶ್ಯಾಮಸಿತೇ ಮಾಘೇ ವಿಶ್ವಯೋಗೇಜನಿ ಕ್ರಮಾತ್ ॥ ೨೮ ॥**

ಆಗ ದೇವರ್ಕಳು ಪ್ರೀತಿಯಿಂದ ಗರ್ಭಾವತರಣಕಲ್ಯಾಣಪೂಜೆಯನ್ನು ಮಾಡಿದರು. ಬಳಿಕ ಕ್ರಮದಿಂದ ಮಾಘಮಾಸದ ಕೃಷ್ಣಪಕ್ಷದ ದ್ವಾದಶೀತಿಥಿಯಲ್ಲಿ ವಿಶ್ವಯೋಗದಲ್ಲಿ ಜನಿಸಿದನು.

**ತದೈವಾಗತ್ಯ ತಂ ನೀತ್ವಾ ಮಹಾಮೇರುಂ ಮಹೋತ್ಸವಾಃ ।**
**ದೇವಾ ಮಹಾಭಿಷೇಕಾಂತೇ ವ್ಯಾಹರಂತಿ ಸ್ಮ ಶೀತಲಮ್ ॥ ೨೯ ॥**

ಆಗಲೇ ದೇವರ್ಕಳು ಬಂದು ಮಹೋತ್ಸವವುಳ್ಳವರಾಗಿ ಆ ಶಿಶುವನ್ನು ಮಹಾ ಮೇರುವಿಗೊಯ್ದು ಜನ್ಮಾಭಿಷೇಕವನ್ನು ಮಾಡಿದನಂತರದಲ್ಲಿ ಶೀತಲನೆಂದು ನಾಮಕರಣವನ್ನು ಮಾಡಿದರು.

**ನವಕೋಟ್ಯಬ್ಧಿಮಾನೋಕ್ತಪುಷ್ಪದಂತಾಂತರಾಂತಿಮೇ ।**
**ಪಲ್ಯೋಪಮಚತುರ್ಭಾಗೇ ವ್ಯುಚ್ಛಿನ್ನೇ ಧರ್ಮಕರ್ಮಣಿ ॥ ೩೦ ॥**

**ತದಭ್ಯಂತರವರ್ತ್ಯಾಯುರುತ್ಪನ್ನಃ ಕನಕಚ್ಛವಿಃ ।**
**ಖಪಂಚಕೈಕಪೂರ್ವಾಯುರ್ಧನುರ್ನವತಿವಿಗ್ರಹಃ ॥ ೩೧ ॥**

**ಗತೇ ಸ್ವಾಯುಶ್ಚತುರ್ಭಾಗೇ ಕೌಮಾರೇ ಸ್ವಪಿತುಃ ಪದಮ್ ।**
**ಪ್ರಾಪ್ಯ ಪ್ರಧಾನಸಿದ್ಧಂ ಚ ಪಾಲಯಾಮಾಸ ಸ ಪ್ರಜಾಃ ॥ ೩೨ ॥**

ಪುಷ್ಪದಂತ ತೀರ್ಥಂಕರರು ಮುಕ್ತರಾಗಿ ಒಂಬತ್ತು ಕೋಟಿ ಸಾಗರೋಪಮ ಕಾಲವು ಕಳೆಯುವಾಗ ಪಲ್ಯೋಪಮಕಾಲದ ನಾಲ್ಕನೆಯ ಭಾಗದಲ್ಲಿ ಧರ್ಮಕರ್ಮ ಗಳು ನಷ್ಟವಾದಾಗ ಆ ಪುಷ್ಪದಂತ ತೀರ್ಥಂಕರರ ಅಂತರಕಾಲದಲ್ಲಿ ಸೇರಿರುವ ಆಯುಷ್ಯವುಳ್ಳವನೂ ಬಂಗಾರದ ಕಾಂತಿಯುಳ್ಳವನೂ ಒಂದು ಲಕ್ಷ ಪೂರ್ವಾ ಯುಷ್ಯವುಳ್ಳವನೂ ತೊಂಬತ್ತುಧನಸ್ಸುಗಳಷ್ಟು ಉನ್ನತವಾದ ದೇಹವುಳ್ಳವನೂ ಆದ ಆ ಶೀತಲನಾಥನು ತನ್ನ ಆಯುಷ್ಯದ ನಾಲ್ಕನೆಯ ಒಂದು ಭಾಗವು ಕೌಮಾರಾ ವಸ್ಥೆಯಲ್ಲಿ ಕಳೆಯುವಾಗ ತನ್ನ ತಂದೆಯ ಪ್ರಧಾನವೂ ಸಿದ್ಧವೂ ಆದ ರಾಜ್ಯ ಪದವಿಯನ್ನು ಹೊಂದಿ ಪ್ರಜೆಗಳನ್ನು ಕಾಪಾಡಿದನು.

**ಗತ್ಯಾದಿಶುಭನಾಮಾನಿ ಸದ್ವೇದ್ಯಂ ಗೋತ್ರಮುತ್ತಮಮ್ ।**
**ಆಯುಸ್ತೀರ್ಥಕರೋಪೇತಮಪವರ್ತಿವಿವರ್ಜಿತಮ್ ॥ ೩೩ ॥**

**ಸರ್ವಾಣ್ಯೇತಾನಿ ಸಂಭೂಯ ಸ್ವೋತ್ಕೃಷ್ಟಾನುಭವೋದಯಾತ್ ।**
**ಸುಖದಾನಿ ತತಸ್ತಸ್ಯ ಸುಖಂ ಕೇನೋಪಮೀಯತೇ ॥ ೩೪ ॥**

ಗತಿಯೇ ಮೊದಲಾದ ಶುಭನಾಮಕರ್ಮಗಳು, ಸಾತಾವೇದನೀಯ, ಉಚ್ಚ ಗೋತ್ರ, ತೀರ್ಥಕರನಾಮಕರ್ಮಸಹಿತವೂ ಅಪಮೃತ್ಯುರಹಿತವೂ ಆದ ಆಯುಷ್ಯ ಕರ್ಮ ಇವೆಲ್ಲ ಸೇರಿ ತಂತಮ್ಮ ಉತ್ಕೃಷ್ಟಾನುಭವದ ಉದಯದಿಂದ ಸುಖವನ್ನು ಕೊಡುವುವುಗಳಾಗಿದ್ದುವು. ಆದುದರಿಂದ ಅವನ ಸುಖವು ಯಾವುದರೊಡನೆ ಹೋಲಿಸಲ್ಪಡುವುದು ?

**ಸ್ವಾಯುಶ್ಚತುರ್ಥಭಾಗಾವಶೇಷೇ ಹ್ರಾಸಿತಸಂಸ್ಥಿತಿಮ್ ।**
**ಪ್ರತ್ಯಾಖ್ಯಾನಕಷಾಯೋದಯಾವಸಾನೇ ಪ್ರತಿಷ್ಠಿತಮ್ ॥ ೩೫ ॥**

**ತಂ ಕದಾಚಿದ್ವಿಹಾರಾರ್ಥಂ ವನೇ ಯಾತಂ ಮಹೌಜಸಮ್ ।**
**ಹಿಮಾನೀಪಟಲಂ ಸದ್ಯಃ ಪ್ರಚ್ಛಾದ್ಯ ವಿಲಯಂ ಗತಮ್ ॥ ೩೬ ॥**

ತನ್ನ ಆಯುಷ್ಯದ ನಾಲ್ಕನೆಯ ಒಂದು ಭಾಗ ಉಳಿದಾಗ ಸಂಸಾರಮೋಹವನ್ನು ಕಡಿಮೆಮಾಡಿದವನೂ ಪ್ರತ್ಯಾಖ್ಯಾನಕ್ರೋಧ ಮಾನ ಮಾಯಾ ಲೋಭ ಕಷಾಯೋದಯದ ಕೊನೆಯಲ್ಲಿರುವವನೂ ಒಂದಾನೊಂದು ಕಾಲದಲ್ಲಿ ವಿಹಾರಕ್ಕೋಸ್ಕರ ವನಕ್ಕೆ ಹೋಗಿರುವವನೂ ಮಹಾಕಾಂತಿಯುಳ್ಳವನೂ ಆದ ಆ ಶೀತಲನಾಥನನ್ನು ಹಿಮದ ರಾಶಿಯು ಆವರಿಸಿಕೊಂಡು ಆಗಲೇ ನಾಶವನ್ನು ಹೊಂದಿತು.

**ಸ ತದ್ಧೇತುಸಮುದ್ಭೂತಬೋಧಿರಿತ್ಥಮಚಿಂತಯತ್ ।**
**ಕ್ಷಣಂ ಪ್ರತ್ಯರ್ಥಪರ್ಯಾಯೈರಿದಂ ವಿಶ್ವಂ ವಿನಶ್ವರಮ್ ॥ ೩೭ ॥**

**ದುಃಖ ದುಃಖಿನಿಮಿತ್ತಾಖ್ಯತ್ರಿತಯಂ ನಿಶ್ಚಿತಂ ಮಯಾ ।**
**ಸುಖಾದಿತ್ರಯವಿಜ್ಞಾನಮೇತನ್ಮೋಹಾನುಬಂಧನಾತ್ ॥ ೩೮ ॥**

ಆ ಕಾರಣದಿಂದ ಜ್ಞಾನೋದಯವುಳ್ಳವನಾದ ಆ ಸ್ವಾಮಿಯು ಮುಂದೆ ಹೇಳುವಂತೆ ಚಿಂತಿಸಿದನು. ''ಕ್ಷಣಿಕಪರ್ಯಾಯಗಳಿಂದ ಈ ವಿಶ್ವವು ಪ್ರತಿಕ್ಷಣದಲ್ಲಿ ನಾಶವನ್ನು ಹೊಂದುವುದು. ದುಃಖ, ದುಃಖಿ, ದುಃಖಕಾರಣಗಳೆಂಬ ಮೂರನ್ನು ನಾನು ನಿಶ್ಚಯಿಸಿದೆನು. ಸುಖ, ಸುಖಿ, ಸುಖಕಾರಣಗಳೆಂಬ ಮೂರರ ಜ್ಞಾನವಿದು ಅಜ್ಞಾನಸಂಬಂಧದಿಂದುಂಟಾಗುವುದು.

**ಅಹಂ ಕಿಲ ಸುಖೀ ಸೌಖ್ಯಮೇತತ್ಕಿಲ ಪುನಃ ಸುಖಮ್ ।**
**ಪುಣ್ಯಾತ್ಕಿಲ ಮಹಾಮೋಹಃ ಕಾಲಲಬ್ಧ್ಯಾ ವಿನಾಭವತ್ ॥ ೩೯ ॥**

ನಾನು ಸುಖಿಯಂತೆ. ಇದು ಸೌಖ್ಯವಂತೆ. ಸುಖವಾದರೋ ಪುಣ್ಯದಿಂದುಂಟಾಗುವುದಂತೆ. ಕಾಲಲಬ್ಧಿಯುಂಟಾಗದಿರುವುದರಿಂದ ಈ ಮಹಾಮೋಹವಾಯಿತು.

**ಕರ್ಮ ಸ್ಯಾತ್ಕಿಂ ನ ವಾ ಪುಣ್ಯಂ ಕರ್ಮ ಚೇತ್ಕರ್ಮಣಃ ಕುತಃ ।**
**ಸುಖಂ ರತಿವಿಕಾರಾಭಿಲಾಷದೋಷವತೋಂಗಿನಃ ॥ ೪೦ ॥**

ಕರ್ಮವು ಪುಣ್ಯಕರ್ಮವಾಗಿರಲಿ ಅಥವಾ ಅಲ್ಲದಿರಲಿ. ಕರ್ಮದಿಂದ ಕರ್ಮವುಂಟಾಗುವುದಾದರೆ ರತಿವಿಕಾರಜನ್ಯವಾದ ವಿಷಯಾಭಿಲಾಷೆಯ ದೋಷವುಳ್ಳ ಪ್ರಾಣಿಗೆ ಸುಖವು ಯಾವುದರಿಂದುಂಟಾಗುವುದು ?

**ವಿಷಯೈರೇವ ಚೇತ್ಸೌಖ್ಯಂ ತೇಷಾಂ ಪರ್ಯಂತಗೋಸ್ಮ್ಯಹಮ್ ।**
**ತತಃ ಕುತೋ ನ ಮೇ ತೃಪ್ತಿರ್ಮಿಥ್ಯಾ ವೈಷಯಿಕಂ ಸುಖಮ್ ॥ ೪೧ ॥**

ವಿಷಯಗಳಿಂದಲೇ ಸುಖವುಂಟಾಗುವುದಾದರೆ ನಾನು ಆ ವಿಷಯಗಳ ಕೊನೆಯನ್ನು ಹೊಂದಿದವನಾಗಿದ್ದೇನೆ. ಅವುಗಳಿಂದೇಕೆ ನನಗೆ ತೃಪ್ತಿಯಿಲ್ಲ ?ಆದುದರಿಂದ ವಿಷಯಜನ್ಯವಾದ ಸುಖವು ಸುಳ್ಳಾಗಿದೆ.

**ಔದಾಸೀನ್ಯಂ ಸುಖಂ ತಚ್ಚ ಸತಿ ಮೋಹೇ ಕುತಸ್ತತಃ ।**
**ಮೋಹಾರಿಮೇವ ನಿರ್ಮೂಲಂ ವಿಲಯಂ ಪ್ರಾಪಯೇ ದ್ರುತಮ್ ॥**

ವಿಷಯಗಳಲ್ಲಿ ಔದಾಸೀನ್ಯವು ಸುಖವಾಗಿರುವುದು. ಮೋಹವಿರುವಾಗ ಆ ಔದಾಸೀನ್ಯವು ಹೇಗುಂಟಾಗುವುದು ? ಆದುದರಿಂದ ಶೀಘ್ರವಾಗಿ ಮೋಹವೆಂಬ ಶತ್ರುವನ್ನೇ ಬುಡಸಹಿತವಾಗಿ ನಾಶಮಾಡುತ್ತೇನೆ.''

**ಇತ್ಯಾಕಲಯ್ಯ ಯಾಥಾತ್ಮ್ಯಂ ಹೇಯಪಕ್ಷೇ ನಿವೇಶಿತಮ್ ।**
**ದತ್ವಾ ಪುತ್ರಾಯ ಸಾಮ್ರಾಜ್ಯಂ ಮೋಹಿನಾಮಾದರಾವಹಮ್ ॥ ೪೩ ॥**

**ಲಬ್ಧಲೌಕಾಂತಿಕಸ್ತೋತ್ರಃ ಪ್ರಾಪ್ತತತ್ಕಾಲಪೂಜನಃ ।**
**ಶುಕ್ರಪ್ರಭಾಂ ಸಮಾರುಹ್ಯ ಸಹೇತುಕವನಾಂತರೇ ॥ ೪೪ ॥**

**ಪೂರ್ವಾಷಾಢೇ ಮಾಘಮಾಸೇ ಕೃಷ್ಣದ್ವಾದಶ್ಯಹಃಕ್ಷಯೇ ।**
**ಉಪವಾಸದ್ವಯೋ ರಾಜಸಹಸ್ರೇಣೇತ್ಯ ಸಂಯಮಮ್ ॥ ೪೫ ॥**

**ಚತುರ್ಜ್ಞಾನೋ ದ್ವಿತೀಯೇಹ್ನಿ ಸ ಚರ್ಯಾರ್ಥಂ ಪ್ರವಿಷ್ಟವಾನ್ ।**
**ಅರಿಷ್ಟನಗರಂ ತಸ್ಮೈ ನವಪುಣ್ಯಃ ಪುನರ್ವಸುಃ ॥ ೪೬ ॥**

**ನಾಮ್ನಾ ನರಪತಿರ್ದತ್ವಾ ಪರಮಾನ್ನಂ ಪ್ರಮೋದವಾನ್ ।**
**ವಿತೀರ್ಣಮಮರೈಸ್ತುಷ್ಟೈಃ ಪ್ರಾಪದಾಶ್ಚರ್ಯಪಂಚಕಮ್ ॥ ೪೭ ॥**

ಈ ಪ್ರಕಾರವಾಗಿ ಯಥಾರ್ಥಸ್ವರೂಪವನ್ನು ವಿಚಾರಮಾಡಿ ಹೇಯಪಕ್ಷದಲ್ಲಿರಿಸಲ್ಪಟ್ಟುದೂ ಮೋಹಿಗಳಿಗೆ ಆದರವನ್ನುಂಟುಮಾಡುವುದೂ ಆದ ಸಾಮ್ರಾಜ್ಯವನ್ನು ಪುತ್ರನಿಗೆ ಕೊಟ್ಟು ಲೌಕಾಂತಿಕದೇವರ್ಕಳಿಂದ ಸ್ತುತಿಸಲ್ಪಟ್ಟವನೂ ತತ್ಕಾಲದಲ್ಲಿ ಪರಿನಿಷ್ಕ್ರಮಣಕಲ್ಯಾಣಪೂಜೆಯನ್ನು ಹೊಂದಿದವನೂ ಶುಕ್ರಪ್ರಭೆಯೆಂಬ ಪಲ್ಲಕ್ಕಿಯನ್ನೇರಿ ಹೋಗಿ ಸಹೇತುಕವನದ ಮಧ್ಯದಲ್ಲಿ ಮಾಘಮಾಸದ ಕೃಷ್ಣಪಕ್ಷದ ದ್ವಾದಶೀತಿಥಿಯಲ್ಲಿ ಸಾಯಂಕಾಲ ಪೂರ್ವಾಷಾಢನಕ್ಷತ್ರದಲ್ಲಿ ಎರಡು ಉಪವಾಸ ನಿಯಮವುಳ್ಳವನೂ ಸಹಸ್ರರಾಜರುಗಳೊಡನೆ ದೀಕ್ಷೆಯನ್ನು ಹೊಂದಿ ಎರಡನೆಯ ದಿವಸ ಮನಃಪರ್ಯಯಜ್ಞಾನವನ್ನು ಹೊಂದಿದವನೂ ಆದ ಆ ಸ್ವಾಮಿಯು ಆಹಾರನಿಮಿತ್ತವಾಗಿ ಅರಿಷ್ಟನಗರವನ್ನು ಪ್ರವೇಶಿಸಿದನು. ನವವಿಧಪುಣ್ಯಗಳುಳ್ಳ ಪುನರ್ವಸುವೆಂಬ ರಾಜನು ಸಂತೋಷದಿಂದ ಆ ಸ್ವಾಮಿಗೆ ಆಹಾರವನ್ನು ಕೊಟ್ಟು ಆದರಿಂದ ಸಂತುಷ್ಟರಾದ ದೇವರ್ಕಳಿಂದ ಕೊಡಲ್ಪಟ್ಟ ಪಂಚಾಶ್ಚರ್ಯಗಳನ್ನು ಹೊಂದಿದನು.

**ಛಾದ್ಮಸ್ಥ್ಯೇನ ಸಮಾಸ್ತಿಸ್ರೋ ನೀತ್ವಾ ಬಿಲ್ವದ್ರುಮಾಶ್ರಯಃ ।**
**ಪೌಷಕೃಷ್ಣಚತುರ್ದಶ್ಯಾಂ ಪೂರ್ವಾಷಾಢೇಪರಾಹ್ಣಕೇ ॥ ೪೮ ॥**

**ದಿನದ್ವಯೋಪವಾಸೇನ ಕೈವಲ್ಯಂ ಕನಕದ್ಯುತಿಃ ।**
**ಪ್ರಾಪದೇತ್ಯ ತದಾ ದೇವಾಸ್ತಸ್ಯ ಪೂಜಾಮಕುರ್ವತ ॥ ೪೯ ॥**

ಛದ್ಮಸ್ಥಾವಸ್ಥೆಯಿಂದ ಮೂರು ವರುಷಗಳನ್ನು ಕಳೆದು ಬಿಲ್ವವೃಕ್ಷವನ್ನು ಆಶ್ರಯಿಸಿದವನೂ ಬಂಗಾರದಂತೆ ಕಾಂತಿಯುಳ್ಳವನೂ ಆದ ಶೀತಲಸ್ವಾಮಿಯು ಪುಷ್ಯಮಾಸದ ಕೃಷ್ಣಪಕ್ಷದ ಚತುರ್ದಶೀತಿಥಿಯಲ್ಲಿ ಪೂರ್ವಾಷಾಢನಕ್ಷತ್ರದಲ್ಲಿ ಸಾಯಂಕಾಲ ಎರಡು ದಿನಗಳ ಉಪವಾಸನಿಯಮವನ್ನು ಸ್ವೀಕರಿಸಿ ಕೇವಲಜ್ಞಾನವನ್ನು ಪಡೆದನು. ಆಗ ದೇವರ್ಕಳು ಬಂದು ಸ್ವಾಮಿಯ ಕೇವಲಜ್ಞಾನಕಲ್ಯಾಣ ಪೂಜೆಯನ್ನು ಮಾಡಿದರು.

**ಅನಗಾರಾಖ್ಯಮುಖ್ಯೈಕಾಶೀತಿಸಪ್ತರ್ದ್ಧಿಸತ್ತಮಃ ।**
**ಶೂನ್ಯದ್ವಯಯುಗೈಕೋಕ್ತಪೂಜ್ಯಪೂರ್ವಧರಾನ್ವಿತಃ ॥ ೫೦ ॥**

**ಶೂನ್ಯದ್ವಯದ್ವಿರಂಧ್ರೇಂದ್ರಿಯೋಕ್ತಶಿಕ್ಷಕಲಕ್ಷಿತಃ ।**
**ಶೂನ್ಯದ್ವಯದ್ವಿಸಪ್ತಾಂಕಜ್ಞಾನತ್ರಯವಿಲೋಚನಃ ॥ ೫೧ ॥**

**ಶೂನ್ಯತ್ರಿತಯಸಪ್ತೋಕ್ತಪಂಚಮಾವಗಮಾನ್ವಿತಃ ।**
**ಶೂನ್ಯತ್ರಿತಯಪಕ್ಷೈಕವಿಕ್ರಿಯರ್ದ್ಧಿಯತೀಡಿತಃ ॥ ೫೨ ॥**

**ಖದ್ವಿಕೇಂದ್ರಿಯಸಪ್ತೋಕ್ತಮನಃಪರ್ಯಯಸಂಯುತಃ ।**
**ಶೂನ್ಯದ್ವಯರ್ದ್ಧಿಪಂಚೋಕ್ತವಾದಿಮುಖ್ಯಾಂಚಿತಕ್ರಮಃ ॥ ೫೩ ॥**

**ಏಕೀಕೃತಯತಿವ್ರಾತಲಕ್ಷಸಮುಪಲಕ್ಷಿತಃ ।**
**ಖಚತುಷ್ಕಾಷ್ಟವಹ್ನ್ಯುಕ್ತಧಾರಣಾದ್ಯಾರ್ಯಿಕಾನ್ವಿತಃ ॥ ೫೪ ॥**

**ಉಪಾಸಕದ್ವಿಲಕ್ಷಾರ್ಚ್ಯೋ ದ್ವಿಗುಣಶ್ರಾವಿಕಾನುತಃ ।**
**ಅಸಂಖ್ಯದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸೇವಿತಃ ॥ ೫೫ ॥**

**ವಿಹೃತ್ಯ ವಿವಿಧಾನ್ ದೇಶಾನ್ ಭವ್ಯಮಿಥ್ಯಾದೃಶೋ ಬಹೂನ್ ।**
**ಸಮ್ಯಕ್ತ್ವಾದಿಗುಣಸ್ಥಾನಾನ್ಯಾಪಯನ್ ಧರ್ಮದೇಶನಾತ್ ॥ ೫೬ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಭದ್ರಪುರೀಪಟ್ಟಣದಲ್ಲಿ ದೃಢರಥಮಹಾರಾಜಂಗಂ ಸುನಂದಾದೇವಿಗಂ ಪೂರ್ವಾಷಾಢನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ತೊಂಬತ್ತುಬಿಲ್ಲುತ್ಸೇಧಮನುಳ್ಳ ಹತ್ತುಸಾವಿರ ಪೂರ್ವಾಯುಷ್ಯಮನುಳ್ಳ ಶ್ರೀವೃಕ್ಷ ಲಾಂಛನಮನುಳ್ಳ ಬ್ರಹ್ಮಮಾನವೀ–ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ವಿದ್ಯುದ್ವರಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಶೀತಲತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಸಮ್ಮೇದಶೈಲಮಾಸಾದ್ಯ ಮಾಸಮಾತ್ರೋಜ್ಝಿತಕ್ರಿಯಃ ।**
**ಪ್ರತಿಮಾಯೋಗಮಾಸಾದ್ಯ ಸಹಸ್ರಮುನಿಸಂವೃತಃ ॥ ೫೭ ॥**

**ಧವಲಾಶ್ವಯುಜಾಷ್ಟಮ್ಯಾಂ ಪೂರ್ವಾಷಾಢೇಪರಾಹ್ಣಗಃ ।**
**ನಾಶಿತಾಶೇಷಕರ್ಮಾರಿಃ ಸಂಪ್ರಾಪತ್ಪರಮಂ ಪದಮ್ ॥ ೫೮ ॥**

ಅನಗಾರನೇ ಮೊದಲಾದ ಎಂಬತ್ತೊಂದು ಮಂದಿ ಸಪ್ತರ್ದ್ಧಿಸಂಪನ್ನರಾದ ಗಣಧರ–ಮುನಿಶ್ರೇಷ್ಠರುಳ್ಳವನೂ ಸಾವಿರದ ನಾಲ್ಕುನೂರು ಮಂದಿ ಪೂರ್ವ ಶಾಸ್ತ್ರಜ್ಞರಾದ ಪೂಜ್ಯಮುನಿಗಳುಳ್ಳವನೂ ಐವತ್ತೊಂಬತ್ತುಸಾವಿರದಿನ್ನೂರು ಮಂದಿ ಶಿಕ್ಷಕಮುನಿಗಳುಳ್ಳವನೂ ಏಳುಸಾವಿರದಿನ್ನೂರು ಮಂದಿ ಅವಧಿಜ್ಞಾನಿಮುನಿಗಳುಳ್ಳವನೂ ಏಳುಸಾವಿರ ಮಂದಿ ಕೇವಲಜ್ಞಾನಿಗಳುಳ್ಳವನೂ ಹನ್ನೆರಡುಸಾವಿರ ಮಂದಿ ವಿಕ್ರಿಯರ್ದ್ಧಿಯುಳ್ಳ ಮುನಿಗಳಿಂದ ಸ್ತುತಿಸಲ್ಪಟ್ಟವನೂ ಏಳುಸಾವಿರದೈನೂರು ಮಂದಿ ಮನಃಪರ್ಯಯಜ್ಞಾನಿಗಳಿಂದ ಸಮನ್ವಿತನೂ ಐದುಸಾವಿರದೇಳುನೂರು ಮಂದಿ ಮುಖ್ಯರಾದ ವಾದಿಮುನಿಗಳಿಂದ ಪೂಜಿಸಲ್ಪಟ್ಟ ಚರಣಗಳುಳ್ಳವನೂ ಒಟ್ಟು ಒಂದುಲಕ್ಷ ಯತಿಸಮೂಹದಿಂದ ಕೂಡಿರುವವನೂ ಧಾರಣಾ ಮೊದಲಾದ ಮೂರು ಲಕ್ಷ ಎಂಬತ್ತು ಸಾವಿರಮಂದಿ ಆರ್ಯಿಕೆಯರಿಂದ ಕೂಡಿರುವವನೂ ಎರಡು ಲಕ್ಷ ಶ್ರಾವಕರಿಂದ ಪೂಜಿಸಲ್ಪಡತಕ್ಕವನೂ ನಾಲ್ಕು ಲಕ್ಷ ಶ್ರಾವಿಕೆಯರಿಂದ ಸ್ತುತಿಸಲ್ಪಟ್ಟವನೂ ಅಸಂಖ್ಯಾತ ದೇವದೇವಿಯರಿಂದ ಸ್ತುತಿಸಲ್ಪಡತಕ್ಕವನೂ ಸಂಖ್ಯಾತತಿರ್ಯಕ್ಪ್ರಾಣಿಗಳಿಂದ ಸೇವಿಸಲ್ಪಟ್ಟವನೂ ಆದ ಸ್ವಾಮಿಯು ನಾನಾ ದೇಶಗಳಲ್ಲಿ ವಿಹರಿಸಿ ಭವ್ಯರಾದ ಅನೇಕ ಮಿಥ್ಯಾದೃಷ್ಟಿಗಳನ್ನು ಧರ್ಮೋಪದೇಶದಿಂದ ಸಮ್ಯಕ್ತ್ವಾದಿಗುಣಸ್ಥಾನಗಳನ್ನು ಹೊಂದಿಸಿ ಬಳಿಕ ಸಮ್ಮೇದಪರ್ವತವನ್ನು ಸೇರಿ ಒಂದುತಿಂಗಳವರೆಗೆ ಯೋಗನಿರೋಧವನ್ನು ಮಾಡಿ ಪ್ರತಿಮಾಯೋಗವನ್ನು ಹೊಂದಿ ಸಹಸ್ರಮುನಿಗಳಿಂದ ಆವರಿಸಲ್ಪಟ್ಟವನೂ ಆಶ್ವಯುಜ ಮಾಸದ ಶುಕ್ಲ ಪಕ್ಷದ ಅಷ್ಟಮೀತಿಥಿಯಲ್ಲಿ ಪೂರ್ವಾಷಾಢನಕ್ಷತ್ರದಲ್ಲಿ ಸಾಯಂಕಾಲ ಕರ್ಮ ಶತ್ರುಗಳನ್ನೆಲ್ಲ ನಾಶಮಾಡಿದವನೂ ಆಗಿ ಪರಮಪದ–ಮೋಕ್ಷವನ್ನು ಪಡೆದನು.

**ಕೃತ್ವಾ ಪಂಚಮಕಲ್ಯಾಣಂ ದೇವೇಂದ್ರಾ ದ್ಯೋತಿತಾಖಿಲಾಃ ।**
**ಸ್ವದೇಹದ್ಯುತಿಭಿಃ ಸ್ತುತ್ವಾ ಶೀತಲಂ ಸಂಶ್ರಿತಾ ದಿವಮ್ ॥ ೫೯ ॥**

ಆಗ ತಮ್ಮ ದೇಹಕಾಂತಿಯಿಂದ ಸಕಲವಸ್ತುಗಳನ್ನು ಪ್ರಕಾಶಪಡಿಸುವವರಾದ ದೇವೇಂದ್ರರು ಬಂದು ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಶೀತಲನಾಥನನ್ನು ಸ್ತುತಿಸಿ ಸ್ವರ್ಗಕ್ಕೆ ಹೋದರು.

**ಯಸ್ಯೋತ್ಪಾದಮನುಪ್ರಸಾದಮಗಮಚ್ಚಂದ್ರೋದಯಾದ್ವಾ ಜಗ- ।**
**ದ್ಬಂಧೂನಾಂ ವ್ಯಕಸನ್ಮುಖಾನಿ ನಿಖಿಲಾನ್ಯಬ್ಜಾನಿ ವೋಷ್ಣದ್ಯುತೇಃ ।**
**ಅರ್ಥಾನ್ಪ್ರಾಪ್ಯ ಸಮೀಪ್ಸಿತಾನ್ಬಹುಮುದಾ ಸನ್ನರ್ಥವಂತೋರ್ಥಿನ- ।**
**ಸ್ತಂ ವಂದೇ ತ್ರಿದಶಾರ್ಚಿತಂ ರತಿತೃಷಾನಿಶ್ಶೇಷಿಣಂ ಶೀತಲಮ್ ॥ ೬೦ ॥**

ಜಗತ್ತು ಚಂದ್ರೋದಯದಿಂದ ಪ್ರಸನ್ನತೆಯನ್ನು ಹೊಂದುವಂತೆ ಯಾವನ ಉತ್ಪತ್ತಿಯಿಂದ ಪ್ರಸನ್ನತೆಯನ್ನು ಹೊಂದಿತೋ ಸೂರ್ಯನ ದೆಸೆಯಿಂದ ಕಮಲಗಳು ಅರಳುವಂತೆ ಯಾವನ ದೆಸೆಯಿಂದ ಬಂಧುಗಳ ಮುಖಗಳೆಲ್ಲ ವಿಕಸಿತಗಳಾದುವೋ ಯಾವನಿಂದ ಯಾಚಕರು ಇಷ್ಟಾರ್ಥಗಳನ್ನು ಪಡೆದು ಬಹು ಸಂತೋಷದಿಂದ ಶ್ರೇಷ್ಠವಾದ ಅರ್ಥಸಂಪತ್ತಿಯುಳ್ಳವರಾಗಿರುತ್ತಾರೋ ದೇವರ್ಕಳಿಂದ ಪೂಜಿಸಲ್ಪಟ್ಟವನೂ ರತಿಸುಖಾಭಿಲಾಷೆಯನ್ನು ತೊರೆದವನೂ ಆದ ಆ ಶೀತಲನಾಥನನ್ನು ವಂದಿಸುತ್ತೇನೆ.

**ದಿಙ್ಮಾತಂಗಕಪೋಲಮೂಲಗಲಿತೈರ್ದಾನೈಸ್ಸತಾಮೋದನ್ನೈ- ।**
**ರ್ದತ್ತಾರ್ಥೇಂದುನಿಭೋಜ್ಜ್ವಲೋತ್ತಿಲಕಿಕಾಸ್ತದ್ದಂತಪರ್ಯಂತಕೇ ।**
**ದಿಕ್ಕನ್ಯಾಃ ಕಲಕಂಠಿಕಾಃ ಸ್ವರಚಿತೈರ್ಗಾಯಂತಿ ವರ್ಣಾಕ್ಷರೈ- ।**
**ರ್ಯಸ್ಯಾತ್ಯುದ್ಧತಮೋಹವೀರವಿಜಯಂ ತಂ ಶೀತಲಂ ಸಂಸ್ತುವೇ ॥**

ಮನೋಹರವಾದ ಕಂಠವುಳ್ಳ ದಿಕ್ಕನ್ಯೆಯರು ದಿಗ್ಗಜಗಳ ಕೆನ್ನೆಗಳಿಂದ ಸುರಿಯುತ್ತಿರುವುವೂ ಪಸರಿಸಲ್ಪಟ್ಟ ಪರಿಮಳವುಳ್ಳುವೂ ಆದ ದಾನಜಲಗಳಿಂದ ಅವರ ಹಲ್ಲುಗಳ ಪಕ್ಕದಲ್ಲಿ ಅರ್ಧಚಂದ್ರಸದೃಶವೂ ಉಜ್ಜ್ವಲವೂ ಆದ ತಿಲಕಗಳನ್ನಿಟ್ಟು ತಾವು ರಚಿಸಿದ ವರ್ಣಾಕ್ಷರಗಳಿಂದ–ಪದ್ಯಗಳಿಂದ ಯಾವನ ಅತ್ಯುದ್ಧತನಾದ ಮೋಹ ವೈರಿಯ ವಿಜಯವನ್ನು ಹಾಡುತ್ತಾರೋ ಆ ಶೀತಲನಾಥನನ್ನು ಸ್ತುತಿಸುತ್ತೇನೆ.

**ಪದ್ಮಗುಲ್ಮಮಖಿಲೈಃ ಸ್ತುತಂ ಗುಣೈರಾರಣೇಂದ್ರಮಮರಾರ್ಚಿತಂ ತತಃ ।**
**ತೀರ್ಥಕೃತ್ಸು ದಶಮಂ ದಯಾಮಯಂ ಶೀತಲಂ ನಮತ ಸರ್ವ ಶೀತಲಮ್ ॥ ೬೧ ॥**

ಮೊದಲು ನಿಖಿಲಗುಣಗಳಿಂದ ಸ್ತುತಿಸಲ್ಪಟ್ಟ ಪದ್ಮಗುಲ್ಮನೂ ಬಳಿಕ ದೇವತೆಗಳಿಂದ ಪೂಜಿತನಾದ ಆರಣಕಲ್ಪೇಂದ್ರನೂ ತರುವಾಯ ತೀರ್ಥಂಕರರಲ್ಲಿ ಹತ್ತನೆಯವನೂ ದಯಾಮಯನೂ ಎಲ್ಲರಿಗೂ ಶಾಂತಿಯನ್ನುಂಟುಮಾಡುವವನೂ ಆದ ಶೀತಲನಾಥನನ್ನು ನಮಸ್ಕರಿಸಿರಿ.

**ಶೀತಲೇಶಸ್ಯ ತೀರ್ಥಾಂತೇ ಸದ್ಧರ್ಮೋ ನಾಶಮೀಯಿವಾನ್ ।**
**ವಕ್ತೃಶ್ರೋತೃಚರಿಷ್ಣೂನಾಮಭಾವಾತ್ಕಾಲದೋಷತಃ ॥ ೬೩ ॥**

ಶೀತಲನಾಥ–ಸ್ವಾಮಿಯ ತೀರ್ಥದ ಕೊನೆಯಲ್ಲಿ ಕಾಲದೋಷದಿಂದ ಸದ್ಧರ್ಮವನ್ನು ಹೇಳುವವರೂ ಕೇಳುವವರೂ ಆಚರಿಸುವವರೂ ಇಲ್ಲದಿದ್ದುದರಿಂದ ಅದು ನಾಶವನ್ನು ಹೊಂದಿತು.

**ತದಾ ಮಲಯದೇಶೇಶೋ ನಿವಸನ್ಭದ್ರಿಲೇ ಪುರೇ ।**
**ರಾಜಾ ಮೇಘರಥಸ್ತಸ್ಯ ಸಚಿವಸ್ಸತ್ಯಕೀರ್ತಿವಾನ್ ॥ ೬೪ ॥**

ಆಗ ಮಲಯದೇಶಾಧಿಪತಿಯಾದ ಮೇಘರಥರಾಜನು ಭದ್ರಿಲಪುರದಲ್ಲಿ ವಾಸಮಾಡುತ್ತಿದ್ದನು. ಅವನಿಗೆ ಸತ್ಯಕೀರ್ತಿಯೆಂಬವನು ಮಂತ್ರಿಯಾಗಿದ್ದನು.

**ಸ ಕದಾಚಿತ್ಸಭಾಗೇಹೇ ಸಿಂಹಾಸನಮಧಿಷ್ಠಿತಃ ।**
**ಅಪ್ರಾಕ್ಷೀತ ಸಭಾಸೀನಾನ್ಧರ್ಮಾರ್ಥಂ ದ್ರವ್ಯದಿತ್ಸಯಾ ॥ ೬೫ ॥**

**ದಾನೇಷು ಕತಮದ್ದಾನಂ ದತ್ತಂ ಬಹುಫಲಂ ಭವೇತ್ ।**
**ಇತ್ಯತೋ ಮತಿವಾಕ್ಸಾರಃ ಸಚಿವೋ ದಾನತತ್ತ್ವವಿತ್ ॥ ೬೬ ॥**

**ಶಾಸ್ತ್ರಾಭಯಾನ್ನದಾನಾನಿ ಪ್ರೋಕ್ತಾನಿ ಮುನಿಸತ್ತಮೈಃ ।**
**ಪೂರ್ವಪೂರ್ವಬಹೂಪಾತ್ತಫಲಾನೀಮಾನಿ ಧೀಮತಾಮ್ ॥ ೬೭ ॥**

**ಪೂರ್ವಾಪರವಿರೋಧಾದಿದೂರಂ ಹಿಂಸಾದ್ಯಪಾಸನಮ್ ।**
**ಪ್ರಮಾಣದ್ವಯಸಂವಾದಿ ಶಾಸ್ತ್ರಂ ಸರ್ವಜ್ಞಭಾಷಿತಮ್ ॥ ೬೮ ॥**

ಒಂದಾನೊಂದು ದಿವಸ ಸಭಾಭವನದಲ್ಲಿ ಸಿಂಹಾಸನದಲ್ಲಿ ಕುಳಿತಿದ್ದ ಆ ಮೇಘರಥರಾಜನು ಧರ್ಮನಿಮಿತ್ತವಾಗಿ ದಾನಮಾಡಬೇಕೆಂಬ ಇಚ್ಛೆಯಿಂದ "ದಾನಗಳಲ್ಲಿ ಯಾವ ದಾನವನ್ನು ಕೊಟ್ಟರೆ ಅಧಿಕಫಲವುಂಟಾಗುವುದು ?" ಎಂದು ಸಭಾಸದರನ್ನು ಪ್ರಶ್ನೆ ಮಾಡಿದನು. ಅದಕ್ಕೆ ದಾನತತ್ತ್ವವನ್ನು ತಿಳಿದವನೂ ಸಾರವಾದ ಬುದ್ಧಿಯೂ ವಚನವೂ ಉಳ್ಳವನೂ ಆದ ಮಂತ್ರಿಯು ಈ ರೀತಿಯಾಗಿ ಹೇಳುತ್ತಾನೆ "ಮುನಿಶ್ರೇಷ್ಠರು ಶಾಸ್ತ್ರದಾನ ಅಭಯದಾನ ಅನ್ನದಾನಗಳನ್ನು ಹೇಳಿದ್ದಾರೆ. ಇವುಗಳಲ್ಲಿ ಮೊದಮೊದಲಿನ ದಾನವು ಪ್ರಾಜ್ಞರಿಗೆ ಹೆಚ್ಚುಹೆಚ್ಚು ಫಲಗಳನ್ನು ಕೊಡುವುದಾಗಿದೆ. ಶಾಸ್ತ್ರವು ಪೂರ್ವಾಪರವಿರೋಧಾದಿ ದೋಷಗಳಿಲ್ಲದುದೂ ಹಿಂಸಾದಿ ಪಾಪಗಳಿಲ್ಲದುದೂ ಪ್ರತ್ಯಕ್ಷ ಪರೋಕ್ಷಪ್ರಮಾಣಗಳಿಂದ ಸಿದ್ಧವೂ ಸರ್ವಜ್ಞರಿಂದ ಹೇಳಲ್ಪಟ್ಟುದೂ ಆಗಿರಬೇಕು.

**ಭೂಯಸ್ಸಂಸಾರಭೀರೂಣಾಂ ಸತಾಮನುಜಿಘೃಕ್ಷಯಾ ।**
**ವ್ಯಾಖ್ಯಾನಂ ತಸ್ಯ ಶಾಸ್ತ್ರಸ್ಯ ಶಾಸ್ತ್ರದಾನಂ ತದುಚ್ಯತೇ ॥ ೬೯ ॥**

ಭವಭೀತರಾದ ಸತ್ಪುರುಷರನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದ ಪುನಃಪುನಃ ಅಂತಹ ಶಾಸ್ತ್ರದ ವ್ಯಾಖ್ಯಾನವನ್ನು ಮಾಡುವುದಕ್ಕೆ ಶಾಸ್ತ್ರದಾನವೆಂದು ಹೆಸರು.

**ಮುಮುಕ್ಷೋರ್ದೃಷ್ಟತತ್ತ್ವಸ್ಯ ಬಂಧಹೇತುಜಿಹಾಸಯಾ ।**
**ಪ್ರಾಣಿಪೀಡಾಪರಿತ್ಯಾಗಸ್ತದ್ದಾನಮಭಯಾಹ್ವಯಮ್ ॥ ೭೦ ॥**

ತತ್ತ್ವಗಳನ್ನು ತಿಳಿದಿರುವ ಮುಮುಕ್ಷುವು ಕರ್ಮಬಂಧದ ಕಾರಣವನ್ನು ತ್ಯಜಿಸಬೇಕೆಂಬ ಇಚ್ಛೆಯಿಂದ ಪ್ರಾಣಿಹಿಂಸೆಯನ್ನು ತ್ಯಜಿಸುವುದಕ್ಕೆ ಅಭಯದಾನವೆಂದು ಹೆಸರು.

**ಹಿಂಸಾದಿದೋಷದೂರೇಭ್ಯೋ ಜ್ಞಾನಿಭ್ಯೋ ಬಾಹ್ಯಸಾಧನಮ್ ।**
**ಪ್ರಾಹುರಾಹಾರದಾನಂ ತತ್ ಶುದ್ಧಾಹಾರಾತಿಸರ್ಜನಮ್ ॥ ೭೧ ॥**

ಹಿಂಸಾದಿದೋಷರಹಿತರಾದ ಜ್ಞಾನಿಗಳಿಗೆ ಕೊಡಲ್ಪಡುವ ಬಾಹ್ಯಸಾಧನವಾದ ಶುದ್ಧಾಹಾರದಾನಕ್ಕೆ ಆಹಾರದಾನವೆಂದು ಹೆಸರು.

**ಆಭ್ಯಾಮಾದ್ಯಂತದಾನಾಭ್ಯಾಮುಭಯೋಃ ಕರ್ಮನಿರ್ಜರಾ ।**
**ಪುಣ್ಯಾಸ್ರವಶ್ಚ ಶೇಷೇಣ ದಾತುಸ್ತದುಭಯಂ ಭವೇತ್ ॥ ೭೨ ॥**

ಈ ದಾನಗಳಲ್ಲಿ ಮೊದಲನೆಯದಾದ ಶಾಸ್ತ್ರದಾನದಿಂದಲೂ ಕೊನೆಯದಾದ ಆಹಾರದಾನದಿಂದಲೂ ದಾನವನ್ನು ಕೊಡುವವನಿಗೂ ಅದನ್ನು ತೆಗೆದುಕೊಳ್ಳುವವನಿಗೂ ಕರ್ಮನಿರ್ಜರೆಯೂ ಪುಣ್ಯಾಸ್ರವವೂ ಆಗುವುವು.

**ನ ಜ್ಞಾನಾತ್ಸಂತಿ ದಾನಾನಿ ವಿನಾ ಜ್ಞಾನಂ ಚ ಶಾಸ್ತ್ರತಃ ।**
**ಹೇಯಾದೇಯಾದಿತತ್ತ್ವಾವಭಾಸನಂ ಪರಮಂ ಹಿತಮ್ ॥ ೭೩ ॥**

ಜ್ಞಾನವಿಲ್ಲದೆ ದಾನಗಳಿಲ್ಲ. ಹೇಯೋಪಾದೇಯಾದಿತತ್ತ್ವಗಳನ್ನು ಪ್ರಕಾಶಪಡಿಸುವುದೂ ಉತ್ಕೃಷ್ಟವೂ ಹಿತಕಾರಿಯೂ ಆದ ಜ್ಞಾನವು ಶಾಸ್ತ್ರದಿಂದುಂಟಾಗುವುದು.

**ತತ್ತ್ವಾಖ್ಯಾತಂ ಶ್ರುತಂ ಸಮ್ಯಕ್ ಭಾವಿತಂ ಶುದ್ಧಬುದ್ಧಯೇ ।**
**ತಯಾ ಹೇಯಂ ಪರಿತ್ಯಜ್ಯ ಹಿತಮಾದಾಯ ಸವ್ರತಾಃ ॥ ೭೪ ॥**

**ಮುಕ್ತಿಮಾರ್ಗಂ ಸಮಾಶ್ರಿತ್ಯ ಕ್ರಮಾಚ್ಛಾಂತೇಂದ್ರಿಯಾಶಯಾಃ ।**
**ಶುಕ್ಲಧ್ಯಾನಮಧಿಷ್ಠಾಯ ಪ್ರಾಪ್ನುವಂತ್ಯಮೃತಂ ಪದಮ್ ॥ ೭೫ ॥**

ಅಂತಹ ಶಾಸ್ತ್ರವನ್ನು ವ್ಯಾಖ್ಯಾನಮಾಡಿದರೆ ಕೇಳಿದರೆ ಮತ್ತು ಚೆನ್ನಾಗಿ ಭಾವಿಸಿದರೆ ಶುದ್ಧವಾದ ಬುದ್ಧಿಯುಂಟಾಗುವುದಕ್ಕೆ ಕಾರಣವಾಗುವುದು. ಆ ಶುದ್ಧ ಬುದ್ಧಿಯಿಂದ ಹೇಯವನ್ನು ತ್ಯಜಿಸಿ ಹಿತವನ್ನು ಸ್ವೀಕರಿಸಿ ವ್ರತಿಗಳು ಮೋಕ್ಷಮಾರ್ಗವನ್ನು ಹೊಂದಿ ಕ್ರಮದಿಂದ ಶಾಂತವಾದ ಇಂದ್ರಿಯಗಳೂ ಮನಸ್ಸೂ ಉಳ್ಳವರಾಗಿ ಶುಕ್ಲಧ್ಯಾನವನ್ನು ಹೊಂದಿ ನಾಶರಹಿತವಾದ–ಮುಕ್ತಿಪದವನ್ನು ಪಡೆಯುತ್ತಾರೆ.

**ತಸ್ಮಾದ್ದಾನೇಷು ತಚ್ಛ್ರೇಷ್ಠಂ ಪ್ರದಾತುರ್ಗ್ರಹೀತುಮಪಿ ।**
**ನಿರವದ್ಯಂ ನಿಜಾನಂದನಿರ್ವಾಣಪದಸಾಧನಮ್ ॥ ೭೬ ॥**

ಆದುದರಿಂದ ದಾನಗಳಲ್ಲಿ ನಿರ್ದುಷ್ಟವೂ ಕೊಡುವವನಿಗೂ ತೆಗೆದುಕೊಳ್ಳುವವನಿಗೂ ನಿಜಾನಂದಕರವಾದ ನಿರ್ವಾಣಪದವಿಗೆ ಸಾಧನವೂ ಆದ ಶಾಸ್ತ್ರದಾನವು ಶ್ರೇಷ್ಠವಾದುದು.

**ಅಂತ್ಯಾದಪ್ಯಲ್ಪಸಾವದ್ಯಾದಭಯಾಖ್ಯಮಭಿಷ್ಟುತಮ್ ।**
**ತ್ರಿಭಿರೇಭಿರ್ಮಹಾದಾನೈಃ ಪ್ರಾಪ್ನೋತಿ ಪರಮಂ ಪದಮ್ ॥ ೭೭ ॥**

ಸ್ವಲ್ಪದೋಷವುಳ್ಳ ಆಹಾರದಾನಕ್ಕಿಂತ ಅಭಯದಾನವು ಸ್ತುತ್ಯವಾದುದು. ಈ ಮೂರು ಮಹಾದಾನಗಳಿಂದ ಮನುಷ್ಯನು ಪರಮಪದವನ್ನು ಹೊಂದುತ್ತಾನೆ.''

**ಇತಿ ಪ್ರಾಹೈವಮುಕ್ತೇಽಪಿ ರಾಜ್ಞಾ ತನ್ನಾನ್ವಮನ್ಯತ ।**
**ಕಪೋತಲೇಶ್ಯಾಮಾಹಾತ್ಮ್ಯಾದನ್ಯದಾನಪ್ರದಿತ್ಸಯಾ ॥ ೭೮ ॥**

ಮಂತ್ರಿಯು ಈ ಪ್ರಕಾರವಾಗಿ ಹೇಳಿದನು. ಹೀಗೆ ಹೇಳಿದರೂ ರಾಜನು ಕಪೋತಲೇಶ್ಯೆಯೆಂಬ ಮನೋಭಾವಮಹಿಮೆಯಿಂದ ಬೇರೆ ದಾನಗಳನ್ನು ಕೊಡಬೇಕೆಂಬ ಇಚ್ಛೆಯಿಂದ ಮಂತ್ರಿಯ ಆ ಮಾತನ್ನು ಒಪ್ಪಲಿಲ್ಲ.

**ತತ್ರೈವ ನಗರೇ ಭೂತಿಶರ್ಮಾಖ್ಯೋ ಬ್ರಾಹ್ಮಣೋಽಭವತ್ ।**
**ಪ್ರಣೀಯ ದುಃಶ್ರುತೀ ರಾಜ್ಞೋಽರಂಜಯತ್ಸ್ವಮನೀಷಯಾ ॥ ೭೯ ॥**

ಅದೇ ನಗರದಲ್ಲಿ ಭೂತಿಶರ್ಮನೆಂಬ ಬ್ರಾಹ್ಮಣನಿದ್ದನು. ಅವನು ತನ್ನ ಬುದ್ಧಿಯಿಂದ ದುಷ್ಟಶಾಸ್ತ್ರಗಳನ್ನು ರಚಿಸಿ ರಾಜನನ್ನು ಸಂತೋಷಪಡಿಸಿದನು.

**ತಸ್ಮಿನ್ನುಪರತೇ ತಸ್ಯ ತನಯಃ ಸರ್ವಶಾಸ್ತ್ರವಿತ್ ।**
**ಮುಂಡಶಾಲಾಯನೋ ಜಾತಸ್ತತ್ರಾಸೀನೋಽಬ್ರವೀದಸೌ ॥ ೮೦ ॥**

**ಮುನೀನಾಂ ದುರ್ವಿಧಾನಾಂ ಚ ದಾನತ್ರಯಮಿದಂ ಮತಮ್ ।**
**ಮಹೇಚ್ಛಾನಾಂ ಮಹೀಶಾನಾಂ ದಾನಮಸ್ತ್ಯನ್ಯದುತ್ತಮಮ್ ॥ ೮೧ ॥**

ಅವನು ಸತ್ತ ಬಳಿಕ ಸರ್ವಶಾಸ್ತ್ರಜ್ಞನಾದ ಮುಂಡಶಾಲಾಯನನೆಂಬ ಅವನ ಮಗನು ಅಲ್ಲಿ ವಾಸಿಸುತ್ತಿದ್ದನು. ಸಭೆಯಲ್ಲಿ ಕುಳಿತಿದ್ದ ಅವನು ರಾಜನಿಗೆ ಈ ರೀತಿಯಾಗಿ ಬೋಧಿಸಿದನು– ''ಈ ಮೂರು ದಾನಗಳು ಮುನಿಗಳಿಗೂ ದರಿದ್ರರಿಗೂ ಉಚಿತವಾಗಿವೆ. ಮಹಾಭಿಲಾಷೆಯುಳ್ಳವರಾದ ರಾಜರುಗಳಿಗೆ ಬೇರೆ ಉತ್ತಮದಾನವಿದೆ.

**ಭೂಸುವರ್ಣಾದಿಭೂಯಿಷ್ಠಮಾಚಂದ್ರಾರ್ಕಯಶಸ್ಕರಮ್ ।**
**ಶಾಪಾನುಗ್ರಹಶಾಲಿಭ್ಯೋ ಬ್ರಾಹ್ಮಣೇಭ್ಯಃ ಪ್ರಯಚ್ಛ ತತ್ ॥ ೮೨ ॥**

ಹೆಚ್ಚಾದ ಭೂಮಿ ಸುವರ್ಣ ಮೊದಲಾದುವುಗಳುಳ್ಳುದೂ ಚಂದ್ರಸೂರ್ಯರಿರುವವರೆಗೂ ಯಶಸ್ಸನ್ನುಂಟುಮಾಡುವುದೂ ಆದ ದಾನವನ್ನು ಶಾಪಾನುಗ್ರಹಶಕ್ತಿಯುಳ್ಳ ಬ್ರಾಹ್ಮಣರಿಗೆ ಕೊಡು.

**ಆರ್ಷಮತ್ರ ಶ್ರುತಂ ಚಾಸ್ತಿ ದಾನಸ್ಯಾಸ್ಯೋಪದೇಶಕಮ್ ।**
**ಇತ್ಯಾನೀಯ ಗೃಹಾತ್ಸ್ವೋಕ್ತ ತತ್ಪುಸ್ತಕಮವಾಚಯತ್ ॥ ೮೩ ॥**

ಈ ದಾನವನ್ನು ಉಪದೇಶಿಸುವ ಋಷಿಪ್ರೋಕ್ತವಾದ ಶಾಸ್ತ್ರವೂ ಇಲ್ಲಿದೆ'' ಎಂದು ಹೇಳಿ ಮನೆಯಿಂದ ತನ್ನ ಪುಸ್ತಕವನ್ನು ತಂದು ಓದಿದನು.

**ಇತ್ಥಂ ತೇನೇಂಗಿತಜ್ಞೇನ ಲಬ್ಧ್ವಾವಸರಮುತ್ಪಥಮ್ ।**
**ಮುಂಡಶಾಲಾಯನೇನೋಕ್ತಂ ರಾಜಾ ತದ್ಬಹ್ವಮನ್ಯತ ॥ ೮೪ ॥**

ಈ ರೀತಿಯಾಗಿ ಇಂಗಿತಜ್ಞನಾದ ಆ ಮುಂಡಶಾಲಾಯನನು ಅವಕಾಶವನ್ನು ಹೊಂದಿ ಹೇಳಿದ ಆ ದುರ್ಮಾರ್ಗವನ್ನು ರಾಜನು ಗೌರವಿಸಿದನು.

**ಪಾಪಾಭೀರೋರಭದ್ರಸ್ಯ ವಿಷಯಾಂಧಸ್ಯ ದುರ್ಮತೈಃ ।**
**ರಂಜಿತಸ್ಸ ಮಹೀಪಾಲಃ ಪರಲೋಕಮಹಾಶಯಾ ॥ ೮೫ ॥**

ಪಾಪಕ್ಕೆ ಹೆದರದವನೂ ದುಷ್ಟನೂ ವಿಷಯಾಂಧನೂ ಆದ ಆ ಮುಂಡಶಾಲಾಯನನ ದುರಭಿಪ್ರಾಯಗಳಿಂದ ಆ ರಾಜನು ಪರಲೋಕದ ಮಹದಾಶೆಯಿಂದ ಸಂತೋಷಪಡಿಸಲ್ಪಟ್ಟನು. ಮುಂಡಶಾಲಾಯನನು ಹೇಳಿದಂತೆ ಆಚರಿಸಿದರೆ ಪರಲೋಕದಲ್ಲಿ ಸುಖವುಂಟಾಗುವುದೆಂಬ ಮಹದಾಶೆಯಿಂದ ರಾಜನು ಸಂತೋಷಪಟ್ಟನೆಂದು ಭಾವವು.

**ಕದಾಚಿತ್ಕಾರ್ತಿಕೇ ಮಾಸೇ ಪೌರ್ಣಮಾಸ್ಯಾಂ ಶುಚಿರ್ಭವನ್ ।**
**ಮುಂಡಶಾಲಾಯನಂ ಭಕ್ತ್ಯಾ ಪೂಜಯಿತ್ವಾಕ್ಷತಾದಿಭಿಃ ॥ ೮೬ ॥**

**ಭೂಸುವರ್ಣಾದಿತತ್ಪ್ರೋಕ್ತದಾನಾನ್ಯದಿತ ದುರ್ಮತಿಃ ।**
**ತಂ ದೃಷ್ಟ್ವಾ ಭಕ್ತಿಮಾನ್ಭೂಪಮಮಾತ್ಯಃ ಪ್ರತ್ಯವೋಚತ ॥ ೮೭ ॥**

ಒಂದಾನೊಂದು ಕಾಲದಲ್ಲಿ ಕಾರ್ತಿಕಮಾಸದಲ್ಲಿ ಪೌರ್ಣಮೀತಿಥಿಯಲ್ಲಿ ಆ ದುರ್ಬುದ್ಧಿಯುಳ್ಳ ರಾಜನು ಶುಚಿರ್ಭೂತನಾಗಿ ಮುಂಡಶಾಲಾಯನನನ್ನು ಅಕ್ಷತ ಮೊದಲಾದುವುಗಳಿಂದ ಪೂಜಿಸಿ ಅವನು ಹೇಳಿದ ಭೂಮಿ ಸುವರ್ಣ ಮೊದಲಾದ ದಾನಗಳನ್ನು ಕೊಟ್ಟನು. ಆ ರಾಜನನ್ನು ನೋಡಿ ಭಕ್ತಿಯುಳ್ಳ ಮಂತ್ರಿಯು ಪ್ರತಿಯಾಗಿ ಹೇಳುತ್ತಾನೆ.

**ಅನುಗ್ರಹಾರ್ಥಂ ಸ್ವಸ್ಯಾತಿಸರ್ಗೋ ದಾನಂ ಜಿನೈರ್ಮತಮ್ ।**
**ಸ್ವಪರೋಪಕೃತಿಂ ಪ್ರಾಹುರತ್ರ ತಜ್ಞಾ ಅನುಗ್ರಹಮ್ ॥ ೮೮ ॥**

''ಅನುಗ್ರಹಕ್ಕೋಸ್ಕರ ಧನದ ತ್ಯಾಗವು ದಾನವಾಗಿರುತ್ತದೆಂದು ಜಿನರು ಹೇಳುತ್ತಾರೆ. ಅನುಗ್ರಹವಿಷಯವನ್ನು ತಿಳಿದಿರುವವರು ತನಗೂ ಪರರಿಗೂ ಮಾಡುವ ಉಪಕಾರವು ಅನುಗ್ರಹವಾಗಿರುತ್ತದೆಂದು ಹೇಳುತ್ತಾರೆ.

**ಸ್ವೋಪಕಾರೋಽಯಸಂವೃದ್ಧಿಃ ಪರಸ್ಯ ಗುಣವರ್ಧನಮ್ ।**
**ಸ್ವಶಬ್ದೋ ಧನಪರ್ಯಾಯವಾಚಿ ಪಾತ್ರೇತಿಸರ್ಜನಮ್ ॥ ೮೯ ॥**

**ಸ್ವಸ್ಯ ದಾನಂ ಪ್ರಶಂಸಂತಿ ತಜ್ಜಾನನ್ನಪಿ ಕಿಂ ವೃಥಾ ।**
**ಕುಪಾತ್ರೇರ್ಥಂ ವಿಸೃಜ್ಯೈವಂ ತ್ರಯಾಣಾಂ ವಿಹತಿಃ ಕೃತಾ ॥ ೯೦ ॥**

ಪುಣ್ಯವೃದ್ಧಿಯು ತನಗೆ ಉಪಕಾರ. ಗುಣವೃದ್ಧಿಯು ಪರರಿಗೆ ಉಪಕಾರ ಸ್ವಶಬ್ದವು ಧನಪರ್ಯಾಯವಾಚಕವಾಗಿದೆ. ಸತ್ಪಾತ್ರದಲ್ಲಿ ಅದನ್ನು ವಿನಿಯೋಗಿಸುವುದಕ್ಕೆ ''ಸ್ವಸ್ಯ ದಾನ'' ವೆಂದು ಹೊಗಳುತ್ತಾರೆ. ಆ ವಿಷಯವನ್ನು ನೀನು ತಿಳಿಯುವವನಾದರೂ ವ್ಯರ್ಥವಾಗಿ ಕುಪಾತ್ರದಲ್ಲಿ ಧನವನ್ನು ವಿನಿಯೋಗಿಸಿ ಹೀಗೇಕೆ ದಾತೃ ಪಾತ್ರ ಧನಗಳನ್ನು ಹಾಳುಮಾಡಿದೆ ?

**ಸುಬೀಜಂ ಸುಪ್ರಭೂತಂ ಚ ಪ್ರಕ್ಷಿಪ್ತಂ ಕಿಂ ತದೂಷರೇ ।**
**ಫಲಂ ಭವತಿ ಸಂಕ್ಲೇಶಬೀಜನಾಶಫಲಾದ್ವಿನಾ ॥ ೯೧ ॥**

ಉತ್ತಮವಾದ ಬೀಜವನ್ನು ಮರುಭೂಮಿಯಲ್ಲಿ ಹೆಚ್ಚಾಗಿ ಬಿತ್ತಿದರೂ ದುಃಖ ಮತ್ತು ಬೀಜನಾಶರೂಪವಾದ ಫಲವಲ್ಲದೆ ಬೇರೆ ಫಲವಾಗುವುದಿಲ್ಲ.

**ಸುಬೀಜಮಲ್ಪಮಪ್ಯುಪ್ತಂ ಸುಕ್ಷೇತ್ರೇ ಕಾಲವೇದಿನಾ ।**
**ತತ್ಸಹಸ್ರಗುಣೀಭೂತಂ ವಾಪಕಸ್ಯ ಫಲಂ ಭವೇತ್ ॥ ೯೨ ॥**

ಸಮಯವರಿತವನು ಒಳ್ಳೆಯ ಬೀಜವನ್ನು ಒಳ್ಳೆಯ ಕ್ಷೇತ್ರದಲ್ಲಿ ಸ್ವಲ್ಪವಾಗಿ ಬಿತ್ತಿದರೂ ಅದರಿಂದ ಬಿತ್ತಿದವನಿಗೆ ಸಹಸ್ರಗುಣಿತವಾದ ಫಲವುಂಟಾಗುವುದು.''

**ಇತಿ ಭಕ್ತೇನ ತೇನೋಕ್ತಮುದಾಹರಣಕೋಟಿಭಿಃ ।**
**ಧೀಮತಾ ತನ್ಮಹೀಭರ್ತುರುಪಹಾರಾಯ ನಾಭವತ್ ॥ ೯೩ ॥**

ಭಕ್ತನೂ ಪ್ರಾಜ್ಞನೂ ಆದ ಆ ಮಂತ್ರಿಯು ಈ ರೀತಿಯಾಗಿ ಅನೇಕ ದೃಷ್ಟಾಂತಗಳಿಂದ ಹೇಳಿದ ಮಾತು ರಾಜನ ಪ್ರಯೋಜನಕ್ಕಾಗಲಿಲ್ಲ.

**ಕಾಲದಷ್ಟಸ್ಯ ವಾ ಮಂತ್ರೋ ಭೈಷಜ್ಯಂ ವಾ ಗತಾಯುಷಃ ।**
**ಜನುಷಾಂಧಸ್ಯ ವಾದರ್ಶೋ ವಿಪರೀತಸ್ಯ ಸದ್ವಚಃ ॥ ೯೪ ॥**

ಕಾಲದಿಂದ ಕಚ್ಚಲ್ಪಟ್ಟವನಿಗೆ–ಕಾಲವು ತೀರಿದವನಿಗೆ ಮಂತ್ರದಂತೆಯೂ ಆಯುಷ್ಯವು ತೀರಿದವನಿಗೆ ಔಷಧಿಯಂತೆಯೂ ಹುಟ್ಟುಕುರುಡನಿಗೆ ಕನ್ನಡಿಯಂತೆಯೂ ವಿಪರೀತನಾದ ರಾಜನಿಗೆ ಆ ಮಂತ್ರಿಯ ಮಾತು ಫಲಕಾರಿಯಾಗಲಿಲ್ಲ.

**ವಿಹಾಯಾನುಕ್ರಮಾಯಾತಂ ದಾನಮಾರ್ಗಂ ಕುಮಾರ್ಗಗಃ ।**
**ಮೂರ್ಖಪ್ರಲಪಿತಂ ದಾನಮಾರಾತೀಯಮವೀವೃತತ್ ॥ ೯೫ ॥**

ಪರಂಪರೆಯಾಗಿ ಬಂದ ದಾನಪದ್ಧತಿಯನ್ನು ಬಿಟ್ಟು ಕುಮಾರ್ಗವನ್ನು ಹೊಂದಿದ ಆ ರಾಜನು ಮೂರ್ಖನಿಂದ ಹೇಳಲ್ಪಟ್ಟ ದಾನವನ್ನು ಋಷಿಪರಂಪರೆಯಿಂದ ಬಂದ ದಾನವನ್ನಾಗಿ ವಿವರಿಸಿದನು.

**ಕನ್ಯಾಹಸ್ತಿಸುವರ್ಣವಾಜಿಕಪಿಲಾದಾಸೀತಿಲಸ್ಯಂದನ- ।**
**ಕ್ಷ್ಮಾಗೇಹಪ್ರತಿಬದ್ಧಮತ್ರ ದಶಧಾ ದಾನಂ ದರಿದ್ರೇಪ್ಸಿತಮ್ ।**
**ತೀರ್ಥಾಂತೇ ಜಿನಶೀತಲಸ್ಯ ಸುತರಾಮಾವಿಶ್ಚಕಾರ ಸ್ವಯಮ್ ।**
**ಲುಬ್ಧೋ ವಸ್ತುಷು ಭೂತಿಶರ್ಮತನಯೋಽಸೌ ಮುಂಡಶಾಲಾಯನಃ ॥**

ಕನ್ಯಾದಾನ, ಗಜದಾನ, ಸುವರ್ಣದಾನ, ಅಶ್ವದಾನ, ಕಪಿಲಾದಾನ, ದಾಸೀದಾನ, ತಿಲದಾನ, ರಥದಾನ, ಭೂದಾನ, ಗೃಹದಾನಗಳೆಂದು ಹೇಳಲ್ಪಟ್ಟ ಹತ್ತು ದಾನಗಳು ದರಿದ್ರರಿಗೆ ಇಷ್ಟವಾದುವು. ಇವುಗಳನ್ನು ಶೀತಲಜಿನರ ತೀರ್ಥದ ಕೊನೆಯಲ್ಲಿ ಭೂತಿಶರ್ಮನ ಪುತ್ರನಾದ ಈ ಮುಂಡಶಾಲಾಯನನು ಆ ವಸ್ತುಗಳಲ್ಲಿ ತಾನು ಲುಬ್ಧನಾಗಿ ಹೆಚ್ಚಾಗಿ ಪ್ರಚಾರಮಾಡಿದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಶೀತಲತೀರ್ಥಕರಪುರಾಣಂ ಷಟ್ಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಶೀತಲತೀರ್ಥಕರಪುರಾಣವೆಂಬ
ಐವತ್ತಾರನೆಯ ಪರ್ವವು ಸಮಾಪ್ತವಾದುದು.

# ಅಥ ಶ್ರೇಯಸ್ತೀರ್ಥಕರಪುರಾಣಂ

**ಶ್ರೇಯಃ ಶ್ರೇಯೇಷು ನಾಸ್ತ್ಯನ್ಯಃ ಶ್ರೇಯಸಃ ಶ್ರೇಯಸೇ ಬುಧೈಃ ।**
**ಇತಿ ಶ್ರೆಯೋರ್ಥಿಭಿಃ ಶ್ರೇಯಃ ಶ್ರೇಯಾನ್ಸಃ ಶ್ರೇಯಸೇಸ್ತು ನಃ ॥ ೧ ॥**

ಪ್ರಾಜ್ಞರಿಂದ ತಮ್ಮ ಶ್ರೇಯಸ್ಸಿಗೋಸ್ಕರ ಆಶ್ರಯಿಸಲ್ಪಡತಕ್ಕ ವಸ್ತುಗಳಲ್ಲಿ ಶ್ರೇಯಾಂಸರಿಗಿಂತ ಬೇರೆ ಆಶ್ರಯಿಸಲ್ಪಡತಕ್ಕ ವಸ್ತುವಿಲ್ಲವಾದುದರಿಂದ ತಮಗೆ ಶ್ರೇಯಸ್ಸನ್ನು ಬಯಸುವವರಿಂದ ಶ್ರೇಯಾಂಸರು ಆಶ್ರಯಿಸಲ್ಪಡತಕ್ಕವರಾಗಿದ್ದಾರೆ. ಅಂತಹ ಶ್ರೇಯಾಂಸರು ನಮ್ಮ ಶ್ರೇಯಸ್ಸಿಗೋಸ್ಕರ ಇರಲಿ.

**ಪುಷ್ಕರಾರ್ಧೇಂದ್ರದಿಕ್ಮೇರುಪ್ರಾಗ್ವಿದೇಹೇ ಸುಕಚ್ಛಕೇ ।**
**ಸೀತಾನದ್ಯುತ್ತರೇ ದೇಶೇ ನೃಪಃ ಕ್ಷೇಮಪುರಾಧಿಪಃ ॥ ೨ ॥**

**ನಲಿನಪ್ರಭನಾಮಾಭೂನ್ನಮಿತಾಶೇಷವಿದ್ವಿಷಃ ।**
**ಪ್ರಜಾನುರಾಗಸಂಪಾದಿತಾಚಿಂತ್ಯಮಹಿಮಾಶ್ರಯಃ ॥ ೩ ॥**

**ಪೃಥಕ್ತ್ರಿಭೇದನಿರ್ಣೀತಶಕ್ತಿಸಿದ್ಧ್ಯುದಯೋದಿತಃ ।**
**ಶಮವ್ಯಾಯಾಮಸಂಪ್ರಾಪ್ತಕ್ಷೇಮಯೋಗೋಯಮೈಧತ ॥ ೪ ॥**

ಪುಷ್ಕರಾರ್ಧದ್ವೀಪದ ಪೂರ್ವದಿಕ್ಕಿನ ಮೇರುವಿನ ಪೂರ್ವವಿದೇಹದ ಸೀತಾನದಿಯ ಉತ್ತರದಲ್ಲಿ ಸುಕಚ್ಛದೇಶದಲ್ಲಿರುವ ಕ್ಷೇಮಪುರದ ದೊರೆಯೂ ಶತ್ರುಗಳನ್ನೆಲ್ಲ ಎರಗಿಸಿಕೊಂಡವನೂ ಪ್ರಜಾನುರಾಗದಿಂದ ಸಂಪಾದಿತವಾದ ಅಚಿಂತ್ಯ ಮಹಿಮೆಗೆ ಆಶ್ರಯನೂ ಬೇರೆ ಬೇರೆಯಾದ ಮೂರು ಭೇದಗಳಿಂದ ನಿರ್ಣೀತವಾದ ಶಕ್ತಿತ್ರಯ ಸಿದ್ಧಿತ್ರಯಗಳ ಆವಿರ್ಭಾವವುಳ್ಳವನೂ ಶಾಂತಿಯಿಂದಲೂ ಪರಿಶ್ರಮದಿಂದಲೂ ಯೋಗಕ್ಷೇಮಗಳನ್ನು ಪಡೆದಿರುವವನೂ ಆದ ನಲಿನಪ್ರಭನೆಂಬ ರಾಜನು ವೃದ್ಧಿಯನ್ನು ಹೊಂದುತ್ತಿದ್ದನು.

**ಭೂಭೃತ್ತ್ವಮರ್ಥವತ್ತಸ್ಮಿನ್ನಸ್ಯಾನ್ಯಾಯೇನ ಪಾಲನಾತ್ ।**
**ಸ್ಥಿತೌ ಸುಸ್ಥಾಪ್ಯ ಸುಸ್ನಿಗ್ಧಾ ಧರಾಮಧಿತ ಸತ್ಪ್ರಜಾಃ ॥ ೫ ॥**

ನ್ಯಾಯದಿಂದ ರಾಜ್ಯವನ್ನು ಪಾಲಿಸಿದುದರಿಂದ ಅವನಲ್ಲಿ "ಭೂಭೃತ್ತ್ವ" ವೆಂಬುದು ಸಾರ್ಥಕವಾಗಿದ್ದಿತು. ಅವನು ಬಹುಪ್ರೀತಿಯುಳ್ಳವರಾದ ಉತ್ತಮ ಪ್ರಜೆಗಳನ್ನು ಸರಿಯಾದ ಸ್ಥಿತಿಯಲ್ಲಿರಿಸಿ ಪೃಥ್ವಿಯನ್ನು ಪಾಲಿಸಿದನು.

**ಧರ್ಮಾ ಏವಾಪರೇ ಧರ್ಮಾಸ್ತಸ್ಮಿನ್ಸನ್ಮಾರ್ಗವರ್ತಿನಿ ।**
**ಅರ್ಥಕಾಮೌ ಚ ಧರ್ಮ್ಯೌ ಯತ್ತತ್ಸ ಧರ್ಮಮಯೋಭವತ್ ॥ ೬ ॥**

ಸನ್ಮಾರ್ಗದಲ್ಲಿರುವ ಆ ನಲಿನಪ್ರಭರಾಜನಲ್ಲಿ ಧರ್ಮಗಳು ಬೇರೆಯೇ–ಲೋಕೋತ್ಕೃಷ್ಟವಾದ ಧರ್ಮಗಳಾಗಿದ್ದುವು. ಅವನಲ್ಲಿ ಅರ್ಥಕಾಮಪುರುಷಾರ್ಥಗಳು ಧರ್ಮಯುಕ್ತಗಳಾಗಿದ್ದುದರಿಂದ ಅವನು ಧರ್ಮಮಯನಾಗಿದ್ದನು.

**ಏವಂ ಸ್ವಕೃತಪುಣ್ಯಾನುಭಾವೋದಿತಸುಖಾಕರಃ ।**
**ಲೋಕಪಾಲೋಪಮೋ ದೀರ್ಘಂ ಪಾಲಯನ್ನಖಿಲಾಮಿಲಾಮ್ ॥ ೭ ॥**

ಈ ರೀತಿಯಾಗಿ ತಾನು ಮಾಡಿದ್ದ ಪುಣ್ಯದ ಫಲಾನುಭವದಿಂದುಂಟಾದ ಸುಖಕ್ಕೆ ಗಣಿಯೂ ಲೋಕವನ್ನು ಪಾಲಿಸುವ ರಾಜನಿಗೆ ಸಮಾನನೂ ಆದ ಆ ನಲಿನಪ್ರಭ ರಾಜನು ಬಹುಕಾಲದವರೆಗೆ ಸಮಸ್ತಪೃಥ್ವಿಯನ್ನಾಳಿದನು.

**ಸಹಸ್ರಾಮ್ರವಣೇನಂತಜಿನಾಂಸ್ತದ್ವನಪಾಲಕಾತ್ ।**
**ಅವತೀರ್ಣಾನ್ವಿದಿತ್ವಾತ್ಮಪರಿವಾರಪರಿಷ್ಕೃತಃ ॥ ೮ ॥**

**ಗತ್ವಾಭ್ಯರ್ಚ್ಯ ಚಿರಂ ಸ್ತುತ್ವಾ ನತ್ವಾ ಸ್ವೋಚಿತದೇಶಭಾಕ್ ।**
**ಶ್ರುತ್ವಾ ಧರ್ಮಂ ಸಮುತ್ಪನ್ನತತ್ತ್ವಬುದ್ಧಿರಿತಿ ಸ್ಮರನ್ ॥ ೯ ॥**

**ಕಸ್ಮಿನ್ಕೇನ ಕಥಂ ಕಸ್ಮಾತ್ಕಸ್ಯ ಕಿಂ ಶ್ರೇಯ ಇತ್ಯದಃ ।**
**ಅಜಾನತಾ ಮಯಾ ಭ್ರಾಂತಂ ಶ್ರಾಂತೇನಾನಂತಜನ್ಮಸು ॥ ೧೦ ॥**

**ಅಹಿತೋ ಬಹುಧಾ ಮೋಹಾನ್ಮಯೈವೇಷ ಪರಿಗ್ರಹಃ ।**
**ತತ್ತ್ಯಾಗಾದ್ಯದಿ ನಿರ್ವಾಣಂ ಕಸ್ಮಾತ್ಕಾಲವಿಲಂಬನಮ್ ॥ ೧೧ ॥**

**ಇತಿ ನಾಮ್ನಾ ಸುಪುತ್ರಾಯ ಪುತ್ರಾಯ ಗುಣಶಾಲಿನೇ ।**
**ದತ್ವಾ ರಾಜ್ಯಂ ಸಮಂ ಭೂಪೈರ್ಬಹುಭಿಃ ಸಂಯಮಂ ಯಯೌ ॥ ೧೨ ॥**

ಒಂದಾನೊಂದು ದಿವಸ ಸಹಸ್ರಾಮ್ರವನದಲ್ಲಿ ಅನಂತಜಿನರು ಅವತರಿಸಿರುತ್ತಾರೆಂದು ವನಪಾಲಕನಿಂದ ತಿಳಿದು ತನ್ನ ಪರಿವಾರಸಹಿತನಾಗಿ ಹೋಗಿ ಅವರನ್ನು ಪೂಜಿಸಿ ಬಹುಕಾಲದವರೆಗೆ ಸ್ತುತಿಸಿ ನಮಸ್ಕರಿಸಿ ತನಗೆ ಉಚಿತವಾದ ಸ್ಥಾನದಲ್ಲಿ ಕುಳಿತು ಧರ್ಮಶ್ರವಣವನ್ನು ಮಾಡಿ ತತ್ತ್ವಜ್ಞಾನೋತ್ಪತ್ತಿಯುಳ್ಳವನಾಗಿ "ಯಾವನಲ್ಲಿ ಯಾವನಿಂದ ಹೇಗೆ ಯಾವನ ದೆಸೆಯಿಂದ ಯಾವನಿಗೆ ಏನು ಶ್ರೇಯಸ್ಸುಂಟಾಗುವುದು ? ಎಂಬೀ ವಿಷಯವನ್ನು ತಿಳಿಯದಿರುವ ನಾನು ಅನಂತ ಜನ್ಮಗಳಲ್ಲಿ ಸುತ್ತಿ ಬಳಲಿದೆನು. ಮೋಹದಿಂದ ನಾನೇ ಈ ಪರಿಗ್ರಹವನ್ನು ಬಹಳವಾಗಿ ಸಂಗ್ರಹಿಸಿದೆನು. ಅದನ್ನು ತ್ಯಜಿಸುವುದರಿಂದ ಮುಕ್ತಿಯು ಪ್ರಾಪ್ತವಾಗುವುದಾದರೆ ಕಾಲವಿಲಂಬವೇತಕ್ಕಾಗಿ ?" ಈ ರೀತಿಯಾಗಿ ಸ್ಮರಿಸಿ ಗುಣಶಾಲಿಯಾದ ಸುಪುತ್ರನೆಂಬ ಪುತ್ರನಿಗೆ ರಾಜ್ಯವನ್ನು ಕೊಟ್ಟು ಅನೇಕ ರಾಜರುಗಳೊಡನೆ ದೀಕ್ಷೆಯನ್ನು ಪಡೆದನು.

**ಶಿಕ್ಷಿತೈಕಾದಶಾಂಗೋಸೌ ತೀರ್ಥಕೃನ್ನಾಮಧಾಮ ಸನ್ ।**
**ಸನ್ನ್ಯಸ್ಯಾಜನಿ ಕಲ್ಪೇಂತ್ಯೇ ಸುರಾಧೀಶೋಚ್ಯುತಾಹ್ವಯಃ ॥ ೧೩ ॥**

**ಪುಷ್ಪೋತ್ತರವಿಮಾನೇಶೋ ದ್ವಾವಿಂಶತ್ಯಬ್ಧಿಜೀವಿತಃ ।**
**ಹಸ್ತತ್ರಯಪ್ರಮಾಣಾಂಗಃ ಪ್ರೋಕ್ತಲೇಶ್ಯಾದಿಭಿರ್ಯುತಃ ॥ ೧೪ ॥**

ಇವನು ಏಕಾದಶಾಂಗ ಶಾಸ್ತ್ರವನ್ನು ಕಲಿತು ಷೋಡಶಭಾವನೆಗಳನ್ನು ಭಾವಿಸಿ ತೀರ್ಥಕರನಾಮವೆಂಬ ತೇಜಸ್ಸುಳ್ಳವನೂ ಸಮಾಧಿಮರಣವನ್ನು ಹೊಂದಿ ಕೊನೆಯ–ಅಚ್ಯುತಕಲ್ಪದಲ್ಲಿ ಪುಷ್ಪೋತ್ತರವಿಮಾನಾಧಿಪತಿಯೂ ಇಪ್ಪತ್ತೆರಡು ಸಾಗರೋಪಮಕಾಲದವರೆಗೆ ಜೀವಿಕೆಯುಳ್ಳವನೂ ಮೂರು ಹಸ್ತಪ್ರಮಾಣ ದೇಹವುಳ್ಳವನೂ ಹಿಂದೆ ಹೇಳಲ್ಪಟ್ಟ ಲೇಶ್ಯಾ ಅವಧಿ ವಿಕ್ರಿಯಾದಿಗಳುಳ್ಳವನೂ ಆದ ಅಚ್ಯುತೇಂದ್ರನಾಗಿ ಜನಿಸಿದನು.

**ದೇವೀಭಿರ್ದಿವ್ಯಭಾವಾಭಿಃ ಕಮನೀಯಾಭಿರನ್ವಹಮ್ ।**
**ಭಾವಸಾರಾಣಿ ಸೌಖ್ಯಾನಿ ತತ್ರ ಪ್ರೀತ್ಯಾನ್ವಭೂಚ್ಚಿರಮ್ ॥ ೧೫ ॥**

ಅಲ್ಲಿ ಅವನು ದಿವ್ಯಭಾವವುಳ್ಳವರೂ ಮನೋಹರರೂ ಆದ ದೇವಿಯರೊಡನೆ ಪ್ರತಿದಿವಸ ಪ್ರೀತಿಯಿಂದ ಬಹುಕಾಲದವರೆಗೆ ಸಾರವಾದ ಸುಖಗಳನ್ನನುಭವಿಸಿದನು.

**ಕಲ್ಪಾತೀತಾ ವಿರಾಗಾಸ್ತೇ ಪರೇ ಚಾಲ್ಪಸುಖಾಸ್ತತಃ ।**
**ಸಂಸಾರಸೌಖ್ಯಪರ್ಯಂತಂ ಸಂತೋಷಾತ್ಸಮತೀಯಿವಾನ್ ॥ ೧೬ ॥**

ಕಲ್ಪಾತೀತರಾದ ದೇವರ್ಕಳು ವಿಷಯಸುಖಾನುರಾಗವಿಲ್ಲದವರಾಗಿರುತ್ತಾರೆ. ಇತರ ಭವನಾದಿ ದೇವರ್ಕಳಾದರೋ ಅಲ್ಪಸುಖವುಳ್ಳವರಾಗಿರುತ್ತಾರೆ. ಆದುದರಿಂದ ಆ ಅಚ್ಯುತೇಂದ್ರನು ಸಂತೋಷದಿಂದ ಸಂಸಾರಸುಖದ ತುತ್ತತುದಿಯನ್ನು ದಾಟಿದನು. ಅಧಿಕಸುಖವನ್ನನುಭವಿಸಿದನೆಂದು ಭಾವವು.



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಸಿಂಹಪುರೀಪಟ್ಟಣದಲ್ಲಿ ವಿಷ್ಣುನೃಪತಿಗಂ ವೈಷ್ಣವೀ(ನಂದಾ)ದೇವಿಗಂ ಶ್ರವಣನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಗಂಡಲಾಂಛನಮನುಳ್ಳ ಎಂಬತ್ತು ಬಿಲ್ಲುತ್ಸೇಧಮನುಳ್ಳ ಎಂಬತ್ತುನಾಲ್ಕುಲಕ್ಷವರ್ಷ ಆಯುಷ್ಯಮನುಳ್ಳ ಈಶ್ವರ ಗೌರೀ–ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ಸಂಕುಲಕೂಟದಲ್ಲಿ ಕರ್ಮಕ್ಷಯಮಂಗೈದ ಶ್ರೀ ಶ್ರೇಯಾಂಸತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಅನುಭೂಯ ಸುಖಂ ತಸ್ಮಿಂಸ್ತಸ್ಮಿನ್ನತ್ರಾಗಮಿಷ್ಯತಿ ।**
**ದ್ವೀಪೇಸ್ಮಿನ್ಭಾರತೇ ಸಿಂಹಪುರಾಧೀಶೋ ನರೇಶ್ವರಃ ॥ ೧೭ ॥**

**ಇಕ್ಷ್ವಾಕುವಂಶವಿಖ್ಯಾತೋ ವಿಷ್ಣುನಾಮಾಸ್ಯ ವಲ್ಲಭಾ ।**
**ನಂದಾ ಷಣ್ಮಾಸಸಂಪ್ರಾಪ್ತವಸುಧಾರಾದಿಪೂಜನಾ ॥ ೧೮ ॥**

**ಜ್ಯೇಷ್ಠೇ ಮಾಸ್ಯಸಿತೇ ಷಷ್ಠ್ಯಾಂ ಶ್ರವಣೇ ರಾತ್ರಿನಿರ್ಗಮೇ ।**
**ಸ್ವವಕ್ತ್ರಾವೇಶಿನಾಗೇಂದ್ರಸ್ವಪ್ನಾನ್ಯೈಕ್ಷಿಷ್ಟ ಷೋಡಶ ॥ ೧೯ ॥**

ಅವನು ಆ ಸ್ವರ್ಗದಲ್ಲಿ ಸುಖವನ್ನನುಭವಿಸಿ ಈ ಮಧ್ಯಮಲೋಕಕ್ಕೆ ಬರುವವನಾಗಿರುವಾಗ ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಸಿಂಹಪುರಾಧಿಪತಿಯೂ ಇಕ್ಷ್ವಾಕುವಂಶದಲ್ಲಿ ಪ್ರಖ್ಯಾತನೂ ಆದ ವಿಷ್ಣುವೆಂಬ ನರೇಶ್ವರನಿದ್ದನು. ನಂದೆಯೆಂಬುವಳು ಆತನ ಪತ್ನಿಯಾಗಿದ್ದಳು. ಆಕೆಯು ಆರುತಿಂಗಳವರೆಗೆ ದೇವರ್ಕಳಿಂದ ವಸುಧಾರಾದಿಪೂಜೆಯನ್ನು ಹೊಂದಿದವಳಾಗಿ ಜ್ಯೇಷ್ಠಮಾಸದ ಕೃಷ್ಣಪಕ್ಷದ ಷಷ್ಠೀ ತಿಥಿಯ ಶ್ರವಣನಕ್ಷತ್ರದಲ್ಲಿ ಬೆಳಗಿನ ಜಾವದಲ್ಲಿ ತನ್ನ ಮುಖವನ್ನು ಪ್ರವೇಶಿಸುತ್ತಿರುವ ಆನೆಯ ಸ್ವಪ್ನವನ್ನೂ ಬೇರೆ ಹದಿನಾರು ಸ್ವಪ್ನಗಳನ್ನೂ ಕಂಡಳು.

**ತತ್ಫಲಾನ್ಯವಬುದ್ಧ್ಯಾಸೌ ಪತ್ಯುಸ್ಸಂಪ್ರಾಪ್ಯ ಸಂಮದವಮ್ ।**
**ತದೈವಾಯಾತದೇವೇಂದ್ರವಿಹಿತೋರುಮಹೋತ್ಸವಾ ॥ ೨೦ ॥**

**ನವ ಮಾಸಾನ್ಯಥೋಕ್ತೇನ ನೀತ್ವಾ ಸಂತೋಷ್ಯ ಸುಪ್ರಜಾಃ ।**
**ಫಾಲ್ಗುಣೇ ಮಾಸಿ ಕೃಷ್ಣೈಕಾದಶ್ಯಾಂ ತ್ರಿಜ್ಞಾನಧಾರಿಣಮ್ ॥ ೨೧ ॥**

**ವಿಷ್ಣುಯೋಗೇ ಮಹಾಭಾಗಮಸೂತಾಚ್ಯುತನಾಯಕಮ್ ।**
**ಮೇಘಾವಲೀವ ಸದ್ವೃಷ್ಟಿವಿಶೇಷಂ ವಿಶ್ವತುಷ್ಟಯೇ ॥ ೨೨ ॥**

ಈಕೆಯು ಆ ಸ್ವಪ್ನಗಳ ಫಲಗಳನ್ನು ಪತಿಯಿಂದ ತಿಳಿದು ಸಂತೋಷವನ್ನು ಹೊಂದಿ ಆಗಲೇ ಬಂದ ದೇವೇಂದ್ರರು ಮಾಡಿದ ಮಹೋತ್ಸವವುಳ್ಳವಳಾಗಿ ಕ್ರಮವಾಗಿ ಒಂಬತ್ತು ತಿಂಗಳುಗಳನ್ನು ಕಳೆದು ಉತ್ತಮಪ್ರಜೆಗಳನ್ನು ಸಂತೋಷಗೊಳಿಸಿ ಫಾಲ್ಗುಣಮಾಸದ ಕೃಷ್ಣಪಕ್ಷದ ಏಕಾದಶೀತಿಥಿಯಲ್ಲಿ ವಿಷ್ಣುಯೋಗದಲ್ಲಿ ಜಗತ್ತನ್ನು ಸಂತೋಷಗೊಳಿಸುವುದಕ್ಕೋಸ್ಕರ, ಮೇಘಸಮೂಹವು ವಿಶೇಷವಾದ ಒಳ್ಳೆಯ ಮಳೆಯನ್ನು ಸುರಿಯುವಂತೆ, ಮತಿಶ್ರುತಾವಧಿಜ್ಞಾನಧಾರಿಯೂ ಮಹಾಭಾಗ್ಯವಂತನೂ ಆದ ಅಚ್ಯುತೇಂದ್ರನನ್ನು ಪಡೆದಳು.

**ತದುದ್ಭವೇ ಪ್ರಸನ್ನಾನಿ ಮನಾಂಸಿ ಸಕಲಾಂಗಿನಾಮ್ ।**
**ಜಲಸ್ಥಲಾನಿ ವಾ ಸದ್ಯಃ ಸರ್ವತ್ರ ಶರದಾಗಮೇ ॥ ೨೩ ॥**

ಶರತ್ಕಾಲವು ಬಂದ ಕೂಡಲೆ ಎಲ್ಲಾ ಕಡೆಗಳಲ್ಲಿ ಜಲಾಶಯಗಳೂ ಸ್ಥಳಗಳೂ ಪ್ರಸನ್ನಗಳಾಗಿರುವಂತೆ, ಆ ಶಿಶುವು ಜನಿಸಿದಾಗ ಸಕಲಪ್ರಾಣಿಗಳ ಮನಸ್ಸುಗಳು ಪ್ರಸನ್ನಗಳಾದುವು.

**ಅರ್ಥಿನೋ ಧನಸಂಪತ್ತ್ಯಾ ಧನಿನೋ ದೀನತರ್ಪಣಾತ್ ।**
**ತೇ ಚ ತೇ ಚೇಷ್ಟಸಂಭೋಗಾತ್ಸ್ವೋತ್ಸವಾಃ ಸ್ಯುಸ್ತದುದ್ಭವೇ ॥ ೨೪ ॥**

ಆ ಶಿಶುವು ಜನಿಸಿದಾಗ ಯಾಚಕರು ಧನವನ್ನು ಸಂಪಾದಿಸಿ ಅದರ ತೃಪ್ತಿಯಿಂದಲೂ ಧನಿಕರು ದಾನಮಾಡಿ ದೀನರನ್ನು ತೃಪ್ತಿಪಡಿಸಿದುದರಿಂದಲೂ ಅವರವರು ಇಷ್ಟಸುಖಾನುಭವವುಳ್ಳವರೂ ತಂತಮ್ಮ ಉತ್ಸವವುಳ್ಳವರೂ ಆದರು.

**ತದಾ ಸರ್ವರ್ತವಸ್ತತ್ರ ಸ್ವೈಸ್ಸ್ವೈರ್ಭಾವೈರ್ಮನೋಹರೈಃ ।**
**ಪ್ರಾದುರ್ಬಭೂವುಃ ಸಂಭೂಯ ಸರ್ವಾಂಗಿಸುಖಹೇತವಃ ॥ ೨೫ ॥**

ಆಗ ಎಲ್ಲಾ ಋತುಗಳು ಮನೋಹರವಾದ ತಂತಮ್ಮ ಭಾವಗಳಿಂದ ಸೇರಿ ಸಮಸ್ತಪ್ರಾಣಿಗಳಿಗೆ ಸುಖಹೇತುಗಳಾಗಿ ಪ್ರಾದುರ್ಭವಿಸಿದುವು.

**ಸರೋಗಾಃ ಪ್ರಾಪುರಾರೋಗ್ಯಂ ಶೋಕಿನೋ ವೀತಶೋಕಿತಾಮ್ ।**
**ಧರ್ಮಿಷ್ಠತಾಂ ಚ ಪಾಪಿಷ್ಠಾಶ್ಚಿತ್ರಮೀಶಸಮುದ್ಭವೇ ॥ ೨೬ ॥**

ಸ್ವಾಮಿಯ ಉತ್ಪತ್ತಿಕಾಲದಲ್ಲಿ ರೋಗಿಷ್ಠರಾಗಿದ್ದವರು ಆರೋಗ್ಯವನ್ನೂ ಶೋಕವುಳ್ಳವರಾಗಿದ್ದವರು ಶೋಕರಾಹಿತ್ಯವನ್ನೂ ಪಾಪಿಷ್ಠರು ಧರ್ಮಿಷ್ಠತ್ವವನ್ನೂ ಹೊಂದಿದರು. ಆಶ್ಚರ್ಯ !

**ಜನಸ್ಯ ಚೇದಯಂ ತೋಷಸ್ತದಾನೀಮತಿಮಾತ್ರಯಾ ।**
**ಪಿತ್ರೋಸ್ತಸ್ಯ ಪ್ರಮೋದಸ್ಯ ಪ್ರಮಾ ಕೇನ ವಿಧೀಯತೇ ॥ ೨೭ ॥**

ಆಗ ಜನರಿಗೆ ಅತ್ಯಧಿಕವಾದ ಈ ಸಂತೋಷವಾಯಿತೆಂದರೆ ಇನ್ನು ಅವನ ತಂದೆ ತಾಯಿಗಳ ಸಂತೋಷದ ಅಳತೆಯನ್ನು ಯಾವುದರಿಂದ ಮಾಡುವುದು ?

**ಸದ್ಯಶ್ಚತುರ್ವಿಧಾ ದೇವಾಃ ಕೃತ್ವಾ ತೇಜೋಮಯಂ ಜಗತ್ ।**
**ಸ್ವಾಂಗಾಭರಣಭಾಭಾರೈರಾಪತಂತಿ ಸ್ಮ ಸರ್ವತಃ ॥ ೨೮ ॥**

ಸ್ವಾಮಿಯ ಉದ್ಭವವಾದೊಡನೆಯೇ ಭವನ ವ್ಯಂತರ ಜ್ಯೋತಿಷ್ಕಲ್ಪವಾಸಿಗಳೆಂಬ ದೇವರ್ಕಳು ತಮ್ಮ ಶರೀರಗಳ ಮತ್ತು ಆಭರಣಗಳ ಕಾಂತಿಯ ಭಾರದಿಂದ ಜಗತ್ತನ್ನು ತೇಜೋಮಯವನ್ನಾಗಿ ಮಾಡುತ್ತ ಎಲ್ಲಾ ಕಡೆಗಳಿಂದಲೂ ಬಂದರು.

**ನೇದುರ್ದುಂದುಭಯೋ ಹೃದ್ಯಾಃ ಪೇತುಃ ಕುಸುಮವೃಷ್ಟಯಃ ।**
**ನೇಟುರಾಮರನರ್ತಕ್ಯೋ ಜಗುಃ ಸ್ವಾದು ದ್ಯುಗಾಯಕಾಃ ॥ ೨೯ ॥**

ಮನೋಹರಗಳಾದ ಭೇರಿಗಳು ಧ್ವನಿಮಾಡಿದುವು. ಪುಷ್ಪವೃಷ್ಟಿಗಳು ಬಿದ್ದುವು. ದೇವನರ್ತಕಿಯರು ನರ್ತನಮಾಡಿದರು. ಸ್ವರ್ಗದ ಗಾಯಕರು ಇಂಪಾಗಿ ಹಾಡಿದರು.

**ಲೋಕೋಯಂ ದೇವಲೋಕೋ ವಾ ತತಶ್ಚಾತ್ರಾದ್ಭುತೋದಯಃ ।**
**ಅಪೂರ್ವಃ ಕೋಪ್ಯಭೂದ್ವೇತಿ ತದಾಸನ್ ದ್ಯುಸದಾಂ ಗಿರಃ ॥ ೩೦ ॥**

ಅವುಗಳಿಂದ ಈ ಲೋಕವು ದೇವಲೋಕವೋ ಎಂಬಂತೆ ಅತ್ಯದ್ಭುತವಾದ ವೈಭವವುಳ್ಳುದಾಯಿತು. ಆಗ "ಯಾವುದೋ ಅಪೂರ್ವವಾದ ವಿಷಯವುಂಟಾಯಿತೋ ?" ಎಂದು ದೇವರ್ಕಳ ಮಾತುಗಳುಂಟಾದುವು.

**ಪಿತರೌ ತಸ್ಯ ಸೌಧರ್ಮಃ ಸ್ವಯಂ ಸದ್ಭೂಷಣಾದಿಭಿಃ ।**
**ಶಚೀದೇವೀ ಚ ಸಂತೋಷ್ಯ ಮಾಯಯಾದಾಯ ಬಾಲಕಮ್ ॥ ೩೧ ॥**

**ಐರಾವತಗಜಸ್ಕಂಧಮಾರೋಪ್ಯಾಮರಸೇನಯಾ ।**
**ಸಹಲೀಲಃ ಸ ಸಂಪ್ರಾಪ್ಯ ಮಹಾಮೇರುಂ ಮಹೌಜಸಮ್ ॥ ೩೨ ॥**

**ಪಂಚಮಾವಾರಪಾರಾತ್ತಕ್ಷೀರವಾರಿಘಟೋತ್ಕರೈಃ ।**
**ಅಭಿಷಿಚ್ಯ ವಿಭೂಷ್ಯೇಶಂ ಶ್ರೇಯಾನಿತ್ಯವದನ್ಮುದಾ ॥ ೩೩ ॥**

ಸೌಧರ್ಮೇಂದ್ರನು ಆ ಸ್ವಾಮಿಯ ತಂದೆತಾಯಿಗಳನ್ನು ತಾನೇ ಶ್ರೇಷ್ಠವಾದ ಆಭರಣಾದಿಗಳಿಂದ ಸಂತೋಷಪಡಿಸಿದನು. ಶಚೀದೇವಿಯು ಮಾಯೆಯಿಂದ ಆ ಬಾಲಕನನ್ನು ತೆಗೆದುಕೊಂಡಳು. ಆ ದೇವೇಂದ್ರನು ಮಹಾತೇಜಸ್ವಿಯಾದ ಆ ಬಾಲಕನನ್ನು ಐರಾವತಗಜದ ಹೆಗಲ ಮೇಲಿಟ್ಟು ದೇವಸೈನ್ಯದೊಡನೆ ಲೀಲೆಯಿಂದ ಮಹಾಮೇರುವನ್ನು ಹೊಂದಿ ಐದನೆಯದಾದ ಕ್ಷೀರಸಮುದ್ರದಿಂದ ತಂದ ಕ್ಷೀರಜಲಘಟಗಳಿಂದ ಅಭಿಷೇಕವನ್ನುಮಾಡಿ ಸ್ವಾಮಿಯನ್ನು ಅಲಂಕರಿಸಿ ಇಂದ್ರನು ಸಂತೋಷದಿಂದ "ಶ್ರೇಯಾನ್" ಎಂದು ಕರೆದನು.

**ತತಃ ಪುರಂ ಸಮಾನೀಯ ಮಾತುರಂಕೇ ನಿಧಾಯ ತಮ್ ।**
**ಸುರಾಧೀಶಃ ಸುರೈಸ್ಸಾರ್ಧಂ ಪ್ರಮುದ್ಯಾರತ್ಸುರಾಲಯಮ್ ॥ ೩೪ ॥**

ಬಳಿಕ ಸ್ವಾಮಿಯನ್ನು ಪಟ್ಟಣಕ್ಕೆ ತಂದು ತಾಯಿಯ ತೊಡೆಯಲ್ಲಿರಿಸಿ ದೇವೇಂದ್ರನು ದೇವರ್ಕಳೊಡನೆ ಸಂತೋಷಗೊಂಡು ಸ್ವರ್ಗಕ್ಕೆ ಹೋದನು.

**ಗುಣೈಸ್ಸಾರ್ಧಮವರ್ಧಂತ ತದಾಸ್ಯಾವಯವಾಃ ಶುಭಾಃ ।**
**ಕ್ರಮಾತ್ಕಾಂತಿಂ ಪ್ರಪುಷ್ಯಂತೋ ಬಾಲಚಂದ್ರಸ್ಯ ವಾಂಶುಭಿಃ ॥ ೩೫ ॥**

ಬಾಲಚಂದ್ರನ ಕಿರಣಗಳಿಂದ ಕಾಂತಿಯನ್ನು ಬೆಳೆಯಿಸುತ್ತವೋ ಎನ್ನುವಂತೆ ಆಗ ಈ ಸ್ವಾಮಿಯ ಶುಭವಾದ ಅವಯವಗಳು ಕ್ರಮದಿಂದ ಗುಣಗಳೊಡನೆ ಬೆಳೆದುವು. ಗುಣಗಳೂ ಅವಯವಗಳೂ ಬೆಳೆದುವೆಂದು ಭಾವವು.

**ಸ ಖತ್ರಯರ್ತುಪಕ್ಷರ್ತುಷಡ್ವತ್ಸರಶತಾಬ್ಧಿಭಿಃ ।**
**ನ್ಯೂನಸಾಗರಕೋಟ್ಯಂತೇ ಪಲ್ಯಾರ್ಧೇ ಧರ್ಮಸಂತತೌ ॥ ೩೬ ॥**

**ವ್ಯುಚ್ಛಿನ್ನಾಯಾಂ ತದಭ್ಯಂತರಾಯುಃ ಶ್ರೇಯಃಸಮುದ್ಭವಃ ।**
**ಪಂಚಶೂನ್ಯಯುಗಾಷ್ಟಾಬ್ದಜೀವಿತಃ ಕನಕಪ್ರಭಃ ॥ ೩೭ ॥**

ಶೀತಲನಾಥರು ಮುಕ್ತರಾಗಿ ೧೦೦ ಸಾಗರ ೬೬ ಲಕ್ಷ ೨೬ ಸಾವಿರ ವರುಷಗಳು ಕಡಿಮೆಯಾದ ಒಂದು ಸಾಗರೋಪಮಕೋಟಿ ವರ್ಷಗಳು ಕಳೆದು ಅರ್ಧಪಲ್ಯ ಕಾಲದವರೆಗೆ ಧರ್ಮಪರಂಪರೆಯು ವಿಚ್ಛೇದವನ್ನು ಹೊಂದಿದಾಗ ಆ ಕಾಲದ ಅವಧಿಯಲ್ಲೇ ಸೇರಿದ ಆಯುಷ್ಯವುಳ್ಳವರೂ ಎಂಬತ್ತು ನಾಲ್ಕು ಲಕ್ಷವರ್ಷಗಳವರೆಗೆ ಜೀವಿಸಿದವರೂ ಬಂಗಾರದಂತೆ ಕಾಂತಿಯುಳ್ಳವರೂ ಆದ ಶ್ರೇಯಸ್ತೀರ್ಥಂಕರರು ಉದ್ಭವಿಸಿದರು.

**ಚಾಪಾಶೀತಿಸಮುತ್ಸೇಧೋ ಬಲೌಜಸ್ತೇಜಸಾಂ ನಿಧಿಃ ।**
**ಏಕವಿಂಶತಿಲಕ್ಷಾಬ್ದಕೌಮಾರಸುಖಸಾಗರಃ ॥ ೩೮ ॥**

**ಪ್ರಾಪ್ಯ ರಾಜ್ಯಂ ಸುರೈಃ ಪೂಜ್ಯಂ ಸರ್ವಲೋಕನಮಸ್ಕೃತಃ ।**
**ತರ್ಪಯಂಶ್ಚಂದ್ರವತ್ಸರ್ವಾನ್ದರ್ಪಿತಾನ್ಭಾನುವತ್ತಪನ್ ॥ ೩೯ ॥**

**ತೇಜೋಮಹಾಮಣಿರ್ವಾರ್ಧಿರ್ಗಾಂಭೀರ್ಯಂ ಮಲಯೋದ್ಭವಃ ।**
**ಶೈತ್ಯಂ ಧರ್ಮ ಇವ ಶ್ರೇಯಃ ಸುಖಂ ಸ ಸ್ವಕರೋಚ್ಚಿರಮ್ ॥ ೪೦ ॥**

ಎಂಬತ್ತು ಧನುಸ್ಸುಗಳಷ್ಟು ಉನ್ನತರೂ ಬಲ ದೀಪ್ತಿ ತೇಜಸ್ಸುಗಳಿಗೆ ನಿಧಿಯೂ ಇಪ್ಪತ್ತೊಂದು ಲಕ್ಷ ವರ್ಷಗಳನ್ನು ಕೌಮಾರಾವಸ್ಥೆಯ ಸುಖಸಮುದ್ರದಲ್ಲಿ ಕಳೆದವರೂ ಸರ್ವಲೋಕನಮಸ್ಕೃತರೂ ದೇವರ್ಕಳಿಂದ ಪೂಜಿಸಲ್ಪಡತಕ್ಕ ರಾಜ್ಯವನ್ನು ಹೊಂದಿ ಚಂದ್ರನಂತೆ ಎಲ್ಲರನ್ನೂ ತೃಪ್ತಿಪಡಿಸುವವರೂ ಗರ್ವಿತರನ್ನು ಸೂರ್ಯನಂತೆ ತಾಪಗೊಳಿಸುವವರೂ ಆದ ಆ ಶ್ರೇಯಸ್ತೀರ್ಥಂಕರರು ಮಹಾಮಣಿಯಂತೆ ತೇಜಸ್ಸನ್ನೂ ಸಮುದ್ರದಂತೆ ಗಾಂಭೀರ್ಯವನ್ನೂ ಮಲಯವಾಯುವಿನಂತೆ ಶೀತಲತ್ವವನ್ನೂ ಧರ್ಮದಂತೆ ಶ್ರೇಯಸ್ಸನ್ನೂ ಸುಖವನ್ನೂ ಜನಗಳಿಗೆ ಬಹುಕಾಲದವರೆಗೆ ಚೆನ್ನಾಗಿ ಉಂಟುಮಾಡಿದರು.

**ಪ್ರಾಗ್ಜನ್ಮಸು ಕೃತಾಯೇನ ಕೃತಾಯಾಂ ಸರ್ವಸಂಪದಿ ।**
**ಬುದ್ಧಿಪೌರುಷಯೋರ್ವ್ಯಾಪ್ತಿಸ್ತಸ್ಯಾಭೂದ್ಧರ್ಮಕಾಮಯೋಃ ॥ ೪೧ ॥**

ಪೂರ್ವಜನ್ಮಗಳಲ್ಲಿ ಮಾಡಲ್ಪಟ್ಟ ಪುಣ್ಯವು ಸರ್ವಸಂಪತ್ತಿಯನ್ನುಂಟುಮಾಡುತ್ತಿದ್ದುದರಿಂದ ಆ ಶ್ರೇಯಸ್ತೀರ್ಥಂಕರರ ಬುದ್ಧಿಯ ಮತ್ತು ಪೌರುಷದ ವ್ಯಾಪ್ತಿಯು ಧರ್ಮಕಾಮಗಳಲ್ಲಿದ್ದಿತು. ಸಂಪತ್ತಿಗೋಸ್ಕರ ಪ್ರಯತ್ನಿಸಬೇಕಾಗಿರಲಿಲ್ಲವೆಂದು ಭಾವವು.

**ತಥಾ ಶುಭವಿನೋದೇಷು ದೇವ್ಯೈಃ ಪುಣ್ಯಾನುಬಂಧಿಷು ।**
**ಸಂಪಾದಿತೇಷು ಕಾಂತಾಭಿರ್ದಿನಾನ್ಯಾರಮತೋಗಮನ್ ॥ ೪೨ ॥**

ದೇವರ್ಕಳಿಂದ ಮಾಡಲ್ಪಟ್ಟುದೂ ಪುಣ್ಯವನ್ನುಂಟುಮಾಡುವುದೂ ಆದ ಶುಭವಿನೋದಗಳಲ್ಲಿ ಪತ್ನಿಯರೊಡನೆ ಕ್ರೀಡಿಸುತ್ತಿದ್ದ ಸ್ವಾಮಿಯ ದಿನಗಳು ಹಾಗೆ ಕಳೆದುವು.

**ಏವಂ ಪಂಚಖಪಕ್ಷಾಬ್ಧಿಮಿತಸಂವತ್ಸರಾವಧೌ ।**
**ರಾಜ್ಯಕಾಲೇಯಮನ್ಯೇದ್ಯುರ್ವಸಂತಪರಿವರ್ತನಮ್ ॥ ೪೩ ॥**

**ವಿಲೋಕ್ಯ ಕಿಲ ಕಾಲೇನ ಸರ್ವಂ ಗ್ರಾಸೀಕೃತಂ ಜಗತ್ ।**
**ಸೋಪಿ ಕಾಲೋ ವ್ಯಯಂ ಯಾತಿ ಕ್ಷಣಾದಿಪರಿವರ್ತನೈಃ ॥ ೪೪ ॥**

**ಕಸ್ಯಾನ್ಯಸ್ಯ ಸ್ಥಿರೀಭಾವೋ ವಿಶ್ವಮೇತದ್ವಿನಶ್ವರಮ್ ।**
**ಶಾಶ್ವತಂ ನ ಪದಂ ಯಾವತ್ಪ್ರಾಪ್ಯತೇ ಸುಸ್ಥಿತಂ ಕುತಃ ॥ ೪೫ ॥**

**ಇತಿ ಸಂಚಿಂತಯನ್ ಲಬ್ಧಸ್ತುತಿಃ ಸಾರಸ್ವತಾದಿಭಿಃ ।**
**ಶ್ರೇಯಸ್ಕರೇ ಸಮಾರೋಪ್ಯ ಸುತೇ ರಾಜ್ಯಂ ಸುರಾಧಿಪೈಃ ॥ ೪೬ ॥**

**ಪ್ರಾಪ್ಯ ನಿಷ್ಕ್ರಮಣಸ್ನಾನಮಾರುಹ್ಯ ವಿಮಲಪ್ರಭಾಮ್ ।**
**ಶಿಬಿಕಾಂ ದೇವಸಂವಾಹ್ಯಾಂ ತ್ಯಕ್ತಾಹಾರೋ ದಿನದ್ವಯಮ್ ॥ ೪೭ ॥**

**ಮನೋಹರವನೋದ್ಯಾನೇ ಫಾಲ್ಗುನೈಕಾದಶೀದಿನೇ ।**
**ಕೃಷ್ಣಪಕ್ಷೇ ಸಹಸ್ರೇಣ ಪೂರ್ವಾಹ್ಣೇ ಭೂಭುಜಾಂ ಸಮಮ್ ॥ ೪೮ ॥**

**ಶ್ರವಣೇ ಸಂಯಮಂ ಪ್ರಾಪ್ಯ ಚತುರ್ಥಾವಗಮೇನ ಸಃ ।**
**ದಿನೇ ದ್ವಿತೀಯೇ ಸಿದ್ಧಾರ್ಥನಗರಂ ಭುಕ್ತಯೇವಿಶತ್ ॥ ೪೯ ॥**

ಈ ರೀತಿಯಾಗಿ ೪೨ ಲಕ್ಷ ವರ್ಷಗಳ ಅವಧಿಯು ರಾಜ್ಯಕಾಲದಲ್ಲಿ ಕಳೆಯಿತು. ಆಗ ಈ ಸ್ವಾಮಿಯು ಒಂದು ದಿವಸ ವಸಂತಋತುವಿನ ಪರಿವರ್ತನೆಯನ್ನು ನೋಡಿ ''ಜಗತ್ತೆಲ್ಲವೂ ಕಾಲಕ್ಕೆ ತುತ್ತಾಗಿದೆ. ಅಂತಹ ಕಾಲವೂ ಕ್ಷಣವೇ ಮೊದಲಾದ ಪರಿವರ್ತನೆಗಳಿಂದ ನಾಶವನ್ನು ಹೊಂದುತ್ತದೆ. ಮತ್ತಾವುದಕ್ಕೆ ಸ್ಥಿರತ್ವವಿದೆ ? ಇದೆಲ್ಲವೂ ನಾಶಶೀಲವಾದುದು. ಶಾಶ್ವತವಾದ ಸ್ಥಾನವನ್ನು ಹೊಂದುವವರೆಗೂ ಸುಖವಾಗಿರುವಿಕೆಯು ಏತರಿಂದಾಗುವುದು ?'' ಈ ಪ್ರಕಾರವಾಗಿ ಚಿಂತಿಸಿ ಸಾರಸ್ವತಾದಿ ಲೌಕಾಂತಿಕದೇವರ್ಕಳಿಂದ ಸ್ತುತಿಸಲ್ಪಟ್ಟವರಾಗಿ ಶ್ರೇಯಸ್ಕರನೆಂಬ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ತಾವು ದೇವೇಂದ್ರರಿಂದ ಪರಿನಿಷ್ಕ್ರಮಣಕಲ್ಯಾಣಾಭಿಷೇಕವನ್ನು ಹೊಂದಿ ದೇವರ್ಕಳಿಂದ ಹೊರಲ್ಪಟ್ಟ ವಿಮಲಪ್ರಭೆಯೆಂಬ ಪಲ್ಲಕ್ಕಿಯನ್ನೇರಿ ಎರಡು ದಿನಗಳವರೆಗೆ ಆಹಾರವನ್ನು ಬಿಟ್ಟು ಮನೋಹರವನೋದ್ಯಾನದಲ್ಲಿ ಫಾಲ್ಗುನ ಮಾಸದ ಕೃಷ್ಣಪಕ್ಷದ ಏಕಾದಶೀದಿನದ ಪ್ರಾತಃಕಾಲದಲ್ಲಿ ಶ್ರವಣನಕ್ಷತ್ರದಲ್ಲಿ ಸಹಸ್ರರಾಜರುಗಳೊಡನೆ ದೀಕ್ಷೆಯನ್ನು ಸ್ವೀಕರಿಸಿ ಎರಡನೆಯ ದಿವಸದಲ್ಲಿ ಮನಃಪರ್ಯಯಜ್ಞಾನವನ್ನು ಹೊಂದಿ ಆಹಾರಕ್ಕೋಸ್ಕರ ಸಿದ್ಧಾರ್ಥನಗರವನ್ನು ಪ್ರವೇಶಿಸಿದರು.

**ತಸ್ಮೈ ಹೇಮದ್ಯುತಿರ್ನಂದಭೂಪತಿರ್ಭಕ್ತಿಪೂರ್ವಕಮ್ ।**
**ದತ್ವಾನ್ನಂ ಪ್ರಾಪ ಸತ್ಪುಣ್ಯಂ ಪಂಚಾಶ್ಚರ್ಯಾಣ್ಯಜರ್ಯಧೀಃ ॥ ೫೦ ॥**

ಅವರಿಗೆ ಬಂಗಾರದ ಕಾಂತಿಯಂತೆ ಕಾಂತಿಯುಳ್ಳವನೂ ಶಿಥಿಲವಾಗದಿರುವ–ದೃಢವಾದ ಬುದ್ಧಿಯುಳ್ಳವನೂ ಆದ ನಂದರಾಜನು ಭಕ್ತಿಪೂರ್ವಕವಾಗಿ ಉತ್ತಮ ಪುಣ್ಯಕರವಾದ ಆಹಾರವನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಹೊಂದಿದನು.

**ದ್ವಿಸಂವತ್ಸರಮಾನೇನ ಛಾದ್ಮಸ್ಥ್ಯೇ ಗತವತ್ಯಸೌ ।**
**ಮುನಿರ್ಮನೋಹರೋದ್ಯಾನೇ ತುಂಬುರುದ್ರುಮಸಂಶ್ರಯಃ ॥ ೫೧ ॥**

**ದಿನದ್ವಯೋಪವಾಸೇನ ಮಾಘೇ ಮಾಸ್ಯಪರಾಹ್ಣಗಃ ।**
**ಶ್ರವಣೇ ಕೃಷ್ಣಪಕ್ಷಾಂತೇ ಕೈವಲ್ಯಮುದಪಾದಯತ್ ॥ ೫೨ ॥**

ಛದ್ಮಸ್ಥಾವಸ್ಥೆಯಲ್ಲಿ ಎರಡು ವರ್ಷಗಳು ಕಳೆಯುತ್ತಿರಲು ಈ ಸ್ವಾಮಿಯು ಮನೋಹರೋದ್ಯಾನದಲ್ಲಿ ತುಂಬುರುವೃಕ್ಷದ ಆಶ್ರಯವುಳ್ಳವರಾಗಿ ಎರಡು ದಿವಸಗಳ ಉಪವಾಸವನ್ನು ಮಾಡಿ ಮಾಘಮಾಸದ ಕೃಷ್ಣಪಕ್ಷದ ಕೊನೆಯಲ್ಲಿ ಸಾಯಂಕಾಲ ಶ್ರವಣನಕ್ಷತ್ರದಲ್ಲಿ ಕೇವಲಜ್ಞಾನವನ್ನು ಪಡೆದರು.

**ತದಾ ಚತುರ್ಥಕಲ್ಯಾಣಪೂಜಾಂ ದೇವಾಶ್ಚತುರ್ವಿಧಾಃ ।**
**ತಸ್ಯ ನಿರ್ವರ್ತಯಾಮಾಸುರ್ವಿವಿಧರ್ದ್ಧಿಸಮನ್ವಿತಾಮ್ ॥ ೫೩ ॥**

ಆಗ ಚತುರ್ವಿಧದೇವರ್ಕಳು ಬಂದು ನಾನಾ ವೈಭವಯುಕ್ತವಾದ ಕೇವಲ ಜ್ಞಾನಕಲ್ಯಾಣಪೂಜೆಯನ್ನು ನೆರವೇರಿಸಿದರು.

**ಸಪ್ತಸಪ್ತತಿಕುಂಥ್ವಾದಿಗಣಭೃದ್ವೃಂದವೇಷ್ಟಿತಃ ।**
**ಶೂನ್ಯದ್ವಯಾನಲೈಕೋಕ್ತಸರ್ವಪೂರ್ವಧರಾವೃತಃ ॥ ೫೪ ॥**

**ಖದ್ವಯದ್ವ್ಯಷ್ಟವಾರ್ಧ್ಯುಕ್ತಶಿಕ್ಷಕೋತ್ತಮಪೂಜಿತಃ ।**
**ಶೂನ್ಯತ್ರಿತಯಷಟ್ಪ್ರೋಕ್ತತೃತೀಯಜ್ಞಾನಮಾನಿತಃ ॥ ೫೫ ॥**

**ಶೂನ್ಯದ್ವಯೇಂದ್ರಿಯರ್ತೂಕ್ತಪಂಚಮಜ್ಞಾನಭಾಸ್ವರಃ ।**
**ಶೂನ್ಯತ್ರಿಕೈಕೈಕಾಖ್ಯೇಯವಿಕ್ರಿಯರ್ದ್ಧಿವಿಭೂಷಿತಃ ॥ ೫೬ ॥**

**ಷಟ್ಸಹಸ್ರಪ್ರಮಾಪ್ರೋಕ್ತಮನಃಪರ್ಯಾಯವೀಕ್ಷಣಃ ।**
**ಶೂನ್ಯತ್ರಿತಯಪಂಚೋಕ್ತವಾದಿಮುಖ್ಯಸಮಾಶ್ರಿತಃ ॥ ೫೭ ॥**

**ಶೂನ್ಯತ್ರಯಯುಗಾಷ್ಟೋಕ್ತಪಿಂಡಿತಾಖಿಲಲಕ್ಷಿತಃ ।**
**ಖಚತುಷ್ಟಯಪಕ್ಷೈಕಧರಣಾದ್ಯಾರ್ಯಿಕಾರ್ಚಿತಃ ॥ ೫೮ ॥**

**ದ್ವಿಲಕ್ಷೋಪಾಸಕೋಪೇತೋ ದ್ವಿಗುಣಶ್ರಾವಿಕಾಂಚಿತಃ ।**
**ಪೂರ್ವೋಕ್ತದೇವತಿರ್ಯಕ್ಕೋ ವಿಹರನ್ ಧರ್ಮಮಾದಿಶನ್ ॥ ೫೯ ॥**

**ಸಮ್ಮೇದಗಿರಿಮಾಸಾದ್ಯ ನಿಷ್ಕ್ರಿಯೋ ಮಾಸಮಾಸ್ಥಿತಃ ।**
**ಸಹಸ್ರಮುನಿಭಿಃ ಸಾರ್ಧಂ ಪ್ರತಿಮಾಯೋಗಧಾರಕಃ ॥ ೬೦ ॥**

**ಪೌರ್ಣಮಾಸ್ಯಾಂ ಧನಿಷ್ಠಾಯಾಂ ದಿನಾಂತೇ ಶ್ರಾವಣೇಂಹಸಾಮ್ ।**
**ಅಸಂಖ್ಯಾತಗುಣಶ್ರೇಣ್ಯಾ ನಿರ್ಜರಾಂ ವಿದಧನ್ಮುಹುಃ ॥ ೬೧ ॥**

**ವಿಧ್ವಸ್ಯ ವಿಶ್ವಕರ್ಮಾಣಿ ಧ್ಯಾನಾಭ್ಯಾಂ ಸ್ಥಾನಪಂಚಕೇ ।**
**ಪಂಚಮೀಂ ಗತಿಮಧ್ಯಾಸ್ಯ ಸಿದ್ಧಃ ಶ್ರೇಯಾನ್ಸುನಿರ್ವೃತಃ ॥ ೬೨ ॥**

ಕುಂಥು ಮೊದಲಾದ ಎಪ್ಪತ್ತೇಳುಮಂದಿ ಗಣಧರರ ಸಮೂಹದಿಂದ ಸುತ್ತಲ್ಪಟ್ಟವರೂ ಸಾವಿರದ ಮುನ್ನೂರು ಮಂದಿ ಏಕಾದಶಾಂಗ ಚತುರ್ದಶಪೂರ್ವ ಶಾಸ್ತ್ರಜ್ಞರಾದ ಶ್ರುತಕೇವಲಿಮುನಿಗಳಿಂದ ಆವರಿಸಲ್ಪಟ್ಟವರೂ ನಲ್ವತ್ತೆಂಟುಸಾವಿರದ ಎರಡುನೂರು ಮಂದಿ ಉತ್ತಮಶಿಕ್ಷಕಮುನಿಗಳಿಂದ ಪೂಜಿತರೂ ಆರುಸಾವಿರ ಮಂದಿ ಅವಧಿಜ್ಞಾನಿಮುನಿಗಳಿಂದ ಮನ್ನಣೆಯನ್ನು ಹೊಂದಿರುವವರೂ ಆರು ಸಾವಿರದ ಐದುನೂರು ಮಂದಿ ಕೇವಲಜ್ಞಾನಿಗಳಿಂದ ಪ್ರಕಾಶಮಾನರೂ ಹನ್ನೊಂದು ಸಾವಿರ ಮಂದಿ ವಿಕ್ರಿಯರ್ದ್ಧಿಯುಳ್ಳ ಮುನಿಗಳಿಂದ ವಿಭೂಷಿತರೂ ಆರುಸಾವಿರ ಮಂದಿ ಮನಃಪರ್ಯಯಜ್ಞಾನಿಗಳುಳ್ಳವರೂ ಐದುಸಾವಿರ ಮಂದಿ ಮುಖ್ಯರಾದ ವಾದಿಗಳಿಂದ ಆಶ್ರಯಿಸಲ್ಪಟ್ಟವರೂ ಒಟ್ಟು ಎಂಬತ್ತುನಾಲ್ಕು ಸಾವಿರ ಮುನಿ ಪುಂಗವರುಳ್ಳವರೂ ಒಂದುಲಕ್ಷವೂ ಇಪ್ಪತ್ತುಸಾವಿರ ಮಂದಿ ಧಾರಣಾ ಮೊದಲಾದ ಆರ್ಯಿಕೆಯರಿಂದ ಪೂಜಿಸಲ್ಪಟ್ಟವರೂ ಎರಡುಲಕ್ಷ ಶ್ರಾವಕರುಳ್ಳವರೂ ನಾಲ್ಕುಲಕ್ಷ ಶ್ರಾವಿಕೆಯರುಳ್ಳವರೂ ಅಸಂಖ್ಯಾತ ದೇವದೇವಿಯರುಳ್ಳವರೂ ಸಂಖ್ಯಾತತಿರ್ಯಕ್ಪ್ರಾಣಿಗಳುಳ್ಳವರೂ ಆದ ಶ್ರೇಯೋನಾಥರು ವಿಹರಿಸುತ್ತ ಧರ್ಮವನ್ನುಪದೇಶಿಸಿ ಕೊನೆಗೆ ಸಮ್ಮೇದಪರ್ವತವನ್ನು ಹೊಂದಿ ಒಂದು ತಿಂಗಳವರೆಗೆ ನಿಷ್ಕ್ರಿಯರಾಗಿ-ಯೋಗನಿರೋಧವನ್ನು ಮಾಡಿದ್ದು ಸಹಸ್ರಮುನಿಗಳೊಡನೆ ಪ್ರತಿಮಾಯೋಗ ಧಾರಿಗಳಾಗಿ ಶ್ರಾವಣಮಾಸದ ಪೌರ್ಣಮೀತಿಥಿಯಲ್ಲಿ ಸಾಯಂಕಾಲ ಧನಿಷ್ಠಾನಕ್ಷತ್ರದಲ್ಲಿ ಅಸಂಖ್ಯಾತಗುಣಶ್ರೇಣಿಯ ಕ್ರಮದಿಂದ ಪುನಃ ಪುನಃ ಕರ್ಮಗಳ ನಿರ್ಜರೆಯನ್ನು ಮಾಡಿ ಅ ಇ ಉ ಋ ಌ ಅಕ್ಷರೋಚ್ಚಾರದಷ್ಟು ಸಮಯದಲ್ಲಿ ಸೂಕ್ಷ್ಮಕ್ರಿಯಾಪ್ರತಿಪಾತಿ ವ್ಯುಪರತಕ್ರಿಯಾನಿವೃತ್ತಿಗಳೆಂಬ ಎರಡು ಶುಕ್ಲಧ್ಯಾನಗಳಿಂದ ಸಕಲ ಕರ್ಮಗಳನ್ನು ನಾಶಮಾಡಿ ಶ್ರೇಯಸ್ತೀರ್ಥಂಕರರು ಮುಕ್ತರಾಗಿ ಐದನೆಯ ಗತಿಯಲ್ಲಿ ಸಿದ್ಧರಾಗಿ ವಿರಾಜಿಸಿದರು.

**ವಿಫಲಾನಿಮಿಷತ್ವಾಃ ಸ್ಮೋ ವಿನಾಸ್ಮಾದಿತಿ ವಾ ಶುಚಾ ।**
**ಕೃತನಿರ್ವಾಣಕಲ್ಯಾಣಾಸ್ತದೈವೇಯುರ್ದಿವಂ ಸುರಾಃ ॥ ೬೩ ॥**

"ಈ ಶ್ರೇಯೋನಾಥರಿಲ್ಲದೆ ನಾವು ನಿಷ್ಫಲವಾದ ಅನಿಮಿಷತ್ವವುಳ್ಳವರಾಗಿದ್ದೇವೆ" ಎಂದು ಶೋಕದಿಂದಲೋ ಎಂಬಂತೆ ದೇವರ್ಕಳು ನಿರ್ವಾಣಕಲ್ಯಾಣ ಪೂಜೆಯನ್ನು ಮಾಡಿದವರಾಗಿ ಆಗಲೇ ಸ್ವರ್ಗಕ್ಕೆ ಹೋದರು.

**ನಿರ್ಧೂಯ ಯಸ್ಯ ನಿಜಜನ್ಮನಿ ಸತ್ಸಮಸ್ತ- ।**
**ಮಾಂಧ್ಯಂ ಚರಾಚರಮಶೇಷಮವೇಕ್ಷಮಾಣಮ್ ।**
**ಜ್ಞಾನಂ ಪ್ರತೀಪವಿರಹಾನ್ನಿಜರೂಪಸಂಸ್ಥಂ ।**
**ಶ್ರೇಯಾನ್ಜಿನಃ ಸ ದಿಶತಾದಶಿವಚ್ಯುತಿಂ ವಃ ॥ ೬೪ ॥**

"ಯಾವನ ಜ್ಞಾನವು ತನ್ನ ಉತ್ಪತ್ತಿಸಮಯದಲ್ಲಿ ಅಜ್ಞಾನಾಂಧತ್ವವನ್ನೆಲ್ಲ ದೂರ ಮಾಡಿ ಸಮಸ್ತ ಚರಾಚರವಸ್ತುವನ್ನು ನೋಡುವುದೂ ಪ್ರತಿಪಕ್ಷಪದಾರ್ಥವಿಲ್ಲದಿರುವುದರಿಂದ ನಿಜರೂಪದಲ್ಲಿರುವುದೂ ಆಗಿರುತ್ತದೋ ಅಂತಹ ಶ್ರೇಯೋಜಿನರು ನಿಮ್ಮ ಅಶ್ರೇಯಸ್ಸನ್ನು ನಾಶಮಾಡಲಿ.

**ಸತ್ಯಂ ಸಾರ್ವ ದಯಾಮಯಂ ತವ ವಚಃ ಸರ್ವಾಸುಭೃದ್ಭ್ಯೋ ಹಿತಮ್ ।**
**ಚಾರಿತ್ರಂ ಚ ವಿಭೋಸ್ತದೇತದುಭಯಂ ಬ್ರೂತೇ ವಿಶುದ್ಧಿಂ ಪರಾಮ್ ।**
**ತಸ್ಮಾದೇವ ಸಮಾಶ್ರಯಂತಿ ವಿಬುಧಾಸ್ತ್ವಾಮೇವ ಶಕ್ರಾದಯೋ ।**
**ಭಕ್ತ್ಯೇತಿ ಸ್ತುತಿಗೋಚರೋಸ್ತು ವಿದುಷಾಂ ಶ್ರೇಯಾನ್ಸ ವಃ ಶ್ರೇಯಸೇ॥**

ಸರ್ವಪ್ರಾಣಿಗಳಿಗೆ ಹಿತಕರನಾದ ಸ್ವಾಮಿಯೆ ! ನಿನ್ನ ವಚನವು ಸತ್ಯವೂ ದಯಾಮಯವೂ ಆಗಿದೆ. ನಿನ್ನ ಚಾರಿತ್ರವು ಸರ್ವಪ್ರಾಣಿಗಳಿಗೆ ಹಿತಕಾರಿಯಾದುದು. ಇವೆರಡು ನಿನ್ನ ಉತ್ಕೃಷ್ಟವಾದ ಶುದ್ಧಿಯನ್ನು ತಿಳಿಸುತ್ತವೆ. ಆದುದರಿಂದಲೇ ಇಂದ್ರಾದಿದೇವರ್ಕಳು ಭಕ್ತಿಯಿಂದ ನಿನ್ನನ್ನೇ ಆಶ್ರಯಿಸುತ್ತಾರೆ." ಈ ರೀತಿಯಾಗಿ ಸ್ತುತಿವಿಷಯನಾದ ಆ ಶ್ರೇಯೋಜಿನನು ಪ್ರಾಜ್ಞರಾದ ನಿಮ್ಮಗಳ ಶ್ರೇಯಸ್ಸಿಗೆ ಕಾರಣನಾಗಿರಲಿ.

**ರಾಜಾಭೂನ್ನಲಿನಪ್ರಭಃ ಪ್ರಭುತಮಃ ಪ್ರಧ್ವಸ್ತಪಾಪಪ್ರಭಃ ।**
**ಕಲ್ಪಾಂತೇ ಸಕಲಾಮರಾಧಿಪಪತಿಃ ಸಂಕಲ್ಪಸೌಖ್ಯಾಕರಃ ।**
**ಯಸ್ತೀರ್ಥಾಧಿಪತಿಸ್ತ್ರಿಲೋಕಮಹಿತಃ ಶ್ರೀಮಾನ್ ಶ್ರಿಯೈ ಶ್ರಾಯಸಮ್ ।**
**ಸ್ಯಾದ್ವಾದಂ ಪ್ರತಿಪದ್ಯ ಸಿದ್ಧಿಮಗಮಚ್ಛ್ರೇಯಾನ್ಜಿನಃ ಸೋಸ್ತು ವಃ॥ ೬೬ ॥**

ಯಾವನು ಮೊದಲು ಪಾಪಗಳ ಪ್ರಭೆಯನ್ನು ನಾಶಮಾಡಿ ನಲಿನಪ್ರಭನೆಂಬ ಮಹಾರಾಜನಾದನೋ ಬಳಿಕ ಕೊನೆಯ ಕಲ್ಪದಲ್ಲಿ ಸಮಸ್ತಸುರಾಧಿಪತಿಯೂ ಸಂಕಲ್ಪಮಾತ್ರದಿಂದುಂಟಾದ ಸುಖಗಳಿಗೆ ಗಣಿಯೂ ಆದ ದೇವೇಂದ್ರನಾದನೋ ಆ ಮೇಲೆ ತ್ರಿಲೋಕಪೂಜಿತನಾದ ತೀರ್ಥಕರನಾಗಿ ಕಲ್ಯಾಣಕರವಾದ ಸ್ಯಾದ್ವಾದವನ್ನು ಹೊಂದಿ ಸಿದ್ಧಿಯನ್ನು ಪಡೆದನೋ ಅಂತಹ ಶ್ರೀಮಂತನಾದ ಶ್ರೇಯೋಜಿನನು ನಿಮ್ಮಗಳ ಸಂಪತ್ತಿಗೆ ಕಾರಣನಾಗಿರಲಿ.

**ಜಿನಸೇನಾನುಗಾಯಾಸ್ಮೈ ಪುರಾಣಕವಯೇ ನಮಃ ।**
**ಗುಣಭದ್ರಭದಂತಾಯ ಲೋಕಸೇನಾರ್ಚಿತಾಂಘ್ರಯೇ ॥ ೬೭ ॥**

ಜಿನರ ಪರಂಪರೆಯನ್ನನುಸರಿಸಿದವನೂ ಪುರಾತನಕವಿಯೂ ಗುಣಗಳಿಂದ ಮಂಗಲಕರನಾದ ದಿಗಂಬರನೂ ಲೋಕಸಮೂಹದಿಂದ ಪೂಜಿತವಾದ ಚರಣಗಳುಳ್ಳವನೂ ಆದ ಈ ಶ್ರೇಯೋಜಿನನಿಗೆ ನಮಸ್ಕಾರವಿರಲಿ. ಜಿನಸೇನಾಚಾರ್ಯರನ್ನು ಅನುಸರಿಸಿದವನೂ ಪುರಾತನಕವಿಯೂ ಲೋಕಸಮೂಹದಿಂದ ಪೂಜಿತವಾದ ಚರಣಗಳುಳ್ಳವನೂ ಆದ ಈ ಗುಣಭದ್ರದಿಗಂಬರ-ಮುನಿಗೆ ನಮಸ್ಕಾರವಿರಲಿ.

**ತೀರ್ಥೇಸ್ಮಿನ್ ಕೇಶವಃ ಶ್ರೀಮಾನಭೂದಾದ್ಯಃ ಸಮುದ್ಯಮೀ ।**
**ಭರತಶ್ಚಕ್ರಿಣಾಂ ವಾಸೌ ತ್ರಿಖಂಡಪರಿಪಾಲಿನಾಮ್ ॥ ೬೮ ॥**

ಈ ಶ್ರೇಯೋಜಿನರ ತೀರ್ಥದಲ್ಲಿ ಷಟ್ಖಂಡಾಧಿಪತಿಗಳಾದ ಚಕ್ರವರ್ತಿಗಳಲ್ಲಿ ಮೊದಲನೆಯವನಾದ ಭರತನಂತೆ ತ್ರಿಖಂಡಾಧಿಪತಿಗಳಾದ ಅರ್ಧಚಕ್ರವರ್ತಿಗಳಲ್ಲಿ ಮೊದಲನೆಯವನೂ ಶ್ರೀಮಂತನೂ ಉದ್ಯಮಶೀಲನೂ ಆದ ಈ ಕೇಶವನಾದನು.

**ಆತೃತೀಯಭವಾತ್ತಸ್ಯ ಚರಿತಂ ಪ್ರಣಿಗದ್ಯತೇ ।**
**ಉದಿತಾಸ್ತಗಭೂಪಾನಾಮುದಾಹರಣಮಿತ್ಯದಃ ॥ ೬೯ ॥**

ಮೂರನೆಯ ಭವ ಮೊದಲುಗೊಂಡು ಅವನ ಚರಿತವು ಉದಿಸುವ ಮತ್ತು ಅಸ್ತವನ್ನು ಹೊಂದುವ ರಾಜರುಗಳಿಗೆ ಉದಾಹರಣವಾಗುವುದೆಂದು ಇದನ್ನು ಹೇಳುತ್ತೇನೆ.

**ದ್ವೀಪೇಸ್ಮಿನ್ಭಾರತೇ ಕ್ಷೇತ್ರೇ ವಿಷಯೋ ಮಗಧಾಹ್ವಯಃ ।**
**ಪುರಂ ರಾಜಗೃಹಂ ತಸ್ಮಿನ್ಪುರಂದರಪುರೋಪಮಮ್ ॥ ೭೦ ॥**

ಈ ಜಂಬೂದ್ವೀಪದ ಭಾರತವರ್ಷದಲ್ಲಿ ಮಗಧವೆಂಬ ದೇಶವಿದೆ. ಅದರಲ್ಲಿ ದೇವೇಂದ್ರನ ನಗರಕ್ಕೆ ಸಮಾನವಾದ ರಾಜಗೃಹವೆಂಬ ನಗರವಿದೆ.

**ಸ್ವರ್ಗಾದೇತ್ಯಾತ್ರ ಭೂಪಸ್ನೂನಾಂ ರಾಜ್ಞಾಂ ಯದ್ಗೃಹಮೇವ ತತ್ ।**
**ಭೋಗೋಪಭೋಗಸಂಪತ್ತ್ಯಾ ನಾಮ ತಸ್ಯಾರ್ಥವತ್ತತಃ ॥ ೭೧ ॥**

ಭೋಗೋಪಭೋಗಸಂಪತ್ತಿಯಿಂದ ಆ ನಗರದ ಹೆಸರು ಸಾರ್ಥಕವಾಗಿರುವುದರಿಂದ ಸ್ವರ್ಗದಿಂದ ಬಂದು ಈ ನಗರದಲ್ಲಿ ಹುಟ್ಟುವ ರಾಜರುಗಳಿಗೆ ಅದು ಗೃಹವೇ ಆಗಿದೆ.

**ವಿಶ್ವಭೂತಿಃ ಪತಿಸ್ತಸ್ಯ ಜೈನೀ ದೇವ್ಯನಯೋಃ ಸುತಃ ।**
**ವಿಶ್ವನಂದನಶೀಲತ್ವಾದ್ವಿಶ್ವನಂದೀತಿ ವಿಶ್ರುತಃ ॥ ೭೨ ॥**

ಆ ನಗರಕ್ಕೆ ವಿಶ್ವಭೂತಿಯು ದೊರೆಯಾಗಿದ್ದನು. ಜೈನಿಯೆಂಬವಳು ಆತನ ಪತ್ನಿಯಾಗಿದ್ದಳು. ಇವರಿಗೆ ವಿಶ್ವವನ್ನು ಸಂತೋಷಪಡಿಸುವ ಸ್ವಭಾವವುಳ್ಳವನಾಗಿದ್ದುದರಿಂದ ವಿಶ್ವನಂದಿಯೆಂದು ಪ್ರಖ್ಯಾತನಾದ ಪುತ್ರನು ಜನಿಸಿದನು.

**ವಿಶ್ವಭೂತೇರ್ವಿಶಾಖಾದಿಭೂತಿರ್ಜಾತೋನುಜಃ ಪ್ರಿಯಾ ।**
**ಲಕ್ಷ್ಮಣಾಖ್ಯಾಸ್ಯ ನಂದ್ಯಂತವಿಶಾಖಸ್ತನಯೋನಯೋಃ ॥ ೭೩ ॥**

ವಿಶ್ವಭೂತಿಗೆ ವಿಶಾಖಭೂತಿಯೆಂಬ ತಮ್ಮನಿದ್ದನು. ಇವನಿಗೆ ಲಕ್ಷ್ಮಣೆಯೆಂಬ ಪತ್ನಿಯಿದ್ದಳು. ಈ ದಂಪತಿಗಳಿಗೆ ವಿಶಾಖನಂದಿಯೆಂಬ ಪುತ್ರನು ಜನಿಸಿದನು.

**ವಿಶ್ವಭೂತಿಸ್ತಪಃ ಪ್ರಾಯಾತ್ಕೃತ್ವಾ ರಾಜ್ಯೇ ನಿಜಾನುಜಮ್ ।**
**ಪ್ರಜಾಃ ಪ್ರಪಾಲಯತ್ಯಸ್ಮಿನ್ಪ್ರಣತಾಖಿಲಭೂಪತೌ ॥ ೭೪ ॥**

ವಿಶ್ವಭೂತಿಯು ರಾಜ್ಯದಲ್ಲಿ ತನ್ನ ತಮ್ಮನನ್ನಿರಿಸಿ ತಾನು ತಪವನ್ನು ಹೊಂದಿದನು. ಸಕಲರಾಜರುಗಳಿಂದ ವಂದಿತನಾದ ಈ ವಿಶಾಖಭೂತಿಯು ಪ್ರಜೆಗಳನ್ನು ಪಾಲಿಸುತ್ತಿದ್ದನು.

**ನಾನಾವೀರುಲ್ಲತಾವೃಕ್ಷೈರ್ವಿರಾಜನ್ನಂದನಂ ವನಮ್ ।**
**ಯದ್ವಿಶ್ವನಂದಿನಸ್ತತ್ರ ಪ್ರಾಣೇಭ್ಯೋಪಿ ಪರಂ ಪ್ರಿಯಮ್ ॥ ೭೫ ॥**

ಅಲ್ಲಿ ಹಲವು ಬಳ್ಳಿಗಳಿಂದಲೂ ಲತೆಗಳಿಂದಲೂ ಮರಗಳಿಂದಲೂ ಶೋಭಿಸುವ ಒಂದು ನಂದನವೆಂಬ ವನವಿದ್ದಿತು. ಅದು ವಿಶ್ವನಂದಿಗೆ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯವಾಗಿದ್ದಿತು.

**ವಿಶಾಖಭೂತಿಪುತ್ರೇಣ ನಿರ್ಭರ್ತ್ಸ್ಯ ವನಪಾಲಕಮ್ ।**
**ಸ್ವೀಕೃತಂ ತದ್ಬಲಾತ್ತೇನ ತೇನಾಸೀತ್ಸಂಯುಗಸ್ತಯೋಃ ॥ ೭೬ ॥**

ವಿಶಾಖಭೂತಿಯ ಪುತ್ರನಾದ ವಿಶಾಖನಂದಿಯು ವನಪಾಲಕನನ್ನು ಬೆದರಿಸಿ ಆ ವನವನ್ನು ಬಲಾತ್ಕಾರದಿಂದ ವಶಪಡಿಸಿಕೊಂಡನು. ಅದರಿಂದ ಆ ವಿಶ್ವನಂದಿಗೂ ವಿಶಾಖನಂದಿಗೂ ಯುದ್ಧವಾಯಿತು.

**ಸಂಗ್ರಾಮಾಸಹನಾತ್ತತ್ರ ದೃಷ್ಟ್ವಾ ತಸ್ಯ ಪಲಾಯನಮ್ ।**
**ವಿಶ್ವನಂದೀ ವಿರಕ್ತಸ್ಸನ್ ಧಿಕ್ ಮೋಹಮಿತಿ ಚಿಂತಯನ್ ॥ ೭೭ ॥**

**ತ್ಯಕ್ತ್ವಾ ಸರ್ವಂ ಸಮಾಗತ್ಯ ಸಂಭೂತಗುರುಸನ್ನಿಧೌ ।**
**ಪಿತೃವ್ಯಮಗ್ರಣೀಕೃತ್ಯ ಸಂಯಮಂ ಪ್ರತ್ಯಪದ್ಯತ ॥ ೭೮ ॥**

ಅಲ್ಲಿ ಯುದ್ಧವನ್ನು ಸಹಿಸಲಾಗದಿದ್ದುದರಿಂದ ವಿಶಾಖನಂದಿಯು ಓಡಿಹೋದನು. ಅದನ್ನು ನೋಡಿ ವಿಶ್ವನಂದಿಯು ವಿರಕ್ತನಾಗಿ ''ಮೋಹವನ್ನು ಸುಡು'' ಎಂದು ಚಿಂತಿಸಿ ಎಲ್ಲವನ್ನೂ ಬಿಟ್ಟು ಸಂಭೂತನೆಂಬ ಗುರುವಿನ ಬಳಿಯಲ್ಲಿ ಬಂದು ತನ್ನ ಚಿಕ್ಕಪ್ಪನೊಡನೆ ದೀಕ್ಷೆಯನ್ನು ಪಡೆದನು.

**ಸ ಶೀಲಗುಣಸಂಪನ್ನಃ ಕುರ್ವನ್ನನಶನಂ ತಪಃ ।**
**ವಿಹರನ್ನೇಕದಾ ಭೋಕ್ತುಂ ಪ್ರಾವಿಶನ್ಮಥುರಾಪುರಮ್ ॥ ೭೯ ॥**

ಶೀಲಗುಣಸಂಪನ್ನನಾದ ಆ ವಿಶ್ವನಂದಿಮುನಿಯು ಅನಶನತಪಸ್ಸನ್ನು ಮಾಡಿ ವಿಹರಿಸುತ್ತ ಒಂದಾನೊಂದು ಕಾಲದಲ್ಲಿ ಆಹಾರಕ್ಕೋಸ್ಕರ ಮಥುರಾನಗರವನ್ನು ಪ್ರವೇಶಿಸಿದನು.

**ಸ ಬಾಲವತ್ಸಯಾ ಧೇನ್ವಾ ಕ್ರುಧ್ವಾ ಪ್ರತಿಹತೋಪತತ್ ।**
**ದೌಷ್ಟ್ಯಾನ್ನಿರ್ವಾಸಿತೋ ದೇಶಾದ್ಪ್ರಾಮ್ಯಂಸ್ತತ್ರಾಗತೋ ವಿಧೀಃ ॥ ೮೦ ॥**

**ವಿಶಾಖನಂದೀ ತಂ ದೃಷ್ಟ್ವಾ ವೇಶ್ಯಾಸೌಧತಲೇ ಸ್ಥಿತಃ ।**
**ವ್ಯಹಸದ್ವಿಕ್ರಮಸ್ತಸ್ಯ ಕ್ವ ಯಾತಃ ಸ ಇತಿ ಕ್ರುಧಾ ॥ ೮೧ ॥**

ಅಲ್ಲಿ ಎಳೆಗರುವಿನ ಹಸುವೊಂದು ಕೋಪಗೊಂಡು ಆ ವಿಶ್ವನಂದಿಮುನಿಗೆ ತಿವಿದು ಕೆಡವಿತು. ಆಗ ದುಷ್ಟತನದಿಂದ ದೇಶದಿಂದ ಗಡಿಪಾರಾಗಿದ್ದ ಬುದ್ಧಿಹೀನನಾದ ಆ ವಿಶಾಖನಂದಿಯು ತಿರುಗುತ್ತ ಅಲ್ಲಿಗೆ ಬಂದು ಸೂಳೆಯ ಮನೆಯ ಉಪ್ಪರಿಗೆಯ ಮೇಲಿದ್ದು ಆ ವಿಶ್ವನಂದಿಮುನಿಯನ್ನು ನೋಡಿ ಕೋಪದಿಂದ ''ಈಗ ಅವನ ಪರಾಕ್ರಮವೆಲ್ಲಿಹೋಯಿತು ?'' ಎಂದು ನಕ್ಕನು .

**ಸಶಲ್ಯಃ ಸೋಪಿ ತಚ್ಛ್ರುತ್ವಾ ಸನಿದಾನೋಸುಸಂಕ್ಷಯೇ ।**
**ಮಹಾಶುಕ್ರೇಭವದ್ದೇವೋ ಯತ್ರಾಸೀದನುಜಃ ಪಿತುಃ ॥ ೮೨ ॥**

ಆ ವಿಶ್ವನಂದಿಮುನಿಯೂ ಆ ಮಾತನ್ನು ಕೇಳಿ ನಿದಾನಶಲ್ಯವುಳ್ಳವನಾಗಿ ಸತ್ತು ಮಹಾಶುಕ್ರವೆಂಬ ಹತ್ತನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು. ಅಲ್ಲಿ ತನ್ನ ತಂದೆಯ ತಮ್ಮ–ವಿಶಾಖಭೂತಿಯೂ ದೇವನಾಗಿ ಜನಿಸಿದ್ದನು.

**ಷೋಡಶಾಬ್ಧ್ಯಾಯುಷಾ ದಿವ್ಯಭೋಗಾನ್ ದೇವ್ಯಪ್ಸರೋಗಣೈಃ ।**
**ಈಪ್ಸಿತಾನನುಭೂಯಾಸೌ ತತಃ ಪ್ರಚ್ಯುತ್ಯ ಭೂತಲೇ ॥ ೮೩ ॥**

**ದ್ವೀಪೇಸ್ಮಿನ್ಭಾರತೇ ಕ್ಷೇತ್ರೇ ಸುರಮ್ಯವಿಷಯೇ ಪುರೇ ।**
**ಪ್ರಜಾಪತಿಮಹಾರಾಜಃ ಪೌದನಾಖ್ಯೇಭವತ್ಪತಿಃ ॥ ೮೪ ॥**

**ಪ್ರಾಣಪ್ರಿಯಾ ಮಹಾದೇವೀ ತಸ್ಯಾಜನಿ ಮೃಗಾವತೀ ।**
**ತಸ್ಯಾಃ ಸುಸ್ವಪ್ನವೀಕ್ಷಾಂತೇ ತ್ರಿಪೃಷ್ಠಾಖ್ಯಃ ಸುತೋಭವತ್ ॥ ೮೫ ॥**

ಅಲ್ಲಿ ಇವನು ಹದಿನಾರು ಸಾಗರೋಪಮಾಯುಷ್ಯದಿಂದ ಅಪ್ಸರಸ್ತ್ರೀಸಮೂಹಗಳೊಡನೆ ಇಷ್ಟವಾದ ದಿವ್ಯಭೋಗಗಳನ್ನನುಭವಿಸಿ ಅಲ್ಲಿಂದ ಚ್ಯುತನಾಗಿ ಭೂತಲದಲ್ಲಿ ಈ ಜಂಬೂದ್ವೀಪದ ಭಾರತವರ್ಷದ ಸುರಮ್ಯದೇಶದಲ್ಲಿರುವ ಪೌದನಪುರದ ಪ್ರಜಾಪತಿಯೆಂಬ ಮಹಾರಾಜನಿಗೆ ಅವನ ಪ್ರಾಣಪ್ರಿಯಳಾದ ಮೃಗಾವತೀ ಮಹಾದೇವಿಗೆ ಶುಭಸ್ವಪ್ನವಾಗಿ ಕೊನೆಯಲ್ಲಿ ತ್ರಿಪೃಷ್ಠನೆಂಬ ಪುತ್ರನಾಗಿ ಜನಿಸಿದನು.

**ಪಿತೃವ್ಯೋಽಪಿ ಚ್ಯುತಸ್ತಸ್ಮಾತ್ತೋಽಕೋಭೂತ್ತನ್ಮಹೀಪತೇಃ ।**
**ಜಯಾವತ್ಯಾಂ ಪುರೈವೇತ್ಯ ವಿಕ್ರಮೀ ವಿಜಯಾಹ್ವಯಃ ॥ ೮೬ ॥**

ಅವನ ಚಿಕ್ಕಪ್ಪನಾಗಿದ್ದ ವಿಶಾಖಭೂತಿಯೂ ಮೊದಲೇ ಆ ಸ್ವರ್ಗದಿಂದ ಚ್ಯುತನಾಗಿ ಬಂದು ಆ ಪ್ರಜಾಪತಿಮಹಾರಾಜನಿಗೆ ಜಯಾವತೀಮಹಾದೇವಿಯಲ್ಲಿ ಪರಾಕ್ರಮಿಯಾದ ವಿಜಯನೆಂಬ ಪುತ್ರನಾಗಿ ಜನಿಸಿದ್ದನು.

**ಭ್ರಮನ್ವಿಶಾಖನಂದೀ ಚ ಚಿರಂ ಸಂಸಾರಚಕ್ರಕೇ ।**
**ವಿಜಯಾರ್ಧೋತ್ತರಶ್ರೇಣ್ಯಾಮಲಕಾಖ್ಯಪುರೇಶಿತುಃ ॥ ೮೭ ॥**

**ಮಯೂರಗ್ರೀವಸಂಜ್ಞಸ್ಯ ಸ್ವಪುಣ್ಯಪರಿಪಾಕತಃ ।**
**ಹಯಗ್ರೀವಾಹ್ವಯಃ ಸೂನುರಜಾಯತ ಜಿತಾರಿರಾಟ್ ॥ ೮೮ ॥**

ಇತ್ತ ವಿಶಾಖನಂದಿಯೂ ಸಂಸಾರಚಕ್ರದಲ್ಲಿ ಬಹುಕಾಲದವರೆಗೆ ತಿರುಗಿ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಅಲಕಾನಗರದ ದೊರೆಯಾದ ಮಯೂರಗ್ರೀವನೆಂಬವನಿಗೆ ತನ್ನ ಪುಣ್ಯಪರಿಪಾಕದಿಂದ ಹಯಗ್ರೀವನೆಂಬ ಪುತ್ರನಾಗಿ ಜನಿಸಿ ಶತ್ರುರಾಜರುಗಳನ್ನು ಜಯಿಸಿದನು.

**ಅಶೀತಿಚಾಪದೇಹೌ ತಾವಾದಿಮೌ ರಾಮಕೇಶವೌ ।**
**ಪಂಚಶೂನ್ಯಯುಗಾಷ್ಟಾಬ್ದನಿರ್ಭಂಗಪರಮಾಯುಷೌ ॥ ೮೯ ॥**

ಆ ವಿಜಯನೂ ತ್ರಿಪೃಷ್ಠನೂ ಎಂಬತ್ತು ಧನುಸ್ಸುಗಳಷ್ಟು ಉನ್ನತವಾದ ದೇಹವುಳ್ಳವರೂ ಚ್ಯುತಿಯಿಲ್ಲದ ಎಂಬತ್ತುನಾಲ್ಕುಲಕ್ಷ ವರ್ಷ ಪರಮಾಯುಷ್ಯವುಳ್ಳವರೂ ಯಥಾಕ್ರಮವಾಗಿ ಶಂಖದಂತೆಯೂ ಇಂದ್ರನೀಲರತ್ನದಂತೆಯೂ ದೇಹಕಾಂತಿಯುಳ್ಳವರೂ ಆದ ಮೊದಲನೆಯ ಬಲಭದ್ರಕೇಶವರಾಗಿದ್ದರು .

**ಶಂಖೇಂದ್ರನೀಲಸಂಕಾಶೌ ಹತ್ವಾಶ್ವಗ್ರೀವಮುದ್ಧತಮ್ ।**
**ತ್ರಿಖಂಡಮಂಡಿತಾಯಾಸ್ತಾವಿಹಾಭೂತಾಂ ಪತೀ ಕ್ಷಿತೇಃ ॥ ೯೦ ॥**

ಅವರು ಉದ್ಧತನಾದ ಹಯಗ್ರೀವನನ್ನು ಕೊಂದು ತ್ರಿಖಂಡಮಂಡಿತವಾದ ಭೂಮಿಗೆ ಅಧಿಪತಿಗಳಾದರು.

**ದ್ವಿಗುಣಾಷ್ಟಸಹಸ್ರಾಣಾಂ ಮುಕುಟಾಂಕಮಹೀಭುಜಾಮ್ ।**
**ಖಗವ್ಯಂತರದೇವಾನಾಮಾಧಿಪತ್ಯಂ ಸಮೀಯತುಃ ॥ ೯೧ ॥**

ಹದಿನಾರುಸಾವಿರ ಮುಕುಟಬದ್ಧರಾದ ರಾಜರುಗಳ ಖೇಚರರ ಮತ್ತು ವ್ಯಂತರದೇವರ್ಕಳ ಆಧಿಪತ್ಯವನ್ನು ಹೊಂದಿದರು.

**ತ್ರಿಪೃಷ್ಠಸ್ಯ ಧನುಃ ಶಂಖಶ್ಚಕ್ರದಂಡಾಸಿಶಕ್ತಯಃ ।**
**ಗದಾ ಚ ಸಪ್ತ ರತ್ನಾನಿ ರಕ್ಷಿತಾನ್ಯಭವನ್ಸುರೈಃ ॥ ೯೨ ॥**

ತ್ರಿಪೃಷ್ಠನಿಗೆ ಧನುಸ್ಸು, ಶಂಖ, ಚಕ್ರ, ದಂಡ, ಖಡ್ಗ, ಶಕ್ತಿಗಳೆಂಬ ಆಯುಧಗಳೂ ಗದೆಯೂ ದೇವತಾರಕ್ಷಿತವಾದ ಏಳು ರತ್ನಗಳೂ ಪ್ರಾಪ್ತವಾದುವು.

**ರಾಮಸ್ಯಾಪಿ ಗದಾ ರತ್ನಮಾಲಾ ಸಮುಸಲಂ ಹಲಮ್ ।**
**ಶ್ರದ್ಧಾನಜ್ಞಾನಚಾರಿತ್ರತಪಾಂಸೀವಾಭವನ್ ಶ್ರಿಯೈ ॥ ೯೩ ॥**

ಬಲಭದ್ರನಾದ ವಿಜಯನಿಗೂ ಶ್ರದ್ಧಾನ ಜ್ಞಾನ ಚಾರಿತ ತಪಸ್ಸುಗಳಂತೆ, ಗದೆ ರತ್ನಮಾಲೆ ಒನಕೆ ನೇಗಿಲು ಇವು ನಾಲ್ಕು ಸಂಪತ್ತಿಗೆ ಕಾರಣಗಳಾದುವು .

**ದೇವ್ಯಃ ಸ್ವಯಂಪ್ರಭಾಮುಖ್ಯಾ ಮುಕುಟೇಶಪ್ರಮಾ ಬಭುಃ ।**
**ಕೇಶವಸ್ಯ ತದರ್ಧಾಸ್ತಾ ರಾಮಸ್ಯಾಪಿ ಮನಃಪ್ರಿಯಾಃ ॥ ೯೪ ॥**

ತ್ರಿಪೃಷ್ಠಕೇಶವನಿಗೆ ಮುಕುಟಬದ್ಧರಾಜರುಗಳ ಸಂಖ್ಯೆಯಷ್ಟು–ಹದಿನಾರು ಸಾವಿರಮಂದಿ ಸ್ವಯಂಪ್ರಭೆಯೇ ಮೊದಲಾದ ದೇವಿಯರಿದ್ದರು. ಬಲಭದ್ರನಿಗೆ ಮನಃಪ್ರಿಯರಾದ ಎಂಟು ಸಾವಿರ ಮಂದಿ ದೇವಿಯರಿದ್ದರು .

**ಸ ಸಂರಮ್ಯ ಚಿರಂ ತಾಭಿರ್ಬಹ್ವಾರಂಭಪರಿಗ್ರಹಃ ।**
**ಸಪ್ತಮೀಂ ಪೃಥಿವೀಂ ಯಾತಃ ಕೇಶವಶ್ಚಾಶ್ವಕಂಧರಃ ॥ ೯೫ ॥**

ಆ ತ್ರಿಪೃಷ್ಠಕೇಶವನು ಆ ಸ್ತ್ರೀಯರೊಡನೆ ಬಹುಕಾಲದವರೆಗೆ ಕ್ರೀಡಿಸುತ್ತಿದ್ದು ಬಹ್ವಾರಂಭಪರಿಗ್ರಹವುಳ್ಳವನಾಗಿ ಸತ್ತು ಏಳನೆಯ ನರಕವನ್ನು ಹೊಂದಿದನು. ಹಯಗ್ರೀವ–ಪ್ರತಿಕೇಶವನೂ ಬಹ್ವಾರಂಭಪರಿಗ್ರಹವುಳ್ಳವನಾಗಿ ಸತ್ತು ಏಳನೆಯ ನರಕವನ್ನು ಹೊಂದಿದನು.

**ಸೀರಪಾಣಿಶ್ಚ ತದ್ದುಃಖಾತ್ತದೈವಾದಾಯ ಸಂಯಮಮ್ ।**
**ಸುವರ್ಣಕುಂಭಯೋಗೀಂದ್ರಾದಭೂದಗೃಹಕೇವಲೀ ॥ ೯೬ ॥**

ಬಲಭದ್ರನೂ ತಮ್ಮನ ವಿಯೋಗದುಃಖದಿಂದ ಆಗಲೇ ಸುವರ್ಣಕುಂಭಯೋಗೀಂದ್ರರಿಂದ ದೀಕ್ಷೆಯನ್ನು ತೆಗೆದುಕೊಂಡು ಅನಗಾರಕೇವಲಿಯಾದನು.

**ಕೃತ್ವಾ ರಾಜ್ಯಮಮೂ ಸಹೈವ ಸುಚಿರಂ ಭುಕ್ತ್ವಾ ಸುಖಂ ತಾದೃಶಮ್ ।**
**ಪೃಥ್ವೀಮೂಲಮಗಾತ್ಸಿಲಾಖಿಲಮಹಾದುಃಖಾಲಯಂ ಕೇಶವಃ ।**
**ರಾಮೋ ಧಾಮ ಪದಂ ಸುಖಸ್ಯ ಜಗತಾಂ ಮೂರ್ಧಾನಮಧ್ಯಾಸ್ತ ಧಿಕ್ ।**
**ದುಷ್ಟಂ ಕಃ ಸುಖಭಾಗ್ವಿಲೋಮಗವಿಧಿಂ ಯಾವನ್ನ ಹನ್ಯಾದಮುಮ್ ॥**

ಈ ಬಲಭದ್ರಕೇಶವರು ಬಹುಕಾಲದವರೆಗೆ ಜೊತೆಯಲ್ಲೇ ರಾಜ್ಯವನ್ನಾಳಿ ಅಂತಹ ಸುಖವನ್ನನುಭವಿಸಿ ಅವರಲ್ಲಿ ಕೇಶವನು ಸಕಲಮಹಾದುಃಖಗಳಿಗೆ ಸ್ಥಾನವಾದ ಪೃಥ್ವಿಯ ಬುಡ–ನರಕವನ್ನು ಹೊಂದಿದನಂತೆ. ಬಲಭದ್ರನು ಸುಖಕ್ಕೆ ಮುಖ್ಯಸ್ಥಾನವಾದ ಜಗತ್ತಿನ ತುದಿಯನ್ನು–ಮುಕ್ತಿಯನ್ನು ಹೊಂದಿದನು. ದುಷ್ಟವಾದ ಈ ವಿಪರೀತದೈವವನ್ನು ನಾಶಮಾಡುವವರೆಗೆ ಯಾವನು ಸುಖಭಾಗಿಯಾಗುವನು ? ಧಿಕ್ಕಾರವಿರಲಿ.

**ಪ್ರಾಗ್ವಿಶ್ವನಂದೀತಿ ದಿಶಾಮಧೀಶ– ।**
**ಸ್ತತೋ ಮಹಾಶುಕ್ರಮಧಿಷ್ಠಿತೋಮರಃ ।**
**ಪುನಸ್ತ್ರಿಪೃಷ್ಠೋ ಭರತಾರ್ಧಚಕ್ರೀ ।**
**ಚಿತಾಘಕಃ ಸಪ್ತಮಭೂಮಿಮಾಶ್ರಯತ್ ॥ ೯೮ ॥**

ಮೊದಲು ದಿಕ್ಕುಗಳಿಗೆ ಅಧಿಪತಿಯಾದ ವಿಶ್ವನಂದಿಯೆಂದೂ ಬಳಿಕ ಮಹಾಶುಕ್ರಸ್ವರ್ಗವನ್ನು ಹೊಂದಿದ ದೇವನೆಂದೂ ಮತ್ತೆ ಭರತಾರ್ಧಚಕ್ರಿಯೆಂದೂ ಪ್ರಖ್ಯಾತನಾದ ತ್ರಿಪೃಷ್ಠನು ಪಾಪಸಂಚಯುವನ್ನು ಮಾಡಿ ಏಳನೆಯ ನರಕವನ್ನು ಹೊಂದಿದನು.

**ವಿಶಾಖಭೂತಿರ್ಧರಣೀಪತಿರ್ಯಮೀ ।**
**ಮರುನ್ಮಹಾಶುಕ್ರಗತಸ್ತತಶ್ಚ್ಯುತಃ ।**
**ಹಲಾಯುಧೋಽಸೌ ವಿಜಯಾಹ್ವಯಃ ಕ್ಷಯಮ್ ।**
**ಭವಂ ಸ ನೀತ್ವಾ ಪರಮಾತ್ಮತಾಮಿತಃ ॥ ೯೯ ॥**

ವಿಶಾಖಭೂತಿಯು ಪಕ್ಷೀಪತಿಯೂ ಮುನಿಯೂ ಮಹಾಶುಕ್ರಸ್ವರ್ಗವನ್ನು ಹೊಂದಿದ ದೇವನೂ ಆಗಿ ಅಲ್ಲಿಂದ ಚ್ಯುತನಾಗಿ ಈ ವಿಜಯನೆಂಬ ಬಲಭದ್ರ ನಾದನು. ಅವನು ಭವಬಂಧನವನ್ನು ನಾಶಮಾಡಿ ಪರಮಾತ್ಮತ್ವವನ್ನು ಪಡೆದನು.

**ವಿಶಾಖನಂದೀ ವಿಹತಪ್ರತಾಪೋ ।**
**ವ್ಯಸುಃ ಪರಿಭ್ರಮ್ಯ ಭವೇ ಚಿರಂ ತತಃ ।**
**ಖಗಾಧಿನಾಥೋ ಹಯಕಂಧರಾಹ್ವಯೋ ।**
**ರಿಪುಸ್ತ್ರಿಪೃಷ್ಠಸ್ಯ ಯಯಾವಧೋಗತಿಮ್ ॥ ೧೦೦ ॥**

ವಿಶಾಖನಂದಿಯು ಪ್ರತಾಪಹೀನನಾಗಿ ಸತ್ತು ಬಹುಕಾಲದವರೆಗೆ ಭವಪರಂಪರೆ ಯಲ್ಲಿ ತಿರುಗಿ ಬಳಿಕ ಹಯಗ್ರೀವನೆಂಬ ಖೇಚರಾಧಿಪತಿಯಾಗಿ ತ್ರಿಪೃಷ್ಠನಿಗೆ ಶತ್ರು ವಾಗಿ ಸತ್ತು ಅಧೋಗತಿಯನ್ನು ಹೊಂದಿದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಶ್ರೇಯಸ್ತೀರ್ಥಕರತ್ರಿಪೃಷ್ಠವಿಜಯಾಶ್ವಗ್ರೀವಪುರಾಣಂ ಸಪ್ತಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಶ್ರೇಯಸ್ತೀರ್ಥಕರ ತ್ರಿಪೃಷ್ಠ ವಿಜಯ ಹಯಗ್ರೀವಪುರಾಣವೆಂಬ ಐವತ್ತೇಳನೆಯ ಪರ್ವವು ಸಮಾಪ್ತವಾದುದು.

---

# ಅಥ ವಾಸುಪೂಜ್ಯತೀರ್ಥಂಕರಪುರಾಣಂ

**ವಾಸುರಿಂದ್ರೋಸ್ಯ ಪೂಜ್ಯೋಯಂ ವಸುಪೂಜ್ಯಸ್ಯ ವಾ ಸುತಃ ।**
**ವಾಸುಪೂಜ್ಯಸ್ತಂ ಪೂಜ್ಯಸ್ಸಜ್ಞಾನೇನ ಪುನಾತು ನಃ ॥ ೧ ॥**

ಇಂದ್ರನಿಗೆ ವಾಸುವೆಂದು ಹೆಸರು. ಈ ವಾಸುವಿಗೆ ಯಾವನು ಪೂಜ್ಯನಾಗಿದ್ದಾನೋ ಅಥವಾ ವಸುಪೂಜ್ಯರಾಜನ ಪುತ್ರನಾಗಿದ್ದಾನೋ ಸತ್ಪುರುಷರಿಗೆ ಪೂಜ್ಯನಾದ ಆ ವಾಸುಪೂಜ್ಯನು ಉತ್ತಮವಾದ ಜ್ಞಾನದಿಂದ ನಮ್ಮನ್ನು ಪವಿತ್ರಮಾಡಲಿ.

**ಪುಷ್ಕರಾರ್ಧೇಂದ್ರದಿಗ್ಮೇರುಸೀತಾವಾಗ್ವತ್ಸಕಾವತೀ- ।**
**ವಿಷಯೇ ಖ್ಯಾತರತ್ನಾದಿಪುರೇ ಪದ್ಮೋತ್ತರಃ ಪತಿಃ ॥ ೨ ॥**

ಪುಷ್ಕರಾರ್ಧದ್ವೀಪದ ಪೂರ್ವದಿಕ್ಕಿನ ಮೇರುವಿನ ಸೀತಾನದಿಯ ಪಶ್ಚಿಮ ತೀರದಲ್ಲಿರುವ ವತ್ಸಕಾವತೀದೇಶದಲ್ಲಿ ಪ್ರಖ್ಯಾತವಾದ ರತ್ನಪುರವೆಂಬ ನಗರವಿದೆ. ಅಲ್ಲಿ ಪದ್ಮೋತ್ತರನೆಂಬವನು ದೊರೆಯಾಗಿದ್ದನು.

**ಕೀರ್ತಿರ್ಗುಣಮಯೀ ವಾಚಿ ಮೂರ್ತಿಃ ಪುಣ್ಯಮಯೀಕ್ಷಣೇ ।**
**ವೃತ್ತಿರ್ಧರ್ಮಮಯೀ ಚಿತ್ತೇ ಸರ್ವೇಷಾಮಸ್ಯ ಭೂಭುಜಃ ॥ ೩ ॥**

ಈ ಪದ್ಮೋತ್ತರರಾಜನ ಗುಣಮಯವಾದ ಕೀರ್ತಿಯು ಎಲ್ಲರ ವಚನದಲ್ಲಿಯೂ ಪುಣ್ಯಮಯವಾದ ಮೂರ್ತಿಯು ನೋಟದಲ್ಲಿಯೂ ಧರ್ಮಮಯವಾದ ಆಚರಣವು ಚಿತ್ತದಲ್ಲಿಯೂ ಇದ್ದುವು.

**ಸಾಮ ವಾಚಿ ದಯಾ ಚಿತ್ತೇ ಧಾಮ ದೇಹೇ ನಯೋ ಮತೌ ।**
**ಧನಂ ದಾನೇ ಜಿನೇ ಭಕ್ತಿಃ ಪ್ರತಾಪಸ್ತಸ್ಯ ಶತ್ರುಷು ॥ ೪ ॥**

ಅವನ ಮಾತಿನಲ್ಲಿ ಮೃದುತ್ವವೂ ಮನಸ್ಸಿನಲ್ಲಿ ದಯೆಯೂ ಶರೀರದಲ್ಲಿ ತೇಜಸ್ಸೂ ಬುದ್ಧಿಯಲ್ಲಿ ನಯವೂ ದಾನದಲ್ಲಿ ಧನವೂ ಜಿನನಲ್ಲಿ ಭಕ್ತಿಯೂ ವೈರಿಗಳಲ್ಲಿ ಪ್ರತಾಪವೂ ಇದ್ದುವು.

**ಪಾತಿ ತಸ್ಮಿನ್ನುವಂ ಭೂಪೇ ನ್ಯಾಯಮಾರ್ಗಾನುವರ್ತಿನಿ ।**
**ವೃದ್ಧಿಮೇವ ಪ್ರಜಾಃ ಪ್ರಾಪುರ್ಮುನೌ ಸಮಿತಯೋ ಯಥಾ ॥ ೫ ॥**

ನ್ಯಾಯಮಾರ್ಗವನ್ನನುಸರಿಸಿರುವ ಆ ರಾಜನು ಪೃಥ್ವಿಯನ್ನು ಪಾಲಿಸುತ್ತಿರುವಾಗ, ಮುನಿಯಲ್ಲಿ ಸಮಿತಿಗಳು ವೃದ್ಧಿಯನ್ನು ಹೊಂದುವಂತೆ, ಪ್ರಜೆಗಳು ವೃದ್ಧಿಯನ್ನೇ ಹೊಂದಿದರು.

**ಗುಣಾಸ್ತಸ್ಯ ಧನಂ ಲಕ್ಷ್ಮೀಸ್ತದೀಯಾಪಿ ಗುಣಪ್ರಿಯಾ ।**
**ತಯಾ ಸಹ ತತೋ ದೀರ್ಘಂ ನಿರ್ದ್ವಂದ್ವಂ ಸುಖಮಾಪ್ನುವನ್ ॥ ೬ ॥**

**ಸ ಕದಾಚಿತ್ತಮಾಸೀನಂ ಮನೋಹರಗಿರೌ ಜಿನಮ್ ।**
**ಯುಗಂಧರಾಹ್ವಯಂ ಸ್ತೋತ್ರೈರುಪಾಸ್ಯ ಖಲು ಭಕ್ತಿಮಾನ್ ॥ ೭ ॥**

**ಶ್ರುತ್ವಾ ಸಪ್ರಶ್ರಯೋ ಧರ್ಮಮನುಪ್ರೇಕ್ಷಾದಿಚಿಂತನಾತ್ ।**
**ಜಾತತ್ರಿಭೇದನಿರ್ವೇದಃ ಪುನಶ್ಚೇತ್ಯಚಿಂತಯತ್ ॥ ೮ ॥**

ಗುಣಗಳು ಅವನ ಧನ. ಅವನ ಲಕ್ಷ್ಮಿಯೂ ಗುಣಪ್ರಿಯಳಾಗಿದ್ದಳು. ಆದುದರಿಂದ ಅವನು ಆಕೆಯೊಡನೆ ಬಹುಕಾಲದವರೆಗೆ ಅದ್ವಿತೀಯವಾದ ಸುಖವನ್ನನುಭವಿಸುವವನಾಗಿ ಒಂದಾನೊಂದು ಕಾಲದಲ್ಲಿ ಮನೋಹರವೆಂಬ ಪರ್ವತದಲ್ಲಿರುವ ಯುಗಂಧರನೆಂಬ ಜಿನನನ್ನು ಸ್ತೋತ್ರಗಳಿಂದ ಭಜಿಸಿ ಭಕ್ತಿಯುಳ್ಳವನೂ ವಿನಯಪರನೂ ಆಗಿ ಧರ್ಮಶ್ರವಣವನ್ನು ಮಾಡಿ ದ್ವಾದಶಾನುಪ್ರೇಕ್ಷೆ ಮೊದಲಾದುವುಗಳ ಚಿಂತನೆಯಿಂದ ಸಂಸಾರ ಶರೀರ ಭೋಗಗಳಲ್ಲಿ ವೈರಾಗ್ಯವನ್ನು ಹೊಂದಿ ಮತ್ತೂ ಈ ರೀತಿಯಾಗಿ ಚಿಂತಿಸಿದನು.

**ಶ್ರಿಯೋ ಮಾಯಾಃ ಸುಖಂ ದುಃಖಮಿಶ್ರಂ ಸಾವಧಿ ಜೀವಿತಮ್ ।**
**ಸಂಯೋಗೋ ವಿಪ್ರಯೋಗಾಂತಃ ಕಾಯೋಽಯಂ ಸಾಮಯಃ ಖಲಃ ॥**

**ಕಾತ್ರ ಪ್ರೀತಿರಹಂ ಜನ್ಮಪಂಚಾವರ್ತಾನ್ಮಹಾಭಯಾತ್ ।**
**ನಿರ್ಗಚ್ಛಾಮ್ಯವಲಂಬ್ಯೈತಾಂ ಕಾಲಲಬ್ಧಿಮುಪಸ್ಥಿತಾಮ್ ॥ ೧೦ ॥**

"ಸಂಪತ್ತಿಗಳು ಮಾಯಾಮಯಗಳಾಗಿವೆ. ಸುಖವು ದುಃಖಮಿಶ್ರವಾಗಿದೆ. ಜೀವಿತವು ಅವಧಿಸಹಿತವಾಗಿದೆ. ಸಂಯೋಗವು ವಿಯೋಗವುಳ್ಳದಾಗಿದೆ. ಈ ದುಷ್ಟವಾದ ದೇಹವು ರೋಗಸಹಿತವಾಗಿದೆ. ಇವುಗಳಲ್ಲಿ ಎಂತಹ ಪ್ರೀತಿ ? ನನಗೆ ಒದಗಿರುವ ಈ ಕಾಲಲಬ್ಧಿಯನ್ನು ಅವಲಂಬಿಸಿ ಮಹಾಭಯಂಕರವಾದ ಪಂಚ ಸಂಸಾರಪರಿವರ್ತನೆಯಿಂದ ಹೊರಡುವೆನು."

**ತತೋ ರಾಜ್ಯಭರಂ ಪುತ್ರೇ ಧನಮಿತ್ರೇ ನಿಯೋಜ್ಯ ಸಃ ।**
**ಮಹೀಶೈರ್ಬಹುಭಿಃ ಸಾರ್ಧಮದೀಕ್ಷಿಷ್ಟಾತ್ಮಶುದ್ಧಯೇ ॥ ೧೧ ॥**

ಈ ಪ್ರಕಾರವಾಗಿ ವಿಚಾರಮಾಡಿ ಬಳಿಕ ಆ ಪದ್ಮೋತ್ತರನು ಧನಮಿತ್ರನೆಂಬ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ಅನೇಕ ರಾಜರುಗಳೊಡನೆ ಆತ್ಮಶುದ್ಧಿಗೋಸ್ಕರ ದೀಕ್ಷೆಯನ್ನು ತೆಗೆದುಕೊಂಡನು.

**ಅಧೀತ್ಯೈಕಾದಶಾಂಗಾನಿ ಶ್ರದ್ಧಾನಾದ್ಯಾಪ್ತಸಂಪದಾ ।**
**ಬಧ್ವಾ ತೀರ್ಥಕರಂ ನಾಮ ಪ್ರಾಂತೇ ಸನ್ನ್ಯಸ್ಯ ಶುದ್ಧಧೀಃ ॥ ೧೨ ॥**

**ಮಹಾಶುಕ್ರವಿಮಾನೇಭೂನ್ಮಹಾಶುಕ್ರೋಮರಾಧಿಪಃ ।**
**ಷೋಡಶಾಬ್ಧಿಪ್ರಮಾಣಾಯುಶ್ಚತುರ್ಹಸ್ತಶರೀರಭಾಕ್ ॥ ೧೩ ॥**

**ಪದ್ಮಲೇಶ್ಯಃ ಶ್ವಸನ್ಮಾಸೈರಷ್ಟಭಿಸ್ತುಷ್ಟಮಾನಸಃ ।**
**ಷೋಡಶಾಬ್ದಸಹಸ್ರಾತ್ತಮಾನಸಾಹಾರಮಾಹರನ್ ॥ ೧೪ ॥**

**ಸದಾ ಶಬ್ದಪ್ರವೀಚಾರಶ್ಚತುರ್ಥಕ್ಷ್ಮಾಗತಾವಧಿಃ ।**
**ಪ್ರಮಾವಧೇರಿ ವೈತಸ್ಯ ವಿಕ್ರಿಯಾಬಲತೇಜಸಾಮ್ ॥ ೧೫ ॥**

ಬಳಿಕ ಏಕಾದಶಾಂಗಶಾಸ್ತ್ರಗಳನ್ನು ಅಭ್ಯಾಸಮಾಡಿ ದರ್ಶನವಿಶುದ್ಧಿ ಮೊದಲಾದ ಆಪ್ತಸಂಪತ್ತಿಯಿಂದ ತೀರ್ಥಕರನಾಮಕರ್ಮವನ್ನು ಬಂಧಿಸಿಕೊಂಡು ಶುದ್ಧಬುದ್ಧಿಯುಳ್ಳವನಾಗಿ ಅವಸಾನಕಾಲದಲ್ಲಿ ಸಮಾಧಿಮರಣವನ್ನು ಹೊಂದಿ ಮಹಾಶುಕ್ರವೆಂಬ ಹನ್ನೆರಡನೆಯ ಸ್ವರ್ಗದಲ್ಲಿ ಹದಿನಾರು ಸಾಗರೋಪಮಾಯುಷ್ಯವುಳ್ಳವನೂ ನಾಲ್ಕು ಹಸ್ತಪ್ರಮಾಣ ಶರೀರವುಳ್ಳವನೂ ಪದ್ಮಲೇಶ್ಯೆಯುಳ್ಳವನೂ ಎಂಟು ತಿಂಗಳಿಗೊಮ್ಮೆ ಉಸಿರಾಡಿಸುವವನೂ ಸಂತುಷ್ಟವಾದ ಮನಸ್ಸುಳ್ಳವನೂ ಹದಿನಾರು ಸಾವಿರ ವರುಷಗಳಿಗೊಮ್ಮೆ ಮಾನಸಾಹಾರವನ್ನು ಸ್ವೀಕರಿಸುವವನೂ ಯಾವಾಗಲೂ ಶಬ್ದಮಾತ್ರದಿಂದ ಕಾಮಸೇವನಾ ತೃಪ್ತಿಯುಳ್ಳವನೂ ನಾಲ್ಕನೆಯ ನರಕದವರೆಗೆ ವ್ಯಾಪಕವಾದ ಅವಧಿಜ್ಞಾನ ವಿಕ್ರಿಯಾ ಬಲ ತೇಜಸ್ಸುಗಳುಳ್ಳವನೂ ಆದ ಮಹಾಶುಕ್ರೇಂದ್ರನಾಗಿ ಜನಿಸಿದನು.

**ತತ್ರಾಮರೀಕಲಾಲಾಪಗೀತವಾದ್ಯಾದಿಮೋದಿತೇ ।**
**ಚೋದಿತೇ ಕಾಲಪರ್ಯಾಯೈಸ್ತಸ್ಮಿನ್ನತ್ರಾಗಮಿಷ್ಯತಿ ॥ ೧೬ ॥**

**ದ್ವೀಪೇಸ್ಮಿನ್ಭಾರತೇ ಚಂಪಾನಗರೇಂಗನರಾಧಿಪಃ । -**
**ಇಕ್ಷ್ವಾಕುಃ ಕಾಶ್ಯಪಃ ಖ್ಯಾತೋ ವಸುಪೂಜ್ಯೋಸ್ಯ ಭಾಮಿನೀ ॥ ೧೭ ॥**

**ಪ್ರಿಯಯಾ ಜಯಾವತೀ ಪ್ರಾಪ್ತವಸುಧಾರಾದಿಮಾನನಾ ।**
**ಆಷಾಢಕೃಷ್ಣಷಷ್ಠ್ಯಂತೇ ಚತುರ್ವಿಂಶರ್ಕ್ಷಲಕ್ಷಿತೇ ॥ ೧೮ ॥**

**ದೃಷ್ಟ್ವಾ ಸ್ವಪ್ನಾನ್ ಫಲಂ ತೇಷಾಂ ಪತ್ಯುರ್ಜ್ಞಾತ್ವಾ ತುತೋಷಿಣೀ ।**
**ಅಷ್ಟೌ ಮಾಸಾನ್ಯಮಾನ್ನೀತ್ವಾ ಪ್ರಾಪ್ತಫಾಲ್ಗುನಮಾಸಿಕಾ ॥ ೧೯ ॥**

**ಕೃಷ್ಣಾಯಾಂ ವಾರುಣೇ ಯೋಗೇ ಚತುರ್ದಶ್ಯಾಂ ಸುರೋತ್ತಮಮ್ ।**
**ಸರ್ವಪ್ರಾಣಿಹಿತಂ ಪುತ್ರಂ ಸುಖೇನೇಯಮಜೀಜನತ್ ॥ ೨೦ ॥**

ಆ ಸ್ವರ್ಗದಲ್ಲಿ ದೇವಸ್ತ್ರೀಯರ ಮಧುರಭಾಷಣ ಗೀತ ವಾದ್ಯ ಮೊದಲಾದುವುಗಳಿಂದ ಸಂತೋಷಗೊಳಿಸಲ್ಪಟ್ಟ ಆ ಮಹಾಶುಕ್ರೇಂದ್ರನು ಕಾಲದ ಪರ್ಯಾಯಗಳಿಂದ ಪ್ರೇರಿತನಾಗಿ ಈ ಮನುಷ್ಯಲೋಕಕ್ಕೆ ಬರುತ್ತಿರುವಾಗ ಈ ಜಂಬೂದ್ವೀಪದ ಭಾರತವರ್ಷದಲ್ಲಿರುವ ಚಂಪಾನಗರದಲ್ಲಿ ಅಂಗದೇಶಾಧಿಪತಿಯೂ ಇಕ್ಷ್ವಾಕುವಂಶಜನೂ ಕಾಶ್ಯಪಗೋತ್ರೋದ್ಭವನೂ ಪ್ರಖ್ಯಾತನೂ ಆದ ವಸುಪೂಜ್ಯಮಹಾರಾಜನು ದೊರೆಯಾಗಿದ್ದನು. ಇವನ ಪ್ರಿಯಪತ್ನಿಯಾದ ಜಯಾವತಿಯು ವಸುಧಾರಾದಿಗಳಿಂದ ಸನ್ಮಾನಿತಳಾಗಿ ಆಷಾಢಮಾಸದ ಕೃಷ್ಣಪಕ್ಷದ ಷಷ್ಠೀತಿಥಿಯಲ್ಲಿ ಶತಭಿಷಾನಕ್ಷತ್ರದಲ್ಲಿ ಹದಿನಾರು ಕನಸುಗಳನ್ನು ಕಂಡು ಪತಿಯಿಂದ ಅವುಗಳ ಫಲವನ್ನು ತಿಳಿದು ಸಂತುಷ್ಟಳಾಗಿ ಕ್ರಮದಿಂದ ಎಂಟು ತಿಂಗಳುಗಳನ್ನು ಕಳೆದು ಫಾಲ್ಗುನಮಾಸದ ಕೃಷ್ಣಪಕ್ಷದ ಚತುರ್ದಶೀತಿಥಿಯಲ್ಲಿ ವರುಣಯೋಗದಲ್ಲಿ ಸುಖದಿಂದ ಆ ದೇವೋತ್ತಮನನ್ನು ಸರ್ವಪ್ರಾಣಿಹಿತಕರನಾದ ಪುತ್ರನನ್ನಾಗಿ ಹಡೆದಳು.

**ಸುರಾಸ್ಸೌಧರ್ಮಮುಖ್ಯಾಸ್ತಂ ಸುರಾದ್ರೌ ಕ್ಷೀರಸಾಗರಾತ್ ।**
**ಘಟೈರಾನೀಯ ಪಾನೀಯಂ ಸ್ನಾಪಯಿತ್ವಾ ಪ್ರಸಾಧನಮ್ ॥ ೨೧ ॥**

**ವಿಧಾಯ ವಾಸುಪೂಜ್ಯಂ ಚ ನಾಮಾದಾಯ ಪುನರ್ಗೃಹಮ್ ।**
**ನೀತ್ವಾ ವಾಸಾನ್ ಸ್ವಕೀಯಾಂಸ್ತೇ ಜಗ್ಮುರ್ಜಾತಮಹೋತ್ಸವಾಃ ॥ ೨೨ ॥**

ಸೌಧರ್ಮೇಂದ್ರನೇ ಮೊದಲಾದ ದೇವರ್ಕಳು ಆ ಶಿಶುವನ್ನು ಮೇರುವಿನಲ್ಲಿ ಪಾಂಡುಕಶಿಲೆಯಲ್ಲಿರಿಸಿ ಕ್ಷೀರಸಮುದ್ರದಿಂದ ಘಟಗಳಲ್ಲಿ ಜಲವನ್ನು ತಂದು ಸ್ನಾನಮಾಡಿಸಿ ದಿವ್ಯಾಭರಣಗಳಿಂದಲಂಕರಿಸಿ ''ವಾಸುಪೂಜ್ಯ'' ನೆಂದು ಹೆಸರನ್ನಿಟ್ಟು ಮತ್ತೆ ಮನೆಗೆ ಕರೆದುತಂದು ಬಿಟ್ಟು ಮಹೋತ್ಸವವುಳ್ಳವರಾಗಿ ತಮ್ಮ ಸ್ಥಾನಗಳಿಗೆ ಹೋದರು.

**ಶ್ರೇಯಸ್ತೀರ್ಥಾಂತರೇ ಪಂಚಾಶಚ್ಚತುಃಸಾಗರೋಪಮೇ ।**
**ಪ್ರಾಂತಪಲ್ಯತ್ರಿಪಾದೇಸ್ಮಿನ್ ವ್ಯುಚ್ಛಿತ್ತೌ ಧರ್ಮಸಂತತೌ ॥ ೨೩ ॥**

**ತದಭ್ಯಂತರವರ್ತ್ಯಾಯುಸ್ಸೋಽಭವಚ್ಚಾಪಸಪ್ತತಿಃ ।**
**ಪಂಚಶೂನ್ಯದ್ವಿಸಪ್ತಾಬ್ದಜೀವಿತಃ ಕುಂಕುಮಚ್ಛವಿಃ ॥ ೨೪ ॥**

ಐವತ್ತುನಾಲ್ಕುಸಾಗರಪರಿಮಿತವಾದ ಶ್ರೇಯಸ್ತೀರ್ಥಂಕರರ ಅಂತರಕಾಲದ ಕೊನೆಯಲ್ಲಿ ಪಲ್ಯಕಾಲದ ಮುಕ್ಕಾಲು ಭಾಗಗಳಲ್ಲಿ ಧರ್ಮಪರಂಪರೆಯು ಲುಪ್ತವಾದಾಗ ಆ ಕಾಲದ ಅವಧಿಯಲ್ಲಿ ಜೀವಿಸಿದವರೂ ಎಪ್ಪತ್ತು ಧನುಸ್ಸುಗಳಷ್ಟು ಶರೀರಪರಿಮಾಣವುಳ್ಳವರೂ ಎಪ್ಪತ್ತೆರಡು ಲಕ್ಷ ವರ್ಷಾಯುಷ್ಯವುಳ್ಳವರೂ ಕುಂಕುಮದಂತೆ ಕಾಂತಿಯುಳ್ಳವರೂ ಆದ ಆ ವಾಸುಪೂಜ್ಯರಾದರು.

**ಇಷ್ಟಾಷ್ಟಾದಶಧಾನ್ಯಾನಾಂ ಬೀಜಾನಾಂ ವೃದ್ಧಿಕಾರಣಮ್ ।**
**ಭೇಕಲೇಹ್ಯಮಿವ ಕ್ಷೇತ್ರಂ ಗುಣಾನಾಮೇಷ ಭೂಪತಿಃ ॥ ೨೫ ॥**

ಕಪ್ಪೆಗಳು ವಾಸಿಸುವ–ನೀರಾಶ್ರಯವಾದ ಕ್ಷೇತ್ರವು ಇಷ್ಟವಾದ ಹದಿನೆಂಟು ಧಾನ್ಯಬೀಜಗಳ ವೃದ್ಧಿಗೆ ಕಾರಣವಾಗಿರುವಂತೆ, ಪೃಥ್ವೀಪತಿಯಾದ ಈ ವಾಸುಪೂಜ್ಯರು ಗುಣಗಳ ವೃದ್ಧಿಗೆ ಕಾರಣರಾಗಿದ್ದರು.

**ಧಿಯಮಸ್ಯ ಗುಣಾಃ ಪ್ರಾಪ್ಯ ಸರ್ವೇ ಸತ್ಫಲದಾಯಿನಃ ।**
**ಸಮಾಂ ವೃಷ್ಟಿಮಿವಾಭೀಷ್ಟಾಂ ಸಸ್ಯಭೇದಾ ಜಗದ್ಧಿತಾಃ ॥ ೨೬ ॥**

ಲೋಕಕ್ಕೆ ಹಿತಕಾರಿಗಳಾದ ನಾನಾಸಸ್ಯಗಳು ಅಭೀಷ್ಟವಾದ ಸಮಾವೆಂಬ ವೃಷ್ಟಿಯನ್ನು ಹೊಂದಿ ಸತ್ಫಲಗಳನ್ನು ಕೊಡುವಂತೆ, ಎಲ್ಲಾ ಗುಣಗಳು ಈ ವಾಸುಪೂಜ್ಯರ ಬುದ್ಧಿಯನ್ನು ಹೊಂದಿ ಸತ್ಫಲದಾಯಕಗಳಾದುವು.

**ತ್ರಯಃ ಸಪ್ತಾಹಕಾ ಮೇಘಾ ಅಶೀತಿಃ ಕಣಶೀಕರಾಃ ।**
**ಷಷ್ಟಿರಾತಪಮೇಘಾನಾಮೇಷಾ ವೃಷ್ಟಿಃ ಸಮಾ ಮತಾ ॥ ೨೭ ॥**

ಏಳು ದಿನಗಳವರೆಗೆ ಮೇಘಗಳು ಸುರಿಯುವ ಮಳೆಗೆ ತ್ರಯವೆಂದೂ ಎಂಬತ್ತು ದಿನಗಳವರೆಗೆ ಸುರಿಯುವ ಮಳೆಗೆ ಕಣಶೀಕರವೆಂದೂ ಬಿಸಿಲಿನಿಂದ ಕಾದ ಮೇಘಗಳು ಅರುವತ್ತು ದಿನಗಳವರೆಗೆ ಸುರಿಯುವ ಈ ಮಳೆಗೆ ಸಮಾವೆಂದೂ ಹೆಸರು.

**ಅಗುರ್ಗುಣಾ ಗುಣೀಭಾವಮನ್ಯೇಷ್ವಸ್ಮಿಂಸ್ತು ಮುಖ್ಯತಾಮ್ ।**
**ಆಶ್ರಯಃ ಕಸ್ಯ ವೈಶಿಷ್ಟ್ಯಂ ವಿಶಿಷ್ಟೋ ನ ಪ್ರಕಲ್ಪತೇ ॥ ೨೮ ॥**

ಗುಣಗಳು ಬೇರೆಯವರಲ್ಲಿ ಗೌಣವಾಗಿದ್ದುವು. ಈ ವಾಸುಪೂಜ್ಯರಲ್ಲಾದರೋ ಮುಖ್ಯತ್ವವನ್ನು ಹೊಂದಿದುವು. ವಿಶಿಷ್ಟವಾದ ಆಶ್ರಯವು ಯಾರಿಗೆ ತಾನೆ ವೈಶಿಷ್ಟ್ಯವನ್ನುಂಟುಮಾಡುವುದಿಲ್ಲ ?

**ಗುಣೀ ಗುಣಮಯಸ್ತಸ್ಯ ನಾಶಸ್ತನ್ನಾಶ ಇಷ್ಯತೇ ।**
**ಇತಿ ಬುಧ್ವಾ ಸುಧೀಃ ಸರ್ವಾನ್ಗುಣಾನ್ಸಮ್ಯಗಪಾಲಯತ್ ॥ ೨೯ ॥**

ಗುಣಿಯು ಗುಣಮಯವಾಗಿರುತ್ತದೆ– ಗುಣಸಮುದಾಯವೇ ಗುಣಿ. ಗುಣವು ನಾಶವಾದರೆ ಗುಣಿಯು ನಾಶವಾಗುವುದು. ಹೀಗೆ ತಿಳಿದು ಪ್ರಾಜ್ಞರಾದ ಆ ವಾಸುಪೂಜ್ಯರು ಆ ಎಲ್ಲಾ ಗುಣಗಳನ್ನು ಚೆನ್ನಾಗಿ ಕಾಪಾಡಿದರು.

**ಅಷ್ಟಾದಶಸಮಾಲಕ್ಷಾಃ ಕೌಮಾರೇ ಪ್ರಾಪ್ಯ ಸಂಸೃತೇಃ ।**
**ನಿರ್ವಿದ್ಯಾತ್ಮಗತಂ ಧೀಮಾನ್ಯಾಥಾತ್ಮ್ಯಂ ಸಮಚಿಂತಯತ್ ॥ ೩೦ ॥**

ಕೌಮಾರಾವಸ್ಥೆಯಲ್ಲಿ ಹದಿನೆಂಟು ಲಕ್ಷ ವರ್ಷಗಳನ್ನು ಕಳೆದು ಪ್ರಾಜ್ಞರಾದ ವಾಸುಪೂಜ್ಯರು ಸಂಸಾರದಿಂದ ವಿರಕ್ತಿಯನ್ನು ಹೊಂದಿ ಯಥಾರ್ಥವಾದ ಆತ್ಮಸ್ವರೂಪವನ್ನು ಮುಂದೆ ಹೇಳುವಂತೆ ಚಿಂತಿಸಿದರು.

**ವಿಧೀರ್ವಿಷಯಸಂಸಕ್ತೋ ಬಧ್ನನ್ನಾತ್ಮಾನಮಾತ್ಮನಾ ।**
**ಬಂಧೈಶ್ಚತುರ್ವಿಧೈರ್ದುಃಖಂ ಭುಂಜಾನಶ್ಚ ಚತುರ್ವಿಧಮ್ ॥ ೩೧ ॥**

**ಅನಾದೌ ಜನ್ಮಕಾಂತಾರೇ ಭ್ರಾಂತ್ವಾ ಕಾಲಾದಿಲಬ್ಧಿತಃ ।**
**ಸನ್ಮಾರ್ಗಂ ಪ್ರಾಪ್ತವಾಂಸ್ತೇನ ಪ್ರಗುಣಂ ಯಾಮಿ ಸದ್ಗತಿಮ್ ॥ ೩೨ ॥**

''ವಿಷಯಾಸಕ್ತನೂ ಅಜ್ಞಾನಿಯೂ ಆದ ನಾನು ತನ್ನಿಂದ ತನ್ನನ್ನು ಬಂಧಿಸಿಕೊಂಡು ಪ್ರಕೃತಿ ಸ್ಥಿತಿ ಅನುಭಾಗ ಪ್ರದೇಶಗಳೆಂಬ ಚತುರ್ವಿಧ ಬಂಧಗಳಿಂದ ಸಹಜ ಶಾರೀರ ಮಾನಸಾಗಂತುಕರೂಪವಾದ ಚತುರ್ವಿಧ ದುಃಖಗಳನ್ನನುಭವಿಸುತ್ತ ಅನಾದಿಯಾದ ಜನ್ಮಾರಣ್ಯದಲ್ಲಿ ತಿರುಗಿ ಕಾಲಲಬ್ಧಿಯಿಂದ ಸನ್ಮಾರ್ಗವನ್ನು ಹೊಂದಿದವನಾಗಿದ್ದೇನೆ. ಆದರಿಂದ ಶ್ರೇಷ್ಠವಾದ ಸದ್ಗತಿಯನ್ನು ಹೊಂದುವೆನು.

**ಅಸ್ತು ಕಾಯಃ ಶುಚಿಃ ಸ್ಥಾಸ್ನುಃ ಪ್ರೇಕ್ಷಣೀಯೋ ನಿರಾಮಯಃ ।**
**ಆಯುಶ್ಚಿರಮನಾಬಾಧಂ ಸುಖಂ ಸಂತತಸಾಧನಮ್ ॥ ೩೩ ॥**

**ಕಿಂತು ಧ್ರುವೋ ವಿಯೋಗೋತ್ರ ರಾಗಾತ್ಮಕಮಿದಂ ಸುಖಮ್ ।**
**ರಾಗೋ ಬಧ್ನಾತಿ ಕರ್ಮಾಣಿ ಬಂಧಃ ಸಂಸಾರಕಾರಣಮ್ ॥ ೩೪ ॥**

ದೇಹವು ಶುಚಿಯೂ ಸ್ಥಿರವೂ ಸುಂದರವೂ ರೋಗವಿಲ್ಲದುದೂ ಆಗಿರಲಿ, ಆಯುಷ್ಯವು ಚಿರಕಾಲ ಬಾಧೆಯಿಲ್ಲದುದಾಗಿರಲಿ, ಸುಖವು ಯಾವಾಗಲೂ ಆದರ ಸಾಧನವುಳ್ಳುದಾಗಿರಲಿ, ಆದರೆ ಈ ಸಂಸಾರದಲ್ಲಿ ಶರೀರವಿಯೋಗವು ನಿಶ್ಚಿತವಾದುದು. ಈ ಸುಖವು ರಾಗರೂಪವಾದುದು. ರಾಗವು ಕರ್ಮಗಳನ್ನು ಬಂಧಿಸುತ್ತದೆ. ಕರ್ಮಬಂಧವು ಸಂಸಾರಕ್ಕೆ ಕಾರಣವಾಗಿದೆ.

ಚತುರ್ಗತಿಮಯಃ ಸೋಪಿ ತಾಶ್ಚ ದುಃಖಸುಖಾವಹಾಃ ।
ತತಃ ಕಿಮಮುನೇತ್ಯೇತತ್ತ್ಯಾಜ್ಯಮೇವ ವಿಚಕ್ಷಣೈಃ ॥ ೩೫ ॥

ಆ ಸಂಸಾರವೂ ಚತುರ್ಗತಿಮಯವಾಗಿದೆ. ಆ ಗತಿಗಳು ದುಃಖಸುಖಗಳನ್ನುಂಟು ಮಾಡುವುವುಗಳಾಗಿವೆ. ಆದುದರಿಂದ ಈ ದೇಹಾದಿಗಳಿಂದೇನು ಪ್ರಯೋಜನ ? ಇದೆಲ್ಲವೂ ಪ್ರಾಜ್ಞರಿಂದ ತ್ಯಜಿಸಲ್ಪಡತಕ್ಕುದೇ ಆಗಿದೆ."

ಇತಿ ಚಿಂತಯತಸ್ತಸ್ಯ ಸ್ತವೋ ಲೌಕಾಂತಿಕೈಃ ಕೃತಃ ।
ಸುರಾ ನಿಷ್ಕ್ರಮಣಸ್ನಾನಭೂಷಣಾದ್ಯುತ್ಸವಂ ವ್ಯಧುಃ ॥ ೩೬ ॥

ಈ ರೀತಿಯಾಗಿ ಚಿಂತಿಸುತ್ತಿರುವ ಆ ವಾಸುಪೂಜ್ಯಸ್ವಾಮಿಯ ಸ್ತೋತ್ರವನ್ನು ಲೌಕಾಂತಿಕದೇವರ್ಕಳು ಮಾಡಿದರು. ಇಂದ್ರಾದಿದೇವರ್ಕಳು ಪರಿನಿಷ್ಕ್ರಮಣಾಭಿಷೇಕ ಅಲಂಕಾರ ಮೊದಲಾದ ಉತ್ಸವವನ್ನು ಮಾಡಿದರು.

ಶಿಬಿಕಾಂ ದೇವಸಂವ್ಯೂಢಾಮಾರುಹ್ಯ ಪೃಥಿವೀಪತಿಃ ।
ವನೇ ಮನೋಹರೋದ್ಯಾನೇ ಚತುರ್ಥೋಪೋಷಿತಂ ವಹನ್ ॥ ೩೭ ॥

ವಿಶಾಖರ್ಕ್ಷೇ ಚತುರ್ದಶ್ಯಾಂ ಸಾಯಾಹ್ನೇ ಕೃಷ್ಣಫಾಲ್ಗುನೇ ।
ಸಾಮಾಯಿಕಂ ಸಮಾಧಾಯ ತುರ್ಯಜ್ಞಾನ್ಯಭೂದಸೌ ॥ ೩೮ ॥

ಪೃಥಿವೀಪತಿಯಾದ ವಾಸುಪೂಜ್ಯಸ್ವಾಮಿಯು ದೇವರ್ಕಳಿಂದ ಹೊರಲ್ಪಟ್ಟ ಪಲ್ಲಕ್ಕಿಯನ್ನೇರಿ ಮನೋಹರೋದ್ಯಾನಕ್ಕೆ ಹೋಗಿ ಅಲ್ಲಿ ನಾಲ್ಕು ಉಪವಾಸ ನಿಯಮವನ್ನು ಮಾಡಿ ಫಾಲ್ಗುನಮಾಸದ ಕೃಷ್ಣಪಕ್ಷದ ಚತುರ್ದಶೀತಿಥಿಯಲ್ಲಿ ವಿಶಾಖಾ ನಕ್ಷತ್ರದಲ್ಲಿ ಸಾಮಾಯಿಕವನ್ನು ಧಾರಣಮಾಡಿ ಮನಃಪರ್ಯಯಜ್ಞಾನಿಯಾದರು.

ಸಹ ತೇನ ಮಹೀಪಾಲಾಃ ಷಟ್ಸಪ್ತತ್ರ್ಯುಮಿತಾ ಹಿತಾಃ ।
ಪ್ರವ್ರಜ್ಯಾಂ ಪ್ರತ್ಯಪದ್ಯಂತ ಪರಮಾರ್ಥವಿದೋ ಮುದಾ ॥ ೩೯ ॥

ಅವರೊಡನೆ ಹಿತಕಾರಿಗಳೂ ಪರಮಾರ್ಥವನ್ನು ತಿಳಿದವರೂ ಆದ ಆರುನೂರೆಪ್ಪತ್ತಾರು ಮಂದಿ ರಾಜರುಗಳು ಸಂತೋಷದಿಂದ ದೀಕ್ಷೆಯನ್ನು ತೆಗೆದುಕೊಂಡರು.

ದ್ವಿತೀಯದಿವಸೇವಿಕ್ಷನ್ಮಹಾನಗರಮಂಧಸೇ ।
ಸುಂದರಾಖ್ಯೋ ನೃಪಸ್ತಸ್ಮೈ ಸುವರ್ಣಾಭೋದಿತಾಶನಮ್ ॥ ೪೦ ॥

ಸ್ವಾಮಿಯು ಎರಡನೆಯ ದಿವಸ ಆಹಾರಕ್ಕೋಸ್ಕರ ಮಹಾನಗರವನ್ನು ಪ್ರವೇಶಿಸಿದರು. ಅವರಿಗೆ ಬಂಗಾರದಂತೆ ಕಾಂತಿಯುಳ್ಳ ಸುಂದರನೆಂಬ ರಾಜನು ಆಹಾರವನ್ನು ಕೊಟ್ಟನು.

ಆಶ್ಚರ್ಯಪಂಚಕಂ ಚಾಪಿ ತೇನ ಚ್ಛಾದ್ಮಸ್ಥ್ಯವತ್ಸರೇ ।
ಗತೇ ಶ್ರೀವಾಸುಪೂಜ್ಯೇಶಃ ಸ್ವದೀಕ್ಷಾವನಮಾಗತಃ ॥ ೪೧ ॥

ಕದಂಬವೃಕ್ಷಮೂಲಸ್ಥಃ ಸೋಪವಾಸೋಪರಾಹ್ಣಕೇ ।
ಮಾಘಜ್ಯೋತ್ಸ್ನಾದ್ವಿತೀಯಾಯಾಂ ವಿಶಾಖರ್ಕ್ಷೇಭವಜ್ಜಿನಃ ॥ ೪೨ ॥

ಅವನು ಪಂಚಾಶ್ಚರ್ಯವನ್ನೂ ಹೊಂದಿದನು. ಹೀಗೆ ಛದ್ಮಸ್ಥಾವಸ್ಥೆಯು ಕಳೆಯುವಾಗ ಶ್ರೀ ವಾಸುಪೂಜ್ಯಸ್ವಾಮಿಯು ತಮ್ಮ ದೀಕ್ಷಾವನಕ್ಕೆ ಬಂದು ಕದಂಬ ವೃಕ್ಷದ ಬುಡದಲ್ಲಿ ಉಪವಾಸವನ್ನು ಕೈಗೊಂಡು ಮಾಘಮಾಸದ ಶುಕ್ಲಪಕ್ಷದ ದ್ವಿತೀಯೆಯಲ್ಲಿ ಸಾಯಂಕಾಲ ವಿಶಾಖಾನಕ್ಷತ್ರದಲ್ಲಿ ಕೇವಲಜ್ಞಾನವನ್ನು ಪಡೆದು ಜಿನರಾದರು.

ಸೌಧರ್ಮಮುಖ್ಯದೇವೇಂದ್ರಾಸ್ತದೈನಮಪೂಜಯನ್ ।
ತತ್ಕಲ್ಯಾಣಂ ನ ವಿಸ್ತಾರ್ಯಂ ನಾಮ್ನೋಂತ್ಯಸ್ಯೋದಯೋ ಯತಃ ॥

ಆಗಲೇ ಸೌಧರ್ಮನೇ ಮೊದಲಾದ ಇಂದ್ರರು ಬಂದು ಈ ಸ್ವಾಮಿಯನ್ನು ಪೂಜಿಸಿದರು. ಕೊನೆಯದಾದ ತೀರ್ಥಕರನಾಮಕರ್ಮದ ಉದಯದಿಂದುಂಟಾದ ಆ ಕೇವಲಜ್ಞಾನಕಲ್ಯಾಣವನ್ನು ವಿಸ್ತರಿಸಬೇಕಾದುದಿಲ್ಲ.

ಷಟ್ಷಷ್ಟಿಮಿತಧರ್ಮಾದಿಗಣಭೃದ್ವೃಂದವಂದಿತಃ ।
ಖದ್ವಯದ್ವ್ಯೇಕವಿಜ್ಞಾತಪೂತಪೂರ್ವಧರಾವೃತಃ ॥ ೪೪ ॥

ಖದ್ವಯದ್ವಿನವಾಗ್ನ್ಯುಕ್ತಶಿಕ್ಷಕಾಭಿಷ್ಟುತಕ್ರಮಃ ।
ಶೂನ್ಯದ್ವಯಚತುಷ್ಪಂಚಪ್ರೋಕ್ತಾವಧಿಬುಧಶ್ರಿತಃ ॥ ೪೫ ॥

ಶೂನ್ಯತ್ರಿಕರ್ತುವಿಖ್ಯಾತಸ್ತುತಕೇವಲವೀಕ್ಷಣಃ ।
ಖಚತುಷ್ಕೈಕನಿರ್ಣೀತವಿಕ್ರಿಯರ್ದ್ಧಿವಿಭೂಷಿತಃ ॥ ೪೬ ॥

ಷಟ್ಸಹಸ್ರಚತುರ್ಜ್ಞಾನಮಾನಿತಕ್ರಮಪಂಕಜಃ ।
ಖದ್ವಯದ್ವಿಚತುಃಪ್ರೋಕ್ತವಾದಿಸಾಧಿತತಚ್ಛ್ರುತಿಃ ॥ ೪೭ ॥

ಶೂನ್ಯತ್ರಯದ್ವಿಸಪ್ತೋಕ್ತಪಿಂಡಿತಾಖಿಲಮಂಡಿತಃ ।
ಶೂನ್ಯತ್ರಯರ್ತುಶೂನ್ಯೈಕಧರಸೇನಾರ್ಯಿಕಾದಿಧೃತ್ ॥ ೪೮ ॥

ದ್ವಿಲಕ್ಷೋಪಾಸಕೋಪೇತಃ ಶ್ರಾವಿಕಾತುರ್ಯಲಕ್ಷಕಃ ।
ಪೂರ್ವೋಕ್ತದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸಂಸ್ತುತಃ ॥ ೪೯ ॥

ಸ ತೈಸ್ಸಹ ವಿಹೃತ್ಯಾಖಿಲಾರ್ಯಕ್ಷೇತ್ರಾಣಿ ತರ್ಪಯನ್ ।
ಧರ್ಮವೃಷ್ಟ್ಯಾ ಕ್ರಮಾತ್ಪ್ರಾಪ್ಯ ಚಂಪಾಮಬ್ದಸಹಸ್ರಕಮ್ ॥ ೫೦ ॥

ಸ್ಥಿತ್ವಾತ್ರ ನಿಷ್ಕ್ರಿಯೋ ಮಾಸಂ ನದ್ಯಾ ರಜತವಾಲುಕಾ- ।
ಸಂಜ್ಞಾಯಾಶ್ಚಿತ್ತಹಾರಿಣ್ಯಾಃ ಪರ್ಯಂತಾವನಿವರ್ತಿನಿ ॥ ೫೧ ॥

ಅಗ್ರಮಂದರಶೈಲಸ್ಯ ಸಾನುಸ್ಥಾನವಿಭೂಷಣೇ ।
ವನೇ ಮನೋಹರೋದ್ಯಾನೇ ಪಲ್ಯಂಕಾಸನಮಾಶ್ರಿತಃ ॥ ೫೨ ॥

ಮಾಸೇ ಭಾದ್ರಪದೇ ಜ್ಯೋತ್ಸ್ನಾ ಚತುರ್ದಶ್ಯಪರಾಹ್ಣಕೇ ।
ವಿಶಾಖಾಯಾಂ ಯಯೌ ಮುಕ್ತಿಂ ಚತುರ್ನವತಿಸಂಯತೈಃ ॥ ೫೩ ॥

ಧರ್ಮನೇ ಮೊದಲಾದ ಅರುವತ್ತಾರು ಮಂದಿ ಗಣಧರರ ಸಮೂಹದಿಂದ ವಂದಿತರೂ ಸಾವಿರದಿನ್ನೂರು ಮಂದಿ ಪವಿತ್ರರಾದ ಏಕಾದಶಾಂಗ ಚತುರ್ದಶ ಪೂರ್ವಶಾಸ್ತ್ರಧಾರಿಗಳಾದ ಮುನಿಗಳಿಂದ ಸುತ್ತಲ್ಪಟ್ಟವರೂ ಮೂವತ್ತೊಂಬತ್ತು ಸಾವಿರದಿನ್ನೂರು ಮಂದಿ ಶಿಕ್ಷಕಮುನಿಗಳಿಂದ ಸ್ತುತಿಸಲ್ಪಟ್ಟ ಚರಣವುಳ್ಳವರೂ ಐದು ಸಾವಿರದ ನಾಲ್ಕುನೂರು ಮಂದಿ ಅವಧಿಜ್ಞಾನಿಮುನಿಗಳಿಂದ ಆಶ್ರಯಿಸಲ್ಪಟ್ಟವರೂ ಆರುಸಾವಿರ ಮಂದಿ ಸ್ತುತ್ಯರಾದ ಕೇವಲಜ್ಞಾನಿಗಳುಳ್ಳವರೂ ಹತ್ತುಸಾವಿರ ಮಂದಿ ವಿಕ್ರಿಯರ್ದ್ಧಿಯುಳ್ಳ ಮುನಿಗಳಿಂದ ವಿಭೂಷಿತರೂ ಆರುಸಾವಿರ ಮಂದಿ ಮನಃಪರ್ಯಯಜ್ಞಾನಿಗಳಿಂದ ಪೂಜಿತವಾದ ಚರಣಕಮಲವುಳ್ಳವರೂ ನಾಲ್ಕುಸಾವಿರದ ನಾಲ್ಕುನೂರು ಮಂದಿ ವಾದಿಮುನಿಗಳಿಂದ ಸಾಧಿತವಾದ ಪ್ರಸಿದ್ಧಿಯುಳ್ಳವರೂ ಒಟ್ಟು ಎಪ್ಪತ್ತೆರಡುಸಾವಿರ ಮಂದಿ ಮುನಿಪುಂಗವರಿಂದ ಭೂಷಿತರೂ ಒಂದು ಲಕ್ಷವೂಆರುಸಾವಿರ ಮಂದಿ ಸೇನಾ ಮೊದಲಾದ ಆರ್ಯಿಕೆಯರುಳ್ಳವರೂ ಎರಡು ಲಕ್ಷ ಶ್ರಾವಕರುಳ್ಳವರೂ ನಾಲ್ಕುಲಕ್ಷ ಶ್ರಾವಿಕೆಯುರುಳ್ಳವರೂ ಅಸಂಖ್ಯಾತ ದೇವ ದೇವಿಯರಿಂದ ಸ್ತುತ್ಯರೂ ಸಂಖ್ಯಾತತಿರ್ಯಕ್ಪ್ರಾಣಿಗಳಿಂದ ಸ್ತುತಿಸಲ್ಪಟ್ಟವರೂ ಆದ ಆ ವಾಸುಪೂಜ್ಯಜಿನರು ಮೇಲೆ ಹೇಳಲ್ಪಟ್ಟ ಗಣಧರಾದಿಗಳೊಡನೆ ವಿಹರಿಸಿ ಧರ್ಮವರ್ಷಣದಿಂದ ಸಮಸ್ತ ಆರ್ಯಕ್ಷೇತ್ರಗಳನ್ನು ತೃಪ್ತಿಗೊಳಿಸಿ ಕ್ರಮದಿಂದ ಚಂಪಾಪುರವನ್ನು ಹೊಂದಿ ಒಂದು ಸಾವಿರ ವರ್ಷಗಳವರೆಗೆ ಅಲ್ಲಿದ್ದು ಕೊನೆಯಲ್ಲಿ ಒಂದು ತಿಂಗಳವರೆಗೆ ಯೋಗನಿರೋಧವನ್ನು ಮಾಡಿ ಮನೋಹರವಾದ ರಜತ ವಾಲುಕಾವೆಂಬ ನದಿಯ ದಡದಲ್ಲಿರುವ ಮಂದಾರಪರ್ವತದ ತುದಿಯ ತಪ್ಪಲಿಗೆ

ಭೂಷಣವಾದ ಮನೋಹರೋದ್ಯಾನದಲ್ಲಿ ಪಲ್ಯಂಕಾಸನವನ್ನು ಹೊಂದಿ ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ದಶೀತಿಥಿಯಲ್ಲಿ ಸಾಯಂಕಾಲ ವಿಶಾಖಾ ನಕ್ಷತ್ರದಲ್ಲಿ ತೊಂಬತ್ತುನಾಲ್ಕು ಮಂದಿ ಮುನಿಶ್ರೇಷ್ಠರೊಡನೆ ಮುಕ್ತಿಯನ್ನು ಪಡೆದರು.

**ಪರಿನಿರ್ವಾಣಕಲ್ಯಾಣಪೂಜಾಪ್ರಾಂತೇ ಮಹಾಸ್ತವೈಃ ।**
**ಅವಂದಿಷತ ತಂ ದೇವಂ ದೇವಾಸ್ಸೇವಾವಿಚಕ್ಷಣಾಃ ॥ ೫೪ ॥**

ಸೇವೆಯಲ್ಲಿ ನಿಪುಣರಾದ ದೇವರ್ಕಳು ಬಂದು ಪರಿನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಕೊನೆಯಲ್ಲಿ ಮಹಾಸ್ತೋತ್ರಗಳೊಡನೆ ಆ ವಾಸುಪೂಜ್ಯಸ್ವಾಮಿಯನ್ನು ವಂದಿಸಿದರು.

**ವಿಜಿಗೀಷೋರ್ಗುಣೈಃ ಷಡ್ಭಿಸ್ಸಿದ್ಧಿಶ್ಚೇತ್ಸುಪ್ರಯೋಜಿತೈಃ ।**
**ಮುಮುಕ್ಷೋಃ ಕಿಂ ನ ಸಾಮೀಭಿರ್ಲಕ್ಷಾಚತುರಶೀತಿಗೈಃ ॥ ೫೫ ॥**

ಶತ್ರುವನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಿಗೆ ಚೆನ್ನಾಗಿ ಪ್ರಯೋಗಿಸಲ್ಪಟ್ಟ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯಗಳೆಂಬ ಆರು ಗುಣಗಳಿಂದ ಸಿದ್ಧಿಯುಂಟಾಗುವುದೆಂದ ಮೇಲೆ ಕರ್ಮಶತ್ರುವನ್ನು ಜಯಿಸಿ ಮುಕ್ತನಾಗಬೇಕೆಂಬ ಇಚ್ಛೆಯುಳ್ಳವನಿಗೆ ಈ ಎಂಬತ್ತುನಾಲ್ಕುಲಕ್ಷ ಗುಣಗಳಿಂದ ಆ ಸಿದ್ಧಿ–ಮೋಕ್ಷ ವುಂಟಾಗುವುದಿಲ್ಲವೇ ?

**ಸದಸದುಭಯಮೇತನ್ನೈಕಶಬ್ದೇನ ವಾಚ್ಯಮ್ ।**
**ತ್ರಿತಯಮಪಿ ಪೃಥಕ್ತ್ವತ್ತುರ್ಯಭಂಗೇನ ಯುಂಜ್ಯಾತ್ ।**
**ಇತಿ ಸಕಲಪದಾರ್ಥಾ ಸಪ್ತಭಂಗೀ ತ್ವಯೋಕ್ತಾ ।**
**ಕಥಮವಿತಥವಾಕ್ತ್ವಂ ವಾಸುಪೂಜ್ಯೋ ನ ಪೂಜ್ಯಃ ॥ ೫೬ ॥**

ಸತ್, ಅಸತ್, ಸದಸತ್–(ಅಸ್ತಿ,ನಾಸ್ತಿ,ಅಸ್ತಿನಾಸ್ತಿ) ಇವುಗಳನ್ನು ಒಂದು ಶಬ್ದದಿಂದ ಹೇಳಲಾಗುವುದಿಲ್ಲ. ಈ ಮೂರನ್ನು ಬೇರೆಬೇರೆಯಾಗಿ ನಾಲ್ಕನೆಯದಾದ ಅವಕ್ತವ್ಯಭಂಗದೊಡನೆ ಸೇರಿಸಬೇಕು. ಸ್ಯಾದಸ್ತಿ,ಸ್ಯಾನ್ನಾಸ್ತಿ, ಸ್ಯಾದಸ್ತಿನಾಸ್ತಿ, ಸ್ಯಾದವಕ್ತವ್ಯ, ಸ್ಯಾದಸ್ತ್ಯವಕ್ತವ್ಯ, ಸ್ಯಾನ್ನಾಸ್ತ್ಯವಕ್ತವ್ಯ, ಸ್ಯಾದಸ್ತಿನಾಸ್ತ್ಯವಕ್ತವ್ಯ. ಎಲೈ ದೇವನೆ ! ನಿನ್ನಿಂದ ಈ ರೀತಿಯಾಗಿ ಹೇಳಲ್ಪಟ್ಟ ಸಕಲಪದಾರ್ಥಗಳನ್ನೊಳಗೊಂಡ ಸಪ್ತಭಂಗಿಯು ಸತ್ಯವಾದ ವಚನವಾಗಿದೆ. ಇಂತಹ ವಾಸುಪೂಜ್ಯನಾದ ನೀನು ಹೇಗೆ ಪೂಜ್ಯನಲ್ಲ ?

**ಧರ್ಮೋ ದಯಾ ಕಥಮಸೌ ಸಪರಿಗ್ರಹಸ್ಯ ।**
**ವೃಷ್ಟಿರ್ಧರಾತಲಹಿತಾ ಕಿಮವಗ್ರಹೇಸ್ತಿ ।**
**ತಸ್ಮಾತ್ತ್ವಯಾ ದ್ವಯಪರಿಗ್ರಹಮುಕ್ತಿರುಕ್ತಾ ।**
**ತದ್ವಾಸುನಾ ಸುಮಹಿತೋ ಜಿನ ವಾಸುಪೂಜ್ಯಃ ॥ ೫೭ ॥**

ದಯೆಯು ಧರ್ಮವಾಗಿದೆ. ಪರಿಗ್ರಹವುಳ್ಳವನಿಗೆ ಈ ದಯೆಯು ಹೇಗುಂಟಾಗುವುದು ? ಭೂತಲಕ್ಕೆ ಹಿತವಾದ ಮಳೆಯು ಅನಾವೃಷ್ಟಿಯ ಕಾಲದಲ್ಲಿರುತ್ತದೋ ? ಆದುದರಿಂದ ಎಲೈ ಜಿನನೆ ! ನೀನು ಬಾಹ್ಯಾಭ್ಯಂತರಪರಿಗ್ರಹಗಳ ತ್ಯಾಗವನ್ನು ಉಪದೇಶಮಾಡಿದೆ. ಆದುದರಿಂದ ನೀನು ದೇವೇಂದ್ರನಿಂದ ಚೆನ್ನಾಗಿ ಪೂಜಿತನಾದ ವಾಸುಪೂಜ್ಯನಾದೆ.

**ಪದ್ಮೋತ್ತರಃ ಪ್ರಥಮಜನ್ಮನಿ ಪಾರ್ಥಿವೇಶಃ ।**
**ಶುಕ್ರೇ ಮಹತ್ಯಮರಷಟ್ಪದಪದ್ಮಪಾದಃ ।**
**ಯೋ ವಾಸುಪೂಜ್ಯಯುವರಾಟ್ತ್ರಿಜಗತ್ಪೂಜ್ಯೋ ।**
**ರಾಜ್ಯೇ ಜಿನಸ್ಸ ದಿಶತಾದತುಲಂ ಸುಖಂ ವಃ ॥ ೫೮ ॥**

ಯಾವನು ಪ್ರಥಮ ಜನ್ಮದಲ್ಲಿ ಪದ್ಮೋತ್ತರನೆಂಬ ರಾಜನೂ ಬಳಿಕ ಮಹಾಶುಕ್ರ–ಸ್ವರ್ಗದಲ್ಲಿ ದೇವರ್ಕಳೆಂಬ ಭ್ರಮರಗಳಿಗೆ ಕಮಲವಾದ ಚರಣವುಳ್ಳ ಮಹಾಶುಕ್ರೇಂದ್ರನೂ ತರುವಾಯ ರಾಜ್ಯದಲ್ಲಿ ತ್ರಿಜಗತ್ಪೂಜ್ಯನಾದ ವಾಸುಪೂಜ್ಯಯುವರಾಜನೂ ಆದನೋ ಅಂತಹ ವಾಸುಪೂಜ್ಯಜಿನನು ನಿಮ್ಮಗಳಿಗೆ ಅನುಪಮವಾದ ಸುಖವನ್ನುಂಟುಮಾಡಲಿ.

**ತೀರ್ಥೇ ಶ್ರೀವಾಸುಪೂಜ್ಯಸ್ಯ ದ್ವಿಪೃಷ್ಠೋ ನಾಮ ಭೂಪತಿಃ ।**
**ತ್ರಿಖಂಡಾಧಿಪತಿರ್ಜಾತೋ ದ್ವಿತೀಯಃ ಸೋರ್ಧಚಕ್ರಿಣಾಮ್ ॥ ೫೯ ॥**

ಶ್ರೀ ವಾಸುಪೂಜ್ಯತೀರ್ಥಂಕರರ ತೀರ್ಥಕಾಲದಲ್ಲಿ ದ್ವಿಪೃಷ್ಠನೆಂಬ ತ್ರಿಖಂಡಾಧಿಪತಿಯಾದ ರಾಜನು ಪ್ರಾದುರ್ಭವಿಸಿದನು. ಅವನು ಅರ್ಧಚಕ್ರಗಳಲ್ಲಿ ಎರಡನೆಯವನಾಗಿದ್ದನು.

**ವೃತ್ತಕಂ ತಸ್ಯ ವಕ್ಷ್ಯಾಮೋ ಜನ್ಮತ್ರಯಸಮಾಶ್ರಿತಮ್ ।**
**ಶ್ರುತೇನ ಯೇನ ಭವ್ಯಾನಾಂ ಭವೇದ್ಭೂಯೋ ಭವಾದ್ಭಯಮ್॥ ೬೦ ॥**

ಅವನ ಮೂರು ಜನ್ಮಗಳಿಗೆ ಸಂಬಂಧಪಟ್ಟ ಚರಿತವನ್ನು ಹೇಳುವೆವು. ಅದನ್ನು ಕೇಳುವುದರಿಂದ ಭವ್ಯರಿಗೆ ಪುನಃಪುನಃ ಭವಭೀತಿಯುಂಟಾದೀತು.

**ದ್ವೀಪೇಸ್ಮಿನ್ಭಾರತೇ ವರ್ಷೇ ಕನಕಾದಿಪುರಾಧಿಪಃ ।**
**ಸುಷೇಣೋ ನಾಮ ಚಾಸ್ಯಾಸೀನ್ನರ್ತಕೀ ಗುಣಮಂಜರೀ ॥ ೬೧ ॥**

ಈ ಜಂಬೂದ್ವೀಪದ ಭಾರತವರ್ಷದಲ್ಲಿ ಸುಷೇಣನೆಂಬವನು ಕನಕಪುರಾಧಿಪತಿಯಾಗಿದ್ದನು. ಇವನಿಗೆ ಗುಣಮಂಜರಿಯೆಂಬ ನರ್ತಕಿಯಿದ್ದಳು.

**ರೂಪಿಣೀ ಸುಭಗಾ ನೃತ್ಯಗೀತವಾದ್ಯಾದಿವಿಶ್ರುತಾ ।**
**ಸರಸ್ವತೀ ದ್ವಿತೀಯೇವ ಸರ್ವಭೂಪಾಭಿವಾಂಛಿತಾ ॥ ೬೨ ॥**

ಆಕೆಯು ಎರಡನೆಯ ಸರಸ್ವತಿಯೋ ಎಂಬಂತೆ ರೂಪವತಿಯೂ ಸುಂದರಳೂ ನರ್ತನ ಗೀತ ವಾದ್ಯ ಮೊದಲಾದುವುಗಳಲ್ಲಿ ಪ್ರಸಿದ್ಧಳೂ ಸಕಲರಾಜರುಗಳಿಂದ ಅಪೇಕ್ಷಿಸಲ್ಪಡತಕ್ಕವಳೂ ಆಗಿದ್ದಳು.

**ಅಸ್ತಿ ತತ್ರೈವ ದೇಶೋನ್ಯೋ ಮಲಯಾಖ್ಯೋ ಮನೋಹರಃ ।**
**ವಿಂಧ್ಯಶಕ್ತಿಃ ಪತಿಸ್ತಸ್ಯ ನೃಪೋ ವಿಂಧ್ಯಪುರೇ ವಸನ್ ॥ ೬೩ ॥**

ಅಲ್ಲೇ ಮನೋಹರವಾದ ಮಲಯವೆಂಬ ಬೇರೊಂದು ದೇಶವಿದೆ. ಆ ದೇಶಕ್ಕೆ ವಿಂಧ್ಯಪುರದಲ್ಲಿ ವಾಸಮಾಡುವ ವಿಂಧ್ಯಶಕ್ತಿಯೆಂಬ ರಾಜನು ದೊರೆಯಾಗಿದ್ದನು.

**ಸ ರಕ್ತೋ ಗುಣಮಂಜರ್ಯಾಂ ಪ್ರೇಕ್ಷ್ಯಾಯಾಮಿವ ಷಟ್ಪದಃ ।**
**ಚೂತಪ್ರಸವಮಂಜರ್ಯಾಂ ಮಾಧುರ್ಯರಸರಂಜಿತಃ ॥ ೬೪ ॥**

ಮಾಧುರ್ಯರಸದಲ್ಲಿ ಪ್ರೀತಿಯುಳ್ಳ ಭ್ರಮರವು ಮಾವಿನ ಹೂವಿನ ಗೊಂಚಲಿನಲ್ಲಿ ಆಸಕ್ತವಾಗುವಂತೆ ಆ ವಿಂಧ್ಯಶಕ್ತಿಯು ನೋಡುವುದಕ್ಕೆ ಯೋಗ್ಯಳಾದ ಆ ಗುಣಮಂಜರಿಯಲ್ಲಿ ಆಸಕ್ತನಾದನು.

**ರತ್ನಾದ್ಯುಪಾಯನೋಪೇತಂ ಮಿತಾರ್ಥಂ ಚಿತ್ತಹಾರಿಣಮ್ ।**
**ಸುಷೇಣಂ ಪ್ರತಿಸನ್ಮಾನ್ಯ ಪ್ರಾಹಿಣೋನ್ನರ್ತಕೀಪ್ಸಯಾ ॥ ೬೫ ॥**

ಆ ನರ್ತಕಿಯನ್ನು ಪಡೆಯಬೇಕೆಂಬ ಇಚ್ಛೆಯಿಂದ ಅವನು ಸುಷೇಣನನ್ನು ಸನ್ಮಾನಿಸಿ ರತ್ನಗಳೇ ಮೊದಲಾದ ಕೈಗಾಣಿಕೆಯುಳ್ಳವನೂ ಮಿತವಾದ ಪದಾರ್ಥಗಳುಳ್ಳವನೂ ಮನೋಹರನೂ ಆದ ದೂತನನ್ನು ಅವನಲ್ಲಿಗೆ ಕಳುಹಿದನು.

**ದೂತೋಪಿ ಸತ್ವರಂ ಗತ್ವಾ ಸ ಸುಷೇಣಮಹೀಪತಿಮ್ ।**
**ದೃಷ್ಟ್ವಾ ಯಥೋಚಿತಂ ತಸ್ಮೈ ದತ್ತೋಪಾಯನಮಬ್ರವೀತ್ ॥ ೬೬ ॥**

**ಯುಷ್ಮದ್ಗೃಹೇ ಮಹಾರತ್ನಂ ನರ್ತಕೀ ಕಿಲ ವಿಶ್ರುತಾ ।**
**ವಿಂಧ್ಯಶಕ್ತಿರ್ಭವದ್ಬಂಧುಸ್ತಾಂ ದ್ರಷ್ಟುಮಭಿಲಾಷುಕಃ ॥ ೬೭ ॥**

**ತತ್ಪ್ರಯೋಜನಮುದ್ದಿಶ್ಯ ಪ್ರಹಿತೋಹಂ ಮಹೀಪತೇ ।**
**ತ್ವಯಾಪಿ ಸಾ ಪ್ರಹೇತವ್ಯಾ ಪ್ರೀತ್ಯಾನೀಯ ಸಮರ್ಪಯೇ ॥ ೬೮ ॥**

ಆ ದೂತನೂ ಶೀಘ್ರವಾಗಿ ಹೋಗಿ ಸುಷೇಣಮಹಾರಾಜನನ್ನು ಕಂಡು ಅವನಿಗೆ ಯಥೋಚಿತವಾದ ಕೈಗಾಣಿಕೆಯನ್ನು ಕೊಟ್ಟು ''ಸ್ವಾಮಿಯೆ ! ನಿಮ್ಮ ಮನೆಯಲ್ಲಿ

ಪ್ರಖ್ಯಾತಳಾದ ನರ್ತಕಿಯೆಂಬ ಮಹಾರತ್ನವಿದೆಯಂತೆ. ನಿಮ್ಮ ಬಂಧುವಾದ ವಿಂಧ್ಯ ಶಕ್ತಿಯು ಆಕೆಯನ್ನು ನೋಡಲಿಚ್ಛೆಯುಳ್ಳವನಾಗಿದ್ದಾನೆ. ಆ ಪ್ರಯೋಜನವನ್ನು ಉದ್ದೇಶಿಸಿ ನನ್ನನ್ನು ಕಳುಹಿಸಿದ್ದಾನೆ. ನೀನೂ ಪ್ರೀತಿಯಿಂದ ಆಕೆಯನ್ನು ಕಳುಹಿಸ ಬೇಕು. ನಾನು ಆಕೆಯನ್ನು ಹಿಂದಿರುಗಿ ಕರೆದುಕೊಂಡು ಬಂದು ಸಮರ್ಪಿಸುವೆನು" ಎಂದನು.

**ಇತ್ಯತಸ್ತದ್ವಚಃ ಶ್ರುತ್ವಾ ಸುತರಾಂ ಕೋಪವೇಪಿನಾ ।**
**ಯಾಹಿ ಯಾಹಿ ಕಿಮಶ್ರಾವ್ಯೈರ್ವಚೋಭಿರ್ದರ್ಪಶಾಲಿಭಿಃ ॥ ೬೯ ॥**

**ಇತಿ ನಿರ್ಭರ್ತ್ಸಿತೋ ಭೂಯಃ ಸುಷೇಣೇನ ದುರುಕ್ತಿಭಿಃ ।**
**ದೂತಃ ಪ್ರತ್ಯೇತ್ಯ ತತ್ಸರ್ವಂ ವಿಂಧ್ಯಶಕ್ತಿಂ ವ್ಯಜಿಜ್ಞಪತ್ ॥ ೭೦ ॥**

ಈ ಮಾತನ್ನು ಕೇಳಿ ಬಹಳವಾಗಿ ಕೋಪದಿಂದ ನಡುಗಿದ ಆ ಸುಷೇಣರಾಜನಿಂದ "ಹೋಗು ಹೋಗು. ಅಹಂಕಾರಯುಕ್ತವಾದ ಮತ್ತು ಕೇಳತಕ್ಕುದಲ್ಲದ ಈ ಮಾತು ಗಳಿಂದೇನು ?" ಎಂದು ಕೆಟ್ಟನುಡಿಗಳಿಂದ ತಿರಸ್ಕರಿಸಲ್ಪಟ್ಟ ಆ ದೂತನು ಹಿಂದಿರುಗಿ ಹೋಗಿ ಅದೆಲ್ಲವನ್ನೂ ವಿಂಧ್ಯಶಕ್ತಿಗೆ ತಿಳಿಸಿದನು.

**ಸೋಪಿ ಕೋಪಗ್ರಹಾವಿಷ್ಟಸ್ತದ್ವಚಃಶ್ರವಣಾದ್ಭೃಶಮ್ ।**
**ಅಸ್ತು ಕೋ ದೋಷ ಇತ್ಯಾತ್ಮಗತಮಾಲೋಚ್ಯ ಮಂತ್ರಿಭಿಃ ॥ ೭೧ ॥**

**ಶೂರೋ ಲಘುಸಮುತ್ಥಾನಃ ಕೂಟಯುದ್ಧವಿಶಾರದಃ ।**
**ಅವಸ್ಕಂದೇನ ಸಂಪ್ರಾಪ್ಯ ಸಾರಸಂಗ್ರಾಮಿಕಾಗ್ರಣೀಃ ॥ ೭೨ ॥**

**ವಿಧಾಯ ಸಂಗರೇ ಭಂಗಂ ತತ್ಕೀರ್ತಿಮಿವ ನರ್ತಕೀಮ್ ।**
**ತಾಮಾಹರದ್ಗತೇ ಪುಣ್ಯೇ ಕಸ್ಯ ಕಿಂ ಕೋತ್ರ ನಾಹರೇತ್ ॥ ೭೩ ॥**

ಆ ಮಾತನ್ನು ಕೇಳಿದುದರಿಂದ ಬಹಳವಾಗಿ ಕೋಪವೆಂಬ ಗ್ರಹದಿಂದ ಆಕ್ರಾಂತನೂ ಶೂರನೂ ಶೀಘ್ರವಾಗಿ ಯುದ್ಧಕ್ಕೇಳುವ-ಉತ್ಸಾಹಿಯೂ ಕಪಟ ಯುದ್ಧದಲ್ಲಿ ಚತುರನೂ ಸಾರವಾದ ಯುದ್ಧದಲ್ಲಿ ಶ್ರೇಷ್ಠನೂ ಆದ ಆ ವಿಂಧ್ಯ ಶಕ್ತಿಯು "ಇರಲಿ – ತಪ್ಪೇನು ?" ಎಂದು ಹೇಳಿ ತನ್ನ ಮನೋಗತವನ್ನು ಮಂತ್ರಿ ಗಳೊಡನೆ ಆಲೋಚಿಸಿ ಶೀಘ್ರವಾಗಿ ಸುಷೇಣನನ್ನು ಹೊಂದಿ ಯುದ್ಧದಲ್ಲಿ ಸೋಲಿಸಿ, ಅವನ ಕೀರ್ತಿಯನ್ನು ಅಪಹರಿಸುವಂತೆ, ಆ ನರ್ತಕಿಯನ್ನು ಅಪಹರಿಸಿ ದನು. ಪುಣ್ಯವು ಕಳೆದುಹೋದರೆ ಈ ಲೋಕದಲ್ಲಿ ಯಾವನು ಯಾವನ ಯಾವ ವಸ್ತುವನ್ನು ತಾನೆ ಅಪಹರಿಸುವುದಿಲ್ಲ ?

**ದಂತಭಂಗೋ ಗಜೇಂದ್ರಸ್ಯ ದಂಷ್ಟ್ರಾಭಂಗೋ ಗಜದ್ವಿಷಃ ।**
**ಮಾನಭಂಗೋ ಮಹೀಭರ್ತುರ್ಮಹಿಮಾನಮಪಹ್ನುತೇ ॥ ೭೪ ॥**

ದೊಡ್ಡ ಆನೆಯ ದಂತಭಂಗವು ಅದರ ಮಹಿಮೆಯನ್ನೂ ಸಿಂಹದ ಕೋರೆಹಲ್ಲಿನ ಭಂಗವು ಅದರ ಮಹಿಮೆಯನ್ನೂ ರಾಜನ ಮಾನಭಂಗವು ಅವನ ಮಹಿಮೆಯನ್ನೂ ನಾಶಮಾಡುತ್ತವೆ.

**ಸ ತೇನ ಮಾನಭಂಗೇನ ಸ್ವಗೃಹಾದ್ಭಗ್ನಮಾನಸಃ ।**
**ಪೃಷ್ಠಭಂಗೇನ ನಾಗೋ ವಾ ನ ಪ್ರತಸ್ಥೇ ಪದಾತ್ಪದಮ್ ॥ ೭೫ ॥**

ಆನೆಯು ತನ್ನ ಹಿಂಗಡೆಯ ಭಂಗದಿಂದ ಹೇಗೆ ನಡೆಯುವುದಿಲ್ಲವೋ ಹಾಗೆ ಸುಷೇಣನು ಆ ಮಾನಭಂಗದಿಂದ ಭಗ್ನವಾದ ಮನಸ್ಸುಳ್ಳವನಾಗಿ ತನ್ನ ಮನೆಯಿಂದ ಒಂದು ಹೆಜ್ಜೆಯೂ ಹೊರಕ್ಕೆ ಹೊರಡಲಿಲ್ಲ.

**ಸ ಕದಾಚಿತ್ಸನಿರ್ವೇದಃ ಸುವ್ರತಾಖ್ಯಜಿನಾಧಿಪಾತ್ ।**
**ಅನಗಾರಾತ್ಪರಿಜ್ಞಾತಧರ್ಮೋ ನಿರ್ಮಲಚೇತಸಾ ॥ ೭೬ ॥**

**ಸ ಕೋಪಿ ಪಾಪಪಾಕೋ ಮೇ ಯೇನ ತೇನಾಪ್ಯಹಂ ಜಿತಃ ।**
**ಇತಿ ಸಂಚಿಂತ್ಯ ಪಾಪಾರಿಂ ನಿಹಂತುಂ ಮತಿಮಾತನೋತ್ ॥ ೭೭ ॥**

ಅವನು ಒಂದಾನೊಂದು ದಿವಸ ಗೃಹತ್ಯಾಗಿಗಳಾದ ಸುವ್ರತರೆಂಬ ಯೋಗಿ ವರ್ಯರಿಂದ ಧರ್ಮಸ್ವರೂಪವನ್ನು ತಿಳಿದು ನಿರ್ಮಲವಾದ ಮನಸ್ಸಿನಿಂದ ಸಂಸಾರ ದಲ್ಲಿ ವಿರಕ್ತಿಯುಳ್ಳವನಾಗಿ "ಯಾವುದೋ ನನ್ನ ಪಾಪದ ಉದಯದಿಂದ ನಾನು ಆ ವಿಂಧ್ಯಶಕ್ತಿಯಿಂದಲೂ ಪರಾಜಿತನಾದೆನು" ಈ ರೀತಿಯಾಗಿ ವಿಚಾರಮಾಡಿ ಪಾಪ ವೆಂಬ ಶತ್ರುವನ್ನು ನಾಶಮಾಡುವುದಕ್ಕೆ ಮನಸ್ಸುಮಾಡಿದನು.

**ತಪಸ್ತನೂನಪಾತ್ತಾಪತನೂಕೃತತನುಶ್ಚಿರಮ್ ।**
**ಸಾರಿಕೋಪಃ ಸ ಸನ್ನ್ಯಸ್ಯ ಸನಿದಾನಃ ಸುರೋಭವತ್ ॥ ೭೮ ॥**

**ವಿಮಾನೇನುಪಮೇ ನಾಮ್ನಾ ಕಲ್ಪೇ ಪ್ರಾಣತನಾಮನಿ ।**
**ವಿಂಶತ್ಯಬ್ಧ್ಯುಪಮಾಯುಸ್ಸನ್ ಸ್ವಪ್ರವೃದ್ಧಿಕೃತಸಮ್ಮದಃ ॥ ೭೯ ॥**

ಬಹುಕಾಲದವರೆಗೆ ತಪಸ್ಸೆಂಬ ಬೆಂಕಿಯ ತಾಪದಿಂದ ಶರೀರವನ್ನು ಕೃಶಮಾಡಿದ ವನೂ ಶತ್ರುವಿನಲ್ಲಿ ಕೋಪವನ್ನಿಟ್ಟಿರುವವನೂ ಆದ ಆ ಸುಷೇಣನೂ ನಿದಾನ ಶಲ್ಯವುಳ್ಳವನಾಗಿ ಸತ್ತು ಪ್ರಾಣತವೆಂಬ ಹದಿನಾಲ್ಕನೆಯ ಸ್ವರ್ಗದಲ್ಲಿ ಅನುಪಮ ವೆಂಬ ವಿಮಾನದಲ್ಲಿ ಇಪ್ಪತ್ತುಸಾಗರಕಾಲ ಪರಮಾಯುಷ್ಯವುಳ್ಳವನೂ ಋದ್ಧಿ ಪ್ರಾಪ್ತಿಯಿಂದುಂಟಾದ ಸಂತೋಷವುಳ್ಳವನೂ ಆದ ದೇವನಾದನು.

**ಅತ್ರೈವ ಭರತೇ ಶ್ರೀಮಾನ್ ಮಹಾಪುರಮಧಿಷ್ಠಿತಃ ।**
**ನೃಪೋ ವಾಯುರಥೋ ನಾಮ ಭುಕ್ತ್ವಾ ರಾಜ್ಯಶ್ರಿಯಂ ಚಿರಮ್ ॥**

**ಶ್ರುತ್ವಾ ಸುವ್ರತನಾಮಾರ್ಹತ್ಪಾರ್ಶ್ವೇ ಧರ್ಮಂ ಸ ತತ್ತ್ವವಿತ್ ।**
**ಸುತಂ ಘನರಥಂ ರಾಜ್ಯೇ ಸ್ಥಾಪಯಿತ್ವಾಗಮತ್ತಪಃ ॥ ೮೧ ॥**

ಇತ್ತ ಇದೇ ಭರತಕ್ಷೇತ್ರದಲ್ಲಿ ಶ್ರೀಮಂತನೂ ಮಹಾಪುರವೆಂಬ ನಗರದ ದೊರೆಯೂ ಆದ ವಾಯುರಥನೆಂಬ ರಾಜನು ಬಹುಕಾಲದವರೆಗೆ ರಾಜ್ಯಸಂಪತ್ತಿ ಯನ್ನು ಅನುಭವಿಸಿ ಸುವ್ರತರೆಂಬ ಅರ್ಹತ್ಪರಮೇಶ್ವರರ ಬಳಿಯಲ್ಲಿ ಧರ್ಮಶ್ರವಣ ವನ್ನು ಮಾಡಿ ತತ್ತ್ವಜ್ಞಾನಿಯಾದ ಅವನು ಘನರಥನೆಂಬ ಪುತ್ರನನ್ನು ರಾಜ್ಯದಲ್ಲಿರಿಸಿ ತಪಸ್ಸನ್ನು ಹೊಂದಿದನು.

**ಅಧೀತ್ಯ ಸರ್ವಶಾಸ್ತ್ರಾಣಿ ವಿಧಾಯ ಪರಮಂ ತಪಃ ।**
**ತತ್ರೈವೇಂದ್ರೋಭವತ್ಕಲ್ಪೇ ವಿಮಾನೇನುತ್ತರಾಹ್ವಯೇ ॥ ೮೨ ॥**

ಅವನು ಸಕಲಶಾಸ್ತ್ರಗಳನ್ನು ಅಧ್ಯಯನಮಾಡಿ ಪರಮತಪಸ್ಸನ್ನು ಮಾಡಿ ಅದೇ- ಪ್ರಾಣತಕಲ್ಪದಲ್ಲಿ ಅನುತ್ತರವಿಮಾನದಲ್ಲಿ ಇಂದ್ರನಾದನು.

**ತತೋವತೀರ್ಯ ವಂಶೇಸ್ಮಿನ್ಪುರೋರ್ದ್ವಾರಾವತೀಪತೇಃ ।**
**ಬ್ರಹ್ಮಾಖ್ಯಸ್ಯಾಚಲಸ್ತೋಕಃ ಸುಭದ್ರಾಯಾಮಭೂದ್ವಿಭುಃ ॥ ೮೩ ॥**

ಬಳಿಕ ಅಲ್ಲಿಂದ ಇಳಿದು ಈ ಪುರುವಂಶದಲ್ಲಿ ದ್ವಾರಾವತಿಯ ದೊರೆಯಾದ ಬ್ರಹ್ಮನಿಗೆ ಸುಭದ್ರೆಯಲ್ಲಿ ಅಚಲನೆಂಬ ಪುತ್ರನಾಗಿ ಜನಿಸಿದನು.

**ತತ್ರೈವಾಸೌ ಸುಷೇಣಾಖ್ಯೋಪ್ಯುಮಾಯಾಮಾತ್ಮಜೋಜನಿ ।**
**ದ್ವಿಪೃಷ್ಠಾಖ್ಯಸ್ತನುಸ್ತಸ್ಯ ಚಾಪಸಪ್ತತಿಸಮ್ಮಿತಾ ॥ ೮೪ ॥**

ಈ ಸುಷೇಣನೂ ಅಲ್ಲಿಯೇ ಬ್ರಹ್ಮರಾಜನ ಎರಡನೆಯ ಪತ್ನಿಯಾದ ಉಮಾ ದೇವಿಯಲ್ಲಿ ದ್ವಿಪೃಷ್ಠನೆಂಬ ಪುತ್ರನಾಗಿ ಜನಿಸಿದನು. ಅವನ ಶರೀರವು ಎಪ್ಪತ್ತು ಧನುಸ್ಸುಗಳಷ್ಟು ಉನ್ನತವಾಗಿತ್ತು.

**ದ್ವಾಸಪ್ತತಿಸಮಾಲಕ್ಷಪರಮಾಯುರ್ನಿರಂತರಮ್ ।**
**ರಾಜ್ಯಭೋಗಾನಭುಂಕ್ತೋಚ್ಚೈರಿಕ್ಷ್ವಾಕೂಣಾಂ ಕುಲಾಗ್ರಣೀಃ ॥ ೮೫ ॥**

ಇಕ್ಷ್ವಾಕುವಂಶದಲ್ಲಿ ಪ್ರಮುಖನಾದ ಆ ದ್ವಿಪೃಷ್ಠನು ಎಪ್ಪತ್ತೆರಡು ಲಕ್ಷ ವರ್ಷ ಪರಮಾಯುಷ್ಯವುಳ್ಳವನಾಗಿ ಯಾವಾಗಲೂ ಅಧಿಕವಾದ ರಾಜ್ಯಭೋಗಗಳನ್ನ ನುಭವಿಸಿದನು.

**ಕುಂದೇಂದ್ರನೀಲಸಂಕಾಶಾವಭೂತಾಂ ಬಲಕೇಶವೌ ।**
**ಸಂಗಮೇನ ಪ್ರವಾಹೌ ವಾ ಗಂಗಾಯಮುನಯೋರಮೂ ॥ ೮೬ ॥**

ಮಲ್ಲೆಯ ಹೂವಿನಂತೆಯೂ ಇಂದ್ರನೀಲರತ್ನದಂತೆಯೂ ದೇಹಕಾಂತಿಯುಳ್ಳ ಆ ಅಚಲ ದ್ವಿಪೃಷ್ಠರು ಬಲರಾಮ ಕೇಶವರಾಗಿ, ಗಂಗಾಯಮುನಾನದಿಗಳ ಪ್ರವಾಹಗಳಂತೆ, ಸೇರಿದ್ದರು.

**ಅವಿಭಕ್ತಾಂ ಮಹೀಮೇತಾವಭುಕ್ತಾಂ ಪುಣ್ಯನಾಯಕೌ ।**
**ಸರಸ್ವತೀಂ ಗುರೂದ್ದಿಷ್ಟಾಂ ಸಮಾನಶ್ರಾವಕಾವಿವ ॥ ೮೭ ॥**

ಸಮಾನರಾದ ಶ್ರಾವಕರಿಬ್ಬರು ಗುರೂಪದಿಷ್ಟವಾದ ಸರಸ್ವತಿಯನ್ನು ಅನುಭವಿಸುವಂತೆ, ಪುಣ್ಯನಾಯಕರಾದ ಈ ಬಲ ಕೇಶವರು ಅವಿಭಕ್ತವಾದ ಪೃಥ್ವಿಯನ್ನು ಅನುಭವಿಸಿದರು.

**ಅವಿವೇಕಸ್ತಯೋರಾಸೀದಧೀತಾಶೇಷಶಾಸ್ತ್ರಯೋಃ ।**
**ಅಪಿ ಶ್ರೀಕಾಮಿನೀಯೋಗೇ ಸ ಏವ ಕಿಲ ಶಸ್ಯತೇ ॥ ೮೮ ॥**

ಸಕಲಶಾಸ್ತ್ರಗಳನ್ನು ಅಧ್ಯಯನ ಮಾಡಿದ ಆ ಬಲ ಕೇಶವರಿಗೆ ಅವಿವೇಕವುಂಟಾಗಿತ್ತು– ಒಬ್ಬನನ್ನು ಬಿಟ್ಟು ಒಬ್ಬನಿರಲಿಲ್ಲವೆಂದು ಭಾವವು. ಸಂಪತ್ತಿಯೂ ಸ್ತ್ರೀಯೂ ಸೇರಿದಾಗಲೂ ವಿಭಾಗ–ವಿಭಜನೆಯುಂಟಾಗದಿರುವುದೇ ಸ್ತುತ್ಯವಾಗಿರುವುದು.

**ಸ್ಥಿರಾವತ್ಯುನ್ನತೌ ಶುಕ್ಲನೀಲೌ ಭಾತಃ ಸ್ಮ ಭೂಭೃತೌ ।**
**ಕೈಲಾಸಾಂಜನಸಂಜ್ಞೌ ವಾ ಸಂಗತೌ ತೌ ಮನೋಹರೌ ॥ ೮೯ ॥**

ಸ್ಥಿರಗಳೂ ಅತ್ಯುನ್ನತಗಳೂ ಶುಭ್ರನೀಲವರ್ಣವುಳ್ಳುವೂ ಆದ ಕೈಲಾಸಪರ್ವತ ಅಂಜನಪರ್ವತಗಳಂತೆ ಸ್ಥಿರಚಿತ್ತರೂ ಅತ್ಯುನ್ನತರೂ ಶುಭ್ರನೀಲವರ್ಣವುಳ್ಳವರೂ ಮನೋಹರರೂ ಆದ ಆ ಬಲ ಕೇಶವರು ಸೇರಿದ್ದರು.

**ಇತಸ್ಸ ವಿಂಧ್ಯಶಕ್ತ್ಯಾಖ್ಯೋ ಘಟೀಯಂತ್ರಸಮಶ್ಚಿರಮ್ ।**
**ಭ್ರಾಂತ್ವಾ ಸಂಸಾರವಾರಾಶಾವಣೀಯಃ ಪುಣ್ಯಸಾಧನಃ ॥ ೯೦ ॥**

**ಇಹೈವ ಶ್ರೀಧರಾಖ್ಯಸ್ಯ ಭೋಗವರ್ಧನಪೂಃಪತೇಃ ।**
**ಅಭೂದಖಿಲವಿಖ್ಯಾತಸ್ತನೂಜಸ್ತಾರಕಾಖ್ಯಯಾ ॥ ೯೧ ॥**

ಇತ್ತ ಆ ವಿಂಧ್ಯಶಕ್ತಿಯೆಂಬವನು ಘಟೀಯಂತ್ರಕ್ಕೆ ಸಮಾನನಾಗಿ ಸಂಸಾರವೆಂಬ ಸಮುದ್ರದಲ್ಲಿ ತಿರುಗಿ ಸ್ವಲ್ಪ ಪುಣ್ಯಸಾಧನವುಳ್ಳವನಾಗಿ ಇದೇ ಭರತಕ್ಷೇತ್ರದಲ್ಲಿರುವ ಭೋಗವರ್ಧನಪುರಾಧಿಪತಿಯಾದ ಶ್ರೀಧರನಿಗೆ ಸಕಲರಲ್ಲಿ ಪ್ರಖ್ಯಾತನಾದ ತಾರಕನೆಂಬ ಪುತ್ರನಾದನು.

**ಬಭಾರ ಭಾಸ್ವರಾಂ ಲಕ್ಷ್ಮೀಂ ಭರತಾರ್ಧವಿಕಾಸಿನೀಮ್ ।**
**ಸ್ವಚಕ್ರಾಕ್ರಾಂತಿಸಂತ್ರಾಸದಾಸೀಭೂತಖಭೂಚರಃ ॥ ೯೨ ॥**

ಅವನು ತನ್ನ ಚಕ್ರದ ಆಕ್ರಮಣದಿಂದುಟಾದಭೀತಿಯಿಂದ ಸೇವಕರಂತಾದ ಖೇಚರರೂ ಭೂಚರರೂ ಉಳ್ಳವನಾಗಿ ಅರ್ಧಭರತಕ್ಷೇತ್ರವನ್ನು ಪ್ರಕಾಶಪಡಿಸುವ ರಾಜ್ಯಸಂಪತ್ತಿಯನ್ನು ಧರಿಸಿದನು.

**ಆಸ್ತಾಮನ್ಯತ್ರ ತದ್ಭೀತ್ಯಾ ಮಂದಮಂದಪ್ರಭೇ ರವೌ ।**
**ಮನ್ಯೇ ವಿಕಸ್ವರಾ ಪದ್ಮಾ ಪದ್ಮೇಷ್ವಪಿ ನ ಜಾತುಚಿತ್ ॥ ೯೩ ॥**

ಬೇರೆ ಕಡೆಯಲ್ಲಿ ಹಾಗಿರಲಿ–ಸೂರ್ಯನು ಆ ತಾರಕನ ಭಯದಿಂದ ಬಹು ಮಂದವಾದ ಪ್ರಭೆಯುಳ್ಳವನಾಗಿರಲು ಲಕ್ಷ್ಮಿಯು ಕಮಲಗಳಲ್ಲಿಯೂ ಎಂದೂ ವಿಕಸಿತಳಾಗಿರಲಿಲ್ಲವೆಂದು ತಿಳಿಯುತ್ತೇನೆ.

**ಪುರಾಣಭೂಪಮಾರ್ಗಸ್ಯ ಸೋಭವತ್ಪಾರಿಪಂಥಿಕಃ ।**
**ಸಿಂಹಿಕಾನಂದನೋ ವೋಗ್ರಃ ಪೌರ್ಣಮಾಸ್ಯಮೃತದ್ಯುತೇಃ ॥ ೯೪ ॥**

ಆ ತಾರಕನು, ಪೌರ್ಣಮಿಯ ಚಂದ್ರನಿಗೆ ಉಗ್ರನಾದ ರಾಹುವಿನಂತೆ, ಪುರಾತನ ರಾಜರ ಪದ್ಧತಿಗೆ ಪ್ರತಿಕೂಲನಾಗಿದ್ದನು.

**ಗಲಂತಿ ಗರ್ಭಾಸ್ತನ್ನಾಮ್ನಾ ಗರ್ಭಿಣೀನಾಂ ಭಯೋದ್ಭವಾತ್ ।**
**ಘನಾಘನಾವಲೀನಾಂ ವಾ ಕ್ರೂರಗ್ರಹವಿಕಾರತಃ ॥ ೯೫ ॥**

ಕ್ರೂರವಾದ ಗ್ರಹದ ವಿಕಾರದಿಂದ ಮೇಘಸಮೂಹಗಳ ಮಧ್ಯಭಾಗಗಳು ನಷ್ಟವಾಗುವಂತೆ ಆ ತಾರಕನ ಹೆಸರಿನಿಂದಲೇ ಭಯವುಂಟಾಗಿ ಗರ್ಭಿಣೀಸ್ತ್ರೀಯರ ಗರ್ಭಗಳು ನಷ್ಟವಾಗುತ್ತವೆ.

**ಅನ್ವಿಷ್ಯ ಪ್ರತಿಯೋದ್ಧಾರಮಲಬ್ಧ್ವಾ ಕ್ರುದ್ಧಮಾನಸಃ ।**
**ಸ್ವಪ್ರತಾಪಾಗ್ನಿಧೂಮೇನ ದೂಷಿತೋ ವಾ ಮಷೀನಿಭಃ ॥ ೯೬ ॥**

ಮಸಿಗೆ ಸಮಾನನಾದ ಆ ತಾರಕನು ತನಗೆ ಪ್ರತಿಯಾದ ಯೋಧನನ್ನು ಹುಡುಕಿ ಹೊಂದದೆ ಕುಪಿತವಾದಮನಸ್ಸುಳ್ಳವನಾಗಿ ತನ್ನ ಪ್ರತಾಪವೆಂಬ ಬೆಂಕಿಯ ಹೊಗೆಯಿಂದ ದೂಷಿತನಾದಂತಿದ್ದನು.

**ಸಂತಪನ್ಸರ್ವಮೂರ್ಧನ್ಯೋ ಘರ್ಮಘರ್ಮಾಂಶುದುಸ್ಸಹಃ ।**
**ಸ ಪಾತಾಭಿಮುಖಃ ಕಿಂ ಸ್ಯುಃ ಸ್ಥಾವರಾಸ್ತಾದೃಶಃ ಶ್ರಿಯಃ ॥ ೯೭ ॥**

ಬೇಸಿಗೆಯ ಸೂರ್ಯನಂತೆ ದುಸ್ಸಹನೂ ಎಲ್ಲರ ತಲೆಯ ಮೇಲಿರುವವನೂ ಸಂತಾಪಗೊಳಿಸುವವನೂ ಆದ ಆ ತಾರಕನು ಪತನಾಭಿಮುಖನಾಗಿದ್ದನು. ಅಂಥವನ ಸಂಪತ್ತಿಗಳು ಸ್ಥಿರವಾಗಿರುತ್ತವೆಯೇ ?

**ಅಖಂಡಸ್ಯ ತ್ರಿಖಂಡಸ್ಯಾಸ್ಯಾಧಿಪತ್ಯಂ ಸಮುದ್ವಹನ್ ।**
**ಜನ್ಮಾಂತರಾಗತಾತ್ಯುಗ್ರವಿರೋಧಾರಾಧ್ಯಚೋದಿತಃ ॥ ೯೮ ॥**

**ದ್ವಿಪೃಷ್ಠಾಚಲಯೋರ್ವೃದ್ಧಿಂ ಪ್ರರೂಢಾಂ ಸೋಢುಮಕ್ಷಮಃ ।**
**ಕರದೀಕೃತನಿಶ್ಶೇಷಮಹೀಪಾಲಕೃಷೀವಲಃ ॥ ೯೯ ॥**

**ಬ್ರಹ್ಮವತ್ಕರದೌ ನೈತೌ ದುರ್ಮದೇನಾತಿದರ್ಪಿತೌ ।**
**ದುಷ್ಟಮಾಶೀವಿಷಂ ಗೇಹೇ ವರ್ಧಮಾನಂ ಸಹೇತ ಕಃ ॥ ೧೦೦ ॥**

ಅಖಂಡವಾದ ತ್ರಿಖಂಡದ ಆಧಿಪತ್ಯವನ್ನು ಧರಿಸಿರುವವನೂ ಜನ್ಮಾಂತರದಿಂದ ಬಂದ ಅತ್ಯುಗ್ರವಾದ ವಿರೋಧವೆಂಬ ದೈವದಿಂದ ಪ್ರೇರಿತನೂ ದ್ವಿಪೃಷ್ಠನ ಮತ್ತು ಅಚಲನ ದೃಢವಾದ ವೃದ್ಧಿಯನ್ನು ಸಹಿಸುವುದಕ್ಕೆ ಅಸಮರ್ಥನೂ ಸಕಲರಾಜರನ್ನು ಕಂದಾಯವನ್ನು ಕೊಡುವ ಕೃಷೀವಲರನ್ನಾಗಿ ಮಾಡಿರುವವನೂ ಆದ ಆ ತಾರಕನು'' ಬ್ರಾಹ್ಮಣನಂತೆ ದುರಹಂಕಾರದಿಂದ ಮತ್ತರಾದ ಇವರು ಕಂದಾಯವನ್ನು ಕೊಡುವವರಲ್ಲ. ಮನೆಯಲ್ಲಿ ಬೆಳೆಯುತ್ತಿರುವ ಕೆಟ್ಟ ಹಾವನ್ನು ಯಾವನು ಸಹಿಸುವನು ?

**ಉಚ್ಛೇದ್ಯಕೋಟಿಮಾರೂಢೌ ಮಮೇಮೌ ಯೇನ ಕೇನ ಚಿತ್ ।**
**ಸಂದೂಷ್ಯಾಹಂ ಹನಿಷ್ಯಾಮಿ ನಿಜಪ್ರಕೃತಿದೂಷಿತೌ ॥ ೧೦೧ ॥**

ತಮ್ಮ ಸ್ವಭಾವದಿಂದ ದೂಷಿತರಾಗಿರುವ ಇವರು ನನಗೆ ನಾಶಮಾಡುವುದಕ್ಕೆ ಯೋಗ್ಯವಾದ ಪಂಗಡಕ್ಕೆ ಸೇರಿದವರಾಗಿರುತ್ತಾರೆ. ಯಾವ ಕಾರಣದಿಂದಾದರೂ ದೂಷಿಸಿ ನಾನು ಇವರನ್ನು ಕೊಲ್ಲುವೆನು.''

**ಇತ್ಯಪಾಯಂ ವಿಚಿಂತ್ಯೈಕಂ ದುರ್ವಾಕ್ಯಂ ಕಲಹಪ್ರಿಯಮ್ ।**
**ಪ್ರಾಹಿಣೋತ್ಸೋಪಿ ತೌ ಪ್ರಾಪ್ಯ ಸಹಸೈವಾಹ ದುರ್ಮುಖಃ ॥ ೧೦೨ ॥**

**ಇತ್ಯಾದಿಶತಿ ವಾಂ ದೇವಸ್ತಾರಕೋ ಮಾರಕೋ ದ್ವಿಷಾಮ್ ।**
**ಯುಷ್ಮದ್ಗೃಹೇ ಕಿಲೈಕೋಸ್ತಿ ಖ್ಯಾತೋ ಗಂಧಗಜೋ ಮಹಾನ್ ॥**

**ಆಶ್ವಸೌ ಮೇ ಪ್ರಹೇತವ್ಯೋ ನೋಚೇದ್ಯುಷ್ಮಚ್ಛಿರೋದ್ವಯಮ್ ।**
**ಖಂಡೀಕೃತ್ಯಾಹರಿಷ್ಯಾಮಿ ಗಜಂ ಮಜ್ಜಯಸೇನಯಾ ॥ ೧೦೪ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಚಂಪಾಪುರೀ–ಪಟ್ಟಣದಲ್ಲಿ ವಸುಪೂಜ್ಯಭೂಪತಿಗಂ ಜಯಾವತೀ(ವಿಜಯಾ)ಮಹಾದೇವಿಗಂ ಶತಭಿಷಾ ನಕ್ಷತ್ರದಲ್ಲುದಯಿಸಿದ ರಕ್ತವರ್ಣಮನುಳ್ಳ ಕುಮಾರ ಬ್ರಹ್ಮಚಾರಿಯೆನಿಸಿದ ಎಪ್ಪತ್ತುಬಿಲ್ಲುತ್ಸೇಧಮನುಳ್ಳ ಎಪ್ಪತ್ತೆರಡುಲಕ್ಷವರ್ಷಾಯುಷ್ಯಮನುಳ್ಳ ಮಹಿಷಲಾಂಛನಮನುಳ್ಳ ಕುಮಾರಗಾಂಧಾರೀ–ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಚಂಪಾಪುರಿಯಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ವಾಸುಪೂಜ್ಯತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

ಈ ರೀತಿಯಾಗಿ ಅಪಾಯವನ್ನು ಚಿಂತಿಸಿ ದುಷ್ಟವಾಕ್ಯವುಳ್ಳವನೂ ಕಲಹ ಪ್ರಿಯನೂ ಆದ ಒಬ್ಬ ದೂತನನ್ನು ಕಳುಹಿಸಿಕೊಟ್ಟನು. ಅವನೂ ಶೀಘ್ರವಾಗಿಯೇ ಆ ಬಲಕೇಶವರನ್ನು ಹೊಂದಿ ದುಷ್ಟವಾದ ಮುಖವುಳ್ಳವನಾಗಿ–ಮುಖವನ್ನು ಗಂಟಿಕ್ಕಿ "ಶತ್ರುಗಳನ್ನು ಕೊಲ್ಲುವವನೂ ಪ್ರಭುವೂ ಆದ ತಾರಕನು ನಿಮಗೆ ಈ ರೀತಿ ಯಾಗಿ ಅಪ್ಪಣೆಮಾಡುತ್ತಾನೆ–ನಿಮ್ಮಮನೆಯಲ್ಲಿ ಪ್ರಖ್ಯಾತವಾದ ದೊಡ್ಡದೊಂದು ಮದಗಜವಿದೆಯಂತಲ್ಲ? ಇದನ್ನು ಶೀಘ್ರವಾಗಿ ತನಗೆ ಕಳುಹಿಸಿಕೊಡಬೇಕು. ಇಲ್ಲವಾದರೆ ನಿಮ್ಮ ಎರಡು ತಲೆಗಳನ್ನು ಕತ್ತರಿಸಿ ತನ್ನ ಜಯಶೀಲಸೇನೆಯಿಂದ ಆನೆಯನ್ನು ಅಪಹರಿಸುವೆನು" ಎಂದು ಹೇಳಿದನು.

**ಇತ್ಯಸಭ್ಯಮಸೋಢವ್ಯಂ ತೇನೋಕ್ತಂ ಕಲಹಾರ್ಥಿನಾ ।**
**ಶ್ರುತ್ವಾಚಲೋಚಲೋವೋಚ್ಚೈರ್ಧೀರೋದಾತ್ತೋಬ್ರವೀದಿದಮ್ ॥**

**ಗಜೋ ನಾಮ ಕಿಯಾನ್ ಶೀಘ್ರಮೇತ್ವಸಾವೇವ ಸೇನಯಾ ।**
**ತಸ್ಮೈ ದದಾಮಹೇನ್ಯಚ್ಚ ಯೇನಾಸೌ ಸ್ವಾಸ್ಥ್ಯಮಾಪ್ನುಯಾತ್ ॥ ೧೦೬ ॥**

ಕಲಹಪ್ರಿಯನಾದ ಆ ದೂತನು ಹೇಳಿದ ಅಸಭ್ಯವೂ ಅಸಹ್ಯವೂ ಆದ ಈ ಮಾತನ್ನು ಕೇಳಿ ಧೀರೋದಾತ್ತನೂ ಪರ್ವತದಂತೆ ಉನ್ನತನೂ ಆದ ಅಚಲನು ಈ ಮಾತನ್ನು ಹೇಳಿದನು "ಆನೆಯೆಂಬುದು ಎಷ್ಟರದು ? ಈ ತಾರಕನೇ ಸೇನೆಯೊ ಡನೆ ಶೀಘ್ರವಾಗಿ ಬರಲಿ. ಯಾವ ವಸ್ತುವಿನಿಂದ ಇವನು ಸ್ವಾಸ್ಥ್ಯವನ್ನು ಹೊಂದು ವನೋ ಅಂತಹ ಬೇರೆ ವಸ್ತುವನ್ನೂ ಅವನಿಗೆ ಕೊಡುವೆವು."

**ಇತ್ಯಾದಿ ತೇನ ಗಂಭೀರಮಭ್ಯುದ್ಯ ಸ ವಿಸರ್ಜಿತಃ ।**
**ಪವಮಾನ ಇವ ಪ್ರಾಪ್ಯ ತತ್ಕೋಪಾಗ್ನಿಮುದೀಪಯತ್ ॥ ೧೦೭ ॥**

ಎಂಬೀ ಮೊದಲಾದ ಮಾತನ್ನು ಗಂಭೀರವಾಗಿ ಹೇಳಿ ಅಚಲನು ಆ ದೂತನನ್ನು ಕಳುಹಿಸಿಕೊಟ್ಟನು. ಅವನು ಶೀಘ್ರವಾಗಿ ತಾರಕನನ್ನು ಹೊಂದಿ ಗಾಳಿಯಂತೆ ಅವನ ಕೋಪವೆಂಬ ಬೆಂಕಿಯನ್ನು ಉರಿಸಿದನು.

**ತಚ್ಛ್ರುತ್ವಾ ಸೋಪಿ ಕೋಪಾಗ್ನಿಪ್ರದೀಪ್ತಃ ಪಾವಕಪ್ರಭಃ ।**
**ತೌ ಪತಂಗಾಯಿತಾವಿತ್ಥಂ ಮತ್ಕ್ರೋಧಾಗ್ನೇರವೋಚತಾಮ್ ॥ ೧೦೮ ॥**

**ಇತ್ಯನಾಲೋಚ್ಯ ಕಾರ್ಯಾಂಗಂ ಸಂಗತಃ ಸಚಿವೈಸ್ಸಮಮ್ ।**
**ಸ್ವಯಮಭ್ಯುಚ್ಛ್ರಿಕಂ ಮತ್ವಾ ಪ್ರಸ್ಥಿತಃ ಪ್ರಾಪ್ತುಮಂತಕಮ್ ॥ ೧೦೯ ॥**

ಆ ಮಾತನ್ನು ಕೇಳಿ ಆ ತಾರಕನೂ ಕೋಪವೆಂಬ ಬೆಂಕಿಯಿಂದ ಜ್ವಲಿಸುವವನೂ ಬೆಂಕಿಯಂತೆ ಪ್ರಭೆಯುಳ್ಳವನೂ ಆಗಿ "ನನ್ನ ಕೋಪವೆಂಬ ಬೆಂಕಿಗೆ ಪತಂಗಗಳಂತಾ ಗುವ ಅವರು ಹೀಗೆ ಹೇಳಿದರು" ಎಂದುಕೊಂಡು ಕಾರ್ಯಭಾಗವನ್ನು ಮಂತ್ರಿ ಗಳೊಡನೆ ಸೇರಿ ಆಲೋಚಿಸದೆ ತಾನೇ ದೊಡ್ಡವನೆಂದು ತಿಳಿದು ಯಮನನ್ನು ಹೊಂದುವುದಕ್ಕೋಸ್ಕರ ಹೊರಟನು.

**ದುರ್ನಯಾಭಿಮುಖೋ ಮೂರ್ಖಶ್ಚಾಲಯಿತ್ವಾಖಿಲಾಮಿಲಾಮ್ ।**
**ಷಡಂಗೇನ ಬಲೇನಾಸೌ ಪ್ರಾಪ್ಯ ತಾವುದಯೋನ್ಮುಖೌ ॥ ೧೧೦ ॥**

**ಸಮುಲ್ಲಂಘಿತಮರ್ಯಾದಃ ಕಾಲಾಂತಜಲಧಿಂ ಜಯನ್ ।**
**ಅರುಣದ್ದಾರುಣಸ್ತೂರ್ಣಂ ಪುರಂ ಸ್ವಬಲವೇಲಯಾ ॥ ೧೧೧ ॥**

ದುರ್ನಯ–ಸೇನಾನಾಯಕನೇ ಪ್ರಮುಖನಾಗಿರುವವನೂ ಮೂರ್ಖನೂ ಮರ್ಯಾದೆಯನ್ನು ಮೀರಿದವನೂ ಪ್ರಳಯಕಾಲದ ಸಮುದ್ರವನ್ನು ಜಯಿಸು ವವನೂ ಭಯಂಕರನೂ ಆದ ಈ ತಾರಕನು ಸಮಸ್ತಪೃಥ್ವಿಯನ್ನು ನಡುಗಿಸುತ್ತ ಷಡಂಗಸೈನ್ಯದೊಡನೆ ಆ ಉನ್ನತಿಶೀಲರಾದ ಬಲಕೇಶವರನ್ನು ಹೊಂದಿ ತನ್ನ ಸೇನೆಯೆಂಬ ಅಲೆಯಿಂದ ಶೀಘ್ರವಾಗಿ ಅವರ ನಗರವನ್ನು ಮುತ್ತಿದನು.

**ಕಾಲವದ್ವೇಲಯಾ ವೇಲಾಂ ತತ್ಸೇನಾಂ ನಿಜಸೇನಯಾ ।**
**ನ್ಯರೌತ್ಸೀಜ್ಜಡನಿಸ್ಸಾರಮಚಲೋಪ್ಯಚಲಸ್ಥಿತಿಃ ॥ ೧೧೨ ॥**

ನಿಶ್ಚಲವಾದ ಸ್ಥಿತಿಯುಳ್ಳ ಅಚಲನೂ, ಪ್ರಳಯಕಾಲವು ಜಲದಿಂದ ನಿಸ್ಸಾರವಾದ ದಡವನ್ನು ತಡೆಯುವಂತೆ, ಜಡತ್ವದಿಂದ ನಿಸ್ಸಾರವಾದ ಆ ತಾರಕನ ಸೇನೆಯನ್ನು ಲೀಲೆಯಾಗಿ ತನ್ನ ಸೇನೆಯಿಂದ ತಡೆದನು.

**ದ್ವಿಪೃಷ್ಠೋ ಮತ್ತಮಾತಂಗಂ ಸಿಂಹಪೋತ ಇವೋದ್ಧತಃ ।**
**ಪರಾಕ್ರಮೈಕಸಾಮ್ರಾಜ್ಯಾದಾಕ್ರಾಮದ್ಬಲಿನಂ ದ್ವಿಷಮ್ ॥ ೧೧೩ ॥**

ಸಿಂಹದ ಮರಿಯು ಮತ್ತಗಜವನ್ನು ಆಕ್ರಮಿಸುವಂತೆ ಉದ್ಧತನಾದ ದ್ವಿಪೃಷ್ಠನು ಬಲಿಷ್ಠನಾದ ಶತ್ರುವನ್ನು ತನ್ನ ಪರಾಕ್ರಮದ ಮುಖ್ಯಸಹಾಯದಿಂದ ಆಕ್ರಮಿಸಿದನು.

**ತಾರಕೋಪಿ ಚಿರಂ ಯುಧ್ವಾ ತಂ ನಿರಾಕರ್ತುಮಕ್ಷಮಃ ।**
**ಭ್ರಮಯಿತ್ವಾಕ್ಷಿಪಚ್ಚಕ್ರಂ ಯಮಚಕ್ರಮಿವಾತ್ಮನಃ ॥ ೧೧೪ ॥**

ತಾರಕನೂ ಬಹುಕಾಲದವರೆಗೆ ಯುದ್ಧವನ್ನು ಮಾಡಿ ಬಲಿಷ್ಠನಾದ ಆ ದ್ವಿಪೃಷ್ಠನನ್ನು ನಿರಾಕರಿಸುವುದಕ್ಕೆ ಶಕ್ತಿಯಿಲ್ಲದವನಾಗಿ ಯಮನ ಚಕ್ರದಂತಿರುವ ತನ್ನ ಚಕ್ರವನ್ನು ತಿರುಗಿಸಿ ಪ್ರಯೋಗಿಸಿದನು.

**ತತ್ಪರೀತ್ಯ ಸ್ಥಿತಂ ಬಾಹೌ ದಕ್ಷಿಣೇ ದಯಿತಶ್ರಿಯಃ ।**
**ತಸ್ಯಾಸೌ ತೇನ ಚಕ್ರೇಣ ನರಕಂ ತಮಜೀಗಮತ್ ॥ ೧೧೫ ॥**

ಅದು ರಾಜ್ಯಲಕ್ಷ್ಮೀಪತಿಯಾದ ದ್ವಿಪೃಷ್ಠನ ಪ್ರದಕ್ಷಿಣೆಯನ್ನು ಮಾಡಿ ಬಲದ ಭುಜದಲ್ಲಿ ನಿಂತಿತು. ಆಗ ಈ ದ್ವಿಪೃಷ್ಠನು ಆ ಚಕ್ರದಿಂದ ತಾರಕನನ್ನು ನರಕಕ್ಕೆ ಕಳುಹಿಸಿದನು.

**ದ್ವಿಪೃಷ್ಠಸ್ಸಪ್ತಸದ್ರತ್ನತ್ರಿಖಂಡೇಶಸ್ತದಾಭವತ್ ।**
**ಅಚಲೋ ಬಲದೇವೋಭೂತ್ಪ್ರಾಪ್ತರತ್ನಚತುಷ್ಟಯಃ ॥ ೧೧೬ ॥**

ಆಗ ದ್ವಿಪೃಷ್ಠನು ಶ್ರೇಷ್ಠವಾದ ಏಳು ರತ್ನಗಳಿಗೂ ಮೂರು ಖಂಡಗಳಿಗೂ ಅಧಿ ಪತಿಯಾದನು. ಬಲದೇವನಾದ ಅಚಲನು ನಾಲ್ಕು ರತ್ನಗಳನ್ನು ಪಡೆದವನಾದನು.

**ಕೃತ್ವಾ ದಿಗ್ವಿಜಯಂ ಜಿತ್ವಾ ಪ್ರತೀಪಾಖ್ಯಾತಭೂಭೃತಃ ।**
**ನತ್ವಾ ಶ್ರೀವಾಸುಪೂಜ್ಯೇಶಂ ಪ್ರವಿಶ್ಯ ಪುರಮಾತ್ಮನಃ ॥ ೧೧೭ ॥**

**ಚಿರಂ ತ್ರಿಖಂಡಸಾಮ್ರಾಜ್ಯಂ ವಿಧಾಯ ವಿವಿಧೈಃ ಸುಖೈಃ ।**
**ದ್ವಿಪೃಷ್ಠಃ ಕಿಲ ನಿಷ್ಠಾಯಾಮಾವಧಿಷ್ಠಾನಮಾಶ್ರಿತಃ ॥ ೧೧೮ ॥**

ಬಳಿಕ ದಿಗ್ವಿಜಯವನ್ನು ಮಾಡಿ ಪ್ರಖ್ಯಾತರಾದ ಶತ್ರುರಾಜರುಗಳನ್ನು ಜಯಿಸಿ ಶ್ರೀ ವಾಸುಪೂಜ್ಯಸ್ವಾಮಿಯನ್ನು ನಮಸ್ಕರಿಸಿ ತಮ್ಮ ನಗರವನ್ನು ಪ್ರವೇಶಿಸಿ ಬಹು ಕಾಲದವರೆಗೆ ತ್ರಿಖಂಡಸಾಮ್ರಾಜ್ಯವನ್ನು ವಿವಿಧಸುಖಗಳಿಂದ ಅನುಭವಿಸಿ ದ್ವಿಪೃಷ್ಠನು ಏಳನೆಯ ನರಕಸ್ಥಾನವನ್ನಾಶ್ರಯಿಸಿದನಂತೆ.

**ಅಚಲೋಪಿ ತದುದ್ವೇಗಾದ್ವಾಸುಪೂಜ್ಯಜಿನಾಶ್ರಯಾತ್ ।**
**ಸಂಪ್ರಾಪ್ಯ ಸಂಯಮಂ ಮೋಕ್ಷಲಕ್ಷ್ಮ್ಯಾ ಸಂಗಮಮೀಯಿವಾನ್ ॥**

ಅವನ ವಿಯೋಗದುಃಖದಿಂದ ಕೂಡಿದ ಅಚಲನೂ ವಾಸುಪೂಜ್ಯಜಿನರ ಆಶ್ರಯ ದಿಂದ ಸಂಯಮವನ್ನು ಹೊಂದಿ ಮೋಕ್ಷಲಕ್ಷ್ಮಿಯ ಸಂಬಂಧವನ್ನು ಹೊಂದಿದನು.

**ಪುಣ್ಯೈಕಬೀಜಮವಲಂಬ್ಯ ಮಹೀಮಿಹಾಪ್ಯ ।**
**ಲಬ್ಧೋದಯಾಂ ಸಮಮುಪಾರ್ಜಿತಸತ್ತ್ವರೂಪೌ ।**
**ಏಕೋಗಮತ್ಫಲಿತುಮುಂಕುರವತ್ಕಿಲೋರ್ಧ್ವಂ ।**
**ಪಾಪೀ ಪರೋ ವಿಫಲಮೂಲಸಮಸ್ತ್ವಧಸ್ತಾತ್ ॥ ೧೨೦ ॥**

ಜೊತೆಯಾಗಿ ಗಳಿಸಿದ ಪುಣ್ಯವುಳ್ಳ ಬಲಕೇಶವರು ಪುಣ್ಯವೆಂಬ ಒಂದು ಬೀಜವನ್ನು ಆಶ್ರಯಿಸಿ ಈ ಲೋಕದಲ್ಲಿ ಉನ್ನತಿಯನ್ನು ಹೊಂದಿರುವ ಪೃಥ್ವಿಯನ್ನು ದೊರಕಿಸಿ ಅವರಿಬ್ಬರಲ್ಲಿ ಅಚಲನೊಬ್ಬನು ಅಂಕುರದಂತೆ ಫಲಿಸುವುದಕ್ಕೋಸ್ಕರ

ಮೇಲೆ-ಮುಕ್ತಿಗೆ ಹೋದನಂತೆ. ಪಾಪಿಯಾದ ಮತ್ತೊಬ್ಬನು-ದ್ವಿಪೃಷ್ಠನು ಫಲವೂ ಬುಡವೂ ಇಲ್ಲದಿರುವ ಮರಕ್ಕೆ ಸಮಾನನಾಗಿ ಕೆಳಕ್ಕೆ ಬಿದ್ದನಂತೆ.

**ಇದಮಿತಿ ವಿಧಿಪಾಕಾದ್ವೃತ್ತಮಸ್ಮಿನ್ ದ್ವಿಪೃಷ್ಠೇ ।**
**ಪರಿಣತಮಚಲೇ ಚ ಪ್ರತ್ಯಹಂ ಚಿಂತಯಿತ್ವಾ ।**
**ವಿಪುಲಮತಿಭಿರಾರ್ಯೈಃ ಕಾರ್ಯಮುಜ್ಝಿತ್ಯ ಪಾಪವ್ ।**
**ಸಕಲಸುಖನಿಧಾನಂ ಪುಣ್ಯಮೇವಾಪ್ರತೀಪಮ್ ॥ ೧೨೧ ॥**

ಅದೃಷ್ಟಪರಿಪಾಕದಿಂದ ಈ ದ್ವಿಪೃಷ್ಠನಲ್ಲಿಯೂ ಅಚಲನಲ್ಲಿಯೂ ಪರಿಣಮಿಸಿರುವ ವೈಪರೀತ್ಯವನ್ನು ಪ್ರತಿದಿವಸದಲ್ಲಿ ಚಿಂತಿಸಿ ವಿಶಾಲವಾದ ಬುದ್ಧಿಯುಳ್ಳ ಮಹನೀಯರು ಪಾಪಕಾರ್ಯವನ್ನು ಬಿಟ್ಟು ಸಕಲಸುಖಗಳಿಗೆ ಮೂಲಕಾರಣವೂ ಪ್ರತಿಕೂಲವಿಲ್ಲದುದೂ ಆದ ಪುಣ್ಯವನ್ನೇ ಸಂಪಾದಿಸಲಿ.

**ಪುರೇತ್ರ ಕನಕಾದಿಕೇ ಪ್ರಥಿತವಾನ್ ಸುಷೇಣೋ ನೃಪಃ ।**
**ತತೋನು ತಪಸಿ ಸ್ಥಿತೋಜನಿ ಚತುರ್ದಶಸ್ವರ್ಗಭಾಕ್ ।**
**ತ್ರಿಖಂಡಪರಿಪಾಲಕೋಭವದತೋ ದ್ವಿಪೃಷ್ಠಾಖ್ಯಯಾ ।**
**ಪರಿಗ್ರಹಮಹಾಭರಾದುಪಗತಃ ಕ್ಷಿತಿಂ ಸಪ್ತಮೀಮ್ ॥ ೧೨೨ ॥**

ಈ ಭರತಕ್ಷೇತ್ರದಲ್ಲಿ ಕನಕಪುರದಲ್ಲಿ ಸುಷೇಣರಾಜನು ಪ್ರಸಿದ್ಧನಾದನು. ಆಮೇಲೆ ಅವನು ತಪಸ್ಸಿನಲ್ಲಿದ್ದು ಹದಿನಾಲ್ಕನೆಯ ಸ್ವರ್ಗವನ್ನು ಹೊಂದಿದವನಾದನು. ಬಳಿಕ ದ್ವಿಪೃಷ್ಠನೆಂಬ ಹೆಸರಿನಿಂದ ತ್ರಿಖಂಡಾಧಿಪತಿಯಾದನು. ಅವನು ಪರಿಗ್ರಹಗಳ ದೊಡ್ಡಹೊರೆಯಿಂದ ಏಳನೆಯ ನರಕಭೂಮಿಯನ್ನು ಹೊಂದಿದನು.

**ಮಹಾಪುರೇ ವಾಯುರಥೋ ಮಹೀಪತಿಃ ।**
**ಪ್ರಪದ್ಯ ಚಾರಿತ್ರಮನುತ್ತರಂ ಯಯೌ ।**
**ತತೋ ಬಲೋ ದ್ವಾರವತೀಪುರೇ ಬಲ- ।**
**ಸ್ತ್ರಿಲೋಕಪೂಜ್ಯತ್ವಮವಾಪ್ಯ ನಿರ್ವೃತಃ ॥ ೧೨೩ ॥**

ಮೊದಲು ಮಹಾಪುರದಲ್ಲಿ ವಾಯುರಥನೆಂಬ ರಾಜನಾಗಿ ಚಾರಿತ್ರವನ್ನು ಪಡೆದು ಬಳಿಕ ಅನುತ್ತರವಿಮಾನವನ್ನು ಹೊಂದಿದನು. ಆಮೇಲೆ ದ್ವಾರವತೀಪುರದಲ್ಲಿ ಬಲಶಾಲಿಯಾದ ಬಲದೇವನಾಗಿ ತ್ರಿಲೋಕಪೂಜ್ಯತೆಯನ್ನು ಪಡೆದು ಮುಕ್ತನಾದನು.

**ವಿಖ್ಯಾತವಿಂಧ್ಯನಗರೇಜನಿ ವಿಂಧ್ಯಶಕ್ತಿ- ।**
**ರ್ಭ್ರಾಂತ್ವಾ ಚಿರಂ ಭವವನೇ ಚಿತಪುಣ್ಯಲೇಶಃ ।**
**ಶ್ರೀಭೋಗವರ್ಧನಪುರಾಧಿಪತಾರಕಾಖ್ಯಃ ।**
**ಪ್ರಾಪ ದ್ವಿಪೃಷ್ಠರಿಪುರಂತ್ಯಮಹೀಂ ಮಹಾಂಹಾಃ ॥ ೧೨೪ ॥**

ಪ್ರಸಿದ್ಧವಾದ ವಿಂಧ್ಯನಗರದಲ್ಲಿ ವಿಂಧ್ಯಶಕ್ತಿಯು ಜನಿಸಿದನು. ಅವನು ಭವಕಾನನದಲ್ಲಿ ಬಹುಕಾಲದ ವರೆಗೆ ತಿರುಗಿ ಸ್ವಲ್ಪ ಪುಣ್ಯವನ್ನು ಗಳಿಸಿ ಭೋಗವರ್ಧನಪುರಾಧಿಪತಿಯಾದ ತಾರಕನಾದನು. ದ್ವಿಪೃಷ್ಠನಿಗೆ ಶತ್ರುವಾದ ಅವನು ಮಹಾಪಾಪವುಳ್ಳವನಾಗಿ ಕೊನೆಯ-ಏಳನೆಯ ನರಕವನ್ನು ಹೊಂದಿದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ವಾಸುಪೂಜ್ಯಜಿನಪತಿದ್ವಿಪೃಷ್ಠಾಚಲತಾರಕಪುರಾಣಮಷ್ಟಪಂಚಾಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯರಿಂದ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ವಾಸುಪೂಜ್ಯತೀರ್ಥಂಕರ ದ್ವಿಪೃಷ್ಠ ಅಚಲ ತಾರಕರ ಪುರಾಣವೆಂಬ ಐವತ್ತೆಂಟನೆಯ ಪರ್ವವು ಸಮಾಪ್ತವಾದುದು.

---

# ಅಥ ವಿಮಲತೀರ್ಥಕರಪುರಾಣಂ

**ವಿಮಲೇಬ್ದಸಮೇ ಬೋಧೇ ದೃಶ್ಯತೇ ವಿಮಲಂ ಜಗತ್ ।**
**ವಿಮಲಂ ಯಸ್ಯ ಮೇ ಸೋದ್ಯ ವಿಮಲಂ ವಿಮಲಃ ಕ್ರಿಯಾತ್ ॥ ೧ ॥**

ಯಾವ ಸ್ವಾಮಿಯ ನಿರ್ಮಲವಾದ ಮೇಘಕ್ಕೆ ಸಮಾನವಾದ ನಿರ್ಮಲಜ್ಞಾನದಲ್ಲಿ ಲೋಕವು ನಿರ್ಮಲವಾಗಿ ಕಾಣುತ್ತದೋ ಅಂತಹ ವಿಮಲನಾಥನು ಈಗ ನನ್ನ ವಿಶೇಷವಾದ ಕರ್ಮಮಲವುಳ್ಳ ಜ್ಞಾನ(ಬೋಧ)ವನ್ನು ನಿರ್ಮಲಜ್ಞಾನವನ್ನಾಗಿ ಮಾಡಲಿ.

**ಪ್ರತೀಚೇಧಾತಕೀಖಂಡೇ ದೇವಾದ್ರ್ಯಪರಭಾಗಭಾಕ್ ।**
**ನದೀದಕ್ಷಿಣಕೂಲಸ್ಥೋ ವಿಷಯೋ ರಮ್ಯಕಾವತೀ ॥ ೨ ॥**

ಧಾತಕೀಖಂಡದ್ವೀಪದ ಪಶ್ಚಿಮದಿಕ್ಕಿನ ಮಹಾಮೇರುವಿನ ಪಶ್ಚಿಮಭಾಗವನ್ನು ಹೊಂದಿರುವ ರಮ್ಯಕಾವತೀದೇಶವು ಸೀತಾನದಿಯ ದಕ್ಷಿಣತೀರದಲ್ಲಿದೆ.

**ಪದ್ಮಸೇನೋ ಮಹೀಶೋತ್ರ ಮಹಾನಗರಮಾಸ್ಥಿತಃ ।**
**ಪ್ರಜಾಭ್ಯ ಇವ ಕಲ್ಪಾಗಃ ಸಮೀಪ್ಸಿತಫಲಪ್ರದಃ ॥ ೩ ॥**

ಈ ದೇಶದಲ್ಲಿ ಪ್ರಜೆಗಳಿಗೆ ಕಲ್ಪವೃಕ್ಷದಂತೆ, ಇಚ್ಛಿತಫಲವನ್ನು ಕೊಡುವ ಪದ್ಮಸೇನಮಹಾರಾಜನು ಮಹಾನಗರದಲ್ಲಿ ವಾಸಮಾಡುತ್ತಿದ್ದನು.

**ತಂತ್ರಾವಾಪವಿಭಾಗೋಕ್ತ ನೀತಿಶಾಸ್ತ್ರಾರ್ಥನಿಶ್ಚಯೇ ।**
**ಉದಾಹರಣಮಿತ್ಯಾಹುಸ್ತದ್ವೃತ್ತಂ ಶಾಸ್ತ್ರವೇದಿನಃ ॥ ೪ ॥**

ಶಾಸ್ತ್ರಜ್ಞರು ಅವನ ಆಚರಣೆಯು ತಂತ್ರಶಾಸ್ತ್ರವಿಭಾಗದಲ್ಲಿ ಹೇಳಲ್ಪಟ್ಟ ನೀತಿಶಾಸ್ತ್ರದ ಅರ್ಥವನ್ನು ನಿಶ್ಚಯಿಸುವುದರಲ್ಲಿ ಉದಾಹರಣೆಯೆಂದು ಹೇಳುತ್ತಾರೆ.

**ಅರ್ಜನಾನುಭವಾವರ್ಥೇ ಪ್ರಜಾನಾಮಾತ್ಮವೃತ್ತಿಭಿಃ ।**
**ವ್ಯಾಪಾರೋ ರಕ್ಷಕೇ ತಸ್ಮಿನ್ಮಹೀಶೇ ಮರ್ದಿತದ್ವಿಷಿ ॥ ೫ ॥**

ಶತ್ರುಗಳನ್ನು ಮರ್ದಿಸಿರುವ ಆ ಪದ್ಮಸೇನಮಹಾರಾಜನು ಪ್ರಜೆಗಳ ರಕ್ಷಕನಾಗಿರುವಾಗ ಅವರ ಧನಾರ್ಜನೆಯೂ ಅನುಭವಿಸುವಿಕೆಯೂ ವ್ಯಾಪಾರವೂ ಅವರವರ ವೃತ್ತಿ–ಜೀವನೋಪಾಯಗಳಿಂದ ಕೂಡಿದುದಾಗಿತ್ತು. ಪ್ರಜೆಗಳ ನಡೆಯೂ ಧನಾರ್ಜನೆಯೂ ಅನುಭವಿಸುವಿಕೆಯೂ ಅವರವರ ವರ್ಣಾಶ್ರಮ ವೃತ್ತಿಗನುಸಾರವಾಗಿದ್ದುವೆಂದು ಭಾವವು.

**ನಾಕ್ರಾಮಂತಿ ಪ್ರಜಾ ನ್ಯಾಯಂ ತಾ ನಾಕ್ರಾಮತಿ ಭೂಪತಿಃ ।**
**ತಂ ತ್ರಿವರ್ಗಸ್ತ್ರಿವರ್ಗಂ ಚ ನಾನ್ಯೋನ್ಯಾತಿಕ್ರಮಃ ಕ್ವಚಿತ್ ॥ ೬ ॥**

ಎಂದೂ ಪ್ರಜೆಗಳು ನ್ಯಾಯವನ್ನು ಮೀರುವುದಿಲ್ಲ. ರಾಜನು ಪ್ರಜೆಗಳನ್ನು ಮೀರುವುದಿಲ್ಲ. ಧರ್ಮಾರ್ಥಕಾಮಗಳು ರಾಜನನ್ನು ಮೀರುವುದಿಲ್ಲ. ಆ ಧರ್ಮಾರ್ಥಕಾಮಗಳು ಒಂದನ್ನೊಂದು ಮೀರುವುದಿಲ್ಲ.

**ಪ್ರೀತಿಂಕರವನೇ ಸರ್ವಗುಪ್ತ ಕೇವಲಿಸನ್ನಿಧೌ ।**
**ಧರ್ಮತತ್ತ್ವಂ ಪರಿಜ್ಞಾಯ ಸ್ವೈಷ್ಯಜ್ಜನ್ಮದ್ವಯಂ ಚ ಸಃ ॥ ೭ ॥**

**ತದೈವ ತೀರ್ಥಕೃಜ್ಞಾತ ಇವ ಜಾತಮಹೋತ್ಸವಃ ।**
**ಪದ್ಮನಾಭಾಯ ದತ್ವೈಶ್ಯಂ ಪ್ರಾರಬ್ಧಂ ಪರಮಂ ತಪಃ ॥ ೮ ॥**

ಆ ಪದ್ಮಸೇನ ಮಹಾರಾಜನು ಪ್ರೀತಿಂಕರವನದಲ್ಲಿ ಸರ್ವಗುಪ್ತರೆಂಬ ಕೇವಲಿಯ ಸಾನ್ನಿಧ್ಯದಲ್ಲಿ ಧರ್ಮಸ್ವರೂಪವನ್ನೂ ತನ್ನ ಮುಂದಿನ ಎರಡು ಜನ್ಮಗಳನ್ನೂ ತಿಳಿದು ಆಗಲೇ ತೀರ್ಥಂಕರನಾದಂತೆ ಮಹೋತ್ಸವವುಳ್ಳವನಾಗಿ ತನ್ನ ಪ್ರಭುತ್ವವನ್ನು ಪದ್ಮನಾಭನೆಂಬ ಪುತ್ರನಿಗೆ ಕೊಟ್ಟು ತಾನು ಪರಮತಪಸ್ಸನ್ನು ಪ್ರಾರಂಭಿಸಿದನು.

**ಪ್ರತೀತೈಕಾದಶಾಂಗಾರ್ಥೋ ಭಾವನಾಹಿತತೀರ್ಥಕೃತ್ ।**
**ಶೇಷಪುಣ್ಯಸಮಗ್ರೋಯಮಾರಾಧ್ಯಾಂತೇ ಚತುಷ್ಟಯಮ್ ॥ ೯ ॥**

**ಸಹಸ್ರಾರವಿಮಾನೇಶಸ್ತನ್ನಾಮೇಂದ್ರೋಜನಿಷ್ಟ ಸಃ ।**
**ಅಷ್ಟಾದಶಾಬ್ಧಿಮಾನಾಯುರೇಕಚಾಪತನೂಚ್ಛ್ರಿತಿಃ ॥ ೧೦ ॥**

**ಜಘನ್ಯಶುಕ್ಲದ್ವಯಭಾಕ್ ನವಮಾಸೇಷು ನಿಃಶ್ವಸನ್ ।**
**ಅಷ್ಟಾದಶಸಹಸ್ರಾಬ್ದೈರಾಹಾರಂ ಮನಸಾಹರನ್ ॥ ೧೧ ॥**

**ತೃಪ್ತೋ ರೂಪಪ್ರವೀಚಾರಾತ್ತ್ವಾಕ್ಚತುರ್ಥಧರಾವಧಿಃ ।**
**ತಾವನ್ಮಾತ್ರಪ್ರಕಾಶಾದಿರಣಿಮಾದಿಗುಣೋನ್ನತಃ ॥ ೧೨ ॥**

**ಸ್ವಸ್ನೇಹಾಮೃತಸಂಪೃಕ್ತಮುಖಾಂಬುರುಹದರ್ಶನಾತ್ ।**
**ಸಂತರ್ಪಿತಾಮರೀಚೇತಾಃ ಸುಚಿರಂ ಸುಖಮನ್ವಭೂತ್ ॥ ೧೩ ॥**

ಪ್ರಸಿದ್ಧವಾದ ಏಕಾದಶಾಂಗಶಾಸ್ತ್ರಾರ್ಥಗಳನ್ನು ತಿಳಿದವನೂ ಷೋಡಶಭಾವನೆಗಳಿಂದ ತೀರ್ಥಕರನಾಮಕರ್ಮವನ್ನು ಉಪಾರ್ಜಿಸಿದವನೂ ಉಳಿದ ಎಲ್ಲಾ ಪುಣ್ಯಕರ್ಮಗಳುಳ್ಳವನೂ ಆದ ಈ ಪದ್ಮಸೇನಯೋಗಿಯು ಅವಸಾನಕಾಲದಲ್ಲಿ ಜ್ಞಾನಾರಾಧನಾ ದರ್ಶನಾರಾಧನಾ ಮೊದಲಾದ ನಾಲ್ಕು ಆರಾಧನೆಗಳನ್ನು ಆರಾಧಿಸಿ ಮಡಿದು ಅವನು ಸಹಸ್ರಾರವೆಂಬ ಹನ್ನೆರಡನೆಯ ಸ್ವರ್ಗದಲ್ಲಿ ಸಹಸ್ರಾರೇಂದ್ರನಾಗಿ ಜನಿಸಿದನು. ಅವನು ಹದಿನೆಂಟು ಸಾಗರೋಪಮಾಯುಷ್ಯವುಳ್ಳವನೂ ಒಂದು ಧನುಸ್ಸಿನಷ್ಟು ಎತ್ತರವಾದ ಶರೀರವುಳ್ಳವನೂ ಜಘನ್ಯ ದ್ರವ್ಯ ಭಾವಶುಕ್ಲಲೇಶ್ಯೆಗಳುಳ್ಳವನೂ ಒಂಬತ್ತು ತಿಂಗಳಿಗೊಮ್ಮೆ ಉಸಿರಾಡಿಸುವವನೂ ಹದಿನೆಂಟುಸಾವಿರ ವರುಷಗಳಿಗೊಮ್ಮೆ ಮಾನಸಾಹಾರವನ್ನು ತೆಗೆದುಕೊಳ್ಳುವವನೂ ದೇವಸ್ತ್ರೀರೂಪದರ್ಶನದಿಂದುಂಟಾದ ಕಾಮಸೇವನೆಯಿಂದ ತೃಪ್ತಿಯುಳ್ಳವನೂ ನಾಲ್ಕನೆಯ ನರಕದವರೆಗೆ ಅವಧಿಯುಳ್ಳವನೂ ಅಷ್ಟೇ ಪ್ರಕಾಶ ಬಲ ಮೊದಲಾದುವುಗಳುಳ್ಳವನೂ ಅಣಿಮಾ ಮಹಿಮಾದಿ ಗುಣಗಳಿಂದ ಉನ್ನತನೂ ತನ್ನ ಪ್ರೇಮವೆಂಬ ಅಮೃತದಿಂದ ಲಿಪ್ತವಾದ ಮುಖಕಮಲದ ನೋಟದಿಂದ ದೇವತಾಸ್ತ್ರೀಯರ ಮನಸ್ಸುಗಳನ್ನು ತೃಪ್ತಿಗೊಳಿಸಿರುವವನೂ ಆಗಿ ಬಹುಕಾಲದವರೆಗೆ ಸುಖವನ್ನನುಭವಿಸಿದನು.

**ಸುರಲೋಕಾದಿಮಂ ಲೋಕಮಿಂದ್ರೇಸ್ಮಿನ್ನಾಗಮಿಷ್ಯತಿ ।**
**ಕ್ಷೇತ್ರೇತ್ರ ಪುರಿ ಕಾಂಪಿಲ್ಯೇ ಪುರುದೇವಾನ್ವಯೋ ನೃಪಃ ॥ ೧೪ ॥**

**ಕೃತವರ್ಮಾ ಮಹಾದೇವೀ ಜಯಶ್ಯಾಮಾಸ್ಯ ವಿಶ್ರುತಾ ।**
**ದೇವೇಂದ್ರಕೃತಪೂಜಾರ್ಹಾ ವಸುಧಾರಾದಿವಸ್ತುಭಿಃ ॥ ೧೫ ॥**

ಈ ಸಹಸ್ರಾರೇಂದ್ರನು ಸ್ವರ್ಗಲೋಕದಿಂದ ಈ ಲೋಕಕ್ಕೆ ಬರುವವನಾಗಿರುವಾಗ ಈ ಭರತಕ್ಷೇತ್ರದ ಕಾಂಪಿಲ್ಯನಗರದಲ್ಲಿ ಪುರುದೇವನ ವಂಶಜನಾದ ಕೃತವರ್ಮನೆಂಬವನು ರಾಜನಾಗಿದ್ದನು. ವಸುಧಾರೆಯೇ ಮೊದಲಾದ ವಸ್ತುಗಳಿಂದ ದೇವೇಂದ್ರನು ಮಾಡಿದ ಪೂಜೆಗೆ ಯೋಗ್ಯಳೂ ಪ್ರಖ್ಯಾತಳೂ ಆದ ಜಯಶ್ಯಾಮಾದೇವಿಯು ಇವನ ಪಟ್ಟಮಹಿಷಿಯಾಗಿದ್ದಳು.

**ಶುಚೌ ಕೃಷ್ಣದಶಮ್ಯಂತರಜನ್ಯಾಮುತ್ತರಾದಿಮೇ ।**
**ಋಕ್ಷೇ ಭಾದ್ರಪದೇ ದೃಷ್ಟ್ವಾ ಸ್ವಪ್ನಾನ್ ಷೋಡಶ ಸತ್ಫಲಾನ್ ॥ ೧೬ ॥**

**ತದಾನೀಮೇವ ಹಸ್ತೀಂದ್ರಂ ವಿಶಂತಂ ವಕ್ತ್ರವಾರಿಜಮ್ ।**
**ವ್ಯಲೋಕಿಷ್ಟ ಫಲಾನ್ಯೇಷಾಮವಬುಧ್ಯ ಮಹೀಪತೇಃ ॥ ೧೭ ॥**

**ತತಃ ಸ್ವವಿಷ್ಟರಾಕಂಪಾನ್ನಿವೇದಿತತದುತ್ಸವೈಃ ।**
**ಸುರೈಃ ಸ್ವರ್ಗಾತ್ಸಮಾಯಾತೈರಾಪ ಕಲ್ಯಾಣಮಾದಿಮಮ್ ॥ ೧೮ ॥**

ಆಕೆಯು ಜ್ಯೇಷ್ಠಮಾಸದಲ್ಲಿ ಕೃಷ್ಣಪಕ್ಷದ ದಶಮಿಯ ದಿವಸ ಬೆಳಗಿನ ಜಾವದಲ್ಲಿ ಉತ್ತರಾಭಾದ್ರಪದನಕ್ಷತ್ರದಲ್ಲಿ ಉತ್ತಮಫಲಗಳುಳ್ಳ ಹದಿನಾರು ಸ್ವಪ್ನಗಳನ್ನೂ ಆಗಲೇ ತನ್ನ ಮುಖಕಮಲವನ್ನು ಪ್ರವೇಶಿಸುತ್ತಿರುವ ದೊಡ್ಡ ಆನೆಯನ್ನೂ ಕಂಡಳು. ತನ್ನ ಪತಿಯಾದ ಕೃತವರ್ಮಮಹಾರಾಜನಿಂದ ಈ ಸ್ವಪ್ನಗಳ ಫಲಗಳನ್ನು ತಿಳಿದು ಬಳಿಕ ತಮ್ಮ ಆಸನಕಂಪದಿಂದ ಸ್ವಾಮಿಯ ಗರ್ಭಾವತಾರೋತ್ಸವವನ್ನು ತಿಳಿದು ಸ್ವರ್ಗದಿಂದ ಬಂದ ದೇವರ್ಕಳಿಂದ ಮೊದಲನೆಯದಾದ – ಗರ್ಭಾವತರಣ ಕಲ್ಯಾಣವನ್ನು ಹೊಂದಿದಳು.

**ವರ್ಧಮಾನೇನ ಗರ್ಭೇಣ ತೇನಾವರ್ಧತ ಸಮ್ಮದಃ ।**
**ಹೃದಯೇ ಬಂಧುವರ್ಗಸ್ಯ ದುರ್ಗತಸ್ಯ ಧನೇನ ವಾ ॥ ೧೯ ॥**

ಧನದಿಂದ ದರಿದ್ರನ ಹೃದಯದಲ್ಲಿ ಸಂತೋಷವು ಹೆಚ್ಚುವಂತೆ ಬೆಳೆಯುತ್ತಿರುವ ಆ ಗರ್ಭದಿಂದ ಬಂಧುವರ್ಗದ ಹೃದಯದಲ್ಲಿ ಸಂತೋಷವು ಹೆಚ್ಚಿತು.

**ಪ್ರಮೋದಾಯ ಸುತಸ್ಯೇಹ ಸಾಮಾನ್ಯಸ್ಯಾಪಿ ಸಂಭವಃ ।**
**ಕಿಮುಚ್ಯತೇ ಪುನಃ ಸೂತೇಃ ಪ್ರಾಗಾನಮ್ರಸುರೇಶಿನಃ ॥ ೨೦ ॥**

ಸಾಮಾನ್ಯವಾದ ಪುತ್ರನ ಉತ್ಪತ್ತಿಯೂ ಈ ಲೋಕದಲ್ಲಿ ಸಂತೋಷಕ್ಕೆ ಕಾರಣ ವಾಗುತ್ತದೆಂದ ಮೇಲೆ ಮೊದಲೇ ದೇವೇಂದ್ರನಿಂದ ನಮಸ್ಕೃತನಾದ ಪುತ್ರನ ಉತ್ಪತ್ತಿಯು ಸಂತೋಷಕ್ಕೆ ಕಾರಣವಾಗುತ್ತದೆಂದು ಹೇಳುವುದೇನು ?

**ಮಾಘಶುಕ್ಲಚತುರ್ದಶ್ಯಾಂ ತಮಹಿರ್ಬುಧ್ನ್ಯಯೋಗತಃ ।**
**ತ್ರಿಬೋಧಂ ತ್ರಿಜಗನ್ನಾಥಂ ಸಾಸೂತ ವಿಮಲಪ್ರಭಮ್ ॥ ೨೧ ॥**

ಆ ಜಯಶ್ಯಾಮಾದೇವಿಯು ಮಾಘಶುಕ್ಲಚತುರ್ದಶಿಯಲ್ಲಿ ಅಹಿರ್ಬುಧ್ನ್ಯ (ಶಿವ)ಯೋಗದಲ್ಲಿ ತ್ರಿಜ್ಞಾನಧಾರಕನೂ ತ್ರಿಲೋಕಾಧಿಪತಿಯೂ ಆದ ಆ ವಿಮಲ ಪ್ರಭನನ್ನು ಹಡೆದಳು.

**ಜನ್ಮಾಭಿಷೇಕಕಲ್ಯಾಣಪ್ರಾಂತೇ ವಿಮಲವಾಹನಮ್ ।**
**ತಮಾಹುರಮರಾಃ ಸರ್ವೇ ಸರ್ವಸಂಸ್ತುತಿಗೋಚರಮ್ ॥ ೨೨ ॥**

ಎಲ್ಲಾ ದೇವರ್ಕಳು ಜನ್ಮಾಭಿಷೇಕಕಲ್ಯಾಣದ ಕೊನೆಯಲ್ಲಿ ಎಲ್ಲರ ಸ್ತುತಿಗೆ ವಿಷಯನಾದ ಆ ಸ್ವಾಮಿಯನ್ನು ವಿಮಲವಾಹನನೆಂದು ಕರೆದರು.

**ವಾಸುಪೂಜ್ಯೇಶಸಂತಾನೇ ತ್ರಿಂಶತ್ಸಾಗರಸಮ್ಮಿತೇ ।**
**ಪ್ರಾಂತಪಲ್ಯೋಪಮೇ ಧರ್ಮೇ ಧ್ವಂಸೇ ತದ್ಗತಜೀವಿತಃ ॥ ೨೩ ॥**

**ಷಷ್ಟಿಲಕ್ಷಮಿತಾಬ್ದಾಯುಃ ಷಷ್ಟಿಚಾಪತನುಪ್ರಮಃ ।**
**ಅಷ್ಟಾಪದಪ್ರಭಃ ಸೋಽಭಾತ್ಸರ್ವಪುಣ್ಯಸಮುಚ್ಚಯಃ ॥ ೨೪ ॥**

ಮೂವತ್ತು ಸಾಗರವರ್ಷಪರಿಮಿತವಾದ ವಾಸುಪೂಜ್ಯಸ್ವಾಮಿಯ ಪರಂಪರೆ ಯಲ್ಲಿ ಕೊನೆಯ ಪಲ್ಯೋಪಮಕಾಲದಲ್ಲಿ ಧರ್ಮವು ನಷ್ಟವಾದಾಗ ಆ ಕಾಲದಲ್ಲಿ ಜೀವಿಸಿದವನೂ ಅರುವತ್ತು ಲಕ್ಷವರ್ಷಪರಿಮಿತವಾದ ಆಯುಷ್ಯವುಳ್ಳವನೂ ಅರುವತ್ತು ಧನುಸ್ಸುಗಳಷ್ಟು ಎತ್ತರವಾದ ಶರೀರವುಳ್ಳವನೂ ಬಂಗಾರದಂತೆ ಕಾಂತಿ ಯುಳ್ಳವನೂ ಆದ ಆ ಸ್ವಾಮಿಯು ಎಲ್ಲರ ಪುಣ್ಯಗಳ ರಾಶಿಯಾಗಿ ಪ್ರಕಾಶಿಸಿದನು.

**ಖಪಂಚಕೇಂದ್ರಿಯೈಕಾಬ್ದಕೌಮಾರವಿರತೌ ಕೃತೀ ।**
**ರಾಜ್ಯಾಭಿಷೇಕಪೂತಾತ್ಮಾ ಪಾವನೀಕೃತವಿಷ್ಟಪಃ ॥ ೨೫ ॥**

ಪುಣ್ಯಶಾಲಿಯಾದ ಆ ವಿಮಲನಾಥನು ಹದಿನೈದು ಲಕ್ಷವರ್ಷಕಾಲವು ಕೌಮಾರಾ ವಸ್ಥೆಯಲ್ಲಿ ಕಳೆದನಂತರ ರಾಜ್ಯಾಭಿಷೇಕದಿಂದ ಪವಿತ್ರಾತ್ಮನೂ ಜಗತ್ತನ್ನು ಪವಿತ್ರ ವನ್ನಾಗಿ ಮಾಡಿದವನೂ ಆದನು.

**ಲಕ್ಷ್ಮೀಃ ಸಹಚರೀ ತಸ್ಯ ಕೀರ್ತಿರ್ಜನ್ಮಾಂತರಾಗತಾ ।**
**ಸರಸ್ವತೀ ಸಹೋತ್ಪನ್ನಾ ವೀರಲಕ್ಷ್ಮ್ಯಾ ಸ್ವಯಂವೃತಃ ॥ ೨೬ ॥**

ಆ ವಿಮಲನಾಥನಿಗೆ ಲಕ್ಷ್ಮಿಯು ಜತೆಯಲ್ಲಿರುವ–ಸಹಚರಿಯಾದಳು. ಕೀರ್ತಿ ಯು ಜನ್ಮಾಂತರದಿಂದ ಬಂದುದಾಗಿದ್ದಿತು. ಸರಸ್ವತಿಯು ಜತೆಯಲ್ಲಿ ಹುಟ್ಟಿದ– ಸಹೋದರಿಯಾಗಿದ್ದಳು. ವೀರಲಕ್ಷ್ಮಿಯಿಂದ ಸ್ವಯಂವರಿಸಲ್ಪಟ್ಟಿದ್ದಾನೆ.

**ಗುಣಾಃ ಸತ್ಯಾದಯಸ್ತಸ್ಮಿನ್ನವರ್ಧಂತ ಯಥಾತಥಾ ।**
**ಮುನೀಂದ್ರೈರಪಿ ಸಂಪ್ರಾರ್ಥ್ಯಾ ವರ್ಣನಾ ತೇಷು ಕಾಪರಾ ॥ ೨೭ ॥**

ಆ ವಿಮಲನಾಥನಲ್ಲಿ ಸತ್ಯವೇ ಮೊದಲಾದ ಗುಣಗಳು ಕ್ರಮಕ್ರಮವಾಗಿ ವೃದ್ಧಿಯನ್ನು ಹೊಂದಿದುವು. ಆ ಗುಣಗಳು ಮುನೀಂದ್ರರಿಂದಲೂ ಪ್ರಾರ್ಥಿಸ ಲ್ಪಡತಕ್ಕುವಾಗಿದ್ದುವು. ಅಂದ ಮೇಲೆ ಆ ಗುಣಗಳಲ್ಲಿ ಬೇರೆ ವರ್ಣನೆ ಯಾವುದು ? (ಇನ್ನೇನು ವರ್ಣನೆ ಬೇಕು ?).

**ಸುಖಸ್ಯ ತಸ್ಯ ಕೋ ವೇತ್ತಿ ಪ್ರಮಾಂ ಮುಕ್ತಿಸುಖಸ್ಯ ಚೇತ್ ।**
**ಅನಂತರನಿತಾಂತತ್ವಾದಾನಂತ್ಯಾದತಿಶುದ್ಧಿತಃ ॥ ೨೮ ॥**

ವಿಮಲನಾಥನ ಸುಖದ ಪರಿಮಾಣವನ್ನು ಯಾವನು ತಿಳಿಯಬಲ್ಲನು ? ಏಕೆಂದರೆ– ಎಡೆಬಿಡದಿರುವ ಉತ್ತರಕಾಲದಲ್ಲಿ ಅವನಿಗೆ ಸಂಪೂರ್ಣವೂ ಅನಂತವೂ ವಿಶುದ್ಧವೂ ಆದ ಮುಕ್ತಿಸುಖವುಂಟಾಗುವುದು.

**ದೇವದೇವಸ್ತದೈವಾಸಾವಾಸೀದ್ವಿಶ್ವಸುರೇಶ್ವರೈಃ ।**
**ಅಭ್ಯರ್ಚಿತಾಂಘ್ರಿರಾಗಂತ್ರೀ ಕೇವಲಂ ಕೇವಲಾತ್ಮತಾ ॥ ೨೯ ॥**

ಈ ವಿಮಲನಾಥನು ಆಗಲೇ (ಮುಕ್ತಿಯುಂಟಾಗುವುದಕ್ಕಿಂತ ಮೊದಲೇ) ಸಮಸ್ತ ದೇವೇಂದ್ರರಿಂದ ಪೂಜಿತವಾದ ಚರಣವುಳ್ಳವನಾದನು. ಅವನಿಗೆ ಕೈವಲ್ಯವು ಮಾತ್ರ ಮುಂದೆ ಬರುವುದಾಗಿದ್ದಿತು.

**ಯಶಃ ಪ್ರಕಾಶಯತ್ಯಾಶಾಃ ಶ್ರೀಶಃ ಕುಂದೇಂದುನಿರ್ಮಲಮ್ ।**
**ಕಾಶಪ್ರಸವನೀಕಾಶಮಾಕಾಶಂ ಚ ಕರೋತ್ಯದಃ ॥ ೩೦ ॥**

ಲಕ್ಷ್ಮೀಪತಿಯಾದ ವಿಮಲನಾಥನ ಕುಂದಪುಷ್ಪದಂತೆಯೂ ಚಂದ್ರನಂತೆಯೂ ನಿರ್ಮಲವಾದ ಯಶಸ್ಸು ದಿಕ್ಕುಗಳನ್ನು ಪ್ರಕಾಶಪಡಿಸುತ್ತದೆ. ಇದು ಆಕಾಶವನ್ನು ಕಾಚಿಯ ಹೂವಿಗೆ ಸದೃಶವನ್ನಾಗಿಯೂ ಮಾಡುತ್ತದೆ.

**ತ್ರಿಂಶಚ್ಛತಸಹಸ್ರಾಬ್ದರಾಜ್ಯಕಾಲಾವಸಾನಗಃ ।**
**ಭೋಗಾನ್ನಿರ್ಭಜ್ಯ ಭುಂಜಾನೋ ಭೂಯಃ ಷಡೃತುಸಂಭವಾನ್ ॥ ೩೧ ॥**

**ಹಿಮಾನೀಪಟಲಚ್ಛನ್ನದಿಗ್ಭೂಭೂರುಹಭೂಧರೇ ।**
**ಹೇಮಂತೇ ಹೈಮನೀಂ ಲಕ್ಷ್ಮೀಂ ವಿಲೀನಾಂ ವೀಕ್ಷ್ಯ ತತ್ಕ್ಷಣಾತ್ ॥**

**ವಿರಕ್ತಃ ಸಂಸೃತೇಃ ಪೂರ್ವನಿಜಜನ್ಮೋಪಯೋಗಭಾಕ್ ।**
**ರೋಗೀವ ನಿತರಾಂ ಖಿನ್ನೋ ಮಾನಭಂಗವಿಮರ್ಶನಾತ್ ॥ ೩೩ ॥**

**ಸಂಜ್ಞಾನೈಸ್ತ್ರಿಭಿರಪ್ಯೇಭಿಃ ಕಿಂ ಕೃತ್ಯಮವಧೌ ಸ್ಥಿತೇ ।**
**ವೀರ್ಯೇಣ ಚ ಕಿಮೇತೇನ ಯದ್ಯುತ್ಕರ್ಷಮನಾಪ್ತವಾನ್ ॥ ೩೪ ॥**

**ಚಾರಿತ್ರಸ್ಯ ನ ಗಂಧೋಽಪಿ ಪ್ರತ್ಯಾಖ್ಯಾನೋದಯೋ ಯತಃ ।**
**ಬಂಧಶ್ಚತುರ್ವಿಧೋಽಪ್ಯಸ್ತಿ ಬಹುಮೋಹಪರಿಗ್ರಹಃ ॥ ೩೫ ॥**

ಪ್ರಮಾದಾಸ್ಸಂತಿ ಸರ್ವೇಪಿ ನಿರ್ಜರಾಪ್ಯಲ್ಪಿಕೇವ ಸಾ ।
ಅಹೋ ಮೋಹಸ್ಯ ಮಾಹಾತ್ಮ್ಯಮದ್ಯಾಪ್ಯಹಮಿಹೈವ ಹಿ ॥ ೩೬ ॥

ಸಾಹಸಂ ಪಶ್ಯ ಭುಂಜೇಮೂನ್ಭೋಗಾನ್ರೋಗಾನಿವಾನುಗಾನ್ ।
ಪುಣ್ಯಸ್ಯ ಕರ್ಮಣಃ ಪಾಕಾದೇತನ್ಮೇ ಸಂಪ್ರವರ್ತತೇ ॥ ೩೭ ॥

ತಸ್ಯ ಯಾವನ್ನ ಯಾಮ್ಯಂತಮನಂತಂ ತತ್ಸುಖಂ ಕುತಃ ।
ಇತೀವ ಚಿತ್ತೇ ವಿಮಲೋ ವಿಮಲಾವಗಮೋದ್ಗಮಾತ್ ॥ ೩೮ ॥

ಮೂವತ್ತು ಲಕ್ಷವರ್ಷ ರಾಜ್ಯಭಾರವನ್ನು ಮಾಡಿ ಕೊನೆಯನ್ನು ಹೊಂದಿದ ವಿಮಲನಾಥನು ಆರು ಋತುಗಳಲ್ಲಿ ಉಂಟಾದ ಭೋಗಗಳನ್ನು ವಿಭಾಗಿಸಿ ಮತ್ತೆ ಮತ್ತೆ ಅನುಭವಿಸಿ ಹಿಮಸಮೂಹದಿಂದ ಮುಚ್ಚಲ್ಪಟ್ಟ ದಿಕ್ಕುಗಳೂ ಭೂಮಿಯೂ ವೃಕ್ಷಗಳೂ ಪರ್ವತಗಳೂ ಉಳ್ಳ ಹಿಮಂತಋತುವಿನಲ್ಲಿ ಲಯವಾಗುತ್ತಿರುವ ಹಿಮದ ಶೋಭೆಯನ್ನು ನೋಡಿ ಆಗಲೇ ಸಂಸಾರದಿಂದ ವಿರಕ್ತನಾಗಿ ತನ್ನ ಪೂರ್ವಜನ್ಮವಿಷಯವನ್ನು ತಿಳಿದು ಮಾನಭಂಗವಾಗಿದ್ದುದನ್ನು ವಿಮರ್ಶಿಸಿ, ರೋಗಿಯಂತೆ, ಬಹಳ ಖಿನ್ನವಾಗಿ ''ಸಂಸಾರಕ್ಕೆ ಎಲ್ಲಿ–ಕೊನೆಯಿದೆಯೆಂದಮೇಲೆ ಈ ಮೂರು ಜ್ಞಾನಗಳಿಂದಲೂ ಏನು ಕೆಲಸ ?ಉನ್ನತಿಯನ್ನು ಹೊಂದದಿದ್ದ ಮೇಲೆ ಈ ಶಕ್ತಿಯಿಂದಲೂ ಏನು ಪ್ರಯೋಜನ ? ಪ್ರತ್ಯಾಖ್ಯಾನಕ್ರೋಧ ಮಾನ ಮಾಯಾ ಲೋಭಗಳ ಉದಯವಿರುವುದರಿಂದ ಚಾರಿತ್ರದ ಗಂಧವೂ ಇಲ್ಲ. ಪ್ರಕೃತಿ ಸ್ಥಿತ್ಯನುಭಾಗ ಪ್ರದೇಶರೂಪವಾದ ಚತುರ್ವಿಧಬಂಧವೂ ಇದೆ. ಅಧಿಕವಾದ ಮೋಹವೂ ಪರಿಗ್ರಹವೂ ಇವೆ. ಎಲ್ಲಾ ವಿಕಥಾದಿಪ್ರಮಾದಗಳೂ ಇರುತ್ತವೆ. ಆ ಕರ್ಮನಿರ್ಜರೆಯು ಅತ್ಯಲ್ಪವಾಗಿದೆ. ಮೋಹದ ಮಹಿಮೆಯು ಆಶ್ಚರ್ಯ ವನ್ನುಂಟುಮಾಡುವುದು. ಈಗಲೂ ನಾನು ಈ ಸಂಸಾರದಲ್ಲೇ ಇದ್ದೇನಲ್ಲ:– ರೋಗಗಳಂತೆ ಅನುಸರಿಸಿರುವ ಈ ಭೋಗಗಳನ್ನು ಅನುಭವಿಸುತ್ತಿದ್ದೇನೆ. ನನ್ನ ಸಾಹಸವನ್ನು ನೋಡು. ಪುಣ್ಯಕರ್ಮದ ಉದಯದಿಂದ ಈ ಭೋಗಸುಖವು ನನಗುಂಟಾಗುತ್ತದೆ. ನಾನು ಆ ಕರ್ಮವನ್ನು ಕೊನೆಗಾಣಿಸುವವರೆಗೂ ಆ ಅನಂತಸುಖವು ಹೇಗುಂಟಾಗುವುದು ? '' ಈ ರೀತಿಯಾಗಿ ಮನಸ್ಸಿನಲ್ಲಿ ನಿರ್ಮಲವಾದ ಜ್ಞಾನೋದಯದಿಂದ ವಿಮಲನಾಥನು ವಿಚಾರ ಮಾಡಿದನು.

ತದೈವಾಯಾತಸಾರಸ್ವತಾದಿಭಿಃ ಕೃತಸಂಸ್ತವಃ ।
ಸುರೈಸ್ತೃತೀಯಕಲ್ಯಾಣೇ ವಿಹಿತಾಭಿಷವೋತ್ಸವಃ ॥ ೩೯ ॥

ದೇವದತ್ತಾಂ ಸಮಾರುಹ್ಯ ಶಿಬಿಕಾಮಮರೈರ್ವೃತಃ ।
ವಿಭುಃ ಸಹೇತುಕೋದ್ಯಾನೇ ಪ್ರಾವ್ರಾಜೀದ್ವ್ಯುಪವಾಸಭಾಕ್ ॥ ೪೦ ॥

ಮಾಘಶುಕ್ಲಚತುರ್ಥ್ಯಾಹಃಪ್ರಾಂತೇ ಷಡ್ವಿಂಶಕರ್ಕ್ಷಕೇ ।
ಸಹಸ್ರನರಪೈಸ್ಸಾರ್ಧಂ ಪ್ರಾಪ್ಯ ತುರ್ಯಾವಬೋಧನಮ್ ॥ ೪೧ ॥

ದ್ವಿತೀಯೇಹ್ನಿ ಪುರಂ ನಂದನಾಭಿದಂ ಭುಕ್ತಯೇವಿಶತ್ ।
ಜಯೋ ನಾಮ ನೃಪಸ್ತಸ್ಮೈ ದತ್ವಾನ್ನಂ ಕನಕಪ್ರಭಃ ॥ ೪೨ ॥

ಪಂಚಾಶ್ಚರ್ಯಂ ಸಮಾಪ್ರಾಪತ್ಕಿಂ ನವಾ ಪಾತ್ರದಾನತಃ ।
ಸಾಮಾಯಿಕಂ ಸಮಾದಾಯ ಸಂಯಮಂ ಶುದ್ಧಚೇತಸಾ ॥ ೪೩ ॥

ತ್ರಿವತ್ಸರಮಿತೇ ಯಾತೇ ತಪಸ್ಯೇಷ ಮಹಾಮುನಿಃ ।
ನಿಜದೀಕ್ಷಾವನೇ ಜಂಬೂದ್ರುಮಮೂಲೇ ದ್ವ್ಯುಪೋಷಿತಃ ॥ ೪೪ ॥

ಮಾಘೇ ಮಾಸಿ ಸಿತೇ ಪಕ್ಷೇ ಷಷ್ಠ್ಯಾಂ ಪ್ರಷ್ಠೋಪರಾಹ್ಣಕೇ ।
ಸ್ವದೀಕ್ಷಾದಾನನಕ್ಷತ್ರೇ ಘಾತಿಕರ್ಮವಿನಾಶನಾತ್ ॥ ೪೫ ॥

ಕೇವಲಾವಗಮಂ ಪ್ರಾಪತ್ಸದ್ಯೋ ವ್ಯಾಪ್ತಚರಾಚರಮ್ ।
ತದೈವಾಪಂಶ್ಚ ದೇವೇಂದ್ರಾಃ ಸ್ವಾನಮನ್ಮುಕುಟಾನನಾಃ ॥ ೪೬ ॥

ದೇವದುಂದುಭಿಮುಖ್ಯಾಷ್ಟಪ್ರಾತಿಹಾರ್ಯಾದಿವೈಭವಮ್ ।
ಪ್ರಾಪ್ಯ ತ್ಯೈರ್ಗಂಧಕುಟ್ಯಂತರ್ಗತಸಿಂಹಾಸನೇ ಸ್ಥಿತಃ ॥ ೪೭ ॥

ಆಗಲೇ ಬಂದ ಸಾರಸ್ವತಾದಿ ಲೌಕಾಂತಿಕದೇವರ್ಕಳಿಂದ ಸ್ತುತಿಸಲ್ಪಟ್ಟವನೂ ಮೂರನೆಯ–ಪರಿನಿಷ್ಕ್ರಮಣಕಲ್ಯಾಣದಲ್ಲಿ ಅಭಿಷೇಕೋತ್ಸವವನ್ನು ಮಾಡಲ್ಪಟ್ಟವನೂ ದೇವದತ್ತವೆಂಬ ಪಲ್ಲಕ್ಕಿಯನ್ನೇರಿ ದೇವರ್ಕಳಿಂದ ಸುತ್ತಲ್ಪಟ್ಟವನೂ ಆದ ವಿಮಲನಾಥನು ಸಹೇತುಕೋದ್ಯಾನದಲ್ಲಿ ಎರಡು ಉಪವಾಸಗಳನ್ನು ಮಾಡಿ ಮಾಘ ಶುಕ್ಲ ಚತುರ್ಥಿಯ ದಿವಸ ಸಾಯಂಕಾಲ ಉತ್ತರಾಭಾದ್ರಪದನಕ್ಷತ್ರದಲ್ಲಿ ಸಹಸ್ರರಾಜರುಗಳೊಡನೆ ದೀಕ್ಷೆಯನ್ನು ಸ್ವೀಕರಿಸಿದನು. ನಾಲ್ಕನೆಯ–ಮನಃಪ್ರರ್ಯಯಜ್ಞಾನವನ್ನು ಹೊಂದಿ ಎರಡನೆಯ ದಿನದಲ್ಲಿ ಆಹಾರಕ್ಕೋಸ್ಕರ ನಂದನವೆಂಬ ನಗರವನ್ನು ಪ್ರವೇಶಿಸಿದನು. ಬಂಗಾರದಂತೆ ಕಾಂತಿಯುಳ್ಳ ಜಯನೆಂಬ ರಾಜನು ಅವನಿಗೆ ಆಹಾರವನ್ನು ಕೊಟ್ಟು ಪಂಚಾಶ್ಚರ್ಯವನ್ನು ಪಡೆದನು. ಸತ್ಪಾತ್ರ ದಾನದಿಂದ ಯಾವುದು ತಾನೆ ದೊರೆಯುವುದಿಲ್ಲ ? ಬಳಿಕ ಶುದ್ಧಚಿತ್ತದಿಂದ ಸಾಮಾಯಿಕಚಾರಿತ್ರವನ್ನು ಹೊಂದಿ ತಪಸ್ಸಿನಲ್ಲಿ ಮೂರು ವರ್ಷಪರಿಮಿತವಾದ ಕಾಲವು ಕಳೆಯುತ್ತಿರಲು ಈ ಅಗ್ರಗಾಮಿಯಾದ ಮಹಾಮುನಿಯು ತನ್ನ ದೀಕ್ಷಾವನದಲ್ಲಿ ನೇರಳೆಯ ಮರದ ಬುಡದಲ್ಲಿ ಎರಡು ಉಪವಾಸನಿಯಮವುಳ್ಳವನಾಗಿ ಮಾಘಮಾಸದ ಶುಕ್ಲಪಕ್ಷದ ಷಷ್ಠೀತಿಥಿಯಲ್ಲಿ ಸಾಯಂಕಾಲದಲ್ಲಿ ತಾನು ದೀಕ್ಷೆಯನ್ನು ತೆಗೆದುಕೊಂಡ ನಕ್ಷತ್ರದಲ್ಲಿ ಘಾತಿಕರ್ಮವಿನಾಶದಿಂದ ತತ್ಕ್ಷಣದಲ್ಲಿ ಚರಾಚರವಸ್ತುಗಳನ್ನು ತಿಳಿಯುವ ಕೇವಲಜ್ಞಾನವನ್ನು ಪಡೆದನು. ಆಗಲೇ ದೇವೇಂದ್ರರು ಚೆನ್ನಾಗಿ ಬಗ್ಗಿದ ಕಿರೀಟಮುಖಗಳುಳ್ಳವರಾಗಿ ಬಂದರು. ಅವರಿಂದ ದೇವದುಂದುಭಿಯೇ ಮೊದಲಾದ ಅಷ್ಟಮಹಾಪ್ರಾತಿಹಾರ್ಯಾದಿ ವೈಭವವನ್ನು ಹೊಂದಿ ಗಂಧಕುಟಿಯ ಮಧ್ಯದಲ್ಲಿರುವ ಸಿಂಹಾಸನದಲ್ಲಿದ್ದನು.

ಮಂದರಾದಿಗಣಾಧೀಶಪಂಚಪಂಚಾಶದಾವೃತಃ ।
ಶತೋತ್ತರಸಹಸ್ರೋಕ್ತಪೂಜ್ಯಪೂರ್ವಧರಾವೃತಃ ॥ ೪೮ ॥

ಖತ್ರಿಪಂಚತುರ್ವಹ್ನ್ಯುಕ್ತಶಿಕ್ಷಕೈರುಪಲಕ್ಷಿತಃ ।
ಖದ್ವಯಾಷ್ಟಚತುರ್ಮೇಯತ್ರಿವಿಧಾವಧಿವಂದಿತಃ ॥ ೪೯ ॥

ಖದ್ವಯೇಂದ್ರಿಯಪಂಚಾಭಿಧೇಯಕೇವಲಲೋಚನಃ ।
ಶೂನ್ಯತ್ರಯನವಜ್ಞಾತವಿಕ್ರಿಯರ್ದ್ಧ್ಯುಪಬೃಂಹಿತಃ ॥ ೫೦ ॥

ಖದ್ವಯೇಂದ್ರಿಯಪಂಚಾವಗಮ್ಯತುರ್ಯಾವಬೋಧನಃ ।
ಖದ್ವಯರ್ತ್ವಗ್ನಿನಿರ್ಣೀತವಾದಿಸಂಯುತಸಂಯುತಃ ॥ ೫೧ ॥

ಅಷ್ಟಷಷ್ಟಿಸಹಸ್ರೋಕ್ತಸರ್ವಸಂಯಮಿಸಂಸ್ತುತಃ ।
ತ್ರಿಸಹಸ್ರೈಕಲಕ್ಷೋಕ್ತಪದ್ಮಾರ್ಯಾದ್ಯಾರ್ಯಿಕಾರ್ಚಿತಃ ॥ ೫೨ ॥

ದ್ವಿಲಕ್ಷಶ್ರಾವಕೋಪೇತೋ ದ್ವಿಗುಣಶ್ರಾವಿಕಾನ್ವಿತಃ ।
ಪೂರ್ವೋಕ್ತದ್ವಿಗಣೋಪೇತೋ ಧರ್ಮಕ್ಷೇತ್ರೇಷ್ವನಾರತಮ್ ॥ ೫೩ ॥

ಭವಾತಪಪರಿಮ್ಲಾನಭವ್ಯಸಸ್ಯಾಭಿತರ್ಪಕಃ ।
ಸಮ್ಮೇದಪರ್ವತಂ ಪ್ರಾಪ್ಯ ಮಾಸಮೇಕಂ ಗತಕ್ರಿಯಃ ॥ ೫೪ ॥

ಖದ್ವಯರ್ತ್ವಷ್ಟಸಂಪ್ರೋಕ್ತಯತಿಭಿಃ ಪ್ರತಿಮಾಂ ಗತಃ ।
ಆಷಾಢಸ್ಯೋತ್ತರಾಷಾಢೇ ಕೃಷ್ಣಾಷ್ಟಮ್ಯಾಂ ನಿಶಾಮುಖೇ ॥ ೫೫ ॥

ಸದ್ಯಃ ಕೃತ್ವಾ ಸಮುದ್ಘಾತಂ ಸೂಕ್ಷ್ಮಂ ಶುಕ್ಲಂ ಸಮಾಶ್ರಿತಃ ।
ಸಮ್ಯಗ್ಯೋಗಾದಯೋಗಸ್ಸನ್ ಸ್ವಾಸ್ಥ್ಯಂ ರೋಗೀವ ಸೋಗಮತ್ ॥

ಮಂದರನೇ ಮೊದಲಾದ ಐವತ್ತೈದು ಮಂದಿ ಗಣಧರರಿಂದ ಆವರಿಸಲ್ಪಟ್ಟವನೂ ಸಾವಿರದನೂರು ಮಂದಿ ಪೂಜ್ಯರಾದ ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಧಾರಿಗಳಾದ ಮುನಿಗಳಿಂದ ಸುತ್ತಲ್ಪಟ್ಟವನೂ ಮೂವತ್ತಾರು ಸಾವಿರದ ಐದುನೂರು ಮೂವತ್ತು ಮಂದಿ ಶಿಕ್ಷಕರಿಂದ ಯುಕ್ತನೂ ನಾಲ್ಕು ಸಾವಿರದ ಎಂಟುನೂರು

ಮಂದಿ ದೇಶಾವಧಿ ಪರಮಾವಧಿ ಸರ್ವಾವಧಿಜ್ಞಾನಿಮುನಿಗಳಿಂದ ವಂದಿಸಲ್ಪಟ್ಟವನೂ ಐದುಸಾವಿರದ ಐದುನೂರು ಮಂದಿ ಕೇವಲಜ್ಞಾನಿಗಳುಳ್ಳವನೂ ಒಂಬತ್ತು ಸಾವಿರ ಮಂದಿ ವಿಕ್ರಿಯರ್ದ್ಧಿಸಂಪನ್ನರಾದ ಮುನಿಗಳುಳ್ಳವನೂ ಐದುಸಾವಿರದ ಐದುನೂರು ಮಂದಿ ಮನಃಪರ್ಯಯಜ್ಞಾನಿಗಳುಳ್ಳವನೂ ಮೂರುಸಾವಿರದ ಆರುನೂರು ಮಂದಿ ವಾದಿಮುನಿಗಳಿಂದ ಯುಕ್ತನೂ ಒಟ್ಟು ಅರುವತ್ತೆಂಟುಸಾವಿರ ಮುನಿಗಳಿಂದ ಸ್ತುತಿಸಲ್ಪಟ್ಟವನೂ ಒಂದುಲಕ್ಷದ ಮೂರುಸಾವಿರ ಮಂದಿ ಪದ್ಮಾ ಮೊದಲಾದ ಆರ್ಯಿಕೆಯರಿಂದ ಪೂಜಿತನೂ ಎರಡು ಲಕ್ಷ ಶ್ರಾವಕರಿಂದ ಯುಕ್ತನೂ ನಾಲ್ಕುಲಕ್ಷ ಶ್ರಾವಿಕೆಯರುಳ್ಳವನೂ ಹಿಂದೆ ಹೇಳಲ್ಪಟ್ಟ ಎರಡು ಗಣ–ಅಸಂಖ್ಯಾತ ದೇವ ದೇವಿಯರೂ ಸಂಖ್ಯಾತತಿರ್ಯಕ್ಪ್ರಾಣಿಗಳೂ ಉಳ್ಳವನೂ ಆರ್ಯಕ್ಷೇತ್ರಗಳಲ್ಲಿ ಯಾವಾಗಲೂ ಭವವೆಂಬ ಬಿಸಿಲಿನಿಂದ ಬಾಡಿದ ಭವ್ಯರೆಂಬ ಸಸ್ಯಗಳನ್ನು ತೃಪ್ತಿಪಡಿಸುವವನೂ ಸಮ್ಮೇದಪರ್ವತವನ್ನು ಹೊಂದಿ ಒಂದು ತಿಂಗಳವರೆಗೆ ಯೋಗನಿರೋಧವನ್ನು ಮಾಡಿದವನೂ ಎಂಟುಸಾವಿರದ ಆರು ನೂರು ಮಂದಿ ಯತಿಗಳೊಡನೆ ಪ್ರತಿಮಾಯೋಗವನ್ನು ಹೊಂದಿದವನೂ ಆಷಾಢ ಮಾಸದ ಕೃಷ್ಣಪಕ್ಷದ ಅಷ್ಟಮೀತಿಥಿಯಲ್ಲಿ ಉತ್ತರಾಷಾಢನಕ್ಷತ್ರದಲ್ಲಿ ಸಾಯಂಕಾಲ ದಲ್ಲಿ ಕೇವಲಸಮುದ್ಘಾತವನ್ನು ಮಾಡಿ ಸೂಕ್ಷ್ಮಕ್ರಿಯಾಪ್ರತಿಪಾತಿ ವ್ಯುಪರತಕ್ರಿಯಾನಿ ವೃತ್ತಿಶುಕ್ಲಧ್ಯಾನಗಳನ್ನು ಹೊಂದಿದವನೂ ಉತ್ತಮಯೋಗವನ್ನು ಬಿಟ್ಟು ಅಯೋಗ ಕೇವಲಿಯೂ ಆಗಿ, ರೋಗಿಯು ಸ್ವಾಸ್ಥ್ಯವನ್ನು ಹೊಂದುವಂತೆ, ಆ ಸ್ವಾಮಿಯು ಸ್ವಾಸ್ಥ್ಯವನ್ನು–ಮುಕ್ತಿಯನ್ನು ಪಡೆದನು.

**ತದಾಪ್ರಭೃತಿ ಲೋಕೇಸ್ಮಿನ್ನೂಜ್ಯಾ ಕಾಲಾಷ್ಟಮೀ ಬುಧೈಃ ।**
**ತದೇವಾಲಂಬನಂ ಕೃತ್ವಾ ಮಿಥ್ಯಾದೃಗ್ಭಿಶ್ಚ ಪೂಜ್ಯತೇ ॥ ೫೭ ॥**

ಅಂದಿನಿಂದ ಈ ಲೋಕದಲ್ಲಿ ಆಷಾಢಕೃಷ್ಣಾಷ್ಟಮಿಯು ಪ್ರಾಜ್ಞರಿಂದ ಪೂಜ್ಯ ವಾಯಿತು. ಆ ಪದ್ಧತಿಯನ್ನೇ ಆಶ್ರಯಿಸಿ ಮಿಥ್ಯಾದೃಷ್ಟಿಗಳೂ ಆ ಅಷ್ಟಮಿಯನ್ನು ಪೂಜಿಸುತ್ತಾರೆ.

**ಕೃತ್ವಾಂತೇಷ್ಟಿಂ ತದಾಭ್ಯೇತ್ಯ ಸೌಧರ್ಮಪ್ರಮುಖಾಸ್ಸುರಾಃ ।**
**ಸಿದ್ಧಸ್ತುತಿಭಿರರ್ಥ್ಯಾಭಿರವಂದಿಷತ ನಿರ್ವೃತಮ್ ॥ ೫೮ ॥**

ಆಗ ಸೌಧರ್ಮನೇ ಮೊದಲಾದ ದೇವರ್ಕಳು ಬಂದು ಕೊನೆಯ ಪೂಜೆಯನ್ನು–ನಿರ್ವಾಣಕಲ್ಯಾಣವನ್ನು ಮಾಡಿ ಶ್ರೇಷ್ಠವಾದ ಸ್ತುತಿಗಳೊಡನೆ ಮುಕ್ತನಾದ ಸ್ವಾಮಿಯನ್ನು ವಂದಿಸಿದರು.

**ಸಂತತ್ಯಾ ಮಲಸಂಚಯಃ ಪರಿಣತೋ ಹಿಂಸಾದಿಭಿಸ್ಸಂತತಮ್ ।**
**ಸಂಸಾರೇಸುಭೃತಾಂ ತತೋ ನಿಜಗುಣಾ ನೇಯುರ್ವಿಶುದ್ಧಿಂ ಕ್ವಚಿತ್ ।**
**ತಾನದ್ಯಾಹಮವಾಪ್ಯ ಬುದ್ಧಿಮಮಲಾಂ ಶುದ್ಧಿಂ ನಯಾಮೀತ್ಯಯುವ್ ।**
**ಶುಕ್ಲಧ್ಯಾನಮುಪಾಶ್ರಿತೋತಿವಿಮಲಸ್ತಸ್ಮಾದ್ಯಥಾರ್ಥಾಹ್ವಯಃ ॥ ೫೯ ॥**

''ಸಂಸಾರದಲ್ಲಿ ಯಾವಾಗಲೂ ಹಿಂಸಾದಿ ಪಾಪಕಾರ್ಯಗಳಿಂದ ಪ್ರಾಣಿಗಳಿಗೆ ಪರಂಪರೆಯಿಂದ ಕರ್ಮಮಲಸಂಚಯವಾಗಿದೆ. ಆದುದರಿಂದ ಆತ್ಮೀಯ ಗುಣ ಗಳೆಂದೂ ವಿಶುದ್ಧಿಯನ್ನು ಹೊಂದುವುದಿಲ್ಲ. ಈಗ ನಾನು ಆ ಗುಣಗಳನ್ನು ಹೊಂದಿ ಬುದ್ಧಿಗೆ ಮಲರಹಿತವಾದ ಶುದ್ಧಿಯನ್ನು ಹೊಂದಿಸುತ್ತೇನೆ'' ಈ ರೀತಿಯಾಗಿ ಈ ವಿಮಲವಾಹನಸ್ವಾಮಿಯು ವಿಚಾರಮಾಡಿ ಶುಕ್ಲಧ್ಯಾನವನ್ನು ಹೊಂದಿದನು. ಆದುದರಿಂದ ಯಥಾರ್ಥವಾದ ಹೆಸರುಳ್ಳವನಾದನು.

**ಶ್ರದ್ಧಾನಬೋಧರದನಂ ಗುಣಪುಣ್ಯಮೂರ್ತಿ- ।**
**ಮಾರಾಧನಾಚರಣಮಾಯತಧರ್ಮಹಸ್ತಮ್ ।**
**ಸನ್ಮಾರ್ಗವಾರಣಮಘಾರಿಮಭಿಪ್ರಚೋದ್ಯ ।**
**ವಿಧ್ವಂಸನಾದ್ವಿಮಲವಾಹನಮಾಹುರೇನಮ್ ॥ ೬೦ ॥**

ಪಾಪವೆಂಬ ಶತ್ರುವನ್ನು ಪ್ರೇರೇಪಿಸಿ ನಾಶಮಾಡಿರುವುದರಿಂದ ಈ ವಿಮಲ ವಾಹನನನ್ನು ಸಮ್ಯಗ್ದರ್ಶನ ಜ್ಞಾನಗಳೆಂಬ ದಂತಗಳುಳ್ಳುದೂ ಗುಣವೆಂಬ ಪುಣ್ಯಮಯವಾದ ಶರೀರವುಳ್ಳುದೂ ಜ್ಞಾನಾದ್ಯಾರಾಧನೆಗಳೆಂಬ ಕಾಲುಗಳುಳ್ಳುದೂ ವಿಸ್ತಾರವಾದ ಧರ್ಮವೆಂಬ ಸೊಂಡಿಲುಳ್ಳುದೂ ಆದ ಸನ್ಮಾರ್ಗ– ಮುಕ್ತಿಮಾರ್ಗ ಕ್ಕೊಯ್ಯುವ ಆನೆಯನ್ನಾಗಿ ಹೇಳುತ್ತಾರೆ–ವಿಮಲವಾಹನ(ನಿರ್ಮಲವಾದವಾಹನ) ನನ್ನಾಗಿ ಹೇಳುತ್ತಾರೆ.

**ವಿನಿಹತಪರಸೇನಃ ಪದ್ಮಸೇನೋ ಮಹೀಶಃ ।**
**ಸುರಸಮಿತಿಸಮರ್ಚ್ಯಃ ಸ್ಪಷ್ಟಸೌಖ್ಯೋಷ್ಟಮೇಂದ್ರಃ ।**
**ವಿಪುಲವಿಮಲಕೀರ್ತಿರ್ವಿಶ್ವವಿಶ್ವಂಭರೇಶೋ ।**
**ವಿಮಲಜಿನಪತಿಃ ಸ್ತಾತ್ತನ್ಸುಷ್ಮತಸ್ತುಷ್ಟಯೇ ವಃ ॥ ೬೧ ॥**

ಮೊದಲು ಶತ್ರುಸೈನ್ಯವನ್ನು ನಾಶಮಾಡಿದ ಪದ್ಮಸೇನಮಹಾರಾಜನೂ ಬಳಿಕ ದೇವತಾಸಮೂಹದಿಂದ ಪೂಜಿಸಲ್ಪಡತಕ್ಕವನೂ ಸ್ಪಷ್ಟವಾದ ಸುಖವುಳ್ಳವನೂ ಆದ ಎಂಟನೆಯ ಇಂದ್ರನೂ ಆಗಿದ್ದು ಆಮೇಲೆ ವಿಸ್ತಾರವಾದ ಮತ್ತು ನಿರ್ಮಲವಾದ ಕೀರ್ತಿಯುಳ್ಳವನೂ ಸಮಸ್ತಜಗತ್ತಿಗೆ ಸ್ವಾಮಿಯೂ ಆದ ವಿಮಲಜಿನಪತಿಯು ಚೆನ್ನಾಗಿ ನಿಮ್ಮ ಸಂತೋಷಕ್ಕೆ ಕಾರಣನಾಗಿರಲಿ.

**ಸ್ತಿಮಿತತಮಸಮಾಧಿಧ್ವಸ್ತನಿಶ್ಶೇಷದೋಷಂ ।**
**ಕ್ರಮಗಮಕರಣಾಂತರ್ಧಾನಹೀನಾವಬೋಧಮ್ ।**
**ವಿಮಲಮಮಲಕೀರ್ತಿಂ ಕೀರ್ತಿಭಾಜಂ ದ್ಯುಭಾಜಾಂ ।**
**ನಮತ ವಿಮಲತಾಪ್ತ್ಯೈ ಭಕ್ತಿಭಾರೇಣ ಭವ್ಯಾಃ ॥ ೬೨ ॥**

ಎಲೈ ಭವ್ಯರೆ ! ಅತ್ಯಂತ ಶಾಂತವಾದ ಸಮಾಧಿ–ಧ್ಯಾನದಿಂದ ಸಮಸ್ತ ದೋಷ ಗಳನ್ನು ನಾಶಮಾಡಿರುವವನೂ ಕ್ರಮ ಕರಣ ವ್ಯವಧಾನರಹಿತವಾದ ಜ್ಞಾನವುಳ್ಳ ವನೂ ನಿರ್ಮಲವಾದ ಕೀರ್ತಿಯುಳ್ಳವನೂ ಸ್ವರ್ಗಿಕರ ಕೀರ್ತಿಭಾಜನನೂ ಆದ ವಿಮಲನಾಥನನ್ನು ನೀವು ನಿರ್ಮಲತ್ವದ ಪ್ರಾಪ್ತಿಗೋಸ್ಕರ ಭಕ್ತಿಭಾರದಿಂದ ನಮಸ್ಕರಿಸಿರಿ .

**ತೀರ್ಥೇ ವಿಮಲನಾಥಸ್ಯ ಸಂಜಾತೌ ರಾಮಕೇಶವೌ ।**
**ಧರ್ಮಸ್ವಯಂಭುನಾಮಾನೌ ತಯೋಶ್ಚರಿತಮುಚ್ಯತೇ ॥ ೬೩ ॥**

ಶ್ರೀವಿಮಲನಾಥತೀರ್ಥಂಕರರ ತೀರ್ಥಕಾಲದಲ್ಲಿ ಧರ್ಮನೆಂಬ ಬಲಭದ್ರನೂ ಸ್ವಯಂಭುವೆಂಬ ಕೇಶವನೂ ಜನಿಸಿದರು. ಅವರ ಚರಿತವನ್ನು ಹೇಳುತ್ತೇವೆ .

**ವಿದೇಹೇಸ್ಮಿನ್ ಪ್ರತೀಚ್ಯಾಸೀನ್ಮಿತ್ರನಂದೀತಿ ಭೂಭುಜಃ ।**
**ಸ್ವವಶೀಕೃತನಿಶ್ಶೇಷನಿಜಭೋಗ್ಯಮಹೀತಲಃ ॥ ೬೪ ॥**

ಈ ಜಂಬೂದ್ವೀಪದ ಪಶ್ಚಿಮವಿದೇಹದಲ್ಲಿ ಮಿತ್ರನಂದಿಯೆಂಬ ರಾಜನಿದ್ದನು. ಅವನು ಭೋಗಿಸುವುದಕ್ಕೆ ಯೋಗ್ಯವಾದ ಸಮಸ್ತ ಭೂತಲವನ್ನು ತನ್ನ ವಶಪಡಿಸಿ ಕೊಂಡಿದ್ದನು.

**ಪ್ರಜಾನಾಮೇಷ ರಕ್ತತ್ವಾತ್ಪ್ರಜಾಶ್ಚಾಸ್ಯ ಪ್ರಪಾಲನಾತ್ ।**
**ಸರ್ವದಾ ವೃದ್ಧಯೇಭೂವನ್ ಭವೇತ್ಸ್ವಾರ್ಥಾತ್ಪರಾರ್ಥತಾ ॥ ೬೫ ॥**

ಈ ಮಿತ್ರನಂದಿಯು ಪ್ರಜೆಗಳಿಗೆ ಪ್ರಿಯನಾಗಿದ್ದುದರಿಂದಲೂ ಇವನ ಪ್ರಜಾ ಪಾಲನದಿಂದಲೂ ಪ್ರಜೆಗಳು ಯಾವಾಗಲೂ ವೃದ್ಧಿಯನ್ನು ಹೊಂದುತ್ತಿದ್ದರು. ನ್ಯಾಯಮಾರ್ಗದಿಂದ ಸ್ವಹಿತವನ್ನು ಸಾಧಿಸಿದರೆ ಅದರಿಂದ ಪರಹಿತವೂ ಆಗುವುದು.

**ಸ್ವಚಕ್ರಮಿವ ತಸ್ಯಾಸೀತ್ಪರಚಕ್ರಂ ಚ ಧೀಮತಃ ।**
**ವಕ್ರಬುದ್ಧಿಸ್ಸ್ವಚಕ್ರಂ ಚ ಪರಚಕ್ರಮುಪಕ್ರಮಾತ್ ॥ ೬೬ ॥**

ಪ್ರಾಜ್ಞನಾದ ಆ ಮಿತ್ರನಂದಿಗೆ ಶತ್ರುಸೇನೆಯೂ ತನ್ನ ಸೇನೆಯಾಗುತ್ತಿತ್ತು. ವಕ್ರ ಬುದ್ಧಿಯುಳ್ಳವನು ಕ್ರಮವನ್ನು ಮೀರುವುದರಿಂದ ತನ್ನ ಸೇನೆಯನ್ನೂ ಶತ್ರು ಸೇನೆಯನ್ನಾಗಿ ಮಾಡಿಕೊಳ್ಳುತ್ತಾನೆ.

**ಅತೃಪ್ಯದೇಷ ಭೂಪಾಲಸ್ತರ್ಪಯಿತ್ವಾಖಿಲಾಃ ಪ್ರಜಾಃ ।**
**ಪರೋಪಕಾರವೃತ್ತೀನಾಂ ಪರತೃಪ್ತಿಃ ಸ್ವತೃಪ್ತಯೇ ॥ ೬೭ ॥**

ಈ ರಾಜನು ಸಕಲಪ್ರಜೆಗಳನ್ನು ತೃಪ್ತಿಗೊಳಿಸಿ ತಾನು ತೃಪ್ತಿಯನ್ನು ಹೊಂದಿದನು. ಪರೋಪಕಾರವನ್ನು ಮಾಡುವವರಿಗೆ ಬೇರೆಯವರ ತೃಪ್ತಿಯು ತಮ್ಮ ತೃಪ್ತಿಗೆ ಕಾರಣವಾಗುವುದು.

**ಸ ಕದಾಚಿತ್ಸಮಾಸಾದ್ಯ ಸುವ್ರತಂ ಜಿನಪುಂಗವಮ್ ।**
**ಶ್ರುತ್ವಾ ಧರ್ಮಂ ಸುಧೀರ್ಮತ್ವಾ ಸ್ವಾಂಗಭೋಗಾದಿಭಂಗುರುಮ್ ॥**

**ಅಂಗಿನೋ ಬತ ಸೀದಂತಿ ಸಂಗಮಾದಾಹಿತಾಂಹಸಃ ।**
**ನಿಸ್ಸಂಗತಾಂ ನ ಗಚ್ಛಂತಿ ಕಿಂ ಗತಂ ನ ವಿದಂತ್ಯಮೀ ॥ ೬೯ ॥**

**ಇತಿ ನಿರ್ವಿದ್ಯ ಸಂಸಾರಾದ್ಗೃಹೀತ್ವಾ ಸಂಯಮಂ ಪರಮ್ ।**
**ಸನ್ನ್ಯಸ್ಯಾಗಾತ್ತ್ರಯಸ್ತ್ರಿಂಶದ್ವಾರ್ಧಿಸ್ಥಿತಿರನುತ್ತರಮ್ ॥ ೭೦ ॥**

ಪ್ರಾಜ್ಞನಾದ ಅವನು ಒಂದಾನೊಂದು ದಿವಸ ಸುವ್ರತರೆಂಬ ಜಿನೇಶ್ವರರನ್ನು ಹೊಂದಿ ಧರ್ಮಶ್ರವಣವನ್ನು ಮಾಡಿ ತನ್ನ ಶರೀರ ಭೋಗ ಮೊದಲಾದುವು ನಶ್ವರವೆಂದು ತಿಳಿದು "ಈ ಪ್ರಾಣಿಗಳು ಸಂಪೂರ್ಣವಾಗಿ ಅಹಿತವನ್ನುಂಟು ಮಾಡುವ ಪಾಪದ ಸಂಬಂಧದಿಂದ ದುಃಖಪಡುತ್ತವೆ. ಪರಿಗ್ರಹರಾಹಿತ್ಯವನ್ನು ಹೊಂದುವುದಿಲ್ಲ. ಕಳೆದುಹೋದುದನ್ನೇಕೆ ಇವು ತಿಳಿಯುವುದಿಲ್ಲ ?" ಈ ರೀತಿಯಾಗಿ ವಿಚಾರಮಾಡಿ ಸಂಸಾರದಿಂದ ವಿರಕ್ತನಾಗಿ ಉತ್ಕೃಷ್ಟವಾದ ಸಂಯಮ– ದೀಕ್ಷೆಯನ್ನು ಸ್ವೀಕರಿಸಿ ಸನ್ಯಾಸವಿಧಿಯಿಂದ ಸತ್ತು ಮೂವತ್ತುಮೂರು ಸಾಗರೋಪಮ ವರ್ಷಸ್ಥಿತಿಯುಳ್ಳ ಅನುತ್ತರವಿಮಾನವನ್ನು ಹೊಂದಿದನು.

**ತತೋ ದ್ವಾರವತೀಪುರ್ಯಾಂ ಸುತೋ ರುದ್ರಮಹೀಪತೇಃ ।**
**ಸುಭದ್ರಾಯಾಂ ಚ ಧರ್ಮಾಖ್ಯಃ ಸೋಭೂತ್ಸುಸ್ವಪ್ನಪೂರ್ವಕಮ್ ॥**

ಅವನು ಅಲ್ಲಿಂದ ಬಂದು ದ್ವಾರವತೀನಗರದಲ್ಲಿ ರುದ್ರನೆಂಬ ರಾಜನಿಗೆ ಸುಭದ್ರೆಯೆಂಬ ಪತ್ನಿಯಲ್ಲಿ ಶುಭಸ್ವಪ್ನಪೂರ್ವಕವಾಗಿ ಧರ್ಮನೆಂಬ ಪುತ್ರನಾದನು.

**ಅಮುಷ್ಮಿನ್ಭಾರತೇ ವರ್ಷೇ ಕುನಾಲವಿಷಯೇ ಪುರಮ್ ।**
**ಸ್ವಾವಸ್ತೀ ತತ್ರ ರಾಜಾಭೂತ್ಸುಕೇತುರ್ಭೋಗತತ್ಪರಃ ॥ ೭೧ ॥**

ಈ ಭಾರತವರ್ಷದಲ್ಲಿ ಕುನಾಲವೆಂಬ ದೇಶದಲ್ಲಿ ಸ್ವಾವಸ್ತಿಯೆಂಬ ನಗರವಿದೆ. ಅಲ್ಲಿ ಭೋಗಪರವಶನಾದ ಸುಕೇತುವೆಂಬ ರಾಜನಿದ್ದನು.

**ಕಾಮಜವ್ಯಸನೇ ದ್ಯೂತೇ ಸಂಸಕ್ತಃ ಕರ್ಮಚೋದಿತಃ ।**
**ನಿಷಿದ್ಧೋ ಮಂತ್ರಿಭಿರ್ಬಂಧುವರ್ಗೈಶ್ಚ ಬಹುಶೋಪಿ ತೈಃ ॥ ೭೨ ॥**

**ಚೋದಿತೋ ವಾ ಸ ತೈರ್ಭೂಯೋದೀವ್ಯದ್ದೈವವಿಲೋಮತಃ ।**
**ರಾಷ್ಟ್ರಂ ವಿತ್ತಂ ಬಲಂ ದೇವ್ಯಃ ಸರ್ವಮಸ್ಯಾಪಹಾರಿತಮ್ ॥ ೭೪ ॥**

ಅವನು ಮಂತ್ರಿಗಳಿಂದಲೂ ಆ ತನ್ನ ಬಂಧುಗಳಿಂದಲೂ ಬಹಳವಾಗಿ ನಿಷೇಧಿಸಲ್ಪಟ್ಟವನಾದರೂ ಕರ್ಮದಿಂದ ಪ್ರೇರಿತನಾಗಿ ಕಾಮವ್ಯಸನದಲ್ಲಿಯೂ ದ್ಯೂತವ್ಯಸನದಲ್ಲಿಯೂ ಆಸಕ್ತನಾಗಿ ಪ್ರತಿಕೂಲದೈವದಿಂದ ಪ್ರೇರಿತನಾದಂತೆ ಮತ್ತೆ ಜೂಜಾಡಿ ತನ್ನ ದೇಶವನ್ನೂ ಧನವನ್ನೂ ಸೈನ್ಯವನ್ನೂ ರಾಣಿಯರನ್ನೂ ಎಲ್ಲವನ್ನೂ ಕಳೆದುಕೊಂಡನು.

**ಕ್ರೋಧಜೇಷು ತ್ರಿಷೂಕ್ತೇಷು ಕಾಮಜೇಷು ಚತುರ್ಷು ಚ ।**
**ನಾಪರಂ ವ್ಯಸನಂ ದ್ಯೂತಾನ್ನಿಕೃಷ್ಟಂ ಪ್ರಾಹುರಾಗಮಾಃ ॥ ೭೫ ॥**

ಕ್ರೋಧದಿಂದ ಮದ್ಯ ಮಾಂಸ ಮತ್ತು ಬೇಟೆ ಈ ಮೂರು ವ್ಯಸನಗಳುಂಟಾಗುತ್ತವೆ. ಕಾಮದಿಂದ ದ್ಯೂತ ಚೌರ್ಯ ವೇಶ್ಯಾ ಮತ್ತು ಪರಸ್ತ್ರೀಗಮನಗಳೆಂಬ ನಾಲ್ಕು ವ್ಯಸನಗಳುಂಟಾಗುತ್ತವೆ. ದ್ಯೂತಕ್ಕಿಂತ ನಿಕೃಷ್ಟವಾದ ವ್ಯಸನವು ಬೇರೆಯಿಲ್ಲವೆಂದು ಆಗಮಗಳು ಹೇಳುತ್ತವೆ.

**ಮಹಾಗುಣೇಷು ಯತ್ಸತ್ಯಮುಕ್ತಂ ಪ್ರಾಗ್ನಾರ್ಯತೇ ಹಿ ತತ್ ।**
**ದ್ಯೂತಾಸಕ್ತೇನ ಲಜ್ಜಾಭಿಮಾನಂ ಪಶ್ಚಾತ್ಕುಲಂ ಸುಖಮ್ ॥ ೭೬ ॥**

**ಸೌಜನ್ಯಂ ಬಂಧವೋ ಧರ್ಮೋ ದ್ರವ್ಯಂ ಕ್ಷೇತ್ರಂ ಗೃಹಂ ಯಶಃ ।**
**ಪಿತರೌ ದಾರಕಾ ದಾರಾಃ ಸ್ವಯಂ ಚಾತಿಪ್ರಸಂಗತಃ ॥ ೭೭ ॥**

ಐದು ಮಹಾಗುಣಗಳಲ್ಲಿ ಹೇಳಲ್ಪಟ್ಟಿರುವ ಸತ್ಯಗುಣವು ಜೂಜಾಡುವವನಿಗೆ ಮೊದಲು ನಾಶವಾಗುತ್ತದೆ. ಬಳಿಕ ಲಜ್ಜೆಯೂ ಅಭಿಮಾನವೂ ಕುಲವೂ ಸುಖವೂ ಸೌಜನ್ಯವೂ ಬಂಧುಗಳೂ ಧರ್ಮವೂ ಧನವೂ ಕ್ಷೇತ್ರವೂ ಮನೆಯೂ ಯಶಸ್ಸೂ ತಂದೆತಾಯಿಗಳೂ ಮಕ್ಕಳೂ ಪತ್ನಿಯರೂ ತಾವಾಗಿ ದೂರವಾಗುತ್ತಾರೆ.

**ನ ಸ್ನಾನಂ ಭೋಜನಂ ಸ್ವಾಪೋ ನಿರೋಧಾದ್ರೋಗಮೃಚ್ಛತಿ ।**
**ನರ್ಥತ್ಯರ್ಥಾನ್ವೃಥಾ ಕ್ಲೇಶೀ ಬಹುದೋಷಶ್ಚಿನೋತ್ಯಘಮ್ ॥ ೭೮ ॥**

ಜೂಜಾಡುವವನು ಸ್ನಾನವನ್ನೂ ಭೋಜನವನ್ನೂ ನಿದ್ರೆಯನ್ನೂ ಮಾಡುವುದಿಲ್ಲ. ಮಲಮೂತ್ರಗಳನ್ನು ತಡೆಯುವುದರಿಂದ ರೋಗವನ್ನು ಹೊಂದುತ್ತಾನೆ. ಧನವನ್ನು ಹೊಂದದೆ ವ್ಯರ್ಥವಾಗಿ ಕ್ಲೇಶವುಳ್ಳವನೂ ಬಹು ದೋಷಗಳುಳ್ಳವನೂ ಆಗಿ ಪಾಪವನ್ನು ಗಳಿಸುತ್ತಾನೆ.

**ಕರೋತಿ ಕುತ್ಸಿತಂ ಕರ್ಮ ಜಾಯತೇ ಪಾರಿಪಂಥಿಕಃ ।**
**ಯಾಚತೇನ್ಯೇಷು ಚಾರ್ಥಾರ್ಥಮಕಾರ್ಯೇಷು ಪ್ರವರ್ತತೇ ॥ ೭೯ ॥**

ಜೂಜಾಡುವವನು ಕೆಟ್ಟಕೆಲಸವನ್ನು ಮಾಡುತ್ತಾನೆ. ಬೇರೆಯವರಿಗೆ ಶತ್ರುವಾಗುತ್ತಾನೆ. ಬೇರೆಯವರಲ್ಲಿ ಬೇಡುತ್ತಾನೆ. ಧನಕ್ಕೋಸ್ಕರ ಅಕಾರ್ಯಗಳಲ್ಲಿ ಪ್ರವರ್ತಿಸುತ್ತಾನೆ.

**ಬಂಧುಭಿಸ್ಸ ಪರಿತ್ಯಕ್ತೋ ರಾಜಭಿರ್ಯಾತಿ ಯಾತನಾಮ್ ।**
**ಇತಿ ದ್ಯೂತಸ್ಯ ಕೋ ದೋಷಾನುದ್ದೇಷ್ಟುಮಪಿ ಶಕ್ನುಯಾತ್ ॥ ೮೦ ॥**

ಅವನು ಬಂಧುಗಳಿಂದ ತ್ಯಜಿಸಲ್ಪಡುತ್ತಾನೆ. ರಾಜರಿಂದ ಯಾತನೆಯನ್ನು ಹೊಂದುತ್ತಾನೆ. ಈ ರೀತಿಯಾಗಿ ಜೂಜಿನ ದೋಷಗಳ ಹೆಸರುಗಳನ್ನು ಹೇಳುವುದಕ್ಕೂ ಯಾವನು ಸಮರ್ಥನಾಗುವನು ?

**ಸುಕೇತುರೇವ ದೃಷ್ಟಾಂತೋ ಯೇನ ರಾಜ್ಯಂ ಚ ಹಾರಿತಮ್ ।**
**ತಸ್ಮಾಲ್ಲೋಕದ್ವಯಂ ವಾಂಛನ್ದೂರತೋ ದ್ಯೂತಮುತ್ಸೃಜೇತ್ ॥ ೮೧ ॥**

ಜೂಜಿನಿಂದಾಗುವ ಕೆಡುಕಿಗೆ ಸುಕೇತುರಾಜನೇ ದೃಷ್ಟಾಂತ. ಅವನು ಜೂಜಾಟದಿಂದ ತನ್ನ ರಾಜ್ಯವನ್ನೂ ಕಳೆದುಕೊಂಡನು. ಆದುದರಿಂದ ಉಭಯಲೋಕಗಳಲ್ಲಿ ಹಿತವನ್ನು ಬಯಸುವವನು ದ್ಯೂತವನ್ನು ದೂರದಿಂದ ಬಿಟ್ಟುಬಿಡಬೇಕು.

**ಸುಕೇತುರಿತಿ ಸರ್ವಸ್ವಹಾನಿಶೋಕಾಕುಲೀಕೃತಃ ।**
**ಗತ್ವಾ ಸುದರ್ಶನಾಚಾರ್ಯಪಾದಮೂಲಂ ಶ್ರುತಾಗಮಃ ॥ ೮೨ ॥**

**ಸದ್ಯೋ ನಿರ್ವಿದ್ಯ ಸಂಸಾರಾತ್ಪ್ರವ್ರಜ್ಯಾಪ್ಯ ಶುಭಾಶಯಃ ।**
**ಶೋಕಾದನ್ನಂ ಸಮುತ್ಸೃಜ್ಯ ತಪೋಭಿರತಿದುಷ್ಕರೈಃ ॥ ೮೩ ॥**

**ದೀರ್ಘಕಾಲಮಲಂ ತಪ್ತ್ವಾ ಕಲಾಗುಣವಿದಗ್ಧತಾ ।**
**ಬಲಂ ಚೈತೇನ ಮೇ ಭೂಯಾತ್ತಪಸೇತ್ಯಾಯುಷಃ ಕ್ಷಯೇ ॥ ೮೪ ॥**

**ಕೃತ್ವಾ ನಿದಾನಂ ಸನ್ನ್ಯಸ್ಯ ಲಾಂತವಂ ಕಲ್ಪಮಾಸ್ಥಿತಃ ।**
**ತತ್ರ ದಿವ್ಯಸುಖಂ ಪ್ರಾಪತ್ಸ ಚತುರ್ದಶಸಾಗರಮ್ ॥ ೮೫ ॥**

ಈ ರೀತಿಯಾಗಿ ಸುಕೇತುವು ತನ್ನ ಸರ್ವಸ್ವನಾಶದಿಂದುಂಟಾದ ಶೋಕದಿಂದ ವ್ಯಾಕುಲನಾಗಿ ಸುದರ್ಶನಾಚಾರ್ಯರ ಪಾದಮೂಲಕ್ಕೆ ಹೋಗಿ ಅವರಿಂದ ಆಗಮವನ್ನು ಕೇಳಿ ತತ್ಕ್ಷಣದಲ್ಲಿ ಸಂಸಾರದಿಂದ ವಿರಕ್ತನಾಗಿ ದೀಕ್ಷೆಯನ್ನು ತೆಗೆದುಕೊಂಡರೂ ಅಶುಭಭಾವನೆಯುಳ್ಳವನಾಗಿ ಶೋಕದಿಂದ ಅನ್ನವನ್ನು ಬಿಟ್ಟು ಬಹು ಕಠಿನವಾದ ತಪಸ್ಸುಗಳಿಂದ ದೀರ್ಘಕಾಲದವರೆಗೆ ಚೆನ್ನಾಗಿ ತಪಸ್ಸನ್ನು ಮಾಡಿ "ಈ ತಪಸ್ಸಿನಿಂದ ನನಗೆ ಕಲೆಗಳಲ್ಲಿಯೂ ಗುಣಗಳಲ್ಲಿಯೂ ನೈಪುಣ್ಯವೂ ಬಲವೂ ಉಂಟಾಗಬೇಕು" ಎಂದು ತನ್ನ ಆಯುಷ್ಯಾವಸಾನದಲ್ಲಿ ನಿದಾನಶಲ್ಯವನ್ನು ಮಾಡಿ ಮಡಿದು ಲಾಂತವಕಲ್ಪವೆಂಬ ಏಳನೆಯ ಸ್ವರ್ಗದಲ್ಲಿ ಜನಿಸಿ ಅಲ್ಲಿ ಅವನು ಹದಿನಾಲ್ಕು ಸಾಗರವರ್ಷಪರಿಮಿತವಾದ ದಿವ್ಯಸುಖವನ್ನು ಹೊಂದಿದನು.

**ತತಃ ಸೋಽಪ್ಯವತೀರ್ಯಾತ್ರ ರುದ್ರಸ್ಯೈವ ಮಹೀಭುಜಃ ।**
**ಬಭೂವ ಪೃಥಿವೀದೇವ್ಯಾಂ ಸ್ವಯಂಭೂಃ ಸೂನುಷು ಪ್ರಿಯಃ ॥ ೮೬ ॥**

ಅವನು ಆ ಸ್ವರ್ಗದಿಂದಿಳಿದು ಈ ಭರತಕ್ಷೇತ್ರದಲ್ಲಿ ರುದ್ರನೆಂಬ ರಾಜನಿಗೆ ಅವನ ಪತ್ನಿಯಾದ ಪೃಥಿವೀದೇವಿಯಲ್ಲಿ ಸ್ವಯಂಭುವೆಂಬ ಪುತ್ರನಾಗಿ ಜನಿಸಿದನು. ಅವನು ಪುತ್ರರಲ್ಲೆಲ್ಲ ತಂದೆತಾಯಿಗಳಿಗೆ ಪ್ರಿಯನಾಗಿದ್ದನು.

**ಧರ್ಮೋ ಬಲಃ ಸ್ವಯಂಭೂಶ್ಚ ಕೇಶವಸ್ತೌ ಪರಸ್ಪರಮ್ ।**
**ಅಭೂತಾಂ ಪ್ರೀತಿಸಂಪನ್ನಾವನ್ವಭೂತಾಂ ಶ್ರಿಯಂ ಚಿರಮ್ ॥ ೮೭ ॥**

ಧರ್ಮನು ಬಲದೇವನಾಗಿದ್ದನು. ಸ್ವಯಂಭುವು ಕೇಶವನಾಗಿದ್ದನು. ಅವರು ಪರಸ್ಪರ ಪ್ರೀತಿಯುಳ್ಳವರಾಗಿ ಬಹುಕಾಲದವರೆಗೆ ಸಂಪತ್ತಿಯನ್ನನುಭವಿಸಿದರು.

**ಸುಕೇತುಜಾತೌ ದ್ಯೂತೇನ ನಿರ್ಜಿತ್ಯ ಬಲಿನಾ ಹಠಾತ್ ।**
**ಸ್ವೀಕೃತಂ ಯೇನ ತದ್ರಾಜ್ಯಂ ಸೋಽಭೂದ್ರತ್ನಪುರೇ ಮಧುಃ ॥ ೮೮ ॥**

ಸುಕೇತುರಾಜನ ಜನ್ಮದಲ್ಲಿ ಬಲಶಾಲಿಯಾದ ಯಾವನು ಜೂಜಿನಿಂದ ಹಠತ್ತಾಗಿ ಜಯಿಸಿ ಆ ಸುಕೇತುವಿನ ರಾಜ್ಯವನ್ನು ಸ್ವೀಕರಿಸಿದ್ದನೋ ಅವನು ರತ್ನಪುರದಲ್ಲಿ ಮಧುವೆಂಬ ರಾಜನಾದನು.

**ತಜ್ಜನ್ಮವೈರಸಂಸ್ಕಾರಸಮೇತೇನಾಧುನಾಮುನಾ ।**
**ತನ್ನಾಮಶ್ರುತಿಮಾತ್ರೇಣ ಸಕೋಪೇನ ಸ್ವಯಂಭುವಾ ॥ ೮೯ ॥**

ಆ ಪೂರ್ವಭವವೈರಸಂಸ್ಕಾರಸಮೇತನಾದ ಈ ಸ್ವಯಂಭುವು ಈಗ ಆ ಮಧುವಿನ ಹೆಸರನ್ನು ಕೇಳಿದೊಡನೆಯೇ ಕೋಪಗೊಳ್ಳುತ್ತಿದ್ದನು.

**ಮಧೋಃ ಕೇನಾಪಿ ಭೂಪೇನ ಪ್ರಹಿತಂ ಪ್ರಾಭೃತಂ ಸ್ವಯಮ್ ।**
**ಘಾತಯಿತ್ವೋಭಯೋರ್ದೂತೌ ಸಾಧಿಕ್ಷೇಪಮಗೃಹ್ಯತ ॥ ೯೦ ॥**

ಮಧುವಿಗೆ ಯಾವನೋ ರಾಜನು ಕೈಗಾಣಿಕೆಯನ್ನು ಕಳುಹಿಸಿದನು. ಸ್ವಯಂಭುವು ಅವರಿಬ್ಬರ ಭೃತ್ಯರನ್ನೂ ಕೊಂದು ಬಲಾತ್ಕಾರವಾಗಿ ಆ ಕೈಗಾಣಿಕೆಯನ್ನು ತೆಗೆದುಕೊಂಡನು.

**ಪ್ರೀತ್ಯಪ್ರೀತಿಸಮುತ್ಪನ್ನಃ ಸಂಸ್ಕಾರೋ ಜಾಯತೇ ಸ್ಥಿರಃ ।**
**ತಸ್ಮಾದಪ್ರೀತಿಮಾತ್ಮಜ್ಞೋ ನ ಕುರ್ಯಾತ್ಕ್ವೋಽಪಿ ಕಸ್ಯಚಿತ್ ॥ ೯೧ ॥**

ಪ್ರೀತಿಯಿಂದಲಾಗಲಿ ಅಪ್ರೀತಿಯಿಂದಲಾಗಲಿ ಉಂಟಾದ ಸಂಸ್ಕಾರವು ಸ್ಥಿರವಾಗಿರುತ್ತದೆ. ಆದುದರಿಂದ ಆತ್ಮಸ್ವರೂಪವನ್ನು ತಿಳಿದ ಯಾವನೂ ಯಾವನ ಮೇಲೆಯೂ ದ್ವೇಷವನ್ನು ಮಾಡಬಾರದು.

**ಆಕರ್ಣ್ಯ ನಾರದಾದ್ದೂತಮೃತ್ಯುಮಾವೇಶಿತಃ ಕ್ರುಧಾ ।**
**ಯಯಾವಭಿಮುಖಂ ಯೋದ್ಧುಂ ರಾಮಕೇಶವಯೋರ್ಮಧುಃ ॥**

ಸ್ವಯಂಭುವು ದೂತನನ್ನು ಕೊಂದನೆಂಬ ವಿಷಯವನ್ನು ನಾರದನಿಂದ ಕೇಳಿ ಕೋಪದಿಂದ ಮಧುವು ಯುದ್ಧಮಾಡುವುದಕ್ಕೋಸ್ಕರ ಆ ಬಲಕೇಶವರಿಗೆ ಇದಿರಾಗಿ ಹೋದನು.

**ತೌ ಚ ಸಂಗ್ರಾಮಸನ್ನದ್ಧೌ ಕ್ರುದ್ಧೌ ಯುದ್ಧವಿಶಾರದೌ ।**
**ಪ್ರಾಪತುಃ ಸಹಸಾ ಹಂತುಂ ತಂ ಯಮಾನಲಸನ್ನಿಭೌ ॥ ೯೩ ॥**

ಯುದ್ಧಸನ್ನದ್ಧರೂ ಕೋಪಗೊಂಡಿರುವವರೂ ಯುದ್ಧದಲ್ಲಿ ಚತುರರೂ ಯಮನಿಗೂ ಅಗ್ನಿಗೂ ಸಮಾನರೂ ಆದ ಆ ಬಲ ಕೇಶವರೂ ಆ ಮಧುವನ್ನು ಕೊಲ್ಲುವುದಕ್ಕೋಸ್ಕರ ಶೀಘ್ರವಾಗಿ ಅವನನ್ನು ಹೊಂದಿದರು.

**ಸೈನ್ಯಯೋರುಭಯೋರಾಸೀತ್ಸಂಗ್ರಾಮಃ ಸಂಹರನ್ನಿವ ।**
**ಪರಸ್ಪರಂ ಚಿರಂ ಘೋರಃ ಶೂರಯೋರ್ಭೀರುಭೀಪ್ರದಃ ॥ ೯೪ ॥**

ಶೂರವಾದ ಆ ಉಭಯಸೈನ್ಯಗಳಿಗೂ ಭೀರುಗಳಿಗೆ ಭಯವನ್ನುಂಟುಮಾಡುವ ಘೋರಯುದ್ಧವು, ಪರಸ್ಪರವಾಗಿ ಸಂಹರಿಸುವಂತೆ, ಹೆಚ್ಚು ಹೊತ್ತಿನವರೆಗೆ ನಡೆಯಿತು.

**ಸ್ವಯಂಭುವಂ ಸಮುದ್ದಿಶ್ಯ ತದಾಸೋಢಾ ಮಧುಃ ಕ್ರುಧಾ ।**
**ಜ್ವಲಚ್ಚಕ್ರಂ ನಿವರ್ತ್ಯಾಶು ನ್ಯಕ್ಷಿಪತ್ತಜ್ಜಿಘಾಂಸಯಾ ॥ ೯೫ ॥**

ಆಗ ಮಧುವು ಕೋಪದಿಂದ ಅಸಹನವುಳ್ಳವನಾಗಿ ಉರಿಯುತ್ತಿರುವ ಚಕ್ರವನ್ನು ತಿರುಗಿಸಿ ಸ್ವಯಂಭುವನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಶೀಘ್ರವಾಗಿ ಅವನ ಮೇಲೆ ಬಿಟ್ಟನು.

**ತದ್ಗತ್ವಾಶು ಪರೀತ್ಯೈನಂ ಭುಜಾಗ್ರೇ ದಕ್ಷಿಣೇ ಸ್ಥಿತಮ್ ।**
**ಅವತೀರ್ಯ ಮರುನ್ಮಾರ್ಗಾದ್ಭಾಸ್ಕರಸ್ಯೇವ ಮಂಡಲಮ್ ॥ ೯೬ ॥**

ಆ ಚಕ್ರವು ಹೋಗಿ ಈ ಸ್ವಯಂಭುವನ್ನು ಪ್ರದಕ್ಷಿಣೆಮಾಡಿ, ಆಕಾಶಮಾರ್ಗದಿಂದ ಸೂರ್ಯನ ಮಂಡಲದಂತೆ, ಅವನ ಬಲದ ಭುಜದ ಮೇಲೆ ಇಳಿದು ನಿಂತಿತು.

**ತದೇವಾದಾಯ ಸಕ್ರೋಧಃ ಸ್ವಯಂಭೂರ್ವಿದ್ವಿಷಂ ಪ್ರತಿ ।**
**ಪ್ರಹಿತ್ಯಾದಾದಸೂಂಸ್ತಸ್ಯ ಕಿಂ ನ ಸ್ಯಾತ್ಸುಕೃತೋದಯಾತ್ ॥ ೯೭ ॥**

ಕ್ರೋಧಯುಕ್ತನಾದ ಆ ಸ್ವಯಂಭುವು ಆ ಚಕ್ರವನ್ನೇ ತೆಗೆದುಕೊಂಡು ಶತ್ರುವಿನ ಮೇಲೆ ಬಿಟ್ಟು ಅವನ ಪ್ರಾಣಗಳನ್ನು ತೆಗೆದು–ಕೊಂದನು. ಪುಣ್ಯದ ಉದಯದಿಂದ ಯಾವುದು ತಾನೆ ಸಾಧ್ಯವಾಗುವುದಿಲ್ಲ ?

**ಆಧಿಪತ್ಯಂ ತದಾವಾಪ್ಯ ಭರತಾರ್ಧಸ್ಯ ಕೇಶವಃ ।**
**ವಾಸವೋ ವಾನ್ವಭೂದ್ಭೋಗಾನ್ನಿರ್ವಿಘ್ನಂ ಸ್ವಾಗ್ರಜಾನ್ವಿತಃ ॥ ೯೮ ॥**

ಆಗ ಕೇಶವನು ಭರತಕ್ಷೇತ್ರದ ಅರ್ಧಭಾಗದ ಆಧಿಪತ್ಯವನ್ನು ಹೊಂದಿ ತನ್ನ ಅಣ್ಣನೊಡನೆ, ದೇವೇಂದ್ರನಂತೆ, ನಿರ್ವಿಘ್ನವಾಗಿ ಭೋಗಗಳನ್ನನುಭವಿಸಿದನು.

**ಮಧುಃ ಸತ್ತ್ವಂ ಸಮುತ್ಸೃಜ್ಯ ಭೂಯಃ ಸಂಸೃತಿಬೀಜಜಮ್ ।**
**ಬದ್ಧಾಯುರ್ನಾರಕಂ ಪ್ರಾಪನ್ನಿರಯಂ ಸ ತಮಸ್ತಮಃ ॥ ೯೯ ॥**

ಆ ಮಧುವು ಪ್ರಾಣವನ್ನು ಬಿಟ್ಟು ಮತ್ತೆ ಭವಬೀಜಜನ್ಯವಾದ ನರಕಾಯುಷ್ಯವನ್ನು ಕಟ್ಟಿಕೊಂಡು ಮಹಾತಮವೆಂಬ ಏಳನೆಯ ನರಕವನ್ನು ಹೊಂದಿದನು.

**ಕೇಶವೋ ಹಿ ತಮನ್ವೇಷ್ಟುಮಿವ ವೈರಾನುಬಂಧನಾತ್ ।**
**ತದೇವ ನರಕಂ ಪಶ್ಚಾತ್ಪ್ರಾವಿಕ್ಷತ್ಪಾಪಪಾಕತಃ ॥ ೧೦೦ ॥**

ಬಳಿಕ ಕೇಶವನು ಕೂಡ ವೈರಸಂಬಂಧದಿಂದ ಆ ಮಧುವನ್ನು ಹುಡುಕುವುದಕ್ಕೋಸ್ಕರವೋ ಎನ್ನುವಂತೆ, ಪಾಪದ ಉದಯದಿಂದ ಅದೇ ನರಕವನ್ನು ಪ್ರವೇಶಿಸಿದನು.

**ಬಲೋಽಪಿ ತದ್ವಿಯೋಗೋತ್ಥಶೋಕಸಂತಪ್ತಮಾನಸಃ ।**
**ನಿರ್ವಿದ್ಯ ಸಂಸೃತೇಃ ಪ್ರಾಪ್ಯ ಜಿನಂ ವಿಮಲವಾಹನಮ್ ॥ ೧೦೧ ॥**

**ಸಾಮಾಯಿಕಂ ಸಮಾದಾಯ ಸಂಯಮಂ ಸಂಯತಾಗ್ರಣೀಃ ।**
**ವಿಗ್ರಹೇ ವಿಗ್ರಹೀವೋಗ್ರಂ ನಿರ್ವ್ಯಗ್ರಮಕರೋತ್ತಪಃ ॥ ೧೦೨ ॥**

ಆ ಸ್ವಯಂಭುವಿನ ವಿಯೋಗದಿಂದುಂಟಾದ ಶೋಕದಿಂದ ಸಂತಪ್ತವಾದ ಮನಸ್ಸುಳ್ಳ ಬಲದೇವನು ಕೂಡ ಸಂಸಾರದಿಂದ ವಿರಕ್ತನಾಗಿ ವಿಮಲವಾಹನ ಜಿನರನ್ನು ಹೊಂದಿ ಅವರಿಂದ ಸಾಮಾಯಿಕವೆಂಬ ಸಂಯಮವನ್ನು (ದೀಕ್ಷೆಯನ್ನು) ತೆಗೆದುಕೊಂಡು ಸಂಯತ–ವ್ರತಿಗಳಿಗೆ ಮುಂದಾಳಾಗಿ, ಯುದ್ಧದಲ್ಲಿ ಯೋಧನಂತೆ, ಉಗ್ರವಾದ ತಪಸ್ಸನ್ನು ಬಹುವ್ಯಗ್ರವಾಗಿ ಮಾಡಿದನು.

**ಸದ್ವೃತ್ತಸ್ತೇಜಸೋ ಮೂರ್ತಿರ್ಧುನ್ವನ್ನಭ್ಯುದಿತಸ್ತಮಃ ।**
**ಅಸಂಬಾಧಮಗಾದೂರ್ಧ್ವಂ ಭಾಸ್ವಾನಿವ ಬಲೋಽಮಲಃ ॥ ೧೦೩ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಕಾಂಪಿಲ್ಯಪಟ್ಟಣದಲ್ಲಿ ಕೃತವರ್ಮಮಹಾರಾಜಂಗಂ ಜಯಶ್ಯಾಮಾದೇವಿಗಂ ಉತ್ತರಾಷಾಢಾನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಅರುವತ್ತು ಬಿಲ್ಲುತ್ಸೇಧಮನುಳ್ಳ ಅರುವತ್ತುಲಕ್ಷವರ್ಷ ಆಯುಷ್ಯಮನುಳ್ಳ ವರಾಹಲಾಂಛನಮನುಳ್ಳ ಷಣ್ಮುಖವೈರೋಟೀ-ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ವೀರಸಂಕುಲಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ವಿಮಲತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

ಹೆಚ್ಚು ದುಂಡಾಗಿರುವವನೂ ತೇಜಸ್ಸಿನ ಮೂರ್ತಿಯೂ ಕತ್ತಲೆಯನ್ನು ಹೋಗಲಾಡಿಸುವವನೂ ಅಭ್ಯುದಯವನ್ನು ಹೊಂದುವವನೂ ಆದ ಸೂರ್ಯನಂತೆ, ಸದಾಚಾರವುಳ್ಳವನೂ ತೇಜೋಮೂರ್ತಿಯೂ ಪಾಪವನ್ನು ನಾಶಮಾಡುವವನೂ ಅಭ್ಯುದಯವನ್ನು ಹೊಂದಿರುವವನೂ ಕರ್ಮಮಲರಹಿತನೂ ಆದ ಆ ಬಲದೇವನು ನಿರ್ಬಾಧವಾಗಿ ಉರ್ಧ್ವಗಮನವನ್ನು ಹೊಂದಿದನು. ಮೋಕ್ಷವನ್ನು ಪಡೆದನೆಂದು ಭಾವವು.

**ದ್ಯೂತೇನ ಮೋಹವಿಹಿತೇನ ವಿಧೀಃ ಸ್ವಯಂಭೂ- ।**
**ರ್ಯಾತೋ ಮಧುಶ್ಚ ನರಕಂ ದುರಿತೀ ದುರಂತಮ್ ।**
**ಧರ್ಮಾಧಿಕಂ ತ್ರಿತಯಮೇವ ಕುಮಾರ್ಗವೃತ್ತ್ಯಾ ।**
**ಹೇತುಃ ಶ್ರಿತಂ ಭವತಿ ದುಃಖಪರಂಪರಾಯಾಃ ॥ ೧೦೪ ॥**

ಮೋಹ-ಲೋಭದಿಂದುಂಟಾದ ಜೂಜಿನಿಂದ ಪಾಪವನ್ನು ಗಳಿಸಿಕೊಂಡವರೂ ಬುದ್ಧಿಹೀನರೂ ಆದ ಸ್ವಯಂಭುವೂ ಮಧುವೂ ದುರಂತವಾದ ನರಕವನ್ನು ಹೊಂದಿದರು. ಕೆಟ್ಟದಾರಿಯಿಂದ ನಡೆದರೆ ಧರ್ಮ ಅರ್ಥ ಕಾಮಗಳು ಮೂರೂ ದುಃಖಪರಂಪರೆಗೆ ಕಾರಣವಾಗುವುದು.

**ಕ್ರೋಧಾದಿಭಿಃ ಸುತಪಸೋಪಿ ಭವೇನ್ನಿದಾನಮ್ ।**
**ತತ್ಸ್ಯಾದ್ದುರಂತದುರಿತೋರ್ಜಿತದುಃಖಹೇತುಃ ।**
**ತೇನಾಪ ಮುಕ್ತಿಪಥಗೋಪ್ಯಪಥಂ ಸುಕೇತು- ।**
**ಸ್ತ್ಯಾಜ್ಯಂ ತತಃ ಖಲಸಮಾಗಮವನ್ನಿದಾನಮ್ ॥ ೧೦೫ ॥**

ಉತ್ತಮವಾದ ತಪಸ್ಸುಳ್ಳವನಿಗೂ ಕ್ರೋಧಾದಿಗಳಿಂದ ನಿದಾನ ಶಲ್ಯವುಂಟಾಗುವುದು. ಅದು ದುರಂತವಾದ ದುಷ್ಕೃತದಿಂದ ಹೆಚ್ಚಿದ ದುಃಖಕ್ಕೆ ಕಾರಣವಾಗುವುದು. ಸುಕೇತುವು ಮುಕ್ತಿಮಾರ್ಗವನ್ನು ಹೊಂದಿದವನಾದರೂ ಆ ನಿದಾನಶಲ್ಯದಿಂದ ತಪ್ಪುದಾರಿಯನ್ನು ಹೊಂದಿದನು. ಆದುದರಿಂದ ನಿದಾನಶಲ್ಯವು, ದುರ್ಜನನ ಸಹವಾಸದಂತೆ, ತ್ಯಾಜ್ಯವಾಗಿದೆ.

**ದ್ಯುತಿವಿನಿಹತಮಿತ್ರೋ ಮಿತ್ರನಂದೀ ಕ್ಷಿತೀಶೋ ।**
**ಯಮುಸಮಿತಿಸಮಗ್ರೋನುತ್ತರಾಧೀಶ್ವರೋಭೂತ್ ।**
**ಅನುಧರಣಿಮಿತಸ್ಸನ್ದ್ವಾವರವತ್ಯಾಂ ಸ ಧರ್ಮಃ ।**
**ಪರಮಪದಮವಾಪತ್ಸಾಧಿತಾತ್ಮಸ್ವರೂಪಃ ॥ ೧೦೬ ॥**

ಮೊದಲು ತನ್ನ ದೇಹಕಾಂತಿಯಿಂದ ಸೂರ್ಯನನ್ನು ಜಯಿಸಿದ ಮಿತ್ರನಂದಿಯೆಂಬ ರಾಜನೂ ಬಳಿಕ ಸಂಪೂರ್ಣವಾದ ವ್ರತಸಮಿತಿಗಳುಳ್ಳ ಮುನಿಯೂ ಆಮೇಲೆ ಅನುತ್ತರವಿಮಾನದಲ್ಲಿ ಅಹಮಿಂದ್ರದೇವನೂ ತರುವಾಯ ಭೂಮಿಗಿಳಿದು–ಬಂದು ದ್ವಾರವತೀ–ನಗರದಲ್ಲಿ ಧರ್ಮನೆಂಬ ರಾಜಪುತ್ರನೂ ಆದ ಆ ಧರ್ಮ–ಬಲಭದ್ರನು ಆತ್ಮಸ್ವರೂಪವನ್ನು ಸಾಧಿಸಿದವನಾಗಿ ಪರಮಪದ– ಮುಕ್ತಿಯನ್ನು ಹೊಂದಿದನು.

**ಕುನಾಲವಿಷಯೇ ಸುಕೇತುರಧಿರಾಡಭೂದ್ದುರ್ಮತಿ-**
**ಸ್ತತಃ ಕೃತತಪಾಸ್ಸುರೋಜನಿ ಸುಖಾಲಯೇ ಲಾಂತವೇ ।**
**ಕೃತಾಂತಸದೃಶೋ ಮಧೋರನುಬಭೂವ ಚಕ್ರೇಶ್ವರ- ।**
**ಸ್ತತಶ್ಚ ದುರಿತೋದಯಾತ್ಕ್ಷಿತಿಮಗಾತ್ ಸ್ವಯಂಭೂರಧಃ ॥ ೧೦೭ ॥**

ಮೊದಲು ಕುನಾಲದೇಶದಲ್ಲಿ ದುರ್ಬುದ್ಧಿಯುಳ್ಳವನಾದ ಸುಕೇತುವೆಂಬ ರಾಜನೂ ಬಳಿಕ ತಪಸ್ಸನ್ನು ಮಾಡಿ ಸುಖಸ್ಥಾನವಾದ ಲಾಂತವವೆಂಬ ಏಳನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದವನೂ ಆಮೇಲೆ ಯಮನಿಗೆ ಸಮಾನನಾದ ಮಧು–ರಾಜನೂ ತರುವಾಯ ಭರತಾರ್ಧದ ಚಕ್ರಿಯಾದ ಕೇಶವನೂ ಆದ ಸ್ವಯಂಭುವು ಪಾಪದ ಉದಯದಿಂದ ಕೆಳಗಿನ ಭೂಮಿಯನ್ನು–ಏಳನೆಯ ನರಕವನ್ನು ಹೊಂದಿದನು.

**ಜಿನಸ್ಯಾಸ್ಯೈವ ತೀರ್ಥೇಗ್ರ್ಯೌ ಗಣೇಶೌ ಮೇರುಮಂದರೌ ।**
**ತುಂಗೌ ಸ್ಥಿರೌ ಸುರೈಸ್ಸೇವ್ಯೌ ವಕ್ಷ್ಯಾಮಶ್ಚರಿತಂ ತಯೋಃ ॥ ೧೦೮ ॥**

ಇದೇ ವಿಮಲತೀರ್ಥಂಕರರ ತೀರ್ಥಕಾಲದಲ್ಲಿ ಶ್ರೇಷ್ಠರೂ ಉನ್ನತರೂ ಸ್ಥಿರಚಿತ್ತರೂ ದೇವರ್ಕಳಿಂದ ಸೇವಿಸಲ್ಪಡತಕ್ಕವರೂ ಆದ ಮೇರು ಮತ್ತು ಮಂದರರೆಂಬಿಬ್ಬರು ಗಣಾಧೀಶ್ವರರಿದ್ದರು. ಅವರ ಚರಿತವನ್ನು ಹೇಳುವೆವು.

**ದ್ವೀಪೇಪರವಿದೇಹೇಸ್ಮಿನ್ಸೀತೋದಾನದ್ಯುದಕ್ತಟೇ ।**
**ವಿಷಯೇ ಗಂಧಮಾಲಿನ್ಯಾಂ ವೀತಶೋಕಪುರಾಧಿಪಃ ॥ ೧೦೯ ॥**

**ವೈಜಯಂತೋ ನೃಪಸ್ತಸ್ಯ ದೇವ್ಯಾಸ್ಸರ್ವಶ್ರಿಯಃ ಸುತೌ ।**
**ಸಂಜಯಂತಜಯಂತಾಖ್ಯೌ ರಾಜಪುತ್ರಗುಣಾನ್ವಿತೌ ॥ ೧೧೦ ॥**

ಇದೇ ಜಂಬೂದ್ವೀಪದ ಪಶ್ಚಿಮವಿದೇಹಕ್ಷೇತ್ರದಲ್ಲಿ ಸೀತೋದಾನದಿಯ ಉತ್ತರ ತೀರದಲ್ಲಿ ಗಂಧಮಾಲಿನಿಯೆಂಬ ದೇಶದಲ್ಲಿ ವೀತಶೋಕವೆಂಬ ನಗರವಿದೆ. ವೈಜಯಂತನೆಂಬವನು ಆ ನಗರದ ದೊರೆಯಾಗಿದ್ದನು. ಸರ್ವಶ್ರೀಯೆಂಬವಳು ಆತನ ಪತ್ನಿ. ಆ ದಂಪತಿಗಳಿಗೆ ರಾಜಪುತ್ರಗುಣಗಳಿಂದ ಯುಕ್ತರಾದ ಸಂಜಯಂತ ಮತ್ತು ಜಯಂತರೆಂಬೀರ್ವರು ಮಕ್ಕಳಿದ್ದರು.

**ತಾವನ್ಯೇದ್ಯುರಶೋಕಾಖ್ಯೇ ವನೇ ತೀರ್ಥಕೃತೋಂತಿಕೇ ।**
**ಧರ್ಮಂ ಸ್ವಯಂಭುವಃ ಶ್ರುತ್ವಾ ಭೋಗನಿರ್ವೇದಚೋದಿತೌ ॥ ೧೧೧ ॥**

**ಸಂಜಯಂತತನೂಜಾಯ ವೈಜಯಂತಾಯ ಧೀಮತೇ ।**
**ದತ್ವಾ ರಾಜ್ಯಂ ಸಮಂ ಪಿತ್ರಾ ಸಂಯಮಂ ಸಮವಾಪತುಃ ॥ ೧೧೨ ॥**

ಅವರು ಮತ್ತೊಂದು ದಿವಸ ಅಶೋಕವನದಲ್ಲಿ ಸ್ವಯಂಭುತೀರ್ಥಂಕರರ ಬಳಿಯಲ್ಲಿ ಧರ್ಮಶ್ರವಣವನ್ನು ಮಾಡಿ ಭೋಗವೈರಾಗ್ಯದಿಂದ ಪ್ರೇರಿತರಾಗಿ ಸಂಜಯಂತನ ಪುತ್ರನೂ ಪ್ರಾಜ್ಞನೂ ಆದ ವೈಜಯಂತನಿಗೆ ರಾಜ್ಯವನ್ನು ಕೊಟ್ಟು ತಮ್ಮ ತಂದೆಯಾದ ವೈಜಯಂತನೊಡನೆ ವ್ರತವನ್ನು ಸ್ವೀಕರಿಸಿ–ಮುನಿಗಳಾದರು.

**ಸಪ್ತಮೇ ಸಂಯತಸ್ಥಾನೇ ಕ್ಷೀಣಾಶೇಷಕಷಾಯಕಃ ।**
**ಸಾಮರಸ್ಯಂ ಸಮಾಪ್ಯಾಪ ವೈಜಯಂತೋ ಜಿನೇಶಿತಾಮ್ ॥ ೧೧೩ ॥**

ಏಳನೆಯ ಸಂಯಮದ ಸ್ಥಾನವಾದ ಹನ್ನೆರಡನೆಯ ಗುಣಸ್ಥಾನದಲ್ಲಿ ಸಮಸ್ತ ಕಷಾಯಗಳನ್ನು ಕ್ಷಯಿಸಿದ ವೈಜಯಂತನು ಸಾಮರಸ್ಯವನ್ನು ಹೊಂದಿ ಜಿನೇಶ್ವರತ್ವವನ್ನು ಪಡೆದನು.

**ಪಿತುಃ ಕೈವಲ್ಯಸಂಪ್ರಾಪ್ತಿಕಲ್ಯಾಣೇ ಧರಣೇಶಿನಃ ।**
**ಜಯಂತೋ ವೀಕ್ಷ್ಯ ಸೌಂದರ್ಯಮೈಶ್ವರ್ಯಂ ಚ ಮಹನ್ಮುನಿಃ ॥**

**ಧರಣೇಂದ್ರೋಭವನ್ಮೃತ್ವಾ ದುರ್ಮತಿಃ ಸ ನಿದಾನತಃ ।**
**ಅತ್ಯಲ್ಪಂ ಬಹುಮೂಲ್ಯೇನ ಗೃಹ್ಣತೋ ನ ಹಿ ದುರ್ಲಭಮ್ ॥ ೧೧೫ ॥**

ತಂದೆಯ ಕೇವಲಜ್ಞಾನ ಪ್ರಾಪ್ತಿಕಲ್ಯಾಣೋತ್ಸವದಲ್ಲಿ ಜಯಂತಮುನಿಯು ಆ ಉತ್ಸವಕ್ಕೆ ಬಂದಿದ್ದ ಧರಣೇಂದ್ರನ ಸೌಂದರ್ಯವನ್ನೂ ಮಹದೈಶ್ವರ್ಯವನ್ನೂ ನೋಡಿ ನಿದಾನಶಲ್ಯದಿಂದ ಮಡಿದು ಆ ದುರ್ಬುದ್ಧಿ–ಜಯಂತನು ಉತ್ತರ ಭವದಲ್ಲಿ ಧರಣೇಂದ್ರನಾದನು. ಹೆಚ್ಚುಬೆಲೆಯಿಂದ ಸ್ವಲ್ಪವನ್ನು ತೆಗೆದುಕೊಳ್ಳುವವನಿಗೆ ಅದು ದುರ್ಲಭವಲ್ಲವೇ ಅಲ್ಲ.

**ಅನ್ಯೇದ್ಯುಃ ಸಂಜಯಂತಾಖ್ಯಂ ಪ್ರತಿಮಾಯೋಗಧಾರಿಣಮ್ ।**
**ಮನೋಹರಪುರಾಭ್ಯರ್ಣಭೀಮಾರಣ್ಯಾಂತರೇ ಯತಿಮ್ ॥ ೧೧೬ ॥**

**ವಿದ್ಯುದ್ದಂಷ್ಟ್ರಾಹ್ವಯೋ ವಿದ್ಯಾಧರೋ ವೀಕ್ಷ್ಯಾಕ್ಷಮೋ ರುಷಾ ।**
**ಪೂರ್ವವೈರಾನುಸಂಧಾನಸ್ಮೃತ್ಯುದ್ಭೂತಾತಿವೇಗಯಾ ॥ ೧೧೭ ॥**

**ಉದ್ಧೃತ್ಯೈತ್ಯಾಖ್ಯಯಾಪ್ಯದ್ರೇರ್ಭರತೇವಾಗ್ದಿಗಾಶ್ರಿತಾ ।**
**ನದೀ ಕುಸುಮವತ್ಯಾಖ್ಯಾ ಹರಿವತ್ಯಭಿಧಾಪರಾ ॥ ೧೧೮ ॥**

**ಸುವರ್ಣಗಜವತ್ಯೌ ಚ ಚಂಡವೇಗಾ ಚ ಪಂಚಮೀ ।**
**ನ್ಯಕ್ಷಿಪತ್ಸಂಗಮೇ ತಾಸಾಮಗಾಧೇ ಸಲಿಲೇ ಖಲಃ ॥ ೧೧೯ ॥**

ಮತ್ತೊಂದು ದಿವಸ ವಿದ್ಯುದ್ದಂಷ್ಟ್ರನೆಂಬ ವಿದ್ಯಾಧರನು ಮನೋಹರಪುರದ ಬಳಿಯಲ್ಲಿರುವ ಘೋರಾರಣ್ಯದ ಮಧ್ಯದಲ್ಲಿ ಪ್ರತಿಮಾಯೋಗಧಾರಿಯಾಗಿದ್ದ ಸಂಜಯಂತನೆಂಬ ಮುನಿಯನ್ನು ನೋಡಿ ಪೂರ್ವಭವದ್ವೇಷಸಂಬಂಧದ ಸ್ಮರಣೆ ಯಿಂದುಂಟಾದ ಬಹುವೇಗವುಳ್ಳ ಕೋಪದಿಂದ ಅಸಹನವುಳ್ಳವನಾಗಿ ಅವನನ್ನು ಎತ್ತಿಕೊಂಡುಹೋಗಿ ಆ ದುಷ್ಟನು ಭರತಕ್ಷೇತ್ರದಲ್ಲಿ ಹೆಸರಿನಿಂದಲೂ ಅದ್ರಿಯೆಂಬ ಪರ್ವತದ ಪೂರ್ವದಿಕ್ಕನ್ನು ಆಶ್ರಯಿಸಿರುವ ಕುಸುಮವತಿಯೆಂಬ ನದಿ, ಮತ್ತೊಂದು ಹರಿವತಿಯೆಂಬ ನದಿ, ಸುವರ್ಣನದಿ, ಗಜವತೀನದಿ, ಐದನೆಯ ಚಂಡ ವೇಗಾನದಿ ಆ ಐದು ನದಿಗಳ ಸಂಗಮದಲ್ಲಿ ಅಗಾಧವಾದ ನೀರಿನಲ್ಲಿ ಎಸೆದನು.

**ಅಯಂ ಪಾಪೀ ಮಹಾಕಾಯೋ ದಾನವೋ ಮಾನವಾಶನಃ ।**
**ಸರ್ವಾನಸ್ಮಾನ್ಪೃಥಗ್ದೃಷ್ಟ್ವಾನ್ ಖಾದಿತುಂ ನಿಭೃತಂ ಸ್ಥಿತಃ ॥ ೧೨೦ ॥**

**ಶರಕುಂತಾದಿಶಸ್ತ್ರೌಘೈರ್ನಿರ್ಘೃಣಂ ಸರ್ವಭಕ್ಷಿಣಮ್ ।**
**ವಯಂ ಸರ್ವೇಽಪಿ ಸಂಭೂಯ ಹನಾಮಾಖಿಲವಿದ್ವಿಷಮ್ ॥ ೧೨೧ ॥**

**ಉಪೇಕ್ಷಿತೋಽಯಮದ್ಯೈವ ಭುಗ್ನಕುಕ್ಷಿರ್ಬುಭುಕ್ಷಿತಃ ।**
**ಭಕ್ಷಯೇಲ್ಲಕ್ಷಿತೋಽವಶ್ಯಂ ನಿಶಾಯಾಂ ಸ್ತ್ರೀಶಿಶೂನ್ಪಶೂನ್ ॥ ೧೨೨ ॥**

**ತಸ್ಮಾನ್ಮದ್ವಚನಂ ಯೂಯಂ ಪ್ರತೀತ ಕಿಮಹಂ ವೃಥಾ ।**
**ಮೃಷಾಂ ಭಾಷೇ ಕಿಮೇತೇನ ವೈರಮಸ್ತ್ಯತ್ರ ಮೇ ಪೃಥಕ್ ॥ ೧೨೩ ॥**

''ಮಹಾಕಾಯನೂ ಮನುಷ್ಯ ಭಕ್ಷಿಯೂ ಪಾಪಿಯೂ ಆದ ಈ ದಾನವನು ಬೇರೆ ಬೇರೆಯಾಗಿ ನೋಡಲ್ಪಟ್ಟ (ಒಂಟೊಂಟಿಗರಾಗಿರುವವರನ್ನು ನೋಡಿ) ನಮ್ಮೆಲ್ಲರನ್ನೂ ಭಕ್ಷಿಸುವುದಕ್ಕೋಸ್ಕರ ಗೋಪ್ಯವಾಗಿರುತ್ತಾನೆ. ನಾವೆಲ್ಲರೂ ಸೇರಿ ನಿರ್ದಯಿಯೂ ಸರ್ವಭಕ್ಷಿಯೂ ಸರ್ವಜನಶತ್ರುವೂ ಆದ ಇವನನ್ನು ಬಾಣ ಕುಂತ ಮೊದಲಾದ ಶಸ್ತ್ರಸಮೂಹಗಳಿಂದ ಕೊಲ್ಲಬೇಕು. ಹಳ್ಳವಾದ ಹೊಟ್ಟೆಯುಳ್ಳವನೂ ಹಸಿದವನೂ ಆದ ಇವನು ಉಪೇಕ್ಷಿಸಲ್ಪಟ್ಟರೆ ಈ ದಿವಸವೇ ರಾತ್ರಿಯಲ್ಲಿ ಹೆಂಗಸರನ್ನೂ ಮಕ್ಕಳನ್ನೂ ಪಶುಗಳನ್ನೂ ನಿಜವಾಗಿ ತಿಂದುಬಿಡುವವನಂತೆ ತೋರುತ್ತಾನೆ. ಆದುದರಿಂದ ನೀವುಗಳು ನನ್ನ ಮಾತನ್ನು ನಂಬಿರಿ. ನಾನೇನು ವ್ಯರ್ಥವಾಗಿ ಸುಳ್ಳನ್ನು ಹೇಳುತ್ತೇನೋ ? ಇವನೊಡನೆ ನನಗೆ ಬೇರೆ ವೈರವಿದೆಯೇ ?''

**ಇತಿ ತೇನ ಖಗಾ ಮುಗ್ಧಾಃ ಪುನಃ ಸರ್ವೇಽಪಿ ಚೋದಿತಾಃ ।**
**ತಥೇತಿ ಮೃತ್ಯುಸಂತ್ರಸ್ತಾಃ ಸಮಸ್ತಾಃ ಶಸ್ತ್ರಸಂಹತಿಃ ॥ ೧೨೪ ॥**

**ಆದಾಯ ಸಾಧುಮೂರ್ಧನ್ಯಂ ಸಮಾಹಿತಮಹಾಧಿಯಮ್ ।**
**ಸಮಂತಾದ್ಧಂತುಮಾರಬ್ಧಾ ವಿಸ್ರಬ್ಧಂ ಲುಬ್ಧಕೋಪಮಾಃ ॥ ೧೨೫ ॥**

ಈ ಪ್ರಕಾರವಾಗಿ ಆ ವಿದ್ಯುದ್ದಂಷ್ಟ್ರನಿಂದ ಪುನಃ ಪ್ರೇರಿತರೂ ಮೂರ್ಖರೂ ಮೃತ್ಯುವಿನಿಂದ ಭೀತರೂ ಆದ ಆ ವಿದ್ಯಾಧರರೆಲ್ಲರೂ ''ಹಾಗೆಯೇ ಆಗಲಿ'' ಎಂದು ಎಲ್ಲಾ ಶಸ್ತ್ರಸಮೂಹಗಳನ್ನು ತೆಗೆದುಕೊಂಡು ಶಾಂತವಾದ ಮಹಾಬುದ್ಧಿಯುಳ್ಳ ಆ ಸಾಧುಶ್ರೇಷ್ಠನನ್ನು ಬೇಡರಿಗೆ ಸಮಾನರಾಗಿ ಎಲ್ಲಾ ಕಡೆಗಳಿಂದಲೂ ಬಹಳವಾಗಿ ಹಿಂಸಿಸುವುದಕ್ಕಾರಂಭಿಸಿದರು.

**ಸೋಽಪಿ ಸರ್ವಸಹಿಷ್ಣುಸ್ಸನ್ ವಜ್ರಕಾಯೋಽಚಲಾಕೃತಿಃ ।**
**ನಿಶ್ಚಲೋ ನಿರ್ವೃತಿಂ ಯಾತಃ ಶುಕ್ಲಧ್ಯಾನೇನ ಶುದ್ಧಧೀಃ ॥ ೧೨೬ ॥**

ವಜ್ರಕಾಯನೂ ಪರ್ವತಾಕಾರನೂ ನಿಶ್ಚಲನೂ ಶುದ್ಧಬುದ್ಧಿಯುಳ್ಳವನೂ ಆದ ಆ ಸಂಜಯಂತಮುನಿಯೂ ಸರ್ವೋಪದ್ರವಗಳನ್ನೂ ಸಹಿಸಿದವನಾಗಿ ಶುಕ್ಲಧ್ಯಾನ ದಿಂದ ಮುಕ್ತಿಯನ್ನು ಹೊಂದಿದನು.

**ಸರ್ವೇ ನಿರ್ವಾಣಕಲ್ಯಾಣಪೂಜಾಂ ಕರ್ತುಂ ಸುರಾಧಿಪಾಃ ।**
**ಚತುರ್ವಿಧಾಃ ಸಮಂ ಪ್ರಾಪಂಸ್ತದಾ ಸದ್ಭಕ್ತಿಚೋದಿತಾಃ ॥ ೧೨೭ ॥**

ಆಗ ಸದ್ಭಕ್ತಿ ಪ್ರೇರಿತರಾದ ಭವನ ವ್ಯಂತರ ಜ್ಯೋತಿಷ್ಕಲ್ಪವಾಸಿಗಳೆಂಬ ಚತುರ್ವಿಧಾಮರೇಂದ್ರರೆಲ್ಲರೂ ನಿರ್ವಾಣಕಲ್ಯಾಣ ಪೂಜೆಯನ್ನು ಮಾಡುವುದಕ್ಕೋಸ್ಕರ ಕೂಡಿಬಂದರು.

**ಸ್ವಾಗ್ರಜಾಂಗೇಕ್ಷಣೋದ್ಭೂತತೃತೀಯಾವಗಮಃ ಕ್ರುಧಾ ।**
**ನಾಗೇಂದ್ರೋ ನಾಗಪಾಶೇನ ತಾನ್ಬಬಂಧಾಖಿಲಾನ್ ಖಗಾನ್ ॥ ೧೨೮ ॥**

ಅಲ್ಲಿಗೆ ಜಯಂತನಾಗಿದ್ದ ಆ ನಾಗೇಂದ್ರನೂ ಬಂದಿದ್ದನು. ಅವನು ತನ್ನ ಅಣ್ಣನ (ಸಂಜಯಂತಕೇವಲಿಯ) ದೇಹವನ್ನು ನೋಡಿದುದರಿಂದುಂಟಾದ ಅವಧಿಜ್ಞಾನ ವುಳ್ಳವನಾಗಿ ಕೋಪದಿಂದ ಆ ವಿದ್ಯಾಧರರೆಲ್ಲರನ್ನೂ ನಾಗಪಾಶದಿಂದ ಕಟ್ಟಿಹಾಕಿದನು.

**ನಾಸ್ಮಾಕಂ ದೇವ ದೋಷೋಽಸ್ತಿ ವಿದ್ಯುದ್ದಂಷ್ಟ್ರೇಣ ಪಾಪಿನಾ ।**
**ವಿದೇಹಾದಮುಮಾನೀಯ ಭಯಂ ಚಾಸ್ಮಾತ್ಖಚಾರಿಣಾಮ್ ॥ ೧೨೯ ॥**

**ಪ್ರತಿಪಾದ್ಯ ಜನೈರೇಭಿರಕಾರಿ ವಿವಿಧೋ ಮುಧಾ ।**
**ಮಹೋಪಸರ್ಗ ಇತ್ಯಾಹುಸ್ತೇಷು ಕೇಚಿದ್ವಿಚಕ್ಷಣಾಃ ॥ ೧೩೦ ॥**

ಆ ವಿದ್ಯಾಧರರಲ್ಲಿ ಪ್ರಾಜ್ಞರಾದ ಕೆಲವರು ''ದೇವಾ ! ನಮ್ಮಗಳ ತಪ್ಪಿಲ್ಲ. ಪಾಪಿಯಾದ ವಿದ್ಯುದ್ದಂಷ್ಟ್ರನು ವಿದೇಹಕ್ಷೇತ್ರದಿಂದ ಈ ಮುನಿಯನ್ನು ತಂದು ಇವನಿಂದ ವಿದ್ಯಾಧರರಿಗೆ ಭಯವಿದೆಯೆಂದು ಹೇಳಿ ಈ ಮೂರ್ಖರಿಂದ ವ್ಯರ್ಥವಾಗಿ ನಾನಾವಿಧವಾದ ಮಹೋಪಸರ್ಗವನ್ನು ಮಾಡಿಸಿದನು'' ಎಂದು ಹೇಳಿದರು.

**ಶ್ರುತ್ವಾ ತನ್ನಾಗರಾಜೋಽಪಿ ತೇಷು ಕಾಲುಷ್ಯಮುತ್ಸೃಜನ್ ।**
**ವಿದ್ಯುದ್ದಂಷ್ಟ್ರಂ ಪಯೋರಾಶೌ ಸಬಂಧುಂ ಕ್ಷೇಪ್ತುಮುದ್ಯತಃ ॥ ೧೩೧ ॥**

ಆ ಮಾತನ್ನು ಕೇಳಿ ಧರಣೇಂದ್ರನು ಅವರಲ್ಲಿ ದ್ವೇಷವನ್ನು ಬಿಟ್ಟು ವಿದ್ಯುದ್ದಂಷ್ಟ್ರನನ್ನೂ ಅವನ ಬಂಧುಗಳನ್ನೂ ಸಮುದ್ರದಲ್ಲಿ ಎಸೆಯುವುದಕ್ಕೆ ಉದ್ಯುಕ್ತನಾದನು.

**ಆದಿತ್ಯಾಭಸ್ತದಾ ದೇವೋ ಗುಣಹೇತುಸ್ತಯೋರಭೂತ್ ।**
**ಮಧ್ಯೇ ಜ್ಞಾತಾನುಬಂಧೋ ವಾ ಧಾತುಪ್ರತ್ಯಯಯೋಃ ಪರಃ॥ ೧೩೨ ॥**

ಆಗ ಆದಿತ್ಯಾಭನೆಂಬ ದೇವನು, ಧಾತುವಿಗೂ ಪ್ರತ್ಯಯಕ್ಕೂ ಮಧ್ಯದಲ್ಲಿ ಬೇರೊಂದು ವಿಕರಣದಂತೆ, ಆ ಧರಣೇಂದ್ರನಿಗೂ ವಿದ್ಯುದ್ದಂಷ್ಟ್ರನಿಗೂ ಮಧ್ಯದಲ್ಲಿ ಗುಣಕ್ಕೆ ಕಾರಣನಾದನು. ಸಮಾಧಾನಪಡಿಸುವುದಕ್ಕೆ ಕಾರಣನಾದನೆಂದು ಭಾವವು.

**ಕೃತದೋಷೋಽಸ್ತ್ವಯಂ ನಾಗನಾಥ ಕಿಂತ್ವನುರೋಧತಃ ।**
**ಸ ಮೇಽಸ್ಯ ಕ್ಷಮ್ಯತಾಂ ಕ್ಷುದ್ರೇ ಕಃ ಕೋಪಸ್ತ್ವಾದೃಶಾಂ ಪಶೌ ॥ ೧೩೩ ॥**

**ಪುರಾದಿತೀರ್ಥಕೃತ್ಕಾಲೇ ಭವದ್ವಂಶಸಮುದ್ಭವೈಃ ।**
**ವಂಶೋಽಸ್ಯ ನಿರ್ಮಿತೋ ದತ್ವಾ ವಿದ್ಯಾ ವಿದ್ಯಾಧರೇಶಿನಾಮ್ ॥ ೧೩೪ ॥**

**ಸಂವರ್ಧ್ಯ ವಿಷವೃಕ್ಷಂ ಚ ಛೇತ್ತುಂ ಸ್ವಯಮುವೈತು ಕಃ ।**
**ಇತ್ಯಾಬಾಲಪ್ರಸಿದ್ಧಂ ಕಿಂ ನ ವೇತ್ಸಿ ವಿಷಭೃತ್ಪತೇ ॥ ೧೩೫ ॥**

''ಎಲೈ ನಾಗೇಂದ್ರನೆ ! ಇವನು ತಪ್ಪನ್ನು ಮಾಡಿದ್ದಾನೆ. ಆದರೆ ನನ್ನ ನಿರ್ಬಂಧದಿಂದ ಇವನ ತಪ್ಪನ್ನು ಕ್ಷಮಿಸು. ನಿನ್ನಂಥವರಿಗೆ ಕ್ಷುದ್ರಪಶುವಿನಲ್ಲಿ ಕೋಪವೇನು ? ಮೊದಲು ಆದಿತೀರ್ಥಂಕರರ ಕಾಲದಲ್ಲಿ ವಿದ್ಯಾಧರೇಶ್ವರರಿಗೆ ವಿದ್ಯೆಗಳನ್ನು ಕೊಟ್ಟು ನಿಮ್ಮ ವಂಶೋತ್ಪನ್ನರು ಇವನ ವಂಶವನ್ನು ನಿರ್ಮಿಸಿದರು. ನಾಗೇಂದ್ರನೇ ! ವಿಷ ವೃಕ್ಷವನ್ನಾದರೂ ತಾನು ಬೆಳೆಯಿಸಿ ತಾನೇ ಅದನ್ನು ಕತ್ತರಿಸುವುದಕ್ಕೆ ಯಾವನು ಮನಸ್ಸುಮಾಡುವನು ? ಹೀಗೆ ಬಾಲಕರವರೆಗೂ ಪ್ರಸಿದ್ಧವಾಗಿರುವ ವಿಷಯವನ್ನು ನೀನು ತಿಳಿಯೆಯಾ ?''

**ಇತ್ಯುಕ್ತಸ್ತೇನನಾಗೇಂದ್ರಃ ಪ್ರತ್ಯುವಾಚ ತಪೋಧನಮ್ ।**
**ಮದಗ್ರಜಮಯಂ ದುಷ್ಟೋ ನಿರ್ಹೇತುಕಮಮೀಮರತ್ ॥ ೧೩೬ ॥**

ತದ್ಧ್ರುವಂ ಮಮ ಹಂತವ್ಯೋ ನ ನಿಷೇಧ್ಯಂ ತ್ವಯಾರ್ಥಿತಮ್ ।
ಮಯೇತಿ ಸ ಹಸನ್ ದೇವಸ್ತದಾಹ ಮತಿಮಾನ್ವೃಥಾ ॥ ೧೩೭ ॥

ವೈರಂ ವಹಸಿ ತೇ ಭ್ರಾತಾ ಜಾತೌ ಜಾತೋಯಮೇವ ಕಿಮ್ ।
ವಿದ್ಯುದ್ದಂಷ್ಟ್ರೋ ನ ಕಿಂ ಭ್ರಾತಾ ಸಂಜಾತಃ ಸಂಸೃತೌ ಭ್ರಮನ್॥ ೧೩೮ ॥

ಬಂಧುಃ ಕಃ ಕೋ ನ ವಾ ಬಂಧುಃ ಬಂಧುತಾಬಂಧುತಾದ್ವಯಮ್ ।
ಸಂಸಾರೇ ಪರಿವರ್ತೇತ ವಿದಾಮತ್ರಾಗ್ರಹಃ ಕುತಃ ॥ ೧೩೯ ॥

ಕೃತಾಪರಾಧಂ ಭ್ರಾತಾ ತೇ ವಿದ್ಯುದ್ದಂಷ್ಟ್ರಮುದಂಡಯಾತ್ ।
ತತೋಽಯಂ ಸ್ಮೃತತಜ್ಜನ್ಮಾ ಮುನೇರಸ್ಯಾಪಕಾರಕಃ ॥ ೧೪೦ ॥

ಅಗ್ರಜಂ ತವ ಪಾಪೋಽಯಂ ಪ್ರಾಕ್ಚ ಜನ್ಮಚತುಷ್ಟಯೇ ।
ಮಹಾವೈರಾನುಬಂಧೇನ ಲೋಕಾಂತರಮಜೀಗಮತ್ ॥ ೧೪೧ ॥

ಅಸ್ಮಿಞ್ಜನ್ಮನ್ಯಮುಂ ಮನ್ಯೇ ಮುನೇರಸ್ಯೋಪಕಾರಕಮ್ ।
ಖಗಮೇತತ್ಕೃತಂ ಸೋಢ್ವಾ ಯನ್ಮುಕ್ತಿಮಯಮೇಯಿವಾನ್ ॥ ೧೪೨ ॥

ಆಸ್ತಾಂ ತಾವದಿದಂ ಭದ್ರ ಭದ್ರಂ ನಿರ್ವಾಣಕಾರಣಮ್ ।
ಪ್ರಾಕ್ತನಸ್ಯಾಪಕಾರಸ್ಯ ವದ ಕೇನ ಪ್ರತಿಕ್ರಿಯಾ ॥ ೧೪೩ ॥

ಇತ್ಯಾಕರ್ಣ್ಯ ಫಣೀಂದ್ರಸ್ತತ್ಕಥ್ಯತಾಂ ಸಾ ಕಥಾ ಮಮ ।
ಕಥಮಿತ್ಯನ್ವಯುಙ್ಕ್ತಾಸಾವಾದಿತ್ಯಾಭಂ ಸಮುತ್ಸುಕಃ ॥ ೧೪೪ ॥

ಈ ರೀತಿಯಾಗಿ ಆ ಆದಿತ್ಯಾಭನಿಂದ ಹೇಳಲ್ಪಟ್ಟ ನಾಗೇಂದ್ರನು ''ಈ ದುಷ್ಟನು ತಪೋಧನನಾದ ನನ್ನ ಅಣ್ಣನನ್ನು ನಿಷ್ಕಾರಣವಾಗಿ ಕೊಂದನು. ಆದುದರಿಂದ ನಾನು ಇವನನ್ನು ಕೊಲ್ಲಲೇಬೇಕು. ನೀನು ತಡೆಯಬಾರದೆಂದು ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ'' ಎಂದು ಮರುಮಾತನಾಡಿದನು. ಆಗ ಆ ಪ್ರಾಜ್ಞನಾದ ಆದಿತ್ಯಾಭದೇವನು ನಗುವವನಾಗಿ ನಾಗೇಂದ್ರನನ್ನು ಕುರಿತು ''ಧರಣೇಂದ್ರನೆ ! ವ್ಯರ್ಥವಾಗಿ ನೀನು ವೈರವನ್ನು ಧರಿಸುತ್ತಿ. ಸಂಸಾರದಲ್ಲಿ ಇವನೇ ನಿನಗೆ ಸಹೋದರನಾದನೇ ? ಸಂಸಾರದಲ್ಲಿ ಅಲೆಯುವ ಈ ವಿದ್ಯುದ್ದಂಷ್ಟ್ರನು ನಿನಗೆ ಸಹೋದರನಾಗಿ ಹುಟ್ಟಿಲ್ಲವೇ ? ಸಂಸಾರದಲ್ಲಿ ಯಾವನು ಬಂಧು ? ಯಾವನು ಬಂಧುವಲ್ಲ ? ಬಂಧುತ್ವ ಅಬಂಧುತ್ವ(ಶತ್ರುತ್ವ)ಗಳೆರಡೂ ತಿರುಗುತ್ತಿರುತ್ತವೆ. ಈ ವಿಷಯದಲ್ಲಿ ಪ್ರಾಜ್ಞರಿಗೆ ಆಗ್ರಹವೆಲ್ಲಿ ಬಂತು ? ನಿನ್ನ ಸಹೋದರನು ತಪ್ಪನ್ನು ಮಾಡಿದ ವಿದ್ಯುದ್ದಂಷ್ಟ್ರನನ್ನು ಶಿಕ್ಷಿಸಿದನು. ಆದುದರಿಂದ ಇವನು ಆ ಜನ್ಮವನ್ನು ಸ್ಮರಿಸಿಕೊಂಡು ಈ ಸಂಜಯಂತಮುನಿಗೆ ಅಪಕಾರವನ್ನು ಮಾಡಿದನು. ಮೊದಲು ನಾಲ್ಕು ಜನ್ಮಗಳಲ್ಲಿ ಈ ಪಾಪಿಯು ವೈರಸಂಬಂಧದಿಂದ ನಿನ್ನ ಅಣ್ಣನನ್ನು ಕೊಂದು ಪರಲೋಕವನ್ನು ಹೊಂದಿಸಿದ್ದನು. ಈ ವಿದ್ಯುದ್ದಂಷ್ಟ್ರನು ಮಾಡಿದ ಉಪಸರ್ಗವನ್ನು ಸಹಿಸಿ ಸಂಜಯಂತಮುನಿಯು ಮುಕ್ತಿಯನ್ನು ಹೊಂದಿದುದರಿಂದ ಈ ಮುನಿಗೆ ಈ ಜನ್ಮದಲ್ಲಿ ಈ ವಿದ್ಯಾಧರನನ್ನು ಉಪಕಾರಿಯನ್ನಾಗಿ ತಿಳಿಯುತ್ತೇನೆ. ಎಲೈ ಮಂಗಳಾಂಗನೆ ! ಮುಕ್ತಿಗೆ ಕಾರಣವಾದ ಈ ಮಂಗಳವಂತಿರಲಿ. ಮೊದಲಿನ ಅಪಕಾರಕ್ಕೆ ಯಾವುದರಿಂದ ಪ್ರತಿಕ್ರಿಯೆ ? ಹೇಳು'' ಎಂದನು. ಈ ಪ್ರಕಾರವಾದ ಮಾತನ್ನು ಕೇಳಿ ಕುತೂಹಲವುಳ್ಳವನಾದ ಈ ನಾಗೇಂದ್ರನು ''ಅದು ಹೇಗೆ ? ಆ ಕಥೆಯನ್ನು ನನಗೆ ಹೇಳು'' ಎಂದು ಆದಿತ್ಯಾಭನನ್ನು ಕೇಳಿದನು.

ಶೃಣು ವೈರಂ ವಿಸೃಜ್ಯಾಸ್ಮಿನ್ಬುದ್ಧಿಮನ್ ಶುದ್ಧಚೇತಸಾ ।
ತತ್ಪ್ರಪಂಚಂ ವದಾಮೀತಿ ದೇವೋ ವಿಸ್ಪಷ್ಟಮಭ್ಯಧಾತ್ ॥ ೧೪೫ ॥

ಆಗ ಆದಿತ್ಯಾಭದೇವನು ಧರಣೇಂದ್ರನನ್ನು ಕುರಿತು ''ಪ್ರಾಜ್ಞನೆ! ಈ ವಿದ್ಯುದ್ದಂಷ್ಟ್ರನಲ್ಲಿ ವೈರವನ್ನು ಬಿಟ್ಟು ಶುದ್ಧಮನಸ್ಸಿನಿಂದ ಕೇಳು. ಆದರ ವಿಸ್ತಾರವನ್ನು ಹೇಳುತ್ತೇನೆ'' ಎಂದು ಸ್ಪಷ್ಟವಾಗಿ ಹೀಗೆ ಹೇಳಿದನು.

ದ್ವೀಪೇಸ್ಮಿನ್ಭಾರತೇ ಸಿಂಹಪುರಾಧೀಶೋ ಮಹೀಪತಿಃ ।
ಸಿಂಹಸೇನಃ ಪ್ರಿಯಾ ತಸ್ಯ ರಾಮದತ್ತಾಭವತ್ಸತೀ ॥ ೧೪೬ ॥

''ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಸಿಂಹಸೇನನೆಂಬ ರಾಜನು ಸಿಂಹಪುರದ ದೊರೆಯಾಗಿದ್ದನು. ಅವನಿಗೆ ರಾಮದತ್ತೆಯೆಂಬವಳು ಪತಿವ್ರತೆಯಾದ ಪ್ರಿಯೆಯಾಗಿದ್ದಳು.

ಶ್ರೀಭೂತಿಸ್ಸತ್ಯಘೋಷಾಂಕೋ ಮಂತ್ರೀ ತಸ್ಯ ಮಹೀಪತೇಃ ।
ಶ್ರುತಿಸ್ಮೃತಿಪುರಾಣಾದಿಶಾಸ್ತ್ರವಿದ್ಬ್ರಾಹ್ಮಣೋತ್ತಮಃ ॥ ೧೪೭ ॥

ಆ ರಾಜನಿಗೆ ಶ್ರುತಿ ಸ್ಮೃತಿ ಪುರಾಣಾದಿಶಾಸ್ತ್ರಗಳನ್ನು ತಿಳಿದವನೂ ಉತ್ತಮ ಬ್ರಾಹ್ಮಣನೂ ಆದ ಶ್ರೀಭೂತಿಯೆಂಬವನು ಮಂತ್ರಿಯಾಗಿದ್ದನು. ಅವನು ತನಗೆ ಸತ್ಯಘೋಷ(ಸತ್ಯವನ್ನು ಹೇಳುವವ)ನೆಂದು ಉಪನಾಮವನ್ನಿಟ್ಟುಕೊಂಡಿದ್ದನು.

ಪದ್ಮಷಂಡಪುರೇ ಶ್ರೇಷ್ಠಿಸುದತ್ತಾಖ್ಯಸುಮಿತ್ರಯೋಃ ।
ಭದ್ರಮಿತ್ರಃ ಸುತೋ ರತ್ನದ್ವೀಪೇ ಪುಣ್ಯೋದಯಾತ್ಸ್ವಯಮ್॥ ೧೪೮ ॥

ಉಪಾರ್ಜಿತಪರಾರ್ಧ್ಯೋರುರತ್ನಃ ಸಿಂಹಪುರೇ ಸ್ಥಿರಮ್ ।
ತಿಷ್ಠಾಸುರ್ಮಂತ್ರಿಣಂ ದೃಷ್ಟ್ವಾ ಸರ್ವಮಾವೇದ್ಯ ತನ್ಮತಾತ್ ॥ ೧೪೯ ॥

ತಸ್ಯ ಹಸ್ತೇ ಸ್ವರತ್ನಾನಿ ಸ್ಥಾಪಯಿತ್ವಾ ಸ್ವಬಾಂಧವಾನ್ ।
ಆನೇತುಂ ಪದ್ಮಷಂಡಾಖ್ಯಂ ಗತ್ವಾ ತಸ್ಮಾನ್ನಿವರ್ತ್ಯ ಸಃ ॥ ೧೫೦ ॥

ಪುನರಭ್ಯೇತ್ಯ ರತ್ನಾನಿ ಸತ್ಯಘೋಷಮಯಾಚತ ।
ಸೋಪಿ ತದ್ರತ್ನಮೋಹೇನ ನ ಜಾನಾಮೀತ್ಯಪಹ್ನುತಃ ॥ ೧೫೧ ॥

ಪದ್ಮಷಂಡಪುರದಲ್ಲಿ ಸುದತ್ತನೆಂಬ ಶ್ರೇಷ್ಠಿಗೂ ಆತನ ಸುಮಿತ್ರೆಯೆಂಬ ಪತ್ನಿಗೂ ಭದ್ರಮಿತ್ರನೆಂಬ ಪುತ್ರನಿದ್ದನು. ಅವನು ಪುಣ್ಯೋದಯದಿಂದ ರತ್ನದ್ವೀಪದಲ್ಲಿ ಉತ್ಕೃಷ್ಟವಾದ ರತ್ನಗಳನ್ನು ಸಂಪಾದಿಸಿದವನಾಗಿ ತಾನು ಸಿಂಹಪುರದಲ್ಲಿ ಸ್ಥಿರವಾಗಿರಬೇಕೆಂದು ಯೋಚಿಸಿ ಸತ್ಯಘೋಷ–ಮಂತ್ರಿಯನ್ನು ಕಂಡು ಅವನಿಗೆ ಎಲ್ಲಾ ವಿಷಯವನ್ನು ತಿಳುಹಿ ಅವನ ಅಭಿಪ್ರಾಯದಂತೆ ತನ್ನ ರತ್ನಗಳನ್ನು ಅವನ ಕೈಯಲ್ಲಿರಿಸಿ ಅವನು ತನ್ನ ಬಂಧುಗಳನ್ನು ಕರೆದುಕೊಂಡು ಬರುವುದಕ್ಕೋಸ್ಕರ ಪದ್ಮಷಂಡನಗರಕ್ಕೆ ಹೋಗಿ ಅಲ್ಲಿಂದ ಹಿಂದಿರುಗಿ ಬಂದು ಸತ್ಯಘೋಷನನ್ನು ಕುರಿತು ರತ್ನಗಳನ್ನು ಕೇಳಿದನು. ಅವನು ಆ ರತ್ನಗಳ ಮೋಹದಿಂದ ''ನನಗೆ ಗೊತ್ತಿಲ್ಲ'' ಎಂದು ಅಲ್ಲಗಳೆದನು.

ಭದ್ರಮಿತ್ರೋಪಿ ಫೂತ್ಕಾರಂ ಸರ್ವತೋ ನಗರೇಕರೋತ್ ।
ಸತ್ಯಘೋಷೋಪಿ ಪಾಪಿಷ್ಠೈರೇಷ ಚೋರೈರಭಿದ್ರುತಃ ॥ ೧೫೨ ॥

ಸರ್ವಸ್ವಹರಣೋದ್ಭೂತಶೋಕವ್ಯಾಕುಲಿತಾಶಯಃ ।
ಪ್ರಲಾಪೀತಿ ಜನಾನೇತತ್ಸ್ವಪ್ರಾಮಾಣ್ಯಾದಜಿಗ್ರಹತ್ ॥ ೧೫೩ ॥

ಭದ್ರಮಿತ್ರನು ಪಟ್ಟಣದಲ್ಲೆಲ್ಲ ಗೋಳಾಡಿದನು. ಆಗ ಸತ್ಯಘೋಷನೂ ''ಇವನನ್ನು ಪಾಪಿಷ್ಠರಾದ ಕಳ್ಳರು ಆಕ್ರಮಿಸಿದರು. ಸರ್ವಸ್ವಹರಣದಿಂದುಂಟಾದ ಶೋಕದಿಂದ ವ್ಯಾಕುಲವಾದ ಮನಸ್ಸುಳ್ಳವನಾಗಿ ಪ್ರಲಾಪಿಸುತ್ತಾನೆ'' ಎಂದು ಈ ತನ್ನ ಪ್ರಾಮಾಣಿಕತೆಯಿಂದ ಜನರಿಗೆ ನಂಬಿಕೆಯನ್ನುಂಟುಮಾಡಿದನು–ಜನರನ್ನು ತನ್ನ ಕಡೆಗೆ ಆಕರ್ಷಿಸಿದನು.

ಸಮಕ್ಷಂ ಭೂಪತೇರಾತ್ಮಶುದ್ಧ್ಯರ್ಥಂ ಶಪಥಂ ಚ ಸಃ ।
ಧರ್ಮಾಧಿಕೃತನಿರ್ದಿಷ್ಟಂ ಚಕಾರಾಚಾರದೂರಗಃ ॥ ೧೫೪ ॥

ಆಚಾರಶೂನ್ಯನಾದ ಆ ಸತ್ಯಘೋಷನು ರಾಜನ ಸನ್ನಿಧಿಯಲ್ಲಿ ತಾನು ನಿರ್ದೋಷಿಯೆಂದು ತೋರಿಸಿಕೊಳ್ಳುವುದಕ್ಕೋಸ್ಕರ ಧರ್ಮವೇ ಪ್ರಧಾನವಾಗಿರುವ ಶಪಥವನ್ನೂ ಮಾಡಿದನು. ಧರ್ಮವನ್ನು ಮುಂದಿಟ್ಟು ಆಣೆಯನ್ನಿಟ್ಟನೆಂದು ಭಾವವು.

ಭದ್ರಮಿತ್ರೋಪಿ ಪಾಪೇನ ವಂಚಿತೋಹಂ ವಿಜಾತಿನಾ ।
ದ್ವಿಜಾತಿನೇತ್ಯನಾಥೋಪಿ ನಾಮುಂಚತ್ಪೂತ್ಕೃತಿಂ ಮುಹುಃ ॥ ೧೫೫ ॥

ಭದ್ರಮಿತ್ರನು ಅನಾಥನಾದರೂ "ಪಾಪಿಯೂ ವಿಜಾತಿಯೂ ಆದ ವಿಪ್ರಜಾತಿಯಿಂದ ನಾನು ವಂಚಿಸಲ್ಪಟ್ಟೆನು" ಎಂದು ಪುನಃ ಪುನಃ ಗೋಳಾಡುವುದನ್ನು ಬಿಡಲಿಲ್ಲ.

**ಚತುರ್ವಿಧೋಪಧಾಶುದ್ಧಂ ಯುಕ್ತಂ ಜಾತ್ಯಾದಿಭಿರ್ಗುಣೈಃ ।**
**ತ್ವಾಂ ಸತ್ಯಂ ಸತ್ಯಘೋಷಾಂಕಂ ಮತ್ವಾ ಮಂತ್ರಿಗುಣೋತ್ತಮಮ್ ॥**

**ಮಯಾ ನ್ಯಾಸೀಕೃತಂ ಹಸ್ತೇ ತವ ರತ್ನಕರಂಡಕಮ್ ।**
**ಕಿಮೇವಮುಪಲಾಪೇನ ಹರ್ತುಂ ತದ್ಬ್ರೂಹಿ ಯುಜ್ಯತೇ ॥ ೧೫೭ ॥**

ಭದ್ರಮಿತ್ರನು "ಅಯ್ಯಾ! ಧರ್ಮಾದಿಚತುರ್ವಿಧಪರೀಕ್ಷೆಗಳಿಂದ ಶುದ್ಧನೂ ಜಾತ್ಯಾದಿಗುಣಗಳಿಂದ ಯುಕ್ತನೂ ಮಂತ್ರಿಗುಣಗಳಿಂದ ಉತ್ತಮನೂ ಆದ ನಿನ್ನನ್ನು ಸತ್ಯವಾಗಿಯೂ ಸತ್ಯಘೋಷನೆಂದು ತಿಳಿದು ನಾನು ನಿನ್ನ ಕೈಯಲ್ಲಿ ರತ್ನಗಳ ಕರಡಿಗೆಯನ್ನಿಟ್ಟೆನು. ನೀನು ಈ ರೀತಿಯಾಗಿ ಅಲ್ಲಗಳೆದು ಅದನ್ನು ಅಪಹರಿಸುವುದು ಯೋಗ್ಯವೇ ? ಹೇಳು.

**ಸಿಂಹಸೇನಮಹಾರಾಜಪ್ರಸಾದೇನ ನ ತೇಽಸ್ತಿ ಕಿಮ್ ।**
**ಛತ್ರಸಿಂಹಾಸನೇ ಮುಕ್ತ್ವಾ ನನು ರಾಜ್ಯಮಿದಂ ತವ ॥ ೧೫೮ ॥**

ಸಿಂಹಸೇನಮಹಾರಾಜನ ಪ್ರಸಾದದಿಂದ ನಿನಗೇನಿಲ್ಲ ? ಛತ್ರಸಿಂಹಾಸನಗಳೆರಡನ್ನು ಬಿಟ್ಟು ಈ ರಾಜ್ಯವು ನಿನ್ನದಲ್ಲವೇ ?

**ಧರ್ಮಂ ಯಶೋ ಮಹತ್ತ್ವಂ ಚ ಕಿಂ ವೃಥೈವ ವಿಘಾತಯೇ ।**
**ನ್ಯಾಸಾಪಹ್ನವದೋಷಂ ಕಿಂ ನ ವೇತ್ಸಿ ಸ್ಮೃತಿಷೂದಿತಮ್ ॥ ೧೫೯ ॥**

ಧರ್ಮವನ್ನೂ ಯಶಸ್ಸನ್ನೂ ಮಹತ್ತ್ವವನ್ನೂ ಏಕೆ ವ್ಯರ್ಥವಾಗಿ ನಾಶಮಾಡುವೆ ? ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ನ್ಯಾಸಾಪಹಾರದೋಷವನ್ನು ನೀನು ತಿಳಿಯುವುದಿಲ್ಲವೇನು ? (ತನ್ನಲ್ಲಿ ಇಟ್ಟುದನ್ನು ಅಪಹರಿಸುವುದಕ್ಕೆ ನ್ಯಾಸಾಪಹಾರವೆಂದು ಹೆಸರು).

**ಏತದೇವಾರ್ಥಶಾಸ್ತ್ರಸ್ಯ ನಿತ್ಯಮಧ್ಯಯನೇ ಫಲಮ್ ।**
**ಯತ್ಪರಾನತಿಸಂಧತ್ತೇ ನಾತಿಸಂಧೀಯತೇ ಪರೈಃ ॥ ೧೬೦ ॥**

ಪರರನ್ನು ವಂಚಿಸುವಿಕೆಯೂ ಪರರಿಂದ ವಂಚಿಸಲ್ಪಡದಿರುವಿಕೆಯೂ ಇದೇ ನಿತ್ಯವೂ ಅರ್ಥಶಾಸ್ತ್ರದ ಅಧ್ಯಯನದ ಪ್ರಯೋಜನ.

**ಇತ್ಯತ್ರ ಪರಶಬ್ದಾರ್ಥೇ ವಿಪರ್ಯೋಽಪಿ ಪರೋ ಮತಃ ।**
**ತತ್ರ ಶತ್ರು ರಹಂ ಕಿಂ ಭೋ ಸತ್ಯಘೋಷ ರಿಪುಸ್ತವ ॥ ೧೬೧ ॥**

ಇಲ್ಲಿ ನೀನು ಪರಶಬ್ದದ ಅರ್ಥದಲ್ಲಿ ವ್ಯತ್ಯಾಸವನ್ನು ಮಾಡುತ್ತಿ. ಪರನೆಂದರೆ ಶತ್ರುವೆಂದರ್ಥ. ಎಲೈ ಸತ್ಯಘೋಷನೆ ! ನಾನು ನಿನಗೆ ಶತ್ರುವೇ ?

**ಸದ್ಭಾವಪ್ರತಿಪನ್ನಾನಾಂ ವಂಚನೇ ಕಾ ವಿದಗ್ಧತಾ ।**
**ಅಂಕಮಾರುಹ್ಯ ಸುಪ್ತಸ್ಯ ಹಂತುಃ ಕಿಂ ನಾಮ ಪೌರುಷಮ್ ॥ ೧೬೨ ॥**

ಒಳ್ಳೆಯ ಭಾವನೆಯಿಂದ ಕೂಡಿರುವವರನ್ನು ವಂಚಿಸುವುದರಲ್ಲಿ ಪಾಂಡಿತ್ಯವೇನಿದೆ ? ತೊಡೆಯನ್ನೇರಿ ಮಲಗಿರುವವನನ್ನು ಕೊಲ್ಲುವವನ ಪೌರುಷವೆಂತಹದು ?

**ಮಹಾಮೋಹಗ್ರಹಗ್ರಸ್ತ ಶ್ರೀಭೂತೇ ಭಾವಿಜನ್ಮನಾ ।**
**ತ್ವಂ ತನ್ಮಾನೀನಶೋ ದೇಹಿ ಮಹ್ಯಂ ರತ್ನಕರಂಡಕಮ್ ॥ ೧೬೩ ॥**

ಮಹಾಮೋಹವೆಂಬ ಗ್ರಹದಿಂದ ಹಿಡಿಯಲ್ಪಟ್ಟ ಶ್ರೀಭೂತಿಯೆ ! ಉತ್ತರ ಜನ್ಮದಿಂದ ನೀನು ನಾಶವನ್ನು ಹೊಂದಬೇಡ. ಆ ರತ್ನದ ಕರಡಿಗೆಯನ್ನು ನನಗೆ ಕೊಡು.

**ಈದೃಂಶ್ಯೇತತ್ಪ್ರಮಾಣಾನಿ ಜಾತಿಸ್ತೇಷಾಮಿಯಂ ಸ್ವಯಮ್ ।**
**ಜಾನಂಶ್ಚ ಮಮ ರತ್ನಾನಿ ಕಿಮಿತ್ಯೇವಮಪಹ್ನುಷೇ ॥ ೧೬೪ ॥**

ನನ್ನ ರತ್ನಗಳು ಇಂತಹವು, ಇಷ್ಟು ಅಳತೆಯವು, ಅವುಗಳ ಜಾತಿ ಇದು ಎಂದು ತಾನು ತಿಳಿದಿದ್ದರೂ ಹೀಗೇಕೆ ಮರೆಮಾಚುವೆ ?"

**ಏವಂ ನಿತ್ಯಂ ನಿಶಾಪ್ರಾಂತೇ ರೋರೌತ್ಯಾರುಹ್ಯ ಭೂರುಹಮ್ ।**
**ಕೃತ್ಯೇ ಕೃಚ್ಛ್ರೇಽಪಿ ಸತ್ತ್ವಾಢ್ಯಾ ನ ತ್ಯಜಂತಿ ಸಮುದ್ಯಮಮ್ ॥ ೧೬೫ ॥**

ಈ ರೀತಿಯಾಗಿ ಯಾವಾಗಲೂ ಬೆಳಗಿನ ಜಾವದಲ್ಲಿ ಮರವನ್ನೇರಿ ಬಹಳವಾಗಿ ಅಳುತ್ತಾನೆ. ಸತ್ತ್ವಗುಣವಿಶಿಷ್ಟರಾದವರು ಕಷ್ಟಕಾರ್ಯದಲ್ಲಿಯೂ ಪ್ರಯತ್ನವನ್ನು ಬಿಡುವುದಿಲ್ಲ.

**ಮುಹುರ್ಮುಹುಸ್ತದಾಕರ್ಣ್ಯ ಮಹಾದೇವ್ಯಾ ಮನಸ್ಯಭೂತ್ ।**
**ಜಾನೇಹಂ ನಾಯಮುನ್ಮತ್ತಃ ಸರ್ವದಾನುಗತಂ ವದನ್ ॥ ೧೬೬ ॥**

ಪದೇ ಪದೇ ಆ ರೋದನವನ್ನು ಕೇಳಿ ಮಹಾರಾಜ್ಞಿಯ ಮನಸ್ಸಿನಲ್ಲಿ "ಯಾವಾಗಲೂ ಒಂದೇ ವಿಷಯವನ್ನು ಹೇಳುತ್ತಿರುವ ಇವನು ಹುಚ್ಚನಲ್ಲವೆಂದು ತಿಳಿಯುತ್ತೇನೆ" ಎಂದು ವಿಚಾರವುಂಟಾಯಿತು.

**ಇತಿ ಸಾವೇದ್ಯ ಭೂಪಾಲಂ ದ್ಯೂತೋಪಾಯೇನ ಮಂತ್ರಿಣಮ್ ।**
**ಜಿತ್ವಾ ಯಜ್ಞೋಪವೀತೇನ ಸಾರ್ಧಂ ತನ್ನಾಮಮುದ್ರಿಕಾಮ್ ॥ ೧೬೭ ॥**

**ದತ್ವಾ ನಿಪುಣಮತ್ಯಾಖ್ಯಧಾತ್ರೀಕರತಲೇ ಮಿಥಃ ।**
**ಪ್ರಹಿತಂ ಮಂತ್ರಿಣಾ ದೇಹಿ ಭದ್ರಮಿತ್ರಕರಂಡಕಮ್ ॥ ೧೬೮ ॥**

**ಅಭಿಜ್ಞಾನಂ ಚ ತಸ್ಯೇತದಿತ್ಯುಕ್ತ್ವಾ ಸನ್ನಿಧಾನತಃ ।**
**ತದಾನಯೇತಿ ಸಂದಿಶ್ಯ ಧಾತ್ರೀಮಾನೀನಯತ್ತದಾ ॥ ೧೬೯ ॥**

ಈ ವಿಷಯವನ್ನು ಆಕೆಯು ರಾಜನಿಗೆ ತಿಳಿಸಿದಳು. ಅವನು ಸತ್ಯಘೋಷ ಮಂತ್ರಿಯನ್ನು ಕರೆಯಿಸಿ ಅವನೊಡನೆ ಜೂಜಾಡಿ ಅವನನ್ನು ಜಯಿಸಿ ಅವನ ಹೆಸರಿನ ಮುದ್ರೆಯನ್ನೂ ಯಜ್ಞೋಪವೀತವನ್ನೂ ಗುಟ್ಟಾಗಿ ನಿಪುಣಮತಿಯೆಂಬ ದಾದಿಯ ಕೈಯಲ್ಲಿ ಕೊಟ್ಟು "ಮಂತ್ರಿಯು ಕಳುಹಿಸಿದನು. ಅವನ ಗುರುತಿದು. ಭದ್ರಮಿತ್ರನ ಕರಡಿಗೆಯನ್ನು ಕೊಡು ಎಂದು ಹೇಳಿ ಆ ಕರಡಿಗೆಯನ್ನು ತೆಗೆದುಕೊಂಡು ಬಾ" ಎಂದು ಆಜ್ಞಾಪಿಸಿ ತನ್ನ ಬಳಿಯಿಂದ ದಾದಿಯನ್ನು ಮಂತ್ರಿಪತ್ನಿಯ ಬಳಿಗೆ ಕಳುಹಿಸಿಕೊಟ್ಟು ಆಗ ಆ ಕರಡಿಗೆಯನ್ನು ತರಿಸಿದನು.

**ತತ್ರಾನ್ಯಾನಿ ಚ ರತ್ನಾನಿ ಕ್ಷಿಪ್ತ್ವಾ ಕ್ಷಿತಿಭುಜಾ ಸ್ವಯಮ್ ।**
**ಭದ್ರಮಿತ್ರಂ ಸಮಾಹೂಯ ರಹಸ್ಯೇತದ್ಭವೇತ್ತವ ॥ ೧೭೦ ॥**

**ಇತ್ಯುಕ್ತಸ್ಸ ಭವೇದ್ದೇವ ಮಮೈವೈತತ್ಕರಂಡಕಮ್ ।**
**ಕಿಂತು ರತ್ನಾನ್ಯನರ್ಘಾಣಿ ಮಿಶ್ರಿತಾನ್ಯತ್ರ ಕಾನಿಚಿತ್ ॥ ೧೭೧ ॥**

**ಏತಾನಿ ಸಂತಿ ಮೇ ನೈವ ಮಮೈತಾನೀತಿ ಶುದ್ಧಧೀಃ ।**
**ಸ್ವರತ್ನಾನ್ಯೇವ ಸತ್ಯೋಕ್ತಿರ್ಜಗ್ರಾಹೋಕ್ತಾಗ್ರಣೀಸ್ಸತಾಮ್ ॥ ೧೭೨ ॥**

ದೊರೆಯು ಆ ಕರಡಿಗೆಯಲ್ಲಿ ಬೇರೆ ರತ್ನಗಳನ್ನೂ ಹಾಕಿ ತಾನು ಗುಟ್ಟಾಗಿ ಭದ್ರಮಿತ್ರನನ್ನು ಕರೆದು "ಇದು ನಿನ್ನದಿರಬಹುದೇ ?" ಎಂದು ಹೇಳಿದನು. ಆಗ ಭದ್ರಮಿತ್ರನು "ಸ್ವಾಮಿಯೆ ! ಈ ಕರಡಿಗೆಯು ನನ್ನದೇ ಆಗಿರಬೇಕು. ಆದರೆ ಇದರಲ್ಲಿ ಕೆಲವು ಅನರ್ಘ್ಯವಾದ ರತ್ನಗಳು ಬೆರೆದಿವೆ. ಇವು ನನ್ನವಲ್ಲವೇ ಅಲ್ಲ. ಇವು ನನ್ನವು" ಎಂದು ಶುದ್ಧಬುದ್ಧಿಯುಳ್ಳವನೂ ಸತ್ಯವಚನವುಳ್ಳವನೂ ಸತ್ಪುರುಷರಲ್ಲಿ ಶ್ರೇಷ್ಠನೆನ್ನಿಸಿರುವವನೂ ಆದ ಭದ್ರಮಿತ್ರನು ತನ್ನ ರತ್ನಗಳನ್ನೇ ತೆಗೆದುಕೊಂಡನು.

**ಸಂತುಷ್ಯ ಭೂಪತಿಸ್ತಸ್ಮೈ ಸತ್ಯಘೋಷಾಂಕಸಂಗತಮ್ ।**
**ಜ್ಯೇಷ್ಠಂ ಶ್ರೇಷ್ಠಿಪದಂ ಭದ್ರಮಿತ್ರಾಯಾದಿತ ವೇದಿತಾ ॥ ೧೭೩ ॥**

ವಿವೇಕಿಯಾದ ರಾಜನು ಸಂತೋಷಪಟ್ಟು ಸತ್ಯಘೋಷನ ಅಧಿಕಾರಕ್ಕೊಳಪಟ್ಟ ಮುಖ್ಯವಾದ ಶ್ರೇಷ್ಠಿಪದವಿಯನ್ನು ಆ ಭದ್ರಮಿತ್ರನಿಗೆ ಕೊಟ್ಟನು.

**ಸತ್ಯಘೋಷೋ ಮೃಷಾವಾದೀ ಪಾಪೀ ಪಾಪಂ ಸಮಾಚರನ್ ।**
**ಧರ್ಮಾಧಿಕರಣೋಕ್ತೇನ ದಂಡ್ಯತಾಮಿತಿ ಭೂಭುಜಾ ॥ ೧೭೪ ॥**

**ಪ್ರೇಷಿತಾಸ್ತೇನ ಮಾರ್ಗೇಣ ಸರ್ವಸ್ವಹರಣಂ ತಥಾ ।**
**ಚಪೇಟಾ ವಜ್ರಮುಷ್ಟ್ಯಾಖ್ಯಮಲ್ಲಸ್ಯ ತ್ರಿಂಶದೂರ್ಜಿತಾಃ ॥ ೧೭೫ ॥**

**ಕಾಂಸ್ಯಪಾತ್ರತ್ರಯಾಪೂರ್ಣನವಗೋಮಯಭಕ್ಷಣಮ್ ।**
**ಇತಿ ತ್ರಿವಿಧದಂಡೇನ ನ್ಯಗೃಹ್ಣನ್ಪುರರಕ್ಷಕಾಃ ॥ ೧೭೬ ॥**

"ಅಸತ್ಯವಾದಿಯೂ ಪಾಪಿಯೂ ಪಾಪಕಾರ್ಯವನ್ನು ಮಾಡುವವನೂ ಆದ ಸತ್ಯಘೋಷನನ್ನು ಧರ್ಮಾಧಿಕಾರಿಗಳು ಹೇಳುವ ರೀತಿಯಿಂದ ಶಿಕ್ಷಿಸಿರಿ" ಎಂದು ದೊರೆಯು ಪುರರಕ್ಷಕರನ್ನು ಕಳುಹಿಸಿದನು. ಅವರು ಸರ್ವಸ್ವಹರಣ, ವಜ್ರಮುಷ್ಟಿಯೆಂಬ ಜಟ್ಟಿಯ ಬಲವಾದ ಮೂವತ್ತು ಪೆಟ್ಟುಗಳು, ಕಂಚಿನ ಮೂರು ಪಾತ್ರೆಗಳಲ್ಲಿ ತುಂಬ ಹೊಸ ಸೆಗಣಿಯ ಭಕ್ಷಣ ಈ ಮೂರು ವಿಧವಾದ ಶಿಕ್ಷೆಯಿಂದ ಸತ್ಯಘೋಷನನ್ನು ನಿಗ್ರಹಿಸಿದರು.

**ನೃಪೇನುಬದ್ಧವೈರಸ್ಸನ್ಮೃತ್ವಾರ್ತಧ್ಯಾನದೂಷಿತಃ ।**
**ದ್ವಿಜಿಹ್ವೋ ಗಂಧನೋ ನಾಮ ಭಾಂಡಾಗಾರೇಜನಿಷ್ಟ ಸಃ ॥ ೧೭೭ ॥**

ಆರ್ತಧ್ಯಾನದಿಂದ ದೂಷಿತನಾದ ಆ ಸತ್ಯಘೋಷನು ರಾಜನಲ್ಲಿ ವೈರವನ್ನು ಕಟ್ಟಿಕೊಂಡವನಾಗಿ ಸತ್ತು ಅವನ ಭಂಡಾರದಲ್ಲಿ ಅಗಂಧನವೆಂಬ ಸರ್ಪವಾಗಿ ಹುಟ್ಟಿದನು.

**ಅನ್ಯಾಯೇನಾನ್ಯವಿತ್ತಸ್ಯ ಸ್ವೀಕಾರಶ್ಚೌರ್ಯಮುಚ್ಯತೇ ।**
**ನೈಸರ್ಗಿಕಂ ನಿಮಿತ್ತೋತ್ಥಂ ತದೇವ ದ್ವಿವಿಧಂ ಸ್ಮೃತಮ್ ॥ ೧೭೮ ॥**

ಅನ್ಯಾಯದಿಂದ ಪರಧನವನ್ನು ಸ್ವೀಕರಿಸುವುದಕ್ಕೆ ಚೌರ್ಯವೆಂದು ಹೆಸರು. ಆ ಚೌರ್ಯವೇ ಸ್ವಾಭಾವಿಕವೆಂದೂ ಯಾವುದಾದರೂ ನಿಮಿತ್ತದಿಂದುಂಟಾದುದೆಂದೂ ಎರಡು ಪ್ರಕಾರವಾಗಿ ಹೇಳಲ್ಪಟ್ಟಿದೆ.

**ಆದ್ಯಮಾಜನ್ಮನೋ ಲೋಭನಿಕೃಷ್ಟಸ್ಪರ್ಧಕೋದಯಾತ್ ।**
**ಸತ್ಯಪ್ಯರ್ಥೇ ಗೃಹೇ ಸ್ವಸ್ಯ ಕೋಟೀಕೋಟ್ಯಾದಿಸಂಖ್ಯಯಾ ॥ ೧೭೯ ॥**

ತನ್ನ ಮನೆಯಲ್ಲಿ ಅನೇಕಕೋಟಿಸಂಖ್ಯೆಯಿಂದ ಧನವಿದ್ದರೂ ಜನ್ಮಾರಭ್ಯ ಲೋಭಕಷಾಯದ ನಿಕೃಷ್ಟವಾದ ಸ್ಪರ್ಧಕದ ಉದಯದಿಂದ ಮೊದಲನೆಯ–ಸ್ವಾಭಾವಿಕವಾದ ಚೌರ್ಯವುಂಟಾಗುವುದು.

**ನ ಚೌರ್ಯೇಣ ವಿನಾ ತೋಷಸ್ತತ್ಸಾಯೇ ಸತಿ ಚ ವ್ಯಯೇ ।**
**ತದ್ವತಸ್ತಾದೃಶೋ ಭಾವಃ ಸರ್ವೇಷಾಂ ವಾ ಕ್ಷುಧಾದಿಕಃ ॥ ೧೮೦ ॥**

ಸ್ವಾಭಾವಿಕವಾದ ಚೌರ್ಯವುಳ್ಳವನಿಗೆ ಆಯವೂ ವ್ಯಯವೂ ಇದ್ದರೂ ಕಳುವನ್ನು ಮಾಡದಿದ್ದರೆ ಸಂತೋಷವಾಗುವುದಿಲ್ಲ. ಎಲ್ಲರಿಗೂ ಹಸಿವು ಮೊದಲಾದುದುಂಟಾಗುವಂತೆ ಅಂತಹ ಭಾವವುಂಟಾಗುವುದು.

**ಸ್ತ್ರೀದ್ಯೂತಾದಿವ್ಯಯಾಸಕ್ತೇರ್ವಿನಾರ್ಥಾದಿತರದ್ಭವೇತ್ ।**
**ತಚ್ಚ ಲೋಭೋದಯೇನೈವ ದುರ್ವಿಪಾಕೇನ ಕೇನಚಿತ್ ॥ ೧೮೧ ॥**

ಸ್ತ್ರೀ ದ್ಯೂತ ಮೊದಲಾದುವುಗಳ ವ್ಯಯದಲ್ಲಿ ಆಸಕ್ತಿಯುಳ್ಳವನಿಗೆ ಧನವಿಲ್ಲದಿರುವುದರಿಂದ ಎರಡನೆಯ–ನಿಮಿತ್ತಜನ್ಯವಾದ ಚೌರ್ಯಭಾವವುಂಟಾಗುವುದು. ಅದು ಯಾವುದೋ ದುರ್ವಿಪಾಕವುಳ್ಳ ಲೋಭಕಷಾಯದ ಉದಯದಿಂದುಂಟಾಗುವುದು.

**ದ್ವಯೇನ ತೇನ ಬಧ್ನಾತಿ ದುರಾಯುರ್ದುಷ್ಟಚೇಷ್ಟಯಾ ।**
**ದುರ್ಗತೌ ತಚ್ಚಿರಂ ದುಃಖಂ ದುರಂತಂ ಹ್ಯನುಭಾವಯೇತ್ ॥ ೧೮೨ ॥**

ಆ ಉಭಯವಿಧವಾದ ಚೌರ್ಯದಿಂದ ದುಷ್ಟವಾದ ಆಯುಷ್ಯಕರ್ಮವು ಕಟ್ಟುತ್ತದೆ. ಅದು ದುರ್ಗತಿಯಲ್ಲಿ ದುಷ್ಟಚೇಷ್ಟೆಯಿಂದ ಜೀವವು ಬಹುಕಾಲದವರೆಗೆ ದುರಂತದುಃಖವನ್ನು ಅನುಭವಿಸುವಂತೆ ಮಾಡುವುದು.

**ಸೌಜನ್ಯಂ ಹನ್ಯತೇ ಭ್ರಂಶೋ ವಿಸ್ರಂಭಸ್ಯ ಧನಾದಿಷು ।**
**ವಿಪತ್ತಿಃ ಪ್ರಾಣಪರ್ಯಂತಾ ಮಿತ್ರಬಂಧ್ವಾದಿಭಿಃ ಸಹ ॥ ೧೮೩ ॥**

ಗುಣಚ್ಯುತಿಯು ಸೌಜನ್ಯವನ್ನು ನಾಶಮಾಡುವುದು. ಧನಾದಿಗಳಲ್ಲಿ ಪ್ರೀತಿಯುಳ್ಳವನಿಗೆ ಮಿತ್ರ ಬಂಧು ಮೊದಲಾದವರೊಡನೆ ಪ್ರಾಣಾಂತವಾದ ವಿಪತ್ತಿಯುಂಟಾಗುವುದು.

**ಗುಣಪ್ರಸವಸಂದೃಬ್ಧಾ ಕೀರ್ತಿರಮ್ಲಾನಮಾಲಿಕಾ ।**
**ಲತೇವ ದಾವಸಂಶ್ಲಿಷ್ಟಾ ಸದ್ಯಶ್ಚೌರ್ಯೇಣ ದಹ್ಯತೇ ॥ ೧೮೪ ॥**

ಗುಣಗಳೆಂಬ ಪುಷ್ಪಗಳಿಂದ ಪೋಣಿಸಲ್ಪಟ್ಟರೂ ಬಾಡದಿರುವ ಮಾಲಿಕೆಯೂ ಆದ ಕೀರ್ತಿಯು, ಕಾಡುಗಿಚ್ಚಿನಿಂದ ವ್ಯಾಪ್ತವಾದ ಬಳ್ಳಿಯಂತೆ, ಚೌರ್ಯದಿಂದ ಶೀಘ್ರವಾಗಿ ದಹಿಸಲ್ಪಡುವುದು.

**ಇತೀದಂ ಜಾನತಾ ಸರ್ವಂ ಸತ್ಯಘೋಷೇಣ ದುರ್ಧಿಯಾ ।**
**ಆದ್ಯಂಶಕೇನ ಚೌರ್ಯೇಣ ಸಾಹಸಂ ತದನುಷ್ಠಿತಮ್ ॥ ೧೮೫ ॥**

ಈ ವಿಷಯವನ್ನೆಲ್ಲ ತಿಳಿದವನಾದ ಸತ್ಯಘೋಷನು ದುರ್ಬುದ್ಧಿಯಿಂದ ಮೊದಲನೆಯ ಪ್ರಕಾರವಾದ–ಸ್ವಾಭಾವಿಕ ಚೌರ್ಯದಿಂದ ಅಂತಹ ಸಾಹಸವನ್ನು ಮಾಡಿದನು.

**ಸದ್ಯೋ ಮಂತ್ರಿಪದಾದ್ಭ್ರಷ್ಟೋ ನಿಗ್ರಹಂ ತಾದೃಶಂ ಗತಃ ।**
**ದುರ್ಗತಿಂ ಚ ಪುನಃ ಪ್ರಾಪ್ತೋ ಮಹಾಪಾಪಾನುಬಂಧಿನೀಮ್॥ ೧೮೬ ॥**

ಸತ್ಯಘೋಷನು ತತ್ಕ್ಷಣದಲ್ಲಿ ಮಂತ್ರಿಪದದಿಂದ ಭ್ರಷ್ಟನಾದನು. ಅಂತಹ ಶಿಕ್ಷೆಯನ್ನು ಹೊಂದಿದನು. ಬಳಿಕ ಮಹಾಪಾಪಸಂಬಂಧವುಳ್ಳ ದುರ್ಗತಿಯನ್ನೂ ಹೊಂದಿದನು.

**ಇತ್ಯಮಾತ್ಯಸ್ಯ ದುರ್ವೃತ್ತಂ ರಾಜಾತ್ಮನಿ ವಿಚಿಂತಯನ್ ।**
**ಧರ್ಮಿಲಾಖ್ಯಾಯ ವಿಪ್ರಾಯ ತತ್ಸಾಚಿವ್ಯಪದಂ ದದೌ ॥ ೧೮೭ ॥**

ಈ ರೀತಿಯಾಗಿ ದೊರೆಯು ಮಂತ್ರಿಯ ದುರಾಚಾರವನ್ನು ತನ್ನಲ್ಲಿ ಚಿಂತಿಸುವವನಾಗಿ ಧರ್ಮಿಲನೆಂಬ ಬ್ರಾಹ್ಮಣನಿಗೆ ಆ ಮಂತ್ರಿಪದವಿಯನ್ನು ಕೊಟ್ಟನು.

**ಕಾಲೇ ಗಚ್ಛತಿ ಸತ್ಯೇವಮನ್ಯೇದ್ಯುರಸನಾಟವೀ– ।**
**ಪರ್ಯಂತವಿಮಲಾದ್ಯುಕ್ತಕಾಂತಾರಕ್ಷ್ಮಾಭೃತಿ ಸ್ಥಿತಮ್ ॥ ೧೮೮ ॥**

**ವರಧರ್ಮಯತಿಂ ಪ್ರಾಪ್ಯ ಭದ್ರಮಿತ್ರವಣಿಗ್ವರಃ ।**
**ಶ್ರುತ್ವಾ ಧರ್ಮಂ ಧನಂ ದಾನೇ ತ್ಯಜಂತಮತಿಮಾತ್ರಯಾ ॥ ೧೮೯ ॥**

**ತಸ್ಯ ಮಾತಾ ಸುಮಿತ್ರಾಖ್ಯಾಸಹಮಾನಾತಿಕೋಪಿನೀ ।**
**ಕಾಲೇ ಮೃತ್ವಾಸನಾಟವ್ಯಾಂ ಸಾ ವ್ಯಾಲೀಭೂಯಮಾಗತಾ ॥ ೧೯೦ ॥**

ಹೀಗೆ ಕಾಲವು ಕಳೆಯುತ್ತಿರಲು ಮತ್ತೊಂದು ದಿವಸ ಭದ್ರಮಿತ್ರ ವೈಶ್ಯೋತ್ತಮನು ಅಸನಾವೆಂಬ ಅರಣ್ಯದ ಸಮೀಪದಲ್ಲಿರುವ ವಿಮಲಕಾಂತಾರವೆಂಬ ಪರ್ವತದಲ್ಲಿದ್ದ ವರಧರ್ಮಯತಿಯನ್ನು ಹೊಂದಿ ಧರ್ಮವನ್ನು ಶ್ರವಣ ಮಾಡಿದನು. ಧನವನ್ನು ವಿಶೇಷವಾಗಿ ದಾನದಲ್ಲಿ ಉಪಯೋಗಿಸುತ್ತಿರುವ ಭದ್ರಮಿತ್ರ ವೈಶ್ಯೋತ್ತಮನನ್ನು ನೋಡಿ ಆತನ ಸುಮಿತ್ರೆಯೆಂಬ ತಾಯಿಯು ಸಹಿಸದಿರು

ವವಳೂ ಬಹಳ ಕೋಪವುಳ್ಳವಳೂ ಆಗಿದ್ದು ಆಕೆಯು ಅವಸಾನ ಕಾಲದಲ್ಲಿ ಸತ್ತು ಆ ಅಸನಾರಣ್ಯದಲ್ಲಿ ಹೆಣ್ಣು ಹುಲಿಯಾಗಿ ಹುಟ್ಟಿದಳು.

**ಯದೃಚ್ಛಯಾ ವನಂ ಯಾತಮವಲೋಕ್ಯ ದುರಾಶಯಾ ।**
**ಸಾಖಾದತ್ಸ್ವಸುತಂ ಕೋಪಾಚ್ಚಿತ್ರಂ ಕಿಂ ನಾಶ್ಯಮಂಗಿನಾಮ್ ॥ ೧೯೧ ॥**

ಯದೃಚ್ಛೆಯಿಂದ ವನವನ್ನು ಹೊಂದಿದ ತನ್ನ ಮಗನನ್ನು ನೋಡಿ ಆ ಹೆಣ್ಣುಹುಲಿಯು ದುರಾಶೆಯಿಂದ ಭಕ್ಷಿಸಿತು. ಆಶ್ಚರ್ಯ ! ಕೋಪದಿಂದ ಪ್ರಾಣಿಗಳಿಗೆ ಯಾವುದುತಾನೆ ಭೋಜ್ಯವಾಗುವುದಿಲ್ಲ ?

**ಸ ಸ್ನೇಹಾದ್ರಾಮದತ್ತಾಯಾಃ ಸಿಂಹಚಂದ್ರಃ ಸುತೋಽಭವತ್ ।**
**ಪೂರ್ಣಚಂದ್ರೋಽನುಜಸ್ತಸ್ಯ ಭೂಪತೇಸ್ತಾವತಿಪ್ರಿಯೌ ॥ ೧೯೨ ॥**

ರಾಮದತ್ತಾಮಹಾರಾಜ್ಞಿಗೆ ಭದ್ರಮಿತ್ರನಲ್ಲಿ ಪ್ರೀತಿಯಿದ್ದುದರಿಂದ ಅವನು ಆಕೆಗೆ ಸಿಂಹಚಂದ್ರನೆಂಬ ಪುತ್ರನಾಗಿ ಜನಿಸಿದನು. ಅವನಿಗೆ ಪೂರ್ಣಚಂದ್ರನೆಂಬ ತಮ್ಮನಿದ್ದನು. ಅವರು ರಾಜನಿಗೆ ಬಹು ಪ್ರಿಯರಾಗಿದ್ದರು.

**ಭಾಂಡಾಗಾರಾವಲೋಕಾರ್ಥಂ ಕದಾಚಿನ್ನೃಪತಿಂ ಗತಮ್ ।**
**ದಶತಿ ಸ್ಮ ನಿಜಕ್ರೋಧಾಚ್ಚಕ್ಷುಃಶ್ರುತಿರಗಂಧನಃ ॥ ೧೯೩ ॥**

ಒಂದಾನೊಂದು ದಿವಸ ಭಂಡಾರವನ್ನು ನೋಡುವುದಕ್ಕೋಸ್ಕರ ಹೋದ ರಾಜನನ್ನು ಆ ಅಗಂಧನವೆಂಬ ಸರ್ಪವು ತನ್ನ ಕ್ರೋಧದಿಂದ ಕಚ್ಚಿತು.

**ತದಾ ಗರುಡದಂಡೇನ ಸರ್ಪಾನಾಹೂಯ ಮಂತ್ರತಃ ।**
**ನಿರ್ದೋಷೋಽಮುಂ ಪ್ರವಿಶ್ಯಾಗ್ನಿಂ ನಿರ್ಗತಃ ಶುದ್ಧಿಮಾಪ್ನುಯಾತ್ ॥**

**ಅನ್ಯಥಾ ನಿಗ್ರಹಿಷ್ಯಾಮೀತ್ಯುಕ್ತ್ವಾ ವಿಷಧರಾಃ ಪರೇ ।**
**ಜಲಾಶಯಾದಿವಾಕ್ಲೇಶಾನ್ನಿರ್ಯಾಂತಿ ಸ್ಮ ಹುತಾಶನಾತ್ ॥ ೧೯೪ ॥**

ಆಗ ಗರುಡದಂಡನೆಂಬ ಗಾರುಡಿಗನು ಮಂತ್ರದಿಂದ ಎಲ್ಲಾ ಸರ್ಪಗಳನ್ನು ಕರೆದು "ಈ ಅಗ್ನಿಯನ್ನು ಪ್ರವೇಶಿಸಿ ಹೊರಡುವವನು ನಿರ್ದೋಷಿಯಾಗಿ ಶುದ್ಧಿಯನ್ನು ಹೊಂದುವನು. ಹಾಗೆ ಮಾಡದಿದ್ದರೆ ನಾನು ಶಿಕ್ಷಿಸುವೆನು" ಎಂದು ಹೇಳಿದನು. ಆಗ ಇತರ ಸರ್ಪಗಳು ಅಗ್ನಿಯನ್ನು ಪ್ರವೇಶಿಸಿ, ಕ್ಲೇಶವಿಲ್ಲದೆ ಜಲಾಶಯದಿಂದ ಹೊರಡುವಂತೆ, ಅಗ್ನಿಯಿಂದ ಹೊರಟುವು.

**ಅಗಂಧನಸ್ತು ತದ್ವಹ್ನೌ ಭಸ್ಮಿತಃ ಕೋಪಮಾನವಾನ್ ।**
**ಕಾಲಕಾಖ್ಯೇ ವನೇ ಜಜ್ಞೇ ಸಲೋಭಶ್ಚಮರೋ ಮೃಗಃ ॥ ೧೯೫ ॥**

ಕೋಪವೂ ಮಾನವೂ ಉಳ್ಳ ಅಗಂಧನಸರ್ಪವಾದರೋ ಆ ಬೆಂಕಿಯಲ್ಲಿ ಬಿದ್ದು ಬೂದಿಯಾಗಿ ಕಾಲಕವೆಂಬ ವನದಲ್ಲಿ ಲೋಭವುಳ್ಳ ಚಮರಮೃಗವಾಗಿ ಹುಟ್ಟಿತು.

**ಸಿಂಹಸೇನೋಽಪಿ ಕಾಲಾಂತೇ ಸಾಮಜಃ ಸಲ್ಲಕೀವನೇ ।**
**ಸಂಭೂಯಾಶನಿಘೋಷಾಖ್ಯಾಂ ಸಮವಾಪ ಮದೋದ್ಧುರಃ ॥ ೧೯೬ ॥**

ಸಿಂಹಸೇನರಾಜನೂ ಕಾಲಾಂತರದಲ್ಲಿ ಸಲ್ಲಕಿಯ (ಆನೆಬೇಲದ) ವನದಲ್ಲಿ ಮದೋನ್ಮತ್ತವಾದ ಆನೆಯಾಗಿ "ಅಶನಿಘೋಷ" ಎಂಬ ಹೆಸರನ್ನು ಪಡೆದನು.

**ಸಿಂಹಚಂದ್ರೋಽಭವದ್ರಾಜಾ ಯೌವರಾಜ್ಯೇಽಜನೀತರಃ ।**
**ಭುಂಜಾನಯೋಸ್ತಯೋರ್ಲಕ್ಷ್ಮೀಂ ಕಾಲೇ ಕ್ಷಣ ಇವಾಯತಿ ॥ ೧೯೭ ॥**

ಇತ್ತ ಸಿಂಹಚಂದ್ರನು ರಾಜನಾದನು. ಪೂರ್ಣಚಂದ್ರನು ಯುವರಾಜನಾದನು. ರಾಜ್ಯಲಕ್ಷ್ಮಿಯನ್ನನುಭವಿಸುತ್ತಿರುವ ಆ ಸಿಂಹಚಂದ್ರ ಪೂರ್ಣಚಂದ್ರರ ದೀರ್ಘ ಕಾಲವು ಕ್ಷಣದಂತೆ ಕಳೆಯಿತು.

**ಕದಾಚಿತ್ಸಿಂಹಸೇನೋಪರತವಾರ್ತಾಶ್ರುತೇರಿತೇ ।**
**ದ್ರಷ್ಟುಂ ದಾಂತಹಿರಣ್ಯಾದಿಮತೀ ಸಂಯಮಸಂಯುತೇ ॥ ೧೯೮ ॥**

ಒಂದಾನೊಂದು ಕಾಲದಲ್ಲಿ ದಾಂತಮತಿ ಹಿರಣ್ಯಮತಿಯರೆಂಬ ಆರ್ಯಿಕೆಯರೀರ್ವರು ಸಿಂಹಸೇನನ ಮರಣವಾರ್ತೆಯನ್ನು ಕೇಳಿ ರಾಮದತ್ತೆಯನ್ನು ನೋಡುವುದಕ್ಕೋಸ್ಕರ ಹೋದರು.

**ಸಮೀಪೇ ರಾಮದತ್ತಾಪಿ ತಯೋಃ ಸಂಯಮಮಾದದೌ ।**
**ತಚ್ಛ್ರೋಕಾತ್ಸಿಂಹಚಂದ್ರೋಽಪಿ ಪೂರ್ಣಚಂದ್ರಯತಿಂ ಶ್ರಿತಃ ॥ ೧೯೯ ॥**

**ಶ್ರುತ್ವಾ ಧರ್ಮಮಿದಂ ಜನ್ಮ ಯದಿ ಯಾತಿ ವೃಥಾ ನೃಣಾಮ್ ।**
**ಕುತಃ ಪುನರಿಹೋತ್ಪತ್ತಿರ್ಭ್ರಾಂತಿರೇವೇತಿ ಚಿಂತಯನ್ ॥ ೨೦೦ ॥**

**ಕೃತ್ವಾ ರಾಜ್ಯೇಽನುಜನ್ಮಾನಂ ದ್ವಿತೀಯಂ ಪ್ರಾಪ್ಯ ಸಂಯಮೇ ।**
**ಗುಣಸ್ಥಾನಂ ವಿಶುದ್ಧ್ಯನ್ಸ ಪ್ರಮಾದಪರಿವರ್ಜನಾತ್ ॥ ೨೦೧ ॥**

**ಖಚಾರಣತ್ವಂ ತುರ್ಯಾವಗಮೋತ್ಕರ್ಷಂ ಚ ಲಬ್ಧವಾನ್ ।**
**ರಾಮದತ್ತಾ ಕದಾಚಿತ್ತಂ ದೃಷ್ಟ್ವಾ ಸಂಜಾತಸಂಮದಾ ॥ ೨೦೨ ॥**

**ಮನೋಹರವನೋದ್ಯಾನೇ ವಂದಿತ್ವಾ ವಿಧಿಪೂರ್ವಕಮ್ ।**
**ತತ್ತಪೋವಿಘ್ನಸಂಪ್ರಶ್ನಪರ್ಯಂತೇ ಪುತ್ರವತ್ಸಲಾ ॥ ೨೦೩ ॥**

**ಪೂರ್ಣಚಂದ್ರಃ ಪರಿತ್ಯಜ್ಯ ಧರ್ಮಂ ಭೋಗೇ ಕೃತಾದರಃ ।**
**ಪ್ರತ್ಯೇತ್ಯುತ ನ ವಾ ಧರ್ಮಮಸಾವಿತ್ಯನ್ವಯುಙ್ಕ್ತ ಸಾ ॥ ೨೦೪ ॥**

ರಾಮದತ್ತೆಯೂ ಆ ಆರ್ಯಿಕೆಯರ ಸಮೀಪದಲ್ಲಿ ಸಂಯಮ–ವ್ರತವನ್ನು ಸ್ವೀಕರಿಸಿದಳು. ಆ ಶೋಕದಿಂದ ಸಿಂಹಚಂದ್ರನೂ ಪೂರ್ಣಚಂದ್ರನೆಂಬ ಯತಿಯನ್ನು ಹೊಂದಿ ಧರ್ಮವನ್ನು ಕೇಳಿ "ಮನುಷ್ಯರ ಈ ಜನ್ಮವು ವ್ಯರ್ಥವಾಗಿ ಕಳೆದು ಹೋಗುವುದಾದರೆ ಮತ್ತೆ ಈ ಜನ್ಮದಲ್ಲಿ ಉತ್ಪತ್ತಿಯು ಏತರಿಂದಾಗುವುದು ? ಮತ್ತೆ ಮನುಷ್ಯಭವವು ದೊರೆಯುವುದೆಂಬುದು ಭ್ರಾಂತಿ" ಈ ರೀತಿಯಾಗಿ ಚಿಂತಿಸುವವನಾಗಿ ಆ ಸಿಂಹಚಂದ್ರನು ರಾಜ್ಯದಲ್ಲಿ ತಮ್ಮನನ್ನಿರಿಸಿ ಪ್ರಮಾದವನ್ನು ತೊರೆದು ಸಂಯಮ–ವ್ರತದಲ್ಲಿ ಎರಡನೆಯದಾದ ಅಪ್ರಮತ್ತಸಂಯತವೆಂಬ ಏಳನೆಯ ಗುಣಸ್ಥಾನವನ್ನು ಹೊಂದಿ ವಿಶುದ್ಧನಾಗಿ ಚಾರಣತ್ವವನ್ನೂ ನಾಲ್ಕನೆಯದಾದ ಉತ್ತಮಮನಃಪರ್ಯಯಜ್ಞಾನವನ್ನೂ ಪಡೆದನು. ಒಂದಾನೊಂದು ಕಾಲದಲ್ಲಿ ರಾಮದತ್ತೆಯು ಮನೋಹರವನೋದ್ಯಾನದಲ್ಲಿ ಆ ಸಿಂಹಚಂದ್ರಮುನಿಯನ್ನು ನೋಡಿ ಸಂತೋಷವುಳ್ಳವಳಾಗಿ ವಿಧಿಪೂರ್ವಕವಾಗಿ ವಂದಿಸಿ ಅವನ ತಪಸ್ಸು ವಿಘ್ನವಿಲ್ಲದೆ ನಡೆಯುವ ಪ್ರಶ್ನೆಯನ್ನು ಕೇಳಿದ ಬಳಿಕ ಪುತ್ರವಾತ್ಸಲ್ಯವುಳ್ಳ ಆಕೆಯು "ಧರ್ಮವನ್ನು ಪರಿತ್ಯಜಿಸಿ ಭೋಗದಲ್ಲಿ ಪ್ರೀತಿಯುಳ್ಳವನಾದ ಈ ಪೂರ್ಣಚಂದ್ರನು ಧರ್ಮವನ್ನು ಪುನಃ ಅಂಗೀಕರಿಸುವನೋ ? ಇಲ್ಲವೋ ?" ಎಂದು ಪ್ರಶ್ನೆ ಮಾಡಿದಳು.

**ಪ್ರತ್ಯಾಹ ಸಿಂಹಚಂದ್ರೋಽಪಿ ಯುಷ್ಮದ್ಧರ್ಮಂ ಗ್ರಹೀಷ್ಯತಿ ।**
**ಮಾಭೂತ್ಖೇದಃ ಕಥಾಂ ಚಾಸ್ಯ ಶೃಣುತಾನ್ಯಭವಾಶ್ರಿತಾಮ್ ॥ ೨೦೫ ॥**

ಸಿಂಹಚಂದ್ರಮುನಿಯು ಈ ರೀತಿಯಾಗಿ ಉತ್ತರವನ್ನು ಹೇಳಿದನು–" ನಿಮ್ಮ ಧರ್ಮವನ್ನು ಸ್ವೀಕರಿಸುವನು. ವಿಷಾದಪಡಬೇಕಾಗಿಲ್ಲ. ಇವನ ಅನ್ಯಭವಸಂಬಂಧವಾದ ಕಥೆಯನ್ನು ಕೇಳಿರಿ.

**ಕೌಸಲೇ ವಿಷಯೇ ವೃದ್ಧಗ್ರಾಮೇ ನಾಮ್ನಾ ಮೃಗಾಯಣಃ ।**
**ವಿಪ್ರಸ್ತಸ್ಯಾಭವದ್ಧರ್ಮಪತ್ನೀ ಚ ಮಧುರಾಹ್ವಯಾ ॥ ೨೦೬ ॥**

ಕೋಸಲದೇಶದಲ್ಲಿರುವ ವೃದ್ಧಗ್ರಾಮದಲ್ಲಿ ಮೃಗಾಯಣನೆಂಬ ಬ್ರಾಹ್ಮಣನಿದ್ದನು. ಆತನಿಗೆ ಮಧುರೆಯೆಂಬ ಧರ್ಮಪತ್ನಿಯಿದ್ದಳು.

**ತತ್ಸುತಾ ವಾರುಣೀಸಂಜ್ಞಾ ಜೀವಿತಾಂತೇ ಮೃಗಾಯಣಃ ।**
**ಸಾಕೇತಾಧೀಶಿನೋತ್ಪಾದಿಬಲಸ್ಯ ಸುಮತೇಶ್ಚ ಸಃ ॥ ೨೦೭ ॥**

**ಸುತಾ ಹಿರಣ್ಯಮತ್ಯಾಸೀತ್ಸುರಮ್ಯವಿಷಯೇ ಪುರೇ ।**
**ಪೌದನೇಧೀಶಿನೇ ಪೂರ್ಣಚಂದ್ರಾಯಾದಾಯಿ ಸಾ ಸತೀ ॥ ೨೦೯ ॥**

ವಾರುಣಿಯೆಂಬವಳು ಅವನ ಮಗಳು. ಮೃಗಾಯಣನು ಸತ್ತು ಸಾಕೇತ ನಗರಾಧಿಪತಿಯಾದ ಆದಿತ್ಯಬಲನಿಗೂ ಆತನ ಪತ್ನಿಯಾದ ಸುಮತಿಗೂ ಹಿರಣ್ಯ ಮತಿಯೆಂಬ ಪುತ್ರಿಯಾಗಿ ಜನಿಸಿದನು. ಪತಿವ್ರತೆಯಾದ ಆ ಹಿರಣ್ಯಮತಿಯನ್ನು ಸುರಮ್ಯದೇಶದ ಪೌದನಪುರಾಧಿಪತಿಯಾದ ಪೂರ್ಣಚಂದ್ರನಿಗೆ ಕೊಟ್ಟು– ವಿವಾಹವನ್ನು ಮಾಡಿದರು.

**ಮಧುರಾಪಿ ತಯೋರ್ಜಾತಾ ರಾಮದತ್ತಾ ತ್ವಮುತ್ತಮಾ ।**
**ಭದ್ರಮಿತ್ರವಣಿಕ್ಸಿಂಹಚಂದ್ರಸ್ತೇ ಸ್ನೇಹತೋಭವತ್ ॥ ೨೧೦ ॥**

ಮೃಗಾಯಣನ ಪತ್ನಿಯಾದ ಮಧುರೆಯೂ ಸತ್ತು ಆ ಪೂರ್ಣಚಂದ್ರನಿಗೂ ಹಿರಣ್ಯಮತಿಗೂ ನೀನು ಉತ್ತಮಳಾದ ರಾಮದತ್ತೆಯೆಂಬ ಪುತ್ರಿಯಾದೆ. ಭದ್ರಮಿತ್ರವೈಶ್ಯನು ಸ್ನೇಹದಿಂದ ನಿನಗೆ ಸಿಂಹಚಂದ್ರನೆಂಬ ಪುತ್ರನಾದನು.

**ವಾರುಣೀ ಪೂರ್ಣಚಂದ್ರೋಽಯಂ ತ್ವತ್ಪಿತಾ ಭದ್ರಬಾಹುತಃ ।**
**ಗೃಹೀತಸಂಯಮೋದ್ಯಾತ್ರ ಸಂವೃತ್ತೋ ಗುರುರಾವಯೋಃ ॥ ೨೧೧ ॥**

ವಾರುಣಿಯು ಈ ಪೂರ್ಣಚಂದ್ರನಾಗಿ ಜನಿಸಿದಳು. ನಿನ್ನ ತಂದೆಯು ಭದ್ರಬಾಹುಮುನಿಯಿಂದ ಸಂಯಮ–ವ್ರತವನ್ನು ಸ್ವೀಕರಿಸಿ ಈಗ ಇಲ್ಲಿ ನಮಗೆ ಗುರುವಾಗಿದ್ದಾನೆ.

**ಮಾತಾ ತೇ ದಾಂತಮತ್ಯಂತೇ ದೀಕ್ಷಿತಾ ಕ್ಷಾಂತಿರದ್ಯ ತೇ ।**
**ಸಿಂಹಸೇನೋಹಿನಾ ದಷ್ಟಃ ಕರೀಂದ್ರೋಶನಿಘೋಷಕಃ ॥ ೨೧೨ ॥**

**ಭೂತ್ವಾ ವನೇ ಭ್ರಮನ್ಮತ್ತೋ ಮಾಮಾಲೋಕ್ಯ ಜಿಘಾಂಸಯಾ ।**
**ಧಾವತಿ ಸ್ಮ ಮಯಾಕಾಶೇ ಸ್ಥಿತ್ವಾ ಸ ಪ್ರತಿಬೋಧಿತಃ ॥ ೨೧೩ ॥**

**ಪೂರ್ವಸಂಬಂಧಮಾಖ್ಯಾಯ ಸರ್ವಂ ಸಮ್ಯಕ್ಸಬುದ್ಧವಾನ್ ।**
**ಸಂಯಮಾಸಂಯಮಂ ಭವ್ಯಃ ಸ್ವಯಂ ಸದ್ಯಃ ಸಮಗ್ರಹೀತ್ ॥ ೨೧೪ ॥**

ನಿನ್ನ ತಾಯಿಯು ದಾಂತಮತಿಯ ಬಳಿಯಲ್ಲಿ ದೀಕ್ಷೆಯನ್ನು ಸ್ವೀಕರಿಸಿದಳು. ಈಗ ನಿನಗೆ ಆಕೆಯು ದೀಕ್ಷೆಯನ್ನು ಕೊಟ್ಟಳು. ಸಿಂಹಸೇನನು ಸರ್ಪದಿಂದ ಕಚ್ಚಲ್ಪಟ್ಟು ವನದಲ್ಲಿ ಅಶನಿಘೋಷವೆಂಬ ಆನೆಯಾಗಿ ಹುಟ್ಟಿ ಮದಿಸಿದುದಾಗಿ ಸಂಚರಿಸುತ್ತ ನನ್ನನ್ನು ನೋಡಿ ಕೊಲ್ಲಬೇಕೆಂಬ ಇಚ್ಛೆಯಿಂದ ಓಡಿಬಂದಿತು. ಆಗ ನಾನು ಆಕಾಶ ದಲ್ಲಿದ್ದು ಅದಕ್ಕೆ ಪೂರ್ವಭವಸಂಬಂಧವನ್ನು ಹೇಳಿ ಬೋಧಿಸಿದೆನು. ಆ ಭವ್ಯ ಜೀವವು ಎಲ್ಲವನ್ನೂ ಚೆನ್ನಾಗಿ ತಿಳಿದುದಾಗಿ ಆಗಲೇ ತಾನು ಸಂಯಮಾಸಂಯಮ ವನ್ನು ಎಂದರೆ ದೇಶಸಂಯಮವನ್ನು ಪರಿಗ್ರಹಿಸಿತು.

**ಶಾಂತಚಿತ್ತಸ್ಸನಿರ್ವೇದೋ ಧ್ಯಾಯನ್ಕಾಯಾದ್ಯಸಾರತಾಮ್ ।**
**ಕೃತ್ವಾ ಮಾಸೋಪವಾಸಾದೀನ್ ಶುಷ್ಕಪತ್ರಾಣಿ ಪಾರಯನ್ ॥ ೨೧೫ ॥**

ಶಾಂತಚಿತ್ತವುಳ್ಳುದೂ ವೈರಾಗ್ಯವುಳ್ಳುದೂ ಶರೀರ ಮೊದಲಾದುವುಗಳ ಅಸಾರತ್ವವನ್ನು ಧ್ಯಾನಿಸುವುದೂ ಆದ ಆ ಆನೆಯು ಮಾಸೋಪವಾಸಾದಿನಿಯಮ ಗಳನ್ನು ಮಾಡಿ ಒಣಗಿದ ಎಲೆಗಳನ್ನು ಭಕ್ಷಿಸುತ್ತಿತ್ತು.

**ಕುರ್ವನ್ನೇವಂ ಮಹಾಸತ್ತ್ವಶ್ಚಿರಂ ಘೋರತರಂ ತಪಃ ।**
**ಯೂಪಕೇಸರಿಣೀನಾಮ ಸರಿತ್ತೀರ್ಥೇ ಕೃಶೋಬಲಃ ॥ ೨೧೬ ॥**

**ಪಾತುಂ ಪ್ರವಿಷ್ಟಸ್ತಂ ವೀಕ್ಷ್ಯ ಸ ಸರ್ಪಶ್ಚಮರಃ ಪುನಃ ।**
**ಜಾತಃ ಕುಕ್ಕುಟಸರ್ಪೋತ್ರ ತದಾಸ್ಯಾರುಹ್ಯ ಮಸ್ತಕಮ್ ॥ ೨೧೭ ॥**

**ದಶತಿ ಸ್ಮ ಗಜಾಪ್ಯೇತದ್ವಿಷೇಣ ವಿಗತಾಸುಕಃ ।**
**ಸಮಾಧಿಮರಣಾಜ್ಜಜ್ಞೇ ಸಹಸ್ರಾರೇ ರವಿಪ್ರಭೇ ॥ ೨೧೮ ॥**

**ವಿಮಾನೇ ಶ್ರೀಧರೋ ದೇವೋ ಧರ್ಮಿಲಶ್ಚಾಯುಷಃ ಕ್ಷಯೇ ।**
**ತತ್ರೈವ ವಾನರಃ ಸೋಭೂತ್ಸಖ್ಯಾತ್ತೇನ ಗಜೇಶಿನಃ ॥ ೨೧೯ ॥**

**ಹತಃ ಕುಕ್ಕುಟಸರ್ಪೋಽಪಿ ತೃತೀಯನರಕೇಭವತ್ ।**
**ಗಜಸ್ಯ ರದನೌ ಮುಕ್ತಾಶ್ಚಾದಾಯಾಧಿಕತೇಜಸಃ ॥ ೨೨೦ ॥**

**ವ್ಯಾಧಃ ಶೃಗಾಲವನ್ನಾಮ ಧನಮಿತ್ರಾಯ ದತ್ತವಾನ್ ।**
**ರಾಜಶ್ರೇಷ್ಠೀ ಚ ತೌ ತಾಶ್ಚ ಪೂರ್ಣಚಂದ್ರಮಹೀಭುಜೇ ॥ ೨೨೧ ॥**

**ದದೌ ದಂತದ್ವಯೇನಾಸೌ ವ್ಯಧಾತ್ಪಾದಚತುಷ್ಟಯಮ್ ।**
**ಪಲ್ಯಂಕಸ್ಯಾತ್ಮನೋ ಮುಕ್ತಾಭಿಶ್ಚ ಹಾರಮಧಾಚ್ಚ ತಮ್ ॥ ೨೨೨ ॥**

ಕೃಶವೂ ಬಲಹೀನವೂ ಆದ ಆ ದೊಡ್ಡ ಪ್ರಾಣಿಯು ಈ ರೀತಿಯಾಗಿ ಬಹು ಸಮಯದವರೆಗೆ ಘೋರತರವಾದ ತಪಸ್ಸನ್ನು ಮಾಡುತ್ತ ಯೂಪಕೇಸರಿಣಿಯೆಂಬ ನದಿಯಘಟ್ಟದಲ್ಲಿ ನೀರನ್ನು ಕುಡಿಯುವುದಕ್ಕೋಸ್ಕರ ಪ್ರವೇಶಿಸಿದ ಆ ಆನೆಯನ್ನು ನೋಡಿ ಮೊದಲು ಸರ್ಪವಾಗಿಯೂ ಮತ್ತೆ ಚಮರಮೃಗವಾಗಿಯೂ ಆಗಿದ್ದು ಈಗ ಇಲ್ಲಿ ಕುಕ್ಕುಟಸರ್ಪವಾಗಿ ಹುಟ್ಟಿರುವ ಆ ಪ್ರಾಣಿಯು ಈ ಆನೆಯ ಮಸ್ತಕವನ್ನೇರಿ ಕಚ್ಚಿತು. ಆನೆಯೂ ಈ ವಿಷದಿಂದ ಸತ್ತಿತು. ಅದು ಸಮಾಧಿಮರಣ ದಿಂದ ಸಹಸ್ರಾರವೆಂಬ ಹನ್ನೆರಡನೆಯ ಸ್ವರ್ಗದಲ್ಲಿ ರವಿಪ್ರಭವಿಮಾನದಲ್ಲಿ ಶ್ರೀಧರ ನೆಂಬ ದೇವನಾಗಿ ಜನಿಸಿತು. ಸತ್ಯಘೋಷನ ಸ್ಥಾನದಲ್ಲಿ ಮಂತ್ರಿಯಾಗಿದ್ದ ಆ ಧರ್ಮಿಲನು ತನ್ನ ಆಯುಷ್ಯಕ್ಷಯದಲ್ಲಿ ಸತ್ತು ಅದೇ ನದೀತೀರದಲ್ಲಿ ಕಪಿಯಾದನು. ಗಜರಾಜನ ಮೈತ್ರಿಯ ದೆಸೆಯಿಂದ ಆ ಕಪಿಯು ಕುಕ್ಕುಟಸರ್ಪವನ್ನು ಕೊಂದಿತು . ಆ ಸರ್ಪವು ಸತ್ತು ಮೂರನೆಯ ನರಕದಲ್ಲಿ ಹುಟ್ಟಿತು. ಶೃಗಾಲವತನೆಂಬ ವ್ಯಾಧನು ಆ ಆನೆಯ ಎರಡುಹಲ್ಲುಗಳನ್ನೂ ಅಧಿಕ ತೇಜಸ್ಸುಳ್ಳ ಮುತ್ತುಗಳನ್ನೂ ತೆಗೆದುಕೊಂಡು ಧನಮಿತ್ರನೆಂಬ ವೈಶ್ಯನಿಗೆ ಕೊಟ್ಟನು. ಆ ರಾಜಶ್ರೇಷ್ಠಿಯು ಆ ದಂತಗಳನ್ನೂ ಮುತ್ತುಗಳನ್ನೂ ಪೂರ್ಣಚಂದ್ರರಾಜನಿಗೆ ಕೊಟ್ಟನು. ಈ ರಾಜನು ಆ ಎರಡು ದಂತಗಳಿಂದ ತನ್ನ ಮಂಚಕ್ಕೆ ನಾಲ್ಕು ಕಾಲುಗಳನ್ನೂ ಮುತ್ತುಗಳಿಂದ ತನಗೆ ಹಾರವನ್ನೂ ಮಾಡಿಸಿದನು. ಆ ಹಾರವನ್ನು ತಾನು ಧರಿಸಿದನು.

**ಈದೃಶಂ ಸಂಸೃತೇರ್ಭಾವಂ ಭಾವಯನ್ಕೋ ವಿಧೀರ್ನ ಚೇತ್ ।**
**ರತಿಂ ತನೋತಿ ಭೋಗೇಷು ಭವಾಭಾವಮಭಾವಯನ್ ॥ ೨೨೩ ॥**

ಸಂಸಾರದ ಇಂತಹ ಸ್ವರೂಪವನ್ನು ಭಾವಿಸುವವನು ಯಾವನು ತಾನೆ ಬುದ್ಧಿಯಿಲ್ಲದವನಲ್ಲವಾಗಿದ್ದರೆ ( ಪ್ರಾಜ್ಞನಾಗಿದ್ದರೆ) ಸಂಸಾರದ ಅಭಾವ (ನಾಶ) ವನ್ನು ಭಾವಿಸದಿರುವವನಾಗಿ ಭೋಗಗಳಲ್ಲಿ ಪ್ರೀತಿಯನ್ನು ಮಾಡುವನು ?ಭವವು ನಾಶಶೀಲವಾದುದೆಂದು ತಿಳಿದು ಪ್ರಾಜ್ಞನು ಭೋಗಗಳನ್ನು ಪ್ರೀತಿಸುವುದಿಲ್ಲವೆಂದು ಭಾವವು.''

**ಇತ್ಯಸೌ ಸಿಂಹಚಂದ್ರೋಕ್ತಂ ರಾಮದತ್ತಾವಬುದ್ಧ್ಯ ತತ್ ।**
**ಪುತ್ರಸ್ನೇಹಾತ್ಸ್ವಯಂ ಗತ್ವಾ ಪೂರ್ಣಚಂದ್ರಮಜಿಜ್ಞಪತ್ ॥ ೨೨೪ ॥**

ಈ ರೀತಿಯಾಗಿ ಸಿಂಹಚಂದ್ರಮುನಿಯಿಂದ ಹೇಳಲ್ಪಟ್ಟ ವಿಷಯವನ್ನು ತಿಳಿದು ರಾಮದತ್ತೆಯು ಪುತ್ರಪ್ರೇಮದಿಂದ ತಾನು ಹೋಗಿ ಆ ಪೂರ್ಣಚಂದ್ರನಿಗೆ ವಿಜ್ಞಾಪಿಸಿದಳು.

**ಗೃಹೀತಧರ್ಮತತ್ತ್ವೋಽಸೌ ಚಿರಂ ರಾಜ್ಯಮಪಾಲಯನ್ ।**
**ರಾಮದತ್ತಾಪಿ ತತ್ಸ್ನೇಹಾತ್ಸನಿದಾನಾಯುಷೋವಧೌ ॥ ೨೨೫ ॥**

**ಮಹಾಶುಕ್ರೇ ವಿಮಾನೇಭೂದ್ಭಾಸ್ಕರೇ ಭಾಸ್ಕರಾಹ್ವಯಃ ।**
**ಪೂರ್ಣಚಂದ್ರೋಽಪಿ ತತ್ರೈವ ವೈಡೂರ್ಯೇ ತತ್ಕೃತಾಹ್ವಯಃ ॥ ೨೨೬ ॥**

ಧರ್ಮರಹಸ್ಯವನ್ನು ಗ್ರಹಣಮಾಡಿದವನಾಗಿ ಈ ಪೂರ್ಣಚಂದ್ರನು ಬಹು ಕಾಲದವರೆಗೆ ರಾಜ್ಯವನ್ನು ಪರಿಪಾಲಿಸಿದನು. ರಾಮದತ್ತೆಯೂ ಆ ಪುತ್ರಸ್ನೇಹದಿಂದ ಆಯುಷ್ಯಾವಸಾನದಲ್ಲಿ ನಿದಾನಶಲ್ಯೆಯುಳ್ಳವಳಾಗಿ ಸತ್ತು ಮಹಾಶುಕ್ರವೆಂಬ

ಹತ್ತನೆಯ ಸ್ವರ್ಗದಲ್ಲಿ ಭಾಸ್ಕರವಿಮಾನದಲ್ಲಿ ಭಾಸ್ಕರನೆಂಬ ದೇವನಾಗಿ ಹುಟ್ಟಿದಳು. ಪೂರ್ಣಚಂದ್ರನೂ ಅದೇ ಸ್ವರ್ಗದಲ್ಲಿ ವೈಡೂರ್ಯವಿಮಾನದಲ್ಲಿ ವೈಡೂರ್ಯನೆಂಬ ದೇವನಾಗಿ ಹುಟ್ಟಿದನು.

**ಸಿಂಹಚಂದ್ರಮುನೀಂದ್ರೋಽಪಿ ಸಮ್ಯಗಾರಾಧ್ಯ ಶುದ್ಧಧೀಃ ।**
**ಪ್ರೀತಿಂಕರವಿಮಾನೇಽಭೂದೂರ್ಧ್ವಗ್ರೈವೇಯಕೋರ್ಧ್ವಗೇ ॥ ೨೨೭ ॥**

ಶುದ್ಧಬುದ್ಧಿಯುಳ್ಳ ಸಿಂಹಚಂದ್ರಮುನೀಂದ್ರನೂ ಚೆನ್ನಾಗಿ ಆರಾಧಿಸಿ ಸತ್ತು ಊರ್ಧ್ವಗ್ರೈವೇಯಕವಿಮಾನಗಳಲ್ಲಿ ಮೇಲಾದ ಗ್ರೈವೇಯಕದಲ್ಲಿರುವ ಪ್ರೀತಿಂಕರ ವಿಮಾನದಲ್ಲಿ ಅಹಮಿಂದ್ರದೇವನಾಗಿ ಜನಿಸಿದನು.

**ರಾಮದತ್ತಾ ತತಶ್ಚ್ಯುತ್ವಾ ಧರಣೀತಿಲಕೇ ಪುರೇ ।**
**ಅತ್ರೈವ ದಕ್ಷಿಣಶ್ರೇಣ್ಯಾಮತಿವೇಗಖಗೇಶಿನಃ ॥ ೨೨೮ ॥**

**ಶ್ರೀಧರಾಖ್ಯಾ ಸುತಾ ಜಾತಾ ಮಾತಾಸ್ಯಾಃ ಸ್ಯಾತ್ಸುಲಕ್ಷಣಾ ।**
**ದತ್ತೇಯಮಲಕಾಧೀಶೇ ದರ್ಶಕಾಯ ಖಗೇಶಿನೇ ॥ ೨೨೯ ॥**

ರಾಮದತ್ತೆಯು ಅಲ್ಲಿಂದ ಚ್ಯುತಳಾಗಿ ಇದೇ ಭರತಕ್ಷೇತ್ರದಲ್ಲಿ ವಿಜಯಾರ್ಧ ಪರ್ವತದ ದಕ್ಷಿಣಶ್ರೇಣಿಯಲ್ಲಿ ಧರಣೀತಿಲಕವೆಂಬ ನಗರದಲ್ಲಿ ಅತಿವೇಗನೆಂಬ ಖೇಚರನಿಗೆ ಶ್ರೀಧರೆಯೆಂಬ ಪುತ್ರಿಯಾಗಿ ಜನಿಸಿದಳು. ಈಕೆಯ ತಾಯಿ ಸುಲಕ್ಷಣೆಯೆಂಬವಳಾಗಿದ್ದಳು. ಈ ಶ್ರೀಧರೆಯು ಅಲಕಾನಗರಾಧೀಶ್ವರನಾದ ದರ್ಶಕನೆಂಬ ಖೇಚರನಿಗೆ ಕೊಡಲ್ಪಟ್ಟಳು.

**ವೈಡೂರ್ಯಾಧಿಪತಿಶ್ಚಾಸ್ಯ ದುಹಿತಾಭೂದ್ಯಶೋಧರಾ ।**
**ಪುಷ್ಕರಾಖ್ಯಪುರೇಟ್ಸೂರ್ಯಾವರ್ತಾಯಾದಾಯ್ಯಸಾವಪಿ ॥ ೨೩೦ ॥**

ವೈಡೂರ್ಯವಿಮಾನಾಧಿಪತಿಯಾಗಿದ್ದ ವೈಡೂರ್ಯದೇವನು ಈ ಶ್ರೀಧರೆಗೆ ಯಶೋಧರೆಯೆಂಬ ಪುತ್ರಿಯಾಗಿ ಜನಿಸಿದನು. ಈ ಯಶೋಧರೆಯು ಪುಷ್ಕರವೆಂಬ ನಗರಾಧಿಪತಿಯಾದ ಸೂರ್ಯಾವರ್ತನಿಗೆ ಕೊಡಲ್ಪಟ್ಟಳು.

**ಗಜಶ್ರೀಧರದೇವೋಽಪಿ ರಶ್ಮಿವೇಗಸ್ತಯೋರಭೂತ್ ।**
**ಕದಾಚಿನ್ಮುನಿಚಂದ್ರಾಖ್ಯಮುನಿಧರ್ಮಾನುಶಾಸನಾತ್ ॥ ೨೩೧ ॥**

**ಸೂರ್ಯಾವರ್ತೇ ತಪೋ ಯಾತೇ ಶ್ರೀಧರಾ ಚ ಯಶೋಧರಾ ।**
**ದೀಕ್ಷಾಂ ಸಮಗ್ರಹೀಷಾತಾಂ ಗುಣವತ್ಯಾರ್ಯಿಕಾಂತಿಕೇ ॥ ೨೩೨ ॥**

ಮೊದಲು ಆನೆಯಾಗಿದ್ದ ಶ್ರೀಧರದೇವನೂ ಆ ಸೂರ್ಯಾವರ್ತನಿಗೂ ಯಶೋಧರೆಗೂ ರಶ್ಮಿವೇಗನೆಂಬ ಪುತ್ರನಾದನು. ಒಂದಾನೊಂದು ಕಾಲದಲ್ಲಿ ಮುನಿಚಂದ್ರನೆಂಬ ಮುನಿಯು ಯತಿಧರ್ಮವನ್ನು ಉಪದೇಶಿಸಿದುದರಿಂದ ಸೂರ್ಯಾವರ್ತನು ತಪಸ್ಸನ್ನು ಹೊಂದುತ್ತಿರಲು ಶ್ರೀಧರೆಯೂ ಯಶೋಧರೆಯೂ ಗುಣವತ್ಯಾರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡರು .

**ಕದಾಚಿದ್ರಶ್ಮಿವೇಗೋಽಗಾತ್ಸಿದ್ಧಕೂಟಜಿನಾಲಯಮ್ ।**
**ಹರಿಚಂದ್ರಾಹ್ವಯಂ ತತ್ರ ದೃಷ್ಟ್ವಾ ಚಾರಣಸಂಯತಮ್ ॥ ೨೩೩ ॥**

**ಶ್ರುತ್ವಾ ಧರ್ಮಂ ಸ ಸಮ್ಯಕ್ತ್ವಂ ಸಂಯಮಂ ಪ್ರತಿಪದ್ಯ ಸಃ ।**
**ಚಾರಣತ್ವಂ ಚ ಸಂಪ್ರಾಪ್ತಃ ಸದ್ಯೋ ಗಗನಗೋಚರಮ್ ॥ ೨೩೪ ॥**

ಒಂದಾನೊಂದು ಕಾಲದಲ್ಲಿ ರಶ್ಮಿವೇಗನು ಸಿದ್ಧಕೂಟಜಿನಾಲಯಕ್ಕೆ ಹೊದನು. ಅಲ್ಲಿ ಹರಿಚಂದ್ರನೆಂಬ ಚಾರಣಮುನಿಯನ್ನು ಕಂಡು ಧರ್ಮವನ್ನು ಶ್ರವಣಮಾಡಿ ಅವನು ಸಮ್ಯಕ್ತ್ವಸಹಿತವಾದ ಸಂಯಮ- ವ್ರತವನ್ನು ಪಡೆದು ಆಗಲೇ ಆಕಾಶ ಚಾರಣತ್ವವನ್ನೂ ಹೊಂದಿದನು.

**ಕಾಂಚನಾಖ್ಯಗುಹಾಯಾಂ ತಂ ಕದಾಚಿದವಲೋಕ್ಯ ತೇ ।**
**ವಂದಿತ್ವಾ ತಿಷ್ಠತಾಂ ತತ್ರ ಶ್ರೀಧರಾ ಚ ಯಶೋಧರಾ ॥ ೨೩೫ ॥**

ಒಂದಾನೊಂದು ಕಾಲದಲ್ಲಿ ಆ ಶ್ರೀಧರೆಯೂ ಯಶೋಧರೆಯೂ ಕಾಂಚನವೆಂಬ ಗುಹೆಯಲ್ಲಿ ರಶ್ಮಿವೇಗಮುನಿಯನ್ನು ಕಂಡು ವಂದಿಸಿ ಅಲ್ಲಿದ್ದರು.

**ಪ್ರಾಕ್ತನೋ ನಾರಕಸ್ತಸ್ಮಾತ್ತಚ್ಯುತ್ವಾಘವಿಪಾಕತಃ ।**
**ಚಿರಂ ಭ್ರಮಿತ್ವಾ ಸಂಸಾರೇ ಮಹಾನಜಗರೋಽಭವತ್ ॥ ೨೩೬ ॥**

ಇತ್ತ ಮೂರನೆಯ ನರಕದಲ್ಲಿ ಹುಟ್ಟಿದ್ದ ಸತ್ಯಘೋಷನ ಜೀವವು ಕರ್ಮ ವಿಪಾಕದಿಂದ ಅಲ್ಲಿಂದ ಚ್ಯುತವಾಗಿ ಸಂಸಾರದಲ್ಲಿ ಬಹುಕಾಲ ಸಂಚರಿಸಿ ಆ ವನದಲ್ಲಿ ಹೆಬ್ಬಾವಾಗಿದ್ದಿತು.

**ತೇ ಚ ತಂ ಚ ನಿರೀಕ್ಷ್ಯೇಷ ಸ ಸೂರ್ಯಪ್ರತಿಮಂ ಕ್ರುಧಾ ।**
**ಸಹಾಗಿಲತ್ಸಮಾರಾಧ್ಯ ತೇ ಕಾಪಿಷ್ಠೇ ಬಭೂವತುಃ ॥ ೨೩೭ ॥**

ಈ ಹೆಬ್ಬಾವು ಆ ಆರ್ಯಿಕೆಯರನ್ನೂ ಸೂರ್ಯಸಮಾನನಾದ ರಶ್ಮಿವೇಗಮುನಿಯನ್ನೂ ಒಟ್ಟಿಗೆ ನುಂಗಿತು. ಆರ್ಯಿಕೆಯರಿಬ್ಬರು ಜ್ಞಾನಾರಾಧಾನೆ ಮೊದಲಾದ ಆರಾಧನೆಗಳನ್ನು ಆರಾಧಿಸಿ ಸತ್ತು ಕಾಪಿಷ್ಠವೆಂಬ ಎಂಟನೆಯ ಸ್ವರ್ಗದಲ್ಲಿ ಜನಿಸಿದರು.

**ರುಚಕಾಖ್ಯೇ ವಿಮಾನೇಽಯಂ ಮುನಿಶ್ಚಾರ್ಕಪ್ರಭಾಹ್ವಯಃ ।**
**ದೇವಃ ಪಂಕಪ್ರಭಾಂ ಪ್ರಾಪತ್ ಪಾಪಾದಜಗರೋಽಪಿ ಸಃ ॥ ೨೩೮ ॥**

ಈ ಮುನಿಯೂ ರುಚಕವೆಂಬ ವಿಮಾನದಲ್ಲಿ ಅರ್ಕಪ್ರಭನೆಂಬ ದೇವನಾಗಿ ಜನಿಸಿದನು. ಆ ಹೆಬ್ಬಾವು ಪಾಪದಿಂದಪಂಕಪ್ರಭೆಯೆಂಬ ನಾಲ್ಕನೆಯ ನರಕವನ್ನು ಹೊಂದಿತು.

**ಸಿಂಹಚಂದ್ರೋ ದಿವೋಽಭ್ಯೇತ್ಯ ದ್ವೀಪೇಽಸ್ಮಿಂಶ್ಚಕ್ರಪೂಃಪತೇಃ ।**
**ಅಪರಾಜಿತರಾಜಸ್ಯ ಸುಂದರ್ಯಾಶ್ಚ ಸುತೋಽಭವತ್ ॥ ೨೩೯ ॥**

**ಚಕ್ರಾಯುಧಸ್ತತೋಽಸ್ಯೈವ ರಶ್ಮಿವೇಗಶ್ಚ್ಯುತೋ ದಿವಃ ।**
**ಸಂಜಾತಶ್ಚಿತ್ರಮಾಲಾಯಾಂ ಸುತೋ ವಜ್ರಾಯುಧಾಹ್ವಯಃ ॥ ೨೪೦ ॥**

ಊರ್ಧ್ವಗ್ರೈವೇಯಕವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟಿದ್ದ ಸಿಂಹಚಂದ್ರನು ಆ ಸ್ವರ್ಗದಿಂದ ಬಂದು ಈ ಜಂಬೂದ್ವೀಪದಲ್ಲಿ ಚಕ್ರಪುರಾಧಿಪತಿಯಾದ ಅಪರಾಜಿತ ರಾಜನಿಗೂ ಆತನ ಪತ್ನಿಯಾದ ಸುಂದರಿಗೂ ಚಕ್ರಾಯುಧನೆಂಬ ಪುತ್ರನಾದನು. ಬಳಿಕ ಸ್ವರ್ಗದಿಂದ ಚ್ಯುತನಾದ ರಶ್ಮಿವೇಗನು ಈ ಚಕ್ರಾಯುಧನಿಗೇ ಚಿತ್ರಮಾಲೆಯೆಂಬ ಪತ್ನಿಯಲ್ಲಿ ವಜ್ರಾಯುಧನೆಂಬ ಪುತ್ರನಾಗಿ ಜನಿಸಿದನು.

**ಶ್ರೀಧರಾ ಚಾಗತಾ ನಾಕಾತ್ಪೃಥಿವೀತಿಲಕೇ ಪುರೇ ।**
**ಸುತಾಭೂತ್ಪ್ರಿಯಕಾರಿಣ್ಯಾಮತಿವೇಗಮಹೀಪತೇಃ ॥ ೨೪೧ ॥**

**ಸರ್ವಲಕ್ಷಣಸಂಪೂರ್ಣಾ ರತ್ನಮಾಲೇತಿ ವಿಶ್ರುತಾ ।**
**ವಜ್ರಾಯುಧಸ್ಯ ಸಾ ದೇವೀ ಸಮಜಾಯತ ಸಂಪದೇ ॥ ೨೪೨ ॥**

ಶ್ರೀಧರೆಯು ಸ್ವರ್ಗದಿಂದ ಬಂದು ಪೃಥಿವೀತಿಲಕನಗರದಲ್ಲಿ ಅತಿವೇಗರಾಜನಿಗೆ ಪ್ರಿಯಕಾರಿಣೀದೇವಿಯಲ್ಲಿ ಸರ್ವಲಕ್ಷಸಂಪೂರ್ಣಳೂ ರತ್ನಮಾಲೆಯೆಂದು ಪ್ರಖ್ಯಾತಳೂ ಆದ ಪುತ್ರಿಯಾದಳು. ಆಕೆಯು ಸಂಪತ್ತಿಗೋಸ್ಕರ ವಜ್ರಾಯುಧನಿಗೆ ರಾಣಿಯಾದಳು.

**ಯಶೋಧರಾ ತಯೋ ರತ್ನಾಯುಧಃ ಸೂನುರಜಾಯತ ।**
**ಏವಮೇತೇ ಸ್ವಪೂರ್ವಾಯಃಫಲಮತ್ರಾಪುರನ್ವಹಮ್ ॥ ೨೪೩ ॥**

ಆ ದಂಪತಿಗಳಿಗೆ ಯಶೋಧರೆಯು ಸ್ವರ್ಗದಿಂದ ಬಂದು ರತ್ನಾಯುಧನೆಂಬ ಪುತ್ರನಾಗಿ ಜನಿಸಿದಳು. ಹೀಗೆ ಇವರುಗಳು ಇಲ್ಲಿ ಯಾವಾಗಲೂ ತಮ್ಮ ಪೂರ್ವಪುಣ್ಯದ ಫಲವನ್ನು ಹೊಂದಿದರು.

**ಶ್ರುತ್ವಾಪರಾಜಿತೋ ಧರ್ಮಮನ್ಯೇದ್ಯುಃ ಪಿಹಿತಾಸ್ರವಾತ್ ।**
**ಚಕ್ರಾಯುಧಾಯ ಸಾಮ್ರಾಜ್ಯಂ ದತ್ವಾದೀಕ್ಷಿಷ್ಟ ಧೀರಧೀಃ ॥ ೨೪೪ ॥**

ಪ್ರಾಜ್ಞನಾದ ಅಪರಾಜಿತನು ಒಂದು ದಿವಸ ಪಿಹಿತಾಸ್ರವಮುನಿಯಿಂದ ಧರ್ಮವನ್ನು ಶ್ರವಣಮಾಡಿ ಚಕ್ರಾಯುಧನಿಗೆ ಸಾಮ್ರಾಜ್ಯವನ್ನಿತ್ತು ದೀಕ್ಷೆಯನ್ನು ತೆಗೆದುಕೊಂಡನು.

**ವಜ್ರಾಯುಧೇ ಸಮಾರೋಪ್ಯ ರಾಜ್ಯಂ ಚಕ್ರಾಯುಧೋ ನೃಪಃ ।**
**ಪ್ರಾವಾಜೀತ್ಸ ಪಿತುಃ ಪಾರ್ಶ್ವೇ ಸ ತಜ್ಜನ್ಮನಿ ಮುಕ್ತಿಭಾಕ್ ॥ ೨೪೫ ॥**

ಆ ಚಕ್ರಾಯುಧರಾಜನು ವಜ್ರಾಯುಧನೆಂಬ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ತಾನು ತಂದೆಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡನು. ಅವನು ಅದೇ ಜನ್ಮದಲ್ಲಿ ಮುಕ್ತಿಯನ್ನು ಹೊಂದಿದನು.

**ಅಧಿರತ್ನಾಯುಧಂ ರಾಜ್ಯಂ ಕೃತ್ವಾ ಚಕ್ರಾಯುಧಾಂತಿಕೇ ।**
**ವಜ್ರಾಯುಧೋಽಪ್ಯಗಾದ್ದೀಕ್ಷಾಂ ಕಿಂ ನ ಕುರ್ವಂತಿ ಸಾತ್ತ್ವಿಕಾಃ ॥ ೨೪೬ ॥**

ವಜ್ರಾಯುಧನೂ ರಾಜ್ಯವನ್ನು ರತ್ನಾಯುಧನಲ್ಲಿರಿಸಿ ತಾನು ಚಕ್ರಾಯುಧ ಮುನಿಯ ಬಳಿಯಲ್ಲಿ ದೀಕ್ಷೆಯನ್ನು ಪಡೆದನು. ಸಾತ್ತ್ವಿಕರು ಯಾವ ಕಾರ್ಯವನ್ನು ತಾನೆ ಮಾಡುವುದಿಲ್ಲ ?

**ರಕ್ತೋ ರತ್ನಾಯುಧೋ ಭೋಗೇ ತ್ಯಕ್ತ್ವಾ ಧರ್ಮಕಥಾಮಪಿ ।**
**ಸೋಽನ್ವಭೂದತಿಗೃಧ್ನುತ್ವಾತ್ಸುಖಾನಿ ಚಿರಮನ್ಯದಾ ॥ ೨೪೭ ॥**

**ಮನೋಹರವನೋದ್ಯಾನೇ ವಜ್ರದಂತಮಹಾಮುನಿಃ ।**
**ವ್ಯಾವರ್ಣಮಾನಲೋಕಾನುಯೋಗಶ್ರವಣವೃದ್ಧಧೀಃ ॥ ೨೪೮ ॥**

**ಪೂರ್ವಜನ್ಮಸ್ಮೃತೇರ್ಮೇಘವಿಜಯೋ ಭದ್ರವಾರಣಃ ।**
**ಮಾಂಸಾದಿಕಬಲಂ ನಾದಾಧ್ಯಾಯನ್ಸಂಸೃತಿದುಃಸ್ಥಿತಿಮ್ ॥ ೨೪೯ ॥**

ಆ ರತ್ನಾಯುಧನು ಧರ್ಮಕಥೆಯನ್ನೂ ಬಿಟ್ಟು ಭೋಗದಲ್ಲಿ ಪ್ರೀತಿಯುಳ್ಳವನಾಗಿ ಅತ್ಯಾಶೆಯಿದ್ದುದರಿಂದ ಬಹುಕಾಲದವರೆಗೆ ಸುಖಗಳನ್ನನುಭವಿಸಿದನು. ಒಂದು ಕಾಲದಲ್ಲಿ ಮನೋಹರವನೋದ್ಯಾನದಲ್ಲಿ ವಜ್ರದಂತಮಹಾಮುನಿಯು ವರ್ಣಿಸಿದ ಲೋಕಸ್ವರೂಪವನ್ನು ಕೇಳಿದುದರಿಂದ ವೃದ್ಧಿಯನ್ನು ಹೊಂದಿದ ಬುದ್ಧಿಯುಳ್ಳ ಮೇಘವಿಜಯವೆಂಬ ಭದ್ರಗಜವು ಪೂರ್ವಜನ್ಮಸ್ಮರಣದಿಂದ ಸಂಸಾರದ ದುಃಸ್ಥಿತಿಯನ್ನು ಧ್ಯಾನಿಸಿದುದಾಗಿ ಮಾಂಸಾದಿ ಕಬಲವನ್ನು ಸ್ವೀಕರಿಸಲಿಲ್ಲ.

**ರಾಜಾ ತು ವ್ಯಾಕುಲೀಭೂಯ ಮಂತ್ರಿವೈದ್ಯವರಾನ್ಸ್ವಯಮ್ ।**
**ಪಪ್ರಚ್ಛ ಕೋ ವಿಕಾರೋಽಸ್ಯ ಗಜಸ್ಯೇತ್ಯಾಹಿತಾದರಃ ॥ ೨೫೦ ॥**

ರಾಜನಾದರೋ ವ್ಯಾಕುಲನಾಗಿ ಮುಖ್ಯಮಂತ್ರಿಗಳನ್ನೂ ಶ್ರೇಷ್ಠವೈದ್ಯರನ್ನೂ ಕುರಿತು ತಾನು ಆನೆಯಲ್ಲಿ ಪ್ರೀತಿಯುಳ್ಳವನಾಗಿ " ಈ ಆನೆಗೇನು ವಿಕಾರವುಂಟಾಗಿದೆ" ಎಂದು ಪ್ರಶ್ನೆಮಾಡಿದನು.

**ವಿಚಾರ್ಯ ತೇ ತ್ರಿದೋಷೋತ್ಥವಿಕಾರಾನವಲೋಕನಾತ್ ।**
**ಅನುಮಾನಾದಯಂ ಧರ್ಮಶ್ರುತೇರ್ಜಾತಿಸ್ಮರೋಽಭವತ್ ॥ ೨೫೧ ॥**

ಅವರು ವಿಚಾರಮಾಡಿ ವಾತ ಪಿತ್ತ ಶ್ಲೇಷ್ಮದೋಷಗಳಿಂದುಂಟಾದ ವಿಕಾರವನ್ನು ಕಾಣದಿರುವುದರಿಂದ ಅನುಮಾನಪ್ರಮಾಣದಿಂದ "ಇದು ಧರ್ಮಶ್ರವಣದಿಂದ ಜಾತಿಸ್ಮರಣವುಳ್ಳುದಾಯಿತು" ಎಂದು ಹೇಳಿದರು.

**ಇತಿ ಸತ್ಪಾತ್ರನಿಷ್ಪನ್ನಶುದ್ಧಾಹಾರಂ ಘೃತಾದಿಭಿಃ ।**
**ಮಿಶ್ರಿತಂ ನ್ಯಕ್ಷಿಪತ್ಕ್ಷಿಪ್ರಂ ತಮಭುಙ್ಕ್ತ ಗಜೇಶ್ವರಃ ॥ ೨೫೨ ॥**

ರಾಜನು ತುಪ್ಪ ಮೊದಲಾದುವುಗಳಿಂದ ಮಿಶ್ರಿತವಾದ ಮತ್ತು ಉತ್ತಮ ಪಾತ್ರದಲ್ಲಿ ಮಾಡಿದ ಶುದ್ಧಾಹಾರವನ್ನು ಕೊಟ್ಟನು. ಗಜರಾಜನು ಆ ಆಹಾರವನ್ನು ಶೀಘ್ರವಾಗಿ ಭುಂಜಿಸಿದನು.

**ತದಾ ಸವಿಸ್ಮಯೋ ರಾಜಾ ಗತ್ವಾವಧಿವಿಲೋಚನಮ್ ।**
**ವಜ್ರದಂತಂ ತದಾಖ್ಯಾಯ ತದ್ಧೇತುಂ ಪೃಚ್ಛತಿ ಸ್ಮ ಸಃ ॥ ೨೫೩ ॥**

ಆಗ ವಿಸ್ಮಯವುಳ್ಳವನಾದ ಆ ರಾಜನು ಹೋಗಿ ಅವಧಿಜ್ಞಾನವೆಂಬ ನೇತ್ರವುಳ್ಳ ವಜ್ರದಂತಮುನಿಗೆ ಆ ವಿಷಯವನ್ನು ಹೇಳಿ ಅದರ ಕಾರಣವನ್ನು ಪ್ರಶ್ನೆಮಾಡಿದನು.

**ಮುನಿರ್ಬಭಾಷೇ ಭೋ ಭೂಪ ಶೃಣು ತತ್ಸಂವಿಧಾನಕಮ್ ।**
**ಭರತೇಽಸ್ಮಿನ್ನೃಪಃ ಪ್ರೀತಿಭದ್ರಶ್ಛತ್ರಪುರಾಧಿಪಃ ॥ ೨೫೪ ॥**

ಮುನಿಯು "ಎಲೈ ರಾಜನೆ ! ಅದರ ಕಾರಣವನ್ನು ಕೇಳು" ಎಂದು ಮುಂದೆ ಹೇಳುವಂತೆ ಮಾತನಾಡಿದನು " ಈ ಭರತಕ್ಷೇತ್ರದಲ್ಲಿ ಪ್ರೀತಿಭದ್ರನೆಂಬ ರಾಜನು ಛತ್ರಪುರಾಧಿಪತಿಯಾಗಿದ್ದನು.

**ಸುಂದರ್ಯಾಮಭವತ್ತಸ್ಯ ಸುತಃ ಪ್ರೀತಿಂಕರಾಹ್ವಯಃ ।**
**ಮಂತ್ರೀ ಚಿತ್ರಮತಿಸ್ತಸ್ಯ ಕಮಲಾ ಕಮಲೋಪಮಾ ॥ ೨೫೫ ॥**

**ಗೃಹಿಣೀ ತುಗ್ಭಭೂವಾಸ್ಯಾ ವಿಚಿತ್ರಮತಿರಾಖ್ಯಯಾ ।**
**ನೃಪಮಂತ್ರಿಸುತೌ ಶ್ರುತ್ವಾ ಧರ್ಮಂ ಧರ್ಮರುಚೇರ್ಯತೇಃ ॥ ೨೫೬ ॥**

**ತದೈವ ಭೋಗನಿರ್ವಿಣ್ಣೌ ದ್ವಾವಪ್ಯಾದದತುಸ್ತಪಃ ।**
**ಕ್ಷೀರಸ್ರಾವರ್ದ್ಧಿರುತ್ಪನ್ನಾ ಪ್ರೀತಿಂಕರಮಹಾಮುನೇಃ ॥ ೨೫೭ ॥**

ಅವನ ಪತ್ನಿಯಾದ ಸುಂದರಿಯಲ್ಲಿ ಪ್ರೀತಿಂಕರನೆಂಬ ಪುತ್ರನು ಜನಿಸಿದನು. ಆ ರಾಜನಿಗೆ ಚಿತ್ರಮತಿಯೆಂಬವನು ಮಂತ್ರಿಯಾಗಿದ್ದನು. ಆ ಮಂತ್ರಿಗೆ ಕಮಲಕ್ಕೆ ಸದೃಶಳಾದ ಕಮಲೆಯೆಂಬ ಪತ್ನಿಯಿದ್ದಳು. ಈಕೆಗೆ ವಿಚಿತ್ರಮತಿಯೆಂಬ ಮಗನಿದ್ದನು. ರಾಜಪುತ್ರನೂ ಮಂತ್ರಿಪುತ್ರನೂ ಧರ್ಮರುಚಿಯೆಂಬ ಯತಿಯಿಂದ ಧರ್ಮವನ್ನು ಶ್ರವಣಮಾಡಿ ಆಗಲೇ ಭೋಗಗಳಲ್ಲಿ ವಿರಕ್ತರಾಗಿ ಈರ್ವರೂ ತಪಸ್ಸನ್ನು ಗ್ರಹಣಮಾಡಿದರು. ಅವರಲ್ಲಿ ಪ್ರೀತಿಂಕರಮಹಾಮುನಿಗೆ ಕ್ಷೀರಸ್ರಾವವೆಂಬ ಋದ್ಧಿ (ಮಹಿಮೆ)ಯುಂಟಾಯಿತು.

**ಸಾಕೇತಪುರಮನ್ಯೇದ್ಯುರ್ಜಗ್ಮತುಸ್ತೌ ಯಥಾಕ್ರಮಮ್ ।**
**ವಿಹರಂತಾವುಪೋಷ್ಯಾಸ್ತ ತತ್ರ ಮಂತ್ರಿಸುತೋ ಯತಿಃ ॥ ೨೫೮ ॥**

ಮತ್ತೊಂದು ದಿವಸ ಅವರೀರ್ವರೂ ಯಥಾಕ್ರಮವಾಗಿ ವಿಹರಿಸುತ್ತ ಸಾಕೇತನಗರಕ್ಕೆ ಹೋದರು. ಮಂತ್ರಿಪುತ್ರನಾದ ಯತಿಯು ಉಪವಾಸವನ್ನು ಮಾಡಿ ಅಲ್ಲಿದ್ದನು.

**ಪ್ರೀತಿಂಕರಂ ಪುರೇ ಚರ್ಯಾಂ ಯಾಂತಂ ಸ್ವಗೃಹಸನ್ನಿಧೌ ।**
**ಗಣಿಕಾ ಬುದ್ಧಿಷೇಣಾಖ್ಯಾ ಪ್ರಣಮ್ಯ ವಿನಯಾನ್ವಿತಾ ॥ ೨೫೯ ॥**

**ದಾನಯೋಗ್ಯಕುಲಾ ನಾಹಮಸ್ಮೀತ್ಯಾತ್ಮಾನಮುಚ್ಚಕೈಃ ।**
**ನಿಂದಂತೀ ಬಾಢಮಪ್ರಾಕ್ಷೀನ್ಮುನೇ ಕಥಯ ಜನ್ಮಿನಾಮ್ ॥ ೨೬೦ ॥**

**ಕುಲರೂಪಾದಯಃ ಕೇನ ಜಾಯಂತೇ ಸಂಸ್ತುತಾ ಇತಿ ।**
**ಮದ್ಯಮಾಂಸಾದಿಕತ್ಯಾಗಾದಿತ್ಯುದೀರ್ಯ ಮುನಿಶ್ಚ ಸಃ ॥ ೨೬೧ ॥**

**ತತಃ ಪ್ರತ್ಯಾಗತಃ ಕಸ್ಮಾತ್ ಸ್ಥಿತೋ ಹೇತೋಶ್ಚಿರಂ ಪುರೇ ।**
**ಭವಾನಿತಿ ತಮಪ್ರಾಕ್ಷೀದ್ವಿಚಿತ್ರಮತಿರಾದರಾತ್ ॥ ೨೬೨ ॥**

ಆಹಾರವನ್ನು ಕುರಿತು ನಗರದಲ್ಲಿ ತನ್ನ ಮನೆಯ ಸಮೀಪದಲ್ಲಿ ಹೋಗುತ್ತಿದ್ದ ಪ್ರೀತಿಂಕರಮುನಿಯನ್ನು ಬುದ್ಧಿಷೇಣೆಯೆಂಬ ವೇಶ್ಯೆಯು ಕಂಡು ವಿನಯಯುಕ್ತಳಾಗಿ ನಮಸ್ಕರಿಸಿ "ಮುನಿಯೇ ! ನಾನು ದಾನವನ್ನು ಕೊಡುವುದಕ್ಕೆ

ಯೋಗ್ಯವಾದ ಕುಲದವಳಾಗಿಲ್ಲ'' ಎಂದು ಹೇಳಿ ಬಹುಶೋಕದಿಂದ ತನ್ನನ್ನು ನಿಂದಿಸುವವಳಾಗಿ ''ಜನ್ಮಧಾರಿಗಳಿಗೆ ಶ್ರೇಷ್ಠವಾದ ಕುಲ ರೂಪಾದಿಗಳು ಯಾವುದರಿಂದುಂಟಾಗುತ್ತವೆ ? ಹೇಳು'' ಎಂದು ಬಹಳವಾಗಿ ಪ್ರಶ್ನೆಮಾಡಿದಳು. ಆ ಮುನಿಯು ''ಮದ್ಯಮಾಂಸಾದಿಗಳ ತ್ಯಾಗದಿಂದ ಉತ್ತಮ ಕುಲ ರೂಪಾದಿಗಳುಂಟಾಗುತ್ತವೆ ಎಂದು ಹೇಳಿ ಅಲ್ಲಿಂದ ಹಿಂದಿರುಗಿ ಬಂದನು. ಆಗ ವಿಚಿತ್ರಮತಿಮುನಿಯು ಪ್ರೀತಿಯಿಂದ ''ನಗರದಲ್ಲಿ ತಾವು ದೀರ್ಘಕಾಲದವರೆಗೆ ಯಾವ ಕಾರಣದಿಂದ ಇದ್ದಿರಿ ?'' ಎಂದು ಆ ಪ್ರೀತಿಂಕರಮುನಿಯನ್ನು ಪ್ರಶ್ನೆ ಮಾಡಿದನು.

**ಸೋಽಪಿ ತದ್ಗಣಿಕಾವಾರ್ತಾಂ ಯಥಾವೃತ್ತಂ ನ್ಯವೇದಯತ್ ।**
**ಪರೇದ್ಯುರ್ಮಂತ್ರಿತುಗ್ಭಿಕ್ಷಾವೇಲಾಯಾಂ ಗಣಿಕಾಗೃಹಮ್ ॥ ೨೬೩ ॥**

**ಪ್ರಾವಿಶತ್ಸಾಪಿ ತಂ ದೃಷ್ಟ್ವಾ ಸಮುತ್ಥಾಯ ಸಸಂಭ್ರಮಮ್ ।**
**ವಂದಿತ್ವಾ ಪೂರ್ವವದ್ಧರ್ಮಮನ್ವಯುಙ್ಕ್ತ ಕೃತಾದರಾ ॥ ೨೬೪ ॥**

ಅವನು ಆ ವೇಶ್ಯಾವಾರ್ತೆಯನ್ನು ಹೇಗೆ ನಡೆಯಿತೋ ಹಾಗೆಯೇ ತಿಳಿಸಿದನು. ಮರುದಿವಸ ಮಂತ್ರಿಪುತ್ರನು ಭಿಕ್ಷಾಸಮಯದಲ್ಲಿ ಆ ವೇಶ್ಯಾಗೃಹವನ್ನು ಪ್ರವೇಶಿಸಿದನು. ಆಕೆಯು ಆ ಮುನಿಯನ್ನು ನೋಡಿ ತ್ವರೆಯಾಗಿ ಎದ್ದು ನಮಸ್ಕರಿಸಿ ಪ್ರೀತಿಯುಳ್ಳವಳಾಗಿ ಮೊದಲಿನಂತೆ ಧರ್ಮವನ್ನು ಕೇಳಿದಳು.

**ಕಾಮರಾಗಕಥಾಮೇವ ವ್ಯಾಜಹಾರ ಸ ದುರ್ಮತಿಃ ।**
**ತದಿಂಗಿತಜ್ಞಯಾವಜ್ಞಾ ತಯಾ ತಸ್ಮಿನ್ವ್ಯಧೀಯತ ॥ ೨೬೫ ॥**

ದುರ್ಬುದ್ಧಿಯುಳ್ಳ ಆ ವಿಚಿತ್ರಮತಿಯು ಆಕೆಗೆ ಕಾಮ ರಾಗಕಥೆಯನ್ನೇ ಹೇಳಿದನು. ಅವನ ಇಂಗಿತವನ್ನು ತಿಳಿದ ಆ ವೇಶ್ಯೆಯು ಅವನಿಗೆ ತಿರಸ್ಕಾರವನ್ನು ಮಾಡಿದಳು.

**ಪ್ರಾಪ್ತಾಪಮಾನೇನ ರುಷಾ ಸೂಪಶಾಸ್ತ್ರೋಕ್ತಿಸಂಸ್ಕೃತಾತ್ ।**
**ಮಾಂಸಾತ್ತನ್ನಗರಾಧೀಶಂ ಗಂಧಮಿತ್ರಮಹೀಪತಿಮ್ ॥ ೨೬೬ ॥**

**ವಶೀಕೃತ್ಯ ತತೋ ಬುದ್ಧಿಷೇಣಾಚಾತ್ಮೀಕೃತಾಮುನಾ ।**
**ಸ ವಿಚಿತ್ರಮತಿರ್ಮೃತ್ವಾ ತವಾಯಮಭವದ್ಗಜಃ ॥ ೨೬೭ ॥**

ಅಪಮಾನವು ಪ್ರಾಪ್ತವಾದುದರಿಂದ ಅವನು ಕೋಪದಿಂದ ಮುನಿವೇಷವನ್ನು ಬಿಟ್ಟು ಪಾಕಶಾಸ್ತ್ರೋಕ್ತ ರೀತಿಯಾಗಿ ಮಾಂಸವನ್ನು ಪಾಕಮಾಡಿ ಅದರಿಂದ ಆ ಪಟ್ಟಣದ ದೊರೆಯಾದ ಗಂಧಮಿತ್ರರಾಜನನ್ನು ವಶಪಡಿಸಿಕೊಂಡು ಅವನ ದೆಸೆಯಿಂದ ಬುದ್ಧಿಷೇಣಾವೇಶ್ಯೆಯನ್ನೂ ತನ್ನ ವಶಮಾಡಿಕೊಂಡನು. ಆ ವಿಚಿತ್ರಮತಿಯು ಸತ್ತು ನಿನ್ನ ಈ ಆನೆಯಾದನು.

**ಅಸ್ಮತ್ತ್ರಿಲೋಕಪ್ರಜ್ಞಪ್ತಿಶ್ರವಣಾಜ್ಜಾತಿಸಂಸ್ಮೃತೇಃ ।**
**ನಿರ್ವಿಣ್ಣೋಽಯಂ ಸಮಾಸನ್ನವಿನೇಯೋ ನಾಗ್ರಹೀದ್ದ್ವಿಧಾವಮ್ ॥ ೨೬೮ ॥**

ನಮ್ಮಿಂದ ತ್ರಿಲೋಕಪ್ರಜ್ಞಪ್ತಿಯನ್ನು ಶ್ರವಣಮಾಡಿದುದರಿಂದ ಭವಸ್ಮರಣೆಯುಂಟಾಗಿ ಅದರಿಂದ ವಿರಕ್ತವಾದ ಈ ಆನೆಯು ಆಸನ್ನಭವ್ಯವಾಗಿ ಕವಳವನ್ನು ತೆಗೆದುಕೊಳ್ಳಲಿಲ್ಲ.

**ತ್ಯಾಗೋ ಭೋಗಾಯ ಧರ್ಮಸ್ಯ ಕಾಚಾಯೇವ ಮಹಾಮಣೇಃ ।**
**ಜನನ್ಯಾ ಇವ ದಾಸ್ಯರ್ಥಂ ತಸ್ಮಾತ್ತಾದೃಕ್ತ್ಯಜೇದ್ಬುಧಃ ॥ ೨೬೯ ॥**

ಗಾಜಿನ ಮಣಿಗೋಸ್ಕರ ಮಹಾರತ್ನವನ್ನು ತ್ಯಜಿಸುವಂತೆಯೂ ವೇಶ್ಯೆಗೋಸ್ಕರ ತಾಯಿಯನ್ನು ತ್ಯಜಿಸುವಂತೆಯೂ ಭೋಗಕ್ಕೋಸ್ಕರ ಧರ್ಮವನ್ನು ತ್ಯಜಿಸುವುದಾಗಿದೆ. ಆದುದರಿಂದ ಪ್ರಾಜ್ಞನು ಅಂತಹ ಕಾರ್ಯವನ್ನು ಬಿಡಬೇಕು.''

**ಇತಿ ತದ್ಭೂಭುಜಾಕರ್ಣ್ಯ ಧಿಗ್ರಾಗಂ ಧರ್ಮದೂಷಕಮ್ ।**
**ಧರ್ಮ ಏವ ಪರಂ ಮಿತ್ರಮಿತಿ ಧರ್ಮರತೋಽಭವತ್ ॥ ೨೭೦ ॥**

ಈ ಪ್ರಕಾರವಾದ ಮಾತನ್ನು ಕೇಳಿ ರತ್ನಾಯುಧರಾಜನು ''ಧರ್ಮವನ್ನು ದೂಷಿಸುವ ರಾಗಕ್ಕೆ ಧಿಕ್ಕಾರ. ಧರ್ಮವೇ ಮುಖ್ಯವಾದ ಮಿತ್ರನು'' ಎಂದು ಧರ್ಮದಲ್ಲಿ ಆಸಕ್ತಿಯುಳ್ಳವನಾದನು.

**ತದೈವ ದತ್ವಾ ಸ್ವಂ ರಾಜ್ಯಂ ಸ್ವಪುತ್ರಾಯೈತ್ಯ ಸಂಯಮಮ್ ।**
**ಮಾತ್ರಾ ಸಹಾಯುಷಃ ಪ್ರಾಂತೇ ಕಲ್ಪೇಂತೇಽನಿಮಿಷೋಽಭವತ್ ॥ ೨೭೧ ॥**

ಆಗಲೇ ತನ್ನ ರಾಜ್ಯವನ್ನು ತನ್ನ ಪುತ್ರನಿಗೆ ಕೊಟ್ಟು ತಾಯಿಯೊಡನೆ ಸಂಯಮ–ವ್ರತವನ್ನು ಹೊಂದಿ ಆಯುಷ್ಯಾವಸಾನದಲ್ಲಿ ಸತ್ತು ಕೊನೆಯ ಕಲ್ಪ–ಸ್ವರ್ಗದಲ್ಲಿ ದೇವನಾದನು.

**ಪ್ರಾಕ್ತನೋ ನಾರಕಃ ಪಂಕಪ್ರಭಾಯಾ ನಿರ್ಗತಶ್ಚಿರಮ್ ।**
**ನಾನಾಯೋನಿಷು ಸಂಭ್ರಾಮ್ಯ ನಾನಾದುಃಖಾನಿ ನಿರ್ವಿಶನ್ ॥ ೨೭೨ ॥**

**ಇಹ ಕಚ್ಛಪುರೇ ದಾರುಣಾಖ್ಯಸ್ಯ ತನಯೋಽಭವತ್ ।**
**ಮಂಗ್ಯಾಂ ವ್ಯಾಧಸ್ಯ ಪಾಪೇನ ಪ್ರಾಕ್ತನೇನಾತಿದಾರುಣಃ ॥ ೨೭೩ ॥**

ಮೊದಲು ನಾಲ್ಕನೆಯ ನರಕವನ್ನು ಹೊಂದಿದ್ದ ಸತ್ಯಘೋಷನಾರಕನು ಅಲ್ಲಿಂದ ಹೊರಟು ಬಹುಕಾಲದವರೆಗೆ ನಾನಾಯೋನಿಗಳಲ್ಲಿ ಅಲೆದು ನಾನಾದುಃಖಗಳನ್ನನುಭವಿಸುವವನಾಗಿ ಇದೇ ದೇಶದಲ್ಲಿ ಕಚ್ಛಪುರದಲ್ಲಿ ದಾರುಣನೆಂಬ ವ್ಯಾಧನಿಗೆ ಮಂಗಿಯೆಂಬವಳಲ್ಲಿ ಮೊದಲಿನ ಪಾಪದಿಂದ ಅತಿದಾರುಣನೆಂಬ ಪುತ್ರನಾದನು.

**ವನೇ ಪ್ರಿಯಂಗುಷಂಡಾಖ್ಯೇ ಪ್ರತಿಮಾಯೋಗಧಾರಿಣಮ್ ।**
**ವಜ್ರಾಯುಧಂ ಖಲಸ್ತಸ್ಮಿನ್ಲೋಕಾಂತರಮಜೀಗಮತ್ ॥ ೨೭೪ ॥**

ಆ ದುಷ್ಟಪುತ್ರನು ಪ್ರಿಯಂಗುಷಂಡವೆಂಬ ಆ ವನದಲ್ಲಿ ಪ್ರತಿಮಾಯೋಗಧಾರಿಯಾಗಿದ್ದ ವಜ್ರಾಯುಧಮುನಿಯನ್ನು ಲೋಕಾಂತರವನ್ನು ಹೊಂದಿಸಿದನು–ಕೊಂದನು.

**ಸೋಢ್ವಾ ವ್ಯಾಧಕೃತಂ ತೀವ್ರಮುಪಸರ್ಗಮಸೌ ಮುನಿಃ ।**
**ಧರ್ಮಧ್ಯಾನೇನ ಸರ್ವಾರ್ಥಸಿದ್ಧಿಂ ಸ ಪ್ರಾಪದಿದ್ಧಧೀಃ ॥ ೨೭೫ ॥**

ತೀವ್ರಬುದ್ಧಿಯುಳ್ಳ ಈ ಮುನಿಯು ವ್ಯಾಧನು ಮಾಡಿದ ಘೋರೋಪಸರ್ಗವನ್ನು ಸಹಿಸಿ ಧರ್ಮಧ್ಯಾನದಿಂದ ಸತ್ತು ಸರ್ವಾರ್ಥಸಿದ್ಧಿಯನ್ನು ಪಡೆದನು.

**ಸಪ್ತಮೀಂ ಪೃಥಿವೀಂ ಪಾಪಾದಧ್ಯುವಾಸಾತಿದಾರುಣಃ ।**
**ಪ್ರಾಗ್ಭಾಗೇ ಧಾತಕೀಖಂಡೇ ವಿದೇಹೇ ಪಶ್ಚಿಮೇ ಮಹಾನ್ ॥ ೨೭೬ ॥**

**ದೇಶೋಽಸ್ತಿ ಗಂಧಿಲಸ್ತಸ್ಮಿನ್ನಯೋಧ್ಯಾನಗರೇ ನೃಪಃ ।**
**ಅರ್ಹದ್ದಾಸೋಽಭವತ್ತಸ್ಯ ಸುವ್ರತಾ ಸುಖದಾಯಿನೀ ॥ ೨೭೭ ॥**

ಇತ್ತ ಅತಿದಾರುಣನು ಸತ್ತು ಪಾಪದಿಂದ ಏಳನೆಯ ನರಕಭೂಮಿಯಲ್ಲಿ ವಾಸಮಾಡಿದನು. ಧಾತಕೀಖಂಡದ್ವೀಪದಲ್ಲಿ ಪೂರ್ವ ಭಾಗದಲ್ಲಿರುವ ಪಶ್ಚಿಮ ವಿದೇಹದಲ್ಲಿ ಗಂಧಿಲವೆಂಬ ದೊಡ್ಡದೊಂದು ದೇಶವಿದೆ. ಆ ದೇಶದಲ್ಲಿರುವ ಅಯೋಧ್ಯಾನಗರದಲ್ಲಿ ಅರ್ಹದ್ದಾಸನೆಂಬ ದೊರೆಯಿದ್ದನು. ಅವನಿಗೆ ಸುವ್ರತೆಯು ಸುಖವನ್ನು ಕೊಡುವ ಪತ್ನಿಯಾಗಿದ್ದಳು.

**ರತ್ನಮಾಲಾ ತಯೋರಾಸೀತ್ಸೂನುರ್ವೀತಭಯಾಹ್ವಯಃ ।**
**ತಸ್ಯೈವ ಜಿನದತ್ತಾಯಾಮಭೂದ್ರತ್ನಾಯುಧಸ್ಸುತಃ ॥ ೨೭೮ ॥**

**ನಾಮ್ನಾ ವಿಭೂಷಣೋ ಜಾತೌ ತಾವುಭೌ ರಾಮಕೇಶವೌ ।**
**ಅವಿಭಜ್ಯ ಶ್ರಿಯಂ ದೀರ್ಘಕಾಲಂ ಭುಕ್ತ್ವಾ ಯಥೋಚಿತಮ್ ॥**

**ಕಾಲಾಂತೇ ಕೇಶವೋಯಾಸೀದ್ಬದ್ಧಾಯುಶ್ಶರ್ಕರಾಪ್ರಭಾಮ್ ।**
**ಸ ಹಲ್ಯಪಿ ನಿವೃತ್ತ್ಯಂತೇ ವಾಸಿತ್ವಾ ಲಾಂತವಂ ಯಯೌ ॥ ೨೮೦ ॥**

ಆ ದಂಪತಿಗಳಿಗೆ ರತ್ನಮಾಲೆಯು ವೀತಭಯನೆಂಬ ಪುತ್ರನಾಗಿ ಜನಿಸಿದಳು. ಆ ಅರ್ಹದ್ದಾಸರಾಜನಿಗೇ ಜಿನದತ್ತೆಯೆಂಬ ಪತ್ನಿಯಲ್ಲಿ ರತ್ನಾಯುಧನು ವಿಭೀಷಣ ನೆಂಬ ಪುತ್ರನಾದನು. ಅವರಿಬ್ಬರು ಬಲಭದ್ರಕೇಶವರಾಗಿ ರಾಜ್ಯಸಂಪತ್ತಿಯನ್ನು ವಿಭಾಗಿಸಿಕೊಳ್ಳದೆ ಉಚಿತಾನುಸಾರವಾಗಿ ಬಹುಕಾಲದವರೆಗೆ ಅನುಭವಿಸಿ ನರ ಕಾಯುಷ್ಯವನ್ನು ಕಟ್ಟಿಕೊಂಡ ಕೇಶವನು ಕಾಲಾಂತದಲ್ಲಿ ಸತ್ತು ಶರ್ಕರಾಪ್ರಭೆಯೆಂಬ ಎರಡನೆಯ ನರಕವನ್ನು ಹೊಂದಿದನು. ಆ ಬಲಭದ್ರನೂ ಪರಮನಿವೃತ್ತಿಯ ಲ್ಲಿದ್ದು–ಸಂಯಮಿಯಾಗಿದ್ದು ಲಾಂತವವೆಂಬ ಏಳನೆಯ ಸ್ವರ್ಗವನ್ನು ಹೊಂದಿ ದನು.

**ಅದಿತ್ಯಾಭಸ್ಸ ವಿವಾಹಂ ದ್ವಿತೀಯಪೃಥಿವೀಸ್ಥಿತಮ್ ।**
**ಪ್ರವಿಶ್ಯ ನರಕಂ ಸ್ನೇಹಾದ್ವಿಭೀಷಣಮಬೋಧಯಮ್ ॥ ೨೮೧ ॥**

ಆ ಆದಿತ್ಯಾಭನೇ ನಾನು. ದ್ವಿತೀಯನರಕದಲ್ಲಿದ್ದ ವಿಭೀಷಣನನ್ನು, ಸ್ನೇಹದಿಂದ ಆ ನರಕಕ್ಕೆ ಪ್ರವೇಶಿಸಿ, ಬೋಧಿಸಿದೆನು.

**ಬುಧ್ವಾ ತತಃ ಸ ನಿರ್ಯಾತೋ ದ್ವೀಪೇಸ್ಮಿನ್ವಿಜಯೇ ಪುರೀ ।**
**ಐರಾವತೇ ಮಹತ್ಯಾಸೀದಯೋಧ್ಯಾ ತದಧೀಶ್ವರಃ ॥ ೨೮೨ ॥**

**ಶ್ರೀವರ್ಮಾಸ್ಯ ಸುಸೀಮಾಖ್ಯಾ ದೇವೀ ತಸ್ಯಾಃ ಸುತೋಽಭವತ್ ।**
**ಶ್ರೀಧಾಮಾಸಾವನಂತಾಖ್ಯಮುನೇರಾದಾಯ ಸಂಯಮಮ್ ॥ ೨೮೩ ॥**

**ಬ್ರಹ್ಮಕಲ್ಪೇಽಭವದ್ದೇವೋ ದಿವ್ಯಾಷ್ಟಗುಣಭೂಷಿತಃ ।**
**ಸರ್ವಾರ್ಥಸಿದ್ಧಿಜಸ್ಸಂಜಯಂತೋ ವಜ್ರಾಯುಧೋಽಭವತ್ ॥ ೨೮೪ ॥**

ಅವನು ಆ ಧರ್ಮಬೋಧೆಯನ್ನು ತಿಳಿದು ಆ ನರಕದಿಂದ ಹೊರಟು ಬಂದು ಈ ಜಂಬೂದ್ವೀಪದಲ್ಲಿ ಜಯಶೀಲವಾದ ಐರಾವತಕ್ಷೇತ್ರದಲ್ಲಿರುವ ದೊಡ್ಡದಾದ ಅಯೋಧ್ಯಾಪುರದ ದೊರೆಯಾದ ಶ್ರೀವರ್ಮನ ಸುಸೀಮೆಯೆಂಬ ಪತ್ನಿಯಲ್ಲಿ ಶ್ರೀಧಾಮನೆಂಬ ಪುತ್ರನಾದನು. ಇವನು ಅನಂತನೆಂಬ ಮುನಿಯಿಂದ ಸಂಯಮ ವನ್ನು ಗ್ರಹಣಮಾಡಿ ಆಯುಷ್ಯವು ತೀರಿದ ಬಳಿಕ ಬ್ರಹ್ಮಕಲ್ಪವೆಂಬ ಐದನೆಯ ಸ್ವರ್ಗದಲ್ಲಿ ದಿವ್ಯವಾದ ಅಣಿಮಾದ್ಯಷ್ಟಗುಣಭೂಷಿತನಾದ ದೇವನಾದನು. ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ್ದ ಸಂಜಯಂತನು ಅಲ್ಲಿಂದ ಚ್ಯುತನಾಗಿ–ಬಂದು ವಜ್ರಾಯುಧನಾದನು.

**ಬ್ರಹ್ಮಕಲ್ಪಾದಿಹಾಗತ್ಯ ತ್ವಂ ಜಯಂತೋ ನಿದಾನತಃ ।**
**ಮೋಹಾದ್ವಿಲುಪ್ತಸಮ್ಯಕ್ತ್ವೋಽಜನಿಷ್ಠಾ ನಾಗನಾಯಕಃ ॥ ೨೮೫ ॥**

ಶ್ರೀಧಾಮನು ಬ್ರಹ್ಮಕಲ್ಪದಿಂದ ಇಲ್ಲಿ ಬಂದು ನೀನು ಸಂಜಯಂತನಾಗಿದ್ದು ಮೋಹನೀಯಕರ್ಮೋದಯದಿಂದ ಸಮ್ಯಕ್ತ್ವವನ್ನು ಹಾಳುಮಾಡಿಕೊಂಡು ನಿದಾನಶಲ್ಯದಿಂದ ನಾಗೇಂದ್ರನಾಗಿ ಜನಿಸಿದೆ.

**ಪ್ರಾಕ್ತನೋ ನಾರಕಃ ಪ್ರಾಂತಪೃಥಿವೀತೋ ವಿನಿರ್ಗತಃ ।**
**ಜಘನ್ಯಾಯುರಹಿರ್ಭೂತ್ವಾ ತೃತೀಯಾಂ ಪೃಥಿವೀಂ ಗತಃ ॥ ೨೮೬ ॥**

ಮೊದಲಿನ ನಾರಕಿಯಾಗಿದ್ದ ಸತ್ಯಘೋಷನ ಜೀವವು ಎರಡನೆಯ ನರಕದಿಂದ ಹೊರಟು ಬಂದು ಜಘನ್ಯಾಯುಷ್ಯವುಳ್ಳ ಸರ್ಪವಾಗಿದ್ದು ಸತ್ತು ಮೂರನೆಯ ನರಕ ವನ್ನು ಹೊಂದಿತು.

**ತತೋ ನಿರ್ಗತ್ಯ ತಿರ್ಯಕ್ಷು ತ್ರಸೇಷು ಸ್ಥಾವರೇಷು ಚ ।**
**ಭ್ರಾಂತ್ವಾಸ್ಮಿನ್ಭರತೇ ಭೂತರಮಣಾಖ್ಯವನಾಂತರೇ ॥ ೨೮೭ ॥**

**ಐರಾವತೀನದೀತೀರೇ ಮೃಗಶೃಂಗಸ್ಸುತೋಽಭವತ್ ।**
**ಗೋಶೃಂಗತಾಪಸಾಧೀಶಶ್ಶಂಖಿಕಾಯಾಂ ವಿರಕ್ತಧೀಃ ॥ ೨೮೮ ॥**

**ಸ ಪಂಚಾಗ್ನಿತಪಃ ಕುರ್ವನ್ದಿವ್ಯಾದಿತಿಲಕಾಧಿಪಮ್ ।**
**ಖಗಂ ವೀಕ್ಷ್ಯಾಂಶುಮಾಲಾಖ್ಯಂ ನಿದಾನಮಕರೋತ್ಕುಧೀಃ ॥ ೨೮೯ ॥**

ಅಲ್ಲಿಂದ ಹೊರಟು ತಿರ್ಯಗ್ಜೀವಗಳಲ್ಲಿ ತ್ರಸಜೀವಗಳಲ್ಲಿ ಮತ್ತು ಸ್ಥಾವರ ಜೀವಗಳಲ್ಲಿ ಭ್ರಮಣಮಾಡಿ ಈ ಭರತಕ್ಷೇತ್ರದಲ್ಲಿ ಭೂತರಮಣವೆಂಬ ವನದ ಮಧ್ಯದಲ್ಲಿ ಐರಾವತೀ ನದೀತೀರದಲ್ಲಿ ಗೋಶೃಂಗನೆಂಬ ಪ್ರಮುಖತಾಪಸನಿಗೆ ಶಂಖಿಕೆಯೆಂಬವಳಲ್ಲಿ ಮೃಗಶೃಂಗನೆಂಬ ಪುತ್ರನಾದನು. ದುರ್ಬುದ್ಧಿಯುಳ್ಳ ಅವನು ವಿರಕ್ತನಾಗಿ ಪಂಚಾಗ್ನಿ ತಪಸ್ಸನ್ನು ಮಾಡಿ ದಿವ್ಯತಿಲಕಪುರಾಧಿಪತಿಯಾದ ಅಂಶು ಮಾಲನೆಂಬ ವಿದ್ಯಾಧರನನ್ನು ನೋಡಿ ನಿದಾನಶಲ್ಯವನ್ನು ಮಾಡಿದನು.

**ಮೃತ್ವಾತ್ರ ಖಗಶೈಲೋದಕ್ಶ್ರೇಣ್ಯಾಂ ಗಗನವಲ್ಲಭೇ ।**
**ವಜ್ರದಂಷ್ಟ್ರಖಗೇಶಸ್ಯ ಪ್ರಿಯಾ ವಿದ್ಯುತ್ಪ್ರಭಾ ತಯೋಃ ॥ ೨೯೦ ॥**

**ವಿದ್ಯುದ್ದಂಷ್ಟ್ರಸ್ಸುತೋ ಜಾತಃ ಸೋಯಂ ವೈರಾನುಬಂಧತಃ ।**
**ಬಧ್ವಾ ಕರ್ಮ ಚಿರಂ ದುಃಖಮಾಪದಾಪ್ಸ್ಯತಿ ಚಾಪರಮ್ ॥ ೨೯೧ ॥**

ಬಳಿಕ ಸತ್ತು ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಗಗನವಲ್ಲಭ ಪುರದಲ್ಲಿ ವಜ್ರದಂಷ್ಟ್ರನೆಂಬ ವಿದ್ಯಾಧರರಾಜನಿಗೂ ಅವನ ಪತ್ನಿಯಾದ ವಿದ್ಯುತ್ಪ್ರಭೆ ಗೂ ವಿದ್ಯುದ್ದಂಷ್ಟ್ರನೆಂಬ ಪುತ್ರನಾಗಿ ಜನಿಸಿದನು. ಈ ವಿದ್ಯುದ್ದಂಷ್ಟ್ರನು ವೈರಸಂಬಂಧ ದಿಂದ ಕರ್ಮವನ್ನು ಬಂಧಿಸಿಕೊಂಡು ಬಹುಕಾಲದವರೆಗೆ ದುಃಖವನ್ನನುಭವಿ ಸಿದನು. ಮುಂದೆಯೂ ಅನುಭವಿಸುವನು.

**ಏವಂ ಕರ್ಮವಶಾಜ್ಜಂತುಸ್ಸಂಸಾರೇ ಪರಿವರ್ತನೇ ।**
**ಪಿತಾ ಪುತ್ರಃ ಸುತೋ ಮಾತಾ ಮಾತಾ ಭ್ರಾತಾ ಸ ಚ ಸ್ವಸಾ ॥ ೨೯೨ ॥**

**ಸ್ವಸಾ ನಪ್ತಾ ಭವೇತ್ಯಾ ವಾ ಬಂಧುಸಂಬಂಧಸಂಸ್ಥಿತಿಃ ।**
**ಕಸ್ಯ ಕೋ ನಾಪಕರ್ತಾತ್ರ ನೋಪಕರ್ತಾ ಚ ಕಸ್ಯ ಕಃ ॥ ೨೯೩ ॥**

ಈ ರೀತಿಯಾಗಿ ಭವಪರಿವರ್ತನದಲ್ಲಿ ಕರ್ಮವಶದಿಂದ ಪ್ರಾಣಿಯು ತಂದೆ ಯಾಗಿದ್ದವನು ಇನ್ನೊಂದು ಜನ್ಮದಲ್ಲಿ ಮಗನಾಗಿಯೂ ಮಗನಾಗಿದ್ದವನು ತಾಯಿ ಯಾಗಿಯೂ ತಾಯಿಯಾಗಿದ್ದವನು ಸಹೋದರನಾಗಿಯೂ ಸಹೋದರನಾಗಿದ್ದ ವನು ಸಹೋದರಿಯಾಗಿಯೂ ಸಹೋದರಿಯಾಗಿದ್ದವಳು ಮೊಮ್ಮಗಳಾಗಿಯೂ ಆಗುವುದು. ಈ ಸಂಸಾರದಲ್ಲಿ ಬಂಧು ಸಂಬಂಧಸ್ಥಿತಿ ಯಾವುದು ? ಯಾವನಿಗೆ ಯಾವನು ಅಪಕಾರಕನಲ್ಲ ? ಯಾವನಿಗೆ ಯಾವನು ಉಪಕಾರಕನಲ್ಲ ?

**ತಸ್ಮಾದ್ವೈರಾನುಬಂಧೇನ ಮಾಕೃಥಾಃ ಪಾಪಬಂಧನಮ್ ।**
**ಮುಂಚ ವೈರಂ ಮಹಾನಾಗ ವಿದ್ಯುದ್ದಂಷ್ಟ್ರಶ್ಚ ಮುಚ್ಯತಾಮ್ ॥ ೨೯೪ ॥**

ಆದುದರಿಂದ ಎಲೈ ಧರಣೇಂದ್ರನೆ ! ವೈರಾನುಬಂಧದಿಂದ ಪಾಪಬಂಧನವನ್ನು ಮಾಡಿಕೊಳ್ಳಬೇಡ. ವೈರವನ್ನು ಬಿಡು. ವಿದ್ಯುದ್ದಂಷ್ಟ್ರನನ್ನೂ ಬಿಡು.''

**ಇತಿ ತದ್ದೇವವಾಕ್ಸೌಧವೃಷ್ಟ್ಯಾ ಸಂತರ್ಪಿತೋಽಹಿರಾಟ್ ।**
**ದೇವಾಹಂ ತ್ವತ್ಪ್ರಸಾದೇನ ಸದ್ಧರ್ಮಂ ಶ್ರದ್ದಧೇ ಸ್ಮ ಭೋಃ ॥ ೨೯೫ ॥**

**ಕಿಂತು ವಿದ್ಯಾಬಲಾದೇಷ ವಿದ್ಯುದ್ದಂಷ್ಟ್ರೋಘಮಾಚರೇತ್ ।**
**ತಸ್ಮಾದಸ್ಯಾನ್ವಯಸ್ಯೈವ ಮಹಾವಿದ್ಯಾಂ ಛಿನದ್ಮ್ಯಹಮ್ ॥ ೨೯೬ ॥**

ಈ ರೀತಿಯಾಗಿ ಆ ದೇವನ ವಚನವೆಂಬ ಅಮೃತವೃಷ್ಟಿಯಿಂದ ಸಂತರ್ಪಿತನಾದ ಧರಣೇಂದ್ರನು ''ಎಲೈ ದೇವನೆ ! ನಾನು ನಿನ್ನ ಪ್ರಸಾದದಿಂದ ಸದ್ಧರ್ಮವನ್ನು ನಂಬುತ್ತೇನೆ. ಆದರೆ ವಿದ್ಯಾಬಲದಿಂದ ಈ ವಿದ್ಯುದ್ದಂಷ್ಟ್ರನು ಪಾಪವನ್ನಾಚರಿಸು ವನು. ಆದುದರಿಂದ ನಾನು ಇವನ ವಂಶದ ಮಹಾವಿದ್ಯೆಯನ್ನೇ ನಾಶಮಾಡಿ ಬಿಡುವೆನು.''

**ಇತ್ಯಾಹೈತದ್ವಚಃ ಶ್ರುತ್ವಾ ದೇವೋ ಮದನುರೋಧತಃ ।**
**ತ್ವಯಾ ನೈತದ್ವಿಧಾತವ್ಯಮಿತ್ಯಾಖ್ಯತ್ಫಣಿನಾಂ ಪತಿಮ್ ॥ ೨೯೭ ॥**

ಎಂದು ಹೇಳಿದನು. ದೇವನು ಈ ಮಾತನ್ನು ಕೇಳಿ ''ನನ್ನ ನಿರ್ಬಂಧದಿಂದ ನೀನು ಈ ಕಾರ್ಯವನ್ನು ಮಾಡಬಾರದು'' ಎಂದು ಧರಣೇಂದ್ರನಿಗೆ ಹೇಳಿದನು.

**ಸೋಽಪಿ ಯದ್ಯೇವಮೇತಸ್ಯ ವಂಶ್ಯಾನಾಂ ಮಾಸಿಧನ್ಮಹಾ- ।**
**ವಿದ್ಯಾಃ ಪುಂಸಾಂ ಸ್ತ್ರಿಯಃ ಸಂಜಯಂತಭಟ್ಟಾರಕಾಂತಿಕೇ ॥ ೨೯೮ ॥**

**ಸಾಧಯಂತ್ವನ್ಯಥಾ ದರ್ಪಾದಿಮೇ ದುಷ್ಟಾಃ ಕುಚೇಷ್ಟಿತಾಃ ।**
**ಭವಿಷ್ಯತಾಂ ಚ ಸಾಧೂನಾಂ ಪಾಪಾಃ ಕುರ್ವಂತ್ಯುಪದ್ರವಮ್ ॥ ೨೯೯ ॥**

ಆಗ ಆ ಧರಣೇಂದ್ರನೂ ದೇವನನ್ನು ಕುರಿತು ''ಹಾಗಾದರೆ ಇವನ ವಂಶಜರಾದ ಪುರುಷರಿಗೆ ಮಹಾವಿದ್ಯೆಗಳು ಸಿದ್ಧಿಸಬಾರದು. ಸ್ತ್ರೀಯರು ಸಂಜಯಂತಭಟ್ಟಾರಕರ ಬಳಿಯಲ್ಲಿ ಸಾಧಿಸಲಿ. ಹಾಗಲ್ಲದಿದ್ದರೆ ದುಷ್ಟರೂ ಪಾಪಿಗಳೂ ಕುಚೇಷ್ಟೆಯುಳ್ಳವರೂ ಆದ ಇವರು ಅಹಂಕಾರದಿಂದ ಮುಂದಾಗುವ ಸಾಧುಗಳಿಗೂ ಉಪದ್ರವವನ್ನು ಮಾಡುವರು'' ಎಂದನು.

**ಏಷೋಽಪಿ ಪರ್ವತೋ ವಿದ್ಯಾಧರಹ್ರೀಕ್ರೀಡಿತಃ ಪರಮ್ ।**
**ಹ್ರೀಮಾನ್ನಾಮೇತ್ಯುದೀರ್ಯಾಸ್ಮಿನ್ ಭ್ರಾತೃಪ್ರತಿನಿಧಿಂ ವ್ಯಧಾತ್ ॥ ೩೦೦ ॥**

ಈ ಪರ್ವತವೂ ವಿಶೇಷವಾಗಿ ವಿದ್ಯಾಧರರಿಂದ ಲಜ್ಜಾಯುತವಾಗಿ ಕ್ರೀಡಿಸಲ್ಪಟ್ಟಿರುವುದರಿಂದ ಇದಕ್ಕೆ '' ಹ್ರೀಮಾನ್ '' ಎಂದು ಹೆಸರಿನ್ನಿಟ್ಟು ಇದರಲ್ಲಿ ಸಹೋದರ (ಸಂಜಯಂತ)ನ ಪ್ರತಿಕೃತಿಯನ್ನು ಮಾಡಿಟ್ಟನು.

**ವಿದ್ಯುದ್ದಂಷ್ಟ್ರಂ ಚ ಸಾಮೋಕ್ತ್ಯೈರ್ಧರ್ಮನ್ಯಾಯಾನುಯಾಯಿಭಿಃ ।**
**ಕೃತ್ವಾ ಪ್ರಶಾಂತಕಾಲುಷ್ಯಂ ದೇವಂ ಚಾಭ್ಯರ್ಚ್ಯ ಯಾತವಾನ್ ॥ ೩೦೧ ॥**

ವಿದ್ಯುದ್ದಂಷ್ಟ್ರನನ್ನೂ ಧರ್ಮನ್ಯಾಯಾನುಸಾರವಾದ ಸಾಮವಚನಗಳಿಂದ ಮನಃಕಾಲುಷ್ಯವಿಲ್ಲದವನನ್ನಾಗಿ ಮಾಡಿ ದೇವನನ್ನೂ ಪೂಜಿಸಿ ಹೊರಟುಹೋದನು.

**ದೇವೋಽಪಿ ಸ್ವಾಯುರಂತೇಸ್ಮಿನ್ನುತ್ತರೇ ಮಧುರಾಪುರೇ ।**
**ಅನಂತವೀರ್ಯರಾಣ್ಮೇರುಮಾಲಿನ್ಯಾಂ ಮೇರುನಾಮಭಾಕ್ ॥ ೩೦೨ ॥**

**ತಸ್ಯೈವಾಮಿತಮತ್ಯಾಂ ಸ ಧರಣೇಂದ್ರೋಽಪಿ ಮಂದರಃ ।**
**ಸಮಭೂತಾಂ ಸುತಾವೇತಾವಿವ ಶುಕ್ರಬೃಹಸ್ಪತೀ ॥ ೩೦೩ ॥**

ಆ ದೇವನೂ ತನ್ನ ಆಯುಷ್ಯದ ಕೊನೆಯಲ್ಲಿ ಸ್ವರ್ಗದಿಂದ ಚ್ಯುತನಾಗಿ ಈ ಉತ್ತರ ಮಧುರಾನಗರದಲ್ಲಿ ಅನಂತವೀರ್ಯರಾಜನಿಗೆ ಮೇರುಮಾಲಿನಿಯೆಂಬ ಪತ್ನಿಯಲ್ಲಿ ಮೇರುವೆಂಬ ಹೆಸರುಳ್ಳ ಪುತ್ರನಾಗಿ ಜನಿಸಿದನು. ಅದೇ ಅನಂತವೀರ್ಯರಾಜನ ಅಮಿತಮತಿಯೆಂಬ ಪತ್ನಿಯಲ್ಲಿ ಆ ಧರಣೇಂದ್ರನು ಕೂಡ ಮಂದರನೆಂಬ ಪುತ್ರನಾಗಿ ಜನಿಸಿದನು. ಈ ಪುತ್ರರು ಶುಕ್ರಬೃಹಸ್ಪತಿಗಳಂತಿದ್ದರು.

**ತಾವಾಸನ್ನವಿನೇಯತ್ವಾಚ್ಛ್ರುತ್ವಾ ವಿಮಲವಾಹನಮ್ ।**
**ಶ್ರುತ್ವಾ ಸ್ವಭವಸಂಬಂಧಮಜಾಯೇತಾಂ ಗಣೇಶಿನೌ ॥ ೩೦೪ ॥**

ಅವರು ಆಸನ್ನಭವ್ಯರಾಗಿದ್ದುದರಿಂದ ವಿಮಲವಾಹನ ಮುನಿಪುಂಗವರನ್ನು ಹೊಂದಿ ತಮ್ಮ ಭವಸಂಬಂಧವನ್ನು ಕೇಳಿ ಗಣಧರರಾದರು.

**ಇಹ ಪ್ರತ್ಯೇಕಮೇತೇಷಾಂ ನಾಮಗ್ರಹಣಪೂರ್ವಕಮ್ ।**
**ಗತಿರ್ಭವಾವಲೀ ವ್ಯಾಖ್ಯಾ ಸಂಕಲಯ್ಯಾಭಿಧೀಯತೇ ॥ ೩೦೫ ॥**

ಇಲ್ಲಿ ಇವರುಗಳು ಪ್ರತಿಯೊಬ್ಬರ ನಾಮಗ್ರಹಣಪೂರ್ವಕವಾಗಿ ಗತಿಯನ್ನೂ ಭವಾವಲಿಯನ್ನೂ ಸಂಗ್ರಹಿಸಿ ವ್ಯಾಖ್ಯಾನವು ಮಾಡಲ್ಪಡುವುದು.

**ಸಿಂಹಸೇನೋಽಶನಿಘೋಷಃ ಪ್ರಾಂತೇ ಶ್ರೀಧರಸಂಜ್ಞಕಃ ।**
**ರಶ್ಮಿವೇಗಃ ಪ್ರಭಾಂತಾರ್ಕೋ ವಜ್ರಾಯುಧಮಹಾನ್ನೃಪಃ ॥ ೩೦೬ ॥**

**ಸರ್ವಾರ್ಥಸಿದ್ಧೌ ದೇವೇಂದ್ರಃ ಸಂಜಯಂತಸ್ತತಶ್ಚ್ಯುತಃ ।**
**ಇತ್ಯಷ್ಟಜನ್ಮಭಿಃ ಪ್ರಾಪತ್ಸಿಂಹಸೇನಃ ಶ್ರಿಯಃ ಪದಮ್ ॥ ೩೦೭ ॥**

ಸಿಂಹಸೇನನು ಅಶನಿಘೋಷವೆಂಬ ಆನೆಯಾಗಿ ಹುಟ್ಟಿ ಬಳಿಕ ಯಥಾಕ್ರಮವಾಗಿ ಶ್ರೀಧರನೂ ರಶ್ಮಿವೇಗನೂ ಅರ್ಕಪ್ರಭನೂ ವಜ್ರಾಯುಧಮಹಾರಜನೂ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರದೇವನೂ ಅಲ್ಲಿಂದ ಚ್ಯುತನಾಗಿ ಸಂಜಯಂತನೂ ಆಗಿ ಹೀಗೆ ಎಂಟು ಜನ್ಮಗಳಿಂದ ಸಿಂಹಸೇನನು ಮುಕ್ತಿಪದವನ್ನು ಪಡೆದನು.

**ಮಧುರಾ ರಾಮದತ್ತಾನು ಭಾಸ್ಕರಃ ಶ್ರೀಧರಾ ಸುರಃ ।**
**ರತ್ನಮಾಲಾಚ್ಯುತೇ ದೇವಸ್ತತೋ ವೀತಭಯಾಹ್ವಯಃ ॥ ೩೦೮ ॥**

**ಆದಿತ್ಯಾಭಸ್ತತೋ ಮೇರುರ್ಗಣೇಶೋ ವಿಮಲೇಶಿನಃ ।**
**ಸಪ್ತರ್ದ್ಧಿಸಮುಪೇತಸ್ಸನ್ ಪ್ರಾಯಾಸೀತ್ಪರಮಂ ಪದಮ್ ॥ ೩೦೯ ॥**

ಮಧುರೆಯೆಂಬವಳು ರಾಮದತ್ತೆಯಾಗಿ ಜನಿಸಿ ಬಳಿಕ ಯಥಾಕ್ರಮವಾಗಿ ಭಾಸ್ಕರದೇವನೂ ಶ್ರೀಧರೆಯೂ ದೇವನೂ ರತ್ನಮಾಲೆಯೂ ಅಚ್ಯುತದೇವನೂ ವೀತಭಯನೂ ಆದಿತ್ಯಾಭದೇವನೂ ಆಗಿ ಬಳಿಕ ವಿಮಲತೀರ್ಥಂಕರರಿಗೆ ಸಪ್ತರ್ದ್ಧಿಯುಕ್ತನಾದ ಮೇರುವೆಂಬ ಗಣಧರನಾಗಿ ಪರಮಪದವನ್ನು ಹೊಂದಿದಳು.

**ವಾರುಣೀ ಪೂರ್ಣಚಂದ್ರಾಖ್ಯೋ ವೈಡೂರ್ಯೋಽಸ್ಮಾದ್ಯಶೋಧರಾ ।**
**ಕಾಪಿಷ್ಠ ಕಲ್ಪೇನಲ್ಪರ್ದ್ಧಿರ್ದೇವೋಭೂದ್ರುಚಕಪ್ರಭಃ ॥ ೩೧೦ ॥**

**ರತ್ನಾಯುಧೋಽಂತ್ಯಕಲ್ಪೋತ್ಥಸ್ತತಶ್ಚ್ಯುತ್ವಾ ವಿಭೀಷಣಃ ।**
**ದ್ವಿತೀಯನರಕೇ ಪಾಪೀ ಶ್ರೀಧಾಮಾ ಬ್ರಹ್ಮಕಲ್ಪಜಃ ॥ ೩೧೧ ॥**

**ಜಯಂತೋ ಧರಣಾಧೀಶೋ ಮಂದರೋ ಗಣನಾಯಕಃ ।**
**ಚತುರ್ಜ್ಞಾನಧರಃ ಪಾರಮವಾಪಜ್ಜನ್ಮವಾರಿಧೇಃ ॥ ೩೧೨ ॥**

ವಾರುಣಿಯು ಪೂರ್ಣಚಂದ್ರನೆಂಬ ರಾಜಪುತ್ರನಾಗಿ ಜನಿಸಿ ಬಳಿಕ ಯಥಾಕ್ರಮವಾಗಿ ವೈಡೂರ್ಯದೇವನೂ ಯಶೋಧರೆಯೂ ಕಾಪಿಷ್ಠಕಲ್ಪ–ಸ್ವರ್ಗದಲ್ಲಿ ಅಧಿಕವಾದ ಋದ್ಧಿಯುಳ್ಳ ರುಚಕಪ್ರಭದೇವನೂ ರತ್ನಾಯುಧನೂ ಅಚ್ಯುತಕಲ್ಪಜನಾದ ದೇವನೂ ಅಲ್ಲಿಂದ ಚ್ಯುತನಾಗಿ ವಿಭೀಷಣನೂ ಪಾಪಿಯಾಗಿ ದ್ವಿತೀಯ ನರಕದಲ್ಲಿ ನಾರಕಿಯೂ ಶ್ರೀಧಾಮನೂ ಬ್ರಹ್ಮಕಲ್ಪಜನಾದ ದೇವನೂ ಜಯಂತನೂ ಧರಣೇಂದ್ರನೂ ಆಗಿ ಬಳಿಕ ವಿಮಲತೀರ್ಥಂಕರರಿಗೆ ಚತುರ್ಥಜ್ಞಾನಧಾರಿಯಾದ ಮಂದರನೆಂಬ ಗಣಧಾರನಾಗಿ ಭವಸಮುದ್ರದ ಪಾರವನ್ನು ಹೊಂದಿದಳು.

**ಶ್ರೀಭೂತಿಸಚಿವೋ ನಾಗಶ್ಚಮರಃ ಕುಕ್ಕುಟಾಹಿಕಃ ।**
**ತೃತೀಯನರಕೇ ದುಃಖೀ ಶಯುಃ ಪಂಕಪ್ರಭೋದ್ಭವಃ ॥ ೩೧೩ ॥**

**ತ್ರಸಸ್ಥಾವರಸಂಭ್ರಾಂತಃ ಪಶ್ಚಾಜ್ಜಾತೋಽತಿದಾರುಣಃ ।**
**ತತಸ್ತಮಸ್ತಮಸ್ಯಾಸೀತ್ಸರ್ಪಸ್ತಸ್ಮಾಚ್ಚ ನಾರಕಃ ॥ ೩೧೪ ॥**

**ಬಹುಯೋನಿಪರಿಭ್ರಾಂತೋ ಮೃಗಶೃಂಗೋ ಮೃತಸ್ತತಃ ।**
**ವಿದ್ಯುದ್ದಂಷ್ಟ್ರಃ ಖಗಾಧೀಶಃ ಪಾಪೀ ಪಶ್ಚಾತ್ಪ್ರಸನ್ನವಾನ್ ॥ ೩೧೫ ॥**

ಶ್ರೀಭೂತಿ (ಸತ್ಯಘೋಷ) ಮಂತ್ರಿಯು ಸರ್ಪವಾಗಿ ಜನಿಸಿ ಬಳಿಕ ಯಥಾಕ್ರಮವಾಗಿ ಚಮರ–ಮೃಗವೂ ಕುಕ್ಕುಟಸರ್ಪವೂ ಮೂರನೆಯ ನರಕದಲ್ಲಿ ದುಃಖಿಯಾದ ನಾರಕಿಯೂ ಹೆಬ್ಬಾವೂ ನಾಲ್ಕನೆಯ ನರಕದಲ್ಲಿ ಹುಟ್ಟಿದ ನಾರಕಿಯೂ ತ್ರಸ ಮತ್ತು ಸ್ಥಾವರಜೀವಾವಸ್ಥೆಗಳಲ್ಲಿ ತಿರುಗಿದವನೂ ತರುವಾಯ ಅತಿದಾರುಣನೂ ಅಲ್ಲಿಂದ ಏಳನೆಯ ನರಕದ ನಾರಕಿಯೂ ಸರ್ಪವೂ ನಾರಕಿಯೂ ಅನೇಕ ಯೋನಿಗಳಲ್ಲಿ ಸುತ್ತಿದವನೂ ಮೃಗಶೃಂಗನೂ ಅಲ್ಲಿ ಸತ್ತು ಪಾಪಿಯಾದ ವಿದ್ಯುದ್ದಂಷ್ಟ್ರ ವಿದ್ಯಾಧರನೂ ಆಗಿ ಬಳಿಕ ಅವನು ಪರಿಶುದ್ಧನಾದನು.

**ಭದ್ರಮಿತ್ರವಣಿಕ್ಸಿಂಹಚಂದ್ರಃ ಪ್ರೀತಿಂಕರೇ ಸುರಃ ।**
**ಚಕ್ರಾಯುಧೋ ವಿಧೂತಾಷ್ಟಕರ್ಮಾ ನಿರ್ವಾಣಮಾಪಿವಾನ್ ॥ ೩೧೬ ॥**

ಭದ್ರಮಿತ್ರನೆಂಬ ವೈಶ್ಯನು ಸಿಂಹಚಂದ್ರನಾಗಿ ಜನಿಸಿ ಬಳಿಕ ಯಥಾಕ್ರಮವಾಗಿ ಪ್ರೀತಿಂಕರವಿಮಾನದಲ್ಲಿ ದೇವನೂ ಚಕ್ರಾಯುಧನೂ ಆಗಿ ಎಂಟು ಕರ್ಮಗಳನ್ನು ನಾಶಮಾಡಿ ಮುಕ್ತಿಯನ್ನು ಪಡೆದನು.

**ಏವಂ ಚತುರ್ಗತಿಷು ತೇ ಚಿರಮುಚ್ಚನೀಚ-**
**ಸ್ಥಾನಾನಿ ಕರ್ಮಪರಿಪಾಕವಶಾತ್ಪ್ರಪದ್ಯ ।**
**ಸೌಖ್ಯಂ ಕ್ವಚಿತ್ಕ್ವಚಿದಯಾಚಿತಮುಗ್ರದುಃಖ-**
**ಮಾಪಂಸ್ತ್ರಯೋತ್ರ ಪರಮಾತ್ಮಪದಂ ಪ್ರಪನ್ನಾಃ** ॥ ೩೧೭ ॥

ಈ ರೀತಿಯಾಗಿ ಅವರು ಕರ್ಮಪರಿಪಾಕವಶದಿಂದ ನರಕಾದಿ ಚತುರ್ಗತಿಗಳಲ್ಲಿ ಬಹುಕಾಲದವರೆಗೆ ಉಚ್ಚನೀಚಭಾವಗಳನ್ನು ಹೊಂದಿ ಕೆಲವು ಕಡೆಯಲ್ಲಿ ಸೌಖ್ಯವನ್ನೂ ಕೆಲವು ಕಡೆಯಲ್ಲಿ ಅಯಾಚಿತವಾದ ತೀವ್ರದುಃಖವನ್ನೂ ಹೊಂದಿದರು. ಇವರಲ್ಲಿ ಮೂರು ಮಂದಿಗಳು ಪರಮಾತ್ಮಪದವನ್ನು ಹೊಂದಿದರು.

**ಖಲಖಗಪಕೃತೋಗ್ರೋಪದ್ರವಂ ಕಸ್ಯಚಿದ್ವಾ**
**ಮನಸಿ ಸಮರಸತ್ವಾನ್ನನ್ಯಮಾನೋ ಮಹೇಚ್ಛಃ ।**
**ಶುಚಿತರವರಶುಕ್ಲಧ್ಯಾನಮಧ್ಯಾಸ್ಯ ಶುದ್ಧಿಮ್**
**ಸಮಗಮದಮಲೋ ಯಸ್ಸಂಜಯಂತಸ್ಸ ವೋವ್ಯಾತ್** ॥ ೩೧೮ ॥

ದುಷ್ಟವಿದ್ಯಾಧರನು ಮಾಡಿದ ತೀವ್ರವಾದ ಉಪದ್ರವವನ್ನು ಸಮತಾರಸದಿಂದ ಯಾವನಿಗೋ ಎಂದು ಮನಸ್ಸಿನಲ್ಲಿ ತಿಳಿಯುವವನೂ ಮಹೇಚ್ಛೆಯುಳ್ಳವನೂ ಆದ ಯಾವನು ಬಹು ಶುಚಿಯಾದ ಮತ್ತು ಶ್ರೇಷ್ಠವಾದ ಶುಕ್ಲಧ್ಯಾನವನ್ನು ಹೊಂದಿ ನಿರ್ಮಲನಾಗಿ ಶುದ್ಧಿಯನ್ನು ಹೊಂದಿದನೋ ಅಂತಹ ಸಂಜಯಂತನು ನಿಮ್ಮನ್ನು ರಕ್ಷಿಸಲಿ.

**ಮೇರುಮಂದರಮಹಾಭಿಧಾನಕೌ**
**ಸ್ವಾಮಿನೇಂದುವಿಜಯಾದ್ಧ್ವತೌಜಸೌ।**
**ಪೂಜಿತೌ ಮುನಿಗಣಾಧಿನಾಯಕೌ**
**ನಾಯಕೌ ನಯಮಯಾಗಮಸ್ಯ ವಃ** ॥ ೩೧೯ ॥

ಸೂರ್ಯಚಂದ್ರರನ್ನು ಜಯಿಸಿದುದರಿಂದ ತೇಜೋಧಾರಿಗಳೂ ಮುನಿಸಮುದಾಯಕ್ಕೆ ಅಧಿಪತಿಗಳೂ ಆದ ಮೇರುಮಂದರರೆಂಬ ದೊಡ್ಡ ಹೆಸರುಳ್ಳಮುನಿಗಳು ನ್ಯಾಯಪೂರ್ಣವಾದ ಆಗಮಕ್ಕೆ ಅಧಿಪತಿಗಳಾಗಿ ನಿಮ್ಮಗಳಿಗೆ ಪೂಜಿಸಲ್ಪಡುವವರಾಗಿ- ಪೂಜ್ಯರಾಗಿರಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ವಿಮಲತೀರ್ಥಕರ ಧರ್ಮ ಸ್ವಯಂಭೂ ಮಧು ಸಂಜಯಂತ ಮೇರು ಮಂದರಪುರಾಣಂ ನಾಮ ಏಕೋನಷಷ್ಟಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ವಿಮಲತೀರ್ಥಂಕರ, ಧರ್ಮ, ಸ್ವಯಂಭೂ, ಮಧು, ಸಂಜಯಂತ, ಮೇರು, ಮಂದರಪುರಾಣವೆಂಬ ಐವತ್ತೊಂಬತ್ತನೆಯ ಪರ್ವವು ಸಮಾಪ್ತವಾದುದು.

---

# ಅಥ ಅನಂತತೀರ್ಥಕರಪುರಾಣಂ

**ಅನಂತೋಽನಂತದೋಷಾಣಾಂ ಹಂತಾನಂತಗುಣಾಕರಃ ।**
**ಹಂತ್ವಂತರ್ಧ್ವಾಂತಸಂತಾನಮಂತಾತೀತಂ ಜಿನಃ ಸ ನಃ ॥ ೧ ॥**

ಅನಂತದೋಷಗಳ ನಾಶಕನೂ ಅನಂತಗುಣಗಳ ಗಣಿಯೂ ಆದ ಆ ಅನಂತ ಜಿನನು ನಮ್ಮಗಳ ಅನಂತವಾದ ಅಂತರಂಗಿಕ ಗಾಢಾಂಧಕಾರ(ಅಜ್ಞಾನ)ಪರಂಪರೆಯನ್ನು ನಾಶಮಾಡಲಿ.

**ಧಾತಕೀಖಂಡಪ್ರಾಗ್ಭಾಗೇ ಮೇರೂದಗ್ವಿಷಯೇ ಮಹತ್ ।**
**ರಮ್ಯಂ ಪುರಮರಿಷ್ಟಾಖ್ಯಮೈಕಧ್ಯಮಿವ ಸಂಪದಾಮ್ ॥ ೨ ॥**

ಧಾತಕೀಖಂಡದ ಪೂರ್ವಭಾಗದ ಮೇರುವಿನ ಉತ್ತರದಲ್ಲಿರುವ ದೇಶದಲ್ಲಿ ರಮಣೀಯವೂ ಸಂಪತ್ತುಗಳ ಐಕ್ಯವೋ ಎಂಬಂತಿರುವುದೂ ಆದ ಅರಿಷ್ಟವೆಂಬ ಮಹಾನಗರವಿರುತ್ತದೆ.

**ಪತಿಃ ಪದ್ಮರಥಸ್ತಸ್ಯ ಪದ್ಮಾಸದ್ಮ ಸ್ವಯಂ ಗುಣೈಃ ।**
**ಯಸ್ಮಿನ್ನಮ್ಹೀಂ ಚಿರಂ ಪಾತಿ ಪ್ರಾಪನ್ಪ್ರೀತಿಂ ಪರಾಂ ಪ್ರಜಾಃ ॥ ೩ ॥**

ಪದ್ಮರಥನು ಆ ನಗರದ ದೊರೆಯಾಗಿದ್ದನು. ಅವನು ಗುಣಗಳಿಂದ ಲಕ್ಷ್ಮಿಗೆ ಸ್ಥಾನನಾಗಿದ್ದನು. ಅವನು ಬಹುಕಾಲದವರೆಗೆ ಪೃಥ್ವಿಯನ್ನು ಪಾಲಿಸುತ್ತಿರಲು ಪ್ರಜೆಗಳು ಬಹುಪ್ರೀತಿಯನ್ನು ಹೊಂದಿದರು.

**ಪುಣ್ಯೋದಯಾತ್ಸುರೂಪಾದಿಸಾಮಗ್ರೀ ಸುಖಸಾಧನೀ ।**
**ಜಂತೋಸ್ತದುದಯಸ್ತಸ್ಮಿನ್ನಪುಷ್ಕಲೋಽಸ್ತಿ ನಿರರ್ಗಲಃ ॥ ೪ ॥**

ಪ್ರಾಣಿಗೆ ಸುಖಸಾಧನವಾದ ಉತ್ತಮರೂಪಾದಿಸಾಮಗ್ರಿಯು ಪುಣ್ಯೋದಯದಿಂದುಂಟಾಗುವುದು. ಅವನಲ್ಲಿ ನಿರರ್ಗಳವಾದ ಆ ಪುಣ್ಯದ ಉದಯವು ಹೇರಳವಾಗಿದೆ.

**ಸದಿಂದ್ರಿಯಾರ್ಥಸಾನ್ನಿಧ್ಯಸಮುದ್ಭೂತಸುಖೇನ ಸಃ ।**
**ಶಕ್ರವತ್ಸುಷ್ಠು ಸಂತೃಪ್ಯ ಸಂಸಾರಫಲಮನ್ವಭೂತ್ ॥ ೫ ॥**

ಅವನು ಉತ್ತಮವಾದ ಇಂದ್ರಿಯವಿಷಯಗಳ ಸಾನ್ನಿಧ್ಯದಿಂದುಂಟಾದ ಸುಖದಿಂದ, ದೇವೇಂದ್ರನಂತೆ, ಚೆನ್ನಾಗಿ ತೃಪ್ತಿಯನ್ನು ಹೊಂದಿ ಸಂಸಾರದ ಫಲವನ್ನನುಭವಿಸಿದನು.

**ಅಥಾನ್ಯದಾ ಸಮಾಸಾದ್ಯ ಸ್ವಯಂಪ್ರಭಜಿನಾಧಿಪಮ್ ।**
**ಸಪ್ರಶ್ರಯಮಭಿಷ್ಟುತ್ಯ ಶ್ರುತ್ವಾ ಧರ್ಮಂ ಸುನಿರ್ಮಲಮ್ ॥ ೬ ॥**

**ಸಂಯೋಗೋ ದೇಹಿನಾಂ ದೇಹೈರಕ್ಷಾಣಾಂ ಚ ಸ್ವಗೋಚರೈಃ ।**
**ಅನಿತ್ಯೋಽನ್ಯತರಾಭಾವೇ ಸರ್ವೇಷಾಮಾಜವಂಜವೇ ॥ ೭ ॥**

ಬಳಿಕ ಒಂದಾನೊಂದು ಕಾಲದಲ್ಲಿ ಆ ಪದ್ಮರಥನು ಸ್ವಯಂಪ್ರಭಜಿನೇಶ್ವರನನ್ನು ಹೊಂದಿ ವಿನಯದಿಂದ ಸ್ತುತಿಸಿ ಬಹುನಿರ್ಮಲವಾದ ಧರ್ಮವನ್ನು ಕೇಳಿ ''ಸಂಸಾರದಲ್ಲಿ ಎಲ್ಲಾ ಪ್ರಾಣಿಗಳಿಗೆ ದೇಹಗಳೊಡನೆಯೂ ಇಂದ್ರಿಯಗಳಿಗೆ ತಮ್ಮ ವಿಷಯಗಳೊಡನೆಯೂ ಸಂಯೋಗವು, ದೇಹೇಂದ್ರಿಯವಿಷಯಗಳಲ್ಲಿ ಯಾವುದೊಂದಿಲ್ಲದಿದ್ದರೂ, ಅನಿತ್ಯವಾಗಿರುತ್ತದೆ.

**ಆಹಿತಾನ್ಯಮತಾಃ ಸಂತು ದೇಹಿನೋ ಮೋಹಿತಾಶಯಾಃ ।**
**ಅಹಂ ವಿಹತಮೋಹಾರಿಮಾಹಾತ್ಮ್ಯಾರ್ಹತ್ಕ್ರಮಾಶ್ರಯಃ ॥ ೮ ॥**

**ಕರವಾಣಿ ಕಥಂಕಾರಂ ಮತಿಮೇತೇಷು ನಿಶ್ಚಲಾಮ್ ।**
**ಇತಿ ಮೋಹಮಹಾಗ್ರಂಥಿಮುದ್ಭಿದ್ಯಾಸ್ಯೋದ್ಯಯೌ ಮತಿಃ ॥ ೯ ॥**

ಮೋಹಯುಕ್ತವಾದ ಅಭಿಪ್ರಾಯವುಳ್ಳ ಪ್ರಾಣಿಗಳು ಅನ್ಯಮತಾಸಕ್ತಿಯುಳ್ಳವುಗಳಾಗಿರಲಿ. ನಾನು ಮೋಹವೈರಿಯ ಮಹಿಮೆಯನ್ನು ನಾಶಮಾಡಿರುವ ಅರ್ಹತ್ಪರಮೇಶ್ವರರ ಪಾದಾಶ್ರಯವುಳ್ಳವನಾಗಿ ಈ ದೇಹೇಂದ್ರಿಯವಿಷಯಗಳಲ್ಲಿ ನಿಶ್ಚಲವಾದ ಬುದ್ಧಿಯನ್ನು ಹೇಗೆ ಮಾಡುವೆನು ?'' ಈ ರೀತಿಯಾಗಿ ವಿಚಾರಮಾಡಿ ಮೋಹದ ದೊಡ್ಡಗಂಟನ್ನು ಕತ್ತರಿಸಿ ಈ ಪದ್ಮರಥನ ಬುದ್ಧಿಯು ಉದ್ಯಮಶೀಲವಾಯಿತು.

**ತತಃ ಪರೀತದಾವಾಗ್ನಿಶಿಖಾಸಂತ್ರಾಸಿತೈಣವತ್ ।**
**ಚಿರೋಷಿತಾಂ ಚ ಸಂಸಾರಸ್ಥಲೀಂ ಹಾತುಂ ಕೃತೋದ್ಯಮಃ ॥ ೧೦ ॥**

ಬಳಿಕ ಅವನು, ಸುತ್ತಲೂ ಕಾಳ್ಗಿಚ್ಚಿನ ಜ್ವಾಲೆಯಿಂದ ಆಯಾಸಗೊಳಿಸಲ್ಪಟ್ಟ ಜಿಂಕೆಯಂತೆ, ಬಹುಕಾಲದವರೆಗೆ ವಾಸಮಾಡಿದ ಸಂಸಾರವೆಂಬ ಸ್ಥಳವನ್ನು ಬಿಡುವುದಕ್ಕೆ ಉದ್ಯೋಗವನ್ನು ಮಾಡಿದನು–ಪ್ರಯತ್ನಿಸಿದನು.

**ಸೂನೌ ಘನರಥೇ ರಾಜ್ಯಂ ನಿಯೋಜ್ಯಾದಾಯ ಸಂಯಮಮ್ ।**
**ಏಕಾದಶಾಂಗವಾರಾಶಿಪಾರಗೋ ಬದ್ಧತೀರ್ಥಕೃತ್ ॥ ೧೧ ॥**

**ಪ್ರಾಂತೇ ಸ್ವಾರಾಧನಾಂ ಪ್ರಾಪ್ಯ ಪರಿತ್ಯಕ್ತಶರೀರಕಃ ।**
**ಅಭೂತ್ಪರ್ಯಂತಕಲ್ಪೇಂದ್ರಃ ಪುಷ್ಪೋತ್ತರವಿಮಾನಜಃ ॥ ೧೨ ॥**

ಪದ್ಮರಥನು ತನ್ನ ಪುತ್ರನಾದ ಘನರಥನಲ್ಲಿ ರಾಜ್ಯಭಾರವನ್ನಿರಿಸಿ ತಾನು ದೀಕ್ಷೆಯನ್ನು ತೆಗೆದುಕೊಂಡು ಏಕಾದಶಾಂಗಶಾಸ್ತ್ರವೆಂಬ ಸಮುದ್ರದ ಪಾರವನ್ನು ಹೊಂದಿದವನೂ ತೀರ್ಥಕೃನ್ನಾಮಕರ್ಮವನ್ನು ಬಂಧಿಸಿಕೊಂಡವನೂ ಕೊನೆಯಲ್ಲಿ ಆತ್ಮಾರಾಧನೆಯನ್ನು ಹೊಂದಿ ಶರೀರತ್ಯಾಗವನ್ನು ಮಾಡಿದವನೂ ಆಗಿ ಕೊನೆಯ ಕಲ್ಪದಲ್ಲಿ ಪುಷ್ಪೋತ್ತರವಿಮಾನದಲ್ಲಿ ದೇವೇಂದ್ರನಾಗಿ ಹುಟ್ಟಿದನು.

**ದ್ವಾವಿಂಶತ್ಯಬ್ಧಿಮಾನಾಯುರ್ಹಸ್ತಾರ್ಧೋನತ್ರಿಧನುಸ್ತನುಃ ।**
**ಶುಕ್ಲಲೇಶ್ಯಃ ಶ್ವಸನ್ನೈಕಾದಶಮಾಸೈಸ್ತು ಸಂಖ್ಯಯಾ ॥ ೧೩ ॥**

**ಖತ್ರಯಾಯನಪಕ್ಷೋಕ್ತವರ್ಷೈರಾಹಾರಮಾಹರನ್ ।**
**ಸುಖೀ ಮನಃಪ್ರವೀಚಾರಾತ್ತಮಸಃ ಪ್ರಾಗ್ಗತಾವಧಿಃ ॥ ೧೪ ॥**

**ತತ್ಪ್ರಮಾಣಬಲಸ್ತೇಜೋವಿಕ್ರಿಯಾಭ್ಯಾಂ ಚ ತತ್ಪ್ರಮಃ ।**
**ಚಿರಂ ತತ್ರ ಸುಖಂ ಭುಕ್ತ್ವಾ ತಸ್ಮಿನ್ನತ್ರಾಗಮಿಷ್ಯತಿ ॥ ೧೫ ॥**

**ದ್ವೀಪೇಽಸ್ಮಿನ್ದಕ್ಷಿಣೇ ಭಾಗೇ ಸಾಕೇತನಗರೇಶ್ವರಃ ।**
**ಇಕ್ಷ್ವಾಕುಃ ಕಾಶ್ಯಪಃ ಸಿಂಹಸೇನೋ ನಾಮ ಮಹಾನೃಪಃ ॥ ೧೬ ॥**

**ಜಯಶ್ಯಾಮಾ ಮಹಾದೇವೀ ತಸ್ಯಾಸ್ಯಾ ವೇಶ್ಮನಃ ಪುರಃ ।**
**ವಸುಧಾರಾಂ ಸುರಾಸ್ಸಾರಾಂ ಮಾಸಷಟ್ಕಮಪೀಪತನ್ ॥ ೧೭ ॥**

ಆ ದೇವೇಂದ್ರನು ಇಪ್ಪತ್ತೆರಡು ಸಾಗರೋಪಮವಾದ ಆಯುಷ್ಯವುಳ್ಳವನೂ ಮೂರುವರೆಮೊಳದಷ್ಟು ಶರೀರವುಳ್ಳವನೂ ಶುಕ್ಲಲೇಶ್ಯೆಯುಳ್ಳವನೂ ಹನ್ನೊಂದು ತಿಂಗಳಿಗೊಂದುಸರ್ತಿ ಉಸಿರಾಡುವವನೂ ಇಪ್ಪತ್ತೆರಡುಸಾವಿರವರುಷಗಳಿಗೊಮ್ಮೆ ಆಹಾರವನ್ನು ತೆಗೆದುಕೊಳ್ಳುವವನೂ ಮನಃಪ್ರವೀಚಾರದಿಂದ (ಮನಃಕಾಮಸೇವನೆಯಿಂದ) ಸುಖಿಯೂ ಆರನೆಯ–ತಮಃಪ್ರಭಾನರಕದವರೆಗೆ ಅವಧಿಜ್ಞಾನವುಳ್ಳವನೂ ಅಲ್ಲಿಯವರೆಗೆ ಬಲವುಳ್ಳವನೂ ತೇಜಸ್ಸಿನಿಂದಲೂ ವಿಕ್ರಿಯೆ

ಯಿಂದಲೂ ಅಷ್ಟೇ ಪರಿಮಿತಿಯುಳ್ಳವನೂ ಆಗಿದ್ದನು. ಅವನು ಬಹು ಕಾಲದವರೆಗೆ ಅಲ್ಲಿ ಸುಖವನ್ನನುಭವಿಸಿ ಈ ಕ್ಷೇತ್ರಕ್ಕೆ ಬರುವವನಾಗಿರಲು ಈ ಜಂಬೂದ್ವೀಪದ ದಕ್ಷಿಣಭಾಗದಲ್ಲಿ ಅಯೋಧ್ಯಾನಗರಾಧಿಪತಿಯೂ ಇಕ್ಷ್ವಾಕುವಂಶಜನೂ ಕಾಶ್ಯಪ ಗೋತ್ರಜನೂ ಆದ ಸಿಂಹಸೇನನೆಂಬವನು ಮಹಾರಾಜನಾಗಿದ್ದನು. ಅವನಿಗೆ ಜಯ ಶ್ಯಾಮಾದೇವಿಯು ಮಹಾರಾಜ್ಞಿಯಾಗಿದ್ದಳು. ಈಕೆಯ ಮನೆಯ ಮುಂದೆ ದೇವ ರ್ಕಳು ಆರುತಿಂಗಳವರೆಗೆ ಸಾರವಾದ ವಸುಧಾರೆಯನ್ನು ಸುರಿದರು.

**ಕಾರ್ತ್ತಿಕೇ ಮಾಸಿ ರೇವತ್ಯಾಂ ಪ್ರಭಾತೇಹ್ನಿ ತದಾದಿಮೇ ।**
**ನಿರೀಕ್ಷ್ಯ ಷೋಡಶಸ್ವಪ್ನಾನ್ವಿಶಂತಂ ಚಾನನಂ ಗಜಮ್ ॥ ೧೮ ॥**

**ಅವಗಮ್ಯ ಫಲಂ ತೇಷಾಂ ಭೂಭುಜಾವಧಿಲೋಚನಾತ್ ।**
**ಗರ್ಭಸ್ಥಿತಾಚ್ಯುತೇಂದ್ರಾಸೌ ಪರಿತೋಷಮಗಾತ್ಪರಮ್ ॥ ೧೯ ॥**

ಕಾರ್ತ್ತಿಕಮಾಸದ ರೇವತೀನಕ್ಷತ್ರದಲ್ಲಿ ಪಾಡ್ಯದ ದಿವಸದಲ್ಲಿ ಬೆಳಗಿನಜಾವದಲ್ಲಿ ಜಯಶ್ಯಾಮಾದೇವಿಯು ಹದಿನಾರು ಸ್ವಪ್ನಗಳನ್ನೂ ಮುಖವನ್ನು ಪ್ರವೇಶಿಸು ತ್ತಿರುವ ಆನೆಯನ್ನೂ ಕಂಡು ಅವುಗಳ ಫಲವನ್ನು ಪತಿಯ ಅವಧಿಜ್ಞಾನವೆಂಬ ನೇತ್ರದಿಂದ ತಿಳಿದು ಗರ್ಭದಲ್ಲಿ ಅಚ್ಯುತೇಂದ್ರನುಳ್ಳ ಈಕೆಯು ಬಹು ಸಂತೋಷ ವನ್ನು ಹೊಂದಿದಳು.

**ತತಃ ಸ್ವರ್ಗಾವತರಣಕಲ್ಯಾಣಾಭಿಷವಂ ಸುರಾಃ ।**
**ಸಂಪಾದ್ಯ ವಸ್ತ್ರಮಾಲ್ಯೋರುಭೂಷಣೈಸ್ತಾವಪೂಜಯನ್ ॥ ೨೦ ॥**

ಬಳಿಕ ದೇವರ್ಕಳು ಸ್ವರ್ಗಾವತರಣಕಲ್ಯಾಣಾಭಿಷೇಕವನ್ನು ಮಾಡಿ ಆ ರಾಜ ದಂಪತಿಗಳನ್ನು ವಸ್ತ್ರಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ಶ್ರೇಷ್ಠವಾದ ಆಭರಣ ಗಳಿಂದಲೂ ಪೂಜಿಸಿದರು.

**ಸುಖಗರ್ಭಾ ಜಯಶ್ಯಾಮಾ ಜ್ಯೇಷ್ಠೇ ಮಾಸ್ಯಸಿತೇ ಸುತಮ್ ।**
**ದ್ವಾದಶ್ಯಾಂ ಪುಷ್ಯಯೋಗೇಸೌ ಸಪುಣ್ಯಮುದಪಾದಯತ್ ॥ ೨೧ ॥**

ಸುಖವಾದ ಗರ್ಭವುಳ್ಳ ಈ ಜಯಶ್ಯಾಮಾದೇವಿಯು ಜ್ಯೇಷ್ಠಮಾಸದ ಕೃಷ್ಣ ಪಕ್ಷದ ದ್ವಾದಶೀತಿಥಿಯಲ್ಲಿ ಪುಷ್ಯಯೋಗದಲ್ಲಿ ಪುಣ್ಯಯುತನಾದ ಸುತನನ್ನು ಪಡೆದಳು.

**ತದಾಗತ್ಯ ಮರುನ್ಮುಖ್ಯಾ ಮುಖ್ಯಶೈಲೇಭಿಷಿಚ್ಯ ತಮ್ ।**
**ಅನಂತಜಿನಮನ್ವರ್ಥನಾಮಾನಂ ವಿದಧುರ್ಮುದಾ ॥ ೨೨ ॥**

ಆಗ ಮುಖ್ಯದೇವರ್ಕಳು ಬಂದು ಮಹಾಮೇರುವಿನಲ್ಲಿ ಆ ಶಿಶುವಿಗೆ ಜನ್ಮಾ ಭಿಷೇಕವನ್ನು ಮಾಡಿ ಸಂತೋಷದಿಂದ ಅನಂತಜಿನನನ್ನು ಅನ್ವರ್ಥವಾದ ಹೆಸರು ಳ್ಳವನನ್ನಾಗಿ ಮಾಡಿದರು. ಆ ಶಿಶುವಿಗೆ ಅನಂತಜಿನನೆಂದು ಸಾರ್ಥಕವಾದ ನಾಮ ಕರಣವನ್ನು ಮಾಡಿದರೆಂದು ಭಾವವು

**ನವಾಬ್ಧ್ಯುಪಮಸಂತಾನೇ ಪಲ್ಯಪಾದತ್ರಯೇ ಸ್ಥಿತೇ ।**
**ಧರ್ಮೇತೀತಾರ್ಹತೋ ಧ್ವಸ್ತೇ ತದಭ್ಯಂತರಜೀವಿತಃ ॥ ೨೩ ॥**

**ತ್ರಿಂಶಲ್ಲಕ್ಷಸಮಾತ್ಮಾಯುಃ ಪಂಚಾಶಚ್ಚಾಪಸಮ್ಮಿತಃ ।**
**ಕನತ್ಕನಕಸಂಕಾಶಃ ಸರ್ವಲಕ್ಷಣಲಕ್ಷಿತಃ ॥ ೨೪ ॥**

**ಖಚತುಷ್ಕೇಂದ್ರಿಯದ್ವ್ಯಬ್ದೇಷ್ವತೀತೇಷ್ವಭಿಷೇಚನಮ್ ।**
**ರಾಜ್ಯಸ್ಯಾಲಭತಾಭ್ಯರ್ಚ್ಯಃ ಸ ನೃಖೇಶಮರುದ್ವರೈಃ ॥ ೨೫ ॥**

ಕಳೆದುಹೋದ ಅರ್ಹತ(ವಿಮಲನಾಥ)ರ ಬಳಿಕ ಪಲ್ಯಕಾಲದ ಮೂರು ಭಾಗ ಸಹಿತವಾದ ಒಂಬತ್ತು ಸಾಗರಕಾಲದಲ್ಲಿ ಧರ್ಮವು ನಷ್ಟವಾದಾಗ ಆ ಕಾಲದ ಅವಧಿ ಯೊಳಗೆ ಜೀವಿಸಿದವನೂ ಮೂವತ್ತುಲಕ್ಷ ವರ್ಷಾಯುಷ್ಯವುಳ್ಳವನೂ ಐವತ್ತು ಧನುಃಪರಿಮಿತವಾದ ದೇಹವುಳ್ಳವನೂ ಪ್ರಕಾಶಮಾನವಾದ ಬಂಗಾರಕ್ಕೆ ಸದೃಶನೂ ಸರ್ವಲಕ್ಷಣಯುಕ್ತನೂ ನರೇಂದ್ರರಿಂದಲೂ ವಿದ್ಯಾಧರೇಂದ್ರರಿಂದಲೂ ಶ್ರೇಷ್ಠರಾದ ದೇವರ್ಕಳಿಂದಲೂ ಪೂಜಿಸಲ್ಪಡತಕ್ಕವನೂ ಆದ ಆ ಅನಂತಜಿನನು ಏಳುಲಕ್ಷವ್ವಾ ಐವತ್ತು ಸಾವಿರವರ್ಷಗಳು ಕಳೆದ ಬಳಿಕ ರಾಜ್ಯದ ಅಭಿಷೇಕವನ್ನು ಹೊಂದಿದನು.

**ಖಪಂಚಕೇಂದ್ರಿಯೈಕೋಕ್ತವರ್ಷೈ ರಾಜ್ಯವ್ಯತಿಕ್ರಮೇ ।**
**ಕದಾಚಿದುಲ್ಕಾಪತನಹೇತುನೋತ್ಪನ್ನಬೋಧಿಕಃ ॥ ೨೬ ॥**

**ಅಜ್ಞಾನಬೀಜಸಂರೂಢಾಮಸಂಯಮಮಹೀಧೃತಾಮ್ ।**
**ಪ್ರಮಾದವಾರಿಸಂಸಿಕ್ತಾಂ ಕಷಾಯಸ್ಕಂಧಯಷ್ಟಿಕಾಮ್ ॥ ೨೭ ॥**

**ಯೋಗಾಲಂಬನಸಂವೃದ್ಧಾಂ ತಿರ್ಯಗ್ಗತಿಪೃಥಕ್ಕೃತಾಮ್ ।**
**ಜರಾಕುಸುಮಸಂಛನ್ನಾಂ ಬಹ್ವಾಮಯಪಲಾಶಿಕಾಮ್ ॥ ೨೮ ॥**

**ದುಃಖದುಷ್ಫಲಸನ್ನಮ್ರಾಂ ದುಷ್ಕರ್ಮವಿಷವಲ್ಲರೀಮ್ ।**
**ಶುಕ್ಲಧ್ಯಾನಾಸಿನಾಮೂಲಂ ಛೆತ್ತುಃ ಸ್ವಾತ್ಮಸಿದ್ಧಯೇ ॥ ೨೯ ॥**

**ಲೌಕಾಂತಿಕೈಃ ಸಮಭ್ಯೇತ್ಯ ಪ್ರಸ್ತುವದ್ಭಿಃ ಪ್ರಪೂಜಿತಃ ।**
**ಅನಂತವಿಜಯೇ ರಾಜ್ಯಂ ನಿಯೋಜ್ಯ ವಿಜಯೀ ತುಜಿ ॥ ೩೦ ॥**

**ಸುರೈಸ್ತೃತೀಯಕಲ್ಯಾಣಪೂಜಾಂ ಪ್ರಾಪ್ಯಾಧಿರೂಢವಾನ್ ।**
**ಯಾನಂ ಸಾಗರದತ್ತಾಖ್ಯಂ ಸಹೇತುಕವನಾಂತರೇ ॥ ೩೧ ॥**

**ಜ್ಯೇಷ್ಠೇ ಷಷ್ಠೋಪವಾಸೇನ ರೇವತ್ಯಾಂ ದ್ವಾದಶೀದಿನೇ ।**
**ಸಹಸ್ರೇಣಾಸಿತೇ ರಾಜ್ಞಾಮದೀಕ್ಷಿಷ್ಟಾಪರಾಹ್ಣಕೇ ॥ ೩೨ ॥**

ಹದಿನೈದುಲಕ್ಷ ವರ್ಷಗಳಿಂದ ರಾಜ್ಯಕಾಲವು ಕಳೆಯುತ್ತಿರಲು ಒಂದಾನೊಂದು ಕಾಲದಲ್ಲಿ ಉಲ್ಕಾಪತನದ ನಿಮಿತ್ತದಿಂದುಂಟಾದ ವಿವೇಕಜ್ಞಾನವುಳ್ಳ ಅನಂತಜಿನನು ಅಜ್ಞಾನವೆಂಬ ಬೀಜದಿಂದುಂಟಾದುದೂ ಅವ್ರತವೆಂಬ ಭೂಮಿಯಿಂದ ಧರಿಸ ಲ್ಪಟ್ಟುದೂ ಪ್ರಮಾದವೆಂಬ ಜಲದಿಂದ ಸೇಚಿಸಲ್ಪಟ್ಟುದೂ ಕಷಾಯಗಳೆಂಬ ದೊಡ್ಡ ಕೊಂಬೆಗಳುಳ್ಳುದೂ ಮನೋವಾಕ್ಕಾಯಯೋಗಗಳ ಆಶ್ರಯದಿಂದ ಬೆಳೆದುದೂ ತಿರ್ಯಗ್ಗತಿಯಿಂದ ದಪ್ಪವಾಗಿ ಮಾಡಲ್ಪಟ್ಟಿರುವುದೂ ಜರೆಯೆಂಬ ಪುಷ್ಪದಿಂದ ಮರೆಯಾಗಿರುವುದೂ ಅನೇಕರೋಗಗಳೆಂಬ ಎಲೆಗಳುಳ್ಳುದೂ ದುಃಖಗಳೆಂಬ ದುಷ್ಫಲಗಳಿಂದ ಚೆನ್ನಾಗಿ ಬಗ್ಗಿರುವುದೂ ಆದ ದುಷ್ಕರ್ಮವೆಂಬ ವಿಷಲತೆಯನ್ನು ಬೇರಿನವರೆಗೂ ಶುಕ್ಲಧ್ಯಾನವೆಂಬ ಖಡ್ಗದಿಂದ ತನ್ನ ಆತ್ಮಸಿದ್ಧಿಗೋಸ್ಕರ ಕತ್ತರಿಸ ಬೇಕೆಂಬ ಇಚ್ಛೆಯುಳ್ಳವನೂ ಸಮೀಪಕ್ಕೆ ಬಂದು ಸ್ತುತಿಸುತ್ತಿರುವ ಲೌಕಾಂತಿಕ ದೇವರ್ಕಳಿಂದ ಪೂಜಿಸಲ್ಪಟ್ಟವನೂ ಅನಂತವಿಜಯನೆಂಬ ಪುತ್ರನಲ್ಲಿ ರಾಜ್ಯವನ್ನಿರಿಸಿ ಜಯಶೀಲನೂ ಆಗಿ ದೇವರ್ಕಳಿಂದ ಮೂರನೆಯ- ದೀಕ್ಷಾಕಲ್ಯಾಣ ಪೂಜೆಯನ್ನು ಹೊಂದಿ ಸಾಗರದತ್ತವೆಂಬ ಪಲ್ಲಕ್ಕಿಯನ್ನೇರಿ ಹೋಗಿ ಸಹೇತುಕವೆಂಬ ವನದ ಮಧ್ಯ ದಲ್ಲಿ ಜ್ಯೇಷ್ಠಮಾಸದ ಕೃಷ್ಣಪಕ್ಷದ ದ್ವಾದಶೀತಿಥಿಯ ರೇವತೀನಕ್ಷತ್ರದಲ್ಲಿ ಸಾಯಂ ಕಾಲದಲ್ಲಿ ಸಹಸ್ರರಾಜರುಗಳೊಡನೆ ದೀಕ್ಷೆಯನ್ನು ತೆಗೆದುಕೊಂಡನು.

**ಸಂಪ್ರಾಪ್ತೋಪಾಂತ್ಯಸಂಜ್ಞಾನಃ ಸಸಾಮಾಯಿಕಸಂಯಮಃ ।**
**ದ್ವಿತೀಯೇಹ್ನಿ ಸ ಚರ್ಯಾಯೈ ಸಾಕೇತಂ ಸಮುಪೇಯಿವಾನ್ ॥ ೩೩ ॥**

ಮನಃಪರ್ಯಯಜ್ಞಾನವನ್ನು ಹೊಂದಿದವನೂ ಸಾಮಾಯಿಕಸಹಿತವಾದ ಸಂಯಮ- ಚಾರಿತ್ರವುಳ್ಳವನೂ ಆದ ಈ ಅನಂತಜಿನನು ಎರಡನೆಯ ದಿವಸದಲ್ಲಿ ಆಹಾರಕ್ಕೋಸ್ಕರ ಅಯೋಧ್ಯಾನಗರವನ್ನು ತಲುಪಿದನು.

**ವಿಶಾಖಭೂಪತಿಸ್ತಸ್ಮೈ ದತ್ವಾನ್ನಂ ಕನಕಚ್ಛವಿಃ ।**
**ಆಶ್ಚರ್ಯಪಂಚಕಂ ಪ್ರಾಪಜ್ಜ್ಞಪಕಂ ಸ್ವರ್ಗಮೋಕ್ಷಯೋಃ ॥ ೩೪ ॥**

ಸುವರ್ಣಕಾಂತಿಯುಳ್ಳ ವಿಶಾಖರಾಜನು ಆ ಅನಂತಜಿನನಿಗೆ ಆಹಾರವನ್ನು ಕೊಟ್ಟು ಸ್ವರ್ಗಮೋಕ್ಷಗಳಿಗೆ ಸೂಚಕವಾದ ಪಂಚಾಶ್ಚರ್ಯವನ್ನು ಪಡೆದನು.

**ಸಂವತ್ಸರದ್ವಯೇ ಯಾತೇ ಛಾದ್ಮಸ್ಥ್ಯೇ ಪ್ರಾಕ್ತನೇ ವನೇ ।**
**ಅಶ್ವತ್ಥಪಾದಪೋಪಾಂತೇ ಕೈವಲ್ಯಮುದಪೀಪದತ್ ॥ ೩೫ ॥**

**ಚೈತ್ರೇಮಾವಾಸ್ಯಾಹಃಪ್ರಾಂತೇ ರೇವತ್ಯಾಂ ಸುರಸತ್ತಮಾಃ ।**
**ತದೈವ ತುರ್ಯಕಲ್ಯಾಣಪೂಜಾಂ ಚ ನಿರವರ್ತಯನ್ ॥ ೩೬ ॥**

ಛದ್ಮಸ್ಥಾವಸ್ಥೆಯಲ್ಲಿ ಎರಡು ವರ್ಷಗಳು ಕಳೆಯುತ್ತಿರಲು ಅನಂತಜಿನನು ಮೊದಲಿನ–ಸಹೇತುಕವನದಲ್ಲಿ ಅಶ್ವತ್ಥವೃಕ್ಷದ ಸಮೀಪದಲ್ಲಿ ಚೈತ್ರಮಾಸದಲ್ಲಿ ಅಮಾವಾಸ್ಯೆಯ ದಿವಸ ಸಾಯಂಕಾಲದಲ್ಲಿ ರೇವತೀನಕ್ಷತ್ರದಲ್ಲಿ ಕೈವಲ್ಯ(ಕೇವಲ ಜ್ಞಾನ)ವನ್ನು ಪಡೆದನು. ಆಗಲೇ ಶ್ರೇಷ್ಠದೇವರ್ಕಳು ಬಂದು ನಾಲ್ಕನೆಯದಾದ ಕೇವಲಜ್ಞಾನಕಲ್ಯಾಣಪೂಜೆಯನ್ನೂ ನೆರವೇರಿಸಿದರು.

**ಜಯಾಖ್ಯಮುಖ್ಯಪಂಚಾಶದ್ಗಣಭೃದ್ಬೃಂಹಿತಾತ್ಮವಾಕ್ ।**
**ಸಹಸ್ರಪೂರ್ವಭೃದ್ವಂದ್ಯಃ ಖದ್ವಯದ್ವ್ಯಗ್ನಿವಾದ್ಯಧೀಟ್ ॥ ೩೭ ॥**

**ಖದ್ವಯೇಂದ್ರಿಯರಂಧ್ರಾಗ್ನಿಸಂಖ್ಯಾಲಕ್ಷಿತಶಿಕ್ಷಕಃ ।**
**ಶೂನ್ಯತ್ರಯತ್ರಿವಾರ್ಧ್ಯುಕ್ತತೃತೀಯಜ್ಞಾನಪೂಜಿತಃ ॥ ೩೮ ॥**

**ಶೂನ್ಯತ್ರಯೇಂದ್ರಿಯಜ್ಞಾತಕೇವಲಾವಗಮಾನ್ವಿತಃ ।**
**ಶೂನ್ಯತ್ರಯವಸೂದ್ದಿಷ್ಟವಿಕ್ರಿಯರ್ದ್ಧಿವಿಭೂಷಿತಃ ॥ ೩೯ ॥**

**ಶೂನ್ಯತ್ರಯೇಂದ್ರಿಯಪ್ರೋಕ್ತಮನಃಪರ್ಯಯಬೋಧನಃ ।**
**ಪಿಂಡೀಕೃತೋಕ್ತಷಟ್ಷಷ್ಟಿಸಹಸ್ರಮುನಿಪಾನ್ವಿತಃ ॥ ೪೦ ॥**

**ಸಲಕ್ಷಾಷ್ಟಸಹಸ್ರೋಕ್ತಸರ್ವಶ್ರ್ಯಾದ್ಯಾರ್ಯಿಕಾಗಣಃ ।**
**ದ್ವಿಲಕ್ಷಶ್ರಾವಕಾಭ್ಯರ್ಚ್ಯೋ ದ್ವಿಗುಣಶ್ರಾವಿಕಾಸ್ತುತಃ ॥ ೪೧ ॥**

**ಅಸಂಖ್ಯದೇವದೇವೀಡ್ಯಸ್ತಿರ್ಯಕ್ಸಂಖ್ಯಾತಸೇವಿತಃ ।**
**ಇತಿ ದ್ವಾದಶವಿಖ್ಯಾತಭವ್ಯಬೃಂದಾರಕಾಗ್ರಣೀಃ ॥ ೪೨ ॥**

**ಸದಸದ್ವಾದಸದ್ವಾದಮಾವಿಷ್ಕುರ್ವನ್ನನಂತಜಿತ್ ।**
**ವಿಹೃತ್ಯ ವಿಶ್ರುತಾನ್ ದೇಶಾನ್ ವಿನೇಯಾನ್ಯೋಜಯನ್ಪಥಿ ॥ ೪೩ ॥**

**ಸಮ್ಮೇದಗಿರಿಮಾಸಾದ್ಯ ವಿಹಾಯ ವಿಹೃತಿಂ ಸ್ಥಿತಃ ।**
**ಮಾಸಂ ಶತಾಧಿಕೈಃ ಷಡ್ಭಿಃ ಸಹಸ್ರೈರ್ಮುನಿಭಿಃ ಸಹ ॥ ೪೪ ॥**

**ಪ್ರತಿಮಾಯೋಗಧಾರೀ ಸನ್ನಮಾವಾಸ್ಯಾಗ್ರರಾತ್ರಿಭಾಕ್ ।**
**ತುರೀಯಧ್ಯಾನಯೋಗೇನ ಸಂಪ್ರಾಪತ್ಪರಮಂ ಪದಮ್ ॥ ೪೫ ॥**

ಜಯನೆಂಬವನೇ ಮೊದಲಾದ ಐವತ್ತು ಗಣಧರರಿಂದ ವೃದ್ಧಿಯನ್ನು ಹೊಂದಿದ ತನ್ನ ವಾಣಿಯುಳ್ಳವನೂ ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಜ್ಞರಾದ ಸಹಸ್ರ ಮುನಿಗಳಿಂದ ವಂದಿಸಲ್ಪಡತಕ್ಕವನೂ ಮೂರುಸಾವಿರದ ಎರಡುನೂರು ಮಂದಿ ವಾದಿಗಳಿಗೆ ಸ್ವಾಮಿಯೂ ಮೂವತ್ತೊಂಬತ್ತು ಸಾವಿರದೈನೂರು ಮಂದಿ ಶಿಕ್ಷಕ ಮುನಿಗಳುಳ್ಳವನೂ ನಾಲ್ಕುಸಾವಿರದ ಮೂರುನೂರುಮಂದಿ ಅವಧಿಜ್ಞಾನಿಗಳಿಂದ ಪೂಜಿತನೂ ಐದುಸಾವಿರಮಂದಿ ಕೇವಲಜ್ಞಾನಿಗಳಿಂದ ಯುಕ್ತನೂ ಎಂಟು ಸಾವಿರಮಂದಿ ವಿಕ್ರಿಯರ್ದ್ಧಿಯುಳ್ಳ ಮುನಿಗಳಿಂದ ವಿಭೂಷಿತನೂ ಐದುಸಾವಿರ ಮಂದಿ ಮನಃಪರ್ಯಯಜ್ಞಾನಿಗಳುಳ್ಳವನೂ ಒಟ್ಟು ಅರುವತ್ತಾರುಸಾವಿರಮಂದಿ ಮುನಿಮುಖ್ಯರೊಡನೆ ಕೂಡಿರುವವನೂ ಒಂದುಲಕ್ಷವೂ ಎಂಟುಸಾವಿರಮಂದಿ ಸರ್ವಶ್ರೀ ಮೊದಲಾದ ಆರ್ಯಿಕಾಸಮೂಹವುಳ್ಳವನೂ ಎರಡುಲಕ್ಷ ಶ್ರಾವಕರಿಂದ ಪೂಜಿಸಲ್ಪಡತಕ್ಕವನೂ ನಾಲ್ಕುಲಕ್ಷ ಶ್ರಾವಿಕೆಯರಿಂದ ಸ್ತುತಿಸಲ್ಪಟ್ಟವನೂ ಅಸಂಖ್ಯಾತ ದೇವದೇವಿಯರಿಂದ ಸ್ತುತಿಸಲ್ಪಡತಕ್ಕವನೂ ಸಂಖ್ಯಾತತಿರ್ಯಕ್ಪ್ರಾಣಿಗಳಿಂದ ಸೇವಿಸಲ್ಪಟ್ಟವನೂ ಹೀಗೆ ಪ್ರಖ್ಯಾತವಾದ ಹನ್ನೆರಡು ಭವ್ಯಸಮುದಾಯಕ್ಕೆ ಅಗ್ರಗಾಮಿಯೂ ಸದಸದ್ವಾದದಿಂದ ಉತ್ತಮವಾದವಾದ(ಸ್ಯಾದ್ವಾದ)ವನ್ನು ಪ್ರಕಟಿಸುವವನೂ ಆದ ಅನಂತಜಿತ್ತೀರ್ಥಂಕರನು ಪ್ರಖ್ಯಾತವಾದ ದೇಶಗಳನ್ನು ವಿಹರಿಸಿ ಭವ್ಯರನ್ನು ಸನ್ಮಾರ್ಗದಲ್ಲಿ ಸೇರಿಸುವವನಾಗಿ ಬಳಿಕ ವಿಹಾರವನ್ನು ತ್ಯಜಿಸಿ ಸಮ್ಮೇದಗಿರಿಯನ್ನು ಹೊಂದಿ ಆರುಸಾವಿರದ ನೂರು ಮಂದಿ ಮುನಿಗಳೊಡನೆ ಒಂದು ತಿಂಗಳವರೆಗೆ. ಪ್ರತಿಮಾಯೋಗಧಾರಿಯಾಗಿದ್ದು ಚೈತ್ರಮಾಸದ ಅಮಾವಾಸ್ಯೆಯ ದಿವಸ ಬೆಳಗಿನ ಜಾವದಲ್ಲಿ ನಾಲ್ಕನೆಯದಾದ ವ್ಯುಪರತಕ್ರಿಯಾನಿವೃತ್ತಿಯೆಂಬ ಶುಕ್ಲಧ್ಯಾನದ ಸಂಬಂಧದಿಂದ ಪರಮಪದವನ್ನು ಪಡೆದನು.

**ಸದ್ಯೋ ದ್ಯುಸತ್ಸಮೂಹೋಪಿ ಸಂಪ್ರಾಪ್ಯಾಂತ್ಯೇಷ್ಟಿಮಾದರಾತ್ ।**
**ವಿಧಾಯ ವಿಧಿವತ್ಸ್ವೌಕಃ ಸ್ವರ್ಲೋಕಂ ಸರ್ವತೋ ಯಯೌ ॥ ೪೬ ॥**

ಆಗಲೇ ಎಲ್ಲಾಕಡೆಗಳಿಂದಲೂ ದೇವರ್ಕಳ ಸಮೂಹವೂ ಆ ಸ್ಥಾನವನ್ನು ಸೇರಿ ವಿಧಿಪ್ರಕಾರವಾಗಿ ಪ್ರೀತಿಯಿಂದ ಅಂತ್ಯಪೂಜೆಯನ್ನು ಮಾಡಿ ತನ್ನ ಸ್ಥಾನವಾದ ಸ್ವರ್ಗಲೋಕಕ್ಕೆ ಹೋಯಿತು.

**ಕುನಯಘನತಮೋದ್ಯತ್ಕುಶ್ರುತೋಲೂಕವಿದ್ವಿಟ್ ।**
**ಸುನಯನಯಮಯೂಖೈರ್ವಿಶ್ವಮಾಶು ಪ್ರಕಾಶ್ಯ ।**
**ಪ್ರಕಟಪರಮದೀಪ್ತಿರ್ಬೋಧಯನ್ ಭವ್ಯಪದ್ಮಾನ್ ।**
**ಪ್ರದಹತು ಸ ಜಿನೇನೋನಂತಜಿದ್ದುಷ್ಕೃತಂ ವಃ ॥ ೪೭ ॥**

ಕುನಯವೆಂಬ ದಟ್ಟವಾದ ಕತ್ತಲೆಯಿಂದುತ್ಪನ್ನವಾದ ಕುಶಾಸ್ತ್ರವೆಂಬ ಗೂಬೆಗೆ ಶತ್ರುವೂ ಉತ್ತಮವಾದ ನಯಗಳೆಂಬ ಕಿರಣಗಳಿಂದ ಶೀಘ್ರವಾಗಿ ಲೋಕವನ್ನು ಪ್ರಕಾಶಪಡಿಸಿ ಪ್ರಕಟವಾದ ಉತ್ಕೃಷ್ಟಕಾಂತಿಯುಳ್ಳವನೂ ಆದ ಆ ಅನಂತಜಿನನೆಂಬ ಸೂರ್ಯನು ಭವ್ಯರೆಂಬ ಕಮಲಗಳನ್ನು ಅರಳಿಸುವವನಾಗಿ ನಿಮ್ಮಗಳ ಪಾಪವನ್ನು ದಹಿಸಲಿ.

**ಪ್ರಾಕ್ಪಾಲಕಃ ಪ್ರಥಿತಪದ್ಮರಥಃ ಪೃಥಿವ್ಯಾಂ ।**
**ಪಶ್ಚಾದ್ವಿನಿಶ್ಚಿತಮತಿಸ್ತಪಸಾಚ್ಯುತೇಂದ್ರಃ ।**
**ತಸ್ಮಾಚ್ಚ್ಯುತೋಭವದನಂತಜಿದಂತಕಾಂತೋ ।**
**ಯಃ ಸೋವತಾದ್ದ್ರುತಮನಂತಭವಾಂತಕಾದ್ವಃ ॥ ೪೮ ॥**

ಪ್ರಸಿದ್ಧನಾದ ಪದ್ಮರಥನು ಮೊದಲು ಪೃಥ್ವಿಯ ಪಾಲಕನಾಗಿದ್ದು ಬಳಿಕ ತಪಸ್ಸಿನಿಂದ ನಿಶ್ಚಿತವಾದ ಬುದ್ಧಿಯುಳ್ಳವನಾಗಿ ಅಚ್ಯುತೇಂದ್ರನಾದನು. ಅಲ್ಲಿಂದ ಚ್ಯುತನಾಗಿ ಮೃತ್ಯುವಿನಾಶಕನಾದ ಅನಂತಜಿನನಾದನು. ಅಂತಹ ಅನಂತಜಿನನು ಅನಂತ ಭವಗಳ ಯಮನ ದೆಸೆಯಿಂದ ನಿಮ್ಮಗಳನ್ನು ಶೀಘ್ರವಾಗಿ ಕಾಪಾಡಲಿ.

**ತತ್ರೈವ ಸುಪ್ರಭೋ ರಾಮಃ ಕೇಶವಃ ಪುರುಷೋತ್ತಮಃ ।**
**ವ್ಯಾವರ್ಣ್ಯತೇ ಭವೇಷೂಚ್ಚೈಸ್ತ್ರಿಷು ವೃತ್ತಕಮೇತಯೋಃ ॥ ೪೯ ॥**

ಆ ಅನಂತನಾಥಜಿನನ ಕಾಲದಲ್ಲೇ ಸುಪ್ರಭನೆಂಬ ಬಲಭದ್ರನೂ ಪುರುಷೋತ್ತಮನೆಂಬ ಕೇಶವನೂ ಇದ್ದರು. ಇವರುಗಳ ಮೂರು ಭವಗಳಲ್ಲಾದ ಚರಿತವನ್ನು ಚೆನ್ನಾಗಿ ವರ್ಣಿಸುವೆವು.

**ಏತಸ್ಮಿನ್ಭಾರತೇ ವರ್ಷೇ ಪೌದನಾಧಿಪತಿರ್ನೃಪಃ ।**
**ವಸುಷೇಣೋ ಮಹಾದೇವೀ ತಸ್ಯ ನಂದೇತ್ಯನಿಂದಿತಾ ॥ ೫೦ ॥**

ಈ ಭಾರತವರ್ಷದಲ್ಲಿ ವಸುಷೇಣನು ಪೌದನಪುರದ ದೊರೆಯಾಗಿದ್ದನು. ಅವನಿಗೆ ಅನಿಂದಿತಳಾದ ನಂದೆಯು ಮಹಾದೇವಿಯಾಗಿದ್ದಳು.

**ದೇವೀಪಂಚಶತೇಟ್ತಸ್ಯಾಂ ರಾಜಾ ಪ್ರಮದನಿರ್ಭರಃ ।**
**ರೇಮೇ ವಸಂತಮಂಜರ್ಯಾಂ ಚಂಚರೀಕ ಇವೋತ್ಸುಕಃ ॥ ೫೧ ॥**

ಐದುನೂರು ದೇವಿಯರ ಪತಿಯಾದ ಆ ವಸುಷೇಣರಾಜನು ಆ ನಂದೆಯಲ್ಲಿ ಹೆಚ್ಚಾದ ಪ್ರೀತಿಯುಳ್ಳವನಾಗಿ, ವಸಂತಋತುವಿನ ಹೂಗೊಂಚಲಿನಲ್ಲಿ ಕುತೂಹಲವುಳ್ಳ ಭ್ರಮರದಂತೆ, ಕ್ರೀಡಿಸಿದನು.



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಅಯೋಧ್ಯಾಪುರಿಯಲ್ಲಿ ಸಿಂಹಸೇನಮಹಾರಾಜಂಗಂ ಜಯಶ್ಯಾಮಾದೇವಿಗಂ ರೇವತೀನಕ್ಷತ್ರದಲ್ಲುದಯಿಸಿದ ಐವತ್ತು ಬಿಲ್ಲುತ್ಸೇಧಮನುಳ್ಳ ಮೂವತ್ತುಲಕ್ಷ ವರ್ಷಾಯುಷ್ಯಮನುಳ್ಳ ಸುವರ್ಣವರ್ಣಮನುಳ್ಳ ಇಕ್ಷ್ವಾಕುವಂಶಮನುಳ್ಳ ಕರಡಿಯ ಲಾಂಛನಮನುಳ್ಳ ಪಾತಾಳಯಕ್ಷಅನಂತಮತಿ–ಯಕ್ಷಯಕ್ಷಿಯರನುಳ್ಳ ಸಮ್ಮೇದಪರ್ವತದ ಸ್ವಯಂಭೂಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಅನಂತತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಮಲಯಾಧೀಶ್ವರೋ ನಾಮ್ನಾ ಕದಾಚಿಚ್ಚಂಡಶಾಸನಃ ।**
**ಆಜಗಾಮ ನೃಪಂ ದ್ರಷ್ಟುಂ ತತ್ಪುರಂ ಮಿತ್ರತಾಂ ಗತಃ ॥ ೫೨ ॥**

ಈ ವಸುಷೇಣನೊಡನೆ ಮಿತ್ರತೆಯನ್ನು ಹೊಂದಿರುವ ಮಲಯದೇಶದ ದೊರೆಯಾದ ಚಂಡಶಾಸನನೆಂಬವನು ಈ ರಾಜನನ್ನು ನೋಡುವುದಕ್ಕೋಸ್ಕರ ಆ ಪೌದನ ಪುರಕ್ಕೆ ಬಂದನು.

**ನಂದಾಸಂದರ್ಶನೇನಾಸೌ ಮೋಹಿತಃ ಪಾಪಪಾಕವಾನ್ ।**
**ಆಹೃತ್ಯ ತಾಮುಪಾಯೇನ ಸ್ವದೇಶಮಗಮತ್ಕುಧೀಃ ॥ ೫೩ ॥**

ನಂದೆಯನ್ನು ನೋಡಿದುದರಿಂದ ಮೋಹಿತನೂ ಪಾಪದ ಪರಿಪಾಕವುಳ್ಳವನೂ ದುರ್ಬುದ್ಧಿಯುಳ್ಳವನೂ ಆದ ಈ ಚಂಡಶಾಸನನು ಉಪಾಯದಿಂದ ಆಕೆಯನ್ನು ಅಪಹರಿಸಿ ಸ್ವದೇಶಕ್ಕೆ ಹೋದನು.

**ವಸುಷೇಣೋಽಪ್ಯಶಕ್ತತ್ವಾತ್ತತ್ಪರಾಭವದುಃಖಿತಃ ।**
**ಚಿಂತಾಂತಕಸಮಾಕೃಷ್ಯಮಾಣಪ್ರಾಣಃ ಸ್ಮೃತೇರ್ಬಲಾತ್ ॥ ೫೪ ॥**

**ಶ್ರೇಯೋಗಣಧರಂ ಪ್ರಾಪ್ಯ ಪ್ರವ್ರಜ್ಯಾಂ ಪ್ರತಿಪದ್ಯ ಸಃ ।**
**ಸಿಂಹನಿಷ್ಕ್ರೀಡಿತಾತ್ಯುಗ್ರಂ ತಪಃ ಕೃತ್ವಾ ಮಹಾಬಲಃ ॥ ೫೫ ॥**

**ಯದಿ ವಿದ್ಯೇತ ಚರ್ಯಾಯಾಃ ಫಲಮನ್ಯತ್ರ ಜನ್ಮನಿ ।**
**ಅಲಂಘ್ಯಶಾಸನಃ ಕಾಂತೋ ಭವಾಮೀತ್ಯಕರೋನ್ಮತಿಮ್ ॥ ೫೬ ॥**

ಅವನ ತಿರಸ್ಕಾರದಿಂದ ದುಃಖಿತನಾದ ಆ ವಸುಷೇಣನೂ ಅಶಕ್ತನಾಗಿದ್ದುದರಿಂದ ಚಿಂತೆಯೆಂಬ ಅಂತಕನಿಂದ ಎಳೆಯಲ್ಪಟ್ಟ ಪ್ರಾಣಗಳುಳ್ಳವನಾಗಿ ಸ್ಮೃತಿಯ ಬಲದಿಂದ ಶ್ರೇಯೋಗಣಧರನನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡು ಸಿಂಹನಿಷ್ಕ್ರೀಡಿತವೆಂಬ ಅತ್ಯುಗ್ರವಾದ ತಪಸ್ಸನ್ನು ಮಾಡಿ ಮಹಾಬಲಶಾಲಿಯಾಗಿ ''ತಪಶ್ಚರಣಕ್ಕೆ ಫಲವಿರುವುದಾದರೆ ಬೇರೆ ಜನ್ಮದಲ್ಲಿ ಅಲಂಘ್ಯವಾದ ಆಡಳಿತವುಳ್ಳವನೂ ಸುಂದರನೂ ಆಗುವೆನು'' ಎಂದು ಸಂಕಲ್ಪವನ್ನು ಮಾಡಿದನು. ನಿದಾನಶಲ್ಯವನ್ನು ಮಾಡಿದನೆಂದರ್ಥವು.

**ತತೋ ವಿಹಿತಸನ್ನ್ಯಾಸಃ ಸಹಸ್ರಾರಂ ಜಗಾಮ ಸಃ ।**
**ಅಷ್ಟಾದಶಸಮುದ್ರಾಯುರ್ದ್ವಾದಶಂ ಕಲ್ಪಮುತ್ತಮಮ್ ॥ ೫೭ ॥**

ಬಳಿಕ ಆ ವಸುಷೇಣಮುನಿಯು ಸನ್ನ್ಯಾಸವನ್ನು ಮಾಡಿ–ಸತ್ತು ಹನ್ನೆರಡನೆಯದಾದ ಸಹಸ್ರಾರವೆಂಬ ಉತ್ತಮಕಲ್ಪ–ಸ್ವರ್ಗವನ್ನು ಸೇರಿದನು. ಅಲ್ಲಿ ಹದಿನೆಂಟು ಸಾಗರೋಪಮಾಯುಷ್ಯವುಳ್ಳವನಾದನು.

**ಅಥ ಜಂಬೂಮತಿ ದ್ವೀಪೇ ಪ್ರಾಗ್ವಿದೇಹೇ ಮಹರ್ದ್ಧಿಕೇ ।**
**ನಂದನಾಖ್ಯೇ ಪುರೇ ಪ್ರಾಭೂನ್ನರಾಧೀಶೋ ಮಹಾಬಲಃ ॥ ೫೮ ॥**

ಬಳಿಕ ಈ ಜಂಬೂದ್ವೀಪದಲ್ಲಿ ವಿಶೇಷಸಂಪತ್ತಿಯುಳ್ಳ ಪೂರ್ವವಿದೇಹದಲ್ಲಿ ನಂದನವೆಂಬ ನಗರದಲ್ಲಿ ಮಹಾಬಲನೆಂಬ ದೊರೆಯಿದ್ದನು.

**ಪ್ರಜಾನಾಂ ಪಾಲಕೋ ಭೋಕ್ತಾ ಸುಖಾನಾಮತಿಧಾರ್ಮಿಕಃ ।**
**ಶ್ರೀಮಾನ್ ದಿಕ್ಪ್ರಾಂತವಿಶ್ರಾಂತಕೀರ್ತಿರಾರ್ತಿಹರೋರ್ಥಿನಾಮ್ ॥ ೫೯ ॥**

**ಸ ಕದಾಚಿಚ್ಛರೀರಾದಿಯಾಥಾತ್ಮ್ಯಾವಗಮೋದಯಾತ್ ।**
**ವಿರಕ್ತಸ್ತೇಷು ನಿರ್ವಾಣಪದವೀಪ್ರಾಪಣೋತ್ಸುಕಃ ॥ ೬೦ ॥**

**ದತ್ವಾ ರಾಜ್ಯಂ ಸ್ವಪುತ್ರಾಯ ಪ್ರಜಾಪಾಲಾರ್ಹದಂತಿಕೇ ।**
**ಗೃಹೀತಸಂಯಮಃ ಸಿಂಹನಿಷ್ಕ್ರೀಡಿತತಪಃ ಶ್ರಿತಃ ॥ ೬೧ ॥**

ಪ್ರಜೆಗಳ ಪಾಲಕನೂ ಸುಖಗಳ ಭೋಗಿಯೂ ಧಾರ್ಮಿಕನೂ ಶ್ರೀಮಂತನೂ ದಿಗಂತವಿಶ್ರಾಂತವಾದ ಕೀರ್ತಿಯುಳ್ಳವನೂ ಯಾಚಕರ ಮನಃಪೀಡಾವಿನಾಶಕನೂ ಆದ ಆ ಮಹಾಬಲನು ಒಂದಾನೊಂದು ಕಾಲದಲ್ಲಿ ಶರೀರಾದಿಗಳ ಯಥಾರ್ಥ ಸ್ವರೂಪದ ಜ್ಞಾನೋದಯದಿಂದ ಅವುಗಳಲ್ಲಿ ವಿರಕ್ತಿಯುಳ್ಳವನೂ ಕೈವಲ್ಯಪದವಿಯನ್ನು ಹೊಂದುವುದರಲ್ಲಿ ಕುತೂಹಲವುಳ್ಳವನೂ ಆಗಿ ತನ್ನ ಪುತ್ರನಿಗೆ ರಾಜ್ಯವನ್ನು ಕೊಟ್ಟು ಪ್ರಜಾಪಾಲನೆಂಬ ಅರ್ಹತ್ಪರಮೇಶ್ವರನ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಸಿಂಹನಿಷ್ಕ್ರೀಡಿತತಪಸ್ಸನ್ನು ಹೊಂದಿದನು.

**ಸನ್ನ್ಯಸ್ಯಾಂತೇ ಸಹಸ್ರಾರಂ ಪ್ರಾಪಾಷ್ಟಾದಶಸಾಗರ– ।**
**ಸ್ಥಿತಿಂ ಭೋಗಾಂಶ್ಚಿರಂ ಭುಕ್ತ್ವಾ ತದಂತೇ ಶಾಂತಮಾನಸಃ ॥ ೬೨ ॥**

**ಅಥೇಹ ಭಾರತೇ ದ್ವಾರವತ್ಯಾಂ ಸೋಮಪ್ರಭಪ್ರಭೋಃ ।**
**ಜಯವತ್ಯಾಮಭೂತ್ಸೂನುಃ ಸುರೂಪಃ ಸುಪ್ರಭಾಹ್ವಯಃ ॥ ೬೩ ॥**

ಕೊನೆಯಲ್ಲಿ ಸನ್ನ್ಯಾಸವನ್ನು ಹೊಂದಿ–ಸತ್ತು ಹದಿನೆಂಟು ಸಾಗರವರ್ಷ ಸ್ಥಿತಿಯುಳ್ಳ ಸಹಸ್ರಾರವೆಂಬ ಹನ್ನೆರಡನೆಯ ಸ್ವರ್ಗವನ್ನು ಪಡೆದು ಬಹುಕಾಲದವರೆಗೆ ಭೋಗಗಳನ್ನನುಭವಿಸಿ ಕೊನೆಯಲ್ಲಿ ಶಾಂತವಾದ ಮನಸ್ಸುಳ್ಳವನಾಗಿ ಬಂದು ಈ ಭಾರತವರ್ಷದಲ್ಲಿ ದ್ವಾರವತಿಯಲ್ಲಿ ಸೋಮಪ್ರಭರಾಜನಿಗೆ ಜಯವತಿಯಲ್ಲಿ ಉತ್ತಮರೂಪವುಳ್ಳ ಸುಪ್ರಭನೆಂಬ ಪುತ್ರನಾದನು.

**ಮಹಾಯತಿಃ ಸಮುತ್ತುಂಗಃ ಸುರವಿದ್ಯಾಧರಾಶ್ರಯಃ ।**
**ಶ್ವೇತಿಮಾನಂ ದಧತ್ಸೋಽಭಾದ್ವಿಜಯಾರ್ಧ ಇವಾಪರಃ ॥ ೬೪ ॥**

ಬಹು ದೀರ್ಘವೂ ಉನ್ನತವೂ ಸುರರಿಗೂ ವಿದ್ಯಾಧರರಿಗೂ ಆಶ್ರಯವೂ ಶುಭ್ರತ್ವವನ್ನು ಧರಿಸಿರುವುದೂ ಆದ ಬೇರೊಂದು ವಿಜಯಾರ್ಧಪರ್ವತವೋ ಎಂಬಂತೆ, ಬಹುವಿಶಾಲನೂ ಉನ್ನತನೂ ದೇವರ್ಕಳಿಗೂ ವಿದ್ಯಾಧರರಿಗೂ ಆಶ್ರಯನೂ ಆದ ಆ ಸುಪ್ರಭನು ಶುಭ್ರತ್ವವನ್ನು ಧರಿಸಿದವನಾಗಿ ಪ್ರಕಾಶಿಸಿದನು.

**ಕಲಂಕವಿಕಲಃ ಕಾಂತಃ ಸಂತತಂ ಸರ್ವಚಿತ್ತಹೃತ್ ।**
**ಪದ್ಮಾನಂದವಿಧಾಯೀತ್ಥಮತಿಶೇತೇ ವಿಧುಂ ಚ ಸಃ ॥ ೬೫ ॥**

ಕಲಂಕರಹಿತನೂ ಮನೋಹರನೂ ಯಾವಾಗಲೂ ಎಲ್ಲರ ಮನಸ್ಸನ್ನಪಹರಿಸುವವನೂ ಲಕ್ಷ್ಮಿಗೆ ಸಂತೋಷವನ್ನುಂಟುಮಾಡುವವನೂ ಆದ ಆ ಸುಪ್ರಭನು ಈ ರೀತಿಯಾಗಿ ಚಂದ್ರನಿಗಿಂತಲೂ ಮಿಗಿಲಾಗಿದ್ದನು.

**ತಸ್ಯೈವ ವಸುಷೇಣಾಖ್ಯಃ ಸೀತಾಯಾಂ ಪುರುಷೋತ್ತಮಃ ।**
**ತೋಕೋಜನಿ ಜನಾನಂದವಿಧಾಯೀ ವಿವಿಧೈರ್ಗುಣೈಃ ॥ ೬೬ ॥**

ಆ ಸೋಮಪ್ರಭನಿಗೆ ಸೀತಾದೇವಿಯೆಂಬ ಪತ್ನಿಯಲ್ಲಿ ವಸುಷೇಣನು ವಿವಿಧ ಗುಣಗಳಿಂದ ಜನರಿಗೆ ಸಂತೋಷವನ್ನುಂಟುಮಾಡುವ ಪುರುಷೋತ್ತಮನೆಂಬ ಪುತ್ರನಾಗಿ ಜನಿಸಿದನು.

**ಸೇವ್ಯಸ್ತೇಜಸ್ವಿಭಿಃ ಸರ್ವೈರವಿಲಂಘ್ಯಮಹೋನ್ನತಿಃ ।**
**ಮಹಾರತ್ನಸಮುದ್ಭಾಸೀ ಸುಮೇರುರಿವ ಸುಂದರಃ ॥ ೬೭ ॥**

ಅವನು ಎಲ್ಲಾ ತೇಜಸ್ವಿಗಳಿಂದ ಸೇವಿಸಲ್ಪಡತಕ್ಕವನೂ ಮೀರತಕ್ಕುದಲ್ಲದ ಮಹೋನ್ನತಿಯುಳ್ಳವನೂ ಮೇರುಪರ್ವತದಂತೆ ಮಹಾರತ್ನಗಳಿಂದ ಪ್ರಕಾಶಮಾನನೂ ಸುಂದರನೂ ಆಗಿದ್ದನು.

**ಶುಕ್ಲಕೃಷ್ಣತ್ವಿಷೌ ಲೋಕವ್ಯವಹಾರಪ್ರವರ್ತಕೌ ।**
**ಪಕ್ಷಾವಿವ ವಿಭಾತಃ ಸ್ಮ ಯುಕ್ತಿತೋ ರಾಮಕೇಶವೌ ॥ ೬೮ ॥**

ಶುಕ್ಲಕೃಷ್ಣಕಾಂತಿಯುಳ್ಳವೂ ಲೋಕವ್ಯವಹಾರವನ್ನು ನಡೆಯಿಸುವುವೂ ಆದ ಶುಕ್ಲಕೃಷ್ಣಪಕ್ಷಗಳಂತೆ, ಶುಕ್ಲಕೃಷ್ಣಕಾಂತಿಯುಳ್ಳವರೂ ಲೋಕವ್ಯವಹಾರವನ್ನು ನಡೆಯಿಸುವವರೂ ಆದ ಆ ಬಲಭದ್ರಕೇಶವರು ಕೂಡಿದ್ದುದರಿಂದ ಪ್ರಕಾಶಿಸಿದರು.

**ಪಂಚಾಶದ್ಧನುರುಚ್ಛ್ರಾಯೌ ತ್ರಿಂಶಲ್ಲಕ್ಷಸಮಾಯುಷೌ ।**
**ಸಮಂ ಸಮಸುಖೌ ಕಾಲಂ ಸಮಜೀಗಮತಾಂ ಚಿರಮ್ ॥ ೬೯ ॥**

ಅವರು ಐವತ್ತು ಧನುಸ್ಸುಗಳಷ್ಟು ಎತ್ತರವಾಗಿರುವವರೂ ಮೂವತ್ತು ಲಕ್ಷ ವರ್ಷಾಯುಷ್ಯವುಳ್ಳವರೂ ಸಮಾನವಾದ ಸುಖವುಳ್ಳವರೂ ಆಗಿ ಕೂಡಿದ್ದು ಬಹು ಕಾಲವನ್ನು ಕಳೆದರು.

**ಅಥ ಭ್ರಾಂತ್ವಾ ಭವೇ ದೀರ್ಘಂ ಪ್ರಾಕ್ತನಶ್ಚಂಡಶಾಸನಃ ।**
**ಚಂಡಾಂಶುರಿವ ಚಂಡೋಽಭೂದ್ದಂಡಿತಾರಾತಿಮಂಡಲಃ ॥ ೬೦ ॥**

**ಕಾಶೀದೇಶೇ ನೃಪೋ ವಾರಾಣಸೀನಗರನಾಯಕಃ ।**
**ಮಧುಸೂದನಶಬ್ದಾಖ್ಯೋ ವಿಖ್ಯಾತಬಲವಿಕ್ರಮಃ ॥ ೬೧ ॥**

ಬಳಿಕ ಸೂರ್ಯನಂತೆ ಉಗ್ರನಾದ ಆ ಮೊದಲಿನ ಚಂಡಶಾಸನನು ಬಹುಕಾಲದ ವರೆಗೆ ಸಂಸಾರದಲ್ಲಿ ಸುತ್ತಿಬಂದು ವೈರಿಸಮೂಹವನ್ನು ದಂಡಿಸುವವನೂ ಕಾಶೀ ದೇಶದಲ್ಲಿ ವಾರಾಣಸೀನಗರಾಧಿಪತಿಯೂ ಪ್ರಖ್ಯಾತವಾದ ಬಲಪರಾಕ್ರಮಿಯೂ ಆದ ಮಧುಸೂದನನೆಂಬ ರಾಜನಾದನು.

**ತೌ ತದೋದಯಿನೌ ಶ್ರುತ್ವಾ ನಾರದಾದಸಹಿಷ್ಣುಕಃ ।**
**ತಮೇವ ಪ್ರೈಷಯತ್ವಾರ್ಥ್ಯಗಜರತ್ನಾದಿಕಂ ಕರಮ್ ॥ ೬೨ ॥**

ಅವನು ಆಗ ಆ ಬಲಭದ್ರಕೇಶವರು ಉನ್ನತಶೀಲರಾಗಿದ್ದಾರೆಂದು ನಾರದನಿಂದ ಕೇಳಿ ಅಸಹನವುಳ್ಳವನಾಗಿ ಗಜರತ್ನ ಮೊದಲಾದ ಕರವನ್ನು(ತೆರಿಗೆಯನ್ನು)ಕೇಳಲು ಆ ನಾರದನನ್ನೇ ಕಳುಹಿದನು.

**ತದಾಕರ್ಣನಕಾಲಾಂತವಾತೋದ್ಧೂತಮನೋಂಬುಧಿಃ ।**
**ಯುಗಾಂತಾಂತಕದುಷ್ಪ್ರೇಕ್ಷ್ಯಶ್ಚುಕ್ರೋಧ ಪುರುಷೋತ್ತಮಃ ॥ ೬೩ ॥**

ಆ ಮಾತನ್ನು ಕೇಳಿದುದರಿಂದ ಪ್ರಳಯಕಾಲದ ಗಾಳಿಯಿಂದ ಕಂಪಿತವಾದ ಮನ ವೆಂಬ ಸಮುದ್ರವುಳ್ಳವನೂ ಪ್ರಳಯಕಾಲದ ಯಮನಂತೆ ಕಷ್ಟದಿಂದ ನೋಡಲ್ಪಡ ತಕ್ಕವನೂ ಆದ ಪುರುಷೋತ್ತಮನು ಕೋಪಗೊಂಡನು.

**ಸುಪ್ರಭೋಽಪಿ ಪ್ರಭಾಜಾಲಂ ವಿಕಿರನ್ ದಿಕ್ಷು ಚಕ್ಷುಷೋಃ ।**
**ಜ್ವಾಲಾವಲೀಮಿವ ಕ್ರೋಧಪಾವಕಾರ್ಚಿಸ್ತತಾಶಯಃ ॥ ೬೪ ॥**

ಕ್ರೋಧವೆಂಬ ಅಗ್ನಿಯ ಜ್ವಾಲೆಯಿಂದ ವ್ಯಾಪ್ತವಾದ ಅಭಿಪ್ರಾಯವುಳ್ಳ ಸುಪ್ರಭ ನೂ ದಿಕ್ಕುಗಳಲ್ಲಿ ಜ್ವಾಲಾಸಮೂಹವನ್ನು ಎರಚುತ್ತಾನೋ ಎನ್ನುವಂತೆ ನೇತ್ರಗಳ ಪ್ರಭಾಸಮೂಹವನ್ನು ಎರಚುವವನಾಗಿ ಕೋಪಗೊಂಡನು.

**ನ ಜ್ಞಾತಃ ಕಃ ಕರೋ ನಾಮ ಕಿಂ ಕರೋ ಯೇನ ಭುಜ್ಯತೇ ।**
**ತಂ ದಾಸ್ಯಾಮಃ ಸ್ಫುರತ್ಖಡ್ಗಂ ಶಿರಸಾಸೌ ಪ್ರತೀಚ್ಛತು ॥ ೬೫ ॥**

**ಏತು ಗೃಹ್ಣಾತು ಕೋ ದೋಷ ಇತ್ಯಾವಿಷ್ಕೃತತೇಜಸೌ ।**
**ಉಭಾವವೋಚತಾಮುಚ್ಚೈರ್ನಾರದಂ ಪರುಷೋಕ್ತಿಭಿಃ ॥ ೬೬ ॥**

"ಕರವೆಂಬುದಾವುದು ? ಗೊತ್ತಾಗಲಿಲ್ಲ. ಕರವೆಂದರೆ ಊಟಮಾಡುವ ಹಸ್ತ ವೋ ? ಪ್ರಕಾಶಿಸುತ್ತಿರುವ ಖಡ್ಗವುಳ್ಳ ಅದನ್ನು ಕೊಡುವೆವು. ಇವನು ಮಸ್ತಕದಿಂದ ಆಂತುಕೊಳ್ಳಲಿ. ಬರಲಿ. ತೆಗೆದುಕೊಳ್ಳಲಿ. ದೋಷವಾವುದು ?" ಈ ರೀತಿಯಾಗಿ ಪ್ರಕಟಗೊಳಿಸಿದ ತೇಜಸ್ಸುಳ್ಳ ಪುರುಷೋತ್ತಮ ಸುಪ್ರಭರೀರ್ವರೂ ಬಲುಬಿರು ಸಾದ ನುಡಿಗಳಿಂದ ನಾರದನನ್ನು ಕುರಿತು ಹೇಳಿದರು.

**ತತಸ್ತದವಗಮ್ಯಾಯಾತ್ಸಂಕ್ರುದ್ಧೋ ಮಧುಸೂದನಃ ।**
**ಹಂತುಂ ತೌ ತೌ ಚ ಹಂತುಂ ತಂ ರೋಷಾದಗಮತಾಂ ಪ್ರತಿ ॥ ೬೭ ॥**

ಬಳಿಕ ಆ ವಿಷಯವನ್ನು ತಿಳಿದು ಬಹುಕೋಪಗೊಂಡ ಮಧುಸೂದನನು ಅವರನ್ನು ಕೊಲ್ಲುವುದಕ್ಕೋಸ್ಕರ ಹೋದನು. ಅವರೂ ಕೋಪದಿಂದ ಅವನನ್ನು ಕೊಲ್ಲುವುದಕ್ಕೋಸ್ಕರ ಇದಿರಾಗಿ ಹೋದರು.

**ಸೇನಯೋರುಭಯೋರಾಸೀತ್ಸಂಗ್ರಾಮಃ ಸಂಹರನ್ನಿವ ।**
**ಸರ್ವಾನಹಂಸ್ತದಾರಿಂ ತಚ್ಚಕ್ರೇಣ ಪುರುಷೋತ್ತಮಃ ॥ ೬೮ ॥**

ಉಭಯ ಸೈನ್ಯಗಳಿಗೆ, ಎಲ್ಲರನ್ನು ಸಂಹರಿಸುತ್ತದೋ ಎನ್ನುವಂತೆ, ಯುದ್ಧ ವಾಯಿತು. ಮಧುಸೂದನನು ತನ್ನ ಚಕ್ರವನ್ನು ಪ್ರಯೋಗಿಸಿದನು. ಆಗ ಪುರು ಷೋತ್ತಮನು ಆ ಮಧುಸೂದನನ ಚಕ್ರದಿಂದಲೇ ಅವನನ್ನು ಕೊಂದನು.

**ತ್ರಿಖಂಡಾಧಿಪತಿತ್ವಂ ತೌ ಚತುರ್ಥೌ ರಾಮಕೇಶವೌ ।**
**ಜ್ಯೋತಿರ್ಲೋಕಾಧಿನಾಥತ್ವಮನ್ವಭೂತಾಮಿವೇಂದ್ವಿನೌ ॥ ೬೯ ॥**

ಚಂದ್ರಸೂರ್ಯರು ಜ್ಯೋತಿರ್ಲೋಕದ ಆಧಿಪತ್ಯವನ್ನು ಅನುಭವಿಸುವಂತೆ, ನಾಲ್ಕನೆಯ ಬಲಭದ್ರಕೇಶವರಾದ ಆ ಸುಪ್ರಭಪುರುಷೋತ್ತಮರು ತ್ರಿಖಂಡಾಧಿ ಪತಿತ್ವವನ್ನು ಅನುಭವಿಸಿದರು.

**ಕೇಶವೋ ಜೀವಿತಾಂತೇಗಾದವಧಿಸ್ಥಾನಮಾಯುಷಾಮ್ ।**
**ಸುಪ್ರಭಸ್ತದ್ವಿಯೋಗೋತ್ಥಶೋಕಾನಲಸಮನ್ವಿತಃ ॥ ೭೦ ॥**

**ಪ್ರಬೋಧಿತಃ ಪ್ರಸನ್ನಾತ್ಮಾ ಸೋಮಪ್ರಭಜಿನೇಶಿನಾ ।**
**ದೀಕ್ಷಿತ್ವಾ ಶ್ರೇಣಿಮಾರುಹ್ಯ ಸ ಮೋಕ್ಷಮುಗಮತ್ಸುಧೀಃ ॥ ೭೧ ॥**

ಕೇಶವನಾದ ಪುರುಷೋತ್ತಮನು ತನ್ನ ಜೀವಿತದ ಕೊನೆಯಲ್ಲಿ ಸತ್ತು ಆಯುಷ್ಯ ಗಳ ಅವಧಿಸ್ಥಾನವನ್ನು (ಏಳನೆಯ ನರಕವನ್ನು) ಹೊಂದಿದನು. ಅವನ ವಿಯೋಗ ದಿಂದುಂಟಾದ ಶೋಕಾಗ್ನಿಯುಕ್ತನಾದ ಆ ಸುಪ್ರಭ–ಬಲಭದ್ರನು ಸೋಮಪ್ರಭ ಜಿನೇಶ್ವರರಿಂದ ಚೆನ್ನಾಗಿ ಬೋಧಿಸಲ್ಪಟ್ಟು ಪ್ರಸನ್ನವಾದ ಆತ್ಮನುಳ್ಳವನೂ ಪ್ರಾಜ್ಞನೂ ಆಗಿ ದೀಕ್ಷೆಯನ್ನು ಪಡೆದು ಕ್ಷಪಕಶ್ರೇಣಿಯನ್ನು ಹತ್ತಿ ಮೋಕ್ಷವನ್ನು ಪಡೆದನು.

**ಸಂಭೂಯ ಪೌದನಪುರೇ ವಸುಷೇಣನಾಮಾ ।**
**ಕೃತ್ವಾ ತಪಃ ಸುರವರೋಜನಿ ಶುಕ್ಲಲೇಶ್ಯಃ ।**
**ತಸ್ಮಾಚ್ಚ್ಯುತೋರ್ಧಭರತಾಧಿಪತಿರ್ಹತಾರಿಃ ।**
**ಪ್ರಾಪಾಂತಿಮಾಂ ಕ್ಷಿತಿಮಧಃ ಪುರುಷೋತ್ತಮಾಖ್ಯಃ ॥ ೭೨ ॥**

ಪುರುಷೋತ್ತಮನೆಂಬ ಕೇಶವನು ಮೊದಲು ಪೌದನಪುರದಲ್ಲಿ ವಸುಷೇಣ ನೆಂಬ ದೊರೆಯಾಗಿ ಜನಿಸಿ ತಪಸ್ಸನ್ನು ಮಾಡಿ ಸತ್ತು ಸ್ವರ್ಗದಲ್ಲಿ ಶುಕ್ಲಲೇಶ್ಯೆಯುಳ್ಳ ದೇವೋತ್ತಮನಾಗಿ ಹುಟ್ಟಿದನು. ಅಲ್ಲಿಂದ ಚ್ಯುತನಾಗಿ ಅರ್ಧ ಭರತಖಂಡದ ಅಧಿ ಪತಿಯಾಗಿ ಶತ್ರುವನ್ನು ಕೊಂದು ಕೆಳಗೆ ಕೊನೆಯ ಭೂಮಿಯನ್ನು–ಏಳನೆಯ ನರಕ ವನ್ನು ಹೊಂದಿದನು.

**ಮಲಯಾಧಿಪಚಂಡಶಾಸನೋ । ನೃಪತಿಃ ಪಾಪಮತಿರ್ಭ್ರಮಂಶ್ಚಿರಮ್ ।**
**ಭವವಾರಿನಿಧಾವಭೂದಧಃ । ಖಲು ಗಂತಾ ಮಧುಸೂದನಾಭಿಧಃ ॥**

ಮಧುಸೂದನನೆಂಬ ಪ್ರತಿನಾರಾಯಣನು ಮೊದಲು ಮಲಯ ದೇಶಾಧಿಪತಿ ಯಾದ ಚಂಡಶಾಸನನೆಂಬ ನರಪತಿಯಾಗಿದ್ದು ಪಾಪಬುದ್ಧಿಯುಳ್ಳವನಾಗಿ ಸತ್ತು ಬಹುಕಾಲದವರೆಗೆ ಭವಸಮುದ್ರದಲ್ಲಿ ತಿರುಗಿ ಮಧುಸೂದನನಾಗಿ ನಾರಾಯಣ ನಿಂದ ಕೊಲ್ಲಲ್ಪಟ್ಟು ಕೆಳಗೆ–ನರಕಕ್ಕೆ ಹೋಗುವವನಾದನು.

**ಮಹಾಬಲಾಖ್ಯಃ ಪುರಿ ನಂದನೇ ನೃಪೋ ।**
**ಮಹಾತಪಾ ದ್ವಾದಶಕಲ್ಪಜಃ ಸುರಃ ।**
**ಪುನರ್ಬಲಃ ಸುಪ್ರಭಸಂಜ್ಞಯಾಗಮತ್ ।**
**ಪರಂ ಪದಂ ಪ್ರಾಪ್ತಸಮಸ್ತಸಂಗಕಃ ॥ ೭೪ ॥**

ನಂದನಪುರದಲ್ಲಿ ಮಹಾಬಲನೆಂಬ ರಾಜನು ಮಹಾತಪಸ್ವಿಯಾಗಿದ್ದು ಸತ್ತು ಹನ್ನೆರಡನೆಯ ಸ್ವರ್ಗದಲ್ಲಿ ದೇವನಾದನು. ಮತ್ತೆ ಸುಪ್ರಭನೆಂಬ ಹೆಸರಿನಿಂದ ಬಲಭದ್ರನಾಗಿ ಸಕಲಪರಿಗ್ರಹಗಳನ್ನು ದೂರಮಾಡಿ ಮುಕ್ತಿಯನ್ನು ಪಡೆದನು.

**ಸಾಮ್ರಾಜ್ಯಸಾರಸೌಖ್ಯಂ ಸುಪ್ರಭ- ।**
**ಪುರುಷೋತ್ತಮೌ ಸಮಂ ಭುಕ್ತ್ವಾ ।**
**ಪ್ರಥಮೋ ನಿರ್ವಾಣಮಗಾ- ।**
**ದಪರೋಽಧೋ ವೃತ್ತಿವೈಚಿತ್ರ್ಯಾತ್** ॥ ೮೫ ॥

ಸುಪ್ರಭನೂ ಪುರುಷೋತ್ತಮನೂ ಸಾಮ್ರಾಜ್ಯದ ಸಾರವಾದ ಸೌಖ್ಯವನ್ನು ಕೂಡಿ ಅನುಭವಿಸಿ ನಡೆವಳಿಕೆಯ ವಿಚಿತ್ರತೆಯಿಂದ ಸುಪ್ರಭನು ಕೈವಲ್ಯವನ್ನು ಪಡೆದನು. ಪುರುಷೋತ್ತಮನು ಕೆಳಕ್ಕೆ–ನರಕಕ್ಕೆ ಹೋದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಅನಂತತೀರ್ಥಕರ ಸುಪ್ರಭ ಪುರುಷೋತ್ತಮ ಮಧುಸೂದನಪುರಾಣಂ ನಾಮ ಷಷ್ಟಿತಮಂ ಪರ್ವ** ॥

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಅನಂತತೀರ್ಥಂಕರ, ಸುಪ್ರಭ, ಪುರುಷೋತ್ತಮ, ಮಧುಸೂದನಪುರಾಣವೆಂಬ
ಅರವತ್ತನೆಯ ಪರ್ವವು ಸಮಾಪ್ತವಾದುದು.

---

# ಅಥ ಧರ್ಮತೀರ್ಥಕರಪುರಾಣಂ

**ಧರ್ಮೋ ಯಸ್ಮಿನ್ಸಮುದ್ಭೂತಾ ಧರ್ಮಾ ದಶ ಸುನಿರ್ಮಲಾಃ ।**
**ಸ ಧರ್ಮಃ ಶರ್ಮ ಸಂದದ್ಯಾದಧರ್ಮಮಪಹತ್ಯ ನಃ ॥ ೧ ॥**

ಯಾವ ಧರ್ಮತೀರ್ಥಂಕರನಲ್ಲಿ ಚೆನ್ನಾಗಿ ನಿರ್ಮಲಗಳಾದ ದಶಧರ್ಮಗಳು ಉತ್ಪನ್ನವಾದುವೋ ಅಂತಹ ಧರ್ಮತೀರ್ಥಂಕರನು ಅಧರ್ಮವನ್ನು ನಾಶಮಾಡಿ ನಮ್ಮಗಳಿಗೆ ಸುಖವನ್ನೀಯಲಿ.

**ಧಾತಕೀಖಂಡಪ್ರಾಗ್ಭಾಗೇ ಪ್ರಾಗ್ವಿದೇಹೇ ಸರಿತ್ತಟೇ ।**
**ದಕ್ಷಿಣೇ ವತ್ಸವಿಷಯೇ ಸುಸೀಮಾನಗರಂ ಮಹತ್ ॥ ೨ ॥**

ಧಾತಕೀಖಂಡದ ಪೂರ್ವಭಾಗದಲ್ಲಿ ಪೂರ್ವವಿದೇಹದಲ್ಲಿ ನದೀತೀರದಲ್ಲಿ ದಕ್ಷಿಣದಿಕ್ಕಿನಲ್ಲಿರುವ ವತ್ಸದೇಶದಲ್ಲಿ ದೊಡ್ಡದಾದ ಸುಸೀಮಾನಗರವಿದೆ.

**ಪತಿರ್ದಶರಥಸ್ತಸ್ಯ ಪ್ರಜ್ಞಾವಿಕ್ರಮದೈವವಾನ್ ।**
**ಸ್ವವಶೀಕೃತಸರ್ವಾರಿರ್ನಿರ್ವ್ಯಾಯಾಮಃ ಶಮೇ ಸ್ಥಿತಃ ॥ ೩ ॥**

ಆ ನಗರಕ್ಕೆ ಬುದ್ಧಿ ಪರಾಕ್ರಮ ಅದೃಷ್ಟ ಇವುಗಳುಳ್ಳವನೂ ಎಲ್ಲಾ ಶತ್ರುಗಳನ್ನು ತನ್ನ ವಶಪಡಿಸಿಕೊಂಡಿರುವವನೂ ಪರಿಶ್ರಮವಿಲ್ಲದವನೂ ಶಾಂತಿಯಲ್ಲಿರುವವನೂ ಆದ ದಶರಥನು ದೊರೆಯಾಗಿದ್ದನು.

**ಸುಖಾನಿ ಧರ್ಮಸಾರಾಣಿ ಪ್ರಜಾಪಾಲನಲಾಲಸಃ ।**
**ಬಂಧುಭಿಶ್ಚ ಸುಹೃದ್ಭಿಶ್ಚ ಸಹ ವಿಸ್ರಬ್ಧಮನ್ವಭೂತ್ ॥ ೪ ॥**

ಅವನು ಪ್ರಜಾಪರಿಪಾಲನದಲ್ಲಿ ಪ್ರೀತಿಯುಳ್ಳವನಾಗಿ ಬಂಧುಗಳೊಡನೆಯೂ ಸ್ನೇಹಿತರೊಡನೆಯೂ ಧರ್ಮದ ಸಾರವಾದ ಸುಖಗಳನ್ನು ಚೆನ್ನಾಗಿ ಅನುಭವಿಸಿದನು.

**ಮಾಧವೇ ಶುಕ್ಲಪಕ್ಷಾಂತೇ ಸಂಪ್ರವೃತ್ತಜನೋತ್ಸವೇ ।**
**ಚಂದ್ರೋಪರಾಗಮಾಲೋಕ್ಯ ಸದ್ಯೋ ನಿರ್ವಿಣ್ಣಮಾನಸಃ ॥ ೫ ॥**

**ಕಾಂತಃ ಕುವಲಯಾಹ್ಲಾದೀ ಕಲಾಭಿಃ ಪರಿಪೂರ್ಣವಾನ್ ।**
**ಈದೃಶಸ್ಯಾಪಿ ಚೇದೀದೃಗವಸ್ಥಾನ್ಯಸ್ಯ ಕಾ ಗತಿಃ ॥ ೬ ॥**

ಚೈತ್ರ ಶುಕ್ಲ ಪೌರ್ಣಮಿಯ ದಿವಸದಲ್ಲಿ ನಡೆದ ಜನರ ಉತ್ಸವಸಮಯದಲ್ಲಿ ದಶರಥರಾಜನು ಚಂದ್ರಗ್ರಹಣವನ್ನು ನೋಡಿ ತತ್ಕ್ಷಣದಲ್ಲಿ ವಿರಕ್ತವಾದ ಮನಸ್ಸುಳ್ಳವನಾಗಿ "ಚಂದ್ರನು ಮನೋಹರನೂ ನೀಲೋತ್ಪಲಗಳನ್ನು ಅರಳಿಸುವವನೂ ಭೂಮಂಡಲಕ್ಕೆ ಆನಂದವನ್ನುಂಟುಮಾಡುವವನೂ ಕಲೆಗಳಿಂದ ಪರಿಪೂರ್ಣನೂ ಆಗಿರುತ್ತಾನೆ. ಅಂಥವನಿಗೂ ಇಂತಹ ಅವಸ್ಥೆಯಾದರೆ ಬೇರೆಯವನ ಗತಿ ಯಾವುದು ?"

**ಇತಿ ಮತ್ವಾ ಸುತೇ ರಾಜ್ಯಭಾರಂ ಕೃತ್ವಾ ಮಹಾರಥೇ ।**
**ನೈಸ್ಸಂಗ್ಯಾಲ್ಲಾಘವೋಪೇತಮಂಗೀಕೃತ್ಯ ಸ ಸಂಯಮಮ್ ॥ ೭ ॥**

**ಏಕಾದಶಾಂಗಧಾರೀ ಸನ್ ಭಾವಿತದ್ವ್ಯಷ್ಟಕಾರಣಃ ।**
**ನಿಬದ್ಧತೀರ್ಥಕೃತ್ಪುಣ್ಯಃ ಸ್ವಾರಾಧ್ಯಾಂತೇ ವಿಶುದ್ಧಧೀಃ ॥ ೮ ॥**

**ತ್ರಯಸ್ತ್ರಿಂಶತ್ಸಮುದ್ರಾಯುರೇಕಹಸ್ತತನೂಚ್ಛ್ರಿತಿಃ ।**
**ಪಂಚರಂಧ್ರಚತುರ್ಮಾಸದಿನೈರುಚ್ಛ್ವಾಸವಾನ್ಸನಾಕ್ ॥ ೯ ॥**

**ಲೋಕನಾಡ್ಯಂತರವ್ಯಾಪಿವಿಮಲಾವಧಿಬೋಧನಃ ।**
**ತತ್ಕ್ಷೇತ್ರವಿಕ್ರಿಯಾತೇಜೋಬಲಸಂಪತ್ಸಮನ್ವಿತಃ ॥ ೧೦ ॥**

**ತ್ರಿಸಹಸ್ರಾಧಿಕತ್ರಿಂಶತ್ಸಹಸ್ರಾಬ್ದೈಃ ಸಮಾಹರನ್ ।**
**ಮುಹೂರ್ತೇ ಮಾನಸಾಹಾರಂ ಶುಕ್ಲಲೇಶ್ಯಾದ್ವಯಸ್ಥಿರಮ್ ॥ ೧೧ ॥**

**ಸರ್ವಾರ್ಥಸಿದ್ಧೌ ಸತ್ಸೌಖ್ಯಂ ನಿಷ್ಪ್ರವೀಚಾರಮನ್ವಭೂತ್ ।**
**ತತೋ ನೃಲೋಕಮೇತಸ್ಮಿನ್ಪುಣ್ಯಭಾಜ್ಯಾಗಮಿಷ್ಯತಿ ॥ ೧೨ ॥**

**ದ್ವೀಪೇಽಸ್ಮಿನ್ಭಾರತೇ ರತ್ನಪುರಾಧೀಶೋ ಮಹೀಪತೇಃ ।**
**ಕುರುವಂಶಸ್ಯ ಗೋತ್ರೇಣ ಕಾಶ್ಯಪಸ್ಯ ಮಹೌಜಸಃ ॥ ೧೩ ॥**

**ದೇವ್ಯಾ ಭಾನುಮಹಾರಾಜಸಂಜ್ಞಸ್ಯ ವಿಪುಲಶ್ರಿಯಃ ।**
**ಸುಪ್ರಭಾಯಾಃ ಸುರಾನೀತವಸುಧಾರಾದಿಸಂಪದಃ ॥ ೧೪ ॥**

**ಸಿತಪಕ್ಷತ್ರಯೋದಶ್ಯಾಂ ವೈಶಾಖೇ ರೇವತೀವಿಧೌ ।**
**ನಿಶಾಂತೇ ಷೋಡಶಸ್ವಪ್ನಾಃ ಸಮಭೂವನ್ ದೃಶೋಃ ಸ್ಫುಟಾಃ ॥ ೧೫ ॥**

ಈ ರೀತಿಯಾಗಿ ತಿಳಿದು ಅವನು ಮಹಾರಥನೆಂಬ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ನಿಸ್ಸಂಗತ್ವದಿಂದ ಹಗುರವಾದ ಸಂಯಮವನ್ನು ಅಂಗೀಕರಿಸಿ–ಮುನಿಯಾಗಿ ಏಕಾದಶಾಂಗಶಾಸ್ತ್ರವನ್ನು ಧರಿಸಿದವನೂ ಷೋಡಶಕಾರಣಗಳನ್ನು ಭಾವಿಸಿದವನೂ ತೀರ್ಥಕರನಾಮವೆಂಬ ಪುಣ್ಯಕರ್ಮವನ್ನು ಕಟ್ಟಿಕೊಂಡವನೂ ವಿಶುದ್ಧವಾದ ಬುದ್ಧಿಯುಳ್ಳವನೂ ಆಗಿ ಕೊನೆಯಲ್ಲಿ ಆತ್ಮಾರಾಧನೆಯನ್ನು ಮಾಡಿ ಮಡಿದು ಸರ್ವಾರ್ಥಸಿದ್ಧಿಯಲ್ಲಿ ಮೂವತ್ತುಮೂರುಸಾಗರ ವರ್ಷಾಯುಷ್ಯವುಳ್ಳವನೂ ಒಂದು ಮೊಳದಷ್ಟು ಎತ್ತರವಾದ ಶರೀರವುಳ್ಳವನೂ ನಾಲ್ಕುನೂರ ತೊಂಬತ್ತೈದು ದಿನಗಳಿಂದ ಸ್ವಲ್ಪ ಶ್ವಾಸೋಚ್ಛ್ವಾಸವನ್ನು ಬಿಡುವವನೂ ಲೋಕನಾಡಿಯವರೆಗೆ ವ್ಯಾಪಿಸುವ ನಿರ್ಮಲವಾದ ಅವಧಿಜ್ಞಾನವುಳ್ಳವನೂ ಆ ಕ್ಷೇತ್ರದವರೆಗೆ ವ್ಯಾಪಿಸುವ ವಿಕ್ರಿಯಾತೇಜೋ ಬಲಸಂಪತ್ತಿಯಿಂದ ಕೂಡಿದವನೂ ಮೂವತ್ತುಮೂರುಸಾವಿರ ವರುಷಗಳಿಗೊಮ್ಮೆ ಒಂದು ಮುಹೂರ್ತಕಾಲದಲ್ಲಿ ಮಾನಸಾಹಾರವನ್ನು ತೆಗೆದುಕೊಳ್ಳುವವನೂ ದ್ರವ್ಯಶುಕ್ಲ ಭಾವಶುಕ್ಲಲೇಶ್ಯೆಗಳುಳ್ಳವನೂ ಆದ ಅಹಮಿಂದ್ರನಾಗಿ ಜನಿಸಿ ಪ್ರವೀಚಾರವಿಲ್ಲದ ಉತ್ತಮಸುಖವನ್ನನುಭವಿಸಿದನು. ಪುಣ್ಯಭಾಗಿಯಾದ ಇವನು ಸರ್ವಾರ್ಥಸಿದ್ಧಿಯಿಂದ ಚ್ಯುತನಾಗಿ ಮನುಷ್ಯಲೋಕಕ್ಕೆ ಬರುವವನಾಗುತ್ತಿರಲು ಈ ಜಂಬೂದ್ವೀಪದ ಭಾರತವರ್ಷದಲ್ಲಿ ರತ್ನಪುರಾಧೀಶ್ವರನೂ ಕುರುವಂಶಜನೂ ಗೋತ್ರದಿಂದ ಕಾಶ್ಯಪನೂ ಮಹಾಕಾಂತಿಯುಳ್ಳವನೂ ಅಧಿಕಸಂಪತ್ತಿಯುಳ್ಳವನೂ ಆದ ಭಾನುಮಹಾರಾಜನ ಪತ್ನಿಯೂ ದೇವರ್ಕಳು ಸುರಿದ ವಸುಧಾರಾದಿಸಂಪತ್ತಿಯುಳ್ಳವಳೂ ಆದ ಸುಪ್ರಭಾದೇವಿಯ ನೇತ್ರಗಳಿಗೆ ವೈಶಾಖ ಮಾಸದ ಶುಕ್ಲಪಕ್ಷದ ತ್ರಯೋದಶೀತಿಥಿಯಲ್ಲಿ ರೇವತೀನಕ್ಷತ್ರದಲ್ಲಿ ಬೆಳಗಿನ ಜಾವದಲ್ಲಿ ಸ್ಫುಟವಾದ ಹದಿನಾರು ಸ್ವಪ್ನಗಳಾದುವು.

**ಸಾ ಪ್ರಬುದ್ಧ್ವಾ ಫಲಾನ್ಯಾತ್ಮಪತೇರವಧಿಲೋಚನಾತ್ ।**
**ತೇಷಾಂ ವಿಜ್ಞಾಯ ಸಂಭೂತಸುತೇವಾಸೀತ್ಸಸಮ್ಮದಾ ॥ ೧೬ ॥**

ಆ ಸುಪ್ರಭಾದೇವಿಯು ಎಚ್ಚತ್ತು ಅವಧಿಜ್ಞಾನವೆಂಬ ನೇತ್ರವುಳ್ಳ ತನ್ನ ಪತಿಯಿಂದ ಆ ಸ್ವಪ್ನಗಳ ಫಲಗಳನ್ನು ತಿಳಿದು ಪುತ್ರೋತ್ಪತ್ತಿಯುಳ್ಳವಳಂತೆ ಸಂತೋಷವುಳ್ಳವಳಾದಳು.

**ತದ್ಯೈತ್ಯಾನುತ್ತರಾದಂತ್ಯಾದಸ್ಯಾ ಗರ್ಭೇಭವದ್ವಿಭುಃ ।**
**ಸುರೇಂದ್ರಾಶ್ಚಾದಿಕಲ್ಯಾಣಮಕುರ್ವಂತ ಸಮಾಗತಾಃ ॥ ೧೭ ॥**

ಆಗ ಸ್ವಾಮಿಯು ಕೊನೆಯ ಅನುತ್ತರವಿಮಾನದಿಂದ ಬಂದು ಈಕೆಯ ಗರ್ಭದಲ್ಲಿ ಜನಿಸಿದನು. ದೇವೇಂದ್ರರು ಬಂದು ಗರ್ಭಾವತರಣಕಲ್ಯಾಣವನ್ನು ಮಾಡಿದರು.

**ಧವಲೇ ನವಮಾಸಾಂತೇ ಗುರುಯೋಗೇ ತ್ರಯೋದಶೀ- ।**
**ದಿನೇ ಮಾಘೇ ಸುತಂ ಮಾಸೇ ಸಾಸೂತಾವಧಿಲೋಚನಮ್ ॥ ೧೮ ॥**

ಆ ಸುಪ್ರಭಾದೇವಿಯು ಒಂಬತ್ತುತಿಂಗಳ ಕೊನೆಯಲ್ಲಿ ಮಾಘಮಾಸದ ಶುಕ್ಲಪಕ್ಷದ ತ್ರಯೋದಶೀದಿನದಲ್ಲಿ ಗುರುಯೋಗದಲ್ಲಿ ಅವಧಿಜ್ಞಾನಲೋಚನನಾದ ಪುತ್ರನನ್ನು ಹಡೆದಳು.

**ತದೈವಾನಿಮಿಷಾಧೀಶಾಸ್ತಂ ನೀತ್ವಾಮರಭೂಧರೇ ।**
**ಕ್ಷೀರಾಬ್ಧಿವಾರಿಭಿರ್ಭೂರಿಕಾರ್ತಸ್ವರಘಟೋದ್ಧೃತೈಃ ॥ ೧೯ ॥**

**ಅಭಿಷಿಚ್ಯ ವಿಭೂಷ್ಯೋಚ್ಚೈರ್ಧರ್ಮಾಖ್ಯಾಮುಗದನ್ಮುದಾ ।**
**ಸರ್ವಭೂತಹಿತಶ್ರೀಮತ್ಸದ್ಧರ್ಮಪಥದೇಶನಾತ್ ॥ ೨೦ ॥**

ಆಗಲೇ ದೇವೇಂದ್ರರು ಆ ಶಿಶುವನ್ನು ತೆಗೆದುಕೊಂಡು ಹೋಗಿ ದೇವಗಿರಿಯಾದ ಮೇರುವಿನಲ್ಲಿ ಸುವರ್ಣಘಟಗಳಿಂದ ಎತ್ತಲ್ಪಟ್ಟ ಕ್ಷೀರಸಮುದ್ರದ ಜಲಗಳಿಂದ ವಿಶೇಷವಾಗಿ ಅಭಿಷೇಕವನ್ನು ಮಾಡಿ ಚೆನ್ನಾಗಿ ಅಲಂಕರಿಸಿ ಸಮಸ್ತಪ್ರಾಣಿಗಳಿಗೆ ಹಿತವನ್ನು ಮಾಡುವ ಸಂಪತ್ತಿಯುಳ್ಳ ಸದ್ಧರ್ಮ ಮಾರ್ಗವನ್ನುಪದೇಶಿಸುವವನಾದುದರಿಂದ ಆ ಶಿಶುವಿಗೆ ಧರ್ಮನೆಂದು ಹೆಸರನ್ನಿಟ್ಟರು.

**ಅನಂತಜಿತಸಂತಾನೇ ಚತುಃಸಾಗರಸಮ್ಮಿತೇ ।**
**ಕಾಲೇ ಪರ್ಯಂತಪಲ್ಯೋಪಮಾರ್ಧೇ ಧರ್ಮೇಸ್ತಮೇಯುಷಿ ॥ ೨೧ ॥**

**ತದಭ್ಯಂತರವರ್ತ್ಯಾಯುರ್ಧರ್ಮನಾಮೋದಪಾದಿ ಸಃ ।**
**ದಶಲಕ್ಷಸಮಾಜೀವೀ ಸಂತಪ್ತಕನಕಚ್ಛವಿಃ ॥ ೨೨ ॥**

**ಖಾಷ್ಟೈಕಹಸ್ತಸದ್ದೇಹೋ ವಯಃ ಕೌಮಾರಮುದ್ವಹನ್ ।**
**ಸಾರ್ಧಲಕ್ಷದ್ವಯಾಬ್ದಾಂತೇ ಲಬ್ಧರಾಜ್ಯಮಹೋದಯಃ ॥ ೨೩ ॥**

**ತುಂಗತ್ವಾದತಿಶುದ್ಧತ್ವಾತ್ ಪ್ರೇಕ್ಷ್ಯತ್ವಾತ್ಸ್ವಾಸ್ರವತ್ವತಃ ।**
**ಅಶೇಷಪೋಷಕತ್ವಾಚ್ಚ ಮೇಘಾಂತಜಲದೋಪಮಃ ॥ ೨೪ ॥**

ಅನಂತತೀರ್ಥಕರರು ಮುಕ್ತರಾದನಂತರ ಆ ಪರಂಪರೆಯಲ್ಲಿ ನಾಲ್ಕು ಸಾಗರ ಪರಿಮಿತವಾದ ಕಾಲದಲ್ಲಿ ಕೊನೆಯ ಪಲ್ಯಕಾಲದ ಅರ್ಧಭಾಗದಲ್ಲಿ ಧರ್ಮವು ಲುಪ್ತವಾಗುತ್ತಿರಲು ಆ ಕಾಲದಲ್ಲೇ ಸೇರಿರುವ ಆಯುಷ್ಯವುಳ್ಳ ಆ ಧರ್ಮತೀರ್ಥಂಕರರು ಉದಿಸಿದರು. ಹತ್ತು ಲಕ್ಷವರ್ಷಗಳವರೆಗೆ ಜೀವಿಸುವವರೂ ಚೆನ್ನಾಗಿ ಕಾಯಿಸಲ್ಪಟ್ಟ ಬಂಗಾರದಂತೆ ಕಾಂತಿಯುಳ್ಳವರೂ ನೂರೆಂಬತ್ತು ಹಸ್ತಪರಿಮಿತವಾದ ಉತ್ತಮದೇಹವುಳ್ಳವರೂ ಎರಡುವರೆ ಲಕ್ಷವರ್ಷಗಳವರೆಗೆ ಕೌಮಾರವಯಸ್ಸನ್ನು ಧರಿಸಿ ಕೊನೆಯಲ್ಲಿ ರಾಜ್ಯಭಾರವನ್ನು ಪಡೆದವರೂ ಆದ ಆ ಧರ್ಮನಾಥರು ಉನ್ನತರಾಗಿದ್ದುದರಿಂದಲೂ ಅತಿಶುದ್ಧರಾಗಿದ್ದುದರಿಂದಲೂ ನೋಡುವುದಕ್ಕೆ ಯೋಗ್ಯರಾಗಿದ್ದುದರಿಂದಲೂ ಶುಭಾಸ್ರವವುಳ್ಳವರಾಗಿದ್ದುದರಿಂದಲೂ ಎಲ್ಲರಿಗೂ ಪೋಷಕರಾಗಿದುದ್ದರಿಂದಲೂ ಶರದೃತುವಿನ ಮೇಘಕ್ಕೆ ಸಮಾನರಾಗಿದ್ದರು.

**ಭದ್ರತ್ವಾದ್ಬಹುದಾನತ್ವಾತ್ಸಲಕ್ಷಣ್ಯಾನ್ಮಹತ್ತ್ವತಃ ।**
**ಸುಕರತ್ವಾತ್ಸುರೇಭತ್ವಾದಪರೋ ವಾ ಗಜೋತ್ತಮಃ ॥ ೨೫ ॥**

ಭದ್ರ–ಮಂಗಲಸ್ವರೂಪನಾಗಿದ್ದುದರಿಂದಲೂ ಬಹುದಾನವುಳ್ಳವನಾದುದರಿಂದಲೂ ಉತ್ತಮಲಕ್ಷಣಗಳುಳ್ಳವನಾದುದರಿಂದಲೂ ದೊಡ್ಡವನಾಗಿರುವುದರಿಂದಲೂ ಉತ್ತಮಕರ (ಸೊಂಡಿಲು, ಕೈ ಅಥವಾ ತೆರಿಗೆ) ಉಳ್ಳವನಾದುದರಿಂದಲೂ ಸುರೇಭ–ದೇವೇಶನಾಗಿದ್ದುದರಿಂದಲೂ ಬೇರೊಂದು ಉತ್ತಮಗಜವೋ ಎಂಬಂತಿದ್ದರು.

**ನಿಗ್ರಹಾನುಗ್ರಹೌ ತಸ್ಯ ನ ದ್ವೇಷೇಚ್ಛಾಪ್ರವರ್ತಿತೌ ।**
**ಗುಣದೋಷಕೃತೌ ತಸ್ಮಾನ್ನಿಗೃಹ್ಣನ್ನಪಿ ಪೂಜ್ಯತೇ ॥ ೨೬ ॥**

ಅವರ ದುಷ್ಟನಿಗ್ರಹವೂ ಶಿಷ್ಟಾನುಗ್ರಹವೂ ದ್ವೇಷದಿಂದಲೂ ಇಚ್ಛಾ–ಪ್ರೀತಿಯಿಂದಲೂ ಉಂಟಾದುವಲ್ಲ. ದೋಷವನ್ನೂ ಗುಣವನ್ನೂ ಕುರಿತು ಉಂಟಾಗಿದ್ದುವು. ಆದುದರಿಂದ ನಿಗ್ರಹಿಸುವವರಾಗಿದ್ದರೂ ಪೂಜಿಸಲ್ಪಡುತ್ತಾರೆ.

**ಕೀರ್ತಿಸ್ತಸ್ಯ ಲತಾ ಸತ್ಯಂ ನೋ ಚೇದ್ವಿಶ್ವವಿಸರ್ಪಿಣೀ ।**
**ಕಥಂ ಕವಿವಚೋವಾರಿಸೇಕಾದದ್ಯಾಪಿ ವರ್ಧತೇ ॥ ೨೭ ॥**

ಅವರ ಕೀರ್ತಿಯು ಸತ್ಯವಾಗಿ ಲತೆಯಾಗಿದ್ದಿತು. ಹಾಗಲ್ಲದಿದ್ದರೆ ಎಲ್ಲಾ ಕಡೆಗಳಲ್ಲಿ ಹರಡಿದ್ದುದು ಹೇಗೆ ? ಅದು ಈಗಲೂ ಕವಿವಚನವೆಂಬ ಜಲಸೇಚನೆಯಿಂದ ವೃದ್ಧಿಯಾಗುತ್ತಿದೆ.

**ಧರಿತ್ರೀ ಸುಖಸಂಭೋಗ್ಯಾ ತಸ್ಯ ಸ್ವಗುಣರಂಜಿತಾ ।**
**ನಾಯಿಕೇವೋತ್ತಮಾ ಕಾಮಮಭೀಷ್ಟಫಲದಾಯಿನೀ ॥ ೨೮ ॥**

ಅಭೀಷ್ಟವಾದ ಉತ್ತಮಫಲವನ್ನು ಕೊಡುವ ಉತ್ತಮನಾಯಿಕೆಯಂತೆ ತನ್ನ ಗುಣದಿಂದ ಅನುರಾಗವುಳ್ಳುದಾದ ಪೃಥಿವಿಯು ಆ ಧರ್ಮನಾಥನಿಗೆ ಅಧಿಕವಾಗಿ ಸುಖದಿಂದ ಅನುಭವಿಸುವುದಕ್ಕೆ ತಕ್ಕುದಾಗಿದ್ದಿತು.

**ಧರ್ಮಾದಸ್ಮಾದವಾಪ್ಸ್ಯಂತಿ ಕರ್ಮಾರಾತಿನಿಬರ್ಹಣಾತ್ ।**
**ಶರ್ಮ ಚೇನ್ನಿರ್ಮಲಂ ಭವ್ಯಾಃ ಶರ್ಮಾಸ್ಯ ಕಿಮು ವರ್ಣ್ಯತೇ ॥ ೨೯ ॥**

ಕರ್ಮವೆಂಬ ಶತ್ರುವನ್ನು ನಾಶಮಾಡುವ ಈ ಧರ್ಮನಾಥನಿಂದ ಭವ್ಯರು ನಿರ್ಮಲವಾದ ಸುಖವನ್ನು ಹೊಂದುವರೆಂದಮೇಲೆ ಇವನ ಸುಖವನ್ನು ಏನೆಂದು ವರ್ಣಿಸುವುದು ?

**ಪಂಚಲಕ್ಷಸಮಾರಾಜ್ಯಕಾಲೇತೀತೇ ಕದಾಪ್ಯಸೌ ।**
**ಉಲ್ಕಾಪಾತಸಮುದ್ಭೂತವೈರಾಗ್ಯಾದಿತ್ಯಚಿಂತಯತ್ ॥ ೩೦ ॥**

ಐದುಲಕ್ಷ ವರ್ಷಗಳ ರಾಜ್ಯಕಾಲವು ಕಳೆಯುತ್ತಿರಲು ಒಂದಾನೊಂದು ಕಾಲದಲ್ಲಿ ಇವನು ಉಲ್ಕಾಪಾತದಿಂದುಂಟಾದ ವೈರಾಗ್ಯದಿಂದ ಮುಂದೆ ಹೇಳುವಂತೆ ಚಿಂತಿಸಿದನು.

**ಕಥಂ ಕ್ವ ಕಸ್ಮಾಜ್ಜಾತೋ ಮೇ ಕಿಮಯಃ ಕಸ್ಯ ಭೋಜನಮ್ ।**
**ಕಿಂ ಭವಿಷ್ಯತಿ ಕಾಯೋಽಯಮಿತಿ ಚಿಂತಾಮಕುರ್ವತಾ ॥ ೩೧ ॥**

**ದುರ್ವಿದಗ್ಧೇನ ಸಾಂಗತ್ಯಮನೇನ ಸುಚಿರಂ ಕೃತಮ್ ।**
**ಅಶ್ನತಾ ದುಃಖಮಾವರ್ಜ್ಯ ಪಾಪಂ ಪಾಪವಿಪಾಕತಃ ॥ ೩೨ ॥**

**ದುಃಖಮೇವ ಸುಖಂ ಮತ್ವಾ ದುರ್ಮತಿಃ ಕರ್ಮಚೋದಿತಃ ।**
**ಶರ್ಮ ಶಾಶ್ವತಮಪ್ರಾಪ್ಯ ಶ್ರಾಂತೋಽಹಂ ಜನ್ಮಸಂತತೌ ॥ ೩೩ ॥**

**ಬೋಧಾದಯೋ ಗುಣಾಃ ಸ್ವೇಮೀ ಮಮೈತದವಿಕಲ್ಪಯನ್ ।**
**ರಾಗಾದಿಕಾನ್ಗುಣಾನ್ಮತ್ವಾ ಧಿಙ್ಮಾಂ ಮತಿವಿಪರ್ಯಯಾತ್ ॥ ೩೪ ॥**

**ಸ್ನೇಹಮೋಹಗ್ರಹಗ್ರಸ್ತೋ ಮುಹುರ್ಬಂಧುಧನಾನ್ಯಲಮ್ ।**
**ಪೋಷಯನ್ನರ್ಜಯನ್ನಾಪಸಂಚಯಾದ್ದುರ್ಗತೀರ್ಗತಃ ॥ ೩೫ ॥**

“ ನನ್ನ ಈ ದೇಹವು ಹೇಗೆ ಎಲ್ಲಿ ಯಾವುದರಿಂದ ಹುಟ್ಟಿತು ? ಪುಣ್ಯವಾವುದು ? ಯಾವನಿಗೆ ಭೋಜನ ? ಏನಾಗುವುದು ? ಈ ರೀತಿಯಾಗಿ ಯೋಚಿಸದಿರುವವನೂ ಪಾಪದ ಉದಯದಿಂದ ಪಾಪವನ್ನು ಸಂಪಾದಿಸಿ ದುಃಖವನ್ನನುಭವಿಸುವವನೂ

ಆದ ಮೂರ್ಖನು–ನಾನು ಈ ದೇಹದೊಡನೆ ಬಹುಕಾಲದಿಂದ ಸಹವಾಸವನ್ನು ಮಾಡಿದೆನು. ಕರ್ಮದಿಂದ ಪ್ರೇರಿತನೂ ದುರ್ಬುದ್ಧಿಯುಳ್ಳವನೂ ಆದ ನಾನು ದುಃಖವನ್ನೇ ಸುಖವನ್ನಾಗಿ ತಿಳಿದು ನಿತ್ಯಸುಖವನ್ನು ಪಡೆಯದೆ ಮತ್ತು ನನ್ನ ಬುದ್ಧಿವೈಪರೀತ್ಯದಿಂದ ಈ ಜ್ಞಾನಾದಿಗುಣಗಳು ನನ್ನವೆಂಬುದನ್ನು ವಿಚಾರಮಾಡದೆ ರಾಗಾದಿಗಳು ತನ್ನ ಗುಣಗಳೆಂದು ತಿಳಿದು ಜನ್ಮಪರಂಪರೆಯಲ್ಲಿ ಬಳಲಿದೆನು. ನನಗೆ ಧಿಕ್ಕಾರವಿರಲಿ. ಸ್ನೇಹಮೋಹಗಳೆಂಬ ಗ್ರಹಗಳಿಂದ ನುಂಗಲ್ಪಟ್ಟವನೂ ಬಂಧು ಧನಗಳನ್ನು ಮತ್ತೆ ಮತ್ತೆ ಹೆಚ್ಚಾಗಿ ಪೋಷಿಸುವವನೂ ಸಂಪಾದಿಸುವವನೂ ಆಗಿ ಪಾಪ ಸಂಚಯದಿಂದ ದುರ್ಗತಿಗಳನ್ನು ಹೊಂದಿದೆನು.''

**ಏವಮೇನಂ ಸ್ವಯಂ ಬುದ್ಧಂ ಮತ್ವಾ ಲೌಕಾಂತಿಕಾಃ ಸುರಾಃ ।**
**ತುಷ್ಟುವುರ್ನಿಷ್ಠಿತಾರ್ಥಸ್ತ್ವಂ ದೇವಾದ್ಯೇತ್ಯತಿಭಕ್ತಿಕಾಃ ॥ ೩೬ ॥**

ಈ ರೀತಿಯಾಗಿ ಈ ಧರ್ಮನಾಥನು ತಾನೇ ತಿಳಿದನೆಂದು ಅತಿಭಕ್ತಿಯುಳ್ಳ ಲೌಕಾಂತಿಕದೇವರ್ಕಳು ತಿಳಿದು ''ಸ್ವಾಮಿಯೆ! ಈಗ ನೀನು ಪರಿಪೂರ್ಣವಾದ ಪ್ರಯೋಜನವುಳ್ಳವನಾದೆ'' ಎಂದು ಅವನನ್ನು ಸ್ತುತಿಸಿದರು.

**ಸುಧರ್ಮನಾಮ್ನಿ ಸ ಜ್ಯೇಷ್ಠೇ ಪುತ್ರೇ ನಿಹಿತರಾಜ್ಯಕಃ ।**
**ಪ್ರಾಪ್ತಃ ನಿಷ್ಕ್ರಮಣಾರಂಭಕಲ್ಯಾಣಾಭಿಷವೋತ್ಸವಮ್ ॥ ೩೭ ॥**

ಸುಧರ್ಮನೆಂಬ ಜ್ಯೇಷ್ಠಪುತ್ರನಲ್ಲಿ ರಾಜ್ಯವನ್ನಿರಿಸಿದ ಆ ಧರ್ಮನಾಥನು ಪರಿನಿಷ್ಕ್ರಮಣಕಲ್ಯಾಣಾಭಿಷೇಕೋತ್ಸವವನ್ನು ಹೊಂದಿದನು.

**ಶಿಬಿಕಾಂ ನಾಗದತ್ತಾಖ್ಯಾಮಾರುಹ್ಯ ಸುರಸತ್ತಮೈಃ ।**
**ಸಹ ಸಾಲವನೋದ್ಯಾನಂ ಗತ್ವಾ ಷಷ್ಠೋಪವಾಸವಾನ್ ॥ ೩೮ ॥**

**ಮಾಘಜ್ಯೋತ್ಸ್ನಾತ್ರಯೋದಶ್ಯಾಮಪರಾಹ್ಣೇ ನೃಪೈಃ ಸಮಮ್ ।**
**ಸಹಸ್ರೇಣ ಸ ಪುಷ್ಯರ್ಕ್ಷೇ ದೀಕ್ಷಾಂ ಮೌಕ್ಷೀಂ ಸಮಗ್ರಹೀತ್ ॥ ೩೯ ॥**

ನಾಗದತ್ತವೆಂಬ ಪಲ್ಲಕ್ಕಿಯನ್ನೇರಿ ಉತ್ತಮದೇವರ್ಕಳೊಡನೆ ಮತ್ತಿಮರಗಳ ಉದ್ಯಾನವನಕ್ಕೆ ಹೋಗಿ ಆರು ಉಪವಾಸಗಳುಳ್ಳವನಾದ ಆ ಧರ್ಮನಾಥನು ಮಾಘ ಶುಕ್ಲ ತ್ರಯೋದಶಿಯ ದಿವಸ ಸಾಯಂಕಾಲದಲ್ಲಿ ಪುಷ್ಯನಕ್ಷತ್ರದಲ್ಲಿ ಸಾವಿರ ದೊರೆಗಳೊಡನೆ ಮೋಕ್ಷದಾಯಕವಾದ ದೀಕ್ಷೆಯನ್ನು ತೆಗೆದುಕೊಂಡನು.

**ಚತುರ್ಥಜ್ಞಾನಸಂಪನ್ನೋ ದ್ವಿತೀಯೇಹ್ನ್ಯವಿಶತ್ಪುರೀಮ್ ।**
**ಭೋಕ್ತುಂ ಪಾಟಲಿಪುತ್ರಾಖ್ಯಾಂ ಸಮುನ್ನದ್ಧಪತಾಕಿಕಾಮ್ ॥ ೪೦ ॥**

ನಾಲ್ಕನೆಯದಾದ ಮನಃಪರ್ಯಯಜ್ಞಾನಸಂಪನ್ನನಾಗಿ ಎರಡನೆಯ ದಿವಸದಲ್ಲಿ ಭೋಜನಕ್ಕೋಸ್ಕರ ಎತ್ತಿ ಕಟ್ಟಲ್ಪಟ್ಟ ಪತಾಕೆಗಳುಳ್ಳ ಪಾಟಲಿಪುತ್ರವೆಂಬ ನಗರವನ್ನು ಪ್ರವೇಶಿಸಿದನು.

**ಧಾನ್ಯಸೇನಮಹೀಪಾಲೋ ದತ್ವಾಸ್ಮೈ ಕನಕದ್ಯುತಿಃ ।**
**ದಾನಮುತ್ತಮಪಾತ್ರಾಯ ಪ್ರಾಪದಾಶ್ಚರ್ಯಪಂಚಕಮ್ ॥ ೪೧ ॥**

ಸ್ವರ್ಣಕಾಂತಿಯುಳ್ಳ ಧಾನ್ಯಸೇನನೆಂಬ ರಾಜನು ಉತ್ತಮಪಾತ್ರನಾದ ಈ ಧರ್ಮನಾಥನಿಗೆ ಆಹಾರದಾನವನ್ನಿತ್ತು ಪಂಚಾಶ್ಚರ್ಯಗಳನ್ನು ಪಡೆದನು.

**ತಥೈಕವರ್ಷೇ ಛದ್ಮಸ್ಥಕಾಲೇತೀತೇ ಪುರಾತನೇ ।**
**ವನೇ ಸಪ್ತಚ್ಛದಸ್ಯಾಧಃ ಕೃತಷಷ್ಠೋಪವಾಸಕಃ ॥ ೪೨ ॥**

**ಪೌರ್ಣಮಾಸ್ಯಾಂ ಸ ಪುಷ್ಯರ್ಕ್ಷೇ ಸಾಯಾಹ್ನೇ ಪ್ರಾಪ ಕೇವಲಮ್ ।**
**ಆಸಸಾದ ಚ ಸತ್ಪೂಜಾಂ ತುರ್ಯಕಲ್ಯಾಣಸೂಚನೀಮ್ ॥ ೪೩ ॥**

ಹಾಗೆ ಒಂದು ವರ್ಷ ಛದ್ಮಸ್ಥ ಕಾಲವು ಕಳೆಯುತ್ತಿರಲು ಮೊದಲಿನ ದೀಕ್ಷಾವನದಲ್ಲಿ ಏಳೆಲೆಬಾಳೆಯ ಗಿಡದ ಕೆಳಗೆ ಆರು ಉಪವಾಸಗಳನ್ನು ಮಾಡಿದವನಾಗಿ ಆ ಧರ್ಮನಾಥನು ಪುಷ್ಯಮಾಸದ ಹುಣ್ಣಿಮೆಯ ದಿವಸ ಸಾಯಂಕಾಲದಲ್ಲಿ ಪುಷ್ಯನಕ್ಷತ್ರದಲ್ಲಿ ಕೇವಲಜ್ಞಾನವನ್ನು ಪಡೆದನು. ನಾಲ್ಕನೆಯದಾದ ಕೇವಲಜ್ಞಾನಕಲ್ಯಾಣ ಸೂಚಕವಾದ ಉತ್ತಮಪೂಜೆಯನ್ನೂ ಹೊಂದಿದನು.

**ಅರಿಷ್ಟಸೇನಾದ್ಯನಲಯುಗಮಾನಗಣಾಧಿಪಃ ।**
**ಶೂನ್ಯದ್ವಯನವಪ್ರೋಕ್ತಸರ್ವಪೂರ್ವಧರಾವೃತಃ ॥ ೪೪ ॥**

**ಶೂನ್ಯದ್ವಯರ್ದ್ಧಿಶೂನ್ಯಾಬ್ಧಿಮಿತಶಿಕ್ಷಕಲಕ್ಷಿತಃ ।**
**ಷಟ್ಛತತ್ರಿಸಹಸ್ರೋಕ್ತತ್ರಿವಿಧಾವಧಿಲೋಚನಃ ॥ ೪೫ ॥**

**ಶೂನ್ಯದ್ವಯೇಂದ್ರಿಯಾಂಭೋಧಿಪ್ರೋಕ್ತಕೇವಲವೀಕ್ಷಣಃ ।**
**ಶೂನ್ಯತ್ರಿಕಮುನಿಜ್ಞಾತವಿಕ್ರಿಯರ್ದ್ಧಿವಿಭೂಷಿತಃ ॥ ೪೬ ॥**

**ಕೇವಲಜ್ಞಾನಮಾನೋಕ್ತಮನಃಪರ್ಯಯವಿದ್ವೃತಃ ।**
**ಖದ್ವಯಾಷ್ಟದ್ವಿವಿಜ್ಞಾತವಾದಿವೃಂದಾಭಿವಂದಿತಃ ॥ ೪೭ ॥**

**ಪಿಂಡೀಕೃತಚತುಷ್ಷಷ್ಟಿಸಹಸ್ರಮುನಿಸಾಧನಃ ।**
**ಖಖಾಬ್ಧಿಪಕ್ಷಷಟ್ಪ್ರೋಕ್ತಸುವ್ರತಾದ್ಯಾರ್ಯಿಕಾರ್ಚಿತಃ ॥ ೪೮ ॥**

**ದ್ವಿಲಕ್ಷಶ್ರಾವಕೋಪೇತೋ ದ್ವಿಗುಣಶ್ರಾವಿಕಾವೃತಃ ।**
**ಪೂರ್ವೋಕ್ತದೇವಸಂದೋಹಸ್ತಿರ್ಯಕ್ಸಂಖ್ಯಾತಸಂಶ್ರಿತಃ ॥ ೪೯ ॥**

**ಇತಿ ದ್ವಾದಶಭೇದೋಕ್ತಗಣಸಂಪತ್ಸಮನ್ವಿತಃ ।**
**ಧರ್ಮಾಧರ್ಮಮುಪಾದಿಕ್ಷದ್ಧರ್ಮಧ್ವಜವಿರಾಜಿತಃ ॥ ೫೦ ॥**

ಅರಿಷ್ಟಸೇನ ಮೊದಲಾದ ನಾಲ್ವತ್ತುಮೂರುಮಂದಿ ಗಣಧರರಿಗೆ ಸ್ವಾಮಿಯೂ ಒಂಬೈನೂರು ಮಂದಿ ಏಕಾದಶಾಂಗಚತುರ್ದಶಪೂರ್ವಶಾಸ್ತ್ರಧಾರಿಗಳಾದ ಮುನಿಗಳಿಂದ ಆವರಿಸಲ್ಪಟ್ಟವನೂ ನಾಲ್ವತ್ತುಸಾವಿರದ ಏಳುನೂರು ಮಂದಿ ಶಿಕ್ಷಕಮುನಿಗಳಿಂದ ಕೂಡಿರುವವನೂ ಮೂರುಸಾವಿರದ ಆರುನೂರು ಮಂದಿ ದೇಶಾವಧಿ ಪರಮಾವಧಿ ಸರ್ವಾವಧಿಜ್ಞಾನನೇತ್ರವುಳ್ಳ ಮುನಿಗಳುಳ್ಳವನೂ ನಾಲ್ಕುಸಾವಿರದ ಐದುನೂರು ಮಂದಿ ಕೇವಲಜ್ಞಾನಿಗಳುಳ್ಳವನೂ ಏಳುಸಾವಿರ ಮಂದಿ ವಿಕ್ರಿಯರ್ದ್ಧಿಯುಳ್ಳ ಮುನಿಗಳಿಂದ ಅಲಂಕೃತನೂ ನಾಲ್ಕುಸಾವಿರದ ಐದುನೂರು ಮಂದಿ ಮನಃಪರ್ಯಯಜ್ಞಾನಿಗಳಿಂದ ಸುತ್ತಲ್ಪಟ್ಟವನೂ ಎರಡುಸಾವಿರದ ಎಂಟುನೂರು ಮಂದಿ ವಾದಿಗಳ ಸಮೂಹದಿಂದ ವಂದಿಸಲ್ಪಟ್ಟವನೂ ಒಟ್ಟು ಅರುವತ್ತುನಾಲ್ಕು ಸಹಸ್ರಮುನಿಗಳಿಗೆ ಸಾಧನನಾಗಿರುವವನೂ ಅರುವತ್ತೆರಡುಸಾವಿರದ ನಾಲ್ಕು ನೂರು ಮಂದಿ ಸುವ್ರತೆಯೇ ಮೊದಲಾದ ಆರ್ಯಿಕೆಯರಿಂದ ಪೂಜಿಸಲ್ಪಟ್ಟವನೂ ಎರಡುಲಕ್ಷ ಶ್ರಾವಕರುಳ್ಳವನೂ ನಾಲ್ಕುಲಕ್ಷ ಶ್ರಾವಿಕೆಯರಿಂದ ಸುತ್ತಲ್ಪಟ್ಟವನೂ ಮೊದಲು ಹೇಳಲ್ಪಟ್ಟ–ಅಸಂಖ್ಯಾತದೇವದೇವಿಯರುಳ್ಳವನೂ ಸಂಖ್ಯಾತತಿರ್ಯಕ್ಪ್ರಾಣಿಗಳಿಂದ ಆಶ್ರಯಿಸಲ್ಪಟ್ಟವನೂ ಹೀಗೆ ಹನ್ನೆರಡು ಪ್ರಕಾರವಾದ ಸಮೂಹ ಸಂಪತ್ತಿಯಿಂದ ಕೂಡಿರುವವನೂ ಧರ್ಮಧ್ವಜದಿಂದ ಪ್ರಕಾಶಿಸುವವನೂ ಆದ ಧರ್ಮತೀರ್ಥಂಕರನು ಧರ್ಮಾಧರ್ಮಗಳನ್ನು ಉಪದೇಶಿಸಿದನು.

**ವಿಹಾರಮಂತೇ ಸಂಹೃತ್ಯ ಸಮ್ಮೇದೇ ಗಿರಿಸತ್ತಮೇ ।**
**ಮಾಸಮೇಕಂ ಸಯೋಗಃ ಸನ್ ನವಾಷ್ಟಶತಸಂಯುತೈಃ ॥ ೫೧ ॥**

**ಶುಚಿಶುಕ್ಲಚತುರ್ಥ್ಯಂತೇ ರಾತ್ರೌ ಧ್ಯಾತಿಂ ಪೃಥಗ್ದ್ವಯೀಮ್ ।**
**ಆಪೂರ್ಯ ಪುಷ್ಯನಕ್ಷತ್ರೇ ಮೋಕ್ಷಲಕ್ಷ್ಮೀಮುಪಾಗಮತ್ ॥ ೫೨ ॥**

ಕೊನೆಯಲ್ಲಿ ವಿಹಾರವನ್ನು ಬಿಟ್ಟು ಶ್ರೇಷ್ಠವಾದ ಸಮ್ಮೇದಗಿರಿಯಲ್ಲಿ ಎಂಟುನೂರ ಒಂಬತ್ತುಮಂದಿ ಮುನಿಗಳೊಡನೆ ಒಂದುತಿಂಗಳವರೆಗೆ ಯೋಗರಹಿತನಾಗಿ –ಯೋಗನಿರೋಧವನ್ನು ಮಾಡಿ ಜ್ಯೇಷ್ಠಮಾಸದ ಶುಕ್ಲಪಕ್ಷದ ಚತುರ್ಥಿಯ ಅಂತ್ಯ ರಾತ್ರಿಯಲ್ಲಿ ಪುಷ್ಯನಕ್ಷತ್ರದಲ್ಲಿ ಸೂಕ್ಷ್ಮಕ್ರಿಯಾಪ್ರತಿಪಾತಿ ವ್ಯುಪರತಕ್ರಿಯಾನಿವೃತ್ತಿಗಳೆಂಬ ಎರಡುಶುಕ್ಲಧ್ಯಾನಗಳನ್ನು ಬೇರೆಬೇರೆಯಾಗಿ–ಯಥಾಕ್ರಮವಾಗಿ ಪೂರ್ತಿ ಮಾಡಿ ಮೋಕ್ಷಲಕ್ಷ್ಮಿಯನ್ನು ಪಡೆದನು.

ತದಾಮೃತಾಶನಾಧೀಶಾಃ ಸಹಸಾಗತ್ಯ ಸರ್ವತಃ ।
ಕೃತ್ವಾ ನಿರ್ವಾಣಕಲ್ಯಾಣಮವಂದಿಷತ ತಂ ಜಿನಮ್ ॥ ೫೩ ॥

ಆಗ ಎಲ್ಲಾ ಕಡೆಗಳಿಂದಲೂ ಶೀಘ್ರವಾಗಿ ದೇವೇಂದ್ರರು ಬಂದು ನಿರ್ವಾಣ ಕಲ್ಯಾಣವನ್ನು ಮಾಡಿ ಆ ಧರ್ಮಜಿನನನ್ನು ವಂದಿಸಿದರು.

ನಿರ್ಜಿತ್ಯ ದಶರಥಃ ಸ ರಿಪೂನ್ನೃಪೋಂತೇಹಮಿಂದ್ರತಾಂ ಗತ್ವಾ ।
ಧರ್ಮಃ ಸ ಪಾತು ಪಾಪೈರ್ಧರ್ಮಾ ಯುಧಿ ದಶ ರಥಾಯಂತೇ ॥

ಯಾವನು ಪೂರ್ವಭವದಲ್ಲಿ ಆ ದಶರಥರಾಜನಾಗಿದ್ದು ಶತ್ರುಗಳನ್ನು ಜಯಿಸಿ ಕೊನೆಯಲ್ಲಿ ಸತ್ತು ಸ್ವರ್ಗದಲ್ಲಿ ಅಹಮಿಂದ್ರತ್ವವನ್ನು ಹೊಂದಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತನಾಗಿ ಧರ್ಮತೀರ್ಥಂಕರನಾದನೋ ಯಾವನಿಗೆ ಪಾಪಗಳೊಡನೆ ಯುದ್ಧದಲ್ಲಿ ಉತ್ತಮಕ್ಷಮಾದಿದಶ ಧರ್ಮಗಳು ರಥಗಳಂತಾದುವೋ ಅಂತಹ ಧರ್ಮತೀರ್ಥಂಕರನು ಕಾಪಾಡಲಿ.

ನಿಹತಸಕಲಘಾತಿರ್ನಿಷ್ಕಲಾಗ್ರಾವಬೋಧೋ ।
ಗದಿತಪರಮಧರ್ಮೋ ಧರ್ಮನಾಮಾ ಜಿನೇಂದ್ರಃ ।
ತ್ರಿತಯತನುವಿನಾಶಾನ್ನಿರ್ಮಲಃ ಶರ್ಮಸಾರೋ ।
ದಿಶತು ಸುಖಮನಂತಂ ಶಾಂತಸರ್ವಾತ್ಮಕೋ ವಃ ॥ ೫೫ ॥

ಸಮಸ್ತಘಾತಿಕರ್ಮಗಳನ್ನು ನಾಶಮಾಡಿದವನೂ ನಿಷ್ಕಲವೂ ಮುಖ್ಯವೂ ಆದ ಕೇವಲಜ್ಞಾನವುಳ್ಳವನೂ ಉತ್ತಮಧರ್ಮವನ್ನುಪದೇಶಿಸಿದವನೂ ಪರಮೌದಾರಿಕ ತೈಜಸ ಕಾರ್ಮಣಗಳೆಂಬ ಮೂರು ಶರೀರಗಳ ವಿನಾಶದಿಂದ ನಿರ್ಮಲನೂ ಸುಖದ ಸಾರವೂ ಎಲ್ಲರ ಆತ್ಮಗಳಿಗೆ ಶಾಂತಿಯನ್ನುಂಟುಮಾಡಿರುವವನೂ ಆದ ಧರ್ಮನೆಂಬ ಜಿನೇಶ್ವರನು ನಿಮ್ಮಗಳಿಗೆ ಅನಂತಸುಖವನ್ನೀಯಲಿ.

ಅಸ್ಮಿನ್ನೇವಾಭವತ್ತೀರ್ಥೇ ಬಲಃ ಶ್ರೀಮಾನ್ ಸುದರ್ಶನಃ ।
ಕೇಶವಃ ಸಿಂಹಶಬ್ದಾಂತಪುರುಷಃ ಪರಿಷದ್ಬಲಃ ॥ ೫೬ ॥

ಈ ಧರ್ಮಜಿನೇಶ್ವರನ ತೀರ್ಥದಲ್ಲೇ ಶ್ರೀಮಂತನಾದ ಸುದರ್ಶನನೆಂಬ ಬಲಭದ್ರನೂ ಸಮೂಹಬಲವುಳ್ಳವನಾದ ಪುರುಷಸಿಂಹನೆಂಬ ಕೇಶವನೂ ಇದ್ದರು.

ತಯೋರಾಖ್ಯಾನಕಂ ವಕ್ಷ್ಯೇ ಭವತ್ರಯಸಮಾಶ್ರಯಮ್ ।
ಇಹ ರಾಜಗೃಹೇ ರಾಜಾ ಸುಮಿತ್ರೋ ನಾಮ ಗರ್ವಿತಃ ॥ ೫೭ ॥

ಮಹಾಮಲ್ಲಾನ್ ಬಹೂನ್ ಜಿತ್ವಾ ಲಬ್ಧಪೂಜಃ ಪರೀಕ್ಷಕೈಃ ।
ತೃಣಾಯಮನ್ಯಮಾನೋನ್ಯಾನಮಾದ್ಯದ್ದುಷ್ಟದಂತಿವತ್ ॥ ೫೮ ॥

ಅವರುಗಳ ಮೂರು ಭವಸಂಬಂಧವಾದ ಚರಿತವನ್ನು ಹೇಳುವೆನು. ಈ ಭರತ ಕ್ಷೇತ್ರದಲ್ಲಿ ರಾಜಗೃಹ ನಗರದಲ್ಲಿ ಗರ್ವಿತನಾದ ಸುಮಿತ್ರನೆಂಬ ದೊರೆಯಿದ್ದನು. ಹಲವು ಮಂದಿ ದೊಡ್ಡ ಜಟ್ಟಿಗಳನ್ನು ಜಯಿಸಿ ಪರೀಕ್ಷಕರಿಂದ ಸನ್ಮಾನಿತನಾದ ಆ ಸುಮಿತ್ರನು ಬೇರೆಯವರನ್ನು ಹುಲ್ಲಿಗೆ ಸಮಾನರನ್ನಾಗಿ ತಿಳಿಯುವವನಾಗಿ ದುಷ್ಟ ಗಜದಂತೆ ಮದಿಸಿದನು.

ಕದಾಚಿದ್ರಾಜಸಿಂಹಾಖ್ಯಃ ಮಹೀನಾಥೋ ಮದೋದ್ಧತಃ ।
ತದ್ಗರ್ವಶಾತನಾಯಾಗಾತ್ತಾಂ ಪುರೀಂ ಮಲ್ಲಯುದ್ಧವಿತ್ ॥ ೫೯ ॥

ಒಂದಾನೊಂದು ಕಾಲದಲ್ಲಿ ಮಲ್ಲಯುದ್ಧವನ್ನು ತಿಳಿದವನೂ ಮದೋದ್ಧತನೂ ಆದ ರಾಜಸಿಂಹನೆಂಬ ಪೃಥಿವೀಪತಿಯು ಆ ಸುಮಿತ್ರನ ಗರ್ವವನ್ನು ನಾಶಮಾಡುವುದಕ್ಕೋಸ್ಕರ ಆ ರಾಜಗೃಹಪುರಿಗೆ ಹೋದನು.

ಸುಮಿತ್ರಸ್ತೇನ ರಂಗಸ್ಥೋ ನಿರ್ಜಿತಃ ಸುಚಿರಾದ್ಯುಧಾ ।
ಉತ್ಖಾತದಂತದಂತೀವ ತದಾಸ್ಥಾದತಿದುಃಖಿತಃ ॥ ೬೦ ॥

ಆ ರಾಜಸಿಂಹನು ರಂಗದಲ್ಲಿರುವ ಸುಮಿತ್ರನನ್ನು ಮಲ್ಲಯುದ್ಧದಿಂದ ಹೆಚ್ಚು ಹೊತ್ತಿನಮೇಲೆ ಜಯಿಸಿದನು. ಆಗ ಸುಮಿತ್ರನು, ಹಲ್ಲನ್ನು ಕೀಳಿಸಿಕೊಂಡ ಆನೆಯಂತೆ, ಬಹುದುಃಖಿತನಾದನು.

ಮಾನಭಂಗೇನ ಭಗ್ನಃ ಸನ್ನಸೌ ರಾಜ್ಯಭರಾಕ್ಷಮಃ ।
ನಿಯುಕ್ತವಾನ್ ಸುತಂ ರಾಜ್ಯೇ ಮಾನಪ್ರಾಣಾ ಹಿ ಮಾನಿನಃ ॥ ೬೧ ॥

ಮಾನಭಂಗದಿಂದ ಭಗ್ನನಾದ ಈ ಸುಮಿತ್ರನು ರಾಜ್ಯಭಾರವನ್ನು ವಹಿಸುವುದಕ್ಕೆ ಅಸಮರ್ಥನಾಗಿ ರಾಜ್ಯದಲ್ಲಿ ಮಗನನ್ನು ನೇಮಿಸಿದನು. ಮಾನವುಳ್ಳವರು ನಿಜವಾಗಿ ಮಾನವೇ ಪ್ರಾಣವೆಂದು ತಿಳಿಯುತ್ತಾರೆ.

ಕೃಷ್ಣಾಚಾರ್ಯಂ ಸಮಾಸಾದ್ಯ ಶ್ರುತ್ವಾ ಧರ್ಮಂ ಯಥೋದಿತಮ್ ।
ಪ್ರವವ್ರಾಜಾತಿನಿರ್ವಿಣ್ಣಸ್ತದ್ಧಿ ಯೋಗ್ಯಂ ಮನಸ್ವಿನಾಮ್ ॥ ೬೨ ॥

ಸುಮಿತ್ರನು ಕೃಷ್ಣಾಚಾರ್ಯ-ಮುನಿಯನ್ನು ಹೊಂದಿ ಯಥೋಕ್ತವಾದ ಧರ್ಮವನ್ನು ಶ್ರವಣಮಾಡಿ ಬಹುವಿರಕ್ತನಾಗಿ ದೀಕ್ಷೆಯನ್ನು ತೆಗೆದುಕೊಂಡನು. ಪ್ರಾಜ್ಞರಿಗೆ ಅದು ಯೋಗ್ಯವೇ ಆಗಿದೆ.

ಕ್ರಮೇಣೋಗ್ರಂ ತಪಃ ಕುರ್ವನ್ ಸಿಂಹನಿಷ್ಕ್ರೀಡಿತಾದಿಕಮ್ ।
ಸ್ವಪರಾಜಯಸಂಕ್ಲೇಶಾದಿತಿ ಪ್ರಾಂತೇ ವ್ಯಚಿಂತಯತ್ ॥ ೬೩ ॥

ಫಲಂ ಚೇದಸ್ತಿ ಚರ್ಯಾಯಾಸ್ತಪಸೋನ್ಯತ್ರ ಜನ್ಮನಿ ।
ಮಮ ಸ್ತಾಂ ವಿದ್ವಿಷೋ ಜೇತುಂ ಮಹಾಬಲಪರಾಕ್ರಮೌ ॥ ೬೪ ॥

ಅವನು ಕ್ರಮದಿಂದ ಸಿಂಹನಿಷ್ಕ್ರೀಡಿತವೇ ಮೊದಲಾದ ಕಠಿನತಪಸ್ಸನ್ನು ಮಾಡಿ ತನ್ನ ಅಪಜಯದಿಂದುಂಟಾದ ಖೇದದಿಂದ ಅವಸಾನಕಾಲದಲ್ಲಿ ಈ ಮುಂದೆ ಹೇಳುವಂತೆ ಚಿಂತಿಸಿದನು.''ತಪಸ್ಸಿನ ಆಚರಣೆಗೆ ಫಲವಿರುವುದಾದರೆ ಇನ್ನೊಂದು ಜನ್ಮದಲ್ಲಿ ಶತ್ರುಗಳನ್ನು ಜಯಿಸುವುದಕ್ಕೋಸ್ಕರ ನನಗೆ ಮಹಾಬಲವೂ ಪರಾಕ್ರಮವೂ ಉಂಟಾಗಲಿ.''

ತಥೈವ ಸನ್ನ್ಯಸ್ಯಾಭೂಚ್ಚ ಮಾಹೇಂದ್ರೇ ಸಪ್ತಸಾಗರ- ।
ಸ್ಥಿತಿರ್ದೇವಶ್ಚಿರಂ ಭೋಗಾನ್ ಭುಂಜಾನಃ ಸುಖಮಾಸ್ಥಿತಃ ॥ ೬೫ ॥

ಹಾಗೆಯೇ ಸನ್ಯಾಸ-ಮರಣವನ್ನು ಹೊಂದಿ ಮಾಹೇಂದ್ರವೆಂಬ ನಾಲ್ಕನೆಯ ಸ್ವರ್ಗದಲ್ಲಿ ಏಳು ಸಾಗರೋಪಮವರ್ಷಸ್ಥಿತಿಯುಳ್ಳ ದೇವನಾಗಿ ಬಹುಕಾಲದವರೆಗೆ ಭೋಗಗಳನ್ನನುಭವಿಸುವವನಾಗಿ ಸುಖಿಯಾಗಿದ್ದನು.

ದ್ವೀಪೇಸ್ಮಿನ್ಮಂದರಾತ್ಪ್ರಾಚಿ ವೀತಶೋಕಪುರೀಪತಿಃ ।
ನರಾದಿವೃಷಭೋ ರಾಜಾಜನಿ ಜಾತಮಹೋದಯಃ ॥ ೬೬ ॥

ಈ ಜಂಬೂದ್ವೀಪದ ಮೇರುವಿನಿಂದ ಪೂರ್ವದಿಕ್ಕಿನಲ್ಲಿ ವೀತಶೋಕಪುರಾಧಿಪತಿಯೂ ಮಹಾಭ್ಯುದಯವುಳ್ಳವನೂ ಆದ ನರವೃಷಭನೆಂಬ ರಾಜನು ಜನಿಸಿದನು.

ಭುಕ್ತ್ವಾ ಕೋಷದ್ವಯೋಪೇತಂ ರಾಜ್ಯಮೂರ್ಜಿತಸೌಖ್ಯಭಾಕ್ ।
ಸದ್ಯಃ ಸಂಜಾತನಿರ್ವೇದೋತ್ಯಜದ್ದಮವರಾಂತಿಕೇ ॥ ೬೭ ॥

ಸ ಘೋರತಪಸಾ ದೀರ್ಘಂ ಗಮಯಿತ್ವಾಯುರಾತ್ಮನಃ ।
ಸಹಸ್ರಾರಂ ಜಗಾಮಾಷ್ಟಾದಶಸಾಗರಸಂಸ್ಥಿತಿಃ ॥ ೬೮ ॥

ವಿಶೇಷವಾದ ಸುಖವನ್ನು ಹೊಂದಿರುವ ಆ ರಾಜನು ರಜತ ಸುವರ್ಣಭಂಡಾರ ಯುಕ್ತವಾದ ರಾಜ್ಯವನ್ನನುಭವಿಸಿ ತತ್ಕ್ಷಣದಲ್ಲಿ ಉತ್ಪನ್ನವಾದ ವಿರಕ್ತಿಯುಳ್ಳವನಾಗಿ ರಾಜ್ಯವನ್ನು ತ್ಯಜಿಸಿ ದಮವರರೆಂಬ ಮುನೀಶ್ವರರ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ತನ್ನ ದೀರ್ಘವಾದ ಆಯುಷ್ಯವನ್ನು ಘೋರ ತಪಸ್ಸಿನಿಂದ ಕಳೆದು ಸತ್ತು ಹದಿನೆಂಟು ಸಾಗರವರ್ಷಸ್ಥಿತಿಯುಳ್ಳವನಾಗಿ ಸಹಸ್ರಾರವೆಂಬ ಹನ್ನೆರಡನೆಯ ಸ್ವರ್ಗವನ್ನು ಹೊಂದಿದನು.

**ಫಲಂ ಸೋಽನಿಮಿಷತ್ವಸ್ಯ ಪ್ರಾಪ್ಯಾನಾರತಲೋಕನಾತ್ ।**
**ಪ್ರಾಣಪ್ರಿಯಾಣಾಂ ಪರ್ಯಂತೇ ಶಾಂತತೇಜಾ ನಿಜಾಯುಷಃ ॥ ೬೯ ॥**

**ಅಸ್ಮಿನ್ ಖಗಪುರಾಧೀಶಸಿಂಹಸೇನಮಹೀಪತೇಃ ।**
**ಇಕ್ಷ್ವಾಕೋರ್ವಿಜಯಾಯಾಶ್ಚ ತನುಜೋಽಭೂತ್ಸುದರ್ಶನಃ ॥ ೭೦ ॥**

ಅವನು ಪ್ರಾಣಪ್ರಿಯೆಯರನ್ನು–ದೇವಸ್ತ್ರೀಯರನ್ನು ಸಂತತವಾಗಿ ನೋಡುವುದರಿಂದ ಅನಿಮಿಷತ್ವದ ಫಲವನ್ನು ಹೊಂದಿ ತನ್ನ ಆಯುಷ್ಯದ ಕೊನೆಯಲ್ಲಿ ಕಳೆಗುಂದಿದವನಾಗಿ–ಸತ್ತು ಈ ಭಾರತವರ್ಷದಲ್ಲಿ ಇಕ್ಷ್ವಾಕುವಂಶಜನೂ ಖಗಪುರಾಧಿಪತಿಯೂ ಆದ ಸಿಂಹಸೇನರಾಜನಿಗೂ ಆತನ ಪತ್ನಿಯಾದ ವಿಜಯಾದೇವಿಗೂ ಸುದರ್ಶನನೆಂಬ ಪುತ್ರನಾದನು.

**ಅಂಬಿಕಾಯಾಂ ಸುತೋಽಸ್ಯೈವ ಸುಮಿತ್ರಃ ಕೇಶವೋಽಭವತ್ ।**
**ಪಂಚಾಬ್ಧಿಧನುರುತ್ಸೇಧೌ ದಶಲಕ್ಷಸಮಾಯುಷೌ ॥ ೭೧ ॥**

**ಪರಸ್ಪರಾನುಕೂಲ್ಯೇನ ಮತಿರೂಪಬಲಾನ್ವಿತೌ ।**
**ಪರಾನಾಕ್ರಮ್ಯ ಸರ್ವಾನ್ಸ್ವಾನ್ ರಂಜಯಾಮಾಸತುರ್ಗುಣೈಃ ॥ ೭೨ ॥**

ಈ ಸಿಂಹಸೇನಮಹಾರಾಜನಿಗೇ ಅಂಬಿಕಾದೇವಿಯಲ್ಲಿ ಸುಮಿತ್ರನು ಪುತ್ರನಾಗಿ ಜನಿಸಿ ಕೇಶವನಾದನು. ಆ ಸುದರ್ಶನ ಸುಮಿತ್ರರಾಜಕುಮಾರರು ನಲ್ವತ್ತೈದು ಧನುಃಪರಿಮಿತಶರೀರೋತ್ಸೇಧವುಳ್ಳವರೂ ಹತ್ತುಲಕ್ಷ ವರ್ಷಾಯುಷ್ಯವುಳ್ಳವರೂ ಪರಸ್ಪರಾನುಕೂಲತೆಯಿಂದ ಬುದ್ಧಿರೂಪಬಲಯುಕ್ತರೂ ಆಗಿ ಗುಣಗಳಿಂದ ಬೇರೆಯವರನ್ನೂ ತಮ್ಮವರನ್ನೂ ಎಲ್ಲರನ್ನೂ ಆಕ್ರಮಿಸಿ ಸಂತೋಷಪಡಿಸಿದರು.

**ಅವಿಭಕ್ತಾಪಿ ದೋಷಾಯ ಭುಜ್ಯಮಾನಾ ತಯೋರಭೂತ್ ।**
**ನ ಲಕ್ಷ್ಮೀಃ ಶುದ್ಧಚಿತ್ತಾನಾಂ ಶುದ್ಧ್ಯೈ ನಿಖಿಲಮುಪಲ್ಯಮ್ ॥ ೭೩ ॥**

ಅವರು ರಾಜ್ಯಲಕ್ಷ್ಮಿಯನ್ನು ವಿಭಾಗಿಸದೆ ಒಟ್ಟಿಗೆ ಅನುಭವಿಸುತ್ತಿದ್ದರೂ ಅದು ಅವರಿಗೆ ದೋಷಕ್ಕೆ ಕಾರಣವಾಗಲಿಲ್ಲ. ಶುದ್ಧಮನಸ್ಸುಳ್ಳವರಿಗೆ ಎಲ್ಲವೂ ಚೆನ್ನಾಗಿ ಶುದ್ಧಿಗೆ ಕಾರಣವಾಗುವುದು.

**ಅಥಾಭೂದ್ಭಾರತೇ ಕ್ಷೇತ್ರೇ ವಿಷಯೇ ಕುರುಜಾಂಗಲೇ ।**
**ಹಾಸ್ತಿನಾಖ್ಯಪುರಾಧೀಶೋ ಮಧುಕ್ರೀಡೋ ಮಹೀಪತಿಃ ॥ ೭೪ ॥**

**ರಾಜಸಿಂಹಚರೋ ಲಂಘಿತಾಖಿಲಾರಾತಿಸಂಹತಿಃ ।**
**ಅಸಹಂಸ್ತೌ ಸಮುದ್ಯಂತೌ ತೇಜಸಾ ಬಲಕೇಶವೌ ॥ ೭೫ ॥**

**ಕರಂ ಪರಾರ್ಧ್ಯರತ್ನಾನಿ ಯಾಚಿತ್ವಾ ಪ್ರಾಹಿಣೋದ್ಬಲೀ ।**
**ದಂಡಗರ್ಭಾಭಿಧಾನಾಭಿಶಾಲಿನಂ ಸಚಿವಾಗ್ರಿಮಮ್ ॥ ೭೬ ॥**

ಬಳಿಕ ಭರತಕ್ಷೇತ್ರದ ಕುರುಜಾಂಗಲದೇಶದಲ್ಲಿ ಮೊದಲು ರಾಜಸಿಂಹನಾಗಿದ್ದವನೂ ಸಮಸ್ತ ಶತ್ರುಸಮೂಹವನ್ನು ಜಯಿಸಿದವನೂ ಆದ ಮಧುಕ್ರೀಡನೆಂಬ ರಾಜನು ಹಸ್ತಿನಾಪುರಾಧಿಪತಿಯಾಗಿದ್ದನು. ಬಲಶಾಲಿಯಾದ ಅವನು ತೇಜಸ್ಸಿನಿಂದ ವೃದ್ಧಿಯನ್ನು ಹೊಂದುತ್ತಿದ್ದ ಆ ಬಲಭದ್ರಕೇಶವರನ್ನು ಸಹಿಸದಿರುವವನಾಗಿ ಬಹುಮೂಲ್ಯವಾದ ರತ್ನಗಳ ತೆರಿಗೆಯನ್ನು ಕೇಳಿ ತರುವುದಕ್ಕೋಸ್ಕರ ದಂಡಗರ್ಭನೆಂಬ ಮುಖ್ಯಮಂತ್ರಿಯನ್ನು ಕಳುಹಿಸಿದನು.

**ತದ್ವಚಃಶ್ರವಣಾತ್ತೌ ಚ ಗಜಕಂಠೀರವಶ್ರುತೇಃ ।**
**ಕಂಠೀರವೌ ವಾ ಸಂಕ್ರುದ್ಧೌ ರೂಢಾಹರ್ಪತಿತೇಜಸೌ ॥ ೭೭ ॥**

ಬಲಿಷ್ಠಸೂರ್ಯನ ತೇಜಸ್ಸುಳ್ಳವರಾದ ಆ ಬಲಭದ್ರಕೇಶವರು, ಶ್ರೇಷ್ಠವಾದ ಆನೆಯ ಶಬ್ದವನ್ನು ಕೇಳುವುದರಿಂದ ಕೋಪಗೊಳ್ಳುವ ಸಿಂಹಗಳಂತೆ, ಆ ಮಧುಕ್ರೀಡನ ಮಾತನ್ನು ಕೇಳಿದುದರಿಂದ ಬಹಳ ಕೋಪಗೊಂಡರು.

**ಕ್ರೀಡಿತುಂ ಯಾಚತೇ ಮೂಢೋ ಗರ್ಭವ್ಯಾಲಂ ಜಡಃ ಕರಮ್ ।**
**ಸಮೀಪವರ್ತೀ ಚೇತ್ತಸ್ಯ ಸಮವರ್ತ್ಯೇತು ದೀಯತೇ ॥ ೭೮ ॥**

"ಆ ಜಡನಾದ ಮೂಢನು ಮಧ್ಯದಲ್ಲಿ ಸರ್ಪವುಳ್ಳ ಕರವನ್ನು (ತೆರಿಗೆಯನ್ನು ಕೈಯನ್ನು) ಆಟವಾಡುವುದಕ್ಕೋಸ್ಕರ ಬೇಡುತ್ತಾನೆ. ಅವನಿಗೆ ಯಮನು ಸಮೀಪದಲ್ಲಿದ್ದರೆ ಬರಲಿ. ಕರವನ್ನು ಕೊಡಲಾಗುವುದು."

**ಇತ್ಯುಕ್ತವಂತೌ ತತ್ಕೋಪಕಠೋರೋಕ್ತ್ಯಾ ಸ ಸತ್ವರಮ್ ।**
**ಗತ್ವಾ ತತ್ಕಾರ್ಯಪರ್ಯಾಯಂ ಮಧುಕ್ರೀಡಮಜಿಜ್ಞಪತ್ ॥ ೭೯ ॥**

ಈ ರೀತಿಯಾಗಿ ಕೋಪದಿಂದ ಕಠೋರವಾದ ಮಾತನ್ನು ಬಲಭದ್ರಕೇಶವರು ಹೇಳಿದರು. ಆ ದಂಡಗರ್ಭಮಂತ್ರಿಯು ಶೀಘ್ರವಾಗಿ ಹೋಗಿ ಆ ವಿಷಯವನ್ನು ಮಧುಕ್ರೀಡನಿಗೆ ವಿಜ್ಞಾಪಿಸಿದನು.

**ಸೋಽಪಿ ತದ್ದುರ್ವಚಃ ಶ್ರುತ್ವಾ ಕೋಪಾರುಣಿತವಿಗ್ರಹಃ ।**
**ವಿಗ್ರಹಾಯ ಸಹೈತಾಭ್ಯಾಂ ಪ್ರತಸ್ಥೇ ಬಹುಸಾಧನಃ ॥ ೮೦ ॥**

ಆ ಕೆಟ್ಟಮಾತನ್ನು ಕೇಳಿ ಕೋಪದಿಂದ ಕೆಂಪಾದ ದೇಹವುಳ್ಳ ಆ ಮಧುಕ್ರೀಡನೂ ಬಹುಸೇನಾಸಾಧನವುಳ್ಳವನಾಗಿ ಈ ಬಲಕೇಶವರೊಡನೆ ಯುದ್ಧಕ್ಕೋಸ್ಕರ ಹೊರಟನು.

**ಅಭಿಗಮ್ಯ ತಮಾಕ್ರಮ್ಯ ಯುದ್ಧ್ವಾ ಯುದ್ಧವಿಶಾರದಃ ।**
**ಅಚ್ಛಿನತ್ತಸ್ಯ ಚಕ್ರೇಣ ಶಿರಃ ಸದ್ಯಃ ಸ ಕೇಶವಃ ॥ ೮೧ ॥**

ಯುದ್ಧದಲ್ಲಿ ನಿಪುಣನಾದ ಆ ಸುಮಿತ್ರಕೇಶವನು ಇದಿರಾಗಿ ಹೋಗಿ ಆ ಮಧುಕ್ರೀಡನನ್ನು ಆಕ್ರಮಿಸಿ ಯುದ್ಧವನ್ನು ಮಾಡಿ ಆಗಲೇ ಚಕ್ರದಿಂದ ಅವನ ಶಿರವನ್ನು ಕತ್ತರಿಸಿದನು.

**ತೌ ತ್ರಿಖಂಡಾಧಿಪತ್ಯೇನ ಲಕ್ಷ್ಮೀಮನುಬಭೂವತುಃ ।**
**ಅವಧಿಸ್ಥಾನಮಾಪನ್ನಃ ಕೇಶವೋ ಜೀವಿತಾವಧೌ ॥ ೮೨ ॥**

ಬಳಿಕ ಆ ಬಲಕೇಶವರು ತ್ರಿಖಂಡಾಧಿಪತ್ಯದಿಂದ ರಾಜ್ಯಲಕ್ಷ್ಮಿಯನ್ನು ಅನುಭವಿಸಿದರು. ಸುಮಿತ್ರಕೇಶವನು ಆಯುಷ್ಯಾವಸಾನದಲ್ಲಿ ಸತ್ತು ಅವಧಿಸ್ಥಾನ (ಏಳನೆಯ ನರಕ)ವನ್ನು ಹೊಂದಿದನು.

**ಹಲಾಯುಧೋಽಪಿ ತಚ್ಛೋಕಾದ್ಧರ್ಮತೀರ್ಥಕರಂ ಶ್ರಿತಃ ।**
**ಪ್ರವ್ರಜ್ಯ ಪ್ರೋದ್ಧುತಾಘೌಘಃ ಪ್ರಾಪ್ನೋತಿ ಸ್ಮ ಪರಂ ಪದಮ್ ॥ ೮೩ ॥**

ಸುದರ್ಶನ–ಬಲಭದ್ರನೂ ಆ ಸುಮಿತ್ರನ ಶೋಕದಿಂದ ಧರ್ಮತೀರ್ಥಂಕರರನ್ನು ಆಶ್ರಯಿಸಿ ದೀಕ್ಷೆಯನ್ನು ತೆಗೆದುಕೊಂಡು ದುರಿತಸಮೂಹವನ್ನು ನಾಶಮಾಡಿ ಪರಮಪದವನ್ನು ಹೊಂದಿದನು.

**ಪ್ರತಿಹತಪರಸೈನ್ಯೌ ಮಾನಶೌಂಡೌ ಪ್ರಚಂಡೌ ।**
**ಫಲಿತಸುಕೃತಸಾರೌ ತಾವಖಂಡತ್ರಿಖಂಡೌ ।**
**ಕಿಲ ಖಲವಿಧಿನೈವಂ ಪಶ್ಯ ವಿಶ್ಲೇಷಿತೌ ಧಿಕ್ ।**
**ದುರಿತಪರವಶತ್ವಂ ಕೇಶವಸ್ಯೈವ ಮೋಹಾತ್ ॥ ೮೪ ॥**

ಶತ್ರುಸೈನ್ಯವನ್ನು ನಾಶಮಾಡಿದವರೂ ಮಾನಶಾಲಿಗಳೂ ಪ್ರಚಂಡರೂ ಪುಣ್ಯದ ಸಾರ–ಸುಖವನ್ನನುಭವಿಸಿದವರೂ ಅಖಂಡತ್ರಿಖಂಡಾಧಿಪತಿಗಳೂ ಆದ ಆ ಸುದರ್ಶನ ಪುರುಷಸಿಂಹ–ಬಲಕೇಶವರು ದುರದೃಷ್ಟದಿಂದ ಹೀಗೆ ವಿಯೋಗವನ್ನು ಹೊಂದಿದರಂತೆ. ನೋಡು, ಮೋಹಕರ್ಮದಿಂದ ಕೇಶವನಿಗೇ ದುಷ್ಕೃತಾಧೀನತೆಯುಂಟಾದುದು–ಅವರಿಬ್ಬರಲ್ಲಿ ಕೇಶವನೇ ಪಾಪಕ್ಕೊಳಗಾದನು. ಧಿಕ್ಕಾರ!

**ಪ್ರಾಗ್ಭೂಭುಜಃ ಪ್ರಥಿತರಾಜಗೃಹೇ ಸುಮಿತ್ರೋ ।**
**ಮಾಹೇಂದ್ರಕಲ್ಪಜಸುರಶ್ಚ್ಯುತವಾಂಸ್ತತೋಽಸ್ಮಿನ್ ।**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ರತ್ನಪುರೀಪಟ್ಟಣದಲ್ಲಿ ಭಾನುಮಹಾರಾಜಂಗಂ ಸುವ್ರತಾಮಹಾದೇವಿಗಂ ಪುಷ್ಯನಕ್ಷತ್ರದಲ್ಲುದಯಿಸಿದ ನಾಲ್ವತ್ತೈದು ಬಿಲ್ಲುತ್ಸೇಧಮನುಳ್ಳ ಹತ್ತುಲಕ್ಷವರ್ಷಾಯುಷ್ಯಮನುಳ್ಳ ವಜ್ರಲಾಂಛನಮನುಳ್ಳ ಕಿನ್ನರಮಾನಸೀ-ಯಕ್ಷಯಕ್ಷಿಯರನುಳ್ಳ ಇಕ್ಷ್ವಾಕುವಂಶಮನುಳ್ಳ ಸಮ್ಮೇದಪರ್ವತದ ದತ್ತವರಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಧರ್ಮತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಭೂಪೋಽಭವತ್ಖಗಪುರೇ ಪುರುಷಾದಿಸಿಂಹಃ ।**
**ಪಶ್ಚಾತ್ಸ ಸಪ್ತಮಮಹೀಂ ಚ ಜಗಾಮ ಭೀಮಾಮ್ ॥ ೮೫ ॥**

ಪುರುಷಸಿಂಹನು ಮೊದಲು ಪ್ರಸಿದ್ಧವಾದ ರಾಜಗೃಹದಲ್ಲಿ ರಾಜನಾಗಿದ್ದನು. ಬಳಿಕ ಮಾಹೇಂದ್ರಕಲ್ಪದಲ್ಲಿ ದೇವನಾದನು. ಅಲ್ಲಿಂದ ಚ್ಯುತನಾಗಿ ಈ ಖಗಪುರದಲ್ಲಿ ಪುರುಷಸಿಂಹನೆಂಬ ರಾಜನಾದನು. ತರುವಾಯ ಭಯಂಕರವಾದ ಏಳನೆಯ ಭೂಮಿ–ನರಕಕ್ಕೂ ಹೋದನು.

**ಪ್ರೋದ್ದರ್ಪದಂತಿದಮನೋಜನಿ ರಾಜಸಿಂಹೋ ।**
**ಭ್ರಾಂತ್ವಾ ಚಿರಂ ಭವವನೇಷು ವಿನಷ್ಟಮಾರ್ಗಃ ।**
**ದೃಷ್ಟ್ವಾನುಮಾರ್ಗಮಜನಿಷ್ಟ ಸ ಹಾಸ್ತಿನಾಖ್ಯೇ ।**
**ಕ್ರೀಡಾಕ್ಷರಾಂತಮಧುರಾಪ ಗತಿಂ ದುರಂತಾಮ್ ॥ ೮೬ ॥**

ಮಧುಕ್ರೀಡನು ಮೊದಲು ಮತ್ತಗಜವನ್ನು ನಿಗ್ರಹಿಸುವ ರಾಜಸಿಂಹನಾಗಿ ಜನಿಸಿದನು. ಅವನು ದಾರಿತಪ್ಪಿದವನಾಗಿ ಭವಕಾನನಗಳಲ್ಲಿ ಬಹುಕಾಲದವರೆಗೆ ತಿರುಗಿ ಬಳಿಕ ಸನ್ಮಾರ್ಗವನ್ನು ಕಂಡು ಹಸ್ತಿನಾಪುರದಲ್ಲಿ ಮಧುಕ್ರೀಡನಾಗಿ ಹುಟ್ಟಿದನು. ಆದರೆ ಅವನು ಮತ್ತೆ ದುರಂತವಾದ ಗತಿಯನ್ನು ಹೊಂದಿದನು. ಏಳನೆಯ ನರಕವನ್ನು ಹೊಂದಿದನೆಂದು ಭಾವವು.

**ನರಾದಿವೃಷಭಃ ಪುರೇ ವಿದಿತವೀತಶೋಕೇ ಮಹೇಟ್ ।**
**ತಪಶ್ಚಿರಮುಪಾಸ್ಯ ಘೋರಮಭತ್ಸಹಸ್ರಾರಕೇ ।**
**ತತಃ ಖಗಪುರೇ ಬಲಃ ಕ್ಷಪಿತಶತ್ರುಪಕ್ಷೋಽಗಮತ್ ।**
**ಕ್ಷಮೈಕನಿಲಯೋ ವಿಲೀನವಿಲಯಃ ಸುಖಂ ಕ್ಷಾಯಿಕಮ್ ॥ ೮೭ ॥**

ಸುದರ್ಶನ–ಬಲಭದ್ರನು ಮೊದಲು ವೀತಶೋಕಪುರದಲ್ಲಿ ನರವೃಷಭನೆಂಬ ಮಹಾರಾಜನಾಗಿದ್ದು ಬಹುಕಾಲದವರೆಗೆ ಘೋರತಪಸ್ಸನ್ನು ಮಾಡಿ ಸತ್ತು ಸಹಸ್ರಾರಸ್ವರ್ಗದಲ್ಲಿ ದೇವನಾದನು. ಬಳಿಕ ಖಗಪುರದಲ್ಲಿ ಬಲಭದ್ರನಾದ ಸುದರ್ಶನನು ಶತ್ರುಪಕ್ಷವನ್ನು ನಾಶಮಾಡಿ ಕೊನೆಯಲ್ಲಿ ಕ್ಷಮೆಗೆ ಮುಖ್ಯಸ್ಥಾನನೂ ನಾಶರಹಿತನೂ ಆಗಿ ಕ್ಷಾಯಿಕಸುಖವನ್ನು ಹೊಂದಿದನು.

**ತತ್ತೀರ್ಥಸ್ಯಾಂತರೇ ಚಕ್ರೀ ತೃತೀಯೋ ಮಘವಾನಭೂತ್ ।**
**ಆತೃತೀಯಭವಾತ್ತಸ್ಯ ಪುರಾಣಂ ಪ್ರಣಿಗದ್ಯತೇ ॥ ೮೮ ॥**

ಆ ಧರ್ಮತೀರ್ಥಂಕರರ ತೀರ್ಥದ ಮಧ್ಯದಲ್ಲಿ ಮಘವಾನೆಂಬ ಮೂರನೆಯ ಚಕ್ರವರ್ತಿಯಾದನು. ಮೂರನೆಯ ಭವದಿಂದ ಅವನ ಪುರಾಣವನ್ನು ಹೇಳುವೆನು.

**ವಾಸುಪೂಜ್ಯಜಿನೇಶಸ್ಯ ತೀರ್ಥೇಽಭೂನ್ನೃಪತಿರ್ಮಹಾನ್ ।**
**ನಾಮ್ನಾ ನರಪತಿರ್ಭುಕ್ತ್ವಾ ಭೋಗಾನ್ ಭಾಗ್ಯಸಮರ್ಪಿತಾನ್ ॥ ೮೯ ॥**

**ವೈರಾಗ್ಯಕಾಷ್ಠಾಮಾರುಹ್ಯ ಕೃತೋತ್ಕೃಷ್ಟತಪಾ ವ್ಯಸುಃ ।**
**ಗ್ರೈವೇಯಕೇಽಭವತ್ಪುಣ್ಯಾದಹಮಿಂದ್ರೇಷು ಮಧ್ಯಮೇ ॥ ೯೦ ॥**

ವಾಸುಪೂಜ್ಯಜಿನೇಶ್ವರರ ತೀರ್ಥದಲ್ಲಿ ನರಪತಿಯೆಂಬ ಮಹಾರಾಜನಿದ್ದನು. ಅವನು ದೈವದತ್ತವಾದ ಭೋಗಗಳನ್ನನುಭವಿಸಿ ಪರಮವೈರಾಗ್ಯವನ್ನು ಹೊಂದಿ ಉತ್ಕೃಷ್ಟತಪಸ್ಸನ್ನು ಮಾಡಿ ಸತ್ತು ಪುಣ್ಯದಿಂದ ಮಧ್ಯಮಗ್ರೈವೇಯಕದಲ್ಲಿ ಅಹಮಿಂದ್ರನಾದನು.

**ಸಪ್ತವಿಂಶತಿವಾರ್ಧ್ಯಾಯುರ್ದಿವ್ಯಭೋಗಾನ್ಮನೋಹರಾನ್ ।**
**ಅನುಭೂಯ ತತಶ್ಚ್ಯುತ್ವಾ ಧರ್ಮತೀರ್ಥಕರಾಂತರೇ ॥ ೯೧ ॥**

**ಕೋಸಲೇ ವಿಷಯೇ ರಮ್ಯೇ ಸಾಕೇತನಗರೀಪತೇಃ ।**
**ಇಕ್ಷ್ವಾಕೋರ್ವಸುಮಿತ್ರಸ್ಯ ಭದ್ರಾಯಾಶ್ಚ ಸುತೋಽಭವತ್ ॥ ೯೨ ॥**

**ಮಘವಾನ್ನಾಮ ಪುಣ್ಯಾತ್ಮಾ ಭವಿಷ್ಯದ್ಭರತಾಧಿಪಃ ।**
**ಪಂಚಲಕ್ಷಸಮಾಜೀವೀ ಕಲ್ಯಾಣಪರಮಾಯುಷಾ ॥ ೯೩ ॥**

**ಸಾರ್ಧದ್ವಿಚತ್ವಾರಿಂಶಚ್ಚಾಪೋಚ್ಛ್ರಿತಿಃ ಕನಕದ್ಯುತಿಃ ।**
**ಷಟ್ಖಂಡಮಂಡಿತಾಂ ಪೃಥ್ವೀಂ ಪ್ರತಿಪಾಲ್ಯ ಪ್ರತಾಪವಾನ್ ॥ ೯೪ ॥**

**ಚತುರ್ದಶಮಹಾರತ್ನಭೂಷಣೋ ನಿಧಿನಾಯಕಃ ।**
**ನೃಖೇಚರಸುರಾಧೀಶಾನ್ನಮಯನ್ ಕ್ರಮಯೋರ್ಯುಗಮ್ ॥ ೯೫ ॥**

**ಸ್ವೋಕ್ತಪ್ರಮಾತ್ಮದೇವೀಭಿರನುಭೂಯ ಯಥೇಪ್ಸಿತಮ್ ।**
**ದಶಾಂಗಭೋಗಾನ್ ಭೂಯಿಷ್ಠಾನ್ ಸುನಿಷ್ಠಿತಮನೋರಥಃ ॥ ೯೬ ॥**

**ಸುಧೀರ್ಮನೋಹರೋದ್ಯಾನೇ ಸ ಕದಾಚಿದ್ಯದೃಚ್ಛಯಾ ।**
**ವಿಲೋಕ್ಯಾಭಯಘೋಷಾಖ್ಯಂ ಕೇವಲಾವಗಮದ್ಯುತಿಮ್ ॥ ೯೭ ॥**

**ತ್ರಿಃಪರೀತ್ಯಾಭಿವಂದ್ಯೈನಂ ಶ್ರುತ್ವಾ ಧರ್ಮಂ ತದಂತಿಕೇ ।**
**ವಿದಿತ್ವಾ ತತ್ತ್ವಸದ್ಭಾವಂ ವಿರಜ್ಯ ವಿಷಯೇಷ್ವಲಮ್ ॥ ೯೮ ॥**

**ಪ್ರಿಯಮಿತ್ರಾಯ ಪುತ್ರಾಯ ದತ್ವಾ ಸಾಮ್ರಾಜ್ಯಸಂಪದಮ್ ।**
**ಸ ಬಾಹ್ಯಾಭ್ಯಂತರಗ್ರಂಥಾಂಸ್ತ್ಯಕ್ತ್ವಾ ಸಂಯಮಮಾದದೌ ॥ ೯೯ ॥**

ಅವನು ಇಪ್ಪತ್ತೇಳು ಸಾಗರೋಪಮವರ್ಷಾಯುಷ್ಯವುಳ್ಳವನಾಗಿ ಮನೋಹರವಾದ ದಿವ್ಯಭೋಗಗಳನ್ನನುಭವಿಸಿ ಅಲ್ಲಿಂದ ಚ್ಯುತನಾಗಿ ಧರ್ಮತೀರ್ಥಂಕರರ ಅಂತರಕಾಲದಲ್ಲಿ ರಮಣೀಯವಾದ ಕೋಸಲದೇಶದಲ್ಲಿ ಅಯೋಧ್ಯಾ ನಗರಾಧಿಪತಿಯೂ ಇಕ್ಷ್ವಾಕುವಂಶಜನೂ ಆದ ವಸುಮಿತ್ರರಾಜನಿಗೂ ಆತನ ಪತ್ನಿಯಾದ ಭದ್ರಾದೇವಿಗೂ ಮಘವಾನೆಂಬ ಪುತ್ರನಾದನು. ಪುಣ್ಯಾತ್ಮನೂ ಮುಂದಿನ ಭರತಾಧಿಪತಿಯೂ ಮಂಗಳಕರವಾದ ಪರಮಾಯುಷ್ಯದಿಂದ ಐದುಲಕ್ಷ ವರ್ಷಗಳವರೆಗೆ ಜೀವಿಸುವವನೂ ನಲ್ವತ್ತೆರಡುವರೆ ಧನುಃಪರಿಮಿತವಾದ ಶರೀರೋನ್ನತಿಯುಳ್ಳವನೂ ಸುವರ್ಣಕಾಂತಿಯುಳ್ಳವನೂ ಷಟ್ಖಂಡಮಂಡಿತವಾದ ಪೃಥ್ವಿಯನ್ನು ಪರಿಪಾಲಿಸಿ ಪ್ರತಾಪವುಳ್ಳವನೂ ಹದಿನಾಲ್ಕು ಮಹಾರತ್ನಗಳು ಭೂಷಣಗಳಾಗಿರುವವನೂ ನವನಿಧಿಗಳಿಗೆ ಅಧಿಪತಿಯೂ ನರೇಂದ್ರರನ್ನೂ ಖೇಚರೇಂದ್ರರನ್ನೂ ಸುರೇಂದ್ರರನ್ನೂ ತನ್ನ ಚರಣಯುಗಲಕ್ಕೆ ಬಗ್ಗಿಸುವವನೂ ತೊಂಬತ್ತಾರುಸಾವಿರ ಮಂದಿ ತನ್ನ ದೇವಿಯರೊಡನೆ ಅಧಿಕವಾದ ದಶಾಂಗ ಭೋಗಗಳನ್ನು ಯಥೇಷ್ಟವಾಗಿ ಅನುಭವಿಸಿ ಪರಿಪೂರ್ಣವಾದ ಮನೋರಥವುಳ್ಳವನೂ ಪ್ರಾಜ್ಞನೂ ಆದ ಆ ಮಘವಾನನು ಒಂದಾನೊಂದು ಕಾಲದಲ್ಲಿ ಮನೋಹರೋದ್ಯಾನದಲ್ಲಿ ಕೇವಲಜ್ಞಾನವೆಂಬ ಕಾಂತಿಯುಳ್ಳ ಅಭಯಘೋಷಕೇವಲಿಯನ್ನು ಯದೃಚ್ಛೆಯಿಂದ ನೋಡಿ ಮೂರು ಪ್ರದಕ್ಷಿಣೆಯನ್ನು ಮಾಡಿ ಈ ಅಭಯ ಘೋಷಕೇವಲಿಯನ್ನು ವಂದಿಸಿ ಧರ್ಮವನ್ನು ಶ್ರವಣಮಾಡಿ ಆ ಕೇವಲಿಯ ಬಳಿಯಲ್ಲಿ ತತ್ತ್ವಸ್ವರೂಪವನ್ನು ತಿಳಿದು ಭೋಗೋಪಭೋಗವಿಷಯಗಳಲ್ಲಿ ಚೆನ್ನಾಗಿ ವಿರಕ್ತಿಯನ್ನು ಹೊಂದಿ ಪ್ರಿಯಮಿತ್ರನೆಂಬ ಪುತ್ರನಿಗೆ ಸಾಮ್ರಾಜ್ಯ ಸಂಪತ್ತನ್ನುಕೊಟ್ಟು ಅವನು ಬಾಹ್ಯಾಭ್ಯಂತರಪರಿಗ್ರಹವನ್ನು ತ್ಯಜಿಸಿ ಸಂಯಮವನ್ನು ಸ್ವೀಕರಿಸಿದನು. ದೀಕ್ಷೆಯನ್ನು ತೆಗೆದುಕೊಂಡನೆಂದು ಭಾವವು.

**ಶುದ್ಧಶ್ರದ್ಧಾನಚಾರಿತ್ರಃ ಶ್ರುತಸಂಪತ್ಸಮನ್ವಿತಃ ।**
**ದ್ವಿತೀಯಶುಕ್ಲಧ್ಯಾನೇನ ಘಾತಿತ್ರಯವಿಘಾತಕೃತ್ ॥ ೧೦೦ ॥**

**ನವಕೇವಲಲಬ್ಧೀದ್ಧೋ ಧರ್ಮವದ್ಧರ್ಮದೇಶನಾತ್ ।**
**ವಿನೇಯನಾಯಕಾನ್ನೀತ್ವಾ ನಿರ್ವಾಣಪದವೀಂ ಪರಾಮ್ ॥ ೧೦೧ ॥**

**ಧ್ಯಾನದ್ವಯಸಮುನ್ಮೂಲಿತಾಘಾತಿಕಚತುಷ್ಕಕಃ ।**
**ಪುಣ್ಯಾಪುಣ್ಯವಿನಿರ್ಮೋಕ್ಷಾದಕ್ಷಯಂ ಮೋಕ್ಷಮಾಕ್ಷಿಪತ್ ॥ ೧೦೨ ॥**

ಶುದ್ಧಸಮ್ಯಕ್ತ್ವಚಾರಿತ್ರಗಳುಳ್ಳವನೂ ಶಾಸ್ತ್ರಸಂಪತ್ತಿಯುಕ್ತನೂ ಏಕತ್ವವಿತರ್ಕವೆಂಬ ಎರಡನೆಯ ಶುಕ್ಲಧ್ಯಾನದಿಂದ ಜ್ಞಾನಾವರಣ ದರ್ಶನಾವರಣ ಅಂತರಾಯಗಳೆಂಬ ಮೂರು ಘಾತಿಕರ್ಮಗಳನ್ನು ನಾಶಮಾಡಿದವನೂ ನವಕೇವಲಲಬ್ಧಿಗಳಿಂದ ಪ್ರಕಾಶಮಾನನೂ ಧರ್ಮತೀರ್ಥಂಕರರಂತೆ ಧರ್ಮವನ್ನುಪದೇಶಿಸುವುದರಿಂದ

ಭವ್ಯೋತ್ತಮರನ್ನು ಉತ್ಕೃಷ್ಟವಾದ ನಿರ್ವಾಣಪದವಿಗೊಯ್ದು ಕೊನೆಯ ಎರಡು ಶುಕ್ಲಧ್ಯಾನಗಳಿಂದ ನಾಲ್ಕು ಅಘಾತಿಕರ್ಮಗಳನ್ನು ನಾಶಮಾಡಿದವನೂ ಆಗಿ ಪುಣ್ಯ ಪಾಪವಿಮೋಚನೆಯಿಂದ ಅಕ್ಷಯವಾದ ಮೋಕ್ಷವನ್ನು ಪಡೆದನು.

**ನರಪತಿರಿಹ ನಾಮ್ನಾ ವಾಸುಪೂಜ್ಯಸ್ಯ ತೀರ್ಥೇ ।**
**ಸಶಮಗುರುಚರಿತ್ರೇಣಾಹಮಿಂದ್ರೋ ಮಹರ್ದ್ಧಿಃ ।**
**ಅಭವದಖಿಲಪುಣ್ಯಶ್ಚಕ್ರವರ್ತೀ ತೃತೀಯ- ।**
**ಸ್ತದನು ಚ ಮಘವಾಖ್ಯೋ ಮುಖ್ಯಸೌಖ್ಯಂ ಸಮಾಪತ್ ॥ ೧೦೩ ॥**

ಈ ಭರತಕ್ಷೇತ್ರದಲ್ಲಿ ವಾಸುಪೂಜ್ಯತೀರ್ಥಂಕರರ ತೀರ್ಥದಲ್ಲಿ ನರಪತಿಯೆಂಬ ರಾಜನಾಗಿದ್ದು ಶಾಂತಿಯುಕ್ತವಾದ ಉತ್ತಮಚಾರಿತ್ರದಿಂದ ಮಹರ್ದ್ಧಿಯುಳ್ಳ ಅಹಮಿಂದ್ರನಾದನು. ಬಳಿಕ ಅಖಿಲಪುಣ್ಯವುಳ್ಳ ಮಘವಾನೆಂಬ ಮೂರನೆಯ ಚಕ್ರವರ್ತಿಯಾಗಿ ಮುಖ್ಯಸೌಖ್ಯವನ್ನು ಹೊಂದಿದನು. ನಿತ್ಯವಾದ ಮುಕ್ತಿಸುಖವನ್ನು ಹೊಂದಿದನೆಂದು ಭಾವವು.

**ಸಮನಂತರ ಏವಾಸ್ಯ ವಿನೀತಾನಗರೇಶಿನಃ ।**
**ನೃಪಸ್ಯಾನಂತವೀರ್ಯಸ್ಯ ಸೂರ್ಯವಂಶಶಿಖಾಮಣೇಃ ॥ ೧೦೪ ॥**

**ಸಹದೇವ್ಯಾಶ್ಚ ಸಂಭೂತಃ ಕಲ್ಪಾದಾಗತ್ಯ ಷೋಡಶಾತ್ ।**
**ಸೂನುಃ ಸನತ್ಕುಮಾರಾಖ್ಯಃ ಪ್ರಿಯಶ್ಚಕ್ರಾಂಕಿತಶ್ರಿಯಃ ॥ ೧೦೫ ॥**

ಈ ಮಘವಚ್ಚಕ್ರವರ್ತಿಯನಂತರದಲ್ಲಿಯೇ ಅಯೋಧ್ಯಾನಗರಾಧಿಪತಿಯೂ ಸೂರ್ಯವಂಶಶಿಖಾಮಣಿಯೂ ಆದ ಅನಂತವೀರ್ಯರಾಜನಿಗೂ ಆತನ ಪತ್ನಿಯಾದ ಸಹದೇವಿಗೂ ಚಕ್ರದಿಂದ ಕೂಡಿದ ಸಂಪತ್ತಿಯುಳ್ಳ ಸನತ್ಕುಮಾರನೆಂಬ ಪ್ರಿಯಪುತ್ರನು ಹದಿನಾರನೆಯ ಕಲ್ಪದಿಂದ ಬಂದು ಜನಿಸಿದನು.

**ಲಕ್ಷತ್ರಯಾಯುಃ ಪೂರ್ವೋಕ್ತಚಕ್ರವರ್ತಿಸಮುಚ್ಛ್ರಿತಿಃ ।**
**ಚಾಮೀಕರಚ್ಛವಿಃ ಸ್ವೇಚ್ಛಾವಶೀಕೃತವಸುಂಧರಃ ॥ ೧೦೬ ॥**

**ದಶಾಂಗಭೋಗಸಂಭೋಗಯೋಗಸಂತರ್ಪಿತೇಂದ್ರಿಯಃ ।**
**ಸಮರ್ಥಿತಾರ್ಥಿಸಂಕಲ್ಪಾನಲ್ಪಕಲ್ಪಮಹೀರುಹಃ ॥ ೧೦೭ ॥**

**ಹಿಮವತ್ಸಾಗರಾಘಾತಮಹೀಮಧ್ಯಮಹೀಭುಜಾಮ್ ।**
**ಆಧಿಪತ್ಯಂ ಸಮಾತನ್ವನ್ನನ್ವಭೂದಧಿಕಾಂ ಶ್ರಿಯಮ್ ॥ ೧೦೮ ॥**

ಮೂರು ಲಕ್ಷವರ್ಷಾಯುಷ್ಯವುಳ್ಳವನೂ ಹಿಂದೆ ಹೇಳಲ್ಪಟ್ಟ ಚಕ್ರವರ್ತಿಯಷ್ಟು (೪೨ ॥ ಧನುಸ್ಸು) ಉನ್ನತನೂ ಸ್ವರ್ಣಕಾಂತಿಯುಳ್ಳವನೂ ಸ್ವೇಚ್ಛೆಯಿಂದ ಪೃಥಿವಿಯನ್ನು ವಶಮಾಡಿಕೊಂಡಿರುವವನೂ ದಶಾಂಗಭೋಗಾನುಭವದ ಸಂಬಂಧದಿಂದ ಇಂದ್ರಿಯಗಳನ್ನು ತೃಪ್ತಿಪಡಿಸಿರುವವನೂ ಯಾಚಕರ ಸಂಕಲ್ಪಕ್ಕಿಂತ ಹೆಚ್ಚಾಗಿ ಕೊಡುವುದರಲ್ಲಿ ಕಲ್ಪವೃಕ್ಷಸಮಾನನೂ ಹಿಮವದ್ಗಿರಿ ಸಮುದ್ರಗಳು ತಡೆದಿರುವ ಭೂಮಧ್ಯದಲ್ಲಿರುವ ರಾಜರುಗಳ ಆಧಿಪತ್ಯವನ್ನು ನಡೆಸುವವನೂ ಆದ ಆ ಸನತ್ಕುಮಾರಚಕ್ರವರ್ತಿಯು ಅಧಿಕಸಂಪತ್ತಿಯನ್ನನುಭವಿಸಿದನು.

**ಪ್ರಯಾತ್ಯೇವಂ ಸುಖೇನಾಸ್ಯ ಕಾಲೇ ಸೌಧರ್ಮಸಂಸದಿ ।**
**ಸನತ್ಕುಮಾರದೇವೇಂದ್ರರೂಪಸ್ಯಾಸ್ತ್ಯತ್ರ ಜಿತ್ವರಃ ॥ ೧೦೯ ॥**

**ಕೋಪೀತಿ ದೇವೈಃ ಸಂಪೃಷ್ಟಃ ಸೌಧರ್ಮೇಂದ್ರೋಬ್ರವೀದಿದಮ್ ।**
**ಸನತ್ಕುಮಾರಶ್ಚಕ್ರೇಶೋ ಬಾಢಂ ಸರ್ವಾಂಗಸುಂದರಃ ॥ ೧೧೦ ॥**

**ಸ್ವಪ್ನೇಪಿ ಕೇನಚಿತ್ತಾದೃಗ್ದೃಷ್ಟಪೂರ್ವಃ ಕದಾಚನ ।**
**ನಾಸ್ತೀತಿ ತದ್ವಚಃ ಶ್ರುತ್ವಾ ಸದ್ಯಃ ಸಂಜಾತಕೌತಕೌ ॥ ೧೧೧ ॥**

**ದ್ವೌ ದೇವೌ ಭುವಮಾಗತ್ಯ ತದ್ರೂಪಾಲೋಕನೇಚ್ಛಯಾ ।**
**ದೃಷ್ಟ್ವಾ ತಂ ಶಕ್ರಸಂಪ್ರೋಕ್ತಂ ಸತ್ಯಮಿತ್ಯಾತ್ತಸಂಮದೌ ॥ ೧೧೨ ॥**

**ಸನತ್ಕುಮಾರಚಕ್ರೇಶಂ ನಿಜಾಗಮನಕಾರಣಮ್ ।**
**ಬೋಧಯಿತ್ವಾ ಸುಧೀಶ್ಚಕ್ರಿನ್ ಶೃಣು ಚಿತ್ತಂ ಸಮಾದಧತ್ ॥ ೧೧೩ ॥**

**ಯದಿ ರೋಗಜರಾದುಃಖಮೃತ್ಯವೋ ನ ಸ್ಯುರತ್ರ ತೇ ।**
**ಸೌಂದರ್ಯೇಣ ತ್ವಮದ್ಯೈವಮತಿಶೇಷೇ ಜಿನಾನಪಿ ॥ ೧೧೪ ॥**

**ಇತ್ಯುಕ್ತ್ವಾ ತೌ ಸುರೌ ಸೂಕ್ತಂ ಸ್ವಧಾಮ ಸಹಸಾ ಗತೌ ।**
**ಕಾಲಲಬ್ಧ್ಯೇವ ತದ್ವಾಚಾ ಪ್ರಬುದ್ಧೋ ಭೂಭುಜಾಂ ಪತಿಃ ॥ ೧೧೫ ॥**

**ರೂಪಯೌವನಸೌಂದರ್ಯಸಂಪತ್ಸೌಖ್ಯಾದಯೋ ನೃಣಾಮ್ ।**
**ವಿದ್ಯುಲ್ಲತಾವಿತಾನಾಚ್ಚ ಮನ್ಯೇ ಪ್ರಾಗೇವ ನಶ್ವರಾಃ ॥ ೧೧೬ ॥**

**ಇತ್ವರೀಃ ಸಂಪದಸ್ತ್ಯಕ್ತ್ವಾ ಜಿತ್ವರೋಹಮಿಹೈನಸಾಮ್ ।**
**ಸತ್ವರಂ ತನುಮುಜ್ಝಿತ್ವಾ ಗತ್ವರೋಸ್ಮ್ಯತ್ಯಕಾಯತಾಮ್ ॥ ೧೧೭ ॥**

**ಸ್ಮರನ್ ದೇವಕುಮಾರಾಖ್ಯಸುತೇ ರಾಜ್ಯಂ ನಿಯೋಜ್ಯ ಸಃ ।**
**ಶಿವಗುಪ್ತಜಿನೋಪಾಂತೇ ದೀಕ್ಷಾಂ ಬಹುಭಿರಾದದೇ ॥ ೧೧೮ ॥**

ಹೀಗೆ ಸುಖದಿಂದ ಈ ಸನತ್ಕುಮಾರನ ಕಾಲವು ಕಳೆಯುತ್ತಿರಲು ಒಂದಾನೊಂದು ದಿವಸ ಸೌಧರ್ಮೇಂದ್ರನ ಸಭೆಯಲ್ಲಿ ದೇವರ್ಕಳು "ಈ ಲೋಕದಲ್ಲಿ ಸನತ್ಕುಮಾರದೇವೇಂದ್ರನ (ಮೂರನೆಯ ಸ್ವರ್ಗದ ಇಂದ್ರನ) ರೂಪವನ್ನು ಜಯಿಸುವವನು ಯಾವನಾದರೂ ಇದ್ದಾನೋ ?" ಎಂದು ಸೌಧರ್ಮೇಂದ್ರನನ್ನು ಕೇಳಿದರು. ಆಗ ಸೌಧರ್ಮೇಂದ್ರನು ಆ ದೇವರ್ಕಳನ್ನು ಕುರಿತು "ಸನತ್ಕುಮಾರ ಚಕ್ರೇಶ್ವರನು ಬಹಳವಾಗಿ ಸರ್ವಾಂಗಸುಂದರನಾಗಿದ್ದಾನೆ. ಸ್ವಪ್ನದಲ್ಲಿಯೂ ಎಂದೂ ಯಾವನೂ ಅಂತಹ ಸುಂದರನನ್ನು ಮೊದಲು ನೋಡಿಲ್ಲ" ಎಂದನು. ಅವನ ಮಾತನ್ನು ಕೇಳಿ ಕುತೂಹಲವುಳ್ಳವರಾದ ಇಬ್ಬರು ದೇವರ್ಕಳು ಅವನ ರೂಪವನ್ನು ನೋಡುವ ಇಚ್ಛೆಯಿಂದ ಆಗಲೇ ಭೂಮಿಗಿಳಿದು ಬಂದು ಅವನನ್ನು ನೋಡಿ ದೇವೇಂದ್ರನು ಹೇಳಿದ ಮಾತು ಸತ್ಯವೆಂದು ಸಂತೋಷವನ್ನು ಹೊಂದಿದವರಾಗಿ ತಮ್ಮ ಆಗಮನದ ಕಾರಣವನ್ನು ಸನತ್ಕುಮಾರಚಕ್ರೇಶ್ವರನಿಗೆ ತಿಳಿಸಿ "ಚಕ್ರವರ್ತಿಯೇ ! ಪ್ರಾಜ್ಞನಾದ ನೀನು ಚಿತ್ತವನ್ನು ಸಮಾಧಾನಗೊಳಿಸಿ ಕೇಳು. ಇಲ್ಲಿ ನಿನಗೆ ರೋಗವೂ ಮುಪ್ಪೂ ದುಃಖವೂ ಮರಣವೂ ಇಲ್ಲದಿದ್ದರೆ ಈಗ ನೀನು ಸೌಂದರ್ಯದಿಂದ ಜಿನರನ್ನು ಕೂಡ ಮೀರುತ್ತಿ" ಎಂದು ಸತ್ಯವಚನವನ್ನು ನುಡಿದು ಆ ದೇವರ್ಕಳು ಶೀಘ್ರವಾಗಿ ತಮ್ಮ ನಿವಾಸಗಳಿಗೆ ಹೋದರು. ಕಾಲಲಬ್ಧಿಯಿಂದಲೋ ಎಂಬಂತೆ ಅವರ ಮಾತಿನಿಂದ ರಾಜಾಧಿರಾಜ–ಸನತ್ಕುಮಾರಚಕ್ರವರ್ತಿಯು ಎಚ್ಚತ್ತವನಾಗಿ " ಮನುಷ್ಯರ ರೂಪ ಯೌವನ ಸೌಂದರ್ಯ ಸಂಪತ್ತಿ ಸೌಖ್ಯ ಮೊದಲಾದವು ಮಿಂಚೆಂಬ ಲತೆಯ ಮೇಲುಕಟ್ಟಿಗಿಂತ ಮೊದಲೇ ನಾಶವಾಗುವುವೆಂದು ತಿಳಿಯುತ್ತೇನೆ. ಗಮನಶೀಲವಾದ ಸಂಪತ್ತಿಗಳನ್ನು ತ್ಯಜಿಸಿ ನಾನಿಲ್ಲಿ ಕರ್ಮಗಳನ್ನು ಜಯಿಸುವವನೂ ಶೀಘ್ರವಾಗಿ ದೇಹವನ್ನು ಬಿಟ್ಟು ಅಕಾಯತ್ವವನ್ನು ಹೊಂದುವವನೂ ಆಗುತ್ತೇನೆ" ಎಂದು ಸ್ಮರಿಸುವವನಾದ ಆ ಸನತ್ಕುಮಾರನು ದೇವಕುಮಾರನೆಂಬ ಪುತ್ರನಲ್ಲಿ ರಾಜ್ಯವನ್ನಿರಿಸಿ ಶಿವಗುಪ್ತಜಿನರ ಬಳಿಯಲ್ಲಿ ಅನೇಕರೊಡನೆ ದೀಕ್ಷೆಯನ್ನು ತೆಗೆದುಕೊಂಡನು.

**ಪಂಚಭಿಃ ಸದ್ವ್ರತೈಃ ಪೂಜ್ಯಃ ಪಾಲಿತೇರ್ಯಾದಿಪಂಚಕಃ ।**
**ಷಡಾವಶ್ಯಕವಶ್ಯಾತ್ಮಾ ನಿರುದ್ಧೇಂದ್ರಿಯಸಂತತಿಃ ॥ ೧೧೯ ॥**

**ನಿಶ್ಚೇಲಃ ಕೃತಭೂವಾಸೋ ದಂತಧಾವನವರ್ಜಿತಃ ।**
**ಉತ್ಥಾಯೈವೈಕದಾ ಭೋಜೀ ಸ್ಫುರನ್ಮೂಲಗುಣೈರಲಮ್ ॥ ೧೨೦ ॥**

**ತ್ರಿಕಾಲಯೋಗವೀರಾಸನೈಕಪಾರ್ಶ್ವಾದಿಭಾಷಿತೈಃ ।**
**ಉತ್ತರೈಶ್ಚ ಗುಣೈರ್ನಿತ್ಯಂ ಯಥಾಯೋಗ್ಯಂ ಸಮಾಚರನ್ ॥ ೧೨೧ ॥**

**ಕ್ಷಮಾವಾನ್ ಕ್ಷ್ಮೇವ ವಿಭಾಗೋ ವಾ ವಾರಿ ವಾ ಶ್ರಿತತಾಪನುತ್ ।**
**ಗಿರೀಶ ಇವ ನಿಷ್ಕಂಪೋ ನಿಃಸಂಗಃ ಪರಮಾಣುವತ್ ॥ ೧೨೨ ॥**

**ನಿರ್ಲೇಪೋಂಬುದವಾರ್ಗೋ ವಾ ಗಂಭೀರೋ ವಾಪಗಾಪತಿಃ ।**
**ಶಶೀವ ಸರ್ವಸಂಹ್ಲಾದೀ ಭಾನುಮಾನಿವ ಭಾಸ್ವರಃ ॥ ೧೨೩ ॥**

**ಬಾಹ್ಯಾಭ್ಯಂತರಸಂಶುದ್ಧಃ ಸುಧೌತಕಲಧೌತವತ್ ।**
**ಆದರ್ಶವತ್ಸಮಾದರ್ಶೀ ಸಂಕೋಚಾತ್ಕೂರ್ಮಸನ್ನಿಭಃ ॥ ೧೨೪ ॥**

**ಅಹಿರ್ವಾಸ್ವಕೃತಾವಾಸಃ ಕರೀವಾಶಬ್ದಯಾನಕಃ ।**
**ಸೃಗಾಲವತ್ಪುರಾಲೋಕೀ ಸುಶೂರೋ ರಾಜಸಿಂಹವತ್ ॥ ೧೨೫ ॥**

**ಸದಾ ವಿನಿದ್ರೋ ಮೃಗವತ್ಸೋಢಾಶೇಷಪರೀಷಹಃ ।**
**ಉಪಸರ್ಗಸಹೋ ವಿಕ್ರಿಯಾದ್ಯುಕ್ತವಿವಿಧರ್ದ್ಧಿಕಃ ॥ ೧೨೬ ॥**

**ಕ್ಷಪಕಶ್ರೇಣಿಮಾರುಹ್ಯ ಧ್ಯಾನದ್ವಯಸುಸಾಧನಃ ।**
**ಘಾತಿಕರ್ಮಾಣಿ ನಿರ್ಧೂಯ ಕೈವಲ್ಯಮುದಪಾದಯತ್ ॥ ೧೨೭ ॥**

ಐದು ಉತ್ತಮವ್ರತಗಳಿಂದ ಪೂಜ್ಯನೂ ಈರ್ಯಾಸಮಿತಿ ಮೊದಲಾದ ಪಂಚ ಸಮಿತಿಗಳನ್ನು ಪಾಲಿಸಿರುವವನೂ ಆರು ಆವಶ್ಯಕಕ್ರಿಯೆಗಳಿಂದ ವಶ್ಯವಾದ ಆತ್ಮನುಳ್ಳವನೂ ಇಂದ್ರಿಯಸಮೂಹವನ್ನು ತಡೆದಿರುವವನೂ ವಸ್ತ್ರವಿಲ್ಲದಿರುವವನೂ ಭೂಶಯನವುಳ್ಳವನೂ ದಂತಧಾವನವನ್ನು ತ್ಯಜಿಸಿರುವವನೂ ಒಂದು ಹೊತ್ತು ನಿಂತುಕೊಂಡೇ ಭೋಜನಮಾಡುವವನೂ ಮೂಲಗುಣಗಳಿಂದಲೂ ತ್ರಿಕಾಲಧ್ಯಾನ ವೀರಾಸನ ಏಕಪಾರ್ಶ್ವಶಯನ ಮೊದಲಾಗಿ ಹೇಳಲ್ಪಟ್ಟಿರುವ ಉತ್ತರಗುಣಗಳಿಂದಲೂ ಯಾವಾಗಲೂ ಅಧಿಕವಾಗಿ ಪ್ರಕಾಶಿಸುವವನೂ ಯೋಗ್ಯತಾನುಸಾರವಾಗಿ ಆ ಉತ್ತರಗುಣಗಳನ್ನು ಆಚರಿಸುವವನೂ ಭೂವಿಭಾಗದಂತೆ ಕ್ಷಮೆಯುಳ್ಳವನೂ ನೀರಿನಂತೆ ಆಶ್ರಯಿಸಿದವರ ತಾಪವನ್ನು ಹೋಗಲಾಡಿಸುವವನೂ ಮಹಾಮೇರುವಿನಂತೆ ನಿಶ್ಚಲನೂ ಪರಮಾಣುವಿನಂತೆ ನಿಸ್ಸಂಗನೂ ಆಕಾಶದಂತೆ ನಿರ್ಲೇಪನೂ ಸಮುದ್ರದಂತೆ ಗಂಭೀರನೂ ಚಂದ್ರನಂತೆ ಎಲ್ಲರಿಗೂ ಸಂತೋಷವನ್ನುಂಟುಮಾಡುವವನೂ ಸೂರ್ಯನಂತೆ ಪ್ರಕಾಶಮಾನನೂ ಶುದ್ಧಮಾಡಲ್ಪಟ್ಟ ಬಂಗಾರದಂತೆ ಬಾಹ್ಯಾಭ್ಯಂತರಪರಿಶುದ್ಧನೂ ಕನ್ನಡಿಯಂತೆ ಸಮದರ್ಶಿಯೂ ಸಂಕೋಚ-ಇಂದ್ರಿಯನಿಗ್ರಹದಿಂದ ಆಮೆಗೆ ಸದೃಶನೂ ಸರ್ಪದಂತೆ ತಾನು ಮಾಡಿದ ವಾಸಸ್ಥಾನವಿಲ್ಲದವನೂ ಆನೆಯಂತೆ ನಿಃಶಬ್ದವಾಗಿ ನಡೆಯುವವನೂ ನರಿಯಂತೆ ಮುಂದೆ ದಾರಿಯನ್ನು ನೋಡುವವನೂ ರಾಜಶ್ರೇಷ್ಠನಂತೆ ಒಳ್ಳೆಯ ಶೂರನೂ ಹರಿಣದಂತೆ ಯಾವಾಗಲೂ ನಿದ್ರೆಯಿಲ್ಲದವನೂ ಸಕಲಪರೀಷಹಗಳನ್ನು ಸಹಿಸಿದವನೂ ಉಪಸರ್ಗಗಳನ್ನು ಸಹಿಸುವವನೂ ವಿಕ್ರಿಯೆ ಮೊದಲಾದ ಋದ್ಧಿಗಳುಳ್ಳವನೂ ಕ್ಷಪಕಶ್ರೇಣಿಯನ್ನೇರಿ ಮೊದಲನೆಯ ಎರಡು ಶುಕ್ಲಧ್ಯಾನ ಸಾಧನವುಳ್ಳವನೂ ಆಗಿ ಘಾತಿಕರ್ಮಗಳನ್ನು ನಾಶಮಾಡಿ ಕೇವಲತ್ವ(ಕೇವಲಜ್ಞಾನ)ವನ್ನುಂಟುಮಾಡಿಕೊಂಡನು.

**ಪುನರ್ವಿಹೃತ್ಯ ಸದ್ಧರ್ಮದೇಶನಾದ್ವಿಷಯಾನ್ಬಹೂನ್ ।**
**ವಿನೇಯಾನ್ಮುಕ್ತಿಸನ್ಮಾರ್ಗಂ ದುರ್ಗಂ ದುರ್ಮಾರ್ಗವರ್ತಿನಾಮ್ ॥**

**ಪಶ್ಚಾದಂತರ್ಮುಹೂರ್ತಾಯುರ್ಯೋಗಂ ರುದ್ಧ್ವಾ ತ್ರಿಭೇದಕಮ್ ।**
**ಸರ್ವಕರ್ಮಕ್ಷಯಾವಾಪ್ಯಮವಾಪನ್ಮೋಕ್ಷಮಕ್ಷಯಮ್ ॥ ೧೨೯ ॥**

ಬಳಿಕ ಅನೇಕದೇಶಗಳನ್ನು ವಿಹರಿಸಿ ದುರ್ಮಾರ್ಗವರ್ತಿಗಳಿಗೆ ದುರ್ಗವಾಗಿರುವ ಮುಕ್ತಿಮಾರ್ಗವನ್ನು ಸದ್ಧರ್ಮೋಪದೇಶದಿಂದ ತೋರಿಸಿಕೊಟ್ಟು ಅವರನ್ನು ಭವ್ಯ-ಶಿಷ್ಯರನ್ನಾಗಿ ಮಾಡಿ ಬಳಿಕ ಅಂತರ್ಮುಹೂರ್ತಾಯುಷ್ಯವಿರುವಾಗ ಮನೋವಾಕ್ಕಾಯ-ತ್ರಿವಿಧಯೋಗವನ್ನು ತಡೆದು ಸರ್ವಕರ್ಮಕ್ಷಯದಿಂದ ಪಡೆಯಲ್ಪಡತಕ್ಕುದಾದ ಅಕ್ಷಯಮೋಕ್ಷವನ್ನು ಪಡೆದನು.

**ಜಿತ್ವಾ ವಿಚಿತ್ರವಪುಷೇಂದ್ರಸನತ್ಕುಮಾರ- ।**
**ಮಾಕ್ರಮ್ಯ ವಿಕ್ರಮಬಲೇನ ದಿಶಾಂ ಚ ಚಕ್ರಮ್ ।**
**ಚಕ್ರೇಣ ಧರ್ಮವಿಹಿತೇನ ಹತಾಘಚಕ್ರೋ ।**
**ದಿಶ್ಯಾತ್ಸ ವಃ ಶ್ರಿಯಮಿಹಾಶು ಸನತ್ಕುಮಾರಃ ॥ ೧೩೦ ॥**

ಯಾವನು ವಿಚಿತ್ರವಾದ ಶರೀರದಿಂದ ಸನತ್ಕುಮಾರೇಂದ್ರನನ್ನು ಜಯಿಸಿ ಪರಾಕ್ರಮಬಲದಿಂದ ದಿಕ್ಕುಗಳ ಮಂಡಲವನ್ನೂ ಆಕ್ರಮಿಸಿ ಧರ್ಮಚಕ್ರದಿಂದ ಪಾಪಸಮೂಹವನ್ನು ನಾಶಮಾಡಿದನೋ ಆ ಸನತ್ಕುಮಾರನು ಇಲ್ಲಿ ನಿಮ್ಮಗಳಿಗೆ ಶೀಘ್ರವಾಗಿ ಸಂಪತ್ತಿಯನ್ನು ಕೊಡಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಧರ್ಮತೀರ್ಥಕರ ಸುದರ್ಶನ ಪುರುಷಸಿಂಹ ಮಧುಕ್ರೀಡ ಮಘವತ್ಸನತ್ಕುಮಾರಪುರಾಣಂ ನಾಮೈಕಷಷ್ಟಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಧರ್ಮತೀರ್ಥಕರ, ಸುದರ್ಶನ, ಪುರುಷಸಿಂಹ, ಮಧುಕ್ರೀಡ,
ಮಘವತ್ಸನತ್ಕುಮಾರಪುರಾಣವೆಂಬ ಅರವತ್ತೊಂದನೆಯ ಪರ್ವವು ಸಮಾಪ್ತವಾದುದು.

---

॥ ಶ್ರೀ ಶಾಂತಿಜಿನಾಯ ನಮಃ ॥

# ಅಥ ಶಾಂತಿತೀರ್ಥಂಕರಪುರಾಣಂ

**ಬುಧ್ವಾ ಸಪರ್ಯಯಂ ಸರ್ವಂ ಬೋಧ್ಯಾಭಾವಾದ್ವಪಚ್ಛಿದಃ ।**
**ಯಸ್ಯಾವಬೋಧೋ ವಿಶ್ರಾಂತಃ ಸ ಶಾಂತಿಃ ಶಾಂತಯೇಸ್ತು ವಃ ॥ ೧ ॥**

ಯಾವನ ಜ್ಞಾನವು ಪರ್ಯಾಯಸಹಿತವಾದ ಸಕಲವಸ್ತುವನ್ನೂ ತಿಳಿದು ಮತ್ತೆ ತಿಳಿಯುವುದಿಲ್ಲದಿರುವುದರಿಂದ ವಿಶ್ರಾಂತಿಯನ್ನು ಹೊಂದಿತೋ ಅಂತಹ ಭವ ವಿನಾಶಕನಾದ ಶಾಂತೀಶ್ವರನು ನಿಮ್ಮಗಳಿಗೆ ಶಾಂತಿಗೋಸ್ಕರ ಇರಲಿ.

**ವಕ್ತೃಶ್ರೋತೃಕಥಾಭೇದಾನ್ ವರ್ಣಯಿತ್ವಾ ಪುರಾ ಬುಧಃ ।**
**ಪಶ್ಚಾದ್ಧರ್ಮಕಥಾಂ ಬ್ರೂಯಾದ್ಗಂಭೀರಾರ್ಥಾಂ ಯಥಾರ್ಥದೃಕ್॥ ೨ ॥**

ಯಥಾರ್ಥವಿಷಯವನ್ನು ಕಂಡಿರುವ ಪ್ರಾಜ್ಞನು ಮೊದಲು ವಕ್ತೃವಿನ ಮತ್ತು ಶ್ರೋತೃವಿನ ಲಕ್ಷಣವನ್ನೂ ಕಥಾಭೇದಗಳನ್ನೂ ವರ್ಣಿಸಿ ಬಳಿಕ ಗಂಭೀರವಾದ ಅರ್ಥವುಳ್ಳ ಧರ್ಮಕಥೆಯನ್ನು ಹೇಳಬೇಕು.

**ವಿದ್ವತ್ವಂ ಸಚ್ಚರಿತ್ರತ್ವಂ ದಯಾಲುತ್ವಂ ಪ್ರಗಲ್ಭತಾ ।**
**ವಾಕ್ಸೌಭಾಗ್ಯೇಂಗಿತಜ್ಞತ್ವೇ ಪ್ರಶ್ನಕ್ಷೋದಸಹಿಷ್ಣುತಾ ॥ ೩ ॥**

**ಸೌಮುಖ್ಯಂ ಲೋಕವಿಜ್ಞಾನಂ ಖ್ಯಾತಿಪೂಜಾದ್ಯನೀಕ್ಷಣವಮ್ ।**
**ಮಿತಾಭಿಧಾನಮಿತ್ಯಾದಿಗುಣಾ ಧರ್ಮೋಪದೇಷ್ಟರಿ ॥ ೪ ॥**

ಪಾಂಡಿತ್ಯ, ಸದಾಚಾರತ್ವ, ದಯಾಲುತ್ವ, ನೈಪುಣ್ಯ, ವಚನಸಂಪತ್ತಿ, ಇಂಗಿತಜ್ಞತೆ, ಪ್ರಶ್ನೆಗಳ ಕಷ್ಟವನ್ನು ಸಹಿಸುವಿಕೆ, ಒಳ್ಳೆಯ ಮುಖಭಾವ, ಲೌಕಿಕವಿಷಯಗಳ ತಿಳುವಳಿಕೆ, ಖ್ಯಾತಿಪೂಜೆಗಳಲ್ಲಿ ದೃಷ್ಟಿಯಿಲ್ಲದಿರುವಿಕೆ, ಮಿತಭಾಷಣ ಮೊದಲಾದ ಗುಣಗಳು ಉಪದೇಶಕನಲ್ಲಿರಬೇಕು.

**ತತ್ತ್ವಜ್ಞೇಪ್ಯಪಚಾರಿತ್ರೇ ವಕ್ತರ್ಯೇತತ್ಕಥಂ ಸ್ವಯಮ್ ।**
**ನ ಚರೇದಿತಿ ತತ್ಪ್ರೋಕ್ತಂ ನ ಗೃಹ್ಣಂತಿ ಪೃಥಗ್ಜನಾಃ ॥ ೫ ॥**

ಉಪದೇಶಕನು ತತ್ತ್ವಜ್ಞಾನಿಯಾಗಿದ್ದರೂ ಚಾರಿತ್ರಹೀನ–ದುರಾಚಾರಿಯಾಗಿದ್ದರೆ ಮೂಢಜನರು "ಇದನ್ನು ತಾನೇಕೆ ಆಚರಿಸುವುದಿಲ್ಲ?" ಎಂದು ಅವನು ಹೇಳಿದುದನ್ನು ಗ್ರಹಣಮಾಡುವುದಿಲ್ಲ.

**ಸಚ್ಚರಿತ್ರೇಪ್ಯಶಾಸ್ತ್ರಜ್ಞೇ ವಕ್ತರ್ಯಲ್ಪಶ್ರುತೋದ್ಧತಾಃ ।**
**ಸಹಾಸಮುಕ್ತಸನ್ಮಾರ್ಗೇ ವಿದಧತ್ಯವಧೀರಣಾಮ್ ॥ ೬ ॥**

ಹೇಳುವ–ಉಪದೇಶಕನು ಸದಾಚಾರಿಯಾಗಿದ್ದರೂ ಶಾಸ್ತ್ರಜ್ಞಾನಿಯಲ್ಲದಿದ್ದರೆ ಸ್ವಲ್ಪವಾದ ಶಾಸ್ತ್ರಜ್ಞಾನದಿಂದ ಗರ್ವಿತರಾಗಿರುವವರು ಪೂರ್ವೋಕ್ತವಾದ ಸನ್ಮಾರ್ಗ–ಮುಕ್ತಿಮಾರ್ಗದಲ್ಲಿ ಪರಿಹಾಸಯುಕ್ತವಾದ ತಿರಸ್ಕಾರವನ್ನು ಮಾಡುತ್ತಾರೆ. ವಕ್ತೃವಿನ ಅಜ್ಞತೆಯಿಂದ ಮುಕ್ತಿಮಾರ್ಗಕ್ಕೆ ತಿರಸ್ಕಾರವುಂಟಾಗುವುದೆಂದು ಭಾವವು.

**ವಿದ್ವತ್ವಸಚ್ಚರಿತ್ರತ್ವೇ ಮುಖ್ಯಂ ವಕ್ತರಿ ಲಕ್ಷಣಮ್ ।**
**ಅಬಾಧಿತಸ್ವರೂಪಂ ವಾ ಜೀವಸ್ಯ ಜ್ಞಾನದರ್ಶನೇ ॥ ೭ ॥**

ಜೀವಕ್ಕೆ ಅಬಾಧಿತವಾದ ಸ್ವರೂಪವುಳ್ಳ ಜ್ಞಾನದರ್ಶನಗಳು ಮುಖ್ಯಲಕ್ಷಣಗಳಾಗಿರುವಂತೆ, ವಕ್ತೃವಿನಲ್ಲಿ ಪಾಂಡಿತ್ಯವೂ ಸದಾಚಾರತ್ವವೂ ಮುಖ್ಯಲಕ್ಷಣಗಳಾಗಿವೆ.

**ಯುಕ್ತಮೇತದಯುಕ್ತಂ ಚೇತ್ಯುಕ್ತಂ ಸಮ್ಯಗ್ವಿಚಾರಯನ್ ।**
**ಸ್ಥಾನೇ ಕುರ್ವನ್ನುಪಾಲಂಭಂ ಭಕ್ತ್ಯಾ ಸೂಕ್ತಂ ಸಮಾದಧತ್ ॥ ೮ ॥**

**ಅಸಾರಪ್ರಾಗ್ಗೃಹಿತಾರ್ಥವಿಶೇಷೇವಿಹಿತಾದರಃ ।**
**ಅಸಹನ್ ಸ್ಖಲಿತಂ ಸ್ಥಾನೇ ಗುರುಭಕ್ತಃ ಕ್ಷಮಾಪರಃ ॥ ೯ ॥**

**ಸಂಸಾರಾಭೀರುರಾಪ್ತೋಕ್ತವಾಗ್ಧಾರಣಪರಾಯಣಃ ।**
**ಪಶುವನ್ಮೃದ್ಹಂಸಸಂಪ್ರೋಕ್ತಗುಣಃ ಶ್ರೋತಾ ನಿಗದ್ಯತೇ ॥ ೧೦ ॥**

ಯಾವನು ಬೇರೆಯವರು ಹೇಳಿದ ವಿಷಯವನ್ನು "ಇದು ಯುಕ್ತವಾದುದು, ಇದು ಅಯುಕ್ತವಾದುದು" ಎಂದು ಚೆನ್ನಾಗಿ ವಿಚಾರಮಾಡುವವನೂ ಯೋಗ್ಯವಿಷಯವನ್ನು ಗ್ರಹಣಮಾಡುವವನೂ ಒಳ್ಳೆಯ ಮಾತನ್ನು ಭಕ್ತಿಯಿಂದ ಪರಿಗ್ರಹಿಸುವವನೂ ಮೊದಲು ಗ್ರಹಿಸಿದ ಅಸಾರವಾದ ಅರ್ಥವಿಶೇಷದಲ್ಲಿ ಪ್ರೀತಿಯನ್ನು ಮಾಡದಿರುವವನೂ ಯೋಗ್ಯವಿಷಯದಲ್ಲಿ ತಪ್ಪನ್ನು ಸಹಿಸದಿರುವವನೂ ಗುರುಭಕ್ತನೂ ಕ್ಷಮಾಪರನೂ ಹೆಚ್ಚಾಗಿ ಭವಭೀತಿಯುಳ್ಳವನೂ ಚೆನ್ನಾಗಿ ಉಪದೇಶಿಸಲ್ಪಟ್ಟ ಮಾತನ್ನು ಧಾರಣಮಾಡುವುದರಲ್ಲಿ ತತ್ಪರನೂ ಪಶುವಿನಂತೆ ಉಪಕಾರಸ್ಮರಣ, ಮಣ್ಣಿನಂತೆ ಮಾರ್ದವ, ಹಂಸದಂತೆ ನೈರ್ಮಲ್ಯಗುಣಗಳುಳ್ಳವನೂ ಆಗಿರುತ್ತಾನೋ ಅವನು ಶ್ರೋತೃವೆಂದು ಹೇಳಲ್ಪಡುತ್ತಾನೆ.

**ಜೀವಾಜೀವಾದಿತತ್ತ್ವಾರ್ಥೋ ಯತ್ರ ಸಮ್ಯಗ್ನಿರೂಪ್ಯತೇ ।**
**ತನುಸಂಸೃತಿಭೋಗೇಷು ನಿರ್ವೇದಶ್ಚ ಹಿತೈಷಿಣಾಮ್ ॥ ೧೧ ॥**

**ದಾನಪೂಜಾತಪಃಶೀಲವಿಶೇಷಾಶ್ಚ ವಿಶೇಷತಃ ।**
**ಬಂಧಮೋಕ್ಷೌ ತಯೋರ್ಹೇತೂ ಫಲೇ ಚಾಸುಭೃತಾಂ ಪೃಥಕ್॥ ೧೨ ॥**

**ಘಟಾಮಟತಿ ಯುಕ್ತ್ಯೈವ ಸದಸತ್ತ್ವಾದಿಕಲ್ಪನಾ ।**
**ಖ್ಯಾತಾ ಪ್ರಾಣಿದಯಾ ಯತ್ರ ಮಾತೇವ ಹಿತಕಾರಿಣೀ ॥ ೧೩ ॥**

**ಸರ್ವಸಂಗಪರಿತ್ಯಾಗಾದ್ಯತ್ರ ಯಾಂತ್ಯಂಗಿನಃ ಶಿವಮ್ ।**
**ತತ್ತ್ವಧರ್ಮಕಥಾ ಸಾ ಸ್ಯಾನ್ನಾಮ್ನಾ ಧರ್ಮಕಥಾಪರಾ ॥ ೧೪ ॥**

ಯಾವುದರಲ್ಲಿ ಜೀವಾದಿತತ್ತ್ವಾರ್ಥವೂ ಹಿತವನ್ನು ಬಯಸುವವರಿಗೆ ಶರೀರ ಸಂಸಾರ ಭೋಗಗಳಲ್ಲಿ ವೈರಾಗ್ಯವೂ ವಿಶೇಷವಾದ ದಾನ ಪೂಜಾ ತಪಸ್ಸು ಶೀಲಗಳೂ ಪ್ರಾಣಿಗಳ ಬಂಧಮೋಕ್ಷಗಳೂ ಅವುಗಳಿಗೆ ಕಾರಣಗಳೂ ಅವುಗಳ ಫಲಗಳೂ ಬೇರೆಬೇರೆಯಾಗಿ ವಿಶೇಷವಾಗಿ ವರ್ಣಿಸಲ್ಪಡುವುವೋ ಯಾವುದರಲ್ಲಿ ಅಸ್ತಿತ್ವ ನಾಸ್ತಿತ್ವವೇ ಮೊದಲಾದ ಕಲ್ಪನೆಯು ಯುಕ್ತವಾಗಿಯೇ ಸಮನ್ವಯವಾಗುವುದೋ ಯಾವುದರಲ್ಲಿ ಪ್ರಾಣಿದಯೆಯು, ತಾಯಿಯಂತೆ, ಹಿತಕಾರಿಣಿಯಾಗಿ ಪ್ರಸಿದ್ಧವಾಗಿದೆಯೋ ಯಾವುದರಲ್ಲಿ ಪ್ರಾಣಿಗಳು ಸರ್ವಸಂಗಪರಿತ್ಯಾಗದಿಂದ ಮುಕ್ತಿಪದವನ್ನು ಹೊಂದುತ್ತವೋ ಅದು ನಿಜವಾದ ಧರ್ಮಕಥೆಯಾಗಿರುವುದು. ಬೇರೆ ಕಥೆಯು ಹೆಸರಿನಿಂದ ಮಾತ್ರ ಧರ್ಮಕಥೆಯಾಗಿರುವುದು.

**ಏವಂ ಪೃಥಗ್ವಿನಿರ್ದಿಶ್ಯ ವಕ್ತ್ರಾದಿತ್ರಯಲಕ್ಷಣಮ್ ।**
**ಅತಃ ಪರಂ ಪ್ರವಕ್ಷ್ಯಾಮಿ ಶಾಂತೀಶಶ್ಚರಿತಂ ಮಹತ್ ॥ ೧೫ ॥**

ಈ ರೀತಿಯಾಗಿ ವಕ್ತೃಶ್ರೋತೃ ಧರ್ಮಕಥೆಗಳ–ಮೂರರ ಲಕ್ಷಣವನ್ನು ಬೇರೆ ಬೇರೆಯಾಗಿ ಹೇಳಿ ಇಲ್ಲಿಂದ ಮುಂದೆ ಶಾಂತೀಶ್ವರರ ದೊಡ್ಡದಾದ ಚರಿತವನ್ನು ಹೇಳುವೆನು.

**ಅಥಾಸ್ಯ ದ್ವೀಪನಾಥಸ್ಯ ಜಂಬೂದ್ವೀಪಮಹೀಪತೇಃ ।**
**ಲವಣಾಂಭೋಧಿನೀಲಾಂಭೋಲಸದ್ವಿಪುಲವಾಸಸಃ ॥ ೧೬ ॥**

**ವಕ್ತಲೀಲಾಂ ದಧದ್ರಾಷ್ಟಮಭೀಷ್ಟಂ ಭರತಾಹ್ವಯಮ್ ।**
**ಷಟ್ಖಂಡಮಂಡಿತಂ ವಾರ್ಧಿಹಿಮವನ್ಮಧ್ಯಸಂಶ್ರಿತಮ್ ॥ ೧೭ ॥**

ಅನಂತರದಲ್ಲಿ ದ್ವೀಪಗಳಿಗೊಡೆಯನೂ ಲವಣಸಮುದ್ರದ ನೀಲಜಲವೆಂಬ ಪ್ರಕಾಶಮಾನವೂ ವಿಶಾಲವೂ ಆದ ವಸ್ತ್ರವುಳ್ಳವನೂ ಆದ ಜಂಬೂದ್ವೀಪವೆಂಬ ಮಹೀಪತಿ–ರಾಜನಿಗೆ, ಷಟ್ಖಂಡಗಳಿಂದ ಭೂಷಿತವೂ ಪೂರ್ವ ದಕ್ಷಿಣ ಪಶ್ಚಿಮ ದಿಕ್ಕುಗಳಲ್ಲಿರುವ ಸಮುದ್ರಗಳ ಮತ್ತು ಉತ್ತರದಿಕ್ಕಿನಲ್ಲಿರುವ ಹಿಮವತ್ಪರ್ವತದ ಮಧ್ಯದಲ್ಲಿರುವುದೂ ಅಭೀಷ್ಟವೂ ಭರತವೆಂಬ ಹೆಸರುಳ್ಳದೂ ಆದ ಭೂಭಾಗವು ಮುಖದ ಲೀಲೆಯನ್ನು ಧರಿಸುತ್ತದೆ. ಜಂಬೂದ್ವೀಪಕ್ಕೆ ಭರತಖಂಡವು ಮುಖ ದಂತಿದೆಯೆಂದು ಭಾವವು.

**ಭೋಗಭೂಭೂತಭೋಗೋಽಪಿ ದಶಾಂಗಶ್ಚಕ್ರಿಣಾಮಪಿ ।**
**ತತ್ರ ತೀರ್ಥಕೃತಾಂ ಚೈಶ್ಯಂ ಸಿದ್ಧಿಶ್ಚಾಘಾತಿಸಂಕ್ಷಯಾತ್ ॥ ೧೮ ॥**

ಆ ಭರತಖಂಡದಲ್ಲಿ ಭೋಗಭೂಮಿಗಳಲ್ಲಾದ ದಶವಿಧಭೋಗವೂ ಚಕ್ರವರ್ತಿಗಳ ಮತ್ತು ತೀರ್ಥಂಕರರ ಪ್ರಭುತ್ವವೂ ಅಘಾತಿಕರ್ಮಕ್ಷಯದಿಂದ ಮುಕ್ತಿಯೂ ಉಂಟಾಗುತ್ತವೆ.

**ತಸ್ಮಾತ್ತನ್ನಾಕಲೋಕಾಚ್ಚ ವರಿಷ್ಠಂ ವರ್ಣ್ಯತೇ ಬುಧೈಃ ।**
**ಐರಾವತಸಮಂ ವೃದ್ಧಿಹಾನಿಭ್ಯಾಂ ಪರಿವರ್ತನಾತ್ ॥ ೧೯ ॥**

ಆದುದರಿಂದ ವಿದ್ವಾಂಸರು ಇದು ಸ್ವರ್ಗಲೋಕಕ್ಕಿಂತಲೂ ಶ್ರೇಷ್ಠವೆಂದು ವರ್ಣಿಸುತ್ತಾರೆ. ಇದು ವೃದ್ಧಿಯಿಂದಲೂ ಹಾನಿಯಿಂದಲೂ ಹೆಚ್ಚುಕಡಮೆಯಾಗುವುದರಿಂದ ಐರಾವತಕ್ಷೇತ್ರಕ್ಕೆ ಸಮಾನವಾಗಿದೆ.

**ಮಧ್ಯೇ ತಸ್ಯ ಗಿರಿರ್ಭಾತಿ ಭರತಾರ್ಧವಿಭಾಗಕೃತ್ ।**
**ಪೂರ್ವಾಪರಾಯತಸ್ತುಂಗೋ ಯಶೋರಾಶಿರಿವೋಜ್ಜ್ವಲಃ ॥ ೨೦ ॥**

ಆ ಭರತಖಂಡದ ಮಧ್ಯದಲ್ಲಿ ಅದನ್ನು ವಿಭಾಗಿಸುವುದೂ ಪೂರ್ವಪಶ್ಚಿಮ ದಿಕ್ಕುಗಳಿಗೆ ದೀರ್ಘವೂ ಉನ್ನತವೂ ಯಶಸ್ಸಿನ ರಾಶಿಯಂತೆ ಪ್ರಕಾಶಮಾನವೂ ಆದ ಪರ್ವತವು ಪ್ರಕಾಶಿಸುತ್ತದೆ.

**ಸ್ವರ್ಗಲೋಕಜಯಾಜ್ಜಾತತೋಷಾಯಾ ವಸುಧಾಸ್ತ್ರಿಯಃ ।**
**ಪುಂಜೀಭೂತಪ್ರಹಾಸೋ ವಾ ರಾಜತೇ ರಾಜತಾಚಲಃ ॥ ೨೧ ॥**

ಸ್ವರ್ಗಲೋಕವನ್ನು ಜಯಿಸಿದುದರಿಂದುಂಟಾದ ಸಂತೋಷವುಳ್ಳ ಭೂಮಿಯೆಂಬಸ್ತ್ರೀಯ ರಾಶಿಯಾದ ನಗೆಯಂತೆ ಆ ಬೆಳ್ಳಿಬೆಟ್ಟವು ಪ್ರಕಾಶಿಸುತ್ತದೆ.

**ಸಫಲಾ ಸರ್ವದಾ ವೃಷ್ಟಿರ್ಮಮೋಪರಿ ನ ಜಾತು ಚಿತ್ ।**
**ಯುಷ್ಮಾಕಮಿತಿ ಶೈಲೇಂದ್ರಾನ್ ಹಸತೀವ ಸ್ವತೇಜಸಾ ॥ ೨೨ ॥**

"ಯಾವಾಗಲೂ ನನ್ನ ಮೇಲೆ ಬೀಳುವ ಮಳೆಯು ಸಫಲವಾಗುತ್ತದೆ. ನಿಮ್ಮಗಳ ಮೇಲೆ ಬೀಳುವ ಮಳೆಯು ಎಂದೂ ಸಫಲವಾಗುವುದಿಲ್ಲ" ಹೀಗೆಂದು ತನ್ನ ತೇಜಸ್ಸಿನಿಂದ ಆ ವಿಜಯಾರ್ಧವು ಮಹಾಮೇರುಗಳನ್ನು ಪರಿಹಾಸ್ಯಮಾಡುತ್ತದೆಯೋ ಎಂಬಂತಿದೆ.

**ಚಲಸ್ವಭಾವೇ ಕುಟಿಲೇ ಜಲಾಢ್ಯೇ ಜಲಧಿಪ್ರಿಯೇ ।**
**ಗುಹಾಸ್ಯಾದಿತಿ ನದ್ಯೌ ಯೋವಮೀದಿವ ಜುಗುಪ್ಸಯಾ ॥ ೨೩ ॥**

ಗಂಗಾಸಿಂಧುನದಿಗಳು ಚಂಚಲಸ್ವಭಾವವುಳ್ಳವೂ ವಕ್ರಗಳೂ ತುಂಬಿದ ನೀರುಳ್ಳವೂ ಸಮುದ್ರಕ್ಕೆ ಪ್ರಿಯಗಳೂ ಆಗಿರುತ್ತವೆಂದು ಆ ವಿಜಯಾರ್ಧವು ಜುಗುಪ್ಸೆಯಿಂದ ಅವುಗಳನ್ನು ಗುಹೆಯೆಂಬ ಮುಖದಿಂದ ವಮನಮಾಡಿತೋ ಎಂಬಂತಿದ್ದಿತು.

**ದೇವವಿದ್ಯಾಧರೈಃ ಸೇವ್ಯಃ ಸದಾ ಸ್ವಾಶ್ರಯವರ್ತಿಭಿಃ ।**
**ಸರ್ವೇಂದ್ರಿಯಸುಖಸ್ಥಾನಮೇಷ ಚಕ್ರಿಣಮನ್ವಗಾತ್ ॥ ೨೪ ॥**

ತನ್ನ ಆಶ್ರಯದಲ್ಲಿರುವ ದೇವರ್ಕಳಿಂದಲೂ ವಿದ್ಯಾಧರರಿಂದಲೂ ಯಾವಾಗಲೂ ಸೇವಿಸಲ್ಪಡತಕ್ಕ ಈ ವಿಜಯಾರ್ಧಪರ್ವತವು ಸರ್ವೇಂದ್ರಿಯಗಳಿಗೆ ಸುಖಸ್ಥಾನನಾದ ಚಕ್ರವರ್ತಿಯನ್ನು ಅನುಕರಣಮಾಡಿತು. ಚಕ್ರವರ್ತಿಯನ್ನು ಹೋಲುತ್ತಿದ್ದಿತೆಂದು ಭಾವವು.

**ಅವಾಚ್ಯಾಂ ಚಕ್ರವಾಲಾಂತಂ ಪೂಃಶ್ರೇಣ್ಯಾಂ ರಥನೂಪುರಮ್ ।**
**ಸ್ವರ್ಗಲೋಕಮಿವ ವ್ಯೋಮ ಕುರ್ವತೀ ತತ್ರ ಕೇತುಭಿಃ ॥ ೨೫ ॥**

ಆ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ಬಾವುಟಗಳಿಂದ ಆಕಾಶವನ್ನು ಸ್ವರ್ಗಲೋಕವನ್ನಾಗಿ ಮಾಡುತ್ತದೆಯೋ ಎಂಬಂತಿರುವ ರಥನೂಪುರ ಚಕ್ರವಾಲವೆಂಬ ನಗರವಿದೆ.

**ವೇಷ್ಟಿತಾ ರತ್ನಸಾಲೇನ ಯಾ ಪಯೋಧರಚುಂಬಿನಾ ।**
**ರತ್ನವೇದಿಕಯೇವೇಯಂ ಜಂಬೂದ್ವೀಪವಸುಂಧರಾ ॥ ೨೬ ॥**

ಈ ಜಂಬೂದ್ವೀಪಪೃಥ್ವಿಯು ರತ್ನವೇದಿಕೆಯಿಂದ ಸುತ್ತಲ್ಪಟ್ಟಿರುವಂತೆ ಆ ರಥನೂಪುರಚಕ್ರವಾಲಪುರವು ಮೇಘವನ್ನು ಚುಂಬಿಸುವ ರತ್ನಖಚಿತವಾದ ಕೋಟೆಯಿಂದ ಸುತ್ತಲ್ಪಟ್ಟಿದೆ.

**ವರ್ಧತೇ ಯತ್ರ ಧರ್ಮಾರ್ಥಕಾಮಾಃ ಸಂಘರ್ಷಣಾದಿವ ।**
**ಯಸ್ಯಾಂ ದರಿದ್ರಶಬ್ದಸ್ಯ ಬಹಿರಂಗಾರ್ಥ ನಿಹ್ನುತಿಃ ॥ ೨೭ ॥**

ಆ ನಗರದಲ್ಲಿ ಧರ್ಮ ಅರ್ಥ ಕಾಮಪುರುಷಾರ್ಥಗಳು ಒಂದಕ್ಕೊಂದು ಸಂಘರ್ಷಣದಿಂದಲೋ ಎಂಬಂತೆ ವೃದ್ಧಿಯನ್ನು ಹೊಂದುತ್ತವೆ. ಅಲ್ಲಿ ಯಾರೂ ಬಡವರಿರಲಿಲ್ಲವೆಂದು ಭಾವವು.

**ಪ್ರಮಾಣನಯನಿಕ್ಷೇಪಾನುಯೋಗೈರನ್ಯದುರ್ಗಮೈಃ ।**
**ಪದಾರ್ಥಾನಾಂ ಪರೀಕ್ಷೇವ ಗೋಪುರೈರ್ಯಾ ವಿಭಾಸತೇ ॥ ೨೮ ॥**

ಬೇರೆಯವರಿಗೆ ದುರ್ಗಮವಾದ ಪ್ರಮಾಣ ನಯ ನಿಕ್ಷೇಪಪ್ರಶ್ನೆಗಳಿಂದ ಪದಾರ್ಥಗಳ ಪರೀಕ್ಷೆಯು ಶೋಭಿಸುವಂತೆ, ಬೇರೆಯವರಿಗೆ ದುರ್ಗಮವಾದ ಗೋಪುರಗಳಿಂದ ಆ ನಗರವು ಪ್ರಕಾಶಿಸುತ್ತದೆ.

**ಅಶೀಲಭೂಷಣಾ ಯತ್ರ ನ ಸಂತಿ ಕುಲಯೋಷಿತಃ ।**
**ವಾಚೋ ಜಿನೇಂದ್ರವಿದ್ಯಾಯಾಮಿವಾಚಾರಿತ್ರದೇಶಿಕಾಃ ॥ ೨೯ ॥**

ಜಿನೇಶ್ವರನ ವಿದ್ಯೆಯಲ್ಲಿ ಚಾರಿತ್ರವನ್ನು ಉಪದೇಶಿಸದಿರುವ ವಚನಗಳಿಲ್ಲದಿರುವಂತೆ ಆ ನಗರದಲ್ಲಿ ಶೀಲವೆಂಬ ಭೂಷಣವಿಲ್ಲದಿರುವ ಸ್ತ್ರೀಯರಿಲ್ಲ. ಎಲ್ಲಾ ಸ್ತ್ರೀಯರೂ ಶೀಲವತಿಯರಾಗಿರುತ್ತಾರೆಂದು ಭಾವವು.

**ಜ್ವಲನಾದಿರ್ಜಟೀ ತಸ್ಯಾಃ ಪತಿಃ ಖಗಪತಿಃ ಕೃತೀ ।**
**ಮಣೀನಾಮಿವ ವಾರಾಶಿರ್ಗುಣಾನಾಮಾಕರೋಽಭವತ್ ॥ ೩೦ ॥**

ಆ ನಗರಕ್ಕೆ ಖೇಚರಾಧಿಪತಿಯೂ ಕುಶಲನೂ ಆದ ಜ್ವಲನಜಟಿಯೆಂಬವನು ದೊರೆಯಾಗಿದ್ದನು. ಅವನು, ರತ್ನಗಳಿಗೆ ಸಮುದ್ರವು ಉತ್ಪತ್ತಿಸ್ಥಾನವಾಗಿರುವಂತೆ, ಗುಣಗಳಿಗೆ ಉತ್ಪತ್ತಿಸ್ಥಾನನಾಗಿದ್ದನು.

**ಪ್ರತಾಪಾದ್ದ್ವಿಷೋ ಯಸ್ಯ ಮಮ್ಲುರ್ವಾರ್ಕಸ್ಯ ಪಲ್ಲವಾಃ ।**
**ವೃಷ್ಟ್ಯಾವರ್ಧಂತ ವಲ್ಲರ್ಯೋ ವಾ ನೀತ್ಯಾ ಸಫಲಾಃ ಪ್ರಜಾಃ ॥ ೩೧ ॥**

ಸೂರ್ಯನ ಪ್ರತಾಪದಿಂದ ತಳಿರುಗಳು ಬಾಡುವಂತೆ ಆ ಜ್ವಲನಜಟಿಯ ಪ್ರತಾಪದಿಂದ ಶತ್ರುಗಳು ಬಾಡಿದರು. ಮಳೆಯಿಂದ ಬಳ್ಳಿಗಳು ಫಲವತ್ತಾಗಿ ಬೆಳೆಯುವಂತೆ ಅವನ ನೀತಿಯಿಂದ ಪ್ರಜೆಗಳು ಸಫಲಮನೋರಥರಾಗಿ ವೃದ್ಧಿ ಹೊಂದಿದರು.

**ತೇನ ಸ್ಥಾನೇ ಯಥಾಕಾಲಂ ಶಾಲಯೋ ವಾ ಸುಯೋಜಿತಾಃ ।**
**ಸಾಮಾದಯಃ ಸದೋಪಾಯಾಃ ಪ್ರಾಫಲನ್ಬಹುಭೋಗದಾಃ ॥ ೩೨ ॥**

ಆ ಜ್ವಲನಜಟಿಯಿಂದ ಯೋಗ್ಯಸ್ಥಾನದಲ್ಲಿ ಕಾಲವರಿತು ಪ್ರಯೋಗಿಸಲ್ಪಟ್ಟ ಸಾಮದಾನಾದಿ ಉಪಾಯಗಳು, ಭತ್ತಗಳಂತೆ, ಬಹುಭೋಗಸುಖವನ್ನು ಕೊಡುವುವುಗಳಾಗಿ ಚೆನ್ನಾಗಿ ಫಲಿಸಿದುವು.

**ಅತೀತಾನ್ ವಿಶ್ವಭೂಪೇಶಾನ್ ಸಂಖ್ಯಾಭೇದಾನಿವೋತ್ತರಃ ।**
**ಗುಣಸ್ಥಾನಕವೃದ್ಧಿಭ್ಯಾಂ ವಿಜಿತ್ಯ ಸ ಮಹಾನಭೂತ್ ॥ ೩೩ ॥**

ಮುಂದಿನ ಸಂಖ್ಯೆಯು ಹಿಂದಿನ ಸಂಖ್ಯಾಭೇದಗಳನ್ನು ಜಯಿಸಿ ದೊಡ್ಡದಾಗಿರುವಂತೆ, ಆ ಜ್ವಲನಜಟಿಯು ಹಿಂದೆ ಕಳೆದುಹೋದ ರಾಜರುಗಳನ್ನೆಲ್ಲರನ್ನು ಗುಣವೃದ್ಧಿಯಿಂದಲೂ ಸ್ಥಾನವೃದ್ಧಿಯಿಂದಲೂ ಜಯಿಸಿ ದೊಡ್ಡವನಾದನು.

**ಉಭಯಾಯತ್ತಸಿದ್ಧಿತ್ವಾದ್ದೈವಪೌರುಷಯೋಗತಃ।**
**ಕೋಪೋದಯವ್ಯಪೇತತ್ವಾತ್ತಂತ್ರಾವಾಪವಿಮರ್ಶನಾತ್ ॥ ೩೪ ॥**

**ಶಕ್ತಿಸಿದ್ಧ್ಯನುಗಾಮಿತ್ವಾದ್ಯೋಗಕ್ಷೇಮಸಮಾಗಮಾತ್ ।**
**ಷಡ್ಗುಣಾನುಗುಣತ್ವಾಚ್ಚ ತದ್ರಾಜ್ಯಮುದಿತೋದಿತಮ್ ॥ ೩೫ ॥**

ಬಾಹ್ಯಾಭ್ಯಂತರ ಸಿದ್ಧಿಗಳು ಸ್ವಾಧೀನವಾಗಿದ್ದುದರಿಂದಲೂ ದೈವ ಯೋಗದಿಂದಲೂ ಪೌರುಷಯೋಗದಿಂದಲೂ ಕೋಪದ ಆವಿರ್ಭಾವವಿಲ್ಲದಿರುವುದರಿಂದಲೂ ತಂತ್ರಪ್ರಯೋಗವನ್ನು ವಿಮರ್ಶಿಸುವುದರಿಂದಲೂ ಪ್ರಭುಶಕ್ತಿ ಮೊದಲಾದ ಶಕ್ತಿತ್ರಯಸಿದ್ಧಿತ್ರಯವನ್ನು ಅನುಸರಿಸುವುದರಿಂದಲೂ ಅಲಬ್ಧ ಲಾಭ ರೂಪವಾದ ಯೋಗದ ಸಮಾಗಮದಿಂದಲೂ ಲಬ್ಧಪರಿರಕ್ಷಣರೂಪವಾದ ಕ್ಷೇಮದ ಸಮಾಗಮದಿಂದಲೂ ಸಂಧಿ ವಿಗ್ರಹ ಯಾನ ಆಸನ ದ್ವೈಧ ಆಶ್ರಯಗಳೆಂಬ ಷಡ್ಗುಣಗಳಿಗೆ ಅನುಗುಣವಾಗಿರುವಿಕೆಯಿಂದಲೂ ಆ ಜ್ವಲನಜಟಿಯ ರಾಜ್ಯವು ದಿನದಿಂದ ದಿನಕ್ಕೆ ವೃದ್ಧಿಯನ್ನು ಹೊಂದಿತು.

**ತಿಲಕಾಂತದಿವೀತ್ಯಾಸೀತ್ಪುರಂ ತತ್ರ ಮಹೀಪತಿಃ ।**
**ಚಂದ್ರಾಭಸ್ತತ್ಪ್ರಿಯಾ ನಾಮ್ನಾ ಸುಭದ್ರೇತಿ ತಯೋಃ ಸುತಾ ॥ ೩೬ ॥**

**ವಾಯುವೇಗಾ ಜಿತಾಶೇಷವೇಗಿವಿದ್ಯಾಧರಾಧಿಪಾ ।**
**ಸ್ವವೇಗವಿದ್ಯಯಾ ಪ್ರೋದ್ಯದ್ವಿದ್ಯುದುದ್ಯೋತಜಿದ್ದ್ಯುತಿಃ ॥ ೩೭ ॥**

ಆ ವಿಜಯಾರ್ಧಪರ್ವತದಲ್ಲಿ ದಿವಿತಿಲಕವೆಂಬ ಪುರವಿದೆ. ಅಲ್ಲಿ ಚಂದ್ರಾಭನೆಂಬ ರಾಜನಿದ್ದನು. ಅವನಿಗೆ ಸುಭದ್ರೆಯೆಂಬ ಪತ್ನಿಯಿದ್ದಳು. ಆ ದಂಪತಿಗಳಿಗೆ ತನ್ನ ವೇಗವಿದ್ಯೆಯಿಂದ ವೇಗವುಳ್ಳ ಸಕಲವಿದ್ಯಾಧರರಾಜರುಗಳನ್ನು ಜಯಿಸಿದವಳೂ ಹೆಚ್ಚುತ್ತಿರುವ ಮಿಂಚಿನ ಪ್ರಕಾಶವನ್ನು ಜಯಿಸುವ ಕಾಂತಿಯುಳ್ಳವಳೂ ಆದ ವಾಯುವೇಗೆಯೆಂಬ ಮಗಳಿದ್ದಳು.

**ತಸ್ಯ ತ್ರಿವರ್ಗನಿಷ್ಪತ್ತ್ಯೈ ಸಾ ವಿಶ್ವಗುಣಭೂಷಣಾ ।**
**ಭೂತಾ ಪುರುಷಕಾರಸ್ಯ ಸದ್ದೈವಸ್ಯೇವ ಶೇಮುಷೀ ॥ ೩೮ ॥**

ಭಾಗ್ಯಶಾಲಿಯಾದ ಶ್ರೇಷ್ಠ ಪುರುಷನ ಬುದ್ಧಿಯಂತೆ, ಸಕಲಗುಣಭೂಷಿತಳಾದ ಆ ವಾಯುವೇಗೆಯು ಆ ಜ್ವಲನಜಟಿಯ ಧರ್ಮ ಅರ್ಥ ಕಾಮಗಳ ಉತ್ಪತ್ತಿಗೆ ಕಾರಣಳಾದಳು. ಜ್ವಲನಜಟಿಗೆ ವಿವಾಹಿತಳಾದಳೆಂದು ಭಾವವು.

**ಪ್ರತಿಪಚ್ಚಂದ್ರರೇಖೇವ ಸಾ ಸರ್ವಜನಸಂಸ್ತುತಾ ।**
**ದ್ವಿತೀಯೇವ ಧರಾರಕ್ತಾ ಭೋಗ್ಯಾ ತೇನ ಸ್ವಪೌರುಷಾತ್ ॥ ೩೯ ॥**

ಶುಕ್ಲಪಕ್ಷದ ಪಾಡ್ಯದ ಚಂದ್ರನ ರೇಖೆಯಂತೆ ಸರ್ವಜನರಿಂದ ಸ್ತುತಿಸಲ್ಪಟ್ಟ ಆ ವಾಯುವೇಗೆಯು, ಬಹುಪ್ರಿಯವಾದ ಎರಡನೆಯ ಪೃಥಿವಿಯೋ ಎಂಬಂತೆ, ಆ ಜ್ವಲನಜಟಿಯಿಂದ ಸ್ವಪೌರುಷದಿಂದ ಭೋಗಿಸಲ್ಪಡತಕ್ಕವಳಾಗಿದ್ದಳು.

**ಲಕ್ಷ್ಮೀಃ ಪರಿಕರಸ್ತಸ್ಯಾ ವ್ಯಧಾಯಿ ವಿವಿಧರ್ದ್ಧಿಕಾ ।**
**ತತ್ಪ್ರೇಮಪ್ರೇರಣಾತ್ತೇನ ವಾಲ್ಲಭ್ಯಂ ನ ಕರೋತಿ ಕಿಮ್ ॥ ೪೦ ॥**

ನಾನಾ ಋದ್ಧಿಗಳುಳ್ಳ ಲಕ್ಷ್ಮಿಯು ಆ ವಾಯುವೇಗೆಗೆ ಪರಿವಾರವಾಗಿದ್ದಳು. ಆ ವಾಯುವೇಗೆಯ ಪ್ರೇಮದ ಪ್ರೇರಣೆಯಿಂದ ಜ್ವಲನಜಟಿಯು ಆ ಪರಿವಾರದೊಡನೆ ಪ್ರೇಮವನ್ನು ಮಾಡುವುದಿಲ್ಲವೇ ? ಲಕ್ಷ್ಮಿಯು ವಾಯುವೇಗೆಯ ಪರಿವಾರವಾಗಿದ್ದುದರಿಂದ ಆ ಲಕ್ಷ್ಮಿಯನ್ನು ಜ್ವಲನಜಟಿಯು ಪ್ರೀತಿಸಿದನೆಂದೂ ಅವನಿಗೆ ಲಕ್ಷ್ಮಿಗಿಂತಲೂ ವಾಯುವೇಗೆಯು ಪ್ರಿಯಳಾಗಿದ್ದಳೆಂದೂ ಭಾವವು.

**ಕೌಲೀನ್ಯಾದನುರಕ್ತತ್ವಾದಭೂತ್ಸೈಕಪತಿಃ ಸತೀ ।**
**ಭೂಪತೇಶ್ಚೈಕಭಾರ್ಯತ್ವಂ ಪ್ರೇಮಾಧಿಕ್ಯಾಜ್ಜಗುರ್ಜನಾಃ ॥ ೪೧ ॥**

ಉತ್ತಮಕುಲದವಳಾಗಿದ್ದುದರಿಂದಲೂ ಪತಿಗೆ ಅನುರಕ್ತಳಾಗಿದ್ದುದರಿಂದಲೂ ಸಾಧ್ವಿಯಾದ ಆ ವಾಯುವೇಗೆಯು ಏಕಪತಿಯುಳ್ಳವಳಾಗಿ–ಪತಿವ್ರತೆಯಾಗಿದ್ದಳು. ರಾಜನಿಗೂ ಒಬ್ಬಳು ಹೆಂಡತಿಯಿರುವುದು ಆಕೆಯಲ್ಲಿ ಪ್ರೇಮಾಧಿಕ್ಯದಿಂದ ಎಂದು ಜನರು ಹೇಳುತ್ತಾರೆ.

**ರೂಪಾದಿಗುಣಸಂಪತ್ತಿಸ್ತಸ್ಯಾಃ ಕಿಂ ಕಥ್ಯತೇ ಪೃಥಕ್ ।**
**ತಸ್ಯ ಚೇಚ್ಛಕ್ರವಚ್ಛಚ್ಯಾಂ ತಸ್ಯಾಂ ಪ್ರೀತಿರಮಾನುಷೀ ॥ ೪೨ ॥**

ಇಂದ್ರನಿಗೆ ಶಚಿಯಲ್ಲಿ ಅಮಾನುಷವಾದ ಪ್ರೀತಿಯಿರುವಂತೆ, ಆ ಜ್ವಲನಜಟಿಗೆ ಆ ವಾಯುವೇಗೆಯಲ್ಲಿ ಅಮಾನುಷವಾದ ಪ್ರೀತಿಯಿದ್ದಿತೆಂದರೆ ಇನ್ನು ಆಕೆಯ ರೂಪಾದಿಗುಣಸಂಪತ್ತಿಯನ್ನು ಬೇರೆ ಹೇಳುವುದೇನು ?

**ದಯಾವಬೋಧಯೋರ್ಮೋಕ್ಷ ಇವ ಸೂನುಸ್ತಯೋರಭೂತ್ ।**
**ಅರ್ಕಕೀರ್ತಿಃ ಸ್ವಕೀರ್ತ್ಯಾಭಾಪ್ರಕಾಶಿತದಿಗಂತರಃ ॥ ೪೩ ॥**

ದಯೆಯಲ್ಲಿ ಮತ್ತು ಸಮ್ಯಗ್ಜ್ಞಾನದಲ್ಲಿ ಮೋಕ್ಷವುಂಟಾಗುವಂತೆ, ಆ ವಾಯುವೇಗಾಜ್ವಲನಜಟಿಗಳಲ್ಲಿ ತನ್ನ ಕೀರ್ತಿಯ ಕಾಂತಿಯಿಂದ ದಿಗಂತರವನ್ನು ಪ್ರಕಾಶಪಡಿಸಿರುವ ಅರ್ಕಕೀರ್ತಿಯೆಂಬ ಪುತ್ರನು ಜನಿಸಿದನು.

**ನೀತಿವಿಕ್ರಮಯೋರ್ಲಕ್ಷ್ಮೀರಿವ ಸರ್ವಮನೋಹರಾ ।**
**ಸ್ವಯಂಪ್ರಭಾಭಿಧಾನಾಸೀತ್ಪ್ರಭೇವ ವಿಧುನಾ ಸಹ ॥ ೪೪ ॥**

ನೀತಿಯಲ್ಲಿಯೂ ಶೌರ್ಯದಲ್ಲಿಯೂ ಲಕ್ಷ್ಮಿ–ಸಂಪತ್ತಿಯುಂಟಾಗುವಂತೆ, ಆ ದಂಪತಿಗಳಲ್ಲಿ ಎಲ್ಲರಿಗಿಂತ ಮನೋಹರಳಾದ ಸ್ವಯಂಪ್ರಭೆಯೆಂಬವಳು, ಚಂದ್ರನೊಡನೆ ಪ್ರಭೆಯಂತೆ, ಅರ್ಕಕೀರ್ತಿಯೊಡನೆ ಜನಿಸಿದಳು.

**ಮುಖೇನಾಂಭೋಜಮಕ್ಷಿಭ್ಯಾಮುತ್ಪಲಂ ಮಣಿದರ್ಪಣಮ್ ।**
**ತ್ವಿಷಾ ಕಾಂತ್ಯಾ ವಿಧುಂ ಜಿತ್ವಾ ಬಭೌ ಸದ್ರೂಪಪತಾಕಯಾ ॥ ೪೫ ॥**

ಆ ಸ್ವಯಂಪ್ರಭೆಯು ಮುಖದಿಂದ ಕಮಲವನ್ನೂ ನೇತ್ರಗಳಿಂದ ಕನ್ನೈದಿಲೆಯನ್ನೂ ಪ್ರಕಾಶದಿಂದ ರನ್ನಗನ್ನಡಿಯನ್ನೂ ಶೋಭೆಯಿಂದ ಚಂದ್ರನನ್ನೂ ಜಯಿಸಿ ಶ್ರೇಷ್ಠವಾದ ಹುಬ್ಬೆಂಬ ಬಾವುಟದಿಂದ ಪ್ರಕಾಶಿಸಿದಳು.

**ಉತ್ಪನ್ನಂ ಯೌವನಂ ತಸ್ಯಾ ಲತಿಕಾಯಾಃ ಪ್ರಸೂನವತ್ ।**
**ಖಗಕಾಮಿಷು ಪುಷ್ಪೇಷುಜ್ವರಶ್ಚೋತ್ಪಾದಿತಸ್ತಯಾ ॥ ೪೬ ॥**

ಲತೆಗೆ ಪುಷ್ಪವುಂಟಾಗುವಂತೆ, ಆ ಸ್ವಯಂಪ್ರಭೆಗೆ ಯೌವನವುಂಟಾಯಿತು. ಆಕೆಯು ಕಾಮುಕರಾದ ಖೇಚರರಲ್ಲಿ ಕಾಮಜ್ವರವನ್ನೂ ಉಂಟುಮಾಡಿದಳು.

**ಆಪಾಂಡುಗಂಡಭಾಭಾಸಿವಕ್ತ್ರಾ ಲೋಲವಿಲೋಚನಾ ।**
**ಮಧ್ಯಾಂಗಕಾರ್ಶ್ಯಸಂಭೂತಸಂಭ್ರಾಂತ್ಯೇವ ಸ್ವಯಂಪ್ರಭಾ ॥ ೪೭ ॥**

ನಡುಮೈಯ ಕೃಶತೆಯಿಂದುಂಟಾದ ಭ್ರಾಂತಿಯಿಂದಲೋ ಎಂಬಂತೆ ಸ್ವಯಂಪ್ರಭೆಯು ಸುತ್ತಲೂ ಬೆಳ್ಳಗಿರುವ ಕೆನ್ನೆಗಳ ಕಾಂತಿಯಿಂದ ಪ್ರಕಾಶಿಸುವ ಮುಖವುಳ್ಳವಳೂ ಚಂಚಲವಾದ ಕಣ್ಣುಗಳುಳ್ಳವಳೂ ಆಗಿದ್ದಳು.

**ತನ್ವ್ಯಾ ರೋಮಾವಲೀ ತನ್ವೀ ಹರಿನೀಲರುಚಿರ್ವ್ಯಭಾತ್ ।**
**ಆರುರುಕ್ಷುರಿವೋದ್ಧ್ಯತ್ವಾತುಂಗಪೀನಘನಸ್ತನೌ ॥ ೪೮ ॥**

ಕೋಮಲಳಾದ ಆ ಸ್ವಯಂಪ್ರಭೆಯ ಕೋಮಲವೂ ಇಂದ್ರನೀಲರತ್ನದ ಕಾಂತಿಯುಳ್ಳುದೂ ಆದ ರೋಮಪಂಗ್ತಿಯು; ಉನ್ನತವೂ ಪುಷ್ಟವೂ ದಟ್ಟವೂ ಆದ ಕುಚಗಳನ್ನು ಮೇಲೆತ್ತಿ ಹತ್ತುವುದಕ್ಕಿಚ್ಛಿಸುತ್ತದೋ ಎಂಬಂತೆ ಪ್ರಕಾಶಿಸಿತು.

**ಅನಾಲೀಢಮನೋಜಾಪಿ ವ್ಯಕ್ತತದ್ವಿಕ್ರಿಯೇವ ಸಾ ।**
**ಸಂಪನ್ನಯೌವನೇನೈವ ಜನಾನಾಮಗಮದ್ವಶಮ್ ॥ ೪೯ ॥**

ಆ ಸ್ವಯಂಪ್ರಭೆಯು ಕಾಮಾನುಭವವಿಲ್ಲದವಳಾದರೂ ವ್ಯಕ್ತವಾದ ಕಾಮವಿಕಾರವುಳ್ಳವಳಂತೆ, ಯೌವನೋತ್ಪತ್ತಿಯಿಂದಲೇ ಜನರ ದೃಷ್ಟಿಗೆ ಗೋಚರಳಾದಳು.

**ಅಥಾನ್ಯೇದ್ಯುರ್ಜಗನ್ನಂದನಾಭಿನಂದನಚಾರಣೌ ।**
**ಸ್ಥಿತೌ ಮನೋಹರೋದ್ಯಾನೇ ಜ್ಞಾತ್ವಾ ಯತಿನಿವೇದಕಾತ್ ॥ ೫೦ ॥**

**ಚತುರಂಗಬಲೋಪೇತಃ ಸ ಪುತ್ರಾಂತಃಪುರಾವೃತಃ ।**
**ಗತ್ವಾಭಿವಂದ್ಯ ಸದ್ಧರ್ಮಶ್ರವಣಾನಂತರಂ ಪರಮ್ ॥ ೫೧ ॥**

**ಸಮ್ಯಗ್ದರ್ಶನಮಾದಾಯ ದಾನಶೀಲಾದಿ ಚಾದರಾತ್ ।**
**ಪ್ರಣಮ್ಯ ಚಾರಣೌ ಭಕ್ತ್ಯಾ ಪ್ರತ್ಯೇತ್ಯ ಪ್ರಾವಿಶತ್ಪುರೀಮ್ ॥ ೫೨ ॥**

ಬಳಿಕ ಮತ್ತೊಂದು ದಿವಸ ಮನೋಹರೋದ್ಯಾನದಲ್ಲಿರುವ ಜಗನ್ನಂದನ ಅಭಿನಂದನರೆಂಬ ಚಾರಣಮುನಿಗಳೀರ್ವರನ್ನು ಯತಿನಿವೇದಕನಾದ ವನಪಾಲಕನಿಂದ ತಿಳಿದು ಚತುರಂಗಸೈನ್ಯಸಮೇತನೂ ಪುತ್ರನಿಂದಲೂ ಅಂತಃಪುರದಿಂದಲೂ ಸುತ್ತಲ್ಪಟ್ಟವನೂ ಆದ ಆ ಜ್ವಲನಜಟಿಯು ಹೋಗಿ ಮುನಿಗಳಿಗೆ ವಂದಿಸಿ ಧರ್ಮಶ್ರವಣವನ್ನು ಮಾಡಿ ಬಳಿಕ ಉತ್ಕೃಷ್ಟವಾದ ಸಮ್ಯಗ್ದರ್ಶನವನ್ನೂ ದಾನಶೀಲಾದಿಗಳನ್ನೂ ಪ್ರೀತಿಯಿಂದ ಗ್ರಹಣಮಾಡಿ ಭಕ್ತಿಯಿಂದ ಚಾರಣಮುನಿಗಳನ್ನು ನಮಸ್ಕರಿಸಿ ಹಿಂದಿರುಗಿ ಬಂದು ನಗರವನ್ನು ಪ್ರವೇಶಿಸಿದನು.

**ಸ್ವಯಂಪ್ರಭಾಪಿ ಸದ್ಧರ್ಮಂ ತತ್ರಾದಾಯೈಕದಾ ಮುದಾ ।**
**ಪರ್ವೋಪವಾಸಪರ್ಮ್ಲಾನತನುರಭ್ಯರ್ಚ್ಯ ಸಾರ್ಹತಃ ॥ ೫೩ ॥**

**ತತ್ಪಾದಪಂಕಜಾಶ್ಲೇಷಪವಿತ್ರಾಂ ಪಾಪಹಾಂ ಸ್ರಜಮ್ ।**
**ಚಿತ್ರಾಂ ಪಿತ್ರೇದಿತ ದ್ವಾಭ್ಯಾಂ ಹಸ್ತಾಭ್ಯಾಂ ವಿನಯಾನತಾ ॥ ೫೪ ॥**

ಆ ಸ್ವಯಂಪ್ರಭೆಯೂ ಚಾರಣಮುನಿಗಳ ಬಳಿಯಲ್ಲಿ ಸದ್ಧರ್ಮವನ್ನು ಗ್ರಹಣಮಾಡಿ ಒಂದಾನೊಂದು ಕಾಲದಲ್ಲಿ ಚತುರ್ದಶಿಯಲ್ಲಿ ಉಪವಾಸವನ್ನು ಮಾಡಿ ಬಾಡಿದ ಮೈಯುಳ್ಳವಳಾಗಿ ಸಂತೋಷದಿಂದ ಅರ್ಹತ್ಪರಮೇಶ್ವರರನ್ನು ಪೂಜಿಸಿ ಅವರ ಪಾದಕಮಲದ ಸಂಬಂಧದಿಂದ ಪವಿತ್ರವೂ ಪಾಪವನ್ನು ನಾಶಮಾಡುವುದೂ ನಾನಾಪ್ರಕಾರವೂ ಆದ ಪುಷ್ಪಮಾಲೆಯನ್ನು ವಿನಯದಿಂದ ನಮ್ರಳಾಗಿ ಎರಡು ಕೈಗಳಿಂದ ತಂದೆಗೆ ಕೊಟ್ಟಳು.

**ತಾಮಾದಾಯ ಮಹೀನಾಥೋ ಭಕ್ತ್ಯಾ ಪಶ್ಯನ್ ಸ್ವಯಂಪ್ರಭಾಮ್ ।**
**ಉಪವಾಸಪರಿಶ್ರಾಂತಾಂ ಪಾರಯೇತಿ ವಿಸೃಜ್ಯ ತಾಮ್ ॥ ೫೫ ॥**

**ಯೌವನಾಪೂರ್ಣಸರ್ವಾಂಗರಮಣೀಯಾ ಪ್ರಿಯಾತ್ಮಜಾ ।**
**ಕಸ್ಮೈ ದೇಯೇಯಮಿತ್ಯೇವಮಾತ್ಮನ್ಯೇವ ವಿತರ್ಕಯನ್ ॥ ೫೬ ॥**

**ಮಂತ್ರಿವರ್ಗಂ ಸಮಾಹೂಯ ಪ್ರಸ್ತುತಾರ್ಥಂ ನ್ಯವೇದಯತ್ ।**
**ಶ್ರುತ್ವಾ ತತ್ಸುಶ್ರುತಃ ಪ್ರಾಹ ಪರೀಕ್ಷ್ಯಾತ್ಮನಿ ನಿಶ್ಚಿತಮ್ ॥ ೫೭ ॥**

ರಾಜನು ಭಕ್ತಿಯಿಂದ ಆ ಪುಷ್ಪಮಾಲಿಕೆಯನ್ನು ತೆಗೆದುಕೊಂಡು ಉಪವಾಸದಿಂದ ಬಳಲಿದ ಸ್ವಯಂಪ್ರಭೆಯನ್ನು ನೋಡಿ "ಪಾರಣೆಯನ್ನು ಮಾಡು" ಎಂದು ಆಕೆಯನ್ನು ಬಿಟ್ಟು "ಯೌವನದಿಂದ ಪರಿಪೂರ್ಣಳೂ ಸರ್ವಾಂಗಸುಂದರಳೂ ಆದ ಈ ಪ್ರಿಯಪುತ್ರಿಯು ಯಾವನಿಗೆ ಕೊಡಲ್ಪಡತಕ್ಕವಳು ?" ಎಂದು ತನ್ನಲ್ಲೇ ವಿಚಾರಮಾಡುವವನಾಗಿ ಮಂತ್ರಿಮಂಡಲವನ್ನು ಕರೆದು ಪ್ರಕೃತವಿಷಯವನ್ನು ತಿಳಿಸಿದನು. ಆ ಮಾತನ್ನು ಕೇಳಿ ಸುಶ್ರುತನೆಂಬ ಮಂತ್ರಿಯು ಪರೀಕ್ಷಿಸಿ ತನ್ನಲ್ಲಿ ನಿಶ್ಚಿತವಾದ ವಿಷಯವನ್ನು ಇಂತೆಂದನು.

**ಅಮುಷ್ಮಿನ್ನುತ್ತರಶ್ರೇಣ್ಯಾಮಲಕಾಖ್ಯಪುರೇಶಿತುಃ ।**
**ಮಯೂರಗ್ರೀವಸಂಜ್ಞಸ್ಯ ಪ್ರಿಯಾ ನೀಲಾಂಜನಾ ತಯೋಃ ॥ ೫೮ ॥**

**ಅಶ್ವಗ್ರೀವೋಗ್ರಿಮೋ ನೀಲರಥಃ ಕಂಠಾಂತನೀಲಸು- ।**
**ವಜ್ರಾಃ ಖ್ಯಾತಾಸ್ತ್ರಯಃ ಸರ್ವೇಪ್ಯಭೂವನ್ಪಂಚ ಸೂನವಃ ॥ ೫೯ ॥**

"ಈ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿ ಅಲಕಾಪಟ್ಟಣದ ದೊರೆಯಾದ ಮಯೂರಗ್ರೀವನೆಂಬವನಿಗೆ ನೀಲಾಂಜನೆಯೆಂಬ ಪತ್ನಿಯಿರುತ್ತಾಳೆ. ಆ ದಂಪತಿಗಳಿಗೆ ಅಶ್ವಗ್ರೀವ, ನೀಲರಥ, ನೀಲಕಂಠ, ಸುಕಂಠ, ವಜ್ರಕಂಠರೆಂಬ ಐದು ಮಂದಿ ಮಕ್ಕಳಿರುವರು. ಅವರಲ್ಲಿ ಮೂರು ಮಂದಿಗಳು ಪ್ರಖ್ಯಾತರಾಗಿರುವರು.

**ಅಶ್ವಗ್ರೀವಸ್ಯ ಕನಕಚಿತ್ರಾ ದೇವೀ ಸುತಾಸ್ತಯೋಃ ।**
**ತೇ ಗ್ರೀವಾಂಗದಚೂಲಾಂತರತ್ನರತ್ನರಥಾದಿಭಿಃ ॥ ೬೦ ॥**

**ಶತಾನಿ ಪಂಚ ಮಂತ್ರ್ಯಸ್ಯ ಹರಿಶ್ಮಶ್ರುಃ ಶ್ರುತಾಂಬುಧಿಃ ।**
**ಶತಬಿಂದುಶ್ಚ ನೈಮಿತ್ತಿಕೋಷ್ಟಾಂಗನಿಪುಣೋ ಮಹಾನ್ ॥ ೬೧ ॥**

ಜ್ಯೇಷ್ಠನಾದ ಅಶ್ವಗ್ರೀವನಿಗೆ ಕನಕಚಿತ್ರೆಯೆಂಬವಳು ಪತ್ನಿಯಾಗಿದ್ದಾಳೆ. ಆ ದಂಪತಿಗಳಿಗೆ ರತ್ನಗ್ರೀವ, ರತ್ನಾಂಗದ, ರತ್ನಚೂಲ, ರತ್ನರಥ ಮೊದಲಾದವರೊಡನೆ ಐದುನೂರುಮಂದಿ ಮಕ್ಕಳಾದರು. ಈ ಅಶ್ವಗ್ರೀವನಿಗೆ ಶಾಸ್ತ್ರವೆಂಬ ಸಮುದ್ರವುಳ್ಳ ಮಹಾಶಾಸ್ತ್ರಜ್ಞನಾದ ಹರಿಶ್ಮಶ್ರುವೆಂಬ ಮಂತ್ರಿಯಿರುವನು. ಅಷ್ಟಾಂಗ ನಿಮಿತ್ತಗಳಲ್ಲಿ ನಿಪುಣನಾದ ಶತಬಿಂದುವೆಂಬ ಮಹಾನೈಮಿತ್ತಿಕ –ಜ್ಯೌತಿಷಿಕನಿರುವನು.

**ಇತಿ ಸಂಪೂರ್ಣರಾಜ್ಯಾಯ ಖಗಶ್ರೇಣೀದ್ವಯೇಶಿನೇ ।**
**ಅಶ್ವಗ್ರೀವಾಯ ದಾತವ್ಯಾ ಕನ್ಯೇತ್ಯೇತದ್ವಿಚಾರಯನ್ ॥ ೬೨ ॥**

ಹೀಗೆ ಸಂಪೂರ್ಣರಾಜ್ಯವುಳ್ಳವನೂ ಖೇಚರರ ದಕ್ಷಿಣೋತ್ತರಶ್ರೇಣಿಗಳಿಗೆ ಪ್ರಭುವೂ ಆದ ಅಶ್ವಗ್ರೀವನಿಗೆ, ಇದನ್ನು ವಿಚಾರಮಾಡುವವನಾಗಿ, ಕನ್ಯೆಯನ್ನು ಕೊಡಬಹುದು."

**ಅಸ್ತ್ವೇವ ಸುಶ್ರುತಾಖ್ಯಾತಂ ಸರ್ವಮಿತ್ಯವನೀಪತಿಮ್ ।**
**ಇದಂ ಬಹುಶ್ರುತೋವೋಚದುತ್ತರಂ ಸ್ವಮನೋಗತಮ್ ॥ ೬೩ ॥**

**ಆಭಿಜಾತ್ಯಮರೋಗತ್ವಂ ವಯಃ ಶೀಲಂ ಶ್ರುತಂ ವಪುಃ ।**
**ಲಕ್ಷ್ಮೀಃ ಪಕ್ಷಃ ಪರೀವಾರೋ ವರೇ ನವ ಗುಣಾಃ ಸ್ಮೃತಾಃ ॥ ೬೪ ॥**

**ಅಶ್ವಗ್ರೀವೇ ತ ಏತೇಪಿ ಸಂತಿ ಕಿಂತು ವಯೋಧಿಕಃ ।**
**ತಸ್ಮಾತ್ಕೋಪಿ ವರೋನ್ಯೋಸ್ತು ಸವಯಾಸ್ತದ್ಗುಣಾನ್ವಿತಃ ॥ ೬೫ ॥**

**ರಾಜಾ ಸಿಂಹರಥಃ ಖ್ಯಾತಃ ಪುರೇ ಗಗನವಲ್ಲಭೇ ।**
**ಪರಃ ಪದ್ಮರಥೋ ಮೇಘಪುರೇ ಚಿತ್ರಪುರಾಧಿರಾಟ್ ॥ ೬೬ ॥**

**ಅರಿಂಜಯಾಖ್ಯಸ್ತ್ರಿಪುರೇ ಖಗೇಶೋ ಲಲಿತಾಂಗದಃ ।**
**ಕನಕಾದಿರಥೋ ವಿದ್ಯಾಕುಶಲೋಶ್ವಪುರೇಶ್ವರಃ ॥ ೬೭ ॥**

**ಮಹಾರತ್ನಪುರೇ ವಿಶ್ವಖಗಾಧೀಶೋ ಧನಂಜಯಃ ।**
**ಕನ್ಯೈಷ್ವನ್ಯತಮಾಯೇಯಂ ದಾತವ್ಯೇತಿ ವಿನಿಶ್ಚಿತಮ್ ॥ ೬೮ ॥**

**ಗತ್ವಾ ತೌ ಸ್ವಾಗತಿಂ ಪೂರ್ವಂ ನಿವೇದ್ಯಾನುಮತೌ ನೃಪಮ್ ।**
**ದೃಷ್ಟ್ವಾ ಯಥೋಚಿತಂ ದತ್ವಾ ಪ್ರಾಭೃತಂ ವಿನಯಾನ್ವಿತೌ ॥ ೧೨೫ ॥**

**ಅಶ್ವಗ್ರೀವೇಣ ದೇವೇನ ತ್ವಮದ್ಯಾಜ್ಞಾಪಿತೋಸ್ಯಹಮ್ ।**
**ರಥಾವರ್ತಾದ್ರಿಮೇಷ್ಯಾಮಿ ತಮಾಯಾತು ಭವಾನಿತಿ ॥ ೧೨೬ ॥**

**ಆವಾಂ ತ್ವಾಮಾಗತೌ ನೇತುಮಾಜ್ಞಾಮಾರೋಪ್ಯ ಮಸ್ತಕಮ್ ।**
**ಆಗಂತವ್ಯಂ ತ್ವಯೇತ್ಯುಚ್ಚೈರೂಚತುಃ ಸೋಪಿ ಕೋಪವಾನ್ ॥ ೧೨೭ ॥**

**ಅಶ್ವಗ್ರೀವಾಃ ಖರಗ್ರೀವಾಃ ಕ್ರೌಂಚಗ್ರೀವಾಸ್ತಥಾಪರೇ ।**
**ದೃಷ್ಟಾಃ ಕ್ರಮೇಲಕಗ್ರೀವಾ ನಾಪೂರ್ವೋ ನಃ ಸ ಪಶ್ಯತಾಮ್ ॥ ೧೨೮ ॥**

**ಇತ್ಯಾಹ ತೌ ಚ ಕಿಂ ಯುಕ್ತಮವಮಂತುಂ ಖಗೇಶ್ವರಮ್ ।**
**ವಿಶ್ವಭೂಪಸಮಭ್ಯರ್ಚ್ಯಂ ತಂ ಭವತ್ಪಕ್ಷಪಾತಿನಮ್ ॥ ೧೨೯ ॥**

**ಇತ್ಯಾಹತುಃ ಖಗೇಶೋಸ್ತು ಪಕ್ಷಪಾತೀ ನ ವಾರ್ಯತೇ ।**
**ನಾಹಮೇಷ್ಯಾಮಿ ತಂ ದ್ರಷ್ಟುಮಿತಿ ಪ್ರತ್ಯಬ್ರವೀತ್ಸ ತೌ ॥ ೧೩೦ ॥**

ಆ ದೂತರು ಹೋಗಿ ಮೊದಲು ತಮ್ಮ ಆಗಮನವನ್ನು ತಿಳಿಸಿ ರಾಜದರ್ಶನಕ್ಕೆ ಅನುಮತಿಯನ್ನು ಪಡೆದು ವಿನಯಾನ್ವಿತರಾಗಿ ಯಥೋಚಿತವಾದ ಕೈಗಾಣಿಕೆಯನ್ನು ಕೊಟ್ಟು ತ್ರಿಪೃಷ್ಠರಾಜನನ್ನು ಕಂಡು "ಸ್ವಾಮಿಯಾದ ಅಶ್ವಗ್ರೀವನು ತಾನು ರಥಾವರ್ತಪರ್ವತಕ್ಕೆ ಬರುವೆನೆಂದೂ ಆ ಪರ್ವತಕ್ಕೆ ನೀನು ಬರಬೇಕೆಂದೂ ನಿನಗೆ ಅಜ್ಞೆಮಾಡಿದ್ದಾನೆ. ನಾವು ಅವನ ಆಜ್ಞೆಯನ್ನು ಶಿರಸಾವಹಿಸಿ ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದೇವೆ. ನೀನು ಬರಬೇಕು" ಎಂದು ಗಟ್ಟಿಯಾಗಿ ನುಡಿದರು. ಆ ತ್ರಿಪೃಷ್ಠನೂ ಕೋಪವುಳ್ಳವನಾಗಿ "ಕುದುರೆಯ ಕೊರಳುಳ್ಳವರನ್ನೂ ಕತ್ತೆಯ ಕೊರಳುಳ್ಳವರನ್ನೂ ಕ್ರೌಂಚಪಕ್ಷಿಯ ಕೊರಳುಳ್ಳವರನ್ನೂ ಒಂಟೆಯ ಕೊರಳುಳ್ಳವರನ್ನೂ ಹಾಗೆಯೇ ಬೇರೆಯವರನ್ನೂ ಕಂಡಿದ್ದೇವೆ. ನಮಗೆ ಅವನು ಅಪೂರ್ವನಾಗಿಲ್ಲ. ನೀವು ಅವನನ್ನು ನೋಡಿ" ಎಂದು ಹೇಳಿದನು. ಆ ಮಾತನ್ನು ಕೇಳಿ ಆ ದೂತರು "ಎಲ್ಲಾ ರಾಜರುಗಳಿಂದ ಪೂಜಿಸಲ್ಪಡತಕ್ಕವನೂ ತಮ್ಮ ಪಕ್ಷಪಾತಿಯೂ ಆದ ಆ ಖೇಚರಾಧಿಪತಿಯನ್ನು ತಾವು ಅವಮಾನಪಡಿಸುವುದು ಯುಕ್ತವೋ ?" ಎಂದು ಹೇಳಿದರು. ಅದಕ್ಕೆ ತ್ರಿಪೃಷ್ಠನು ಖೇಚರಾಧಿಪತಿಯು ಪಕ್ಷಪಾತಿಯಾಗಿರಲಿ. ಅದನ್ನು ತಡೆಯುವುದಿಲ್ಲ. ನಾನು ಅವನನ್ನು ನೋಡುವುದಕ್ಕೋಸ್ಕರ ಬರುವುದಿಲ್ಲ" ಎಂದು ಮರುಮಾತನಾಡಿದನು.

**ದರ್ಪಾದಿದಂ ನ ವಕ್ತವ್ಯಮದೃಷ್ಟ್ವಾ ಚಕ್ರವರ್ತಿನಮ್ ।**
**ದೇಹೇಪಿ ನ ಸ್ಥಿತಿರ್ಭೂಮೌ ಕಃ ಪುನಃ ಸ್ಥಾತುಮರ್ಹತಿ ॥ ೧೩೧ ॥**

**ಇತಿ ಶ್ರುತ್ವಾ ವಚೋ ರಾಜ್ಞಾ ತಯೋಶ್ಚಕ್ರೇಣ ವರ್ತಿತುಮ್ ।**
**ಶೀಲೋಸೌ ಕಿಂ ಘಟಾದೀನಾಂ ಕಾರಕಃ ಕಾರುಕಾಗ್ರಣೀಃ ॥ ೧೩೨ ॥**

**ತಸ್ಯ ಕಿಂ ಪ್ರೇಕ್ಷ್ಯಮಿತ್ಯುಕ್ತೌ ತೌ ಸಕೋಪಾವವೋಚತಾಮ್ ।**
**ಕನ್ಯಾರತ್ನಮಿದಂ ಚಕ್ರಿಭೋಗ್ಯಂ ಕಿಂ ತೇದ್ಯ ಜೀರ್ಯತಿ ॥ ೧೩೩ ॥**

**ರಥನೂಪುರರಾಜಾಸೌ ಜ್ವಲನಾದಿಜಟೀ ಕಥಮ್ ।**
**ಪ್ರಜಾಪತಿಶ್ಚ ನಾಮಾಪಿ ಸಂಧತ್ತೇ ಚಕ್ರಿಣಿ ದ್ವಿಷಿ ॥ ೧೩೪ ॥**

**ಇತಿ ಸದ್ಯಸ್ತತೋ ದೂತೌ ನಿರ್ಗತ್ಯ ದ್ರುತಗಾಮಿನೌ ।**
**ಪ್ರಾಪ್ಯಾಶ್ವಗ್ರೀವಮಾನಮ್ಯ ಪ್ರೋಚತುಸ್ತದ್ವಿಜೃಂಭಣಮ್ ॥ ೧೩೫ ॥**

"ಗರ್ವದಿಂದ ಈ ಮಾತು ಹೇಳತಕ್ಕುದಲ್ಲ. ಚಕ್ರವರ್ತಿಯನ್ನು ನೋಡದೆ ದೇಹದಲ್ಲಿಯೂ ಇರುವಂತಿಲ್ಲ. ಅಂದಮೇಲೆ ಭೂಮಿಯಲ್ಲಿ ಯಾವನು ನಿಲ್ಲಲು ಯೋಗ್ಯನಾಗುತ್ತಾನೆ ?" ಈ ರೀತಿಯಾದ ದೂತರ ಮಾತನ್ನು ಕೇಳಿ ತ್ರಿಪೃಷ್ಠರಾಜನು "ಚಕ್ರದಿಂದ ನಡೆಯುವುದಕ್ಕೆ–ಜೀವಿಸುವುದಕ್ಕೆ ಸ್ವಭಾವವಾಗಿರುವವನೂ ಕಾರುಜಾತೀಯ(ಶೂದ್ರ)ರಲ್ಲಿ ಮುಂದಾಳುವೂ ಆದ ಇವನು ಮಡಿಕೆ ಮೊದಲಾದುವುಗಳನ್ನು ಮಾಡುವವನೋ ? ಅವನಿಗೆ ಇಷ್ಟವಾದುದಾವುದು ?" ಎಂದು ಹೇಳಿದನು. ಆಗ ಆ ದೂತರು ಕೋಪವುಳ್ಳವರಾಗಿ "ಈ ಕನ್ಯಾರತ್ನವು ಚಕ್ರವರ್ತಿಯಿಂದ ಭೋಗಿಸಲ್ಪಡತಕ್ಕುದಾಗಿದೆ. ಈಗ ನಿನಗೆ ಜೀರ್ಣವಾಗುತ್ತದೋ ? ಚಕ್ರವರ್ತಿಯು ಶತ್ರುವಾಗಿರುತ್ತಿರಲು ರಥನೂಪುರದ ರಾಜನಾದ ಈ ಜ್ವಲನಜಟಿಯೂ ಪ್ರಜಾಪತಿ ರಾಜನೂ ಹೆಸರನ್ನು ಕೂಡ ಹೇಗೆ ಧರಿಸುವರು ?" ಈ ಪ್ರಕಾರವಾಗಿ ಹೇಳಿ ತತ್ಕ್ಷಣದಲ್ಲಿ ದೂತರು ಅಲ್ಲಿಂದ ಹೊರಟು ಶೀಘ್ರಗಾಮಿಗಳಾಗಿ ಹೋಗಿ ಅಶ್ವಗ್ರೀವನನ್ನು ಹೊಂದಿ ನಮಸ್ಕರಿಸಿ ಆ ತ್ರಿಪೃಷ್ಠನ ವಿಜೃಂಭಣವನ್ನು ಅವನಿಗೆ ತಿಳಿಸಿದರು.

**ಖಗೇಶ್ವರೋಪಿ ತತ್ಸೋಢುಮಕ್ಷಮೋ ರೂಕ್ಷವೀಕ್ಷಣಃ ।**
**ಭೇರೀಮಾಸ್ಫಾಲಯಾಮಾಸ ರಣಪ್ರಾರಂಭಸೂಚನೀಮ್ ॥ ೧೩೬ ॥**

ಖೇಚರೇಶ್ವರನೂ ಆ ವಿಜೃಂಭಣವನ್ನು ಸಹಿಸುವುದಕ್ಕೆ ಅಸಮರ್ಥನೂ ತೀಕ್ಷ್ಣದೃಷ್ಟಿಯುಳ್ಳವನೂ ಆಗಿ ಯುದ್ಧಾರಂಭಸೂಚಕವಾದ ಭೇರಿಯನ್ನು ಹೊಡೆಯಿಸಿದನು.

**ತದ್ಧ್ವನಿರ್ವ್ಯಾಪ ದಿಕ್ಪ್ರಾಂತಾನ್ ಹತ್ವಾ ದಿಗ್ದಂತಿನಾಂ ಮದಮ್ ।**
**ಚಕ್ರವರ್ತಿನಿ ಸಂಕ್ರುದ್ಧೇ ಕೇ ಮಹಾಂತೋ ನ ಬಿಭ್ಯತಿ ॥ ೧೩೭ ॥**

ಆ ಶಬ್ದವು ದಿಗ್ಗಜಗಳ ಮದವನ್ನು ನಾಶಮಾಡಿ ದಿಗಂತಗಳನ್ನು ವ್ಯಾಪಿಸಿತು. ಚಕ್ರವರ್ತಿಯು ಕುಪಿತನಾದರೆ ದೊಡ್ಡವರು ಯಾರು ತಾನೆ ಹೆದರುವುದಿಲ್ಲ ?

**ಉಭಯೋಃ ಸೇನಯೋಸ್ತತ್ರ ಸಂಗ್ರಾಮಃ ಸಮಭೂನ್ಮಹಾನ್ ।**
**ಸಮಕ್ಷಯಾತ್ತಯೋಃ ಪ್ರಾಪದಂತಕಃ ಸಮವರ್ತಿತಾಮ್ ॥ ೧೩೮ ॥**

ಅಲ್ಲಿ ಉಭಯಸೇನೆಗಳಿಗೆ ಮಹಾಯುದ್ಧವುಂಟಾಯಿತು. ಆ ಸೇನೆಗಳಲ್ಲಿ ಸಮಾನವಾಗಿ ಸೈನ್ಯನಾಶವಾದುದರಿಂದ ಯಮನು ಆಗ ಸಮವರ್ತಿತ್ವವನ್ನು ಹೊಂದಿದನು. ಆಗ ಯಮನ ಸಮವರ್ತಿಯೆಂಬ ಹೆಸರಿಗೆ ಸಾರ್ಥಕತೆಯುಂಟಾಯಿತೆಂದು ಭಾವವು.

**ಯುದ್ಧ್ವಾ ಚಿರಂ ಪದಾತೀನಾಂ ವೃಥಾ ಕಿಂ ಕ್ರಿಯತೇ ಕ್ಷಯಃ ।**
**ಇತಿ ತ್ರಿಪೃಷ್ಠೋ ಯುದ್ಧಾರ್ಥಮಭ್ಯಶ್ವಗ್ರೀವಮೀಯಿವಾನ್ ॥ ೧೩೯ ॥**

ಬಹುಕಾಲದವರೆಗೆ ಯುದ್ಧವನ್ನು ವ್ಯರ್ಥವಾಗಿ ಮಾಡಿ ಪದಾತಿಗಳ ನಾಶವನ್ನೇಕೆ ಮಾಡಬೇಕು ? ಎಂದು ಯೋಚಿಸಿ ತ್ರಿಪೃಷ್ಠನು ಯುದ್ಧಕ್ಕೋಸ್ಕರ ಅಶ್ವಗ್ರೀವನಿಗೆ ಇದಿರಾಗಿ ಹೋದನು.

**ಹಯಗ್ರೀವೋಪಿ ಜನ್ಮಾಂತರಾನುಬದ್ಧೋರುವೈರತಃ ।**
**ಆಚ್ಛಾದಯದತಿಕ್ರುದ್ಧಃ ಶರವರ್ಷೈರ್ವಿರೋಧಿನಮ್ ॥ ೧೪೦ ॥**

ಜನ್ಮಾಂತರಾನುಬದ್ಧವಾದ ಬಹುವೈರವುಳ್ಳ ಹಯಗ್ರೀವನೂ ಬಹುಕೋಪವುಳ್ಳವನಾಗಿ ಬಾಣವೃಷ್ಟಿಗಳಿಂದ ಶತ್ರುವನ್ನು ಮುತ್ತಿದನು.

**ದ್ವಂದ್ವಯುದ್ಧೇನ ತೌ ಜೇತುಮಕ್ಷಮಾವಿತರೇತರಮ್ ।**
**ಮಾಯಾಯುದ್ಧಂ ಸಮಾರಬ್ಧೌ ಮಹಾವಿದ್ಯಾಬಲೋದ್ಧತೌ ॥ ೧೪೧ ॥**

ದ್ವಂದ್ವಯುದ್ಧದಿಂದ ಒಬ್ಬನನ್ನೊಬ್ಬನು ಜಯಿಸುವುದಕ್ಕೆ ಅಸಮರ್ಥರಾದ ಮತ್ತು ಮಹಾವಿದ್ಯಾಬಲದಿಂದ ಮದೋನ್ಮತ್ತರಾದ ಆ ಅಶ್ವಗ್ರೀವ ತ್ರಿಪೃಷ್ಠರು ಮಾಯಾಯುದ್ಧವನ್ನಾರಂಭಿಸಿದರು.

**ಯುದ್ಧ್ವಾ ಚಿರಂ ಹಯಗ್ರೀವಶ್ಚಕ್ರಂ ನ್ಯಕ್ಷಿಪದಭ್ಯರಿ ।**
**ತದೇವಾದಾಯ ತದ್ಗ್ರೀವಾಮಾಚ್ಛಿನತ್ಕೇಶವಃ ಕ್ರುಧಾ ॥ ೧೪೨ ॥**

ಬಹುಕಾಲದವರೆಗೆ ಯುದ್ಧವನ್ನು ಮಾಡಿ ಅಶ್ವಗ್ರೀವನು ಶತ್ರುವಿನ ಮೇಲೆ ಚಕ್ರವನ್ನು ಎಸೆದನು. ಅದೇ ಚಕ್ರವನ್ನು ತೆಗೆದುಕೊಂಡು ತ್ರಿಪೃಷ್ಠ–ಕೇಶವನು ಕೋಪದಿಂದ ಅಶ್ವಗ್ರೀವನ ಕೊರಳನ್ನು ಕತ್ತರಿಸಿದನು.

**ತಾವರ್ಕವಿಧುಸಂಕಾಶೌ ತ್ರಿಪೃಷ್ಠವಿಜಯೌ ವಿಭೂ ।**
**ಭರತಾರ್ಧಾಧಿಪತ್ಯೇನ ಭಾತಃ ಸ್ಮ ಧ್ವಸ್ತ ವಿದ್ವಿಷೌ ॥ ೧೪೩ ॥**

ಸೂರ್ಯಚಂದ್ರರಿಗೆ ಸಮಾನರೂ ಪ್ರಭುಗಳೂ ಶತ್ರುಸಂಹಾರಕರೂ ಆದ ಆ ತ್ರಿಪೃಷ್ಠನೂ ವಿಜಯನೂ ಅರ್ಧಭರತಕ್ಷೇತ್ರದ ದೊರೆತನದಿಂದ ಪ್ರಕಾಶಿಸಿದರು.

**ನೃಪೇಂದ್ರೈಃ ಖೇಚರಾಧೀಶೈರ್ವ್ಯಂತರೈರ್ಮಾಗಧಾದಿಭಿಃ ।**
**ಕೃತಾಭಿಷೇಕಃ ಸಂಪ್ರಾಪತ್ತ್ರಿಪೃಷ್ಠಃ ಪೃಷ್ಠತಾಂ ಕ್ಷಿತೇಃ ॥ ೧೪೪ ॥**

ರಾಜೇಂದ್ರರಿಂದಲೂ ಖೇಚರೇಂದ್ರರಿಂದಲೂ ಮಾಗಧನೇ ಮೊದಲಾದ ವ್ಯಂತರರಿಂದಲೂ ರಾಜ್ಯಾಭಿಷೇಕಮಾಡಲ್ಪಟ್ಟವನಾದ ತ್ರಿಪೃಷ್ಠನು ಭೂಮಿಗೆ ಬೆನ್ನಿನ ಭಾವವನ್ನು ಹೊಂದಿದನು. ಭೂಮಿಗೆ ಆಧಾರಭೂತರಾಜನಾದನೆಂದು ಭಾವವು.

**ಆಧಿಪತ್ಯಂ ದ್ವಯೋಃ ಶ್ರೇಣ್ಯೋರ್ವಿತತಾರಾದಿಕೇಶವಃ ।**
**ಹೃಷ್ಟಃ ಸ್ವಯಂಪ್ರಭಾಪಿತ್ರೇ ನ ಸ್ಯಾತ್ಕಿಂ ಶ್ರೀಮದಾಶ್ರಯಾತ್ ॥ ೧೪೫ ॥**

ಆದಿಕೇಶವನಾದ ತ್ರಿಪೃಷ್ಠನು ಸಂತುಷ್ಟನಾಗಿ ಸ್ವಯಂಪ್ರಭೆಯ ತಂದೆಯಾದ ಜ್ವಲನಜಟಿಗೆ ಉಭಯಶ್ರೇಣಿಗಳ ಆಧಿಪತ್ಯವನ್ನು ಕೊಟ್ಟನು. ಶ್ರೀಮಂತನ ಆಶ್ರಯದಿಂದ ಯಾವುದು ತಾನೆ ಪ್ರಾಪ್ತವಾಗುವುದಿಲ್ಲ?

**ಅಸಿಃ ಶಂಖೋ ಧನುಶ್ಚಕ್ರಂ ಶಕ್ತಿರ್ದಂಡೋ ಗದಾಭವನ್ ।**
**ರತ್ನಾನಿ ಸಪ್ತ ಚಕ್ರೇಶೋ ರಕ್ಷಿತಾನಿ ಮರುದ್ಗಣೈಃ ॥ ೧೪೬ ॥**

ತ್ರಿಪೃಷ್ಠಚಕ್ರೇಶ್ವರನಿಗೆ ಖಡ್ಗ, ಶಂಖ, ಧನುಸ್ಸು, ಚಕ್ರ, ಶಕ್ತ್ಯಾಯುಧ, ದಂಡಾಯುಧ, ಗದೆ ಇವುಗಳೂ ದೇವಸಮೂಹಗಳಿಂದ ರಕ್ಷಿಸಲ್ಪಟ್ಟ ಏಳು ರತ್ನಗಳೂ ಉಂಟಾದುವು.

**ರತ್ನಮಾಲಾ ಹಲಂ ಭಾಸ್ವದ್ರಾಮಸ್ಯ ಮುಸಲಂ ಗದಾ ।**
**ಮಹಾರತ್ನಾನಿ ಚತ್ವಾರಿ ಬಭೂವುರ್ಭಾವಿನಿರ್ವೃತೇಃ ॥ ೧೪೭ ॥**

ಮುಂದೆ–ತದ್ಭವ ಮೋಕ್ಷಗಾಮಿಯಾದ ಬಲಭದ್ರನಿಗೆ ರತ್ನಗಳ ಮಾಲೆ, ನೇಗಿಲು, ವನಿಕೆ, ಗದೆ ಇವುಗಳೂ ನಾಲ್ಕು ಮಾಹರತ್ನಗಳೂ ಉಂಟಾದುವು.

**ದೇವ್ಯಃ ಸ್ವಯಂಪ್ರಭಾಮುಖ್ಯಾಃ ಸಹಸ್ರಾಣ್ಯಸ್ಯ ಷೋಡಶ ।**
**ಬಲಸ್ಯಾಷ್ಟಸಹಸ್ರಾಣಿ ಕುಲರೂಪಗುಣಾನ್ವಿತಾಃ ॥ ೧೪೮ ॥**

ಈ ತ್ರಿಪೃಷ್ಠ–ಕೇಶವನಿಗೆ ಕುಲರೂಪಗುಣಯುಕ್ತರಾದ ಸ್ವಯಂಪ್ರಭೆಯೇ ಮೊದಲಾದ ಹದಿನಾರುಸಾವಿರ ದೇವಿಯರೂ ಬಲಭದ್ರನಿಗೆ ಎಂಟುಸಾವಿರ ದೇವಿಯರೂ ಆದರು.

**ಅರ್ಕಕೀರ್ತಿಕುಮಾರಸ್ಯ ಜ್ಯೋತಿರ್ಮಾಲಾಂ ಖಗಾಧಿಪಃ ।**
**ಪ್ರಾಜಾಪತ್ಯವಿವಾಹೇನ ಮಹತ್ಯಾ ಸಂಪದಾಗ್ರಹೀತ್ ॥ ೧೪೯ ॥**

ಖೇಚರಾಧಿಪತಿಯಾದ ಜ್ವಲನಜಟಿಯು ಅರ್ಕಕೀರ್ತಿಕುಮಾರನಿಗೆ ಜ್ಯೋತಿರ್ಮಾಲೆಯನ್ನು ಪ್ರಾಜಾಪತ್ಯವೆಂಬ ವಿವಾಹವಿಧಿಯಿಂದ ಮಹಾವೈಭವದಿಂದ ಗ್ರಹಣಮಾಡಿದನು.

**ತಯೋರಮಿತತೇಜಾಶ್ಚ ಸುತಾರಾ ಚಾಭವತ್ಸುತಾ ।**
**ಪ್ರತಿಪಚ್ಚಂದ್ರಯೋಃ ಶುಕ್ಲಪಕ್ಷ್ಯೋ ರೇಖೇವ ಚೈಂದವೀ ॥ ೧೫೦ ॥**

ಆ ಅರ್ಕಕೀರ್ತಿಗೂ ಜ್ಯೋತಿರ್ಮಾಲೆಗೂ ಅಮಿತತೇಜನೆಂಬ ಪುತ್ರನೂ ಸುತಾರೆಯೆಂಬ ಪುತ್ರಿಯೂ ಜನಿಸಿದರು. ಅವರು ಪ್ರತಿಪತ್ತಿನ(ಪಾಡ್ಯದ) ಶುಕ್ಲಪಕ್ಷದಂತೆಯೂ ಚಂದ್ರನ ರೇಖೆಯಂತೆಯೂ ಶೋಭಿಸಿದರು.

**ವಿಷ್ಣೋಃ ಸ್ವಯಂಪ್ರಭಾಯಾಶ್ಚ ಸುತಃ ಶ್ರೀವಿಜಯೋಜನಿ ।**
**ತತೋ ವಿಜಯಭದ್ರಾಖ್ಯಃ ಸುತಾ ಜ್ಯೋತಿಷ್ಪ್ರಭಾಹ್ವಯಾ ॥ ೧೫೧ ॥**

ತ್ರಿಪೃಷ್ಠ–ಕೇಶವನಿಗೂ ಸ್ವಯಂಪ್ರಭೆಗೂ ಶ್ರೀವಿಜಯನೆಂಬ ಪುತ್ರನು ಜನಿಸಿದನು. ಆಮೇಲೆ ವಿಜಯಭದ್ರನೆಂಬ ಪುತ್ರನೂ ಜ್ಯೋತಿಷ್ಪ್ರಭೆಯೆಂಬ ಪುತ್ರಿಯೂ ಜನಿಸಿದರು.

**ಪ್ರಜಾಪತಿಮಹಾರಾಜಃ ಪರಿಪ್ರಾಪ್ತ ಮಹೋದಯಃ ।**
**ಕದಾಚಿಜ್ಜಾತಸಂವೇಗಃ ಸಂಪ್ರಾಪ್ಯ ಪಿಹಿತಾಸ್ರವಮ್ ॥ ೧೫೨ ॥**

**ಆದಾಜ್ಜೈನೇಶ್ವರಂ ರೂಪಂ ತ್ಯಕ್ತ್ವಾ ಶೇಷಪರಿಗ್ರಹಮ್ ।**
**ಯೇನ ಸಂಪ್ರಾಪ್ಯತೇ ಭಾವಃ ಸುಖಾತ್ಮಪರಮಾತ್ಮನಃ ॥ ೧೫೩ ॥**

ಮಹಾಭ್ಯುದಯವನ್ನು ಹೊಂದಿದ ಪ್ರಜಾಪತಿರಾಜನು ಒಂದಾನೊಂದು ಕಾಲದಲ್ಲಿ ಧರ್ಮದಲ್ಲಿಯೂ ಅದರ ಫಲದಲ್ಲಿಯೂ ಪ್ರೀತಿರೂಪವಾದ ಸಂವೇಗವನ್ನು ಹೊಂದಿದವನಾಗಿ ಪಿಹಿತಾಸ್ರವ ಮುನಿಯನ್ನು ಹೊಂದಿ ಸಂಪೂರ್ಣಪರಿಗ್ರಹವನ್ನು ತ್ಯಜಿಸಿ ಯಾವುದರಿಂದ ಸುಖರೂಪವಾದ ಪರಮಾತ್ಮನ ಸ್ವರೂಪವು ದೊರೆಯುವುದೋ ಅಂತಹ ಜಿನೇಶ್ವರಸಂಬಂಧವಾದ ರೂಪವನ್ನು ಸ್ವೀಕರಿಸಿದನು. ಜಿನಮುನಿಯಾದನೆಂದು ಭಾವವು.

**ಬಾಹ್ಯೇತರದ್ವಿಷಡ್ಭೇದತಪಸ್ಯವಿರತೋದ್ಯಮಃ ।**
**ಚಿರಂ ತಪಸ್ಯನ್ ಸ್ವಂ ಚಿತ್ತಮಾಯುರಂತೇ ಸಮಾದಧತ್ ॥ ೧೫೪ ॥**

**ಮಿಥ್ಯಾತ್ವಂ ಸಂಯಮಾಭಾವಂ ಪ್ರಮಾದಂ ಸಕಷಾಯತಾಮ್ ।**
**ಕೈವಲ್ಯಂ ಸ ಸಯೋಗತ್ವಂ ತ್ಯಕ್ತ್ವಾಭೂತ್ಪರಮಃ ಕ್ರಮಾತ್ ॥ ೧೫೫ ॥**

ಅವನು ಆರು ವಿಧವಾದ ಪ್ರಾಯಶ್ಚಿತ್ತಾದಿ ಬಾಹ್ಯತಪಸ್ಸಿನಲ್ಲಿಯೂ ಆರು ವಿಧವಾದ ಅನಶನಾದಿ ಅಭ್ಯಂತರತಪಸ್ಸಿನಲ್ಲಿಯೂ ಯಾವಾಗಲೂ ಪ್ರಯತ್ನಪರನಾಗಿ ಬಹುಕಾಲದವರೆಗೆ ತಪಸ್ಸನ್ನು ಮಾಡಿ ಆಯುಷ್ಯಾವಸಾನದಲ್ಲಿ ತನ್ನ ಚಿತ್ತವನ್ನು ಸ್ವಾಧೀನದಲ್ಲಿರಿಸಿ ಯಥಾಕ್ರಮವಾಗಿ ಮಿಥ್ಯಾತ್ವವನ್ನೂ ಸಂಯಮ–ವ್ರತದ ಅಭಾವವನ್ನೂ ಕಷಾಯಭಾವವನ್ನೂ ತ್ಯಜಿಸಿ ಕೇವಲಜ್ಞಾನವನ್ನು ಪಡೆದು ಬಳಿಕ ಮನೋವಾಕ್ಕಾಯಪ್ರವೃತ್ತಿರೂಪವಾದ ಯೋಗವನ್ನೂ ತ್ಯಜಿಸಿ ಪರಮಾತ್ಮನಾದನು.

**ಖೇಚರೇಶೋಪಿ ತಚ್ಛ್ರುತ್ವಾ ರಾಜ್ಯಂ ದತ್ವಾರ್ಕಕೀರ್ತಯೇ ।**
**ನಿರ್ಗ್ರಂಥರೂಪಮಾಪನ್ನೋ ಜಗನ್ನಂದನಸನ್ನಿಧೌ ॥ ೧೫೬ ॥**

ಆ ವಿಷಯವನ್ನು ಕೇಳಿ ಖೇಚರಾಧಿಪತಿ–ಜ್ವಲನಜಟಿಯೂ ಅರ್ಕಕೀರ್ತಿಗೆ ರಾಜ್ಯವನ್ನು ಕೊಟ್ಟು ಜಗನ್ನಂದನ ಮುನಿಸನ್ನಿಧಿಯಲ್ಲಿ ನಿರ್ಗ್ರಂಥಮುನಿರೂಪವನ್ನು ಹೊಂದಿದನು.

**ಅಯಾಚನಮನಾದಾನಮಾರ್ಜವಂ ತ್ಯಾಗಮಸ್ಪೃಹಾಮ್ ।**
**ಕ್ರೋಧಾದಿಹಾಪನಂ ಜ್ಞಾನಾಭ್ಯಾಸಂ ಧ್ಯಾನಂ ಚ ಸೋಽನ್ವಭೂತ್ ॥**

ಅವನು ಯಾಚಿಸದಿರುವಿಕೆಯನ್ನೂ ದಾನಮಾಡಲ್ಪಡದಿರುವ ವಸ್ತುವನ್ನು ಸ್ವೀಕರಿಸದಿರುವಿಕೆಯನ್ನೂ ಸರಳತೆಯನ್ನೂ ತ್ಯಾಗವನ್ನೂ ಆಶಾರಾಹಿತ್ಯವನ್ನೂ ಕ್ರೋಧಾದಿಗಳ ನಿವೃತ್ತಿಯನ್ನೂ ಜ್ಞಾನಾಭ್ಯಾಸವನ್ನೂ ಧ್ಯಾನವನ್ನೂ ಅನುಭವಿಸಿದನು.

**ತತೋ ನಿಃಶೇಷಮಂಹಾಂಸಿ ನಿಹತ್ಯ ನಿರುಪೋಪಧಿಃ ।**
**ನಿರಾಕಾರೋಪಿ ಸಾಕಾರೋ ನಿರ್ವಾಣಮಗಮತ್ಪರಮ್ ॥ ೧೫೮ ॥**

ಅದರಿಂದ ಸಕಲಕರ್ಮಗಳನ್ನು ನಾಶಮಾಡಿ ಉಪಾಧಿರಹಿತನೂ ಪುದ್ಗಲಸಂಬಂಧವಾದ ಆಕಾರಶೂನ್ಯನಾಗಿದ್ದರೂ ಆತ್ಮಾಕಾರವುಳ್ಳವನೂ–ಪುರುಷಾಕಾರನೂ ಆಗಿ ಪರಮನಿರ್ವಾಣವನ್ನು ಹೊಂದಿದನು.

**ತ್ರಿಪೃಷ್ಠೋ ನಿಷ್ಠುರಾರಾತಿವಿಜಯೋ ವಿಜಯಾನುಗಃ ।**
**ತ್ರಿಖಂಡಾಖಂಡಗೋಮಿನ್ಯಾಃ ಕಾಮಂ ಕಾಮಾನ್ಸಮನ್ವಭೂತ್॥ ೧೫೯ ॥**

ನಿಷ್ಠುರವೈರಿಗಳನ್ನು ಜಯಿಸಿದವನೂ ವಿಜಯ–ಬಲಭದ್ರನ ತಮ್ಮನೂ ಆದ ತ್ರಿಪೃಷ್ಠನು ಅಖಂಡವಾದ ತ್ರಿಖಂಡಪೃಥ್ವಿಯ ಇಷ್ಟವಿಷಯಗಳನ್ನು ಯಥೇಚ್ಛವಾಗಿ ಅನುಭವಿಸಿದನು.

**ಸ ಕದಾಚಿತ್ಸ್ವಜಾಮಾತುಃ ಸುತಯಾಮಿತತೇಜಸಃ ।**
**ಸ್ವಯಂವರವಿಧಾನೇನ ಮಾಲಾಮಾಸಂಜಯದ್ಗಲೇ ॥ ೧೬೦ ॥**

ಅವನು ಒಂದಾನೊಂದು ಕಾಲದಲ್ಲಿ ತನ್ನ ಅಳಿಯನಾದ ಅಮಿತತೇಜನ ಕೊರಳಿನಲ್ಲಿ ಸ್ವಯಂವರವಿಧಾನದಿಂದ ಪುತ್ರಿಯಿಂದ ಮಾಲೆಯನ್ನು ಸಂಬಂಧ ಮಾಡಿಸಿದನು. ಸ್ವಯಂವರಮಾಲೆಯನ್ನು ಹಾಕಿಸಿದನೆಂದು ಭಾವವು.

**ಅನೇನೈವ ವಿಧಾನೇನ ಸುತಾರಾ ಚಾನುರಾಗಿಣೀ ।**
**ಸ್ವಯಂ ಶ್ರೀವಿಜಯಸ್ಯಾಸೀದ್ವಕ್ಷಃಸ್ಥಲನಿವಾಸಿನೀ ॥ ೧೬೧ ॥**

ಇದೇ ವಿಧಾನದಿಂದ ಸುತಾರೆಯೂ ಅನುರಾಗವುಳ್ಳವಳಾಗಿ ತಾನು ಶ್ರೀವಿಜಯನ ವಕ್ಷಃಸ್ಥಲದಲ್ಲಿ ನಿವಾಸಮಾಡುವವಳಾದಳು. ಮನಃಪ್ರಿಯಳಾದ ಪತ್ನಿಯಾದಳೆಂದು ಭಾವವು.

**ಇತ್ಯನ್ಯೋನ್ಯಾನ್ವಿತಾಪತ್ಯಸಂಬಂಧಾಃ ಸರ್ವಬಾಂಧವಾಃ ।**
**ಸ್ವಚ್ಛಾಂಭಃಪೂರ್ಣಸಂಫುಲ್ಲಸರಸಃ ಶ್ರಿಯಮಭ್ಯಯುಃ ॥ ೧೬೨ ॥**

ಹೀಗೆ ಪರಸ್ಪರವಾಗಿ ಸೇರಿದ ಮಕ್ಕಳ ಸಂಬಂಧವುಳ್ಳ ಎಲ್ಲಾ ಬಂಧುಗಳು ಸ್ವಚ್ಛವಾದ ಜಲದಿಂದ ತುಂಬಿರುವುದೂ ಅರಳಿದ ತಾವರೆಗಳುಳ್ಳುದೂ ಆದ ಸರೋವರದ ಶೋಭೆಯನ್ನು ಹೊಂದಿದರು.

**ಆಯುರಂತೇವಧಿಸ್ಥಾನಂ ಪ್ರಾಪ್ತೇರ್ಧಭರತೇಶಿನಿ ।**
**ವಿಜಯೋ ರಾಜ್ಯಮಾಯೋಜ್ಯ ಸುತೇ ಶ್ರೀವಿಜಯೇ ಸ್ವಯಮ್ ॥**

**ದತ್ವಾ ವಿಜಯಭದ್ರಾಯ ಯೌವರಾಜ್ಯಪದಂ ಚ ಸಃ ।**
**ಚಕ್ರಿಶೋಕಸಮಾಕ್ರಾಂತಸ್ವಾಂತೋ ಹಂತುಮಘದ್ವಿಷಃ ॥ ೧೬೪ ॥**

**ಸಹಸ್ರೈಃ ಸಪ್ತಭಿಃ ಸಾರ್ಧಂ ರಾಜಭಿಃ ಸಂಯಮಂ ಯಯೌ ।**
**ಸುವರ್ಣಕುಂಭಮಭ್ಯೇತ್ಯ ಮುನಿಮಭ್ಯರ್ಣನಿರ್ವೃತಿಃ ॥ ೧೬೫ ॥**

ಅರ್ಧಭರತಾಧೀಶನಾದ ತ್ರಿಪೃಷ್ಠನು ಆಯುಷ್ಯಾವಸಾನದಲ್ಲಿ ಅವಧಿಸ್ಥಾನವಾದ ಏಳನೆಯ ನರಕವನ್ನು ಹೊಂದುತ್ತಿರಲಾಗಿ ಆ ವಿಜಯ–ಬಲಭದ್ರನು ಪುತ್ರನಾದ ಶ್ರೀವಿಜಯನಲ್ಲಿ ರಾಜ್ಯಭಾರವನ್ನಿರಿಸಿ ವಿಜಯಭದ್ರನಿಗೆ ಯೌವರಾಜ್ಯಪದವನ್ನಿತ್ತು ಚಕ್ರವರ್ತಿಯ ಮರಣದ ಶೋಕದಿಂದ ವ್ಯಾಪ್ತವಾದ ಮನಸ್ಸುಳ್ಳವನೂ ಸಮೀಪವಾದ ಮುಕ್ತಿಯುಳ್ಳವನೂ ಆದ ತಾನು ಕರ್ಮಶತ್ರುಗಳನ್ನು ನಾಶಮಾಡುವುದಕ್ಕೋಸ್ಕರ ಏಳುಸಾವಿರಮಂದಿ ರಾಜರುಗಳೊಡನೆ ಸುವರ್ಣಕುಂಭಮುನಿಯ ಬಳಿಗೆ ಹೋಗಿ ಸಂಯಮವನ್ನು ಹೊಂದಿ–ಮುನಿಯಾದನು.

**ಘಾತಿಕರ್ಮಾಣಿ ನಿರ್ಮೂಲ್ಯ ಕೈವಲ್ಯಂ ಚೋದಪಾದಯತ್ ।**
**ಅಭೂನ್ನಿಲಿಂಪಸಂಪೂಜ್ಯೋ ವ್ಯಪೇತಾಗಾರಕೇವಲೀ ॥ ೧೬೬ ॥**

ಅವನು ಘಾತಿಕರ್ಮಗಳನ್ನು ನಾಶಮಾಡಿ ದೇವರ್ಕಳಿಂದ ಪೂಜಿಸಲ್ಪಡತಕ್ಕವನೂ ಅನಗಾರಕೇವಲಿಯೂ ಆದನು. ಕೊನೆಗೆ ಮುಕ್ತಿಯನ್ನೂ ಪಡೆದನು.

**ತದಾಕರ್ಣ್ಯಾರ್ಕಕೀರ್ತಿಶ್ಚ ನಿಧಾಯಾಮಿತತೇಜಸಮ್ ।**
**ರಾಜ್ಯೇ ವಿಪುಲಮತ್ಯಾಖ್ಯಚಾರಣಾದಗಮತ್ತಪಃ ॥ ೧೬೭ ॥**

ಆ ವಿಷಯವನ್ನು ಕೇಳಿ ಅರ್ಕಕೀರ್ತಿಯೂ ಅಮಿತತೇಜನನ್ನು ರಾಜ್ಯದಲ್ಲಿರಿಸಿ ವಿಪುಲಮತಿಯೆಂಬ ಚಾರಣಮುನಿಯಿಂದ ತಪಸ್ಸನ್ನು ಪಡೆದನು.

**ನಷ್ಟಕರ್ಮಾಷ್ಟಕೋಭೀಷ್ಟಾಮಸಾವಾಪಾಷ್ಟಮೀಂ ಮಹೀಮ್ ।**
**ಅನಾಪ್ಯಂ ನಾಮ ಕಿಂ ತ್ಯಕ್ತುಂ ವ್ಯಕ್ತಮಾಶಾಮಧೀಶಿನಾಮ್ ॥ ೧೬೮ ॥**

ಈ ಅರ್ಕಕೀರ್ತಿಮುನಿಯು ಅಷ್ಟಕರ್ಮಗಳನ್ನು ನಾಶಮಾಡಿದವನಾಗಿ ಅಭೀಷ್ಟವಾದ ಅಷ್ಟಮಪೃಥಿವಿಯನ್ನು ಹೊಂದಿದನು. ವ್ಯಕ್ತವಾಗಿ ಆಶೆಯನ್ನು ಬಿಡುವುದಕ್ಕೆ ಸಮರ್ಥರಾದವರಿಗೆ ಯಾವುದು ತಾನೆ ಹೊಂದುವುದಕ್ಕೆ ಯೋಗ್ಯವಲ್ಲದುದು ?

**ತಯೋರವಿಕಲಪ್ರೀತ್ಯಾ ಯಾತೇ ಕಾಲೇ ನಿರಾಕುಲಮ್ ।**
**ಸುಖೇನಾಮಿತಶಬ್ದಾದಿತೇಜಃಶ್ರೀವಿಜಯಾಖ್ಯಯೋಃ ॥ ೧೬೯ ॥**

**ಕಶ್ಚಿಚ್ಛ್ರೀವಿಜಯಾಧೀಶಂ ಸಾಶೀರ್ವಾದಃ ಕದಾಚನ ।**
**ಉಪೇತ್ಯ ರಾಜಂಶ್ಚಿತ್ತಂ ತೇ ಪ್ರಣಿಧೇಹಿ ಮಮೋದಿತೇ ॥ ೧೭೦ ॥**

**ಪೌದನಾಧಿಪತೇರ್ಮೂರ್ಧ್ನಿ ಪತಿತೇತೋಹ್ನಿ ಸಪ್ತಮೇ ।**
**ಮಹಾಶನಿಸ್ತತಶ್ಚಿಂತ್ಯಃ ಪ್ರತೀಕಾರೋಸ್ಯ ಸತ್ವರಮ್ ॥ ೧೭೧ ॥**

**ಇತ್ಯಬ್ರವೀತ್ತದಾಕರ್ಣ್ಯ ಯುವರಾಜೋರುಣೇಕ್ಷಣಃ ।**
**ವದ ಕಿಂ ಪತಿತಾ ಸರ್ವವಿದಸ್ತೇ ಮಸ್ತಕೇ ತದಾ ॥ ೧೭೨ ॥**

**ಇತಿ ನೈಮಿತ್ತಿಕಂ ರುಷ್ಟ್ವಾಪ್ರಾಕ್ಷೀತ್ಸೋಪ್ಯಾಹ ಮೂರ್ಧ್ನಿ ಮೇ ।**
**ರತ್ನವೃಷ್ಟಿಃ ಪತೇತ್ಸಾಕಮಭಿಷೇಕೇಣ ಹೀತ್ಯದಃ ॥ ೧೭೩ ॥**

**ಸಾವಷ್ಟಂಭಂ ವಚಃ ಶ್ರುತ್ವಾ ತಸ್ಯ ರಾಜಾ ಸವಿಸ್ಮಯಃ ।**
**ಭದ್ರ ತ್ವಯಾಸ್ಯತಾಮಸ್ಮಿನ್ನಾಸನೇ ಕಿಂಚಿದುಚ್ಯತೇ ॥ ೧೭೪ ॥**

**ಕಿಂಗೋತ್ರಃ ಕಿಂಗುರುರ್ಬ್ರೂಹಿ ಕಿಂಶಾಸ್ತ್ರಂ ಕಿಂನಿಮಿತ್ತಕಃ ।**
**ಕಿಂನಾಮಾ ಕಿಂನಿಮಿತ್ತೋಯಮಾದೇಶ ಇತಿ ಪೃಷ್ಟವಾನ್ ॥ ೧೭೫ ॥**

ಆ ಅಮಿತತೇಜಃಶ್ರೀವಿಜಯರ ಕಾಲವು ಸಂಪೂರ್ಣವಾದ ಪ್ರೀತಿಯಿಂದ ನಿರಾಕುಲವಾಗಿ ಸುಖದಿಂದ ಕಳೆಯುತ್ತಿರಲು ಒಂದಾನೊಂದು ಸಮಯದಲ್ಲಿ ಯಾವನೋ ಒಬ್ಬ ಮನುಷ್ಯನು ಆಶೀರ್ವಾದಸಹಿತನಾಗಿ ಶ್ರೀವಿಜಯರಾಜನನ್ನು ಹೊಂದಿ "ರಾಜನೆ ! ನನ್ನ ಮಾತಿನಲ್ಲಿ ನಿನ್ನ ಮನಸ್ಸನ್ನಿಡು. ಈ ದಿನದಿಂದ ಏಳನೆಯ ದಿನದಲ್ಲಿ ಪೌದನಾಧಿಪತಿಯ–ತಲೆಯ ಮೇಲೆ ದೊಡ್ಡ ಸಿಡಿಲು ಬೀಳುವುದು. ಆದುದರಿಂದ ಇದಕ್ಕೆ ಶೀಘ್ರವಾಗಿ ಪ್ರತೀಕಾರವನ್ನು ಯೋಚಿಸಬೇಕು" ಎಂದು ಹೇಳಿದನು. ಆ ಮಾತನ್ನು ಕೇಳಿ ಶ್ರೀವಿಜಯರಾಜನು ಕೆಂಪಾದ ಕಣ್ಣುಗಳುಳ್ಳವನಾಗಿ "ಸರ್ವಜ್ಞನಾದ ನಿನ್ನ ತಲೆಯ ಮೇಲೆ ಆಗ ಏನು ಬೀಳುವುದು ? ಹೇಳು" ಎಂದು ಕೋಪಗೊಂಡು ಆ ನೈಮಿತ್ತಿಕನನ್ನು ಕುರಿತು ಹೇಳಿದನು. ಆಗ ಅವನೂ "ನನ್ನ ತಲೆಯ ಮೇಲೆ ಅಭಿಷೇಕದೊಡನೆ ನಿಜವಾಗಿ ರತ್ನವೃಷ್ಟಿಯು ಬೀಳುವುದು" ಎಂದನು. ಆ ನೈಮಿತ್ತಿಕನ ಅಭಿಮಾನಯುಕ್ತವಾದ ಈ ಮಾತನ್ನು ಕೇಳಿ ದೊರೆಯು ಆಶ್ಚರ್ಯಯುಕ್ತನಾಗಿ "ಅಯ್ಯಾ ! ನೀನು ಆಸನದಲ್ಲಿ ಕುಳಿತುಕೊ, ಸ್ವಲ್ಪ ಹೇಳುತ್ತೇನೆ. ನೀನು ಯಾವ ವಂಶದವನು ? ಯಾವ ಗುರುವುಳ್ಳವನು ? ಯಾವ ಶಾಸ್ತ್ರವುಳ್ಳವನು ? ಯಾವ ಉದ್ದೇಶವುಳ್ಳವನು ?" ಎಂದು ಪ್ರಶ್ನೆಮಾಡಿದನು.

**ಕುಂಡಲಾಖ್ಯಪುರೇ ರಾಜಾ ನಾಮ್ನಾ ಸಿಂಹರಥೋ ಮಹಾನ್ ।**
**ಪುರೋಹಿತಃ ಸುರಗುರುಃ ತಸ್ಯ ಶಿಷ್ಯೋ ವಿಶಾರದಃ ॥ ೧೭೬ ॥**

**ತಚ್ಛಿಷ್ಯೇಣ ನಿಮಿತ್ತಾನಿ ಪ್ರವ್ರಜ್ಯ ಹಲಿನಾ ಸಹ ।**
**ಮಯಾಷ್ಟಾಂಗಾನ್ಯಧೀತಾನಿ ಸೋಪದೇಶಂ ಶ್ರುತಾನಿ ಚ ॥ ೧೭೭ ॥**

**ಅಷ್ಟಾಂಗಾನಿ ನಿಮಿತ್ತಾನಿ ಕಾನಿ ಕಿಂಲಕ್ಷಣಾನಿ ಚೇತ್ ।**
**ಶೃಣು ಶ್ರೀವಿಜಯಾಯುಷ್ಮನ್ ಯಥಾಪ್ರಶ್ನಂ ಬ್ರವೀಮಿ ತೇ ॥ ೧೭೮ ॥**

**ಅಂತರಿಕ್ಷಸಭೌಮಾಂಗಸ್ವರವ್ಯಂಜನಲಕ್ಷಣ– ।**
**ಚ್ಛಿನ್ನಸ್ವಪ್ನವಿಭೇದೇನ ಪ್ರೋಕ್ತಾನ್ಯಾಗಮವೇದಿಭಿಃ ॥ ೧೭೯ ॥**

**ತಾತ್ಸ್ವಾಷ್ಟ್ರತ್ವಾಹಚರ್ಯಾದ್ವಾ ಜ್ಯೋತಿಷಾಮಂತರಿಕ್ಷವಾಕ್ ।**
**ಚಂದ್ರಾದಿಪಂಚಭೇದಾನಾಮುದಯಾಸ್ತಮಯಾದಿಭಿಃ ॥ ೧೮೦ ॥**

**ಜಯಃ ಪರಾಜಯೋ ಹಾನಿವೃದ್ಧಿರ್ಮೃತ್ಯುಃ ಸಜೀವಿತಃ ।**
**ಲಾಭಾಲಾಭೌ ನಿರೂಪ್ಯಂತೇ ಯತ್ರಾನ್ಯಾನಿ ಚ ತತ್ತ್ವತಃ ॥ ೧೮೧ ॥**

**ಭೂಮಿಸ್ಥಾನಾದಿಭೇದೇನ ಹಾನಿವೃದ್ಧ್ಯಾದಿಬೋಧನಮ್ ।**
**ಭೂಮ್ಯಂತಃಸ್ಥಿತರತ್ನಾದಿಕಥನಂ ಭೌಮಮಿಷ್ಯತೇ ॥ ೧೮೨ ॥**

**ಅಂಗಪ್ರತ್ಯಂಗಸಂಸ್ಪರ್ಶದರ್ಶನಾದಿಭಿರಂಗಿನಾಮ್ ।**
**ಅಂಗಂ ಕಾಲತ್ರಯೋತ್ಪನ್ನಶುಭಾಶುಭನಿರೂಪಣಮ್ ॥ ೧೮೩ ॥**

**ಮೃದಂಗಾದಿಗಜೇಂದ್ರಾದಿಚೇತನೇತರಸುಸ್ವರೈಃ ।**
**ದುಃಸ್ವರೈಶ್ಚ ಸ್ವರೋಭೀಷ್ಟಾನಿಷ್ಟಪ್ರಾಪಣಸೂಚನಮ್ ॥ ೧೮೪ ॥**

**ಶಿರೋಮುಖಾದಿಸಂಜಾತತಿಲಲಕ್ಷ್ಮವ್ರಣಾದಿಭಿಃ ।**
**ವ್ಯಂಜನಂ ಸ್ಥಾನಮಾನೈಶ್ಯಲಾಭಾಲಾಭಾದಿವೇದನಮ್ ॥ ೧೮೫ ॥**

**ಶ್ರೀವೃಕ್ಷಸ್ವಸ್ತಿಕಾದ್ಯಷ್ಟಶತಾಂಗಗತಲಕ್ಷಣೈಃ ।**
**ಭೋಗೈಶ್ವರ್ಯಾದಿಸಂಪ್ರಾಪ್ತಿಕಥನಂ ಲಕ್ಷಣಂ ಮತಮ್ ॥ ೧೮೬ ॥**

**ದೇವಮಾನುಷರಕ್ಷೋವಿಭಾಗೈರ್ವಸ್ತ್ರಾಯುಧಾದಿಷು ।**
**ಮೂಷಕಾದಿಕೃತಚ್ಛೇದೈರ್ಭಿನ್ನಂ ತತ್ಫಲಭಾಷಣಮ್ ॥ ೧೮೭ ॥**

**ಶುಭಾಶುಭವಿಭಾಗೋಕ್ತಸ್ವಪ್ನಸಂದರ್ಶನಾನ್ನೃಣಾಮ್ ।**
**ಸ್ವಪ್ನೋ ವೃದ್ಧಿವಿನಾಶಾದಿಯಾಥಾತ್ಮ್ಯಕಥನಂ ಮತಃ ॥ ೧೮೮ ॥**

ಅದಕ್ಕೆ ಆ ನೈಮಿತ್ತಿಕನು ''ಕುಂಡಲಪುರದಲ್ಲಿ ಸಿಂಹರಥನೆಂಬ ಮಹಾರಾಜನಿದ್ದಾನೆ. ಬೃಹಸ್ಪತಿಯು ಅವನ ಪುರೋಹಿತ. ವಿಶಾರದನೆಂಬವನು ಆ ಪುರೋಹಿತನ ಶಿಷ್ಯ. ಬಲಭದ್ರನೊಡನೆ ನಾನು ದೀಕ್ಷೆಯನ್ನು ತೆಗೆದುಕೊಂಡು ಆ ಶಿಷ್ಯನಿಂದ ಅಷ್ಟಾಂಗನಿಮಿತ್ತಗಳನ್ನು ಅಧ್ಯಯನಮಾಡಿದೆನು ಮತ್ತು ಉಪದೇಶಸಹಿತವಾಗಿ ಕೇಳಿದೆನು. ಅಷ್ಟಾಂಗನಿಮಿತ್ತಗಳಾವುವು ? ಯಾವ ಲಕ್ಷಣಗಳುಳ್ಳುವು ? ಎಂದರೆ ಆಯುಷ್ಮಂತನಾದ ಶ್ರೀ ವಿಜಯನೆ ! ಕೇಳು. ಪ್ರಶ್ನಾನುಸಾರವಾಗಿ ನಿನಗೆ ಹೇಳುತ್ತೇನೆ. ಆಗಮಜ್ಞಾನಿಗಳಾದ ಮಹರ್ಷಿಗಳು ಅಂತರಿಕ್ಷ, ಭೌಮ, ಅಂಗ, ಸ್ವರ, ವ್ಯಂಜನ, ಲಕ್ಷಣ, ಛಿನ್ನ, ಸ್ವಪ್ನಭೇದದಿಂದ ಎಂಟು ವಿಧವಾಗಿ ಹೇಳಿದ್ದಾರೆ. ಅಂತರಿಕ್ಷದಲ್ಲಿರುವುದರಿಂದ ಅಥವಾ ಅಂತರಿಕ್ಷದೊಡನೆ ಇರುವುದರಿಂದ ಜ್ಯೋತಿರ್ದೇವತೆಗಳಿಗೆ ಅಂತರಿಕ್ಷವೆಂಬ ಹೆಸರಿದೆ. ಚಂದ್ರಾದಿಪಂಚಪ್ರಕಾರವಾದ ಆ ಜ್ಯೋತಿರ್ದೇವತೆಗಳ ಉದಯಾಸ್ತಮಾನಾದಿಗಳಿಂದ ಜಯ, ಪರಾಜಯ, ಹಾನಿ, ವೃದ್ಧಿ, ಮೃತ್ಯು, ಜೀವಿತ, ಲಾಭ, ನಷ್ಟ, ಇವುಗಳೂ ಇತರವಿಷಯಗಳೂ ಯಥಾರ್ಥವಾಗಿ ಯಾವುದರಲ್ಲಿ ಹೇಳಲ್ಪಡುವುವೋ ಅದಕ್ಕೆ ಅಂತರಿಕ್ಷಾಂಗವೆಂದು ಹೆಸರು. ಭೂಮಿಸ್ಥಾನಾದಿಭೇದದಿಂದ ಹಾನಿವೃದ್ಧಿ ಮೊದಲಾದುವುಗಳನ್ನು ತಿಳಿಸುವುದೂ ಭೂಮಿಯೊಳಗಿರುವ ರತ್ನಾದಿಗಳನ್ನು ತಿಳಿಸುವದೂ ಆದ ಚಿಹ್ನೆಗೆ ಭೌಮಾಂಗವೆಂದು ಹೆಸರು. ಪ್ರಾಣಿಗಳ ಅಂಗಪ್ರತ್ಯಂಗಗಳ ಸ್ಪರ್ಶನವನ್ನು ನೋಡುವಿಕೆಯೇ ಮೊದಲಾದುವುಗಳಿಂದ ಕಾಲತ್ರಯದಲ್ಲಿ ಉಂಟಾಗುವ ಶುಭಾಶುಭಗಳನ್ನು ತಿಳಿಸುವ ಚಿಹ್ನೆಗೆ ಅಂಗವೆಂದು ಹೆಸರು. ಮದ್ದಳೆಯೇ ಮೊದಲಾದ ಅಚೇತನ ವಸ್ತುಗಳ ಮತ್ತು ದೊಡ್ಡ ಆನೆಯೇ ಮೊದಲಾದ ಚೇತನ–ಪ್ರಾಣಿಗಳ ಸುಸ್ವರದಿಂದ ಇಷ್ಟಪ್ರಾಪ್ತಿಯನ್ನೂ ದುಃಸ್ವರದಿಂದ ಅನಿಷ್ಟಪ್ರಾಪ್ತಿಯನ್ನೂ ಸೂಚಿಸುವ ಚಿಹ್ನೆಗೆ ಸ್ವರಾಂಗವೆಂದು ಹೆಸರು. ಮಸ್ತಕ ಮುಖ ಮೊದಲಾದ ಸ್ಥಾನಗಳಲ್ಲುಂಟಾದ ತಿಲ (ಎಳ್ಳಿನಂತಹ ಕಪ್ಪು ಗುರುತು) ಲಕ್ಷಣ, ವ್ರಣ ಮೊದಲಾದುವುಗಳಿಂದ ಸ್ಥಾನ ಮಾನ ಪ್ರಭುತ್ವ ಲಾಭ ನಷ್ಟ ಮೊದಲಾದುವುಗಳನ್ನು ತಿಳಿಸುವ ಚಿಹ್ನೆಗೆ ವ್ಯಂಜನಾಂಗವೆಂದು ಹೆಸರು. ಶರೀರದಲ್ಲಿರುವ ಶ್ರೀವೃಕ್ಷ ಸ್ವಸ್ತಿಕವೇ ಮೊದಲಾದ ನೂರೆಂಟು ಲಕ್ಷಣಗಳಿಂದ ಭೋಗ ಸಂಪತ್ತಿ ಮೊದಲಾದುವುಗಳ ಪ್ರಾಪ್ತಿಯನ್ನು ತಿಳಿಸುವ ಚಿಹ್ನೆಗೆ ಲಕ್ಷಣಾಂಗವೆಂದು ಹೆಸರು. ವಸ್ತ್ರ ಆಯುಧ ಮೊದಲಾದ ವಸ್ತುಗಳಲ್ಲಿ ದೇವ ಮನುಷ್ಯ ರಾಕ್ಷಸವಿಭಾಗಗಳುಳ್ಳ ಇಲಿಯೇ ಮೊದಲಾದುವುಗಳಿಂದ ಮಾಡಲ್ಪಟ್ಟ ಭೇದ–ರಂಧ್ರಗಳಿಂದ ಅವುಗಳ ಶುಭಾಶುಭಫಲಗಳನ್ನು ತಿಳಿಸುವ ಚಿಹ್ನೆಗೆ ಛಿನ್ನಾಂಗವೆಂದು ಹೆಸರು. ಶುಭಾಶುಭಭೇದದಿಂದ ದ್ವಿವಿಧವಾದ ಸ್ವಪ್ನಗಳ ದರ್ಶನದಿಂದ ಮನುಷ್ಯರಿಗೆ ವೃದ್ಧಿ ವಿನಾಶ ಮೊದಲಾದುವುಗಳ ಯಥಾರ್ಥಸ್ವರೂಪವನ್ನು ತಿಳಿಸುವ ಚಿಹ್ನೆಗೆ ಸ್ವಪ್ನಾಂಗವೆಂದು ಹೆಸರು.''

**ಇತ್ಯುಕ್ತ್ವಾ ಕ್ಷುತ್ಪಿಪಾಸಾದಿದ್ವಾವಿಂಶತಿಪರೀಷಹೈಃ ।**
**ಪೀಡಿತೋಽಸಹಮಾನೋಽಹಂ ಪದ್ಮಿನೀಖೇಟಮಾಯಯೌ ॥ ೧೮೯ ॥**

**ತತ್ರ ಮನ್ಮಾತುಲಃ ಸೋಮಶರ್ಮಾ ಚಂದ್ರಾನನಾಂ ಸುತಾಮ್ ।**
**ಹಿರಣ್ಯಲೋಮಾಸಂಭೂತಾಂ ಪ್ರೀತ್ಯಾ ಮಹ್ಯಂ ಪ್ರದತ್ತವಾನ್ ॥ ೧೯೦ ॥**

**ದ್ರವ್ಯಾರ್ಜನಂ ಪರಿತ್ಯಜ್ಯ ನಿಮಿತ್ತಾಭ್ಯಾಸತತ್ಪರಮ್ ।**
**ಮಾಂ ಸಾ ನಿರೀಕ್ಷ್ಯ ನಿರ್ವಿಣ್ಣಾ ಪಿತೃದತ್ತಧನಕ್ಷಯಾತ್ ॥ ೧೯೧ ॥**

**ಭೋಜನಾವಸರೇಽನ್ಯೇದ್ಯುರ್ಧನಮೇತತ್ತ್ವದಾರ್ಜಿತಮ್ ।**
**ಇತಿ ಪಾತ್ರೇಕ್ಷಿಪದ್ರೋಷಾನ್ಮದ್ವರಾಟಕಸಂಚಯಮ್ ॥ ೧೯೨ ॥**

**ರಂಜಿತಸ್ಫಟಿಕೇ ತತ್ರ ತಪನಾಭೀಷುಸನ್ನಿಧಿಮ್ ।**
**ಕಾಂತಾಕ್ಷಿಪತ್ಕರಕ್ಷಾಲನಾಂಬುಧಾರಾಂ ಚ ಪಶ್ಯತಾ ॥ ೧೯೩ ॥**

**ಮಯಾರ್ಥಲಾಭಂ ನಿಶ್ಚಿತ್ಯ ತೋಷಾಭಿಷವಪೂರ್ವಕಮ್ ।**
**ಅಮೋಘಜಿಹ್ವನಾಮ್ನಾಯಮಾದೇಶಸ್ತೇಽಧುನಾ ಕೃತಃ ॥ ೧೯೪ ॥**

**ಇತ್ಯನ್ವಾಖ್ಯತ್ಸ ತಚ್ಛ್ರುತ್ವಾ ಸಯುಕ್ತಿಕಮಸೌ ನೃಪಃ ।**
**ಚಿಂತಾಕುಲೋ ವಿಸರ್ಜ್ಯೈನಮುಕ್ತವಾನಿತಿ ಮಂತ್ರಿಣಃ ॥ ೧೯೫ ॥**

**ಇದಂ ಪ್ರತ್ಯೇಯಮಸ್ಯೋಕ್ತಂ ವಿಚಿಂತ್ಯೈತತ್ಪ್ರತಿಕ್ರಿಯಾ ।**
**ಅಭ್ಯರ್ಣೇ ಮೂಲನಾಶೇ ಕಃ ಕುರ್ಯಾತ್ಕಾಲವಿಲಂಬನಮ್ ॥ ೧೯೬ ॥**

ಈ ಪ್ರಕಾರವಾಗಿ ಹೇಳಿ ಅವನು ಪುನಃ ''ನಾನು ಹೊಟ್ಟೆಹಸಿವು ಬಾಯರಿಕೆ ಮೊದಲಾದ ಇಪ್ಪತ್ತೆರಡು ಪರೀಷಹಗಳಿಂದ ಪೀಡಿತನೂ ಸಹಿಸದಿರುವವನೂ ಆಗಿ ಪದ್ಮಿನೀಖೇಟವೆಂಬ ನಗರಕ್ಕೆ ಬಂದೆನು. ಅಲ್ಲಿ ನನ್ನ ಮಾವನಾದ ಸೋಮಶರ್ಮನು ತನ್ನ ಪತ್ನಿಯಾದ ಹಿರಣ್ಯಲೋಮೆಯೆಂಬವಳಲ್ಲಿ ಜನಿಸಿದ ಚಂದ್ರಾನನೆಯೆಂಬ ಮಗಳನ್ನು ನನಗೆ ಪ್ರೀತಿಯಿಂದ ಕೊಟ್ಟನು. ದ್ರವ್ಯಾರ್ಜನೆಯನ್ನು ಪರಿತ್ಯಜಿಸಿ ನಿಮಿತ್ತಾಭ್ಯಾಸದಲ್ಲಿ ತತ್ಪರನಾದ ನನ್ನನ್ನು ಆಕೆಯು ನೋಡಿ ತಂದೆಯು ಕೊಟ್ಟಿದ್ದ ದ್ರವ್ಯವು ನಾಶವಾದುದರಿಂದ ಖಿನ್ನಳಾಗಿ ಮತ್ತೊಂದು ದಿವಸ ಭೋಜನ ಸಮಯದಲ್ಲಿ ''ನೀನು ಸಂಪಾದಿಸಿದ ದ್ರವ್ಯವಿದು'' ಎಂದು ಕೋಪದಿಂದ ಪಾತ್ರದಲ್ಲಿ ನನ್ನ ಕವಡೆಗಳ ರಾಶಿಯನ್ನು ಹಾಕಿದಳು. ಆ ಪ್ರಕಾಶಮಾನವಾದ ಸ್ಫಟಿಕ ಪಾತ್ರೆಯಲ್ಲಿ ಸೂರ್ಯಕಿರಣಗಳ ಸಾನ್ನಿಧ್ಯವನ್ನೂ ಪತ್ನಿಯು ಹಾಕಿದ ಹಸ್ತ ಪ್ರಕ್ಷಾಲನದ ಜಲಧಾರೆಯನ್ನೂ ನೋಡಿದವನೂ ಅಮೋಘಜಿಹ್ವನೆಂಬ ಹೆಸರುಳ್ಳವನೂ ಆದ ನಾನು ಸಂತೋಷದಿಂದ ನನಗೆ ಅಭಿಷೇಕಪೂರ್ವಕವಾಗಿ ಅರ್ಥಲಾಭವಾಗುವುದೆಂದು ನಿಶ್ಚಯಿಸಿ ಈಗ ನಿನಗೆ ಈ ಆದೇಶವನ್ನು ಮಾಡಿದೆನು'' ಎಂದು ಹೇಳಿದನು. ಸಯುಕ್ತಿಕವಾದ ಆ ಮಾತನ್ನು ಕೇಳಿ ಈ ಶ್ರೀವಿಜಯರಾಜನು ಚಿಂತಾಕುಲನಾಗಿ ಈ ಅಮೋಘಜಿಹ್ವನನ್ನು ಬಿಟ್ಟು ಮಂತ್ರಿಗಳನ್ನು ಕುರಿತು ''ಇವನ ಈ ಮಾತು ನಂಬತಕ್ಕುದಾಗಿದೆ. ಇದಕ್ಕೆ ಪ್ರತಿಕ್ರಿಯೆಯು ಯೋಚಿಸಲ್ಪಡತಕ್ಕುದಾಗಿದೆ. ಮೂಲನಾಶವು ಸಮೀಪದಲ್ಲಿರಲು ಯಾವನು ಕಾಲವಿಲಂಬವನ್ನು ಮಾಡುವನು ?'' ಎಂದು ಹೇಳಿದನು.

**ತಚ್ಛ್ರುತ್ವಾ ಸುಮತಿಃ ಪ್ರಾಹ ತ್ವಾಮಂಭೋಧಿದಲಾಂತರೇ ।**
**ಲೋಹಮಂಜೂಷಿಕಾಂತಸ್ಥಂ ಸ್ಥಾಪಯಾಮೇತಿ ರಕ್ಷಿತುಮ್ ॥ ೧೯೭ ॥**

ಆ ಮಾತನ್ನು ಕೇಳಿ ಸುಮತಿಯೆಂಬ ಮಂತ್ರಿಯು ರಾಜನನ್ನು ಕುರಿತು ''ನಿನ್ನನ್ನು ರಕ್ಷಿಸುವುದಕ್ಕೆ ಕಬ್ಬಿಣದ ಪೆಟ್ಟಿಗೆಯೊಳಗಿರಿಸಿ ಸಮುದ್ರದ ನೀರಿನ ಮಧ್ಯದಲ್ಲಿ ಸ್ಥಾಪಿಸುತ್ತೇವೆ'' ಎಂದು ಹೇಳಿದನು.

**ಮಕರಾದಿಭಯಂ ತತ್ರ ವಿಜಯಾರ್ಧಗುಹಾಂತರೇ ।**
**ವಿದಧಾಮ ಇತಿ ಶ್ರುತ್ವಾ ಸ ಸುಬುದ್ಧಿರಭಾಷತ ॥ ೧೯೮ ॥**

ಈ ಮಾತನ್ನು ಸುಬುದ್ಧಿಯೆಂಬ ಮಂತ್ರಿಯು ಕೇಳಿ ''ಸಮುದ್ರದಲ್ಲಿ ಮೊಸಳೆ ಮೊದಲಾದುವುಗಳ ಭಯವಿದೆ. ಆದುದರಿಂದ ನಿನ್ನನ್ನು ವಿಜಯಾರ್ಧಪರ್ವತದ ಗುಹೆಯ ಮಧ್ಯದಲ್ಲಿರಿಸುತ್ತೇವೆ'' ಎಂದು ಮಾತನಾಡಿದನು.

**ತದ್ವಚೋಽವಸಿತೌ ಪ್ರಾಜ್ಞಃ ಪುರಾವೃತ್ತಕವಿತ್ತದಾ ।**
**ಅರ್ಥಾಖ್ಯಾನಕಮಿತ್ಯಾಖ್ಯತ್ಪ್ರಸಿದ್ಧಂ ಬುದ್ಧಿಸಾಗರಃ ॥ ೧೯೯ ॥**

ಅವನ ಮಾತು ಮುಗಿದ ಬಳಿಕ ಪ್ರಾಜ್ಞನೂ ಪೂರ್ವದಲ್ಲಿ ನಡೆದುದನ್ನು ತಿಳಿದವನೂ ಆದ ಬುದ್ಧಿಸಾಗರಮಂತ್ರಿಯು ಆಗ ಪ್ರಸಿದ್ಧವಾದ ಅರ್ಥವುಳ್ಳ ಕಥೆಯನ್ನು ಈ ರೀತಿಯಾಗಿ ಹೇಳಿದನು.

**ದುಃಶಾಸ್ತ್ರಶ್ರುತಿದರ್ಪಿಷ್ಠಃ ಸೋಮಃ ಸಿಂಹಪುರೇ ವಸನ್ ।**
**ಪರಿವ್ರಾಟ್ಸ ವಿವಾದಾರ್ಥೇ ಜಿನದಾಸೇನ ನಿರ್ಜಿತಃ ॥ ೨೦೦ ॥**

**ಮೃತ್ವಾ ತತ್ರೈವ ಕಾಲಾಂತೇ ಸಂಭೂಯ ಮಹಿಷೋ ಮಹಾನ್ ।**
**ವಣಿಗ್ಲವಣದುರ್ಭಾರಚಿರವಾಹಕೃಶೀಕೃತಃ ॥ ೨೦೧ ॥**

**ಪ್ರಾಕ್ ಪೋಷಯದ್ಭಿರ್ನಿಃಶ್ಶಕ್ತಿರಿತಿ ಪಶ್ಚಾದುಪೇಕ್ಷಿತಃ ।**
**ಜಾತಿಸ್ಮರಃ ಪುರೇ ಬದ್ಧವೈರೋ ವ್ಯಪಗತಾಸುಕಃ ॥ ೨೦೨ ॥**

**ಶ್ಮಶಾನೇ ರಾಕ್ಷಸಃ ಪಾಪೀ ತಸ್ಮಿನ್ನೇವೋದಪದ್ಯತ ।**
**ತತ್ಪುರಾಧೀಶಿನೌ ಕುಂಭಭೀಮೌ ಕುಂಭಸ್ಯ ಪಾಚಕಃ ॥ ೨೦೩ ॥**

**ರಸಾಯನಾದಿಪಾಕಾಖ್ಯಸ್ತದ್ಭೋಗ್ಯಪಿಶಿತೇಽಸತಿ ।**
**ಶಿಶೋರ್ವ್ಯಸೋಸ್ತದಾ ಮಾಂಸಂ ಕುಂಭಸ್ಯಾಯೋಜಯದ್ಭಯಾತ್ ॥**

**ತತ್ಸ್ವಾದಲೋಲುಪಃ ಪಾಪೀ ತದಾಪ್ರಭೃತಿ ಖಾದಿತುಮ್ ।**
**ಮಾನುಷ್ಯಮಾಂಸಮಾರಬ್ಧಃ ಸಂಪ್ರೇಪ್ಸುರ್ನಾರಕೀಂ ಗತಿಮ್ ॥ ೨೦೫ ॥**

**ಪ್ರಜಾನಾಂ ಪಾಲಕೋ ರಾಜಾ ತಾವತ್ತಿಷ್ಠತು ಪಾಲನೇ ।**
**ಖಾದತ್ಯಯಮಿತಿ ತ್ಯಕ್ತಃ ಸ ತ್ಯಾಜ್ಯಃ ಸಚಿವಾದಿಭಿಃ ॥ ೨೦೬ ॥**

**ತನ್ಮಾಂಸಜೀವಿತಃ ಕ್ರೂರಃ ಕದಾಚಿನ್ನಿಜಪಾಚಕಮ್ ।**
**ಹತ್ವಾ ಸಾಧಿತತದ್ವಿದ್ಯಃ ಸಂಕ್ರಾಂತಪ್ರೋಕ್ತರಾಕ್ಷಸಃ ॥ ೨೦೭ ॥**

**ಪ್ರಜಾಃ ಸ ಭಕ್ಷಯಾಮಾಸ ಪ್ರತ್ಯಹಂ ಪರಿತೋ ಭ್ರಮನ್ ।**
**ತತಃ ಸರ್ವೇಽಪಿ ಸಂತ್ರಸ್ತಾಃ ಪೌರಾಃ ಸಂತ್ಯಜ್ಯ ತತ್ಪುರಮ್ ॥ ೨೦೮ ॥**

**ನಗರಂ ಪ್ರಾವಿಶನ್ಕಾರಕಟಂ ನಾಮ ಮಹಾಭಿಯಾ ।**
**ತತ್ರಾಪ್ಯಾಗತ್ಯ ಪಾಪಿಷ್ಠಃ ಕುಂಭಾಖ್ಯೋಽಭಕ್ಷಯನ್ನರಾನ್ ॥ ೨೦೯ ॥**

**ತತಃ ಪ್ರಭೃತಿ ತತ್ಪ್ರಾಹುಃ ಕುಂಭಕಾರಕಟಂ ಪುರಮ್ ।**
**ಯಥಾದೃಷ್ಟನೃಭಕ್ಷಿತ್ವಾದ್ಭೀತ್ವೈಕಶಕಟೌದನಮ್ ॥ ೨೧೦ ॥**

**ಖಾದ್ಯೈಕಂ ಮಾನುಷಂ ಚೇತಿ ಪ್ರಜಾಸ್ತಸ್ಯ ಸ್ಥಿತಿಂ ವ್ಯಧುಃ ।**
**ತತ್ರೈವ ನಗರೇ ಚಂಡಕೌಶಿಕೋ ನಾಮ ವಿಪ್ರಕಃ ॥ ೨೧೧ ॥**

**ಸೋಮಶ್ರೀಸ್ತತ್ಪ್ರಿಯಾ ಭೂತಸಮುಪಾಸನತಶ್ಚಿರಮ್ ।**
**ಮುಂಡಕೌಶಿಕನಾಮಾನಂ ತನೂಜಂ ತಾವವಾಪತುಃ ॥ ೨೧೨ ॥**

**ಕುಂಭಾಹಾರಾಯ ಯಾಂತಂ ತಂ ಕದಾಚಿನ್ಮುಂಡಕೌಶಿಕಮ್ ।**
**ಶಕಟಸ್ಯೋಪರಿ ಕ್ಷಿಪ್ತಂ ನೀತ್ವಾ ಭೂತೈಃ ಪ್ರಯಾಯಿಭಿಃ ॥ ೨೧೩ ॥**

**ಕುಂಭೇನಾನುಯತಾ ದಂಡಹಸ್ತೇನಾಕ್ರಮ್ಯ ತರ್ಜಿತೈಃ ।**
**ಭಯಾದ್ಬಿಲೇ ವಿನಿಕ್ಷಿಪ್ತಂ ಜಗಾರಾಜಗರೋ ದ್ವಿಜಮ್ ॥ ೨೧೪ ॥**

**ವಿಜಯಾರ್ಧಗುಹಾಯಾಂ ತನ್ನಿಕ್ಷೇಪಣಮಯುಕ್ತಕಮ್ ।**
**ಪಥ್ಯಂ ತದ್ವಚನಂ ಶ್ರುತ್ವಾ ಸೂಕ್ಷ್ಮಧೀರ್ಮತಿಸಾಗರಃ ॥ ೨೧೫ ॥**

**ಭೂಪತೇರಶನೇಃ ಪಾತೋ ನೋಕ್ತೋ ನೈಮಿತ್ತಿಕೇನ ತತ್ ।**
**ಪೌದನಾಧಿಪತಿಃ ಕಶ್ಚಿದನ್ಯೋಽವಸ್ಥಾಪ್ಯತಾಮಿತಿ ॥ ೨೧೬ ॥**

**ಜಗಾದ ಭವತಾ ಪ್ರೋಕ್ತಂ ಯುಕ್ತಮಿತ್ಯಭ್ಯುಪೇತ್ಯ ತೇ ।**
**ಸಂಭೂಯ ಮಂತ್ರಿಣೋ ಯಕ್ಷಪ್ರತಿಬಿಂಬಂ ನೃಪಾಸನೇ ॥ ೨೧೭ ॥**

**ನಿವೇಶ್ಯ ಪೌದನಾಧೀಶಸ್ತ್ವಮಿತ್ಯೇನಮ ಪೂಜಯನ್ ।**
**ಮಹೀಶೋಽಪಿ ಪರಿತ್ಯಕ್ತ ರಾಜ್ಯಭೋಗೋಪಭೋಗಕಃ ॥ ೨೧೮ ॥**

**ಪ್ರಾರಬ್ಧಪೂಜಾದಾನಾದಿನಿಜಪ್ರಕೃತಿಮಂಡಲಃ ।**
**ಜಿನಚೈತ್ಯಾಲಯೇ ಶಾಂತಿಕರ್ಮ ಕುರ್ವನ್ನುಪಾವಿಶತ್ ॥ ೨೧೯ ॥**

''ಸಿಂಹಪುರದಲ್ಲಿ ವಾಸಮಾಡುವ ಸೋಮನೆಂಬ ಸನ್ಯಾಸಿಯು ದುಷ್ಟಶಾಸ್ತ್ರಗಳನ್ನು ಕೇಳಿ ಗರ್ವಿತನಾಗಿ ಜಿನದಾಸನೊಡನೆ ವಾದಕ್ಕೆ ಬಂದು ವಾದದ ಅರ್ಥದಲ್ಲಿ ಸೋತನು. ಕಾಲಾಂತದಲ್ಲಿ ಸತ್ತು ಅದೇ ನಗರದಲ್ಲಿ ದೊಡ್ಡಕೋಣನಾಗಿ ಹುಟ್ಟಿ ಅದು ಬಹುಕಾಲದವರೆಗೆ ವರ್ತಕರ ಉಪ್ಪಿನ ಮೂಟೆಗಳನ್ನು ಹೊತ್ತು ಕೃಶವಾಯಿತು. ಮೊದಲು ಪೋಷಣೆಮಾಡುತ್ತಿದ್ದವರು ಅದು ಶಕ್ತಿಹೀನವಾಯಿತೆಂದು ಬಳಿಕ ಅವನ್ನು ಉಪೇಕ್ಷಿಸಿದರು. ಅದು ಪೂರ್ವಭವಸ್ಮರಣೆಯುಳ್ಳದೂ ಬದ್ಧವೈರವುಳ್ಳದೂ ಆಗಿ ಸತ್ತು ಅದೇ ನಗರದಲ್ಲಿ ಸುಡುಗಾಡಿನಲ್ಲಿ ರಾಕ್ಷಸನಾಗಿ ಹುಟ್ಟಿತು. ಕುಂಭ ಮತ್ತು ಭೀಮರೆಂಬವರು ಆ ನಗರದ ದೊರೆಗಳು. ಅವರಲ್ಲಿ ಕುಂಭನ ರಸಾಯನಪಾಕನೆಂಬ ಅಡಿಗೆಯವನು ಒಂದು ದಿವಸ ಕುಂಭನಿಗೆ ಭೋಗ್ಯವಾದ ಮಾಂಸವು ಸಿಕ್ಕದಿರಲು ಭಯದಿಂದ ಆಗ ಸತ್ತ ಮಗುವಿನ ಮಾಂಸವನ್ನು ಬೇಯಿಸಿ ಕುಂಭನಿಗೆ ಬಡಿಸಿದನು. ಅದರ ರುಚಿಯಲ್ಲಿ ಲೋಲುಪನೂ ಪಾಪಿಯೂ ಆದ ಆ ಕುಂಭನು ನರಕಗತಿಯನ್ನು ಹೊಂದಲು ಛವನಾಗಿ ಅಂದಿನಿಂದ ನರಮಾಂಸವನ್ನು ತಿನ್ನುವುದಕ್ಕಾರಂಭಿಸಿದನು. ದೊರೆಯು ಯಾವವರೆಗೆ ಪ್ರಜೆಗಳ ಪಾಲಕನಾಗಿರುತ್ತಾನೋ ಅಲ್ಲಿಯವರೆಗೆ ಅವನು ಪಾಲನದಲ್ಲಿರಬೇಕು. ಇವನು ಪ್ರಜೆಗಳನ್ನು ತಿನ್ನುತ್ತಾನೆ. ಇವನು ತ್ಯಾಜ್ಯನೆಂದು ಮಂತ್ರಿ ಮೊದಲಾದವರು ಅವನನ್ನು ತ್ಯಜಿಸಿದರು. ನರಮಾಂಸದಿಂದ ಜೀವಿಸುವ ಕ್ರೂರನಾದ ಆ ಕುಂಭನು ಒಂದಾನೊಂದು ಸಮಯದಲ್ಲಿ ತನ್ನ ಅಡಿಗೆಯವನನ್ನು ಕೊಂದು ಅವನು ವಿದ್ಯೆಯನ್ನು ಸಾಧಿಸಿದವನೂ ಮೇಲೆ ಹೇಳಲ್ಪಟ್ಟ ರಾಕ್ಷಸನನ್ನು ವಶಪಡಿಸಿಕೊಂಡವನೂ ಪ್ರತಿದಿವಸ ಊರಿನ ಸುತ್ತಲೂ ಸಂಚರಿಸುವವನೂ ಆಗಿ ಪ್ರಜೆಗಳನ್ನು ಭಕ್ಷಿಸಿದನು. ಆದರಿಂದ ಪುರನಿವಾಸಿಗಳೆಲ್ಲರೂ ಭೀತರಾಗಿ ಆ ನಗರವನ್ನು ಬಿಟ್ಟು ಮಹಾಭಯದಿಂದ ಕಾರಕಟವೆಂಬ ನಗರವನ್ನು ಪ್ರವೇಶಿಸಿದರು. ಪಾಪಿಷ್ಠನಾದ ಕುಂಭನು ಅಲ್ಲಿಗೂ ಬಂದು ಮನುಷ್ಯರನ್ನು ಭಕ್ಷಿಸಿದನು. ಅಂದಿನಿಂದ ಆ ನಗರವನ್ನು ಕುಂಭಕಾರಕಟಪುರವೆಂದು ಕರೆಯುತ್ತಾರೆ. ಕುಂಭನು ಕಂಡ ಕಂಡ ಮನುಷ್ಯರನ್ನು ಭಕ್ಷಿಸುತ್ತಿದ್ದುದರಿಂದ ಪ್ರಜೆಗಳು ಭೀತರಾಗಿ ಅವನಿಗೆ ''ಒಂದು ಗಾಡಿ ಅನ್ನವನ್ನೂ ಒಬ್ಬ ಮನುಷ್ಯನನ್ನೂ ತಿನ್ನು'' ಎಂದು ಗೊತ್ತುಮಾಡಿದರು. ಅದೇ ನಗರದಲ್ಲಿ ಚಂಡಕೌಶಿಕನೆಂಬ ವಿಪ್ರನೂ ಸೋಮಶ್ರೀಯೆಂಬ ಆತನ ಪತ್ನಿಯೂ ಇದ್ದರು. ಅವರು ಬಹುಕಾಲದವರೆಗೆ ಭೂತಗಳ ಉಪಾಸನೆಯಿಂದ ಮುಂಡಕೌಶಿಕನೆಂಬ ಪುತ್ರನನ್ನು ಪಡೆದರು. ಒಂದಾನೊಂದು ಕಾಲದಲ್ಲಿ ಕುಂಭನ ಆಹಾರಕ್ಕೋಸ್ಕರ ಸರ್ತಿಯ ಮೇರೆಗೆ ಗಾಡಿಯ ಮೇಲಿರಿಸಲ್ಪಟ್ಟ ಅನ್ನವನ್ನು ತೆಗೆದುಕೊಂಡು ಹೋಗುತ್ತಿರುವ ಆ ಮುಂಡಕೌಶಿಕನನ್ನು ಭೂತಗಳು ಕರೆದುಕೊಂಡು ಹೋಗುತ್ತಿರುವಾಗ ಕೈಯಲ್ಲಿ ದಂಡವನ್ನು ಹಿಡಿದುಕೊಂಡು ಆಕ್ರಮಿಸಿ

ಹಿಂಬಾಲಿಸುತ್ತಿರುವ ಕುಂಭನಿಂದ ಅವು ಬೆದರಿಸಲ್ಪಟ್ಟವುಗಳಾಗಿ ಭಯದಿಂದ ಆ ಮುಂಡಕೌಶಿಕದ್ವಿಜನನ್ನು ಒಂದು ಬಿಲದಲ್ಲಿರಿಸಿದುವು. ಅಲ್ಲಿ ಅವನನ್ನು ಒಂದು ಹೆಬ್ಬಾವು ನುಂಗಿತು. ಆದುದರಿಂದ ರಾಜನನ್ನು ವಿಜಯಾರ್ಧಗಿರಿಯ ಗುಹೆಯಲ್ಲಿರಿಸುವುದು ಯುಕ್ತವಲ್ಲ.'' ಬುದ್ಧಿಸಾಗರಮಂತ್ರಿಯ ಹಿತಕರವಾದ ಆ ಮಾತನ್ನು ಕೇಳಿ ಸೂಕ್ಷ್ಮಬುದ್ಧಿಯುಳ್ಳ ಮತಿಸಾಗರಮಂತ್ರಿಯು ''ನೈಮಿತ್ತಿಕನು ರಾಜನಿಗೆ ಸಿಡಿಲು ಬೀಳುವುದೆಂದು ಹೇಳಲಿಲ್ಲ. ಆದುದರಿಂದ ಬೇರೆ ಯಾವನಾದರೂ ಪೌದನಾಧಿಪತಿಯಾಗಿ ಸ್ಥಾಪಿಸಲ್ಪಡಲಿ'' ಎಂದು ಹೇಳಿದನು. ಆಗ ಆ ಮಂತ್ರಿಗಳು ಸೇರಿ ''ತಾವು ಹೇಳಿದುದು ಯುಕ್ತವಾಗಿದೆ'' ಎಂದು ಒಪ್ಪಿ ರಾಜನ ಪೀಠದಲ್ಲಿ ಯಕ್ಷದೇವನ ಪ್ರತಿಬಿಂಬವನ್ನಿರಿಸಿ ''ನೀನು ಪೌದನಾಧಿಪತಿ'' ಎಂದು ಈ ಪ್ರತಿಬಿಂಬವನ್ನು ಪೂಜಿಸಿದರು. ರಾಜನೂ ರಾಜ್ಯಭೋಗೋಪಭೋಗಗಳನ್ನು ಪರಿತ್ಯಜಿಸಿದವನೂ ತನ್ನ ಪ್ರಜಾಸಮೂಹದಿಂದ ಪ್ರಾರಂಭಿಸಲ್ಪಟ್ಟ ಪೂಜಾದಾನಾದಿಗಳುಳ್ಳವನೂ ಜಿನಚೈತ್ಯಾಲಯದಲ್ಲಿ ಶಾಂತಿಕರ್ಮವನ್ನು ಮಾಡುವವನೂ ಆಗಿ ಕುಳಿತುಕೊಂಡನು.

**ಸಪ್ತಮೇಹನಿ ಯಕ್ಷಸ್ಯ ಪ್ರತಿಮಾಯಾ ಮಹಾಧ್ವನಿಃ ।**
**ನೃಪತನ್ನಿಷ್ಠುರಂ ಮೂರ್ಧ್ನಿ ಸಹಸಾ ಭೀಷಣೋಶನಿಃ ॥ ೨೨೦ ॥**

ಏಳನೆಯ ದಿವಸದಲ್ಲಿ ಯಕ್ಷದೇವನ ಪ್ರತಿಮೆಯ ತಲೆಯ ಮೇಲೆ ಅಕಸ್ಮಾತ್ತಾಗಿ ಮಹಾಧ್ವನಿಯುಳ್ಳದೂ ಭಯಂಕರವೂ ಆದ ಸಿಡಿಲು ತೀವ್ರವಾಗಿ ಬಿದ್ದಿತು.

**ತಸ್ಮಿನ್ನುಪದ್ರವೇ ಶಾಂತೇ ಪ್ರಮದಾತ್ಪುರವಾಸಿನಃ ।**
**ವರ್ಧಮಾನಾನಕಧ್ವಾನೈರಕುರ್ವನ್ನುತ್ಸವಂ ಪರಮ್ ॥ ೨೨೧ ॥**

ಆ ಉಪದ್ರವವು ಶಾಂತವಾಗುತ್ತಿರಲು ಸಂತೋಷದಿಂದ ಪುರನಿವಾಸಿಗಳು ವೃದ್ಧಿಯಾಗುತ್ತಿರುವ ಭೇರೀಧ್ವನಿಗಳಿಂದ ಮಹೋತ್ಸವವನ್ನು ಮಾಡಿದರು.

**ನೈಮಿತ್ತಿಕಂ ಸಮಾಹೂಯ ರಾಜಾ ಸಂಪೂಜ್ಯ ದತ್ತವಾನ್ ।**
**ತಸ್ಮೈ ಗ್ರಾಮಶತಂ ಪದ್ಮಿನೀಖೇಟೇನ ಸಸಮ್ಮದಃ ॥ ೨೨೨ ॥**

ಆಗ ರಾಜನು ಸಂತೋಷವುಳ್ಳವನಾಗಿ ಆ ನೈಮಿತ್ತಿಕನನ್ನು ಕರೆಯಿಸಿ ಅವನನ್ನು ಪೂಜಿಸಿ ಅವನಿಗೆ ಪದ್ಮಿನೀಖೇಟನಗರದೊಡನೆ ನೂರು ಗ್ರಾಮಗಳನ್ನು ಕೊಟ್ಟನು.

**ವಿಧಾಯ ವಿಧಿವದ್ಭಕ್ತ್ಯಾ ಶಾಂತಿಪೂಜಾಪುರಸ್ಸರಮ್ ।**
**ಮಹಾಭಿಷೇಕಂ ಲೋಕೇಶಾಮರ್ಹತಾಂ ಸಚಿವೋತ್ತಮಾಃ ॥ ೨೨೩ ॥**

**ಅಷ್ಟಾಪದಮಯೈಃ ಕುಂಭೈರಭಿಷಿಚ್ಯ ಮಹೀಪತಿಮ್ ।**
**ಸಿಂಹಾಸನಂ ಸಮಾರೋಪ್ಯ ಸ್ವರಾಜ್ಯೇ ಪ್ರತ್ಯತಿಷ್ಠಿಪನ್ ॥ ೨೨೪ ॥**

ಸಚಿವೋತ್ತಮರು ಲೋಕಾಧೀಶರಾದ ಅರ್ಹತ್ಪರಮೇಶ್ವರರಿಗೆ ವಿಧಿಪ್ರಕಾರವಾಗಿ ಭಕ್ತಿಯಿಂದ ಶಾಂತಿಪೂಜಾಪುರಸ್ಸರವಾಗಿ ಮಹಾಭಿಷೇಕವನ್ನು ಮಾಡಿ ಸುವರ್ಣಮಯವಾದ ಕಲಶಗಳಿಂದ ರಾಜನಿಗೆ ಅಭಿಷೇಕವನ್ನು ಮಾಡಿ ಸಿಂಹಾಸನವನ್ನು ಹತ್ತಿಸಿ ಅವನ ರಾಜ್ಯದಲ್ಲಿ ಸ್ಥಾಪಿಸಿದರು.

**ಏವಂ ಸುಖಸುಖೇನೈವ ಕಾಲೇ ಗಚ್ಛತಿ ಸೋನ್ಯದಾ ।**
**ವಿದ್ಯಾಂ ಸ್ವಮಾತುರಾದಾಯ ಸಂಸಾಧ್ಯಾಕಾಶಗಾಮಿನೀಮ್ ॥ ೨೨೫ ॥**

**ಸುತಾರಯಾ ಸಹ ಜ್ಯೋತಿರ್ವನಂ ಗತ್ವಾ ರಿರಂಸಯಾ ।**
**ಯಥೇಷ್ಟಂ ವಿಹರಂಸ್ತತ್ರ ಸಲೀಲಂ ಕಾಂತಯಾ ಸ್ಥಿತಃ ॥ ೨೨೬ ॥**

ಹೀಗೆ ಬಹುಸುಖದಿಂದಲೇ ಕಾಲವು ಕಳೆಯುತ್ತಿರಲು ಒಂದು ಕಾಲದಲ್ಲಿ ಆ ರಾಜನು ತನ್ನ ತಾಯಿಯಿಂದ ಆಕಾಶಗಾಮಿನೀವಿದ್ಯೆಯನ್ನು ತೆಗೆದುಕೊಂಡು ಚೆನ್ನಾಗಿ ಸಾಧಿಸಿ ರಮಿಸಬೇಕೆಂಬ ಇಚ್ಛೆಯಿಂದ ತನ್ನ ಪತ್ನಿಯಾದ ಸುತಾರೆಯೊಡನೆ ಜ್ಯೋತಿರ್ವನಕ್ಕೆ ಹೋಗಿ ಅಲ್ಲಿ ಯಥೇಷ್ಟವಾಗಿ ಲೀಲೆಯಿಂದ ವಿಹರಿಸುವವನಾಗಿದ್ದನು.

**ಇತಶ್ಚಮರಚಂಚಾಖ್ಯಪುರೇಶೋಶನಿಘೋಷಕಃ ।**
**ಆಸುರ್ಯಾಶ್ಚ ಸುತೋ ಲಕ್ಷ್ಮ್ಯಾ ಮಹಾನಿಂದ್ರಾಶನೇಃ ಖಗಃ ॥ ೨೨೭ ॥**

**ವಿದ್ಯಾಂ ಸ ಭ್ರಾಮರೀಂ ನಾಮ್ನಾ ಪ್ರಸಾಧ್ಯಾಯಾನ್ಪುರಂ ಸ್ವಯಮ್ ।**
**ಸುತಾರಾಂ ವೀಕ್ಷ್ಯ ಜಾತೇಚ್ಛಸ್ತಾಮಾದಾತುಂ ಕೃತೋದ್ಯಮಃ ॥ ೨೨೮ ॥**

**ಕೃತ್ರಿಮೈಣಚ್ಛಲಾತ್ತಸ್ಮಾದಪನೀಯ ಮಹೀಪತಿಮ್ ।**
**ತದ್ರೂಪೇಣ ನಿವೃತ್ತ್ಯೈತ್ಯ ಸುತಾರಾಂ ದುರಿತಾಶಯಃ ॥ ೨೨೯ ॥**

**ಮೃಗೋಗಾದ್ವಾಯುವೇಗೇನ ತಂ ಗೃಹೀತುಮಪಾರಯನ್ ।**
**ಆಗತೋಹಂ ಪ್ರಯಾತ್ಯಸ್ತಮರ್ಕೋ ಯಾವಃ ಪುರಂ ಪ್ರತಿ ॥ ೨೩೦ ॥**

**ಇತ್ಯುಕ್ತ್ವಾರೋಪ್ಯ ತಾಂ ಖೇಟೋ ವಿಮಾನಮಗಮಚ್ಛಠಃ ।**
**ಗತ್ವಾಂತರೇ ಸ್ವಂ ಸೌರೂಪ್ಯಶಾಲಿನಾ ತೇನ ದರ್ಶಿತಮ್ ॥ ೨೩೧ ॥**

ಇತ್ತ ಇಂದ್ರಾಶನಿಯೆಂಬ ಖೇಚರನಿಗೂ ಆತನ ಪತ್ನಿಯಾದ ಆಸುರಿಯೆಂಬವಳಿಗೂ ಪುತ್ರನೂ ಚಮರಚಂಚುವೆಂಬ ನಗರದ ದೊರೆಯೂ ಅಧಿಕ ಸಂಪತ್ತಿಯುಳ್ಳವನೂ ಆದ ಅಶನಿಘೋಷನೆಂಬ ಖೇಚರನು ಭ್ರಾಮರಿಯೆಂಬ ವಿದ್ಯೆಯನ್ನು ಸಾಧಿಸಿ ತನ್ನ ಪಟ್ಟಣಕ್ಕೆ ಬರುವಾಗ ಸುತಾರೆಯನ್ನು ನೋಡಿ ಉಂಟಾದ ಇಚ್ಛೆಯುಳ್ಳವನೂ ಆಕೆಯನ್ನು ತೆಗೆದುಕೊಳ್ಳುವುದಕ್ಕೆ ಪ್ರಯತ್ನವನ್ನು ಮಾಡುವವನೂ ಆಗಿ ಕೃತ್ರಿಮವಾದ ಹರಿಣದ ನೆಪದಿಂದ ರಾಜನನ್ನು ಅಲ್ಲಿಂದ ಒಯ್ದು ಅವನ ರೂಪದಿಂದ ಹಿಂದಿರುಗಿ ಬಂದು ದುರಭಿಪ್ರಾಯವುಳ್ಳವನಾಗಿ ''ಹರಿಣವು ವಾಯುವೇಗದಿಂದ ಹೋಯಿತು. ಅದನ್ನು ಹಿಡಿಯುವುದಕ್ಕೆ ಅಸಮರ್ಥನಾಗಿ ನಾನು ಬಂದೆನು. ಸೂರ್ಯನು ಅಸ್ತವನ್ನು ಹೊಂದುತ್ತಾನೆ. ಪಟ್ಟಣಕ್ಕೆ ಹೋಗೋಣ'' ಎಂದು ಹೇಳಿ ಆ ಸುತಾರೆಯನ್ನು ಆ ದುಷ್ಟನಾದ ಖೇಚರನು ವಿಮಾನದಲ್ಲಿ ಹತ್ತಿಸಿಕೊಂಡು ಹೊರಟುಹೋದನು. ಹೋಗಿ ಬಹು ಸುಂದರನಾದ ಆ ಅಶನಿಘೋಷನು ನಡುದಾರಿಯಲ್ಲಿ ಆಕೆಗೆ ತನ್ನ ರೂಪವನ್ನು ತೋರಿಸಿದನು.

**ರೂಪಮಾಲೋಕ್ಯ ತತ್ಕೋಯಮಿತಿ ಸಾ ವಿಹ್ವಲಾಭವತ್ ।**
**ಇತಸ್ತತ್ಪ್ರೋಕ್ತವೈತಾಲೀಂ ಸುತಾರಾರೂಪಧಾರಿಣೀಮ್ ॥ ೨೩೨ ॥**

**ಸ್ಥಿತಾಂ ಕುಕ್ಕುಟಸರ್ಪೇಣ ದಷ್ಟಾಹಮಿತಿ ಸಂಭ್ರಮಾತ್ ।**
**ಮ್ರಿಯಮಾಣಾಮಿವಾಲೋಕ್ಯ ವಿನಿವೃತ್ತಾಗತಃ ಸ್ವಯಮ್ ॥ ೨೩೩ ॥**

**ಆಹಾರ್ಯಂ ತದ್ವಿಷಂ ಜ್ಞಾತ್ವಾ ಮಣಿಮಂತ್ರೌಷಧಾದಿಭಿಃ ।**
**ಸುಸ್ನಿಗ್ಧಃ ಪೌದನಾಧೀಶೋ ಮರ್ತುಂ ಸಹ ತಯೇಚ್ಛುಕಃ ॥ ೨೩೪ ॥**

**ಸೂರ್ಯಕಾಂತಸಮುದ್ಭೂತದಹನಜ್ವಲಿತೇಂಧನಃ ।**
**ಚಿತಿಕಾಂ ಕಾಂತಯಾ ಸಾರ್ಧಮಾರುರೋಹ ಶುಚಾಕುಲಃ ॥ ೨೩೫ ॥**

ಆ ರೂಪವನ್ನು ನೋಡಿ ''ಇವನು ಯಾವನು ?'' ಎಂದು ಆ ಸುತಾರೆಯು ಖಿನ್ನಳಾದಳು. ಇತ್ತ ಶ್ರೀವಿಜಯನು ಹಿಂದಿರುಗಿ ಬಂದು ಸುತಾರೆಯ ರೂಪವನ್ನು ಧರಿಸಿರುವುದೂ ''ನಾನು ಅಕಸ್ಮಾತ್ ಕುಕ್ಕುಟಸರ್ಪದಿಂದ ಕಚ್ಚಲ್ಪಟ್ಟೆನು'' ಎಂದು ಸಾಯುವವಳಂತಿರುವುದೂ ಆದ ಅಶನಿಘೋಷನ ವೈತಾಲೀವಿದ್ಯೆಯನ್ನು ನೋಡಿ ಮಣಿಮಂತ್ರೌಷಧಾದಿಗಳಿಂದ ಆ ವಿಷವು ಹೋಗತಕ್ಕದಲ್ಲವೆಂದು ತಾನು ತಿಳಿದು ಬಹುಪ್ರೇಮವುಳ್ಳವನಾದ ಪೌದನಾಧಿಪತಿ–ಶ್ರೀವಿಜಯನು ಆ ಸುತಾರೆಯೊಡನೆ ಸಾಯುವುದಕ್ಕೆ ಇಚ್ಛೆಯುಳ್ಳವನಾಗಿಯೂ ಸೂರ್ಯಕಾಂತಶಿಲೆಯಿಂದುಂಟಾದ ಬೆಂಕಿಯಿಂದ ಚಿತೆಯ ಕಟ್ಟಿಗೆಯನ್ನು ಹೊತ್ತಿಸಿದವನಾಗಿಯೂ ಶೋಕದಿಂದ ಆಕುಲನಾಗಿಯೂ ಪತ್ನಿಯೊಡನೆ ಚಿತೆಯನ್ನೇರಿದನು.

**ತದೈವ ಖೇಚರೌ ಕೌಚಿತ್ತತ್ರ ಸನ್ನಿಹಿತೌ ತಯೋಃ ।**
**ವಿದ್ಯಾವಿಚ್ಛೇದಿನೀಂ ವಿದ್ಯಾಂ ಸ್ಮೃತ್ವೈಕೇನ ಮಹೌಜಸಾ ॥ ೨೩೬ ॥**

**ಹತಾಸೌ ಭೀತವೈತಾಲೀ ವಾಮಪಾದೇನ ದರ್ಶಿತ- ।**
**ಸ್ವರೂಪಾಸ್ಯ ಪುರಃ ಸ್ಥಾತುಮಶಕ್ತಾಗಾದದೃಶ್ಯತಾಮ್ ॥ ೨೩೭ ॥**

ಆಗಲೇ ಯಾರೋ ಇಬ್ಬರು ಖೇಚರರು ಅಲ್ಲಿ ಸನ್ನಿಹಿತರಾಗಿ ಅವರಲ್ಲಿ ಮಹಾ ತೇಜಸ್ಸುಳ್ಳವನೊಬ್ಬನು ವಿದ್ಯಾವಿಚ್ಛೇದಿನಿಯೆಂಬ ವಿದ್ಯೆಯನ್ನು ಸ್ಮರಿಸಿ ಎಡಗಾಲಿನಿಂದ ಒದೆಯಲ್ಪಟ್ಟ ಈ ಭೀತವಾದ ವೈತಾಲಿಯು ತನ್ನ ರೂಪವನ್ನು ತೋರಿಸಿ ಈ ಖೇಚರನ ಮುಂದೆ ನಿಲ್ಲುವುದಕ್ಕೆ ಅಸಮರ್ಥವಾಗಿ ಅದೃಶ್ಯತ್ವವನ್ನು ಹೊಂದಿತು.

**ತದ್ವಿಲೋಕ್ಯ ಮಹೀಪಾಲೋ ನಿತರಾಂ ವಿಸ್ಮಯಂ ಗತಃ ।**
**ಕಿಮೇತದಿತ್ಯಪೋಚತ್ತಂ ಖಚರಸ್ತ್ವಾಹ ತತ್ಕಥಾಮ್ ॥ ೨೩೮ ॥**

ಅದನ್ನು ನೋಡಿ ಶ್ರೀವಿಜಯರಾಜನು ಬಹಳ ಆಶ್ಚರ್ಯವನ್ನು ಹೊಂದಿದವನಾಗಿ "ಇದೇನು ?" ಎಂದು ಆ ಖೇಚರನನ್ನು ಕೇಳಿದನು. ಆ ಖೇಚರನಾದರೋ ಆ ಕಥೆಯನ್ನು ಈ ರೀತಿಯಾಗಿ ಹೇಳಿದನು.

**ದ್ವೀಪೇಸ್ಮಿನ್ ದಕ್ಷಿಣಶ್ರೇಣ್ಯಾಂ ಭರತೇ ಖಚರಾಚಲೇ ।**
**ಜ್ಯೋತಿಪ್ಪ್ರಭಪುರಾಧೀಶಃ ಸಂಭಿನ್ನೋಹಂ ಮಮ ಪ್ರಿಯಾ ॥ ೨೩೯ ॥**

**ಸಂಜ್ಞಯಾ ಸರ್ವಕಲ್ಯಾಣೀ ಸೂನುರ್ದೀಪಶಿಖಾಹ್ವಯಃ ।**
**ಏಷ ಮೇ ಸ್ವಾಮಿನಾಮೇತ್ವಾ ರಥನೂಪುರಭೂಭುಜಾ ॥ ೨೪೦ ॥**

**ವಿಹರ್ತುಂ ವಿಪುಲೋದ್ಯಾನೇ ತಲಾಂತಶಿಖರಿಶ್ರುತೇ ।**
**ತತೋ ನಿವರ್ತಮಾನಸ್ಸನ್ ಖೇಯಾನಕವಿಮಾನಗಾ ॥ ೨೪೧ ॥**

**ಕ್ವ ಮೇ ಶ್ರೀವಿಜಯಃ ಸ್ವಾಮೀ ರಥನೂಪುರಭೂಪತೇ ।**
**ಕ್ವ ಮಾಂ ಪಾಹೀತಿ ಸಾಕ್ರೋಶಂ ವನಿತಾಕರುಣಸ್ವನಮ್ ॥ ೨೪೨ ॥**

**ಶ್ರುತ್ವಾಹಂ ತತ್ರ ಗತ್ವಾಖ್ಯಂ ಕಸ್ತ್ವಂ ಕಾಂ ವಾ ಹರಸ್ಯಮೂಮ್ ।**
**ಇತ್ಯಸೌ ಚಾಹ ಸಕ್ರೋಧಶ್ಚಂಚ್ವಂತಚಮರಾಧಿಪಃ ॥ ೨೪೩ ॥**

**ಖಗೇನೋಶನಿಘೋಷಾಖ್ಯೋ ಹಠಾದೇನಾಂ ನಯಾಮ್ಯಹಮ್ ।**
**ಭವತೋ ಯದಿ ಸಾಮರ್ಥ್ಯಮಸ್ತ್ಯೇಹ್ಯೇಹೀತಿ ಮೋಚಯ ॥ ೨೪೪ ॥**

**ತಚ್ಛ್ರುತ್ವಾ ಮತ್ಪ್ರಭೋರೇಷಾ ನೀಯತೇನೇನ ಸಾನುಜಾ ।**
**ಸಾಮಾನ್ಯವತ್ಕಥಂ ಯಾಮಿ ಹನ್ಮ್ಯೇನಮಿತಿ ನಿಶ್ಚಯಾತ್ ॥ ೨೪೫ ॥**

**ಯೋದ್ಧುಂ ಪ್ರಕ್ರಮಮಾಣಂ ಮಾಂ ನಿವಾರ್ಯಾನೇನ ಮಾ ಕ್ರುಧಾಃ ।**
**ವೃಥೇತಿ ಯುದ್ಧಂ ನಿರ್ಬಂಧಾತ್ಪೌದನಾಖ್ಯಪುರಾಧಿಪಃ ॥ ೨೪೬ ॥**

**ಜ್ಯೋತಿರ್ವನೇ ವಿಯೋಗೇನ ಮಮ ಶೋಕಾನಲಾಹಿತಃ ।**
**ವರ್ತತೇ ತತ್ರ ಗತ್ವಾ ತಂ ಮದವಸ್ಥಾಂ ನಿವೇದಯ ॥ ೨೪೭ ॥**

**ಇತಿ ತ್ವತ್ಕಾಂತಯಾ ರಾಜನ್ ಪ್ರೇಷಿತೋಹಮಿಹಾಗತಃ ।**
**ಇಯಂ ತದ್ವೈರಿನಿರ್ದಿಷ್ಟದೇವತೇತ್ಯಾದರಾನ್ವಿತಃ ॥ ೨೪೮ ॥**

**ಶ್ರುತ್ವಾ ತತ್ಪೌದನಾಧೀಶೋ ಸತ್ಕೃತಂ ಕಥ್ಯತಾಮಿದಮ್ ।**
**ವೃತ್ತಾಂತಂ ಸತ್ವರಂ ಗತ್ವಾ ಸನ್ಮಿತ್ರೇಣ ತ್ವಯಾಧುನಾ ॥ ೨೪೯ ॥**

**ಮಜ್ಜನನ್ಯನುಜಾದೀನಾಮಿತ್ಯುಕ್ತೋಸೌ ನಭಶ್ಚರಃ ।**
**ಸುತಂ ದೀಪಶಿಖಂ ಸದ್ಯಃ ಪ್ರಾಹಿಣೋತ್ಪೌದನಂ ಪ್ರತಿ ॥ ೨೫೦ ॥**

"ನಾನು ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಖೇಚರಪರ್ವತ--ವಿಜಯಾರ್ಧದಲ್ಲಿಯ ದಕ್ಷಿಣಶ್ರೇಣಿಯಲ್ಲಿರುವ ಜ್ಯೋತಿಪ್ಪ್ರಭಪುರದ ದೊರೆಯಾದ ಸಂಭಿನ್ನನು. ಹೆಸರಿನಿಂದ ಸರ್ವಕಲ್ಯಾಣಿಯೆಂಬವಳು ನನ್ನ ಹೆಂಡತಿ. ಇವನು ದೀಪಶಿಖನೆಂಬ ಪುತ್ರನು. ನನ್ನ ಸ್ವಾಮಿಯಾದ ರಥನೂಪುರದ ದೊರೆಯೊಡನೆ ಹೋಗಿ ಶಿಖರಿತಲವೆಂಬ ವಿಶಾಲವಾದ ಉದ್ಯಾನದಲ್ಲಿ ವಿಹರಿಸುವುದಕ್ಕೋಸ್ಕರ ಹೋಗಿ ಅಲ್ಲಿಂದ ಹಿಂದಿರುಗುವವನಾಗಿ ಆಕಾಶದಲ್ಲಿ ಹೋಗುತ್ತಿರುವ ವಿಮಾನದಲ್ಲಿ "ರಥನೂಪುರಾಧಿಪತಿಯೆ !ನನ್ನ ಸ್ವಾಮಿಯಾದ ಶ್ರೀವಿಜಯನೆಲ್ಲಿ ?ಎಲ್ಲಿ ?ನನ್ನನ್ನು ಕಾಪಾಡು" ಎಂದು ನಾನು ಆಕ್ರೋಶಯುಕ್ತವಾದ ಸ್ತ್ರೀಯ ಕರುಣಧ್ವನಿಯನ್ನು ಕೇಳಿ ಅಲ್ಲಿ ಹೋಗಿ "ಯಾವನು ನೀನು ? ಈಕೆಯನ್ನು ಏತಕ್ಕಾಗಿ ಹರಣ ಮಾಡುತ್ತಿ ?" ಎಂದು ಕೇಳಿದೆನು. ಇವನೂ ಕ್ರೋಧಯುಕ್ತನಾಗಿ "ನಾನು ಚಮರಚಂಚು ಪುರಾಧಿಪತಿಯೂ ಅಶನಿಘೋಷನೆಂಬ ಹೆಸರುಳ್ಳವನೂ ಆದ ಖೇಚರಾಧಿಪತಿ. ಈಕೆಯನ್ನು ಬಲಾತ್ಕಾರದಿಂದ ಒಯ್ಯುತ್ತೇನೆ. ನಿನಗೆ ಸಾಮರ್ಥ್ಯವಿದ್ದರೆ ಬಾ ಬಾ ಬಿಡಿಸು" ಎಂದನು. ಆ ಮಾತನ್ನು ಕೇಳಿ ನಾನು "ನನ್ನ ಸ್ವಾಮಿಯಾದ ಅಮಿತತೇಜನ ಆ ಸಹೋದರಿಯಾದ ಈಕೆಯನ್ನು ಇವನು ಒಯ್ಯುತ್ತಾನೆ. ಸಾಮಾನ್ಯನಂತೆ ಹೇಗೆ ಹೋಗುವೆನು ?ಇವನನ್ನು ಕೊಲ್ಲುತ್ತೇನೆ" ಹೀಗೆಂಬ ನಿಶ್ಚಯದಿಂದ ಯುದ್ಧಮಾಡುವುದಕ್ಕೆ ತೊಡಗಿರುವ ನನ್ನನ್ನು ಕುರಿತು ವ್ಯರ್ಥವಾಗಿ ಇವನೊಡನೆ ಕೋಪಿಸಿಕೊಳ್ಳಬೇಡ" ಎಂದು ನಿರ್ಬಂಧದಿಂದ ಯುದ್ಧವನ್ನು ತಡೆದು "ಪೌದನಾಧಿಪತಿಯು ಜ್ಯೋತಿರ್ವನದಲ್ಲಿ ನನ್ನ ವಿಯೋಗದಿಂದ ಶೋಕಾಗ್ನಿಯುಕ್ತನಾಗಿರುತ್ತಾನೆ. ಅಲ್ಲಿ ಹೋಗಿ ಅವನಿಗೆ ನನ್ನ ಅವಸ್ಥೆಯನ್ನು ತಿಳಿಸು" ಎಂದು ನಿನ್ನ ಪತ್ನಿಯಿಂದ ಕಳುಹಿಸಲ್ಪಟ್ಟ ನಾನು ಇಲ್ಲಿಗೆ ಬಂದೆನು. ರಾಜನೆ ! ಇದು ಆ ಶತ್ರುವಿನಿಂದ ನಿರ್ದೇಶಿಸಲ್ಪಟ್ಟ ದೇವತೆಯಾಗಿದೆ" ಈ ರೀತಿಯಾಗಿ ಹೇಳಿದ ಆ ಖೇಚರನ ಮಾತನ್ನು ಪೌದನಾಧಿಪತಿ-ಶ್ರೀವಿಜಯನು ಪ್ರೀತಿಯುಕ್ತನಾಗಿ ಕೇಳಿ "ಈ ಸತ್ಕಾರ್ಯವೃತ್ತಾಂತವನ್ನು ಸನ್ಮಿತ್ರನಾದ ನೀನು ಈಗ ಶೀಘ್ರವಾಗಿ ಹೋಗಿ ನನ್ನ ತಾಯಿ ತಮ್ಮ ಮೊದಲಾದವರಿಗೆ ಹೇಳು" ಎಂದು ಹೇಳಲ್ಪಟ್ಟ ಈ ಖೇಚರನು ತನ್ನ ಪುತ್ರನಾದ ದೀಪಶಿಖನನ್ನು ಆಗಲೇ ಪೌದನಪುರಕ್ಕೆ ಕಳುಹಿಸಿದನು.

**ಅಭವತ್ಪೌದನಾಖ್ಯೇಪಿ ಬಹೂತ್ಪಾತವಿಜೃಂಭಣಮ್ ।**
**ತದ್ದೃಷ್ಟ್ವಾಮೋಘಜಿಹ್ವಾಖ್ಯೋ ಜಯಗುಪ್ತಶ್ಚ ಸಂಭ್ರಮಾತ್ ॥ ೨೫೧ ॥**

**ಉತ್ಪನ್ನಃ ಸ್ವಾಮಿನಃ ಕಿಂಚಿದ್ಭಯಂ ತದಪಿ ನಿರ್ಗತಮ್ ।**
**ಆಗಮಿಷ್ಯತಿ ಚಾದ್ಯೈವ ಕಶ್ಚಿತ್ಕುಶಲವಾರ್ತಯಾ ॥ ೨೫೨ ॥**

**ಸ್ವಸ್ಥಾಸ್ತಿಷ್ಠಂತು ತತ್ತತ್ರಭವಂತೋ ಮಾ ಗಮನ್ಭಯಮ್ ।**
**ಇತಿ ಸ್ವಯಂಪ್ರಭಾದೀಂಸ್ತಾನಾಶ್ವಾಸಂ ನಯತಃ ಸ್ಮ ತಾನ್ ॥ ೨೫೩ ॥**

ಪೌದನಪುರದಲ್ಲಿಯೂ ಬಹಳವಾದ ಉತ್ಪಾತಗಳ ವಿಜೃಂಭಣೆಯುಂಟಾಗಿದ್ದಿತು. ಅದನ್ನು ನೋಡಿ ಅಮೋಘಜಿಹ್ವನೂ ಜಯಗುಪ್ತನೂ ಸಂಭ್ರಮದಿಂದ "ಪ್ರಭುವಿಗೆ ಸ್ವಲ್ಪ ಭಯವುಂಟಾಗಿತ್ತು. ಈ ದಿವಸದಲ್ಲೇ ಒಬ್ಬಾನೊಬ್ಬನು ಕ್ಷೇಮಸಮಾಚಾರದೊಡನೆ ಬರುವನು. ಆದುದರಿಂದ ತಾವುಗಳು ಸ್ವಸ್ಥರಾಗಿರಬೇಕು. ಭಯಪಡಬೇಡಿ" ಎಂದು ಆ ಸ್ವಯಂಪ್ರಭಾ ಮೊದಲಾದವರನ್ನು ಸಮಾಧಾನಪಡಿಸಿದರು.

**ತದೈವ ಗಗನಾದ್ದೀಪಶಿಖೋಪ್ಯಾಗಮ್ಯ ಭೂತಲಮ್ ।**
**ಸ್ವಯಂಪ್ರಭಾಂ ಸುತಂ ಚಾಸ್ಯಾಃ ಪ್ರಣಮ್ಯ ವಿಧಿವತ್ಸುಧೀಃ ॥ ೨೫೪ ॥**

**ಕ್ಷೇಮಂ ಶ್ರೀವಿಜಯಾಧೀಶೋ ಭವದ್ಭಿಸ್ತ್ಯಜ್ಯತಾಂ ಭಯಮ್ ।**
**ಇತಿ ತದ್ವೃತ್ತಕಂ ಸರ್ವಂ ಯಥಾವತ್ಸ ನ್ಯವೇದಯತ್ ॥ ೨೫೫ ॥**

ಆಗಲೇ ಆಕಾಶದಿಂದ ಪ್ರಾಜ್ಞನಾದ ದೀಪಶಿಖನು ಭೂತಲಕ್ಕೆ ಬಂದು ಸ್ವಯಂಪ್ರಭೆಯನ್ನೂ ಈಕೆಯ ಪುತ್ರನನ್ನೂ ವಿಧಿಪ್ರಕಾರವಾಗಿ ವಂದಿಸಿ "ಶ್ರೀವಿಜಯ ರಾಜನಿಗೆ ಕ್ಷೇಮವಿದೆ. ತಾವುಗಳು ಭಯವನ್ನು ಬಿಡಬೇಕು" ಎಂದು ಅವನು ಎಲ್ಲಾ ಸಮಾಚಾರವನ್ನು ನಡೆದ ಹಾಗೆಯೇ ತಿಳಿಸಿದನು.

**ತದ್ವಾರ್ತಾಕರ್ಣನಾದ್ದಾವಪರಿಮ್ಲಾನಲತೋಪಮಾ ।**
**ನಿರ್ವಾಣಾಭ್ಯರ್ಣದೀಪಸ್ಯ ಶಿಖೇವ ವಿಗತಪ್ರಭಾ ॥ ೨೫೬ ॥**

**ಶ್ರುತಪ್ರಾವೃಡ್ಘನಧ್ವಾನಾ ಕಲಹಂಸೀವ ಶೋಕಿನೀ ।**
**ಸ್ಯಾದ್ವಾದವಾದಿವಿಧ್ವಸ್ತದುಃಶ್ರುತಿರ್ವಾಕುಲಾಕುಲಾ ॥ ೨೫೭ ॥**

**ತದಾನೀಮೇವ ನಿರ್ಗತ್ಯ ಚತುರಂಗಬಲಾನ್ವಿತಾ ।**
**ಸ್ವಯಂಪ್ರಭಾಗಾತ್ಸಖಗಾ ಸಸುತಾ ತದ್ವನಾಂತರಮ್ ॥ ೨೫೮ ॥**

**ಆಯಾಂತೀಂ ದೂರತೋ ದೃಷ್ಟ್ವಾ ಮಾತರಂ ಸ್ವಾನುಜಾನುಗಾಮ್ ।**
**ಪ್ರತಿಗತ್ಯಾನಮತ್ತಸ್ಯಾಃ ಪಾದಯೋಃ ಪೌದನಾಧಿಪಃ ॥ ೨೫೯ ॥**

ಆ ಸಮಾಚಾರವನ್ನು ಕೇಳಿದುದರಿಂದ ಕಾಡ್ಗಿಚ್ಚಿನಿಂದ ಬಾಡಿದ ಬಳ್ಳಿಗೆ ಸಮಾನಳೂ ಆರಿಹೋಗುವುದಕ್ಕೆ ಸಮೀಪವಾದ ದೀಪದ ಜ್ವಾಲೆಯಂತೆ ಕಾಂತಿ ಶೂನ್ಯಳೂ ವರ್ಷಾಕಾಲದ ಮೇಘಧ್ವನಿಯನ್ನು ಕೇಳಿದ ಸ್ತ್ರೀಕಲಹಂಸಪಕ್ಷಿಯಂತೆ ಶೋಕವುಳ್ಳವಳೂ ಸ್ಯಾದ್ವಾದವಾದಿಯಿಂದ ಖಂಡಿಸಲ್ಪಟ್ಟ ದುಷ್ಟಶಾಸ್ತ್ರದಂತೆ ಬಹು ವ್ಯಾಕುಲಳೂ ಆದ ಸ್ವಯಂಪ್ರಭಾದೇವಿಯು ಚತುರಂಗಸೈನ್ಯಸಮೇತಳಾಗಿ ಖೇಚರರೊಡನೆಯೂ ಪುತ್ರರೊಡನೆಯೂ ಆಗಲೇ ಹೊರಟು ಆ ವನದ ಮಧ್ಯಕ್ಕೆ ಬರುತ್ತಿರುವವಳೂ ಹಿಂಬಾಲಿಸಿ ಬರುವ ತನ್ನ ತಮ್ಮನನ್ನುಳ್ಳವಳೂ ಆದ ತಾಯಿಯನ್ನು ದೂರದಿಂದ ನೋಡಿ ಪೌದನಾಧಿಪತಿ–ಶ್ರೀವಿಜಯನು ಇದಿರಾಗಿ ಹೋಗಿ ಆಕೆಯ ಪಾದಗಳಿಗೆ ನಮಸ್ಕಾರಮಾಡಿದನು.

**ಸ್ವಯಂಪ್ರಭಾ ಚ ತಂ ದೃಷ್ಟ್ವಾ ಬಾಷ್ಪಾವಿಲವಿಲೋಚನಾ ।**
**ಉತ್ತಿಷ್ಠ ಪುತ್ರ ದೃಷ್ಟೋಽಸಿ ಮತ್ಪುಣ್ಯಾಚ್ಚಿರಜೀವಿತಃ ॥ ೨೬೦ ॥**

**ಇತಿ ಶ್ರೀವಿಜಯಂ ದೋರ್ಭ್ಯಾಮುತ್ಥಾಪ್ಯಾಸ್ಪೃಶ್ಯ ತೋಷಿಣೀ ।**
**ಸುಖಾಸೀನಮಥಾಪೃಚ್ಛತ್ಸುತಾರಾಹರಣಾದಿಕಮ್ ॥ ೨೬೧ ॥**

ಸ್ವಯಂಪ್ರಭೆಯೂ ಅವನನ್ನು ನೋಡಿ ಕಣ್ಣೀರುತುಂಬಿದ ಕಣ್ಣುಗಳುಳ್ಳವಳಾಗಿ ''ಮಗನೆ ! ಏಳು. ನನ್ನ ಪುಣ್ಯದಿಂದ ಚಿರಂಜೀವಿಯಾಗಿ ಕಾಣಲ್ಪಟ್ಟೆ'' ಎಂದು ಶ್ರೀವಿಜಯನನ್ನು ಕೈಗಳಿಂದ ಏಳಿಸಿ ಸುತ್ತಲೂ ಮೈಮುಟ್ಟಿ ಸಂತುಷ್ಟಳಾಗಿ ಬಳಿಕ ಸುಖವಾಗಿ ಕುಳಿತಿರುವ ಮಗನನ್ನು ಕುರಿತು ಸುತಾರಾಹರಣ ಮೊದಲಾದ ವಿಷಯವನ್ನು ಪ್ರಶ್ನೆಮಾಡಿದಳು.

**ಖಗಃ ಸಂಭಿನ್ನನಾಮಾಯಂ ಸೇವಕೋಽಮಿತತೇಜಸಃ ।**
**ಅನೇನೋಪಕೃತಿರ್ಯಾದ್ಯ ಕೃತಾ ಸಾಂಬ ತ್ವಯಾಪಿ ನ ॥ ೨೬೨ ॥**

**ಮಮೇತಿ ಶೇಷಮಪ್ಯಾಹ ತತೋಽಸಾವಪ್ಯನೂದ್ಯವಮ್ ।**
**ತನೂಜಂ ಪುರರಕ್ಷಾಯೈ ನಿರ್ವರ್ತ್ಯಾಗಾತ್ಮಜಾನ್ವಿತಾ ॥ ೨೬೩ ॥**

**ರಥನೂಪುರಮುದ್ದಿಶ್ಯ ಗತಾ ಗಗನವರ್ತ್ಮನಾ ।**
**ಸ್ವದೇಶಚರಚಾರೋಕ್ತ್ಯಾ ವಿದಿತಾಮಿತತೇಜಸಾ ॥ ೨೬೪ ॥**

**ಮಹಾವಿಭೂತ್ಯಾ ಪ್ರತ್ಯೇತ್ಯ ಮಾಮಿಕಾ ಪರಿತುಷ್ಯತಾ ।**
**ಪ್ರವೇಶಿತಾ ಸಕೇತೂಚ್ಚೈಃ ಪುರಮಾಬದ್ಧತೋರಣಮ್ ॥ ೨೬೫ ॥**

**ಪ್ರಾಘೂರ್ಣಿಕವಿಧಿಂ ವಿಶ್ವಂ ವಿಧಾಯ ವಿಧಿವತ್ತಯೋಃ ।**
**ತದಾಗಮನಕಾರ್ಯಂ ಚ ಜ್ಞಾತ್ವಾ ವಿದ್ಯಾಧರಾಧಿಪಃ ॥ ೨೬೬ ॥**

**ದೂತಂ ಮರೀಚನಾಮಾನಮಿಂದ್ರಾಶನಿಸುತಂ ಪ್ರತಿ ।**
**ಪ್ರಹೀತ್ಯ ತನ್ಮುಖಾತ್ತಸ್ಯ ವಿದಿತ್ವಾ ದುಸ್ಸಹಂ ವಚಃ ॥ ೨೬೭ ॥**

**ಆಲೋಚ್ಯ ಮಂತ್ರಿಭಿಃ ಸಾರ್ಧಮುಚ್ಛೇತ್ತುಂ ತಂ ಮದೋದ್ಧತಮ್ ।**
**ಮೈಥುನಾಯ ಮಹೇಚ್ಛಾಯ ನಿಜಾಮ್ನಾಯಸಮಾಗತಮ್ ॥ ೨೬೮ ॥**

**ಯುದ್ಧವೀರ್ಯಂ ಪ್ರಹರಣಾವರಣಂ ಬಂಧಮೋಚನಮ್ ।**
**ಇತಿ ವಿದ್ಯಾತ್ರಯಂ ಶತ್ರುಧ್ವಂಸಾರ್ಥಮದಿತಾದರಾತ್ ॥ ೨೬೯ ॥**

ಅಮಿತತೇಜನ ಸೇವಕನಾದ ಇವನು ಸಂಭಿನ್ನನೆಂಬ ಖೇಚರನಾಗಿದ್ದಾನೆ. ತಾಯಿಯೆ ! ಈ ದಿವಸ ಇವನು ನನಗೆ ಮಾಡಿದ ಉಪಕಾರವನ್ನು ನೀನೂ ಮಾಡಿಲ್ಲ'' ಎಂದು ಉಳಿದ ವಿಷಯವನ್ನೂ ಹೇಳಿದನು. ಬಳಿಕ ಈ ಸ್ವಯಂಪ್ರಭೆಯೂ ಶ್ರೀವಿಜಯನ ಅನುಜನಾದ ತನ್ನ ಪುತ್ರನನ್ನು ನಗರರಕ್ಷಣೆಗೋಸ್ಕರ ಹಿಂದೆ ಕಳುಹಿಸಿ ತಾನು ಜ್ಯೇಷ್ಠಪುತ್ರನೊಡನೆ ಕೂಡಿ ಆಕಾಶಮಾರ್ಗದಿಂದ ರಥನೂಪುರನಗರಕ್ಕೆ ಹೋದಳು. ಆ ವಿಷಯವನ್ನು ತನ್ನ ದೇಶದಲ್ಲಿ ಸಂಚರಿಸುವ ಭೃತ್ಯರ ಮಾತಿನಿಂದ ತಿಳಿದು ಸಂತೋಷವುಳ್ಳವನಾದ ಅಮಿತತೇಜನು ಮಹಾವೈಭವದಿಂದ ಇದಿರ್ಗೊಂಡು ಅತ್ತೆಯನ್ನು ಬಾವುಟಗಳೂ ತೋರಣಗಳೂ ಕಟ್ಟಲ್ಪಟ್ಟಿರುವ ತನ್ನ ಪಟ್ಟಣಕ್ಕೆ ವೈಭವದಿಂದ ಪ್ರವೇಶಮಾಡಿಸಿ ಸ್ವಯಂಪ್ರಭೆಗೂ ಶ್ರೀವಿಜಯನಿಗೂ ವಿಧಿಪ್ರಕಾರವಾಗಿ ಅತಿಥಿಸತ್ಕಾರ ವಿಧಿಯನ್ನೆಲ್ಲ ಮಾಡಿ ಅವರ ಆಗಮನದ ಕಾರ್ಯವನ್ನೂ ತಿಳಿದು ವಿದ್ಯಾಧರಾಧಿಪತಿಯು ಮರೀಚಿಯೆಂಬ ದೂತನನ್ನು ಇಂದ್ರಾಶನಿಯ ಪುತ್ರ–ಅಶನಿಘೋಷನ ಬಳಿಗೆ ಕಳುಹಿಸಿ ಆ ದೂತನ ಮುಖದಿಂದ ಅವನ ದುಸ್ಸಹವಾದ ಮಾತನ್ನು ಕೇಳಿ–ತಿಳಿದು ಮದೋದ್ಧತನಾದ ಅವನನ್ನು ನಾಶಮಾಡುವುದಕ್ಕೋಸ್ಕರ ಮಂತ್ರಿಗಳೊಡನೆ ಆಲೋಚಿಸಿ ಮಹೇಚ್ಛೆಯುಳ್ಳ ಮೈದುನ–ಶ್ರೀವಿಜಯನಿಗೆ ತನ್ನ ವಂಶಪರಂಪರೆಯಿಂದ ಬಂದ ಯುದ್ಧವೀರ್ಯ ಪ್ರಹರಣಾವರಣ ಬಂಧಮೋಚನಗಳೆಂಬ ಮೂರು ವಿದ್ಯೆಗಳನ್ನು ಶತ್ರುವಿನಾಶಕ್ಕೋಸ್ಕರ ಪ್ರೀತಿಯಿಂದ ಕೊಟ್ಟನು.

**ರಶ್ಮಿವೇಗಸುವೇಗಾದಿಸಹಸ್ರಾರ್ಧಾತ್ಮಜೈಃ ಸಹ ।**
**ಪೌದನೇಶಂ ವ್ರಜೇತ್ಯುಕ್ತ್ವಾ ಶತ್ರೋರುಪರಿ ದರ್ಪಿಣಃ ॥ ೨೭೦ ॥**

**ಸಹಸ್ರರಶ್ಮಿನಾ ಸಾರ್ಧಂ ಜ್ಯಾಯಸಾ ಸ್ವಾತ್ಮಜೇನ ಸಃ ।**
**ಮಹಾಜ್ವಾಲಾಹ್ವಯಾಂ ಸರ್ವವಿದ್ಯಾಛೇದನಸಂಯುತಾಮ್ ॥ ೨೭೧ ॥**

**ಸಂಜಯಂತಮಹಾಚೈತ್ಯಮೂಲೇ ಸಾಧಯಿತುಂ ಗತಃ ।**
**ಹ್ರೀಮಂತಂ ಪರ್ವತಂ ವಿದ್ಯಾಂ ವಿದ್ಯಾನಾಂ ಸಾಧನಾಸ್ಪದಮ್॥ ೨೭೨ ॥**

''ಗರ್ವಿತನಾದ ಶತ್ರುವಿನ ಮೇಲೆ ರಶ್ಮಿವೇಗ ಸುವೇಗ ಮೊದಲಾದ ಐದುನೂರು ಮಂದಿ ನನ್ನ ಮಕ್ಕಳೊಡನೆ ಹೋಗು'' ಎಂದು ಪೌದನಾಧಿಪತಿಯಾದ ಶ್ರೀವಿಜಯನಿಗೆ ಹೇಳಿ ಆ ಅಮಿತತೇಜನು ತನ್ನ ಜ್ಯೇಷ್ಠಪುತ್ರನಾದ ಸಹಸ್ರರಶ್ಮಿಯೊಡನೆ ಸಮಸ್ತವಿದ್ಯೆಗಳನ್ನು ಛೇದಿಸುವ ಮಹಾಜ್ವಾಲೆಯೆಂಬ ವಿದ್ಯೆಯನ್ನು ಸಂಜಯಂತರ ಮಹಾಪ್ರತಿಮೆಯ ಸಮೀಪದಲ್ಲಿ ಸಾಧಿಸುವುದಕ್ಕೋಸ್ಕರ ವಿದ್ಯೆಗಳ ಸಾಧನ ಸ್ಥಾನವಾದ ಹ್ರೀಮಂತ ಪರ್ವತಕ್ಕೆ ಹೋದನು.

**ರಶ್ಮಿವೇಗಾದಿಭಿಃ ಸಾರ್ಧಂ ಶ್ರುತ್ವಾ ಶ್ರೀವಿಜಯಾಗಮಮ್ ।**
**ಯುದ್ಧಾಯಾಶನಿಘೋಷೇಣ ಪ್ರೇಷಿತಾಃ ಸ್ವಸುತಾಃ ಕ್ರುಧಾ ॥ ೨೭೩ ॥**

**ಸುಘೋಷಃ ಶತಘೋಷಾಖ್ಯಃ ಸ ಸಹಸ್ರಾದಿಘೋಷಕಃ ।**
**ಯುದ್ಧ್ವಾನ್ಯೇಪಿ ಚ ಮಾಸಾರ್ಧಂ ಸರ್ವೇ ಭಂಗಮುಪಾಗಮನ್ ॥**

ರಶ್ಮಿವೇಗ ಮೊದಲಾದವರೊಡನೆ ಶ್ರೀವಿಜಯನು ಬಂದ ವಿಷಯವನ್ನು ಕೇಳಿ ಆ ಅಶನಿಘೋಷನು ಕೋಪದಿಂದ ಸುಘೋಷ ಶತಘೋಷ ಸಹಸ್ರಘೋಷರೆಂಬ ತನ್ನ ಪುತ್ರರನ್ನೂ ಬೇರೆಯವರನ್ನೂ ಯುದ್ಧಕ್ಕೋಸ್ಕರ ಕಳುಹಿಸಿಕೊಟ್ಟನು. ಅವರೆಲ್ಲ ಹದಿನೈದು ದಿನಗಳವರೆಗೆ ಯುದ್ಧವನ್ನು ಮಾಡಿ ಭಂಗವನ್ನು ಹೊಂದಿ–ಸೋತರು.

**ತದ್ಬುದ್ಧ್ವಾ ಕ್ರೋಧಸಂತಪ್ತೋ ಯೋದ್ಧುಂ ಸ್ವಯಮುಪೇಯಿವಾನ್ ।**
**ಸ್ವನಾಶಪಿಸುನಾಶೇಷಘೋಷಣೋಽಶನಿಘೋಷಕಃ ॥ ೨೭೫ ॥**

ಆ ವಿಷಯವನ್ನು ತಿಳಿದು ಕ್ರೋಧಸಂತಪ್ತನೂ ತನ್ನ ನಾಶವನ್ನು ಸೂಚಿಸುವ ಎಲ್ಲಾ ಘೋಷಣೆಗಳುಳ್ಳವನೂ ಆದ ಅಶನಿಘೋಷನು ತಾನು ಯುದ್ಧಮಾಡುವುದಕ್ಕೋಸ್ಕರ ಹೋದನು.

**ಯುದ್ಧೇ ಶ್ರೀವಿಜಯೋಽಪ್ಯೇತಂ ವಿಧಾತುಂ ಪ್ರಾಹರದ್ದ್ವಿಧಾ ।**
**ಭ್ರಾಮರೀವಿದ್ಯಯಾ ಸೋಽಪಿ ದ್ವಿರೂಪಃ ಸಮಜಾಯತ ॥ ೨೭೬ ॥**

ಯುದ್ಧದಲ್ಲಿ ಶ್ರೀವಿಜಯನು ಈ ಅಶನಿಘೋಷನನ್ನು ಎರಡು ತುಂಡು ಮಾಡುವುದಕ್ಕೋಸ್ಕರ ಹೊಡೆದನು. ಆ ಅಶನಿಘೋಷನೂ ಭ್ರಾಮರೀವಿದ್ಯೆಯಿಂದ ಎರಡು ರೂಪಗಳುಳ್ಳವನಾದನು.

**ಚತುರ್ಗುಣತ್ವಮಾಯಾತೌ ಪುನಸ್ತೌ ತೇನ ಖಂಡಿತೌ ।**
**ಸಂಗ್ರಾಮೋಶನಿಘೋಷೈಕಮಯೋಭೂದಿತಿ ಖಂಡನಾತ್ ॥ ೨೭೭ ॥**

ಪುನಃ ಆ ಶ್ರೀವಿಜಯನಿಂದ ತುಂಡುಮಾಡಲ್ಪಟ್ಟ ಆ ಎರಡು ರೂಪಗಳು ಚತುರ್ಗುಣತ್ವವನ್ನು ಹೊಂದಿ- ನಾಲ್ಕಾದುವು. ಹೀಗೆ ತುಂಡುಮಾಡುವುದರಿಂದ ಯುದ್ಧವು ಅಶನಿಘೋಷಮಯವಾಯಿತು. ಎಲ್ಲಿ ನೋಡಿದರೂ ಯುದ್ಧದಲ್ಲಿ ಅಶನಿಘೋಷನೇ ಕಾಣಿಸಿಕೊಂಡನೆಂದು ಭಾವವು.

**ತದಾ ಸಾಧಿತವಿದ್ಯಃ ಸನ್ ರಥನೂಪುರನಾಯಕಃ ।**
**ಏತ್ಯಾದಿಶನ್ಮಹಾಜ್ವಾಲಾವಿದ್ಯಾಂ ತಾಂ ಸೋಢುಮಕ್ಷಮಃ ॥ ೨೭೮ ॥**

**ಮಾಸಾರ್ಧಂ ಕೃತಸಂಗ್ರಾಮೋ ವಿಜಯಾಖ್ಯಜಿನೇಶಿನಃ ।**
**ನಾಭೇಯಸೀಮನಾಮಾದ್ರಿಗಜಧ್ವಜಸಮೀಪಗಾಮ್ ॥ ೨೭೯ ॥**

**ಸಭಾಂ ಭೀತ್ವಾ ಖಗೇಶೋಗಾತ್ಕೋಪಾತ್ತೇಪ್ಯನುಯಾಯಿನಃ ।**
**ಮಾನಸ್ತಂಭಂ ನಿರೀಕ್ಷ್ಯಾಸನ್ ಪ್ರಸೀದಚ್ಚಿತ್ತವೃತ್ತಯಃ ॥ ೨೮೦ ॥**

ಆಗ ರಥನೂಪುರಾಧಿಪತಿಯಾದ ಅಮಿತತೇಜನು ವಿದ್ಯೆಯನ್ನು ಸಾಧಿಸಿದವನಾಗಿ ಬಂದು ಅಶನಿಘೋಷನ ವಿದ್ಯಾ-ಮಾಯೆಯನ್ನು ನಾಶಮಾಡುವುದಕ್ಕೋಸ್ಕರ ತನ್ನ ಮಹಾಜ್ವಾಲಾವಿದ್ಯೆಗೆ ಆಜ್ಞೆಮಾಡಿದನು. ಅದನ್ನು ಸಹಿಸುವುದಕ್ಕೆ ಅಸಮರ್ಥನೂ ಹದಿನೈದು ದಿನಗಳವರೆಗೆ ಯುದ್ಧವನ್ನು ಮಾಡಿದವನೂ ಆದ ಅಶನಿಘೋಷಖೇಚರಾಧಿಪತಿಯು ಭಯಪಟ್ಟು ವೃಷಭಾದ್ರಿಯಲ್ಲಿ ಗಜಧ್ವಜದ ಸಮೀಪದಲ್ಲಿದ್ದ ವಿಜಯಜಿನೇಶ್ವರರ ಸಮವಸರಣಸಭೆಯನ್ನು ಹೊಕ್ಕನು. ಅಮಿತತೇಜನೇ ಮೊದಲಾದವರೂ ಕೋಪದಿಂದ ಹಿಂಬಾಲಿಸಿ ಹೋದರು. ಅವರು ಮಾನಸ್ತಂಭವನ್ನು ನೋಡಿ ಪ್ರಸನ್ನವಾದ ಮನೋವ್ಯಾಪಾರವುಳ್ಳವರಾದರು.

**ಜಿನಂ ಪ್ರದಕ್ಷಿಣೀಕೃತ್ಯ ತ್ರಿಃ ಪ್ರಣಮ್ಯ ಜಗತ್ಪತಿಮ್ ।**
**ವಾಂತವೈರವಿಷಾಃ ಸರ್ವೇ ತತ್ರಾಸಿಷತ ತೇ ಸಮಮ್ ॥ ೨೮೧ ॥**

ಅವರೆಲ್ಲರೂ ಜಗತ್ಪತಿಯಾದ ಜಿನೇಶ್ವರನನ್ನು ಮೂರಾವರ್ತಿ ಪ್ರದಕ್ಷಿಣೆಮಾಡಿ ನಮಸ್ಕರಿಸಿ ವೈರವೆಂಬ ವಿಷವನ್ನು ವಮನಮಾಡಿದವರಾಗಿ ಅಲ್ಲಿ ಒಟ್ಟಿಗೆ ಕುಳಿತುಕೊಂಡರು.

**ತತ್ರಾಗತ್ಯಾಸುರೀದೇವೀ ಸತೀಂ ಶೀಲವತೀಂ ಸ್ವಯಮ್ ।**
**ಸುತಾರಾಂ ದ್ರುತಮಾನೀಯ ಪರಿಮ್ಲಾನಲತೋಪಮಾಮ್ ॥ ೨೮೨ ॥**

**ಮತ್ಪುತ್ರಸ್ಯ ಯುವಾಂ ಕ್ಷಂತುಮಪರಾಧನಮರ್ಹಥಃ ।**
**ಇತ್ಯುದೀರ್ಯಾರ್ಪಯತ್ಸಾ ಶ್ರೀವಿಜಯಾಮಿತತೇಜಸೋಃ ॥ ೨೮೩ ॥**

ಆಸುರೀದೇವಿಯು ಅಲ್ಲಿಗೆ ಬಂದು ಪತಿವ್ರತೆಯೂ ಶೀಲವತಿಯೂ ಬಾಡಿದ ಬಳ್ಳಿಗೆ ಸಮಾನಳೂ ಆದ ಸುತಾರೆಯನ್ನು ಶೀಘ್ರವಾಗಿ ತಾನು ಕರೆತಂದು ''ನೀವುಗಳು ನನ್ನ ಮಗನ ತಪ್ಪನ್ನು ಕ್ಷಮಿಸುವುದಕ್ಕೆ ಅರ್ಹರಾಗಿರುತ್ತೀರಿ'' ಎಂದು ಹೇಳಿ ಆಕೆಯು ಶ್ರೀವಿಜಯನಿಗೂ ಅಮಿತತೇಜನಿಗೂ ಒಪ್ಪಿಸಿದಳು.

**ತಿರಶ್ಚಾಮಪಿ ಚೇದ್ವೈರಮಹಾರ್ಯಂ ಜಾತಿಹೇತುಕಮ್ ।**
**ವಿನಶ್ಯತಿ ಜಿನಾಭ್ಯಾಸೇ ಮನುಷ್ಯಾಣಾಂ ಕಿಮುಚ್ಯತೇ ॥ ೨೮೪ ॥**

ತಿರ್ಯಕ್ಪ್ರಾಣಿಗಳ ಜಾತಿಕಾರಣವಾದ ಮತ್ತು ಹೋಗಲಾಡಿಸಲಾಗದ ವೈರವೂ ಜಿನೇಶ್ವರರ ಬಳಿಯಲ್ಲಿ ನಾಶವಾಗುವುದೆಂದಮೇಲೆ ಮನುಷ್ಯರ ವೈರವು ನಾಶವಾಗುವುದೆಂದು ಹೇಳಬೇಕೇಕೆ ?

**ಕರ್ಮಾಣ್ಯನಾದಿಬದ್ಧಾನಿ ಮುಚ್ಯಂತೇ ಯದಿ ಸಂಸೃತೇಃ ।**
**ಜಿನಾನಾಂ ಸನ್ನಿಧೌ ತೇಷಾಂ ನಾಶ್ಚರ್ಯಂ ವೈರಮೋಚನಮ್ ॥ ೨೮೫ ॥**

ಸಂಸಾರದ ಅನಾದಿಬದ್ಧವಾದ ಕರ್ಮಗಳೂ ಜಿನೇಶ್ವರರ ಸನ್ನಿಧಿಯಲ್ಲಿ ಬಿಡಲ್ಪಡುತ್ತವೆಂದಮೇಲೆ ಆ ಪ್ರಾಣಿಗಳ ವೈರವಿಮೋಚನವು ಆಶ್ಚರ್ಯವಲ್ಲ.

**ಅಂತಕೋ ದುರ್ನಿವಾರೋತ್ರ ವಾರ್ಯತೇ ಸೋಪಿ ಹೇಲಯಾ ।**
**ಜಿನಸ್ಮರಣಮಾತ್ರೇಣ ನ ವಾರ್ಯೋನ್ಯಃ ಸ ಕೋ ರಿಪುಃ ॥ ೨೮೬ ॥**

ಈ ಲೋಕದಲ್ಲಿ ಯಮನನ್ನು ತಡೆಯುವುದು ಕಷ್ಟ. ಜಿನೇಶ್ವರರ ಸ್ಮರಣಮಾತ್ರದಿಂದ ಆ ಯಮನೂ ಸುಲಭದಿಂದ ನಿವಾರಿಸಲ್ಪಡುತ್ತಾನೆಂದಮೇಲೆ ಬೇರೆಯವನು ಯಾವ ಶತ್ರುವು ನಿವಾರಿಸಲ್ಪಡತಕ್ಕವನಲ್ಲ ?

**ತದಂತಕಪ್ರತೀಕಾರಃ ಸ್ಮರಣೀಯೋ ಮನೀಷಿಭಿಃ ।**
**ಜಗತ್ತ್ರಯೈಕನಾಥೋರ್ಹನ್ ಪುರೇಹ ಚ ಹಿತಾವಹಃ ॥ ೨೮೭ ॥**

ಪ್ರಾಜ್ಞರು ಆ ಯಮನಿಗೆ ಪ್ರತೀಕಾರವನ್ನು ಚಿಂತಿಸಬೇಕು. ಮೂರು ಲೋಕಗಳಿಗೆ ಸ್ವಾಮಿಯಾದ ಅರ್ಹತ್ಪರಮೇಶ್ವರನು ಪೂರ್ವದಲ್ಲಿಯೂ ಇಲ್ಲಿಯೂ ಹಿತವನ್ನುಂಟುಮಾಡುವವನಾಗಿರುತ್ತಾನೆ.

**ಅಥ ವಿದ್ಯಾಧರಾಧೀಶಃ ಪ್ರಣಮ್ಯ ಪ್ರಾಂಜಲಿರ್ಜಿನಮ್ ।**
**ಭಕ್ತ್ಯಾ ಸದ್ಧರ್ಮಮಪ್ರಾಕ್ಷೀತ್ಸ ತತ್ತ್ವಾರ್ಥಬುಭುತ್ಸಯಾ ॥ ೨೮೮ ॥**

**ಮಹಾದುಃಖೋರ್ಮಿಸಂಕೀರ್ಣದುಃಸಂಸಾರಪಯೋನಿಧೇಃ ।**
**ಸ್ಫುರತ್ಕಷಾಯನಕ್ರಸ್ಯ ಪಾರಃ ಕೇನಾಪ್ಯತೇ ಜಿನ ॥ ೨೮೯ ॥**

**ಪೃಷ್ಟವ್ಯೋ ನಾಪರಃ ಕೋಪಿ ತೀರ್ಣಸಂಸಾರಸಾಗರಃ ।**
**ತ್ವಮೇವೈಕೋ ಜಗದ್ಬಂಧೋ ವಿನೇಯಾನನುಶಾಧಿ ನಃ ॥ ೨೯೦ ॥**

**ಭವದ್ವಾಷಾಬೃಹನ್ನಾವಾ ರತ್ನತ್ರಯಮಹಾಧನಾಃ ।**
**ಸ್ವಸ್ಥಾನಂ ಜನ್ಮವಾರಾಶೇರವಾಪನ್ ಸುಖಸಾಧನಮ್ ॥ ೨೯೧ ॥**

**ಇತಿ ತಂ ಚ ತತೋ ದೇವೋ ವಾಚಾ ಪ್ರೋವಾಚ ದಿವ್ಯಯಾ ।**
**ಸಂತರ್ಪ್ಯಂತೇ ಯಯಾ ಭವ್ಯಾಃ ಪ್ರಾಚ್ಯಾ ವೃಷ್ಟ್ಯೇವ ಚಾತಕಾಃ ॥ ೨೯೨ ॥**

ಅನಂತರದಲ್ಲಿ ವಿದ್ಯಾಧರಾಧಿಪತಿಯಾದ ಅಮಿತತೇಜನು ಭಕ್ತಿಯಿಂದ ಜಿನನನ್ನು ನಮಸ್ಕರಿಸಿ ತತ್ತ್ವಾರ್ಥವನ್ನು ತಿಳಿಯಬೇಕೆಂಬ ಇಚ್ಛೆಯಿಂದ ''ಜಿನನೆ ! ಉದ್ದೀಪಿತವಾದ ಕಷಾಯವೆಂಬ ಮೊಸಳೆಯುಳ್ಳ ಮಹಾದುಃಖವೆಂಬ ಅಲೆಯಿಂದ ವ್ಯಾಪ್ತವಾದ ಸಂಸಾರವೆಂಬ ಸಮುದ್ರದ ಪಾರವನ್ನು ಯಾವನು ಹೊಂದುವನು ? ಜಗದ್ಬಂಧುವೆ ! ಬೇರೆಯಾವನೂ ಪ್ರಶ್ನೆಮಾಡಲ್ಪಡತಕ್ಕವನಲ್ಲ. ನೀನೊಬ್ಬನೇ ಸಂಸಾರವೆಂಬ ಸಮುದ್ರವನ್ನು ದಾಟಿದವನು. ಭಕ್ತರಾದ ನಮಗೆ ಶಿಕ್ಷಣವನ್ನು ಕೊಡು. ರತ್ನತ್ರಯವೆಂಬ ಮಹಾಧನವುಳ್ಳವರು ತಮ್ಮ ವಚನವೆಂಬ ದೊಡ್ಡ ಹಡಗಿನಿಂದ ಜನ್ಮವೆಂಬ ಸಮುದ್ರದ ದೆಸೆಯಿಂದ ಸುಖಸಾಧನವಾದ ಸ್ವಸ್ಥಾನವನ್ನು ಹೊಂದಿದರು.'' ಈ ರೀತಿಯಾಗಿ ಸದ್ಧರ್ಮವನ್ನು ಕೇಳಿದನು. ಬಳಿಕ ಸ್ವಾಮಿಯು ಆ ಖೇಚರೇಶ್ವರನನ್ನು ಕುರಿತು, ಚಾತಕಪಕ್ಷಿಗಳು ಮೊದಲನೆಯ-ಸ್ವಾತಿಯ ಮಳೆಯಿಂದ ತೃಪ್ತಿಪಡಿಸಲ್ಪಡುವಂತೆ, ಯಾವ ವಚನದಿಂದ ಭವ್ಯರು ತೃಪ್ತಿಪಡುತ್ತಾರೋ ಅಂತಹ ದಿವ್ಯವಚನದಿಂದ ಈ ರೀತಿಯಾಗಿ ಹೇಳಿದನು.

**ಶೃಣು ಭವ್ಯ ಭವಸ್ಯಾಸ್ಯ ಕಾರಣಂ ಕರ್ಮ ಕರ್ಮಣಃ ।**
**ಹೇತವೋ ಹೇ ಖಗಾಧೀಶ ಮಿಥ್ಯಾತ್ವಾಸಂಯಮಾದಯಃ ॥ ೨೯೩ ॥**

**ಮಿಥ್ಯಾತ್ವೋದಯಸಂಭೂತಪರಿಣಾಮೋ ವಿಪರ್ಯಯಮ್ ।**
**ಜ್ಞಾನಸ್ಯ ಜನಯನ್ವಿದ್ಧಿ ಮಿಥ್ಯಾತ್ವಂ ಬಂಧಕಾರಣಮ್ ॥ ೨೯೪ ॥**

"ಎಲೈ ಭವ್ಯನಾದ ಖೇಚರಾಧಿಪತಿಯೆ ! ಕೇಳು. ಈ ಭವಕ್ಕೆ ಕರ್ಮವು ಕಾರಣ. ಕರ್ಮಕ್ಕೆ ಮಿಥ್ಯಾತ್ವ ಅಸಂಯಮ ಮೊದಲಾದುವು ಕಾರಣಗಳು. ಮಿಥ್ಯಾತ್ವದ ಉದಯದಿಂದುಂಟಾದ ಭಾವವು ಜ್ಞಾನಕ್ಕೆ ವಿಪರ್ಯಯವನ್ನುಂಟುಮಾಡುವುದೆಂದು ತಿಳಿ. ಮಿಥ್ಯಾತ್ವವು ಕರ್ಮಬಂಧಕ್ಕೆ ಕಾರಣವಾಗಿದೆ.

**ಅಜ್ಞಾನಸಂಶಯೈಕಾಂತವಿಪರೀತವಿಕಲ್ಪನಮ್ ।**
**ವಿನಯೈಕಾಂತಜಂ ಚೇತಿ ತಜ್ಞೈಸ್ತತ್ಪಂಚಧಾ ಮತಮ್ ॥ ೨೯೫ ॥**

ಮಿಥ್ಯಾತ್ವವನ್ನು ತಿಳಿದು ಪ್ರಾಜ್ಞರು ಆ ಮಿಥ್ಯಾತ್ವವು ಅಜ್ಞಾನ, ಸಂಶಯ, ಏಕಾಂತ, ವಿಪರೀತಕಲ್ಪನ, ವಿನಯೈಕಾಂತಗಳೆಂದು ಐದು ಪ್ರಕಾರವಾಗಿ ತಿಳಿಯುತ್ತಾರೆ.

**ಪಾಪಧರ್ಮಾಭಿಧಾನಾವಬೋಧದೂರೇಷು ಜಂತುಷು ।**
**ಮಿಥ್ಯಾತ್ವೋದಯಪರ್ಯಾಯೋ ಮಿಥ್ಯಾತ್ವಂ ಸ್ಯಾತ್ತದಾದಿಮಮ್ ॥**

ಪಾಪದ ಮತ್ತು ಧರ್ಮದ ತಿಳುವಳಿಕೆಯಿಂದ ದೂರವಾಗಿರುವ ಪ್ರಾಣಿಗಳಲ್ಲಿ ಮಿಥ್ಯಾತ್ವಕರ್ಮದ ಉದಯರೂಪವಾದ ಭಾವವು ಮೊದಲನೆಯ ಅಜ್ಞಾನ ಮಿಥ್ಯಾತ್ವವಾಗಿರುತ್ತದೆ.

**ಆಪ್ತಾಗಮಾದಿನಾನಾತ್ವಾತ್ತತ್ತ್ವೇ ಡೋಲಾಯಮಾನತಾ ।**
**ಯೇನ ಸಂಶಯಮಿಥ್ಯಾತ್ವಂ ತದ್ವಿದ್ಧಿ ಬುಧಸತ್ತಮ ॥ ೨೯೭ ॥**

ಬಹು ಪ್ರಾಜ್ಞನೆ ! ಆಪ್ತ–ದೇವರು ಶಾಸ್ತ್ರ ಮೊದಲಾದುವು ಹಲವು ಬಗೆಯಾಗಿರುವುದರಿಂದ ಯಥಾರ್ಥಸ್ವರೂಪದಲ್ಲಿ ಯಾವುದರಿಂದ ಚಂಚಲತ್ವವುಂಟಾಗುವುದೋ ಅದು ಸಂಶಯಮಿಥ್ಯಾತ್ವವೆಂದು ತಿಳಿ.

**ದ್ರವ್ಯಪರ್ಯಾಯರೂಪೇರ್ಥೇ ತ್ರ್ಯಂಗೇ ಚಾಕ್ಷಯಸಾಧನೇ ।**
**ತತ್ಸ್ಯಾದೇಕಾಂತಮಿಥ್ಯಾತ್ವಂ ಯೇನೈಕಾಂಶಾವಧಾರಣಮ್ ॥ ೨೯೮ ॥**

ದ್ರವ್ಯಪರ್ಯಾಯರೂಪವಾದ ಪದಾರ್ಥದಲ್ಲಿಯೂ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ಮೂರು ಅಂಗಗಳುಳ್ಳ ಮುಕ್ತಿಸಾಧನದಲ್ಲಿಯೂ ಯಾವುದರಿಂದ ಒಂದು ಅಂಶದ ನಿಶ್ಚಯವಾಗುವುದೋ ಅದು ಏಕಾಂತಮಿಥ್ಯಾತ್ವವಾಗುವುದು.

**ಯೋ ಜ್ಞಾನಜ್ಞಾಯಕಜ್ಞೇಯಯಾಥಾತ್ಮ್ಯೇ ನಿರ್ಣಯೋನ್ಯಥಾ ।**
**ಸ ಯೇನಾತ್ಮನಿ ತದ್ವಿದ್ಧಿ ಮಿಥ್ಯಾತ್ವಂ ವಿಪರೀತಜಮ್ ॥ ೨೯೯ ॥**

ಜ್ಞಾನ, ಜ್ಞಾಯಕ (ತಿಳಿಯುವವನು), ಜ್ಞೇಯ (ತಿಳಿಯಲ್ಪಡತಕ್ಕುದು) ಇವುಗಳ ಯಥಾರ್ಥಸ್ವರೂಪದಲ್ಲಿ ಯಾವ ನಿರ್ಣಯವಿದೆಯೋ ಅದು ಯಾವ ಮಿಥ್ಯಾತ್ವಭಾವದಿಂದ ಆತ್ಮನಲ್ಲಿ ವಿಪರೀತವಾಗುವುದೋ ಅದು ವಿಪರೀತಮಿಥ್ಯಾತ್ವವೆಂದು ತಿಳಿ. ನಿರ್ಣೀತವಾಗಿರುವ ಜ್ಞಾನಾದಿಯಥಾರ್ಥವಿಷಯವನ್ನು ವಿಪರೀತವಾಗಿ ತಿಳಿಯುವುದು ವಿಪರೀತಮಿಥ್ಯಾತ್ವವೆಂದು ಭಾವವು.

**ಮನೋವಾಕ್ಕಾಯವೃತ್ತೇನ ಪ್ರಣತೌ ಸರ್ವವಸ್ತುಷು ।**
**ಮುಕ್ತ್ಯುಪಾಯಮತಿರ್ಯೇನ ಮಿಥ್ಯಾತ್ವಂ ಸ್ಯಾತ್ತದಂತಿಮಮ್ ॥ ೩೦೦ ॥**

ಮನೋವಾಕ್ಕಾಯಗಳಲ್ಲಿರುವ ಯಾವ ಭಾವದಿಂದ ಸಮಸ್ತವಸ್ತುಗಳಲ್ಲಿ ನಮ್ರತೆ–ವಿನಯವಿದ್ದರೆ ಮೋಕ್ಷೋಪಾಯವಾಗುವುದೆಂಬ ಬುದ್ಧಿಯುಂಟಾಗುವುದೋ ಅದು ಕೊನೆಯ–ವಿನಯೈಕಾಂತಮಿಥ್ಯಾತ್ವವಾಗುವುದು.

**ಅವ್ರತಸ್ಯ ಮನಃಕಾಯವಚೋವೃತ್ತಿರಸಂಯಮಃ ।**
**ತದ್ಜ್ಞೈಃ ಸೋಪಿ ದ್ವಿಧಾ ಪ್ರೋಕ್ತಃ ಪ್ರಾಣೇಂದ್ರಿಯಸಮಾಶ್ರಯಾತ್ ॥**

**ಅಪ್ರತ್ಯಾಖ್ಯಾನಮೋಹಾನಾಮುದಯೋ ಯಾವದಂಗಿನಾಮ್ ।**
**ಆಚತುರ್ಥಗುಣಸ್ಥಾನಾತ್ಸ ತಾವದ್ಬಂಧಕಾರಣಮ್ ॥ ೩೦೨ ॥**

ಮನೋವಾಕ್ಕಾಯಗಳಲ್ಲಿ ವ್ರತವಿಲ್ಲದಿರುವುದಕ್ಕೆ ಅಸಂಯಮವೆಂದು ಹೆಸರು. ಅದೂ ಪ್ರಾಣಿ ಇಂದ್ರಿಯಗಳ ಆಶ್ರಯದಿಂದ ಎರಡು ಪ್ರಕಾರವಾಗಿರುತ್ತದೆಂದು ಆ ಅಸಂಯಮವನ್ನು ತಿಳಿದವರು ಹೇಳಿದ್ದಾರೆ. ಆ ಅಸಂಯಮವು ಪ್ರಾಣಿಗಳಿಗೆ ಅಪ್ರತ್ಯಾಖ್ಯಾನಕಷಾಯಮೋಹನೀಯಕರ್ಮದ ಉದಯವು ಎಷ್ಟರವರೆಗಿರುವುದೋ ಅಷ್ಟರವರೆಗೆ ನಾಲ್ಕನೆಯ–ಅವಿರತಸಮ್ಯಗ್ದೃಷ್ಟಿಗುಣಸ್ಥಾನದವರೆಗೆ ಕರ್ಮಬಂಧಕ್ಕೆ ಕಾರಣವಾಗಿರುವುದು.

**ಕಾಯವಾಕ್ಚೇತಸಾಂ ವೃತ್ತಿರ್ವ್ರತಾನಾಂ ಮಲಕಾರಿಣೀ ।**
**ಯಾ ಸಾ ಷಷ್ಠಗುಣಸ್ಥಾನಾತ್ಪ್ರಮಾದೋ ಬಂಧವೃತ್ತಯೇ ॥ ೩೦೩ ॥**

ಅಹಿಂಸಾದಿಮಹಾವ್ರತಗಳಿಗೆ ದೋಷವನ್ನುಂಟುಮಾಡುವ ಕಾಯವಾಕ್ಚಿತ್ತಗಳ ವೃತ್ತಿ–ವ್ಯಾಪಾರಕ್ಕೆ ಪ್ರಮಾದವೆಂದು ಹೆಸರು. ಅದು ಆರನೆಯ–ಪ್ರಮತ್ತಸಂಯತ ಗುಣಸ್ಥಾನದವರೆಗೆ ಬಂಧಕ್ಕೆ ಕಾರಣವಾಗಿರುವುದು.

**ಪ್ರೋಕ್ತಾಃ ಪಂಚದಶೈತಸ್ಯ ಭೇದಾಃ ಸಂಜ್ವಲನೋದಯಾತ್ ।**
**ಚಾರಿತ್ರತ್ರಯಯುಕ್ತಸ್ಯ ಪ್ರಾಯಶ್ಚಿತ್ತಸ್ಯ ಹೇತವಃ ॥ ೩೦೪ ॥**

ಈ ಪ್ರಮಾದದಲ್ಲಿ ಹದಿನೈದು ಭೇದಗಳಿವೆ. ಸಾಮಾಯಿಕ, ಛೇದೋಪಸ್ಥಾಪನಾ, ಪರಿಹಾರವಿಶುದ್ಧಿಗಳೆಂಬೀ ಮೂರು ಚಾರಿತ್ರಗಳುಳ್ಳವನಿಗೆ ಸಂಜ್ವಲನ ಕಷಾಯಮೋಹನೀಯಕರ್ಮೋದಯದಿಂದ ಈ ಪ್ರಮಾದಗಳು ಪ್ರಾಯಶ್ಚಿತ್ತಕ್ಕೆ ಕಾರಣಗಳಾಗುತ್ತವೆ.

**ಯಃ ಸಂಜ್ವಲನಸಂಜ್ಞಸ್ಯ ಚತುಷ್ಕಸ್ಯೋದಯಾದ್ಭವೇತ್ ।**
**ಗುಣಸ್ಥಾನಚತುಷ್ಕೇ ಸ ಕಷಾಯೋ ಬಂಧಹೇತುಕಃ ॥ ೩೦೫ ॥**

ಏಳನೆಯ ಗುಣಸ್ಥಾನದಿಂದ ಹತ್ತನೆಯ ಗುಣಸ್ಥಾನದವರೆಗೆ ನಾಲ್ಕು ಗುಣಸ್ಥಾನಗಳಲ್ಲಿ ಸಂಜ್ವಲನಕ್ರೋಧ ಮಾನ ಮಾಯಾ ಲೋಭಗಳ–ನಾಲ್ಕರ ಉದಯದಿಂದ ಯಾವ ಕಷಾಯವುಂಟಾಗುವುದೋ ಅದು ಕರ್ಮಬಂಧಕ್ಕೆ ಕಾರಣವಾಗುವುದು.

**ಸ ಯಃ ಷೋಡಶಭೇದೇನ ಕಷಾಯಃ ಕಥಿತೋ ಜಿನೈಃ ।**
**ಉಪಶಾಂತಾದಿತೋ ಹೇತುರ್ಬಂಧೇ ಸ್ಥಿತ್ಯನುಭಾಗಯೋಃ ॥ ೩೦೬ ॥**

ಕರ್ಮಗಳ ಉಪಶಾಂತಾದಿ ಭಾವಗಳಿಂದುಂಟಾಗುವ ಅನಂತಾನುಬಂಧಿ, ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ, ಸಂಜ್ವಲನಕ್ರೋಧ ಮಾನ ಮಾಯಾ ಲೋಭಗಳ ಭೇದದಿಂದ ಹದಿನಾರು ಪ್ರಕಾರವಾಗಿ ಜಿನೇಶ್ವರರಿಂದ ಹೇಳಲ್ಪಟ್ಟಿರುವ ಕಷಾಯವು ಸ್ಥಿತಿಬಂಧದಲ್ಲಿಯೂ ಅನುಭಾಗಬಂಧದಲ್ಲಿಯೂ ಕಾರಣವಾಗಿರುವುದು.

**ಆತ್ಮಪ್ರದೇಶಸಂಚಾರೋ ಯೋಗೋ ಬಂಧವಿಧಾಯಕಃ ।**
**ಗುಣಸ್ಥಾನತ್ರಯೇ ಜ್ಞೇಯಃ ಸದ್ವೇದ್ಯಸ್ಯ ಸ ಏಕಕಃ ॥ ೩೦೭ ॥**

ಉಪಶಾಂತಕಷಾಯ ಕ್ಷೀಣಕಷಾಯ ಸಯೋಗಕೇವಲಿಗುಣಸ್ಥಾನಗಳಲ್ಲಿ ಮೂರರಲ್ಲಿ ಸಾತಾವೇದನೀಯಕರ್ಮದ ಬಂಧವು ಆತ್ಮಪ್ರದೇಶಚಲನರೂಪವಾದ ಆ ಯೋಗವೊಂದರಿಂದಲೇ ಆಗುವುದೆಂದು ತಿಳಿಯಬೇಕು.

**ಮಾನಸಃ ಸ ಚತುರ್ಭೇದಸ್ತಾವಾನೇವ ವಚಃಶ್ರಿತಃ ।**
**ಕಾಯೇ ಸಪ್ತವಿಧಃ ಸರ್ವೋ ಯಥಾಸ್ವಂ ದ್ವಯಬಂಧಕೃತ್ ॥ ೩೦೮ ॥**

ಮನೋಯೋಗಸಂಬಂಧವಾದ ನಾಲ್ಕು ಭೇದವೂ ವಚನಯೋಗವನ್ನಾಶ್ರಯಿಸಿರುವ ನಾಲ್ಕು ಭೇದವೂ ಕಾಯಯೋಗದಲ್ಲಿರುವ ಏಳುಭೇದವೂ ಸೇರಿ ಎಲ್ಲವೂ–ಹದಿನೈದು ಯೋಗಗಳೂ ಯಥಾಯೋಗ್ಯವಾಗಿ ಪ್ರಕೃತಿಬಂಧ ಪ್ರದೇಶಬಂಧಗಳೆರಡನ್ನು ಮಾಡುತ್ತವೆ.

**ಪಂಚಭಿರ್ಬಧ್ಯತೇ ಮಿಥ್ಯಾತ್ವಾದಿಭಿರ್ವರ್ಣಿತೈಃ ಸದಾ ।**
**ಸ ವಿಂಶತಿಶತೇನಾರ್ಯ ಕರ್ಮಣಾಂ ಸ್ವೋಚಿತೇ ಪದೇ ॥ ೩೦೯ ॥**

ಎಲೈ ಆರ್ಯನೆ! ಮೇಲೆ ವರ್ಣಿಸಲ್ಪಟ್ಟಿರುವ ಮಿಥ್ಯಾತ್ವ ಅವ್ರತ ಪ್ರಮಾದ ಕಷಾಯ ಯೋಗಗಳಿಂದ–ಐದರಿಂದ ತಮಗೆ ಉಚಿತವಾದ ಗುಣಸ್ಥಾನದಲ್ಲಿ ಯಾವಾಗಲೂ ಜೀವನಿಗೆ ನೂರಿಪ್ಪತ್ತು ಕರ್ಮಗಳ ಬಂಧವಾಗುವುದು.

**ಜಂತುಸ್ತೈರ್ಭ್ರಾಮ್ಯತೇ ಭೂಯೋ ಭೂಯೋ ಗತ್ಯಾದಿಪರ್ಯಯಃ ।**
**ಆಶ್ರಿತಾದಿಗುಣಸ್ಥಾನಃ ಸರ್ವಜೀವಸಮಾಸಕಃ ॥ ೩೧೦ ॥**

ಆ ಕರ್ಮಗಳಿಂದ ಪ್ರಥಮಗುಣಸ್ಥಾನವನ್ನಾಶ್ರಯಿಸಿರುವುದೂ ಗತಿ ಇಂದ್ರಿಯ ಮೊದಲಾದ ಸಕಲಜೀವಸಮಾಸಗಳುಳ್ಳುದೂ ಆದ ಪ್ರಾಣಿಯು ಗತಿ ಜಾತಿ ಮೊದಲಾದ ಪರ್ಯಾಯಗಳುಳ್ಳುದಾಗಿ ಪುನಃ ಪುನಃ ತಿರುಗಿಸಲ್ಪಡುತ್ತದೆ.

**ತ್ರ್ಯಜ್ಞಾನದರ್ಶನೋಪೇತಸ್ತ್ರಿಭಾವೋ ವೀತಸಂಯಮಃ ।**
**ಭವ್ಯೋಽಭವ್ಯಶ್ಚ ಸಂಸಾರಚಕ್ರಕಾವರ್ತಗರ್ತಗಃ ॥ ೩೧೧ ॥**

ಕುಮತಿ, ಕುಶ್ರುತ, ವಿಭಂಗಗಳೆಂಬ ಮೂರು ಅಜ್ಞಾನಗಳಿಂದಲೂ ಚಕ್ಷು ರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನಗಳೆಂಬ ಮೂರು ದರ್ಶನಗಳಿಂದಲೂ ಕೂಡಿರುವವನೂ ಔದಯಿಕ, ಕ್ಷಾಯೋಪಶಮಿಕ, ಪಾರಿಣಾಮಿಕಗಳೆಂಬ ಮೂರು ಭಾವಗಳುಳ್ಳವನೂ ಸಂಯಮ–ವ್ರತವಿಲ್ಲದವನೂ ಆದ ಭವ್ಯನೂ ಅಭವ್ಯನೂ ಸಂಸಾರವೆಂಬ ಚಕ್ರದ ಸುಳಿಯಿಂದಾದ ಹಳ್ಳವನ್ನು ಹೊಂದಿದವರಾಗಿರುತ್ತಾರೆ.

**ಜನ್ಮಮೃತ್ಯುಜರಾರೋಗಸುಖದುಃಖಾದಿಭೇದಭಾಕ್ ।**
**ಅತೀತಾನಾದಿಕಾಲೇತ್ರ ಕಶ್ಚಿತ್ಕಾಲಾದಿಲಬ್ಧಿತಃ ॥ ೩೧೨ ॥**

**ಕರಣತ್ರಯಸಂಶಾಂತಸಪ್ತ ಪ್ರಕೃತಿ ಸಂಚಯಃ ।**
**ಪ್ರಾಪ್ತವಿಚ್ಛೇದಸಂಸಾರಃ ಶಮಸಂಭೂತದರ್ಶನಃ ॥ ೩೧೩ ॥**

**ಅಪ್ರತ್ಯಾಖ್ಯಾನಮಿಶ್ರಾಖ್ಯಭಾವಾಪ್ತದ್ವಾದಶವ್ರತಃ ।**
**ಪ್ರತ್ಯಾಖ್ಯಾನಾಖ್ಯಮಿಶ್ರಾಖ್ಯಭಾವಾವಾಪ್ತಮಹಾವ್ರತಃ ॥ ೩೧೪ ॥**

**ಸಪ್ತಪ್ರಕೃತಿನಿರ್ಣಾಶಲಬ್ಧಕ್ಷಾಯಿಕದರ್ಶನಃ ।**
**ಮೋಹಾರಾತಿವಿಘಾತೋತ್ಥಕ್ಷಾಯಿಕಾಚಾರಭೂಷಿತಃ ॥ ೩೧೫ ॥**

**ದ್ವಿತೀಯಶುಕ್ಲಸದ್ಧ್ಯಾನೋ ಘಾತಿತ್ರಿತಯಘಾತಕಃ ।**
**ನವಕೇವಲಭಾವಾಪ್ತ್ಯಾ ಸ್ನಾತಕಃ ಸರ್ವಪೂಜಿತಃ ॥ ೩೧೬ ॥**

**ತೃತೀಯಶುಕ್ಲಸದ್ಧ್ಯಾನನಿರುದ್ಧಾಶೇಷಯೋಗಕಃ ।**
**ಸಮುಚ್ಛಿನ್ನಕ್ರಿಯಾಯೋಗಾದ್ವಿಚ್ಛಿನ್ನಾಶೇಷಬಂಧನಃ ॥ ೩೧೭ ॥**

**ಏವಂ ತ್ರಿರೂಪಸನ್ಮಾರ್ಗಾತ್ಕ್ರಮಾಪ್ತಾದ್ಭವವಾರಿಧಿಮ್ ।**
**ಭವ್ಯೋ ಭವಾದೃಶೋ ಭವ್ಯ ಸಮುತ್ತೀರ್ಯೈಧತೇ ಸದಾ ॥ ೩೧೮ ॥**

ಈ ಸಂಸಾರದಲ್ಲಿ ಅನಾದಿಕಾಲದಲ್ಲಿ ಹುಟ್ಟುವಿಕೆ, ಸಾಯುವಿಕೆ, ಮುಪ್ಪು, ರೋಗ, ಸುಖ, ದುಃಖ ಮೊದಲಾದ ಭೇದಗಳನ್ನು ಹೊಂದಿದವನಾದ ಒಬ್ಬಾನೊಬ್ಬ ಭವ್ಯನು ಕಾಲಾದಿಲಬ್ಧಿಯಿಂದ ಅಧಃಪ್ರವೃತ್ತಿಕರಣ ಅಪೂರ್ವಕರಣ ಅನಿವೃತ್ತಿಕರಣಗಳಿಂದ ಶಾಂತವಾದ ಮಿಥ್ಯಾತ್ವ, ಸಮ್ಯಙ್ಮಿಥ್ಯಾತ್ವ, ಸಮ್ಯಕ್ತ್ವಪ್ರಕೃತಿ, ಅನಂತಾನುಬಂಧಿಕ್ರೋಧ, ಮಾನ, ಮಾಯಾ, ಲೋಭಗಳೆಂಬೀ ಸಪ್ತಪ್ರಕೃತಿ ಸಮೂಹವುಳ್ಳವನೂ ಸಂಸಾರದ ವಿಚ್ಛೇದವನ್ನು ಹೊಂದಿದವನೂ ಶಮಭಾವದಿಂ ದುಂಟಾದ–ಉಪಶಮಸಮ್ಯಗ್ದರ್ಶನವುಳ್ಳವನೂ ಅಪ್ರತ್ಯಾಖ್ಯಾನ ಕ್ರೋಧ ಮಾನ ಮಾಯಾ ಲೋಭಗಳ ಕ್ಷಯೋಪಶಮಭಾವದಿಂದ ಪ್ರಾಪ್ತವಾದ ೫ ಅಣುವ್ರತ, ೩ ಗುಣವ್ರತ, ೪ ಶಿಕ್ಷಾವ್ರತಗಳೆಂಬ ಹನ್ನೆರಡು ವ್ರತಗಳುಳ್ಳವನೂ ಪ್ರತ್ಯಾಖ್ಯಾನಕ್ರೋಧ ಮಾನ ಮಾಯಾ ಲೋಭಗಳ ಕ್ಷಯೋಪಶಮಭಾವದಿಂದ ಪ್ರಾಪ್ತವಾದ ಮಹಾ ವ್ರತಗಳುಳ್ಳವನೂ ಮಿಥ್ಯಾತ್ವಾದಿ ಸಪ್ತಪ್ರಕೃತಿಗಳ ವಿನಾಶದಿಂದ ಪ್ರಾಪ್ತವಾದ ಕ್ಷಾಯಿಕ ಸಮ್ಯಗ್ದರ್ಶನವುಳ್ಳವನೂ ಚಾರಿತ್ರಮೋಹನೀಯಕರ್ಮವೆಂಬ ಶತ್ರುವಿನ ವಿನಾಶ ದಿಂದುಂಟಾದ ಕ್ಷಾಯಿಕಾಚಾರದಿಂದ ಭೂಷಿತನೂ ಏಕತ್ವವಿತರ್ಕವೆಂಬ ದ್ವಿತೀಯ ಶುಕ್ಲಧ್ಯಾನವುಳ್ಳವನೂ ಜ್ಞಾನಾವರಣ ದರ್ಶನಾವರಣ ಅಂತರಾಯಗಳೆಂಬ ಮೂರು ಘಾತಿಕರ್ಮಗಳನ್ನು ನಾಶಮಾಡಿದವನೂ ನವಕೇವಲಲಬ್ಧಿಭಾವಗಳ ಪ್ರಾಪ್ತಿಯಿಂದ ಸರ್ವಪೂಜಿತನಾದ ಸ್ನಾತಕ–ಸರ್ವಜ್ಞ–ಕೇವಲಿಯೂ ಸೂಕ್ಷ್ಮಕ್ರಿಯಾಪ್ರತಿಪಾತಿ ಯೆಂಬ ತೃತೀಯಶುಕ್ಲಧ್ಯಾನದಿಂದ ಮನೋವಾಕ್ಕಾಯವ್ಯಾಪಾರರೂಪವಾದ ಸಮಸ್ತಯೋಗವನ್ನು ತಡೆದವನೂ ನಾಲ್ಕನೆಯದಾದ ವ್ಯುಪರತಕ್ರಿಯಾ–ಸಮು ಚ್ಛಿನ್ನಕ್ರಿಯಾಶುಕ್ಲಧ್ಯಾನದಿಂದ ಸಕಲಕರ್ಮಬಂಧನವನ್ನು ನಾಶಮಾಡಿದವನೂ ಆಗಿ ಎಲೈ ಭವ್ಯನೆ! ನಿನ್ನಂತಹ ಭವ್ಯನು ಹೀಗೆ ಕ್ರಮದಿಂದ ಪ್ರಾಪ್ತವಾದ ಸಮ್ಯಗ್ದರ್ಶನ ಜ್ಞಾನ ಚಾರಿತ್ರರೂಪವಾದ ಸನ್ಮಾರ್ಗದಿಂದ ಭವಸಾಗರವನ್ನು ದಾಟಿ ಯಾವಾಗಲೂ ವೃದ್ಧಿಯನ್ನು ಹೊಂದುತ್ತಿರುತ್ತಾನೆ."

**ಇತಿ ತಾಂ ಜನ್ಮನಿರ್ವಾಣಪ್ರಕ್ರಿಯಾಂ ಜಿನಭಾಷಿತಾಮ್ ।**
**ಶ್ರುತ್ವಾ ಪೀತಾಮೃತೋ ವಾಸೌ ವಿಶ್ವವಿದ್ಯಾಧರೇಶ್ವರಃ ॥ ೩೧೯ ॥**

**ಕಾಲಾದ್ಯುಕ್ತಚತುರ್ಭೇದಪ್ರಾಯೋಗ್ಯಪ್ರಾಪಣಾತ್ತದಾ ।**
**ಸಮ್ಯಕ್ಶ್ರದ್ಧಾನಸಂಶುದ್ಧಃ ಶ್ರಾವಕವ್ರತಭೂಷಿತಃ ॥ ೩೨೦ ॥**

**ಭಗವನ್ ಕಿಂಚಿದಿಚ್ಛಾಮಿ ಪ್ರಷ್ಟುಮನ್ಯಚ್ಚ ಚೇತಸಿ ।**
**ಸ್ಥಿತಂ ಮೇಶನಿಘೋಷೋಯಂ ಪ್ರಭಾವಂ ತತ್ತ್ವತೋವಯನ್ ॥**

**ಸುತಾರಾಂ ಮೇನುಜಾಮೇವ ಹೃತವಾನ್ ಕೇನ ಹೇತುನಾ ।**
**ಇತ್ಯಪ್ರಾಕ್ಷೀಜ್ಜಿನೇಂದ್ರೋಪಿ ಹೇತುಂ ತಸ್ಯೈವಮಬ್ರವೀತ್ ॥ ೩೨೨ ॥**

ಈ ರೀತಿಯಾಗಿ ಜಿನೇಶ್ವರರಿಂದ ಹೇಳಲ್ಪಟ್ಟ ಆ ಜನ್ಮವಿನಾಶದ ಪ್ರಕ್ರಿಯೆಯನ್ನು ಕೇಳಿ ಅಮೃತವನ್ನು ಪಾನಮಾಡಿದವನಂತಿರುವ ಈ ಸಕಲವಿದ್ಯಾಧರಾಧೀಶ್ವರನಾದ ಅಮಿತತೇಜನು ಕಾಲಾದಿಭೇದಗಳಿಂದ ಹೇಳಲ್ಪಟ್ಟಿರುವ ನಾಲ್ಕು ಪ್ರಕಾರವಾದ ಲಬ್ಧಿಗಳಿಂದ ಯೋಗ್ಯತೆಯು ಪ್ರಾಪ್ತವಾದುದರಿಂದ ಆಗ ಸಮ್ಯಗ್ದರ್ಶನದಿಂದ ಪರಿಶುದ್ಧನೂ ಶ್ರಾವಕವ್ರತಗಳಿಂದ ಭೂಷಿತನೂ ಆಗಿ "ಭಗವನ್! ನನ್ನ ಮನಸ್ಸಿನಲ್ಲಿರುವ ಬೇರೆ ಸ್ವಲ್ಪ ವಿಷಯಗಳನ್ನೂ ಪ್ರಶ್ನೆಮಾಡುವುದಕ್ಕೆ ಬಯ ಸುತ್ತೇನೆ– ಈ ಅಶನಿಘೋಷನು ನನ್ನ ಪ್ರಭಾವವನ್ನು ನಿಜವಾಗಿ ತಿಳಿದವನಾಗಿ ನನ್ನ ತಂಗಿಯಾದ ಸುತಾರೆಯನ್ನು ಯಾವ ಕಾರಣದಿಂದ ಹೀಗೆ ಅಪಹರಿಸಿದನು?" ಎಂದು ಪ್ರಶ್ನೆಮಾಡಿದನು. ಜಿನೇಶ್ವರರೂ ಅವನಿಗೆ ಕಾರಣವನ್ನು ಈ ರೀತಿಯಾಗಿ ಹೇಳಿದರು.

**ಜಂಬೂಪಲಕ್ಷಿತೇ ದ್ವೀಪೇ ವಿಷಯೇ ಮಂಗಲಾಹ್ವಯೇ ।**
**ಅಚಲಗ್ರಾಮವಾಸ್ತವ್ಯೋ ಬ್ರಾಹ್ಮಣೋ ಧರಣೀಜಟಃ ॥ ೩೨೩ ॥**

"ಜಂಬೂದ್ವೀಪದಲ್ಲಿರುವ ಮಂಗಲದೇಶದಲ್ಲಿ ಅಚಲಗ್ರಾಮನಿವಾಸಿಯಾದ ಧರಣೀಜಟನೆಂಬ ಬ್ರಾಹ್ಮಣನಿದ್ದನು.

**ಅಗ್ನಿಲಾ ಗೃಹಿಣೀ ತೋಕೌ ಭೂತ್ಯಂತೇಂದ್ರಾಗ್ನಿ ಸಂಜ್ಞಕೌ ।**
**ಕಪಿಲಸ್ತಸ್ಯ ದಾಸೇರಸ್ತದ್ವೇದಾಧ್ಯಯನೇ ಸ್ವಯಮ್ ॥ ೩೨೪ ॥**

**ವೇದಾನ್ ಸ ಸೂಕ್ಷ್ಮಬುದ್ಧಿತ್ವಾದಜ್ಞಾಸೀದ್ಗ್ರಂಥತೋರ್ಥತಃ ।**
**ತದ್ಜ್ಞಾತ್ವಾ ಬ್ರಾಹ್ಮಣಃ ಕ್ರುಧ್ವಾ ತ್ವಯಾಯೋಗ್ಯಮಿದಂ ಕೃತಮ್ ॥**

**ಇತಿ ದಾಸೀಸುತಂ ಗೇಹಾತ್ತದೈವ ನಿರಜೀಗಮತ್ ।**
**ಕಪಿಲೋಪಿ ವಿಷಣ್ಣಾತ್ಮಾ ತಸ್ಮಾದ್ರತ್ನಪುರಂ ಯಯೌ ॥ ೩೨೬ ॥**

ಅಗ್ನಿಲೆಯೆಂಬವಳು ಆತನ ಪತ್ನಿ. ಇಂದ್ರಭೂತಿ ಅಗ್ನಿಭೂತಿಗಳೆಂಬೀರ್ವರು ಮಕ್ಕಳು. ಕಪಿಲನೆಂಬವನು ಆ ಬ್ರಾಹ್ಮಣನ ದಾಸಿಯ ಪುತ್ರ. ಆ ಧರಣೀಜಟನು ಮಕ್ಕಳಿಗೆ ವೇದಾಧ್ಯಯನವನ್ನು ಮಾಡಿಸುವ ಕಾಲದಲ್ಲಿ ಆ ಕಪಿಲನು ಸೂಕ್ಷ್ಮಬುದ್ಧಿ ಯಿದ್ದುದರಿಂದ ತಾನೂ ಗ್ರಂಥದಿಂದಲೂ ಅರ್ಥದಿಂದಲೂ ವೇದಗಳನ್ನು ತಿಳಿದನು. ಆ ವಿಷಯವನ್ನು ತಿಳಿದು ಬ್ರಾಹ್ಮಣನು ಕೋಪಿಸಿ "ನೀನು ಈ ಅಯೋಗ್ಯ

ಕಾರ್ಯವನ್ನು ಮಾಡಿದೆ'' ಎಂದು ಆ ದಾಸೀಪುತ್ರನನ್ನು ಆಗಲೇ ಮನೆಯಿಂದ ಹೊರಡಿಸಿದನು. ಕಪಿಲನೂ ಖಿನ್ನಮನಸ್ಕನಾಗಿ ಅಲ್ಲಿಂದ ರತ್ನಪುರಕ್ಕೆ ಹೋದನು.

**ಶ್ರುತಾಧ್ಯಯನಸಂಪನ್ನಂ ಯೋಗ್ಯಂ ತಂ ವೀಕ್ಷ್ಯ ಸತ್ಯಕಃ ।**
**ವಿಪ್ರಃ ಸ್ವತನುಜಾಂ ಜಂಬೂಸಮುತ್ಪನ್ನಾಂ ಸಮಾರ್ಪಯತ್ ॥ ೩೨೭ ॥**

ಅಲ್ಲಿ ಸತ್ಯಕನೆಂಬ ವಿಪ್ರನು ಶಾಸ್ತ್ರಾಧ್ಯಯನಸಂಪನ್ನನಾದ ಆ ಕಪಿಲನನ್ನು ನೋಡಿ ಯೋಗ್ಯನೆಂದು ತಿಳಿದು ಜಂಬೂವೆಂಬ ಪತ್ನಿಯಲ್ಲಿ ಜನಿಸಿದ ತನ್ನ ಮಗಳನ್ನು ಅವನಿಗೆ ಕೊಟ್ಟನು.

**ಸ ರಾಜಪೂಜಿತಸ್ತತ್ರ ಸರ್ವಶಾಸ್ತ್ರಾರ್ಥಸಾರವಿತ್ ।**
**ವ್ಯಾಖ್ಯಾಮಖಂಡಿತಾಂ ಕುರ್ವನ್ನನಯತ್ಕತಿಚಿತ್ಸಮಾಃ ॥ ೩೨೮ ॥**

ಸಮಸ್ತಶಾಸ್ತ್ರಾರ್ಥಸಾರವನ್ನು ತಿಳಿದ ಆ ಕಪಿಲನು ಅಲ್ಲಿ ರಾಜಪೂಜಿತನಾಗಿ ಅಖಂಡಿತವಾದ ವ್ಯಾಖ್ಯಾನವನ್ನು ಮಾಡುತ್ತ ಕೆಲವು ವರ್ಷಗಳನ್ನು ಕಳೆದನು.

**ತಸ್ಯ ವಿಪ್ರಕುಲಾಯೋಗ್ಯದುಶ್ಚರಿತ್ರವಿಮರ್ಶನಾತ್ ।**
**ತದ್ಭಾರ್ಯಾ ಸತ್ಯಭಾಮಾಯಂ ಕಸ್ಯೇತ್ಯಾಯತಸಂಶಯಾ ॥ ೩೨೯ ॥**

ಆ ಕಪಿಲನ ವಿಪ್ರವಂಶಕ್ಕೆ ಅಯೋಗ್ಯವಾದ ದುರಾಚಾರದ ವಿಮರ್ಶೆಯಿಂದ ಆತನ ಪತ್ನಿಯಾದ ಸತ್ಯಭಾಮೆಯು "ಇವನು ಯಾವನ ಮಗನು ?" ಎಂದು ದೀರ್ಘಸಂದೇಹವುಳ್ಳವಳಾದಳು.

**ವಾರ್ತಾಪರಂಪರಾಜ್ಞಾತಸ್ವಕೀಯಪ್ರಾಭವಂ ದ್ವಿಜಮ್ ।**
**ಸ್ವದಾರಿದ್ರ್ಯಾಪನೋದಾರ್ಥಂ ಸ್ವಾಂತಿಕಂ ಸಮುಪಾಗತಮ್ ॥ ೩೩೦ ॥**

**ದೂರಾತ್ಕಪಿಲಕೋ ದೃಷ್ಟ್ವಾ ದುಷ್ಟಾತ್ಮಾ ಧರಣೀಜಟಮ್ ।**
**ಕುಪಿತೋಽಪಿ ಮನಸ್ಯಸ್ಮೈ ಪ್ರತ್ಯುತ್ಥಾಯಾಭಿವಾದ್ಯ ಚ ॥ ೩೩೧ ॥**

**ತಮುಚ್ಚಾಸನಮಾರೋಪ್ಯ ಮಾತುರ್ಭ್ರಾತ್ರೋಶ್ಚ ಕಿಂ ಮಮ ।**
**ಕುಶಲಂ ಬ್ರೂತ ಮದ್ಭಾಗ್ಯಾದ್ಯೂಯಮತ್ರೈವಮಾಗತಾಃ ॥ ೩೩೨ ॥**

**ಇತಿ ಪೃಷ್ಟ್ವಾ ಪ್ರತೋಷ್ಯೈನಂ ಸ್ನಾನವಸ್ತ್ರಾಶನಾದಿಭಿಃ ।**
**ಸ್ವಜಾತ್ಯುದ್ಭೇದಭೀತತ್ವಾತ್ಸಮ್ಯಕ್ ತಸ್ಯ ಮನೋಗ್ರಹೀತ್ ॥ ೩೩೩ ॥**

ಪರಂಪರೆಯಾಗಿ ಬಂದ ಸಮಾಚಾರದಿಂದ ಕಪಿಲನ ಪ್ರಭುತ್ವವನ್ನು ತಿಳಿದು ತನ್ನ ಬಡತನವನ್ನು ಹೋಗಲಾಡಿಸುವುದಕ್ಕೋಸ್ಕರ ಅವನ ಸಮೀಪಕ್ಕೆ ಬಂದ ಆ ಧರಣೀಜಟಬ್ರಾಹ್ಮಣನನ್ನು ದುಷ್ಟಾತ್ಮನಾದ ಕಪಿಲನು ದೂರದಿಂದ ನೋಡಿ ಮನಸ್ಸಿನಲ್ಲಿ ಕೋಪವುಳ್ಳವನಾದರೂ ಎದ್ದುನಿಂತು ವಂದಿಸಿ ಉನ್ನತಾಸನದಲ್ಲಿ ಅವನನ್ನು ಕುಳ್ಳಿರಿಸಿ "ನನ್ನ ತಾಯಿಯೂ ಸಹೋದರರುಗಳೂ ಕ್ಷೇಮವೇ ?ಹೇಳಿ. ನನ್ನ ಭಾಗ್ಯದಿಂದ ನೀವು ಹೀಗೆ ಇಲ್ಲಿಗೆ ಬಂದಿರಿ'' ಎಂದು ಪ್ರಶ್ನೆಮಾಡಿ ಸ್ನಾನ ವಸ್ತ್ರ ಭೋಜನಾದಿಗಳಿಂದ ಈ ಬ್ರಾಹ್ಮಣನನ್ನು ಸಂತೋಷಪಡಿಸಿ ತನ್ನ ಜಾತಿಯ ವಿಷಯ ವನ್ನು ಹೊರಗೆಡಹುವನೆಂಬ ಭಯದಿಂದ ಅವನ ಮನಸ್ಸನ್ನು ಚೆನ್ನಾಗಿ ಒಲಿಸಿದನು.

**ಸೋಽಪಿ ವಿಪ್ರೋಽಪಿ ದಾರಿದ್ರ್ಯಾಭಿದ್ರುತಃ ಪುತ್ರಮೇವ ತಮ್ ।**
**ಪ್ರತಿಪದ್ಯಾಚರತ್ಪಾಪಂ ನಾರ್ಥಿನಾಂ ಸ್ಥಿತಿಪಾಲನಮ್ ॥ ೩೩೪ ॥**

ಆ ಧರಣೀಜಟನೂ ಬ್ರಾಹ್ಮಣನಾದರೂ ಬಡತನದಿಂದ ಕುಗ್ಗಿದವನಾಗಿ ಅವನನ್ನು ಮಗನನ್ನಾಗಿಯೇ ಒಪ್ಪಿ ಪಾಪವನ್ನಾಚರಿಸಿದನು. ಯಾಚಕರಿಗೆ ತಮ್ಮ ಸ್ಥಿತಿಯ ಪಾಲನವಿರುವುದಿಲ್ಲ. ಯಾಚಕರು ತಮ್ಮ ಗೌರವವನ್ನೂ ಕುಲ ಮರ್ಯಾದೆಯನ್ನೂ ಕಾಪಾಡುವುದಿಲ್ಲವೆಂದು ಭಾವವು.

**ದಿನಾನಿ ಕಾನಿಚಿದ್ಯಾತಾನ್ಯೇವಂ ಸಂವೃತವೃತ್ತಯೋಃ ।**
**ತಯೋಃ ಕದಾಚಿತ್ತಂ ವಿಪ್ರಂ ಸತ್ಯಭಾಮಾ ಧನಾರ್ಚಿತಮ್ ॥ ೩೩೫ ॥**

**ಅಪ್ರಾಕ್ಷೀತ್ತತ್ಪರೋಕ್ಷೇಯಂ ಕಿಂ ಸತ್ಯಂ ಬ್ರೂತ ವಃ ಸುತಃ ।**
**ಏತತ್ಕುತ್ಸಿತಚಾರಿತ್ರಾನ್ನ ಪ್ರತ್ಯೇಮೀತಿ ಪುತ್ರತಾಮ್ ॥ ೩೩೬ ॥**

ಹೀಗೆ ಸಮಾಚಾರವನ್ನು ಬಚ್ಚಿಟ್ಟ ಆ ದಂಪತಿಗಳಿಗೆ ಕೆಲವು ದಿನಗಳು ಕಳೆದುವು. ಒಂದಾನೊಂದು ಕಾಲದಲ್ಲಿ ಆ ಕಪಿಲನಿಲ್ಲದಿರುವಾಗ ಸತ್ಯಭಾಮೆಯು ಆ ಧರಣೀಜಟಬ್ರಾಹ್ಮಣನನ್ನು ದ್ರವ್ಯದಿಂದ ಸನ್ಮಾನಿಸಿ "ಸತ್ಯವನ್ನು ಹೇಳಿ. ಇವನೇನು ನಿಮ್ಮ ಮಗನೇ ? ಇವನ ದುರಾಚಾರದಿಂದ ನಿಮ್ಮ ಮಗನೆಂಬುದನ್ನು ನಾನು ನಂಬುವುದಿಲ್ಲ'' ಎಂದು ಪ್ರಶ್ನೆಮಾಡಿದಳು.

**ಸ ಸಂಪೂರ್ಣವಸುರ್ಗೇಹಂ ಯಿಯಾಸುಶ್ಚೇತಸಾ ದ್ವಿಷನ್ ।**
**ಗದಿತ್ವಾಗಾದ್ಯಥಾವೃತ್ತಂ ದುಷ್ಟಾನಾಂ ನಾಸ್ತಿ ದುಷ್ಕರಮ್ ॥ ೩೩೭ ॥**

ಹೆಚ್ಚಾದ ದ್ರವ್ಯವುಳ್ಳವನೂ ಮನಸ್ಸಿನಿಂದ ದ್ವೇಷಿಸುವವನೂ ಆದ ಆ ಬ್ರಾಹ್ಮಣನು ತನ್ನ ಮನೆಗೆ ಹೋಗಬೇಕೆಂಬ ಇಚ್ಛೆಯುಳ್ಳವನಾಗಿ ಯಥಾರ್ಥ ವಿಷಯವನ್ನು ಹೇಳಿ ಹೊರಟುಹೋದನು. ದುಷ್ಟರಿಗೆ ದುಷ್ಕರವಾದುದಿಲ್ಲ.

**ಅಥ ತನ್ನಗರಾಧೀಶಃ ಶ್ರೀಷೇಣಃ ಸಿಂಹನಂದಿತಾ- ।**
**ನಿಂದಿತಾ ಚ ಪ್ರಿಯೇ ತಸ್ಯ ತಯೋರಿಂದ್ರೇಂದುಸನ್ನಿಭೌ ॥ ೩೩೮ ॥**

**ಇಂದ್ರೋಪೇಂದ್ರಾದಿಸೇನಾಂತೌ ತನೂಜೌ ಮನುಜೋತ್ತಮೌ ।**
**ತಾಭ್ಯಾಮತಿವಿನೀತಾಭ್ಯಾಂ ಪಿತರಃ ಪ್ರೀತಿಮಾಗಮನ್ ॥ ೩೩೯ ॥**

ಅನಂತರದಲ್ಲಿ ಶ್ರೀಷೇಣನೆಂಬವನು ಆ ರತ್ನಪುರಾಧಿಪತಿಯಾಗಿದ್ದನು. ಅವನಿಗೆ ಸಿಂಹನಂದಿತೆ ಅನಿಂದಿತೆಯೆಂಬೀರ್ವರು ಪತ್ನಿಯರಿದ್ದರು. ಅವರಿಗೆ ಯಥಾಕ್ರಮ ವಾಗಿ ಇಂದ್ರನಿಗೂ ಚಂದ್ರನಿಗೂ ಸಮಾನರೂ ಮನುಷ್ಯರಲ್ಲಿ ಶ್ರೇಷ್ಠರೂ ಆದ ಇಂದ್ರಸೇನ ಉಪೇಂದ್ರಸೇನರೆಂಬೀರ್ವರು ಪುತ್ರರಿದ್ದರು. ಬಹುವಿನೀತರಾದ ಆ ಪುತ್ರ ರಿಂದ ತಂದೆತಾಯಿಗಳು ಪ್ರೀತಿಯನ್ನು ಹೊಂದಿದರು.

**ಪಾಪಸ್ವಪತಿನಾ ಸತ್ಯಭಾಮಾ ಸ್ವಾನ್ವಯಮಾನಿನೀ ।**
**ಸಹವಾಸಮನಿಚ್ಛಂತೀ ಭೂಪತಿಂ ಶರಣಂ ಗತಾ ॥ ೩೪೦ ॥**

ತನ್ನ ವಂಶದ ಅಭಿಮಾನವುಳ್ಳವಳಾದ ಸತ್ಯಭಾಮೆಯು ಪಾಪಿಯಾದ ತನ್ನ ಪತಿಯೊಡನೆ ಸಹವಾಸವನ್ನು ಇಚ್ಛಿಸದಿರುವವಳಾಗಿ ದೊರೆಯನ್ನು ಶರಣ ಹೊಂದಿದಳು.

**ತತಃ ಕಾಪಿಲಕಂ ಶೋಕಾನ್ಮಸ್ತಕನ್ಯಸ್ತಹಸ್ತಕಮ್ ।**
**ಸ್ವೋಪಾಂತೋಪೇತಮನ್ಯಾಯಘೋಷಣಂ ಕೃತಕದ್ವಿಜಮ್ ॥ ೩೪೧ ॥**

**ವೀಕ್ಷ್ಯ ವಿಜ್ಞಾತವೃತ್ತಾಂತಃ ಸ ಶ್ರೀಷೇಣಮಹೀಪತಿಃ ।**
**ಪಾಪಿಷ್ಠಾನಾಂ ವಿಜಾತೀನಾಂ ನಾಕಾರ್ಯಂ ನಾಮ ಕಿಂಚನ ॥ ೩೪೨ ॥**

**ಏತದರ್ಥಂ ಕುಲೀನಾನಾಂ ನೃಪಾಃ ಕುರ್ವಂತಿ ಸಂಗ್ರಹಮ್ ।**
**ಆದಿಮಧ್ಯಾವಸಾನೇಷು ನ ತೇ ಯಾಸ್ಯಂತಿ ವಿಕ್ರಿಯಾಮ್ ॥ ೩೪೩ ॥**

**ಸ್ವಯಂ ರಕ್ತೋ ವಿರಕ್ತಾಯಾಂ ಯೋನುರಾಗಂ ಪ್ರವಾಂಛತಿ ।**
**ಹರಿನೀಲಮಣೌ ತೇಜಶ್ಚಾಸೌ ಕಾಂಕ್ಷತಿ ಲೋಹಿತಮ್ ॥ ೩೪೪ ॥**

**ಇತ್ಯಾದಿ ಚಿಂತಯನ್ ಸದ್ಯಸ್ತಂ ದುರಾಚಾರಮಾತ್ಮನಃ ।**
**ದೇಶಾನ್ನಿರಾಕರೋದ್ಧರ್ಮ್ಯಾ ನ ಸಹಂತೇ ಸ್ಥಿತಿಕ್ಷತಿಮ್ ॥ ೩೪೫ ॥**

ಬಳಿಕ ಶೋಕದಿಂದ ತನ್ನ ತಲೆಯ ಮೇಲೆ ಕೈಯಿಟ್ಟವನೂ ತನ್ನ ಸಮೀಪವನ್ನು ಹೊಂದಿರುವವನೂ ಅನ್ಯಾಯವಾದ ಘೋಷಣೆಯುಳ್ಳವನೂ ಕೃತಕಬ್ರಾಹ್ಮಣನೂ ಆದ ಕಪಿಲನನ್ನು ನೋಡಿ ಸಮಾಚಾರವನ್ನು ತಿಳಿದ ಆ ಶ್ರೀಷೇಣಮಹಾರಾಜನು "ವಿಜಾತಿಯವರಾದ ಪಾಪಿಷ್ಠರಿಗೆ ಅಕಾರ್ಯವೆಂಬುದಾವುದೂ ಇಲ್ಲ. ಇದಕ್ಕೋ ಸ್ಕರ ರಾಜರು ಕುಲೀನರ ಸಂಗ್ರಹವನ್ನು ಮಾಡುತ್ತಾರೆ. ಅವರು ಆದಿಯಲ್ಲಿಯೂ

ಮಧ್ಯದಲ್ಲಿಯೂ ಅಂತದಲ್ಲಿಯೂ ವಿಕಾರವನ್ನು ಹೊಂದುವುದಿಲ್ಲ. ವಿರಕ್ತಳಾಗಿರುವವಳಲ್ಲಿ ಅನುರಕ್ತನಾಗಿರುವ ಯಾವನು ತಾನು ಅನುರಾಗವನ್ನಿಚ್ಛಿಸುತ್ತಾನೋ ಇವನು ಇಂದ್ರನೀಲಮಣಿಯಲ್ಲಿ ರಕ್ತಕಾಂತಿಯನ್ನಿಚ್ಛಿಸುತ್ತಾನೆ'' ಇತ್ಯಾದಿ ವಿಷಯಗಳನ್ನು ಚಿಂತಿಸುವವನಾಗಿ ಆ ದುರಾಚಾರಿಯಾದ ಕಪಿಲನನ್ನು ತತ್ಕ್ಷಣದಲ್ಲಿ ತನ್ನ ದೇಶದಿಂದ ತಳ್ಳಿದನು. ಧರ್ಮವನ್ನು ಬಿಡದಿರುವ ಧರ್ಮಾತ್ಮರು ಮರ್ಯಾದೆಯ ಹಾನಿಯನ್ನು ಸಹಿಸುವುದಿಲ್ಲ.

**ಕದಾಚಿತ್ಸ ಮಹೀಪಾಲಶ್ಚಾರಣದ್ವಂದ್ವಮಾಗತಮ್ ।**
**ಪ್ರತೀಕ್ಷ್ಯಾದಿತ್ಯಗತ್ಯಾಖ್ಯಮರಿಂಜಯಮಪಿ ಸ್ವಯಮ್ ॥ ೩೪೬ ॥**

**ದತ್ವಾನ್ನದಾನಮೇತಾಭ್ಯಾಮವಾಪ್ಯಾಶ್ಚರ್ಯಪಂಚಕಮ್ ।**
**ಉದಕ್ಕುರ್ವಾಯುರಾಬಧ್ನಾದ್ದಶಾಂಗತರುಭೋಗದಮ್ ॥ ೩೪೭ ॥**

ಒಂದಾನೊಂದು ಕಾಲದಲ್ಲಿ ಆ ಶ್ರೀಷೇಣರಾಜನು ತನ್ನಲ್ಲಿಗೆ ಬಂದ ಆದಿತ್ಯಗತಿ ಅರಿಂಜಯರೆಂಬೀರ್ವರು ಚಾರಣಮುನಿಗಳನ್ನು ಇದಿರ್ಗೊಂಡು ಇವರುಗಳಿಗೆ ತಾನು ಅನ್ನದಾನವನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಪಡೆದು ದಶಾಂಗಕಲ್ಪವೃಕ್ಷಗಳ ಭೋಗವನ್ನು ಕೊಡುವ ಉತ್ತರಕುರು–ಭೋಗಭೂಮಿಯ ಆಯುಷ್ಯವನ್ನು ಬಂಧಿಸಿಕೊಂಡನು.

**ದೇವ್ಯೌ ದಾನಾನುಮೋದೇನ ಸತ್ಯಭಾಮಾ ಚ ಸತ್ಕ್ರಿಯಾ ।**
**ತದೇವಾಯುರವಾಪುಸ್ತಾಃ ಕಿಂ ನ ಸ್ಯಾತ್ಸಾಧುಸಂಗಮಾತ್ ॥ ೩೪೮ ॥**

ಶ್ರೀಷೇಣಮಹಾರಾಜನ ದೇವಿಯರೂ ಸತ್ಕ್ರಿಯೆಯುಳ್ಳ ಸತ್ಯಭಾಮೆಯೂ ಆ ಮುನಿದಾನದ ಅನುಮೋದದಿಂದ ಅವರು ಅದೇ ಉತ್ತರಕುರುಭೋಗಭೂಮಿಯ ಆಯುಷ್ಯವನ್ನು ಹೊಂದಿದರು. ಸಾಧುಗಳ ಸಹವಾಸದಿಂದ ಯಾವುದುತಾನೆ ಉಂಟಾಗುವುದಿಲ್ಲ ?

**ಅಥ ಕೌಶಾಂಬ್ಯಧೀಶಸ್ಯ ಮಹಾಬಲಮಹೀಪತೇಃ ।**
**ಶ್ರೀಮತ್ಯಾಶ್ಚ ಸುತಾ ನಾಮ್ನಾ ಶ್ರೀಕಾಂತಾ ಕಾಂತತಾವಧಿಃ ॥ ೩೪೯ ॥**

**ರಾಜಾ ತಾಮಿಂದ್ರಸೇನಸ್ಯ ವಿವಾಹವಿಧಿನಾದದಾತ್ ।**
**ತಯಾ ಸಹಾಗತಾನಂತಮತಿಃ ಸಾಮಾನ್ಯಕಾಮಿನೀ ॥ ೩೫೦ ॥**

**ಏತಯೋಪೇಂದ್ರಸೇನಸ್ಯ ಸಾಂಗತ್ಯಂ ಸ್ನೇಹನಿರ್ಭರಮ್ ।**
**ಅಭೂದಭೂಚ್ಚ ತದ್ಧೇತೋಸ್ತಯೋರುದ್ಯಾನವರ್ತಿನೋಃ ॥ ೩೫೧ ॥**

**ಯುದ್ಧೋದ್ಯಮಸ್ತದಾಕರ್ಣ್ಯ ತೌ ನಿವಾರಯಿತುಂ ನೃಪಃ ।**
**ಗತ್ವಾ ಕಾಮಾತುರೌ ಕ್ರುದ್ಧಾವಸಮರ್ಥಃ ಪ್ರಿಯಾತ್ಮಜಃ ॥ ೩೫೨ ॥**

**ಸೋಢುಂ ತನೂಜಯೋರ್ದುಃಖಮಾರ್ದ್ರಾಶಯತಯಾ ಸ್ವಯಮ್ ।**
**ಅಶಕ್ನುವನ್ ಸಮಾಘ್ರಾಯ ವಿಷಪುಷ್ಪಂ ಮೃತಿಂ ಯಯೌ ॥ ೩೫೩ ॥**

ಬಳಿಕ ಕೌಶಾಂಬಿಯ ದೊರೆಯಾದ ಮಹಾಬಲರಾಜನಿಗೂ ಆತನ ಪತ್ನಿಯಾದ ಶ್ರೀಮತಿಗೂ ಸೌಂದರ್ಯದ ಎಲ್ಲೆಯಾದ ಶ್ರೀಕಾಂತೆಯೆಂಬವಳು ಪುತ್ರಿಯಾದಳು. ಮಹಾಬಲರಾಜನು ಆಕೆಯನ್ನು ವಿವಾಹವಿಧಿಯಿಂದ ಇಂದ್ರಸೇನನಿಗೆ ಕೊಟ್ಟನು. ಆ ಶ್ರೀಕಾಂತೆಯೊಡನೆ ಸಾಮಾನ್ಯಸ್ತ್ರೀಯಾದ ಅನಂತಮತಿಯೆಂಬವಳು ಬಂದಳು. ಈಕೆಯೊಡನೆ ಉಪೇಂದ್ರಸೇನನಿಗೆ ಸ್ನೇಹಪೂರ್ಣವಾದ ಸಹವಾಸವುಂಟಾಯಿತು. ಆ ಕಾರಣದಿಂದ ಉದ್ಯಾನದಲ್ಲಿರುವ ಆ ಇಂದ್ರಸೇನ ಉಪೇಂದ್ರಸೇನರಲ್ಲಿ ಯುದ್ಧದ ಪ್ರಯತ್ನವುಂಟಾಯಿತು. ಆ ವಿಷಯವನ್ನು ಕೇಳಿ ಪ್ರಿಯಪುತ್ರರುಳ್ಳವನಾದ ಶ್ರೀಷೇಣ ಮಹಾರಾಜನು ಹೋಗಿ ಕಾಮಾತುರರೂ ಕ್ರುದ್ಧರೂ ಆದ ಆ ಪುತ್ರರನ್ನು ತಡೆಯುವುದಕ್ಕೆ ಅಸಮರ್ಥನಾಗಿ ತಾನು ಶೋಕಾರ್ದ್ರಹೃದಯವುಳ್ಳವನಾದುದರಿಂದ ಪುತ್ರರ ದುಃಖವನ್ನು ಸಹಿಸುವುದಕ್ಕೆ ಅಸಮರ್ಥನಾಗಿ ವಿಷಪುಷ್ಪವನ್ನು ಮೂಸಿ ಮರಣವನ್ನು ಹೊಂದಿದನು.

**ತದೇವ ಪುಷ್ಪಮಾಘ್ರಾಯ ಸಮೀಯುರ್ವಿಗತಾಸುತಾಮ್ ।**
**ತದ್ದೇವ್ಯೌ ಸತ್ಯಭಾಮಾ ಚ ವಿಚಿತ್ರಾ ವಿಧಿಚೋದನಾ ॥ ೩೫೪ ॥**

ಅದೇ ಹೂವನ್ನು ಮೂಸಿ ಅವನ ಪತ್ನಿಯರೂ ಸತ್ಯಭಾಮೆಯೂ ಮಡಿದರು. ದೈವಪ್ರೇರಣೆಯು ವಿಚಿತ್ರವಾಗಿದೆ.

**ಧಾತಕೀಖಂಡಪೂರ್ವಾರ್ಧಕುರುಷೂತ್ತರನಾಮಸು ।**
**ದಂಪತೀ ನೃಪತಿಃ ಸಿಂಹನಂದಿತಾ ಚ ಬಭೂವತುಃ ॥ ೩೫೫ ॥**

ಆ ರಾಜನೂ ಸಿಂಹನಂದಿತೆಯೂ ಧಾತಕೀಖಂಡದ ಪೂರ್ವಾರ್ಧದಲ್ಲಿರುವ ಉತ್ತರಕುರುಗಳಲ್ಲಿ ದಂಪತಿಗಳಾಗಿ ಹುಟ್ಟಿದರು.

**ಅಭೂದನಿಂದಿತಾರ್ಯೋಽಸ್ಯ ಸತ್ಯಭಾಮಾ ಚ ವಲ್ಲಭಾ ।**
**ತಸ್ಥುಃ ಸರ್ವೇಽಪಿ ತೇ ತತ್ರ ಭೋಗಭೂಭೋಗಭೋಗಿನಃ ॥ ೩೫೬ ॥**

ಅನಿಂದಿತೆಯೆಂಬವಳು ಆ ಉತ್ತರಕುರುಕ್ಷೇತ್ರದಲ್ಲಿ ಆರ್ಯನಾಗಿ ಜನಿಸಿದಳು. ಸತ್ಯಭಾಮೆಯು ಈ ಆರ್ಯನ ಪತ್ನಿಯಾಗಿ ಜನಿಸಿದಳು. ಅವರೆಲ್ಲರೂ ಅಲ್ಲಿ ಭೋಗಭೂಮಿಯ ಭೋಗವನ್ನನುಭವಿಸುವವರಾಗಿದ್ದರು.

**ಅಥ ಕಶ್ಚಿತ್ಖಗೋ ಮಧ್ಯಂ ಪ್ರವಿಶ್ಯ ನೃಪಪುತ್ರಯೋಃ ।**
**ವೃಥಾ ಕಿಮಿತಿ ಯುದ್ಧ್ಯೇಥೇ ಅನುಜಾ ಯುವಯೋರಿಯಮ್ ॥**

**ಇತ್ಯಾಹ ತದ್ವಚಃ ಶ್ರುತ್ವಾ ಕುಮಾರಾಭ್ಯಾಂ ಸವಿಸ್ಮಯಮ್ ।**
**ಕಥಂ ತದಿತಿ ಸಂಪೃಷ್ಟಃ ಪ್ರತ್ಯಾಹ ಗಗನೇಚರಃ ॥ ೩೫೮ ॥**

ಇತ್ತ ಆಮೇಲೆ ಒಬ್ಬನೊಬ್ಬ ವಿದ್ಯಾಧರನು ಆ ರಾಜಪುತ್ರರ ಮಧ್ಯವನ್ನು ಪ್ರವೇಶಿಸಿ ''ವ್ಯರ್ಥವಾಗಿ ಏತಕ್ಕೋಸ್ಕರ ಯುದ್ಧಮಾಡುತ್ತೀರಿ ? ಈಕೆಯು ನಿಮ್ಮ ತಂಗಿ'' ಎಂದು ಹೇಳಿದನು. ಆ ಮಾತನ್ನು ಕೇಳಿ ರಾಜಕುಮಾರರು ಆಶ್ಚರ್ಯವುಳ್ಳವರಾಗಿ ''ಅದು ಹೇಗೆ ?'' ಎಂದು ಆ ಖೇಚರನನ್ನು ಪ್ರಶ್ನೆಮಾಡಿದರು. ಖೇಚರನು ಮುಂದೆ ಹೇಳುವಂತೆ ಉತ್ತರವನ್ನಿತ್ತನು.

**ಧಾತಕೀಖಂಡಪ್ರಾಗ್ಭಾಗಮಂದರಪ್ರಾಚ್ಯಪುಷ್ಕಲಾ- ।**
**ವತೀಖಗಾದ್ರ್ಯವಾಕ್ಶ್ರೇಣೀಗತಾದಿತ್ಯಾಭಪೂರ್ಭುಜಃ ॥ ೩೫೯ ॥**

**ತನೂಜೋಽಮಿತಸೇನಾಯಾಂ ಸುಕುಂಡಲಿಖಗೇಶಿನಃ ।**
**ಮಣಿಕುಂಡಲಿನಾಮಾಹಂ ಕದಾಚಿತ್ಪುಂಡರೀಕಿಣೀಮ್ ॥ ೩೬೦ ॥**

**ಗತ್ವಾಮಿತಪ್ರಭಾರ್ಹದ್ಭ್ಯಃ ಶ್ರುತ್ವಾ ಧರ್ಮಂ ಸನಾತನಮ್ ।**
**ಮತ್ಪೂರ್ವಭವಸಂಬಂಧಮಪ್ರಾಕ್ಷಮವದಂಶ್ಚ ತೇ ॥ ೩೬೧ ॥**

**ತೃತೀಯೇ ಪುಷ್ಕರಾಖ್ಯಾತದ್ವೀಪೇಪರಸುರಾಚಲಾತ್ ।**
**ಪ್ರತೀಚ್ಯಾಂ ವೀತಶೋಕಾಖ್ಯಂ ಸರಿದ್ವಿಷಯಮಧ್ಯಗಮ್ ॥ ೩೬೨ ॥**

**ಪುರಂ ಚಕ್ರಧ್ವಜಸ್ತಸ್ಯ ಪತಿಃ ಕನಕಮಾಲಿಕಾ ।**
**ದೇವೀ ಕನಕಪದ್ಮಾದಿಲತೇ ಜಾತೇ ತಯೋಃ ಸುತೇ ॥ ೩೬೩ ॥**

**ವಿದ್ಯುನ್ಮತ್ಯಾಶ್ಚ ತಸ್ಯೈವ ದೇವ್ಯಾಃ ಪದ್ಮಾವತೀ ಸುತಾ ।**
**ಯಾತಿ ಕಾಲೇ ಸುಖಂ ತೇಷಾಂ ಕದಾಚಿತ್ಕಾಲಲಬ್ಧಿತಃ ॥ ೩೬೪ ॥**

**ಪ್ರಪೀತಾಮಿತಸೇನಾಖ್ಯಗಣಿನೀವಾಗ್ರಸಾಯನಾ ।**
**ಸುತೇ ಕನಕಮಾಲಾ ಚ ಕಲ್ಪೇಜನಿಷತಾದಿಮೇ ॥ ೩೬೫ ॥**

**ಸುರಾಃ ಪದ್ಮಾವತೀ ವೀಕ್ಷ್ಯ ಗಣಿಕಾಂ ಕಾಮುಕದ್ವಯ- ।**
**ಪ್ರಸಾಧ್ಯಮಾನಾಂ ತಚ್ಚಿತ್ತಾಭೂತ್ತತ್ರ ಸುರಲಂಜಿಕಾ ॥ ೩೬೬ ॥**

**ತತಃ ಕನಕಮಾಲೈತ್ಯ ತ್ವಮಭೂರ್ಮಣಿಕುಂಡಲೀ ।**
**ಸುತಾದ್ವಯಂ ಚ ತದ್ರತ್ನಪುರೇಭೂತಾಂ ನೃಪಾತ್ಮಜೌ ॥ ೩೬೭ ॥**

**ಸ್ವಶ್ಚ್ಯುತ್ವಾನಂತಮತ್ಯಾಖ್ಯಾ ಸುರವೇಶ್ಯಾಪ್ಯಜಾಯತ ।**
**ತದ್ಧೇತೋರ್ವರ್ತತೇ ಯುದ್ಧಮದ್ಯ ತದ್ರಾಜಪುತ್ರಯೋಃ ॥ ೩೬೮ ॥**

**ಇತಿ ಜೈನೀಮಿಮಾಂ ವಾಣೀಮಾಕರ್ಣ್ಯಾನ್ಯಾಯಕಾರಿಣೌ ।**
**ಯುವಾಮಜ್ಞಾತಧರ್ಮಾಣೌ ನಿಷೇದ್ಧುಮಹಮಾಗತಃ ॥ ೩೬೯ ॥**

''ಧಾತಕೀಖಂಡದ ಪೂರ್ವಭಾಗದ ಮೇರುವಿನ ಪೂರ್ವವಿದೇಹದಲ್ಲಿರುವ ಪುಷ್ಕಲಾವತಿಯೆಂಬ ದೇಶದ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯನ್ನು ಹೊಂದಿರುವ ಆದಿತ್ಯಾಭಪುರವನ್ನಾಳುವ ಸುಕುಂಡಲಿಯೆಂಬ ರಾಜನ ಪತ್ನಿಯಾದ ಅಮಿತಸೇನೆಯಲ್ಲಿ ನಾನು ಮಣಿಕುಂಡಲಿಯೆಂಬ ಪುತ್ರನಾಗಿದ್ದೇನೆ. ಒಂದಾನೊಂದು ಕಾಲದಲ್ಲಿ ನಾನು ಪುಂಡರೀಕಿಣೀನಗರಕ್ಕೆ ಹೋಗಿ ಅಮಿತಪ್ರಭರೆಂಬ ಅರ್ಹತ್ಪರಮೇಶ್ವರರಿಂದ ಸನಾತನವಾದ ಧರ್ಮವನ್ನು ಕೇಳಿ ನನ್ನ ಪೂರ್ವಭವ ಸಂಬಂಧವನ್ನು ಪ್ರಶ್ನೆಮಾಡಿದೆನು. ಅವರು ಈ ರೀತಿಯಾಗಿ ಹೇಳಿದರು:– ಪುಷ್ಕರವೆಂದು ಪ್ರಸಿದ್ಧವಾಗಿರುವ ಮೂರನೆಯ ದ್ವೀಪದಲ್ಲಿ ಪಶ್ಚಿಮಮೇರುವಿನಿಂದ ಪಶ್ಚಿಮದಿಕ್ಕಿನಲ್ಲಿ ವೀತಶೋಕವೆಂಬ ನಗರವು ದೇಶದ ಮಧ್ಯಭಾಗವನ್ನು ಹೊಂದಿದೆ. ಚಕ್ರಧ್ವಜನೆಂಬವನು ಅದರ ದೊರೆ. ಕನಕಮಾಲೆಯೆಂಬವಳು ಆತನ ಪತ್ನಿ. ಅವರಲ್ಲಿ ಕನಕಲತೆ ಪದ್ಮಲತೆಯೆಂಬೀರ್ವರು ಪುತ್ರಿಯರು ಜನಿಸಿದರು. ಅದೇ ರಾಜನ ವಿದ್ಯುನ್ಮತಿಯೆಂಬ ಪತ್ನಿಗೆ ಪದ್ಮಾವತಿಯೆಂಬ ಪುತ್ರಿಯು ಜನಿಸಿದಳು. ಅವರ ಕಾಲವು ಸುಖವಾಗಿ ಕಳೆಯುತ್ತಿರಲು ಒಂದಾನೊಂದು ಕಾಲದಲ್ಲಿ ಕಾಲಲಬ್ಧಿಯಿಂದ ಅಮಿತಸೇನೆಯೆಂಬ ಆರ್ಯಿಕೆಯ ವಚನವೆಂಬ ರಸಾಯನವನ್ನು ಪಾನಮಾಡಿದ ಕನಕಮಾಲೆಯೂ ಆಕೆಯ ಪುತ್ರಿಯರೂ ಆಯುಷ್ಯಾವಸಾನದಲ್ಲಿ ಸತ್ತು ಮೊದಲನೆಯ ಕಲ್ಪ–ಸ್ವರ್ಗದಲ್ಲಿ ದೇವರ್ಕಳಾಗಿ ಜನಿಸಿದರು. ಪದ್ಮಾವತಿಯು ಇಬ್ಬರು ಕಾಮುಕರಿಂದ ಸಾಧಿಸಲ್ಪಡುತ್ತಿರುವ ವೇಶ್ಯೆಯನ್ನು ನೋಡಿ ತದೇಕಚಿತ್ತಳಾದಳು. ಆಕೆಯು ಆಯುಷ್ಯಾವಸಾನದಲ್ಲಿ ಸತ್ತು ಆ ಸೌಧರ್ಮಸ್ವರ್ಗದಲ್ಲಿ ಅಪ್ಸರಸ್ತ್ರೀಯಾಗಿ ಜನಿಸಿದಳು. ಕನಕಮಾಲೆಯ ಆತ್ಮವು ಆ ಸ್ವರ್ಗದಿಂದ ಚ್ಯುತವಾಗಿ ಬಂದು ನೀನು ಮಣಿಕುಂಡಲಿಯಾದೆ. ಆ ಈರ್ವರು ಪುತ್ರಿಯರ ಆತ್ಮಗಳೂ ರತ್ನಪುರದಲ್ಲಿ ರಾಜಪುತ್ರರಾಗಿ ಜನಿಸಿದರು. ಪದ್ಮಾವತಿಯು ದೇವವೇಶ್ಯೆಯಾಗಿದ್ದು ಸ್ವರ್ಗದಿಂದ ಚ್ಯುತಳಾಗಿ ಅನಂತಮತಿಯಾಗಿ ಜನಿಸಿದಳು. ಆಕೆಯ ನಿಮಿತ್ತದಿಂದ ಆ ರಾಜಪುತ್ರರಿಗೆ ಈಗ ಯುದ್ಧವುಂಟಾಗಿದೆ.' ಈ ಪ್ರಕಾರವಾದ ಈ ಜಿನೇಶ್ವರ ಸಂಬಂಧವಾದ ವಚನವನ್ನು ಕೇಳಿ ನಾನು(ಮಣಿಕುಂಡಲಿಯು) ಅನ್ಯಾಯವನ್ನು ಮಾಡುತ್ತಿರುವವರೂ ಧರ್ಮವನ್ನು ತಿಳಿಯದವರೂ ಆದ ನಿಮ್ಮಗಳನ್ನು ನಿಷೇಧಿಸುವುದಕ್ಕೋಸ್ಕರ ಬಂದೆನು.''

**ಇತಿ ತದ್ವಚನಾದ್ವಿತಕಲಹೌ ಜಾತಸಂವಿದೌ ।**
**ಸದ್ಯಃ ಸಂಭೂತನಿರ್ವೇಗೌ ಸುಧರ್ಮಗುರುಸನ್ನಿಧೌ ॥ ೩೭೦ ॥**

**ದೀಕ್ಷಾಮಾದಾಯ ನಿರ್ವಾಣಮಾರ್ಗಪರ್ಯಂತಗಾಮಿನೌ ।**
**ಕ್ಷಾಯಿಕಾನಂತಬೋಧಾದಿಗುಣೌ ನಿರ್ವೃತಿಮಾಪತುಃ ॥ ೩೭೧ ॥**

ಈ ಪ್ರಕಾರವಾದ ಆ ಮಣಿಕುಂಡಲಿಯ ಮಾತಿನಿಂದ ಜ್ಞಾನೋದಯವುಳ್ಳವರೂ ಯುದ್ಧವನ್ನು ತ್ಯಜಿಸಿದವರೂ ಆ ಕ್ಷಣದಲ್ಲಿ ವೈರಾಗ್ಯೋತ್ಪತ್ತಿಯುಳ್ಳವರೂ ಸುಧರ್ಮನೆಂಬ ಗುರುವಿನ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಮುಕ್ತಿಮಾರ್ಗದವರೆಗೆ ಹೋಗುವವರೂ ಕ್ಷಾಯಿಕವಾದ ಅನಂತಜ್ಞಾನಾದಿ ಗುಣಗಳುಳ್ಳವರೂ ಆಗಿ ಮೋಕ್ಷವನ್ನು ಹೊಂದಿದರು.

**ತದಾನಂತಮತಿಶ್ಚಾತ್ತಸಂಪೂರ್ಣಶ್ರಾವಕವ್ರತಾ ।**
**ನಾಕಲೋಕಮವಾಪಾಪ್ಯಂ ನ ಕಿಂ ವಾ ಸದನುಗ್ರಹಾತ್ ॥ ೩೭೨ ॥**

ಆಗ ಅನಂತಮತಿಯೂ ಸಂಪೂರ್ಣಶ್ರಾವಕವ್ರತಗಳನ್ನು ಹೊಂದಿದವಳಾಗಿ ಆಯುಷ್ಯಾವಸಾನದಲ್ಲಿ ಮಡಿದು ಸ್ವರ್ಗಲೋಕವನ್ನು ಹೊಂದಿದಳು. ಸತ್ಪುರುಷರ ಅನುಗ್ರಹದಿಂದ ಯಾವುದು ತಾನೆ ಹೊಂದುವುದಕ್ಕೆ ಯೋಗ್ಯವಾಗಿರುವುದಿಲ್ಲ ?

**ಸೌಧರ್ಮಕಲ್ಪೇ ಶ್ರೀಷೇಣೋ ವಿಮಾನೇ ಶ್ರೀಪ್ರಭೇಭವತ್ ।**
**ದೇವೀ ಶ್ರೀನಿಲಯೇ ವಿದ್ಯುತ್ಪ್ರಭಾಭೂತ್ಸಿಂಹನಂದಿತಾ ॥ ೩೭೩ ॥**

ಶ್ರೀಷೇಣನು ಸತ್ತು ಸೌಧರ್ಮಕಲ್ಪದಲ್ಲಿ ಶ್ರೀಪ್ರಭವಿಮಾನದಲ್ಲಿ ಶ್ರೀಪ್ರಭನೆಂಬ ದೇವನಾದನು. ಸಿಂಹನಂದಿತೆಯು ಸತ್ತು ಶ್ರೀನಿಲಯವಿಮಾನದಲ್ಲಿ ವಿದ್ಯುತ್ಪ್ರಭಾ ದೇವಿಯಾದಳು.

**ಬ್ರಾಹ್ಮಣ್ಯನಿಂದಿತೇ ಚಾಸ್ತಾಂ ವಿಮಾನೇ ವಿಮಲಪ್ರಭೇ ।**
**ದೇವೀ ಶುಕ್ಲಪ್ರಭಾ ನಾಮ್ನಾ ದೇವೋತ್ರ ವಿಮಲಪ್ರಭಃ ॥ ೩೭೪ ॥**

ಬ್ರಾಹ್ಮಣಿ–ಸತ್ಯಭಾಮೆಯು ಸತ್ತು ವಿಮಲಪ್ರಭವಿಮಾನದಲ್ಲಿ ಶುಕ್ಲಪ್ರಭೆಯೆಂಬ ದೇವಿಯಾದಳು. ಅನಿಂದಿತೆಯು ಸತ್ತು ವಿಮಲಪ್ರಭವಿಮಾನದಲ್ಲಿ ವಿಮಲಪ್ರಭ ದೇವನಾದಳು.

**ಪಂಚಪಲ್ಯೋಪಮಪ್ರಾಂತೇ ಶ್ರೀಷೇಣಃ ಪ್ರಚ್ಯುತಸ್ತತಃ ।**
**ಅರ್ಕಕೀರ್ತೇಃ ಸುತಃ ಶ್ರೀಮಾನಜನಿಷ್ಠಾಸ್ತ್ವಮೀದೃಶಃ ॥ ೩೭೫ ॥**

ಐದು ಪಲ್ಯೋಪಮಕಾಲದ ಕೊನೆಯಲ್ಲಿ ಶ್ರೀಷೇಣ(ಶ್ರೀಪ್ರಭ)ನು ಸೌಧರ್ಮಕಲ್ಪದಿಂದ ಚ್ಯುತನಾಗಿ ಅರ್ಕಕೀರ್ತಿಯ ಪುತ್ರನೂ ಶ್ರೀಮಂತನೂ ಆದ ನೀನು (ಅಮಿತತೇಜನು) ಇಂತಹವನಾಗಿ ಜನಿಸಿದೆ.

**ತವ ಜ್ಯೋತಿಪ್ರಭಾ ಕಾಂತಾಜನಿ ಸಾ ಸಿಂಹನಂದಿತಾ ।**
**ಆಸೀದನಿಂದಿತಾ ಚಾಯಂ ದೇವೀ ಶ್ರೀವಿಜಯಾಹ್ವಯಃ ॥ ೩೭೬ ॥**

ಸಿಂಹನಂದಿತೆಯಾಗಿದ್ದವಳು ನಿನಗೆ ಜ್ಯೋತಿಪ್ರಭೆಯೆಂಬ ಪತ್ನಿಯಾಗಿ ಜನಿಸಿದಳು. ಅನಿಂದಿತೆಯಾಗಿದ್ದ ಪತ್ನಿಯು ಈ ಶ್ರೀವಿಜಯನಾದನು.

**ಸತ್ಯಭಾಮಾ ಸುತಾರಾಭೂತ್ಪಾಕ್ತನಃ ಕಪಿಲಃ ಖಲಃ ।**
**ಸುಚಿರಂ ದುರ್ಗತೀರ್ಭ್ರಾಂತ್ವಾ ಸ ಭೂತರಮಣೇ ವನೇ ॥ ೩೭೭ ॥**

**ಐರಾವತೀನದೀತೀರೇ ಸಮಭೂತ್ತಾಪಸಾಶ್ರಮೇ ।**
**ಸುತಶ್ಚಪಲವೇಗಾಯಾಂ ಕೌಶಿಕಾನ್ಮೃಗಶೃಂಗವಾಕ್ ॥ ೩೭೮ ॥**

ಸತ್ಯಭಾಮೆಯಾಗಿದ್ದವಳು ಸುತಾರೆಯಾದಳು. ಮೊದಲಿನ ದುಷ್ಟನಾದ ಆ ಕಪಿಲನು ಬಹುಕಾಲದವರೆಗೆ ದುರ್ಗತಿಗಳನ್ನು ಸುತ್ತಿ ಭೂತರಮಣವೆಂಬ ವನದಲ್ಲಿ ಐರಾವತೀನದೀತೀರದಲ್ಲಿ ತಪಸ್ವಿಗಳ ಆಶ್ರಮದಲ್ಲಿ ಕೌಶಿಕತಾಪಸನಿಂದ ಚಪಲವೇಗೆಯಲ್ಲಿ ಮೃಗಶೃಂಗನೆಂಬ ಪುತ್ರನಾದನು.

**ಕುತಾಪಸವ್ರತಂ ದೀರ್ಘಮನುಷ್ಠಾಯ ದುರಾಶಯಃ ।**
**ಶ್ರಿಯಂ ಚಪಲವೇಗಸ್ಯ ವಿಲೋಕ್ಯ ಖಚರೇಶಿನಃ ॥ ೩೭೯ ॥**

**ನಿದಾನಂ ಮನಸಾ ಮೂಢೋ ವಿಧಾಯ ಬುಧನಿಂದಿತಮ್ ।**
**ಜನಿತ್ವಾಶನಿಘೋಷೋಯಂ ಸುತಾರಾಂ ಸ್ನೇಹತೋಗ್ರಹೀತ್ ॥ ೩೮೦ ॥**

ಆ ಮೂಢನು ದುರಭಿಪ್ರಾಯವುಳ್ಳವನಾಗಿ ಬಹುಕಾಲದವರೆಗೆ ದುಷ್ಟತಾಪಸವ್ರತವನ್ನು ಮಾಡಿ ಚಪಲವೇಗನೆಂಬ ಖೇಚರಾಧಿಪತಿಯ ಸಂಪತ್ತಿಯನ್ನು ನೋಡಿ ಪ್ರಾಜ್ಞರಿಂದ ನಿಂದಿತವಾದ ನಿದಾನಶಲ್ಯವನ್ನು ಮನಸ್ಸಿನಲ್ಲಿ ಮಾಡಿ ಸತ್ತು ಈಗ ಅಶನಿಘೋಷನಾಗಿ ಜನಿಸಿ ಸುತಾರೆಯನ್ನು ಸ್ನೇಹದಿಂದ ಗ್ರಹಣಮಾಡಿದನು.

**ಭವೇ ಭಾವ್ಯತ್ರ ನವಮೇ ಪಂಚಮಶ್ಚಕ್ರವರ್ತಿನಾಮ್ ।**
**ತೀರ್ಥೇಶಾಂ ಷೋಡಶಃ ಶಾಂತಿರ್ಭವಾನ್ ಶಾಂತಿಪ್ರದಃ ಸತಾಮ್ ॥**

ನೀನು (ಅಮಿತತೇಜನು) ಮುಂದೆ ಒಂಬತ್ತನೆಯ ಭವದಲ್ಲಿ ಈ ಭಾರತವರ್ಷದಲ್ಲಿ ಚಕ್ರವರ್ತಿಗಳಲ್ಲಿ ಐದನೆಯವನೂ ತೀರ್ಥಂಕರರಲ್ಲಿ ಹದಿನಾರನೆಯವನೂ ಸತ್ಪುರುಷರಿಗೆ ಶಾಂತಿಪ್ರದನೂ ಆದ ಶಾಂತಿತೀರ್ಥಂಕರನಾಗುವೆ.''

**ಇತಿ ತಜ್ಜಿನಶೀತಾಂಶುವಾಗ್ಜ್ಯೋತ್ಸ್ನಾಪ್ರಸರಪ್ರಭಾ- ।**
**ಪ್ರಸಂಗಾದ್ವ್ಯಕಸತ್ಖೇಚರೇಂದ್ರಹೃತ್ಕುಮುದಾಕರಃ ॥ ೩೮೨ ॥**

ಈ ಪ್ರಕಾರವಾದ ಆ ಜಿನೇಶ್ವರನೆಂಬ ಚಂದ್ರನ ವಚನವೆಂಬ ಬೆಳದಿಂಗಳಿನ ವಿಸ್ತೃತ ಪ್ರಭೆಯ ಸಂಬಂಧದಿಂದ ಖೇಚರೇಶ್ವರನ ಹೃದಯವೆಂಬ ಕುಮುದಸರೋವರವು ಅರಳಿತು.

**ತದೈವಾಶನಿಘೋಷಾಖ್ಯೋ ಮಾತಾ ಚಾಸ್ಯ ಸ್ವಯಂಪ್ರಭಾ ।**
**ಸುತಾರಾ ಚ ಪರೇ ಚಾಪನ್ನಿರ್ವಿಣ್ಣಾಃ ಸಂಯಮಂ ಪರಮ್ ॥ ೩೮೩ ॥**

ಆಗಲೇ ಅಶನಿಘೋಷನೂ ಇವನ ತಾಯಿಯೂ ಸ್ವಯಂಪ್ರಭೆಯೂ ಸುತಾರೆಯೂ ಬೇರೆಯವರೂ ವಿರಕ್ತರಾಗಿ ಉತ್ಕೃಷ್ಟವಾದ ಸಂಯಮವನ್ನು ಹೊಂದಿದರು.

**ಅಭಿವಂದ್ಯ ಜಿನಂ ಸರ್ವೇ ತ್ರಿಃ ಪರೀತ್ಯ ಯಥೋಚಿತಮ್ ।**
**ಜಗ್ಮುಶ್ಚಕ್ರಿತನೂಜಾದ್ಯಾಸ್ತೇ ಸಹಾಮಿತತೇಜಸಾ ॥ ೩೮೪ ॥**

ಚಕ್ರವರ್ತಿಯ ಪುತ್ರರೇ ಮೊದಲಾದ ಅವರೆಲ್ಲರೂ ಅಮಿತತೇಜನೊಡನೆ ಜಿನೇಶ್ವರನಿಗೆ ತ್ರಿಪ್ರದಕ್ಷಿಣೆಯನ್ನು ಮಾಡಿ ವಂದಿಸಿ ಯಥೋಚಿತವಾಗಿ ಹೊರಟು ಹೋದರು.

**ಅರ್ಕಕೀರ್ತಿಸುತಃ ಕುರ್ವನ್ನಭುಕ್ತಿಂ ಸರ್ವಪರ್ವಸು ।**
**ಸ್ಥಿತಿಭೇದೇ ಚ ತದ್ಯೋಗ್ಯಂ ಪ್ರಾಯಶ್ಚಿತ್ತಂ ಸಮಾಚರನ್ ॥ ೩೮೫ ॥**

**ಮಹಾಪೂಜಾಂ ಸದಾ ಕುರ್ವನ್ ಪಾತ್ರದಾನಾದಿ ಚಾದರಾತ್ ।**
**ದದದ್ಧರ್ಮಕಥಾಂ ಶೃಣ್ವನ್ ಭವ್ಯಾನ್ ಧರ್ಮಂ ಪ್ರಬೋಧಯನ್ ॥**

**ನಿಃಶಂಕಾದಿಗುಣಾಂಸ್ತನ್ವನ್ದೃಷ್ಟಿಮೋಹಾನಪೋಹಯನ್ ।**
**ಇನೋ ವಾಮಿತತೇಜಃ ಸನ್ ಸುಖಪ್ರೇಕ್ಷ್ಯೋಽಮೃತಾಂಶುವತ್ ॥**

**ಸಂಯಮೀವ ಶಮಂ ಯಾತಃ ಪಾಲಯನ್ ಪಿತೃವತ್ಪ್ರಜಾಃ ।**
**ಲೋಕದ್ವಯಹಿತಂ ಧರ್ಮ್ಯಂ ಕರ್ಮ ಪ್ರಾವರ್ತಯತ್ತದಾ ॥ ೩೮೮ ॥**

ಅರ್ಕಕೀರ್ತಿಯ ಪುತ್ರನಾದ ಅಮಿತತೇಜನು ಎಲ್ಲಾ ಪರ್ವಗಳಲ್ಲಿ ಭೋಜನವನ್ನು ಮಾಡದಿರುವವನೂ ಸ್ಥಿತಿಭಂಗವಾದರೆ ಅದಕ್ಕೆ ಯೋಗ್ಯವಾದ ಪ್ರಾಯಶ್ಚಿತ್ತವನ್ನು ಮಾಡುವವನೂ ಯಾವಾಗಲೂ ಮಹಾಪೂಜೆಯನ್ನು ಮಾಡುವವನೂ ಪ್ರೀತಿಯಿಂದ ಪಾತ್ರದಾನವನ್ನು ಕೊಡುವವನೂ ಧರ್ಮಕಥೆಯನ್ನು ಕೇಳುವವನೂ ಭವ್ಯರಿಗೆ ಧರ್ಮವನ್ನು ಬೋಧಿಸುವವನೂ ನಿಃಶಂಕಾದಿಗುಣಗಳನ್ನು ವಿಸ್ತರಿಸುವವನೂ ದರ್ಶನಮೋಹನೀಯಕರ್ಮಗಳನ್ನು ಹೋಗಲಾಡಿಸುವವನೂ ಸೂರ್ಯನಂತೆ ಅಪಾರವಾದ ತೇಜಸ್ಸುಳ್ಳವನೂ ಚಂದ್ರನಂತೆ ಸುಖದಿಂದ ನೋಡಲ್ಪಡತಕ್ಕವನೂ ಸಂಯಮಿ-ಮುನಿಯಂತೆ ಉಪಶಮಭಾವವನ್ನು ಹೊಂದಿರುವವನೂ ತಂದೆಯಂತೆ ಪ್ರಜೆಗಳನ್ನು ಕಾಪಾಡುವವನೂ ಆಗಿ ಯಾವಾಗಲೂ ಇಹಪರಲೋಕಹಿತವೂ ಧರ್ಮಯುಕ್ತವೂ ಆದ ಕಾರ್ಯವನ್ನು ನಡೆಸಿದನು.

**ಪ್ರಜ್ಞಪ್ತಿಃಕಾಮರೂಪಿಣ್ಯಾವಥಾಗ್ನಿಸ್ತಂಭಿನೀ ಪರಾ ।**
**ಉದಕಸ್ತಂಭಿನೀ ವಿದ್ಯಾ ವಿದ್ಯಾ ವಿಶ್ವಪ್ರವೇಶಿನೀ ॥ ೩೮೯ ॥**

**ಅಪ್ರತೀಘಾತಗಾಮಿನ್ಯಾ ಸಹಾನ್ಯಾಕಾಶಗಾಮಿನೀ ।**
**ಉತ್ಪಾದನೀ ಪರಾ ವಿದ್ಯಾ ಸಾ ವಶೀಕರಣೀ ಸ್ತುತಾ ॥ ೩೯೦ ॥**

**ಆವೇಶನೀ ದಶಮ್ಯನ್ಯಾ ಮಾನ್ಯಾ ಪ್ರಸ್ಥಾಪನೀತಿ ಚ ।**
**ಪ್ರಮೋಹನೀ ಪ್ರಹರಣೀ ಸಂಕ್ರಮಣ್ಯಾಖ್ಯಯೋದಿತಾ ॥ ೩೯೧ ॥**

**ಆವರ್ತನೀ ಸಂಗ್ರಹಣೀ ಭಂಜನೀ ಚ ವಿಪಾಟನೀ ।**
**ಪ್ರವರ್ತನೀ ಪ್ರರೋಟನ್ಯಾ ಸಹಾನ್ಯಾಪಿ ಪ್ರಹಾಪಣೀ ॥ ೩೯೨ ॥**

**ಪ್ರಭಾವನೀ ಪ್ರಲಾಪನ್ಯಾ ನಿಕ್ಷೇಪಣ್ಯಾ ಚ ಯಾ ಸ್ಮೃತಾ ।**
**ಶಬರೀ ಪರಾ ಚ ಚಾಂಡಾಲೀ ಮಾತಂಗೀತಿ ಚ ಕೀರ್ತಿತಾ ॥ ೩೯೩ ॥**

**ಗೌರೀ ಖಟ್ವಾಂಗಿಕಾ ಶ್ರೀಮುದ್ಗನ್ಯಾ ಚ ಶತಸಂಕುಲಾ ।**
**ಕುಂಭಾಂಡೀತಿ ಚ ವಿಖ್ಯಾತಾ ತಥಾ ವಿರಲವೇಗಿಕಾ ॥ ೩೯೪ ॥**

**ರೋಹಿಣ್ಯತೋ ಮನೋವೇಗಾ ಮಹಾವೇಗಾಹ್ವಯಾಪಿ ಚ ।**
**ಚಂಡವೇಗಾ ಸಚಪಲವೇಗಾ ಲಘುಂಕರೀತಿ ಚ ॥ ೩೯೫ ॥**

**ಪರ್ಣಲಘ್ವಾಖ್ಯಕಾ ವೇಗಾವತೀತಿ ಪ್ರತಿಪಾದಿತಾ ।**
**ಶೀತೋಷ್ಣದೇ ಚ ವೈತಾಲ್ಯಾ ಮಹಾಜ್ವಾಲಾಭಿಧಾನಿಕಾ ॥ ೩೯೬ ॥**

**ಛೇದನೀ ಸರ್ವವಿದ್ಯಾನಾಂ ಯುದ್ಧವೀರ್ಯೇತಿ ಚೋದಿತಾ ।**
**ಬಂಧನಾಂ ಮೋಚನೀ ಚೋಕ್ತಾ ಪ್ರಹಾರಾವರಣೀ ತಥಾ ॥ ೩೯೭ ॥**

**ಭ್ರಾಮರ್ಯಾಭೋಗಿನೀತ್ಯಾದ್ಯಾಃ ಕುಲಜಾತಿಪ್ರಸಾಧಿತಾಃ ।**
**ವಿದ್ಯಾಸ್ತಾಸಾಮಯಂ ಪಾರಂ ಗತ್ವಾ ಯೋಗೀವ ನಿರ್ಬಭೌ ॥ ೩೯೮ ॥**

ಪ್ರಜ್ಞಪ್ತಿವಿದ್ಯಾ, ಕಾಮರೂಪಿಣೀವಿದ್ಯಾ, ಆಮೇಲೆ ಮತ್ತೊಂದು ಅಗ್ನಿಸ್ತಂಭನೀವಿದ್ಯಾ, ಜಲಸ್ತಂಭನೀವಿದ್ಯಾ, ವಿಶ್ವಪ್ರವೇಶಿನೀವಿದ್ಯಾ, ಅಪ್ರತೀಘಾತಗಾಮಿನೀವಿದ್ಯಾ, ಆಕಾಶಗಾಮಿನೀವಿದ್ಯಾ, ಉತ್ಪಾದನೀವಿದ್ಯಾ, ವಶೀಕರಣೀವಿದ್ಯಾ, ಹತ್ತನೆಯದಾದ ಬೇರೊಂದು ಆವೇಶನೀವಿದ್ಯಾ, ಮಾನ್ಯವಾದ ಪ್ರಸ್ಥಾಪನೀವಿದ್ಯಾ, ಪ್ರಮೋಹನೀವಿದ್ಯಾ, ಪ್ರಹರಣೀವಿದ್ಯಾ, ಸಂಕ್ರಮಣೀವಿದ್ಯಾ, ಆವರ್ತನೀವಿದ್ಯಾ, ಸಂಗ್ರಹಣೀವಿದ್ಯಾ, ಭಂಜನೀವಿದ್ಯಾ, ವಿಪಾಟನೀವಿದ್ಯಾ, ಪ್ರವರ್ತನೀವಿದ್ಯಾ, ಪ್ರರೋಟನೀವಿದ್ಯಾ, ಬೇರೊಂದು ಪ್ರಹಾಪಣೀವಿದ್ಯಾ, ಪ್ರಭಾವನೀವಿದ್ಯಾ, ಪ್ರಲಾಪನೀವಿದ್ಯಾ, ನಿಕ್ಷೇಪಣೀವಿದ್ಯಾ, ಶಬರೀವಿದ್ಯಾ, ಬೇರೊಂದು ಚಾಂಡಾಲೀವಿದ್ಯಾ, ಮಾತಂಗೀವಿದ್ಯಾ, ಗೌರೀವಿದ್ಯಾ, ಖಟ್ವಾಂಗಿಕಾವಿದ್ಯಾ, ಶ್ರೀಮುದ್ಗನೀವಿದ್ಯಾ, ಶತಸಂಕುಲಾವಿದ್ಯಾ, ಪ್ರಖ್ಯಾತವಾದ ಕುಂಭಾಂಡೀವಿದ್ಯಾ, ವಿರಲವೇಗಿಕಾವಿದ್ಯಾ, ರೋಹಿಣೀವಿದ್ಯಾ, ಮನೋವೇಗಾವಿದ್ಯಾ, ಮಹಾವೇಗಾವಿದ್ಯಾ, ಚಂಡವೇಗಾವಿದ್ಯಾ, ಚಪಲವೇಗಾವಿದ್ಯಾ, ಲಘುಕರೀವಿದ್ಯಾ, ಪರ್ಣಲಘುವಿದ್ಯಾ, ವೇಗಾವತೀವಿದ್ಯಾ, ಶೀತದಾವಿದ್ಯಾ, ಉಷ್ಣದಾವಿದ್ಯಾ, ವೈತಾಲೀವಿದ್ಯಾ, ಮಹಾಜ್ವಾಲಾವಿದ್ಯಾ, ಸರ್ವವಿದ್ಯಾಛೇದನೀವಿದ್ಯಾ, ಯುದ್ಧವೀರ್ಯಾವಿದ್ಯಾ, ಬಂಧನಮೋಚನೀವಿದ್ಯಾ, ಪ್ರಹಾರಾವರಣೀವಿದ್ಯಾ, ಹಾಗೆಯೇ ಭ್ರಾಮರೀವಿದ್ಯಾ, ಆಭೋಗಿನೀವಿದ್ಯಾ, ಇವೇ ಮೊದಲಾದ ವಿದ್ಯೆಗಳು ಕುಲಪರಂಪರೆಯಿಂದಲೂ ಜಾತಿಪರಂಪರೆಯಿಂದಲೂ ಚೆನ್ನಾಗಿ ಸಾಧಿಸಲ್ಪಟ್ಟವುಗಳಾಗಿವೆ. ಈ ಅಮಿತತೇಜನು ಆ ವಿದ್ಯೆಗಳ ಪಾರಗಾಮಿಯಾಗಿ ಯೋಗಿಯಂತೆ ಪ್ರಕಾಶಿಸಿದನು.

**ಶ್ರೇಣೀದ್ವಯಾಧಿಪತ್ಯೇನ ವಿದ್ಯಾಧರಧರಾಧಿಪಃ ।**
**ಪ್ರಾಪ್ಯ ತಚ್ಚಕ್ರವರ್ತಿತ್ವಂ ಚಿರಂ ಭೋಗಾನಭುಂಕ್ತ ಸಃ ॥ ೩೯೯ ॥**

ವಿದ್ಯಾಧರಪೃಥಿವೀಪತಿಯಾದ ಆ ಅಮಿತತೇಜನು ದಕ್ಷಿಣೋತ್ತರಶ್ರೇಣಿಗಳ ದೊರೆತನದಿಂದ ಅವುಗಳ ಚಕ್ರವರ್ತಿತ್ವವನ್ನು ಹೊಂದಿ ಬಹುಕಾಲದವರೆಗೆ ಭೋಗಗಳನ್ನು ಅನುಭವಿಸಿದನು.

**ಕದಾಚಿತ್ಖೇಚರಾಧೀಶಶ್ಚಾರಣಾಯ ಯಥಾವಿಧಿ ।**
**ದಾನಂ ದಮವರಾಖ್ಯಾಯ ದತ್ವಾಪಾಶ್ಚರ್ಯಪಂಚಕಮ್ ॥ ೪೦೦ ॥**

ಒಂದಾನೊಂದು ಕಾಲದಲ್ಲಿ ಆ ಖೇಚರಾಧಿಪತಿಯಾದ ಅಮಿತತೇಜನು ದಮವರನೆಂಬ ಚಾರಣಮುನಿಗೆ ವಿಧಿಪ್ರಕಾರವಾಗಿ ಆಹಾರದಾನವನ್ನು ಕೊಟ್ಟು ಪಂಚಾಶ್ಚರ್ಯವನ್ನು ಪಡೆದನು.

**ಅನ್ಯದಾಮಿತತೇಜಃಶ್ರೀವಿಜಯೌ ವಿನತಾನನೌ ।**
**ನತ್ವಾಮರಗುರುಂ ದೇವಗುರುಂ ಚ ಮುನಿಪುಂಗವೌ ॥ ೪೦೧ ॥**

**ಪೃಷ್ಟ್ವಾ ಧರ್ಮಸ್ಯ ಯಾಥಾತ್ಮ್ಯಂ ಪೀತ್ವಾ ತದ್ವಚನಾಮೃತಮ್ ।**
**ಅಜರಾಮರತಾಂ ಪ್ರಾಪ್ತಾವಿವ ತೋಷಮುಪೇಯತುಃ ॥ ೪೦೨ ॥**

ಮತ್ತೊಂದು ಕಾಲದಲ್ಲಿ ಅಮಿತತೇಜನೂ ಶ್ರೀವಿಜಯನೂ ಮುಖವನ್ನು ಬಗ್ಗಿಸಿ ಅಮರಗುರು ದೇವಗುರುಗಳೆಂಬೀರ್ವರು ಮುನಿಪುಂಗವರನ್ನು ನಮಸ್ಕರಿಸಿ ಧರ್ಮದ ಯಥಾರ್ಥಸ್ವರೂಪವನ್ನು ಕೇಳಿ ಅವರ ವಚನವೆಂಬ ಅಮೃತವನ್ನು ಪಾನ ಮಾಡಿ, ಅಜರಾಮರತ್ವವನ್ನು ಹೊಂದಿದವರಂತೆ, ಸಂತೋಷವನ್ನು ಹೊಂದಿದರು.

**ಪುನಃ ಶ್ರೀವಿಜಯೋಽಪ್ರಾಕ್ಷೀದ್ಭವಸಂಬಂಧಮಾತ್ಮನಃ ।**
**ಪಿತುಃ ಸ ಭಗವಾನ್ ಪ್ರಾಹ ಪ್ರಥಮಃ ಪ್ರಾಸ್ತಕಲ್ಮಷಃ ॥ ೪೦೩ ॥**

**ಸಾಕಲ್ಯೇನ ತದಾಖ್ಯಾನಂ ವಿಶ್ವನಂದಿಭವಾದಿತಃ ।**
**ಸಮಾಕರ್ಣ್ಯ ತದಾಖ್ಯಾನಂ ಭೋಗೇ ಕೃತನಿದಾನಕಃ ॥ ೪೦೪ ॥**

**ಕಂಚಿತ್ಕಾಲಂ ಸಮಾಸಾದ್ಯ ಖಭೂಚರಸುಖಾಮೃತಮ್ ।**
**ವಿಪುಲಾದಿಮತೇಃ ಪಾರ್ಶ್ವೇ ವಿಮಲಾದಿಮತೇಶ್ಚ ತೌ ॥ ೪೦೫ ॥**

**ಮಹೀಭುಜೌ ನಿಶಮ್ಯೈಕಮಾಸಮಾತ್ರಾತ್ಮಜೀವಿತಮ್ ।**
**ದತ್ವಾರ್ಕತೇಜಸೇ ರಾಜ್ಯಂ ಶ್ರೀದತ್ತಾಯ ಚ ಸಾದರಮ್ ॥ ೪೦೬ ॥**

**ಕೃತಾಷ್ಟಾಹ್ನಿಕಸತ್ಪೂಜೌ ಮುನೀಶಶ್ಚಂದನೇ ವನೇ ।**
**ಸಮೀಪೇ ನಂದನಾಖ್ಯಸ್ಯ ತ್ಯಕ್ತ್ವಾ ಸಂಗಂ ತಯೋಃ ಖಗೇಟ್ ॥ ೪೦೭ ॥**

**ಪ್ರಾಯೋಪಗಮಸನ್ನ್ಯಾಸವಿಧಿನಾರಾಧ್ಯ ಶುದ್ಧಧೀಃ ।**
**ನಂದ್ಯಾವರ್ತೇಽಭವತ್ಕಲ್ಪೇ ರವಿಚೂಲಸ್ತ್ರಯೋದಶೇ ॥ ೪೦೮ ॥**

ಬಳಿಕ ಶ್ರೀವಿಜಯನು ತನ್ನ ತಂದೆಯ ಭವಸಂಬಂಧವನ್ನು ಪ್ರಶ್ನೆಮಾಡಿದನು. ಮಾಹಾತ್ಮ್ಯವುಳ್ಳವನೂ ಕಲ್ಮಷದೂರನೂ ಆದ ಮೊದಲನೆಯ ಅಮರಗುರುವು ವಿಶ್ವನಂದಿಯ ಭವ ಮೊದಲುಗೊಂಡು ಅವನ ಕಥೆಯನ್ನು ಸಂಪೂರ್ಣವಾಗಿ ಹೇಳಿದನು. ಆ ಕಥೆಯನ್ನು ಕೇಳಿ ಭೋಗದಲ್ಲಿ ನಿದಾನಶಲ್ಯೆಯುಳ್ಳವನಾಗಿ ಕೆಲವು ಕಾಲದವರೆಗೆ ಖೇಚರ ಭೂಚರಸಂಬಂಧವಾದ ಸುಖವೆಂಬ ಅಮೃತವನ್ನು ಹೊಂದಿ ವಿಪುಲಮತಿ ಮತ್ತು ವಿಮಲಮತಿ–ಮುನೀಶ್ವರರುಗಳ ಬಳಿಯಲ್ಲಿ ಆ ದೊರೆಗಳೀರ್ವರೂ ತಮ್ಮ ಆಯುಷ್ಯವು ಒಂದೇ ತಿಂಗಳು ಉಳಿದಿದೆಯೆಂದು ಕೇಳಿ ಅರ್ಕತೇಜನಿಗೂ ಶ್ರೀದತ್ತನಿಗೂ ಪ್ರೀತಿಪೂರ್ವಕವಾಗಿ ರಾಜ್ಯವನ್ನು ಕೊಟ್ಟು ಶ್ರೇಷ್ಠವಾದ ಅಷ್ಟಾಹ್ನಿಕಪೂಜೆಯನ್ನು ಮಾಡಿದವರಾಗಿ ಚಂದನವನದಲ್ಲಿ ನಂದನನೆಂಬ ಮುನಿಯ ಬಳಿಯಲ್ಲಿ ಪರಿಗ್ರಹವನ್ನು ತ್ಯಜಿಸಿ ಅವರಿಬ್ಬರಲ್ಲಿ ಖೇಚಾರಧಿಪತಿಯಾದ ಅಮಿತತೇಜನು ಶುದ್ಧವಾದ ಬುದ್ಧಿಯುಳ್ಳವನಾಗಿ ಪ್ರಾಯೋಪಗಮನಸನ್ನ್ಯಾಸವಿಧಿಯಿಂದ ಆರಾಧನೆಗಳನ್ನು ಆರಾಧಿಸಿ ಮಡಿದು ಹದಿಮೂರನೆಯದಾದ ಆನತ ಕಲ್ಪದಲ್ಲಿ ನಂದ್ಯಾವರ್ತವಿಮಾನದಲ್ಲಿ ರವಿಚೂಲನೆಂಬ ದೇವನಾದನು.

**ಅಭೂಚ್ಛ್ರೀವಿಜಯೋಽಪ್ಯತ್ರ ಸ್ವಸ್ತಿಕೇ ಮಣಿಚೂಲಿಕಃ ।**
**ವಿಂಶತ್ಯಬ್ಧ್ಯುಪಮಾಯುಷ್ಕೌ ಜೀವಿತಾವಸಿತೌ ತತಃ ॥ ೪೦೯ ॥**

**ದ್ವೀಪೇಽಸ್ಮಿನ್ ಪ್ರಾಗ್ವಿದೇಹಸ್ಥವಿಲಸದ್ವತ್ಸಕಾವತೀ- ।**
**ದೇಶೇ ಪ್ರಭಾಕರೀಪುರ್ಯಾಂ ಪತಿಸ್ತಿಮಿತಸಾಗರಃ ॥ ೪೧೦ ॥**

**ದೇವೀ ವಸುಂಧರೀ ಜಾತಸ್ತಯೋರಾದಿತ್ಯಚೂಲವಾಕ್ ।**
**ದೇವೋಽಪರಾಜಿತಃ ಸೂನುರ್ನಂದ್ಯಾವರ್ತಾದ್ದಿವಶ್ಚ್ಯುತಃ ॥ ೪೧೧ ॥**

**ತಸ್ಯೈ ವಾನುಮತೋ ದೇವ್ಯಾಂ ಮಣಿಚೂಲೋಽಪ್ಯಭೂತ್ಸುತಃ ।**
**ಶ್ರೀಮಾನನಂತವೀರ್ಯಾಖ್ಯೋ ದಿವಿಜಃ ಸ್ವಸ್ತಿಕಾಚ್ಚ್ಯುತಃ ॥ ೪೧೨ ॥**

ಶ್ರೀವಿಜಯನೂ ಈ ಕಲ್ಪದಲ್ಲಿ ಸ್ವಸ್ತಿಕವಿಮಾನದಲ್ಲಿ ಮಣಿಚೂಲನೆಂಬ ದೇವನಾದನು. ಅವರೀರ್ವರೂ ಇಪ್ಪತ್ತು ಸಾಗರೋಪಮವರ್ಷಾಯುಷ್ಯವುಳ್ಳವರಾಗಿದ್ದರು. ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪ್ರಕಾಶಮಾನವಾದ ವತ್ಸಕಾವತೀದೇಶದಲ್ಲಿರುವ ಪ್ರಭಾಕರಿಯೆಂಬ ನಗರಿಯಲ್ಲಿ ಸ್ತಿಮಿತಸಾಗರನೆಂಬವನು ದೊರೆ. ವಸುಂಧರಿಯೆಂಬವಳು ಆತನ ಪತ್ನಿ. ಆ ದಂಪತಿಗಳಿಗೆ ಸ್ವರ್ಗದಿಂದ ನಂದ್ಯಾವರ್ತವಿಮಾನದಿಂದ ಆಯುಷ್ಯಾವಸಾನದಲ್ಲಿ ಚ್ಯುತನಾದ ರವಿಚೂಲದೇವನು ಅಪರಾಜಿತನೆಂಬ ಪುತ್ರನಾದನು. ಆ ಸ್ತಿಮಿತಸಾಗರನಿಗೇ ಅನುಮತಾದೇವಿಯಲ್ಲಿ ಸ್ವಸ್ತಿಕವಿಮಾನದಿಂದ ಚ್ಯುತನಾದ ಮಣಿಚೂಲದೇವನೂ ಶ್ರೀಮಂತನಾದ ಅನಂತವೀರ್ಯನೆಂಬ ಪುತ್ರನಾದನು.

**ಕಾಂತ್ಯಾ ಕುವಲಯಾಹ್ಲಾದಾತ್ತೃಷ್ಣಾತಾಪಾಪನೋದನಾತ್ ।**
**ಕಲಾಧರತ್ವಾದ್ಭಾತಃ ಸ್ಮ ಜಂಬೂದ್ವೀಪವಿಧೂಪಮೌ ॥ ೪೧೩ ॥**

ಕಾಂತಿಯಿಂದ ಕುಮುದಪುಷ್ಪಗಳಿಗೆ ಮತ್ತು ಭೂಮಂಡಲಕ್ಕೆ ಆಹ್ಲಾದವನ್ನುಂಟುಮಾಡಿರುವುದರಿಂದಲೂ ಬಾಯಾರಿಕೆಯ ಮತ್ತು ಆಶೆಯ ತಾಪವನ್ನು ಹೋಗಲಾಡಿಸಿರುವುದರಿಂದಲೂ ಕಲೆಗಳನ್ನು ಮತ್ತು ವಿದ್ಯೆಗಳನ್ನು ಧರಿಸಿರುವುದರಿಂದಲೂ ಆ ಅಪರಾಜಿತ ಅನಂತವೀರ್ಯ–ರಾಜಕುಮಾರರು ಜಂಬೂದ್ವೀಪದ ಈರ್ವರು ಚಂದ್ರರಿಗೆ ಸಮಾನರಾಗಿ ಪ್ರಕಾಶಿಸಿದರು.

**ಪದ್ಮಾನಂದಕರೌ ಭಾಸ್ವದ್ವಪುಷೌ ಧ್ವಸ್ತತಾಮಸೌ ।**
**ನಿತ್ಯೋದಯೌ ಜಗನ್ನೇತ್ರೇ ತಾವಾದ್ಯೌ ವಾ ದಿವಾಕರೌ ॥ ೪೧೪ ॥**

**ನವಂ ಚ ಕೌ ಕಲಾವಂತೌ ಸಪ್ರತಾಪೌ ನ ದಾಹಕೌ ।**
**ಕರದ್ವಯವ್ಯಪೇತೌ ತೌ ಸತ್ಕರೌ ರೇಜತುಸ್ತರಾಮ್ ॥ ೪೧೫ ॥**

ಕಮಲಗಳಿಗೆ ಆನಂದವನ್ನುಂಟುಮಾಡುವವರೂ ಪ್ರಕಾಶಮಾನವಾದ ದೇಹವುಳ್ಳವರೂ ಕತ್ತಲೆಯನ್ನು ಹೋಗಲಾಡಿಸಿರುವವರೂ ಯಾವಾಗಲೂ ಉದಯವುಳ್ಳವರೂ ಜಗತ್ತಿಗೆ ಕಣ್ಣಾಗಿರುವವರೂ ಆದ ಮೊದಲನೆಯ ಇಬ್ಬರು ಸೂರ್ಯರಂತೆ, ಲಕ್ಷ್ಮಿಗೆ ಆನಂದವನ್ನುಂಟುಮಾಡುವವರೂ ಪ್ರಕಾಶಮಾನವಾದ ದೇಹವುಳ್ಳವರೂ ತಮೋಗುಣವನ್ನು ನಾಶಮಾಡಿರುವವರೂ ಯಾವಾಗಲೂ ಅಭ್ಯುದಯವುಳ್ಳವರೂ ಜಗತ್ತಿಗೆ ಕಣ್ಣಿನಂತಿರುವವರೂ ಪೃಥಿವಿಯಲ್ಲಿ ಹೊಸದಾಗಿ ಕಲೆಗಳುಳ್ಳವರೂ–ಚಂದ್ರರೂ ಪ್ರತಾಪವುಳ್ಳವರೂ ದಾಹವನ್ನುಂಟುಮಾಡದಿರುವವರೂ ಉಷ್ಣಕಿರಣ ಶೀತಕಿರಣರಹಿತರೂ ಶ್ರೇಷ್ಠವಾದ ಕೈಗಳುಳ್ಳವರೂ ಆದ ಆ ಅಪರಾಜಿತಾನಂತವೀರ್ಯರು ಅಧಿಕವಾಗಿ ಪ್ರಕಾಶಿಸಿದರು.

**ನೋಪಮಾನಂ ತಯೋಃ ಕಾಮೋ ರೂಪೇಣಾನಂಗತಾಂ ಗತಃ ।**
**ನೀತ್ಯಾ ನಾನ್ಯೋನ್ಯಜೇತಾರೌ ಗುರುಶುಕ್ರೌ ಚ ತತ್ಸಮೌ ॥ ೪೧೬ ॥**

ರೂಪದಿಂದ ಅನಂಗತ್ವವನ್ನು ಹೊಂದಿರುವ ಮನ್ಮಥನು ಆ ಅಪರಾಜಿತಾನಂತವೀರ್ಯರಿಗೆ ಉಪಮಾನನಲ್ಲ. ನೀತಿಯಿಂದ ಒಬ್ಬನನ್ನೊಬ್ಬನು ಜಯಿಸುವವರಾದ ಗುರು ಶುಕ್ರರೂ ಅವರಿಗೆ ಸಮಾನರಲ್ಲ.

**ಹೀಯತೇ ವರ್ಧತೇ ಚಾಪಿ ಭಾಸ್ಕರೇಣ ವಿನಿರ್ಮಿತಾ ।**
**ವರ್ಧತೇ ತತ್ಕೃತಾ ಛಾಯಾ ವರ್ಧಮಾನಸ್ಯ ವಾ ತರೋಃ ॥ ೪೧೭ ॥**

ಸೂರ್ಯನಿಂದುಂಟಾದ ನೆರಳು ಕಡಿಮೆಯಾಗುತ್ತದೆ ಮತ್ತು ಹೆಚ್ಚುತ್ತದೆ. ಆ ಅಪರಾಜಿತಾನಂತವೀರ್ಯರಿಂದುಂಟಾದ ಛಾಯಾ–ಕೃಪೆಯು, ಬೆಳೆಯುತ್ತಿರುವ ಮರದ ನೆರಳಿನಂತೆ, ಹೆಚ್ಚುತ್ತದೆ.

**ನ ತಯೋರ್ವಿಗ್ರಹೋ ಯಾನಂ ತಥಾಪ್ಯರಿಮಹೀಭುಜಃ ।**
**ತತ್ಪ್ರತಾಪಭಯಾತ್ತಾಭ್ಯಾಂ ಸ್ವಯಂ ಸಂಧಾತುಮಿಚ್ಛುಕಾಃ ॥ ೪೧೮ ॥**

ಆ ಅಪರಾಜಿತಾನಂತವೀರ್ಯರ ಯುದ್ಧವಾಗಲಿ ಶತ್ರುಗಳ ಮೇಲೆ ದಂಡೆತ್ತಿ ಹೋಗುವಿಕೆಯಾಗಲಿ ಇರಲಿಲ್ಲ. ಆದರೂ ಶತ್ರುರಾಜರುಗಳು ಅವರ ಪ್ರತಾಪದ ಭಯದಿಂದ ತಾವೇ ಅವರೊಡನೆ ಸಂಧಾನಮಾಡಿಕೊಳ್ಳುವುದಕ್ಕೆ ಬಯಸುತ್ತಿದ್ದರು.

**ಅವರ್ಧಿಷಾತಾಂ ತಾವೇವಂ ರಾಜ್ಯಲಕ್ಷ್ಮೀಕಟಾಕ್ಷಗೌ ।**
**ನವಂ ವಯಃ ಸಮಾಸಾದ್ಯ ಶುಕ್ಲಾಷ್ಟಮ್ಯಮೃತಾಂಶುವತ್ ॥ ೪೧೯ ॥**

ರಾಜ್ಯಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರರಾದ ಆ ಅಪರಾಜಿತಾನಂತವೀರ್ಯರು, ಶುಕ್ಲಪಕ್ಷದ ಅಷ್ಟಮಿಯ ಚಂದ್ರನಂತೆ ನೂತನವಯಸ್ಸನ್ನು ಹೊಂದಿ ಹೀಗೆ ವೃದ್ಧಿ ಹೊಂದಿದರು.

**ಪರ್ಯಾಯೋ ರಾಜ್ಯಭೋಗಸ್ಯ ಯೋಗ್ಯಯೋರ್ಮತ್ತನೂಜಯೋಃ ।**
**ಇತೀವ ರತಿಮಚ್ಛೈತ್ಸೀದ್ಭೋಗೇಷ್ವೇತತ್ಪಿತಾನ್ಯದಾ ॥ ೪೨೦ ॥**

ಮತ್ತೊಂದು ಕಾಲದಲ್ಲಿ ''ಯೋಗ್ಯರಾದ ನನ್ನ ಪುತ್ರರಿಗೆ ರಾಜ್ಯಭೋಗದ ಸರದಿಯುಂಟಾಯಿತು'' ಎಂದು ತಿಳಿದೋ ಎನ್ನುವಂತೆ ಇವರ ತಂದೆಯಾದ ಸ್ತಿಮಿತಸಾಗರನು ಭೋಗಗಳಲ್ಲಿ ಪ್ರೀತಿಯನ್ನು ತೊರೆದನು.

**ತದೈವ ತೌ ಸಮಾಹೂಯ ಕುಮಾರಾವಮರೋಪಮೌ ।**
**ಅಭಿಷಿಚ್ಯಾರ್ಪಯದ್ರಾಜ್ಯಂ ಯೌವರಾಜ್ಯಂ ಚ ಸೋಽಸ್ಪೃಹಃ ॥ ೪೨೧ ॥**

ಆಗಲೇ ಅವನು ನಿಸ್ಪೃಹನಾಗಿ ದೇವೋಪಮರಾದ ಆ ರಾಜಕುಮಾರರನ್ನು ಕರೆಯಿಸಿ ರಾಜ್ಯಭಿಷೇಕವನ್ನು ಮಾಡಿ ಜ್ಯೇಷ್ಠಪುತ್ರನಿಗೆ ರಾಜ್ಯವನ್ನೂ ಕನಿಷ್ಠಪುತ್ರನಿಗೆ ಯೌವರಾಜ್ಯವನ್ನೂ ಕೊಟ್ಟನು.

**ಸ್ವಯಂ ಸ್ವಯಂಪ್ರಭಾಖ್ಯಾತಜಿನಪಾದೋಪಸೇವನಾತ್ ।**
**ಸಂಯಮೇನ ಸಮಾಸಾದ್ಯ ಧರಣೇಂದ್ರರ್ದ್ಧಿದರ್ಶನಾತ್ ॥ ೪೨೨ ॥**

**ನಿದಾನದೂಷಿತೋ ಬಾಲತಪಾ ಲೋಲತಯಾ ಸುಖೇ ।**
**ಸ್ವಕಾಲಾಂತೇ ವಿಶುದ್ಧಾತ್ಮಾ ಜಗಾಮ ಧರಣೇಶಿತಾಮ್ ॥ ೪೨೩ ॥**

ತಾನು ಸಂಯಮದಿಂದ ಸ್ವಯಂಪ್ರಭಜಿನರ ಪಾದಸೇವನವನ್ನು ಹೊಂದಿ ಒಂದು ದಿನ ಧರಣೇಂದ್ರನ ಸಂಪತ್ತಿಯನ್ನು ನೋಡಿದುದರಿಂದ ಸುಖದಲ್ಲಿ ಆಸಕ್ತಿಯುಳ್ಳವನಾಗಿ ನಿದಾನಶಲ್ಯದಿಂದ ದೂಷಿತನೂ ಬಾಲತಪಸ್ಸುಳ್ಳವನೂ ತನ್ನ ಆಯುಷ್ಯಾವಸಾನದಲ್ಲಿ ವಿಶುದ್ಧಾತ್ಮನೂ ಆಗಿ ಸತ್ತು ಧರಣೇಂದ್ರಪದವಿಯನ್ನು ಪಡೆದನು.

**ತತ್ಪದೇ ತೌ ಸಮಾಸಾದ್ಯ ಬೀಜಮೂಲಾಂಕುರಾವಿವ ।**
**ನೀತಿವಾರಿಪರೀಷೇಕಾತ್ಸುಭೂಮೌ ವೃದ್ಧಿಮೀಯತುಃ ॥ ೪೨೪ ॥**

ಇತ್ತ ಆ ರಾಜಕುಮಾರರು ರಾಜ್ಯವನ್ನೂ ಯೌವರಾಜ್ಯವನ್ನೂ ಹೊಂದಿ, ಬೀಜದ ಮೊಳಕೆಗಳು ಒಳ್ಳೆಯ ಭೂಮಿಯಲ್ಲಿ ಜಲಸೇಚನೆಯಿಂದ ವೃದ್ಧಿಯನ್ನು ಹೊಂದುವಂತೆ, ನೀತಿಯೆಂಬ ಜಲಸೇಚನೆಯಿಂದ ವೃದ್ಧಿಯನ್ನು ಹೊಂದಿದರು.

**ಅಭ್ಯುದ್ಯತಾಸ್ತಯೋಃ ಪೂರ್ವಂ ಸಪ್ರತಾಪಾ ನಯಾಂಶವಃ ।**
**ಆಕ್ರಮ್ಯ ಮಸ್ತಕೇ ಚಕ್ರುರಾಸ್ಪದಂ ಸರ್ವಭೂಭೃತಾಮ್ ॥ ೪೨೫ ॥**

ಪೂರ್ವದಿಕ್ಕಿನಲ್ಲಿ ಉದಿಸಿದ ಪ್ರತಾಪಸಹಿತವಾದ ಕಿರಣಗಳು ಸಮಸ್ತಪರ್ವತಗಳ ಶಿಖರದಲ್ಲಿ ಆಕ್ರಮಿಸಿ ಆಸ್ಪದವನ್ನು ಹೊಂದುವಂತೆ, ಆ ರಾಜಕುಮಾರರ ಮೊದಲುಉಂಟಾದ ಪ್ರತಾಪಸಹಿತವಾದ ನಯ–ನೀತಿಗಳೆಂಬ ಕಿರಣಗಳು ಸಮಸ್ತರಾಜರುಗಳ ಮಸ್ತಕದಲ್ಲಿ ಆಕ್ರಮಿಸಿ ಸ್ಥಾನವನ್ನು ಮಾಡಿಕೊಂಡುವು. ಪ್ರತಾಪದಿಂದಲೂ ನಯನೀತಿಗಳಿಂದಲೂ ಸಕಲರಾಜರುಗಳನ್ನು ನಮ್ರರನ್ನಾಗಿ ಮಾಡಿದರೆಂದು ಭಾವವು.

**ಲಕ್ಷ್ಮ್ಯಾ ನವೇ ಯುವಾನೌ ತೌ ತತ್ಪ್ರೀತಿಃ ಸಮಸಂಗಮಾತ್ ।**
**ಭೋಗಾಸಕ್ತಿಂ ವ್ಯಧಾದ್ಬಾಢಂ ತಯೋರುದ್ಗತಪುಣ್ಯಯೋಃ ॥ ೪೨೬ ॥**

ಯುವಕರಾದ ಆ ರಾಜಕುಮಾರರು ನೂತನರಾಜ್ಯಲಕ್ಷ್ಮಿಯನ್ನೂ ಯೌವರಾಜ್ಯಲಕ್ಷ್ಮಿಯನ್ನೂ ಸಮಾನಸಂಗಮದಿಂದ ಪಡೆದರು. ಆ ಲಕ್ಷ್ಮಿಯರ ಪ್ರೀತಿಯು ಪುಣ್ಯೋದಯವುಳ್ಳವರಾದ ಆ ರಾಜಕುಮಾರರಲ್ಲಿ ಚೆನ್ನಾಗಿ ಭೋಗಾಸಕ್ತಿಯನ್ನುಂಟುಮಾಡಿತು.

**ನರ್ತಕೀ ಬರ್ಬರೀತ್ಯೇಕಾ ಖ್ಯಾತಾನ್ಯಾ ಚ ಚಿಲಾತಿಕಾ ।**
**ನೃತ್ತವಿದ್ಯೇವ ಸಾಮರ್ಥ್ಯಾದ್ರೂಪದ್ವಯಮುಪಾಗತಾ ॥ ೪೨೭ ॥**

ನೃತ್ತವಿದ್ಯೆಯು ಸಾಮರ್ಥ್ಯದಿಂದ ಎರಡು ರೂಪವನ್ನು ಹೊಂದಿತೋ ಎನ್ನುವಂತೆ ಬರ್ಬರಿಯೆಂದೂ ಚಿಲಾತಿಕೆಯೆಂದೂ ಪ್ರಖ್ಯಾತರಾದ ಈರ್ವರು ನರ್ತಕಿಯರಿದ್ದರು.

**ಭೂಪತೀ ತೌ ತಯೋರ್ನೃತ್ತಂ ಕದಾಚಿಜ್ಜಾತಸಮ್ಮದೌ ।**
**ವಿಲೋಕಮಾನಾವಾಸೀನಾವಾಗಮನ್ನಾರದಸ್ತದಾ ॥ ೪೨೮ ॥**

**ಸೂರ್ಯಾಚಂದ್ರಮಸೌ ಸೈಂಹಿಕೇಯೋ ವಾ ಜನಿತಾಶುಭಃ ।**
**ನೃತ್ತಾಸಂಗಾತ್ಕುಮಾರಾಭ್ಯಾಂ ಕ್ರೂರಃ ಸೋಽವಿಹಿತಾದರಃ ॥ ೪೨೯ ॥**

**ಜಾಜ್ವಲ್ಯಮಾನಕೋಪಾಗ್ನಿಶಿಖಾಸಂತಪ್ತಮಾನಸಃ ।**
**ಚಂಡಾಂಶುರಿವ ಮಧ್ಯೇಽಹ್ನಿ ಜಜ್ವಾಲ ಶುಚಿಸಂಗಮಾತ್ ॥ ೪೩೦ ॥**

ಒಂದಾನೊಂದು ಕಾಲದಲ್ಲಿ ಆ ನರ್ತಕಿಯರ ನೃತ್ತವನ್ನು ನೋಡುತ್ತ ಸಂತೋಷದಿಂದ ಕುಳಿತಿದ್ದ ಆ ರಾಜರುಗಳನ್ನು, ರಾಹುವು ಸೂರ್ಯಚಂದ್ರರನ್ನು ಹೊಂದುವಂತೆ, ಅಶುಭಪರಿಣಾಮೋತ್ಪತ್ತಿಯುಳ್ಳ ನಾರದನು ಹೊಂದಿದನು. ನೃತ್ತದಲ್ಲಿ ಆಸಕ್ತರಾಗಿದ್ದ ಆ ರಾಜಕುಮಾರರಿಂದ ಸತ್ಕರಿಸಲ್ಪಡದ ಆ ಕ್ರೂರನಾದ ನಾರದನು ಜಾಜ್ವಲ್ಯಮಾನವಾದ ಕೋಪವೆಂಬ ಅಗ್ನಿಯ ಜ್ವಾಲೆಯಿಂದ ಸಂತಪ್ತವಾದ ಮನಸ್ಸುಳ್ಳವನಾಗಿ, ಜ್ಯೇಷ್ಠಮಾಸದ ಸಂಗಮದಿಂದ ಮಧ್ಯಾಹ್ನದಲ್ಲಿ ಸೂರ್ಯನಂತೆ, ಜ್ವಲಿಸಿದನು.

**ಸ ತದೈವ ಸಭಾಮಧ್ಯಾನ್ನಿರ್ಗತ್ಯ ಕಲಹಪ್ರಿಯಃ ।**
**ದ್ರಾಕ್ಪ್ರಾಪತ್ಕೋಪವೇಗೇನ ನಗರೇ ಶಿವಮಂದಿರೇ ॥ ೪೩೧ ॥**

**ದಮಿತಾರಿಂ ಸಭಾಸ್ಥಾನೇ ಸನ್ನಿವಿಷ್ಟಂ ಸ್ವವಿಷ್ಟರೇ ।**
**ಅಸ್ತಮಸ್ತಕಭಾಸ್ವಂತಮಿವ ಪ್ರಪತನೋನ್ಮುಖಮ್ ॥ ೪೩೨ ॥**

ಕಲಹಪ್ರಿಯನಾದ ಆ ನಾರದನು ಆಗಲೇ ಸಭಾಮಧ್ಯದಿಂದ ಹೊರಟು ಕೋಪದ ವೇಗದಿಂದ ಶೀಘ್ರವಾಗಿ ಶಿವಮಂದಿರವೆಂಬ ನಗರದಲ್ಲಿ ಸಭಾಸ್ಥಾನದಲ್ಲಿ ತನ್ನ ಪೀಠದಲ್ಲಿ ಕುಳಿತಿದ್ದವನೂ ಪತನೋನ್ಮುಖನೂ ಅಸ್ತಪರ್ವತದ ಮಸ್ತಕದಲ್ಲಿರುವವನೂ ಆದ ಸೂರ್ಯನಂತಿರುವವನೂ ಆದ ದಮಿತಾರಿರಾಜನನ್ನು ಹೊಂದಿದನು.

**ಸದ್ಯೋ ವಿಲೋಕ್ಯ ಸೋಽಪ್ಯಾಶು ಪ್ರತ್ಯುತ್ಥಾನಪುರಸ್ಸರಮ್ ।**
**ಪ್ರತಿಗೃಹ್ಯ ಪ್ರಣಮ್ಯೋಚ್ಚೈರ್ವಿಷ್ಟರೇ ಸನ್ನಿವೇಶ್ಯ ತಮ್ ॥ ೪೩೩ ॥**

**ದತ್ತಾಶಿಷಂ ಕಿಮುದ್ದಿಶ್ಯ ಭವಂತೋ ಮಾಮುಪಾಗತಾಃ ।**
**ಸಂಮುದಂ ಕಿಂ ಮಮಾದೇಷ್ಟುಂ ಪ್ರಾಪ್ತಂ ಕಿಂ ವಾ ಮಹಾಪದಮ್ ॥**

ಅವನೂ ಆ ನಾರದನನ್ನು ಆಗಲೇ ನೋಡಿ ಶೀಘ್ರವಾಗಿ ಎದ್ದುನಿಂತು ಇದಿರ್ಗೊಂಡು ನಮಸ್ಕರಿಸಿ ಉನ್ನತಾಸನದಲ್ಲಿ ಕುಳ್ಳಿರಿಸಿದನು. ಆಶೀರ್ವದಿಸಿದ ಆ ನಾರದನನ್ನು ಕುರಿತು ದಮಿತಾರಿಯು ''ತಾವು ಏನನ್ನು ಉದ್ದೇಶಿಸಿ ನನ್ನನ್ನು ಹೊಂದಿದಿರಿ ?ನನಗೆ ಸಂತೋಷವನ್ನು ಹೇಳುವುದಕ್ಕೆ ಬಂದಿರೋ ?ಅಥವಾ ಮಹಾಪತ್ತನ್ನು ಹೇಳುವುದಕ್ಕೆ ಬಂದಿರೋ ?''

ಇತ್ಯಪ್ರಾಕ್ಷೀದಸೌ ಚಾಸ್ಯ ವಿಕಾಸಿವದನಾಂಬುಜಃ ।
ಸಂಮುದಂ ಜನಯನ್ವಾಚಮವೋಚತ್ಪ್ರೀತಿವರ್ಧನೀಮ್ ॥ ೪೩೫ ॥

ಈ ಪ್ರಕಾರವಾಗಿ ಪ್ರಶ್ನೆಮಾಡಿದನು. ವಿಕಸಿತವಾದ ಮುಖಕಮಲವುಳ್ಳವನಾದ ಈ ನಾರದನೂ ಈ ದಮಿತಾರಿಗೆ ಸಂತೋಷವನ್ನುಂಟುಮಾಡುವವನಾಗಿ ಪ್ರೀತಿಯನ್ನು ಹೆಚ್ಚಿಸುವ ಮಾತನ್ನು ಹೇಳಿದನು.

ಸಾರಭೂತಾನಿ ವಸ್ತೂನಿ ತವಾನ್ವೇಷ್ಟುಂ ಪರಿಭ್ರಮನ್ ।
ನರ್ತಕೀದ್ವಯಮದ್ರಾಕ್ಷಂ ಪ್ರೇಕ್ಷ್ಯಾಯೋಗ್ಯಂ ತಥೈವ ತತ್ ॥ ೪೩೬ ॥

ಅಸ್ಥಾನಸ್ಥಂ ಸಮೀಕ್ಷೈವಮನಿಷ್ಟಂ ಸೋಢುಮಕ್ಷಮಃ ।
ಆಗತೋಹಂ ಕಥಂ ಸಹ್ಯಃ ಪಾದೇ ಚೂಡಾಮಣಿಃ ಸ್ಥಿತಃ ॥ ೪೩೭ ॥

"ನಿನಗೆ ಸಾರಭೂತವಾದ ವಸ್ತುಗಳನ್ನು ಹುಡುಕುವುದಕ್ಕೋಸ್ಕರ ಸಂಚರಿಸುವವನಾಗಿ ಈರ್ವರು ನರ್ತಕಿಯರನ್ನು ನೋಡಿದೆನು. ಹಾಗೆಯೇ ನೋಡುವುದಕ್ಕೆ ಯೋಗ್ಯರಾದ ಆ ನರ್ತಕಿಯರು ಅಯೋಗ್ಯಸ್ಥಾನದಲ್ಲಿರುವುದನ್ನು ನೋಡಿ ಹೀಗೆ ಅನಿಷ್ಟವಿಷಯವನ್ನು ಸಹಿಸುವುದಕ್ಕೆ ಅಸಮರ್ಥನಾಗಿ ನಾನು ಬಂದೆನು. ಚೂಡಾಮಣಿಯು ಪಾದದಲ್ಲಿದ್ದರೆ ಹೇಗೆ ತಾನೆ ಸಹ್ಯವಾಗುವುದು ?

ಸಂಪ್ರತ್ಯಪ್ರತಿಮಲ್ಲೌ ವಾ ನೂತನಶ್ರೀಮದೋದ್ಧತೌ ।
ಪ್ರಭಾಕರೀಪುರಾಧೀಶೌ ವ್ಯಲೀಕವಿಜಿಗೀಷುಕೌ ॥ ೪೩೮ ॥

ಸಪ್ತವ್ಯಸನಸಂಸಕ್ತೌ ಸುಖೋಚ್ಛೇದ್ಯೌ ಪ್ರಮಾದಿನೌ ।
ತಯೋರ್ಗೃಹೇ ಸುಖಗ್ರಾಹ್ಯಂ ಜಗತ್ಸಾರಮವಸ್ಥಿತಮ್ ॥ ೪೩೯ ॥

ಈಗ ಅಸಮಾನರಾದ ಜಟ್ಟಿಗಳಂತಿರುವವರೂ ನೂತನಸಂಪತ್ತಿಯಿಂದ ಮದೋದ್ಧತರೂ ಮಿಥ್ಯಾಜಯೇಚ್ಛೆಯುಳ್ಳವರೂ ಸಪ್ತವ್ಯಸನಗಳಲ್ಲಿ ಆಸಕ್ತರೂ ಆದ ಪ್ರಭಾಕರೀಪುರದ ಈರ್ವರು ದೊರೆಗಳು ಸುಲಭದಿಂದ ಭೇದಿಸಲ್ಪಡತಕ್ಕವರೂ ಪ್ರಮಾದವುಳ್ಳವರೂ ಆಗಿರುತ್ತಾರೆ. ಅವರ ಮನೆಯಲ್ಲಿ ಸುಖದಿಂದ ಗ್ರಹಣ ಮಾಡುವುದಕ್ಕೆ ಯೋಗ್ಯವಾದ ಜಗತ್ತಿನ ಸಾರವು–ನರ್ತಕೀಯುಗ್ಮವು ಇರುತ್ತದೆ.

ತದ್ದೂತಪ್ರೇಷಣಾದೇವ ತವಾದ್ಯಾಯಾತಿ ಹೇಲಯಾ ।
ಕಾಲಹಾನಿರ್ನ ಕರ್ತವ್ಯಾ ಹಸ್ತಾಸನ್ನೇತಿದುರ್ಲಭೇ ॥ ೪೪೦ ॥

ಅದು ದೂತನನ್ನು ಕಳುಹಿಸುವುದರಿಂದಲೇ ನಿನಗೆ ಈ ದಿವಸ ಸುಲಭದಿಂದ ಬರುವುದು. ಅತಿದುರ್ಲಭವಾದ ವಸ್ತುವು ಕೈಯಹತ್ತಿರಕ್ಕೆ ಬರುವಾಗ ಕಾಲಹರಣವನ್ನು ಮಾಡಬಾರದು."

ಇತ್ಯೇವಂ ಪ್ರೇರಿತಸ್ತೇನ ಸ ಪಾಪೇನ ಯಮೇನ ವಾ ।
ದಮಿತಾರಿಃ ಸಮಾಸನ್ನಮರಣಃ ಶ್ರವಣಂ ದದೌ ॥ ೪೪೧ ॥

ಈ ಪ್ರಕಾರವಾಗಿ ಯಮನಿಂದ ಪ್ರೇರಿತನಾದಂತೆ ಪಾಪಿಯಾದ ಆ ನಾರದನಿಂದ ಪ್ರೇರಿತನೂ ಸಮೀಪಿಸಿರುವ ಮರಣವುಳ್ಳವನೂ ಆದ ದಮಿತಾರಿಯು ಆ ಮಾತಿಗೆ ಕಿವಿಗೊಟ್ಟನು.

ತದ್ಯೈವ ನರ್ತಕೀವಾರ್ತಾಶ್ರುತಿವ್ಯಾಮುಗ್ಧಚೇತನಃ ।
ದೂತಂ ಸೋಪಾಯನಂ ಪ್ರಸ್ತುತಾರ್ಥಸಂಬಂಧವೇದಿನಮ್ ॥ ೪೪೨ ॥

ಪ್ರಾಹಿಣೋದ್ವತ್ಸಕಾವತ್ಯಾಂ ಮಹೀಶೌ ಶೌರ್ಯಶಾಲಿನೌ ।
ಪ್ರತಿ ಸೋಪಿ ನೃಪಾದೇಶಾದಂತರೇಹಾನ್ಯಹಾಪಯನ್ ॥ ೪೪೩ ॥

ಗತ್ವಾ ಜಿನಗೃಹೇ ಪ್ರೋಷಧೋಪವಾಸಸಮನ್ವಿತಮ್ ।
ಅಪರಾಜಿತರಾಜಂ ಚ ಯುವರಾಜಂ ಚ ಸುಸ್ಥಿತಮ್ ॥ ೪೪೪ ॥

ದೃಷ್ಟ್ವಾಮಾತ್ಯಮುಖಾದ್ದೂತೋ ನಿವೇದಿತನಿಜಾಗಮಃ ।
ಯಥೌಚಿತ್ಯಂ ಪ್ರದಾಯಾಭ್ಯಾಂ ಸ್ವಾನೀತೋಪಾಯನಂ ಸುಧೀಃ॥ ೪೪೫ ॥

ಜ್ವಲತ್ಯಸ್ಯ ಪ್ರತಾಪಾಗ್ನಿರ್ದಿವ್ಯಾಯಃಪಿಂಡಭಾಸ್ವರಃ ।
ಕೃತದೋಷಾನ್ವ್ಯಲೀಕಾಭಿಮಾನಿನೋ ದಹತಿ ದ್ರುತಮ್ ॥ ೪೪೬ ॥

ಯಸ್ಯ ನಾಮ್ನೈವ ನಿರ್ಭಿನ್ನಹೃದಯಾಃ ಪ್ರಾಕೃತದ್ವಿಷಃ ।
ವಮಂತಿ ವೈರಮಸ್ತ್ರಂ ವಾ ವಿನಮ್ರಾ ಭಯವಿಹ್ವಲಾಃ ॥ ೪೪೭ ॥

ನ ಸಂತಿ ಸಹಜಾಸ್ತಸ್ಯ ಶತ್ರವಃ ಶುದ್ಧಚೇತಸಃ ।
ವಿಭಜ್ಯಾನ್ವಯಜೈರ್ವಿಶ್ವೈಸ್ತದ್ರಾಜ್ಯಂ ಭುಜ್ಯತೇ ಯತಃ ॥ ೪೪೮ ॥

ಕೃತ್ರಿಮಾಃ ಕೇನ ಜಾಯಂತೇ ರಿಪವಸ್ತಸ್ಯ ಭೂಭುಜೈಃ ।
ಮಾಲೇವಾಜ್ಞಾ ಹತಾವಜ್ಞೈರುಹ್ಯತೇ ಯದಿ ಮೂರ್ಧಭಿಃ ॥ ೪೪೯ ॥

ವಿನಮ್ರವಿಶ್ವವಿದ್ಯೇಶಮುಕುಟಾಗ್ರಮಣಿತ್ವಿಷಾ ।
ಸ ಪಾದಪೀಠಪರ್ಯಂತೇ ವಿಧತ್ತೇ ಧನುರಾಮರಮ್ ॥ ೪೫೦ ॥

ಯಶಃ ಕುಂದೇಂದುನಿರ್ಭಾಸಿ ತಸ್ಯಾರಾತಿಜಯಾರ್ಜಿತಮ್ ।
ಕನ್ಯಾ ಗಾಯಂತಿ ದಿಗ್ದಂತಿದಂತಪರ್ಯಂಕಕೇಷ್ವಲಮ್ ॥ ೪೫೧ ॥

ದುರ್ದಮಾ ವಿದ್ವಿಷಸ್ತೇನ ದಾಂತಾ ಯಂತ್ರೇವ ದಂತಿನಃ ।
ದಮಿತಾರಿರಿತಿ ಖ್ಯಾತಿಂ ಸ ಧತ್ತೇನ್ವರ್ಥಪೇಶಲಾಮ್ ॥ ೪೫೨ ॥

ತಸ್ಯ ಶೌರ್ಯಾನಲೋ ಭಸ್ಮಿತಾಖಿಲಾರಾತಿರಂಧನಃ ।
ಜಾಜ್ವಲೀತಿ ತಥಾಪ್ಯಗ್ನಿಕುಮಾರಾಮರಭೀಷಣಃ ॥ ೪೫೩ ॥

ಪ್ರೇಷಿತಃ ಶ್ರೀಮತಾನೇನ ದೇವೇನಾಹಂ ಯುವಾಂ ಪ್ರತಿ ।
ಪ್ರೀತಯೇ ಯಾಚಿತುಂ ತಸ್ಮಾದ್ದಾತವ್ಯಂ ನರ್ತಕೀದ್ವಯಮ್ ॥ ೪೫೪ ॥

ಯುಷ್ಮದೀಯಂ ಭುವಿ ಖ್ಯಾತಂ ಯೋಗ್ಯಂ ತಸ್ಯೈವ ತದ್ಯತಃ ।
ಯುವಯೋಃ ಸ ಹಿ ತದ್ದಾನಾತ್ಸುಪ್ರಸನ್ನಃ ಫಲಿಷ್ಯತಿ ॥ ೪೫೫ ॥

ಆಗಲೇ ನರ್ತಕಿಯರ ಸಮಾಚಾರವನ್ನು ಕೇಳಿದುದರಿಂದ ವ್ಯಾಮೋಹಿತವಾದ ಮನಸ್ಸುಳ್ಳವನಾಗಿ ಪ್ರಕೃತವಿಷಯದ ಸಂಬಂಧವನ್ನು ತಿಳಿದಿರುವ ದೂತನನ್ನು ವತ್ಸಕಾವತಿಯಲ್ಲಿ ಶೌರ್ಯಶಾಲಿಗಳಾಗಿರುವ ರಾಜರುಗಳನ್ನು ಕುರಿತು ಕೈಗಾಣಿಕೆಯೊಡನೆ ಕಳುಹಿದನು. ಆ ದೂತನೂ ದೊರೆಯ ಆಜ್ಞೆಯಿಂದ ಮಧ್ಯದಲ್ಲಿ ದಿನಗಳನ್ನು ಕಳೆಯದೆ ಹೋಗಿ ಜಿನಮಂದಿರದಲ್ಲಿ ಪ್ರೋಷಧೋಪವಾಸವುಳ್ಳವನಾಗಿ ಕುಳಿತಿದ್ದ ಅಪರಾಜಿತರಾಜನನ್ನು ಮತ್ತು ಯುವರಾಜನನ್ನು ಕಂಡು ಮಂತ್ರಿಯ ಮೂಲಕವಾಗಿ ತನ್ನ ಆಗಮನವನ್ನು ತಿಳುಹಿದ ಪ್ರಾಜ್ಞನಾದ ದೂತನು ತಾನು ತಂದಿದ್ದ ಕೈಗಾಣಿಕೆಯನ್ನು ಉಚಿತಾನುಸಾರವಾಗಿ ಈ ರಾಜರುಗಳಿಗೆ ಕೊಟ್ಟು "ಈ ದಮಿತಾರಿಯ ದಿವ್ಯವಾದ ಕಬ್ಬಿಣದ ಗುಂಡಿನಂತೆ ಪ್ರಕಾಶಮಾನವಾದ ಪ್ರತಾಪವೆಂಬ ಬೆಂಕಿಯು ಜ್ವಲಿಸುತ್ತದೆ. ತಪ್ಪನ್ನು ಮಾಡಿದ ಮಿಥ್ಯಾಭಿಮಾನಿಗಳನ್ನು ಶೀಘ್ರವಾಗಿ ಸುಡುತ್ತದೆ. ಯಾವ ದಮಿತಾರಿಯ ಹೆಸರಿನಿಂದಲೇ ಭೇದಿಸಲ್ಪಟ್ಟ ಹೃದಯವುಳ್ಳ ಸಾಮಾನ್ಯಶತ್ರುಗಳು ನಮ್ರರಾಗಿಯೂ ಭಯದಿಂದ ಬಾಡಿದವರಾಗಿಯೂ ವೈರವನ್ನು ಕಾರಿಬಿಡುತ್ತಾರೆ. ಅಥವಾ ಅಸ್ತ್ರವನ್ನು ಬಿಡುತ್ತಾರೆ. ಅವನ ರಾಜ್ಯವನ್ನು ಎಲ್ಲಾ ವಂಶಜರು ವಿಭಾಗಿಸಿಕೊಂಡು ಅನುಭವಿಸುವುದರಿಂದ ಶುದ್ಧ ಮನಸ್ಸಿನವನಾದ ಅವನಿಗೆ ಒಡಹುಟ್ಟಿರುವ ಶತ್ರುಗಳಿಲ್ಲ. ಅವನಿಗೆ ತಿರಸ್ಕಾರವನ್ನು ಮಾಡದಿರುವ ರಾಜರುಗಳು ಅವನ ಆಜ್ಞೆಯನ್ನು ಮಸ್ತಕಗಳಲ್ಲಿ ಪುಷ್ಪಮಾಲೆಯಂತೆ ಧರಿಸುತ್ತಾರೆಂದಮೇಲೆ ಅವನಿಗೆ ಕೃತ್ರಿಮಶತ್ರುಗಳು ಯಾವ ಕಾರಣದಿಂದುಂಟಾಗುತ್ತಾರೆ ? ಅವನು ನಮ್ರರಾಧ ಸಮಸ್ತವಿದ್ಯಾಧರರ ಕಿರೀಟಗಳ ಅಗ್ರಭಾಗದಲ್ಲಿರುವ ರತ್ನಗಳ ಕಾಂತಿಯಿಂದ ತನ್ನ ಪಾದಪೀಠದ ಸಮೀಪದಲ್ಲಿ ದೇವ ಸಂಬಂಧವಾದ–ಇಂದ್ರಧನುಸ್ಸನ್ನು ಮಾಡುತ್ತಾನೆ. ಅವನ ಶತ್ರುವಿಜಯದಿಂದುಂಟಾದುದೂ

ಕುಂದಪುಷ್ಪಕ್ಕೂ ಚಂದ್ರನಿಗೂ ಸದೃಶವೂ ಆದ ಯಶಸ್ಸನ್ನು ದಿಕ್ಕನ್ಯೆಯರು ದಿಗ್ಗಜಗಳ ದಂತಪ್ರದೇಶಗಳಲ್ಲಿ ಚೆನ್ನಾಗಿ ಹಾಡುತ್ತಾರೆ. ಆನೆಯ ಮಾವಟಿಗನಿಂದ ಆನೆಗಳು ದಮನಮಾಡಲ್ಪಡುವಂತೆ ಆ ದಮಿತಾರಿಯಿಂದ ದುರ್ದಮರಾದ ಶತ್ರುಗಳು ದಮನಮಾಡಲ್ಪಡುತ್ತಾರೆ. ಆದುದರಿಂದ ಅವನು ದಮಿತಾರಿಯೆಂಬ ಅನ್ವರ್ಥವೂ ಸುಂದರವೂ ಆದ ಖ್ಯಾತಿಯನ್ನು–ಹೆಸರನ್ನು ಧರಿಸಿರುತ್ತಾನೆ. ಆ ದಮಿತಾರಿಯ ಸಕಲಶತ್ರುಗಳೆಂಬ ಪಾಕಗಳನ್ನು ಭಸ್ಮಮಾಡಿದ ಶೌರ್ಯವೆಂಬ ಬೆಂಕಿಯು ಅಧಿಕವಾಗಿ ಜ್ವಲಿಸುತ್ತದೆ. ಹಾಗಾದರೂ ಅಗ್ನಿ ಕುಮಾರದೇವನಂತೆ ಭಯಂಕರವಾಗಿದೆ. ಶ್ರೀಮಂತನಾದ ಈ ದಮಿತಾರಿಯು ಪ್ರೀತಿಗೋಸ್ಕರ ನರ್ತಕೀಯುಗ್ಮವನ್ನು ಕೇಳುವುದಕ್ಕಾಗಿ ನನ್ನನ್ನು ನಿಮ್ಮಗಳ ಬಳಿಗೆ ಕಳುಹಿದನು. ಆದುದರಿಂದ ನರ್ತಕಿಯರನ್ನು ಕೊಡಬೇಕು. ಜಗತ್ತಿನಲ್ಲಿ ಪ್ರಖ್ಯಾತವಾದ ಮತ್ತು ನಿಮ್ಮಗಳ ಸಂಬಂಧವಾದ ಆ ನರ್ತಕೀಯುಗ್ಮವು ಆ ದಮಿತಾರಿಗೇ ಯೋಗ್ಯವಾಗಿರುವುದರಿಂದ ಆದನ್ನು ಅವನಿಗೆ ಕೊಡುವುದರಿಂದ ಅವನು ನಿಮ್ಮಗಳಲ್ಲಿ ಚೆನ್ನಾಗಿ ಪ್ರಸನ್ನನಾಗಿ ಫಲಿಸುವನು."

**ಇತ್ಯಬ್ರವೀದಿದಂ ಶ್ರುತ್ವಾ ತಮಾವಾಸಂ ಪ್ರಹಿತ್ಯ ತೌ ।**
**ಕಿಂ ಕಾರ್ಯಮಿತಿ ಪೃಚ್ಛಂತೌ ಸ್ಥಿತಾವಾಹೂಯ ಮಂತ್ರಿಣಃ ॥ ೪೫೬ ॥**

ಈ ಪ್ರಕಾರವಾಗಿ ಹೇಳಿದನು. ಈ ಮಾತನ್ನು ಕೇಳಿ ಆ ರಾಜಕುಮಾರರು ಆ ದೂತನನ್ನು ಬಿಡಾರಕ್ಕೆ ಕಳುಹಿಸಿ ಮಂತ್ರಿಗಳನ್ನು ಕರೆದು "ಏನು ಮಾಡತಕ್ಕುದು ?" ಎಂದು ಕೇಳುತ್ತಿದ್ದರು.

**ತಯೋಃ ಪುಣ್ಯೋದಯಾತ್ತದ್ವಸ್ತೃತೀಯಭವದೇವತಾಃ ।**
**ಸುನಿರೂಪ್ಯ ಸ್ವರೂಪಾಣಿ ತೌ ಸ್ವಯಂ ಸಮುಪಾಶ್ರಯನ್ ॥ ೪೫೭ ॥**

ಆಗಲೇ ಅವರುಗಳ ಪುಣ್ಯೋದಯದಿಂದ ಮೂರನೆಯ ಭವದ ದೇವತೆಗಳು ಬಂದು ತಾವು ತಮ್ಮ ರೂಪಗಳನ್ನು ಚೆನ್ನಾಗಿ ವಿವರಿಸಿ ಆ ರಾಜಕುಮಾರರನ್ನು ಆಶ್ರಯಿಸಿದುವು.

**ವಯಂ ಯುವಾಭ್ಯಾಂ ಸಂಯೋಜ್ಯಾ ನಿಜಾಭಿಪ್ರೇತಕರ್ಮಣಿ ।**
**ಅಸ್ಥಾನೇ ಮಾಕುಲೀಭೂತಮಿತ್ಯಾಹುಶ್ಚಾಹಿತಾದರಾಃ ॥ ೪೫೮ ॥**

ಆ ದೇವತೆಗಳು ಪ್ರೀತಿಯುಳ್ಳವೂ ಆಗಿ "ನೀವುಗಳು ನಿಮಗಿಷ್ಟವಾದ ಕಾರ್ಯದಲ್ಲಿ ನಮ್ಮನ್ನು ಸೇರಿಸಬೇಕು. ಸ್ಥಾನವಲ್ಲದ ಸ್ಥಾನದಲ್ಲಿ ವ್ಯಾಕುಲರಾಗಬೇಡಿ" ಎಂದು ಹೇಳಿದುವು.

**ಶ್ರುತ್ವೈತದ್ರಾಜ್ಯಭಾರಂ ಸ್ವಂ ನಿಧಾಯ ನಿಜಮಂತ್ರಿಷು ।**
**ನರ್ತಕೀವೇಷಮಾದಾಯ ರಾಜ್ಞಾವಾಂ ಪ್ರೇಷಿತೇ ತತಃ ॥ ೪೫೯ ॥**

**ಯಾಮೇತಿ ದೂತೇನಾಲಪ್ಯ ಸಂಪ್ರಾಪ್ಯ ಶಿವಮಂದಿರಮ್ ।**
**ಸಮಾಲೋಚಿತಗೂಢಾರ್ಥೌ ಪ್ರವಿಶ್ಯ ನೃಪಮಂದಿರಮ್ ॥ ೪೬೦ ॥**

**ದೃಷ್ಟವಂತೌ ಖಗಾಧೀಶಂ ಯಥೌಚಿತ್ಯಂ ಪ್ರತುಷ್ಯ ಸಃ ।**
**ಸಂಭಾಷ್ಯ ಸಾಮವಾಕ್ಸಾರಃ ಪೂಜಯಿತ್ವಾ ದಿನೇಪರೇ ॥ ೪೬೧ ॥**

**ಅಂಗಹಾರೈಃ ಸಕರಣೈರಸೈರ್ಭಾವೈರ್ಮನೋಹರೈಃ ।**
**ನೃತ್ತಂ ತಯೋರ್ವಿಲೋಕ್ಯಾಪ್ತಸಮ್ಮದಃ ಪರಿತೋಷತಃ ॥ ೪೬೨ ॥**

**ಭವನ್ನೃತ್ತಕಲಾಂ ಕಲ್ಯಾಮಾಶು ಶಿಕ್ಷಯತಂ ಸುತಾಮ್ ।**
**ಮದೀಯಾಮಿತ್ಯದಾತ್ಕನ್ಯಾಮೇತಾಭ್ಯಾಂ ಕನಕಶ್ರಿಯಮ್ ॥ ೪೬೩ ॥**

ಈ ಮಾತನ್ನು ಕೇಳಿ ತಮ್ಮ ರಾಜ್ಯಭಾರವನ್ನು ತಮ್ಮ ಮಂತ್ರಿಗಳಲ್ಲಿರಿಸಿ ತಾವು ಆ ನರ್ತಕಿಯರ ವೇಷವನ್ನು ಧರಿಸಿ ದೂತನ ಬಳಿಗೆ ಬಂದು "ನಮ್ಮನ್ನು ರಾಜರು ಕಳುಹಿಸಿದ್ದಾರೆ. ಆದುದರಿಂದ ಹೋಗೋಣ" ಎಂದು ಹೇಳಿ ದೂತನೊಡನೆ ಶಿವಮಂದಿರನಗರವನ್ನು ಹೊಂದಿ ರಹಸ್ಯವಿಷಯವನ್ನು ಪರ್ಯಾಲೋಚಿಸಿದವರಾಗಿ ಅರಮನೆಯನ್ನು ಪ್ರವೇಶಿಸಿ ಉಚಿತಾನುಸಾರವಾಗಿ ಆ ಖೇಚರಾಧಿಪತಿಯನ್ನು ಕಂಡರು. ಸಾರವಾದ ಸಾಮವಚನವುಳ್ಳ ಆ ದಮಿತಾರಿಯು ಸಂತುಷ್ಟನಾಗಿ ಮಾತನಾಡಿ ಅವರನ್ನು ಸತ್ಕರಿಸಿ ಮತ್ತೊಂದು ದಿವಸ ಕರಣಸಹಿತವಾದ ಅಂಗವಿಕ್ಷೇಪಗಳಿಂದಲೂ ಮನೋಹರವಾದ ರಸಗಳಿಂದಲೂ ಭಾವಗಳಿಂದಲೂ ಕೂಡಿದ ಅವರ ನೃತ್ಯವನ್ನು ನೋಡಿ ಹರ್ಷವನ್ನು ಹೊಂದಿದವನಾಗಿ ಸಂತೋಷದಿಂದ "ಮನೋಹರವಾದ ತಮ್ಮ ನೃತ್ಯಕಲೆಯನ್ನು ಶೀಘ್ರವಾಗಿ ನನ್ನ ಮಗಳಿಗೆ ಕಲಿಸಿರಿ" ಎಂದು ಇವರಿಗೆ ಕನಕಶ್ರೀಯೆಂಬ ಕನ್ಯೆಯನ್ನು ಕೊಟ್ಟನು.

**ಆದಾಯ ತಾಂ ಯಥಾಯೋಗ್ಯಂ ನರ್ತಯಂತೌ ನೃಪಾತ್ಮಜಾಮ್ ।**
**ಪೇಠತುರ್ಗುಣಸಂದೃಬ್ಧಮಿತಿ ತೇ ಭಾವಿಚಕ್ರಿಣಃ ॥ ೪೬೪ ॥**

ಆ ರಾಜಪುತ್ರಿಯನ್ನು ತೆಗೆದುಕೊಂಡು ಯಥೋಚಿತವಾಗಿ ನರ್ತನಮಾಡಿಸುವವರಾಗಿ ಅವರು ಮುಂದಿನ ಚಕ್ರವರ್ತಿಯ ಗುಣಸಮೂಹವನ್ನು ಮುಂದೆ ಹೇಳುವ ರೀತಿಯಾಗಿ ಪಠನಮಾಡಿದರು.

**ಗುಣೈಃ ಕುಲಬಲಾದಿಭಿರ್ಭುವಿ ವಿಜಿತ್ಯ ವಿಶ್ವಾನ್ನೃಪಾ- ।**
**ನ್ಮನೋಜಮಪಿ ಲಜ್ಜಯನ್ ಯುವವರೋ ವಪುಃಸಂಪದಾ ।**
**ವಿದಗ್ಧವನಿತಾವಿಲಾಸಲಲಿತಾವಲೋಕಾಲಯಃ ।**
**ಕ್ಷಿತೇಃ ಪತಿರನಂತವೀರ್ಯ ಇತಿ ವಿಶ್ರುತಃ ಪಾತು ವಃ ॥ ೪೬೫ ॥**

"ಕುಲ ಬಲ ಮೊದಲಾದ ಗುಣಗಳಿಂದ ಜಗತ್ತಿನಲ್ಲಿ ಸಕಲರಾಜರುಗಳನ್ನು ಜಯಿಸಿ ಮನ್ಮಥನನ್ನೂ ಲಜ್ಜೆಗೊಳಿಸುವವನೂ ಯುವಕರಲ್ಲಿ ಶ್ರೇಷ್ಠನೂ ಶರೀರಸಂಪತ್ತಿಯಿಂದ ಚತುರೆಯರಾದ ಸ್ತ್ರೀಯರ ವಿಲಾಸದಿಂದ ಮನೋಹರವಾದ ನೋಟಕ್ಕೆ ಸ್ಥಾನನೂ ಅನಂತವೀರ್ಯನೆಂದು ಪ್ರಸಿದ್ಧನೂ ಆದ ಪೃಥಿವೀಪತಿಯು ನಿಮ್ಮಗಳನ್ನು ಕಾಪಾಡಲಿ."

**ತದಾ ತಚ್ಛ್ರುತಿಮಾತ್ರೇಣ ಮದನಾವಿಷ್ಟವಿಗ್ರಹಾ ।**
**ಸ್ತೂಯತೇ ಯಃ ಸ ಕೋ ಬ್ರೂತಮಿತ್ಯಪ್ರಾಕ್ಷೀನ್ನೃಪಾತ್ಮಜಾ ॥ ೪೬೬ ॥**

ಆಗ ಆ ಗುಣಪ್ರಶಂಸೆಯ ಶ್ರವಣಮಾತ್ರದಿಂದ ಕಾಮಾವಿಷ್ಟವಾದ ದೇಹವುಳ್ಳ ರಾಜಪುತ್ರಿಯು "ಸ್ತುತಿಸಲ್ಪಡುವವನು ಅವನು ಯಾವನು ? ಹೇಳಿ" ಎಂದು ಪ್ರಶ್ನೆಮಾಡಿದಳು.

**ಪ್ರಭಾಕರೀಪುರಾಧೀಶೋಜನಿ ಸ್ತಿಮಿತಸಾಗರಾತ್ ।**
**ಮಹಾಮಣಿರಿವ ಕ್ಷ್ಮಾಭೃನ್ಮೌಲಿಚೂಡಾಮಣೀಯಿತಃ ॥ ೪೬೭ ॥**

**ಕಾಂತಾಕಲ್ಪಲತಾರೋಹರಮ್ಯಕಲ್ಪಮಹೀರುಹಃ ।**
**ಕಾಮಿನೀಭ್ರಮರೀಭೋಗ್ಯಮುಖಾಂಭೋಜವಿರಾಜಿತಃ ॥ ೪೬೮ ॥**

"ರಾಜರುಗಳ ಕಿರೀಟಗಳಿಗೆ ಚೂಡಾಮಣಿಯಂತಿರುವ ಪ್ರಭಾಕರೀಪುರಾಧಿಪತಿಯೂ ಸ್ತ್ರೀಯೆಂಬ ಕಲ್ಪಲತೆಯು ಹಬ್ಬುವುದಕ್ಕೆ ರಮಣೀಯವಾದ ಕಲ್ಪವೃಕ್ಷದಂತಿರುವವನೂ ಕಾಮಿನಿಯೆಂಬ ಹೆಣ್ಣುದುಂಬಿಯು ಭೋಗಿಸುವುದಕ್ಕೆ ಯೋಗ್ಯವಾದ ಮುಖಕಮಲದಿಂದ ವಿರಾಜಿತನೂ ಆದ ಆ ಅನಂತವೀರ್ಯನು, ಸ್ತಿಮಿತವಾದ ಸಮುದ್ರದಿಂದ ಮಹಾಮಣಿಯು ಹುಟ್ಟುವಂತೆ, ಸ್ತಿಮಿತಸಾಗರ–ರಾಜನಿಂದ ಜನಿಸಿದನು."

**ಇತಿ ತದ್ವಯತದ್ರೂಪಲಾವಣ್ಯಾದ್ಯನುವರ್ಣನಾತ್ ।**
**ದ್ವಿಗುಣೀಭೂತಸಂಪ್ರೀತಿರಿತ್ಯುವಾಚ ಖಗಾತ್ಮಜಾ ॥ ೪೬೯ ॥**

**ಕಿಮಸೌ ಲಭ್ಯತೇ ದ್ರಷ್ಟುಂ ಕನ್ಯಕೇ ಸುಷ್ಠು ಲಭ್ಯತೇ ।**
**ತ್ವಯೇತ್ಯನಂತವೀರ್ಯಸ್ಯ ರೂಪಂ ಸಾಕ್ಷಾತ್ಪ್ರದರ್ಶಿತಮ್ ॥ ೪೭೦ ॥**

ಈ ಪ್ರಕಾರವಾಗಿ ಅವರೀರ್ವರು ಅವನ ರೂಪಲಾವಣ್ಯಾದಿಗಳನ್ನು ವರ್ಣಿಸಿದುದರಿಂದ ದ್ವಿಗುಣಿತಪ್ರೀತಿಯುಳ್ಳವಳಾದ ಖೇಚರಪುತ್ರಿಯು "ಇವನೇನು ನೋಡುವುದಕ್ಕೆ ದೊರೆಯುವನೋ ?" ಎಂದಳು "ಕನ್ಯಕೆಯೆ ! ನಿನಗೆ ಚೆನ್ನಾಗಿ ದೊರೆಯುವನು" ಎಂದು ಅನಂತವೀರ್ಯನ ರೂಪವು ಸಾಕ್ಷಾತ್ತಾಗಿ ತೋರಿಸಲ್ಪಟ್ಟಿತು.

**ತದ್ದರ್ಶನಸಮುದ್ಭೂತಮದನಜ್ವರವಿಹ್ವಲಾಮ್ ।**
**ನರ್ತಕ್ಯೌ ತಾಂ ಸಮಾದಾಯ ಜಗ್ಮತುರ್ಮರುತಃ ಪಥಾ ॥ ೪೭೧ ॥**

ಆ ರೂಪವನ್ನು ನೋಡಿದುದರಿಂದುಂಟಾದ ಕಾಮಜ್ವರದಿಂದ ಬಾಡಿದ ಆ ಕನಕ ಶ್ರೀಯನ್ನು ಕರೆದುಕೊಂಡು ನರ್ತಕಿಯರು ಗಗನಮಾರ್ಗದಿಂದ ಹೊರಟು ಹೋದರು.

**ತದ್ವಾರ್ತಾಂ ಖೇಚರಾಧೀಶಃ ಶ್ರುತ್ವಾಂತರ್ವಂಶಿಕೋದಿತಾತ್ ।**
**ಸ್ವಭಟಾನ್ ಪ್ರೇಷಯಾಮಾಸ ತದ್ದ್ವಯಾನಯನಂ ಪ್ರತಿ ॥ ೪೭೨ ॥**

ಖೇಚರಾಧಿಪತಿಯಾದ ದಮಿತಾರಿಯು ಅಂತಃಪುರದ ಅಧಿಕಾರಿಯ ಮಾತಿನಿಂದ ಆ ಸಮಾಚಾರವನ್ನು ಕೇಳಿ ಅವರೀರ್ವರನ್ನು ಕರೆದುಕೊಂಡು ಬರುವುದಕ್ಕೋಸ್ಕರ ತನ್ನ ಭಟರನ್ನು ಕಳುಹಿಸಿದನು.

**ತದಾಗಮನಮಾಲೋಕ್ಯ ಸ ನಿವರ್ತ್ಯ ಹಲೀ ಬಲೀ ।**
**ನ್ಯಯುದ್ಧ್ಯತಾನುಜಂ ದೂರೇ ಸ್ಥಾಪಯಿತ್ವಾ ಸಕನ್ಯಕಮ್ ॥ ೪೭೩ ॥**

ಬಲಶಾಲಿಯಾದ ಆ ಬಲಭದ್ರನು ಭಟರ ಆಗಮನವನ್ನು ನೋಡಿ ಕನ್ಯಾ ಸಹಿತನಾಗಿರುವ ತಮ್ಮನನ್ನು ದೂರದಲ್ಲಿರಿಸಿ ತಾನು ಅವರೊಡನೆ ಯುದ್ಧ ಮಾಡಿದನು.

**ತೇ ತೇನ ಸುಚಿರಂ ಯುದ್ಧ್ವಾ ಕೃತಾಂತೋಪಾಂತಮಾಶ್ರಿತಾಃ ।**
**ದಮಿತಾರಿಃ ಪುನಃ ಕ್ರುಧ್ವಾ ಯುದ್ಧಶೌಂಡಾನ್ ಸಮಾದಿಶತ್ ॥ ೪೭೪ ॥**

ಆ ಭಟರು ಬಹಳ ಸಮಯದವರೆಗೆ ಬಲಭದ್ರನೊಡನೆ ಯುದ್ಧಮಾಡಿ ಯಮನ ಸಮೀಪವನ್ನು ಹೊಂದಿದರು. ದಮಿತಾರಿಯು ಕುಪಿತನಾಗಿ ಯುದ್ಧ ವಿಶಾರದರನ್ನು ಪುನಃ ಕಳುಹಿಸಿದನು.

**ತೇಪಿ ತತ್ಖಡ್ಗಧಾರೋರುವಾರಿರಾಶಾವಿವಾದ್ರಯಃ ।**
**ನಿಮಜ್ಜಂತಿ ಸ್ಮ ತಚ್ಛೃತ್ವಾ ಖಗಾಧೀಶಃ ಸವಿಸ್ಮಯಃ ॥ ೪೭೫ ॥**

**ನರ್ತಕ್ಯೋರ್ನ ಪ್ರಭಾವೋಯಂ ಕಿಮೇತದ್ಬ್ರೂತ ಮಂತ್ರಿಣಃ ।**
**ಇತ್ಯಾಹ ತೇ ಚ ತತ್ತತ್ತ್ವಂ ಸ್ವಯಂ ಜ್ಞಾತ್ವಾ ನ್ಯವೇದಯನ್ ॥ ೪೭೬ ॥**

ಅವರೂ ಆ ಬಲಭದ್ರನ ಖಡ್ಗಧಾರೆಯೆಂಬ ದೊಡ್ಡದಾದ ಸಮುದ್ರದಲ್ಲಿ, ಪರ್ವತಗಳಂತೆ, ಮುಳುಗಿದರು. ಆ ವಿಷಯವನ್ನು ಕೇಳಿ ಖೇಚರಾಧಿಪತಿಯು ಆಶ್ಚರ್ಯವುಳ್ಳವನಾಗಿ ''ಇದು ನರ್ತಕಿಯರ ಪ್ರಭಾವವಲ್ಲ. ಮಂತ್ರಿಗಳೆ !ಇದೇನು ? ಹೇಳಿ'' ಎಂದು ಹೇಳಿದನು. ಅವರೂ ಆದರ ಗುಟ್ಟನ್ನು ತಾವು ತಿಳಿದು ದೊರೆಗೆ ತಿಳಿಸಿದರು.

**ತದಾ ಲಬ್ಧೇಂಧನೋ ವಾಗ್ನಿಃ ಕ್ರುದ್ಧೋ ವಾ ಗಜವಿದ್ವಿಷಃ ।**
**ದಮಿತಾರಿಃ ಸ್ವಯಂ ಯೋದ್ಧುಂ ಚಚಾಲ ಸ್ವಬಲಾನ್ವಿತಃ ॥ ೪೭೭ ॥**

ಆಗ ಕಟ್ಟಿಗೆಯನ್ನು ಹೊಂದಿದ ಬೆಂಕಿಯಂತೆಯೂ ಸಿಂಹದಂತೆಯೂ ಕುಪಿತ ನಾದ ದಮಿತಾರಿಯು ತನ್ನ ಸೇನಾಸಮೇತನಾಗಿ ತಾನೇ ಯುದ್ಧಮಾಡುವುದಕ್ಕೆ ನಡೆದನು.

**ಏಕಕೋಪಿ ಹಲೀ ಸರ್ವಾನ್ ವಿದ್ಯಾವಿಕ್ರಮಸಾಧನಃ ।**
**ದಮಿತಾರೀಂ ವಿಮುಚ್ಯೈತಾನ್ ದೇಹಶೇಷಾಂಶ್ಚಕಾರ ಸಃ ॥ ೪೭೮ ॥**

ವಿದ್ಯೆಯೂ ಪರಾಕ್ರಮವೂ ಸಾಧನವಾಗಿರುವ ಆ ಬಲಭದ್ರನು ಒಬ್ಬನಾಗಿದ್ದರೂ ದಮಿತಾರಿಯನ್ನು ಬಿಟ್ಟು ಈ ಸೈನಿಕರೆಲ್ಲರನ್ನೂ ದೇಹಾವಶಿಷ್ಟರನ್ನಾಗಿ ಮಾಡಿದನು –ಕೊಂದನು.

**ದಮಿತಾರಿಂ ಯಮಂ ವೈಕಂ ಹಂತುಮಾಯಾಂತಮಗ್ರಜಮ್ ।**
**ಅನಂತವೀರ್ಯಸ್ತಂ ದೃಷ್ಟ್ವಾ ಕೇಸರೀವ ಮದದ್ವಿಪಮ್ ॥ ೪೭೯ ॥**

**ಅಭ್ಯೇತ್ಯಾನೇಕಧಾ ಯುದ್ಧ್ವಾ ವಿದ್ಯಾಬಲಮದೋದ್ಧತಮ್ ।**
**ವಿಮದೀಕೃತ್ಯ ನಿಷ್ಪಂದಂ ವ್ಯಧಾದಧಿಕವಿಕ್ರಮಃ ॥ ೪೮೦ ॥**

ಒಂಟಿಯಾಗಿರುವ ಅಣ್ಣನನ್ನು ಕೊಲ್ಲುವುದಕ್ಕೋಸ್ಕರ ಯಮನಂತೆ ಬರು ತ್ತಿರುವ ಆ ದಮಿತಾರಿಯನ್ನು ಅಧಿಕಪರಾಕ್ರಮಿಯಾದ ಅನಂತವೀರ್ಯನು ನೋಡಿ ಮದಗಜವನ್ನು ಸಿಂಹವು ಇದಿರಿಸುವಂತೆ ಇದಿರಿಸಿ ಅನೇಕವಿಧವಾದ ಯುದ್ಧವನ್ನು ಮಾಡಿ ವಿದ್ಯಾಬಲದಿಂದ ಗರ್ವಿತನಾದ ಆ ದಮಿತಾರಿಯ ಗರ್ವವನ್ನಿಳಿಸಿ ನಿಶ್ಚಲ ನನ್ನಾಗಿ ಮಾಡಿದನು.

**ಖಗೇಶಶ್ಚಕ್ರಮಾದಾಯ ಕ್ಷಿಪತಿ ಸ್ಮಾಭಿಭೂಭುಜಮ್ ।**
**ದಕ್ಷಿಣಾಗ್ರಕರಾಭ್ಯರ್ಣೇ ತಸ್ಥಿವತ್ತತ್ ಪರೀತ್ಯ ತಮ್ ॥ ೪೮೧ ॥**

**ಮೃತ್ಯುಂ ವಾ ಧರ್ಮಚಕ್ರೇಣ ಯೋಗೀ ತಂ ಖೇಚರಾಧಿಪಮ್ ।**
**ಅಹಂಸ್ತೇನೈವ ಚಕ್ರೇಣ ವಿಕ್ರಮೀ ಭಾವಿಕೇಶವಃ ॥ ೪೮೨ ॥**

ಖೇಚರೇಶ್ವರನಾದ ದಮಿತಾರಿಯು ತನ್ನ ಚಕ್ರವನ್ನು ತೆಗೆದುಕೊಂಡು ಅನಂತ ವೀರ್ಯನಿಗೆ ಇದಿರಾಗಿ ಪ್ರಯೋಗಿಸಿದನು. ಅದು ಅನಂತವೀರ್ಯನನ್ನು ಸುತ್ತಿ ಬಂದು ಅವನ ಬಲಗೈಯ ಸಮೀಪದಲ್ಲಿ ನಿಂತಿತು. ಯೋಗಿಯು ಧರ್ಮಚಕ್ರದಿಂದ ಆ ಮೃತ್ಯುವನ್ನು ಕೊಲ್ಲುವಂತೆ, ಪರಾಕ್ರಮಿಯಾದ ಮುಂದಿನ ಕೇಶವನು ಅದೇ ಚಕ್ರದಿಂದ ಆ ಖೇಚರಾಧಿಪತಿಯನ್ನು ಕೊಂದನು.

**ಇತಿ ಯುದ್ಧಾಂತಮಾಸಾದ್ಯ ಗಗನೇ ಗಚ್ಛತೋಸ್ತಯೋಃ ।**
**ಪೂಜ್ಯಾತಿಕ್ರಮಭೀತ್ಯೇವ ವಿಮಾನೇ ಸಹಸಾ ಸ್ಥಿತೇ ॥ ೪೮೩ ॥**

ಈ ರೀತಿಯಾಗಿ ಯುದ್ಧವನ್ನು ಮುಗಿಸಿ ಆಕಾಶದಲ್ಲಿ ಹೋಗುತ್ತಿರುವ ಆ ಬಲಭದ್ರ ಕೇಶವರ ವಿಮಾನಗಳು, ಪೂಜ್ಯರನ್ನು ಅತಿಕ್ರಮಿಸುವ ಭೀತಿಯಿಂದಲೋ ಎಂಬಂತೆ, ಅಕಸ್ಮಾತ್ತಾಗಿ ನಿಂತುವು.

**ಕೇನಚಿತ್ಕೀಲಿತೇವೇತೋ ನ ಯಾತಃ ಕೇನ ಹೇತುನಾ ।**
**ಇತಿ ತೌ ಪರಿತೋ ವೀಕ್ಷ್ಯ ಸದೋ ದಿವ್ಯಂ ವಿಲೋಕ್ಯ ತತ್ ॥ ೪೮೪ ॥**

**ಮಾನಸ್ತಂಭಾಃ ಸರಾಂಸ್ಯೇತಾನ್ಯೇತದ್ವನಚತುಷ್ಟಯಮ್ ।**
**ಮಧ್ಯೇ ಗಂಧಕುಟೀ ನೂನಂ ಜಿನೇಂದ್ರಃ ಕೋಪಿ ತಿಷ್ಠತಿ ॥ ೪೮೫ ॥**

''ಯಾವನಿಂದಲೋ ಕೀಲಿಸಲ್ಪಟ್ಟಂತೆ, ಇಲ್ಲಿಂದ ಯಾವ ಕಾರಣದಿಂದ ವಿಮಾನಗಳು ಹೋಗುವುದಿಲ್ಲ ?'' ಎಂದು ಆ ಬಲಭದ್ರ ಕೇಶವರು ಸುತ್ತಲೂ ನೋಡಿ ಕೆಳಗಿರುವ ಆ ದಿವ್ಯಸಭೆಯನ್ನು ನೋಡಿ ''ಇವು ಮಾನಸ್ತಂಭಗಳು, ಇವು ಸರೋವರಗಳು, ಇವು ನಾಲ್ಕು ವನಗಳು, ಮಧ್ಯದಲ್ಲಿ ಗಂಧಕುಟಿಯಿದೆ. ನಿಶ್ಚಯ ವಾಗಿ ಯಾವನೋ ಜಿನೇಶ್ವರನಿದ್ದಾನೆ.''

**ಇತಿ ತತ್ರಾವತೀರ್ಯೈಷ ಶಿವಮಂದಿರನಾಯಕಃ ।**
**ಸುತಃ ಕನಕಪುಂಖಸ್ಯ ಜಯದೇವ್ಯಾಶ್ಚ ನಿಶ್ಚಿತಃ ॥ ೪೮೬ ॥**

**ದಮಿತಾರಿಪಿತಾ ಕೀರ್ತಿದರೋ ನಾಮ್ನಾ ವಿರಕ್ತವಾನ್ ।**
**ಪ್ರಾಪ್ಯ ಶಾಂತಿಕರಾಭ್ಯಾಸೇ ಪ್ರವ್ರಜ್ಯಾಂ ಪಾರಮೇಶ್ವರೀಮ್ ॥ ೪೮೭ ॥**

**ಸಂವತ್ಸರಂ ಸಮಾದಾಯ ಪ್ರತಿಮಾಯೋಗಮಾಗಮತ್ ।**
**ಕೇವಲಾವಗಮಂ ಭಕ್ತ್ಯಾ ಸುನಾಸೀರಾದಿಪೂಜಿತಃ ॥ ೪೮೮ ॥**

ಎಂದು ಅಲ್ಲಿ ಇಳಿದು ''ಇವನು ಶಿವಮಂದಿರಪುರಾಧಿಪತಿಯೂ ಕನಕಪುಂಖನ ಮತ್ತು ಜಯದೇವಿಯ ನಿಶ್ಚಿತಪುತ್ರನೂ ದಮಿತಾರಿಯ ತಂದೆಯೂ ಆದ ಕೀರ್ತಿ

ಧರನೆಂಬವನು ವೈರಾಗ್ಯವುಳ್ಳವನಾಗಿ ಶಾಂತಿಕರರೆಂಬ ಮುನೀಶ್ವರರ ಬಳಿಯಲ್ಲಿ ಪರಮೇಶ್ವರಸಂಬಂಧವಾದ ದೀಕ್ಷೆಯನ್ನು ಹೊಂದಿ ಒಂದು ವರ್ಷದವರೆಗೆ ಪ್ರತಿಮಾಯೋಗನಿಯಮವನ್ನು ಪರಿಗ್ರಹಿಸಿ ಭಕ್ತಿಯಿಂದ ದೇವೇಂದ್ರನೇ ಮೊದಲಾದವರಿಂದ ಪೂಜಿತನಾಗಿ ಕೇವಲಜ್ಞಾನವನ್ನು ಹೊಂದಿದನು.''

ಇತ್ಯುಕ್ತ್ವೈತ್ಯ ಪರೀತ್ಯ ತ್ರಿಃ ಪ್ರಪ್ರಣಮ್ಯ ಜಿನೇಶ್ವರಮ್ ।
ಶ್ರುತಧರ್ಮಕಥೌ ತತ್ರ ತಸ್ಥತುರ್ಧ್ವಸ್ತಕಲ್ಮಷೌ ॥ ೪೮೯ ॥

ಈ ಪ್ರಕಾರವಾಗಿ ಹೇಳಿ ಮೂರು ಸುತ್ತು ಪ್ರದಕ್ಷಿಣೆಮಾಡಿ ಬಂದು ಜಿನೇಶ್ವರನನ್ನು ಚೆನ್ನಾಗಿ ನಮಸ್ಕರಿಸಿ ಧರ್ಮಕಥೆಯನ್ನು ಕೇಳಿ ಕಲ್ಮಷರಹಿತರಾಗಿ ಅಲ್ಲಿ ಕುಳಿತರು.

ಕನಕಶ್ರೀಃ ಸಹಾಭ್ಯೇತ್ಯ ತಾಭ್ಯಾಂ ಭಕ್ತ್ಯಾ ಪಿತಾಮಹಮ್ ।
ವಂದಿತ್ವಾ ಘಾತಿಹಂತಾರಮಪ್ರಾಕ್ಷೀತ್ಸ್ವಭವಾಂತರಮ್ ॥ ೪೯೦ ॥

ಆ ಬಲಭದ್ರ ಕೇಶವರೊಡನೆ ಕನಕಶ್ರೀಯು ಬಂದು ಘಾತಿಕರ್ಮವಿನಾಶಕನಾದ ತಾತನನ್ನು ಭಕ್ತಿಯಿಂದ ವಂದಿಸಿ ತನ್ನ ಭವಾಂತರವನ್ನು ಪ್ರಶ್ನೆಮಾಡಿದಳು.

ಇತಿ ಪೃಷ್ಟೋ ಜಿನಾಧೀಶೋ ನಿಜವಾಗಮೃತಾಂಶುಭಿಃ ।
ತಾಂ ತರ್ಪಯಿತುಮಿತ್ಯಾಹ ಪರಾರ್ಥೈಕಫಲೇಹಿತಃ ॥ ೪೯೧ ॥

ಈ ರೀತಿಯಾಗಿ ಪ್ರಶ್ನೆಮಾಡಲ್ಪಟ್ಟವನೂ ಪರಪ್ರಯೋಜನರೂಪವಾದ ಮುಖ್ಯ ಫಲವನ್ನಿಚ್ಛಿಸುವವನೂ ಆದ ಜಿನೇಶ್ವರನು ತನ್ನ ವಚನಗಳೆಂಬ ಅಮೃತಕಿರಣಗಳಿಂದ ಆ ಕನಕಶ್ರೀಯನ್ನು ತೃಪ್ತಿಪಡಿಸುವುದಕ್ಕೋಸ್ಕರ ಈ ರೀತಿಯಾಗಿ ಹೇಳಿದನು.

ಅತ್ರ ಜಂಬೂದ್ರುಮಾಲಕ್ಷ್ಯದ್ವೀಪೇಸ್ಮಿಂ ಭರತಾವನೌ ।
ಶಂಖಾಖ್ಯನಗರೇ ವೈಶ್ಯೋ ದೇವಿಲಸ್ತತ್ಸುತಾಭವಃ ॥ ೪೯೨ ॥

ಬಂಧುಶ್ರಿಯಾಂ ತ್ವಮೇಕೈವ ಶ್ರೀದತ್ತಾ ಜ್ಯಾಯಸೀ ಸತೀ ।
ಸುತಾಃ ಪರಾಃ ಕನೀಯಸ್ಯಃ ಕುಂಡಿಃ ಪಂಗೂ ಕುಣೀ ತಥಾ ॥ ೪೯೩ ॥

ಬಧಿರಾ ಕುಬ್ಜಿಕಾ ಕಾಣಾ ಷಟ್ತಾಸಾಂ ಪೋಷಿಕಾ ಸ್ವಯಮ್ ।
ತ್ವಂ ಕದಾಚನ್ಮುನಿಂ ಸರ್ವಯಶಸಂ ಶಂಖಶೈಲಗಮ್ ॥ ೪೯೪ ॥

ಅಭಿವಂದ್ಯ ಶಮಂ ಯಾತಾ ಹಿಂಸಾವಿರಮಣವ್ರತಮ್ ।
ಗೃಹೀತ್ವಾ ಧರ್ಮಚಕ್ರಾಖ್ಯಮುಪವಾಸಂ ಚ ಶುದ್ಧಧೀಃ ॥ ೪೯೫ ॥

ಅನ್ನದಾ ಸುವ್ರತಾಖ್ಯಾಯೈ ಗಣಿನ್ಯೈ ವಿಧಿಪೂರ್ವಕಮ್ ।
ದತ್ವಾಂಧೋದಾನಮೇತಸ್ಯಾ ವಮನೇ ಸತ್ಯುಪೋಷಿತಾತ್ ॥ ೪೯೬ ॥

ಸಮ್ಯಕ್ತ್ವಾಭಾವತಸ್ತತ್ರ ವಿಚಿಕಿತ್ಸಾಮುಗಾಸ್ತತಃ ।
ಸೌದರ್ಮೇ ಜೀವಿತಸ್ಯಾಂತೇ ಭೂತ್ವಾ ಸಾಮಾನಿಕಾಮರೀ ॥ ೪೯೭ ॥

ತತೋ ಮಂದರ ಮಾಲಿನ್ಯಾಂ ದಮಿತಾರಿಃ ಸುತಾಭವಃ ।
ಪುಣ್ಯಾದ್ವ್ರತೋಪವಾಸಾತ್ತಾದ್ವಿಚಿಕಿತ್ಸಾಫಲಂ ತ್ವಿದಮ್ ॥ ೪೯೮ ॥

ಸಬಲಂ ಪಿತರಂ ಹತ್ವಾ ಹೃತ್ವಾನೀತಾಸಿ ದುಃಖಿನೀ ।
ವಿಚಿಕಿತ್ಸಾಂ ನ ಕುರ್ವಂತಿ ತಸ್ಮಾತ್ಸಾಧುಷು ಧೀಧನಾಃ ॥ ೪೯೯ ॥

''ಈ ಜಂಬೂದ್ವೀಪದ ಈ ಭರತಭೂಮಿಯಲ್ಲಿ ಶಂಖನಗರದಲ್ಲಿ ದೇವಿಲನೆಂಬ ವೈಶ್ಯನಿದ್ದನು. ಅವನಿಗೆ ಬಂಧುಶ್ರೀಯೆಂಬ ಪತ್ನಿಯಲ್ಲಿ ನೀನು ಶ್ರೀ ದತ್ತೆಯೆಂಬ ಆತನ ಪುತ್ರಿಯಾದೆ. ಕುಂಡಿ, ಕುಂಟಿ, ಕುಣೀ, ಕಿವುಡಿ, ಗಿಡ್ಡಿ, ಕುರುಡಿ ಈ ಆರು ಮಂದಿ ಹೆಣ್ಣುಮಕ್ಕಳು ನಿನ್ನ ತಂಗಿಯರಾಗಿದ್ದರು. ನೀನೊಬ್ಬಳೇ ಆ ಹೆಣ್ಣುಮಕ್ಕಳ ಪೋಷಣೆಯನ್ನು ಮಾಡುವವಳಾಗಿದ್ದೆ. ಒಂದಾನೊಂದು ಕಾಲದಲ್ಲಿ ನೀನು ಶಂಖಗಿರಿಯನ್ನು ಹೊಂದಿರುವ ಸರ್ವಯಶನೆಂಬ ಮುನಿಯನ್ನು ವಂದಿಸಿ ಶಾಂತಭಾವವನ್ನು ಹೊಂದಿದವಳೂ ಶುದ್ಧಬುದ್ಧಿಯುಳ್ಳವಳೂ ಆಗಿ ಹಿಂಸಾದಿಪಾಪ ನಿವೃತ್ತಿರೂಪವಾದ ವ್ರತವನ್ನೂ ಧರ್ಮಚಕ್ರವೆಂಬ ಉಪವಾಸವನ್ನೂ ಗ್ರಹಣಮಾಡಿ ಮತ್ತೊಂದು ಕಾಲದಲ್ಲಿ ಸುವ್ರತೆಯೆಂಬ ಆರ್ಯಿಕೆಗೆ ವಿಧಿಪೂರ್ವಕವಾಗಿ ಅನ್ನದಾನವನ್ನು ಕೊಟ್ಟು ಆ ಆರ್ಯಿಕೆಯು ಉಪವಾಸವನ್ನು ಮಾಡಿದ್ದುದರಿಂದ ಆಕೆಗೆ ವಮನವಾಗುತ್ತಿರಲು ಸಮ್ಯಕ್ತ್ವವಿಲ್ಲದಿದ್ದುದರಿಂದ ಅದರಲ್ಲಿ ನೀನು ಜಿಗುಪ್ಸೆಯನ್ನು ಹೊಂದಿದೆ. ಅದರಿಂದ ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮಕಲ್ಪದಲ್ಲಿ ಸಾಮಾನಿಕದೇವಿಯಾಗಿದ್ದು ಆಯುಷ್ಯವು ತೀರಿದ ಬಳಿಕ ಅಲ್ಲಿಂದ ಚ್ಯುತಳಾಗಿ ವ್ರತೋಪವಾಸದಿಂದುಂಟಾದ ಪುಣ್ಯದಿಂದ ದಮಿತಾರಿಗೆ ಮಂದರಮಾಲಿನಿಯೆಂಬವಳಲ್ಲಿ ಪುತ್ರಿಯಾದೆ. ಕೇಶವನು ಸೇನಾಸಮೇತನಾದ ನಿನ್ನ ತಂದೆಯನ್ನು ಕೊಂದು ನಿನ್ನನ್ನು ಅಪಹರಿಸಿ ಅವನಿಂದ ನೀನು ದುಃಖವುಳ್ಳವಳಾಗಿ ತರಲ್ಪಟ್ಟಿರುತ್ತಿ. ಇದಾದರೋ ನೀನು ಜಿಗುಪ್ಸೆಯನ್ನು ಮಾಡಿದ್ದುದರ ಫಲ. ಆದುದರಿಂದ ಪ್ರಾಜ್ಞರು ಸಾಧುಗಳಲ್ಲಿ ಜಿಗುಪ್ಸೆಯನ್ನು ಮಾಡುವುದಿಲ್ಲ.''

ಶ್ರುತ್ವೈತದತಿಶೋಕಾರ್ತಾ ವಂದಿತ್ವಾ ಜಿನಪುಂಗವಮ್ ।
ಪ್ರಭಾಕರೀಮಗಾತ್ತಾಭ್ಯಾಂ ಸಹ ಸಾ ಖೇಚರಾತ್ಮಜಾ ॥ ೫೦೦ ॥

ಈ ವಿಷಯವನ್ನು ಕೇಳಿ ಬಹುಶೋಕಪೀಡಿತಳಾಗಿ ಜಿನೇಶ್ವರನನ್ನು ವಂದಿಸಿ ಆ ಖೇಚರಪುತ್ರಿಯು ಆ ಬಲಭದ್ರ ಕೇಶವರೊಡನೆ ಪ್ರಭಾಕರೀಪಟ್ಟಣಕ್ಕೆ ಹೋದಳು.

ಸುಘೋಷವಿದ್ಯುದ್ದಂಷ್ಟ್ರಾಖ್ಯೌ ಭ್ರಾತರೌ ಕನಕಶ್ರಿಯಃ ।
ತತ್ಪುರೇನಂತಸೇನೇನ ಯುಧ್ಯಮಾನೌ ಬಲೋದ್ಧತೌ ॥ ೫೦೧ ॥

ವಿಲೋಕ್ಯ ವಿಹಿತಕ್ರೋಧೌ ಜಘ್ನತುರ್ಬಲಕೇಶವೌ ।
ತನ್ನಿಶಮ್ಯ ಖಗಾಧೀಶತನುಜಾ ಸೋಢುಮಕ್ಷಮಾ ॥ ೫೦೨ ॥

ಪ್ರವೃದ್ಧತೇಜಸಾ ಯೂನಾ ಭಾನುನೇವ ಹತದ್ಯುತಿಃ ।
ಯುತಾ ಸಾ ವಿಧುರೇಖೇವ ಕ್ಷೀಣಪಕ್ಷಬಲಾನ್ವಿತಾ ॥ ೫೦೩ ॥

ಆ ಪಟ್ಟಣದಲ್ಲಿ ಆ ಕನಕಶ್ರೀಯ ಸುಘೋಷ ವಿದ್ಯುದ್ದಂಷ್ಟ್ರರೆಂಬೀರ್ವರು ಬಲುಗರ್ವಿತರಾದ ಸಹೋದರರು ಬಲಭದ್ರಕೇಶವರ ಕಡೆಯವನಾದ ಅನಂತಸೇನನೊಡನೆ ಯುದ್ಧಮಾಡುತ್ತಿದ್ದರು. ಅದನ್ನು ನೋಡಿ ಕೋಪಗೊಂಡ ಬಲಭದ್ರ ಕೇಶವರು ಅವರನ್ನು ಹಿಂಸಿಸಿದರು. ಆ ವಿಷಯವನ್ನು ಖೇಚರಪುತ್ರಿಯಾದ ಕನಕಶ್ರೀಯ ಕೇಳಿ ಸಹಿಸುವುದಕ್ಕೆ ಅಸಮರ್ಥಳಾಗಿ ವೃದ್ಧಿಯನ್ನು ಹೊಂದಿದ ತೇಜಸ್ಸುಳ್ಳ ಸೂರ್ಯನೊಡನೆ ಸೇರಿರುವ ಮತ್ತು ಕ್ಷೀಣಪಕ್ಷದಿಂದಲೂ ಕ್ಷೀಣಬಲದಿಂದಲೂ ಕೂಡಿರುವ ಚಂದ್ರರೇಖೆಯು ಕಾಂತಿಹೀನವಾಗಿರುವಂತೆ, ವೃದ್ಧಿಯನ್ನು ಹೊಂದಿದ ತೇಜಸ್ಸುಳ್ಳ ಯುವಕ-ಅನಂತವೀರ್ಯನೊಡನೆ ಕೂಡಿರುವವಳೂ ಕ್ಷೀಣವಾದ ಪಕ್ಷಬಲವುಳ್ಳವಳೂ ಆದ ಆ ಕನಕಶ್ರೀಯು ಕಾಂತಿಹೀನಳಾದಳು.

ಶೋಕದಾವಾನಲಮ್ಲಾನಾ ಲೂನೇವ ವನವಲ್ಲರೀ ।
ವಿಚ್ಛಿನ್ನಕಾಮಭೋಗೇಚ್ಛಾ ಚಿಚ್ಛಿತ್ಸುರ್ದುಃಖಸಂತತೀಃ ॥ ೫೦೪ ॥

ಮೋಚಯಿತ್ವಾನುಬದ್ಧೌ ತೌ ಸಂಪ್ರಾರ್ಥ್ಯ ಬಲಕೇಶವೌ ।
ಸ್ವಯಂಪ್ರಭಾಖ್ಯತೀರ್ಥೇಶಾತ್ಪೀತ್ವಾ ಧರ್ಮರಸಾಯನಮ್ ॥ ೫೦೫ ॥

**ಸುಪ್ರಭಾಗಣಿನೀಪಾರ್ಶ್ವೇ ದೀಕ್ಷಿತ್ವಾ ಜೀವಿತಾವಧೌ ।**
**ಸೌಧರ್ಮಕಲ್ಪೇ ದೇವೋಽಭೂಚ್ಚಿತ್ರಂ ವಿಲಸಿತಂ ವಿಧೇಃ ॥ ೫೦೬ ॥**

ಶೋಕವೆಂಬ ಕಾಡ್ಗಿಚ್ಚಿನಿಂದ ಬಾಡಿದವಳೂ ಕತ್ತರಿಸಲ್ಪಟ್ಟಿರುವ ವನಲತೆಯಂತಿರುವವಳೂ ಕಾಮಭೋಗೇಚ್ಛೆಯನ್ನು ನಾಶಮಾಡಿದವಳೂ ದುಃಖಪರಂಪರೆಗಳನ್ನು ನಾಶಮಾಡಲಿಚ್ಛೆಯುಳ್ಳವಳೂ ಆದ ಆ ಕನಕಶ್ರೀಯು ಬಂಧಿಸಲ್ಪಟ್ಟಿದ್ದ ಆ ಸಹೋದರರನ್ನು, ಬಲಭದ್ರ ಕೇಶವರನ್ನು ಪ್ರಾರ್ಥಿಸಿ , ಬಂಧವಿಮೋಚನೆಯನ್ನು ಮಾಡಿಸಿ ಸ್ವಯಂಪ್ರಭರೆಂಬ ತೀರ್ಥೇಶ್ವರರಿಂದ ಧರ್ಮವೆಂಬ ರಸಾಯನವನ್ನು ಪಾನಮಾಡಿ ಸುಪ್ರಭೆಯೆಂಬ ಆರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮಕಲ್ಪದಲ್ಲಿ ದೇವನಾಗಿ ಜನಿಸಿದಳು. ವಿಧಿವಿಲಾಸವು ವಿಚಿತ್ರವಾಗಿದೆ.

**ಸುವಿಹಿತಮಹೋಪಾಯೌ ವಿದ್ಯಾಬಲಾದ್ಬಹುಪುಣ್ಯಕೌ ।**
**ಬುಧಜನನುತೌ ಸುಪ್ರಾರಂಭೌ ಪರಸ್ಪರಸಂಗತೌ ।**
**ಹತಪೃಥುರಿಪುಶಾಂತಾತ್ಮಾನೌ ಯಥಾನಯವಿಕ್ರಮೌ ।**
**ಸಮಮವಿಶತಾಂ ಸಿದ್ಧಾರ್ಥೌ ತೌ ಪುರೀಂ ಪರಮೋತ್ಸವಾಮ್॥ ೫೦೭ ॥**

ವಿದ್ಯಾಬಲದಿಂದ ಮಹೋಪಾಯವನ್ನು ಚೆನ್ನಾಗಿ ಪ್ರಯೋಗಿಸಿರುವವರೂ ಬಹುಪುಣ್ಯವುಳ್ಳವರೂ ಪ್ರಾಜ್ಞರಿಂದ ಸ್ತುತಿಸಲ್ಪಟ್ಟವರೂ ಚೆನ್ನಾಗಿ ಕಾರ್ಯಾರಂಭವನ್ನು ಮಾಡುವವರೂ ಒಬ್ಬರಿಗೊಬ್ಬರು ಸೇರಿಕೊಂಡಿರುವವರೂ ಪ್ರಬಲ ವೈರಿಯನ್ನು ಕೊಂದು ಶಾಂತರಾಗಿರುವವರೂ ಉಚಿತಾನುಸಾರವಾಗಿ ನಯಪರಾಕ್ರಮವುಳ್ಳವರೂ ಅಭೀಷ್ಟಾರ್ಥಸಿದ್ಧಿಯುಳ್ಳವರೂ ಆದ ಆ ಬಲಭದ್ರ ಕೇಶವರು ಪರಮೋತ್ಸವವುಳ್ಳ ಪುರವನ್ನು ಒಟ್ಟಿಗೆ ಪ್ರವೇಶಮಾಡಿದರು.

**ಜಿತ್ವಾ ಪ್ರಸಿದ್ಧಖಚರಾನ್ ಖಚರಾದಿಭರ್ತುರ್ -।**
**ರಥ್ಯಾಸ್ಯ ತದ್ಧಲಧರತ್ವಮಲಂಘ್ಯಶಕ್ತಿಃ ।**
**ವ್ಯಕ್ತೀಚಕಾರ ಸುಚಿರಾದಪರಾಜಿತತ್ವಮ್ ।**
**ಭಾವೇನ ಚೈತದಿತಿ ನೈವ ನಿಜೇನ ನಾಮ್ನಾ ॥ ೫೦೮ ॥**

ಅಲಂಘ್ಯವಾದ ಶಕ್ತಿಯುಳ್ಳ ಅಪರಾಜಿತನು ಖೇಚರಾಧಿಪತಿಯಾದ ದಮಿತಾರಿಯ ಪ್ರಸಿದ್ಧಖೇಚರರನ್ನು ಜಯಿಸಿ ಆ ಹಲಧರತ್ವ–ಬಲಭದ್ರತ್ವವನ್ನು ಹೊಂದಿ ತನ್ನ ಹೆಸರಿನಿಂದಲೇ ಅಲ್ಲದೆ ಸ್ವಭಾವದಿಂದಲೂ ಈ ಅಪರಾಜಿತತ್ವವನ್ನು ಬಹುಕಾಲದವರೆಗೆ ವ್ಯಕ್ತಗೊಳಿಸಿದನು. ನಿಜವಾಗಿಯೂ ಬೇರೆಯವರಿಂದ ಜಯಿಸಲ್ಪಡದವನಾಗಿದ್ದನೆಂದು ಭಾವವು.

**ಚಕ್ರೇಣ ತಸ್ಯ ಯುಧಿ ತಂ ದಮಿತಾರಿಶಕ್ತಿಮ್ ।**
**ಹತ್ವಾ ತ್ರಿಖಂಡಪತಿತಾಂ ಸಮವಾಪ್ಯ ತಸ್ಮಾತ್ ।**
**ವೀರ್ಯೇಣ ಸೂರ್ಯವಿಜಯೀತ್ಯಮನಂತವೀರ್ಯೋ ।**
**ಧುರ್ಯೋಽಭವದ್ಭುವಿ ಸ ಶೌರ್ಯಪರೇಷು ಶೂರಃ ॥ ೫೦೯ ॥**

ಶತ್ರುಗಳ ಶಕ್ತಿಯನ್ನು ದಮನಮಾಡಿದ ಆ ದಮಿತಾರಿಯನ್ನು ಯುದ್ಧದಲ್ಲಿ ಅವನ ಚಕ್ರದಿಂದಲೇ ಕೊಂದು ತ್ರಿಖಂಡಾಧಿಪತ್ಯವನ್ನು ಹೊಂದಿ ಶೌರ್ಯದಿಂದ ಸೂರ್ಯನನ್ನು ಜಯಿಸುವವನೂ ಶೌರ್ಯಶಾಲಿಗಳಲ್ಲಿ ಶೂರನೂ ಆದ ಆ ಅನಂತವೀರ್ಯನು ಈ ರೀತಿಯಾಗಿ ಪೃಥ್ವಿಯಲ್ಲಿ ಪ್ರಮುಖನಾದನು.

**ನಿತ್ಯಾಲೋಚಿತಮಂತ್ರಶಕ್ತ್ಯನುಗತಃ ಸ್ಫೂರ್ಜತ್ಪ್ರತಾಪಾನಲ- ।**
**ಜ್ವಾಲಾಭಸ್ಮಿತವೈರಿವಂಶಗಹನಸ್ತ್ವಂ ಚಕ್ರಿಣಾಮಗ್ರಣೀಃ ।**
**ಯಸ್ತ್ವಾಂ ಕೋಪಯತಿ ಕ್ಷಣಾದರಿರಸೌ ಕಾಲಜ್ವಲಜ್ಜ್ವಾಲಿನಾ ।**
**ಲೀಢೋ ಲಿಹ್ಯತ ಏವ ಲಕ್ಷ್ಯತ ಇತಿ ಸ್ತುತ್ಯಃ ಸದಾ ವಂದಿಭಿಃ ॥ ೫೧೦ ॥**

**ಗತಘನರಿಪುರೋಧಃ ಸಾಗ್ರಜೋದ್ದಿಷ್ಟಮಾರ್ಗಃ ।**
**ಸಮುಪಗತವಿಶುದ್ಧಿಃ ಕಾಲಲಬ್ಧ್ಯಾ ಸ ಚಕ್ರೀ ।**
**ರವಿರಿವ ನಿಜದೀಪ್ತಿವ್ಯಾಪ್ತದಿಕ್ಚಕ್ರವಾಲಃ ।**
**ಶರದಮಿವ ಪುರೀಂ ಸ್ವಾಮಧ್ಯುವಾಸೋಗ್ರತೇಜಾಃ ॥ ೫೧೧ ॥**

''ನೀನು ನಿತ್ಯವೂ ಆಲೋಚಿಸಲ್ಪಟ್ಟ ಮಂತ್ರಶಕ್ತಿಗನುಸಾರವಾಗಿರುವವನೂ ಪ್ರಕಾಶಮಾನವಾದ ಪ್ರತಾಪವೆಂಬ ಬೆಂಕಿಯ ಜ್ವಾಲೆಯಿಂದ ವೈರಿಗಳ ವಂಶವೆಂಬ ವನವನ್ನು ಭಸ್ಮಮಾಡಿರುವವನೂ ಚಕ್ರವರ್ತಿಗಳಲ್ಲಿ ಶ್ರೇಷ್ಠನೂ ಆಗಿರುತ್ತಿ. ನಿನ್ನನ್ನು ಯಾವನು ಕೋಪಗೊಳಿಸುತ್ತಾನೋ ಈ ಶತ್ರುವು ಕ್ಷಣಕಾಲದಿಂದ ಯಮನೆಂಬ ಉರಿಯುತ್ತಿರುವ ಬೆಂಕಿಯಿಂದ ವ್ಯಾಪ್ತನಾಗಿ ಆಸ್ವಾದಿಸಲ್ಪಟ್ಟವನಾಗಿಯೇ ತೋರುತ್ತಾನೆ'' ಈ ಪ್ರಕಾರವಾಗಿ ಸ್ತುತಿಪಾಠಕರಿಂದ ಯಾವಾಗಲೂ ಸ್ತುತಿಸಲ್ಪಡತಕ್ಕವನೂ ಬಲಿಷ್ಠನಾದ ಶತ್ರುವಿನ ಆಕ್ರಮಣವನ್ನು ತೊಲಗಿಸಿದವನೂ ಅಣ್ಣನಿಂದ ಹೇಳಲ್ಪಟ್ಟ ದಾರಿಯಲ್ಲಿ ವರ್ತಿಸುವವನೂ ಕಾಲಲಬ್ಧಿಯಿಂದ ಪ್ರಾಪ್ತವಾದ ವಿಶುದ್ಧಿಯುಳ್ಳವನೂ ತನ್ನ ಕಾಂತಿಯಿಂದ ವ್ಯಾಪ್ತವಾದ ದಿಙ್ಮಂಡಲವುಳ್ಳ ಸೂರ್ಯನಂತೆ ತನ್ನ ಕಾಂತಿಯಿಂದ ವ್ಯಾಪ್ತವಾದ ದಿಙ್ಮಂಡಲವುಳ್ಳವನೂ ಆದ ಆ ಚಕ್ರವರ್ತಿ–ಅನಂತವೀರ್ಯನು ಶರದೃತುವಿನಂತಿರುವ ತನ್ನ ಪಟ್ಟಣದಲ್ಲಿ ವಾಸಮಾಡಿದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಅಪರಾಜಿತಾನಂತವೀರ್ಯಾಭ್ಯುದಯವರ್ಣನಂ ನಾಮ ದ್ವಿಷಷ್ಟಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯ ವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಅಪರಾಜಿತಾನಂತವೀರ್ಯಾಭ್ಯುದಯವರ್ಣನವೆಂಬ
ಅರವತ್ತೆರಡನೆಯ ಪರ್ವವು ಸಮಾಪ್ತವಾದುದು.

---



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಹಸ್ತಿನಾಪಟ್ಟಣದಲ್ಲಿ ವಿಶ್ವಸೇನಮಹಾರಾಜಂಗಂ ಐರಾದೇವಿಗಂ ಭರಣೀ ನಕ್ಷತ್ರದಲ್ಲುದಯಿಸಿದ ಸುವರ್ಣ ವರ್ಣಮನುಳ್ಳ ನಾಲ್ವತ್ತುಬಿಲ್ಲುತ್ಸೇಧಮನುಳ್ಳ ಕುರುವಂಶಮನುಳ್ಳ ಒಂದುಲಕ್ಷವರ್ಷ ಆಯುಷ್ಯಮನುಳ್ಳ ಮೃಗಲಾಂಛನಮನುಳ್ಳ ಗರುಡಮಹಾಮಾನಸೀ–ಯಕ್ಷಯಕ್ಷಿಯರನುಳ್ಳ ಸಮ್ಮೇದಪರ್ವತದ ಪ್ರಭಾಸಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಶಾಂತಿತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

# ಅಥ ತ್ರಿಷಷ್ಟಿತಮಂ ಪರ್ವ

(ಶಾಂತಿತೀರ್ಥಕರಪುರಾಣ ಮುಂದುವರೆದದ್ದು)

**ಸಿಂಹಾಸನೇ ಸುಖಾಸೀನೋ ವೀಜ್ಯಮಾನಃ ಪ್ರಕೀರ್ಣಕೈಃ ।**
**ಅರ್ಧಚಕ್ರೀ ವ್ಯರಾಜಿಷ್ಟ ಯಥಾ ಷಡ್ಖಂಡಮಂಡಿತಃ ॥ ೫೧೨ ॥**

ಸಿಂಹಾಸನದಲ್ಲಿ ಸುಖದಿಂದ ಕುಳಿತು ಚಾಮರಗಳಿಂದ ಬೀಸಲ್ಪಡುತ್ತಿರುವ ಅರ್ಧಚಕ್ರಿಯು ಷಟ್ಖಂಡಮಂಡಿತನಾಗಿರುವಂತೆ ಪ್ರಕಾಶಿಸಿದನು.

**ಅಥಾಪರಾಜಿತೋಪ್ಯಾತ್ಮಯೋಗ್ಯರತ್ನಾದ್ಯಧೀಶ್ವರಃ ।**
**ಬಲದೇವಪದಂ ಪ್ರಾಪ್ಯ ಪ್ರತ್ಯಹಂ ವೃದ್ಧಿಮಾತನೋತ್ ॥ ೫೧೩ ॥**

ಬಳಿಕ ಅಪರಾಜಿತನೂ ತನಗೆ ಯೋಗ್ಯವಾದ ರತ್ನಾದಿಗಳಿಗೆ ಅಧಿಪತಿಯಾಗಿ ಬಲದೇವಪದವಿಯನ್ನು ಹೊಂದಿ ಪ್ರತಿದಿವಸ ವೃದ್ಧಿಯಾದನು.

**ಏವಂ ಭವಾಂತರಾಬದ್ಧವಿವೃದ್ಧಸ್ನೇಹಯೋಸ್ತಯೋಃ ।**
**ಕಾಲೇ ಗಚ್ಛತ್ಯವಿಚ್ಛಿನ್ನಸ್ವಚ್ಛಂದಸುಖಸಾರಯೋಃ ॥ ೫೧೪ ॥**

**ವಿಜಯಾಯಾಂ ಹಲೇಶಸ್ಯ ಬಭೂವ ಸುಮತಿಃ ಸುತಾ ।**
**ಜ್ಯೋತ್ಸ್ನೇವ ಪ್ರೀಣಿತಾಶೇಷಾ ಶುಕ್ಲಪಕ್ಷೇಂದುರೇಖಯೋಃ ॥ ೫೧೫ ॥**

ಭವಾಂತರಗಳಿಂದ ಅನುಬದ್ಧವಾದ ಮತ್ತು ವೃದ್ಧಿಯನ್ನು ಹೊಂದಿರುವ ಸ್ನೇಹವುಳ್ಳವರೂ ಅವಿಚ್ಛಿನ್ನವೂ ಸ್ವಚ್ಛಂದವೂ ಆದ ಸುಖದ ಸಾರವುಳ್ಳವರೂ ಆದ ಆ ಅಪರಾಜಿತಾನಂತವೀರ್ಯರ ಕಾಲವು ಈ ರೀತಿಯಾಗಿ ಕಳೆಯುತ್ತಿರಲು ಬಲಭದ್ರನಿಗೆ ವಿಜಯಾದೇವಿಯಲ್ಲಿ, ಶುಕ್ಲಪಕ್ಷದ ಚಂದ್ರರೇಖೆಗಳ ಬೆಳದಿಂಗಳಿನಂತೆ, ಎಲ್ಲರನ್ನೂ ಸಂತೋಷಪಡಿಸುವ ಸುಮತಿಯೆಂಬ ಪುತ್ರಿಯು ಜನಿಸಿದಳು.

**ಸಾನ್ವಹಂ ಕುರ್ವತೀ ವೃದ್ಧಿಂ ಸ್ವಸ್ಯಾಃ ಪಿತ್ರೋರಪಿ ಸ್ವಯಮ್ ।**
**ಗುಣೈರಾಹ್ಲಾದನೈಃ ಪ್ರೀತಿಂ ವ್ಯಧಾತ್ಕುವಲಯೇಪ್ಸಿತಾಮ್ ॥ ೫೧೬ ॥**

ಆಕೆಯು ಪ್ರತಿದಿವಸ ತನ್ನ ವೃದ್ಧಿಯನ್ನು ಮಾಡುವವಳಾಗಿ ತಾನು ತಂದೆ ತಾಯಿಗಳಿಗೂ ಸಂತೋಷಪಡಿಸುವ ಗುಣಗಳಿಂದ ಕುಮುದಪುಷ್ಪಸಮೂಹಕ್ಕೆ ಭೂಮಂಡಲಕ್ಕೆ ಇಚ್ಛಿತವಾದ ಪ್ರೀತಿಯನ್ನುಂಟುಮಾಡಿದಳು.

**ದಾನಾದ್ದಮವರಾಖ್ಯಾಯ ಚಾರಣಾಯ ಯಥೋಚಿತಮ್ ।**
**ಸಾಶ್ಚರ್ಯಪಂಚಕಂ ಪ್ರಾಪತ್ತತ್ರ ದೃಷ್ಟ್ವಾ ನಿಜಾತ್ಮಜಾಮ್ ॥ ೫೧೭ ॥**

**ರೂಪೇಣ ಕೇವಲಂ ನೇಯಂ ಭೂಷಿತಾ ಯೌವನೇನ ಚ ।**
**ವರಂ ಪ್ರಾರ್ಥಯತೇ ಬಾಲಾ ಸಂಶ್ರಿತಾ ಕಾಲದೇವತಾಮ್ ॥ ೫೧೮ ॥**

ಆಕೆಯು ದಮವರನೆಂಬ ಚಾರಣಮುನಿಗೆ ಯಥೋಚಿತವಾಗಿ ಒಂದು ದಿನ ಆಹಾರದಾನವನ್ನು ಮಾಡಿದುದರಿಂದ ಪಂಚಾಶ್ಚರ್ಯವನ್ನು ಹೊಂದಿದಳು. ಅಪರಾಜಿತನು ಅಲ್ಲಿ ತನ್ನ ಪುತ್ರಿಯನ್ನು ನೋಡಿ "ರೂಪದಿಂದಲೇ ಅಲ್ಲದೆ ಯೌವನದಿಂದಲೂ ಭೂಷಿತಳಾದ ಈ ಬಾಲೆಯು ಕಾಲದೇವತೆಯನ್ನು ಆಶ್ರಯಿಸಿದವಳಾಗಿ ವರನನ್ನು ಪ್ರಾರ್ಥಿಸುತ್ತಾಳೆ."

**ಇತಿ ಸಂಚಿಂತ್ಯ ತೌ ಶ್ರಾವಿತಸ್ವಯಂವರಘೋಷಣೌ ।**
**ಕೃತ್ವಾ ಸ್ವಯಂವೃತೇಃ ಶಾಲಾಂ ಪ್ರವೇಶ್ಯಾತ್ರ ವರೋತ್ತಮಾನ್ ॥ ೫೧೯ ॥**

**ಸುತಾಂ ಚ ಸ್ಯಂದನಾರೂಢಾಂ ಸುಪ್ರೀತೌ ತಸ್ಥತುಸ್ತದಾ ।**
**ಕಾಚಿದ್ವಿಮಾನಮಾರುಹ್ಯ ಖಾಗತಾ ಸುರಸುಂದರೀ ॥ ೫೨೦ ॥**

**ಅಭಿಜಾನಾಸಿ ಕಿಂ ದೇವಲೋಕೇಹಂ ತ್ವಂ ಚ ಕನ್ಯಕೇ ।**
**ವತ್ಸ್ಯಾವಸ್ತತ್ರ ಸಂಜ್ಞಾನಾತ್ಸಮಭೂತ್ಸ್ಥಿತಿರಾವಯೋಃ ॥ ೫೨೧ ॥**

**ಯಾ ಪ್ರಾಗವಾತರದ್ಧಾತ್ರೀಂ ತಾಮನ್ಯಾ ಬೋಧಯತ್ವಿತಿ ।**
**ಪ್ರೋಚೇ ಚೋಭಯಸಂಬಂಧಂ ಸನ್ನಿಧ್ಯಾಯ ಮನಃ ಶೃಣು ॥ ೫೨೨ ॥**

**ಪುಷ್ಕರದ್ವೀಪಪೂರ್ವಾರ್ಧಭರತೇ ನಂದನೇ ಪುರೇ ।**
**ನಯವಿಕ್ರಮಸಂಪನ್ನೋ ಮಹೀಶೋಮಿತವಿಕ್ರಮಃ ॥ ೫೨೩ ॥**

**ಏತಸ್ಯಾನಂತಮತ್ಯಾಶ್ಚ ಧನಾನಂತಶ್ರಿಯೌ ಸುತೇ ।**
**ಭೂತ್ವಾವಾಂ ಸಿದ್ಧಕೂಟಸ್ಥನಂದನಾಖ್ಯಯತೀಶ್ವರಾತ್ ॥ ೫೨೪ ॥**

**ಶ್ರುತ್ವಾ ಧರ್ಮಂ ವ್ರತೈಃ ಸಾರ್ಧಮುಪವಾಸಾಂಶ್ಚ ಸಂವಿದಾ ।**
**ಸಮಗ್ರಹೀಷ್ವಾಂ ನೌ ದೃಷ್ಟ್ವಾ ಕದಾಚಿತ್ತ್ರಿಪುರಾಧಿಪಃ ॥ ೫೨೫ ॥**

**ಮನೋಹರವನೇ ಗಚ್ಛನ್ ಸಹ ವಜ್ರಾಂಗದಃ ಖಗಃ ।**
**ಕಾಂತಯಾ ವಜ್ರಮಾಲಿನ್ಯಾ ಸಮಾಸಕ್ತಮತಿಸ್ತದಾ ॥ ೫೨೬ ॥**

**ಪುರೀಂ ಪ್ರಾಪಯ್ಯ ಕಾಂತಾಂ ಸ್ವಾಂ ಸಹಸಾ ಪುನರಾಗತಃ ।**
**ಗೃಹೀತ್ವಾವಾಂ ವ್ರಜನ್ನಾಶು ನಿಜಾಭಿಪ್ರಾಯವೇದಿನೀಮ್ ॥ ೫೨೭ ॥**

**ಆಗತಾಮಂತರೇ ದೃಷ್ಟ್ವಾ ದೂರಾತ್ತಾಂ ವಜ್ರಮಾಲಿನೀಮ್ ।**
**ತ್ಯಕ್ತ್ವಾ ವೇಣುವನೇ ಭೀತ್ವಾ ತಸ್ಯಾಃ ಸ್ವಪುರಮೀಯಿವಾನ್ ॥ ೫೨೮ ॥**

**ಆವಾಂ ಸನ್ನ್ಯಸ್ಯ ತತ್ರೈವ ಸೌಧರ್ಮೇಂದ್ರಸ್ಯ ಶುದ್ಧಧೀಃ ।**
**ವ್ರತೋಪವಾಸಪುಣ್ಯೇನ ದೇವೀ ನವಮಿಕಾಭವಮ್ ॥ ೫೨೯ ॥**

**ತ್ವಂ ಚ ದೇವೀ ಕುಬೇರಸ್ಯ ರತ್ಯಾಖ್ಯಾ ಸಮಜಾಯಥಾಃ ।**
**ಅನ್ಯೋನ್ಯಮವಗತ್ಯೈತ್ಯ ನಂದೀಶ್ವರಮಹಾಮಹಮ್ ॥ ೫೩೦ ॥**

**ಅಥ ಮಂದರಪರ್ಯಂತವನೇ ನಿರ್ಜಂತುಕೇ ಸ್ಥಿತಮ್ ।**
**ಚಾರಣಂ ಧೃತಿಷೇಣಾಖ್ಯಂ ಸಮಾಶ್ರಿತ್ಯ ಪ್ರಣಮ್ಯ ತಮ್ ॥ ೫೩೧ ॥**

**ಆವಾಮಪೃಚ್ಛ್ವಯಾವೇದಂ ಕದಾ ಸ್ಯಾನ್ಮುಕ್ತಿರಾವಯೋಃ ।**
**ಇತ್ಯಥೋ ಮುನಿರಪ್ಯಾಹ ಜನ್ಮನೀತಶ್ಚತುರ್ಥಕೇ ॥ ೫೩೨ ॥**

**ಅವಶ್ಯಂ ಯುವಯೋರ್ಮುಕ್ತಿರಿತಿ ತಸ್ಮಾನ್ಮಹಾಮತೇ ।**
**ಸುಮತೇ ನಾಕಿನಾಂ ಲೋಕಾತ್ ತ್ವಾಂ ಬೋಧಯಿತುಮಾಗತಾ ॥**

ಈ ರೀತಿಯಾಗಿ ಆ ಬಲಭದ್ರಕೇಶವರು ಯೋಚಿಸಿ ಸ್ವಯಂವರದ ಡಂಗೂರ ಹೊಯ್ಸಿ ಸ್ವಯಂವರಶಾಲೆಯನ್ನು ಮಾಡಿ ಅದರಲ್ಲಿ ಶ್ರೇಷ್ಠರಾದ ವರರನ್ನೂ ರಥವನ್ನೇರಿದ ಪುತ್ರಿಯನ್ನೂ ಪ್ರವೇಶಗೊಳಿಸಿ ಬಹುಪ್ರೀತಿಯುಳ್ಳವರಾಗಿದ್ದರು. ಆಗ ವಿಮಾನವನ್ನೇರಿ ಆಕಾಶದಿಂದ ಬಂದ ಒಬ್ಬಾಳೊಬ್ಬ ಸುರಸುಂದರಿಯು ಈ ಸುಮತಿ ಕುಮಾರಿಯನ್ನು ಕುರಿತು "ಏನು ನೆನಪಿದೆಯೋ ? ದೇವಲೋಕದಲ್ಲಿ ನಾನೂ ನೀನೂ ಕನ್ಯಕೆಯರಾಗಿ ವಾಸಮಾಡಿರುವೆವು. ಅಲ್ಲಿ ನಮ್ಮಗಳ ಆಯುಷ್ಯಸ್ಥಿತಿಯು ಚೆನ್ನೆಯಿಂದ ಗೊತ್ತಾಯಿತು. ಮೊದಲು ಯಾವಳು ಭೂಮಿಗಿಳಿಯುವಳೋ ಅವಳಿಗೆ ಮತ್ತೊಬ್ಬಳು ಬೋಧಿಸಲೆಂದೂ ಹೇಳಲ್ಪಟ್ಟಿತು. ಮನವಿಟ್ಟು ನಮ್ಮಿಬ್ಬರ ಸಂಬಂಧವನ್ನು ಕೇಳು. ಪುಷ್ಕರದ್ವೀಪದ ಪೂರ್ವಾರ್ಧಭರತಕ್ಷೇತ್ರದಲ್ಲಿ ನಂದನ

ಪುರದಲ್ಲಿ ನೀತಿಯಿಂದಲೂ ಪರಾಕ್ರಮದಿಂದಲೂ ಸಂಪನ್ನನಾದ ಅಮಿತವಿಕ್ರಮನೆಂಬ ದೊರೆಯಿದ್ದನು. ಈ ಅಮಿತವಿಕ್ರಮನಿಗೂ ಅನಂತಮತಿಗೂ ನಾವೀರ್ವರು ಧನಶ್ರೀ ಅನಂತಶ್ರೀಯೆಂಬ ಪುತ್ರಿಯರಾಗಿ ಸಿದ್ಧಕೂಟ ಚೈತ್ಯಾಲಯದಲ್ಲಿದ್ದ ನಂದನನೆಂಬ ಯತೀಶ್ವರನಿಂದ ಧರ್ಮವನ್ನು ಶ್ರವಣಮಾಡಿ ವ್ರತಗಳೊಡನೆ ತಿಳುವಳಿಕೆಯಿಂದ ಉಪವಾಸಗಳನ್ನೂ ಸ್ವೀಕರಿಸಿದೆವು. ಒಂದಾನೊಂದು ಕಾಲದಲ್ಲಿ ಮನೋಹರವನದಲ್ಲಿ ತನ್ನ ಪತ್ನಿಯಾದ ವಜ್ರಮಾಲಿನಿಯೊಡನೆ ಹೋಗುತ್ತಿದ್ದ ತ್ರಿಪುರಾಧಿಪತಿಯಾದ ವಜ್ರಾಂಗದ–ಖೇಚರನು ಆಗ ನಮ್ಮನ್ನು ನೋಡಿ ಆಸಕ್ತವಾದ ಮನಸ್ಸುಳ್ಳವನಾಗಿ ತನ್ನ ಪತ್ನಿಯನ್ನು ಪಟ್ಟಣಕ್ಕೆ ತಲುಪಿಸಿ ತ್ವರೆಯಾಗಿ ಹಿಂದಿರುಗಿ ಬಂದು ನಮ್ಮನ್ನು ಹಿಡಿದುಕೊಂಡು ಶೀಘ್ರವಾಗಿ ಹೋಗುವವನಾಗಿ ತನ್ನ ಅಭಿಪ್ರಾಯವನ್ನು ತಿಳಿದು ಬಂದ ಆ ವಜ್ರಮಾಲಿನಿಯನ್ನು ಮಧ್ಯದಲ್ಲಿ ದೂರದಿಂದ ನೋಡಿ ಆಕೆಯ ಭಯದಿಂದ ಬಿದಿರಿನ ಕಾಡಿನಲ್ಲಿ ನಮ್ಮನ್ನು ಬಿಟ್ಟು ತನ್ನ ಪಟ್ಟಣಕ್ಕೆ ಹೋದನು. ನಾವುಗಳು ಅಲ್ಲೇ ಸಮಾಧಿಮರಣವನ್ನು ಹೊಂದಿ ನಾನು ವ್ರತೋಪವಾಸಗಳ ಪುಣ್ಯದಿಂದ ಸೌಧರ್ಮೇಂದ್ರನಿಗೆ ಶುದ್ಧಬುದ್ಧಿಯುಳ್ಳ ನವಮಿಕಾದೇವಿಯಾದೆನು. ನೀನು ಕುಬೇರನಿಗೆ ರತಿಯೆಂಬ ದೇವಿಯಾದೆ. ನಾವು ಒಬ್ಬಳನ್ನೊಬ್ಬಳು ತಿಳಿದು ನಂದೀಶ್ವರಮಹೋತ್ಸವಕ್ಕೆ ಬಂದು ಬಳಿಕ ನಿರ್ಜಂತುಕವಾದ ಮೇರುವಿನ ಸಮೀಪದ ಕಾಡಿನಲ್ಲಿದ್ದ ಧೃತಿಷೇಣನೆಂಬ ಚಾರಣಮುನಿಯನ್ನು ಆಶ್ರಯಿಸಿ ಅವನನ್ನು ನಾವು ನಮಸ್ಕರಿಸಿ "ನಮಗೆ ಮುಕ್ತಿ ಯಾವಾಗ ಆಗುವುದು ?" ಎಂಬೀ ವಿಷಯವನ್ನು ಪ್ರಶ್ನೆಮಾಡಿದೆವು. ಅನಂತರದಲ್ಲಿ ಮುನಿಯೂ "ಈ ಜನ್ಮದಿಂದ ನಾಲ್ಕನೆಯ ಜನ್ಮದಲ್ಲಿ ಅವಶ್ಯವಾಗಿ ನಿಮ್ಮಗಳಿಗೆ ಮುಕ್ತಿಯಾಗುವುದು" ಎಂದು ಹೇಳಿದನು. ಆದುದರಿಂದ ಮಹಾಬುದ್ಧಿಯುಳ್ಳವಳಾದ ಸುಮತಿಯೇ ! ಸ್ವರ್ಗಿಕರ ಲೋಕದಿಂದ ನಿನಗೆ ಬೋಧಿಸುವುದಕ್ಕೋಸ್ಕರ ನಾನು ಬಂದೆನು."

**ಇತ್ಯವೋಚತ್ತದಾಕರ್ಣ್ಯ ಸುಮತಿರ್ನಾಮ ಸಾರ್ಥಕಮ್ ।**
**ಕುರ್ವತೀ ಪಿತ್ರನಿರ್ಮುಕ್ತಾ ಪ್ರಾವ್ರಜತ್ಸುವ್ರತಾಂತಿಕೇ ॥ ೫೩೪ ॥**

**ಕನ್ಯಕಾಭಿಃ ಶತೈಃ ಸಾರ್ಧಂ ಸಪ್ತಭಿಃ ಸಾ ಮಹಾತಪಾಃ ।**
**ತ್ಯಕ್ತಪ್ರಾಣಾನತೇ ಕಲ್ಪೇ ದೇವೋಭವದನೂದಿಶೇ ॥ ೫೩೫ ॥**

ಈ ರೀತಿಯಾಗಿ ಹೇಳಿದಳು. ಆ ಮಾತನ್ನು ಕೇಳಿ ಸುಮತಿಯು ತನ್ನ ಹೆಸರನ್ನು ಸಾರ್ಥಕಗೊಳಿಸುವವಳಾಗಿ ತಂದೆಯಿಂದ ಬಿಡಲ್ಪಟ್ಟವಳಾಗಿ ಸುವ್ರತೆಯೆಂಬ ಆರ್ಯಿಕೆಯ ಬಳಿಯಲ್ಲಿ ಏಳುನೂರೈವತ್ತು ಮಂದಿ ಕನ್ಯಕೆಯರೊಡನೆ ದೀಕ್ಷೆಯನ್ನು ತೆಗೆದುಕೊಂಡಳು. ಆಕೆಯು ಮಹಾತಪಸ್ಸುಳ್ಳವಳಾಗಿ ಆಯುಷ್ಯಾವಸಾನದಲ್ಲಿ ಸತ್ತು ದೇವನಾದಳು.

**ಆಧಿಪತ್ಯಂ ತ್ರಿಖಂಡಸ್ಯ ವಿಧಾಯ ವಿವಿಧೈಃ ಸುಖೈಃ ।**
**ಪ್ರಾವಿಶತ್ಕೇಶವಃ ಪಾಪಾತ್ಪ್ರಾಂತೇ ರತ್ನಪ್ರಭಾಂ ಕ್ಷಿತಿಮ್ ॥ ೫೩೬ ॥**

ಇತ್ತ ಕೇಶವನು ನಾನಾಸುಖಗಳಿಂದ ತ್ರಿಖಂಡಾಧಿಪತ್ಯವನ್ನು ಮಾಡಿ ಆಯುಷ್ಯಾವಸಾನದಲ್ಲಿ ಸತ್ತು ಪಾಪದಿಂದ ರತ್ನಪ್ರಭಾಭೂಮಿ–ಪ್ರಥಮನರಕವನ್ನು ಪ್ರವೇಶಿಸಿದನು.

**ತಚ್ಛೋಕಾತ್ಸೀರಪಾಣಿಶ್ಚ ರಾಜ್ಯಲಕ್ಷ್ಮೀಂ ಪ್ರಬುದ್ಧಧೀಃ ।**
**ಪ್ರದಾಯಾನಂತಸೇನಾಯ ಯಶೋಧರಮುನೀಶ್ವರಾತ್ ॥ ೫೩೭ ॥**

**ಆದಾಯ ಸಂಯಮಂ ಪ್ರಾಪ್ಯ ತೃತೀಯಾವಗಮಂ ಶಮೀ ।**
**ತ್ರಿಂಶದ್ದಿವಸಸನ್ನ್ಯಾಸಾದಚ್ಯುತಾಧೀಶ್ವರೋಭವತ್ ॥ ೫೩೮ ॥**

ಅವನ ಶೋಕದಿಂದ ಅಪರಾಜಿತ– ಬಲಭದ್ರನೂ ಎಚ್ಚತ್ತ ಬುದ್ಧಿಯುಳ್ಳವನಾಗಿ ಅನಂತಸೇನನಿಗೆ ರಾಜ್ಯಲಕ್ಷ್ಮಿಯನ್ನಿತ್ತು ತಾನು ಯಶೋಧರಮುನೀಶ್ವರನಿಂದ ವ್ರತವನ್ನು ತೆಗೆದುಕೊಂಡು ಮೂರನೆಯದಾದ–ಅವಧಿಜ್ಞಾನವನ್ನು ಹೊಂದಿ ಶಾಂತನಾಗಿ ಮೂವತ್ತು ದಿನಗಳವರೆಗೆ ಸನ್ನ್ಯಾಸ–ಆಹಾರತ್ಯಾಗದಿಂದ ಸತ್ತು ಅಚ್ಯುತಸ್ವರ್ಗದ ಇಂದ್ರನಾದನು.

**ಧರಣೇಂದ್ರಾತ್ಪಿತುರ್ಬುದ್ಧ್ವಾ ಪ್ರಾಪ್ತಸಮ್ಯಕ್ತ್ವರತ್ನಕಃ ।**
**ಸಂಖ್ಯಾತವರ್ಷೈಃ ಪ್ರಚ್ಯುತ್ಯ ನರಕಾದ್ದುರಿತಚ್ಯುತೇಃ ॥ ೫೩೯ ॥**

**ದ್ವೀಪೇಸ್ಮಿನ್ ಭಾರತೇ ಖೇಚರಾದ್ರ್ಯುದಕ್ಶ್ರೇಣಿವಿಶ್ರುತೇ ।**
**ಮೇಘವಾಹನವಿದ್ಯಾಧರೇಶೋ ಗಗನವಲ್ಲಭೇ ॥ ೫೪೦ ॥**

**ದೇವ್ಯಾಂ ತುಜಸ್ಮೇಘಮಾಲಿನ್ಯಾಂ ಮೇಘನಾದಃ ಖಗಾಧಿಪಃ ।**
**ಶ್ರೇಣೀದ್ವಯಾಧಿಪತ್ಯೇನ ಭೋಗಾಂಶ್ಚಿರಮಭುಂಜ್ತ ಸಃ ॥ ೫೪೧ ॥**

ಆ ಬಲಭದ್ರಕೇಶವರ ತಂದೆಯು ಧರಣೇಂದ್ರನಾಗಿ ಹುಟ್ಟಿದ್ದನು. ಅವನು ಹೋಗಿ ಪ್ರಥಮನರಕದಲ್ಲಿದ್ದ ಅನಂತವೀರ್ಯನಿಗೆ ಬೋಧಿಸಿದನು. ಆದರಿಂದ ಪೂರ್ವಭವವಿಷಯವನ್ನು ತಿಳಿದು ಸಮ್ಯಕ್ತ್ವವೆಂಬ ರತ್ನವನ್ನು ಪಡೆದವನಾಗಿ ದುಷ್ಕೃತವಿನಾಶದಿಂದ ಸಂಖ್ಯಾತವರ್ಷಗಳನಂತರ ನರಕದಿಂದ ಚ್ಯುತನಾಗಿ ಬಂದು ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಖೇಚರಪರ್ವತವಾದ ವಿಜಯಾರ್ಧದ ಉತ್ತರಶ್ರೇಣಿಯಲ್ಲಿ ಪ್ರಸಿದ್ಧವಾದ ಗಗನವಲ್ಲಭನಗರದಲ್ಲಿ ಮೇಘವಾಹನ–ವಿದ್ಯಾಧರೇಶ್ವರನ ಪತ್ನಿಯಾದ ಮೇಘಮಾಲಿನಿಯಲ್ಲಿ ಖೇಚರಾಧಿಪತಿಯಾದ ಮೇಘನಾದನೆಂಬ ಪುತ್ರನಾದನು. ಅವನು ಉಭಯಶ್ರೇಣಿಗಳ ಆಧಿಪತ್ಯದಿಂದ ಬಹುಕಾಲದವರೆಗೆ ಭೋಗಗಳನ್ನನುಭವಿಸಿದನು.

**ಕದಾಚನ್ಮಂದರೇ ವಿದ್ಯಾಂ ಪ್ರಜ್ಞಪ್ತಿಂ ನಂದನೇ ವನೇ ।**
**ಸಾಧಯನ್ ಮೇಘನಾದೋಯಮಚ್ಯುತೇಶೇನ ಬೋಧಿತಃ ॥ ೫೪೨ ॥**

ಒಂದಾನೊಂದು ಕಾಲದಲ್ಲಿ ಮಂದರಪರ್ವತದ ನಂದನವನದಲ್ಲಿ ಈ ಮೇಘನಾದನು ಪ್ರಜ್ಞಪ್ತಿವಿದ್ಯೆಯನ್ನು ಸಾಧಿಸುವವನಾಗಿ ಅಚ್ಯುತೇಂದ್ರನಿಂದ ಬೋಧಿಸಲ್ಪಟ್ಟನು.

**ಲಬ್ಧಬೋಧಿಃ ಸಮಾಶ್ರಿತ್ಯ ಸುರಾಮರಗುರೂ ಯಮವಾನ್ ।**
**ಸಗುಪ್ತಿಸಮಿತಿಃ ಸಮ್ಯಗಾದಾಯ ಚಿರಮಾಚರನ್ ॥ ೫೪೩ ॥**

**ಅನ್ಯೇದ್ಯುರ್ನಂದನಾಖ್ಯಾದ್ರೌ ಪ್ರತಿಮಾಯೋಗಮಾಗಮತ್ ।**
**ಅಶ್ವಗ್ರೀವಾನುಜೋ ಭ್ರಾಂತ್ವಾ ಸುಕಂಠಾಖ್ಯೋ ಭವಾರ್ಣವೇ ॥ ೫೪೪ ॥**

**ಅಸುರತ್ವಂ ಸಮಾಸಾದ್ಯ ದೃಷ್ಟ್ವೈನಂ ಮುನಿಸತ್ತಮಮ್ ।**
**ವಿಧಾಯ ಬಹುಧಾ ಕ್ರೋಧಾದುಪಸರ್ಗಾನಪಾರಯನ್ ॥ ೫೪೫ ॥**

**ಮಹಾಯೋಗಾತ್ಪ್ರತಿಜ್ಞಾತಾತ್ಸ್ಥಿರಂ ಚಾಲಯಿತುಂ ಖಲಃ ।**
**ಲಜ್ಜಾತಿರಸ್ಕರಿಣ್ಯೇವ ಸೋಂತರ್ಧಾನಮುಪಾಗತಃ ॥ ೫೪೬ ॥**

ಆಗ ಜ್ಞಾನಪ್ರಾಪ್ತಿಯುಳ್ಳವನಾಗಿ ಸುರಗುರು ಅಮರಗುರುಗಳೆಂಬ ಚಾರಣಮುನಿಗಳನ್ನು ಹೊಂದಿ ತ್ರಿಗುಪ್ತಿಪಂಚಮಸಮಿತಿಸಹಿತವಾದ ಯಮವ್ರತಗಳನ್ನು ತೆಗೆದುಕೊಂಡು ಮುನಿಯಾಗಿ ಬಹುಕಾಲದವರೆಗೆ ಚೆನ್ನಾಗಿ ಆಚರಿಸುತ್ತ ಮತ್ತೊಂದು ದಿವಸ ನಂದನವೆಂಬ ಪರ್ವತದಲ್ಲಿ ಪ್ರತಿಮಾಯೋಗವನ್ನು ಹೊಂದಿ ಧ್ಯಾನಾರೂಢನಾಗಿದ್ದನು. ಅಶ್ವಗ್ರೀವನ ತಮ್ಮನಾದ ಸುಕಂಠನು ಭವಸಮುದ್ರದಲ್ಲಿ ತಿರುಗಿ ಅಸುರತ್ವವನ್ನು ಹೊಂದಿದ್ದು ಈ ಮುನಿವರ್ಯನನ್ನು ನೋಡಿ ಕೋಪದಿಂದ ಅನೇಕ ವಿಧವಾದ ಉಪಸರ್ಗಗಳನ್ನು ಮಾಡಿ ಪ್ರತಿಜ್ಞೆಮಾಡಲ್ಪಟ್ಟಿದ್ದ ಮಹಾಯೋಗದಿಂದ ಸ್ಥಿರನಾಗಿದ್ದ ಆ ಮೇಘನಾದ–ಮುನಿಯನ್ನು ಅಲ್ಲಾಡಿಸುವುದಕ್ಕೆ ಅಸಮರ್ಥನಾಗಿ ಆ ದುಷ್ಟನಾದ ಆ ಅಸುರನು ಲಜ್ಜಾತಿರಸ್ಕಾರದಿಂದಲೋ ಎಂಬಂತೆ ಮರೆಯಾದನು.

**ಮುನಿಃ ಸನ್ನ್ಯಸ್ಯ ಕಾಲಾಂತೇ ಸೋಚ್ಯುತೇಗಾತ್ಪ್ರತೀಂದ್ರತಾಮ್ ।**
**ಇಂದ್ರೇಣ ಸಹ ಸಂಪ್ರೀತ್ಯಾ ಸಪ್ರವೀಚಾರಭೋಗಭಾಕ್ ॥ ೫೪೭ ॥**

ಆ ಮೇಘನಾದಮುನಿಯು ಕಾಲಾಂತದಲ್ಲಿ ಸನ್ನ್ಯಾಸವನ್ನು ಹೊಂದಿ–ಸತ್ತು ಅಚ್ಯುತಸ್ವರ್ಗದಲ್ಲಿ ಪ್ರತೀಂದ್ರತ್ವವನ್ನು ಹೊಂದಿ ಇಂದ್ರನೊಡನೆ ಬಹುಪ್ರೀತಿಯಿಂದ ಪ್ರವೀಚಾರಸಹಿತವಾದ ಭೋಗಗಳಿಗೆ ಭಾಗಿಯಾದನು.

**ಪ್ರಾಕ್ ಪ್ರಚ್ಯುತ್ಯಾಚ್ಯುತಾಧೀಶೋ ದ್ವೀಪೇಸ್ಮಿನ್ ಪ್ರಾಗ್ವಿದೇಹಕೇ ।**
**ವಿಷಯೇ ಮಂಗಲಾವತ್ಯಾಂ ಸ್ಥಾನೀಯೇ ರತ್ನಸಂಚಯೇ ॥ ೫೪೮ ॥**

**ರಾಜ್ಞಃ ಕ್ಷೇಮಂಕರಾಖ್ಯಸ್ಯ ಕೃತಪುಣ್ಯೋಽಭವತ್ಸುತಃ ।**
**ಶ್ರೀ ಮಾನ್ಕನಕಚಿತ್ರಾಯಾಂ ಭಾಸೋ ವಾ ಮೇಘವಿದ್ಯುತೇಃ ॥ ೫೪೯ ॥**

**ಆಧಾನಪ್ರೀತಿಸುಪ್ರೀತಿಧೃತಿಮೋದಪ್ರಿಯೋದ್ಭವ- ।**
**ಪ್ರಭೃತ್ಯುಕ್ತಕ್ರಿಯೋಪೇತೋ ಧೀಮಾನ್ ವಜ್ರಾಯುಧಾಹ್ವಯಃ ॥**

ಅಚ್ಯುತೇಂದ್ರನು ಮೊದಲು ಚ್ಯುತನಾಗಿ ಈ ಜಂಬೂದ್ವೀಪದ ಪೂರ್ವ ವಿದೇಹದಲ್ಲಿ ಮಂಗಲಾವತೀದೇಶದಲ್ಲಿರುವ ರತ್ನಸಂಚಯನಗರದಲ್ಲಿ ಕ್ಷೇಮಂಕರನೆಂಬ ರಾಜನಿಗೆ ಕನಕಚಿತ್ರೆಯೆಂಬ ಪತ್ನಿಯಲ್ಲಿ ಶ್ರೀಮಂತನೂ ಪುಣ್ಯಸಂಚಯವನ್ನು ಮಾಡಿರುವವನೂ ಆಧಾನ, ಪ್ರೀತಿ, ಸುಪ್ರೀತಿ, ಧೃತಿ, ಮೋದ, ಪ್ರಿಯೋದ್ಭವ ಮೊದಲಾದ ಕ್ರಿಯಾಪೂರ್ವಕವಾಗಿ ಜನಿಸಿದವನೂ ಪ್ರಾಜ್ಞನೂ ಆದ ವಜ್ರಾಯುಧನೆಂಬ ಪುತ್ರನಾದನು. ಅವನು ಮೇಘದ ಮಿಂಚಿನ ಕಾಂತಿಯಂತಿದ್ದನು.

**ತನ್ಮಾತರೀವ ತಜ್ಜನ್ಮತೋಷಃ ಸರ್ವೇಷ್ವಭೂದ್ಬಹುಃ ।**
**ಭವೇಚ್ಛಚೀಶದಿಶ್ಯೇವ ಕಿಂ ಪ್ರಕಾಶೋಂಶುಮಾಲಿನಃ ॥ ೫೫೧ ॥**

ಅವನ ಜನನದ ಸಂತೋಷಾತಿಶಯವು ಅವನ ತಾಯಿಯಲ್ಲಿರುವಂತೆ ಎಲ್ಲರಲ್ಲಿ ಉಂಟಾಯಿತು. ಸೂರ್ಯನ ಪ್ರಕಾಶವು ಇಂದ್ರದಿಕ್ಕಿನಲ್ಲೇ ಆಗುವುದೇನು ? ಸೂರ್ಯಪ್ರಕಾಶವು ಸಕಲದಿಕ್ಕುಗಳಲ್ಲಾಗುವಂತೆ ವಜ್ರಾಯುಧನ ಜನನದ ಸಂತೋಷವು ಎಲ್ಲರಲ್ಲಿಯೂ ಆಯಿತೆಂದು ಭಾವವು.

**ಅವರ್ಧಿಷ್ಟ ವಪುಸ್ತಸ್ಯ ಸಾರ್ಧಂ ರೂಪಾದಿಸಂಪದಾ ।**
**ಭೂಷಿತೋಽನಿಮಿಷೋವಾಸೌ ಭೂಷಣೈಃ ಸಹಜೈರ್ಗುಣೈಃ ॥ ೫೫೨ ॥**

ಅವನ ಶರೀರವು ರೂಪಾದಿ ಸಂಪತ್ತಿಯೊಡನೆ ಬೆಳೆಯಿತು. ಆಭರಣಗಳಿಂದ ಭೂಷಿತನಾದ ದೇವನಂತೆ, ವಜ್ರಾಯುಧನು ಸಹಜವಾದ ಗುಣಗಳಿಂದ ಭೂಷಿತನಾದನು.

**ಜನಾನುರಾಗಃ ಪ್ರಾಗೇವ ತಸ್ಮಿಂಸ್ತಸ್ಯೋದ್ಭವಾದಭೂತ್ ।**
**ಸಂಧ್ಯಾರಾಗ ಇವಾರ್ಕಸ್ಯ ಮಹಾಭ್ಯುದಯಸೂಚನಃ ॥ ೫೫೩ ॥**

ಆ ವಜ್ರಾಯುಧನ ಉತ್ಪತ್ತಿಯಿಂದ ಅವನಲ್ಲಿ ಮಹಾಭ್ಯುದಯವನ್ನು ಸೂಚಿಸುವ ಜನಾನುರಾಗವು, ಸೂರ್ಯನ ಸಂಧ್ಯಾರಾಗದಂತೆ, ಮೊದಲೇ ಉಂಟಾಯಿತು.

**ವಿಶ್ವಾಶಾ ವ್ಯಾನಶೇ ತಸ್ಯ ಯಶೋ ವಿಶದಯದ್ಭೃಶಮ್ ।**
**ಕಾಶಪ್ರಸವಸಂಕಾಶಮಾಶ್ವಾಸಿತಜನಶ್ರುತಿ ॥ ೫೫೪ ॥**

ಕಾಚಿಹುಲ್ಲಿನ ಹೂವಿಗೆ ಸಮಾನವೂ ಜನರ ಶ್ರೋತ್ರಗಳಿಗೆ ಆಶ್ವಾಸನವನ್ನುಂಟು ಮಾಡಿರುವುದೂ ಆದ ಆ ವಜ್ರಾಯುಧನ ಯಶಸ್ಸು ಸಕಲದಿಕ್ಕುಗಳನ್ನು ಅಧಿಕವಾಗಿ ಬೆಳಗುವುದಾಗಿ ವ್ಯಾಪಿಸಿತು.

**ರಾಜ್ಯಲಕ್ಷ್ಮ್ಯಾ ವ್ಯಭಾಲ್ಲಕ್ಷ್ಮೀಮತ್ಯಾ ಚಾಪ್ಯ ನವಂ ವಯಃ ।**
**ಅಸೌ ಪಕ್ಷಾಂತರಂ ಕಾಂತ್ಯಾ ಜ್ಯೋತ್ಸ್ನಯಾ ಚಾಪ್ಯ ವಾ ವಿಧುಃ ॥**

ಶುಕ್ಲಪಕ್ಷವನ್ನು ಹೊಂದಿ ಕಾಂತಿಯಿಂದಲೂ ಬೆಳದಿಂಗಳಿನಿಂದಲೂ ಚಂದ್ರನು ಪ್ರಕಾಶಿಸುವಂತೆ, ಈ ವಜ್ರಾಯುಧನು ನೂತನವಯಸ್ಸನ್ನು ಹೊಂದಿ ರಾಜ್ಯಲಕ್ಷ್ಮಿಯಿಂದಲೂ ಲಕ್ಷ್ಮೀಮತಿ(ಪತ್ನಿ)ಯಿಂದಲೂ ಪ್ರಕಾಶಿಸಿದನು.

**ಸೂನುಸ್ತಯೋಃ ಪ್ರತೀಂದ್ರೋಽಭೂತ್ಸಹಸ್ರಾಯುಧನಾಮಭಾಕ್ ।**
**ವಾಸರಾದೇರಿವ ಪ್ರಾಚ್ಯಾಂ ಘರ್ಮದೀಪ್ತಿಃ ಕನದ್ದ್ಯುತಿಃ ॥ ೫೫೬ ॥**

ಪೂರ್ವದಿಕ್ಕಿನಲ್ಲಿ ದಿನಾರಂಭದಿಂದ ಪ್ರಕಾಶಮಾನವಾದ ಕಾಂತಿಯುಳ್ಳ ಉಷ್ಣಕಿರಣನು–ರವಿಯು ಜನಿಸುವಂತೆ ಅನಂತವೀರ್ಯನಾಗಿದ್ದ ಪ್ರತೀಂದ್ರನು ಆ ವಜ್ರಾಯುಧ ಲಕ್ಷ್ಮೀಮತಿಯರಿಗೆ ಸಹಸ್ರಾಯುಧನೆಂಬ ಪುತ್ರನಾದನು.

**ಶ್ರೀಷೇಣಾಯಾಂ ಸುತಸ್ತಸ್ಯ ಶಾಂತಾಂತಕನಕೋಽಜನಿ ।**
**ಏವಂ ಕ್ಷೇಮಂಕರಃ ಪುತ್ರಪೌತ್ರಾದಿಪರಿವಾರಿತಃ ॥ ೫೫೭ ॥**

**ಅಪ್ರತೀಪಪ್ರತಾಪೋಪನತಭೂಪಕದಂಬಕಃ ।**
**ಕದಾಚಿದ್ವೀಜ್ಯಮಾನೋಽಸ್ಥಾಚ್ಚಾಮರೈಃ ಸಿಂಹವಿಷ್ಟರೇ ॥ ೫೫೮ ॥**

ಆ ಸಹಸ್ರಾಯುಧನಿಗೆ ಶ್ರೀಷೇಣೆಯೆಂಬ ಪತ್ನಿಯಲ್ಲಿ ಕನಕಶಾಂತನೆಂಬ ಪುತ್ರನು ಜನಿಸಿದನು. ಈ ರೀತಿಯಾಗಿ ಪುತ್ರಪೌತ್ರಾದಿಗಳಿಂದ ಸುತ್ತಲ್ಪಟ್ಟವನೂ ಇದಿರಿಲ್ಲದ ಪ್ರತಾಪವುಳ್ಳವನೂ ಸಮೀಪಕ್ಕೆ ಬಂದು ನಮಸ್ಕರಿಸುತ್ತಿರುವ ರಾಜರುಗಳ ಸಮೂಹವುಳ್ಳವನೂ ಆದ ಕ್ಷೇಮಂಕರನು ಒಂದಾನೊಂದುಕಾಲದಲ್ಲಿ ಚಾಮರಗಳಿಂದ ಬೀಸಲ್ಪಡುವವನಾಗಿ ಸಿಂಹಪೀಠದಲ್ಲಿ ಕುಳಿತಿದ್ದನು.

**ತದಾಮರಸದಸ್ಯಾಸೀದೀಶಾನಸ್ತುತಿಗೋಚರಃ ।**
**ವಜ್ರಾಯುಧೋ ಮಹಾನ್ ಸಮ್ಯಗ್ದರ್ಶನಾಧಿಕ್ಯತಃ ಕೃತೀ ॥ ೫೫೯ ॥**

ಆಗ ಸಮ್ಯಗ್ದರ್ಶನದ ಆಧಿಕ್ಯದಿಂದ ಮಹಾಪುಣ್ಯಶಾಲಿಯಾದ ವಜ್ರಾಯುಧನು ದೇವರ್ಕಳ ಸಭೆಯಲ್ಲಿ ಈಶಾನೇಂದ್ರನ ಸ್ತುತಿಗೆ ವಿಷಯನಾದನು. ದೇವಸಭೆಯಲ್ಲಿ ಈಶಾನೇಂದ್ರನು ವಜ್ರಾಯುಧನನ್ನು ಸ್ತುತಿಸಿದನೆಂದು ಭಾವವು.

**ದೇವೋ ವಿಚಿತ್ರಚೂಲಾಖ್ಯಸ್ತತ್ಸ್ತವಂ ಸೋಢುಮಕ್ಷಮಃ ।**
**ಅಭಿವಜ್ರಾಯುಧಂ ಪ್ರಾಪತ್ಖಲೋ ಹ್ಯನ್ಯಸ್ತವಾಸಹಃ ॥ ೫೬೦ ॥**

ವಿಚಿತ್ರಚೂಲನೆಂಬ ದೇವನು ಆ ಪ್ರಶಂಸೆಯನ್ನು ಸಹಿಸುವುದಕ್ಕೆ ಅಸಮರ್ಥನಾಗಿ ವಜ್ರಾಯುಧನನ್ನು ಹೊಂದಿದನು. ದುಷ್ಟನು ಬೇರೆಯವರ ಪ್ರಶಂಸೆಯನ್ನು ಸಹಿಸುವುದೇ ಇಲ್ಲ.

**ದೃಷ್ಟ್ವಾ ರೂಪಪರಾವೃತ್ತ್ಯಾ ಮಹೀನಾಥಂ ಯಥೋಚಿತಮ್ ।**
**ವಾದಕಂಡೂಯಯಾವೋಚತ್ಸೌತ್ರಾಂತಿಕಮತೇ ಸ್ಥಿತಃ ॥ ೫೬೧ ॥**

ರೂಪಪರಾವರ್ತನದಿಂದ ಯಥೋಚಿತವಾಗಿ ದೊರೆಯನ್ನು ಕಂಡು ಸೌತ್ರಾಂತಿಕಮತದಲ್ಲಿರುವವನಾಗಿ ವಾದದ ತೀಟೆಯಿಂದ ಈರೀತಿಯಾಗಿ ಹೇಳಿದನು.

**ತ್ವಂ ಜೀವಾದಿಪದಾರ್ಥಾನಾಂ ವಿದ್ವಾನ್ಕಿಲ ವಿಚಾರಣೇ ।**
**ವದ ಪರ್ಯಾಯಿಣೋ ಭಿನ್ನಃ ಪರ್ಯಾಯಃ ಕಿಂ ವಿಪರ್ಯಯಃ ॥**

"ವಿಚಾರಮಾಡುವಾಗ ನೀನು ಜೀವಾದಿಪದಾರ್ಥಗಳ ವಿದ್ವಾಂಸನಂತೆ ತೋರುತ್ತಿ. ಪರ್ಯಾಯಿಯಿಂದ ಪರ್ಯಾಯವು ಭಿನ್ನವೋ ? ಅಭಿನ್ನವೋ ? ಹೇಳು.

**ಭಿನ್ನಶ್ಚೇಚ್ಛೂನ್ಯತಾಪ್ರಾಪ್ತಿಸ್ತಯೋರಾಧಾರಹಾನಿತಃ ।**
**ತಥಾ ಚಾವ್ಯಪದೇಶತ್ವಾನ್ನಾಯಂ ಪಕ್ಷೋ ಘಟಾಮಟೇತ್ ॥ ೫೬೩ ॥**

ಪರ್ಯಾಯಿಯಿಂದ ಪರ್ಯಾಯವು ಭಿನ್ನವಾಗಿರುವುದಾದರೆ ಆ ಪರ್ಯಾಯಿಪರ್ಯಾಯಗಳಿಗೆ ಆಧಾರವಿಲ್ಲದಿರುವುದರಿಂದ ಶೂನ್ಯತ್ವಪ್ರಾಪ್ತಿಯಾಗುವುದು. ಅಲ್ಲದೆ ನಿನ್ನ ಸಿದ್ಧಾಂತದಲ್ಲಿ ಹಾಗೆ ಹೇಳದಿರುವುದರಿಂದ ಈ ಪಕ್ಷವು ಸರಿಯಾಗಲಾರದು.

**ಏಕತ್ವಸಂಗರೇಪ್ಯೇತನ್ನ ಯುಕ್ತಿಪದವೀಂ ವ್ರಜೇತ್ ।**
**ಅನ್ಯೋನ್ಯಗೋಚರೈಕತ್ವನಾನಾತ್ವಾದ್ಯಂತಸಂಕರಾತ್ ॥ ೫೬೪ ॥**

ಅವುಗಳಿಗೆ ಅಭಿನ್ನತ್ವವನ್ನಂಗೀಕರಿಸಿದರೂ ಅನ್ಯೋನ್ಯವಾಗಿ ಗೋಚರವಾಗುವ ಏಕತ್ವ, ಅನೇಕತ್ವ, ಆದಿ, ಅಂತ ಇವುಗಳ ಬೇರೆಯುವಿಕೆಯಿಂದ ಈ ಮಾತು ಯುಕ್ತಿಯ ಸ್ಥಾನವನ್ನು ಹೊಂದಲಾರದು.

**ಅಸ್ತು ಚೇದ್ದ್ರವ್ಯಮೇಕಂ ತೇ ಪರ್ಯಾಯಾಃ ಬಹವೋ ಮತಾಃ ।**
**ಏಕಾತ್ಮಕಮಪೀತ್ಯೇಷ ಸಂಗರೋ ಭಂಗಮಾಪ್ನುಯಾತ್ ॥ ೫೬೫ ॥**

ದ್ರವ್ಯವು ಒಂದು, ಆ ಪರ್ಯಾಯಗಳು ಅನೇಕವೆಂದು ನಿನಗೆ ಅಭಿಮತವಿರುವುದಾದರೆ ಆ ದ್ರವ್ಯಪರ್ಯಾಯಗಳಿಗೆ ಏಕರೂಪತ್ವವೂ ಇದೆಯೆಂಬೀ ಪ್ರತಿಜ್ಞೆಯು ಭಂಗವಾಗುವುದು.

**ನಿತ್ಯತ್ವೇಪಿ ತಯೋಃ ಪುಣ್ಯಪಾಪಪಾಕಾತ್ಮತಾಚ್ಯುತೇಃ ।**
**ತದ್ಧೇತುಬಂಧನಾಭಾವಾನ್ಮೋಕ್ಷಾಭಾವೋ ನ ವಾರ್ಯತೇ ॥ ೫೬೬ ॥**

ಆ ಪರ್ಯಾಯಿಪರ್ಯಾಯಗಳಿಗೆ ನಿತ್ಯತ್ವವಿದ್ದರೂ ಪುಣ್ಯಪಾಪ ಪರಿಪಾಕಕ್ಕೆ ಚ್ಯುತಿಯುಂಟಾಗುವುದರಿಂದಲೂ ಆ ಪುಣ್ಯಪಾಪಗಳಿಗೆ ಕಾರಣವೂ ಪುಣ್ಯಪಾಪ ಬಂಧವೂ ಇಲ್ಲದಿರುವುದರಿಂದಲೂ ಮೋಕ್ಷದ ಅಭಾವವುಂಟಾಗುವುದು. ಅದನ್ನು ತಡೆಯಲಾಗುವುದಿಲ್ಲ.

**ಅಗತ್ಯಾ ಕ್ಷಣಿಕತ್ವಂ ಚೇತ್ತಯೋರಭ್ಯುಪಗಮ್ಯತೇ ।**
**ತವಾಭ್ಯುಪಗಮತ್ಯಾಗಃ ಪಕ್ಷಸಿದ್ಧಿಶ್ಚ ಮೇ ಭವೇತ್ ॥ ೫೬೭ ॥**

ಬೇರೆ ಗತಿಯಿಲ್ಲದಿರುವುದರಿಂದ ಆ ಪರ್ಯಾಯಿಪರ್ಯಾಯಗಳಿಗೆ ಕ್ಷಣಿಕತ್ವವನ್ನು ಅಂಗಿಕರಿಸುವುದಾದರೆ ನಿನ್ನ ಅಂಗೀಕಾರದ ತ್ಯಾಗವೂ ನನ್ನ ಪಕ್ಷದ ಸಿದ್ಧಿಯೂ ಆಗುವುವು.

**ತತೋ ಭವನ್ಮತಂ ಭದ್ರಚ್ಛಾದಕೈಃ ಪರಿಕಲ್ಪಿತಮ್ ।**
**ಕಲ್ಪನಾಮಾತ್ರಮತ್ರಾಸ್ಥಾಂ ಮಾಕೃಥಾಸ್ತ್ವಂ ವೃಥಾಶ್ರಮಮ್ ॥ ೫೬೮ ॥**

ಆದುದರಿಂದ ಅಯ್ಯಾ! ಕಲ್ಪನಾಮಾತ್ರವಾದ ನಿನ್ನ ಮತವು ವಂಚಕರಿಂದ ಪರಿಕಲ್ಪಿತವಾದುದು. ಇದರಲ್ಲಿ ನೀನು ಆಶಕ್ತಿಯನ್ನೂ ವ್ಯರ್ಥಶ್ರಮವನ್ನೂ ಮಾಡಬೇಡ.''

**ಇತ್ಯಾಕರ್ಣ್ಯ ತದೋಕ್ತಂ ತದ್ಬುಧೋ ವಜ್ರಾಯುಧೋಽಭಣತ್ ।**
**ಶೃಣು ಚಿತ್ತಂ ನಿಧಾಯೋಚ್ಚೈರ್ಮಾಧ್ಯಸ್ಥಂ ಪ್ರಾಪ್ಯ ಸೌಗತ ॥ ೫೬೯ ॥**

ಈ ರೀತಿಯಾಗಿ ದೇವನಿಂದ ಹೇಳಲ್ಪಟ್ಟ ಆ ಮಾತನ್ನು ಕೇಳಿ ಪ್ರಾಜ್ಞನಾದ ವಜ್ರಾಯುಧನು ಈ ರೀತಿಯಾಗಿ ಹೇಳಿದನು– ''ಸೌಗತನೆ! ಮಾಧ್ಯಸ್ಥಭಾವವನ್ನು ಹೊಂದಿ ಚೆನ್ನಾಗಿ ಚಿತ್ತವಿಟ್ಟು ಕೇಳು.

**ಜಿನೇಂದ್ರವದನೇಂದೂದ್ಯತ್ಸ್ಯಾದ್ವಾದಾಮೃತಪಾಯಿನಾಮ್ ।**
**ಸ್ವಕರ್ಮಫಲಭೋಗಾದಿವ್ಯವಹಾರವಿರೋಧಿನಮ್ ॥ ೫೭೦ ॥**

**ಕ್ಷಣಿಕೈಕಾಂತದುರ್ವಾದಮವಲಂಬ್ಯ ಪ್ರರೂಪಿತಃ ।**
**ತ್ವಯಾ ದೋಷೋ ನ ಬಾಧಾಯೈ ಕಲ್ಪತೇ ಧರ್ಮಧರ್ಮಿಣೋಃ ॥**

ಜಿನೇಶ್ವರಮುಖಚಂದ್ರನಿಂದುಂಟಾದ ಸ್ಯಾದ್ವಾದವೆಂಬ ಅಮೃತವನ್ನು ಪಾನ ಮಾಡುವವರಿಗೆ ತಮ್ಮ ಕರ್ಮಫಲಾನುಭೋಗಾದಿ ವ್ಯವಹಾರಗಳಿಗೆ ವಿರೋಧಿಯಾದ ಕ್ಷಣಿಕೈಕಾಂತದುರ್ವಾದವನ್ನವಲಂಬಿಸಿ ನೀನು ಹೇಳಿದ ದೋಷವು ಧರ್ಮಾಧರ್ಮಿಗಳ ಬಾಧೆಗೆ ಸಮರ್ಥ ಕಾರಣವಾಗುವುದಿಲ್ಲ.

**ಸಂಜ್ಞಾಪ್ರಜ್ಞಾಸ್ವಚಿಹ್ನಾದಿಭೇದೈರ್ಭಿನ್ನತ್ವಮೇತಯೋಃ ।**
**ಏಕತ್ವಂ ಚಾಪೃಥಕ್ತ್ವಾರ್ಪಣನಯೈಕಾವಲಂಬನಾತ್ ॥ ೫೭೨ ॥**

**ಕಾರ್ಯಕಾರಣಭಾವೇನ ಕಾಲತ್ರಿತಯವರ್ತಿನಾಮ್ ।**
**ಸ್ಕಂಧಾನಾಮವ್ಯವಚ್ಛೇದಸಂತಾನೋಽಭ್ಯುಪಗಮ್ಯತೇ ॥ ೫೭೩ ॥**

ಹೆಸರು, ಬುದ್ಧಿ, ಲಕ್ಷಣ ಇವೇ ಮೊದಲಾದ ಭೇದಗಳಿಂದ ಈ ಪರ್ಯಾಯಿ ಪರ್ಯಾಯಗಳಿಗೆ ಭಿನ್ನತ್ವವೂ ಇವುಗಳನ್ನು ಬೇರೆಬೇರೆಯಾಗಿ ಮಾಡಲಾಗದಿರುವುದರಿಂದ ಏಕತ್ವವೂ ಕಾರ್ಯಕಾರಣರೂಪದಿಂದ ತ್ರಿಕಾಲಗಳಲ್ಲಿರುವ ಸ್ಕಂಧಗಳಿಗೆ ಮಧ್ಯದಲ್ಲಿ ವಿಚ್ಛೇದವಾಗದಿರುವ ಸಂತಾನವೂ ಅಂಗೀಕರಿಸಲ್ಪಡುತ್ತವೆ.

**ಸ್ಕಂಧಾನಾಂ ಕ್ಷಣಿಕತ್ವೇಪಿ ತದ್ಭಾವಾತ್ಕೃತಕರ್ಮಣಃ ।**
**ಯುಕ್ತಃ ಫಲೋಪಭೋಗಾದಿರಸ್ಮಾಕಮಿತಿ ತೇ ಮತಿಃ ॥ ೫೭೪ ॥**

**ಏತೇನ ಪರಿಹಾರೇಣ ಭವತಃ ಪಕ್ಷರಕ್ಷಣಮ್ ।**
**ವಾತಾರಿತರುಬಂಧೇನ ರೋಧೋ ವಾ ಮತ್ತದಂತಿನಃ ॥ ೫೭೫ ॥**

''ಸ್ಕಂಧಗಳಿಗೆ ಕ್ಷಣಿಕತ್ವವಿದ್ದರೂ ಆ ಸಂತಾನವಿರುವುದರಿಂದ ಮಾಡಲ್ಪಟ್ಟ ಕರ್ಮದ ಫಲಾನುಭವಾದಿಗಳು ನಮಗೆ ಯುಕ್ತವಾಗಿವೆ'' ಎಂದು ನಿನ್ನ ಅಭಿಪ್ರಾಯವಿರುವುದು. ಈ ಪರಿಹಾರದಿಂದ ನಿನ್ನ ಪಕ್ಷದ ರಕ್ಷಣೆಯು, ಮದಿಸಿದ ಆನೆಗಳನ್ನು ಹರಳಿನ ಗಿಡದಲ್ಲಿ ಕಟ್ಟುವುದರಿಂದ ತಡೆದಿರಿಸುವಂತಿದೆ.

**ಸಂತಾನಿಭ್ಯಃ ಸ ಸಂತಾನಃ ಪೃಥಕ್ಕಿಂ ವಾಪೃಥಙ್ಮತಃ ।**
**ಪೃಥಕ್ ಚೇತ್ಕಿಂ ನ ಪಶ್ಯಾಮಃ ಸಂತಾನಿಭ್ಯಃ ಪೃಥಙ್ಮತಮ್ ॥ ೫೭೬ ॥**

ಆ ಸಂತಾನವು ಸಂತಾನಿಗಳಿಂದ ಬೇರೆಯೋ? ಅಥವಾ ಬೇರೆಯಲ್ಲವೋ? ಸಂತಾನಿಗಳಿಂದ ಸಂತಾನವು ಬೇರೆಯಾಗಿರುವುದಾದರೆ ಹಾಗೆ ಬೇರೆಯಾಗಿ ತಿಳಿಯಲ್ಪಟ್ಟಿರುವ ಆ ಸಂತಾನವನ್ನೇಕೆ ನಾವು ನೋಡುವುದಿಲ್ಲ? ಸಂತಾನಿಗಳಿಂದ ಬೇರೆಯಾಗಿರುವ ಸಂತಾನವು ಕಾಣುವುದಿಲ್ಲವೆಂದು ಭಾವವು.

**ಅಥೇಷ್ಟೋ ವ್ಯತಿರೇಕೇಣ ಸಂತಾನಿಭ್ಯಃ ಸ್ವಕಲ್ಪಿತಃ ।**
**ಸಂತಾನಃ ಶೂನ್ಯತಾಂ ತಸ್ಯ ಸುಗತೋಽಪಿ ನ ವಾರಯೇತ್ ॥ ೫೭೭ ॥**

ಬಳಿಕ ಸ್ವಕಲ್ಪಿತವಾದ ಸಂತಾನವು ಸಂತಾನಿಗಳಿಂದ ಬೇರೆಯಾಗಿರುತ್ತದೆಂದು ಅಭಿಮತವಾಗಿರುವುದಾದರೆ ಆ ಸಂತಾನಕ್ಕೆ ಪ್ರಾಪ್ತವಾಗುವ ಶೂನ್ಯತೆಯನ್ನು ಸುಗತ–ಬುದ್ಧನೂ ನಿವಾರಿಸಲಾಗುವುದಿಲ್ಲ.

**ಪ್ರಧ್ವಸ್ತಾನ್ನಾಸ್ತ್ಯತಿಕ್ರಾಂತಃ ಕ್ಷಣೋ ಭಾವ್ಯಪ್ಯನುದ್ಭವಾತ್ ।**
**ಭವನ್ ಕ್ಷಣಃ ಸ್ವರೂಪಾಪ್ತಿವ್ಯಾಪ್ತೋ ನಾಪ್ನೋತಿ ಸಂತತಿಮ್ ॥ ೫೭೮ ॥**

ನಷ್ಟವಾದ ಸಂತಾನಿಯಿಂದ ಬೇರೆಯಾದ ಕ್ಷಣವಿಲ್ಲ. ಸಂತಾನಿಯ ಉತ್ಪತ್ತಿಯಾಗದಿರುವುದರಿಂದ ಭವಿಷ್ಯತ್ಕಾಲದ ಕ್ಷಣವೂ ಸಂತತಿಯನ್ನು ಹೊಂದುವುದಿಲ್ಲ. ವರ್ತಮಾನಕಾಲದಲ್ಲಿ ಉಂಟಾಗುತ್ತಿರುವ ಕ್ಷಣವು ಸಂತಾನಿಯ ಸ್ವರೂಪಪ್ರಾಪ್ತಿಯಿಂದ ವ್ಯಾಪ್ತವಾಗಿ ಸಂತತಿಯನ್ನು ಹೊಂದುವುದಿಲ್ಲ. ಭೂತಭವಿಷ್ಯದ್ವರ್ತಮಾನ ಕ್ಷಣಗಳು ಮೂರೂ ಸಂತಾನವನ್ನುಂಟುಮಾಡಲವಕಾಶವಿಲ್ಲವೆಂದು ಭಾವವು.

**ಯದಿ ಕಶ್ಚಿಚ್ಚತುರ್ಥೋಽಸ್ತಿ ಸಂತಾನಸ್ಯ ತವಾಸ್ತು ಸಃ ।**
**ತತಃ ಸಂತಾನವಾದೋಽಯಂ ಭವವ್ಯಸನಸಂತತಿಃ ॥ ೫೭೯ ॥**

ನಿನ್ನ ಸಂತಾನಕ್ಕೆ ಯಾವುದಾದರೂ ನಾಲ್ಕನೆಯ ಕ್ಷಣವಿರುವುದಾದರೆ ಅದು ಇರಲಿ. ಆದುದರಿಂದ ಈ ಸಂತಾನವಾದವು ನಿನ್ನ ವ್ಯಸನಸಂತತಿಯಾಗುವುದು. ನಾಲ್ಕು ಕ್ಷಣಗಳನ್ನು ಒಪ್ಪಿಕೊಂಡಂತಾದುದರಿಂದ ಕ್ಷಣಿಕವಾದವು ನಷ್ಟವಾಯಿತೆಂದು ಭಾವವು.''

**ಇತಿ ದೇವೋಽಪ್ಯಸೌ ತಸ್ಯ ವಾಗ್ವಜ್ರೇಣ ವಿಚೂರ್ಣಿತಮ್ ।**
**ವಚೋ ವಿಚಿಂತ್ಯ ಸ್ವಂ ಭಗ್ನಮಾನಃ ಕಾಲಾದಿಲಬ್ಧಿತಃ ॥ ೫೮೦ ॥**

**ಸದ್ಯಃ ಸಮ್ಯಕ್ತ್ವಮಾದಾಯ ಸಂಪೂಜ್ಯ ಧರಣೀಶ್ವರಮ್ ।**
**ನಿಜಾಗಮನವೃತ್ತಾಂತಮಭಿಧಾಯ ದಿವಂ ಗತಃ ॥ ೫೮೧ ॥**

ಈ ರೀತಿಯಾಗಿ ಈ ದೇವನೂ ಆ ವಜ್ರಾಯುಧನ ವಚನವೆಂಬ ವಜ್ರದಿಂದ ಚೂರುಮಾಡಲ್ಪಟ್ಟ ತನ್ನ ವಚನವನ್ನು ಚಿಂತಿಸಿ ಗರ್ವಭಂಗವುಳ್ಳವನಾಗಿ ಕಾಲಲಬ್ಧಿಯಿಂದ ಆಗಲೇ ಸಮ್ಯಕ್ತ್ವವನ್ನು ಹೊಂದಿ ಪೃಥಿವೀಪತಿಯನ್ನು ಪೂಜಿಸಿ ತನ್ನ ಆಗಮನದ ಸಮಾಚಾರವನ್ನು ಹೇಳಿ ಸ್ವರ್ಗಕ್ಕೆ ಹೋದನು.

**ಅಥ ಕ್ಷೇಮಂಕರಃ ಪೃಥ್ವ್ಯಾಃ ಕ್ಷೇಮಂ ಯೋಗಂ ಚ ಸಂದಧತ್ ।**
**ಲಬ್ಧಬೋಧಿರ್ಮತಿಜ್ಞಾನಕ್ಷಯೋಪಶಮನಾಗ್ರಹಃ ॥ ೫೮೨ ॥**

**ವಜ್ರಾಯುಧಕುಮಾರಸ್ಯ ಕೃತ್ವಾ ರಾಜ್ಯಾಭಿಷೇಚನಮ್ ।**
**ಪ್ರಾಪ್ತಲೌಕಾಂತಿಕಸ್ತೋತ್ರಃ ಪರಿನಿಷ್ಕ್ರಮ್ಯ ಗೇಹತಃ ॥ ೫೮೩ ॥**

**ಅನಾವರಣಮಸ್ಥಾನಮಪ್ರಮಾದಮನುಕ್ರಮಮ್ ।**
**ಅಸಂಗಮಕೃತಾಹಾರಮನಾಹಾರ್ಯಮನೇಕಧಾ ॥ ೫೮೪ ॥**

**ಅಕಷಾಯಮನಾರಂಭಮಸಾವದ್ಯಮಖಂಡಿತಮ್ ।**
**ಅನಾರತಶ್ರುತಾಭ್ಯಾಸಂ ಪ್ರಕುರ್ವನ್ ಸ ತಪಶ್ಚಿರಮ್ ॥ ೫೮೫ ॥**

**ನಿರ್ಮಮಂ ನಿರಹಂಕಾರಂ ನಿಃಶಾಠ್ಯಂ ನಿರ್ಜಿತೇಂದ್ರಿಯಮ್ ।**
**ನಿಷ್ಕ್ರೋಧಂ ನಿಶ್ಚಲಂ ಚಿತ್ತಂ ನಿರ್ವೃತ್ಯೈ ನಿರ್ಮಲಂ ವ್ಯಧಾತ್॥ ೫೮೬ ॥**

ಪೃಥ್ವಿಯ ಲಬ್ಧಪರಿರಕ್ಷಣರೂಪವಾದ ಕ್ಷೇಮವನ್ನೂ ಅಲಬ್ಧಲಾಭರೂಪವಾದ ಯೋಗವನ್ನೂ ಧರಿಸಿರುವವನೂ ಮತಿಜ್ಞಾನಾವರಣಕರ್ಮದ ಕ್ಷಯೋಪಶಮದ ಪ್ರಕೋಪ–ಉತ್ಕರ್ಷತೆಯುಳ್ಳವನೂ ಆದ ಕ್ಷೇಮಂಕರನು ವಿವೇಕೋದಯವುಳ್ಳವನಾಗಿ ಬಳಿಕ ವಜ್ರಾಯುಧಕುಮಾರನಿಗೆ ರಾಜ್ಯಾಭಿಷೇಕವನ್ನು ಮಾಡಿ ಲೌಕಾಂತಿಕ ದೇವರ್ಕಳಿಂದ ಸ್ತುತಿಸಲ್ಪಟ್ಟವನಾದ ಆ ಕ್ಷೇಮಂಕರನು ಮನೆಯಿಂದ ಹೊರಟು ಹೋಗಿ ಹೊದಿಕೆಯಿಲ್ಲದುದೂ ಆಹಾರವಿಲ್ಲದುದೂ ಬೇರೆಯವರಿಂದ ಅಪಹರಿಸಲ್ಪಡದಿರುವುದೂ ಕಷಾಯರಹಿತವೂ ಆರಂಭರಹಿತವೂ ಅಖಂಡಿತವೂ ಯಾವಾಗಲೂ ಶಾಸ್ತ್ರಾಭ್ಯಾಸವುಳ್ಳುದೂ ಆದ ತಪಸ್ಸನ್ನು ಬಹುಕಾಲದವರೆಗೆ ಅನೇಕ ಪ್ರಕಾರವಾಗಿ ಮಾಡುವವನಾಗಿ ಮಮಕಾರವಿಲ್ಲದುದೂ ಅಹಂಕಾರವಿಲ್ಲದುದೂ ದುಷ್ಟತ್ವವಿಲ್ಲದುದೂ ಇಂದ್ರಿಯಗಳನ್ನು ನಿಗ್ರಹಿಸಿರುವುದೂ ಕ್ರೋಧವಿಲ್ಲದುದೂ ನಿಶ್ಚಲವೂ ಆದ ಮನಸ್ಸನ್ನು ಮುಕ್ತಿಗೋಸ್ಕರ ನಿರ್ಮಲವನ್ನಾಗಿ ಮಾಡಿದನು.

**ಕ್ರಮಾತ್ಕೈವಲ್ಯಮಪ್ಯಾಪ್ಯ ವ್ಯಾಹೂತಪುರುಹೂತಕಮ್ ।**
**ಗಣಾನ್ ದ್ವಾದಶ ಚಾತ್ಮೀಯಾನ್ವಾಗ್ವಿಸರ್ಗಾದತೀತೃಪತ್ ॥ ೫೮೭ ॥**

ಕಾಲಕ್ರಮದಿಂದ ದೇವೇಂದ್ರನನ್ನು ಬರಮಾಡಿಕೊಳ್ಳುವ ಕೇವಲಜ್ಞಾನವನ್ನು ಹೊಂದಿ ತನ್ನ ದ್ವಾದಶಗಣಗಳನ್ನೂ ದಿವ್ಯಧ್ವನಿಯಿಂದ ತೃಪ್ತಿಪಡಿಸಿದನು.

**ವಜ್ರಾಯುಧೇಥ ಭೂನಾಥೇ ಸ್ವಪುಣ್ಯಫಲಿತಾಂ ಮಹೀಮ್ ।**
**ಪಾತ್ಯಾಗಮನ್ಮಧುರ್ಮಾಸೋ ಮದನೋನ್ಮಾದದೀಪನಃ ॥ ೫೮೮ ॥**

ಬಳಿಕ ವಜ್ರಾಯುಧರಾಜನು ತನ್ನ ಪುಣ್ಯದಿಂದ ಫಲಿಸಿದ ಪೃಥ್ವಿಯನ್ನು ಕಾಪಾಡುತ್ತಿರಲು ಕಾಮನಿಗೆ ಉನ್ಮಾದವನ್ನು ಹೆಚ್ಚಿಸುವ ಚೈತ್ರಮಾಸವು ಬಂದಿತು.

**ಕೋಕಿಲಾನಾಂ ಕಲಾಲಾಪೋ ಧ್ವನಿಶ್ಚ ಮಧುರೋಲಿನಾಮ್ ।**
**ಆಹರತ್ಕಾಮಮಂತ್ರೋ ವಾ ಪ್ರಾಣಾನ್ ಪ್ರೋಷಿತಯೋಷಿತಾಮ್ ॥**

ಕೋಗಿಲೆಗಳ ಮನೋಹರವಾದ ಆಲಾಪವೂ ದುಂಬಿಗಳ ಮಧುರಧ್ವನಿಯೂ, ಕಾಮನ ಮಂತ್ರದಂತೆ, ವಿಯೋಗವತಿಯರಾದ ಸ್ತ್ರೀಯರ ಪ್ರಾಣಗಳನ್ನು ಅಪಹರಿಸಿದುವು.

**ವನಾನ್ಯಪಿ ಮನೋಜಾಯ ತ್ರಿಜಗದ್ವಿಜಿಗೀಷವೇ ।**
**ಯಸ್ಮಿನ್ ಪುಷ್ಪಕರೇ ಸ್ವೈರಂ ದದ್ಯುಃ ಸರ್ವಸ್ವಮಾತ್ಮನಃ ॥ ೫೯೦ ॥**

**ತಸ್ಮಿನ್ ಕಾಲೇ ವನೇ ರಂತುಂ ಸ್ವೇ ದೇವರಮಣೇ ಮತಿಮ್ ।**
**ಜ್ಞಾತ್ವಾ ಸುದರ್ಶನಾವಕ್ತ್ರಾದ್ಧಾರಿಣ್ಯಾದ್ಯಾತ್ಮಯೋಷಿತಾಮ್ ॥ ೫೯೧ ॥**

**ಔತ್ಸುಕ್ಯಾತ್ತದ್ವನಂ ಗತ್ವಾ ಸುದರ್ಶನಸರೋವರೇ ।**
**ಜಲಕ್ರೀಡಾಂ ಸ್ವದೇವೀಭಿಃ ಪ್ರವರ್ತಯತಿ ಭೂಭುಜೇ ॥ ೫೯೨ ॥**

**ಅಪಿಧಾಯ ಸರಃ ಸದ್ಯಃ ಕಶ್ಚಿದ್ವಿದ್ಯಾಧರಃ ಖಲಃ ।**
**ಶಿಲಯಾ ನಾಗಪಾಶೇನ ತಮಬಧ್ನಾನ್ನೃಪೋಪ್ಯಸೌ ॥ ೫೯೩ ॥**

**ಶಿಲಾಂ ಹಸ್ತತಲೇನಾಹನ್ ಸಾ ಗತಾ ಶತಖಂಡತಾಮ್ ।**
**ವಿದ್ಯಾಧರೋಪಿ ದುಷ್ಟಾತ್ಮಾ ತದಾನೀಂ ಪ್ರಪಲಾಯತ ॥ ೫೯೪ ॥**

ಪುಷ್ಪಗಳನ್ನುಂಟುಮಾಡುವ ಯಾವ ಕಾಲದಲ್ಲಿ ವನಗಳೂ ತ್ರಿಜಗತ್ತನ್ನು ಜಯಿಸಲಿಚ್ಛಿಸುವ ಮನ್ಮಥನಿಗೆ ತಮ್ಮ ಸರ್ವಸ್ವವನ್ನು ಯಥೇಚ್ಛವಾಗಿ ಕೊಟ್ಟುವೋ ಅಂತಹ ಕಾಲದಲ್ಲಿ ತನ್ನ ದೇವರಮಣವನದಲ್ಲಿ ಕ್ರೀಡಿಸುವುದಕ್ಕೆ ಧಾರಿಣಿಯೇ ಮೊದಲಾದ ತನ್ನ ಸ್ತ್ರೀಯರಿಗೆ ಮನಸ್ಸಿರುವುದನ್ನು ಸುದರ್ಶನೆಯ ಮುಖದಿಂದ ತಿಳಿದು ಕುತೂಹಲದಿಂದ ಆ ವನಕ್ಕೆ ಹೋಗಿ ಸುದರ್ಶನ ಸರೋವರದಲ್ಲಿ ವಜ್ರಾಯುಧರಾಜನು ತನ್ನ ಪತ್ನಿಯರೊಡನೆ ಜಲಕ್ರೀಡೆಯನ್ನು ಮಾಡುತ್ತಿರಲು ಒಬ್ಬಾನೊಬ್ಬ ದುಷ್ಟನಾದ ವಿದ್ಯಾಧರನು ಆಗಲೇ ಆ ಸರೋವರವನ್ನು ಕಲ್ಲಿನಿಂದ ಮುಚ್ಚಿ ಆ ವಜ್ರಾಯುಧನನ್ನು ನಾಗಪಾಶದಿಂದ ಕಟ್ಟಿದನು. ಈ ವಜ್ರಾಯುಧರಾಜನೂ ಆ ಶಿಲೆಯನ್ನು ಅಂಗೈಯಿಂದ ಹೊಡೆದನು. ಅದು ನೂರಾರು ಚೂರಾಯಿತು. ದುಷ್ಟಾತ್ಮನಾದ ವಿದ್ಯಾಧರನು ಆಗ ಓಡಿಹೋದನು.

**ಏಷ ಪೂರ್ವಭವೇ ಶತ್ರುರ್ವಿದ್ಯುದ್ದಂಷ್ಟ್ರಾಭಿಧಾನಕಃ ।**
**ವಜ್ರಾಯುಧೋಪಿ ದೇವೀಭಿಃ ಸಹ ಸ್ವಪುರಮಾಗಮತ್ ॥ ೫೯೫ ॥**

ಈ ವಿದ್ಯಾಧರನು ಪೂರ್ವದಲ್ಲಿ ಶತ್ರುವಾಗಿದ್ದ ವಿದ್ಯುದ್ದಂಷ್ಟ್ರನೆಂಬವನು. ವಜ್ರಾಯುಧನೂ ದೇವಿಯರೊಡನೆ ತನ್ನ ಪಟ್ಟಣಕ್ಕೆ ಬಂದನು.

**ಏವಂ ಸುಖೇನ ಭೂಭರ್ತುಃ ಕಾಲೇ ಗಚ್ಛತ್ಯಯೋದಯಾತ್ ।**
**ನಿಧಯೋ ನವ ರತ್ನಾನಿ ಚತುರ್ದಶ ತದಾಭವನ್ ॥ ೫೯೬ ॥**

ಈ ರೀತಿಯಾಗಿ ಪುಣ್ಯೋದಯದಿಂದ ವಜ್ರಾಯುಧರಾಜನ ಕಾಲವು ಸುಖದಿಂದ ಕಳೆಯುತ್ತಿರಲು ಆಗ ಅವನಿಗೆ ನವನಿಧಿಗಳೂ ಚತುರ್ದಶರತ್ನಗಳೂ ಉಂಟಾದುವು.

**ಚಕ್ರವರ್ತಿಶ್ರಿಯಂ ಪ್ರಾಪ್ಯ ನಿವಿಷ್ಟಂ ಸಿಂಹವಿಷ್ಟರೇ ।**
**ಕಶ್ಚಿದ್ವಿದ್ಯಾಧರೋ ಭೀತಃ ಶರಣಂ ತಮುಪಾಗತಃ ॥ ೫೯೭ ॥**

ಚಕ್ರವರ್ತಿಸಂಪತ್ತಿಯನ್ನು ಹೊಂದಿ ಸಿಂಹಾಸನದಲ್ಲಿ ಕುಳಿತಿದ್ದ ಆ ವಜ್ರಾಯುಧರಾಜನನ್ನು ಭೀತನಾದ ಒಬ್ಬಾನೊಬ್ಬ ವಿದ್ಯಾಧರನು ಶರಣವನ್ನು ಹೊಂದಿದನು.

**ತಸ್ಯೈವಾನುಪದಂ ಕಾಚಿದುತ್ಖಾತಾಸಿಲತಾ ಖಗೀ ।**
**ಕ್ರೋಧಾನಲಶಿಖೇವಾಗಾದ್ದ್ಯೋತಯಂತೀ ಸಭಾವನಿಮ್ ॥ ೫೯೮ ॥**

ಅವನ ಹಿಂದೆಯೇ ಲತೆಯಂತಿರುವ ಕತ್ತಿಯನ್ನೆತ್ತಿದ ಒಬ್ಬಾಳೊಬ್ಬ ಖೇಚರಿಯು, ಕೋಪವೆಂಬ ಬೆಂಕಿಯ ಜ್ವಾಲೆಯಂತೆ, ಸಭಾಭೂಮಿಯನ್ನು ಪ್ರಕಾಶಪಡಿಸುವವಳಾಗಿ ಬಂದಳು.

**ತಸ್ಯಾಶ್ಚಾನುಪದಂ ಕಶ್ಚಿತ್ ಸ್ಥವಿರಃ ಸ ಗದಾಧರಃ ।**
**ಸಮಾಗತ್ಯ ಮಹಾರಾಜ ದುರಾತ್ಮೈಷ ಖಗಾಧಮಃ ॥ ೫೯೯ ॥**

ಆಕೆಯ ಹಿಂದೆಯೂ ಒಬ್ಬಾನೊಬ್ಬ ಮುದುಕನು ಗದೆಯನ್ನು ಧರಿಸಿದವನಾಗಿ ಬಂದು ''ಮಹಾರಾಜನೇ ! ಇವನು ಪ್ರಸಿದ್ಧ ದುರಾತ್ಮನಾದ ಅಧಮಖೇಚರನು.

**ತ್ವಂ ದುಷ್ಟನಿಗ್ರಹೇ ಶಿಷ್ಟಪಾಲನೇ ಚ ನಿರಂತರಮ್ ।**
**ಜಾಗರ್ಷಿ ನಿಗ್ರಹಃ ಕಾರ್ಯಸ್ತ್ವಯಾಸ್ಯಾನ್ಯಾಯಕಾರಿಣಃ ॥ ೬೦೦ ॥**

ನೀನು ದುಷ್ಟನಿಗ್ರಹದಲ್ಲಿಯೂ ಶಿಷ್ಟಪಾಲನದಲ್ಲಿಯೂ ಯಾವಾಗಲೂ ಜಾಗರೂಕನಾಗಿರುತ್ತಿ. ಅನ್ಯಾಯಕಾರಿಯಾದ ಇವನನ್ನು ನೀನು ನಿಗ್ರಹಿಸಬೇಕು.

**ಕೋಸಾವನ್ಯಾಯ ಇತ್ಯೇತಜ್ಜ್ಞಾತುಮಿಚ್ಛಾ ತವಾಸ್ತಿ ಚೇತ್ ।**
**ವದಾಮಿ ದೇವ ಸಮ್ಯಕ್ತತ್ಪ್ರಣಿಧಾಯ ಮನಃ ಶೃಣು ॥ ೬೦೧ ॥**

ಈ ಅನ್ಯಾಯವಾವುದೆಂಬುದನ್ನು ತಿಳಿಯುವುದಕ್ಕೆ ನಿನಗೆ ಇಚ್ಛೆಯಿದ್ದರೆ ಪ್ರಭುವೇ ! ಹೇಳುತ್ತೇನೆ, ಚೆನ್ನಾಗಿ ಮನಸ್ಸನ್ನಿಟ್ಟು ಅದನ್ನು ಕೇಳು, ಹೇಳುತ್ತೇನೆ.

**ಜಂಬೂದ್ವೀಪಸುಕಚ್ಛಾಖ್ಯವಿಷಯೇ ಖಚರಾಚಲೇ ।**
**ಶ್ರೇಣ್ಯಾಮುತ್ತರದಿಗ್ಭಾಯಾಂ ಶುಕಪ್ರಭಪುರಾಧಿಪಃ ॥ ೬೦೨ ॥**

**ಖಗಾಧೀಡಿಂದ್ರದತ್ತಾಖ್ಯಃ ಪ್ರಿಯಾ ತಸ್ಯ ಯಶೋಧರಾ ।**
**ತಯೋರಹಂ ಸುತೋ ವಾಯುವೇಗೋ ವಿದ್ಯಾಧರೈರ್ಮತಃ ॥ ೬೦೩ ॥**

ಜಂಬೂದ್ವೀಪದ ಸುಕಚ್ಛದೇಶದಲ್ಲಿ ಖೇಚರಗಿರಿಯಾದ ವಿಜಯಾರ್ಧಪರ್ವತದಲ್ಲಿ ಉತ್ತರದಿಕ್ಕಿನಲ್ಲಿರುವ ಶ್ರೇಣಿಯಲ್ಲಿ ಶುಕಪ್ರಭಪುರದ ದೊರೆಯಾದ ಇಂದ್ರದತ್ತನೆಂಬವನು ಖೇಚರಾಧಿಪತಿ. ಯಶೋಧರೆಯು ಅವನ ಪತ್ನಿ. ಆ ದಂಪತಿಗಳಿಗೆ ನಾನು ವಿದ್ಯಾಧರರಿಂದ ಸಮ್ಮತನಾದ ವಾಯುವೇಗನೆಂಬ ಪುತ್ರನಾಗಿದ್ದೇನೆ.

**ತತ್ರ ಕಿನ್ನರಗೀತಾಖ್ಯನಗರಾಧಿಪತಿಃ ಖಗಃ ।**
**ಚಿತ್ರಚೂಲಃ ಸುತಾ ತಸ್ಯ ಸುಕಾಂತಾ ಮೇ ಪ್ರಿಯಾಭವತ್ ॥ ೬೦೪ ॥**

ಆ ಉತ್ತರಶ್ರೇಣಿಯಲ್ಲಿ ಚಿತ್ರಚೂಲನೆಂಬ ಖೇಚರನು ಕಿನ್ನರಗೀತವೆಂಬ ನಗರದ ಅಧಿಪತಿ. ಅವನ ಮಗಳಾದ ಸುಕಾಂತೆಯು ನನ್ನ ಪತ್ನಿಯಾದಳು.

**ಸುತಾ ಮಮ ಸುಕಾಂತಾಯಾಶ್ಚೈಷಾ ಶಾಂತಿಮತಿಃ ಸತೀ ।**
**ವಿದ್ಯಾಃ ಸಾಧಯಿತುಂ ಯಾತಾ ಮುನಿಸಾಗರಪರ್ವತಮ್ ॥ ೬೦೫ ॥**

ನನಗೂ ಸುಕಾಂತೆಗೂ ಪುತ್ರಿಯೂ ಪತಿವ್ರತೆಯೂ ಆದ ಈ ಶಾಂತಿಮತಿಯು ವಿದ್ಯೆಗಳನ್ನು ಸಾಧಿಸುವುದಕ್ಕೋಸ್ಕರ ಮುನಿಸಾಗರವೆಂಬ ಪರ್ವತವನ್ನು ಹೊಂದಿದಳು.

**ವಿದ್ಯಾಸಾಧನವಿಘ್ನಾರ್ಥಂ ಪಾಪೋಯಂ ಸಮುಪಸ್ಥಿತಃ ।**
**ಪುಣ್ಯೋದಯಾತ್ತದೈವಾಸ್ಯಾ ವಿದ್ಯಾ ಸಿದ್ಧಿಮುಪಾಗತಾ ॥ ೬೦೬ ॥**

ವಿದ್ಯಾಸಾಧನೆಗೆ ವಿಘ್ನವನ್ನು ಮಾಡುವುದಕ್ಕೋಸ್ಕರ ಪಾಪಿಯಾದ ಇವನು ಹತ್ತಿರಕ್ಕೆ ಬಂದನು. ಪುಣ್ಯೋದಯದಿಂದ ಆಗಲೇ ಈಕೆಯ ವಿದ್ಯೆಯು ಸಿದ್ಧಿಯನ್ನು ಹೊಂದಿತು.

**ತದ್ಭಯಾತ್ತ್ವಾಮಯಂ ಪಾಪಕರ್ಮಾಕೃತ್ಸಮುಪಾಶ್ರಯತ್ ।**
**ವಿದ್ಯಾಪೂಜಾಂ ಸಮಾದಾಯ ತದೈವಾಹಂ ಸಮಾಗಮಮ್ ॥ ೬೦೭ ॥**

ಪಾಪಕಾರ್ಯವನ್ನು ಮಾಡುವವನಾದ ಇವನು ಆ ಶಾಂತಿಮತಿಯ ಭಯದಿಂದ ನಿನ್ನನ್ನು ಆಶ್ರಯಿಸಿದನು. ಆಗಲೇ ನಾನು ವಿದ್ಯಾಪೂಜೆಯನ್ನು ಮಾಡಿ ಬಂದೆನು.

**ಅದೃಷ್ಟ್ವಾ ಮತ್ಸುತಾಂ ತತ್ರ ತನ್ಮಾರ್ಗಂ ಕ್ಷಿಪ್ರಮನ್ವಿತಃ ।**
**ಇತ್ಯವಾದೀತ್ಸ ತತ್ಸರ್ವಂ ಶ್ರುತ್ವಾವಧಿವಿಲೋಚನಃ ॥ ೬೦೮ ॥**

**ಜಾನಾಮ್ಯಹಂ ಮಹಚ್ಚಾಸ್ಯಾ ವಿದ್ಯಾಯಾ ವಿಘ್ನಕಾರಣಮ್ ।**
**ಇತಿ ವಜ್ರಾಯುಧೋ ವ್ಯಕ್ತಮೇವಂ ಪ್ರೋವಾಚ ತಾಂ ಕಥಾಮ್ ॥**

ಅಲ್ಲಿ ನನ್ನ ಮಗಳನ್ನು ಕಾಣದೆ ಶೀಘ್ರವಾಗಿ ಆಕೆಯ ದಾರಿಯನ್ನು ಅನುಸರಿಸಿದೆನು'' ಈ ಪ್ರಕಾರವಾಗಿ ಅವನು ಹೇಳಿದನು. ಅವಧಿಜ್ಞಾನವೆಂಬ ನೇತ್ರವುಳ್ಳ ವಜ್ರಾಯುಧನು ಅದೆಲ್ಲವನ್ನೂ ಕೇಳಿ ''ಈ ವಿದ್ಯೆಯ ಮಹಾವಿಘ್ನಕಾರಣವನ್ನು ನಾನು ಬಲ್ಲೆನು''ಎಂದು ವ್ಯಕ್ತವಾಗಿ ಆ ಕಥೆಯನ್ನು ಈ ರೀತಿಯಾಗಿ ಹೇಳಿದನು.

**ಅಸ್ಮಿನ್ನೈರಾವತೇ ಖ್ಯಾತೇ ಗಾಂಧಾರವಿಷಯೇ ನೃಪಃ ।**
**ವಿಂಧ್ಯಸೇನಃ ಪತಿರ್ವಿಂಧ್ಯಪುರಸ್ಯ ವಿಲಸನ್ ಗುಣೈಃ ॥ ೬೧೦ ॥**

**ಸುಲಕ್ಷಣಾಯಾಂ ತಸ್ಯಾಭೂತ್ಸೂನುರ್ನಲಿನಕೇತುಕಃ ।**
**ತತ್ರೈವ ಧನಮಿತ್ರಸ್ಯ ಶ್ರೀದತ್ತಾಯಾಂ ಸುತೋ ವಣಿಕ್ ॥ ೬೧೧ ॥**

**ಸುದತ್ತೋ ನಾಮ ತಸ್ಯಾಸೀದ್ಭಾರ್ಯಾ ಪ್ರೀತಿಂಕರಾಹ್ವಯಾ ।**
**ದೃಷ್ಟ್ವಾ ನಲಿನಕೇತುಸ್ತಾಂ ಕ್ವಚಿದ್ವನವಿಹಾರಿಣೀಮ್ ॥ ೬೧೨ ॥**

**ಮದನಾನಲಸಂತಪ್ತಸ್ತಂ ದಾಹಂ ಸೋಢುಮಕ್ಷಮಃ ।**
**ನ್ಯಾಯವೃತ್ತಿಂ ಸಮುಲ್ಲಂಘ್ಯ ಬಲಾದಹೃತ ದುರ್ಮತಿಃ ॥ ೬೧೩ ॥**

''ಈ ಐರಾವತಕ್ಷೇತ್ರದಲ್ಲಿ ಪ್ರಖ್ಯಾತವಾದ ಗಾಂಧಾರದೇಶದಲ್ಲಿ ಗುಣಗಳಿಂದ ಪ್ರಕಾಶಿಸುವವನಾದ ವಿಂಧ್ಯಸೇನನೆಂಬ ರಾಜನು ವಿಂಧ್ಯಪುರದ ದೊರೆಯಾಗಿದ್ದನು. ಅವನಿಗೆ ಸುಲಕ್ಷಣೆಯೆಂಬ ಪತ್ನಿಯಲ್ಲಿ ನಲಿನಕೇತುವೆಂಬ ಪುತ್ರನು ಜನಿಸಿದನು. ಅದೇ ನಗರದಲ್ಲಿ ಧನಮಿತ್ರನೆಂಬ ವೈಶ್ಯನಿಗೆ ಶ್ರೀದತ್ತೆಯೆಂಬವಳಲ್ಲಿ ಸುದತ್ತನೆಂಬ ವೈಶ್ಯಪುತ್ರನಿದ್ದನು. ಅವನಿಗೆ ಪ್ರೀತಿಂಕರೆಯೆಂಬ ಪತ್ನಿಯಿದ್ದಳು. ಒಂದಾನೊಂದು ಕಡೆಯಲ್ಲಿ ವನವಿಹಾರವನ್ನು ಮಾಡುತ್ತಿದ್ದ ಆ ಪ್ರೀತಿಂಕರೆಯನ್ನು ನಲಿನಕೇತು–ರಾಜಕುಮಾರನು ನೋಡಿ ಕಾಮಾಗ್ನಿಸಂತಪ್ತನಾಗಿ ಆ ತಾಪವನ್ನು ಸಹಿಸುವುದಕ್ಕೆ ಅಸಮರ್ಥನಾದ ಆ ದುರ್ಮತಿಯು ನ್ಯಾಯವರ್ತನವನ್ನು ಮೀರಿ ಬಲಾತ್ಕಾರದಿಂದ ಆಕೆಯನ್ನು ಅಪಹರಿಸಿದನು.

**ಸುದತ್ತಸ್ತೇನ ನಿರ್ವಿಣ್ಣಃ ಸುವ್ರತಾಖ್ಯಜಿನಾಂತಿಕೇ ।**
**ಪ್ರವ್ರಜ್ಯ ಸುಚಿರಂ ಘೋರಂ ತಪಃ ಕೃತ್ವಾಯುಷೋವಧೌ ॥ ೬೧೪ ॥**

**ಸನ್ನ್ಯಸ್ಯೈಶಾನಕಲ್ಪೇಭೂದೇಕಸಾಗರಜೀವಿತಃ ।**
**ತತ್ರ ಭೋಗಾಂಶ್ಚಿರಂ ಭುಕ್ತ್ವಾ ತತಃ ಪ್ರಚ್ಯುತ್ಯ ಪುಣ್ಯಭಾಕ್ ॥ ೬೧೫ ॥**

**ಜಂಬೂದ್ವೀಪಸುಕಚ್ಛಾಖ್ಯವಿಜಯಾರ್ಧಾಚಲೋತ್ತರ– ।**
**ಶ್ರೇಣ್ಯಾಂ ಪುರೇಭವತ್ಕಾಂಚನಾದ್ಯಂತತಿಲಕಾಹ್ವಯೇ ॥ ೬೧೬ ॥**

**ಮಹೇಂದ್ರವಿಕ್ರಮಸ್ಯೇಷ್ಟತನೂಜೋಜಿತಸೇನವಾಕ್ ।**
**ಅಭೂದನಿಲವೇಗಾಯಾಂ ವಿದ್ಯಾವಿಕ್ರಮದುರ್ಗತಃ ॥ ೬೧೭ ॥**

ಅದರಿಂದ ಸುದತ್ತನು ವಿರಕ್ತನಾಗಿ ಸುವ್ರತರೆಂಬ ಜಿನರ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಬಹುಕಾಲದವರೆಗೆ ಘೋರವಾದ ತಪಸ್ಸನ್ನು ಮಾಡಿ ಆಯುಷ್ಯಾವಸಾನದಲ್ಲಿ ಮಡಿದು ಈಶಾನಕಲ್ಪದಲ್ಲಿ ಒಂದು ಸಾಗರೋಪಮವರ್ಷಾಯುಷ್ಯವುಳ್ಳವನಾದನು. ಪುಣ್ಯಭಾಗಿಯಾದ ಅವನು ಅಲ್ಲಿ ಬಹುಕಾಲದವರೆಗೆ ಭೋಗಗಳನ್ನನುಭವಿಸಿ ಅಲ್ಲಿಂದ ಚ್ಯುತನಾಗಿ ಜಂಬೂದ್ವೀಪದ ಸುಕಚ್ಛದೇಶದ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಕಾಂಚನತಿಲಕವೆಂಬ ನಗರದಲ್ಲಿ ಮಹೇಂದ್ರವಿಕ್ರಮರಾಜನಿಗೆ ಆತನ ಅನಿಲವೇಗೆಯೆಂಬ ಪತ್ನಿಯಲ್ಲಿ ಅಜಿತಸೇನನೆಂಬ ಇಷ್ಟಪುತ್ರನಾದನು. ಅವನು ವಿದ್ಯೆಯಿಂದಲೂ ಪರಾಕ್ರಮದಿಂದಲೂ ದುರ್ಜೇಯನಾಗಿದ್ದನು.

**ಇತೋ ನಲಿನಕೇತುಶ್ಚ ವೀಕ್ಷ್ಯೋಲ್ಕಾಪಾತಮಾತ್ಮವಾನ್ ।**
**ನಿರ್ವಿದ್ಯ ಪ್ರಾಕ್ತನಾತ್ಮೀಯಂ ದುಶ್ಚರಿತ್ರಂ ವಿನಿಂದಯನ್ ॥ ೬೧೮ ॥**

**ಶ್ರೀಮಂಕರಮುನಿಂ ಶ್ರಿತ್ವಾ ದೀಕ್ಷಾಮಾದಾಯ ಶುದ್ಧಧೀಃ ।**
**ಕ್ರಮಾತ್ಕೈವಲ್ಯಮಾಸಾದ್ಯ ಸಂಪ್ರಾಪ ಕ್ಷಿತಿಮಷ್ಟಮೀಮ್ ॥ ೬೧೯ ॥**

ಇತ್ತ ನಲಿನಕೇತುವೂ ಉಲ್ಕಾಪಾತವನ್ನು ನೋಡಿ ಆತ್ಮಬೋಧೆಯುಳ್ಳವನೂ ಮೊದಲಿನ ತನ್ನ ದುಶ್ಚರಿತ್ರವನ್ನು ನಿಂದಿಸುವವನೂ ಆಗಿ ವೈರಾಗ್ಯವನ್ನು ಹೊಂದಿ ಶ್ರೀಮಂಕರನೆಂಬ ಮುನಿಯನ್ನು ಆಶ್ರಯಿಸಿ ದೀಕ್ಷೆಯನ್ನು ತೆಗೆದುಕೊಂಡು ಶುದ್ಧಬುದ್ಧಿಯುಳ್ಳವನಾಗಿ ಕ್ರಮದಿಂದ ಕೈವಲ್ಯವನ್ನು ಪಡೆದು ಅಷ್ಟಮಪೃಥ್ವಿಯನ್ನು ಹೊಂದಿದನು–ಮುಕ್ತನಾದನು.

ಪ್ರೀತಿಂಕರಾಪಿ ಸಂವೇಗಾತ್ಸಂಶ್ರಿತಾ ಸುವ್ರತಾಂತಿಕಮ್ ।
ಗೃಹಸಂಗಪರಿತ್ಯಾಗಾತ್ಕೃತ್ವಾ ಚಾಂದ್ರಾಯಣಂ ಪರಮ್ ॥ ೬೨೦ ॥

ಪ್ರಾಂತೇ ಸನ್ಯಸ್ಯ ಸಾ ಪ್ರಾಪತ್ಕಲ್ಪಮೀಶಾನನಾಮಕಮ್ ।
ತತ್ರ ಸ್ವಾಯುಸ್ಥಿತಿಂ ನೀತ್ವಾ ದಿವ್ಯೈರ್ಭೋಗೈಸ್ತತಶ್ಚ್ಯುತಾ ॥ ೬೨೧ ॥

ತವಾಜನಿ ತನೂಜೇಯಮಯಂ ವಿದ್ಯಾವಿಘಾತಕೃತ್ ।
ತತ್ಸಂಬಂಧಾದಿತಿ ಪ್ರೋಕ್ತಂ ಸರ್ವಮಾಕರ್ಣ್ಯ ಭೂಭುಜಾ ॥ ೬೨೨ ॥

ನಿರ್ವಿದ್ಯ ಸಂಸೃತೇಃ ಶಾಂತಿಮತಿಃ ಕ್ಷೇಮಂಕರಾಹ್ವಯಾತ್ ।
ತೀರ್ಥೇಶಾದ್ಧರ್ಮಮಾಸಾದ್ಯ ಸದ್ಯಃ ಪ್ರಾಪ್ಯ ಸುಲಕ್ಷಣಾಮ್ ॥ ೬೨೩ ॥

ಗಣಿನೀಂ ಸಂಯಮಂ ಶ್ರಿತ್ವಾ ಸನ್ಯಸ್ಯೈಶಾನಸಂಜ್ಞಕೇ ।
ನಾಕೇ ನಿಲಿಂಪೋ ಭೂತ್ವಾ ಸ್ವಕಾಯಪೂಜಾರ್ಥಮಾಗಮತ್ ॥ ೬೨೪ ॥

ತದಾನೀಮೇವ ಕೈವಲ್ಯಂ ಪ್ರಾಪತ್ಪವನವೇಗವಾಕ್ ।
ಸಹೈವಾಜಿತಸೇನೇನ ಕೃತ್ವಾ ಪೂಜಾಂ ತಯೋರಯಾತ್ ॥ ೬೨೫ ॥

ಪ್ರೀತಿಂಕರೆಯೂ ಧರ್ಮದಲ್ಲಿಯೂ ಅದರ ಫಲದಲ್ಲಿಯೂ ಪ್ರೀತಿರೂಪವಾದ ಸಂವೇಗದಿಂದ ಸುವ್ರತೆಯೆಂಬ ಆರ್ಯಿಕೆಯ ಸಮೀಪವನ್ನು ಹೊಂದಿ ತನ್ನ ಮನೆಯನ್ನೂ ಪರಿಗ್ರಹಗಳನ್ನೂ ತ್ಯಜಿಸಿ ಉತ್ಕೃಷ್ಟವಾದ ಚಾಂದ್ರಾಯಣತಪಸ್ಸನ್ನು ಮಾಡಿ ಆಯುಷ್ಯಾವಸಾನದಲ್ಲಿ ಆಕೆಯು ಸಮಾಧಿಮರಣವನ್ನು ಹೊಂದಿ ಈಶಾನ ಕಲ್ಪವನ್ನು ಸೇರಿದಳು. ಅಲ್ಲಿ ದಿವ್ಯಭೋಗಗಳಿಂದ ತನ್ನ ಆಯುಷ್ಯಸ್ಥಿತಿಯನ್ನು ಕಳೆದು ಅಲ್ಲಿಂದ ಚ್ಯುತಳಾಗಿ ಇವಳು ನಿನ್ನ ಮಗಳಾಗಿ ಜನಿಸಿದಳು. ಆ ಪೂರ್ವಭವ ಸಂಬಂಧದಿಂದ ಈ ಅಜಿತಸೇನನು ವಿದ್ಯಾವಿಘಾತವನ್ನು ಮಾಡುವವನಾದನು'' ಈ ರೀತಿಯಾಗಿ ವಜ್ರಾಯುಧರಾಜನಿಂದ ಹೇಳಲ್ಪಟ್ಟ ಎಲ್ಲವನ್ನೂ ಕೇಳಿ ಶಾಂತಿಮತಿಯು ಸಂಸಾರದಿಂದ ವಿರಕ್ತಳಾಗಿ ಕ್ಷೇಮಂಕರರೆಂಬ ತೀರ್ಥೇಶ್ವರರಿಂದ ಧರ್ಮವನ್ನು ತಿಳಿದು ಆಗಲೇ ಸುಲಕ್ಷಣೆಯೆಂಬ ಆರ್ಯಿಕೆಯನ್ನು ಹೊಂದಿ ಸಂಯಮ–ದೀಕ್ಷೆಯನ್ನು ಪಡೆದು ಆಯುಷ್ಯಾವಸಾನದಲ್ಲಿ ಸಮಾಧಿಮರಣವನ್ನು ಹೊಂದಿ ಈಶಾನವೆಂಬ ಸ್ವರ್ಗದಲ್ಲಿ ದೇವನಾಗಿ ತನ್ನ ಸಮೂಹದೊಡನೆ ಆ ದೇವನು ಪೂಜೆಗೋಸ್ಕರ ಬಂದನು. ಆಗಲೇ ಆ ಪವನವೇಗನು ಅಜಿತಸೇನನೊಡನೆಯೇ ಕೈವಲ್ಯವನ್ನು ಹೊಂದಿದನು. ಶಾಂತಿಮತಿಯ ತಂದೆಯಾದ ವಾಯುವೇಗನೂ ವಿದ್ಯಾಸಿದ್ಧಿಗೆ ವಿಘಾತವನ್ನು ಮಾಡಿದ ಅಜಿತಸೇನನೂ ಸಂಸಾರವಿರಕ್ತರಾಗಿ ದೀಕ್ಷೆಯನ್ನು ತೆಗೆದುಕೊಂಡು ತಪಸ್ಸನ್ನು ಮಾಡಿ ಕೇವಲಜ್ಞಾನವನ್ನು ಹೊಂದಿದರೆಂದು ಭಾವವು. ಆ ಉಭಯಕೇವಲಿಗಳ ಪೂಜೆಯನ್ನು ಮಾಡಿ ಆ ದೇವನು ಹೊರಟುಹೋದನು.

ತಥಾ ಚಕ್ರಧರೇ ರಾಜ್ಯಲಕ್ಷ್ಮ್ಯಾಲಿಂಗಿತವಿಗ್ರಹೇ ।
ದಶಾಂಗಭೋಗಸಾದ್ಭೂತೇ ಪಾತಿ ಷಟ್ಖಂಡಮಂಡಲಮ್ ॥ ೬೨೬ ॥

ವಿದ್ಯಾಧರಾದ್ರ್ಯವಾಗ್ಭಾಗಶಿವಮಂದಿರಭೂಪತಿಃ ।
ಮೇಘವಾಹನನಾಮಾಸ್ಯ ವಿಮಲಾಖ್ಯಾ ಪ್ರಿಯಾ ತಯೋಃ ॥ ೬೨೭ ॥

ಸುತಾ ಕನಕಮಾಲೇತಿ ಕಲ್ಯಾಣವಿಧಿಪೂರ್ವಕಮ್ ।
ಜಾತಾ ಕನಕಶಾಂತೇಃ ಸಾ ಝಷಕೇತುಸುಖಾವಹಾ ॥ ೬೨೮ ॥

ಆ ರೀತಿಯಾಗಿ ರಾಜ್ಯಲಕ್ಷ್ಮಿಯಿಂದ ಆಲಿಂಗಿತವಾದ ದೇಹವುಳ್ಳವನೂ ದಶಾಂಗ ಭೋಗಪರವಶನೂ ಆದ ವಜ್ರಾಯುಧಚಕ್ರೇಶ್ವರನು ಷಟ್ಖಂಡಭೂಮಂಡಲವನ್ನು ರಕ್ಷಿಸುತ್ತಿರುವಾಗ ವಿದ್ಯಾಧರಪರ್ವತದ ದಕ್ಷಿಣಭಾಗದಲ್ಲಿರುವ ಶಿವಮಂದಿರಪುರದ ದೊರೆಯಾದ ಮೇಘವಾಹನನಿಗೂ ಅವನ ಪತ್ನಿಯಾದ ವಿಮಲೆಗೂ ಕನಕ ಮಾಲೆಯೆಂಬ ಪುತ್ರಿಯು ಜನಿಸಿದಳು. ಆಕೆಯು ಕನಕಶಾಂತಿಯೆಂಬವನಿಗೆ ಕಲ್ಯಾಣ ವಿಧಿಪೂರ್ವಕವಾಗಿ ಕಾಮಸುಖವನ್ನುಂಟುಮಾಡುವವಳಾದಳು. ಕನಕಮಾಲೆಯು ಕನಕಶಾಂತಿಗೆ ವಿವಾಹಿತಳಾದಳೆಂದು ಭಾವವು.

ತಥಾ ವಸ್ವೋಕಸಾರಾಖ್ಯಪುರಾಧೀಶಖಗೇಶಿನಃ ।
ಸುತಾ ಸಮುದ್ರಸೇನಸ್ಯ ಜಯಸೇನೋದರೋದಿತಾ ॥ ೬೨೯ ॥

ಪ್ರಿಯಾ ವಸಂತಸೇನಾಪಿ ಬಭೂವಾಸ್ಯ ಕನೀಯಸೀ ।
ತಾಭ್ಯಾಂ ನಿರ್ವೃತಿಮಾಪಾಸೌ ದೃಷ್ಟಿಚರ್ಯಾದ್ವಯೇನ ವಾ ॥ ೬೩೦ ॥

ಹಾಗೆಯೇ ವಸ್ವೋಕಸಾರವೆಂಬ ನಗರದ ದೊರೆಯೂ ಖೇಚರಾಧಿಪತಿಯೂ ಆದ ಸಮುದ್ರಸೇನನಿಗೆ ಜಯಸೇನೆಯ ಗರ್ಭದಲ್ಲಿ ಜನಿಸಿದ ವಸಂತಸೇನೆಯೆಂಬ ಪುತ್ರಿಯೂ ಈ ಕನಕಶಾಂತಿಗೆ ಕಿರಿಯ ಹೆಂಡತಿಯಾದಳು. ಸಮ್ಯಗ್ದರ್ಶನ ಸಮ್ಯಕ್ಚಾರಿತ್ರಗಳಿಂದ ನಿತ್ಯ ಸುಖವನ್ನು ಹೊಂದುವಂತೆ, ಆ ಉಭಯಪತ್ನಿಯರಿಂದ ಈ ಕನಕಶಾಂತಿಯು ಸುಖವನ್ನು ಹೊಂದಿದನು.

ಕೋಕಿಲಪ್ರಥಮಾಲಾಪೈರಾಹೂತ ಇವ ಕೌತುಕಾತ್ ।
ಅಯಾದ್ವನವಿಹಾರಾಯ ಕದಾಚಿತ್ಸ ಸಹಪ್ರಿಯಃ ॥ ೬೩೧ ॥

ಒಂದಾನೊಂದು ಕಾಲದಲ್ಲಿ ಆ ಕನಕಶಾಂತಿಯು ಕೋಗಿಲೆಗಳ ಪ್ರಥಮಾಲಾಪಗಳಿಂದ ಕರೆಯಲ್ಪಟ್ಟವನಂತೆ ಪತ್ನಿಯರೊಡನೆ ಕೂಡಿದವನಾಗಿ ಕುತೂಹಲದಿಂದ ವನವಿಹಾರಕ್ಕೋಸ್ಕರ ಹೋದನು.

ಕಂದಮೂಲಫಲಾನ್ವೇಷೀ ನಿಧಿಂ ವಾ ಸುಕೃತೋದಯಾತ್ ।
ಕುಮಾರೋ ಮುನಿಮದ್ರಾಕ್ಷೀದ್ವಿಪಿನೇ ವಿಮಲಪ್ರಭಮ್ ॥ ೬೩೨ ॥

ಕಂದಮೂಲಫಲಗಳನ್ನು ಹುಡುಕುವವನು ಪುಣ್ಯೋದಯದಿಂದ ನಿಧಿಯನ್ನು ಕಾಣುವಂತೆ ಕನಕಶಾಂತಿ–ರಾಜಕುಮಾರನು ಅರಣ್ಯದಲ್ಲಿ ವಿಮಲಪ್ರಭಮುನಿಯನ್ನು ಕಂಡನು.

ತಂ ತ್ರಿಃ ಪರೀತ್ಯ ವಂದಿತ್ವಾ ತತಸ್ತತ್ತ್ವಂ ಪ್ರಬುದ್ಧವಾನ್ ।
ಮನೋರಜಃ ಸಮುದ್ಧೂಯ ಶುದ್ಧಿಂ ಬುದ್ಧೇರುಪಾಸದತ್ ॥ ೬೩೩ ॥

ತದಾನೀಮೇವ ತಂ ದೀಕ್ಷಾಲಕ್ಷ್ಮೀಶ್ಚ ಸ್ವವಶಂ ವ್ಯಧಾತ್ ।
ಶಂಫಲೀವ ವಸಂತಶ್ರೀರಜಾಯತ ತಪಶ್ರಿಯಃ ॥ ೬೩೪ ॥

ಆಗಲೇ ಆ ಕನಕಶಾಂತಿಯನ್ನು ದೀಕ್ಷಾಲಕ್ಷ್ಮಿಯೂ ತನ್ನ ವಶಪಡಿಸಿಕೊಂಡಳು. ಕನಕಶಾಂತಿಯು ದೀಕ್ಷೆಯನ್ನು ತೆಗೆದುಕೊಂಡನೆಂದು ಭಾವವು. ವಸಂತಲಕ್ಷ್ಮಿಯು ತಪೋಲಕ್ಷ್ಮಿಗೆ ಸುಖಫಲವುಳ್ಳ–ದೂತಿಯಂತಾದಳು. ವಸಂತಋತುವಿನ ಶೋಭೆಯು ತಪಸ್ಸಿಗೆ ಉತ್ತೇಜಕವಾಗಿದ್ದಿತೆಂದು ಭಾವವು.

ದೇವ್ಯೌ ವಿಮಲಮತ್ಯಾಖ್ಯಗಣಿನೀಂ ತೇ ಸಮಾಶ್ರಿತೇ ।
ಅದೀಕ್ಷ್ಯೇತಾಂ ಸಹೈತೇನ ಯುಕ್ತಂ ತತ್ಕುಲಯೋಷಿತಾಮ್ ॥ ೬೩೫ ॥

ಅವನ ಆ ಪತ್ನಿಯರು ವಿಮಲಮತಿಯೆಂಬ ಆರ್ಯಿಕೆಯನ್ನು ಹೊಂದಿದವರಾಗಿ ಈ ಕನಕಶಾಂತಿಯೊಡನೆ ದೀಕ್ಷೆಯನ್ನು ತೆಗೆದುಕೊಂಡರು. ಕುಲಸ್ತ್ರೀಯರಿಗೆ ಅದು ಯುಕ್ತವಾಗಿದೆ.

ಸಿದ್ಧಾಚಲೇ ಕದಾಚಿತ್ತಂ ಪ್ರತಿಮಾಯೋಗಧಾರಿಣಮ್ ।
ಖಗೋ ವಸಂತಸೇನಾಯಾ ಬದ್ಧವೈರೇಣ ಮೈಥುನಃ ॥ ೬೩೬ ॥

ವಿಲೋಕ್ಯ ಚಿತ್ರಚೂಲಾಖ್ಯಃ ಲೋಪಾರುಣಿತವೀಕ್ಷಣಃ ।
ಪ್ರಾರೀಪ್ಸುರುಪಸರ್ಗಾಯ ತರ್ಜಿತಃ ಖೇಚರೇಶ್ವರೈಃ ॥ ೬೩೭ ॥

ಒಂದಾನೊಂದು ಕಾಲದಲ್ಲಿ ಸಿದ್ಧಾಚಲದಲ್ಲಿ ಪ್ರತಿಮಾಯೋಗಧಾರಿಯಾಗಿದ್ದ ಆ ಕನಕಶಾಂತಿಯನ್ನು ವಸಂತಸೇನೆಯ ಮೈದುನನಾದ ಚಿತ್ರಚೂಲನೆಂಬ ಖೇಚರನು ನೋಡಿ ಪೂರ್ವಬದ್ಧವಾದ ವೈರದಿಂದುಂಟಾದ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನೂ ಉಪಸರ್ಗವನ್ನು ಮಾಡುವುದಕ್ಕೆ ಪ್ರಾರಂಭಿಸಬೇಕೆಂಬ ಇಚ್ಛೆಯುಳ್ಳವನೂ ಆಗಿ ಖೇಚರಾಧಿಪತಿಗಳಿಂದ ತಿರಸ್ಕರಿಸಲ್ಪಟ್ಟನು.

**ಅನ್ಯದಾ ರತ್ನಸೇನಾಖ್ಯೋ ನೃಪೋ ರತ್ನಪುರಾಧಿಪಃ ।**
**ದತ್ವಾಪ ಪಂಚಕಾಶ್ಚರ್ಯಂ ಭಿಕ್ಷಾಂ ಕನಕಶಾಂತಯೇ ॥ ೬೩೮ ॥**

ಮತ್ತೊಂದು ಕಾಲದಲ್ಲಿ ರತ್ನಪುರಾಧಿಪತಿಯಾದ ರತ್ನಸೇನನೆಂಬ ರಾಜನು ಕನಕಶಾಂತಿಮುನಿಗೆ ಭಿಕ್ಷೆಯನ್ನು ಕೊಟ್ಟು ಪಂಚಾಶ್ಚರ್ಯವನ್ನು ಪಡೆದನು.

**ಚಿತ್ರಚೂಲಃ ಪುನಶ್ಚಾಸ್ಯ ಪ್ರತಿಮಾಯೋಗಧಾರಿಣಃ ।**
**ವನೇ ಸುರನಿಪಾತಾಖ್ಯೇ ವಿಘಾತಂ ಕರ್ತುಮುದ್ಯತಃ ॥ ೬೩೯ ॥**

ಚಿತ್ರಚೂಲನು ಸುರನಿಪಾತವೆಂಬ ವನದಲ್ಲಿ ಪ್ರತಿಮಾಯೋಗಧಾರಿಯಾದ ಈ ಕನಕಶಾಂತಿಮುನಿಗೆ ಪುನಃ ತಪೋವಿಘಾತವನ್ನು ಮಾಡುವುದಕ್ಕೆ ಉದ್ಯುಕ್ತನಾದನು.

**ತಸ್ಮಿನ್ಕೋಪಂ ಪರಿತ್ಯಜ್ಯ ಘಾತಿಘಾತಾದ್ಯತೀಶ್ವರಃ ।**
**ಕೇವಲಾವಗಮಂ ಪ್ರಾಪತ್ಕ್ವಾಪಿ ಕೋಪೋ ನ ಧೀಮತಾಮ್॥ ೬೪೦ ॥**

ಯತೀಶ್ವರನು ಆ ಚಿತ್ರಚೂಲನಲ್ಲಿ ಕೋಪವನ್ನು ಪರಿತ್ಯಜಿಸಿ ಘಾತಿಕರ್ಮವಿನಾಶದಿಂದ ಕೇವಲಜ್ಞಾನವನ್ನು ಹೊಂದಿದನು. ಪ್ರಾಜ್ಞರಿಗೆ ಎಲ್ಲಿಯೂ ಕೋಪವಿರುವುದಿಲ್ಲ.

**ದೇವಾಗಮನಮಾಲೋಕ್ಯ ಭೀತ್ವಾ ಸ ಖಗಪಾಪಕಃ ।**
**ತಮೇವ ಶರಣಂ ಯಾತೋ ನೀಚಾನಾಂ ವೃತ್ತಿರೀದೃಶೀ ॥ ೬೪೧ ॥**

ಕೇವಲಜ್ಞಾನಪೂಜೆಗಾಗಿ ದೇವರ್ಕಳು ಬರುವುದನ್ನು ನೋಡಿ ಆ ಪಾಪಿಯಾದ ಖೇಚರನು ಹೆದರಿ ಆ ಕನಕಶಾಂತಿಕೇವಲಿಯನ್ನೇ ಶರಣವನ್ನು ಹೊಂದಿದನು. ನೀಚರ ವರ್ತನವು ಇಂತಹದು.

**ಅಥ ವಜ್ರಾಯುಧಾಧೀಶೋ ನಪ್ತ್ರುಕೈವಲ್ಯದರ್ಶನಾತ್ ।**
**ಲಬ್ಧಬೋಧಿಃ ಸಹಸ್ರಾಯುಧಾಯ ರಾಜ್ಯಂ ಪ್ರದಾಯ ತತ್ ॥ ೬೪೨ ॥**

**ದೀಕ್ಷಾಂ ಕ್ಷೇಮಂಕರಖ್ಯಾತತೀರ್ಥಕರ್ತುರುಪಾಂತಗಃ ।**
**ಪ್ರಾಪ್ಯ ಸಿದ್ಧಗಿರೌ ವರ್ಷಂ ಪ್ರತಿಮಾಯೋಗಮಾಸ್ಥಿತಃ ॥ ೬೪೩ ॥**

ಆಮೇಲೆ ವಜ್ರಾಯುಧಚಕ್ರೇಶ್ವರನು ಮೊಮ್ಮಗನ ಕೈವಲ್ಯವನ್ನು ನೋಡಿದುದರಿಂದ ವಿವೇಕಪ್ರಾಪ್ತಿಯುಳ್ಳವನಾಗಿ ಸಹಸ್ರಾಯುಧನಿಗೆ ಆ ರಾಜ್ಯವನ್ನು ಕೊಟ್ಟು ಕ್ಷೇಮಂಕರತೀರ್ಥಂಕರರ ಸಮೀಪವನ್ನು ಹೊಂದಿದವನಾಗಿ ದೀಕ್ಷೆಯನ್ನು ತೆಗೆದುಕೊಂಡು ಸಿದ್ಧಗಿರಿಯಲ್ಲಿ ವರ್ಷದವರೆಗೆ ಪ್ರತಿಮಾಯೋಗದಲ್ಲಿದ್ದನು.

**ತಸ್ಯ ಪಾದೌ ಸಮಾಲಂಬ್ಯ ವಲ್ಮೀಕಂ ಬಹ್ವವರ್ಧತ ।**
**ವರ್ಧಯಂತಿ ಮಹಾತ್ಮಾನಃ ಪಾದಲಗ್ನಾನಪಿ ದ್ವಿಷಃ ॥ ೬೪೪ ॥**

ಆ ವಜ್ರಾಯುಧಮುನಿಯ ಪಾದಗಳನ್ನಾಶ್ರಯಿಸಿ ಹುತ್ತವು ಹೆಚ್ಚಾಗಿ ಬೆಳೆಯಿತು. ಮಹಾತ್ಮರುಗಳು ತಮ್ಮ ಪಾದಗಳನ್ನವಲಂಬಿಸಿದ ಶತ್ರುಗಳನ್ನೂ ವೃದ್ಧಿಹೊಂದಿಸುತ್ತಾರೆ.

**ವ್ರತಿನಂ ತಂ ವ್ರತತ್ಯೋಽಪಿ ಮಾರ್ದವಂ ವಾ ಸಮೀಪ್ಸವಃ ।**
**ಗಾಢಂ ರೂಢಾಃ ಸಮಾಸೇದುರಾಕಂಠಮಪಿ ತತ್ತನುಮ್ ॥ ೬೪೫ ॥**

ಲತೆಗಳೂ ಮಾರ್ದವವನ್ನು ಹೊಂದಬೇಕೆಂಬ ಇಚ್ಛೆಯುಳ್ಳವುಗಳಂತೆ ಆ ವ್ರತಿಯನ್ನು ದೃಢವಾಗಿ ಹೊಂದಿಕೊಂಡು ಕಂಠದವರೆಗೂ ಅವನ ಶರೀರವನ್ನು ಆವರಿಸಿದುವು.

**ಅಶ್ವಗ್ರೀವಸುತೌ ರತ್ನಕಂಠರತ್ನಾಯುಧಾಭಿಧೌ ।**
**ಭ್ರಾಂತ್ವಾ ಜನ್ಮನ್ಯತಿಬಲಮಹಾಬಲಸಮಾಖ್ಯಯಾ ॥ ೬೪೬ ॥**

**ಭೂತ್ವಾ ಸುತೌ ತಮಭ್ಯೇತ್ಯ ತದ್ವಿಘಾತಂ ಚಿಕೀರ್ಷುಕೌ ।**
**ರಂಭಾತಿಲೋತ್ತಮೇ ದೃಷ್ಟ್ವಾ ತರ್ಜಯಿತ್ವಾತಿಭಕ್ತಿತಃ ॥ ೬೪೭ ॥**

**ಗಂಧಾದಿಭಿರ್ಯತಿಂ ದಿವ್ಯೈರಭ್ಯರ್ಚ್ಯ ದಿವಮೀಯತುಃ ।**
**ಕ್ವ ತೇ ಕ್ವ ವಾಸುರೌ ಪುಣ್ಯೇ ಸತಿ ಕಿಂ ನ ಘಟಾಮಟೇತ್ ॥ ೬೪೮ ॥**

ಅಶ್ವಗ್ರೀವನ ಪುತ್ರರಾದ ರತ್ನಕಂಠನೂ ರತ್ನಾಯುಧನೂ ಸಂಸಾರದಲ್ಲಿ ತಿರುಗಿ ಅತಿಬಲ ಮಹಾಬಲರೆಂಬ ಹೆಸರಿನಿಂದ ಅಸುರದೇವರ್ಕಳಾಗಿ ಆ ವಜ್ರಾಯುಧಮುನಿಯನ್ನು ಹೊಂದಿ ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡಬೇಕೆಂಬ ಇಚ್ಛೆಯುಳ್ಳವರಾದರು. ರಂಭೆಯೂ ತಿಲೋತ್ತಮೆಯೂ ಅವರನ್ನು ಕಂಡು ತಿರಸ್ಕರಿಸಿ ಅಧಿಕವಾದ ಭಕ್ತಿಯಿಂದ ಯತಿಯನ್ನು ದಿವ್ಯವಾದ ಗಂಧಾದಿಗಳಿಂದ ಪೂಜಿಸಿ ಸ್ವರ್ಗಕ್ಕೆ ಹೋದರು. ಆ ರಂಭಾತಿಲೋತ್ತಮೆಯರೆಲ್ಲಿ ? ಆ ಅಸುರದೇವರ್ಕಳೆಲ್ಲಿ ? ಪುಣ್ಯವಿದ್ದರೆ ಯಾವುದುತಾನೆ ಸರಿಯಾಗುವುದಿಲ್ಲ ?

**ಕಿಂಚಿತ್ಕಾರಣಮುದ್ದಿಶ್ಯ ವಜ್ರಾಯುಧಸುತೋಽಪಿ ತತ್ ।**
**ರಾಜ್ಯಂ ಶತಬಲಿನ್ಯುಚ್ಚೈರ್ನಿಧಾಯ ನಿಹತಸ್ಪೃಹಃ ॥ ೬೪೯ ॥**

**ಸಂಯಮಂ ಸಮ್ಯಗಾದಾಯ ಮುನೀಂದ್ರಾತ್ಪಿಹಿತಾಸ್ರವಾತ್ ।**
**ಯೋಗಾವಸಾನೇ ಸಂಪ್ರಾಪದ್ವಜ್ರಾಯುಧಮುನೀಶ್ವರಮ್ ॥ ೬೫೦ ॥**

ವಜ್ರಾಯುಧನ ಪುತ್ರ–ಸಹಸ್ರಾಯುಧನೂ ಸ್ವಲ್ಪಕಾರಣವನ್ನುದ್ದೇಶಿಸಿ ಆ ರಾಜ್ಯವನ್ನು ಶತಬಲಿಯಲ್ಲಿರಿಸಿ ಚೆನ್ನಾಗಿ ಭೋಗಾಕಾಂಕ್ಷೆಯನ್ನು ನಾಶಮಾಡಿದವನಾಗಿ ಪಿಹಿತಾಸ್ರವಮುನೀಶ್ವರರಿಂದ ಚೆನ್ನಾಗಿ ಸಂಯಮವನ್ನು ಗ್ರಹಣಮಾಡಿ ಯೋಗವು ಪೂರ್ತಿಯಾದ ಮೇಲೆ ವಜ್ರಾಯುಧಮುನೀಶ್ವರನನ್ನು ಹೊಂದಿದನು.

**ತಾವುಭೌ ಸುಚಿರಂ ಕೃತ್ವಾ ಪ್ರವ್ರಜ್ಯಾಂ ಸಹ ದುಃಸಹಾಮ್ ।**
**ವೈಭಾರಪರ್ವತಸ್ಯಾಗ್ರೇ ವಿಗ್ರಹೇಷ್ವಕೃತಾಗ್ರಹೌ ॥ ೬೫೧ ॥**

**ಊರ್ಧ್ವಗ್ರೈವೇಯಕಸ್ಯಾಧೋಭೂತಾಂ ಸೌಮನಸಾಹ್ವಯೇ ।**
**ಏಕಾನ್ನತ್ರಿಂಶದಬ್ಧ್ಯಾಯುಷೌ ವಿಮಾನೇ ಮಹರ್ಧಿಕೌ ॥ ೬೫೨ ॥**

ಆ ವಜ್ರಾಯುಧ ಸಹಸ್ರಾಯುಧಮುನಿಗಳೀರ್ವರು ದೇಹದಲ್ಲಿಯೂ ಆಸಕ್ತಿಯನ್ನು ಮಾಡದಿರುವವರಾಗಿ ವೈಭಾರಪರ್ವತದ ತುದಿಯಲ್ಲಿ ಜೊತೆಯಾಗಿ ದುಸ್ಸಹವಾದ ತಪಸ್ಸನ್ನು ಮಾಡಿ ಆಯುಷ್ಯಾವಸಾನದಲ್ಲಿ ಮಡಿದು ಊರ್ಧ್ವಗ್ರೈವೇಯಕದ ಕೆಳಗೆ ಸೌಮನಸವೆಂಬ ವಿಮಾನದಲ್ಲಿ ಇಪ್ಪತ್ತೊಂಬತ್ತುಸಾಗರೋಪಮವರ್ಷಾಯುಷ್ಯವುಳ್ಳ ಮಹರ್ದ್ಧಿಕದೇವರ್ಕಳಾಗಿ ಹುಟ್ಟಿದರು.

**ತತೋ ವಜ್ರಾಯುಧಶ್ಚ್ಯುತ್ವಾ ದ್ವೀಪೇಽಸ್ಮಿನ್ ಪ್ರಾಗ್ವಿದೇಹಗೇ ।**
**ವಿಷಯೇ ಪುಷ್ಕಲಾವತ್ಯಾಂ ನಗರೀ ಪುಂಡರೀಕಿಣೀ ॥ ೬೫೩ ॥**

**ಪತಿರ್ಘನರಥಸ್ತಸ್ಯ ದೇವೀ ಕಾಂತಾ ಮನೋಹರಾ ।**
**ತಯೋರ್ಮೇಘರಥಾಖ್ಯೋಽಭೂದಾಧಾನಾದ್ಯಾಪ್ತಸತ್ಕ್ರಿಯಃ ॥ ೬೫೪ ॥**

ಅಲ್ಲಿಂದ ವಜ್ರಾಯುಧನು ಚ್ಯುತನಾಗಿ ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪುಷ್ಕಲಾವತೀದೇಶದಲ್ಲಿರುವ ಪುಂಡರೀಕಿಣೀನಗರದ ದೊರೆಯಾದ ಘನರಥನಿಗೂ ಆತನ ಪತ್ನಿಯಾದ ಮನೋಹರಾದೇವಿಗೂ ಗರ್ಭಾಧಾನಾದಿ ಸತ್ಕ್ರಿಯೆಗಳನ್ನು ಹೊಂದಿದ ಮೇಘರಥನೆಂಬ ಪುತ್ರನಾಗಿ ಜನಿಸಿದನು.

**ತಸ್ಯೈವಾನ್ಯೋಽಹಮಿಂದ್ರೋಽಪಿ ಸುತೋ ದೃಢರಥಾಹ್ವಯಃ ।**
**ಜಾತೋ ಮನೋರಮಾಯಾಂ ತಾವಿವ ಚಂದ್ರದಿವಾಕರೌ ॥ ೬೫೫ ॥**

ಇನ್ನೊಬ್ಬ ಅಹಮಿಂದ್ರ(ಸಹಸ್ರಾಯುಧ)ನೂ ಆ ಘನರಥನಿಗೇ ಮನೋರಮಾದೇವಿಯಲ್ಲಿ ದೃಢರಥನೆಂಬ ಪುತ್ರನಾದನು. ಆ ರಾಜಕುಮಾರರು ಚಂದ್ರಸೂರ್ಯರಂತೆ ಶೋಭಿಸಿದರು.

**ತಯೋಃ ಪರಾಕ್ರಮಪ್ರಜ್ಞಾಪ್ರಶ್ರಯಪ್ರಾಭವಕ್ಷಮಾಃ ।**
**ಸತ್ಯತ್ಯಾಗಾದಯೋಽನ್ಯೇ ಚ ಪ್ರಾದುರಾಸನ್ಗುಣಾಃ ಸ್ಥಿರಾಃ ॥ ೬೫೬ ॥**

ಅವರುಗಳಲ್ಲಿ ಸ್ಥಿರವಾದ ಪರಾಕ್ರಮ, ವಿಶೇಷಜ್ಞಾನ, ವಿನಯ, ಪ್ರಭುತ್ವ, ಕ್ಷಮಾ ಗುಣಗಳೂ; ಸತ್ಯ, ತ್ಯಾಗ ಮೊದಲಾದ ಬೇರೆ ಗುಣಗಳೂ ಪ್ರಾದುರ್ಭವಿಸಿದುವು.

**ಸುತೌ ತೌ ಯೌವನಾಪೂರ್ಣೌ ಪ್ರಾಪ್ತೈಶ್ವರ್ಯಾವಿವ ದ್ವಿಪೌ ।**
**ವಿಲೋಕ್ಯ ತದ್ವಿವಾಹಾರ್ಥಂ ಮಹೀಶೋ ವಿಹಿತಸ್ಮೃತಿಃ ॥ ೬೫೭ ॥**

**ಜ್ಯೇಷ್ಠಸೂನೋರ್ವಿವಾಹೇನ ಪ್ರಿಯಮಿತ್ರಾಮನೋರಮೇ ।**
**ಕನೀಯಸೋಽಪಿ ಸುಮತಿಂ ವಿಧತ್ತೇ ಚಿತ್ತವಲ್ಲಭಾಮ್ ॥ ೬೫೮ ॥**

ಆನೆಗಳಂತೆ ಪೂರ್ಣಯೌವನವುಳ್ಳವರೂ ಐಶ್ವರ್ಯಪ್ರಾಪ್ತಿಯುಳ್ಳವರೂ ಆದ ಆ ಪುತ್ರರನ್ನು ನೋಡಿ ಘನರಥರಾಜನು ಅವರುಗಳ ವಿವಾಹಕ್ಕೋಸ್ಕರ ಸ್ಮರಿಸಿ ಕೊಂಡವನಾಗಿ ಜ್ಯೇಷ್ಠಪುತ್ರನಿಗೆ ಪ್ರಿಯಮಿತ್ರೆ ಮನೋರಮೆಯೆಂಬೀರ್ವರು ಕನ್ಯೆಯರನ್ನೂ ಕನಿಷ್ಠಪುತ್ರನಿಗೆ ಸುಮತಿಯೆಂಬ ಕನ್ಯೆಯನ್ನೂ ವಿವಾಹವಿಧಿಯಿಂದ ಮನೋವಲ್ಲಭೆಯರಾದ-ಪತ್ನಿಯರನ್ನಾಗಿ ಮಾಡಿದನು.

**ಅಭವತ್ಪ್ರಿಯಮಿತ್ರಾಯಾಂ ತನುಜೋ ನಂದಿವರ್ಧನಃ ।**
**ಸುಮತ್ಯಾಂ ವರಸೇನಾಖ್ಯಃ ಸುತೋ ದೃಢರಥಸ್ಯ ಚ ॥ ೬೫೯ ॥**

ಜೇಷ್ಠಪುತ್ರನಾದ ಮೇಘರಥನಿಗೆ ಪ್ರಿಯಮಿತ್ರೆಯಲ್ಲಿ ನಂದಿವರ್ಧನನೆಂಬ ಪುತ್ರ ನಾದನು. ಕನಿಷ್ಠಪುತ್ರನಾದ ದೃಢರಥನಿಗೆ ಸುಮತಿಯಲ್ಲಿ ವರಸೇನನೆಂಬ ಪುತ್ರ ನಾದನು.

**ಇತಿ ಸ್ವಪುತ್ರಪೌತ್ರಾದಿಸುಖಸಾಧನಸಂಯುತಃ ।**
**ಸಿಂಹವಿಷ್ಟರಮಧ್ಯಾಸ್ಯ ಶಕ್ರಲೀಲಾಂ ಸಮಾವಹತ್ ॥ ೬೬೦ ॥**

ಈ ರೀತಿಯಾಗಿ ತನ್ನ ಪುತ್ರಪೌತ್ರಾದಿಸುಖಸಾಧನಯುಕ್ತನಾದ ಘನರಥ ಮಹಾರಾಜನು ಸಿಂಹಪೀಠದಲ್ಲಿ ಕುಳಿತು ದೇವೇಂದ್ರನ ಲೀಲೆಯನ್ನು ಧರಿಸಿದನು.

**ತದಾತ್ರ ಪ್ರಿಯಮಿತ್ರಾಯಾಃ ಸುಷೇಣಾ ನಾಮ ಚೇಟಿಕಾ ।**
**ಕೃಕವಾಕುಂ ಸಮಾನೀಯ ಘನತುಂಡಾಭಿಧಾನಕಮ್ ॥ ೬೬೧ ॥**

**ದರ್ಶಯಿತ್ವಾಹ ಯದ್ಯೇನಂ ಜಯೇಯುಃ ಕೃಕವಾಕವಃ ।**
**ಪರೇಷಾಂ ಪ್ರದದೇ ತೇಭ್ಯೋ ದೀನಾರಾಣಾಂ ಸಹಸ್ರಕಮ್ ॥ ೬೬೨ ॥**

ಆಗ ಇಲ್ಲಿಗೆ ಪ್ರಿಯಮಿತ್ರೆಯ ಭೃತ್ಯಳಾದ ಸುಷೇಣೆಯೆಂಬವಳು ಘನತುಂಡ ವೆಂದು ಹೆಸರುಳ್ಳ ಕೋಳಿಯನ್ನು ತಂದು ತೋರಿಸಿ ''ಬೇರೆಯವರ ಕೋಳಿಗಳು ಈ ಕೋಳಿಯನ್ನು ಜಯಿಸಿದರೆ ಅವರಿಗೆ ಸಹಸ್ರ ದೀನಾರ(ನಾಣ್ಯ)ಗಳನ್ನು ಕೊಡು ತ್ತೇನೆ''ಎಂದಳು.

**ಇತಿ ದೇವ್ಯಾಃ ಕನೀಯಸ್ಯಾಃ ಶ್ರುತ್ವಾ ತದ್ಗಣಿಕಾನಯತ್ ।**
**ಕಾಂಚನಾ ವಜ್ರತುಂಡಾಖ್ಯಂ ಕುಕ್ಕುಟಂ ಯೋಧನೇ ತಯೋಃ ॥ ೬೬೩ ॥**

**ಅನ್ಯೋನ್ಯದುಃಖಹೇತುತ್ವಾದೇತಯೋಃ ಪಶ್ಯತಾಮಪಿ ।**
**ಹಿಂಸಾನಂದಾದಿಕಂ ದೃಷ್ಟುಮಯೋಗ್ಯಂ ಧರ್ಮವೇದಿನಾಮ್ ॥ ೬೬೪ ॥**

**ಇತಿ ಸ್ಮರಂಶ್ಚ ಭವ್ಯಾನಾಂ ಬಹೂನಾಮುಪಶಾಂತಯೇ ।**
**ಸ್ವಕೀಯಪುತ್ರಮಾಹಾತ್ಮ್ಯಪ್ರಕಾಶನಧಿಯಾ ಚ ತತ್ ॥ ೬೬೫ ॥**

**ಯುದ್ಧಂ ಘನರಥಾಧೀಶೋ ಲೋಕಮಾನೋ ದೃಢಕ್ರುಧೋಃ ।**
**ಸ ಮೇಘರಥಮಪ್ರಾಕ್ಷೀದ್ಬಲಮೇತತ್ಕುತೋಽನಯೋಃ ॥ ೬೬೬ ॥**

**ಇತಿ ತೇನ ಸ ಪೃಷ್ಟಃ ಸನ್ ವಿಶುದ್ಧಾವಧಿಲೋಚನಃ ।**
**ತಯೋಸ್ತಾದೃಶಯುದ್ಧಸ್ಯ ಹೇತುಮೇವಮುದಾಹರತ್ ॥ ೬೬೭ ॥**

ಈ ಮಾತನ್ನು ಕಿರಿಯ ಹೆಂಡತಿಯ ಕಾಂಚನೆಯೆಂಬ ದಾಸಿಯು ಕೇಳಿ ವಜ್ರ ತುಂಡವೆಂಬ ಕೋಳಿಯನ್ನು ತಂದಳು. ಆ ಕೋಳಿಗಳ ಯುದ್ಧದಲ್ಲಿ ''ಇವುಗಳಿಗೆ ಪರಸ್ಪರ ದುಃಖಕಾರಣವಾಗಿರುವುದರಿಂದ ನೋಡುವವರಿಗೂ ಹಿಂಸಾನಂದ ವುಂಟಾಗುವುದರಿಂದ ಧರ್ಮಜ್ಞರಿಗೆ ಈ ಕಾಳಗವು ನೋಡುವುದಕ್ಕೆ ಯೋಗ್ಯ ವಾದುದಲ್ಲ'' ಎಂದು ಸ್ಮರಿಸುವವನಾದ ಆ ಘನರಥರಾಜನು ಅನೇಕಭವ್ಯರ ಉಪ ಶಾಂತಿಗೋಸ್ಕರ ತನ್ನ ಪುತ್ರನ ಮಹಿಮೆಯನ್ನು ಪ್ರಕಾಶಪಡಿಸಬೇಕೆಂಬ ಬುದ್ಧಿ ಯಿಂದ ಆ ಯುದ್ಧವನ್ನು ನೋಡುವವನಾಗಿ ''ದೃಢವಾದ ಕೋಪವುಳ್ಳ ಈ ಕೋಳಿ ಗಳಿಗೆ ಯಾವುದರಿಂದ ಈ ಶಕ್ತಿಯುಂಟಾಯಿತು ?'' ಎಂದು ಮೇಘರಥನನ್ನು ಪ್ರಶ್ನೆಮಾಡಿದನು. ವಿಶುದ್ಧವಾದ ಅವಧಿಜ್ಞಾನವೆಂಬ ನೇತ್ರವುಳ್ಳ ಆ ಮೇಘರಥನು ಈ ರೀತಿಯಾಗಿ ಘನರಥನಿಂದ ಪ್ರಶ್ನೆಮಾಡಲ್ಪಟ್ಟವನಾಗಿ ಆ ಕೋಳಿಗಳ ಅಂತಹ ಕಾಳಗಕ್ಕೆ ಕಾರಣವನ್ನು ಈ ರೀತಿಯಾಗಿ ಹೇಳಿದನು.

**ಅಸ್ಮಿನ್ನೈರಾವತೇ ರತ್ನಪುರೇ ಶಾಕಟಿಕೌ ಕ್ರುಧಾ ।**
**ಸೋದರ್ಯೌ ಭದ್ರಧನ್ಯಾಖ್ಯೌ ಬಲೀವರ್ದನಿಮಿತ್ತತಃ ॥ ೬೬೮ ॥**

**ಪಾಪಿಷ್ಠೌ ಶ್ರೀನದೀತೀರೇ ಹತ್ವಾ ಮೃತ್ವಾ ಪರಸ್ಪರಮ್ ।**
**ಕಾಂಚನಾಖ್ಯಸರಿತ್ತೀರೇ ಶ್ವೇತತಾಮ್ರಾದಿಕರ್ಣಕೌ ॥ ೬೬೯ ॥**

**ಸ್ವಪೂರ್ವಜನ್ಮಪಾಪೇನಾಜಾಯೇತಾಂ ವನವಾರಣೌ ।**
**ತತ್ರಾಪಿ ಭವಸಂಬದ್ಧಕ್ರೋಧಾದ್ಯುದ್ಧ್ವಾ ಮೃತಿಂ ಗತೌ ॥ ೬೭೦ ॥**

**ಅಯೋಧ್ಯಾಪುರವಾಸ್ತವ್ಯೋ ನಂದಿಮಿತ್ರೋಽಸ್ತಿ ವಲ್ಲವಃ ।**
**ಮಹಿಷೀಮಂಡಲೇ ತಸ್ಯ ಜಜ್ಞಾತೇ ಗವಲೋತ್ತಮೌ ॥ ೬೭೧ ॥**

''ಈ ಐರಾವತಕ್ಷೇತ್ರದ ರತ್ನಪುರದಲ್ಲಿ ಗಾಡಿಯವರಾದ ಭದ್ರ ಮತ್ತು ಧನ್ಯ ರೆಂಬೀರ್ವರು ಪಾಪಿಷ್ಠಸಹೋದರರು ಎತ್ತಿನ ನಿಮಿತ್ತದಿಂದ ಶ್ರೀನದೀತೀರದಲ್ಲಿ ಒಬ್ಬನಿಗೊಬ್ಬನು ಕೋಪದಿಂದ ಹೊಡೆದುಕೊಂಡು ಸತ್ತು ಕಾಂಚನವೆಂಬ ನದಿಯ ದಡದಲ್ಲಿ ತಮ್ಮ ಪೂರ್ವಜನ್ಮದ ಪಾಪದಿಂದ ಶ್ವೇತಕರ್ಣ ತಾಮ್ರಕರ್ಣಗಳೆಂಬ ಕಾಡಾನೆಗಳಾಗಿ ಹುಟ್ಟಿದುವು. ಅಲ್ಲಿಯೂ ಪೂರ್ವಭವಸಂಬಂಧವಾದ ಕೋಪದಿಂದ ಕಾದಾಡಿ ಸತ್ತು ಅಯೋಧ್ಯಾನಗರನಿವಾಸಿಯಾದ ನಂದಿಮಿತ್ರನೆಂಬ ಗೊಲ್ಲನ ಎಮ್ಮೆಗಳ ಹಿಂಡಿನಲ್ಲಿ ಒಳ್ಳೆಯ ಕೋಣಗಳಾಗಿ ಹುಟ್ಟಿದುವು.

**ದೃಪ್ತೌ ತತ್ರಾಪಿ ಸಂರಂಭಸಂಭೃತೌ ತೌ ಪರಸ್ಪರಮ್ ।**
**ಬಭೂವತುಶ್ಚಿರಂ ಯುದ್ಧ್ವಾ ಶೃಂಗಾಗ್ರಾಕೃಷ್ಟಜೀವಿತೌ ॥ ೬೭೨ ॥**

ಅಲ್ಲಿಯೂ ಮದಿಸಿದುವೂ ವೈರಭಾವದಿಂದ ಹುಟ್ಟಿದುವೂ ಆದ ಆ ಕೋಣಗಳು ಬಹುಕಾಲದವರೆಗೆ ಒಂದಕ್ಕೊಂದು ಕಾದಾಡಿ ಕೊಂಬಿನ ತುದಿಯಿಂದ ಪ್ರಾಣಗಳನ್ನು ಹೀರಿಕೊಂಡುವುಗಳಾದುವು. ಸತ್ತುಹೋದುವೆಂದು ಭಾವವು.

**ತಸ್ಮಿನ್ನೇವ ಪುರೇ ಶಕ್ತಿವರಶಬ್ದಾದಿಸೇನಯೋಃ ।**
**ಮೇಷಾವಭೂತಾಂ ತೌ ರಾಜಪುತ್ರಯೋರ್ವಜ್ರಮಸ್ತಕೌ ॥ ೬೭೩ ॥**

ಅವು ಸತ್ತು ಅದೇ ನಗರದಲ್ಲಿ ಶಕ್ತಿಸೇನ ವರಸೇನರೆಂಬ ರಾಜಪುತ್ರರಲ್ಲಿ ವಜ್ರದಂತೆ ತಲೆಯುಳ್ಳ ಎರಡು ಕುರಿ-ಟಗರುಗಳಾಗಿ ಹುಟ್ಟಿದುವು.

**ಯುದ್ಧ್ವಾನ್ಯೋನ್ಯಂ ಗತಪ್ರಾಣೌ ಸಂಜಾತೌ ಕುಕ್ಕುಟಾವಿಮೌ ।**
**ಸ್ವವಿದ್ಯಾಧ್ಯಾಸಿತಾವೇತೌ ಗೂಢೌ ಯೋಧಯತಃ ಖಗೌ ॥ ೬೭೪ ॥**

**ಕಾರಣಂ ಕಿಂ ತಯೋಃ ಕೌ ವಾ ತೌ ಚೇಚ್ಛೃಣು ಮಹೀಪತೇ ।**
**ಜಂಬೂಪಲಕ್ಷಿತೇ ದ್ವೀಪೇ ಭರತೇ ಖಚರಾಚಲೇ ॥ ೬೭೫ ॥**

**ಪುರೇಽಭೂದುತ್ತರಶ್ರೇಣ್ಯಾಂ ಕನಕಾದಿನಿ ಭೂಪತಿಃ ।**
**ಖಗೋ ಗರುಡವೇಗಾಖ್ಯೋ ಧೃತಿಷೇಣಾಸ್ಯ ವಲ್ಲಭಾ ॥ ೬೭೬ ॥**

ಅವು ಒಂದಕ್ಕೊಂದು ಕಾದಾಡಿ ಸತ್ತು ಈ ಕೋಳಿಗಳಾಗಿ ಹುಟ್ಟಿವೆ. ''ವಿದ್ಯಾಸಿದ್ಧಿಯುಳ್ಳ ಈ ವಿದ್ಯಾಧರರೀರ್ವರು ಗುಪ್ತವಾಗಿ ಯುದ್ಧಮಾಡಿಸುತ್ತಾರೆ. ಕಾರಣವೇನು ? ಅವರು ಯಾರು ?'' ಎಂದರೆ ರಾಜನೆ ! ಕೇಳು–ಜಂಬೂದ್ವೀಪದ ಭರತ ಕ್ಷೇತ್ರದಲ್ಲಿ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಕನಕಪುರದಲ್ಲಿ ಗರುಡವೇಗನೆಂಬ ಖೇಚರಾಧಿಪತಿಯಿದ್ದಾನೆ. ಧೃತಿಷೇಣೆಯೆಂಬವಳು ಈ ಗರುಡ ವೇಗನ ಪತ್ನಿ.

**ತಿಲಕಾಂತದಿವಿಶ್ಚಂದ್ರತಿಲಕಶ್ಚ ಸುತೌ ತಯೋಃ ।**
**ಸಿದ್ಧಕೂಟೇ ಸಮಾಸೀನಂ ಚಾರಣದ್ವಂದ್ವಮಾಶ್ರಿತೌ ॥ ೬೭೭ ॥**

**ಸ್ತುತ್ವಾ ಸ್ವಜನ್ಮಸಂಬಂಧಂ ಸಪ್ರಶ್ರಯಮಪೃಚ್ಛತಾಮ್ ।**
**ಜ್ಯೇಷ್ಠೋ ಮುನಿಸ್ತಯೋರೇವಂ ತತ್ಪ್ರಪಂಚಮಭಾಷತ ॥ ೬೭೮ ॥**

ಆ ದಂಪತಿಗಳಿಗೆ ದಿವಿತಿಲಕ ಚಂದ್ರತಿಲಕರೆಂಬೀರ್ವರು ಪುತ್ರರಾದರು. ಅವರು ಸಿದ್ಧಕೂಟದಲ್ಲಿ ಕುಳಿತಿದ್ದ ಈರ್ವರು ಚಾರಣಮುನಿಗಳನ್ನು ಆಶ್ರಯಿಸಿ ಅವರನ್ನು ಸ್ತೋತ್ರಮಾಡಿ ವಿನಯಪೂರ್ವಕವಾಗಿ ತಮ್ಮ ಭವಸಂಬಂಧವನ್ನು ಕೇಳಿದರು. ಆ ಈರ್ವರು ಮುನಿಗಳಲ್ಲಿ ದೊಡ್ಡವರು ಅವರ ಭವದ ವಿಸ್ತಾರವನ್ನು ಈ ರೀತಿಯಾಗಿ ಹೇಳಿದರು.

**ಧಾತಕೀಖಂಡಪ್ರಾಗ್ಭಾಗೇ ಪುರಮೈರಾವತೇ ಭುವಿ ।**
**ತಿಲಕಾಖ್ಯಂ ಪತಿಸ್ತಸ್ಯ ಬಭೂವಾಭಯಘೋಷವಾಕ್ ॥ ೬೭೯ ॥**

''ಧಾತಕೀಖಂಡದ್ವೀಪದ ಪೂರ್ವಭಾಗದಲ್ಲಿರುವ ಐರಾವತಕ್ಷೇತ್ರದಲ್ಲಿ ತಿಲಕವೆಂಬ ನಗರವಿದೆ. ಅಭಯಘೋಷನೆಂಬವನು ಆ ನಗರದ ದೊರೆಯಾಗಿದ್ದನು.

**ಸುವರ್ಣತಿಲಕಾ ತಸ್ಯ ದೇವೀ ಜಾತೌ ಸುತೌ ತಯೋಃ ।**
**ವಿಜಯೋನ್ಯೋ ಜಯಂತಶ್ಚ ಸಂಪನ್ನನಯವಿಕ್ರಮೌ ॥ ೬೮೦ ॥**

ಸುವರ್ಣತಿಲಕೆಯೆಂಬವಳು ಅವನ ಪತ್ನಿ. ಆ ದಂಪತಿಗಳಿಗೆ ನಯಪರಾಕ್ರಮ ಸಂಪನ್ನರಾದ ವಿಜಯ ಜಯಂತರೆಂಬೀರ್ವರು ಪುತ್ರರು ಜನಿಸಿದರು.

**ಖಗಾದ್ರಿದಕ್ಷಿಣಶ್ರೇಣೀಮಂದರಾಖ್ಯ ಪುರೇಶಿನಃ ।**
**ಶಂಖಸ್ಯ ಜಯದೇವ್ಯಾಶ್ಚ ಪೃಥಿವೀತಿಲಕಾ ಸುತಾ ॥ ೬೮೧ ॥**

ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿರುವ ಮಂದರವೆಂಬ ನಗರದ ಅಧಿಪತಿಯಾದ ಶಂಖನಿಗೂ ಆತನ ಪತ್ನಿಯಾದ ಜಯದೇವಿಗೂ ಪೃಥಿವೀತಿಲಕೆಯೆಂಬ ಪುತ್ರಿಯು ಜನಿಸಿದಳು.

**ತಸ್ಯ ತ್ವಭಯಘೋಷಸ್ಯ ಸಾಭವತ್ಪ್ರಾಣವಲ್ಲಭಾ ।**
**ಏಕಸಂವತ್ಸರಂ ತಸ್ಯಾಮೇವಾಸಕ್ತೇನ್ಯದಾ ವಿಭೌ ॥ ೬೮೨ ॥**

**ಸುವರ್ಣತಿಲಕಾ ಸಾರ್ಧಂ ವಿಹರ್ತುಂ ಭವತಾ ವನಮ್ ।**
**ವಷ್ಟೀತಿ ನೃಪತಿಂ ಚಂಪಕೋಕ್ತ್ಯಾದಿತಿಲಕಾವದತ್ ॥ ೬೮೩ ॥**

ಆಕೆಯೂ ಆ ಅಭಯಘೋಷನಿಗೆ ಪ್ರಾಣಪ್ರಿಯೆಯಾದ ಪತ್ನಿಯಾದಳು. ಒಂದು ವರ್ಷದವರೆಗೆ ದೊರೆಯು ಆಕೆಯಲ್ಲೇ ಆಸಕ್ತನಾಗಿರುತ್ತಿರಲು ಮತ್ತೊಂದು ಕಾಲದಲ್ಲಿ ''ಸುವರ್ಣತಿಲಕೆಯು ತಮ್ಮೊಡನೆ ವನವಿಹಾರವನ್ನು ಾಡಲಿಚ್ಛಿಸುತ್ತಾಳೆ'' ಎಂದು ಚಂಪಕತಿಲಕೆಯೆಂಬವಳು ಬಂದು ದೊರೆಗೆ ಃಳಿದಳು.

**ಟ್ಚೇಟಿಕಾವಚಃ ಶ್ರುತ್ವಾ ತದೇಷ್ಟುಮಭಿಧಾಯ ತಮ್ ।**
**ೃಥಿವೀತಿಲಕಾ ರಮ್ಯಂ ವನಮತ್ರೈವ ದರ್ಶಯೇ ॥ ೬೮೪ ॥**

**ಇತಿ ತತ್ಕಾಲಜಂ ಸರ್ವಂ ನವವಸ್ತು ಪ್ರದರ್ಶ್ಯ ಸಾ ।**
**ತೇನಾಶಕ್ನುವತೀ ರೋದ್ಧುಂ ಮಾನಭಂಗೇನ ಪೀಡಿತಾ ॥ ೬೮೫ ॥**

**ಸುಮತಿಂ ಗಣಿನೀಂ ಪ್ರಾಪ್ಯ ಪ್ರವ್ರಜ್ಯಾಮಾದದೇ ಸತೀ ।**
**ಹೇತು ರಾಸನ್ನಭವ್ಯಾನಾಂ ಮಾನಶ್ಚ ಹಿತಸಿದ್ಧಯೇ ॥ ೬೮೬ ॥**

ಸುವರ್ಣತಿಲಕೆಯ ಆ ಸೇವಕಿಯ ಮಾತನ್ನು ಕೇಳಿ ಆಗ ಹೋಗಬೇಕೆಂಬ ಇಚ್ಛೆಯುಳ್ಳವನಾದ ಆ ದೊರೆಯನ್ನು ಕುರಿತು ಪೃಥಿವೀತಿಲಕೆಯು ''ರಮಣೀಯ ವಾದ ವನವನ್ನು ಇಲ್ಲಿಯೇ ತೋರಿಸುತ್ತೇನೆ'' ಎಂದು ಹೇಳಿ ಆ ಕಾಲದಲ್ಲುಂಟಾಗುವ ಎಲ್ಲಾ ನೂತನವಸ್ತುವನ್ನು ತೋರಿಸಿ ಅದರಿಂದ ದೊರೆಯನ್ನು ತಡೆಯುವುದಕ್ಕೆ ಅಸಮರ್ಥಳಾದ ಮತ್ತು ಪತಿವ್ರತೆಯಾದ ಆ ಪೃಥಿವೀತಿಲಕೆಯು ಮಾನಭಂಗದಿಂದ ಪೀಡಿತಳಾಗಿ ಸುಮತಿಯೆಂಬ ಆರ್ಯಿಕೆಯನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡಳು. ಆಸನ್ನಭವ್ಯರಿಗೆ ಮಾನವೂ ಹಿತಸಿದ್ಧಿಗೆ ಕಾರಣವಾಗುವುದು.

**ಭಕ್ತ್ಯಾ ದಮವರಾಖ್ಯಾಯ ದತ್ವಾ ದಾನಂ ಮಹೀಪತಿಃ ।**
**ಆಶ್ಚರ್ಯಪಂಚಕಂ ಪ್ರಾಪ್ಯ ಕದಾಚಿದಭಯಾಹ್ವಯಃ ॥ ೬೮೭ ॥**

**ಅವಾಪ್ಯ ಸಹ ಸೂನುಭ್ಯಾಮನಂತಗುರುಸನ್ನಿಧಿಮ್ ।**
**ಲಬ್ಧಬೋಧಿಃ ಸಮಾದತ್ತ ದುಃಸಹಂ ಸ ಮಹಾವ್ರತಮ್ ॥ ೬೮೮ ॥**

ಒಂದಾನೊಂದು ಕಾಲದಲ್ಲಿ ಅಭಯಘೋಷರಾಜನು ಭಕ್ತಿಯಿಂದ ದಮವರನೆಂಬ ಮುನಿಗೆ ಆಹಾರದಾನವನ್ನು ಕೊಟ್ಟು ಪಂಚಾಶ್ಚರ್ಯವನ್ನು ಹೊಂದಿ ವಿವೇಕಪ್ರಾಪ್ತಿಯುಳ್ಳವನಾಗಿ ದುಃಸಹವಾದ ಮಹಾವ್ರತವನ್ನು ಸ್ವೀಕರಿಸಿದನು.

**ಕಾರಣಂ ತೀರ್ಥಕೃನ್ನಾಮ್ನೋ ಭಾವಯಿತ್ವಾಯುಷೋವಧೌ ।**
**ಸಮ್ಯಗಾರಾಧ್ಯ ಪುತ್ರಾಭ್ಯಾಮಚ್ಯುತಂ ಕಲ್ಪಮಾಪ್ತವಾನ್ ॥ ೬೮೯ ॥**

ಅವನು ತೀರ್ಥಕರನಾಮಕರ್ಮದ ಕಾರಣವನ್ನು ಭಾವಿಸಿ ಚೆನ್ನಾಗಿ ಆರಾಧಿಸಿ ಆಯುಷ್ಯಾವಸಾನದಲ್ಲಿ ಸತ್ತು ಪುತ್ರರೊಡನೆ ಅಚ್ಯುತಕಲ್ಪವನ್ನು ಹೊಂದಿದನು.

**ದ್ವಾವಿಂಶತ್ಯಬ್ಧಿಮಾನಾಯುರ್ಭುಕ್ತ್ವಾ ಭೋಗಾಂಶ್ಚ್ಯುತೌ ತತಃ ।**
**ಜೀವಿತಾಂತೇ ಭವಂತೌ ತೌ ಜಾತೌ ನೃಪಕುಮಾರಕೌ ॥ ೬೯೦ ॥**

**ಇತಿ ತತ್ಸಮ್ಯಗಾಕರ್ಣ್ಯ ಭಗವನ್ನಾವಯೋಃ ಪಿತಾ ।**
**ಕ್ವೇತಿ ಪೃಷ್ಟೋ ಮುನಿಸ್ತಾಭ್ಯಾಮಬ್ರವೀದಿತಿ ತತ್ಕಥಾಮ್ ॥ ೬೯೧ ॥**

ಇಪ್ಪತ್ತೆರಡು ಸಾಗರಪರಿಮಿತವಾದ ಆಯುಷ್ಯದವರೆಗೆ ಆ ಪುತ್ರರು ಅಲ್ಲಿ ಭೋಗಗಳನ್ನನುಭವಿಸಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತರಾಗಿ ನೀವುಗಳು ದಿವಿತಿಲಕ ಚಂದ್ರತಿಲಕರೆಂಬ ರಾಜಕುಮಾರರಾಗಿ ಜನಿಸಿದಿರಿ'' ಈ ರೀತಿಯಾಗಿ ಆ ಚಾರಣಮನೀಶ್ವರರು ಹೇಳಿದ ಮಾತನ್ನು ಚೆನ್ನಾಗಿ ಕೇಳಿ ''ಭಗವನ್! ವಿಜಯ ಜಯಂತರಾಗಿದ್ದ ನಮ್ಮಗಳ ತಂದೆಯಾಗಿದ್ದ ಅಭಯಘೋಷನು ಎಲ್ಲಿದ್ದಾನೆ ?'' ಎಂದು ಆ ರಾಜಕುಮಾರರಿಂದ ಪುನಃ ಪ್ರಶ್ನೆಮಾಡಲ್ಪಟ್ಟ ಆ ಚಾರಣಮುನೀಶ್ವರರು ಆ ಕಥೆಯನ್ನು ಈ ರೀತಿಯಾಗಿ ಹೇಳಿದರು.

**ತತಃ ಪ್ರಚ್ಯುತ್ಯ ಕಲ್ಪಾಂತಾದ್ಧೇಮಾಂಗದಮಹೀಪತೇಃ ।**
**ಸುತೋಭೂನ್ಮೇಘಮಾಲಿನ್ಯಾಂ ದೇವ್ಯಾಂ ಘನರಥಾಹ್ವಯಃ ॥ ೬೯೨ ॥**

ಅವನು ಆ ಅಚ್ಯುತಕಲ್ಪದಿಂದ ಚ್ಯುತನಾಗಿ ಹೇಮಾಂಗದರಾಜನಿಗೆ ಅವನ ಪತ್ನಿಯಾದ ಮೇಘಮಾಲಿನಿಯಲ್ಲಿ ಘನರಥನೆಂಬ ಪುತ್ರನಾದನು.

**ಇದಾನೀಂ ಪುಂಡರೀಕಿಣ್ಯಾಂ ಯುದ್ಧಂ ಕುಕ್ಕುಟಯೋರಸೌ ।**
**ಪ್ರೇಕ್ಷಮಾಣಃ ಸ್ಥಿತಃ ಶ್ರೀಮಾನ್ ದೇವೀಸುತಸಮನ್ವಿತಃ ॥ ೬೯೩ ॥**

**ತದಾಕರ್ಣ್ಯ ಭವತ್ಪ್ರೀತ್ಯಾ ಖಗೌ ತಾವಾಗತಾವಿಮೌ ।**
**ಇತಿ ಮೇಘರಥಾತ್ಸರ್ವಮಾಕರ್ಣ್ಯಾತ್ಮೀಯವಿಗ್ರಹಮ್ ॥ ೬೯೪ ॥**

**ಪ್ರಕಟೀಕೃತ್ಯ ತೌ ಭೂಪಂ ಕುಮಾರಂ ಚಾಭಿಪೂಜ್ಯ ತಮ್ ।**
**ಗತ್ವಾ ಗೋವರ್ಧನೋಪಾಂತೇ ದೀಕ್ಷಾಸಿದ್ಧಿಮವಾಪತಾಮ್ ॥ ೬೯೫ ॥**

ಈಗ ಪುಂಡರೀಕಿಣಿಯಲ್ಲಿ ಶ್ರೀಮಂತನಾಗಿರುವ ಈ ಘನರಥನು ಪತ್ನೀ ಪುತ್ರರೊಡನೆ ಕೂಡಿದವನಾಗಿ ಕೋಳಿಗಳ ಕಾಳಗವನ್ನು ನೋಡುತ್ತಿದ್ದಾನೆ'' ಈ ರೀತಿಯಾಗಿ ಆ ಚಾರಣಮುನೀಶ್ವರರು ಹೇಳಿದ ಮಾತನ್ನು ಕೇಳಿ ಅವರಿಗೆ ನಿಮ್ಮಲ್ಲಿರುವ ಪ್ರೀತಿಯಿಂದ ಆ ಈ ಖೇಚರರು ಬಂದಿದ್ದಾರೆ'' ಈ ಪ್ರಕಾರವಾಗಿ ಮೇಘರಥನಿಂದ ಎಲ್ಲವನ್ನೂ ಕೇಳಿ ಆ ದಿವಿತಿಲಕ−ಚಂದ್ರತಿಲಕ ಖೇಚರರಾಜಕುಮಾರರು ತಮ್ಮ ಶರೀರವನ್ನು ಪ್ರಕಟಪಡಿಸಿ ಘನರಥರಾಜನನ್ನೂ ಆ ಮೇಘರಥ−ರಾಜಕುಮಾರನನ್ನೂ ಪೂಜಿಸಿ ಹೋಗಿ ಗೋವರ್ಧನ ಮುನಿಸಮೀಪದಲ್ಲಿ ದೀಕ್ಷೆಯ ಸಿದ್ಧಿಯನ್ನು ಪಡೆದರು. ದೀಕ್ಷೆಯನ್ನು ಹೊಂದಿ ತಪಸ್ಸುಮಾಡಿ ಮುಕ್ತರಾದರೆಂದು ಭಾವವು.

**ಸ್ವಪೂರ್ವಭವಸಂಬಂಧಂ ವಿದಿತ್ವಾ ಕುಕ್ಕುಟೌ ಚ ತೌ ।**
**ಮುಕ್ತ್ವಾ ಪರಸ್ಪರಾಬದ್ಧವೈರಂ ಸನ್ನ್ಯಸ್ಯ ಸಾಹಸಾತ್ ॥ ೧೯೬ ॥**

**ಅಭೂತಾಂ ಭೂತದೇವಾದಿರಮಣಾಂತವನದ್ವಯೇ ।**
**ತಾಮ್ರಾದಿಚೂಲಚೂಲಾಂತಕನಕೌ ಭೂತಜಾತಿಜೌ ॥ ೧೯೭ ॥**

ಆ ಕೋಳಿಗಳೂ ತಮ್ಮ ಪೂರ್ವಭವಸಂಬಂಧವನ್ನು ತಿಳಿದು ಪರಸ್ಪರಾನುಬದ್ಧವಾದ ವೈರವನ್ನು ಬಿಟ್ಟು ಶೀಘ್ರವಾಗಿ ಶುಭಭಾವನೆಯಿಂದ ಸತ್ತು ಭೂತರಮಣ ದೇವರಮಣಗಳೆಂಬ ಎರಡು ವನಗಳಲ್ಲಿ ತಾಮ್ರಚೂಲ ಕನಕಚೂಲಗಳೆಂಬ ಭೂತಜಾತಿಯ ವ್ಯಂತರದೇವತೆಗಳಾಗಿ ಹುಟ್ಟಿದುವು.

**ತದೈವಾಗತ್ಯ ತೌ ದೇವೌ ಪ್ರೀತ್ಯಾ ಮೇಘರಥಾಹ್ವಯಮ್ ।**
**ಸಂಪೂಜ್ಯಾಖ್ಯಾಯ ಸಂಬಂಧಂ ಸ್ವಜನ್ಮಾಂತರಜಂ ಸ್ಫುಟಮ್ ॥ ೧೯೮ ॥**

**ಮಾನುಷೋತ್ತರಭೂಧ್ರಾಂತರ್ವರ್ತಿ ವಿಶ್ವಂ ವಿಲೋಕಯ ।**
**ಏಷ ಏವ ತವಾವಾಭ್ಯಾಮುಪಕಾರೋ ವಿಧೀಯತೇ ॥ ೧೯೯ ॥**

**ಇತ್ಯುದೀರ್ಯ ಕುಮಾರಂ ತಂ ಸ್ಯಾತ್ತಥೇತಿ ಪ್ರತಿಶ್ರುತಿಮ್ ।**
**ಸಾರ್ಧಂ ಸ್ವಾಪ್ತೈಃ ಸಮಾರೋಪ್ಯ ವಿಮಾನಂ ವಿವಿಧರ್ದ್ಧಿಕಮ್ ॥ ೨೦೦ ॥**

**ಸಂಪ್ರಾಪ್ಯ ಗಗನಾಭೋಗಂ ಮೇಘಮಾಲಾವಿಭೂಷಿತಮ್ ।**
**ದರ್ಶಯಾಮಾಸತುರ್ಯಾಂತೌ ಕಾಂತಾನ್ ದೇಶಾನ್**
**ಯಥಾಕ್ರಮಮ್ ॥ ೨೦೧ ॥**

ಆಗಲೇ ಆ ತಾಮ್ರಚೂಲ ಕನಕಚೂಲ−ದೇವರ್ಕಳು ಬಂದು ಪ್ರೀತಿಯಿಂದ ಮೇಘರಥನನ್ನು ಪೂಜಿಸಿ ತಮ್ಮ ಜನ್ಮಾಂತರಜನ್ಯವಾದ ಸಂಬಂಧವನ್ನು ಸ್ಪಷ್ಟವಾಗಿ ಹೇಳಿ ''ಮೇಘರಥಕುಮಾರನೆ! ಮಾನುಷೋತ್ತರ ಪರ್ವತದ ಮಧ್ಯದಲ್ಲಿರುವ ಜಗತ್ತನ್ನು ನೋಡು. ನಿನಗೆ ನಮ್ಮಿಂದ ಈ ಉಪಕಾರವೇ ಮಾಡಲ್ಪಡುವುದು'' ಎಂದು ಆ ರಾಜಕುಮಾರನನ್ನು ಕುರಿತು ಹೇಳಿ ''ಹಾಗೆಯೇ ಆಗಲಿ'' ಎಂದು ರಾಜಕುಮಾರನಿಂದ ಪ್ರತಿವಚನವನ್ನು ಹೊಂದಿ ವಿವಿಧಸಂಪತ್ತಿಯುಳ್ಳ ವಿಮಾನವನ್ನು ತಮ್ಮ ಆಪ್ತರೊಡನೆ ಹತ್ತಿಸಿ ಮೇಘಮಾಲೆಗಳಿಂದ ವಿಭೂಷಿತವಾದ ವಿಶಾಲಾಕಾಶವನ್ನು ಹೊಂದಿ ಯಥಾಕ್ರಮವಾಗಿ ಹೋಗುತ್ತ ಮನೋಹರವಾದ ದೇಶಗಳನ್ನು ತೋರಿಸಿದುವು.

**ಭರತಃ ಪ್ರಥಮೋ ದೇಶಸ್ತತೋ ಹೈಮವತಃ ಪರಃ ।**
**ಹರಿವರ್ಷೋ ವಿದೇಹಶ್ಚ ರಮ್ಯಕಃ ಪಂಚಮೋ ಮತಃ ॥ ೨೦೨ ॥**

**ಹೈರಣ್ಯವತಸಂಜ್ಞಶ್ಚ ಪರಶ್ಚೈರಾವತಾಹ್ವಯಃ ।**
**ಪಶ್ಯೈತೇ ಸಪ್ತ ಭೂಭೃದ್ಭಿರ್ವಿಭಕ್ತಾಃ ಸಪ್ತಭಿರ್ವಿಭೋ ॥ ೨೦೩ ॥**

''ಪ್ರಭುವೇ ! ಭರತವರ್ಷವು ಮೊದಲನೆಯ ದೇಶ. ಆಮೇಲೆ ಹೈಮವತ, ಹರಿವರ್ಷ, ವಿದೇಹ, ರಮ್ಯಕವು ಐದನೆಯದಾಗಿ ತಿಳಿಯಲ್ಪಟ್ಟಿದೆ. ಹೈರಣ್ಯವತ, ಐರಾವತವೆಂಬುದು ಮತ್ತೊಂದು ದೇಶ. ಈ ಏಳುದೇಶಗಳು ಏಳುಪರ್ವತಗಳಿಂದ ವಿಭಾಗಿಸಲ್ಪಟ್ಟಿವೆ. ನೋಡು.

**ಹಿಮವಾನ್ಮಹಾಹಿಮವಾನ್ನಿಷಧೋ ಮಂದರೋ ಮಹಾನ್ ।**
**ನೀಲೋ ರುಕ್ಮಿ ಶಿಖರ್ಯಾಖ್ಯೋ ವಿಖ್ಯಾತಾಃ ಕುಲಪರ್ವತಾಃ ॥ ೨೦೪ ॥**

ಹಿಮವಾನ್, ಮಹಾಹಿಮವಾನ್, ನಿಷಧ, ಮಹಾಮೇರು, ನೀಲ, ರುಕ್ಮಿ, ಶಿಖರಿ ಇವುಗಳು ಪ್ರಖ್ಯಾತಗಳಾದ ಕುಲಪರ್ವತಗಳು.

**ಇಮಾ ರಮ್ಯಾ ಮಹಾನದ್ಯಶ್ಚತುರ್ದಶ ಸಮುದ್ರಗಾಃ ।**
**ಪದ್ಮಾದಿಹ್ರದಸಂಭೂತಾ ನಾನಾಸ್ರೋತಸ್ವಿನೀಯುತಾಃ ॥ ೨೦೫ ॥**

**ಗಂಗಾ ಸಿಂಧುಶ್ಚ ರೋಹಿಚ್ಚ ರೋಹಿತಾಸ್ಯಾ ಹರಿತ್ಪರಾ ।**
**ಹರಿಕಾಂತಾ ಪರಾ ಸೀತಾ ಸೀತೋದಾಚಾಷ್ಟಮೀ ನದೀ ॥ ೨೦೬ ॥**

**ನಾರೀ ಚ ನರಕಾಂತಾ ಚ ಕೂಲಾಂತಾ ಸ್ವರ್ಣಸಂಜ್ಞಿಕಾ ।**
**ತತೋನ್ಯಾ ರೂಪಕೂಲಾಖ್ಯಾ ರಕ್ತಾ ರಕ್ತೋದಯಾ ಸಹ ॥ ೨೦೭ ॥**

ರಮಣೀಯಗಳೂ ಸಮುದ್ರವನ್ನು ಹೊಂದುವುವೂ ಪದ್ಮ ಮಹಾಪದ್ಮ ಹ್ರದಗಳಿಂದುಂಟಾದುವೂ ಅನೇಕ ಉಪನದಿಗಳಿಂದ ಕೂಡಿರುವುವೂ ಆದ ಗಂಗಾ, ಸಿಂಧು, ರೋಹಿತ್, ರೋಹಿತಾಸ್ಯಾ, ಹರಿತ್, ಹರಿಕಾಂತಾ, ಸೀತಾ, ಎಂಟನೆಯ ನದೀ−ಸಿತೋದಾ, ನಾರೀ, ನರಕಾಂತಾ, ಸ್ವರ್ಣಕೂಲಾ, ರೂಪ್ಯಕೂಲಾ, ರಕ್ತಾ, ರಕ್ತೋದಾ ಇವು ಹದಿನಾಲ್ಕು ಮಹಾನದಿಗಳು.

**ಹ್ರದಾಃ ಷೋಡಶ ಸಂಖ್ಯಾಃ ಸ್ಯುಃ ಕುಶೇಶಯವಿಭೂಷಿತಾಃ ।**
**ಪಶ್ಯ ಪದ್ಮೋ ಮಹಾಪದ್ಮಸ್ತಿಗಿಂಛಃ ಕೇಸರೀ ಮಹಾ− ॥ ೨೦೮ ॥**

**ಪುಂಡರೀಕಸ್ತಥಾ ಪುಂಡರೀಕೋ ನಿಷಧನಾಮಕಃ ।**
**ಪರೋ ದೇವಕುರುಃ ಸೂರ್ಯಃ ಸುಲಸೋ ದಶಮಃ ಸ್ಮೃತಃ ॥ ೨೦೯ ॥**

**ವಿದ್ಯುತ್ಪ್ರಭಾಹ್ವಯಃ ಖ್ಯಾತೋ ನೀಲವಾಕ್ಕುರುರುತ್ತರಃ ।**
**ಚಂದ್ರೋನ್ಯೈರಾವತೋ ಮಾಲಾವಾಂಶ್ಚ ವಿಖ್ಯಾತಸಂಜ್ಞಕಾಃ ॥ ೨೧೦ ॥**

ಕಮಲಗಳಿಂದ ವಿಭೂಷಿತಳಾದ ಹ್ರದ−ಸರೋವರಗಳು ಹದಿನಾರು ಇರುವುವು. ನೋಡು−ಪದ್ಮ, ಮಹಾಪದ್ಮ, ತಿಗಿಂಛ, ಕೇಸರೀ, ಮಹಾಪುಂಡರೀಕ, ಹಾಗೆಯೇ ಪುಂಡರೀಕ, ನಿಷಧ, ದೇವಕುರು, ಸೂರ್ಯ, ಹತ್ತನೆಯದು ಸುಲಸ, ವಿದ್ಯುತ್ಪ್ರಭ, ಪ್ರಖ್ಯಾತವಾದ ನೀಲ, ಉತ್ತರಕುರು, ಚಂದ್ರ, ಬಳಿಕ ಐರಾವತ, ಮಾಲಾವಾನ್ ಇವು ಪ್ರಖ್ಯಾತವಾದ ಹೆಸರುಗಳುಳ್ಳವು.

**ತೇಷಾಮಾದ್ಯೇಷು ಷಟ್ಸು ಸ್ಯುಸ್ತಾಃ ಶ್ರೀಹ್ರೀಧೃತಿಕೀರ್ತಯಃ ।**
**ಬುದ್ಧಿರ್ಲಕ್ಷ್ಮೀಶ್ಚ ಶಕ್ರಸ್ಯ ವ್ಯಂತರ್ಯೋ ವಲ್ಲಭಾಂಗನಾಃ ॥ ೨೧೧ ॥**

ಆ ಹದಿನಾರು ಸರೋವರಗಳಲ್ಲಿ ಮೊದಲನೆಯವುಗಳಾದ ಆರು ಸರೋವರಗಳಲ್ಲಿ ಇಂದ್ರನ ಪ್ರಿಯಾಂಗನೆಯರಾದ ಆ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿಯರೆಂಬ ವ್ಯಂತರಿಯರಿರುವರು.

**ನಾಗಾಃ ಶೇಷೇಷು ತನ್ನಾಮಧೇಯಾಃ ಸಂತತವಾಸಿನಃ ।**
**ಪಶ್ಯಾಮೀ ಚ ಮಹಾಭಾಗ ಪ್ರೇಕ್ಷ್ಯ ವಕ್ಷಾರಪರ್ವತಾಃ ॥ ೨೧೨ ॥**

**ಚಿತ್ರಪದ್ಮಾದಿಕೋಟಾಖ್ಯೌ ಕೂಟಾಂತನಲಿನಃ ಪರಃ ।**
**ಏಕಶೈಲಸ್ತ್ರಿಕೂಟಶ್ಚ ಕೂಟೋ ವೈಶ್ರವಣಾದಿಮಃ ॥ ೨೧೩ ॥**

**ಅಂಜನಾತ್ಮಾಂಜನೌ ಶಬ್ದಾವತೀ ಚ ವಿಕಟಾವತೀ ।**
**ಆಶೀವಿಷಾಭಿಧಾನಶ್ಚ ಸುಖಾವಹಸಮಾಹ್ವಯಃ ॥ ೨೧೪ ॥**

**ಚಂದ್ರಮಾಲಸ್ತಥಾ ಸೂರ್ಯಮಾಲೋ ನಾಗಾದಿಮಾಲವಾಕ್ ।**
**ದೇವಮಾಲಃ ಪರೋ ಗಂಧಮಾದನೋ ಮಾಲ್ಯವಾನಪಿ ॥ ೨೧೫ ॥**

ವಿದ್ಯುತ್ಪ್ರಭಃ ಸೌಮನಸಃ ಪ್ರಲಯೋತ್ಪತ್ತಿದೂರಗಾಃ ।
ವಿಭಂಗನದ್ಯೋ ಹ್ಯೇತಾಶ್ಚ ಸ್ವಚ್ಛಾಂಬುಪರಿಪೂರಿತಾಃ ॥ ೨೦೬ ॥

ಗ್ರಾಹಹ್ರದವತೀಸಂಜ್ಞೇ ಪರಾ ಪಂಕವತೀತಿ ಚ ।
ತಪ್ತಮತ್ತಜಲಾಭ್ಯಾಂ ಚ ಸಹೋನ್ಮತ್ತಜಲಾಹ್ವಯಾ ॥ ೨೦೭ ॥

ಕ್ಷಾರೋದಾ ಚ ಸಶೀತೋದಾ ಸ್ರೋತೋಂತರ್ವಾಹಿನೀ ಪರಾ ।
ಗಂಭೀರಮಾಲಿನೀ ಫೇನಮಾಲಿನ್ಯೂರ್ಮ್ಯಾದಿಮಾಲಿನೀ ॥ ೨೦೮ ॥

ಉಳಿದ ಹತ್ತು ಸರೋವರಗಳಲ್ಲಿ ಆ ಸರೋವರಗಳ ಹೆಸರುಗಳುಳ್ಳವರಾದ ನಾಗದೇವರ್ಕಳು ಯಾವಾಗಲೂ ವಾಸಮಾಡುವವರಾಗಿರುತ್ತಾರೆ. ಅದೃಷ್ಟ ಶಾಲಿಯೇ ! ನೋಡು, ಇವು ನೋಡತಕ್ಕುವುಗಳಾದ ವಕ್ಷಾರಪರ್ವತಗಳು ಹದಿ ನಾರು–ಚಿತ್ರಕೂಟ, ಪದ್ಮಕೂಟ, ನಲಿನಕೂಟ, ವೈಶ್ರವಣಕೂಟ, ಅಂಜನ, ಆತ್ಮಾಂಜನ, ಶಬ್ದಾವತೀ, ವಿಕಟಾವತೀ, ಆಶೀವಿಷ, ಸುಖಾವಹ, ಚಂದ್ರಮಾಲ, ಸೂರ್ಯಮಾಲ, ನಾಗಮಾಲ, ದೇವಮಾಲ. ಮುಂದೆ ಹೇಳಲ್ಪಡುವುವು ನಾಲ್ಕು ಗಜದಂತಪರ್ವತಗಳು–ಗಂಧಮಾದನ, ಮಾಲ್ಯವಾನ್, ವಿದ್ಯುತ್ಪ್ರಭ, ಸೌಮನಸ ಈ ಇಪ್ಪತ್ತು ಪರ್ವತಗಳು ಪ್ರಲಯೋತ್ಪತ್ತಿಗಳಿಂದ ದೂರವಾಗಿರುವುವು. ಸ್ವಚ್ಛಜಲ ಪರಿಪೂರ್ಣಗಳಾದ ವಿಭಂಗನದಿಗಳಿವು ಹನ್ನೆರಡು:– ಗ್ರಾಹವತೀ, ಹ್ರದವತೀ, ಪಂಕವತೀ, ತಪ್ತಜಲಾ, ಮತ್ತಜಲಾ, ಉನ್ಮತ್ತಜಲಾ, ಕ್ಷಾರೋದಾ, ಶೀತೋದಾ, ಸ್ರೋತೋಂತರ್ವಾಹಿನೀ, ಗಂಭೀರಮಾಲಿನೀ, ಫೇನಮಾಲಿನೀ, ಊರ್ಮಿ ಮಾಲಿನೀ.

ಅಮೀ ಚ ವಿಷಯಾಃ ಕಚ್ಛಾಸುಕಚ್ಛಾಪರಿಭಾಷಿತೌ ।
ಮಹಾಕಚ್ಛಾ ತಥಾ ಕಚ್ಛಕಾವತ್ಯಾವರ್ತಲಾಂಗಲಾಃ ॥ ೨೦೯ ॥

ಪುಷ್ಕಲಾಪುಷ್ಕಲಾವತ್ಯೌ ವತ್ಸಾ ನಾಮ್ನಾ ಚ ಕೀರ್ತಿತಾ ।
ಸುವತ್ಸಾ ಚ ಮಹಾವತ್ಸಾ ವಿಖ್ಯಾತಾ ವತ್ಸಕಾವತೀ ॥ ೨೧೦ ॥

ರಮ್ಯಾ ಚ ರಮ್ಯಕಾಖ್ಯಾ ರಮಣೀಯಾ ಮಂಗಲಾವತೀ ।
ಪದ್ಮಾ ಸುಪದ್ಮಾ ಮಹಾಪದ್ಮಾ ಪದ್ಮಾವತ್ಯಭಿಖ್ಯಯಾ ॥ ೨೧೧ ॥

ಶಂಖಾ ಚ ನಲಿನಾಖ್ಯಾ ಚ ಕುಮುದಾ ಸರಿದಾಪರಾ ।
ವಪ್ರಾ ಸುವಪ್ರಾ ಚ ಮಹಾವಪ್ರಯಾ ವಪ್ರಕಾವತೀ ॥ ೨೧೨ ॥

ಗಂಧಾ ಸುಗಂಧಾ ಗಂಧಾವತೀಶಬ್ದಾ ಗಂಧಮಾಲಿನೀ ।
ಏತಾಶ್ಚ ರಾಜಧಾನ್ಯೋತ್ರ ಕುಮಾರಾಲೋಕಯ ಸ್ಫುಟಮ್ ॥ ೨೧೩ ॥

ಕಚ್ಛಾ, ಸುಕಚ್ಛಾ, ಮಹಾಕಚ್ಛಾ, ಕಚ್ಛಕಾವತೀ, ಆವರ್ತಾ, ಲಾಂಗಲಾ, ಪುಷ್ಕಲಾ, ಪುಷ್ಕಲಾವತೀ, ವತ್ಸಾ, ಸುವತ್ಸಾ, ಮಹಾವತ್ಸಾ, ವತ್ಸಕಾವತೀ, ರಮ್ಯಾ, ರಮ್ಯಕಾ, ರಮಣೀಯಾ, ಮಂಗಲಾವತೀ, ಪದ್ಮಾ, ಸುಪದ್ಮಾ, ಮಹಾಪದ್ಮಾ, ಪದ್ಮಾವತೀ, ಶಂಖಾ, ನಲಿನಾ, ಕುಮುದಾ, ಸರಿದಾ, ವಪ್ರಾ, ಸುವಪ್ರಾ, ಮಹಾವಪ್ರಾ, ವಪ್ರಕಾವತೀ, ಗಂಧಾ, ಸುಗಂಧಾ, ಗಂಧಾವತೀ, ಗಂಧಮಾಲಿನೀ ಇವು ಮೂವತ್ತೆರಡು ಪ್ರಖ್ಯಾತದೇಶಗಳು.

ಕ್ಷೇಮಾ ಕ್ಷೇಮಪುರೀ ಚಾನ್ಯಾರಿಷ್ಟಾರಿಷ್ಟಪುರೀ ಪರಾ ।
ಖಡ್ಗಾಖ್ಯಯಾ ಚ ಮಂಜೂಷಾ ಚೌಷಧೀ ಪುಂಡರೀಕಿಣೀ ॥ ೨೧೪ ॥

ಸುಸೀಮಾ ಕುಂಡಲಾ ಸಾರ್ಧಮಪರಾಜಿತಸಂಜ್ಞಯಾ ।
ಪ್ರಭಂಕರಾಂಕವತ್ಯಾಖ್ಯಾ ಪದ್ಮಾವತ್ಯಭಿಧೋದಿತಾ ॥ ೨೧೫ ॥

ಶುಭಾಶಬ್ದಾಭಿಧಾನಾ ಚ ನಗರೀ ರತ್ನಸಂಚಯಾ ।
ಅಶ್ವಸಿಂಹಮಹಾಪುರ್ಯೋ ವಿಜಯಾದಿಪುರೀ ಪರಾ ॥ ೨೧೬ ॥

ಅರಜಾ ವಿರಜಾಶ್ಚೈವಮಶೋಕಾ ವೀತಶೋಕವಾಕ್ ।
ವಿಜಯಾ ವೈಜಯಂತೀ ಚ ಜಯಂತೀ ಚಾಪರಾಜಿತಾ ॥ ೨೧೭ ॥

ಅಥ ಚಕ್ರಪುರೀ ಖಡ್ಗಪುರ್ಯಯೋಧ್ಯಾ ಚ ವರ್ಣಿತಾ ।
ಅವಧ್ಯೇತ್ಯಥ ಸೀತೋತ್ತರಾಧ್ವಾಗಾನ್ಮೇರುಸನ್ನಿಧೇಃ ॥ ೨೧೮ ॥

ಪ್ರಾದಕ್ಷಿಣ್ಯೇನ ವಕ್ಷಾರಾದ್ಯಾದೀಂಶ್ಚ ಪ್ರತಿಪಾದಿತಾನ್ ।
ಸಮುದ್ರಾದಿವನಾದೀನಿ ಭೂತೋದ್ದಿಷ್ಟಾನಿ ಭೂಭುಜಾ ॥ ೨೧೯ ॥

ಪಶ್ಯತಾನ್ಯಾನಿ ಚ ಸ್ವೈರಂ ಮಾನುಷೋತ್ತರಭೂಭೃತಃ ।
ಮಧ್ಯವರ್ತೀನಿ ಸರ್ವಾಣಿ ಪ್ರೀತ್ಯಾವಿಷ್ಕೃತತೇಜಸಾ ॥ ೨೨೦ ॥

ಅಕೃತ್ರಿಮಜಿನಾಗಾರಾಣ್ಯಭ್ಯರ್ಚ್ಯ ಸ್ತುತಿಭಿಶ್ಚಿರಮ್ ।
ಸ್ತುತ್ವಾರ್ಥ್ಯಾಭಿರ್ನಿವೃತ್ಯಾಪಿ ಸ್ವಂ ಪುರಂ ಪರಮೋತ್ಸವಮ್ ॥ ೨೨೧ ॥

ಕ್ಷೇಮಾ, ಕ್ಷೇಮಪುರೀ, ಅರಿಷ್ಟಾ, ಅರಿಷ್ಟಪುರೀ, ಖಡ್ಗಾ, ಮಂಜೂಷಾ, ಓಷಧೀ, ಪುಂಡರೀಕಿಣೀ, ಸುಸೀಮಾ, ಕುಂಡಲಾ, ಅಪರಾಜಿತಾ, ಪ್ರಭಂಕರಾ, ಅಂಕವತೀ, ಪದ್ಮಾವತೀ, ಶುಭಾ, ರತ್ನಸಂಚಯಾ, ಅಶ್ವಪುರೀ, ಸಿಂಹಪುರೀ, ಮಹಾಪುರೀ, ವಿಜಯಪುರೀ, ಅರಜಾ, ವಿರಜಾ, ಅಶೋಕಾ, ವೀತಶೋಕಾ, ವಿಜಯಾ, ವೈಜಯಂತೀ, ಜಯಂತೀ, ಅಪರಾಜಿತಾ, ಚಕ್ರಪುರೀ, ಖಡ್ಗಪುರೀ, ಅಯೋಧ್ಯಾ, ಅವಧ್ಯಾ ಇವು ಮೂವತ್ತೆರಡು ನಗರಗಳು. ಮಹಾಮೇರುವಿನ ಸೀತಾನದಿಯ ಉತ್ತರಭಾಗದಿಂದ ಪ್ರದಕ್ಷಿಣೆಯಾಗಿರುವ ವಕ್ಷಾರಪರ್ವತ ಮೊದಲಾದುವು ಗಳನ್ನೂ ಸಮುದ್ರ ಮೊದಲಾದುವುಗಳನ್ನೂ ಆ ಭೂತಗಳು ರಾಜನಿಗೆ ತೋರಿಸಿ ಹೇಳಿದುವು. ಅವುಗಳನ್ನೂ ಮಾನುಷೋತ್ತರಪರ್ವತದ ಮಧ್ಯದಲ್ಲಿರುವ ಬೇರೆ ಎಲ್ಲಾ ವಿಷಯಗಳನ್ನೂ ಪ್ರೀತಿಯಿಂದ ಯಥೇಚ್ಛವಾಗಿ ನೋಡುತ್ತಿರುವ ರಾಜನು ತನ್ನ ತೇಜಸ್ಸನ್ನು ಬೀರುವವನಾಗಿ ಅಕೃತ್ರಿಮಜಿನಮಂದಿರಗಳನ್ನು ಪೂಜಿಸಿ ಅರ್ಥ ಗರ್ಭಿತವಾದ ಸ್ತುತಿಗಳಿಂದ ಸ್ತುತಿಸಿ ಹಿಂದಿರುಗಿ ಮಹೋತ್ಸವವುಳ್ಳ ತನ್ನ ಪಟ್ಟಣ ವನ್ನು ಪ್ರವೇಶಮಾಡಿದನು.

ದಿವ್ಯಾಭರಣದಾನೇನ ಪರಿಪೂಜ್ಯ ಮಹೀಪತಿಮ್ ।
ಸಾಮೋಕ್ತಿಭಿಶ್ಚ ತೌ ವ್ಯಂತರೇಶೌ ಸ್ವಾವಾಸಮೀಯತುಃ ॥ ೨೨೨ ॥

ಆ ವ್ಯಂತರೇಂದ್ರರು ದಿವ್ಯವಾದ ಆಭರಣಗಳ ದಾನದಿಂದಲೂ ಪ್ರಿಯ ವಚನಗಳಿಂದಲೂ ದೊರೆಯನ್ನು ಪೂಜಿಸಿ ತಮ್ಮ ವಾಸಸ್ಥಾನಕ್ಕೆ ಹೋದರು.

ಯಃ ಕರ್ಮವ್ಯತಿಹಾರೇಣ ನೋಪಕಾರಾರ್ಣವಂ ತರೇತ್ ।
ಸ ಜೀವನ್ನಪಿ ನಿರ್ಜೀವೋ ನಿರ್ಗಂಧಕುಸುಮೋಪಮಃ ॥ ೨೨೩ ॥

ಯಾವ ಮನುಷ್ಯನು ಪ್ರತಿಕ್ರಿಯೆಯಿಂದ ಉಪಕಾರವೆಂಬ ಸಮುದ್ರವನ್ನು ದಾಟುವುದಿಲ್ಲವೋ ನಿರ್ಗಂಧಪುಷ್ಪಸಮಾನನಾದ ಆ ಮನುಷ್ಯನು ಜೀವಿಸಿದ್ದರೂ ನಿರ್ಜೀವನಾಗಿರುತ್ತಾನೆ.

ಕೃಕವಾಕೂ ಚ ಚೇದೇವಮುಪಕಾರವಿಧೌ ಕಥಮ್ ।
ಮನುಷ್ಯಾ ಜರಯಂತ್ಯಂಗೇ ನ ಚೇದುಪಕೃತಂ ಖಲಾಃ ॥ ೨೨೪ ॥

ಕೋಳಿಗಳು ಕೂಡ ಪ್ರತ್ಯುಪಕಾರವಿಧಾನದಲ್ಲಿ ಈ ರೀತಿಯಾಗಿ ಆಚರಿಸಿದುವೆಂದ ಮೇಲೆ ಮನುಷ್ಯರು ಹೇಗೆ ಆ ಉಪಕಾರವನ್ನು ಶರೀರದಲ್ಲಿ ಜೀರ್ಣಿಸಿ ಕೊಳ್ಳುತ್ತಾರೆ ? ಉಪಕಾರವನ್ನು ಮಾಡದಿದ್ದರೆ ಅಂಥವರು ದುಷ್ಟರೆನಿಸಿ ಕೊಳ್ಳುವರು.

ಕದಾಚಿತ್ಕಾಲಲಾಭೇನ ನೃಪೋ ಘನರಥಾಹ್ವಯಃ ।
ಚೋದಿತಃ ಸ್ವಗತಂ ಧೀಮಾನಿತಿ ದೇಹಾದ್ಯಚಿಂತಯತ್ ॥ ೨೨೫ ॥

ಪ್ರಾಜ್ಞನಾದ ಘನರಥಮಹಾರಾಜನು ಒಂದಾನೊಂದು ಕಾಲದಲ್ಲಿ ಕಾಲ ಲಬ್ಧಿಯಿಂದ ಪ್ರೇರಿತನಾಗಿ ತನ್ನ ಶರೀರ ಮೊದಲಾದುದನ್ನು ಮನಸ್ಸಿನಲ್ಲಿ ಈ ರೀತಿಯಾಗಿ ವಿಚಾರಮಾಡಿದನು.

**ಧಿಕ್ಕಷ್ಟಮಿಷ್ಟಮಿತ್ಯೇತಚ್ಛರೀರಂ ಜಂತುರಾವಸೇತ್ ।**
**ಅವಸ್ಕರಗೃಹಾಚ್ಚೈನನ್ಷಾಮ್ಯೇತ್ಯತಿಜುಗುಪ್ಸಿತಮ್ ॥ ೭೩೬ ॥**

"ಈ ಶರೀರವು ಇಷ್ಟವೆಂದು ತಿಳಿದು ಪ್ರಾಣಿಯು ಇದರಲ್ಲಿ ವಾಸಮಾಡುವುದು. ಇದು ಅಮೇಧ್ಯದ ಗೃಹವಾಗಿರುವುದರಿಂದ ಬಹುಜುಗುಪ್ಸಿತವಾದುದೆಂದು ತಿಳಿಯುವುದಿಲ್ಲ. ಕಷ್ಟ ! ಧಿಕ್ಕಾರವಿರಲಿ.

**ತರ್ಪಕಾಣಿ ಸುಖಾನ್ಯಾಹುಃ ಕಾನಿ ತಾನ್ಯತ್ರ ದೇಹಿನಾಮ್ ।**
**ಮೋಹಃ ಕೋಪ್ಯತಿದುಃಖೇಷು ಸುಖಾಸ್ಥಾ ಪಾಪಹೇತುಷು ॥ ೭೩೭ ॥**

ತೃಪ್ತಿಯನ್ನುಂಟುಮಾಡುವ ವಸ್ತುಗಳು ಸುಖಗಳೆಂದು ಹೇಳುತ್ತಾರೆ. ಈ ಸಂಸಾರದಲ್ಲಿ ಪ್ರಾಣಿಗಳಿಗೆ ಅಂತಹ ವಸ್ತುಗಳಾವುವು ? ಪಾಪಕ್ಕೆ ಕಾರಣಗಳಾದ ಅತಿದುಃಖವಿಷಯಗಳಲ್ಲಿ ಸುಖದ ಅಪೇಕ್ಷೆಯುಂಟಾಗುವುದು. ಯಾವುದೋ ಮೋಹ–ಭ್ರಾಂತಿಯಿದು.

**ಜನ್ಮಾದ್ಯಂತರ್ಮುಹೂರ್ತಂ ಚೇಜ್ಜೀವಿತಂ ನಿಶ್ಚಿತಂ ತತಃ ।**
**ನ ಕ್ಷಣೇ ಚ ಕುತೋ ಜನ್ಮೀ ಜಾಯೇತ ನ ಹಿತೇ ರತಃ ॥ ೭೩೮ ॥**

ಹುಟ್ಟಿದ ಮೊದಲುಗೊಂಡು ಅಂತರ್ಮುಹೂರ್ತದವರೆಗೆ ಜೀವಿತವು ನಿಶ್ಚಿತವಾಗಿರುವುದು. ಅನಂತರದ ಕ್ಷಣದಲ್ಲಿ ನಿಶ್ಚಿತವಾಗಿಲ್ಲ. ಪ್ರಾಣಿಯು ತನ್ನ ಹಿತದಲ್ಲೇಕೆ ಆಸಕ್ತವಾಗುವುದಿಲ್ಲ ?

**ಬಂಧವೋ ಬಂಧನಾನ್ಯೇತೇ ಸಂಪದೋ ವಿಪದೋಂಗಿನಾಮ್ ।**
**ನ ಚೇದೇವಂ ಕುತಃ ಸಂತೋ ವನಾಂತಂ ಪ್ರಾಕ್ತನಾಃ ಗತಾಃ ॥ ೭೩೯ ॥**

ಪ್ರಾಣಿಗಳಿಗೆ ಈ ಬಂಧುಗಳು ಬಂಧನಕ್ಕೆ ಕಾರಣರು. ಸಂಪತ್ತುಗಳು ವಿಪತ್ತಿಗೆ ಕಾರಣಗಳು. ಹೀಗಲ್ಲದಿದ್ದರೆ ಸತ್ಪುರುಷರಾದ ಪೂರ್ವಿಕರು ಅರಣ್ಯಮಧ್ಯವನ್ನೇಕೆ ಹೊಂದಿದರು ?"

**ವಿತರ್ಕಯಂತಮಿತ್ಯೇನಂ ಪ್ರಾಪ್ಯ ಲೌಕಾಂತಿಕಾಮರಾಃ ।**
**ವಿಜ್ಞಾಯಾವಧಿವಿಜ್ಞಾನಾದನುವಕ್ತುಂ ತದೀಪ್ಸಿತಮ್ ॥ ೭೪೦ ॥**

**ದೇವ ದೇವಸ್ಯ ಕೋ ವಕ್ತಾ ದೇವ ವಿವಾವಗಚ್ಛತಿ ।**
**ಸಾಧು ಹೇಯಮುಪಾದೇಯಂ ಚಾರ್ಥಮಿತ್ಯಾದಿಸಂಸ್ತವೈಃ ॥ ೭೪೧ ॥**

**ಸ್ತುತ್ವಾ ಸತಾಮಭಿಷ್ಟುತ್ಯಮಭ್ಯರ್ಚ್ಯ ಪ್ರಸವೈರ್ನಿಜೈಃ ।**
**ನಿಯೋಗಮನುಪಾಲ್ಯ ಸ್ವಂ ಸ್ವಂ ಧಾಮೈತುಂ ನಭೋಗಮನ್॥ ೭೪೨ ॥**

ಈ ರೀತಿಯಾಗಿ ವಿಚಾರಮಾಡುತ್ತಿರುವ ಈ ಘನರಥಮಹಾರಾಜನನ್ನು ಲೌಕಾಂತಿಕದೇವರ್ಕಳು ಹೊಂದಿ ಅವನ ಇಷ್ಟಾರ್ಥವನ್ನು ಅವಧಿಜ್ಞಾನದಿಂದ ತಿಳಿದು ಅದನ್ನು ಪುಷ್ಟೀಕರಿಸುವುದಕ್ಕೋಸ್ಕರ "ಸ್ವಾಮಿಯೇ ! ತಮಗೆ ಹೇಳುವವನಾವನು ? ಹೇಯವಾದ ವಿಷಯವನ್ನೂ ಉಪಾದೇಯವಾದ ವಿಷಯವನ್ನೂ ಸ್ವಾಮಿಯೇ ಚೆನ್ನಾಗಿ ತಿಳಿಯುತ್ತೀರಿ" ಎಂಬೀ ಮೊದಲಾದ ಸ್ತೋತ್ರಗಳಿಂದ ಸತ್ಪುರುಷರಿಗೆ ಸ್ತುತ್ಯನಾದ ಆ ಘನರಥನನ್ನು ಸ್ತುತಿಸಿ ತಾವು ತಂದಿದ್ದ ದಿವ್ಯಪುಷ್ಪಗಳಿಂದ ಪೂಜಿಸಿ ತಮ್ಮ ಕರ್ತವ್ಯವನ್ನು ಪಾಲಿಸಿ ತಂತಮ್ಮ ನಿವಾಸಗಳಿಗೆ ಹೋಗುವುದಕ್ಕೋಸ್ಕರ ಆಕಾಶವನ್ನು ಸೇರಿದರು.

**ತತೋ ಮೇಘರಥೇ ರಾಜ್ಯಮಭಿಷೇಕಪುರಸ್ಸರಮ್ ।**
**ನಿಯೋಜ್ಯಾಭಿಷವಂ ದೇವೈಃ ಸ್ವಯಂ ಚಾಪ್ಯಾಪ ಸಂಯಮಮ್ ॥**

ಬಳಿಕ ಘನರಥಮಹಾರಾಜನು ಅಭಿಷೇಕಪುರಸ್ಸರವಾಗಿ ಮೇಘರಥನಲ್ಲಿ ರಾಜ್ಯಭಾರವನ್ನಿರಿಸಿ ತಾನೂ ದೇವರ್ಕಳಿಂದ ಅಭಿಷೇಕವನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡನು.

**ಮನೋವಾಕ್ಕಾಯಸಂಶುದ್ಧಿಂ ವಿದಧದ್ವಿಜಿತೇಂದ್ರಿಯಃ ।**
**ಕಷಾಯವಿಷಮಸ್ವಂತಮುವಮೀದವಮಂ ಸುಧೀಃ ॥ ೭೪೪ ॥**

ಪ್ರಾಜ್ಞನೂ ಜಿತೇಂದ್ರಿಯನೂ ಆದ ಘನರಥಮುನಿಯು ಮನೋವಾಕ್ಕಾಯವಿಶುದ್ಧಿಯನ್ನು ಧರಿಸಿದವನಾಗಿ ಅನಾತ್ಮೀಯವೂ ನಿಕೃಷ್ಟವೂ ಆದ ಕಷಾಯವೆಂಬ ವಿಷವನ್ನು ವಮನಮಾಡಿದನು.

**ಆರುಹ್ಯಶ್ರೇಣೀಂ ಸಮಾರುಹ್ಯ ಕ್ರಮಾತ್ಕರ್ಮಾಣಿ ನಿರ್ಮಮಃ ।**
**ನಿರ್ಮೂಲ್ಯ ನಿರ್ಮಲಂ ಭಾವಮವಾಪಾವಗಮಸ್ಯ ಸಃ ॥ ೭೪೫ ॥**

ಮಮಕಾರರಹಿತನಾದ ಆ ಘನರಥಮುನಿಯು ಕ್ಷಪಕಶ್ರೇಣಿಯನ್ನೇರಿ ಕ್ರಮದಿಂದ ಕರ್ಮಗಳನ್ನು ನಿರ್ಮೂಲಮಾಡಿ ಜ್ಞಾನದ ನಿರ್ಮಲವಾದ ಭಾವವನ್ನು ಹೊಂದಿದನು.

**ತದಾ ಕೈವಲ್ಯಸಂಪ್ರಾಪ್ತಿಪ್ರಭಾವಾತ್ಕಂಪಿತಾಸನಾಃ ।**
**ನಿಲಿಂಪಾಃ ಸರ್ವಸಂಪತ್ತ್ಯಾ ಪತ್ಯುಃ ಪೂಜಾಮಕುರ್ವತ ॥ ೭೪೬ ॥**

ಆಗ ಕೇವಲಜ್ಞಾನಪ್ರಾಪ್ತಿಯ ಪ್ರಭಾವದಿಂದ ಕಂಪಿತವಾದ ಆಸನಗಳುಳ್ಳ ದೇವರ್ಕಳು ಬಂದು ಸರ್ವಸಂಪತ್ತಿಯಿಂದ ಸ್ವಾಮಿಯ ಕೇವಲಜ್ಞಾನಪೂಜೆಯನ್ನು ಮಾಡಿದರು.

**ಸ ದೇವರಮಣೋದ್ಯಾನೇ ಸಮಂ ಮೇಘರಥೋನ್ಯದಾ ।**
**ಸ್ವದೇವೀಭಿರ್ವಿಹೃತ್ಯಾಸ್ತ ಚಂದ್ರಕಾಂತಶಿಲಾತಲೇ ॥ ೭೪೭ ॥**

ಬೇರೊಂದು ಸಮಯದಲ್ಲಿ ಆ ಮೇಘರಥರಾಜನು ದೇವರಮಣೋದ್ಯಾನದಲ್ಲಿ ತನ್ನ ದೇವಿಯರೊಡನೆ ವಿಹರಿಸಿ ಚಂದ್ರಕಾಂತಶಿಲಾತಲದಲ್ಲಿ ಕುಳಿತಿದ್ದನು.

**ನಿವಿಷ್ಟಂ ತಂ ಸಮಾಕ್ರಮ್ಯ ಗಚ್ಛನ್ಕಶ್ಚಿನ್ನಭಶ್ಚರಃ ।**
**ಗಂಡೋಪಲ ಇವ ವ್ಯೋಮ್ನಿ ಸಂರುದ್ಧಸ್ವವಿಮಾನಕಃ ॥ ೭೪೮ ॥**

**ಶಿಲಾಂ ದೃಷ್ಟ್ವಾ ನೃಪಾರೂಢಾಮುತ್ಥಾಪಯಿತುಮುದ್ಯತಃ ।**
**ನೃಪಾಂಗುಷ್ಠಾಗ್ರನಿರ್ಭುಗ್ನಶಿಲಾಭಾರಪ್ರಪೀಡಿತಃ ॥ ೭೪೯ ॥**

**ತತ್ಸೋಢುಮಕ್ಷಮೋ ಗಾಢಮಾಕ್ರಂದತ್ಕರುಣಸ್ವನಮ್ ।**
**ತದಾ ತತ್ಖಚರೀ ಪ್ರಾಪ್ಯ ನಾಥಾನಾಥಾಸ್ಮಿ ನಾಥ್ಯಸೇ ॥ ೭೫೦ ॥**

**ಪತಿಭಿಕ್ಷಾಂ ದದಸ್ವೇತಿ ಪ್ರಾಹಾಥೋತ್ಥಾಪಿತಕ್ರಮಃ ।**
**ಕಿಮೇತದಿತಿ ಭೂನಾಥಃ ಸ ಪೃಷ್ಟಃ ಪ್ರಿಯಮಿತ್ರಯಾ ॥ ೭೫೧ ॥**

ಹಾಗೆ ಕುಳಿತಿದ್ದ ಆ ಮೇಘರಥರಾಜನನ್ನು ಆಕ್ರಮಿಸಿ ಆಕಾಶದಲ್ಲಿ ಹೋಗುತ್ತಿದ್ದ ಒಬ್ಬಾನೊಬ್ಬ ಖೇಚರನು, ಕಲ್ಲುಬಂಡೆಯಲ್ಲಿ ತಡೆಯಲ್ಪಟ್ಟ ವಿಮಾನವುಳ್ಳವನಂತೆ, ತಡೆಯಲ್ಪಟ್ಟ ವಿಮಾನವುಳ್ಳವನಾಗಿ ರಾಜನು ಕುಳಿತಿದ್ದ ಆ ಚಂದ್ರಕಾಂತಶಿಲೆಯನ್ನು ನೋಡಿ ಅದನ್ನು ಎತ್ತುವುದಕ್ಕೆ ಉದ್ಯುಕ್ತನಾದನು. ಆಗ ರಾಜನು ಅಂಗುಷ್ಠದ ತುದಿಯಿಂದ ಆ ಕಲ್ಲನ್ನು ಅಮುಕಿದನು. ಆ ಕಲ್ಲಿನ ಭಾರದಿಂದ ಪೀಡಿತನಾದ ಆ ಖೇಚರನು ಅದನ್ನು ಸಹಿಸುವುದಕ್ಕೆ ಅಸಮರ್ಥನಾಗಿ ಕರುಣಧ್ವನಿಯಾಗುವಂತೆ ಗಟ್ಟಿಯಾಗಿ ಅತ್ತು–ಕಿರುಚಿಕೊಂಡನು. ಆಗ ಆತನ ಹೆಂಡತಿಯು ಬಂದು "ಪ್ರಭುವೇ ! ಅನಾಥಳಾಗಿದ್ದೇನೆ. ನಿನ್ನನ್ನು ಬೇಡುತ್ತೇನೆ. ಪತಿಭಿಕ್ಷೆಯನ್ನು ಕೊಡು" ಎಂದು ಹೇಳಿದಳು. ಬಳಿಕ ಕಾಲುಗಳನ್ನು ಮೇಲೆತ್ತಿದ ಆ ಮೇಘರಥ ರಾಜನನ್ನು "ಇದೇನು ?" ಎಂದು ಪ್ರಿಯಮಿತ್ರೆಯು ಪ್ರಶ್ನೆಮಾಡಿದಳು.

**ವಿಜಯಾರ್ಧಾಲಕಾಖ್ಯೇಶೋ ವಿದ್ಯುದ್ದಂಷ್ಟ್ರಃ ಖಗಾಧಿಪಃ ।**
**ಪ್ರಾಣೇಶಾನಿಲವೇಗಾಸ್ಯ ಸುತಃ ಸಿಂಹರಥಸ್ತಯೋಃ ॥ ೭೫೨ ॥**

ಆದಕ್ಕೆ ಮೇಘರಥನು "ಖೇಚರಾಧಿಪತಿಯಾದ ವಿದ್ಯುದ್ದಂಷ್ಟ್ರನು ವಿಜಯಾರ್ಧ ಪರ್ವತದ ಅಲಕಾನಗರದ ದೊರೆ. ಅನಿಲವೇಗೆಯು ಇವನ ಪತ್ನಿ. ಆ ದಂಪತಿಗಳಿಗೆ ಸಿಂಹರಥನು ಪುತ್ರ.

**ಅಭಿವಂದ್ಯ ಜಿನಾಧೀಶಮಮಾಯನ್ನಮಿತವಾಹನಮ್ ।**
**ಮಮೋಪರಿ ವಿಮಾನೇ ಸ್ವೇ ರುದ್ಧೇ ನಾಯಾತಿ ಕೇನ ಚಿತ್ ॥ ೨೫೩ ॥**

**ದಿಶಾ ವಿಲೋಕ್ಯ ಮಾಂ ದೃಷ್ಟ್ವಾ ಸ ದರ್ಪಾತ್ಕೋಪಲೇಪಿತಃ ।**
**ಅಸ್ಮಾನ್ ಶಿಲಾತಲೇನಾಮಾ ಪ್ರೋತ್ಥಾಪಯಿತುಮುದ್ಯಮೀ ॥ ೨೫೪ ॥**

**ಪೀಡಿತೋಽಯಂ ಮದಂಗುಷ್ಠೇನೈಷಾಪ್ಯಸ್ಯ ಮನೋರಮಾ ।**
**ಇತ್ಯಬ್ರವೀತ್ತದಾಕರ್ಣ್ಯ ಕಿಂ ಕೋಪಸ್ಯಾಸ್ಯ ಕಾರಣಮ್ ॥ ೨೫೫ ॥**

**ಇದಮೇವ ಕಿಮಸ್ತ್ಯನ್ಯದತ್ರಾನ್ಯತ್ರಾಪಿ ವೇತ್ಯಸೌ ।**
**ತಯೋಕ್ತೋ ನಾನ್ಯದಿತ್ಯಸ್ಯ ಪ್ರಾಗ್ಜನ್ಮೇತ್ಯುಪದಿಷ್ಟವಾನ್ ॥ ೨೫೬ ॥**

ಅವನು ಅಮಿತವಾಹನಜಿನೇಶ್ವರರನ್ನು ವಂದಿಸಿ ಬರುತ್ತ ನನ್ನ ಮೇಲೆ ತನ್ನ ವಿಮಾನವು ಯಾವುದೋ ಕಾರಣದಿಂದ ತಡೆಯಲ್ಪಟ್ಟು ಬಾರದಿರುತ್ತಿರಲು ದಿಕ್ಕುಗಳನ್ನು ನೋಡಿ ನನ್ನನ್ನು ಕಂಡು ಅಹಂಕಾರದಿಂದಲೂ ಕೋಪದಿಂದಲೂ ಕೂಡಿದವನಾಗಿ ನಮ್ಮನ್ನು ಆ ಶಿಲಾಸಹಿತವಾಗಿ ಎತ್ತುವುದಕ್ಕೆ ಉದ್ಯುಕ್ತನಾದನು. ಆಗ ನನ್ನ ಅಂಗುಷ್ಠದಿಂದ ಇವನು ಪೀಡಿತನಾದನು. ಈಕೆಯಾದರೋ ಇವನ ಹೆಂಡತಿ" ಎಂದು ಹೇಳಿದನು. ಆ ಮಾತನ್ನು ಕೇಳಿ ಪ್ರಿಯಮಿತ್ರೆಯು "ಇವನ ಕೋಪಕ್ಕೆ ಇಲ್ಲಿ ಇದೇ ಕಾರಣವೋ ? ಬೇರೆ ಕಡೆಯಲ್ಲಿಯೂ ಬೇರೆ ಕಾರಣವಿದೆಯೋ ?" ಎಂದು ಕೇಳಿದಳು. ಆಗ ಮೇಘರಥನು "ಬೇರೆ ಕಾರಣವಿಲ್ಲ" ಎಂದು ಈ ಸಿಂಹರಥನ ಪೂರ್ವಜನ್ಮವನ್ನು ಈ ರೀತಿಯಾಗಿ ಹೇಳಿದನು.

**ದ್ವೀಪೇ ದ್ವಿತೀಯೇ ಪೂರ್ವಸ್ಮಿನ್ನೈರಾವತಸಮಾಹ್ವಯೇ ।**
**ದೇಶೇ ಶಂಖಪುರೇ ರಾಜಾ ಧನಗುಪ್ತೋಸ್ಯ ಶಂಖಿಕಾ ॥ ೨೫೭ ॥**

**ಭಾರ್ಯಾ ತೌ ಶಂಖಶೈಲಸ್ಥಾತ್ಸರ್ವಗುಪ್ತಮುನೀಶ್ವರಾತ್ ।**
**ಆಪ್ತೌ ಜಿನಗುಣಖ್ಯಾತಿಮುಪೋಷಿತವಿಧಿಂ ಸಮಮ್ ॥ ೨೫೮ ॥**

"ಧಾತಕೀಖಂಡದ್ವೀಪದ ಪೂರ್ವದಿಕ್ಕಿನಲ್ಲಿರುವ ಐರಾವತವೆಂಬ ದೇಶದಲ್ಲಿ ಶಂಖಪುರದಲ್ಲಿ ಧನಗುಪ್ತನೆಂಬ ರಾಜನಿದ್ದನು. ಶಂಖಿಕೆಯೆಂಬವಳು ಇವನ ಹೆಂಡತಿ. ಆ ದಂಪತಿಗಳು ಶಂಖಪರ್ವತದಲ್ಲಿದ್ದ ಸರ್ವಗುಪ್ತಮುನೀಶ್ವರರಿಂದ ಜಿನಗುಣವೆಂಬ ಉಪವಾಸವಿಧಿಯನ್ನು ಒಟ್ಟಿಗೆ ಸ್ವೀಕರಿಸಿದರು.

**ಭಿಕ್ಷಾಚರಮಥಾನ್ಯೇದ್ಯುರ್ಧೃತಿಷೇಣಯತೀಶ್ವರಮ್ ।**
**ನಿರೀಕ್ಷ್ಯ ಭಿಕ್ಷಾಂ ದತ್ವಾಸ್ಮೈ ವಸುಧಾರಾದ್ಯವಾಪತಾಮ್ ॥ ೨೫೯ ॥**

ಬಳಿಕ ಇನ್ನೊಂದು ದಿವಸ ಭಿಕ್ಷೆಗೋಸ್ಕರ ಚರಿಸುವ ಧೃತಿಷೇಣಯತೀಶ್ವರರನ್ನು ಕಂಡು ಇವರಿಗೆ ಭಿಕ್ಷೆಯನ್ನು ಕೊಟ್ಟು ವಸುಧಾರಾದಿ–ಪಂಚಾಶ್ಚರ್ಯವನ್ನು ಪಡೆದರು.

**ಸಮಾಧಿಗುಪ್ತಮಾಸಾದ್ಯ ಸನ್ನ್ಯಸ್ಯಾಭೂತ್ಸ ಭೂಪತಿಃ ।**
**ಬ್ರಹ್ಮೇಂದ್ರಃ ಸ್ವಾಯುಷೋತ್ಕೃಷ್ಟಸ್ತಸ್ಮಾತ್ಸಿಂಹರಥೋಽಜನಿ ॥ ೨೬೦ ॥**

**ಶಂಖಿಕಾ ಚ ಪರಿಭ್ರಮ್ಯ ಸಂಸಾರೇ ತಪಸಾಗಮತ್ ।**
**ದೇವಲೋಕಂ ತತಶ್ಚ್ಯುತ್ವಾ ಖಗಭೂಭೃದವಾಕ್ತಟೇ ॥ ೨೬೧ ॥**

**ವಸ್ವಾಲಯಪುರೇಶೇಂದ್ರಕೇತೋರಾಸೀದಿಯಂ ಸುತಾ ।**
**ಸತೀ ಮದನವೇಗಾಖ್ಯಾ ಸುಪ್ರಭಾಯಾಂ ಸ ತಚ್ಚ್ಯುತೇಃ ॥ ೨೬೨ ॥**

**ಪರಿತುಷ್ಯ ನೃಪಂ ಶ್ರಿತ್ವಾ ಪೂಜಯಿತ್ವಾ ಯಥೋಚಿತಮ್ ।**
**ಸುವರ್ಣತಿಲಕೇ ರಾಜ್ಯಂ ನಿಯೋಜ್ಯ ಬಹುಭಿಃ ಸಹ ॥ ೨೬೩ ॥**

**ದೀಕ್ಷಾಂ ಘನರಥಾಭ್ಯರ್ಣೇ ಜೈನೀಂ ಸಿಂಹರಥೋಗ್ರಹೀತ್ ।**
**ಪ್ರಿಯಮಿತ್ರಾಭಿದಾಂ ಪ್ರಾಪ್ಯ ಗಣಿನೀಂ ಗುಣಸನ್ನಿಧಿಮ್ ॥ ೨೬೪ ॥**

**ಸುಧೀರ್ಮದನವೇಗಾ ಚ ಕೃಛ್ರಮುಚ್ಚೈರಗಾತ್ತಪಃ ।**
**ಕೋಪೋಽಪಿ ಕ್ವಾಪಿ ಪಾಪೋಪಲೇಪನಾಪನುದೇ ಮತಃ ॥ ೨೬೫ ॥**

ಆ ಧನಗುಪ್ತರಾಜನು ಆಯುಷ್ಯಾವಸಾನದಲ್ಲಿ ಸಮಾಧಿಗುಪ್ತಮುನಿಯನ್ನು ಹೊಂದಿ ಶುಭಪರಿಣಾಮದಿಂದ ಮಡಿದು ಐದನೆಯ ಬ್ರಹ್ಮಸ್ವರ್ಗದಲ್ಲಿ ಉತ್ಕೃಷ್ಟಾಯುಷ್ಯವುಳ್ಳ ಬ್ರಹ್ಮೇಂದ್ರನಾದನು. ಅಲ್ಲಿಂದ ಚ್ಯುತನಾಗಿ ಬಂದು ಸಿಂಹರಥನಾಗಿ ಜನಿಸಿದನು. ಆ ಶಂಖಿಕೆಯೂ ಸಂಸಾರದಲ್ಲಿ ಪರಿಭ್ರಮಿಸಿ ತಪಸ್ಸಿನಿಂದ ದೇವಲೋಕವನ್ನು ಹೊಂದಿದಳು. ಅಲ್ಲಿಂದ ಚ್ಯುತಳಾಗಿ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ವಸ್ವಾಲಯಪುರಾಧಿಪತಿಯಾದ ಇಂದ್ರಕೇತುವಿಗೆ ಆತನ ಪತ್ನಿಯಾದ ಸುಪ್ರಭಾದೇವಿಯಲ್ಲಿ ಸಾಧ್ವಿಯಾದ ಈಕೆಯು ಮದನವೇಗೆಯೆಂಬ ಪುತ್ರಿಯಾದಳು." ಆ ಮಾತನ್ನು ಕೇಳಿದುದರಿಂದ ಆ ಸಿಂಹರಥನು ಸಂತುಷ್ಟನಾಗಿ ಮೇಘರಥರಾಜನನ್ನು ಹೊಂದಿ ಯಥೋಚಿತವಾಗಿ ಪೂಜಿಸಿ ಸುವರ್ಣತಿಲಕವೆಂಬ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ಅನೇಕರೊಡನೆ ಘನರಥಜಿನರ ಬಳಿಯಲ್ಲಿ ಜಿನದೀಕ್ಷೆಯನ್ನು ಗ್ರಹಣ ಮಾಡಿದನು. ಪ್ರಾಜ್ಞಳಾದ ಮದನವೇಗೆಯೂ ಗುಣವಂತಳಾದ ಪ್ರಿಯಮಿತ್ರೆಯೆಂಬ ಆರ್ಯಿಕೆಯನ್ನು ಹೊಂದಿ ಬಹುಕಠಿನವಾದ ತಪಸ್ಸನ್ನು ಗ್ರಹಣಮಾಡಿದಳು. ಕೋಪವೂ ಕೆಲವು ಕಡೆಯಲ್ಲಿ ಪಾಪದ ಲೇಪವನ್ನು ದೂರಮಾಡುವುದಕ್ಕೆ ಕಾರಣವಾಗುವುದೆಂದು ತಿಳಿಯಲ್ಪಟ್ಟಿದೆ.

**ಅಥ ಸ್ವಪುಣ್ಯಕರ್ಮಾಪ್ತಪ್ರಾಜ್ಯರಾಜ್ಯಮಹೋದಯಾತ್ ।**
**ತ್ರಿವರ್ಗಫಲಪರ್ಯಂತಪರಿಪೂರ್ಣಮನೋರಥಮ್ ॥ ೨೬೬ ॥**

**ಶುದ್ಧಶ್ರದ್ಧಾನಸಂಪನ್ನಂ ವ್ರತಶೀಲಗುಣಾನ್ವಿತಮ್ ।**
**ಸಪ್ರಶ್ರಯಂ ಶ್ರುತಾಭಿಜ್ಞಂ ಪ್ರಗಲ್ಭಂ ವಲ್ಗುಭಾಷಣಮ್ ॥ ೨೬೭ ॥**

**ಸುಸಪ್ತಪರಮಸ್ಥಾನಭಾಗಿನಂ ಭವ್ಯಭಾಸ್ಕರಮ್ ।**
**ನೃಪಂ ಮೇಘರಥಂ ದಾರದಾರಕಾದಿನಿಷೇವಿತಮ್ ॥ ೨೬೮ ॥**

**ಕೃತ್ವಾ ನಾಂದೀಶ್ವರೀಂ ಪೂಜಾಂ ಜೈನಧರ್ಮೋಪದೇಶಿನಮ್ ।**
**ಸೋಪವಾಸಮುಪಾಪ್ಯೇಕಃ ಕಪೋತಸ್ತಂ ಸವೇಪಥುಃ ॥ ೨೬೯ ॥**

ಬಳಿಕ ತನ್ನ ಪುಣ್ಯಕರ್ಮದಿಂದ ಪಡೆಯಲ್ಪಟ್ಟ ಉತ್ಕೃಷ್ಟವಾದ ರಾಜ್ಯದ ಮಹೋನ್ನತಿಯಿಂದ ಧರ್ಮಾರ್ಥಕಾಮಫಲಗಳವರೆಗೆ ಪರಿಪೂರ್ಣವಾದ ಮನೋರಥವುಳ್ಳವನೂ ಶುದ್ಧಸಮ್ಯಕ್ತ್ವಸಂಪನ್ನನೂ ವ್ರತಶೀಲ ಗುಣಗಳಿಂದ ಯುಕ್ತನೂ ವಿನಯವುಳ್ಳವನೂ ಶಾಸ್ತ್ರಜ್ಞನೂ ಸಮರ್ಥನೂ ನಿಂದ್ಯವಾದ ವಿಷಯವನ್ನು ಮಾತನಾಡದಿರುವವನೂ ಶ್ರೇಷ್ಠವಾದ ಸಪ್ತಪರಮಸ್ಥಾನಭಾಗಿಯೂ ಭವ್ಯೋತ್ತಮನೂ ಪತ್ನೀಪುತ್ರಾದಿಗಳಿಂದ ಸೇವಿಸಲ್ಪಟ್ಟವನೂ ನಂದೀಶ್ವರ ಪೂಜೆಯನ್ನು ಮಾಡಿ ಜೈನಧರ್ಮವನ್ನು ಉಪದೇಶಿಸುವವನೂ ಉಪವಾಸ ವ್ರತವುಳ್ಳವನೂ ಆದ ಆ ಮೇಘರಥರಾಜನನ್ನು ನಡುಗುತ್ತಿರುವ ಒಂದು ಪಾರಿವಾಳವು ಹೊಂದಿತು.

**ತಸ್ಯಾನುಪದಮೇವಾನ್ಯೋ ಗೃಧ್ರೋ ಬದ್ಧಜವಃ ಪುರಃ ।**
**ಸ್ಥಿತ್ವಾ ನೃಪಸ್ಯ ದೇವಾಹಂ ಮಹಾಕ್ಷುದ್ವೇದನಾತುರಃ ॥ ೨೭೦ ॥**

**ತತಃ ಕಪೋತಮೇತಂ ಮೇ ಭಕ್ಷ್ಯಂ ತ್ವಚ್ಛರಣಾಗತಮ್ ।**
**ದದಸ್ವ ದಾನಶೂರಸ್ತ್ವಂ ನ ಚೇದ್ವಿದ್ಧ್ಯತ್ರ ಮಾಂ ಮೃತಮ್ ॥ ೨೭೧ ॥**

**ಇತ್ಯವಾದೀತ್ತದಾಕರ್ಣ್ಯ ಯುವಾ ದೃಢರಥೋಽಬ್ರವೀತ್ ।**
**ಪೂಜ್ಯ ಬ್ರೂಹಿ ವದತ್ಯೇಷ ಗೃಧ್ರಃ ಕೇನಾಸ್ಮಿ ವಿಸ್ಮಿತಃ ॥ ೨೭೨ ॥**

ಅದರ ಹಿಂದೆಯೇ ವೇಗವುಳ್ಳ ಬೇರೊಂದು ಹದ್ದು-ಗಿಡಗವು ಬಂದು ಮೇಘರಥರಾಜನ ಮುಂದೆ ನಿಂತು "ಸ್ವಾಮಿಯೇ ! ನಾನು ಬಹಳ ಕ್ಷುದ್ವೇದನೆಯಿಂದ ಪೀಡಿತನಾಗಿದ್ದೇನೆ. ಆದುದರಿಂದ ನನ್ನ ಭಕ್ಷ್ಯವೂ ನಿನ್ನ ಶರಣವನ್ನು ಹೊಂದಿರುವುದೂ ಆದ ಈ ಪಾರಿವಾಳವನ್ನು ನನಗೆ ಕೊಡು. ನೀನು ದಾನಶೂರನು. ಪಾರಿವಾಳವನ್ನು ಕೊಡದಿದ್ದರೆ ಇಲ್ಲಿ ನಾನು ಸತ್ತೆನೆಂದೇ ತಿಳಿ" ಎಂದು ಹೇಳಿತು. ಆ ಮಾತನ್ನು ಕೇಳಿ ಯುವಕನಾದ ದೃಢರಥನು "ಪೂಜ್ಯನೆ ! ಈ ಹದ್ದು ಯಾವ ಕಾರಣದಿಂದ ಮಾತನಾಡುತ್ತದೆ ? ಹೇಳು. ನಾನು ವಿಸ್ಮಿತನಾಗಿದ್ದೇನೆ" ಎಂದು ಮೇಘರಥನನ್ನು ಕೇಳಿದನು.

**ಇತಿ ಸ್ವಾನುಜಸಂಪ್ರಶ್ನಾದಿತ್ಯವೋಚನ್ಮಹೀಪತಿಃ ।**
**ಅತ್ರ ಜಂಬೂದ್ರುಮದ್ವೀಪೇ ಕ್ಷೇತ್ರೇ ಮೇರೋರುದಗ್ಗತೇ ॥ ೭೭೩ ॥**

**ನಗರೇ ಪದ್ಮಿನೀಖೇಟೇ ವಣಿಕ್ಸಾಗರಸೇನವಾಕ್ ।**
**ತಸ್ಯಾಮಿತಮತಿರ್ಜಾಯಾ ತಯೋರ್ಲುಬ್ಧತರೌ ಸುತೌ ॥ ೭೭೪ ॥**

**ಧನಮಿತ್ರೋ ನಂದಿಷೇಣೋ ಜಾತೌ ಸ್ವಧನಹೇತುನಾ ।**
**ಹತ್ವಾ ಪರಸ್ಪರಂ ಮೃತ್ವಾ ಖಗಾವೇತೌ ಬಭೂವತುಃ ॥ ೭೭೫ ॥**

**ದೇವಃ ಸನ್ನಿಹಿತಃ ಕಶ್ಚಿದ್ಗೃಧ್ರಸ್ಯೋಪರಿ ಕಃ ಸ ಚೇತ್ ।**
**ತ್ವಯಾ ಹೇಮರಥೋ ನಾಮ್ನಾ ದಮಿತಾರಿರಣೇ ಹತಃ ॥ ೭೭೬ ॥**

**ಪರಿಭ್ರಮ್ಯ ಭವೇ ಭೂಯಃ ಕೈಲಾಸಾದ್ರಿತಟೇಭವತ್ ।**
**ಪರ್ಣಕಾಂತಾನದೀತೀರೇ ಧೀಮಾಂಶ್ಚಂದ್ರಾಭಿಧಾನಕಃ ॥ ೭೭೭ ॥**

**ಶ್ರೀದತ್ತಾಯಾಂ ಕುಶಾಸ್ತ್ರಜ್ಞಸ್ತನೂಜಃ ಸೋಮತಾಪಸಾತ್ ।**
**ತಪಃ ಪಂಚಾಗ್ನಿ ಸಂತಪ್ಯ ಜ್ಯೋತಿರ್ಲೋಕೇಮರೋಜನಿ ॥ ೭೭೮ ॥**

ಈ ರೀತಿಯಾದ ಪ್ರಶ್ನೆಯಿಂದ ಮೇಘರಥಮಹಾರಾಜನು ತನ್ನ ತಮ್ಮನನ್ನು ಕುರಿತು ಈ ರೀತಿಯಾಗಿ ಹೇಳಿದನು- "ಈ ಜಂಬೂದ್ವೀಪದಲ್ಲಿ ಮೇರುವಿನಿಂದ ಉತ್ತರದಲ್ಲಿರುವ ಐರಾವತಕ್ಷೇತ್ರದಲ್ಲಿ ಪದ್ಮಿನೀಖೇಟನಗರದಲ್ಲಿ ಸಾಗರಸೇನನೆಂಬ ವರ್ತಕನಿದ್ದನು. ಅವನಿಗೆ ಅಮಿತಮತಿಯೆಂಬವಳು ಪತ್ನಿಯಾಗಿದ್ದಳು. ಆ ದಂಪತಿಗಳಿಗೆ ಧನಮಿತ್ರ ನಂದಿಷೇಣರೆಂಬೀರ್ವರು ಬಹು ಲೋಭಿಗಳಾದ ಪುತ್ರರು ಜನಿಸಿದರು. ಅವರು ತಮ್ಮ ಧನದ ನಿಮಿತ್ತದಿಂದ ಪರಸ್ಪರವಾಗಿ ಹೊಡೆದುಕೊಂಡು ಸತ್ತು ಈ ಪಕ್ಷಿಗಳಾಗಿದ್ದಾರೆ. ಹದ್ದಿನ ಮೇಲೆ ಸಮೀಪಿಸಿರುವ ಆ ಒಬ್ಬಾನೊಬ್ಬ ದೇವನಾರೆಂದರೆ-ದಮಿತಾರಿಯೊಡನೆ ಯುದ್ಧಮಾಡಿದ ಕಾಲದಲ್ಲಿ ಹೇಮರಥನೆಂಬವನನ್ನು ನೀನು ಕೊಂದೆ. ಅವನು ಭವದಲ್ಲಿ ಮತ್ತೆ ಪರಿಭ್ರಮಿಸಿ ಕೈಲಾಸಪರ್ವತದ ತಪ್ಪಲಿನಲ್ಲಿರುವ ಪರ್ಣಕಾಂತಾನದಿಯ ದಡದಲ್ಲಿ ಸೋಮನೆಂಬ ತಾಪಸನಿಂದ ಶ್ರೀದತ್ತೆಯೆಂಬವಳಲ್ಲಿ ಪ್ರಾಜ್ಞನಾದ ಚಂದ್ರನೆಂಬ ಪುತ್ರನಾಗಿ ಜನಿಸಿದನು. ಅವನು ಮಿಥ್ಯಾಶಾಸ್ತ್ರಗಳಲ್ಲಿ ಪಂಡಿತನಾಗಿ ಪಂಚಾಗ್ನಿತಪಸ್ಸನ್ನು ಮಾಡಿ ಸತ್ತು ಜ್ಯೋತಿರ್ಲೋಕದಲ್ಲಿ ದೇವನಾಗಿ ಜನಿಸಿದನು.

**ಸ ಕದಾಚಿದ್ದಿವಂ ಗತ್ವಾ ದ್ವಿತೀಯೇಂದ್ರಸಭಾಸದ್ಯೈಃ ।**
**ದಾತಾ ಮೇಘರಥಾನ್ನಾನ್ಯಃ ಕ್ಷಿತಾವಸ್ತೀತಿ ಸಂಸ್ತುತಮ್ ॥ ೭೭೯ ॥**

**ಶ್ರುತ್ವಾ ಪ್ರೋದ್ಯದಮರ್ಷೇಣ ಮಾಂ ಪರೀಕ್ಷಿತುಮಾಗತಃ ।**
**ಶೃಣು ಚೇತಃ ಸಮಾಧಾಯ ಭ್ರಾತರ್ದಾನಾದಿಲಕ್ಷಣಮ್ ॥ ೭೮೦ ॥**

ಅವನು ಒಂದಾನೊಂದು ಕಾಲದಲ್ಲಿ ಸ್ವರ್ಗಕ್ಕೆ ಹೋಗಿ ಎರಡನೆಯ ಕಲ್ಪದ ಇಂದ್ರನ ಸಭಾಸದರಿಂದ "ಪೃಥ್ವಿಯಲ್ಲಿ ಮೇಘರಥನಿಗಿಂತ ಬೇರೆ ದಾತನಿಲ್ಲ" ಎಂದು ಸ್ತುತಿಸಲ್ಪಟ್ಟುದನ್ನು ಕೇಳಿದುದರಿಂದುಂಟಾದ ರೋಷದಿಂದ ನನ್ನನ್ನು ಪರೀಕ್ಷಿಸುವುದಕ್ಕೋಸ್ಕರ ಬಂದಿದ್ದಾನೆ. ಸಹೋದರನೆ ! ಮನಸ್ಸನ್ನಿಟ್ಟು ದಾನಾದಿಗಳ ಲಕ್ಷಣವನ್ನು ಕೇಳು.

**ಅನುಗ್ರಹಾರ್ಥಂ ಸ್ವಸ್ಯಾತಿಸರ್ಗೋ ದಾನಂ ವಿದೋವದನ್ ।**
**ಅನುಗ್ರಹೋಪಿ ಸ್ವಾನ್ಯೋಪಕಾರಿತ್ವಮಭಿಧೀಯತೇ ॥ ೭೮೧ ॥**

ಅನುಗ್ರಹಕ್ಕೋಸ್ಕರ ದ್ರವ್ಯದ ತ್ಯಾಗವನ್ನು ಪ್ರಾಜ್ಞರು ದಾನವನ್ನಾಗಿ ಹೇಳಿದ್ದಾರೆ. ತನಗೂ ಪರರಿಗೂ ಉಪಕಾರವನ್ನು ಮಾಡುವಿಕೆಯು ಅನುಗ್ರಹವೆಂದು ಹೇಳಲ್ಪಡುತ್ತದೆ.

**ದಾತಾ ಚ ಶಕ್ತಿವಿಜ್ಞಾನಶ್ರದ್ಧಾದಿಗುಣಲಕ್ಷಿತಃ ।**
**ದೇಯಂ ವಸ್ತ್ವಪ್ಯಪೀಡಾಭಾಕ್ ತದ್ದಯೋರ್ಗುಣವರ್ಧನಮ್ ॥**

ದಾತನೂ ಶಕ್ತಿ, ವಿಜ್ಞಾನ, ಶ್ರದ್ಧೆ ಮೊದಲಾದ ಗುಣಗಳಿಂದ ಕೂಡಿದವನಾಗಿರಬೇಕು. ದಾನಮಾಡುವುದಕ್ಕೆ ಯೋಗ್ಯವಾದ ವಸ್ತುವು ದುಃಖವನ್ನುಂಟು ಮಾಡದಿರುವುದೂ ದಾತೃಪಾತ್ರಗಳ ಗುಣವನ್ನು ಹೆಚ್ಚಿಸುವುದೂ ಆಗಿರಬೇಕು.

**ಸಾಧನಂ ಕ್ರಮಶೋ ಮುಕ್ತೇರಾಹಾರೋ ಭೇಷಜಂ ಶ್ರುತಮ್ ।**
**ಸರ್ವಪ್ರಾಣಿದಯಾ ಶುದ್ಧಂ ದೇಯಂ ಸರ್ವಜ್ಞಭಾಷಿತಮ್ ॥ ೭೮೩ ॥**

ಆಹಾರ, ಔಷಧ, ಶಾಸ್ತ್ರ, ಸಕಲಪ್ರಾಣಿಗಳಲ್ಲಿ ದಯೆ ಇವು ಕ್ರಮದಿಂದ ಮುಕ್ತಿಗೆ ಸಾಧನವೂ ಶುದ್ಧವೂ ಕೊಡುವುದಕ್ಕೆ ಯೋಗ್ಯವೂ ಆದ ವಸ್ತುವೆಂದು ಸರ್ವಜ್ಞರಿಂದ ಹೇಳಲ್ಪಟ್ಟಿದೆ.

**ಮೋಕ್ಷಮಾರ್ಗೇ ಸ್ಥಿತಃ ಪಾತಾ ಸ್ವಸ್ಯಾನ್ಯೇಷಾಂ ಚ ಸಂಸೃತೇಃ ।**
**ಪಾತ್ರಂ ದಾನಸ್ಯ ಸೋಭೀಷ್ಟೋ ನಿಷ್ಠಿತಾರ್ಥೈರ್ನಿರಂಜನೈಃ ॥ ೭೮೪ ॥**

ಯಾವನು ಮೋಕ್ಷಮಾರ್ಗದಲ್ಲಿರುವವನೂ ತನ್ನನ್ನೂ ಬೇರೆಯವರನ್ನೂ ಸಂಸಾರದಿಂದ ರಕ್ಷಿಸುವವನೂ ಆಗಿರುತ್ತಾನೋ ಅವನು ದಾನಕ್ಕೆ ಪಾತ್ರನೆಂದು ಕೃತಕೃತ್ಯರಾದ ಜಿನೇಶ್ವರರಿಂದ ಅಭಿಮತನಾಗಿದ್ದಾನೆ.

**ಕೃತಾರ್ಥಃ ಸ ಜಗತ್ತ್ರಾತುಂ ನಿರವದ್ಯಂ ವಚೋ ದಧತ್ ।**
**ಭವ್ಯೇಭ್ಯಃ ಸ ಹಿ ದಾತಾ ತದ್ದೇಯಂ ತತ್ಪಾತ್ರಮುತ್ತಮಮ್ ॥ ೭೮೫ ॥**

ಯಾವನು ಕೃತಾರ್ಥನೂ ಜಗತ್ತನ್ನು ಕಾಪಾಡುವುದಕ್ಕೋಸ್ಕರ ಭವ್ಯರಿಗೆ ನಿರ್ದುಷ್ಟವಾದ ವಚನವನ್ನು ಧರಿಸಿರುತ್ತಾನೋ ಅವನು ಪಾತ್ರನು. ಮೇಲೆ ಹೇಳಲ್ಪಟ್ಟ ಗುಣಗಳುಳ್ಳವನೇ ದಾತನು. ಅದೇ ಕೊಡಲ್ಪಡತಕ್ಕ ವಸ್ತು. ಅದೇ ಉತ್ತಮವಾದ ಪಾತ್ರ.

**ನ ತು ಮಾಂಸಾದಿಕಂ ದೇಯಂ ಪಾತ್ರಂ ನಾಸ್ಯ ಪ್ರತೀಕ್ಷಕಃ ।**
**ತದ್ದಾತಾಪಿ ನ ದಾತೇಮೌ ಜ್ಞೇಯೌ ನರಕನಾಯಕೌ ॥ ೭೮೬ ॥**

ಮಾಂಸ ಮೊದಲಾದ ವಸ್ತುವು ಕೊಡುವುದಕ್ಕೆ ಯೋಗ್ಯವಾದುದಲ್ಲ. ಮಾಂಸವನ್ನಿಚ್ಛಿಸುವವನು ಪಾತ್ರನಲ್ಲ. ಮಾಂಸವನ್ನು ದಾನಮಾಡುವವನು ದಾತನಲ್ಲ. ಮಾಂಸವನ್ನು ದಾನಮಾಡುವವನೂ ತೆಗೆದುಕೊಳ್ಳುವವನೂ ಇವರಿಬ್ಬರೂ ನರಕಾಧಿಕಾರಿಗಳೆಂದು ತಿಳಿಯಬೇಕು.

**ತತೋ ಗೃಧ್ರೋ ನ ತತ್ಪಾತ್ರಂ ನಾಯಂ ದೇಯಂ ಕಪೋತಕಃ ।**
**ತಥಾ ಮೈಘರಥೀಂ ವಾಣೀಮಾಕರ್ಣ್ಯ ಜ್ಯೋತಿಷಾಮರಃ ॥ ೭೮೭ ॥**

**ಅಸಿ ದಾನವಿಭಾಗಜ್ಞೋ ದಾನಶೂರಶ್ಚ ಪಾರ್ಥಿವ ।**
**ಇತಿ ಸ್ತುತ್ವಾ ಪ್ರದರ್ಶ್ಯ ಸ್ವಂ ತಂ ಸಂಪೂಜ್ಯ ಜಗಾಮ ಸಃ ॥ ೭೮೮ ॥**

ಆದುದರಿಂದ ಈ ಹದ್ದು ಅಂತಹ ಪಾತ್ರವಲ್ಲ. ಈ ಪಾರಿವಾಳವು ಕೊಡಲ್ಪಡತಕ್ಕ ವಸ್ತುವಲ್ಲ" ಈ ರೀತಿಯಾದ ಮೇಘರಥನ ಮಾತನ್ನು ಕೇಳಿ ಆ ಜ್ಯೋತಿರ್ದೇವನು "ರಾಜನೆ ! ನೀನು ದಾನಗಳ ವಿಭಾಗವನ್ನು ತಿಳಿದವನೂ ದಾನಶೂರನೂ ಆಗಿರುತ್ತಿ" ಎಂದು ಸ್ತುತಿಸಿ ತನ್ನ ರೂಪವನ್ನು ತೋರಿಸಿ ಆ ಮೇಘರಥನನ್ನು ಪೂಜಿಸಿ ಹೊರಟು ಹೋದನು.

**ದ್ವಿಜದ್ವಯಮಪಿ ಜ್ಞಾತ್ವಾ ತದುಕ್ತಂ ತ್ಯಕ್ತದೇಹಕಮ್ ।**
**ಆರಣ್ಯೇ ದೇವರಮಣೇ ಸ್ತಾಂ ಸರೂಪಾತಿರೂಪಕೌ ॥ ೭೮೯ ॥**

**ದೇವೌ ಮೇಘರಥಂ ಪಶ್ಚಾತ್ತ್ವತ್ಪ್ರಸಾದಾತ್ಕುಯೋನಿತಃ ।**
**ನಿರಗಾವ ನೃಪೇತ್ಯುಕ್ತ್ವಾ ಪೂಜ್ಯಂ ಸಂಪೂಜ್ಯ ಜಗ್ಮತುಃ ॥ ೭೯೦ ॥**

ಮೇಘರಥನ ಮಾತನ್ನು ಆ ಎರಡು ಪಕ್ಷಿಗಳೂ ತಿಳಿದು ತಮ್ಮ ದೇಹತ್ಯಾಗವನ್ನು ಮಾಡಿ ದೇವರಮಣವೆಂಬ ಅರಣ್ಯದಲ್ಲಿ ಸರೂಪ ಅತಿರೂಪಗಳೆಂಬ ವ್ಯಂತರ ದೇವತೆಗಳಾದುವು. ಬಳಿಕ ಆ ದೇವತೆಗಳು ಬಂದು "ರಾಜನೆ ! ನಿನ್ನ ಪ್ರಸಾದದಿಂದ ನಾವು ದುಷ್ಟವಾದ ಯೋನಿಯಿಂದ ಹೊರಟೆವು" ಎಂದು ಹೇಳಿ ಪೂಜ್ಯನಾದ ಮೇಘರಥನನ್ನು ಪೂಜಿಸಿ ಹೊರಟು ಹೋದುವು.

**ಕದಾಚಿತ್ಸ ನೃಪೋ ದಾನಂ ದತ್ವಾ ದಮವರೇಶಿನೇ ।**
**ಚಾರಣಾಯ ಪರಿಪ್ರಾಪ್ತಪಂಚಾಶ್ಚರ್ಯನಿಧಿಃ ಸುಧೀಃ ॥ ೭೯೧ ॥**

**ನಂದೀಶ್ವರಮಹಾಪೂಜಾಂ ವಿಧಾಯೋಪೋಷಿತವ್ರತಃ ।**
**ನಿಶಾಯಾಂ ಪ್ರತಿಮಾಯೋಗೇ ಧ್ಯಾಯನ್ನಸ್ಥಾದಿವಾದ್ರಿರಾಟ್ ॥ ೭೯೨ ॥**

ಪ್ರಾಜ್ಞನಾದ ಆ ಮೇಘರಥರಾಜನು ಒಂದಾನೊಂದು ಕಾಲದಲ್ಲಿ ದಮವರನೆಂಬ ಚಾರಣಮುನಿಗೆ ದಾನವನ್ನು ಕೊಟ್ಟು ಪಂಚಾಶ್ಚರ್ಯನಿಧಿಯನ್ನು ಪಡೆದು ನಂದೀಶ್ವರಮಹಾಪೂಜೆಯನ್ನು ಮಾಡಿ ಉಪವಾಸವ್ರತವುಳ್ಳವನಾಗಿ ರಾತ್ರಿಯಲ್ಲಿ ಪ್ರತಿಮಾಯೋಗದಲ್ಲಿ ಧ್ಯಾನಿಸುತ್ತ, ಮಹಾಮೇರುವಿನಂತೆ, ನಿಶ್ಚಲನಾಗಿದ್ದನು.

**ಈಶಾನೇಂದ್ರೋ ವಿದಿತ್ವೈತನ್ಮರುತ್ಸದಸಿ ಶುದ್ಧದೃಕ್ ।**
**ಧೈರ್ಯಸಾರಸ್ತ್ವಮೇವಾದ್ಯ ಚಿತ್ರಮಿತ್ಯಬ್ರವೀನ್ಮುದಾ ॥ ೭೯೩ ॥**

ಈಶಾನೇಂದ್ರನು ಈ ವಿಷಯವನ್ನು ತಿಳಿದು ದೇವಸಭೆಯಲ್ಲಿ "ಶುದ್ಧ ಸಮ್ಯಗ್ದೃಷ್ಟಿಯಾದ ನೀನೇ ಈಗ ಧೈರ್ಯದಸಾರವಾಗಿರುತ್ತಿ. ಆಶ್ಚರ್ಯ !" ಎಂದು ಸಂತೋಷದಿಂದ ಹೇಳಿದನು.

**ಸ್ವಗತಂ ತಂ ಸ್ತವಂ ಶ್ರುತ್ವಾ ದೇವೈಃ ಕಸ್ಯ ಸ್ತುತಿಃ ಸತಃ ।**
**ತ್ವಯಾಕಾರೀತ್ಯಸೌ ಪೃಷ್ಟಃ ಪ್ರತ್ಯಾಹೇತಿ ಸುರಾನ್ಪ್ರತಿ ॥ ೭೯೪ ॥**

ಈಶಾನೇಂದ್ರನ ಆತ್ಮಗತವಾದ ಆ ಸ್ತೋತ್ರವನ್ನು ಕೇಳಿ ದೇವರ್ಕಳು "ನೀನು ಯಾವ ಸತ್ಪುರುಷನ ಸ್ತುತಿಯನ್ನು ಮಾಡಿದೆ ?" ಎಂದು ಪ್ರಶ್ನೆಮಾಡಿದರು. ಆಗ ಈಶಾನೇಂದ್ರನು ದೇವರ್ಕಳನ್ನು ಕುರಿತು ಈ ರೀತಿಯಾಗಿ ಉತ್ತರವನ್ನಿತ್ತನು.

**ಧೀರೋ ಮೇಘರಥೋ ನಾಮ ಶುದ್ಧದೃಕ್ಪಾರ್ಥಿವಾಗ್ರಣೀಃ ।**
**ಪ್ರತಿಮಾಯೋಗಧಾರ್ಯದ್ಯ ತಸ್ಯ ಭಕ್ತ್ಯಾ ಸ್ತುತಿಃ ಕೃತಾ ॥ ೭೯೫ ॥**

"ಧೀರನೂ ಶುದ್ಧಸಮ್ಯಗ್ದೃಷ್ಟಿಯೂ ರಾಜಶ್ರೇಷ್ಠನೂ ಆದ ಮೇಘರಥ ನೆಂಬವನು ಈ ದಿವಸ ಪ್ರತಿಮಾಯೋಗಧಾರಿಯಾಗಿರುತ್ತಾನೆ. ಅವನಿಗೆ ಭಕ್ತಿಯಿಂದ ಸ್ತುತಿಯನ್ನು ಮಾಡಿದುದಾಗಿದೆ."

**ತದುದೀರಿತಮಾಕರ್ಣ್ಯ ತತ್ಪರೀಕ್ಷಾತಿದಕ್ಷಿಣೇ ।**
**ಅತಿರೂಪಾಸುರೂಪಾಖ್ಯೇ ದೇವ್ಯಾವಾಗತ್ಯ ಭೂಪತಿಮ್ ॥ ೭೯೬ ॥**

**ವಿಲಾಸೈರ್ವಿಭ್ರಮೈರ್ಹಾವೈರ್ಭಾವೈರ್ಗೀತೈಃ ಪ್ರಜಲ್ಪನೈಃ ।**
**ಅನ್ಯೈಶ್ಚ ಮದನೋನ್ಮಾದಹೇತುಭಿಸ್ತನ್ಮನೋಚಲಮ್ ॥ ೭೯೭ ॥**

**ವಿದ್ಯುಲ್ಲತೇವ ದೇವಾದ್ರಿಂ ತೇ ಚಾಲಯಿತುಮಕ್ಷಮೇ ।**
**ಸತ್ಯಮೀಶಾನಸಂಪ್ರೋಕ್ತಮಿತಿ ಸ್ತುತ್ವಾ ಸ್ವರೀಯತುಃ ॥ ೭೯೮ ॥**

ಅವನ ಮಾತನ್ನು ಕೇಳಿ ಅತಿರೂಪಾ ಸುರೂಪಾ ಎಂಬ ಬಹುಸರಳರಾದ ದೇವಿಯರೀರ್ವರು ಮೇಘರಥರಾಜನ ಬಳಿಗೆ ಬಂದು ವಿಲಾಸಗಳಿಂದಲೂ ವಿಭ್ರಮಗಳಿಂದಲೂ ಹಾವಭಾವಗಳಿಂದಲೂ ಗೀತಗಳಿಂದಲೂ ಮಾತುಗಳಿಂದಲೂ ಕಾಮೋದ್ದೀಪನಕಾರಣಗಳಾದ ಬೇರೆ ವಿಷಯಗಳಿಂದಲೂ ಅವನ ದೃಢಮನಸ್ಸನ್ನು ಪರೀಕ್ಷಿಸಿ, ಮೇರುಪರ್ವತವನ್ನು ವಿದ್ಯುಲ್ಲತೆಯಂತೆ, ಅಲ್ಲಾಡಿಸುವುದಕ್ಕೆ ಅಸಮರ್ಥರಾಗಿ ಆ ದೇವಿಯರು "ಈಶಾನೇಂದ್ರನು ಹೇಳಿದ ಮಾತು ಸತ್ಯವಾದುದು" ಎಂದು ಸ್ತುತಿಸಿ ಸ್ವರ್ಗಕ್ಕೆ ಹೋದರು.

**ಅನ್ಯದೇಶಾನಕಲ್ಪೇಶೋ ಮರುನ್ಮಧ್ಯೇ ಯದೃಚ್ಛಯಾ ।**
**ಸಮಸ್ತೌತ್ಪ್ರಿಯಮಿತ್ರಾಯಾ ರೂಪಮಾಕರ್ಣ್ಯ ತತ್ಸ್ತವಮ್ ॥ ೭೯೯ ॥**

**ರತಿಷೇಣಾರತಿಶ್ಚೈತ್ಯ ದೇವ್ಯೌ ತದ್ರೂಪವೀಕ್ಷಿತುಮ್ ।**
**ಏತಾಂ ಮಜ್ಜನವೇಲಾಯಾಂ ಗಂಧತೈಲಾಕ್ತದೇಹಿಕಾಮ್ ॥ ೮೦೦ ॥**

**ನಿರೂಪ್ಯೇಂದ್ರವಚಃ ಸಮ್ಯಕ್ ಶ್ರದ್ಧಾಯಾಪ್ಯಭಿಭಾಷಿತುಮ್ ।**
**ತಯಾ ಸಹೇಭ್ಯಕನ್ಯಾಕೃತೀ ಧೃತ್ವಾ ತಾಂ ಸಮೂಚತುಃ ॥ ೮೦೧ ॥**

**ತ್ವಾಮಿಭ್ಯಕನ್ಯಕೇ ದ್ರಷ್ಟುಮೈತಾಮಿತಿ ಸಖೀಮುಖಾತ್ ।**
**ತಾಭ್ಯಾಮುಕ್ತಂ ಸಮಾಕರ್ಣ್ಯ ಪ್ರಮದಾದಸ್ತು ತಿಷ್ಠತಾಮ್ ॥ ೮೦೨ ॥**

**ತಾವದಿತ್ಯಾತ್ತಸಂಸ್ಕಾರಂ ಕೃತ್ವಾಹೂಯಾಭ್ಯದರ್ಶಯತ್ ।**
**ತಾಂ ನಿಶಮ್ಯಾಹತುಸ್ತೇ ಚ ಪ್ರಾಗ್ವತ್ಕಾಂತಿರ್ನ ಚಾಧುನಾ ॥ ೮೦೩ ॥**

ಮತ್ತೊಂದು ಕಾಲದಲ್ಲಿ ಈಶಾನೇಂದ್ರನು ದೇವರ್ಕಳ ಮಧ್ಯದಲ್ಲಿ ಯದೃಚ್ಛೆಯಿಂದ ಪ್ರಿಯಮಿತ್ರೆಯ ರೂಪವನ್ನು ಹೊಗಳಿದನು. ಆ ಹೊಗಳಿಕೆಯನ್ನು ಕೇಳಿ ರತಿಷೇಣಾ ರತಿಯೆಂಬೀರ್ವರು ದೇವಿಯರು ಆಕೆಯ ರೂಪವನ್ನು ನೋಡುವುದಕ್ಕೋಸ್ಕರ ಬಂದು ಸ್ನಾನದ ಸಮಯದಲ್ಲಿ ಗಂಧವನ್ನೂ ಎಣ್ಣೆಯನ್ನೂ ಮೈಗೆ ಹಚ್ಚಿಕೊಂಡಿರುವ ಈ ಪ್ರಿಯಮಿತ್ರೆಯನ್ನು ನೋಡಿ ಈಶಾನೇಂದ್ರನ ಮಾತನ್ನು ಚೆನ್ನಾಗಿ ನಂಬಿಯೂ ಆ ಪ್ರಿಯಮಿತ್ರೆಯೊಡನೆ ಮಾತನಾಡುವುದಕ್ಕೋಸ್ಕರ ಧನಿಕಕನ್ಯೆಯರ ರೂಪಗಳನ್ನು ಧರಿಸಿಕೊಂಡು ಸಖಿಯ ಮುಖದಿಂದ "ನಿನ್ನನ್ನು ಧನಿಕಕನ್ಯೆಯರೀರ್ವರು ನೋಡುವುದಕ್ಕೋಸ್ಕರ ಬಂದಿದ್ದಾರೆ" ಎಂದು ಆ ಪ್ರಿಯಮಿತ್ರೆಯನ್ನು ಮಾತನಾಡಿಸಿದರು. ಆ ಕನ್ಯೆಯರಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಸಂತೋಷದಿಂದ "ಆಗಲಿ, ಸ್ವಲ್ಪಸಮಯದವರೆಗಿರಲಿ" ಎಂದು ಹೇಳಿ ತನ್ನ ಉಡಿಗೆ ತೊಡಿಗೆಯನ್ನು ಹಾಕಿಕೊಂಡ ಆಕೆಯನ್ನು ನೋಡಿ ಆ ದೇವಿಯರು "ಮೊದಲಿನಂತೆ ಈಗ ದೇಹಕಾಂತಿಯಿಲ್ಲ" ಎಂದು ಹೇಳಿದರು.

**ಇತಿ ಸಾ ತದ್ವಚಃ ಶ್ರುತ್ವಾ ಪ್ರಿಯಮಿತ್ರಾ ಮಹೀಪತೇಃ ।**
**ವಕ್ತ್ರಂ ವ್ಯಲೋಕಯತ್ಸಾಹ ಸೋಪಿ ಕಾಂತೇ ತಥೇತಿ ತಾಮ್ ॥ ೮೦೪ ॥**

ಆ ಪ್ರಿಯಮಿತ್ರೆಯು ಈ ಪ್ರಕಾರವಾದ ಮಾತನ್ನು ಕೇಳಿ ಮೇಘರಥರಾಜನ ಮುಖವನ್ನು ನೋಡಿದಳು. ಅವನೂ "ಕಾಂತೆಯೆ ! ಹಾಗೆಯೇ ಸರಿ" ಎಂದು ಆ ಪ್ರಿಯಮಿತ್ರೆಯನ್ನು ಕುರಿತು ಹೇಳಿದನು.

**ದೇವ್ಯೌ ಸ್ವರೂಪಮಾದಾಯ ನಿಜಾಗಮನವೃತ್ತಕಮ್ ।**
**ನಿವೇದ್ಯ ರೂಪಮಸ್ಯಾಶ್ಚ ಧಿಗ್ವಿಲಕ್ಷಣಭಂಗುರಮ್ ॥ ೮೦೫ ॥**

**ಅತ್ರ ನಾಭಂಗುರಂ ಕಿಂಚಿದಿತಿ ನಿರ್ವಿದ್ಯ ಚೇತಸಾ ।**
**ತಾಂ ಸಂಪೂಜ್ಯೇಯತುಃ ಸ್ವರ್ಗಂ ಸ್ವದೀಪ್ತಿವ್ಯಾಪ್ತದಿಕ್ತಟೇ ॥ ೮೦೬ ॥**

ದೇವಿಯರು ತಮ್ಮ ಆಗಮನದ ಸಮಾಚಾರವನ್ನು ತಿಳಿಸಿ "ಈ ಪ್ರಿಯಮಿತ್ರೆಯ ರೂಪವೂ ವಿಲಕ್ಷಣರೀತಿಯಿಂದ ನಾಶಶೀಲವಾಗಿದೆ. ಧಿಕ್ಕಾರ. ಈ ಲೋಕದಲ್ಲಿ ಯಾವ ವಸ್ತುವೂ ನಿತ್ಯವಾಗಿಲ್ಲ" ಈ ಪ್ರಕಾರವಾಗಿ ಮನಸ್ಸಿನಿಂದ ವೈರಾಗ್ಯವನ್ನು ಹೊಂದಿ ಆ ಪ್ರಿಯಮಿತ್ರೆಯನ್ನು ಪೂಜಿಸಿ ತಮ್ಮ ಕಾಂತಿಯಿಂದ ವ್ಯಾಪ್ತವಾದ ದಿಕ್ಪ್ರದೇಶಗಳುಳ್ಳವರಾಗಿ ಸ್ವರ್ಗಕ್ಕೆ ಹೋದರು.

**ದೇವೀಂ ತದ್ಧೇತುನಾ ಖಿನ್ನಾಂ ನಿತ್ಯಾನಿತ್ಯಾತ್ಮಕಂ ಜಗತ್ ।**
**ಸರ್ವಮಂತಃ ಶುಚಂ ಮಾಗಾ ಇತ್ಯಾಶ್ವಾಸ್ಯ ಮಹೀಪತಿಃ ॥ ೮೦೭ ॥**

**ರಾಜ್ಯಭೋಗೈಃ ಸ್ವಕಾಂತಾಭಿರ್ನಿತಾಂತಂ ನಿರ್ವೃತಿಂ ವ್ರಜನ್ ।**
**ಗತ್ವಾ ಮನೋಹರೋದ್ಯಾನಮನ್ಯೇದ್ಯುಃ ಸ್ವಗುರುಂ ಜಿನಮ್ ॥ ೮೦೮ ॥**

**ಸಿಂಹಾಸನೇ ಸಮಾಸೀನಂ ಸುರಾಸುರಪರಿಷ್ಕೃತಮ್ ।**
**ಸಮಸ್ತಪರಿವಾರೇಣ ತ್ರಿಃ ಪರೀತ್ಯಾಭಿವಂದ್ಯ ಚ ॥ ೮೦೯ ॥**

**ಸರ್ವಭವ್ಯಹಿತಂ ವಾಂಛನ್ ಪಪ್ರಚ್ಛೋಪಾಸಕಕ್ರಿಯಾಮ್ ।**
**ಪ್ರಾಯಃ ಕಲ್ಪದ್ರುಮಸ್ಯೇವ ಪರಾರ್ಥಂ ಚೇಷ್ಟಿತಂ ಸತಾಮ್ ॥ ೮೧೦ ॥**

ಸ್ವರೂಪಕ್ಷಯದ ಕಾರಣದಿಂದ ಖಿನ್ನಳಾದ ಪ್ರಿಯಮಿತ್ರಾದೇವಿಯನ್ನು "ಈ ಜಗತ್ತೆಲ್ಲವೂ ನಿತ್ಯಾನಿತ್ಯರೂಪವಾಗಿದೆ. ಮನಸ್ಸಿನಲ್ಲಿ ಶೋಕವನ್ನು ಮಾಡಬೇಡ" ಎಂದು ರಾಜನು ಸಮಾಧಾನಪಡಿಸಿ ತನ್ನ ಪತ್ನಿಯರೊಡನೆ ರಾಜ್ಯಭೋಗಗಳಿಂದ ಬಹಳವಾಗಿ ಸುಖವನ್ನು ಹೊಂದುವವನಾಗಿ ಮತ್ತೊಂದು ದಿವಸ ಮನೋಹರೋದ್ಯಾನಕ್ಕೆ ಹೋಗಿ ತನ್ನ ತಂದೆಯೂ ಸಿಂಹಾಸನದಲ್ಲಿ ಕುಳಿತಿರುವವನೂ ಸುರಾಸುರರಿಂದ ಆವರಿಸಲ್ಪಟ್ಟವನೂ ಆದ ಘನರಥಜಿನನನ್ನು ಸಮಸ್ತ ಪರಿವಾರದೊಡನೆ ತ್ರಿಪ್ರದಕ್ಷಿಣೆಯನ್ನು ಮಾಡಿ ವಂದಿಸಿ ಸಮಸ್ತ ಭವ್ಯರಿಗೆ ಹಿತವನ್ನು ಬಯಸುವವನಾಗಿ ಶ್ರಾವಕಕ್ರಿಯೆಯನ್ನು ಪ್ರಶ್ನೆಮಾಡಿದನು. ಪ್ರಾಯಿಕವಾಗಿ ಸತ್ಪುರುಷರ ಕೆಲಸವು, ಕಲ್ಪವೃಕ್ಷದಂತೆ, ಪರಪ್ರಯೋಜನಕ್ಕೋಸ್ಕರವಾಗಿರುವುದು.

**ಪ್ರಾಗುಕ್ತೈಕಾದಶೋಪಾಸಕಸ್ಥಾನಾನಿ ವಿಭಾಗತಃ ।**
**ಉಪಾಸಕಕ್ರಿಯಾಬದ್ಧೋಪಾಸಕಾಧ್ಯಯನಾಹ್ವಯಮ್ ॥ ೮೧೧ ॥**

**ಅಂಗಂ ಸಪ್ತಸಮಾಖ್ಯೇಯಂ ಶ್ರಾವಕಾಣಾಂ ಹಿತೈಷಿಣಾಮ್ ।**
**ಇತಿ ವ್ಯಾವರ್ಣಯಾಮಾಸ ತೀರ್ಥಕೃತ್ಪ್ರಾರ್ಥಿತಾರ್ಥಕೃತ್ ॥ ೮೧೨ ॥**

ಪ್ರಾರ್ಥಿಸಲ್ಪಟ್ಟ ಪ್ರಯೋಜನವನ್ನುಂಟುಮಾಡುವ ಘನರಥತೀರ್ಥಂಕರರು ಹಿತವನ್ನು ಬಯಸುವ ಶ್ರಾವಕರುಗಳಿಗೆ ವಿಭಾಗದಿಂದ ಮೊದಲು ಹೇಳಲ್ಪಟ್ಟ ಶ್ರಾವಕರ ಹನ್ನೊಂದು ಸ್ಥಾನ(ನೆಲೆ)ಗಳನ್ನೂ ಶ್ರಾವಕಕ್ರಿಯೆಗಳಿಂದ ಕೂಡಿರುವ ಉಪಾಸಕಾಧ್ಯಯನವೆಂಬ ಏಳನೆಯ ಅಂಗವನ್ನೂ ಮುಂದೆ ಹೇಳುವ ರೀತಿಯಾಗಿ ವರ್ಣಿಸಿದರು.

**ಗರ್ಭಾನ್ವಯಕ್ರಿಯಾಃ ಪೂರ್ವಂ ತತೋ ದೀಕ್ಷಾನ್ವಯಕ್ರಿಯಾಃ ।**
**ಕರ್ತ್ರನ್ವಯಕ್ರಿಯಾಶ್ಚಾನ್ಯಾಸ್ತತ್ಸಂಖ್ಯಾಶ್ಚಾನುತತ್ತ್ವತಃ ॥ ೮೧೩ ॥**

"ಮೊದಲು ಗರ್ಭಾನ್ವಯಕ್ರಿಯೆಗಳು. ಬಳಿಕ ದೀಕ್ಷಾನ್ವಯಕ್ರಿಯೆಗಳು. ಅವುಗಳ ಸಂಖ್ಯೆಗಳೂ ತತ್ತ್ವವನ್ನನುಸರಿಸಿರುತ್ತವೆ.

**ಗರ್ಭಾಧಾನಾದಿನಿರ್ವಾಣಪರ್ಯಂತಾಃ ಪ್ರಥಮಕ್ರಿಯಾಃ ।**
**ಪ್ರೋಕ್ತಾಃ ಪ್ರೋಕ್ತಾಸ್ತ್ರಿಪಂಚಾಶತ್ಸಮ್ಯಗ್ದರ್ಶನಶುದ್ಧಿಷು ॥ ೮೧೪ ॥**

**ದೀಕ್ಷಾನ್ವಯಕ್ರಿಯಾಶ್ಚಾಷ್ಟಚತ್ವಾರಿಂಶತ್ಪ್ರಕೀರ್ತಿತಾಃ ।**
**ಅವತಾರಾದಿಕಾ ನಿರ್ವೃತ್ಯಂತಾಃ ನಿರ್ವಾಣಸಾಧಿಕಾಃ ॥ ೮೧೫ ॥**

**ಸದ್ಗೃಹೀತ್ವಾದಿಸಿದ್ಧ್ಯಂತಾಃ ಸಪ್ತ ಕರ್ತ್ರನ್ವಯಕ್ರಿಯಾಃ ।**
**ಸಮ್ಯಕ್ಸ್ವರೂಪಮೇತಾಸಾಂ ವಿಧಾನಂ ಫಲಮಪ್ಯದಃ ॥ ೮೧೬ ॥**

ಸಮ್ಯಗ್ದರ್ಶನಶುದ್ಧಿಯುಳ್ಳವರಲ್ಲಿ ಗರ್ಭಾಧಾನದಿಂದ ಮೊದಲಾಗಿ ನಿರ್ವಾಣ ಪರ್ಯಂತವಾದ ಐವತ್ತುಮೂರು ಕ್ರಿಯೆಗಳು ಗರ್ಭಾನ್ವಯಕ್ರಿಯೆಗಳೆಂದು ಹೇಳಲ್ಪಟ್ಟಿವೆ. ಅವತಾರಕ್ರಿಯೆಯಿಂದ ಮೊದಲಾಗಿ ಮೋಕ್ಷಪರ್ಯಂತವಾದ ಮತ್ತು ಮೋಕ್ಷಸಾಧಕಗಳಾದ ನಾಲ್ವತ್ತೆಂಟು ಕ್ರಿಯೆಗಳು ದೀಕ್ಷಾನ್ವಯಕ್ರಿಯೆಗಳೆಂದು ಹೇಳಲ್ಪಟ್ಟಿವೆ. ಸದ್ಗೃಹಸ್ಥತ್ವ ಮೊದಲಾಗಿ ಮುಕ್ತಿಪರ್ಯಂತವಾದ ಏಳು ಕ್ರಿಯೆಗಳು ಕರ್ತ್ರನ್ವಯಕ್ರಿಯೆಗಳೆಂದು ಹೇಳಲ್ಪಟ್ಟಿವೆ. ಈ ಕ್ರಿಯೆಗಳ ಉತ್ತಮ ಸ್ವರೂಪವಿದು. ಇವುಗಳ ವಿಧಿಯಿದು. ಫಲವಿದು."

**ತಮುಪಾಸಕಸದ್ಧರ್ಮಂ ಶ್ರುತ್ವಾ ಘನರಥೋದಿತಮ್ ।**
**ನತ್ವಾ ಮೇಘರಥೋ ಭಕ್ತ್ಯಾ ಮುಕ್ತ್ಯೈ ಶಾಂತಾಂತರಂಗಕಃ ॥ ೮೧೭ ॥**

**ಶರೀರಭೋಗಸಂಸಾರದೌಸ್ಥಿತ್ಯಂ ಚಿಂತಯನ್ಮುಹುಃ ।**
**ಸಂಯಮಾಭಿಮುಖೋ ರಾಜ್ಯೇ ತಿಷ್ಠೇತ್ಯನುಜಮಾದಿಶತ್ ॥ ೮೧೮ ॥**

(ಈ ಕ್ರಿಯೆಗಳ ವಿಶೇಷವರ್ಣನವು ಮೊದಲು ಮಾಡಲ್ಪಟ್ಟಿರುವುದರಿಂದ ಇಲ್ಲಿ ವರ್ಣಿಸಲಿಲ್ಲ) ಮೇಘರಥನು ಘನರಥತೀರ್ಥೇಶ್ವರರಿಂದ ಹೇಳಲ್ಪಟ್ಟ ಆ ಶ್ರಾವಕ ಧರ್ಮವನ್ನು ಕೇಳಿ ಮುಕ್ತಿಗೋಸ್ಕರ ಭಕ್ತಿಯಿಂದ ನಮಸ್ಕರಿಸಿ ಶಾಂತವಾದ ಅಂತರಂಗವುಳ್ಳವನಾಗಿಯೂ ಶರೀರ ಭೋಗ ಸಂಸಾರಗಳ ದುಃಸ್ಥಿತಿಯನ್ನು ಬಾರಿ ಬಾರಿಗೆ ಚಿಂತಿಸುವವನಾಗಿಯೂ ಸಂಯಮ–ದೀಕ್ಷಾಭಿಮುಖನಾಗಿಯೂ "ನೀನು ರಾಜ್ಯದಲ್ಲಿರು" ಎಂದು ತಮ್ಮನಿಗೆ ಹೇಳಿದನು.

**ತ್ವಯಾ ರಾಜ್ಯಸ್ಯ ಯೋ ದೋಷೋ ದೃಷ್ಟೋಽದರ್ಶಿ ಮಯಾಪ್ಯಸೌ ।**
**ತ್ಯಾಜ್ಯಂ ತಚ್ಚೇದ್ಗೃಹೀತ್ವಾಪಿ ಪ್ರಾಗೇವಾಗ್ರಹಣಂ ವರಮ್ ॥ ೮೧೯ ॥**

**ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ಯಥಾ ।**
**ಇತಿ ತಸ್ಮಿಂಸ್ತದಾದಾನೇ ವಿಮುಖತ್ವಮುಪಾಗತೇ ॥ ೮೨೦ ॥**

**ಸುತಾಯ ಮೇಘಸೇನಾಯ ದತ್ವಾ ರಾಜ್ಯಂ ಯಥಾವಿಧಿ ।**
**ಸಹಸ್ರೈಃ ಸಪ್ತಭಿಃ ಸಾರ್ಧಂ ಸಾನುಜೋ ಜಗತೀಪತಿಃ ॥ ೮೨೧ ॥**

**ನೃಪೈರ್ದೀಕ್ಷಾಂ ಸಮಾದಾಯ ಕ್ರಮಾದೇಕಾದಶಾಂಗವಿತ್ ।**
**ಪ್ರತ್ಯಯಾಂಸ್ತೀರ್ಥಕೃನ್ನಾಮ್ನಃ ಷೋಡಶೈತಾನಭಾವಯತ್ ॥ ೮೨೨ ॥**

"ರಾಜ್ಯದಲ್ಲಿ ನೀನು ಯಾವ ದೋಷವನ್ನು ಕಂಡೆಯೋ ಈ ದೋಷವನ್ನು ನಾನೂ ಕಂಡೆನು. ಅಂತಹ ರಾಜ್ಯವನ್ನು ಗ್ರಹಣಮಾಡಿಯೂ ಅದು ಬಿಡಲ್ಪಡತಕ್ಕುದಾದರೆ, ಕೆಸರನ್ನು ಮುಟ್ಟಿ ತೊಳೆದುಕೊಳ್ಳುವುದಕ್ಕಿಂತ ಅದನ್ನು ಮುಟ್ಟದೆ ದೂರದಲ್ಲಿರುವಂತೆ, ಮೊದಲೇ ಆ ರಾಜ್ಯವನ್ನು ಗ್ರಹಣಮಾಡದಿರುವುದೊಳ್ಳೆಯದು" ಎಂದು ಆ ದೃಢರಥನು ರಾಜ್ಯವನ್ನು ಗ್ರಹಣಮಾಡುವುದರಲ್ಲಿ ವಿಮುಖತ್ವವನ್ನು ಹೊಂದುತ್ತಿರಲು ಮೇಘಸೇನನೆಂಬ ಪುತ್ರನಿಗೆ ವಿಧಿಪ್ರಕಾರವಾಗಿ ರಾಜ್ಯವನ್ನು ಕೊಟ್ಟು ಮೇಘರಥರಾಜನು ಅನುಜಸಮೇತನಾಗಿ ಏಳು ಸಹಸ್ರರಾಜರುಗಳೊಡನೆ ದೀಕ್ಷೆಯನ್ನು ತೆಗೆದುಕೊಂಡು ಕ್ರಮದಿಂದ ಏಕಾದಶಾಂಗಶಾಸ್ತ್ರಜ್ಞನಾಗಿ ತೀರ್ಥಕರ ನಾಮಕರ್ಮದ ಈ ಹದಿನಾರು ಕಾರಣಗಳನ್ನು ಭಾವಿಸಿದನು.

**ಜಿನೋಪದಿಷ್ಟನಿರ್ಗ್ರಂಥಮೋಕ್ಷಮಾರ್ಗೇ ರುಚಿರ್ಮತಾ ।**
**ನಿಃಶಂಕತಾದಿಕಾಷ್ಟಾಂಗಾ ವಿಶುದ್ಧಿರ್ದರ್ಶನಸ್ಯ ಸಾ ॥ ೮೨೩ ॥**

ಜಿನೇಶ್ವರರಿಂದ ಹೇಳಲ್ಪಟ್ಟಿರುವುದೂ ಪರಿಗ್ರಹರಹಿತವೂ ಆದ ಮೋಕ್ಷಮಾರ್ಗದಲ್ಲಿ ನಿಃಶಂಕಾದಿ ಅಷ್ಟಾಂಗಗಳುಳ್ಳ ಪ್ರೀತಿಯು ಯಾವುದಿದೆಯೋ ಅದು ದರ್ಶನ ವಿಶುದ್ಧಿಯೆಂದು ತಿಳಿಯಲ್ಪಟ್ಟಿರುವುದು.

**ಮಾರ್ಗೇಽಸ್ಮಿನ್ ವರ್ತಮಾನಸ್ಯ ಯದುಕ್ತಂ ತದ್ಭವೇನ್ನ ವಾ ।**
**ಇತಿ ಶಂಕಾಪರಿತ್ಯಾಗಂ ಶಂಕಾರಹಿತತಾಂ ವಿದುಃ ॥ ೮೨೪ ॥**

"ಈ ಮೋಕ್ಷಮಾರ್ಗದಲ್ಲಿರುವವನಿಗೆ ಯಾವ ಸುಖವು ಹೇಳಲ್ಪಟ್ಟಿರುವುದೋ ಅದು ಉಂಟಾಗುವುದೋ ಇಲ್ಲವೋ" ಈ ರೀತಿಯಾದ ಸಂದೇಹವನ್ನು ತ್ಯಜಿಸುವುದನ್ನು ಶಂಕಾರಾಹಿತ್ಯವನ್ನಾಗಿ ತಿಳಿಯುತ್ತಾರೆ.

**ದ್ವಿಲೋಕಭೋಗಮಿಥ್ಯಾದೃಕ್ಕಾಂಕ್ಷಾವ್ಯಾವೃತ್ತಿರಾಗಮೇ ।**
**ದ್ವಿತೀಯಮಂಗಮಾಖ್ಯಾತಂ ವಿಶುದ್ಧಿರ್ದರ್ಶನಶ್ರಿತಾ ॥ ೮೨೫ ॥**

ಇಹಲೋಕ ಪರಲೋಕಗಳ ಭೋಗಗಳಲ್ಲಿ ಮಿಥ್ಯಾದರ್ಶನದಿಂದುಂಟಾಗುವ ಕಾಂಕ್ಷೆಯ ತ್ಯಾಗವು ಶಾಸ್ತ್ರದಲ್ಲಿ ನಿಃಕಾಂಕ್ಷಿತವೆಂಬ ಎರಡನೆಯ ಅಂಗವಾಗಿ ಹೇಳಲ್ಪಟ್ಟಿದೆ. ಈ ಅಂಗದಿಂದಲೂ ಸಮ್ಯಗ್ದರ್ಶನಕ್ಕೆ ವಿಶುದ್ಧಿಯುಂಟಾಗುವುದು.

**ದೇಹಾದ್ಯಶುಚಿಸದ್ಭಾವಮವಗಮ್ಯ ಶುಚೀತಿ ಯಃ ।**
**ಸಂಕಲ್ಪಸ್ತಸ್ಯ ಸಂತ್ಯಾಗಃ ಸಾ ಸ್ಯಾನ್ನಿರ್ವಿಚಿಕಿತ್ಸತಾ ॥ ೮೨೬ ॥**

**ಅಥವಾರ್ಹನ್ಮತೇ ನೇದಂ ಚೇತ್ಸರ್ವಂ ಯುಕ್ತಮಿತ್ಯಸತ್ ।**
**ಆಗ್ರಹಃ ಕೋಽಪಿ ತತ್ತ್ಯಾಗಃ ಸಾ ಸ್ಯಾನ್ನಿರ್ವಿಚಿಕಿತ್ಸತಾ ॥ ೮೨೭ ॥**

ಶರೀರಾದಿಗಳಲ್ಲಿರುವ ಅಶುಚಿಯನ್ನು ತಿಳಿದು ಅದು ಶುಚಿಯೆಂದುಂಟಾಗುವ ಸಂಕಲ್ಪವನ್ನು ತ್ಯಜಿಸುವುದು ಯಾವುದುಂಟೋ ಅದು ನಿರ್ವಿಚಿಕಿತ್ಸತೆಯೆಂಬ ಮೂರನೆಯ ಅಂಗವಾಗಿದೆ. ಅಥವಾ "ಆರ್ಹತಮತದಲ್ಲಿ ಇದು ಇಲ್ಲದಿದ್ದರೆ ಮತ್ತೆಲ್ಲವೂ ಯುಕ್ತವಾಗಿದೆ" ಎಂಬ ದುರಾಗ್ರಹವನ್ನು ತ್ಯಜಿಸುವುದು ಯಾವುದುಂಟೋ ಅದು ನಿರ್ವಿಚಿಕಿತ್ಸತೆಯೆಂಬ ಮೂರನೆಯ ಅಂಗವಾಗಿದೆ.

**ತತ್ತ್ವವದ್ಭಾಸಮಾನೇಷು ಬಹುದುರ್ನಯವರ್ತ್ಮಸು ।**
**ಯುಕ್ತ್ಯಭಾವಾದ್ವಿಮೋಹತ್ವಮಾಹುರ್ದೃಷ್ಟೇರಮೂಢತಾಮ್ ॥ ೮೨೮ ॥**

ತತ್ತ್ವದಂತೆ ತೋರುವ ಅನೇಕ ದುರ್ನಯಮಾರ್ಗಗಳಲ್ಲಿ–ಮಿಥ್ಯಾಮಾರ್ಗಗಳಲ್ಲಿ ಯುಕ್ತಿಯಿಲ್ಲದಿರುವುದರಿಂದ ಮೋಹಿತನಾಗದಿರುವುದು ಸಮ್ಯಗ್ದರ್ಶನಕ್ಕೆ ಅಮೂಢತೆಯೆಂಬ ನಾಲ್ಕನೆಯ ಅಂಗವೆಂದು ಹೇಳುತ್ತಾರೆ.

**ವೃದ್ಧಿಃ ಕ್ರಿಯಾತ್ಮಧರ್ಮಸ್ಯ ಭಾವನಾಭಿಃ ಕ್ಷಮಾದಿಭಿಃ ।**
**ಅಭೀಷ್ಟಂ ದರ್ಶನಸ್ಯಾಂಗಂ ಸುದೃಗ್ಭಿರುಪಬೃಂಹಣಮ್ ॥ ೮೨೯ ॥**

ಕ್ಷಮಾದಿಭಾವನೆಗಳೊಡನೆ ಕ್ರಿಯರೂಪವಾದ ಧರ್ಮದ ವೃದ್ಧಿಯು ಸಮ್ಯಗ್ದರ್ಶನಕ್ಕೆ ಉಪಬೃಂಹಣವೆಂಬ ಐದನೆಯ ಅಂಗವಾಗಿ ಸಮ್ಯಗ್ದೃಷ್ಟಿಗಳಿಂದ ಅಂಗೀಕೃತವಾಗಿದೆ.

**ಧರ್ಮಧ್ವಂಸನಿಮಿತ್ತೇಷು ಯಾ ಕಷಾಯೋದಯಾದಿಷು ।**
**ಧರ್ಮಚ್ಯವನಸಂರಕ್ಷಾ ಸ್ವಾನ್ಯಯೋಃ ಸಾ ಸ್ಥಿತಿಕ್ರಿಯಾ ॥ ೮೩೦ ॥**

ತನ್ನ ಮತ್ತು ಬೇರೆಯವರ ಧರ್ಮವಿನಾಶಕ್ಕೆ ಕಾರಣಗಳಾದ ಕ್ರೋಧಾದಿ ಕಷಾಯೋದಯವೇ ಮೊದಲಾದುವುಗಳಿಂದ ಚ್ಯುತಿಯಾಗುವ ಧರ್ಮವನ್ನು ರಕ್ಷಿಸುವುದು ಯಾವುದುಂಟೋ ಅದು ಸ್ಥಿತಿಕ್ರಿಯೆಯೆಂಬ ಆರನೆಯ ಅಂಗವಾಗಿದೆ.

**ಜಿನಪ್ರಣೀತಸದ್ಧರ್ಮಾಮೃತನಿತ್ಯಾನುರಾಗತಾ ।**
**ವಾತ್ಸಲ್ಯಂ ಮಾರ್ಗಮಾಹಾತ್ಮ್ಯಭಾವನಾ ಸ್ಯಾತ್ಪ್ರಭಾವನಾ ॥ ೮೩೧ ॥**

ಜಿನೇಶ್ವರರಿಂದ ವಿರಚಿತವಾದ ಸದ್ಧರ್ಮವೆಂಬ ಅಮೃತದಲ್ಲಿ ನಿತ್ಯವಾಗಿರುವ ಅನುರಾಗವು ವಾತ್ಸಲ್ಯವೆಂಬ ಏಳನೆಯ ಅಂಗವಾಗಿರುತ್ತದೆ. ಸನ್ಮಾರ್ಗದ ಮಹಿಮೆಯ ಭಾವನೆಯು ಪ್ರಭಾವನೆಯೆಂಬ ಎಂಟನೆಯ ಅಂಗವಾಗಿರುವುದು.

**ಜ್ಞಾನಾದಿಷು ಚ ತದ್ವತ್ಸು ಚಾದರೋ ನಿಷ್ಕಷಾಯತಾ ।**
**ತದ್ದ್ವಯಂ ವಿನಯಸ್ಯಾಹುಃ ಸಂತಃ ಸಂಪನ್ನತಾಂ ಸ್ಫುಟಮ್ ॥ ೮೩೨ ॥**

ಜ್ಞಾನಾದಿಗುಣಗಳಲ್ಲಿಯೂ ಆ ಗುಣಗಳುಳ್ಳವರಲ್ಲಿಯೂ ಪ್ರೀತಿ ಮತ್ತು ಕ್ರೋಧಾದಿಕಷಾಯಗಳಿಲ್ಲದಿರುವಿಕೆ ಅವೆರಡನ್ನು ಸತ್ಪುರುಷರು ವಿನಯಸಂಪನ್ನತೆಯೆಂಬ ಎರಡನೆಯ ಭಾವನೆಯನ್ನಾಗಿ ಹೇಳುತ್ತಾರೆ.

**ವ್ರತಶೀಲನಿಬದ್ಧೇಷು ಭೇದೇಷು ನಿರವದ್ಯತಾ ।**
**ಶೀಲವ್ರತಾನತೀಚಾರಃ ಪ್ರೋಕ್ತಃ ಸೂಕ್ತ ವಿದಾಂವರೈಃ ॥ ೮೩೩ ॥**

ವ್ರತಗಳಲ್ಲಿಯೂ ಶೀಲಗಳಲ್ಲಿಯೂ ದೋಷವಿಲ್ಲದಿರುವಿಕೆಯು ಶೀಲವ್ರತಾನತೀಚಾರವೆಂಬ ಮೂರನೆಯ ಭಾವನೆಯೆಂದು ಶ್ರೇಷ್ಠರಾದ ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿದೆ.

**ಜ್ಞಾನೋಪಯೋಗೋಽಭೀಕ್ಷ್ಣ್ಯೋಽಸೌ ಯಾ ನಿತ್ಯಶ್ರುತಭಾವನಾ ।**
**ಸಂವೇಗಃ ಸಂಸೃತೇರ್ದುಃಖಾದ್ದುಃಸಹಾನ್ನಿತ್ಯಭೀರುತಾ ॥ ೮೩೪ ॥**

ಪ್ರತಿನಿತ್ಯಶಾಸ್ತ್ರಭಾವನೆಯು ಅಭೀಕ್ಷ್ಣಜ್ಞಾನೋಪಯೋಗವೆಂಬ ನಾಲ್ಕನೆಯ ಭಾವನೆಯಾಗಿದೆ. ಸಂಸಾರದ ದುಃಸ್ಸಹವಾದ ದುಃಖದ ದೆಸೆಯಿಂದ ಸತ್ಯವಾದ ಭೀತಿಯು ಸಂವೇಗವೆಂಬ ಐದನೆಯ ಭಾವನೆಯಾಗಿದೆ.

**ಆಹಾರಾದಿತ್ರಯೋತ್ಸರ್ಗಃ ಪಾತ್ರೇಭ್ಯಸ್ತ್ಯಾಗ ಇಷ್ಯತೇ ।**
**ಯಥಾಗಮಂ ಯಥಾವೀರ್ಯಂ ಕಾಯಕ್ಲೇಶಸ್ತಪೋ ಭವೇತ್॥ ೮೩೫ ॥**

ಸತ್ಪಾತ್ರಗಳಿಗೆ ಆಹಾರಾಭಯಭೈಷಜ್ಯಗಳ ದಾನವು ತ್ಯಾಗವೆಂಬ ಆರನೆಯ ಭಾವನೆಯಾಗಿದೆ. ಆಗಮಾನುಸಾರವಾಗಿಯೂ ಶಕ್ತ್ಯನುಸಾರವಾಗಿಯೂ ಮಾಡಲ್ಪಡುವ ಕಾಯಕ್ಲೇಶವು ತಪವೆಂಬ ಏಳನೆಯ ಭಾವನೆಯಾಗಿದೆ.

**ಕದಾಚಿನ್ಮುನಿಸಂಘಸ್ಯ ಬಾಹ್ಯಾಭ್ಯಂತರಹೇತುಭಿಃ ।**
**ಸಂಧಾರಣಂ ಸಮಾಧಿಃ ಸ್ಯಾತ್ಪ್ರತ್ಯೂಹೇ ತಪಸಃ ಸತಿ ॥ ೮೩೬ ॥**

ಎಂದಾದರೂ ಮುನಿಸಂಘದ ತಪಸ್ಸಿಗೆ ಬಾಹ್ಯಾಭ್ಯಂತರ ಕಾರಣಗಳಿಂದ ವಿಘ್ನವು ಸಂಭವಿಸಿದಾಗ ಅದನ್ನು ದೂರಮಾಡುವಿಕೆಯು ಸಾಧುಸಮಾಧಿಯೆಂಬ ಎಂಟನೆಯ ಭಾವನೆಯಾಗಿರುತ್ತದೆ.

**ಗುಣಿನಾಂ ನಿರವದ್ಯೇನ ವಿಧಿನಾ ದುಃಖನಿರ್ಹೃತಿಮ್ ।**
**ವೈಯಾವೃತ್ಯಕ್ರಿಯಾಂ ಪ್ರಾಹುಃ ಸಾಧನಂ ತಪಸಃ ಪರಮ್ ॥ ೮೩೭ ॥**

ನಿರ್ದುಷ್ಟವಾದ ವಿಧಿಯಿಂದ ಗುಣವಂತರ ದುಃಖವನ್ನು ದೂರಮಾಡುವುದನ್ನು ವೈಯಾವೃತ್ಯಕ್ರಿಯೆಯನ್ನಾಗಿ ಹೇಳುತ್ತಾರೆ. ಅದು ತಪಸ್ಸಿಗೆ ಉತ್ಕೃಷ್ಟವಾದ ಸಾಧನವಾಗಿದೆ.

**ಜಿನೇಷು ಗಣನಾಥೇಷು ಬಹುಶಾಸ್ತ್ರೇಷು ಚಾಗಮೇ ।**
**ಭಾವಶುದ್ಧ್ಯಾನುರಾಗಃ ಸ್ಯಾದ್ಭಕ್ತಿಃ ಕಾಯಾದಿಗೋಚರಾ ॥ ೮೩೮ ॥**

ಜಿನೇಶ್ವರರಲ್ಲಿಯೂ ಆಚಾರ್ಯರಲ್ಲಿಯೂ ಉಪಾಧ್ಯಾಯರಲ್ಲಿಯೂ ಆಗಮದಲ್ಲಿಯೂ ಮನೋವಾಕ್ಕಾಯಗಳಿಂದಲೂ ಭಾವಶುದ್ಧಿಯಿಂದಲೂ ಪ್ರೀತಿಯನ್ನು ಮಾಡುವಿಕೆಯು ಭಕ್ತಿಯೆನ್ನಿಸುವುದು.

**ಸಾಮಾಯಿಕಾದಿಷಟ್ಕಸ್ಯ ಯಥಾಕಾಲಂ ಪ್ರವರ್ತನಮ್ ।**
**ಭವೇದಾವಶ್ಯಕಾಹಾನಿರ್ಯಥೋಕ್ತವಿಧಿನಾ ಮುನೇಃ ॥ ೮೩೯ ॥**

ಸಾಮಾಯಿಕ ಮೊದಲಾದ ಆರು ಕ್ರಿಯೆಗಳನ್ನು ಕಾಲವನ್ನನುಸರಿಸಿ ಶಾಸ್ತ್ರೋಕ್ತ ವಿಧಿಯಿಂದ ಆಚರಿಸುವಿಕೆಯು ಮುನಿಯ ಆವಶ್ಯಕಾಪರಿಹಾಣಿಯೆಂಬ ಭಾವನೆಯಾಗಿದೆ.

**ಜ್ಞಾನೇನ ತಪಸಾ ಜೈನಪೂಜಯಾನ್ಯೇನ ಚಾಪಿ ವಾ ।**
**ಧರ್ಮಪ್ರಕಾಶನಂ ಪ್ರಾಜ್ಞಾಃ ಪ್ರಾಹುರ್ಮಾರ್ಗಪ್ರಭಾವನಾಮ್ ॥ ೮೪೦ ॥**

ಜ್ಞಾನದಿಂದಲಾಗಲಿ, ತಪಸ್ಸಿನಿಂದಲಾಗಲಿ, ಜಿನಪೂಜೆಯಿಂದಲಾಗಲಿ, ಬೇರೆ ವಿಧದಿಂದಲಾಗಲಿ, ಧರ್ಮಪ್ರಕಾಶನವನ್ನು ಪ್ರಾಜ್ಞರು ಮಾರ್ಗಪ್ರಭಾವನೆಯನ್ನಾಗಿ ಹೇಳುತ್ತಾರೆ.

**ವತ್ಸೇ ಧೇನೋರಿವ ಸ್ನೇಹೋ ಯಃ ಸಧರ್ಮಿಣ್ಯಕೃತ್ರಿಮಃ ।**
**ತದ್ವಾತ್ಸಲ್ಯಂ ಪ್ರಶಂಸಂತಿ ಪ್ರಶಂಸಾಪಾರಮಾಶ್ರಿತಾಃ ॥ ೭೪೧ ॥**

ಹಸುವಿಗೆ ಕರುವಿನಲ್ಲಿರುವ ಪ್ರೀತಿಯಂತೆ, ಸಧರ್ಮಿಯಲ್ಲಿ ಅಕೃತ್ರಿಮವಾದ ಪ್ರೀತಿಯಾವುದುಂಟೋ ಅದು ವಾತ್ಸಲ್ಯವೆಂದು ಪ್ರಶಂಸೆಯ ಪಾರವನ್ನು ಹೊಂದಿರುವವರು ಹೇಳುತ್ತಾರೆ.

**ಇತ್ಯೇತಾನಿ ಸಮಸ್ತಾನಿ ವ್ಯಸ್ತಾನಿ ಚ ಜಿನೇಶ್ವರಾಃ ।**
**ಕಾರಣಾನ್ಯಾಮನಂತ್ಯಂತ್ಯನಾಮ್ನಃ ಷೋಡಶ ಬಂಧನೇ ॥ ೮೪೨ ॥**

ಈ ಹದಿನಾರು ಭಾವನೆಗಳೆಲ್ಲ ಸೇರಿ ಅಥವಾ ಒಂದೊಂದಾಗಿ ಕೊನೆಯದಾದ ತೀರ್ಥಕರನಾಮಕರ್ಮದ ಬಂಧನದಲ್ಲಿ ಕಾರಣಗಳಾಗುತ್ತವೆಂದು ಜಿನೇಶ್ವರರು ಹೇಳುತ್ತಾರೆ.

**ಏತದ್ಭಾವನಯಾ ಬದ್ಧ್ವಾ ತೀರ್ಥಕೃನ್ನಾಮ ನಿರ್ಮಲಮ್ ।**
**ಯೇನ ತ್ರೈಲೋಕ್ಯಸಂಕ್ಷೋಭಸ್ತಸ್ಯ ಮೇಘರಥೋ ಮುನಿಃ ॥ ೮೪೩ ॥**

**ಕ್ರಮೇಣ ವಿಹರನ್ ದೇಶಾನ್ ಪ್ರಾಪ್ತವಾನ್ ಶ್ರೀಪುರಾಹ್ವಯಮ್ ।**
**ಶ್ರೀಷೇಣಸ್ತತ್ಪತಿಸ್ತಸ್ಮೈ ದತ್ವಾ ಭಿಕ್ಷಾಂ ಯಥೋಚಿತಮ್ ॥ ೮೪೪ ॥**

**ಪಶ್ಚಾದ್ದಂತಪುರೇ ನಂದನಾಭಿಧಾನಶ್ಚ ಭಕ್ತಿಮಾನ್ ।**
**ತಥೈವ ಪುಂಡರೀಕಿಣ್ಯಾಂ ಸಿಂಹಸೇನಶ್ಚ ಶುದ್ಧದೃಕ್ ॥ ೮೪೫ ॥**

**ಜ್ಞಾನದರ್ಶನಚಾರಿತ್ರತಪಸಾಂ ಪರ್ಯಯಾನ್ ಬಹೂನ್ ।**
**ಸಮ್ಯಗ್ವರ್ಧಯತೇ ಪ್ರಾಪುಃ ಪಂಚಾಶ್ಚರ್ಯಾಣಿ ಪಾರ್ಥಿವಾಃ ॥ ೮೪೬ ॥**

ಆ ಮೇಘರಥಮುನಿಯು ಈ ಭಾವನೆಯಿಂದ ಮೂರು ಲೋಕಗಳಲ್ಲಿ ಆಂದೋಲನವನ್ನುಂಟುಮಾಡುವ ನಿರ್ಮಲವಾದ ಆ ತೀರ್ಥಕರನಾಮಕರ್ಮವನ್ನು ಬಂಧಿಸಿಕೊಂಡು ಕ್ರಮದಿಂದ ದೇಶಗಳನ್ನು ವಿಹರಿಸುತ್ತ ಶ್ರೀಪುರವೆಂಬ ನಗರವನ್ನು ಹೊಂದಿದನು. ಅದರ ದೊರೆಯಾದ ಶ್ರೀಷೇಣನೂ ಬಳಿಕ ದಂತಪುರದಲ್ಲಿ ಭಕ್ತಿಶಾಲಿಯಾದ ನಂದನನೆಂಬ ರಾಜನೂ ಹಾಗೆಯೇ ಪುಂಡರೀಕಿಣಿಯಲ್ಲಿ ಶುದ್ಧಸಮ್ಯಗ್ದೃಷ್ಟಿಯಾದ ಸಿಂಹಸೇನರಾಜನೂ ಜ್ಞಾನ ದರ್ಶನ ಚಾರಿತ್ರ ತಪಸ್ಸುಗಳ ಅನೇಕ ಪರ್ಯಾಯಗಳನ್ನು ಚೆನ್ನಾಗಿ ವೃದ್ಧಿಹೊಂದಿಸುವವನಾದ ಆ ಮೇಘರಥಮುನಿಗೆ ಯಥೋಚಿತವಾಗಿ ಭಿಕ್ಷೆಯನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಪಡೆದರು.

**ಸಂಯಮಸ್ಯ ಪರಾಂ ಕೋಟಿಮಾರುಹ್ಯ ಸ ಮುನೀಶ್ವರಃ ।**
**ದೃಢೋ ದೃಢರಥೇನಾಮಾ ನಭಸ್ತಿಲಕಪರ್ವತೇ ॥ ೮೪೭ ॥**

**ಮಾಸಮಾತ್ರಂ ಪರಿತ್ಯಜ್ಯ ಶರೀರಂ ಶಾಂತಕಲ್ಮಷಃ ।**
**ಪ್ರಾಯೋಪಗಮನೇನಾಪ್ತಃ ಪ್ರಾಣಾಂತೇಂತ್ಯಾಹಮಿಂದ್ರತಾಮ್॥ ೮೪೮ ॥**

ಆ ಮುನೀಶ್ವರನು ಸಂಯಮದ ತುತ್ತತುದಿಯನ್ನೇರಿ ನಭಸ್ತಿಲಕಪರ್ವತದಲ್ಲಿ ಒಂದು ತಿಂಗಳವರೆಗೆ ದೃಢರಥಮುನಿಯೊಡನೆ ದೃಢನಾಗಿದ್ದು ಶಾಂತವಾದ ಕಲ್ಮಷವುಳ್ಳವನಾಗಿ ಪ್ರಾಣಾಂತದಲ್ಲಿ ಪ್ರಾಯೋಪಗಮನವಿಧಿಯಿಂದ ದೇಹವನ್ನು ತ್ಯಜಿಸಿ ಕೊನೆಯದಾದ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರತ್ವವನ್ನು ಪಡೆದನು.

**ಏತೌ ತತ್ರ ತ್ರಯಸ್ತ್ರಿಂಶತ್ಸಾಗರೋಪಮಜೀವಿತೌ ।**
**ವಿಧೂಜ್ಜ್ವಲತರಾರತ್ನಿಶರೀರೌ ಶುಕ್ಲಲೇಶ್ಯಕೌ ॥ ೮೪೯ ॥**

**ಮಾಸೈಃ ಷೋಡಶಭಿಃ ಸಾರ್ಧಮಾಸೈರ್ನಿಃಶ್ವಾಸಮೀಯುಷೌ ।**
**ತ್ರಯಸ್ತ್ರಿಂಶತ್ಸಹಸ್ರಾಬ್ದೈರಾಹೃತಾಮೃತಭೋಜನೌ ॥ ೮೫೦ ॥**

**ನಿಃಪ್ರವೀಚಾರಸೌಖ್ಯಾಢ್ಯೌ ಲೋಕನಾಡ್ಯಂತರಾಶ್ರಿತ- ।**
**ತದ್ಗೋಚರಪರಿಚ್ಛೇದಪ್ರವಣಾವಧಿಲೋಚನೌ ॥ ೮೫೧ ॥**

**ತತ್ಕ್ಷೇತ್ರಮಿತವೀರ್ಯಾಭಾವಿಕ್ರಿಯೌ ಸುಚಿರಂ ಸ್ಥಿತೌ ।**
**ಅನುನಂತರಜನ್ಮಾಪ್ಯ ಮೋಕ್ಷಲಕ್ಷ್ಮೀಸಮಾಗಮೌ ॥ ೮೫೨ ॥**

ಈ ಮೇಘರಥ ದೃಢರಥರು ಆ ಸರ್ವಾರ್ಥಸಿದ್ಧಿಯಲ್ಲಿ ಮೂವತ್ತುಮೂರು ಸಾಗರೋಪಮವರ್ಷಾಯುಷ್ಯವುಳ್ಳವರೂ ಚಂದ್ರನಂತೆ ಪ್ರಕಾಶಮಾನವೂ ಒಂದು ಹಸ್ತಪ್ರಮಾಣವೂ ಆದ ಶರೀರವುಳ್ಳವರೂ ಶುಕ್ಲಲೇಶ್ಯೆಯುಳ್ಳವರೂ ಹದಿನಾರುವರೆ ತಿಂಗಳಿಗೊಮ್ಮೆ ಉಸಿರಾಡಿಸುವವರೂ ಮೂವತ್ತುಮೂರುಸಾವಿರ ವರುಷಗಳಿಗೊಮ್ಮೆ ಅಮೃತಭೋಜನವನ್ನು ಮಾಡುವವರೂ ಕಾಮಸೇವನಾರಹಿತವಾದ ಸುಖದಿಂದ ಪರಿಪೂರ್ಣರೂ ಲೋಕನಾಡಿಯ ಮಧ್ಯದಲ್ಲಿರುವ ವಸ್ತುಗಳನ್ನು ತಿಳಿಯುವುದರಲ್ಲಿ ಸಮರ್ಥವಾದ ಅವಧಿಜ್ಞಾನವೆಂಬ ನೇತ್ರವುಳ್ಳವರೂ ಆ ಲೋಕನಾಡಿಯವರೆಗೆ ಬಲಕಾಂತಿವಿಕ್ರಿಯೆಗಳುಳ್ಳವರೂ ಉತ್ತರಜನ್ಮವನ್ನು ಪಡೆದು ಮೋಕ್ಷಲಕ್ಷ್ಮಿಯ ಸಮಾಗಮವುಳ್ಳವರೂ ಆಗಿ ಬಹುಕಾಲದವರೆಗೆ ಅಲ್ಲಿದ್ದರು.

**ಅಥಾಸ್ಮಿನ್ ಭಾರತೇ ವರ್ಷೇ ವಿಷಯಃ ಕುರುಜಾಂಗಲಃ ।**
**ಆರ್ಯಕ್ಷೇತ್ರಸ್ಯ ಮಧ್ಯಸ್ಥಃ ಸರ್ವಧಾನ್ಯಾಕರೋ ಮಹಾನ್ ॥ ೮೫೩ ॥**

ಇತ್ತ ಈ ಭಾರತ ವರ್ಷದಲ್ಲಿ ಆರ್ಯಕ್ಷೇತ್ರದ ಮಧ್ಯದಲ್ಲಿರುವುದೂ ಸಮಸ್ತ ಧಾನ್ಯಗಳ ಉತ್ಪತ್ತಿಸ್ಥಾನವೂ ಆದ ಕುರುಜಾಂಗಲವೆಂಬ ದೊಡ್ಡದಾದ ದೇಶವಿದೆ.

**ತತ್ರ ತಾಂಬೂಲವಲ್ಲ್ಯಾತ್ತಾಃ ಸಫಲಾಃ ಕ್ರಮುಕದ್ರುಮಾಃ ।**
**ಮಂದಾರದಾರಕಾಶ್ಲೇಷಸುಖಂ ಪ್ರಖ್ಯಾಪಯಂತಿ ವಾ ॥ ೮೫೪ ॥**

ಅಲ್ಲಿ ವೀಳ್ಯದೆಲೆಯ ಹಂಬುಗಳಿಂದ ಕೂಡಿರುವುವೂ ಫಲಗಳುಳ್ಳುವೂ ಆದ ಅಡಿಕೆಯ ಮರಗಳು ಮಂದಾರತರುವೆಂಬ ಪುತ್ರನ ಆಲಿಂಗನದಿಂದುಂಟಾಗುವ ಸುಖವನ್ನು ಚೆನ್ನಾಗಿ ಹೇಳುವಂತಿದ್ದುವು.

**ಮಹಾಫಲಪ್ರದಾಸ್ತುಂಗಾ ಬದ್ಧಮೂಲಾ ಮನೋಹರಾಃ ।**
**ಸುರಾಜವದ್ವಿರಾಜಂತೇ ಸತ್ಪತ್ರಾಶ್ಶೋಚಭೂರುಹಾಃ ॥ ೮೫೫ ॥**

ಮಹಾಫಲಗಳನ್ನು ಕೊಡುವುವೂ ಉನ್ನತಗಳೂ ಗಟ್ಟಿಯಾಗಿರುವ ಬುಡವುಳ್ಳುವೂ ಮನೋಹರಗಳೂ ಉತ್ತಮವಾದ ಪತ್ರಗಳುಳ್ಳುವೂ ಆದ ತೆಂಗಿನ ಮರಗಳು, ಉತ್ತಮರಾಜನಂತೆ, ಶೋಭಿಸುತ್ತವೆ.

**ಸದೃಷ್ಟ್ಯಾ ಸೌಕುಮಾರ್ಯೇಣ ಚ್ಛಾಯಯಾ ರಸವತ್ತಯಾ ।**
**ಕದಲ್ಯಃ ಸರ್ವಸೌಂದರ್ಯಾಃ ಸಂಪ್ರೀತ್ಯೈ ರಮಣೀಸಮಾಃ ॥ ೮೫೬ ॥**

ಸುಂದರವಾದ ನೋಟದಿಂದಲೂ ಸುಕುಮಾರತ್ವದಿಂದಲೂ ಕಾಂತಿಯಿಂದಲೂ ರಸಿಕತೆಯಿಂದಲೂ ಸರ್ವಸೌಂದರ್ಯವುಳ್ಳ ಬಾಳೆಯ ಗಿಡಗಳು, ರಮಣಿಯರಿಗೆ ಸಮಾನಗಳಾಗಿ ಪ್ರೀತಿಗೆ ಕಾರಣಗಳಾಗಿದ್ದುವು. ಸಂತೋಷವನ್ನುಂಟುಮಾಡುತ್ತಿದ್ದುವೆಂದು ಭಾವವು.

**ಆಮ್ರಾಃ ಕಮ್ರಾಃ ಫಲೈರ್ನಮ್ರಾಃ ಪಲ್ಲವಪ್ರಸವೋಜ್ಜ್ವಲಾಃ ।**
**ಕೋಕಿಲಾಲಾಪವಾಚಾಲಾ ಲೋಲಾಲಿಕುಲಸಂಕುಲಾಃ ॥ ೮೫೭ ॥**

ಫಲಗಳಿಂದ ಬಗ್ಗಿರುವುವೂ ತಳಿರುಗಳಿಂದಲೂ ಹೂವುಗಳಿಂದಲೂ ಪ್ರಕಾಶಮಾನಗಳೂ ಕೋಗಿಲೆಗಳ ಆಲಾಪಗಳಿಂದ ವಾಚಾಳುಗಳೂ ಚಂಚಲವಾದ ಭ್ರಮರಗಳ ಸಾಲಿನಿಂದ ವ್ಯಾಪ್ತಗಳೂ ಆದ ಮಾವಿನ ಗಿಡಗಳು ಕಾಮೋದ್ದೀಪಕಗಳಾಗಿದ್ದುವು.

**ಸ್ಥೂಲಪಕ್ವಫಲಾಃ ಪ್ರೋದ್ಯದ್ಗಂಧಾಂಧೀಕೃತಷಟ್ಪದಾಃ ।**
**ಪನಸಾಃ ಪ್ರಚುರಾ ರೇಜುರಾಮೂಲಾತ್ಫಲದಾಯಿನಃ ॥ ೮೫೮ ॥**

ಹಣ್ಣಾದ ದೊಡ್ಡ ಫಲಗಳುಳ್ಳುವೂ ವ್ಯಾಪ್ತವಾದ ಪರಿಮಳದಿಂದ ಕುರುಡಾಗಿರುವ ಭ್ರಮರಗಳುಳ್ಳುವೂ ಬುಡದಿಂದ ತುದಿಯವರೆಗೆ ಫಲಗಳನ್ನು ಕೊಡುವುವೂ ಆದ ಹಲಸಿನ ಮರಗಳು ವಿಶೇಷವಾಗಿ ಶೋಭಿಸುತ್ತಿದ್ದುವು.

**ಗುಲ್ಮವಲ್ಲೀದ್ರುಮಾಃ ಸರ್ವೇ ಪ್ರಸೂನಭರಭಂಗುರಾಃ ।**
**ಕ್ರೀಡಾಗಾರನಿಭಾ ಭಾಂತಿ ಕಾಮನಾಮಮಹೀಭುಜಃ ॥ ೮೫೯ ॥**

ಹೂವಿನ ಭಾರದಿಂದ ನಶ್ವರಗಳಾದ ಎಲ್ಲಾ ಪೊದರುಗಳೂ ಬಳ್ಳಿಗಳೂ ಮರಗಳೂ ಕಾಮನೆಂಬ ರಾಜನ ಕ್ರೀಡಾಗೃಹಗಳಿಗೆ ಸಮಾನಗಳಾಗಿ ಪ್ರಕಾಶಿಸುತ್ತವೆ.

**ನಿರ್ಝರಮಿಚ್ಛಿದ್ರಮಚ್ಛಿದ್ರಂ ನಿಃಪಾಷಾಣಂ ನಿರೂಷಣಮ್ ।**
**ನಿರ್ಗಷ್ಟಾಷ್ಟಭಯಂ ಭೂರಿಭೂತಲಂ ಸಫಲಂ ಸದಾ ॥ ೮೬೦ ॥**

ರಂಧ್ರವಿಲ್ಲದಿರುವ ಭೂಮಿಯುಳ್ಳುದೂ ಹೀಳದಿರುವುದೂ ಕಲ್ಲುಗಳಿಲ್ಲದಿರುವುದೂ ಸೌಳಿಲ್ಲದಿರುವುದೂ ಎಂಟು ಪ್ರಕಾರವಾದ ಭಯಗಳಿಲ್ಲದಿರುವುದೂ ಆದ ಭೂತಲವೆಲ್ಲವೂ ಯಾವಾಗಲೂ ಫಲಗಳುಳ್ಳುದಾಗಿದ್ದಿತು.

**ಅಪ್ರಮಾದೋರುಚಾರಿತ್ರಾಃ ಪ್ರಾಯಶ್ಚಿತ್ತಮಿವ ದ್ವಿಜಾಃ ।**
**ನ ದಂಡಭಯಮೃಚ್ಛಂತಿ ಪ್ರಜಾಃ ಸ್ವಸ್ಥಿತಿಪಾಲನಾತ್ ॥ ೮೬೧ ॥**

ಪ್ರಮಾದರಹಿತವಾದ ಉತ್ಕೃಷ್ಟವಾದ ಚಾರಿತ್ರವುಳ್ಳ ಬ್ರಾಹ್ಮಣರು ಪ್ರಾಯಶ್ಚಿತ್ತವನ್ನು ಹೊಂದದಿರುವಂತೆ, ಪ್ರಜೆಗಳು ತಂತಮ್ಮ ಸ್ಥಿತಿಪಾಲನವನ್ನು ಮಾಡುತ್ತಿರುವುದರಿಂದ ಶಿಕ್ಷೆಯ ಭಯವನ್ನು ಹೊಂದುವುದಿಲ್ಲ.

**ಮಹಾಜಲಾಶಯಾ ನಿತ್ಯಮಚ್ಛಾಃ ಸ್ವಚ್ಛಾಂಬುಸಂಭೃತಾಃ ।**
**ನಾನಾಪ್ರಸವಸಂಛನ್ನಾ ಜಹ್ರುರ್ಜ್ಯೋತಿರ್ಜಗಚ್ಛ್ರಿಯಮ್ ॥ ೮೬೨ ॥**

ಯಾವಾಗಲೂ ಸ್ವಚ್ಛವಾಗಿರುವುವೂ ಸ್ವಚ್ಛವಾದ ನೀರಿನಿಂದ ತುಂಬಿರುವುವೂ ವಿವಿಧಪುಷ್ಪಗಳಿಂದ ಆಚ್ಛಾದಿಸಲ್ಪಟ್ಟಿರುವುವೂ ಆದ ಕೆರೆಗಳು ಜ್ಯೋತಿರ್ಲೋಕದ ಶೋಭೆಯನ್ನಪಹರಿಸಿದುವು.

**ಪುಷ್ಪನೇತ್ರಾಃ ಸಮುತ್ತುಂಗಾ ವಿಟಪಾಯತಬಾಹವಃ ।**
**ಭೂರುಹಾ ಭೂಮಿಪಾಯಂತೇ ಸದಾ ಚಾರುಫಲಾವಹಾಃ ॥ ೮೬೩ ॥**

ಪುಷ್ಪಗಳೆಂಬ ನೇತ್ರಗಳುಳ್ಳುವೂ ಉನ್ನತಗಳೂ ಕೊಂಬೆಗಳೆಂಬ ಉದ್ದವಾದ ಭುಜಗಳುಳ್ಳುವೂ ಯಾವಾಗಲೂ ಸುಂದರವಾದ ಫಲಗಳನ್ನು ಹೊತ್ತಿರುವುವೂ ಆದ ವೃಕ್ಷಗಳು ರಾಜರುಗಳಂತಿರುತ್ತವೆ.

**ಪಲ್ಲವೋಷ್ಠ್ಯಃ ಪ್ರಸೂನಾಢ್ಯಾಸ್ತನ್ವಂಗ್ಯೋಲಿಕುಲಾಲಕಾಃ ।**
**ಸತ್ಪತ್ರಾಶ್ಚಿತ್ರವಲ್ಲರ್ಯೋ ರಮಣ್ಯ ಇವ ರೇಜಿರೇ ॥ ೮೬೪ ॥**

ತಳಿರುಗಳೆಂಬ ತುಟಿಗಳುಳ್ಳವೂ ಪುಷ್ಪಗಳಿಂದ ತುಂಬಿರುವುವೂ ಸೂಕ್ಷ್ಮವಾದ ಅಂಗವುಳ್ಳುವೂ ಭ್ರಮರಗಳ ಸಾಲೆಂಬ ಕುರುಳುಕೂದಲುಗಳುಳ್ಳುವೂ ಶ್ರೇಷ್ಠವಾದ ಪತ್ರಗಳುಳ್ಳುವೂ ಆದ ನಾನಾಪ್ರಕಾರವಾದ ಪೂಗೊಂಚಲುಗಳು, ರಮಣಿಯರಂತೆ, ಪ್ರಕಾಶಿಸಿದುವು.

**ಆಮಧ್ಯಂ ರಸಿಕಾ ಮೂಲಾತ್ಪರ್ಯಂತೇ ವಿರಸಾಸ್ತತಃ ।**
**ಪೀಡ್ಯಂತೇ ಸುತರಾಂ ಯಂತ್ರೈರಿಕ್ಷವೋ ಜಿತದುರ್ಜನಾಃ ॥ ೮೬೫ ॥**

ಬುಡದಿಂದ ಮಧ್ಯದವರೆಗೆ ರಸವುಳ್ಳುವೂ ತುದಿಯಲ್ಲಿ ರಸವಿಲ್ಲದಿರುವುವೂ ದುರ್ಜನರನ್ನು ಜಯಿಸಿರುವುವೂ ಆದ ಕಬ್ಬುಗಳು ಯಂತ್ರಗಳಿಂದ ಬಹಳವಾಗಿ ಪೀಡಿಸಲ್ಪಡುತ್ತವೆ. ತಪ್ಪನ್ನು ಮಾಡಿ ಪೀಡೆಗೊಳಗಾಗುವ ಮನುಷ್ಯರು ಆ ದೇಶದಲ್ಲಿರಲಿಲ್ಲವೆಂದೂ ಕಬ್ಬುಗಳು ಮಾತ್ರ ಯಂತ್ರಗಳಿಂದ ಪೀಡಿಸಲ್ಪಡುತ್ತಿದ್ದುವೆಂದೂ ಭಾವವು.

**ಶಬ್ದನಿಷ್ಪಾದನೇ ಲೋಪಃ ಪ್ರಧ್ವಂಸಃ ಪಾಪವೃತ್ತಿಷು ।**
**ದಾಹೋ ವಿರಹಿವರ್ಗೇಷು ವೇಧಃ ಶ್ರವಣಯೋರ್ದ್ವಯೋಃ ॥ ೮೬೬ ॥**

ವ್ಯಾಕರಣ ರೀತಿಯಾಗಿ ಶಬ್ದನಿಷ್ಪತ್ತಿಯನ್ನು ಮಾಡುವುದರಲ್ಲಿ ಲೋಪವೆಂಬುದಿದ್ದಿತು. ಜನರಲ್ಲಿರಲಿಲ್ಲವೆಂದು ಭಾವವು. ಪಾಪಾಚರಣಗಳಲ್ಲಿ ಪ್ರಧ್ವಂಸವಿದ್ದಿತು. ಪಾಪಾಚರಣಗಳು ನಾಶವಾಗುತ್ತಿದ್ದುವೆಂದು ಭಾವವು. ವಿರಹಿಗಳ ಸಮೂಹಗಳಲ್ಲಿ ದಾಹವಿದ್ದಿತು–ಇತರವಿಧವಾದ ಸಂತಾಪವಿರಲಿಲ್ಲವೆಂದು ಭಾವವು. ಚುಚ್ಚುವಿಕೆಯು ಎರಡು ಕಿವಿಗಳಲ್ಲಿದ್ದಿತು.

**ದಂಡೋ ದಾರುಷು ಶಸ್ತ್ರೇಷು ನಿಸ್ತ್ರಿಂಶೋಕ್ತಿಸ್ತಪಸ್ವಿಷು ।**
**ನಿರ್ಧನತ್ವಂ ವಿದಾನತ್ವಂ ಮದಾಪಾಯೇನ ದಂತಿಷು ॥ ೮೬೭ ॥**

ದಂಡವೆಂಬುದು ಮರಗಳಲ್ಲಿದ್ದಿತು. ತೀಕ್ಷ್ಣತೆಯು ಶಾಸ್ತ್ರಗಳಲ್ಲಿದ್ದಿತು. ನಿರ್ಧನತ್ವವು ತಪಸ್ವಿಗಳಲ್ಲಿದ್ದಿತು. ದಾನವಿಲ್ಲದಿರುವಿಕೆಯು ಮದಜಲವಿಲ್ಲದ ಆನೆಗಳಲ್ಲಿದ್ದಿತು. ಅಲ್ಲಿಯ ಜನರಲ್ಲಿ ದಂಡವೂ ತೀಕ್ಷ್ಣತೆಯೂ ನಿರ್ಧನತ್ವವೂ ದಾನರಾಹಿತ್ಯವೂ ಇರಲಿಲ್ಲವೆಂದು ಭಾವವು.

**ಸುರತೇಷು ವಿಲಜ್ಜತ್ವಂ ಕಾಂತಕನ್ಯಾಸು ಯಾಚನಮ್ ।**
**ತಾಪೋನಲೋಪಜೀವೇಷು ಮಾರಣಂ ರಸಖಾದಿಷು ॥ ೮೬೮ ॥**

ಲಜ್ಜೆಯಿಲ್ಲದಿರುವಿಕೆಯು ರತಿಕ್ರೀಡೆಗಳಲ್ಲಿದ್ದಿತು. ಬೇಡುವಿಕೆಯು ಸುಂದರ ಕನ್ಯೆಯರಲ್ಲಿದ್ದಿತು. ವಿವಾಹನಿಮಿತ್ತವಾಗಿ ಸುಂದರಕನ್ಯೆಯರನ್ನು ಕೇಳುತ್ತಿದ್ದರೆಂದು ಭಾವವು. ತಾಪವು ಅಗ್ನಿಕಾಯಿಕಜೀವಗಳಲ್ಲಿದ್ದಿತು. ಮಾರಣವು ದ್ರಾವಕಗಳಲ್ಲಿದ್ದಿತು.

**ನಾಕಾಂಡಮೃತ್ಯವಃ ಸಂತಿ ನಾಪಿ ದುರ್ಮಾರ್ಗಗಾಮಿನಃ ।**
**ಮುಕ್ತ್ವಾ ವಿಗ್ರಹಿಣೋ ಮುಕ್ತಮಾರಣಾಂತಿಕವಿಗ್ರಹಾನ್ ॥ ೮೬೯ ॥**

ಯೋಧರನ್ನು ಬಿಟ್ಟು ಅಲ್ಲಿ ಅಕಾಲಮೃತ್ಯುವುಳ್ಳವರಿಲ್ಲ. ಮಾರಣಾಂತಿಕ ಸಮುದ್ಘಾತದ ಕುಟಿಲಗತಿಯುಳ್ಳವರನ್ನು ಬಿಟ್ಟು ದುರ್ಮಾರ್ಗಗಾಮಿಗಳೂ ಇಲ್ಲ.

**ಪ್ರಾಚ್ಯವೃತ್ತಿವಿಪರ್ಯಾಸಃ ಸಂಯಮಗ್ರಾಹಿಣೋ ಭವೇತ್ ।**
**ನ ಷಟ್ಕರ್ಮಸು ಕಸ್ಯಾಪಿ ವರ್ಣಾನಾಂ ದುರ್ನಯದ್ವಿಷಾಮ್ ॥ ೮೭೦ ॥**

ದುರ್ನಯಗಳನ್ನು ದ್ವೇಷಿಸುವ ಬ್ರಾಹ್ಮಣಾದಿಚತುರ್ವರ್ಣಗಳಲ್ಲಿ ಯಾವನಿಗೂ ಅಸಿಮಸಿ ಮೊದಲಾದ ಷಟ್ಕರ್ಮಗಳಲ್ಲಿ ವ್ಯತ್ಯಾಸವುಂಟಾಗಲಿಲ್ಲ. ಪೂರ್ವದ ವೃತ್ತಿಯ ವ್ಯತ್ಯಾಸವು ಸಂಯಮವನ್ನು ಗ್ರಹಣಮಾಡುವ – ಮುನಿಗಾಗುವುದು.

**ಶಾಲಯೋ ಲೀಲಯಾ ವೃದ್ಧಿಮುಪೇತಾಃ ಸರ್ವತರ್ಪಿಣಃ ।**
**ವಿನಮ್ರಾಃ ಫಲಸಂಪ್ರಾಪ್ತೌ ಭ್ರೇಜುಃ ಸದ್ಭೂಮಿಪೋಪಮಾಃ ॥ ೮೭೧ ॥**

ಲೀಲೆಯಿಂದ ವೃದ್ಧಿಯನ್ನು ಹೊಂದಿರುವುವೂ ಎಲ್ಲರನ್ನೂ ತೃಪ್ತಿಪಡಿಸುವುವೂ ಫಲಪ್ರಾಪ್ತಿ ಕಾಲದಲ್ಲಿ ಬಗ್ಗಿರುವುವೂ ಆದ ಭತ್ತದ ಪೈರುಗಳು ರಾಜರಿಗೆ ಸದೃಶಗಳಾಗಿ ಚಲಿಸಿದುವು.

**ಕ್ಷರಂತಿ ವಾರಿದಾಃ ಕಾಲೇ ದುಹತೇ ಧೇನವಃ ಸದಾ ।**
**ಫಲಂತಿ ಭೂರುಹಾಃ ಸರ್ವೇ ಪುಷ್ಪಂತಿ ಚ ಲತಾಃ ಸದಾ ॥ ೮೭೨ ॥**

ಕಾಲದಲ್ಲಿ ಮೇಘಗಳು ಮಳೆಯನ್ನು ಸುರಿಯುತ್ತವೆ. ಹಸುಗಳು ಯಾವಾಗಲೂ ಹಾಲು ಕರೆಯುತ್ತವೆ. ವೃಕ್ಷಗಳೆಲ್ಲ ಫಲಗಳನ್ನು ಬಿಡುತ್ತವೆ. ಲತೆಗಳು ಯಾವಾಗಲೂ ಹೂವು ಬಿಡುತ್ತವೆ.

**ನಿತ್ಯೋತ್ಸವಾಃ ನಿರಾತಂಕಾ ನಿರ್ಬಾಧಾ ಧನಿಕಾಃ ಪ್ರಜಾಃ ।**
**ನಿರ್ಮದಾ ನಿತ್ಯಕರ್ಮಾಣೋ ನಿಯುಕ್ತಾಃ ಸ್ವಾಸು ವೃತ್ತಿಷು ॥ ೮೭೩ ॥**

ನಿತ್ಯೋತ್ಸವವುಳ್ಳವರೂ ರೋಗವಿಲ್ಲದವರೂ ಬಾಧೆಯಿಲ್ಲದವರೂ ಧನಿಕರೂ ಅಹಂಕಾರವಿಲ್ಲದವರೂ ನಿತ್ಯಕರ್ಮಗಳುಳ್ಳವರೂ ಆದ ಅಲ್ಲಿಯ ಪ್ರಜೆಗಳು ತಂತಮ್ಮ ವೃತ್ತಿಗಳಲ್ಲಿ ನಿಯುಕ್ತರಾಗಿದ್ದರು.

**ಹಸ್ತಿನಾಖ್ಯಾ ಪುರೀ ತಸ್ಯ ಶುಭಾ ನಾಭಿರಿವಾಬಭೌ ।**
**ಭೃಶಂ ದೇಶಸ್ಯ ದೇಹಸ್ಯ ಮಹತೀ ಮಧ್ಯವರ್ತಿನೀ ॥ ೮೭೪ ॥**

ಆ ದೇಶದ ಮಧ್ಯದಲ್ಲಿರುವುದೂ ಶುಭವೂ ದೊಡ್ಡದೂ ಆದ ಹಸ್ತಿನಾಪುರಿಯು, ದೇಹದ ಮಧ್ಯದಲ್ಲಿರುವ ಶುಭವಾದ ದೊಡ್ಡ ಹೊಕ್ಕಳಿನಂತೆ, ಅಧಿಕವಾಗಿ ಪ್ರಕಾಶಿಸುತ್ತಿದ್ದಿತು.

**ಭೂರಿನೀರಭವಾನೇಕಪ್ರಸೂನೋದಿತಭೂತಿಭಿಃ ।**
**ತಿಸೃಭಿಃ ಪರಿಖಾಭಿಸ್ತನ್ನಗರಂ ಪರಿವೇಷ್ಟಿತಮ್ ॥ ೮೭೫ ॥**

ಅಧಿಕವಾದ ನೀರಿನಲ್ಲಿ ಉದ್ಭವಿಸಿದ ಅನೇಕಪುಷ್ಪಗಳಿಂದುಂಟಾದ ಸಂಪತ್ತಿಯುಳ್ಳ ಮೂರು ಕಂದಕಗಳಿಂದ ಆ ನಗರವು ಸುತ್ತಲ್ಪಟ್ಟಿದೆ.

**ವಿಭಾತಿ ಗೋಪುರೋಪೇತದ್ವಾರಾಟ್ಟಾಲಕಪಙ್ಕ್ತಿಭಿಃ ।**
**ವಪ್ರಪ್ರಾಕಾರದುರ್ಲಂಘ್ಯಂ ಮುರಜೈಃ ಕಪಿಶೀರ್ಷಕೈಃ ॥ ೮೭೬ ॥**

**ಇಂದ್ರಕೋಶೈರ್ಬೃಹದ್ಯಂತ್ರೈರ್ಯುಕ್ತಂ ದೇವಪಥಾದಿಭಿಃ ।**
**ಮಹತ್ಕ್ಷುದ್ರಾದಿಸದ್ದ್ವಾರೈರ್ವೀಥಿಭಿರ್ಬಹುಭಿಶ್ಚ ತತ್ ॥ ೮೭೭ ॥**

ಕಂದಕಗಳಿಂದಲೂ ಕೋಟೆಗಳಿಂದಲೂ ದುರ್ಲಂಘ್ಯವಾದ ಆ ನಗರವು ಗೋಪುರಗಳಿಂದ ಕೂಡಿದ ದ್ವಾರಗಳಿಂದಲೂ ಉಪ್ಪರಿಗೆಗಳ ಸಾಲುಗಳಿಂದಲೂ ಕಪಿಗಳ ಕುಲಾವಿಗಳುಳ್ಳ ಮದ್ದಳೆಗಳಿಂದಲೂ ಮಂಚಗಳಿಂದಲೂ ದೊಡ್ಡದಾದ ಯಂತ್ರಗಳಿಂದಲೂ ದೇವಮಾರ್ಗ ಮೊದಲಾದುವುಗಳಿಂದಲೂ ದೊಡ್ಡ ಬಾಗಿಲುಗಳಿಂದಲೂ ಚಿಕ್ಕ ಬಾಗಿಲುಗಳಿಂದಲೂ ಹಲವು ಬೀದಿಗಳಿಂದಲೂ ಕೂಡಿದುದಾಗಿ ಶೋಭಿಸುತ್ತಿದೆ.

**ರಾಜಮಾರ್ಗಾ ವಿರಾಜಂತೇ ಸಾರವಸ್ತುಸಮನ್ವಿತಾಃ ।**
**ಸ್ವರ್ಗಾಪವರ್ಗಮಾರ್ಗಾಭಾಃ ಸಂಚರಚ್ಚಾರುವೃತ್ತಯಃ ॥ ೮೭೮ ॥**

ಸಾರವಸ್ತುಗಳಿಂದ ಕೂಡಿರುವುವೂ ಸಂಚರಿಸುವ ಸದಾಚಾರಿಗಳುಳ್ಳುವೂ ಆದ ರಾಜಮಾರ್ಗಗಳು, ಸ್ವರ್ಗಮೋಕ್ಷಗಳ ಮಾರ್ಗಗಳಿಗೆ ಸಮಾನಗಳಾಗಿ ಪ್ರಕಾಶಿಸುತ್ತಿವೆ.

**ನ ನೇಪಥ್ಯಾದಿಭಿರ್ಭೇಸ್ತದ್ಭುವಾಂ ಸಾರವಸ್ತುಜೈಃ ।**
**ಕುಲಜಾತಿವಯೋವರ್ಣವಚೋಬೋಧಾದಿಭಿರ್ಭಿದಾ ॥ ೮೭೯ ॥**

ಆ ನಗರದಲ್ಲಿ ಜನಿಸಿದವರಿಗೆ ಸಾರವಸ್ತುಗಳಿಂದುಂಟಾದ ಅಲಂಕಾರಾದಿಗಳಿಂದ ಭೇದವಿರಲಿಲ್ಲ–ಎಲ್ಲರೂ ಸಮಾನರಾಗಿದ್ದರು. ಕುಲ, ಜಾತಿ, ವಯಸ್ಸು, ವರ್ಣ, ವಚನ, ಬುದ್ಧಿ ಮೊದಲಾದುವುಗಳಿಂದ ಭೇದವಿದ್ದಿತು.

**ತತ್ಪುರ್ಯಾಂ ಸೌಧಕೂಟಾಗ್ರಬದ್ಧಧ್ವಜನಿರೋಧನಾತ್ ।**
**ನಾತಪಸ್ಯ ಪ್ರವೇಶೋಽಸ್ತಿ ವಿಘನಾರ್ಕದಿನೇಷ್ವಪಿ ॥ ೮೮೦ ॥**

ಆ ನಗರದಲ್ಲಿ ಮಹಡಿಮನೆಗಳ ತುದಿಯಲ್ಲಿ ಕಟ್ಟಲ್ಪಟ್ಟಿರುವ ಬಾವುಟಗಳ ತಡೆಯಿಂದ ಮೇಘಾಚ್ಛಾದನವಿಲ್ಲದ ಸೂರ್ಯನಿರುವ ದಿನಗಳಲ್ಲಿಯೂ ಬಿಸಿಲಿನ ಪ್ರವೇಶವಿಲ್ಲ.

**ಪುಷ್ಪಾಂಗರಾಗಧೂಪಾದಿಸೌಗಂಧ್ಯಾಂಧೀಕೃತಾಲಿಭಿಃ ।**
**ಭ್ರಮದ್ಭಿಸ್ತತ್ರ ಖೇ ಪ್ರಾವೃಟ್ಶಂಕಾ ಗೃಹಶಿಖಂಡಿನಾಮ್ ॥ ೮೮೧ ॥**

ಆ ನಗರದಲ್ಲಿ ಆಕಾಶದಲ್ಲಿ ಸಂಚರಿಸುವುವೂ ಪುಷ್ಪ, ಅಂಗಲೇಪನ, ಧೂಪ ಮೊದಲಾದ ಗಂಧದ್ರವ್ಯಗಳ ಪರಿಮಳದಿಂದ ಕುರುಡಾಗಿರುವುವೂ ಆದ ಭ್ರಮರಗಳಿಂದ ಮನೆಯ ನವಿಲುಗಳಿಗೆ ವರ್ಷಾಕಾಲದ ಸಂದೇಹವುಂಟಾಗುವುದು.

**ರೂಪಲಾವಣ್ಯಕಾಂತ್ಯಾದಿಗುಣೈರ್ಯುವತಿಭಿರ್ಯುತಾಃ ।**
**ಯುವಾನಾಸ್ತೈಶ್ಚ ತಾಸ್ತತ್ರ ತತ್ತೇಽನ್ಯೋನ್ಯಸುಖಾವಹಾಃ ॥ ೮೮೨ ॥**

ಆ ನಗರದಲ್ಲಿ ಯುವಕರು ರೂಪ ಲಾವಣ್ಯ ಕಾಂತಿ ಮೊದಲಾದ ಗುಣಗಳುಳ್ಳ ಯುವತಿಯರೊಡನೆ ಕೂಡಿದ್ದರು. ಯುವಕರು ಅಂತಹ ಯುವತಿಯರೊಡನೆ ಕೂಡಿದ್ದರು. ಅವರು ಪರಸ್ಪರವಾಗಿ ಸುಖವನ್ನುಂಟುಮಾಡುವವರಾಗಿದ್ದರು.

**ಮದನೋದ್ದೀಪನದ್ರವ್ಯೈರ್ನಿಸರ್ಗಪ್ರೇಮತೋ ಗುಣೈಃ ।**
**ಕಾಂತ್ಯಾದಿಭಿಶ್ಚ ದಂಪತ್ಯೋಃ ಪ್ರೀತಿಸ್ತತ್ರ ನಿರಂತರಮ್ ॥ ೮೮೩ ॥**

ಕಾಮೋದ್ದೀಪಕವಸ್ತುಗಳಿಂದಲೂ ಕಾಂತ್ಯಾದಿಗುಣಗಳಿಂದಲೂ ಆ ನಗರದಲ್ಲಿ ದಂಪತಿಗಳಲ್ಲಿ ಸ್ವಾಭಾವಿಕವಾದ ಪ್ರೇಮದಿಂದ ಯಾವಾಗಲೂ ಪ್ರೀತಿಯಿದ್ದಿತು.

**ಅಹಿಂಸಾಲಕ್ಷಣೋ ಧರ್ಮೋ ಯತಯೋ ವಿಗತಸ್ಪೃಹಾಃ ।**
**ದೇವೋಽರ್ಹನ್ನೇವ ನಿರ್ದೋಷಸ್ತತ್ಸರ್ವೇಽಪ್ಯತ್ರ ಧಾರ್ಮಿಕಾಃ ॥ ೮೮೪ ॥**

ಈ ನಗರದಲ್ಲಿ ಅಹಿಂಸಾಲಕ್ಷಣವುಳ್ಳುದೇ ಧರ್ಮವು. ಕಾಂಕ್ಷೆಯಿಲ್ಲದವರೇ ಯತಿಗಳು. ದೋಷವಿಲ್ಲದಿರುವ ಅರ್ಹತ್ಪರಮೇಶ್ವರನೇ ದೇವರು. ಆದುದರಿಂದ ಎಲ್ಲರೂ ಧಾರ್ಮಿಕರಾಗಿದ್ದರು.

**ಯತ್ಕಿಂಚಿತ್ಸಂಚಿತಂ ಪಾಪಂ ಪಂಚಸೂನಾದಿವೃತ್ತಿಭಿಃ ।**
**ಪಾತ್ರದಾನಾದಿಭಿಃ ಸದ್ಯಸ್ತದ್ವಿಲುಂಪಂತ್ಯುಪಾಸಕಾಃ ॥ ೮೮೫ ॥**

ಶ್ರಾವಕರು ಕತ್ತರಿಸುವಿಕೆ, ಸಾರಿಸುವಿಕೆ ಮೊದಲಾದ ಪಂಚಸೂನ–ಪಾಪ ಕಾರ್ಯಗಳಿಂದ ಆರ್ಜಿಸಿದ ಪಾಪವನ್ನು ಪಾತ್ರದಾನಾದಿ ಪುಣ್ಯಕಾರ್ಯಗಳಿಂದ ಆಗಲೇ ನಾಶಮಾಡುತ್ತಾರೆ.

**ನ್ಯಾಯ್ಯೋ ನೃಪಃ ಪ್ರಜಾ ಧರ್ಮ್ಯಾ ನಿರ್ಜಂತು ಕ್ಷೇತ್ರಮನ್ವಹಮ್ ।**
**ಸ್ವಾಧ್ಯಾಯಸ್ತತ್ಪರಂ ತಸ್ಮಾನ್ನ ತ್ಯಜಂತಿ ಯತೀಶ್ವರಾಃ ॥ ೮೮೬ ॥**

ಅಲ್ಲಿಯ ರಾಜನು ನ್ಯಾಯಪರನು. ಪ್ರಜೆಗಳು ಧರ್ಮಪರರು. ಕ್ಷೇತ್ರವು ನಿರ್ಜಂತುಕವಾದುದು. ಪ್ರತಿದಿವಸ ಶಾಸ್ತ್ರಾಧ್ಯಯನವು ನಡೆಯುತ್ತದೆ. ಆದುದರಿಂದ ಯತೀಶ್ವರರು ಆ ನಗರವನ್ನು ಬಿಡುವುದಿಲ್ಲ.

**ನಾನಾಪುಷ್ಪಫಲಾನಮ್ರಮಹೀಜೈರ್ನಂದನೈರ್ವನೈಃ ।**
**ನಂದನಂ ಚ ವಿಜೀಯೇತ ತತ್ಪುರೋಪಾಂತವರ್ತಿಭಿಃ ॥ ೮೮೭ ॥**

ವಿವಿಧಪುಷ್ಪಗಳಿಂದಲೂ ಫಲಗಳಿಂದಲೂ ಚೆನ್ನಾಗಿ ಬಗ್ಗಿರುವ ಮರಗಳುಳ್ಳುವೂ ಆ ನಗರದ ಸಮೀಪದಲ್ಲಿರುವುವೂ ಆದ ನಂದನವನಗಳಿಂದ ಮೇರುವಿನ ನಂದನವನವೂ ಜಯಿಸಲ್ಪಡುವುದು.

**ನಿಷ್ಪನ್ನಸಾರವಸ್ತೂನಾಂ ನಿಃಶೇಷಾಣಾಂ ನಿಜೋದ್ಭವ- ।**
**ಸ್ಥಾನೇಷ್ವನುಪಭೋಗ್ಯತ್ವಾತ್ತದೇವಾಯಾಂತಿ ಸರ್ವತಃ ॥ ೮೮೮ ॥**

**ತತ್ರಸ್ಥೈರೇವ ಭುಜ್ಯಂತೇ ತಾನಿ ದಾನೇನ ಚೇದ್ಬಹಿಃ ।**
**ನಿರ್ಯಾಂತಿ ಯಾಂತು ತತ್ತ್ಯಾದ್ಯಕ್ತ್ಯಾಗಿಭೋಗಿಜನೈಶ್ಚಿರಮ್ ॥ ೮೮೯ ॥**

ಉತ್ಪನ್ನವಾಗುವ ಸಕಲವಸ್ತುಗಳು ತಾವು ಹುಟ್ಟಿದ ಸ್ಥಳಗಳಲ್ಲಿ ಉಪಭೋಗಯೋಗ್ಯಗಳಲ್ಲದಿರುವುದರಿಂದ ಎಲ್ಲಾ ಕಡೆಗಳಿಂದಲೂ ಆ ನಗರವನ್ನೇ ಕುರಿತು ಬರುತ್ತಿದ್ದುವು. ಎಲ್ಲಾ ಕಡೆಗಳಿಂದಲೂ ಭೋಗ್ಯವಸ್ತುಗಳು ಆ ನಗರಕ್ಕೇ ಬರುತ್ತಿದ್ದುವೆಂದು ಭಾವವು. ಆ ವಸ್ತುಗಳನ್ನು ಆ ಪುರನಿವಾಸಿಗಳೇ ಚಿರಕಾಲ ಅನುಭವಿಸುತ್ತಾರೆ. ಅಂತಂತಹ ತ್ಯಾಗಿಜನರಿಂದಲೂ ಭೋಗಿಜನರಿಂದಲೂ ಆ ವಸ್ತುಗಳು ಪಟ್ಟಣದ ಹೊರಕ್ಕೆ ಹೋದರೆ ಹೋಗಲಿ. ದಾನಿಗಳಿಂದ ದಾನಮಾಡಲ್ಪಟ್ಟ ವಸ್ತುಗಳೂ ಭೋಗಿಗಳಿಂದ ಭೋಗಿಸಲ್ಪಟ್ಟು ಹೆಚ್ಚಾದ ವಸ್ತುಗಳೂ ಪಟ್ಟಣದ ಹೊರಕ್ಕೆ ಹೋಗುತ್ತಿದ್ದುವೆಂದು ಭಾವವು.

**ತತ್ರ ತಾದಾತ್ವಿಕಾಃ ಸರ್ವೇ ತನ್ನ ದೋಷಾಯ ಕಲ್ಪತೇ ।**
**ತತ್ಪುಣ್ಯಾತ್ಸರ್ವವಸ್ತೂನಿ ವರ್ಧಂತೇ ಪ್ರತ್ಯಹಂ ಯತಃ ॥ ೮೯೦ ॥**

ಆ ಪುರನಿವಾಸಿಗಳ ಪುಣ್ಯದಿಂದ ಅಲ್ಲಿ ಸಕಲವಸ್ತುಗಳೂ ಪ್ರತಿದಿವಸ ಬೆಳೆಯುತ್ತವೆ. ಎಲ್ಲಾ ವಸ್ತುಗಳೂ ಆಗಾಗಲೇ ಉಂಟಾಗುವುವುಗಳಾಗಿರುವುದರಿಂದ ದೋಷಕ್ಕವಕಾಶವಿಲ್ಲ.

**ಬ್ರಹ್ಮಸ್ಥಾನೋತ್ತರೇ ಭಾಗೇ ಭೂರ್ಯಭೂದ್ರಾಜಮಂದಿರಮ್ ।**
**ಮಹಾಮೇರುನಿಭಂ ಭಾಸ್ವದ್ಭದ್ರಸಾಲಾದಿಭೂಷಿತಮ್ ॥ ೮೯೧ ॥**

ಆ ನಗರದ ಮಧ್ಯಭಾಗದಿಂದ ಉತ್ತರದಲ್ಲಿ, ಪ್ರಕಾಶಮಾನವಾದ ಭದ್ರಸಾಲವನ ಮೊದಲಾದುವುಗಳಿಂದ ಅಲಂಕೃತವಾದ ಮಹಾಮೇರುವಿಗೆ ಸಮಾನವಾದ ದೊಡ್ಡ ರಾಜಭವನವಿದ್ದಿತು.

**ಯಥಾಸ್ಥಾನನಿವೇಶೇನ ಪರಿತೋ ರಾಜಮಂದಿರಮ್ ।**
**ಉದ್ಯಂತೀವೋಜ್ಜ್ವಲದ್ರಮ್ಯಹರ್ಮ್ಯಾಣ್ಯನ್ಯಾನಿ ಚಾಬಭುಃ ॥ ೮೯೨ ॥**

ಆ ರಾಜಭವನದ ಸುತ್ತಲೂ ಉಚಿತಸ್ಥಾನಗಳಲ್ಲಿ ರಚಿತವಾಗಿದ್ದುದರಿಂದ ಪ್ರಕಾಶಮಾನವೂ ಸುಂದರವೂ ಆದ ಬೇರೆ ದೊಡ್ಡ ಮನೆಗಳೂ, ಉದಯಿಸುತ್ತವೋ ಎಂಬಂತೆ, ಪ್ರಕಾಶಿಸುತ್ತಿದ್ದುವು.

ತದ್ರಾಜಧಾನೀನಾಥಸ್ಯ ಕಾಶ್ಯಪಾನ್ವಯಭಾಸ್ವತಃ ।
ಭೂಪಸ್ಯಾಜಿತಸೇನಸ್ಯ ಚಿತ್ತನೇತ್ರಪ್ರಿಯಪ್ರದಾ ॥ ೮೯೩ ॥

ಬಾಲಚಂದ್ರಾದಿಸುಸ್ವಪ್ನದರ್ಶಿನೀ ಪ್ರಿಯದರ್ಶನಾ ।
ಬ್ರಹ್ಮಕಲ್ಪಚ್ಯುತಂ ಸೂನುಂ ವಿಶ್ವಸೇನಮಜೀಜನತ್ ॥ ೮೯೪ ॥

ಆ ರಾಜಧಾನಿಯ ದೊರೆಯೂ ಕಾಶ್ಯಪವಂಶಕ್ಕೆ ಸೂರ್ಯನೂ ಆದ ಅಜಿತಸೇನರಾಜನ ಮನಸ್ಸಿಗೂ ಕಣ್ಣುಗಳಿಗೂ ಪ್ರಿಯಳಾದ ಪ್ರಿಯದರ್ಶನೆಯು ಬಾಲಚಂದ್ರಾದಿ ಶುಭಸ್ವಪ್ನಗಳನ್ನು ನೋಡಿದವಳಾಗಿ ಬ್ರಹ್ಮಕಲ್ಪದಿಂದ ಚ್ಯುತನಾದ ವಿಶ್ವಸೇನನೆಂಬ ಪುತ್ರನನ್ನು ಹಡೆದಳು.

ಗಾಂಧಾರವಿಷಯಖ್ಯಾತಗಾಂಧಾರನಗರೇಶಿನಃ ।
ಅಜಿತಂಜಯಭೂಭರ್ತುರಜಿತಾಯಾಂ ಸುತಾಗತಾ ॥ ೮೯೫ ॥

ಸನತ್ಕುಮಾರಾದ್ಯೈರಾಖ್ಯಾ ವಿಶ್ವಸೇನಪ್ರಿಯಾಭವತ್ ।
ಶ್ರೀಹ್ರೀಧೃತ್ಯಾದಿಸಂಸೇವ್ಯಾ ನಭಸ್ಯೇ ಕೃಷ್ಣಸಪ್ತಮೇ ॥ ೮೯೬ ॥

ದಿನೇ ಭರಣಿನಕ್ಷತ್ರೇ ಯಾಮಿನೀತುರ್ಯಭಾಗಗಾ ।
ಸ್ವಪ್ನಾನ್ ಷೋಡಶ ಸಾದ್ರಾಕ್ಷೀತ್ಸಾಕ್ಷಾತ್ಸತ್ಯಫಲಪ್ರದಾನ್ ॥ ೮೯೭ ॥

ಗಾಂಧಾರದೇಶದಲ್ಲಿ ಪ್ರಖ್ಯಾತವಾದ ಗಾಂಧಾರನಗರದ ದೊರೆಯಾದ ಅಜಿತಂಜಯರಾಜನಿಗೆ ಅಜಿತಾದೇವಿಯಲ್ಲಿ ಸನತ್ಕುಮಾರಕಲ್ಪದಿಂದ ಬಂದು ಹುಟ್ಟಿದ ಐರಾದೇವಿಯೆಂಬ ಪುತ್ರಿಯು ವಿಶ್ವಸೇನನ ಪತ್ನಿಯಾದಳು. ಶ್ರೀಹ್ರೀಧೃತಿ ಕೀರ್ತ್ಯಾದಿ ದೇವಿಯರಿಂದ ಸೇವಿಸಲ್ಪಡತಕ್ಕವಳೂ ಭಾದ್ರಪದಮಾಸದ ಕೃಷ್ಣಪಕ್ಷದ ಸಪ್ತಮೀ ದಿನದಲ್ಲಿ ಭರಣೀನಕ್ಷತ್ರದಲ್ಲಿ ರಾತ್ರಿಯ ನಾಲ್ಕನೆಯ ಭಾಗವನ್ನು ಹೊಂದಿರುವವಳೂ ಆದ ಆ ಐರಾದೇವಿಯು ಸಾಕ್ಷಾತ್ತಾಗಿ ಸತ್ಯಫಲಗಳನ್ನು ಕೊಡುವ ಹದಿನಾರು ಸ್ವಪ್ನಗಳನ್ನು ಕಂಡಳು.

ದರನಿದ್ರಾಸಮುದ್ಭೂತಬೋಧಾ ಶುದ್ಧಸುಧಾಶನಾ ।
ತದನಂತರಮೈಕ್ಷಿಷ್ಟ ಪ್ರವಿಷ್ಟಂ ವದನಂ ಗಜಮ್ ॥ ೮೯೮ ॥

ಸ್ವಲ್ಪನಿದ್ರೆಯಿಂದ ಸ್ವಲ್ಪ ಎಚ್ಚರಿಕೆಯುಳ್ಳವಳಾದ ಐರಾದೇವಿಯು ಶುದ್ಧವಾದ ಅಮೃತವನ್ನು ಭುಂಜಿಸಿದವಳಂತಾಗಿ ತದನಂತರದಲ್ಲಿ ತನ್ನ ಮುಖವನ್ನು ಪ್ರವೇಶಿಸುತ್ತಿರುವ ಆನೆಯನ್ನು ಅರೆನಿದ್ದೆಯಲ್ಲಿ–ಸ್ವಪ್ನದಲ್ಲಿ ಕಂಡಳು.

ತದೈವಾಸೌ ದಿವೋ ದೇವಸ್ತತೋ ಮೇಘರಥಾಭಿಧಃ ।
ತಸ್ಯಾಮವಾತರದ್ಗರ್ಭೇ ಶುಕ್ತೌ ಮುಕ್ತೋದಬಿಂದುವತ್ ॥ ೮೯೯ ॥

ಬಳಿಕ ಆಗಲೇ ಸ್ವರ್ಗದಿಂದ ಈ ಮೇಘರಥದೇವನು, ಮುತ್ತಿನ ಚಿಪ್ಪಿನಲ್ಲಿ ಮುತ್ತಾಗುವ ನೀರಿನ ಬಿಂದುವಿನಂತೆ, ಐರಾದೇವಿಯ ಗರ್ಭದಲ್ಲಿ ಅವತರಿಸಿದನು.

ತದೈವ ಯಾಮಭೇರೀ ಚ ತತ್ಸ್ವಪ್ನಶುಭಸೂಚನೀ ।
ಜಜೃಂಭೇ ಮಧುರಂ ಸುಪ್ತಾಂ ಬೋಧಯಂತೀವ ಸುಂದರೀಮ್ ॥

ಆಗಲೇ ಆ ಸ್ವಪ್ನಗಳ ಶುಭಸೂಚನೆಯನ್ನು ಮಾಡುವ ಜಾವದ ನಗಾರಿಯೂ, ಮಲಗಿರುವ ಆ ಸುಂದರಿಯನ್ನು ಎಚ್ಚರಿಸುತ್ತದೋ ಎಂಬಂತೆ, ಇಂಪಾಗಿ ಮೊಳಗಿತು.

ಪದ್ಮಿನೀವ ತದಾಕರ್ಣ್ಯ ವಿಕಸನ್ಮುಖಪಂಕಜಾ ।
ಶಯ್ಯಾಗೃಹಾತ್ಸಮುತ್ಥಾಯ ಕೃತಮಂಗಲಮಜ್ಜನಾ ॥ ೯೦೧ ॥

ತತ್ಕಾಲೋಚಿತನೇಪಥ್ಯಾ ಕಲ್ಪವಲ್ಲೀವ ಜಂಗಮಾ ।
ಸಿತಾತಪತ್ರವಿತ್ರಾಸಿತಾರ್ಕಬಾಲಾಂಶುಮಾಲಿಕಾ ॥ ೯೦೨ ॥

ಪ್ರಕೀರ್ಣಕಪರಿಕ್ಷೇಪಪ್ರಪಂಚಿತಮಹೋದಯಾ ।
ಜನೈಃ ಕತಿಪಯೈರೇವ ಪ್ರತ್ಯಾಸನ್ನೈಃ ಪರಿಷ್ಕೃತಾ ॥ ೯೦೩ ॥

ಸಾವಿಶಚ್ಚಂದ್ರರೇಖಾಸೌ ಸಭಾಮಿವ ವಿಭಾವರೀಮ್ ।
ಕೃತೋಪಚಾರವಿನಯಾಂ ತಾಮರ್ಧಾಸನಮಾಪಯತ್ ॥ ೯೦೪ ॥

ಆಗ ಆ ಶಬ್ದವನ್ನು ಕೇಳಿ ತಾವರೆಯ ಬಳ್ಳಿಯಂತೆ ಅರಳಿದ ಮುಖಕಮಲವುಳ್ಳವಳೂ ಶಯನಗೃಹದಿಂದೆದ್ದು ಮಂಗಲಸ್ನಾನವುಳ್ಳವಳೂ ಆ ಕಾಲಕ್ಕೆ ಯೋಗ್ಯವಾದ ಅಲಂಕಾರವುಳ್ಳವಳೂ ಸಂಚರಿಸುವ ಕಲ್ಪಲತೆಯಂತಿರುವವಳೂ ಬೆಳ್ಗೊಡೆಯಿಂದ ಹೋಗಲಾಡಿಸಲ್ಪಟ್ಟ ಸೂರ್ಯನ ಎಳೆಬಿಸಿಲಿನಮಾಲೆಯುಳ್ಳವಳೂ ಸುತ್ತಲಿರುವ ಚಾಮರಗಳಿಂದ ವಿಸ್ತರಿಸಲ್ಪಟ್ಟ ಮಹಾವಿಭೂತಿಯುಳ್ಳವಳೂ ಸಮೀಪದಲ್ಲಿರುವ ಕೆಲವೇ ಜನರಿಂದ ಆವರಿಸಲ್ಪಟ್ಟವಳೂ ಆದ ಆ ಐರಾದೇವಿಯು, ಚಂದ್ರರೇಖೆಯು ರಾತ್ರಿಯನ್ನು ಪ್ರವೇಶಿಸುವಂತೆ, ರಾಜಸಭೆಯನ್ನು ಪ್ರವೇಶಿಸಿದಳು. ಉಪಚಾರವನ್ನೂ ವಿನಯವನ್ನೂ ಮಾಡಿದ ಆಕೆಯನ್ನು ದೊರೆಯು ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡನು.

ನೃಪಸ್ಯಾಭಿನಿವೇದ್ಯಾತ್ಮದೃಷ್ಟಸ್ವಪ್ನಾವಲೀಂ ಕ್ರಮಾತ್ ।
ತತ್ಫಲಾನ್ಯಪ್ಯಬೋಧಿಷ್ಟ ರಾಜ್ಞಃ ಸಾವಧಿಲೋಚನಾತ್ ॥ ೯೦೫ ॥

ಆಕೆಯು ತಾನು ಕಂಡ ಕನಸುಗಳನ್ನು ಒಂದೊಂದಾಗಿ ರಾಜನಿಗೆ ತಿಳಿಸಿ ಅವಧಿಜ್ಞಾನವೆಂಬ ನೇತ್ರವುಳ್ಳ ರಾಜನಿಂದ ಆ ಸ್ವಪ್ನಗಳ ಫಲಗಳನ್ನೂ ತಿಳಿದಳು.

ಸ್ವರ್ಗಾತ್ತದೈವ ದೇವೇಂದ್ರಾಃ ಸಹ ದೇವೈಶ್ಚತುರ್ವಿಧೈಃ ।
ಸ್ವರ್ಗಾವತಾರಕಲ್ಯಾಣಂ ಸಂಪ್ರಾಪ್ಯ ಸಮುಪಾದಯನ್ ॥ ೯೦೬ ॥

ಆಗಲೇ ದೇವೇಂದ್ರರು ಸ್ವರ್ಗದಿಂದ ಚತುರ್ವಿಧಾಮರರೊಡನೆ ರಾಜಭವನವನ್ನು ಹೊಂದಿ ಸ್ವರ್ಗಾವತರಣಕಲ್ಯಾಣವನ್ನು ನೆರವೇರಿಸಿದರು.

ತ್ರಿವಿಷ್ಟಪೇಶ್ವರೇ ಗರ್ಭೇ ವರ್ಧಮಾನೇ ಮಹೋದಯೈಃ ।
ಅಭ್ಯೇತ್ಯ ನವಮಂ ಮಾಸಂ ಮಾತಾ ತ್ರಿಜಗದೀಶಿತುಃ ॥ ೯೦೭ ॥

ಮಾಸಾನ್ಪಂಚದಶ ಪ್ರಾಪ್ತರತ್ನವೃಷ್ಟ್ಯಮರಾರ್ಚನಾ ।
ಶುಚೌ ಕೃಷ್ಣಚತುರ್ದಶ್ಯಾಂ ಯಾಮ್ಯಯೋಗೇ ನಿಶಾತ್ಯಯೇ ॥ ೯೦೮ ॥

ನಂದನಂ ಜಗದಾನಂದಸಂದೋಹಮಿವ ಸುಂದರಮ್ ।
ಅಸೂತಾಮಲಸದ್ಬೋಧತ್ರಿತಯೋಜ್ಜ್ವಲಲೋಚನಮ್ ॥ ೯೦೯ ॥

ತ್ರಿಲೋಕಾಧಿಪತಿಯು ಗರ್ಭದಲ್ಲಿ ಮಹೋದಯಗಳಿಂದ ಬೆಳೆಯುತ್ತಿರಲು ಆ ತ್ರಿಜಗತ್ಪತಿಯ ತಾಯಿಯಾದ ಐರಾದೇವಿಯು ಹದಿನೈದು ತಿಂಗಳುಗಳವರೆಗೆ ರತ್ನವೃಷ್ಟಿಯನ್ನೂ ದೇವರ್ಕಳ ಪೂಜೆಯನ್ನೂ ಹೊಂದಿದವಳಾಗಿ ಒಂಬತ್ತನೆಯ ತಿಂಗಳನ್ನು ಹೊಂದಿ ಜ್ಯೇಷ್ಠಮಾಸದಲ್ಲಿ ಕೃಷ್ಣಪಕ್ಷದ ಚತುರ್ದಶೀತಿಥಿಯಲ್ಲಿ ಭರಣಿನಕ್ಷತ್ರಯೋಗದಲ್ಲಿ ರಾತ್ರಿಯ ಅವಸಾನದಲ್ಲಿ–ಬೆಳಗಿನ ಜಾವದಲ್ಲಿ ಜಗತ್ತಿನ ಆನಂದದ ಸಮೂಹವೋ ಎಂಬಂತಿರುವವನೂ ಸುಂದರನೂ ನಿರ್ಮಲವೂ ಶ್ರೇಷ್ಠವೂ ಆದ ಮತಿಶ್ರುತಾವಧಿಜ್ಞಾನವೆಂಬ ನೇತ್ರವುಳ್ಳವನೂ ಆದ ಪುತ್ರನನ್ನು ಹಡೆದಳು.

ಶಂಖಭೇರೀಗಜಾರಾತಿಘಂಟಾರಾವಾವಬೋಧಿತಾಃ ।
ಜೈನಂ ಜನ್ಮೋತ್ಸವಂ ದೇವಾಃ ಸಂಭೂಯ ಸಮವರ್ಧಯನ್॥ ೯೧೦ ॥

ಶಂಖ ಭೇರೀ ಸಿಂಹ ಘಂಟಾಧ್ವನಿಗಳಿಂದ ಎಚ್ಚರಿಸಲ್ಪಟ್ಟ ದೇವರ್ಕಳು ಸೇರಿ ಜಿನನ ಸಂಬಂಧವಾದ ಜನ್ಮೋತ್ಸವವನ್ನು ಬೆಳೆಯಿಸಿದರು.

ತದಾ ಶಚೀಮಹಾದೇವೀ ಪ್ರದ್ಯೋತಿತದಿಗಂತರಾ ।
ಗರ್ಭಗೇಹಂ ಪ್ರವಿಶ್ಯೋಚ್ಚೈರ್ಮಾಯಯಾನಿದ್ರಾವಶೀಕೃತಾ ॥ ೯೧೧ ॥

ಜಿನೇಂದ್ರಜನನೀಮ್ಯೈರಾಂ ಕುಮಾರಸಹಿತಾಂ ಸತೀಮ್ ।
ಪರೀತ್ಯ ತ್ರಿಃ ಪ್ರಣಮ್ಯಾರ್ಚ್ಯಾಂ ಮಾಯಾವಿಕೃತಬಾಲಕಮ್ ॥ ೯೧೨ ॥

ತ್ರಿಲೋಕಮಾತುಃ ಪುರತೋ ನಿವೇಶ್ಯ ಪರಮೇಶ್ವರಮ್ ।
ಕುಮಾರವರಮಾದಾಯ ವಿಶ್ವಾಮರನಮಸ್ಕೃತಮ್ ॥ ೯೧೩ ॥

ಮೃದುಬಾಹುಯುಗಾ ನೀತ್ವಾ ಸ್ವಪತೇರಕರೋತ್ಕರೇ ।
ಐರಾವತಗಜಸ್ಕಂಧಮಾರೋಪ್ಯ ಮರುತಾಂ ಪತಿಃ ॥ ೯೧೪ ॥

ಪುರೇವ ಪುರುದೇವಂ ತಂ ಸುರಾದ್ರೇರ್ಮಸ್ತಕಾರ್ಪಿತಮ್ ।
ಅಭಿಷಿಚ್ಯಾಂಬುಭಿಃ ಕ್ಷೀರಮಹಾಂಭೋನಿಧಿಸಂಭವೈಃ ॥ ೯೧೫ ॥

ಪ್ರಸಾಧನವಿಶೇಷಾಣಾಮಪಿ ಚೈಕಂ ಪ್ರಸಾಧನಮ್ ।
ಆಚಾರಪಾಲನಾಯೈವ ಭೂಷಯಿತ್ವಾ ವಿಭೂಷಣೈಃ ॥ ೯೧೬ ॥

ಸರ್ವಶಾಂತಿಪ್ರದೋ ದೇವಃ ಶಾಂತಿರಿತ್ಯಸ್ತು ನಾಮಭಾಕ್ ।
ಇತಿ ತಸ್ಯಾಭಿಷೇಕಾಂತೇ ನಾಮಾಸೌ ನಿರವರ್ತಯತ್ ॥ ೯೧೭ ॥

ಆಗ ಶಚೀಮಹಾದೇವಿಯು ದಿಕ್ಕಿದೇಶಗಳನ್ನು ಪ್ರಕಾಶಪಡಿಸುವವಳಾಗಿ ಗರ್ಭಗೃಹವನ್ನು ಪ್ರವೇಶಿಸಿ ಚೆನ್ನಾಗಿ ಮಾಯಾನಿದ್ರೆಯಿಂದ ವಶೀಕೃತಳೂ ಜಿನೇಶ್ವರ ಜನನಿಯೂ ಪುತ್ರಸಹಿತಳೂ ಸಾಧ್ವಿಯೂ ಪೂಜ್ಯಳೂ ಆದ ಐರಾದೇವಿಯನ್ನು ಮೂರು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಮಾಯೆಯಿಂದ ನಿರ್ಮಿತನಾದ ಬಾಲಕನನ್ನು ಆ ತ್ರಿಜಗನ್ಮಾತೆಯ ಮುಂದಿಟ್ಟು ಸಮಸ್ತದೇವರ್ಕಳಿಂದ ನಮಸ್ಕರಿ ಸಲ್ಪಟ್ಟವನೂ ಕುಮಾರರಲ್ಲಿ ಶ್ರೇಷ್ಠನೂ ಆದ ಆ ಜಿನಬಾಲಕನನ್ನು ತೆಗೆದುಕೊಂಡು ಮೃದುವಾದ ಭುಜಯುಗ್ಮವುಳ್ಳವಳಾಗಿ ಕೊಂಡುಹೋಗಿ ತನ್ನ ಪತಿಯ ಕೈಯಲ್ಲಿ ಕೊಟ್ಟಳು. ದೇವೇಂದ್ರನು ಮೊದಲು ಪುರುಪರಮೇಶ್ವರನಿಗೆ ಮಾಡಿದಂತೆ ಆ ಸ್ವಾಮಿಯನ್ನು ಐರಾವತಗಜದ ಹೆಗಲನ್ನು ಹತ್ತಿಸಿ ಮಹಾಮೇರುಪರ್ವತಕ್ಕೆ ಕರೆದು ಕೊಂಡು ಹೋಗಿ ಅದರ ತುದಿಯಲ್ಲಿ–ಪಾಂಡುಕಶಿಲೆಯಲ್ಲಿ ಕುಳ್ಳಿರಿಸಿ ಕ್ಷೀರಮಹಾ ಸಾಗರದ ಜಲಗಳಿಂದ ಅಭಿಷೇಕವನ್ನು ಮಾಡಿ ಅಲಂಕಾರವಿಶೇಷಗಳಿಗೂ ಮುಖ್ಯಾ ಲಂಕಾರನಾದ ಆ ಜಿನಬಾಲಕನನ್ನು ಶಿಷ್ಟಾಚಾರರಕ್ಷಣೆಗೋಸ್ಕರವೇ ಆಭರಣಗಳಿಂದ ಅಲಂಕರಿಸಿ ''ಎಲ್ಲರಿಗೂ ಶಾಂತಿಯನ್ನೀಯುವ ಸ್ವಾಮಿಯು ಶಾಂತಿಯೆಂಬ ಹೆಸರುಳ್ಳವನಾಗಿರಲಿ'' ಎಂದು ಜನ್ಮಾಭಿಷೇಕದ ನಂತರದಲ್ಲಿ ಈ ದೇವೇಂದ್ರನು ಆ ಸ್ವಾಮಿಗೆ ನಾಮಕರಣವನ್ನು ಮಾಡಿದನು.

ಪ್ರೀತ್ಯಾ ಸುರವರ್ಯೈಃ ಸಾರ್ಧಂ ಮಂದರಾದೇತ್ಯ ಮಂದಿರಮ್ ।
ಜನನ್ಯಾಃ ಸರ್ವಮಾವೇದ್ಯ ಜಗದೀಶಂ ಸಮಾರ್ಪಯತ್ ॥ ೯೧೮ ॥

ಅನೃತ್ಯಚ್ಚೋದಿತಾನಂದೋ ಬಹುಭಾವರಸೋದಯಃ ।
ಸಮ್ಮದಶ್ಚೇದಮರ್ಯಾದಃ ಸರಾಗಂ ಕಂ ನ ನರ್ತಯೇತ್ ॥ ೯೧೯ ॥

ದೇವೇಂದ್ರನು ಶ್ರೇಷ್ಠದೇವರ್ಕಳೊಡನೆ ಮಹಾಮೇರುವಿನಿಂದ ರಾಜಭವನಕ್ಕೆ ಬಂದು ಜಿನಜನನಿಗೆ ಎಲ್ಲವನ್ನೂ ತಿಳಿಸಿ ಜಗತ್ಪತಿಯನ್ನು ಸಮರ್ಪಿಸಿದನು. ಆನಂದೋತ್ಪತ್ತಿಯುಳ್ಳವನೂ ವಿಶೇಷವಾದ ಭಾವಗಳ ಮತ್ತು ರಸಗಳ ಆವಿರ್ಭಾವ ವುಳ್ಳವನೂ ಆಗಿ ನರ್ತನವನ್ನೂ ಮಾಡಿದನು. ಮೇರೆಮೀರಿದ ಸಂತೋಷ ವುಂಟಾದರೆ ಅದು ಅನುರಾಗವುಳ್ಳ ಯಾವನನ್ನು ತಾನೆ ಕುಣಿಸುವುದಿಲ್ಲ ?

ಲೋಕಪಾಲಾಂಸ್ತ್ರಿಲೋಕಾನಾಂ ಪಾಲಕಸ್ಯ ಮಹಾತ್ಮನಃ ।
ಬಾಲಕಸ್ಯಾಸ್ಯ ಕಲ್ಪೇಶಃ ಪಾಲಕಾನ್ಸರ್ಯಕಲ್ಪಯತ್ ॥ ೯೨೦ ॥

ಕಲ್ಪಾಧಿಪತಿ–ದೇವೇಂದ್ರನು ಮೂರು ಲೋಕಗಳ ರಕ್ಷಕನೂ ಮಹಾತ್ಮನೂ ಆದ ಈ ಬಾಲಕನ ರಕ್ಷಕರನ್ನಾಗಿ ಲೋಕಪಾಲಕರನ್ನು ಗೊತ್ತುಮಾಡಿದನು.

ಇತಿ ದ್ವಿತೀಯಕಲ್ಯಾಣಸಾಕಲ್ಯಸಮನಂತರಮ್ ।
ಸಶಕ್ರಾಃ ಸರ್ವಗೀರ್ವಾಣಾಃ ಸ್ವಂ ಸ್ವಮೋಕಃ ಸಮಂ ಯಯುಃ॥ ೯೨೧ ॥

ಈ ರೀತಿಯಾಗಿ ಎರಡನೆಯದಾದ ಜನ್ಮಾಭಿಷೇಕಕಲ್ಯಾಣದ ನಂತರ ದೇವೇಂದ್ರಸಹಿತರಾದ ಸಕಲದೇವರ್ಕಳು ಒಟ್ಟಿಗೆ ತಂತಮ್ಮ ನಿವಾಸಗಳಿಗೆ ಹೊರಟು ಹೋದರು.

ಚತುರ್ವಿಭಕ್ತಪಲ್ಯೋಪಮತ್ರ್ಯಂಶೋನತ್ರಿಸಾಗರೇ ।
ಧರ್ಮತೀರ್ಥಸ್ಯ ಸಂತಾನೇ ಪಲ್ಯತುರ್ಯಾಂಶಶೇಷಿತೇ ॥ ೯೨೨ ॥

ವ್ಯುಚ್ಛಿನ್ನೇ ಮುಕ್ತಿಸನ್ಮಾರ್ಗೇ ತದಭ್ಯಂತರಜೀವಿತಃ ।
ಶಾಂತಿಃ ಸಮುದಪಾದ್ಯಾನಮನ್ನರಾಮರನಾಯಕಃ ॥ ೯೨೩ ॥

ಲಕ್ಷಾ ಸಮಾಯುಶ್ಚತ್ವಾರಿಂಶಚ್ಚಾಪಾಂಗಃ ಸುವರ್ಣರುಕ್ ।
ಧ್ವಜತೋರಣಸೂರ್ಯೇಂದುಶಂಖಚಕ್ರಾದಿಲಕ್ಷಣಃ ॥ ೯೨೪ ॥

ಧರ್ಮತೀರ್ಥಂಕರರ ಪರಂಪರೆಯಲ್ಲಿ ಪಲ್ಯೋಪಮಕಾಲದ ನಾಲ್ಕು ಭಾಗಗಳಲ್ಲಿ ಮೂರು ಭಾಗಗಳು ಕಡಿಮೆಯಾದ ಮೂರು ಸಾಗರೋಪಮ ಕಾಲದಲ್ಲಿ ಪಲ್ಯೋಪಮಕಾಲದ ನಾಲ್ಕನೆಯ ಭಾಗವುಳಿದಾಗ ಮುಕ್ತಿಸನ್ಮಾರ್ಗವು ನಾಶವಾಗಿರುತ್ತಿರಲು ಆ ಕಾಲಪರಿಮಿತಿಯೊಳಗೆ ಜೀವಿಸಿದವನೂ ನಮಸ್ಕರಿಸು ತ್ತಿರುವ ಮನುಷ್ಯರ ಮತ್ತು ದೇವರ್ಕಳ ಸ್ವಾಮಿಯೂ ಒಂದು ಲಕ್ಷ ವರ್ಷಾಯುಷ್ಯ ವುಳ್ಳವನೂ ನಾಲ್ವತ್ತು ಬಿಲ್ಲುಗಳಷ್ಟು ಎತ್ತರವಾದ ದೇಹವುಳ್ಳವನೂ ಬಂಗಾರದ ಬಣ್ಣವುಳ್ಳವನೂ ಧ್ವಜ, ತೋರಣ, ಸೂರ್ಯ, ಚಂದ್ರ, ಶಂಖ, ಚಕ್ರ ಮೊದಲಾದ ಲಕ್ಷಣಗಳುಳ್ಳವನೂ ಆದ ಶಾಂತಿತೀರ್ಥಂಕರನು ಹುಟ್ಟಿದನು.

ಪುಣ್ಯಾದ್ದೃಢರಥೋ ದೀರ್ಘಮನುಭೂಯಾಹಮಿಂದ್ರತಾಮ್ ।
ವಿಶ್ವಸೇನಾದ್ಯಶಸ್ವತ್ಯಾಂ ಸುತಶ್ಚಕ್ರಾಯುಧೋಭವತ್ ॥ ೯೨೫ ॥

ಅತ್ತ ದೃಢರಥನು ಪುಣ್ಯದಿಂದ ಬಹುಕಾಲದವರೆಗೆ ಅಹಮಿಂದ್ರತ್ವವನ್ನನುಭವಿಸಿ ವಿಶ್ವಸೇನಮಹಾರಾಜನಿಗೆ ಯಶಸ್ವತೀದೇವಿಯಲ್ಲಿ ಚಕ್ರಾಯುಧನೆಂಬ ಪುತ್ರನಾಗಿ ಜನಿಸಿದನು.

ಮಹಾಮಣಿರಿವಾಂಭೋಧೌ ಗುಣಾನಾಂ ವಾ ಗಣೋ ಮುನೌ ।
ತತ್ರ ಶಾಂತಿರಗಾದ್ವೃದ್ಧಿಂ ಪ್ರಮದೋ ವೋದಿತೋದಿತೇ ॥ ೯೨೬ ॥

ಸಮುದ್ರದಲ್ಲಿ ಮಹಾರತ್ನದಂತೆಯೂ ಮುನಿಯಲ್ಲಿ ಗುಣಗಳ ಸಮೂಹ ದಂತೆಯೂ ಮಹಾಭ್ಯುದಯವುಳ್ಳ ಆ ಹಸ್ತಿನಾಪುರದಲ್ಲಿ, ಸಂತೋಷವು ಹೆಚ್ಚು ವಂತೆ, ಶಾಂತೀಶ್ವರನು ವೃದ್ಧಿಯನ್ನು ಹೊಂದಿದನು.

ವರ್ಧಂತೇ ಸ್ಮ ಗುಣಾಸ್ತಸ್ಮಿನ್ ಸ್ಪರ್ಧೇನಾವಯವೈಃ ಕ್ರಮಾತ್ ।
ತಥಾ ವಿಧಾಯ ಸೋದರ್ಯಂ ಕೀರ್ತಿರ್ಲಕ್ಷ್ಮೀಃ ಸರಸ್ವತೀ ॥ ೯೨೭ ॥

ಆ ಶಾಂತೀಶ್ವರನಲ್ಲಿ ಗುಣಗಳು ಅವಯವಗಳೊಡನೆ ಸ್ಪರ್ಧೆಯಿಂದ ಕ್ರಮದಿಂದ ವೃದ್ಧಿಹೊಂದಿದುವು. ಹಾಗೆಯೇ ಕೀರ್ತಿಯೂ ಲಕ್ಷ್ಮಿಯೂ ಸರಸ್ವತಿಯೂ ಸಹೋದರಿಯರ ಭಾವವನ್ನು ಹೊಂದಿ ವೃದ್ಧಿಹೊಂದಿದರು. ಗುಣಗಳೂ ಅವಯವ ಗಳೂ ಕೀರ್ತಿಸಂಪತ್ತಿಜ್ಞಾನಗಳೂ ವೃದ್ಧಿಯಾದುವೆಂದು ಭಾವವು.

ಅಭಾತ್ತಸ್ಯಾತ್ತಸೌಂದರ್ಯಂ ರೂಪಮಾಪೂರ್ಣಯೌವನೇ ।
ವಿಧೋರ್ವಿಧೂತವೈಕಲ್ಯಮಿವ ಪರ್ವಣಿ ಮಂಡಲಮ್ ॥ ೯೨೮ ॥

ಪೌರ್ಣಮಿಯಲ್ಲಿ ಕಲಾನ್ಯೂನತೆಯನ್ನು ದೂರಮಾಡಿರುವ–ಪೂರ್ಣವಾದ ಚಂದ್ರಮಂಡಲವು ಪ್ರಕಾಶಿಸುವಂತೆ, ಪೂರ್ಣಯೌವನದಲ್ಲಿ ಆ ಶಾಂತೀಶ್ವರನ ಸೌಂದರ್ಯವಿಶಿಷ್ಟವಾದ ರೂಪವು ಪ್ರಕಾಶಿಸಿತು.

ಮೃದವಸ್ತನವಃ ಸ್ನಿಗ್ಧಾಃ ಕೃಷ್ಣಾಃ ಕೇಶಾಃ ಸುಕುಂಚಿತಾಃ ।
ಪ್ರಾಂಚಿತಾಶ್ಚಂಚರೀಕಾಭಾಃ ಶುಭಾಸ್ತಸ್ಯಮಸ್ತಕಸ್ಥಿತಾಃ ॥ ೯೨೯ ॥

ಆ ಶಾಂತೀಶ್ವರನ ಮಸ್ತಕದಲ್ಲಿದ್ದ ಶುಭವಾದ ಕೂದಲುಗಳು ಕೋಮಲಗಳೂ ಸೂಕ್ಷ್ಮಗಳೂ ಹೊಳಪಾಗಿರುವುವೂ ಕಪ್ಪಾಗಿರುವುವೂ ಸುರುಳಿಯಾಗಿರುವುವೂ ವಿಸ್ತೃತಗಳೂ ಭ್ರಮರಗಳಿಗೆ ಸಮಾನಗಳೂ ಆಗಿದ್ದುವು.

ಶಿರೋ ವಿರಾಜತೇ ಸ್ಮಾಸ್ಯ ಶಿಖರಂ ವಾ ಮರುನ್ಮರೋಃ ।
ಲಲಾಟಾತ್ಪಟ್ಟಭಾಜೋಸ್ಮಾದಹಮೇವೋಪರೀತಿ ವಾ ॥ ೯೩೦ ॥

ದೇವರ್ಕಳ ಪರ್ವತವಾದ ಮೇರುವಿನ ಶಿಖರದಂತಿರುವ ಈ ಶಾಂತೀಶ್ವರನ ಮಸ್ತಕವು ''ಪಟ್ಟವನ್ನು ಹೊಂದಿರುವ ಹಣೆಗಿಂತ ನಾನೇ ಮೇಲೆ'' ಎನ್ನುವಂತೆ ಪ್ರಕಾಶಿಸಿತು.

**ಲಕ್ಷ್ಮೀರ್ಲಲಾಟಪಟ್ಟೇಸ್ಮಿಂಸ್ತಸ್ಯ ಪಟ್ಟದ್ವಯಾರ್ಚಿತಾ ।**
**ರಾಜತಾಮಿತಿ ವಾ ತುಂಗಂ ವಿಸ್ತೀರ್ಣಂ ಚ ವ್ಯಧಾದ್ವಿಧಿಃ ॥ ೯೩೧ ॥**

''ರಾಜ್ಯಪಟ್ಟದಿಂದಲೂ ಧರ್ಮರಾಜ್ಯಪಟ್ಟದಿಂದಲೂ ಪೂಜಿತಳಾದ ಲಕ್ಷ್ಮಿಯು ಆ ಶಾಂತೀಶ್ವರನ ಈ ಲಲಾಟಪಟ್ಟದಲ್ಲಿ ಪ್ರಕಾಶಿಸಲಿ'' ಹೀಗೋ ಎಂಬಂತೆ ವಿಧಿಯು ಅವನ ಹಣೆಯನ್ನು ಉನ್ನತವನ್ನಾಗಿಯೂ ವಿಶಾಲವನ್ನಾಗಿಯೂ ಮಾಡಿದನು.

**ಸುರೂಪೇ ಕುಟಿಲೇ ವಾಸ್ಯ ಭ್ರುವೌ ವೇಶ್ಯೇ ವಿರೇಜತುಃ ।**
**ಕುಟಿಲೇತಿ ನ ರೇಖಾ ಕಿಂ ಪೀಯೂಷಾಂಶೋರ್ವಿರಾಜತೇ ॥ ೯೩೨ ॥**

ಈ ಶಾಂತೀಶ್ವರನ ಸುಂದರವೂ ವಕ್ರವೂ ಆದ ಹುಬ್ಬುಗಳು, ಸುಂದರಿಯರೂ ವಕ್ರರೂ ಆದ ಈರ್ವರು ವೇಶ್ಯೆಯರಂತೆ, ಪ್ರಕಾಶಿಸಿದುವು. ಚಂದ್ರನ ರೇಖೆಯು ವಕ್ರವಾಗಿದ್ದರೂ ಪ್ರಕಾಶಿಸುವುದಿಲ್ಲವೇ ?

**ಆಧಿಕ್ಯಂ ಚಕ್ಷುಷೋಃ ಪ್ರಾಹುಃ ಶುಭಾವಯವಚಿಂತಕಾಃ ।**
**ವೀಕ್ಷ್ಯ ತಚ್ಚಕ್ಷುಷೀ ವೃತ್ತಮಿತೀಯಮನಯೋಃ ಸ್ತುತಿಃ ॥ ೯೩೩ ॥**

ಶುಭಾವಯವಗಳನ್ನು ಚಿಂತಿಸುವವರು ನೇತ್ರಗಳಿಗೆ ಆಧಿಕ್ಯವನ್ನು ಹೇಳುತ್ತಾರೆ. ಈ ನೇತ್ರಗಳ ಈ ಸ್ತುತಿಯು ಆ ಶಾಂತೀಶ್ವರನ ನೇತ್ರಗಳನ್ನು ನೋಡಿ ಹೀಗೆ ಉಂಟಾಗಿರುವುದು.

**ಕರ್ಣೌ ತಸ್ಯ ನ ವರ್ಣ್ಯೇತೇ ನಿಃಶೇಷಶ್ರುತಪಾತ್ರತಾಮ್ ।**
**ಯಾತೌ ಚೇದ್ದುರ್ಲಭಂ ತತ್ತು ಶೋಭಾನ್ಯತ್ರಾಪಿ ವಿದ್ಯತೇ ॥ ೯೩೪ ॥**

ಆ ಶಾಂತೀಶ್ವರನ ಕಿವಿಗಳು ಸಕಲಶಾಸ್ತ್ರಗಳ ಪಾತ್ರತೆಯನ್ನು ಹೊಂದಿದುವಾದರೆ ವರ್ಣಿಸಲ್ಪಡುವುದಿಲ್ಲ. ಅದೇ ವರ್ಣನೆಯಾಗಿರುವುದೆಂದು ಭಾವವು. ಸಕಲಶಾಸ್ತ್ರ ಪಾತ್ರತ್ವವು ದುರ್ಲಭವಾದುದು. ಶೋಭೆಯಾದರೆ ಬೇರೆ ಕಡೆಯಲ್ಲಿಯೂ ಇರುತ್ತದೆ.

**ಅಯಂ ವಿನಿರ್ಜಿತಾಶೇಷಂ ಮೋಹಮಲ್ಲಂ ವಿಜೇಷ್ಯತೇ ।**
**ಭಾತ್ವತ್ರೈವೇತಿ ವಾ ತುಂಗಾ ಸಂಗತಾ ನಾಸಿಕಾ ಕೃತಾ ॥ ೯೩೫ ॥**

''ಈ ಶಾಂತೀಶ್ವರನು ಎಲ್ಲರನ್ನೂ ಜಯಿಸಿದ ಮೋಹವೆಂಬ ಜಟ್ಟಿಯನ್ನು ಜಯಿಸುವನು. ಇವನಲ್ಲೇ ಸೇರಿರುವ ಉನ್ನತವಾದ ಮೂಗು ಪ್ರಕಾಶಿಸಲಿ'' ಎನ್ನುವಂತೆ ರಚಿಸಲ್ಪಟ್ಟಿದೆ.

**ಕಪೋಲಫಲಕೌ ಶ್ಲಕ್ಷ್ಣೌ ಧಾತ್ರಾ ವಾ ವಿಪುಲೌ ಕೃತೌ ।**
**ತದ್ವಕ್ತ್ರಜಸರಸ್ವತ್ಯಾ ವಿನೋದೇನ ವಿಲೇಖಿತುಮ್ ॥ ೯೩೬ ॥**

ಆ ಶಾಂತೀಶ್ವರನ ಹೊಳಪಾದ ಹಲಗೆಯಂತಿರುವ ಕೆನ್ನೆಗಳು, ಅವನ ಮುಖದಲ್ಲಿ ಹುಟ್ಟುವ ಸರಸ್ವತಿಗೆ ವಿನೋದದಿಂದ ಬರೆಯುವುದಕ್ಕೋಸ್ಕರ ಬ್ರಹ್ಮನಿಂದ ವಿಸ್ತರಿಸಲ್ಪಟ್ಟಂತಿದ್ದುವು.

**ಸ್ಮಿತಭೇದಾಃ ಸರಸ್ವತ್ಯಾಃ ಕಿಂ ಕಿಂ ಶುದ್ಧಾಕ್ಷರಾವಲಿಃ ।**
**ಶಂಕಾಮಿತಿ ಸಿತಾಃ ಸ್ನಿಗ್ಧಾಃ ಘನಾಸ್ತೇನುರ್ದ್ವಿಜಾಃ ಸಮಾಃ ॥ ೯೩೭ ॥**

ಶಾಂತೀಶ್ವರನ ಶುಭ್ರವೂ ಹೊಳಪೂ ದಟ್ಟವೂ ಸಮವೂ ಆದ ಹಲ್ಲುಗಳು ''ಸರಸ್ವತಿಯ ನಗೆಯ ಭೇದಗಳೋ ? ಶುದ್ಧವಾದ ಅಕ್ಷರಗಳ ಸಾಲೋ ?'' ಎಂಬ ಸಂಶಯವನ್ನುಂಟುಮಾಡಿದುವು.

**ವಟಬಿಂಬಪ್ರವಾಲಾದಿ ಪರೇಷಾಂ ಭವತೂಪಮಾ ।**
**ನಾಸ್ಯಾಧರಸ್ಯ ತೇನಾಯಂ ಸ್ಮರ್ಯತೇ ನಾಧರೋಧರಃ ॥ ೯೩೮ ॥**

ಬೇರೆಯವರ ತುಟಿಗೆ ಆಲದ ಚಿಗುರೆಲೆ, ತೊಂಡೆಯ ಹಣ್ಣು, ಹವಳ ಮೊದಲಾದುದು ಉಪಮೆಯಾಗಲಿ. ಆದರೆ ಈ ಶಾಂತೀಶ್ವರನ ತುಟಿಗೆ ಅದು ಉಪಮೆಯಲ್ಲ. ಆದುದರಿಂದ ಈ ಅಧರವು (ತುಟಿಯು) ಅಧರವಾಗಿ (ಕೀಳಾಗಿ) ತಿಳಿಯಲ್ಪಡುವುದಿಲ್ಲ.

**ಭವೇಚ್ಚಿಬುಕಮನ್ಯೇಷಾಂ ಭಾವಿಶ್ಮಶ್ರು ಕ್ರಿಮಪ್ಯದಃ ।**
**ಸದಾ ದೃಶ್ಯಮಿದಂ ಭಾವಾದಿತ್ಯಕಾರೀವ ಶೋಭನಮ್ ॥ ೯೩೯ ॥**

ಬೇರೆಯವರ ಈ ಯಾವ ಗಡ್ಡವಾದರೂ ಮುಂದೆ ಗಡ್ಡಮೀಸೆಯುಳ್ಳದಾಗುವುದು. ಶಾಂತೀಶ್ವರನ ಈ ಗಡ್ಡವು ಯಾವಾಗಲೂ ನೋಡತಕ್ಕದಾಗಿರುವುದೆಂದು ಸ್ವಭಾವದಿಂದ ಮಂಗಳಕರವಾಗಿ ಮಾಡಲ್ಪಟ್ಟಂತಿದ್ದಿತು. ಯಾವಾಗಲೂ ಗಡ್ಡಮೀಸೆಯಿಲ್ಲದೆ ಸುಂದರವಾಗಿದ್ದಿತೆಂದು ಭಾವವು.

**ಕ್ಷಯೀ ಕಲಂಕೀ ಪಂಕೋತ್ಥಂ ರಜಸಾ ದೂಷಿತಂ ತತಃ ।**
**ನೈತದ್ವಕ್ತ್ರಸ್ಯ ಸಾಧರ್ಮ್ಯಂ ಧತ್ತಃ ಸ್ಮೇಂದುಸರೋರುಹೇ ॥ ೯೪೦ ॥**

ಚಂದ್ರನು ಕ್ಷಯಿಸುವವನೂ ಕಲಂಕವುಳ್ಳವನೂ ಆಗಿರುತ್ತಾನೆ. ತಾವರೆಯು ಕೆಸರಿನಲ್ಲಿ ಹುಟ್ಟಿರುವುದೂ ಧೂಳಿಯಿಂದ ದೂಷಿತವೂ ಆಗಿರುತ್ತದೆ. ಆದುದರಿಂದ ಚಂದ್ರನೂ ತಾವರೆಯೂ ಈ ಶಾಂತೀಶ್ವರನ ಮುಖದ ಸಾಧರ್ಮ್ಯವನ್ನು ಧರಿಸುವುದಿಲ್ಲ.

**ಧ್ವನಿಶ್ಚೇನ್ನಿರ್ಗತಸ್ತಸ್ಮಾದ್ದಿವ್ಯೋ ವಿಶ್ವಾರ್ಥದರ್ಪಣಃ ।**
**ಪೃಥಕ್ಕಸ್ಯಕಂಠತಾ ತಸ್ಯ ಕಂಠಸ್ಯ ಕಿಮು ವರ್ಣ್ಯತೇ ॥ ೯೪೧ ॥**

ಆ ಶಾಂತೀಶ್ವರನಿಂದ ಹೊರಟ ದಿವ್ಯಧ್ವನಿಯು ಸಮಸ್ತಪದಾರ್ಥಗಳನ್ನು ತೋರಿಸುವ ಕನ್ನಡಿಯೆಂದಮೇಲೆ ಅವನ ಕಂಠದ ಉತ್ತಮಕಂಠತ್ವವನ್ನು ವರ್ಣಿಸುವುದೇನು ?

**ಸ್ಪರ್ಧಮಾನಭುಜಾಗ್ರಾಭ್ಯಾಂ ತೌಂಗ್ಯೇನ ಶಿರಸಾ ಸಮಮ್ ।**
**ತ್ರಿಕೂಟಹಾಟಕಾದ್ರಿರ್ವಾ ಸೋಭಾತ್ತ್ರಿಭುವನಪ್ರಭುಃ ॥ ೯೪೨ ॥**

ಉನ್ನತವಾದ ಶಿರಸ್ಸಿನೊಡನೆ ಸ್ಪರ್ಧೆಮಾಡುವ ಭುಜಗಳ ಅಗ್ರಭಾಗಗಳಿಂದ ಮೂರು ಶಿಖರಗಳುಳ್ಳ ಬಂಗಾರದ ಬೆಟ್ಟವೋ ಎನ್ನುವಂತೆ ತ್ರಿಲೋಕಾಧಿಪತಿಯಾದ ಆ ಶಾಂತೀಶ್ವರನು ಪ್ರಕಾಶಿಸಿದನು.

**ಬಾಹೂ ಬಾಹುತರಂ ತಸ್ಯ ಭಾತಃ ಸ್ಮಾಜಾನುಲಂಬಿತೌ ।**
**ಧಾತ್ರೀಂ ಸಂಧರ್ತುಕಾಮೌ ವಾ ಕೇಯೂರಾದಿವಿಭೂಷಣೌ ॥ ೯೪೩ ॥**

ಕಣಕಾಲಿನವರೆಗೆ ಜೋಲುತ್ತಿರುವುವೂ ಬಾಹುಪುರಿ ಮೊದಲಾದ ಆಭರಣಗಳುಳ್ಳುವೂ ಆದ ಆ ಶಾಂತೀಶ್ವರನ ಭುಜಗಳು, ಪೃಥ್ವಿಯನ್ನು ಧರಿಸುವುದಕ್ಕೆ ಇಚ್ಛೆಯುಳ್ಳವುಗಳಂತೆ, ಬಹಳವಾಗಿ ಪ್ರಕಾಶಿಸಿದುವು.

**ವ್ಯಧಾಯಿ ವೇಧಸಾ ತಸ್ಯ ವಿಸ್ತೀರ್ಣಂ ವಕ್ಷಸಃ ಸ್ಥಲಮ್ ।**
**ಅಸಂಬಾಧಂ ವಸಂತ್ವಸ್ಮಿನ್ನಿತಿ ವಾ ಬಹವಃ ಶ್ರಿಯಃ ॥ ೯೪೪ ॥**

''ಅನೇಕ ಲಕ್ಷ್ಮಿಯರು ಈ ಎದೆಯಲ್ಲಿ ವಾಸಮಾಡಲಿ'' ಎನ್ನುವಂತೆ ಬ್ರಹ್ಮನು ಆ ಶಾಂತೀಶ್ವರನ ವಿಶಾಲವೂ ಇಕ್ಕಟ್ಟಿಲ್ಲದುದೂ ಆದ ವಕ್ಷಃಸ್ಥಲವನ್ನು (ಎದೆಯನ್ನು) ನಿರ್ಮಿಸಿದನು.

**ವ್ಯಾಪ್ತಮಧ್ಯಮಣಿಚ್ಛಾಯಾಹಾರಂ ವಕ್ಷೋ ವ್ಯಭಾತ್ತರಾಮ್ ।**
**ಮಧ್ಯೇಕೃತಾರ್ಕಸಂಧ್ಯಾಭ್ರಹೇಮಾದ್ರಿತಟಸನ್ನಿಭಮ್ ॥ ೯೪೫ ॥**

ಮಧ್ಯಮಣಿಯ ಕಾಂತಿಯಿಂದ ವ್ಯಾಪ್ತವಾದ ಹಾರವುಳ್ಳುದೂ ಸಂಧ್ಯಾಕಾಲದ ಮೇಘದ ಮಧ್ಯದಲ್ಲಿ ಮಾಡಲ್ಪಟ್ಟ ಸೂರ್ಯನುಳ್ಳ ಬಂಗಾರದ ಬೆಟ್ಟದ ತಪ್ಪಲಿಗೆ ಸಮಾನವೂ ಆದ ಎದೆಯು ಅಧಿಕವಾಗಿ ಪ್ರಕಾಶಿಸಿತು.

**ತನ್ಮಧ್ಯಂ ಮುಷ್ಟಿಸಮ್ಮಾಯಿ ಬಿಭರ್ತ್ಯೂರ್ಧ್ವಗತನೋರ್ಭರಮ್ ।**
**ಗುರುಂ ನಿರಾಕುಲಂ ತಸ್ಯ ತಾನವಂ ತೇನ ಶೋಭತೇ ॥ ೯೪೬ ॥**

ಮುಷ್ಟಿಯಲ್ಲಿ ಅಡಕವಾಗುವ ಆ ಶಾಂತೀಶ್ವರನ ಸೊಂಟವು ಮೇಲಿನ ಶರೀರದ ಹೆಚ್ಚಾದ ಭಾರವನ್ನು ನಿರಾಕುಲವಾಗಿ ಧರಿಸುತ್ತದೆ. ಆದರಿಂದ ಅವನ ಶರೀರಭಾವವು ಶೋಭಿಸುತ್ತದೆ.

**ಗಂಭೀರಾ ದಕ್ಷಿಣಾವರ್ತಾ ತಸ್ಯಾಭ್ಯುದಯಸೂಚನೀ ।**
**ನಾಭಿಃ ಸಪದ್ಮಾ ಮಧ್ಯಸ್ಥಾ ಸ್ಯಾತ್ಪದಂ ನ ಸ್ತುತೇಃ ಕುತಃ ॥ ೯೪೭ ॥**

ಆಳವೂ ದಕ್ಷಿಣವಾದ ಸುಳಿಯುಳ್ಳುದೂ ಅಭ್ಯುದಯವನ್ನು ಸೂಚಿಸುವುದೂ ಲಕ್ಷ್ಮೀಸಹಿತವೂ ಶರೀರಮಧ್ಯದಲ್ಲಿರುವುದೂ ಆದ ಆ ಶಾಂತೀಶ್ವರನ ನಾಭಿಯು ಸ್ತುತಿಯ ಅವಕಾಶವನ್ನೇಕೆ ಹೊಂದುವುದಿಲ್ಲ ? ಸ್ತುತಿಸಲ್ಪಡತಕ್ಕುದಾಗಿದೆಯೆಂದು ಭಾವವು.

**ಕಟೀತಟೀ ಕಟೀಸೂತ್ರಧಾರಿಣೀ ಹಾರಿಣೀ ಭೃಶಮ್ ।**
**ಸವೇದಿಕಾ ಸ್ಥಲೀವಾಸ್ಯ ಜಂಬೂದ್ವೀಪಸ್ಯ ಭಾಸತೇ ॥ ೯೪೮ ॥**

ಉಡುದಾರವನ್ನು ಧರಿಸಿರುವುದೂ ಬಹಳವಾಗಿ ಮನೋಹರವೂ ಆದ ಈ ಶಾಂತೀಶ್ವರನ ಕಟೀಪ್ರದೇಶವು, ಜಂಬೂದ್ವೀಪದ ವೇದಿಕಾಸಹಿತವಾದ ಮಧ್ಯ ಪ್ರದೇಶದಂತೆ, ಪ್ರಕಾಶಿಸುತ್ತದೆ.

**ವೃತ್ತೇ ಶ್ಲಕ್ಷ್ಣೇ ಸುಖಸ್ಪರ್ಶೇ ಸ್ತಾಂ ರಂಭಾಸ್ತಂಭಸನ್ನಿಭೇ ।**
**ಕಿಂತ್ವಸ್ಯೋರೂ ಸದಾ ದತ್ತಫಲೇ ಗುರುಭರಕ್ಷಮೇ ॥ ೯೪೯ ॥**

ದುಂಡಾಗಿರುವುವೂ ಹೊಳಪಾಗಿರುವುವೂ ಸುಖಸ್ಪರ್ಶವುಳ್ಳುವೂ ಆದ ಈ ಶಾಂತೀಶ್ವರನ ತೊಡೆಗಳು ಬಾಳೆಯ ಕಂಬಗಳಿಗೆ ಸಮಾನಗಳಾಗಿದ್ದುವು. ಆದರೆ ಅವು ಯಾವಾಗಲೂ ಫಲಪ್ರದಗಳೂ ಹೆಚ್ಚಾದ ಭಾರವನ್ನು ಹೊರುವುದರಲ್ಲಿ ಸಮರ್ಥಗಳೂ ಆಗಿದ್ದುವು.

**ಮರ್ಯಾದಾಕಾರಿ ಯತ್ತಸ್ಮಾತ್ತದೇತಸ್ಯೋರುಜಂಘಯೋಃ ।**
**ಶಸ್ಯಂ ಜಾನುದ್ವಯಂ ಸದ್ಭಿಃ ಸತ್ಕ್ರಿಯಂ ಕಿಂ ನ ಶಸ್ಯತೇ ॥ ೯೫೦ ॥**

ಈ ಶಾಂತೀಶ್ವರನ ಮೊಳಕಾಲುಗಳೆರಡು ತೊಡೆಗಳಿಗೂ ಕಣಕಾಲುಗಳಿಗೂ ಎಲ್ಲೆಯನ್ನು ಮಾಡುವುದಾಗಿರುವುದರಿಂದ ಅದು ಸತ್ಪುರುಷರಿಂದ ಸ್ತುತಿಸಲ್ಪಡ ತಕ್ಕುದಾಗಿದೆ. ಉತ್ತಮವಾದ ಕಾರ್ಯವನ್ನು ಮಾಡುವ ವಸ್ತುವು ಸ್ತುತಿಸಲ್ಪಡು ವುದಿಲ್ಲವೇ ?

**ನಮಿತಾಶೇಷದೇವೇಂದ್ರೌ ಪಾದಪದ್ಮೌ ಶ್ರಿಯಾಶ್ರಿತೌ ।**
**ತಯೋರುಪರಿ ಚೇಜ್ಜಂಘೇ ತಸ್ಯ ಕಾ ವರ್ಣನಾಪರಾ ॥ ೯೫೧ ॥**

ಸಮಸ್ತ ದೇವೇಂದ್ರರಿಂದ ನಮಸ್ಕರಿಸಲ್ಪಟ್ಟಿರುವ ಶಾಂತೀಶ್ವರನ ಪಾದಕಮಲ ಗಳು ಲಕ್ಷ್ಮಿಯಿಂದ ಆಶ್ರಯಿಸಲ್ಪಟ್ಟಿವೆ. ಆ ಪಾದಕಮಲಗಳ ಮೇಲೆ ಕಣಕಾಲುಗಳಿ ರುತ್ತವೆಂದರೆ ಅವನ ವರ್ಣನೆಯು ಮತ್ತಾವುದು ಬೇಕು ?

**ಗುಲ್ಫಯೋರಿವ ಮಂತ್ರಸ್ಯ ಗೂಢತೈವ ಗುಣೋಽಭವತ್ ।**
**ಫಲದಾ ಸಾ ತತಃ ಸರ್ವಂ ಫಲಕೃತ್ತ್ವಾದ್ಗುಣೇ ಸ್ಮೃತವಮ್ ॥ ೯೫೨ ॥**

ಮಂತ್ರದ ಗೂಢತ್ವವು ಗುಣವಾಗಿರುವಂತೆ, ಅವನ ಪಾದಗಳ ಮಾಂಸ ಖಂಡಗಳ–ಗೆಣ್ಣುಗಳ ಗೂಢತ್ವವು ಗುಣವೇ ಆಗಿದ್ದಿತು. ಆದುದರಿಂದ ಆ ಗೂಢತೆಯು ಫಲದಾಯಕವಾಗಿದ್ದಿತು. ಫಲವನ್ನುಂಟುಮಾಡುವುದರಿಂದ ಅಂತಹ ಎಲ್ಲ ವಸ್ತುವೂ ಗುಣವುಳ್ಳುದೆಂದು ಸ್ಮರಿಸಲ್ಪಟ್ಟಿದೆ.

**ಕೂರ್ಮಪೃಷ್ಠೌ ಕ್ರಮೌ ತಸ್ಯ ಶ್ರಿತ್ವಾಸೌ ಸುಸ್ಥಿತೌ ಧರಾ ।**
**ಧೃತಾ ಕೂರ್ಮೇಣ ಧಾತ್ರೀತಿ ಧ್ರುವಂ ರೂಢಿಸ್ತತೋಽಭವತ್ ॥ ೯೫೩ ॥**

ಆಮೆಯ ಬೆನ್ನಿನಂತಿರುವ ಆ ಶಾಂತೀಶ್ವರನ ಪಾದಗಳನ್ನು ಆಶ್ರಯಿಸಿ ಈ ಪೃಥ್ವಿಯು ಸುರಕ್ಷಿತವಾಗಿದೆ. ಆದುದರಿಂದ "ಪೃಥ್ವಿಯು ಆಮೆಯಿಂದ ಧರಿಸ ಲ್ಪಟ್ಟಿದೆ" ಎಂದು ಲೋಕದಲ್ಲಿ ರೂಢಿಯಾಯಿತು. ಇದು ನಿಶ್ಚಯ.

**ಪೀನೌ ವಕ್ರೋನ್ನತೌ ಸುಸ್ಥೌ ತಸ್ಯಾಂಗುಷ್ಠೌ ಸುಖಾಕರೌ ।**
**ರೇಜತುರ್ದರ್ಶಯಂತೌ ವಾ ಮಾರ್ಗಂ ಸ್ವರ್ಗಾಪವರ್ಗಯೋಃ ॥**

ಪುಷ್ಟವಾಗಿರುವುವೂ ವಕ್ರವಾಗಿಯೂ ಉನ್ನತವಾಗಿಯೂ ಇರುವುವೂ ಬಹು ಸ್ಥಿರವಾಗಿರುವುವೂ ಸುಖೋತ್ಪತ್ತಿಸ್ಥಾನಗಳೂ ಆದ ಆ ಶಾಂತೀಶ್ವರನ ಅಂಗುಷ್ಠಗಳು ಸ್ವರ್ಗಮೋಕ್ಷಗಳ ಮಾರ್ಗವನ್ನು ತೋರಿಸುತ್ತವೋ ಎನ್ನುವಂತೆ ಪ್ರಕಾಶಿಸಿದುವು.

**ಅಷ್ಟಾವಂಗುಲಯಸ್ತಸ್ಯ ಬಭುಃ ಶ್ಲಿಷ್ಟಾಃ ಪರಸ್ಪರಮ್ ।**
**ಕರ್ಮಾಣ್ಯಷ್ಟಾವಪಹ್ನೋತುಂ ನಿರ್ಗತಾ ಇವ ಶಕ್ತಯಃ ॥ ೯೫೫ ॥**

ಆ ಶಾಂತೀಶ್ವರನ ಅಂಗುಷ್ಠಗಳು ಹೊರತಾದ ಎಂಟು ಬೆರಲ್ಗಳು, ಪರಸ್ಪರವಾಗಿ ಸೇರಿರುವುವುಗಳಾಗಿ, ಎಂಟು ಕರ್ಮಗಳನ್ನು ನಾಶಮಾಡುವುದಕ್ಕೋಸ್ಕರ ಹೊರ ಟಿರುವ ಶಕ್ತಿಗಳೋ ಎನ್ನುವಂತೆ ಪ್ರಕಾಶಿಸಿದುವು.

**ದಶ ಧರ್ಮಾಃ ಪುರೈವೈನಂ ತದ್ವ್ಯಾಜೇನೇವ ಸೇವಿತುಮ್ ।**
**ಕ್ರಮೌ ಸಮಾಶ್ರಿತಾಸ್ತಸ್ಯ ವ್ಯರಾಜಂತ ನಖಾಃ ಸುಖಾಃ ॥ ೯೫೬ ॥**

ಆ ಶಾಂತೀಶ್ವರನ ಪಾದಗಳನ್ನಾಶ್ರಯಿಸಿರುವುವೂ ಸುಖವನ್ನುಂಟುಮಾಡುವುವೂ ಆದ ಹತ್ತು ಉಗುರುಗಳು, ಉತ್ತಮಕ್ಷಮಾದಿದಶಧರ್ಮಗಳು ಆ ಉಗುರುಗಳ ನೆವದಿಂದ ಮೊದಲೇ ಇವನನ್ನು ಸೇವಿಸುವುದಕ್ಕೋಸ್ಕರವೋ ಎನ್ನುವಂತೆ, ಪ್ರಕಾಶಿ ಸಿದುವು.

**ಅಸ್ಯಾವಯವಭಾವಾತ್ತೇ ವಾಸವಾದ್ಯಾ ನಮಂತಿ ನೌ ।**
**ಇತೀವ ರಾಗಿಣೌ ತಸ್ಯ ಪಾದೌ ಪಲ್ಲವಸನ್ನಿಭೌ ॥ ೯೫೭ ॥**

"ನಾವು ಈ ಶಾಂತೀಶ್ವರನ ಅವಯವಗಳಾಗಿರುವುದರಿಂದ ನಮಗೆ ಆ ದೇವೇಂದ್ರನೇ ಮೊದಲಾದವರು ನಮಸ್ಕರಿಸುತ್ತಾರೆ" ಹೀಗೆ ತಿಳಿದೋ ಎಂಬಂತೆ ಅವನ ಪಾದಗಳು ತಳಿರಿನಂತೆ ರಾಗವುಳ್ಳವಾಗಿ–ಕೆಂಪಾಗಿದ್ದುವು.

**ನಾಮೃತಾಂಶೋರ್ನಿಶಾಸಂಗಾದುಷ್ಣತ್ವಾದ್ಭಾಸ್ಕರಸ್ಯ ಚ ।**
**ತೇಜಸ್ತಸ್ಯೋಪಮಾನಂ ಸ್ಯಾದ್ಭೂಷಣಕಲ್ಪಜತೇಜಸಃ ॥ ೯೫೮ ॥**

ಭೂಷಣಾಂಗಕಲ್ಪವೃಕ್ಷದ ತೇಜಸ್ಸುಳ್ಳವನಾದ ಆ ಶಾಂತೀಶ್ವರನಿಗೆ ಚಂದ್ರನ ತೇಜಸ್ಸಿಗೆ ರಾತ್ರಿಯ ಸಂಬಂಧವಿರುವುದರಿಂದ ಅದು ಉಪಮಾನವಲ್ಲ. ಸೂರ್ಯನ ತೇಜಸ್ಸಿಗೆ ಉಷ್ಣತ್ವವಿರುವುದರಿಂದ ಅದೂ ಉಪಮಾನವಾಗುವುದಿಲ್ಲ.

**ಕಾಂತೇಃ ಕಾ ವರ್ಣನಾ ತಸ್ಯ ಯದಿ ಶಕ್ರಃ ಸಹಸ್ರದೃಕ್ ।**
**ಶಚೀವದನಪಂಕೇಜವಿಮುಖಸ್ತಂ ನಿರೀಕ್ಷತೇ ॥ ೯೫೯ ॥**

ದೇವೇಂದ್ರನು ಸಹಸ್ರನೇತ್ರಗಳುಳ್ಳವನೂ ಶಚಿಯ ಮುಖಕಮಲದಲ್ಲಿ ವಿಮುಖನೂ ಆಗಿ ಆ ಶಾಂತೀಶ್ವರನನ್ನು ನೋಡುತ್ತಾನೆಂದರೆ ಅವನ ಕಾಂತಿಗೆ ಬೇರೆ ವರ್ಣನೆ ಯಾವುದು ?

**ಭೂಷಣಾನಾಂ ಕುಲಂ ಲೇಭೇ ಶೋಭಾಂ ತಸ್ಯಾಂಗಸಂಗಮಾತ್ ।**
**ಮಹಾಮಣಿನಿಬದ್ಧೇದ್ಧಸುಧೌತಕಲಧೌತವತ್ ॥ ೯೬೦ ॥**

ಮಹಾರತ್ನಖಚಿತವಾದ ಶುದ್ಧಸುವರ್ಣದಂತೆ, ಆ ಶಾಂತೀಶ್ವರನ ದೇಹಸಂಬಂಧ ದಿಂದ ಆಭರಣಗಳ ಸಮೂಹವು ಶೋಭೆಯನ್ನು ಹೊಂದಿತು.

**ಸ್ವನಾಮಶ್ರುತಿಸಂಶುಷ್ಯನ್ಮದಾರಿಕರಿಸಂಹತೇಃ ।**
**ರವೋರಾಜತ ರಾಜೇಶೋ ರಾಜಕಂಠೀರವಸ್ಯ ವಾ ॥ ೯೬೧ ॥**

ತನ್ನ ಹೆಸರನ್ನು ಕೇಳುವುದರಿಂದ ಅಹಂಕಾರರಹಿತರಾಗುವ ಶತ್ರುಗಳೆಂಬ ಆನೆಗಳ ಗುಂಪಿಗೆ ರಾಜಶ್ರೇಷ್ಠನಾದ ಶಾಂತೀಶ್ವರನ ಧ್ವನಿಯು, ತನ್ನ ಹೆಸರನ್ನು ಕೇಳುವುದರಿಂದ ಮದರಹಿತವಾಗುವ ಆನೆಗಳ ಹಿಂಡಿಗೆ ಸಿಂಹರಾಜನ ಧ್ವನಿಯಂತೆ, ಪ್ರಕಾಶಿಸಿತು.

**ಕೀರ್ತಿವಲ್ಲೀ ಜಗತ್ಪ್ರಾಂತಂ ಪ್ರಾಪ್ಯ ಪ್ರಾಗೇವ ಜನ್ಮನಃ ।**
**ತದೀಯಾಲಂಬನಾಭಾವಾದಿವ ತಾವತಿ ಸುಸ್ಥಿತಾ ॥ ೯೬೨ ॥**

ಶಾಂತೀಶ್ವರನ ಜನ್ಮಕ್ಕಿಂತ ಮೊದಲೇ ಅವನ ಕೀರ್ತಿಯೆಂಬ ಲತೆಯು ಲೋಕದ ಕೊನೆಯನ್ನು ಹೊಂದಿ ಮುಂದೆ ಜಗತ್ತಿನ ಆಶ್ರಯವಿಲ್ಲದಿರುವುದರಿಂದಲೋ ಎನ್ನುವಂತೆ ಅಷ್ಟರಲ್ಲೇ ಸುರಕ್ಷಿತವಾಗಿದ್ದಿತು.

**ಕುಲರೂಪವಯಃಶೀಲಕಲಾಕಾಂತ್ಯಾದಿಭೂಷಣಾಃ ।**
**ಕನ್ಯಕಾಸ್ತತ್ಪಿತಾ ತೇನಾಯೋಜಯದ್ರತಿದಾಯಿನೀಃ ॥ ೯೬೩ ॥**

ಆ ಶಾಂತೀಶ್ವರನ ತಂದೆಯು ಕುಲ, ರೂಪ, ವಯಸ್ಸು, ಶೀಲ, ವಿದ್ಯಾ, ಕಾಂತಿ ಮೊದಲಾದ ಗುಣಗಳೆಂಬ ಭೂಷಣಗಳುಳ್ಳವರೂ ರತಿಸುಖವನ್ನು ಕೊಡುವವರೂ ಆದ ಕನ್ಯೆಯರನ್ನು ತಂದು ಶಾಂತೀಶ್ವರನೊಡನೆ ಸೇರಿಸಿ–ವಿವಾಹಮಾಡಿದನು.

**ಕಾಮಿನೀನೀಲನೀರೇಜದಲೋಜ್ಜ್ವಲವಿಲೋಚನೈಃ ।**
**ಪ್ರೇಮಾಮೃತಾಂಬುಸಂಸಿಕ್ತೈರ್ಮುಹುರಾಹ್ಲಾದಿತಾಶಯಃ ॥ ೯೬೪ ॥**

**ವಲ್ಲಭಾವನಿತಾಲೋಲಲೀಲಾಲಸವಿಲೋಕನೈಃ ।**
**ಸ್ವಮನೋಧನಲುಂಟಾಕೈರಖಂಡಂ ಸ ಶಮೇಯಿವಾನ್ ॥ ೯೬೫ ॥**

ಕಾಮಿನಿಯರ ಕನ್ನೈದಿಲೆಯ ಎಸಳಿನಂತೆ ಪ್ರಕಾಶಮಾನಗಳೂ ಪ್ರೇಮವೆಂಬ ಅಮೃತಜಲದಿಂದ ಸೇಚಿಸಲ್ಪಟ್ಟಿರುವುವೂ ಆದ ನೇತ್ರಗಳಿಂದ ಪುನಃ ಪುನಃ ಸಂತೋಷಗೊಳಿಸಲ್ಪಟ್ಟ ಹೃದಯವುಳ್ಳವನಾದ ಆ ಶಾಂತೀಶ್ವರನು ತನ್ನ ಮನವೆಂಬ ಧನವನ್ನು ಕದಿಯುವವುಗಳಾದ ಪ್ರಿಯಪತ್ನಿಯರ ಚಂಚಲವೂ ಲೀಲೆಯಿಂದ ಮತ್ತವಾಗಿರುವುವೂ ಆದ ನೋಟಗಳಿಂದ ಸುಖವನ್ನು ಹೊಂದಿದನು.

**ಪಂಚವರ್ಗಸಹಸ್ರಾಬ್ದಕಾಲೇ ಗತವತೀಶಿತುಃ ।**
**ಕೌಮಾರೇಣ ಸುಖೈರೇವ ದಿವ್ಯಮಾನುಷಗೋಚರೈಃ ॥ ೯೬೬ ॥**

**ತತೋಽನು ತತ್ಪ್ರಮಾಣೇನ ವಿಶ್ವಸೇನಸಮರ್ಪಿತೇ ।**
**ರಾಜ್ಯೇಽಪ್ಯಚ್ಛಿನ್ನಭೋಗಸ್ಯ ಕಾಲೇ ವಿಗಲಿತೇ ತದಾ ॥ ೯೬೭ ॥**

**ಸಾಮ್ರಾಜ್ಯಸಾಧನಾನ್ಯಸ್ಯ ಚಕ್ರಾದೀನಿ ಚತುರ್ದಶ ।**
**ರತ್ನಾನಿ ನಿಧಯೋಽಭೂವನ್ನವ ಚಾವಿಷ್ಕೃತೌಜಸಃ ॥ ೯೬೮ ॥**

ಈ ರೀತಿಯಾಗಿ ಸ್ವಾಮಿಗೆ ದೇವಮಾನವಗೋಚರವಾದ ಸುಖಗಳಿಂದ ಇಪ್ಪತ್ತೈದು ಸಹಸ್ರವರ್ಷಗಳ ಕಾಲವು ಕೌಮಾರವಯಸ್ಸಿನಿಂದ ಕಳೆಯುತ್ತಿರಲು ಬಳಿಕ ವಿಶ್ವಸೇನಮಹಾರಾಜನಿಂದ ಕೊಡಲ್ಪಟ್ಟ ರಾಜ್ಯಭಾರದಲ್ಲಿಯೂ ಅಖಂಡಿತವಾದ ಭೋಗ–ಸುಖವುಳ್ಳ ಸ್ವಾಮಿಯ ಕಾಲವು ಅದೇ ಇಪ್ಪತ್ತೈದು ಸಹಸ್ರವರ್ಷಗಳ ಪರಿಮಾಣದಿಂದ ಕಳೆಯುತ್ತಿರಲು ಆಗ ಪ್ರಕಟವಾದ ತೇಜಸ್ಸುಳ್ಳ ಈ ಶಾಂತೀಶ್ವರನಿಗೆ ಸಾಮ್ರಾಜ್ಯಸಾಧನೆಗಳಾದ ಚಕ್ರವೇ ಮೊದಲಾದುವೂ ಹದಿನಾಲ್ಕು ರತ್ನಗಳೂ ನವನಿಧಿಗಳೂ ಉಂಟಾದುವು.

**ತೇಷು ಚಕ್ರಾತಪತ್ರಾಸಿದಂಡಾಃ ಶಸ್ತ್ರಗೃಹೇಽಭವನ್ ।**
**ಕಾಕಿಣೀ ಚರ್ಮ ಚೂಡಾದಿಮಣಿಶ್ಚ ಶ್ರೀನಿಕೇತನೇ ॥ ೯೬೯ ॥**

ಅವುಗಳಲ್ಲಿ ಚಕ್ರವೂ ಛತ್ರವೂ ಖಡ್ಗವೂ ದಂಡವೂ ಆಯುಧಶಾಲೆಯಲ್ಲುಂಟಾದುವು. ಕಾಕಿಣಿಯೂ ಚರ್ಮರತ್ನವೂ ಚೂಡಾಮಣಿಯೂ ಶ್ರೀಗೃಹದಲ್ಲುಂಟಾದುವು.

**ಪುರೋಧಾಃ ಸ್ಥಪತಿಃ ಸೇನಾಪತಿರ್ಗೃಹಪತಿಶ್ಚ ತೇ ।**
**ಹಾಸ್ತಿನಾಖ್ಯಪುರೇ ಕನ್ಯಾಗಜಾಶ್ವಾಃ ಖಗಭೂಧರೇ ॥ ೯೭೦ ॥**

ಆ ಪುರೋಹಿತ, ಸ್ಥಪತಿ (ಬಡಗಿ), ಸೇನಾಪತಿ, ಗೃಹಪತಿರತ್ನಗಳು ಹಸ್ತಿನಾಪುರದಲ್ಲುಂಟಾದುವು. ಕನ್ಯಾರತ್ನವೂ ಗಜರತ್ನವೂ ಅಶ್ವರತ್ನವೂ ಖೇಚರಾಚಲ–ವಿಜಯಾರ್ಧಪರ್ವತದಲ್ಲುಂಟಾದುವು.

**ನವಾಪಿ ನಿಧಯಃ ಪೂಜ್ಯಾ ನದೀಸಾಗರಸಂಗಮೇ ।**
**ತದಾನೀಮೇವ ದೇವೇಶೈರಾನೀತಾಃ ಪುಣ್ಯಚೋದಿತೈಃ ॥ ೯೭೧ ॥**

ಸ್ವಾಮಿಯ ಪುಣ್ಯದಿಂದ ಪ್ರೇರಿತರಾದ ದೇವೇಂದ್ರರು ಆಗಲೇ ನದೀಸಮುದ್ರಗಳ ಸಂಗಮಸ್ಥಾನದಲ್ಲಿದ್ದ ಪೂಜ್ಯವಾದ ನವನಿಧಿಗಳನ್ನೂ ತಂದರ್ಪಿಸಿದರು.

**ಇತ್ಯಾಧಿಪತ್ಯಮಾಸಾದ್ಯ ದಶಭೋಗಾಂಗಸಂಗತಃ ।**
**ತಾವತ್ಯೇವ ಗತೇ ಕಾಲೇ ಸ್ವಾಲಂಕಾರಾಲಯಾಂತರೇ ॥ ೯೭೨ ॥**

**ಅಲಂಕುರ್ವನ್ನಿಜಚ್ಛಾಯಾದ್ವಯಮಾಲೋಕ್ಯ ದರ್ಪಣೇ ।**
**ಸಾಶ್ಚರ್ಯಂ ಚಿಂತಯನ್ನೇತತ್ಕಿಮಿತ್ಯಂತರ್ಗತಂ ಕೃತೀ ॥ ೯೭೩ ॥**

**ಲಬ್ಧಬೋಧಿರ್ಮತಿಜ್ಞಾನಕ್ಷಯೋಪಶಮಸಂಪದಾ ।**
**ಸ್ವಜನ್ಮಾಂತರಸಂತಾನಂ ಸ್ಮೃತ್ವಾ ನಿರ್ವೇಗಮಾಪ್ತವಾನ್ ॥ ೯೭೪ ॥**

ಈ ರೀತಿಯಾಗಿ ಆಧಿಪತ್ಯವನ್ನು ಹೊಂದಿ ದಶವಿಧಭೋಗಸಾಧನಗಳಿಂದ ಕೂಡಿದವನಾಗಿದ್ದನು. ಸಾಮ್ರಾಜ್ಯಪದವಿಯಲ್ಲಿ ಅಷ್ಟೇ(೨೫ ಸಹಸ್ರವರ್ಷ)ಕಾಲವು ಕಳೆಯುತ್ತಿರಲು ಒಂದು ದಿವಸ ತನ್ನ ಅಲಂಕಾರಗೃಹದಲ್ಲಿ ಅಲಂಕರಿಸಿಕೊಳ್ಳುವವನಾಗಿ ಕನ್ನಡಿಯಲ್ಲಿ ತನ್ನ ಎರಡು ನೆರಳನ್ನು ನೋಡಿ ಆಶ್ಚರ್ಯವಾಗಿ ''ಇದೇನು ?'' ಎಂದು ಮನೋಗತವಾದ ವಿಷಯವನ್ನು ಚಿಂತಿಸಿ ಆ ಸುಕೃತಿಯಾದ ಸ್ವಾಮಿಯು ವಿವೇಕೋದಯವುಳ್ಳವನಾಗಿ ಮತಿಜ್ಞಾನಾವರಣಕರ್ಮದ ಕ್ಷಯೋಪಶಮರೂಪವಾದ ಸಂಪತ್ತಿಯಿಂದ ತನ್ನ ಜನ್ಮಾಂತರಗಳ ಪರಂಪರೆಯನ್ನು ಸ್ಮರಿಸಿ ವೈರಾಗ್ಯವನ್ನು ಹೊಂದಿದನು.

**ಘನಚ್ಛಾಯಾಸಮಾಃ ಸರ್ವಸಂಪದಃ ಶಶರಾಹತಿಃ ।**
**ವಿದ್ಯುದ್ದ್ಯುತಿವಲ್ಲಕ್ಷ್ಮೀಃ ಕಾಯೋ ಮಾಯಾಮಯೋಽಪಿ ವಾ ॥ ೯೭೫ ॥**

''ಸಕಲಸಂಪತ್ತಿಗಳು ಮೇಘದ ನೆರಳಿಗೆ ಸಮಾನಗಳು. ಶತ್ರುಬಾಣಗಳ ಆಘಾತವುಳ್ಳ ರಾಜ್ಯಲಕ್ಷ್ಮಿಯು ಮಿಂಚಿನ ಹೊಳಪಿನಂತಿರುವುದು. ಶರೀರವೂ ಮಾಯಾಮಯವಾದುದು.

**ಪ್ರಾತಶ್ಛಾಯಾಯುರಾತ್ಮೀಯಾಃ ಪರಕೀಯಾ ವಿಯೋಗವತ್ ।**
**ಸಂಯೋಗೋ ಹಾನಿವದ್ವೃದ್ಧಿರ್ಜನ್ಮೇದಂ ಪೂರ್ವಜನ್ಮವತ್ ॥ ೯೭೬ ॥**

ಆಯುಷ್ಯವು ಪ್ರಾತಃಕಾಲದ ನೆರಳಿಗೆ ಸಮಾನವಾದುದು. ಆತ್ಮೀಯ–ಬಂಧುಗಳು ಪರಕೀಯರಾಗಿರುತ್ತಾರೆ. ಸಂಯೋಗವು ವಿಯೋಗವುಳ್ಳುದಾಗಿದೆ. ವೃದ್ಧಿಯು ಹಾನಿಯುಳ್ಳುದಾಗಿದೆ. ಈ ಜನ್ಮವು ಪೂರ್ವಜನ್ಮಸಂಬಂಧವುಳ್ಳುದಾಗಿದೆ.''

**ಇತಿ ಚೇತಸಿ ಸಂಪಶ್ಯನ್ ಸರ್ವಮೇತನ್ಮಹೀಪತಿಃ ।**
**ನಿರ್ಗಂತುಮುದ್ಯಯೌ ಗೇಹಾದ್ದೂರೀಕೃತದುರಾಶಯಃ ॥ ೯೭೭ ॥**

ಈ ರೀತಿಯಾಗಿ ಇದೆಲ್ಲವನ್ನು ಮನಸ್ಸಿನಲ್ಲಿ ನೋಡುವವನಾದ ಶಾಂತೀಶ್ವರ–ಚಕ್ರವರ್ತಿಯು ದುರಭಿಪ್ರಾಯವನ್ನು ದೂರಮಾಡಿದವನಾಗಿ ಮನೆಯಿಂದ ಹೊರಡುವುದಕ್ಕೆ ಉದ್ಯುಕ್ತನಾದನು.

**ತದಾ ಲೌಕಾಂತಿಕಾಃ ಪ್ರಾಪ್ಯ ಧರ್ಮತೀರ್ಥಸ್ಯ ವರ್ತನೇ ।**
**ಕಾಲೋಽಯಂ ತವ ದೇವಸ್ಯ ಚಿರವಿಚ್ಛಿನ್ನಸಂತತೇಃ ॥ ೯೭೮ ॥**

**ಇತ್ಯವೋಚನ್ವಚಸ್ತೇಷಾಮನುಮತ್ಯ ಮಹಾಮತಿಃ ।**
**ನಾರಾಯಣಾಯ ತದ್ರಾಜ್ಯಂ ಸೂನವೇಶ್ರಾಣಯನ್ಮುದಾ ॥ ೯೭೯ ॥**

ಆಗ ಲೌಕಾಂತಿಕದೇವರ್ಕಳು ಸ್ವಾಮಿಯನ್ನು ಹೊಂದಿ "ಬಹುಕಾಲದಿಂದ ನಷ್ಟವಾಗಿರುವ ಪರಂಪರೆಯುಳ್ಳ ಧರ್ಮತೀರ್ಥದ ಪ್ರಚಾರದಲ್ಲಿ ಸ್ವಾಮಿಯಾದ ನಿನಗೆ ಇದು ಕಾಲವಾಗಿದೆ." ಎಂದು ಹೇಳಿದರು. ಅವರುಗಳ ಮಾತನ್ನೊಪ್ಪಿ ಮಹಾಬುದ್ಧಿಶಾಲಿಯಾದ ಸ್ವಾಮಿಯು ಸಂತೋಷದಿಂದ ಆ ರಾಜ್ಯವನ್ನು ನಾರಾಯಣನೆಂಬ ಪುತ್ರನಿಗೆ ಕೊಟ್ಟನು.

**ತತಃ ಸುರಗಣಾಧೀಶವಿಹಿತಾಭಿಷವೋತ್ಸವಃ ।**
**ಯುಕ್ತಿಮದ್ವಚನೈರ್ಬಂಧೂನ್ಮೋಚಯಿತ್ವಾಗ್ರಣೀಃ ಸತಾಮ್ ॥ ೯೮೦ ॥**

**ಸರ್ವಾರ್ಥಸಿದ್ಧಿಶಿಬಿಕಾಮಾರುಹ್ಯ ಮರುದುದ್ಧೃತಾಮ್ ।**
**ಸಹಸ್ರಾಮ್ರವನಂ ಪ್ರಾಪ್ಯ ಕಮನೀಯಶಿಲಾತಲೇ ॥ ೯೮೧ ॥**

**ಕುಬೇರದಿಙ್ಮುಖೋ ಬದ್ಧಪರ್ಯಂಕಾಸನಸುಸ್ಥಿತಃ ।**
**ಜ್ಯೇಷ್ಠಮಾಸ್ಯಸಿತೇ ಪಕ್ಷೇ ಚತುರ್ಥ್ಯಾಮಪರಾಹ್ಣಕೇ ॥ ೯೮೨ ॥**

**ಋಕ್ಷೇ ಷಷ್ಠೋಪವಾಸೇನ ಭರಣ್ಯಾಂ ಪ್ರಣಿಧಾನವಾನ್ ।**
**ಕೃತಸಿದ್ಧನಮಸ್ಕಾರಸ್ತ್ಯಕ್ತವಸ್ತ್ರಾದ್ಯುಪಚ್ಛದಃ ॥ ೯೮೩ ॥**

**ಪಂಚಮುಷ್ಟಿಭಿರುಲ್ಲುಂಚ್ಯ ಕೇಶಾನ್ ಕ್ಲೇಶಾನಿವಾಯತಾನ್ ।**
**ಜಾತರೂಪಂ ಹಸದ್ದೀಪ್ತ್ಯಾ ಜಾತರೂಪಮವಾಪ್ಯ ಸಃ ॥ ೯೮೪ ॥**

**ಸದ್ಯಃ ಸಾಮಾಯಿಕೀಂ ಶುದ್ಧಿಂ ಸಮನಃಪರ್ಯಯಾಮಗಾತ್ ।**
**ಕೇಶಾಂಸ್ತದೈವ ದೇವೇಶೋ ಜ್ವಲತ್ಪಟಲಿಕಾಶ್ರಿತಾನ್ ॥ ೯೮೫ ॥**

**ಯಥಾಬಹುಗುಣೀಭೂತಾನಾಮೋದಮಿಲಿತಾಲಿಭಿಃ ।**
**ಪಂಚಮಾಬ್ಧಿತರಂಗಾಣಾಂ ಪರಭಾಗೇ ವ್ಯಧಾತ್ತರಾಮ್ ॥ ೯೮೬ ॥**

ಬಳಿಕ ದೇವೇಂದ್ರರಿಂದ ಮಾಡಲ್ಪಟ್ಟ ಅಭಿಷೇಕೋತ್ಸವವುಳ್ಳವನೂ ಸತ್ಪುರುಷರಲ್ಲಿ ಶ್ರೇಷ್ಠನೂ ಆದ ಸ್ವಾಮಿಯು ಯುಕ್ತಿಯಾದ ಮಾತುಗಳಿಂದ ಬಂಧುಗಳನ್ನು ಸಮಾಧಾನಗೊಳಿಸಿಕೊಂಡು ದೇವರ್ಕಳಿಂದ ಹೊರಲ್ಪಟ್ಟ ಸರ್ವಾರ್ಥಸಿದ್ಧಿಯೆಂಬ ಪಲ್ಲಕ್ಕಿಯನ್ನೇರಿ ಸಹಸ್ರಾಮ್ರವನವನ್ನು ಹೊಂದಿ ಮನೋಹರವಾದ ಕಲ್ಲಿನಲ್ಲಿ ಉತ್ತರಾಭಿಮುಖನೂ ಪರ್ಯಂಕಾಸನದಲ್ಲಿ ಚೆನ್ನಾಗಿ ಕುಳಿತವನೂ ಜ್ಯೇಷ್ಠಮಾಸದಲ್ಲಿ ಶುಕ್ಲಪಕ್ಷದ ಚತುರ್ಥೀತಿಥಿಯಲ್ಲಿ ಸಾಯಂಕಾಲದಲ್ಲಿ ಭರಣೀನಕ್ಷತ್ರದಲ್ಲಿ ಆರು ಉಪವಾಸಗಳಿಂದ ಯೋಗಧಾರಣವುಳ್ಳವನೂ ಸಿದ್ಧನಮಸ್ಕಾರಗಳನ್ನು ಮಾಡಿದವನೂ ವಸ್ತ್ರಾದಿಪರಿಗ್ರಹಗಳನ್ನು ತ್ಯಜಿಸಿದವನೂ ಆಗಿ ಆ ಶಾಂತೀಶ್ವರನು, ದೀರ್ಘವಾದ ಕ್ಲೇಶಗಳನ್ನು ಕೀಳುವಂತೆ, ಪಂಚಮುಷ್ಟಿಗಳಿಂದ ತಲೆಗೂದಲುಗಳನ್ನು ಕಿತ್ತು ಕಾಂತಿಯಿಂದ ಚಿನ್ನವನ್ನು ಹಾಸ್ಯಮಾಡುವ ಹುಟ್ಟಿದಾಗಳಿನ–ಜಾತರೂಪವನ್ನು ಹೊಂದಿ ಆಗಲೇ ಮನಃಪರ್ಯಯಜ್ಞಾನಸಹಿತವಾದ ಸಾಮಾಯಿಕಚಾರಿತ್ರದ ಶುದ್ಧಿಯನ್ನು ಪಡೆದನು. ಆಗಲೇ ದೇವೇಂದ್ರನು ಪ್ರಕಾಶಮಾನವಾದ ತಟ್ಟೆಯಲ್ಲಿರುವುವೂ ಪರಿಮಳಕ್ಕೆ ಬಂದು ಸೇರಿದ ಭ್ರಮರಗಳಿಂದ ಬಹುಗುಣಿತವಾದಂತಿರುವುವೂ ಆದ ಆ ತಲೆಗೂದಲುಗಳನ್ನು ಐದನೆಯದಾದ ಕ್ಷೀರಸಮುದ್ರದ ತೆರೆಗಳ ಆಚೆಯಲ್ಲಿರಿಸಿದನು.

**ಚಕ್ರಾಯುಧಾದಿಸದ್ರಾಜ್ಞಾಂ ಸಹಸ್ರಂ ಸಹ ಸಂಯಮಮ್ ।**
**ಶಾಂತಿನಾಥೇನ ಸಂಪ್ರಾಪದಾಪದಾಮಂತಕಾರಿಣಾ ॥ ೯೮೭ ॥**

ಚಕ್ರಾಯುಧನೇ ಮೊದಲಾದ ಸಾವಿರಮಂದಿ ಶ್ರೇಷ್ಠರಾಜರು ಆಪತ್ತುಗಳನ್ನು ನಾಶಮಾಡುವ ಶಾಂತೀಶ್ವರನೊಡನೆ ದೀಕ್ಷೆಯನ್ನು ಪಡೆದರು.

**ಭೂಯಾದಸ್ಮಾಕಮಪ್ಯೇವಮಿತ್ಯಾಶಾಸನತತ್ಪರಾಃ ।**
**ಪುಣ್ಯಪಣ್ಯಂ ಸಮಾದಾಯ ಭಕ್ತಿಮೂಲ್ಯೇನ ಭಾಕ್ತಿಕಾಃ ॥ ೯೮೮ ॥**

**ಪಾಕಶಾಸನಮುಖ್ಯಾಶ್ಚ ನಾಕಲೋಕೋನ್ಮುಖಾ ಯಯುಃ ।**
**ಸ್ವಾಶನಾದ್ವಿಶ್ವಲೋಕೇಶೇ ಪವಿತುಂ ಮಂದರಂ ಪುರಮ್ ॥ ೯೮೯ ॥**

**ಪ್ರವಿಷ್ಟಾಯ ಪ್ರದಾಯಾನ್ನಂ ಪ್ರಾಸುಕಂ ಪರಮೋತ್ಸವಾತ್ ।**
**ಸುಮಿತ್ರಾಖ್ಯಮಹೀಪಾಲಃ ಪ್ರಾಪದಾಶ್ಚರ್ಯಪಂಚಕಮ್ ॥ ೯೯೦ ॥**

"ಹೀಗೆ ನಮ್ಮಗಳಿಗೂ ಸಂಯಮವುಂಟಾಗಲಿ" ಎಂಬ ಅಭಿಲಾಷೆಯಲ್ಲಿ ಆಸಕ್ತರೂ ಭಕ್ತರೂ ಆದ ದೇವೇಂದ್ರನೇ ಮೊದಲಾದವರು ಭಕ್ತಿಯೆಂಬ ಮೂಲ್ಯದಿಂದ ಪುಣ್ಯವೆಂಬ ವ್ಯಾಪಾರವನ್ನು ತೆಗೆದುಕೊಂಡು ಸ್ವರ್ಗಲೋಕಾಭಿಮುಖರಾಗಿ ಹೊರಟುಹೋದರು. ತನ್ನ ಭೋಜನದಿಂದ ಮಂದರವೆಂಬ ಪುರವನ್ನು ಪವಿತ್ರವನ್ನಾಗಿ ಮಾಡುವುದಕ್ಕೋಸ್ಕರ ಪ್ರವೇಶಿಸಿದ ಸಕಲಲೋಕಾಧಿಪತಿ–ಶಾಂತೀಶ್ವರನಿಗೆ ಉತ್ಕೃಷ್ಟವಾದ ಉತ್ಸವದಿಂದ ಪ್ರಾಸುಕವಾದ ಅನ್ನವನ್ನು ಕೊಟ್ಟು ಸುಮಿತ್ರನೆಂಬ ರಾಜನು ಪಂಚಾಶ್ಚರ್ಯಗಳನ್ನು ಪಡೆದನು.

**ಕ್ರಮಾದೇವಂ ತಪಃ ಕುರ್ವನ್ನುರ್ವೀಂ ಸರ್ವಾಂ ಪವಿತ್ರಯನ್ ।**
**ತನೂಕೃತಕಷಾಯಃ ಸನ್ ಮೋಹಾರಾತಿಜಿಗೀಷಯಾ ॥ ೯೯೧ ॥**

**ಬಹುಭಿರ್ಮುನಿಭಿಃ ಸಾರ್ಧಂ ಶ್ರೀಮಾಂಶ್ಚಕ್ರಾಯುಧಾದಿಭಿಃ ।**
**ಸಹಸ್ರಾಮ್ರವನಂ ಪ್ರಾಪ್ಯ ನಂದ್ಯಾವರ್ತತರೋರಧಃ ॥ ೯೯೨ ॥**

**ಶ್ರೇಷ್ಠಃ ಷಷ್ಠೋಪವಾಸೇನ ಧವಲೇ ದಶಮೀದಿನೇ ।**
**ಪುಷ್ಯೇ ಮಾಸೇ ದಿನಸ್ಯಾಂತೇ ಪರ್ಯಂಕಾಸನಮಾಸ್ಥಿತಃ ॥ ೯೯೩ ॥**

**ಪ್ರಾಙ್ಮುಖೋ ಬಾಹ್ಯಸಾಮಗ್ರೀಂ ನೈರ್ಗ್ರಂಥ್ಯಾದಿಮವಾಪ್ತವಾನ್ ।**
**ಕರಣತ್ರಯಸಂಪ್ರಾಪ್ತೇಃ ಕ್ಷಪಕಶ್ರೇಣಿಮಧ್ಯಗಃ ॥ ೯೯೪ ॥**

**ಆರೂಢತುರ್ಯಚಾರಿತ್ರರಥೋ ಧರ್ಮ್ಯಾಭಿಧಾನಭಾಕ್ ।**
**ಧ್ಯಾನಾಸಿಹತಮೋಹಾರಿರ್ವೀತರಾಗೋಂತ್ಯಸಂಯಮಃ ॥ ೯೯೫ ॥**

**ದ್ವಿತೀಯಶುಕ್ಲಸದ್ಧ್ಯಾನಚಕ್ರವಿಚ್ಛಿನ್ನಘಾತಿಕಃ ।**
**ಏವಂ ಷೋಡಶವರ್ಷಾಣಿ ಛಾದ್ಮಸ್ಥ್ಯಂ ಭಾವಮಾಶ್ರಿತಃ ॥ ೯೯೬ ॥**

**ನಿರ್ಗ್ರಂಥೋ ನೀರಜಾ ವೀತವಿಘ್ನೋ ವಿಶ್ವೈಕಬಾಂಧವಃ ।**
**ಕೇವಲಜ್ಞಾನಸಾಮ್ರಾಜ್ಯಶ್ರಿಯಂ ಶಾಂತಾಮಶಿಶ್ರಿಯತ್ ॥ ೯೯೭ ॥**

ಈ ರೀತಿಯಾಗಿ ತಪಸ್ಸನ್ನು ಮಾಡುವವನೂ ಕ್ರಮದಿಂದ ಸಮಸ್ತಭೂಮಿಯನ್ನು ಪವಿತ್ರವನ್ನಾಗಿ ಮಾಡುವವನೂ ಮೋಹವೈರಿಯನ್ನು ಜಯಿಸಬೇಕೆಂಬ ಇಚ್ಛೆಯಿಂದ ಕ್ರೋಧಾದಿ ಕಷಾಯಭಾವಗಳನ್ನು ಸೂಕ್ಷ್ಮಗೊಳಿಸಿದವನೂ ಆಗಿ ಶ್ರೀ ಶಾಂತೀಶ್ವರನು ಚಕ್ರಾಯುಧನೇ ಮೊದಲಾದ ಅನೇಕ ಮುನಿಗಳೊಡನೆ ಸಹಸ್ರಾಮ್ರವನವನ್ನು ಹೊಂದಿ ನಂದಿವರ್ಧನವೆಂಬ ಮರದಡಿಯಲ್ಲಿ ಪುಷ್ಯಮಾಸದಲ್ಲಿ ಶುಕ್ಲಪಕ್ಷದಲ್ಲಿ ದಶಮೀದಿವಸ ಸಾಯಂಕಾಲದಲ್ಲಿ ಆರು ಉಪವಾಸಗಳ ನಿಯಮದಿಂದ ಪರ್ಯಂಕಾಸನದಲ್ಲಿರುವವನೂ ಶ್ರೇಷ್ಠನೂ ಪೂರ್ವಾಭಿಮುಖನೂ ನಿರ್ಗ್ರಂಥತ್ವವೇ ಮೊದಲಾದ ಬಾಹ್ಯಸಾಮಗ್ರಿಯನ್ನು ಹೊಂದಿದವನೂ ಅಧಃಪ್ರವೃತ್ತಕರಣ ಅಪೂರ್ವಕರಣ ಅನಿವೃತ್ತಕರಣಗಳ ಪ್ರಾಪ್ತಿಯಿಂದ ಕ್ಷಪಕಶ್ರೇಣಿಯ ಮಧ್ಯವನ್ನು ಹೊಂದಿರುವವನೂ ನಾಲ್ಕನೆಯದಾದ ಸೂಕ್ಷ್ಮಸಾಂಪರಾಯಚಾರಿತ್ರವೆಂಬ ರಥವನ್ನೇರಿದವನೂ ಧರ್ಮಧ್ಯಾನವೆಂಬ ಖಡ್ಗದಿಂದ ಮೋಹವೆಂಬ ಶತ್ರುವನ್ನು ನಾಶಮಾಡಿದವನೂ ವೀತರಾಗನೂ ಯಥಾಖ್ಯಾತವೆಂಬ ಕೊನೆಯ ಚಾರಿತ್ರವುಳ್ಳವನೂ ಏಕತ್ವವಿತರ್ಕಶುಕ್ಲಧ್ಯಾನವೆಂಬ ಚಕ್ರದಿಂದ ಘಾತಿಕರ್ಮಗಳನ್ನು ನಾಶಮಾಡಿದವನೂ ಹೀಗೆ ಹದಿನಾರುವರುಷಗಳ ವರೆಗೆ ಛದ್ಮಸ್ಥಭಾವವನ್ನಾಶ್ರಯಿಸಿದವನೂ ನಿರ್ಗ್ರಂಥನೂ ಕರ್ಮರಜವಿಲ್ಲದವನೂ ವಿಘ್ನವಿಲ್ಲದವನೂ ಜಗತ್ತಿಗೆ ಮುಖ್ಯಬಂಧುವೂ ಆಗಿ ಶಾಂತವಾದ ಕೇವಲಜ್ಞಾನವೆಂಬ ಸಾಮ್ರಾಜ್ಯದ ಸಂಪತ್ತಿಯನ್ನು ಆಶ್ರಯಿಸಿದನು.

**ತದಾ ತೀರ್ಥಕರಾಖ್ಯೋರುಪುಣ್ಯಕರ್ಮಮಹಾಮರುತ್ ।**
**ಸಂಕ್ಷೋಭಿತಚತುರ್ಭೇದಸುರಾಂಭೋಧಿರ್ವಿಜೃಂಭಿತಃ ॥ ೯೯೮ ॥**

ಆಗ ತೀರ್ಥಂಕರತ್ವರೂಪವಾದ ವಿಶಿಷ್ಟಪುಣ್ಯಕರ್ಮವೆಂಬ ಮಹಾಮಾರುತವು ಚತುರ್ನಿಕಾಯಾಮರರೆಂಬ ಸಮುದ್ರವನ್ನು ಕ್ಷೋಭೆಗೊಳಿಸಿದುದಾಗಿ ವಿಜೃಂಭಿಸಿತು.

**ಸ್ವಸಮುದ್ಭೂತಸದ್ಭಕ್ತಿತರಂಗಾನೀತಪೂಜನಃ ।**
**ರತ್ನಾವಲೀಭಿರಭ್ಯೇತ್ಯ ಪ್ರಾರ್ಚಯತ್ಪ್ರಾಣಭೃತ್ಪತಿಮ್ ॥ ೯೯೯ ॥**

ತನ್ನಲ್ಲುಂಟಾದ ಸದ್ಭಕ್ತಿಪರಂಪರೆಗಳಿಂದ ತರಲ್ಪಟ್ಟ ಪೂಜಾಸಾಮಾಗ್ರಿಗಳುಳ್ಳುದಾದ ಚತುರ್ನಿಕಾಯಾಮರಸಮೂಹವು ರತ್ನರಾಶಿಗಳೊಡನೆ ಬಂದು ಪ್ರಾಣಿಗಳ ಸ್ವಾಮಿಯಾದ ಶಾಂತಿತೀರ್ಥಂಕರರನ್ನು ಪೂಜಿಸಿತು.

**ಚಕ್ರಾಯುಧಾದಯಶ್ಚಾಸ್ಯ ಷಟ್ತ್ರಿಂಶದ್ಗಣನಾಯಕಾಃ ।**
**ಶತಾನ್ಯಷ್ಟೌ ಸಮಾಖ್ಯಾತಾಃ ಪೂರ್ವಾಣಾಂ ಪಾರದರ್ಶಿನಃ ॥ ೧೦೦೦ ॥**

ಈ ಶಾಂತಿತೀರ್ಥಂಕರರಿಗೆ ಚಕ್ರಾಯುಧನೇ ಮೊದಲಾದ ಮೂವತ್ತಾರು ಮಂದಿ ಗಣಧರರಿದ್ದರು. ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಗಳ ಪಾರವನ್ನು ಕಂಡಿರುವ ಮುನಿಗಳು ಎಂಟುನೂರು ಮಂದಿಗಳಿದ್ದರು.

**ಶೂನ್ಯದ್ವಿತಯವಸ್ವೈಕಚತುರ್ನಿರ್ಮಿತಶಿಕ್ಷಕಾಃ ।**
**ತ್ರಿಸಹಸ್ರಾವಧಿಜ್ಞಾನಸಮುಜ್ಜ್ವಲವಿಲೋಚನಾಃ ॥ ೧೦೦೧ ॥**

ನಲ್ವತ್ತೊಂದು ಸಾವಿರದ ಎಂಟುನೂರು ಮಂದಿ ಶಿಕ್ಷಕಮುನಿಗಳಿದ್ದರು. ಮೂರುಸಾವಿರ ಮಂದಿ ಅವಧಿಜ್ಞಾನವೆಂಬ ಉಜ್ವಲವಾದ ನೇತ್ರಗಳುಳ್ಳ ಮುನಿಗಳಿದ್ದರು.

**ಚತುಃಸಹಸ್ರಸಂಖ್ಯೋಕ್ತಕೇವಲಾವಗಮೇಶ್ವರಾಃ ।**
**ಷಟ್ಸಹಸ್ರಾಣಿ ಸಂಪ್ರೋಕ್ತಾ ವಿಕ್ರಿಯರ್ದ್ಧಿವಿಭೂಷಿತಾಃ ॥ ೧೦೦೨ ॥**

ನಾಲ್ಕುಸಾವಿರಮಂದಿ ಕೇವಲಜ್ಞಾನವನ್ನು ಪಡೆದ ಮುನೀಶ್ವರರಿದ್ದರು. ಆರು ಸಾವಿರಮಂದಿ ವಿಕ್ರಿಯರ್ದ್ಧಿ ಮುನಿಗಳಿಂದ ವಿಭೂಷಿತರಾಗಿದ್ದರು.

**ಮನಃಪರ್ಯಯಸದ್ಬೋಧಾಃ ಸಹಸ್ರಾಣಾಂ ಚತುಷ್ಟಯಮ್ ।**
**ಶೂನ್ಯದ್ವಯಚತುಷ್ಪಕ್ಷಲಕ್ಷಿತಾಃ ಪೂಜ್ಯವಾದಿನಃ ॥ ೧೦೦೩ ॥**

ಮನಃ ಪರ್ಯಯಜ್ಞಾನಿಗಳು ನಾಲ್ಕುಸಾವಿರ ಮಂದಿಗಳಿದ್ದರು. ಪೂಜ್ಯರಾದ ವಾದಿಗಳು ಎರಡುಸಾವಿರದ ನಾಲ್ಕುನೂರು ಮಂದಿಗಳಿದ್ದರು.

**ತೇ ದ್ವಿಷಷ್ಟಿಸಹಸ್ರಾಣಿ ಸರ್ವೇಽಪಿ ಮುನಯೋ ಮತಾಃ ।**
**ಆರ್ಯಿಕಾ ಹರಿಷೇಣಾದ್ಯಾಃ ಖದ್ವಯತ್ರಿಖಷಣ್ಮಿತಾಃ ॥ ೧೦೦೪ ॥**

ಅವರೆಲ್ಲರೂ ಸೇರಿ ಅರುವತ್ತೆರಡುಸಾವಿರ ಮುನಿಗಳಿದ್ದರು. ಹರಿಷೇಣಾ ಮೊದಲಾದ ಆರ್ಯಿಕೆಯರು ಅರುವತ್ತು ಸಾವಿರದ ಮೂರುನೂರು ಮಂದಿಗಳಿದ್ದರು.

**ಶ್ರಾವಕಾಃ ಸುರಕೀರ್ತ್ಯಾದ್ಯಾ ಲಕ್ಷದ್ವಯನಿರೂಪಿತಾಃ ।**
**ಅರ್ಹದ್ದಾಸ್ಯಾದಿಕಾಃ ಪ್ರೋಕ್ತಾಃ ಶ್ರಾವಿಕಾ ದ್ವಿಗುಣಾಸ್ತತಃ ॥ ೧೦೦೫ ॥**

ಸುರಕೀರ್ತಿಯೇ ಮೊದಲಾದ ಶ್ರಾವಕರು ಎರಡು ಲಕ್ಷ ಜನರಿದ್ದರು. ಅರ್ಹದ್ದಾಸಿಯೇ ಮೊದಲಾದ ನಾಲ್ಕು ಲಕ್ಷ ಶ್ರಾವಿಕೆಯರಿದ್ದರು.

**ದೇವದೇವ್ಯೋಽಪ್ಯಸಂಖ್ಯಾತಾಸ್ತಿರ್ಯಗ್ಗ್ಯಾಃ ಸಂಖ್ಯಯಾ ಮಿತಾಃ ।**
**ಇತಿ ದ್ವಾದಶಭಿಃ ಸಾರ್ಧಂ ಗಣೈಃ ಸದ್ಧರ್ಮಮಾದಿಶನ್ ॥ ೧೦೦೬ ॥**

**ವಿಹರನ್ಮಾಸಮಾತ್ರಾಯುಃ ಸಮ್ಮೇದಾಚಲಮಾಗತಃ ।**
**ವ್ಯಪೇತವಿಹೃತಿರ್ಯೋಗಮಾಸ್ಥಾಯಾಚಲಿತಂ ವಿಭುಃ ॥ ೧೦೦೭ ॥**

**ಜ್ಯೇಷ್ಠಕೃಷ್ಣಚತುರ್ದಶ್ಯಾಂ ಪೂರ್ವರಾತ್ರೇ ಕೃತಕ್ರಿಯಃ ।**
**ತೃತೀಯಶುಕ್ಲಧ್ಯಾನೇನ ರುದ್ಧಯೋಗೋ ವಿಬಂಧನಃ ॥ ೧೦೦೮ ॥**

**ಇಕಾರಪಂಚಕೋಚ್ಚಾರಮಾತ್ರೇ ಕಾಲೇ ವಿಯೋಗಕಃ ।**
**ಚತುರ್ಥಶುಕ್ಲಧ್ಯಾನೇನ ನಿರಾಕೃತತನುತ್ರಯಃ ॥ ೧೦೦೯ ॥**

**ಅಗಾದ್ಭರಣಿನಕ್ಷತ್ರೇ ಲೋಕಾಗ್ರಂ ಗುಣವಿಗ್ರಹಃ ।**
**ಅತೀತಕಾಲೇತಾಃ ಸಿದ್ಧಾ ಯತ್ರಾನಂತಾ ನಿರಂಜನಾಃ ॥ ೧೦೧೦ ॥**

ಅಸಂಖ್ಯಾತ ದೇವ ದೇವಿಯರಿದ್ದರು. ಸಂಖ್ಯಾತತಿರ್ಯಕ್ಪ್ರಾಣಿಗಳಿದ್ದುವು. ಈ ರೀತಿಯಾಗಿ ದ್ವಾದಶಗಣಗಳೊಡನೆ ಸದ್ಧರ್ಮವನ್ನು ಬೋಧಿಸುತ್ತ ವಿಹರಿಸುವವನಾಗಿ ಸ್ವಾಮಿಯು ಒಂದು ತಿಂಗಳ ಆಯುಷ್ಯವುಳಿದಿರುವಾಗ ವಿಹಾರವನ್ನು ತ್ಯಜಿಸಿ ಸಮ್ಮೇದಶಿಖರಕ್ಕೆ ಬಂದು ನಿಶ್ಚಲವಾದ ಯೋಗವನ್ನು ಹೊಂದಿ ಜ್ಯೇಷ್ಠಮಾಸದ ಕೃಷ್ಣಪಕ್ಷದ ಚತುರ್ದಶೀತಿಥಿಯಲ್ಲಿ ಭರಣಿ ನಕ್ಷತ್ರದಲ್ಲಿ ಕ್ರಿಯೆಗಳನ್ನು ಪೂರ್ಣಗೊಳಿಸಿದವನೂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ತೃತೀಯಶುಕ್ಲಧ್ಯಾನದಿಂದ ಯೋಗನಿರೋಧವನ್ನು ಮಾಡಿದವನೂ ಬಂಧನರಹಿತನೂ ಐದು ಇಕಾರೋಚ್ಚಾರಮಾತ್ರ ಕಾಲದಲ್ಲಿ ಮನೋವಾಕ್ಕಾಯಯೋಗರಹಿತನೂ ವ್ಯುಪರತಕ್ರಿಯಾನಿವೃತ್ತಿಯೆಂಬ ನಾಲ್ಕನೆಯ ಶುಕ್ಲಧ್ಯಾನದಿಂದ ಪರಮೌದಾರಿಕತೈಜಸ ಕಾರ್ಮಣಗಳೆಂಬ ಮೂರು ಶರೀರಗಳನ್ನು ದೂರಮಾಡಿದವನೂ ಗುಣಗಳೆಂಬ ದೇಹವುಳ್ಳವನೂ ಆಗಿ ಭೂತಕಾಲದಲ್ಲಿ ಸಿದ್ಧಿಯನ್ನು ಪಡೆದಿರುವವರೂ ಕರ್ಮಮಲರಹಿತರೂ ಆದ ಅನಂತಸಿದ್ಧರಿಂದ ಲೋಕಾಗ್ರಭಾಗವನ್ನು ಹೊಂದಿದನು.

**ಚತುರ್ವಿಧಾಮರಾಃ ಸೇಂದ್ರಾಃ ನಿಸ್ತಂದ್ರಾ ರುಂದ್ರಭಕ್ತಯಃ ।**
**ಕೃತ್ವಾಂತ್ಯೇಷ್ಟಿಂ ತದಾಗತ್ಯ ಸ್ವಂ ಸ್ವಮಾವಾಸಮಾಶ್ರಯನ್ ॥ ೧೦೧೧ ॥**

ಆಗ ಆಲಸ್ಯವಿಲ್ಲದವರೂ ಅಧಿಕವಾದ ಭಕ್ತಿಯುಳ್ಳವರೂ ಆದ ಚತುರ್ವಿಧ ದೇವರ್ಕಳು ಇಂದ್ರಸಮೇತರಾಗಿ ಬಂದು ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ತಂತಮ್ಮ ವಾಸಸ್ಥಾನವನ್ನು ಆಶ್ರಯಿಸಿದರು.

**ಚಕ್ರಾಯುಧಾದಯೋಽಪ್ಯೇವಮಾಧ್ಯಾಯಾಂತೇ ತನುತ್ರಯಮ್ ।**
**ಹಿತ್ವಾ ನವ ಸಹಸ್ರಾಣಿ ನಿರ್ವೃತಿಂ ಯತಯೋಗಮನ್ ॥ ೧೦೧೨ ॥**

ಹೀಗೆ ಚಕ್ರಾಯುಧನೇ ಮೊದಲಾದ ಒಂಬತ್ತುಸಾವಿರ ಮಂದಿ ಯತಿಗಳೂ ಧ್ಯಾನಿಸಿ ಕೊನೆಯಲ್ಲಿ ಮೂರು ಶರೀರಗಳನ್ನು ತ್ಯಜಿಸಿ ಮೋಕ್ಷವನ್ನು ಹೊಂದಿದರು.

**ಇತಿ ಪರಮಮವಾಪ್ಯ ಜ್ಞಾನದೃಕ್ಸೌಖ್ಯವೀರ್ಯ- ।**
**ಸ್ಫುರಿತತನುನಿವಾಸವ್ಯಾಹೃತಿಸ್ಥಾನಮುಚ್ಚೈಃ ॥**
**ಸುರಪರಿವೃಢಪೂಜ್ಯಃ ಶಾಂತಿಭಟ್ಟಾರಕೋ ವೋ ।**
**ದಿಶತು ಪರಮಸಪ್ತಸ್ಥಾನಸಂಪ್ರಾಪ್ತಿಮಾಪ್ತಃ ॥ ೧೦೧೩ ॥**

ಈ ರೀತಿಯಾಗಿ ಉತ್ಕೃಷ್ಟವಾದ ಜ್ಞಾನ, ದರ್ಶನ, ಸುಖ, ವೀರ್ಯ, ಪ್ರಕಾಶಮಾನವಾದ ಪರಮೌದಾರಿಕ ದೇಹದಲ್ಲಿ ವಾಸ, ದಿವ್ಯಧ್ವನಿ ಇವುಗಳ ಸ್ಥಾನವನ್ನು ಹೊಂದಿ ದೇವಸಮೂಹದಿಂದ ಪೂಜಿಸಲ್ಪಡತಕ್ಕವನೂ ಸಪ್ತಪರಮಸ್ಥಾನಪ್ರಾಪ್ತಿಯನ್ನು ಹೊಂದಿದವನೂ–ಆಪ್ತನೂ ಆದ ಶಾಂತಿಭಟ್ಟಾರಕನು ನಿಮಗೆ ಸಪ್ತಪರಮಸ್ಥಾನಪ್ರಾಪ್ತಿಯನ್ನೀಯಲಿ.

**ಕರ್ಮಾಣ್ಯಷ್ಟ ಸಕಾರಣಾನಿ ಸಫಲಾನ್ಯುನ್ಮೂಲ್ಯ ನೈರ್ಮಲ್ಯವಾನ್ ।**
**ಸಮ್ಯಕ್ತ್ವಾದಿಗುಣಾಷ್ಟಕಂ ನಿಜಮಜಃ ಸ್ವೀಕೃತ್ಯ ಕೃತ್ಯಾಂತಗಃ ॥**
**ಸ್ವಾಕಾರಂ ವಿಗತಾದಿಭೂತಸಮಯೇ ನಷ್ಟಂ ಸಮಾಪ್ಯ ಸ್ಫುಟಮ್ ।**
**ಶಾಂತೀಶಸ್ತ್ರಿಜಗಚ್ಛಿಖಾಮಣಿರಭೂದಾವಿರ್ಭವತ್ಪ್ರಾಭವಃ ॥ ೧೦೧೪ ॥**

ಕಾರಣಸಹಿತಗಳೂ ಫಲಸಹಿತಗಳೂ ಆದ ಎಂಟು ಕರ್ಮಗಳನ್ನು ನಿರ್ಮೂಲಮಾಡಿ ನೈರ್ಮಲ್ಯವುಳ್ಳವನೂ ಸಮ್ಯಕ್ತ್ವವೇ ಮೊದಲಾದ ಎಂಟು ನಿಜಗುಣಗಳನ್ನು ಸ್ವೀಕರಿಸಿ ಜನ್ಮರಹಿತನೂ ಕೃತಕೃತ್ಯನೂ ಮುಕ್ತನಾಗುವುದಕ್ಕಿಂತ ಪೂರ್ವಸಮಯದಲ್ಲಿ ತನ್ನ ದೇಹಾಕಾರವನ್ನು ನಷ್ಟಮಾಡಿ ಚೆನ್ನಾಗಿ ಆವಿರ್ಭವಿಸಿದ ಪ್ರಭುತ್ವವುಳ್ಳವನೂ ಆದ ಶಾಂತೀಶ್ವರನು ತ್ರಿಲೋಕಶಿಖಾಮಣಿಯಾದನು.

**ಶ್ರೀಷೇಣಃ ಕುರುಜಃ ಸುರಃ ಖಗಪತಿರ್ದೇವೋ ಹಲೇಶೋಮರೋ ।**
**ಯೋ ವಜ್ರಾಯುಧಚಕ್ರಭೃತ್ಸುರಪತಿಃ ಪ್ರಾಪ್ಯಾಹಮಿಂದ್ರಂ ಪದಮ್ ॥**
**ಪಶ್ಚಾನ್ಮೇಘರಥೋ ಮುನೀಂದ್ರಮಹಿತಃ ಸರ್ವಾರ್ಥಸಿದ್ಧಿಂ ಶ್ರಿತಃ ।**
**ಶಾಂತೀಶೋ ಜಗದೇಕಶಾಂತಿರತುಲಾಂ ದಿಶ್ಯಾಚ್ಛ್ರಿಯಂ ವಶ್ಚಿರಮ್ ॥**

ಮೊದಲು ಶ್ರೀಷೇಣಮಹಾರಾಜನಾಗಿದ್ದವನು ಬಳಿಕ ಯಥಾಕ್ರಮವಾಗಿ ಉತ್ತಮ ಭೋಗಭೂಮಿಜನೂ ದೇವನೂ ಖೇಚರರಾಜನೂ ದೇವನೂ ಬಲಭದ್ರನೂ ದೇವನೂ ವಜ್ರಾಯುಧಚಕ್ರವರ್ತಿಯೂ ಅಹಮಿಂದ್ರಪದವನ್ನು ಹೊಂದಿ ದೇವಾಧಿಪತಿಯೂ ಬಳಿಕ ಮೇಘರಥನೂ ಪೂಜ್ಯನಾದ ಮುನೀಶ್ವರನೂ ಸರ್ವಾರ್ಥಸಿದ್ಧಿಯನ್ನು ಹೊಂದಿದ ಅಹಮಿಂದ್ರನೂ ಆಗಿದ್ದ ಶ್ರೀ ಶಾಂತೀಶ್ವರನು ಜಗತ್ತಿಗೆ ಶಾಂತಿಯನ್ನುಂಟುಮಾಡುವವನಾಗಿ ನಿಮ್ಮಗಳಿಗೆ ಬಹುಕಾಲ ಅನುಪಮವಾದ ಸಂಪತ್ತಿಯನ್ನೀಯಲಿ.

**ಆದಾವನಿಂದಿತಾ ಭೋಗಭೂಮಿಜೋ ವಿಮಲಪ್ರಭಃ ।**
**ತತಃ ಶ್ರೀವಿಜಯೋ ದೇವೋನಂತವೀರ್ಯೋನು ನಾರಕಃ ॥ ೧೦೧೬ ॥**

**ಮೇಘನಾದಃ ಪ್ರತೀಂದ್ರೋಭೂತ್ತತ್ಸಹಸ್ರಾಯುಧೋಜನಿ ।**
**ತತೋಹಮಿಂದ್ರಕಲ್ಪೇಶೋನಲ್ಪರ್ದ್ಧಿರಭವತ್ತತಃ ॥ ೧೦೧೭ ॥**

**ಚ್ಯುತೋ ದೃಢರಥೋ ಜಜ್ಞೇ ಪ್ರಜ್ಞೋ ಮೇಘರಥಾನುಜಃ ।**
**ಅಂತ್ಯಾನುತ್ತರಜಶ್ಚಕ್ರಾಯುಧೋ ಗಣಧರೋಕ್ಷರಃ ॥ ೧೦೧೮ ॥**

ಆದಿಯಲ್ಲಿ ಅನಿಂದಿತೆಯಾಗಿದ್ದವಳು ಬಳಿಕ ಯಥಾಕ್ರಮವಾಗಿ ಭೋಗಭೂಮಿಯ ಆರ್ಯನೂ ವಿಮಲಪ್ರಭರಾಜನೂ ಶ್ರೀವಿಜಯನೂ ದೇವನೂ ಅನಂತವೀರ್ಯನೂ ಆಮೇಲೆ ನಾರಕನೂ ಮೇಘನಾದರಾಜನೂ ಪ್ರತೀಂದ್ರನೂ ಆಗಿ ತರುವಾಯ ಸಹಸ್ರಾಯುಧನು ಜನಿಸಿದನು. ಅನಂತರದಲ್ಲಿ ಅಧಿಕವಾದ ಸಂಪತ್ತಿಯುಳ್ಳ ಅಹಮಿಂದ್ರಕಲ್ಪಾಧಿಪತಿಯಾದನು. ಅಲ್ಲಿಂದ ಚ್ಯುತನಾಗಿ ಪ್ರಾಜ್ಞನೂ ಮೇಘರಥನ ತಮ್ಮನೂ ಆದ ದೃಢರಥನಾಗಿ ಜನಿಸಿದನು. ಬಳಿಕ ಕೊನೆಯ ಅನುತ್ತರವಿಮಾನದಲ್ಲಿ ಅಹಮಿಂದ್ರನಾಗಿದ್ದು ಅಲ್ಲಿಂದ ಚ್ಯುತನಾಗಿ ಚಕ್ರಾಯುಧನಾದನು. ಅವನು ಶಾಂತೀಶ್ವರನ ನಾಶರಹಿತನಾದ ಗಣಧರನಾದನು.

**ಇತಿ ಹಿತಕೃತವೇದೀ ಬದ್ಧಸೌಹಾರ್ದಭಾವಃ ।**
**ಸಕಲಜಗದಧೀಶಾ ಶಾಂತಿನಾಥೇನ ಸಾರ್ಧಮ್ ॥**
**ಪರಮಸುಖಫಲಂ ಸಂಪ್ರಾಪ ಚಕ್ರಾಯುಧಾಂಕೋ ।**
**ನ ಭವತಿ ಕಿಮಿಹೇಷ್ಟಂ ಸಂಪ್ರಯೋಗಾನ್ಮಹದ್ಭಿಃ ॥ ೧೦೧೯ ॥**

ಈ ರೀತಿಯಾಗಿ ಹಿತಕಾರ್ಯವನ್ನು ತಿಳಿದವನೂ ಸೌಹಾರ್ದಭಾವವುಳ್ಳವನೂ ಆದ ಚಕ್ರಾಯುಧನು ಸಕಲಲೋಕಾಧಿಪತಿಯಾದ ಶಾಂತೀಶ್ವರನೊಡನೆ ಪರಮಸುಖರೂಪವಾದ ಫಲವನ್ನು ಹೊಂದಿದನು. ಈ ಲೋಕದಲ್ಲಿ ದೊಡ್ಡವರ ಸಂಬಂಧ–ಸಹವಾಸದಿಂದ ಯಾವ ಇಷ್ಟವುಂಟಾಗುವುದಿಲ್ಲ ?

**ಆನ್ಯೇ ತಾವದಿಹಾಸತಾಂ ಭಗವತಾಂ ಮಧ್ಯೇಪಿ ತೀರ್ಥೇಶಿನಾಮ್ ।**
**ಕೋಸೌ ದ್ವಾದಶಜನ್ಮಸು ಪ್ರತಿಭವಂ ಪ್ರಾಪದ್ವಿವೃದ್ಧಿಂ ಪರಾಮ್ ॥**
**ಮುಕ್ತ್ವಾ ಶಾಂತಿಜಿನಂ ತತೋ ಬುಧಜನಾಃ ಧ್ಯಾಯಂತು ಸರ್ವೋತ್ತಮಮ್ ।**
**ಸಾರ್ವಂ ಶಾಂತಿಜಿನೇಂದ್ರಮೇವ ಸತತಂ ಶಾಂತಿಂ ಸ್ವಯಂ ಪ್ರೇಪ್ಸವಃ ॥**

ಈ ಲೋಕದಲ್ಲಿ ಬೇರೆಯವರಾದರೋ ಹಾಗಿರಲಿ, ಮಾಹಾತ್ಮ್ಯವುಳ್ಳವರಾದ ತೀರ್ಥಂಕರರ ಮಧ್ಯದಲ್ಲಿಯೂ ಶಾಂತಿಜಿನನನ್ನು ಬಿಟ್ಟು ಹನ್ನೆರಡು ಜನ್ಮಗಳಲ್ಲಿ ಪ್ರತಿಯೊಂದು ಭವದಲ್ಲಿ ಯಾವನು ಉತ್ಕೃಷ್ಟವಾದ ವೃದ್ಧಿಯನ್ನು ಹೊಂದಿದನು ? ಆದುದರಿಂದ ವಿದ್ವಜ್ಜನರೇ ! ಶಾಂತಿಯನ್ನು ಪಡೆಯಲ್ಲಿಚ್ಛಿಸುವ ತಾವುಗಳು ಯಾವಾಗಲೂ ಸರ್ವೋತ್ತಮನೂ ಎಲ್ಲರಿಗೂ ಹಿತಕರನೂ ಆದ ಶಾಂತಿಜಿನೇಂದ್ರನನ್ನೇ ಧ್ಯಾನಿಸಿರಿ.

**ಧ್ವಸ್ತೋ ಮುಕ್ತಿಪಥಃ ಪುರುಪ್ರಭೃತಿಭಿರ್ದೇವೈಃ ಪುನರ್ದರ್ಶಿತಃ ।**
**ಕಿಂತ್ವಂತಂ ಪ್ರಥಿತಾವಧೇರ್ಗಮಯಿತುಂ ಕೋಪಿ ಪ್ರಭುರ್ನಾಭವತ್ ॥**
**ದೇವೇನಾಭಿಹಿತಸ್ತ್ವನೇನ ಸಮಗಾದವ್ಯಾಹತಸ್ತಾವಧಿಮ್ ।**
**ತಚ್ಛಾಂತೀಶಮುಪೇತ ತತ್ರಭವತಾಮಾದ್ಯಂ ಗುರುಂ ಧೀಧನಾಃ ॥**

ನಷ್ಟವಾಗಿದ್ದ ಮೋಕ್ಷಮಾರ್ಗವನ್ನು ಪುರುಪರಮೇಶ್ವರರೇ ಮೊದಲಾದ ದೇವರುಗಳು ಪುನಃ ಪ್ರದರ್ಶಿಸಿದರು. ಆದರೆ ಯಾವನೂ ಪ್ರಸಿದ್ಧವಾದ ಎಲ್ಲೆಯ ಕೊನೆಯನ್ನು ಹೊಂದಿಸಲು ಸಮರ್ಥನಾಗಲಿಲ್ಲ. ಈ ಶಾಂತೀಶ್ವರನು ಹೇಳಿದ ಮುಕ್ತಿಮಾರ್ಗವಾದರೋ ಪ್ರತಿಬಂಧಕವಿಲ್ಲದಿರುವ ತನ್ನ ಎಲ್ಲೆಯನ್ನು ಹೊಂದಿದೆ. ಆದುದರಿಂದ ಎಲೈ ಬುದ್ಧಿಯೆಂಬ ಧನವುಳ್ಳವರೇ ! ಪೂಜ್ಯರಲ್ಲಿ ಆದ್ಯಗುರುವಾದ ಶಾಂತೀಶ್ವರನನ್ನು ಹೊಂದಿರಿ. ಧರ್ಮತೀರ್ಥಂಕರರವರೆಗೆ ಮಧ್ಯೇ ಮಧ್ಯೇ ಮುಕ್ತಿಮಾರ್ಗವು ವಿಚ್ಛಿನ್ನವಾಗಿದ್ದಿತೆಂದೂ ಶಾಂತಿತೀರ್ಥಂಕರರ ಕಾಲದಿಂದ ಈವರೆಗೂ ವಿಚ್ಛಿನ್ನವಾಗಿಲ್ಲವೆಂದೂ ಭಾವವು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಶಾಂತಿಚಕ್ರಧರ ತೀರ್ಥಕರಪುರಾಣಂ ನಾಮ ತ್ರಿಷಷ್ಟಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಶಾಂತಿಚಕ್ರಧರ ತೀರ್ಥಕರಪುರಾಣವೆಂಬ
ಅರವತ್ತಮೂರನೆಯ ಪರ್ವವು ಸಮಾಪ್ತವಾದುದು.

---

# ಅಥ ಕುಂಥುತೀರ್ಥಕರಪುರಾಣಂ

**ಗ್ರಂಥಾನ್ ಕಂಥಾಮಿವ ತ್ಯಕ್ತ್ವಾ ಸದ್ಗ್ರಂಥಾನ್ ಮೋಕ್ಷಗಾಮಿನಃ ।**
**ರಕ್ಷನ್ ಸೂಕ್ಷ್ಮಾಂಶ್ಚ ಕುಂಥುಭ್ಯಃ ಕುಂಥುಃ ಪಾಂಥಾನ್ ಸ ಪಾತು ವಃ ॥**

ಯಾವನು, ಹರುಕುಬಟ್ಟೆಯನ್ನು ತ್ಯಜಿಸುವಂತೆ, ಪರಿಗ್ರಹಗಳನ್ನು ತ್ಯಜಿಸಿ ಉತ್ತಮದ್ರವ್ಯಗಳುಳ್ಳವರಾದ ಮೋಕ್ಷಗಾಮಿಗಳನ್ನೂ ಕುಂಥುವೆಂಬ ಸೂಕ್ಷ್ಮಜೀವಗಳಿಗಿಂತಲೂ ಸೂಕ್ಷ್ಮವಾದ ಮಾರ್ಗಸ್ಥಜೀವಗಳನ್ನೂ ರಕ್ಷಣೆಮಾಡುತ್ತಾನೋ ಅಂತಹ ಕುಂಥುನಾಥನು ನಿಮ್ಮಗಳನ್ನು ಕಾಪಾಡಲಿ.

**ದ್ವೀಪೇಽಸ್ಮಿನ್ ಪ್ರಾಗ್ವಿದೇಹಸ್ಯ ಸೀತಾದಕ್ಷಿಣಕೂಲಗೇ ।**
**ವತ್ಸಾಖ್ಯವಿಷಯೇ ರಾಜಾ ಸುಸೀಮಾನಗರಾಧಿಪಃ ॥ ೧ ॥**

**ಅಭೂತ್ಸಿಂಹರಥೋ ನಾಮ ಶ್ರೀಮಾನ್ ಸಿಂಹಪರಾಕ್ರಮಃ ।**
**ಸಂಹತಾನಪಿ ವಿದ್ವಿಷ್ಟಾನ್ ಮಹಿಮ್ನೈವ ವಶಂ ನಯನ್ ॥ ೨ ॥**

ಈ ಜಂಬೂದ್ವೀಪದಲ್ಲಿ ಪೂರ್ವವಿದೇಹದ ಸೀತಾನದಿಯ ದಕ್ಷಿಣತೀರದಲ್ಲಿರುವ ವತ್ಸವೆಂಬ ದೇಶದಲ್ಲಿ ಸುಸೀಮಾನಗರದ ದೊರೆಯೂ ಶ್ರೀಮಂತನೂ ಸಿಂಹ ಪರಾಕ್ರಮಿಯೂ ಗುಂಪುಸೇರಿರುವ ಶತ್ರುಗಳನ್ನೂ ತನ್ನ ಮಹಿಮೆಯಿಂದಲೇ ವಶ ಪಡಿಸಿಕೊಳ್ಳುವವನೂ ಆದ ಸಿಂಹರಥನೆಂಬ ರಾಜನಿದ್ದನು.

**ಭಯಾದಿವ ತಮಂಹೋರಿರ್ಬೃಂಹಿತನ್ಯಾಯವೃತ್ತಕಮ್ ।**
**ಲಂಘಿತಾಖಿಲಭೂಚಕ್ರಂ ನಾಲೋಕಿಷ್ಟಾತಿದೂರತಃ ॥ ೩ ॥**

ವೃದ್ಧಿಯನ್ನು ಹೊಂದುತ್ತಿರುವ ನ್ಯಾಯಾಚರಣೆಯುಳ್ಳವನೂ ಸಮಸ್ತ ಭೂಮಂಡಲವನ್ನತಿಕ್ರಮಿಸಿದವನೂ ಆದ ಆ ಸಿಂಹರಥನನ್ನು ಪಾಪವೆಂಬ ಶತ್ರುವು, ಭಯದಿಂದಲೋ ಎಂಬಂತೆ, ಬಹುದೂರದಿಂದಲೂ ನೋಡಲಿಲ್ಲ.

**ಭೋಗಾನುಭವ ಏವಾಸ್ಮೈ ಶಾಸ್ತ್ರಮಾರ್ಗಾನುಸಾರಿಣೇ ।**
**ಅದಿತಾಮುತ್ರಿಕೀಂ ಸಿದ್ಧಿಮೈಹಿಕೀಂ ಚಾಸ್ತವಿದ್ವಿಷೇ ॥ ೪ ॥**

ಶಾಸ್ತ್ರಮಾರ್ಗಾನುಸಾರಿಯೂ ಶತ್ರುರಹಿತನೂ ಆದ ಈ ಸಿಂಹರಥನಿಗೆ ಭೋಗಾನುಭವವೇ ಐಹಿಕಸಿದ್ಧಿಯನ್ನೂ ಆಮುತ್ರಿಕಸಿದ್ಧಿಯನ್ನೂ ಕೊಟ್ಟಿತು. ಸಿಂಹರಥನ ಭೋಗಾನುಭವವು ಅವನಿಗೆ ಐಹಿಕಸುಖವನ್ನು ಕೊಟ್ಟುದುದಲ್ಲದೆ ಪರಲೋಕದ ಸುಖಕ್ಕೂ ಕಾರಣವಾಗಿದ್ದಿತೆಂದು ಭಾವವು.

**ಸ ಕದಾಚಿದ್ದಿವೋಲ್ಕಾಯಾಃ ಪಾತಮಾಲೋಕ್ಯ ತರ್ಕಯನ್ ।**
**ಇಯಂ ಮೋಹಮಹಾರಾತಿವಿಘಾತಾಯೇತಿ ಚೇತಸಾ ॥ ೫ ॥**

**ತದೈವೋಪೇತ್ಯ ನತ್ವರ್ಷಿಂ ವೃಷಭಂ ಯತಿಪೂರ್ವಕಮ್ ।**
**ಶ್ರುತ್ವಾ ತದುದಿತಂ ಭಕ್ತ್ಯಾ ಧರ್ಮತತ್ತ್ವಸ್ಯ ವಿಸ್ತರಮ್ ॥ ೬ ॥**

**ಸ್ಯಾಂ ಸಮಾಹಿತಮೋಹೋಽಹಂ ಯದ್ಯುಲ್ಕಾಸೂಚಿತಾಪದಃ ।**
**ಮಮೈವೇತಿ ವಿಚಿಂತ್ಯಾಶು ಸುಧೀರ್ಮೋಹಜಿಹಾಸಯಾ ॥ ೭ ॥**

**ರಾಜ್ಯಭಾರಂ ಸಮಾರೋಪ್ಯ ಸುತೇ ಸಹ ಮಹೀಭುಜೈಃ ।**
**ಬಹುಭಿಃ ಸಂಯಮಂ ಪ್ರಾಪ್ಯ ವಿಬುದ್ಧೈಕಾದಶಾಂಗಕಃ ॥ ೮ ॥**

**ಬಧ್ವಾ ತತ್ಕಾರಣೈಸ್ತೀರ್ಥಕರನಾಮಾದಿಕಂ ಶುಭಮ್ ।**
**ಸ್ವಾಯುರಂತೇ ಸಮಾರಾಧ್ಯ ಪ್ರಾಪಾಂತಿಮಮನುತ್ತರಮ್ ॥ ೯ ॥**

ಅವನು ಒಂದಾನೊಂದು ಕಾಲದಲ್ಲಿ ಆಕಾಶದಿಂದ ಉಲ್ಕಾಪಾತವನ್ನು ನೋಡಿ "ಇದು ಮೋಹವೆಂಬ ಮಹಾವೈರಿಯನ್ನು ನಾಶಮಾಡುವುದಕ್ಕೋಸ್ಕರವಾಗಿದೆ" ಎಂದು ಬುದ್ಧಿಯಿಂದ ಊಹಿಸುವವನಾಗಿ ಆಗಲೇ ಯತಿವೃಷಭನೆಂಬ ಋಷಿಯನ್ನು ಹೊಂದಿ ಅವನಿಗೆ ನಮಸ್ಕರಿಸಿ ಅವನು ಹೇಳಿದ ಧರ್ಮತತ್ತ್ವದ ವಿಸ್ತೃತ ವರ್ಣನೆಯನ್ನು ಭಕ್ತಿಯಿಂದ ಕೇಳಿ "ನಾನು ಮೋಹಕರ್ಮದ ಉಪಶಾಂತಿಯುಳ್ಳವನಾದರೆ ಉಲ್ಕಾಪಾತದಿಂದ ಸೂಚಿತವಾದ ಆಪತ್ತುಗಳು ನನಗೇ ಆಗಿರುತ್ತವೆ" ಎಂದು ಚಿಂತಿಸಿ ಪ್ರಾಜ್ಞನಾದ ಆ ಸಿಂಹರಥನು ಶೀಘ್ರವಾಗಿ ಮೋಹವನ್ನು ತ್ಯಜಿಸಬೇಕೆಂಬ ಇಚ್ಛೆಯಿಂದ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ಅನೇಕರಾಜರುಗಳೊಡನೆ ಸಂಯಮ–ವ್ರತವನ್ನು ಹೊಂದಿ ಏಕಾದಶಾಂಗಶಾಸ್ತ್ರವನ್ನು ತಿಳಿದವನಾಗಿ ತೀರ್ಥಕರ ನಾಮಕರ್ಮದ ಕಾರಣಗಳಿಂದ ಆ ತೀರ್ಥಕರನಾಮವೇ ಮೊದಲಾದ ಶುಭಕರ್ಮ ವನ್ನು ಬಂಧಿಸಿ ಆಯುಷ್ಯಾವಸಾನದಲ್ಲಿ ಮಡಿದು ಕೊನೆಯ ಅನುತ್ತರ ವಿಮಾನವನ್ನು ಹೊಂದಿದನು. ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಜನಿಸಿದನೆಂದು ಭಾವವು.

**ಅನ್ವಭೂದಪ್ರವೀಚಾರಂ ಸುಖಂ ತತ್ರಾತ್ತಕೌತುಕಮ್ ।**
**ಮಾನಸಂ ಮಾನನೀಯಂ ಯನ್ಮುನೀನಾಂ ಚಾಪರಾಗಜಮ್ ॥ ೧೦ ॥**

ಅಲ್ಲಿ ಕುತೂಹಲಯುಕ್ತವೂ ಕಾಮಸೇವನಾರಹಿತವೂ ಮುನಿಗಳಿಗೂ ಮಾನ್ಯವು ರಾಗರಹಿತವೂ ಆದ ಮಾನಸಿಕಸುಖವನ್ನನುಭವಿಸಿದನು.

**ಇಹ ಜಂಬೂಮತಿ ದ್ವೀಪೇ ಭರತೇ ಕುರುಜಾಂಗಲೇ ।**
**ಹಾಸ್ತಿನಾಖ್ಯಪುರಾಧೀಶಃ ಕೌರವಃ ಕಾಶ್ಯಪಾನ್ವಯಃ ॥ ೧೧ ॥**

**ಶೂರಸೇನೋ ಮಹಾರಾಜಃ ಶ್ರೀಕಾಂತಾಸ್ಯಾಗ್ರವಲ್ಲಭಾ ।**
**ದೇವೇಭ್ಯೋ ವಸುಧಾರಾದಿಪೂಜಾಮಾಪ್ತವತೀ ಸತೀ ॥ ೧೨ ॥**

**ಭಾಗೇ ಮನೋಹರೇ ಯಾಮೇ ದಶಮ್ಯಾಂ ನಿಶಿ ಪಶ್ಚಿಮೇ ।**
**ಶ್ರಾವಣೇ ಬಹುಲೇ ಪಕ್ಷೇ ನಕ್ಷತ್ರೇ ಕೃತ್ತಿಕಾಹ್ವಯೇ ॥ ೧೩ ॥**

**ಸರ್ವಾರ್ಥಸಿದ್ಧಿದೇವಸ್ಯ ಸ್ವರ್ಗಾವತರಣಕ್ಷಣೇ ।**
**ದೃಷ್ಟಷೋಡಶಸುಸ್ವಪ್ನಾ ಗಜಂ ವಕ್ತ್ರಪ್ರವೇಶಿನಮ್ ॥ ೧೪ ॥**

**ನಿಶಮ್ಯ ಯಾಮಭೇರ್ಯಾದಿಮಂಗಲಧ್ವನಿಬೋಧಿತಾ ।**
**ಕೃತನಿತ್ಯಕ್ರಿಯಾ ಸ್ನಾತ್ವಾ ಧೃತಮಂಗಲಮಂಡನಾ ॥ ೧೫ ॥**

**ಆಪ್ತೈಃ ಕತಿಪಯೈರೇವ ವೃತಾ ವಿದ್ಯುದ್ವಿಲಾಸಿನೀ ।**
**ದ್ಯೋತಯಂತೀ ಸದಾ ವ್ಯೋಮ ಸಾಕ್ಷಾಲ್ಲಕ್ಷ್ಮೀರಿವಾಪರಾ ॥ ೧೬ ॥**

**ಕೃತಾನುರೂಪವಿನಯಾ ಭರ್ತುರರ್ಧಾಸನೇ ಸ್ಥಿತಾ ।**
**ಸ್ವಪ್ನಾವಲಿಂ ನಿವೇದ್ಯಾಸ್ಮಾದ್ವಿದಿತ್ವಾವಧಿವೀಕ್ಷಣಾತ್ ॥ ೧೭ ॥**

**ಫಲಾನ್ಯನುಕ್ರಮಾತ್ತೇಷಾಂ ವಿಕಸದ್ವದನಾಂಬುಜಾ ।**
**ನಲಿನೀವಾಂಶುಸಂಸ್ಪರ್ಶಾದುಷ್ಣಾಂಶೋರತುಷತ್ತರಾಮ್ ॥ ೧೮ ॥**

ಇಲ್ಲಿ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕುರುಜಾಂಗಲದೇಶದಲ್ಲಿ ಹಸ್ತಿನಾಪುರದ ದೊರೆಯೂ ಕುರುವಂಶಜನೂ ಕಾಶ್ಯಪಗೋತ್ರೋದ್ಭವನೂ ಆದ ಶೂರಸೇನನೆಂಬ ಮಹಾರಾಜನಿದ್ದನು. ಈತನ ಮುಖ್ಯಪತ್ನಿಯೂ ಸಾಧ್ವಿಯೂ ಆದ ಶ್ರೀಕಾಂತೆಯು ದೇವರ್ಕಳಿಂದ ವಸುಧಾರಾದಿಪೂಜೆಯನ್ನು ಹೊಂದಿ ಶ್ರಾವಣ ಮಾಸದ ಕೃಷ್ಣಪಕ್ಷದ ದಶಮೀ ತಿಥಿಯ ರಾತ್ರಿಯ ಕೊನೆಯ ಭಾಗದಲ್ಲಿ

ಮನೋಹರಯಾಮದಲ್ಲಿ ಕೃತ್ತಿಕಾನಕ್ಷತ್ರದಲ್ಲಿ ಸರ್ವಾರ್ಥಸಿದ್ಧಿಯ ದೇವನ ಸ್ವರ್ಗಾವತರಣಸಮಯದಲ್ಲಿ ಹದಿನಾರು ಶುಭಸ್ವಪ್ನಗಳನ್ನೂ ಮುಖವನ್ನು ಪ್ರವೇಶಿಸುವ ಆನೆಯ ಸ್ವಪ್ನವನ್ನೂ ಕಂಡು ಯಾಮಭೇರಿಯೇ ಮೊದಲಾದುವುಗಳ ಮಂಗಲಧ್ವನಿಯಿಂದ ಎಚ್ಚತ್ತು ನಿತ್ಯಕ್ರಿಯೆಗಳನ್ನೂ ಸ್ನಾನವನ್ನೂ ಮಾಡಿ ಮಂಗಲಾಲಂಕಾರಗಳನ್ನು ಧರಿಸಿಕೊಂಡು ಕೆಲವು ಆಪ್ತರಿಂದ ಆವರಿಸಲ್ಪಟ್ಟವಳೂ ಮಿಂಚಿನಂತೆ ವಿಲಾಸವುಳ್ಳವಳೂ ಸದಾ ಆಕಾಶವನ್ನು ಪ್ರಕಾಶಪಡಿಸುವ ಮತ್ತೊಬ್ಬಳು ಸಾಕ್ಷಾತ್ ಲಕ್ಷ್ಮಿಯಂತಿರುವವಳೂ ಅನುರೂಪವಾದ ವಿನಯವನ್ನು ಮಾಡಿದವಳೂ ಗಂಡನ ಬಳಿಗೆ ಹೋಗಿ ಅವನ ಅರ್ಧಾಸನದಲ್ಲಿ ಕುಳಿತು ಸ್ವಪ್ನಾವಲಿಯನ್ನು ನಿವೇದಿಸಿ ಅವಧಿಜ್ಞಾನನೇತ್ರವುಳ್ಳವನಾದ ಇವನಿಂದ ಆ ಸ್ವಪ್ನಗಳ ಫಲಗಳನ್ನು ಅನುಕ್ರಮದಿಂದ ತಿಳಿದು ಅರಳಿದ ಮುಖಕಮಲವುಳ್ಳವಳೂ ಆಗಿ, ಸೂರ್ಯನ ಕಿರಣಗಳ ಸ್ಪರ್ಶದಿಂದ ತಾವರೆಯ ಬಳ್ಳಿಯಂತೆ, ಬಹಳವಾಗಿ ಸಂತೋಷಪಟ್ಟಳು.

**ತದೈವಾನಿಮಿಷಾಧೀಶಾಃ ಕಲ್ಯಾಣಾಭಿಷವಂ ತಯೋಃ ।**
**ವಿಧಾಯ ಬಹುಧಾಭ್ಯರ್ಚ್ಯ ತೋಷಯಿತ್ವಾ ಯಯುರ್ದಿವಮ್ ॥ ೨೦ ॥**

ಆಗಲೇ ದೇವೇಂದ್ರರು ಬಂದು ಆ ದಂಪತಿಗಳಿಗೆ ಕಲ್ಯಾಣಾಭಿಷೇಕವನ್ನು ಮಾಡಿ ಬಹಳವಾಗಿ ಪೂಜಿಸಿ ಸಂತೋಷಪಡಿಸಿ ಸ್ವರ್ಗಕ್ಕೆ ಹೋದರು.

**ಶುಕ್ತಿರ್ಮುಕ್ತಾ ವಿಶೇಷೇಣ ವಾಭೂತ್ಸಾ ತೇನ ಗರ್ಭಿಣೀ ।**
**ಕ್ರೋಡೀಕೃತಾಮೃತಾಭೀಷುರ್ಮೇಘರೇಖೇವ ಚಾಬಭೌ ॥ ೨೧ ॥**

ಮುಕ್ತಾಫಲವಿಶೇಷದಿಂದ ಮುತ್ತಿನ ಚಿಪ್ಪಿನಂತೆ, ಆ ಸರ್ವಾರ್ಥಸಿದ್ಧಿದೇವನಿಂದ ಆಕೆಯು ಗರ್ಭಿಣಿಯಾದಳು ಮತ್ತು ಕ್ರೋಡೀಕೃತವಾದ ಅಮೃತಕಿರಣಗಳುಳ್ಳ ಮೇಘರೇಖೆಯಂತೆ ಪ್ರಕಾಶಿಸಿದಳು.

**ನವಮೇ ಮಾಸಿ ವೈಶಾಖೇ ಶುಕ್ಲಪಕ್ಷಾದಿಮೇ ದಿನೇ ।**
**ಸಾಸೂತಾಗ್ನೇಯಯೋಗೇ ವಾ ವಿಧುಂ ತಮಪರಾ ದಿಶಾ ॥ ೨೨ ॥**

ಪಶ್ಚಿಮದಿಕ್ಕು ಚಂದ್ರನನ್ನು ಉದಯಗೊಳಿಸುವಂತೆ, ಆ ಶ್ರೀಕಾಂತಾದೇವಿಯು ಒಂಬತ್ತನೆಯ ತಿಂಗಳಲ್ಲಿ ವೈಶಾಖಮಾಸದ ಶುಕ್ಲಪಕ್ಷದ ಪ್ರಥಮೆಯ ದಿವಸದಲ್ಲಿ ಆಗ್ನೇಯಯೋಗದಲ್ಲಿ–ಕೃತ್ತಿಕಾನಕ್ಷತ್ರದಲ್ಲಿ ಪುತ್ರನನ್ನು ಹಡೆದಳು.

**ತುರಾಷಹಂ ಪುರೋಧಾಯ ಸಮಭ್ಯೇತ್ಯ ಸುರಾಸುರಾಃ ।**
**ಸುಮೇರುಮರ್ಭಕಂ ನೀತ್ವಾ ಕ್ಷೀರಸೈಂಧವವಾರಿಭಿಃ ॥ ೨೩ ॥**

**ಅಭಿಷಿಚ್ಯ ವಿಭೂಷ್ಯೈನಂ ಕುಂಥುಮಾಹೂಯ ಸಂಜ್ಞಯಾ ।**
**ಸಮಾನೀಯ ಸಮರ್ಪ್ಯಾಯನ್ ಪಿತ್ರೋರಾವಾಸಮಾತ್ಮನಃ ॥ ೨೪ ॥**

ಆಗ ಸುರಾಸುರರು ಇಂದ್ರನನ್ನು ಮುಂದುಮಾಡಿಕೊಂಡು ಬಂದು ಮಗುವನ್ನು ಮೇರುಪರ್ವತಕ್ಕೆ ತೆಗೆದುಕೊಂಡು ಹೋಗಿ ಕ್ಷೀರಸಮುದ್ರದ ಜಲಗಳಿಂದ ಅಭಿಷೇಕವನ್ನು ಮಾಡಿ ಅಲಂಕರಿಸಿ ಇವನನ್ನು ಕುಂಥುವೆಂದು ಕರೆದು–ನಾಮಕರಣವನ್ನು ಮಾಡಿ ತಂದು ತಂದೆ ತಾಯಿಗಳಿಗೆ ಸಮರ್ಪಿಸಿ ತಮ್ಮ ವಾಸಸ್ಥಾನಗಳಿಗೆ ಹೋದರು.

**ಶಾಂತೀಶತೀರ್ಥಸಂತಾನಕಾಲೇಜನಿ ಜಿನೇಶ್ವರಃ ।**
**ಪಲ್ಯೋಪಮಾರ್ಧೇ ಪುಣ್ಯಾಬ್ಧಿಸ್ತದಭ್ಯಂತರಜೀವಿತಃ ॥ ೨೫ ॥**

ಶಾಂತೀಶ್ವರರ ತೀರ್ಥಪರಂಪರೆಯ ಅರ್ಧಪಲ್ಯೋಪಮವರ್ಷಪರಿಮಿತವಾದ ಕಾಲದಲ್ಲಿ ಪುಣ್ಯಸಮುದ್ರನೂ ಆ ಅರ್ಧಪಲ್ಯೋಪಮಕಾಲದಲ್ಲಿ ಜೀವಿಸಿದವನೂ ಆದ ಕುಂಥುಜಿನೇಶ್ವರನು ಜನಿಸಿದನು.

**ಸಮಾಪಂಚಸಹಸ್ರೋನಲಕ್ಷಾ ಸಂವತ್ಸರಸ್ಥಿತಿಃ ।**
**ಪಂಚತ್ರಿಂಶದ್ಧನುಷ್ಕಾಯೋ ನಿಷ್ಟಪ್ತಾಷ್ಟಾಪದದ್ಯುತಿಃ ॥ ೨೬ ॥**

**ಖಪಂಚಮುನಿವಹ್ನಿದ್ವಿಪ್ರಮಾಸಂವತ್ಸರಾಂತರೇ ।**
**ನೀತ್ವಾ ಕೌಮಾರಮೇತಾವತ್ಯೇವ ಕಾಲೇ ಚ ರಾಜತಾಮ್ ॥ ೨೭ ॥**

**ನಿಜಜನ್ಮದಿನೇ ಚಕ್ರಲಕ್ಷ್ಮೀಂ ಸಂಪ್ರಾಪ್ಯ ಸಮ್ಮದಾತ್ ।**
**ದಶಾಂಗಭೋಗಾನ್ ನಿರ್ವಿಶ್ಯ ನಿಷ್ಪ್ರತೀಪಂ ನಿರಂತರಮ್ ॥ ೨೮ ॥**

**ಷಡಂಗಬಲಸಂಯುಕ್ತಃ ಕದಾಚಿತ್ಕ್ರೀಡಿತುಂ ವನಮ್ ।**
**ಗತ್ವಾ ರಂತ್ವಾ ಚಿರಂ ಸ್ವೈರಂ ನಿವರ್ತ್ಯಾಯನ್ಪುನಃ ಪುರಮ್ ॥ ೨೯ ॥**

**ಮುನಿಮಾತಪಯೋಗೇನ ಸ್ಥಿತಂ ಕಂಚಿನ್ನ್ಯರೂಪಯತ್ ।**
**ಮಂತ್ರಿಣಂ ಪ್ರತಿ ತರ್ಜನ್ಯಾ ಪಶ್ಯ ಪಶ್ಯೇತಿ ಚಕ್ರಭೃತ್ ॥ ೩೦ ॥**

ಐದು ಸಹಸ್ರವರ್ಷಗಳು ಕಡಮೆಯಾದ ಒಂದು ಲಕ್ಷವರ್ಷಸ್ಥಿತಿ–ಆಯುಷ್ಯವುಳ್ಳವನೂ ಮೂವತ್ತೈದು ಧನುಃಪರಿಮಿತವಾದ ಶರೀರವುಳ್ಳವನೂ ಕಾಯಿಸಲ್ಪಟ್ಟ ಚಿನ್ನದಂತೆ ದೇಹಕಾಂತಿಯುಳ್ಳವನೂ ಆಗಿ ಇಪ್ಪತ್ತುಮೂರು ಸಾವಿರದ ಏಳು ನೂರೈವತ್ತು ವರುಷಗಳ ಕಾಲದಲ್ಲಿ ಕೌಮಾರಾವಸ್ಥೆಯನ್ನೂ ಇಷ್ಟೇ ಕಾಲದಲ್ಲಿ (೨೩೭೫೦) ದೊರೆತನವನ್ನೂ ಕಳೆದು ತನ್ನ ಜನ್ಮದಿನದಲ್ಲಿ ಚಕ್ರಸಂಪತ್ತಿಯನ್ನು ಪಡೆದು ಕುಂಥುಚಕ್ರೇಶ್ವರನು ಸಂತೋಷದಿಂದ ದಶಾಂಗಭೋಗಗಳನ್ನು ನಿರಾತಂಕವಾಗಿ ಎಡಬಿಡದೆ ಅನುಭವಿಸಿ ಒಂದಾನೊಂದು ಕಾಲದಲ್ಲಿ ಕ್ರೀಡಿಸುವುದಕ್ಕೋಸ್ಕರ ಷಡಂಗಬಲಸಮೇತನಾಗಿ ವನಕ್ಕೆ ಹೋಗಿ ಬಹುಸಮಯದವರೆಗೆ ಯಥೇಚ್ಛವಾಗಿ ಕ್ರೀಡಿಸಿ ಹಿಂದಿರುಗಿ ಮತ್ತೆ ಪಟ್ಟಣಕ್ಕೆ ಬರುತ್ತ ಬಿಸಿಲಿನಲ್ಲಿ ಧ್ಯಾನದಿಂದಿದ್ದ ಒಬ್ಬಾನೊಬ್ಬ ಮುನಿಯನ್ನು ತರ್ಜನಿಯೆಂಬ ಬೆರಲಿನಿಂದ ಮಂತ್ರಿಗೆ "ನೋಡು ನೋಡು" ಎಂದು ತೋರಿಸಿದನು.

**ಸ ತಂ ನಿರೀಕ್ಷ್ಯ ತತ್ರೈವ ಭಕ್ತ್ಯಾವನತಮಸ್ತಕಃ ।**
**ದೇವೈವಂ ದುಷ್ಕರಂ ಕುರ್ವಂಸ್ತಪಃ ಕಿಂ ಫಲಮಾಪ್ಸ್ಯತಿ ॥ ೩೧ ॥**

**ಇತ್ಯಪ್ರಾಕ್ಷೀನ್ನೃಪೋಪ್ಯಸ್ಯ ಭೂಯಃ ಸ್ಮೇರಮುಖೋವದತ್ ।**
**ಭವೇಸ್ಮಿನ್ನೇವ ನಿರ್ಮೂಲ್ಯ ಕರ್ಮಾಣ್ಯಾಪ್ನೋತಿ ನಿರ್ವೃತಿಮ್ ॥ ೩೨ ॥**

**ನ ಚೇದೇವಂ ಸುರೇಂದ್ರತ್ವಚಕ್ರವರ್ತಿತ್ವಗೋಚರಮ್ ।**
**ಸುಖಮಭ್ಯುದಯಂ ಭುಕ್ತ್ವಾ ಕ್ರಮಾಚ್ಛಾಶ್ವತಮೇಷ್ಯತಿ ॥ ೩೩ ॥**

**ಅಪರಿತ್ಯಕ್ತಸಂಗಸ್ಯ ಭವೇತ್ಪರ್ಯಟನಮ್ ಭವೇ ।**
**ಇತ್ಯುಚ್ಯೈರ್ಮುಕ್ತಿಸಂಸಾರಕಾರಣಂ ಪರಮಾರ್ಥವಿತ್ ॥ ೩೪ ॥**

ಆ ಮಂತ್ರಿಯು ಆ ಮುನಿಯನ್ನು ನೋಡಿ ಅಲ್ಲೇ ಭಕ್ತಿಯಿಂದ ತಲೆಬಗ್ಗಿಸಿ–ನಮಸ್ಕರಿಸಿದವನಾಗಿ "ಸ್ವಾಮಿಯೆ! ಇವನು ಹೀಗೆ ದುಷ್ಕರವಾದ ತಪಸ್ಸನ್ನು ಮಾಡುವವನಾಗಿ ಯಾವ ಫಲವನ್ನು ಹೊಂದುವನು ?" ಎಂದು ಪ್ರಶ್ನೆಮಾಡಿದನು. ಕುಂಥುರಾಜನೂ ಹಸನ್ಮುಖನಾಗಿ ಮತ್ತೆ ಈ ಮಂತ್ರಿಗೆ "ಇದೇ ಭವದಲ್ಲಿ ಕರ್ಮಗಳನ್ನು ನಿರ್ಮೂಲಮಾಡಿ ಮೋಕ್ಷವನ್ನು ಹೊಂದುವನು. ಹೀಗಲ್ಲದಿದ್ದರೆ ದೇವೇಂದ್ರತ್ವ ಚಕ್ರವರ್ತಿತ್ವಗೋಚರವಾದ ಅಭ್ಯುದಯಸುಖವನ್ನನುಭವಿಸಿ ಕ್ರಮದಿಂದ ನಿತ್ಯಸುಖವನ್ನು ಹೊಂದುವನು. ಪರಿಗ್ರಹಗಳನ್ನು ತ್ಯಜಿಸದಿರುವವನಿಗೆ ಭವದಲ್ಲಿ ಪರಿಭ್ರಮಣವಾಗುವುದು" ಈ ರೀತಿಯಾಗಿ ಪರಮಾರ್ಥವನ್ನು ತಿಳಿದ ಕುಂಥುನಾಥನು ಮುಕ್ತಿಯ ಮತ್ತು ಸಂಸಾರದ ಕಾರಣವನ್ನು ಚೆನ್ನಾಗಿ ಹೇಳಿದನು.

**ಕಾಲೋ ಮಂಡಲಿಕತ್ವೇನ ಯಾವಾನ್ನೀತಃ ಸುಖಾಯುಷಾ ।**
**ತಾವತ್ಯೇವ ಸಮಾ ನೀತಾ ಮಹೇಚ್ಛಶ್ಚಕ್ರವರ್ತಿನಾಮ್ ॥ ೩೫ ॥**

**ವಿರಜ್ಯ ರಾಜ್ಯಭೋಗೇಷು ನಿರ್ವಾಣಸುಖಲಿಪ್ಸಯಾ ।**
**ಸ್ವಾತೀತಭವಬೋಧೇನ ಲಬ್ಧಬೋಧಿರ್ಬುಧೋತ್ತಮಃ ॥ ೩೬ ॥**

**ಸಾರಸ್ವತಾದಿಸಂಸ್ತೋತ್ರಮಪಿ ಸಂಭಾವ್ಯ ಸಾದರಮ್ ।**
**ಸ್ವಜೇ ನಿಯೋಜ್ಯ ರಾಜ್ಯಸ್ಯ ಭಾರಂ ನಿಷ್ಕ್ರಮಣೋತ್ಸವಮ್ ॥ ೩೭ ॥**

ಸ್ವಯಂ ಸಂಪ್ರಾಪ್ಯ ದೇವೇಂದ್ರೈಃ ಶಿಬಿಕಾಂ ವಿಜಯಾಭಿಧಾಮ್ ।
ಆರುಹ್ಯಾಮರಸಂವಾಹ್ಯಾಂ ಸಹೇತುಕವನಂ ಪ್ರತಿ ॥ ೩೮ ॥

ಗತ್ವಾ ಷಷ್ಠೋಪವಾಸೇನ ಸಂಯಮಂ ಪ್ರತ್ಯಪದ್ಯತ ।
ಜನ್ಮಮಾಃಪಕ್ಷದಿವಸೇ ಕೃತ್ತಿಕಾಯಾಂ ನೃಪೋತ್ತಮೈಃ ॥ ೩೯ ॥

ಸಹಸ್ರೇಣಾಪ ತುರ್ಯಾವಬೋಧಂ ಚ ದಿವಸಾತ್ಯಯೇ ।
ಪುರಂ ಹಾಸ್ತಿನಮನ್ಯೇದ್ಯುಸ್ತಸ್ಮೈ ಗತವತೇದಿತ ॥ ೪೦ ॥

ಆಹಾರಂ ಧರ್ಮಮಿತ್ರಾಖ್ಯಃ ಪ್ರಾಪ ಚಾಶ್ಚರ್ಯಪಂಚಕಮ್ ।
ಕುರ್ವನ್ನೇವಂ ತಪೋ ಘೋರಂ ನೀತ್ವಾ ಷೋಡಶವತ್ಸರಾನ್ ॥ ೪೧ ॥

ನಿಜದೀಕ್ಷಾವನೇ ಷಷ್ಠೇನೋಪವಾಸೇನ ಶುದ್ಧಿಭಾಕ್ ।
ತಿಲಕದ್ರುಮಮೂಲಸ್ಥಶ್ಚೈತ್ರಜ್ಯೋತ್ಸ್ನಾಪರಾಹ್ಣಕೇ ॥ ೪೨ ॥

ಕೃತ್ತಿಕಾಯಾಂ ತೃತೀಯಾಯಾಂ ಕೈವಲ್ಯಮುದಪಾದಯತ್ ।
ಮುದಾ ತತ್ಕಾಲಸಂಪ್ರಾಪ್ತಸರ್ವಾಮರಸಮರ್ಥಿತಮ್ ॥ ೪೩ ॥

ಪ್ರಾರ್ಥ್ಯಂ ಚತುರ್ಥಕಲ್ಯಾಣಪೂಜಾವಿಧಿಮವಾಪುಷಃ ।
ತಸ್ಯ ಸ್ವಯಂಭೂನಾಮಾದ್ಯಾಃ ಪಂಚತ್ರಿಂಶದ್ಗಣೇಶಿನಃ ॥ ೪೪ ॥

ಶತಾನಿ ಸಪ್ತ ಪೂರ್ವಾಣಾಂ ಸಂವಿದೋ ಮುನಿಸತ್ತಮಾಃ ।
ಖಪಂಚೈಕತ್ರಿವಾರ್ಧ್ಯಕ್ತಾಃ ಶಿಕ್ಷಕಾ ಲಕ್ಷಿತಾಶಯಾಃ ॥ ೪೫ ॥

ಕುಂಥುನಾಥನಿಗೆ ಮಂಡಲಿಕರಾಜತ್ವದಿಂದ ಎಷ್ಟು ಕಾಲವು ಕಳೆಯಿತೋ ಅಷ್ಟೇ ವರ್ಷವು ಚಕ್ರವರ್ತಿಗಳ ಸುಖಾಯುಷ್ಯದಿಂದ ಕಳೆಯಿತು. ಮಹೇಚ್ಛೆಯುಳ್ಳವನೂ ಪ್ರಾಜ್ಞರಲ್ಲಿ ಶ್ರೇಷ್ಠನೂ ಆದ ಕುಂಥುಚಕ್ರೇಶ್ವರನು ಮೋಕ್ಷಸುಖವನ್ನು ಪಡೆಯಬೇಕೆಂಬ ಇಚ್ಛೆಯಿಂದ ರಾಜ್ಯಭೋಗಗಳಲ್ಲಿ ವಿರಕ್ತಿಯನ್ನು ಹೊಂದಿ ತನ್ನ ಕಳೆದು ಹೋದ ಭವಗಳ ತಿಳುವಳಿಕೆಯಿಂದ ವಿವೇಕೋದಯವುಳ್ಳವನಾಗಿ ಸಾರಸ್ವತಾದಿ ಲೌಕಾಂತಿಕದೇವರ್ಕಳ ಸ್ತೋತ್ರವನ್ನೂ ಚೆನ್ನಾಗಿ ಆದರಸಹಿತವಾಗಿ ಭಾವಿಸಿ ರಾಜ್ಯದ ಭಾರವನ್ನು ತನ್ನ ಪುತ್ರನಲ್ಲಿರಿಸಿ ತಾನು ದೇವೇಂದ್ರರಿಂದ ಪರಿನಿಷ್ಕ್ರಮಣಕಲ್ಯಾಣೋತ್ಸವವನ್ನು ಹೊಂದಿ ದೇವರ್ಕಳಿಂದ ಹೊರಲ್ಪಡತಕ್ಕ ವಿಜಯವೆಂಬ ಪಲ್ಲಕ್ಕಿಯನ್ನೇರಿ ಸಹೇತುಕವನಕ್ಕೆ ಹೋಗಿ ಹುಟ್ಟಿದ ತಿಂಗಳಲ್ಲಿ (ವೈಶಾಖಮಾಸದಲ್ಲಿ) ಶುಕ್ಲಪಕ್ಷದ ಪ್ರಥಮೆಯಲ್ಲಿ ಕೃತ್ತಿಕಾನಕ್ಷತ್ರದಲ್ಲಿ ಸಹಸ್ರರಾಜರುಗಳೊಡನೆ ಆರು ಉಪವಾಸ ನಿಯಮದಿಂದ ದೀಕ್ಷೆಯನ್ನು ತೆಗೆದುಕೊಂಡನು. ಆರನೆಯ ದಿವಸ ಸಾಯಂಕಾಲದಲ್ಲಿ ನಾಲ್ಕನೆಯದಾದ ಮನಃಪರ್ಯಯಜ್ಞಾನವನ್ನೂ ಪಡೆದನು. ಮರುದಿವಸ ಹಸ್ತಿನಾಪುರಕ್ಕೆ ಹೋದ ಆ ಕುಂಥುನಾಥನಿಗೆ ಧರ್ಮಮಿತ್ರನೆಂಬ ರಾಜನು ಆಹಾರವನ್ನು ಕೊಟ್ಟು ಪಂಚಾಶ್ಚರ್ಯಗಳನ್ನು ಪಡೆದನು. ಈ ರೀತಿಯಾಗಿ ಘೋರ ತಪಸ್ಸನ್ನು ಮಾಡುವವನಾಗಿ ಹದಿನಾರು ವರುಷಗಳನ್ನು ಕಳೆದು ತಾನು ದೀಕ್ಷೆಯನ್ನು ತೆಗೆದುಕೊಂಡಿದ್ದ–ಸಹೇತುಕವನದಲ್ಲಿ ಆರು ಉಪವಾಸಗಳಿಂದ ಶುದ್ಧಿಯನ್ನು ಹೊಂದಿದವನಾಗಿ ತಿಲಕವೃಕ್ಷದ ಬುಡದಲ್ಲಿದ್ದು ಚೈತ್ರಮಾಸದ ಶುಕ್ಲಪಕ್ಷದ ತದಿಗೆಯ ದಿವಸ ಸಾಯಂಕಾಲದಲ್ಲಿ ಕೃತ್ತಿಕಾನಕ್ಷತ್ರದಲ್ಲಿ ಕೇವಲಜ್ಞಾನವನ್ನು ಪಡೆದನು. ಸಂತೋಷದಿಂದ ಆ ಕಾಲದಲ್ಲಿ ಬಂದು ಸೇರಿದ ಸಕಲದೇವರ್ಕಳಿಂದ ಸಮರ್ಥನ ಮಾಡಲ್ಪಟ್ಟುದೂ ಪ್ರಾರ್ಥಿಸಲ್ಪಡತಕ್ಕುದೂ ಆದ ಕೇವಲಜ್ಞಾನಕಲ್ಯಾಣ ಪೂಜಾವಿಧಿಯನ್ನು ಪುಷ್ಟೀಕರಿಸಿದ ಆ ಕುಂಥುತೀರ್ಥಂಕರರಿಗೆ ಸ್ವಯಂಭುವೇ ಮೊದಲಾದ ಮೂವತ್ತೈದು ಮಂದಿ ಗಣಧರರಿದ್ದರು. ಏಕಾದಶಾಂಗಚತುರ್ದಶ ಪೂರ್ವಶಾಸ್ತ್ರಗಳನ್ನು ತಿಳಿದ ಮುನಿಶ್ರೇಷ್ಠರು ಏಳುನೂರು ಮಂದಿಗಳಿದ್ದರು. ನಾಲ್ವತ್ತುಮೂರು ಸಾವಿರದ ನೂರೈವತ್ತು ಮಂದಿ ಮರ್ಮಜ್ಞರಾದ ಶಿಕ್ಷಕಮುನಿಗಳಿದ್ದರು.

ಖದ್ವಯೇಂದ್ರಿಯಪಕ್ಷೋಕ್ತಾಸ್ತೃತೀಯಾವಗಮಾಮಲಾಃ ।
ಶೂನ್ಯದ್ವಯದ್ವಿವಹ್ನ್ಯುಕ್ತಾಃ ಕೇವಲಜ್ಞಾನಭಾಸ್ಕರಾಃ ॥ ೪೬ ॥

ಎರಡುಸಾವಿರದ ಐದುನೂರು ಮಂದಿ ಅವಧಿಜ್ಞಾನದಿಂದ ನಿರ್ಮಲರಾದ ಮುನಿಗಳಿದ್ದರು. ಮೂರುಸಾವಿರದ ಎರಡುನೂರು ಮಂದಿ ಕೇವಲಜ್ಞಾನಿಗಳೆಂಬ ಸೂರ್ಯರಿದ್ದರು.

ಖದ್ವಯ್ಯೇಕೇಂದ್ರಿಯಜ್ಞಾತಾ ವಿಕ್ರಿಯರ್ದ್ಧಿವಿಭೂಷಣಾಃ ।
ತ್ರಿಶತತ್ರಿಸಹಸ್ರಾಣಿ ಚತುರ್ಥಜ್ಞಾನಧಾರಿಣಃ ॥ ೪೭ ॥

ವಿಕ್ರಿಯರ್ದ್ಧಿಯೆಂಬ ಆಭರಣವುಳ್ಳ ಮುನಿಗಳು ಐದುಸಾವಿರದ ನೂರು ಮಂದಿಗಳಿದ್ದರು. ಮೂರುಸಾವಿರದ ಮೂರುನೂರು ಮಂದಿ ಮನಃಪರ್ಯಯಜ್ಞಾನ ಧಾರಿಗಳಿದ್ದರು.

ಪಂಚಾಶದ್ದ್ವಿಸಹಸ್ರಾಣಿ ಖ್ಯಾತಾನುತ್ತರವಾದಿನಃ ।
ಸರ್ವೇ ತೇ ಪಿಂಡಿತಾಃ ಷಷ್ಟಿಸಹಸ್ರಾಣಿ ಯತೀಶ್ವರಾಃ ॥ ೪೮ ॥

ಎರಡುಸಾವಿರದ ಐವತ್ತು ಮಂದಿ ಪ್ರಖ್ಯಾತರಾದ ಅನುತ್ತರವಾದಿಗಳಿದ್ದರು. ಅವರೆಲ್ಲರೂ ಸೇರಿ ಅರವತ್ತುಸಾವಿರ ಮಂದಿ ಯತೀಶ್ವರರು ಕುಂಥುತೀರ್ಥಂಕರರ ಸಮವಸರಣದಲ್ಲಿದ್ದರು.

ಭಾವಿತಾದ್ಯಾರ್ಯಿಕಾಃ ಶೂನ್ಯಪಂಚವಹ್ನಿಖಷಣ್ಮಿತಾಃ ।
ತ್ರಿಲಕ್ಷಾಃ ಶ್ರಾವಿಕಾ ಲಕ್ಷದ್ವಯಂ ಸರ್ವೇಪ್ಯುಪಾಸಕಾಃ ॥ ೪೯ ॥

ಅರವತ್ತುಸಾವಿರದ ಮುನ್ನೂರೈವತ್ತು ಮಂದಿ ಭಾವಿತಾ ಮೊದಲಾದ ಆರ್ಯಿಕೆಯರಿದ್ದರು. ಮೂರು ಲಕ್ಷ ಶ್ರಾವಿಕೆಯರಿದ್ದರು. ಎಲ್ಲಾ ಶ್ರಾವಕರು ಎರಡುಲಕ್ಷ ಮಂದಿಗಳಿದ್ದರು.

ದೇವದೇವ್ಯಸ್ತ್ವಸಂಖ್ಯಾತಾಸ್ತಿರ್ಯಗ್ಯಾಃ ಸಂಖ್ಯಯಾ ಮಿತಾಃ ।
ದಿವ್ಯೇನ ಧ್ವನಿನಾಮೀಷಾಂ ಕುರ್ವನ್ ಧರ್ಮೋಪದೇಶನಮ್ ॥ ೫೦ ॥

ದೇಶಾನ್ ವಿಹೃತ್ಯ ಮಾಸಾಯುಃ ಸಮ್ಮೇದಾಚಲಮಾಸ್ಥಿತಃ ।
ಪ್ರತಿಮಾಯೋಗಮಾದಾಯ ಸಹಸ್ರಮುನಿಭಿಃ ಸಹ ॥ ೫೧ ॥

ವೈಶಾಖಜ್ಯೋತ್ಸ್ನಪಕ್ಷಾದಿದಿನೇ ರಾತ್ರೇಃ ಪುರಾತನೇ ।
ಭಾಗೇ ಕರ್ಮಾಣಿ ನಿರ್ಮೂಲ್ಯ ಕೃತ್ತಿಕಾಯಾಂ ನಿರಂಜನಃ ॥ ೫೨ ॥

ಪ್ರಾಪ್ತಗೀರ್ವಾಣಕಲ್ಯಾಣಪೂಜಃ ಪ್ರಾಪತ್ಪರಂ ಪದಮ್ ।
ಸ ಶುದ್ಧಜ್ಞಾನವೈರಾಗ್ಯಮಬಾಧಮನಿನಶ್ವರಮ್ ॥ ೫೩ ॥

ಅಸಂಖ್ಯಾತ ದೇವದೇವಿಯರಿದ್ದರು. ಸಂಖ್ಯಾತತಿರ್ಯಕ್ಪ್ರಾಣಿಗಳಿದ್ದುವು. ಇವರುಗಳಿಗೆ ದಿವ್ಯಧ್ವನಿಯಿಂದ ಧರ್ಮೋಪದೇಶವನ್ನು ಮಾಡುತ್ತ ದೇಶಗಳನ್ನು ವಿಹರಿಸಿ ಬಳಿಕ ಒಂದು ತಿಂಗಳ ಆಯುಷ್ಯವಿರುವಾಗ ಸಮ್ಮೇದಪರ್ವತದಲ್ಲಿದ್ದು ಸಹಸ್ರ ಮುನಿಗಳೊಡನೆ ಪ್ರತಿಮಾಯೋಗವನ್ನು ಧಾರಣಮಾಡಿ ವೈಶಾಖಮಾಸದ ಶುಕ್ಲ ಪಕ್ಷದ ಪ್ರಥಮೆಯ ದಿನದಲ್ಲಿ ರಾತ್ರಿಯ ಪೂರ್ವಭಾಗದಲ್ಲಿ ಕೃತ್ತಿಕಾನಕ್ಷತ್ರದಲ್ಲಿ ಕರ್ಮಗಳನ್ನು ನಿರ್ಮೂಲಮಾಡಿ ನಿರಂಜನ–ನಿರ್ಮಲನೂ ನಿರ್ವಾಣಕಲ್ಯಾಣ ಪೂಜೆಯನ್ನು ಹೊಂದಿದವನೂ ಆದ ಆ ಕುಂಥುನಾಥನು ಶುದ್ಧವಾದ ಜ್ಞಾನ ವೈರಾಗ್ಯಗಳುಳ್ಳುದೂ ಬಾಧಾರಹಿತವೂ ನಾಶರಹಿತವೂ ಆದ ಪರಮಪದ– ಮುಕ್ತಿಯನ್ನು ಪಡೆದನು.

ಆಸೀತ್ಸಿಂಹರಥೋ ನೃಪಃ ಪೃಥುತಪಾಃ ಸರ್ವಾರ್ಥಸಿದ್ಧೀಶ್ವರಃ ।
ಕಲ್ಯಾಣಾನ್ವಯಭಾಕ್ ಷಡಂಗಶಿಬಿರಸ್ತ್ರೈಲೋಕ್ಯಮುಖ್ಯಾರ್ಚಿತಃ ॥
ಪ್ರಾಪ್ತಾತ್ಮಾಷ್ಟಗುಣಸ್ತ್ರಿವಿಷ್ಟಪಶಿಖಾಪ್ರೋದ್ಭಾಸಚೂಡಾಮಣಿಃ ।
ದಿಶ್ಯಾದ್ವಃ ಶ್ರಿಯಮಪ್ರತೀಪಮಹಿಮಾ ಕುಂಥುರ್ಜಿನಃ ಶಾಶ್ವತೀಮ್ ॥



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಗಜಪುರೀಪಟ್ಟಣದಲ್ಲಿ ಸೂರಸೇನಮಹಾರಾಜಂಗಂ ಕಮಲಾಮಹಾದೇವಿಗಂ ಕೃತ್ತಿಕಾನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಕುರುವಂಶಮನುಳ್ಳ ಮೂವತ್ತೈದುಬಿಲ್ಲುತ್ಸೇಧಮನುಳ್ಳ ತೊಂಬತ್ತೈದುಸಾವಿರವರ್ಷ ಆಯುಷ್ಯಮನುಳ್ಳ ಅಜಲಾಂಛನಮನುಳ್ಳ ಗಂಧರ್ವಜಯಾ–ಯಕ್ಷಯಕ್ಷಿಯರನುಳ್ಳ ಸಮ್ಮೇದಗಿರಿಯ ಜ್ಞಾನಧರ ಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಕುಂಥುತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

ಕುಂಥುನಾಥನು ಮೊದಲು ಸಿಂಹರಥರಾಜನಾಗಿದ್ದನು. ಅವನು ಮಹಾತಪಸ್ಸುಳ್ಳವನಾಗಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದನು. ಅಲ್ಲಿಂದ ಚ್ಯುತನಾಗಿ–ಬಂದು ಕಲ್ಯಾಣಪರಂಪರೆಯನ್ನು ಪಡೆದ ತೀರ್ಥಂಕರನೂ ಷಡಂಗಸೈನ್ಯವುಳ್ಳ ಚಕ್ರವರ್ತಿಯೂ ಮೂರು ಲೋಕಗಳ ನಾಯಕರುಗಳಿಂದ ಪೂಜಿಸಲ್ಪಟ್ಟವನೂ ಆತ್ಮನ ಕ್ಷಾಯಿಕಸಮ್ಯಕ್ತ್ವವೇ ಮೊದಲಾದ ಎಂಟು ಗುಣಗಳನ್ನು ಪಡೆದವನೂ ಮೂರು ಲೋಕದ ಶಿಖರದಲ್ಲಿ ಪ್ರಕಾಶಿಸುವ ಚೂಡಾಮಣಿಯೂ ತಡೆಯಿಲ್ಲದ ಮಹಿಮೆಯುಳ್ಳವನೂ ಆದ ಕುಂಥುಜಿನೇಶ್ವರನು ನಿಮ್ಮಗಳಿಗೆ ನಿತ್ಯವಾದ ಸಂಪತ್ತಿಯನ್ನು ಕೊಡಲಿ.

**ದೇಹಜ್ಯೋತಿಷಿ ಯಸ್ಯ ಶಕ್ರಸಹಿತಾಃ ಸರ್ವೇಽಪಿ ಮಗ್ನಾಃ ಸುರಾ ।**
**ಜ್ಞಾನಜ್ಯೋತಿಷಿ ಪಂಚತತ್ತ್ವಸಹಿತಂ ಮಗ್ನಂ ನಭಶ್ಚಾಖಿಲಮ್ ॥**
**ಲಕ್ಷ್ಮೀಧಾಮ ದಧದ್ವಿಧೂತವಿತತಧ್ವಾಂತಃ ಸ ಧಾಮದ್ವಯಮ್ ।**
**ಪಂಥಾನಂ ಕಥಯತ್ವನಂತಗುಣಭೃತ್ಕುಂಥುರ್ಭವಾಂತಸ್ಯ ವಃ ॥ ೫೫ ॥**

ಯಾವನ ದೇಹಕಾಂತಿಯಲ್ಲಿ ದೇವೇಂದ್ರಸಹಿತರಾದ ದೇವರ್ಕಳೆಲ್ಲರೂ ಮಗ್ನರಾದರೋ ಜ್ಞಾನಜ್ಯೋತಿಯಲ್ಲಿ ಜೀವ ಪುದ್ಗಲ ಧರ್ಮ ಅಧರ್ಮ ಕಾಲಗಳೆಂಬ ಪಂಚತತ್ತ್ವಸಹಿತವಾದ ಆಕಾಶವೆಲ್ಲವೂ ಮಗ್ನವಾಯಿತೋ ಅಭ್ಯುದಯ ನಿಃಶ್ರೇಯಸ ಸ್ಥಾನಗಳುಳ್ಳ ಲಕ್ಷ್ಮೀಸ್ಥಾನವನ್ನು ಧರಿಸಿರುವವನೂ ವಿಸ್ತೃತವಾದ ಅಜ್ಞಾನಾಂಧಕಾರವನ್ನು ನಾಶಮಾಡಿದವನೂ ಅನಂತಗುಣಗಳನ್ನು ಧರಿಸಿರುವವನೂ ಆದ ಆ ಕುಂಥುಜಿನನು ನಿಮ್ಮಗಳಿಗೆ ಭವವಿನಾಶದ ಮಾರ್ಗವನ್ನು ಹೇಳಲಿ.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಕುಂಥುಚಕ್ರಧರ ತೀರ್ಥಕರಪುರಾಣಂ ನಾಮ ಚತುಃಷಷ್ಟಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಕುಂಥುತೀರ್ಥಕರ ಚಕ್ರಧರಪುರಾಣವೆಂಬ
ಅರವತ್ತನಾಲ್ಕನೆಯ ಪರ್ವವು ಸಮಾಪ್ತವಾದುದು.

---

# ಅಥ ಅರತೀರ್ಥಕರಪುರಾಣಂ

**ಸರತಾರಂ ಸರಂ ಸಾರಂ ನರನಾಥಕೃತಾನತಿಮ್ ।**
**ಅಗಾಧಾಸಾರಸಂಸಾರಸಾಗರೋತ್ತಾರಕಾರಣಮ್ ॥ ೧ ॥**

ರಾಜರುಗಳಿಂದ ನಮಸ್ಕಾರವನ್ನು ಮಾಡಿಸಿಕೊಳ್ಳುವವನೂ ಅಗಾಧವೂ ಅಸಾರವೂ ಆದ ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕೆ ಕಾರಣನೂ ಜ್ಞಾನಿಯೂ ಸಾರಭೂತನೂ ಆದ ಅರನಾಥನನ್ನು ಹೊಂದಿರಿ–ಭಜಿಸಿರಿ.

**ದ್ವೀಪೇಜಂಬೂದ್ರುಮಖ್ಯಾತೇ ಸೀತೋತ್ತರತಟಾಶ್ರಿತೇ ।**
**ಕಚ್ಛಾಖ್ಯವಿಷಯೇ ಕ್ಷೇಮಪುರಾಧೀಶೋ ಮಹೀಪತಿಃ ॥ ೨ ॥**

**ನಾಮ್ನಾಧನಪತಿಃ ಪಾತಾ ಪ್ರಜಾನಾಂ ಜನತಾಪ್ರಿಯಃ ।**
**ಧಾತ್ರೀದೇನುಃ ಸ್ವಯಂ ತಸ್ಯ ದುಗ್ಧೇ ಸ್ಮ ಪ್ರಸ್ತುತಾನಿಶಮ್ ॥ ೩ ॥**

ಜಂಬೂದ್ವೀಪದಲ್ಲಿ ಸೀತೋದಾನದಿಯ ಉತ್ತರದಿಕ್ಕಿನ ದಡವನ್ನಾಶ್ರಯಿಸಿರುವ ಕಚ್ಛದೇಶದಲ್ಲಿ ಕ್ಷೇಮಪುರಾಧಿಪತಿಯೂ ಜನಸಮುದಾಯಕ್ಕೆ ಪ್ರಿಯನೂ ಆದ ಧನಪತಿಯೆಂಬ ರಾಜನು ಪ್ರಜೆಗಳ ಪಾಲಕನಾಗಿದ್ದನು. ಅವನಿಗೆ ಪೃಥ್ವಿಯೆಂಬ ಧೇನುವು ಯಾವಾಗಲೂ ತಾನು ಸಿದ್ಧವಾಗಿ ಕರೆಯುತ್ತಿದ್ದಿತು.

**ವಿನಾರ್ಥಿಭಿರಪಿ ತ್ಯಾಗೀ ವಿನಾಪ್ಯರಿಭಿರುದ್ಯಮೀ ।**
**ತರ್ಪಿತಾರ್ಥಿನಿ ಧೂತಾರೌ ತಸ್ಮಿಂಸ್ತೌ ಸಹಜೌ ಗುಣೌ ॥ ೪ ॥**

ಆ ಧನಪತಿಮಹಾರಾಜನು ಯಾಚಕರಿಲ್ಲದಿದ್ದರೂ ತ್ಯಾಗಿಯಾಗಿದ್ದನು. ಶತ್ರುಗಳಿಲ್ಲದಿದ್ದರೂ ಉದ್ಯಮಶೀಲನಾಗಿದ್ದನು. ಯಾಚಕರನ್ನು ತೃಪ್ತಿಗೊಳಿಸಿರುವವನೂ ಶತ್ರುಗಳನ್ನು ನಾಶಮಾಡಿರುವವನೂ ಆದ ಆ ಧನಪತಿಮಹಾರಾಜನಲ್ಲಿ ಆ ತ್ಯಾಗವೂ ಉದ್ಯಮವೂ ಸಹಜಗುಣಗಳಾಗಿದ್ದುವು.

**ಸ್ವವೃತ್ತ್ಯನುಗಮೇನೈವ ವರ್ಗತ್ರಯನಿಷೇವಿಣಃ ।**
**ರಾಜಾ ಪ್ರಜಾಶ್ಚ ರಾಜ್ಯೇಸ್ಮಿಸ್ತನ್ನ ಧರ್ಮವ್ಯತಿಕ್ರಮಃ ॥ ೫ ॥**

ರಾಜನೂ ಪ್ರಜೆಗಳೂ ಈ ಕಚ್ಛದೇಶದಲ್ಲಿ ತಂತಮ್ಮ ಜೀವನವೃತ್ತಿಯನ್ನನುಸರಿಸಿಯೇ ಧರ್ಮಾರ್ಥಕಾಮಪುರುಷಾರ್ಥಗಳನ್ನು ಸೇವಿಸುವವರಾಗಿದ್ದರು. ಆದುದರಿಂದ ಇಲ್ಲಿ ಧರ್ಮದ ಅತಿಕ್ರಮವಿಲ್ಲ.

**ಕದಾಚಿದ್ಧರಣೀಧರ್ತಾ ಪೀತ್ವಾರ್ಹನ್ನಂದತೀರ್ಥಕೃ- ।**
**ದ್ದಿವ್ಯಧ್ವನಿಸಮುದ್ಭೂತಧರ್ಮಸಾರರಸಾಯನಮ್ ॥ ೬ ॥**

**ವಿರಜ್ಯ ರಾಜ್ಯಭೋಗಾತ್ತರಸಾದ್ರಾಜ್ಯಂ ನಿಜಾತ್ಮಜೇ ।**
**ನಿಯೋಜ್ಯ ಮಂಕ್ಷು ಪ್ರವ್ರಜ್ಯಾಂ ಜೈನೀಂ ಜನ್ಮಾಂತಕಾರಿಣೀಮ್ ॥ ೭ ॥**

**ಆಸಾದ್ಯೈಕಾದಶಾಂಗೋರುಪಾರಾವಾರಸ್ಯ ಪಾರಗಃ ।**
**ದ್ವ್ಯಷ್ಟಕಾರಣಸಂಬಂಧತೀರ್ಥಕೃನ್ನಾಮಪುಣ್ಯಭೃತ್ ॥ ೮ ॥**

**ಪ್ರಾಯೋಪಗಮನೇನಾಪ ಸ ಜಯಂತೇಹಮಿಂದ್ರತಾಮ್ ।**
**ತ್ರಯಸ್ತ್ರಿಂಶತ್ಸಮುದ್ರೋಪಮಾಯುರ್ಹಸ್ತತನುಪ್ರಮಃ ॥ ೯ ॥**

**ಶುಕ್ಲಲೇಶ್ಯಾದ್ವಯಃ ಸಾರ್ಧೈರ್ಮಾಸೈಃ ಷೋಡಶಭಿಃ ಶ್ವಸನ್ ।**
**ತ್ರಯಸ್ತ್ರಿಂಶತ್ಸಹಸ್ರೋಕ್ತವರ್ಷೈರ್ಮಾನಸಮಾಹರನ್ ॥ ೧೦ ॥**

**ಅಮೃತಂ ನಿಷ್ಪ್ರವೀಚಾರಸುಖಸಾಗರಪಾರಗಃ ।**
**ಸ್ವಾವಧಿಜ್ಞಾನನಿರ್ಣೀತಲೋಕನಾಡ್ಯರ್ಥವಿಸ್ತೃತಿಃ ॥ ೧೧ ॥**

**ಸ್ವಾವಧಿಕ್ಷೇತ್ರನಿರ್ಣೀತಪ್ರಕಾಶಬಲವಿಕ್ರಿಯಃ ।**
**ಅತಿಪ್ರಶಾಂತರಾಗಾದಿರಾಸನ್ನೀಕೃತನಿರ್ವೃತಿಃ ॥ ೧೨ ॥**

**ಸದ್ವೇದ್ಯೋದಯಸಂಭೂತಮನ್ವಭೂದ್ಭೋಗಮುತ್ತಮಮ್ ।**
**ಉದಿತೋದಿತಪರ್ಯಾಪ್ತಿಪರ್ಯಂತೋಪಾಂತಮಾಸ್ಥಿತಃ ॥ ೧೩ ॥**

ಒಂದಾನೊಂದು ಕಾಲದಲ್ಲಿ ಆ ರಾಜನು ಅರ್ಹನ್ನಂದತೀರ್ಥಂಕರರ ದಿವ್ಯಧ್ವನಿಯಿಂದುಂಟಾದ ಧರ್ಮದ ಸಾರವೆಂಬ ರಸಾಯನವನ್ನು ಪಾನಮಾಡಿ ರಾಜ್ಯಭೋಗದಿಂದುಂಟಾದ ಪ್ರೀತಿಯಿಂದ ವಿರಕ್ತಿಯನ್ನು ಹೊಂದಿ ತನ್ನ ಪುತ್ರನಲ್ಲಿ ರಾಜ್ಯವನ್ನಿರಿಸಿ ಶೀಘ್ರವಾಗಿ ಜನ್ಮವನ್ನು ಕೊನೆಗಾಣಿಸುವ ಜಿನದೀಕ್ಷೆಯನ್ನು ಸ್ವೀಕರಿಸಿ ಏಕಾದಶಾಂಗಶಾಸ್ತ್ರವೆಂಬ ಮಹಾಸಮುದ್ರದ ಪಾರವನ್ನು ಹೊಂದಿದವನೂ ಷೋಡಶಕಾರಣಗಳ ಸಂಬಂಧವುಳ್ಳ ತೀರ್ಥಕರನಾಮವೆಂಬ ಪುಣ್ಯವನ್ನು ಧರಿಸಿದವನೂ ಆಗಿ ಪ್ರಾಯೋಪಗಮನವಿಧಿಯಿಂದ ಮಡಿದು ಜಯಂತವೆಂಬ ಅನುತ್ತರವಿಮಾನದಲ್ಲಿ ಅಹಮಿಂದ್ರತ್ವವನ್ನು ಪಡೆದನು. ಮೂವತ್ತುಮೂರು ಸಾಗರೋಪಮವರ್ಷಾಯುಷ್ಯವುಳ್ಳವನೂ ಒಂದು ಹಸ್ತ ಶರೀರಪರಿಮಾಣವುಳ್ಳವನೂ ದ್ರವ್ಯಶುಕ್ಲ ಭಾವಶುಕ್ಲಲೇಶ್ಯೆಗಳುಳ್ಳವನೂ ಹದಿನಾರುವರೆ ತಿಂಗಳಿಗೊಮ್ಮೆ ಶ್ವಾಸೋಚ್ಛ್ವಾಸವನ್ನು ಬಿಡುವವನೂ ಮೂವತ್ತುಮೂರುಸಾವಿರ ವರುಷಗಳಿಗೊಮ್ಮೆ ಮನಸ್ಸಿನಿಂದ ಅಮೃತಾಹಾರವನ್ನು ಸ್ವೀಕರಿಸುವವನೂ ಕಾಮಸೇವನಾರಹಿತವಾದ ಸುಖಸಮುದ್ರದ ಪಾರವನ್ನು ಹೊಂದಿರುವವನೂ ಲೋಕನಾಡಿಯಲ್ಲಿ ವಿಸ್ತಾರವಾಗಿರುವ ಪದಾರ್ಥಗಳನ್ನು ತನ್ನ ಅವಧಿಜ್ಞಾನದಿಂದ ನಿರ್ಣಯಿಸುವವನೂ ತನ್ನ ಅವಧಿಕ್ಷೇತ್ರದಿಂದ ನಿರ್ಣೀತವಾದ ಪ್ರಕಾಶಬಲವಿಕ್ರಿಯೆಗಳುಳ್ಳವನೂ ಬಹುಶಾಂತತೆಯನ್ನು ಹೊಂದಿರುವ ರಾಗಾದಿವಿಕಾರಭಾವಗಳುಳ್ಳವನೂ ಸಮೀಪಿಸಿರುವ ಮುಕ್ತಿಯುಳ್ಳವನೂ ಚೆನ್ನಾಗಿ ಉದಯಕ್ಕೆ ಬಂದಿರುವ ಪರ್ಯಾಪ್ತಿಯ (ದೇವತ್ವದ) ಕೊನೆಯಲ್ಲಿರುವವನೂ ಆಗಿ ಸಾತಾವೇದನೀಯಕರ್ಮದ ಉದಯದಿಂದುಂಟಾದ ಉತ್ತಮಭೋಗವನ್ನನುಭವಿಸಿದನು.

**ದ್ವೀಪೇಸ್ಮಿನ್ ಭಾರತೇ ಕ್ಷೇತ್ರೇ ದೇಶೋಸ್ತಿ ಕುರುಜಾಂಗಲಃ ।**
**ಹಾಸ್ತಿನಾಖ್ಯಪುರಂ ತಸ್ಯ ಪತಿರ್ಗೋತ್ರೇಣ ಕಾಶ್ಯಪಃ ॥ ೧೪ ॥**

**ಸೋಮವಂಶಸಮುದ್ಭೂತಃ ಸುದರ್ಶನಸಮಾಹ್ವಯಃ ।**
**ಮಿತ್ರಸೇನಾ ಮಹಾದೇವೀ ಪ್ರಾಣೇಭ್ಯೋಪ್ಯಸ್ಯ ವಲ್ಲಭಾ ॥ ೧೫ ॥**

ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕುರುಜಾಂಗಲವೆಂಬ ದೇಶವಿದೆ. ಅಲ್ಲಿ ಹಸ್ತಿನಾಪುರವೆಂಬ ನಗರವಿದೆ. ಕಾಶ್ಯಪಗೋತ್ರೋದ್ಭವನೂ ಚಂದ್ರವಂಶೋತ್ಪನ್ನನೂ ಆದ ಸುದರ್ಶನನೆಂಬವನು ಆ ನಗರದ ದೊರೆ. ಇವನಿಗೆ ಪ್ರಾಣಗಳಿಗಿಂತ ಪ್ರಿಯಳಾದ ಮಿತ್ರಸೇನಾಮಹಾದೇವಿಯು ಪತ್ನಿಯಾಗಿದ್ದಳು.

**ವಸುಧಾರಾದಿಕಾಂ ಪೂಜಾಂ ಪ್ರಾಪ್ಯ ಪ್ರೀತ್ಯಾನುಫಾಲ್ಗುನೇ ।**
**ಮಾಸೇ ಸಿತತೃತೀಯಾಯಾಂ ರೇವತ್ಯಾಂ ನಿಶಿ ಪಶ್ಚಿಮೇ ॥ ೧೬ ॥**

**ಭಾಗೇ ಜಯಂತದೇವಸ್ಯ ಸ್ವರ್ಗಾವತರಣಕ್ಷಣೇ ।**
**ದೃಷ್ಟಷೋಡಶಸುಸ್ವಪ್ನಾ ಫಲಂ ತೇಷಾಂ ನಿಜಾಧಿಪಮ್ ॥ ೧೭ ॥**

**ಅನುಯುಜ್ಯಾವಧಿಜ್ಞಾನಂ ತದುಕ್ತಫಲಸಂಶ್ರುತೇಃ ।**
**ಪ್ರಾಪ್ತತ್ರೈಲೋಕ್ಯರಾಜ್ಯೇವ ಪ್ರಾಸೀದತ್ಪರಮೋದಯಾ ॥ ೧೮ ॥**

ಆಕೆಯು ದೇವರ್ಕಳಿಂದ ವಸುಧಾರಾದಿಪೂಜೆಯನ್ನು ಪಡೆದು ಪ್ರೀತಿಯಿಂದ ಫಾಲ್ಗುನಮಾಸದಲ್ಲಿ ಶುಕ್ಲಪಕ್ಷದ ತದಿಗೆಯಲ್ಲಿ ರೇವತೀನಕ್ಷತ್ರದಲ್ಲಿ ಬೆಳಗಿನ ಜಾವ

ದಲ್ಲಿ ಜಯಂತಾನುತ್ತರವಿಮಾನದ ಅಹಮಿಂದ್ರದೇವನ ಸ್ವರ್ಗಾವತಾರಕಾಲದಲ್ಲಿ ಹದಿನಾರು ಶುಭಸ್ವಪ್ನಗಳನ್ನು ಕಂಡು ಅವುಗಳ ಫಲವನ್ನು ಅವಧಿಜ್ಞಾನವುಳ್ಳ ತನ್ನ ಗಂಡನನ್ನು ಕೇಳಿ ಅವನು ಹೇಳಿದ ಫಲವನ್ನು ಕೇಳಿದುದರಿಂದ ತ್ರೈಲೋಕ್ಯರಾಜ್ಯವನ್ನು ಹೊಂದಿದವಳಂತೆ ಮಹೋನ್ನತಿಯುಳ್ಳವಳಾಗಿ ಪ್ರಸನ್ನಳಾದಳು.

**ತದಾಗತಾಮರಾಧೀಶಕೃತಕಲ್ಯಾಣಸಮ್ಮದಾ ।**
**ನಿರ್ವೃತಾ ನಿರ್ಮದಾ ನಿತ್ಯರಮ್ಯಾ ಸೌಮ್ಯಾನನಾ ಶುಚಿಃ ॥ ೧೯ ॥**

**ಸಂವಾಹ್ಯಮಾನಾ ದೇವೀಭಿಸ್ತತ್ಕಾಲೋಚಿತವಸ್ತುಭಿಃ ।**
**ಮೇಘಮಾಲೇವ ಸದ್ಗರ್ಭಮುದ್ವಹಂತೀ ಜಗದ್ಧಿತಮ್ ॥ ೨೦ ॥**

**ಮಾರ್ಗಶೀರ್ಷೇ ಸಿತೇ ಪಕ್ಷೇ ಪುಷ್ಯಯೋಗೇ ಚತುರ್ದಶೀ- ।**
**ತಿಥೌ ತ್ರಿವಿಧಸದ್ಬೋಧಂ ತನೂಜಮುದಪೀಪದತ್ ॥ ೨೧ ॥**

ಆಗ ಬಂದ ದೇವೇಂದ್ರನಿಂದ ಮಾಡಲ್ಪಟ್ಟ ಗರ್ಭಾವತರಣಕಲ್ಯಾಣದ ಸಂತೋಷವುಳ್ಳವಳೂ ಸುಖವುಳ್ಳವಳೂ ಮದರಹಿತಳೂ ಸದಾ ರಮಣೀಯಳೂ ಸೌಮ್ಯವಾದ ಮುಖವುಳ್ಳವಳೂ ಶುಚಿಯೂ ದೇವಿಯರಿಂದ ಆ ಕಾಲಕ್ಕೆ ಉಚಿತವಾದ ವಸ್ತುಗಳಿಂದ ಸೇವೆಮಾಡಿಸಿಕೊಳ್ಳುವವಳೂ, ಮೇಘದ ಮಾಲೆಯಂತೆ, ಜಗತ್ತಿಗೆ ಹಿತವಾದ ಉತ್ತಮಗರ್ಭವನ್ನು ಧರಿಸಿದವಳೂ ಆಗಿ ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಪುಷ್ಯನಕ್ಷತ್ರಯೋಗದಲ್ಲಿ ಚತುರ್ದಶೀತಿಥಿಯಲ್ಲಿ ಮತಿಶ್ರುತಾವಧಿಜ್ಞಾನಗಳುಳ್ಳ ಪುತ್ರನನ್ನು ಹಡೆದಳು.

**ತಸ್ಯ ಜನ್ಮೋತ್ಸವಸ್ಯಾಲಂ ವರ್ಣನಾಯ ಮರುದ್ವರಾಃ ।**
**ಸದಿ ಸ್ವರ್ಗಂ ಸಮುದ್ವಾಸ್ಯ ಸರ್ವೇಪ್ಯತ್ರ ಸಜಾನಯಃ ॥ ೨೨ ॥**

ಉತ್ತಮದೇವರ್ಕಳೆಲ್ಲ ಸ್ವರ್ಗವನ್ನು ಬರಿದುಮಾಡಿ ಪತ್ನೀಸಹಿತರಾಗಿ ಇಲ್ಲಿ ಆ ಬಾಲಕನ ಜನ್ಮೋತ್ಸವಕ್ಕೆ ಬಂದರೆಂದರೆ ವರ್ಣನೆಗೆ ಅದು ಸಾಕು.

**ಅತ್ಯಲ್ಪಂ ತೃಪ್ತಿ ಮಾಪನ್ನಾ ದೀನಾನಾಥವನೀಪಕಾಃ ।**
**ಇತೀದಮಿಹ ಸಂಪ್ರಾಪ್ತಂ ಯದಿ ತೃಪ್ತಂ ಜಗತ್ತ್ರಯಮ್ ॥ ೨೩ ॥**

ಅವನ ಜನ್ಮಕಾಲದಲ್ಲಿ ಮೂರು ಲೋಕವು ತೃಪ್ತಿಯನ್ನು ಹೊಂದಿತೆಂದಮೇಲೆ ಇಲ್ಲಿ ದೀನರೂ ಅನಾಥರೂ ಯಾಚಕರೂ ತೃಪ್ತಿಯನ್ನು ಹೊಂದಿದರೆಂಬುದು ಅತ್ಯಲ್ಪವರ್ಣನೆಯಾಯಿತು.

**ಕಂಥುತೀರ್ಥೇಶಸಂತಾನೇ ಪಲ್ಯತುರ್ಯಾಂಶಸಮ್ಮಿತೇ ।**
**ಸಹಸ್ರಕೋಟಿವರ್ಷೋನೇ ತದಭ್ಯಂತರಜೀವಿತಃ ॥ ೨೪ ॥**

**ಅರೋ ಜಿನೋಜನಿ ಶ್ರೀಮಾನಶೀತಿಂ ಚತುರುತ್ತರಾಮ್ ।**
**ವತ್ಸರಾಣಾಂ ಸಹಸ್ರಾಣಿ ಪರಮಾಯುಃ ಸಮುದ್ವಹನ್ ॥ ೨೫ ॥**

ಸಹಸ್ರಕೋಟಿ ವರ್ಷಗಳು ಕಡಮೆಯೂ ಒಂದು ಪಲ್ಯಕಾಲದ ನಾಲ್ಕನೆಯ ಒಂದು ಭಾಗಪರಿಮಿತವೂ ಆದ ಕುಂಥುತೀರ್ಥೇಶ್ವರರ ಪರಂಪರೆಯಲ್ಲಿ ಆ ಕಾಲದೊಳಗೇ ಜೀವಿಸಿದವನೂ ಶ್ರೀಮಂತನೂ ಆದ ಅರಜಿನನು ಜನಿಸಿದನು.

**ತ್ರಿಂಶಚ್ಚಾಪತನೂತ್ಸೇಧಶ್ಚಾರುಚಾಮೀಕರಚ್ಛವಿಃ ।**
**ಲಾವಣ್ಯಸ್ಯ ಪರಾ ಕೋಟಿಃ ಸೌಭಾಗ್ಯಸ್ಯಾಕರಃ ಪರಃ ॥ ೨೬ ॥**

**ಸೌಂದರ್ಯಸ್ಯ ಸಮುದ್ರೋಯಮಾಲಯೋ ರೂಪಸಂಪದಃ ।**
**ಗುಣಾಃ ಕಿಮಸ್ಮಿನ್ನುಂಭೂತಾಃ ಕಿಂ ಗುಣೇಷ್ವಸ್ಯ ಸಂಭವಃ ॥ ೨೭ ॥**

**ಅಭೂದ್ಗುಣಮಯಃ ಕಿಂ ವೇತ್ಯಾಶಂಕಾಂ ಜನಯನ್ ಜನಾನ್ ।**
**ಅವರ್ಧತ ಸಮಂ ಲಕ್ಷ್ಮ್ಯಾಬಾಲಕಲ್ಪದ್ರುಮೋಪಮಃ ॥ ೨೮ ॥**

ಮೂವತ್ತು ಬಿಲ್ಲುಗಳಷ್ಟು ಉನ್ನತನೂ ಮನೋಹರವಾದ ಬಂಗಾರದ ದೇಹಕಾಂತಿಯುಳ್ಳವನೂ ಲಾವಣ್ಯದ ತುತ್ತತುದಿಯೂ ಸೌಭಾಗ್ಯದ ಶ್ರೇಷ್ಠವಾದ ಗಣಿಯೂ ಸೌಂದರ್ಯದ ಸಮುದ್ರನೂ ರೂಪಸಂಪತ್ತಿಯ ಮನೆಯೂ "ಗುಣಗಳು ಇವನಲ್ಲಿ ಹುಟ್ಟಿದುವೋ ?ಗುಣಗಳಲ್ಲಿ ಇವನ ಉತ್ಪತ್ತಿಯೋ ?ಅಥವಾ ಗುಣಮಯನಾಗಿ ಜನಿಸಿದನೋ ?" ಎಂಬುದಾಗಿ ಜನರಿಗೆ ಸಂದೇಹವನ್ನುಂಟುಮಾಡುವವನೂ ಎಳೆಯದಾದ ಕಲ್ಪವೃಕ್ಷಕ್ಕೆ ಸಮಾನನೂ ಆದ ಈ ಅರಜಿನನು ಲಕ್ಷ್ಮಿಯೊಡನೆ ಬೆಳೆದನು. ಅರಜಿನನು ಬೆಳೆದಹಾಗೆಲ್ಲ ಅವನ ಶೋಭೆಯೂ ಸಂಪತ್ತಿಯೂ ಬೆಳೆಯಿತೆಂದು ಭಾವವು.

**ತಸ್ಯ ಶೂನ್ಯತ್ರಿಕೈಕದ್ವಿಪ್ರಮಾಣಮಿತವತ್ಸರೈಃ ।**
**ಗತೇ ಕುಮಾರಕಾಲೇಭೂದ್ರಾಜ್ಯಂ ಮಂಡಲಿಕೋಚಿತಮ್ ॥ ೨೯ ॥**

ಇಪ್ಪತ್ತೊಂದು ಸಹಸ್ರವರ್ಷಗಳಿಂದ ಅವನ ಕೌಮಾರಕಾಲವು ಕಳೆಯುತ್ತಿರಲು ಅವನಿಗೆ ಮಂಡಲಿಕರಾಜೋಚಿತವಾದ ರಾಜ್ಯವು ಪ್ರಾಪ್ತವಾಯಿತು.

**ತಾವತ್ಯೇವ ಗತೇ ಕಾಲೇ ತಸ್ಮಿನ್ಸಕಲಚಕ್ರಿತಾ ।**
**ಭೋಗಾನ್ ಸಮನ್ವಭೂದ್ಭಾಗೇ ತೃತೀಯೇ ಸ ನಿಜಾಯುಷಃ ॥ ೩೦ ॥**

ಅಷ್ಟೇ ಕಾಲವು ಕಳೆಯುತ್ತಿರಲು ಆ ಅರಜಿನನಲ್ಲಿ ಪೂರ್ಣಚಕ್ರವರ್ತಿತ್ವವುಂಟಾಯಿತು. ಅವನು ತನ್ನ ಆಯುಷ್ಯದ ಮೂರನೆಯ ಭಾಗದಲ್ಲಿ ಚಕ್ರವರ್ತಿಭೋಗಗಳನ್ನನುಭವಿಸಿದನು.

**ಕದಾಚಿಚ್ಛಾರದಾಂಭೋದವಿಲಾಯಪ್ರತಿಲೋಕನಾತ್ ।**
**ಸಮುದ್ಭೂತಸ್ವಜನ್ಮೋಪಯೋಗಬೋಧಿಃ ಸುರೋತ್ತಮೈಃ ॥ ೩೧ ॥**

**ಪ್ರಬೋಧಿತೋನುವಾದೇನ ದತ್ವಾ ರಾಜ್ಯಂ ಸ್ವಸೂನವೇ ।**
**ಅರವಿಂದಕುಮಾರಾಯ ಸುರೈರೂಢಾಮಧಿಷ್ಠಿತಃ ॥ ೩೨ ॥**

**ಶಿಬಿಕಾಂ ವೈಜಯಂತ್ಯಾಖ್ಯಾಂ ಸಹೇತುಕವನಂ ಗತಃ ।**
**ದೀಕ್ಷಾಂ ಷಷ್ಠೋಪವಾಸೇನ ರೇವತ್ಯಾಂ ದಶಮೀದಿನೇ ॥ ೩೩ ॥**

**ಶುಕ್ಲೇಗಾನ್ಮಾರ್ಗಶೀರ್ಷಸ್ಯ ಸಾಯಾಹ್ನೇ ಭೂಮಿಜ್ಯೈಃ ಸಹ ।**
**ಸಹಸ್ರೇಣ ಚತುರ್ಜ್ಞಾನಧಾರೀ ಚ ಸಮಜಾಯತ ॥ ೩೪ ॥**

ಒಂದಾನೊಂದು ಕಾಲದಲ್ಲಿ ಶರತ್ಕಾಲದ ಮೇಘದ ವಿನಾಶವನ್ನು ನೋಡುವುದರಿಂದುಂಟಾದ ತನ್ನ ಜನ್ಮದ ಉಪಯೋಗವನ್ನು ತಿಳಿದವನಾಗಿಯೂ ದೇವೋತ್ತಮರಾದ ಲೌಕಾಂತಿಕದೇವರ್ಕಳಿಂದ ಮಾಡಲ್ಪಟ್ಟ ಅನುವಾದದಿಂದ ಎಚ್ಚರಿಸಲ್ಪಟ್ಟವನಾಗಿಯೂ ತನ್ನ ಪುತ್ರನಾದ ಅರವಿಂದಕುಮಾರನಿಗೆ ರಾಜ್ಯವನ್ನು ಕೊಟ್ಟು ದೇವರ್ಕಳಿಂದ ಹೊರಲ್ಪಟ್ಟ ವೈಜಯಂತಿಯೆಂಬ ಪಲ್ಲಕ್ಕಿಯನ್ನೇರಿ ಸಹೇತುಕವನಕ್ಕೆ ಹೋಗಿ ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ದಶಮೀದಿನದ ಸಾಯಂಕಾಲದಲ್ಲಿ ರೇವತೀನಕ್ಷತ್ರದಲ್ಲಿ ಆರು ಉಪವಾಸನಿಯಮದಿಂದ ಸಹಸ್ರ ರಾಜರುಗಳೊಡನೆ ದೀಕ್ಷೆಯನ್ನು ತೆಗೆದುಕೊಂಡನು. ನಾಲ್ಕನೆಯದಾದ ಮನಃಪರ್ಯಯಜ್ಞಾನಧಾರಿಯೂ ಆದನು.

**ಸಮ್ಯಗೇವಂ ತಪಃ ಕುರ್ವನ್ ಕದಾಚಿತ್ಪಾರಣಾದಿನೇ ।**
**ಪ್ರಾಯಾಚ್ಚಕ್ರಪುರಂ ತಸ್ಮೈ ದತ್ವಾನ್ನಮಪರಾಜಿತಃ ॥ ೩೫ ॥**

**ಮಹೀಪತಿಃ ಸುವರ್ಣಾಭಃ ಪ್ರಾಪದಾಶ್ಚರ್ಯಪಂಚಕಮ್ ।**
**ಛಾದ್ಮಸ್ಥ್ಯೇನಾಗಮಂಸ್ತಸ್ಯ ಮುನೇರ್ವರ್ಷಾಣಿ ಷೋಡಶ ॥ ೩೬ ॥**

ಈ ರೀತಿಯಾಗಿ ತಪಸ್ಸನ್ನು ಮಾಡುವವನಾಗಿ ಒಂದಾನೊಂದು ಕಾಲದಲ್ಲಿ ಪಾರಣೆಯ ದಿನದಲ್ಲಿ ಚಕ್ರಪುರಕ್ಕೆ ಹೋದನು. ಅವನಿಗೆ ಸುವರ್ಣಕಾಂತಿಯುಳ್ಳವನಾದ ಅಪರಾಜಿತರಾಜನು ಆಹಾರದಾನವನ್ನು ಕೊಟ್ಟು ಪಂಚಾಶ್ಚರ್ಯವನ್ನು ಪಡೆದನು. ಆ ಮುನಿಗೆ ಛದ್ಮಸ್ಥಾವಸ್ಥೆಯಿಂದ ಹದಿನಾರು ವರ್ಷಗಳು ಕಳೆದುವು.

**ತತೋ ದೀಕ್ಷಾವನೇ ಮಾಸೇ ಕಾರ್ತಿಕೇ ದ್ವಾದಶೀದಿನೇ ।**
**ರೇವತ್ಯಾಂ ಶುಕ್ಲಪಕ್ಷೇಪರಾಹ್ಣೇ ಚೂತತರೋರಧಃ ॥ ೩೭ ॥**

**ಷಷ್ಠೋಪವಾಸೇನಾಹತ್ಯ ಘಾತೀನ್ಯಾರ್ಹಂತ್ಯಮಾಸದತ್ ।**
**ಸುರಾಶ್ಚತುರ್ಥಕಲ್ಯಾಣೇ ಸಂಭೂಯೈನಮಪೂಜಯನ್ ॥ ೩೮ ॥**

ಬಳಿಕ ದೀಕ್ಷಾವನದಲ್ಲಿ ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶೀದಿನದಲ್ಲಿ ರೇವತೀ ನಕ್ಷತ್ರದಲ್ಲಿ ಸಾಂಯಕಾಲದಲ್ಲಿ ಮಾವಿನಮರದ ಕೆಳಗೆ ಆರು ಉಪವಾಸನಿಯಮದಿಂದ ಘಾತಿಕರ್ಮಗಳನ್ನು ನಾಶಮಾಡಿ ಆರ್ಹಂತ್ಯವನ್ನು ಪಡೆದನು. ನಾಲ್ಕನೆಯದಾದ ಕೇವಲಜ್ಞಾನಕಲ್ಯಾಣದಲ್ಲಿ ದೇವರ್ಕಳು ಸೇರಿ ಈ ಅರಜಿನನನ್ನು ಪೂಜಿಸಿದರು.

**ಕುಂಭಾರ್ಯಾದ್ಯಾ ಗಣೇಶೋಸ್ಯ ತ್ರಿಂಶತ್ಪೂರ್ವಾಂಗವೇದಿನಃ ।**
**ಶೂನ್ಯೈಕಶಣ್ಮಿತಾ ಜ್ಞೇಯಾಃ ಶಿಕ್ಷಕಾಃ ಸೂಕ್ಷ್ಮಬುದ್ಧಯಃ ॥ ೩೯ ॥**

**ಪಂಚವಹ್ನ್ಯಷ್ಟಪಂಚಾಗ್ನಿಮಿತಾಸ್ತ್ರಿಜ್ಞಾನಧಾರಿಣಃ ।**
**ಶೂನ್ಯದ್ವಯಾಷ್ಟಪಕ್ಷೋಕ್ತಾಃ ಕೇವಲಜ್ಞಾನಲೋಚನಾಃ ॥ ೪೦ ॥**

**ತಾವಂತಃ ಖದ್ವಯಾಗ್ನ್ಯಬ್ಧಿಮಿತಾ ವಿಕ್ರಿಯರ್ದ್ಧಿಕಾಃ ।**
**ಕರಣೇಂದ್ರಿಯಖದ್ವ್ಯುಕ್ತಾ ಮನಃಪರ್ಯಯಬೋಧನಾಃ ॥ ೪೧ ॥**

ಇವನಿಗೆ ಕುಂಭಾರ್ಯನೇ ಮೊದಲಾದ ಮೂವತ್ತು ಮಂದಿ ಗಣಧರರಿದ್ದರು. ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಜ್ಞರಾದ ಮುನಿಗಳು ಆರುನೂರ ಹತ್ತು ಮಂದಿಗಳಿದ್ದರು. ಸೂಕ್ಷ್ಮಬುದ್ಧಿಯುಳ್ಳ ಶಿಕ್ಷಕಮುನಿಗಳು ಮೂವತ್ತೈದುಸಾವಿರದ ಎಂಟುನೂರ ಮೂವತ್ತೈದು ಮಂದಿಗಳಿದ್ದರು. ಮತಿಶ್ರುತಾವಧಿಜ್ಞಾನಧಾರಿಗಳಾದ ಮುನಿಗಳು ಎರಡುಸಾವಿರದೆಂಟುನೂರು ಮಂದಿಗಳಿದ್ದರು. ಕೇವಲಜ್ಞಾನವೆಂಬ ನೇತ್ರವುಳ್ಳವರೂ ಅಷ್ಟು ಮಂದಿಗಳಿದ್ದರು. ವಿಕ್ರಿಯರ್ದ್ಧಿಯುಳ್ಳಮುನಿಗಳು ನಾಲ್ಕು ಸಾವಿರದ ಮೂರುನೂರು ಮಂದಿಗಳಿದ್ದರು. ಮನಃಪರ್ಯಯಜ್ಞಾನವುಳ್ಳ ಮುನಿಗಳು ಎರಡುಸಾವಿರದ ಐವತ್ತೈದು ಮಂದಿಗಳಿದ್ದರು.

**ಶತಾನಿ ಷಟ್ಸಹಸ್ರಂ ಚ ತತ್ರಾನುತ್ತರವಾದಿನಃ ।**
**ಸರ್ವೇ ತೇ ಸಂಚಿತಾಃ ಪಂಚಾಶತ್ಸಹಸ್ರಾಣಿ ಸಂಯತಾಃ ॥ ೪೨ ॥**

ಅಲ್ಲಿ ಅನುತ್ತರವಾದಿಮುನಿಗಳು ಸಾವಿರದ ಆರುನೂರು ಮಂದಿಗಳಿದ್ದರು. ಆ ಮುನಿಗಳೆಲ್ಲರೂ ಸೇರಿ ಐವತ್ತುಸಾವಿರ ಮಂದಿಗಳಿದ್ದರು.

**ಜ್ಞೇಯಾಃ ಷಷ್ಟಿಸಹಸ್ರಾಣಿ ರಕ್ಷಿಲಾಪ್ರಮುಖಾರ್ಯಿಕಾಃ ।**
**ಲಕ್ಷಷಷ್ಟಿಸಹಸ್ರಾಣಿ ಶ್ರಾವಕಾಃ ಶ್ರಾವಿಕಾಶ್ಚ ತಾಃ ॥ ೪೩ ॥**

**ಲಕ್ಷತ್ರಯಂ ವಿನಿರ್ದಿಷ್ಟಂ ದೇವಾಃ ಪೂರ್ವೋಕ್ತಮಾನಕಾಃ ।**
**ತಿರ್ಯಗ್ಭೇದಾಶ್ಚ ಸಂಖ್ಯಾತಾ ವೃತೋ ದ್ವಾದಶಭಿರ್ಗಣೈಃ ॥ ೪೪ ॥**

**ಏಭಿರ್ಧರ್ಮೋಪದೇಶಾರ್ಥಂ ವ್ಯಹರದ್ವಿಷಯಾನ್ ಶುಚೀನ್ ।**
**ಮಾಸಮಾತ್ರಾವಶೇಷಾಯುಃ ಸಮ್ಮೇದಗಿರಿಮಸ್ತಕೇ ॥ ೪೫ ॥**

**ಸಹಸ್ರಮುನಿಭಿಃ ಸಾರ್ಧಂ ಪ್ರತಿಮಾಯೋಗಮಾಸ್ಥಿತಃ ।**
**ಚೈತ್ರಕೃಷ್ಣಾಂತರೇವತ್ಯಾಂ ಪೂರ್ವರಾತ್ರೇಗಮಚ್ಛಿವಮ್ ॥ ೪೬ ॥**

ರಕ್ಷಿಲಾ ಮೊದಲಾದ ಆರ್ಯಿಕೆಯರು ಅರುವತ್ತುಸಾವಿರ ಮಂದಿಗಳಿದ್ದರೆಂದು ತಿಳಿಯಬೇಕು. ಒಂದುಲಕ್ಷದ ಅರುವತ್ತುಸಾವಿರ ಮಂದಿಗಳು ಶ್ರಾವಕರೂ ಮೂರು ಲಕ್ಷ ಶ್ರಾವಿಕೆಯರೂ ಇದ್ದರು. ದೇವದೇವಿಯರು ಮೊದಲು ಹೇಳಲ್ಪಟ್ಟ (ಅಸಂಖ್ಯಾತ) ಪರಿಮಾಣವುಳ್ಳವರಿದ್ದರು. ಸಂಖ್ಯಾತತಿರ್ಯಕ್ಪ್ರಾಣಿಗಳಿದ್ದುವು. ಈ ದ್ವಾದಶಗಣಗಳಿಂದ ಪರಿವೃತನಾಗಿ ಧರ್ಮೋಪದೇಶಕ್ಕೋಸ್ಕರ ಶುಚಿಯಾದ ದೇಶಗಳನ್ನು ವಿಹರಿಸಿದನು. ಒಂದು ತಿಂಗಳ ಆಯುಷ್ಯವುಳಿದಿರುವಾಗ ಸಮ್ಮೇದ ಪರ್ವತದ ಶಿಖರದಲ್ಲಿ ಸಹಸ್ರಮುನಿಗಳೊಡನೆ ಪ್ರತಿಮಾಯೋಗದಲ್ಲಿದ್ದು ಚೈತ್ರ ಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿವಸ ರಾತ್ರಿಯ ಪೂರ್ವಭಾಗದಲ್ಲಿ ರೇವತೀ ನಕ್ಷತ್ರದಲ್ಲಿ ಮೋಕ್ಷವನ್ನು ಹೊಂದಿದನು.

**ತದಾಗತ್ಯ ಸುರಾಧೀಶಾಃ ಕೃತನಿರ್ವಾಣಪೂಜನಾಃ ।**
**ಸ್ತುತ್ವಾ ಸ್ತುತಿಶತೈರ್ಭಕ್ತ್ಯಾ ಸ್ವಂ ಸ್ವಮೋಕಃ ಸಮಂ ಯಯುಃ ॥ ೪೭ ॥**

ಆಗ ದೇವೇಂದ್ರರು ಬಂದು ನಿರ್ವಾಣಕಲ್ಯಾಣಪೂಜೆಯನ್ನು ಮಾಡಿದವರಾಗಿ ಭಕ್ತಿಯಿಂದ ಅನೇಕಸ್ತುತಿಗಳಿಂದ ಸ್ತುತಿಸಿ ತಂತಮ್ಮ ವಾಸಸ್ಥಾನವನ್ನು ಕುರಿತು ಒಟ್ಟಿಗೆ ಹೊರಟು ಹೋದರು.

**ತ್ಯಕ್ತಂ ಯೇನ ಕುಲಾಲಚಕ್ರಮಿವ ತಚ್ಚಕ್ರಂ ಧರಾಚಕ್ರಜಿತ್ ।**
**ಶ್ರೀಶ್ಚಾಸೌ ಘಟನಾದಿಕೇವ ಪರಮಶ್ರೀಧರ್ಮಚಕ್ರೇಪ್ಸಯಾ ॥**
**ಯುಷ್ಮಾನ್ಸಭಕ್ತಿಭರಾನತಾನ್ಸ ದುರಿತಾರಾತೇರಸಧ್ವಂಸಕೃ- ।**
**ತ್ಪಾಯಾದ್ಭವ್ಯಜನಾನರೋ ಜಿನಪತಿಃ ಸಂಸಾರಭೀರೂನ್ ಸದಾ ॥ ೪೮ ॥**

ಯಾವನು, ಕುಂಬಾರನ ಚಕ್ರವನ್ನು ತ್ಯಜಿಸುವಂತೆ, ಭೂಮಂಡಲವನ್ನು ಜಯಿಸಿದ ಚಕ್ರರತ್ನವನ್ನೂ ಉತ್ಕೃಷ್ಟಸಂಪತ್ತಿಯುಳ್ಳ ಧರ್ಮಚಕ್ರವನ್ನು ಪಡೆಯಬೇಕೆಂಬ ಇಚ್ಛೆಯಿಂದ, ಸಂಯೋಜಕಸ್ತ್ರೀಯನ್ನು ತ್ಯಜಿಸುವಂತೆ, ರಾಜ್ಯಲಕ್ಷ್ಮಿಯನ್ನೂ ತ್ಯಜಿಸಿದನೋ ದುಷ್ಕೃತವೆಂಬ ಶತ್ರುವಿನ ಶಕ್ತಿಯನ್ನು ನಾಶಮಾಡುವವನಾದ ಆ ಈ ಅರಜಿನೇಶ್ವರನು ಭಕ್ತಿಯ ಭಾರದಿಂದ ಬಗ್ಗಿದವರೂ ಭವ್ಯಜನರೂ ಯಾವಾಗಲೂ ಸಂಸಾರದ ಭೀತಿಯುಳ್ಳವರೂ ಆದ ನಿಮ್ಮಗಳನ್ನು ಕಾಪಾಡಲಿ.

**ಕ್ಷುತ್ತೃಡ್ಭಯಾದಿಗುರುಕರ್ಮಕೃತೋರುದೋಷಾ-।**
**ನಷ್ಟಾದಶಾಪಿ ಸನಿಮಿತ್ತಮಪಾಸ್ಯ ಶುದ್ಧಿಮ್ ॥**
**ಯೋ ಲಬ್ಧವಾಂಸ್ತ್ರಿಭುವನೈಕಗುರುರ್ಗರೀಯಾ- ।**
**ನಷ್ಟಾದಶೋ ದಿಶತು ಶೀಘ್ರಮರಃ ಶ್ರಿಯಂ ವಃ ॥ ೪೯ ॥**

ಯಾವನು ಹದಿನೆಂಟು ಪ್ರಕಾರವಾದ ಕ್ಷುಧಾತೃಷಾಭಯವೇ ಮೊದಲಾದ ಮತ್ತು ಕರ್ಮವಿಶೇಷದಿಂದುಂಟಾದ ಮಹಾದೋಷಗಳನ್ನು ಕಾರಣಸಹಿತವಾಗಿ ನಾಶಮಾಡಿ ಶುದ್ಧಿಯನ್ನು ಪಡೆದನೋ ಮೂರುಲೋಕಗಳಿಗೆ ಮುಖ್ಯಗುರುವೂ ದೊಡ್ಡವನೂ ತೀರ್ಥಂಕರರಲ್ಲಿ ಹದಿನೆಂಟನೆಯವನೂ ಆದ ಆ ಅರಜಿನೇಶ್ವರನು ಶೀಘ್ರವಾಗಿ ನಿಮ್ಮಗಳಿಗೆ ಶ್ರೀಯನ್ನು ಕೊಡಲಿ.

**ಪ್ರಾಗ್ಯೋಭೂನ್ನೃಪತಿರ್ಮಹಾನ್ ಧನಪತಿಃ ಪಶ್ಚಾದ್ವ್ರತಾನಾಂ ಪತಿಃ ।**
**ಸ್ವರ್ಗಾಗ್ರೇ ವಿಲಸಜ್ಜಯಂತಜಪತಿಃ ಪ್ರೋದ್ಯತ್ಸುಖಾನಾಂ ಪತಿಃ ॥**
**ಷಟ್ಖಂಡಾಧಿಪತಿಶ್ಚತುರ್ದಶಲಸದ್ರತ್ನೈರ್ನಿಧೀನಾಂ ಪತಿ- ।**
**ಸ್ತ್ರೈಲೋಕ್ಯಾಧಿಪತಿಃ ಪುನಾತ್ವರಪತಿಃ ಸ್ವಂ ಸಂಶ್ರಿತಾನ್ಸಶ್ಚಿರಮ್ ॥ ೫೦ ॥**

ಯಾವನು ಮೊದಲು ಧನಪತಿಮಹಾರಾಜನಾದನೋ ಬಳಿಕ ವ್ರತಗಳಿಗೆ ಪತಿಯಾದ ಮುನಿಯೂ ಸ್ವರ್ಗದ ತುದಿಯಲ್ಲಿ ಪ್ರಕಾಶಮಾನವಾದ ಜಯಂತ ವಿಮಾನದಲ್ಲಿ ಜನಿಸಿದ ಅಹಮಿಂದ್ರನೂ ಹೆಚ್ಚುತ್ತಿರುವ ಸುಖಗಳಿಗೆ ಅಧಿಪತಿಯೂ ಪ್ರಕಾಶಮಾನವಾದ ಚತುರ್ದಶರತ್ನಗಳಿಂದ ಷಟ್ಖಂಡಾಧಿಪತಿಯೂ ನವನಿಧಿಗಳಿಗೊಡೆಯನೂ ಆದನೋ ಅಂತಹ ತ್ರಿಲೋಕಾಧಿಪತಿಯಾದ ಅರಜಿನೇಶ್ವರನು ತನ್ನನ್ನು ಆಶ್ರಯಿಸಿದ ನಿಮ್ಮಗಳನ್ನು ಬಹುಕಾಲದವರೆಗೆ ಪವಿತ್ರಮಾಡಲಿ.

**ಅಥಾಸ್ಮಿನ್ನೇವ ತೀರ್ಥೇಭೂತ್ಸುಭೌಮೋ ನಾಮ ಚಕ್ರಭೃತ್ ।**
**ತೃತೀಯಜನ್ಮನ್ಯತ್ರೈವ ಭರತೇಸೌ ಭುವಃ ಪತಿಃ ॥ ೫೧ ॥**

**ಭೂಪಾಲೋ ನಾಮ ಸಂಗ್ರಾಮೇ ಬಲಿಭಿರ್ವಿಜಿಗೀಷುಭಿಃ ।**
**ಪ್ರಾಪ್ತಾಭಿಮಾನಭಂಗಃ ಸನ್ ಭೃಶಂ ನಿರ್ವಿದ್ಯ ಸಂಸೃತೇಃ ॥ ೫೨ ॥**

**ದೀಕ್ಷಾಂ ಜೈನೇಶ್ವರೀಮಾದಾತ್ಸಂಭೂತಗುರುಸನ್ನಿಧೌ ।**
**ಕದಾಚಿತ್ಸ ತಪಃ ಕುರ್ವನ್ನಿದಾನಮಕರೋತ್ಕುಧೀಃ ॥ ೫೩ ॥**

**ಭೂಯಾನ್ಮೇ ಚಕ್ರವರ್ತಿತ್ವಮಿತಿ ಭೋಗಾನುಷಂಜನಾತ್ ।**
**ಕ್ಷೀರಂ ವಿಷೇಣ ವಾ ತೇನ ಮನಸಾ ದೂಷಿತಂ ತಪಃ ॥ ೫೪ ॥**

ಬಳಿಕ ಈ ಅರತೀರ್ಥಂಕರರ ತೀರ್ಥದಲ್ಲೇ ಸುಭೌಮನೆಂಬ ಚಕ್ರವರ್ತಿಯಿದ್ದನು. ಇವನು ಹಿಂದೆ ಮೂರನೆಯ ಜನ್ಮದಲ್ಲಿ ಈ ಭರತಕ್ಷೇತ್ರದಲ್ಲೇ ಭೂಪಾಲನೆಂಬ ರಾಜನಾಗಿದ್ದು ಯುದ್ಧದಲ್ಲಿ ಜಯಿಸಲಿಚ್ಛಿಸುವ ಬಲಿಷ್ಠರಿಂದ ಅಭಿಮಾನ

ಭಂಗಿತನಾಗಿ ಸಂಸಾರದಿಂದ ಅಧಿಕವಾಗಿ ವೈರಾಗ್ಯವನ್ನು ಹೊಂದಿ ಸಂಭೂತನೆಂಬ ಗುರುವಿನ ಬಳಿಯಲ್ಲಿ ಜಿನದೀಕ್ಷೆಯನ್ನು ತೆಗೆದುಕೊಂಡನು. ಆ ಭೂಪಾಲ ಮುನಿಯು ತಪಸ್ಸನ್ನು ಮಾಡುತ್ತ ಒಂದಾನೊಂದು ಕಾಲದಲ್ಲಿ ದುರ್ಬುದ್ಧಿಯುಳ್ಳವನಾಗಿ "ಉತ್ತರಜನ್ಮದಲ್ಲಿ ಭೋಗಗಳ ಸಂಬಂಧದಿಂದ ನನಗೆ ಚಕ್ರವರ್ತಿತ್ವವುಂಟಾಗಲಿ" ಎಂದು ನಿದಾನಶಲ್ಯವನ್ನು ಮಾಡಿದನು. ವಿಷದಿಂದ ಹಾಲು ದೂಷಿತವಾಗುವಂತೆ, ಆ ನಿದಾನಶಲ್ಯವುಳ್ಳ ಮನಸ್ಸಿನಿಂದ ತಪಸ್ಸು ದೂಷಿತವಾಯಿತು.

**ಸ ತಥೈವಾಚರನ್ ಘೋರಂ ತಪಃ ಸ್ವಸ್ಯಾಯುಷಃ ಕ್ಷಯೇ ।**
**ಸಮಾಧಾಯ ಮಹಾಶುಕ್ರೇ ಸನ್ನ್ಯಾಸೇನೋದಪದ್ಯತ ॥ ೫೫ ॥**

ಅವನು ಹಾಗೆಯೇ ಘೋರತಪಸ್ಸನ್ನಾಚರಿಸಿ ತನ್ನ ಆಯುಷ್ಯದ ಕ್ಷಯದಲ್ಲಿ–ಅವಸಾನಕಾಲದಲ್ಲಿ ಮನಸ್ಸಮಾಧಾನವನ್ನು ಹೊಂದಿ ಸನ್ನ್ಯಾಸವಿಧಿಯಿಂದ ಸತ್ತು ಮಹಾಶುಕ್ರವೆಂಬ ಹತ್ತನೆಯ ಸ್ವರ್ಗದಲ್ಲಿ ಉತ್ಪನ್ನನಾದನು.

**ತತ್ರ ಷೋಡಶವಾರಾಶಿಮಾನಾಯುಃ ಸುಖಮಾಸ್ತ ಸಃ ।**
**ದ್ವೀಪೇಸ್ಮಿನ್ ಭಾರತೇ ಕೋಸಲಾಖ್ಯೇ ರಾಷ್ಟ್ರೇ ಗುಣಾನ್ವಿತೇ ॥ ೫೬ ॥**

**ಸಹಸ್ರಬಾಹುರಿಕ್ಷ್ವಾಕುಃ ಸಾಕೇತನಗರಾಧಿಪಃ ।**
**ರಾಜ್ಞೀ ತಸ್ಯಾಭವಚ್ಚಿತ್ರಮತ್ಯಾಖ್ಯಾ ಹೃದಯಪ್ರಿಯಾ ॥ ೫೭ ॥**

ಅಲ್ಲಿ ಅವನು ಹದಿನಾರು ಸಾಗರೋಪಮವರ್ಷಾಯುಷ್ಯವುಳ್ಳವನಾಗಿ ಸುಖವಾಗಿದ್ದನು. ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಗುಣಯುಕ್ತವಾದ ಕೋಶಲ ದೇಶದಲ್ಲಿ ಇಕ್ಷ್ವಾಕುವಂಶಜನೂ ಅಯೋಧ್ಯಾನಗರಾಧಿಪತಿಯೂ ಆದ ಸಹಸ್ರಬಾಹುವೆಂಬ ರಾಜನಿದ್ದನು. ಆತನಿಗೆ ಮನಃಪ್ರಿಯಳಾದ ಚಿತ್ರಮತಿಯೆಂಬ ರಾಜ್ಞಿಯಿದ್ದಳು.

**ಕನ್ಯಾಕುಬ್ಜಮಹೀಶಸ್ಯ ಪಾರತಾಖ್ಯಸ್ಯ ಸಾತ್ಮಜಾ ।**
**ತಸ್ಯಾಂ ಸುತಃ ಸ್ವಪುಣ್ಯೇನ ಕೃತವೀರಾಭಿಧೋಭವತ್ ॥ ೫೮ ॥**

ಆಕೆಯು ಕನ್ಯಾಕುಬ್ಜದ ದೊರೆಯಾದ ಪಾರತನೆಂಬವನ ಮಗಳು. ಆಕೆಯಲ್ಲಿ ತನ್ನ ಪುಣ್ಯದಿಂದ ಕೃತವೀರನೆಂಬ ಪುತ್ರನಾದನು.

**ತತ್ರ ಪ್ರವರ್ಧಮಾನೇಸ್ಮಿನ್ನಿದಮನ್ಯದುದೀರ್ಯತೇ ।**
**ಸಹಸ್ರಭುಜಭೂಭರ್ತುಃ ಪಿತೃವ್ಯಾಚ್ಛತಬಿಂದುತಃ ॥ ೫೯ ॥**

**ಪಾರತಾಖ್ಯಮಹೀಶಸ್ಯ ಶ್ರೀಮತ್ಯಾಸ್ತನಯಃ ಸ್ವಸುಃ ।**
**ಜಮದಗ್ನಿಃ ಸ ರಾಮಾಂತಃ ಕೌಮಾರೇ ಮಾತೃಮೃತ್ಯುತಃ ॥ ೬೦ ॥**

**ನಿರ್ವೇಗಾತ್ತಾಪಸೋ ಭೂತ್ವಾ ಪಂಚಾಗ್ನಿತಪಸಿ ಸ್ಥಿತಃ ।**
**ದೃಢಗ್ರಾಹಿಮಹೀಶಸ್ಯ ವಿಪ್ರೇಣ ಹರಿವರ್ಮಣಾ ॥ ೬೧ ॥**

**ಅಭೂದಖಂಡಿತಂ ಸಖ್ಯಮೇವಂ ಕಾಲೇ ಪ್ರಯಾತ್ಯಸೌ ।**
**ದೃಢಗ್ರಾಹೀ ತಪೋ ಜೈನಮಗ್ರಹೀದ್ಬ್ರಾಹ್ಮಣೋಪಿ ಚ ॥ ೬೨ ॥**

**ತಾಪಸವ್ರತಮಂತೇಭೂಜ್ಜ್ಯೋತಿರ್ಲೋಕೇ ದ್ವಿಜೋತ್ತಮಃ ।**
**ದೃಢಗ್ರಾಹೀ ಚ ಸೌಧರ್ಮೇ ಸೋವಧಿಜ್ಞಾನಚಕ್ಷುಷಾ ॥ ೬೩ ॥**

**ಮಿಥ್ಯಾತ್ವಾಜ್ಜ್ಯೋತಿಷಾಂ ಲೋಕೇ ಸಮುತ್ಪನ್ನಂ ದ್ವಿಜೋತ್ತಮಮ್ ।**
**ವಿಜ್ಞಾಯ ಜೈನಸದ್ಧರ್ಮಂ ತಂ ಗ್ರಾಹಯಿತುಮಾಗಮತ್ ॥ ೬೪ ॥**

ಅಲ್ಲಿ ಈ ಕೃತವೀರನು ಬೆಳೆಯುತ್ತಿರಲು ಇತ್ತ ಇದೊಂದು ಬೇರೆ ವಿಷಯವು ಹೇಳಲ್ಪಡುತ್ತದೆ–ಸಹಸ್ರಬಾಹುರಾಜನ ಚಿಕ್ಕಪ್ಪನಾದ ಶತಬಿಂದುವಿನ ದೆಸೆಯಿಂದ ಪಾರತರಾಜನ ಸಹೋದರಿಯಾದ ಶ್ರೀಮತಿಗೆ ಜಮದಗ್ನಿರಾಮನೆಂಬ ಪುತ್ರನು ಜನಿಸಿದನು. ಅವನು ಕುಮಾರಾವಸ್ಥೆಯಲ್ಲಿ ತಾಯಿಯ ವಿಯೋಗದಿಂದ ವೈರಾಗ್ಯವುಂಟಾದುದರಿಂದ ತಾಪಸನಾಗಿ ಪಂಚಾಗ್ನಿತಪಸ್ಸಿನಲ್ಲಿದ್ದನು. ಇತ್ತ ದೃಢಗ್ರಾಹಿಯೆಂಬ ರಾಜನಿಗೆ ಹರಿವರ್ಮನೆಂಬ ಬ್ರಾಹ್ಮಣನೊಡನೆ ಅಖಂಡಿತವಾದ ಸ್ನೇಹವಾಯಿತು. ಹೀಗೆ ಕಾಲವು ಕಳೆಯುತ್ತಿರಲು ಈ ದೃಢಗ್ರಾಹಿರಾಜನು ಜಿನದೀಕ್ಷೆಯನ್ನು ಗ್ರಹಣಮಾಡಿದನು. ದ್ವಿಜೋತ್ತಮನಾದ ಆ ಬ್ರಾಹ್ಮಣನೂ ತಾಪಸವ್ರತವನ್ನು ಗ್ರಹಣಮಾಡಿದನು. ಆಯುಷ್ಯಾವಸಾನದಲ್ಲಿ ಆ ಬ್ರಾಹ್ಮಣನು ಸತ್ತು ಜ್ಯೋತಿರ್ಲೋಕದಲ್ಲಿ ಜ್ಯೋತಿರ್ದೇವನಾಗಿ ಹುಟ್ಟಿದನು. ದೃಢಗ್ರಾಹಿಮುನಿಯು ಸತ್ತು ಸೌಧರ್ಮಕಲ್ಪದಲ್ಲಿ ದೇವನಾಗಿ ಜನಿಸಿದನು. ಅವನು ಅವಧಿಜ್ಞಾನವೆಂಬ ನೇತ್ರದಿಂದ ಬ್ರಾಹ್ಮಣನು ಮಿಥ್ಯಾತ್ವದ ದೆಸೆಯಿಂದ ಜ್ಯೋತಿರ್ದೇವರ್ಕಳ ಲೋಕದಲ್ಲಿ ಜನಿಸಿದ್ದಾನೆಂದು ತಿಳಿದು ಅವನಿಗೆ ಜೈನಸದ್ಧರ್ಮವನ್ನು ಗ್ರಹಣಮಾಡಿಸುವುದಕ್ಕೋಸ್ಕರ ಬಂದನು.

**ದೃಷ್ಟ್ವಾ ತಂ ತತ್ರ ಮಿಥ್ಯಾತ್ವಾತ್ತ್ವಮೇವಂ ಕುತ್ಸಿತೋಭವಃ ।**
**ಉತ್ಕೃಷ್ಟಶುದ್ಧಸಮ್ಯಕ್ತ್ವಾದ್ದೇವಭೂಯಮಹಂ ಗತಃ ॥ ೬೫ ॥**

**ತಸ್ಮಾದುಪೈಹಿ ಮೋಕ್ಷಸ್ಯ ಮಾರ್ಗಮಿತ್ಯಬ್ರವೀತ್ತತಃ ।**
**ತಾಪಸಾನಾಂ ತಪಃ ಕಸ್ಮಾದಶುದ್ಧಮಿತಿ ಸಂಶಯಾತ್ ॥ ೬೬ ॥**

**ಅನ್ವಯುಙ್ಕ್ತ ಸ ತಂ ಸೋಪಿ ದರ್ಶಯಾಮ್ಯೇಹಿ ಭೂತಲಮ್ ।**
**ಇತ್ಯನ್ಯೋನ್ಯಂ ಸಮಾಲೋಚ್ಯ ಕೀಚಕದ್ವಂದ್ವತಾಂ ಗತೌ ॥ ೬೭ ॥**

**ಜಮದಗ್ನಿಮುನೇರ್ದೀರ್ಘಶ್ಮಶ್ರ್ವಾಶ್ರಯಮುಪಾಶ್ರಿತೌ ।**
**ಕಾಂಚಿತ್ಕಾಲಕಲಾಂ ಸ್ಥಿತ್ವಾ ಸದ್ದೃಷ್ಟಿಃ ಸುರಕೀಚಕಃ ॥ ೬೮ ॥**

**ಸಮಭಾಷತ ಮಾಯಾಜ್ಞೋ ಜ್ಯೋತಿಷ್ಕಾಮರಕೀಚಕೀಮ್ ।**
**ಏತದ್ವನಾಂತರಂ ಗತ್ವಾ ಪ್ರತ್ಯಾಯಾಸ್ಯಾಮ್ಯಹಂ ಪ್ರಿಯೇ ॥ ೬೯ ॥**

**ಪ್ರತೀಕ್ಷಸ್ವಾತ್ರ ಮಾಂ ಸ್ಥಿತ್ವೇತ್ಯಸೌ ಚಾಹಾಗಮಂ ತವ ।**
**ನ ಶ್ರದ್ದಧಾಮಿ ಮೇ ದೇಹಿ ಶಪಥಂ ಯದಿ ಯಾಸ್ಯಸಿ ॥ ೭೦ ॥**

**ಇತ್ಯತಃ ಸೋಬ್ರವೀದ್ಬ್ರೂಹಿ ಪಾತಕೇಷು ಕಿಮಿಚ್ಛಸಿ ।**
**ಪಂಚಸು ತ್ವಮಹಂ ತಸ್ಮಿನ್ದಾಸ್ಯಾಮಿ ತದಿತಿ ಸ್ಫುಟಮ್ ॥ ೭೧ ॥**

ಅಲ್ಲಿ ಅವನನ್ನು ನೋಡಿ "ಮಿಥ್ಯಾತ್ವದ ದೆಸೆಯಿಂದ ನೀನು ಹೀಗೆ ಕುತ್ಸಿತನಾದೆ. ಉತ್ಕೃಷ್ಟವಾದ ಶುದ್ಧಸಮ್ಯಕ್ತ್ವದಿಂದ ನಾನು ದೇವತ್ವವನ್ನು ಹೊಂದಿದೆನು. ಆದುದರಿಂದ ಮೋಕ್ಷದ ಮಾರ್ಗವನ್ನು ಹೊಂದು" ಎಂದು ಹೇಳಿದನು. ಬಳಿಕ ಆ ಜ್ಯೋತಿರ್ದೇವನು ತಾಪಸರುಗಳ ತಪಸ್ಸು ಯಾವ ಕಾರಣದಿಂದ ಅಶುದ್ಧವೆಂಬ ಸಂಶಯದಿಂದ ಆ ದೇವನನ್ನು ಪ್ರಶ್ನೆಮಾಡಿದನು. ಆ ದೇವನೂ ಆ ಜ್ಯೋತಿರ್ದೇವನನ್ನು ಕುರಿತು "ಭೂತಲಕ್ಕೆ ಬಾ, ತೋರಿಸುತ್ತೇನೆ" ಎಂದು ಪರಸ್ಪರವಾಗಿ ಪರ್ಯಾಲೋಚಿಸಿ ಎರಡು ಹೆಣ್ಣುಗಂಡು ಗೌಜಗನಹಕ್ಕಿಗಳ ರೂಪವನ್ನು ಧರಿಸಿ ಅವು ಜಮದಗ್ನಿಮುನಿಯ ಉದ್ದವಾದ ಗಡ್ಡದ ಆಶ್ರಯವನ್ನು ಹೊಂದಿದುವು. ಗಡ್ಡದಲ್ಲಿ ಗೂಡುಕಟ್ಟಿ ವಾಸಮಾಡಿದುವೆಂದು ಭಾವವು. ಸ್ವಲ್ಪಕಾಲದವರೆಗೆ ಆ ಗಡ್ಡದಲ್ಲಿದ್ದು ಆ ತಾಪಸಿಯ ಮಾಯೆಯನ್ನು ತಿಳಿದ ಸಮ್ಯಗ್ದೃಷ್ಟಿಯಾದ ಆ ದೇವಕೀಚಕಪಕ್ಷಿಯು ಜ್ಯೋತಿಷ್ಕದೇವನಾದ ಸ್ತ್ರೀಕೀಚಕಪಕ್ಷಿಯನ್ನು ಕುರಿತು "ಪ್ರಿಯಳೆ ! ನಾನು ಈ ವನದ ಮಧ್ಯಕ್ಕೆ ಹೋಗಿ ಹಿಂದಿರುಗಿ ಬರುವೆನು. ಇಲ್ಲಿದ್ದು ನನ್ನನ್ನು ಇದಿರುನೋಡುತ್ತಿರು" ಎಂದು ಮಾತನಾಡಿಸಿತು. ಆಗ ಈ ಸ್ತ್ರೀಕೀಚಕಪಕ್ಷಿಯು "ನಿನ್ನ ಬರುವಿಕೆಯನ್ನು ನಾನು ನಂಬುವುದಿಲ್ಲ. ನೀನು ಬರುವುದಾದರೆ ನನಗೆ ಬೇರೆ ಶಪಥವನ್ನು ಕೊಡು" ಎಂದು ಹೇಳಿತು. ಬಳಿಕ ಆ ಪುರುಷಪಕ್ಷಿಯು "ಪಂಚಮಹಾಪಾತಕಗಳಲ್ಲಿ ನೀನು ಯಾವುದನ್ನಿಚ್ಛಿಸುವೆ ? ಅದನ್ನು ಹೇಳು. ಅದರಲ್ಲಿ ನಾನು ಶಪಥವನ್ನು ಕೊಡುವೆನು" ಎಂದು ಸ್ಪಷ್ಟವಾಗಿ ಹೇಳಿತು.

**ಸಾಪ್ಯಾಹ ತೇಷು ಮೇ ವಾಂಛಾ ಕಸ್ಮಿಂಶ್ಚಿನ್ನೈವ ದೇಹಿ ಮೇ ।**
**ತಾಪಸಸ್ಯಾಸ್ಯ ಯಾಸ್ಯಾಮಿ ಗತಿಂ ನೈಷ್ಯಾಮ್ಯಹಂ ಯದಿ ॥ ೭೨ ॥**

ಇತೀಮಂ ಶಪಥಂ ಗಂತುಂ ಮುಂಚಾಮಿ ತ್ವಾಂ ಪ್ರಿಯೇತಿ ತಮ್ ।
ತಚ್ಛ್ರುತ್ವಾ ಕೀಚಕಃ ಪ್ರಾಹ ಮುಕ್ತ್ವೈನಂ ಕಂಚಿದೀಪ್ಸಿತಮ್ ॥ ೭೩ ॥

ಬ್ರೂಹ್ಯನ್ಯಮಿತಿ ತದ್ವಂದ್ವವಿಸಂವಾದಂ ಸ ತಾಪಸಃ ।
ಶ್ರುತ್ವಾ ಕ್ರೋಧೇನ ಸಂತಪ್ತೋ ವಿಘೂರ್ಣಿತವಿಲೋಚನಃ ॥ ೭೪ ॥

ಹಸ್ತಾಭ್ಯಾಂ ಹಂತುಮುತ್ಕ್ರುಧ್ಯಾರ್ದ್ಗೃಹೀತ್ವಾ ನಿಶ್ಚಲಂ ದ್ವಿಜೌ ।
ಮದ್ದುರ್ಧರತಪಃ ಪ್ರಾಪ್ಯ ಭಾವಿಲೋಕೋನಭೀಪ್ಸಿತಃ ॥ ೭೫ ॥

ಯುವಾಭ್ಯಾಂ ಕೇನ ತದ್ವಾಚ್ಯಮಿತ್ಯಾಹಾತಃ ಖಗೋಬ್ರವೀತ್ ।
ಮಾಗಮಃ ಕೋಪಮೇತೇನ ಸೌಜನ್ಯಂ ತವ ನಶ್ಯತಿ ॥ ೭೬ ॥

ಯಾತ್ಯಾತಂಚನತಕ್ರೇಣ ಪಯೋಲ್ಪೇನ ನ ಕಿಂ ಕ್ಷತಿಮ್ ।
ಶೃಣು ತೇ ದುರ್ಗತೇರ್ಹೇತುಂ ಚಿರಂ ಘೋರಂ ತಪಸ್ಯತಃ ॥ ೭೭ ॥

ಕೌಮಾರಬ್ರಹ್ಮಚಾರಿತ್ವಂ ತವ ಸಂತತಿವಿಚ್ಛಿದೇ ।
ಸಂತಾನಘಾತಿನಃ ಪುಂಸಃ ಕಾ ಗತಿರ್ನರಕಾದ್ವಿನಾ ॥ ೭೮ ॥

ಅಪುತ್ರಸ್ಯ ಗತಿರ್ನಾಸ್ತೀತ್ಯಾರ್ಷಂ ಕಿಂ ನ ತ್ವಯಾ ಶ್ರುತಮ್ ।
ಕುತೋವಿಚಾರಯನ್ನೇವಂ ಕ್ಲಿಶ್ನಾಸಿ ಜಡಧೀರಿತಿ ॥ ೭೯ ॥

ಆಗ ಹೆಣ್ಣು ಹಕ್ಕಿಯೂ "ಪ್ರಿಯನೆ ! ಆ ಪಂಚಮಹಾಪಾತಕಗಳಲ್ಲಿ ನನಗೆ ಯಾವುದರಲ್ಲಿಯೂ ಇಚ್ಛೆಯಿಲ್ಲವೇ ಇಲ್ಲ ತಾನು ಬಾರದಿದ್ದರೆ ಈ ತಾಪಸನ ಗತಿಯನ್ನು ಹೊಂದುವೆನೆಂದು ನನಗೆ ಈ ಶಪಥವನ್ನು ಕೊಡು. ನಿನ್ನನ್ನು ಹೋಗುವುದಕ್ಕೆ ಬಿಡುತ್ತೇನೆ" ಎಂದು ಆ ಗಂಡುಹಕ್ಕಿಗೆ ಹೇಳಿತು. ಆ ಮಾತನ್ನು ಕೇಳಿ ಪುರುಷ ಕೀಚಕಪಕ್ಷಿಯು "ಈ ಶಪಥವನ್ನು ಬಿಟ್ಟು ಇಷ್ಟವಾದ ಬೇರೆ ಯಾವುದನ್ನಾದರೂ ಹೇಳು" ಎಂದು ಹೇಳಿತು. ಆ ಉಭಯಪಕ್ಷಿಗಳ ಈ ವಿವಾದವನ್ನು ಆ ತಾಪಸ ಜಮದಗ್ನಿಯು ಕೇಳಿ ಕೋಪದಿಂದ ಸಂತಪ್ತನೂ ಕಣ್ಣುಗಳನ್ನು ಮೆಟಕಿಸಿದವನೂ ಆಗಿ ಕೈಗಳಿಂದ ಆ ಪಕ್ಷಿಗಳನ್ನು ಕೊಲ್ಲುವುದಕ್ಕೋಸ್ಕರ ಗಟ್ಟಿಯಾಗಿ ಹಿಡಿದು ಬಹುಕ್ರೂರತೆಯಿಂದ "ನನ್ನ ಕಠಿನತಪಸ್ಸನ್ನು ಹೊಂದಿ ಮುಂದಿನ ಪರಲೋಕವನ್ನು ಯಾವ ಕಾರಣದಿಂದ ನೀವುಗಳು ಇಚ್ಛಿಸಲಿಲ್ಲ ? ಆದನ್ನು ಹೇಳಬೇಕು" ಎಂದು ಹೇಳಿದನು. ಬಳಿಕ ಆ ಗಂಡುಹಕ್ಕಿಯು ತಾಪಸನನ್ನು ಕುರಿತು "ಕೋಪವನ್ನು ಹೊಂದಬೇಡ. ಇದರಿಂದ ನಿನ್ನ ಸೌಜನ್ಯವು ನಾಶವಾಗುವುದು. ಸ್ವಲ್ಪವಾದ ಹೆಪ್ಪಿನ ಮಜ್ಜಿಗೆಯಿಂದ ಹಾಲು ನಾಶವನ್ನು ಹೊಂದುವುದಿಲ್ಲವೇ ? ಬಹುಕಾಲದವರೆಗೆ ಘೋರವಾಗಿ ತಪಸ್ಸನ್ನು ಮಾಡುವ ನಿನ್ನ ದುರ್ಗತಿಯ ಕಾರಣವನ್ನು ಕೇಳು. ನಿನ್ನ ಕುಮಾರಾವಸ್ಥೆಯ ಬ್ರಹ್ಮಚಾರಿತ್ವವು ಸಂತತಿವಿಚ್ಛಿತ್ತಿಗೆ ಕಾರಣವಾಗಿದೆ. ಸಂತಾನ ಘಾತಕನಾದ ಪುರುಷನಿಗೆ ನರಕದ ಹೊರತು ಗತಿ ಯಾವುದು ? ಪುತ್ರನಿಲ್ಲದವನಿಗೆ ಗತಿಯಿಲ್ಲವೆಂಬ ಋಷಿವಚನವನ್ನು ನೀನು ಕೇಳಿಲ್ಲವೇನು ? ವಿಚಾರವನ್ನು ಮಾಡದೆ ಮಂದಬುದ್ಧಿಯುಳ್ಳವನಾಗಿ ಹೀಗೇಕೆ ಕಷ್ಟಪಡುತ್ತಿ ?" ಎಂದು ಹೇಳಿತು.

ಶ್ರುತ್ವಾ ತದ್ವಚನಂ ಮಂದಮತಿರ್ನಿಶ್ಚಿತ್ಯ ತತ್ತಥಾ ।
ವಧೂಜನೇಷು ಸಕ್ತಾನಾಮಜಾನಂ ತಪಸಃ ಕ್ಷತಿಮ್ ॥ ೮೦ ॥

ಮಮೋಪಕಾರಕಾವೇತಾವಿತಿ ಮುಕ್ತ್ವಾ ದ್ವಿಜದ್ವಯಮ್ ।
ವಂಚಿತೋಗಾತ್ಕುಧೀಸ್ತಾಭ್ಯಾಂ ಕನ್ಯಾಕುಬ್ಜಾಧಿಪಂ ಪ್ರತಿ ॥ ೮೧ ॥

ಮಂದಮತಿಯಾದ ಆ ತಾಪಸನು ಆ ಹಕ್ಕಿಯ ಮಾತನ್ನು ಕೇಳಿ ಆದು ಹಾಗೆಯೇ ಸರಿಯೆಂದು ನಿಶ್ಚಯಿಸಿ "ಸ್ತ್ರೀಜನರಲ್ಲಿ ಆಸಕ್ತರಾದವರ ತಪಸ್ಸಿಗೆ ಹಾನಿಯಾಗುವುದೆಂದು ತಿಳಿದೆನು. ಇವು ನನಗೆ ಉಪಕಾರಿಗಳು" ಎಂದು ಆ ಎರಡು ಹಕ್ಕಿಗಳನ್ನು ಬಿಟ್ಟು ಅವುಗಳಿಂದ ವಂಚಿತನೂ ದುರ್ಬುದ್ಧಿಯುಳ್ಳವನೂ ಆಗಿ ಕನ್ಯಾಕುಬ್ಜದ ದೊರೆಯನ್ನು ಹೊಂದಿದನು.

ಸ್ಥಾಸ್ನು ನಾಜ್ಞಾನವೈರಾಗ್ಯಮಿತ್ಯತ್ರಾಘೋಷಯನ್ನಿವ ।
ದೃಷ್ಟ್ವಾ ಪಾರತಭೂಪಾಲಮಾತ್ಮಮಾತುಲಮತ್ರಪಃ ॥ ೮೨ ॥

ಆಕಾರೇಣೈವ ಕನ್ಯಾರ್ಥಾಗಮನಂ ಸ ನಿವೇದಯನ್ ।
ಆಸನದ್ವಯಮಾಲೋಕ್ಯ ಸರಾಗಾಸನಮಾಸ್ಥಿತಃ ॥ ೮೩ ॥

ನಿಜಾಗಮನವೃತ್ತಾಂತಂ ಮಹೀಪತಿಮಜೀಗಮತ್ ।
ತದಾಕರ್ಣ್ಯ ನೃಪಃ ಖೇದಾದ್ಧಿಗ್ಧಿಗಜ್ಞಾನಮಿತ್ಯಮುವ್ ॥ ೮೪ ॥

ಕನ್ಯಾಶತಂ ಮಮಾಸ್ತ್ಯತ್ರ ಯಾ ತ್ವಾಮಿಚ್ಛತಿ ಸಾಸ್ತು ತೇ ।
ಇತ್ಯವೋಚದಸೌ ಚಾಗಾತ್ಕನ್ಯಕಾಸ್ತಂ ನಿರೀಕ್ಷ್ಯ ತಾಃ ॥ ೮೫ ॥

ಅರ್ಧದಗ್ಧಶವಂ ಮತ್ವಾ ತಪೋದಗ್ಧಶರೀರಕಮ್ ।
ಜುಗುಪ್ಸಯಾಪಲಾಯಂತ ಕಾಶ್ಚಿತ್ಕಾಶ್ಚಿದ್ಭಯಾಹಿತಾಃ ॥ ೮೬ ॥

"ಅಜ್ಞಾನಮೂಲಕವಾದ ವೈರಾಗ್ಯವು ಸ್ಥಿರವಾಗಿರುವುದಿಲ್ಲ" ಎಂದು ಚೆನ್ನಾಗಿ ಘೋಷಿಸುವವನಂತೆ ನಾಚಿಕೆಯಿಲ್ಲದವನೂ ತನ್ನ ಮಾವನಾದ ಪಾರತರಾಜನನ್ನು ನೋಡಿ ಆಕಾರದಿಂದಲೇ ಕನ್ಯಾರ್ಥವಾಗಿ ಬಂದಿರುವುದೆಂಬುದನ್ನು ತಿಳಿಸುವವನೂ ಆದ ಆ ಜಮದಗ್ನಿಯು ದೊರೆಯಿಂದ ಇರಿಸಲ್ಪಟ್ಟ ಸರಾಗಾಸನ ವಿರಾಗಾಸನಗಳೆರಡನ್ನು ನೋಡಿ ಸರಾಗಾಸನದಲ್ಲಿ ಕುಳಿತು ತನ್ನ ಆಗಮನದ ಸಮಾಚಾರವನ್ನು ದೊರೆಗೆ ತಿಳುಹಿದನು. ಆದನ್ನು ಕೇಳಿ ರಾಜನು ವಿಷಾದದಿಂದ "ಅಜ್ಞಾನಕ್ಕೆ ಧಿಕ್ಕಾರ ! ಧಿಕ್ಕಾರ !" ಎಂದು ಈ ಜಮದಗ್ನಿಯನ್ನು ಕುರಿತು "ನನಗೆ ನೂರು ಮಂದಿ ಹೆಣ್ಣು ಮಕ್ಕಳಿದ್ದಾರೆ. ಅವರಲ್ಲಿ ನಿನ್ನನ್ನು ಯಾವಳು ಇಚ್ಛಿಸುತ್ತಾಳೋ ಅವಳು ನಿನಗಿರಲಿ" ಎಂದು ಹೇಳಿದನು. ಈ ಜಮದಗ್ನಿಯೂ ಆ ಕನ್ಯೆಯರಿದ್ದಲ್ಲಿಗೆ ಹೋದನು. ಆ ಕನ್ಯಕೆಯರು ತಪಸ್ಸಿನಿಂದ ದಗ್ಧವಾದ ಶರೀರವುಳ್ಳ ಆ ಜಮದಗ್ನಿಯನ್ನು ನೋಡಿ ಅರ್ಧದಗ್ಧವಾದ ಹೆಣವನ್ನಾಗಿ ತಿಳಿದು ಅವರಲ್ಲಿ ಕೆಲವು ಕನ್ಯೆಯರು ಜಿಗುಪ್ಸೆಯಿಂದ ಓಡಿಹೋದರು. ಇನ್ನು ಕೆಲವು ಕನ್ಯೆಯರು ಭಯಾಕ್ರಾಂತರಾಗಿ ಓಡಿಹೋದರು.

ವ್ರೀಡಯಾ ಪೀಡಿತಃ ಸೋಪಿ ತಾಸ್ತ್ಯಕ್ತ್ವಾ ಬಾಲಿಕಾಂ ಸುತಾಮ್ ।
ತಸ್ಯೈವಾಲೋಕ್ಯ ಮೂಢಾತ್ಮಾ ಪಾಂಸುಕ್ರೀಡಾಪರಾಯಣಾಮ್ ॥ ೮೭ ॥

ಕದಲೀಫಲಮಾದರ್ಶ್ಯ ಪ್ರಾಹ ಮಾಮಿಚ್ಛಸೀತಿ ತಾಮ್ ।
ವಾಂಛಾಮೀತ್ಯಬ್ರವೀತ್ಸಾ ಚ ಮಾಮಿಯಂ ವಾಂಛತೀತಿ ತಾಮ್ ॥

ನೃಪಂ ನಿವೇದ್ಯ ಸಂಗೃಹ್ಯ ಸಮಯಾಸೀದ್ವನಂ ಪ್ರತಿ ।
ಪದಂ ಪ್ರತಿ ಜನೈರ್ನಿಂದ್ಯಮಾನೋ ದೀನತಮೋ ಜಡಃ ॥ ೮೯ ॥

ರೇಣುಕೀತ್ಯಭಿಧಾಂ ತಸ್ಯಾ ವಿಧಾಯ ಸ್ವೀಚಕಾರ ಸಃ ।
ಪ್ರವೃತ್ತಿರ್ಧರ್ಮ ಇತ್ಯೇಷಾ ತದಾಪ್ರಭೃತಿ ವಾಗಭೂತ್ ॥ ೯೦ ॥

ಲಜ್ಜೆಯಿಂದ ಪೀಡಿತನೂ ಮೂಢಾತ್ಮನೂ ಆದ ಆ ಜಮದಗ್ನಿಯೂ ಆ ಕನ್ಯಕೆಯರನ್ನು ಬಿಟ್ಟು ಆ ಪಾರತರಾಜನ ಪುತ್ರಿಯೇ ಆದ ಮತ್ತು ಧೂಳಿಯ ಆಟದಲ್ಲಿ ಆಸಕ್ತಳಾದ ಬಾಲಿಕೆಯನ್ನು ನೋಡಿ ಆದಕ್ಕೆ ಬಾಳೆಯ ಹಣ್ಣನ್ನು ತೋರಿಸಿ "ನನ್ನನ್ನು ಇಚ್ಛಿಸುತ್ತೀಯೋ ?" ಎಂದು ಆ ಬಾಲಿಕೆಯನ್ನು ಕುರಿತು ಹೇಳಿದನು. ಆ ಬಾಲಿಕೆಯೂ "ಇಚ್ಛಿಸುತ್ತೇನೆ" ಎಂದು ಹೇಳಿತು. "ಈಕೆಯು ನನ್ನನ್ನು ಇಚ್ಛಿಸುತ್ತಾಳೆ" ಎಂದು ದೊರೆಗೆ ನಿವೇದಿಸಿ ಆ ಬಾಲಿಕೆಯನ್ನು ಸಂಗ್ರಹಿಸಿಕೊಂಡು ಹಜ್ಜೆ ಹಜ್ಜೆಗೂ ಜನರಿಂದ ನಿಂದಿಸಲ್ಪಡುವವನೂ ಅತ್ಯಂತ ದೀನನೂ ಮೂರ್ಖನೂ ಆದ ಆ ಜಮದಗ್ನಿಯು ವನಕ್ಕೆ ಹೋಗಿ ಆಕೆಗೆ ರೇಣುಕಿಯೆಂದು ಹೆಸರನ್ನಿಟ್ಟು ಸ್ವೀಕರಿಸಿದನು. ಅಂದಿನಿಂದ "ಪ್ರವೃತ್ತಿಯು–ಪತ್ನೀಸಹಿತನಾಗಿದ್ದು ತಪವನ್ನಾಚರಿಸುವುದು ಧರ್ಮವು" ಎಂಬೀ ಮಾತುಂಟಾಯಿತು.

ಬೋಧೌ ಶ್ರದ್ಧಾವಿಶೇಷಸ್ಯ ಭೇದೌ ವಾ ತಪಸೋ ಯತೇಃ ।
ಬಾಹ್ಯಾಭ್ಯಂತರನಾಮಾನೌ ತಾವಭೂತಾಂ ಸುತೌ ಸ್ತುತೌ ॥ ೯೧ ॥

ಇಂದ್ರಃ ಶ್ವೇತಶ್ಚ ರಾಮಾಂತೌ ಚಂದ್ರಾದಿತ್ಯಸಮತ್ವಿಷೌ ।
ಕಾಮಾರ್ಥೌ ವಾ ಜನಾಭೀಷ್ಟೌ ಯುಕ್ತೌ ವಾ ನಯವಿಕ್ರಮೌ ॥ ೯೨ ॥

ಜಮದಗ್ನಿ ರೇಣುಕಿಯರಿಗೆ ಶ್ರದ್ಧಾವಿಶೇಷದ ಎರಡು ಜ್ಞಾನಗಳಂತಿರುವವರೂ ಯತಿಯ ತಪಸ್ಸಿನ ಬಾಹ್ಯಾಭ್ಯಂತರಗಳೆಂಬೆರಡು ಭೇದಗಳಂತಿರುವವರೂ ಚಂದ್ರ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳವರೂ ಜನರಿಗೆ ಅಭೀಷ್ಟವಾದ ಕಾಮ ಪುರುಷಾರ್ಥ ಅರ್ಥಪುರುಷಾರ್ಥಗಳಂತಿರುವವರೂ ಸೇರಿಕೊಂಡಿರುವ ನಯ ಪರಾಕ್ರಮಗಳಂತಿರುವವರೂ ಸ್ತುತಿಸಲ್ಪಟ್ಟಿರುವವರೂ ಆದ ಇಂದ್ರರಾಮ ಶ್ವೇತ ರಾಮರೆಂಬೀರ್ವರು ಪುತ್ರರು ಜನಿಸಿದರು.

**ಪ್ರಯಾತ್ಯೇವಂ ತಯೋಃ ಕಾಲೇ ಮುನಿರನ್ಯೇದ್ಯುರಾಗತಃ ।**
**ಅರಿಂಜಯೋಗ್ರಜೋ ಗೇಹಂ ರೇಣುಕ್ಯಾಸ್ತದ್ದಿದೃಕ್ಷಯಾ ॥ ೯೩ ॥**

ಈ ರೀತಿಯಾಗಿ ಆ ಜಮದಗ್ನಿ ರೇಣುಕಿಯರ ಕಾಲವು ಕಳೆಯುತ್ತಿರಲು ಮತ್ತೊಂದು ದಿವಸ ರೇಣುಕಿಯ ಅಣ್ಣನಾದ ಅರಿಂಜಯಮುನಿಯು ಆಕೆಯನ್ನು ನೋಡಬೇಕೆಂಬ ಇಚ್ಛೆಯಿಂದ ಆಕೆಯ ಮನೆಗೆ ಬಂದನು.

**ದೃಷ್ಟ್ವಾ ಯಥೋಪಚಾರೇಣ ಮುನಿಂ ಭರ್ತೃಪ್ರಚೋದಿತಾ ।**
**ಪೂಜ್ಯ ಮದ್ದಾನಕಾಲೇ ಮೇ ದತ್ತಂ ಕಿಂ ಭವತಾ ಧನಮ್ ॥ ೯೪ ॥**

**ವದೇತ್ಯಾಹ ತತಸ್ತೇನ ಮಯಾ ದತ್ತಂ ನ ಕಿಂಚನ ।**
**ಇದಾನೀಂ ದೀಯತೇ ಭದ್ರೇ ತ್ರಿಜಗತ್ಸ್ವಪಿ ದುರ್ಲಭಮ್ ॥ ೯೫ ॥**

**ಗೃಹಾಣ ಯೇನ ಪ್ರಾಪ್ನೋಷಿ ತ್ವಂ ಸುಖಾನಾಂ ಪರಂಪರಾಮ್ ।**
**ಸಮ್ಯಕ್ತ್ವಂ ವ್ರತಸಂಯುಕ್ತಂ ಶೀಲಮಾಲಾಸಮುಜ್ಜ್ವಲಮ್ ॥ ೯೬ ॥**

**ಇತ್ಯುಕ್ತ್ವಾ ಕಾಲಲಬ್ಧ್ಯೇವ ತದ್ವಾಚಾ ಚೋದಿತಾ ಸತೀ ।**
**ಸಮ್ಯಗ್ಗೃಹೀತಮಿತ್ಯಾಖ್ಯನ್ಮುನೀಶಶ್ಚಾತಿತುಷ್ಟವಾನ್ ॥ ೯೭ ॥**

ರೇಣುಕಿಯು ಗಂಡನಿಂದ ಪ್ರೇರಿತಳಾಗಿ ಅರಿಂಜಯಮುನಿಯನ್ನು ಯಥೋಚಿತವಾದ ಉಪಚಾರದೊಡನೆ ನೋಡಿ ''ಪೂಜ್ಯನೆ ! ನನ್ನನ್ನು ಕೊಡುವ ಕಾಲದಲ್ಲಿ ನೀನು ನನಗೆ ಧನವನ್ನು ಕೊಟ್ಟಿರುವೆಯಾ ? ಹೇಳು'' ಎಂದಳು. ಬಳಿಕ ಆ ಅರಿಂಜಯ ಮುನಿಯು ರೇಣುಕಿಯನ್ನು ಕುರಿತು ''ಮಂಗಳಾಂಗಿಯೇ ! ಆಗ ನಾನು ಏನನ್ನೂ ಕೊಟ್ಟಿಲ್ಲ. ಈಗ ಮೂರು ಲೋಕಗಳಲ್ಲಿಯೂ ದುರ್ಲಭವೂ ವ್ರತಸಹಿತವೂ ಶೀಲಗಳ ಮಾಲೆಯಿಂದ ಪ್ರಕಾಶಮಾನವೂ ಆದ ಸಮ್ಯಕ್ತ್ವವನ್ನು ಕೊಡುತ್ತೇನೆ, ಪರಿಗ್ರಹಿಸು. ಅದರಿಂದ ನೀನು ಸುಖಗಳ ಪರಂಪರೆಯನ್ನು ಹೊಂದುವೆ'' ಎಂದು ಹೇಳಿದನು. ಕಾಲಲಬ್ಧಿಯಿಂದಲೋ ಎಂಬಂತೆ, ಅವನ ಮಾತಿನಿಂದ ಪ್ರೇರಿತಳಾಗಿ ಆಕೆಯು ''ಚೆನ್ನಾಗಿ ಗ್ರಹಣಮಾಡಿದೆನು'' ಎಂದಳು. ಮುನೀಶ್ವರನೂ ಸಂತೋಷಪಟ್ಟನು.

**ಕಾಮಧೇನ್ವಭಿಧಾಂ ವಿದ್ಯಾಮೀಪ್ಸಿತಾರ್ಥಪ್ರದಾಯಿನೀಮ್ ।**
**ತಸ್ಯೈ ವಿಶ್ರಾಣಯಾಂಚಕ್ರೇ ಸಮಂತ್ರಂ ಪರಶುಂ ಚ ಸಃ ॥ ೯೮ ॥**

ಆ ಅರಿಂಜಯಮುನಿಯು ಇಷ್ಟಾರ್ಥವನ್ನು ಕೊಡುವ ಕಾಮಧೇನುವೆಂಬ ವಿದ್ಯೆಯನ್ನೂ ಮಂತ್ರಸಹಿತವಾದ ಕೊಡಲಿಯನ್ನೂ ಆಕೆಗೆ ಕೊಟ್ಟನು.

**ಅಥಾನ್ಯದಾ ಯಯೌ ಸಾರ್ಧಂ ಕೃತವೀರೇಣ ತತ್ಪಿತಾ ।**
**ತಪೋವನಂ ಸನಾಭಿತ್ವಾದ್ಭುಕ್ತ್ವಾ ಗಂತವ್ಯಮಿತ್ಯಮುಮ್ ॥ ೯೯ ॥**

**ಸಹಸ್ರಬಾಹುಂ ಸಂಭಾಷ್ಯ ಜಮದಗ್ನಿರಭೋಜಯತ್ ।**
**ಮಹಾರಾಜಕುಲೇಪ್ಯೇಷಾ ಸಾಮಗ್ರೀ ನಾಸ್ತಿ ಭೋಜನೇ ॥ ೧೦೦ ॥**

**ತಪೋವನನಿವಿಷ್ಟಾನಾಮಾಗತಾ ಭವತಾಂ ಕುತಃ ।**
**ಇತಿ ಸ್ವಮಾತುರನುಜಾಮಪ್ರಾಕ್ಷೀದ್ರೇಣುಕೀಂ ಮಿಥಃ ॥ ೧೦೧ ॥**

**ಕೃತವೀರೋಬ್ರವೀತ್ಸಾಪಿ ತದ್ವಿದ್ಯಾಲಂಭನಾದಿಕಮ್ ।**
**ಸೋಪಿ ಮೋಹಾದಯಾಚಿಷ್ಟ ತಾಂ ದೇನುಮಕೃತಜ್ಞಕಃ ॥ ೧೦೨ ॥**

ಬಳಿಕ ಜಮದಗ್ನಿಯು ಜ್ಞಾತಿಯಾಗಿರುವುದರಿಂದ ಭೋಜನಮಾಡಿ ಬರಬೇಕೆಂದು ಮತ್ತೊಂದು ಕಾಲದಲ್ಲಿ ಕೃತವೀರನೊಡನೆ ಅವನ ತಂದೆಯು ತಪೋವನಕ್ಕೆ ಹೋದನು. ಜಮದಗ್ನಿಯು ಈ ಸಹಸ್ರಬಾಹುವನ್ನು ಮಾತನಾಡಿಸಿ ಭೋಜನಮಾಡಿಸಿದನು. ಆಗ ಕೃತವೀರನು ''ಮಹಾರಾಜನ ಅರಮನೆಯಲ್ಲಿಯೂ ಭೋಜನದಲ್ಲಿ ಈ ಸಾಮಗ್ರಿಯಿಲ್ಲ. ತಪೋವನವನ್ನು ಪ್ರವೇಶಿಸಿರುವ ತಮ್ಮಗಳಿಗೆ ಎಲ್ಲಿಂದ ಬಂದಿತು ?'' ಎಂದು ತನ್ನ ತಾಯಿಯ ತಂಗಿಯಾದ ರೇಣುಕಿಯನ್ನು ರಹಸ್ಯವಾಗಿ ಪ್ರಶ್ನೆಮಾಡಿದನು. ಆಕೆಯೂ ಆ ಕಾಮಧೇನುವಿದ್ಯಾವಲಂಬನವೇ ಮೊದಲಾದ ವಿಷಯವನ್ನು ಹೇಳಿದಳು. ಕೃತಜ್ಞನಲ್ಲದಿರುವ ಆ ಕೃತವೀರನೂ ಮೋಹದಿಂದ ಆ ಕಾಮಧೇನುವನ್ನು ಬೇಡಿದನು.

**ಹೋಮಧೇನುರಿಯಂ ತಾತ ವರ್ಣಾಶ್ರಮಗುರೋಸ್ತವ ।**
**ಯಾಚನೈಷಾ ನ ಯುಕ್ತೇತಿ ತದುಕ್ತ್ಯಾ ಕೋಪವೇಗತಃ ॥ ೧೦೩ ॥**

**ಪರಾರ್ಧ್ಯಂ ಯದ್ಧನಂ ಲೋಕೇ ತದ್ಯೋಗ್ಯಂ ಪೃಥಿವೀಭುಜಾಮ್ ।**
**ನ ಧೇನುರೀದೃಶೀ ಭೋಗ್ಯಾ ಕಂದಮೂಲಫಲಾಶಿಭಿಃ ॥ ೧೦೪ ॥**

**ಇತ್ಯುಕ್ತ್ವಾ ಧೇನುಮಾದಾಯ ಹಠಾತ್ಕಾರೇಣ ಗಚ್ಛತಃ ।**
**ಅವಸ್ಥಿತಂ ಪುರಸ್ತಾತ್ತಂ ಜಮದಗ್ನಿಂ ಮಹೀಪತಿಃ ॥ ೧೦೫ ॥**

**ಹತ್ವಾ ಸ್ವಮಾರ್ಗಮುಲ್ಲಂಘ್ಯ ಕುಮಾರ್ಗೋಭೂತ್ಪುರೋನ್ಮುಖಃ ।**
**ರುದತೀಂ ರೇಣುಕೀಂ ಭರ್ತೃಮರಣಾತ್ಪಹತೋದರೀಮ್ ॥ ೧೦೬ ॥**

**ಅಥ ಪುತ್ರೌ ವನಾತ್ಪುಷ್ಪಕಂದಮೂಲಫಲಾದಿಕಮ್ ।**
**ಆದಾಯಾಲೋಕ್ಯ ಸಂಪ್ರಾಪ್ತೌ ಕಿಮೇತದಿತಿ ವಿಸ್ಮಯಾತ್ ॥ ೧೦೭ ॥**

**ಪೃಷ್ಟ್ವಾ ವಿಜ್ಞಾಯ ತತ್ಸರ್ವಂ ಸಕೋಪೌ ಶೋಕನಿರ್ಭರಾಮ್ ।**
**ನಿರ್ವಾಪ್ಯ ಯುಕ್ತಿಮದ್ವಾಗ್ಭಿಸ್ತೌ ನೈಸರ್ಗಿಕವಿಕ್ರಮೌ ॥ ೧೦೮ ॥**

**ಧ್ವಜೀಕೃತನಿಶಾತೋಗ್ರಪರಶೂ ಯಮಸನ್ನಿಭೌ ।**
**ಗೋಗ್ರಹೇ ಮರಣಂ ಪುಣ್ಯಹೇತುರಿತ್ಯವಿಗಾನತಃ ॥ ೧೦೯ ॥**

**ಶ್ರೂಯತೇ ತತ್ತಥೈವಾಸ್ತಾಂ ಕಃ ಸಹೇತ ಪಿತುರ್ವಧಮ್ ।**
**ಇತ್ಯುಕ್ತ್ವಾನುಗತಾಶೇಷಸ್ನಿಹ್ಯನ್ಮುನಿಕುಮಾರಕೌ ॥ ೧೧೦ ॥**

**ತದ್ಗತಂ ಮಾರ್ಗಮನ್ವೇತ್ಯ ಸಾಕೇತನಗರಾಂತಿಕಮ್ ।**
**ಸಂಪ್ರಾಪ್ಯ ಕೃತಸಂಗ್ರಾಮೌ ಕೃತವೀರೇಣ ಭೂಪತಿಮ್ ॥ ೧೧೧ ॥**

**ಸಹಸ್ರಬಾಹುಮಾಹತ್ಯ ಸಾಯಾಹ್ನೇವಿಕ್ಷತಾಂ ಪುರಮ್ ।**
**ಹಲಾಹಲೋಪಮಾನ್ಯಾಶು ಘೋರಾಂಹಾಂಸ್ಯೂರ್ಜಿತಾನ್ಯಲಮ್ ॥**

**ಫಲಂತ್ಯಕಾರ್ಯಚರ್ಯಾಣಾಂ ದುಃಸಹಾಂ ದುಃಖಸಂತತಿಮ್ ।**
**ಸಹಸ್ರಬಾಹುಸಂತಾನನಿಶ್ಶೇಷೀಕರಣೋತ್ಸುಕಮ್ ॥ ೧೧೩ ॥**

**ಜ್ಞಾತ್ವಾ ಪರಶುರಾಮೀಯಮಭಿಪ್ರಾಯಂ ಮಹಾಮತಿಃ ।**
**ಭೂಪಾಲಚರದೇವೇನ ನಿದಾನವಿಷದೂಷಿತಾತ್ ॥ ೧೧೪ ॥**

**ಸಮುದ್ಭೂತೇನ ತಪಸೋ ಮಹಾಶುಕ್ರೇತ್ರ ಜನ್ಮಿನಾ ।**
**ರಾಜ್ಞೀಂ ಸಗರ್ಭಾಂ ಚಿತ್ರಮತಿಂ ತಾಂ ಶಾಂಡಿಲ್ಯತಾಪಸಃ ॥ ೧೧೫ ॥**

**ತದಗ್ರಜಃ ಸಮಾದಾಯ ಗತ್ವಾವಿಜ್ಞಾತಚರ್ಯಯಾ ।**
**ಸುಸ್ನಿಗ್ಧಾಖ್ಯಕನಿರ್ಗ್ರಂಥಮುನೇರಾವೇದ್ಯ ವೃತ್ತಕಮ್ ॥ ೧೧೬ ॥**

**ತತ್ಸಮೀಪೇ ನಿಧಾಯಾರ್ಯ ಮತೇ ಮೇ ನಾಸ್ತಿ ಕಶ್ಚನ ।**
**ತತ್ರ ಗತ್ವಾ ಸಮೀಕ್ಷ್ಯಾಗಮಿಷ್ಯಾಮ್ಯೇಷಾತ್ರ ತಿಷ್ಠತು ॥ ೧೧೭ ॥**

**ದೇವೀತಿ ಗತವಾಂಸ್ತಸ್ಮಾತ್ತದ್ಯೈವಾಸೂತ ಸಾ ಸುತಮ್ ।**
**ತದಾನೀಮೇವ ತಂ ತತ್ರ ಭವಿಷ್ಯದ್ಭರತಾಧಿಪಃ ॥ ೧೧೮ ॥**

**ಬಾಲಕೋಽಯಮಿತಿ ಜ್ಞಾನಾತ್ಸ್ವೀಚಕ್ರುರ್ವನದೇವತಾಃ ।**
**ತಾಭಿಃ ಪ್ರಪಾಲ್ಯಮಾನೋಽಯಮನಾಬಾಧಮವರ್ಧತ ॥ ೧೧೯ ॥**

ರೇಣುಕಿಯು ಕೃತವೀರನನ್ನು ಕುರಿತು "ಅಯ್ಯಾ! ಇದು ನಿನ್ನ ವರ್ಣಾಶ್ರಮ ಗುರುವಿನ ಹೋಮಧೇನುವಾಗಿದೆ. ನಿನ್ನ ಈ ಬೇಡಿಕೆಯು ಯುಕ್ತವಾದುದಲ್ಲ" ಎಂದಳು. ಆ ಮಾತಿನಿಂದುಂಟಾದ ಕೋಪದ ವೇಗದಿಂದ ಕೃತವೀರನು ರೇಣುಕಿಯನ್ನು ಕುರಿತು "ಲೋಕದಲ್ಲಿರುವ ಬಹುಮೂಲ್ಯವಾದ ಧನವು ರಾಜರುಗಳಿಗೆ ಯೋಗ್ಯವಾದುದು. ಇಂತಹ ಕಾಮಧೇನುವು ಕಂದ ಮೂಲ ಫಲಗಳನ್ನು ಭುಂಜಿಸುವವರಿಂದ ಅನುಭವಿಸಲ್ಪಡತಕ್ಕುದಲ್ಲ" ಎಂದು ಹೇಳಿ ಬಲಾತ್ಕಾರದಿಂದ ಕಾಮಧೇನುವನ್ನು ತೆಗೆದುಕೊಂಡು ಹೋಗುತ್ತಿರುವ ರಾಜನ ಮುಂದೆ ಬಂದು ನಿಂತ ಜಮದಗ್ನಿಯನ್ನು ದುರ್ಮಾರ್ಗಗಾಮಿಯಾದ ಆ ರಾಜನು ಕೊಂದು ತನ್ನ ಮಾರ್ಗವನ್ನು ದಾಟಿ ಪಟ್ಟಣಾಭಿಮುಖನಾದನು. ಪತಿಯ ಮರಣದಿಂದ ಅಳುತ್ತಿರುವವಳೂ ಕೃಶೋದರಿಯೂ ಆದ ರೇಣುಕಿಯನ್ನು ವನದಿಂದ ಪುಷ್ಪ ಕಂದ ಮೂಲ ಫಲಾದಿಗಳನ್ನು ತೆಗೆದುಕೊಂಡು ಬಂದ ಆಕೆಯ ಪುತ್ರರು ನೋಡಿ ಆಶ್ಚರ್ಯದಿಂದ ಇದೇನೆಂದು ಪ್ರಶ್ನೆಮಾಡಿ ಅದೆಲ್ಲವನ್ನೂ ತಿಳಿದು ಕೋಪವುಳ್ಳವರಾಗಿ ದುಃಖಪೂರಿತಳಾದ ತಾಯಿಯನ್ನು ಯುಕ್ತಿಯುಳ್ಳ ಮಾತುಗಳಿಂದ ಸಮಾಧಾನಪಡಿಸಿ ಸ್ವಾಭಾವಿಕವಾಗಿ ಪರಾಕ್ರಮಿಗಳೂ ಹರಿತವೂ ಭಯಂಕರವೂ ಆದ ಕೊಡಲಿಯನ್ನು ಬಾವುಟದಂತೆ ಎತ್ತಿಕೊಂಡಿರುವವರೂ ಯಮನಿಗೆ ಸಮಾನರೂ ಆದ ಆ ಇಂದ್ರರಾಮ ಶ್ವೇತರಾಮರು "ಗೋವುಗಳ ಗ್ರಹಣದಲ್ಲಿ ಮರಣವು ಪುಣ್ಯಹೇತುವಾಗಿರುವುದೆಂದು ನಿಶ್ಚಯವಾಗಿ ಶಾಸ್ತ್ರದಲ್ಲಿ ಕೇಳಲ್ಪಡುತ್ತದೆ. ಅದು ಹಾಗೇ ಇರಲಿ. ತಂದೆಯ ವಧೆಯನ್ನು ಯಾವನು ಸಹಿಸುವನು ?" ಎಂದು ಹೇಳಿ ತಮ್ಮನ್ನು ಹಿಂಬಾಲಿಸಿ ಬಂದ ಸ್ನೇಹಿತರಾದ ಎಲ್ಲಾ ಮುನಿಕುಮಾರರುಳ್ಳವರಾಗಿ ಆ ರಾಜನು ಹೋದ ಮಾರ್ಗವನ್ನನುಸರಿಸಿ ಹೋಗಿ ಅಯೋಧ್ಯಾನಗರದ ಬಳಿಯನ್ನು ಸೇರಿ ಕೃತವೀರನೊಡನೆ ಯುದ್ಧವನ್ನು ಮಾಡುವವರಾಗಿ ಸಹಸ್ರಬಾಹುರಾಜನನ್ನು ಕೊಂದು ಸಾಯಂಕಾಲದಲ್ಲಿ ನಗರವನ್ನು ಪ್ರವೇಶಿಸಿದರು. ಅಕಾರ್ಯಗಳನ್ನಾಚರಿಸುವವರಿಗೆ ಕಾಲಕೂಟ–ವಿಷಕ್ಕೆ ಸಮಾನಗಳೂ ತೀವ್ರಗಳೂ ಆದ ಘೋರ ಪಾಪಗಳು ದುಃಸಹವಾದ ದುಃಖಪರಂಪರೆಯನ್ನು ಶೀಘ್ರವಾಗಿ ಫಲಿಸುತ್ತವೆ. ಸಹಸ್ರಬಾಹುವಿನ ಸಂತಾನವನ್ನು ನಿಃಶೇಷವಾಗಿ ಮಾಡುವುದರಲ್ಲಿ ಉತ್ಸುಕವಾದ ಪರಶುರಾಮರ ಅಭಿಪ್ರಾಯವನ್ನು ತಿಳಿದು ಮಹಾಬುದ್ಧಿಶಾಲಿಯೂ ಚಿತ್ರಮತಿಯ ಅಣ್ಣನೂ ಆದ ಶಾಂಡಿಲ್ಯತಾಪಸನು ನಿದಾನಶಲ್ಯವೆಂಬ ವಿಷದಿಂದ ದೂಷಿತವಾದ ತಪಸ್ಸಿನಿಂದ ಮಹಾಶುಕ್ರಸ್ವರ್ಗದಲ್ಲಿ ಜನಿಸಿದ್ದವನೂ ಇಲ್ಲಿ ಜನಿಸಿರುವವನೂ ಭೂಪಾಲರಾಜನಾಗಿದ್ದವನೂ ಆದ ದೇವನನ್ನು ಗರ್ಭದಲ್ಲಿ ಧರಿಸಿರುವವಳೂ ಸಹಸ್ರಬಾಹುವಿನ ಪಟ್ಟಮಹಿಷಿಯೂ ಆದ ಆ ಚಿತ್ರಮತಿಯನ್ನು ಕರೆದುಕೊಂಡು ಗುಪ್ತವಾದ ಗಮನದಿಂದ ಸುಸ್ನಿಗ್ಧನೆಂಬ ನಿರ್ಗ್ರಂಥಮುನಿಯ ಬಳಿಗೆ ಹೋಗಿ ಸಮಾಚಾರವನ್ನು ಅವನಿಗೆ ತಿಳುಹಿ ಅವನ ಸಮೀಪದಲ್ಲಿ ಆಕೆಯನ್ನಿರಿಸಿ "ಪೂಜ್ಯನೆ! ನನ್ನ ಮಠದಲ್ಲಿ ಯಾವನೂ ಇಲ್ಲ. ಅಲ್ಲಿ ಹೋಗಿ ನೋಡಿಕೊಂಡು ಬರುವೆನು. ಈ ದೇವಿಯು ಇಲ್ಲಿರಲಿ" ಎಂದು ಹೇಳಿ ಅಲ್ಲಿಂದ ಹೊರಟು ಹೋದನು. ಆ ಚಿತ್ರಮತಿಯು ಆಗಲೇ ಆ ಪುತ್ರನನ್ನು ಹಡೆದಳು. ಅಲ್ಲಿ ವನದೇವತೆಗಳು "ಈ ಬಾಲಕನು ಭರತಖಂಡದ ಅಧಿಪತಿ–ಚಕ್ರವರ್ತಿಯಾಗುವವನು" ಎಂಬ ಜ್ಞಾನದಿಂದ ಆ ಮಗುವನ್ನು ಸ್ವೀಕರಿಸಿದರು. ಆ ದೇವತೆಗಳಿಂದ ಕಾಪಾಡಲ್ಪಡುತ್ತಿರುವ ಈ ಬಾಲಕನು ನಿರ್ಬಾಧವಾಗಿ ಬೆಳೆಯುತ್ತಿದ್ದನು.

**ದಿನಾನಿ ಕಾನಿಚಿನ್ನೀತ್ವಾ ಮಹೀಮಾಶ್ಲಿಷ್ಯ ಜಾತವಾನ್ ।**
**ಬಾಲಕೋಽಯಂ ಕಥಂ ಭಾವಿ ಭಟ್ಟಾರಕ ಶುಭಾಶುಭಮ್ ॥ ೧೨೦ ॥**

**ಅನುಗೃಹ್ಯಾಸ್ಯ ವಕ್ತವ್ಯಮಿತಿ ದೇವ್ಯೋದಿತೋ ಮುನಿಃ ।**
**ಏಷ ಚಕ್ರೀ ಭವೇದಂಬ ವತ್ಸರೇ ಷೋಡಶೇ ಧ್ರುವಮ್ ॥ ೧೨೧ ॥**

**ಸಾಗ್ನಿಚುಲ್ಲೀಗತಸ್ಥೂಲಕಿಲಾಸಘೃತಮಧ್ಯಗಾನ್ ।**
**ಉಷ್ಣಾನ್ ಪೂಪಾನ್ ಸಮಾದಾಯ ಭಕ್ಷಯಿಷ್ಯತಿ ಬಾಲಕಃ ॥ ೧೨೨ ॥**

**ಅಭಿಜ್ಞಾನಮಿದಂ ಭಾವಿಚಕ್ರಿತ್ವಸ್ಯಾಸ್ಯ ನಿಶ್ಚಿನು ।**
**ತಸ್ಮಾನ್ನಾಸ್ಮ ಭಯಂ ಯಾಸೀರಿತಿ ತಾಮತಿದುಃಖಿತಾಮ್ ॥ ೧೨೩ ॥**

**ಸುಸ್ನಿಗ್ಧಾಖ್ಯೋ ಭೃಶಂ ಸ್ವಾಸ್ಥ್ಯಮನೈಷೀತ್ಕರುಣಾತ್ಮಕಃ ।**
**ತತಸ್ತದಗ್ರಜೋಽಭ್ಯೇತ್ಯ ತಾಂ ನೀತ್ವಾ ಗೇಹಮಾತ್ಮನಃ ॥ ೧೨೪ ॥**

**ಸಮುದ್ಭೂತೋಽಯಮಾಶ್ಲಿಷ್ಯ ಮೇದಿನೀಮಿತಿ ತಸ್ಯ ಸಃ ।**
**ಸುಭೌಮ ಇತಿ ಸಂಪ್ರೀತ್ಯಾ ಚಕ್ರೇ ನಾಮ ಕೃತೋತ್ಸವಃ ॥ ೧೨೫ ॥**

ಕೆಲವು ದಿನಗಳು ಕಳೆದ ಬಳಿಕ ಒಂದಾನೊಂದು ದಿವಸ ಚಿತ್ರಮತಿದೇವಿಯು "ಭಟ್ಟಾರಕನೆ! ಈ ಬಾಲಕನು ಭೂಮಿಯನ್ನು ತಬ್ಬಿಕೊಂಡು ಹುಟ್ಟಿದನು. ಇವನ ಮುಂದಿನ ಶುಭಾಶುಭಫಲವು ಹೇಗಿದೆ ? ಅನುಗ್ರಹಿಸಿ ಹೇಳಬೇಕು" ಎಂದು ಆ ಸುಸ್ನಿಗ್ಧಮುನಿಯನ್ನು ಕುರಿತು ಹೇಳಿದಳು. ಕರುಣಾಸ್ವರೂಪನಾದ ಆ ಸುಸ್ನಿಗ್ಧಮುನಿಯು "ತಾಯಿಯೆ! ಇವನು ಹದಿನಾರನೆಯ ವರ್ಷದಲ್ಲಿ ಚಕ್ರವರ್ತಿಯಾಗುವನು. ನಿಶ್ಚಯ. ಈ ಬಾಲಕನು ಅಗ್ನಿಸಹಿತವಾದ ಒಲೆಯಲ್ಲಿರುವ ದೊಡ್ಡ ಬಾಂಡ್ಲಿಯ ತುಪ್ಪದ ಮಧ್ಯದಲ್ಲಿರುವ ಬಿಸಿಯಾದ ಕಜ್ಜಾಯಗಳನ್ನು ತೆಗೆದುಕೊಂಡು ತಿನ್ನುವನು. ಇವನ ಮುಂದಿನ ಚಕ್ರವರ್ತಿತ್ವಕ್ಕೆ ಇದನ್ನು ಗುರುತನ್ನಾಗಿ ನಿಶ್ಚಯಿಸು. ಆದುದರಿಂದ ಭಯವನ್ನು ಹೊಂದಬೇಡ" ಎಂದು ಹೇಳಿ ಅತಿ ದುಃಖಿತಳಾದ ಆ ಚಿತ್ರಮತಿಯನ್ನು ಚೆನ್ನಾಗಿ ಸ್ವಸ್ಥತೆಯನ್ನು ಹೊಂದಿಸಿದನು– ಸಮಾಧಾನಪಡಿಸಿದನು. ಬಳಿಕ ಆಕೆಯ ಅಣ್ಣನು–ಶಾಂಡಿಲ್ಯನು ಬಂದು ಆಕೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ "ಇವನು ಭೂಮಿಯನ್ನಾಲಿಂಗಿಸಿ ಹುಟ್ಟಿದನು" ಎಂದು ಆ ಶಾಂಡಿಲ್ಯನು ಉತ್ಸವವನ್ನುಮಾಡಿ ಆ ಬಾಲಕನಿಗೆ ಬಹು ಪ್ರೀತಿಯಿಂದ "ಸುಭೌಮ" ಎಂದು ಹೆಸರನ್ನಿಟ್ಟನು.

**ಶಸ್ತ್ರಶಾಸ್ತ್ರಾಣಿ ಸರ್ವಾಣಿ ಸಪ್ರಯೋಗಾಣಿ ಸಂತತಮ್ ।**
**ಸೋಪದೇಶಂ ಸಮಭ್ಯಸ್ಯ ವರ್ಧತೇ ಸ್ಮ ಸ ಗೋಪಿತಃ ॥ ೧೨೬ ॥**

ಗುಪ್ತವಾಗಿರಿಸಲ್ಪಟ್ಟ ಆ ಬಾಲಕನು ಯಾವಾಗಲೂ ಪ್ರಯೋಗಗಳೊಡನೆ ಸಮಸ್ತ ಶಸ್ತ್ರಗಳನ್ನೂ ಶಾಸ್ತ್ರಗಳನ್ನೂ ಉಪದೇಶಸಹಿತವಾಗಿ ಚೆನ್ನಾಗಿ ಅಭ್ಯಾಸಮಾಡಿ ಬೆಳೆದನು.

**ಅಥ ತೌ ರೇಣುಕೀಪುತ್ರೌ ಪ್ರವೃದ್ಧೋಗ್ರಪರಾಕ್ರಮೌ ।**
**ತ್ರಿಸಪ್ತಕೃತ್ವೋ ನಿರ್ಮೂಲಮಾಪಾದ್ಯ ಕ್ಷತ್ರಿಯಾನ್ವಯಮ್ ॥ ೧೨೭ ॥**

**ಸ್ವಹತಾಖಿಲಭೂಪಾಲಶಿರಾಂಸಿ ಸ್ಥಾಪನೇಚ್ಛಯಾ ।**
**ಶಿಲಾಸ್ತಂಭೇಷು ಸಂಗೃಹ್ಯ ಬದ್ಧವೈರೌ ಗುರೋರ್ವಧಾತ್ ॥ ೧೨೮ ॥**

**ಸಾರ್ವಭೌಮೀಂ ಶ್ರಿಯಂ ಸಮ್ಯಕ್ಸಂಭೂಯಾನುಬಭೂವತುಃ ।**
**ನಿಮಿತ್ತಕುಶಲೋ ನಾಮ್ನಾ ಕದಾಚಿತ್ಸ ನಿಮಿತ್ತವಿತ್ ॥ ೧೨೯ ॥**

**ಭವತಃ ಶತ್ರುರುತ್ಪನ್ನಃ ಪ್ರಯತ್ನೋಽತ್ರ ವಿಧೀಯತಾಮ್ ।**
**ಕಃ ಪ್ರತ್ಯಯೋಽಸ್ತಿ ಚೇದ್ವಚ್ಮಿ ತ್ವದ್ಧತಾಖಿಲಭೂಭುಜಾಮ್ ॥ ೧೩೦ ॥**

**ದಂತಾ ಯಸ್ಯಾಶನಂ ಭೂತ್ವಾ ಪರಿಣಂಸ್ಯಂತ್ಯಸೌ ರಿಪುಃ ।**
**ಇತೀಂದ್ರರಾಮಂ ರಾಜಾನಂ ಪರಶ್ವೀಶಮಬೂಬುಧತ್ ॥ ೧೩೧ ॥**

ಬಳಿಕ ಅಧಿಕವಾದ ಉಗ್ರಪರಾಕ್ರಮವುಳ್ಳವರಾದ ಆ ರೇಣುಕೀಪುತ್ರರು ತಂದೆಯ ವಧೆಯಿಂದ ವೈರವುಳ್ಳವರಾಗಿ ಇಪ್ಪತ್ತೊಂದುಸಲ ಕ್ಷತ್ರಿಯವಂಶವನ್ನು ನಿರ್ಮೂಲ ಮಾಡಿ ತಾವು ಕೊಂದ ಎಲ್ಲಾ ದೊರೆಗಳ ತಲೆಗಳನ್ನು ಕಲ್ಲಿನ ಕಂಬಗಳಲ್ಲಿ ಸ್ಥಾಪಿಸಬೇಕೆಂಬ ಇಚ್ಛೆಯಿಂದ ಸೇರಿಸಿ ಚಕ್ರವರ್ತಿ ಸಂಬಂಧವಾದ ಸಂಪತ್ತಿಯನ್ನು ಚೆನ್ನಾಗಿ

ಇಬ್ಬರೂ ಸೇರಿ ಅನುಭವಿಸಿದರು. ಒಂದಾನೊಂದು ಕಾಲದಲ್ಲಿ ಪ್ರಸಿದ್ಧನಿಮಿತ್ತ ಜ್ಞಾನಿಯಾದ ನಿಮಿತ್ತಕುಶಲನೆಂಬವನು ''ನಿನಗೆ ಶತ್ರುವು ಹುಟ್ಟಿದನು. ಈ ವಿಷಯದಲ್ಲಿ ಪ್ರಯತ್ನವು ಮಾಡಲ್ಪಡಲಿ. ಗುರುತು ಯಾವುದಿದೆಯೆಂದರೆ, ಹೇಳುತ್ತೇನೆ–ನೀನು ಕೊಂದಿರುವ ಎಲ್ಲಾ ದೊರೆಗಳ ಹಲ್ಲುಗಳು ಯಾವನಿಗೆ ಭೋಜನವಾಗಿ ಪರಿಣಮಿಸುವುವೋ ಇವನು ಶತ್ರುವು'' ಎಂಬುದಾಗಿ ಕೊಡಲಿಯ ಅಧಿಪತಿಯಾದ ಇಂದ್ರರಾಮರಾಜನಿಗೆ ತಿಳುಹಿದನು.

**ಶ್ರುತ್ವಾ ಯಥಾವನ್ನೈಮಿತ್ತಿಕೋಕ್ತಂ ಚೇತಸಿ ಧಾರಯನ್ ।**
**ಕೃತ್ವಾ ಪರಶುರಾಮೋಽಪಿ ದಾನಶಾಲಾಂ ಸುಭೋಜನಾಮ್ ॥ ೧೩೨ ॥**

**ತತ್ಪರೀಕ್ಷಾರ್ಥಮಾಯಾಂತು ಯೇತ್ರ ವಿಷ್ವಣನಾರ್ಥಿನಃ ।**
**ಇತ್ಯಾಘೋಷಯತಿ ಸ್ಮೈತಚ್ಛ್ರುತ್ವಾ ತೇಽಪಿ ಸಮಾಗಮನ್ ॥ ೧೩೩ ॥**

ನಿಮಿತ್ತಜ್ಞಾನಿಯ ಮಾತನ್ನು ಕೇಳಿ ಅದರಂತೆಯೇ ಆ ವಿಷಯವನ್ನು ಮನಸ್ಸಿನಲ್ಲಿ ಧರಿಸಿದವನಾದ ಆ ಪರಶುರಾಮನೂ ಉತ್ತಮಭೋಜನವುಳ್ಳ ದಾನಶಾಲೆಯನ್ನು ಮಾಡಿ ಅದರ ಪರೀಕ್ಷೆಗೋಸ್ಕರ ''ಈ ದಾನಶಾಲೆಯಲ್ಲಿ ಭೋಜನವನ್ನು ಮಾಡಲಿ ಚ್ಛಿಸುವವರು ಬರಲಿ'' ಎಂದು ಡಂಗೂರ ಹೊಯ್ಸಿದನು. ಇದನ್ನು ಕೇಳಿ ಭೋಜನಾರ್ಥಿಗಳು ಬಂದರು.

**ತೇಷಾಂ ಪಾತ್ರಸ್ಥತದ್ದಂತಾನ್ ಸಂಪ್ರದರ್ಶ್ಯ ಪರೀಕ್ಷಿತುಮ್ ।**
**ತಾನ್ ಭೋಜಯತಿ ಭೂಪಾಲೇ ಪ್ರತ್ಯಹಂ ಸ್ವನಿಯೋಗಿಭಿಃ ॥ ೧೩೪ ॥**

**ಪಿತುರ್ಮರಣವೃತ್ತಾಂತಂ ಸ್ವಮಾತುರವಬುದ್ಧವಾನ್ ।**
**ಸ ಚಕ್ರೇಶಿತ್ವಸಂಪ್ರಾಪ್ತಿಕಾಲಾಯಾನಂ ಚ ತತ್ತ್ವತಃ ॥ ೧೩೫ ॥**

**ಸುಸ್ನಿಗ್ಧಮುನಿನಿರ್ದಿಷ್ಟಂ ಸಂವೃತಾತ್ಮಸ್ವರೂಪಕಃ ।**
**ಪರಿವ್ರಾಜಕವೇಷೇಣ ಸ್ವರಹಸ್ಯಾರ್ಥವೇದಿನಾ ॥ ೧೩೬ ॥**

**ರಾಜಪುತ್ರಸಮೂಹೇನ ಸುಭೌಮೋಽಪ್ಯಾಗಮತ್ಪುರಮ್ ।**
**ಸಭಾಗ್ಯಾಂಶ್ಚೋದಯತ್ಯೇವ ಕಾಲೇ ಕಲ್ಯಾಣಕೃದ್ವಿಧಿಃ ॥ ೧೩೭ ॥**

ಅವರುಗಳನ್ನು ಪರೀಕ್ಷಿಸುವುದಕ್ಕೋಸ್ಕರ ಪಾತ್ರಗಳಲ್ಲಿರುವ ಹಲ್ಲುಗಳನ್ನು ಅವರುಗಳಿಗೆ ತೋರಿಸಿ ತನ್ನ ಭೃತ್ಯರುಗಳಿಂದ ದೊರೆಯು ಪ್ರತಿದಿವಸ ಭೋಜನ ಮಾಡಿಸುತ್ತಿರಲು ಆ ಸುಭೌಮನು ತಂದೆಯ ಮರಣವಾರ್ತೆಯನ್ನೂ ಸುಸ್ನಿಗ್ಧ ಮುನಿಯು ಹೇಳಿದ ಚಕ್ರವರ್ತಿತ್ವಪ್ರಾಪ್ತಿಯ ಕಾಲವು ಬರುವುದನ್ನೂ ತನ್ನ ತಾಯಿಯ ದೆಸೆಯಿಂದ ತಿಳಿದನು. ಗುಪ್ತವಾದ ಸ್ವರೂಪವುಳ್ಳವನಾದ ಸುಭೌಮನೂ ತನ್ನ ರಹಸ್ಯಾರ್ಥವನ್ನು ತಿಳಿದ ರಾಜಪುತ್ರಸಮೂಹದೊಡನೆ ಮುನಿವೇಷದಿಂದ ಅಯೋಧ್ಯಾಪಟ್ಟಣಕ್ಕೆ ಬಂದನು. ಶುಭವನ್ನುಂಟುಮಾಡುವ ವಿಧಿಯು ಭಾಗ್ಯ ವಂತರನ್ನು ಯೋಗ್ಯಕಾಲದಲ್ಲಿ ಅವಶ್ಯವಾಗಿ ಪ್ರೇರೇಪಿಸುತ್ತದೆ.

**ತದಾ ಸಾಕೇತವಾಸ್ತವ್ಯದೇವತಾಕ್ರಂದನಂ ಮಹತ್ ।**
**ಮಹೀಕಂಪೋ ದಿವಾ ತಾರಾವೃಷ್ಟ್ಯಾದಿರಭವತ್ಪುರೇ ॥ ೧೩೮ ॥**

ಆಗ ಅಯೋಧ್ಯಾನಗರವಾಸಿಗಳಾದ ದೇವತೆಗಳ ಮಹಾರೋದನವೂ ಭೂ ಕಂಪವೂ ಹಗಲಿನಲ್ಲಿ ನಕ್ಷತ್ರಗಳ ವೃಷ್ಟಿಯೇ ಮೊದಲಾದುದೂ ಪಟ್ಟಣ ದಲ್ಲುಂಟಾದುವು.

**ತದಾಗತ್ಯ ಕುಮಾರೋಽಸೌ ಶಾಲಾಂ ಭೋಕ್ತುಮುಪಾಗತಃ ।**
**ತಮಾಹೂಯ ನಿವೇಶ್ಯೋಚ್ಚೈರಾಸನೇ ಹತಭೂಭುಜಾಮ್ ॥ ೧೩೯ ॥**

**ನಿಯುಕ್ತಾ ದರ್ಶಯಂತಿ ಸ್ಮ ದಂತಾಂಸ್ತಸ್ಯಾನುಭಾವತಃ ।**
**ಕಲಮಾನ್ನಂ ತದಾಸಂಸ್ತೇ ತದ್ದೃಷ್ಟ್ವಾ ಪರಿಚಾರಿಣಃ ॥ ೧೪೦ ॥**

**ವ್ಯಜಿಜ್ಞಪನ್ನೃಪಂ ಸೋಽಪಿ ಸ ಧೃತ್ವಾನೀಯತಾಮಿತಿ ।**
**ಸಮರ್ಥಾನ್ಪ್ರಾಹಿಣೋದ್ಭೃತ್ಯಾಂಸ್ತೇಽಪಿ ತಂ ಪ್ರಾಪ್ಯ ನಿಷ್ಠುರಾಃ ॥ ೧೪೧ ॥**

**ಆಹೂತೋಽಸಿ ಮಹೀಶೇನ ತ್ವಮೇಹ್ಯಾಶ್ವಿತ್ಯುದಾಹರನ್ ।**
**ನಾಹಂ ಯುಯಾಯಮಿವಾಸ್ಯಾದಾಂ ಜೀವಿಕಾಂ ತತ್ತದಂತಿಕಮ್ ॥ ೧೪೨ ॥**

**ಕಿಮಿತ್ಯೇಷ್ಯಾಮಿ ಯಾತೇತಿ ತರ್ಜಿತಾಸ್ತತ್ಪ್ರಭಾವತಃ ।**
**ಭಟಾ ಭಯಜ್ವರಗ್ರಸ್ತಾ ಯಯುಃ ಸರ್ವೇ ಯಥಾಯಥಮ್ ॥ ೧೪೩ ॥**

ಆಗ ಬಂದು ಈ ಸುಭೌಮಕುಮಾರನು ಭೋಜನಕ್ಕೋಸ್ಕರ ದಾನಶಾಲೆಯನ್ನು ಹೊಂದಿದನು. ಅವನನ್ನು ಕರೆದು ಉನ್ನತಾಸನದಲ್ಲಿ ಕುಳ್ಳಿರಿಸಿ ಮೊದಲು ಕೊಲ್ಲ ಲ್ಪಟ್ಟ ದೊರೆಗಳ ಹಲ್ಲುಗಳನ್ನು ಆ ನೇಮಿಸಲ್ಪಟ್ಟಿದ್ದ ಜನರು–ಭೃತ್ಯರು ಸುಭೌ ಮನಿಗೆ ತೋರಿಸಿದರು. ಅವನ ಪ್ರಭಾವದಿಂದ ಆಗ ಆ ಹಲ್ಲುಗಳು ಭತ್ತದ ಅನ್ನವಾದುವು. ಅದನ್ನು ನೋಡಿ ಆ ಸೇವಕರು ರಾಜನಿಗೆ ವಿಜ್ಞಾಪಿಸಿದರು. ಅವನೂ ''ಅವನನ್ನು ಎತ್ತಿಕೊಂಡು ಬನ್ನಿ'' ಎಂದು ಸಮರ್ಥರಾದ ಭೃತ್ಯರನ್ನು ಕಳುಹಿಸಿ ಕೊಟ್ಟನು. ನಿಷ್ಠುರರಾದ ಆ ಭೃತ್ಯರೂ ಸುಭೌಮನನ್ನು ಹೊಂದಿ ''ಮಹೀಪತಿಯು ನಿನ್ನನ್ನು ಕರೆಯುತ್ತಾನೆ. ಶೀಘ್ರವಾಗಿ ಬಾ'' ಎಂದು ಹೇಳಿದರು. ಸುಭೌಮನು ''ನಿಮ್ಮಂತೆ ನಾನು ಇವನಿಗೆ ಜೀವಿಕೆಯನ್ನು ಕೊಟ್ಟಿಲ್ಲ. ಆದುದರಿಂದ ಅವನ ಬಳಿಗೆ ನಾನೇಕೆ ಬರುವೆನು ? ಹೊರಟು ಹೋಗಿ'' ಎಂದು ಗದರಿಸಲ್ಪಟ್ಟ ಎಲ್ಲಾ ಭಟರು ಆ ಸುಭೌಮನ ಪ್ರಭಾವದಿಂದ ಭಯ ಮತ್ತು ಜ್ವರಗ್ರಸ್ತರಾಗಿ ಬಂದ ಹಾಗೆಯೇ ಹೊರಟು ಹೋದರು.

**ಶ್ರುತ್ವಾ ಪರಶುರಾಮಸ್ತತ್ಕ್ರುಧ್ವಾ ಸನ್ನದ್ಧಸಾಧನಃ ।**
**ಸಮಾಗತಸ್ತಮಾಲೋಕ್ಯ ಸುಭೌಮೋಽಭಿಮುಖಂ ಯಯೌ ॥ ೧೪೪ ॥**

ಪರಶುರಾಮನು ಆ ಮಾತನ್ನು ಕೇಳಿ ಕೋಪಗೊಂಡು ಸಾಧನವನ್ನು ಅಣಿಮಾಡಿ ಕೊಂಡವನಾಗಿ ಬಂದನು. ಅವನನ್ನು ನೋಡಿ ಸುಭೌಮನು ಇದಿರಾಗಿ ಹೋದನು.

**ಬಲಂ ಪರಶುರಾಮಃ ಸ್ವಂ ತೇನ ಯೋದ್ಧುಂ ಸಮಾದಿಶತ್ ।**
**ಜನ್ಮಪ್ರಭೃತಿ ತತ್ಪಾತಾ ಭರತವ್ಯಂತರಾಧಿಪಃ ॥ ೧೪೫ ॥**

**ರಕ್ಷಿತ್ವಾಸ್ಥಾತ್ಕುಮಾರಂ ತಂ ತಸ್ಮಾತ್ತಸ್ಯಾಗ್ರತೋ ಬಲಮ್ ।**
**ಸ್ಥಾತುಮಕ್ಷಮಮಾಲೋಕ್ಯ ಸ್ವಯಂ ಗಜಮಚೋದಯತ್ ॥ ೧೪೬ ॥**

ಪರಶುರಾಮನು ಸುಭೌಮನೊಡನೆ ಯುದ್ಧಮಾಡುವುದಕ್ಕೋಸ್ಕರ ತನ್ನ ಸೈನ್ಯಕ್ಕೆ ಆಜ್ಞೆಮಾಡಿದನು. ಸುಭೌಮನು ಹುಟ್ಟಿದಂದಿನಿಂದ ಅವನನ್ನು ಕಾಪಾಡಿದ ಭರತಕ್ಷೇತ್ರದ ವ್ಯಂತರದೇವಾಧಿಪತಿಯು ಆಗ ಆ ಸುಭೌಮಕುಮಾರನನ್ನು ಕಾಪಾಡಿಕೊಂಡಿದ್ದನು. ಆದುದರಿಂದ ಆ ಸುಭೌಮನ ಮುಂದೆ ನಿಲ್ಲುವುದಕ್ಕೆ ಅಸಮರ್ಥವಾದ ಸೈನ್ಯವನ್ನು ನೋಡಿ ಪರಶುರಾಮನು ತಾನೇ ಆನೆಯನ್ನು ಪ್ರೇರೇಪಿಸಿದನು.

**ಸಹಸೈವ ಸುಭೌಮಸ್ಯಾಪ್ಯಭವದ್ಗಂಧವಾರಣಃ ।**
**ಚಕ್ರಂ ಚ ಸನ್ನಿಧೌ ದಿವ್ಯಂ ಸಾರ್ವಭೌಮತ್ವಸಾಧನಮ್ ॥ ೧೪೭ ॥**

**ಸಹಸ್ರದೇವತಾರಕ್ಷ್ಯಂ ಕಿಂ ನ ಸ್ಯಾತ್ಸುಮುಖೇ ವಿಧೌ ।**
**ವಾರಣೇಂದ್ರಂ ತಮಾರುಹ್ಯ ಪೂರ್ವಾದ್ರಿಮಿವ ಭಾಸ್ಕರಃ ॥ ೧೪೮ ॥**

**ಸಹಸ್ರಾರಂ ಕರೇ ಕೃತ್ವಾ ಕುಮಾರಶ್ಚಕ್ರಮಾಬಭೌ ।**
**ತಂ ದೃಷ್ಟ್ವಾ ರುಷ್ಟವಾನ್ ಹಂತುಂ ಜಾಮದಗ್ನ್ಯೋಽಭ್ಯುಪಾಗಮತ್ ॥**

ಆಗ ಸುಭೌಮನಿಗೂ ಶೀಘ್ರವಾಗಿಯೇ ಮದಗಜವೂ ಚಕ್ರವರ್ತಿತ್ವಕ್ಕೆ ಸಾಧನ ವಾದ ಮತ್ತು ಸಹಸ್ರದೇವತೆಗಳಿಂದ ರಕ್ಷಿಸಲ್ಪಡತಕ್ಕ ದಿವ್ಯಚಕ್ರವೂ ಸನ್ನಿಹಿತವಾದುವು. ವಿಧಿಯು ಸುಮುಖವಾಗಿರುತ್ತಿರಲು ಯಾವುದು ತಾನೆ ಸನ್ನಿಹಿತವಾಗುವುದಿಲ್ಲ ?

ಸೂರ್ಯನು ಪೂರ್ವಾಚಲವನ್ನೇರುವಂತೆ ಸುಭೌಮಕುಮಾರನು ಆ ಗಜೇಂದ್ರನನ್ನೇರಿ ಸಾವಿರ ಅರಗಳುಳ್ಳ ಚಕ್ರವನ್ನು ಕೈಯಲ್ಲಿ ಹಿಡಿದು ಪ್ರಕಾಶಿಸಿದನು. ಆ ಸುಭೌಮನನ್ನು ನೋಡಿ ಕೋಪವುಳ್ಳವನಾದ ಜಮದಗ್ನಿಪುತ್ರ–ಪರಶುರಾಮನು ಅವನನ್ನು ಕೊಲ್ಲುವುದಕ್ಕೋಸ್ಕರ ಇದಿರು ಬಂದನು.

**ಚಕ್ರೇಣ ತಂ ಕುಮಾರೋಪಿ ಲೋಕಾಂತರಮಜೀಗಮತ್ ।**
**ಅಕರೋಚ್ಚಾಸ್ಯ ಸೈನ್ಯಸ್ಯ ತದೈವಾಭಯಘೋಷಣಾಮ್** ॥ ೧೫೦ ॥

ಸುಭೌಮಕುಮಾರನೂ ಅವನನ್ನು ಚಕ್ರದಿಂದ ಲೋಕಾಂತರವನ್ನು ಹೊಂದಿಸಿ–ಕೊಂದನು. ಆಗಲೇ ಈ ಪರಶುರಾಮನ ಸೈನ್ಯಕ್ಕೆ ಅಭಯಘೋಷಣೆಯನ್ನೂ ಮಾಡಿದನು.

**ಅರೇಶತೀರ್ಥಸಂತಾನೇ ಕಾಲೇ ದ್ವಿಶತಕೋಟಿಷು ।**
**ಸದ್ವಾತ್ರಿಂಶತ್ಸು ಯಾತೇಭೂತ್ಸುಭೌಮೋ ವತ್ಸರೇಷ್ವಯಮ್** ॥ ೧೫೧ ॥

ಅರನಾಥತೀರ್ಥಂಕರರ ತೀರ್ಥಪರಂಪರೆಯಲ್ಲಿ ಮೂವತ್ತೆರಡು ವರ್ಷಸಹಿತವಾದ ಎರಡುಕೋಟಿ ವರ್ಷಕಾಲವು ಕಳೆಯುತ್ತಿರಲು ಈ ಸುಭೌಮನು ಹುಟ್ಟಿದನು.

**ಅಭಿಭೂತಾಖಿಲಾರಾತಿರಷ್ಟಮಶ್ಚಕ್ರವರ್ತಿಷು ।**
**ಸಮಾಷಷ್ಟಿಸಹಸ್ರಾಯುರಷ್ಟಾವಿಂಶತಿಚಾಪಮಾಃ** ॥ ೧೫೨ ॥

**ಜಾತರೂಪಚ್ಛವಿಃ ಶ್ರೀಮಾನಿಕ್ಷ್ವಾಕುಕುಲಕೇಸರೀ ।**
**ವಿರಾಜಮಾನೋ ವಿಸ್ಪಷ್ಟಚಕ್ರಾದಿಶುಭಲಕ್ಷಣೈಃ** ॥ ೧೫೩ ॥

ಅವನು ಸಮಸ್ತ ಶತ್ರುಗಳನ್ನು ಆಕ್ರಮಿಸಿದವನೂ ಚಕ್ರವರ್ತಿಗಳಲ್ಲಿ ಎಂಟನೆಯವನೂ ಅರವತ್ತು ಸಹಸ್ರವರ್ಷಾಯುಷ್ಯವುಳ್ಳವನೂ ಇಪ್ಪತ್ತೆಂಟು ಧನುಃಪರಿಮಿತವಾದ ದೇಹಾಕಾರವುಳ್ಳವನೂ ಬಂಗಾರದಂತೆ ಕಾಂತಿಯುಳ್ಳವನೂ ಸಂಪತ್ತಿಯುಳ್ಳವನೂ ಇಕ್ಷ್ವಾಕುವಂಶದಲ್ಲಿ ಶ್ರೇಷ್ಠನೂ ಬಹುಸ್ಪಷ್ಟವಾದ ಚಕ್ರಾದಿಶುಭಲಕ್ಷಣಗಳಿಂದ ಪ್ರಕಾಶಮಾನನೂ ಆಗಿದ್ದನು.

**ತತೋ ರತ್ನಾನಿ ಶೇಷಾಣಿ ನಿಧಯೋಪಿ ನವಾಭವನ್ ।**
**ಷಟ್ಖಂಡಸ್ಯಾಧಿಪತ್ಯೇನ ಪ್ರಾದುರಾಸೀತ್ಸ ಚಕ್ರಭೃತ್** ॥ ೧೫೪ ॥

ಬಳಿಕ ಉಳಿದ ರತ್ನಗಳೂ ನವನಿಧಿಗಳೂ ಉಂಟಾದುವು. ಆ ಸುಭೌಮನು ಷಟ್ಖಂಡಾಧಿಪತ್ಯದಿಂದ ಚಕ್ರಧರನಾಗಿ ಪ್ರಾದುರ್ಭವಿಸಿದನು.

**ಚಕ್ರವರ್ತಿತ್ವಸಂಪ್ರಾಪ್ಯಾನ್ ಭೋಗಾನ್ ದಶವಿಧಾಂಶ್ಚಿರಮ್ ।**
**ಅನ್ವಭೂದಿವ ದೇವೇಂದ್ರೋ ದಿವಿ ದಿವ್ಯಾನನಾರತಮ್** ॥ ೧೫೫ ॥

ಸ್ವರ್ಗದಲ್ಲಿ ದೇವೇಂದ್ರನು ಯಾವಾಗಲೂ ದಿವ್ಯಭೋಗಗಳನ್ನನುಭವಿಸುವಂತೆ, ಸುಭೌಮನು ಚಕ್ರವರ್ತಿತ್ವದಿಂದ ಪಡೆಯಲ್ಪಡತಕ್ಕ ಹತ್ತು ವಿಧವಾದ ಭೋಗಗಳನ್ನು ಬಹುಕಾಲದವರೆಗೆ ಅನುಭವಿಸಿದನು.

**ಅನ್ಯೇದ್ಯುಃ ಸೂಪಕಾರೋಸ್ಯ ನಾಮ್ನಾಮೃತರಸಾಯನಃ ।**
**ರಸಾಯನಾಹಿಕಾಮಸ್ಮೈ ಮುದಾದಾದಮ್ಲಿಕಾಂ ಹಿತಃ** ॥ ೧೫೬ ॥

ಮತ್ತೊಂದು ದಿವಸ ಈ ಸುಭೌಮನಿಗೆ ಹಿತಕರನಾದ ಅಮೃತರಸಾಯನನೆಂಬ ಅಡಿಗೆಯವನು ಸಂತೋಷದಿಂದ ಇವನಿಗೆ ರಸಾಯನಾಹಿಕವೆಂಬ ಅಂಬಲಿಯನ್ನು ಕೊಟ್ಟನು.

**ತನ್ನಾಮಶ್ರುತಿಮಾತ್ರೇಣ ತದ್ಗುಣಸ್ಯಾವಿಚಾರಕಃ ।**
**ತದ್ವೈರಿಚೋದಿತಃ ಕೋಪಾದ್ಭೂಪತಿಸ್ತಮದಂಡಯತ್** ॥ ೧೫೭ ॥

ಆ ರಸಾಯನದ ಗುಣವನ್ನು ವಿಚಾರಮಾಡದೆ ಸುಭೌಮರಾಜನು ಆ ಅಡಿಗೆಯವನ ಶತ್ರುವಿನಿಂದ ಪ್ರೇರಿತನಾಗಿ ಆ ರಸಾಯನದ ಹೆಸರನ್ನು ಕೇಳಿದುದರಿಂದಲೇ ಕೋಪದಿಂದ ಅವನನ್ನು ಶಿಕ್ಷಿಸಿದನು.

**ಸೋಪಿ ತೇನೈವ ದಂಡೇನ ಮ್ರಿಯಮಾಣೋತಿತೀವ್ರರುಟ್ ।**
**ವಧ್ಯಾಸಂ ನೃಪಮಿತ್ಯಾತ್ತನಿದಾನಃ ಪುಣ್ಯಲೇಶತಃ** ॥ ೧೫೮ ॥

**ಜ್ಯೋತಿರ್ಲೋಕೇ ಮರೋ ಭೂತ್ವಾ ವಿಭಂಗಜ್ಞಾನವೀಕ್ಷಣಃ ।**
**ಅನುಸ್ಮೃತ್ಯ ರುಷಾ ವೈರಂ ಜಿಘಾಂಸುಃ ಸ ಮಹೀಪತಿಮ್** ॥ ೧೫೯ ॥

**ಜಿಹ್ವಾಲೋಲುಪಮಾಲಕ್ಷ್ಯ ಸಂಧೃತ್ಯ ವಣಿಗಾಕೃತಿಮ್ ।**
**ಸುಸ್ವಾದುಫಲದಾನೇನ ಪ್ರತ್ಯಹಂ ತಮಸೇವತ** ॥ ೧೬೦ ॥

ಆ ಅಡಿಗೆಯವನೂ ಅದೇ ಶಿಕ್ಷೆಯಿಂದ ಸಾಯುವವನೂ ಅತ್ಯಂತ ತೀವ್ರವಾದ ಕೋಪವುಳ್ಳವನೂ "ಈ ರಾಜನನ್ನು ಕೊಲ್ಲುವೆನು" ಎಂದು ನಿದಾನಶಲ್ಯವುಳ್ಳವನೂ ಆಗಿ ಪುಣ್ಯದ ಲೇಶದಿಂದ ಅವನು ಜ್ಯೋತಿರ್ಲೋಕದಲ್ಲಿ ವಿಭಂಗಜ್ಞಾನವೆಂಬ ನೇತ್ರವುಳ್ಳ ದೇವನಾಗಿ ಜನಿಸಿ ವೈರವನ್ನು ಸ್ಮರಿಸಿಕೊಂಡು ಕೋಪದಿಂದ ಸುಭೌಮರಾಜನನ್ನು ಕೊಲ್ಲಬೇಕೆಂಬ ಇಚ್ಛೆಯುಳ್ಳವನಾಗಿ ಅವನು ಜಿಹ್ವಾಚಾಪಲ್ಯವುಳ್ಳವನೆಂದು ಕಂಡು ವರ್ತಕನ ವೇಷವನ್ನು ಧರಿಸಿಕೊಂಡು ಪ್ರತಿದಿವಸ ಒಳ್ಳೆಯ ರುಚಿಯುಳ್ಳ ಫಲಗಳ ದಾನದಿಂದ ಆ ಸುಭೌಮನನ್ನು ಸೇವಿಸಿದನು.

**ನಿಷ್ಠಿತಾನಿ ಫಲಾನೀತಿ ಕದಾಚಿತ್ತೇನ ಭಾಷಿತೇ ।**
**ಆನೇತವ್ಯಾನಿ ತಾನ್ಯೇವ ಗತ್ವೇತ್ಯಾಖ್ಯನ್ನೃಪೋಪಿ ತಮ್** ॥ ೧೬೧ ॥

ಒಂದಾನೊಂದು ಕಾಲದಲ್ಲಿ ಆ ವರ್ತಕನು " ಫಲಗಳು ಮುಗಿದುವು" ಎಂದು ಹೇಳುತ್ತಿರಲು ದೊರೆಯು ಆ ವರ್ತಕನನ್ನು ಕುರಿತು" ಹೋಗಿ ಆ ಫಲಗಳನ್ನೇ ತರಬೇಕು" ಎಂದು ಹೇಳಿದನು.

**ಆನೇತುಂ ತಾನ್ಯಶಕ್ಯಾನಿ ಪ್ರಾಙ್ಮಯಾರಾಧ್ಯ ದೇವತಾಮ್ ।**
**ತದ್ವನಸ್ವಾಮಿನೀಂ ದೀರ್ಘಂ ಲಬ್ಧಾನ್ಯೇತಾನಿ ಕಾನಿಚಿತ್** ॥ ೧೬೨ ॥

**ಆಸಕ್ತಿಸ್ತೇಷು ಚೇದಸ್ತಿ ದೇವಸ್ಯ ತವ ತದ್ವನಮ್ ।**
**ಮಯಾ ಸಹ ತ್ವಮಾಯಾಹಿ ಯಥೇಷ್ಟಂ ತಾನಿ ಭಕ್ಷಯ** ॥ ೧೬೩ ॥

**ಇತಿ ಪ್ರಲಂಭನಂ ತಸ್ಯ ವಿಸ್ರಭ್ಯ ಪ್ರತಿಪನ್ನವಾನ್ ।**
**ರಾಜಾ ಪ್ರಕ್ಷೀಣಪುಣ್ಯಾನಾಂ ವಿನಶ್ಯತಿ ವಿಚಾರಣಾ** ॥ ೧೬೪ ॥

ಆಗ ಆ ವರ್ತಕನು " ಆ ಫಲಗಳನ್ನು ತರುವುದಕ್ಕೆ ಸಾಧ್ಯವಿಲ್ಲ. ಮೊದಲು ನಾನು ಆ ವನದ ಸ್ವಾಮಿನಿಯಾದ ದೇವತೆಯನ್ನು ಬಹುಕಾಲದವರೆಗೆ ಆರಾಧಿಸಿ ಈ ಕೆಲವು ಫಲಗಳನ್ನು ಪಡೆದೆನು. ಸ್ವಾಮಿಯಾದ ನಿನಗೆ ಆ ಫಲಗಳಲ್ಲಿ ಆಸಕ್ತಿಯಿದ್ದರೆ ನೀನು ನನ್ನೊಡನೆ ಆ ವನಕ್ಕೆ ಬಾ. ಆ ಫಲಗಳನ್ನು ಯಥೇಷ್ಟವಾಗಿ ತಿನ್ನು" ಈ ಪ್ರಕಾರವಾದ ಅವನ ವಂಚನೆಯನ್ನು ನಂಬಿ ರಾಜನು ಒಪ್ಪಿಕೊಂಡನು. ಪುಣ್ಯಹೀನರಿಗೆ ವಿಚಾರಶಕ್ತಿಯು ನಾಶವಾಗುತ್ತದೆ.

**ಏತದ್ರಾಜ್ಯಂ ಪರಿತ್ಯಜ್ಯ ರಸನೇಂದ್ರಿಯಲೋಲುಪಃ ।**
**ಮತ್ಸ್ಯವತ್ಕಿಂ ವಿನಷ್ಟೇತಿ ಮಂತ್ರಿಭಿರ್ವಾರಿತೋಪ್ಯಸೌ** ॥ ೧೬೫ ॥

**ತದುಕ್ತಮತಿಲಂಘ್ಯಾಜ್ಞಃ ಪೋತೇನಾಗಾಹತಾಂಬುಧಿಮ್ ।**
**ತದಾ ರತ್ನಾನಿ ತದ್ಗೇಹಾದ್ವ್ಯಪೇತಾನ್ಯಖಿಲಾನ್ಯಪಿ** ॥ ೧೬೬ ॥

**ಸಹಸ್ರಯಕ್ಷರಕ್ಷ್ಯಾಣಿ ಪ್ರತ್ಯೇಕಂ ನಿಧಿಭಿಃ ಸಮಮ್ ।**
**ತದ್ವಿದಿತ್ವಾ ವಣಿಗ್ವೈರೀ ನೀತ್ವಾ ಮಧ್ಯೇಂಬುಧಿ ದ್ವಿಷಮ್** ॥ ೧೬೭ ॥

**ಸ್ವಪ್ರಾಗ್ಜನ್ಮಾಕೃತಿಂ ತಸ್ಯ ಪ್ರಕಟೀಕೃತ್ಯ ದುರ್ವಚಃ ।**
**ಉಕ್ತ್ವಾ ವೈರಾನುಬಂಧಂ ಚ ಕ್ರೂರಶ್ಚಿತ್ರವಧಾನ್ಯಧಾತ್** ॥ ೧೬೮ ॥

ಮೀನಿನಂತೆ, ಜಿಹ್ವೇಂದ್ರಿಯಲೋಲುಪನಾಗಿ ಈ ರಾಜ್ಯವನ್ನು ಪರಿತ್ಯಜಿಸಿ ಏತಕ್ಕೆ ನಾಶವನ್ನು ಹೊಂದುವನೆಂದು ಮಂತ್ರಿಗಳಿಂದ ನಿವಾರಿಸಲ್ಪಟ್ಟವನಾದರೂ ತಿಳಿಗೇಡಿಯಾದ ಈ ಸುಭೌಮನು ಅವರ ಮಾತನ್ನು ಮೀರಿ ಹಡಗಿನಿಂದ ಸಮುದ್ರವನ್ನು

ಹೊಕ್ಕನು. ಆಗ ಪ್ರತಿಯೊಂದೂ ಸಹಸ್ರಯಕ್ಷರಕ್ಷಿತಗಳಾಗಿದ್ದ ಎಲ್ಲಾ ರತ್ನಗಳೂ ನಿಧಿಗಳೂ ಅವನ ಮನೆಯಿಂದ ತೊಲಗಿದುವು. ಆ ವಿಷಯವನ್ನು ತಿಳಿದು ಕ್ರೂರನಾದ ಆ ವರ್ತಕವೈರಿಯು ಶತ್ರುವಾದ ಸುಭೌಮನನ್ನು ಸಮುದ್ರಮಧ್ಯದಲ್ಲಿ ತೆಗೆದುಕೊಂಡು ಹೋಗಿ ಅವನಿಗೆ ತನ್ನ ಪೂರ್ವಜನ್ಮದ ಆಕೃತಿಯನ್ನು ಪ್ರಕಟಿಸಿ ಕೆಟ್ಟ ಮಾತನ್ನೂ ವೈರಸಂಬಂಧವನ್ನೂ ಹೇಳಿ ಚಿತ್ರಹಿಂಸೆಗಳನ್ನು ಮಾಡಿದನು.

**ಸುಭೌಮೋಽಪಿ ವಿಪದ್ಯಾಂತೇ ರೌದ್ರಧ್ಯಾನಪರಾಯಣಃ ।**
**ಶ್ವಾಭ್ರೀಂ ಗತಿಂ ಸಮಾಪನ್ನೋ ದೌರ್ಮತ್ಯಾತ್ಕಿಂ ನ ಜಾಯತೇ॥ ೧೬೯ ॥**

ಸುಭೌಮನೂ ಅವಸಾನಕಾಲದಲ್ಲಿ ರೌದ್ರಧ್ಯಾನಪರಾಯಣನಾಗಿ ಸತ್ತು ನರಕ ಗತಿಯನ್ನು ಹೊಂದಿದನು. ದುರ್ಬುದ್ಧಿಯಿಂದ ಯಾವುದು ತಾನೇ ಉಂಟಾಗು ವುದಿಲ್ಲ ?

**ಲೋಭಾತ್ಸಹಸ್ರಬಾಹುಶ್ಚ ಪ್ರಾಪತ್ತಿರ್ಯಗ್ಗತಿಂ ಸತುಕ್ ।**
**ಜಮದಗ್ನಿಸುತೌ ಹಿಂಸಾಪರತಂತ್ರೌ ಗತಾವಧಃ ॥ ೧೭೦ ॥**

ಸಹಸ್ರಬಾಹುವೂ ಲೋಭದಿಂದ ಪುತ್ರಸಹಿತನಾಗಿ ಸತ್ತು ತಿರ್ಯಗ್ಗತಿಯನ್ನು ಹೊಂದಿದನು. ಹಿಂಸಾಪರತಂತ್ರರಾದ ಜಮದಗ್ನಿಯ ಪುತ್ರರು ಸತ್ತು ಕೆಳಕ್ಕೆ–ನರಕಕ್ಕೆ ಹೋದರು.

**ತತ ಏವ ತ್ಯಜಂತ್ಯೇತೌ ರಾಗದ್ವೇಷೌ ಮನೀಷಿಣಃ ।**
**ತತ್ತ್ಯಾಗಾದಾಪ್ನುವಂತ್ಯಾಪ್ಯಾನಾಪ್ಸ್ಯಂತಿ ಚ ಪರಂ ಪದಮ್ ॥ ೧೭೧ ॥**

ಆದುದರಿಂದಲೇ ಪ್ರಾಜ್ಞರು ಈ ರಾಗದ್ವೇಷಗಳನ್ನು ಬಿಡುತ್ತಾರೆ. ಅವುಗಳ ತ್ಯಾಗದಿಂದ ಹೊಂದಲ್ಪಡತಕ್ಕ ವಿಷಯಗಳನ್ನು ಹೊಂದುತ್ತಾರೆ. ಪರಮಪದವಾದ ಮುಕ್ತಿಸ್ಥಾನವನ್ನೂ ಹೊಂದುವರು.

**ಏಕೋಽಪಿ ಸಿಂಹಸದೃಶಃ ಸಕಲಾವನೀಶೋ ।**
**ಹತ್ವಾ ಪಿತುರ್ವಧಕೃತೌ ಜಮದಗ್ನಿಸೂನೂ ।**
**ಕೀರ್ತ್ಯಾ ಸ್ವಯಾ ಧವಲಿತಾಖಿಲದಿಕ್ಸುಭೌಮ- ।**
**ಶ್ಚಕ್ರೀ ಸ್ವದುರ್ನಯವಶಾನ್ನರಕೇಷ್ವಮೋಽಭೂತ್ ॥ ೧೭೨ ॥**

ಸಿಂಹಸಮಾನನೂ ಸಮಸ್ತಪೃಥ್ವಿಗೆ ನಾಯಕನೂ ತನ್ನ ಕೀರ್ತಿಯಿಂದ ಸಕಲ ದಿಕ್ಕುಗಳನ್ನು ಬೆಳಗಿದವನೂ ಎಂಟನೆಯ ಚಕ್ರವರ್ತಿಯೂ ಆದ ಸುಭೌಮನು ಒಬ್ಬನೇ ಆದರೂ ತನ್ನ ತಂದೆಯನ್ನು ಕೊಂದ ಜಮದಗ್ನಿಪುತ್ರರನ್ನು ಕೊಂದು ತನ್ನ ಕೆಟ್ಟನಡತೆಯ ವಶದಿಂದ ನರಕದಲ್ಲಿ ಹುಟ್ಟಿದನು.

**ಭೂಪಾಲಭೂಪತಿರಸಹ್ಯತಪೋವಿಧಾಯೀ ।**
**ಶುಕ್ರೇಭವನ್ಮಹತಿ ಷೋಡಶಸಾಗರಾಯುಃ ।**
**ಚ್ಯುತ್ವಾ ತತಃ ಸಕಲಚಕ್ರಧರಃ ಸುಭೌಮೋ ।**
**ರಾಮಾಂತಕೃನ್ನರಕನಾಯಕತಾಂ ಜಗಾಮ ॥ ೧೭೩ ॥**

ಅಸಹ್ಯವಾದ ತಪಸ್ಸನ್ನು ಮಾಡಿದ ಭೂಪಾಲರಾಜನು ಮಹಾಶುಕ್ರಸ್ವರ್ಗದಲ್ಲಿ ಹದಿನಾರು ಸಾಗರೋಪಮವರ್ಷಾಯುಷ್ಯವುಳ್ಳವನಾದನು. ಅಲ್ಲಿಂದ ಚ್ಯುತನಾಗಿ ಸಕಲಚಕ್ರವರ್ತಿಯೂ ಜಮದಗ್ನಿಯ ಪುತ್ರರಾದ ಇಂದ್ರರಾಮ ಶ್ವೇತರಾಮರನ್ನು ಕೊಂದವನೂ ಆದ ಸುಭೌಮನಾಗಿ ನರಕಾಧಿಪತ್ಯವನ್ನು ಹೊಂದಿದನು.

**ನಂದಿಷೇಣೋ ಬಲಃ ಪುಂಡರೀಕೋರ್ಧಭರತಾಧಿಪಃ ।**
**ರಾಜಪುತ್ರಾವಿಮೌ ಜಾತೌ ತೃತೀಯೇತ್ರ ಭವಾಂತರೇ ॥ ೧೭೪ ॥**

**ಸುಕೇತ್ವಾಶ್ರಯಶಲ್ಯೇನ ತಪಃ ಕೃತ್ವಾಯುಷೋಽವಧೌ ।**
**ಆದ್ಯೇ ಕಲ್ಪೇ ಸಮುತ್ಪದ್ಯ ತತಃ ಪ್ರಚ್ಯುತ್ಯ ಚಕ್ರಿಣಃ ॥ ೧೭೫ ॥**

**ಪಶ್ಚಾತ್ ಷಟ್ಛತಕೋಟ್ಯಬ್ದಾತೀತಾವತ್ರೈವ ಭಾರತೇ ।**
**ರಾಜ್ಞಶ್ಚಕ್ರಪುರಾಧೀಶಾದಿಕ್ಷ್ವಾಕೋರ್ವರಸೇನತಃ ॥ ೧೭೬ ॥**

**ವೈಜಯಂತ್ಯಾಂ ಬಲೋ ದೇವ್ಯೋ ಲಕ್ಷ್ಮೀವತ್ಯಾಮಜಾಯತ ।**
**ಪುಂಡರೀಕಸ್ತಯೋರಾಯುಃ ಖತ್ರಯತ್ರ್ಯಿಂದ್ರಿಯಾಬ್ದವತ್ ॥ ೧೭೭ ॥**

**ಷಡ್ವಿಂಶತಿಸ್ತನೂತ್ಸೇಧೋ ಧನುಷಾಂ ನಿಯತಾಯುಷೋಃ ।**
**ಸ್ವತಪಃಸಂಚಿತಾತ್ಪುಣ್ಯಾತ್ಕಾಲೇ ಯಾತ್ಯಾಪುಷೋಃ ಸುಖಮ್ ॥ ೧೭೮ ॥**

**ಅನ್ಯದೋಪೇಂದ್ರಸೇನಾಖ್ಯಮಹೀಡಿಂದ್ರಪುರಾಧಿಪಃ ।**
**ಪದ್ಮಾವತೀಂ ಸುತಾಂ ಸ್ವಸ್ಯ ಪುಂಡರೀಕಾಯ ದತ್ತವಾನ್ ॥ ೧೭೯ ॥**

ಬಳಿಕ ಈ ಭರತಕ್ಷೇತ್ರದಲ್ಲಿ ನಂದಿಷೇಣನೆಂಬ ಬಲಭದ್ರ, ಅರ್ಧಭರತ ಕ್ಷೇತ್ರಾಧಿಪತಿಯಾದ ಪುಂಡರೀಕನೆಂಬ ನಾರಾಯಣ ಈ ರಾಜಪುತ್ರರು ಜನಿಸಿದರು. ಹಿಂದೆ ಮೂರನೆಯ ಭವದಲ್ಲಿ ಸುಕೇತುರಾಜನ ಆಶ್ರಯದಲ್ಲಿ ನಿದಾನಶಲ್ಯದಿಂದ ತಪಸ್ಸನ್ನು ಮಾಡಿ ತಮ್ಮ ಆಯುಷ್ಯದ ಕೊನೆಯಲ್ಲಿ ಸತ್ತು ಮೊದಲನೆಯ ಕಲ್ಪದಲ್ಲಿ ದೇವರ್ಕಳಾಗಿ ಹುಟ್ಟಿ ಅಲ್ಲಿಂದ ಚ್ಯುತರಾಗಿ ಸುಭೌಮಚಕ್ರವರ್ತಿಯನಂತರ ಆರುನೂರು ಕೋಟಿ ವರ್ಷಗಳು ಕಳೆದ ಬಳಿಕ ಇದೇ ಭರತಕ್ಷೇತ್ರದಲ್ಲಿ ಚಕ್ರಪುರಾಧಿ ಪತಿಯೂ ಇಕ್ಷ್ವಾಕುವಂಶಜನೂ ಆದ ವರಸೇನರಾಜನ ದೆಸೆಯಿಂದ ವೈಜಯಂತೀ ದೇವಿಯಲ್ಲಿ ನಂದಿಷೇಣ–ಬಲದೇವನೂ ಲಕ್ಷ್ಮೀಮತಿದೇವಿಯಲ್ಲಿ ಪುಂಡರೀಕನೂ ಜನಿಸಿದರು. ಅವರ ಆಯುಷ್ಯವು ಐವತ್ತಾರುಸಾವಿರ ವರ್ಷಗಳುಳ್ಳದಾಗಿದ್ದಿತು. ಇಪ್ಪತ್ತಾರು ಬಿಲ್ಲುಗಳ ಶರೀರೋತ್ಸೇಧವಿದ್ದಿತು. ತಮ್ಮ ತಪಸ್ಸಿನಿಂದ ಸಂಚಿತವಾದ ಪುಣ್ಯದಿಂದ ಸುಖವನ್ನು ಹೊಂದಿರುವವರೂ ನಿಯತವಾದ ಆಯುಷ್ಯವುಳ್ಳವರೂ ಆದ ಆ ನಂದಿಷೇಣ ಪುಂಡರೀಕರ ಕಾಲವು ಕಳೆಯುತ್ತಿರಲು ಮತ್ತೊಂದು ಕಾಲದಲ್ಲಿ ಇಂದ್ರಪುರಾಧಿಪತಿಯಾದ ಉಪೇಂದ್ರಸೇನನೆಂಬ ರಾಜನು ತನ್ನ ಪುತ್ರಿಯಾದ ಪದ್ಮಾವತಿಯನ್ನು ಪುಂಡರೀಕನಿಗೆ ಕೊಟ್ಟು–ಮದುವೆಮಾಡಿದನು.

**ಅಥ ದರ್ಪೀ ದುರಾಚಾರಃ ಸುಕೇತುಃ ಪ್ರಾಕ್ತನೋ ರಿಪುಃ ।**
**ನಿಜೋಪಾರ್ಜಿತಕರ್ಮಾನುರೂಪೇಣ ಭವಸಂತತೌ ॥ ೧೮೦ ॥**

**ಭ್ರಾಂತ್ವಾ ಕ್ರಮೇಣ ಸಂಚಿತ್ಯ ಶುಭಂ ತದನುರೋಧತಃ ।**
**ಭೂತ್ವಾ ಚಕ್ರಪುರಾಧೀಶೋ ವಶೀಕೃತವಸುಂಧರಃ ॥ ೧೮೧ ॥**

**ಗ್ರೀಷ್ಮಾರ್ಕಮಂಡಲಾಭತ್ವಾದಸೋಢಾಪರತೇಜಸಾಮ್ ।**
**ತದ್ವಿವಾಹಶ್ರುತೇಃ ಕ್ರುದ್ಧಃ ಸನ್ನದ್ಧಾಶೇಷಸಾಧನಃ ॥ ೧೮೨ ॥**

**ನಿಶುಂಭೋ ಮಾರಕೋರೀಣಾಂ ನಾರಕೇಭ್ಯೋಽಪಿ ನಿರ್ದಯಃ ।**
**ಪ್ರಾಸ್ಥಿತಾಖಂಡವಿಕ್ರಾಂತಿಃ ಪುಂಡರೀಕಂ ಜಿಘಾಂಸುಕಃ ॥ ೧೮೩ ॥**

ಬಳಿಕ ಅಹಂಕಾರಿಯೂ ದುರಾಚಾರಿಯೂ ಮೊದಲಿನ ಶತ್ರುವೂ ಆದ ಸುಕೇತುವು ತಾನು ಸಂಪಾದಿಸಿದ ಕರ್ಮಾನುರೂಪದಿಂದ ಭವಪರಂಪರೆಯಲ್ಲಿ ತಿರುಗಿ ಕ್ರಮದಿಂದ ಶುಭಕರ್ಮವನ್ನು ಸಂಪಾದಿಸಿ ಆದರ ಬಲದಿಂದ ಚಕ್ರಪುರಾಧಿ ಪತಿಯಾಗಿ ಪೃಥಿವಿಯನ್ನು ವಶಪಡಿಸಿಕೊಂಡವನೂ ಗ್ರೀಷ್ಮಋತುವಿನ ಸೂರ್ಯ ಮಂಡಲಕ್ಕೆ ಸಮಾನನಾಗಿದ್ದುದರಿಂದ ಬೇರೆಯವರ ತೇಜಸ್ಸುಗಳನ್ನು ಸಹಿಸದಿರು ವವನೂ ಆ ಪದ್ಮಾವತಿಯ ವಿವಾಹವಾರ್ತೆಯನ್ನು ಕೇಳಿದುದರಿಂದ ಕೋಪ ಗೊಂಡವನೂ ಯುದ್ಧಸಾಧನಗಳನ್ನೆಲ್ಲ ಅಣಿಮಾಡಿಕೊಂಡವನೂ ಶತ್ರುಗಳಿಗೆ ಯಮನೂ ನಾರಕರಿಗಿಂತಲೂ ನಿರ್ದಯನೂ ಅಖಂಡವಾದ ಪರಾಕ್ರಮವುಳ್ಳವನೂ ಆಗಿ ಹುಟ್ಟಿದ ನಿಶುಂಭನು ಪುಂಡರೀಕನನ್ನು ಕೊಲ್ಲಬೇಕೆಂಬ ಇಚ್ಛೆಯುಳ್ಳವನಾಗಿ ಹೊರಡುವುದಕ್ಕೆ ಉದ್ಯುಕ್ತನಾದನು.

**ಯುದ್ಧ್ವಾ ಬಹುವಿಧೇನಾಮಾ ತೇನೋದ್ಯತ್ತೇಜಸಾ ಚಿರಮ್ ।**
**ತಚ್ಚಕ್ರಾಶನಿಪಾತೇನ ಘಾತಿತಾಯುರಯಾದಧಃ ॥ ೧೮೪ ॥**

ಬಹುವಿಧ–ಸಾಧನಗಳುಳ್ಳವನೂ ಉದಯಿಸುತ್ತಿರುವ ತೇಜಸ್ಸುಳ್ಳವನೂ ಆದ ಆ ಪುಂಡರೀಕನೊಡನೆ ಬಹುಸಮಯದವರೆಗೆ ಯುದ್ಧವನ್ನುಮಾಡಿ ಕೊನೆಯಲ್ಲಿ ಪುಂಡರೀಕನ ಮೇಲೆ ಚಕ್ರವನ್ನು ಪ್ರಯೋಗಿಸಿ ಅದು ಪುಂಡರೀಕನ ಹಸ್ತಗತವಾಗಲು

ಆವನಿಂದ ಪ್ರೇರಿತವಾದ ಆದೇ ಚಕ್ರವೆಂಬ ಸಿಡಿಲಿನ ಪತನದಿಂದ ನಷ್ಟವಾದ ಆಯುಷ್ಯವುಳ್ಳ ನಿಶುಂಭ–ಪ್ರತಿಕೇಶವನು ಸತ್ತು ಕೆಳಕ್ಕೆ–ನರಕಕ್ಕೆ ಹೋದನು.

**ತಾವುಭಾವಿವ ಚಂದ್ರಾರ್ಕೌ ಸಂಯುಕ್ತೌ ಲೋಕಪಾಲಕೌ ।**
**ಸ್ವಪ್ರಭಾಕ್ರಾಂತದಿಕ್ಚಕ್ರೌ ಪಾಲಯಿತ್ವಾ ಚಿರಂ ಧರಾಮ್ ॥ ೧೮೫ ॥**

**ಅವಿಭಕ್ತಶ್ರಿಯಾ ಪ್ರೀತಿಂ ಪರಮಾಂ ಪ್ರಾಪತುಃ ಪೃಥಕ್ ।**
**ವ್ಯಾಪ್ತಚಕ್ಷುರ್ವಿಶೇಷೌ ವಾ ರಮ್ಯೈಕವಿಷಯೇಕ್ಷಣೇ ॥ ೧೮೬ ॥**

ಚಂದ್ರಸೂರ್ಯರಂತೆ ಸೇರಿರುವವರೂ ಲೋಕರಕ್ಷಕರೂ ತಮ್ಮ ಪ್ರಭೆಯಿಂದ ಆಕ್ರಮಿಸಲ್ಪಟ್ಟ ದಿಙ್ಮಂಡಲವುಳ್ಳವರೂ ಆದ ಬಲಕೇಶವರು–ನಂದಿಷೇಣ ಪುಂಡರೀಕರು ಬಹುಕಾಲದವರೆಗೆ ಪೃಥಿವಿಯನ್ನು ಪಾಲಿಸಿ, ರಮಣೀಯವಾದ ಒಂದು ವಿಷಯವನ್ನು ನೋಡುವುದರಲ್ಲಿ ಬೇರೆ ಬೇರೆಯಾಗಿ ವ್ಯಾಪ್ತವಾದ ನೇತ್ರವಿಶೇಷಗಳಂತೆ, ಅವಿಭಕ್ತವಾದ ಸಂಪತ್ತಿಯಿಂದ ಬೇರೆ ಬೇರೆಯಾಗಿ ಪರಮಪ್ರೀತಿಯನ್ನು ಹೊಂದಿದರು.

**ತಯೋರ್ಭವತ್ರಯಾಯಾತಪರಸ್ಪರಸಮುದ್ಭವಾತ್ ।**
**ಪ್ರೇಮ್ಣಸ್ತೃಪ್ತೇರಯಾನ್ನಾಂಶಮಪಿ ತೃಪ್ತಿರ್ನೃಪತ್ವಜಾ ॥ ೧೮೭ ॥**

ಆ ನಂದಿಷೇಣ ಪುಂಡರೀಕರಿಗೆ ತಾವು ರಾಜರಾಗಿದ್ದುದರಿಂದುಂಟಾದ ತೃಪ್ತಿಯು ಮೂರು ಭವಗಳಿಂದ ಬಂದ ಮತ್ತು ಪರಸ್ಪರವಾಗಿ ಉಂಟಾದ ಪ್ರೇಮದ ತೃಪ್ತಿಯ ಅಂಶವನ್ನೂ ಹೊಂದಲಿಲ್ಲ. ರಾಜತ್ವದ ತೃಪ್ತಿಗಿಂತಲೂ ಮೂರು ಭವಗಳಿಂದ ಬಂದ ಪ್ರೇಮದ ತೃಪ್ತಿಯು ಹೆಚ್ಚಾಗಿದ್ದಿತೆಂದು ಭಾವವು.

**ಪುಂಡರೀಕಶ್ಚಿರಂ ಭುಕ್ತ್ವಾ ಭೋಗಾಂಸ್ತತ್ರಾತಿಸಕ್ತಿತಃ ।**
**ಬದ್ಧ್ವಾಯುರ್ನಾರಕಂ ಘೋರಂ ಬಹ್ವಾರಂಭಪರಿಗ್ರಹಃ ॥ ೧೮೮ ॥**

**ಪ್ರಾಂತೇ ರೌದ್ರಾಭಿಸಂಧಾನಾದ್ರೂಢಮಿಥ್ಯಾತ್ವಭಾವನಃ ।**
**ಪ್ರಾಣೈಸ್ತಮಃಪ್ರಭಾಂ ಮೃತ್ವಾ ಪ್ರಾವಿಶತ್ಪಾಪಪಾಕವಾನ್ ॥ ೧೮೯ ॥**

ಬಹ್ವಾರಂಭಪರಿಗ್ರಹವುಳ್ಳ ಪುಂಡರೀಕನು ಬಹುಕಾಲದವರೆಗೆ ಭೋಗಗಳನ್ನು ಅನುಭವಿಸಿ ಅವುಗಳಲ್ಲಿ ಅತ್ಯಾಸಕ್ತಿಯಿಂದ ಘೋರವಾದ ನರಕಾಯುಷ್ಯವನ್ನು ಬಂಧಿಸಿ ಅವಸಾನಕಾಲದಲ್ಲಿ ರೌದ್ರಧ್ಯಾನದಿಂದ ಬೆಳೆದ ಮಿಥ್ಯಾತ್ವಭಾವನೆಯುಳ್ಳವನೂ ಪಾಪದ ಪರಿಪಾಕವುಳ್ಳವನೂ ಆಗಿ ಪ್ರಾಣಗಳಿಂದ ವಿಯೋಗವನ್ನು ಹೊಂದಿ–ಸತ್ತು ತಮಃಪ್ರಭೆಯೆಂಬ ಏಳನೆಯ ನರಕವನ್ನು ಪ್ರವೇಶಿಸಿದನು.

**ಹಲಭೃತ್ತದ್ವಿಯೋಗೇನ ಜಾತನಿರ್ವೇದಸಾರಥಿಃ ।**
**ಶಿವಘೋಷಯತಿಂ ಪ್ರಾಪ್ಯ ಸಂಯಮಂ ಪ್ರತ್ಯಪದ್ಯತ ॥ ೧೯೦ ॥**

ನೇಗಿಲನ್ನು ಧರಿಸಿದ–ಬಲಭದ್ರನು ಆ ಪುಂಡರೀಕನ ವಿಯೋಗದಿಂದುಂಟಾದ ವೈರಾಗ್ಯವೆಂಬ ಸಾರಥಿಯುಳ್ಳವನಾಗಿ ಶಿವಘೋಷಯತಿಯನ್ನು ಹೊಂದಿ ಸಂಯಮ–ದೀಕ್ಷೆಯನ್ನು ತೆಗೆದುಕೊಂಡನು.

**ಸ ಬಾಹ್ಯಾಭ್ಯಂತರಂ ಶುದ್ಧಂ ತಪಃ ಕೃತ್ವಾ ನಿರಾಕುಲಃ ।**
**ಮೂಲೋತ್ತರಾಣಿ ಕರ್ಮಾಣಿ ನಿರ್ಮೂಲ್ಯಾವಾಪ ನಿರ್ವೃತಿಮ್ ॥**

ಅವನು ವ್ಯಾಕುಲವಿಲ್ಲದವನಾಗಿ ಬಾಹ್ಯಾಭ್ಯಂತರಶುದ್ಧವಾದ ತಪಸ್ಸನ್ನು ಮಾಡಿ ಮೂಲಕರ್ಮಗಳನ್ನೂ ಉತ್ತರಕರ್ಮಗಳನ್ನೂ ನಿರ್ಮೂಲಮಾಡಿ ಮುಕ್ತಿಯನ್ನು ಪಡೆದನು.

**ಜಾತೌ ತೃತೀಯಜನನೇ ಧರಣೀಶಪುತ್ರೌ ।**
**ಪಶ್ಚಾತ್ಸುರೌ ಪ್ರಥಮಕಲ್ಪಗತಾವಭೂತಾಮ್ ॥**
**ಶ್ರೀನಂದಿಷೇಣಹಲಭೃತ್ಸ ನಿಶುಂಭಶತ್ರುಃ ।**
**ಷಷ್ಠಸ್ತ್ರಿಖಂಡಧರಣೀಟ್ಸ ಚ ಪುಂಡರೀಕಃ ॥ ೧೯೨ ॥**

ಶ್ರೀನಂದಿಷೇಣಬಲಭದ್ರನೂ ನಿಶುಂಭನ ಶತ್ರುವೂ ತ್ರಿಖಂಡಭೂಪತಿಗಳಲ್ಲಿ ಆರನೆಯವನೂ ಆದ ಆ ಪುಂಡರೀಕನೂ ಮೊದಲು ಮೂರನೆಯ ಜನ್ಮದಲ್ಲಿ ರಾಜಪುತ್ರರಾಗಿ ಹುಟ್ಟಿದರು. ಬಳಿಕ ಪ್ರಥಮಕಲ್ಪ–ಸ್ವರ್ಗವನ್ನು ಹೊಂದಿದ ದೇವರ್ಕಳಾದರು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಅರತೀರ್ಥಕರ ಚಕ್ರಧರ ಸುಭೌಮಚಕ್ರವರ್ತಿ ನಂದಿಷೇಣಬಲದೇವ ಪುಂಡರೀಕಾರ್ಧಚಕ್ರವರ್ತಿ ನಿಶುಂಭಪ್ರತಿಶತ್ರುಪುರಾಣಂ ನಾಮ ಪಂಚಷಷ್ಟಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಅರತೀರ್ಥಕರ ಚಕ್ರಧರ ಸುಭೌಮಚಕ್ರವರ್ತಿ ನಂದಿಷೇಣಬಲದೇವ ಪುಂಡರೀಕಾರ್ಧಚಕ್ರವರ್ತಿ ನಿಶುಂಭಪ್ರತಿಶತ್ರುಪುರಾಣವೆಂಬ ಅರವತ್ತೈದನೆಯ ಪರ್ವವು ಸಮಾಪ್ತವಾದುದು.



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಗಜಪುರಿಯೆಂಬ ಪಟ್ಟಣದಲ್ಲಿ ಸುದರ್ಶನಮಹಾರಾಜಂಗಂ ಸುಮಿತ್ರಾಮಹಾದೇವಿಗಂ ರೋಹಿಣೀನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಕುರುವಂಶಮನುಳ್ಳ ಮೂವತ್ತು ಬಿಲ್ಲುತ್ಸೇಧಮನುಳ್ಳ ಎಂಬತ್ತುನಾಲ್ಕು ಸಾವಿರ ವರ್ಷಾಯುಷ್ಯಮನುಳ್ಳ ಮಹೇಂದ್ರವಿಜಯಾದೇವೀ–ಯಕ್ಷಯಕ್ಷಿಯರನುಳ್ಳ ಸಮ್ಮೇದಪರ್ವತದ ನಾಟಕಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಅರತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

# ಅಥ ಮಲ್ಲಿತೀರ್ಥಕರಪುರಾಣಂ

**ಮೋಹಮಲ್ಲಮಮಲ್ಲಂ ಯೋ ವ್ಯಜೇಷ್ಟಾನಿಷ್ಟಕಾರಿಣಮ್ ।**
**ಕರೀಂದ್ರಂ ವಾ ಹರಿಃ ಸೋಽಯಂ ಮಲ್ಲಿಃ ಶಲ್ಯಹರೋಽಸ್ತು ನಃ ॥ ೧ ॥**

ಸಿಂಹವು ದೊಡ್ಡ ಆನೆಯನ್ನು ಜಯಿಸುವಂತೆ ಯಾವನು ಅನಿಷ್ಟವನ್ನು ಮಾಡುವವನೂ ತನಗೆ ಪ್ರತಿಯಾದ ಮಲ್ಲರಿಲ್ಲದವನೂ ಆದ ಮೋಹವೆಂಬ ಮಲ್ಲನನ್ನು ಜಯಸಿದನೋ ಅಂತಹ ಈ ಮಲ್ಲಿನಾಥನು ನಮ್ಮಗಳ ಶಲ್ಯವನ್ನು ನಾಶಮಾಡುವವನಾಗಲಿ.

**ಜಂಬೂಪಲಕ್ಷಿತೇ ದ್ವೀಪೇ ಮೇರೋಃ ಪ್ರಾಕ್ಕಚ್ಛಕಾವತೀ- ।**
**ವಿಷಯೇ ವೀತಶೋಕಾಖ್ಯಪುರೇ ವೈಶ್ರವಣಾಹ್ವಯಃ ॥ ೨ ॥**

**ಮಹಾವಂಶೋ ಮಹೀ ತಸ್ಯ ಮಹಾಗುಣಮಹೀಯಸಃ ।**
**ಕುಂಭಕಾರಕರಾಲಗ್ನಮೃತ್ಸ್ನೇವ ವಶವರ್ತಿನೀ ॥ ೩ ॥**

ಜಂಬೂದ್ವೀಪದ ಮಹಾಮೇರುವಿನ ಪೂರ್ವದಿಕ್ಕಿನಲ್ಲಿ ಕಚ್ಛಕಾವತೀದೇಶದಲ್ಲಿರುವ ವೀತಶೋಕಪುರದಲ್ಲಿ ಮಹಾವಂಶದವನಾದ ವೈಶ್ರವಣನೆಂಬ ರಾಜನಿದ್ದನು. ಮಹಾಗುಣಗಳಿಂದ ಶ್ರೇಷ್ಠನಾದ ಆ ವೈಶ್ರವಣನಿಗೆ ಪೃಥ್ವಿಯು, ಕುಂಬಾರನ ಕೈಯಲ್ಲಿರುವ ಮಣ್ಣನಂತೆ, ವಶದಲ್ಲಿದ್ದಿತು.

**ಯೋಗಸ್ತಾಭ್ಯೋ ಮಹಾಂಸ್ತಸ್ಯ ಪ್ರಜಾನಾಂ ಕ್ಷೇಮಕಾರಿಣಃ ।**
**ತಾ ಯಸ್ಮಾದುಪಯುಜ್ಯಂತೇ ಕೋಶದುರ್ಗಬಲಾದಿಭಿಃ ॥ ೪ ॥**

ಯಾವನ ದೆಸೆಯಿಂದ ಪ್ರಜೆಗಳು ಭಂಡಾರ ದುರ್ಗ ಸೇನಾ ಮೊದಲಾದುವುಗಳಿಂದ ಉಪಯೋಗಿಸಲ್ಪಡುತ್ತಾರೋ ಪ್ರಜೆಗಳಿಗೆ ಲಬ್ಧಪರಿರಕ್ಷಣರೂಪವಾದ ಕ್ಷೇಮವನ್ನು ಮಾಡುವ ಆ ವೈಶ್ರವಣರಾಜನಿಗೆ ಆ ಪ್ರಜೆಗಳ ದೆಸೆಯಿಂದ ಅಲಬ್ಧಲಾಭರೂಪವಾದ ಮಹಾಯೋಗವುಂಟಾಗುತ್ತಿದ್ದಿತು.

**ಮಹಾಹವೇಷು ಸಂಧರ್ತುಂ ಸಂಚಿನೋತಿ ಧನಂ ಪ್ರಜಾಃ ।**
**ಧತ್ತೇ ದಂಡಂ ಚ ಸನ್ಮಾರ್ಗೇ ಸಂಪ್ರವರ್ತಯಿತುಂ ಸ ತಾಃ ॥ ೫ ॥**

ಆ ವೈಶ್ರವಣನು ಮಹಾಯುದ್ಧಗಳಲ್ಲಿ ಪ್ರಜೆಗಳನ್ನು ಕಾಪಾಡುವುದಕ್ಕೋಸ್ಕರ ಧನವನ್ನು ಸಂಗ್ರಹಿಸುತ್ತಾನೆ. ಆ ಪ್ರಜೆಗಳನ್ನು ಸನ್ಮಾರ್ಗದಲ್ಲಿ ನಡೆಯಿಸುವುದಕ್ಕೋಸ್ಕರ ಅವರಿಗೆ ಶಿಕ್ಷೆಯನ್ನೂ ಮಾಡುತ್ತಾನೆ.

**ಇತಿ ಪ್ರವೃದ್ಧಪುಣ್ಯಾನುಭಾವಸಂಪಾದಿತಾಂ ಶ್ರಿಯಮ್ ।**
**ಪ್ರಿಯಾಮಿವ ನವೋಢಾಂ ತಾಮುತ್ಪ್ರೀತ್ಯಾನುಭವಂಶ್ಚಿರಮ್ ॥ ೬ ॥**

**ಕದಾಚಿತ್ಪ್ರಾವೃಡಾರಂಭೇ ಜೃಂಭಮಾಣಾಂ ವನಾವಲಿಮ್ ।**
**ವಿಲೋಕಿತುಂ ಪುರಸ್ಯಾಯಾದುಪಶಲ್ಯಮುದಾತ್ತಧೀಃ ॥ ೭ ॥**

ಈ ಪ್ರಕಾರವಾಗಿ ವೃದ್ಧಿಯಾದ ಪುಣ್ಯದ ಮಹಿಮೆಯಿಂದ ಸಂಪಾದಿಸಲ್ಪಟ್ಟ ಆ ಸಂಪತ್ತಿಯನ್ನು, ಹೊಸದಾಗಿ ವಿವಾಹಿತಳಾದ ಪತ್ನಿಯನ್ನು ಅನುಭವಿಸುವಂತೆ, ಬಹುಕಾಲದವರೆಗೆ ಬಹುಪ್ರೀತಿಯಿಂದ ಅನುಭವಿಸುವವನಾಗಿ ಉದಾತ್ತವಾದ ಬುದ್ಧಿಯುಳ್ಳ ಆ ವೈಶ್ರವಣರಾಜನು ಒಂದಾನೊಂದು ಕಾಲದಲ್ಲಿ ವರ್ಷಾಕಾಲದ ಆರಂಭದಲ್ಲಿ ವೃದ್ಧಿಹೊಂದುತ್ತಿರುವ ವನಗಳ ಸಾಲನ್ನು ನೋಡುವುದಕ್ಕೋಸ್ಕರ ಪಟ್ಟಣದ ಎಲ್ಲೆಯನ್ನು ಹೊಂದಿದನು.

**ತತ್ರ ಶಾಖೋಪಶಾಖಾಃ ಸ್ವಾಃ ಪ್ರಸಾರ್ಯೇವ ನೃಪೋ ಮಹಾನ್ ।**
**ಅವಗಾಹ್ಯ ಮಹೀಂ ತಸ್ಥೌ ನ್ಯಗ್ರೋಧಃ ಸೇವಿತೋ ದ್ವಿಜೈಃ ॥ ೮ ॥**

ಅಲ್ಲಿ ದ್ವಿಜರಿಂದ ಸೇವಿಸಲ್ಪಟ್ಟ ಮಹಾರಾಜನಂತೆ, ಪಕ್ಷಿಗಳಿಂದ ಸೇವಿಸಲ್ಪಟ್ಟ ಆಲದ ಮರವು ತನ್ನ ಶಾಖೋಪಶಾಖೆಗಳನ್ನು ಹರಡಿ ಭೂಮಿಯನ್ನು ಹೊಕ್ಕಿದ್ದಿತು.

**ತಂ ವಿಲೋಕ್ಯ ಮಹೀಪಾಲಃ ಪಶ್ಯ ಪಶ್ಯಾಸ್ಯ ವಿಸ್ತೃತಿಮ್ ।**
**ತುಂಗತ್ವಂ ಬದ್ಧಮೂಲತ್ವಂ ವಹನ್ನನ್ವೇತಿ ಮಾಮಯಮ್ ॥ ೯ ॥**

**ದರ್ಶಯನ್ನಿತಿ ಸಾಶ್ಚರ್ಯಂ ಪ್ರಿಯಾಣಾಂ ಪಾರ್ಶ್ವವರ್ತಿನಾಮ್ ।**
**ಗತ್ವಾ ವನಾಂತರೇ ಭ್ರಾಂತ್ವಾ ತೇನೈವಾಯನ್ಪುನಃ ಪಥಾ ॥ ೧೦ ॥**

**ಆಮೂಲಾದ್ಭಸ್ಮಿತಂ ವೀಕ್ಷ್ಯ ವಜ್ರಪಾತೇನ ತಂ ವಟಮ್ ।**
**ಕಸ್ಯಾತ್ರ ಬದ್ಧಮೂಲತ್ವಂ ಕಸ್ಯ ಕಾ ವಾತ್ರ ವಿಸ್ತೃತಿಃ ॥ ೧೧ ॥**

**ಕಸ್ಯ ವಾ ತುಂಗತಾನಾಮ ಯದ್ಯಸ್ಯಾಪೀದೃಶೀ ಗತಿಃ ।**
**ಇತಿ ಚಿಂತಾಂ ಸಮಾಪನ್ನಃ ಸಂತ್ರಸ್ತಃ ಸಂಸೃತಿಸ್ಥಿತೇಃ ॥ ೧೨ ॥**

**ಪ್ರದಾಯ ರಾಜ್ಯಂ ಪುತ್ರಾಯ ಶ್ರೀನಾಗನಗವರ್ತಿನಮ್ ।**
**ಶ್ರೀನಾಗಯತಿಮಾಸಾದ್ಯ ಪೀತಧರ್ಮರಸಾಯನಃ ॥ ೧೩ ॥**

**ರಾಜಭಿರ್ಬಹುಭಿಃ ಸಾರ್ಧಮವಾಪ್ಯಾತ್ಯುತ್ತಮಂ ತಪಃ ।**
**ಅಂಗಾನ್ಯೇಕಾದಶಾಂಗಾನಿ ವಿಧಾಯ ವಿಧಿನಾ ಧಿಯಾ ॥ ೧೪ ॥**

**ಸಂಪಾದ್ಯ ತೀರ್ಥಕೃನ್ನಾಮಗೋತ್ರಂ ಚೋಪಾತ್ತಭಾವನಃ ।**
**ತಪಸ್ಯನ್ ಸುಚಿರಂ ಪ್ರಾಂತೇ ಪ್ರಾಸ್ತಾಶೇಷಪರಿಗ್ರಹಃ ॥ ೧೫ ॥**

**ಸೋಽನುತ್ತರವಿಮಾನೇಷು ಸಂಬಭೂವಾಪರಾಜಿತೇ ।**
**ತ್ರಯಸ್ತ್ರಿಂಶತ್ಸಮುದ್ರೋಪಮಾಯುರ್ಹಸ್ತೋಚ್ಛ್ರಿತಿಃ ಕೃತೀ ॥ ೧೬ ॥**

ಆ ಮರವನ್ನು ನೋಡಿ ದೊರೆಯು ''ಈ ಮರದ ವಿಸ್ತಾರವನ್ನು ನೋಡು, ನೋಡು. ಔನ್ನತ್ಯವನ್ನೂ ಚೆನ್ನಾಗಿ ಬೇರು ಬಿಟ್ಟಿರುವಿಕೆಯನ್ನೂ ಹೊಂದಿರುವ ಈ ಮರವು ನನ್ನನ್ನು ಅನುಸರಿಸುತ್ತದೆ'' ಎಂದು ಆಶ್ಚರ್ಯಯುತವಾಗಿರುವಂತೆ ಸಮೀಪದಲ್ಲಿರುವ ಪ್ರಿಯಜನಗಳಿಗೆ ತೋರಿಸುವವನಾಗಿ ಹೋಗಿ ವನಮಧ್ಯದಲ್ಲಿ ಭ್ರಮಣಮಾಡಿ ಮತ್ತೆ ಅದೇ ಮಾರ್ಗದಿಂದ ಬರುವವನಾಗಿ ಸಿಡಿಲಿನ ಪತನದಿಂದ ಬುಡದಿಂದ ತುದಿಯವರೆಗೆ ಸುಟ್ಟು ಬೂದಿಯಾಗಿರುವ ಆ ಆಲದ ಮರವನ್ನು ನೋಡಿ '' ಈ ಮರಕ್ಕೂ ಇಂತಹ ಗತಿಯಾದರೆ ಇಲ್ಲಿ ಯಾವುದರ ಚೆನ್ನಾಗಿ ಬೇರು ಬಿಟ್ಟಿರುವಿಕೆಯಿದೆ ? ಇಲ್ಲಿ ಯಾವುದರ ವಿಸ್ತಾರವಿದೆ ? ಯಾವುದರ ಔನ್ನತ್ಯವೆಂಬುದಿದೆ ?'' ಈ ರೀತಿಯಾಗಿ ಚಿಂತೆಯನ್ನು ಹೊಂದಿ ಸಂಸಾರಸ್ಥಿತಿಯಿಂದ ಹೆದರಿದವನೂ ಮಗನಿಗೆ ರಾಜ್ಯವನ್ನು ಕೊಟ್ಟು ಶ್ರೀನಾಗಪರ್ವತದಲ್ಲಿರುವ ಶ್ರೀನಾಗಯತಿಯನ್ನು ಹೊಂದಿ ಧರ್ಮವೆಂಬ ರಸಾಯನವನ್ನು ಪಾನಮಾಡಿದವನೂ ಅನೇಕ ರಾಜರುಗಳೊಡನೆ ಅತ್ಯುತ್ತಮವಾದ ತಪಸ್ಸನ್ನು ಹೊಂದಿ ಏಕಾದಶಾಂಗಶಾಸ್ತ್ರಗಳನ್ನು ಬುದ್ಧಿಯ ವಿಧಾನದಿಂದ ಅವಯವಗಳನ್ನಾಗಿ ಮಾಡಿ ಅಂದರೆ ಬದ್ಧ್ಯನುಸಾರವಾಗಿ ಏಕಾದಶಾಂಗಶಾಸ್ತ್ರಗಳನ್ನು ಧಾರಣಮಾಡಿ ಬಹುಕಾಲದವರೆಗೆ ತಪಸ್ಸನ್ನು ಮಾಡುವವನೂ ಷೋಡಶಭಾವನೆಗಳನ್ನು ಹೊಂದಿದವನೂ ತೀರ್ಥಕರನಾಮಕರ್ಮವನ್ನೂ ಉಚ್ಚಗೋತ್ರಕರ್ಮವನ್ನೂ ಸಂಪಾದಿಸಿ ಕೊನೆಯಲ್ಲಿ ಸಮಸ್ತಪರಿಗ್ರಹಗಳನ್ನು ದೂರಮಾಡಿದವನೂ ಆಗಿ ಸತ್ತು ಆ ಪುಣ್ಯಶಾಲಿಯು ಅನುತ್ತರವಿಮಾನಗಳಲ್ಲಿ ಒಂದಾದ ಅಪರಾಜಿತವಿಮಾನದಲ್ಲಿ ಮೂವತ್ತುಮೂರು ಸಾಗರೋಪಮ ವರ್ಷಾಯುಷ್ಯವುಳ್ಳವನೂ ಒಂದು ಮೊಳದಷ್ಟು ದೇಹಪರಿಮಾಣವುಳ್ಳವನೂ ಆಗಿ ಹುಟ್ಟಿದನು.

**ಮಾಸಾನ್ ಷೋಡಶ ಮಾಸಾರ್ಧಂ ಚಾತಿವಾಹ್ಯ ಮನಾಕ್ಸಕೃತ್ ।**
**ಶ್ವಸಿತ್ವಾಹಾರಮಾದತ್ತೇ ಮನಸಾ ಯೋಗ್ಯಪುದ್ಗಲಾನ್ ॥ ೧೭ ॥**

**ತ್ರಯಸ್ತ್ರಿಂಶತ್ಸಹಸ್ರೋಕ್ತವತ್ಸರಾಣಾಂ ವ್ಯತಿಕ್ರಮೇ ।**
**ಭೋಗೋಸ್ಯ ನಿಷ್ಪ್ರವೀಚಾರೋ ಲೋಕನಾಡ್ಯಂತರಾವಧೇಃ ॥ ೧೮ ॥**

**ತತ್ಕ್ಷೇತ್ರಮಿತಭಾಶಕ್ತಿವಿಕ್ರಿಯಸ್ಯಾಮರೇಶಿತುಃ ।**
**ತಸ್ಮಿನ್ ಷಣ್ಮಾಸಶೇಷಾಯುಷ್ಯಾಗಮಿಷ್ಯತಿ ಭೂತಲಮ್ ॥ ೧೯ ॥**

**ಅತ್ರೈವ ಭರತೇ ವಂಗವಿಷಯೇ ಮಿಥಿಲಾಧಿಪಃ ।**
**ಇಕ್ಷ್ವಾಕುಭೂಪತಿಃ ಕುಂಭನಾಮಾ ಕಾಶ್ಯಪಗೋತ್ರಜಃ ॥ ೨೦ ॥**

**ಪ್ರಜಾವತೀ ಮಹಾದೇವೀ ತಸ್ಯ ಲಕ್ಷ್ಮೀರಿವಾಪರಾ ।**
**ಪೀಯೂಷಾಶಿಕೃತಾಚಿಂತ್ಯವಸುಧಾರಾದಿವೈಭವಾ ॥ ೨೧ ॥**

**ಚೈತ್ರಮಾಸೇ ಸಿತೇ ಪಕ್ಷೇ ನಿಶಾಂತೇ ಪ್ರತಿಪದ್ದಿನೇ ।**
**ಅಶ್ವಿನ್ಯಾಂ ಷೋಡಶಸ್ವಪ್ನಾನ್ ವ್ಯಲೋಕಿಷ್ಟೇಷ್ಟಸೂಚಿನಃ ॥ ೨೨ ॥**

ಅವನು ಹದಿನಾರುವರೆ ತಿಂಗಳುಗಳಿಗೊಮ್ಮೆ ಸ್ವಲ್ಪ ಉಸಿರುಬಿಡುತ್ತಾನೆ. ಮೂವತ್ತುಮೂರು ಸಹಸ್ರವರ್ಷಗಳಿಗೊಮ್ಮೆ ಯೋಗ್ಯವಾದ ಪುದ್ಗಲಗಳನ್ನು ಮನಸ್ಸಿನಿಂದ ಆಹಾರವನ್ನಾಗಿ ತೆಗೆದುಕೊಳ್ಳುತ್ತಾನೆ. ಲೋಕನಾಡಿಯ ಕೊನೆಯ ವರೆಗೆ ಅವಧಿಜ್ಞಾನವುಳ್ಳವನೂ ಆ ಕ್ಷೇತ್ರದವರೆಗೆ ಕಾಂತಿ ಶಕ್ತಿ ವಿಕ್ರಿಯೆ ಇವುಗಳುಳ್ಳವನೂ ಆದ ಅಹಮಿಂದ್ರನಿಗೆ ಕಾಮಸೇವನಾರಹಿತವಾದ ಭೋಗವಿದ್ದಿತು. ಅವನು ಆರುತಿಂಗಳ ಆಯುಷ್ಯವಿರುವಾಗ ಭೂತಲಕ್ಕೆ ಬರುವವನಾಗುತ್ತಿರಲು ಇಲ್ಲಿ ಭರತ ಕ್ಷೇತ್ರದಲ್ಲೇ ವಂಗದೇಶದಲ್ಲಿ ಮಿಥಿಲಾನಗರಾಧಿಪತಿಯೂ ಇಕ್ಷ್ವಾಕುರಾಜನೂ ಕಾಶ್ಯಪಗೋತ್ರೋದ್ಭವನೂ ಆದ ಕುಂಭನೆಂಬ ದೊರೆಯಿದ್ದನು. ಅವನಿಗೆ, ಬೇರೊಬ್ಬಳು ಲಕ್ಷ್ಮಿಯೋ ಎನ್ನುವಂತೆ, ಮಹಾದೇವಿಯಾದ ಪ್ರಜಾವತಿಯು ದೇವರ್ಕಳಿಂದ ಮಾಡಲ್ಪಟ್ಟ ಅಚಿಂತ್ಯವಾದ ವಸುಧಾರಾದಿವೈಭವವುಳ್ಳವಳಾಗಿ ಚೈತ್ರಮಾಸದಲ್ಲಿ ಶುಕ್ಲಪಕ್ಷದ ಪ್ರಥಮೆಯ ದಿನದ ಬೆಳಗಿನ ಜಾವದಲ್ಲಿ ಅಶ್ವಿನೀನಕ್ಷತ್ರದಲ್ಲಿ ಇಷ್ಟವಿಷಯವನ್ನು ಸೂಚಿಸುವ ಹದಿನಾರು ಸ್ವಪ್ನಗಳನ್ನು ಕಂಡಳು.

**ತದೈವ ಮಂಗಲಾನ್ಯುಚ್ಚೈಃ ಪೇಠುರ್ಮಂಗಲಪಾಠಕಾಃ ।**
**ಹತಾ ಪ್ರಭಾತಭೇರೀ ಚ ದರನಿದ್ರಾವಿಘಾತಿನೀ ॥ ೨೩ ॥**

ಆಗಲೇ ಮಂಗಲಪಾಠಕರು ಮಂಗಲಗಳನ್ನು ಗಟ್ಟಿಯಾಗಿ ಪಠನಮಾಡಿದರು. ಅರೆನಿದ್ದೆಯನ್ನು ಹೋಗಲಾಡಿಸುವ ಪ್ರಾತಃಕಾಲದ ಭೇರಿಯೂ ಹೊಡೆಯಲ್ಪಟ್ಟಿತು.

**ಪ್ರಬುಧ್ಯಾಧಿಕಸಂತೋಷಾ ಸ್ನಾತ್ವಾ ಮಂಗಲವೇಷಧೃತ್ ।**
**ಪತಿಂ ಪ್ರತಿ ಗತಾ ರೇಖಾ ಚಂದ್ರಸ್ಯೇವ ತದಾತನೀ ॥ ೨೪ ॥**

**ಸಂಸತ್ಕುಮುದ್ವತೀಂ ಸಾ ವಿಕಾಸಯಂತೀ ಸ್ವತೇಜಸಾ ।**
**ಆನಂದಯದ್ವಿಲೋಕ್ಯೈನಾಮಧೀಶೋಪ್ಯಾಸನಾದಿಭಿಃ ॥ ೨೫ ॥**

ಆಗ ಆಕೆಯು ಎಚ್ಚೆತ್ತು ಅಧಿಕಸಂತೋಷವುಳ್ಳವಳಾಗಿ ಸ್ನಾನವನ್ನು ಮಾಡಿಕೊಂಡು ಮಂಗಲಾಲಂಕಾರಗಳನ್ನು ಧರಿಸಿ, ಪ್ರಾತಃಕಾಲದ ಚಂದ್ರನ ರೇಖೆಯು ಚಂದ್ರನನ್ನು ಹೊಂದುವಂತೆ, ತನ್ನ ತೇಜಸ್ಸಿನಿಂದ ಸಭೆಯೆಂಬ ಕುಮುದಪುಷ್ಪವನ್ನು ಅರಳಿಸುವವಳಾಗಿ ಪತಿಯನ್ನು ಹೊಂದಿದಳು. ಈಕೆಯನ್ನು ನೋಡಿ ದೊರೆಯು ಆಸನಾದಿಗಳಿಂದ ಸಂತೋಷಪಡಿಸಿದನು.

**ಸುಸ್ಥಿತಾರ್ಧಾಸನೇ ಸಾಪಿ ಸ್ವಪ್ನಾಂಸ್ತಾಂಸ್ತಮಬೋಧಯತ್ ।**
**ಫಲಾನ್ಯಮೀಷಾಂ ಶುಶ್ರೂಷುಃ ಪರಿತೋಷಕರಾಣ್ಯತಃ ॥ ೨೬ ॥**

ಪತಿಯ ಅರ್ಧಾಸನದದಲ್ಲಿ ಚೆನ್ನಾಗಿ ಕುಳಿತ ಆ ಪ್ರಜಾವತೀಮಹಾದೇವಿಯೂ ಈ ಸ್ವಪ್ನಗಳ ಫಲಗಳನ್ನು ಪತಿಯಿಂದ ತಿಳಿಯಬೇಕೆಂಬ ಇಚ್ಛೆಯುಳ್ಳವಳಾಗಿ ಸಂತೋಷಕರಗಳಾದ ಆ ಸ್ವಪ್ನಗಳನ್ನು ಅವನಿಗೆ ತಿಳುಹಿದಳು.

**ಯಥಾಕ್ರಮಂ ನೃಪೋಪ್ಯುಕ್ತ್ವಾ ಫಲಂ ತೇಷಾಂ ಪೃಥಕ್ ಪೃಥಕ್ ।**
**ಗಜವಕ್ತ್ರಪ್ರವೇಶಾವಲೋಕನಾದ್ಗರ್ಭಮಾಶ್ರಿತಃ ॥ ೨೭ ॥**

**ತವಾಹಮಿಂದ್ರ ಇತ್ಯೇನಾಮಾನಯತ್ಪ್ರಮದಂ ಪರಮ್ ।**
**ಕುರ್ವಂತಸ್ತದ್ವಚಃ ಸತ್ಯಂ ಸಮಂತಾದಮರೇಶ್ವರಾಃ ॥ ೨೮ ॥**

**ಸಮಾಗತ್ಯ ತಯೋಃ ಕೃತ್ವಾ ಸ್ವರ್ಗಾವತರಣೋತ್ಸವಮ್ ।**
**ಕಲ್ಯಾಣಭಾಗಿನಃ ಪಿತ್ರೋರ್ಯಯುಸ್ತೋಷಾತ್ಸ್ವಮಾಶ್ರಯಮ್ ॥ ೨೯ ॥**

ರಾಜನೂ ಯಥಾಕ್ರಮವಾಗಿ ಆ ಸ್ವಪ್ನಗಳ ಫಲಗಳನ್ನು ಬೇರೆ ಬೇರೆಯಾಗಿ ಹೇಳಿ "ಆನೆಯು ಮುಖವನ್ನು ಪ್ರವೇಶಿಸುವ ಸ್ವಪ್ನವನ್ನು ನೋಡಿದುದರಿಂದ ಅಹಮಿಂದ್ರನು ನಿನ್ನ ಗರ್ಭವನ್ನಾಶ್ರಯಿಸಿದನು" ಎಂದು ಹೇಳಿ ಈಕೆಗೆ ಬಹು ಸಂತೋಷವನ್ನುಂಟುಮಾಡಿದನು. ಅವನ ಮಾತನ್ನು ಸತ್ಯವನ್ನಾಗಿ ಮಾಡುವ ದೇವೇಂದ್ರರು ಎಲ್ಲಾ ಕಡೆಗಳಿಂದ ಬಂದು ಆ ತಂದೆತಾಯಿಗಳಲ್ಲಿ ಕಲ್ಯಾಣಭಾಗಿಯಾದ ಸ್ವಾಮಿಯ ಸ್ವರ್ಗಾವತರಣಕಲ್ಯಾಣೋತ್ಸವವನ್ನು ಮಾಡಿ ಸಂತೋಷದಿಂದ ತಂತಮ್ಮ ಸ್ಥಾನವನ್ನು ಹೊಂದಿದರು.

**ತಮಾದಾಯೋದರಂ ತಸ್ಯಾ ನಿರ್ಬಾಧಂ ಭಾಸತೇ ಸ್ಮ ತತ್ ।**
**ಸಂಕ್ರಾಂತಾಪೂರ್ಣಶೀತಾಂಶುಸಂಮುಖೀನತಲೋಪಮಮ್ ॥ ೩೦ ॥**

ಪ್ರಜಾವತೀಮಹಾದೇವಿಯ ಆ ಹೊಟ್ಟೆಯು ಆ ಸ್ವಾಮಿಯನ್ನು ಪರಿಗ್ರಹಿಸಿ, ಪ್ರತಿಬಿಂಬಿಸಿರುವ ಪೂರ್ಣಚಂದ್ರನುಳ್ಳ ಕನ್ನಡಿಗೆ ಸಮಾನವಾಗಿ, ನಿರ್ಬಾಧಕವಾಗಿ ಪ್ರಕಾಶಿಸಿತು.

**ಸುಖೇನ ನವಮೇ ಮಾಸೇ ಪೂರ್ಣೇ ಪೂರ್ಣೇಂದುಭಾಸ್ವರಮ್ ।**
**ವಿಭಕ್ತಸರ್ವಾವಯವಂ ಸರ್ವಲಕ್ಷಣಲಕ್ಷಿತಮ್ ॥ ೩೧ ॥**

**ಮಾರ್ಗಶೀರ್ಷೇ ಸಿತೈಕಾದಶೀದಿನೇಶ್ವಿನಿಸಂಗಮೇ ।**
**ತ್ರಿಜ್ಞಾನಲೋಚನಂ ದೇವಂ ತಂ ಪ್ರಾಸೂತ ಪ್ರಜಾವತೀ ॥ ೩೨ ॥**

ಸುಖದಿಂದ ಒಂಬತ್ತನೆಯ ತಿಂಗಳು ತುಂಬುತ್ತಿರಲು ಪ್ರಜಾವತಿಯು ಮಾರ್ಗಶಿರಮಾಸದ ಶುಕ್ಲಪಕ್ಷದ ಏಕಾದಶೀದಿನದಲ್ಲಿ ಅಶ್ವಿನೀನಕ್ಷತ್ರಯೋಗದಲ್ಲಿ ಪೂರ್ಣಚಂದ್ರನಂತೆ ಪ್ರಕಾಶಮಾನನೂ ಬಿಡುವಾಗಿರುವ ಎಲ್ಲಾ ಅವಯವಗಳುಳ್ಳವನೂ ಸಮಸ್ತಲಕ್ಷಣಗಳಿಂದ ಕೂಡಿರುವವನೂ ಮತಿಶ್ರುತಾವಧಿಜ್ಞಾನಗಳೆಂಬ ನೇತ್ರಗಳುಳ್ಳವನೂ ಆದ ಆ ಸ್ವಾಮಿಯನ್ನು ಹಡೆದಳು.

**ತದಾಮೃತಾಶಿನಃ ಸರ್ವೇ ಸಂಪ್ರಾಪ್ಯ ಪ್ರಾಪ್ತಸಂಮದಾಃ ।**
**ತೇಜಃಪಿಂಡಂ ಸಮಾದಾಯ ಬಾಲಂ ಬಾಲಾರ್ಕಸನ್ನಿಭಮ್ ॥ ೩೩ ॥**

**ಗತ್ವಾಚಲೇಶೇ ಸುಸ್ಥಾಪ್ಯ ಪಂಚಮಾಬ್ಧಿಪಯೋಜಲೈಃ ।**
**ಅಭಿಷಿಚ್ಯ ವಿಭೂಷ್ಯೋಚ್ಚೈರ್ಮಲ್ಲಿನಾಮಾನಮಾಜಗುಃ ॥ ೩೪ ॥**

ಆಗ ಸಂತೋಷವನ್ನು ಹೊಂದಿದ ಎಲ್ಲಾ ದೇವರ್ಕಳು ಬಂದು ತೇಜೋರಾಶಿಯೂ ಬಾಲಸೂರ್ಯನಿಗೆ ಸಮಾನನೂ ಆದ ಆ ಬಾಲಕನನ್ನು ತೆಗೆದುಕೊಂಡು ಹೋಗಿ ಮಹಾಮೇರುವಿನಲ್ಲಿ ಸಂಸ್ಥಾಪಿಸಿ ಕ್ಷೀರಸಮುದ್ರದ ಜಲಗಳಿಂದ ಅಭಿಷೇಕವನ್ನು ಮಾಡಿ ಚೆನ್ನಾಗಿ ಅಲಂಕರಿಸಿ "ಮಲ್ಲಿ" ಎಂದು ನಾಮಕರಣವನ್ನು ಮಾಡಿದರು.

**ತೇ ಪುನಸ್ತಂ ಸಮಾನೀಯ ನಾಮಶ್ರಾವಣಪೂರ್ವಕಮ್ ।**
**ಮಾತುರಂಕೇ ವ್ಯವಸ್ಥಾಪ್ಯ ಸ್ವನಿವಾಸಾನ್ ಪ್ರಪೇದಿರೇ ॥ ೩೫ ॥**

ಆ ದೇವರ್ಕಳು ಪುನಃ ಆ ಬಾಲಕನನ್ನು ತಂದು ಅವನ ಹೆಸರನ್ನು ತಿಳಿಸಿ ತಾಯಿಯ ತೊಡೆಯ ಮೇಲಿರಿಸಿ ತಮ್ಮ ಸ್ಥಾನಗಳನ್ನು ಹೊಂದಿದರು.

**ಅರೇಶತೀರ್ಥಸಂತಾನಕಾಲಸ್ಯಾಂತೇ ಸ ಪುಣ್ಯಭಾಕ್ ।**
**ಸಹಸ್ರಕೋಟಿವರ್ಷಸ್ಯ ತದಭ್ಯಂತರಜೀವ್ಯಭೂತ್ ॥ ೩೬ ॥**

ಅರತೀರ್ಥೇಶ್ವರರ ತೀರ್ಥಪರಂಪರೆಯ ಸಹಸ್ರಕೋಟಿವರ್ಷಕಾಲದ ಕೊನೆಯಲ್ಲಿ ಆ ಕಾಲದೊಳಗೆ ಜೀವಿಸಿದವನೂ ಪುಣ್ಯಶಾಲಿಯೂ ಆದ ಆ ಮಲ್ಲಿನಾಥನು ಉದ್ಭವಿಸಿದನು.

**ಸಮಾನಾಂ ಪಂಚಪಂಚಾಶತ್ಸಹಸ್ರಾಣ್ಯಸ್ಯ ಜೀವಿತಮ್ ।**
**ಪಂಚವಿಂಶತಿಚಾಪಾಸನೋಚ್ಛ್ರಿತೇಃ ಕನಕದ್ಯುತೇಃ ॥ ೩೭ ॥**

ಇಪ್ಪತ್ತೈದುಬಿಲ್ಲುಗಳಷ್ಟುಉನ್ನತನೂ ಬಂಗಾರದ ಕಾಂತಿಯುಳ್ಳವನೂ ಆದ ಈ ಮಲ್ಲಿನಾಥನ ಜೀವಿತ(ಆಯುಷ್ಯ)ವು ಐವತ್ತೈದು ಸಹಸ್ರವರ್ಷಗಳುಳ್ಳುದಾಗಿತ್ತು.

**ಶತಸಂವತ್ಸರೈರ್ಯಾತೇ ಕುಮಾರಸಮಯೇ ಪುರಮ್ ।**
**ಚಲತ್ಸಿತಪತಾಕಾಭಿಃ ಸರ್ವತ್ರೋದ್ಬದ್ಧತೋರಣೈಃ ॥ ೩೮ ॥**

**ವಿಚಿತ್ರರಂಗವಲ್ಲೀಭಿರ್ವಿಕೀರ್ಣಕುಸುಮೋತ್ಕರೈಃ ।**
**ನಿರ್ಜಿತಾಂಭೋನಿಧಿಧ್ವಾನೈಃ ಪ್ರಧ್ವನತ್ಪಟಹಾದಿಭಿಃ ॥ ೩೯ ॥**

**ಮಲ್ಲಿರ್ನಿಜವಿವಾಹಾರ್ಥಂ ಭೂಯೋ ವೀಕ್ಷ್ಯ ವಿಭೂಷಿತಮ್ ।**
**ಸ್ಮೃತ್ವಾಪರಾಜಿತಂ ರಮ್ಯಂ ವಿಮಾನಂ ಪೂರ್ವಜನ್ಮನಃ ॥ ೪೦ ॥**

**ಸಾ ವೀತರಾಗತಾ ಪ್ರೀತಿಸ್ತಜ್ಜಾತೋ ಮಹಿಮಾ ಚ ಸಃ ।**
**ಕುತಃ ಕುತೋ ವಿವಾಹೋಽಯಂ ಸತಾಂ ಲಜ್ಜಾವಿಧಾಯಕಃ ॥ ೪೧ ॥**

**ವಿಡಂಬನಮಿದಂ ಸರ್ವಂ ಪ್ರಾಕೃತಂ ಪ್ರಾಕೃತೈರ್ಜನೈಃ ।**
**ನಿಂದಯನ್ನಿತಿ ನಿರ್ವಿದ್ಯ ಸೋಽಭೂನ್ನಿಷ್ಕ್ರಮಣೋದ್ಯತಃ ॥ ೪೨ ॥**

ನೂರು ಸಂವತ್ಸರಗಳಿಂದ ಕುಮಾರಕಾಲವು ಕಳೆಯುತ್ತಿರಲು ಆ ಮಲ್ಲಿನಾಥನು ತನ್ನ ವಿವಾಹಕ್ಕೋಸ್ಕರ ಚಲಿಸುತ್ತಿರುವ ಬಿಳೀ ಬಾವುಟಗಳಿಂದಲೂ ಎಲ್ಲಾ ಕಡೆಗಳಲ್ಲಿ ಎತ್ತಿ ಕಟ್ಟಲ್ಪಟ್ಟ ತೋರಣಗಳಿಂದಲೂ ನಾನಾಪ್ರಕಾರವಾದ ರಂಗವಲ್ಲಿಗಳಿಂದಲೂ ಚೆಲ್ಲಲ್ಪಟ್ಟಿರುವ ಹೂವುಗಳ ರಾಶಿಗಳಿಂದಲೂ ಸಮುದ್ರದ ಧ್ವನಿಯನ್ನು ಜಯಿಸಿರುವ ನಗಾರಿಯೇ ಮೊದಲಾದುವುಗಳ ನಾದಗಳಿಂದಲೂ ಅಲಂಕೃತವಾದ ಪಟ್ಟಣವನ್ನು ಮತ್ತೆ ಮತ್ತೆ ನೋಡಿ ಪೂರ್ವಜನ್ಮದ ರಮಣೀಯವಾದ ಅಪರಾಜಿತವಿಮಾನವನ್ನು ಸ್ಮರಿಸಿ '' ಆ ವೀತರಾಗಜನ್ಯವಾದ ಪ್ರೀತಿಯೆಲ್ಲಿ? ಅದರಿಂದುಂಟಾದ ಆ ಮಹಿಮೆಯೆಲ್ಲಿ? ಸತ್ಪುರುಷರಿಗೆ ಲಜ್ಜೆಯನ್ನುಂಟು ಮಾಡುವ ಈ ವಿವಾಹವೆಲ್ಲಿ? ಇದೆಲ್ಲವೂ ವಿವೇಕವಿಲ್ಲದ ಜನರಿಂದ ಮಾಡಲ್ಪಟ್ಟ ವಿಡಂಬನ'' ಎಂಬುದಾಗಿ ನಿಂದಿಸುವವನಾಗಿ ವಿರಕ್ತಿಯನ್ನು ಹೊಂದಿ ಪರಿನಿಷ್ಕ್ರಮಣದಲ್ಲಿ ಉದ್ಯುಕ್ತನಾದನು.

**ತದಾ ದ್ಯುಮುನಯಃ ಪ್ರಾಪ್ಯ ಪ್ರಸ್ತುತಸ್ತುತಿವಿಸ್ತರಾಃ ।**
**ಅನುಮತ್ಯ ಮತಂ ತಸ್ಯ ಯಯುಃ ಖೇನ ತಿರೋಹಿತಾಃ ॥ ೪೩ ॥**

ಆಗ ಸ್ವರ್ಗದ ಮುನಿಗಳಾದ ಲೌಕಾಂತಿಕದೇವರ್ಕಳು ಸ್ವಾಮಿಯನ್ನು ಹೊಂದಿ ವಿಸ್ತೃತವಾದ ಸ್ತುತಿಯನ್ನು ಮಾಡಿದವರಾಗಿ ಆ ಸ್ವಾಮಿಯ ಅಭಿಪ್ರಾಯವನ್ನು ಅನುಮತಿಸಿ ಆಕಾಶದಿಂದ ಮರೆಯಾದವರಾಗಿ ಹೊರಟು ಹೋದರು.

**ತೀರ್ಥಕೃತ್ಸ್ವಪಿ ಕೇಷಾಂಚಿದೇವಾಸೀದೀದೃಶೀ ಮತಿಃ ।**
**ದುಷ್ಕರೋ ವಿಷಯತ್ಯಾಗಃ ಕೌಮಾರೇ ಮಹತಾಮಪಿ ॥ ೪೪ ॥**

''ತೀರ್ಥಂಕರರಲ್ಲಿಯೂ ಕೆಲವರಿಗೇ ಇಂತಹ ಬುದ್ಧಿಯುಂಟಾಗಿದ್ದಿತು. ದೊಡ್ಡವರಿಗೂ ಕೌಮಾರಾವಸ್ಥೆಯಲ್ಲಿ ವಿಷಯಸುಖದ ತ್ಯಾಗವು ಕಷ್ಟವಾಗಿರುವುದು.''

**ಇತಿ ಭಕ್ತ್ಯಾ ಕೃತಾಲಾಪಾ ನಭೋಭಾಗೇ ಪರಸ್ಪರಮ್ ।**
**ಪರಿನಿಷ್ಕ್ರಾಂತಿಕಲ್ಯಾಣಮಹಾಭಿಷವಣೋತ್ಸವಮ್ ॥ ೪೫ ॥**

**ಸೋತ್ಸವಾಃ ಪ್ರಾಪಯಂತಿ ಸ್ಮ ಕುಮಾರಮಮರೇಶ್ವರಾಃ ।**
**ಕುಮಾರೋಽಪಿ ಜಯಂತಾಭಿಧಾನಂ ಯಾನಮಧಿಷ್ಠಿತಃ ॥ ೪೬ ॥**

**ಗತ್ವಾ ಶ್ವೇತವನೋದ್ಯಾನಮುಪವಾಸದ್ವಯಾನ್ವಿತಃ ।**
**ಸ್ವಜನ್ಮಮಾಸನಕ್ಷತ್ರದಿನಪಕ್ಷಸಮಾಶ್ರಿತಃ ॥ ೪೭ ॥**

**ಕೃತಸಿದ್ಧನಮಸ್ಕಾರಃ ಪರಿತ್ಯಕ್ತೋಪಧಿದ್ವಯಃ ।**
**ಸಾಯಾಹ್ನೇ ತ್ರಿಶತೈರ್ಭೂಪೈಃ ಸಹ ಸಂಪ್ರಾಪ್ಯ ಸಂಯಮಮ್ ॥ ೪೮ ॥**

**ಸಂಯಮಪ್ರತ್ಯಯೋತ್ಪನ್ನಚತುರ್ಥಜ್ಞಾನಭಾಸ್ಕರಃ ।**
**ಮಾರ್ಗೋಽಯಮಿತಿ ಸಂಚಿಂತ್ಯ ಸಮ್ಯಗ್ಜ್ಞಾನಪ್ರಚೋದಿತಃ ॥ ೪೯ ॥**

**ಮಿಥಿಲಾಂ ಪ್ರಾವಿಶತ್ತಸ್ಮೈ ನಂದಿಷೇಣನರಾಧಿಪಃ ।**
**ಪ್ರದಾಯ ಪ್ರಾಸುಕಾಹಾರಂ ಪ್ರಾಪದ್ಸ್ವರ್ಣದ್ಯುತಿಃ ಶುಭಮ್ ॥ ೫೦ ॥**

ಈ ರೀತಿಯಾಗಿ ಭಕ್ತಿಯಿಂದ ಆಕಾಶಭಾಗದಲ್ಲಿ ಒಬ್ಬರಿಗೊಬ್ಬರು ಮಾತನಾಡಿದವರಾದ ದೇವೇಂದ್ರರು ಉತ್ಸವವುಳ್ಳವರಾಗಿ ಮಲ್ಲಿನಾಥಕುಮಾರನಿಗೆ ಪರಿನಿಷ್ಕ್ರಮಣಕಲ್ಯಾಣಾಭಿಷೇಕೋತ್ಸವವನ್ನು ಮಾಡಿಸಿದರು. ಜಯಂತವೆಂಬಪಲ್ಲಕ್ಕಿಯನ್ನೇರಿದ ಮಲ್ಲಿನಾಥಕುಮಾರನೂ ಶ್ವೇತವನೋದ್ಯಾನಕ್ಕೆ ಹೋಗಿ ಎರಡು ಉಪವಾಸನಿಯಮಸಹಿತನೂ ತನ್ನ ಜನ್ಮದ ಮಾಸಪಕ್ಷದಿನ ನಕ್ಷತ್ರಗಳನ್ನು ಆಶ್ರಯಿಸಿದವನೂ ಸಿದ್ಧನಮಸ್ಕಾರವನ್ನು ಮಾಡಿದವನೂ ಬಾಹ್ಯಾಭ್ಯಂತರಪರಿಗ್ರಹಗಳನ್ನು ತ್ಯಜಿಸಿದವನೂ ಸಾಯಂಕಾಲದಲ್ಲಿ ಮೂರುನೂರು ಮಂದಿ ದೊರೆಗಳೊಡನೆ ಸಂಯಮ–ದೀಕ್ಷೆಯನ್ನು ಹೊಂದಿ ಆ ಸಂಯಮಹೇತುವಿನಿಂದುಂಟಾದ ನಾಲ್ಕನೆಯ– ಮನಃಪರ್ಯಯಜ್ಞಾನವೆಂಬ ಸೂರ್ಯನುಳ್ಳವನೂ ಸಮ್ಯಗ್ಜ್ಞಾನದಿಂದ ಪ್ರೇರಿತನೂ ಆಗಿ ''ಇದು ಮುನಿಮಾರ್ಗ'' ಎಂದು ಯೋಚಿಸಿ ಆಹಾರಕ್ಕೋಸ್ಕರ ಮಿಥಿಲಾನಗರವನ್ನು ಪ್ರವೇಶಿಸಿದನು. ಅವನಿಗೆ ಸುವರ್ಣಕಾಂತಿಯುಳ್ಳವನಾದ ನಂದಿಷೇಣರಾಜನು ಪ್ರಾಸುಕವಾದ ಆಹಾರವನ್ನು ಕೊಟ್ಟು ಶುಭ–ಪಂಚಾಶ್ಚರ್ಯವನ್ನು ಪಡೆದನು.

**ದಿನಷಟ್ಕೇ ಗತೇ ತಸ್ಯ ಛಾದ್ಮಸ್ಥ್ಯೇ ಪ್ರಾಕ್ತನೇ ವನೇ ।**
**ಅಧಸ್ತರೋರಶೋಕಸ್ಯ ತ್ಯಕ್ತಾಹದ್ವಿತಯಾಹೃತೇಃ ॥ ೫೧ ॥**

**ಪೂರ್ವಾಹ್ಣೇ ಜನ್ಮನೀವಾತ್ರಾಪ್ಯಸ್ಯ ಸತ್ಸು ದಿನಾದಿಷು ।**
**ಘಾತಿತ್ರಿತಯನಿರ್ನಾಶಾತ್ಕೇವಲಾವಗಮೋಽಭವತ್ ॥ ೫೨ ॥**

ಆ ಮಲ್ಲಿನಾಥನಿಗೆ ಛದ್ಮಸ್ಥಾವಸ್ಥೆಯಲ್ಲಿ ಆರು ದಿನಗಳು ಕಳೆಯುತ್ತಿರಲು ಮೊದಲಿನ–ದೀಕ್ಷಾವನದಲ್ಲಿ ಅಶೋಕವೃಕ್ಷದ ಕೆಳಗೆ ಎರಡು ದಿನಗಳ ಆಹಾರ ತ್ಯಾಗವುಳ್ಳವನಾದ ಈ ಸ್ವಾಮಿಗೆ ಜನ್ಮದಲ್ಲಿ ಹೇಗೋ ಹಾಗೆ ಇಲ್ಲಿಯೂ ಶ್ರೇಷ್ಠವಾದ ದಿನ ಮಾಸ ಪಕ್ಷವೇ ಮೊದಲಾದುವುಗಳಲ್ಲಿ ಪ್ರಾತಃಕಾಲದಲ್ಲಿ ಜ್ಞಾನಾವರಣ ದರ್ಶನಾವರಣ ಅಂತರಾಯಗಳೆಂಬ ಮೂರು ಘಾತಿಕರ್ಮಗಳ ಸಂಪೂರ್ಣ ನಾಶದಿಂದ ಕೇವಲಜ್ಞಾನವುಂಟಾಯಿತು.

**ಬೋಧಿತಾ ಇವ ದೇವೇಂದ್ರಾಃ ಸರ್ವೇ ಜ್ಞಾನೇನ ತೇನ ತೇ ।**
**ಸಂಭೂಯಾಗತ್ಯ ತತ್ಪೂಜಾಮಕುರ್ವನ್ಸರ್ವವೇದಿನಃ ॥ ೫೩ ॥**

ಆ ಜ್ಞಾನದಿಂದ ಎಚ್ಚರಿಸಲ್ಪಟ್ಟವರಂತೆ ಎಲ್ಲಾ ದೇವೇಂದ್ರರೂ ಸೇರಿ ಬಂದು ಸರ್ವಜ್ಞ – ಮಲ್ಲಿನಾಥನ ಕೇವಲಜ್ಞಾನಕಲ್ಯಾಣಪೂಜೆಯನ್ನು ಮಾಡಿದರು.

**ಅಷ್ಟಾವಿಂಶತಿರಸ್ಯಾಸನ್ ವಿಶಾಖಾದ್ಯಾ ಗಣಾಧಿಪಾಃ ।**
**ಖಪಂಚೇಂದ್ರಿಯಮಾನೋಕ್ತಾ ಮುನಯಃ ಪೂರ್ವಧಾರಿಣಃ ॥ ೫೪ ॥**

ಈ ಸ್ವಾಮಿಗೆ ವಿಶಾಖನೇ ಮೊದಲಾದ ಗಣಧರರು ಇಪ್ಪತ್ತೆಂಟು ಮಂದಿಗಳಿದ್ದರು. ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಧಾರಿಗಳಾದ ಮುನಿಗಳು ಐದುನೂರೈವತ್ತು ಮಂದಿಗಳಿದ್ದರು.

**ಶೂನ್ಯತ್ರಿತಯರಂಧ್ರದ್ವಿಪ್ರೋಕ್ತಸಂಖ್ಯಾನಶಿಕ್ಷಕಾಃ ।**
**ದ್ವಿಶತದ್ವಿಸಹಸ್ರೋಕ್ತತೃತೀಯಾವಗಮಸ್ತುತಾಃ ॥ ೫೫ ॥**

ಇಪ್ಪತ್ತೊಂಬತ್ತು ಸಾವಿರ ಶಿಕ್ಷಕಮುನಿಗಳಿದ್ದರು. ಎರಡುಸಾವಿರದಿನ್ನೂರು ಅವಧಿಜ್ಞಾನದಿಂದ ಸ್ತುತರಾದ ಮುನಿಗಳಿದ್ದರು.

**ತಾವಂತಃ ಪಂಚಮಜ್ಞಾನಾಃ ಖದ್ವಯಾಬ್ಧ್ಯೇಕವಾದಿನಃ ।**
**ಶೂನ್ಯದ್ವಯನವದ್ವ್ಯುಕ್ತವಿಕ್ರಿಯರ್ದ್ಧಿವಿಭೂಷಿತಾಃ ॥ ೫೬ ॥**

ಅಷ್ಟುಮಂದಿ ಕೇವಲಜ್ಞಾನಿಗಳಿದ್ದರು. ಸಾವಿರದ ನಾಲ್ಕುನೂರು ಮಂದಿ ವಾದಿಮುನಿಗಳಿದ್ದರು. ಎರಡುಸಾವಿರದೊಂಬೈನೂರು ವಿಕ್ರಿಯರ್ದ್ಧಿವಿಭೂಷಿತರಾದ ಮುನಿಗಳಿದ್ದರು.

**ಶೂನ್ಯಪಂಚಮುನೀಂದೂಕ್ತಮನಃಪರ್ಯಯಬೋಧನಾಃ ।**
**ಚತ್ವಾರಿಂಶತ್ಸಹಸ್ರಾಣಿ ಸರ್ವೇ ಸಂಕಲನಾಂ ಶ್ರಿತಾಃ ॥ ೫೭ ॥**

ಸಾವಿರದೇಳುನೂರೈವತ್ತು ಮಂದಿ ಮನಃಪರ್ಯಯಜ್ಞಾನಿಗಳಿದ್ದರು. ಒಟ್ಟು ಸೇರಿ ಆ ಮುನಿಶ್ರೇಷ್ಠರೆಲ್ಲರು ನಲ್ವತ್ತುಸಾವಿರ ಮಂದಿಗಳಿದ್ದರು.

**ಖತ್ರಯೇಂದ್ರಿಯಪಂಚೋಕ್ತಬಂಧುಷೇಣಾದಿಕಾರ್ಯಿಕಾಃ ।**
**ಶ್ರಾವಕಾ ಲಕ್ಷಯಾ ಪ್ರೋಕ್ತಾಃ ಶ್ರಾವಿಕಾಸ್ತ್ರಿಗುಣಾಸ್ತತಃ ॥ ೫೮ ॥**

ಐವತ್ತೈದುಸಾವಿರ ಮಂದಿ ಬಂಧುಷೇಣಾ ಮೊದಲಾದ ಆರ್ಯಿಕೆಯರಿದ್ದರು. ಒಂದು ಲಕ್ಷ ಶ್ರಾವಕರಿದ್ದರು. ಮೂರು ಲಕ್ಷ ಶ್ರಾವಿಕೆಯರಿದ್ದರು.

**ದೇವಾ ದೇವ್ಯಸ್ತ್ವಸಂಖ್ಯಾತಾ ಗಣ್ಯಾಃ ಕಂಠೀರವಾದಯಃ ।**
**ಏವಂ ದ್ವಾದಶಭಿರ್ದೇವೋ ಗಣೈರೇಭಿಃ ಪರಿಷ್ಕೃತಃ ॥ ೫೯ ॥**

**ಮುಕ್ತಿಮಾರ್ಗಂ ನಯನ್ ಭವ್ಯಪಥಿಕಾನ್ ಪ್ರಥಿತಧ್ವನಿಃ ।**
**ವಿಜಹಾರ ಮಹಾದೇಶಾನ್ ಭವ್ಯಸತ್ತ್ವಾನುರೋಧತಃ ॥ ೬೦ ॥**

ದೇವದೇವಿಯರಾದರೋ ಅಸಂಖ್ಯಾತರಾಗಿದ್ದರು. ಸಿಂಹವೇ ಮೊದಲಾದ ತಿರ್ಯಕ್ಪ್ರಾಣಿಗಳು ಸಂಖ್ಯಾತಗಳಿದ್ದುವು. ಈ ರೀತಿಯಾಗಿ ಸ್ವಾಮಿಯು ಈ ದ್ವಾದಶ ಗಣಗಳಿಂದ ಆವರಿಸಲ್ಪಟ್ಟವನೂ ಪ್ರಸಿದ್ಧವಾದ ಧ್ವನಿಯುಳ್ಳವನೂ ಭವ್ಯರೆಂಬ ಪಥಿಕರನ್ನು ಮುಕ್ತಿಮಾರ್ಗಕ್ಕೆ ತೆಗೆದುಕೊಂಡು ಹೋಗುವವನೂ ಆಗಿ ಭವ್ಯಪ್ರಾಣಿಗಳ ಅನುರೋಧದಿಂದ ಮಹಾದೇಶಗಳನ್ನು ವಿಹರಿಸಿದನು.

**ತತೋ ಮಾಸಾವಶೇಷಾಯುಃ ಸಮ್ಮೇದಾಚಲಮಾಶ್ರಿತಃ ।**
**ಪ್ರತಿಮಾಯೋಗಮಾದಾಯ ಮುನಿಭಿಃ ಸಹ ಪಂಚಭಿಃ ॥ ೬೧ ॥**

**ಸಹಸ್ರೈರ್ಧ್ಯಾನಮಾಸ್ಥಾಯ ಭರಣ್ಯಾಂ ಪೂರ್ವರಾತ್ರಗಃ ।**
**ಫಾಲ್ಗುನೋಜ್ಜ್ವಲಪಂಚಮ್ಯಾಂ ತನುವಾತಂ ಸಮಾಶ್ರಯತ್ ॥ ೬೨ ॥**

ಬಳಿಕ ಒಂದು ತಿಂಗಳ ಆಯುಷ್ಯವುಳಿದಿರುವಾಗ ಸಮ್ಮೇದಪರ್ವತವನ್ನು ಆಶ್ರಯಿಸಿ ಪ್ರತಿಮಾಯೋಗವನ್ನು ಹೊಂದಿ ಐದು ಸಹಸ್ರ ಮುನಿಗಳೊಡನೆ ಧ್ಯಾನವನ್ನು ಮಾಡಿ ಫಾಲ್ಗುನಮಾಸದ ಶುಕ್ಲಪಕ್ಷದ ಪಂಚಮೀತಿಥಿಯಲ್ಲಿ ಭರಣೀನಕ್ಷತ್ರದಲ್ಲಿ ರಾತ್ರಿಯ ಪೂರ್ವಭಾಗವನ್ನು ಹೊಂದಿದವನಾಗಿ ತನುವಾತವನ್ನಾಶ್ರಯಿಸಿದನು. ಮುಕ್ತನಾದನೆಂದು ಭಾವವು.

**ಕಲ್ಯಂ ನಿರ್ವಾಣಕಲ್ಯಾಣಮನ್ವೇತ್ಯಾಮರನಾಯಕಃ ।**
**ಗಂಧಾದಿಭಿಃ ಸಮಭ್ಯರ್ಚ್ಯ ತತ್ಕ್ಷೇತ್ರಮಪವಿತ್ರಯತ್ ॥ ೬೩ ॥**

ಬಳಿಕ ದೇವೇಂದ್ರನು ಬಂದು ಮನೋಹರವಾದ ನಿರ್ವಾಣಕಲ್ಯಾಣವನ್ನು ಮಾಡಿ ಗಂಧಾದಿಗಳಿಂದ ಪೂಜಿಸಿ ಆ ಕ್ಷೇತ್ರವನ್ನು ಪವಿತ್ರಮಾಡಿದನು.

**ಜನನಮೃತಿತರಂಗಾದ್ದುಃಖದುರ್ವಾರಿಪೂರ್ಣಾ- ।**
**ದುಪಚಿತಗುಣರತ್ನೋ ದುಃಸ್ಪೃಹಾವರ್ತಗರ್ತಾತ್ ।**
**ಸ ಕುಮತವಿಧುವೃದ್ಧಾದ್ಧ್ಯಾತಿನಾವಾ ಭವಾಬ್ಧೇ- ।**
**ರಭಜತ ಭುವನಾಗ್ರಂ ವಿಗ್ರಹಗ್ರಾಹಮುಕ್ತಃ ॥ ೬೪ ॥**

ಆ ಮಲ್ಲಿನಾಥನು ಜನನಮರಣಗಳೆಂಬ ಅಲೆಗಳುಳ್ಳದೂ ದುಃಖವೆಂಬ ಕೆಟ್ಟನೀರಿನಿಂದ ತುಂಬಿರುವುದೂ ದುರಾಶೆಯೆಂಬ ಸುಳಿಯ ನೆಲಮಾಳಿಗೆಯುಳ್ಳದೂ ದುರ್ಮತವೆಂಬ ಚಂದ್ರನಿಂದ ವೃದ್ಧಿಯನ್ನು ಹೊಂದಿರುವುದೂ ಆದ ಭವಸಮುದ್ರದಿಂದ ಹೆಕ್ಕಿಕೊಂಡ ಗುಣಗಳೆಂಬ ರತ್ನಗಳುಳ್ಳವನೂ ದೇಹವೆಂಬ ಮೊಸಳೆಯಿಂದ ಬಿಡಲ್ಪಟ್ಟವನೂ ಆಗಿ ಧ್ಯಾನವೆಂಬ ಹಡಗಿನಿಂದ ಲೋಕಾಗ್ರವನ್ನು ಹೊಂದಿದನು.

**ಯೇನ ಶಿಷ್ಟಮುರುವರ್ತ್ಮ ವಿಮುಕ್ತೇರ್ಯಂ ನಮಂತಿ**
**ನಮಿತಾಖಿಲಲೋಕಾಃ ।**
**ಯೋ ಗುಣೈಃ ಸ್ವಯಮಧಾರಿ ಸಮಗ್ರೈಃ ಸ ಶ್ರಿಯಂ ದಿಶತು**
**ಮಲ್ಲಿರಶಲ್ಯಃ ॥ ೬೫ ॥**

ಯಾವನು ಸಮಸ್ತಗುಣಗಳಿಂದ ತಾನು ಧರಿಸಲ್ಪಟ್ಟನೋ ನಮಸ್ಕರಿಸಲ್ಪಟ್ಟ ಸಕಲಲೋಕವುಳ್ಳ–ಮುನಿಪುಂಗವರು ಯಾವನನ್ನು ನಮಸ್ಕರಿಸುತ್ತಾರೋ ಮುಕ್ತಿಯ ಹೆದ್ದಾರಿಯು ಯಾವನಿಂದ ಹೇಳಲ್ಪಟ್ಟಿತೋ ಅಂತಹ ಶಲ್ಯರಹಿತನಾದ ಮಲ್ಲಿನಾಥನು ಸಂಪತ್ತಿಯನ್ನು ಕೊಡಲಿ.

**ಅಜನಿ ವೈಶ್ರವಣೋ ಧರಣೀಶ್ವರಃ ಪುನರನುತ್ತರನಾಮ್ನ್ಯಪರಾಜಿತೇ ।**
**ಜಿತಖಲಾಖಿಲಮೋಹಮಹಾರಿಪುರ್ದಿಶತು ಮಲ್ಲಿರಸಾವತುಲಂ**
**ಸುಖಮ್ ॥ ೬೬ ॥**

ಅವನು ಮೊದಲು ವೈಶ್ರವಣನೆಂಬ ಪೃಥಿವೀಪತಿಯಾಗಿ ಹುಟ್ಟಿದನು. ಮತ್ತೆ ಅಪರಾಜಿತವೆಂಬ ಅನುತ್ತರವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟಿದನು. ಸಮಸ್ತ ಮೋಹವೆಂಬ ದುಷ್ಟಶತ್ರುವನ್ನು ಜಯಿಸಿದ ಈ ಮಲ್ಲಿಜಿನೇಶ್ವರನು ಅನುಪಮವಾದ ಸುಖವನ್ನು ಕೊಡಲಿ.

**ಮಲ್ಲೇರ್ಜಿನಸ್ಯ ಸಂತಾನೇಭೂತ್ಪದ್ಮೋ ನಾಮ ಚಕ್ರಭೃತ್ ।**
**ದ್ವೀಪೇಸ್ಮಿನ್ ಪ್ರಾಚ್ಯಸೌ ಮೇರೋಃ ಸುಕಚ್ಛವಿಷಯೇ ನೃಪಃ ॥ ೬೭ ॥**

**ಶ್ರೀಪುರೇಶಃ ಪ್ರಜಾಪಾಲಸ್ತೃತೀಯೇಜನಿ ಜನ್ಮನಿ ।**
**ಸ್ವಾಮಿಪ್ರಕೃತಿಸಂಪ್ರೋಕ್ತಗುಣಾನಾಮುತ್ತಮಾಶ್ರಯಃ ॥ ೬೮ ॥**

ಮಲ್ಲಿಜಿನೇಶ್ವರರ ಪರಂಪರೆಯಲ್ಲಿ ಪದ್ಮನೆಂಬ ಚಕ್ರವರ್ತಿಯಿದ್ದನು. ಇವನು ಹಿಂದೆ ಮೂರನೆಯ ಜನ್ಮದಲ್ಲಿ ಈ ಜಂಬೂದ್ವೀಪದಲ್ಲಿ ಮಹಾಮೇರುವಿನ ಪೂರ್ವದಿಕ್ಕಿನಲ್ಲಿ ಸುಕಚ್ಛದೇಶದಲ್ಲಿ ತ್ರಿಪುರಾಧಿಪತಿಯೂ ರಾಜನಲ್ಲಿರಬೇಕಾದ ಸ್ವಾಭಾವಿಕಗುಣಗಳಿಗೆ ಉತ್ತಮವಾದ ಆಶ್ರಯನೂ ಆದ ಪ್ರಜಾಪಾಲನೆಂಬ ರಾಜನಾಗಿ ಜನಿಸಿದ್ದನು.

**ಸುರಾಜ್ಞಸ್ತಸ್ಯ ನಾಭೂವನ್ ರಾಜ್ಯೇಸ್ಯಾಯುಕ್ತವಾದಿಭಿಃ ।**
**ಪ್ರಜಾನಾಂ ಪಂಚಭಿರ್ಬಾಧಾಸ್ತದವರ್ತಂತ ತಾಃ ಸುಖಮ್ ॥ ೬೯ ॥**

ಆ ಈ ಉತ್ತಮರಾಜನ ರಾಜ್ಯದಲ್ಲಿ ಐದುಮಂದಿ ಅಯುಕ್ತವಾದಿಗಳಿಂದ–ಏಕಾಂತ ವಿಪರೀತಾದಿಪಂಚಮಿಥ್ಯಾಮತವಾದಿಗಳಿಂದ ಪ್ರಜೆಗಳಿಗೆ ಬಾಧೆಗಳಿರಲಿಲ್ಲ. ಆದುದರಿಂದ ಆ ಪ್ರಜೆಗಳು ಸುಖವಾಗಿದ್ದರು.

**ಶಕ್ತಿತ್ರಿತಯಸಂಪತ್ತ್ಯಾ ಶತ್ರೂನ್ ನಿರ್ಜಿತ್ಯ ಜಿತ್ವರಃ ।**
**ವಿಶ್ರಾಂತವಿಗ್ರಹೋ ಭೋಗಾನ್ ಧರ್ಮೇಣಾರ್ಥೇನ ಚಾನ್ವಭೂತ್ ॥**

ಜಯಶೀಲನಾದ ಆ ಪ್ರಜಾಪಾಲಮಹಾರಾಜನು ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿಗಳೆಂಬ ಸಂಪತ್ತಿಯಿಂದ ಶತ್ರುಗಳನ್ನು ಜಯಿಸಿ ಯುದ್ಧವಿಲ್ಲದವನಾಗಿ ಧರ್ಮದಿಂದಲೂ ಅರ್ಥದಿಂದಲೂ ಭೋಗಗಳನ್ನನುಭವಿಸಿದನು.

**ಸ ಕದಾಚಿದ್ವಿಲೋಕ್ಯೋಲ್ಕಾಪಾತಂ ಜಾತಾವಬೋಧನಃ ।**
**ಆಪಾತರಮಣೀಯತ್ವಮಾಕಲಯ್ಯೇಷ್ಟಸಂಪದಾಮ್ ॥ ೭೧ ॥**

**ಸ್ಥಾಸ್ನುಬುದ್ಧ್ಯಾ ವಿಮುಗ್ಧತ್ವಾದನ್ವಭೂವಮಿಮಾಶ್ಚಿರಮ್ ।**
**ನ ಚೇದುಲ್ಕಾಪ್ರಪಾತೋಽಯಂ ಭೂಯೋ ಭ್ರಾಂತಿರ್ಭವಾರ್ಣವೇ ॥**

**ಇತ್ಯಾರೋಪ್ಯ ಸುತೇ ರಾಜ್ಯಂ ಶಿವಗುಪ್ತಜಿನೇಶ್ವರಮ್ ।**
**ಪ್ರಪದ್ಯ ಪರಮಂ ಪಿತ್ಸುರಯಾಸೀತ್ಸಂಯಮದ್ವಯಮ್ ॥ ೭೩ ॥**

ಅವನು ಒಂದಾನೊಂದು ಕಾಲದಲ್ಲಿ ಉಲ್ಕಾಪಾತವನ್ನು ನೋಡಿ ವಿವೇಕೋದಯವುಳ್ಳವನಾಗಿ ಇಷ್ಟಸಂಪತ್ತುಗಳ ಅವಿಚಾರಮನೋಹರತ್ವವನ್ನು ಯೋಚಿಸಿ "ಸ್ಥಿರವಾಗಿರುತ್ತವೆಂಬ ಬುದ್ಧಿಯಿಂದ ನಾನು ಮೂಢನಾದುದರಿಂದ ಈ ಇಷ್ಟ ವಿಷಯಗಳನ್ನು ಬಹುಕಾಲ ಅನುಭವಿಸಿದೆನು. ಈ ಉಲ್ಕಾಪಾತವಾಗದಿದ್ದಿದ್ದರೆ ಮತ್ತೆ ಭವಸಮುದ್ರದಲ್ಲಿ ಭ್ರಮಣವಾಗುತ್ತಿದ್ದಿತು" ಎಂದು ರಾಜ್ಯವನ್ನು ಪುತ್ರನಲ್ಲಿರಿಸಿ ಶಿವಗುಪ್ತಮುನೀಶ್ವರನನ್ನು ಹೊಂದಿ ಪರಮಪದವನ್ನು ಹೊಂದಬೇಕೆಂಬ ಇಚ್ಛೆಯುಳ್ಳವನಾಗಿ ಎರಡು ಸಂಯಮಗಳನ್ನು–ಬಾಹ್ಯಾಭ್ಯಂತರ ತಪಸ್ಸನ್ನು ಹೊಂದಿದನು.

**ಸಮುತ್ಕೃಷ್ಟಾಷ್ಟಶುದ್ಧೀದ್ಧತಪೋರುದ್ಧಾಶುಭಾಸ್ರವಃ।**
**ಕ್ರಮಾತ್ಕಾಲಾಂತಮಾಸಾದ್ಯ ಸುಸಮಾಹಿತಮಾನಸಃ ॥ ೭೪ ॥**

**ನಿಜರಾಜ್ಯೇನ ಸಂಕ್ರೀತಂ ಸ್ವಹಸ್ತಪ್ರಾಪ್ತಮಚ್ಯುತಮ್ ।**
**ತುತೋಷ ಕಲ್ಪಮಾಲೋಕ್ಯ ಜಿತಕ್ರೇಯೋ ಹಿ ತುಷ್ಯತಿ ॥ ೭೫ ॥**

ಕಾಲಕ್ರಮದಿಂದ ಉತ್ಕೃಷ್ಟವಾದ ಎಂಟು (ಪಂಚೇಂದ್ರಿಯ ಮನೋವಾಕ್ಕಾಯ) ಶುದ್ಧಿಗಳಿಂದ ದೀಪ್ತವಾದ ತಪಸ್ಸಿನಿಂದ ಅಶುಭಕರ್ಮಗಳ ಆಸ್ರವವನ್ನು ತಡೆದವನೂ ಮನಸ್ಸನ್ನು ಸ್ವಾಧೀನಪಡಿಸಿದವನೂ ಆಗಿ ಸತ್ತು ತನ್ನ ರಾಜ್ಯದಿಂದ ಬೆಲೆಗೆ ಕೊಳ್ಳಲ್ಪಟ್ಟುದೂ ಕೈಗೆ ದೊರೆತುದೂ ಆದ ಅಚ್ಯುತಕಲ್ಪವನ್ನು ನೋಡಿ ಸಂತೋಷಪಟ್ಟನು. ಅಚ್ಯುತಸ್ವರ್ಗದಲ್ಲಿ ಜನಿಸಿ ಸಂತೋಷಪಟ್ಟನೆಂದು ಭಾವವು. ಕ್ರಯಕ್ಕೆ ಕೊಳ್ಳಲ್ಪಡುವ ವಸ್ತುವಿನಲ್ಲಿ ಜಯಶೀಲನಾಗಿರುವವನು–ಲಾಭವನ್ನು ಹೊಂದಿರುವವನು ನಿಜವಾಗಿ ಸಂತೋಷಪಡುತ್ತಾನೆ.

**ದ್ವಾವಿಂಶತ್ಯಬ್ಧಿಮೇಯಾಯುಃ ಪ್ರಾಂತೇಸಾವಚ್ಯುತಾಧಿಪಃ ।**
**ದ್ವೀಪೇತ್ರ ಭಾರತೇ ಕಾಶೌ ವಾರಾಣಸ್ಯಾಂ ಮಹೀಭುಜಃ ॥ ೭೬ ॥**

**ಇಕ್ಷ್ವಾಕೋಃ ಪದ್ಮನಾಭಸ್ಯ ರಾಮಾಯಾಶ್ಚಾಭವತ್ಸುತಃ ।**
**ಪದ್ಮಾಭಿಧಾನಃ ಪದ್ಮಾದಿಪ್ರಶಸ್ತಾಶೇಷಲಕ್ಷಣಃ ॥ ೭೭ ॥**

**ತ್ರಿಂಶದ್ವರ್ಷಸಹಸ್ರಾಯುರ್ದ್ವಾವಿಂಶತಿಧನುಸ್ತನುಃ ।**
**ಸುರಸಂಪ್ರಾರ್ಥ್ಯಕಾಂತ್ಯಾದಿಃ ಕಾರ್ತಸ್ವರವಿಭಾಸ್ವರಃ ॥ ೭೮ ॥**

ಈ ಅಚ್ಯುತಸ್ವರ್ಗಾಧಿಪತಿಯು ಇಪ್ಪತ್ತೆರಡು ಸಾಗರೋಪಮವರ್ಷಾಯುಷ್ಯವುಳ್ಳವನಾಗಿದ್ದು ಸುಖವನ್ನನುಭವಿಸಿ ಕೊನೆಯಲ್ಲಿ ಈ ಜಂಬೂದ್ವೀಪದ ಭರತ ಕ್ಷೇತ್ರದಲ್ಲಿ ಕಾಶಿದೇಶದ ವಾರಾಣಸೀನಗರದಲ್ಲಿ ಇಕ್ಷ್ವಾಕುವಂಶದ ರಾಜನಾದ ಪದ್ಮನಾಭನಿಗೂ ಆತನ ಪತ್ನಿಗೂ ಕಮಲವೇ ಮೊದಲಾದ ಸಕಲಶುಭಲಕ್ಷಣಗಳುಳ್ಳವನೂ ಮೂವತ್ತು ಸಹಸ್ರ ವರ್ಷಾಯುಷ್ಯವುಳ್ಳವನೂ ಇಪ್ಪತ್ತು ಬಿಲ್ಲುಗಳಷ್ಟು ಉನ್ನತವಾದ ದೇಹವುಳ್ಳವನೂ ದೇವರ್ಕಳಿಂದ ಪ್ರಾರ್ಥಿಸಲ್ಪಡತಕ್ಕ ಕಾಂತಿ ಮೊದಲಾದ ಗುಣಗಳುಳ್ಳವನೂ ಸುವರ್ಣದಂತೆ ಪ್ರಕಾಶಮಾನನೂ ಆದ ಪದ್ಮನೆಂಬ ಪುತ್ರನು ಜನಿಸಿದನು.

**ಪುಣ್ಯೋದಯಾತ್ಕ್ರಮೇಣಾಸ್ಯ ಚಕ್ರಿತ್ವಂ ವಿಕ್ರಮಾರ್ಜಿತಮ್ ।**
**ದಶಾಂಗಭೋಗಾನ್ನಿಸ್ಸಂಗಮಭಂಗಾನನ್ವಭೂಚ್ಚಿರಮ್ ॥ ೭೯ ॥**

ಕಾಲಕ್ರಮದಿಂದ ಪುಣ್ಯೋದಯದಿಂದ ಚಕ್ರವರ್ತಿತ್ವವು ಇವನ ಪರಾಕ್ರಮದಿಂದ ಸಂಪಾದಿಸಲ್ಪಟ್ಟಿತು. ಚ್ಯುತಿಯಿಲ್ಲದ ದಶಾಂಗಭೋಗಗಳನ್ನು ಬಹುಕಾಲದವರೆಗೆ ಇತರ ಸಂಬಂಧವಿಲ್ಲದ ಹಾಗೆ ಅನುಭವಿಸಿದನು.

**ಪೃಥಿವೀಸುಂದರೀಮುಖ್ಯಾಃ ಸ್ವಸ್ಯಾಷ್ಟೌ ಪುತ್ರಿಕಾಃ ಸತೀಃ ।**
**ಸುಕೇತುಖಚರಾಧೀಶಪುತ್ರೇಭ್ಯೋದಾತ್ಪ್ರಸನ್ನವಾನ್ ॥ ೮೦ ॥**

ಸುಕೇತುವೆಂಬ ಖೇಚರಾಧಿಪತಿಯು ಪ್ರಸನ್ನನಾಗಿ ಪೃಥಿವೀಸುಂದರಿಯೇ ಮೊದಲಾದ ಪತಿವ್ರತೆಯರಾದ ತನ್ನ ಎಂಟು ಮಂದಿ ಪುತ್ರಿಯರನ್ನು ಚಕ್ರವರ್ತಿಯ ಪುತ್ರರಿಗೆ ಕೊಟ್ಟನು.

**ಏವಂ ಸುಖೇನ ಕಾಲೇಸ್ಯ ಯಾತಿ ಸತ್ಯಂಬುದೋಂಬರೇ ।**
**ಪ್ರೇಕ್ಷಪ್ರಮೋದಮುತ್ಪಾದ್ಯ ಸದ್ಯೋಸೌ ವಿದ್ಯುತಿಂ ಯಯೌ ॥ ೮೧ ॥**

ಈ ರೀತಿಯಾಗಿ ಈ ಪದ್ಮಚಕ್ರವರ್ತಿಯ ಕಾಲವು ಸುಖದಿಂದ ಕಳೆಯುತ್ತಿರಲು ಒಂದು ದಿವಸ ಆಕಾಶದಲ್ಲಿ ಮೇಘವು ಪ್ರೇಕ್ಷಕರಿಗೆ ಸಂತೋಷವನ್ನುಂಟುಮಾಡಿ ತತ್ಕ್ಷಣದಲ್ಲಿ ಇದು ಕಾಂತಿರಾಹಿತ್ಯವನ್ನು ಹೊಂದಿತು.

**ತಂ ವೀಕ್ಷ್ಯ ನ ವಿಪಕ್ಷೋಸ್ಯ ತಥಾಪ್ಯೇಷೋಗಮಲ್ಲಯಮ್ ।**
**ಸಂಪತ್ಸು ಸರ್ವವಿದ್ವಿಟ್ಸು ಕಾ ಸ್ಥೈರ್ಯಾಸ್ಥಾ ವಿವೇಕಿನಃ ॥ ೮೨ ॥**

**ಇತಿ ಚಕ್ರೀ ಸಮಾಲೋಚ್ಯ ಸಂಯಮೇಭೂದ್ರತಸ್ತದಾ ।**
**ಸುಕೇತುಃ ಕುಲವೃದ್ಧೋಸ್ಯ ನಾಮ್ನಾ ದುಶ್ಚರಿತೋಬ್ರವೀತ್ ॥ ೮೩ ॥**

**ರಾಜ್ಯಸಂಪ್ರಾಪ್ತಿಕಾಲಸ್ತೇ ಕನೀಯಾನ್ನವಯೌವನಃ ।**
**ಭೋಗಾನ್ ಭುಂಕ್ಷ್ವ ನ ಕಾಲೋಽಯಂ ತಪಸಃ ಕಿಂ ವಿಧೀರ್ಭವೇಃ ॥**

ಅದನ್ನು ನೋಡಿ ಚಕ್ರವರ್ತಿಯು "ಈ ಮೇಘಕ್ಕೆ ವಿರೋಧಿಯಾವುದೂ ಇಲ್ಲ. ಆದರೂ ಇದು ನಾಶವನ್ನು ಹೊಂದಿತು. ಅಂದಮೇಲೆ ಸರ್ವಶತ್ರುಗಳುಳ್ಳ ಸಂಪತ್ತುಗಳಲ್ಲಿ ವಿವೇಕಿಗೆ ಸ್ಥಿರತ್ವಬುದ್ಧಿಯಾವುದಿರುವುದು ?" ಈ ರೀತಿಯಾಗಿ ಚೆನ್ನಾಗಿ ಆಲೋಚಿಸಿ ಸಂಯಮದಲ್ಲಿ ಆಸಕ್ತನಾದನು. ಆಗ ಇವನ ಕುಲವೃದ್ಧನೂ ದುರಾಚಾರಿಯೂ ಆದ ಸುಕೇತುವೆಂಬ ಅಮಾತ್ಯನು "ನಿನಗೆ ರಾಜ್ಯಪ್ರಾಪ್ತಿಯಾದ ಕಾಲವಿದು. ಚಿಕ್ಕವನೂ ನವಯೌವನವುಳ್ಳವನೂ ಆದ ನೀನು ಭೋಗಗಳನ್ನು ಭೋಗಿಸು. ಇದು ತಪಸ್ಸಿಗೆ ಕಾಲವಲ್ಲ. ಏತಕ್ಕೆ ಬುದ್ಧಿಯಿಲ್ಲದವನಾಗುವೆ ?

**ಕೇನಾಪಿ ತಪಸಾ ಕಾರ್ಯಂ ಕಿಂ ವ್ಯಥಾಯಾಸಮಾತ್ರಕಮ್ ।**
**ನಾತ್ರ ಕಿಂಚಿತ್ಫಲಂ ನೈವ ಪರಲೋಕಶ್ಚ ಕಶ್ಚನ ॥ ೮೫ ॥**

ಯಾವ ತಪಸ್ಸಿನಿಂದಾದರೂ ಏನು ಕೆಲಸ ?ಸುಮ್ಮನೆ ಬರೇ ಆಯಾಸ. ಇದರಲ್ಲಿ ಸ್ವಲ್ಪವೂ ಪ್ರಯೋಜನವಿಲ್ಲ. ಯಾವುದೊಂದು ಪರಲೋಕವೂ ಇಲ್ಲ.

**ಕಥಂ ನ ಪರಲೋಕಶ್ಚೇದಭಾವಾತ್ಪರಲೋಕಿನಃ ।**
**ಪಂಚಭೂತಾತ್ಮಕೇ ಕಾಯೇ ಚೇತನಾ ಮದಶಕ್ತಿವತ್ ॥ ೮೬ ॥**

**ಪಿಷ್ಟಕಿಣ್ವಾದಿಸಂಯೋಗೇ ತದಾತ್ಮೋಕ್ತಿಃ ಖಪುಷ್ಪವತ್ ।**
**ತತಃ ಪ್ರೇತ್ಯೋಪಭೋಗಾದಿಕಾಂಕ್ಷಾ ಸ್ವಕೃತಕರ್ಮಣಃ ॥ ೮೭ ॥**

**ವಂಧ್ಯಾಸ್ತನಂಧಯಸ್ಯೇವ ಖಪುಷ್ಪಾಪೀಡಲಿಪ್ಸನಮ್ ।**
**ಆಗ್ರಹೋಽಯಂ ಪರಿತ್ಯಾಜ್ಯೋ ರಾಜ್ಯಂ ಕುರು ನಿರಾಕುಲಮ್ ॥ ೮೮ ॥**

ಪರಲೋಕವು ಹೇಗಿಲ್ಲವೆಂದರೆ–ಪರಲೋಕವನ್ನು ಹೊಂದುವವನಿಲ್ಲದಿರುವುದರಿಂದ ಪರಲೋಕವಿಲ್ಲ. ಹಿಟ್ಟು ಮದ್ಯದ ಹಿಪ್ಪೆ ಮೊದಲಾದುವುಗಳ ಸಂಯೋಗದಲ್ಲಿ ಮದಶಕ್ತಿಯಿರುವಂತೆ ಪೃಥಿವ್ಯಾದಿ ಪಂಚಭೂತಸ್ವರೂಪವಾದ ಶರೀರದಲ್ಲಿ ಚೇತನವಿದೆ. ಆದುದರಿಂದ ಆತ್ಮನಿದ್ದಾನೆಂಬ ಮಾತು ಆಕಾಶಪುಷ್ಪದಂತಿರುವುದು. ಆದುದರಿಂದ ತಾನು ಮಾಡಿದ ಕರ್ಮಕ್ಕೆ ಪರಲೋಕದಲ್ಲಿ ಉಪಭೋಗಾದಿಕಾಂಕ್ಷೆಯನ್ನು ಮಾಡುವುದು ಬಂಜೆಯ ಮಗನ ಆಕಾಶಪುಷ್ಪಮರ್ದನದಕಾಂಕ್ಷೆಯಂತಿರುವುದು. ಈ ಆಗ್ರಹವನ್ನು ಪರಿತ್ಯಜಿಸಿ ನಿಶ್ಚಿಂತೆಯಾಗಿ ರಾಜ್ಯಭಾರವನ್ನು ಮಾಡು.

**ಸತ್ಯಪ್ಯಾತ್ಮನಿ ಕೌಮಾರೇ ಸುಕುಮಾರಃ ಕಥಂ ತಪಃ ।**
**ಸಹಸೇ ನಿಷ್ಠುರಂ ದೇವ ಪುಷ್ಕರೈರಪಿ ದುಷ್ಕರಮ್ ॥ ೮೯ ॥**

**ಇತ್ಯುಕ್ತಂ ತದಮಾತ್ಯಸ್ಯ ಸ ಶ್ರುತ್ವಾ ಶೂನ್ಯವಾದಿನಃ ।**
**ರೂಪಾದಿರೂಪ ಏವಾತ್ರ ಭೂತಸಂಘೋಽಭಿಲಕ್ಷ್ಯತೇ ॥ ೯೦ ॥**

**ಸುಖದುಃಖಾದಿಸಂವೇದ್ಯಂ ಚೈತನ್ಯಂ ತದ್ವಿಲಕ್ಷಣಮ್ ।**
**ತದ್ವಾನ್ ದೇಹಾದಿಹಾನ್ಯೋಽಯಂ ಸ್ವಸಂವಿತ್ತ್ಯಾನುಭೂಯತೇ ॥ ೯೧ ॥**

**ಬುದ್ಧಿಪೂರ್ವಕ್ರಿಯಾಲಿಂಗಾದನ್ಯತ್ರಾಪ್ಯನುಮೀಯತೇ ।**
**ಅಸ್ತ್ಯಾತ್ಮಾ ಭಾವಿಲೋಕಶ್ಚ ಸತ್ತ್ವಾಚ್ಚಾತೀತಸಂಸ್ಮೃತೇಃ ॥ ೯೨ ॥**

ಸ್ವಾಮಿಯೇ ! ಆತ್ಮನಿದ್ದರೂ ಸುಕುಮಾರನಾದ ನೀನು ಕುಮಾರಾವಸ್ಥೆಯಲ್ಲಿ, ಕಮಲಗಳಿಂದಲೂ ಮಾಡುವುದಕ್ಕೆ ಕಷ್ಟವಾದ, ಕಠಿನತಪಸ್ಸನ್ನು ಹೇಗೆ ಸಹಿಸುವೆ ?'' ಈ ರೀತಿಯಾಗಿ ಹೇಳಲ್ಪಟ್ಟ ಶೂನ್ಯವಾದಿಯಾದ ಮಂತ್ರಿಯ ಮಾತನ್ನು ಕೇಳಿ ಆ ಚಕ್ರವರ್ತಿಯು ''ಈ ಜಗತ್ತಿನಲ್ಲಿ ಪಂಚಭೂತಗಳ ಸಮೂಹವು ರೂಪ ರಸ ಗಂಧಾದಿರೂಪವಾಗಿಯೇ ನೋಡಲ್ಪಡುತ್ತದೆ. ಸುಖದುಃಖಾದಿಗಳಿಂದ ತಿಳಿಯಲ್ಪಡತಕ್ಕ ಚೈತನ್ಯವು ಪಂಚಭೂತಸಮೂಹಕ್ಕಿಂತ ವಿಲಕ್ಷಣವಾಗಿದೆ. ಚೈತನ್ಯವುಳ್ಳ ಈ ಆತ್ಮನು ದೇಹಕ್ಕಿಂತ ಬೇರೆಯಿದ್ದಾನೆಂದು ಸ್ವಸಂವೇದನಜ್ಞಾನದಿಂದ ಅನುಭೂತವಾಗುತ್ತದೆ. ಬುದ್ಧಿಪೂರ್ವಕವಾಗಿ ಕಾರ್ಯವನ್ನು ಮಾಡುವುದರಿಂದ ಬೇರೆಯವರಲ್ಲಿಯೂ ಆತ್ಮನಿದ್ದಾನೆಂದು ಅನುಮಾನಪ್ರಮಾಣದಿಂದ ತಿಳಿಯಲ್ಪಡುತ್ತದೆ. ಪೂರ್ವಜನ್ಮದ ಅಸ್ತಿತ್ವವಿರುವುದರಿಂದಲೂ ಅದರ ಸ್ಮರಣೆಯುಂಟಾಗುವುದರಿಂದಲೂ ಮುಂದಿನ ಲೋಕವೂ (ಉತ್ತರಜನ್ಮವೂ) ಇರುತ್ತದೆ.

**ಇಹಲೋಕಾದಿಪರ್ಯಂತವೀಕ್ಷಣೌ ಜನ್ಮಿನಾಂ ಸತಾಮ್ ।**
**ಬುದ್ಧಿಕಾರಣಕಾರ್ಯೌ ಸ್ತಾಂ ಚೈತನ್ಯಾನ್ಮಧ್ಯಧೀರಿವ ॥ ೯೩ ॥**

**ಇತ್ಯಾದಿಯುಕ್ತಿವಾದೇನ ಚಕ್ರೀ ತಂ ಶೂನ್ಯವಾದಿನಮ್ ।**
**ಶ್ರದ್ಧಾಪ್ಯಾತ್ಮಾಸ್ತಿತಾಂ ಸಮ್ಯಕ್ಕೃತಬಂಧುವಿಸರ್ಜನಃ ॥ ೯೪ ॥**

ಚೈತನ್ಯವಾಗಿರುವುದರಿಂದ ಮಧ್ಯದ ಬುದ್ಧಿಯು ಮುಂದಿನ ಬುದ್ಧಿಯ ಕಾರಣರೂಪವನ್ನೂ ಹಿಂದಿನ ಬುದ್ಧಿಯ ಕಾರ್ಯರೂಪವನ್ನೂ ಹೊಂದುವಂತೆ ಅಸ್ತಿತ್ವಗುಣವುಳ್ಳ ಪ್ರಾಣಿಗಳ ಇಹಲೋಕದ ಆದಿಯ ನೋಟವೂ ಅಂತಹ ನೋಟವೂ ಇರಲಿ. ಅಂದರೆ ಮಧ್ಯದ ಬುದ್ಧಿಯ ಕಾರ್ಯಕಾರಣಭಾವದಿಂದ ಪೂರ್ವೋತ್ತರ ಬುದ್ಧಿಗಳು ಸಿದ್ಧವಾಗುವಂತೆ, ಆತ್ಮನ ಇಹಜನ್ಮದ ಬುದ್ಧಿಯು ಪೂರ್ವಜನ್ಮದ ಬುದ್ಧಿಯ ಕಾರ್ಯವಾಗಿಯೂ ಮುಂದಿನ ಜನ್ಮದ ಬುದ್ಧಿಯ ಕಾರಣವಾಗಿಯೂ ಇದರಿಂದ ಪೂರ್ವೋತ್ತರಲೋಕಗಳೂ–ಪೂರ್ವೋತ್ತರ ಜನ್ಮಗಳೂ ಇರಲೆಂದೂ ಭಾವವು.''

**ನಿಯೋಜ್ಯ ಸ್ವಾತ್ಮಜಂ ರಾಜ್ಯೇ ಸುಕೇತ್ವಾದಿಮಹೀಭುಜೈಃ ।**
**ಜಿನಾತ್ಸಮಾಧಿಗುಪ್ತಾಖ್ಯಾತ್ಸಮಂ ಸಂಯಮಮಾದದೇ ॥ ೯೫ ॥**

ಇದೇ ಮೊದಲಾದ ಯುಕ್ತಿವಾದದಿಂದ ಆ ಶೂನ್ಯವಾದಿಗೆ ಆತ್ಮನ ಇರುವಿಕೆಯ ಚೆನ್ನಾಗಿ ನಂಬಿಕೆಯನ್ನುಂಟುಮಾಡಿ ಬಂಧುಗಳನ್ನು ವಿಸರ್ಜಿಸಿದವನಾಗಿ ತನ್ನ ಪುತ್ರನನ್ನು ರಾಜ್ಯದಲ್ಲಿರಿಸಿ ಸುಕೇತುವೇ ಮೊದಲಾದ ರಾಜರುಗಳೊಡನೆ ಸಮಾಧಿಗುಪ್ತರೆಂಬ ಜಿನೇಶ್ವರರಿಂದ ಸಂಯಮವನ್ನು ಸ್ವೀಕರಿಸಿದನು.

**ವಿಶುದ್ಧಪರಿಣಾಮಾನಾಮುತ್ತರೋತ್ತರಭಾವಿನಾಮ್ ।**
**ಪ್ರಾಪ್ಯ ಕ್ರಮೇಣ ಪರ್ಯಂತಂ ಪರ್ಯಂತಂ ಪ್ರಾಪ ಘಾತಿನಾಮ್ ॥**

ಅವನು ಮುಂದೆ ಮುಂದೆ ಉಂಟಾಗುವ ವಿಶುದ್ಧಪರಿಣಾಮಗಳ ಕೊನೆಯನ್ನೂ ಕ್ರಮದಿಂದ ಘಾತಿಕರ್ಮಗಳ ಕೊನೆಯನ್ನೂ ಹೊಂದಿದನು.

**ನವಕೇವಲಲಬ್ಧೀದ್ಧವಿಶುದ್ಧವ್ಯಾಹೃತೀಶ್ವರಃ ।**
**ಕಾಲೇ ಕಾಯತ್ರಯಂ ಹಿತ್ವಾ ಪದೇಭೂತ್ಪಾರಮೇಶ್ವರೇ ॥ ೯೭ ॥**

ನವಕೇವಲಲಬ್ಧಿಗಳಿಂದ ಪ್ರಕಾಶಮಾನವೂ ವಿಶುದ್ಧವೂ ಆದ ವಚನಕ್ಕೆ ಅಧಿಪತಿಯಾದ ಆ ಪದ್ಮಮುನೀಶ್ವರನು ಯೋಗ್ಯಕಾಲದಲ್ಲಿ ಔದಾರಿಕ ತೈಜಸ ಕಾರ್ಮಣಗಳೆಂಬ ಮೂರು ಶರೀರಗಳನ್ನು ಬಿಟ್ಟು ಪರಮೇಶ್ವರನ ಸಂಬಂಧವಾದ ಸ್ಥಾನದಲ್ಲಿ ವಿರಾಜಮಾನನಾದನು.

**ಉದಯಾದುದಯಾತ್ತಸ್ಯ ಧರಣೀ ಧರಣೀಮುದಃ ।**
**ತಾನವಂ ತಾನವಂ ಕಿಂಚಿತ್ಸಂಪದಂ ಸಂಪದಂ ಶ್ರಿತಃ ॥ ೯೮ ॥**

ಪೃಥ್ವಿಗೆ ಸಂತೋಷವನ್ನು ಮಾಡುವವನೂ ವಿರಳ ವಿರಳವಾದ ಶ್ರೇಷ್ಠಸ್ಥಾನವನ್ನು ಹೊಂದಿರುವವನೂ ಸಂಪತ್ತಿಯನ್ನು ಹೊಂದಿರುವವನೂ ಆದ ಆ ಪದ್ಮನ ಉದಯದಿಂದ ಪೃಥ್ವಿಯು ಉನ್ನತಿಯನ್ನು ಹೊಂದಿತು.

**ನಾಪನ್ನಾಪನ್ನಭೋಗೇನ ಮಾಮತೋ ಮಾ ಮತೋದಯಾ ।**
**ಸ ಪದ್ಮಾಖ್ಯಃ ಸಪದ್ಮಾಖ್ಯಃ ಸಂಗಮಃ ಸಂಗಮಃ ಸತಾಮ್ ॥ ೯೯ ॥**

ಅನುಗುಣ್ಯದಿಂದ ಭೋಗಗಳನ್ನು ಹೊಂದಿದ ಪದ್ಮನಿಂದ ಲಕ್ಷ್ಮಿಯು ಪಡೆಯಲ್ಪಡಲಿಲ್ಲವೆಂಬುದಿಲ್ಲ. ಲೋಕಸಮ್ಮತವಾದ ಉದಯವುಳ್ಳ ಬುದ್ಧಿಯೂ ಪಡೆಯಲ್ಪಟ್ಟಿತು. ಪದ್ಮನೆಂದು ಹೆಸರುಳ್ಳ ಆ ಪದ್ಮನು ಪದ್ಮದ (ಕಮಲದ, ಪದ್ಮನಿಧಿಯ) ಹೆಸರಿನೊಡನೆ ಕೂಡಿದವನಾಗಿಯೂ ಶ್ರೇಷ್ಠವಾದ ಜ್ಞಾನವುಳ್ಳವನಾಗಿಯೂ ಸತ್ಪುರುಷರ ಸಂಬಂಧವುಳ್ಳವನಾಗಿಯೂ ಇದ್ದನು.

**ಮಂದರಾಗ ಇವೋತ್ತುಂಗೋ ಮಂದರಾಗೋರಿಧಾರಿಣಾಮ್ ।**
**ರಾಜತೇ ರಾಜತೇಜೋಭಿರ್ನವಮೋನವಮೋ ಮುದಾ ॥ ೧೦೦ ॥**

ಅವನು ಮಂದರಪರ್ವತದಂತೆ ಉನ್ನತನೂ ಶತ್ರುಭಾವವನ್ನು ಧರಿಸಿರುವವರ ವಿಷಯದಲ್ಲಿ ಮಂದವಾದ ರಾಗವುಳ್ಳವನೂ ರಾಜತೇಜಸ್ಸುಗಳಿಂದ ಒಂಬತ್ತನೆಯವನೂ ಸಂತೋಷದಿಂದ ಕಡಮೆಯಿಲ್ಲದವನೂ ಆಗಿ ಪ್ರಕಾಶಿಸುತ್ತಾನೆ.

**ಪ್ರಥಮಮಜನಿ ರಾಜಾ ಯಃ ಪ್ರಜಾಪಾಲನಾಮಾ ।**
**ಶಮಿತಕರಣವೃತ್ತ್ಯಾ ಪ್ರಾಂತಕಲ್ಪೇಶ್ವರೋಽಭೂತ್ ।**
**ಸಕಲಭರತನಾಥಃ ಶರ್ಮಣಃ ಸದ್ಮ ಪದ್ಮಃ ।**
**ಪರಮಪದಮವಾಪತ್ಸೋಽಮಲಂ ಶಂ ಕ್ರಿಯಾನ್ನಃ ॥ ೧೦೧ ॥**

ಯಾವನು ಮೊದಲು ಪ್ರಜಾಪಾಲನೆಂಬ ರಾಜನಾಗಿ ಜನಿಸಿದನೋ ಬಳಿಕ ಇಂದ್ರಿಯ ವ್ಯಾಪಾರಗಳನ್ನು ಶಮನಮಾಡಿದುದರಿಂದ ಅಚ್ಯುತಕಲ್ಪದಲ್ಲಿ ದೇವೇಂದ್ರನಾದನೋ ಆಯುಷ್ಯಾವಸಾನದಲ್ಲಿ ಚ್ಯುತನಾಗಿ ಸಕಲಭರತಖಂಡಕ್ಕೆ ಅಧಿಪತಿಯೂ ಸುಖಕ್ಕೆ ಸ್ಥಾನವೂ ಆದ ಪದ್ಮಚಕ್ರೇಶ್ವರನಾಗಿ ಪರಮಪದವನ್ನು ಹೊಂದಿದನೋ ಆ ಮುಕ್ತಾತ್ಮನು ನಮ್ಮಗಳಿಗೆ ನಿರ್ಮಲವಾದ ಸುಖವನ್ನುಂಟುಮಾಡಲಿ.

**ತೀರ್ಥೇಽಸ್ಮಿನ್ನೇವ ಸಂಭೂತೌ ಸಪ್ತಮೌ ರಾಮಕೇಶವೌ ।**
**ತೃತೀಯೇ ತೌ ಭವೇಭೂತಾಂ ಸಾಕೇತೇ ರಾಜಪುತ್ರಕೌ ॥ ೧೦೨ ॥**

ಈ ಮಲ್ಲಿತೀರ್ಥಂಕರರ ತೀರ್ಥದಲ್ಲೇ ಏಳನೆಯ ಬಲರಾಮ ಕೇಶವರು ಜನಿಸಿದರು. ಮೂರನೆಯ ಭವದಲ್ಲಿ ಅವರು ಅಯೋಧ್ಯಾನಗರದಲ್ಲಿ ರಾಜಪುತ್ರರಾಗಿದ್ದರು.

**ಅಪ್ರಿಯತ್ವಾತ್ಪಿತಾ ತ್ಯಕ್ತ್ವಾ ತೌ ಸ್ನೇಹೇನ ಕನೀಯಸೇ ।**
**ಭ್ರಾತ್ರೇ ಸ್ವಸ್ಮೈ ದದೌ ಯೌವರಾಜ್ಯೇ ಪಟ್ಟಂ ಸುಕಲ್ಪಿತಮ್ ॥ ೧೦೩ ॥**

ಅಪ್ರಿಯರಾಗಿದ್ದುದರಿಂದ ತಂದೆಯು ಅವರನ್ನು ತ್ಯಜಿಸಿ ತನ್ನ ತಮ್ಮನಿಗೆ ಪ್ರೀತಿಯಿಂದ ಚೆನ್ನಾಗಿ ರಚಿತವಾದ ಯುವರಾಜಪಟ್ಟವನ್ನು ಕೊಟ್ಟನು.

**ಮಂತ್ರಿಣೈವ ಕೃತಂ ಸರ್ವಮಿದಮಿತ್ಯತಿಕೋಪಿನೌ ।**
**ಅಮಾತ್ಯೇ ಬದ್ಧವೈರೌ ತೌ ಧರ್ಮತೀರ್ಥಾನ್ವಯಾನುಗೌ ॥ ೧೦೪ ॥**

**ಶಿವಗುಪ್ತಮುನೇರಂತೇವಾಸಿತಾಮೇತ್ಯ ಸಂಯಮಮ್ ।**
**ವಿಧಾಯ ಸುವಿಶಾಲಾಖ್ಯೇ ಸೌಧರ್ಮೇಮರತಾಂ ಗತೌ ॥ ೧೦೫ ॥**

ಇದೆಲ್ಲ ಮಂತ್ರಿಯಿಂದಲೇ ಮಾಡಲ್ಪಟ್ಟಿತೆಂದು ಬಹುಕೋಪವುಳ್ಳವರೂ ಆ ಮಂತ್ರಿಯಲ್ಲಿ ಬದ್ಧವೈರವುಳ್ಳವರೂ ಧರ್ಮತೀರ್ಥಂಕರರ ತೀರ್ಥಪರಂಪರೆಯನ್ನು ಹೊಂದಿದವರೂ ಆದ ಆ ರಾಜಪುತ್ರರು ಶಿವಗುಪ್ತಮುನಿಯ ಶಿಷ್ಯತ್ವವನ್ನು ಪಡೆದು ತಪಸ್ಸನ್ನು ಮಾಡಿ ಸತ್ತು ಸೌಧರ್ಮಸ್ವರ್ಗದಲ್ಲಿ ಸುವಿಶಾಲವೆಂಬ ವಿಮಾನದಲ್ಲಿ ದೇವತ್ವವನ್ನು ಹೊಂದಿದರು–ದೇವರ್ಕಳಾಗಿ ಹುಟ್ಟಿದರು.

**ತತಃ ಪ್ರಚ್ಯುತ್ಯ ಭೂಪಸ್ಯ ವಾರಾಣಸ್ಯಾಂ ಬಭೂವತುಃ ।**
**ಇಕ್ಷ್ವಾಕುತಿಲಕಸ್ಯಾಗ್ನಿಶಿಖಸ್ಯ ತನಯೌ ಪ್ರಿಯೌ ॥ ೧೦೬ ॥**

ಅಲ್ಲಿ ಸುಖವನ್ನನುಭವಿಸಿ ಆಯುಷ್ಯಾವಸಾನದಲ್ಲಿ ಚ್ಯುತರಾಗಿ ವಾರಾಣಸೀನಗರದಲ್ಲಿ ದೊರೆಯೂ ಇಕ್ಷ್ವಾಕುವಂಶತಿಲಕನೂ ಆದ ಅಗ್ನಿಶಿಖನಿಗೆ ಪ್ರಿಯಪುತ್ರರಾಗಿ ಜನಿಸಿದರು.

**ಮಾತಾಪರಾಜಿತಾ ಕೇಶವತೀ ಚ ಕ್ರಮಶಸ್ತಯೋಃ ।**
**ನಂದಿಮಿತ್ರಾಹ್ವಯೋ ಜ್ಯೇಷ್ಠಃ ಕನಿಷ್ಠೋ ದತ್ತಸಂಜ್ಞಕಃ ॥ ೧೦೭ ॥**

ಅಪರಾಜಿತೆಯೂ ಕೇಶವತಿಯೂ ಅವರ ತಾಯಂದಿರು. ಯಥಾಕ್ರಮವಾಗಿ ಅವರಲ್ಲಿ ನಂದಿಮಿತ್ರನೆಂಬ ಜ್ಯೇಷ್ಠಪುತ್ರನೂ ದತ್ತನೆಂಬ ಕನಿಷ್ಠಪುತ್ರನೂ ಆದರು.

**ದ್ವಾತ್ರಿಂಶತ್ಪತ್ರಯಾಬ್ದೌ ತೌ ದ್ವಾವಿಂಶತಿಧನುಸ್ತನೂ ।**
**ಚಂದ್ರೇಂದ್ರನೀಲಸಂಕಾಶಾವವರ್ಧೇತಾಮನುತ್ತರೌ ॥ ೧೦೮ ॥**

ಮೂವತ್ತೆರಡುಸಾವಿರ ವರ್ಷಾಯುಷ್ಯವುಳ್ಳವರೂ ಇಪ್ಪತ್ತೆರಡು ಧನುಸ್ಸುಗಳಷ್ಟು ಪರಿಮಿತವಾದ ದೇಹವುಳ್ಳವರೂ ಚಂದ್ರನಿಗೂ ಇಂದ್ರನೀಲರತ್ನಕ್ಕೂ ಸಮಾನವಾದ ಕಾಂತಿಯುಳ್ಳವರೂ ಆದ ಆ ರಾಜಪುತ್ರರು ಅಪ್ರತಿಮರಾಗಿ ಬೆಳೆದರು.

**ತತೋ ಮಂತ್ರೀ ಚ ಪೂರ್ವೋಕ್ತೋ ಭ್ರಾಂತ್ವಾ ಸಂಸಾರಸಾಗರೇ ।**
**ಕ್ರಮೇಣ ವಿಜಯಾರ್ಧಾದ್ರಿಮಂದರಾಖ್ಯಪುರಾಧಿಪಃ ॥ ೧೦೯ ॥**

**ಬಲೀಂದ್ರಾಭಿಧಯಾ ಖ್ಯಾತೋ ಜಾತೋ ವಿದ್ಯಾಧರಾಧಿಪಃ ।**
**ಸೋನ್ಯೇದ್ಯುರ್ಯುವಯೋರ್ಭದ್ರಃ ಕ್ಷೀರೋದಾಖ್ಯೋಸ್ತಿ ವಿಶ್ರುತಃ ॥**

**ಮಹಾನ್ಮಹ್ಯೈವ ಯೋಗ್ಯೋಸೌ ದೀಯತಾಂ ಗಂಧವಾರಣಃ ।**
**ಇತಿ ದರ್ಪಾದವಷ್ಟಂಭೀ ಪ್ರಾಹಿಣೋತ್ಪ್ರತಿ ತೌ ವಚಃ ॥ ೧೧೧ ॥**

ಬಳಿಕ ಪೂರ್ವೋಕ್ತನಾದ ಮಂತ್ರಿಯೂ ಭವಸಮುದ್ರದಲ್ಲಿ ತಿರುಗಿ ಕ್ರಮದಿಂದ ವಿಜಯಾರ್ಧಪರ್ವತದಲ್ಲಿರುವ ಮಂದರವೆಂಬ ಪುರದ ಅಧಿಪತಿಯೂ ಬಲೀಂದ್ರನೆಂಬ ಹೆಸರಿನಿಂದ ಪ್ರಸಿದ್ಧನೂ ಆದ ವಿದ್ಯಾಧರಾಧಿಪತಿಯಾಗಿ ಹುಟ್ಟಿದನು. ಅಹಂಕಾರಿಯಾದ ಅವನು ಮತ್ತೊಂದು ದಿವಸ ಆ ನಂದಿಮಿತ್ರ ದತ್ತರನ್ನು ಕುರಿತು "ನಿಮ್ಮಲ್ಲಿ ಕ್ಷೀರೋದವೆಂಬ ಪ್ರಖ್ಯಾತವಾದ ಭದ್ರಗಜವಿದೆ. ನನಗೇ ಯೋಗ್ಯವಾದ ಈ ಮಹಾಮದಗಜವನ್ನು ಕೊಡಿ" ಎಂದು ಕೆಚ್ಚಿನಿಂದ ಹೇಳಿಕಳುಹಿಸಿದನು.

**ಶ್ರುತ್ವಾ ತದ್ವಚನಂ ತೌ ಚ ತೇನಾವಾಭ್ಯಾಂ ಸುತೇ ಸ್ವಯಮ್ ।**
**ದೇಯೇ ಚೇದ್ದೀಯತೇ ದಂತೀ ನೋಚೇತ್ಸೋಪಿ ನ ದೀಯತೇ ॥**

**ಇತಿ ಪ್ರತ್ಯಾಹತುಃ ಕರ್ಣಕಟುಕಂ ತದುದೀರಿತಮ್ ।**
**ಸಮಾಕರ್ಣ್ಯ ಬಲೀಂದ್ರಾಖ್ಯೋ ಬಿಭ್ರತ್ಕಾಲಾನುಕಾರಿತಾಮ್ ॥ ೧೧೩ ॥**

**ಯೋದ್ಧುಂ ತಾಭ್ಯಾಂ ಸಮಂ ಭೀಮಕೋಪಃ ಸನ್ನದ್ಧವಾಂಸ್ತದಾ ।**
**ಖಗೇಂದ್ರೋ ದಕ್ಷಿಣಶ್ರೇಣ್ಯಾಂ ಸುರಕಾಂತಾರಪೂಃಪತಿಃ ॥ ೧೧೪ ॥**

**ಕೇಶವತ್ಯಾ ಮಹಾನ್ಭ್ರಾತಾ ಸಮ್ಮೇದಾದ್ರೌ ಸುಸಾಧಿತೇ ।**
**ಸಿಂಹಪಕ್ಷೀಂದ್ರವಾಹಿನ್ಯೌ ಮಹಾವಿದ್ಯೇ ಯಥಾವಿಧಿ ॥ ೧೧೫ ॥**

**ದತ್ವಾ ತಾಭ್ಯಾಂ ಕುಮಾರಾಭ್ಯಾಂ ನಾಮ್ನಾ ಕೇಸರಿವಿಕ್ರಮಃ ।**
**ತದೀಯಕಾರ್ಯಸಾಹಾಯ್ಯಂ ಬಂಧುತ್ವೇನಾನ್ವಮನ್ಯತ ॥ ೧೧೬ ॥**

ಆ ಮಾತನ್ನು ಕೇಳಿ ಅವರೂ "ನಮಗೆ ಅವನು ತನ್ನ ಈರ್ವರು ಪುತ್ರಿಯರನ್ನು ಕೊಟ್ಟರೆ ನಾವು ಆನೆಯನ್ನು ಕೊಡುತ್ತೇವೆ. ಇಲ್ಲದಿದ್ದರೆ ಆನೆಯನ್ನೂ ಕೊಡುವುದಿಲ್ಲ" ಎಂದು ಪ್ರತಿಯಾಗಿ ಹೇಳಿದರು. ಕರ್ಣಕಟುವಾದ ಆ ಮಾತನ್ನು ಕೇಳಿ ಬಲೀಂದ್ರನು ಯಮನ ಅನುಕರಣವನ್ನು ಧರಿಸಿದವನೂ ಭಯಂಕರವಾದ ಕೋಪವುಳ್ಳವನೂ ಆಗಿ ಅವರೊಡನೆ ಯುದ್ಧಮಾಡುವುದಕ್ಕೋಸ್ಕರ ಸನ್ನದ್ಧನಾದನು. ಆಗ ದಕ್ಷಿಣಶ್ರೇಣಿಯಲ್ಲಿ ಸುರಕಾಂತಾರವೆಂಬ ನಗರದ ದೊರೆಯೂ ವಿದ್ಯಾಧರಾಧಿಪತಿಯೂ ದತ್ತನ ತಾಯಿಯಾದ ಕೇಶವತಿಯ ಅಣ್ಣನೂ ಆದ ಕೇಸರಿವಿಕ್ರಮನೆಂಬವನು ಸಮ್ಮೇದಪರ್ವತದಲ್ಲಿ ಚೆನ್ನಾಗಿ ಸಾಧಿಸಲ್ಪಟ್ಟಿದ್ದ ಸಿಂಹವಾಹಿನೀ ಗರುಡವಾಹಿನಿಗಳೆಂಬ ಮಹಾವಿದ್ಯೆಗಳನ್ನು ವಿಧಿಪ್ರಕಾರವಾಗಿ ಆ ರಾಜಕುಮಾರರಿಗೆ ಕೊಟ್ಟು ಬಂಧುತ್ವದಿಂದ ಅವರ ಕಾರ್ಯಕ್ಕೆ ಸಹಾಯವನ್ನು ನೀಡಿದನು.

**ತಯೋಸ್ತುಮುಲಯುದ್ಧೇನ ಬಲಯೋರ್ಬಲಿನೋರಭೂತ್ ।**
**ಸಂಗ್ರಾಮಃ ಕ್ಷಯಕಾಲೋ ವಾ ಸಂಹರನ್ ಸಕಲಾಃ ಪ್ರಜಾಃ ॥ ೧೧೭ ॥**

ಬಿಕ್ಕಟ್ಟಾದ ಯುದ್ಧದಿಂದ ಬಲಶಾಲಿಗಳಾದ ಆ ಎರಡು ಸೈನ್ಯಗಳ ಕದನವು, ಪ್ರಳಯಕಾಲದಂತೆ, ಸಕಲಪ್ರಜೆಗಳನ್ನು ಸಂಹರಿಸುವುದಾಯಿತು.

**ತತ್ರ ಮಾಯಾಮಯೇ ಯುದ್ಧೇ ಬಲೀಂದ್ರತನಯಂ ಕ್ರುಧಾ ।**
**ಮುಖಂ ಶತಬಲಿಂ ಮೃತ್ಯೋಃ ಸೀರಪಾಣಿರನೀನಯತ್ ॥ ೧೧೮ ॥**

ಅಲ್ಲಿ ನಡೆದ ಮಾಯಾಮಯವಾದ ಯುದ್ಧದಲ್ಲಿ ಬಲಭದ್ರನು ಕೋಪದಿಂದ ಬಲೀಂದ್ರನ ಪುತ್ರನಾದ ಶತಬಲಿಯನ್ನು ಮೃತ್ಯುವಿನ ಮುಖವನ್ನು ಹೊಂದಿಸಿದನು–ಕೊಂದನು.

**ಬಲೀಂದ್ರೇಣಾಪಿ ತದ್ದೃಷ್ಟ್ವಾ ಸಮುತ್ಪನ್ನರುಷಾತ್ಮನಃ ।**
**ಪ್ರಹಿತಂ ಚಕ್ರಮುದ್ದಿಶ್ಯ ಕೇಶವಂ ಕೌಶಿಕೋಪಮಮ್ ॥ ೧೧೯ ॥**

ಅದನ್ನು ನೋಡಿ ಉತ್ಪನ್ನವಾದ ಕೋಪವುಳ್ಳ ಬಲೀಂದ್ರನೂ ಇಂದ್ರನಿಗೆ ಸಮಾನನಾದ ದತ್ತ–ಕೇಶವನನ್ನು ಉದ್ದೇಶಿಸಿ ತನ್ನ ಚಕ್ರವನ್ನು ಪ್ರಯೋಗಿಸಿದನು.

**ತತ್ತಂ ಪ್ರದಕ್ಷಿಣೀಕೃತ್ಯ ದಕ್ಷಿಣಂ ಬಾಹುಮಾಶ್ರಿತಮ್ ।**
**ತದೇವಾದಾಯ ದತ್ತೋಪಿ ಹತ್ವಾ ತಂ ತಚ್ಛಿರೋಗ್ರಹೀತ್ ॥ ೧೨೦ ॥**

ಅದು ಅವನನ್ನು ಪ್ರದಕ್ಷಿಣೆಮಾಡಿ ಅವನ ಬಲದ ಭುಜವನ್ನು ಆಶ್ರಯಿಸಿತು. ಆ ಚಕ್ರವನ್ನೇ ತೆಗೆದುಕೊಂಡು ದತ್ತನೂ ಆ ಬಲೀಂದ್ರನನ್ನು ಕೊಂದು ಅವನ ತಲೆಯನ್ನು ಗ್ರಹಣಮಾಡಿದನು.

ಯುದ್ಧಾಂತೇ ತೌ ತದಾ ವೀರೌ ಪ್ರದತ್ತಾಭಯಘೋಷಣೌ ।
ತ್ರಿಖಂಡಧರಣೀಚಕ್ರಂ ಸಚಕ್ರಂ ಚಕ್ರತುಃ ಸ್ವಕಮ್ ॥ ೧೨೧ ॥

ಆಗ ಯುದ್ಧವು ಮುಗಿದನಂತರದಲ್ಲಿ ಅಭಯಘೋಷಣವನ್ನು ಮಾಡಿದ ಆ ವೀರರು ಚಕ್ರಸಹಿತವಾದ ತ್ರಿಖಂಡಭೂಮಂಡಲವನ್ನು ತಮ್ಮದನ್ನಾಗಿ ಮಾಡಿದರು.

ಚಿರಂ ರಾಜ್ಯಸುಖಂ ಭುಕ್ತ್ವಾ ಸ್ವಾಯುರಂತೇ ಸ ಚಕ್ರಭೃತ್ ।
ಬದ್ಧ್ವಾಯುರ್ನಾರಕಂ ಘೋರಮವಧಿಸ್ಥಾನಮೇಯಿವಾನ್ ॥ ೧೨೨ ॥

ಬಹುಕಾಲದವರೆಗೆ ರಾಜ್ಯಸುಖವನ್ನನುಭವಿಸಿ ಆ ಚಕ್ರವರ್ತಿ–ದತ್ತನು ತನ್ನ ಆಯುಷ್ಯಾವಸಾನದಲ್ಲಿ ನರಕಾಯುಷ್ಯವನ್ನು ಕಟ್ಟಿಕೊಂಡು ಸತ್ತು ಭಯಂಕರವಾದ ಅವಧಿಸ್ಥಾನವಾದ ಸಪ್ತಮನರಕವನ್ನು ಸೇರಿದನು.

ತನ್ನಿರ್ವೇದೇನ ರಾಮೋಪಿ ಸಂಭೂತಜಿನಸನ್ನಿಧೌ ।
ದೀಕ್ಷಿತ್ವಾ ಬಹುಭಿರ್ಭೂಪೈರಭೂದಗೃಹಕೇವಲೀ ॥ ೧೨೩ ॥

ಅವನ ಮರಣಜನ್ಯವಾದ ವಿರಕ್ತಿಯಿಂದ ಬಲಭದ್ರನೂ ಸಂಭೂತಜಿನರ ಬಳಿಯಲ್ಲಿ ಅನೇಕ ರಾಜರುಗಳೊಡನೆ ದೀಕ್ಷೆಯನ್ನು ಪಡೆದು ಅನಗಾರಕೇವಲಿಯಾದನು.

ಜಾತೌ ಸಾಕೇತಪುರ್ಯಾಂ ಪ್ರಥಿತನೃಪಸುತೌ ತೌ ಸಮಾದಾಯ ದೀಕ್ಷಾಮ್ ।
ಪ್ರಾಂತೇ ಸೌಧರ್ಮಕಲ್ಪೇ ಪ್ರಣಿಹಿತಮನಸೌ ದೇವಭಾವಂ ಪ್ರಯಾತೌ ।
ವಾರಾಣಸ್ಯಾಮಭೂತಾಂ ಪುರುಕುಲತಿಲಕೌ ನಂದಿಮಿತ್ರಶ್ಚ ದತ್ತೋ ।
ದತ್ತೋಽಸೌ ಸಪ್ತಮೀಂ ಕ್ಷ್ಮಾಂ ಸಮಗಮದಪರೋಽಪ್ಯಾಪ ಕೈವಲ್ಯ ಲಕ್ಷ್ಮೀಮ್ ॥ ೧೨೪ ॥

ಮೊದಲು ಅಯೋಧ್ಯಾನಗರದಲ್ಲಿ ಪ್ರಸಿದ್ಧರಾದ ರಾಜಪುತ್ರರಾಗಿ ಜನಿಸಿ ಬಳಿಕ ಅವರು ದೀಕ್ಷೆಯನ್ನು ತೆಗೆದುಕೊಂಡು ಮನೋದಾರ್ಢ್ಯವುಳ್ಳವರಾಗಿ ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮಕಲ್ಪದಲ್ಲಿ ದೇವತ್ವವನ್ನು ಹೊಂದಿದರು. ತರುವಾಯ ವಾರಾಣಸಿಯಲ್ಲಿ ಪುರುವಂಶತಿಲಕರಾದ ನಂದಿಮಿತ್ರನೂ ದತ್ತನೂ ಆದರು. ಅವರಲ್ಲಿ ಈ ದತ್ತನು ಏಳನೆಯ ನರಕವನ್ನು ಹೊಂದಿದನು. ಮತ್ತೊಬ್ಬನು ಮುಕ್ತಿ ಲಕ್ಷ್ಮಿಯನ್ನು ಪಡೆದನು.

ಮಂತ್ರೀ ಚಿರಂ ಜನನವಾರಿನಿಧೌ ಭ್ರಮಿತ್ವಾ ।
ಪಶ್ಚಾದ್ಬಲೀಂದ್ರ ಇತಿ ನಾಮಧರಃ ಖಗೇಶಃ ।
ದತ್ತಾದವಾಪ್ತಮರಣೋ ನರಕಂ ದುರಂತಮ್ ।
ಪ್ರಾಪತ್ತತಃ ಪರಿಹರಂತ್ವನುಬದ್ಧವೈರಮ್ ॥ ೧೨೫ ॥

ಮಂತ್ರಿಯು ಬಹುಕಾಲದವರೆಗೆ ಜನ್ಮವಾರಿಧಿಯಲ್ಲಿ ಅಲೆದು ಬಳಿಕ ಬಲೀಂದ್ರನೆಂಬ ಹೆಸರುಳ್ಳ ಖೇಚರಾಧಿಪತಿಯಾಗಿ ದತ್ತನ ದೆಸೆಯಿಂದ ಮರಣವನ್ನು ಹೊಂದಿದವನಾಗಿ ದುರಂತವಾದ ನರಕವನ್ನು ಹೊಂದಿದನು. ಆದುದರಿಂದ ವೈರವನ್ನು ಕಟ್ಟಿಕೊಳ್ಳಬಾರದು.

ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಮಲ್ಲಿತೀರ್ಥಕರ ಪದ್ಮಚಕ್ರಧರ ನಂದಿಮಿತ್ರಬಲದೇವ ದತ್ತನಾಮವಾಸುದೇವ ಬಲೀಂದ್ರಾಖ್ಯಪ್ರತಿವಾಸುದೇವಪುರಾಣಂ ನಾಮ ಷಟ್ಷಷ್ಟಂ ಪರ್ವ ॥

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಮಲ್ಲಿತೀರ್ಥಕರ ಪದ್ಮಚಕ್ರಧರ ನಂದಿಮಿತ್ರಬಲದೇವ ದತ್ತನಾಮವಾಸುದೇವ ಬಲೀಂದ್ರಪ್ರತಿವಾಸುದೇವಪುರಾಣವೆಂಬ ಅರವತ್ತಾರನೆಯ ಪರ್ವವು ಸಮಾಪ್ತವಾದುದು.

---



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಮಿಥಿಲಾಪುರಿಯೆಂಬ ಪಟ್ಟಣದಲ್ಲಿ ಕುಂಭಮಹಾರಾಜಂಗಂ ಪ್ರಭಾವತೀ ಮಹಾದೇವಿಗಂ ಅಶ್ವಿನೀನಕ್ಷತ್ರದಲ್ಲುದಯಿಸಿದ ಸುವರ್ಣವರ್ಣಮನುಳ್ಳ ಇಪ್ಪತ್ತೈದು ಬಿಲ್ಲುತ್ಸೇಧಮನುಳ್ಳ ಐವತ್ತೈದುಸಾವಿರ ವರ್ಷಾಯುಷ್ಯಮನುಳ್ಳ ಇಕ್ಷ್ವಾಕುವಂಶಮನುಳ್ಳ ಕುಂಭಲಾಂಛನಮನುಳ್ಳ ಕುಬೇರಾಪರಾಜಿತಾ–ಯಕ್ಷಯಕ್ಷಿಯರನುಳ್ಳ ಸಮ್ಮೇದಪರ್ವತದ ಸಂಬಲಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಮಲ್ಲಿತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

# ಅಥ ಮುನಿಸುವ್ರತತೀರ್ಥಕರಪುರಾಣಂ

**ನಿವೃತ್ತಾ ವ್ರತಶಬ್ದಾರ್ಥೋ ಯಸ್ಯಾಭೂತ್ಸರ್ವವಸ್ತುಷು ।**
**ದೇಯಾನ್ನಃ ಸ ವ್ರತಂ ಸ್ವಸ್ಯ ಸುವ್ರತೋ ಮುನಿಸುವ್ರತಃ ॥ ೧ ॥**

ಯಾವನಿಗೆ ಸಕಲವಸ್ತುಗಳಲ್ಲಿ ತ್ಯಾಗಬುದ್ಧಿಯುಂಟಾಗುತ್ತಿರಲು ವ್ರತಶಬ್ದದ ಅರ್ಥವುಂಟಾಯಿತೋ ಅಂತಹ ಶ್ರೇಷ್ಠವಾದ ವ್ರತವುಳ್ಳ ಮುನಿಸುವ್ರತನು ತನ್ನ ವ್ರತವನ್ನು ನಮಗೆ ಕೊಡಲಿ.

**ತೃತೀಯಜನ್ಮನೀಹಾಸೀಜ್ಜಿನೇಂದ್ರೋ ಮುನಿಸುವ್ರತಃ ।**
**ಭರತೇಂಗಾಖ್ಯವಿಷಯೇ ನೃಪಶ್ಚಂಪಾಪುರಾಧಿಪಃ ॥ ೨ ॥**

**ಹರಿವರ್ಮಾಭಿಧೋನ್ಯೇದ್ಯುರಗ್ರೋದ್ಯಾನೇ ಜಿನೇಶ್ವರಮ್ ।**
**ಅನಂತವೀರ್ಯನಾಮಾನಮನಗಾರಂ ವಿವಂದಿಷುಃ ॥ ೩ ॥**

**ಗತ್ವಾತ್ಮಪರಿವಾರೇಣ ಸ ಸಪರ್ಯಃ ಪರೀತ್ಯ ತಮ್ ।**
**ತ್ರಿಃ ಸಮಭ್ಯರ್ಚ್ಯ ವಂದಿತ್ವಾಪ್ರಾಕ್ಷೀದ್ಧರ್ಮಂ ಸನಾತನಮ್ ॥ ೪ ॥**

ಮುನಿಸುವ್ರತಜಿನೇಶ್ವರನು ಮೂರನೆಯ ಜನ್ಮದಲ್ಲಿ ಈ ಭರತಕ್ಷೇತ್ರದಲ್ಲಿ ಅಂಗ ದೇಶದ ಚಂಪಾಪುರಾಧಿಪತಿಯಾದ ಹರಿವರ್ಮನೆಂಬ ರಾಜನಾಗಿದ್ದನು. ಅವನು ಮತ್ತೊಂದು ದಿವಸ ಮುಖ್ಯವಾದ ಉದ್ಯಾನದಲ್ಲಿ ಗೃಹರಹಿತನಾದ ಅನಂತ ವೀರ್ಯನೆಂಬ ಜಿನೇಶ್ವರನನ್ನು ವಂದಿಸಬೇಕೆಂಬ ಇಚ್ಛೆಯಿಂದ ಪೂಜಾಸಾಮಗ್ರಿ ಯುಳ್ಳವನಾಗಿ ತನ್ನ ಪರಿವಾರದೊಡನೆ ಹೋಗಿ ಅವನನ್ನು ಮೂರುಸಲ ಬಲ ಗೊಂಡು ಪೂಜಿಸಿ ವಂದಿಸಿ ಸನಾತನವಾದ ಧರ್ಮವನ್ನು ಪ್ರಶ್ನೆಮಾಡಿದನು.

**ಸಂಸಾರೀ ಮುಕ್ತ ಇತ್ಯಾತ್ಮಾ ದ್ವೇಧಾ ಕರ್ಮಭಿರಷ್ಟಭಿಃ ।**
**ಬದ್ಧಂ ಸಂಸಾರಿಣಂ ಪ್ರಾಹುಸ್ತೈರ್ಮುಕ್ತೋಮುಕ್ತ ಇಷ್ಯತೇ ॥ ೫ ॥**

"ಆತ್ಮನು ಸಂಸಾರಿಯೆಂದೂ ಮುಕ್ತನೆಂದೂ ಎರಡು ಪ್ರಕಾರನಾಗಿರುತ್ತಾನೆ. ಎಂಟು ಕರ್ಮಗಳಿಂದ ಬದ್ಧನಾದವನನ್ನು ಸಂಸಾರಿಯನ್ನಾಗಿ ಹೇಳುತ್ತಾರೆ. ಆ ಎಂಟು ಕರ್ಮಗಳಿಂದ ಬಿಡಲ್ಪಟ್ಟವನು ಮುಕ್ತನೆಂದು ಹೇಳಲ್ಪಡುತ್ತಾನೆ.

**ಮೂಲಭೇದೇನ ತಾನ್ಯಷ್ಟೌ ಜ್ಞಾನಾವೃತ್ಯಾದಿನಾಮಭಿಃ ।**
**ಜ್ಞೇಯಾನ್ಯುತ್ತರಭೇದೇನ ವಸ್ವಬ್ಧ್ಯೇಕೋಕ್ತಸಂಖ್ಯಯಾ ॥ ೬ ॥**

ಆ ಕರ್ಮಗಳು ಜ್ಞಾನಾವರಣಾದಿ ನಾಮಧೇಯಗಳಿಂದ ಮೂಲಭೇದದಿಂದ ಎಂಟು ಪ್ರಕಾರವಾಗಿರುತ್ತವೆ. ಉತ್ತರಭೇದದಿಂದ ನೂರನಲ್ವತ್ತೆಂಟು ಸಂಖ್ಯೆಯಿಂದ ತಿಳಿಯಲ್ಪಡತಕ್ಕವಾಗಿವೆ.

**ಬಂಧಶ್ಚತುಷ್ಪ್ರಕಾರಃ ಸ್ಯಾತ್ಪ್ರಕೃತ್ಯಾದಿವಿಕಲ್ಪಿತಃ ।**
**ಪ್ರತ್ಯಯೋಪಿ ಚತುರ್ಭೇದೋ ಮಿಥ್ಯಾತ್ವಾದಿರ್ಜಿನೋದಿತಃ ॥ ೭ ॥**

ಪ್ರಕೃತಿ ಸ್ಥಿತಿ ಅನುಭಾಗ ಪ್ರದೇಶ ಭೇದದಿಂದ ಕರ್ಮಬಂಧವು ನಾಲ್ಕು ಪ್ರಕಾರ ವಾಗಿರುತ್ತದೆ. ಕರ್ಮಬಂಧಕ್ಕೆ ಕಾರಣವೂ ಮಿಥ್ಯಾತ್ವ ಅವ್ರತ ಕಷಾಯ ಯೋಗ ಭೇದದಿಂದ ನಾಲ್ಕು ಪ್ರಕಾರವಾಗಿ ಜಿನೇಶ್ವರರಿಂದ ಹೇಳಲ್ಪಟ್ಟಿದೆ.

**ಉದಯಾದಿವಿಕಲ್ಪೇನ ಕರ್ಮಾವಸ್ಥಾ ಚತುರ್ವಿಧಾ ।**
**ಸಂಸಾರಃ ಪಂಚಧಾ ಪ್ರೋಕ್ತೋ ದ್ರವ್ಯಕ್ಷೇತ್ರಾದಿಲಕ್ಷಣಃ ॥ ೮ ॥**

ಕರ್ಮಗಳ ಉದಯ ಉಪಶಮ ಕ್ಷಯ ಕ್ಷಯೋಪಶಮ ಭೇದದಿಂದ ಕರ್ಮಗಳ ಅವಸ್ಥೆಯು ನಾಲ್ಕು ಪ್ರಕಾರವಾಗಿರುತ್ತದೆ. ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ ಲಕ್ಷಣವುಳ್ಳ ಸಂಸಾರವು ಐದು ಪ್ರಕಾರವಾಗಿ ಹೇಳಲ್ಪಟ್ಟಿದೆ.

**ರೋಧೋ ಗುಪ್ತ್ಯಾದಿಭಿಸ್ತೇಷಾಂ ತಪಸಾ ರೋಧನಿರ್ಜರೇ ।**
**ತುರೀಯಶುಕ್ಲಧ್ಯಾನೇನ ಮೋಕ್ಷಸಿದ್ಧಿಸ್ತತೋ ಭವೇತ್ ॥ ೯ ॥**

ತ್ರಿಗುಪ್ತಿ ಪಂಚಸಮಿತಿ ಪಂಚವ್ರತಗಳಿಂದ ಆ ಕರ್ಮಗಳ ಸಂವರೆ-ತಡೆ ಯಾಗುವುದು. ತಪಸ್ಸಿನಿಂದ ಕರ್ಮಗಳ ಸಂವರೆಯೂ ನಿರ್ಜರೆಯೂ ಆಗುವುವು. ವ್ಯುಪರತಕ್ರಿಯಾನಿವೃತ್ತಿಯೆಂಬ ನಾಲ್ಕನೆಯ ಶುಕ್ಲಧ್ಯಾನದಿಂದ ಮೋಕ್ಷದ ಸಿದ್ಧಿ-ಪ್ರಾಪ್ತಿಯಾಗುವುದು.

**ಕೃತ್ಸ್ನಕರ್ಮಕ್ಷಯೋ ಮೋಕ್ಷೋ ನಿರ್ಜರಾ ತ್ವೇಕದೇಶತಃ ।**
**ಮುಕ್ತಸ್ಯಾತುಲಮತ್ಯಂತರಾಯಮಾತ್ಯಂತಿಕಂ ಸುಖಮ್ ॥ ೧೦ ॥**

ಸಕಲಕರ್ಮಗಳ ಕ್ಷಯವು ಮೋಕ್ಷವಾಗಿರುತ್ತದೆ. ಕರ್ಮಗಳ ಏಕದೇಶಕ್ಷಯವು ನಿರ್ಜರೆಯಾಗಿರುತ್ತದೆ. ಕರ್ಮವಿಮುಕ್ತನಾದ ಆತ್ಮನಿಗೆ ಅನುಪಮವೂ ವಿಘ್ನ ವಿಲ್ಲದುದೂ ಆದ ಸುಖವಿರುತ್ತದೆ."

**ಇತ್ಯಾದಿ ತತ್ತ್ವಸರ್ವಸ್ವಂ ಭಗವಾಂಸ್ತಮಬೂಬುಧತ್ ।**
**ಸ್ವವಚೋರಶ್ಮಿಜಾಲೇನ ಭವ್ಯಾಬ್ಜಾನಾಂ ಪ್ರಬೋಧಕಃ ॥ ೧೧ ॥**

ತನ್ನ ವಚನಗಳೆಂಬ ಕಿರಣಗಳ ಸಮೂಹದಿಂದ ಭವ್ಯಜೀವಿಗಳೆಂಬ ಕಮಲಗಳನ್ನು ಅರಳಿಸುವ-ಎಚ್ಚರಿಸುವವನಾದ ಭಗವಾನ್ ಅನಂತವೀರ್ಯಜಿನೇಶ್ವರನು ಇವೇ ಮೊದಲಾದ ಸಕಲತತ್ತ್ವಗಳನ್ನು ಆ ಹರಿವರ್ಮರಾಜನಿಗೆ ಬೋಧಿಸಿದನು.

**ಸೋಪಿ ತತ್ತತ್ತ್ವಸದ್ಭಾವಮವಗಮ್ಯ ಯಥೋದಿತಮ್ ।**
**ನಿರ್ವಿದ್ಯ ಸಂಸೃತೇರ್ಜ್ಯೇಷ್ಠಪುತ್ರೇ ರಾಜ್ಯಂ ನಿಯೋಜ್ಯ ತತ್ ॥ ೧೨ ॥**

**ಗ್ರಂಥದ್ವಯಪರಿತ್ಯಾಗಪಟುಶ್ಚಟುಲಮಾಯಯಾ ।**
**ಸಂಯಮಂ ಬಹುಭಿಃ ಸಾರ್ಧಂ ಮೂರ್ಧನ್ಯೈರೂರ್ಧ್ವಗಾಮಿಭಿಃ ॥**

ಆ ಹರಿವರ್ಮರಾಜನೂ ಅವರು ಹೇಳಿದಂತೆ ಆ ತತ್ತ್ವಗಳ ಸದ್ಭಾವವನ್ನು ತಿಳಿದು ಸಂಸಾರದಿಂದ ವಿರಕ್ತನಾಗಿ ಜ್ಯೇಷ್ಠಪುತ್ರನಲ್ಲಿ ಆ ರಾಜ್ಯವನ್ನಿರಿಸಿ ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗದಲ್ಲಿ ಚತುರನಾಗಿ ಮೇಲೆ-ಮುಕ್ತಿಗೆ ಹೋಗುವವರಾದ ಅನೇಕ ರಾಜರುಗಳೊಡನೆ ಉತ್ಕೃಷ್ಟವಾದ ಸಂಯಮವನ್ನು ಹೊಂದಿದನು.

**ಅವಾದೀಧರದೇಕಾದಶಾಂಗಾನಿ ಗುರುಸಂಗಮಾತ್ ।**
**ಅಬಧ್ನಾತ್ತೀರ್ಥಕೃದ್ಗೋತ್ರೇ ಶ್ರದ್ಧಾ ಶುದ್ಧ್ಯಾದಿಭಾವನಃ ॥ ೧೪ ॥**

ಗುರುಸಂಪರ್ಕದಿಂದ ಏಕಾದಶಾಂಗಶಾಸ್ತ್ರಗಳನ್ನು ಧರಿಸಿದನು-ತಿಳಿದನು. ದರ್ಶನವಿಶುದ್ಧ್ಯಾದಿಭಾವನೆಗಳುಳ್ಳವನಾಗಿ ತೀರ್ಥಕರನಾಮಕರ್ಮವನ್ನೂ ಉಚ್ಚ ಗೋತ್ರಕರ್ಮವನ್ನೂ ಬಂಧಿಸಿಕೊಂಡನು.

**ಚರಮೇವಂ ತಪಃ ಕೃತ್ವಾ ಪ್ರಾಂತೇ ಸ್ವಾರಾಧನಾವಿಧಿಃ ।**
**ಭವಿಷ್ಯತ್ಪಂಚಕಲ್ಯಾಣಃ ಪ್ರಾಣತೇಂದ್ರೋಭವದ್ವಿಭುಃ ॥ ೧೫ ॥**

ಈ ರೀತಿಯಾಗಿ ಬಹುಕಾಲದವರೆಗೆ ತಪಸ್ಸನ್ನು ಮಾಡಿ ಅವಸಾನಕಾಲದಲ್ಲಿ ಶ್ರೇಷ್ಠವಾದ ಆರಾಧನಾವಿಧಿಯುಳ್ಳವನೂ ಮುಂದೆ ಪಂಚಕಲ್ಯಾಣಗಳುಳ್ಳವನೂ ಆದ ಪ್ರಭುವು-ಹರಿವರ್ಮಮುನಿಪುಂಗವನು ಮಡಿದು ಹದಿನಾಲ್ಕನೆಯದಾದ ಪ್ರಾಣತಸ್ವರ್ಗದಲ್ಲಿ ಇಂದ್ರನಾಗಿ ಜನಿಸಿದನು.

**ಸಾಗರೋಪಮವಿಂಶತ್ಯಾ ಮಿತಾಯುಃ ಶುಕ್ಲಲೇಶ್ಯಕಃ ।**
**ಸಾರ್ಧಾರತ್ನಿತ್ರಯೋತ್ಸೇಧೋ ಮಾಸೈರ್ದಶಭಿರುಚ್ಛ್ವಸನ್ ॥ ೧೬ ॥**

**ಸಂವತ್ಸರಸಹಸ್ರಾಣಾಂ ವಿಂಶತ್ಯಾಮಾಹಿತಾಹೃತಿಃ ।**
**ಮನಾಙ್ಮನಃಪ್ರವೀಚಾರಭೋಗೋಽಷ್ಟರ್ದ್ಧಿಸಮನ್ವಿತಃ ॥ ೧೭ ॥**

**ಆಪಂಚಮಾವನೇರಾತ್ಮಗೋಚರವ್ಯಾಪ್ತಾವಧಿಃ ।**
**ತತ್ಕ್ಷೇತ್ರಮಿತಶಕ್ತ್ಯಾದಿಶ್ಚಿರಂ ತತ್ರಾನ್ವಭೂತ್ಸುಖಮ್ ॥ ೧೮ ॥**

ಅಲ್ಲಿ ಅವನು ಇಪ್ಪತ್ತು ಸಾಗರೋಪಮವರ್ಷಸಂಖ್ಯೆಯಿಂದ ಪರಿಮಿತವಾದ ಆಯುಷ್ಯವುಳ್ಳವನೂ ಶುಕ್ಲಲೇಶ್ಯೆಯುಳ್ಳವನೂ ಮೂರುವರೆ ಮೊಳದಷ್ಟು ಎತ್ತರವಾದ ದೇಹವುಳ್ಳವನೂ ಹತ್ತು ತಿಂಗಳಿಗೊಮ್ಮೆ ಉಸಿರಾಡಿಸುವವನೂ ಇಪ್ಪತ್ತು ಸಹಸ್ರವರ್ಷಗಳಲ್ಲಿ ಸ್ವಲ್ಪ ಅಮೃತಾಹಾರವುಳ್ಳವನೂ ಮನಸ್ಸಿನಿಂದ ಕಾಮಸೇವನೆಯುಳ್ಳವನೂ ಅಣಿಮಾ ಮಹಿಮಾ ಮೊದಲಾದ ಎಂಟು ಋದ್ಧಿಗಳಿಂದ ಕೂಡಿರುವವನೂ ಐದನೆಯ ನರಕಭೂಮಿಯವರೆಗೆ ವ್ಯಾಪಿಸುವ ತನ್ನ ಅವಧಿಜ್ಞಾನದ ವಿಷಯವುಳ್ಳವನೂ ಆ ಕ್ಷೇತ್ರದವರೆಗೆ ಪರಿಮಿತವಾದ ಶಕ್ತಿ ವಿಕ್ರಿಯೆ ಮೊದಲಾದುವುಗಳುಳ್ಳವನೂ ಆಗಿ ಅಲ್ಲಿ ಬಹುಕಾಲದವರೆಗೆ ಸುಖವನ್ನು ಅನುಭವಿಸಿದನು.

**ತಸ್ಮಿನ್ ಷಣ್ಮಾಸಶೇಷಾಯುಷ್ಯಾಗಮಿಷ್ಯತಿ ಭೂತಲಮ್ ।**
**ಜನ್ಮಗೇಹಾಂಗಣಂ ತಸ್ಯ ರತ್ನವೃಷ್ಟ್ಯಾರ್ಚಿತಂ ಸುರೈಃ ॥ ೧೯ ॥**

ಆರುತಿಂಗಳ ಆಯುಷ್ಯವುಳಿದಿರುವ ಆ ಪ್ರಾಣತೇಂದ್ರನು ಭೂತಲಕ್ಕೆ ಬರುವವನಾಗಿರಲು ಅವನು ಜನಿಸುವ ಮನೆಯ ಅಂಗಣವನ್ನು ದೇವರ್ಕಳು ರತ್ನಗಳ ವೃಷ್ಟಿಯಿಂದ ಪೂಜಿಸಿದರು.

**ಅತ್ರೈವ ಭರತೇ ರಾಜಾ ಪುರೇ ರಾಜಗೃಹಾಹ್ವಯೇ ।**
**ಸುಮಿತ್ರೋ ಮಗಧಾಧೀಶೋ ಹರಿವಂಶಶಿಖಾಮಣಿಃ ॥ ೨೦ ॥**

**ಗೋತ್ರೇಣ ಕಾಶ್ಯಪಸ್ತಸ್ಯ ದೇವೀ ಸೋಮಾಹ್ವಯಾ ಸುರೈಃ ।**
**ಪೂಜಿತಾ ಶ್ರಾವಣೇ ಮಾಸಿ ನಕ್ಷತ್ರೇ ಶ್ರವಣೇ ದಿನೇ ॥ ೨೧ ॥**

**ಸ್ವಪ್ನಾನ್ ಕೃಷ್ಣದ್ವಿತೀಯಾಯಾಂ ಸ್ವರ್ಗಾವತರಣೋನ್ಮುಖೇ ।**
**ಪ್ರಾಣತಾಧೀಶ್ವರೇಽಪಶ್ಯತ್ ಷೋಡಶೇಷ್ಟಾರ್ಥಸೂಚಕಾನ್ ॥ ೨೨ ॥**

ಇದೇ ಭರತಕ್ಷೇತ್ರದಲ್ಲಿ ರಾಜಗೃಹವೆಂಬ ನಗರದಲ್ಲಿ ಮಗಧರಾಜ್ಯಾಧಿಪತಿಯೂ ಹರಿವಂಶಶಿಖಾಮಣಿಯೂ ಕಾಶ್ಯಪಗೋತ್ರಜನೂ ಆದ ಸುಮಿತ್ರರಾಜನಿದ್ದನು. ಅವನ ಪತ್ನಿಯಾದ ಸೋಮಾದೇವಿಯು ದೇವರ್ಕಳಿಂದ ಪೂಜಿತಳಾಗಿ, ಶ್ರಾವಣ ಮಾಸದಲ್ಲಿ ಕೃಷ್ಣಪಕ್ಷದ ದ್ವಿತೀಯೆಯಲ್ಲಿ ಶ್ರವಣನಕ್ಷತ್ರದ ದಿನದಲ್ಲಿ ಆ ಪ್ರಾಣತೇಂದ್ರನು ಸ್ವರ್ಗದಿಂದ ಅವತರಿಸುವುದಕ್ಕೆ ಅಭಿಮುಖನಾಗಿರುತ್ತಿರಲು, ಇಷ್ಟಾರ್ಥಸೂಚಕಗಳಾದ ಹದಿನಾರು ಸ್ವಪ್ನಗಳನ್ನು ಕಂಡಳು.

**ಗಜರಾಜಂ ಚ ವಕ್ತ್ರಂ ಸ್ವಂ ಪ್ರವಿಶಂತಂ ಪ್ರಭಾವಿನಮ್ ।**
**ತೇನೈವ ಪರಿತೋಷೇಣ ಪ್ರಬುದ್ಧಾ ಶುದ್ಧವೇಷಧೃತ್ ॥ ೨೩ ॥**

**ನೃಪಮಾವೇದಯತ್ಸ್ವಪ್ನಾಂಸ್ತತ್ಫಲಶ್ರವಣೇಚ್ಛಯಾ ।**
**ಸಾವಧಿಃ ಸೋಽಪ್ಯಭಾಷಿಷ್ಟ ಸಂಭೂತಿಂ ತ್ರಿಜಗತ್ಪತೇಃ ॥ ೨೪ ॥**

ತನ್ನ ಮುಖವನ್ನು ಪ್ರವೇಶಿಸುತ್ತಿರುವುದೂ ಪ್ರಭಾವವುಳ್ಳದೂ ಆದ ದೊಡ್ಡ ಆನೆಯನ್ನೂ ಕನಸಿನಲ್ಲಿ ಕಂಡಳು. ಅದೇ ಸಂತೋಷದಿಂದ ಎಚ್ಚತ್ತು ಶುದ್ಧವಾದ ವೇಷವನ್ನು ಧರಿಸಿಕೊಂಡು ಹೋಗಿ ಆ ಸ್ವಪ್ನಗಳ ಫಲಗಳನ್ನು ಕೇಳಬೇಕೆಂಬ ಇಚ್ಛೆಯಿಂದ ಅವುಗಳನ್ನು ರಾಜನಿಗೆ ತಿಳಿಸಿದಳು. ಅವಧಿಜ್ಞಾನವುಳ್ಳ ಆ ಸುಮಿತ್ರರಾಜನೂ ಆಕೆಗೆ ತ್ರಿಜಗತ್ಪತಿಯ ಉತ್ಪತ್ತಿಯನ್ನು ಹೇಳಿದನು.

**ತದ್ವಾಕ್ಶ್ರವಣಸಂಫುಲ್ಲಮನೋವದನಪಂಕಜಾ ।**
**ತದೈವಾಯಾತದೇವೇಂದ್ರಕೃತಾಭಿಷವಣೋತ್ಸವಾ ॥ ೨೫ ॥**

**ಸುರೋಪನೀತಭೋಗೋಪಭೋಗ್ಯೈಃ ಸ್ವರ್ಗಸುಖಾವಹೈಃ ।**
**ನವಮಂ ಮಾಸಮಾಸಾದ್ಯ ಸುಖೇನಾಸೂತ ಸುಪ್ರಜಾಮ್ ॥ ೨೬ ॥**

**ಸಂವತ್ಸರಚತುಷ್ಪಂಚಾಶಲ್ಲಕ್ಷಾಪ್ರಮಿತೇ ಗತೇ ।**
**ಮಲ್ಲೀಶತೀರ್ಥಸಂತಾನೇ ತದಭ್ಯಂತರಜೀವಿತಮ್ ॥ ೨೭ ॥**

ಆ ಮಾತನ್ನು ಕೇಳಿದುದರಿಂದ ವಿಕಸಿತವಾದ ಮನಸ್ಸೂ ಮುಖಕಮಲವೂ ಉಳ್ಳವಳೂ ಆಗಲೇ ಬಂದ ದೇವೇಂದ್ರರಿಂದ ಮಾಡಲ್ಪಟ್ಟ ಅಭಿಷೇಕೋತ್ಸವವುಳ್ಳವಳೂ ಆಗಿ ಸ್ವರ್ಗಸುಖವನ್ನುಂಟುಮಾಡುವುವೂ ದೇವರ್ಕಳಿಂದ ತರಲ್ಪಟ್ಟುವೂ ಆದ ಭೋಗೋಪಭೋಗವಸ್ತುಗಳಿಂದ ಸುಖದಿಂದ ಒಂಬತ್ತನೆಯ ತಿಂಗಳನ್ನು ಹೊಂದಿ, ಐವತ್ತನಾಲ್ಕು ಲಕ್ಷವರ್ಷಪರಿಮಿತವಾದ ಮಲ್ಲಿತೀರ್ಥಂಕರರ ಪರಂಪರೆಯು ಕಳೆಯುತ್ತಿರಲು ಆ ಅವಧಿಯೊಳಗೆ ಜೀವಿಸಿದ ಉತ್ತಮಪ್ರಜೆಯನ್ನು ಅಂದರೆ ಪುತ್ರನನ್ನು ಪ್ರಸವಿಸಿದಳು.

**ತಜ್ಜನ್ಮಸಮಯಾಯಾತೈಃ ಸ್ವದೀಪ್ತ್ಯಾ ವ್ಯಾಪ್ತದಿಙ್ಮುಖೈಃ ।**
**ಮೇರೌ ಸುರೇಂದ್ರೈಃ ಸಂಪ್ರಾಪ್ತಮುನಿಸುವ್ರತಸುಶ್ರುತಿಃ ॥ ೨೮ ॥**

**ತ್ರಿಂಶತ್ಸಹಸ್ರವರ್ಷಾಯುಶ್ಚಾಪವಿಂಶತಿಸಮ್ಮಿತಃ ।**
**ಸಹಸಾನಗಲಚ್ಛಾಯಃ ಸಂಪನ್ನಾಖಿಲಲಕ್ಷಣಃ ॥ ೨೯ ॥**

**ಖದ್ವಯೇಂದ್ರಿಯಸಪ್ತಾಂಕವರ್ಷೈಃ ಕೌಮಾರನಿರ್ಗಮೇ ।**
**ರಾಜ್ಯಾಭಿಷೇಕಂ ಸಂಪ್ರಾಪ್ಯ ಪ್ರಾಪ್ತಾನಂದಪರಂಪರಃ ॥ ೩೦ ॥**

**ಶೂನ್ಯತ್ರಿಕೇಂದ್ರಿಯೈಕೋಕ್ತಸಂವತ್ಸರಪರಿಕ್ಷಯೇ ।**
**ಗರ್ಜದ್ಘನಘಟಾಟೋಪಸಮಯೇ ಯಾಗಹಸ್ತಿನಃ ॥ ೩೧ ॥**

**ವನಸ್ಮರಣಸಂತ್ಯಕ್ತಕಬಲಗ್ರಹಣಂ ನೃಪಃ ।**
**ನಿರೀಕ್ಷ್ಯಾವಧಿನೇತ್ರೇಣ ವಿಜ್ಞಾತೈತನ್ಮನೋಗತಃ ॥ ೩೨ ॥**

**ತತ್ಪೂರ್ವಭವಸಂಬಂಧಂ ಕೌತೂಹಲವತಾಂ ನೃಣಾಮ್ ।**
**ಅವೋಚದ್ವೃತ್ತಮಿತ್ಯುಚ್ಚೈಃ ಸ ಮನೋಹರಯಾ ಗಿರಾ ॥ ೩೩ ॥**

ಆ ಪುತ್ರನ ಜನನಸಮಯದಲ್ಲಿ ಬಂದವರೂ ತಮ್ಮ ದೇಹಕಾಂತಿಯಿಂದ ವ್ಯಾಪ್ತವಾದ ದಿಕ್ಕುಗಳುಳ್ಳವರೂ ಆದ ದೇವೇಂದ್ರರಿಂದ ಮೇರುಪರ್ವತದಲ್ಲಿ ಮುನಿಸುವ್ರತನೆಂಬ ಹೆಸರನ್ನು ಪಡೆದವನೂ ಮೂವತ್ತು ಸಹಸ್ರವರ್ಷಾಯುಷ್ಯವುಳ್ಳವನೂ ಇಪ್ಪತ್ತು ಧನುಃಪರಿಮಿತವಾದ ಶರೀರೋತ್ಸೇಧವುಳ್ಳವನೂ ನವಿಲಿನ ಕೊರಳಿನ ಬಣ್ಣದಂತೆ ದೇಹಕಾಂತಿಯುಳ್ಳವನೂ ಸಮಸ್ತಶುಭಲಕ್ಷಣಗಳನ್ನು ಹೊಂದಿರುವವನೂ ಏಳುವರೆ ಸಹಸ್ರವರ್ಷಗಳಿಂದ ಕೌಮಾರಾವಸ್ಥೆಯು ಕಳೆಯುತ್ತಿರಲು ರಾಜ್ಯಾಭಿಷೇಕವನ್ನು ಹೊಂದಿ ಆನಂದಪರಂಪರೆಯುಳ್ಳವನೂ ಹದಿನೈದು ಸಹಸ್ರವರ್ಷಗಳು ಕಳೆದನಂತರದಲ್ಲಿ ಗರ್ಜಿಸುತ್ತಿರುವ ಮೇಘಸಮೂಹದ ರಭಸವುಳ್ಳ ಸಮಯದಲ್ಲಿ ಯಾಗಸಂಬಂಧವಾದ ಆನೆಯು ತನ್ನ ವನವನ್ನು ಸ್ಮರಿಸಿ ಆಹಾರತ್ಯಾಗಮಾಡಿದುದನ್ನು ನೋಡಿ ಅವಧಿಜ್ಞಾನವೆಂಬ ನೇತ್ರದಿಂದ ಈ ಆನೆಯ ಮನೋಗತವನ್ನು ತಿಳಿದವನೂ ಆದ ಆ ಮುನಿಸುವ್ರತ ರಾಜನು ಕುತೂಹಲವುಳ್ಳವರಾದ ಮನುಷ್ಯರಿಗೆ ಆ ಆನೆಯ ಪೂರ್ವಭವಸಂಬಂಧವುಳ್ಳ ಸಮಾಚಾರವನ್ನು ಮನೋಹರವಾದ ವಚನದಿಂದ ಮುಂದೆ ಹೇಳುವಂತೆ ಚೆನ್ನಾಗಿ ಹೇಳಿದನು.

**ಪೂರ್ವಂ ತಾಲಪುರಾಧೀಶೋ ನಾಮ್ನಾ ನರಪತಿರ್ನೃಪಃ ।**
**ಮಹಾಕುಲಾಭಿಮಾನಾದಿದುರ್ಲೇಶ್ಯಾವಿಷ್ಟಚಿತ್ತಕಃ ॥ ೩೪ ॥**

**ಪಾತ್ರಾಪಾತ್ರವಿಶೇಷಾನಭಿಜ್ಞಃ ಕುಜ್ಞಾನಮೋಹಿತಃ ।**
**ದತ್ವಾ ಕಿಮಿಚ್ಛಕಂ ದಾನಂ ತತ್ಫಲಾತ್ಸಮಭೂದಿಭಃ ॥ ೩೫ ॥**

ಪೂರ್ವಕಾಲದಲ್ಲಿ ತಾಲಪುರದ ದೊರೆಯಾದ ನರಪತಿಯೆಂಬ ರಾಜನು ಮಹಾವಂಶದ ಅಭಿಮಾನವೇ ಮೊದಲಾದ ದುರ್ಭಾವನೆಗಳಿಂದ ಕೂಡಿದ ಮನಸ್ಸುಳ್ಳವನೂ ಪಾತ್ರಾಪಾತ್ರವಿಶೇಷವನ್ನು ತಿಳಿಯದಿರುವವನೂ ದುರ್ಜ್ಞಾನದಿಂದ ಮೂಢನೂ ಆಗಿ ಯಾಚಕರು ಇಚ್ಛಿಸುವ–ಕಿಮಿಚ್ಛಕವೆಂಬ ದಾನವನ್ನು ಕೊಟ್ಟು ಅದರ ಫಲದಿಂದ ಆನೆಯಾಗಿ ಹುಟ್ಟಿದನು.

**ನಾಜ್ಞಾನಂ ಸ್ಮರತಿ ಪ್ರಾಚ್ಯಂ ನ ರಾಜ್ಯಂ ಪೂಜ್ಯಸಂಪದವ್ ।**
**ಕುದಾನಸ್ಯ ಚ ನೈಷ್ಫಲ್ಯಂ ವನಂ ಸ್ಮರತಿ ದುರ್ಮತಿಃ ॥ ೩೬ ॥**

ದುರ್ಬುದ್ಧಿಯುಳ್ಳ ಈ ಆನೆಯ ಮೊದಲಿನ ಅಜ್ಞಾನವನ್ನೂ ರಾಜ್ಯವನ್ನೂ ಪೂಜ್ಯವಾದ ಸಂಪತ್ತಿಯನ್ನೂ ಕುತ್ಸಿತವಾದ ದಾನದ ನಿಷ್ಫಲತ್ವವನ್ನೂ ಸ್ಮರಿಸುವುದಿಲ್ಲ. ವನವನ್ನು ಮಾತ್ರ ಸ್ಮರಿಸುತ್ತದೆ.''

**ತದ್ವಚಃಶ್ರವಣೋತ್ಪನ್ನಸ್ವಪೂರ್ವಭವಸಂಸ್ಮೃತೇಃ ।**
**ಸಂಯಮಾಸಂಯಮಂ ಸದ್ಯೋ ಜಗ್ರಾಹ ಗಜಸತ್ತಮಃ ॥ ೩೭ ॥**

ಆ ಮಾತನ್ನು ಕೇಳಿದುದರಿಂದುಟಾದ ತನ್ನ ಪೂರ್ವಭವಸ್ಮರಣದಿಂದ ಆ ಉತ್ತಮಗಜವು ಆಗಲೇ ಸಂಯಮಾಸಂಯಮವನ್ನು–ದೇಶವ್ರತವನ್ನು ಸ್ವೀಕರಿಸಿತು.

**ತತ್ಪತ್ಯಯಸಮುತ್ಪನ್ನಬೋಧಿಸ್ತ್ಯಾಗೋನ್ಮುಖೋ ನೃಪಃ ।**
**ಲೌಕಾಂತಿಕೈಸ್ತದೈವೇತ್ಯ ಪ್ರಸ್ತುತೋಕ್ತ್ಯಾ ಪ್ರತಿಶ್ರುತಃ ॥ ೩೮ ॥**

**ಸ್ವರಾಜ್ಯಂ ಯುವರಾಜಾಯ ವಿಜಯಾಯ ವಿತೀರ್ಯ ಸಃ ।**
**ಸುರೈಃ ಸಂಪ್ರಾಪ್ತನಿಷ್ಕ್ರಾಂತಿಕಲ್ಯಾಣಃ ಕಲ್ಯಧೀಗುಣಃ ॥ ೩೯ ॥**

**ಅಪರಾಜಿತನಾಮೋರುಶಿಬಿಕಾಮಧಿರೂಢವಾನ್ ।**
**ರೂಢಕೀರ್ತಿಃ ಕ್ಷರನ್ಮೂಢಿರೂಢೋ ನರಖಗಾಮರೈಃ ॥ ೪೦ ॥**

**ಪ್ರಾಪ್ಯ ಷಷ್ಠೋಪವಾಸೇನ ವನಂ ನೀಲಾಭಿಧಾನಕವ್ ।**
**ವೈಶಾಖೇ ಬಹುಲೇ ಪಕ್ಷೇ ಶ್ರವಣೇ ದಶಮೀದಿನೇ ॥ ೪೧ ॥**

**ಸಹಸ್ರಭೂಪೈಃ ಸಾಯಾಹ್ನೇ ಸಹ ಸಂಯಮಮಗ್ರಹೀತ್ ।**
**ಕೈಶ್ಯಮೀಶಃ ಸುರೇಶಾನಾಂ ಸುರೇಶೋ ವಿಶ್ವದೃಶ್ವನಃ ॥ ೪೨ ॥**

**ಶಾಶ್ವತಂ ಪದಮನ್ವಿಚ್ಛನ್ ಪ್ರಾಪಯತ್ಪಂಚಮಾಂಬುಧಿವ್ ।**
**ಚತುರ್ಥಾವಗಮಃ ಶುದ್ಧಮತಾಪ್ಸೀತ್ಸೋಪ್ಯಲಂ ತಪಃ ॥ ೪೩ ॥**

ಆ ಹೇತುವಿನಿಂದುಂಟಾದ ವಿವೇಕೋದಯವುಳ್ಳವನೂ ತ್ಯಾಗದಲ್ಲಿ ಅಭಿಮುಖನೂ ಆದ ಆ ಮುನಿಸುವ್ರತರಾಜನು ಆಗಲೇ ಬಂದ ಲೌಕಾಂತಿಕ ದೇವರ್ಕಳಿಂದ ಪ್ರಕೃತವಚನದಿಂದ ಅನುಮೋದಿಸಲ್ಪಟ್ಟವನೂ ತನ್ನ ರಾಜ್ಯವನ್ನು ವಿಜಯನೆಂಬ ಯುವರಾಜನಿಗೆ ಕೊಟ್ಟು ದೇವರ್ಕಳಿಂದ ಪರಿನಿಷ್ಕ್ರಾಂತಿಕಲ್ಯಾಣವನ್ನು ಹೊಂದಿದವನೂ ಸಮರ್ಥವಾದ ಬುದ್ಧಿಗುಣವುಳ್ಳವನೂ ರೂಢವಾದ ಕೀರ್ತಿಯುಳ್ಳವನೂ ಕಳೆದುಹೋದ ಮೋಹವುಳ್ಳವನೂ ಅಪರಾಜಿತವೆಂಬ ಪಲ್ಲಕ್ಕಿಯನ್ನೇರಿ ಮನುಷ್ಯರಿಂದಲೂ ಖೇಚರರಿಂದಲೂ ದೇವರ್ಕಳಿಂದಲೂ ಹೊರಲ್ಪಟ್ಟವನೂ ಆಗಿ ನೀಲವೆಂಬವನವನ್ನು ಸೇರಿ ವೈಶಾಖಮಾಸದ ಕೃಷ್ಣಪಕ್ಷದ ದಶಮೀದಿನದ ಸಾಯಂಕಾಲದಲ್ಲಿ ಶ್ರವಣನಕ್ಷತ್ರದಲ್ಲಿ ಸಹಸ್ರರಾಜರುಗಳೊಡನೆ ಆರು ಉಪವಾಸ ನಿಯಮದಿಂದ ಸಂಯಮವನ್ನು ಗ್ರಹಣಮಾಡಿದನು. ದೇವೇಂದ್ರರಿಗೆ ಸ್ವಾಮಿಯಾದ ವಿಶ್ವದರ್ಶಿ–ಮುನಿಸುವ್ರತನ ಕೇಶರಾಶಿಯನ್ನು ದೇವೇಂದ್ರನು ಶಾಶ್ವತವಾದ ಸ್ಥಾನವನ್ನಿಚ್ಛಿಸುವವನಾಗಿ ಐದನೆಯದಾದ ಕ್ಷೀರಸಮುದ್ರವನ್ನು ತಲುಪಿಸಿದನು. ನಾಲ್ಕನೆಯದಾದ ಮನಃಪರ್ಯಯಜ್ಞಾನವುಳ್ಳವನಾದ ಆ ಮುನಿಸುವ್ರತಸ್ವಾಮಿಯೂ ಶುದ್ಧವಾದ ತವಸ್ಸನ್ನು ಚೆನ್ನಾಗಿ ಮಾಡಿದನು.

**ಶಮಭಾವನಯಾತೃಪ್ತತ್ತಥಾಪಿ ತನುಸಂಸ್ಥಿತೇಃ ।**
**ಕದಾಚಿತ್ಪಾರಣಾಕಾಲೇ ಪ್ರಾಯಾದ್ರಾಜಗೃಹಂ ಪುರವ್ ॥ ೪೪ ॥**

ಅವನು ಉಪಶಮಭಾವನೆಯಿಂದ ತೃಪ್ತಿಯನ್ನು ಹೊಂದಿದನಾದರೂ ಶರೀರಸ್ಥಿತಿಗೆ ಒಂದಾನೊಂದು ಕಾಲದಲ್ಲಿ ಪಾರಣೆಯ ಸಮಯದಲ್ಲಿ ರಾಜಗೃಹನಗರಕ್ಕೆ ಹೋದನು.

**ಪ್ರದಾಯ ಪ್ರಾಸುಕಾಹಾರಂ ತಸ್ಮೈ ಚಾಮೀಕರಚ್ಛವಿಃ ।**
**ನೃಪೋ ವೃಷಭಸೇನಾಖ್ಯಃ ಪಂಚಾಶ್ಚರ್ಯಮವಾಪಿವಾನ್ ॥ ೪೫ ॥**

ಅವನಿಗೆ ಸುವರ್ಣಕಾಂತಿಯುಳ್ಳ ವೃಷಭಸೇನನೆಂಬ ರಾಜನು ಪ್ರಾಸುಕವಾದ–ಶುದ್ಧಾಹಾರವನ್ನು ಕೊಟ್ಟು ಪಂಚಾಶ್ಚರ್ಯವನ್ನು ಪಡೆದನು.

**ಮಾಸೋನವತ್ಸರೇ ಯಾತೇ ಛಾದ್ಮಸ್ಥ್ಯೇ ಸ್ವತಪೋವನೇ ।**
**ಚಂಪಕದ್ರುಮಮೂಲಸ್ಥೋ ವಿಹಿತೋಪೋಷಿತದ್ವಯಃ ॥ ೪೬ ॥**

**ಸ್ವದೀಕ್ಷಾಪಕ್ಷನಕ್ಷತ್ರಸಹಿತೇ ನವಮೀದಿನೇ ।**
**ಸಾಯಾಹ್ನೇ ಕೇವಲಜ್ಞಾನಂ ಸದ್ಧ್ಯಾನೇನೋದಪಾದಯತ್ ॥ ೪೭ ॥**

ಒಂದು ತಿಂಗಳು ಕಡಿಮೆಯಾದ ಒಂದು ವರ್ಷವು ಛದ್ಮಸ್ಥಾವಸ್ಥೆಯಲ್ಲಿ ಕಳೆಯುತ್ತಿರಲು ತನ್ನ ತಪೋವನದಲ್ಲಿ ಚಂಪಕವೃಕ್ಷದ ಬುಡದಲ್ಲಿರುವವನೂ ಎರಡು ಉಪವಾಸಗಳನ್ನು ಮಾಡಿದವನೂ ಆಗಿ ತಾನು ದೀಕ್ಷೆಯನ್ನು ತೆಗೆದುಕೊಂಡಿರುವ ಪಕ್ಷವೂ ನಕ್ಷತ್ರವೂ ಸಹಿತವಾದ ನವಮೀದಿನದ ಸಾಯಂಕಾಲದಲ್ಲಿ ಶ್ರೇಷ್ಠವಾದ ಧ್ಯಾನದಿಂದ ಕೇವಲಜ್ಞಾನವನ್ನು ಪಡೆದನು.

**ತದೈವಾಗತ್ಯ ದೇವೇಂದ್ರಾಸ್ತತ್ಕಲ್ಯಾಣಂ ವ್ಯಧುರ್ಮುದಾ ।**
**ಮಾನಸ್ತಂಭಾದಿವಿನ್ಯಾಸವಿವಿಧರ್ದ್ಧಿವಿಭೂಷಿತವ್ ॥ ೪೮ ॥**

ಆಗಲೇ ದೇವೇಂದ್ರರು ಬಂದು ಮಾನಸ್ತಂಭವೇ ಮೊದಲಾದುವುಗಳ ರಚನೆಯಿಂದಲೂ ವಿವಿಧ ಋದ್ಧಿಗಳಿಂದಲೂ ಭೂಷಿತವಾದ ಕೇವಲಜ್ಞಾನಕಲ್ಯಾಣವನ್ನು ಸಂತೋಷದಿಂದ ಮಾಡಿದರು.

**ಮಲ್ಲಿಪ್ರಭೃತಯೋಭೂವನ್ನಷ್ಟಾದಶಗಣೇಶಿನಃ ।**
**ದ್ವಾದಶಾಂಗಧರಾಃ ಪಂಚಶತಾನಿ ಪರಮೇಷ್ಠಿನಃ ॥ ೪೯ ॥**

ಆ ಮುನಿಸುವ್ರತಪರಮೇಷ್ಠಿಗೆ ಮಲ್ಲಿಮುನೀಶ್ವರನೇ ಮೊದಲಾದ ಹದಿನೆಂಟು ಮಂದಿಗಳು ಗಣಧರರಿದ್ದರು. ದ್ವಾದಶಾಂಗಶಾಸ್ತ್ರಧಾರಿಗಳಾದ ಮುನೀಶ್ವರರು ಐದು ನೂರು ಮಂದಿಗಳಿದ್ದರು.

**ಶಿಕ್ಷಕಾಸ್ತಸ್ಯ ಸದ್ವೃಂಚಃ ಸಹಸ್ರಾಣ್ಯೇಕವಿಂಶತಿಃ ।**
**ಭರ್ತುರಷ್ಟಶತಪ್ರಾಂತಸಹಸ್ರಮವಧೀಕ್ಷಣಾಃ ॥ ೫೦ ॥**

ಅವನಿಗೆ ಶ್ರೇಷ್ಠರಾದ ಶಿಕ್ಷಕಮುನಿಗಳು ಇಪ್ಪತ್ತೊಂದು ಸಾವಿರ ಮಂದಿಗಳಿದ್ದರು. ಸ್ವಾಮಿಗೆ ಅವಧಿಜ್ಞಾನನೇತ್ರವುಳ್ಳ ಮುನೀಶ್ವರರು ಸಾವಿರದೆಂಟುನೂರು ಮಂದಿಗಳಿದ್ದರು.

**ತಾವಂತಃ ಕೇವಲಜ್ಞಾನಾ ವಿಕ್ರಿಯರ್ದ್ಧಿಸಮೃದ್ಧಯಃ ।**
**ದ್ವಿಶತದ್ವಿಸಹಸ್ರಾಣಿ ಚತುರ್ಥಜ್ಞಾನಧಾರಿಣಃ ॥ ೫೧ ॥**

**ಸಹಾರ್ಧೇನ ಸಹಸ್ರಂ ತು ವಾದಿನಾಂ ದ್ವಿಶತಾಧಿಕವ್ ।**
**ಸಹಸ್ರಂ ಪಿಂಡಿತಾಸ್ತ್ರಿಂಶತ್ಸಹಸ್ರಾಣಿ ಮುನೀಶ್ವರಾಃ ॥ ೫೨ ॥**

**ಪುಷ್ಪದಂತಾದಯಃ ಪಂಚಾಶತ್ಸಹಸ್ರಾಣಿ ಚಾರ್ಯಿಕಾಃ ।**
**ಏಕೈವ ಶ್ರಾವಕಾ ಲಕ್ಷಾ ತ್ರಿಗುಣಾಃ ಶ್ರಾವಿಕಾಸ್ತತಃ ॥ ೫೩ ॥**

ಕೇವಲಜ್ಞಾನವುಳ್ಳವರೂ ಅಷ್ಟು(೧೮೦೦) ಮಂದಿಗಳಿದ್ದರು. ವಿಕ್ರಿಯರ್ದ್ಧಿಸಮೃದ್ಧಿಯುಳ್ಳ ಮುನಿಗಳು ಎರಡುಸಾವಿರದ ಎರಡುನೂರು ಮಂದಿಗಳಿದ್ದರು.

ನಾಲ್ಕನೆಯದಾದ ಮನಃಪರ್ಯಯಜ್ಞಾನಧಾರಿಗಳು ಸಾವಿರದ ಐದುನೂರು ಮಂದಿಗಳಿದ್ದರು. ವಾದಿಮುನಿಗಳು ಸಾವಿರದ ಎರಡುನೂರು ಮಂದಿಗಳಿದ್ದರು. ಒಟ್ಟು ಸೇರಿ ಮುನಿಸುವ್ರತಸ್ವಾಮಿಯ ಸಮವಸರಣದಲ್ಲಿ ಮೂವತ್ತು ಸಹಸ್ರ ಮುನೀಶ್ವರರಿದ್ದರು. ಪುಷ್ಪದಂತಾ ಮೊದಲಾದ ಆರ್ಯಿಕೆಯರು ಐವತ್ತುಸಾವಿರ ಮಂದಿಗಳಿದ್ದರು. ಒಂದೇ ಲಕ್ಷ ಶ್ರಾವಕರಿದ್ದರು. ಅವರಿಗಿಂತ ಮೂರರಷ್ಟು ಶ್ರಾವಿಕೆಯರಿದ್ದರು.

**ಅಸಂಖ್ಯಾತೋ ಮರುತ್ಸಂಘೋಽಸಂಖ್ಯಾತೋ ದ್ವಾದಶೋ ಗಣಃ ।**
**ಏಷಾಂ ಧರ್ಮಂ ಬ್ರುವನ್ನಾರ್ಯಕ್ಷೇತ್ರಾಣಿ ವ್ಯಹರಚ್ಚಿರಮ್ ॥ ೫೪ ॥**

ದೇವರ್ಕಳ ಸಮೂಹವು ಅಸಂಖ್ಯಾತವಾಗಿದ್ದಿತು. ದ್ವಾದಶಗಣವು ಅಸಂಖ್ಯಾತ ವಾಗಿದ್ದಿತು. ಸ್ವಾಮಿಯು ಇವರುಗಳಿಗೆ ಧರ್ಮವನ್ನು ಹೇಳುತ್ತ ಬಹುಕಾಲದವರೆಗೆ ಆರ್ಯಕ್ಷೇತ್ರಗಳನ್ನು ವಿಹರಿಸಿದನು.

**ವಿಹೃತ್ಯ ಮಾಸಮಾತ್ರಾಯುಃ ಸಮ್ಮೇದಾಚಲಮೂರ್ಧನಿ ।**
**ಪ್ರತಿಮಾಯೋಗಧಾರೀ ಸನ್ ಸ ಸಹಸ್ರಮುನೀಶ್ವರಃ ॥ ೫೫ ॥**

**ಫಾಲ್ಗುನೇ ಶ್ರವಣೇ ಕೃಷ್ಣದ್ವಾದಶ್ಯಾಂ ನಿಶಿ ಪಶ್ಚಿಮೇ ।**
**ಭಾಗೇ ಹಿತ್ವಾ ತನುಂ ಮುಕ್ತಿಮವಾಪ ಮುನಿಸುವ್ರತಃ ॥ ೫೬ ॥**

ವಿಹರಿಸಿ ಒಂದು ತಿಂಗಳ ಆಯುಷ್ಯವುಳಿದಿರುವಾಗ ಸಮ್ಮೇದಪರ್ವತದ ಶಿಖರ ದಲ್ಲಿ ಸಹಸ್ರಮುನೀಶ್ವರಸಹಿತನೂ ಪ್ರತಿಮಾಯೋಗಧಾರಿಯೂ ಆದ ಮುನಿ ಸುವ್ರತನು ಫಾಲ್ಗುನಮಾಸದಲ್ಲಿ ಕೃಷ್ಣಪಕ್ಷದ ದ್ವಾದಶೀತಿಥಿಯಲ್ಲಿ ರಾತ್ರಿಯ ಕೊನೆಯ ಭಾಗದಲ್ಲಿ ಶ್ರವಣನಕ್ಷತ್ರದಲ್ಲಿ ದೇಹವನ್ನು ಬಿಟ್ಟು ಮುಕ್ತಿಯನ್ನು ಹೊಂದಿದನು.

**ಕೃತ್ವಾ ಪಂಚಮಕಲ್ಯಾಣಸಪರ್ಯಾಮೂರ್ಜಿತೋದಯಾಮ್ ।**
**ವಂದಿತ್ವಾ ಸುರವಂದಾರುವೃಂದಂ ಯಾತಂ ಯಥಾಯಥಮ್ ॥ ೫೭ ॥**

ನಮಸ್ಕರಿಸುವ ದೇವರ್ಕಳ ಸಮೂಹವು ವಿಶೇಷವೈಭವವುಳ್ಳ ನಿರ್ವಾಣಕಲ್ಯಾಣ ಪೂಜೆಯನ್ನು ಮಾಡಿ ವಂದಿಸಿ ಬಂದಹಾಗೆ ಹೊರಟು ಹೋಯಿತು.

**ವ್ಯಾಪ್ತಂ ತತ್ಪ್ರಭಯಾ ಸದೋ ವಿಜಯತೇ ನೀಲೋತ್ಪಲಾನಾಂ ವನಂ ।**
**ಧ್ವಾಂತಂ ವಾಕ್ಚ ಮನೋಗತಂ ಧುತವತೀ ಭಾಂ ಭಾನುಜಾಂ ಭಾಸ್ವರಾಮ್ ॥**
**ಬೋಧಶ್ಚಾಖಿಲಜಂ ತಮೋ ವ್ಯಪಹರನ್ಸ್ವರ್ಘ್ನಂ ಜಗದ್ವಂದಿತಾಂ ।**
**ಧತ್ತೇ ತನ್ಮುನಿಸುವ್ರತಸ್ಯ ಭಗವನ್ನಾರ್ಥಂ ತವೇಂದ್ರಾದಿಭಿಃ ॥ ೫೮ ॥**

ಭಗವಂತನೆ ! ಮುನಿಸುವ್ರತನಾದ ನಿನ್ನ ಆ ಪರಮೌದಾರಿಕದಿವ್ಯದೇಹಕಾಂತಿ ಯಿಂದ ವ್ಯಾಪ್ತವಾದ ಸಮವಸರಣಸಭೆಯು ನೀಲೋತ್ಪಲಗಳ ವನವನ್ನು ಜಯಿಸು ತ್ತದೆ. ಮನೋಗತವಾದ ಕತ್ತಲೆಯನ್ನು–ಅಜ್ಞಾನವನ್ನು ಹೋಗಲಾಡಿಸಿರುವ ವಾಣಿಯೂ ಪ್ರಕಾಶಮಾನವಾದ ಸೂರ್ಯನಿಂದುಂಟಾದ ಕಾಂತಿಯನ್ನು ಜಯಿಸು ತ್ತದೆ. ಸಕಲಪದಾರ್ಥಜನ್ಯವಾದ ಕತ್ತಲೆಯನ್ನು–ಅಜ್ಞಾನವನ್ನು ನಾಶಮಾಡುವ ಜ್ಞಾನವೂ ಸೂರ್ಯನನ್ನು ಜಯಿಸುತ್ತದೆ. ಆದುದರಿಂದ ಜಗತ್ತು ಇಂದ್ರನೇ ಮೊದಲಾದವರೊಡನೆ ನಿನ್ನ ಸ್ತುತಿ ಪಾಠಕತ್ವವನ್ನು ಧರಿಸುತ್ತದೆ.

**ಕಾರ್ಯಂ ಕಾರಣತೋ ಗುಣಂ ಚ ಗುಣಿನೋ ಭೇದಂ ಚ ಸಾಮಾನ್ಯತೋ ।**
**ವಕ್ತ್ಯೇಕಃ ಪೃಥಗೇವ ಕೋಽಪ್ಯಪೃಥಗಿತ್ಯೇಕಾಂತತೋ ನ ದ್ವಯಮ್ ॥**
**ತತ್ಸರ್ವಂ ಘಟತೇ ತವೈವ ನಯಸಂಯೋಗಾತ್ತತಸ್ತ್ವಂ ಸತಾ- ।**
**ಮಾಪ್ತೋಽಭೂರ್ಮುನಿಸುವ್ರತಾಯ ಭಗವಂಸ್ತುಭ್ಯಂ ನಮಃ ಕುರ್ಮಹೇ ॥ ೫೯ ॥**

ಒಬ್ಬನು ಕಾರಣದಿಂದ ಕಾರ್ಯವೂ ಗುಣಿಯಿಂದ ಗುಣವೂ ಸಾಮಾನ್ಯದಿಂದ ಭೇದ–ವಿಶೇಷವೂ ಬೇರೆಯೇ ಆಗಿರುತ್ತದೆಂದು ಏಕಾಂತದಿಂದ ಹೇಳುತ್ತಾನೆ. ಎರಡು ಬೇರೆ ಬೇರೆಯಲ್ಲವೆಂದು ಯಾವನೂ ಹೇಳುವುದಿಲ್ಲ. ಅದೆಲ್ಲವೂ ನಿನ್ನ ನಯಸಂಯೋಜನೆಯಿಂದಲೇ ಘಟನೆಯಾಗುತ್ತದೆ (ಅಪೇಕ್ಷಾದೃಷ್ಟಿಯಿಂದಲೇ ಸರಿಯಾಗುತ್ತದೆ) ಆದುದರಿಂದ ನೀನು ಸತ್ಪುರುಷರಿಗೆ ಆಪ್ತನಾಗಿ ಆದೆ. ಇಂತಹ ಮುನಿಸುವ್ರತನಾದ ನಿನಗೆ ನಮಸ್ಕಾರವನ್ನು ಮಾಡುತ್ತೇವೆ.

**ಪ್ರಾಗಾಸೀದ್ಧರಿವರ್ಮನಾಮನೃಪತಿರ್ಲಬ್ಧ್ವಾ ತಪೋ ಬದ್ಧವಾ- ।**
**ನ್ನಾಮಾಂತ್ಯಂ ಬಹುಭಾವನಃ ಶುಚಿಮೃತಿರ್ಯಃ ಪ್ರಾಣತೇಂದ್ರೋ ಭವತ್ ॥**
**ಚ್ಯುತ್ವಾಸ್ಮಾನ್ಮುನಿಸುವ್ರತೋ ಹರಿಕುಲವ್ಯೋಮಾಮಲೇಂದುರ್ಜಿನೋ ।**
**ಭೂತ್ವಾ ಭವ್ಯಕುಮುದ್ವತೀಂ ವ್ಯಕಸಯಲ್ಲಕ್ಷ್ಮೀಂ ಪ್ರದಿಶ್ಯಾತ್ಸ ನಃ ॥ ೬೦ ॥**

ಮೊದಲು ಹರಿವರ್ಮನೆಂಬ ರಾಜನಿದ್ದನು. ಯಾವನು ತಪಸ್ಸನ್ನು ಹೊಂದಿ ಅನೇಕ ಶುಭಭಾವನೆಗಳುಳ್ಳವನಾಗಿ ಕೊನೆಯದಾದ–ತೀರ್ಥಕರನಾಮಕರ್ಮವನ್ನು ಬಂಧಿಸಿಕೊಂಡು ಪವಿತ್ರವಾದ ಮರಣವುಳ್ಳವನಾಗಿ ಪ್ರಾಣತಕಲ್ಪೇಂದ್ರನಾದನೋ ಯಾವನು ಇಲ್ಲಿಂದ ಚ್ಯುತನಾಗಿ ಹರಿವಂಶವೆಂಬ ಆಕಾಶಕ್ಕೆ ನಿರ್ಮಲನಾದ ಚಂದ್ರ ನಾದ ಮುನಿಸುವ್ರತಜಿನನಾಗಿ ಭವ್ಯರೆಂಬ ಕುಮುದವನ್ನು ಅರಳಿಸಿದನೋ ಅಂತಹ ಮುನಿಸುವ್ರತನು ನಮ್ಮಗಳಿಗೆ ಸಂಪತ್ತಿಯನ್ನು ಕೊಡಲಿ.

**ತತ್ತೀರ್ಥೆ ಏವ ಚಕ್ರೇಶೋ ಹರಿಷೇಣಸಮಾಹ್ವಯಃ ।**
**ಸ ತೃತೀಯಭವೇನಂತಜಿನತೀರ್ಥೇ ನೃಪೋ ಮಹಾನ್ ॥ ೬೧ ॥**

**ಕೃತ್ವಾ ತಪಃ ಸಮುತ್ಕೃಷ್ಟಂ ಕೋಽಪಿ ಕೇನಾಪಿ ಹೇತುನಾ ।**
**ಸನತ್ಕುಮಾರಕಲ್ಪೇಽಭೂತ್ಸುವಿಶಾಲವಿಮಾನಕೇ ॥ ೬೨ ॥**

**ಷಟ್ಸಾಗರೋಪಮಾನಾಯುರ್ಭುಕ್ತ್ವಾ ಭೋಗಾನನಾರತಮ್ ।**
**ತತಃ ಪ್ರಚ್ಯುತ್ಯ ತೀರ್ಥೇಽಸ್ಮಿನ್ ರಾಜ್ಞೋ ಭೋಗಪುರೇಶಿತುಃ ॥ ೬೩ ॥**

**ಪ್ರಭೋರಿಕ್ಷ್ವಾಕುವಂಶಸ್ಯ ಪದ್ಮನಾಭಮಹೀಪತೇಃ ।**
**ಐರಾನಯೋಃ ಸುತೋ ಜಾತೋ ಹರಿಷೇಣಃ ಸುತೋತ್ತಮಃ ॥ ೬೪ ॥**

ಆ ಮುನಿಸುವ್ರತತೀರ್ಥಂಕರರ ತೀರ್ಥಕಾಲದಲ್ಲೇ ಹರಿಷೇಣನೆಂಬ ಚಕ್ರವರ್ತಿ ಯಿದ್ದನು. ಅವನು ಹಿಂದೆ ಮೂರನೆಯ ಭವದಲ್ಲಿ ಅನಂತಜಿನರ ತೀರ್ಥಕಾಲದಲ್ಲಿ ಒಬ್ಬಾನೊಬ್ಬ ಮಹಾರಾಜನಾಗಿದ್ದು ಯಾವುದೋ ಕಾರಣದಿಂದ ಉತ್ಕೃಷ್ಟವಾದ ತಪಸ್ಸನ್ನು ಮಾಡಿ ಸತ್ತು ಸನತ್ಕುಮಾರಕಲ್ಪದಲ್ಲಿ ಸುವಿಶಾಲವಿಮಾನದಲ್ಲಿ ಆರು ಸಾಗರೋಪಮವರ್ಷಾಯುಷ್ಯವುಳ್ಳ ದೇವನಾದನು. ಅಲ್ಲಿ ಯಾವಾಗಲೂ ಭೋಗ ಗಳನ್ನನುಭವಿಸಿ ಅಲ್ಲಿಂದ ಚ್ಯುತನಾಗಿ ಈ ಮುನಿಸುವ್ರತಜಿನೇಶ್ವರರ ತೀರ್ಥದಲ್ಲಿ ಭೋಗಪುರಾಧಿಪತಿಯೂ ಇಕ್ಷ್ವಾಕುವಂಶಕ್ಕೆ ಪ್ರಭುವೂ ಆದ ಪದ್ಮನಾಭನೆಂಬ ರಾಜನಿಗೂ ಐರಾದೇವಿಯೆಂಬ ಪತ್ನಿಗೂ ಪುತ್ರಶ್ರೇಷ್ಠನಾದ ಹರಿಷೇಣನೆಂಬ ಪುತ್ರನಾಗಿ ಜನಿಸಿದನು.

**ಸಮಾಯುತಮಿತಾತ್ಮಾಯುಃ ಕನತ್ಕರ್ಚೂರಸಚ್ಛವಿಃ ।**
**ಧನುರ್ವಿಂಶತಿವರ್ಷ್ಮಾಂಗಃ ಕ್ರಮೇಣಾಪೂರ್ಣಯೌವನಃ ॥ ೬೫ ॥**

ಹತ್ತು ಸಹಸ್ರವರ್ಷಾಯುಷ್ಯವುಳ್ಳವನೂ ಪ್ರಕಾಶಮಾನವಾದ ಕಚೋರದ ಬಣ್ಣದಂತೆ ದೇಹಕಾಂತಿಯುಳ್ಳವನೂ ಇಪ್ಪತ್ತು ಧನುಃಪರಿಮಾಣವುಳ್ಳ ಶರೀರವುಳ್ಳ ವನೂ ಆದ ಆ ಹರಿಷೇಣನು ಕ್ರಮದಿಂದ ಸಂಪೂರ್ಣವಾದ ಯೌವನವುಳ್ಳವ ನಾದನು.

**ಕದಾಚಿತ್ತೇನ ಗತ್ವಾಮಾ ಪದ್ಮನಾಭಮಹೀಪತಿಃ ।**
**ಜನಂ ಮನೋಹರೋದ್ಯಾನೇನಂತವೀರ್ಯಾಭಿಧಾನಕಮ್ ॥ ೬೬ ॥**

**ಅಭಿವಂದ್ಯ ತತಃ ಶ್ರುತ್ವಾ ತತ್ತ್ವೇ ಸಂಸಾರಮೋಕ್ಷಯೋಃ ।**
**ಸಂತ್ಯಜ್ಯ ರಾಜಸೀಂ ವೃತ್ತಿಂ ಶಮೇ ಸ್ಥಾತುಂ ಸಮುತ್ಸುಕಃ ॥ ೬೭ ॥**

**ರಾಜ್ಯಭಾರಂ ಸಮಾರೋಪ್ಯ ಸುತೇ ಭೂಪತಿಭಿಃ ಸಮಮ್ ।**
**ಬಹುಭಿಃ ಸಂಯಮಂ ಪ್ರಾಪತ್ಪಿತ್ಸುಃ ಪರಮಂ ಪದಮ್ ॥ ೬೮ ॥**

ಒಂದಾನೊಂದು ಕಾಲದಲ್ಲಿ ಪದ್ಮನಾಭರಾಜನು ಆ ಹರಿಷೇಣನೊಡನೆ ಹೋಗಿ ಮನೋಹರೋದ್ಯಾನದಲ್ಲಿದ್ದ ಅನಂತವೀರ್ಯನೆಂಬ ಜಿನನನ್ನು ನಮಸ್ಕರಿಸಿ ಅವನಿಂದ ಸಂಸಾರ ಮೋಕ್ಷಗಳ ಸ್ವರೂಪಗಳನ್ನು ಕೇಳಿ ರಾಜಸೀವೃತ್ತಿಯನ್ನು ಪರಿತ್ಯಜಿಸಿ ಉಪಶಮಭಾವದಲ್ಲಿರುವುದಕ್ಕೆ ಬಹು ಕುತೂಹಲವುಳ್ಳವನೂ ಪರಮಪದವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವನೂ ಆಗಿ ರಾಜ್ಯಭಾರವನ್ನು ಹರಿಷೇಣಪುತ್ರನಲ್ಲಿರಿಸಿ ಅನೇಕ ರಾಜರುಗಳೊಡನೆ ಸಂಯಮ-ದೀಕ್ಷೆಯನ್ನು ಪಡೆದನು.

**ಹರಿಷೇಣೋಽಪ್ಯುಪಾದಾಯ ಶ್ರಾವಕವ್ರತಮುತ್ತಮಮ್ ।**
**ಮುಕ್ತೇರ್ದ್ವಿತೀಯಸೋಪಾನಮಿತಿ ಮತ್ವಾವಿಶತ್ಪುರಮ್ ॥ ೬೯ ॥**

ಹರಿಷೇಣನೂ ಉತ್ತಮಶ್ರಾವಕವ್ರತವನ್ನು, ಮುಕ್ತಿಗೆ ಎರಡನೆಯ ಮೆಟ್ಟಲೆಂದು ತಿಳಿದು, ಪರಿಗ್ರಹಿಸಿ ಪುರವನ್ನು ಪ್ರವೇಶಿಸಿದನು.

**ತಪಸ್ಯತಶ್ಚಿರಂ ಘೋರಂ ಪದ್ಮನಾಭಮಹಾಮುನೇಃ ।**
**ದೀಕ್ಷಾವನೇಭೂತ್ಕೈವಲ್ಯಂ ಪ್ರತಿಮಾಯೋಗಧಾರಿಣಃ ॥ ೭೦ ॥**

ಬಹುಕಾಲದವರೆಗೆ ಘೋರವಾಗಿ ತಪಸ್ಸನ್ನು ಮಾಡುತ್ತಿದ್ದವನೂ ದೀಕ್ಷಾವನದಲ್ಲಿ ಪ್ರತಿಮಾಯೋಗಧಾರಣವನ್ನು ಮಾಡಿರುವವನೂ ಆದ ಪದ್ಮನಾಭ ಮುನಿಗೆ ಕೇವಲಜ್ಞಾನೋತ್ಪತ್ತಿಯಾಯಿತು.

**ಆಸಂಶ್ಚಕ್ರಾತಪತ್ರಾಸಿದಂಡರತ್ನಾನಿ ತದ್ದಿನೇ ।**
**ಹರಿಷೇಣಮಹೀಶಸ್ಯ ತದೈವಾಯುಧವೇಶ್ಮನಿ ॥ ೭೧ ॥**

ಆ ದಿವಸದಲ್ಲಿ ಆಗಲೇ ಹರಿಷೇಣರಾಜನ ಆಯುಧಗೃಹದಲ್ಲಿ ಚಕ್ರ, ಛತ್ರ, ಖಡ್ಗ ದಂಡರತ್ನಗಳುಂಟಾದುವು.

**ಶ್ರೀಗೃಹೇ ಕಾಕಿಣೀಚರ್ಮಮಣಿರತ್ನಾನಿ ಚಾಭವನ್ ।**
**ಯುಗಪತ್ತುಷ್ಟಚಿತ್ತೋಸೌ ತದ್ವಾರ್ತಾದ್ವಯಶಾಸಿನೇ ॥ ೭೨ ॥**

**ದತ್ವಾ ತುಷ್ಟಿಧನಂ ಪ್ರಾಯಾಜ್ಜಿನಪೂಜಾವಿಧಿತ್ಸಯಾ ।**
**ಪೂಜಯಿತ್ವಾಭಿವಂದ್ಯೈನಂ ಜಿನಂ ಪ್ರತಿನಿವೃತ್ಯ ಸಃ ॥ ೭೩ ॥**

**ಪುರಂ ಪ್ರವಿಶ್ಯ ಚಕ್ರಸ್ಯ ಕೃತಪೂಜಾವಿಧಿರ್ದಿಶಃ ।**
**ಜೇತುಂ ಸಮುದ್ಯತಸ್ತಸ್ಯ ತದಾನೀಮುಭವತ್ಪುರೇ ॥ ೭೪ ॥**

**ಪುರೋಹಿತೋ ಗೃಹಪತಿಃ ಸ್ಥಪತಿಶ್ಚ ಚಮೂಪತಿಃ ।**
**ಹಸ್ತ್ಯಶ್ವಕನ್ಯಾರತ್ನಾನಿ ಖಗಾದ್ರೇರಾನಯನ್ ಖಗಾಃ ॥ ೭೫ ॥**

ಶ್ರೀಗೃಹದಲ್ಲಿ ಕಾಕಿಣೀ ಚರ್ಮ ಮಣಿರತ್ನಗಳುಂಟಾದುವು. ಸಂತುಷ್ಟವಾದ ಮನಸ್ಸುಳ್ಳ ಈ ಹರಿಷೇಣನು ಏಕಕಾಲದಲ್ಲಿ ಆ ಎರಡು ಸಮಾಚಾರಗಳನ್ನು ತಿಳಿಸಿದ ಸೇವಕನಿಗೆ ಪಾರಿತೋಷಕದ್ರವ್ಯವನ್ನು ಕೊಟ್ಟು ಜಿನಪೂಜೆಯನ್ನು ಮಾಡಬೇಕೆಂಬ ಇಚ್ಛೆಯಿಂದ ಹೊರಟು ಹೋದನು. ಆ ಹರಿಷೇಣಮಹಾರಾಜನು ಈ ಪದ್ಮನಾಭ ಮುನಿಯನ್ನು ಪೂಜಿಸಿ ನಮಸ್ಕರಿಸಿ ಹಿಂದಿರುಗಿ ಬಂದು ಪಟ್ಟಣವನ್ನು ಪ್ರವೇಶಿಸಿ ಚಕ್ರದ ಪೂಜಾವಿಧಿಯನ್ನು ಮಾಡಿದವನಾಗಿ ದಿಕ್ಕುಗಳನ್ನು ಜಯಿಸುವುದಕ್ಕೋಸ್ಕರ ಉದ್ಯುಕ್ತನಾದ ಆ ಹರಿಷೇಣಮಹಾರಾಜನಿಗೆ ಆಗ ಪಟ್ಟಣದಲ್ಲಿ ಪುರೋಹಿತರತ್ನವೂ ಗೃಹಪತಿರತ್ನವೂ ಸ್ಥಪತಿರತ್ನವೂ ಸೇನಾಪತಿರತ್ನವೂ ಉಂಟಾದುವು. ಖೇಚರರು ವಿಜಯಾರ್ಧಪರ್ವತದಿಂದ ಗಜರತ್ನ ಅಶ್ವರತ್ನ ಸ್ತ್ರೀರತ್ನಗಳನ್ನು ತಂದರು.

**ನದೀಮುಖೇಷು ಸಂಭೂತಾನ್ನವಾಪಿ ಮಹತೋ ನಿಧೀನ್ ।**
**ಆನಿನ್ಯಿರೇ ಸ್ವಯಂ ಭಕ್ತ್ಯಾ ಗಣಬದ್ಧಾಭಿಧಾಃ ಸುರಾಃ ॥ ೭೬ ॥**

ಗಣಬದ್ಧರೆಂಬ ದೇವರ್ಕಳು ನದೀಮುಖಗಳಲ್ಲಿ ಉದ್ಭವಿಸಿದ ಒಂಬತ್ತು ಮಹಾನಿಧಿಗಳನ್ನು ಭಕ್ತಿಯಿಂದ ತಾವೇ ತಂದೊಪ್ಪಿಸಿದರು.

**ಸ ತೈಃ ಶ್ಲಾಘ್ಯೈಃ ಷಡಂಗೇನ ಬಲೇನ ಪ್ರಸ್ಥಿತೋ ದಿಶಃ ।**
**ಜಿತ್ವಾ ತತ್ಸಾರರತ್ನಾನಿ ಸ್ವೀಕೃತ್ಯ ವಿನತಾಖಿಲಃ ॥ ೭೭ ॥**

**ಸ್ವರಾಜಧಾನ್ಯಾಂ ಸಂಸೇವ್ಯಃ ಸುರಭೂಪಖಗಾಧಿಪೈಃ ।**
**ದಶಾಂಗಭೋಗಾನ್ನಿರ್ವ್ಯಗ್ರಂ ನಿರ್ವಿಶನ್ ಸುಚಿರಂ ಸ್ಥಿತಃ ॥ ೭೮ ॥**

ಶ್ಲಾಘ್ಯಗಳಾದ ಆ ರತ್ನಗಳಿಂದಲೂ ನಿಧಿಗಳಿಂದಲೂ ಕೂಡಿದವನೂ ಷಡಂಗ ಸೈನ್ಯದೊಡನೆ ಹೊರಟು ದಿಕ್ಕುಗಳನ್ನು ಜಯಿಸಿ ಅಲ್ಲಿಯಸಾರವಾದ ರತ್ನಗಳನ್ನು ಸ್ವೀಕರಿಸಿ ಎಲ್ಲರಿಂದಲೂ ನಮಸ್ಕರಿಸಲ್ಪಟ್ಟವನೂ ತನ್ನ ರಾಜಧಾನಿಯಲ್ಲಿ ದೇವರ್ಕಳಿಂದಲೂ ರಾಜರುಗಳಿಂದಲೂ ಖೇಚರಾಧಿಪತಿಗಳಿಂದಲೂ ಭಜಿಸಲ್ಪಡುವವನೂ ಆದ ಆ ಹರಿಷೇಣಚಕ್ರವರ್ತಿಯು ಬಹುಕಾಲದವರೆಗೆ ದಶಾಂಗಭೋಗಗಳನ್ನು ನಿಶ್ಚಿಂತೆಯಾಗಿ ಅನುಭವಿಸುವವನಾಗಿದ್ದನು.

**ಕದಾಚಿತ್ಕಾರ್ತ್ತಿಕೇ ಮಾಸೇ ನಂದೀಶ್ವರದಿನೇಷ್ವಯಮ್ ।**
**ಕೃತ್ವಾಷ್ಟಸು ಮಹಾಪೂಜಾಂ ಸೋಪವಾಸೋಂತಿಮೇ ದಿನೇ ॥ ೭೯ ॥**

**ಹರ್ಮ್ಯಪೃಷ್ಠೇ ಸಭಾಮಧ್ಯೇ ಶಾರದೇಂದುರಿವಾಂಬರೇ ।**
**ಭಾಸಮಾನಃ ಸಮಾಲೋಕ್ಯ ರಾಹುಗ್ರಾಸೀಕೃತಂ ವಿಧುಮ್ ॥ ೮೦ ॥**

**ಧಿಗಸ್ತು ಸಂಸೃತೇರ್ಭಾವಂ ಜ್ಯೋತಿರ್ಲೋಕೈಕನಾಯಕಃ ।**
**ಗ್ರಸ್ತಸ್ತಾರಾಪತಿಃ ಕಷ್ಟಂ ಪೂರ್ಣಃ ಸ್ವೈರ್ವೇಷ್ಟಿತೋಽಪ್ಯಯಮ್ ॥ ೮೧ ॥**

ಒಂದಾನೊಂದು ಕಾಲದಲ್ಲಿ ಕಾರ್ತ್ತಿಕಮಾಸದಲ್ಲಿ ನಂದೀಶ್ವರಾಷ್ಟಾಹ್ನಿಕದ ಎಂಟು ದಿನಗಳಲ್ಲಿ ಈ ಭರತಾಧಿಪನಾದ ಹರಿಷೇಣಚಕ್ರವರ್ತಿಯು ಮಹಾಪೂಜೆಯನ್ನು ಮಾಡಿ ಕೊನೆಯ ದಿವಸದಲ್ಲಿ ಉಪವಾಸವುಳ್ಳವನಾಗಿಯೂ, ಆಕಾಶದಲ್ಲಿ ಶರತ್ಕಾಲದ ಚಂದ್ರನಂತೆ, ಅರಮನೆಯಲ್ಲಿ ಸಭಾಮಧ್ಯದಲ್ಲಿ ಪ್ರಕಾಶಮಾನನಾಗಿಯೂ ರಾಹುವಿನಿಂದ ನುಂಗಲ್ಪಟ್ಟ ಚಂದ್ರನನ್ನು ನೋಡಿ ''ಸಂಸಾರದ ಸ್ವರೂಪಕ್ಕೆ ಧಿಕ್ಕಾರವಿರಲಿ. ಜ್ಯೋತಿರ್ಲೋಕಕ್ಕೆ ಮುಖ್ಯನಾಯಕನೂ ನಕ್ಷತ್ರಗಳಿಗೆ ಅಧಿಪತಿಯೂ ಪರಿಪೂರ್ಣನೂ ಆದ ಈ ಚಂದ್ರನು ತನ್ನವರಿಂದ ಆವರಿಸಲ್ಪಟ್ಟವನಾಗಿದ್ದರೂ ರಾಹುವಿನಿಂದ ನುಂಗಲ್ಪಟ್ಟನು. ಕಷ್ಟ !

**ಅತ್ರ ಕಾ ಗತಿರನ್ಯೇಷಾಂ ಪ್ರಾಪ್ತೇ ಕಾಲೇವಿಲಂಘಿನಿ ।**
**ವಿಧೌ ವಿಲಸತೀತ್ಯಾತ್ತನಿರ್ವೇದೋ ಭರತಾಧಿಪಃ ॥ ೮೨ ॥**

**ಅನುಪ್ರೇಕ್ಷಾಸ್ವರೂಪಾಖ್ಯಾಮುಖೇನ ಸ್ವಸಭಾಸ್ಥಿತಾನ್ ।**
**ಧರ್ಮಸಾರಂ ನಿರೂಪ್ಯಾಶು ಕೃತ್ವಾ ತತ್ತ್ವಾರ್ಥವೇದಿನಃ ॥ ೮೩ ॥**

**ದತ್ವಾ ರಾಜ್ಯಂ ಸತಾಂ ಪೂಜ್ಯೋ ಮಹಾಸೇನಾಯ ಸೂನವೇ ।**
**ತತ್ಪ್ರಾರ್ಥಿತೇನ ಸಂತರ್ಪ್ಯ ದೀನಾನಾಥವನೀಪಕಾನ್ ॥ ೮೪ ॥**

**ಶ್ರೀನಾಗಜಿನಮಾಸಾದ್ಯ ಸೀಮಂತಾಚಲಸುಸ್ಥಿತಮ್ ।**
**ಯಥೋಕ್ತವಿಧಿನಾ ತ್ಯಕ್ತ್ವಾ ಸಂಗಂ ದ್ವ್ಯಂಗಮನಂಗಜಿತ್ ॥ ೮೫ ॥**

**ಬಹುಭಿಃ ಸಹ ಸಂಪ್ರಾಪ್ಯ ಸಂಯಮಂ ಶಮಸಾಧನಮ್ ।**
**ಕ್ರಮೇಣ ಪ್ರಾಪ್ತಬಹ್ವರ್ದ್ಧಿರಾಯುರಂತೇ ಚತುರ್ವಿಧಾಮ್ ॥ ೮೬ ॥**

**ಆರಾಧನಾಂ ಸಮಾರಾಧ್ಯ ಪ್ರಾಯೋಪಗಮನಂ ಶ್ರಿತಃ ।**
**ಕ್ಷೀಣಪಾಪಃ ಕೃಪಾಮೂರ್ತಿರಾಪಾಂತಿಮಮನುತ್ತರಮ್ ॥ ೮೭ ॥**

ಕಾಲವು ಪ್ರಾಪ್ತವಾಗುತ್ತಿರಲು ಮೀರಲಶಕ್ಯವಾದ ವಿಧಿಯು ಪ್ರಕಾಶಿಸುತ್ತಿರಲು ಈ ಲೋಕದಲ್ಲಿ ಬೇರೆಯವರ ಗತಿಯಾವುದು ?'' ಎಂದು ವೈರಾಗ್ಯವನ್ನು ಹೊಂದಿದವನಾಗಿಯೂ ಅನುಪ್ರೇಕ್ಷಾಸ್ವರೂಪವನ್ನು ಹೇಳುವ ಮೂಲಕವಾಗಿ ತನ್ನ ಸಭೆಯಲ್ಲಿರುವವರಿಗೆ ಧರ್ಮದ ಸಾರವನ್ನು ಹೇಳಿ ಶೀಘ್ರವಾಗಿ ತತ್ತ್ವಾರ್ಥವನ್ನು ತಿಳಿದವರನ್ನಾಗಿ ಮಾಡಿ ಮಹಾಸೇನನೆಂಬ ಪುತ್ರನಿಗೆ ರಾಜ್ಯವನ್ನು ಕೊಟ್ಟು

ಸತ್ಪುರುಷರಿಗೆ ಪೂಜ್ಯನಾಗಿಯೂ ದೀನರನ್ನೂ ಅನಾಥರನ್ನೂ ಯಾಚಕರನ್ನೂ ಅವರು ಕೇಳಿದ ವಸ್ತುವಿನಿಂದ ತೃಪ್ತಿಪಡಿಸಿ ಸೀಮಂತಪರ್ವತದಲ್ಲಿದ್ದ ಶ್ರೀನಾಗಜಿನನನ್ನು ಹೊಂದಿ ಶಾಸ್ತ್ರೋಕ್ತವಾದ ವಿಧಿಯಿಂದ ಬಾಹ್ಯಾಭ್ಯಂತರಪರಿಗ್ರಹಗಳನ್ನು ತ್ಯಜಿಸಿ ಕಾಮನನ್ನು ಜಯಿಸಿದವನಾಗಿಯೂ ಉಪಶಮಭಾವಕ್ಕೆ ಸಾಧನವಾದ ಸಂಯಮವನ್ನು ಅನೇಕರೊಡನೆ ಹೊಂದಿ ಕ್ರಮದಿಂದ ಅನೇಕ ಋದ್ಧಿಗಳನ್ನು ಹೊಂದಿದವನಾಗಿಯೂ ಆಯುಷ್ಯಾವಸಾನದಲ್ಲಿ ಜ್ಞಾನದರ್ಶನಾದಿ ಚತುರ್ವಿಧಾರಾಧನೆಯನ್ನು ಆರಾಧಿಸಿ ಪ್ರಾಯೋಪಗಮನವನ್ನು ಹೊಂದಿದವನಾಗಿಯೂ ಪಾಪಕ್ಷೀಣನಾಗಿಯೂ ದಯಾಮೂರ್ತಿಯಾಗಿಯೂ ಸತ್ತು ಕೊನೆಯ ಅನುತ್ತರ–ಸರ್ವಾರ್ಥಸಿದ್ಧಿವಿಮಾನವನ್ನು ಪಡೆದನು.

**ಭೂಪಃ ಕೋಽಪಿ ಪುರಾ ಶ್ರಿಯಾ ಶ್ರಿತವಪುಃ ಪಾಪೋಪಲೇಪಾದ್ಭೃಶಂ ।**
**ಬಿಭ್ಯತ್ವಾಪ್ಯ ತಪೋ ಭಯಸ್ಯ ಶರಣಂ ಮತ್ವಾ ತೃತೀಯೇಽಭವತ್ ।**
**ಕಲ್ಪೇಽಂತ್ಯೇ ಭುವಮೇತ್ಯ ಚಕ್ರಪದವೀಂ ಸಂಪ್ರಾಪ್ಯ ಭುಕ್ತ್ವಾ ಸುಖಂ ।**
**ಸ ಶ್ರೀಮಾನ್ ಹರಿಷೇಣರಾಜವೃಷಭಃ ಸರ್ವಾರ್ಥಸಿದ್ಧಿಂ ಯಯೌ ॥**

ಪೂರ್ವದಲ್ಲಿ ಶೋಭೆಯಿಂದ ಕೂಡಿದ ಶರೀರವುಳ್ಳ ಯಾವ ರಾಜನೊಬ್ಬನು ಪಾಪದ ಲೇಪದಿಂದ ಬಹಳವಾಗಿ ಹೆದರಿದವನಾಗಿ ಭಯಕ್ಕೆ ತಪಸ್ಸು ಶರಣವೆಂದು ತಿಳಿದು ಅದನ್ನು ಹೊಂದಿ ಆಯುಷ್ಯಾವಸಾನದಲ್ಲಿ ಸತ್ತು ಸನತ್ಕುಮಾರವೆಂಬ ಮೂರನೆಯ ಕಲ್ಪದಲ್ಲಿ ದೇವನಾಗಿದ್ದು ಅಲ್ಲಿಂದ ಚ್ಯುತನಾಗಿ ಭೂಮಿಯನ್ನು ಹೊಂದಿ ಚಕ್ರವರ್ತಿಪದವಿಯನ್ನು ಪಡೆದು ಸುಖವನ್ನನುಭವಿಸಿದನೋ ಅಂತಹ ಶ್ರೀಮಂತನಾದ ಹರಿಷೇಣರಾಜಶ್ರೇಷ್ಠನು ಸರ್ವಾರ್ಥಸಿದ್ಧಿಯನ್ನು ಹೊಂದಿದನು.

**ತೀರ್ಥೇಽಸ್ಮಿನ್ನೇವ ಸಂಭೂತಾವಷ್ಟಮೌ ರಾಮಕೇಶವೌ ।**
**ರಾಮಲಕ್ಷ್ಮಣನಾಮಾನೌ ತತ್ಪುರಾಣಂ ನಿಗದ್ಯತೇ ॥ ೮೯ ॥**

ಈ ಮುನಿಸುವ್ರತತೀರ್ಥಂಕರರ ತೀರ್ಥಕಾಲದಲ್ಲೇ ರಾಮಲಕ್ಷ್ಮಣರೆಂಬ ಎಂಟನೆಯ ಬಲಭದ್ರ ನಾರಾಯಣರು ಜನಿಸಿದರು. ಅವರ ಪುರಾಣವು ಹೇಳಲ್ಪಡುತ್ತದೆ.

**ಇಹೈವ ಭಾರತೇ ಕ್ಷೇತ್ರೇ ರಾಷ್ಟ್ರೇ ಮಲಯನಾಮನಿ ।**
**ಪ್ರಜಾಪತಿಮಹಾರಾಜೋಜನಿ ರತ್ನಪುರಾಧಿಪಃ ॥ ೯೦ ॥**

ಈ ಭರತಕ್ಷೇತ್ರದಲ್ಲೇ ಮಲಯವೆಂಬ ದೇಶದಲ್ಲಿ ರತ್ನಪುರಾಧಿಪತಿಯಾದ ಪ್ರಜಾಪತಿಮಹಾರಾಜನು ಜನಿಸಿದನು.

**ತುಕ್ತಸ್ಯ ಗುಣಕಾಂತಾಯಾಂ ಚಂದ್ರಚೂಲಸಮಾಹ್ವಯಃ ।**
**ವಿಜಯಾಖ್ಯೇನ ತಸ್ಯಾಸೀತ್ಸಂಪ್ರೀತಿರ್ಮಂತ್ರಿಸೂನುನಾ ॥ ೯೧ ॥**

ಅವನ ಪತ್ನಿಯಾದ ಗುಣಕಾಂತೆಯಲ್ಲಿ ಚಂದ್ರಚೂಲನೆಂಬ ಪುತ್ರನು ಜನಿಸಿದನು. ಅವನಿಗೆ ಮಂತ್ರಿಪುತ್ರನಾದ ವಿಜಯನೆಂಬವನೊಡನೆ ಸ್ನೇಹವಾಯಿತು.

**ಪಿತೃಸಲ್ಲಾಲಿತೌ ಬಾಲೌ ಕುಲಾದಿಮದಚೋದಿತೌ ।**
**ಅಭೂತಾಂ ದುಷ್ಟಚಾರಿತ್ರೌ ದಂತಿನೌ ವಾತಿವರ್ತಿನೌ ॥ ೯೨ ॥**

ತಂದೆತಾಯಿಗಳಿಂದ ಪೋಷಿತರೂ ಕುಲಾದಿಗರ್ವದಿಂದ ಪ್ರೇರಿತರೂ ಆದ ಆ ಬಾಲಕರು, ಅತಿಕ್ರಮಿಸುವ ಆನೆಗಳಂತೆ, ದುರಾಚಾರಿಗಳಾದರು.

**ಅನ್ಯೇದ್ಯುಸ್ತತ್ಪುರೇ ಗೌತಮಾವೈಶ್ರವಣಸಂಭವ- ।**
**ಶ್ರೀದತ್ತಾಖ್ಯಾಯ ಮುಖ್ಯಾಯ ಕುಬೇರೇಣಾತ್ಮಜಾಂ ಸತೀಮ್ ॥ ೯೩ ॥**

**ದೀಯಮಾನಾಂ ಸಮಾಲೋಕ್ಯ ಪಾಣ್ಯಂಭಃಸೇಕಪೂರ್ವಕಮ್ ।**
**ಕುಬೇರದತ್ತಾಂ ಕೇನಾಪಿ ಮಹಾಪಾಪವಿಧಾಯಿನಾ ॥ ೯೪ ॥**

**ತಸ್ಯಾಃ ಸ್ವಾನುಚರೇಣೋಕ್ತಾಂ ಶ್ರುತ್ವಾ ರೂಪಾದಿಸಂಪದಮ್ ।**
**ಕುಮಾರೇ ತಾಂ ಸ್ವಸಾತ್ಕರ್ತುಂ ಸಹಮಿತ್ರೇ ಸಮುದ್ಯತೇ ॥ ೯೫ ॥**

**ವಣಿಕ್ಸಂಘಸಮಾಕ್ರೋಶಧ್ವನಿಮಾಕರ್ಣ್ಯ ಭೂಪತಿಃ ।**
**ಸ್ವತನೂಜದುರಾಚಾರದಾರೂದ್ಯತ್ಕೋಪಪಾವಕಃ ॥ ೯೬ ॥**

**ಪುರರಕ್ಷಕಮಾಹೂಯ ದುರಾತ್ಮಾನಂ ಕುಮಾರಕಮ್ ।**
**ಲೋಕಾಂತರಾತಿಥಿಂ ಸದ್ಯೋ ವಿಧೇಹೀತಿ ಸಮಾದಿಶತ್ ॥ ೯೭ ॥**

ಮತ್ತೊಂದು ದಿವಸ ಆ ನಗರದಲ್ಲಿರುವ ಗೌತಮೆಯಲ್ಲಿ ವೈಶ್ರವಣನಿಂದ ಜನಿಸಿದವನೂ ಮುಖ್ಯನೂ ಆದ ಶ್ರೀದತ್ತನಿಗೆ ಕುಬೇರನೆಂಬ ವೈಶ್ಯನಿಂದ ತನ್ನ ಪುತ್ರಿಯೂ ಪತಿವ್ರತೆಯೂ ಹಸ್ತೋದಕಸೇಚನಪೂರ್ವಕವಾಗಿ ಕೊಡಲ್ಪಡುತ್ತಿರುವವಳೂ ಆದ ಕುಬೇರದತ್ತೆಯನ್ನು ನೋಡಿ ಮಹಾಪಾಪಕಾರಿಯಾದ ಒಬ್ಬಾನೊಬ್ಬ ತನ್ನ ಸೇವಕನಿಂದ ಹೇಳಲ್ಪಟ್ಟ ಆ ಕುಬೇರದತ್ತೆಯ ರೂಪಾದಿಸಂಪತ್ತಿಯನ್ನು ಕೇಳಿ ಆಕೆಯನ್ನು ಸ್ವಾಧೀನಮಾಡಿಕೊಳ್ಳುವುದಕ್ಕೋಸ್ಕರ ಮಿತ್ರಸಹಿತನಾದ ರಾಜಕುಮಾರನು ಉದ್ಯುಕ್ತನಾಗಿರಲು ವೈಶ್ಯರ ಸಮೂಹದಲ್ಲುಂಟಾದ ಆಕ್ರೋಶಧ್ವನಿಯನ್ನು ಕೇಳಿ ಪ್ರಜಾಪತಿಮಹಾರಾಜನು ತನ್ನ ಪುತ್ರನ ದುರಾಚಾರವೆಂಬ ಕಟ್ಟಿಗೆಯಿಂದುಂಟಾದ ಕೋಪವೆಂಬ ಬೆಂಕಿಯುಳ್ಳವನಾಗಿ ನಗರರಕ್ಷಕನನ್ನು ಕರೆದು ದುರಾತ್ಮನಾದ ರಾಜಕುಮಾರನನ್ನು ತತ್ಕ್ಷಣದಲ್ಲಿ ಲೋಕಾಂತರದ ಅತಿಥಿಯನ್ನಾಗಿ ಮಾಡು–ಕೊಲ್ಲು" ಎಂದು ಆಜ್ಞೆಮಾಡಿದನು.

**ತಥೈವ ಸೋಽಪಿ ರಾಜಾಜ್ಞಾಚೋದಿತಸ್ತುಮುಲಾಹವೇ ।**
**ಜೀವಗ್ರಾಹಂ ಗೃಹೀತ್ವೈನಮಾನಯನ್ನಿಕಟಂ ಪ್ರಭೋಃ ॥ ೯೮ ॥**

ಹಾಗೆಯೇ ಆ ನಗರರಕ್ಷಕನೂ ರಾಜಾಜ್ಞೆಯಿಂದ ಪ್ರೇರಿತನಾಗಿ ಬಿಕ್ಕಟ್ಟಾದ ಕದನದಲ್ಲಿ ಈ ರಾಜಕುಮಾರನನ್ನು ಜೀವಸಹಿತವಾಗಿ ಹಿಡಿದು ದೊರೆಯ ಬಳಿಗೆ ತಂದನು.

**ತಮಾಲೋಕ್ಯ ಕಿಮಿತ್ಯೇಷ ಪಾಪೀಹಾನೀಯತೇ ದ್ರುತಮ್ ।**
**ನಿಶಾತಶೂಲಮಾರೋಪ್ಯ ಶ್ಮಶಾನೇ ಸ್ಥಾಪ್ಯತಾಮಿತಿ ॥ ೯೯ ॥**

**ರಾಜ್ಞೋಕ್ತೇ ಪ್ರಸ್ಥಿತೋ ಹಂತುಂ ಕುಮಾರಂ ಪುರರಕ್ಷಕಃ ।**
**ನ್ಯಾಯಾನುವರ್ತನಂ ಯುಕ್ತಂ ನ ಹಿ ಸ್ನೇಹಾನುವರ್ತನಮ್ ॥ ೧೦೦ ॥**

ರಾಜನು ಅವನನ್ನು ನೋಡಿ "ಈ ಪಾಪಿಯನ್ನು ಇಲ್ಲಿಗೇಕೆ ಕರೆದುಕೊಂಡು ಬಂದೆ? ಶೀಘ್ರವಾಗಿ ಸುಡುಗಾಡಿನಲ್ಲಿ ಹರಿತವಾದ ಶೂಲವನ್ನೇರಿಸಿ ಸ್ಥಾಪಿಸು" ಎಂದು ಹೇಳಲು ಪುರರಕ್ಷಕನು ರಾಜಕುಮಾರನನ್ನು ಕೊಲ್ಲುವುದಕ್ಕೋಸ್ಕರ ಹೊರಟನು. ನ್ಯಾಯಪರರಿಗೆ ನ್ಯಾಯಾನುಸರಣವು ಯುಕ್ತವಾದುದು. ಸ್ನೇಹಾನುಸರಣವು ಯುಕ್ತವಾದುದೇ ಅಲ್ಲ.

**ತದಾಮಾತ್ಯೋತ್ತಮಃ ಪೌರಾನ್ ಪುರಸ್ಕೃತ್ಯ ಮಹೀಪತಿಮ್ ।**
**ವ್ಯಜಿಜ್ಞಪದಿತಿ ವ್ಯಕ್ತಮುತ್ಕ್ಷಿಪ್ತಕರಕುಡ್ಮಲಃ ॥ ೧೦೧ ॥**

ಆಗ ಮಂತ್ರಿಶ್ರೇಷ್ಠನು ಪುರನಿವಾಸಿಗಳನ್ನು ಮುಂದುಮಾಡಿಕೊಂಡು ರಾಜನಿಗೆ ಕೈಗಳನ್ನೆತ್ತಿ ನಮಸ್ಕರಿಸಿದವನಾಗಿ ಮುಂದೆ ಹೇಳುವಂತೆ ವ್ಯಕ್ತವಾಗಿ ವಿಜ್ಞಾಪಿಸಿಕೊಂಡನು.

**ಕೃತ್ಯಾಕೃತ್ಯವಿವೇಕೋಽಸ್ಯ ನಾಬಾಲ್ಯಾದ್ದೇವ ವಿದ್ಯತೇ ।**
**ಪ್ರಮಾದೋಽಸ್ಮಾಕಮೇವಾಯಂ ವಿನೇಯಾಃ ಪಿತೃಭಿಃ ಸುತಾಃ ॥ ೧೦೨ ॥**

"ಸ್ವಾಮಿಯೆ! ಈ ರಾಜಕುಮಾರನಿಗೆ ಬಾಲ್ಯದ ಮೊದಲುಗೊಂಡು ಕಾರ್ಯಾಕಾರ್ಯದ ವಿವೇಚನೆಯಿಲ್ಲ. ಇದು ನಮ್ಮ ಪ್ರಮಾದವೇ ಆಗಿದೆ. ತಂದೆ ತಾಯಿಗಳು ಮಕ್ಕಳನ್ನು ವಿನೀತರನ್ನಾಗಿ ಮಾಡಬೇಕು.

**ನ ದಾಂತೋ ಯಂತೃಭಿರ್ದಂತೀ ಶೈಶವೇ ಚೇದ್ಯಥೋಚಿತಮ್ ।**
**ಪ್ರಾಪ್ತೈಶ್ವರ್ಯೋ ನ ಕಿಂ ಕುರ್ಯಾದಸೌ ದರ್ಪಗ್ರಹಾಹಿತಃ ॥ ೧೦೩ ॥**

ಮಾವಟಿಗರು ಆನೆಯನ್ನು ಅದರ ಶೈಶವದಲ್ಲಿ ಯಥೋಚಿತವಾಗಿ ದಮನ ಮಾಡದಿದ್ದರೆ ಮದವೆಂಬ ಗ್ರಹದಿಂದ ಕೂಡಿದುದೂ ಐಶ್ವರ್ಯ-ಯೌವನವನ್ನು ಹೊಂದಿರುವುದೂ ಆದ ಈ ಆನೆಯು ಯಾವ ಅನರ್ಥವನ್ನು ಮಾಡುವುದಿಲ್ಲ? ಗರ್ವವೆಂಬ ಗ್ರಹದಿಂದ ಆವಿಷ್ಟನಾದ ಈ ರಾಜಕುಮಾರನೂ ಐಶ್ವರ್ಯವನ್ನು ಹೊಂದಿದವನಾಗಿ ಯಾವ ಅನರ್ಥವನ್ನು ಮಾಡುವುದಿಲ್ಲ? ಎಂದು ಭಾವವು.

**ನ ಬುದ್ಧಿಮಾನ್ನ ದುರ್ಬುದ್ಧಿರ್ನ ವಧಂ ದಂಡಮರ್ಹತಿ ।**
**ಆಹಾರ್ಯಬುದ್ಧಿರೇಷೋತಃ ಶಿಕ್ಷಣೀಯೋಧುನಾಪ್ಯಲಮ್ ॥ ೧೦೪ ॥**

ಈ ಕುಮಾರನು ಬುದ್ಧಿಯುಳ್ಳವನೂ ಅಲ್ಲ; ದುರ್ಬುದ್ಧಿಯುಳ್ಳವನೂ ಅಲ್ಲ. ಇಂಥವನು ವಧರೂಪವಾದ ಶಿಕ್ಷೆಗೆ ಅರ್ಹನಲ್ಲ. ಇವನು ವಶಕ್ಕೆ ತರಲು ಯೋಗ್ಯವಾದ ಬುದ್ಧಿಯುಳ್ಳವನಾಗಿದ್ದಾನೆ. ಆದುದರಿಂದ ಈಗಲೂ ಇವನು ಚೆನ್ನಾಗಿ ಶಿಕ್ಷಣವನ್ನು ಹೊಂದುವುದಕ್ಕೆ ಅರ್ಹನಾಗಿದ್ದಾನೆ.

**ನ ಕೋಪೋಸ್ಮಿಂಸ್ತವಾಸ್ತ್ಯೇವ ನ್ಯಾಯಮಾರ್ಗೋನ್ನಿನೀಷಯಾ ।**
**ನಿಗೃಹ್ಣಾಸ್ಯೇಕ ಏವಾಯಂ ರಾಜ್ಯಸಂತತಿಸಂವೃತೌ ॥ ೧೦೫ ॥**

ಇವನಲ್ಲಿ ನಿನಗೆ ಕೋಪವಿಲ್ಲವೇ ಇಲ್ಲ. ನ್ಯಾಯಮಾರ್ಗಕ್ಕೆ ಒಯ್ಯಬೇಕೆಂಬ ಇಚ್ಛೆಯಿಂದ ದಂಡಿಸುತ್ತಿ. ರಾಜ್ಯಪರಂಪರೆಯ ರಕ್ಷಣೆಯಲ್ಲಿ ಇವನೊಬ್ಬನೇ ಇದ್ದಾನೆ. ಆ ರಾಜನಿಗೆ ಅವನೊಬ್ಬನೇ ಪುತ್ರನೆಂದು ಭಾವವು.

**ಅನ್ಯತ್ಸಂಧಿತ್ಸತೋತ್ರಾನ್ಯತ್ಪ್ರಚ್ಯುತಂ ತದಿತಿ ಶ್ರುತಿಃ ।**
**ಸಾ ತವಾದ್ಯ ಸಮಾಯಾತಿ ಸಂತಾನೋಚ್ಛೇದಕಾರಿಣಃ ॥ ೧೦೬ ॥**

'ಒಂದನ್ನು ಸೇರಿಸುವವನಿಗೆ ಮತ್ತೊಂದು ಜಾರಿಹೋಗುವುದು-ಒಂದು ಹೋಗಿ ಮತ್ತೊಂದಾಯಿತು' ಎಂಬುದು ಈಗ ಸಂತಾನ-ಪರಂಪರೆಯನ್ನು ನಾಶ ಮಾಡುವ ನಿನಗೆ ಚೆನ್ನಾಗಿ ಅನ್ವಯಿಸುತ್ತದೆ.

**ಏತತ್ಪೂತ್ಕಾರತೋ ಜ್ಯೇಷ್ಠಂ ತನೂಜಮವಧೀನ್ನೃಪಃ ।**
**ಇತ್ಯವಾಚ್ಯಭಯಗ್ರಸ್ತಾಃ ಪೌರಾಸ್ತ್ವೈತೇ ಪುರಸ್ಥಿತಾಃ ॥ ೧೦೭ ॥**

'ನಮ್ಮ ಈ ಕೂಗಾಟದಿಂದಾಗಿ ರಾಜನು ತನ್ನ ಜ್ಯೇಷ್ಠಪುತ್ರನನ್ನು ಕೊಂದನು' ಎಂಬ ಅಪವಾದಭಯಗ್ರಸ್ತರಾದ ಈ ಪುರನಿವಾಸಿಗಳು ನಿನ್ನ ಮುಂದೆ ನಿಂತಿದ್ದಾರೆ.

**ತತ್ಕ್ಷಮಸ್ವಾಪರಾಧಂ ಮೇ ಮಹೀಶ ಪ್ರಾರ್ಥಿತೋಸ್ಯಮುಮ್ ।**
**ಏತನ್ಮಂತ್ರಿವಚಃ ಶ್ರುತ್ವಾ ವಿರೂಪಕಮುದೀರಿತಮ್ ॥ ೧೦೮ ॥**

**ಅವಿದ್ಭಿರಿವ ಶಾಸ್ತ್ರಾರ್ಥಂ ಭವದ್ಭಿಃ ಶ್ರುತಪಾರಗೈಃ ।**
**ದುಷ್ಟಾನಾಂ ನಿಗ್ರಹಃ ಶಿಷ್ಟಪಾಲನಂ ಭೂಭುಜಾಂ ಮತಮ್ ॥ ೧೦೯ ॥**

**ನೀತಿಶಾಸ್ತ್ರೇಷು ತತ್ಸ್ನೇಹಮೋಹಾಶಕ್ತಿಭಯಾದಿಭಿಃ ।**
**ಅಸ್ಮಾಭಿರ್ಲಂಘಿತೇ ನ್ಯಾಯೇ ಭವಂತಸ್ತಸ್ಯ ವರ್ತಕಾಃ ॥ ೧೧೦ ॥**

ಆದುದರಿಂದ ರಾಜನೆ! ನನ್ನ ಈ ತಪ್ಪನ್ನು ಮನ್ನಿಸು. ನಿನ್ನನ್ನು ಪ್ರಾರ್ಥಿಸುತ್ತೇನೆ." ಮಂತ್ರಿಯ ಈ ಮಾತನ್ನು ಕೇಳಿ ರಾಜನು "ಶಾಸ್ತ್ರದ ಪಾರವನ್ನು ಹೊಂದಿರುವ ತಾವುಗಳು ಶಾಸ್ತ್ರದ ಅರ್ಥವನ್ನು ತಿಳಿಯದವರಂತೆ ಅಸಂಗತವಾದ ಮಾತನ್ನಾಡಿದಿರಿ. ದುಷ್ಟನಿಗ್ರಹವೂ ಶಿಷ್ಟಪರಿಪಾಲನವೂ ನೀತಿಶಾಸ್ತ್ರಗಳಲ್ಲಿ ರಾಜರುಗಳ ಮತವೆಂದು ಹೇಳಲ್ಪಟ್ಟಿದೆ. ಆ ಪುತ್ರನ ಪ್ರೀತಿ ಮೋಹ ಅಶಕ್ತಿ ಭಯವೇ ಮೊದಲಾದವುಗಳುಳ್ಳ ನಾವು ನ್ಯಾಯವನ್ನು ಮೀರುತ್ತಿರಲು ತಾವುಗಳು ಅದಕ್ಕೆ ಪ್ರವರ್ತಕರು.

**ತಸ್ಮಾದಯುಕ್ತಂ ಯುಷ್ಮಾಕಂ ಮಾಂ ಯೋಜಯಿತುಮುತ್ಪಥೇ ।**
**ದುಷ್ಟೋ ದಕ್ಷಿಣಹಸ್ತೋಪಿ ಸ್ವಸ್ಯ ಛೇದ್ಯೋ ಮಹೀಭುಜಾ ॥ ೧೧೧ ॥**

ಆದುದರಿಂದ ನನ್ನನ್ನು ತಪ್ಪು ದಾರಿಯಲ್ಲಿ ಸೇರಿಸುವುದು ನಿಮ್ಮಗಳಿಗೆ ತಕ್ಕುದಲ್ಲ. ತನ್ನ ದುಷ್ಟವಾದ ಬಲಗೈಯಾದರೂ ರಾಜನಿಂದ ಕತ್ತರಿಸಲ್ಪಡತಕ್ಕುದಾಗಿದೆ.

**ಕೃತ್ಯಾಕೃತ್ಯವಿವೇಕಾತಿದೂರೋ ಮ ಢೋ ನ ಭೂಭುಜಃ ।**
**ಸ ಸಾಂಖ್ಯಪುರುಷಸ್ತೇನ ಕೃತ್ಯಂ ನಾತ್ರ ಪರತ್ರ ಚ ॥ ೧೧೨ ॥**

ಕಾರ್ಯಾಕಾರ್ಯವಿವೇಕದಿಂದ ದೂರನೂ ಮೂರ್ಖನೂ ಆಗಿರುವವನು ರಾಜನ ಪುತ್ರನಲ್ಲ. ಅಂಥವನು ಸಾಂಖ್ಯಮತದ ಪುರುಷ. (ಸಾಂಖ್ಯಮತದಲ್ಲಿ ಪ್ರಕೃತಿಯು ಕಾರ್ಯಕಾರಿಯೆಂದೂ ಪುರುಷನು ಕಮಲಪತ್ರದಂತೆ ನಿರ್ಲಿಪ್ತನೆಂದೂ ಹೇಳಿದೆ) ಅಂಥವನಿಂದ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಮಾಡಲ್ಪಡತಕ್ಕ ಕೆಲಸವಿಲ್ಲ.

**ತಸ್ಮಾನ್ನ ಪ್ರತಿಷೇಧ್ಯೋಹಮಿತಿ ರಾಜ್ಞಾಭಿಭಾಷಿತೇ ।**
**ಪೌರಾಸ್ತದೇವ ಜಾನಾತಿ ದೇವ ಏವೇತ್ಯಯುರ್ಭಯಾತ್ ॥ ೧೧೩ ॥**

ಆದುದರಿಂದ ನನ್ನನ್ನು ತಡೆಯಬಾರದು" ಎಂದು ರಾಜನು ಮಾತನಾಡುತ್ತಿರಲು ಪುರನಿವಾಸಿಗಳು "ಆ ವಿಷಯವನ್ನು ದೊರೆಯೇ ತಿಳಿಯುತ್ತಾನೆ" ಎಂದು ಭಯದಿಂದಲೇ ಹೊರಟು ಹೋದರು.

**ಸುತೇತಿಸ್ನಿಗ್ಧತಾಂ ಭರ್ತುರ್ಜಾನಂಶ್ಚೈವಾಹಮೇವ ತಮ್ ।**
**ದಂಡಯಿಷ್ಯಾಮಿ ಗತ್ವೇತಿ ನಿರ್ಗತ್ಯ ತದನುಜ್ಞಯಾ ॥ ೧೧೪ ॥**

**ಪ್ರಾಪ್ಯ ಸ್ವರಾಜಪುತ್ರಾಭ್ಯಾಂ ವನಗಿರ್ಯದ್ರಿಮಬ್ರವೀತ್ ।**
**ಹೇ ಕುಮಾರ ತವಾವಶ್ಯಂ ಮರಣಂ ಸಮುಪಸ್ಥಿತಮ್ ॥ ೧೧೫ ॥**

**ಬಿಭೇಃ ಶಕ್ನೋಷಿ ಕಿಂ ಮರ್ತುಮಿತ್ಯವಾದೀತ್ಸ ಚೇದೃಶಮ್ ।**
**ಬಿಭೇಮಿ ಚೇದಹಂ ಮೃತ್ಯೋಃ ಕಿಮಿತ್ಯೇತದನುಷ್ಠಿತಮ್ ॥ ೧೧೬ ॥**

**ಸಲಿಲಂ ವಾ ತೃಷಾರ್ತಸ್ಯ ಶೀತಲಂ ಮರಣಂ ಮಮ ।**
**ತತ್ರ ಕಾ ಭೀರಿತಿ ವ್ಯಕ್ತಂ ತದುಕ್ತಮವಬುಧ್ಯ ಸಃ ॥ ೧೧೭ ॥**

**ನಾಗರೇಭ್ಯೋ ಮಹೀಭರ್ತ್ರೇ ಕುಮಾರಾಯಾತ್ಮನೇಪಿ ಚ ।**
**ಲೋಕದ್ವಯಹಿತಂ ಕಾರ್ಯಂ ನಿಶ್ಚಿತ್ಯ ಸಚಿವಾಗ್ರಣೀಃ ॥ ೧೧೮ ॥**

**ತದದ್ರಿಮಸ್ತಕಂ ಗತ್ವಾ ಮಹಾಬಲಗಣೇಶಿನಮ್ ।**
**ಅಭಿವಂದ್ಯ ನಿಜಾಯಾನಕಾರ್ಯಂ ಚಾಸ್ಮೈ ನ್ಯವೇದಯತ್ ॥ ೧೧೯ ॥**

ಪ್ರಭುವಿಗೆ ಪುತ್ರನಲ್ಲಿರುವ ಬಹುಪ್ರೇಮವನ್ನು ತಿಳಿಯುವವನಾಗಿಯೇ ಮಂತ್ರಿಯು "ನಾನೇ ಹೋಗಿ ಆ ಪುತ್ರನನ್ನು ಶಿಕ್ಷಿಸುವೆನು." ಎಂದು ಆ ರಾಜನ ಅನುಜ್ಞೆಯಿಂದ ತನ್ನ ಪುತ್ರನೊಡನೆಯೂ ರಾಜನ ಪುತ್ರನೊಡನೆಯೂ ಹೊರಟು ವನಗಿರಿಯೆಂಬ ಪರ್ವತವನ್ನು ಸೇರಿ "ಎಲೈ ರಾಜುಕುಮಾರನೆ! ನಿನಗೆ ಅವಶ್ಯವಾಗಿ ಮರಣವು ಸನ್ನಿಹಿತವಾಗಿದೆ. ಭಯವಿಲ್ಲದವನಾಗಿ ಸಾಯುವುದಕ್ಕೆ ಸಮರ್ಥನಾಗಿರುವೆಯಾ?" ಎಂದು ಹೇಳಿದನು. ಅದಕ್ಕೆ ಆ ರಾಜಪುತ್ರನೂ "ನಾನು ಮರಣಕ್ಕೆ ಹೆದರುತ್ತೇನಾದರೆ ಏತಕ್ಕೋಸ್ಕರ ಇಂತಹ ಈ ಕಾರ್ಯವನ್ನು ಮಾಡುತ್ತಿದ್ದೆನು? ಬಾಯಾರಿಕೆಯಿಂದ ಪೀಡಿತನಾದವನಿಗೆ ತಣ್ಣಗಿರುವ ನೀರಿನಂತೆ ನನಗೆ ಮರಣವು ಶಾಂತಿಯನ್ನುಂಟುಮಾಡುವುದು. ಅದರಲ್ಲಿ ಭೀತಿ ಯಾವುದು?" ಎಂದು ಸ್ಫುಟವಾಗಿ ಹೇಳಿದನು. ಆ ಮಂತ್ರಿಮುಖ್ಯನು ರಾಜಕುಮಾರನ ಮಾತನ್ನು ತಿಳಿದು ಪುರನಿವಾಸಿಗಳಿಗೂ ರಾಜನಿಗೂ ರಾಜಕುಮಾರನಿಗೂ ತನಗೂ ಇಹಪರ ಲೋಕಹಿತವಾದ ಕಾರ್ಯವನ್ನು ನಿಶ್ಚಯಿಸಿ ಆ ಪರ್ವತದ ಶಿಖರಕ್ಕೆ ಹೋಗಿ ಮಹಾಬಲನೆಂಬ ಗಣಧರಯತಿಯನ್ನು ನಮಸ್ಕರಿಸಿ ತನ್ನ ಆಗಮನದ ಕಾರ್ಯವನ್ನೂ ಈ ಮುನಿಮುಖ್ಯನಿಗೆ ನಿವೇದಿಸಿದನು.

**ಮನಃಪರ್ಯಯಸಂಜ್ಞಾನಚಕ್ಷುಃ ಸ ಗಣನಾಯಕಃ ।**
**ಮಾಭೈಷೀರ್ಧ್ರಾವಿಮೌ ರಾಮಕೇಶವಾವಿಹ ಭಾವಿನೌ ॥ ೧೨೦ ॥**

**ತೃತೀಯಜನ್ಮನೀತ್ಯಾಹ ತಚ್ಛ್ರುತ್ವಾ ಸಚಿವೋ ಮುದಾ ।**
**ತೌ ತತ್ರಾನೀಯ ಸಂಶ್ರಾವ್ಯ ಧರ್ಮಂ ಸಂಯಮಮಾಪಯತ್॥ ೧೨೧ ॥**

ಮನಃಪರ್ಯಯಜ್ಞಾನವೆಂಬ ನೇತ್ರವುಳ್ಳವನಾದ ಆ ಗಣಧರನು "ಹೆದರ ಬೇಡ. ಇವರಿಬ್ಬರು ಇಲ್ಲಿ ಮುಂದೆ ಮೂರನೆಯ ಜನ್ಮದಲ್ಲಿ ಬಲಭದ್ರ ನಾರಾಯಣರಾಗುವವರು." ಎಂದು ಮಂತ್ರಿಗೆ ಹೇಳಿದನು. ಆ ಮಾತನ್ನು ಕೇಳಿ ಮಂತ್ರಿಯು ಸಂತೋಷದಿಂದ ಆ ಈರ್ವರು ಕುಮಾರರನ್ನು ಗಣಧರರ ಬಳಿಗೆ ಕರೆದುಕೊಂಡು ಬಂದು ಧರ್ಮವನ್ನು ಕೇಳಿಸಿ ಸಂಯಮವನ್ನು ಹೊಂದಿಸಿದನು. ದೀಕ್ಷೆಯನ್ನು ಕೊಡಿಸಿದನೆಂದು ಭಾವವು.

**ತತೋ ಭೂಪತಿಮಾಸಾದ್ಯ ಮಂತ್ರೀತೀದಮಬೋಧಯತ್ ।**
**ವಾರಣಾರೇರಿವಾಭೀರೋರೇಕಕಸ್ಯ ಗುಹಾಶ್ರಿತಃ ॥ ೧೨೨ ॥**

**ಅನಾದೃತಸ್ವಸೌಖ್ಯಸ್ಯ ಕಸ್ಯ ಚಿದ್ವನವಾಸಿನಃ ।**
**ಸ್ವಕಾರ್ಯೇಷ್ವತಿತೀವ್ರಸ್ಯ ಜನಸ್ಯಾತ್ಯುಗ್ರಚೇಷ್ಟಿತುಃ ॥ ೧೨೩ ॥**

**ತಾವರ್ಪಿತೌ ಮಯಾ ಸೋಪಿ ತಾವಾಹ ಕೃತದೋಷಯೋಃ ।**
**ಭವತೋರ್ನ ಸುಖಂ ಸ್ಮಾರ್ಯಂ ದುಃಖಂ ಭೋಗ್ಯಂ ಸುದುಷ್ಕರಮ್ ॥ ೧೨೪ ॥**

**ಸ್ಮರ್ತವ್ಯಾ ದೇವತಾ ಚಿತ್ತೇ ಪರಲೋಕನಿಮಿತ್ತತಃ ।**
**ಇತ್ಯತಸ್ತೌ ಚ ಭದ್ರ ತ್ವಂ ಮಾಸ್ಮಕೃಥಾಃ ಕಷ್ಟದಂಡನಮ್ ॥ ೧೨೫ ॥**

**ಆವಾಭ್ಯಾಮಾವಯೋಃ ಕಾರ್ಯಮಿತ್ಯಾತ್ಮಕರಭಾವಿತಾಮ್ ।**
**ವೇದನಾಂ ತೀವ್ರಮಾಸಾದ್ಯ ಪರಲೋಕೋನ್ಮುಖಾವುಭೌ ॥ ೧೨೬ ॥**

**ಅಭೂತಾಂ ತದ್ವಿಲೋಕ್ಯಾಹಮಭಿಪ್ರೇತಾರ್ಥನಿಷ್ಠಿತಮ್ ।**
**ಸುವಿಧಾಯಾಗತೋ ದೇವ ಸಿದ್ಧಂ ಭವದುದೀರಿತಮ್ ॥ ೧೨೭ ॥**

**ಶ್ರುತ್ವಾ ತದ್ವಚನಂ ರಾಜಾ ಮಹಾದುಃಖಾಕುಲೋ ಮನಾಕ್ ।**
**ನಿವಾತಸ್ತಿಮಿತಕ್ಷ್ಮಾಜಸಮಾನೋ ನಿಶ್ಚಲಂ ಸ್ಥಿತಃ ॥ ೧೨೮ ॥**

ಅಲ್ಲಿಂದ ಬಂದು ಮಂತ್ರಿಯು ರಾಜನನ್ನು ಕಂಡು ಹೀಗೆ ಈ ಮಾತನ್ನು ಹೇಳಿದನು "ದೇವಾ ! ಸಿಂಹದಂತೆ ಭಯವಿಲ್ಲದವನೂ ಒಬ್ಬನೇ ಆಗಿರುವವನೂ ಗುಹೆಯನ್ನು ಹೊಂದಿರುವವನೂ ತನ್ನ ಸೌಖ್ಯದಲ್ಲಿ ಆದರವಿಲ್ಲದಿರುವವನೂ ವನವಾಸಿಯೂ ತನ್ನ ಕಾರ್ಯಗಳಲ್ಲಿ ಬಹುತೀವ್ರನೂ ಬಹು ಭಯಂಕರವಾದ ವ್ಯಾಪಾರವುಳ್ಳವನೂ ಆದ ಒಬ್ಬಾನೊಬ್ಬ ಮನುಷ್ಯನಿಗೆ ಆ ಕುಮಾರರನ್ನು ನಾನು ಅರ್ಪಿಸಿದೆನು. ಆ ಮನುಷ್ಯನೂ ಕುಮಾರರನ್ನು ಕುರಿತು "ತಪ್ಪನ್ನು ಮಾಡಿರುವ ನಿಮ್ಮಗಳಿಗೆ ಸ್ಮರಿಸಲ್ಪಡತಕ್ಕ ಸುಖವಿಲ್ಲ. ಬಹುಕಷ್ಟವಾದ ದುಃಖವು ನಿಮ್ಮಿಂದ ಭೋಗಿಸಲ್ಪಡತಕ್ಕುದಾಗಿದೆ. ಪರಲೋಕನಿಮಿತ್ತದಿಂದ ಹೃದಯದಲ್ಲಿ ದೇವರನ್ನು ಸ್ಮರಿಸಬೇಕು" ಎಂದು ಹೇಳಿದನು. ಬಳಿಕ ಅವರೂ ಆ ಮನುಷ್ಯನನ್ನು ಕುರಿತು "ಅಯ್ಯಾ! ನಮ್ಮಗಳಿಂದ ಮಾಡಲ್ಪಡತಕ್ಕುದೂ ನಮ್ಮಗಳಿಗೆ ಕಷ್ಟವೂ ಆದ ದಂಡವನ್ನು ನೀನು ಯೋಚನೆ ಮಾಡಬೇಡ" (ನಮ್ಮಗಳಿಗೆ ಕಷ್ಟವಾದ ಶಿಕ್ಷೆಯೆಂದು ಯೋಚಿಸಬೇಡ) ಎಂದು ಹೇಳಿ ಆತ್ಮಸ್ವರೂಪಸಾಧಕವಾದ ಭಾವನೆಯುಳ್ಳ ವೇದನೆಯನ್ನು ತೀವ್ರವಾಗಿ ಪಡೆದು ಈರ್ವರೂ ಪರಲೋಕಾಭಿಮುಖರಾದರು. ಅದನ್ನು ನೋಡಿ ನಾನು ಅಭೀಷ್ಟವಾದ ಪ್ರಯೋಜನಸಿದ್ಧಿಯನ್ನು ಚೆನ್ನಾಗಿ ಮಾಡಿ ಬಂದೆನು. ನಿನ್ನ ಮಾತು ಸಿದ್ಧಿಸಿತು." ಮಂತ್ರಿಯ ಮಾತನ್ನು ಕೇಳಿ ಪ್ರಜಾಪತಿ ಮಹಾರಾಜನು ಮಹಾದುಃಖದಿಂದ ವ್ಯಾಕುಲನೂ ಗಾಳಿಯಿಲ್ಲದ ಸ್ತಿಮಿತವಾದ ಮರಕ್ಕೆ ಸಮಾನನೂ ಆಗಿ ಸ್ವಲ್ಪ ನಿಶ್ಚಲನಾಗಿದ್ದನು.

**ಆತ್ಮನಾ ಮಂತ್ರಿಭಿರ್ಬಂಧುಜನೈಶ್ಚಾಲೋಚ್ಯ ನಿಶ್ಚಿತಮ್ ।**
**ಕಾರ್ಯಂ ಹಿತಮನುಷ್ಠೇಯಂ ತತ್ಪ್ರಾಕ್ ನಾನುಷ್ಠಿತಂ ತ್ವಯಾ॥ ೧೨೯ ॥**

"ತಾನು ಮಂತ್ರಿಗಳೊಡನೆಯೂ ಬಂಧುಜನಗಳೊಡನೆಯೂ ಆಲೋಚಿಸಿ ನಿಶ್ಚಿತವೂ ಹಿತವೂ ಆದ ಕಾರ್ಯವನ್ನು ಮಾಡಬೇಕು. ಅದನ್ನು ಮೊದಲು ನೀನು ಮಾಡಲಿಲ್ಲ.

**ಕರಜಾಲಮತಿಕ್ರಾಂತಮಿವ ಸರ್ಪಿರ್ಮಹೀರುಹೇ ।**
**ಪ್ರಸೂನಮಿವ ಸಂಶುಷ್ಕಂ ಕಾರ್ಯಂ ಕಾಲಾತಿಪಾತಿತಮ್ ॥ ೧೩೦ ॥**

ಕೈಯೆಂಬ ಬಲೆಯನ್ನು ಅತಿಕ್ರಮಿಸಿದ(ಕೈಬೆರಲ್ಗಳ ಸಂಧಿಯಿಂದ ಸೋರಿ ಹೋದ) ತುಪ್ಪದಂತೆಯೂ ಮರದಲ್ಲಿ ಚೆನ್ನಾಗಿ ಒಣಗಿದ ಹೂವಿನಂತೆಯೂ ಕಾರ್ಯವು ಕಾಲವನ್ನು ಮೀರಿತು.

**ತತ್ರ ಶೋಕೋ ನ ಕರ್ತವ್ಯೋ ವೃಥೇತಿ ಸಚಿವೋದಿತಮ್ ।**
**ಶ್ರುತ್ವಾ ತದ್ವಚನಂ ಬ್ರೂಹಿ ನಂರ್ಜೀ ತದ್ವೃತ್ತಕಂ ಕಥಮ್ ॥ ೧೩೧ ॥**

**ಇತ್ಯಪ್ರಾಕ್ಷೀತ್ತತೋಽಸ್ಯಾಭಿಪ್ರಾಯವಿತ್ಸಚಿವೋಽವದತ್ ।**
**ಯತಯೋ ವನಗಿರ್ಯದ್ರಿಗುಹಾಗಹನವಾಸಿನಃ ॥ ೧೩೨ ॥**

**ಧೈರ್ಯಾಸಿಧಾರಾನಿರ್ಭಿನ್ನಕಷಾಯವಿಷಯದ್ವಿಷಃ ।**
**ಸ್ಥೂಲಸೂಕ್ಷ್ಮಾಸುಭೃದ್ರಕ್ಷಾನಿತಾಂತೋದ್ಯತವೃತ್ತಯಃ ॥ ೧೩೩ ॥**

**ಭಿಯಾ ಭಿಯೇವ ಕೋಪೇನ ಕೋಪೇನೇವಾನಿತಾಶಯಾಃ ।**
**ಅಸಂಯತೇಷು ಭೋಗೋಪಭೋಗೇಷ್ವಿವ ಮಿತಾದರಾಃ ॥ ೧೩೪ ॥**

ಆ ವಿಷಯದಲ್ಲಿ ವ್ಯರ್ಥವಾಗಿ ಶೋಕ ಮಾಡುವುದು ಸರಿಯಲ್ಲ" ಎಂಬುದಾಗಿ ಮಂತ್ರಿಯು ಹೇಳಿದ ಆ ಮಾತನ್ನು ಕೇಳಿ ರಾಜನು "ಆ ಸಮಾಚಾರವನ್ನು ಹೇಳು. ನಾನು ನಿನ್ನನ್ನು ಬೆದರಿಸುವುದಿಲ್ಲ, ಹೇಗೆ?" ಎಂದು ಮಂತ್ರಿಯನ್ನು ಪ್ರಶ್ನೆಮಾಡಿದನು. ಬಳಿಕ ಈ ರಾಜನ ಅಭಿಪ್ರಾಯವನ್ನು ತಿಳಿದ ಮಂತ್ರಿಯು ದೊರೆಯನ್ನು ಕುರಿತು "ಯತಿಗಳು ವನ ಗಿರಿ ಪರ್ವತ ಗುಹಾ ಅರಣ್ಯಗಳಲ್ಲಿ ವಾಸಮಾಡುವವರೂ ಧೈರ್ಯವೆಂಬ ಕತ್ತಿಯ ಧಾರೆಯಿಂದ ಕಷಾಯಗಳೆಂಬ ಮತ್ತು ವಿಷಯಗಳೆಂಬ ಶತ್ರುಗಳನ್ನು ಭೇದಿಸಿರುವವರೂ ಸ್ಥೂಲಸೂಕ್ಷ್ಮಪ್ರಾಣಿಗಳ ರಕ್ಷಣೆಯಲ್ಲಿ ಸಂಪೂರ್ಣವಾಗಿ ಉದ್ಯುಕ್ತವಾಗಿರುವ ನಡೆಯುಳ್ಳವರೂ ಭೀತಿಯಿಂದಲೋ ಎಂಬಂತೆ ಭೀತಿಯಿಂದಲೂ ಕೋಪದಿಂದಲೋ ಎಂಬಂತೆ ಕೋಪದಿಂದಲೂ ಹೊಂದಲ್ಪಡದಿರುವ ಮನಸ್ಸುಳ್ಳವರೂ ಭೋಗೋಪಭೋಗಗಳಲ್ಲಿ ಮಿತವಾದ ಪ್ರೀತಿಯುಳ್ಳವರಾಗಿರುವಂತೆ ಅಸಂಯತರಲ್ಲಿ–ವ್ರತಹೀನರಲ್ಲಿ ಮಿತವಾದ ಪ್ರೀತಿಯುಳ್ಳವರೂ ಆಗಿರುತ್ತಾರೆ.

**ತೇಭ್ಯಸ್ತೌ ಧರ್ಮಸದ್ಭಾವಂ ಶ್ರುತ್ವಾ ನಿರ್ವಿದ್ಯ ದೀಕ್ಷಿತೌ ।**
**ಇತಿ ವಿಸ್ಪಷ್ಟತದ್ವಾಕ್ಯಾತ್ಪರಿತುಷ್ಟೋ ಮಹೀಪತಿಃ ॥ ೧೩೫ ॥**

**ಲೋಕದ್ವಯಹಿತೋ ನಾನ್ಯಸ್ತ್ವಮಿವೇತ್ಯಭಿನಂದ್ಯ ತಮ್ ।**
**ದುಷ್ಪುತ್ರ ಇವ ಭೋಗೋಯಂ ಪಾಪಾಪಾಲಾಪಕಾರಣಮ್ ॥ ೧೩೬ ॥**

ಆ ಯತಿಗಳಿಂದ ಆ ಕುಮಾರರು ಧರ್ಮದ ಸ್ವರೂಪವನ್ನು ಕೇಳಿ ವೈರಾಗ್ಯವನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡರು" ಎಂದು ಹೇಳಿದನು. ಈ ರೀತಿಯಾಗಿ ಬಹುಸ್ಪಷ್ಟವಾದ ಅವನ ಮಾತಿನಿಂದ ಸಂತುಷ್ಟನಾದ ರಾಜನು ಮಂತ್ರಿಯನ್ನು ಕುರಿತು "ನಿನ್ನಂತೆ ಇಹಪರಲೋಕಗಳಲ್ಲಿ ಹಿತಕಾರಿಯು ಬೇರೊಬ್ಬನಿಲ್ಲ" ಎಂದು ಅವನನ್ನು ಅಭಿನಂದಿಸಿ "ದುಷ್ಟಪುತ್ರನಂತೆ ಈ ರಾಜ್ಯಭೋಗವು ಪಾಪಪುಣ್ಯಗಳೆಂಬ ಮಾತಿಗೆ ಕಾರಣವಾಗಿದೆ. (ಪುತ್ರನೆಂಬ ಸಂತೋಷ, ದುರಾಚಾರಿಯೆಂಬ ದುಃಖ ಕಾರಣನಾದ ದುಷ್ಪುತ್ರ. ಹಾಗಿದೆ ರಾಜ್ಯಭೋಗ)

**ಇತಿ ಸ್ವಕುಲಯೋಗ್ಯಾಯ ದತ್ತರಾಜ್ಯಮಹಾಭರಃ ।**
**ಗತ್ವಾ ಗಣೇಶಮಭ್ಯರ್ಚ್ಯ ವನಾದ್ರೌ ನವಸಂಯತೌ ॥ ೧೩೭ ॥**

**ಮಯಾ ಕೃತೋ ಮಹಾನ್ ದೋಷಸ್ತಂ ಕ್ಷಮೇಥಾಂ ಯುವಾಮಿತಿ ।**
**ನಿಗದನ್ನಾವಯೋರ್ಲೋಕದ್ವಿತಯೈಕಗುರುರ್ಭವಾನ್ ॥ ೧೩೮ ॥**

**ಸಂಯಮೋಯಂ ತ್ವಯಾವಾಪಿತ್ಯಾಭ್ಯಾಂ ಸಂಪ್ರಾಪ್ಯ ಸಂಸ್ತವಮ್ ।**
**ಬಹುಭಿರ್ಭೂಭುಜೈಃ ಸಾರ್ಧಂ ತ್ಯಕ್ತಸಂಗಃ ಸ ಸಂಯಮಮ್॥ ೧೩೯ ॥**

**ಪ್ರಾಪ್ಯ ಕ್ರಮೇಣ ಧ್ವಸ್ತಾರಿರ್ಘಾತಿಕರ್ಮವಿಘಾತಕೃತ್ ।**
**ಕೇವಲಾವಗಮಜ್ಯೋತಿರ್ಲೋಕಾಗ್ರೇ ವ್ಯದ್ಯುತತ್ತರಾಮ್ ॥ ೧೪೦ ॥**

ಈ ಪ್ರಕಾರವಾಗಿ ನಿಶ್ಚಯಿಸಿ ತನ್ನ ವಂಶದಲ್ಲಿ ಯೋಗ್ಯನಾದವನಿಗೆ ರಾಜ್ಯದ ಮಹಾ ಭಾರವನ್ನು ಕೊಟ್ಟವನಾಗಿ ಗಣಧರಮುನಿಪುಂಗವನನ್ನು ಪೂಜಿಸಿ ವನಾದ್ರಿಯಲ್ಲಿ ಹೊಸದಾಗಿ ದೀಕ್ಷಿತರಾಗಿರುವ ಆ ಕುಮಾರರನ್ನು ಹೊಂದಿ "ನಾನು ಮಾಡಿದ ದೊಡ್ಡ ತಪ್ಪನ್ನು ನೀವುಗಳು ಕ್ಷಮಿಸಿರಿ" ಎಂದು ಹೇಳುವವನಾಗಿ, "ತಾವು ನಮ್ಮ ಗಳಿಗೆ ಉಭಯಲೋಕಗಳ ಮುಖ್ಯಗುರುವಾಗಿರುತ್ತೀರಿ. ಈ ವ್ರತವು ನಿಮ್ಮಿಂದ ಹೊಂದಲ್ಪಟ್ಟಿತು" ಎಂದು ಈ ಕುಮಾರಯತಿಗಳಿಂದ ಸ್ತೋತ್ರವನ್ನು ಹೊಂದಿ ಅನೇಕ ರಾಜರುಗಳೊಡನೆ ಆ ಪ್ರಜಾಪತಿಮಹಾರಾಜನು ಪರಿಗ್ರಹಗಳನ್ನು ತ್ಯಜಿಸಿ ದವನಾಗಿ ಸಂಯಮವನ್ನು ಹೊಂದಿ ಕ್ರಮದಿಂದ ಘಾತಿಕರ್ಮಗಳನ್ನು ನಾಶ ಮಾಡಿದವನೂ ಕೇವಲಜ್ಞಾನವೆಂಬ ಜ್ಯೋತಿಯುಳ್ಳವನೂ ಆಮೇಲೆ ಅಘಾತಿ ಕರ್ಮಶತ್ರುವನ್ನು ನಾಶಮಾಡಿದವನೂ ಆಗಿ ಲೋಕದ ತುದಿಯಲ್ಲಿ ಅಧಿಕವಾಗಿ ಪ್ರಕಾಶಿಸಿದನು.

**ತೌ ಸಮುತ್ಕೃಷ್ಟಚಾರಿತ್ರೌ ದ್ವೌ ಖಡ್ಗಪುರಬಾಹ್ಯಕೌ ।**
**ಆತಾಪಯೋಗಮಾದಾಯ ತಸ್ಥತುಸ್ತ್ಯಕ್ತವಿಗ್ರಹೌ ॥ ೧೪೧ ॥**

ಅತ್ಯುತ್ಕೃಷ್ಟಚಾರಿತ್ರವುಳ್ಳವರಾದ ಆ ಈರ್ವರು ಕುಮಾರಯತಿಗಳು ಶರೀರ ಮೋಹವನ್ನು ತ್ಯಜಿಸಿ ಆತಾಪನಯೋಗವನ್ನು ಸ್ವೀಕರಿಸಿ ಖಡ್ಗಪುರದ ಬಾಹ್ಯ ಭಾಗದಲ್ಲಿ ನಿಂತಿದ್ದರು.

**ತತ್ಪುರಾಧಿಪಸೋಮಪ್ರಭಾಹ್ವಯಸ್ಯ ಸುದರ್ಶನಾ ।**
**ಸೀತಾ ಚ ದೇವ್ಯೌ ತತ್ಸೂನೂ ಸುಪ್ರಭಃ ಸುಪ್ರಭಾಂಗಧೃತ್ ॥ ೧೪೨ ॥**

**ಪುರುಷೋತ್ತಮನಾಮಾ ಚ ಗುಣೈಶ್ಚ ಪುರುಷೋತ್ತಮಃ ।**
**ಮಧುಸೂದನಮುಚ್ಛಿದ್ಯ ಕೃತದಿಗ್ವಿಜಯಪೂರ್ವಕಮ್ ॥ ೧೪೩ ॥**

**ನೃಖೇಚರಸುರಾಧೀಶಪ್ರವರ್ಧಿತಮಹೋದಯಮ್ ।**
**ಪ್ರವಿಶಂತಂ ಪ್ರಭಾವಂತಂ ನಗರಂ ಪುರುಷೋತ್ತಮಮ್ ॥ ೧೪೪ ॥**

**ಚಂದ್ರಚೂಲಮುನಿರ್ದೃಷ್ಟ್ವಾ ನಿದಾನಮಕೃತಜ್ಞಕಃ ।**
**ಜೀವಿತಾವಸಿತೌ ಸಮ್ಯಗಾರಾಧ್ಯೋಭೌ ಚತುರ್ವಿಧಮ್ ॥ ೧೪೫ ॥**

**ಸನತ್ಕುಮಾರಕಲ್ಪಸ್ಯ ವಿಮಾನೇ ಕನಕಪ್ರಭೇ ।**
**ವಿಜಯಃ ಸ್ವರ್ಣಚೂಲೋನ್ಯೋ ಮಣಿಚೂಲೋ ಮಣಿಪ್ರಭೇ ॥**

**ಜಾತವಾಂಸ್ತೌ ತದುತ್ಕೃಷ್ಟಸಾಗರೋಪಮಿತಾಯುಷೌ ।**
**ಸುಚಿರಂ ಭುಕ್ತಸಂಭೋಗೌ ತತಶ್ಚ್ಯುತ್ವೇಹ ಭಾರತೇ ॥ ೧೪೭ ॥**

**ವಾರಾಣಸೀಪುರಾಧೀಶೋ ರಾಜ್ಞೋ ದಶರಥಶ್ರುತೇಃ ।**
**ಸುತಃ ಸುಬಾಲಾಸಂಜ್ಞಾಯಾಂ ಶುಭಸ್ವಪ್ನಪುರಸ್ಸರಮ್ ॥ ೧೪೮ ॥**

**ಕೃಷ್ಣಪಕ್ಷೇ ತ್ರಯೋದಶ್ಯಾಂ ಫಾಲ್ಗುನೇ ಮಾಸ್ಯಜಾಯತ ।**
**ಮಘಾಯಾಂ ಹಲಭೃದ್ಧಾವೀ ಚೂಲಾಂತಕನಕಾಮರಃ ॥ ೧೪೯ ॥**

**ತ್ರಯೋದಶಸಹಸ್ರಾಬ್ದೋ ರಾಮನಾಮಾನತಾಖಿಲಃ ।**
**ತತ ಏವ ಮಹೀಭರ್ತುಃ ಸುಮಿತ್ರಾಯಾಮಭೂತ್ಸುತಃ ॥ ೧೫೦ ॥**

**ಸರಃಸೂರ್ಯೇಂದುಕಲಮಕ್ಷೇತ್ರಸಿಂಹಾನ್ಮಹಾಫಲಾನ್ ।**
**ಸ್ವಪ್ನಾನ್ ಸಂದರ್ಶ್ಯ ಮಾಘಸ್ಯ ಶುಕ್ಲಪಕ್ಷಾದಿಮೇ ದಿನೇ ॥ ೧೫೧ ॥**

**ವಿಶಾಖರ್ಕ್ಷೇ ಸ ಚಕ್ರಾಂಕೋ ಮಣಿಚೂಲಾಮೃತಾಶನಃ ।**
**ಷಡ್ಗುಣದ್ವಿಸಹಸ್ರಾಬ್ದಜೀವಿತೋ ಲಕ್ಷ್ಮಣಾಹ್ವಯಃ ॥ ೧೫೨ ॥**

ಆ ನಗರದ ದೊರೆಯಾದ ಸೋಮಪ್ರಭನೆಂಬವನಿಗೆ ಸುದರ್ಶನೆ ಸೀತೆಯೆಂಬೀ ರ್ವರು ಪತ್ನಿಯರಿದ್ದರು. ಅವರಿಬ್ಬರಲ್ಲಿ ಸುದರ್ಶನೆಗೆ ಶ್ರೇಷ್ಠವಾದ ಪ್ರಭೆಯುಳ್ಳ ದೇಹವನ್ನು ಧರಿಸಿರುವ ಸುಪ್ರಭನೆಂಬ ಪುತ್ರನೂ ಸೀತೆಗೆ ಗುಣಗಳಿಂದಲೂ ಪುರುಷೋತ್ತಮನಾದ ಪುರುಷೋತ್ತಮನೆಂಬ ಪುತ್ರನೂ ಜನಿಸಿದರು. ಮಧು ಸೂದನನೆಂಬವನನ್ನು ನಾಶಮಾಡಿ ದಿಗ್ವಿಜಯಪೂರ್ವಕವಾಗಿ ಪಟ್ಟಣಕ್ಕೆ ಪ್ರವೇಶಿಸು ತ್ತಿರುವವನೂ ನರೇಂದ್ರ ಖೇಚರೇಂದ್ರ ಸುರೇಂದ್ರರಿಂದ ಹೆಚ್ಚಿಸಲ್ಪಟ್ಟ ಅಭ್ಯುದಯ ವುಳ್ಳವನೂ ಆದ ಪುರುಷೋತ್ತಮನನ್ನು ಅಜ್ಞನಾದ ಚಂದ್ರಚೂಲ ಮುನಿಯು ನೋಡಿ ನಿದಾನಶಲ್ಯವನ್ನು ಮಾಡಿದನು. ಜೀವಿತಾವಸಾನದಲ್ಲಿ ಇಬ್ಬರೂ ಜ್ಞಾನಾ ರಾಧಾನಾ ಮೊದಲಾದ ಚತುರ್ವಿಧಾರಾಧನೆಗಳನ್ನು ಆರಾಧಿಸಿ ಸತ್ತು ಸನತ್ಕುಮಾರ ಕಲ್ಪದ ಕನಕಪ್ರಭವಿಮಾನದಲ್ಲಿ ವಿಜಯನು ಸ್ವರ್ಣಚೂಲನೆಂಬ ದೇವನಾಗಿಯೂ ಇನ್ನೊಬ್ಬನು-ಚಂದ್ರಚೂಲನು ಮಣಿಪ್ರಭವಿಮಾನದಲ್ಲಿ ಮಣಿಚೂಲನೆಂಬ ದೇವ ನಾಗಿಯೂ ಹುಟ್ಟಿದರು. ಅವರು ಆ ಸ್ವರ್ಗದ ಉತ್ಕೃಷ್ಟವಾದ ಸಾಗರೋಪಮ ವರ್ಷಾಯುಷ್ಯವುಳ್ಳವರೂ ಬಹುಕಾಲದವರೆಗೆ ಭೋಗ-ಸುಖವನ್ನನುಭವಿಸಿ ದವರೂ ಆಗಿ ಬಳಿಕ ಅಲ್ಲಿಂದ ಚ್ಯುತಿಯನ್ನು ಹೊಂದಿ ಈ ಭರತಕ್ಷೇತ್ರದಲ್ಲಿ ವಾರಾಣಸೀಪುರಾಧಿಪತಿಯಾದ ದಶರಥನೆಂಬ ರಾಜನಿಗೆ ಸುಬಾಲೆಯೆಂಬ ಪತ್ನಿಯಲ್ಲಿ ಫಾಲ್ಗುನಮಾಸದ ಕೃಷ್ಣಪಕ್ಷದ ತ್ರಯೋದಶೀ-ತಿಥಿಯಲ್ಲಿ ಮಘಾ ನಕ್ಷತ್ರದಲ್ಲಿ ಕನಕಚೂಲದೇವನು ಮುಂದೆ ಹಲಧರನಾಗುವವನೂ ಹದಿಮೂರು ಸಹಸ್ರವರ್ಷಾಯುಷ್ಯವುಳ್ಳವನೂ ಎಲ್ಲರಿಂದಲೂ ನಮಸ್ಕರಿಸಿಕೊಂಡವನೂ ಆದ ರಾಮನೆಂಬ ಪುತ್ರನಾಗಿ ಜನಿಸಿದನು. ಆ ದಶರಥಮಹಾರಾಜನ ದೆಸೆಯಿಂದಲೇ ಸುಮಿತ್ರಾದೇವಿಯಲ್ಲಿ ಮಹಾಫಲಗಳುಳ್ಳ ಸರೋವರ, ಸೂರ್ಯ, ಚಂದ್ರ, ಭತ್ತದ ಕ್ಷೇತ್ರ, ಸಿಂಹ-ಸ್ವಪ್ನಗಳನ್ನು ಕಾಣಿಸಿ ಮಾಘಮಾಸದ ಶುಕ್ಲಪಕ್ಷದ ಪ್ರಥಮೆಯ ದಿನದಲ್ಲಿ ವಿಶಾಖನಕ್ಷತ್ರದಲ್ಲಿ ಚಕ್ರದ ಗುರುತುಳ್ಳ ಆ ಮಣಿಚೂಲ ದೇವನು ಹನ್ನೆರಡು ಸಹಸ್ರವರ್ಷಾಯುಷ್ಯವುಳ್ಳ ಲಕ್ಷ್ಮಣನೆಂಬ ಪುತ್ರನಾಗಿ ಹುಟ್ಟಿದನು.

**ತೌ ಪಂಚದಶಚಾಪಾಂಗೌ ದ್ವಾತ್ರಿಂಶಲ್ಲಕ್ಷಣಾನ್ವಿತೌ ।**
**ಆದಿಸಂಹನನೌ ಸಂಸ್ಥಾನಂ ಚಾಭೂದಾದಿಮಂ ತಯೋಃ ॥ ೧೫೩ ॥**

ಹದಿನೈದು ಧನುಃಪರಿಮಿತವಾದ ಶರೀರವುಳ್ಳವರೂ ಮೂವತ್ತೆರಡು ಲಕ್ಷಣ ಗಳಿಂದ ಕೂಡಿದವರೂ ಆದ ಆ ರಾಮಲಕ್ಷ್ಮಣರು ಮೊದಲನೆಯದಾದ ವಜ್ರವೃಷಭ ನಾರಾಚಸಂಹನನವುಳ್ಳವರಾಗಿದ್ದರು. ಅವರುಗಳ ಸಂಸ್ಥಾನವೂ (ಶರೀರಾಕೃತಿ ಯೂ) ಮೊದಲನೆಯದಾದ ಸಮಚತುರಸ್ರಸಂಸ್ಥಾನವಾಗಿದ್ದಿತು.

**ಅಮೇಯವೀರ್ಯೌ ಹಂಸಾಂಸನೀಲೋತ್ಪಲಸಮತ್ವಿಷೌ ।**
**ತಯೋಃ ಸಪಂಚಪಂಚಾಶತ್ಪಂಚಾಶದ್ವರ್ಷಸಮ್ಮಿತೇ ॥ ೧೫೪ ॥**

**ಕುಮಾರಕಾಲೇ ನಿಷ್ಕ್ರಾಂತೇ ನಿತಾಂತಪರಮೋದಯೇ ।**
**ಭಾರತೇಸ್ಮಿನ್ನಯೋಧ್ಯಾಯಾಂ ಭರತಾದಿಮಹೀಶಿಷು ॥ ೧೫೫ ॥**

**ಗತೇಷ್ವಿಕ್ಷ್ವಾಕುಮುಖ್ಯೇಷು ಸಂಖ್ಯಾತೀತೇಷ್ವನಂತರಮ್ ।**
**ಹರಿಷೇಣಮಹಾರಾಜೇ ದಶಮೇ ಚಕ್ರವರ್ತಿನಿ ॥ ೧೫೬ ॥**

**ಸರ್ವಾರ್ಥಸಿದ್ಧಾವುತ್ಪನ್ನೇ ಸಂವತ್ಸರಸಹಸ್ರಕೇ ।**
**ಕಾಲೇ ಗತವತಿ ಪ್ರಾಭೂತ್ಸಗರಾಖ್ಯೋ ಮಹೀಪತಿಃ ॥ ೧೫೭ ॥**

ಅವರು ಅಪರಿಮಿತವಾದ ಶಕ್ತಿಯುಳ್ಳವರೂ ಯಥಾಕ್ರಮವಾಗಿ ಹಂಸದ ರೆಕ್ಕೆಗೆ ಸಮಾನವೂ ಕನ್ನೈದಿಲೆಯ ಹೂವಿಗೆ ಸಮಾನವೂ ಆದ ಶರೀರಕಾಂತಿಯುಳ್ಳವರೂ ಆಗಿದ್ದರು. ಅವರಲ್ಲಿ ರಾಮನ ಐವತ್ತೈದು ವರ್ಷಪರಿಮಿತವೂ ಲಕ್ಷ್ಮಣನ ಐವತ್ತು ವರ್ಷಪರಿಮಿತವೂ ಆದ ಕುಮಾರಕಾಲವು ಕಳೆಯಿತು. ಸಂಪೂರ್ಣವಾಗಿ

ಪರಮೋನ್ನತಿಯುಳ್ಳ ಈ ಭರತಕ್ಷೇತ್ರದಲ್ಲಿ ಅಯೋಧ್ಯಾನಗರದಲ್ಲಿ ಇಕ್ಷ್ವಾಕು ವಂಶದಲ್ಲಿ ಮುಖ್ಯರಾದ ಭರತನೇ ಮೊದಲಾದ ರಾಜರುಗಳು ಅಸಂಖ್ಯಾತಜನರು ಕಳೆದ ಬಳಿಕ ಹತ್ತನೆಯ ಚಕ್ರವರ್ತಿಯಾದ ಹರಿಷೇಣಮಹಾರಾಜನು ರಾಜ್ಯವನ್ನಾಳಿ ಆಯುಷ್ಯಾವಸಾನದಲ್ಲಿ ಸತ್ತು ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿ ಸಹಸ್ರವರ್ಷಕಾಲವು ಕಳೆಯುತ್ತಿರಲು ಸಗರನೆಂಬ ರಾಜನು ಹುಟ್ಟಿದನು.

**ನಿಷ್ಪಂಡವಮಂಡಲಶ್ಚಂಡಃ ಸುಲಸಾಯಾಃ ಸ್ವಯಂವರೇ ।**
**ಮಧುಪಿಂಗಲನಾಮಾನಂ ಕುಮಾರವರಮಾಗತಮ್ ॥ ೧೫೮ ॥**

**ದೂಷ್ಯಲಕ್ಷ್ಮಾಯಮಿತ್ಯುಕ್ತ್ವಾ ನಿರಾಸ್ಥನ್ನೃಪಮಧ್ಯಗಮ್ ।**
**ಸಗರೇ ಬದ್ಧವೈರಃ ಸನ್ ನಿಷ್ಕ್ರಮ್ಯ ಮಧುಪಿಂಗಲಃ ॥ ೧೫೯ ॥**

**ಸಲಜ್ಜಃ ಸಂಯಮೀ ಭೂತ್ವಾ ಮಹಾಕಾಲೋಽಸುರೋಽಭವತ್ ।**
**ಸೋಽಸುರಃ ಸಗರಾಧೀಶವಂಶನಿರ್ಮೂಲನೋದ್ಯತಃ ॥ ೧೬೦ ॥**

**ದ್ವಿಜವೇಷಂ ಸಮಾದಾಯ ಸಂಪ್ರಾಪ್ಯ ಸಗರಾಹ್ವಯಮ್ ।**
**ಅಥರ್ವವೇದವಿಹಿತಂ ಪ್ರಾಣಿಹಿಂಸಾಪರಾಯಣಮ್ ॥ ೧೬೧ ॥**

**ಕುರು ಯಾಗಂ ಶ್ರಿಯೋ ವೃದ್ಧ್ಯೈ ಶತ್ರುವಿಚ್ಛೇದನೇಚ್ಛಯಾ ।**
**ಇತಿ ತಂ ದುರ್ಮತಿಂ ಭೂಪಂ ಪಾಪಾಭೀರುರ್ವ್ಯಮೋಹಯತ್ ॥**

ಅಖಂಡವಾದ ಭೂಮಂಡಲವುಳ್ಳವನೂ ಭಯಂಕರನೂ ಆದ ಆ ಸಗರನು ಸುಲಸೆಯ ಸ್ವಯಂವರದಲ್ಲಿ ಬಂದ ಮಧುಪಿಂಗಲನೆಂಬ ಶ್ರೇಷ್ಠರಾಜಕುಮಾರನನ್ನು "ಇವನು ದೂಷಿಸಲ್ಪಡತಕ್ಕ ಲಕ್ಷಣವುಳ್ಳವನಾಗಿದ್ದಾನೆ" ಎಂದು ಹೇಳಿ ರಾಜರುಗಳ ಮಧ್ಯದಲ್ಲಿರುವವನನ್ನು ನಿರಾಕರಿಸಿದನು. ಸಗರನಲ್ಲಿ ಬದ್ಧವೈರವುಳ್ಳವನಾದ ಆ ಮಧುಪಿಂಗಲನು ಲಜ್ಜೆಯುಳ್ಳವನಾಗಿ ಹೊರಟು ಸಂಯಮಿಯಾಗಿ ಸತ್ತು ಮಹಾ ಕಾಲನೆಂಬ ಅಸುರದೇವನಾಗಿ ಹುಟ್ಟಿದನು. ಆ ಅಸುರನು ಸಗರಮಹಾರಾಜನ ವಂಶವನ್ನು ನಿರ್ಮೂಲನ ಮಾಡುವುದರಲ್ಲಿ ಉದ್ಯುಕ್ತನಾಗಿ ಬ್ರಾಹ್ಮಣವೇಷವನ್ನು ಧರಿಸಿಕೊಂಡು ಬಂದು ಸಗರನನ್ನು ಕಂಡು "ಸಂಪತ್ತಿಯ ವೃದ್ಧಿಗೋಸ್ಕರ ಅಥರ್ವವೇದದಲ್ಲಿ ಹೇಳಲ್ಪಟ್ಟಿರುವ ಅಹಿಂಸಾಪ್ರಧಾನವಾದ ಯಾಗವನ್ನು ಮಾಡು" ಎಂದು ಶತ್ರುವನ್ನು ನಾಶಮಾಡಬೇಕೆಂಬ ಇಚ್ಛೆಯಿಂದ ಪಾಪದ ಭಯವಿಲ್ಲದಿರುವ ಆ ಮಹಾಕಾಲನು ದುರ್ಬುದ್ಧಿಯುಳ್ಳ ಆ ಸಗರರಾಜನನ್ನು ಮೋಹಗೊಳಿಸಿದನು.

**ಅನುಷ್ಠಾಯ ತಥಾಸೋಽಪಿ ಪ್ರಾವಿಶತ್ಪಾಪಿನಾಂ ಕ್ಷಿತಿಮ್ ।**
**ನಿರ್ಮೂಲಂ ಕುಲಮಪ್ಯಸ್ಯ ನಷ್ಟಂ ದುರ್ಮಾರ್ಗವರ್ತನಾತ್ ॥ ೧೬೩ ॥**

ಆ ಸಗರನೂ ಹಾಗೆಯೇ ಮಾಡಿ ಸತ್ತು ಪಾಪಿಗಳ ಭೂಮಿಯನ್ನು–ನರಕವನ್ನು ಪ್ರವೇಶಿಸಿದನು. ದುರ್ಮಾರ್ಗದಲ್ಲಿ ನಡೆದುದರಿಂದ ಈ ಸಗರನ ವಂಶವೂ ನಿರ್ಮೂಲವಾಗಿ ನಷ್ಟವಾಯಿತು.

**ಶ್ರುತ್ವಾ ತತ್ಸಾತ್ಮಜೋ ರಾಮಪಿತಾಸ್ಮಾಕಂ ಕ್ರಮಾಗತಮ್ ।**
**ಸಾಕೇತಪುರಮಿತ್ಯೇತ್ಯ ತದಧ್ಯಾಸ್ಯಾನ್ವಪಾಲಯತ್ ॥ ೧೬೪ ॥**

ಆ ವಿಷಯವನ್ನು ರಾಮನ ತಂದೆಯಾದ ದಶರಥನು ಪುತ್ರಸಹಿತನಾಗಿ ಕೇಳಿ "ಅಯೋಧ್ಯಾನಗರವು ನಮಗೆ ವಂಶಪರಂಪರೆಯಿಂದ ಬಂದುದಾಗಿದೆ" ಎಂದು ಅಲ್ಲಿ ವಾಸಮಾಡಿ ರಾಜ್ಯಪರಿಪಾಲನವನ್ನು ಮಾಡಿದನು.

**ತತ್ರಾಸ್ಯ ದೇವ್ಯಾಂ ಕೈಕೇಯ್ಯಾಮಭವತ್ಭರತಾಹ್ವಯಃ ।**
**ಶತ್ರುಘ್ನಶ್ಚಾನ್ಯದಪ್ಯೇಕಂ ದಶಾನನವಧಾದ್ಯಶಃ ॥ ೧೬೫ ॥**

**ಕಾರಣಂ ಪ್ರಕೃತಂ ಭಾವಿ ರಾಮಲಕ್ಷ್ಮಣಯೋರಿದಮ್ ।**
**ಮಿಥಿಲಾನಗರಾಧೀಶೋ ಜನಕಸ್ತಸ್ಯ ವಲ್ಲಭಾ ॥ ೧೬೬ ॥**

**ಸುರೂಪಾ ವಸುಧಾದೇವೀ ವಿನಯಾದಿವಿಭೂಷಿತಾ ।**
**ಸುತಾ ಸೀತೇತ್ಯಭೂತ್ತಸ್ಯಾಃ ಸಂಪ್ರಾಪ್ತನವಯೌವನಾ ॥ ೧೬೭ ॥**

ಅಲ್ಲಿ ಈ ದಶರಥನಿಗೆ ಪತ್ನಿಯಾದ ಕೈಕೇಯಿಯಲ್ಲಿ ಭರತನೆಂಬವನೂ ಶತ್ರುಘ್ನನೂ ಹುಟ್ಟಿದರು. ಮುಂದೆ ರಾವಣನ ವಧೆಯಿಂದುಂಟಾಗುವ ಯಶಸ್ಸು ರಾಮಲಕ್ಷ್ಮಣರ ಪ್ರಖ್ಯಾತಿಗೆ ಮತ್ತೊಂದು ಪ್ರಕೃತಕಾರಣವಾಗಿರುವುದು. ಜನಕ ರಾಜನು ಮಿಥಿಲಾನಗರಾಧಿಪತಿ. ಒಳ್ಳೆಯ ರೂಪವತಿಯೂ ವಿನಯಾದಿ ಗುಣ ಗಳಿಂದ ವಿಭೂಷಿತಳೂ ಆದ ವಸುಧಾದೇವಿಯು ಅವನ ಪತ್ನಿಯಾಗಿದ್ದಳು. ಆಕೆಗೆ ನವಯೌವನವನ್ನು ಹೊಂದಿದ ಸೀತೆಯೆಂಬ ಮಗಳಿದ್ದಳು.

**ತಾಂ ವರೀತುಂ ಸಮಾಯಾತನೃಪದೂತಾನ್ಮಹೀಪತಿಃ ।**
**ದದಾಮಿ ತಸ್ಮೈ ದೈವಾನುಕೂಲ್ಯಂ ಯಸ್ಯೇತಿ ಸೋಽಮುಚತ್ ॥ ೧೬೮ ॥**

ಆಕೆಯನ್ನು ವರಿಸುವುದಕ್ಕೋಸ್ಕರ ಕೇಳಲು ಕಳುಹಿಸಲ್ಪಟ್ಟು ಬಂದ ರಾಜ ದೂತರುಗಳನ್ನು ಆ ಜನಕಮಹಾರಾಜನು "ದೈವಾನುಕೂಲತೆಯು ಯಾವನಿ ಗಿರುವುದೋ ಅವನಿಗೆ ಕೊಡುವೆನು" ಎಂದು ಹೇಳಿದನು.

**ನೃಪಃ ಕದಾಚಿದಾಸ್ಥಾನೀಂ ವಿದ್ವಜ್ಜನವಿರಾಜಿನೀಮ್ ।**
**ಆಸ್ಥಾಯ ಕಾರ್ಯಕುಶಲಂ ಕುಶಲಾದಿಮತಿಂ ಹಿತಮ್ ॥ ೧೬೯ ॥**

**ಸೇನಾಪತಿಂ ಸಮುಪ್ರಾಕ್ಷೀತ್ಪ್ರಾಕ್ಪ್ರವೃತ್ತಂ ಕಥಾಂತರಮ್ ।**
**ಪುರಾ ಕಿಲಾತ್ರ ಸಗರಃ ಸುಲಸಾ ಚಾಹುತೀಕೃತಾಃ ॥ ೧೭೦ ॥**

**ಪರೇ ಚಾಶ್ವಾದಯಃ ಪ್ರಾಪನ್ ಸಶರೀರಾಃ ಸುರಾಲಯಮ್ ।**
**ಇತೀದಂ ಶ್ರೂಯತೇದ್ಯಾಪಿ ಯಾಗೇನ ಯದಿ ಗಮ್ಯತೇ ॥ ೧೭೧ ॥**

**ಸ್ವರ್ಲೋಕಃ ಕ್ರಿಯತೇಸ್ಮಾಭಿರಪಿ ಯಾಗೋ ಯಥೋದಿತಮ್ ।**
**ಇತಿ ತದ್ವಚನಂ ಶ್ರುತ್ವಾ ಸ ಸೇನಾಪತಿರಬ್ರವೀತ್ ॥ ೧೭೨ ॥**

**ನಾಗಾಸುರೈಃ ಸದಾ ಕ್ರುದ್ಧೈರ್ಮಾತ್ಸರ್ಯೇಣ ಪರಸ್ಪರಮ್ ।**
**ಅನ್ಯೋನ್ಯಾರಬ್ಧಕಾರ್ಯಾಣಾಂ ಪ್ರತಿಘಾತೋ ವಿಧೀಯತೇ ॥ ೧೭೩ ॥**

ಜನಕಮಹಾರಾಜನು ಒಂದಾನೊಂದು ಕಾಲದಲ್ಲಿ ವಿದ್ವಜ್ಜನರಿಂದ ಪ್ರಕಾಶ ಮಾನವಾದ ಆಸ್ಥಾನದಲ್ಲಿದ್ದು ಕಾರ್ಯಚತುರನೂ ಹಿತಕಾರಿಯೂ ಆದ ಕುಶಲ ಮತಿಯೆಂಬ ಸೇನಾಪತಿಯನ್ನು ಕುರಿತು ಮೊದಲು ನಡೆದ ಬೇರೊಂದು ಕಥೆಯನ್ನು ಈ ರೀತಿಯಾಗಿ ಪ್ರಶ್ನೆಮಾಡಿದನು– "ಪೂರ್ವಕಾಲದಲ್ಲಿ ಇಲ್ಲಿ ಆಹುತಿಮಾಡಲ್ಪಟ್ಟ ಸಗರನೂ ಸುಲಸೆಯೂ ಇತರ ಕುದುರೆಯೇ ಮೊದಲಾದ ಪ್ರಾಣಿಗಳೂ ಶರೀರ ಸಹಿತಗಳಾಗಿಯೇ ಸ್ವರ್ಗವನ್ನು ಪಡೆದುವಂತೆ. ಈ ವಿಷಯವು ಹೀಗೆಂದು ಈಗಲೂ ಕೇಳಲ್ಪಡುತ್ತದೆ. ಯಾಗದಿಂದ ಸ್ವರ್ಗಲೋಕವು ಪ್ರಾಪ್ತವಾಗುವುದಾದರೆ ಶಾಸ್ತ್ರೋಕ್ತ ವಾಗಿರುವಂತೆ ನಾವೂ ಯಾಗವನ್ನು ಮಾಡುತ್ತೇವೆ." ಈ ರೀತಿಯಾದ ಜನಕರಾಜನ ಮಾತನ್ನು ಕೇಳಿ ಆ ಸೇನಾಪತಿಯು "ಯಾವಾಗಲೂ ಕೋಪಗೊಂಡಿರುವ ನಾಗಾ ಸುರದೇವರ್ಕಳು ಪರಸ್ಪರವಾಗಿ ಆರಂಭಿಸಿದ ಕಾರ್ಯಗಳಿಗೆ ಮಾತ್ಸರ್ಯದಿಂದ ಪರಸ್ಪರವಾಗಿ ವಿಘಾತವನ್ನು ಮಾಡುತ್ತಾರೆ.

**ಅಯಂ ಚಾದ್ಯ ಮಹಾಕಾಲೇನಾಸುರೇಣ ನವೋ ವಿಧಿಃ ।**
**ಯಾಗೋ ವಿನಿರ್ಮಿತಸ್ತಸ್ಯ ವಿಘಾತಃ ಶಂಕ್ಯತೇರಿಭಿಃ ॥ ೧೭೪ ॥**

ಈಗ ಈ ಹೊಸದಾದ ಯಾಗವಿಧಿಯನ್ನು ಮಹಾಕಾಲನೆಂಬ ಅಸುರನು ನಿರ್ಮಿಸಿದನು. ಅದಕ್ಕೆ ಶತ್ರುಗಳಿಂದ ವಿಘಾತವುಂಟಾಗುವ ಸಂಶಯವಿದೆ.

**ನಾಗರಾಡುಪಕರ್ತಾಭೂನ್ನಮೇಶ್ಚ ವಿನಮೇರಪಿ ।**
**ತತೋ ಯಾಗಸ್ಯ ಹಂತಾರಃ ಖಗಾಸ್ತತ್ಪಕ್ಷಪಾತಿನಃ ॥ ೧೭೫ ॥**

ನಾಗರಾಜ–ಧರಣೇಂದ್ರನು ನಮಿಗೂ ವಿನಮಿಗೂ ಉಪಕಾರವನ್ನು ಮಾಡಿದವ ನಾಗಿದ್ದನು. ಆದುದರಿಂದ ಅವನ ಪಕ್ಷಪಾತಿಗಳಾದ ಖೇಚರರು ಯಾಗಕ್ಕೆ ವಿಘಾತಕ ರಾಗಿರುತ್ತಾರೆ.

**ಯಾಗಃ ಸಿಧ್ಯತಿ ಶಕ್ತಾನಾಂ ತದ್ವಿಘಾತವ್ಯಪೋಹನೇ ।**
**ಯದ್ಯಪ್ಯೇತಂ ನ ಬುದ್ಧ್ಯೇರನ್ನೂಪ್ಯಶೈಲನಿವಾಸಿನಃ ॥ ೧೭೬ ॥**

**ನಿಶ್ಚಿಂತೋ ರಾವಣಃ ಶೌರ್ಯಶಾಲೀ ಮಾನಗ್ರಹಾಹಿತಃ ।**
**ತಸ್ಮಾತ್ತ್ವಾಗಪಿ ಶಂಕಾಸ್ತಿ ಸ ಕದಾಚಿದ್ವಿಘಾತಕೃತ್ ॥ ೧೭೭ ॥**

**ಸ್ಯಾತ್ತದ್ರಾಮಾಯ ಶಕ್ತಾಯ ದಾಸ್ಯಾಮಃ ಕನ್ಯಕಾಮಿಮಾಮ್ ।**
**ಇತಿ ತದ್ವಚನಂ ಸರ್ವೇ ತುಷ್ಟುವುಸ್ತತ್ಸಭಾಸಿನಃ ॥ ೧೭೮ ॥**

ಯಾಗದ ವಿಘಾತವನ್ನು ಹೋಗಲಾಡಿಸಿದಾಗ ಶಕ್ತರಾಗಿರುವವರಿಗೆ ಯಾಗವು ಸಿದ್ಧಿಸುತ್ತದೆ. ವಿಜಯಾರ್ಧಪರ್ವತನಿವಾಸಿಗಳು–ಖೇಚರರು ಪ್ರಾಯಿಕವಾಗಿ ಈ ಯಾಗವನ್ನು ತಿಳಿಯರು. ಪರಾಕ್ರಮಶಾಲಿಯೂ ಗರ್ವವೆಂಬ ಗ್ರಹದಿಂದ ಕೂಡಿರುವವನೂ ಆದ ರಾವಣನು ನಿಶ್ಚಿಂತನಾಗಿದ್ದಾನೆ. ಅವನು ಎಂದಾದರೂ ವಿಘಾತವನ್ನು ಮಾಡುವನೆಂದು ಸಂದೇಹವಿರುತ್ತದೆ. ಆದುದರಿಂದ ಶಕ್ತನಾಗಿರುವ ರಾಮನಿಗೆ ಮೊದಲೇ ಈ ಕನ್ಯೆಯನ್ನು ಕೊಡುವೆವು'' ಎಂದು ಹೇಳಿದನು. ಅವನ ಮಾತನ್ನು ಆ ಸಭಾಸದರೆಲ್ಲರೂ ಪ್ರಶಂಸಿಸಿದರು.

**ನಿರಚಿನ್ವಂಶ್ಚ ಭೂಪೇನ ಸಾಕಂ ತತ್ಕಾರ್ಯಮೇವ ತೇ ।**
**ತದೈವ ಜನಕೋ ದೂತಂ ಪ್ರಾಹಿಣೋದ್ರಾಮಲಕ್ಷ್ಮಣೌ ॥ ೧೭೯ ॥**

**ಮದೀಯಯಾಗರಕ್ಷಾರ್ಥಂ ಪ್ರಹೇತವ್ಯೌ ಕೃತತ್ವರಮ್ ।**
**ರಾಮಾಯ ದಾಸ್ಯತೇ ಸೀತಾ ಚೇತಿ ಶಾಸನಹಾರಿಣಮ್ ॥ ೧೮೦ ॥**

**ಸಲೇಖೋಪಾಯನಂ ಸಂತಂ ನೃಪಂ ದಶರಥಂ ಪ್ರತಿ ।**
**ತಥಾನ್ಯಾಂಶ್ಚ ಮಹೀಟ್ಪೂನೂನ್ ದೂತಾನಾನೇತುಮಾದಿಶತ್॥ ೧೮೧ ॥**

ಆ ಸಭಾಸದರು ಜನಕರಾಜನೊಡನೆ ಆ ಕಾರ್ಯವನ್ನೇ ಪರಿಗ್ರಹಿಸಿದರು. ಆಗಲೇ ಜನಕಮಹಾರಾಜನು ದಶರಥಮಹಾರಾಜನ ಬಳಿಗೆ ''ನನ್ನ ಯಾಗವನ್ನು ರಕ್ಷಿಸುವುದಕ್ಕೋಸ್ಕರ ಶೀಘ್ರವಾಗಿ ರಾಮಲಕ್ಷ್ಮಣರನ್ನು ಕಳುಹಿಸಿ ಕೊಡಬೇಕು. ರಾಮನಿಗೆ ಸೀತೆಯು ಕೊಡಲ್ಪಡುವಳು'' ಎಂದು ಲೇಖವನ್ನೂ ಕೈಗಾಣಿಕೆಯನ್ನೂ ಕೊಟ್ಟು ಆಜ್ಞಾಪಾಲಕನಾದ ದೂತನೊಬ್ಬನನ್ನು ಕಳುಹಿಸಿಕೊಟ್ಟನು. ಹಾಗೆಯೇ ಇತರ ರಾಜಪುತ್ರರನ್ನೂ ಕರೆದುಕೊಂಡು ಬರುವುದಕ್ಕೋಸ್ಕರ ದೂತರಿಗೆ ಆಜ್ಞೆ ಮಾಡಿದನು.

**ಅಯೋಧ್ಯೇಶೋಪಿ ಲೇಖಾರ್ಥಂ ದೂತೋಕ್ತಂ ಚಾವಧಾರಯನ್ ।**
**ತತ್ಪ್ರಯೋಜನನಿಶ್ಚಿತ್ಯೈ ಮಂತ್ರಿಣಃ ಪೃಚ್ಛತಿ ಸ್ಮ ಸಃ ॥ ೧೮೨ ॥**

**ಜನಕೋಕ್ತಂ ನಿವೇದ್ಯಾತ್ರ ಕಿಂ ಕಾರ್ಯಂ ಕ್ರಿಯತಾಮಿತಿ ।**
**ಇದಮಾಗಮಸಾರಾಖ್ಯೋ ಮಂತ್ರ್ಯವೋಚದ್ವಚೋಶುಭಮ್ ॥ ೧೮೩ ॥**

**ನಿರಂತರಾಯಸಂಸಿದ್ಧೌ ಯಾಗಸ್ಯೋಭಯಲೋಕಜಮ್ ।**
**ಹಿತಂ ಕೃತಂ ಭವೇತ್ತಸ್ಮಾದ್ಗತಿರಸ್ತ್ವನಯೋರಿತಿ ॥ ೧೮೪ ॥**

ಅಯೋಧ್ಯಾಧಿಪತಿಯಾದ ಆ ದಶರಥನೂ ಲೇಖದ ಅರ್ಥವನ್ನೂ ದೂತನು ಹೇಳಿದುದನ್ನೂ ತಿಳಿದವನಾಗಿ ಅದರ ಪ್ರಯೋಜನವನ್ನು ನಿಶ್ಚಯಿಸುವುದಕ್ಕೋಸ್ಕರ ಜನಕಮಹಾರಾಜನ ಮಾತನ್ನು ತಿಳಿಸಿ '' ಈ ವಿಷಯದಲ್ಲಿ ಯಾವ ಕಾರ್ಯವನ್ನು ಮಾಡಬೇಕು ?'' ಎಂದು ಮಂತ್ರಿಗಳನ್ನು ಕೇಳಿದನು. ಆಗ ಆಗಮಸಾರನೆಂಬ ಮಂತ್ರಿಯು ''ನಿರ್ವಿಘ್ನವಾಗಿ ಯಾಗದ ಸಿದ್ಧಿಯಾದರೆ ಉಭಯಲೋಕಜನ್ಯವಾದ ಹಿತವನ್ನು ಮಾಡಿದಂತಾಗುವುದು. ಆದುದರಿಂದ ಈ ರಾಮಲಕ್ಷ್ಮಣರಿಗೆ ಸದ್ಗತಿಯಾಗಲಿ'' ಎಂಬ ಅಶುಭವಚನವನ್ನು ಹೇಳಿದನು.

**ವಚಸ್ಯವಸಿತೇ ತಸ್ಯ ತದುಕ್ತಮವಧಾರ್ಯ ಸಃ ।**
**ಪ್ರಜಲ್ಪತಿ ಸ್ಮಾತಿಶಯಮತ್ಯಾಖ್ಯೋ ಮಂತ್ರಿಣಾಂ ಮತಃ ॥ ೧೮೫ ॥**

ಅವನ ಮಾತು ಮುಗಿಯುತ್ತಿರಲು ಅವನ ಮಾತನ್ನು ಮನಸ್ಸಿನಲ್ಲಿಟ್ಟು ಮಂತ್ರಿಗಳಿಗೆ ಅಭಿಮತನಾದ ಆ ಅತಿಶಯಮತಿಯೆಂಬ ಮಂತ್ರಿಯು ಈ ರೀತಿಯಾಗಿ ಹೇಳಿದನು.

**ಧರ್ಮೋ ಯಾಗೋಯಮಿತ್ಯೇತತ್ಪ್ರಮಾಣಪದವೀಂ ವಚಃ ।**
**ನ ಪ್ರಾಪ್ನೋತ್ಯತ ಏವಾತ್ರ ನ ವರ್ತಂತೇ ಮನೀಷಿಣಃ ॥ ೧೮೬ ॥**

''ಈ ಯಾಗವು ಧರ್ಮವೆಂಬ ಮಾತು ಪ್ರಮಾಣಪದವಿಯನ್ನು ಹೊಂದುವುದಿಲ್ಲ. ಆದುದರಿಂದಲೇ ಪ್ರಾಜ್ಞರು ಈ ವಿಷಯದಲ್ಲಿ ಪ್ರವರ್ತಿಸುವುದಿಲ್ಲ.

**ಪ್ರಮಾಣಭೂಯಂ ವಾಕ್ಯಸ್ಯ ವಕ್ತೃಪ್ರಾಮಾಣ್ಯತೋ ಭವೇತ್ ।**
**ಸರ್ವಪ್ರಾಣಿವಧಾಶಂಸಿಯಜ್ಞಾಗಮವಿಧಾಯಿನಃ ॥ ೧೮೭ ॥**

**ಕಥಮುನ್ಮತ್ತಕಸ್ಯೇವ ಪ್ರಾಮಾಣ್ಯಂ ವಿಪ್ರವಾದಿನಃ ।**
**ವಿರುದ್ಧಾಲಾಪಿತಾ ಸಿದ್ಧಾ ನೇತಿ ಚೇದ್ವೇದವಾದಿನಃ ॥ ೧೮೮ ॥**

**ಸಿದ್ಧ್ಯೈವೈಕತ್ರ ಘಾತೋಕ್ತೇರನ್ಯತ್ರೈತನ್ನಿಷೇಧನಾತ್ ।**
**ಸ್ವಯಂಭೂತ್ವಾದದೋಷೋಸ್ಯ ವಿರೋಧೇ ಸತ್ಯಪೀತ್ಯಸತ್ ॥ ೧೮೯ ॥**

**ಪ್ರಸ್ಪಷ್ಟ್ಯೋಪಿ ಸ್ವಯಂಭೂತ್ವಂ ಕೀದೃಶಂ ತತ್ತದುಚ್ಯತಾಮ್ ।**
**ಬುದ್ಧಿಮತ್ಕರಣಸ್ಪಂದಸಂಬಂಧನಿರಪೇಕ್ಷಣಮ್ ॥ ೧೯೦ ॥**

**ಸ್ವಯಂಭೂತ್ವಂ ಭವೇನ್ಮೇಘಭೇಕಾದೀನಾಂ ಚ ಸಾ ಗತಿಃ ।**
**ತತಃ ಸರ್ವಜ್ಞನಿರ್ದಿಷ್ಟಂ ಸರ್ವಪ್ರಾಣಿಹಿತಾತ್ಮಕಮ್ ॥ ೧೯೧ ॥**

**ಜ್ಞೇಯಮಾಗಮಶಬ್ದಾಖ್ಯಂ ಸರ್ವದೋಷವಿವರ್ಜಿತಮ್ ।**
**ವರ್ತತೇ ಯಜ್ಞಶಬ್ದಶ್ಚ ದಾನದೇವರ್ಷಿಪೂಜಯೋಃ ॥ ೧೯೨ ॥**

ವಾಕ್ಯಕ್ಕೆ ಪ್ರಾಮಾಣ್ಯವು ವಕ್ತೃವಿನ ಪ್ರಾಮಾಣ್ಯದಿಂದಾಗುವುದು. ಸಕಲಪ್ರಾಣಿಗಳ ವಧೆಯನ್ನು ಹೇಳುವ ಯಜ್ಞಾಗಮವನ್ನು ಮಾಡುವ ವಿಪ್ರವಾದಿಯ ವಾಕ್ಯವು, ಉನ್ಮತ್ತನ ವಾಕ್ಯದಂತೆ, ಹೇಗೆ ಪ್ರಾಮಾಣ್ಯವನ್ನು ಹೊಂದುವುದು ?ವೇದವಾದಿಯ ಪೂರ್ವಾಪರವಿರುದ್ಧವಾದ ಮಾತು ಸಿದ್ಧವಾಗಿದೆ. ಇಲ್ಲವಾದರೆ ಒಂದು ಕಡೆಯಲ್ಲಿ ಹಿಂಸೆಯ ವಚನದಿಂದಲೂ ಇನ್ನೊಂದು ಕಡೆಯಲ್ಲಿ ಹಿಂಸೆಯ ನಿಷೇಧದಿಂದಲೂ ವಿರುದ್ಧವಾದ ಹೇಳಿಕೆಯು ಸಿದ್ಧವೇ ಆಗಿದೆ. ಪೂರ್ವಾಪರವಿರೋಧವಿದ್ದರೂ ವೇದವು ತಾನೇ ಉಂಟಾಗಿರುವುದರಿಂದ ಅಗೌರುಷೇಯವಾಗಿರುವುದರಿಂದ ದೋಷವಿಲ್ಲವೆಂಬುದು ಸರಿಯಲ್ಲ. ವೇದದ ಆ ಸ್ವಯಂಭೂತ್ವವು (ತಾನೇ ಉಂಟಾಗಿರುವಿಕೆಯು) ಎಂತಹುದು ? ಅದನ್ನು ಹೇಳು. ನೀನು–ಆಗಮಸಾರ ಮಂತ್ರಿಯು ನಮ್ಮಿಂದ ಕೇಳಲ್ಪಡುವುದಕ್ಕೆ ಯೋಗ್ಯನಾಗಿರುತ್ತಿ. ಬುದ್ಧಿಯುಳ್ಳವನ ಸಾಧನದ ಚಲನೆಯ ಸಂಬಂಧಾಪೇಕ್ಷೆಯಿಲ್ಲದಿರುವಿಕೆಯು ಸ್ವಯಂಭೂತ್ವವಾಗುವುದಾದರೆ ಮೇಘಕ್ಕೂ ಕಪ್ಪೆಯೇ ಮೊದಲಾದುವುಗಳಿಗೂ ಆ ಗತಿಯು–ಸ್ವಯಂಭೂತ್ವವು ಪ್ರಾಪ್ತವಾಗುವುದು. ಆದುದರಿಂದ ಸರ್ವಜ್ಞನಿಂದ ಹೇಳಲ್ಪಟ್ಟಿರುವುದೂ ಸಕಲಪ್ರಾಣಿಗಳಿಗೆ ಹಿತರೂಪವೂ ಸಮಸ್ತದೋಷರಹಿತವೂ ಆದ ಶಾಸ್ತ್ರವು ಆಗಮಶಬ್ದವೆಂದು ತಿಳಿಯಬೇಕು. ಯಜ್ಞಶಬ್ದವೂ ದಾನಾರ್ಥದಲ್ಲಿಯೂ ದೇವರ ಋಷಿಗಳ ಪೂಜಾರ್ಥದಲ್ಲಿಯೂ ಇರುತ್ತದೆ.

**ಯಾಗೋ ಯಜ್ಞಃ ಕ್ರತುಃ ಪೂಜಾ ಸಪರ್ಯೇಜ್ಯಾಧ್ವರೋ ಮಖಃ ।**
**ಮಹ ಇತ್ಯಪಿ ಪರ್ಯಾಯವಚನಾನ್ಯರ್ಚನಾವಿಧೇಃ ॥ ೧೯೩ ॥**

ಯಾಗ, ಯಜ್ಞ, ಕ್ರತು, ಪೂಜಾ, ಸಪರ್ಯಾ, ಇಜ್ಯಾ, ಅಧ್ವರ, ಮಖ, ಮಹ, ಈ ಪದಗಳು ಪೂಜಾವಿಧಿಯ ಪರ್ಯಾಯವಚನಗಳಾಗಿರುತ್ತವೆ.

**ಯಜ್ಞ ಶಬ್ದಾಭಿಧೇಯೋರುದಾನಪೂಜಾಸ್ವರೂಪಕಾತ್ ।**
**ಧರ್ಮ್ಯಾತ್ಪುಣ್ಯಂ ಸಮಾವರ್ಜ್ಯಂ ತತ್ಪಾಕಾದ್ವಿವಿಜೇಶ್ವರಾಃ ॥ ೧೯೪ ॥**

**ಶತಕ್ರತುಃ ಶತಮಖಃ ಶತಾಧ್ವರ ಇತಿ ಶ್ರುತಾಃ ।**
**ಪ್ರಾದುರ್ಭೂತಾಃ ಪ್ರಸಿದ್ಧಾಸ್ತೇ ಲೋಕೇ ಚ ಸಮಯೇಷು ಚ॥ ೧೯೫ ॥**

ಯಜ್ಞಶಬ್ದದ ಅರ್ಥವಾದ ಮಹಾದಾನ ಮಹಾಪೂಜಾಸ್ವರೂಪವಾದ ಧಾರ್ಮಿಕಕಾರ್ಯದಿಂದ ಪುಣ್ಯವನ್ನು ಸಂಪಾದಿಸಬೇಕು. ಆ ಪುಣ್ಯದ ಉದಯದಿಂದ ಶತಕ್ರತುವೆಂದೂ ಶತಮಖನೆಂದೂ ಶತಾಧ್ವರನೆಂದೂ ಪ್ರಸಿದ್ಧರಾದ ದೇವೇಂದ್ರರಾಗಿ ಪ್ರಾದುರ್ಭೂತರಾಗುವರು. ಆ ದೇವೇಂದ್ರರು ಲೋಕದಲ್ಲಿಯೂ ಸಿದ್ಧಾಂತಗಳಲ್ಲಿಯೂ ಪ್ರಸಿದ್ಧರಾಗಿರುತ್ತಾರೆ.

**ಹಿಂಸಾರ್ಥೋ ಯಜ್ಞಶಬ್ದಶ್ಚೇತ್ತತ್ಕರ್ತುರ್ನಾರಕೀ ಗತಿಃ ।**
**ಪ್ರಯಾತಿ ಸೋಪಿ ಚೇತ್ಸ್ವರ್ಗಂ ವಿಹಿಂಸಾನಾಮಧೋಗತಿಃ ॥ ೧೯೬ ॥**

ಯಜ್ಞಶಬ್ದವು ಹಿಂಸೆಯ ಅರ್ಥವುಳ್ಳದಾಗಿರುವುದಾದರೆ ಅದನ್ನು ಮಾಡುವವನಿಗೆ ನರಕಗತಿಯು ಪ್ರಾಪ್ತವಾಗುವುದು. ಹಿಂಸಾರೂಪವಾದ ಯಜ್ಞವನ್ನು ಮಾಡುವವನೂ ಸ್ವರ್ಗಕ್ಕೆ ಹೋಗುವುದಾದರೆ ಅಹಿಂಸಕರಿಗೆ ಅಧೋಗತಿಯಾಗಬೇಕು.

**ತವ ಸ್ಯಾದಿತ್ಯಭಿಪ್ರಾಯೋ ಹಿಂಸ್ಯಮಾನಾಂಗಿದಾನತಃ ।**
**ತದ್ವಧೇನ ಚ ದೇವಾನಾಂ ಪೂಜ್ಯತ್ವಾದ್ಯಜ್ಞ ಇತ್ಯಯಮ್ ॥ ೧೯೭ ॥**

**ವರ್ತತೇ ದೇವಪೂಜಾಯಾಂ ದಾನೇ ಚಾನ್ವರ್ಥತಾಂ ಗತಃ ।**
**ಏತತ್ಸ್ವಗೃಹಮಾನ್ಯಂ ತೇ ಯದ್ಯಸ್ಮಿನ್ನೇಷ ಇಷ್ಯತೇ ॥ ೧೯೮ ॥**

'ಹಿಂಸಿಸಲ್ಪಡತಕ್ಕ ಪ್ರಾಣಿಗಳನ್ನು ದಾನಮಾಡುವುದರಿಂದಲೂ ಆ ಪ್ರಾಣಿಗಳ ವಧೆಯಿಂದಲೂ ದೇವರ್ಕಳಿಗೆ ಪೂಜ್ಯವಾಗಿರುವುದರಿಂದಲೂ "ಯಜ್ಞ" ಎಂಬೀ ಶಬ್ದವು ದೇವಪೂಜೆಯಲ್ಲಿಯೂ ದಾನದಲ್ಲಿಯೂ ಅನ್ವರ್ಥತೆಯನ್ನು ಹೊಂದಿದುದಾಗಿದೆ' ಎಂದು ನಿನ್ನ ಅಭಿಪ್ರಾಯವಿರಬಹುದು. ಈ ಅರ್ಥದಲ್ಲಿ ಈ ಯಜ್ಞಶಬ್ದವು ಇಚ್ಛಿಸಲ್ಪಡುವುದಾದರೆ ಇದು ನಿನ್ನ ಮನೆಯಲ್ಲಿ ಮಾನ್ಯವಾಗಿರಬೇಕು.

**ಹಿಂಸಾಯಾಮಿತಿ ಧಾತ್ವರ್ಥಪಾಠೇ ಕಿಂ ನ ವಿಧೀಯತೇ ।**
**ನ ಹಿಂಸಾ ಯಜ್ಞಶಬ್ದಾರ್ಥೋ ಯದಿ ಪ್ರಾಣಿವಧಾತ್ಮಕಮ್ ॥ ೧೯೯ ॥**

**ಯಜ್ಞಂ ಕಥಂ ಚರಂತ್ಯಾರ್ಯಾ ಇತ್ಯಶಿಕ್ಷಿತಲಕ್ಷಿತಮ್ ।**
**ಆರ್ಷಾನಾರ್ಷವಿಕಲ್ಪೇನ ಯಾಗೋ ದ್ವಿವಿಧ ಇಷ್ಯತೇ ॥ ೨೦೦ ॥**

ಹಾಗಿಲ್ಲವಾದರೆ ಧಾತ್ವರ್ಥಪಾಠದಲ್ಲಿ "ಯಜ ಹಿಂಸಾಯಾಂ" ಎಂದೇಕೇ ವಿಧಿಸಲ್ಪಡುವುದಿಲ್ಲ? ಆದುದರಿಂದ ಯಜ್ಞಶಬ್ದಾರ್ಥವು ಹಿಂಸೆಯಲ್ಲ. ಪ್ರಾಣಿವಧರೂಪವಾದುದು ಯಜ್ಞವಾದರೆ ಅದನ್ನು ಆರ್ಯರು–ಪೂಜ್ಯರು ಹೇಗೆ ಆಚರಿಸುತ್ತಾರೆ? ಈ ಕಾರಣದಿಂದ ಯಜ್ಞಶಬ್ದಕ್ಕೆ ಹಿಂಸಾರ್ಥಕಥನವು ಮೂರ್ಖರಿಂದ ಮಾಡಲ್ಪಟ್ಟಿರುವುದಾಗಿದೆ. ಯಾಗವು ಆರ್ಷಯಾಗ ಅನಾರ್ಷಯಾಗಗಳೆಂಬ ಭೇದದಿಂದ ಎರಡು ಪ್ರಕಾರವಾಗಿ ಇಚ್ಛಿಸಲ್ಪಡುತ್ತದೆ.

**ತೀರ್ಥೇಶಾ ಜಗದಾದ್ಯೇನ ಪರಮಬ್ರಹ್ಮಣೋದಿತೇ ।**
**ವೇದೇ ಜೀವಾದಿಷಡ್ದ್ರವ್ಯಭೇದಯಾಥಾತ್ಮ್ಯದೇಶನೇ ॥ ೨೦೧ ॥**

**ತ್ರಯೋಗ್ನಯಃ ಸಮುದ್ದಿಷ್ಟಾಃ ಕ್ರೋಧಕಾಮೋದರಾಗ್ನಯಃ ।**
**ತೇಷು ಕ್ಷಮಾವಿರಾಗತ್ವಾನಶನಾಹುತಿಭಿರ್ವನೇ ॥ ೨೦೨ ॥**

**ಸ್ಥಿತ್ವರ್ಷಿಯತಿಮುನ್ಯಸ್ತಶರಣಾಃ ಪರಮದ್ವಿಜಾಃ ।**
**ಇತ್ಯಾತ್ಮಯಜ್ಞಮಿಷ್ಟಾರ್ಥಾಮಷ್ಟಮೀಮವನೀಂ ಯಯುಃ ॥ ೨೦೩ ॥**

ಜಗತ್ತಿನಲ್ಲಿ ಮೊದಲನೆಯವನೂ ಪರಮಬ್ರಹ್ಮನೂ ಆದ ವೃಷಭತೀರ್ಥೇಶ್ವರನಿಂದ ಹೇಳಲ್ಪಟ್ಟಿರುವುದೂ ಜೀವಾದಿಷಡ್ದ್ರವ್ಯಗಳ ಭೇದದ ಯಥಾರ್ಥಸ್ವರೂಪವನ್ನುಪದೇಶಿಸುವುದೂ ಆದ ವೇದದಲ್ಲಿ ಕ್ರೋಧ, ಮೋಹ, ಜಠರಾಗ್ನಿಗಳೆಂಬ ಮೂರು ಅಗ್ನಿಗಳು ಹೇಳಲ್ಪಟ್ಟಿವೆ. ಋಷಿ ಯತಿ ಮುನಿ ಗೃಹರಹಿತರುಗಳೆಂಬ ಉತ್ಕೃಷ್ಟದ್ವಿಜರು ವನದಲ್ಲಿದ್ದು ಆ ಮೂರು ಅಗ್ನಿಗಳಲ್ಲಿ ಯಥಾಕ್ರಮವಾಗಿ ಕ್ಷಮಾ ವೀತರಾಗತ್ವ ನಿರಾಹಾರಗಳೆಂಬ ಆಹುತಿಗಳಿಂದ ಆತ್ಮಯಜ್ಞವನ್ನು ಮಾಡಿ ಇಷ್ಟಾರ್ಥವಾದ ಅಷ್ಟಮಪೃಥ್ವಿ(ಮುಕ್ತಿ)ಯನ್ನು ಹೊಂದಿದರು.

**ತಥಾ ತೀರ್ಥಗಣಾಧೀಶಶೇಷಕೇವಲಿಸದ್ವಪುಃ- ।**
**ಸಂಸ್ಕಾರಮಹಿತಾಗ್ನೀಂದ್ರಮುಕುಟೋತ್ಥಾಗ್ನಿಷು ತ್ರಿಷು ॥ ೨೦೪ ॥**

**ಪರಮಾತ್ಮಪದಂ ಪ್ರಾಪ್ತಾನ್ನಿಜಾನ್ ಪಿತೃಪಿತಾಮಹಾನ್ ।**
**ಉದ್ದಿಶ್ಯ ಭಾಕ್ತಿಕಾಃ ಪುಷ್ಪಗಂಧಾಕ್ಷತಫಲಾದಿಭಿಃ ॥ ೨೦೫ ॥**

**ಆರ್ಷೋಪಾಸಕವೇದೋಕ್ತ ಮಂತ್ರೋಚ್ಚಾರಣಪೂರ್ವಕಮ್ ।**
**ದಾನಾದಿಸತ್ಕ್ರಿಯೋಪೇತಾ ಗೇಹಾಶ್ರಮತಪಸ್ವಿನಃ ॥ ೨೦೬ ॥**

**ನಿತ್ಯಮಿಷ್ಟ್ವೇಂದ್ರಸಾಮಾನಿಕಾದಿಮಾನ್ಯಪದೋದಿತಾಃ ।**
**ಲೌಕಾಂತಿಕಾಶ್ಚ ಭೂತ್ವಾಮರದ್ವಿಜಾ ಧ್ವಸ್ತಕಲ್ಮಷಾಃ ॥ ೨೦೭ ॥**

ಹಾಗೆಯೇ ತೀರ್ಥಂಕರರ ಶರೀರಸಂಸ್ಕಾರದಿಂಲೂ ಗಣಧರರ ಶರೀರ ಸಂಸ್ಕಾರದಿಂದಲೂ ಇತರಕೇವಲಿಗಳ ಶರೀರಸಂಸ್ಕಾರದಿಂದಲೂ ಪೂಜಿತವೂ ಅಗ್ನಿಕುಮಾರೇಂದ್ರನ ಕಿರೀಟದಿಂದುಂಟಾದುದೂ ಆದ ಮೂರು ಅಗ್ನಿಗಳಲ್ಲಿ ದಾನಾದಿ ಸತ್ಕ್ರಿಯೆಗಳುಳ್ಳವರೂ ಗೃಹಸ್ಥಾಶ್ರಮದ ತಪಸ್ವಿಗಳೂ ಆದ ಭಕ್ತರು ಪರಮಾತ್ಮಪದವನ್ನು ಹೊಂದಿರುವ ತಮ್ಮ ತಂದೆತಾತರುಗಳನ್ನು ಉದ್ದೇಶಿಸಿ ಋಷಿಪ್ರೋಕ್ತವಾದ ಏಳನೆಯ ಉಪಾಸಕಾಧ್ಯಯನಾಂಗವೆಂಬ ವೇದದಲ್ಲಿ ಹೇಳಲ್ಪಟ್ಟ ಮಂತ್ರೋಚ್ಚಾರಪೂರ್ವಕವಾಗಿ ಪುಷ್ಪ ಗಂಧ ಅಕ್ಷತ ಫಲಾದಿಗಳಿಂದ ನಿತ್ಯವೂ ಪೂಜಿಸಿ ಮುಂದೆ ಇಂದ್ರ, ಸಾಮಾನಿಕ ಮೊದಲಾದ ದೇವರ್ಕಳ ಮಾನ್ಯಸ್ಥಾನಗಳಲ್ಲಿ ಜನಿಸಿದ ದೇವದ್ವಿಜರೂ ಲೌಕಾಂತಿಕದೇವರ್ಕಳೂ ಕರ್ಮವನ್ನು ನಾಶಮಾಡಿದವರೂ ಆಗುವರು.

**ದ್ವಿತೀಯಜ್ಞಾನವೇದಸ್ಯ ಸಾಮಾನ್ಯೇನ ಸತಃ ಸದಾ ।**
**ದ್ರವ್ಯಕ್ಷೇತ್ರಾದಿಭೇದೇನ ಕರ್ತೄಣಾಂ ತೀರ್ಥದೇಶಿನಾಮ್ ॥ ೨೦೮ ॥**

**ಪಂಚಕಲ್ಯಾಣಭೇದೇಷು ದೇವಾ ಯಜ್ಞವಿಧಾನತಃ ।**
**ಚಿತಪುಣ್ಯಫಲಂ ಭುಕ್ತ್ವಾ ಕ್ರಮೇಣಾಪ್ಸ್ಯಂತಿ ಸಿದ್ಧತಾಮ್ ॥ ೨೦೯ ॥**

ಶ್ರೇಷ್ಠವಾದ ಶ್ರುತಜ್ಞಾನವೇದದ ಕರ್ತರೂ ಸಾಮಾನ್ಯವಾದ ದ್ರವ್ಯಕ್ಷೇತ್ರಾದಿ ಭೇದದಿಂದ ಯಾವಾಗಲೂ ಧರ್ಮತೀರ್ಥವನ್ನುಪದೇಶಿಸುವವರೂ ಆದ ತೀರ್ಥಂಕರರ ಪಂಚಕಲ್ಯಾಣಭೇದಗಳಲ್ಲಿ ದೇವರ್ಕಳು ಯಜ್ಞವಿಧಾನದಿಂದ ಸಂಪಾದಿಸಿದ ಪುಣ್ಯದ ಫಲವನ್ನು ಅನುಭವಿಸಿ ಕ್ರಮದಿಂದ ಸಿದ್ಧತ್ವವನ್ನು ಪಡೆಯುವರು.

**ಯಾಗೋಯಮೃಷಿಭಿಃ ಪ್ರೋಕ್ತೋ ಯತ್ಯಗಾರಿದ್ವಯಾಶ್ರಯಃ ।**
**ಆದ್ಯೋ ಮೋಕ್ಷಾಯ ಸಾಕ್ಷಾತ್ಸ್ಯಾತ್ಸ್ಯಾತ್ಪರಂಪರಯಾ ಪರಃ ॥ ೨೧೦ ॥**

ಯತ್ಯಾಶ್ರಯ ಮತ್ತು ಗೃಹಸ್ಥಾಶ್ರಯವುಳ್ಳ ಈ ಯಾಗವು ಋಷಿಗಳಿಂದ ಹೇಳಲ್ಪಟ್ಟಿದೆ. ಮೊದಲನೆಯದಾದ ಯತ್ಯಾಶ್ರಯಯಾಗವು ಸಾಕ್ಷಾತ್ತಾಗಿ ಮೊಕ್ಷಕ್ಕೆ ಕಾರಣವಾಗಿದೆ. ಎರಡನೆಯದಾದ ಗೃಹಸ್ಥಾಶ್ರಮಿಗಳ ಯಾಗವು ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾಗಿದೆ.

**ಏವಂ ಪರಂಪರಾಯಾತದೇವಯಜ್ಞವಿಧೇಷ್ವಿಹ ।**
**ದ್ವಿಲೋಕಹಿತಕೃತ್ಯೇಷು ವರ್ತಮಾನೇಷು ಸಂತತಮ್ ॥ ೨೧೧ ॥**

**ಮುನಿಸುವ್ರತತೀರ್ಥೇಶಸಂತಾನೇ ಸಗರದ್ವಿಷಃ ।**
**ಮಹಾಕಾಲೋಸುರೋ ಹಿಂಸಾಯಜ್ಞಮಜ್ಞೋನ್ವಶಾದಮುಮ್॥ ೨೧೨ ॥**

ಈ ರೀತಿಯಾಗಿ ಪರಂಪರೆಯಿಂದ ಬಂದ ದೇವಯಜ್ಞಭೇದಗಳು ಈ ಕ್ಷೇತ್ರದಲ್ಲಿ ಇಹಪರಲೋಕಹಿತಕಾರ್ಯಗಳಾಗಿ ಯಾವಾಗಲೂ ಇರುತ್ತಿರಲು ಮುನಿಸುವ್ರತ ತೀರ್ಥಂಕರರ ತೀರ್ಥಪರಂಪರೆಯಲ್ಲಿ ಸಗರನ ವೈರಿಯೂ ಅಜ್ಞನೂ ಆದ ಮಹಾ ಕಾಲಾಸುರನು ಈ ಹಿಂಸಾಯಜ್ಞವನ್ನು ಪ್ರಚಾರಮಾಡಿದನು.

**ಕಥಂ ತದಿತಿ ಚೇದಸ್ಮಿನ್ ಭಾರತೇ ಚಾರಣಾದಿಕೇ ।**
**ಯುಗಲೇ ನಗರೇ ರಾಜಾಜನಿ ನಾಮ್ನಾ ಸುಯೋಧನಃ ॥ ೨೧೩ ॥**

ಅದು ಹೇಗೆಂದರೆ–ಈ ಭಾರತವರ್ಷದಲ್ಲಿ ಚಾರಣಯುಗಲವೆಂಬ ನಗರದಲ್ಲಿ ಸುಯೋಧನನೆಂಬ ರಾಜನು ಜನಿಸಿದನು.

**ದೇವೀ ತಸ್ಯಾತಿಥಿಖ್ಯಾತಿಸ್ತನೂಜಾ ಸುಲಸಾನಯೋಃ ।**
**ತಸ್ಯಾಃ ಸ್ವಯಂವರಾರ್ಥೇ ತದ್ದೂತೋಕ್ತ್ಯಾ ಪುರಮಾಗತೇ ॥ ೨೧೪ ॥**

**ಮಹೀಶಮಂಡಲೇ ಸಾಕೇತೇಶಿನಂ ಸಗರಾಹ್ವಯಮ್ ।**
**ತತ್ರಾಗಂತುಂ ಸಮುದ್ಯುಕ್ತಮನ್ಯದಾ ಸ್ವಶಿರೋರುಹಾಮ್ ॥ ೨೧೫ ॥**

**ಕಲಾಪೇ ಪಲಿತಂ ಪ್ರಾಚ್ಯಂ ಜ್ಞಾತ್ವಾ ತೈಲೋಪಲೇಪಿನಾ ।**
**ನಿರ್ವಿದ್ಯ ವಿಮುಖಂ ಯಾನೇ ವಿಲೋಕ್ಯ ಕುಶಲಾ ತದಾ ॥ ೨೧೬ ॥**

**ಧಾತ್ರೀ ಮಂಡೋದರೀ ನಾಮ ತಮಿತ್ವಾ ಪಲಿತಂ ನವಮ್ ।**
**ಪವಿತ್ರಂ ದ್ರವ್ಯಲಾಭಂ ತೇ ವದತೀತ್ಯತ್ಯಬೂಬುಧತ್ ॥ ೨೧೭ ॥**

ಅವನಿಗೆ ಅತಿಥಿಯೆಂಬವಳು ಪತ್ನಿಯಾಗಿದ್ದಳು. ಈ ದಂಪತಿಗಳಿಗೆ ಸುಲಸೆ ಯೆಂಬ ಮಗಳಿದ್ದಳು. ಆಕೆಯ ಸ್ವಯಂವರಕ್ಕೋಸ್ಕರ ಆ ಸುಯೋಧನರಾಜನ ದೂತನ ಮಾತಿನಿಂದ ರಾಜರುಗಳ ಸಮೂಹವು ಪಟ್ಟಣಕ್ಕೆ ಬರುತ್ತಿರಲು ಅಯೋಧ್ಯಾನಗರಾಧಿಪತಿಯೂ ಆ ಚಾರಣಯುಗಲಕ್ಕೆ ಬರುವುದಕ್ಕೋಸ್ಕರ ಉದ್ಯುಕ್ತನೂ ಮತ್ತೊಂದು ಸಮಯದಲ್ಲಿ ತನ್ನ ತಲೆಗೂದಲುಗಳ ಸಮೂಹದಲ್ಲಿ ಮೊದಲಿನ ನರೆಗೂದಲನ್ನು ಎಣ್ಣೆಹಚ್ಚುವ ಸೇವಕನಿಂದ ತಿಳಿದು ವೈರಾಗ್ಯವನ್ನು ಹೊಂದಿ ಗಮನದಲ್ಲಿ ವಿಮುಖನೂ ಆದ ಸಗರಮಹಾರಾಜನನ್ನು ನೋಡಿ ಚತುರ ಳಾದ ಮಂಡೋದರಿಯೆಂಬ ದಾದಿಯು (ಸಾಕಿದವಳು) ಆಗ ಅವನನ್ನು ಕಂಡು "ಹೊಸದಾದ ನರೆಗೂದಲು ನಿನಗೆ ಪವಿತ್ರವಾದ ದ್ರವ್ಯಲಾಭವನ್ನು ಹೇಳುತ್ತದೆ" ಎಂದು ಬಹಳವಾಗಿ ಬೋಧಿಸಿದಳು.

**ತತ್ರೈವ ಸಚಿವೋ ವಿಶ್ವಭೂರಪ್ಯೇತ್ಯಾನ್ಯಭೂಭೃತಾಮ್ ।**
**ಪರಾಙ್ಮುಖೀ ಸಾ ತ್ವಾಮೇವ ಸುಲಸಾಭಿಲಷತ್ಯಲಮ್ ॥ ೨೧೮ ॥**

**ಯಥಾತಥಾಹಂ ಕರ್ತಾಸ್ಮಿ ಕೌಶಲೇನೇತ್ಯಭಾಷತ ।**
**ತದ್ವಚಃಶ್ರವಣಾತ್ಪ್ರೀತಃ ಸಾಕೇತನಗರಾಧಿಪಃ ॥ ೨೧೯ ॥**

**ಚತುರಂಗಬಲೇನಾಮಾ ಸುಯೋಧನಪುರಂ ಯಯೌ ।**
**ದಿನೇಷು ಕೇಷುಚಿತ್ತತ್ರ ಯಾತೇಷು ಸುಲಸಾಂತಿಕೇ ॥ ೨೨೦ ॥**

**ಮಂಡೋದರ್ಯಾ ಕುಲಂ ರೂಪಂ ಸೌಂದರ್ಯಂ ವಿಕ್ರಮೋ ನಯಃ ।**
**ವಿನಯೋ ವಿಭವೋ ಬಂಧುಸಂಪದನ್ಯೇ ಚ ಯೇ ಸ್ತುತಾಃ ॥ ೨೨೧ ॥**

**ಗುಣಾ ವರಸ್ಯ ತೇಯೋಧ್ಯಾಪುರೇಶೇ ರಾಜಪುತ್ರಿಕಾ ।**
**ತತ್ಸರ್ವಮವಗಮ್ಯಾಸೀತ್ತಸ್ಮಿನ್ನಾಸಂಜಿತಾಶಯಾ ॥ ೨೨೨ ॥**

ಅಲ್ಲಿಗೇ ಸಗರಮಹಾರಾಜನ ವಿಶ್ವಭೂವೆಂಬ ಮಂತ್ರಿಯೂ ಬಂದು ಅವನನ್ನು ಕುರಿತು "ಆ ಸುಲಸೆಯು ಇತರರಾಜರುಗಳ ವಿಷಯದಲ್ಲಿ ವಿಮುಖಳಾಗಿ ನಿನ್ನನ್ನೇ ಬಹಳವಾಗಿ ಅಪೇಕ್ಷಿಸುವಂತೆ ಚಾತುರ್ಯದಿಂದ ನಾನು ಮಾಡುತ್ತೇನೆ" ಎಂದು ಹೇಳಿದನು. ಆ ಮಾತನ್ನು ಕೇಳಿದುದರಿಂದ ಪ್ರೀತಿಯುಳ್ಳವನಾದ ಅಯೋಧ್ಯಾ ನಗರಾಧಿಪತಿ–ಸಗರನು ಚತುರಂಗಸೈನ್ಯದೊಡನೆ ಸುಯೋಧನನ ಪಟ್ಟಣಕ್ಕೆ ಹೋದನು. ಅಲ್ಲಿ ಕೆಲವು ದಿನಗಳು ಕಳೆಯುತ್ತಿರಲು ಸುಲಸೆಯ ಬಳಿಯಲ್ಲಿ ಮಂಡೋದರಿಯು "ಕುಲ, ರೂಪ, ಸೌಂದರ್ಯ,ಪರಾಕ್ರಮ, ನಯ, ವಿನಯ, ಐಶ್ವರ್ಯ, ಬಂಧುಸಂಪತ್ತಿ ಈ ಗುಣಗಳೂ ವರನಲ್ಲಿರಬೇಕಾದ ಸ್ತುತ್ಯವಾದ ಬೇರೆ ಗುಣಗಳೂ ಅಯೋಧ್ಯಾನಗರಾಧಿಪತಿಯಾದ ಸಗರನಲ್ಲಿರುತ್ತವೆ" ಎಂದು ಹೇಳಿ ದಳು. ರಾಜಪುತ್ರಿಯು ಅದೆಲ್ಲವನ್ನೂ ತಿಳಿದು ಅವನಲ್ಲಿ ಆಸಕ್ತವಾದ ಮನಸ್ಸುಳ್ಳವ ಳಾದಳು.

**ತದ್ವಿದಿತ್ವಾತಿಥಿರ್ಯುಕ್ತಿಮದ್ವಚೋಭಿಃ ಪ್ರದೂಷ್ಯ ತಮ್ ।**
**ಸುರಮ್ಯವಿಷಯೇ ಪೌದನಾಧೀಡ್ಬಾಹುಬಲೀಶಿನಃ ॥ ೨೨೩ ॥**

**ಕುಲೇ ಮಹೀಭುಜಾಂ ಜ್ಯೇಷ್ಠೋ ಮದ್ಭ್ರಾತಾ ತೃಣಪಿಂಗಲಃ ।**
**ತಸ್ಯ ಸರ್ವಯಶಾ ದೇವೀ ತಯೋಸ್ತುಙ್ಮಧುಪಿಂಗಲಃ ॥ ೨೨೪ ॥**

**ಸರ್ವೈರ್ವರಗುಣೈರ್ಗಣ್ಯೋ ನವೇ ವಯಸಿ ವರ್ತತೇ ।**
**ಸ ತ್ವಯಾ ಮಾಲಯಾ ಮಾನನೀಯೋದ್ಯ ಮದಪೇಕ್ಷಯಾ ॥ ೨೨೫ ॥**

**ಸಾಕೇತಪತಿನಾ ಕಿಂ ತೇ ಸಪತ್ನೀದುಃಖದಾಯಿನಾ ।**
**ಇತ್ಯಾಹೈತದ್ವಚಃ ಸಾಪಿ ಸ್ವೋಪರೋಧಾಭ್ಯುಪಾಗಮತ್ ॥ ೨೨೬ ॥**

ಅದನ್ನು ತಿಳಿದು ಸುಲಸೆಯ ತಾಯಿಯಾದ ಅತಿಥಿಯು ಯುಕ್ತಿಯುಳ್ಳ ಮಾತುಗಳಿಂದ ಆ ಸಗರನನ್ನು ದೂಷಿಸಿ "ಸುರಮ್ಯದೇಶದಲ್ಲಿ ಪೌದನಾಧಿಪತಿ ಯಾಗಿದ್ದ ಬಾಹುಬಲಿಸ್ವಾಮಿಯ ವಂಶದಲ್ಲಿ ರಾಜರುಗಳಲ್ಲಿ ಮುಖ್ಯನೂ ನನ್ನ ಸಹೋದರನೂ ಆದ ತೃಣಪಿಂಗಲನಿದ್ದಾನೆ. ಅವನ ಪತ್ನಿಯು ಸರ್ವಯಶಾ. ಆ ದಂಪತಿಗಳ ಪುತ್ರನಾದ ಮಧುಪಿಂಗಲನು ನೂತನವಯಸ್ಸಿನಲ್ಲಿ ವರನಲ್ಲಿರಬೇಕಾದ ಎಲ್ಲಾ ಗುಣಗಳಿಂದ ಗಣ್ಯನಾಗಿದ್ದಾನೆ. ನನ್ನ ಅಪೇಕ್ಷೆಯಿಂದ ಈಗ ನೀನು ಅವನನ್ನು ಮಾಲೆಯಿಂದ ಸನ್ಮಾನಿಸಬೇಕು. ಸವತಿಯ ದುಃಖವನ್ನು ಕೊಡುವವನಾದ ಅಯೋಧ್ಯಾನಗಾರಧಿಪತಿ–ಸಗರನಿಂದ ನಿನಗೇನು ಪ್ರಯೋಜನ ?" ಎಂದು ಹೇಳಿ ದಳು. ಈ ಮಾತನ್ನು ಆ ಸುಲಸೆಯೂ ತನಗೆ ಪ್ರತಿಬಂಧವುಳ್ಳವಳಾಗಿ ಅಂಗೀ ಕರಿಸಿದಳು.

**ತದಾಪ್ರಭೃತಿ ಕನ್ಯಾಯಾಃ ಸಮೀಪಾಗಮನಾದಿಕಮ್ ।**
**ಉಪಾಯೇನಾತಿಥಿರ್ದೇವೀ ಮಂಡೋದರ್ಯಾ ನ್ಯವಾರಯತ್॥ ೨೨೭ ॥**

ಆ ಮೊದಲುಗೊಂಡು ಅತಿಥಿದೇವಿಯು ಕನ್ಯೆಯ ಬಳಿಗೆ ಮಂಡೋದರಿಯ ಆಗಮನಾದಿಗಳನ್ನು ಉಪಾಯದಿಂದ ತಡೆದಳು. ಮಂಡೋದರಿಯು ಸುಲಸೆಯ ಬಳಿಗೆ ಬಾರದಂತೆ ಮಾಡಿದಳೆಂದು ಭಾವವು.

**ಧಾತ್ರೀ ಚ ಪ್ರಸ್ತುತಾರ್ಥಸ್ಯ ವಿಘಾತಮವದದ್ವಿಭೋಃ ।**
**ನೃಪೋ ಹಿ ಮಂತ್ರಿಣಂ ಪ್ರಾಹ ಯದಸ್ಮಾಭಿರಭೀಪ್ಸಿತಮ್ ॥ ೨೨೮ ॥**

**ತತ್ತ್ವಯಾ ಸರ್ವಥಾ ಸಾಧ್ಯಮಿತಿ ಸೋಪ್ಯಭ್ಯುಪೇತ್ಯ ತತ್ ।**
**ವರಸ್ಯ ಲಕ್ಷಣಂ ಶಸ್ತಮಪ್ರಶಸ್ತಂ ಚ ವರ್ಣ್ಯತೇ ॥ ೨೨೯ ॥**

**ಯೇನ ತಾದೃಗ್ವಿಧಂ ಗ್ರಂಥಂ ಸಮುತ್ಪಾದ್ಯ ವಿಚಕ್ಷಣಃ ।**
**ಸ್ವಯಂವರವಿಧಾನಾಖ್ಯಂ ವಿಧಾಯಾರೋಪ್ಯ ಪುಸ್ತಕೇ ॥ ೨೩೦ ॥**

**ಮಂಜೂಷಾಯಾಂ ವಿನಿಕ್ಷಿಪ್ಯ ತದುದ್ಯಾನವನಾಂತರೇ ।**
**ಧರಾತಿರೋಹಿತಂ ಕೃತ್ವಾ ನ್ಯಧಾದವಿದಿತಂ ಪರೈಃ ॥ ೨೩೧ ॥**

ಆ ದಾದಿಯೂ ಪ್ರಕೃತವಿಷಯದ ವಿಘಾತವನ್ನು ದೊರೆಗೆ ತಿಳುಹಿದಳು. ದೊರೆಯೂ ಮಂತ್ರಿಯನ್ನು ಕುರಿತು "ನಮ್ಮ ಇಷ್ಟಾರ್ಥವನ್ನು ನೀನು ಸಾಧಿಸಲೇ ಬೇಕು" ಎಂದು ಹೇಳಿದನು. ಚತುರನಾದ ಆ ಮಂತ್ರಿಯೂ ದೊರೆಯ ಮಾತನ್ನು

ಒಪ್ಪಿ ವರನ ಶುಭಲಕ್ಷಣವೂ ಅಶುಭಲಕ್ಷಣವೂ ಯಾವ ಗ್ರಂಥದಿಂದ ವರ್ಣಿಸಲ್ಪಡುವುದೋ ಅಂತಹ ಗ್ರಂಥವನ್ನು ನಿರ್ಮಿಸಿ ಅದಕ್ಕೆ "ಸ್ವಯಂವರವಿಧಾನ" ವೆಂದು ಹೆಸರನ್ನಿಟ್ಟು ಅದನ್ನು ಪುಸ್ತಕದಲ್ಲಿ ಆರೋಪಿಸಿ–ಬರೆದು ಪೆಟ್ಟಿಗೆಯಲ್ಲಿ ಆ ನಗರೋದ್ಯಾನದ ವನದ ಮಧ್ಯದಲ್ಲಿ ಬೇರೆಯವರು ತಿಳಿಯಲಾಗದಂತೆ ಭೂಮಿಯಲ್ಲಿ ಮರೆಮಾಡಿ–ಹೂತಿಟ್ಟನು.

**ದಿನೇಷು ಕೇಷುಚಿದ್ಯಾತೇಷೂದ್ಯಾನಾವನಿಶೋಧನೇ ।**
**ಹಲಾಗ್ರೇಣೋದ್ಧೃತಂ ಮಂತ್ರೀ ಮಯಾ ದೃಷ್ಟಂ ಯದೃಚ್ಛಯಾ ॥**

**ಪುರಾತನಮಿದಂ ಶಾಸ್ತ್ರಮಿತ್ಯಜಾನನ್ನಿವ ಸ್ವಯಮ್ ।**
**ವಿಸ್ಮಿತೋ ರಾಜಪುತ್ರಾಣಾಂ ಸಮಾಜೇ ತದವಾಚಯತ್ ॥ ೨೩೩ ॥**

**ಸಂಭಾವಯತು ಪಿಂಗಾಕ್ಷಂ ಕನ್ಯಾ ವರಕದಂಬಕೇ ।**
**ನ ಮಾಲಯಾ ಮೃತಿಸ್ತಸ್ಯಾಃ ಸಾ ತಂ ಚೇತ್ಸಮಭೀಭವತ್ ॥ ೨೩೪ ॥**

**ತೇನಾಪಿ ನ ಪ್ರವೇಷ್ಟವ್ಯಾ ಸಭಾಂಹೋಭೀತ್ರಪಾವತಾ ।**
**ಪ್ರವಿಷ್ಟೋಽಪ್ಯತ್ರಪಃ ಪಾಪೀ ತತೋ ನಿರ್ಘಾಟ್ಯತಾಮಿತಿ ॥ ೨೩೫ ॥**

ಕೆಲವು ದಿನಗಳು ಕಳೆಯುತ್ತಿರಲು ಮಂತ್ರಿಯು "ಉದ್ಯಾನಭೂಮಿಯ ಶೋಧನೆಯಲ್ಲಿ ನೇಗಿಲಿನ ತುದಿಯಿಂದ ಅಕಸ್ಮಾತ್ತಾಗಿ ಎತ್ತಲ್ಪಟ್ಟ ಪುರಾತನವಾದ ಈ ಶಾಸ್ತ್ರವನ್ನು ನಾನು ಕಂಡೆನು" ಎಂದು ತಾನು ತಿಳಿಯದವನಂತೆ ಆಶ್ಚರ್ಯವುಳ್ಳವನಾಗಿ ರಾಜಪುತ್ರರ ಸಮೂಹದಲ್ಲಿ ಆ ಪುಸ್ತಕವನ್ನು "ಕನ್ಯೆಯು ವರಸಮೂಹದಲ್ಲಿ ಪಿಂಗಳವರ್ಣದ ಕಣ್ಣುಳ್ಳವನನ್ನು ಮಾಲಿಕೆಯಿಂದ ಸನ್ಮಾನಿಸಲಾಗದು. ಆ ಕನ್ಯೆಯು ಅಂತಹ ವರನನ್ನು ಸನ್ಮಾನಿಸಿದರೆ ಆಕೆಗೆ ಮರಣವಾಗುವುದು. ಪಾಪಭೀತಿಯೂ ಲಜ್ಜೆಯೂ ಉಳ್ಳ ಅಂತಹ ಮನುಷ್ಯನೂ ಸಭೆಗೆ ಪ್ರವೇಶಿಸಬಾರದು. ಆ ಪಾಪಿಯು ನಾಚಿಕೆಯಿಲ್ಲದವನಾಗಿ ಪ್ರವೇಶಿಸಿದರೂ ಸಭೆಯಿಂದ ಅವನನ್ನು ಹೊರಡಿಸಬೇಕು" ಎಂದು ಓದಿದನು.

**ತದಸೌ ಸರ್ವಮಾಕರ್ಣ್ಯ ಲಜ್ಜಯಾ ಮಧುಪಿಂಗಲಃ ।**
**ತದ್ಗುಣತ್ವಾತ್ತತೋ ಗತ್ವಾ ಹರಿಷೇಣಗುರೋಸ್ತಪಃ ॥ ೨೩೬ ॥**

**ಪ್ರಸನ್ನಸ್ತದ್ವಿದಿತ್ವಾಗುರ್ಮುದಂ ಸಗರಭೂಪತಿಃ ।**
**ವಿಶ್ವಭೂಶ್ಚೇಷ್ಟಸಂಸಿದ್ಧಾವನ್ಯೇ ಚ ಕುಟಿಲಾಶಯಾಃ ॥ ೨೩೭ ॥**

ಅದೆಲ್ಲವನ್ನೂ ಈ ಮಧುಪಿಂಗಲನು ಕೇಳಿ ತಾನು ಅಂತಹ ಗುಣವುಳ್ಳವನಾದುದರಿಂದ ಲಜ್ಜೆಯಿಂದ ಆ ಸಭೆಯಿಂದ ಹೊರಟು ಹೋಗಿ ಹರಿಷೇಣಗುರುವಿನಿಂದ ತಪಸ್ಸನ್ನು ಹೊಂದಿದನು. ಅದನ್ನು ತಿಳಿದು ಸಗರಮಹಾರಾಜನೂ ವಿಶ್ವಭೂಮಂತ್ರಿಯೂ ಕುಟಿಲಾಭಿಪ್ರಾಯವುಳ್ಳವರಾದ ಬೇರೆಯವರೂ ಇಷ್ಟಸಿದ್ಧಿಯಾಗುತ್ತಿರಲು ಸಂತೋಷವನ್ನು ಹೊಂದಿದರು.

**ಸಂತಸ್ತದ್ಬಾಂಧವಾಶ್ಚಾನ್ಯೇ ವಿಷಾದಮಗಮಂಸ್ತದಾ ।**
**ನ ಪಶ್ಯಂತ್ಯರ್ಥಿನಃ ಪಾಪಂ ವಂಚನಾಸಂಚಿತಂ ಮಹತ್ ॥ ೨೩೮ ॥**

ಆಗ ಸತ್ಪುರುಷರೂ ಮಧುಪಿಂಗಲನ ಬಂಧುಗಳೂ ಬೇರೆಯವರೂ ವಿಷಾದವನ್ನು ಹೊಂದಿದರು. ಸ್ವಾರ್ಥಿಗಳು ವಂಚನೆಯಿಂದ ಸಂಪಾದಿಸಿದ ಮಹಾಪಾಪವನ್ನು ನೋಡುವುದಿಲ್ಲ.

**ಅಥ ಕೃತ್ವಾ ಮಹಾಪೂಜಾಂ ದಿನಾನ್ಯಷ್ಟೌ ಜಿನೇಶಿನಾಮ್ ।**
**ತದಂತೇಽಭಿಷವಂ ಚೈನಾಂ ಸುಲಸಾಂ ಕನ್ಯಕೋತ್ತಮಾಮ್ ॥ ೨೩೯ ॥**

**ಸ್ನಾತಾಮಲಂಕೃತಾಂ ಶುದ್ಧತಿಥಿವಾರಾದಿಸನ್ನಿಧೌ ।**
**ಪುರೋಧಾ ರಥಮಾರೋಪ್ಯ ನೀತ್ವಾ ಚಾರುಭಟಾವೃತಾಮ್ ॥ ೨೪೦ ॥**

**ನೃಪಾನ್ ಭದ್ರಾಸನಾರೂಢಾನ್ ಸ ಸ್ವಯಂವರಮಂಡಪೇ ।**
**ಯಥಾಕ್ರಮಂ ವಿನಿರ್ದಿಶ್ಯ ಕುಲಜಾತ್ಯಾದಿಭಿಃ ಪೃಥಕ್ ॥ ೨೪೧ ॥**

**ವ್ಯರಮತ್ಸಾ ಸಮಾಸಕ್ತಾ ಸಾಕೇತಪುರನಾಯಕಮ್ ।**
**ಅಕರೋತ್ಕಂಠದೇಶೇ ತಂ ಮಾಲಾಲಂಕೃತವಿಗ್ರಹಮ್ ॥ ೨೪೨ ॥**

ಬಳಿಕ ಎಂಟು ದಿನಗಳವರೆಗೆ ಜಿನೇಶ್ವರರ ಮಹಾಪೂಜೆಯನ್ನೂ ಅದರ ಕೊನೆಯಲ್ಲಿ ಅಭಿಷೇಕವನ್ನೂ ಮಾಡಿ ಕನ್ಯಕೆಯರಲ್ಲಿ ಶ್ರೇಷ್ಠಳೂ ಅಲಂಕೃತಳೂ ಸ್ನಾನವನ್ನು ಮಾಡಿದವಳೂ ಆದ ಈ ಸುಲಸೆಯನ್ನು ಶುದ್ಧವಾದ ತಿಥಿ ವಾರ ನಕ್ಷತ್ರಾದಿಗಳ ಸಾನ್ನಿಧ್ಯದಲ್ಲಿ ಆ ಪುರೋಹಿತನು ರಥವನ್ನೇರಿಸಿ ಸುಂದರರಾದ ಭಟರಿಂದ ಆವರಿಸಲ್ಪಟ್ಟ ಆಕೆಯನ್ನು ಕರೆದುಕೊಂಡು ಹೋಗಿ ಸ್ವಯಂವರಮಂಟಪದಲ್ಲಿ ಭದ್ರಾಸನಾರೂಢರಾಗಿದ್ದ ರಾಜರುಗಳನ್ನು ಅವರ ವಂಶ ಜಾತಿ ಮೊದಲಾದುವುಗಳಿಂದ ಬೇರೆಬೇರೆಯಾಗಿ ಯಥಾಕ್ರಮವಾಗಿ ತೋರಿಸಿ ವಿರಾಮವನ್ನು ಪಡೆದನು. ಆ ಸುಲಸೆಯು ಆಸಕ್ತಳಾಗಿ ಅಯೋಧ್ಯಾನಗಾರಧಿಪತಿಯಾದ ಆ ಸಗರಮಹಾರಾಜನನ್ನು ಕಂಠಪ್ರದೇಶದಲ್ಲಿ ಮಾಲೆಯಿಂದ ಅಲಂಕೃತವಾದ ದೇಹವುಳ್ಳವನನ್ನಾಗಿ ಮಾಡಿದಳು. ಸಗರನ ಕೊರಳಿಗೆ ವರಣಮಾಲೆಯನ್ನು ಹಾಕಿದಳೆಂದು ಭಾವವು.

**ಅನಯೋರನುರೂಪೋಽಯಂ ಸಂಗಮೋ ವೇಧಸಾ ಕೃತಃ ।**
**ಇತ್ಯುಕ್ತ್ವಾ ಮತ್ಸರಾಪೇತಮತುಷ್ಯದ್ಭೂಪಮಂಡಲಮ್ ॥ ೨೪೩ ॥**

"ಬ್ರಹ್ಮನು ಇವರುಗಳ ಈ ಅನುರೂಪವಾದ ಸಂಬಂಧವನ್ನು ಮಾಡಿದನು. ಎಂದು ಹೇಳಿ ಮತ್ಸರವಿಲ್ಲದಿರುವ ರಾಜರುಗಳ ಸಮೂಹವು ಸಂತೋಷಪಟ್ಟಿತು.

**ಕಲ್ಯಾಣವಿಧಿಪರ್ಯಾಪ್ತೌ ಸ್ಥಿತ್ವಾ ತತ್ರೈವ ಕಾನಿಚಿತ್ ।**
**ದಿನಾನಿ ಸಗರಃ ಶ್ರೀಮಾನ್ ಸುಖೇನ ಸುಲಸಾನ್ವಿತಃ ॥ ೨೪೪ ॥**

**ಸಾಕೇತನಗರಂ ಗತ್ವಾ ಭೋಗಾನನುಭವನ್ ಸ್ಥಿತಃ ।**
**ಮಧುಪಿಂಗಲಸಾಧೋಶ್ಚ ವರ್ತಮಾನಸ್ಯ ಸಂಯಮೇ ॥ ೨೪೫ ॥**

**ಪುರಮೇಕಂ ತನುಸ್ಥಿತ್ಯೈ ವಿಶತೋ ವೀಕ್ಷ್ಯ ಲಕ್ಷಣಮ್ ।**
**ಕಶ್ಚಿನ್ನೈಮಿತ್ತಿಕೋ ಯೂನಃ ಪೃಥ್ವೀರಾಜ್ಯಾರ್ಹದೇಹಜೈಃ ॥ ೨೪೬ ॥**

**ಲಕ್ಷಣೈರೇಷ ಭಿಕ್ಷಾಶೀ ಕಿಲ ಕಿಂ ಲಕ್ಷಣಾಗಮೈಃ ।**
**ಇತ್ಯನಿಂದತ್ತದಾಕರ್ಣ್ಯ ಪರೋಽಪ್ಯೇವಮಭಾಷತ ॥ ೨೪೭ ॥**

ಮಂಗಲವಿಧಿಯು ಪೂರ್ತಿಯಾದ ಬಳಿಕ ಶ್ರೀಮಂತನಾದ ಸಗರನು ಸುಲಸೆಯೊಡನೆ ಕೂಡಿ ಕೆಲವು ದಿನಗಳವರೆಗೆ ಸುಖದಿಂದ ಅಲ್ಲೇ ಇದ್ದು ಬಳಿಕ ಅಯೋಧ್ಯಾನಗರವನ್ನು ಪ್ರವೇಶಿಸಿ ಭೋಗಗಳನ್ನು ಅನುಭವಿಸುವವನಾಗಿದ್ದನು. ಇತ್ತ ಸಂಯಮದಲ್ಲಿರುವವನೂ ಶರೀರಸ್ಥಿತಿಗೆ–ಆಹಾರಕ್ಕೋಸ್ಕರ ಒಂದು ನಗರಕ್ಕೆ ಪ್ರವೇಶಿಸುವವನೂ ಯುವಕನೂ ಆದ ಮಧುಪಿಂಗಲನಸಾಧುವಿನ ಲಕ್ಷಣವನ್ನು ನೋಡಿ ಒಬ್ಬ ನೈಮಿತ್ತಿಕನು "ಭೂಮಿಯ ರಾಜ್ಯಕ್ಕೆ ಯೋಗ್ಯವಾದ ದೇಹದಲ್ಲಿ ಹುಟ್ಟಿರುವ ಲಕ್ಷಣಗಳಿಂದ ಕೂಡಿ ಇವನು ಭಿಕ್ಷಾಭೋಜನವುಳ್ಳವನಾಗಿದ್ದಾನಂತೆ! ಅಂದಮೇಲೆ ಲಕ್ಷಣಶಾಸ್ತ್ರಗಳಿಂದೇನು ಪ್ರಯೋಜನ?" ಎಂದು ಶಾಸ್ತ್ರವನ್ನು ನಿಂದಿಸಿದನು. ಅದನ್ನು ಕೇಳಿ ಮತ್ತೊಬ್ಬನು ಇಂತೆಂದನು.

**ಏಷ ರಾಜ್ಯಶ್ರಿಯಂ ಭುಂಜನ್ ಮೃಷಾ ಸಗರಮಂತ್ರಿಣಾ ।**
**ಕೃತ್ರಿಮಾಗಮಮಾದರ್ಶ್ಯ ದೂಷಿತಸ್ಸನ್ ಹ್ರಿಯಾ ತಪಃ ॥ ೨೪೮ ॥**

**ಪ್ರಪನ್ನವಾನ್ ಗತೇ ಚಾಸ್ಮಿನ್ ಸುಲಸಾಂ ಸಗರೋಽಗ್ರಹೀತ್ ।**
**ಇತಿ ತದ್ವಚನಂ ಶ್ರುತ್ವಾ ಮುನಿಃ ಕ್ರೋಧಾಗ್ನಿದೀಪಿತಃ ॥ ೨೪೯ ॥**

**ಜನ್ಮಾಂತರೇ ಫಲೇನಾಸ್ಯ ತಪಸಃ ಸಗರಾನ್ವಯಮ್ ।**
**ಸರ್ವಂ ನಿರ್ಮೂಲಯಾಮೀತಿ ವಿಧೀಃ ಕೃತನಿದಾನಕಃ ॥ ೨೫೦ ॥**

**ಮೃತ್ವಾಸಾವಸುರೇಂದ್ರಸ್ಯ ಮಹೀಷಾನೀಕಗಾದಿಮೇ ।**
**ಕಕ್ಷಾಭೇದೇ ಚತುಃಷಷ್ಟಿಸಹಸ್ರಾಸುರನಾಯಕಃ ॥ ೨೫೧ ॥**

**ಮಹಾಕಾಲೋಽಭವತ್ತತ್ರ ದೇವೈರಾವೇಷ್ಟಿತೋ ನಿಜೈಃ ।**
**ದೇವಲೋಕಮಿಮಂ ಕೇನ ಪ್ರಾಪ್ತೋಽಹಮಿತಿ ಸಂಸ್ಮರನ್ ॥ ೨೫೨ ॥**

**ಜ್ಞಾತ್ವಾ ವಿಭಂಗಜ್ಞಾನೋಪಯೋಗೇನ ಪ್ರಾಕ್ತನೇ ಭವೇ ।**
**ಪ್ರವೃತ್ತಮಖಿಲಂ ಪಾಪೀ ಕೋಪಾವಿಷ್ಕೃತತೇಜಸಾ ॥ ೨೫೩ ॥**

**ತಸ್ಮಿನ್ಮಂತ್ರಿಣಿ ಭೂಪೇ ಚ ರೂಢವೈರೋಽಪಿ ತೌ ತದಾ ।**
**ಅನಿಚ್ಛನ್ ಹಂತುಮತ್ಯುಗ್ರಂ ಸ ಚಿಕೀರ್ಷುರಘಂ ತಯೋಃ ॥ ೨೫೪ ॥**

**ತದುಪಾಯಂ ಸಹಾಯಾಂಶ್ಚ ಸಂಚಿಂತ್ಯ ಸಮುಪಸ್ಥಿತಃ ।**
**ನಾಚಿಂತಯನ್ಮಹತ್ಪಾಪಮಾತ್ಮನೋ ಧಿಗ್ವಿಮೂಢತಾಮ್ ॥ ೨೫೫ ॥**

"ಇವನು ರಾಜ್ಯಶ್ರೀಯನ್ನು ಅನುಭವಿಸುತ್ತಿರುವವನಾಗಿಯೂ ಸುಳ್ಳಾಗಿ ಕೃತ್ರಿಮವಾದ ಆಗಮವನ್ನು ತೋರಿಸಿ ಸಗರನ ಮಂತ್ರಿಯಿಂದ ದೂಷಿತನಾಗಿಯೂ ಲಜ್ಜೆಯಿಂದ ತಪವನ್ನು ಪಡೆದನು. ಇವನು ತಪಸ್ಸಿಗೆ ಹೊರಟು ಹೋದ ಬಳಿಕ ಸಗರನು ಸುಲಸೆಯನ್ನು ಗ್ರಹಣಮಾಡಿದನು" ಈ ರೀತಿಯಾದ ಆ ಮಾತನ್ನು ಕೇಳಿ ಮಧುಪಿಂಗಲಮುನಿಯು ಕ್ರೋಧವೆಂಬ ಬೆಂಕಿಯಿಂದ ಉದ್ದೀಪ್ತನೂ ಬುದ್ಧಿಹೀನನೂ ಆಗಿ " ಈ ತಪಸ್ಸಿನ ಫಲದಿಂದ ಜನ್ಮಾಂತರದಲ್ಲಿ ಸಗರನ ವಂಶವನ್ನೆಲ್ಲ ನಿರ್ಮೂಲಮಾಡುತ್ತೇನೆ" ಎಂದು ನಿದಾನಶಲ್ಯವನ್ನು ಮಾಡಿ ಸತ್ತು ಇವನು ಅಸುರಕುಮಾರೇಂದ್ರನ ಕೋಣಗಳ ಸೈನ್ಯದ ಮೊದಲನೆಯ ಸಾಲಿನಲ್ಲಿ ಅರವತ್ತನಾಲ್ಕುಸಹಸ್ರ ಅಸುರದೇವರ್ಕಳ ಯಜಮಾನನಾದ ಮಹಾಕಾಲಾಸುರದೇವನಾದನು. ಅಲ್ಲಿ ತನ್ನ ಪರಿವಾರದೇವರ್ಕಳಿಂದ ಸುತ್ತಲ್ಪಟ್ಟವನಾದ ಆ ಪಾಪಿಯು "ಈ ದೇವಲೋಕವನ್ನು ನಾನು ಯಾವ ಕಾರಣದಿಂದ ಪಡೆದೆನು ?" ಎಂದು ಸ್ಮರಿಸುವವನಾಗಿ ವಿಭಂಗಜ್ಞಾನದ ಉಪಯೋಗದಿಂದ ಪೂರ್ವಭವದಲ್ಲಿ ನಡೆದ ವಿಷಯವೆಲ್ಲವನ್ನೂ ತಿಳಿದು ಕೋಪದಿಂದ ಪ್ರಕಟವಾದ ತೇಜಸ್ಸಿನಿಂದ ಆ ಮಂತ್ರಿಯಲ್ಲಿಯೂ ಸಗರರಾಜನಲ್ಲಿಯೂ ರೂಢವಾದ ವೈರವುಳ್ಳವನಾದರೂ ಆಗ ಅವರನ್ನು ಕೊಲ್ಲುವುದಕ್ಕೆ ಇಚ್ಛಿಸದಿರುವವನಾಗಿ ಆ ದೇವನು ಅವರಲ್ಲಿ ಅತಿಭಯಂಕರವಾದ ಪಾಪವನ್ನುಂಟುಮಾಡಬೇಕೆಂಬ ಇಚ್ಛೆಯುಳ್ಳವನಾಗಿ ಅದರ ಉಪಾಯವನ್ನೂ ಸಹಾಯಗಳನ್ನೂ ಚೆನ್ನಾಗಿ ಯೋಚಿಸಿ ಸಗರನಲ್ಲಿಗೆ ಬಂದನು. ತನಗೆ ಮಹತ್ಪಾಪವುಂಟಾಗುವುದೆಂಬುದನ್ನು ಯೋಚಿಸಲಿಲ್ಲ. ಮೂರ್ಖತ್ವವನ್ನು ಧಿಕ್ಕರಿಸು.

**ಇದಂ ಪ್ರಕೃತಮತ್ರಾನ್ಯತ್ತದಭಿಪ್ರಾಯಸಾಧನಮ್ ।**
**ದ್ವೀಪೇತ್ರ ಭಾರತೇ ದೇಶೇ ಧವಲೇ ಸ್ವಸ್ತಿಕಾವತೀ- ॥ ೨೫೬ ॥**

**ಪುರಂ ವಿಶ್ವಾವಸುಸ್ತಸ್ಯ ಪಾಲಕೋ ಹರಿವಂಶಜಃ ।**
**ದೇವ್ಯಸ್ಯ ಶ್ರೀಮತೀ ನಾಮ್ನಾ ವಸುರಾಸೀತ್ಸುತೋಽನಯೋಃ ॥ ೨೫೭ ॥**

ಇಲ್ಲಿ ಆ ಮಹಾಕಾಲನ ಅಭಿಪ್ರಾಯಕ್ಕೆ ಸಾಧನವಾದ ಮತ್ತೊಂದು ಈ ವಿಷಯವು ಪ್ರಕೃತವಾಗಿರುವುದು. ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಧವಲದೇಶದಲ್ಲಿ ಸ್ವಸ್ತಿಕಾವತಿಯೆಂಬುದೊಂದು ಪಟ್ಟಣವಿದೆ. ಹರಿವಂಶೋತ್ಪನ್ನನಾದ ವಿಶ್ವಾವಸುವೆಂಬವನು ಆ ನಗರದ ಪರಿಪಾಲಕ. ಶ್ರೀಮತಿಯೆಂಬವಳು ಇವನ ಪತ್ನಿ. ಈ ದಂಪತಿಗಳಿಗೆ ವಸುವೆಂಬ ಪುತ್ರನಿದ್ದನು.

**ತತ್ರೈವ ಬ್ರಾಹ್ಮಣಃ ಪೂಜ್ಯಃ ಸರ್ವಶಾಸ್ತ್ರವಿಶಾರದಃ ।**
**ಅಭೂತ್ಕ್ಷೀರಕದಂಬಾಖ್ಯೋ ವಿಖ್ಯಾತೋಽಧ್ಯಾಪಕೋತ್ತಮಃ ॥ ೨೫೮ ॥**

ಆ ನಗರದಲ್ಲೇ ಪೂಜ್ಯನೂ ಸಕಲಶಾಸ್ತ್ರವಿಶಾರದನೂ ಪ್ರಸಿದ್ಧನೂ ಶ್ರೇಷ್ಠನಾದ ಉಪಾಧ್ಯಾಯನೂ ಆದ ಕ್ಷೀರಕದಂಬನೆಂಬ ಬ್ರಾಹ್ಮಣನಿದ್ದನು.

**ಸಮೀಪೇ ತಸ್ಯ ತತ್ಸೂನುಃ ಪರ್ವತೋಽನ್ಯಶ್ಚ ನಾರದಃ ।**
**ದೇಶಾಂತರಾಗತಶ್ಛಾತ್ರಸ್ತುಗ್ವಸುಶ್ಚ ಮಹೀಪತೇಃ ॥ ೨೫೯ ॥**

**ಏತೇ ತ್ರಯೋಽಪಿ ವಿದ್ಯಾನಾಂ ಪಾರಮಾಪನ್ನ ಪರ್ವತಃ ।**
**ತೇಷ್ವಧೀರ್ವಿಪರೀತಾರ್ಥಗ್ರಾಹೀ ಮೋಹವಿಪಾಕತಃ ॥ ೨೬೦ ॥**

**ಶೇಷೌ ಯಥೋಪದಿಷ್ಟಾರ್ಥಗ್ರಾಹಿಣೌ ತೇ ತ್ರಯೋಽಪ್ಯಗುಃ ।**
**ವನಂ ದರ್ಭಾದಿಕಂ ಛೇತ್ತುಂ ಸೋಪಾಧ್ಯಾಯಾಃ ಕದಾಚನ ॥ ೨೬೧ ॥**

ಅವನ ಬಳಿಯಲ್ಲಿ ಅವನ ಮಗನಾದ ಪರ್ವತ, ದೇಶಾಂತರದಿಂದ ಬಂದ ವಿದ್ಯಾರ್ಥಿಯಾದ ನಾರದ, ವಿಶ್ವಾವಸುರಾಜನ ಮಗನಾದ ವಸು ಈ ಮೂರು ಜನರೂ ವಿದ್ಯೆಗಳ ಪಾರವನ್ನು ಹೊಂದಿದರು. ಅವರಲ್ಲಿ ಬುದ್ಧಿಶೂನ್ಯನಾದ ಆ ಪರ್ವತನೂ ಮೋಹಕರ್ಮದ ಉದಯದಿಂದ ವಿಪರೀತವಾದ ಅರ್ಥವನ್ನು ಗ್ರಹಣ ಮಾಡುವವನೂ ಉಳಿದವರು ಉಪದೇಶಿಸಲ್ಪಟ್ಟಂತೆಯೇ ಅರ್ಥವನ್ನು ಗ್ರಹಣ ಮಾಡುವವರೂ ಆಗಿದ್ದರು. ಅವರು ಮೂವರೂ ಒಂದಾನೊಂದು ಕಾಲದಲ್ಲಿ ದರ್ಭಾದಿಗಳನ್ನು ಕೊಯ್ಯುವುದಕ್ಕೋಸ್ಕರ ಉಪಾಧ್ಯಾಯಸಹಿತರಾಗಿ ವನಕ್ಕೆ ಹೋದರು.

**ಗುರುಃ ಶ್ರುತಧರೋ ನಾಮ ತತ್ರಾಚಲಶಿಲಾತಲೇ ।**
**ಸ್ಥಿತೋ ಮುನಿತ್ರಯಂ ತಸ್ಮಾಚ್ಛ್ರುತ್ವಾಷ್ಟಾಂಗನಿಮಿತ್ತಕಮ್ ॥ ೨೬೨ ॥**

**ತತ್ಸಮಾಪ್ತೌ ಸ್ತುತಿಂ ಕೃತ್ವಾ ಸುಸ್ಥಿತಾನ್ ತಾನ್ನಿರೀಕ್ಷ್ಯ ಸಃ ।**
**ತನ್ನೈಪುಣ್ಯಪರೀಕ್ಷಾರ್ಥಂ ಸಮಪೃಚ್ಛನ್ಮುನೀಶ್ವರಃ ॥ ೨೬೩ ॥**

**ಪಠಚ್ಛಾತ್ರತ್ರಯಸ್ಯಾಸ್ಯ ನಾಮ ಕಿಂ ಕಸ್ಯ ಕಿಂ ಕುಲಮ್ ।**
**ಕೋ ಭಾವಃ ಕಾ ಗತಿಃ ಪ್ರಾಂತೇ ಭವದ್ಭಿಃ ಕಥ್ಯತಾಮಿತಿ ॥ ೨೬೪ ॥**

ಅಲ್ಲಿ ಪರ್ವತದ ಕಲ್ಲಿನ ಮೇಲೆ ಶ್ರುತಧರನೆಂಬ ಗುರುವಿದ್ದನು. ಅವನಿಂದ ಮೂವರು ಮುನಿಗಳು ಅಷ್ಟಾಂಗನಿಮಿತ್ತಶಾಸ್ತ್ರವನ್ನು ಕೇಳಿ ಅದರ ಸಮಾಪ್ತಿಯಲ್ಲಿ ಸ್ತೋತ್ರವನ್ನು ಮಾಡಿ ಚೆನ್ನಾಗಿರುವ ಆ ಮೂವರು ಮುನಿಗಳನ್ನು ನೋಡಿ ಅವರ ಚಾತುರ್ಯವನ್ನು ಪರೀಕ್ಷಿಸುವುದಕ್ಕೋಸ್ಕರ ಆ ಮುನೀಶ್ವರನು "ಓದಿರುವ ಈ ಮೂರುಜನ ವಿದ್ಯಾರ್ಥಿಗಳ ಹೆಸರೇನು ? ಇವರುಗಳ ವಂಶವಾವುದು ? ಮನೋಭಾವವಾವುದು ? ಕೊನೆಯಲ್ಲಿ ಇವರುಗಳಿಗೆ ಯಾವ ಗತಿಯಾಗುವುದು ? ನೀವುಗಳು ಹೇಳಿ" ಎಂದು ಪ್ರಶ್ನೆಮಾಡಿದನು.

**ತೇಷ್ವೇಕೋಽಭಾಷತಾತ್ಮಜ್ಞಃ ಶೃಣ್ವಿತ್ಯಸ್ಮತ್ಸಮೀಪಗಃ ।**
**ವಸುಃ ಕ್ಷಿತಿಪತೇಃ ಸೂನುಸ್ತೀವ್ರರಾಗಾದಿದೂಷಿತಃ ॥ ೨೬೫ ॥**

ಆ ಮುನಿಗಳಲ್ಲಿ ಆತ್ಮಜ್ಞಾನಿಯಾದ ಒಬ್ಬನು "ಕೇಳು, ನಮ್ಮಗಳ ಸಮೀಪದಲ್ಲಿರುವವನೂ ರಾಜನ ಮಗನೂ ಆದ ವಸುವು ತೀವ್ರವಾದ ರಾಗಾದಿಭಾವಗಳಿಂದ ದೂಷಿತನಾಗಿ ಹಿಂಸೆಯನ್ನು ಧರ್ಮವನ್ನಾಗಿ ನಿಶ್ಚಯಿಸಿ ನರಕಾವಾಸವನ್ನು ಹೊಂದುವನು" ಎಂದು ಹೇಳಿದನು.

**ಹಿಂಸಾಂ ಧರ್ಮಂ ವಿನಿಶ್ಚಿತ್ಯ ನಾರಕಾವಾಸಮೇಷ್ಯತಿ ।**
**ಪರೋಽಬ್ರವೀದಯಂ ಮಧ್ಯೇ ಸ್ಥಿತೋ ಬ್ರಾಹ್ಮಣಪುತ್ರಕಃ ॥ ೨೬೬ ॥**

**ಪರ್ವತಾಖ್ಯೋ ವಿಧೀಃ ಕ್ರೂರೋ ಮಹಾಕಾಲೋಪದೇಶನಾತ್ ।**
**ಪಠಿತ್ವಾಥರ್ವಣಂ ಪಾಪಶಾಸ್ತ್ರಂ ದುರ್ಮಾರ್ಗದೇಶಕಃ ॥ ೨೬೭ ॥**

**ಹಿಂಸೈವ ಧರ್ಮ ಇತ್ಯಜ್ಞೋ ರೌದ್ರಧ್ಯಾನಪರಾಯಣಃ ।**
**ಬಹೂಂಸ್ತತ್ರ ಪ್ರವರ್ತ್ಯಾಸ್ಮಿನ್ ನರಕಂ ಯಾಸ್ಯತೀತಿ ಸಃ ॥ ೨೬೮ ॥**

ಇನ್ನೊಬ್ಬ ಮುನಿಯು "ಮಧ್ಯದಲ್ಲಿರುವವನೂ ಬ್ರಾಹ್ಮಣಪುತ್ರನೂ ಬುದ್ಧಿಯಿಲ್ಲದವನೂ ಕ್ರೂರನೂ ಆದ ಈ ಪರ್ವತನೆಂಬವನು ಮಹಾಕಾಲಾಸುರನ ಉಪದೇಶದಿಂದ ಪಾಪಶಾಸ್ತ್ರವಾದ ಅಥರ್ವಣವನ್ನು ಪಠನಮಾಡಿ ದುರ್ಮಾರ್ಗೋಪ

ದೇಶೇರ್ಚಿತ್ವಾಪರಾದೃಶ್ಯೇ ಗಂಧಮಾಲ್ಯಾದಿಮಂಗಲೈಃ ।
ಕರ್ಣಚ್ಛೇದಂ ವಿಧಾಯೈನಾವದ್ಯೈವಾನಯತಂ ಯುವಾಮ್ ॥ ೩೦೮ ॥

ಇತ್ಯವಾದೀತ್ತತಃ ಪಾಪೀ ಪರ್ವತೋಸ್ತಿ ನ ಕಶ್ಚನ ।
ವನೇಸ್ಮಿನ್ನಿತಿ ವಿಚ್ಛಿದ್ಯ ಕರ್ಣೌ ಪಿತರಮಾಗತಃ ॥ ೩೦೯ ॥

ತ್ವಯಾ ಪೂಜ್ಯ ಯಥಾದಿಷ್ಟಂ ತತ್ತಥೈವ ಮಯಾ ಕೃತಮ್ ।
ಇತಿ ವೀತಘೃಣೋ ಹರ್ಷಾತ್ಸ್ವಪ್ರೇಷಣಮಬೂಬುಧತ್ ॥ ೩೧೦ ॥

ಆಗ ಪರ್ವತನ ತಾಯಿಯೂ ಪ್ರಸನ್ನಳಾದಳು. ಮತ್ತೂ ಆ ಬ್ರಾಹ್ಮಣೋತ್ತಮನು ಆಕೆಗೆ ಆ ಮುನಿಗಳು ಹೇಳಿದ್ದ ವಾಕ್ಯಗಳ ಅರ್ಥದ ನಂಬಿಕೆಯನ್ನುಂಟುಮಾಡಬೇಕೆಂಬ ಇಚ್ಛೆಯುಳ್ಳವನಾಗಿ ತನ್ನ ಮಗನ ಮತ್ತು ಆ ವಿದ್ಯಾರ್ಥಿ–ನಾರದನ ಭಾವವನ್ನು ಪರೀಕ್ಷಿಸುವುದಕ್ಕೋಸ್ಕರ ತಾನು ಪತ್ನೀಸಹಿತನಾಗಿ ಏಕಾಂತದಲ್ಲಿದ್ದು ಹಿಟ್ಟಿನಿಂದ ಎರಡು ಆಡುಗಳನ್ನು ಮಾಡಿ "ಬೇರೆಯವರು ನೋಡದಿರುವ ಪ್ರದೇಶದಲ್ಲಿ ಗಂಧಮಾಲ್ಯಾದಿ ಮಂಗಲವಸ್ತುಗಳಿಂದ ಈ ಆಡುಗಳನ್ನು ಪೂಜಿಸಿ ಇವುಗಳ ಕಿವಿಗಳನ್ನು ಕೊಯ್ದು ಇವುಗಳನ್ನು ಈ ದಿನದಲ್ಲೇ ನೀವುಗಳು ತನ್ನಿರಿ" ಎಂದು ಆ ಪರ್ವತ ನಾರದರಿಗೆ ಹೇಳಿದನು. ಬಳಿಕ ಆ ಪಾಪಿಯಾದ ಪರ್ವತನು "ಈ ವನದಲ್ಲಿ ಯಾವನೂ ಇಲ್ಲ" ಎಂದು ತಾನೊಯ್ದಿದ್ದ ಆಡಿನ ಕಿವಿಗಳನ್ನು ಕೊಯ್ದು ತಂದೆಯ ಬಳಿಗೆ ಬಂದು "ಪೂಜ್ಯನೆ! ನೀನು ಆಜ್ಞಾಪಿಸಿದಂತೆ ಮಾಡಿದೆನು" ಎಂದು ಕರುಣವಿಲ್ಲದವನಾಗಿ ಸಂತೋಷದಿಂದ ತನ್ನನ್ನು ಕಳುಹಿಸಿದ್ದ ವಿಷಯವನ್ನು ಹೇಳಿದನು.

ನಾರದೋಪಿ ವನಂ ಯಾತೋದೃಶ್ಯೇ ದೇಶೇಸ್ಯ ಕರ್ಣಯೋಃ ।
ಕರ್ತವ್ಯಶ್ಛೇದ ಇತ್ಯುಕ್ತಂ ಗುರುಣಾ ಚಂದ್ರಭಾಸ್ಕರೌ ॥ ೩೧೧ ॥

ನಕ್ಷತ್ರಾಣಿ ಗ್ರಹಾಸ್ತಾರಕಾಶ್ಚ ಪಶ್ಯಂತಿ ದೇವತಾಃ ।
ಸದಾ ಸನ್ನಿಹಿತಾಃ ಸಂತಿ ಪಕ್ಷಿಣೋ ಮೃಗಜಾತಯಃ ॥ ೩೧೨ ॥

ನೈತೇ ಶಕ್ಯಾ ನಿರಾಕರ್ತುಮಿತ್ಯೇತ್ಯ ಗುರುಸನ್ನಿಧಿಮ್ ।
ಭವ್ಯಾತ್ಮಾದೃಷ್ಟದೇಶಸ್ಯ ವನೇ ಕೇನಾಪ್ಯಸಂಭವಾತ್ ॥ ೩೧೩ ॥

ನಾಮಾದಿಚತುರರ್ಥೇಷು ಪಾಪಾಪಖ್ಯಾತಿಕಾರಣ- ।
ಕ್ರಿಯಾಣಾಮವಿಧೇಯತ್ವಾಚ್ಛಾಗಮಾನೀತವಾನಿಮಮ್ ॥ ೩೧೪ ॥

ಇತ್ಯಾಹ ತದ್ವಚಃ ಶ್ರುತ್ವಾ ಸ್ವಸುತಸ್ಯ ಜಡಾತ್ಮತಾಮ್ ।
ವಿಚಿಂತ್ಯೈಕಾಂತವಾದ್ಯುಕ್ತಂ ಸರ್ವಥಾಕಾರಣಾನುಗಮ್ ॥ ೩೧೫ ॥

ಕಾರ್ಯಮಿತ್ಯೇತದೇಕಾಂತಮತಂ ಕುಮತಮೇವ ತತ್ ।
ಕಾರಣಾನುಗತಂ ಕಾರ್ಯಂ ಕ್ವಚಿತ್ತತ್ಕ್ವಚಿದನ್ಯಥಾ ॥ ೩೧೬ ॥

ಇತಿ ಸ್ಯಾದ್ವಾದಸಂದೃಷ್ಟಂ ಸತ್ಯಮಿತ್ಯಭಿತುಷ್ಟವಾನ್ ।
ಶಿಷ್ಯಸ್ಯ ಯೋಗ್ಯತಾಂ ಚಿತ್ತೇ ನಿಧಾಯ ಬುಧಸತ್ತಮಃ ॥ ೩೧೭ ॥

ನಾರದನೂ ವನಕ್ಕೆ ಹೋದವನಾಗಿ "ಅದೃಶ್ಯವಾದ ಪ್ರದೇಶದಲ್ಲಿ ಇದರ ಕಿವಿಗಳನ್ನು ಕತ್ತರಿಸಬೇಕೆಂದು ಗುರುವು ಹೇಳಿದ್ದಾನೆ. ಚಂದ್ರಸೂರ್ಯರೂ ನಕ್ಷತ್ರಗಳೂ ಗ್ರಹಗಳೂ ತಾರೆಗಳೂ ದೇವತೆಗಳೂ ನೋಡುತ್ತಾರೆ. ಪಕ್ಷಿಗಳೂ ಮೃಗಜಾತಿಗಳೂ ಯಾವಾಗಲೂ ಸಮೀಪಿಸಿರುತ್ತವೆ. ಇವುಗಳನ್ನು ನಿರಾಕರಿಸುವುದಕ್ಕೆ ಶಕ್ಯವಾಗುವುದಿಲ್ಲ" ಎಂದು ಆ ಭವ್ಯಾತ್ಮನು ಗುರುವಿನ ಬಳಿಗೆ ಬಂದು "ವನದಲ್ಲಿ ಯಾರಿಂದಲೂ ನೋಡಲ್ಪಡದಿರುವ ಪ್ರದೇಶವು ಅಸಂಭವವಾಗಿರುವುದರಿಂದ ನಾಮ ಸ್ಥಾಪನಾ ದ್ರವ್ಯ ಭಾವಗಳೆಂಬ ನಾಲ್ಕು ಅರ್ಥಗಳಲ್ಲಿಯೂ ಪಾಪಕ್ಕೂ ಅಪಖ್ಯಾತಿಗೂ ಕಾರಣವಾದ ಕ್ರಿಯೆಗಳನ್ನು ಮಾಡಬಾರದಾದುದರಿಂದ ಈ ಆಡನ್ನು ಹಿಂದೆ ತಂದೆನು" ಎಂದು ಹೇಳಿದನು. ಆ ಮಾತನ್ನು ಕೇಳಿ ತನ್ನ ಮಗನ ಜಡತ್ವವನ್ನು ಯೋಚಿಸಿ "ಕಾರ್ಯವು ಸರ್ವಥಾ ಕಾರಣವನ್ನು ಅನುಸರಿಸಿರುವುದಿಲ್ಲವೆಂದು ಏಕಾಂತವಾದಿಯಿಂದ ಹೇಳಲ್ಪಟ್ಟ ಏಕಾಂತಮತವು ಮಿಥ್ಯಾಮತವೇ ಆಗಿದೆ. ಆದುದರಿಂದ ಕಾರ್ಯವು ಕೆಲವು ಕಡೆಯಲ್ಲಿ ಕಾರಣವನ್ನನುಸರಿಸಿರುವುದು, ಕೆಲವು ಕಡೆಯಲ್ಲಿ ಕಾರಣವನ್ನನುಸರಿಸಿರುವುದಿಲ್ಲವೆಂಬ ಸ್ಯಾದ್ವಾದದೃಷ್ಟಿಯಿಂದ ನೋಡಲ್ಪಟ್ಟ ಮತವು ಸತ್ಯವಾದುದು" ಎಂದು ಪಂಡಿತೋತ್ತಮನಾದ ಆ ಕ್ಷೀರಕದಂಬನು ಶಿಷ್ಯನ ಯೋಗ್ಯತೆಯನ್ನು ಮನಸ್ಸಿನಲ್ಲಿಟ್ಟು ಸಂತೋಷಪಟ್ಟನು.

ಹೇ ನಾರದ ತ್ವಮೇವಾತ್ರ ಸೂಕ್ಷ್ಮಪ್ರಜ್ಞೋ ಯಥಾರ್ಥವಿತ್ ।
ಇತಃ ಪ್ರಭೃತ್ಯುಪಾಧ್ಯಾಯಪದೇ ತ್ವಂ ಸ್ಥಾಪಿತೋ ಮಯಾ ॥ ೩೧೮ ॥

ವ್ಯಾಖ್ಯೇಯಾನಿ ತ್ವಯಾ ಸರ್ವಶಾಸ್ತ್ರಾಣೀತಿ ಪ್ರಪೂಜ್ಯ ತಮ್ ।
ಪ್ರಾವರ್ಧಯದ್ಗುಣೈರೇವ ಪ್ರೀತಿಃ ಸರ್ವತ್ರ ಧೀಮತಾಮ್ ॥ ೩೧೯ ॥

ಅವನು ನಾರದನನ್ನು ಕುರಿತು "ಎಲೌ ನಾರದನೆ! ಇಲ್ಲಿ ನೀನೇ ಸೂಕ್ಷ್ಮಬುದ್ಧಿಯುಳ್ಳವನೂ ಯಥಾರ್ಥವಿಷಯವನ್ನು ತಿಳಿದವನೂ ಆಗಿರುತ್ತಿ. ಈ ಮೊದಲುಗೊಂಡು ನೀನು ನನ್ನಿಂದ ಉಪಾಧ್ಯಾಯ ಪದವಿಯಲ್ಲಿ ಸ್ಥಾಪಿಸಲ್ಪಟ್ಟಿರುತ್ತಿ. ನೀನು ಸಕಲಶಾಸ್ತ್ರಗಳನ್ನು ವ್ಯಾಖ್ಯಾನ ಮಾಡಬೇಕು" ಎಂದು ಹೇಳಿ ಅವನನ್ನು ಚೆನ್ನಾಗಿ ಸನ್ಮಾನಿಸಿ ವೃದ್ಧಿಹೊಂದಿಸಿದನು–ಉನ್ನತಿಗೆ ತಂದನು. ಎಲ್ಲಾ ಕಡೆಗಳಲ್ಲಿಯೂ ಪ್ರಾಜ್ಞರಿಗೆ ಗುಣಗಳಿಂದಲೇ ಪ್ರೀತಿಯುಂಟಾಗುವುದು.

ನಿಜಾಭಿಮುಖಮಾಸೀನಂ ತನೂಜಂ ಚೈವಮಬ್ರವೀತ್ ।
ವಿನಾಂಗ ತ್ವಂ ವಿವೇಕೇನ ವೃಥಾ ಏತದ್ವಿರೂಪಕಮ್ ॥ ೩೨೦ ॥

ಕಾರ್ಯಾಕಾರ್ಯವಿವೇಕಸ್ತೇ ನ ಶ್ರುತಾದಪಿ ವಿದ್ಯತೇ ।
ಕಥಂ ಜೀವಸಿ ಮಚ್ಚಕ್ಷುಃಪರೋಕ್ಷೇ ಗತಧೀರಿತಿ ॥ ೩೨೧ ॥

ತನಗೆ ಅಭಿಮುಖವಾಗಿ ಕುಳಿತಿರುವ ಪುತ್ರನನ್ನೂ ಕುರಿತು "ಮಗುವೆ! ನೀನು ವಿವೇಕವಿಲ್ಲದೆ ಈ ದುಷ್ಕಾರ್ಯವನ್ನು ಮಾಡಿದೆ. ಶಾಸ್ತ್ರದಿಂದಲೂ ನಿನಗೆ ಕಾರ್ಯಾಕಾರ್ಯವಿವೇಕವಿರುವುದಿಲ್ಲ. ಬುದ್ಧಿಯಿಲ್ಲದ ನೀನು ನನ್ನ ಕಣ್ಮರೆಯಲ್ಲಿ (ಸತ್ತ ಮೇಲೆ) ಹೇಗೆ ಜೀವಿಸುವೆ?" ಎಂದು ಹೇಳಿದನು.

ಏವಂ ಪಿತ್ರಾ ಸಶೋಕೇನ ಕೃತಶಿಕ್ಷೋವಿಚಕ್ಷಣಃ ।
ನಾರದೇ ಬದ್ಧವೈರೋಭೂತ್ಕುಧಿಯಾಮೀದೃಶೀ ಗತಿಃ ॥ ೩೨೨ ॥

ಈ ರೀತಿಯಾಗಿ ಶೋಕಸಹಿತನೂ ತಂದೆಯಿಂದ ಉಪದೇಶಿಸಲ್ಪಟ್ಟವನೂ ಮೂರ್ಖನೂ ಆದ ಪರ್ವತನು ನಾರದನಲ್ಲಿ ಬದ್ಧವೈರವುಳ್ಳವನಾದನು. ದುರ್ಬುದ್ಧಿಯುಳ್ಳವರ ಗತಿಯು ಈ ರೀತಿಯಾಗಿರುತ್ತದೆ.

ಸ ಕದಾಚಿದುಪಾಧ್ಯಾಯಃ ಸರ್ವಸಂಗಾನ್ ಪರಿತ್ಯಜನ್ ।
ಪರ್ವತಸ್ತಸ್ಯ ಮಾತಾ ಚ ಮಂದಬುದ್ಧೀ ತಥಾಪಿ ತೌ ॥ ೩೨೩ ॥

ಪಾಲನೀಯೌ ತ್ವಯಾ ಭದ್ರ ಮತ್ಪರೋಕ್ಷೇಪಿ ಸರ್ವಥಾ ।
ಇತ್ಯವೋಚದ್ವಸುಂ ಸೋಪಿ ಪೂತೋಸ್ಮ್ಯೇತದನುಗ್ರಹಾತ್ ॥ ೩೨೪ ॥

ಅನುಕ್ತಸಿದ್ಧಮೇತತ್ತು ವಕ್ತವ್ಯಂ ಕಿಮಿದಂ ಮಮ ।
ವಿಧೇಯಃ ಸಂಶಯೋ ನಾತ್ರ ಪೂಜ್ಯಪಾದ ಯಥೋಚಿತಮ್॥ ೩೨೫ ॥

ಪರಲೋಕಮನುಷ್ಠಾತುಮರ್ಹಸೀತಿ ದ್ವಿಜೋತ್ತಮಮ್ ।
ಮನೋಹರಕಥಾಮ್ಲಾನಮಾಲಯಾಭ್ಯರ್ಚಯನ್ನೃಪಃ ॥ ೩೨೬ ॥

ಒಂದಾನೊಂದು ಕಾಲದಲ್ಲಿ ಆ ಉಪಾಧ್ಯಾಯ–ಕ್ಷೀರಕದಂಬನು ಸಮಸ್ತ ಪರಿಗ್ರಹಗಳನ್ನು ಪರಿತ್ಯಜಿಸುವವನಾಗಿ ವಸುರಾಜನನ್ನು ಕುರಿತು "ಅಯ್ಯಾ! ಪರ್ವತನೂ ಅವನ ತಾಯಿಯೂ ಮಂದಬುದ್ಧಿಯುಳ್ಳವರು. ಆದರೂ ನೀನು ನನ್ನ ಪರೋಕ್ಷದಲ್ಲಿಯೂ ಅವರುಗಳನ್ನು ಸಂಪೂರ್ಣವಾಗಿ ಕಾಪಾಡಬೇಕು." ಎಂದು ಹೇಳಿದನು. ಅವನೂ "ಪೂಜ್ಯಪಾದರೆ! ಈ ಅನುಗ್ರಹದಿಂದ ನಾನು ಪವಿತ್ರನಾಗಿರುತ್ತೇನೆ. ಈ ಕಾರ್ಯವಾದರೋ ಹೇಳಲ್ಪಡದೆಯೇ ಸಿದ್ಧವಾಗಿರುತ್ತದೆ. ಇದನ್ನು ನನಗೆ ಹೇಳಬೇಕೇ? ನಾನು ತಮಗೆ ವಿಧೇಯನು. ಈ ವಿಷಯದಲ್ಲಿ ಸಂಶಯವಿಲ್ಲ. ಯಥೋಚಿತವಾಗಿ ತಾವು ಪರಲೋಕವನ್ನು ಅನುಷ್ಠಿಸುವುದಕ್ಕೆ ಅರ್ಹರಾಗಿರುತ್ತೀರಿ" ಎಂದು ವಸುರಾಜನು ಆ ವಿಪ್ರೋತ್ತಮನನ್ನು ಈ ಮನೋಹರವಾದ ಕಥೆಯೆಂಬ ಬಾಡದಿರುವ ಪುಷ್ಪಮಾಲೆಯಿಂದ ಪೂಜಿಸಿದನು.

**ತತಃ ಕ್ಷೀರಕದಂಬೇ ಚ ಸಮ್ಯಕ್ತ್ವಂಪ್ರಾಪ್ಯ ಸಂಯಮಮ್ ।**
**ಪ್ರಾಂತೇ ಸನ್ನ್ಯಸ್ಯ ಸಂಪ್ರಾಪ್ತೇ ನಾಕಿನಾಂ ಲೋಕಮುತ್ತಮಮ್॥ ೩೨೭ ॥**

**ಪರ್ವತೋಪಿ ಪಿತೃಸ್ಥಾನಮಧ್ಯಾಸ್ಯಾಶೇಷಶಾಸ್ತ್ರವಿತ್ ।**
**ಶಿಷ್ಯಾಣಾಂ ವಿಶ್ವದಿಕ್ಕಾನಾಂ ವ್ಯಾಖ್ಯಾತುಂ ರತಿಮಾತನೋತ್ ॥ ೩೨೮ ॥**

ಬಳಿಕ ಕ್ಷೀರಕದಂಬನೂ ಚೆನ್ನಾಗಿ ಸಂಯಮವನ್ನು ಹೊಂದಿ ಅವಸಾನಕಾಲದಲ್ಲಿ ಸಮಾಧಿಮರಣವನ್ನು ಪಡೆದು ಸ್ವರ್ಗಿಕರ ಉತ್ತಮವಾದ ಲೋಕವನ್ನು ಪಡೆಯುತ್ತಿರಲು ಸಕಲಶಾಸ್ತ್ರಜ್ಞನಾದ ಪರ್ವತನೂ ತಂದೆಯ ಸ್ಥಾನದಲ್ಲಿದ್ದು ಸಕಲ ದಿಕ್ಕುಗಳಿಂದ ಬಂದಿರುವ ಶಿಷ್ಯರುಗಳಿಗೆ ವ್ಯಾಖ್ಯಾನವನ್ನು ಮಾಡುವುದಕ್ಕೋಸ್ಕರ ಪ್ರೀತಿಯನ್ನು ಮಾಡಿದನು.

**ತಸ್ಮಿನ್ನೇವ ಪುರೇ ನಾರದೋಪಿ ವಿದ್ವಜ್ಜನಾರ್ಚಿತಃ ।**
**ಸೂಕ್ಷ್ಮಧೀರ್ವಿಹಿತಸ್ಥಾನೋ ಬಭಾರ ವ್ಯಾಖ್ಯಯಾ ಯಶಃ ॥ ೩೨೯ ॥**

ಅದೇ ನಗರದಲ್ಲಿ ವಿದ್ವಜ್ಜನರಿಂದ ಪೂಜಿತನೂ ಸೂಕ್ಷ್ಮಬುದ್ಧಿಯುಳ್ಳವನೂ ಯೋಗ್ಯವಾದ ಸ್ಥಾನವುಳ್ಳವನೂ ಆದ ನಾರದನೂ ವ್ಯಾಖ್ಯಾನದಿಂದ ಯಶಸ್ಸನ್ನು ಗಳಿಸಿದನು.

**ಗಚ್ಛತ್ಯೇವಂ ತಯೋಃ ಕಾಲೇ ಕದಾಚಿತ್ಸಾಧುಸಂಸದಿ ।**
**ಅಜೈರ್ಹೋತವ್ಯಮಿತ್ಯಸ್ಯ ವಾಕ್ಯಸ್ಯಾರ್ಥಪ್ರರೂಪಣೇ ॥ ೩೩೦ ॥**

**ವಿವಾದೋಭೂನ್ಮಹಾಂಸ್ತತ್ರ ವಿಗತಾಂಕುರಶಕ್ತಿಕಮ್ ।**
**ಯವಬೀಜಂ ತ್ರಿವರ್ಷಸ್ಥಮಜ ಇತ್ಯಭಿಧೀಯತೇ ॥ ೩೩೧ ॥**

**ತದ್ವಿಕಾರೇಣ ಸಪ್ತಾರ್ಚಿರ್ಮುಖೇ ದೇವಾರ್ಚನಂ ವಿದಃ ।**
**ವದಂತಿ ಯಜ್ಞಮಿತ್ಯಾಖ್ಯದನುಪದ್ಧತಿ ನಾರದಃ ॥ ೩೩೨ ॥**

ಈ ರೀತಿಯಾಗಿ ಅವರುಗಳ ಕಾಲವು ಕಳೆಯುತ್ತಿರಲು ಒಂದಾನೊಂದು ಕಾಲದಲ್ಲಿ ಸತ್ಪುರುಷರ ಸಭೆಯಲ್ಲಿ ''ಅಜಗಳಿಂದ ಹೋಮ ಮಾಡತಕ್ಕುದು'' ಎಂಬೀ ವಾಕ್ಯದ ಅರ್ಥನಿರೂಪಣದಲ್ಲಿ ಅಲ್ಲಿ ದೊಡ್ಡದಾದ ವಿವಾದವುಂಟಾಯಿತು. ''ಅಂಕುರಶಕ್ತಿಯು ನಷ್ಟವಾಗಿರುವ ಮೂರು ವರ್ಷದ ಯವಬೀಜವು ಅಜವೆಂದು ಹೇಳಲ್ಪಡುತ್ತದೆ. ಪ್ರಾಜ್ಞರು ಆ ಯವಧಾನ್ಯದ ವಿಕಾರದಿಂದ–ಹಿಟ್ಟಿನಿಂದ ಅಗ್ನಿಮುಖದಲ್ಲಿ ದೇವಪೂಜೆಯನ್ನು ಯಜ್ಞವನ್ನಾಗಿ ಹೇಳುತ್ತಾರೆ'' ಎಂದು ನಾರದನು ಪದ್ಧತಿಯನ್ನನುಸರಿಸಿ ಹೇಳಿದನು.

**ಪರ್ವತೋಪ್ಯಜಶಬ್ದೇನ ಪಶುಭೇದಃ ಪ್ರಕೀರ್ತಿತಃ ।**
**ಯಜ್ಞೋಗ್ನೌ ತದ್ವಿಕಾರೇಣ ಹೋತ್ರಮಿತ್ಯವದದ್ವಿಧೀಃ ॥ ೩೩೩ ॥**

ಬುದ್ಧಿಯಿಲ್ಲದ ಪರ್ವತನೂ ಆಗ ''ಅಜಶಬ್ದದಿಂದ ಪಶುಭೇದವು (ಆಡು) ಹೇಳಲ್ಪಟ್ಟಿದೆ. ಅದರ ವಿಕಾರದಿಂದ–ವಪೆಯಿಂದ ಅಗ್ನಿಯಲ್ಲಿ ಮಾಡಲ್ಪಡುವ ಯಜ್ಞವು ಹೋತ್ರವಾಗಿರುತ್ತದೆ'' ಎಂದು ಹೇಳಿದನು.

**ದ್ವಯೋರ್ವಚನಮಾಕರ್ಣ್ಯ ದ್ವಿಜಪ್ರಮುಖಸಾಧವಃ ।**
**ಮಾತ್ಸರ್ಯಾನ್ನಾರದೇ ನೈಷ ಧರ್ಮಃ ಪ್ರಾಣಿವಧಾದಿತಿ ॥ ೩೩೪ ॥**

**ಪ್ರತಿಷ್ಠಾಪಯಿತುಂ ಧಾತ್ರ್ಯಾಂ ದುರಾತ್ಮಾ ಪರ್ವತೋಬ್ರವೀತ್ ।**
**ಪತಿತೋಯಮಯೋಗ್ಯೋ ನಃ ಸಹ ಸಂಭಾಷಣಾದಿಷು ॥ ೩೩೫ ॥**

**ಇತಿ ಹಸ್ತತಲಾಸ್ಫಾಲನೇನ ನಿರ್ಭರ್ತ್ಸ್ಯ ತಂ ಕ್ರುಧಾ ।**
**ಘೋಷಯಾಮಾಸುರತ್ರೈವ ದುರ್ಬುದ್ಧೇರೀದೃಶಂ ಫಲಮ್ ॥ ೩೩೬ ॥**

ಅವರಿಬ್ಬರ ಮಾತನ್ನು ಕೇಳಿ ಬ್ರಾಹ್ಮಣರೇ ಮೊದಲಾದ ಸಾಧುಪುರುಷರು ''ನಾರದನೊಡನೆ ಮಾತ್ಸರ್ಯದಿಂದ ದುರಾತ್ಮನಾದ ಪರ್ವತನು ಪ್ರಾಣಿವಧೆಯಿಂದ ಇದು ಧರ್ಮವೆಂದು ಪೃಥಿವಿಯಲ್ಲಿ ಪ್ರತಿಷ್ಠಾಪಿಸುವುದಕ್ಕೋಸ್ಕರ ಹೇಳಿದನು. ಪತಿತನಾದ ಇವನು ನಮ್ಮಗಳ ಜತೆಯಲ್ಲಿ ಸಂಭಾಷಣಾದಿಗಳಲ್ಲಿ ಅಯೋಗ್ಯನಾಗಿರುತ್ತಾನೆ'' ಎಂದು ಅಂಗೈಯ ಹೊಡೆತದಿಂದ ಅವನನ್ನು ಬೆದರಿಸಿ ಕೋಪದಿಂದ ಘೋಷಣೆಯನ್ನು ಮಾಡಿದರು. ದುರ್ಬುದ್ಧಿಯುಳ್ಳವನಿಗೆ ಈ ಲೋಕದಲ್ಲಿಯೇ ಈ ಪ್ರಕಾರವಾದ ಫಲವುಂಟಾಗುವುದು.

**ಏವಂ ಬಹಿಷ್ಕೃತಃ ಸರ್ವೈರ್ಮಾನಭಂಗಾದಗಾದ್ವನಮ್ ।**
**ತತ್ರ ಬ್ರಾಹ್ಮಣವೇಷೇಣ ವಯಸಾ ಪರಿಣಾಮಿನಾ ॥ ೩೩೭ ॥**

**ಕೃತಾಂತಾರೋಹಣಾಸನ್ನಸೋಪಾನಪದವೀರಿವ ।**
**ವಲೀರುದ್ವಹತಾ ಭೂಯಃ ಸ್ಖಲತೇವಾಂಧಚಕ್ಷುಷಾ ॥ ೩೩೮ ॥**

**ವಿರಲೇನ ಶಿರೋಜೇನ ಸಿತೇನ ದಧತಾತತಮ್ ।**
**ರಾಜತಂ ವಾ ಶಿರಸ್ತ್ರಾಣಮಂತಿಕಾಂತಕಜಾದ್ಭಯಾತ್ ॥ ೩೩೯ ॥**

**ಜರಾಂಗನಾಸಮಾಸಂಗಸುಖಾದ್ವಾಮೀಲಚಕ್ಷುಷಾ ।**
**ಚಲಚ್ಛಿರಃ ಕರೇಣೇವ ಕರಿಣಾ ಕುಪಿತಾಹಿನಾ ॥ ೩೪೦ ॥**

**ಇವೋರ್ಧ್ವಶ್ವಾಸಿನಾ ರಾಜವಲ್ಲಭೇನೇವ ನಾಗ್ರತಃ ।**
**ಪ್ರಸ್ಫುಟಂ ಪಶ್ಯತಾ ಭಗ್ನಪೃಷ್ಠೇನಾಪಟುಭಾಷಿಣಾ ॥ ೩೪೧ ॥**

**ರಾಜ್ಞೇವ ಯೋಗ್ಯದಂಡೇನ ಶಮೇನೇವ ತನೂಭೃತಾ ।**
**ವಿಶ್ವಭೂನ್ನೃಪಕನ್ಯಾಸು ಬದ್ಧಕ್ರೋಧಮಿವಾತ್ಮನಃ ॥ ೩೪೨ ॥**

**ವಕ್ತುಂ ಧಾರಯತಾ ಯಜ್ಞೋಪವೀತಂ ತ್ರಿಗುಣಾತ್ಮಕಮ್ ।**
**ತೇನ ಸ್ವಾಭಿಮತಾರಂಭಸಿದ್ಧಿಹೇತುಗವೇಷಿಣಾ ॥ ೩೪೩ ॥**

**ಮಹಾಕಾಲೇನ ದೃಷ್ಟಸ್ಸನ್ ಪರ್ವತಃ ಪರ್ವತೇ ಭ್ರಮನ್ ।**
**ಪ್ರತಿಗಮ್ಯ ತಮಾನಮ್ಯ ಸೋಭ್ಯಧಾದಭಿವಾದನಮ್ ॥ ೩೪೪ ॥**

ಈ ರೀತಿಯಾಗಿ ಎಲ್ಲರಿಂದಲೂ ಬಹಿಷ್ಕೃತನಾದ ಪರ್ವತನು ಮಾನಭಂಗದಿಂದ ವನಕ್ಕೆ ಹೋದನು. ಅಲ್ಲಿ ಬ್ರಾಹ್ಮಣವೇಷವುಳ್ಳವನೂ ಹಣ್ಣಾದ ವಯಸ್ಸುಳ್ಳವನೂ ಯಮನು ಹತ್ತುವುದಕ್ಕೆ ಸಮೀಪವಾಗಿರುವ ಮೆಟ್ಟಲುಗಳ ಸಾಲುಗಳಂತಿರುವ ಹೊಟ್ಟೆಯ ಮೇಲಿನ ರೇಖೆಗಳನ್ನು ಧರಿಸಿರುವವನೂ ಕುರುಡುಗಣ್ಣಿನಿಂದ ಜಾರಿಬೀಳುವಂತಿರುವವನೂ ವಿರಳವೂ ಶುಭ್ರವೂ ಆದ ತಲೆಗೂದಲಿನಿಂದ, ಸಮೀಪದಲ್ಲಿರುವ ಯಮನಿಂದುಂಟಾದ ಭಯದಿಂದ ಬೆಳ್ಳಿಯ ವಿಶಾಲವಾದ ಶಿರಸ್ತ್ರಾಣವನ್ನು ಧರಿಸಿರುವಂತಿರುವವನೂ ಮುಪ್ಪೆಂಬ ಸ್ತ್ರೀಯ ಸಂಬಂಧದ ಸುಖದಿಂದಲೋ ಎಂಬಂತೆ ಚೆನ್ನಾಗಿ ಮುಚ್ಚಲ್ಪಟ್ಟ ಕಣ್ಣುಗಳುಳ್ಳವನೂ ಆನೆಯಂತೆ ಕಂಪಿತವಾದ ಮಸ್ತಕದಲ್ಲಿ ಕೈಯುಳ್ಳವನೂ ಕುಪಿತವಾದ ಹಾವಿನಂತೆ ಊರ್ಧ್ವಶ್ವಾಸವುಳ್ಳವನೂ ದೊರೆಗೆ ಪ್ರಿಯನಾದ ಮನುಷ್ಯನಂತೆ ಮುಂದುಗಡೆಯಲ್ಲಿ ಸ್ಫುಟವಾಗಿ ನೋಡದಿರುವವನೂ ಸೊಂಟಮುರಿದವನೂ ಸರಿಯಾಗಿ ಮಾತನಾಡದಿರುವವನೂ ಯೋಗ್ಯವಾದ ಶಿಕ್ಷೆಯನ್ನು ಮಾಡುವ ರಾಜನಂತೆ ಯೋಗ್ಯವಾದ ದಂಡವುಳ್ಳವನೂ ಶರೀರಧಾರಿಯಾದ ಶಮವೋ ಎನ್ನುವಂತೆ ಶರೀರಧಾರಿಯೂ ವಿಶ್ವಭೂಮಂತ್ರಿಯಲ್ಲಿಯೂ ಸಗರರಾಜನಲ್ಲಿಯೂ ಸುಲಸಾ ಕನ್ಯೆಯಲ್ಲಿಯೂ ಇರುವ ತನ್ನ ಬದ್ಧಕ್ರೋಧವನ್ನು ಹೇಳುವುದಕ್ಕೋಸ್ಕರವೋ ಎನ್ನುವಂತೆ ಮೂರೆಳೆಗಳುಳ್ಳ ಯಜ್ಞೋಪವೀತವನ್ನು ಧರಿಸಿರುವವನೂ ತನ್ನ ಇಷ್ಟಕಾರ್ಯಾರಂಭದ ಸಿದ್ಧಿಗೆ ಕಾರಣವನ್ನು ಹುಡುಕುತ್ತಿರುವವನೂ ಆದ ಆ ಮಹಾಕಾಲಾಸುರನಿಂದ ಪರ್ವತದಲ್ಲಿ ಸಂಚರಿಸುತ್ತಿದ್ದ ಪರ್ವತನು ನೋಡಲ್ಪಟ್ಟವನಾಗಿ ಅವನು ಇದಿರು ಹೋಗಿ ಆ ಮುದುಕನನ್ನು ನಮಸ್ಕರಿಸಿ ತನ್ನ ಪರಿಚಯಕಥನದೊಡನೆ ನಮಸ್ಕಾರವನ್ನು ಹೇಳಿದನು.

**ಮಹಾಕಾಲಸ್ತಮಾಶ್ವಾಸ್ಯ ಸ್ವಸ್ತಿ ತೇಸ್ತ್ವಿತಿ ಸಾದರಮ್ ।**
**ತಮವಿಜ್ಞಾತಪೂರ್ವಂ ವಾ ಕುತಸ್ತ್ಯಸ್ತ್ವಂ ವನಾಂತರೇ ॥ ೩೪೫ ॥**

**ಪರಿಭ್ರಮಣಮೇತತ್ತೇ ಬ್ರೂಹಿ ಮೇ ಕೇನ ಹೇತುನಾ ।**
**ಇತ್ಯಪೃಚ್ಛದಸೌ ಚಾಹ ನಿಜವೃತ್ತಾಂತಮಾದಿತಃ ॥ ೩೪೬ ॥**

ಮಹಾಕಾಲನು "ನಿನಗೆ ಮಂಗಳವಾಗಲಿ" ಎಂದು ಆದರ ಪೂರ್ವಕವಾಗಿ ಅವನನ್ನು ಸಮಾಧಾನಪಡಿಸಿ ಅವನನ್ನು ಮೊದಲು ತಿಳಿಯದವನಂತೆ "ನೀನು ಎಲ್ಲಿಯವನು ? ಅರಣ್ಯಮಧ್ಯದಲ್ಲಿ ನಿನ್ನ ಈ ಸಂಚಾರವು ಯಾವ ಕಾರಣದಿಂದ ? ನನಗೆ ಹೇಳು" ಎಂದು ಕೇಳಿದನು. ಈ ಪರ್ವತನೂ ಮೊದಲಿನಿಂದ ತನ್ನ ಸಮಾಚಾರವನ್ನು ಹೇಳಿದನು.

**ತಂ ನಿಶಮ್ಯ ಮಹಾಕಾಲಃ ಸಗರಂ ಮಮ ವೈರಿಣಮ್ ।**
**ನಿರ್ವಂಶೀಕರ್ತುಮೇಷ ಸ್ಯಾತ್ಸಮರ್ಥೋ ಮೇ ಪ್ರತಿಷ್ಕಶಃ ॥ ೩೪೭ ॥**

ಅದನ್ನು ಕೇಳಿ ಮಹಾಕಾಲನು "ನನ್ನ ವೈರಿಯಾದ ಸಗರನನ್ನು ನಿರ್ವಂಶಮಾಡು ವುದಕ್ಕೆ ಸಮರ್ಥನಾದ ಇವನು ನನಗೆ ಪ್ರತಿನಿಧಿ–ಸಹಾಯಕನಾಗುವನು."

**ಇತಿ ನಿಶ್ಚಿತ್ಯ ಪಾಪಾತ್ಮಾ ವಿಪ್ರಲಂಭನಪಂಡಿತಃ ।**
**ತ್ವತ್ಪಿತಾ ಸ್ಥಂಡಿಲೋ ವಿಷ್ಣುರುಪಮನ್ಯುರಹಂ ಚ ಭೋ ॥ ೩೪೮ ॥**

**ಭೌಮೋಪಾಧ್ಯಾಯಸಾನ್ನಿಧ್ಯೇ ಶಾಸ್ತ್ರಾಭ್ಯಾಸಮಕುರ್ಮಹಿ ।**
**ತ್ವತ್ಪಿತಾ ಮೇ ತತೋ ವಿದ್ಧಿ ಧರ್ಮಭ್ರಾತಾ ತಮೀಕ್ಷಿತುಮ್ ॥ ೩೪೯ ॥**

**ಮಮಾಗಮನಮೇತಚ್ಚ ವೈಫಲ್ಯಂ ಸಮುಪದ್ಯತ ।**
**ಮಾಭೈಷೀಃ ಶತ್ರುವಿಧ್ವಂಸೇ ಸಹಾಯಸ್ತೇ ಭವಾಮ್ಯಹಮ್ ॥ ೩೫೦ ॥**

ಎಂದು ನಿಶ್ಚಯಿಸಿ ಪಾಪಾತ್ಮನೂ ವಂಚನೆಯಲ್ಲಿ ಪಂಡಿತನೂ ಆದ ಆ ಮಹಾಕಾಲಾಸುರನು "ಎಲೈ ಪರ್ವತನೆ ! ನಿನ್ನ ತಂದೆಯೂ ಸ್ಥಂಡಿಲನೂ ವಿಷ್ಣುವೂ ಉಪಮನ್ಯುವೂ ನಾನೂ ಭೌಮೋಪಾಧ್ಯಾಯನ ಬಳಿಯಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿದೆವು. ಆದುದರಿಂದ ನಿನ್ನ ತಂದೆಯು ನನಗೆ ಧರ್ಮಭ್ರಾತೃವೆಂದು ತಿಳಿ. ಅವನನ್ನು ನೋಡುವುದಕ್ಕೋಸ್ಕರ ನನ್ನ ಆಗಮನ. ಇದು ನಿಷ್ಫಲವಾಯಿತು. ಹೆದರಬೇಡ. ಶತ್ರುವಿನಾಶದಲ್ಲಿ ನಾನು ನಿನಗೆ ಸಹಾಯಕನಾಗುತ್ತೇನೆ."

**ಇತಿ ಕ್ಷೀರಕದಂಬಾತ್ಮಜೇಷ್ಟಾರ್ಥಾನುಗತಾಃ ಸ್ವಯಮ್ ।**
**ಅಥರ್ವಣಗತಾಃ ಷಷ್ಟಿಸಹಸ್ರಪ್ರಮಿತಾಃ ಪೃಥಕ್ ॥ ೩೫೧ ॥**

**ಋಚೋ ವೇದೇ ರಹಸ್ಯಾನೀತ್ಯುತ್ಪಾದ್ಯಾಧ್ಯಾಪ್ಯ ಪರ್ವತಮ್ ।**
**ಶಾಂತಿಪುಷ್ಟ್ಯಭಿಚಾರಾತ್ಮಕ್ರಿಯಾಃ ಪೂರ್ವೋಕ್ತಮಂತ್ರಣೈಃ ॥ ೩೫೨ ॥**

**ನಿಶಿತಾಃ ಪವನೋಪೇತವಹ್ನಿಜ್ವಾಲಾಸಮಾಃ ಫಲಮ್ ।**
**ಇಷ್ಟೇರುತ್ಪಾದಯಿಷ್ಯಂತಿ ಪ್ರಯುಕ್ತಾಃ ಪಶುಹಿಂಸನಾತ್ ॥ ೩೫೩ ॥**

**ತತಃ ಸಾಕೇತಮಧ್ಯಾಸ್ಯ ಶಾಂತಿಕಾದಿಫಲಪ್ರದಮ್ ।**
**ಹಿಂಸಾಯಾಗಂ ಸಮಾರಭ್ಯ ಪ್ರಭಾವಂ ವಿದಧಾಮಹೇ ॥ ೩೫೪ ॥**

**ಇತ್ಯುಕ್ತ್ವಾ ವೈರಿನಾಶಾರ್ಥಮಾತ್ಮೀಯಾನ್ ದಿತಿಪುತ್ರಕಾನ್ ।**
**ತೀವ್ರಾನ್ ಸಗರರಾಷ್ಟ್ರಸ್ಯ ಬಾಧಾಂ ತೀವ್ರಜ್ವರಾದಿಭಿಃ ॥ ೩೫೫ ॥**

**ಕುರುಧ್ವಮಿತಿ ಸಂಪ್ರೇಷ್ಯ ಸದ್ವಿಜಸ್ತತ್ಪುರಂ ಗತಃ ।**
**ಸಗರಂ ಮಂತ್ರಗರ್ಭಾಶೀರ್ವಾದೇನಾಲೋಕ್ಯ ಪರ್ವತಃ ॥ ೩೫೬ ॥**

**ಸ್ವಪ್ರಭಾವಂ ಪ್ರಕಾಶ್ಯಾಸ್ಯ ತ್ವದ್ದೇಶವಿಷಮಾಶಿವಮ್ ।**
**ಶಮಯಿಷ್ಯಾಮಿ ಯಜ್ಞೇನ ಸಮಂತ್ರೇಣಾವಿಲಂಬಿತಮ್ ॥ ೩೫೭ ॥**

**ಯಜ್ಞಾಯ ವೇಧಸಾ ಸೃಷ್ಟಾಃ ಪಶವಸ್ತದ್ವಿಹಿಂಸನಾತ್ ।**
**ನ ಪಾಪಂ ಪುಣ್ಯಮೇತತ್ಸ್ಯಾತ್ಸ್ವರ್ಗೋರುಸುಖಸಾಧನಮ್ ॥ ೩೫೮ ॥**

ಈ ಪ್ರಕಾರವಾಗಿ ಕ್ಷೀರಕದಂಬನ ಪುತ್ರನ ಇಷ್ಟಾರ್ಥವನ್ನು ಅನುಸರಿಸಿರುವುವೂ ಅಥರ್ವಣದಲ್ಲಿರುವುವೂ ಅರವತ್ತು ಸಹಸ್ರಪರಿಮಿತಗಳೂ ಆದ ಋಕ್ಕುಗಳನ್ನು ವೇದದಲ್ಲಿ ರಹಸ್ಯಗಳೆಂದು ನಿರ್ಮಾಣಮಾಡಿ ತಾನೇ ಪರ್ವತನಿಗೆ ಬೇರೆ ಬೇರೆಯಾಗಿ ಅಧ್ಯಯನಮಾಡಿಸಿ "ಮೊದಲು ಹೇಳಲ್ಪಟ್ಟ ಮಂತ್ರ–ಋಕ್ಕುಗಳಿಂದ ಪ್ರಯೋಗಿ ಸಲ್ಪಟ್ಟುವೂ ತೀಕ್ಷ್ಣಗಳೂ ಗಾಳಿಯೊಡನೆ ಕೂಡಿದ ಬೆಂಕಿಯ ಜ್ವಾಲೆಗೆ ಸಮಾನಗಳೂ ಆದ ಶಾಂತಿ ಪುಷ್ಟಿ ಹಿಂಸಾಕಾರ್ಯರೂಪವಾದ ಕ್ರಿಯೆಗಳು ಪಶುವಧೆಯಿಂದ ಯಜ್ಞಕ್ಕೆ ಫಲವನ್ನುಂಟುಮಾಡುತ್ತವೆ. ಆದುದರಿಂದ ಅಯೋಧ್ಯೆಯಲ್ಲಿದ್ದು ಶಾಂತಿಕವೇ ಮೊದಲಾದ ಫಲವನ್ನು ಕೊಡುವ ಹಿಂಸಾಯಾಗವನ್ನು ಪ್ರಾರಂಭಿಸಿ ಪ್ರಭಾವವನ್ನುಂಟುಮಾಡುತ್ತೇವೆ" ಎಂದು ಹೇಳಿ ಶತ್ರುನಾಶಕ್ಕೋಸ್ಕರ ತನ್ನವರೂ ಕ್ರೂರಿಗಳೂ ಆದ ದೈತ್ಯರನ್ನು ಕುರಿತು "ಕಠಿನವಾದ ಜ್ವರಾದಿಗಳಿಂದ ಸಗರನ ದೇಶಕ್ಕೆ ಬಾಧೆಯನ್ನು ಮಾಡಿರಿ" ಎಂದು ಕಳುಹಿಸಿಕೊಟ್ಟು ತಾನು ಆ ವಿಪ್ರಸಹಿತನಾಗಿ ಆ ಪಟ್ಟಣಕ್ಕೆ ಹೋದನು. ಪರ್ವತನು ಮಂತ್ರಗರ್ಭಿತವಾದ ಆಶೀರ್ವಾದದಿಂದ ಸಗರನನ್ನು ನೋಡಿ ಇವನಿಗೆ ತನ್ನ ಪ್ರಭಾವವನ್ನು ಪ್ರಕಾಶಪಡಿಸಿ "ನಿನ್ನ ದೇಶದಲ್ಲಿ ಹೆಚ್ಚಿರುವ ಅಮಂಗಳವನ್ನು ಮಂತ್ರಸಹಿತವಾದ ಯಜ್ಞದಿಂದ ಶೀಘ್ರವಾಗಿ ಉಪಶಮಮಾಡುತ್ತೇನೆ. ಪಶುಗಳು ಯಜ್ಞಕ್ಕೋಸ್ಕರ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿವೆ. ಆ ಪಶುಗಳ ವಧೆಯಿಂದ ಪಾಪವಿಲ್ಲ. ಈ ಪುಣ್ಯಕಾರ್ಯವು ಸ್ವರ್ಗದ ಅಧಿಕಸುಖಕ್ಕೆ ಸಾಧನವಾಗುವುದು."

**ಇತಿ ಪ್ರತ್ಯಾಯ್ಯ ತಂ ಪಾಪಃ ಪುನರಪ್ಯೇವಮಬ್ರವೀತ್ ।**
**ತ್ವಂ ಪಶೂನಾಂ ಸಹಸ್ರಾಣಿ ಷಷ್ಟಿಂ ಯಾಗಸ್ಯ ಸಿದ್ಧಯೇ ॥ ೩೫೯ ॥**

**ಕುರು ಸಂಗ್ರಹಮನ್ಯಚ್ಚ ದ್ರವ್ಯಂ ತದ್ಯೋಗ್ಯಮಿತ್ಯಸೌ ।**
**ರಾಜಾಪಿ ಸರ್ವವಸ್ತೂನಿ ತಥೈವಾಸ್ಮೈ ಸಮಾರ್ಪಯತ್ ॥ ೩೬೦ ॥**

ಈ ರೀತಿಯಾಗಿ ಆ ಸಗರನನ್ನು ನಂಬಿಸಿ ಪಾಪಿಯಾದ ಈ ಪರ್ವತನು ಸಗರನನ್ನು ಕುರಿತು "ಯಾಗದ ಸಿದ್ಧಿಗೋಸ್ಕರ ನೀನು ಅರವತ್ತು ಸಹಸ್ರಪಶುಗಳ ಸಂಗ್ರಹವನ್ನು ಮಾಡು. ಬೇರೆ ಅದಕ್ಕೆ ಯೋಗ್ಯವಾದ ದ್ರವ್ಯವನ್ನೂ ಸಂಗ್ರಹಿಸು" ಎಂದೂ ಹೇಳಿದನು. ರಾಜನೂ ಅದರಂತೆಯೇ ಸರ್ವವಸ್ತುಗಳನ್ನು ಇವನಿಗೆ ಸಮರ್ಪಿಸಿ ದನು.

**ಪ್ರಾರಭ್ಯ ಪರ್ವತೋ ಯಾಗಂ ಪ್ರಾಣಿನೋಽಮಂತ್ರಯತ್ತದಾ ।**
**ಮಹಾಕಾಲಃ ಶರೀರೇಣ ಸಹ ಸ್ವರ್ಗಮುಪಾಗತಾಃ ॥ ೩೬೧ ॥**

**ಇತ್ಯಾಕಾಶೇ ವಿಮಾನೈಸ್ತಾನ್ನೀಯಮಾನಾನದರ್ಶಯತ್ ।**
**ದೇಶೇಽಶಿವೋಪಸರ್ಗಂ ಚ ತದೈವಾಸೌ ನಿರಸ್ತವಾನ್ ॥ ೩೬೨ ॥**

ಪರ್ವತನು ಯಾಗವನ್ನು ಪ್ರಾರಂಭಿಸಿ ಅದಕ್ಕೆ ಪ್ರಾಣಿಗಳನ್ನು ಮಂತ್ರಿಸಿ–ಹಾಕಿದನು. ಆಗ ಮಹಾಕಾಲನು ಶರೀರದೊಡನೆ ಸ್ವರ್ಗವನ್ನು ಹೊಂದಿದುವೆಂದು ಆಕಾಶದಲ್ಲಿ ವಿಮಾನಗಳಿಂದ ಒಯ್ಯಲ್ಪಡುತ್ತಿರುವ ಆ ಪ್ರಾಣಿಗಳನ್ನು ತೋರಿಸಿದನು. ಆಗಲೇ ಇವನು ದೇಶದಲ್ಲಿದ್ದ ಅಮಂಗಳವನ್ನೂ ಉಪಸರ್ಗವನ್ನೂ ಹೋಗಲಾಡಿಸಿ ದನು.

**ತದ್ದೃಷ್ಟ್ವಾ ದೇಹಿನೋ ಮುಗ್ಧಾಸ್ತತ್ಪ್ರಲಂಭೇನ ಮೋಹಿತಾಃ ।**
**ತಾಂ ಗತಿಂ ಪ್ರೇಪ್ಸವೋ ಯಾಗಮೃತಿಮಾಕಾಂಕ್ಷಯನ್ನಲಮ್ ॥ ೩೬೩ ॥**

ಅದನ್ನು ನೋಡಿ ಮುಗ್ಧಗಳಾದ ಪ್ರಾಣಿಗಳು ಆ ವಂಚನೆಯಿಂದ ಮೋಹಿತ ಗಳಾಗಿಯೂ ಆ ಸ್ವರ್ಗಗತಿಯನ್ನು ಹೊಂದಬೇಕೆಂಬ ಇಚ್ಛೆಯುಳ್ಳವುಗಳಾಗಿಯೂ ಅಧಿಕವಾಗಿ ಯಾಗದಲ್ಲಿ ಮರಣವನ್ನಪೇಕ್ಷಿಸಿದುವು.

**ತದ್ಯಜ್ಞಾವಸಿತೌ ಜಾತ್ಯಂ ಹಯಮೇಕಂ ವಿಧಾನತಃ ।**
**ಇಯಾಜ ಸುಲಸಾಂ ದೇವೀಮಪಿ ರಾಜಾಜ್ಞಯಾ ಖಲಃ ॥ ೩೬೪ ॥**

ಆ ಯಜ್ಞವು ಪೂರ್ತಿಯಾದ ಬಳಿಕ ಆ ದುಷ್ಟನು ಒಳ್ಳೆಯ ಜಾತಿಯ ಒಂದು ಕುದುರೆಯನ್ನು ರಾಜಾಜ್ಞೆಯಿಂದ ಸುಲಸಾದೇವಿಯನ್ನೂ ವಿಧಿಯಿಂದ ಯಜ್ಞ ಮಾಡಿದನು.

**ಪ್ರಿಯಕಾಂತಾವಿಯೋಗೋತ್ಥಶೋಕದಾವಾನಲಾರ್ಚಿಷಾ ।**
**ಪರಿಪ್ಲುಷ್ಟತನೂ ರಾಜಾ ರಾಜಧಾನೀಂ ಪ್ರವಿಷ್ಟವಾನ್ ॥ ೩೬೪ ॥**

ಪ್ರಿಯಪತ್ನಿಯ ವಿಯೋಗದಿಂದುಂಟಾದ ಶೋಕವೆಂಬ ಕಾಡ್ಗಿಚ್ಚಿನ ಜ್ವಾಲೆಯಿಂದ ಸುಡಲ್ಪಟ್ಟ ಶರೀರವುಳ್ಳವನಾದ ಸಗರರಾಜನು ರಾಜಧಾನಿಯನ್ನು ಪ್ರವೇಶಿಸಿದನು.

**ಶಯ್ಯಾತಲೇ ವಿನಿಕ್ಷಿಪ್ಯ ಶರೀರಂ ಪ್ರಾಣಿಹಿಂಸನಮ್ ।**
**ವೃತ್ತಂ ಮಹದಿದಂ ಧರ್ಮಃ ಕಿಮಧರ್ಮೋಽಯಮಿತ್ಯಸೌ ॥ ೩೬೫ ॥**

**ಸಂಶಯಾನಸ್ತದಾನ್ಯೇದ್ಯುರ್ಮುನಿಂ ರತಿವರಾಭಿಧಮ್ ।**
**ಅಭಿವಂದ್ಯ ಮಯಾರಬ್ಧಂ ಭಟ್ಟಾರಕ ಯಥಾಸ್ಥಿತಮ್ ॥ ೩೬೬ ॥**

**ಬ್ರೂಹಿ ಕಿಂ ಪುಣ್ಯಕರ್ಮೇದಂ ಪಾಪಂ ಮೇ ವಾ ವಿಚಾರ್ಯ ತತ್ ।**
**ಇತ್ಯವೋಚದಸೌ ಚಾಹ ಧರ್ಮಶಾಸ್ತ್ರಬಹಿಷ್ಕೃತಮ್ ॥ ೩೬೭ ॥**

**ಏತದೇತದ್ವಿಧಾತಾರಂ ಸಪ್ತಮೀಂ ಪ್ರಾಪಯೇತ್ಕ್ಷಿತಿಮ್ ।**
**ತಸ್ಯಾಭಿಜ್ಞಾನಮಪ್ಯಸ್ತಿ ದಿನೇಽಸ್ಮಿನ್ ಸಪ್ತಮೇಽಶನಿಃ ॥ ೩೬೮ ॥**

**ಪತಿಷ್ಯತಿ ತತೋ ವಿದ್ಧಿ ಸಪ್ತಮೀ ಧರಣೀತಿ ತೇ ।**
**ತದುಕ್ತಂ ಭೂಪತಿರ್ಗತ್ವಾ ಬ್ರಾಹ್ಮಣಂ ತಂ ನ್ಯವೇದಯತ್ ॥ ೩೬೯ ॥**

ಹಾಸಿಗೆಯಲ್ಲಿ ಶರೀರವನ್ನಿರಿಸಿ – ಮಲಗಿ "ಈ ಮಹಾಪ್ರಾಣಿವಧೆಯು ನಡೆಯಿತು. ಇದು ಧರ್ಮವೋ? ಅಧರ್ಮವೋ?" ಎಂದು ಇವನು ಸಂದೇಹಪಡುವವನಾಗಿ ಆಗ ಮತ್ತೊಂದು ದಿವಸ ರತಿವರನೆಂಬ ಮುನಿಯನ್ನು ಕಂಡು ವಂದಿಸಿ "ಭಟ್ಟಾರಕನೆ! ಇದ್ದಹಾಗೆ ಹೇಳು. ನನ್ನಿಂದ ಪ್ರಾರಂಭಿಸಲ್ಪಟ್ಟ ಈ ಕಾರ್ಯವು ಪುಣ್ಯಕರ್ಮವೋ? ಪಾಪಕರ್ಮವೋ? ಅದನ್ನು ವಿಚಾರಮಾಡಿ ನನಗೆ ಹೇಳು" ಎಂದು ಹೇಳಿದನು. ಅದಕ್ಕೆ ಈ ಯತಿಯು "ಇದು ಧರ್ಮಶಾಸ್ತ್ರ ಬಹಿಷ್ಕೃತವಾದ ಕಾರ್ಯ. ಇದನ್ನು ಮಾಡುವವನನ್ನು ಇದು ಏಳನೆಯ ನರಕಭೂಮಿಯನ್ನು ಹೊಂದಿಸುವುದು. ಅದಕ್ಕೆ ಗುರುತೂ ಇದೆ. ಈ ಏಳನೆಯ ದಿನದಲ್ಲಿ ನಿನ್ನ ಮೇಲೆ ಸಿಡಿಲು ಬೀಳುವುದು. ಆದುದರಿಂದ ನಿನಗೆ ಏಳನೆಯ ಭೂಮಿಯಾಗುವುದೆಂದು ತಿಳಿ" ಎಂದು ಹೇಳಿದನು. ಆ ಮಾತನ್ನು ದೊರೆಯು ಹೋಗಿ ಆ ಬ್ರಾಹ್ಮಣನಿಗೆ ತಿಳಿಸಿದನು.

**ತನ್ಮೃಷಾ ಕಿಮಸೌ ವೇತ್ತಿ ನಗ್ನಃ ಕ್ಷಪಣಕಸ್ತತಃ ।**
**ಶಂಕಾಸ್ತಿ ಚೇತ್ತವೈತಸ್ಯಾಃ ಶಾಂತಿರತ್ರ ವಿಧೀಯತೇ ॥ ೩೭೦ ॥**

**ಇತ್ಯುಕ್ತಿಭಿರ್ಮನಸ್ತಸ್ಯ ಸಂಧಾರ್ಯ ಶಿಥಿಲೀಕೃತಮ್ ।**
**ಯಜ್ಞಂ ಪುನಃ ಸಮಾರಬ್ಧ ಸ ತತಃ ಸಪ್ತಮೇ ದಿನೇ ॥ ೩೭೧ ॥**

**ಮಾಯಯಾಸುರಪಾಪಸ್ಯ ಸುಲಸಾ ನಭಸಿ ಸ್ಥಿತಾ ।**
**ದೈವಭಾವಂ ಗತಾ ಪ್ರಾಚ್ಯಪಶುಭೇದಪರಿಷ್ಕೃತಾ ॥ ೩೭೨ ॥**

"ಅದು ಸುಳ್ಳು. ಈ ಬೆತ್ತಲೆಯ ಕ್ಷಪಣಕನು ಏನು ಬಲ್ಲ? ಆದರಿಂದ ನಿನಗೆ ಸಂದೇಹವಿದ್ದರೆ ಇಲ್ಲಿ ಇದಕ್ಕೆ ಶಾಂತಿಯು ಮಾಡಲ್ಪಡುವುದು" ಈ ರೀತಿಯಾದ ಮಾತುಗಳಿಂದ ಅವನ ಮನಸ್ಸನ್ನು ಸಮಾಧಾನಪಡಿಸಿ ಶಿಥಿಲವಾಗಿ ಮಾಡಲ್ಪಟ್ಟಿತು. ಆ ಪರ್ವತನು ಮತ್ತೆ ಯಜ್ಞವನ್ನು ಪ್ರಾರಂಭಿಸಿದನು. ಬಳಿಕ ಏಳನೆಯ ದಿನದಲ್ಲಿ ಆ ಪಾಪಿಯಾದ ಅಸುರನ ಮಾಯೆಯಿಂದ ಸುಲಸೆಯು ದೇವತ್ವವನ್ನು ಪಡೆದು ಮೊದಲಿನ ಪಶುಗಳಿಂದ ಸುತ್ತಲ್ಪಟ್ಟವಳಾಗಿ ಆಕಾಶದಲ್ಲಿದ್ದಳು.

**ಯಾಗಮೃತ್ಯುಫಲೇನೈಷಾ ಲಬ್ಧಾ ದೇವಗತಿರ್ಮಯಾ ।**
**ತತ್ತ್ವಮೋದಂ ತವಾಖ್ಯಾತುಂ ವಿಮಾನೇಹಮಿಹಾಗತಾ ॥ ೩೭೩ ॥**

**ಯಜ್ಞೇನ ಪ್ರೀಣಿತಾ ದೇವಾಃ ಪಿತರಶ್ಚೇತ್ಯಭಾಷತ ।**
**ತದ್ವಚಃಶ್ರವಣಾದ್ದೃಷ್ಟಂ ಪ್ರತ್ಯಕ್ಷಂ ಯಾಗಮೃತ್ಯುಜಮ್ ॥ ೩೭೪ ॥**

**ಫಲಂ ಜೈನಮುನೇರ್ವಾಕ್ಯಮಸತ್ಯಮಿತಿ ಭೂಪತಿಃ ।**
**ತೀವ್ರಹಿಂಸಾನುರಾಗೇಣ ಸದ್ಧರ್ಮದ್ವೇಷಣೋದಯಾತ್ ॥ ೩೭೫ ॥**

**ಸಂಭೂತಪರಿಣಾಮೇನ ಮೂಲೋತ್ತರವಿಕಲ್ಪಿತಾತ್ ।**
**ತತ್ಪ್ರಾಯೋಗ್ಯಸಮುತ್ಕೃಷ್ಟದುಷ್ಟಸಂಕ್ಲೇಶಸಾಧನಾತ್ ॥ ೩೭೬ ॥**

**ನರಕಾಯುಃಪ್ರಭೃತ್ಯಷ್ಟಕರ್ಮಣಾಂ ಸ್ವೋಚಿತಸ್ಥಿತೇಃ ।**
**ಅನುಭಾಗಸ್ಯ ಚ ಸ್ನಿಗ್ಧನಿಕಾಚಿತವಿಬಂಧನೇ ॥ ೩೭೭ ॥**

**ವಿಭೀಷಣಾಶನಿತ್ವೇನ ತತ್ಕಾಲೇ ಪತಿತೇ ರಿಪೌ ।**
**ತತ್ಕರ್ಮಪ್ರಸಕ್ತಾಖಿಲಾಂಗಿಭಿಃ ಸಗರಃ ಸಹ ॥ ೩೭೮ ॥**

**ರೌರವೇಜನಿ ದುಷ್ಟಾತ್ಮಾ ಮಹಾಕಾಲೋಪಿ ತತ್ಕ್ಷಣೇ ।**
**ಸ್ವವೈರಪವನಾಪೂರಣೇನ ಗತ್ವಾ ರಸಾತಲಮ್ ॥ ೩೭೯ ॥**

**ತಂ ದಂಡಯಿತುಮುತ್ಕ್ರೋಧಸ್ತೃತೀಯನರಕಾವಧೌ ।**
**ಅನ್ವಿಷ್ಯಾನವಲೋಕ್ಯೈನಂ ವಿಶ್ವಭೂಪ್ರಭೃತಿದ್ವಿಷಾಮ್ ॥ ೩೮೦ ॥**

**ಮೃತಿಪ್ರಯೋಗಸಂಪಾದೀ ತತೋ ನಿರ್ಗತ್ಯ ನಿರ್ಘೃಣಃ ।**
**ಪರ್ವತಸ್ಯ ಪ್ರಸಾದೇನ ಸುಲಸಾಸಹಿತಃ ಸುಖಮ್ ॥ ೩೮೧ ॥**

**ಪ್ರಾಪ್ತೋಹಮಿತಿ ಶಂಸಂತಂ ವಿಮಾನೇರಿಮದರ್ಶಯತ್ ।**
**ತಂ ದೃಷ್ಟ್ವಾ ತತ್ಪರೋಕ್ಷೇತ್ರ ವಿಶ್ವಭೂಸಚಿವಃ ಸ್ವಯಮ್ ॥ ೩೮೨ ॥**

**ವಿಷಯಾಧಿಪತಿರ್ಭೂತ್ವಾ ಮಹಾಮೇಧೇ ಕೃತೋದ್ಯಮಃ ।**
**ವಿಮಾನಾಂತರ್ಗತಾ ದೇವಾಃ ಪಿತರಶ್ಚ ನಭೋಂಗಣೇ ॥ ೩೮೩ ॥**

**ಸರ್ವೇಷಾಂ ದರ್ಶಿತಾ ವ್ಯಕ್ತಂ ಮಹಾಕಾಲಸ್ಯ ಮಾಯಯಾ ।**
**ಮಹಾಮೇಧಸ್ತ್ವಯಾ ಯಾಗೋ ಮಂತ್ರಿನ್ ಪುಣ್ಯವತಾ ಕೃತಃ॥೩೮೪ ॥**

**ಇತಿ ವಿಶ್ವಭುವಂ ಭೂಯಃ ಸಂಭೂಯಾಸ್ತಾವಿಷುಸ್ತದಾ ।**
**ನಾರದಸ್ತಾಪಸಾಶ್ಚೈತದಾಕರ್ಣ್ಯೈವಂ ದುರಾತ್ಮನಾ ॥ ೩೮೫ ॥**

**ದುರ್ಮಾರ್ಗೋ ದ್ವಿಷತಾನೇನ ಧಿಗ್ಲೋಕಸ್ಯ ಪ್ರಕಾಶಿತಃ ।**
**ನಿವಾರ್ಯೋಽಯಮುಪಾಯೇನ ಕೇನಚಿತ್ಪಾಪಪಂಡಿತಃ ॥ ೩೮೬ ॥**

**ಇತಿ ಸರ್ವೇಽಪಿ ಸಂಗತ್ಯ ಸಾಕೇತಪುರಮಾಗತಾಃ ।**
**ಯಥಾವಿಧಿ ಸಮಾಲೋಕ್ಯ ಸಚಿವಂ ಪಾಪಿನೋ ನರಾಃ ॥ ೩೮೭ ॥**

**ನಿತಾಂತಮರ್ಥಕಾಮಾರ್ಥಂ ಕುರ್ವಂತಿ ಪ್ರಾಣಿನಾಂ ವಧಮ್ ।**
**ನ ಕೇಪಿ ಕ್ವಾಪಿ ಧರ್ಮಾರ್ಥಂ ಪ್ರಾಣಿನಾಂ ಸಂತಿ ಘಾತಕಾಃ ॥ ೩೮೮ ॥**

**ವೇದವಿದ್ಭಿರಹಿಂಸೋಕ್ತಾ ವೇದೇ ಬ್ರಹ್ಮನಿರೂಪಿತೇ ।**
**ಕಲ್ಪವಲ್ಲೀವ ಮಾತೇವ ಸಖೀವ ಜಗತೇ ಹಿತಾ ॥ ೩೮೯ ॥**

**ಇತಿ ಪೂರ್ವರ್ಷಿವಾಕ್ಯಸ್ಯ ತ್ವಯಾ ಪ್ರಾಮಾಣ್ಯಮಿಚ್ಛತಾ ।**
**ತ್ಯಾಜ್ಯಮೇತದ್ವಧಪ್ರಾಯಂ ಕರ್ಮ ಕರ್ಮನಿಬಂಧನಮ್ ॥ ೩೯೦ ॥**

**ತಾಪಸೈರಭ್ಯಧಾಯಿಾತಿ ಸರ್ವಪ್ರಾಣಿಹಿತೈಷಿಭಿಃ ।**
**ವಿಶ್ವಭೂರಿದಮಾಕರ್ಣ್ಯ ತಾಪಸಾ ಭೋ ಕಥಂ ಮಯಾ ॥ ೩೯೧ ॥**

ದೃಷ್ಟಂ ಶಕ್ಯಮಪಹ್ನೋತುಂ ಸಾಕ್ಷಾತ್ಸ್ವರ್ಗಸ್ಯ ಸಾಧನಮ್ ।
ಇತಿ ಬ್ರುವನ್ ಪುನರ್ನಾರದೇನೋಕ್ತಃ ಪಾಪಭೀರುಣಾ ॥ ೩೯೩ ॥

ಅಮಾತ್ಯೋತ್ತಮ ವಿದ್ವಾಂಸ್ತ್ವಂ ಕಿಮೇತತ್ಸ್ವರ್ಗಸಾಧನಮ್ ।
ಸಗರಂ ಸಪರೀವಾರಂ ನಿರ್ಮೂಲಯಿತುಮಿಚ್ಛತಾ ॥ ೩೯೪ ॥

ಉಪಾಯೋಯಂ ವ್ಯಧಾಯ್ಯೇವಂ ಪ್ರತ್ಯಕ್ಷಫಲದರ್ಶನಮ್ ।
ಕೇನಚಿತ್ಕುಹಕಜ್ಞೇನ ಮುಗ್ಧಾನಾಂ ಮೋಹಕಾರಣಮ್ ॥ ೩೯೫ ॥

ತತಃ ಶೀಲೋಪವಾಸಾದಿವಿಧಿಮಾರ್ಷಾಗಮೋದಿತಮ್ ।
ಆಚರೇತಿ ಸ ತಂ ಪ್ರಾಹ ಪರ್ವತಂ ನಾರದೋದಿತಮ್ ॥ ೩೯೬ ॥

ಶ್ರುತಂ ತ್ವಯೇತ್ಯಸೌ ಶಾಸ್ತ್ರೇಣಾಸುರೋಕ್ತೇನ ದುರ್ಮತಿಃ ।
ಮೋಹಿತೋ ನಾರದೇನಾಪಿ ಪ್ರಾಗಿದಂ ಕಿಂ ನ ವಾ ಶ್ರುತಮ್॥ ೩೯೭ ॥

ಮಮಾಸ್ಯ ಚ ಗುರುರ್ನಾನ್ಯೋ ಮತ್ಪಿತೈವಾತಿಗರ್ವಿತಃ ।
ಸಮತ್ಸರಸ್ತದಾಪ್ಯೇಷ ಮಯ್ಯದ್ಯ ಕಿಮಿವೋಚ್ಯತೇ ॥ ೩೯೮ ॥

ಸುಶ್ರುತೋ ಮದ್ಗುರೋರ್ಧರ್ಮಭ್ರಾತಾ ಜಗತಿ ವಿಶ್ರುತಃ ।
ಸ್ಥವಿರಸ್ತೇನ ಚ ಶ್ರೌತಂ ರಹಸ್ಯಂ ಪ್ರತಿಪಾದಿತಮ್ ॥ ೩೯೯ ॥

ಯಾಗಮೃತ್ಯುಫಲಂ ಸಾಕ್ಷಾನ್ಮಯಾಪಿ ಪ್ರಕಟೀಕೃತಮ್ ।
ನ ಚೇತ್ತೇ ಪ್ರತ್ಯಯೋ ವಿಶ್ವವೇದಾಂಭೋನಿಧಿಪಾರಗಮ್ ॥ ೪೦೦ ॥

ವಸುಂ ಪ್ರಸಿದ್ಧಂ ಸತ್ಯೇನ ಪೃಚ್ಛೇರಿತ್ಯನ್ವಭಾಷತ ।
ತಚ್ಛ್ರುತ್ವಾ ನಾರದೋವಾದೀತ್ಕೋ ದೋಷಃ ಪೃಚ್ಛ್ಯತಾಮಸೌ ॥ ೪೦೧ ॥

ಇದಂ ತಾವದ್ವಿಚಾರಾರ್ಹಂ ವಧಶ್ಚೇದ್ಧರ್ಮಸಾಧನಮ್ ।
ಅಹಿಂಸಾದಾನಶೀಲಾದಿ ಭವೇತ್ಪಾಪಪ್ರಸಾಧನಮ್ ॥ ೪೦೨ ॥

ಅಸ್ತು ಚೇನ್ಮತ್ಸ್ಯಬಂಧಾದಿಪಾಪಿನಾಂ ಪರಮಾ ಗತಿಃ ।
ಸತ್ಯಧರ್ಮತಪೋಬ್ರಹ್ಮಚಾರಿಣೋ ಯಾಂತ್ಯಧೋಗತಿಮ್ ॥ ೪೦೩ ॥

ಯಜ್ಞೇ ಪಶುವಧಾದ್ಧರ್ಮೋ ನೇತರತ್ರೇತಿ ಚೇನ್ನ ತತ್ ।
ವಧಸ್ಯ ದುಃಖಹೇತುತ್ವೇ ಸಾದೃಶ್ಯಾದುಭಯತ್ರ ಚ ॥ ೪೦೪ ॥

ಫಲೇನಾಪಿ ಸಮಾನೇನ ಭಾವ್ಯಂ ಕಸ್ತನ್ನಿಷೇಧಕಃ ।
ಅಥ ತ್ವಮೇವಂ ಮನ್ಯೇಥಾಃ ಪಶುಸೃಷ್ಟೇಃ ಸ್ವಯಂಭುವಃ ॥ ೪೦೫ ॥

ಯಜ್ಞಾರ್ಥತ್ವಾನ್ನ ತಸ್ಯಾಸ್ತಿ ವಿನಿಯೋಕ್ತುರಘಾಗಮಃ ।
ಇತ್ಯಯಂ ಚಾತಿಮುಗ್ಧಾಭಿಲಾಷಃ ಸಾಧುವಿಗರ್ಹಿತಃ ॥ ೪೦೬ ॥

ತತ್ಸರ್ಗಸ್ಯೈವ ಸಾಧುತ್ವಾದಸ್ತ್ಯನ್ಯಚ್ಚಾತ್ರ ದುರ್ಘಟಮ್ ।
ಯದರ್ಥಂ ಯದ್ಧಿ ತಸ್ಯಾನ್ಯಥೋಪಯೋಗೇರ್ಥಕೃನ್ನ ತತ್ ॥ ೪೦೭ ॥

''ಯಾಗದಲ್ಲಿ ಮರಣವನ್ನು ಹೊಂದಿದ ಫಲದಿಂದ ಈ ದೇವಗತಿಯನ್ನು ನಾನು ಪಡೆದೆನು. ಆ ಸಂತೋಷವನ್ನು ನಿನಗೆ ಹೇಳುವುದಕ್ಕೋಸ್ಕರ ನಾನು ವಿಮಾನದಲ್ಲಿ ಇಲ್ಲಿಗೆ ಬಂದೆನು. ಯಜ್ಞದಿಂದ ದೇವರ್ಕಳೂ ಪಿತೃಗಳೂ ಸಂತೋಷಗೊಳಿಸಲ್ಪಟ್ಟಿದ್ದಾರೆ'' ಎಂದು ಹೇಳಿದಳು. ಆ ಮಾತನ್ನು ಕೇಳಿದುದರಿಂದ ದೊರೆಯು ''ಯಾಗಮೃತ್ಯುವಿನಿಂದುಂಟಾದ ಫಲವು ಪ್ರತ್ಯಕ್ಷವಾಗಿ ನೋಡಲ್ಪಟ್ಟಿತು. ಜೈನ ಮುನಿಯ ವಾಕ್ಯವು ಸುಳ್ಳು'' ಎಂದು ಹೇಳಿ ಹಿಂಸಾನುರಾಗದಿಂದುಂಟಾದ ಪರಿಣಾಮದಿಂದ ಸದ್ಧರ್ಮದ್ವೇಷದ ಉದಯವುಳ್ಳುದೂ ಮೂಲೋತ್ತರ ಕರ್ಮಪ್ರಕೃತಿಗಳೆಂಬ ಭೇದವುಳ್ಳುದೂ ಅದಕ್ಕೆ ಯೋಗ್ಯವೂ ಉತ್ಕೃಷ್ಟವೂ ದುಷ್ಟವೂ ಆದ ಸಂಕ್ಲೇಶಪರಿಣಾಮದ ಸಾಧನದಿಂದ ನರಕಾಯುಷ್ಯವೇ ಮೊದಲಾದ ಎಂಟು ಕರ್ಮಗಳ ಅವುಗಳಿಗೆ ಉಚಿತವಾದ ಸ್ಥಿತಿಯ ಮತ್ತು ಅನುಭಾಗದ ಸ್ನಿಗ್ಧರೂಕ್ಷ ಕರ್ಮಪರಮಾಣುಗಳ ಬಂಧನಗಳು ಭಯಂಕರವಾದ ಸಿಡಿಲಿನ ರೂಪದಿಂದ ಆ ಕಾಲದಲ್ಲಿ ಶತ್ರುವಿನ ಮೇಲೆ ಬೀಳುತ್ತಿರಲು ಆ ಕಾರ್ಯಕ್ಕೆ ಸಂಪೂರ್ಣವಾಗಿ ಸಂಬಂಧಿಸಿದ ಸಕಲಪ್ರಾಣಿಗಳೊಡನೆ ಸಗರನು ಸತ್ತು ರೌರವನರಕದಲ್ಲಿ ಹುಟ್ಟಿದನು. ದುಷ್ಟಾತ್ಮನಾದ ಮಹಾಕಾಲನೂ ಆ ಕ್ಷಣದಲ್ಲಿ ತನ್ನ ವೈರವೆಂಬ ಗಾಳಿಯ ತುಂಬಿರುವಿಕೆಯಿಂದ ಬಹುಕೋಪವುಳ್ಳವನಾಗಿ ಆ ಸಗರನನ್ನು ಶಿಕ್ಷಿಸುವುದಕ್ಕೋಸ್ಕರ ಪಾತಾಳಕ್ಕೆ ಹೋಗಿ ಮೂರನೆಯ ನರಕದ ಎಲ್ಲೆಯಲ್ಲಿ ಹುಡುಕಿ ಈ ಸಗರನನ್ನು ಕಾಣದೆ ಅಲ್ಲಿಂದ ಹೊರಟು ಬಂದು ನಿರ್ದಯನಾಗಿ ವಿಶ್ವಭೂಮಂತ್ರಿಯೇ ಮೊದಲಾದ ಶತ್ರುಗಳ ಮರಣಪ್ರಯೋಗವನ್ನು ಸಂಪಾದಿಸುವವನಾಗಿ (ಕೊಲ್ಲುವುದಕ್ಕೆ ಉಪಾಯವನ್ನು ಹುಡುಕುವವನಾಗಿ) ''ನಾನು ಪರ್ವತನ ಪ್ರಸಾದದಿಂದ ಸುಲಸಾಸಹಿತನಾಗಿ ಸುಖವನ್ನು ಹೊಂದಿದೆನು'' ಎಂದು ಹೊಗಳುತ್ತಿರುವ ಶತ್ರುವನ್ನು ವಿಮಾನದಲ್ಲಿ ತೋರಿಸಿದನು. ಅವನನ್ನು ನೋಡಿ ಅವನ ಪರೋಕ್ಷದಲ್ಲಿ ವಿಶ್ವಭೂಮಂತ್ರಿಯು ಇಲ್ಲಿ ತಾನೇ ದೇಶಕ್ಕೆ ಅಧಿಪತಿಯಾಗಿ ಮಹಾಯಾಗದಲ್ಲಿ ಪ್ರಯತ್ನಮಾಡಿದನು. ಆಕಾಶಪ್ರದೇಶದಲ್ಲಿ ವಿಮಾನದೊಳಗಿರುವ ದೇವರ್ಕಳೂ ಮಹಾಕಾಲನ ಮಾಯೆಯಿಂದ ಎಲ್ಲರಿಗೂ ವ್ಯಕ್ತವಾಗಿ ತೋರಿಸಲ್ಪಟ್ಟರು. ''ಮಂತ್ರಿಯೇ ! ಪುಣ್ಯವಂತನಾದ ನೀನು ಮಹಾಮೇಧಯಾಗವನ್ನು ಮಾಡಿದೆ'' ಎಂದು ವಿಶ್ವಭೂಮಂತ್ರಿಯನ್ನು ಎಲ್ಲರೂ ಸೇರಿ ಸ್ತುತಿಸಿದರು. ಆಗ ನಾರದನೂ ತಪಸ್ವಿಗಳೂ ಇದನ್ನು ಕೇಳಿ ''ದುರಾತ್ಮನಾದ ಈ ಶತ್ರುವು ಲೋಕಕ್ಕೆ ಈ ರೀತಿಯಾಗಿ ದುರ್ಮಾರ್ಗವನ್ನು ಪ್ರಕಾಶಪಡಿಸಿದನು. ಧಿಕ್ಕಾರ ! ಪಾಪಕಾರ್ಯದಲ್ಲಿ ಪಂಡಿತನಾದ ಇವನನ್ನು ಯಾವುದಾದರೂ ಉಪಾಯದಿಂದ ತಡೆಯಬೇಕು'' ಎಂದು ಎಲ್ಲರೂ ಸೇರಿ ಅಯೋಧ್ಯಾನಗರಕ್ಕೆ ಬಂದು ವಿಧಿಪ್ರಕಾರವಾಗಿ ಮಂತ್ರಿಯನ್ನು ನೋಡಿ ''ಮಂತ್ರಿಯೆ ! ಪಾಪಿಗಳಾದ ಮನುಷ್ಯರು ಅರ್ಥಕಾಮ ಪುರುಷಾರ್ಥಗಳಿಗೋಸ್ಕರ ಹೆಚ್ಚಾಗಿ ಪ್ರಾಣಿಗಳ ವಧೆಯನ್ನು ಮಾಡುತ್ತಾರೆ. ಧರ್ಮಕ್ಕೋಸ್ಕರ ಪ್ರಾಣಿಗಳ ಘಾತಕರು ಎಲ್ಲಿಯೂ ಯಾರೂ ಇಲ್ಲ. ಬ್ರಹ್ಮನಿಂದ ಹೇಳಲ್ಪಟ್ಟಿರುವ ವೇದದಲ್ಲಿ ಅಹಿಂಸೆಯು ವೇದವಿದ್ವಾಂಸರಿಂದ ಕಲ್ಪಲತೆಯಂತೆಯೂ ತಾಯಿಯಂತೆಯೂ ಸಖಿಯಂತೆಯೂ ಜಗತ್ತಿಗೆ ಹಿತವಾದುದೆಂದು ಹೇಳಲ್ಪಟ್ಟಿದೆ. ಪೂರ್ವದ ಋಷಿಗಳ ವಾಕ್ಯಕ್ಕೆ ಪ್ರಾಮಾಣ್ಯವನ್ನಿಚ್ಛಿಸುವ ನಿನ್ನಿಂದ ವಧರೂಪವೂ ಕರ್ಮಕ್ಕೆ ಕಾರಣವೂ ಆದ ಈ ಹಿಂಸಾಕಾರಣವು ತ್ಯಜಿಸಲ್ಪಡತಕ್ಕುದಾಗಿದೆ.'' ಈ ರೀತಿಯಾಗಿ ಸಕಲಪ್ರಾಣಿಗಳಿಗೆ ಹಿತವನ್ನು ಬಯಸುವ ತಪಸ್ವಿಗಳು ಹೇಳಿದರು. ವಿಶ್ವಭೂಮಂತ್ರಿಯು ಈ ಮಾತನ್ನು ಕೇಳಿ '' ಎಲೈ ತಪಸ್ವಿಗಳೆ ! ನಾನು ಪ್ರತ್ಯಕ್ಷವಾಗಿ ನೋಡಿದ ಸ್ವರ್ಗದ ಸಾಧನವನ್ನು ಅಲ್ಲಗಳೆಯಲು ಹೇಗೆ ಶಕ್ಯವಾಗುವುದು ?'' ಎಂದು ಹೇಳುವವನಾಗಿ ಪಾಪಭೀತನಾದ ನಾರದನಿಂದ ಪುನಃ ''ಮಂತ್ರಿಶ್ರೇಷ್ಠನೆ ! ನೀನು ಪ್ರಾಜ್ಞ. ಇದು ಸ್ವರ್ಗಸಾಧನವೇ ? ಪರಿವಾರ ಸಹಿತನಾದ ಸಗರನನ್ನು ನಿರ್ಮೂಲಮಾಡುವುದಕ್ಕೋಸ್ಕರ ಇಚ್ಛಿಸುವ ಯಾವನೋ ಕುಹಕಜ್ಞನು ಮೂರ್ಖರಿಗೆ ಮೋಹಕ್ಕೆ ಕಾರಣವೂ ಹೀಗೆ ಪ್ರತ್ಯಕ್ಷಫಲವನ್ನು ತೋರಿಸುವುದೂ ಆದ ಉಪಾಯವನ್ನು ಮಾಡಿದನು. ಆದುದರಿಂದ ಋಷಿಪ್ರಣೀತವಾದ ಆಗಮದಲ್ಲಿ ಹೇಳಲ್ಪಟ್ಟಿರುವ ಶೀಲೋಪವಾಸಾದಿ ವಿಧಿಯನ್ನು ಆಚರಿಸು'' ಎಂದು ಮಂತ್ರಿಗೆ ಹೇಳಿದನು. ಆಗ ಆ ಮಂತ್ರಿಯು ಆ ಪರ್ವತನನ್ನು ಕುರಿತು ''ನಾರದನು ಹೇಳಿದುದನ್ನು ನೀನು ಕೇಳಿದೆಯಾ ?'' ಎಂದು ಹೇಳಿದನು. ಮಹಾಕಾಲಾಸುರನಿಂದ ಹೇಳಲ್ಪಟ್ಟ ಶಾಸ್ತ್ರದಿಂದ ಮೋಹಿತನಾದ ಈ ದುರ್ಮತಿ–ಪರ್ವತನು ''ನಾರದನೂ ಮೊದಲು ಇದನ್ನು ಕೇಳಿಲ್ಲವೇನು ?ನನಗೂ ಇವನಿಗೂ ನನ್ನ ತಂದೆಯೇ ಗುರು. ಬೇರೆಯವನಲ್ಲ. ಬಹುಗರ್ವಿತನಾದ ಇವನು ಆಗಲೂ ನನ್ನಲ್ಲಿ ಮತ್ಸರವುಳ್ಳವನಾಗಿದ್ದನು. ಈಗೇನು ಹೇಳಲ್ಪಡುತ್ತದೆ ? ನನ್ನ ತಂದೆಯ ಧರ್ಮಭ್ರಾತೃವೂ ಜಗತ್ತಿನಲ್ಲಿ ಪ್ರಖ್ಯಾತನೂ ಆದ ಮುದುಕನು ಉತ್ತಮಶಾಸ್ತ್ರಜ್ಞನಾಗಿದ್ದಾನೆ. ಶ್ರುತಿಸಂಬಂಧವಾದ ರಹಸ್ಯವು ಅವನಿಂದ ಹೇಳಲ್ಪಟ್ಟಿದೆ. ಯಾಗದಲ್ಲಿ ಮೃತ್ಯುವಿನ ಫಲವನ್ನು ನಾನೂ ಸಾಕ್ಷಾತ್ತಾಗಿ ಪ್ರಕಟಿಸಿದೆನು. ನಿನಗೆ ನಂಬಿಗೆಯಿಲ್ಲವಾದರೆ ಸಮಸ್ತವೇದವೆಂಬ ಸಮುದ್ರದ ಪಾರವನ್ನು ಹೊಂದಿರುವವನೂ ಸತ್ಯದಿಂದ ಪ್ರಸಿದ್ಧನೂ ಆದ ವಸುಮಹಾರಾಜನನ್ನು ಕೇಳು'' ಎಂದು ಮಾತನಾಡಿದನು. ಆ ಮಾತನ್ನು ಕೇಳಿ ನಾರದನು ''ತಪ್ಪೇನು ?ಈ ವಸುವು ಕೇಳಲ್ಪಡಲಿ. ಇದಾದರೋ ವಿಚಾರಾರ್ಹವಾಗಿದೆ. ಪ್ರಾಣಿವಧೆಯು ಧರ್ಮಸಾಧನವಾದರೆ ಅಹಿಂಸಾದಾನಶೀಲವೇ ಮೊದಲಾದುದು ಪಾಪಸಾಧನವಾಗಬೇಕು. ಆಗಲಿಯೆಂದರೆ ಗಾಳ ಮೊದಲಾದುವುಗಳನ್ನು ಮಾಡುವ ಪಾಪಿಗಳಿಗೆ ಉತ್ಕೃಷ್ಟವಾದ ಗತಿಯಾಗಬೇಕು. ಸತ್ಯವೂ ಧರ್ಮವೂ ತಪಸ್ಸೂ ಉಳ್ಳ ಬ್ರಹ್ಮಚಾರಿಗಳು

ಅಧೋಗತಿಯನ್ನು ಹೊಂದುತ್ತಾರೆ. 'ಯಜ್ಞದಲ್ಲಿ ಪಶುವಧೆಯಿಂದ ಧರ್ಮವಾಗುವುದು. ಬೇರೆಕಡೆಯಲ್ಲಿ ಧರ್ಮವಾಗುವುದಿಲ್ಲ' ಎನ್ನುವುದಾದರೆ ಅದು ಸರಿಯಲ್ಲ. ವಧೆಯು ಉಭಯತ್ರ ಸಮಾನವಾಗಿ ದುಃಖಹೇತುವಾಗಿರುವುದರಿಂದ ಫಲವೂ ಸಮಾನವಾಗಿಯೇ ಆಗಬೇಕು. ಅದನ್ನು ನಿಷೇಧಿಸುವವನಾವನು ?ಆಮೇಲೆ ನೀನು ಹೀಗೆ ತಿಳಿಯಬಹುದು-ಬ್ರಹ್ಮನ ಪಶುಸೃಷ್ಟಿಯು ಯಜ್ಞಕ್ಕೋಸ್ಕರವಾಗಿರುವುದರಿಂದ ಪಶುವನ್ನು ಯಜ್ಞಕ್ಕೆ ವಿನಿಯೋಗಿಸುವವನಿಗೆ ಪಾಪವು ಬರುವುದಿಲ್ಲವೆಂಬುದಿದು ಸಾಧುಗಳಿಂದ ದೂಷಿತವಾದ ಮೂರ್ಖರ ಅಭಿಲಾಷೆಯಾಗಿರುವುದು. ಯಾಗನಿಮಿತ್ತವಾದ ಪಶುಸೃಷ್ಟಿಗೆ ಸಮೀಚೀನತೆಯಿರುವುದರಿಂದ ಈ ವಿಷಯದಲ್ಲಿ ಬೇರೆಯೂ ದುರ್ಘಟನೆಯಿದೆ. ಯಾವುದಕ್ಕೋಸ್ಕರ ಯಾವ ವಸ್ತುವು ನಿರ್ಮಿತವಾಗಿರುವುದೋ ಅದನ್ನು ಬೇರೆ ಕಾರ್ಯಕ್ಕೆ ಉಪಯೋಗಿಸಿದರೆ ಅದು ಪ್ರಯೋಜನಕಾರಿಯಾಗುವುದಿಲ್ಲ.

**ಯಥಾನ್ಯಥೋಪಯುಕ್ತಂ ಸತ್ ಶ್ಲೇಷ್ಮಾದಿಶಮನೌಷಧಮ್ ।**
**ಯಜ್ಞಾರ್ಥಪಶುಸರ್ಗೇಣ ಕ್ರಯವಿಕ್ರಯಣಾದಿಕಮ್ ॥ ೪೦೮ ॥**

**ತಥಾನ್ಯಥಾ ಪ್ರಯುಕ್ತಂ ತತ್ ಮಹಾದೋಷಾಯ ಕಲ್ಪತೇ ।**
**ದುರ್ಬಲಂ ವಾದಿನಂ ದೃಷ್ಟ್ವಾ ಬ್ರೂಮಸ್ತ್ವಾಮಭ್ಯುಪೇತ್ಯ ಚ ॥ ೪೦೯ ॥**

ಶ್ಲೇಷ್ಮಾದಿರೋಗೋಪಶಮನದ ಔಷಧವೂ ಬೇರೆ ರೀತಿಯಾಗಿ ಉಪಯೋಗಿಸಿದಾಗ ಹೇಗೆ ಕೆಡುಕನ್ನು ಮಾಡುವುದೋ ಹಾಗೆ ಯಜ್ಞಕ್ಕೋಸ್ಕರವಾದ ಪಶುಸೃಷ್ಟಿಯಿಂದ ಕೊಳ್ಳುವುದು ಮಾರುವುದೇ ಮೊದಲಾದ ಕಾರ್ಯವು ಬೇರೆ ರೀತಿಯಾಗಿ ಪ್ರಯೋಗಿಸಿದಾಗ ದೋಷಕ್ಕೆ ಕಾರಣವಾಗುವುದು. ದುರ್ಬಲವಾದಿಯಾದ ನಿನ್ನನ್ನು ನೋಡಿ ಮತ್ತು ಹೊಂದಿ ಹೇಳುತ್ತೇವೆ.

**ಯಥಾ ಶಸ್ತ್ರಾದಿಭಿಃ ಪ್ರಾಣಿವ್ಯಾಪಾದೀ ಬಧ್ಯತೇಂಹಸಾ ।**
**ಮಂತ್ರೈರಪಿ ಪಶೂನ್ ಹತ್ವಾ ಬಧ್ಯತೇ ನಿರ್ವಿಶೇಷತಃ ॥ ೪೧೦ ॥**

ಶಸ್ತ್ರಾದಿಗಳಿಂದ ಪ್ರಾಣಿಹಿಂಸಕನು ಪಾಪದಿಂದ ಬಂಧಿಸಲ್ಪಡುವಂತೆ ಮಂತ್ರಗಳಿಂದಲೂ ಪಶುಗಳನ್ನು ಕೊಂದುಯಾಜಕನು ವಿಶೇಷವಿಲ್ಲದೆ ಪಾಪದಿಂದ ಬಂಧಿಸಲ್ಪಡುತ್ತಾನೆ.

**ಪಶ್ವಾದಿಲಕ್ಷಣಃ ಸರ್ಗೋ ವ್ಯಜ್ಯತೇ ಕ್ರಿಯತೇಥವಾ ।**
**ಕ್ರಿಯತೇ ಚೇತ್ಖಪುಷ್ಪಾದಿ ಚಾಸನ್ನ ಕ್ರಿಯತೇ ಕುತಃ ॥ ೪೧೧ ॥**

ಬ್ರಹ್ಮನು ಪಶುವೇ ಮೊದಲಾದ ಲಕ್ಷಣವುಳ್ಳ ಸೃಷ್ಟಿಯನ್ನು ಅಭಿವ್ಯಕ್ತಮಾಡುತ್ತಾನೋ ? ನಿರ್ಮಿಸುತ್ತಾನೋ ? (ಮರೆಯಾಗಿರುವುದನ್ನು ವ್ಯಕ್ತಮಾಡುತ್ತಾನೋ ? ಇಲ್ಲದುದನ್ನು ಹೊಸದಾಗಿ ನಿರ್ಮಾಣಮಾಡುತ್ತಾನೊ ? ಎಂದು ಭಾವವು) ಹೊಸದಾಗಿ ನಿರ್ಮಿಸುತ್ತಾನಾದರೆ ಇಲ್ಲದಿರುವ ಆಕಾಶಪುಷ್ಪಾದಿಗಳನ್ನೂ ಏಕೆ ನಿರ್ಮಿಸುವುದಿಲ್ಲ ?

**ಅಥಾಭಿವ್ಯಜ್ಯತೇ ತಸ್ಯ ವಾಚ್ಯಂ ಪ್ರಾಕ್ಪ್ರತಿಬಂಧಕಮ್ ।**
**ಪ್ರದೀಪಜ್ವಲನಾತ್ಪೂರ್ವಂ ಘಟಾದೇರಂಧಕಾರವತ್ ॥ ೪೧೨ ॥**

ಅಥವಾ ಅಭಿವ್ಯಕ್ತಮಾಡುತ್ತಾನಾದರೆ, ಪ್ರದೀಪಜ್ವಲನಕ್ಕಿಂತ ಮೊದಲು ಘಟಾದಿ ಪದಾರ್ಥಗಳಿಗೆ ಅಂಧಕಾರವು ಪ್ರತಿಬಂಧಕವಾಗಿರುವಂತೆ, ಪಶುಗಳ ಅಭಿವ್ಯಕ್ತಿಗೆ ಮೊದಲು ಪ್ರತಿಬಂಧಕವಾಗಿದ್ದುದಾವುದೆಂದು ಹೇಳಬೇಕು.

**ಅಸ್ತು ನಾನಾವೃತವ್ಯಕ್ತಿಃ ಸೃಷ್ಟಿವಾದೋಪಿ ಹೀಯತೇ ।**
**ಇತಿ ಶ್ರುತ್ವಾ ವಚಃ ಸರ್ವೇ ತಸ್ಯ ತೇ ತಂ ಸಮಸ್ತುವನ್ ॥ ೪೧೩ ॥**

ಮರೆಯಾಗಿಲ್ಲದಿರುವ ಪಶು ಮೊದಲಾದುವುಗಳ ಅಭಿವ್ಯಕ್ತಿಯೇ ಇರಲಿಯೆಂದರೆ ಅವುಗಳನ್ನು ಸೃಷ್ಟಿಸುತ್ತಾನೆಂಬ ವಾದವು ನಾಶವಾಗುವುದು." ಈ ರೀತಿಯಾದ ನಾರದನ ಮಾತನ್ನು ಕೇಳಿ ಆ ಸಭಾಸದರೆಲ್ಲರೂ ಅವನನ್ನು ಹೊಗಳಿದರು.

**ವಸುನಾ ಚೇದ್ದ್ವಯೋರ್ವಾದವಿಚ್ಛೇದಃ ಸೋಭಿಗಮ್ಯತಾಮ್ ।**
**ಇತಿ ತಾಭ್ಯಾಂ ಸಮಂ ಸಂಸದಗಚ್ಛತ್ಸ್ವಸ್ತಿಕಾವತೀಮ್ ॥ ೪೧೪ ॥**

"ವಸುರಾಜನು ಇಬ್ಬರ ವಾದನಿವೃತ್ತಿಯನ್ನು ಮಾಡುತ್ತಾನಾದರೆ ಅವನ ಬಳಿಗೆ ಹೋಗೋಣ" ಎಂದು ಆ ಪರ್ವತನಾರದರೊಡನೆ ಸಭೆಯು ಸ್ವಸ್ತಿಕಾವತಿಗೆ ಹೋಯಿತು.

**ತತ್ಸರ್ವಂ ಪರ್ವತೇನೋಕ್ತಂ ಜ್ಞಾತ್ವಾ ತಜ್ಜನನೀ ತದಾ ।**
**ಸಹ ತೇನ ವಸುಂ ದೃಷ್ಟ್ವಾ ಪರ್ವತಸ್ತ್ವತ್ಪರಿಗ್ರಹಃ ॥ ೪೧೫ ॥**

**ತಪೋವನೋನ್ಮುಖೇನಾಯಂ ಗುರುಣಾಪಿ ತವಾರ್ಪಿತಃ ।**
**ನಾರದೇನ ಸಹಾಸ್ಯೇಹ ತವಾಧ್ಯಕ್ಷೇ ಭವಿಷ್ಯತಿ ॥ ೪೧೬ ॥**

**ವಿವಾದೋ ಯದಿ ಭಂಗೋತ್ರ ಭಾವೀ ಭಾವಿ ಯಮಾನನಮ್ ।**
**ವಿದ್ಧ್ಯಸ್ಯ ಶರಣಂ ನಾನ್ಯದಿತ್ಯಾಖ್ಯತ್ಸೋಪಿ ಸಾದರಮ್ ॥ ೪೧೭ ॥**

**ವಿಧಿತ್ಸುರ್ಗುರುಶುಶ್ರೂಷಾಮಂಬ ಮಾಸ್ಮಾತ್ರ ಶಂಕಥಾಃ ।**
**ಜಯಮಸ್ಯ ವಿಧಾಸ್ಯಾಮೀತ್ಯಸ್ಯಾ ಭಯಮಪಾಕರೋತ್ ॥ ೪೧೮ ॥**

ಈ ಮೊದಲು ಪರ್ವತನು ಆ ವಿಷಯವನ್ನೆಲ್ಲ ತನ್ನ ತಾಯಿಗೆ ಹೇಳಿದ್ದನು. ಆಗ ಆಕೆಯು ಅವನೊಡನೆ ಹೋಗಿ ವಸುರಾಜನನ್ನು ಗುಟ್ಟಾಗಿ ಕಂಡು "ಪರ್ವತನು ನಿನಗೆ ಸೇರಿದವನು. ತಪೋವನಕ್ಕೆ ಅಭಿಮುಖನಾದ ಗುರುವೂ ಇವನನ್ನು ನಿನಗೆ ಅರ್ಪಿಸಿದ್ದಾನೆ. ಇಲ್ಲಿ ನಿನ್ನ ಸಮಕ್ಷಮದಲ್ಲಿ ನಾರದನೊಡನೆ ಇವನ ವಿವಾದವಾಗುವುದು. ಈ ವಾದದಲ್ಲಿ ಇವನಿಗೆ ಭಂಗ-ಅಪಜಯವಾದರೆ ಯಮನ ಬಾಯಿಯು ಇವನಿಗೆ ಶರಣವಾಗುವುದಲ್ಲದೆ ಬೇರೆಯಲ್ಲವೆಂದು ತಿಳಿ" ಎಂದು ವಸುರಾಜನಿಗೆ ಹೇಳಿದಳು. ಆ ವಸುರಾಜನೂ ಆದರಸಹಿತವಾಗಿ ಗುರುಶುಶ್ರೂಷೆಯನ್ನು ಮಾಡಲಿಚ್ಛೆಯುಳ್ಳವನಾಗಿ "ತಾಯಿಯೇ ! ಈ ವಿಷಯದಲ್ಲಿ ಸಂದೇಹಪಡಬೇಡ. ಇವನಿಗೆ ಜಯವನ್ನುಂಟುಮಾಡುವೆನು." ಎಂದು ಹೇಳಿ ಆಕೆಯ ಭಯವನ್ನು ಹೋಗಲಾಡಿಸಿದನು.

**ಅನ್ಯೇದ್ಯುರ್ವಸುಮಾಕಾಶಸ್ಫಟಿಕಾಂಘ್ರ್ಯುದ್ಧೃತಾಸನಮ್ ।**
**ಸಿಂಹಾಂಕಿತಂ ಸಮಾರುಹ್ಯ ಸ್ಥಿತಂ ಸಮುಪಗಮ್ಯ ತೇ ॥ ೪೧೯ ॥**

**ಸಂಪ್ರಚ್ಛಂತಿ ಸ್ಮ ಸರ್ವೇಪಿ ವಿಶ್ವಭೂಶಚಿವಾದಯಃ ।**
**ತ್ವತ್ತಃ ಪ್ರಾಗಪ್ಯಹಿಂಸಾದಿಧರ್ಮರಕ್ಷಣತತ್ಪರಾಃ ॥ ೪೨೦ ॥**

**ಚತ್ವಾರೋತ್ರ ಮಹೀಪಾಲಾ ಭೂತಾ ಹಿಮಮಹಾಸಮ- ।**
**ವಸ್ವಾದಿಗಿರಿಪರ್ಯಂತನಾಮಾನೋ ಹರಿವಂಶಜಾಃ ॥ ೪೨೧ ॥**

**ಪರೇ ಚೈಷು ವ್ಯತೀತೇಷು ವಿಶ್ವಾವಸುಮಹಾಮಹೀಟ್ ।**
**ಅಭೂತ್ತತೋ ಭವಾಂಶ್ಚಾಸೀದಹಿಂಸಾಧರ್ಮರಕ್ಷಕಃ ॥ ೪೨೨ ॥**

ಇನ್ನೊಂದು ದಿವಸ ಸಿಂಹಾಂಕಿತವೂ ಆಕಾಶಸ್ಫಟಿಕದ ಕಾಲುಗಳಿಂದ ಧರಿಸಲ್ಪಟ್ಟುದೂ ಆದ ಆಸನವನ್ನೇರಿರುವ ವಸುರಾಜನನ್ನು ಕಂಡು ವಿಶ್ವಭೂಮಂತ್ರಿಯೇ ಮೊದಲಾದ ಅವರೆಲ್ಲರೂ "ವಸುರಾಜನೆ ! ನಿನಗಿಂತ ಮೊದಲೂ ಇಲ್ಲಿ ಅಹಿಂಸಾದಿಧರ್ಮರಕ್ಷಣತತ್ಪರರೂ ಹಿಮಗಿರಿ ಮಹಾಗಿರಿ ಸಮಗಿರಿ ವಸುಗಿರಿಗಳೆಂದು ಹೆಸರುಳ್ಳವರೂ ಹರಿವಂಶೋತ್ಪನ್ನರೂ ಆದ ನಾಲ್ಕುಮಂದಿ ದೊರೆಗಳೂ ಬೇರೆಯವರೂ ಇದ್ದರು. ಇವರುಗಳು ಕಾಲಾಧೀನರಾದಮೇಲೆ ವಿಶ್ವಾವಸು ಮಹಾರಾಜನಾದನು. ಬಳಿಕ ನೀನೂ ಅಹಿಂಸಾಧರ್ಮರಕ್ಷಕನಾದೆ.

**ತ್ವಮೇವ ಸತ್ಯವಾದೀತಿ ಪ್ರಘೋಷೋ ಭುವನತ್ರಯೇ ।**
**ವಿಷವಹ್ನಿತುಲಾದೇಶ್ಯೋ ವಸ್ತುಸಂದೇಹಸನ್ನಿಧೌ ॥ ೪೨೩ ॥**

ನೀನೇ ಸತ್ಯವನ್ನು ಹೇಳುವವನೆಂದು ಮೂರು ಲೋಕದಲ್ಲಿ ಪ್ರಖ್ಯಾತಿಯಿದೆ. ವಸ್ತುವಿನ ಸಂದೇಹವುಂಟಾದಲ್ಲಿ ನೀನು ವಿಷದ ಬೆಂಕಿಯ ಮತ್ತು ತಕ್ಕಡಿಯ

ಸ್ಥಾನದಲ್ಲಿರುವವನಾಗಿರುತ್ತಿ (ಮನುಷ್ಯನ ಸತ್ಯಪರೀಕ್ಷೆಗಾಗಿ ಅವನಿಗೆ ವಿಷವನ್ನು ತಿನ್ನಿಸಿ ನೋಡುವುದೂ ಅಗ್ನಿಯ ಸ್ಪರ್ಶವನ್ನು ಮಾಡಿಸಿ ನೋಡುವುದೂ ವಸ್ತುವಿನ ಹೆಚ್ಚುಕಡಮೆಯನ್ನು ಪರೀಕ್ಷಿಸುವುದಕ್ಕಾಗಿ ತಕ್ಕಡಿಯಲ್ಲಿ ತೂಕಮಾಡುವುದೂ ಪ್ರಸಿದ್ಧವಾಗಿದೆ).

**ತ್ವಮೇವ ಪ್ರತ್ಯಯೋತ್ಪಾದೀ ಛಿಂದಿ ನಃ ಸಂಶಯಂ ವಿಭೋ ।**
**ಅಹಿಂಸಾಲಕ್ಷಣಂ ಧರ್ಮಂ ನಾರದಃ ಪ್ರತ್ಯಪದ್ಯತ ॥ ೪೨೪ ॥**

**ಪರ್ವತಸ್ತದ್ವಿಪರ್ಯಾಸಮುಪಾಧ್ಯಾಯೋಪದೇಶನಮ್ ।**
**ಯಾದೃಕ್ತಾದೃಕ್ತ್ವಯಾ ವಾಚ್ಯಮಿತ್ಯಸೌ ಚಾರ್ಥಿತಃ ಪುರಾ ॥ ೪೨೫ ॥**

**ಗುರುಪತ್ನ್ಯಾಪ್ತನಿರ್ದಿಷ್ಟಂ ಬುದ್ಧ್ಯಮಾನೋಪಿ ಭೂಪತಿಃ ।**
**ಮಹಾಕಾಲಮಹಾಮೋಹೇನಾಹಿತೋ ದುಃಷಮಾವಧೇಃ ॥ ೪೨೬ ॥**

**ಸಾಮೀಪ್ಯಾದ್ರಕ್ಷಣಾನಂದರೌದ್ರಧ್ಯಾನಪರಾಯಣಃ ।**
**ಪರ್ವತಾಭಿಹಿತಂ ತತ್ತ್ವಂ ದೃಷ್ಟೇ ಕಾನುಪಪನ್ನತಾ ॥ ೪೨೭ ॥**

**ಸ್ವರ್ಗಮಸ್ಯೈವ ಯೋಗೇನ ಸಜಾನಿಃ ಸಗರೋಪ್ಯಗಾತ್ ।**
**ಜ್ವಲತ್ಪ್ರದೀಪಮನ್ಯೇನ ಕೋ ದೀಪೇನ ಪ್ರಕಾಶಯೇತ್ ॥ ೪೨೮ ॥**

**ಪರ್ವತೋಕ್ತಂ ಭಯಂ ಹಿತ್ವಾ ಕುರುಧ್ವಂ ಸ್ವರ್ಗಸಾಧನಮ್ ।**
**ಇತಿ ಹಿಂಸಾನೃತಾನಂದಬದ್ಧಾಯುರ್ನಾರಕಂ ಪ್ರತಿ ॥ ೪೨೯ ॥**

**ಮಿಥ್ಯಾ ಪಾಪಾಪವಾದಾಭ್ಯಾಮಭೀರುರಭಣೀದಿದಮ್ ।**
**ಅಹೋ ಮಹೀಪತೇರ್ವಕ್ತ್ರಾದಪೂರ್ವಂ ಘೋರಮೀದೃಶಮ್॥ ೪೩೦ ॥**

**ನಿರ್ಯಾತಮಿತಿ ವೈಷಮ್ಯಾದುಕ್ತೇ ನಾರದತಾಪಸೈಃ ।**
**ಆಕ್ರೋಶದಂಬರಂ ನದ್ಯಃ ಪ್ರತಿಕೂಲಜಲಸ್ರವಾಃ ॥ ೪೩೧ ॥**

**ಸದ್ಯಃ ಸರಾಂಸಿ ಶುಷ್ಕಾಣಿ ರಕ್ತವೃಷ್ಟಿರನಾರತಾ ।**
**ತೀವ್ರಾಂಶೋರಂಶವೋ ಮಂದಾ ವಿಶ್ವಾಶ್ಚಾಶಾ ಮಲೀಮಸಾಃ ॥ ೪೩೨ ॥**

**ಬಭೂವುಃ ಪ್ರಾಣಿನಃ ಕಂಪಮಾದಧುರ್ಭಯವಿಹ್ವಲಾಃ ।**
**ತದಾ ಮಹಾಧ್ವನಿರ್ಧಾತ್ರೀ ದ್ವಿಧಾ ಭೇದಮುಪಾಗತಾ ॥ ೪೩೩ ॥**

**ವಸೋಸ್ತಸ್ಮಿನ್ಮಹೀರಂಧ್ರೇ ನ್ಯಮಜ್ಜತ್ಸಿಂಹವಿಷ್ಟರಮ್ ।**
**ತದ್ದೃಷ್ಟ್ವಾ ದೇವವಿದ್ಯಾಧರೇಶಾ ಘನಪಥೇ ಸ್ಥಿತಾಃ ॥ ೪೩೪ ॥**

**ಅತಿಕ್ರಮ್ಯಾದಿಮಂ ಮಾರ್ಗಂ ವಸುರಾಜ ಮಹಾಮತೇ ।**
**ಧರ್ಮವಿಧ್ವಂಸನಂ ಮಾರ್ಗಂ ಮಾಭಿಧಾ ಇತ್ಯಘೋಷಯನ್॥ ೪೩೫ ॥**

ಪ್ರಭುವೇ ! ನೀನೇ ನಂಬಿಕೆಯನ್ನುಂಟುಮಾಡುವವನು. ನಮ್ಮಗಳ ಸಂಶಯವನ್ನು ನಾಶಮಾಡು. ನಾರದನು ಅಹಿಂಸಾಲಕ್ಷಣವುಳ್ಳ ಧರ್ಮವನ್ನು ಪ್ರತಿಪಾದಿಸಿದನು. ಪರ್ವತನು ಅದಕ್ಕೆ ವಿರುದ್ಧವಾದ–ವಧೆಯನ್ನು ಗುರೂಪದೇಶವನ್ನಾಗಿ ಪ್ರತಿಪಾದಿಸಿದನು. ಎಂತಹದು ಧರ್ಮವೋ ಅಂತಹ ಧರ್ಮವನ್ನು ನೀನು ಹೇಳಬೇಕು'' ಎಂದು ಹೇಳಿದರು. ಮೊದಲು ತನ್ನ ಗುರುಪತ್ನಿಯಿಂದ ಪ್ರಾರ್ಥಿಸಲ್ಪಟ್ಟಿದ್ದ ಈ ವಸುಮಹಾರಾಜನು ಆಪ್ತನಿಂದ ತೋರಿಸಲ್ಪಟ್ಟ ಧರ್ಮವನ್ನು ತಿಳಿದವನಾದರೂ ಮಹಾಕಾಲಾಸುರನೆಂಬ ಮಹಾಮೋಹವುಳ್ಳವನೂ ದುಃಷಮವೆಂಬ ಪಂಚಮಕಾಲದ ಎಲ್ಲೆಯು ಸಮೀಪಿಸಿರುವುದರಿಂದ ಪರಿಗ್ರಹರಕ್ಷಣಾನಂದವೆಂಬ ರೌದ್ರಧ್ಯಾನದಲ್ಲಿ ಆಸಕ್ತನೂ ಆಗಿ ''ಪರ್ವತನಿಂದ ಹೇಳಲ್ಪಟ್ಟಿರುವುದು ಯಥಾರ್ಥವಾದುದು. ಪ್ರತ್ಯಕ್ಷ ವಿಷಯದಲ್ಲಿ ಅಸಂಗತತ್ವವೇನಿದೆ ? ಸಗರಮಹಾರಾಜನೂ ಪತ್ನೀಸಹಿತನಾಗಿ ಈ ಹಿಂಸಾಯಜ್ಞದ ಸಂಬಂಧದಿಂದಲೇ ಸ್ವರ್ಗಕ್ಕೆ ಹೋದನು. ಉರಿಯುತ್ತಿರುವ ದೀಪವನ್ನು ಮತ್ತೊಂದು ದೀಪದಿಂದ ಯಾವನು ಪ್ರಕಾಶಪಡಿಸುವನು ?ಸ್ವರ್ಗಕ್ಕೆ ಸಾಧನವಾದ ಮತ್ತು ಪರ್ವತನು ಹೇಳಿದ ಕಾರ್ಯವನ್ನು ಭಯವನ್ನು ಬಿಟ್ಟು ಮಾಡಿರಿ'' ಎಂದು ಹಿಂಸಾನಂದ ಅನೃತಾನಂದ ರೂಪವಾದ ರೌದ್ರಧ್ಯಾನಗಳಿಂದ ಬದ್ಧವಾದ ನರಕಾಯುಷ್ಯವುಳ್ಳವನೂ ಪಾಪದಿಂದಲೂ ಅಪವಾದದಿಂದಲೂ ಹೆದರದಿರುವವನೂ ಆಗಿ ಈ ಮಿಥ್ಯಾವಚನವನ್ನು ಹೇಳಿದನು. ಆಗ ನಾರದನಿಂದಲೂ ತಪಸ್ವಿಗಳಿಂದಲೂ ''ಅಹಾ ! ದೊರೆಯ ಮುಖದಿಂದ ಅಪೂರ್ವವೂ ಭಯಂಕರವೂ ಆದ ಇಂತಹ ಮಾತು ವೈಷಮ್ಯದಿಂದ ಹೊರಟಿತು'' ಎಂದು ಹೇಳಲ್ಪಡುತ್ತಿರಲು ಆಕಾಶವೂ ಕೂಗಿತು. ನದಿಗಳು ಪ್ರತಿಕೂಲವಾಗಿ ಹರಿಯುವವುಗಳಾದುವು. ಆಗಲೇ ಸರೋವರಗಳು ಬತ್ತಿದುವು. ಸತತವಾಗಿ ರಕ್ತವೃಷ್ಟಿಯಾಯ್ತು. ಸೂರ್ಯನ ಕಿರಣಗಳು ಮಂದವಾದುವು. ಎಲ್ಲಾ ದಿಕ್ಕುಗಳು ಮಲಿನವಾದುವು. ಭಯದಿಂದ ಕಂಗೆಟ್ಟ ಪ್ರಾಣಿಗಳು ನಡುಗಿದುವು. ಭೂಮಿಯು ಮಹಾಶಬ್ದವುಳ್ಳುದಾಗಿ ಎರಡು ಭಾಗವಾಯಿತು. ವಸುರಾಜನ ಸಿಂಹಾಸನವು ಅವನೊಡನೆ ಆ ರಂಧ್ರದಲ್ಲಿ ಮುಳುಗಿತು. ಅದನ್ನು ನೋಡಿ ಆಕಾಶದಲ್ಲಿದ್ದ ದೇವರ್ಕಳೂ ವಿದ್ಯಾಧರರಾಜರುಗಳೂ ''ಮಹಾಮತಿಯಾದ ವಸುರಾಜನೆ ! ಸನಾತನವಾದ ಮಾರ್ಗವನ್ನು ಅತಿಕ್ರಮಿಸಿ ಧರ್ಮವಿಧ್ವಂಸಕವಾದ ಮಾರ್ಗವನ್ನು ಹೇಳಬೇಡ'' ಎಂದು ಘೋಷಿಸಿದರು.

**ಪರ್ವತಂ ವಸುರಾಜಂ ಚ ಸಿಂಹಾಸನನಿಮಜ್ಜನಾತ್ ।**
**ಪರಿಮ್ಲಾನಮುಖೌ ದೃಷ್ಟ್ವಾ ಮಹಾಕಾಲಸ್ಯ ಕಿಂಕರಾಃ ॥ ೪೩೬ ॥**

**ತಾಪಸಾಕಾರಮಾದಾಯ ಭಯಂ ಮಾಸ್ಮಾತ್ರ ಗಚ್ಛತಮ್ ।**
**ಇತ್ಯಾತ್ಮೋತ್ಥಾಪಿತಂ ವಾಭ್ಯದರ್ಶಯನ್ ಹರಿವಿಷ್ಟರಮ್ ॥ ೪೩೭ ॥**

ಸಿಂಹಾಸನವು ಮುಳುಗಿದುದರಿಂದ ಬಾಡಿದ ಮುಖವುಳ್ಳವರಾದ ಪರ್ವತನನ್ನೂ ವಸುರಾಜನನ್ನೂ ನೋಡಿ ಮಹಾಕಾಲಾಸುರನ ಭೃತ್ಯರು–ದೇವತೆಗಳು ತಾಪಸರ ಆಕಾರವನ್ನು ಸ್ವೀಕರಿಸಿ ಅವರಿಬ್ಬರನ್ನು ಕುರಿತು ''ಈ ವಿಷಯದಲ್ಲಿ ಭಯವನ್ನು ಹೊಂದಬೇಡಿರಿ'' ಎಂದು ಹೇಳಿ ಸಿಂಹಪೀಠವನ್ನು ತಾವು ಎತ್ತಿದಂತೆ ತೋರಿಸಿದರು.

**ನೃಪೋಪ್ಯಹಂ ಕಥಂ ತತ್ತ್ವವಿದ್ಬಿಭೇಮ್ಯಮೃಷಂ ವಚಃ ।**
**ಪರ್ವತಸ್ಯೈವ ನಿಶ್ಚಿನ್ವಂತ್ವಿತ್ಯಾಕಂಠಂ ನಿಮಗ್ನವಾನ್ ॥ ೪೩೮ ॥**

ಆಗ ವಸುರಾಜನೂ '' ಯಥಾರ್ಥವಿಷಯವನ್ನು ತಿಳಿದಿರುವ ನಾನು ಹೇಗೆ ಹೆದರುತ್ತೇನೆ ? ಪರ್ವತನ ಮಾತೇ ಸತ್ಯವೆಂದು ನಿಶ್ಚಯಿಸಿರಿ '' ಎಂದು ಹೇಳಿ ಕಂಠದವರೆಗೂ ಆ ಬಿಲದಲ್ಲಿ ಮುಳುಗಿದನು.

**ಅನೇನೇಯಮವಸ್ಥಾಭೂನ್ಮಿಥ್ಯಾವಾದೇನ ಭೂಪತೇಃ ।**
**ತ್ಯಜೇಮಾಮಿತಿ ಸಂಪ್ರಾರ್ಥಿತೋಪಿ ಯತ್ನೇನ ಸಾಧುಭಿಃ ॥ ೪೩೯ ॥**

**ತಥಾಪಿ ಯಜ್ಞಮೇವಾಜ್ಞಃ ಸನ್ಮಾರ್ಗಂ ಪ್ರತಿಪಾದಯನ್ ।**
**ಭುವಾ ಕುಪಿತಯೇವಾಸೌ ನಿಗೀರ್ಣೋಂತ್ಯಾಮಗಾತ್ಕ್ಷಿತಿಮ್ ॥ ೪೪೦ ॥**

''ಈ ಮಿಥ್ಯಾವಾದದಿಂದ ದೊರೆಗೆ ಈ ಅವಸ್ಥೆಯಾಯಿತು. ಈ ಹಿಂಸೆಯ ಮಾತನ್ನು ಬಿಡು'' ಎಂದು ವಸುರಾಜನು ಸಾಧುಪುರುಷರಿಂದ ಯತ್ನದಿಂದ ಚೆನ್ನಾಗಿ ಪ್ರಾರ್ಥಿಸಲ್ಪಟ್ಟವನಾದರೂ ಈ ಮೂರ್ಖನು ಹಿಂಸಾಯಜ್ಞವನ್ನೇ ಸನ್ಮಾರ್ಗವನ್ನಾಗಿ ಹೇಳುವವನಾಗಿ ಕುಪಿತವಾದ ಭೂಮಿಯಿಂದ ನುಂಗಲ್ಪಟ್ಟನೋ ಎನ್ನುವಂತೆ ಕೊನೆಯ ಭೂಮಿಯನ್ನು–ನರಕಭೂಮಿಯನ್ನು ಹೊಂದಿದನು.

**ಅಥಾಸುರೋ ಜಗತ್ಪತ್ಯಯಾಯಾದಾಯ ನರೇಂದ್ರಯೋಃ ।**
**ದಿವ್ಯರೂಪಮವಾಪಾವಾವಾಂ ಯಾಗೇ ಶ್ರದ್ಧಯಾ ದಿವಮ್ ॥ ೪೪೧ ॥**

**ನಾರದೋಕ್ತಮುಪಾಕರ್ಣ್ಯಮಿತ್ಯುಕ್ತ್ವಾಪದದೃಶ್ಯತಾಮ್ ।**
**ಶೋಕಾಶ್ಚರ್ಯವತಾಗಾತ್ಸ್ವರ್ವಸುರ್ನೋ ದುರ್ಮಹೀಮಿತಿ ॥ ೪೪೨ ॥**

**ಸ ವಿಸಂವದಮಾನೇನ ಜನೇನ ಮಹತಾ ಸಹ ।**
**ಪ್ರಯಾಗೇ ವಿಶ್ವಭೂರ್ಗತ್ವಾ ರಾಜಸೂಯವಿಧಿಂ ವ್ಯಧಾತ್ ॥ ೪೪೩ ॥**

ಅನಂತರದಲ್ಲಿ ಮಹಾಕಾಲಾಸುರನು ಲೋಕಕ್ಕೆ ವಿಶ್ವಾಸವನ್ನುಂಟುಮಾಡುವುದ ಕ್ಕೋಸ್ಕರ ಸಗರ ವಸುರಾಜರುಗಳ ದಿವ್ಯರೂಪವನ್ನು ಸ್ವೀಕರಿಸಿ "ನಾವುಗಳು ಯಾಗದಲ್ಲಿ ಶ್ರದ್ಧೆಯಿಂದ ನಾರದನು ಹೇಳಿದುದನ್ನು ತಿರಸ್ಕರಿಸಿ ಸ್ವರ್ಗವನ್ನು ಪಡೆದೆವು" ಎಂದು ಹೇಳಿ ಅದೃಶ್ಯನಾದನು. "ವಸುರಾಜನು ಸ್ವರ್ಗವನ್ನು ಸೇರಿದನು. ಇಲ್ಲ-ದುರ್ಗತಿಯನ್ನು ಪಡೆದನು" ಎಂದು ಒಬ್ಬರಿಗೊಬ್ಬರು ವಿವಾದ ಮಾಡುವವರೂ ಶೋಕವೂ ಆಶ್ಚರ್ಯವೂ ಉಳ್ಳವರೂ ಆದ ಮಹಾಜನರೊಡನೆ ಆ ವಿಶ್ವಭೂಮಂತ್ರಿಯು ಹೋಗಿ ಪ್ರಯಾಗದಲ್ಲಿ ರಾಜಸೂಯಯಾಗವಿಧಿಯನ್ನು ಮಾಡಿದನು.

**ಮಹಾಪುರಾಧಿಪಾದ್ಯಾಶ್ಚ ನಿಂದಂತೋ ಜನಮೂಢತಾಮ್ ।**
**ಪರಮಬ್ರಹ್ಮನಿರ್ದಿಷ್ಟಮಾರ್ಗರಕ್ತಾ ಮನಾಕ್ಸ್ಥಿತಾ ॥ ೪೪೪ ॥**

**ನಾರದೇನೈವ ಧರ್ಮಸ್ಯ ಮರ್ಯಾದೇತ್ಯಭಿನಂದ್ಯ ತಮ್ ।**
**ಅಧಿಷ್ಠಾನಮದುಸ್ತಸ್ಮೈ ಪುರಂ ಗಿರಿತಟಾಭಿಧಮ್ ॥ ೪೪೫ ॥**

ಮಹಾಪುರದ ರಾಜನೇ ಮೊದಲಾದವರೂ ಜನರ ಮೂರ್ಖತ್ವವನ್ನು ನಿಂದಿಸು ವವರಾಗಿಯೂ ಪರಬ್ರಹ್ಮ-ತೀರ್ಥಂಕರಪರಮದೇವರಿಂದ ಉಪದೇಶಿಸಲ್ಪಟ್ಟ ಧರ್ಮದಲ್ಲಿ ಆಸಕ್ತರಾಗಿಯೂ "ನಾರದನಿಂದಲೇ ಸ್ವಲ್ಪ ಧರ್ಮದ ಮರ್ಯಾದೆ ಯಿರುವುದಾಯಿತು" ಎಂದು ನಾರದನನ್ನು ಹೊಗಳಿ ಅವನಿಗೆ ಗಿರಿತಟವೆಂಬ ಪುರವನ್ನು ವಾಸಕ್ಕಾಗಿ ಕೊಟ್ಟರು.

**ತಾಪಸಾಶ್ಚ ದಯಾಧರ್ಮವಿಧ್ವಂಸವಿಧುರಾಶಯಾಃ ।**
**ಕಲಯಂತಃ ಕಲಿಂ ಕಾಲಂ ವಿಚೇಲುಃ ಸ್ವಂ ಸ್ವಮಾಶ್ರಯಮ್ ॥ ೪೪೬ ॥**

ದಯಾಮಯವಾದ ಧರ್ಮದ ನಾಶದಿಂದ ದೂರವಾಗಿರುವ ಭಾವವುಳ್ಳ ತಪಸ್ವಿಗಳೂ ಕಲಿಕಾಲವನ್ನು ಕಾರಣವನ್ನಾಗಿ ತಿಳಿಯುವವರಾಗಿ ತಂತಮ್ಮ ಸ್ಥಾನಗಳಿಗೆ ಹೋದರು.

**ತತೋಽನ್ಯೇದ್ಯುಃ ಖಗೋ ನಾಮ್ನಾ ದೇವೋ ದಿನಕರಾದಿಮಃ ।**
**ಪರ್ವತಸ್ಯಾಖಿಲಪ್ರಾಣಿವಿರುದ್ಧಾಚರಿತಂ ತ್ವಯಾ ॥ ೪೪೭ ॥**

**ನಿರುಧ್ಯತಾಮಿತಿ ಪ್ರೀತ್ಯಾ ನಿರ್ದಿಷ್ಟೋ ನಾರದೇನ ಸಃ ।**
**ಕರಿಷ್ಯಾಮಿ ತಥೇತೀತ್ವಾ ನಾಗಾನ್ ಗಾಂಧಾರಪನ್ನಗಾನ್ ॥ ೪೪೮ ॥**

**ಸ್ವವಿದ್ಯಯಾ ಸಮಾಹೂತಾಂಸ್ತತ್ಪ್ರಪಂಚಂ ಯಥಾಸ್ಥಿತಮ್ ।**
**ಅವೋಚತ್ತೇಽಪಿ ಸಂಗ್ರಾಮೇ ಭಂಕ್ತ್ವಾ ದೈತ್ಯಮಕುರ್ವತ ॥ ೪೪೯ ॥**

**ಯಜ್ಞವಿಘ್ನಂ ತದಾಲೋಕ್ಯ ವಿಶ್ವಭೂಪರ್ವತಾಹ್ವಯೌ ।**
**ಶರಣಾನ್ವೇಷಣೋದ್ಯುಕ್ತೌ ಮಹಾಕಾಲಂ ಯದೃಚ್ಛಯಾ ॥ ೪೫೦ ॥**

**ಪುರಃ ಸನ್ನಿಹಿತಂ ದೃಷ್ಟ್ವಾ ಯಾಗವಿಘ್ನಂ ತಮೂಚತುಃ ।**
**ನಾಗೈರ್ದ್ವೇಷಿಭಿರಸ್ಮಾಕಂ ವಿಹಿತೋಽಯಮುಪದ್ರವಃ ॥ ೪೫೧ ॥**

**ನಾಗವಿದ್ಯಾಶ್ಚ ವಿದ್ಯಾನುಪ್ರವಾದಪರಿಭಾಷಿತಾಃ ।**
**ನಿಷಿದ್ಧಂ ಜಿನಬಿಂಬಾನಾಮುಪರ್ಯಾಸಾಂ ವಿಜೃಂಭಣಮ್ ॥ ೪೫೨ ॥**

ಬಳಿಕ ಮತ್ತೊಂದು ದಿವಸ ನಾರದನು ದಿನಕರದೇವನೆಂಬ ಖೇಚರನನ್ನು ಕುರಿತು "ನೀನು ಪರ್ವತನ ಸಕಲಪ್ರಾಣಿಗಳಿಗೆ ವಿರುದ್ಧವಾದ ಆಚರಣೆಯನ್ನು ತಡೆಯಬೇಕು" ಎಂದು ಪ್ರೀತಿಯಿಂದ ಹೇಳಿದನು. ಅದಕ್ಕೆ ಅವನು ಒಪ್ಪಿ "ಹಾಗೆಯೇ ಮಾಡುವೆನು" ಎಂದು ಹೇಳಿ ಹೋಗಿ ಗಾಂಧಾರಪನ್ನಗರೆಂಬ ನಾಗದೇವರ್ಕಳನ್ನು ತನ್ನ ವಿದ್ಯೆಯಿಂದ ಆಹ್ವಾನಮಾಡಿ ಅದರ ವಿವರವನ್ನು ಇದ್ದ ಹಾಗೆಯೇ ಅವರಿಗೆ ಹೇಳಿದನು. ಆ ದೇವರ್ಕಳೂ ಯುದ್ಧದಲ್ಲಿ ಮಹಾಕಾಲಾಸುರನ ಕಡೆಯ ದೈತ್ಯನನ್ನು ಸೋಲಿಸಿ ಯಜ್ಞಕ್ಕೆ ವಿಘ್ನವನ್ನು ಮಾಡಿದರು. ಅದನ್ನು ನೋಡಿ ವಿಶ್ವಭೂಮಂತ್ರಿಯೂ ಪರ್ವತನೂ ಶರಣವನ್ನು ಹುಡುಕುವುದರಲ್ಲಿ ಉದ್ಯುಕ್ತರಾಗಿ ಅಕಸ್ಮಾತ್ತಾಗಿ ಮುಂದೆ ಸಮೀಪಿಸಿದ ಮಹಾಕಾಲನನ್ನು ನೋಡಿ ಅವನಿಗೆ ಯಾಗದ ವಿಘ್ನವನ್ನು ಹೇಳಿದರು. ಆ ಮಾತನ್ನು ಕೇಳಿ ಈ ಮಹಾಕಾಲನು "ನಮ್ಮ ದ್ವೇಷಿಗಳಾದ ನಾಗದೇವರ್ಕಳು ಈ ಉಪದ್ರವನ್ನು ಮಾಡಿದರು. ನಾಗವಿದ್ಯೆಗಳೂ ವಿದ್ಯಾನುವಾದದಲ್ಲಿ ಹೇಳಲ್ಪಟ್ಟಿವೆ. ಜಿನಬಿಂಬಗಳ ಮೇಲೆ ಈ ವಿದ್ಯೆಗಳ ವಿಜೃಂಭಣವು ತಡೆಯಲ್ಪಟ್ಟಿದೆ.

**ತತೋ ಯುವಾಂ ಜಿನಾಕಾರಾನ್ ಸುರೂಪಾನ್ ದಿಕ್ಚತುಷ್ಟಯೇ ।**
**ನಿವೇಶ್ಯಾಭ್ಯರ್ಚ್ಯ ಯಜ್ಞಸ್ಯ ಪ್ರಕ್ರಮೇಥಾಮಿಮಂ ವಿಧಿಮ್ ॥ ೪೫೩ ॥**

ಆದುದರಿಂದ ನೀವುಗಳು ಉತ್ತಮರೂಪವುಳ್ಳ ಜಿನಾಕಾರ-ಪ್ರತಿಮೆಗಳನ್ನು ನಾಲ್ಕು ದಿಕ್ಕುಗಳಲ್ಲಿರಿಸಿ ಅವುಗಳನ್ನು ಪೂಜಿಸಿ ಯಜ್ಞದ ಈ ವಿಧಿಯನ್ನು ಉಪಕ್ರಮಿಸಿರಿ."

**ಇತ್ಯುಪಾಯಮಸಾವಾಹ ತೌ ಚ ತಚ್ಚಕ್ರತುಸ್ತಥಾ ।**
**ಪುನಃ ಖಗಾಧಿಪೋಽಭ್ಯೇತ್ಯ ಯಜ್ಞವಿಘ್ನವಿಧಿತ್ಸಯಾ ॥ ೪೫೪ ॥**

**ದೃಷ್ಟ್ವಾ ಜೈನೇಂದ್ರಬಿಂಬಾನಿ ವಿದ್ಯಾಃ ಕ್ರಾಮಂತಿ ನಾತ್ರ ಮೇ ।**
**ನಾರದಾಯ ನಿವೇದ್ಯೇತಿ ಸ ಸ್ವಧಾಮ ಸಮಾಶ್ರಯತ್ ॥ ೪೫೫ ॥**

ಈ ರೀತಿಯಾಗಿ ಉಪಾಯವನ್ನು ಹೇಳಿದನು. ಆ ವಿಶ್ವಭೂಪರ್ವತರೂ ಅವನು ಹೇಳಿದಂತೆ ಆ ಕಾರ್ಯವನ್ನು ಮಾಡಿದರು. ಪುನಃ ಯಜ್ಞಕ್ಕೆ ವಿಘ್ನವನ್ನು ಮಾಡ ಬೇಕೆಂಬ ಇಚ್ಛೆಯಿಂದ ಆ ಖೇಚರಾಧಿಪತಿಯು ಬಂದು ಜಿನೇಶ್ವರ ಬಿಂಬಗಳನ್ನು ನೋಡಿ "ಇಲ್ಲಿ ನನ್ನ ವಿದ್ಯೆಗಳು ನಡೆಯುವುದಿಲ್ಲ" ಎಂದು ನಾರದನಿಗೆ ಹೇಳಿ ತನ್ನ ವಾಸಸ್ಥಾನಕ್ಕೆ ಹೋದನು.

**ನಿರ್ವಿಘ್ನಂ ಯಜ್ಞನಿರ್ವೃತ್ತೌ ವಿಶ್ವಭೂಃ ಪರ್ವತಶ್ಚ ತೌ ।**
**ಜೀವಿತಾಂತೇ ಚಿರಂ ದುಃಖಂ ನರಕೇಽನುಬಭೂವತುಃ ॥ ೪೫೬ ॥**

ನಿರ್ವಿಘ್ನವಾಗಿ ಯಜ್ಞವು ಪೂರ್ತಿಯಾಗುತ್ತಿರಲು ಆ ವಿಶ್ವಭೂಮಂತ್ರಿಯೂ ಪರ್ವತನೂ ಜೀವಿತಾಂತದಲ್ಲಿ ಸತ್ತು ನರಕದಲ್ಲಿ ಹುಟ್ಟಿ ಬಹುಕಾಲದವರೆಗೆ ದುಃಖವನ್ನನುಭವಿಸಿದರು.

**ಮಹಾಕಾಲೋಽಪ್ಯಭಿಪ್ರೇತಂ ಸಾಧಯಿತ್ವಾ ಸ್ವರೂಪಧೃತ್ ।**
**ಪ್ರಾಗ್ಭವೇ ಪೌದನಾಧೀಶೋ ನೃಪೋಽಹಂ ಮಧುಪಿಂಗಲಃ ॥ ೪೫೭ ॥**

**ಮಯೇದಂ ಸುಲಸಾಹೇತೋರ್ಮಹತ್ಪಾಪಮನುಷ್ಠಿತಮ್ ।**
**ಅಹಿಂಸಾಲಕ್ಷಣೋ ಧರ್ಮೋ ಜೈನೇಂದ್ರೈರಭಿಭಾಷಿತಃ ॥ ೪೫೮ ॥**

**ಅನುಷ್ಠೇಯಃ ಸ ಧರ್ಮಿಷ್ಠೈರಿತ್ಯುಕ್ತ್ವಾಸೌ ತಿರೋದಧತ್ ।**
**ಸ್ವಯಂ ಚಾದಾತ್ಸ್ವದುಶ್ಚೇಷ್ಟಾಪ್ರಾಯಶ್ಚಿತ್ತಂ ದಯಾರ್ದ್ರಧೀಃ ॥ ೪೫೯ ॥**

ಮಹಾಕಾಲನೂ ತನ್ನ ಇಷ್ಟಾರ್ಥವನ್ನು ಸಾಧಿಸಿ ನಿಜರೂಪವನ್ನು ಧರಿಸಿದವನಾಗಿ 'ಪೂರ್ವದಲ್ಲಿ ನಾನು ಪೌದನಾಧಿಪತಿಯಾದ ಮಧುಪಿಂಗಲನೆಂಬ ರಾಜನಾಗಿದ್ದೆನು. ನಾನು ಸುಲಸೆಯ ನಿಮಿತ್ತದಿಂದ ಈ ಮಹತ್ಪಾಪವನ್ನು ಮಾಡಿದೆನು. ಜಿನೇಶ್ವರರಿಂದ ಹೇಳಲ್ಪಟ್ಟಿರುವ ಅಹಿಂಸಾಲಕ್ಷಣವುಳ್ಳ ಆ ಪರಮಧರ್ಮವನ್ನು ಧರ್ಮಿಷ್ಠರು ಅನುಷ್ಠಿಸಬೇಕು.' ಎಂದುಹೇಳಿ ಇವನು ಮರೆಯಾದನು. ದಯಾರ್ದ್ರವಾದ ಬುದ್ಧಿಯುಳ್ಳ ತಾನೂ ತನ್ನ ದುಷ್ಕಾರ್ಯಕ್ಕೆ ಪ್ರಾಯಶ್ಚಿತ್ತವನ್ನು ತೆಗೆದುಕೊಂಡನು.

**ನಿವೃತ್ತಿಮೇವ ಸಂಮೋಹಾದ್ವಿಹಿತಾತ್ಪಾಪಕರ್ಮಣಃ ।**
**ವಿಶ್ವಭೂಪ್ರಮುಖಾಃ ಸರ್ವೇ ಹಿಂಸಾಧರ್ಮಪ್ರವರ್ತಕಾಃ ॥ ೪೬೦ ॥**

**ಪ್ರಾಯಯುಸ್ತೇ ಗತಿಂ ಪಾಪಾನ್ನಾರಕೀಮಿತಿ ಕೇಚನ ।**
**ದಿವ್ಯಬೋಧೈಃ ಸಮಾಕರ್ಣ್ಯ ಮುನಿಭಿಃ ಸಮುದಾಹೃತಾತ್ ॥ ೪೬೧ ॥**

**ಪರ್ವತೋದ್ದಿಷ್ಟದುರ್ಮಾರ್ಗಂ ನೋಪೇಯುಃ ಪಾಪಭೀರವಃ ।**
**ಕೇಚಿತ್ತು ದೀರ್ಘಸಂಸಾರಾಸ್ತಸ್ಮಿನ್ನೇವ ವ್ಯವಸ್ಥಿತಾಃ ॥ ೪೬೨ ॥**

**ಇತ್ಯನೇನ ಸ ಮಂತ್ರೀ ಚ ರಾಜಾ ಚಾಗಮುದಾರ್ಹತಮ್ ।**
**ಸಭಾಸೀನಾಶ್ಚ ಸರ್ವೇಪಿ ಮಂತ್ರಿಣಂ ತುಷ್ಟುವುಸ್ತರಾಮ್ ॥ ೪೬೩ ॥**

'ಅವನು ಅಜ್ಞಾನದಿಂದ ಮಾಡಿದ ಪಾಪಕರ್ಮದ ನಿವಾರಣವನ್ನೇ ಮಾಡಿದನು. ಹಿಂಸಾಧರ್ಮಪ್ರವರ್ತಕರಾದ ವಿಶ್ವಭೂಮಂತ್ರಿಯೇ ಮೊದಲಾದವರೆಲ್ಲರು ಪಾಪದಿಂದ ನರಕಗತಿಯನ್ನು ಹೊಂದಿದರು.' ಎಂದು ಕೇಳಿ ದಿವ್ಯಜ್ಞಾನಿಗಳಾದ ಮುನಿಗಳು ಹೇಳಿದ ಮಾತಿನಿಂದ ಪಾಪಭೀತಿಯುಳ್ಳವರಾದ ಕೆಲವರು ಪರ್ವತನು ಹೇಳಿದ ದುರ್ಮಾರ್ಗವನ್ನು ಅನುಸರಿಸಲಿಲ್ಲ. ದೀರ್ಘಸಂಸಾರಿಗಳಾದ ಕೆಲವರು ಆ ದುರ್ಮಾರ್ಗದಲ್ಲೇ ಇದ್ದರು'' ಈ ರೀತಿಯಾದ ಅತಿಶಯಮತಿಮಂತ್ರಿಯ ಮಾತಿನಿಂದ ಆ ಆಗಮಸಾರನೆಂಬ ಮಂತ್ರಿಯೂ ದಶರಥರಾಜನೂ ಸಭಾಸದರೂ ಆರ್ಹತವಾದ ಅಹಿಂಸಾಧರ್ಮವನ್ನು ಪಡೆದರು. ಎಲ್ಲರೂ ಮಂತ್ರಿಯನ್ನು ಬಹಳವಾಗಿ ಸ್ತುತಿಸಿದರು.

**ತದಾ ಸೇನಾಪತಿರ್ನಾಮ್ನಾ ಮಹೀಶಸ್ಯ ಮಹಾಬಲಃ ।**
**ಪುಣ್ಯಂ ಭವತು ಪಾಪಂ ವಾ ಯಾಗೇ ನಸ್ತೇನ ಕಿಂ ಫಲಮ್ ॥ ೪೬೪ ॥**

**ಪ್ರಭಾವದರ್ಶನಂ ಶ್ರೇಯೋ ಭೂಭೃನ್ಮಧ್ಯೇ ಕುಮಾರಯೋಃ ।**
**ಇತ್ಯುಕ್ತವಾಂಸ್ತತೋ ರಾಜಾ ಪುನಶ್ಚೈತದ್ವಿಚಾರಯನ್ ॥ ೪೬೫ ॥**

**ಇತಿ ಮತ್ವಾ ವಿಸರ್ಜ್ಯೈತಾನ್ ಮಂತ್ರಿಸೇನಾಪತೀನ್ ಪುನಃ ।**
**ಹಿತೋಪದೇಶಿನಂ ಪ್ರಶ್ನಜ್ಞಮಪೃಚ್ಛತ್ಪುರೋಹಿತಮ್ ॥ ೪೬೬ ॥**

**ಗತಯೋರ್ಜನಕಾಗಾರಂ ಸ್ಯಾನ್ನ ವೇಷ್ಟಂ ಕುಮಾರಯೋಃ ।**
**ಇತಿ ಸೋಪಿ ಪುರಾಣೇಷು ನಿಮಿತ್ತೇಷು ಚ ಲಕ್ಷಿತಮ್ ॥ ೪೬೭ ॥**

**ಅಸ್ಮತ್ಕುಮಾರಯೋಸ್ತತ್ರ ಯಾಗೇ ಭಾವೀ ಮಹೋದಯಃ ।**
**ಸಂಶಯೋತ್ರ ನ ಕರ್ತವ್ಯಸ್ತ್ವಯಾನ್ಯಚ್ಚೇದಮುಚ್ಯತೇ ॥ ೪೬೮ ॥**

**ಅಥಾಸ್ಮಿನ್ ಭಾರತೇ ಕ್ಷೇತ್ರೇ ಮನವಸ್ತೀರ್ಥನಾಯಕಾಃ ।**
**ಚಕ್ರೇಶಾಸ್ತ್ರಿವಿಧಾ ರಾಮಾ ಭವಿಷ್ಯಂತಿ ಮಹೌಜಸಃ ॥ ೪೬೯ ॥**

**ಇತ್ಯಾಖ್ಯಾತಾಃ ಪುರಾಣಜ್ಞೈರ್ಮುನೀಶೈಃ ಪ್ರಾಜ್ಞಯಾ ಶ್ರುತಾಃ ।**
**ತೇಷ್ವಷ್ಟಮಾವಿಮೌ ರಾಮಕೇಶವೌ ನಃ ಕುಮಾರಕೌ ॥ ೪೭೦ ॥**

**ಭಾವಿನೌ ರಾವಣಂ ಹತ್ವೇತ್ಯವಾದೀದ್ವಾವಿವಿದ್ವರಃ ।**
**ತತ್ತದುಕ್ತಂ ತದಾಕರ್ಣ್ಯ ಪರಿತೋಷಮಗಾನ್ನೃಪಃ ॥ ೪೭೧ ॥**

ಆಗ ದಶರಥಮಹಾರಾಜನ ಮಹಾಬಲನೆಂಬ ಸೇನಾಪತಿಯು '' ಯಾಗದಲ್ಲಿ ಪುಣ್ಯವಾದರೂ ಆಗಲಿ, ಪಾಪವಾದರೂ ಆಗಲಿ. ಅದರಿಂದ ನಮಗೇನು ಪ್ರಯೋಜನ ?ರಾಜರುಗಳ ಮಧ್ಯದಲ್ಲಿ ರಾಮಲಕ್ಷ್ಮಣ–ಕುಮಾರರ ಪ್ರಭಾವವನ್ನು ತೋರಿಸುವುದು ಶ್ರೇಯಸ್ಕರವಾಗುವುದು'' ಎಂದು ಹೇಳಿದನು. ಬಳಿಕ ದಶರಥಮಹಾರಾಜನು ಮತ್ತೂ ಈ ವಿಷಯವನ್ನು ವಿಚಾರಮಾಡುವವನಾಗಿ ಹೀಗೆ ತಿಳಿದು ಈ ಮಂತ್ರಿಸೇನಾಪತಿಗಳನ್ನು ಬೀಳ್ಕೊಟ್ಟು ಪುನಃ ಹಿತೋಪದೇಶಕನೂ ಪ್ರಶ್ನೆಯನ್ನು ತಿಳಿಯುವವನೂ ಆದ ಪುರೋಹಿತನನ್ನು ಕುರಿತು ''ಜನಕಮಹಾರಾಜನ ಅರಮನೆಗೆ ಹೋಗುವ ರಾಮಲಕ್ಷ್ಮಣ–ಕುಮಾರರುಗಳಿಗೆ ಇಷ್ಟಸಿದ್ಧಿಯಾಗುವುದೋ ? ಇಲ್ಲವೋ ?'' ಎಂದು ಪ್ರಶ್ನೆಮಾಡಿದನು. ಮುಂದಿನ ವಿಷಯಗಳನ್ನು ತಿಳಿಯುವವರಾದ ವಿದ್ವಾಂಸರಲ್ಲಿ ಶ್ರೇಷ್ಠನಾದ ಆ ಪುರೋಹಿತನೂ ದೊರೆಯನ್ನು ಕುರಿತು ''ನಮ್ಮ ಕುಮಾರರುಗಳಿಗೆ ಅಲ್ಲಿ ಯಾಗದಲ್ಲಿ ಮಹಾಭ್ಯುದಯವುಂಟಾಗುವುದು. ಈ ವಿಷಯದಲ್ಲಿ ನೀನು ಸಂಶಯಪಡಬಾರದು. ಅಲ್ಲದೆ ಈ ವಿಷಯವನ್ನೂ ಹೇಳುತ್ತೇನೆ–ಈ ಭರತಕ್ಷೇತ್ರದಲ್ಲಿ ಮಹಾತೇಜಸ್ವಿಗಳಾದ ಮನುಗಳೂ ತೀರ್ಥೇಶ್ವರರೂ ಮೂರು ವಿಧವಾದ ಚಕ್ರೇಶ್ವರರೂ (ಪೂರ್ಣಚಕ್ರಿ, ಕೇಶವ, ಪ್ರತಿಕೇಶವ) ಆಗುವರೆಂದು ಪುರಾಣಜ್ಞಾನಿಗಳಾದ ಮುನೀಶ್ವರರಿಂದ ಹೇಳಲ್ಪಟ್ಟಿರುತ್ತಾರೆ. ಈ ವಿಷಯವನ್ನು ಮೊದಲು ಕೇಳಿದ್ದೇನೆ. ಅವರಲ್ಲಿ ನಮ್ಮ ಈ ಕುಮಾರರುಗಳು ರಾವಣನನ್ನು ಕೊಂದು ಎಂಟನೆಯ ಬಲಭದ್ರ ಕೇಶವರಾಗುವರು'' ಎಂದು ಹೇಳಿದನು. ಆಗ ದಶರಥಮಹಾರಾಜನು ಆ ಪುರೋಹಿತನ ಆ ಮಾತನ್ನು ಕೇಳಿ ಸಂತೋಷವನ್ನು ಹೊಂದಿದನು.

**ಕೃತ್ವಾ ಪಾಪಪಟುಃ ಕ್ರುಧಾ ಪಶುವಧಸ್ತೋತ್ರಸೂತ್ರಮಾಭೂತಲಂ ।**
**ಹಿಂಸಾಯಜ್ಞಮವರ್ತಯತ್ಕಪಟಧೀಃ ಕ್ರೂರೋ ಮಹಾಕಾಲಕಃ ।**
**ತೇನಾಗಾತ್ಸ ವಸುಃ ಸ ಪರ್ವತಖಲೋ ಘೋರಾಂ ಧರಾಂ ನಾರಕೀಂ ।**
**ದುರ್ಮಾರ್ಗಾನ್ ದುರಿತಾವಹಾನ್ ವಿದಧತಾಂ ನೈತನ್ಮಹತ್ಪಾಪಿನಾಮ್॥**

ಪಾಪಕಾರ್ಯದಲ್ಲಿ ಚತುರನೂ ಕಪಟಬುದ್ಧಿಯುಳ್ಳವನೂ ಕ್ರೂರನೂ ಆದ ಮಹಾಕಾಲನು ಕೋಪದಿಂದ ಜಗತ್ತಿನಲ್ಲೆಲ್ಲ ಪಶುವಧೆಯ ದುಃಶಾಸ್ತ್ರವನ್ನು ಕಲ್ಪನೆ ಮಾಡಿ ಹಿಂಸಾಯಜ್ಞವನ್ನು ಪ್ರಚಾರಮಾಡಿದನು. ಅದರಿಂದ ಆ ವಸುರಾಜನೂ ಆ ದುಷ್ಟನಾದ ಪರ್ವತನೂ ಭಯಂಕರವಾದ ನರಕಭೂಮಿಯನ್ನು ಪಡೆದರು. ಪಾಪವನ್ನುಂಟುಮಾಡುವ ದುರ್ಮಾರ್ಗವನ್ನು ನಿರ್ಮಿಸುವ ಪಾಪಿಗಳಿಗೆ ಈ ನರಕಗಮನವು ದೊಡ್ಡದಲ್ಲ.

**ವ್ಯಾಮೋಹಾತ್ಸುಲಸಾಪ್ರಿಯಃ ಸಸುಲಸಃ ಸಾರ್ಧಂ ಸ್ವಯಂ ಮಂತ್ರಿಣಾ ।**
**ಶತ್ರುಚ್ಛದ್ಮವಿವೇಕಶೂನ್ಯಹೃದಯಃ ಸಂಪಾದ್ಯ ಹಿಂಸಾಕ್ರಿಯಾಮ್ ।**
**ನಷ್ಟೋ ಗಂತುಮಧಃಕ್ಷಿತಿಂ ದುರಿತಿನಾಮಕ್ರೂರನಾಶಂ ಮುಧಾ ।**
**ದುಷ್ಕರ್ಮಾಭಿರತಸ್ಯ ಕಿಂ ಹಿ ನ ಭವೇದನ್ಯಸ್ಯ ಚೇದೃಗ್ವಿಧಮ್॥ ೪೭೩ ॥**

ಸುಲಸೆಯ ಪ್ರಿಯನಾದ ಸಗರನು ಸುಲಸಾಸಹಿತನಾಗಿಯೂ ಶತ್ರುವಿನ ಕಪಟವನ್ನು ತಿಳಿಯುವ ವಿವೇಕವಿಲ್ಲದ ಹೃದಯವುಳ್ಳವನಾಗಿಯೂ ತಾನು ಮಂತ್ರಿಯೊಡನೆ ವ್ಯಾಮೋಹದಿಂದ ಹಿಂಸಾಕಾರ್ಯವನ್ನು ಮಾಡಿ ನಾಶವನ್ನು ಹೊಂದಿದನು. ಪಾಪಿಗಳಿಗೆ ಅಧೋಭೂಮಿಯನ್ನು ಹೊಂದುವುದಕ್ಕೆ ಕ್ರೂರವಲ್ಲದ–ಸಾಧುಪ್ರಾಣಿಗಳ ನಾಶವನ್ನು ಕಾರಣವನ್ನಾಗಿ ಹೇಳುತ್ತಾರೆ. ನಿಷ್ಪ್ರಯೋಜನವಾಗಿ ದುಷ್ಕಾರ್ಯದಲ್ಲಿ ಆಸಕ್ತನಾದವನಿಗೂ ಬೇರೆಯವನಿಗೂ ಇಂತಹ ನರಕದುಃಖವೇತಕ್ಕಾಗದು ?

**ಸ್ವಾಚಾರ್ಯವರ್ಯಮನುಸೃತ್ಯ ಹಿತಾನುಶಾಸೀ ।**
**ವಾದೇ ಸಮೇತ್ಯ ಬುಧಸಂಸದಿ ಸಾಧುವಾದಮ್ ।**
**ಶ್ರೀನಾರದೋ ವಿಹಿತಭೂರಿತಪಾಃ ಕೃತಾರ್ಥಃ ।**
**ಸರ್ವಾರ್ಥಸಿದ್ಧಿಮುಗಮತ್ಸುಧಿಯಾಮಧೀಶಃ ॥ ೪೭೪ ॥**

ವಾದದಲ್ಲಿ ತನ್ನ ಆಚಾರ್ಯೋತ್ತಮರನ್ನು ಅನುಸರಿಸಿ ವಿದ್ವಾಂಸರ ಸಭೆಯಲ್ಲಿ ಉತ್ತಮವಾದ ವಾದವನ್ನು ಹೊಂದಿ ಹಿತವನ್ನುಪದೇಶಿಸಿದವನೂ ಕೃತಾರ್ಥನೂ ಸಮ್ಯಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ನಾರದನು ಅಧಿಕವಾದ ತಪಸ್ಸನ್ನು ಮಾಡಿದವನಾಗಿ ಸತ್ತು ಸರ್ವಾರ್ಥಸಿದ್ಧಿಸ್ವರ್ಗವನ್ನು ಹೊಂದಿದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ದುರ್ಮಾರ್ಗಪ್ರವರ್ತನಪ್ರಪಂಚವ್ಯಾವರ್ಣನಂ ನಾಮ ಸಪ್ತಷಷ್ಟಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್''ದುರ್ಮಾರ್ಗಪ್ರವರ್ತನ ಪ್ರಪಂಚವ್ಯಾವರ್ಣನವೆಂಬ ಅರವತ್ತೇಳನೆಯ ಪರ್ವವು ಸಮಾಪ್ತವಾದುದು.

---

## ಅಥ ಅಷ್ಟಷಷ್ಟಂ ಪರ್ವ

(ಮುನಿಸುವ್ರತತೀರ್ಥಕರಪುರಾಣ–ಮುಂದುವರೆದದ್ದು)

**ಪುರೋಹಿತಃ ಪುನಶ್ಚಾಸೌ ತತ್ಕಥಾಂ ಶ್ರೋತುಮರ್ಹಸಿ ।**
**ಇತಿ ಸಂಬೋಧ್ಯ ಭೂಪಾಲಂ ತತೋ ವಕ್ತುಂ ಪ್ರಚಕ್ರಮೇ ॥ ೪೭೫ ॥**

**ಕ್ರಮೇಣ ಶ್ರವ್ಯಶಬ್ದಾರ್ಥಸಾರವಾಣೀರ್ಭವಾವಲಿಮ್ ।**
**ದಶಾಸ್ಯಸ್ಯ ದಶಾಶಾಸ್ಯ ಪ್ರಕಾಶಿಸ್ವಯಶಃಶ್ರಿಯಃ ॥ ೪೭೬ ॥**

ದಶರಥಮಹಾರಾಜನ ಪುರೋಹಿತನು "ಮತ್ತೂ ಆ ಕಥೆಯನ್ನು ಕೇಳುವುದಕ್ಕೆ ಅರ್ಹನಾಗಿರುತ್ತಿ" ಎಂದು ರಾಜನನ್ನು ಸಂಬೋಧಿಸಿ ಬಳಿಕ ಕ್ರಮದಿಂದ ಕೇಳುವುದಕ್ಕೆ ಯೋಗ್ಯವಾದ ಶಬ್ದಗಳ ಸಾರವೂ ಅರ್ಥಗಳ ಸಾರವೂ ಉಳ್ಳ ವಚನವುಳ್ಳವನಾಗಿ ದಶದಿಙ್ಮುಖಗಳಲ್ಲಿ ಪ್ರಕಾಶಿಸುವ ತನ್ನ ಯಶೋಲಕ್ಷ್ಮಿಯುಳ್ಳವನಾದ ದಶಮುಖ–ರಾವಣನ ಭವಪರಂಪರೆಯನ್ನು ಹೇಳುವುದಕ್ಕೆ ತೊಡಗಿದನು.

**ಅಥಾಸ್ತಿ ನಾಕಲೋಕಾಭೋ ಧಾತಕೀಖಂಡಪೂರ್ವಭಾಕ್ ।**
**ಭಾರತೇ ಭೂಗುಣಾದ್ಯುಕ್ತೋ ದೇಶಃ ಸಾರಸಮುಚ್ಚಯಃ ॥ ೪೭೭ ॥**

"ಅನಂತರದಲ್ಲಿ ಧಾತಕೀಖಂಡದ ಪೂರ್ವದಿಕ್ಕಿನಲ್ಲಿರುವ ಭರತಕ್ಷೇತ್ರದಲ್ಲಿ ಸ್ವರ್ಗಲೋಕಕ್ಕೆ ಸಮಾನವೂ ಭೂಮಿಯ ಗುಣವೇ ಮೊದಲಾದುವುಗಳಿಂದ ಕೂಡಿರುವುದೂ ಆದ ಸಾರಸಮುಚ್ಚಯವೆಂಬ ದೇಶವಿದೆ.

**ತಸ್ಮಿನ್ನಾಗಪುರೇ ಖ್ಯಾತೋ ನರದೇವೋ ಮಹೀಪತಿಃ ।**
**ಸ ಕದಾಚಿದನಂತಾಖ್ಯಗಣೇಶಾತ್ಕೃತವಂದನಃ ॥ ೪೭೮ ॥**

**ಶ್ರುತಧರ್ಮಕಥೋ ಜಾತನಿರ್ವೇದೋ ಜ್ಯೇಷ್ಠಸೂನವೇ ।**
**ಪ್ರದಾಯ ಭೋಗದೇವಾಯ ರಾಜ್ಯಮಾಪನ್ನಸಂಯಮಃ ॥ ೪೭೯ ॥**

**ಚರಂಸ್ತಪಃ ಸಮುತ್ಕೃಷ್ಟಂ ದೃಷ್ಟ್ವಾ ವಿದ್ಯಾಧರಾಧಿಪಮ್ ।**
**ಸದ್ಯಶ್ಚಪಲವೇಗಾಖ್ಯಂ ನಿದಾನಮಕರೋದಧೀಃ ॥ ೪೮೦ ॥**

ಅಲ್ಲಿ ನಾಗಪುರವೆಂಬ ನಗರದಲ್ಲಿ ಪ್ರಖ್ಯಾತನಾದ ನರದೇವನೆಂಬ ರಾಜನಿದ್ದನು. ಅವನು ಒಂದಾನೊಂದು ಕಾಲದಲ್ಲಿ ಅನಂತನೆಂಬ ಗಣಧರನಿಗೆ ವಂದನೆಯನ್ನು ಮಾಡಿ ಅವನಿಂದ ಧರ್ಮಕಥೆಯನ್ನು ಕೇಳಿ ವೈರಾಗ್ಯವುಳ್ಳವನಾಗಿ ತನ್ನ ಜ್ಯೇಷ್ಠ ಪುತ್ರನಾದ ಭೋಗದೇವನಿಗೆ ರಾಜ್ಯವನ್ನಿತ್ತು ಸಂಯಮವನ್ನು ಹೊಂದಿ ತಪಸ್ಸನ್ನು ಮಾಡುತ್ತ ಚಪಲವೇಗನೆಂಬ ಬಹುಶ್ರೇಷ್ಠನಾದ ವಿಧ್ಯಾಧರರಾಜನನ್ನು ನೋಡಿ ಬುದ್ಧಿಯಿಲ್ಲದವನಾಗಿ ನಿದಾನಶಲ್ಯವನ್ನು ಮಾಡಿದನು. ತಪಸ್ಸಿನ ಫಲದಿಂದ ಮುಂದಿನ ಭವದಲ್ಲಿ ತಾನು ಆ ಚಪಲವೇಗನಂತಾಗಬೇಕೆಂದು ಆಶೆಪಟ್ಟನೆಂದು ಭಾವವು.

**ಪ್ರಾಂತೇ ಸನ್ನ್ಯಸ್ಯ ಸೌಧರ್ಮಕಲ್ಪೇಭೂದಮೃತಾಶನಃ ।**
**ಅಥಾಸ್ಮಿನ್ ಭಾರತೇ ಕ್ಷೇತ್ರೇ ವಿಜಯಾರ್ಧಮಹಾಚಲೇ ॥ ೪೮೧ ॥**

**ಖಗೇಶೋ ದಕ್ಷಿಣಶ್ರೇಣ್ಯಾಂ ಮೇಘಕೂಟಪುರಾಧಿಪಃ ।**
**ವಿನಮ್ಯನ್ವಯಸಂಭೂತಃ ಸಹಸ್ರಗ್ರೀವಖೇಚರಃ ॥ ೪೮೨ ॥**

**ಕ್ರುದ್ಧಾತ್ಮಭ್ರಾತೃಪುತ್ರೋರುಬಲೇನೋತ್ಸಾರಿತಸ್ತತಃ ।**
**ಗತ್ವಾ ಲಂಕಾಪುರೀಂ ತ್ರಿಂಶತ್ಸಹಸ್ರಾಬ್ದಾನಪಾಲಯತ್ ॥ ೪೮೩ ॥**

ಕೊನೆಯಲ್ಲಿ ಸಮಾಧಿಮರಣವನ್ನು ಹೊಂದಿ ಸೌಧರ್ಮಕಲ್ಪದಲ್ಲಿ ದೇವನಾದನು. ಬಳಿಕ ಈ ಭರತಕ್ಷೇತ್ರದ ವಿಜಯಾರ್ಧಪರ್ವತದಲ್ಲಿ ದಕ್ಷಿಣಶ್ರೇಣಿಯಲ್ಲಿ ಮೇಘಕೂಟಪುರಾಧಿಪತಿಯೂ ಖೇಚರೇಶ್ವರನೂ ವಿನಮಿಯ ವಂಶೋತ್ಪನ್ನನೂ ಆದ ಸಹಸ್ರಗ್ರೀವನೆಂಬ ಖೇಚರನು ಕುಪಿತನಾದ ತನ್ನ ಸಹೋದರನ ಪುತ್ರನ ಬಲದಿಂದ ಹೊರಡಿಸಲ್ಪಟ್ಟವನಾಗಿ ಅಲ್ಲಿಂದ ಹೋಗಿ ಲಂಕಾಪುರಿಯನ್ನು ಸೇರಿ ಅಲ್ಲಿ ಮೂವತ್ತು ಸಹಸ್ರವರ್ಷಗಳವರೆಗೆ ರಾಜ್ಯಪರಿಪಾಲನವನ್ನು ಮಾಡಿದನು.

**ತಸ್ಯ ಪುತ್ರಃ ಶತಗ್ರೀವಸ್ತತ್ಪಷ್ಠಾಂಶೋನವತ್ಸರಾನ್ ।**
**ಪಾತಿ ಸ್ಮ ತತ್ಸುತಃ ಪಂಚಾಶದ್ಗ್ರೀವೋಪ್ಯನ್ವಪಾಲಯತ್ ॥ ೪೮೪ ॥**

**ವತ್ಸರಾಣಾಂ ಸಹಸ್ರಾಣಿ ವಿಂಶತಿಂ ತಸ್ಯ ಚಾತ್ಮಜಃ ।**
**ಪೌಲಸ್ತ್ಯಸ್ತ್ರಿಃ ಖಪಂಚೈಕವರ್ಷಾಯುಸ್ತಸ್ಯ ವಲ್ಲಭಾ ॥ ೪೮೫ ॥**

**ಮೇಘಶ್ರೀರನಯೋಃ ಸೂನುಃ ಸ ದೇವೋಭೂದ್ದಶಾನನಃ ।**
**ಚತುರ್ದಶಸಹಸ್ರಾಬ್ದಪರಮಾಯುರ್ಮಹೀತಲಮ್ ॥ ೪೮೬ ॥**

**ಪಾಲಯನ್ನನ್ಯದಾ ಕಾಂತಾಸಹಾಯಃ ಕ್ರೀಡಿತುಂ ವನಮ್ ।**
**ಗತ್ವಾ ಲಂಕೇಶ್ವರಃ ಖೇಚರಾಚಲಸ್ಥಾಲಕೇಶಿತುಃ ॥ ೪೮೭ ॥**

**ಸುತಾಮಮಿತವೇಗಸ್ಯ ವಿದ್ಯಾಸಾಧನತತ್ಪರಾಮ್ ।**
**ಲೋಲೋ ಮಣಿಮತಿಂ ವೀಕ್ಷ್ಯ ಕಾಮಮೋಹವಶೀಕೃತಃ ॥ ೪೮೮ ॥**

**ತಾಂ ದುರಾತ್ಮಾತ್ಮಸಾತ್ಕರ್ತುಂ ತದ್ವಿದ್ಯಾಸಿದ್ಧಿಮಭ್ಯಹನ್ ।**
**ಸಾಪಿ ದ್ವಾದಶವರ್ಷೋಪವಾಸಕ್ಲೇಶಕೃಶೀಕೃತಾ ॥ ೪೮೯ ॥**

**ತತ್ಸಿದ್ಧಿವಿಘ್ನಹೇತುತ್ವಾತ್ಕುಪಿತ್ವಾ ಖಚರೇಶಿನೇ ।**
**ಪುತ್ರಿಕಾಸ್ಯೈವ ಭೂತ್ವೇಮಂ ವಧ್ಯಾಸಮಿತಿ ದುರ್ಮತಿಮ್ ॥ ೪೯೦ ॥**

**ಕೃತ್ವಾ ಭವಾಂತೇ ಮಂಡೋದರೀಗರ್ಭಂ ಸಮಧಿಷ್ಠಿತಾ ।**
**ಭೂಕಂಪಾದಿಮಹೋತ್ಪಾತೈಸ್ತಜ್ಜನ್ಮಸಮಯೋದ್ಭವೈಃ ॥ ೪೯೧ ॥**

**ವಿನಾಶೋ ರಾವಣಸ್ಯೇತಿ ನೈಮಿತ್ತಿಕವಚಃಶ್ರುತೇಃ ।**
**ದಶಾನನೋತಿಭೀತಃ ಸನ್ಯತ್ರ ಕ್ವಚನ ಪಾಪಿನೀಮ್ ॥ ೪೯೨ ॥**

**ತ್ಯಜೇಮಾಮಿತಿ ಮಾರೀಚಮಾಜ್ಞಾಪಯದಘಾದಧೀಃ ।**
**ಸೋಪಿ ಮಂಡೋದರೀಗೇಹಂ ಗತ್ವಾ ದೇವಸ್ಯ ದೇವಿ ಮೇ ॥ ೪೯೩ ॥**

**ಕರ್ಮೈವಂ ನಿರ್ಘೃಣಸ್ಯಾಸೀದಿತಿ ತಸ್ಯೈ ನ್ಯವೇದಯತ್ ।**
**ಸಾಪಿ ದೇವನಿದೇಶಸ್ಯ ನಾಹಮಸ್ಮಿ ನಿವಾರಿಕಾ ॥ ೪೯೪ ॥**

**ಇತಿ ಪ್ರಭೂತದ್ರವ್ಯೇಣ ಮಂಜೂಷಾಯಾಂ ನಿಧಾಯ ತಾಮ್ ।**
**ತತ್ಸಂವಿಧಾನಪತ್ರೇಣ ಸಹೋಕ್ತ್ವೇದಂ ಚ ತಂ ಮುಹುಃ ॥ ೪೯೫ ॥**

**ಮಾರೀಚಮಾನ್ಯ ಮೇ ಸ್ನಿಗ್ಧಃ ಪ್ರಕೃತ್ಯಾ ಬಾಲಿಕಾಮಿಮಾಮ್ ।**
**ಬಾಧಾವಿರಹಿತೇ ದೇಶೇ ನಿಕ್ಷಿಪೇತಿ ಗಲಜ್ಜಲೇ ॥ ೪೯೬ ॥**

**ವಿಮೃಜ್ಯ ಲೋಚನೇ ತಸ್ಮೈ ಸ್ವತನೂಜಾಂ ಸಮಾರ್ಪಯತ್ ।**
**ಸ ನೀತ್ವಾ ಮಿಥಿಲೋದ್ಯಾನನಿಕಟೇ ಪ್ರಕಟೇ ಕ್ವಚಿತ್ ॥ ೪೯೭ ॥**

**ಧರಾಂತಃಕೃತಮಂಜೂಷೋ ವಿಷಣ್ಣೋ ನ್ಯವೃತಚ್ಛುಚಾ ।**
**ತಸ್ಮಿನ್ನೇವ ದಿನೇ ದೃಷ್ಟ್ವಾ ಗೇಹನಿರ್ಮಾಪಣಂ ಪ್ರತಿ ॥ ೪೯೮ ॥**

**ಭೂಮಿಸಂಶೋಧನೇ ಲಾಂಗಲಾಗ್ರಲಗ್ನಾಂ ನಿಯೋಗಿನಃ ।**
**ಮಂಜೂಷಾಮೇತದಾಶ್ಚರ್ಯಮಿತಿ ಭೂಪಮಬೋಧಯನ್ ॥ ೪೯೯ ॥**

ಆ ಸಹಸ್ರಗ್ರೀವನ ಪುತ್ರನಾದ ಶತಗ್ರೀವನು ಇಪ್ಪತ್ತೈದು ಸಹಸ್ರವರ್ಷಗಳವರೆಗೆ ರಾಜ್ಯವನ್ನಾಳಿದನು. ಅವನ ಪುತ್ರನಾದ ಪಂಚಾಶದ್ಗ್ರೀವನೂ ಇಪ್ಪತ್ತು ಸಹಸ್ರ ವರ್ಷಗಳವರೆಗೆ ರಾಜ್ಯವನ್ನಾಳಿದನು. ಅವನ ಪುತ್ರನಾದ ಪೌಲಸ್ತ್ಯನು ಹದಿನೈದು ಸಹಸ್ರವರ್ಷಾಯುಶ್ಯವುಳ್ಳವನಾಗಿ ರಾಜ್ಯವನ್ನಾಳಿದನು. ಮೇಘಶ್ರೀಯೆಂಬವಳು ಆ ಪೌಲಸ್ತ್ಯನ ಪತ್ನಿ. ಈ ದಂಪತಿಗಳಿಗೆ ಆ ದೇವನು ದಶಾನನನೆಂಬ ಪುತ್ರನಾಗಿ ಜನಿಸಿದನು. ಹದಿನಾಲ್ಕು ಸಹಸ್ರವರ್ಷ ಪರಮಾಯುಷ್ಯವುಳ್ಳ ಆ ಲಂಕೇಶ್ವರನು ಭೂತಲವನ್ನು ಪಾಲಿಸುತ್ತ ಮತ್ತೊಂದು ಕಾಲದಲ್ಲಿ ಪತ್ನೀಸಹಿತನಾಗಿ ಕ್ರೀಡಿಸುವುದ ಕ್ಕೋಸ್ಕರ ವನಕ್ಕೆ ಹೋಗಿ ವಿಜಯಾರ್ಧಪರ್ವತದಲ್ಲಿರುವ ಅಲಕಾಪುರಾಧಿಪತಿ ಯಾದ ಅಮಿತವೇಗನ ಪುತ್ರಿಯೂ ವಿದ್ಯಾಸಾಧನೆಯಲ್ಲಿ ಆಸಕ್ತಳೂ ಆದ ಮಣಿ ಮತಿಯನ್ನು ನೋಡಿ ಲೋಲನೂ ಕಾಮಮೋಹದಿಂದ ವಶೀಕೃತನೂ ಆದ ಆ ದುರಾತ್ಮನು ಆಕೆಯನ್ನು ತನ್ನ ವಶಪಡಿಸಿಕೊಳ್ಳುವುದಕ್ಕೋಸ್ಕರ ಆಕೆಯ ವಿದ್ಯಾಸಿದ್ಧಿ ಯನ್ನು ನಾಶಮಾಡಿದನು. ಹನ್ನೆರಡು ವರ್ಷಗಳವರೆಗೆ ಉಪವಾಸದ ಕ್ಲೇಶದಿಂದ ಕೃಶಳಾಗಿ ಮಾಡಲ್ಪಟ್ಟಿದ್ದ ಆಕೆಯೂ ಆ ವಿದ್ಯಾಸಿದ್ಧಿಯ ವಿಘ್ನದ ನಿಮಿತ್ತದಿಂದ ಖೇಚರೇಶ್ವರನಿಗೆ ಕೋಪಗೊಂಡು "ಇವನಿಗೇ ಮಗಳಾಗಿ ಜನಿಸಿ ಇವನನ್ನು ಕೊಲ್ಲು ವೆನು" ಎಂದು ದುರ್ಬುದ್ಧಿಯನ್ನು ಮಾಡಿ ಭವಾಂತರದಲ್ಲಿ ಸತ್ತು ದಶಾಸ್ಯನ ಪತ್ನಿ ಯಾದ ಮಂಡೋದರಿಯ ಗರ್ಭದಲ್ಲಿ ವಾಸಮಾಡಿದಳು– ಹುಟ್ಟಿದಳು. ಆಕೆಯ ಜನ್ಮಸಮಯದಲ್ಲುಂಟಾದ ಭೂಕಂಪವೇ ಮೊದಲಾದ ಮಹೋತ್ಪಾತಗಳಿಂದ "ರಾವಣನ ವಿನಾಶವಾಗುವುದು" ಎಂದು ನೈಮಿತ್ತಿಕನ ಮಾತನ್ನು ಕೇಳಿದುದರಿಂದ ದಶಾಸ್ಯನು ಅತಿಭೀತನಾಗಿ "ಈ ಪಾಪಿಯನ್ನು ಎಲ್ಲಿಯಾದರೂ ಬಿಡು" ಎಂದು ಮಾರೀಚನಿಗೆ ಆಜ್ಞೆಮಾಡಿದನು. ಪಾಪದಿಂದ ಬುದ್ಧಿಯಿಲ್ಲದವನಾದ ಆ ಮಾರೀಚನೂ ಮಂಡೋದರಿಯ ಮನೆಗೆ ಹೋಗಿ "ದೇವಿಯೆ! ನನಗೆ ನಿರ್ದಯನಾದ ಪ್ರಭುವಿನ ಕಾರ್ಯವು ಹೀಗುಂಟಾಯಿತು" ಎಂದು ಆಕೆಗೆ ತಿಳುಹಿದನು. ಆಕೆಯೂ "ಸ್ವಾಮಿಯ ಅಪ್ಪಣೆಯನ್ನು ನಾನು ನಿವಾರಿಸುವವಳಾಗು ವುದಿಲ್ಲ" ಎಂದು ಆ ಹೆಣ್ಣುಮಗುವನ್ನು ಅಧಿಕವಾದ ದ್ರವ್ಯದೊಡನೆಯೂ ಆದರ ಪರಿಚಯದ ಪತ್ರದೊಡನೆಯೂ ಪೆಟ್ಟಿಗೆಯಲ್ಲಿಟ್ಟು "ಮಾನ್ಯನಾದ ಮಾರೀಚನೆ! ಸ್ವಭಾವದಿಂದ ನನಗೆ ಪ್ರೀತಿಪಾತ್ರನಾದ ನೀನು ಈ ಬಾಲಿಕೆಯನ್ನು ಬಾಧೆಯಿಲ್ಲದ ಪ್ರದೇಶದಲ್ಲಿರಿಸು" ಎಂಬೀ ಮಾತನ್ನು ಅವನಿಗೆ ಪುನಃ ಪುನಃ ಹೇಳಿ ನೀರು ಸುರಿಯುತ್ತಿರುವ ಕಣ್ಣುಗಳನ್ನು ಒರಸಿಕೊಂಡು ತನ್ನ ಪುತ್ರಿಯನ್ನು ಆ ಮಾರೀಚನಿಗೆ ಕೊಟ್ಟಳು. ಅವನು ತೆಗೆದುಕೊಂಡು ಹೋಗಿ ಮಿಥಿಲಾದೇಶದ ಉದ್ಯಾನದ ಸಮೀಪದಲ್ಲಿರುವ ಪ್ರಕಟವಾದ ಒಂದಾನೊಂದು ಸ್ಥಳದಲ್ಲಿ ಭೂಮಿಯೊಳಗೆ ಪೆಟ್ಟಿಗೆಯನ್ನಿಟ್ಟು ಖಿನ್ನನಾಗಿ ಶೋಕದಿಂದ ಹಿಂದಿರುಗಿದನು. ಅದೇ ದಿನದಲ್ಲಿ ಮನೆಯ ನಿರ್ಮಾಣವನ್ನು ಕುರಿತು ಭೂಮಿಶೋಧನೆಯನ್ನು ಮಾಡಿದಾಗ ನೇಗಿಲಿನ ತುದಿಗೆ ಸಿಕ್ಕಿದ ಆ ಪೆಟ್ಟಿಗೆಯನ್ನು ನೋಡಿ ಭೃತ್ಯರು "ಆಶ್ಚರ್ಯವಿದು" ಎಂದು ದೊರೆಗೆ ತಿಳಿಸಿದರು.

**ಸುರೂಪಾಂ ಬಾಲಿಕಾಂ ವೀಕ್ಷ್ಯ ತದಭ್ಯಂತರವರ್ತಿನೀಮ್ ।**
**ನೃಪಸ್ತದವತಾರಾರ್ಥಂ ಲಿಪಿಲೇಖಾದ್ವಿಬುಧ್ಯ ಸಃ ॥ ೫೦೦ ॥**

**ತತ್ಪೂರ್ವಾಪರಸಂಬಂಧಮೇಷಾ ಸೀತಾಭಿಧಾನಕಾ ।**
**ಸುತಾಭವತ್ತವೇತ್ಯೇನಾಂ ವಸುಧಾಯೈ ದದೌ ಮುದಾ ॥ ೫೦೧ ॥**

ಆ ರಾಜನು ಆ ಪೆಟ್ಟಿಗೆಯೊಳಗಿರುವ ಶ್ರೇಷ್ಠವಾದ ರೂಪವುಳ್ಳ ಬಾಲಿಕೆಯನ್ನು ನೋಡಿ ಆಕೆಯ ಜನನದ ವಿಷಯವಾದ ಲಿಪಿಯ ಲೇಖದಿಂದ ಆಕೆಯ ಪೂರ್ವಾಪರಸಂಬಂಧವನ್ನು ತಿಳಿದು "ಸೀತೆಯೆಂಬ ಹೆಸರುಳ್ಳ ಈಕೆಯು ನಿನಗೆ ಮಗಳಾಗಿ ಆದಳು" ಎಂದು ಸಂತೋಷದಿಂದ ಈ ಬಾಲಿಕೆಯನ್ನು ತನ್ನ ಪತ್ನಿಯಾದ ವಸುಧೆಗೆ ಕೊಟ್ಟನು.

**ವಸುಧಾ ವಸುಧಾಗೇಹೇ ಗುಣಯಂತೀ ಕಲಾಗುಣಾನ್ ।**
**ಅವರ್ಧಯದಿಮಾಂ ಗೂಢಂ ಲಂಕೇಶೋಽಪಿ ನ ವೇತ್ತ್ಯಮೂಮ್ ॥**

**ವಾರ್ತಾಂ ಜನಕಯಾಗಸ್ಯ ತಸ್ಮಾನ್ನಾತ್ರಾಗಮಿಷ್ಯತಿ ।**
**ದಾಸ್ಯತ್ಯವಶ್ಯಂ ರಾಮಾಯ ತಾಂ ಕನ್ಯಾಂ ಮಿಥಿಲೇಶ್ವರಃ ॥ ೫೦೩ ॥**

ವಸುಧೆಯು ನೆಲಮಾಳಿಗೆಯಲ್ಲಿ ಕಲೆಗಳನ್ನು ವೃದ್ಧಿಪಡಿಸುತ್ತಿರುವ ಈ ಬಾಲಿಕೆಯನ್ನು ಗುಪ್ತವಾಗಿ ಬೆಳೆಯಿಸಿದಳು. ಲಂಕಾಧಿಪತಿಯೂ ಈ ವಾರ್ತೆಯನ್ನು ತಿಳಿಯುವುದಿಲ್ಲ. ಆದುದರಿಂದ ಜನಕಮಹಾರಾಜನ ಯಾಗಕ್ಕೆ ಇಲ್ಲಿಗೆ ಬರುವು ದಿಲ್ಲ. ಮಿಥಿಲಾಧಿಪತಿಯು ಆ ಕನ್ಯೆಯನ್ನು ರಾಮನಿಗೆ ಅವಶ್ಯವಾಗಿ ಕೊಡುವನು.

**ತತ್ಕುಮಾರೌ ಪ್ರಹೇತವ್ಯಾವಿತಿ ನೈಮಿತ್ತಿಕೋಕ್ತಿತಃ ।**
**ರಾಜ್ಞಾಖಿಲಬಲೇನಾಮೂ ಪ್ರಹಿತೌ ರಾಮಲಕ್ಷ್ಮಣೌ ॥ ೫೦೪ ॥**

ಆದುದರಿಂದ ಕುಮಾರರುಗಳನ್ನು ಕಳುಹಿಸಿಕೊಡಬೇಕು" ಈ ಪ್ರಕಾರವಾದ ನೈಮಿತ್ತಿಕನ ಮಾತಿನಿಂದ ದಶರಥಮಹಾರಾಜನು ಸಮಸ್ತ ಸೈನ್ಯದೊಡನೆ ರಾಮ ಲಕ್ಷ್ಮಣರನ್ನು ಕಳುಹಿಸಿಕೊಟ್ಟನು.

**ಪ್ರತ್ಯುದ್ಯಾತೌ ಮಹೀಶೇನ ಜನಕೇನಾನುರಾಗಿಣಾ ।**
**ಪ್ರಾಗ್ಜನ್ಮಸಂಚಿತಾಮೇಯಸ್ವಪುಣ್ಯಪರಿಪಾಕತಃ ॥ ೫೦೫ ॥**

**ರೂಪಾದಿಗುಣಸಂಪತ್ತ್ಯಾ ಸತ್ಯಮೇತೌ ಗತೋಪಮೌ ।**
**ಇತಿ ಪೌರೈಃ ಪ್ರಶಂಸದ್ಭಿಃ ಪ್ರೇಕ್ಷಮಾಣೈಃ ಸಮಂತತಃ ॥ ೫೦೬ ॥**

**ಪುರೀಂ ಪ್ರವಿಶ್ಯ ಭೂಪೋಕ್ತೇ ಸ್ಥಾನೇ ನ್ಯವಸತಾಂ ಸುಖಮ್ ।**
**ದಿನೈಃ ಕತಿಪಯೈರೇವ ನೃಪಮಂಡಲಸನ್ನಿಧೌ ॥ ೫೦೭ ॥**

**ನಿರ್ವರ್ತ್ಯಾಭಿಮತಂ ಯಜ್ಞವಿಧಾನಂ ತದನಂತರಮ್ ।**
**ಮಹಾವಿಭೂತಿಭಿಃ ಸೀತಾಂ ದದೌ ರಾಮಾಯ ಭೂಪತಿಃ ॥ ೫೦೮ ॥**

ಅನುರಾಗವುಳ್ಳ ಜನಕಮಹಾರಾಜನಿಂದಲೂ "ಪೂರ್ವಜನ್ಮಸಂಚಿತವೂ ಅಪರಿ ಮಿತವೂ ಆದ ತಮ್ಮ ಪುಣ್ಯದ ಪರಿಪಾಕದಿಂದ ಸತ್ಯವಾಗಿಯೂ ಇವರು ರೂಪಾದಿ ಗುಣಸಂಪತ್ತಿಯಿಂದ ಉಪಮಾರಹಿತರಾಗಿದ್ದಾರೆ" ಎಂದು ಹೊಗಳುತ್ತಿರುವ ವರೂ ಎಲ್ಲಾ ಕಡೆಗಳಿಂದಲೂ ನೋಡುತ್ತಿರುವವರೂ ಆದ ಪುರನಿವಾಸಿಗಳಿಂದಲೂ ಇದಿರ್ಗೊಳ್ಳಲ್ಪಟ್ಟವರಾದ ರಾಮಲಕ್ಷ್ಮಣರು ನಗರವನ್ನು ಪ್ರವೇಶಿಸಿ ರಾಜನಿಂದ ಹೇಳಲ್ಪಟ್ಟ ಸ್ಥಾನದಲ್ಲಿ ಸುಖವಾಗಿ ವಾಸಮಾಡಿದನು. ಕೆಲವು ದಿನಗಳಿಂದಲೇ ರಾಜರುಗಳ ಸಮೂಹದ ಸನ್ನಿಧಿಯಲ್ಲಿ ತನಗೆ ಇಷ್ಟವಾದ ಯಜ್ಞವಿಧಾನವನ್ನು ಪೂರ್ತಿಮಾಡಿ ಬಳಿಕ ಜನಕರಾಜನು ಮಹಾವೈಭವಗಳಿಂದ ಸೀತೆಯನ್ನು ರಾಮನಿಗೆ ಕೊಟ್ಟನು.

**ದಿನಾನಿ ಕಾನಿ ಚಿತ್ತತ್ರ ಸೀತಯೇವ ಶ್ರಿಯಾ ಸಮಮ್ ।**
**ನವಪ್ರೇಮಸಮುದ್ಭೂತಸುಖಂ ರಾಮೋಽನ್ವಭೂದ್ಭೃಶಮ್ ॥ ೫೦೯ ॥**

ಅಲ್ಲಿ ರಾಮನು ಲಕ್ಷ್ಮಿಯೊಡನೆ ಹೇಗೋ ಹಾಗೆ ಸೀತೆಯೊಡನೆ ನೂತನ ಪ್ರೇಮದಿಂದುಂಟಾದ ಸುಖವನ್ನು ಕೆಲವು ದಿನಗಳವರೆಗೆ ಚೆನ್ನಾಗಿ ಅನುಭವಿಸಿದನು.

**ತದಾ ದಶರಥಾಭ್ಯರ್ಣಾದಾಯಾತಸಚಿವೋಕ್ತಿಭಿಃ ।**
**ಜನಕಾನುಮತಃ ಶುದ್ಧತಿಥೌ ಪರಿಜನಾನ್ವಿತಃ ॥ ೫೧೦ ॥**

**ಅಭ್ಯಯೋಧ್ಯಾಪುರಂ ಸೀತಾಸಮೇತೋ ಜಾತಸಂಮದಃ ।**
**ಲಕ್ಷ್ಮಣೇನ ಚ ಗತ್ವಾಶು ಸ್ವಾನುಜಾಭ್ಯಾಂ ಸ್ವಬಂಧುಭಿಃ ॥ ೫೧೧ ॥**

**ಪರಿವಾರೈಶ್ಚ ಸ ಪ್ರತ್ಯುದ್ಗಮ್ಯಮಾನೋ ನಿಜಾಂ ಪುರೀಮ್ ।**
**ವಿಭೂತ್ಯಾ ದಿವಿಜೇಂದ್ರೋ ವಾ ವಿನೀತಾಂ ಪ್ರಾವಿಶಚ್ಛ್ರಿಯೇ ॥ ೫೧೨ ॥**

ಆಗ ದಶರಥನ ಬಳಿಯಿಂದ ಬಂದ ಮಂತ್ರಿಯ ಮಾತುಗಳಿಂದ ರಾಮನು ಜನಕಮಹಾರಾಜನಿಂದ ಅನುಮತಿಸಲ್ಪಟ್ಟವನೂ ಪರಿವಾರಜನರೊಡನೆ ಕೂಡಿದವನೂ ಸೀತಾಸಮೇತನೂ ಸಂತೋಷೋತ್ಪತ್ತಿಯುಳ್ಳವನೂ ಲಕ್ಷ್ಮಣನೊಡನೆ ಶುದ್ಧತಿಥಿಯಲ್ಲಿ ಅಯೋಧ್ಯಾನಗರಾಭಿಮುಖವಾಗಿ ಶೀಘ್ರವಾಗಿ ಹೋಗಿ ತನ್ನ ತಮ್ಮಂದಿರಾದ ಭರತ ಶತ್ರುಘ್ನರಿಂದಲೂ ತನ್ನ ಬಂಧುಗಳಿಂದಲೂ ಪರಿವಾರ ಜನರಿಂದಲೂ ಇದಿರ್ಗೊಳ್ಳಲ್ಪಟ್ಟವನೂ ಆಗಿ, ದೇವೇಂದ್ರನು ತನ್ನ ಪುರವನ್ನು ಪ್ರವೇಶಿಸುವಂತೆ, ಜಯಶೀಲನಾದ ಆ ರಾಮನು ತನ್ನ ಪಟ್ಟಣವಾದ ಅಯೋಧ್ಯಾ ನಗರವನ್ನು ವೈಭವದಿಂದ ಪ್ರವೇಶಿಸಿದನು.

**ದೃಷ್ಟ್ವಾ ಯಥೋಚಿತಂ ಪ್ರೀತ್ಯಾ ಪಿತರೌ ಪ್ರೀತಚೇತಸೌ ।**
**ತಸ್ಥೌ ಪ್ರವರ್ಧಮಾನಶ್ರೀಃ ಸಪ್ರಿಯಃ ಸಾನುಜಃ ಸುಖಮ್ ॥ ೫೧೩ ॥**

ಪ್ರೀತಿಯುಳ್ಳದಾದ ಮನಸ್ಸುಳ್ಳ ತಂದೆ ತಾಯಿಗಳನ್ನು ಯಥೋಚಿತವಾಗಿ ಪ್ರೀತಿಯಿಂದ ನೋಡಿ ವೃದ್ಧಿಯನ್ನು ಹೊಂದುತ್ತಿರುವ ಸಂಪತ್ತಿಯುಳ್ಳವನೂ ಪ್ರಿಯಪತ್ನಿಯೊಡನೆಯೂ ತಮ್ಮಂದಿರೊಡನೆಯೂ ಕೂಡಿರುವವನೂ ಆಗಿ ಸುಖವಾಗಿದ್ದನು.

**ತದಾ ತದುತ್ಸವಂ ಭೂಯೋ ವರ್ಧಯನ್ನಾತ್ಮನಾ ಮಧುಃ ।**
**ಕೋಕಿಲಾಲಿಕುಲಾಲಾಪಡಿಂಡಿಮೋ ಮಂಡಯನ್ ದಿಶಃ ॥ ೫೧೪ ॥**

**ಸಂಧಿಂ ತಪೋಧನೈಃ ಸಾರ್ಧಂ ವಿಗ್ರಹಂ ಶಿಥಿಲವ್ರತೈಃ ।**
**ಪ್ರಕುರ್ವಾಣಸ್ಯ ಕಾಮಸ್ಯ ಸಾಮವಾಯಿಕತಾಂ ವಹನ್ ॥ ೫೧೫ ॥**

**ಕಾಮಿನಾಂ ಖಂಡಯನ್ಮಾನಂ ವಿಯುಕ್ತಾನ್ ದಂಡಯನ್ ಭೃಶಮ್ ।**
**ಸಂಯುಕ್ತಾನ್ ಪಂಡಿತಾನ್ ಕುರ್ವನ್ ಪ್ರಚಂಡಃ ಪ್ರಾವಿಶಜ್ಜಗತ್ ॥**

ಆಗ ಆ ಉತ್ಸವವನ್ನು ಪುನಃ ತನ್ನಿಂದ ಹೆಚ್ಚಿಸುವುದೂ ಕೋಗಿಲೆಗಳ ಮತ್ತು ಭ್ರಮರಗಳ ಸಮೂಹದ ಧ್ವನಿಯೆಂಬ ನಗಾರಿಯ ಶಬ್ದವುಳ್ಳುದೂ ದಿಕ್ಕುಗಳನ್ನು ಅಲಂಕರಿಸುವುದೂ ತಪಸ್ವಿಗಳೊಡನೆ ಸಂಧಿಯನ್ನೂ ಶಿಥಿಲವ್ರತವುಳ್ಳವರೊಡನೆ ಕದನವನ್ನೂ ಮಾಡುವವನಾದ ಕಾಮನಿಗೆ ಸಮವಾಯಸಂಬಂಧತ್ವ– ಸಹಾಯಕತ್ವವನ್ನು ವಹಿಸಿರುವುದೂ ಆದ ವಸಂತಋತುವು ಕಾಮುಕರ ಮಾನವನ್ನು ಖಂಡಿಸುವುದೂ ವಿಯೋಗವುಳ್ಳವರನ್ನು ಚೆನ್ನಾಗಿ ದಂಡಿಸುವುದೂ ವಿದ್ವಾಂಸರುಗಳನ್ನು ಪರಸ್ಪರವಾಗಿ ಸೇರುವವರನ್ನಾಗಿ ಮಾಡುವುದೂ ಆಗಿ ಜಗತ್ತನ್ನು ಪ್ರವೇಶಿಸಿತು. ಆಗ ವಸಂತಋತುವು ಪ್ರಾಪ್ತವಾಗಿ ರಾಮನ ಪುರಪ್ರವೇಶೋತ್ಸವಕ್ಕೆ ಹೆಚ್ಚಾದ ಶೋಭೆಯನ್ನುಂಟುಮಾಡಿತೆಂದು ಭಾವವು.

**ತದಾಗಮನಮಾತ್ರೇಣ ಸದ್ವನಸ್ಪತಿಜಾತಯಃ ।**
**ಕಾಶ್ಚಿದಂಕುರಿತಾಃ ಕಾಶ್ಚಿತ್ಸಾನುರಾಗಾಃ ಸಪಲ್ಲವೈಃ ॥ ೫೧೭ ॥**

ಆ ವಸಂತಋತುವಿನ ಆಗಮನ ಮಾತ್ರದಿಂದ ಕೆಲವು ವನಸ್ಪತಿಗಳು ತಳಿರುಗಳಿಂದ ಅನುರಾಗವುಳ್ಳವುಗಳಾಗಿ–ಕೆಂಪಾದುವು.

**ಕಾಶ್ಚಿತ್ಕೋರಕಿತಾಃ ಕಾಶ್ಚಿತ್ಸಹಾಸಾಃ ಕುಸುಮೋತ್ಕರೈಃ ।**
**ಸ್ವಾವಧ್ಯಾಯಾತಚಿತ್ತೇಶಾಃ ಕಾಂತಾ ಇವ ನಿರಂತರಮ್ ॥ ೫೧೮ ॥**

ಇನ್ನು ಕೆಲವು ವನಸ್ಪತಿಗಳು ಮೊಗ್ಗುಗಳುಳ್ಳವಾದುವು. ಮತ್ತೆ ಕೆಲವು ವನಸ್ಪತಿಗಳು, ತಾವು ಹೇಳಿದ ಅವಧಿಯಲ್ಲಿ ಬಂದ ಗಂಡಂದಿರುಳ್ಳ ಪತ್ನಿಯರುಗಳಂತೆ, ಎಡೆಬಿಡದೆ ಪುಷ್ಪಸಮೂಹಗಳಿಂದ ನಗುವಂತಿದ್ದುವು.

**ಹಿಮಾನೀಪಟಲಾನ್ಮುಕ್ತಂ ಸುವ್ಯಕ್ತಂ ಚಂದ್ರಮಂಡಲಮ್ ।**
**ಜ್ಯೋತ್ಸ್ನಾಂ ಪ್ರಸಾರಯಾಮಾಸ ದಿಕ್ಷು ಲಕ್ಷ್ಮೀವಿಧಾಯಿನೀಮ್॥೫೧೯ ॥**

ಹಿಮಸಮೂಹದಿಂದ ಬಿಡಲ್ಪಟ್ಟುದೂ ಚೆನ್ನಾಗಿ ವ್ಯಕ್ತವಾದುದೂ ಆದ ಚಂದ್ರಮಂಡಲವು ದಿಕ್ಕುಗಳಲ್ಲಿ ಶೋಭೆಯನ್ನುಂಟುಮಾಡುವ ಬೆಳದಿಂಗಳನ್ನು ಹರಡಿತು.

**ಸಾರಮಾಮೋದಮಾದಾಯ ವಿಕಿರನ್ ಪುಷ್ಪಜಂ ರಜಃ ।**
**ಸರೋವಾರಿಕಣೈಃ ಸಾರ್ಧಮುಪಾಚ್ಯಃ ಪವನೋ ವವೌ ॥ ೫೨೦ ॥**

ಸಾರವಾದ ಪರಿಮಳವನ್ನು ತೆಗೆದುಕೊಂಡು ಪುಷ್ಪಗಳಿಂದುಂಟಾದ ಧೂಳಿಯನ್ನು ಎರಚುವ ದಕ್ಷಿಣದಿಕ್ಕಿನ ಗಾಳಿಯು ಸರೋವರಗಳ ನೀರಿನ ಹನಿಗಳೊಡನೆ ಬೀಸಿತು.

**ತದಾನ್ಯಾಭಿಶ್ಚ ರಾಮಸ್ಯ ರಾಮಾಭಿಃ ಸಪ್ತಭಿರ್ನೃಪಃ ।**
**ಪ್ರೇಕ್ಷ್ಯಾಭಿರ್ಲಕ್ಷ್ಮಣಸ್ಯಾಪಿ ಪೃಥಿವೀದೇವಿಕಾದಿಭಿಃ ॥ ೫೨೧ ॥**

**ಪ್ರೀತ್ಯಾ ಷೋಡಶಮಾನಾಭಿರ್ಜಿನಪೂಜಾಪುರಸ್ಸರಮ್ ।**
**ತನೂಜಾಭಿರ್ನರೇಂದ್ರಾಣಾಂ ವಿವಾಹಮಕರೋತ್ಕೃತೀ ॥ ೫೨೨ ॥**

ಆಗ ಪುಣ್ಯಶಾಲಿಯಾದ ದಶರಥಮಹಾರಾಜನು ರಾಮನಿಗೆ ಬೇರೆ ಏಳು ಮಂದಿ ಸುಂದರಿಯರಾದ ಕನ್ಯೆಯರೊಡನೆಯೂ ಲಕ್ಷ್ಮಣನಿಗೂ ರಾಜರುಗಳ ಪೃಥಿವೀದೇವಿಯೇ ಮೊದಲಾದ ಹದಿನಾರು ಮಂದಿ ರಾಜಪುತ್ರಿಯರೊಡನೆಯೂ ಪ್ರೀತಿಯಿಂದ ಜಿನಪೂಜಾಪುರಸ್ಸರವಾಗಿ ವಿವಾಹವನ್ನು ಮಾಡಿದನು.

**ತತಃ ಸರ್ವರ್ತುಷು ಪ್ರೇಮ್ಣಾ ತಾಭಿಸ್ತೌ ಸುಖಮೀಯತುಃ ।**
**ತಾಶ್ಚ ತಾಭ್ಯಾಮಯೋ ಯಸ್ಮಾದ್ಬಾಹ್ಯಹೇತೋಃ ಸುಖಪ್ರದಃ ॥ ೫೨೩ ॥**

ಸುಖವನ್ನುಂಟುಮಾಡುವ ವಿಧಿಯು ಬಾಹ್ಯಕಾರಣದಿಂದ ಸುಖಪ್ರದವಾಗಿರುವುದರಿಂದ ಬಳಿಕ ಆ ರಾಮಲಕ್ಷ್ಮಣರು ಸಮಸ್ತ ಋತುಗಳಲ್ಲಿ ಆ ಪತ್ನಿಯರೊಡನೆ ಪ್ರೇಮದಿಂದ ಸುಖವನ್ನು ಹೊಂದಿದರು. ಆ ಪತ್ನಿಯರೂ ರಾಮಲಕ್ಷ್ಮಣರೊಡನೆ ಸುಖವನ್ನು ಹೊಂದಿದರು.

**ಏವಂ ಸ್ವಪುಣ್ಯಪಾಕಾಪ್ತಸುಖಾನುಭವತತ್ಪರೌ ।**
**ತೌ ಲಬ್ಧಾವಸರಾವಿತ್ಥಂ ಕದಾಚಿತ್ಪ್ರೋಚತುರ್ನೃಪಮ್ ॥ ೫೨೪ ॥**

ಹೀಗೆ ತಮ್ಮ ಪುಣ್ಯಪರಿಪಾಕದಿಂದ ಹೊಂದಲ್ಪಟ್ಟ ಸುಖಾನುಭವದಲ್ಲಿ ತತ್ಪರರಾದ ಆ ರಾಮಲಕ್ಷ್ಮಣರು ಒಂದಾನೊಂದು ಕಾಲದಲ್ಲಿ ಅವಕಾಶವನ್ನು ಹೊಂದಿದವರಾಗಿ–ಸಮಯವರಿತು ದಶರಥಮಹಾರಾಜನನ್ನು ಕುರಿತು ಈ ರೀತಿಯಾಗಿ ಹೇಳಿದರು.

**ಕಾಶೀದೇಶೇ ಕ್ರಮಾಯಾತಮಸ್ಮತ್ಪುರವರಂ ಪುರು ।**
**ವಾರಾಣಸೀ ತದದ್ಯಾಭೂದನಧಿಷ್ಠಿತನಾಯಕಮ್ ॥ ೫೨೫ ॥**

''ಕಾಶೀದೇಶದಲ್ಲಿ ಪರಂಪರೆಯಿಂದ ಬಂದುದೂ ದೊಡ್ಡದೂ ಆದ ವಾರಾಣಸಿಯೆಂಬ ನಮ್ಮ ಶ್ರೇಷ್ಠನಗರವಿದೆ. ಈಗ ಅದು ಅನಾಯಕವಾಗಿದೆ.

**ಆಜ್ಞಾ ಯದ್ಯಸ್ತಿ ದೇವಸ್ಯ ತದಾವಾಮುದಿತೋದಿತಮ್ ।**
**ವಿಧಾಸ್ಯಾವ ಇತಿ ಶ್ರುತ್ವಾ ನರೇಂದ್ರಸ್ತದುದೀರಿತಮ್ ॥ ೫೨೬ ॥**

**ವಿಯೋಗಮೇತಯೋಃ ಸೋಢುಮಕ್ಷಮೋ ಭರತಾದಯಃ ।**
**ಅಸ್ಮದ್ವಂಶ್ಯಾ ಮಹೀನಾಥಾಃ ಸ್ಥಿತ್ವಾತ್ರೈವ ಪುರೇ ಪುರಾ ॥ ೫೨೭ ॥**

**ಷಟ್ಖಂಡಮಂಡಿತಾಂ ಪೃಥ್ವೀಂ ಬಹವೋಪಾಲಯಂಶ್ಚಿರಮ್ ।**
**ಏಕದೇಶಸ್ಥಯೋರೇವ ಸೂರ್ಯಾಚಂದ್ರಮಸೋರಿವ ॥ ೫೨೮ ॥**

**ವಿಭಾಸಿ ಭವತೋಸ್ತೇಜೋ ವ್ಯಾಪ್ನೋತಿ ಮಹಿಮಂಡಲಮ್ ।**
**ತತಃ ಕಿಂ ತತ್ಪ್ರಯಾಣೇನ ಮಾಗಾತಾಮಿತಿ ಸೋಽಬ್ರವೀತ್ ॥ ೫೨೯ ॥**

ಸ್ವಾಮಿಯ–ತಮ್ಮ ಆಜ್ಞೆಯಾದರೆ ನಾವುಗಳು ಅದನ್ನು ದಿನೇ ದಿನೇ ಉನ್ನತಿಯುಳ್ಳುದನ್ನಾಗಿ ಮಾಡುವೆವು'' ಈ ರೀತಿಯಾದ ಅವರ ಮಾತನ್ನು ಕೇಳಿ ಆ ದಶರಥಮಹಾರಾಜನು ಇವರುಗಳ ವಿಯೋಗವನ್ನು ಸಹಿಸಲಾರದವನಾಗಿ ''ಪೂರ್ವಕಾಲದಲ್ಲಿ ನಮ್ಮ ವಂಶೀಯರಾದ ಭರತನೇ ಮೊದಲಾದ ಅನೇಕ

ರಾಜರುಗಳು ಈ ಅಯೋಧ್ಯಾಪಟ್ಟಣದಲ್ಲೇ ಇದ್ದು ಷಟ್ಖಂಡಮಂಡಿತವಾದ ಪೃಥ್ವಿಯನ್ನು ಬಹುಕಾಲದವರೆಗೆ ಪಾಲಿಸಿದರು. ಸೂರ್ಯಚಂದ್ರರಂತೆ, ಒಂದೇ ಪ್ರದೇಶದಲ್ಲಿರುವ ನಿಮ್ಮಗಳ ಪ್ರಕಾಶಮಾನವಾದ ತೇಜಸ್ಸು ಭೂಮಂಡಲವನ್ನು ವ್ಯಾಪಿಸುತ್ತದೆ. ಆದುದರಿಂದ ಅಲ್ಲಿಯ ಪ್ರಯಾಣದಿಂದೇನು ಫಲ? ಹೋಗ ಬೇಡಿ'' ಎಂದು ಹೇಳಿದನು.

**ನಿಷಿದ್ಧಾವಪಿ ತೌ ತೇನ ಪುನಶ್ಚೈವಮವೋಚತಾಮ್ ।**
**ಆವಯೋರೇವ ದೇವಸ್ಯ ಸ್ನೇಹೋ ಯಾನನಿಷೇಧನಮ್** ॥ ೫೩೦ ॥

ಆ ದಶರಥಮಹಾರಾಜನಿಂದ ಅಡ್ಡಿಮಾಡಲ್ಪಟ್ಟವರಾದರೂ ಆ ರಾಮ ಲಕ್ಷ್ಮಣರು ಮತ್ತೂ ಈ ರೀತಿಯಾಗಿ ಹೇಳಿದರು ''ಸ್ವಾಮಿಯ ಪ್ರೀತಿಯು ನಮ್ಮಗಳಲ್ಲೇ ಪ್ರಯಾಣನಿಷೇಧವನ್ನು ಮಾಡುವುದು.

**ಶೌರ್ಯಸ್ಯ ಸಂಭವೋ ಯಾವದ್ಯಾವತ್ಪುಣ್ಯಸ್ಯ ಚ ಸ್ಥಿತಿಃ ।**
**ತಾವದುತ್ಸಾಹಸನ್ನಾಹಂ ನ ಮುಂಚಂತ್ಯುದಯಾರ್ಥಿನಃ** ॥ ೫೩೧ ॥

ಉನ್ನತಿಯನ್ನಿಚ್ಛಿಸುವವರು ಎಲ್ಲಿಯವರೆಗೆ ಶೌರ್ಯದ ಉತ್ಪತ್ತಿಯೂ ಪುಣ್ಯದ ಸ್ಥಿತಿಯೂ ಇರುವುವೋ ಅಲ್ಲಿಯವರೆಗೆ ಉತ್ಸಾಹದ ಸನ್ನಾಹವನ್ನು ಬಿಡುವುದಿಲ್ಲ.

**ಬುದ್ಧಿಂ ಶಕ್ತಿಮುಪಾಯಂ ಚ ಜಯಂ ಗುಣವಿಕಲ್ಪನಮ್ ।**
**ಸಮ್ಯಕ್ಪ್ರಕೃತಿಭೇದಾಂಶ್ಚ ವಿದಿತ್ವಾ ರಾಜಸೂನುನಾ** ॥ ೫೩೨ ॥

**ಮಹೋದ್ಯೋಗೋ ವಿಧಾತವ್ಯೋ ವಿರುದ್ಧವಿಜಿಗೀಷುಣಾ ।**
**ಸ್ವಭಾವವಿನಯೋದ್ಭೂತಾ ದ್ವಿಧಾ ಬುದ್ಧಿರ್ನಿಗದ್ಯತೇ** ॥ ೫೩೩ ॥

ಶತ್ರುಗಳನ್ನು ಜಯಿಸಲಿಚ್ಛಿಸುವ ರಾಜಪುತ್ರನು ಬುದ್ಧಿಯನ್ನೂ ಶಕ್ತಿಯನ್ನೂ ಉಪಾಯವನ್ನೂ ಜಯವನ್ನೂ ಗುಣಭೇದವನ್ನೂ ಪ್ರಜಾಭೇದಗಳನ್ನೂ ಚೆನ್ನಾಗಿ ತಿಳಿದು ಮಹೋದ್ಯೋಗವನ್ನು ಮಾಡಬೇಕು. ಬುದ್ಧಿಯು ಸ್ವಭಾವದಿಂದುಂಟಾ ದುದೆಂದೂ ವಿನಯದಿಂದುಂಟಾದುದೆಂದೂ ಎರಡು ವಿಧವಾಗಿ ಹೇಳಲ್ಪಡುತ್ತದೆ.

**ಮಂತ್ರೋತ್ಸಾಹಪ್ರಭೂತ್ಯುತ್ಥಾ ತ್ರಿಧಾ ಶಕ್ತಿರುದಾಹೃತಾ ।**
**ಪಂಚಾಂಗಮಂತ್ರನಿರ್ಣೀತಿರ್ಮಂತ್ರಶಕ್ತಿರ್ಮತಾಗಮೇ** ॥ ೫೩೪ ॥

ಶಕ್ತಿಯು ಮಂತ್ರದಿಂದುಂಟಾದ ಶಕ್ತಿಯೆಂದೂ ಉತ್ಸಾಹದಿಂದುಂಟಾದ ಶಕ್ತಿ ಯೆಂದೂ ಪ್ರಭೂತಿ–ಉತ್ಪತ್ತಿಯಿಂದುಂಟಾದ ಶಕ್ತಿಯೆಂದೂ ಮೂರು ವಿಧವಾಗಿ ಹೇಳಲ್ಪಟ್ಟಿದೆ. ಪಂಚಾಂಗಮಂತ್ರಗಳ ನಿರ್ಣಯವು ಮಂತ್ರಶಕ್ತಿಯೆಂದು ಆಗಮದಲ್ಲಿ ಹೇಳಿದೆ.

**ಶೌರ್ಯೋರ್ಜಿತತ್ವಮುತ್ಸಾಹಶಕ್ತಿಃ ಶಕ್ತಿಜ್ಞಸಮ್ಮತಾ ।**
**ಪ್ರಭುಶಕ್ತಿರ್ಮಹೀಭರ್ತುರಾಧಿಕ್ಯಂ ಕೋಶದಂಡಯೋಃ** ॥ ೫೩೫ ॥

ಶೌರ್ಯದ ಆಧಿಕ್ಯವು ಶಕ್ತಿಯನ್ನು ತಿಳಿದವರಿಗೆ ಸಮ್ಮತವಾದ ಉತ್ಸಾಹ ಶಕ್ತಿಯಾಗಿರುತ್ತದೆ. ದೊರೆಯ ಭಂಡಾರದ ಮತ್ತು ಶಿಕ್ಷೆಯ ಆಧಿಕ್ಯವು ಪ್ರಭು ಶಕ್ತಿಯಾಗಿರುತ್ತದೆ.

**ಸಾಮಪ್ರದಾನೋಪಪ್ರದಾಂ ಭೇದಂ ದಂಡಂ ಚ ನಯಕೋವಿದಾಃ ।**
**ವದಂತ್ಯುಪಾಯಾಂಶ್ಚತುರೋ ಯೈರರ್ಥಃ ಸಾಧ್ಯತೇ ನೃಪೈಃ** ॥ ೫೩೬ ॥

ರಾಜರುಗಳು ಯಾವುವುಗಳಿಂದ ಅರ್ಥ–ಪ್ರಯೋಜನವನ್ನು ಸಾಧಿಸುತ್ತಾರೋ ಅಂತಹ ಉಪಾಯಗಳನ್ನು ಸಾಮದೊಡನೆ ಉಪಪ್ರದಾ(ಲಂಚ), ಭೇದ, ದಂಡ ಗಳೆಂದು ನಾಲ್ಕು ಪ್ರಕಾರವಾಗಿ ನಯವನ್ನು ತಿಳಿದ ಪ್ರಾಜ್ಞರು ಹೇಳುತ್ತಾರೆ.

**ಪ್ರಿಯಂ ಹಿತಂ ವಚಃ ಕಾಯಪರಿಷ್ವಂಗಾದಿ ಸಾಮ ತತ್ ।**
**ಹಸ್ತ್ಯಶ್ವದೇಶರತ್ನಾದಿದತ್ತಿಃ ಸೋಪಪ್ರದೋದಿತಾ** ॥ ೫೩೭ ॥

ಪ್ರಿಯವೂ ಹಿತವೂ ಆದ ವಚನವೂ ಶರೀರಾಲಿಂಗನವೇ ಮೊದಲಾದುದೂ ಯಾವುದುಂಟೋ ಅದು ಸಾಮೋಪಾಯವಾಗಿರುತ್ತದೆ. ಆನೆ ಕುದುರೆ ನಾಡು ರತ್ನ ಇವೇ ಮೊದಲಾದ ವಸ್ತುಗಳ ದಾನವಾವುದುಂಟೋ ಅದು ಉಪಪ್ರದೋಪಾಯ ವೆಂದು ಹೇಳಲ್ಪಟ್ಟಿದೆ.

**ಕೃತ್ಯಾನಾಮುಪಜಾಪೇನ ಸ್ವೀಕೃತಿಂ ಭೇದಮಾದಿಶೇತ್ ।**
**ಸಸ್ಯಮುಷ್ಟಿವಧಂ ದಾಹಲೋಪವಿಧ್ವಂಸನಾದಿಕಮ್** ॥ ೫೩೮ ॥

**ಶತ್ರುಕ್ಷಯಕರಂ ಕರ್ಮ ಪಂಡಿತೈರ್ದಂಡ ಇಷ್ಯತೇ ।**
**ಇಂದ್ರಿಯಾಣಾಂ ನಿಜಾರ್ಥೇಷು ಪ್ರವೃತ್ತಿರವಿರೋಧಿನೀ** ॥ ೫೩೯ ॥

**ಕಾಮಾದಿಶತ್ರುವಿತ್ರಾಸೋ ವಾ ಜಯೋ ಜಯಶಾಲಿನಃ ।**
**ಸಂಧಿಃ ಸ ವಿಗ್ರಹೋ ನೇತುರಾಸನಂ ಯಾನಸಂಶ್ರಯೌ** ॥ ೫೪೦ ॥

**ದ್ವೈಧೀಭಾವಶ್ಚ ಷಟ್ಪ್ರೋಕ್ತಾ ಗುಣಾಃ ಪ್ರಣಯಿನಃ ಶ್ರಿಯಃ ।**
**ಕೃತವಿಗ್ರಹಯೋಃ ಪಶ್ಚಾತ್ಕೇನಚದ್ಧೇತುನಾ ತಯೋಃ** ॥ ೫೪೧ ॥

**ಮೈತ್ರೀಭಾವಃ ಸ ಸಂಧಿಃ ಸ್ಯಾತ್ಸಾವಧಿರ್ವಾ ಗತಾವಧಿಃ ।**
**ಪರಸ್ಪರಾಪಕಾರೋರಿವಿಜಿಗೀಷ್ವೋಃ ಸ ವಿಗ್ರಹಃ** ॥ ೫೪೨ ॥

ಭೇದಿಸುವಿಕೆಯಿಂದ ಕಾರ್ಯಗಳ–ಪ್ರಯೋಜನಗಳ ಸ್ವೀಕಾರವನ್ನು ಭೇದೋ ಪಾಯವನ್ನಾಗಿ ಹೇಳಬೇಕು. ಬೆಳೆಯನಾಶ, ಮುಷ್ಟಿಯಿಂದ ಹಿಂಸಿಸುವುದು, ಸುಡುವುದು, ಅಪಹರಿಸುವುದು, ಧ್ವಂಸಮಾಡುವುದು ಇವೇ ಮೊದಲಾದ ಶತ್ರುನಾಶಕರವಾದ ಕಾರ್ಯವು ದಂಡೋಪಾಯವೆಂದು ಪ್ರಾಜ್ಞರಿಂದ ಇಚ್ಛಿಸಲ್ಪ ಟ್ಟಿದೆ(ಹೇಳಲ್ಪಟ್ಟಿದೆ). ಇಂದ್ರಿಯಗಳ ಸ್ವವಿಷಯಗಳಲ್ಲಿ ಪರಸ್ಪರವಿರೋಧವಿಲ್ಲ ದಿರುವ ಪ್ರವೃತ್ತಿಯ ಅಥವಾ ಕಾಮಕ್ರೋಧಾದಿಶತ್ರುಗಳಿಗೆ ವಿಶೇಷ ಭಯವ ನ್ನುಂಟುಮಾಡುವಿಕೆಯು ಜಯಶಾಲಿಯ ಜಯವಾಗಿರುತ್ತದೆ. ಲಕ್ಷ್ಮಿಯ ಪ್ರಿಯ ನಿಗೆ–ಸಂಪತ್ತಿಯನ್ನು ಪ್ರೀತಿಸುವವನಿಗೆ ಸಂಧಿ, ವಿಗ್ರಹ, ಆಸನ, ಯಾನ, ಸಂಶ್ರಯ, ದ್ವೈಧೀಭಾವಗಳೆಂಬ ಆರು ಗುಣಗಳು ಹೇಳಲ್ಪಟ್ಟಿವೆ. ಯುದ್ಧವನ್ನು ಮಾಡಿದವರಲ್ಲಿ ಈರ್ವರಲ್ಲಿ ಬಳಿಕ ಯಾವುದೋ ಕಾರಣದಿಂದ ಅವಧಿಯುಳ್ಳ ಅಥವಾ ಅವಧಿ ಯಿಲ್ಲದ ಮಿತ್ರತ್ವವು ಸಂಧಿಯೆನ್ನಿಸುವುದು. ಇದಿರಾಳಿಯನ್ನು ಜಯಿಸಬೇಕೆಂಬ ಇಚ್ಛೆಯುಳ್ಳ ಈರ್ವರಲ್ಲಿ ಉಂಟಾಗುವ ಪರಸ್ಪರಾಪಕಾರವು ವಿಗ್ರಹವಾಗಿರುವುದು.

**ಮಾಮಿಹಾನ್ಯೋಹಮಪ್ಯನ್ಯಮಶಕ್ತೋ ಹಂತುಮಿತ್ಯಸೌ ।**
**ತೂಷ್ಣೀಂಭಾವೋ ಭವೇನ್ನೇತುರಾಸನಂ ವೃದ್ಧಿಕಾರಣಮ್ ।** ॥ ೫೪೩ ॥

''ಇಲ್ಲಿ ಬೇರೆಯವನು ನನ್ನನ್ನು ಕೊಲ್ಲುವುದಕ್ಕೆ ಅಶಕ್ತನು. ನಾನು ಬೇರೆ ಯವನನ್ನು ಕೊಲ್ಲುವುದಕ್ಕೆ ಅಶಕ್ತನು'' ಹೀಗೆಂದು ಸುಮ್ಮನಿರುವಿಕೆಯು ಆ ಮನು ಷ್ಯನ ವೃದ್ಧಿಗೆ ಕಾರಣವಾದ ಆಸನವಾಗುವುದು.

**ಸ್ವವೃದ್ಧೌ ಶತ್ರುಹಾನೌ ವಾ ದ್ವಯೋರ್ವಾಭ್ಯುದ್ಯತಂ ಸ್ಮೃತಮ್ ।**
**ಅರಿಂ ಪ್ರತಿ ವಿಭೋರ್ಯಾನಂ ತಾವನ್ಮಾತ್ರಫಲಪ್ರದಮ್** ॥ ೫೪೪ ॥

ತನ್ನ ವೃದ್ಧಿಯಾಗುತ್ತಿರಲು ಅಥವಾ ಶತ್ರುವಿನ ಹಾನಿಯಾಗುತ್ತಿರಲು ಶತ್ರುವನ್ನು ಕುರಿತು ಪ್ರಭುವಿನ ಉದ್ಯಮವು ಯಾನವೆಂದು ಸ್ಮರಿಸಲ್ಪಟ್ಟಿದೆ. ಆ ಯಾನವು ವೃದ್ಧಿ ಅಥವಾ ಹಾನಿರೂಪವಾದ ಫಲವನ್ನು ಮಾತ್ರ ಕೊಡುವುದು.

**ಅನನ್ಯಶರಣಸ್ಯಾಹುಃ ಸಂಶ್ರಯಂ ಶತ್ರುಸಂಶ್ರಯಮ್ ।**
**ಸಂಧಿವಿಗ್ರಹಯೋರ್ವೃತ್ತಿರ್ದ್ವೈಧೀಭಾವೋ ದ್ವಿಷೌ ಪ್ರತಿ** ॥ ೫೪೫ ॥

ಬೇರೆ ರಕ್ಷಕರಿಲ್ಲದವನು ಶತ್ರುವಿನ ಆಶ್ರಯವನ್ನು ಹೊಂದಿದರೆ ಅದನ್ನು ಆಶ್ರಯವನ್ನಾಗಿ ಹೇಳುತ್ತಾರೆ. ಇಬ್ಬರು ಶತ್ರುಗಳನ್ನು ಕುರಿತು ಸಂಧಿಯ ಸ್ಥಿತಿಯೂ ಕಲಹದ ಸ್ಥಿತಿಯೂ ಉಂಟಾದರೆ ಅದು ದ್ವೈಧೀಭಾವವಾಗುವುದು.

**ಸ್ವಾಮ್ಯಮಾತ್ಯೌ ಜನಸ್ಥಾನಂ ಕೋಶೋ ದಂಡಃ ಸಗುಪ್ತಿಕಃ ।**
**ಮಿತ್ರಂ ಚ ಭೂಮಿಪಾಲಸ್ಯ ಸಪ್ತ ಪ್ರಕೃತಯಃ ಸ್ಮೃತಾಃ ॥ ೫೪೬ ॥**

ರಾಜನಿಗೆ ಸ್ವಾಮಿ, ಅಮಾತ್ಯ, ಜನಸ್ಥಾನ(ದೇಶ) ಭಂಡಾರ, ದಂಡ, ಅಂಗರಕ್ಷಕ, ಮಿತ್ರ ಇವು ಏಳು ಪ್ರಕೃತಿಗಳೆಂದು ಎಣಿಸಲ್ಪಟ್ಟಿವೆ.

**ಇಮೇ ರಾಜ್ಯಸ್ಥಿತೇಃ ಪ್ರಾಜ್ಞೈಃ ಪದಾರ್ಥಾ ಹೇತವೋ ಮತಾಃ ।**
**ತೇಷೂಪಾಯವತೀ ಶಕ್ತಿಃ ಪ್ರಧಾನಾ ವ್ಯವಸಾಯಿನೀ ॥ ೫೪೭ ॥**

ಈ ಪದಾರ್ಥಗಳು ರಾಜ್ಯದ ಸ್ಥಿತಿಗೆ ಕಾರಣಗಳೆಂದು ಪ್ರಾಜ್ಞರಿಂದ ಸಮ್ಮತವಾಗಿವೆ. ಅವುಗಳಲ್ಲಿ ಉಪಾಯವುಳ್ಳುದೂ ವ್ಯವಸಾಯವುಳ್ಳುದೂ ಆದ ಶಕ್ತಿಯು ಮುಖ್ಯವಾದುದು.

**ಪಾನೀಯಂ ಖನನಾದ್ವಹ್ನಿರ್ಮಥನಾದುಪಲಭ್ಯತೇ ।**
**ಅದೃಷ್ಟಮಪಿ ಸಂಪ್ರಾಪ್ಯಂ ಸತ್ಫಲಂ ವ್ಯವಸಾಯತಃ ॥ ೫೪೮ ॥**

ಅಗೆಯುವುದರಿಂದ ಜಲವೂ ಘರ್ಷಣೆಯಿಂದ ಬೆಂಕಿಯೂ ಪಡೆಯಲಾಗುತ್ತದೆ. ಸತ್ಫಲವುಳ್ಳ ಅದೃಷ್ಟವೂ ವ್ಯವಸಾಯದಿಂದ ಹೊಂದಲ್ಪಡತಕ್ಕುದಾಗಿದೆ.

**ಫಲಪ್ರಸವಹೀನಂ ವಾ ಸಹಕಾರಂ ವಿಹಂಗಮಾಃ ।**
**ವಿವೇಕವಂತೋನಾಪ್ತೋಪದಿಷ್ಟಂ ವಾ ಕುತ್ಸಿತಾಗಮಮ್ ॥ ೫೪೯ ॥**

**ರಾಜಪುತ್ರಮನುತ್ಸಾಹಂ ತ್ಯಜಂತಿ ವಿಪುಲಾಃ ಶ್ರಿಯಃ ।**
**ಸ್ವಕೀಯಯೌಧಸಾಮಂತಮಹಾಮಾತ್ಯಾದಯೋಪಿ ಚ ॥ ೫೫೦ ॥**

ಪಕ್ಷಿಗಳು ಫಲಪುಷ್ಪರಹಿತವಾದ ಮಾವಿನ ಮರವನ್ನು ತ್ಯಜಿಸುವಂತೆಯೂ ವಿವೇಕವುಳ್ಳವರು ಅನಾಪ್ತನಿಂದ ಉಪದೇಶಿಸಲ್ಪಟ್ಟಿರುವ ದುಷ್ಟಾಗಮ–ಶಾಸ್ತ್ರವನ್ನು ತ್ಯಜಿಸುವಂತೆಯೂ ಅಧಿಕವಾದ ಸಂಪತ್ತುಗಳೂ ತನ್ನ ಯುದ್ಧಭಟರೂ ಸಾಮಂತರಾಜರೂ ಮಹಾಮಂತ್ರಿಗಳೇ ಮೊದಲಾದವರೂ ಉತ್ಸಾಹವಿಲ್ಲದಿರುವ ರಾಜಪುತ್ರನನ್ನು ತ್ಯಜಿಸುತ್ತಾರೆ.

**ಪುತ್ರಂ ಪಿತಾಪ್ಯನುದ್ಯೋಗಂ ಮತ್ವಾಯೋಗ್ಯಂ ವಿಷೀದತಿ ।**
**ಇತಿ ವಿಜ್ಞಾಪನಂ ಶ್ರುತ್ವಾ ತಯೋರ್ನರಪತಿಸ್ತದಾ ॥ ೫೫೧ ॥**

**ಯುವಾಭ್ಯಾಮುಕ್ತಮೇವೇದಂ ಪ್ರತ್ಯಪಾದಿ ಕುಲೋಚಿತಮ್ ।**
**ಇತ್ಯಾವಿಷ್ಕೃತಹರ್ಷಾಬ್ಧಿರ್ಭಾವಿಸೀರಭೃತಃ ಸ್ವಯಮ್ ॥ ೫೫೨ ॥**

**ವಿನ್ಯಸ್ಯ ರಾಜ್ಯಯೋಗ್ಯೋರುಮುಕುಟಂ ಲಕ್ಷ್ಮಣಸ್ಯ ಚ ।**
**ಪ್ರಬುದ್ಧಯೌವರಾಜ್ಯಾಧಿಪತ್ಯಪಟ್ಟಂ ಮಹೌಜಸಃ ॥ ೫೫೩ ॥**

**ಮಹಾಭ್ಯುದಯಸಂಪಾದಿಸತ್ಯಾಶೀರ್ಭಿಃ ಪ್ರವರ್ತಯನ್ ।**
**ಪುತ್ರೌ ಪ್ರಸ್ಥಾಪಯಾಮಾಸ ಪುರೀಂ ವಾರಾಣಸೀಂ ಪ್ರತಿ ॥ ೫೫೪ ॥**

ತಂದೆಯೂ ಉದ್ಯೋಗವಿಲ್ಲದ ಮಗನನ್ನು ಅಯೋಗ್ಯನನ್ನಾಗಿ ತಿಳಿದು ದುಃಖಪಡುತ್ತಾನೆ'' ಈ ಪ್ರಕಾರವಾದ ಆ ರಾಮಲಕ್ಷ್ಮಣರ ವಿಜ್ಞಾಪನೆಯನ್ನು ಕೇಳಿ ದಶರಥಮಹಾರಾಜನು ಆಗ ರಾಮಲಕ್ಷ್ಮಣರನ್ನು ಕುರಿತು ''ನೀವುಗಳು ಹೇಳಿದ ಈ ಮಾತು ವಂಶೋಚಿತವಾಗಿಯೇ ಪ್ರತಿಪಾದಿಸಲ್ಪಟ್ಟಿದೆ'' ಎಂದು ಪ್ರಕಟಿಸಲ್ಪಟ್ಟ ಸಂತೋಷವೆಂಬ ಸಮುದ್ರವುಳ್ಳವನಾಗಿ ಮುಂದೆ ಹಲಧರನಾಗುವ ರಾಮನಿಗೆ ತಾನು ರಾಜ್ಯಯೋಗ್ಯವಾದ ಮಹಾಕಿರೀಟವನ್ನಿರಿಸಿ ಮಹಾತೇಜಸ್ವಿಯಾದ ಲಕ್ಷ್ಮಣನಿಗೂ ಉನ್ನತವಾದ ಯೌವರಾಜ್ಯಾಧಿಪತ್ಯದ ಪಟ್ಟವನ್ನು ಕಟ್ಟಿ ಮಹಾಭ್ಯುದಯವನ್ನುಂಟುಮಾಡುವ ಸತ್ಯಾಶೀರ್ವಾದಗಳಿಂದ ಪ್ರವರ್ತಿಸುವವನಾಗಿ ವಾರಾಣಸೀ ನಗರಕ್ಕೆ ಪುತ್ರರನ್ನು ಪ್ರಯಾಣ ಮಾಡಿಸಿದನು.

**ಗತ್ವಾ ಪ್ರವಿಶ್ಯ ತಾಮುಚ್ಚೈಃ ಪೌರಾನ್ ಜಾನಪದಾನಪಿ ।**
**ದಾನಮಾನಾದಿಭಿಃ ಸಮ್ಯಕ್ ಸದಾ ತೋಷಯತೋಸ್ತಯೋಃ ॥ ೫೫೫ ॥**

**ದುಷ್ಟನಿಗ್ರಹಶಿಷ್ಟಾನುಪಾಲನಪ್ರವಿಧಾಯಿನೋಃ ।**
**ಅವಿಲಂಘಯತೋಃ ಪೂರ್ವಮರ್ಯಾದಾಂ ನೀತಿವೇದಿನೋಃ॥ ೫೫೬ ॥**

**ಪ್ರಜಾಪಾಲನಕಾರ್ಯೈಕನಿಷ್ಠಯೋರ್ನಿಷ್ಠಿತಾರ್ಥಯೋಃ ।**
**ಕಾಲೇ ಗಚ್ಛತಿ ಕಲ್ಯಾಣೈಃ ಕಲ್ಯೈರ್ನಿಶ್ಶಲ್ಯಸೌಖ್ಯದೈಃ ॥ ೫೫೭ ॥**

**ಇತೋ ಲಂಕಾಮಧಿಷ್ಠಾಯ ತ್ರಿಖಂಡಭರತಾವನೇಃ ।**
**ಅಧೀಶ್ವರೋಹಮೇವೇತಿ ಗರ್ವಪರ್ವತಭಾಸ್ಕರಃ ॥ ೫೫೮ ॥**

**ಸಂಭಾವಯಂತಮಾತ್ಮಾನಂ ರಾವಣಂ ಶತ್ರುರಾವಣಮ್ ।**
**ನಿಜತೇಜಃಪ್ರತಾಪಾಪಹಸ್ತಿತೋಷ್ಣಾಂಶುಮಂಡಲಮ್ ॥ ೫೫೯ ॥**

**ದಂಡೋಪನತಸಾಮಂತವಿನಮ್ರಮುಕುಟಾಗ್ರಿಮ– ।**
**ಸ್ಫುರನ್ಮಣಿಮಯೂಖಾಂಬುವಿಕಸಚ್ಚರಣಾಂಬುಜಮ್ ॥ ೫೬೦ ॥**

**ನಿಜಾಸನೇ ಸಮಾಸೀನಂ ಕೀರ್ಯಮಾಣಪ್ರಕೀರ್ಣಕಮ್ ।**
**ಅವತೀರ್ಣಂ ಧರಾಭಾಗಮಿವ ನೀಲನವಾಂಬುದಮ್ ॥ ೫೬೧ ॥**

**ಆಭಾಷಮಾಣಮಾಕ್ಷಿಪ್ಯ ಸಭ್ರೂಭಂಗಂ ಭಯಂಕರಮ್ ।**
**ಅನುಜೈರಾತ್ಮಜೈರ್ಮೌಲೈರ್ಭಟೈಶ್ಚ ಪರಿವಾರಿತಮ್ ॥ ೫೬೨ ॥**

**ಪಿಂಗೋತ್ತುಂಗಜಟಾಜೂಟಪ್ರಭಾಪಿಂಜರಿತಾಂಬರಃ ।**
**ಇಂದ್ರನೀಲಾಕ್ಷಸೂತ್ರೋರುವಲಯಾಲಂಕೃತಾಂಗುಲಿಃ ॥ ೫೬೩ ॥**

**ತೀರ್ಥಾಂಬುಸಂಭೃತೋದ್ಭಾಸಿಪದ್ಮರಾಗಕಮಂಡಲುಃ ।**
**ಸುವರ್ಣಸೂತ್ರಯಜ್ಞೋಪವೀತಪೂತನಿಜಾಕೃತಿಃ ॥ ೫೬೪ ॥**

**ಖಾದೇತ್ಯ ನಾರದೋನ್ಯೇದ್ಯುಃ ಸೋಪಚಾರಂ ಸಮೈಕ್ಷತ ।**
**ತದಾಲೋಕ್ಯ ಚಿರಾದ್ದ್ರಷ್ಟುಂ ದೃಷ್ಟೋಸೀತಸ್ತ್ವಯಾಸ್ಮತಾಮ್ ॥ ೫೬೫ ॥**

**ಕೌತಸ್ಕುತಂ ಕಿಮರ್ಥಂ ವಾ ತವಾಗಮನಮಿತ್ಯಸೌ ।**
**ರಾವಣೇನಾನುಯುಕ್ತಃ ಸನ್ ಕುಧೀರಿದಮಭಾಷತ ॥ ೫೬೬ ॥**

ಹೋಗಿ ಆ ವಾರಾಣಸೀಪುರಿಯನ್ನು ಪ್ರವೇಶಿಸಿ ಪುರನಿವಾಸಿಗಳನ್ನೂ ದೇಶವಾಸಿಗಳನ್ನೂ ಯಾವಾಗಲೂ ದಾನಮಾನಾದಿಗಳಿಂದ ಚೆನ್ನಾಗಿ ಸಂತೋಷಪಡಿಸುವವರೂ ದುಷ್ಟನಿಗ್ರಹವನ್ನೂ ಶಿಷ್ಟಪರಿಪಾಲನವನ್ನೂ ಮಾಡುವವರೂ ಪೂರ್ವಮರ್ಯಾದೆಯನ್ನು ಮೀರದಿರುವವರೂ ನೀತಿಯನ್ನು ತಿಳಿದಿರುವವರೂ ಪ್ರಜಾಪಾಲನಕಾರ್ಯದಲ್ಲಿ ಮುಖ್ಯವಾದ ನಿಷ್ಠೆಯುಳ್ಳವರೂ ಆದ ಆ ರಾಮಲಕ್ಷ್ಮಣರ ಕಾಲವು ಕೊರತೆಯಿಲ್ಲದ ಸುಖವನ್ನು ಕೊಡುವುವೂ ಶ್ರೇಷ್ಠಗಳೂ ಆದ ಶುಭವಿಷಯಗಳಿಂದ ಕಳೆಯುತ್ತಿರಲು ಇತ್ತ ಲಂಕಾನಗರದಲ್ಲಿದ್ದು ''ತ್ರಿಖಂಡ ಭರತಭೂಮಿಗೆ ನಾನೇ ಅಧೀಶ್ವರ'' ಎಂದು ಗರ್ವವೆಂಬ ಪರ್ವತದಲ್ಲಿ ಸೂರ್ಯನಾಗಿ ತನ್ನನ್ನು ಚೆನ್ನಾಗಿ ಭಾವಿಸುವವನೂ ಶತ್ರುಗಳಿಗೆ ಅಳುವನ್ನುಂಟುಮಾಡುವವನೂ ತನ್ನ ತೇಜಸ್ಸಿನಿಂದಲೂ ಪ್ರತಾಪದಿಂದಲೂ ಸೂರ್ಯಮಂಡಲವನ್ನು ಕೀಳುಮಾಡಿರುವವನೂ ದಂಡೋಪಾಯದಿಂದ ವಶೀಕೃತರಾದ ಸಾಮಂತರಾಜರುಗಳ ಬಗ್ಗಿದ ಕಿರೀಟಗಳ ಮೇಲಿರುವ ಪ್ರಕಾಶಮಾನವಾದ ರತ್ನಗಳ ಕಿರಣವೆಂಬ ಜಲದಿಂದ ವಿಕಸಿತವಾದ ಪಾದಕಮಲವುಳ್ಳವನೂ ತನ್ನ ಆಸನದಲ್ಲಿ ಕುಳಿತಿರುವವನೂ ಚಾಮರಗಳಿಂದ ಬೀಸಲ್ಪಡುತ್ತಿರುವವನೂ ಭೂಭಾಗವನ್ನು ಕುರಿತು ಅವತರಿಸಿದ ನೀಲಮೇಘದಂತಿರುವವನೂ ಆಕ್ಷೇಪಿಸಿ ಮಾತನಾಡುವವನೂ ಸಹೋದರರಿಂದಲೂ ಪುತ್ರರಿಂದಲೂ ಅಂಗರಕ್ಷಕ–ಭಟರಿಂದಲೂ ಆವರಿಸಲ್ಪಟ್ಟವನೂ ಆದ ರಾವಣನನ್ನು ಎತ್ತರವಾದ ಕೆಂಜೆಡೆಯ ಗಂಟಿನ ಕಾಂತಿಯಿಂದ ಆಕಾಶವನ್ನು ಕೆಂಚಾಗಿಮಾಡಿರುವವನೂ ಇಂದ್ರನೀಲಮಣಿಯ ಜಪಸರವನ್ನು ಬೆರಳಿಗೆ ದೊಡ್ಡದಾಗಿ ಸುತ್ತಿರುವವನೂ ತೀರ್ಥಜಲದಿಂದ ತುಂಬಲ್ಪಟ್ಟ ಪ್ರಕಾಶಮಾನವಾದ ಪದ್ಮರಾಗರತ್ನದ ಕಮಂಡಲುಳ್ಳವನೂ ಬಂಗಾರದ ಎಳೆಗಳುಳ್ಳ

ಯಜ್ಞೋಪವೀತದಿಂದ ಪವಿತ್ರವಾದ ತನ್ನ ಆಕೃತಿಯುಳ್ಳವನೂ ಆದ ನಾರದ ಮುನಿಯು ಮತ್ತೊಂದು ದಿವಸ ಆಕಾಶದಿಂದ ಬಂದು ಉಪಚಾರದೊಡನೆ ಕೂಡಿ ಕಂಡನು. ಆಗ ನೋಡಿ "ಮಂಗಲಸ್ವರೂಪನೆ! ಬಹುಕಾಲದನಂತರ ಕಾಣಿಸಿ ಕೊಂಡವನಾಗಿರುತ್ತಿ. ಈ ಕಡೆಯಲ್ಲಿ ಕುಳಿತುಕೊಳ್ಳೋಣವಾಗಲಿ. ಎಲ್ಲೆಲ್ಲಿಂದ ಏತಕ್ಕೋಸ್ಕರ ನಿನ್ನ ಆಗಮನ?" ಎಂದು ರಾವಣನಿಂದ ಪ್ರಶ್ನೆ ಮಾಡಲ್ಪಟ್ಟವನಾಗಿ ದುರ್ಬುದ್ಧಿಯುಳ್ಳ ಈ ನಾರದನು ಈ ಮಾತನ್ನು ಹೇಳಿದನು.

**ದೃಪ್ತದುರ್ಜಯಭೂಪೋಗ್ರಕರಿಕಂಠೀರವಾಯಿತ ।**
**ಏತನ್ಮನಃ ಸಮಾಧಾಯ ದಶಾಸ್ಯ ಶ್ರೋತುಮರ್ಹಸಿ ॥ ೫೬೭ ॥**

"ಗರ್ವಿತರೂ ದುರ್ಜಯರೂ ಆದ ರಾಜರುಗಳೆಂಬ ಭಯಂಕರವಾದ ಆನೆಗಳಿಗೆ ಸಿಂಹದಂತಿರುವ ದಶಮುಖನೆ! ಮನಸ್ಸನ್ನು ಸಮಾಧಾನಗೊಳಿಸಿ ಈ ವಿಷಯವನ್ನು ಕೇಳುವುದಕ್ಕೆ ಅರ್ಹನಾಗಿರುತ್ತಿ.

**ವಾರಾಣಸೀಪುರಾದದ್ಯ ಮಮಾತ್ರಾಗಮನಂ ವಿಭೋ ।**
**ತತ್ಪುರೀಪತಿರಿಕ್ಷ್ವಾಕುವಂಶಾಂಬರದಿವಾಕರಃ ॥ ೫೬೮ ॥**

**ಸುತೋ ದಶರಥಾಖ್ಯಸ್ಯ ರಾಮನಾಮಾತಿವಿಶ್ರುತಃ ।**
**ಕುಲರೂಪವಯೋಜ್ಞಾನಶೌರ್ಯಸತ್ವಾದಿಭಿರ್ಗುಣೈಃ ॥ ೫೬೯ ॥**

**ಅನಣೀಯಾನ್ಸ್ವಪುಣ್ಯೇನ ಸ ಸಂಪ್ರತ್ಯುದಯೋನ್ಮುಖಃ ।**
**ತಸ್ಮೈ ಯಜ್ಞಾಪದೇಶೇನ ಸ್ವಯಮಾಹೂಯ ಕನ್ಯಕಾಮ್ ॥ ೫೭೦ ॥**

**ಸ್ವನಾಮಶ್ರವಣಾದೇಯಗರ್ವಿಕಾಮುಕಚೇತಸಮ್ ।**
**ಪರ್ಯಾಪ್ತಸ್ತ್ರೀಗುಣೈಕಧ್ಯವೃತ್ತಿಸಂಪತ್ಕೃತಾಕೃತಿಮ್ ॥ ೫೭೧ ॥**

**ನೇತ್ರಗೋಚರಮಾತ್ರಾಖಿಲಾನಂಗಸುಖದಾಯಿನೀಮ್ ।**
**ಜೇತುಂ ಸಂಭೋಗರತ್ಯಂತೇ ಶಕ್ತಾಂ ಮುಕ್ತಿವಧೂಮಪಿ ॥ ೫೭೨ ॥**

**ತ್ವಾಮನಾದೃತ್ಯ ಯೋಗ್ಯಾಂ ತೇ ತ್ರಿಖಂಡಾಖಂಡಸಂಪದಮ್ ।**
**ಸ್ತ್ರೀರತ್ನಂ ಸ್ವಾತ್ಮಜಾಂ ಲಕ್ಷ್ಮೀಮಿವಾದಾನ್ಮಿಥಿಲಾಧಿಪಃ ॥ ೫೭೩ ॥**

ಪ್ರಭುವೇ! ಈ ದಿವಸ ವಾರಾಣಸೀಪುರದಿಂದ ಇಲ್ಲಿಗೆ ನನ್ನ ಆಗಮನವಾಗಿದೆ. ಇಕ್ಷ್ವಾಕುವಂಶವೆಂಬ ಆಕಾಶಕ್ಕೆ ಸೂರ್ಯನೂ ದಶರಥನೆಂಬವನ ಪುತ್ರನೂ ಬಹುಪ್ರಖ್ಯಾತನೂ ಆದ ರಾಮನೆಂಬವನು ಆ ವಾರಾಣಸೀನಗರದ ದೊರೆ ಯಾಗಿದ್ದಾನೆ. ಕುಲ ರೂಪ ವಯಸ್ಸು ಜ್ಞಾನ ಶೌರ್ಯ ಸತ್ಯ ಇವೇ ಮೊದಲಾದ ಗುಣಗಳಿಂದ ದೊಡ್ಡವನಾದ ಆ ರಾಮನು ಈಗ ತನ್ನ ಪುಣ್ಯದಿಂದ ಉನ್ನತಿಗೆ ಅಭಿಮುಖನಾಗಿರುತ್ತಾನೆ. ಮಿಥಿಲಾಧಿಪತಿಯಾದ ಜನಕಮಹಾರಾಜನು ಯಜ್ಞದ ನೆವದಿಂದ ಅವನನ್ನು ತಾನು ಕರೆದು ಲಕ್ಷ್ಮಿಯಂತಿರುವವಳೂ ತನ್ನ ಪುತ್ರಿಯೂ ಕನ್ಯೆಯೂ ತನ್ನ ಹೆಸರಿನ ಶ್ರವಣದಿಂದ ಗ್ರಹಣಮಾಡಲ್ಪಡತಕ್ಕವಳೆಂದು ಗರ್ವ ಪಡುವ ಕಾಮುಕರ ಮನಸ್ಸುಳ್ಳವಳೂ ಪೂರ್ಣವಾದ ಸ್ತ್ರೀಗುಣಗಳನ್ನು ಒಂದು ಕಡೆಯಲ್ಲಿರಿಸಿ ಆ ಸಂಪತ್ತಿಯಿಂದ ಮಾಡಲ್ಪಟ್ಟ ಆಕಾರವುಳ್ಳವಳೂ ದೃಷ್ಟಿಗೋಚರ ಳಾದ ಮಾತ್ರದಿಂದ ಎಲ್ಲರಿಗೂ ಕಾಮಸುಖವನ್ನು ಕೊಡುವವಳೂ ಸಂಭೋಗ ಸುಖದ ಕೊನೆಯಲ್ಲಿ ಮುಕ್ತಿವಧುವನ್ನೂ ಜಯಿಸುವುದಕ್ಕೆ ಸಮರ್ಥಳೂ ನಿನಗೆ ಯೋಗ್ಯಳೂ ತ್ರಿಖಂಡಗಳ ಅಖಂಡಸಂಪತ್ತಿಯೂ ಆದ ಸ್ತ್ರೀರತ್ನವನ್ನು ನಿನ್ನನ್ನು ಅನಾದರಿಸಿ ಆ ರಾಮನಿಗೆ ಕೊಟ್ಟನು.

**ತಸ್ಯ ಭೋಗೋಪಭೋಗೈಕನಿಷ್ಠಸ್ಯ ವಿಪುಲಶ್ರಿಯಃ ।**
**ಪಾರ್ಶ್ವೇ ಸ್ಥಿತ್ವಾಸಹಿಷ್ಣುತ್ವಾದ್ಭವಂತಮವಲೋಕಿತುಮ್ ॥ ೫೭೪ ॥**

**ಇಹ ಪ್ರೇಮ್ಣಾಗತೋಽಸ್ಮೀತಿ ನಾರದೋಕ್ತ್ಯಾ ಖಗೇಶಿನಾ ।**
**ಇಚ್ಛಾ ಪಶ್ಯತಿ ನೋ ಚಕ್ಷುಃ ಕಾಮಿನಾಮಿತ್ಯುದೀರಿತಮ್ ॥ ೫೭೫ ॥**

**ಸತ್ಯಂ ಪ್ರಕುರ್ವತಾ ಸದ್ಯಃ ಸೀತಾಸಂಬಂಧವಾಕ್ಶ್ರುತೇಃ ।**
**ಅನಂಗಶರಸಂಪಾತಜರ್ಝರೀಕೃತಚೇತಸಾ ॥ ೫೭೬ ॥**

**ಧನ್ಯಾನ್ಯತ್ರ ನ ಸಾ ಸ್ಥಾತುಂ ಯೋಗ್ಯಾ ಭಾಗ್ಯವಿಹೀನಕೇ ।**
**ಮಂದಾಕಿನ್ಯಾಃ ಸ್ಥಿತಿಃ ಕ್ವ ಸ್ಯಾತ್ತ್ಯಕ್ತ್ವಾ ವಿಹಾಯ ಮಹಾಂಬುಧಿಮ್ ॥ ೫೭೭ ॥**

**ಬಲಾತ್ಕಾರೇಣ ತಾಂ ತಸ್ಮಾದಪಹೃತ್ಯಾತಿದುರ್ಬಲಾತ್ ।**
**ರತ್ನಮಾಲಾಮಿವಾಲೋಲಾಂ ಕರಿಷ್ಯಾಮಿ ಮಮೋರಸಿ ॥ ೫೭೮ ॥**

**ಇತಿ ಕಾಮಾಗ್ನಿತಪ್ತೇನ ತೇನ ಪಾಪೇನ ಸಂಸದಿ ।**
**ಸ್ವಸ್ಯಾಮುಗಾರ್ಯನಾರ್ಯೇಣ ದುರ್ಜನಾನಾಮಿಯಂ ಗತಿಃ ॥ ೫೭೯ ॥**

ಭೋಗೋಪಭೋಗಗಳಲ್ಲಿ ಮುಖ್ಯವಾಗಿ ಆಸಕ್ತನೂ ಅಧಿಕವಾದ ಸಂಪತ್ತಿ ಯುಳ್ಳವನೂ ಆದ ಆ ಜನಕಮಹಾರಾಜನ ಬಳಿಯಲ್ಲಿದ್ದು ಸಹನವಾಗ ದಿದ್ದುದರಿಂದ ನಿನ್ನನ್ನು ನೋಡುವುದಕ್ಕೋಸ್ಕರ ಪ್ರೇಮದಿಂದ ಇಲ್ಲಿಗೆ ಬಂದವ ನಾಗಿದ್ದೇನೆ" ಈ ರೀತಿಯಾದ ನಾರದನ ಮಾತಿನಿಂದ "ಕಾಮುಕರ ಇಚ್ಛೆಯು ನೋಡುತ್ತದೆ, ಕಣ್ಣು ನೋಡುವುದಿಲ್ಲ" ಎಂಬ ನುಡಿಯನ್ನು ಸತ್ಯವನ್ನಾಗಿ ಮಾಡುವವನೂ ತತ್ಕ್ಷಣದಲ್ಲಿ ಸೀತಾಸಂಬಂಧವಾದ ಮಾತನ್ನು ಕೇಳಿದುದರಿಂದ ಕಾಮಬಾಣಗಳ ಪತನದಿಂದ ಜರ್ಝರಿತವಾದ ಚಿತ್ತವುಳ್ಳವನೂ "ಧನ್ಯಳಾದ ಆಕೆಯು ಬೇರೆಕಡೆ ಭಾಗ್ಯಹೀನನಲ್ಲಿರುವುದಕ್ಕೆ ಯೋಗ್ಯಳಲ್ಲ. ಗಂಗೆಯ ಇರುವಿ ಕೆಯು ಮಹಾಸಾಗರವನ್ನು ಬಿಟ್ಟು ಬೇರೆಲ್ಲಿರುವುದು? ಅತಿದುರ್ಬಲನಾದ ಆ ರಾಮನಿಂದ ಆಕೆಯನ್ನು ಬಲಾತ್ಕಾರದಿಂದ ಅಪಹರಿಸಿ ನನ್ನ ಹೃದಯದಲ್ಲಿ ರತ್ನಮಾಲೆಯನ್ನೋಪಾದಿಯಲ್ಲಿ ಚಲಿಸುವವಳನ್ನಾಗಿ ಮಾಡುವೆನು" ಎಂದು ಕಾಮಾಗ್ನಿಸಂತಪ್ತನೂ ಪಾಪಿಯೂ ಅನಾರ್ಯನೂ ಆದ ಆ ಖೇಚರೇಶ್ವರನಿಂದ ತನ್ನ ಸಭೆಯಲ್ಲಿ ಹೇಳಲ್ಪಟ್ಟಿತು. ಅನಾರ್ಯನಿಂದ ದುರ್ಜನರಿಗೆ ಇಂತಹ ಗತಿಯಾಗು ವುದು.

**ಸ ನಾರದಃ ಪುನಸ್ತತ್ರ ಪ್ರದೀಪ್ತಂ ಕೋಪಪಾವಕಮ್ ।**
**ಪ್ರಜ್ವಾಲಯಿತುಮಸ್ಯೇದಮಾಚಚಕ್ಷೇತಿಪಾಪಧೀಃ ॥ ೫೮೦ ॥**

ಅತ್ಯಂತ ಪಾಪಬುದ್ಧಿಯುಳ್ಳವನಾದ ಆ ನಾರದನು ಆ ರಾವಣನಲ್ಲಿ ಜನಿಸಿದ ಕೋಪವೆಂಬ ಬೆಂಕಿಯನ್ನು ಚೆನ್ನಾಗಿ ಉರಿಸುವುದಕ್ಕೋಸ್ಕರ ಇವನಿಗೆ ಮತ್ತೆ ಈ ಮಾತನ್ನು ಹೇಳಿದನು.

**ಪರಿಪ್ರಾಪ್ತೋದಯೋ ರಾಮೋ ಮಹಾರಾಜ್ಯಪದೇ ಸ್ಥಿತಃ ।**
**ಯೌವರಾಜ್ಯಪದೇ ತಸ್ಯ ಲಕ್ಷ್ಮಣೋಸ್ಯಾತ್ಸಹೋದ್ಭವಃ ॥ ೫೮೧ ॥**

"ಅಭ್ಯುದಯವನ್ನು ಹೊಂದಿರುವ ರಾಮನು ಮಹಾರಾಜ್ಯಪದವಿಯಲ್ಲಿರು ತ್ತಾನೆ. ಅವನ ಸಹೋದರನಾದ ಲಕ್ಷ್ಮಣನು ಯೌವರಾಜ್ಯಪದವಿಯಲ್ಲಿರುತ್ತಾನೆ.

**ವಾರಾಣಸೀಂ ಪ್ರವಿಷ್ಟಾಭ್ಯಾಂ ತಾಭ್ಯಾಂ ವಿಶ್ವನೃಪೇಶ್ವರಾಃ ।**
**ಸ್ವಸುತಾದಾನಸಮ್ಮಾನಿತಾಭ್ಯಾಂ ಸಂಬಂಧಮಾದಧುಃ ॥ ೫೮೨ ॥**

**ತತಸ್ತೇ ತೇನ ರಾಮೇಣ ಲಕ್ಷ್ಮಣಾವಿಷ್ಕೃತೌಜಸಾ ।**
**ನ ಯುದ್ಧಂ ಬುಧ್ಯತೇಸ್ಮಾಭಿಸ್ತ್ಯಜ್ಯತಾಂ ವಿಗ್ರಹಾಗ್ರಹಃ ॥ ೫೮೩ ॥**

ವಾರಾಣಸೀನಗರವನ್ನು ಪ್ರವೇಶಿಸಿರುವವರೂ ರಾಜನಿಂದ ತಮ್ಮ ಪುತ್ರಿಯರ ದಾನದಿಂದ ಸಮ್ಮಾನಿಸಲ್ಪಟ್ಟವರೂ ಆದ ಆ ರಾಮಲಕ್ಷ್ಮಣರೊಡನೆ ಎಲ್ಲಾ ರಾಜಾಧಿ ರಾಜರು ಸಂಬಂಧವನ್ನು ಧರಿಸಿದರು. ಆದುದರಿಂದ ಲಕ್ಷ್ಮಣನಿಂದ ಹೆಚ್ಚಿಸಲ್ಪಟ್ಟಿರುವ ಓಜಸ್ಸುಳ್ಳವನಾದ ಆ ರಾಮನೊಡನೆ ಯುದ್ಧವು ತಿಳಿಯಲ್ಪಡುವುದಿಲ್ಲ. ರಾಮ ನೊಡನೆ ಯಾವ ರಾಜರೂ ಯುದ್ಧವನ್ನು ಮಾಡುವುದು ಗೊತ್ತಾಗುವುದಿಲ್ಲವೆಂದು ಭಾವವು. ನಾವು ಯುದ್ಧದ ಆಗ್ರಹವನ್ನು ಬಿಡೋಣ."

**ಇತ್ಯೇತದುಕ್ತಮಾಕರ್ಣ್ಯ ಕುಪಿತಃ ಸ್ಮಿತಮುದ್ವಹನ್ ।**
**ಮತ್ಪ್ರಭಾವಂ ಮುನೇ ಮಂಕ್ಷು ಶ್ರೋಷ್ಯತೀತಿ ವಿಸೃಜ್ಯ ತಮ್॥ ೫೮೪ ॥**

ಮಂತ್ರಶಾಲಾಂ ಪ್ರವಿಶ್ಯಾತ್ಮಗತಮಿತ್ಥಮಮನ್ಯತ ।
ಉಪಾಯಸಾಧ್ಯಮೇತದ್ಧಿ ಕಾರ್ಯಂ ನ ಹಿ ಬಲಾತ್ಕೃತೇಃ ॥ ೫೮೫ ॥

ಮಹೀಯಸೋಽಪ್ಯುಪಾಯೇನ ಶ್ರೀರಧ್ಯಾಹ್ರಿಯತೇ ಬುಧೈಃ ।
ಇತ್ಯತೋಽಮಾತ್ಯಮಾಹೂಯ ದೃಪ್ತೌ ದಶರಥಾತ್ಮಜೌ ॥ ೫೮೬ ॥

ಜಿಗೀಷೂ ಮತ್ಪದಂ ದುಷ್ಟಾವುಚ್ಛೇದಾರ್ಹೌ ಕೃತತ್ವರಮ್ ।
ಪತ್ನೀ ಸೀತಾಭಿಧಾ ಚಾಸ್ತಿ ರಾಮಾಖ್ಯಸ್ಯ ದುರಾತ್ಮನಃ ॥ ೫೮೭ ॥

ತಾಮಾಹರಿಷ್ಯತೋ ಹಂತುಂ ತಮುಪಾಯಂ ವಿಚಿಂತಯ ।
ಇತ್ಯವೋಚತ್ಸ ಮಾರೀಚೋ ವಿನಯಾಕುಂಚಿತಾಂಜಲಿಃ ॥ ೫೮೮ ॥

ಶೃಣು ಭಟ್ಟಾರಕ ಸ್ವಾಮಿನ್ ಹಿತಕಾರ್ಯಾನುವರ್ತನಮ್ ।
ಅಹಿತಪ್ರತಿಷೇಧಶ್ಚ ಮಂತ್ರಿಕೃತ್ಯಮಿದಂ ದ್ವಯಮ್ ॥ ೫೮೯ ॥

ಭವನ್ನಿರೂಪಿತಂ ಕಾರ್ಯಮಪಥ್ಯಮಯಶಸ್ಕರಮ್ ।
ಪಾಪಾನುಬಂಧಿ ದುಸ್ಸಾಧ್ಯಮಯೋಗ್ಯಂ ಸದ್ವಿಗರ್ಹಿತಮ್ ॥ ೫೯೦ ॥

ಹೀಗೆ ಹೇಳಿದ ಈ ಮಾತನ್ನು ಕೇಳಿ ರಾವಣನು ಕುಪಿತನೂ ಮುಗುಳ್ನಗೆಯನ್ನು ಧರಿಸಿದವನೂ ಆಗಿ ನಾರದನನ್ನು ಕುರಿತು ''ಮುನಿಯೇ ! ನನ್ನ ಪ್ರಭಾವವನ್ನು ಶೀಘ್ರವಾಗಿ ತಾವು ಕೇಳುವಿರಿ'' ಎಂದು ಅವನನ್ನು ಬಿಟ್ಟು ಮಂತ್ರಶಾಲೆಯನ್ನು ಪ್ರವೇಶಿಸಿ ಮನೋಗತವನ್ನು ಈ ಮುಂದೆ ಹೇಳುವ ರೀತಿಯಾಗಿ ತಿಳಿದನು. '' ಈ ಕಾರ್ಯವು ಉಪಾಯದಿಂದ ಸಾಧಿಸಲ್ಪಡತಕ್ಕುದಾಗಿದೆ. ಬಲಾತ್ಕಾರದಿಂದ ಸಾಧಿಸಲ್ಪಡತಕ್ಕುದಲ್ಲವು. ದೊಡ್ಡವನ ಸಂಪತ್ತಿಯಾದರೂ ಪ್ರಾಜ್ಞರಿಂದ ಉಪಾಯದಿಂದ ಸೆಳೆದುಕೊಳ್ಳಲ್ಪಡುತ್ತದೆ.'' ಈ ರೀತಿಯಾಗಿ ಯೋಚಿಸಿದ ಬಳಿಕ ಮಂತ್ರಿಯನ್ನು ಕರೆದು ''ಸೊಕ್ಕಿರುವವರೂ ನನ್ನ ಪದವಿಯನ್ನು ಜಯಿಸಬೇಕೆಂಬ ಇಚ್ಛೆಯುಳ್ಳವರೂ ದುಷ್ಟರೂ ಆದ ದಶರಥನ ಮಕ್ಕಳು ಶೀಘ್ರವಾಗಿ ನಾಶಮಾಡಲ್ಪಡುವುದಕ್ಕೆ ಅರ್ಹರಾಗಿರುತ್ತಾರೆ. ದುರಾತ್ಮನಾದ ರಾಮನಿಗೆ ಸೀತೆಯೆಂಬ ಪತ್ನಿಯಿದ್ದಾಳೆ. ಆಕೆಯನ್ನು ಅಪಹರಿಸುವವನಿಗೆ ಆ ರಾಮನನ್ನು ಕೊಲ್ಲುವುದಕ್ಕೋಸ್ಕರ ಉಪಾಯವನ್ನು ಚಿಂತಿಸು'' ಎಂದು ಹೇಳಿದನು. ಆಗ ಆ ಮಾರೀಚನು ವಿನಯದಿಂದ ಮುದುರಿದ ಕೈಬೊಗಸೆಯುಳ್ಳವನಾಗಿ ರಾವಣನನ್ನು ಕುರಿತು ''ರಾಜನಾದ ಸ್ವಾಮಿಯೆ ! ಕೇಳು. ಹಿತಕಾರ್ಯವನ್ನು ಅನುಸರಿಸುವುದು ಅಹಿತಕಾರ್ಯವನ್ನು ನಿಷೇಧಿಸುವುದು ಇವೆರಡು ಮಂತ್ರಿಯ ಕಾರ್ಯವಾಗಿದೆ. ನೀನು ಹೇಳಿದ ಕಾರ್ಯವು ಅಹಿತವೂ ಅಪಯಶಸ್ಸನ್ನುಂಟುಮಾಡುವುದೂ ಪಾಪಬಂಧನಕರವೂ ದುಸ್ಸಾಧ್ಯವೂ ಅಯೋಗ್ಯವೂ ಸತ್ಪುರುಷರಿಂದ ನಿಂದಿಸಲ್ಪಟ್ಟಿರುವುದೂ ಆಗಿರುತ್ತದೆ.

ಅನ್ಯದಾರಾಹೃತಿರ್ನಾಮ ಪಾತಕೇಷ್ವತಿಪಾತಕಮ್ ।
ಕೋ ಹಿ ನಾಮ ಕುಲೇ ಜಾತ ಅಸ್ತ್ಯನ್ಯೋಽಪಿ ತದುಚ್ಛಿತಾ ॥ ೫೯೧ ॥

ಪರದಾರಾಪಹರಣವೆಂಬುದು ಪಾತಕಗಳಲ್ಲಿ ಮಹಾಪಾತಕವಾಗಿದೆ. ಸತ್ಕುಲದಲ್ಲಿ ಜನಿಸಿದ ಬೇರೆ ಯಾವನು ತಾನೆ ಆ ರಾಮನನ್ನು ನಾಶಮಾಡುವವನಿದ್ದಾನೆ ?

ಅಸ್ತ್ಯನ್ಯೋಽಪಿ ತದುಚ್ಛೇತ್ತಾ ತದುಪಾಯೇನ ಕಿಂ ತವ ।
ಭವದ್ವಂಶವಿನಾಶೈಕಹೇತುನಾ ಧೂಮಕೇತುನಾ ॥ ೫೯೨ ॥

ಅಂತಹ ಕೊಲೆಗೇಡಿಯನ್ನು ನಾಶಮಾಡುವವನೂ ಮತ್ತೊಬ್ಬನಿರುತ್ತಾನೆ. ನಿನ್ನ ವಂಶದ ವಿನಾಶಕ್ಕೆ ಮುಖ್ಯಕಾರಣವೂ ಧೂಮಕೇತುವೂ ಆದ ಆ ಉಪಾಯದಿಂದ ನಿನಗೇನು ಪ್ರಯೋಜನ ?''

ಇತ್ಯಾಖ್ಯತ್ಸಾರ್ಥಕೋಪಾಖ್ಯಾಂ ತನ್ಮಾರೀಚವಚೋ ವಿಧೀಃ ।
ನಾದಾದಾಸನ್ನಮೃತ್ಯುತ್ವಾದ್ದೃಷ್ಟಾಪ್ಟರಿ ಇವೌಷಧಮ್ ॥ ೫೯೩ ॥

ಈ ರೀತಿಯಾಗಿ ಸಾರ್ಥಕವಾದ ವಿಷಯವನ್ನು ಹೇಳಿದನು. ಅಶುಭವನ್ನು ಕಂಡ ಮನುಷ್ಯನು ಸಮೀಪಿಸಿದ ಮರಣವುಳ್ಳವನಾಗಿರುವುದರಿಂದ ಔಷಧವನ್ನು ತೆಗೆದುಕೊಳ್ಳದಿರುವಂತೆ, ಬುದ್ಧಿಹೀನನಾದ ರಾವಣನು ಸಮೀಪಿಸಿರುವ ಮರಣವುಳ್ಳವನಾಗಿರುವುದರಿಂದ ಆ ಮಾರೀಚನ ಮಾತನ್ನು ತೆಗೆದುಕೊಳ್ಳಲಿಲ್ಲ.

ಗೃಹೀತಮೇವ ನೇತ್ಯೇತನ್ನಾವಾದೀಚ್ಚೇತಿ ಮಂತ್ರಿಣಮ್ ।
ಕಿಮನೇನ ವೃಥಾ ಮಂತ್ರವಚನೇನೇಷ್ಟಘಾತಿನಾ ॥ ೫೯೪ ॥

ವೇತ್ಸಿ ಚೇದ್ಬ್ರೂಹಿ ಸೀತಾಪಹರಣೋಪಾಯಮಾರ್ಯ ಮೇ ।
ಏವಂ ತೇನೋಚ್ಯಮಾನೋಽಸೌ ತವ ಚೇದೇಷ ನಿಶ್ಚಯಃ ॥ ೫೯೫ ॥

ಪರೀಕ್ಷ್ಯ ಶಸ್ಯಾ ಶಂಫಲ್ಯಾ ತಸ್ಯಾಸ್ತ್ವಯ್ಯನುರಕ್ತತಾಮ್ ।
ಆನೇಯಾ ಸಾ ಸುಖೇನೈವ ಸ್ನಿಗ್ಧೋಪಾಯೇನ ಕೇನಚಿತ್ ॥ ೫೯೬ ॥

ಮತ್ತೂ ಮಂತ್ರಿಯನ್ನು ಕುರಿತು ಈ ರೀತಿಯಾಗಿ ಹೇಳಿದನು. ''ಈ ನಿನ್ನ ಮಾತು ಗ್ರಹಣಮಾಡಲ್ಪಡಲೇ ಇಲ್ಲವೆಂಬುದಿಲ್ಲ. ಆದರೆ ವ್ಯರ್ಥವಾದ ಈ ಇಷ್ಟವಿಘಾತಕ ಮಂತ್ರವಚನದಿಂದೇನು ಫಲ ? ಆರ್ಯನೆ ! ನೀನು ಸೀತಾಪಹರಣದ ಉಪಾಯವನ್ನು ತಿಳಿದಿದ್ದರೆ ನನಗೆ ಹೇಳು.'' ಈ ರೀತಿಯಾಗಿ ಆ ರಾವಣನಿಂದ ಹೇಳಲ್ಪಟ್ಟ ಈ ಮಾರೀಚನು ''ಇದು ನಿನ್ನ ನಿಶ್ಚಯವಾಗಿರುವುದಾದರೆ ನಿನ್ನಲ್ಲಿ ಆಕೆಗೆ ಅನುರಾಗವಿರುವಿಕೆಯನ್ನು ಪರೀಕ್ಷಿಸಿ ಯಾವುದಾದರೂ ಸುಖವಾದ ಮತ್ತು ಪ್ರಿಯವಾದ ಉಪಾಯದಿಂದಲೇ ಸ್ತುತ್ಯಳೂ ಸುಖಕಾರಿಣಿಯೂ ಆದ ಆ ಸೀತಾದೇವಿಯು ಕರೆದುಕೊಂಡು ಬರುವುದಕ್ಕೆ ಯೋಗ್ಯಳಾಗಿರುತ್ತಾಳೆ.

ವಿರಕ್ತಾ ಚೇತ್ತ್ವಯಾ ದೇವ ಹಠಾದಾಕ್ಷಿಪ್ಯತಾಮಿತಿ ।
ಪ್ರತ್ಯಾಹ ತತ್ಸಮಾಕರ್ಣ್ಯ ಪ್ರಶಂಸನ್ಸಾಧು ಸಾಧ್ವಿತಿ ॥ ೫೯೭ ॥

ತದೈವ ಕಾತರಂ ಶೂರ್ಪಣಖಾಮಾಹೂಯ ಕೇನಚಿತ್ ।
ಪ್ರಕಾರೇಣ ತ್ವಯಾ ಸೀತಾ ಮಯಿ ರಕ್ತಾ ವಿಧೀಯತಾಮ್ ॥ ೫೯೮ ॥

ಇತ್ಯಾಹ ಸಾದರಂ ಸಾಪಿ ತತ್ಸಂಗೀರ್ಯ ವಿಹಾಯಸಿ ।
ತದೈವ ರಂಹಸಾ ಗತ್ವಾ ಪ್ರಾಪದ್ವಾರಾಣಸೀಂ ಪುರೀಮ್ ॥ ೫೯೯ ॥

ಪ್ರಭುವೇ ! ಆಕೆಯು ನಿನ್ನಲ್ಲಿ ವಿರಕ್ತಳಾಗಿದ್ದರೆ ನೀನು ಹಠಾತ್ತಾಗಿ ಎಳೆದು ತೆಗೆದುಕೊಂಡು ಬಾ'' ಎಂದು ಹೇಳಿದನು. ಆ ಮಾತನ್ನು ಕೇಳಿ ರಾವಣನು ಮಾರೀಚನನ್ನು ''ಚೆನ್ನಾಗಿದೆ, ಚೆನ್ನಾಗಿದೆ'' ಎಂದು ಪ್ರಶಂಸಿಸುವವನಾಗಿ ಆಗಲೇ ಎದೆಗೆಟ್ಟಿರುವಂತೆ ಶೂರ್ಪಣಖೆಯನ್ನು ಕರೆದು ''ಯಾವ ಪ್ರಕಾರದಿಂದಾದರೂ ನೀನು ಸೀತೆಯನ್ನು ನನ್ನಲ್ಲಿ ಪ್ರೀತಿಯುಳ್ಳವಳನ್ನಾಗಿ ಮಾಡು'' ಎಂದು ಹೇಳಿದನು. ಆಕೆಯು ಪ್ರೀತಿಪುರಸ್ಸರವಾಗಿ ಆ ಮಾತನ್ನು ಒಪ್ಪಿಕೊಂಡು ಆಗಲೇ ಆಕಾಶದಲ್ಲಿ ವೇಗದಿಂದ ಹೋಗಿ ವಾರಾಣಸೀನಗರವನ್ನು ಸೇರಿದಳು.

ಚಿತ್ರಕೂಟಾಭಿಧೋದ್ಯಾನೇ ನಂದನಾಚ್ಚಾತಿಸುಂದರೇ ।
ರಾಮೋ ರಂತುಂ ತದಾ ಗತ್ವಾ ವಸಂತೇ ಸೀತಯಾ ಸಹ ॥ ೬೦೦ ॥

ಮಧ್ಯೇವನಂ ಪರಿಕ್ರಮ್ಯ ವೀಕ್ಷ್ಯ ನಾನಾವನಸ್ಪತೀನ್ ।
ಸಪ್ರಸೂನಾಂ ಸಹಾಸಾಂ ವಾ ಸರಾಗಾಂ ವಾ ಸಪಲ್ಲವಾಮ್ ॥ ೬೦೧ ॥

ಲತಾಂ ಸಮುತ್ಸುಕಸ್ತನ್ವೀಂ ತನ್ವೀಮನ್ಯಾಮಿವ ಪ್ರಿಯಾಮ್ ।
ಆಲೋಕಮಾನೋ ಜಾನಕ್ಯಾಲೋಕಿತಃ ಸನ್ ಸಕೋಪಯಾ ॥ ೬೦೨ ॥

ಕುಪಿತೇಯಂ ವಿನಾ ಹೇತೋಃ ಪ್ರಸಾದ್ಯೇತ್ಯೇವಮಬ್ರವೀತ್ ।
ಪಶ್ಯ ಚಂದ್ರಾನನೇ ಭೃಂಗಂ ಲತಾಯಾಃ ಕುಸುಮೇ ಭೃಶಮ್ ॥ ೬೦೩ ॥

ತವಾಸ್ಯೇ ಮಾಮಿವಾಸಕ್ತಂ ತತ್ರ ತರ್ಪಯಿತುಂ ಸ್ವಯಮ್ ।
ರಾಗಂ ಪಿಂಡೀದ್ರುಮಃ ಪುಷ್ಪೈರುದ್ಗಿರನ್ನಿವ ನೂತನೈಃ ॥ ೬೦೪ ॥

ಮಮ ನೇತ್ರಾಲಿನೋಃ ಪ್ರೀತ್ಯೈ ಬದ್ಧ್ವೈಭಿಶ್ಚಿತ್ರಶೇಖರಮ್ ।
ಸ್ವಹಸ್ತೇನ ಪ್ರಿಯೇ ತೇಮೂನಲಂಕುರು ಶಿರೋರುಹಾನ್ ॥ ೬೦೫ ॥

ಆಗ ವಸಂತಋತುವಿನಲ್ಲಿ ನಂದನವನಕ್ಕಿಂತಲೂ ಅತಿಸುಂದರವಾದ ಚಿತ್ರಕೂಟವೆಂಬ ಉದ್ಯಾನದಲ್ಲಿ ರಾಮನು ಸೀತೆಯೊಡನೆ ಕ್ರೀಡಿಸುವುದಕ್ಕೋಸ್ಕರ

ಹೋಗಿ ವನಮಧ್ಯದಲ್ಲಿ ಸಂಚರಿಸಿ ವಿವಿಧವನಸ್ಪತಿಗಳನ್ನು ನೋಡಿ ನಗೆಯೊಡನೆ ಕೂಡಿರುವಂತೆ ಪುಷ್ಪಸಹಿತವೂ ಅನುರಾಗದೊಡನೆ ಕೂಡಿರುವಂತೆ ಪಲ್ಲವ (ಚಿಗುರೆಲೆ) ಸಹಿತವೂ ಕೋಮಲವೂ ಆಗಿರುವ ಲತೆಯನ್ನು, ಪ್ರಿಯಳಾದ ಬೇರೊಬ್ಬಳು ಕೋಮಲೆಯನ್ನು ನೋಡುವವನಂತೆ, ಕುತೂಹಲವುಳ್ಳವನಾಗಿ ನೋಡುತ್ತಿರುವ ಆ ರಾಮನು ಕೋಪಸಹಿತಳಾದ ಜಾನಕಿಯಿಂದ ನೋಡಲ್ಪಟ್ಟ ವನಾಗಿ ''ಕಾರಣವಿಲ್ಲದೆ ಕುಪಿತಳಾಗಿರುವ ಈಕೆಯು ಪ್ರಸನ್ನಪಡಿಸಲ್ಪಡತಕ್ಕ ವಳಾಗಿದ್ದಾಳೆ'' ಎಂದು ಯೋಚಿಸಿ ಜಾನಕಿಯನ್ನು ಕುರಿತು ಇಂತೆಂದನು:–
''ಚಂದ್ರಮುಖಿಯೆ ! ನಿನ್ನ ಮುಖದಲ್ಲಿ ಆಸಕ್ತನಾದ ನನ್ನಂತೆ, ಬಳ್ಳಿಯ ಹೂವಿನಲ್ಲಿ ಚೆನ್ನಾಗಿ ಆಸಕ್ತವಾಗಿರುವ ದುಂಬಿಯನ್ನು ನೋಡು. ಅದನ್ನು ತೃಪ್ತಿಪಡಿಸುವುದ ಕ್ಕೋಸ್ಕರ ಖರ್ಜೂರದ ಮರವು ತಾನು ನೂತನವಾದ ಪುಷ್ಪಗಳಿಂದ ನನ್ನ ಕಣ್ಣುಗಳೆಂಬ ದುಂಬಿಗಳ ಪ್ರೀತಿಗೋಸ್ಕರ ರಾಗವನ್ನು ಉದ್ಗರಿಸು(ವಮನ ಮಾಡು)ವಂತಿದೆ. ಪ್ರಿಯಳೆ ! ಈ ಪುಷ್ಪಗಳಿಂದ ಚಿತ್ರವಾದ ತಲೆಗೂದಲುಗಳ ಗಂಟನ್ನು ಸ್ವಹಸ್ತದಿಂದ ಕಟ್ಟಿ ನಿನ್ನ ಈ ತಲೆಗೂದಲುಗಳನ್ನು ಅಲಂಕರಿಸು.

**ಏತತ್ಪುಷ್ಪೈಃ ಪ್ರವಾಲೈಶ್ಚ ಭೂಷಣಾನಿ ಪ್ರಕಲ್ಪಯ ।**
**ತವಾಪಿ ತ್ವಂ ವಿಭಾಸ್ಯೇತೈರ್ಜಂಗಮೇವ ಲತಾಪರಾ ॥ ೭೦೬ ॥**

ಈ ಪುಷ್ಪಗಳಿಂದಲೂ ತಳಿರುಗಳಿಂದಲೂ ನಿನಗೂ ಅಲಂಕಾರಗಳನ್ನು ಮಾಡು. ಇವುಗಳಿಂದ ನೀನು, ಸಂಚರಿಸುವ ಬೇರೊಂದು ಲತೆಯೋ ಎಂಬಂತೆ, ಪ್ರಕಾಶಿ ಸುತ್ತಿ.''

**ಇತ್ಯುಕ್ತಿಭಿಶ್ಚ ತಾಂ ಮೂಕೀಭೂತಾಮಾಲೋಕ್ಯ ಕೋಪಿನೀಮ್ ।**
**ಪುನಶ್ಚೈವಮಭಾಷಿಷ್ಟ ಮೃಷ್ಟೇಷ್ಟವಚನೋ ನೃಪಃ ॥ ೭೦೭ ॥**

ಈ ಪ್ರಕಾರವಾದ ಮಾತುಗಳಿಂದಲೂ ಮಾತನಾಡದಿರುವವಳೂ ಕೋಪವುಳ್ಳ ವಳೂ ಆದ ಆ ಜಾನಕಿಯನ್ನು ನೋಡಿ ಮಧುರವೂ ಇಷ್ಟವೂ ಆದ ವಚನಗಳುಳ್ಳ ರಾಜನು ಮತ್ತೂ ಈ ರೀತಿಯಾಗಿ ಮಾತನಾಡಿದನು.

**ತ್ವದ್ವಕ್ತ್ರಂ ದರ್ಪಣೇ ವೀಕ್ಷ್ಯ ಚಕ್ಷುಷೀ ತೇ ಕೃತಾರ್ಥಕೇ ।**
**ತ್ವದಾಸ್ಯಸೌರಭೇಣೈವ ತೃಪ್ತಾ ತೇ ನಾಸಿಕಾ ಭೃಶಮ್ ॥ ೭೦೮ ॥**

''ನಿನ್ನ ಕಣ್ಣುಗಳು ಕನ್ನಡಿಯಲ್ಲಿ ನಿನ್ನ ಮುಖವನ್ನು ನೋಡಿ ಕೃತಾರ್ಥಗಳಾ ದುವು. ನಿನ್ನ ಮುಖದ ಪರಿಮಳದಿಂದಲೇ ನಿನ್ನ ಮೂಗು ಚೆನ್ನಾಗಿ ತೃಪ್ತವಾಯಿತು.

**ತ್ವಚ್ಛ್ರವ್ಯಗೇಯಸಲ್ಲಾಪೈಃ ಕರ್ಣೌ ಪೂರ್ಣರಸೌ ತವ ।**
**ತವ ಬಿಂಬಾಧರಾಸ್ವಾದಾತ್ತ್ವಜ್ಜಿಹ್ವಾನ್ಯರಸಾಸ್ಪೃಹಾ ॥ ೭೦೯ ॥**

ಕೇಳುವುದಕ್ಕೆ ಯೋಗ್ಯವೂ ಹಾಡುವುದಕ್ಕೆ ಯೋಗ್ಯವೂ ಆದ ನಿನ್ನ ಸಲ್ಲಾಪ ಗಳಿಂದ ನಿನ್ನ ಕಿವಿಗಳು ಪೂರ್ಣವಾದ ಪ್ರೀತಿಯುಳ್ಳವಾಗಿವೆ. ನಿನ್ನ ನಾಲಗೆಯು ತೊಂಡೆಯ ಹಣ್ಣಿನಂತಿರುವ ನಿನ್ನ ತುಟಿಯ ಆಸ್ವಾದದಿಂದ ಇತರ ರಸಗಳಲ್ಲಿ ಇಚ್ಛೆಯಿಲ್ಲದಿರುವುದಾಗಿದೆ.

**ಪರಿರಭ್ಯ ಕರೌ ತೃಪ್ತೌ ತವ ತ್ವತ್ಕಠಿನಸ್ತನೌ ।**
**ಮನೋಽಪೀಂದ್ರಿಯಸಂತೃಪ್ತ್ಯಾ ಸಂತೃಪ್ತಂ ನಿತರಾಂ ಪ್ರಿಯೇ ॥ ೭೧೦ ॥**

**ಸ್ವಸ್ಮಾಮೇವ ಸ್ವಯಂ ತೃಪ್ತಾ ಸಿದ್ಧಾಕೃತಿರಿವಾಧುನಾ ।**
**ಕೋಪಸ್ತೇ ಯುಕ್ತ ಏವೇತಿ ಸೀತಾಂ ಸ ಚತುರೋಕ್ತಿಭಿಃ ॥ ೭೧೧ ॥**

ನಿನ್ನ ಕೈಗಳು ನಿನ್ನ ಕಠಿನಕುಚಗಳನ್ನು ಆಲಿಂಗಿಸಿ ತೃಪ್ತಿಯುಳ್ಳವಾಗಿವೆ. ಪ್ರಿಯೆ ! ತನ್ನಲ್ಲೇ ತಾನು ತೃಪ್ತಿಯನ್ನು ಹೊಂದಿರುವ ಸಿದ್ಧರ ಆಕೃತಿಯಂತೆ ನಿನ್ನ ಮನವೂ ಇಂದ್ರಿಯಗಳ ಸಂತೃಪ್ತಿಯಿಂದ ಅಧಿಕವಾಗಿ ತೃಪ್ತಿಯನ್ನು ಹೊಂದಿದೆ. ಈಗ ನಿನ್ನ ಕೋಪವು ಯುಕ್ತವೇ ಆಗಿದೆ'' ಈ ರೀತಿಯಾಗಿ ಅವನು ನಿಪುಣವಾದ ಮಾತು ಗಳಿಂದ ಸೀತೆಯನ್ನು ಕುರಿತು ಮಾತನಾಡಿದನು.

**ತತಃ ಪ್ರಸನ್ನಯಾ ಸಾರ್ಧಂ ಸುಖಂ ಸರ್ವೇಂದ್ರಿಯೋದ್ಭವಮ್ ।**
**ಸಂಪ್ರಾಪನ್ನೂತನಂ ಭೂಪಃ ಕೋಪೋಽಪಿ ಸುಖಕೃತ್ಕ್ವಚಿತ್ ॥ ೭೧೨ ॥**

ಬಳಿಕ ಪ್ರಸನ್ನಳಾದ ಆಕೆಯೊಡನೆ ರಾಮನು ಸರ್ವೇಂದ್ರಿಯಗಳಿಂದುಂಟಾ ದುದೂ ನವೀನವೂ ಆದ ಸುಖವನ್ನು ಪಡೆದನು. ಕೆಲವು ಕಡೆಯಲ್ಲಿ ಕೋಪವೂ ಸುಖವನ್ನುಂಟುಮಾಡುವುದಾಗಿರುತ್ತದೆ.

**ತತ್ರೈವ ಲಕ್ಷ್ಮಣೋಽಪ್ಯೇವಂ ಸ್ವಪ್ರಿಯಾಭಿಃ ಸಹಾರಮತ್ ।**
**ತದಾ ತದಾ ಮುದಾ ಕಾಮಸ್ತೇಭ್ಯೋಽಭ್ಯರ್ಥಮದಾತ್ಸುಖಮ್ ॥ ೭೧೩ ॥**

ಅಲ್ಲಿಯೇ ಲಕ್ಷ್ಮಣನೂ ಹೀಗೆ ತನ್ನ ಪತ್ನಿಯರೊಡನೆ ಕ್ರೀಡಿಸಿದನು. ಕಾಮನು ಆಗಾಗ್ಗೆ ಸಂತೋಷದಿಂದ ಅವರಿಗೆ ಇಷ್ಟವಾದ ಸುಖವನ್ನು ಕೊಟ್ಟನು.

**ಏವಂ ರಾಮಶ್ಚಿರಂ ರಂತ್ವಾ ಕಾಂತೇ ಪಶ್ಯ ರವಿಃ ಕರೈಃ ।**
**ಸರ್ವಾನ್ ದಹತಿ ಮೂರ್ಧಸ್ಥಸ್ತೀವ್ರಃ ಕಸ್ಯಾತ್ರ ಶಾಂತಯೇ ॥ ೭೧೪ ॥**

ಈ ರೀತಿಯಾಗಿ ರಾಮನು ಬಹುಕಾಲದವರೆಗೆ ಕ್ರೀಡಿಸಿ ಬಳಿಕ ಸೀತೆಯನ್ನು ಕುರಿತು ''ಕಾಂತೆಯೇ ! ನೋಡು. ನೆತ್ತಿಯಲ್ಲಿರುವ ಸೂರ್ಯನು ಎಲ್ಲರನ್ನೂ ಕಿರಣಗಳಿಂದ ಸುಡುತ್ತಾನೆ'' ಈ ಲೋಕದಲ್ಲಿ ತೀವ್ರನಾಗಿರುವವನು ಯಾವನು ಶಾಂತಿಗೋಸ್ಕರ ಕಾರಣನಾಗುತ್ತಾನೆ ?

**ಲಕ್ಷ್ಮಣಾಕ್ರಮವಿಕ್ರಾಂತಿವಿಜಿತಾರಾತಿಸನ್ನಿಭಾಃ ।**
**ಛಾಯಾಮಾತ್ಮನಿ ಸಂಲೀನಾಂ ಪ್ರಕುರ್ವಂತಿ ಮಹೀರುಹಃ ॥ ೭೧೫ ॥**

ಲಕ್ಷ್ಮಣನ ಕ್ರಮರಹಿತ(ಅಧಿಕ) ವಾದ ಪರಾಕ್ರಮದಿಂದ ಜಯಿಸಲ್ಪಟ್ಟ ಶತ್ರುಗಳಿಗೆ ಸಮಾನಗಳಾದ ವೃಕ್ಷಗಳು ನೆರಳನ್ನು ತಮ್ಮಲ್ಲಿ ಅಡಗಿರುವುದನ್ನಾಗಿ ಮಾಡುತ್ತವೆ.

**ವೈರಾಜ್ಯಪರಿವಾರೋ ವಾ ಮೃಗಪೂಗಃ ಸಶಾಬಕಃ ।**
**ಕ್ವಾಪ್ಯಲಬ್ಧಾಶ್ರಯಸ್ತಪ್ತೋ ಭ್ರಾಮ್ಯತೀತಸ್ತತೋ ಬತ ॥ ೭೧೬ ॥**

ಮರಿಗಳೊಡನಿರುವ ಮೃಗಗಳ ಸಮೂಹವು ರಾಜ್ಯವನ್ನು ಕಳೆದುಕೊಂಡವನ ಪರಿವಾರದಂತೆ ಎಲ್ಲಿಯೂ ಆಶ್ರಯವನ್ನು ಹೊಂದದಿರುವುದೂ ತಪಿಸುತ್ತಿರು ವುದೂ ಆಗಿ ಇತ್ತತ್ತ ಚಲಿಸುತ್ತದೆ. ಕಷ್ಟ !''

**ಇತಿ ಚೇತೋಹರೈಃ ಸೀತಾಂ ಮೋದಯನ್ ಸ ತಯಾ ಸಹ ।**
**ಶಚೀದೇವ್ಯೇವ ದೇವೇಶಃ ಕೃತ್ವಾ ವನವಿನೋದನಮ್ ॥ ೭೧೭ ॥**

**ಕಿಂಚಿತ್ಖಿನ್ನಾಮಿವಾಲಕ್ಷ್ಯ ತಾಂ ಜಲಾಶಯಮಾಸದತ್ ।**
**ತತ್ರ ಸಿಂಚನ್ಪ್ರಿಯಾಂ ಶೀತೈರ್ಯಂತ್ರಮುಕ್ತಪಯಃಕಣೈಃ ॥ ೭೧೮ ॥**

**ಈಷನ್ನಿಮೀಲಿತಾಲೋಲನಯನೇಂದೀವರೋಜ್ಜ್ವಲಮ್ ।**
**ತದ್ವಕ್ತ್ರಕಮಲಂ ಪಶ್ಯನ್ನಾಸಾವಲ್ಪಂ ತದಾತುಷತ್ ॥ ೭೧೯ ॥**

ಈ ರೀತಿಯಾಗಿ ಮನೋಹರಗಳಾದ ಮಾತುಗಳಿಂದ ಆ ರಾಮನು ಸೀತೆಯನ್ನು ಸಂತೋಷಪಡಿಸುವವನಾಗಿ, ಶಚೀದೇವಿಯೊಡನೆ ದೇವೇಂದ್ರನಂತೆ, ಆಕೆಯೊಡನೆ ವನವಿನೋದವನ್ನು ಮಾಡಿ ಸ್ವಲ್ಪ ಖಿನ್ನಳಾಗಿರುವ ಆಕೆಯನ್ನು ನೋಡಿ ಜಲಾಶಯವನ್ನು ಸೇರಿದನು. ಅಲ್ಲಿ ಯಂತ್ರಗಳಿಂದ ಬಿಡಲ್ಪಟ್ಟ ತಣ್ಣೀರಿನ ಹನಿಗಳಿಂದ ಪ್ರಿಯೆಯನ್ನು ಸಿಂಚಿಸುವವನಾಗಿ ಸ್ವಲ್ಪವಾಗಿ ಮುಚ್ಚಲ್ಪಟ್ಟಿರುವುದೂ ಚಲಿಸುವುದೂ ಆದ ನೇತ್ರಗಳೆಂಬ ಕನ್ನೈದಿಲೆಗಳಿಂದ ಪ್ರಕಾಶಮಾನವಾದ ಆಕೆಯ ಮುಖ ಕಮಲವನ್ನು ನೋಡುವವನಾಗಿ ಆಗ ಈ ರಾಮನು ಸ್ವಲ್ಪವಾಗಿ ಸಂತೋಷ ಪಡಲಿಲ್ಲ. ಹೆಚ್ಚಾಗಿ ಸಂತೋಷಪಟ್ಟನೆಂದು ಭಾವವು.

**ವಕ್ಷೋದಘ್ನಮಸೌ ವಾರಿ ಪ್ರಾವಿಶತ್ಸಸ್ಮಿತಂ ಪ್ರಿಯಾಮ್ ।**
**ಪರಿರಂಭೋತ್ಸುಕಾಂ ವಿದ್ವಾನಿಂಗಿತಜ್ಞಾ ಹಿ ನಾಗರಾಃ ॥ ೬೨೦ ॥**

ಪ್ರಿಯೆಯನ್ನು ಆಲಿಂಗನದಲ್ಲಿ ಕುತೂಹಲವುಳ್ಳವಳನ್ನಾಗಿ ತಿಳಿದ ಈ ರಾಮನು ಮುಗುಳ್ನಗೆಯಿಂದ ಕೂಡಿರುವಂತೆ ಎದೆಯವರೆಗಿರುವ ನೀರನ್ನು ಪ್ರವೇಶಿಸಿದನು. ವನಕ್ರೀಡೆಯಾದ ಮೇಲೆ ಜಲಕ್ರೀಡೆಯನ್ನಾರಂಭಿಸಿದರೆಂದು ಭಾವವು. ನಾಗರಿಕರು ಇಂಗಿತಜ್ಞರಾಗಿಯೇ ಇರುತ್ತಾರೆ.

**ಭ್ರಮರ್ಯೈಃ ಪಂಕಜಂ ಮುಕ್ತ್ವಾ ಕಾಂತಾಸ್ಯಾಬ್ಜಂ ವತಂಸಕಮ್ ।**
**ತುರಾಕುಲೀಕೃತಂ ದೃಷ್ಟ್ವಾ ಖೇದೀ ಹ್ಲಾದೀ ಚ ಸೋಭವತ್ ॥ ೬೨೧ ॥**

ಕರ್ಣಭೂಷಣವಾದ ಕಮಲವನ್ನು ಬಿಟ್ಟು ಭ್ರಮರಗಳಿಂದ ಶೀಘ್ರವಾಗಿ ಬಾಧೆ ಪಡಿಸಲ್ಪಟ್ಟ ಪತ್ನಿಯ ಮುಖಕಮಲವನ್ನು ನೋಡಿ ಆ ರಾಮನು ಖೇದವುಳ್ಳವನಾಗಿಯೂ ಸಂತೋಷವುಳ್ಳವನಾಗಿಯೂ ಆದನು.

**ಏವಂ ಜಲೇ ಚಿರಂ ರಂತ್ವಾ ತತ್ರಾಪೂರ್ಯ ಮನೋರಥಮ್ ।**
**ಸಾಂತಃಪುರೋ ವನೇ ರಮ್ಯಪ್ರದೇಶೇ ಸ್ಥಿತಿಮಾವ್ರಜತ್ ॥ ೬೨೨ ॥**

ಈ ರೀತಿಯಾಗಿ ನೀರಿನಲ್ಲಿ ಬಹುಕಾಲದವರೆಗೆ ಕ್ರೀಡಿಸಿ ಅಲ್ಲಿ ಮನೋರಥವನ್ನು ಪೂರ್ತಿಮಾಡಿ ಅಂತಃಪುರಸಹಿತನಾಗಿ ವನದಲ್ಲಿ ರಮಣೀಯವಾದ ಪ್ರದೇಶದಲ್ಲಿ ಸ್ಥಿತಿಯನ್ನು ಹೊಂದಿದನು. ಬೀಡು ಬಿಟ್ಟನೆಂದು ಭಾವವು.

**ತದಾ ಶೂರ್ಪಣಖಾಗತ್ಯ ತಯೋರ್ನೃಪತನೂಜಯೋಃ ।**
**ವೀಕ್ಷ್ಯಮಾಣಾತುಲಾಂ ಲಕ್ಷ್ಮೀಮನುರಕ್ತಾಂ ಸವಿಸ್ಮಯಮ್ ॥ ೬೨೩ ॥**

**ಪ್ರಭೂತಪ್ರಸವಾನಮ್ರಕಮ್ರಾಶೋಕಮಹೀರುಹಃ ।**
**ಅಧಸ್ತಾತ್ಸುಸ್ಥಿತಾಂ ಸೀತಾಂ ಹರಿನ್ಮಣಿಶಿಲಾತಲೇ ॥ ೬೨೪ ॥**

**ವನಲಕ್ಷ್ಮೀಮಿವಾಲೋಕ್ಯ ಭೂಷ್ಯಮಾಣಾಂ ಸಖೀಜನೈಃ ।**
**ಯುಕ್ತಮೇವ ಖಗೇಶಸ್ಯ ಪ್ರೇಮಾಸ್ಯಾಮಿತಿ ವಾದಿನೀ ॥ ೬೨೫ ॥**

**ಬಭೂವ ಸ್ಥವಿರಾ ರೂಪಪರಾವರ್ತನವಿದ್ಯಯಾ ।**
**ಸೀತಾವಿಲಾಸಸಂದರ್ಶಸಂಭೂತವ್ರೀಡಯೇವ ಸಾ ॥ ೬೨೬ ॥**

ಆಗ ಶೂರ್ಪಣಖೆಯು ಬಂದು ಆ ರಾಜಕುಮಾರರಲ್ಲಿ ಅನುರಕ್ತಳೂ ಅನುಪಮಳೂ ಆದ ಲಕ್ಷ್ಮಿಯನ್ನು–ಶೋಭೆಯನ್ನು ಆಶ್ಚರ್ಯದೊಡನೆ ನೋಡುವವಳಾಗಿ ಅಧಿಕವಾದ ಪುಷ್ಪಗಳಿಂದ ಸುತ್ತಲೂ ಬಗ್ಗಿರುವುದೂ ಮನೋಹರವೂ ಆದ ಅಶೋಕವೃಕ್ಷದ ಕೆಳಗೆ ಪಚ್ಚೆಯ ಮಣಿಶಿಲೆಯ ಮೇಲೆ ಕುಳಿತಿರುವವಳೂ ಸಖೀಜನರಿಂದ ವನಲಕ್ಷ್ಮಿಯಂತೆ ಅಲಂಕರಿಸಲ್ಪಡುತ್ತಿರುವವಳೂ ಆದ ಸೀತೆಯನ್ನು ನೋಡಿ ''ಖೇಚರೇಶ್ವರ–ರಾವಣನಿಗೆ ಈಕೆಯಲ್ಲಿ ಪ್ರೇಮವು ಯುಕ್ತವೇ ಆಗಿದೆ'' ಎಂದು ಹೇಳುವವಳಾಗಿ ಆಕೆಯು, ಸೀತೆಯ ವಿಲಾಸವನ್ನು ನೋಡಿದುದರಿಂದುಂಟಾದ ಲಜ್ಜೆಯಿಂದಲೋ ಎಂಬಂತೆ, ರೂಪಪರಾವರ್ತನವಿದ್ಯೆಯಿಂದ ಮುದುಕಿಯಾದಳು. ಮುದುಕಿಯ ವೇಷವನ್ನು ಧರಿಸಿದಳೆಂದು ಭಾವವು.

**ತದ್ರೂಪಂ ವರ್ಣಯಂತೀತ್ಥಂ ಸಕೌತುಕಮಮನ್ಯತ ।**
**ಸ್ವಬುದ್ಧಿಕೌಶಲಾದೇತತ್ಕೃತಂ ರೂಪಂ ನ ವೇಧಸಾ ॥ ೬೨೭ ॥**

**ಯಾದೃಚ್ಛಿಕಂ ನ ಚೇದನ್ಯತ್ಕಿಮಕಾರೀತಿ ನೇದೃಶಮ್ ।**
**ಶೇಷದೇವ್ಯೋ ಜರಾಜೀರ್ಣಾಂ ತಾಂ ದೃಷ್ಟ್ವಾ ಯೌವನೋದ್ಧತಾಃ ॥**

**ಕಾ ತ್ವಂ ವದ ಕುತಸ್ತ್ಯಾ ವೇತ್ಯವೋಚನ್ ಹಾಸಪೂರ್ವಕಮ್ ।**
**ಉದ್ಯಾನಪಾಲಕಸ್ಯಾಹಂ ಮಾತಾತ್ಮೇವೇತಿ ಸಾ ಪುನಃ ॥ ೬೨೯ ॥**

**ತಾಸಾಂ ಚಿತ್ತಪರೀಕ್ಷಾರ್ಥಮಿಮಾಂ ವಾಚಮುದಾಹರತ್ ।**
**ಯುಷ್ಮನ್ನ ಪುಣ್ಯಭಾಗಿನ್ಯೋ ಮಾನ್ಯಾಃ ಸಂತ್ಯನ್ಯಯೋಷಿತಃ ॥ ೬೩೦ ॥**

**ಯಸ್ಮಾದಾಭ್ಯಾಂ ಕುಮಾರಾಭ್ಯಾಂ ಸಹ ಭೋಗಪರಾಯಣಾಃ ।**
**ಯುಷ್ಮಾಭಿಃ ಪ್ರಾಕ್ಕೃತಂ ಕಿಂ ವಾ ಪುಣ್ಯಂ ತನ್ಮಮ ಕಥ್ಯತಾಮ್ ॥ ೬೩೧ ॥**

**ತತ್ಕರಿಷ್ಯಾಮಿ ಯೇನಾಸ್ಯ ರಾಜ್ಞೀಭೂತ್ವಾ ಮಹೀಪತೇಃ ।**
**ಇಮಂ ವಿರಕ್ತಮನ್ಯಾಸು ವಿಧಾಸ್ಯಾಮೀತಿ ತದ್ವಚಃ ॥ ೬೩೨ ॥**

**ಶ್ರುತ್ವಾ ತಾಶ್ಚಿತ್ತಮೇತಸ್ಯಾಸ್ತರುಣಂ ಸ್ಮರವಿಹ್ವಲಮ್ ।**
**ವಪುರೇವ ಜರಾಗ್ರಸ್ತಮಿತ್ಯಲಂ ಸಹಸಾಹಸನ್ ॥ ೬೩೩ ॥**

ಶೂರ್ಪಣಖೆಯು ಆ ಸೀತಾದೇವಿಯ ರೂಪವನ್ನು ಕುತೂಹಲದಿಂದ ಕೂಡಿರುವಂತೆ ಮುಂದೆ ಹೇಳುವ ರೀತಿಯಾಗಿ ವರ್ಣಿಸುವವಳಾಗಿ ''ಬ್ರಹ್ಮನು ತನ್ನ ಬುದ್ಧಿಕುಶಲತೆಯಿಂದ ಈ ರೂಪವನ್ನು ಮಾಡಲಿಲ್ಲ. ಆಕಸ್ಮಾತ್ತಾಗಿ ಮಾಡಿದನು. ಹಾಗಲ್ಲದಿದ್ದರೆ ಬೇರೆ ಇಂತಹ ರೂಪವನ್ನೇಕೆ ಮಾಡಲಿಲ್ಲ ?'' ಎಂದು ತಿಳಿದಳು. ಸೀತಾದೇವಿಯ ಹೊರತು ಯೌವನದಿಂದ ಗರ್ವಿತರಾದ ಬೇರೆ ದೇವಿಯರು ಮುಪ್ಪಿನಿಂದ ಜೀರ್ಣಳಾದ ಆ ಮುದುಕಿಯನ್ನು ನೋಡಿ ''ನೀನು ಯಾವಳು ? ಎಲ್ಲಿಯವಳು ?'' ಎಂದು ಹಾಸ್ಯಪೂರ್ವಕವಾಗಿ ಮಾತನಾಡಿದರು. ಆಕೆಯು ಆ ದೇವಿಯರನ್ನು ಕುರಿತು ''ನಾನು ಇಲ್ಲೇ ಉದ್ಯಾನಪಾಲಕನ ತಾಯಿಯಾಗಿದ್ದೇನೆ'' ಹೀಗೆಂದು ಮತ್ತೆ ಅವರ ಮನಸ್ಸನ್ನು ಪರೀಕ್ಷಿಸುವುದಕ್ಕೋಸ್ಕರ ಈ ಮುಂದಿನ ಮಾತನ್ನು ಹೇಳಿದಳು. ''ನೀವುಗಳು ಇಂತಹ ರಾಜಕುಮಾರನೊಡನೆ ಭೋಗಾಸಕ್ತರಾಗಿರುವುದರಿಂದ ನಿಮ್ಮಗಳಿಗಿಂತ ಪುಣ್ಯಭಾಗಿನಿಯರೂ ಮಾನ್ಯರೂ ಆದ ಬೇರೆ ಸ್ತ್ರೀಯರಿಲ್ಲ. ಪೂರ್ವಜನ್ಮದಲ್ಲಿ ನೀವುಗಳು ಯಾವ ಪುಣ್ಯವನ್ನು ಮಾಡಿದ್ದೀರೋ ಅದನ್ನು ನನಗೆ ಹೇಳಿ. ಅದನ್ನು ನಾನು ಮಾಡುವೆನು. ಅದರಿಂದ ಈ ರಾಜನಿಗೆ–ರಾಮನಿಗೆ ರಾಣಿಯಾಗಿ ಇವನನ್ನು ಇತರ ಸ್ತ್ರೀಯರಲ್ಲಿ ವಿರಕ್ತನನ್ನಾಗಿ ಮಾಡುವೆನು'' ಹೀಗೆ ಆಕೆಯ ಮಾತನ್ನು ಕೇಳಿ ಆ ದೇವಿಯರೂ ''ಈಕೆಯ ಶರೀರವೇ ಮುಪ್ಪಿನಿಂದ ವ್ಯಾಪ್ತವಾಗಿರುವುದು. ಮನಸ್ಸು ತರುಣವಾಗಿಯೂ ಕಾಮದಿಂದ ಬಳಲಿದುದಾಗಿಯೂ ಇರುತ್ತದೆ'' ಎಂದು ಶೀಘ್ರವಾಗಿ ಚೆನ್ನಾಗಿ ಹಾಸ್ಯಮಾಡಿದರು–ನಕ್ಕರು.

**ಮಾ ಹಾಸಃ ಕುಲಸೌರೂಪ್ಯಕಲಾಗುಣಯುಜಾಮಿಹ ।**
**ಸಮಪ್ರೇಮಹಲಿಪ್ರಾಪ್ತೇಃ ಕಿಮನ್ಯಜ್ಜನ್ಮನಃ ಫಲಮ್ ॥ ೬೩೪ ॥**

**ವದತೇತಿ ವದಂತೀಂ ತಾಂ ಪುನರ್ಭೋ ಜನ್ಮನಃ ಫಲಮ್ ।**
**ತವೇದಮೇವ ಚೇದಸ್ಮದ್ವಿಭುನಾ ವಿಧಿನಾ ವಯಮ್ ॥ ೬೩೫ ॥**

**ತ್ವಾಮದ್ಯ ಯೋಜಯಿಷ್ಯಾಮಃ ಪರಿಮುಕ್ತವಿಚಾರಣಮ್ ।**
**ಮಹಾದೇವೀ ಭವೇತ್ಯಾಸಾಂ ಹಾಸಬಾಣಶರವ್ಯತಾಮ್ ॥ ೬೩೬ ॥**

**ಉಪಯಾಂತೀಮಿಮಾಂ ವೀಕ್ಷ್ಯ ಕಾರುಣ್ಯಾಜ್ಜನಕಾತ್ಮಜಾ ।**
**ಕಿಮಿತ್ಯಾಕಾಂಕ್ಷಸಿ ಸ್ತ್ರೀತ್ವಂ ತ್ವಂ ಹಿತಾನವಬೋಧಿನೀ ॥ ೬೩೭ ॥**

**ಸ್ತ್ರೀತಾಮನುಭವಂತೀಭಿರತ್ರಾಮೂಭಿರನೀಪ್ಸಿತಮ್ ।**
**ಪ್ರಾಪ್ತಂ ಪ್ರಾಪ್ಯಂ ಚ ದುರ್ಬುದ್ಧೇ ಮಹಾಪಾಪಫಲಂ ಶೃಣು ॥ ೬೩೮ ॥**

''ಪರಿಹಾಸ್ಯವು ಬೇಡ. ಕುಲವನ್ನೂ ಒಳ್ಳೆಯ ರೂಪವನ್ನೂ ಕಲಾಗುಣಗಳನ್ನೂ ಪಡೆದಿರುವವರಿಗೆ ಈ ಜನ್ಮದಲ್ಲಿ ಪ್ರೇಮಸಹಿತನಾಗಿರುವ ರಾಮ–ಬಲಭದ್ರನ ಪ್ರಾಪ್ತಿಗಿಂತ ಜನ್ಮದ ಬೇರೆ ಫಲವಾವುದು ? ಹೇಳಿರಿ'' ಈ ರೀತಿಯಾಗಿ ಹೇಳುತ್ತಿರುವ ಆ ಮುದುಕಿಯನ್ನು ಕುರಿತು ಮತ್ತೆ ''ಎಲೌ ಮುದುಕಿಯೆ ! ನಿನಗೆ ಜನ್ಮದ ಫಲವು ಇದೇ ಆಗಿರುವುದಾದರೆ ನಾವುಗಳು ಈ ದಿವಸ ನಿನ್ನನ್ನು ನಮ್ಮ ಸ್ವಾಮಿಯೊಡನೆ ವಿಧಿಯಿಂದ ಸೇರಿಸುವೆವು. ಯೋಚನೆಯನ್ನು ಬಿಟ್ಟು ಇವನಿಗೆ ನೀನು ಮಹಾದೇವಿಯಾಗು'' ಈ ರೀತಿಯಾಗಿ ಈ ದೇವಿಯರ ಹಾಸ್ಯವೆಂಬ ಬಾಣಕ್ಕೆ

ಗುರಿಯಾಗಿರುವಿಕೆಯನ್ನು ಹೊಂದಿರುವ ಈ ಮುದುಕಿಯನ್ನು ನೋಡಿ ಕಾರುಣ್ಯದಿಂದ ಜನಕಪುತ್ರಿಯು ''ಹಿತವನ್ನು ತಿಳಿಯದಿರುವ ನೀನು ಸ್ತ್ರೀತ್ವವನ್ನೇಕೆ ಬಯಸುವೆ ?ದುರ್ಬುದ್ಧಿಯೆ !ಈ ಲೋಕದಲ್ಲಿ ಸ್ತ್ರೀತ್ವವನ್ನನುಭವಿಸುವ ಈ ಸ್ತ್ರೀಯರಿಂದ ಇಚ್ಛಿಸದಿರುವುದು ಪಡೆಯಲಾಗಿದೆ. ಹೊಂದಬೇಕಾದುದನ್ನು ಪಡೆಯಲಾಗಿಲ್ಲ. ದುರ್ಬುದ್ಧಿಯೆ ! ಮಹಾಪಾಪದ ಫಲವನ್ನು ಕೇಳು.

**ಅನಿಷ್ಟಲಕ್ಷಣಾದನ್ಯೈರಗ್ರಾಹ್ಯತ್ವಾಚ್ಛುಚಾ ಗೃಹೇ ।**
**ಸ್ವೇ ವಾಸೋ ಮೃತ್ಯುಪರ್ಯಂತಂ ಕುಲರಕ್ಷಣಕಾರಣಾತ್ ॥ ೬೩೯ ॥**

ಸ್ತ್ರೀಯು ಅನಿಷ್ಟಲಕ್ಷಣದ ದೆಸೆಯಿಂದ ಪರಿಗ್ರಾಹ್ಯಳಲ್ಲದಿರುವುದರಿಂದ ತನ್ನ ಮನೆಯಲ್ಲಿ ಕುಲರಕ್ಷಣೆಯ ಕಾರಣದಿಂದ ತಾನು ಸಾಯುವವರೆಗೂ ಶೋಕದಿಂದ ವಾಸಮಾಡಬೇಕಾಗುವುದು.

**ಅಪತ್ಯಜನನಾಭಾವೇ ಪ್ರವಿಷ್ಟೋತ್ಪನ್ನಗೇಹಯೋಃ ।**
**ಶೋಕೋತ್ಪಾದನಂ ವಂಧ್ಯಾತ್ವಾನ್ನಿರ್ಭಾಗ್ಯತ್ವಾದಗೌರವಮ್ ॥ ೬೪೦ ॥**

ಮಕ್ಕಳನ್ನು ಹಡೆಯದಿದ್ದರೆ ಬಂಜೆಯಾಗಿರುವುದರಿಂದ ತಾನು ಪ್ರವೇಶಿಸಿದ ಮತ್ತು ಹುಟ್ಟಿದ ಮನೆಗಳಿಗೆ ಶೋಕೋತ್ಪತ್ತಿಯಾಗುವುದು. ಭಾಗ್ಯಹೀನಳಾಗಿರುವುದರಿಂದ ಅಗೌರವವುಂಟಾಗುವುದು.

**ದುರ್ಭಗತ್ವೇನ ಕಾಂತಾನಾಂ ಪರಿತ್ಯಾಗಾತ್ಪರಾಭವಃ ।**
**ಅಸ್ಪೃಶ್ಯತ್ವಂ ರಜೋದೋಷಾತ್ಖಂಡನಾತ್ಕಲಹಾದಿಭಿಃ ॥ ೬೪೧ ॥**

**ದುಃಖದಾವಾಗ್ನಿಸಂತಾಪೋ ವನ್ಯಾನಾಮಿವ ಭೂರುಹಾಮ್ ।**
**ಚಕ್ರವರ್ತಿಸುತಾನಾಂ ಚ ಪರಪಾದೋಪಸೇವನಾ ॥ ೬೪೨ ॥**

ಸ್ತ್ರೀಯರಿಗೆ ಕುರೂಪತ್ವದಿಂದ ಪರಿತ್ಯಾಗವೂ ಅದರಿಂದ ತಿರಸ್ಕಾರವೂ ಉಂಟಾಗುವುದು. ರಜಸ್ವಲೆಯಾಗುವ ದೋಷದಿಂದ ಅಸ್ಪೃಶ್ಯತೆಯುಂಟಾಗುವುದು. ಕಲಹಾದಿಗಳಿಂದ ಖಂಡನೆಯುಂಟಾಗಿ ಅದರಿಂದ, ಅರಣ್ಯಜನ್ಯವಾದ ಮರಗಳಿಗೆ ಕಾಳ್ಗಿಚ್ಚಿನ ಸಂತಾಪವುಂಟಾಗುವಂತೆ, ದುಃಖವೆಂಬ ಕಾಳ್ಗಿಚ್ಚಿನ ಸಂತಾಪವುಂಟಾಗುವುದು. ಚಕ್ರವರ್ತಿಯ ಪುತ್ರಿಯರಿಗೂ ಅನ್ಯರ ಪಾದಸೇವೆಯುಂಟಾಗುವುದು.

**ಮಾನಭಂಗಃ ಸಪತ್ನೀಷು ದೃಷ್ಟೋತ್ಕರ್ಷೇಣ ಕೇನಚಿತ್ ।**
**ಸ್ವಭಾವವಕ್ರವಾಕ್ಕಾಯಮನೋಭಿಃ ಕುಟಿಲಾತ್ಮತಾ ॥ ೬೪೩ ॥**

ಯಾವುದಾದರೂ ತನ್ನ ಗುಣಾಧಿಕ್ಯವನ್ನು ಕಾಣುವುದರಿಂದ ಸವತಿಯರಲ್ಲಿ ತನಗೆ ಮಾನಭಂಗವುಂಟಾಗುವುದು. ಸ್ವಭಾವದಿಂದ ವಕ್ರವಾದ ವಾಕ್ಕಾಯಮನುಸ್ಸುಗಳಿಂದ ಕುಟಿಲತ್ವವುಂಟಾಗುವುದು.

**ಗರ್ಭಸೂತಿಸಮುತ್ಪನ್ನರೋಗಾದಿಪರಿಪೀಡನಮ್ ।**
**ಶೋಚನಂ ಸ್ತ್ರೀಸಮುತ್ಪತ್ತಾವಪತ್ಯಮರಣೇಸುಖಮ್ ॥ ೬೪೪ ॥**

ಗರ್ಭೋತ್ಪತ್ತಿಯಿಂದುಂಟಾದ ರೋಗಾದಿಗಳ ಪೀಡನೆಯೂ ಹೆಣ್ಣುಮಗುವಿನ ಜನನದಲ್ಲಿ ಶೋಕವೂ ಮಕ್ಕಳ ಮರಣದಲ್ಲಿ ಅಸುಖ–ದುಃಖವೂ ಉಂಟಾಗುವುವು.

**ರಹಸ್ಯಕಾರ್ಯಬಾಹ್ಯತ್ವಂ ಸರ್ವಕಾರ್ಯೇಸ್ವತಂತ್ರತಾ ।**
**ವಿಧವಾತ್ವೇ ಮಹಾದುಃಖಪಾತ್ರತ್ವಂ ದುಷ್ಟಚೇಷ್ಟಯಾ ॥ ೬೪೫ ॥**

**ದಾನಶೀಲೋಪವಾಸಾದಿಪರಲೋಕಹಿತಕ್ರಿಯಾ- ।**
**ವಿಧಾನೇಷ್ವಪ್ರಧಾನತ್ವಂ ಸಂತಾನಾರ್ಥಾನವಾಪನಮ್ ॥ ೬೪೬ ॥**

**ಕುಲನಾಶೋಗತಿರ್ಮುಕ್ತೇರಿತ್ಯಾದ್ಯನ್ಯಚ್ಚ ದೂಷಿತಮ್ ।**
**ಸಾಧಾರಣಮಿದಂ ಸರ್ವಸ್ತ್ರೀಣಾಂ ಕಸ್ಮಾತ್ತವಾಭವತ್ ॥ ೬೪೭ ॥**

**ತಸ್ಮಿನ್ಸುಖಾಭಿಲಾಷಿತ್ವಂ ವಯಸ್ಯಸ್ಮಿನ್ ಗತತ್ರಪೇ ।**
**ನ ಚಿಂತಯಸಿ ತೇ ಭಾವಿ ಹಿತಂ ಮತಿವಿಪರ್ಯಯಾತ್ ॥ ೬೪೮ ॥**

ರಹಸ್ಯಕಾರ್ಯಗಳಲ್ಲಿ ಬಾಹ್ಯತೆ–ಪ್ರವೇಶವಿಲ್ಲ. ಸಮಸ್ತಕಾರ್ಯದಲ್ಲಿ ಪ್ರಧಾನತ್ವವಿಲ್ಲ. ವಿಧವಾವಸ್ಥೆಯಲ್ಲಿ ಮಹಾದುಃಖಪಾತ್ರತೆಯುಂಟಾಗುವುದು. ದುರ್ವ್ಯಾಪಾರದಿಂದ ದಾನ ಶೀಲ ಉಪವಾಸವೇ ಮೊದಲಾದ ಪರಲೋಕಹಿತ ಕಾರ್ಯವಿಧಾನಗಳಲ್ಲಿ ಪ್ರಧಾನತೆಯಿರುವುದಿಲ್ಲ. ಸಂತಾನನಿಮಿತ್ತವಾದ ಬೀಜಾರೋಪವನ್ನು ಮಾಡಿಸದಿರುವುದು ಕುಲನಾಶಕ್ಕೆ ಕಾರಣವಾಗುವುದು. ಸ್ತ್ರೀಗೆ ಮುಕ್ತಿಯ ಗತಿಯಿಲ್ಲ. ಇವೇ ಮೊದಲಾದ ಈ ಬೇರೆ ದೂಷಣವೂ ಸರ್ವಸ್ತ್ರೀಯರಿಗೂ ಸಾಧಾರಣವಾಗಿದೆ. ಅಂತಹ ಸ್ತ್ರೀತ್ವದಲ್ಲಿ ನಿನಗೆ ಯಾವ ಕಾರಣದಿಂದ ಅಭಿಲಾಷೆಯುಂಟಾಯಿತು ? ಲಜ್ಜೆಯಿಲ್ಲದವಳೆ ! ಈ ವಯಸ್ಸಿನಲ್ಲಿ ಬುದ್ಧಿವೈಪರೀತ್ಯದಿಂದ ನಿನ್ನ ಮುಂದಿನ ಹಿತವನ್ನು ಚಿಂತಿಸುವುದಿಲ್ಲ.

**ಸ್ತ್ರೀತ್ವೇ ಸತೀತ್ವಮೇವೈಕಂ ಶ್ಲಾಘ್ಯಂ ತತ್ಪತಿಮಾತ್ಮನಃ ।**
**ವಿರೂಪಂ ವ್ಯಾಧಿತಂ ನಿಃಸ್ವಂ ದುಃಸ್ವಭಾವಮವರ್ತಕಮ್ ॥ ೬೪೯ ॥**

**ತ್ಯಕ್ತ್ವಾನ್ಯಂ ಚೇದೃಶಂ ಸ್ವಾಸಾಂ ಚಕ್ರಿಣಂ ಚಾಭಿಲಾಷಿಣಮ್ ।**
**ಪಶ್ಯಂತ್ಯಃ ಕುಷ್ಠಿಚಂಡಾಲಸದೃಶಂ ನಾಭಿಲಾಷುಕಾಃ ॥ ೬೫೦ ॥**

ಸ್ತ್ರೀತ್ವದಲ್ಲಿ ಪತಿವ್ರತತ್ವವೊಂದೇ ಶ್ಲಾಘ್ಯವಾದುದು. ಕುರೂಪಿಯೂ ರೋಗಿಯೂ ಧನಹೀನನೂ ದುಷ್ಟಸ್ವಭಾವವುಳ್ಳವನೂ ನಿರುದ್ಯೋಗಿಯೂ ಆದ ತನ್ನ ಆ ಪತಿಯನ್ನು ಬಿಟ್ಟು ಪತಿವ್ರತೆಯರು ರಾಮನಂತಹ ಬೇರೆ ಪುರುಷನನ್ನೂ ತಮ್ಮನ್ನು ಬಯಸುವ ಚಕ್ರವರ್ತಿಯನ್ನೂ ಕುಷ್ಠರೋಗಿಗೂ ಚಂಡಾಲನಿಗೂ ಸಮಾನನನ್ನಾಗಿ ನೋಡುವವರಾಗಿ ಇಚ್ಛಿಸುವುದಿಲ್ಲ. ಪತಿವ್ರತಾಸ್ತ್ರೀಯು ತನ್ನ ಪತಿಯು ಎಂಥವನಾಗಿದ್ದರೂ ಅವನನ್ನು ತ್ಯಜಿಸುವುದಿಲ್ಲವೆಂದೂ ತನ್ನನ್ನು ಬಯಸುವ ಪರಪುರುಷನು ಚಕ್ರವರ್ತಿಯಾದರೂ ಅವನನ್ನು ಬಯಸುವುದಿಲ್ಲವೆಂದೂ ಭಾವವು.

**ತಮಪ್ಯಾಕ್ರಮ್ಯ ಭೋಗೇಚ್ಛಂ ಸದ್ಯೋ ದೃಷ್ಟಿವಿಷೋಪಮಾಃ ।**
**ನಯಂತಿ ಭಸ್ಮಸಾದ್ಭಾವಂ ಯದ್ಬಲಾತ್ಕುಲಯೋಷಿತಃ ॥ ೬೫೧ ॥**

ಆಕ್ರಮಿಸಿ ಭೋಗೇಚ್ಛೆಯುಳ್ಳವನಾದ ಅಂತಹ ಪರಪುರುಷನನ್ನೂ ದೃಷ್ಟಿವಿಷಸಮಾನರಾದ ಕುಲಸ್ತ್ರೀಯರು ಪಾತಿವ್ರತ್ಯದ ಬಲದಿಂದ ಭಸ್ಮೀಭೂತನನ್ನಾಗಿ ಮಾಡುತ್ತಾರೆ.''

**ಇತ್ಯಾಹ ತದ್ವಚಃ ಶ್ರುತ್ವಾ ಮಂದರಾದ್ರಿಶ್ಚ ಚಾಲ್ಯತೇ ।**
**ಶಕ್ಯಂ ಚಾಲಯಿತುಂ ನಾಸ್ಯಾಶ್ಚಿತ್ತಮಿತ್ಯಾಕುಲಾಕುಲಾ ॥ ೬೫೨ ॥**

**ಗೃಹಕಾರ್ಯಂ ಭವದ್ವಾಕ್ಯಶ್ರುತೇರ್ವಿಸ್ಮೃತ್ಯ ದುಃಸ್ಥಿತಾ ।**
**ಯಾಮಿ ದೇವ್ಯಹಮಿತ್ಯೇತಚ್ಚರಣಾವವನಮ್ಯ ಸಾ ॥ ೬೫೩ ॥**

**ಗತಾನಿಷ್ಠಿತಕಾರ್ಯತ್ವಾದ್ವಿಷಣ್ಣಾ ರಾವಣಂ ಪ್ರತಿ ।**
**ಅಶಕ್ಯಾರಂಭವೃತ್ತೀನಾಂ ಕ್ಲೇಶಾದನ್ಯತ್ಕುತಃ ಫಲಮ್ ॥ ೬೫೪ ॥**

ಈ ರೀತಿಯಾಗಿ ಹೇಳಿದಳು. ಆ ಸೀತೆಯ ಮಾತನ್ನು ಕೇಳಿ ''ಮಂದರಪರ್ವತವೂ ಅಲ್ಲಾಡಿಸಲ್ಪಡುತ್ತದೆ. ಆದರೆ ಈಕೆಯ ಮನಸ್ಸನ್ನು ಅಲ್ಲಾಡಿಸುವುದಕ್ಕೆ ಸಾಧ್ಯವಿಲ್ಲ'' ಎಂದು ಬಹು ಆಕುಲಳಾಗಿ ''ದೇವಿಯೆ ! ನಾನು ನಿನ್ನ ಮಾತನ್ನು ಕೇಳುತ್ತ ಮನೆಯ ಕಾರ್ಯವನ್ನೂ ಮರೆತಿದ್ದೆನು. ಹೋಗುತ್ತೇನೆ'' ಎಂದು ಈ ಸೀತೆಯ ಕಾಲುಗಳನ್ನು ನಮಸ್ಕರಿಸಿ ಆ ಶೂರ್ಪಣಖೆಯು ಉದ್ದಿಷ್ಟಕಾರ್ಯವು ಕೈಗೂಡದಿದ್ದುದರಿಂದ ಖಿನ್ನಳಾಗಿ ರಾವಣನ ಬಳಿಗೆ ಹೋದಳು. ಅಸಾಧ್ಯವಾದ ಕಾರ್ಯಾರಂಭದಲ್ಲಿರುವವರಿಗೆ ಕ್ಲೇಶಕ್ಕಿಂತ ಬೇರೆಯಾದ ಫಲವೆಲ್ಲಿಂದ ಬರುವುದು ?

**ದೃಷ್ಟ್ವಾ ತಂ ಸ್ವೋಚಿತಂ ದೇವ ಸೀತಾ ಶೀಲವತೀ ನ ಸಾ ।**
**ವಜ್ರಯಷ್ಟಿರಿವಾನ್ಯೇನ ಭೇತ್ತುಂ ಕೇನಾಪಿ ಶಕ್ಯತೇ ॥ ೬೫೫ ॥**

ಶೂರ್ಪಣಖೆಯು ತನಗೆ ಉಚಿತನಾದ ಆ ರಾವಣನನ್ನು ನೋಡಿ ''ಪ್ರಭುವೆ ! ಸೀತೆಯು ಶೀಲವತಿಯಾಗಿರುತ್ತಾಳೆ. ವಜ್ರದ ಕೋಲನ್ನು ಭೇದಿಸುವುದಕ್ಕೆ ಸಾಧ್ಯವಾಗದಿರುವಂತೆ, ಆಕೆಯನ್ನು ಭೇದಿಸುವುದಕ್ಕೆ ಬೇರೆ ಯಾವನಿಂದಲೂ ಸಾಧ್ಯವಿಲ್ಲ.''

**ಇತಿ ಸ್ವಗತವೃತ್ತಾಂತಮುಕ್ತ್ವಾ ತೇಭಿಮತಂ ಮಯಾ ।**
**ನೋಕ್ತಂ ಶೀಲವತೀಕೋಪವಹ್ನಿಭೀತ್ಯೇತಿ ಚಾಬ್ರವೀತ್ ॥ ೬೫೬ ॥**

ಈ ಪ್ರಕಾರವಾಗಿ ತನ್ನಲ್ಲಿರುವ ಸಮಾಚಾರವನ್ನು ಹೇಳಿ "ಶೀಲವತಿಯ ಕೋಪವೆಂಬ ಬೆಂಕಿಯ ಭಯದಿಂದ ನಾನು ನಿನ್ನ ಅಭಿಪ್ರಾಯವನ್ನು ಆಕೆಗೆ ಹೇಳಲಿಲ್ಲ" ಎಂದೂ ರಾವಣನಿಗೆ ಹೇಳಿದಳು.

**ಶ್ರುತ್ವಾ ತದ್ವಚನಂ ಸರ್ವಮಸತ್ಯಮವಧಾರಯನ್ ।**
**ಪ್ರಕಟೀಕೃತಕೋಪಾಗ್ನಿರಿಂಗಿತಾಕಾರವೃತ್ತಿಭಿಃ ॥ ೬೫೭ ॥**

**ಮುಗ್ಧೇ ಫಣೀಂದ್ರನಿಃಶ್ವಾಸಭೋಗಾಟೋಪವಿಲೋಕನಾತ್ ।**
**ಭೀತ್ವಾ ತದ್ಗ್ರಹಣಂ ಕೋ ವಾ ವಿಷವಾದೀ ವಿಮುಂಚತಿ ॥ ೬೫೮ ॥**

ಎಲ್ಲಾ ಮಾತನ್ನು ಕೇಳಿ ಸುಳ್ಳೆಂದು ನಿಶ್ಚಯಿಸುವವನಾಗಿಯೂ ಇಂಗಿತಾಕಾರ ವರ್ತನಗಳಿಂದ ಪ್ರಕಟಮಾಡಲ್ಪಟ್ಟ ಕೋಪಾಗ್ನಿಯುಳ್ಳವನಾಗಿಯೂ "ಮೂರ್ಖಳೇ! ಬುಸುಗುಟ್ಟುವ ದೊಡ್ಡಹಾವಿನ ಹೆಡೆಯ ರಭಸವನ್ನು ನೋಡಿ ಹೆದರಿ ಯಾವ ಹಾವಾಡಿಗನು ತಾನೆ ಅದನ್ನು ಹಿಡಿಯದೆ ಬಿಡುತ್ತಾನೆ?

**ಬಾಹ್ಯಸ್ಥೈರ್ಯವಚಃ ಶ್ರುತ್ವಾ ಭೀತ್ವಾ ತಸ್ಯಾಸ್ತ್ವಮಾಗತಾ ।**
**ಗಜಕರ್ಣಚಲಾ ಸ್ತ್ರೀಣಾಂ ಚಿತ್ತವೃತ್ತಿರ್ನ ವೇತ್ಸಿ ಕಿಮ್ ॥ ೬೫೯ ॥**

ಆಕೆಯ ಹೊರಗಿನ ಸ್ಥಿರತೆಯ ಮಾತನ್ನು ಕೇಳಿ ನೀನು ಹೆದರಿ ಬಂದೆ. ಹೆಂಗುಸರ ಮನೋವೃತ್ತಿಯು ಆನೆಯ ಕಿವಿಯಂತೆ ಚಂಚಲವಾದುದೆಂದು ತಿಳಿಯೆಯಾ?

**ನಾಸ್ಯಾಶ್ಚಿತ್ತಂ ತ್ವಯಾಭೇದಿ ನ ಜಾನೇ ಕೇನ ಹೇತುನಾ ।**
**ಉಪಾಯಕುಶಲಾಭಾಸೀತ್ಯಸೌ ತಾಮಭ್ಯತರ್ಜಯತ್ ॥ ೬೬೦ ॥**

ಯಾವ ಕಾರಣದಿಂದ ಈಕೆಯ ಚಿತ್ತವನ್ನು ನೀನು ಭೇದಿಸಲಿಲ್ಲವೋ ತಿಳಿಯೆನು. ಉಪಾಯಚತುರಳಾಗಿ ಕಾಣುತ್ತಿರುವೆ" ಈ ರೀತಿಯಾಗಿ ಈ ರಾವಣನು ಆ ಶೂರ್ಪಣಖೆಯನ್ನು ಬೆದರಿಸಿದನು.

**ಭೋಗೋಪಭೋಗದ್ವಾರೇಣ ರಂಜಯೇಯಂ ಮನೋ ಯದಿ ।**
**ತತ್ರ ಯದ್ವಸ್ತು ನಾನ್ಯತ್ರ ತತ್ಸ್ವಪ್ನೇಪ್ಯುಪಲಭ್ಯತೇ ॥ ೬೬೧ ॥**

ಆಗ ಆ ಶೂರ್ಪಣಖೆಯೂ ರಾವಣನನ್ನು ಕುರಿತು "ಭೋಗೋಪಭೋಗ ಮೂಲಕವಾಗಿ ಆಕೆಯ ಮನಸ್ಸನ್ನು ಸಂತೋಷಪಡಿಸುತ್ತೇನೆಂದರೆ ಆ ವಾರಾಣಸಿಯಲ್ಲಿರುವ ವಸ್ತುವು ಬೇರೆಕಡೆಯಲ್ಲಿ ಕನಸಿನಲ್ಲಿಯೂ ಪಡೆಯಲಾಗುವುದಿಲ್ಲ.

**ಅಥ ಶೌರ್ಯಾದಿಭೀ ರಾಮಸದೃಶೋ ನ ಕ್ವಚಿತ್ಪುಮಾನ್ ।**
**ವೀಣಾದಿಭಿಶ್ಚೇತ್ತಾಸ್ಯಾ ಸರ್ವಕಲಾಗುಣವಿಶಾರದಾ ॥ ೬೬೨ ॥**

ಆಮೇಲೆ ಶೌರ್ಯಾದಿಗುಣಗಳಿಂದ ಸಂತೋಷಪಡಿಸುತ್ತೇನೆಂದರೆ ರಾಮನಿಗೆ ಸಮಾನನಾದ ಪುರುಷನು ಎಲ್ಲಿಯೂ ಇಲ್ಲ. ವೀಣಾದಿವಿದ್ಯೆಗಳಿಂದ ಸಂತೋಷಪಡಿಸುತ್ತೇನೆಂದರೆ ಆ ಸೀತೆಯು ಸಮಸ್ತಕಲಾಗುಣವಿಶಾರದಳಾಗಿರುತ್ತಾಳೆ.

**ಸುಗ್ರಹಂ ತಲಹಸ್ತೇನ ಭೂಮಿಷ್ಠೈರ್ಭಾನುಮಂಡಲಮ್ ।**
**ಪಾತಾಲಾದಪಿ ಶೇಷೋಹಿಃ ಸುಹರೋ ಡಿಂಭಕೇನ ಚ ॥ ೬೬೩ ॥**

**ಸಮುತ್ತಾನಯಿತುಂ ಶಕ್ಯಾ ಸಸಮುದ್ರಾ ವಸುಂಧರಾ ।**
**ಭೇತ್ತುಂ ಶೀಲವತೀಚಿತ್ತಂ ನ ಶಕ್ಯಂ ಮನ್ಮಥೇನ ಚ ॥ ೬೬೪ ॥**

**ಇತ್ಯಾಕ್ಯುತ್ವಾಸ್ಪದಃ ಪಾಪಾದವಕರ್ಣ್ಯ ಸ ರಾವಣಃ ।**
**ನಿರ್ಮಲೈಃ ಕೇತನೈರ್ದೂರಾತ್ಪರಿಹಾಸಕೃತಾಂ ಜನಯದ್ಭುಶಮ್ ॥ ೬೬೫ ॥**

**ಹಂಸಾವಲೀತಿ ಸಂದೇಹಂ ನವನಿರ್ಮೋಕಹಾಸಿಭಿಃ ।**
**ದಿಶೋ ಮುಖರಯದ್ಧೇಮಘಂಟಾಚಟುಲನಿಃಸ್ವನೈಃ ॥ ೬೬೬ ॥**

**ಕುರ್ವದ್ಘನೈರ್ಘನಾಶ್ಲೇಷಂ ವಿಶ್ಲಿಷ್ಟೈರಿವ ಬಂಧುಭಿಃ ।**
**ಯಯೌ ಪುಷ್ಪಕಮಾರುಹ್ಯ ಗಗನೇ ಸಹ ಮಂತ್ರಿಣಾ ॥ ೬೬೭ ॥**

ಭೂಮಿಯಲ್ಲಿರುವವರು ಹಸ್ತತಲದಿಂದ ಸೂರ್ಯಮಂಡಲವನ್ನು ಸುಲಭವಾಗಿ ಹಿಡಿಯಬಹುದು. ಬಾಲಕನು ಪಾತಾಳದಿಂದ ಆದಿಶೇಷನನ್ನು ಸುಲಭವಾಗಿ ಹಿಡಿದು ತರಬಹುದು. ಸಮುದ್ರಸಹಿತವಾದ ಭೂಮಿಯನ್ನು ತಿರುವಿಹಾಕುವುದಕ್ಕೆ ಸಾಧ್ಯವಾಗಬಹುದು. ಆದರೆ ಶೀಲವತಿಯ-ಸೀತೆಯ ಮನಸ್ಸನ್ನು ಭೇದಿಸುವುದಕ್ಕೆ ಮನ್ಮಥನಿಂದಲೂ ಸಾಧ್ಯವಲ್ಲ" ಎಂದು ಹೇಳಿದಳು. ಈ ಮಾತನ್ನು ಕೇಳಿ ಪಾಪದ ದೆಸೆಯಿಂದ ಆ ರಾವಣನು ನಿರ್ಮಲವೂ ನೂತನವಾದ ಹಾವಿನ ಪೊರೆಯನ್ನು ಪರಿಹಾಸಮಾಡುವುವೂ ಆದ ಬಾವುಟಗಳಿಂದ ದೂರದಿಂದ ನೋಡುವವರಿಗೆ ಅಧಿಕವಾಗಿ ಹಂಸಗಳ ಸಾಲೆಂಬ ಸಂದೇಹವನ್ನುಂಟುಮಾಡುವುದೂ ದಿಕ್ಕುಗಳನ್ನು ಶಬ್ದಮಯವಾಗಿ ಮಾಡುವ ಬಂಗಾರದ ಘಂಟೆಗಳ ವಿಶೇಷವಾದ ಮತ್ತು ನಿಬಿಡವಾದ ಶಬ್ದಗಳಿಂದ ವಿಯುಕ್ತರಾದ ಬಂಧುಗಳೊಡನೆ ದೃಢವಾದ ಆಲಿಂಗನವನ್ನು ಮಾಡುವಂತಿರುವುದೂ ಆದ ಪುಷ್ಪಕವಿಮಾನವನ್ನೇರಿ ಮಂತ್ರಿಯೊಡನೆ ಆಕಾಶದಲ್ಲಿ ಹೊರಟುಹೋದನು.

**ಧ್ವಜದಂಡಾಗ್ರನಿರ್ಭಿನ್ನವಾರಿದಚ್ಯುತವಾರ್ಲವೈಃ ।**
**ಮಂದಗಂಧವಹಾನೀತೈರ್ವಿನೀತಾಧ್ವಪರಿಶ್ರಮಃ ॥ ೬೬೮ ॥**

**ಸೀತೋತ್ಸುಕಸ್ತದಾ ಗಚ್ಛನ್ ದದೃಶೇ ಪುಷ್ಪಕಸ್ಥಿತಃ ।**
**ಶರದ್ವಲಾಹಕಾಂತಸ್ಥೋ ವಾಸೌ ನೀಲಬಲಾಹಕಃ ॥ ೬೬೯ ॥**

ಮಂದಮಾರುತದಿಂದ ತರಲ್ಪಟ್ಟ ಮತ್ತು ಧ್ವಜದಂಡಗಳ ಅಗ್ರಭಾಗಗಳಿಂದ ಭೇದಿಸಲ್ಪಟ್ಟ ಮೇಘದಿಂದ ಜಾರಿದ ನೀರಿನ ಹನಿಗಳಿಂದ ಮಾರ್ಗಪರಿಶ್ರಮವನ್ನು ಹೋಗಲಾಡಿಸಿದವನೂ ಸೀತಾದೇವಿಯಲ್ಲಿ ಕುತೂಹಲವುಳ್ಳವನೂ ಹೋಗುತ್ತಿರುವವನೂ ಪುಷ್ಪಕವಿಮಾನದಲ್ಲಿರುವವನೂ ಆದ ಈ ರಾವಣನು ಆಗ, ಶರತ್ಕಾಲದ ಮೇಘದ ಮಧ್ಯದಲ್ಲಿರುವ ನೀಲಮೇಘದಂತೆ, ಕಂಡನು.

**ಸಂಪ್ರಾಪ್ಯ ಚಿತ್ರಕೂಟಾಖ್ಯಂ ನಂದನಂ ನಂದನಸ್ವನಮ್ ।**
**ಪ್ರವಿಷ್ಟ ಇವ ಸೀತಾಯಾಶ್ಚಿತ್ತಂ ತುಷ್ಟಿಮಗಾದಲಮ್ ॥ ೬೭೦ ॥**

ಸಂತೋಷವನ್ನುಂಟುಮಾಡುವ ಶಬ್ದವುಳ್ಳ ಚಿತ್ರಕೂಟವೆಂಬ ನಂದನವನ್ನು ಸೇರಿ, ಸೀತೆಯ ಚಿತ್ತವನ್ನು ಪ್ರವೇಶಿಸಿದವನಂತೆ, ಬಹುಸಂತೋಷವನ್ನು ಪಡೆದನು.

**ತದಾಜ್ಞಯಾಥ ಮಾರೀಚಃ ಪರಾರ್ಧ್ಯಮಣಿನಿರ್ಮಿತಃ ।**
**ಭೂತ್ವಾ ಹರಿಣಪೋತೋಸೌ ಸೀತಾಯಾಃ ಸ್ವಮದರ್ಶಯತ್ ॥ ೬೭೧ ॥**

ಆ ರಾವಣನ ಆಜ್ಞೆಯಿಂದ ಮಾರೀಚನು ಹೆಚ್ಚು ಬೆಲೆ ಬಾಳುವ ರತ್ನಗಳಿಂದ ನಿರ್ಮಿತವಾದ ಜಿಂಕೆಯ ಮರಿಯಾಗಿ ಸೀತೆಗೆ ತನ್ನನ್ನು ತೋರಿಸಿದನು.

**ತಂ ಮನೋಹಾರಿಣಂ ದೃಷ್ಟ್ವಾ ಪಶ್ಯ ನಾಥಾತಿಕೌತುಕಮ್ ।**
**ಹರಿಣಶ್ಚಿತ್ರವರ್ಣೋಯಂ ರಂಜಯತ್ಯಂಜಸಾ ಮನಃ ॥ ೬೭೨ ॥**

ಮನೋಹರವಾದ ಆ ಜಿಂಕೆಯ ಮರಿಯನ್ನು ನೋಡಿ ಸೀತೆಯು ರಾಮನನ್ನು ಕುರಿತು "ಸ್ವಾಮಿಯೆ! ಅತ್ಯಂತಕೌತುಕವನ್ನು ನೋಡು. ಚಿತ್ರವರ್ಣದ ಈ ಹರಿಣವು ಮನಸ್ಸನ್ನು ಶೀಘ್ರವಾಗಿ ಸಂತೋಷಪಡಿಸುತ್ತದೆ."

**ಇತಿ ಸೀತಾವಚಃ ಶ್ರುತ್ವಾ ವಿನೇತುಂ ತತ್ಕುತೂಹಲಮ್ ।**
**ತದಾನಿನೀಷಯಾ ಗತ್ವಾರಾಮೇ ರಾಮೋ ವಿಧೌ ವಿಧೀಃ ॥ ೬೭೩ ॥**

**ಗ್ರೀವಾಭಂಗೇನ ಮಾಂ ಪಶ್ಯನ್ ಕುರ್ವನ್ ದೂರಂ ಪುನಃ ಪು ತಿಮ್ ।**
**ವಲ್ಗು ಧಾವನ್ ಕ್ಷಣಂ ಖಾದನ್ ವಿಭಯೋ ವಾ ತೃಣಾಂಕುರಾನ್ ॥**

**ಹಸ್ತಗ್ರಾಹ್ಯಮಿವಾತ್ಮಾನಂ ಕೃತ್ವೋಡ್ಡೀಯಾತಿದೂರಗಃ ।**
**ವೃಥಾಕರ್ಷತಿ ಮಾಂ ಮಾಯಾಮೃಗೋ ವೈಷೋತಿದುರ್ಗ್ರಹಃ॥ ೬೭೫ ॥**

ಈ ರೀತಿಯಾಗಿ ಸೀತೆಯ ಮಾತನ್ನು ಕೇಳಿ ಆ ಕುತೂಹಲವನ್ನು ಹೋಗಲಾಡಿಸುವುದಕ್ಕೋಸ್ಕರ ಅದನ್ನು ತರಬೇಕೆಂಬ ಇಚ್ಛೆಯಿಂದ ಅದೃಷ್ಟವಿಷಯದಲ್ಲಿ ಬುದ್ಧಿಯಿಲ್ಲದವನಾಗಿ ರಾಮನು ಆರಾಮ–ಉದ್ಯಾನದಲ್ಲಿ ಹೋಗಿ "ಕುತ್ತಿಗೆಯನ್ನು ಬಗ್ಗಿಸುವುದರಿಂದ ನನ್ನನ್ನು ನೋಡುವುದೂ ಮತ್ತೆ ದೂರವಾಗಿ ಹಾರುವುದೂ ಮನೋಹರವಾಗಿ ಓಡುವುದೂ ಕ್ಷಣಕಾಲ ಭಯವಿಲ್ಲದಿರುವಂತೆ ಹುಲ್ಲಿನ ಮೊಳಕೆಗಳನ್ನು ತಿನ್ನುವುದೂ ತನ್ನನ್ನು ಕೈಗೆ ಸಿಕ್ಕಿದಂತೆ ಮಾಡಿ ಹಾರಿ ಬಹುದೂರದಲ್ಲಿರುವುದೂ ಆದ ಈ ಹರಿಣವು, ಮಾಯಾಮೃಗದಂತೆ, ಹಿಡಿಯುವುದಕ್ಕೆ ಕಷ್ಟಸಾಧ್ಯವಾಗಿ ನನ್ನನ್ನು ವ್ಯರ್ಥವಾಗಿ ಕಷ್ಟಪಡಿಸುತ್ತದೆ."

**ವದನ್ನಿತ್ಯನ್ವಗಾತ್ಸೋಽಪಿ ಮೃಗೋಗಾದ್ಗಗನಾಂಗಣಮ್ ।**
**ಕುತಃ ಕೃತ್ಯಪರಾಮರ್ಶಃ ಸ್ತ್ರೀವಶೀಕೃತಚೇತಸಾಮ್ ॥ ೬೭೬ ॥**

ಈ ರೀತಿಯಾಗಿ ಹೇಳುವವನಾಗಿ ಹಿಂಬಾಲಿಸಿದನು. ಆ ಮೃಗವೂ ಗಗನಾಂಗಣವನ್ನು ಹೊಂದಿತು–ಆಕಾಶಕ್ಕೆ ಹಾರಿತು. ಸ್ತ್ರೀವಶೀಕೃತವಾದ ಮನಸ್ಸುಳ್ಳವರಿಗೆ ಕಾರ್ಯವಿವೇಚನೆಯು ಎಲ್ಲಿಂದ ಬರುವುದು ?

**ಲೋಕಮಾನೋ ನಭೋ ರಾಜಸೂನುಸ್ತಾಮನಿರೂಪಯನ್ ।**
**ತಸ್ಥೌ ತತ್ರೈವ ವಿಭ್ರಾಂತೋ ಘಟಾಂತರಗತಾಹಿವತ್ ॥ ೬೭೭ ॥**

ಆಕಾಶವನ್ನು ನೋಡುವವನಾದ ರಾಜಪುತ್ರನು ಆ ಸೀತೆಯನ್ನು ಕಾಣದಿರುವವನಾಗಿ, ಘಟದೊಳಗಿರುವ ಹಾವಿನಂತೆ, ಹೆಚ್ಚು ಭ್ರಾಂತನಾಗಿ ಅಲ್ಲೇ ನಿಂತುಬಿಟ್ಟನು.

**ಅಥೇತೋ ರಾಮರೂಪೇಣ ಪರಿವೃತ್ತೋ ದಶಾನನಃ ।**
**ಸೀತಾಮಿತ್ವಾ ಪುರೋ ಧೃತ್ವಾ ಪ್ರಹಿತೋ ಹರಿಣೋ ಮಯಾ॥ ೬೭೮ ॥**

**ವಾರುಣೀದಿಕ್ಪ್ರಿಯೇ ಪಶ್ಯ ಬಿಂಬಮೇಷಾಂಶುಮಾಲಿನಃ ।**
**ಸಿಂದೂರತಿಲಕಂ ನ್ಯಸ್ತಂ ಬಿಭ್ರತೀವ ವಿರಾಜತೇ ॥ ೬೭೯ ॥**

ಬಳಿಕ ಇತ್ತ ರಾಮನ ರೂಪದಿಂದ ಪರಿವರ್ತನೆಯನ್ನು ಹೊಂದಿದ ದಶಮುಖನು ಸೀತೆಯ ಬಳಿಗೆ ಹೋಗಿ "ಪ್ರಿಯಳೆ ! ನಾನು ಹರಿಣವನ್ನು ಹಿಡಿದು ಮುಂದೆ ಕಳುಹಿಸಿಕೊಟ್ಟೆನು. ನೋಡು. ಈ ಪಶ್ಚಿಮದಿಕ್ಕು, ಹಣೆಗಿರಿಸಲ್ಪಟ್ಟ ಸಿಂದೂರದ ತಿಲಕವನ್ನು ಧರಿಸುತ್ತದೆಯೋ ಎನ್ನುವಂತೆ, ಸೂರ್ಯನ ಬಿಂಬವನ್ನು ಧರಿಸುವುದಾಗಿ ಪ್ರಕಾಶಿಸುತ್ತದೆ.

**ಆರೋಹ ಶಿಬಿಕಾಂ ತಸ್ಮಾದಾಶು ಸುಂದರಿ ಬಂಧುರಾಮ್ ।**
**ಪುರೀಂ ಗಮನಕಾಲೋಽಯಂ ವರ್ತತೇ ಸುಖರಾತ್ರಯೇ ॥ ೬೮೦ ॥**

ಸುಂದರಿಯೆ ! ಆದುದರಿಂದ ಮನೋಹರವಾದ ಪಲ್ಲಕ್ಕಿಯನ್ನು ಶೀಘ್ರವಾಗಿ ಹತ್ತು. ರಾತ್ರಿಯ ಸುಖಕ್ಕೋಸ್ಕರ ಇದು ನಗರವನ್ನು ಕುರಿತು ಗಮನಕಾಲವಾಗಿದೆ."

**ಇತ್ಯವಾದೀತ್ತದಾಕರ್ಣ್ಯ ಸಮಾಯಾಶಿಬಿಕಾಕೃತಿ ।**
**ವಿಮಾನಂ ಪುಷ್ಪಕಂ ಮೋಹಾದಾರುರೋಹ ಧರಾಸುತಾ ॥ ೬೮೧ ॥**

ಈ ರೀತಿಯಾಗಿ ಹೇಳಿದನು. ಭೂಮಿಪುತ್ರಿಯಾದ ಸೀತೆಯು ಆ ಮಾತನ್ನು ಕೇಳಿ ಮಾಯಾಸಹಿತವಾದ ಪಲ್ಲಕ್ಕಿಯ ಆಕೃತಿಯುಳ್ಳ ಪುಷ್ಪಕವಿಮಾನವನ್ನು ಅಜ್ಞಾನದಿಂದ ಹತ್ತಿದಳು. ಮಾಯೆಯಿಂದ ಪಲ್ಲಕ್ಕಿಯ ಆಕಾರವಾಗಿ ಮಾಡಲ್ಪಟ್ಟ ಪುಷ್ಪಕವಿಮಾನವನ್ನೇರಿದಳೆಂದು ಭಾವವು.

**ರಾಮಂ ವಾ ತುರಗಾರೂಢಮಾತ್ಮಾನಂ ಸಂಪ್ರದರ್ಶಯನ್ ।**
**ಮಹೀಗತಿಮಿವ ಭ್ರಾಂತಿಂ ಜನಯನ್ ದುಹಿತುರ್ಮಹೇಃ ॥ ೬೮೨ ॥**

**ತಾಂ ಭುಜಂಗೀಮಿವಾನ್ವೈಷೀದುಪಾಯೇನ ಸ್ವಮೃತ್ಯವೇ ।**
**ಪತಿವ್ರತಾಗ್ರಗಾಂ ಪಾಪೀ ಮಾಯಾಚುಂಚುರ್ದಶಾನನಃ ॥ ೬೮೩ ॥**

ರಾಮನಂತೆ ಕುದುರೆಯನ್ನು ಹತ್ತಿರುವ ತನ್ನನ್ನು ತೋರಿಸುವವನೂ ಭೂಮಿಪುತ್ರಿಗೆ ಭೂಮಿಯ ಗಮನವನ್ನೋಪಾದಿಯಲ್ಲಿ(ತ್ವರೆಯಾಗಿ) ಭ್ರಾಂತಿಯನ್ನುಂಟುಮಾಡುವವನೂ ಪಾಪಿಯೂ ವಂಚನೆಯಲ್ಲಿ ನಿಪುಣನೂ ಆದ ಆ ದಶಮುಖನು ತನ್ನ ಮೃತ್ಯುವಿಗೋಸ್ಕರ, ಹೆಣ್ಣುಹಾವನ್ನು ಒಯ್ಯುವಂತೆ, ಪತಿವ್ರತಾಶಿರೋಮಣಿಯಾದ ಆ ಸೀತೆಯನ್ನು ಉಪಾಯದಿಂದ ಒಯ್ದನು.

**ಕ್ರಮಾಲ್ಲಂಕಾಮವಾಪ್ಯೈನಾಮವತಾರ್ಯ ವನಾಂತರೇ ।**
**ಸದ್ಯೋ ಮಾಯಾಂ ನಿರಾಕೃತ್ಯ ಜ್ಞಾಪಿತಾನಯನಕ್ರಮಃ ॥ ೬೮೪ ॥**

**ಇಂದ್ರನೀಲಚ್ಛವಿಂ ದೇಹಂ ಗೂಢಾರ್ಥಂ ಶಿಷ್ಯಸಂತತೇಃ ।**
**ಆಚಾರ್ಯೋ ವಾ ಸ ತಸ್ಯಾಃ ಸ್ವಂ ಸುಚಿರಾತ್ಸಮದರ್ಶಯತ್ ॥ ೬೮೫ ॥**

ಕ್ರಮದಿಂದ ಲಂಕೆಯನ್ನು ತಲುಪಿ ಈಕೆಯನ್ನು ವನದಲ್ಲಿ ಇಳಿಸಿ ತತ್ಕ್ಷಣದಲ್ಲಿ ಮಾಯೆಯನ್ನು ದೂರಮಾಡಿ ತಂದ ರೀತಿಯನ್ನು ತಿಳಿಸಿದವನಾಗಿ, ಉಪಾಧ್ಯಾಯನು ಶಿಷ್ಯಸಮೂಹಕ್ಕೆ ಗೂಢವಾದ ಅರ್ಥವನ್ನು ತೋರಿಸುವಂತೆ, ಗೂಢವಾದ ಪ್ರಯೋಜನವುಳ್ಳದೂ ಇಂದ್ರನೀಲರತ್ನದ ಕಾಂತಿಯುಳ್ಳದೂ ಆದ ತನ್ನ ಶರೀರವನ್ನು ಹೆಚ್ಚುಹೊತ್ತಿನ ಮೇಲೆ ಆಕೆಗೆ ತೋರಿಸಿದನು.

**ಭಯೇನ ಲಜ್ಜಯಾ ರಾಮವಿರಹೋತ್ಥಶುಚಾ ಚ ಸಾ ।**
**ಅಗಾದ್ರಾಜಸುತಾ ಮೂರ್ಛಾಮತಿಕೃಚ್ಛ್ರಪ್ರತಿಕ್ರಿಯಾಮ್ ॥ ೬೮೬ ॥**

ಆ ರಾಜಪುತ್ರಿಯು ಭಯದಿಂದಲೂ ಲಜ್ಜೆಯಿಂದಲೂ ರಾಮನ ವಿರಹದಿಂದುಂಟಾದ ಶೋಕದಿಂದಲೂ ಪ್ರತಿಕ್ರಿಯೆಯನ್ನು ಮಾಡುವುದಕ್ಕೆ ಬಹುಕಷ್ಟವಾದ ಮೂರ್ಛೆಹೋದಳು.

**ಸದ್ಯಃ ಶೀಲವತೀಸ್ಪರ್ಶಾದ್ವಿದ್ಯಾ ಗಗನಗಾಮಿನೀ ।**
**ವಿನಶ್ಯತೀತಿ ಭೀತ್ವಾಸೌ ಜಾನಕೀಂ ಸ್ವಯಮಸ್ಪೃಶನ್ ॥ ೬೮೭ ॥**

**ವಿದ್ಯಾಧರೀಃ ಸಮಾಹೂಯ ಶೀತಾಂಬುಪವನಾದಿಭಿಃ ।**
**ಮೂರ್ಛಾಮಸ್ಯಾ ನಿರಾಕುರ್ಯುರಿತಿ ದಕ್ಷಾ ನ್ಯಯೋಜಯತ್॥ ೬೮೮ ॥**

ಶೀಲವತಿಯ ಸ್ಪರ್ಶದಿಂದ ತನ್ನ ಗಗನಗಾಮಿನೀವಿದ್ಯೆಯು ತತ್ಕ್ಷಣದಲ್ಲಿ ನಾಶವಾಗುವುದೆಂದು ಹೆದರಿ ಈ ರಾವಣನು ಜಾನಕಿಯನ್ನು ತಾನು ಮುಟ್ಟದಿರುವವನಾಗಿ ತಣ್ಣೀರು ಗಾಳಿಯೇ ಮೊದಲಾದುವುಗಳಿಂದ ಈಕೆಯ ಮೂರ್ಛೆಯನ್ನು ನಿವಾರಣಮಾಡಲೆಂದು ಸಮರ್ಥರಾದ ವಿದ್ಯಾಧರಿಯರನ್ನು ಕರೆದು ನೇಮಿಸಿದನು.

**ಉಪಾಯೈಸ್ತಾಭಿರುದ್ಭೂತಮೂರ್ಛಾಪೋಚದ್ಧರಾಸುತಾ ।**
**ಯೂಯಂ ಕಾಃ ಕಃ ಪ್ರದೇಶೋಽಯಮಿತಿ ಶಂಕಾಕುಲಾಶಯಾ॥ ೬೮೯ ॥**

ಆ ವಿದ್ಯಾಧರಿಯರಿಂದ ಉಪಾಯಗಳಿಂದ ಹೋಗಲಾಡಿಸಲ್ಪಟ್ಟ ಮೂರ್ಛೆಯುಳ್ಳ ಭೂಮಿಪುತ್ರಿಯು "ನೀವುಗಳು ಯಾರು ? ಈ ಪ್ರದೇಶವಾವುದು ?" ಎಂದು ಸಂದೇಹದಿಂದ ಆಕುಲವಾದ ಚಿತ್ತವುಳ್ಳವಳಾಗಿ ಮಾತನಾಡಿದಳು.

**ವಿದ್ಯಾಧರ್ಯೋ ವಯಂ ಲಂಕಾಪುರಮೇತನ್ಮನೋಹರಮ್ ।**
**ವನಂ ರಾವಣರಾಜಸ್ಯ ತ್ರಿಖಂಡಾಧಿಪತೇರಿದಮ್ ॥ ೬೯೦ ॥**

"ನಾವು ವಿದ್ಯಾಧರಿಯರು. ಇದು ಮನೋಹರವಾದ ಲಂಕಾನಗರ. ಇದು ತ್ರಿಖಂಡಾಧಿಪತಿಯಾದ ರಾವಣರಾಜನ ವನ.

**ತ್ವಾದೃಶೀ ವನಿತಾ ಲೋಕೇ ನ ಕಾಚಿತ್ಪುಣ್ಯಭಾಗಿನೀ ।**
**ಮಹೇಂದ್ರಮಿವ ಪೌಲೋಮೀ ಸುಭದ್ರೇವಾದಿಭೂಪತಿಮ್ ॥ ೬೯೧ ॥**

**ಶ್ರೀಮತೀ ವಜ್ರಜಂಘಂ ವಾ ತ್ವಮೇನಂ ಕುರು ತೇ ಪತಿಮ್ ।**
**ಸ್ವಾಮಿನೀ ಭವ ಸೌಭಾಗ್ಯಾದ್ರಾವಣಸ್ಯ ಮಹಾಶ್ರಿಯಃ ॥ ೬೯೨ ॥**

ಲೋಕದಲ್ಲಿ ನಿನ್ನಂತಹ ಪುಣ್ಯಭಾಗಿನಿಯು ಯಾವಳೂ ಇಲ್ಲ. ಶಚೀದೇವಿಯು ದೇವೇಂದ್ರನನ್ನೂ ಸುಭದ್ರಾದೇವಿಯು ಪ್ರಥಮಚಕ್ರಿಯಾದ ಭರತನನ್ನೂ ಶ್ರೀಮತಿಯು ವಜ್ರಜಂಘನನ್ನೂ ಪತಿಯನ್ನಾಗಿ ಮಾಡಿಕೊಂಡಂತೆ ನೀನು ಈ ರಾವಣನನ್ನು ನಿನ್ನ ಪತಿಯನ್ನಾಗಿ ಮಾಡಿಕೊ. ಸೌಭಾಗ್ಯದಿಂದ ಮಹಾಸಂಪತ್ತಿಯುಳ್ಳವನಾದ ರಾವಣನ ಸ್ವಾಮಿನಿಯಾಗು."

**ಜಾನಕೀ ತಾಭಿರಿತ್ಯುಕ್ತಾ ಸುದೂನಾ ದೀನಮಾನಸಾ ।**
**ಕಿಂ ಪೌಲೋಮ್ಯಾದಯಃ ಶೀಲಭಂಗೇನೈತಾನ್ ಪತೀನ್ ಗತಾಃ॥೬೯೩ ॥**

**ಪ್ರಾಣೇಭ್ಯೋಽಪ್ಯಧಿಕಾಃ ಕೇ ವಾ ವಿಕ್ರೀಣಂತಿ ಗುಣಶ್ರಿಯಃ ।**
**ತ್ರಿಖಂಡಸ್ಯಾಧಿಪೋಽಸ್ತ್ವಸ್ತು ಷಡ್ಖಂಡಸ್ಯಾಖಿಲಸ್ಯ ವಾ ॥ ೬೯೪ ॥**

**ಕಿಂ ತೇನ ಯದಿ ಶೀಲಸ್ಯ ಖಂಡನಂ ಮಂಡನಸ್ಯ ಮೇ ।**
**ಪ್ರಾಣಾಃ ಸತಾಂ ನಹಿ ಪ್ರಾಣಾಃ ಗುಣಾಃ ಪ್ರಾಣಾಃ ಪ್ರಿಯಾಸ್ತತಃ॥ ೬೯೫ ॥**

**ತದ್ಧ್ವಂಯಾತ್ಪಾಲಯಾಮ್ಯೇತಾನ್ ಗುಣಪ್ರಾಣಾನ್ನ ಜೀವಿಕಾಮ್ ।**
**ಮೂರ್ತಿರ್ವಿನಶ್ವರೀ ಯಾತು ವಿನಾಶಮವಿನಶ್ವರಮ್ ॥ ೬೯೬ ॥**

**ವಿನಶ್ಯತಿ ನ ಮೇ ಶೀಲಂ ಕುಲಶೈಲಾನುಕಾರಿ ತತ್ ।**
**ಇತಿ ಪ್ರತ್ಯುತ್ತರಂ ದತ್ವಾ ಗೃಹೀತ್ವಾ ಸಾ ವ್ರತಂ ತದಾ ॥ ೬೯೭ ॥**

**ವದಿಷ್ಯಾಮಿ ನ ಭೋಕ್ಷ್ಯೇ ಚ ಯಾವನ್ನ ಶ್ರೂಯತೇ ಮಯಾ ।**
**ರಾಮಸ್ಯ ಕ್ಷೇಮವಾರ್ತೇತಿ ಮನಸಾಲೋಚ್ಯ ಸುವ್ರತಾ ॥ ೬೯೮ ॥**

**ಸ್ಥಿತಾ ಬೋಧಿತವೈಧವ್ಯವಿರುದ್ಧಸ್ವಲ್ಪಭೂಷಣಾ ।**
**ಯಥಾರ್ಥಂ ಚಿಂತಯಂತ್ಯಂತಃ ಸಂತತಂ ಸಂಸೃತೇಃ ಸ್ಥಿತಿಮ್ ॥ ೬೯೯ ॥**

ಆ ವಿದ್ಯಾಧರಸ್ತ್ರೀಯರಿಂದ ಈ ರೀತಿಯಾಗಿ ಹೇಳಲ್ಪಟ್ಟ ಜಾನಕಿಯು ಬಲುನೊಂದವಳೂ ಖಿನ್ನವಾದ ಮನಸ್ಸುಳ್ಳವಳೂ ಆಗಿ "ಶಚಿಯೇ ಮೊದಲಾದವರು ಶೀಲಭಂಗದಿಂದ ಮಹೇಂದ್ರಾದಿಗಳನ್ನು ಪತಿಗಳನ್ನಾಗಿ ಪಡೆದರೇನು ? ಪ್ರಾಣಗಳಿಗಿಂತಲೂ ಹೆಚ್ಚಾದ ಗುಣಗಳೆಂಬ ಸಂಪತ್ತಿಗಳನ್ನು ಯಾರುತಾನೆ ಮಾರುತ್ತಾರೆ ? ತ್ರಿಖಂಡಗಳ ಅಧಿಪತಿಯಾದರೂ ಆಗಿರಲಿ; ಸಮಸ್ತಷಡ್ಖಂಡಗಳ ಅಧಿಪತಿಯಾದರೂ ಆಗಿರಲಿ; ನನಗೆ ಅಲಂಕಾರವಾದ ಶೀಲದ ಖಂಡನೆಯಾದರೆ ಆ ತ್ರಿಖಂಡಷಡ್ಖಂಡಾಧಿಪತ್ಯದಿಂದೇನು ಪ್ರಯೋಜನ ? ಸತ್ಪುರುಷರಿಗೆ ಪ್ರಾಣಗಳು ಪ್ರಾಣಗಳಲ್ಲ; ಪ್ರಿಯವಾದ ಗುಣಗಳು ಪ್ರಾಣಗಳು. ಆದುದರಿಂದ ನಾನು ಆ ಪ್ರಾಣಗಳ ನಾಶದಿಂದ ಈ ಗುಣಗಳೆಂಬ ಪ್ರಾಣಗಳನ್ನು ಕಾಪಾಡುವೆನು. ಜೀವಿಕೆಯನ್ನು ಕಾಪಾಡುವುದಿಲ್ಲ. ನಾಶಶೀಲವಾದ ಮೂರ್ತಿ-ದೇಹವು ವಿನಾಶವನ್ನು ಹೊಂದಲಿ. ನಾಶವಾಗದಿರುವ ನನ್ನ ಶೀಲವು ನಾಶವಾಗುವುದಿಲ್ಲ. ಅದು ಕುಲಪರ್ವತವನ್ನು ಅನುಕರಿಸಿರುವುದು. ಶೀಲವು ಕುಲಪರ್ವತದಂತೆ ಅವಿಚಲಿತವಾಗಿರುವುದೆಂದು ಭಾವವು." ಈ ರೀತಿಯಾಗಿ ಪ್ರತ್ಯುತ್ತರವನ್ನು ಕೊಟ್ಟು ಆಗ ಆಕೆಯು "ರಾಮನ ಕ್ಷೇಮಸಮಾಚಾರವನ್ನು ಕೇಳುವವರೆಗೂ ನಾನು ಮಾತನಾಡುವುದಿಲ್ಲ ಮತ್ತು ಭೋಜನಮಾಡುವುದಿಲ್ಲ" ಎಂದು ಮನಸ್ಸಿನಿಂದ ಆಲೋಚಿಸಿ ವ್ರತವನ್ನು ತೆಗೆದುಕೊಂಡು ಉತ್ತಮವ್ರತವುಳ್ಳವಳೂ ವೈಧವ್ಯವಿರುದ್ಧಬೋಧಕವಾದ ಸ್ವಲ್ಪಾಭರಣಗಳುಳ್ಳವಳೂ ಯಾವಾಗಲೂ ಅಂತರಂಗದಲ್ಲಿ ಸಂಸಾರದ ಸ್ಥಿತಿಯನ್ನು ಯಥಾರ್ಥವಾಗಿ ಚಿಂತಿಸುವವಳೂ ಆಗಿದ್ದಳು.

**ಪ್ರಾದುರಾಸಂಸ್ತದೋತ್ಪಾತಾ ಲಂಕಾಯಾಂ ಕಿಂಕರಾ ಇವ ।**
**ತದ್ಧ್ವಂಸಿಕಾಲರಾಜಸ್ಯ ಸಮಂತಾದ್ಭಯದಾಯಿನಃ ॥ ೭೦೦ ॥**

ಆಗ ಲಂಕೆಯಲ್ಲಿ ಅದನ್ನು ನಾಶಮಾಡುವ ಕಾಲವೆಂಬ ರಾಜನ ಭೃತ್ಯರೋ ಎಂಬಂತೆ, ಎಲ್ಲಾಕಡೆಗಳಲ್ಲಿ ಭಯವನ್ನುಂಟುಮಾಡುವ ಉತ್ಪಾತಗಳು ಪ್ರಾದುರ್ಭವಿಸಿದುವು.

**ಉತ್ಪನ್ನಮಾಯುಧಾಗಾರೇ ಚಕ್ರಂ ವೈ ಕಾಲಚಕ್ರವತ್ ।**
**ಯಜ್ಞಶಾಲಾಪ್ರಬದ್ಧಸ್ಯ ಬಸ್ತಕಸ್ಯೇವ ಶಾಡ್ವಲಮ್ ॥ ೭೦೧ ॥**

ಯಜ್ಞಶಾಲೆಯಲ್ಲಿ ಕಟ್ಟಿದ್ದ ಆಡಿಗೆ ಗರಿಕೆಯಂತೆ, ರಾವಣನ ಆಯುಧಶಾಲೆಯಲ್ಲಿ ಚೆನ್ನಾಗಿ, ಕಾಲಚಕ್ರದಂತೆ, ಚಕ್ರವುತ್ಪನ್ನವಾಯಿತು.

**ತದುತ್ಪತ್ತಿಫಲಸ್ಯಾಸ್ಯಾನವಬೋದ್ಧುಃ ಖಗೇಶಿನಃ ।**
**ಜ್ವಲದ್ಧಾರಂ ಮಹಾಚಕ್ರಂ ಮಹಾತೋಷಮಜೀಜನತ್ ॥ ೭೦೨ ॥**

ಅದರ ಉತ್ಪತ್ತಿಯ ಫಲವನ್ನು ತಿಳಿಯದಿರುವ ಈ ಖೇಚರಾಧಿಪತಿಗೆ ಪ್ರಕಾಶಮಾನವಾದ ಧಾರೆಯುಳ್ಳ ಮಹಾಚಕ್ರವು ಮಹಾಸಂತೋಷವನ್ನುಂಟುಮಾಡಿತು.

**ರಾಮೋ ನಾಮ ಬಲೋ ಭಾವೀ ಲಕ್ಷ್ಮಣೋಽಪ್ಯನುಜಾತವಾನ್ ।**
**ತಸ್ಯ ರೂಢಪ್ರತಾಪೌ ತೌ ದ್ವಾವಪ್ಯಭ್ಯುದಯೌ ॥ ೭೦೩ ॥**

ಆಗ ಮಂತ್ರಿಗಳೇ ಮೊದಲಾದವರು ರಾವಣನನ್ನು ಕುರಿತು "ರಾಮನೆಂಬವನು ಮುಂದೆ ಬಲಭದ್ರನಾಗುವವನು. ಅವನಿಗೆ ಲಕ್ಷ್ಮಣನೂ ಅನುಜನಾಗಿದ್ದಾನೆ. ರೂಢವಾದ ಪ್ರತಾಪವುಳ್ಳ ಅವರಿಬ್ಬರೂ ಅಭ್ಯುದಯವುಳ್ಳವರಾಗಿದ್ದಾರೆ.

**ಸೀತಾ ಶೀಲವತೀ ನೇಯಂ ಜೀವಂತೀ ತೇ ಭವಿಷ್ಯತಿ ।**
**ಅಭಿಭೂತಿಃ ಸುಶೀಲಾನಾಮತ್ರೈವ ಫಲದಾಯಿನೀ ॥ ೭೦೪ ॥**

ಶೀಲವತಿಯಾದ ಈ ಸೀತೆಯು ಜೀವಸಹಿತ ನಿನಗೆ ದೊರೆಯುವುದಿಲ್ಲ. ಉತ್ತಮಶೀಲವುಳ್ಳವರ ತಿರಸ್ಕಾರವು ಇಲ್ಲಿಯೇ ಫಲವನ್ನು ಕೊಡುವುದಾಗಿರುತ್ತದೆ.

**ಉತ್ಪಾತಾಶ್ಚ ಪುರೇಭೂವನ್ ಬಹವೋಽಶುಭಸೂಚಕಾಃ ।**
**ಲೋಕದ್ವಯಾಹಿತಂ ಬಾಢಮಯಶಶ್ಚಾಯುಗಾವಧಿ ॥ ೭೦೫ ॥**

ಪಟ್ಟಣದಲ್ಲಿ ಅಶುಭಸೂಚಕಗಳಾದ ಅನೇಕ ಉತ್ಪಾತಗಳೂ ಆದುವು. ಇಹಪರ ಲೋಕಗಳಲ್ಲಿ ಅಹಿತವಾದ ಅಪಯಶಸ್ಸು ಯುಗದ ಕೊನೆಯವರೆಗೂ ದೃಢವಾಗಿರುವುದು.

**ಮುಚ್ಯತಾಂ ಮಂಕ್ಷ್ವಿಯಂ ಯಾವನ್ನಾತ್ರೇದಂ ರೂಢಿಮೃಚ್ಛತಿ ।**
**ಇತಿ ಯುಕ್ತಿಮತೀಂ ವಾಣೀಮುಕ್ತೋ ಮಂತ್ರ್ಯಾದಿಭಿಸ್ತದಾ ॥ ೭೦೬ ॥**

ಈ ಅಪಯಶಸ್ಸು ಇಲ್ಲಿ ಎಷ್ಟರವರೆಗೆ ಹಬ್ಬುವುದಿಲ್ಲವೋ ಅಷ್ಟರಲ್ಲಿ ಈ ಸೀತೆಯು ಶೀಘ್ರವಾಗಿ ಬಿಡಲ್ಪಡಲಿ." ಈ ರೀತಿಯಾಗಿ ಯುಕ್ತಿಯುಳ್ಳ ಮಾತನ್ನು ಹೇಳಿದರು.

**ಪ್ರತ್ಯಭಾಷತ ಲಂಕೇಶೋ ಯೂಯಂ ಯುಕ್ತಿವಿರೋಧಿ ಕಿಮ್ ।**
**ಅಸ್ಮೃತ್ವಾ ವದತೈವಂ ವಃ ಪ್ರತ್ಯಕ್ಷೇ ಕಾ ವಿಚಾರಣಾ ॥ ೭೦೭ ॥**

**ಚಕ್ರರತ್ನಂ ಸಮುತ್ಪನ್ನಂ ಸೀತಾಪಹರಣೇನ ಮೇ ।**
**ಷಡ್ಖಂಡಾರ್ಧಾಧಿಪತ್ಯಂ ಚ ತೇನ ವಿತ್ತ ಕರಸ್ಥಿತಮ್ ॥ ೭೦೮ ॥**

ಆಗ ಲಂಕೇಶ್ವರನು "ನೀವುಗಳು ವಿಸ್ಮೃತಿಯಿಂದ ಹೀಗೆ ಪ್ರತ್ಯಕ್ಷವಿರೋಧವಾದ ಮಾತನ್ನೇಕೆ ಹೇಳುತ್ತೀರಿ ? ಪ್ರತ್ಯಕ್ಷವಿಷಯದಲ್ಲಿ ನಿಮ್ಮಗಳ ವಿಚಾರಣೆಯಾವುದು ? ಸೀತಾಪಹರಣದಿಂದ ನನಗೆ ಚಕ್ರರತ್ನವುತ್ಪನ್ನವಾಯಿತು. ಅದರಿಂದ ತ್ರಿಖಂಡಾಧಿಪತ್ಯವನ್ನು ಕೈಯಲ್ಲಿರುವುದನ್ನಾಗಿ ತಿಳಿಯಿರಿ.

**ಸ್ವಯಂ ಗೃಹಾಗತಾಂ ಲಕ್ಷ್ಮೀಂ ಹನ್ಯಾತ್ಪಾದೇನ ಕೋ ವಿಧೀಃ ।**
**ಇತಿ ತದ್ಭಾಷಿತಂ ಶ್ರುತ್ವಾ ವ್ಯರಮನ್ ಹಿತವಾದಿನಃ ॥ ೭೦೯ ॥**

ತಾನಾಗಿ ಮನೆಗೆ ಬಂದ ಲಕ್ಷ್ಮಿಯನ್ನು ಯಾವ ಬುದ್ಧಿಹೀನನು ಕಾಲಿನಿಂದ ಒದೆಯುವನು ?" ಎಂದು ಮರುಮಾತನಾಡಿದನು. ಅವನ ಮಾತನ್ನು ಕೇಳಿ ಹಿತವಾದಿಗಳು ವಿರಾಮವನ್ನು ಹೊಂದಿದರು.

**ಇತಃ ಪರಿಜನೋ ರಾಮಂ ಮಾಯಾಮಯಮೃಗಾನುಗಮ್ ।**
**ವಿಪಿನೇ ನಷ್ಟದಿಗ್ಭಾಗಂ ಸೂರ್ಯೇಸ್ತಾಚಲಮೇಯುಷಿ ॥ ೨೧೦ ॥**

**ಅದೃಷ್ಟ್ವಾನ್ವಿಷ್ಯ ಸೀತಾಂ ಚ ವೈಮನಸ್ಯಮಗಾತ್ತರಾಮ್ ।**
**ಸಹ್ಯಸ್ತನೋರ್ವಿಯೋಗೋಽಪಿ ಸ್ವಾಮಿನಃ ಕೇನ ಸಹ್ಯತೇ ॥ ೨೧೧ ॥**

ಸೂರ್ಯನು ಅಸ್ತಂಗತನಾಗುತ್ತಿರಲು ಇತ್ತ ರಾಮನ ಪರಿವಾರಜನರು ಮಾಯಾಮಯವಾದ ಮೃಗವನ್ನು ಹಿಂಬಾಲಿಸಿರುವವನೂ ಅರಣ್ಯದಲ್ಲಿ ದಿಕ್ಕುತೋರದವನೂ ಆದ ರಾಮನನ್ನು ಕಾಣದೆ ಸೀತೆಯನ್ನೂ ಹುಡುಕಿ ಕಾಣದೆ ಬಹಳವಾಗಿ ವೈಮನಸ್ಯವನ್ನು ಹೊಂದಿದರು. ಶರೀರದ ವಿಯೋಗವಾದರೂ ಸಹಿಸುವುದಕ್ಕೆ ಯೋಗ್ಯವಾಗಿರುವುದು. ಸ್ವಾಮಿಯ ವಿಯೋಗವು ಯಾವನಿಂದ ಸಹಿಸಲಾಗುವುದು ?

**ಭಾನಾವುದಯಮಾಯಾತಿ ಮರ್ತ್ಯಲೋಕೈಕಚಕ್ಷುಷಿ ।**
**ಧ್ವಾಂತೇ ಭಿಯೇವ ನಿರ್ಯಾತೇ ದಲಂತೀಷ್ವಬ್ಜರಾಜಿಷು ॥ ೨೧೨ ॥**

**ಘಟಾಮಟತಿ ಕೋಕಾನಾಂ ಯುಗ್ಮೇ ಯುಗ್ಮದ್ವಿಷಾಂ ಮುದಾ ।**
**ಅರ್ಥಃ ಶಬ್ದೇನ ವಾ ಯೋಗಂ ಸಾಧುನಾ ಜಾನಕೀಪ್ರಿಯಃ ॥ ೨೧೩ ॥**

**ಸ್ವಯಂ ಪರಿಜನೇನಾಪ ಭಾಸ್ಕರೋ ದಿವಸೇನ ವಾ ।**
**ದೃಷ್ಟ್ವಾ ತಂ ಮತ್ಪ್ರಿಯಾ ಕ್ವೇತಿ ನೃಪಃ ಪಪ್ರಚ್ಛ ಸಾಕುಲಃ ॥ ೨೧೪ ॥**

ಮಾನವಲೋಕಕ್ಕೆ ಮುಖ್ಯ ನೇತ್ರವಾದ ಸೂರ್ಯನು ಉದಯವನ್ನು ಹೊಂದುತ್ತಿರಲು ಗಾಢಾಂಧಕಾರವು ಭೀತಿಯಿಂದಲೋ ಎಂಬಂತೆ ಹೊರಟು ಹೋಗುತ್ತಿರಲು ತಾವರೆಗಳ ಸಮೂಹಗಳು ಅರಳುತ್ತಿರಲು ಯುಗಲವನ್ನು ದ್ವೇಷಿಸುವ (ರಾತ್ರಿಯಲ್ಲಿ ಕಣ್ಣುಕಾಣದೆ ಒಂಟಿಯಾಗಿರುವ) ಚಕ್ರವಾಕಪಕ್ಷಿಗಳ ಯುಗ್ಮವು ಸಂತೋಷದಿಂದ ಸಂಯೋಗವನ್ನು ಹೊಂದುತ್ತಿರಲು, ಅರ್ಥವು ಸಮೀಚೀನವಾದ ಶಬ್ದದೊಡನೆ ಸಂಬಂಧವನ್ನು ಹೊಂದುವಂತೆಯೂ ಸೂರ್ಯನು ಹಗಲಿನೊಡನೆ ಸಂಬಂಧವನ್ನು ಹೊಂದುವಂತೆಯೂ ಜಾನಕೀಪ್ರಿಯನಾದ ರಾಮನು ತಾನು ಪರಿಜನರೊಡನೆ ಸಂಯೋಗವನ್ನು ಹೊಂದಿದನು. ಆ ದಿವಸ ರಾತ್ರಿಯಲ್ಲೆಲ್ಲ ರಾಮನು ಅರಣ್ಯದಲ್ಲಿ ಏಕಾಂಗಿಯಾಗಿದ್ದು ಬೆಳಗಾದ ಮೇಲೆ ಪರಿವಾರಜನರೊಡನೆ ಸೇರಿದನೆಂದು ಭಾವವು. ರಾಮನು ಆ ಪರಿವಾರಜನರನ್ನು ನೋಡಿ ವ್ಯಾಕುಲನಾಗಿ ''ನನ್ನ ಪ್ರಿಯೆಯೆಲ್ಲಿ ?'' ಎಂದು ಪ್ರಶ್ನೆಮಾಡಿದನು.

**ದೇವ ದೇವೀ ಚ ದೇವೋ ವಾ ನಾಸ್ಮಾಭಿರವಲೋಕಿತಾ ।**
**ದೇವೀ ಛಾಯೇವ ತೇ ತಸ್ಮಾತ್ತ್ವಮವೈಷೀತಿ ಸೋಽಭ್ಯಧಾತ್ ॥ ೨೧೫ ॥**

ಆ ಪರಿಜನರು ದೇವನೆ ! ದೇವಿಯೂ ನಮ್ಮಿಂದ ನೋಡಲ್ಪಡಲಿಲ್ಲ; ದೇವನೂ (ನೀನೂ) ನೋಡಲ್ಪಡಲಿಲ್ಲ. ದೇವಿಯು ನಿನ್ನ ನೆರಳಿನಂತೆ–ಹಿಂಬಾಲಿಸಿರುವುದರಿಂದ ದೇವಿಯನ್ನು ನೀನೇ ಬಲ್ಲೆ'' ಎಂದು ಹೇಳಿದರು.

**ಅಥ ತದ್ವಚನಾಲ್ಲಬ್ಧರಂಧ್ರಾ ರಾಮಂ ಸಮಗ್ರಹೀತ್ ।**
**ಮೂರ್ಛಾ ಸೀತಾಸಪತ್ನೀ ವಾ ಮೋಹಯಂತೀ ಮನಃ ಕ್ಷಣಮ್ ॥**

ಬಳಿಕ ಆ ಪರಿಜನರ ಮಾತಿನಿಂದ ಅವಕಾಶವನ್ನು ಹೊಂದಿದ ಮೂರ್ಛೆಯು, ಸೀತೆಯ ಸವತಿಯಂತೆ, ಕ್ಷಣಕಾಲದವರೆಗೆ ಮನಸ್ಸನ್ನು ಮೋಹಗೊಳಿಸುವುದಾಗಿ ರಾಮನನ್ನು ಹಿಡಿಯಿತು. ರಾಮನು ಮೂರ್ಛಿತನಾದನೆಂದು ಭಾವವು.

**ತದಾ ಶೀತಕ್ರಿಯಾ ಸೀತಾಸಖೀವ ಸಹಸಾ ನೃಪಮ್ ।**
**ವ್ಯಶ್ಲೇಷಯತ್ತತಃ ಸೋಽಪಿ ಕ್ವ ಸೀತೇತಿ ಪ್ರಬುದ್ಧವಾನ್ ॥ ೨೧೭ ॥**

ಆಗ ಸೀತೆಯ ಸಖಿಯಂತೆ ಶೀತಕ್ರಿಯೆಯು ಶೀಘ್ರವಾಗಿ ರಾಮನನ್ನು ಆ ಮೂರ್ಛೆಯಿಂದ ಬೇರೆಮಾಡಿತು. ಆ ರಾಮನೂ ''ಸೀತೆಯೆಲ್ಲಿ ?'' ಎಂದು ಎಚ್ಚತ್ತನು.

**ದೇವೀಂ ಪರಿಜನಃ ಸರ್ವಃ ಸಮಂತಾತ್ಪ್ರತಿಭೂರುಹಮ್ ।**
**ಅನ್ವೇಷಯನ್ವಿಲೋಕ್ಯೋತ್ತರೀಯಂ ವಂಶವಿಧಾರಿತಮ್ ॥ ೨೧೮ ॥**

**ತಸ್ಮಾಸ್ತದಾ ತದಾನೀಯ ರಾಘವಾಯ ಸಮಾರ್ಪಯತ್ ।**
**ಉತ್ತರೀಯಾಂಶುಕಂ ದೇವ್ಯಾ ಭವತ್ಯೇತದಿತಃ ಕುತಃ ॥ ೨೧೯ ॥**

**ಇತ್ಯವಿಜ್ಞಾತತತ್ತ್ವಃ ಶೋಕವ್ಯಾಕುಲಮಾನಸಃ ।**
**ಸಹಾನುಜೇನ ತಚ್ಚಿಂತಾಂ ಕುರ್ವನ್ನುರ್ವೀಶ್ವರಃ ಸ್ಥಿತಃ ॥ ೨೨೦ ॥**

ಎಲ್ಲಾ ಪರಿಜನರು ದೇವಿಯನ್ನು ಪ್ರತಿಯೊಂದು ಮರದ ಸುತ್ತಲೂ ಹುಡುಕಿದರು. ಬಿದಿರಿನಿಂದ ಧರಿಸಲ್ಪಟ್ಟಿದ್ದ (ಬಿದಿರಿನಲ್ಲಿ ಸಿಕ್ಕಿಕೊಂಡಿದ್ದ) ಆಕೆಯ ಉತ್ತರೀಯ–ವಸ್ತ್ರವನ್ನು ಕಂಡು ಅದನ್ನು ತಂದು ರಾಘವನಿಗೆ ಅರ್ಪಿಸಿದರು. ''ಇದು ದೇವಿಯ ಉತ್ತರೀಯವಸ್ತ್ರವಾಗಿರುತ್ತದೆ. ಇಲ್ಲಿ ಎಲ್ಲಿಂದ ಬಂದಿತು ?'' ಎಂದು ಯಥಾರ್ಥವಿಷಯವನ್ನು ತಿಳಿಯದವನೂ ಶೋಕದಿಂದ ವ್ಯಾಕುಲವಾದ ಮನಸ್ಸುಳ್ಳವನೂ ಆದ ಪೃಥವೀಪತಿ–ರಾಮನು ತಮ್ಮನೊಡನೆ ಚಿಂತೆಯನ್ನು ಮಾಡುವವನಾಗಿದ್ದನು.

**ತತ್ಕ್ಷಣೇ ಸಂಭ್ರಮಾಕ್ರಾಂತೋ ದೂತೋ ದಶರಥಾಂತಿಕಾತ್ ।**
**ತಂ ಪ್ರಾಪ್ಯ ವಿನತೋ ಮೂರ್ಧ್ನಾ ಕಾರ್ಯಮಿತ್ಥಮಭಾಷತ ॥ ೨೨೧ ॥**

ಆ ಕ್ಷಣದಲ್ಲಿ ದಶರಥಮಹಾರಾಜನ ಬಳಿಯಿಂದ ಆತುರದಿಂದ ವ್ಯಾಪ್ತನಾದ ದೂತನು ರಾಮನನ್ನು ಕಂಡು ಮಸ್ತಕದಿಂದ ನಮಸ್ಕರಿಸಿ ತಾನು ಬಂದ ಕಾರ್ಯವನ್ನು ಈ ರೀತಿಯಾಗಿ ಹೇಳಿದನು.

**ಗೃಹೀತ್ವಾ ರೋಹಿಣೀಂ ರಾಹೌ ಪ್ರಯಾತೇ ಗಗನಾಂತರಮ್ ।**
**ಏಕಾಕಿನಂ ತುಷಾರಾಂಶುಂ ಭ್ರಾಮ್ಯಂತಂ ಸಮಲೋಕಿಷಿ ॥ ೨೨೨ ॥**

**ಸ್ವಪ್ನೇ ಕಿಂ ಫಲಮೇತಸ್ಯೇತ್ಯನ್ವಯುಙ್ಕ್ತ ಮಹೀಪತಿಃ ।**
**ಪುರೋಹಿತಮಸೌ ಚಾಹ ಸೀತಾಮದ್ಯ ದಶಾನನಃ ॥ ೨೨೩ ॥**

**ಗೃಹೀತವಾನ್ ಸ ಮಾಯಾವೀ ರಾಮಸ್ವಾಮೀ ಚ ಕಾನನೇ ।**
**ತಾಂ ಸಮನ್ವೇಷಿತುಂ ಶೋಕಾದಾಕುಲೋ ಭ್ರಾಮ್ಯತಿ ಸ್ವಯಮ್ ॥**

**ಮಂಕ್ಷು ದೂತಮುಖಾದೇತತ್ಜ್ಞಾಪಣೀಯಮಿತಿ ಸ್ಫುಟಮ್ ।**
**ತದ್ರಾಜಾಜ್ಞಾಗತೋಽಸ್ಮೀತಿ ಲೇಖಗರ್ಭಕರಂಡಕಮ್ ॥ ೨೨೫ ॥**

**ನ್ಯಧಾಚ್ಚಾಗ್ರೇ ತದಾದಾಯ ಶಿರಸಾ ರಘುನಂದನಃ ।**
**ವಿಮೋಚ್ಯ ಪತ್ರಮಂತಸ್ಥಂ ಸ್ವಯಮಿತ್ಥಮವಾಚಯತ್ ॥ ೨೨೬ ॥**

''ದಶರಥಮಹಾರಾಜನು ಪುರೋಹಿತನನ್ನು ಕುರಿತು 'ರಾಹುವು ರೋಹಿಣಿಯನ್ನು ಹಿಡಿದುಕೊಂಡು ಆಕಾಶಮಧ್ಯವನ್ನು ಹೊಂದುತ್ತಿರಲು ಏಕಾಕಿಯಾಗಿ ಸಂಚರಿಸುತ್ತಿರುವ ಚಂದ್ರನನ್ನು ಕನಸಿನಲ್ಲಿ ಕಂಡೆನು. ಇದರ ಫಲವೇನು ?' ಎಂದು ಪ್ರಶ್ನೆಮಾಡಿದನು. ಈ ಪುರೋಹಿತನು ದಶರಥನನ್ನು ಕುರಿತು 'ಆ ಮಾಯಾವಿಯಾದ ದಶಮುಖನು ಈ ದಿವಸ ಸೀತೆಯನ್ನು ಗ್ರಹಣಮಾಡಿದನು. ರಾಮಸ್ವಾಮಿಯು ತಾನು ಆಕೆಯನ್ನು ಹುಡುಕುವುದಕ್ಕೋಸ್ಕರ ಶೋಕದಿಂದ ಆಕುಲನಾಗಿ ಅರಣ್ಯದಲ್ಲಿ ತಿರುಗುತ್ತಾನೆ. ಶೀಘ್ರವಾಗಿ ಈ ವಿಷಯವನ್ನು ದೂತಮುಖದಿಂದ ಸ್ಫುಟವಾಗಿ ತಿಳಿಸಬೇಕು–ರಾಮನಿಗೆ ಹೇಳಿಕಳುಹಿಸಬೇಕು' ಎಂದು ಹೇಳಿದನು. ಆದುದರಿಂದ ನಾನು ರಾಜಾಜ್ಞೆಯಿಂದ ಬಂದವನಾಗಿದ್ದೇನೆ'' ಎಂದು ಲೇಖಗರ್ಭಿತವಾದ ಕರಡಿಗೆಯನ್ನು ರಾಮನ ಮುಂದಿಟ್ಟನು. ರಘುನಂದನನು ಅದನ್ನು ಶಿರಸಾ ಪರಿಗ್ರಹಿಸಿ ಅದರೊಳಗಿದ್ದ ಪತ್ರವನ್ನು ಬಿಡಿಸಿ ತಾನು ಈ ರೀತಿಯಾಗಿ ಓದಿದನು.

**ಇತೋ ವಿನೀತಾನಗರಾಚ್ಛ್ರೀಮತಃ ಶ್ರೀಮತಾಂ ಪತಿಃ ।**
**ಪ್ರೇಮಪ್ರಸಾರಿತಾತ್ಮೀಯಭುಜಾಭ್ಯಾಂ ಸ್ವಪ್ರಿಯಾತ್ಮಜೌ ॥ ೨೨೭ ॥**

**ಪರಿಷ್ವಜ್ಯಾನುಯುಜ್ಯಾಂಗಕ್ಷೇಮವಾರ್ತಾಂ ತತಃ ಪರಮ್ ।**
**ಇದಮಾಜ್ಞಾಪಯತ್ಯತ್ರ ದಕ್ಷಿಣಾಬ್ಧ್ಯಂತರಸ್ಥಿತಾಃ ॥ ೭೨೮ ॥**

**ಷಟ್ಪಂಚಾಶನ್ಮಹಾದ್ವೀಪಾಶ್ಚಕ್ರವರ್ತ್ಯನುವರ್ತಿನಃ ।**
**ಕೇಶವಾಶ್ಚ ಸ್ವಮಾಹಾತ್ಮ್ಯಾತ್ತದರ್ಧಪರಿರಕ್ಷಿಣಃ ॥ ೭೨೯ ॥**

"ಇಲ್ಲಿಂದ ಸಂಪತ್ತಿಯುಳ್ಳ ಅಯೋಧ್ಯಾನಗರದಿಂದ ಶ್ರೀಮಂತರ ಅಧಿಪತಿಯು–ದಶರಥನು ಪ್ರೇಮದಿಂದ ಪಸರಿಸಿದ ತನ್ನ ಬಾಹುಗಳಿಂದ ತನ್ನ ಪ್ರಿಯಪುತ್ರರನ್ನು ಆಲಿಂಗಿಸಿ ಶರೀರಕ್ಷೇಮಸಮಾಚಾರವನ್ನು ಪ್ರಶ್ನೆಮಾಡಿ ಆ ಮೇಲೆ ಇದನ್ನು ಆಜ್ಞಾಪಿಸುತ್ತಾನೆ:– ಈ ಭರತಕ್ಷೇತ್ರದಲ್ಲಿ ದಕ್ಷಿಣಸಮುದ್ರದ ಮಧ್ಯದಲ್ಲಿರುವ ಐವತ್ತಾರು ಮಹಾದ್ವೀಪಗಳು ಚಕ್ರವರ್ತಿಯ ಅಧೀನದಲ್ಲಿರುವುವು. ಕೇಶವರೂ ತಮ್ಮ ಮಹಿಮೆಯಿಂದ ಅದರ ಅರ್ಧದ್ವೀಪಗಳನ್ನು–ಮೂವತ್ತೆರಡು ಮಹಾದ್ವೀಪಗಳನ್ನು ಪರಿಪಾಲಿಸುವವರಾಗಿರುತ್ತಾರೆ.

**ದ್ವೀಪೋಽಸ್ತಿ ತೇಷು ಲಂಕಾಖ್ಯಸ್ತ್ರಿಕೂಟಾದ್ರಿವಿಭೂಷಿತಃ ।**
**ತಸ್ಮಿನ್ವಿನಮಿಸಂತಾನವಿದ್ಯಾಧರಧರೇಶಿನಾಮ್ ॥ ೭೩೦ ॥**

**ಚತುಷ್ಪಯೇ ವ್ಯತಿಕ್ರಾಂತೇ ಪ್ರಜಾಪಾಲನಲೋಲುಪೇ ।**
**ರಾವಣಾಖ್ಯೋ ಬಲಾಲ್ಲೋಕಕಂಟಕಃ ಸ್ತ್ರೀಷು ಲಂಪಟಃ ॥ ೭೩೧ ॥**

**ತತೋಽಭೂದನ್ಯದಾ ತಸ್ಯ ನಾರದೇನ ರಣೇಚ್ಛುನಾ ।**
**ರೂಪಲಾವಣ್ಯಕಾಂತ್ಯಾದಿ ಕಥಿತಂ ಕ್ಷಿತಿಜಾಶ್ರಿತಮ್ ॥ ೭೩೨ ॥**

ಆ ಐವತ್ತಾರು ಮಹಾದ್ವೀಪಗಳಲ್ಲಿ ತ್ರಿಕೂಟಪರ್ವತದಿಂದ ವಿಭೂಷಿತವಾದ ಲಂಕೆಯೆಂಬ ದ್ವೀಪವಿದೆ. ಅದರಲ್ಲಿ ವಿನಮಿಸಂತಾನದ ವಿದ್ಯಾಧರರಾಜರಲ್ಲಿ ಪ್ರಜಾರಕ್ಷಣಲೋಲುಪರಾದ–ನಾಲ್ಕು ಸಹಸ್ರಗ್ರೀವನೇ ಮೊದಲಾದ ನಾಲ್ಕು ಜನರು ಕಾಲಾಧೀನರಾಗುತ್ತಿರಲು ಬಳಿಕ ಸಾಮರ್ಥ್ಯದಿಂದ ಲೋಕಕಂಟಕನೂ ಸ್ತ್ರೀಯರಲ್ಲಿ ಲಂಪಟನೂ ಆದ ರಾವಣನೆಂಬವನಾದನು. ಮತ್ತೊಂದು ಕಾಲದಲ್ಲಿ ಅವನಿಗೆ ಯುದ್ಧಕಾಂಕ್ಷಿಯಾದ ನಾರದನು ಸೀತೆಯನ್ನಾಶ್ರಯಿಸಿರುವ ರೂಪಲಾವಣ್ಯ ಕಾಂತಿಯೇ ಮೊದಲಾದುದನ್ನು ಹೇಳಿದನು.

**ತದೈವ ಮದನಾಮೋಘಬಾಣನಿರ್ಭಿನ್ನಮಾನಸಃ ।**
**ಪೌಲಸ್ತ್ಯೋ ಧ್ವಸ್ತಧೀಧೈರ್ಯೋ ಮಾಯಾವೀ ನ್ಯಾಯದೂರಗಃ ॥**

**ಅನನ್ಯವೇದ್ಯಮಾಗತ್ಯ ಸೋಪಾಯಂ ಸ್ವಾಂ ಪುರೀಂ ಸತೀಮ್ ।**
**ಅನೈಷೀದ್ಯಾವದಸ್ಮಾಕಮುದ್ಯೋಗಸಮಯೋ ಭವೇತ್ ॥ ೭೩೪ ॥**

**ತಾವತ್ಸ್ವಕಾಯಸಂರಕ್ಷಾ ಕರ್ತವ್ಯೇತಿ ಪ್ರಿಯಾಂ ಪ್ರತಿ ।**
**ಪ್ರಹಿಣೋತು ಕುಮಾರೋಽಗ್ರ್ಯಂ ದೂತಂ ಸ್ವಂ ಧೀರಯನ್ನಿತಿ ॥ ೭೩೫ ॥**

ಆಗಲೇ ಕಾಮನ ಅಮೋಘವಾದ ಬಾಣಗಳಿಂದ ಭೇದಿಸಲ್ಪಟ್ಟ ಚಿತ್ತವುಳ್ಳವನೂ ನಷ್ಟವಾದ ಬುದ್ಧಿಯೂ ಧೈರ್ಯವೂ ಉಳ್ಳವನೂ ವಂಚಕನೂ ನ್ಯಾಯಕ್ಕೆ ದೂರವಾಗಿರುವವನೂ ಆದ ಪೌಲಸ್ತ್ಯ–ರಾವಣನು ಬೇರೆಯವರು ತಿಳಿಯದಂತೆ ಬಂದು ಉಪಾಯಸಹಿತವಾಗಿ ಸಾಧ್ವಿಯಾದ–ಸೀತೆಯನ್ನು ತನ್ನ ಪಟ್ಟಣಕ್ಕೆ ಒಯ್ದನು. 'ನಮಗೆ ಉದ್ಯೋಗಸಮಯವು ಪ್ರಾಪ್ತವಾಗುವವರೆಗೆ ಶರೀರರಕ್ಷಣೆಯನ್ನು ಮಾಡಬೇಕು' ಎಂದು ಧೈರ್ಯಗೊಳಿಸುವವನಾಗಿ ಕುಮಾರನು ಪ್ರಿಯೆಯ–ಸೀತೆಯ ಬಳಿಗೆ ತನ್ನ ಮುಖ್ಯದೂತನನ್ನು ಕಳುಹಬೇಕು" ಹೀಗೆ ಪತ್ರದಲ್ಲಿ ಬರೆಯಲಾಗಿತ್ತು.

**ಪಿತೃಲೇಖಾರ್ಥಮಾಧ್ಯಾಯ ರುದ್ಧಶೋಕಃ ಕ್ರುಧೋದ್ಧತಃ ।**
**ಅಂತಕಸ್ಯಾಂಕಮಾರೋಢುಂ ಸ ಲಂಕೇಶಃ ಕಿಮಿಚ್ಛತಿ ॥ ೭೩೬ ॥**

ರಾಮನು ತಂದೆಯ ಲೇಖದ ಅರ್ಥವನ್ನು ಮನನಮಾಡಿ ಶೋಕವನ್ನು ತಡೆದವನೂ ಕೋಪದಿಂದ ಉದ್ಧತನೂ ಆಗಿ "ಆ ಲಂಕೇಶ್ವರನು ಯಮನ ತೊಡೆಯನ್ನು ಹತ್ತಲಿಚ್ಛಿಸುತ್ತಾನೇನು ?

**ಶಶಸ್ಯ ಸಿಂಹಪೋತೇನ ಕಿಂ ವಿರೋಧೇಽಸ್ತಿ ಜೀವಿಕಾ ।**
**ಸತ್ಯಮಾಸನ್ನಮೃತ್ಯೂನಾಂ ಸದ್ಯೋ ವಿಧ್ವಂಸನಂ ಮತೇಃ ॥ ೭೩೭ ॥**

ಮೊಲಕ್ಕೆ ಸಿಂಹದ ಮರಿಯೊಡನೆ ವಿರೋಧವಿದ್ದರೆ ಅದು ಬದುಕುವುದುಂಟೇ ? ನಿಜವಾಗಿಯೂ ಸಮೀಪಿಸಿರುವ ಮರಣವುಳ್ಳವರಿಗೆ ತತ್ಕ್ಷಣದಲ್ಲಿ ಬುದ್ಧಿಯ ವಿನಾಶವಾಗುವುದು.

**ಇತ್ಯುದ್ಧತೋದಿತೈಃ ಕೋಪಮಾವಿಶ್ಚಕ್ರೇಽನುಲಕ್ಷ್ಮಣಃ ।**
**ಜನಕೋ ಭರತಃ ಶತ್ರುಘ್ನಶ್ಚ ತದ್ವೃತ್ತಕಶ್ರುತೇಃ ॥ ೭೩೮ ॥**

**ಸಂಪ್ರಾಪ್ಯ ರಾಘವಂ ಸೋಪಚಾರಮಾಲೋಕ್ಯ ಯುಕ್ತಿಮ- ।**
**ದ್ವಾಕ್ಯೈಃ ಶೋಕಂ ಶಮಂ ನೇತುಂ ತದೈವಂ ತೇ ಸಮಬ್ರುವನ್॥೭೩೯ ॥**

ಈ ರೀತಿಯಾಗಿ ರಾಮನು ದಿಟ್ಟತನದ ಮಾತುಗಳಿಂದ ಲಕ್ಷ್ಮಣನನ್ನು ಅನುಸರಿಸಿ ಕೋಪವನ್ನು ವ್ಯಕ್ತಪಡಿಸಿದನು. ಲಕ್ಷ್ಮಣನೂ ಕೋಪಗೊಂಡನೆಂದು ಭಾವವು. ಸೀತಾಪಹರಣಸಮಾಚಾರವನ್ನು ಕೇಳಿದುದರಿಂದ ಜನಕಮಹಾರಾಜನೂ ಭರತನೂ ಶತ್ರುಘ್ನನೂ ರಾಮನನ್ನು ಕಂಡು ಉಪಚಾರಸಹಿತವಾಗಿ ಅವನನ್ನು ಕಂಡು ಯುಕ್ತಿಯುಳ್ಳ ಮಾತುಗಳಿಂದ ಅವನ ಶೋಕವನ್ನು ಸಮಾಧಾನ ಮಾಡುವುದಕ್ಕೋಸ್ಕರ ಆಗ ಅವರು ಈ ರೀತಿಯಾಗಿ ಹೇಳಿದರು.

**ಚೌರ್ಯೇಣ ರಾವಣಸ್ಯೈವ ಪರದಾರಾಪಹಾರಿಣಃ ।**
**ಪರಾಭವಃ ಪರಿದ್ರೋಗ್ಧಾ ದುರಾತ್ಮಾ ಧರ್ಮವರ್ತ್ಮನಃ ॥ ೭೪೦ ॥**

"ಕಳುವಿನಿಂದ ಪರವನಿತೆಯನ್ನಪಹರಿಸಿದ ರಾವಣನಿಗೇ ದುರಾತ್ಮನು ಧರ್ಮಮಾರ್ಗದಿಂದ ಚ್ಯುತನಾದನೆಂದು ತಿರಸ್ಕಾರವುಂಟಾಗುವುದು.

**ಸೀತಾಶಾಪೇನ ದಹ್ಯೋಽಸೌ ನಿರ್ವಿಚಾರಮಕಾರ್ಯಕೃತ್ ।**
**ಮಹಾಪಾಪಕೃತಾಂ ಪಾಪಮಸ್ಮಿನ್ನೇವ ಫಲಿಷ್ಯತಿ ॥ ೭೪೧ ॥**

ವಿಚಾರವಿಲ್ಲದೆ ಅಕಾರ್ಯವನ್ನು ಮಾಡಿದ ಈ ರಾವಣನು ಸೀತೆಯ ಶಾಪದಿಂದ ದಹಿಸಲ್ಪಡತಕ್ಕವನಾಗಿದ್ದಾನೆ. ಮಹಾಪಾಪವನ್ನು ಮಾಡುವವರಿಗೆ ಈ ಭವದಲ್ಲೇ ಪಾಪವು ಫಲಿಸುವುದು.

**ಉಪಾಯಶ್ಚಿಂತ್ಯತಾಂ ಕೋಽಪಿ ಸೀತಾಪ್ರತ್ಯಾಯನಂ ಪ್ರತಿ ।**
**ಇತಿ ತೈರ್ಬೋಧಿತೋ ರಾಮಃ ಸುಪ್ತೋತ್ಥಿತ ಇವಾಭವತ್ ॥ ೭೪೨ ॥**

ಸೀತೆಯನ್ನು ಹಿಂದೆ ತರುವುದಕ್ಕೆ ಯಾವುದಾದರೂ ಉಪಾಯವು ಹುಡುಕಲ್ಪಡಲಿ." ಈ ರೀತಿಯಾಗಿ ಅವರಿಂದ ಬೋಧಿಸಲ್ಪಟ್ಟ ರಾಮನು ಮಲಗಿ ಎದ್ದವನಂತೆ–ನಿದ್ರೆಯಿಂದ ಎಚ್ಚತ್ತವನಂತಾದನು.

**ತತ್ಕಾಲೇ ಖೇಚರದ್ವಂದ್ವಂ ದೌವಾರಿಕನಿವೇದಿತಮ್ ।**
**ನೃಪಾನುಮತಮಾಗತ್ಯ ಯಥೋಚಿತಮಲೋಕತ ॥ ೭೪೩ ॥**

ಆ ಸಮಯದಲ್ಲಿ ದ್ವಾರಪಾಲಕನು ಬಂದು ಇಬ್ಬರು ಖೇಚರರು ಬಂದಿದ್ದಾರೆಂದು ತಿಳಿಸಿದನು. ರಾಮನು ಅವರು ಬರುವಂತೆ ಅನುಮತಿಯನ್ನಿತ್ತನು. ಅವರು ರಾಮನ ಬಳಿಗೆ ಬಂದು ಯಥೋಚಿತವಾಗಿ ಅವನನ್ನು ಕಂಡರು.

**ಭವಿಷ್ಯದ್ಬಲದೇವೋಽಪಿ ಕೃತತದ್ಯೋಗ್ಯಸಂಮದಃ ।**
**ಏತದಾಗಮನಂ ಕಸ್ಮಾತ್ಕೌ ಭವಂತೌ ಕುಮಾರಕೌ ॥ ೭೪೪ ॥**

ಮುಂದೆ ಬಲದೇವನಾಗುವ ರಾಮನೂ ಅವರನ್ನು ಸಂತೋಷಗೊಳಿಸಿ "ಯಾವ ಕಾರಣದಿಂದ ಈ ಆಗಮನ ? ಕುಮಾರರುಗಳಾದ ತಾವುಗಳಾರು ?"

**ಇತ್ಯನ್ವಯುಂಕ್ತ ಸುಗ್ರೀವಸ್ತತ್ರೇದಂ ಸಮ್ಯಗಬ್ರವೀತ್ ।**
**ಖಗಾದ್ರಿದಕ್ಷಿಣಶ್ರೇಣ್ಯಾಂ ಪುರಂ ಕಿಲಕಿಲಾಹ್ವಯಮ್ ॥ ೭೪೫ ॥**

ಈ ರೀತಿಯಾಗಿ ಪ್ರಶ್ನೆಮಾಡಿದನು. ಅಲ್ಲಿ ಆ ಸುಗ್ರೀವನು "ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ಕಿಲಕಿಲವೆಂಬ ನಗರವಿದೆ.

ತದಧೀಶೋ ಬಲೀಂದ್ರಾಖ್ಯೋ ವಿಖ್ಯಾತಃ ಖೇಚರೇಷ್ವಸೌ ।
ಪ್ರಿಯಂಗುಸುಂದರೀ ತಸ್ಯ ಪ್ರಿಯಾ ತಸ್ಯಾಂ ತನೂದ್ಭವೌ ॥ ೨೪೬ ॥

ವಾಲಿಸುಗ್ರೀವನಾಮಾನಾವಜಾಯಾವಹಿ ಭೂಭುಜಃ ।
ಪಿತರ್ಯುಪರತೇಜಾಯತಾಗ್ರಜಸ್ಯಾಧಿರಾಜತಾ ॥ ೨೪೭ ॥

ಬಲೀಂದ್ರನೆಂಬವನು ಅದರ ದೊರೆ. ಇವನು ಖೇಚರರಲ್ಲಿ ಪ್ರಸಿದ್ಧನಾಗಿರುತ್ತಾನೆ. ಪ್ರಿಯಂಗುಸುಂದರಿಯು ಅವನ ಪತ್ನಿ. ಆಕೆಯಲ್ಲಿ ಆ ಬಲೀಂದ್ರರಾಜನಿಗೆ ವಾಲಿಸುಗ್ರೀವರೆಂಬ ಪುತ್ರರು ಜನಿಸಿದ್ದೇವೆ. ತಂದೆಯು ಸತ್ತಮೇಲೆ ಅಣ್ಣನಿಗೆ ದೊರೆತನವಾಯಿತು.

ಮಮಾಪಿ ಯುವರಾಜತ್ವಮಜನಿಷ್ಟ ಕ್ರಮಾಗತಮ್ ।
ಏವಂ ಗಚ್ಛತಿ ಮತ್ಸ್ಥಾನಮಪಹೃತ್ಯ ಮದಗ್ರಜಃ ॥ ೨೪೮ ॥

ಲೋಭಾಕ್ರಾಂತಾಶಯೋ ದೇಶಾತ್ಸ ನಿರ್ವಾಸಯತಿ ಸ್ಮ ಮಾಮ್ ।
ಏಷೋಽಪಿ ದಕ್ಷಿಣಶ್ರೇಣ್ಯಾಂ ವಿದ್ಯುತ್ಕಾಂತಾಪುರೇಶಿನಃ ॥ ೨೪೯ ॥

ಪ್ರಭಂಜನಖಗಾಧೀಶಸ್ತನೂಜೋಽಮಿತವೇಗವಾಕ್ ।
ತ್ರಿಧಾವಿದ್ಯೋಽಂಜನಾದೇವ್ಯಾಮವ್ಯಾಹತಪರಾಕ್ರಮಃ ॥ ೨೫೦ ॥

ನನಗೂ ಕ್ರಮಾಗತವಾದ ಯುವರಾಜತ್ವವು ಪ್ರಾಪ್ತವಾಯಿತು. ಹೀಗೆ ಕಾಲವು ಕಳೆಯುತ್ತಿರಲು ನನ್ನ ಆ ಅಣ್ಣನು ಲೋಭಾಕ್ರಾಂತವಾದ ಹೃದಯವುಳ್ಳವನಾಗಿ ನನ್ನ ಸ್ಥಾನವನ್ನು ಅಪಹರಿಸಿ ನನ್ನನ್ನು ದೇಶದಿಂದ ಓಡಿಸಿದನು. ಇವನು ದಕ್ಷಿಣ ಶ್ರೇಣಿಯಲ್ಲಿ ವಿದ್ಯುತ್ಕಾಂತಾಪುರಾಧಿಪತಿಯಾದ ಪ್ರಭಂಜನನೆಂಬ ಖೇಚರರಾಜನಿಗೆ ಅವನ ಪತ್ನಿಯಾದ ಅಂಜನಾದೇವಿಯಲ್ಲಿ ಜನಿಸಿದ ಅಮಿತವೇಗನೆಂಬ ಪುತ್ರನಾಗಿದ್ದಾನೆ. ಇವನು ಮೂರು ವಿಧವಾದ ವಿದ್ಯೆಯುಳ್ಳವನೂ ಅಪ್ರತಿಹತವಾದ ಪರಾಕ್ರಮವುಳ್ಳವನೂ ಆಗಿದ್ದಾನೆ.

ನಭಶ್ಚರಕುಮಾರಾಣಾಂ ಸಮುದಾಯೇ ಪರಸ್ಪರಮ್ ।
ಕದಾಚಿದಾತ್ಮವಿದ್ಯಾನಾಮನುಭಾವಪರೀಕ್ಷಣೇ ॥ ೨೫೧ ॥

ವಿಜಯಾರ್ಧಗಿರೇರ್ಮೂರ್ಧ್ನಿ ಕ್ರಮಂ ವಿನ್ಯಸ್ಯ ದಕ್ಷಿಣಮ್ ।
ವಾಮಪಾದೇನ ಭಾಸ್ವಂತಮಪಹತ್ಯ ಪುನಸ್ತದಾ ॥ ೨೫೨ ॥

ತ್ರಸರೇಣುಪ್ರಮಾಣಂ ಸ್ವಂ ಶರೀರಮಕೃತಾದ್ಭುತಮ್ ।
ತತಃ ಪ್ರಭೃತಿ ವಿದ್ಯೇಶೈರ್ವಿಸ್ಮಯಾಹಿತಮಾನಸೈಃ ॥ ೨೫೩ ॥

ಅಣುಮಾನಿತಿ ಹರ್ಷೇಣ ನಿಖಿಲೈರಭ್ಯಧಾಯ್ಯಯಮ್ ।
ಪೀತವ್ಯಾಕರಣಾಂಭೋಧಿಃ ಸಖಾ ಪ್ರಾಣಾಧಿಕೋ ಮಮ ॥ ೨೫೪ ॥

ಒಂದಾನೊಂದು ಕಾಲದಲ್ಲಿ ಖೇಚರಕುಮಾರರುಗಳ ಸಮೂಹದಲ್ಲಿ ಪರಸ್ಪರವಾಗಿ ತಮ್ಮ ವಿದ್ಯಾಮಹಿಮೆಯ ಪರೀಕ್ಷೆಯಲ್ಲಿ ವಿಜಯಾರ್ಧಪರ್ವತದ ಮಸ್ತಕದಲ್ಲಿ ಬಲಗಾಲನ್ನಿಟ್ಟು ಎಡಗಾಲಿನಿಂದ ಸೂರ್ಯನನ್ನು ಒದೆದು ಪುನಃ ಆಗ ತನ್ನ ಶರೀರವನ್ನು ವಿಸ್ಮಯವಾದ ತ್ರಸರೇಣುಪರಿಮಾಣವುಳ್ಳುದನ್ನಾಗಿ ಮಾಡಿದನು. ಬಹುಸೂಕ್ಷ್ಮಶರೀರವನ್ನು ಮಾಡಿಕೊಂಡನೆಂದು ಭಾವವು. ಅಂದಿನಿಂದ ಇವನು ಆಶ್ಚರ್ಯಯುಕ್ತವಾದ ಮನಸ್ಸುಳ್ಳ ಎಲ್ಲಾ ವಿದ್ಯಾಧರರಿಂದ ಸಂತೋಷದಿಂದ ''ಅಣುಮಾನ್'' ಎಂದು ಹೇಳಲ್ಪಟ್ಟನು. ಆಗ ಅಮಿತವೇಗನಿಗೆ ''ಅಣುಮಾನ್'' ಎಂಬ ಹೆಸರು ಬಂದಿತೆಂದು ಭಾವವು. ವ್ಯಾಕರಣವೆಂಬ ಸಮುದ್ರವನ್ನು ಪಾನ ಮಾಡಿರುವ ಇವನು ನನಗೆ ಪ್ರಾಣಗಳಿಗಿಂತ ಹೆಚ್ಚಾದ ಗೆಳೆಯನಾಗಿದ್ದಾನೆ.

ಗತ್ವಾ ಕದಾಚಿದೇತೇನ ಸಹ ಸಮ್ಮೇದಪರ್ವತಮ್ ।
ಸಿದ್ಧಕೂಟಾಭಿಧೇ ತೀರ್ಥಕ್ಷೇತ್ರೇಽರ್ಹತ್ಪ್ರತಿಮಾ ಬಹೂಃ ॥ ೨೫೫ ॥

ಅಭ್ಯರ್ಚ್ಯ ಭಕ್ತ್ಯಾ ವಂದಿತ್ವಾ ಸ್ಥಿತೋಽಸ್ಮಿ ಶುಭಭಾವನಃ ।
ಜಟಾಮುಕುಟಸಂಧಾರೀ ಮುಕ್ತಾಯಜ್ಞೋಪವೀತಕಃ ॥ ೨೫೬ ॥

ಕಷಾಯವಸ್ತ್ರಃ ಕಕ್ಷಾವಲಂಬಿರತ್ನಕಮಂಡಲುಃ ।
ಕರೋದ್ಧೃತಾತಪತ್ರಾಣೋ ನೈಷ್ಠಿಕಬ್ರಹ್ಮಸದ್ವ್ರತಃ ॥ ೨೫೭ ॥

ನಾರದೋ ವಿಶಿಖಾರೂಢೋ ರೌದ್ರಧ್ಯಾನಪರಾಯಣಃ ।
ಅವತೀರ್ಯ ನಭೋಭಾಗಾತ್ಪರೀತ್ಯ ಜಿನಮಂದಿರಮ್ ॥ ೨೫೮ ॥

ಸಮುಪಾವಿಕ್ಷದೇಕತ್ರ ಜಿನಸ್ತವನಪೂರ್ವಕಮ್ ।
ಸಮುಪೇತ್ಯ ತಮಪ್ರಾಕ್ಷಂ ಕಿಂ ಮುನೇ ಸ್ಥಾನಮಾತ್ಮನಃ ॥ ೨೫೯ ॥

ಸಂಪದ್ಯತೇ ನವೇತ್ಯೇತದ್ವಚನಾದಬ್ರವೀದಸೌ ।
ರಾಮಲಕ್ಷ್ಮಣಯೋರರ್ಧಭರತಸ್ವಾಮಿತಾಚಿರಾತ್ ॥ ೨೬೦ ॥

ಭವಿಷ್ಯತಿ ಕೃತಪ್ರೇಷಣಸ್ಯ ತಾಭ್ಯಾಂ ತವೇಪ್ಸಿತಮ್ ।
ಸಂಪತ್ಸ್ಯತೇ ಚ ತತ್ಪ್ರೇಷ್ಯಂ ಕಿಂಚಿದ್ರಾಮಮನೋರಮಾಮ್ ॥ ೨೬೧ ॥

ವಿಹರಂತೀಂ ವನೇ ವೀಕ್ಷ್ಯ ರಾವಣೋ ಮಾಯಯಾಗ್ರಹೀತ್ ।
ತದ್ರಾಮಲಕ್ಷ್ಮಣಾವದ್ಯ ಲಂಕಾಭಿಗಮನೋಚಿತಮ್ ॥ ೨೬೨ ॥

ಅನ್ವೇಷಿತಾರೌ ಪುರುಷಂ ತಿಷ್ಠತಃ ಸ್ವಾರ್ಥಸಿದ್ಧಯೇ ।
ಇತಿ ತದ್ವಚನಾತ್ತೋಷಾದಾಗತೌ ವಾಂ ಪ್ರತೀತಿ ಸಃ ॥ ೨೬೩ ॥

ಒಂದಾನೊಂದು ಕಾಲದಲ್ಲಿ ನಾನು ಇವನೊಡನೆ ಸಮ್ಮೇದಪರ್ವತಕ್ಕೆ ಹೋಗಿ ಸಿದ್ಧಕೂಟವೆಂಬ ತೀರ್ಥಕ್ಷೇತ್ರದಲ್ಲಿ ಅನೇಕ ಅರ್ಹತ್ಪ್ರತಿಮೆಗಳನ್ನು ಭಕ್ತಿಯಿಂದ ಪೂಜಿಸಿ ವಂದಿಸಿ ಶುಭಭಾವನೆಯುಳ್ಳವನಾಗಿದ್ದೆನು. ಆಗ ಜಟೆಯೆಂಬ ಕಿರೀಟವನ್ನು ಧರಿಸಿರುವವನೂ ಮುತ್ತುಗಳ ಯಜ್ಞೋಪವೀತವುಳ್ಳವನೂ ಕಾವಿಬಟ್ಟೆಯುಳ್ಳವನೂ ಕಂಕುಳಲ್ಲಿ ಕಮಂಡಲುಳ್ಳವನೂ ಕೈಯಲ್ಲಿ ಕೊಡೆಯನ್ನು ಹಿಡಿದಿರುವವನೂ ಶ್ರೇಷ್ಠವಾದ ನೈಷ್ಠಿಕಬ್ರಹ್ಮಚರ್ಯವ್ರತವುಳ್ಳವನೂ ಬಾಣವನ್ನು ಧರಿಸಿರುವವನೂ ರೌದ್ರಧ್ಯಾನಪರಾಯಣನೂ ಆದ ನಾರದನು ಆಕಾಶಪ್ರದೇಶದಿಂದಿಳಿದು ಜಿನಸ್ತುತಿ ಪೂರ್ವಕವಾಗಿ ಜಿನಮಂದಿರವನ್ನು ಬಲಗೊಂಡು ಒಂದು ಕಡೆಯಲ್ಲಿ ಕುಳಿತನು. ಆಗ ನಾನು ಅವನ ಬಳಿಗೆ ಹೋಗಿ 'ಮುನಿಯೆ ! ನನ್ನ ಸ್ಥಾನವು ನನಗೆ ದೊರೆಯುವುದೋ ? ಇಲ್ಲವೋ ?' ಎಂದು ಕೇಳಿದೆನು. ಈ ಮಾತಿನಿಂದ ಇವನು 'ರಾಮಲಕ್ಷ್ಮಣರಿಗೆ ಶೀಘ್ರವಾಗಿ ಅರ್ಧಭರತಕ್ಷೇತ್ರದ ದೊರೆತನವು ಪ್ರಾಪ್ತವಾಗುವುದು. ಅವರುಗಳಿಂದ ಕಳುಹಿಸಲ್ಪಟ್ಟವನಾದ ನಿನ್ನ ಇಷ್ಟಾರ್ಥವು ಕೈಗೂಡುವುದು. ಹೇಳಿಕಳುಹಿಸಲ್ಪಡತಕ್ಕ ವಿಷಯ–ದೌತ್ಯವಾವುದೆಂದರೆ– ವನದಲ್ಲಿ ವಿಹರಿಸುತ್ತಿದ್ದ ರಾಮನ ಪತ್ನಿಯನ್ನು ರಾವಣನು ನೋಡಿ ಮಾಯೆಯಿಂದ ಗ್ರಹಣಮಾಡಿದನು. ಆದುದರಿಂದ ರಾಮಲಕ್ಷ್ಮಣರು ಈಗ ತಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ಲಂಕೆಗೆ ಹೋಗುವುದಕ್ಕೆ ಯೋಗ್ಯನಾದ ಪುರುಷನನ್ನು ಹುಡುಕುತ್ತಿದ್ದಾರೆ' ಎಂದು ಹೇಳಿದನು. ಆ ನಾರದಮುನಿಯ ಮಾತಿನಿಂದ ಸಂತೋಷದಿಂದ ನಾವುಗಳು ನಿಮ್ಮಗಳ ಬಳಿಗೆ ಬಂದೆವು.'' ಎಂಬೀ ಮಾತನ್ನು ಹೇಳಿದನು.

ತೌ ಚ ತದ್ವಚನಾತ್ಪೂಜಾಮುಚಿತಾಂ ಚಕ್ರತುಸ್ತಯೋಃ ।
ಅಥ ವಿಜ್ಞಾಪಯಾಮಾಸ ಪ್ರಭಂಜನತನೂದ್ಭವಃ ॥ ೨೬೪ ॥

ತವಾದೇಶೋಽಸ್ತಿ ಚೇದ್ದೇವ್ಯಾಃ ಸ್ಥಾನಮನ್ವೇಷಯಾಮ್ಯಹಮ್ ।
ತತ್ಪ್ರತ್ಯಯಾರ್ಥಮಾಖ್ಯೇಯಮಭಿಜ್ಞಾನಂ ಮಹೀಪತೇ ॥ ೨೬೫ ॥

ಇತಿ ತೇನೋಕ್ತಮಾಕರ್ಣ್ಯ ವಿನಮ್ಯನ್ವಯಖೇಂದುನಾ ।
ಮಮಾಭಿಪ್ರೇತಮೇತೇನ ಪ್ರಸೇತ್ಸ್ಯತ್ಯಸ್ತಸಂಶಯಮ್ ॥ ೨೬೬ ॥

ಇತಿ ಮತ್ವಾ ಸ್ವನಾಮಾಂಕಮುದ್ರಿಕಾಂ ಮತ್ಪ್ರಿಯೇದೃಶೀ ।
ವರ್ಣಾದಿಭಿರಿತಿ ವ್ಯಕ್ತಮುಕ್ತ್ವಾ ತಸ್ಮೈ ದದೌ ನೃಪಃ ॥ ೨೬೭ ॥

ಆ ರಾಮಲಕ್ಷ್ಮಣರೂ ಸುಗ್ರೀವನ ಮಾತಿನಿಂದ ಅವರುಗಳಿಗೆ ಉಚಿತವಾದ ಸತ್ಕಾರವನ್ನು ಮಾಡಿದರು. ಬಳಿಕ ಪ್ರಭಂಜನನ ಪುತ್ರನಾದ ಅಣುಮಂತನು ರಾಮನನ್ನು ಕುರಿತು "ರಾಜನೆ ! ನಿನ್ನ ಆಜ್ಞೆಯಾದರೆ ನಾನು ದೇವಿಯ ಸ್ಥಾನವನ್ನು ಹುಡುಕುವೆನು. ಆಕೆಯ ನಂಬಿಕೆಗೋಸ್ಕರ ಗುರುತನ್ನು ಹೇಳಬೇಕು" ಎಂದು ವಿಜ್ಞಾಪಿಸಿದನು. ಅವನು ಹೇಳಿದುದನ್ನು ಕೇಳಿ ದೊರೆಯು ವಿನಮಿಯ ವಂಶವೆಂಬ ಆಕಾಶಕ್ಕೆ ಚಂದ್ರನಾದ ಇವನಿಂದ ನನ್ನ ಇಷ್ಟಾರ್ಥವು ನಿಃಸಂಶಯವಾಗಿ ಸಿದ್ಧಿಸುವುದು" ಎಂದು ತಿಳಿದು "ನನ್ನ ಪ್ರಿಯೆಯು ವರ್ಣಾದಿಗಳಿಂದ ಇಂಥವಳು" ಎಂದು ವ್ಯಕ್ತವಾಗಿ ಹೇಳಿ ತನ್ನ ಹೆಸರಿನ ಗುರುತಿನ ಮುದ್ರಿಕೆಯನ್ನು ಅವನಿಗೆ ಕೊಟ್ಟನು.

ಸ ರಾಮಚರಣಾಂಭೋಜಂ ವಿನಮ್ಯ ಗಗನಾಂತರಮ್ ।
ಸಮುತ್ಪತ್ಯ ಸಮುಲ್ಲಂಘ್ಯ ಸಮುದ್ರಂ ಸತ್ರಿಕೂಟಕಮ್ ॥ ೨೬೮ ॥

ದ್ವಿಷಟ್ಕಯೋಜನಾಯಾಮಂ ನವಯೋಜನವಿಸ್ತೃತಮ್ ।
ದ್ವಾತ್ರಿಂಶದ್ಗೋಪುರೋಪೇತಂ ರತ್ನಪ್ರಾಕಾರಮಂಡಿತಮ್ ॥ ೨೬೯ ॥

ನಾನಾಭವನಸಂಕೀರ್ಣಂ ಮಣಿತೋರಣಭಾಸ್ವರಮ್ ।
ಮಹಾಮೇರುಸಮುತ್ತುಂಗಂ ರಾವಣಾವಾಸರಾಜಿತಮ್ ॥ ೨೭೦ ॥

ಅಲಿಪುಂಸ್ಕೋಕಿಲಾಲಾಪೈರ್ಲಸತ್ಕುಸುಮಪಲ್ಲವೈಃ ।
ಸರಾಗಹಾಸಂ ಗಾಯದ್ಭಿರಿವೋದ್ಯಾನೈರ್ಮನೋಹರಮ್ ॥ ೨೭೧ ॥

ಲಂಕಾನಗರಮಾಸಾದ್ಯ ಸೀತಾನ್ವೇಷಣತತ್ಪರಃ ।
ಗೃಹೀತಭ್ರಮರಾಕಾರೋ ದಶಾನನಸಭಾಗೃಹೇ ॥ ೨೭೨ ॥

ಇಂದ್ರಜಿತ್ಪ್ರಮುಖಾನ್ ಭೂಪಕುಮಾರಾನ್ ವೀಕ್ಷ್ಯ ಸಾದರಮ್ ।
ಮಂಡೋದರೀಪ್ರಭೃತ್ಯೇತದ್ವನಿತಾಶ್ಚ ನಿರೂಪಯನ್ ॥ ೨೭೩ ॥

ನತಾಖಿಲಖಗಾಧೀಶಮೌಲಿಮಾಲಾರ್ಚಿತಕ್ರಮಮ್ ।
ಮಧ್ಯೇಸಿಂಹಾಸನಂ ಸಿಂಹವಿಕ್ರಮಂ ಶಕ್ರಸನ್ನಿಭಮ್ ॥ ೨೭೪ ॥

ನೀಲಾದ್ರಿಮಿವ ಗಂಗೋರುತರಂಗೈಶ್ಚಮರೀರುಹೈಃ ।
ದೋಧೂಯಮಾನಮಾಲೋಕ್ಯ ರಾವಣಂ ರಾಧಿತದ್ವಿಷಮ್ ॥ ೨೭೫ ॥

ಅಹೋ ಪಾಪಸ್ಯ ಕೋಪ್ಯೇಷ ವಿಪಾಕೋಯಮಪೀದೃಶಃ ।
ಕಿಲ ಧಿಗ್ಧರ್ಮಮುಲ್ಲಂಘ್ಯ ಪರದಾರಾಭಿಲಾಷುಕಃ ॥ ೨೭೬ ॥

ಧ್ರುವಂ ತನ್ನಾರದೇನೋಕ್ತಮಕಾಲಹರಣಂ ಧ್ರುವಮ್ ।
ಭಾವೀತಿ ಭಾವಯನ್ ಸೀತಾಂ ತತ್ಸಭಾಯಾಮಲಕ್ಷಯನ್ ॥ ೨೭೭ ॥

ಮಂದಮಂದಪ್ರಭೇ ಭಾನೌ ದಿನೇ ಸತಿ ದಿನಾತ್ಯಯೇ ।
ಸಹಾಯಸಂಪದಂ ಪ್ರಾಯೋ ಮನ್ವಾನಃ ಸಂಪದಾವಹಾಮ್ ॥ ೨೭೮ ॥

ಉದಯಾಸ್ತಮಯೌ ನಿತ್ಯಂ ದೇಹಿನಾಮಿತಿ ರಾವಿಣಃ ।
ರವಿಂ ವಯೋ ನಿರೂಪ್ಯೇವ ಸಮಂತಾದಿತಿ ಚಿಂತಯನ್ ॥ ೨೭೯ ॥

ದೂತೋ ರಾಮಸ್ಯ ಗತ್ವಾಂತಃಪುರಪಶ್ಚಿಮಗೋಪುರಮ್ ।
ಆರುಹ್ಯಾಲೋಕಮಾನೋಯಂ ಭ್ರಮರಾರಾವರಾಜಿತಮ್ ॥ ೨೮೦ ॥

ವನಂ ಸರ್ವರ್ತುಕಂ ನಾಮ ನಂದನಂ ನಂದನೋಪಮಮ್ ।
ಫಲಪ್ರಸವಭಾರಾವನಮ್ರಕಮ್ರಮಹೀರುಹೈಃ ॥ ೨೮೧ ॥

ಮಂದಗಂಧವಹೋದ್ಧೂತನಾನಾಪ್ರಸವಪಾಂಸುಭಿಃ ।
ಕೃತಕಾದ್ರಿಸರೋವಾಪೀಲತಾಲಲಿತಮಂಡಪೈಃ ॥ ೨೮೨ ॥

ಮದನೋದ್ದೀಪನೈರ್ದೇಶೈರನ್ಯೈಶ್ಚಾತಿಮನೋಹರಮ್ ।
ದೃಷ್ಟ್ವಾ ತತ್ರ ಮನಾಕ್ಸ್ಥಿತ್ವಾ ಸಪ್ರಮೋದಃ ಸಕೌತುಕಃ ॥ ೨೮೩ ॥

ತತ್ರೈಕಸ್ಮಿನ್ಸಮಾಸನ್ನದೇಶೇ ವಿದ್ಯಾಧರೀಜನೈಃ ।
ಸಾಮಾದಿಭಿರ್ವಶೀಕರ್ತುಮಿಂಗಿತಾಕಾರವೇದಿಭಿಃ ॥ ೨೮೪ ॥

ಪರೀತಾಂ ಶಿಂಶಪಾಕ್ಷ್ಮಾಜಮೂಲೇ ಶೋಕಾಕುಲೀಕೃತಾಮ್ ।
ಧ್ಯಾಯಂತೀಂ ನಿಭೃತಾಂ ಮತ್ವಾ ಸ್ಥಿತ್ವಾಪಿ ಕುಲರಕ್ಷಣೇ ॥ ೨೮೫ ॥

ಸಯತ್ನಾಂ ಶೀಲಮಾಲಾಂ ವಾ ಸಮಾಲೋಕ್ಯ ಧರಾತ್ಮಜಾಮ್ ।
ಇಯಂ ಸಾ ರಾವಣಾನೀತಾ ಸೀತಾ ಜ್ಞಾತಾಭಿವರ್ಣಿತೈಃ ॥ ೨೮೬ ॥

ಅಭಿಜ್ಞಾನೈರ್ನೃಪೇಂದ್ರೇಣ ಮಮ ಪುಣ್ಯೋದಯಾದಿತಿ ।
ತದ್ದರ್ಶನಾತ್ಸಮುತ್ಪನ್ನರಾಗೋ ರಾವಣಪಾಪಿನಾ ॥ ೨೮೭ ॥

ಕಲ್ಪವಲ್ಲೀವ ದಾವೇನ ತಾಪಿತೇಯಂ ಸತೀತ್ಯಲಮ್ ।
ಶೋಕಾಭಿತಪ್ತಚಿತ್ತೋಪಿ ನೀತಿಮಾರ್ಗವಿಶಾರದಃ ॥ ೨೮೮ ॥

ಪ್ರಾರಬ್ಧಕಾರ್ಯಸಂಸಿದ್ಧಾವುದ್ಯತಸ್ಯ ವಿವೇಕಿನಃ ।
ಪ್ರಾಹುರ್ನೀತಿವಿದಃ ಕೋಪಃ ವ್ಯಸನಂ ಕಾರ್ಯವಿಘ್ನಕೃತ್ ॥ ೨೮೯ ॥

ತಸ್ಮಾದಸ್ಥಾನಕೋಪೇನ ಕೃತಮಿತ್ಯಾಹಿತಕ್ಷಮಃ ।
ನಿಜಾಗಮನವಾರ್ತಾಂ ತಾಮವಬೋಧಯಿತುಂ ಸತೀಮ್ ॥ ೨೯೦ ॥

ಮನಾಗವಸರಾಪೇಕ್ಷೀ ಸ್ಥಿತಸ್ತಾವನ್ನಿಶಾಕರಃ ।
ಉದಯಕ್ಷ್ಮಾಭೃದುದ್ಭಾಸಿಚೂಡಾಮಣಿನಿಭೋ ಬಭೌ ॥ ೨೯೧ ॥

ಅವನು ರಾಮನ ಚರಣಕಮಲಗಳಿಗೆ ನಮಸ್ಕರಿಸಿ ಆಕಾಶಕ್ಕೆ ನೆಗೆದು ತ್ರಿಕೂಟಾಚಲಸಹಿತವಾದ ಸಮುದ್ರವನ್ನು ದಾಟಿ ಹನ್ನೆರಡು ಯೋಜನ ದೀರ್ಘವೂ ಒಂಬತ್ತು ಯೋಜನ ವಿಸ್ತೃತವೂ ಮೂವತ್ತೆರಡು ಗೋಪುರಗಳಿಂದ ಕೂಡಿರುವುದೂ ರತ್ನನಿರ್ಮಿತವಾದ ಕೋಟೆಗಳಿಂದ ಭೂಷಿತವೂ ವಿವಿಧಗೃಹಗಳಿಂದ ನಿಬಿಡವೂ ರತ್ನಮಯವಾದ ತೋರಣಗಳಿಂದ ಪ್ರಕಾಶಮಾನವೂ ಮಹಾಮೇರುವಿನಂತೆ ಉನ್ನತವೂ ರಾವಣನ ಆವಾಸದಿಂದ ದೀಪ್ಯಮಾನವೂ ಭ್ರಮರಗಳ ಮತ್ತು ಗಂಡುಕೋಗಿಲೆಗಳ ಆಲಾಪಗಳಿಂದಲೂ ಪ್ರಕಾಶಮಾನವಾದ ಪುಷ್ಪಗಳಿಂದಲೂ ತಳಿರುಗಳಿಂದಲೂ ರಾಗ ಹಾಸಯುಕ್ತವಾಗಿ ಗಾನಮಾಡುತ್ತವೋ ಎಂಬಂತಿರುವ ಉದ್ಯಾನಗಳಿಂದಲೂ ಮನೋಹರವೂ ಆದ ಲಂಕಾನಗರವನ್ನು ಸೇರಿ ಸೀತೆಯನ್ನು ಹುಡುಕುವುದರಲ್ಲಿ ತತ್ಪರನೂ ಭ್ರಮರದ ಆಕಾರವನ್ನು ಧರಿಸಿದವನೂ ರಾವಣನ ಸಭಾಮಂದಿರದಲ್ಲಿ ಇಂದ್ರಜಿತ್ ಮೊದಲಾದ ರಾಜಕುಮಾರರನ್ನೂ ಪ್ರೀತಿಪೂರ್ವಕವಾಗಿ ನೋಡಿ ಮಂಡೋದರಿಯೇ ಮೊದಲಾದ ಇವನ ಸ್ತ್ರೀಯರನ್ನೂ ನೋಡುವವನೂ ನಮಸ್ಕರಿಸುತ್ತಿರುವ ಸಮಸ್ತಖೇಚರರಾಜರುಗಳ ಕಿರೀಟಗಳ ಮಾಲೆಯಿಂದ ಪೂಜಿತವಾದ ಪಾದಗಳುಳ್ಳವನೂ ಸಿಂಹಾಸನದ ಮಧ್ಯದಲ್ಲಿ ಸಿಂಹಪರಾಕ್ರಮಿಯೂ ದೇವೇಂದ್ರನಿಗೆ ಸಮಾನನೂ, ಗಂಗಾನದಿಯ ಅಲೆಗಳಿಂದ ಬೀಸಲ್ಪಡುವ ನೀಲಪರ್ವತದಂತೆ, ಚಾಮರಗಳಿಂದ ಬೀಸಲ್ಪಡುತ್ತಿರುವವನೂ ಶತ್ರುಗಳನ್ನು ಸಾಧಿಸಿ–ವಶಪಡಿಸಿಕೊಂಡವನೂ ಆದ ರಾವಣನನ್ನು ನೋಡಿ "ಆಹಾ ! ಇದು ಪಾಪದ ಯಾವುದೋ ವಿಪಾಕ. ಇಂತಹ ಇವನೂ ಧರ್ಮವನ್ನು ಮೀರಿ ಪರಸ್ತ್ರೀಕಾಂಕ್ಷೆಯುಳ್ಳವನಾಗಿದ್ದಾನಂತೆ. ಧಿಕ್ಕಾರ. ನಾರದನು ಹೇಳಿದ ಮಾತು ನಿಶ್ಚಯ. ನಿಶ್ಚಯವಾಗಿ ಮುಂದೆ ಕಾಲಹರಣವಾಗುವುದಿಲ್ಲ. ಸೀತೆಯನ್ನು ತರುವುದಕ್ಕೂ ರಾವಣನ ವಿನಾಶಕಾಲಕ್ಕೂ ಕಾಲಹರಣವಿಲ್ಲವೆಂದು ಭಾವವು" ಈ ರೀತಿಯಾಗಿ ಭಾವಿಸುವವನೂ ಆ ಸಭೆಯಲ್ಲಿ ಸೀತೆಯನ್ನು ಕಾಣದಿರುವವನೂ ಸೂರ್ಯನು ಬಹುಮಂದವಾದ ಪ್ರಭೆಯುಳ್ಳವನಾಗುತ್ತಿರಲು ದಿನವು ಕಳೆದು

ಹೋಗಿ ವನಮಧ್ಯದಲ್ಲಿ ಸಂಚರಿಸಿ ವಿವಿಧವನಸ್ಪತಿಗಳನ್ನು ನೋಡಿ ನಗೆಯೊಡನೆ ಕೂಡಿರುವಂತೆ ಪುಷ್ಪಸಹಿತವೂ ಅನುರಾಗದೊಡನೆ ಕೂಡಿರುವಂತೆ ಪಲ್ಲವ (ಚಿಗುರೆಲೆ) ಸಹಿತವೂ ಕೋಮಲವೂ ಆಗಿರುವ ಲತೆಯನ್ನು, ಪ್ರಿಯಳಾದ ಬೇರೊಬ್ಬಳು ಕೋಮಲೆಯನ್ನು ನೋಡುವವನಂತೆ, ಕುತೂಹಲವುಳ್ಳವನಾಗಿ ನೋಡುತ್ತಿರುವ ಆ ರಾಮನು ಕೋಪಸಹಿತಳಾದ ಜಾನಕಿಯಿಂದ ನೋಡಲ್ಪಟ್ಟ ವನಾಗಿ "ಕಾರಣವಿಲ್ಲದೆ ಕುಪಿತಳಾಗಿರುವ ಈಕೆಯು ಪ್ರಸನ್ನಪಡಿಸಲ್ಪಡತಕ್ಕ ವಳಾಗಿದ್ದಾಳೆ" ಎಂದು ಯೋಚಿಸಿ ಜಾನಕಿಯನ್ನು ಕುರಿತು ಇಂತೆಂದನು:– "ಚಂದ್ರಮುಖಿಯೆ ! ನಿನ್ನ ಮುಖದಲ್ಲಿ ಆಸಕ್ತನಾದ ನನ್ನಂತೆ, ಬಳ್ಳಿಯ ಹೂವಿನಲ್ಲಿ ಚೆನ್ನಾಗಿ ಆಸಕ್ತವಾಗಿರುವ ದುಂಬಿಯನ್ನು ನೋಡು. ಅದನ್ನು ತೃಪ್ತಿಪಡಿಸುವುದ ಕ್ಕೋಸ್ಕರ ಖರ್ಜೂರದ ಮರವು ತಾನು ನೂತನವಾದ ಪುಷ್ಪಗಳಿಂದ ನನ್ನ ಕಣ್ಣುಗಳೆಂಬ ದುಂಬಿಗಳ ಪ್ರೀತಿಗೋಸ್ಕರ ರಾಗವನ್ನು ಉದ್ಗರಿಸು(ವಮನ ಮಾಡು)ವಂತಿದೆ. ಪ್ರಿಯಳೆ ! ಈ ಪುಷ್ಪಗಳಿಂದ ಚಿತ್ರವಾದ ತಲೆಗೂದಲುಗಳ ಗಂಟನ್ನು ಸ್ವಹಸ್ತದಿಂದ ಕಟ್ಟಿ ನಿನ್ನ ಈ ತಲೆಗೂದಲುಗಳನ್ನು ಅಲಂಕರಿಸು.

**ಏತತ್ಪುಷ್ಪೈಃ ಪ್ರವಾಲೈಶ್ಚ ಭೂಷಣಾನಿ ಪ್ರಕಲ್ಪಯ ।**
**ತವಾಪಿ ತ್ವಂ ವಿಭಾಸ್ಯೇತೈರ್ಜಂಗಮೇವ ಲತಾಪರಾ ॥ ೬೦೬ ॥**

ಈ ಪುಷ್ಪಗಳಿಂದಲೂ ತಳಿರುಗಳಿಂದಲೂ ನಿನಗೂ ಅಲಂಕಾರಗಳನ್ನು ಮಾಡು. ಇವುಗಳಿಂದ ನೀನು, ಸಂಚರಿಸುವ ಬೇರೊಂದು ಲತೆಯೋ ಎಂಬಂತೆ, ಪ್ರಕಾಶಿಸುತ್ತಿ."

**ಇತ್ಯುಕ್ತಿಭಿಶ್ಚ ತಾಂ ಮೂಕೀಭೂತಾಮಾಲೋಕ್ಯ ಕೋಪಿನೀಮ್ ।**
**ಪುನಶ್ಚೈವಮಭಾಷಿಷ್ಟ ಮೃಷ್ಟೇಷ್ಟವಚನೋ ನೃಪಃ ॥ ೬೦೭ ॥**

ಈ ಪ್ರಕಾರವಾದ ಮಾತುಗಳಿಂದಲೂ ಮಾತನಾಡದಿರುವವಳೂ ಕೋಪವುಳ್ಳ ವಳೂ ಆದ ಆ ಜಾನಕಿಯನ್ನು ನೋಡಿ ಮಧುರವೂ ಇಷ್ಟವೂ ಆದ ವಚನಗಳುಳ್ಳ ರಾಜನು ಮತ್ತೂ ಈ ರೀತಿಯಾಗಿ ಮಾತನಾಡಿದನು.

**ತ್ವದ್ವಕ್ತ್ರಂ ದರ್ಪಣೇ ವೀಕ್ಷ್ಯ ಚಕ್ಷುಷೀ ತೇ ಕೃತಾರ್ಥಕೇ ।**
**ತ್ವದಾಸ್ಯಸೌರಭೇಣೈವ ತೃಪ್ತಾ ತೇ ನಾಸಿಕಾ ಭೃಶಮ್ ॥ ೬೦೮ ॥**

"ನಿನ್ನ ಕಣ್ಣುಗಳು ಕನ್ನಡಿಯಲ್ಲಿ ನಿನ್ನ ಮುಖವನ್ನು ನೋಡಿ ಕೃತಾರ್ಥಗಳಾದುವು. ನಿನ್ನ ಮುಖದ ಪರಿಮಳದಿಂದಲೇ ನಿನ್ನ ಮೂಗು ಚೆನ್ನಾಗಿ ತೃಪ್ತವಾಯಿತು.

**ತ್ವಚ್ಛ್ರವ್ಯಗೇಯಸಲ್ಲಾಪೈಃ ಕರ್ಣೌ ಪೂರ್ಣರಸೌ ತವ ।**
**ತವ ಬಿಂಬಾಧರಾಸ್ವಾದಾತ್ತ್ವಜ್ಜಿಹ್ವಾನ್ಯರಸಾಸ್ಪೃಹಾ ॥ ೬೦೯ ॥**

ಕೇಳುವುದಕ್ಕೆ ಯೋಗ್ಯವೂ ಹಾಡುವುದಕ್ಕೆ ಯೋಗ್ಯವೂ ಆದ ನಿನ್ನ ಸಲ್ಲಾಪ ಗಳಿಂದ ನಿನ್ನ ಕಿವಿಗಳು ಪೂರ್ಣವಾದ ಪ್ರೀತಿಯುಳ್ಳವಾಗಿವೆ. ನಿನ್ನ ನಾಲಗೆಯು ತೊಂಡೆಯ ಹಣ್ಣಿನಂತಿರುವ ನಿನ್ನ ತುಟಿಯ ಆಸ್ವಾದದಿಂದ ಇತರ ರಸಗಳಲ್ಲಿ ಇಚ್ಛೆಯಿಲ್ಲದಿರುವುದಾಗಿದೆ.

**ಪರಿರಭ್ಯ ಕರೌ ತೃಪ್ತೌ ತವ ತ್ವತ್ಕಠಿನಸ್ತನೌ ।**
**ಮನೋಪೀಂದ್ರಿಯಸಂತೃಪ್ತ್ಯಾ ಸಂತೃಪ್ತಂ ನಿತರಾಂ ಪ್ರಿಯೇ ॥ ೬೧೦ ॥**

**ಸ್ವಸ್ಮಾಮೇವ ಸ್ವಯಂ ತೃಪ್ತಾ ಸಿದ್ಧಾಕೃತಿರಿವಾಧುನಾ ।**
**ಕೋಪಸ್ತೇ ಯುಕ್ತ ಏವೇತಿ ಸೀತಾಂ ಸ ಚತುರೋಕ್ತಿಭಿಃ ॥ ೬೧೧ ॥**

ನಿನ್ನ ಕೈಗಳು ನಿನ್ನ ಕಠಿನಕುಚಗಳನ್ನು ಆಲಿಂಗಿಸಿ ತೃಪ್ತಿಯುಳ್ಳವಾಗಿವೆ. ಪ್ರಿಯೆ ! ತನ್ನಲ್ಲೇ ತಾನು ತೃಪ್ತಿಯನ್ನು ಹೊಂದಿರುವ ಸಿದ್ಧರ ಆಕೃತಿಯಂತೆ ನಿನ್ನ ಮನವೂ ಇಂದ್ರಿಯಗಳ ಸಂತೃಪ್ತಿಯಿಂದ ಅಧಿಕವಾಗಿ ತೃಪ್ತಿಯನ್ನು ಹೊಂದಿದೆ. ಈಗ ನಿನ್ನ ಕೋಪವು ಯುಕ್ತವೇ ಆಗಿದೆ" ಈ ರೀತಿಯಾಗಿ ಅವನು ನಿಪುಣವಾದ ಮಾತುಗಳಿಂದ ಸೀತೆಯನ್ನು ಕುರಿತು ಮಾತನಾಡಿದನು.

**ತತಃ ಪ್ರಸನ್ನಯಾ ಸಾರ್ಧಂ ಸುಖಂ ಸರ್ವೇಂದ್ರಿಯೋದ್ಭವಮ್ ।**
**ಸಂಪ್ರಾಪನ್ನೂತನಂ ಭೂಪಃ ಕೋಪೋಪಿ ಸುಖಕೃತ್ಕ್ವಚಿತ್ ॥ ೬೧೨ ॥**

ಬಳಿಕ ಪ್ರಸನ್ನಳಾದ ಆಕೆಯೊಡನೆ ರಾಮನು ಸರ್ವೇಂದ್ರಿಯಗಳಿಂದುಂಟಾದುದೂ ನವೀನವೂ ಆದ ಸುಖವನ್ನು ಪಡೆದನು. ಕೆಲವು ಕಡೆಯಲ್ಲಿ ಕೋಪವೂ ಸುಖವನ್ನುಂಟುಮಾಡುವುದಾಗಿರುತ್ತದೆ.

**ತತ್ರೈವ ಲಕ್ಷ್ಮಣೋಪ್ಯೇವಂ ಸ್ವಪ್ರಿಯಾಭಿಃ ಸಹಾರಮತ್ ।**
**ತದಾ ತದಾ ಮುದಾ ಕಾಮಸ್ತೇಭ್ಯೋಭ್ಯರ್ಥಮದಾತ್ಸುಖಮ್ ॥ ೬೧೩ ॥**

ಅಲ್ಲಿಯೇ ಲಕ್ಷ್ಮಣನೂ ಹೀಗೆ ತನ್ನ ಪತ್ನಿಯರೊಡನೆ ಕ್ರೀಡಿಸಿದನು. ಕಾಮನು ಆಗಾಗ್ಗೆ ಸಂತೋಷದಿಂದ ಅವರಿಗೆ ಇಷ್ಟವಾದ ಸುಖವನ್ನು ಕೊಟ್ಟನು.

**ಏವಂ ರಾಮಶ್ಚಿರಂ ರಂತ್ವಾ ಕಾಂತೇ ಪಶ್ಯ ರವಿಃ ಕರೈಃ ।**
**ಸರ್ವಾನ್ ದಹತಿ ಮೂರ್ಧಸ್ಥಸ್ತೀವ್ರಃ ಕಸ್ಯಾತ್ರ ಶಾಂತಯೇ ॥ ೬೧೪ ॥**

ಈ ರೀತಿಯಾಗಿ ರಾಮನು ಬಹುಕಾಲದವರೆಗೆ ಕ್ರೀಡಿಸಿ ಬಳಿಕ ಸೀತೆಯನ್ನು ಕುರಿತು "ಕಾಂತೆಯೇ ! ನೋಡು. ನೆತ್ತಿಯಲ್ಲಿರುವ ಸೂರ್ಯನು ಎಲ್ಲರನ್ನೂ ಕಿರಣಗಳಿಂದ ಸುಡುತ್ತಾನೆ" ಈ ಲೋಕದಲ್ಲಿ ತೀವ್ರನಾಗಿರುವವನು ಯಾವನು ಶಾಂತಿಗೋಸ್ಕರ ಕಾರಣನಾಗುತ್ತಾನೆ ?

**ಲಕ್ಷ್ಮಣಾಕ್ರಮವಿಕ್ರಾಂತಿವಿಜಿತಾರಾತಿಸನ್ನಿಭಾಃ ।**
**ಛಾಯಾಮಾತ್ಮನಿ ಸಂಲೀನಾಂ ಪ್ರಕುರ್ವಂತಿ ಮಹೀರುಹಃ ॥ ೬೧೫ ॥**

ಲಕ್ಷ್ಮಣನ ಕ್ರಮರಹಿತ(ಅಧಿಕ) ವಾದ ಪರಾಕ್ರಮದಿಂದ ಜಯಿಸಲ್ಪಟ್ಟ ಶತ್ರುಗಳಿಗೆ ಸಮಾನಗಳಾದ ವೃಕ್ಷಗಳು ನೆರಳನ್ನು ತಮ್ಮಲ್ಲಿ ಅಡಗಿರುವುದನ್ನಾಗಿ ಮಾಡುತ್ತವೆ.

**ವೈರಾಜ್ಯಪರಿವಾರೋ ವಾ ಮೃಗಪೂಗಃ ಸಶಾಬಕಃ ।**
**ಕ್ವಾಪ್ಯಲಬ್ಧಾಶ್ರಯಸ್ತಪ್ತೋ ಭ್ರಾಮ್ಯತೀತಸ್ತತೋ ಬತ ॥ ೬೧೬ ।**

ಮರಿಗಳೊಡನಿರುವ ಮೃಗಗಳ ಸಮೂಹವು ರಾಜ್ಯವನ್ನು ಕಳೆದುಕೊಂಡವನ ಪರಿವಾರದಂತೆ ಎಲ್ಲಿಯೂ ಆಶ್ರಯವನ್ನು ಹೊಂದದಿರುವುದೂ ತಪಿಸುತ್ತಿರುವುದೂ ಆಗಿ ಇತ್ತತ್ತ ಚಲಿಸುತ್ತದೆ. ಕಷ್ಟ !"

**ಇತಿ ಚೇತೋಹರೈಃ ಸೀತಾಂ ಮೋದಯನ್ ಸ ತಯಾ ಸಹ ।**
**ಶಚೀದೇವ್ಯೇವ ದೇವೇಶಃ ಕೃತ್ವಾ ವನವಿನೋದನಮ್ ॥ ೬೧೭**

**ಕಿಂಚಿತ್ಖಿನ್ನಾಮಿವಾಲಕ್ಷ್ಯ ತಾಂ ಜಲಾಶಯಮಾಸದತ್ ।**
**ತತ್ರ ಸಿಂಚನ್ಪ್ರಿಯಾಂ ಶೀತೈರ್ಯಂತ್ರಮುಕ್ತಪಯಃಕಣೈಃ ॥ ೬೧೮**

**ಈಷನ್ನಿಮೀಲಿತಾಲೋಲನಯನೇಂದೀವರೋಜ್ಜ್ವಲಮ್ ।**
**ತದ್ವಕ್ತ್ರಕಮಲಂ ಪಶ್ಯನ್ನಾಸಾವಲ್ಪಂ ತದಾತುಷತ್ ॥ ೬೧೯**

ಈ ರೀತಿಯಾಗಿ ಮನೋಹರಗಳಾದ ಮಾತುಗಳಿಂದ ಆ ರಾಮನು ಸೀತೆಯನ ಸಂತೋಷಪಡಿಸುವವನಾಗಿ, ಶಚೀದೇವಿಯೊಡನೆ ದೇವೇಂದ್ರನಂತೆ, ಆಕೆಯೊಡ ವನವಿನೋದವನ್ನು ಮಾಡಿ ಸ್ವಲ್ಪ ಖಿನ್ನಳಾಗಿರುವ ಆಕೆಯನ್ನು ನೋ ಜಲಾಶಯವನ್ನು ಸೇರಿದನು. ಅಲ್ಲಿ ಯಂತ್ರಗಳಿಂದ ಬಿಡಲ್ಪಟ್ಟ ತಣ್ಣೀರಿನ ಹನಿಗಳಿಂ ಪ್ರಿಯೆಯನ್ನು ಸಿಂಚಿಸುವವನಾಗಿ ಸ್ವಲ್ಪವಾಗಿ ಮುಚ್ಚಲ್ಪಟ್ಟಿರುವುದೂ ಚಲಿಸುವುದ ಆದ ನೇತ್ರಗಳೆಂಬ ಕನ್ನೈದಿಲೆಗಳಿಂದ ಪ್ರಕಾಶಮಾನವಾದ ಆಕೆಯ ಮು ಕಮಲವನ್ನು ನೋಡುವವನಾಗಿ ಆಗ ಈ ರಾಮನು ಸ್ವಲ್ಪವಾಗಿ ಸಂತೋ ಪಡಲಿಲ್ಲ. ಹೆಚ್ಚಾಗಿ ಸಂತೋಷಪಟ್ಟನೆಂದು ಭಾವವು.

**ವಕ್ಷೋದಘ್ನಮಸೌ ವಾರಿ ಪ್ರಾವಿಶತ್ಸಸ್ಮಿತಂ ಪ್ರಿಯಾಮ್ ।**
**ಪರಿರಂಭೋತ್ಸುಕಾಂ ವಿದ್ವಾನಿಂಗಿತಜ್ಞಾ ಹಿ ನಾಗರಾಃ ॥ ೬೨೦ ॥**

ಪ್ರಿಯೆಯನ್ನು ಆಲಿಂಗನದಲ್ಲಿ ಕುತೂಹಲವುಳ್ಳವಳನ್ನಾಗಿ ತಿಳಿದ ಈ ರಾಮನು ಮುಗುಳ್ನಗೆಯಿಂದ ಕೂಡಿರುವಂತೆ ಎದೆಯವರೆಗಿರುವ ನೀರನ್ನು ಪ್ರವೇಶಿಸಿದನು. ವನಕ್ರೀಡೆಯಾದ ಮೇಲೆ ಜಲಕ್ರೀಡೆಯನ್ನಾರಂಭಿಸಿದರೆಂದು ಭಾವವು. ನಾಗರಿಕರು ಇಂಗಿತಜ್ಞರಾಗಿಯೇ ಇರುತ್ತಾರೆ.

**ಭ್ರಮರೈಃ ಪಂಕಜಂ ಮುಕ್ತ್ವಾ ಕಾಂತಾಸ್ಯಾಬ್ಜಂ ವತಂಸಕಮ್ ।**
**ತುರಾಕುಲೀಕೃತಂ ದೃಷ್ಟ್ವಾ ಖೇದೀ ಹ್ಲಾದೀ ಚ ಸೋಽಭವತ್ ॥ ೬೨೧ ॥**

ಕರ್ಣಭೂಷಣವಾದ ಕಮಲವನ್ನು ಬಿಟ್ಟು ಭ್ರಮರಗಳಿಂದ ಶೀಘ್ರವಾಗಿ ಬಾಧೆ ಪಡಿಸಲ್ಪಟ್ಟ ಪತ್ನಿಯ ಮುಖಕಮಲವನ್ನು ನೋಡಿ ಆ ರಾಮನು ಖೇದವುಳ್ಳವನಾಗಿಯೂ ಸಂತೋಷವುಳ್ಳವನಾಗಿಯೂ ಆದನು.

**ಏವಂ ಜಲೇ ಚಿರಂ ರಂತ್ವಾ ತತ್ರಾಪೂರ್ಯ ಮನೋರಥಮ್ ।**
**ಸಾಂತಃಪುರೋ ವನೇ ರಮ್ಯಪ್ರದೇಶೇ ಸ್ಥಿತಿಮಾವ್ರಜತ್ ॥ ೬೨೨ ॥**

ಈ ರೀತಿಯಾಗಿ ನೀರಿನಲ್ಲಿ ಬಹುಕಾಲದವರೆಗೆ ಕ್ರೀಡಿಸಿ ಅಲ್ಲಿ ಮನೋರಥವನ್ನು ಪೂರ್ತಿಮಾಡಿ ಅಂತಃಪುರಸಹಿತನಾಗಿ ವನದಲ್ಲಿ ರಮಣೀಯವಾದ ಪ್ರದೇಶದಲ್ಲಿ ಸ್ಥಿತಿಯನ್ನು ಹೊಂದಿದನು. ಬೀಡು ಬಿಟ್ಟನೆಂದು ಭಾವವು.

**ತದಾ ಶೂರ್ಪಣಖಾಗತ್ಯ ತಯೋರ್ನೃಪತನೂಜಯೋಃ ।**
**ವೀಕ್ಷ್ಯಮಾಣಾತುಲಾಂ ಲಕ್ಷ್ಮೀಮನುರಕ್ತಾಂ ಸವಿಸ್ಮಯಮ್ ॥ ೬೨೩ ॥**

**ಪ್ರಭೂತಪ್ರಸವಾನಮ್ರಕಮ್ರಾಶೋಕಮಹೀರುಹಃ ।**
**ಅಧಸ್ತಾತ್ಸುಸ್ಥಿತಾಂ ಸೀತಾಂ ಹರಿನ್ಮಣಿಶಿಲಾತಲೇ ॥ ೬೨೪ ॥**

**ವನಲಕ್ಷ್ಮೀಮಿವಾಲೋಕ್ಯ ಭೂಷ್ಯಮಾಣಾಂ ಸಖೀಜನೈಃ ।**
**ಯುಕ್ತಮೇವ ಖಗೇಶಸ್ಯ ಪ್ರೇಮಾಸ್ಯಾಮಿತಿ ವಾದಿನೀ ॥ ೬೨೫ ॥**

**ಬಭೂವ ಸ್ಥವಿರಾ ರೂಪಪರಾವರ್ತನವಿದ್ಯಯಾ ।**
**ಸೀತಾವಿಲಾಸಸಂದರ್ಶಸಂಭೂತವ್ರೀಡಯೇವ ಸಾ ॥ ೬೨೬ ॥**

ಆಗ ಶೂರ್ಪಣಖೆಯು ಬಂದು ಆ ರಾಜಕುಮಾರರಲ್ಲಿ ಅನುರಕ್ತಳೂ ಅನುಪಮಳೂ ಆದ ಲಕ್ಷ್ಮಿಯನ್ನು–ಶೋಭೆಯನ್ನು ಆಶ್ಚರ್ಯದೊಡನೆ ನೋಡುವವಳಾಗಿ ಅಧಿಕವಾದ ಪುಷ್ಪಗಳಿಂದ ಸುತ್ತಲೂ ಬಗ್ಗಿರುವುದೂ ಮನೋಹರವೂ ಆದ ಅಶೋಕವೃಕ್ಷದ ಕೆಳಗೆ ಪಚ್ಚೆಯ ಮಣಿಶಿಲೆಯ ಮೇಲೆ ಕುಳಿತಿರುವವಳೂ ಸಖೀಜನರಿಂದ ವನಲಕ್ಷ್ಮಿಯಂತೆ ಅಲಂಕರಿಸಲ್ಪಡುತ್ತಿರುವವಳೂ ಆದ ಸೀತೆಯನ್ನು ನೋಡಿ "ಖೇಚರೇಶ್ವರ–ರಾವಣನಿಗೆ ಈಕೆಯಲ್ಲಿ ಪ್ರೇಮವು ಯುಕ್ತವೇ ಆಗಿದೆ" ಎಂದು ಹೇಳುವವಳಾಗಿ ಆಕೆಯು, ಸೀತೆಯ ವಿಲಾಸವನ್ನು ನೋಡಿದುದರಿಂದುಂಟಾದ ಲಜ್ಜೆಯಿಂದಲೋ ಎಂಬಂತೆ, ರೂಪಪರಾವರ್ತನವಿದ್ಯೆಯಿಂದ ಮುದುಕಿಯಾದಳು. ಮುದುಕಿಯ ವೇಷವನ್ನು ಧರಿಸಿದಳೆಂದು ಭಾವವು.

**ತದ್ರೂಪಂ ವರ್ಣಯಂತೀತ್ಥಂ ಸಕೌತುಕಮುವನ್ಯತ ।**
**ಸ್ವಬುದ್ಧಿಕೌಶಲಾದೇತತ್ಕೃತಂ ರೂಪಂ ನ ವೇಧಸಾ ॥ ೬೨೭ ॥**

**ಯಾದೃಚ್ಛಿಕಂ ನ ಚೇದನ್ಯತ್ಕಿಮಕಾರೀತಿ ನೇದೃಶಮ್ ।**
**ಶೇಷದೇವ್ಯೋ ಜರಾಜೀರ್ಣಾಂ ತಾಂ ದೃಷ್ಟ್ವಾ ಯೌವನೋದ್ಧತಾಃ ॥**

**ಕಾ ತ್ವಂ ವದ ಕುತಸ್ತ್ಯಾ ವೇತ್ಯವೋಚನ್ ಹಾಸಪೂರ್ವಕಮ್ ।**
**ಉದ್ಯಾನಪಾಲಕಸ್ಯಾಹಂ ಮಾತಾತ್ರೈವೇತಿ ಸಾ ಪುನಃ ॥ ೬೨೮ ॥**

**ತಾಸಾಂ ಚಿತ್ತಪರೀಕ್ಷಾರ್ಥಮಿಮಾಂ ವಾಚಮುದಾಹರತ್ ।**
**ಯುಷ್ಮನ್ನ ಪುಣ್ಯಭಾಗಿನ್ಯೋ ಮಾನ್ಯಾಃ ಸಂತ್ಯನ್ಯಯೋಷಿತಃ ॥ ೬೩೦ ॥**

**ಯುಸ್ಮಾದಾಭ್ಯಾಂ ಕುಮಾರಾಭ್ಯಾಂ ಸಹ ಭೋಗಪರಾಯಣಾಃ ।**
**ಯುಷ್ಮಾಭಿಃ ಪ್ರಾಕ್ಕೃತಂ ಕಿಂ ವಾ ಪುಣ್ಯಂ ತನ್ಮಮ ಕಥ್ಯತಾಮ್ ॥ ೬೩೧ ॥**

**ತತ್ಕರಿಷ್ಯಾಮಿ ಯೇನಾಸ್ಯ ರಾಜ್ಞೀಭೂತ್ವಾ ಮಹೀಪತೇಃ ।**
**ಇಮಂ ವಿರಕ್ತಮನ್ಯಾಸು ವಿಧಾಸ್ಯಾಮೀತಿ ತದ್ವಚಃ ॥ ೬೩೨ ॥**

**ಶ್ರುತ್ವಾ ತಾಶ್ಚಿತ್ತಮೇತಸ್ಯಾಸ್ತರುಣಂ ಸ್ಮರವಿಹ್ವಲಮ್ ।**
**ವಪುರೇವ ಜರಾಗ್ರಸ್ತಮಿತ್ಯಲಂ ಸಹಸಾಹಸನ್ ॥ ೬೩೩ ॥**

ಶೂರ್ಪಣಖೆಯು ಆ ಸೀತಾದೇವಿಯ ರೂಪವನ್ನು ಕುತೂಹಲದಿಂದ ಕೂಡಿರುವಂತೆ ಮುಂದೆ ಹೇಳುವ ರೀತಿಯಾಗಿ ವರ್ಣಿಸುವವಳಾಗಿ "ಬ್ರಹ್ಮನು ತನ್ನ ಬುದ್ಧಿಕುಶಲತೆಯಿಂದ ಈ ರೂಪವನ್ನು ಮಾಡಲಿಲ್ಲ. ಆಕಸ್ಮಾತ್ತಾಗಿ ಮಾಡಿದನು. ಹಾಗಲ್ಲದಿದ್ದರೆ ಬೇರೆ ಇಂತಹ ರೂಪವನ್ನೇಕೆ ಮಾಡಲಿಲ್ಲ ?" ಎಂದು ತಿಳಿದಳು. ಸೀತಾದೇವಿಯ ಹೊರತು ಯೌವನದಿಂದ ಗರ್ವಿತರಾದ ಬೇರೆ ದೇವಿಯರು ಮುಪ್ಪಿನಿಂದ ಜೀರ್ಣಳಾದ ಆ ಮುದುಕಿಯನ್ನು ನೋಡಿ "ನೀನು ಯಾವಳು ? ಎಲ್ಲಿಯವಳು ?" ಎಂದು ಹಾಸ್ಯಪೂರ್ವಕವಾಗಿ ಮಾತನಾಡಿದರು. ಆಕೆಯು ಆ ದೇವಿಯರನ್ನು ಕುರಿತು "ನಾನು ಇಲ್ಲೇ ಉದ್ಯಾನಪಾಲಕನ ತಾಯಿಯಾಗಿದ್ದೇನೆ" ಹೀಗೆಂದು ಮತ್ತೆ ಅವರ ಮನಸ್ಸನ್ನು ಪರೀಕ್ಷಿಸುವುದಕ್ಕೋಸ್ಕರ ಈ ಮುಂದಿನ ಮಾತನ್ನು ಹೇಳಿದಳು. "ನೀವುಗಳು ಇಂತಹ ರಾಜಕುಮಾರನೊಡನೆ ಭೋಗಾಸಕ್ತರಾಗಿರುವುದರಿಂದ ನಿಮ್ಮಗಳಿಗಿಂತ ಪುಣ್ಯಭಾಗಿನಿಯರೂ ಮಾನ್ಯರೂ ಆದ ಬೇರೆ ಸ್ತ್ರೀಯರಿಲ್ಲ. ಪೂರ್ವಜನ್ಮದಲ್ಲಿ ನೀವುಗಳು ಯಾವ ಪುಣ್ಯವನ್ನು ಮಾಡಿದ್ದೀರೋ ಅದನ್ನು ನನಗೆ ಹೇಳಿ. ಅದನ್ನು ನಾನು ಮಾಡುವೆನು. ಅದರಿಂದ ಈ ರಾಜನಿಗೆ–ರಾಮನಿಗೆ ರಾಣಿಯಾಗಿ ಇವನನ್ನು ಇತರ ಸ್ತ್ರೀಯರಲ್ಲಿ ವಿರಕ್ತನನ್ನಾಗಿ ಮಾಡುವೆನು" ಹೀಗೆ ಆಕೆಯ ಮಾತನ್ನು ಕೇಳಿ ಆ ದೇವಿಯರೂ "ಈಕೆಯ ಶರೀರವೇ ಮುಪ್ಪಿನಿಂದ ವ್ಯಾಪ್ತವಾಗಿರುವುದು. ಮನಸ್ಸು ತರುಣವಾಗಿಯೂ ಕಾಮದಿಂದ ಬಳಲಿದುದಾಗಿಯೂ ಇರುತ್ತದೆ" ಎಂದು ಶೀಘ್ರವಾಗಿ ಚೆನ್ನಾಗಿ ಹಾಸ್ಯಮಾಡಿದರು–ನಕ್ಕರು.

**ಮಾ ಹಾಸಃ ಕುಲಸೌರೂಪ್ಯಕಲಾಗುಣಯುಜಾಮಿಹ ।**
**ಸಮಪ್ರೇಮಹಲಿಪ್ರಾಪ್ತೇಃ ಕಿಮನ್ಯಜ್ಜನ್ಮನಃ ಫಲಮ್ ॥ ೬೩೪ ॥**

**ವದತೇತಿ ವದಂತೀಂ ತಾಂ ಪುನರ್ಭೋ ಜನ್ಮನಃ ಫಲಮ್ ।**
**ತವೇದಮೇವ ಚೇದಸ್ಮದ್ವಿಭುನಾ ವಿಧಿನಾ ವಯಮ್ ॥ ೬೩೫ ॥**

**ತ್ವಾಮದ್ಯ ಯೋಜಯಿಷ್ಯಾಮಃ ಪರಿಮುಕ್ತವಿಚಾರಣಮ್ ।**
**ಮಹಾದೇವೀ ಭವೇತ್ಯಾಸಾಂ ಹಾಸಬಾಣಶರವ್ಯತಾಮ್ ॥ ೬೩೬ ॥**

**ಉಪಯಾಂತೀಮಿಮಾಂ ವೀಕ್ಷ್ಯ ಕಾರುಣ್ಯಾಜ್ಜನಕಾತ್ಮಜಾ ।**
**ಕಿಮಿತ್ಯಾಕಾಂಕ್ಷಸಿ ಸ್ತ್ರೀತ್ವಂ ತ್ವಂ ಹಿತಾನವಬೋಧಿನೀ ॥ ೬೩೭ ॥**

**ಸ್ತ್ರೀತಾಮನುಭವಂತೀಭಿರತ್ರಾಮೂಭಿರನೀಪ್ಸಿತಮ್ ।**
**ಪ್ರಾಪ್ತಂ ಪ್ರಾಪ್ಯಂ ಚ ದುರ್ಬುದ್ಧೇ ಮಹಾಪಾಪಫಲಂ ಶೃಣು ॥ ೬೩೮ ॥**

"ಪರಿಹಾಸ್ಯವು ಬೇಡ. ಕುಲವನ್ನೂ ಒಳ್ಳೆಯ ರೂಪವನ್ನೂ ಕಲಾಗುಣಗಳನ್ನೂ ಪಡೆದಿರುವವರಿಗೆ ಈ ಜನ್ಮದಲ್ಲಿ ಪ್ರೇಮಸಹಿತನಾಗಿರುವ ರಾಮ–ಬಲಭದ್ರನ ಪ್ರಾಪ್ತಿಗಿಂತ ಜನ್ಮದ ಬೇರೆ ಫಲವಾವುದು ? ಹೇಳಿರಿ" ಈ ರೀತಿಯಾಗಿ ಹೇಳುತ್ತಿರುವ ಆ ಮುದುಕಿಯನ್ನು ಕುರಿತು ಮತ್ತೆ "ಎಲೌ ಮುದುಕಿಯೆ ! ನಿನಗೆ ಜನ್ಮದ ಫಲವು ಇದೇ ಆಗಿರುವುದಾದರೆ ನಾವುಗಳು ಈ ದಿವಸ ನಿನ್ನನ್ನು ನಮ್ಮ ಸ್ವಾಮಿಯೊಡನೆ ವಿಧಿಯಿಂದ ಸೇರಿಸುವೆವು. ಯೋಚನೆಯನ್ನು ಬಿಟ್ಟು ಇವನಿಗೆ ನೀನು ಮಹಾದೇವಿಯಾಗು" ಈ ರೀತಿಯಾಗಿ ಈ ದೇವಿಯರ ಹಾಸ್ಯವೆಂಬ ಬಾಣಕ್ಕೆ

ಅಲಂಘ್ಯಂ ಕೇನಚಿಚ್ಛಾತ್ರ ಪ್ರಾಯೇಣ ವಿಧಿಚೇಷ್ಟಿತಮ್ ।
ಇಹ ಜನ್ಮನಿ ಕಿಂ ಬಂಧುಸ್ತ್ವಂ ಕಿಂ ವಾ ಪರಜನ್ಮನಿ ॥ ೬೨೪ ॥

ನ ಜಾನೇ ತ್ವಾಂ ವಿಲೋಕ್ಯಾದ್ಯ ಮಮ ಸ್ನೇಹಃ ಪ್ರವರ್ಧತೇ ।
ಯದಿ ಮಜ್ಜನನೀತ್ವಂ ತ್ವಂ ಪದ್ಮನೇತ್ರೇವಬುಧ್ಯಸೇ ॥ ೬೨೫ ॥

ತ್ವಾಂ ಮೇ ಭಾವಯಿತುಂ ವಷ್ಟಿ ಸಪತ್ನೀಂ ಖಚರಾಧಿಪಃ ।
ತೇನ ಬಾಲೇ ಮೃತಿಂ ಚಾಪಿ ಯಾಹಿ ಮಾಗಾಸ್ತದೀಪ್ಸಿತಮ್ ॥ ೬೨೬ ॥

ಈ ಲೋಕದಲ್ಲಿ ವಿಧಿವ್ಯಾಪಾರವನ್ನು ಪ್ರಾಯಿಕವಾಗಿ ಯಾವನಿಂದಲೂ ಮೀರಲಾಗುವುದಿಲ್ಲ. ಈ ಜನ್ಮದಲ್ಲಿ ನೀನು ಬಂಧುವೋ ? ಅಥವಾ ಪರಜನ್ಮದಲ್ಲಿ ಬಂಧುವೋ ? ತಿಳಿಯೆನು. ಈ ದಿವಸ ನಿನ್ನನ್ನು ನೋಡಿ ನನ್ನ ಪ್ರೀತಿಯು ಹೆಚ್ಚುತ್ತದೆ. ಕಮಲನೇತ್ರೆಯೆ ! ನಾನು ತಾಯಿಯಾಗಿರುವಿಕೆಯನ್ನು (ತಾಯಿಯೆಂದು) ನೀನು ತಿಳಿಯುವೆಯಾದರೆ ಖೇಚರರಾಜನು ನಿನ್ನನ್ನು ಸವತಿಯನ್ನಾಗಿ ಭಾವಿಸುವುದಕ್ಕೆ ನನಗೆ ಹೇಳುತ್ತಾನೆ. ಆದರಿಂದ ಬಾಲೆಯೆ ! ಮರಣವನ್ನಾದರೂ ಹೊಂದು. ಅವನ ಇಷ್ಟಾರ್ಥವನ್ನು ಒಪ್ಪಬೇಡ."

ಸ್ತನಪ್ರಸ್ನುತಿಮಿತ್ಯೇವಂ ವದಂತೀ ಪ್ರಾಪದುತ್ಸುಕಾ ।
ತಸ್ಯಾಃ ಪಯೋಧರದ್ವಂದ್ವಮಭಿಷೇಕ್ತುಮಿವಾಪತತ್ ॥ ೬೨೭ ॥

ಜಲಂ ಗದ್ಗದಕಂಠಾಯಾಶ್ಚಕ್ಷುರ್ಭ್ಯಾಂ ಸ್ನೇಹಸೂಚನಮ್ ।
ಶೋಕಾನಲಪರಿಮ್ಲಾನಂ ವಕ್ತ್ರಾಬ್ಜಂ ಚಾಭವತ್ತದಾ ॥ ೬೨೮ ॥

ಈ ರೀತಿಯಾಗಿ ಹೇಳುವವಳೂ ಕುತೂಹಲವುಳ್ಳವಳೂ ಆಗಿ ಸ್ತನಗಳಿಂದ ಸ್ತನ್ಯದ ಸುರಿಯುವಿಕೆಯನ್ನು ಹೊಂದಿದಳು. ಸ್ತನ್ಯವು ಪ್ರವಿಸಿತೆಂದು ಭಾವವು. ಗದ್ಗದ ಕಂಠವುಳ್ಳವಳಾದ ಆ ಮಂಡೋದರಿಯ ಎರಡು ಸ್ತನಗಳನ್ನು ಅಭಿಷೇಕ ಮಾಡುವುದಕ್ಕೋಸ್ಕರವೋ ಎಂಬಂತೆ ಕಣ್ಣುಗಳಿಂದ ಸ್ನೇಹದ ಸೂಚನೆಯುಳ್ಳ ನೀರು ಬಿದ್ದಿತು. ಆಗ ಮುಖಕಮಲವೂ ಶೋಕವೆಂಬ ಬೆಂಕಿಯಿಂದ ಬಾಡಿದುದಾಯಿತು.

ತದ್ವೀಕ್ಷ್ಯ ಜಾನಕೀ ಸರ್ವಂ ಪ್ರಾಪ್ತಾ ಸ್ವಾಮಿವ ಮಾತರಮ್ ।
ಜಾಯತೇ ಸ್ಮಾರ್ದ್ರಹೃದಯಾ ಬಾಷ್ಪಾವಿಲವಿಲೋಚನಾ ॥ ೬೨೯ ॥

ಜಾನಕಿಯು ಅದೆಲ್ಲವನ್ನೂ ನೋಡಿ ತನ್ನ ತಾಯಿಯನ್ನು ಪಡೆದವಳಂತೆ ದ್ರವೀಭೂತವಾದ ಮನಸ್ಸುಳ್ಳವಳೂ ಕಣ್ಣೀರಿನಿಂದ ವ್ಯಾಪ್ತವಾದ ನೇತ್ರಗಳುಳ್ಳವಳೂ ಆದಳು.

ತದಭಿಪ್ರಾಯಮಾಜ್ಞಾಯ ದಶಾನನವಧೂತ್ತಮಾ ।
ಯದಿ ಸ್ವಕಾರ್ಯಸಂಸಿದ್ಧಿಮಭಿಕಾಮಯಸೇ ಭೃಶಮ್ ॥ ೬೩೦ ॥

ಕೃತಾಂಜಲಿರಹಂ ಯಾಚೇ ಗೃಹಾಣಾಹಾರಮಂಬಿಕೇ ।
ಸರ್ವಸ್ಯ ಸಾಧನಂ ದೇಹಸ್ತಸ್ಯಾಹಾರಃ ಸುಸಾಧನಮ್ ॥ ೬೩೧ ॥

ವದಂತಿ ನಿಪುಣಾಃ ಕ್ಷ್ಮಾಜೇ ಪ್ರಸವಾದಿ ಕುತೋಸತಿ ।
ಸ್ಥಿತೇ ವಪುಷಿ ರಾಮಸ್ಯ ಸ್ವಾಮಿನಸ್ತವ ವೀಕ್ಷಣಮ್ ॥ ೬೩೨ ॥

ನ ಚೇತ್ತದ್ದರ್ಶನಂ ಸಾಧ್ಯಂ ವಪುಷೈವ ಮಹತ್ತಪಃ ।
ನ ಚೇನ್ಮದ್ವಚನಂ ಗ್ರಾಹ್ಯಂ ತ್ವಯಾಹಮಪಿ ಭೋಜನಮ್ ॥ ೬೩೩ ॥

ತ್ಯಜಾಮೀತ್ಯವದತ್ಸೀತಾಪ್ಯೇತಚ್ಛ್ರುತ್ವಾವಧಾರ್ಯ ಚ ।
ಮಮಾಮಾತಾಪಿ ಮಾತೇವ ಮದ್ದುಃಖೇ ದುಃಖಿತಾಜನಿ ॥ ೬೩೪ ॥

ಇತಿ ಚಿತ್ತೇ ವಿನಮ್ಯೈತಚ್ಚರಣೌ ಸ್ನಿಗ್ಧಮೈಕ್ಷತ ।
ಮಂಜೂಷಾಸ್ಥಾಪನಾಕಾಲೇ ಮತ್ಸುತಾಯಾ ಇವೇಕ್ಷಿತಮ್ ॥ ೬೩೫ ॥

ಏತಸ್ಯಾಂ ಮಧುರಂ ಸತ್ಯಾಃ ಸಂತಾಪಯತಿ ಸರ್ವತಃ ।
ಇತಿ ಪ್ರಲಯಮಾಪನ್ನಾ ತದಾ ರಾವಣವಲ್ಲಭಾ ॥ ೬೩೬ ॥

ಆಪ್ತೈರ್ದುಃಖೇನ ತದ್ದುಃಖಾದ್ವಿನೀತಾ ಪ್ರಾವಿಶತ್ಪುರಮ್ ।
ಶಿಂಶಪಾಸ್ಥಸ್ತತೋಭ್ಯೇತ್ಯ ದೂತಃ ಪ್ಲವಗವಿದ್ಯಯಾ ॥ ೬೩೭ ॥

ಪರಾವೃತ್ಯ ಕಪೇರ್ಮೂರ್ತ್ಯಾ ಸ್ವಯಂ ನಿದ್ರಾತ್ಮಭಿದ್ರುತಾನ್ ।
ವಿಧಾಯ ರಕ್ಷಕಾನ್ ದೇವ್ಯಾಃ ಪುರಸ್ತಾತ್ಸಮವಸ್ಥಿತಃ ॥ ೬೩೮ ॥

ಆ ಸೀತಾದೇವಿಯ ಅಭಿಪ್ರಾಯವನ್ನು ಚೆನ್ನಾಗಿ ತಿಳಿದು ರಾವಣನ ಪತ್ನಿಯಾದ ಮಂಡೋದರಿಯು ಸೀತಾದೇವಿಯನ್ನು ಕುರಿತು "ತಾಯಿಯೆ ! ನೀನು ತನ್ನ ಕಾರ್ಯಸಿದ್ಧಿಯನ್ನು ಅಧಿಕವಾಗಿ ಇಚ್ಛಿಸುತ್ತಿ. ನಾನು ಕೈಜೋಡಿಸಿ ಬೇಡುತ್ತೇನೆ. ಆಹಾರವನ್ನು ಸ್ವೀಕರಿಸು. 'ಎಲ್ಲಾ ಕಾರ್ಯಕ್ಕೂ ಶರೀರವೂ ಸಾಧನವಾಗಿದೆ. ಆ ಶರೀರಕ್ಕೆ ಆಹಾರವು ಸಾಧನವಾಗಿದೆ.' ಎಂದು ಪ್ರಾಜ್ಞರು ಹೇಳುತ್ತಾರೆ. ಭೂಮಿಪುತ್ರಿಯೆ ! ಶರೀರವಿಲ್ಲದಿದ್ದರೆ ಸಕಲಕಾರ್ಯದ ಉತ್ಪತ್ತಿಯೇ ಮೊದಲಾದುದು ಯಾವುದರಿಂದುಂಟಾಗುವುದು ? ಶರೀರವಿದ್ದರೆ ನಿನ್ನ ಪತಿಯಾದ ರಾಮನ ದರ್ಶನವಾಗ ದು. ಅವನ ದರ್ಶನವು ಸಾಧ್ಯವಾಗದಿದ್ದರೆ ಶರೀರದಿಂದಲೇ ಮಹಾತಪಸ್ಸನ್ನು ಮಾಡಬಹುದು ? ನನ್ನ ಮಾತನ್ನು ನೀನು ಗ್ರಹಣಮಾಡದಿದ್ದರೆ ನಾನೂ ಊಟವನ್ನು ಬಿಡುತ್ತೇನೆ" ಎಂದು ಹೇಳಿದಳು. ಸೀತೆಯೂ ಈ ಮಾತನ್ನು ಕೇಳಿ ಧರಿಸಿ "ನನ್ನ ತಾಯಿಯಲ್ಲದಿದ್ದರೂ ತಾಯಿಯಂತೆ ನನ್ನ ದುಃಖದಲ್ಲಿ ದುಃಖಿತಳಾದಳು" ಎಂದು ಮನಸ್ಸಿನಲ್ಲಿ ಧಾರಣಮಾಡಿ ಈ ಮಂಡೋದರಿಯ ಕಾಲುಗಳಿಗೆ ನಮಸ್ಕರಿಸಿ ಪ್ರೀತಿಯಿಂದ ಕೂಡಿರುವಂತೆ ಆಕೆಯನ್ನು ನೋಡಿದಳು. ಆಗ ಮಂಡೋದರಿಯು "ಪೆಟ್ಟಿಗೆಯಲ್ಲಿ ಸ್ಥಾಪಿಸಿದ ಕಾಲದಲ್ಲಿ ನನ್ನ ಪುತ್ರಿಯ ನೋಟವಿದ್ದಂತೆ ಪತಿವ್ರತೆಯ ಮಧುರವಾದ ಈ ನೋಟವು ನನ್ನನ್ನು ಎಲ್ಲಾ ಕಡೆಯಿಂದಲೂ ಸಂತಾಪಗೊಳಿಸುತ್ತದೆ." ಈ ರೀತಿಯಾಗಿ ಆ ದುಃಖದಿಂದ ನಿಶ್ಚೇಷ್ಟತೆಯನ್ನು ಹೊಂದಿದವಳೂ ವಿನೀತಳೂ ಆಗಿ ಆಪ್ತರೊಡನೆ ದುಃಖದಿಂದ ನಗರವನ್ನು ಪ್ರವೇಶಿಸಿದಳು. ಆಮೇಲೆ ಅಗರುಗಿಡದಲ್ಲಿದ್ದ ದೂತನು ಪ್ಲವಗ ವಿದ್ಯೆಯಿಂದ ತಾನು ಕಪಿಯ ಆಕೃತಿಯಿಂದ ಪರಿವರ್ತನೆಯನ್ನು ಹೊಂದಿ ಸೀತೆಯ ಹತ್ತಿರಕ್ಕೆ ಬಂದು ನಿಂತನು.

ಪುಣಮ್ಯ ತಾಂ ಸ್ವವೃತ್ತಾಂತಂ ಸರ್ವಂ ಸಂಶ್ರಾವ್ಯ ವಾನರಃ ।
ರಾಮಸ್ವಾಮಿನಿದೇಶೇನ ಲೇಖಗರ್ಭಕರಂಡಕಮ್ ॥ ೬೩೯ ॥

ಮಯಾನೀತಮಿದಂ ದೇವೀತ್ಯಗ್ರೇಸ್ಯಾಃ ಸ ತದಕ್ಷಿಪತ್ ।
ತದ್ದೃಷ್ಟ್ವಾ ಕಿಮಯಂ ಮಾಯಾವಿಗ್ರಹೋ ರಾವಣಾಧಮಃ ॥ ೬೪೦ ॥

ಶಂಕಮಾನೇತಿ ಸಾ ವೀಕ್ಷ್ಯ ತತ್ರ ಶ್ರೀವತ್ಸಲಾಂಛನಮ್ ।
ರತ್ನಾಂಗುಲೀಯಕಂ ಚಾತ್ಮಪತಿನಾಮಾಕ್ಷರಾಂಕಿತಮ್ ॥ ೬೪೧ ॥

ಮಮೇದಮಪಿ ಭಾತ್ಯೇವ ಮಾಯೇವಾಸ್ಯ ದುರಾತ್ಮನಃ ।
ಕೋ ಜಾನಾತಿ ತಥಾಪ್ಯೇತತ್ಪತ್ರಂ ತಸ್ಯೈವ ವಾ ಭವೇತ್ ॥ ೬೪೨ ॥

ಮದ್ಭಾಗ್ಯಾದಿತಿ ನಿರ್ಭಿದ್ಯ ಮುದ್ರಾಂ ಪತ್ರಮವಾಚಯತ್ ।
ವಾಚನಾನಂತರಂ ವೀತಶೋಕಯಾ ಸ್ನಿಗ್ಧವೀಕ್ಷಯಾ ॥ ೬೪೩ ॥

ಜೀವಿತಾಹಂ ತ್ವಯಾ ಸ್ಥಾನಮಧಿತಿಷ್ಠಸಿ ಮೇ ಪಿತುಃ ।
ಇತ್ಯುಕ್ತಃ ಸೀತಯಾ ಕರ್ಣೌ ಪಿಧಾಯ ಪವನಾತ್ಮಜಃ ॥ ೬೪೪ ॥

ಮತ್ಸ್ವಾಮಿನೋ ಮಹಾದೇವೀ ಮಾತರ್ನೇಹಾನ್ಯಕಲ್ಪನಾ ।
ತ್ವಾಂ ನೇತುಂ ಮಮ ಸಾಮರ್ಥ್ಯಮದ್ಯೈವಾಸ್ತಿ ಪತಿವ್ರತೇ ॥ ೬೪೫ ॥

ನಾಸ್ತಿ ಭಟ್ಟಾರಕಸ್ಯಾಜ್ಞಾ ಸ್ವಯಮೇವ ಮಹೀಪತಿಃ ।
ಹತ್ವೈತ್ಯ ರಾವಣಂ ತಸ್ಯ ತ್ವಾಂ ನೇಷ್ಯತಿ ಸಹ ಶ್ರಿಯಾ ॥ ೬೪೬ ॥

**ತತ್ಸಾಹಸೇನ ತತ್ಕೀರ್ತಿರ್ವ್ಯಾಪ್ನೋತು ಭುವನತ್ರಯಮ್ ।**
**ತತಃ ಶರೀರಸಂಧಾರಣಾರ್ಥಮಾಹಾರಮಾಹರ ॥ ೮೪೭ ॥**

**ಭಗವತ್ಯತ್ರ ಕೋ ದೋಷೋ ರಾಜ್ಞಾ ತೇ ಸಂಗಮೋಚಿರಾತ್ ।**
**ಇತ್ಯಾಖ್ಯತ್ಸಾ ತತಸ್ತ್ಯಕ್ತ್ವಾ ವೈಮನಸ್ಯಂ ಮಹೀಭುಜಾ ॥ ೮೪೮ ॥**

**ಕಾಯಸ್ಥಿತಿಸಮಾಧಾನಂ ಚಾಭ್ಯುಪೇತ್ಯ ಕೃತತ್ವರಮ್ ।**
**ತತ್ಕಾಲೋಚಿತಕಾರ್ಯೋಕ್ತಿಕುಶಲಾ ತಂ ವ್ಯಸರ್ಜಯತ್ ॥ ೮೪೯ ॥**

ಆ ಕಪಿಯು ಸೀತೆಯನ್ನು ನಮಸ್ಕರಿಸಿ ಎಲ್ಲಾ ತನ್ನ ಸಮಾಚಾರವನ್ನು ಕೇಳಿಸಿ "ದೇವಿಯೆ ! ರಾಮಸ್ವಾಮಿಯ ಆಜ್ಞೆಯಿಂದ ನಾನು ಲೇಖಗರ್ಭಿತವಾದ ಈ ಕರಡಿಗೆಯನ್ನು ತಂದೆನು" ಎಂದು ಅದನ್ನು ಈಕೆಯ ಮುಂದಿಟ್ಟನು. ಅದನ್ನು ನೋಡಿ "ಇವನೇನು ಮಾಯಾಶರೀರವುಳ್ಳ ಅಧಮನಾದ ರಾವಣನೋ ?" ಎಂದು ಸಂದೇಹಪಡುವವಳಾದ ಆ ಸೀತೆಯು ಆ ಕರಡಿಗೆಯಲ್ಲಿ ಶ್ರೀವತ್ಸಲಾಂಛನವನ್ನೂ ತನ್ನ ಪತಿಯ ಹೆಸರಿನ ಅಕ್ಷರಗಳಿಂದ ಕೆತ್ತಲ್ಪಟ್ಟಿರುವ ರತ್ನದುಂಗುರವನ್ನೂ ನೋಡಿ " ಇದೂ ನನಗೆ ಈ ದುರಾತ್ಮನ ಮಾಯೆಯಂತೆಯೇ ತೋರುತ್ತದೆ. ಯಾವನು ಬಲ್ಲನು ? ಆದರೂ ನನ್ನ ಭಾಗ್ಯದಿಂದ ಈ ಪತ್ರವು ಆ ನನ್ನ ಪತಿದೇವನದೇ ಆಗಿದ್ದರೂ ಇರಬಹುದು" ಎಂದು ಮುದ್ರೆಯನ್ನೊಡೆದು ಪತ್ರವನ್ನೋದಿದಳು. ಓದಿದ ಬಳಿಕ ಶೋಕರಹಿತಳೂ ಪ್ರೀತಿಯುಕ್ತವಾದ ನೋಟವುಳ್ಳವಳೂ ಆದ ಸೀತೆಯು "ನಿನ್ನಿಂದ ನಾನು ಬದುಕಿದೆನು. ನೀನು ನನ್ನ ತಂದೆಯ ಸ್ಥಾನವನ್ನು ಹೊಂದಿರುತ್ತಿ" ಎಂದು ಹೇಳಲ್ಪಟ್ಟ ಪವನಸೂನುವು ಕಿವಿಗಳನ್ನು ಮುಚ್ಚಿ "ತಾಯಿಯೇ ! ನೀನು ನನ್ನ ಸ್ವಾಮಿಯ ಮಹಾದೇವಿ. ಇಲ್ಲಿ – ನನ್ನಲ್ಲಿ ಬೇರೆ ಕಲ್ಪನೆಯಿಲ್ಲ. (ತಂದೆಯ ಸ್ಥಾನದಲ್ಲಿ ಕಲ್ಪಿಸಲಾಗದೆಂದು ಭಾವವು) ಪತಿವ್ರತೆಯೆ ! ಈ ದಿವಸವೇ ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ನನಗೆ ಶಕ್ತಿಯಿದೆ. ಆದರೆ ಅದಕ್ಕೆ ಸ್ವಾಮಿಯ ಆಜ್ಞೆಯಿಲ್ಲ. ಪ್ರಭುವು ತಾನೇ ಬಂದು ರಾವಣನನ್ನು ಕೊಂದು ಅವನ ಸಂಪತ್ತಿಯೊಡನೆ ನಿನ್ನನ್ನು ಕರೆದುಕೊಂಡು ಹೋಗುವನು. ಆ ಸಾಹಸದಿಂದ ಅವನ ಕೀರ್ತಿಯು ಮೂರು ಲೋಕವನ್ನು ವ್ಯಾಪಿಸಿದುದಾಗಿರಲಿ. ಆದುದರಿಂದ ಪೂಜ್ಯಳೆ ! ಶರೀರಧಾರಣೆಗೋಸ್ಕರ ಆಹಾರವನ್ನು ತೆಗೆದುಕೋ. ಇದರಲ್ಲಿ ದೋಷವೇನು ? ರಾಮನೊಡನೆ ನಿನಗೆ ಶೀಘ್ರವಾಗಿ ಸಮಾಗಮವಾಗುವುದು" ಎಂದು ಹೇಳಿದನು. ಬಳಿಕ ಆಕೆಯು ರಾವಣನೊಡನೆ ವೈಮನಸ್ಯವನ್ನು ಬಿಟ್ಟು ಶರೀರಸ್ಥಿತಿಸಮಾಧಾನವನ್ನು–ಆಹಾರಸ್ವೀಕಾರವನ್ನು ಒಪ್ಪಿಕೊಂಡು ತತ್ಕಾಲೋಚಿತವಾದ ಕಾರ್ಯದಲ್ಲಿ ಚತುರಳಾಗಿ ಅವನನ್ನು ಶೀಘ್ರವಾಗಿ ಬಿಟ್ಟು–ಕಳುಹಿಸಿ ಕೊಟ್ಟಳು.

**ಪ್ರಣಮ್ಯ ಸೋಪಿ ತತ್ಪಾದಪಂಕಜಂ ಭಾಸ್ಕರೋದಯೇ ।**
**ಗತ್ವಾ ತತೋ ಝಟಿತ್ಯಾಪ ರಾಮಂ ಸ್ವಾಗಮನೋನ್ಮುಖಮ್ ॥ ೮೫೦ ॥**

**ವದನಾಬ್ಜಪ್ರಸಾದೇನ ಕಾರ್ಯಸಿದ್ಧಿಂ ನಿವೇದಯನ್ ।**
**ಪ್ರಣತ್ಯ ಸ್ವಾಮಿನಾ ಸಮ್ಯಕ್ಪರಿರಭ್ಯೋದಿತಾಸನಃ ॥ ೮೫೧ ॥**

**ಉಪವಿಷ್ಟೋ ಮುದಾ ತೇನ ಪೃಷ್ಟೋ ದೃಷ್ಟೇತಿ ಮತ್ಪ್ರಿಯಾ ।**
**ಸಪ್ರಪಂಚಮುದೀರ್ಯೋಚ್ಚೈರ್ವಚಸ್ತತ್ಪ್ರೀತಿಹೇತುಕಮ್ ॥ ೮೫೨ ॥**

**ನಿಸರ್ಗಾದ್ರಾವಣೋ ದೃಪ್ತಶ್ಚಕ್ರಂ ಚಾಸ್ಯತ್ಸಮುದ್ಭಯೌ ।**
**ಲಂಕಾಯಾಂ ದುರ್ನಿಮಿತ್ತಾನಿ ಚಾಸನ್ನೇತ್ಯಾಶ್ಚ ಖೇಚರಾಃ ॥ ೮೫೩ ॥**

**ಸಂತಿ ತತ್ಸೇವಕಾಃ ಸರ್ವಮೇತದಾಲೋಚ್ಯ ಮಂತ್ರಿಭಿಃ ।**
**ಜಾನಕ್ಯಾನಯನೋಪಾಯೋ ನಿಶ್ಚೇತವ್ಯೋ ಯಥಾ ತಥಾ ॥ ೮೫೪ ॥**

**ಇತೀದಂ ಚೋದಿತಂ ಕಾರ್ಯಮವದತ್ಪವನಾತ್ಮಜಃ ।**
**ತದುಕ್ತಂ ಚೇತಸಾ ಸಮ್ಯಗವಧಾರ್ಯೋರ್ಜಿತಾಶಯಃ ॥ ೮೫೫ ॥**

**ತತಃ ಸೇನಾಪತಿಂ ಪಟ್ಟಬಂಧೇನಾನಿಲನಂದನಮ್ ।**
**ಕೃತ್ವಾಧಿರಾಜ್ಯಪಟ್ಟಂ ಚ ಸುಗ್ರೀವಸ್ಯ ಮಹೀಪತಿಃ ॥ ೮೫೬ ॥**

**ಸಹ ತಾಭ್ಯಾಂ ಸಮಪ್ರಾಕ್ಷೀನ್ಮಂತ್ರಿಣಃ ಕೃತ್ಯನಿರ್ಣಯಮ್ ।**
**ತತ್ರೈವಮಂಗದೋವೋಚದ್ದೇವ ತ್ರೇಧಾ ಮಹೀಭುಜಃ ॥ ೮೫೭ ॥**

**ಲೋಭಧರ್ಮಾಸುರಾಹ್ವಾದಿವಿಜಯ್ಯಂತಾಭಿಧಾನಕಾಃ ।**
**ಪ್ರಥಮೇ ದಾನಮನ್ಯಸ್ಮಿನ್ಸಾಮಾಂತ್ಯೇ ಭೇದದಂಡನೇ ॥ ೮೫೮ ॥**

**ನಯಜ್ಞೈಃ ಕಾರ್ಯಸಿದ್ಧ್ಯರ್ಥಮಿತ್ಯುಪಾಯಃ ಪ್ರಯುಜ್ಯತೇ ।**
**ಅಂತಿಮೋ ರಾವಣಸ್ತೇಷು ನೀಚತ್ವಾತ್ಕ್ರೂರಕರ್ಮಕೃತ್ ॥ ೮೫೯ ॥**

**ಭೇದದಂಡೌ ಪ್ರಯೋಕ್ತವ್ಯೌ ತತ್ತಸ್ಮಿನ್ನೀತಿವೇದಿಭಿಃ ।**
**ಕ್ರಮಸ್ತಥಾಪಿ ನೋಲ್ಲಂಘ್ಯಃ ಸಾಮ ತಾವತ್ಪ್ರಯುಜ್ಯತಾಮ್ ॥ ೮೬೦ ॥**

ಆ ಅಣುಮಂತನೂ ಆಕೆಯ ಪಾದಕಮಲವನ್ನು ನಮಸ್ಕರಿಸಿ ಸೂರ್ಯೋದಯ ಸಮಯದಲ್ಲಿ ಅಲ್ಲಿಂದ ಶೀಘ್ರವಾಗಿ ಹೋಗಿ ತನ್ನ ಆಗಮನವನ್ನು ಇದಿರು ನೋಡುತ್ತಿದ್ದ ರಾಮನನ್ನು ಕಂಡು ಮುಖಕಮಲದ ಪ್ರಸನ್ನತೆಯಿಂದ ಕಾರ್ಯಸಿದ್ಧಿಯನ್ನು ತಿಳಿಸುವವನಾಗಿ ನಮಸ್ಕರಿಸಿ ರಾಮನಿಂದ ಚೆನ್ನಾಗಿ ಆಲಿಂಗಿಸಲ್ಪಟ್ಟು ಆಸನವನ್ನು ಸ್ವೀಕರಿಸುವಂತೆ ಹೇಳಲ್ಪಟ್ಟವನಾಗಿಯೂ ಕುಳಿತುಕೊಂಡವನಾಗಿಯೂ ರಾಮನಿಂದ ಸಂತೋಷದಿಂದ "ನನ್ನ ಪ್ರಿಯೆಯನ್ನು ನೋಡಿದೆಯಾ ?" ಎಂದು ಕೇಳಲ್ಪಟ್ಟವನಾಗಿಯೂ ರಾಮನಿಗೆ ಪ್ರೀತಿಗೆ ಕಾರಣವಾದ ಮಾತನ್ನು ಸವಿಸ್ತರವಾಗಿ ಚೆನ್ನಾಗಿ ಹೇಳಿ "ರಾವಣನು ಸ್ವಭಾವದಿಂದ ಗರ್ವಿತನಾಗಿದ್ದಾನೆ. ಚಕ್ರವು ಬೇರೆ ಉದ್ಭವಿಸಿತು. ಲಂಕೆಯಲ್ಲಿ ದುರ್ನಿಮಿತ್ತಗಳುಂಟಾಗಿವೆ. ಅವನ ಸೇವಕರಾದ ಖೇಚರರು ನಮ್ಮಿಂದ ವಶಪಡಿಸಿಕೊಳ್ಳಲ್ಪಡತಕ್ಕವರಾಗಿದ್ದಾರೆ. ಇದೆಲ್ಲವನ್ನೂ ಮಂತ್ರಿಗಳೊಡನೆ ಆಲೋಚಿಸಿ ಹೇಗಾದರೂ ಜಾನಕಿಯನ್ನು ಕರೆದುಕೊಂಡು ಬರುವ ಉಪಾಯವನ್ನು ನಿಶ್ಚಯಿಸಬೇಕು" ಈ ರೀತಿಯಾಗಿ ಆಂಜನೇಯನು ಈ ಕಾರ್ಯವನ್ನೂ ಹೇಳಿದನು. ಉಚ್ಚವಾದ ಅಭಿಪ್ರಾಯವುಳ್ಳ ರಾಮಮಹೀಪತಿಯು ಆಂಜನೇಯನು ಹೇಳಿದ ಮಾತನ್ನು ಚೆನ್ನಾಗಿ ಧಾರಣಮಾಡಿ ಬಳಿಕ ಆಂಜನೇಯನಿಗೆ ಸೇನಾಪತಿಪಟ್ಟವನ್ನೂ ಸುಗ್ರೀವನಿಗೆ ಅಧಿರಾಜ್ಯಪಟ್ಟವನ್ನೂ ಕಟ್ಟಿ ಅವರೀರ್ವರೊಡನೆ ಮಂತ್ರಿಗಳಿಗೆ ಕಾರ್ಯದ ನಿರ್ಣಯವನ್ನು ತಿಳಿಸಿದನು. ಅಲ್ಲಿ ಅಂಗದನು ರಾಮನನ್ನು ಕುರಿತು "ಸ್ವಾಮಿಯೆ ! ರಾಜರುಗಳು ಲೋಭವಿಜಯಿ, ಧರ್ಮವಿಜಯಿ, ಅಸುರವಿಜಯಿಗಳೆಂದು ಮೂರು ವಿಧವಾಗಿರುತ್ತಾರೆ. ನಯವನ್ನು ತಿಳಿದವರು ಕಾರ್ಯಸಿದ್ಧಿಗೋಸ್ಕರ ಮೊದಲನೆಯ–ಲೋಭವಿಜಯಿಯಲ್ಲಿ ದಾನೋಪಾಯವನ್ನೂ ಧರ್ಮವಿಜಯಿಯಲ್ಲಿ ಸಾಮೋಪಾಯವನ್ನೂ ಕೊನೆಯ–ಅಸುರವಿಜಯಿಯಲ್ಲಿ ಭೇದೋಪಾಯ ದಂಡೋಪಾಯಗಳನ್ನೂ ಪ್ರಯೋಗಿಸುತ್ತಾರೆ. ಅವರಲ್ಲಿ ಕ್ರೂರಕಾರ್ಯವನ್ನು ಮಾಡವವನಾದ ರಾವಣನು ನೀಚತ್ವದಿಂದ ಕೊನೆಯವನಾಗಿದ್ದಾನೆ. ಆದುದರಿಂದ ನೀತಿಜ್ಞರು ಅವನಲ್ಲಿ ಭೇದೋಪಾಯವನ್ನೂ ದಂಡೋಪಾಯವನ್ನು ಪ್ರಯೋಗಿಸಬೇಕು. ಕ್ರಮವನ್ನು ಮೀರಬಾರದು. ಆದರೂ ಸಾಮೋಪಾಯವು ಪ್ರಯೋಗಿಸಲ್ಪಡಲಿ.

**ಕಃ ಸಾಮವಿತ್ಪ್ರಯೋಕ್ತವ್ಯ ಇತ್ಯಸ್ಮಿನ್ ಸಂಪ್ರಧಾರಣೇ ।**
**ದಕ್ಷತಾದಿಗುಣೋಪೇತಾ ಬಹವಃ ಸಂತಿ ಭೂಚರಾಃ ॥ ೮೬೧ ॥**

'ಸಾಮೋಪಾಯವನ್ನು ತಿಳಿದ ಯಾವನನ್ನು ಕಳುಹಿಸಬೇಕು ?' ಎಂಬ ನಿರ್ಧಾರದಲ್ಲಿ ದಕ್ಷತೆಯೇ ಮೊದಲಾದ ಗುಣಗಳುಳ್ಳ ಭೂಚರರು ಹಲವರಿದ್ದಾರೆ.

**ಕಿಂತು ನಾಕಾಶಗಾಮಿತ್ವಸಾಮರ್ಥ್ಯಂ ತೇಷು ವಿದ್ಯತೇ ।**
**ತಸ್ಮಾತ್ಸೇನಾಪತಿಃ ಪ್ರೇಷ್ಯಸ್ತ್ವಯಾಯಂ ನೂತನಃ ಕೃತಃ ॥ ೮೬೨ ॥**

**ದೃಷ್ಟಮಾರ್ಗಃ ಪರಾಧೃಷ್ಯಃ ಸಿದ್ಧಕಾರ್ಯಃ ಶ್ರುತಾಗಮಃ ।**
**ಜಾತ್ಯಾದಿವಿದ್ಯಾಸಂಪನ್ನಃ ಸ್ಯಾದಸ್ಮಾತ್ಕಾರ್ಯನಿರ್ಣಯಃ ॥ ೮೬೩ ॥**

ಆದರೆ ಅವರುಗಳಲ್ಲಿ ಆಕಾಶಗಮನಸಾಮರ್ಥ್ಯವಿಲ್ಲ. ಆದುದರಿಂದ ಹೊಸದಾಗಿ ಮಾಡಲ್ಪಟ್ಟ ಸೇನಾಪತಿಯೂ ದಾರಿಯನ್ನು ಕಂಡವನೂ ಬೇರೆಯವರಿಂದ ನಿಗ್ರಹಿಸಲ್ಪಡದವನೂ ಕಾರ್ಯಸಿದ್ಧಿಯುಳ್ಳವನೂ ಆಗಮವನ್ನು ಕೇಳಿರುವವನೂ ಜಾತಿವಿದ್ಯೆಯೇ ಮೊದಲಾದ ವಿದ್ಯಾಸಂಪನ್ನನೂ ಆದ ಈ ಆಂಜನೇಯನನ್ನು ನೀನು ಕಳುಹಿಸಲು ಯೋಗ್ಯನಾಗಿದ್ದಾನೆ. ಇವನಿಂದ ಕಾರ್ಯನಿರ್ಣಯವಾಗುವುದು.

ಇತ್ಯೇತದುಪದೇಶೇನ ಮನೋವೇಗಾಭಿಧಾನಕಮ್ ।
ವಿಜಯಂ ಕುಮುದಾಖ್ಯಾನಂ ಖ್ಯಾತಂ ರವಿಗತಿಂ ಹಿತಮ್ ॥ ೮೬೪ ॥

ಸಹಾಯೀಕೃತ್ಯ ಸಂಪೂಜ್ಯ ಕುಮಾರ ಭವತೋಪರಃ ।
ಕಾರ್ಯವಿತ್ಕಾರ್ಯಕೃಚ್ಚಾಸ್ತಿ ನಾತ್ರೇತಿ ಶ್ಲಾಘಯನ್ನೃಪಃ ॥ ೮೬೫ ॥

ಪವಮಾನಾತ್ಮಜಂ ವಾಚ್ಯಸ್ತ್ವಯೈವಂ ಸ ವಿಭೀಷಣಃ ।
ಅಥ ತ್ವಮೇವ ಧರ್ಮಜ್ಞಃ ಪ್ರಾಜ್ಞಃ ಕಾರ್ಯವಿಪಾಕವಿತ್ ॥ ೮೬೬ ॥

ಹಿತೋ ಲಂಕೇಶ್ವರಾಯಾಸ್ಮೈ ಸೂರ್ಯವಂಶಾಗ್ರಿಮಾಯ ಚ ।
ಸೀತಾಹರಣಮನ್ಯಾಯ್ಯಮಾಕಲ್ಪಮಯಶಸ್ಕರಮ್ ॥ ೮೬೭ ॥

ಅಪಥ್ಯಮಿತಿ ಸಂಶ್ರಾವ್ಯ ರಾವಣಂ ರತಮೋಹಿತಮ್ ।
ಮೋಚನೀಯಾ ತ್ವಯಾ ಸೀತಾ ತಥಾ ಸತಿ ಭವತ್ಕುಲಮ್ ॥ ೮೬೮ ॥

ತ್ವಯೈವ ರಕ್ಷಿತಂ ಪಾಪಾದಪಾಯಾದಪವಾದತಃ ।
ಇತಿ ಸಾಮೋಕ್ತಿಭಿಸ್ತಸ್ಮಿನ್ಸ್ವೀಕೃತೇ ಸ್ವೀಕೃತಾ ದ್ವಿಷಃ ॥ ೮೬೯ ॥

ಗೋಮಿನ್ಯಾ ಸಹ ಸೀತಾಪಿ ವೇತ್ಸಿ ದೂತೋತ್ತಮಾಪರಮ್ ।
ತ್ವಮೇವ ಕೃತ್ಯಂ ನಿರ್ಣೀಯ ದ್ವಿಡ್ವೃತ್ತಂ ಶೀಘ್ರಮೇಹಿ ಮಾಮ್॥೮೭೦ ॥

ಇತ್ಯಮುಂಚತ್ಸಹಾಯೈಸ್ತೈಃ ಸ ಕುಮಾರಃ ಪ್ರಣಮ್ಯ ತಮ್ ।
ಗತ್ವಾಪ್ಯ ಸಹಸಾ ಲಂಕಾಂ ಜ್ಞಾತೋ ವೀಕ್ಷ್ಯ ವಿಭೀಷಣಮ್ ॥ ೮೭೧ ॥

ರಾಮಭಟ್ಟಾರಕೇಣಾಹಂ ಪ್ರೇಷಿತೋ ಭವದಂತಿಕಮ್ ।
ಇತಿ ಸಪ್ರಶ್ರಯಂ ಸರ್ವಂ ತದುಕ್ತಂ ತಮಜೀಗಮತ್ ॥ ೮೭೨ ॥

ಈ ಪ್ರಕಾರವಾದ ಉಪದೇಶದಿಂದ ದೊರೆಯು ಪವನಸುತನನ್ನು ಸತ್ಕರಿಸಿ ಮನೋವೇಗನೆಂಬವನನ್ನೂ ವಿಜಯನನ್ನೂ ಪ್ರಖ್ಯಾತನಾದ ಕುಮುದನೆಂಬವನನ್ನೂ ಹಿತಕಾರಿಯಾದ ರವಿಗತಿಯನ್ನೂ ಅವನಿಗೆ ಸಹಾಯಕರನ್ನಾಗಿ ಮಾಡಿ "ಪವನಕುಮಾರನೆ! ನಿನಗಿಂತ ಕಾರ್ಯವನ್ನು ತಿಳಿದವನೂ ಕಾರ್ಯವನ್ನು ಮಾಡುವವನೂ ಬೇರೆಯಾವನೂ ಇಲ್ಲ" ಎಂದು ಶ್ಲಾಘಿಸುವವನಾಗಿ ಬಳಿಕ ಅಣುಮಂತನನ್ನು ಕುರಿತು "ಆ ವಿಭೀಷಣನಿಗೆ ನೀನು 'ನೀನೇ ಧರ್ಮಜ್ಞನೂ ಪ್ರಾಜ್ಞನೂ ಕಾರ್ಯಪರಿಪಾಕವನ್ನು ತಿಳಿದವನೂ ಈ ಸೂರ್ಯವಂಶಶ್ರೇಷ್ಠನಾದ ಲಂಕೇಶ್ವರನಿಗೆ ಹಿತಕಾರಿಯೂ ಆಗಿರುತ್ತಿ. ಸೀತಾಪಹರಣವು ಅನ್ಯಾಯವೂ ಕಲ್ಪಾಂತದವರೆಗೆ ಅಪಯಶಸ್ಸನ್ನುಂಟುಮಾಡುವುದೂ ಅಹಿತಕಾರಿಯೂ ಆಗಿರುತ್ತದೆಂದು ಸುರತ–ಕ್ರೀಡಾಮೋಹಿತನಾದ ರಾವಣನಿಗೆ ತಿಳಿಸಿ ನೀನು ಸೀತೆಯನ್ನು ಬಿಡಿಸಬೇಕು. ಹಾಗಾದರೆ ನಿನ್ನ ವಂಶವು ನಿನ್ನಿಂದಲೇ ಪಾಪದಿಂದಲೂ ಅಪಾಯದಿಂದಲೂ ಅಪವಾದದಿಂದಲೂ ರಕ್ಷಿಸಿದಂತಾಗುವುದು' ಈ ರೀತಿಯಾಗಿ ಸಾಮವಚನಗಳಿಂದ ಹೇಳಬೇಕು. ಅವನು ಸ್ವೀಕರಿಸಿದರೆ(ವಶೀಕೃತನಾದರೆ) ಶತ್ರುಗಳೂ ವಶೀಕೃತರಾದಂತೆ. ಪೃಥಿವಿಯೊಡನೆ ಸೀತೆಯೂ ವಶೀಕೃತಳಾದಂತೆ. ದೂತೋತ್ತಮನೆ! ಇತರ ಕಾರ್ಯವನ್ನು ನೀನೇ ತಿಳಿಯುತ್ತಿ. ಶತ್ರುವಿನ ಸಮಾಚಾರವನ್ನು ನಿರ್ಣಯಿಸಿ ಶೀಘ್ರವಾಗಿ ನನ್ನ ಬಳಿಗೆ ಬಾ" ಈ ರೀತಿಯಾಗಿ ಹೇಳಿ ಆ ಸಹಾಯಕರೊಡನೆ ಬಿಟ್ಟನು. ಆ ಪವನಕುಮಾರನು ರಾಮನಿಗೆ ನಮಸ್ಕರಿಸಿ ಹೋಗಿ ಶೀಘ್ರವಾಗಿ ಲಂಕೆಯನ್ನು ಸೇರಿ ಪೂರ್ವಪರಿಚಯವುಳ್ಳವನಾಗಿ ವಿಭೀಷಣನನ್ನು ನೋಡಿ "ರಾಮಸ್ವಾಮಿಯು ನನ್ನನು ನಿನ್ನ ಬಳಿಗೆ ಕಳುಹಿಸಿದನು" ಈ ರೀತಿಯಾಗಿ ರಾಮನು ಹೇಳಿದ್ದ ಎಲ್ಲಾ ಮಾತುಗಳನ್ನು ವಿನಯದೊಡನೆ ವಿಭೀಷಣನಿಗೆ ತಿಳಿಸಿದನು.

ಇದಂ ಚ ಸ್ವಯಮಾಹಾಸೌ ಸ್ವಾಮಿಸಂದೇಶಹಾರಿಣಮ್ ।
ಪ್ರಾಪಯ ತ್ವಂ ಖಗಾಧೀಶಂ ಮಾಂ ತಸ್ಮೈ ಹಿತಕಾರಿಣಮ್ ॥ ೮೭೩ ॥

ರಾಮಾಭಿಪ್ರೇತಕಾರ್ಯಸ್ಯ ತ್ವಯಾ ಸಿದ್ಧಿಸ್ತಥಾ ಸತಿ ।
ಕಾರ್ಯಮೇತತ್ತು ಮದ್ದ್ವಾರಾದ್ವಿಧಾತುಂ ಭವತೋ ಭವೇತ್ ॥ ೮೭೪ ॥

ಈ ಆಂಜನೇಯನು ತನ್ನ ಪರವಾಗಿ ವಿಭೀಷಣನನ್ನು ಕುರಿತು "ಸ್ವಾಮಿಯ ಸಂದೇಶವನ್ನೊಯ್ಯುವವನೂ ರಾವಣನಿಗೆ ಹಿತವನ್ನು ಮಾಡುವವನೂ ಆದ ನನ್ನನ್ನು ನೀನು ಆ ರಾವಣನ ಬಳಿಗೆ ಕರೆದುಕೊಂಡು ಹೋಗು. ರಾಮನ ಅಭೀಷ್ಟಕಾರ್ಯದ ಸಿದ್ಧಿಯು ನಿನ್ನಿಂದಾಗುವುದು. ಹಾಗಾದರೆ ಈ ಕಾರ್ಯವು ನಿನ್ನ ದೆಸೆಯಿಂದ ನನ್ನ ಮೂಲಕವಾಗಿ ಮಾಡುವುದಕ್ಕೆ ಯೋಗ್ಯವಾಗುವುದು.

ತ್ವಯೋಕ್ತೋಪಿ ನ ಚೇತ್ಸೀತಾಂ ವಿಮುಂಚತಿ ಸ ಮಂದಧೀಃ ।
ನಾಪರಾಧಸ್ತವಾಪುಣ್ಯಃ ಸ್ವಯಮೇವ ವಿನಂಕ್ಷ್ಯತಿ ॥ ೮೭೫ ॥

ನಿನ್ನಿಂದ ಹೇಳಲ್ಪಟ್ಟವನಾದರೂ ಆ ಮಂದಬುದ್ಧಿಯು ಸೀತೆಯನ್ನು ಬಿಡದಿದ್ದರೆ ನಿನ್ನ ತಪ್ಪಿಲ್ಲ. ಪುಣ್ಯಹೀನನಾದ ಅವನು ತಾನೇ ವಿನಾಶವನ್ನು ಹೊಂದುವನು.

ವರ್ಧಮಾನಶ್ರಿಯಂ ದೃಷ್ಟ್ವಾ ರಾಮಂ ತತ್ಪುಣ್ಯಚೋದಿತಮ್ ।
ಇತಂ ದ್ವಿತಯಲೋಕೈಕಹಿತಂ ಯಾಯಾಮಧೀಶ್ವರಮ್ ॥ ೮೭೬ ॥

ಇತಿ ರಕ್ತಂ ಸ್ವಯಂ ಭೂಯೋ ಧರಣೀಗೋಚರಂ ಬಲಮ್ ।
ಪಂಚಾಶತ್ಕೋಟಿಸಂಯುಕ್ತಂ ಲಕ್ಷಾ ಚತುರಶೀತಿಕಮ್ ॥ ೮೭೭ ॥

ಸಾರ್ಧಂ ತ್ರಿಕೋಟಿಸಂಖ್ಯಾನಂ ಖೇಚರಾನೀಕಮುಷ್ಯದಃ ।
ಬಲೇನೈತೇನ ಸಂಪ್ರಾಪ್ಯ ಸ ನೃಸಿಂಹಃ ಸಲಕ್ಷ್ಮಣಃ ॥ ೮೭೮ ॥

ಹರ್ತುಮದ್ಯೈವ ಸೀತಾಂ ಸ್ವಾಂ ಸೀತಾಂ ಚ ಖಚರೇಶಿನಃ ।
ಸಮರ್ಥಃ ಕಿಂತು ದಾಕ್ಷಿಣ್ಯಂ ವಿಭೋರ್ನೈಸರ್ಗಿಕಂ ತ್ವಯಿ ॥ ೮೭೯ ॥

ತತೋಹಂ ಪ್ರೇಷಿತಸ್ತೇನ ತ್ವಂ ಚ ಕಿಂ ವೇತ್ಸಿ ನೇದೃಶಮ್ ।
ಇತಿ ತದ್ವಚನಂ ಶ್ರುತ್ವಾ ಕಾರ್ಯವಿದ್ರಾವಣಾನುಜಃ ॥ ೮೮೦ ॥

ತದಾನೀಮೇವ ತಂ ನೀತ್ವಾ ದಶಾನನಮಜಿಜ್ಞಪತ್ ।
ವಚೋಹರೋಯಂ ರಾಮೇಣ ಪ್ರಹಿತೋ ದೇವಸನ್ನಿಧಿಮ್ ॥ ೮೮೧ ॥

ಇತ್ಯಸಾವಪಿ ಯೋಗ್ಯೇನ ಕ್ರಮೇಣಾಲೋಕ್ಯ ರಾವಣಮ್ ।
ತದಾದಿಷ್ಟಾಸನೇ ಸ್ಥಿತ್ವಾ ಪ್ರಾಭೃತಾರ್ಪಣಪೂರ್ವಕಮ್ ॥ ೮೮೨ ॥

ಶ್ರವ್ಯೈರ್ಹಿತಮಿತಾಲಾಪೈಃ ಶೃಣು ದೇವೇತಿ ಬೋಧಯನ್ ।
ಪ್ರಾಜ್ಞೋ ವಿಜ್ಞಾಪಯಾಮಾಸ ಪುಸ್ಪಷ್ಟಮಧುರಧ್ವನಿಃ ॥ ೮೮೩ ॥

ಅಯೋಧ್ಯಾಮಧುನಾಧ್ಯಾಸ್ಯ ವರ್ಧಮಾನೋ ನಿಜೌಜಸಾ ।
ಆತ್ಮಾಭಿಗಾಮಿಕಪ್ರಜ್ಞೋತ್ಸಾಹಾದಿಗುಣಭೂಷಣಃ ॥ ೮೮೪ ॥

ರಾಘವಃ ಕುಶಲೀ ದೇವಂ ತ್ರಿಖಂಡಾಖಂಡನಾಯಕಮ್ ।
ಕುಶಲೋದಂತಸಂಪ್ರಶ್ನಪೂರ್ವಮಿತ್ಥಮಭಾಷತ ॥ ೮೮೫ ॥

ಸೀತಾನ್ಯಸ್ಯೇತಿ ನೀತಾಸಾವಸ್ಮದೀಯೇತ್ಯಜಾನತಾ ।
ಕಿಂ ಜಾತಂ ನಾಸ್ತಿ ದೋಷೋ ದ್ರಾಕ್ ಪ್ರೇಷಣೀಯಾ ಮನೀಷಿಣಾ ॥

ನ ಚೇದ್ವಿನಮಿವಂಶೈಕಭೂಷಣಸ್ಯ ಮಹಾತ್ಮನಃ ।
ನಾನುರೂಪಮಿದಂ ಕರ್ಮ ಧರ್ಮಶರ್ಮವಿಘಾತಕೃತ್ ॥ ೮೮೬ ॥

ಕುಲಪುತ್ರಮಹಾಂಭೋಧೇರ್ನ ಯುಕ್ತಂ ಮಲಧಾರಣಮ್ ।
ಸೀತಾವಿಮೋಚನೋತ್ತುಂಗತರಂಗೈಃ ಕ್ಷಿಪ್ಯತಾಂ ಬಹಿಃ ॥ ೮೮೭ ॥

ವೃದ್ಧಿಹೊಂದುತ್ತಿರುವ ಸಂಪತ್ತಿಯುಳ್ಳ ರಾಮನನ್ನು ನೋಡಿ 'ಅವನ ಪುಣ್ಯದಿಂದ ಪ್ರೇರಿತವಾದ ಇಹಪರಲೋಕಗಳ ಮುಖ್ಯಹಿತವನ್ನು ಹೊಂದಿರುವ ಪ್ರಭುವನ್ನಾಗಿ ಪಡೆಯುವೆನು' ಎಂದು ಐವತ್ತುಕೋಟಿಯೂ ಎಂಬತ್ತುನಾಲ್ಕು ಲಕ್ಷ ಭೂಚರಸೈನ್ಯವೂ ಮೂರುವರೆ ಕೋಟಿ ಖೇಚರಸೈನ್ಯವೂ ತಾನೇ ಅನುರಾಗ ವುಳ್ಳುದಾಗಿ ಬಂದು ಸೇರಿದೆ. ಈ ಸೈನ್ಯದೊಡನೆ ಆ ಪುರುಷಶ್ರೇಷ್ಠನು ಲಕ್ಷ್ಮಣ ಸಹಿತನಾಗಿ ಈ ಲಂಕಾನಗರಕ್ಕೆ ಬಂದು ಈ ದಿವಸವೇ ತನ್ನ ಸೀತೆಯನ್ನೂ ಖೇಚರಾಧಿಪತಿಯ ಲಕ್ಷ್ಮಿಯನ್ನೂ ಅಪಹರಿಸುವುದಕ್ಕೆ ಸಮರ್ಥನಾಗಿದ್ದಾನೆ. ಆದರೆ ಪ್ರಭುವೆ ! ನಿನ್ನಲ್ಲಿ ಸ್ವಾಭಾವಿಕವಾದ ದಾಕ್ಷಿಣ್ಯವಿದೆ. ಆದುದರಿಂದ ರಾಮನು ನನ್ನನ್ನು ಕಳುಹಿಸಿದ್ದಾನೆ. ನೀನೂ ಇಂತಹ ವಿಷಯವನ್ನು ತಿಳಿಯುವುದಿಲ್ಲವೆ ?'' ಎಂದು ಹೇಳಿದನು. ಅವನ ಮಾತನ್ನು ಕೇಳಿ ಕಾರ್ಯಜ್ಞನಾದ ರಾವಣನ ತಮ್ಮನು ಆಗಲೇ ಆಂಜನೇಯನನ್ನು ಕರೆದುಕೊಂಡು ಹೋಗಿ ರಾವಣನಿಗೆ ''ರಾಮನು ಈ ದೂತನನ್ನು ಸ್ವಾಮಿಯ (ನಿನ್ನ) ಸನ್ನಿಧಿಗೆ ಕಳುಹಿಸಿದ್ದಾನೆ'' ಎಂದು ವಿಜ್ಞಾಪಿಸಿದನು. ಈ ಅಣುಮಂತನೂ ಯೋಗ್ಯವಾದ ಕ್ರಮದಿಂದ ರಾವಣನನ್ನು ನೋಡಿ ಕೈಗಾಣಿಕೆಯನ್ನೊಪ್ಪಿಸಿ ಅವನಿಂದ ಆಜ್ಞಾಪಿಸಲ್ಪಟ್ಟ ಆಸನದಲ್ಲಿ ಕುಳಿತು ಕೇಳುವುದಕ್ಕೆ ಯೋಗ್ಯವಾದ ಹಿತಮಿತವಚನಗಳಿಂದ ''ಸ್ವಾಮಿಯೆ ! ಕೇಳು'' ಎಂದು ಬೋಧಿಸುವವನಾದ ಆ ಪ್ರಾಜ್ಞನು–ಆಂಜನೇಯನು ಬಹುಸ್ಪಷ್ಟವಾದ ಮಧುರ ಶಬ್ದವುಳ್ಳವನಾಗಿ ರಾವಣನನ್ನು ಕುರಿತು ''ಅಯೋಧ್ಯಾನಗರದಲ್ಲಿದ್ದು ತನ್ನ ಪ್ರಭಾವದಿಂದ ವೃದ್ಧಿಯನ್ನು ಹೊಂದುತ್ತಿರುವವನೂ ತನ್ನ ಉನ್ನತಿಶೀಲವಾದ ಪ್ರಜ್ಞೆಯೇ ಮೊದಲಾದ ಗುಣಗಳೆಂಬ ಆಭರಣಗಳುಳ್ಳವನೂ ಆದ ರಾಘವನು ಕುಶಲನಾಗಿದ್ದಾನೆ. ತ್ರಿಖಂಡಗಳ ಅಖಂಡಪ್ರಭುವಾದ ಸ್ವಾಮಿಯನ್ನು–ನಿನ್ನನ್ನು ಕುರಿತು ಕುಶಲವಾರ್ತೆಯ ಪ್ರಶ್ನಪೂರ್ವಕವಾಗಿ ಈ ರೀತಿಯಾಗಿ ಹೇಳಿದನು–ಈ ಸೀತೆಯು ನನ್ನವಳೆಂದು ತಿಳಿಯದ ರಾವಣನು ಬೇರೆಯವನ ಪತ್ನಿಯೆಂದು ತಿಳಿದು ಒಯ್ದನು. ಏನಾಯಿತು ? ದೋಷವಿಲ್ಲ. ಪ್ರಾಜ್ಞನು–ಅವನು ಶೀಘ್ರವಾಗಿ ಆಕೆ ಯನ್ನು ಕಳುಹಿಸಿಕೊಡಬೇಕು. ಹಾಗೆ ಕಳುಹಿಸಿಕೊಡದಿದ್ದರೆ ವಿನಮಿಯ ವಂಶಕ್ಕೆ ಮುಖ್ಯಭೂಷಣನಾದ ಮಹಾತ್ಮನಿಗೆ– ರಾವಣನಿಗೆ ಧರ್ಮವನ್ನೂ ಸುಖವನ್ನೂ ವಿಘಾತಮಾಡುವ ಈ ಕಾರ್ಯವು ಅನುರೂಪವಾದುದಲ್ಲ. ಕುಲಪುತ್ರನೆಂಬ ಮಹಾಸಮುದ್ರಕ್ಕೆ ಮಲವನ್ನು ಧರಿಸುವಿಕೆಯು ಯುಕ್ತವಾದುದಲ್ಲ. ಅದು ಸೀತೆಯನ್ನು ಬಿಡುವಿಕೆಯೆಂಬ ಉನ್ನತವಾದ ಅಲೆಗಳಿಂದ ಹೊರಕ್ಕೆ ಚೆಲ್ಲಲ್ಪಡಲಿ'' ಎಂದು ವಿಜ್ಞಾಪಿಸಿದನು.

**ಇತಿ ತತ್ಪ್ರೋಕ್ತಮಾಕರ್ಣ್ಯ ಪ್ರತ್ಯುವಾಚ ಖಗೇಶ್ವರಃ ।**
**ಸೀತಾಂ ನಾನವಬುಧ್ಯಾಹಮಾನೈಷಂ ಕಿಂತು ಭೂಭುಜಃ ॥ ೬೮೯ ॥**

**ಮಮೈವ ಸರ್ವರತ್ನಾನಿ ಸ್ತ್ರೀರತ್ನಂ ತು ವಿಶೇಷತಃ ।**
**ಪ್ರೇಷಯತ್ವಿತಿ ಕಿಂ ವಕ್ತುಂ ಯುಕ್ತಂ ಮಾಂ ತೇ ಮಹೀಪತೇಃ ॥ ೬೯೦ ॥**

**ದರ್ಪಿಷ್ಠಾನಾಮಸೌ ಪ್ರಷ್ಠೋ ಜ್ಯೇಷ್ಠತಾಂ ಮೇ ನ ಬುಧ್ಯತೇ ।**
**ಚಕ್ರೋತ್ಪತ್ತಿರ್ನ ಕಿಂ ತಸ್ಯ ಶ್ರವಣೋಪಾಂತವರ್ತಿನೀ ॥ ೬೯೧ ॥**

**ಭೂನಭಶ್ಚರಭೂಪಾಲಮೌಲಿಮಾಲಾಸ್ಥಲಾಂಬುಜಮ್ ।**
**ಮತ್ಪಾದದ್ವಂದ್ವಮಿತ್ಯೇತದಾಗೋಪಾಲಂ ಪ್ರಸಿದ್ಧಿಮತ್ ॥ ೬೯೨ ॥**

**ಸೀತಾ ಮಮೇಯಮಿತ್ಯಲ್ಪಮೇತದಾಖೇಚರಾಚಲಾತ್ ।**
**ಸೀತಾ ನಾನ್ಯಸ್ಯ ತಾಂ ಚಾಸೌ ಜಿಘೃಕ್ಷುರಿವ ವಿಕ್ರಮೀ ॥ ೬೯೩ ॥**

**ಇಮಾಂ ಚ ತಾಂ ಚ ಯದ್ಯಸ್ತಿ ಶಕ್ತಿರತ್ರೈತ್ಯ ರಾಘವಃ ।**
**ಜಿತ್ವಾ ಮಾಂ ವಿಗ್ರಹೇಣಾಶು ಗೃಹ್ಣೀಯಾತ್ಕೇನ ವಾರ್ಯತೇ ॥ ೬೯೪ ॥**

ಈ ರೀತಿಯಾಗಿ ಆ ಪವನಪುತ್ರನು ಹೇಳಿದ ಮಾತನ್ನು ಕೇಳಿ ಖೇಚರೇಶ್ವರ–ರಾವಣನು ''ನಾನು ಸೀತೆಯನ್ನು ತಿಳಿಯದೆ ತರಲಿಲ್ಲ. ಆದರೆ ಸಮಸ್ತರತ್ನಗಳೂ ದೊರೆಯಾದ ನನ್ನವೇ ಆಗಿರುತ್ತವೆ. ಸ್ತ್ರೀರತ್ನವಾದರೋ ವಿಶೇಷವಾಗಿ ನನ್ನದೇ ಆಗಿದೆ. 'ಕಳುಹಿಸಿಕೊಡಲಿ' ಎಂದು ನನಗೆ ಹೇಳುವುದು ನಿನ್ನ ದೊರೆಗೆ ಯುಕ್ತವಾದುದೇ ? ಅಹಂಕಾರಿಗಳಲ್ಲಿ ಮುಖ್ಯನಾದ ಇವನು ನನ್ನ ಹಿರಿತನವನ್ನು ತಿಳಿಯನು. ಚಕ್ರದ ಉತ್ಪತ್ತಿಯ ವಾರ್ತೆಯು ಅವನ ಕಿವಿಯ ಸಮೀಪದಲ್ಲಿಲ್ಲವೋ ? ನನ್ನ ಚರಣಯುಗಲವು ಭೂಚರ ಖೇಚರರಾಜರುಗಳ ಕಿರೀಟಗಳ ಮಾಲೆಗಳಿಗೆ ನೆಲದಾವರೆಯೆಂಬುದು ದನಕಾಯುವವನವರೆಗೂ ಪ್ರಸಿದ್ಧಿಯುಳ್ಳುದಾಗಿದೆ. ವಿಜಯಾರ್ಧಪರ್ವತದವರೆಗೂ ರಾಜ್ಯಲಕ್ಷ್ಮಿಯು ಬೇರೆ ಯವನಿಗಿಲ್ಲವೆನ್ನುವಾಗ ಈ ಸೀತೆಯು ನನ್ನವಳೆಂಬುದಿದು ಬಹುಸ್ವಲ್ಪ ವಿಷಯ. ಆ ಸೀತೆಯನ್ನೂ ಇವನು ಗ್ರಹಣಮಾಡಬೇಕೆಂಬ ಇಚ್ಛೆಯುಳ್ಳವನಂತಿರುತ್ತಾನೆ. ಶಕ್ತಿಯಿದ್ದರೆ ಪರಾಕ್ರಮಿಯಾದ ರಾಘವನು ಇಲ್ಲಿ ಬಂದು ಯುದ್ಧದಿಂದ ನನ್ನನ್ನು ಜಯಿಸಿ ಶೀಘ್ರವಾಗಿ ಈ ಸೀತೆಯನ್ನೂ ಆ ರಾಜ್ಯಲಕ್ಷ್ಮಿಯನ್ನೂ ಗ್ರಹಣಮಾಡಲಿ. ಯಾವನು ಅಡ್ಡಿಮಾಡುತ್ತಾನೆ ?''

**ಇತಿ ತನ್ನಾಶಸಂಸೂಚಿವಚನಂ ದೈವಚೋದಿತಮ್ ।**
**ಶ್ರುತ್ವಾ ರಾಮೋದಯಾಪಾದಿನಿಮಿತ್ತಂ ಶುಭಸೂಚಕಮ್ ॥ ೬೯೫ ॥**

**ಇದಮೇವಾಸ್ತು ನೋಽಭೀಷ್ಟಮಿತಿ ಮತ್ವಾನಿಲಾತ್ಮಜಃ ।**
**ವ್ಯಾಜಹಾರ ದುರಾತ್ಮಾನಂ ದುಶ್ಚರಿತ್ರಂ ದಶಾನನಮ್ ॥ ೬೯೬ ॥**

**ಅನ್ಯಾಯಸ್ಯ ನಿಷೇದ್ಧಾ ತ್ವಂ ನಿಷೇಧ್ಯಶ್ಚೇನ್ನಿಷೇದ್ಧರಿ ।**
**ವಾಡವಾಗ್ನಿರಿವಾಂಭೋಧೌ ಕೇನ ವಾ ಸ ನಿಷಿಧ್ಯತೇ ॥ ೬೯೭ ॥**

ಈ ರೀತಿಯಾಗಿ ದೈವದಿಂದ ಪ್ರೇರಿತವೂ ಆ ರಾವಣನ ನಾಶವನ್ನು ಸೂಚಿಸುವುದೂ ಆದ ವಚನವನ್ನು ಕೇಳಿ ಆಂಜನೇಯನು ''ಶುಭಸೂಚಕವೂ ರಾಮನ ಉನ್ನತಿಯನ್ನುಂಟುಮಾಡುವುದೂ ಆದ ನಿಮಿತ್ತವು ಇದೇ ನಮಗೆ ಅಭೀಷ್ಟವಾಗಿರಲಿ'' ಎಂದು ತಿಳಿದು ದುರಾತ್ಮನೂ ದುರಾಚಾರಿಯೂ ಆದ ದಶಮುಖನನ್ನು ಕುರಿತು ನೀನು ಅನ್ಯಾಯವನ್ನು ನಿಷೇಧಿಸುವವನು. ನಿಷೇಧಿಸುವ ವನೇ ನಿಷೇಧಿಸಲ್ಪಡತಕ್ಕವನಾದರೆ, ಸಮುದ್ರದಲ್ಲಿ ವಡವಾಗ್ನಿಯಂತೆ, ಅಂಥವನನ್ನು ಯಾವನು ನಿಷೇಧಿಸುವನು ?

**ಅಭೇದ್ಯೇಯಮಹಂ ಖ್ಯಾತೋ ರಾಘವಃ ಸಿಂಹವಿಕ್ರಮಃ ।**
**ಅಕೀರ್ತಿರ್ನಿಷ್ಫಲಾಚಂದ್ರಮಿತಿ ಸ್ಮರ್ತುಂ ತವೋಚಿತಮ್ ॥ ೬೯೮ ॥**

ಈ ಸೀತೆಯು ಅಭೇದ್ಯಳು. ನಾನು ಪ್ರಖ್ಯಾತನು. ರಾಘವನು ಸಿಂಹ ಪರಾಕ್ರಮಿಯು. ನಿಷ್ಫಲವಾದ ಅಪಕೀರ್ತಿಯು ಚಂದ್ರನಿರುವವರೆಗಿರುವುದು. ಈ ರೀತಿಯಾಗಿ ನಿನಗೆ ಸ್ಮರಿಸುವುದಕ್ಕೆ ಉಚಿತವಾಗಿದೆ.

**ಮಯಾ ಬಂಧುತ್ವಸಂಬಂಧಾತ್ತವ ಪಥ್ಯಮುದಾಹೃತಮ್ ।**
**ಪ್ರಭೋ ಗೃಹಾಣ ಚೇತ್ತುಭ್ಯಂ ರೋಚತೇ ಚೇನ್ನ ಮಾಗ್ರಹೀಃ ॥ ೬೯೯ ॥**

ಪ್ರಭುವೇ ! ಬಂಧುತ್ವಸಂಬಂಧದಿಂದ ನಾನು ನಿನಗೆ ಹಿತವಾದ ವಿಷಯವನ್ನು ಹೇಳಿದೆನು. ನಿನಗೆ ಇಷ್ಟವಾದರೆ ಪರಿಗ್ರಹಿಸು. ಇಲ್ಲವಾದರೆ ಪರಿಗ್ರಹಿಸಬೇಡ'' ಎಂದು ಹೇಳಿದನು.

**ಇತಿ ದೂತವಚಃ ಶ್ರುತ್ವಾ ಪೌಲಸ್ತ್ಯಃ ಪುನರಬ್ರವೀತ್ ।**
**ರತ್ನಂ ಮಮಾನಿವೇದ್ಯೇದಂ ಜನಕೇನ ಸಮರ್ಪಿತಮ್ ॥ ೭೦೦ ॥**

**ದರ್ಪಾದ್ದಾಶರಥೌ ತಸ್ಮಾದಾಹೃತೇಯಂ ಮಯಾ ರುಷಾ ।**
**ಮದ್ಯೋಗ್ಯವಸ್ತುಸ್ವೀಕಾರಾದಕೀರ್ತಿಶ್ಚೇದ್ಭವೇನ್ಮಮ ॥ ೭೦೧ ॥**

**ಚಕ್ರರತ್ನಂ ಚ ಮದ್ಧಸ್ತಾದಾದದಾತು ಸ ರಾಘವಃ ।**
**ಇತ್ಯನ್ವತೋಂಜನಾಸೂನುರವೋಚದ್ದಶಕಂಧರಮ್ ॥ ೭೦೨ ॥**

**ವಚಃ ಪ್ರಸನ್ನಗಂಭೀರಂ ತತ್ತದುಕ್ತ್ಯನುಸಾರಿ ಯತ್ ।**
**ಸೀತಾ ಮಯಾ ಹೃತೇತ್ಯೇತತ್ಕಿಂ ವಕ್ಷ್ಯವಿದಿತಂ ಜನೈಃ ॥ ೭೦೩ ॥**

ಕರೇ ತಸ್ಯ ಸ್ಥಿತಾ ಸೇತಿ ವಿಭೋ ತ್ವದ್ಧರಣಕ್ಷಣೇ ।
ಕಿಮೇತೇನ ಭವಚ್ಛೌರ್ಯಂ ವದಾತ್ರ ಪ್ರಕಟೀಭವೇತ್ ॥ ೯೦೪ ॥

ಕಿಂ ವೃಥೋಕ್ತ್ಯಾ ಪ್ರಿಯೇಣೈವ ರಾಜ್ಞೀ ಮಂಕ್ಷು ತವಾರ್ಪಿತಾ ।
ಇತಿ ತದ್ಗೂಢಹಾಸೋಕ್ತಿವಹ್ನಿಸಂತಾಪಿತಾಶಯಃ ॥ ೯೦೫ ॥

ಪುಷ್ಪಕಾಧಿಪತಿರ್ದೃಷ್ಟಿವಿಷಾಹೀಂದ್ರಫಣಾಮಣಿಮ್ ।
ಆದಾತುಮಿಚ್ಛತೋ ಗಂತುಂ ಗತಿಂ ರಾಮೋಭಿವಾಂಛತಿ ॥ ೯೦೬ ॥

ದೂತಸ್ತ್ವಂ ತನ್ನ ವಧ್ಯೋಸಿ ಯಾಹಿ ಯಾಹೀತ್ಯತರ್ಜಯತ್ ।
ನಿರ್ಜಿತ್ಯ ಸಿಂಧುರಾರಾತಿಂ ಗರ್ಜಿತೇನೋರ್ಜಿತಕ್ರುಧಾ ॥ ೯೦೭ ॥

ಈ ರೀತಿಯಾಗಿ ದೂತನ ಮಾತನ್ನು ಕೇಳಿ ಪೌಲಸ್ತ್ಯನು ಆಂಜನೇಯನನ್ನು ಕುರಿತು ''ಜನಕನು ಅಹಂಕಾರದಿಂದ ನನಗೆ ತಿಳಿಸದೆ ಈ ರತ್ನವನ್ನು ದಶರಥನ ಪುತ್ರನಲ್ಲಿ ಸಮರ್ಪಿಸಿದನು. ಆದುದರಿಂದ ನಾನು ಈಕೆಯನ್ನು ಕೋಪದಿಂದ ಅಪಹರಿಸಿದೆನು. ನನಗೆ ಯೋಗ್ಯವಾದ ವಸ್ತುವಿನ ಸ್ವೀಕಾರದಿಂದ ನನಗೆ ಅಪಕೀರ್ತಿಯು ಬರುವುದಾದರೆ ಆ ರಾಘವನು ಚಕ್ರರತ್ನವನ್ನೂ ನನ್ನ ಕೈಯಿಂದ ತೆಗೆದುಕೊಳ್ಳಲಿ'' ಎಂದು ಪುನಃ ಹೇಳಿದನು. ಬಳಿಕ ಆಂಜನೇಯನು ದಶಕಂಠನನ್ನು ಕುರಿತು ಪ್ರಸನ್ನವೂ ಗಂಭೀರವೂ ಆ ರಾವಣನ ಮಾತಿಗನುಸಾರವೂ ಆದ ಮಾತನ್ನು ಈ ರೀತಿಯಾಗಿ ಹೇಳಿದನು– ''ಪ್ರಭುವೆ !'ಸೀತೆಯನ್ನು ನಾನು ಅಪಹರಿಸಿದೆನು' ಎಂದು ಹೇಳುತ್ತಿ. ನೀನು ಹರಣಮಾಡಿದ ಸಮಯದಲ್ಲಿ ಆಕೆಯು ಅವನ ಕೈಯಲ್ಲಿ (ರಾಮನ ವಶದಲ್ಲಿ) ಇದ್ದಳೆಂಬುದಿದೇನು ಜನರಿಗೆ ಗೊತ್ತಿಲ್ಲವೇ ? ಇದರಿಂದ ಈ ಲೋಕದಲ್ಲಿ ನಿನ್ನ ಶೌರ್ಯವು ಪ್ರಕಟವಾಗುವುದೋ ? ಹೇಳು ವ್ಯರ್ಥವಾದ ಮಾತಿನಿಂದೇನು ? ಪ್ರಿಯನೇ ಶೀಘ್ರವಾಗಿ ರಾಜ್ಞಿಯನ್ನು ನಿನಗರ್ಪಿಸಿದನು. (ರಾಮನೇ ಸೀತೆಯನ್ನು ನಿನಗರ್ಪಿಸಿದನೆಂದು ಹಾಸ್ಯದ ಮಾತಿದು)'' ಈ ರೀತಿಯಾಗಿ ಅವನ ಗೂಢವಾದ ಪರಿಹಾಸ್ಯ ವಚನವೆಂಬ ಬೆಂಕಿಯಿಂದ ಸಂತಾಪಗೊಳಿಸಲ್ಪಟ್ಟ ಹೃದಯವುಳ್ಳ ರಾವಣನು ಆಂಜನೇಯನನ್ನು ''ಪುಷ್ಪಕವಿಮಾನಾಧಿಪತಿಯಾದ ರಾಮನು ದೃಷ್ಟಿವಿಷವುಳ್ಳ ದೊಡ್ಡಹಾವಿನ ಹೆಡೆಯಲ್ಲಿರುವ ರತ್ನವನ್ನು ತೆಗೆದುಕೊಳ್ಳಲಿಚ್ಛಿಸುವವನ ಗತಿಯನ್ನು ಹೊಂದುವುದಕ್ಕೆ ಬಯಸುತ್ತಾನೆ. ನೀನು ದೂತನಾಗಿರುವುದರಿಂದ ನಿನ್ನನ್ನು ಕೊಲ್ಲುವುದು ಯೋಗ್ಯವಲ್ಲ. ಹೋಗು ಹೋಗು'' ಎಂದು ಸಿಂಹವನ್ನು ಜಯಿಸಿ ಹೆಚ್ಚಾದ ಕೋಪವುಳ್ಳ ಗರ್ಜನೆಯಿಂದ (ಸಿಂಹಗರ್ಜನೆಯಿಂದ) ತಿರಸ್ಕರಿಸಿ–ಬೆದರಿಸಿದನು.

ತತಃ ಕುಂಭನಿಕುಂಭೋಗ್ರಕುಂಭಕರ್ಣಾದಿಭಿರ್ಭಟೈಃ ।
ಇಂದ್ರಜಿತ್ಸೇಂದ್ರಧರ್ಮಾತಿಕಾಯಾರ್ಕಖರದೂಷಣೈಃ ॥ ೯೦೮ ॥

ಖರೇಣ ದುರ್ಮುಖಾಖ್ಯೇನ ಮಹಾಮುಖಖಗೇಶಿನಾ ।
ಕ್ರುದ್ಧೈಃ ಕುಮಾರೈರನ್ಯೈಶ್ಚ ತರ್ಜ್ಯಮಾನೋನಿಲಾತ್ಮಜಃ ॥ ೯೦೯ ॥

ಗರ್ಜಿತೇನ ವೃಥಾನೇನ ವನಿತಾಜನಸಮ್ಮುಖಮ್ ।
ಕಿಂ ಕೃತ್ಯಮತ್ರ ಸಂಗ್ರಾಮೇ ಮದೀಯಂ ಶೃಣುತೋತ್ತರಮ್ ॥ ೯೧೦ ॥

ಇತ್ಯವಾದೀತ್ತದಾ ನೇದಮುಚಿತಂ ದುರುದೀರಿತಮ್ ।
ಇತಿ ತಾನ್ ವಾರಯನ್ ಕ್ರುದ್ಧೋ ನ್ಯಾಯವೇದೀ ವಿಭೀಷಣಃ॥ ೯೧೧ ॥

ಯಾಹಿ ಭದ್ರಾನಿವಾರ್ಯೋಯಮಕಾರ್ಯಾದಾರ್ಯವರ್ಜಿತಃ ।
ಶುಭಾಶುಭವಿಪಾಕಾನಾಂ ಭಾವಿನಾಂ ಕೋ ನಿವಾರಕಃ ॥ ೯೧೨ ॥

ಇತ್ಯುವಾಚಾಣುಮಾಂಶ್ಚೈತ್ಯ ಜಾನಕೀಂ ವರ್ಜಿತಾಶನಾಮ್ ।
ಮಂಡೋದರ್ಯುಪರುಧ್ಯಾಸ್ಯಾ ದ್ರಾಗ್ದೃಷ್ಟ್ವಾ ಪಾರಣಾವಿಧಿಮ್ ॥

ತತೋ ವಾರಾಶಿಮುಲ್ಲಂಘ್ಯ ರಾಮಾಭ್ಯರ್ಣಮುಪಾಗತಃ ।
ನತ್ವಾ ಕಿಂ ಬಹುನೋಕ್ತೇನ ಸೀತಾ ತೇನ ನ ಮೋಕ್ಷ್ಯತೇ ॥ ೯೧೪ ॥

ಅತಸ್ತದನುರೂಪಂ ವಃ ಕಾರ್ಯಂ ಮಾಭೂತ ಶೀತಕಾಃ ।
ಶಂಸಂತಿ ನಿಶ್ಚಿತೇ ಕಾರ್ಯೇ ಕೃತ್ಯಜ್ಞಾಃ ಕ್ಷಿಪ್ರಕಾರಿತಾಮ್ ॥ ೯೧೫ ॥

ಬಳಿಕ ಕುಂಭ, ನಿಕುಂಭ, ಭಯಂಕರನಾದ ಕುಂಭಕರ್ಣ ಮೊದಲಾದ ಭಟರುಗಳಿಂದಲೂ ಇಂದ್ರಜಿತ್, ಇಂದ್ರಧರ್ಮ, ಅತಿಕಾಯಾರ್ಕ, ಖರದೂಷಣರುಗಳಿಂದಲೂ ಖರನಿಂದಲೂ ದುರ್ಮುಖನೆಂಬವನಿಂದಲೂ ಮಹಾಮುಖಖೇಚರನಿಂದಲೂ ಕ್ರುದ್ಧರಾದ ರಾವಣಪುತ್ರರಿಂದಲೂ ಬೇರೆಯವರಿಂದಲೂ ತಿರಸ್ಕರಿಸಲ್ಪಟ್ಟ ಆಂಜನೇಯನು ''ವ್ಯರ್ಥವಾಗಿ ಸ್ತ್ರೀಜನರ ಸಮ್ಮುಖವಾಗಿ ಈ ಗರ್ಜನೆಯಿಂದೇನು ಕಾರ್ಯ ? ನನ್ನ ಉತ್ತರವನ್ನು ಇಲ್ಲಿ ಯುದ್ಧದಲ್ಲಿ ಕೇಳಿರಿ'' ಎಂದು ಹೇಳಿದನು. ಆಗ ಕೋಪಗೊಂಡವನೂ ನ್ಯಾಯವನ್ನು ತಿಳಿದವನೂ ಆದ ವಿಭೀಷಣನು ''ಈ ದುರ್ವಚನವು ಉಚಿತವಾದುದಲ್ಲ'' ಎಂದು ಅವರನ್ನು ತಡೆಯುವವನಾಗಿ ಅಣುಮಂತನನ್ನು ಕುರಿತು ''ಅಯ್ಯಾ ! ಹೋಗು. ಸತ್ಪುರುಷರಿಂದ ಬಿಡಲ್ಪಟ್ಟ ಈ ರಾವಣನು ಅಕಾರ್ಯದಿಂದ ನಿವಾರಿಸಲ್ಪಡ ತಕ್ಕವನಾಗಿಲ್ಲ. ಮುಂದಾಗುವ ಶುಭಾಶುಭಪರಿಪಾಕಗಳನ್ನು ತಡೆಯುವವನಾವನು ?'' ಎಂದು ಹೇಳಿದನು. ಅಣುಮಂತನೂ ಆಹಾರವನ್ನು ತ್ಯಜಿಸಿದ್ದ ಜಾನಕಿಯನ್ನು ಕಂಡು ಮಂಡೋದರಿಯ ನಿರ್ಬಂಧದಿಂದ ಈ ಸೀತಾದೇವಿಯ ಪಾರಣಾವಿಧಿಯನ್ನು ನೋಡಿ ಬಳಿಕ ಶೀಘ್ರವಾಗಿ ಸಮುದ್ರವನ್ನು ದಾಟಿ ರಾಮನ ಸಮೀಪವನ್ನು ಹೊಂದಿದವನಾಗಿ ನಮಸ್ಕರಿಸಿ ''ಹೆಚ್ಚು ಹೇಳುವುದರಿಂದೇನು ? ಈ ರಾವಣನು ಸೀತಾದೇವಿಯನ್ನು ಬಿಡುವುದಿಲ್ಲ. ಆದುದರಿಂದ ನಿಮ್ಮ ಯುದ್ಧ ಕಾರ್ಯವು ಅವನಿಗೆ ಅನುರೂಪವಾಗಿದೆ. ಉದಾಸೀನರಾಗಬೇಡಿ. ಕಾರ್ಯವನ್ನು ತಿಳಿದವರು ನಿಶ್ಚಿತವಾದ ಕಾರ್ಯದಲ್ಲಿ ಶೀಘ್ರವಾಗಿ ಮಾಡುವಿಕೆಯನ್ನು ಪ್ರಶಂಸಿಸುತ್ತಾರೆ. ನಿಶ್ಚಿತವಾದ ಕಾರ್ಯವನ್ನು ಶೀಘ್ರವಾಗಿ ಮಾಡಬೇಕೆಂದು ಹೇಳುತ್ತಾರೆಂದು ಭಾವವು''

ಇತ್ಯಾಹಾದಾಯ ತತ್ಪ್ರೋಕ್ತಮಿಕ್ಷ್ವಾಕುಕುಲಕೇಸರೀ ।
ಚತುರಂಗಬಲೇನಾಮಾ ಚಿತ್ರಕೂಟವನಾಂತರೇ ॥ ೯೧೬ ॥

ಕಾಲಮೇವ ಬಲಂ ಮತ್ವಾನೈಷೀದ್ವರ್ಷರ್ತುಮಿತ್ವರಃ ।
ತತ್ರತ್ಯಂ ವಾಲಿನೋ ದೂತಃ ಸಮೀಕ್ಷ್ಯ ರಘುನಂದನಮ್ ॥ ೯೧೭ ॥

ಪ್ರಣಮ್ಯೋಪಾಯನಂ ದತ್ವೇತ್ಯಬ್ರವೀದಾತ್ಮನೇ ಹಿತಮ್ ।
ವಿಜ್ಞಾಪಯತಿ ಮತ್ಸ್ವಾಮೀ ವಾಲೀತಿ ಬಲವಾನಲಮ್ ॥ ೯೧೮ ॥

ಪೂಜ್ಯಪಾದೋ ಯದಿ ಪ್ರೇಷ್ಯಂ ಮಾಮಿಚ್ಛತಿ ಮಹೀಪತಿಃ ।
ನ ಪ್ರತೀಚ್ಛತು ಭೃತ್ಯತ್ವಂ ಸುಗ್ರಿವಾನಿಲಪುತ್ರಯೋಃ ॥ ೯೧೯ ॥

ತಾವಕಿಂಚಿತ್ಕರಾವಾರ್ಯೋ ವೇತ್ತ್ಯೇವೈತತ್ಪರಾಕ್ರಮಮ್ ।
ತಿಷ್ಠತ್ವತ್ರೈವ ದೇವೋಹಂ ಗತ್ವಾ ಲಂಕಾಂ ದಶಾನನಮ್ ॥ ೯೨೦ ॥

ಮಾನಭಂಗೇ ನಿಯೋಜ್ಯಾರ್ಯಾಮಾನಯೇದ್ಯೈವ ಜಾನಕೀಮ್ ।
ಇತ್ಯಾಕರ್ಣಿತತದ್ವಾಕ್ಯಃ ಪ್ರಾಪ್ರಾಕ್ಷೀಲ್ಲಕ್ಷ್ಮಣಾಗ್ರಜಃ ॥ ೯೨೧ ॥

ಸಾಮಭೇದವಿದೋ ವಾಚ್ಯಂ ಕಿಷ್ಕಿಂಧೇಶಃ ಕಿಮುತ್ತರಮ್ ।
ಇತಿ ಮಂತ್ರಿಗಣಂ ಸರ್ವಸಮ್ಮತಃ ಸಂಸ್ತುತೋಂಗದಃ ॥ ೯೨೨ ॥

ಶತ್ರುರ್ಮಿತ್ರಮುದಾಸೀನ ಇತಿ ಭೂಪಾಸ್ತ್ರಯೋ ಮತಾಃ ।
ರಾವಣಸ್ತೇಷು ನಃ ಶತ್ರುರ್ವಾಲೀ ಮಿತ್ರಸ್ಯ ವಿದ್ವಿಷಃ ॥ ೯೨೩ ॥

ಈ ರೀತಿಯಾಗಿ ಹೇಳಿದನು. ಇಕ್ಷ್ವಾಕುವಂಶ ಶ್ರೇಷ್ಠನಾದ ರಾಮನು ಆಂಜನೇಯನು ಹೇಳಿದುದನ್ನು ಪರಿಗ್ರಹಿಸಿ ಗಮನಶೀಲನಾಗಿ ಕಾಲವನ್ನೇ ಬಲಿಷ್ಠವನ್ನಾಗಿ ತಿಳಿದು ಚಿತ್ರಕೂಟವನದ ಮಧ್ಯದಲ್ಲಿ ವರ್ಷಋತುವನ್ನು ಕಳೆದನು. ವಾಲಿಯ ದೂತನು ಬಂದು ಅಲ್ಲಿರುವ ರಘುನಂದನನನ್ನು ನೋಡಿ ಕೈಗಾಣಿಕೆಯನ್ನು ಕೊಟ್ಟು ನಮಸ್ಕರಿಸಿ ''ಚೆನ್ನಾಗಿ ಬಲವುಳ್ಳವನೂ ನನ್ನ ಸ್ವಾಮಿಯೂ ಆದ

ವಾಲಿಯು ತನಗೆ (ರಾಮನಿಗೆ) ಹಿತವನ್ನು ಈ ರೀತಿಯಾಗಿ ವಿಜ್ಞಾಪಿಸುತ್ತಾನೆ– 'ಪೂಜ್ಯಪಾದನಾದ ರಾಜನು–ರಾಮನು ನನ್ನನ್ನು ಕಳುಹುವುದಕ್ಕೆ ಯೋಗ್ಯ–ದೂತನನ್ನಾಗಿ ಇಚ್ಛಿಸುತ್ತಾನಾದರೆ ಸುಗ್ರೀವ ವಾಯುಪುತ್ರರ ಭೃತ್ಯತ್ವವನ್ನು ಅಂಗೀಕರಿಸಬಾರದು. ಅವರು ಕೆಲಸಕ್ಕೆ ಬಾರದವರು. ಪೂಜ್ಯನು ಇವನ (ವಾಲಿಯ) ಪರಾಕ್ರಮವನ್ನು ತಿಳಿದೇ ತಿಳಿಯುತ್ತಾನೆ. ಸ್ವಾಮಿಯು ಇಲ್ಲಿಯೇ ಇರಲಿ. ನಾನು ಲಂಕೆಗೆ ಹೋಗಿ ದಶಮುಖನನ್ನು ಮಾನಭಂಗದಲ್ಲಿ ಸೇರಿಸಿ (ರಾವಣನಿಗೆ ಮಾನಭಂಗವನ್ನು ಮಾಡಿ) ಪೂಜ್ಯಳಾದ ಜಾನಕಿಯನ್ನು ಈ ದಿನವೇ ತರುವೆನು'' ಈ ರೀತಿಯಾಗಿ ಆ ದೂತನು ವಾಲಿಯ ಮಾತನ್ನು ರಾಮನಿಗೆ ಹೇಳಿದನು. ಹೀಗೆ ಆ ವಾಲಿಯ ದೂತನ ಮಾತನ್ನು ಕೇಳಿದ ಲಕ್ಷ್ಮಣನ ಅಣ್ಣನು ''ಸಾಮ ಭೇದೋಪಾಯಗಳನ್ನು ತಿಳಿದಿರುವ ಕಿಷ್ಕಿಂಧಾಧಿಪತಿ– ವಾಲಿಗೇನು ಉತ್ತರವನ್ನು ಹೇಳಬೇಕು ? ಎಂದು ಮಂತ್ರಿಸಮೂಹವನ್ನು ಕುರಿತು ಪ್ರಶ್ನೆಮಾಡಿದನು. ಸರ್ವ ಸಮ್ಮತನೂ ಸ್ತುತಿಸಲ್ಪಟ್ಟವನೂ ಆದ ಅಂಗದನು ರಾಮನನ್ನು ಕುರಿತು ''ರಾಜರು ಶತ್ರುವೆಂದೂ ಮಿತ್ರನೆಂದೂ ಉದಾಸೀನನೆಂದೂ ಮೂರು ವಿಧವಾಗಿ ತಿಳಿಯಲ್ಪಟ್ಟಿರುತ್ತಾರೆ. ಅವರಲ್ಲಿ ರಾವಣನು ನಮಗೆ ಶತ್ರುವಾಗಿದ್ದಾನೆ. ವಾಲಿಯು ಮಿತ್ರನಾದ ಸುಗ್ರೀವನ ಶತ್ರುವಾಗಿದ್ದಾನೆ.

**ನ ಕುರ್ಮೋ ಯದಿ ತತ್ಕಾರ್ಯಂ ಸಂಬಧ್ನೀಯಾತ್ಸ ಶತ್ರುಣಾ ।**
**ತಥಾ ಚೋಪಚಯಃ ಶತ್ರೋರ್ದುರುಚ್ಛೇದ್ಯೋ ಹಿ ತೇನ ಸಃ ॥**

ವಾಲಿಯ ಕಾರ್ಯವನ್ನು ನಾವು ಮಾಡದಿದ್ದರೆ ಅವನು ಶತ್ರುವಿನೊಡನೆ ಸೇರಿಕೊಳ್ಳುವನು. ಹಾಗೆ ಸೇರಿಕೊಳ್ಳುವುದರಿಂದ ಶತ್ರುವಿನ ಆ ಬಲವನ್ನು ನಾಶ ಮಾಡುವುದೇ ಕಷ್ಟಸಾಧ್ಯವಾಗುವುದು.

**ಅಥ ವಾಲಿವಚಃ ಕುರ್ಮಃ ಕರ್ಮ ತತ್ತ್ವಯಿ ದುಷ್ಕರಮ್ ।**
**ತತೋ ಹಠಾತ್ತವಾಯಾತಂ ಕಿಷ್ಕಿಂಧೇಶವಿನಾಶನಮ್ ॥ ೯೨೫ ॥**

**ಪ್ರಾಕ್ ಪಶ್ಚಾಚ್ಛಕ್ತಿ ಸಂಪತ್ತ್ಯಾ ಸುಖೋಚ್ಛೇದ್ಯೋ ದಶಾನನಃ ।**
**ಇತ್ಯಬ್ರವೀತ್ತದಾದಾಯ ದೂತಮಾಹೂಯ ಭೂಪತಿಃ ॥ ೯೨೬ ॥**

**ಮಹಾಮೇಘಾಭಿಧಾನಂ ಮೇ ಪ್ರದಾಯಾನೇಕಪಾಗ್ರಿಮಮ್ ।**
**ಸಹಾಭ್ಯೇತ್ಯ ಮಯಾ ಲಂಕಾಂ ಚರ್ಚ್ಯಂ ಪಶ್ಚಾತ್ತ್ವದೀಪ್ಸಿತಮ್॥ ೯೨೭ ॥**

**ಇತ್ಯುಕ್ತ್ವಾವಾಮುನಾತ್ಮೀಯಮಪಿ ದೂತಂ ವ್ಯಸರ್ಜಯತ್ ।**
**ಗತ್ವಾ ತೌ ರಾಮಸಂದೇಶಾತ್ಸುಗ್ರೀವಸ್ಯಾಗ್ರಜನ್ಮನಃ ॥ ೯೨೮ ॥**

**ಕೋಪಮಾನಯತಃ ಸ್ಮಾಸೌ ಚೇತ್ಯವೋಚನ್ಮದೋದ್ಧತಃ ।**
**ಏವಂ ಪ್ರಾರ್ಥಯಮಾನೋ ಮಾಂ ರಾಮೋ ರಾಮಾಪಹಾರಿಣಮ್ ॥**

**ನಿರ್ಮೂಲ್ಯಾನೀಯ ಸೀತಾಂ ಕಿಂ ಯಶೋ ದಿಕ್ಷು ಪ್ರಕೀರ್ಣವಾನ್ ।**
**ದಶಾಸ್ಯೇ ಸಾಮ ಸಾಮೋಕ್ತ್ಯಾ ಸಮಿಪ್ಸು ಸಾಮವಾಯಿಕಮ್ ॥ ೬೩೦ ॥**

**ಪರುಷೋಕ್ತಿರ್ಮಯೀತ್ಯಸ್ಯ ಧೀಶೌರ್ಯೇ ಪಶ್ಯ ಕೀದೃಶೀ ।**
**ಇಮಾಂ ತದ್ಗರ್ವದುರ್ಭಾಷಾಂ ಶ್ರುತ್ವಾ ರಾಘವಸೇವಿನಾ ॥ ೬೩೧ ॥**

**ಚೌರ್ಯೇಣ ಪರದಾರಾಣಾಂ ನೇತುರುನ್ಮಾರ್ಗಗಾಮಿನಃ ।**
**ದೋಷದ್ವಯಾನುರೂಪಂ ತ್ವಂ ದಂಡಂ ದ್ರಕ್ಷ್ಯಸಿ ಚಾಚಿರಾತ್॥ ೯೩೨ ॥**

**ಕಿಂ ತೇನ ತವ ಚೇತ್ಪಥ್ಯಮಿಚ್ಛಸ್ಯುಚ್ಛಿದ್ಯ ದುರ್ಮದಮ್ ।**
**ದತ್ವಾ ಗಜಂ ಕುರೂಪಾಸಾಂ ಸ್ವಾಮಿನೋ ವೃದ್ಧಿಮೇಷ್ಯಸಿ ॥ ೯೩೩ ॥**

**ಅವಶ್ಯಮಚಿರೇಣೇತಿ ದೂತೇನೋದ್ದೀಪಿತಃ ಕ್ರುಧಾ ।**
**ವಾಲೀ ಕಾಲಾನುಕಾರೀ ತಂ ಪ್ರತ್ಯಾಹ ಪರುಷಂ ವಚಃ ॥ ೯೩೪ ॥**

**ವಾರಣಾಶಾಂ ತ್ಯಜತ್ವಸ್ತಿ ಚೇದಾಶಾ ನಾಸ್ತಿ ವಾರಣಮ್ ।**
**ಯಾತು ಮತ್ಪಾದಸೇವಾಂ ವಾ ಮಯಾಮಾ ಯಾತು ವಾ ರಣಮ್ ॥**

ವಾಲಿಯ ಮಾತನ್ನು ನಡೆಸೋಣವೆಂದರೆ ಅದು ನಿನ್ನಲ್ಲಿ ಕಠಿನವಾದ ಕಾರ್ಯ. ಆದುದರಿಂದ ನಿನಗೆ ಮೊದಲು ಕಿಷ್ಕಿಂಧಾಧಿಪತಿ–ವಾಲಿಯ ವಿನಾಶವು ಅಕಸ್ಮಾತ್ತಾಗಿ ಬಂದೊದಗಿತು. ಬಳಿಕ ಶಕ್ತಿಸಂಪತ್ತಿಯಿಂದ ದಶಮುಖನನ್ನು ಸುಖದಿಂದ ನಾಶಮಾಡಬಹುದು'' ಎಂದು ಹೇಳಿದನು. ರಾಜ–ರಾಮಚಂದ್ರನು ಆ ಮಾತನ್ನು ಸ್ವೀಕರಿಸಿ ವಾಲಿಯ ದೂತನನ್ನು ಕರೆದು ''ಮಹಾಮೇಘವೆಂಬ ಶ್ರೇಷ್ಠಗಜವನ್ನು ನನಗೆ ಕೊಟ್ಟು ನನ್ನೊಡನೆ ಲಂಕೆಗೆ ಬಂದು ಬಳಿಕ ನಿನ್ನ ಇಷ್ಟಾರ್ಥವು ಚರ್ಚಿಸಲ್ಪಡತಕ್ಕುದಾಗಿದೆ'' ಎಂದು ವಾಲಿಗೆ ಹೇಳಬೇಕೆಂದು ಹೇಳಿ ಈ ದೂತನೊಡನೆ ತನ್ನ ದೂತನನ್ನೂ ಕಳುಹಿಸಿಕೊಟ್ಟನು. ಆ ದೂತರು ಹೋಗಿ ರಾಮನ ಸಂದೇಶದಿಂದ ಸುಗ್ರೀವನ ಅಣ್ಣ–ವಾಲಿಗೆ ಕೋಪವನ್ನುಂಟುಮಾಡಿದರು. ಮದೋದ್ಧತನಾದ ಈ ವಾಲಿಯೂ ಆ ಮಾತನ್ನು ಕೇಳಿ '' ಈ ರೀತಿಯಾಗಿ ನನ್ನನ್ನು ಪ್ರಾರ್ಥಿಸುವ ರಾಮನು ತನ್ನ ಹೆಂಡತಿಯನ್ನು ಅಪಹರಿಸಿದವನನ್ನು ನಿರ್ಮೂಲ ಮಾಡಿ ಸೀತೆಯನ್ನು ತಂದು ದಿಕ್ಕುಗಳಲ್ಲಿ ಯಶಸ್ಸನ್ನು ಹರಡಿದನೇನು ?ಯುದ್ಧವನ್ನಿಚ್ಛಿಸುವ ದಶಮುಖನಲ್ಲಿ ಸಾಮವಚನ–ಸಮಾಧಾನಕರವಾದ ಮಾತಿನಿಂದ ಒಡಂಬಡಿಕೆ. ನನ್ನಲ್ಲಿ ಹೀಗೆ ಕಠಿನವಚನ. ಇವನ ಬುದ್ಧಿಯೂ ಶೌರ್ಯವೂ ಎಂಥವು ? ನೋಡು'' ಈ ರೀತಿಯಾಗಿ ಹೇಳಿದನು. ಆ ವಾಲಿಯ ಈ ಗರ್ವದ ದುರ್ಭಾಷೆಯನ್ನು ಕೇಳಿ ರಾಘವನ ಸೇವಕನಾದ ದೂತನಿಂದ ''ಕಳುವಿನಿಂದ ಪರವನಿತೆಯನ್ನು ಒಯ್ಯುವವನೂ ಉನ್ಮಾರ್ಗಗಾಮಿಯೂ ಆದ ರಾವಣನಿಗೆ ಆ ಎರಡು ದೋಷಗಳಿಗೆ ಅನುಗುಣವಾದ ಶಿಕ್ಷೆಯನ್ನು ನೀನು ಶೀಘ್ರವಾಗಿ ನೋಡುವೆ. ಅದರಿಂದೇನು ?ನಿನಗೆ ಹಿತವನ್ನಿಚ್ಛಿಸುವೆಯಾದರೆ ದುರಹಂಕಾರವನ್ನು ದೂರಮಾಡಿ ಆನೆಯನ್ನು ಕೊಟ್ಟು ರಾಮಸ್ವಾಮಿಯ ಸೇವೆಯನ್ನು ಮಾಡು. ಅವಶ್ಯವಾಗಿ ಸ್ವಲ್ಪಕಾಲದಿಂದ ಉನ್ನತಿಯನ್ನು ಹೊಂದುವೆ'' ಎಂಬುದಾಗಿ ಹೇಳಿದನು. ಕೋಪದಿಂದ ಪ್ರಜ್ವಲಿತನೂ ಯಮನ ಅನುಕರಣವುಳ್ಳವನೂ ಆದ ವಾಲಿಯು ಆ ದೂತನನ್ನು ಕುರಿತು ''ಈ ಆನೆಯ ಆಶೆಯನ್ನು ಬಿಟ್ಟುಬಿಡಲಿ. ಹಾಗೆ ಆಶೆಯಿದ್ದರೆ ಅಡ್ಡಿಯಿಲ್ಲ. ನನ್ನ ಪಾದಸೇವೆಯನ್ನು ಮಾಡಲಿ. ಅಥವಾ ನನ್ನೊಡನೆ ಯುದ್ಧವನ್ನಾದರೂ ಮಾಡಲಿ'' ಎಂದು ಕಠಿನವಚನವನ್ನು ಪ್ರತಿಯಾಗಿ ಹೇಳಿದನು.

**ತದಾ ತಸ್ಯಾಶುಭಾಂ ವಾಣೀಂ ತದ್ವಿನಾಶವಿಧಾಯಿನೀಮ್ ।**
**ಶ್ರುತ್ವಾ ದೂತೋಭ್ಯುಪೇತ್ಯೈಷ್ಯದ್ಬಲಿನಂ ವಾಲಿನೋಂತಕಮ್ ॥ ೯೩೬ ॥**

**ಪ್ರಾತಿಕೂಲ್ಯೇನ ವಾಲೀ ವಃ ಕೃತ್ರಿಮಃ ಶತ್ರುರುತ್ಥಿತಃ ।**
**ಪಾರಿಪಂಥಿಕವನ್ಮಾರ್ಗೋ ದುರ್ಗಸ್ತಸ್ಮಿನ್ ವಿರೋಧಿನಿ ॥ ೯೩೭ ॥**

ಆಗ ಅವನ ವಿನಾಶವನ್ನು ಮಾಡುವುದಾದ ಅವನ ಅಶುಭವಚನವನ್ನು ಕೇಳಿ ದೂತನು ವಾಲಿಯ ಅಂತಕನಾದ ಭವಿಷ್ಯದ್ಬಲಭದ್ರನನ್ನು ಕಂಡು ''ಕೃತ್ರಿಮನಾದ ವಾಲಿಯು ನಿಮಗೆ ಪ್ರತಿಕೂಲತೆಯಿಂದ ಶತ್ರುವಾಗಿ ತಲೆದೋರಿದ್ದಾನೆ. ಅವನು ವಿರೋಧಿಯಾಗಿರುತ್ತಿರಲು ಆ ಶತ್ರುವುಳ್ಳ ದಾರಿಯು ಪ್ರಯಾಣಕ್ಕೆ ಕಠಿನವಾಗುವುದು.''

**ಇತ್ಯಬ್ರವೀತ್ತತೋ ರಾಮಃ ಸುಗ್ರೀವಪ್ರಮುಖಂ ಬಲಮ್ ।**
**ಲಕ್ಷ್ಮಣಂ ನಾಯಕಂ ಕೃತ್ವಾ ಪ್ರಾಹಿಣೋತ್ಖಾದಿರಂ ವನಮ್ ॥ ೯೩೮ ॥**

ಈ ರೀತಿಯಾಗಿ ಹೇಳಿದನು. ಬಳಿಕ ರಾಮನು ಸುಗ್ರೀವನೇ ಪ್ರಮುಖನಾಗಿರುವ ಸೈನ್ಯಕ್ಕೆ ಲಕ್ಷ್ಮಣನನ್ನು ನಾಯಕನನ್ನಾಗಿ ಮಾಡಿ ವಾಲಿಯ ಖದಿರವನಕ್ಕೆ ಕಳುಹಿಸಿದನು.

**ಗತ್ವಾ ವೈದ್ಯಾಧರಂ ಸೈನ್ಯಂ ವಾಲಿನೋಭ್ಯಾಗತಂ ಬಲಮ್ ।**
**ಜಘಾನೇವ ವನಂ ವಜ್ರಂ ಪ್ರಜ್ವಲಚ್ಛಸ್ತ್ರಸಂತತಿ ॥ ೯೩೯ ॥**

ವಜ್ರಾಯುಧವು ವನವನ್ನು ನಾಶಮಾಡುವಂತೆ ಪ್ರಜ್ವಲಿಸುತ್ತಿರುವ ಶಸ್ತ್ರ ಸಮೂಹವುಳ್ಳುದೂ ವಿದ್ಯಾಧರರುಳ್ಳುದೂ ಆದ ಸೈನ್ಯವು ಹೋಗಿ ಇದಿರಾಗಿ ಬಂದ ವಾಲಿಯ ಸೈನ್ಯವನ್ನು ನಾಶಮಾಡಿತು.

**ಸ್ವಯಂ ಸರ್ವಬಲೇನಾಮಾ ಯೋದ್ಧುಂ ವಾಲೀ ತದಾಗಮತ್ ।**
**ಪುನಸ್ತಯೋರಭೂದ್ಯುದ್ಧಂ ಬಲಯೋಃ ಕಾಲಲೀಲಯೋಃ ॥ ೯೪೦ ॥**

ಆಗ ವಾಲಿಯು ತಾನು ಸಮಸ್ತಸೈನ್ಯದೊಡನೆ ಯುದ್ಧಕ್ಕೋಸ್ಕರ ಹೋದನು. ಯಮನ ಲೀಲೆಯುಳ್ಳ ಆ ಸೈನ್ಯಗಳಿಗೆ ಪುನಃ ಯುದ್ಧವಾಯಿತು.

**ಪ್ರಲಯೇ ವಾಂತಕಸ್ತತ್ರ ಪ್ರಾಯಸ್ತೃಪ್ತಿಮುಪೇಯಿವಾನ್ ।**
**ಆಕರ್ಣಾಕೃಷ್ಟನಿರ್ಮುಕ್ತನಿಶಾತಸಿತಪತ್ರಿಣಾ ॥ ೯೪೧ ॥**

**ಲಕ್ಷ್ಮಣೇನ ಶಿರೋಗ್ರಾಹಿ ತಾಲಂ ವಾ ವಾಲಿನಃ ಫಲಮ್ ।**
**ತದಾ ಸ್ವಸ್ಥಾನಮಾಪನ್ನೌ ಸುಗ್ರೀವಾನಿಲನಂದನೌ ॥ ೯೪೨ ॥**

ಯಮನು, ಪ್ರಲಯಕಾಲದಲ್ಲಿ ತೃಪ್ತಿಯನ್ನು ಹೊಂದಿದಂತೆ ಆ ಯುದ್ಧದಲ್ಲಿ ಬಹಳವಾಗಿ ತೃಪ್ತಿಯನ್ನು ಹೊಂದಿದನು. ಕಿವಿಯವರೆಗೆಳೆದು ಬಿಡಲ್ಪಟ್ಟ ಹರಿತವಾದ ಬಾಣವುಳ್ಳ ಲಕ್ಷ್ಮಣನು ತಾಳೆಯ ಫಲವನ್ನು ಗ್ರಹಣಮಾಡುವಂತೆ ವಾಲಿಯ ಶಿರವನ್ನು ಗ್ರಹಣಮಾಡಿದನು. ವಾಲಿಯ ತಲೆಯನ್ನು ಚೆಂಡಾಡಿದನೆಂದು ಭಾವವು. ಆಗ ಸುಗ್ರೀವನೂ ವಾಯುಪುತ್ರನೂ ತಂತಮ್ಮ ಸ್ಥಾನವನ್ನು ಪಡೆದರು. ಕಳೆದುಕೊಂಡಿದ್ದ ಸ್ಥಾನಗಳನ್ನು ಪಡೆದರೆಂದು ಭಾವವು.

**ಸದ್ಯಃ ಫಲತಿ ಸಂಸೇವಾ ಪ್ರಾಯೇಣ ಪ್ರಭುಮಾಶ್ರಿತಾ ।**
**ತತಃ ಸರ್ವೇಗಮನ್ರಾಮಸ್ವಾಮಿನಂ ಸೋಪ್ಯನೀಯತ ॥ ೯೪೩ ॥**

**ಸ್ವಸ್ಥಾನಂ ಸ್ವಬಲೋ ಭಕ್ತ್ಯಾ ಸುಗ್ರೀವೇಣ ಸಹಾನುಜಃ ।**
**ವಿಭೋರ್ಮನೋಹರೋದ್ಯಾನೇ ಕಿಷ್ಕಿಂಧೇ ಶರದಾಗಮೇ ॥ ೯೪೪ ॥**

**ಬಲಂ ಚತುರ್ದಶಾಕ್ಷೋಹಿಣೀಪ್ರಮಂ ಭೂಶ್ರಿತಾಮಭೂತ್ ।**
**ಲಕ್ಷ್ಮಣಶ್ಚ ಜಗತ್ಪಾದಗಿರೌ ನಿರಶನಸ್ತದಾ ॥ ೯೪೫ ॥**

**ಸಪ್ತಾಹಂ ಶಿವಘೋಷಾಖ್ಯಮೋಕ್ಷಸ್ಥಾನೇ ಕೃತಾರ್ಚನಃ ।**
**ಪ್ರಜ್ಞಪ್ತಿಂ ಸಾಧಯಾಮಾಸ ಭಟಾಷ್ಟಶತರಕ್ಷಿತಃ ॥ ೯೪೬ ॥**

ಪ್ರಭುವನ್ನಾಶ್ರಯಿಸಿದ ಸೇವೆಯು ಪ್ರಾಯಿಕವಾಗಿ ತತ್ಕ್ಷಣದಲ್ಲಿ ಫಲಿಸುತ್ತದೆ. ಆಂಜನೇಯ ಸುಗ್ರೀವರ ಸೇವೆಗೆ ಕೂಡಲೆ ಫಲವುಂಟಾಯಿತೆಂದು ಭಾವವು. ಬಳಿಕ ಎಲ್ಲರೂ ರಾಮಸ್ವಾಮಿಯನ್ನು ಹೊಂದಿದರು–ತನ್ನ ಸೈನ್ಯಸಮೇತನೂ ಅನುಜ–ಲಕ್ಷ್ಮಣಸಮೇತನೂ ಆದ ಆ ರಾಮಚಂದ್ರನನ್ನೂ ಸುಗ್ರೀವನು ಭಕ್ತಿಯಿಂದ ತನ್ನ ಸ್ಥಾನಕ್ಕೆ ಕರೆದುಕೊಂಡು ಹೋದನು. ಶರದೃತುವಿನಲ್ಲಿ ಕಿಷ್ಕಿಂಧದ ಮನೋಹರೋಧ್ಯಾನದಲ್ಲಿರುವ ಪ್ರಭುವಿಗೆ ಭೂಚರರ ಹದಿನಾಲ್ಕು ಸಹಸ್ರ ಅಕ್ಷೋಹಿಣೀಪರಿಮಿತವಾದ ಸೈನ್ಯವುಂಟಾಯಿತು. ಆಗ ಲಕ್ಷ್ಮಣನು ಶಿವಘೋಷನೆಂಬ ಮುನಿಯ ಮೋಕ್ಷಸ್ಥಾನವಾದ ಜಗತ್ಪಾದಗಿರಿಯಲ್ಲಿ ಎಂಟುನೂರು ಭಟರಿಂದ ರಕ್ಷಿಸಲ್ಪಟ್ಟವನಾಗಿಯೂ ಏಳು ದಿನಗಳವರೆಗೆ ನಿರಾಹಾರಿಯಾಗಿಯೂ ಪೂಜೆಯನ್ನು ಮಾಡಿದವನಾಗಿಯೂ ಪ್ರಜ್ಞಪ್ತಿಯೆಂಬ ವಿದ್ಯೆಯನ್ನು ಸಾಧಿಸಿದನು.

**ಸುಗ್ರೀವೋಪಿ ಮಹಾವಿದ್ಯಾಃ ಪೂಜಯಾಮಾಸ ಸರ್ವತಃ ।**
**ಸೋಪವಾಸೋ ಗಿರೌ ಸಮ್ಮೇದಾಖ್ಯೇ ಸಿದ್ಧಶಿಲಾತಲೇ ॥ ೯೪೭ ॥**

ಸುಗ್ರೀವನೂ ವ್ರತಸಹಿತನಾಗಿಯೂ ಉಪವಾಸ ಸಹಿತನಾಗಿಯೂ ಸಮ್ಮೇದ ಪರ್ವತದಲ್ಲಿ ಸಿದ್ಧಶಿಲೆಯಲ್ಲಿ ಮಹಾವಿದ್ಯೆಗಳನ್ನು ಪೂಜಿಸಿದನು.

**ತಥಾನ್ಯೇಪಿ ಸ್ವವಿದ್ಯಾನಾಂ ಖಗಾಃ ಪೂಜಾಮಕುರ್ವತ ।**
**ಏವಂ ಭೂಖೇಚರಾಧೀಶಬಲಂ ಚಾಲಿತಕೇತನಮ್ ॥ ೯೪೮ ॥**

**ರಾಮಲಕ್ಷ್ಮಣಸುಗ್ರೀವಮರುನ್ನಂದನನಾಯಕಮ್ ।**
**ಕರೀಂದ್ರಮಕರಾಕೀರ್ಣಂ ತುರಂಗಮತರಂಗಕಮ್ ॥ ೯೪೯ ॥**

**ಪ್ರಲಯಾಂಭೋಧಿಸಂಕಾಶಂ ಲಂಕಾಂ ಪ್ರತಿ ಚಚಾಲ ತತ್ ।**
**ಲಂಕಾಪುರೇಪ್ಯಣುಮತೋ ವಿನಿವೃತ್ತೌ ದಶಾನನಃ ॥ ೯೫೦ ॥**

**ಕುಂಭಕರ್ಣಾದಿಭಿರ್ನಾಸ್ಮದುಗ್ರವಂಶಸ್ಯ ಭಾಸ್ವತಃ ।**
**ಕರ್ಮೇದಮುಚಿತಂ ಖ್ಯಾತಪೌರುಷಸ್ಯ ತವ ಪ್ರಭೋ ॥ ೯೫೧ ॥**

**ಸ್ತ್ರೀರತ್ನಮೇತದುಚ್ಛಿಷ್ಟಂ ತದಸ್ಮದನುರೋಧತಃ ।**
**ವಿಸೃಜ್ಯತಾಮಿತಿ ಪ್ರೋಕ್ತೋಪ್ಯಾಸಕ್ತಸ್ತ್ಯಕ್ತುಮಕ್ಷಮಃ ॥ ೯೫೨ ॥**

**ಭೂಯಸ್ತೃಣಮನುಷ್ಯಸ್ಯ ರಾಮನಾಮ್ನೋ ಬಲಂ ಕಿಲ ।**
**ಸೀತಾಂ ನೇತುಮಿತೋಸ್ಮಾಕಮುಪರ್ಯಾಗಚ್ಛತೀತಿ ವಾಕ್ ॥ ೯೫೩ ॥**

**ಶ್ರೂಯತೇದ್ಯ ಕಥಂ ಸೀತಾಮೋಕ್ಷಃ ಕುಲಕಲಂಕಕೃತ್ ।**
**ಇತ್ಯಾಖ್ಯತ್ತದ್ವಚಃ ಸೋಢುಮಕ್ಷಮೋ ರಾವಣಾನುಜಃ ॥ ೯೫೪ ॥**

**ಸೂರ್ಯವಂಶಸ್ಯ ಸೂರ್ಯಃ ಕಿಂ ರಾಮಸ್ತೃಣಮನುಷ್ಯಕಃ ।**
**ನ ಶೃಣೋಷಿ ವಚಃ ಪಥ್ಯಂ ಬಂಧೂನಾಂ ಮದನಾಂಧಕಃ ॥ ೯೫೫ ॥**

**ಪರದಾರಾರ್ಪಣಂ ದೋಷಂ ವದನ್ ದೋಷವಿದಾಂ ವರಃ ।**
**ಪರಸ್ತ್ರೀಗ್ರಹಣಂ ಶೌರ್ಯಂ ತ್ವದುಪಜ್ಞಂ ಭವೇದ್ಭುವಿ ॥ ೯೫೬ ॥**

ಹಾಗೆ ಬೇರೆ ಖೇಚರರೂ ತಮ್ಮ ವಿದ್ಯೆಗಳ ಪೂಜೆಯನ್ನು ಮಾಡಿದರು. ಈ ರೀತಿಯಾಗಿ ಚಲಿಸುತ್ತಿರುವ ಬಾವುಟಗಳುಳ್ಳುದೂ ರಾಮ ಲಕ್ಷ್ಮಣ ಸುಗ್ರೀವ ವಾಯುಪುತ್ರ ಇವರುಗಳನ್ನು ನಾಯಕರುಗಳನ್ನಾಗಿ ಪಡೆದಿರುವುದೂ ದೊಡ್ಡ ಆನೆಗಳೆಂಬ ಮೊಸಳೆಗಳಿಂದ ವ್ಯಾಪ್ತವೂ ಕುದುರೆಗಳೆಂಬ ಅಲೆಗಳುಳ್ಳುದೂ ಪ್ರಳಯಕಾಲದ ಸಮುದ್ರಕ್ಕೆ ಸಮಾನವೂ ಆದ ಆ ಭೂಚರರಾಜರ ಸೈನ್ಯವು ಲಂಕೆಗೆ ಹೋಯಿತು. ಲಂಕಾಪುರದಲ್ಲಿ ಹಿಂದೆ ಅಣುಮಂತನು ಬಂದನಂತರ ಕುಂಭಕರ್ಣನೇ ಮೊದಲಾದವರಿಂದ ''ಪ್ರಭುವೇ! ನಮ್ಮ ಉಗ್ರವಂಶಕ್ಕೆ ಸೂರ್ಯನೂ ಪ್ರಖ್ಯಾತವಾದ ಪೌರುಷವುಳ್ಳವನೂ ಆದ ನಿನಗೆ ಈ ಕಾರ್ಯವು ಉಚಿತವಾದುದಲ್ಲ. ಈ ಸ್ತ್ರೀರತ್ನವು ಎಂಜಲು. ನಮ್ಮ ನಿರ್ಬಂಧದಿಂದ ಅದನ್ನು ಬಿಟ್ಟು ಬಿಡು'' ಎಂದು ದಶಮುಖನು ಹೇಳಲ್ಪಟ್ಟರೂ ಆಸಕ್ತನಾಗಿಯೂ ಬಿಡುವುದಕ್ಕೆ ಅಸಮರ್ಥನಾಗಿಯೂ ''ರಾಮನೆಂಬ ತೃಣಮನುಷ್ಯನ ಸೈನ್ಯವು ಸೀತೆಯನ್ನು ಒಯ್ಯುವುದಕ್ಕೋಸ್ಕರ ಈಕಡೆ ನಮ್ಮ ಮೇಲೆ ಪುನಃ ಬರುವುದೆಂಬ ಮಾತು ಈ ದಿವಸ ಕೇಳಲ್ಪಡುತ್ತದೆ. ವಂಶಕ್ಕೆ ಕಲಂಕವನ್ನುಂಟುಮಾಡುವ ಸೀತಾವಿಮೋಚನವು ಹೇಗಾಗುವುದು ?'' ಎಂದು ಹೇಳಿದನು. ಆ ಮಾತನ್ನು ಸಹಿಸಲಾರದ ರಾವಣಾನುಜ–ವಿಭೀಷಣನು ರಾವಣನನ್ನು ಕುರಿತು ''ಸೂರ್ಯವಂಶಕ್ಕೆ ಸೂರ್ಯನಾದ ರಾಮನು ತೃಣಮನುಷ್ಯನೇನು ? ಕಾಮಾಂಧನೂ ದೋಷಜ್ಞರಲ್ಲಿ ಶ್ರೇಷ್ಠನೂ ಆದ ನೀನು ಪರಸ್ತ್ರೀಯ ಅರ್ಪಣವನ್ನು ದೋಷವನ್ನಾಗಿ ಹೇಳುವವನಾಗಿ ಬಂಧುಗಳ ಹಿತ ವಚನವನ್ನು ಕೇಳುವುದಿಲ್ಲ. ಪರಸ್ತ್ರೀಗ್ರಹಣವು ಪರಾಕ್ರಮವೆಂದು ಭೂಮಿಯಲ್ಲಿ ನಿನ್ನ ಮೊದಲನೆಯ ತಿಳುವಳಿಕೆಯಾಗಿದೆ.

**ಮಿಥ್ಯೋತ್ತರೇಣ ಕಿಂ ಮಾರ್ಗವಿಧ್ವಂಸೋಮಾರ್ಗವರ್ತನಮ್ ।**
**ದುರ್ಧರಂ ತವ ದುರ್ಬುದ್ಧೇ ಲೋಕದ್ವಯಭಯಾವಹಮ್ ॥ ೯೫೭ ॥**

**ವಿಷಯಾನನಿಷಿದ್ಧಾಂಶ್ಚ ಪರಿತ್ಯಕ್ತುಂ ವಯಸ್ತವ ।**
**ಪರಾಮೃಶಾತ್ರ ಕಿಂ ಯುಕ್ತಂ ನಿಷಿದ್ಧವಿಷಯೈಷಣಮ್ ॥ ೯೫೮ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ರಾಜಗೃಹಪಟ್ಟಣದಲ್ಲಿ ಸುಮಿತ್ರಮಹಾರಾಜಂಗಂ ಪದ್ಮಾವತೀಮಹಾದೇವಿಗಂ ಶ್ರವಣನಕ್ಷತ್ರದಲ್ಲುದಯಿಸಿದ ಶ್ಯಾಮವರ್ಣಮನುಳ್ಳ ಇಪ್ಪತ್ತುಬಿಲ್ಲುತ್ಸೇಧಮನುಳ್ಳ ಮೂವತ್ತುಸಾವಿರ ವರ್ಷಾಯುಷ್ಯಮನುಳ್ಳ ಹರಿವಂಶಮನುಳ್ಳ ಆಮೆಯ ಲಾಂಛನಮನುಳ್ಳ ವರುಣಬಹುರೂಪಿಣೀ–ಯಕ್ಷಯಕ್ಷಿಯರನುಳ್ಳ ಸಮ್ಮೇದಪರ್ವತದ ನಿರ್ಜರಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ಮುನಿಸುವ್ರತತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

ದುರ್ಬುದ್ಧಿಯುಳ್ಳವನೇ ! ಮಿಥ್ಯೆಯಾದ ಉತ್ತರದಿಂದ ಪೂರ್ವಪದ್ಧತಿಯ ನಾಶವೂ ಇಹಪರಲೋಕಗಳಲ್ಲಿ ಭಯಂಕರವಾದ ಮತ್ತು ದುರ್ಧರವಾದ ನಿನ್ನ ತಪ್ಪುದಾರಿಯ ನಡತೆಯು ಏತಕ್ಕೆ ?ನಿಷಿದ್ಧವಲ್ಲದ ವಿಷಯಗಳನ್ನೂ ಪರಿತ್ಯಜಿಸುವುದಕ್ಕೆ ನಿನ್ನ ವಯಸ್ಸು ಯೋಗ್ಯವಾಗಿರುವಾಗ ಇಲ್ಲಿ ನಿಷಿದ್ಧವಿಷಯಗಳ ಬಯಕೆಯು ಯೋಗ್ಯವಾದುದೇನು ? ವಿಚಾರಮಾಡು.

**ವಿದ್ಧಿ ವೈದ್ಯಾಧರೀ ಲಕ್ಷ್ಮೀರಿಯಂ ತವ ಗುಣಪ್ರಿಯಾ ।**
**ಅನರ್ಪಯಂತಂ ಸೀತಾಂ ತ್ವಾಂ ತ್ಯಜತ್ಯದ್ಯೈವ ನಿರ್ಗುಣಮ್ ॥ ೬೫೯ ॥**

ಗುಣಪ್ರಿಯಳಾದ ನಿನ್ನ ಈ ವಿದ್ಯಾಧರಲಕ್ಷ್ಮಿಯು ಸೀತೆಯನ್ನು ಅರ್ಪಿಸದಿರುವವನೂ ಗುಣರಹಿತನೂ ಆದ ನಿನ್ನನ್ನು ಈ ದಿನವೇ ಬಿಡುತ್ತಾಳೆಂದು ತಿಳಿ.

**ಅಕಾರ್ಯಕಾರಿಣಾಮತ್ರ ಗಣನಾಯಾಂ ಕಿಮಗ್ರಿಮಮ್ ।**
**ತ್ವಾಂ ಕರೋಷ್ಯಭಿಲಾಷಾತ್ಮಕಾರ್ಯೇಣ ಪರಯೋಷಿತಿ ॥ ೬೬೦ ॥**

ಈ ಲೋಕದಲ್ಲಿ ಅಕಾರ್ಯವನ್ನು ಮಾಡುವವರ ಎಣಿಕೆಯಲ್ಲಿ ಪರಸ್ತ್ರೀಯಲ್ಲಿ ಅಭಿಲಾಷಾರೂಪವಾದ ಬಹು ಅಕಾರ್ಯದಿಂದ ನಿನ್ನನ್ನು ಮೊದಲನೆಯವನನ್ನಾಗಿ ಏತಕ್ಕೆ ಮಾಡುತ್ತಿ ?

**ಪ್ರತಿಕೂಲೋಽಸಿ ಪುಣ್ಯಸ್ಯ ದುರ್ವೃತ್ತ್ಯಾ ಪಾಪಸಂಚಯಾತ್ ।**
**ತವಾನನುಗುಣಂ ದೈವಂ ವಿನಾ ದೈವಾತ್ಕುತಃ ಶ್ರಿಯಃ ॥ ೬೬೧ ॥**

ದುರ್ವ್ಯಾಪಾರದಿಂದ ಪಾಪಸಂಚಯವಾಗುವುದರಿಂದ ಪುಣ್ಯಕ್ಕೆ ಪ್ರತಿಕೂಲನಾಗಿರುತ್ತಿ. ನಿನಗೆ ದೈವವು ಅನುಗುಣವಾಗಿಲ್ಲ. ದೈವವಿಲ್ಲದೆ ಸಂಪತ್ತಿಗಳೆಲ್ಲಿಂದುಂಟಾಗುವುವು ?

**ಪರಸ್ತ್ರೀಹರಣಂ ನಾಮ ಪಾಪಂ ಪಾಪೇಷು ದುಸ್ತರಮ್ ।**
**ವಿಸ್ತರೇಣ ಕಿಮುಕ್ತೇನ ನೇಷ್ಯತ್ಯೇನಸ್ತಮಸ್ತಮಮ್ ॥ ೬೬೨ ॥**

ಪರಸ್ತ್ರೀಹರಣವೆಂಬುದು ಪಾಪಗಳಲ್ಲಿ ದುಸ್ತರವಾದ ಪಾಪವಾಗಿದೆ. ವಿಸ್ತೃತವಾದ ಮಾತಿನಿಂದೇನು ? ಪಾಪವು ನಿನ್ನನ್ನು ಮಹಾತಮವೆಂಬ ಏಳನೆಯ ನರಕಕ್ಕೊಯ್ಯುವುದು.

**ಆಸ್ತಾಂ ತಾವದದೋ ಭಾವಿ ಶಾಪೈಃ ಶೀಲಾಲಯಾಃ ಸ್ತ್ರಿಯಃ ।**
**ಅಲಮಾಮೂಲತೋ ದಗ್ಧುಂ ಕುಲಂ ಕ್ರೋಧವಿಧಾಯಿನಾಮ್ ॥**

ಮುಂದಾಗುವುದಿದು ಹಾಗಿರಲಿ. ಶೀಲಕ್ಕೆ ಸ್ಥಾನರಾದ ಸ್ತ್ರೀಯರು ಕೋಪವನ್ನು ಮಾಡುವವರ ಕುಲವನ್ನು ಶಾಪಗಳಿಂದ ಮೂಲಸಹಿತವಾಗಿ ಸುಡುವುದಕ್ಕೆ ಸಾಕು.

**ನಾನಿಚ್ಛಂತೀಂ ಪ್ರತೀಚ್ಛಾಮೀತ್ಯೇಕಮೇವ ತವ ವ್ರತಮ್ ।**
**ಪೋತಭೂತಂ ಭವಾಬ್ಧಿಂ ತತ್ತರೀತುಂ ಕಿಂ ವಿನಾಶಯೇಃ ॥ ೬೬೪ ॥**

ಇಚ್ಛಿಸದಿರುವವಳನ್ನು ತಾನಿಚ್ಛಿಸುವುದಿಲ್ಲವೆಂಬುದೊಂದೇ ನಿನ್ನ ವ್ರತವು ಭವಸಮುದ್ರವನ್ನು ದಾಟುವುದಕ್ಕೆ ಚಿಕ್ಕ ಹಡಗಾಗಿರುವುದು. ಅದನ್ನು ನಾಶಮಾಡುವೆಯಾ ?

**ಪ್ರಾಣೈರಪಿ ಯಶಃ ಕ್ರೇಯಂ ಸತಾಂ ಪ್ರಾಣೈಶ್ಚ ತೇನ ಚ ।**
**ಪಾಪಂ ಕಲ್ಪಾಂತರಸ್ಥಾಯಿ ಕ್ರೀಣಾಸ್ಯಜ್ಞೋಽಯಶಶ್ಚ ಧಿಕ್ ॥ ೬೬೫ ॥**

ಸತ್ಪುರುಷರಿಗೆ ಪ್ರಾಣಗಳಿಂದಲೂ ಯಶಸ್ಸು ಕೊಂಡುಕೊಳ್ಳತಕ್ಕುದಾಗಿದೆ. ಅಜ್ಞಾನಿಯಾದ ನೀನು ಪ್ರಾಣಗಳಿಂದಲೂ ಯಶಸ್ಸಿನಿಂದಲೂ ಕಲ್ಪಾಂತರಸ್ಥಾಯಿಯಾದ ಪಾಪವನ್ನೂ ಅಪಕೀರ್ತಿಯನ್ನೂ ಬೆಲೆಗೆ ತೆಗೆದುಕೊಳ್ಳುತ್ತಿ. ಧಿಕ್ಕಾರ.

**ಕಸ್ಯೇಯಂ ದುಹಿತಾ ಸೀತಾ ಕಿಂ ತನ್ನ ಜ್ಞಾಯತೇ ತ್ವಯಾ ।**
**ಸುಜ್ಞಾನಮಪ್ಯವಿಜ್ಞೇಯಂ ಕಾಮವ್ಯಾಮುಗ್ಧಮಾನಸೈಃ ॥ ೬೬೬ ॥**

ಈ ಸೀತೆಯು ಯಾವನ ಮಗಳೆಂದು ನಿನಗೆ ಗೊತ್ತಿಲ್ಲವೋ ? ಕಾಮದಿಂದ ವ್ಯಾಮೋಹಿತವಾದ ಮನಸ್ಸುಳ್ಳವರು ಸುಜ್ಞಾನವನ್ನೂ ಅರಿಯರು.

**ಅತ್ಯೌತ್ಸುಕ್ಯಮನಾಪ್ತೇಷು ಪ್ರಾಪ್ತೇಷು ಪರಿತೋಷಣಮ್ ।**
**ಭುಜ್ಯಮಾನೇಷು ವೈರಸ್ಯಂ ವಿಷಯೇಷು ನ ವೇತ್ಸಿ ಕಿಮ್ ॥ ೬೬೭ ॥**

ಹೊಂದಲ್ಪಡದಿರುವ ವಿಷಯಗಳಲ್ಲಿ ಅತಿಕುತೂಹಲವೂ ಹೊಂದಲ್ಪಟ್ಟಿರುವ ವಿಷಯಗಳಲ್ಲಿ ಸಂತೋಷವೂ ಅನುಭವಿಸಲ್ಪಡುತ್ತಿರುವ ವಿಷಯಗಳಲ್ಲಿ ವಿರಸವೂ ಉಂಟಾಗುವುವೆಂಬುದನ್ನು ನೀನರಿಯೆಯಾ ?

**ಅಯೋಗ್ಯಾಯಾಮನಾಪ್ಯಾಯಾಂ ನಾಶಹೇತೌ ವೃಥಾ ರತಿಮ್ ।**
**ಮಾಕೃಥಾಃ ಪಾಪದುಃಖಾವಲೇಪಭಾಕ್ಪರಯೋಷಿತಿ ॥ ೬೬೮ ॥**

ಯೋಗ್ಯಳಲ್ಲದವಳೂ ಹೊಂದಲ್ಪಡತಕ್ಕವಳಲ್ಲದವಳೂ ಪಾಪಕ್ಕೆ ಕಾರಣಳೂ ಆದ ಪರಸ್ತ್ರೀಯಲ್ಲಿ ವ್ಯರ್ಥವಾಗಿ ಪಾಪಭಾಗಿಯೂ ದುಃಖಭಾಗಿಯೂ ಅಹಂಕಾರಭಾಗಿಯೂ ಆಗಿ ಆಸೆಪಡಬೇಡ.

**ಆದೇಶಃ ಕೀದೃಶಃ ಸೋಽಪಿ ವಿಸ್ಮಾರ್ಯೋ ಭಾವಿವೇದಿನಾಮ್ ।**
**ಚಕ್ರಸ್ಯ ಪರಿಪಾಕಂ ಚ ಪ್ರಾದುರ್ಭೂತಸ್ಯ ಭಾವಯ ॥ ೬೬೯ ॥**

ಭವಿಷ್ಯತ್ತನ್ನು ತಿಳಿದಿರುವವರ ಆದೇಶವು ಎಂತಹದು ? ಅದನ್ನೂ ಸ್ಮರಿಸಬೇಕು ಪ್ರಾದುರ್ಭವಿಸಿರುವ ಚಕ್ರದ ಪರಿಪಾಕವನ್ನೂ ಭಾವಿಸು.

**ಬಲಾನಾಮಷ್ಟಮಂ ರಾಮಂ ಲಕ್ಷ್ಮಣಂ ಚಾರ್ಧಚಕ್ರಿಣಾಮ್ ।**
**ಆಮನಂತಿ ಪುರಾಣಜ್ಞಾಃ ಪ್ರಾಜ್ಞ ತಚ್ಚ ವಿಚಿಂತಯ ॥ ೬೭೦ ॥**

ಪ್ರಾಜ್ಞನೆ ! ಪುರಾಣವನ್ನು ತಿಳಿದವರು ಬಲಭದ್ರರಲ್ಲಿ ರಾಮನನ್ನು ಎಂಟನೆಯವನನ್ನಾಗಿಯೂ ಅರ್ಧಚಕ್ರಿಗಳಲ್ಲಿ ಲಕ್ಷ್ಮಣನನ್ನು ಎಂಟನೆಯವನನ್ನಾಗಿಯೂ ತಿಳಿಯುತ್ತಾರೆ. ಅದನ್ನೂ ಯೋಚಿಸು.

**ಯಾದೃಜ್ಞಾರ್ಪಯತೋ ದೋಷಸ್ತಾದೃಗರ್ಪಯತಸ್ತವ ।**
**ಸೀತಾಂ ನೇತಿ ವಿನಿಶ್ಚಿತ್ಯ ತಾಂ ರಾಮಾಯ ಸಮರ್ಪಯ ॥ ೬೭೧ ॥**

**ಇತಿ ಲಕ್ಷ್ಮೀಲತಾವೃದ್ಧಿಸಾಧನಂ ಧರ್ಮಶರ್ಮದಮ್ ।**
**ವಚೋಽವೋಚದ್ವಿಚಾರ್ಯೋಚ್ಚೈರ್ಯಶಃ ಕರ್ತುಂ ಶಶಿಪ್ರಭಮ್ ॥**

ಸೀತೆಯನ್ನು ಅರ್ಪಿಸದಿರುವ ನಿನಗೆ ಎಂತಹ ದೋಷವೋ ಆಕೆಯನ್ನು ಅರ್ಪಿಸುವ ನಿನಗೆ ಅಂತಹ ದೋಷವಿಲ್ಲವೆಂದು ನಿಶ್ಚಯಿಸಿ ಆಕೆಯನ್ನು ರಾಮನಿಗೆ ಸಮರ್ಪಿಸು.'' ಈ ರೀತಿಯಾಗಿ ಲಕ್ಷ್ಮಿಯೆಂಬ ಲತೆಯ ವೃದ್ಧಿಗೆ ಸಾಧನವೂ ಧರ್ಮವನ್ನೂ ಸುಖವನ್ನೂ ಕೊಡುವುದೂ ಆದ ವಚನವನ್ನು ಚಂದ್ರನ ಪ್ರಭೆಯಂತೆ ಪ್ರಭೆಯುಳ್ಳ ಯಶಸ್ಸನ್ನುಂಟುಮಾಡುವುದಕ್ಕೋಸ್ಕರ ಚೆನ್ನಾಗಿ ವಿಚಾರಮಾಡಿ ಹೇಳಿದನು.

**ಭಾಷಾಂ ವಿಭೀಷಣಸ್ಯೈವಂ ಭಾಷಮಾಣಾಯ ಭೀಷಣಃ ।**
**ರುಷಿತೋ ರಾವಣೋ ದೂತೆನ್ಯೈಕತ್ವಮುಪಗಮ್ಯ ಮೇ ॥ ೬೭೩ ॥**

**ಪರಾಭವಂ ಸಭಾಮಧ್ಯೇ ಪ್ರಾಗ್ಮುಸ್ಸಹಮಜೀಜನಃ ।**
**ಸಂಪ್ರತ್ಯಪಿ ದುರುಕ್ತ್ಯೋಽಹಂ ತ್ವಯಾ ಸಹಜತಾಬಲಾತ್ ॥ ೬೭೪ ॥**

**ಅವಧ್ಯೋ ಯಾಹಿ ಮದ್ದೇಶಾದಿತ್ಯಭಾಷತ ನಿಷ್ಠುರಮ್ ।**
**ಸೋಽಪಿ ದುಶ್ಚರಿತಸ್ಯಾಸ್ಯ ನಾಶೋಽವಶ್ಯಂ ಭವಿಷ್ಯತಿ ॥ ೬೭೫ ॥**

**ಸಹಾನೇನ ವಿನಾಶೋ ಮಾಂ ದೂಷಯತ್ಯಯಶಸ್ಕರಃ ।**
**ನಿರ್ವಾಸಿತೋಽಹಂ ನಿರ್ಭರ್ತ್ಸ್ಯ ದೇಶಾದ್ಧಿತಮುದಾಹರನ್ ॥ ೬೭೬ ॥**

**ಇಷ್ಟ ಏವ ಕಿಲಾರಣ್ಯೇ ವೃಷ್ಯೋ ದೇವ ಇತಿ ಶ್ರುತಿಃ ।**
**ಪುಣ್ಯಾನ್ಯಮಾದ್ಯ ಸಂಪನ್ನಾ ಯಾಮಿ ರಾಮಕ್ರಮಾಂಬುಜಮ್॥ ೬೭೭ ॥**

**ಇತ್ಯಂತರ್ಗತಮಾಲೋಚ್ಯ ವಿನಿಶ್ಚಿತ್ಯ ವಿಭೀಷಣಃ ।**
**ಜಲಧೇರ್ಜಲಮುಲ್ಲಂಘ್ಯ ಸೌಜನ್ಯಮಿವ ಸತ್ವರಮ್ ॥ ೯೭೮ ॥**

**ಮಹಾನದೀಪ್ರವಾಹೋ ವಾ ವಾರಿಧಿಂ ರಾಮಮಾಸದತ್ ।**
**ಲಕ್ಷ್ಮಣಪ್ರಮುಖಾನ್ಮುಖ್ಯಾನ್ವೇಲಾಲೀಲಾವಹಾನ್ಬಹೂನ್ ॥ ೯೭೯ ॥**

**ಪ್ರತ್ಯುದ್ಗಮಯ್ಯ ವಿಸ್ರಭ್ಯ ತಮಾನೀಯ ಪರೀಕ್ಷಯಾ ।**
**ಸೋಽಪಿ ಜ್ಞಾತ್ವಾನುಭಾವತ್ವಾದೇಕೀಭಾವಮುಪಾಗಮತ್ ॥ ೯೮೦ ॥**

ಈ ರೀತಿಯಾದ ಭಾಷೆಯನ್ನು ಭಾಷಣಮಾಡುತ್ತಿರುವ ವಿಭೀಷಣನಿಗೆ ರೋಷವುಳ್ಳವನೂ ಭಯಂಕರನೂ ಆದ ರಾವಣನು "ಮೊದಲು ನೀನು ದೂತ–ಆಂಜನೇಯನೊಡನೆ ಐಕ್ಯವನ್ನು ಹೊಂದಿ ಸಭಾಮಧ್ಯದಲ್ಲಿ ನನಗೆ ದುಸ್ಸಹವಾದ ತಿರಸ್ಕಾರವನ್ನುಂಟುಮಾಡಿದೆ. ಈಗಲೂ ನೀನು ಒಡಹುಟ್ಟಿರುವಿಕೆಯ ಬಲದಿಂದ ನನ್ನನ್ನು ಬಯ್ದೆ. ನಿನ್ನನ್ನು ಕೊಲ್ಲತಕ್ಕುದಲ್ಲ. ನನ್ನ ದೇಶದಿಂದ ಹೊರಟುಹೋಗು" ಎಂದು ನಿಷ್ಠುರವಾಗಿ ಮಾತನಾಡಿದನು. ಆ ವಿಭೀಷಣನೂ "ದುರಾಚಾರಿಯಾದ ಇವನ ನಾಶವು ಅವಶ್ಯವಾಗಿ ಆಗುವುದು. ಅಪಯಶಸ್ಸನ್ನುಂಟುಮಾಡುವ ವಿನಾಶವು ಇವನೊಡನೆ ನನ್ನನ್ನು ದೂಷಿಸುವುದು. ಬೆದರಿಸಿ ನನ್ನನ್ನು ದೇಶದಿಂದ ಹೊರಡಿಸಿದನು. ಒಳ್ಳೆಯದಾಯಿತು" ಎಂದು ಹೇಳುವವನಾಗಿ "ಇಷ್ಟವಾದ ಅರಣ್ಯದಲ್ಲೇ ದೇವನು ಮಳೆಗರೆದನು' ಎಂಬ ಶ್ರುತಿಯು ನನ್ನ ಪುಣ್ಯದಿಂದ ಈ ದಿವಸ ಪ್ರಾಪ್ತವಾಯಿತು. ರಾಮನ ಚರಣಕಮಲವನ್ನು ಸೇರುತ್ತೇನೆ" ಎಂದು ಹೃದಯಗತವಾದ ವಿಷಯವನ್ನು ಆಲೋಚಿಸಿ ನಿಶ್ಚಯಿಸಿ ಸಮುದ್ರದ ಜಲವನ್ನು, ಸೌಜನ್ಯವು ದಾಟಿತೋ ಎನ್ನುವಂತೆ, ಶೀಘ್ರವಾಗಿ ದಾಟಿ, ಮಹಾನದೀಪ್ರವಾಹವು ಸಮುದ್ರವನ್ನು ಹೊಂದುವಂತೆ, ರಾಮನನ್ನು ಸೇರಿದನು. ಆ ರಾಮಚಂದ್ರನೂ ಅಲೆಗಳ ಲೀಲೆಯನ್ನು ಹೊಂದಿರುವ ಲಕ್ಷ್ಮಣನೇ ಮೊದಲಾದ ಅನೇಕ ಪ್ರಮುಖರನ್ನು ವಿಭೀಷಣನಿಗೆ ಇದಿರ್ಗೊಳಿಸಿ ಅವನನ್ನು ಕರೆದುಕೊಂಡು ಬಂದು ಪರೀಕ್ಷೆಯಿಂದ ನಂಬಿಕೆಯನ್ನು ಹೊಂದಿ ಅನುಭವದಿಂದ ತಿಳಿದು ಐಕ್ಯವನ್ನು ಹೊಂದಿದನು.

**ತತಃ ಕತಿಪಯೈರೇವ ಪ್ರಯಾಣೈರ್ಗತವದ್ಬಲಮ್ ।**
**ಜಲಧೇಸ್ತಟಮಾಶ್ರಿತ್ಯ ಸನ್ನಿವಿಷ್ಟಂ ಸಮಂತತಃ ॥ ೯೮೧ ॥**

ಬಳಿಕ ಕೆಲವೇ ಪ್ರಯಾಣಗಳಿಂದ ಹೋದ ಸೈನ್ಯವು ಸಮುದ್ರತೀರವನ್ನು ಆಶ್ರಯಿಸಿ ಸುತ್ತಲೂ ಕುಳಿತುಕೊಂಡಿತು.

**ತದಾ ತತ್ರಾಣುಮಾನಿತ್ಥಂ ರಾಮಂ ವ್ಯಜ್ಞಾಪಯನ್ಮಿಥಃ ।**
**ದೇವಾದೇಶೋಽಸ್ತಿ ಚೇದ್ಗತ್ವಾ ಲಂಕಾಂ ಶೌರ್ಯೋಽಜ್ಜಿಹೀರ್ಷಯಾ ॥**

**ವನಭಂಗೇನ ತೇ ಶತ್ರೋರ್ಮಾನಭಂಗಂ ಕರೋಮ್ಯಹಮ್ ।**
**ಲಂಕಾದಾಹೇನ ದಾಹಂ ಚ ದೇಹಸ್ಯಾಹಿತಕಾರಿಣಃ ॥ ೯೮೩ ॥**

ಆಗ ಅಲ್ಲಿ ಅಣುಮಂತನು ರಾಮನನ್ನು ಕುರಿತು ರಹಸ್ಯವಾಗಿ ಈ ರೀತಿಯಾಗಿ ವಿಜ್ಞಾಪಿಸಿದನು "ಸ್ವಾಮಿಯೆ! ಅಪ್ಪಣೆಯಾದರೆ ನಾನು ಲಂಕೆಗೆ ಹೋಗಿ ಶೌರ್ಯವನ್ನು ಪ್ರಕಾಶಪಡಿಸಬೇಕೆಂಬ ಇಚ್ಛೆಯಿಂದ ವನದ ಭಂಗವನ್ನು ಮಾಡಿ ನಿನ್ನ ಶತ್ರುವಿನ ಮಾನಭಂಗವನ್ನು ಮಾಡುತ್ತೇನೆ. ಅಹಿತಕಾರಿಯಾದ ರಾವಣನ ಶರೀರದ ದಹನವನ್ನೂ ಲಂಕಾದಹನದಿಂದ ಮಾಡುತ್ತೇನೆ.

**ತಥಾ ಸತಿ ಸ ಮಾನಿತ್ವಾದಸೋಢೇಹಾಗಮಿಷ್ಯತಿ ।**
**ಸ್ಥಾನಭ್ರಂಶಾತ್ಸುಖಚ್ಛೇದ್ಯೋ ನಾಗಚ್ಛೇತ್ತೇಜಸಃ ಕ್ಷತಿಃ ॥ ೯೮೪ ॥**

ಹಾಗಾದರೆ ಆ ರಾವಣನು ಗರ್ವಿಯಾಗಿರುವುದರಿಂದ ಸಹಿಸದಿರುವವನಾಗಿ ಇಲ್ಲಿಗೆ ಬರುವನು. ಸ್ಥಾನಭ್ರಷ್ಟದಿಂದ ಸುಖವಾಗಿ ನಾಶಮಾಡಲ್ಪಡತಕ್ಕವನಾಗುತ್ತಾನೆ. ಬಾರದಿದ್ದರೆ ಅವನ ತೇಜಸ್ಸಿಗೆ ಹಾನಿಯುಂಟಾಗುವುದು."

**ಇತಿ ಶ್ರುತ್ವಾಸ್ಯ ವಿಜ್ಞಪ್ತಿಂ ತದಸ್ತ್ವಿತ್ಯವದನ್ನೃಪಃ ।**
**ಸಹಾಯಾಂಶ್ಚಾದಿಶತ್ತಸ್ಯ ವಿದ್ಯೇಶಾನ್ ಶೌರ್ಯಶಾಲಿನಃ ॥ ೯೮೫ ॥**

ಈ ರೀತಿಯಾಗಿ ಈ ಅಣುಮಂತನ ವಿಜ್ಞಾಪನೆಯನ್ನು ಕೇಳಿ ರಾಜನು "ಹಾಗೆಯೇ ಆಗಲಿ" ಎಂದು ಹೇಳಿದನು. ಅವನಿಗೆ ಪರಾಕ್ರಮಿಗಳಾದ ವಿದ್ಯಾಧರರನ್ನು ಸಹಾಯಕರನ್ನಾಗಿಯೂ ಆಜ್ಞೆಮಾಡಿದನು.

**ಲಬ್ಧಾಜ್ಞಃ ಸೋಽಪಿ ಸಂತುಷ್ಯ ಸದ್ಯೋ ವಾನರವಿದ್ಯಯಾ ।**
**ಪ್ರಾದುರ್ಭಾವಿತದುಷ್ಪ್ರೇಕ್ಷ್ಯನಾನಾವಾನರಸೇನಯಾ ॥ ೯೮೬ ॥**

**ದ್ರುತಂ ವಾರಾಶಿಮುಲ್ಲಂಘ್ಯ ವಿಕ್ರಮಾದ್ವನಪಾಲಕಾನ್ ।**
**ಆಕ್ರಮ್ಯ ನಿಗ್ರಹಂ ಕೃತ್ವಾ ವನಭಂಗಂ ವ್ಯಧಾತ್ಕ್ರುಧಾ ॥ ೯೮೭ ॥**

ಆಜ್ಞೆಯನ್ನು ಪಡೆದ ಆ ಅಣುಮಂತನೂ ಸಂತುಷ್ಟನಾಗಿ ಆಗಲೇ ವಾನರ ವಿದ್ಯೆಯಿಂದ ಉಂಟುಮಾಡಲ್ಪಟ್ಟುದೂ ನೋಡುವುದಕ್ಕೆ ಅಸಹ್ಯವೂ ಆದ ವಿವಿಧ ವಾನರಸೇನೆಯೊಡನೆ ಶೀಘ್ರವಾಗಿ ಸಮುದ್ರವನ್ನು ದಾಟಿ ಪರಾಕ್ರಮದಿಂದ ವನ ಪಾಲಕರನ್ನು ಆಕ್ರಮಿಸಿ ಕೋಪದಿಂದ ಅವರನ್ನು ನಿಗ್ರಹಿಸಿ ವನಭಂಗವನ್ನು ಮಾಡಿದನು.

**ಊರ್ಧ್ವೀಕೃತಕರಾ ಘೋರಂ ಕ್ರೋಶಂತೋ ವನಪಾಲಕಾಃ ।**
**ಪ್ರಾವಿಶನ್ನಗರೀಂ ಪೌರಾನ್ ಶ್ರಾವಯಂತೋಽಶ್ರುತಶ್ರುತಿಮ್ ॥ ೯೮೮ ॥**

ಕೈಗಳನ್ನು ಮೇಲಕ್ಕೆತ್ತಿರುವ ವನಪಾಲಕರು ಭಯಂಕರವಾಗಿ ಕೂಗುವವರಾಗಿಯೂ ಪುರನಿವಾಸಿಗಳಿಗೆ ಅಶ್ರುತವಿಷಯವನ್ನು ಕೇಳಿಸುವವರಾಗಿಯೂ ನಗರವನ್ನು ಪ್ರವೇಶಿಸಿದರು.

**ತದಾ ರಾಕ್ಷಸವಿದ್ಯೋದ್ಯದ್ಧ್ವಜಮಾಲೋಪಲಕ್ಷಿತಾಃ ।**
**ಅಭಿಯಾತಾ ಪುರೀರಕ್ಷಾ ಯೋದ್ಧುಂ ಪವನನಂದನಮ್ ॥ ೯೮೯ ॥**

ಆಗ ರಾಕ್ಷಸವಿದ್ಯೆಯಿಂದುಂಟಾದ ಬಾವುಟಗಳ ಮಾಲೆಗಳಿಂದ ಕೂಡಿರುವ ನಗರರಕ್ಷಕರು ಯುದ್ಧಮಾಡುವುದಕ್ಕೋಸ್ಕರ ಪವನಕುಮಾರನನ್ನು ಇದಿರಿಸಿದರು.

**ಅಥಾನಿಲಸುತಾದಿಷ್ಟಾ ವಾನರಾನೀಕನಾಯಕಾಃ ।**
**ತಾನಭಂಜನ್ ಸಮುದ್ಧೃತ್ಯ ಪ್ರಹೃತ್ಯ ವನಪಾದಪೈಃ ॥ ೯೯೦ ॥**

ಬಳಿಕ ವಾಯುಪುತ್ರನಿಂದ ಆಜ್ಞಾಪಿಸಲ್ಪಟ್ಟ ವಾನರಸೇನಾನಾಯಕರು ಅವರನ್ನು ಎತ್ತಿ ವನವೃಕ್ಷಗಳಿಂದ ಹೊಡೆದು ಭಂಗಪಡಿಸಿದರು.

**ತತಃ ಸ್ಫುರನ್ಮಹಾಜ್ವಾಲವಿದ್ಯಯಾಸೌ ಬಹಿಃಪುರಮ್ ।**
**ನಿರಧಾಕ್ಷೀದಧಿಕ್ಷಿಪ್ಯ ರೂಕ್ಷರಕ್ಷೋಬಲಂ ಬಲೀ ॥ ೯೯೧ ॥**

ಬಳಿಕ ಈ ಬಲಶಾಲಿಯಾದ ಆಂಜನೇಯನು ಪ್ರಕಾಶಮಾನವಾದ ಮಹಾಜ್ವಾಲವಿದ್ಯೆಯಿಂದ ನಗರದ ಹೊರಗೆ ಕ್ರೂರಿಗಳಾದ ರಾಕ್ಷಸರ ಸೈನ್ಯವನ್ನು ಆಕ್ರಮಿಸಿ ಸುಟ್ಟುಬಿಟ್ಟನು.

**ಏವಂ ರಾವಣದುರ್ವಾರಪ್ರತಾಪಪ್ರೋದ್ಯತದ್ರುಮಮ್ ।**
**ಪ್ರೋನ್ಮೂಲ್ಯ ವಾನರಾನೀಕನಾಯಕೋ ರಾಮಮಾಯಯೌ ॥ ೯೯೨ ॥**

ಈ ರೀತಿಯಾಗಿ ರಾವಣನ ದುರ್ನಿವಾರ್ಯವಾದ ಪ್ರತಾಪವೆಂಬ ಉನ್ನತವಾದ ವೃಕ್ಷವನ್ನು ಕಿತ್ತು ಕಪಿಸೇನಾನಾಯಕನಾದ ಆಂಜನೇಯನು ರಾಮನನ್ನು ಸೇರಿದನು.

**ಸನ್ನಾಹ್ಯ ರಾಘವಃ ಸ್ಥಿತ್ವಾ ಬಲಂ ಸಂಗ್ರಾಮಸಮ್ಮುಖಮ್ ।**
**ನಾಗತೋ ರಾವಣಃ ಕೇನ ಹೇತುನೇತಿ ವಿಭೀಷಣಮ್ ॥ ೯೯೩ ॥**

**ಅಪ್ರಾಕ್ಷೀದಥ ಸೋಽಪ್ಯಾಖ್ಯಲ್ಲಂಕಾಯಾಂ ನಾಸ್ತಿ ರಾವಣಃ ।**
**ವಾಲಿಲೋಕಾಂತರಾಪತ್ತಿಂ ಸುಗ್ರೀವಾಣುಮತೋರಪಿ ॥ ೯೯೪ ॥**

ವಿದ್ಯಾಬಲಾವಲೇಪಿತ್ವಮವಗಮ್ಯ ಸ್ವಯಂ ಚ ಸಃ ।
ನಿವೇಶ್ಯ ನಿಜರಕ್ಷಾಯಾಂ ಸುತಮಿಂದ್ರಜಿದಾಹ್ವಯಮ್ ॥ ೯೯೫ ॥

ಅಷ್ಟೋಪವಾಸಮಾಸಾದ್ಯ ಸಮ್ಯಙ್ನಿಯಮಿತೇಂದ್ರಿಯಃ ।
ಆದಿತ್ಯಪಾದಶೈಲೇಂದ್ರೇ ವಿದ್ಯಾಃ ಸಂಸಾಧಯನ್ ಸ್ಥಿತಃ ॥ ೯೯೬ ॥

ರಾಕ್ಷಸಾದಿಮಹಾವಿದ್ಯಾಸಿದ್ಧಾವುಪಚಿತೋ ಭವೇತ್ ।
ತದ್ವಿಘ್ನಪೂರ್ವಕಂ ಲಂಕಾಮವಷ್ಟಭ್ಯ ನಿವೇಶನಮ್ ॥ ೯೯೭ ॥

ಪ್ರಯೋಜನಮಿತಿ ಶ್ರದ್ಧಿತಂ ಸೀತಾಪತಿಂ ಪ್ರತಿ ।
ನಾಯಕಾಭ್ಯಾಂ ತತಃ ಸುಗ್ರೀವಾಣುಮಂತೌ ಸ್ವಸಾಧಿತಾಃ ॥ ೯೯೮ ॥

ದತ್ವಾ ಗರುಡಸಿಂಹಾದಿವಾಹಿನ್ಯೌ ಬಂಧಮೋಚನೀಮ್ ।
ಹನನಾವರಣೀಂ ವಿದ್ಯಾಶ್ಚತಸ್ರೋಽಸ್ಯ ಪೃಥಕ್ ಪೃಥಕ್ ॥ ೯೯೯ ॥

ಪ್ರಜ್ಞಪ್ತಿವಿದ್ಯಾವಿಕೃತವಿಮಾನೇನ ಮಹಾಬಲಮ್ ।
ಲಂಕಾಪುರಬಹಿರ್ಭಾಗೇ ತನ್ನಿವೇಶಯತಃ ಸ್ಮ ತೌ ॥ ೧೦೦೦ ॥

ರಾಘವನು ಯುದ್ಧಾಭಿಮುಖವಾಗಿ ಸೈನ್ಯವನ್ನು ಸಿದ್ಧಗೊಳಿಸಿದ್ದು "ರಾವಣನು ಯಾವ ಕಾರಣದಿಂದ ಬರಲಿಲ್ಲ ?" ಎಂದು ವಿಭೀಷಣನನ್ನು ಕೇಳಿದನು– ಬಳಿಕ ಆ ವಿಭೀಷಣನೂ "ರಾವಣನು ಲಂಕೆಯಲ್ಲಿಲ್ಲ. ವಾಲಿಯ ಲೋಕಾಂತರಪ್ರಾಪ್ತಿಯನ್ನೂ ಸುಗ್ರೀವಾಣುಮಂತರ ವಿದ್ಯೆಯನ್ನೂ ಸಾಮರ್ಥ್ಯವನ್ನೂ ದರ್ಪವನ್ನೂ ತಿಳಿದು ಅವನು ತಾನೂ ತನ್ನ ರಕ್ಷಣೆಯಲ್ಲಿ ಪುತ್ರನಾದ ಇಂದ್ರಜಿತ್ತನನ್ನು ನೇಮಿಸಿ ಎಂಟು ಉಪವಾಸಗಳನ್ನು ಹೊಂದಿ ಚೆನ್ನಾಗಿ ಇಂದ್ರಿಯದ ಮನವುಳ್ಳವನಾಗಿಯೂ ಆದಿತ್ಯಪಾದಪರ್ವತದಲ್ಲಿ ವಿದ್ಯೆಗಳನ್ನು ಸಾಧಿಸುವವನಾಗಿಯೂ ಇರುತ್ತಾನೆ. ರಾಕ್ಷಸಾದಿಮಹಾವಿದ್ಯೆಗಳ ಸಿದ್ಧಿಯಲ್ಲಿ ನಿಶ್ಚಲನಾಗಿರುವನು. ಆ ವಿದ್ಯಾವಿಘ್ನಪೂರ್ವಕವಾಗಿ ಲಂಕೆಯನ್ನಾಕ್ರಮಿಸಿ ಸೈನ್ಯವನ್ನಿರಿಸುವುದು ಪ್ರಯೋಜನಕಾರಿಯಾಗುವುದು" ಎಂದು ನಂಬಿಕೆಯುಳ್ಳವನಾದ ಸೀತಾಪತಿಯನ್ನು ಕುರಿತು ಹೇಳಿದನು. ಬಳಿಕ ಸುಗ್ರೀವನೂ ಅಣುಮಂತನೂ ತಾವು ಸಾಧಿಸಿದ್ದ ಗರುಡವಾಹಿನೀ ಸಿಂಹವಾಹಿನೀ ಬಂಧಮೋಚನೀ ಹನನಾವರಣಿಗಳೆಂಬೀ ನಾಲ್ಕು ವಿದ್ಯೆಗಳನ್ನು ನಾಯಕರಿಗೆ–ರಾಮಲಕ್ಷ್ಮಣರಿಗೆ ಬೇರೆ ಬೇರೆಯಾಗಿ ಕೊಟ್ಟು ಅವರು ಪ್ರಜ್ಞಪ್ತಿ ವಿದ್ಯೆಯಿಂದ ನಿರ್ಮಿತವಾದ ವಿಮಾನದಿಂದ ಆ ಸೇನೆಯನ್ನೆಲ್ಲ ಲಂಕಾಪುರದ ಹೊರಗಿನ ಭಾಗದಲ್ಲಿರಿಸಿದರು.

ನಭಶ್ಚರಕುಮಾರೇಷು ತದಾ ರಾಮಾಜ್ಞಯಾ ಗಿರಿಮ್ ।
ಸಂಪ್ರಾಪ್ಯ ಯುಧ್ಯಮಾನೇಷು ರಾವಣಸ್ಯಾಗ್ರಸೂನುನಾ ॥ ೧೦೦೧ ॥

ಸಂಭೂಯೇಂದ್ರಜಿತಾ ಯೂಯಂ ಯುಧ್ಯಧ್ವಮಿತಿ ಸ ಕ್ರುಧಾ ।
ಪ್ರೇಷಿತಾಃ ಖಚರಾಧೀಶಾ ಪ್ರಾಚ್ಯಾಃ ಸರ್ವಾಃ ಸ್ವದೇವತಾಃ ॥ ೧೦೦೨ ॥

ಇಯಂತಂ ಕಾಲಮಸ್ಮಾಭಿರ್ಭವತ್ಪುಣ್ಯಬಲೋದಯಾತ್ ।
ತ್ವಯಾಭಿಲಷಿತಂ ಕಾರ್ಯಂ ಸಾಧಿತಂ ಪುಣ್ಯಸಂಕ್ಷಯೇ ॥ ೧೦೦೩ ॥

ಸಮರ್ಥಾ ನೇತ್ಯಸಾವುಕ್ತೋ ವ್ಯಕ್ತಂ ತಾಭಿರ್ದಶಾನನಃ ।
ಭವತೀಭಿರ್ವರಾಕೀಭಿರ್ಯಾತ ಕಿಂ ಮಮ ಸಾಧ್ಯತೇ ॥ ೧೦೦೪ ॥

ಹನ್ಮ್ಯಹಂ ಪೌರುಷೇಣೈವ ನೃಮೃಗಾನ್ ಸಹಖೇಚರಾನ್ ।
ಸಹಾಯೈಃ ಸಾಧಿತಂ ಕಾರ್ಯಂ ಲಜ್ಜಾಯೈ ನನು ಮಾನಿನಾಮ್ ॥

ಇತಿ ಕ್ರುದ್ಧಃ ಪುರೀಮಾರತ್ತದೈವಾಸೌ ಸಹೇಂದ್ರಜಿತ್ ।
ದುಶ್ಚೇಷ್ಟಸ್ಯಾಸ್ತಪುಣ್ಯಸ್ಯ ಭೂತಂ ಭಾವಿ ಚ ನಶ್ಯತಿ ॥ ೧೦೦೬ ॥

ಆಗ ರಾಮನ ಆಜ್ಞೆಯಿಂದ ಖೇಚರಕುಮಾರರು ಸೇರಿ ಆದಿತ್ಯಪಾದಗಿರಿಯನ್ನು ಹೊಂದಿ ರಾವಣನ ಜ್ಯೇಷ್ಠಪುತ್ರನಾದ ಇಂದ್ರಜಿತ್ತನೊಡನೆ ಯುದ್ಧಮಾಡುತ್ತಿರಲು ಕೋಪಯುಕ್ತನಾದ ಖೇಚರಾಧಿಪತಿ–ರಾವಣನಿಂದ "ನೀವು ಯುದ್ಧಮಾಡಿರಿ" ಎಂದು ಕಳುಹಿಸಲ್ಪಟ್ಟ ಮೊದಲಿನ ಎಲ್ಲಾ ತನ್ನ ದೇವತೆಗಳು "ಇಷ್ಟು ಕಾಲದವರೆಗೆ ನಿನ್ನ ಪುಣ್ಯಬಲದ ಉದಯದಿಂದ ನಾವುಗಳು ನಿನ್ನಿಂದ ಇಚ್ಛಿಸಲ್ಪಟ್ಟ ಕಾರ್ಯವನ್ನು ಸಾಧಿಸಿದೆವು. ಈಗ ನಿನ್ನ ಪುಣ್ಯಕ್ಷಯವಾಗುತ್ತಿರಲು ಅಂತಹ ಕಾರ್ಯವನ್ನು ಸಾಧಿಸುವುದಕ್ಕೆ ನಾವು ಸಮರ್ಥರಲ್ಲ" ಎಂದು ಆ ದೇವತೆಗಳು ಈ ದಶಮುಖನಿಗೆ ವ್ಯಕ್ತವಾಗಿ ಹೇಳಿದುವು. ಕುಪಿತನಾದ ಈ ರಾವಣನು "ಶೋಚನೀಯರಾದ ನಿಮ್ಮಗಳಿಂದ ನನಗೇನು ಸಾಧಿಸಲ್ಪಡುತ್ತದೆ ? ಹೋಗಿರಿ. ನಾನು ಪೌರುಷದಿಂದಲೇ ಖೇಚರಸಹಿತರಾದ ಮನುಷ್ಯಮೃಗಗಳನ್ನು ಕೊಲ್ಲುತ್ತೇನೆ. ಸಹಾಯಗಳಿಂದ ಸಾಧಿಸಲ್ಪಟ್ಟ ಕಾರ್ಯವು ಮಾನಶಾಲಿಗಳಿಗೆ ಲಜ್ಜೆಗೇ ಕಾರಣವಾಗುವುದು" ಎಂದು ಆ ದೇವತೆಗಳಿಗೆ ಹೇಳಿ ಆಗಲೇ ಇಂದ್ರಜಿತ್ತಿನೊಡನೆ ಪಟ್ಟಣವನ್ನು ಸೇರಿದನು. ದುರ್ವ್ಯಾಪಾರವುಳ್ಳವನೂ ಪುಣ್ಯಹೀನನೂ ಆದ ಮನುಷ್ಯನ ಹಿಂದಿನ ಮತ್ತು ಮುಂದಿನ ಸಹಾಯಸಂಪತ್ತಿಯು ನಾಶವಾಗುತ್ತದೆ.

ಪರಿವಾರಮುಖಾದ್ಜ್ಞಾತ್ವಾ ಪರೈರ್ಲಂಕೋಪರೋಧನಮ್ ।
ಹರಿಣೈರ್ಹರಿರಾರುದ್ಧಃ ಪಶ್ಯ ಕಾಲವಿಪರ್ಯಯಮ್ ॥ ೧೦೦೭ ॥

ಅಥವಾಸನ್ನಮೃತ್ಯೂನಾಂ ಭವೇತ್ಪ್ರಕೃತಿವಿಭ್ರಮಃ ।
ಇತಿ ಗರ್ಜನ್ಸಮಾಕ್ರಾಂತತುಂಗಮಾತಂಗಸಿಂಹವತ್ ॥ ೧೦೦೮ ॥

ರವಿಕೀರ್ತಿಂ ಸ್ವಸೇನಾನ್ಯಂ ಹರಿಣಧ್ವಜಮಾದಿಶತ್ ।
ಯುದ್ಧಾಯಾಸ್ಫಾಲ್ಯತಾಂ ಭೇರೀ ಶತ್ರುಪಕ್ಷಕ್ಷಯಾವಹಾ ॥ ೧೦೦೯ ॥

ಶತ್ರುಗಳು ಲಂಕೆಯನ್ನು ಮುತ್ತಿದರೆಂಬುದನ್ನು ಪರಿವಾರಜನರ ಮುಖದಿಂದ ತಿಳಿದು ರಾವಣನು "ಹರಿಣಗಳು ಸಿಂಹವನ್ನು ಮುತ್ತಿದುವು. ಕಾಲವ್ಯತ್ಯಾಸವನ್ನು ನೋಡು. ಅಥವಾ ಸಮೀಪಿಸಿರುವ ಮರಣವುಳ್ಳವರಿಗೆ ಚಿತ್ತಭ್ರಮೆಯಾಗುವುದು" ಎಂದು ದೊಡ್ಡ ಆನೆಯನ್ನಾಕ್ರಮಿಸಿದ ಸಿಂಹದಂತೆ ಗರ್ಜಿಸುವವನಾಗಿ ಹರಿಣಧ್ವಜವುಳ್ಳ ರವಿಕೀರ್ತಿಯೆಂಬ ಸೇನಾಪತಿಗೆ "ಶತ್ರುಪಕ್ಷವನ್ನು ನಾಶಮಾಡುವ ಭೇರಿಯು ಯುದ್ಧಕೋಸ್ಕರ ಹೊಡೆಯಲ್ಪಡಲಿ" ಎಂದು ಆಜ್ಞೆಮಾಡಿದನು.

ಇತ್ಯಾದಿಷ್ಟಸ್ತದೈವಾಸೌ ತಥಾ ಕೃತ್ವಾಖಿಲಂ ಬಲಮ್ ।
ಕಾಲಾಂತೇ ಕಾಲದೂತೋ ವಾ ಸಹಸೈಕೀಚಕಾರ ತತ್ ॥ ೧೦೧೦ ॥

ಈ ರೀತಿಯಾಗಿ ಆಜ್ಞಾಪಿಸಲ್ಪಟ್ಟ ಈ ಸೇನಾಪತಿಯು ಆಗಲೇ ಹಾಗೆಮಾಡಿ, ಪ್ರಳಯಕಾಲದಲ್ಲಿ ಯಮನ ದೂತನಂತೆ, ಶೀಘ್ರವಾಗಿ ಎಲ್ಲಾ ಸೈನ್ಯವನ್ನು ಒಟ್ಟುಗೂಡಿಸಿದನು.

ಅಥ ನಿರ್ಗತ್ಯ ಲಂಕಾಯಾ ವಿಭಕ್ತನಿಜಸಾಧನಃ ।
ಸ ಕುಂಭೇನ ನಿಕುಂಭೇನ ಕುಂಭಕರ್ಣೇನ ಚಾಪರೈಃ ॥ ೧೦೧೧ ॥

ಸಹಜೈರಿಂದ್ರಜಿನ್ಮುಖ್ಯೇನೇಂದ್ರಾಖ್ಯೇನೇಂದ್ರಕೀರ್ತಿನಾ ।
ಇಂದ್ರವರ್ಮಾಭಿಧಾನೇನ ತನೂಜೈರಪರೈರಪಿ ॥ ೧೦೧೨ ॥

ಮಹಾಮುಖಾತಿಕಾಯಾರ್ಕದುರ್ಮುಖಾಖ್ಯೈರ್ಮಹಾಬಲೈಃ ।
ಖರದೂಷಣಧೂಮ್ರಾಕ್ಷಪ್ರಮುಖೈಶ್ಚ ಖಗೇಶ್ವರೈಃ ॥ ೧೦೧೩ ॥

ಇವ ಕ್ರೂರಗ್ರಹೈರ್ಭಾಸ್ವಾನ್ಸೈದಾಘಃ ಪರಿವಾರಿತಃ ।
ತ್ರಿಜಗದ್ಗ್ರಸನಾಲೋಲಕಾಲಲೀಲಾಂ ವಿಡಂಬಯನ್ ॥ ೧೦೧೪ ॥

ನ ತೌ ಮಮ ಪುರಃ ಸ್ಥಾತುಂ ಸಮರ್ಥೌ ರಾಮಲಕ್ಷ್ಮಣೌ ।
ತಿಷ್ಠತಃ ಶಶಗೋಮಾಯೂ ಕಿಂ ಪುರಃ ಸಂಹತೌ ಹರೇಃ ॥ ೧೦೧೫ ॥

**ಅರಾವಣಂ ಭವೇದದ್ಯ ಜಗದೇತತ್ಸತೋಸ್ತಯೋಃ ।**
**ಸಹಾವಶ್ಯಮಹಂ ತಾಭ್ಯಾಂ ಪಾಲಯಾಮಿ ಮಹೀಂ ನ ಹಿ ॥ ೧೦೧೬ ॥**

**ಇತ್ಯಾದ್ಯತರ್ಕಿತಾಯಾತನಿಜಾಮಂಗಲಮಾಲಪನ್ ।**
**ಕಾಲಮೇಘ ಮಹಾಗಂಧಗಜಸ್ಕಂಧಮಧಿಷ್ಠಿತಃ ॥ ೧೦೧೭ ॥**

**ಪ್ರತಿವಾತಹತಪ್ರೋದ್ಯದ್ರಾಕ್ಷಸಧ್ವಜರಾಜಿತಃ ।**
**ಅಗ್ರೇಸರಸ್ಫುರಚ್ಚಕ್ರಚ್ಛತ್ರಸ್ಥಗಿತಭಾಸ್ಕರಃ ॥ ೧೦೧೮ ॥**

**ನಾನಾನೂನಾನಕಧ್ವಾನಭಿನ್ನಾಶಾನೇಕಪಶ್ರುತಿಃ ।**
**ಖೇಚರಾಧೀಶ್ವರೋ ಯೋದ್ಧುಂ ಸನ್ನದ್ಧೋಸ್ಥಾನ್ಮದೋದ್ಧತಃ॥ ೧೦೧೯ ॥**

ಬಳಿಕ ವಿಭಾಗಿಸಲ್ಪಟ್ಟ ತನ್ನ ಸಾಧನವುಳ್ಳವನಾದ ಆ ಖೇಚರಾಧಿಪತಿ–ರಾವಣನು ಕುಂಭನೊಡನೆಯೂ ನಿಕುಂಭನೊಡನೆಯೂ ಕುಂಭಕರ್ಣನೊಡನೆಯೂ ಬೇರೆಯವರೊಡನೆಯೂ ಲಂಕೆಯಿಂದ ಹೊರಟು ಸಹೋದರರಿಂದಲೂ ಮುಖ್ಯನಾದ ಇಂದ್ರಜಿತ್ತಿನಿಂದಲೂ ಇಂದ್ರನೆಂಬವನಿಂದಲೂ ಇಂದ್ರಕೀರ್ತಿಯಿಂದಲೂ ಇಂದ್ರವರ್ಮನೆಂಬವನಿಂದಲೂ ಬೇರೆಮಕ್ಕಳಿಂದಲೂ ಮಹಾಬಲವುಳ್ಳವರಾದ ಮಹಾಮುಖ, ಅತಿಕಾಯ, ಅರ್ಕ, ದುರ್ಮುಖರೆಂಬವರಿಂದಲೂ ಖರದೂಷಣ ಧೂಮ್ರಾಕ್ಷಮೊದಲಾದ ಖೇಚರಾಧಿಪತಿಗಳಿಂದಲೂ, ಕ್ರೂರಗ್ರಹಗಳಿಂದ ಬೇಸಿಗೆಯ ಸೂರ್ಯನಂತೆ, ಸುತ್ತಲ್ಪಟ್ಟವನಾಗಿಯೂ ಮೂರು ಲೋಕಗಳನ್ನು ನುಂಗುವುದರಲ್ಲಿ ಆಸಕ್ತನಾದ ಯಮನ ಲೀಲೆಯನ್ನು ಅನುಕರಣಮಾಡುವವನಾಗಿಯೂ "ಆ ರಾಮಲಕ್ಷ್ಮಣರು ನನ್ನ ಮುಂದೆ ನಿಲ್ಲುವುದಕ್ಕೆ ಸಮರ್ಥರಲ್ಲ. ಮೊಲವೂ ನರಿಯೂ ಸಿಂಹದ ಮುಂದೆ ಸೇರಿ ನಿಲ್ಲುತ್ತವೇನು ? ಆ ರಾಮಲಕ್ಷ್ಮಣರಿರುತ್ತಿರಲು ಈ ಜಗತ್ತು ರಾವಣನಿಲ್ಲದುದಾಗುವುದು. ಅವರುಗಳೊಡನೆ ನಾನು ಅವಶ್ಯವಾಗಿ ಪೃಥ್ವಿಯನ್ನು ಪಾಲಿಸುವುದಿಲ್ಲ" ಎಂಬೀ ಮೊದಲಾದ ಮತ್ತು ಊಹಿಸಲ್ಪಡದೆ ಬಾಯಿಯಿಂದ ಬಂದ ತನ್ನ ಅಮಂಗಲವನ್ನು ನುಡಿಯುವವನಾಗಿಯೂ ಕಾಲಮೇಘವೆಂಬ ದೊಡ್ಡ ಆನೆಯ ಹೆಗಲಿನಲ್ಲಿ ಕುಳಿತವನಾಗಿಯೂ ಇದಿರುಗಾಳಿಯಿಂದ ಹೊಡೆಯಲ್ಪಟ್ಟ ಎತ್ತರವಾದ ರಾಕ್ಷಸಧ್ವಜಗಳಿಂದ ಶೋಭಿತನಾಗಿಯೂ ಮುಂದೆ ಹೋಗುತ್ತಿರುವ ಪ್ರಕಾಶಮಾನವಾದ ಚಕ್ರದಿಂದಲೂ ಛತ್ರದಿಂದಲೂ ಮರೆಮಾಡಲ್ಪಟ್ಟ ಸೂರ್ಯವುಳ್ಳವನಾಗಿಯೂ ದಿಗ್ಗಜಗಳ ಕಿವಿಗಳನ್ನು ಭೇದಿಸುವ ವಿವಿಧಮಹಾಭೇರಿಗಳ ಧ್ವನಿಯುಳ್ಳವನಾಗಿಯೂ ಯುದ್ಧಮಾಡುವುದಕ್ಕೆ ಸನ್ನದ್ಧನಾಗಿಯೂ ಮದೋದ್ಧತನಾಗಿಯೂ ಇದ್ದನು.

**ಇತೋ ರಾಮಸ್ತದಾಯಾನಕಥಾಕರ್ಣನಘೂರ್ಣಿತಃ ।**
**ದುರ್ನಿವಾರೋ ರಿಪೂನ್ ಕೋಪಪಾವಕೇನೇವ ನಿರ್ದಹನ್ ॥ ೧೦೨೦ ॥**

**ಚಕ್ಷುಃಪ್ರಾಂತವಿನಿರ್ಗಚ್ಛಜ್ಜ್ವಲದ್ವೀಕ್ಷಾಶಿಖಾವಲೀಃ ।**
**ಉಲ್ಕಾಲೀರಿವಾಯೋದ್ಧುಂ ನಿಕ್ಷಿಪನ್ ದಿಕ್ಷು ಮಂಕ್ಷು ಸಃ॥ ೧೦೨೧ ॥**

**ಮಹಾವಿದ್ಯಾಸಮೂಹಾಪ್ತಪಂಚಮಾಂಗಬಲಾನ್ವಿತಃ ।**
**ತಾಲಧ್ವಜಃ ಸಮಾರುಹ್ಯ ಗಜಮಂಜನಪರ್ವತಮ್ ॥ ೧೦೨೨ ॥**

**ಲಕ್ಷ್ಮಣೋಪಿ ಮುಖಾಲಂಬಿವಿಷಧೃದ್ಗರುಡಧ್ವಜಃ ।**
**ಉದಯಾದ್ರಿಮಿವಾರುಹ್ಯ ಗಜಂ ವಿಜಯಪರ್ವತಮ್ ॥ ೧೦೨೩ ॥**

**ಜಿನೇಶಿನಂ ಪ್ರಣಮ್ಯೈತೌ ವಿಶ್ವವಿಘ್ನವಿನಾಶಿನಮ್ ।**
**ಸುಗ್ರೀವಾನಿಲಪುತ್ರಾದಿಖಗೇಶೈಃ ಪರಿವೇಷ್ಟಿತೌ ॥ ೧೦೨೪ ॥**

**ಸೂರ್ಯಾಚಂದ್ರಮಸೌ ವಾರಿತಮೋ ಹಂತುಂ ಸಮುದ್ಯತೌ ।**
**ಭಾಸಮಾನೌ ನಭೋಭಾಗೇ ದೃಪ್ತದುರ್ಮತಿಘಾತಿನೌ ॥ ೧೦೨೫ ॥**

**ರಾವಣಾಭಿಮುಖಂ ಯೋದ್ಧುಂ ವಿಭಜ್ಯ ಧ್ವಜಿನೀಂ ನಿಜಾಮ್ ।**
**ಯುದ್ಧಭೂಮಿಮಧಿಷ್ಠಾಯ ತಸ್ಥತುಸ್ತ್ರಾಸಿತದ್ವಿಷೌ ॥ ೧೦೨೬ ॥**

ಇತ್ತ ಆ ರಾಮಚಂದ್ರನು ರಾವಣನು ಬರುವ ಕಥೆಯನ್ನು ಕೇಳಿ ತಲೆದೂಗಿದವನೂ ದುರ್ನಿವಾರ್ಯನೂ ಕೋಪವೆಂಬ ಬೆಂಕಿಯಿಂದ ಶತ್ರುಗಳನ್ನು ಸುಡುವವನಂತಿರುವವನೂ ಕಡೆಗಣ್ಣುಗಳಿಂದ ಹೊರಡುತ್ತಿರುವ ಪ್ರಕಾಶಮಾನವಾದ ನೋಟವೆಂಬ ಜ್ವಾಲೆಗಳ ಸಮೂಹಗಳನ್ನು, ಕೊಳ್ಳಿಗಳ ಸಮೂಹಗಳನ್ನೋಪಾದಿಯಲ್ಲಿ ಯುದ್ಧಮಾಡುವುದಕ್ಕೋಸ್ಕರ ದಿಕ್ಕುಗಳಲ್ಲಿ ಶೀಘ್ರವಾಗಿ ಪಸರಿಸುವವನೂ ಮಹಾವಿದ್ಯೆಗಳ ಸಮೂಹದಿಂದ ಪಡೆಯಲ್ಪಟ್ಟ ಐದನೆಯ ಅಂಗಬಲಯುಕ್ತನೂ ತಾಲಧ್ವಜವುಳ್ಳವನೂ ಆಗಿ ಅಂಜನಪರ್ವತವೆಂಬ ಗಜವನ್ನೇರಿ, ಲಕ್ಷ್ಮಣನೂ ಮುಖವನ್ನವಲಂಬಿಸಿರುವ ವಿಷವನ್ನು ಧರಿಸಿರುವ ಗರುಡಧ್ವಜವುಳ್ಳವನಾಗಿ ಉದಯಪರ್ವತದಂತಿರುವ ವಿಜಯಪರ್ವತವೆಂಬ ಗಜವನ್ನೇರಿ, ಸಮಸ್ತ ವಿಘ್ನವಿನಾಶಕನಾದ ಜಿನೇಶ್ವರನನ್ನು ನಮಸ್ಕರಿಸಿ ಈ ರಾಮಲಕ್ಷ್ಮಣರೂ ಸುಗ್ರೀವ ಆಂಜನೇಯರೇ ಮೊದಲಾದ ಖೇಚರಾಧಿಪತಿಗಳಿಂದ ಸುತ್ತಲ್ಪಟ್ಟವರೂ ಶತ್ರುವೆಂಬ ಕತ್ತಲೆಯನ್ನು ನಾಶಮಾಡುವುದಕ್ಕೋಸ್ಕರ ಸೂರ್ಯಚಂದ್ರರಂತೆ ಆವಿರ್ಭವಿಸಿದವರೂ ಆಕಾಶಪ್ರದೇಶದಲ್ಲಿ ಪ್ರಕಾಶಮಾನರೂ ಗರ್ವಿತನಾದ ದುರ್ಬುದ್ಧಿ–ರಾವಣನನ್ನು ನಾಶಮಾಡುವವರೂ ಶತ್ರುಗಳಿಗೆ ಖೇದವನ್ನುಂಟುಮಾಡುವವರೂ ಆಗಿ ರಾವಣನಿಗಿದಿರಾಗಿ ಯುದ್ಧಮಾಡುವುದಕ್ಕೋಸ್ಕರ ತಮ್ಮ ಸೈನ್ಯವನ್ನು ವಿಭಾಗಿಸಿ ಯುದ್ಧಭೂಮಿಯಲ್ಲಿದ್ದರು.

**ತತ್ರ ತೂರ್ಯಮಹಾಧ್ವಾನಾಃ ಪ್ರತಿಸೇನಾನಕಧ್ವನಿಮ್ ।**
**ನಿರ್ಭರ್ತ್ಸಯಂತೋ ದೋರ್ದಂಡನಿಷ್ಠುರಪ್ರಹತೇರ್ಭಯಾತ್ ॥**

**ಗುಹಾಗಹ್ವರದೇಶಾದೀನ್ ವಿಶಂತೋ ವಾ ಸಮಂತತಃ ।**
**ಗಜಬೃಂಹಿತವಾಹೋರುಹೇಷಾಘೋಷಾನ್ ವಿಶೇಷತಃ ॥ ೧೦೨೮ ॥**

**ವರ್ಧಯಂತೋ ಭಟಾನಾಂ ಚ ಸುತರಾಂ ಶೌರ್ಯಸಂಪದಮ್ ।**
**ದ್ವಿಷಾಂ ಭಯಂ ಪ್ರಕುರ್ವಂತೋ ನಭೋಭಾಗಮರೋಧಯನ್ ॥**

ಅಲ್ಲಿ ತಮ್ಮಟೆ ಮೊದಲಾದ ರಣವಾದ್ಯಗಳ ಮಹಾಧ್ವನಿಗಳು ಪ್ರತಿಯಾದ ಸೈನ್ಯದ ರಣಭೇರಿಯ ಧ್ವನಿಯನ್ನು ತಿರಸ್ಕರಿಸುವವುಗಳಾಗಿಯೂ ದಂಡದಂತಿರುವ ಭುಜಗಳ ನಿಷ್ಠುರವಾದ ಹೊಡೆತದ ಭಯದಿಂದ ಗುಹಾ ಲತಾಗೃಹ ಪ್ರದೇಶಾದಿಗಳನ್ನು ಎಲ್ಲಾ ಕಡೆಗಳಿಂದಲೂ ಪ್ರವೇಶಿಸುವಂತಿರುವುವುಗಳಾಗಿಯೂ ಆನೆಗಳ ಬೃಂಹಿತ–ಶಬ್ದಗಳನ್ನು ಕುದುರೆಗಳ ಹೇಷಾಧ್ವನಿಗಳನ್ನೂ ವಿಶೇಷವಾಗಿ ವೃದ್ಧಿಹೊಂದಿಸುವವುಗಳಾಗಿಯೂ ಭಟರ ಶೌರ್ಯಸಂಪತ್ತಿಯನ್ನು ಅಧಿಕವಾಗಿ ಹೆಚ್ಚಿಸುವವುಗಳಾಗಿಯೂ ಶತ್ರುಗಳಿಗೆ ಭಯವನ್ನುಂಟುಮಾಡುವವುಗಳಾಗಿಯೂ ಆಕಾಶಭಾಗವನ್ನು ಆವರಿಸಿದುವು.

**ತದಾವಿಷ್ಕೃತಸಂರಂಭಾಃ ಕಲತ್ರಾಣೀವ ದುರ್ಜಯಾಃ ।**
**ಹಸ್ತಾಗ್ರಮಿತಮಧ್ಯಾನಿ ನವಾಂಭೋದಕುಲಾನಿ ವಾ ॥ ೧೦೩೦ ॥**

**ಸಶರಾಣಿ ಮನಾಂಸೀವ ಗುಣನಮ್ರಾಣಿ ಧೀಮತಾಮ್ ।**
**ದುರುಕ್ತವಚನಾನೀವ ಹೃದ್ವಿಭೇದೀನಿ ದೂರತಃ ॥ ೧೦೩೧ ॥**

**ದಿಗ್ವ್ಯಾಪಿಮೌರ್ವಿನಾದತ್ವಾತ್ಕೋಪಹುಂಕಾರವಂತಿ ವಾ ।**
**ಕರ್ಣಾಭ್ಯರ್ಣಪ್ರವರ್ತಿತ್ವಾನ್ನಿಗದಂತೀವ ಮಂತ್ರಣಮ್ ॥ ೧೦೩೨ ॥**

**ಕೃಚ್ಛ್ರಕೃತ್ಯೇಪ್ಯಭಂಗತ್ವಾತ್ಸಂಗತಾನೀವ ಸಜ್ಜನೈಃ ।**
**ಶರಾಸನಾನಿ ಸಂಧಾರ್ಯ ನಿರಗಚ್ಛನ್ ಧನುರ್ಧರಾಃ ॥ ೧೦೩೩ ॥**

**ಖಡ್ಗವರ್ಮಧರಾ ಧೀರಭಟಾಶ್ಚ ಪಟುರಾಟಿನಃ ।**
**ಘನಾನ್ ಸತಟಿತಃ ಕೃಷ್ಣಾನ್ ಗರ್ಜತೋ ವಿಜಿಗೀಷವಃ ॥ ೧೦೩೪ ॥**

**ನಾನಾಪ್ರಹರಣೋಪೇತಾ ನಾನಾಯುದ್ಧವಿಶಾರದಾಃ ।**
**ಪರೇ ಚ ಪರಿತಃ ಪ್ರಾಪುರ್ಯೋದ್ಧುಂ ಪರಬಲಂ ಭಟಾಃ ॥ ೧೦೩೫ ॥**

ಆಗ ಪ್ರಕಟಪಡಿಸಲ್ಪಟ್ಟ ಕಾರ್ಯಸನ್ನಾಹಗಳುಳ್ಳವರೂ ದುರ್ಜಯರೂ ಆದ ಧನುರ್ಧಾರಿಗಳು, ಸ್ತ್ರೀಯರಂತೆ ಹಸ್ತಪರಿಮಿತವಾದ ನಡುವುಳ್ಳುವೂ ನೂತನವಾದ ಮೇಘಗಳ ಸಮೂಹಗಳಂತೆ ಬಾಣಸಹಿತಗಳೂ ಪ್ರಾಜ್ಞರ ಗುಣಗಳಿಂದ ನಮ್ರಗಳಾದ ಮನಸ್ಸುಗಳಂತೆ ಹಗ್ಗದಿಂದ ಬಗ್ಗಿರುವುವೂ ದೂರದಿಂದ ಹೃದಯವನ್ನು ಭೇದಿಸುವ ದುರ್ವಚನಗಳಂತೆ ಹೃದಯವನ್ನು ಭೇದಿಸುವುವೂ ದಿಕ್ಕುಗಳನ್ನು ವ್ಯಾಪಿಸುವ ಬಿಲ್ಲಿನ ಹಗ್ಗದ ಶಬ್ದದಿಂದ ಕೋಪದಿಂದ ಹುಂಕಾರವುಳ್ಳವುಗಳಂತಿರುವುವೂ ಕಿವಿಯ ಸಮೀಪದಲ್ಲಿ ಪ್ರವರ್ತಿಸುವುದರಿಂದ ಮಂತ್ರಾಲೋಚನೆಯನ್ನು ಹೇಳುವವು ಗಳಿಂತಿರುವುವೂ ಕಷ್ಟವಾದ ಕಾರ್ಯದಲ್ಲಿಯೂ ಭಂಗವಾಗದಿರುವುದರಿಂದ ಸಜ್ಜನ ರೊಡನೆ ಸೇರಿದಂತಿರುವುವೂ ಆದ ಬಿಲ್ಲುಗಳನ್ನು ಧರಿಸಿ, ವಿದ್ಯುತ್ತಿನೊಡನೆ ಕೂಡಿರು ವುವೂ ಕಪ್ಪಾಗಿರುವುವೂ ಗರ್ಜಿಸುವುವೂ ಆದ ಮೇಘಗಳನ್ನು ಜಯಿಸಬೇಕೆಂಬ ಇಚ್ಛೆಯುಳ್ಳವರೂ ಖಡ್ಗಗಳನ್ನೂ ಕವಚಗಳನ್ನೂ ಧರಿಸಿರುವವರೂ ಪಟುವಾಗಿ ಕೂಗಾಡುವವರೂ ಧೀರರೂ ಆದ ಭಟರೂ ಹೊಡೆಯುವ ವಿವಿಧಸಾಧನಗಳಿಂದ ಕೂಡಿರುವವರೂ ವಿವಿಧಯುದ್ಧನಿಪುಣರೂ ಆದ ಬೇರೆ ಭಟರೂ ಯುದ್ಧಮಾಡು ವುದಕ್ಕೋಸ್ಕರ ಸುತ್ತಲೂ ಶತ್ರುಸೈನ್ಯವನ್ನು ಎದುರಿಸಿದರು.

**ಅತಿದ್ರುತಖುರಾಘಾತೈರ್ದಾರಯಂತ ಇವಾವನಿಮ್ ।**
**ಸಚಾಮರಾ ಮಹೀಶಾ ವಾ ಸಮಹಾಮಣಿಪೀಠಿಕಾಃ ॥ ೧೦೩೬ ॥**

**ಆಮೃತೇರಿಷ್ಟಭೃತ್ಯಾ ವಾ ಸ್ವಸ್ವಾಮಿಹಿತಕಾರಿಣಃ ।**
**ಭುಂಜಾನಾ ಇವ ಸಗ್ರಾಸಾ ಮಧುರೈಃ ಕಿಂಕಿಣೀರವೈಃ ॥ ೧೦೩೭ ॥**

**ವಿಜಯಂ ವಾ ಸ್ವಸೈನ್ಯಸ್ಯ ಘೋಷಯಂತೋ ನಿರಂತರಮ್ ।**
**ಸಪಕ್ಷಾ ಇವ ಸಂಪನ್ನಕಂಕಟಾ ಗಗನಾಂತರಮ್ ॥ ೧೦೩೮ ॥**

**ವಿಲಂಘಯಿಷವೋ ಲಾಲಾಜಲಫೇನಪ್ರಸೂನಕೈಃ ।**
**ಸ್ವಪಾದನಟನೃತ್ತಾರ್ಥಮರ್ಚಯಂತೋ ಧರಾಮಿವ ॥ ೧೦೩೯ ॥**

**ಹಯಾ ಯವನಕಾಶ್ಮೀರಬಾಹ್ಲಿಕಾದಿಸಮುದ್ಭವಾಃ ।**
**ಸ್ಫುರದುತ್ಖಾತಖಡ್ಗಾಂಶುವಿಲಸತ್ಸಾದ್ಯಧಿಷ್ಠಿತಾಃ ॥ ೧೦೪೦ ॥**

**ಮಹಾಸೈನ್ಯಾಬ್ಧಿಸಂಭೂತತರಂಗಾ ಭಾವಿನಿರ್ಗತಾಃ ।**
**ದ್ವಿಷೋ ಭೀಷಯಿತುಂ ವೋಚ್ಚೈರ್ಹೇಷಾಘೋಷೈರ್ವಿಭೀಷಣೈಃ ॥**

ಬಹುವೇಗವುಳ್ಳ ಗೊರಸುಗಳ ಆಘಾತಗಳಿಂದ ಭೂಮಿಯನ್ನು ಸೀಳುವಂತಿ ರುವುವೂ ರಾಜರುಗಳಂತೆ ಚಾಮರಸಹಿತಗಳೂ ಮಹಾರತ್ನಖಚಿತವಾದ ಜೀನು ಗಳುಳ್ಳವೂ ಮರಣಪರ್ಯಂತವೂ ತಮ್ಮ ಸ್ವಾಮಿಗೆ ಹಿತವನ್ನು ಮಾಡುವ ಇಷ್ಟರಾದ ಭೃತ್ಯರಂತಿರುವುವೂ ಭುಂಜಿಸುವವುಗಳಂತೆ ಗ್ರಾಸಸಹಿತವಾಗಿರುವುವೂ ಮಧುರ ವಾದ ಗೆಜ್ಜೆಗಳ ಶಬ್ದಗಳಿಂದ ಯಾವಾಗಲೂ ತಮ್ಮ ಸೈನ್ಯದ ವಿಜಯವನ್ನು ಘೋಷಿಸುವಂತಿರುವುವೂ ರೆಕ್ಕೆಯುಳ್ಳವುಗಳಂತೆ ಎದೆಯ ಕವಚಗಳಿಂದ ಕೂಡಿ ರುವುವೂ ಆಕಾಶಮಧ್ಯವನ್ನು ಕುರಿತು ಹಾರುವುದಕ್ಕಿಚ್ಛಿಸುವುವೂ ತಮ್ಮ ಪಾದ ಗಳೆಂಬ ನಟರ ಕುಣಿತಕ್ಕೋಸ್ಕರ ಜೊಲ್ಲಿನ ನೀರಿನ ನೊರೆಗಳೆಂಬ ಪುಷ್ಪಗಳಿಂದ ಭೂಮಿಯನ್ನು ಪೂಜಿಸುವಂತಿರುವುವೂ ಯವನ ಕಾಶ್ಮೀರ ಬಾಹ್ಲಿಕಾದಿದೇಶಗಳಲ್ಲಿ ಜನಿಸಿರುವುವೂ ಪ್ರಕಾಶಮಾನವೂ ಎತ್ತಲ್ಪಟ್ಟಿರುವುವೂ ಆದ ಖಡ್ಗಗಳ ಕಿರಣಗಳಿಂದ ಪ್ರಕಾಶಮಾನರಾದ ಸವಾರರುಳ್ಳವೂ ಮಹಾಸೈನ್ಯವೆಂಬ ಸಮುದ್ರದಲ್ಲಿ ಹುಟ್ಟಿದ ಅಲೆಗಳೂ ಆದ ಕುದುರೆಗಳು ಭಯಂಕರವಾದ ಹೇಷಾಧ್ವನಿಗಳಿಂದ ಶತ್ರುಗಳನ್ನು ಹೆದರಿಸುವುದಕ್ಕೋಸ್ಕರವೋ ಎಂಬಂತೆ ಮುಂದೆ ಹೊರಟವು.

**ಸ್ವಾನುಕೂಲಾನಿಲಾಃ ಶಸ್ತ್ರಭಾಂಡಾಃ ಪ್ರೋದ್ದಂಡಕೇತವಃ ।**
**ಸಂಗ್ರಾಮಾಂಭೋನಿಧೇಃ ಪೋತಾಃ ಪ್ರಚೇಲುಃ ಪೃಥವೋ ರಥಾಃ ॥**

ತಮಗೆ ಅನುಕೂಲವಾಗಿ–ಇದಿರಾಗಿ ಬೀಸುತ್ತಿರುವ ಗಾಳಿಯುಳ್ಳವೂ ಶಸ್ತ್ರ ಗಳನ್ನು ತುಂಬಿರುವ ಪಾತ್ರಗಳುಳ್ಳವೂ ಉದ್ದವಾದ ದಂಡಗಳುಳ್ಳ ಬಾವುಟಗಳು ಳ್ಳವೂ ಯುದ್ಧವೆಂಬ ಸಮುದ್ರದ ತೆಪ್ಪಗಳೂ ಆದ ದೊಡ್ಡದಾದ ರಥಗಳು ನಡೆದುವು.

**ಚಕ್ರೇಣೈಕೇನ ಚೇಚ್ಚಕ್ರೀ ವಿಕ್ರಮೀ ನಸ್ತಯೋರ್ದ್ವಯಮ್ ।**
**ಮತ್ವೇತಿ ವಾ ದ್ರುತಂ ಪೇತುರ್ದ್ವಿಟ್ಚಕ್ರಾಕ್ರಮಿಣೋ ರಥಾಃ ॥ ೧೦೪೩ ॥**

''ಒಂದು ಚಕ್ರದಿಂದ ಚಕ್ರವರ್ತಿಯು ಪರಾಕ್ರಮಿಯಾಗಿರುತ್ತಾನಾದರೆ ನಮಗೆ ಎರಡು ಚಕ್ರಗಳಿರುತ್ತವೆ'' ಎಂದು ತಿಳಿದೋ ಎಂಬಂತೆ ರಥಗಳು ಶೀಘ್ರವಾಗಿ ಶತ್ರುಸಮೂಹವನ್ನು ಆಕ್ರಮಿಸುವವುಗಳಾಗಿ ನಡೆದುವು.

**ನಾಯಕಾಧಿಷ್ಠಿತಾಃ ಶಸ್ತ್ರೈಃ ಸಂಪೂರ್ಣಾಸ್ತೂರ್ಣವಾಜಿನಃ ।**
**ಸನ್ನದ್ಧಾಃ ಸಂತು ನೋ ಯುದ್ಧೇ ಬದ್ಧಕಕ್ಷ್ಯಾಃ ಕಥಂ ರಥಾಃ ॥ ೧೦೪೪ ॥**

ಒಳಗೆ ಕುಳಿತಿರುವ ಯಜಮಾನರುಗಳುಳ್ಳುವೂ ಶಸ್ತ್ರಗಳಿಂದ ತುಂಬಿರುವುವೂ ವೇಗವಾದ ಕುದುರೆಗಳುಳ್ಳುವೂ ಅಣಿಯಾಗಿರುವುವೂ ಆದ ರಥಗಳು ಯುದ್ಧದಲ್ಲಿ ಹೇಗೆ ಸಿದ್ಧವಾಗದಿರುವುವು ?

**ಧಾವಂತು ಪತ್ತಯೋ ವಾಹಾ ಗಜಾಶ್ಚೈಭಿಃ ಕಿಮಾತುರೈಃ ।**
**ಜಯೋಸ್ಮಾಸ್ವಿತಿ ವಾ ಮಂದಂ ಸ್ಯಂದನಾಃ ಸಭರಾ ಯಯುಃ॥ ೧೦೪೫ ॥**

''ಪದಾತಿಗಳೂ ಕುದುರೆಗಳೂ ಆನೆಗಳೂ ಓಡಲಿ. ಆತುರವುಳ್ಳ ಇವುಗಳಿಂದೇನು ಪ್ರಯೋಜನ ? ನಮ್ಮಗಳಲ್ಲಿ ಜಯವಿದೆ'' ಹೀಗೆ ತಿಳಿದೋ ಎಂಬಂತೆ ಭಾರವುಳ್ಳ ರಥಗಳು ಮೆಲ್ಲನೆ ನಡೆದುವು.

**ಸನ್ಮಾರ್ಗಗಾಮಿಭಿಃ ಶಸ್ತ್ರಧಾರಿಭಿಶ್ಚಕ್ರವರ್ತಿಭಿಃ ।**
**ರಥೈರ್ದಿಕ್ಚಕ್ರಮಾಕ್ರಮ್ಯಂ ತೈರ್ದ್ವಿಟ್ಚಕ್ರಂ ಕಿಮುಚ್ಯತೇ ॥ ೧೦೪೬ ॥**

ಉತ್ತಮಮಾರ್ಗದಲ್ಲಿ ಗಮನಮಾಡುವುವೂ ಶಸ್ತ್ರಗಳನ್ನು ಧರಿಸಿರುವುವೂ ಚಕ್ರಗಳುಳ್ಳುವೂ ಆದ ರಥಗಳು ದಿಕ್ಚಕ್ರವನ್ನು ಆಕ್ರಮಿಸುತ್ತವೆಂದಮೇಲೆ ಅವುಗಳು ಶತ್ರುಸಮೂಹವನ್ನು ಆಕ್ರಮಿಸುತ್ತವೆಂದು ಹೇಳುವುದೇನು ?

**ಮಹೀಧರನಿಭೈಃ ಪೂರ್ವಕಾಯೈರೌದಗ್ರ್ಯಧಾರಿಣಃ ।**
**ಪಶ್ಚಾತ್ತ್ವಸಾರಿತಾಗ್ರಾಂಗುಲಿ ವಿಲಂಘ್ಯ ಸ್ವಪೇಟಕಾಃ ॥ ೧೦೪೭ ॥**

**ಅಂಭೋರುಹಕರಾ ಪೋದ್ಯದ್ರಕ್ತಪುಷ್ಕರಶೋಭಿನಃ ।**
**ಪರಪ್ರಣೇಯುವೃತ್ತಿತ್ವಾದರ್ಭಕಾನುವಿಧಾಯಿನಃ ॥ ೧೦೪೮ ॥**

**ರುಷೇವೋತ್ಥಾಪಯಂತೋಲೀನ್ ಕರ್ಣತಾಲೈಃ ಕಟಸ್ಥಿತಾನ್ ।**
**ಸಬಲಾಕಾ ಇವಾಂಭೋದಾಃ ಸಮುದ್ಯದ್ಧವಲಧ್ವಜೈಃ ॥ ೧೦೪೯ ॥**

**ಕೇಚಿತ್ಪರಮದಾಮೋದಮಾಘ್ರಾಯಾಂಭೋದವರ್ತ್ಮನಿ ।**
**ಕ್ರಮೈಃ ಪ್ರವಿಕಸತ್ಪುಷ್ಕರೈಸ್ತೈರ್ಯೋದ್ಧುಂ ಸಮುದ್ಧತಾಃ ॥ ೧೦೫೦ ॥**

**ನಿಶಿತೋರ್ಧ್ವಾಂಕುಶಾಘಾತದಲನ್ನಿರ್ಯಾಣವಾರಿತಾಃ ।**
**ಮುಹುರ್ವಿಧೂತಮೂರ್ಧಾನಃ ಕರೇಣುಗಣಸನ್ನಿಧೌ ॥ ೧೦೫೧ ॥**

**ಪ್ರಶಾಂತೀಭೂತಸಂರಂಭಾ ಮಹಾಮಾತ್ರಾದ್ಯಧಿಷ್ಠಿತಾಃ ।**
**ಮಾತಂಗಾಸ್ತುಂಗದೇಹತ್ವಾದಾಕ್ರಮಂತ ಇವಾಖಿಲಮ್ ॥ ೧೦೫೨ ॥**

**ಸರ್ವತೋ ನಿರ್ಯಯುರ್ಘೋಚ್ಚೈರ್ಜಂಗಮಾ ಧರಣೀಧರಾಃ ।**
**ಕೇತವಃ ಸ್ವಾನುಕೂಲಾನಿಲೇರಿತಾ ವಿದ್ವಿಷಃ ಪ್ರತಿ ॥ ೧೦೫೩ ॥**

**ಚೇಲುರ್ದಂಡಾನ್ ಪರಿತ್ಯಜ್ಯ ಪುರೋ ಯೋದ್ಧುಮಿವೋದ್ಯತಾಃ ।**
**ನಭಸಃ ಶುದ್ಧರೂಪಸ್ಯ ಮಲಂ ಜಲಧರಾಕೃತಿಮ್ ॥ ೧೦೫೪ ॥**

**ಅಥವಾಪನಯಂತೋ ವಾ ಸಂಛಾದಿತರವಿತ್ವಿಷಃ ।**
**ಧೃತದಂಡಪ್ರವೃತ್ತಿತ್ವಾದ್ವಯೋತೀತಾನುಕಾರಿಣಃ ॥ ೧೦೫೫ ॥**

**ಕಾಲೇ ವಿಮುಕ್ತಿಮತ್ವಾಚ್ಚ ಮುನಿಮಾರ್ಗಾನುಸಾರಿಣಃ ।**
**ಖಲಾವಷ್ಟಂಭಖಿನ್ನಾವನಿನಿಃಶ್ವಸಿತಸನ್ನಿಭೇ ॥ ೧೦೫೬ ॥**

**ಮಿಥ್ಯಾಜ್ಞಾನ ಇವಾಶೇಷಬೋಧವಿಧ್ವಂಸಕಾರಿಣಿ ।**
**ಮಹಾಭಯೇ ವಾ ಸಂಪ್ರಾಪ್ತೇ ರಣವಿಘ್ನವಿಧಾಯಿನಿ ॥ ೧೦೫೭ ॥**

**ಪುರಾನರ್ಜಿತಪುಣ್ಯೇ ವಾ ಸಮುಸ್ತನಯನಾಪ್ರಿಯೇ ।**
**ರಜಸ್ಯೇವ ನಭೋಭಾಗಲಂಘಿನ್ಯಾಹಿತರಂಹಸಿ ॥ ೧೦೫೮ ॥**

**ಮೂರ್ಛಿತಂ ಗರ್ಭಗಂ ಕುಡ್ಯಲಿಖಿತಂ ಚಾತಿಶಯ್ಯ ತತ್ ।**
**ಬಲಂ ಕಲಕಲಂ ಕಿಂಚಿದ್ವಿಚೇಷ್ಟಮಭವತ್ತದಾ ॥ ೧೦೫೯ ॥**

ಪರ್ವತಸಮಾನಗಳಾದ ಮುಂದಿನ ದೇಹಗಳಿಂದ ಔನ್ನತ್ಯವನ್ನು ಧರಿಸಿರುವುವೂ ಸೊಂಡಿಲನ್ನು ಹಿಂದಕ್ಕೆ ಚಾಚಿರುವಂತೆ ಲಂಘಿಸಿ ತಮ್ಮ ಸಮೂಹವುಳ್ಳವೂ ಕಮಲಗಳೇ ಕೈಗಳುಳ್ಳವಾಗಿವೆಯೋ ಎನ್ನುವಂತೆ ಉನ್ನತವಾದ ಮತ್ತು ಕೆಂಪಾದ ಸೊಂಡಿಲುಗಳಿಂದ ಶೋಭಿಸುವುವೂ ಬೇರೆಯವರಿಂದ ಒಯ್ಯಲ್ಪಡತಕ್ಕವುಗಳಾಗಿರುವುದರಿಂದ ಮಕ್ಕಳನ್ನು ಅನುಕರಣಮಾಡುವುವೂ ಕೆನ್ನೆಗಳಲ್ಲಿರುವ ದುಂಬಿಗಳನ್ನು ಕಿವಿಗಳೆಂಬ ತಾಳಗಳಿಂದ ಕೋಪದಿಂದಲೋ ಎನ್ನುವಂತೆ ಏಳಿಸುವುವೂ ಎತ್ತರವಾದ ಬಿಳೀಬಾವುಟಗಳಿಂದ ಬೆಳ್ಳಕ್ಕಿಗಳೊಡನೆ ಕೂಡಿರುವ ಮೇಘಗಳಂತಿರುವುವೂ ಕೆಲವು ಆನೆಗಳು ಮೇಘಮಾರ್ಗ(ಆಕಾಶ)ದಲ್ಲಿ ಬೇರೆ ಆನೆಗಳ ಮದಜಲದ ಪರಿಮಳವನ್ನು ಮೂಸಿ ಹಜ್ಜೆಗಳಿಂದ ಚೆನ್ನಾಗಿ ಅರಳಿದ ಸೊಂಡಿಲುಗಳಿಂದ ಆ ಬೇರೆ ಆನೆಗಳೊಡನೆ ಯುದ್ಧಮಾಡುವುದಕ್ಕೆ ಗರ್ವದಿಂದ ಅಣಿಯಾಗಿರುವುವೂ ಹರಿತವಾದ ಮತ್ತು ಉನ್ನತವಾದ ಅಂಕುಶಗಳ ಆಘಾತಗಳಿಂದ ಸೀಳುತ್ತಿರುವ ಕಡೆಗಣ್ಣುಗಳಿಂದ ತಡೆಯಲ್ಪಟ್ಟಿರುವುವೂ ಹೆಣ್ಣಾನೆಗಳ ಸಾನ್ನಿಧ್ಯದಲ್ಲಿ ಪುನಃ ಪುನಃ ತಲೆಯನ್ನು ಕೊಡಹುತ್ತಿರುವುವೂ ಬಹು ಶಾಂತವಾದ ಆತುರವುಳ್ಳವೂ ಮಹಾಪರಿವಾರಜನರೇ ಮೊದಲಾದವರಿಂದ ಹತ್ತಲ್ಪಟ್ಟಿರುವುವೂ ಆದ ಆನೆಗಳು ಉನ್ನತವಾದ ದೇಹವಿರುವುದರಿಂದ ಎಲ್ಲವನ್ನೂ ಆಕ್ರಮಿಸುವಂತಿರುವವುಗಳಾಗಿ, ಸಂಚರಿಸುವ ಉನ್ನತವಾದ ಪರ್ವತಗಳೋ ಎನ್ನುವಂತೆ, ಎಲ್ಲಾಕಡೆಗಳಿಂದಲೂ ಹೊರಟವು. ತಮಗನುಕೂಲವಾದ ಗಾಳಿಯಿಂದ ಪ್ರೇರಿತಗಳಾದ ಬಾವುಟಗಳು ದಂಡಗಳನ್ನು ಪರಿತ್ಯಜಿಸಿ ಮುಂದೆ ಶತ್ರುಗಳನ್ನು ಕುರಿತು (ಶತ್ರುಗಳೊಡನೆ) ಯುದ್ಧಮಾಡುವುದಕ್ಕೋಸ್ಕರವೋ ಎಂಬಂತೆ ಉದ್ಯುಕ್ತಗಳೂ ಶುದ್ಧರೂಪವಾದ ಆಕಾಶದ ಕಶ್ಮಲವನ್ನು ಅಥವಾ ಮೇಘಾಕೃತಿಯನ್ನು ಹೋಗಲಾಡಿಸುತ್ತವೋ ಎಂಬಂತಿರುವುವೂ ಸೂರ್ಯಕಾಂತಿಯನ್ನು ಆವರಿಸಿರುವುವೂ ದಂಡಗಳನ್ನು ಧರಿಸಿರುವುದರಿಂದ ವಯಸ್ಸು ಕಳೆದ–ಮುದುಕರನ್ನು ಅನುಕರಿಸುವವೂ ಅನುಕೂಲವಾದ ಕಾಲದಲ್ಲಿ (ಯುದ್ಧವಿರಾಮಕಾಲದಲ್ಲಿ) ವಿಮೋಚನೆಯನ್ನು ಹೊಂದುವುದರಿಂದ ಮುನಿಮಾರ್ಗವನ್ನನುಸರಿಸುವುವೂ ಆಗಿ ಚಲಿಸಿದುವು. ದುಷ್ಟನ ಆಕ್ರಮಣದಿಂದ ಖಿನ್ನವಾದ ಭೂಮಿಯ ಉಸಿರಿಗೆ ಸಮಾನವೂ ಸಮಸ್ತಜ್ಞಾನವನ್ನು ನಾಶಮಾಡುವ ಮಿಥ್ಯಾಜ್ಞಾನದಂತಿರುವುದೂ ಯುದ್ಧಕ್ಕೆ ವಿಘ್ನವನ್ನುಂಟುಮಾಡುವ ಮಹಾಭಯವು ಸಂಪ್ರಾಪ್ತವಾದಂತಿರುವುದೂ ಪೂರ್ವದಲ್ಲಿ ಪುಣ್ಯಾರ್ಜನೆಯನ್ನು ಮಾಡದಿರುವ ಮನುಷ್ಯನಂತೆ ಎಲ್ಲರ ನೇತ್ರಗಳಿಗೆ ಅಪ್ರಿಯವೂ ಆಕಾಶಭಾಗಕ್ಕೆ ನೆಗೆದಿರುವುದೂ ವೇಗವುಳ್ಳುದೂ ಆದ ಧೂಳಿನಲ್ಲೇ ಕಲಕಲಧ್ವನಿಯುಳ್ಳ ಆ ಸೈನ್ಯವು ಆಗ ಮೂರ್ಛಿತಮನುಷ್ಯನನ್ನೂ ಗರ್ಭದಲ್ಲಿರುವ ಶಿಶುವನ್ನೂ ಗೋಡೆಯಲ್ಲಿ ಬರೆಯಲ್ಪಟ್ಟ ಚಿತ್ರವನ್ನೂ ಮೀರಿ ಸ್ವಲ್ಪ ಸ್ತಬ್ಧವಾಯಿತು. ಧೂಳಿನಲ್ಲಿ ಕಣ್ಣುಕಾಣದೆ ಸೈನ್ಯವು ಸ್ವಲ್ಪಸಮಯದವರೆಗೆ ನಿಶ್ಚೇಷ್ಟವಾಯಿತೆಂದು ಭಾವವು.

**ವಿಧ್ವಸ್ತವೈರಿಭೂಪಾಲಚಿತ್ತಕ್ಷೋಭೋಪಮೇ ಶನೈಃ ।**
**ಪೃಥೌ ತಸ್ಮಿನ್ರಜಃಕ್ಷೋಭೇ ಪ್ರಶಾಂತೇ ಸತಿ ವಿಕ್ರುಧಃ ॥ ೧೦೬೦ ॥**

**ಪ್ರಸ್ಪಷ್ಟದೃಷ್ಟಿಸಂಚಾರಾಃ ಸೇನಾನಾಯಕಚೋದಿತಾಃ ।**
**ಗತಿಪ್ರಪಾತಸಂಶುದ್ಧಾ ನವಾಬ್ದಾ ವಾ ಧನುರ್ಧರಾಃ ॥ ೧೦೬೧ ॥**

**ಶರವೃಷ್ಟಿಂ ವಿಮುಂಚಂತೋ ಹೃದಯಾನಿ ವಿರೋಧಿನಾಮ್ ।**
**ಕುರ್ವಂತಿ ಸ್ಮಾಪರಾಗಾಣಿ ಸದ್ಭಟಾನಾಂ ರಣಾಂಗಣೇ ॥ ೧೦೬೨ ॥**

ಶತ್ರುರಾಜರುಗಳ ನಾಶದಿಂದ ಶಾಂತವಾದ ಮನಃಕ್ಷೋಭೆಗೆ ಸಮಾನವಾದ ಮತ್ತು ಅಧಿಕವಾದ ಆ ಧೂಳಿಯ ಕ್ಷೋಭೆಯು ಮೆಲ್ಲನೆ ಶಾಂತವಾಗುತ್ತಿರಲು ಚೆನ್ನಾಗಿ ಸ್ಪಷ್ಟವಾದ ದೃಷ್ಟಿಸಂಚಾರವುಳ್ಳವರೂ ಸೇನಾಧಿಪತಿಗಳಿಂದ ಪ್ರೇರಿತರೂ ಹೆಚ್ಚಾದ ಕೋಪವುಳ್ಳವರೂ ಆದ ಧನುರ್ಧಾರಿಗಳು, ಗಮನದಿಂದ ಪರಿಶುದ್ಧಗಳಾದ ನೂತನಮೇಘಗಳಂತೆ, ಬಾಣಗಳ ಮಳೆಯನ್ನು ಸುರಿಯುವವರಾಗಿ ರಣಾಂಗಣದಲ್ಲಿ ಶತ್ರುಗಳ ಉತ್ತಮಭಟರ ಹೃದಯಗಳನ್ನು ರಕ್ತವಿಲ್ಲದವುಗಳನ್ನಾಗಿ ಅನುರಾಗರಹಿತಗಳನ್ನಾಗಿ ಮಾಡಿದರು.

**ಯುಧ್ಯಂತೇ ಸ್ಮಾಹವೋತ್ಸಾಹಾತ್ತೇಪಿ ತೈರೇವ ಚೋದಿತಾಃ ।**
**ದ್ವಿಷತೋ ವಾ ನ ಸತ್ವಾಭಿವ್ಯಕ್ತಿಃ ಸ್ಯಾತ್ ಸುಹೃದಃ ಸತಾಮ್॥ ೧೦೬೩ ॥**

ಆ ಭಟರೂ ಆ ಸೇನಾಧಿಪತಿಗಳಿಂದಲೇ ಪ್ರೇರಿತರಾಗಿ ಯುದ್ಧೋತ್ಸಾಹದಿಂದ ಯುದ್ಧಮಾಡಿದರು. ಸತ್ಪುರುಷರ ಸಾಮರ್ಥ್ಯದ ಅಭಿವ್ಯಕ್ತಿಯು ಶತ್ರುವಿನಿಂದಾಗುವಂತೆ ಮಿತ್ರನಿಂದಾಗುವುದಿಲ್ಲ.

**ಮಯಾ ಮಜ್ಜೀವಿತಂ ದಾತುಂ ನೃಪಾಜ್ಜೀವಿತಮಾದದೇ ।**
**ತಸ್ಯ ಕಾಲೋಯಮಿತ್ಯೇಕೋ ವ್ಯತರತ್ತದೃಣಂ ರಣೇ ॥ ೧೦೬೪ ॥**

"ನನ್ನ ಜೀವಿತವನ್ನು ದಾನಮಾಡುವುದಕ್ಕೋಸ್ಕರ ದೊರೆಯಿಂದ ನಾನು ಜೀವಿತವನ್ನು ತೆಗೆದುಕೊಂಡಿದ್ದೇನೆ. ಆ ಜೀವಿತದ ದಾನಕ್ಕೆ ಇದು ಕಾಲವಾಗಿದೆ" ಈ ರೀತಿಯಾಗಿ ಒಬ್ಬ ಭಟನು ಯುದ್ಧದಲ್ಲಿ ಆ ದೊರೆಯ ಋಣವನ್ನು ಕೊಟ್ಟನು.

**ಭೃತ್ಯಕೃತ್ಯಂ ಯಶಃ ಶೂರಗತಿಶ್ಚಾತ್ರ ತ್ರಯಂ ಫಲಮ್ ।**
**ಪುರುಷಾರ್ಥತ್ರಯಂ ಚೈತದೇವೇತ್ಯನ್ಯೋ ನ್ಯಯುಧ್ಯತ ॥ ೧೦೬೫ ॥**

"ಈ ಯುದ್ಧದಲ್ಲಿ ಭೃತ್ಯನು ಮಾಡಬೇಕಾದ ಕಾರ್ಯ, ಯಶಃಪ್ರಾಪ್ತಿ ಶೂರರು ಹೊಂದುವ ಗತಿ ಇವು ಮೂರು ಫಲಗಳು. ಇದೇ ಪುರುಷಾರ್ಥತ್ರಯ" ಎಂದು ಮತ್ತೊಬ್ಬ ಭಟನು ಯುದ್ಧಮಾಡಿದನು.

**ನಾಸ್ಮದ್ಬಲೇ ಮೃತಿಂ ವೀಕ್ಷೇ ಕಸ್ಯಾಪಿ ಸ ಪರಾಭವಃ ।**
**ಮಮೇತಿ ಮನ್ಯಮಾನೋನ್ಯಃ ಪ್ರಾಗ್ಯುಧ್ವಾಮ್ರಿಯತ ಸ್ವಯಮ್ ॥**

"ನಮ್ಮ ಸೈನ್ಯದಲ್ಲಿ ನಾನು ಯಾವನೊಬ್ಬನ ಮರಣವನ್ನೂ ನೋಡುವುದಿಲ್ಲ. ಆ ತಿರಸ್ಕಾರವು ನನಗೆ" ಎಂದು ತಿಳಿಯುವವನಾದ ಬೇರೊಬ್ಬನು ಮೊದಲು ತಾನು ಯುದ್ಧವನ್ನು ಮಾಡಿ ಸತ್ತನು.

**ಅಯುಧ್ಯಂತೈವಮುತ್ಕ್ರೋಧಾತ್ಸರ್ವಶಸ್ತ್ರೈರನಾರತಮ್ ।**
**ಸವ್ಯಾಪಸವ್ಯಮುಕ್ತಾರ್ಧಮುಕ್ತಾಮುಕ್ತೈರನಾಕುಲಮ್ ॥ ೧೦೬೭ ॥**

ಅಧಿಕವಾದ ಕೋಪದಿಂದ ಭಟರು ಎಡೆಬಿಡದೆ ಎಡಗೈಗಳಿಂದಲೂ ಬಲಗೈಗಳಿಂದಲೂ ಬಿಡಲ್ಪಟ್ಟ, ಅರ್ಧವಾಗಿ ಬಿಡಲ್ಪಟ್ಟ ಮತ್ತು ಬಿಡಲ್ಪಡದ ಸಮಸ್ತ ಶಸ್ತ್ರಗಳಿಂದ ವ್ಯಾಕುಲವಿಲ್ಲದೆ ಯುದ್ಧಮಾಡಿದರು (ಬಾಣಗಳು ಬಿಡುವಂತಹವು. ಭರ್ಜಿಗಳು ಅರ್ಧವಾಗಿ ಬಿಡುವಂತಹವು. ಖಡ್ಗಗಳು ಬಿಡುವಂತಹುಗಳಲ್ಲ).

**ಅಭೀತಮಾರ್ಗಣೇನ್ಯೈವ ಮಾರ್ಗಣಾ ಮಾರ್ಗಮಾತ್ಮನಃ ।**
**ಮಧ್ಯೇ ವಿಧಾಯ ಗತ್ವಾ ದ್ರಾಕ್ಪರತ್ರ ಪತಿತಾಃ ಪರೇ ॥ ೧೦೬೮ ॥**

ಬೇರೆ ಬಾಣಗಳು ತಮ್ಮ ಮಾರ್ಗವನ್ನು ಭಯವಿಲ್ಲದ ಹುಡುಕುವಿಕೆಯಿಂದಲೇ ಮಾಡಿಕೊಂಡು ಮಧ್ಯದಲ್ಲಿ ಶೀಘ್ರವಾಗಿ ಹೋಗಿ ಆಚೆಕಡೆಯಲ್ಲಿ ಬಿದ್ದುವು. ಬಾಣಗಳು ಮಧ್ಯದಲ್ಲಿ ಲಕ್ಷ್ಯವನ್ನು ಭೇದಿಸಿ ದಾರಿಮಾಡಿಕೊಡು ಹೋಗಿ ಆಚೆಕಡೆಯಲ್ಲಿ ಬಿದ್ದುವೆಂದು ಭಾವವು.

**ದೂರಂ ತ್ಯಕ್ತ್ವಾ ಗುಣಾನ್ ಬಾಣೈಸ್ತೀಕ್ಷ್ಣೈಃ ಶೋಣಿತಪಾಯಿಭಿಃ ।**
**ಋಜುತ್ವಾಜ್ಜಹ್ರಿರೇ ಪ್ರಾಣಾ ಗುಣೋಽಪಿ ನ ಗುಣಃ ಖಲೇ ॥ ೧೦೬೯ ॥**

ಹರಿತಗಳೂ ರಕ್ತಪಾನಮಾಡುವುವೂ ಆದ ಬಾಣಗಳು ಬಿಲ್ಲುಗಳ ಹಗ್ಗಗಳನ್ನು ದೂರವಾಗಿ ಬಿಟ್ಟು ಋಜುವಾಗಿರುವುದರಿಂದ ಪ್ರಾಣಗಳನ್ನಪಹರಿಸಿದುವು. ದುಷ್ಟನಲ್ಲಿ ಗುಣ(ಹಗ್ಗ)ವಿದ್ದರೂ ಅದು ಗುಣವಲ್ಲ.

**ನ ವೈರಸ್ಯಂ ಫಲಂ ಕಿಂಚಿತ್ತಥಾಪ್ಯಘ್ನನ್ ಶರಾಃ ಪರಾನ್ ।**
**ಪರಪ್ರೇರಿತವೃತ್ತೀನಾಂ ತೀಕ್ಷ್ಣಾನಾಮೀದೃಶೀ ಗತಿಃ ॥ ೧೦೭೦ ॥**

ವಿರಸಭಾವವು ಸ್ವಲ್ಪವೂ ಪ್ರಯೋಜನವಿಲ್ಲದಿದ್ದರೂ (ದ್ವೇಷಸಾಧನವಲ್ಲ ದಿದ್ದರೂ) ಬಾಣಗಳು ಬೇರೆಯವರನ್ನು ಕೊಂದುವು. ಬೇರೆಯವರಿಂದ ಪ್ರೇರಿತ ವಾದ ವ್ಯಾಪಾರವುಳ್ಳ ತೀಕ್ಷ್ಣಸ್ವಭಾವವುಳ್ಳವರ ಗತಿಯು ಇಂತಹದಾಗಿದೆ.

**ಖಗಾಃ ಖಗೈಃ ಖಗಾನ್ ಜಘ್ನುರ್ಬದ್ಧವೈರಾಃ ಖಗಾ ಇವ ।**
**ತೃಣಾಯ ಮನ್ಯಮಾನಾಃ ಸ್ವಪ್ರಾಣಾನ್ ಪಾಪಾಃ ಪರಸ್ಪರಮ್॥ ೧೦೭೧ ॥**

ಬದ್ಧವೈರವುಳ್ಳ ಪಾಪಿಗಳಾದ ಖೇಚರರು, ಬದ್ಧವೈರವುಳ್ಳ ಪಕ್ಷಿಗಳಂತೆ, ತಮ್ಮ ಪ್ರಾಣಗಳನ್ನು ಹುಲ್ಲಿಗೆ ಸಮಾನವಾಗಿ ತಿಳಿಯುವವರಾಗಿ ಬಾಣಗಳಿಂದ ಪರಸ್ಪರ ವಾಗಿ ಖೇಚರರನ್ನು ಕೊಂದರು.

**ಲಕ್ಷ್ಯಬದ್ಧಾತ್ಮದೃಷ್ಟ್ಯಾನ್ವಿತಾಶುಪಾತಿಶಿತೈಃ ಶರೈಃ ।**
**ಧನ್ವಿನಃ ಪಾತಯಂತಿ ಸ್ಮ ಗಿರೀನ್ವಾ ಕರಿಣೋ ಬಹೂನ್ ॥ ೧೦೭೨ ॥**

ಧನುರ್ಧಾರಿಗಳಾದ ಯೋಧರು, ಲಕ್ಷ್ಯವನ್ನು ಹಿಡಿದು ತಮ್ಮಿಂದ ನೋಡ ಲ್ಪಟ್ಟುದನ್ನು ಅನುಸರಿಸಿ ಶೀಘ್ರವಾಗಿ ಹೋಗಿ ಬೀಳುವ ಹರಿತವಾದ ಬಾಣಗಳಿಂದ ಪರ್ವತಗಳನ್ನು ಬೀಳಿಸುವಂತೆ, ಅನೇಕ ಆನೆಗಳನ್ನು ಬೀಳಿಸಿದರು.

**ಏಕೇನೈಕಃ ಶರೇಣೇಭಮವಧೀನ್ಮರ್ಮಭೇದಿನಾ ।**
**ಸ್ವೀಕುರ್ವಂತ್ಯತ ಏವಾನ್ಯಮರ್ಮಜ್ಞಾನ್ವಿಜಿಗೀಷವಃ ॥ ೧೦೭೩ ॥**

ಒಬ್ಬ ಯೋಧನು ಮರ್ಮಭೇದಿಯಾದ ಒಂದು ಬಾಣದಿಂದ ಆನೆಯನ್ನು ಕೊಂದನು. ಆದುದರಿಂದಲೇ ಜಯಿಸಲಿಚ್ಛಿಸುವವರು ಇತರ ಮರ್ಮಜ್ಞರನ್ನು ಸ್ವೀಕರಿಸುತ್ತಾರೆ. ಮರ್ಮಜ್ಞರನ್ನು ಸಹಾಯಕರನ್ನಾಗಿ ಸ್ವೀಕರಿಸುತ್ತಾರೆಂದು ಭಾವವು.

**ಪ್ರಘಾತಮೂರ್ಛಿತಃ ಕಶ್ಚಿತ್ಸ್ರವಹಲ್ಲೋಹಿತೋ ಭಟಃ ।**
**ಆಪತದ್ಗೃಧ್ರಪಕ್ಷಾನಿಲೋತ್ಥಿತೋಽಹನ್ಬಹೂನ್ ಪುನಃ ॥ ೧೦೭೪ ॥**

ಪೆಟ್ಟಿನಿಂದ ಮೂರ್ಛಿತನೂ ಹರಿಯುತ್ತಿರುವ ರಕ್ತವುಳ್ಳವನೂ ಆದ ಒಬ್ಬಾ ನೊಬ್ಬ ಭಟನು ಹಾರಿಬಂದು ಬೀಳುತ್ತಿರುವ ಹದ್ದಿನ ರೆಕ್ಕೆಗಳ ಗಾಳಿಯಿಂದ ಚೇತರಿಸಿಕೊಂಡು ಎದ್ದವನಾಗಿ ಪುನಃ ಹಲವರನ್ನು ಕೊಂದನು.

**ನೀಯಮಾನಮಿವಾತ್ಮಾನಂ ವೀಕ್ಷ್ಯಾನ್ಯೋ ದೇವಕನ್ಯಯಾ ।**
**ಸೋತ್ಸವಃ ಸಹಸೋದಸ್ಥಾತ್ಸಹಾಸೋ ದರಮೂರ್ಛಿತಃ ॥ ೧೦೭೫ ॥**

ಸ್ವಲ್ಪ ಮೂರ್ಛಿತನಾದ ಇನ್ನೊಬ್ಬ ಭಟನು ದೇವಕನ್ಯೆಯಿಂದ ಒಯ್ಯಲ್ಪಡು ತ್ತಿರುವವನನ್ನೋಪಾದಿಯಲ್ಲಿ ತನ್ನನ್ನು ನೋಡಿ ಉತ್ಸವವುಳ್ಳವನೂ ನಗೆಯುಳ್ಳ ವನೂ ಆಗಿ ಶೀಘ್ರವಾಗಿ ಎದ್ದನು.

**ಬಾಣಾಂಕಿತೇ ರಣತ್ತೂರ್ಯೇ ರಣರಂಗೇ ನಿರಂತರಮ್ ।**
**ನೃತ್ಯತ್ಕಬಂಧಕೇ ಸದ್ಯಃ ಶರಾಚ್ಛಾದಿತಮಂಡಪೇ ॥ ೧೦೭೬ ॥**

**ಬದ್ಧಾಂತ್ರಜಾಲಮಾಲೋಽನ್ಯೋ ಬಹಲಾಸ್ರಾಸ್ರವಾರ್ಚಿತಃ ।**
**ರಾಕ್ಷಸೇನ ವಿವಾಹೇನ ವೀರಲಕ್ಷ್ಮೀಂ ಸಮಾಕ್ಷಿಪತ್ ॥ ೧೦೭೭ ॥**

ಬಾಣಗಳಿಂದ ಗುರುತಾಗಿರುವುದೂ ತಮ್ಮಟೆಯ ಧ್ವನಿಯುಳ್ಳುದೂ ಎಡೆ ಬಿಡದೆ ಕುಣಿಯುತ್ತಿರುವ ಮುಂಡಗಳುಳ್ಳುದೂ ಆದ ಯುದ್ಧರಂಗದಲ್ಲಿ ಬಾಣ ಗಳಿಂದ ಆಚ್ಛಾದಿತವಾದ ಮಂಡಪದಲ್ಲಿ ಕಟ್ಟಲ್ಪಟ್ಟ ಕರುಳುಗಳ ಮಾಲೆಯುಳ್ಳವನೂ ಹೆಚ್ಚಾದ ರಕ್ತದ ಸುರಿಯುವಿಕೆಯಿಂದ ಅರ್ಚಿಸಲ್ಪಟ್ಟವನೂ ಆದ ಬೇರೊಬ್ಬ ಭಟನು ಆಗಲೇ ರಾಕ್ಷಸವಿವಾಹದಿಂದ ವೀರಲಕ್ಷ್ಮಿಯನ್ನು ವಶಪಡಿಸಿಕೊಂಡನು.

**ಢಾಕಿನ್ಯಶ್ಚಟುಲಂ ನೇಟುರರುವನ್ಭೈರವಂ ಶಿವಾಃ ।**
**ಊರ್ಧ್ವವಕ್ತ್ರವಮದ್ವಹ್ನಿವಿಸ್ಫುಲಿಂಗವಿಭೀಷಣಾಃ ॥ ೧೦೭೮ ॥**

ಮೇಲಾದ ಮುಖದಿಂದ ಹೊರಡುತ್ತಿರುವ ಬೆಂಕಿಯ ಕಿಡಿಗಳಿಂದ ಭಯಂ ಕರಗಳಾದ ಢಾಕಿನಿ–ಭೂತಗಳು ಚೆನ್ನಾಗಿ ಕುಣಿದುವು. ನರಿಗಳು ಭಯಂಕರವಾಗಿ ಕೂಗಿದುವು.

**ಉತ್ಕ್ಷಿಪ್ತಕೃತ್ತಿಕಾಜಾಲಶ್ಚಟಲ್ಲೋಲಃ ಕಪಾಲಭೃತ್ ।**
**ಅತಿಪಾನನಿಪೀತಾಸ್ರಮವಮೀದ್ರಾಕ್ಷಸೀಗಣಃ ॥ ೧೦೭೯ ॥**

ಚರ್ಮಸಮೂಹವನ್ನು ಕೀಳುತ್ತಿರುವುದೂ ಹೆಚ್ಚುತ್ತಿರುವ ಆಶೆಯುಳ್ಳುದೂ ರುಂಡಗಳನ್ನು ಧರಿಸಿರುವುದೂ ಆದ ರಾಕ್ಷಸಿಯರ ಸಮೂಹವು ಹೆಚ್ಚಾಗಿ ಕುಡಿದಿದ್ದ ರಕ್ತವನ್ನು ಕಕ್ಕಿತು.

**ನಿಶಾತಶರನಾರಾಚಚಕ್ರಾದ್ಯುಪನಿಪಾತನಾತ್ ।**
**ನಿಷ್ಪ್ರಭಂ ನಿಷ್ಪ್ರತಾಪಂ ಚ ತದಾಭೂದರ್ಕಮಂಡಲಮ್ ॥ ೧೦೮೦ ॥**

ಹರಿತವಾದ ಬಾಣಗಳ ನಿಡಿಗೋಲುಗಳ ಮತ್ತು ಚಕ್ರವೇ ಮೊದಲಾದುವುಗಳ ಪತನದಿಂದ ಆಗ ಸೂರ್ಯಮಂಡಲವು ಕಾಂತಿಯೂ ಪ್ರತಾಪವೂ ಇಲ್ಲದುದಾ ಯಿತು.

**ಸ್ಯಾದ್ವಾದಿಭಿಃ ಸಮಾಕ್ರಾಂತಕುವಾದಿಕುಲವತ್ತದಾ ।**
**ದಶಾನನಬಲಾನ್ಯಾಪನ್ ಭಂಗಂ ರಾಘವಸೈನಿಕೈಃ ॥ ೧೦೮೧ ॥**

ಆಗ, ಸ್ಯಾದ್ವಾದಿಗಳಿಂದ ಆಕ್ರಮಿಸಲ್ಪಟ್ಟ ಮಿಥ್ಯಾವಾದಿಗಳ ಸಮೂಹದಂತೆ, ರಾಘವನ ಸೈನಿಕರಿಂದ ದಶಮುಖನ ಸೈನ್ಯಗಳು ಭಂಗವನ್ನು ಹೊಂದಿದುವು.

**ಇತಿ ಪ್ರವೃತ್ತಸಂಗ್ರಾಮೇ ಸುಚಿರಂ ತದ್ರಣಾಂಗಣೇ ।**
**ಮೃತಾಃ ಕೇಚಿತ್ಪುನಃ ಕೇಚಿತ್ ಪ್ರಹೃತಾಃ ಪ್ರಾಣಮೋಕ್ಷಣೇ ॥ ೧೦೮೨ ॥**

**ಅಕ್ಷಮಾಃ ಪಾಪಕರ್ಮಾಣಃ ಸ್ಥಿತಾಃ ಕಂಠಗತಾಸವಃ ।**
**ಸಮವರ್ತೀ ನರಾನ್ ಸರ್ವಾನ್ ಗ್ರಸ್ತ್ವಾ ಜರಯಿತುಂ ತದಾ॥ ೧೦೮೩ ॥**

**ನಿಶ್ಯಕ್ತಿರ್ವಾಂತವಾನೇತಾನಿತಿ ಶಂಕಾವಿಧಾಯಿನಃ ।**
**ಇತಸ್ತತೋ ಭಟಾ ವ್ಯಸ್ತಾಃ ಸಂಗರೇ ಜರ್ಜರಾಂಗಕಾಃ ॥ ೧೦೮೪ ॥**

**ಜನಯಂತ್ಯಂತಕಸ್ಯಾಪಿ ವೀಕ್ಷ್ಯಮಾಣಸ್ಯ ಭೀರಸಮ್ ।**
**ವಾಜಿನೋತ್ರ ಸಮುಚ್ಛಿನ್ನಚರಣಾಃ ಸತ್ತ್ವಶಾಲಿನಃ ॥ ೧೦೮೫ ॥**

ಅಂಗೇನೈವ ಸಮುತ್ಥಾತುಮುದ್ಯಂತಿ ಸ್ಮೋರ್ಜಿತೌಜಸಃ ।
ಅಭಾನಿಭಾ ಭಟೋನ್ಮುಕ್ತಶರನಾರಾಚಕೀಲಿತಾಃ ॥ ೧೦೮೬ ॥

ಪ್ರಕ್ಷರದ್ಧಾತುನಿಷ್ಯಂದಾ ಗಿರಯೋ ವಾಲ್ಪವೇಣವಃ ।
ಚಕ್ರಾದ್ಯವಯವೈರ್ಭಗ್ನೈರ್ವಿಕ್ಷಿಪ್ತಾಃ ಸರ್ವತೋ ರಥಾಃ ॥ ೧೦೮೭ ॥

ಭಾಂತಿ ಸ್ಮ ಭಿನ್ನಪೋತಾ ವಾ ತತ್ಸಂಗ್ರಾಮಾಬ್ಧಿಮಧ್ಯಗಾಃ ।
ದಿನಾನ್ಯೇವಂ ಬಹೂನ್ಯಾಸೀತ್ಸಂಗ್ರಾಮೋ ಬಲಯೋರ್ದ್ವಯೋಃ ॥

ಈ ಪ್ರಕಾರವಾಗಿ ಬಹುಸಮಯದವರೆಗೆ ನಡೆದ ಯುದ್ಧದಲ್ಲಿ ಆ ರಣಾಂಗಣದಲ್ಲಿ ಕೆಲವು ಭಟರು ಸತ್ತರು. ಕೆಲವು ಭಟರು ಹೊಡೆಯಲ್ಪಟ್ಟರು. ಪಾಪಕರ್ಮವುಳ್ಳವರಾದ ಕೆಲವು ಭಟರು ಪ್ರಾಣತ್ಯಾಗದಲ್ಲಿ ಅಸಮರ್ಥರಾಗಿಯೂ ಕಂಠಗತಪ್ರಾಣರಾಗಿಯೂ ಇದ್ದರು. ಆಗ ''ಯಮನು ಎಲ್ಲಾ ಮನುಷ್ಯರನ್ನು ನುಂಗಿ ಜೀರ್ಣಿಸಿಕೊಳ್ಳುವುದಕ್ಕೆ ಶಕ್ತಿಯಿಲ್ಲದವನಾಗಿ ಇವರುಗಳನ್ನು ಕಕ್ಕಿದನು'' ಎಂದು ಸಂದೇಹವನ್ನುಂಟುಮಾಡುವವರೂ ಯುದ್ಧದಲ್ಲಿ ಜರ್ಜರಿತವಾದ ದೇಹವುಳ್ಳವರೂ ಇತ್ತತ್ತ ಚದರಿದವರೂ ಆದ ಭಟರು ತಮ್ಮನ್ನು ನೋಡುತ್ತಿರುವ ಯಮನಿಗೂ ಭಯರಸವನ್ನುಂಟುಮಾಡುತ್ತಾರೆ. ಈ ಯುದ್ಧದಲ್ಲಿ ಕತ್ತರಿಸಲ್ಪಟ್ಟ ಕಾಲುಗಳುಳ್ಳವೂ ಬಲಶಾಲಿಗಳೂ ಊರ್ಜಿತವಾದ ತೇಜಸ್ಸುಳ್ಳವೂ ಆದ ಕುದುರೆಗಳು ದೇಹದಿಂದಲೇ ಏಳುವುದಕ್ಕೆ ಪ್ರಯತ್ನಿಸಿದುವು. ಭಟರಿಂದ ಬಿಡಲ್ಪಟ್ಟ ಬಾಣಗಳ ನಿಡಿಗೋಲುಗಳಿಂದ ಕೀಲಿಸಲ್ಪಟ್ಟಿರುವ ಆನೆಗಳು, ಕರಗುತ್ತಿರುವ ಧಾತುಗಳ ಸ್ರವಿಸುವಿಕೆಯುಳ್ಳವೂ ಅಲ್ಪವಾದ ಬಿದಿರುಗಳುಳ್ಳವೂ ಆದ ಪರ್ವತಗಳಂತೆ, ಪ್ರಕಾಶಿಸಿದುವು. ಮುರಿದುಹೋದ ಚಕ್ರವೇ ಮೊದಲಾದ ಅವಯವಗಳಿಂದ ಎಲ್ಲಾ ಕಡೆಗಳಲ್ಲಿ ಚೆಲ್ಲಾಡಿದ ರಥಗಳು, ಆ ಯುದ್ಧವೆಂಬ ಸಮುದ್ರದ ಮಧ್ಯದಲ್ಲಿರುವ ಒಡೆದ ಹಡಗುಗಳಂತೆ, ಪ್ರಕಾಶಿಸಿದುವು. ಹೀಗೆ ಬಹುದಿನಗಳವರೆಗೆ ಉಭಯಸೈನ್ಯಗಳಿಗೆ ಯುದ್ಧವಾಯಿತು.

ಪ್ರಾಯೇಣ ವಿಮುಖೇ ದೈವೇ ಸ್ವಂ ಬಲಂ ವೀಕ್ಷ್ಯ ಭಂಗುರವ್ ।
ಸಂತಪ್ತೋ ಮಾಯಯಾ ಸೀತಾಶಿರಶ್ಛೇದಂ ದಶಾನನಃ ॥ ೧೦೮೯ ॥

ವಿಧಾಯ ತವ ದೇವೀಯಂ ಗೃಹಾಣೇತಿ ರುಷಾಕ್ಷಿಪತ್ ।
ಶಿರಸ್ತತ್ಪಶ್ಯತೋ ಭರ್ತುರ್ಹೃದಿ ಮೋಹೇ ಕೃತಾಸ್ಪದೇ ॥ ೧೦೯೦ ॥

ಖೇಚರೇಶ್ವರಸೈನ್ಯಸ್ಯ ಸಮೀಕ್ಷ್ಯ ಸಮರೋತ್ಸವಮ್ ।
ಸೀತಾಂ ಶೀಲವತೀಂ ಕಶ್ಚಿದಪಿ ಸ್ಪಷ್ಟುಂ ತ್ವಯಾ ವಿನಾ ॥ ೧೦೯೧ ॥

ಶಕ್ತೋ ನಾಸ್ತಿ ದಶಾಸ್ಯಸ್ಯ ಮಾಯೇಯಂ ಮಾತ್ರಗಾಃ ಶುಚಮ್ ।
ನಾಥೇತಿ ರಾಘವಂ ತಥ್ಯಮಬ್ರವೀದ್ರಾವಣಾನುಜಃ ॥ ೧೦೯೨ ॥

ಪ್ರಾಯಿಕವಾಗಿ ದೈವವು ವಿಮುಖವಾಗಿರುತ್ತಿರಲು ನಾಶವಾದ ತನ್ನ ಸೈನ್ಯವನ್ನು ನೋಡಿ ಸಂತಪ್ತನಾದ ದಶಮುಖನು ಮಾಯೆಯಿಂದ ಸೀತೆಯ ಶಿರಶ್ಛೇದವನ್ನು ಮಾಡಿ ''ಈಕೆಯು ನಿನ್ನ ದೇವಿ. ಗ್ರಹಣಮಾಡು'' ಎಂದು ಕೋಪದಿಂದ ಎಸೆದನು. ಆ ಶಿರಸ್ಸನ್ನು ನೋಡುತ್ತಿರುವ ಪ್ರಭುವಿನ ಹೃದಯದಲ್ಲಿ ಮೂರ್ಛೆಯು ಸ್ಥಾನವನ್ನು ಹೊಂದುತ್ತಿರಲು ಖೇಚರೇಶ್ವರ–ರಾವಣನ ಸೈನ್ಯದ ಯುದ್ಧೋತ್ಸವವನ್ನು ನೋಡಿ ರಾವಣನ ತಮ್ಮನಾದ ವಿಭೀಷಣನು ''ಶೀಲವತಿಯಾದ ಸೀತೆಯನ್ನು ನಿನ್ನಿಂದ ಹೊರತು ಯಾವನೂ ಮುಟ್ಟುವುದಕ್ಕೆ ಸಮರ್ಥನಾಗಿಲ್ಲ. ಇದು ದಶಮುಖನ ಮಾಯೆಯಾಗಿದೆ. ಸ್ವಾಮಿಯೆ ! ಈ ವಿಷಯದಲ್ಲಿ ಶೋಕವನ್ನು ಹೊಂದಬೇಡ'' ಎಂದು ರಾಘವನಿಗೆ ಸತ್ಯವನ್ನು ಹೇಳಿದನು.

ವಿಭೀಷಣಸ್ಯ ತದ್ವಾಕ್ಯಂ ಶ್ರದ್ಧಾಯ ರಘುನಂದನಃ ।
ಗಜಾರಿರ್ಗಜಯೂಥಂ ವಾ ಭಾಸ್ಕರೋ ವಾ ತಮಸ್ತತಿಮ್ ॥ ೧೦೯೩ ॥

ಬಲಂ ವಿಭೇದಯಾಮಾಸ ಸದ್ಯೋ ವಿದ್ಯಾಧರೇಶಿನಃ ।
ಪ್ರಕಾಶಯುದ್ಧಮುಜ್ಝಿತ್ಯ ಮಾಯಾಯುದ್ಧವಿಧಿತ್ಸಯಾ ॥ ೧೦೯೪ ॥

ಸ್ವಪುತ್ರೈಃ ಸಹ ಪೌಲಸ್ತ್ಯೋ ಲಂಘತೇ ಸ್ಮ ನಭೋಂಗಣಮ್ ।
ತಂ ವೀಕ್ಷ್ಯ ತದೃಶೇ ದಕ್ಷೌ ದುರೀಕ್ಷ್ಯಂ ರಾಮಲಕ್ಷ್ಮಣೌ ॥ ೧೦೯೫ ॥

ಗಜಾರಿವಿನತಾಸೂನುವಾಹಿನೀಭ್ಯಾಂ ಖಮುದ್ಯತೌ ।
ಸುಗ್ರೀವಾಣುಮದಾದ್ಯಾತ್ಮ ವಿದ್ಯಾಧರಬಲಾನ್ವಿತೌ ॥ ೧೦೯೬ ॥

ವಿಭೀಷಣನ ಆ ಮಾತನ್ನು ನಂಬಿ ರಘುನಂದನನು, ಸಿಂಹವು ಆನೆಗಳ ಸಮೂಹವನ್ನೂ ಸೂರ್ಯನು ಕತ್ತಲೆಗಳ ಸಮೂಹವನ್ನೂ ಭೇದಿಸುವಂತೆ, ತತ್ಕ್ಷಣದಲ್ಲಿ ವಿದ್ಯಾಧರೇಶ್ವರನ ಸೈನ್ಯವನ್ನು ಭೇದಿಸಿದನು. ಆಗ ಪೌಲಸ್ತ್ಯ–ರಾವಣನು ಪ್ರಕಾಶಯುದ್ಧವನ್ನು ತ್ಯಜಿಸಿ ಮಾಯಾಯುದ್ಧವನ್ನು ಮಾಡಬೇಕೆಂಬ ಇಚ್ಛೆಯಿಂದ ತನ್ನ ಪುತ್ರರೊಡನೆ ಆಕಾಶಕ್ಕೆ ನೆಗೆದನು. ಕಷ್ಟದಿಂದ ನೋಡಲ್ಪಡತಕ್ಕವನಾದ ಆ ರಾವಣನನ್ನು ನೋಡಿ ಆ ಮಾಯಾಯುದ್ಧದಲ್ಲಿ ಸಮರ್ಥರಾದ ರಾಮಲಕ್ಷ್ಮಣರು ಸುಗ್ರೀವ ಅಣುಮಾನ್ ಮೊದಲಾದ ತಮ್ಮ ವಿದ್ಯಾಧರಸೇನಾ ಸಮೇತರಾಗಿ ಸಿಂಹವಾಹಿನೀ ಗರುಡವಾಹಿನೀ ವಿದ್ಯೆಗಳೊಡನೆ ಅಣಿಯಾದರು.

ರಾವಣೇನ ಸಮಂ ರಾಮೋ ಲಕ್ಷ್ಮಣೋಪ್ಯಗ್ರಸೂನುನಾ ।
ಸುಗ್ರೀವಃ ಕುಂಭಕರ್ಣೇನ ಮರುತ್ತುಗ್ರವಿಕೀರ್ತಿನಾ ॥ ೧೦೯೭ ॥

ಖರೇಣ ಕೇತುರಬ್ಜಾದಿರಂಗದಶ್ಚೇಂದ್ರಕೀರ್ತಿನಾ ।
ಇಂದ್ರವರ್ಮಾಭಿಧಾನೇನ ಕುಮುದೋ ಯುದ್ಧವಿಶ್ರುತಃ ॥ ೧೦೯೮ ॥

ಖರದೂಷಣನಾಮ್ನಾಪಿ ನೀಲೋ ಮಾಯಾವಿಶಾರದಃ ।
ಏವಮನ್ಯೇಪಿ ತೈರನ್ಯೈ ರಾಮಭೃತ್ಯಾ ರಣೋದ್ಯತಾಃ ॥ ೧೦೯೯ ॥

ದಶಾಸ್ಯನಾಯಕೈಃ ಸಾರ್ಧಂ ಮಾಯಾಯುದ್ಧಮಕುರ್ವತ ।
ತದಾ ರಾಮೇಣ ಸಂಗ್ರಾಮೇ ಪರಿಭೂತಂ ದಶಾನನಮ್ ॥ ೧೧೦೦ ॥

ಅವಲೋಕ್ಯೇಂದ್ರಜಿನ್ಮಧ್ಯಂ ಪ್ರಾವಿಶದ್ವಾಸ್ಯ ಜೀವಿತಮ್ ।
ತಂ ಶಕ್ತ್ಯಾಪಾತಯದ್ರಾಮಸ್ತಂ ನಿರೀಕ್ಷ್ಯ ಖಗಾಧಿಪಃ ॥ ೧೧೦೧ ॥

ಕುಪಿತ್ವಾಧಾವದುದ್ದಿಶ್ಯ ಸಶಸ್ತ್ರೋ ಲಕ್ಷ್ಮಣಾಗ್ರಜಮ್ ।
ತನ್ಮಧ್ಯೇ ಲಕ್ಷ್ಮಣಸ್ತೂರ್ಣಮಭೂತ್ತಂ ದಶಕಂಧರಃ ॥ ೧೧೦೨ ॥

ಮಾಯಾಗಜಂ ಸಮಾರುಹ್ಯ ವ್ಯಧಾನ್ನಾರಾಚಪಂಜರೇ ।
ಪ್ರಹಾರಾವರಣೇನಾಶು ಪ್ರತಾಪೀ ಗರುಡಧ್ವಜಃ ॥ ೧೧೦೩ ॥

ಸಿಂಹಪೋತ ಇವೋದ್ದೃಪ್ತೋ ದುರ್ನಿವಾರ್ಯೋರಿವಾರಣೈಃ ।
ತತ್ಪಂಜರಂ ವಿಭಿದ್ಯಾಸೌ ನಿರ್ಯಯೌ ನಿಜವಿದ್ಯಯಾ ॥ ೧೧೦೪ ॥

ರಾಮನು ರಾವಣನೊಡನೆಯೂ ಲಕ್ಷ್ಮಣನು ಇಂದ್ರಜಿತ್ತಿನೊಡನೆಯೂ ಸುಗ್ರೀವನು ಕುಂಭಕರ್ಣನೊಡನೆಯೊ ವಾಯುಪುತ್ರನು ರವಿಕೀರ್ತಿಯೊಡನೆಯೂ ಕಮಲಕೇತುವು ಖರನೊಡನೆಯೂ ಅಂಗದನು ಇಂದ್ರಕೀರ್ತಿಯೊಡನೆಯೂ ಯುದ್ಧದಲ್ಲಿ ಪ್ರಖ್ಯಾತನಾದ ಕುಮುದನು ಇಂದ್ರವರ್ಮನೊಡನೆಯೂ ಮಾಯಾನಿಪುಣನಾದ ನೀಲನು ಖರದೂಷಣನೊಡನೆಯೂ ಹೀಗೆ ಯುದ್ಧದಲ್ಲಿ ಉದ್ಯುಕ್ತರಾದ ಬೇರೆ ರಾಮಭೃತ್ಯರೂ ರಾವಣನ ಕಡೆಯ ಆ ಬೇರೆ ಪ್ರಮುಖರೊಡನೆ ಮಾಯಾಯುದ್ಧವನ್ನು ಮಾಡಿದರು. ಆಗ ಯುದ್ಧದಲ್ಲಿ ರಾಮನಿಂದ ತಿರಸ್ಕೃತನಾದ ದಶಮುಖನನ್ನು ನೋಡಿ ಇಂದ್ರಜಿತು, ಈ ರಾವಣನ ಜೀವಿತದಂತೆ ಮಧ್ಯಭಾಗವನ್ನು ಪ್ರವೇಶಿಸಿದನು. ಅವನನ್ನು ರಾಮನು ಶಕ್ತ್ಯಾಯುಧದಿಂದ ಕೆಡಹಿದನು. ಅವನನ್ನು ನೋಡಿ ಖೇಚರಾಧಿಪತಿಯಾದ ರಾವಣನು ಕೋಪಗೊಂಡು ಶಸ್ತ್ರಸಹಿತನಾಗಿ ಲಕ್ಷ್ಮಣನ ಅಣ್ಣನನ್ನು ಉದ್ದೇಶಿಸಿ–ಇದಿರಾಗಿ ಓಡಿದನು. ಅವರೀರ್ವರ ಮಧ್ಯದಲ್ಲಿ ಲಕ್ಷ್ಮಣನು ಶೀಘ್ರವಾಗಿ ಪ್ರವೇಶಿಸಿದನು. ಆಗ ದಶಕಂಠನು ಮಾಯಾಗಜವನ್ನೇರಿ ಆ ಲಕ್ಷ್ಮಣನನ್ನು ಬಾಣಗಳ ನಿಡಿಗೋಲುಗಳ ಪಂಜರದಲ್ಲಿರಿಸಿದನು. ಪ್ರತಾಪಿಯೂ ಗರುಡಧ್ವಜನೂ ಸಿಂಹದ ಮರಿಯಂತೆ ಬಹುಗರ್ವಿತನೂ ಶತ್ರುಗಳೆಂಬ ಆನೆಗಳಿಂದ ಕಷ್ಟದಿಂದ ನಿವಾರಿಸಲ್ಪಡತಕ್ಕವನೂ ಆದ ಈ ಲಕ್ಷ್ಮಣನು ಶೀಘ್ರವಾಗಿ ಪ್ರಹಾರಾವರಣವೆಂಬ ತನ್ನ ವಿದ್ಯೆಯಿಂದ ಆ ಪಂಜರವನ್ನು ಭೇದಿಸಿ ಹೊರಟನು.

**ದೃಷ್ಟ್ವಾ ತದ್ರಾವಣಃ ಕ್ರುದ್ಧ್ವಾ ಪ್ರತೀತಂ ಚಕ್ರಮಾದಿಶತ್ ।**
**ಸಿಂಹನಾದಂ ತದಾಕುರ್ವನ್ ಗಗನೇ ನಾರದಾದಯಃ ॥ ೧೧೦೫ ॥**

ಅದನ್ನು ನೋಡಿ ರಾವಣನು ಕೋಪಗೊಂಡು ಪ್ರಸಿದ್ಧವಾದ ಚಕ್ರಕ್ಕೆ ಆಜ್ಞೆಮಾಡಿದನು. ಲಕ್ಷ್ಮಣನ ಮೇಲೆ ಚಕ್ರವನ್ನು ಪ್ರಯೋಗಿಸಿದನೆಂದು ಭಾವವು. ಆಗ ಆಕಾಶದಲ್ಲಿ ನಾರದನೇ ಮೊದಲಾದವರು ಸಿಂಹನಾದವನ್ನು ಮಾಡಿದರು.

**ಬಾಹೌ ಪ್ರದಕ್ಷಿಣೀಕೃತ್ಯ ದಕ್ಷಿಣೇ ಸ್ವಸ್ಯ ತಿಷ್ಠತಾ ।**
**ಚಕ್ರೇಣ ವಿಕ್ರಮೇಣೇವ ಮೂರ್ತೀಭೂತೇನ ಚಕ್ರಿಣಾ ॥ ೧೧೦೬ ॥**

**ತೇನ ತೇನ ಶಿರೋಗ್ರಾಹಿ ತ್ರಿಖಂಡಂ ವಾ ಖಗೇಶಿತುಃ ।**
**ಸೋಪಿ ಪ್ರಾಗೇವ ಬದ್ಧಾಯುರ್ದುರಾಚಾರಾದಧೋಗತಿಮ್॥ ೧೧೦೭ ॥**

**ಪ್ರಾಪದಾಪತ್ಕರೀಂ ಘೋರಾಂ ಪಾಪಿನಾಂ ಕಾ ಪರಾ ಗತಿಃ ।**
**ವಿಜಯಾಬ್ಜಂ ಸಮಾಪೂರ್ಯ ಕೇಶವೋ ವಿಶ್ವವಿದ್ವಿಷಾಮ್ ॥ ೧೧೦೮ ॥**

**ಅಭಯಂ ಘೋಷಯಾಮಾಸ ಸ ಧರ್ಮೋ ಜಿತಭೂಭುಜಾಮ್ ।**
**ತದಾವಶಿಷ್ಟಪೌಲಸ್ತ್ಯಮಹಾಮಾತ್ರಾದಯೋಲಿವತ್ ॥ ೧೧೦೯ ॥**

**ಮಲಿನಾ ಬಲಚಕ್ರೇಶಪಾದಪಂಕಜಮಾಶ್ರಯನ್ ।**
**ಮಂಡೋದರ್ಯಾದಿತದ್ದೇವೀದುಃಖನೋದನಪೂರ್ವಕಮ್॥ ೧೧೧೦ ॥**

**ವಿಭೀಷಣಾಯ ಲಂಕೈಶ್ಯಪಟ್ಟಬಂಧಂ ವಿಧಾಯ ತೌ ।**
**ದಶಕಂಠಾನ್ವಯಾಯಾತವಿಶ್ವಭುಕ್ತಿಂ ವಿತೇರತುಃ ॥ ೧೧೧೧ ॥**

ಪ್ರದಕ್ಷಿಣೆಮಾಡಿ ತನ್ನ ಬಲದ ಭುಜದಲ್ಲಿ ನಿಂತ ಆ ಚಕ್ರದಿಂದ ಮೂರ್ತೀಭೂತವಾದ ಪರಾಕ್ರಮವೋ ಎಂಬಂತಿರುವ ಆ ಚಕ್ರವರ್ತಿ-ಲಕ್ಷ್ಮಣನಿಂದ, ತ್ರಿಖಂಡವು ಪರಿಗ್ರಹಿಸಲ್ಪಡುವಂತೆ, ಖೇಚರೇಶ್ವರನಾದ ರಾವಣನ ಶಿರಸ್ಸು ಪರಿಗ್ರಹಿಸಲ್ಪಟ್ಟಿತು. ಲಕ್ಷ್ಮಣನು ಅದೇ ಚಕ್ರದಿಂದ ರಾವಣನ ತಲೆಯನ್ನು ಚೆಂಡಾಡಿ ತ್ರಿಖಂಡವನ್ನು ಸ್ವಾಧೀನಪಡಿಸಿಕೊಂಡನೆಂದು ಭಾವವು. ದುರಾಚಾರದಿಂದ ಮೊದಲೇ ಬದ್ಧವಾದ ಆಯುಷ್ಯವುಳ್ಳ ಆ ರಾವಣನೂ ಆಪತ್ತನ್ನುಂಟುಮಾಡುವುದೂ ಭಯಂಕರವೂ ಆದ ಅಧೋಗತಿಯನ್ನು ಹೊಂದಿದನು. ಪಾಪಿಗಳಿಗೆ ಬೇರೆ ಗತಿ ಯಾವುದು ? ಇತ್ತ ಕೇಶವನು ವಿಜಯಶಂಖವನ್ನೂದಿ ಸಮಸ್ತಶತ್ರುಗಳಿಗೆ ಅಭಯವನ್ನು ಘೋಷಣೆಮಾಡಿದನು. ಜಯಿಸಿದ ರಾಜರುಗಳಿಗೆ ಅದು ಧರ್ಮವಾಗಿದೆ. ಆಗ ರಾವಣನ ಉಳಿದ ಮಹಾಪರಿವಾರಜನರೇ ಮೊದಲಾದವರು, ದುಂಬಿಗಳಂತೆ ಮಲಿನ-ಖಿನ್ನರಾಗಿ ಬಲಭದ್ರನ ಮತ್ತು ಚಕ್ರೇಶ-ಲಕ್ಷ್ಮಣನ ಚರಣಕಮಲವನ್ನಾಶ್ರಯಿಸಿದರು. ಆ ರಾಮಲಕ್ಷ್ಮಣರು ಮಂಡೋದರಿಯೇ ಮೊದಲಾದ ಆ ರಾವಣನ ಪತ್ನಿಯರ ದುಃಖನಿವಾರಣಪೂರ್ವಕವಾಗಿ ವಿಭೀಷಣನಿಗೆ ಲಂಕಾಧಿಪತ್ಯದ ಪಟ್ಟವನ್ನು ಕಟ್ಟಿ ದಶಕಂಠನ ವಂಶಪರಂಪರೆಯಿಂದ ಬಂದ ರಾಜ್ಯಭೋಗವನ್ನು ಕೊಟ್ಟರು.

**ಅಭೂತಾಂ ಚ ತ್ರಿಖಂಡೇಶೌ ಪ್ರಚಂಡೌ ಬಲಕೇಶವೌ ।**
**ಅಥ ಶೀಲವತೀಂ ಸೀತಾಮಶೋಕವನಮಧ್ಯಗಾಮ್ ॥ ೧೧೧೨ ॥**

**ಸಂಗ್ರಾಮವಿಜಯಾಕರ್ಣನೋದೀರ್ಣಪ್ರಮದಾನ್ವಿತಾಮ್ ।**
**ರಾವಣಾನುಜಸುಗ್ರೀವಪವಮಾನಾತ್ಮಜಾದಯಃ ॥ ೧೧೧೩ ॥**

**ಗತ್ವಾ ಯಥೋಚಿತಂ ದೃಷ್ಟ್ವಾ ಜ್ಞಾಪಯಿತ್ವಾ ಜಯೋತ್ಸವಮ್ ।**
**ಸಮಯುಯುಂಜತ ರಾಮೇಣ ಸಮಂ ಲಕ್ಷ್ಮೀಮಿವಾಪರಾಮ್ ॥ ೧೧೧೪ ॥**

**ಮಹಾಮಣಿಂ ವಾ ಹಾರೇಣ ಕುಶಲಾಃ ಕವಯೋ ಯಥಾ ।**
**ವಾಚಂ ಮನೋಹರಾರ್ಥೇನ ಸಂತೋ ಧರ್ಮೇಣ ವಾ ಧಿಯಮ್ ॥**

ಪ್ರಚಂಡರಾದ ಆ ಬಲಕೇಶವರು ತ್ರಿಖಂಡಾಧಿಪತಿಗಳೂ ಆದರು. ಬಳಿಕ ವಿಭೀಷಣ ಸುಗ್ರೀವ ಆಂಜನೇಯನೇ ಮೊದಲಾದವರು ಯುದ್ಧವಿಜಯವನ್ನು ಕೇಳಿದುದರಿಂದುಟಾದ ಸಂತೋಷದಿಂದ ಕೂಡಿದವಳೂ ಅಶೋಕವನದ ಮಧ್ಯದಲ್ಲಿರುವವಳೂ ಶೀಲವತಿಯೂ ಆದ ಸೀತೆಯನ್ನು ಕಂಡು ಯಥೋಚಿತವಾಗಿ ಆಕೆಯನ್ನು ನೋಡಿ ಜಯೋತ್ಸವವನ್ನು ತಿಳಿಸಿ, ಮಹಾರತ್ನವನ್ನು ಹಾರದೊಡನೆಯೂ ಚತುರರಾದ ಕವಿಗಳು ವಚನವನ್ನು ಮನೋಹರವಾದ ಅರ್ಥದೊಡನೆಯೂ ಸತ್ಪುರುಷರು ಬುದ್ಧಿಯನ್ನು ಧರ್ಮದೊಡನೆಯೂ ಸೇರಿಸುವಂತೆ, ಆಕೆಯನ್ನು ಬೇರೊಬ್ಬಳು ಲಕ್ಷ್ಮಿಯನ್ನೋಪಾದಿಯಲ್ಲಿ ರಾಮನೊಡನೆ ಸೇರಿಸಿದರು.

**ಸದ್ಭೃತ್ಯಮಿತ್ರಸಂಬಂಧಾದ್ಭವಂತೀಪ್ಸಿತಸಿದ್ಧಯಃ ।**
**ವಹಂತೀ ಜಾನಕೀ ದುಃಖಮಾಪ್ರಾಣಪ್ರಿಯದರ್ಶನಾತ್ ॥ ೧೧೧೬ ॥**

**ರಾಮೋಪಿ ತದ್ವಿಯೋಗೋತ್ಥಶೋಕವ್ಯಾಕುಲಿತಾಶಯಃ ।**
**ತೌ ಪರಸ್ಪರಸಂದರ್ಶಾತ್ಪರಾಂ ಪ್ರೀತಿಮವಾಪತುಃ ॥ ೧೧೧೭ ॥**

ಉತ್ತಮಭೃತ್ಯರ ಮತ್ತು ಮಿತ್ರರ ಸಂಬಂಧದಿಂದ ಇಷ್ಟಾರ್ಥಸಿದ್ಧಿಗಳಾಗುತ್ತವೆ. ಜಾನಕಿಯು ತನ್ನ ಪ್ರಾಣಪ್ರಿಯನ ದರ್ಶನದವರೆಗೆ ದುಃಖವನ್ನು ಹೊಂದಿದವಳಾಗಿರುತ್ತಾಳೆ. ರಾಮನೂ ಆಕೆಯ ವಿಯೋಗದಿಂದುಂಟಾದ ಶೋಕದಿಂದ ವ್ಯಾಕುಲವಾದ ಚಿತ್ತವುಳ್ಳವನಾಗಿರುತ್ತಾನೆ. ಆ ದಂಪತಿಗಳು ಒಬ್ಬರನ್ನೊಬ್ಬರು ನೋಡಿದುದರಿಂದ ಅಧಿಕವಾದ ಪ್ರೀತಿಯನ್ನು ಹೊಂದಿದರು.

**ತೃತೀಯಪ್ರಕೃತಿಂ ಪ್ರಾಪ್ಯ ನೃಪೋ ವಾ ಸಾಪಿ ವಾ ನೃಪಮ್ ।**
**ಆರಭ್ಯ ವಿರಹಾದ್ವೃತ್ತಂ ಯದ್ಯತ್ತತ್ತದಪೃಚ್ಛತಾಮ್ ॥ ೧೧೧೮ ॥**

ಮೂರನೆಯದಾದ ಮಿತ್ರಸ್ವಭಾವವನ್ನು ಹೊಂದಿ ದೊರೆಯೂ ದೊರೆಯನ್ನು ಹೊಂದಿ ಆ ಸೀತೆಯೂ ತಮ್ಮ ವಿರಹವಾದಂದಿನಿಂದ ಏನೇನು ನಡೆಯಿತೋ ಅದನ್ನು ಕೇಳಿದರು.

**ಅನ್ಯೋನ್ಯಸುಖದುಃಖಾನಿ ನಿವೇದ್ಯ ಸುಖಿನಃ ಪ್ರಿಯಾಃ ।**
**ಕೃತದೋಷೋ ಹತಃ ಸೀತಾ ನಿರ್ದೋಷೇತಿ ನಿರೂಪ್ಯ ತಾಮ್ ॥**

**ಸ್ವೀಕರೋದ್ರಾಘವಃ ಸಂತೋ ವಿಚಾರಾನುಚರಾಃ ಸದಾ ।**
**ತತೋ ಲಂಕಾಪುರೋಗಚ್ಛತ್ಸ್ಫುರತ್ಪೀಠಗಿರೌ ಸ್ಥಿತಮ್ ॥ ೧೧೨೦ ॥**

ಪ್ರಿಯಜನರು ಪರಸ್ಪರವಾಗಿ ಸುಖದುಃಖಗಳನ್ನು ತಿಳಿಸಿ ಸುಖಿಗಳಾದರು. ''ದೋಷವನ್ನು ಮಾಡಿದ ರಾವಣನು ಕೊಲ್ಲಲ್ಪಟ್ಟನು. ಸೀತೆಯು ನಿರ್ದೋಷಳು'' ಎಂದು ಕಂಡು ಆಕೆಯನ್ನು ರಾಘವನು ಸ್ವೀಕರಿಸಿದನು. ಸತ್ಪುರುಷರು ಯಾವಾಗಲೂ ವಿಚಾರಾನುಸಾರಿಗಳಾಗಿರುತ್ತಾರೆ. ಬಳಿಕ ರಾಮನು ಲಂಕಾನಗರದಿಂದ ಹೊರಟು ಹೋದನು. ಪ್ರಕಾಶಮಾನವಾದ ಪೀಠಗಿರಿಯಲ್ಲಿ ನಿವಾಸವಾಯಿತು.

**ತತ್ರ್ಯಾಭಿಷವಂ ಪ್ರಾಪ್ಯ ಸರ್ವತೀರ್ಥಾಂಬುಸಂಭೃತೈಃ ।**
**ಅಷ್ಟೋತ್ತರಸಹಸ್ರೋರುಸುವರ್ಣಕಲಶೈರ್ಮುದಾ ॥ ೧೧೨೧ ॥**

**ದೇವವಿದ್ಯಾಧರಾಧೀಶೈಃ ಸ್ವಹಸ್ತೇನ ಸಮುದ್ಧೃತೈಃ ।**
**ಕೋಟಿಕಾಖ್ಯಶಿಲಾಂ ತಸ್ಮಿನ್ನುಜ್ಜಹ್ರೇ ರಾಘವಾನುಜಃ ॥ ೧೧೨೨ ॥**

**ತನ್ಮಾಹಾತ್ಮ್ಯಪ್ರತುಷ್ಟಂ ಸತ್ಸಿಂಹನಾದಂ ವ್ಯಧಾದ್ಬಲಮ್ ।**
**ತನ್ನಿವಾಸೀ ಸುನಂದಾಖ್ಯೋ ಯಕ್ಷಃ ಸಂಪೂಜ್ಯ ತೌ ಮುದಾ॥ ೧೧೨೩ ॥**

**ಅಸಿಂ ಸೌನಂದಕಂ ನಾಮ್ನಾ ಸಮಾನಂ ಚಕ್ರಿಣೇದಿತ ।**
**ಅನುಗಂಗಂ ತತೋ ಗತ್ವಾ ಗಂಗಾದ್ವಾರಸಮೀಪಗೇ ॥ ೧೧೨೪ ॥**

ವನೇ ನಿವೇಶ್ಯ ಶಿಬಿರಂ ರಥಮಾರುಹ್ಯ ಚಕ್ರಭೃತ್ ।
ಗೋಪುರೇಣ ಪ್ರವಿಶ್ಯಾಬ್ಧಿಂ ನಿಜನಾಮಾಂಕಿತಂ ಶರಮ್ ॥ ೧೧೨೫ ॥

ಮಾಗಧಾವಾಸಮುದ್ದಿಶ್ಯ ವ್ಯಮುಂಚತ್ಕುಂಚಿತಕ್ರಮಃ ।
ಮಾಗಧೋಪಿ ಶರಂ ವೀಕ್ಷ್ಯ ಮತ್ವಾ ಸ್ವಂ ಸ್ವಲ್ಪಪುಣ್ಯಕಮ್ ॥ ೧೧೨೬ ॥

ಅಭಿಷ್ಟುವನ್ಮಹಾಪುಣ್ಯಶ್ಚಕ್ರವರ್ತೀತಿ ಲಕ್ಷ್ಮಣಮ್ ।
ರತ್ನಹಾರಂ ಕಿರೀಟಂ ಚ ಕುಂಡಲಂ ಶರಮಪ್ಯಮುಮ್ ॥ ೧೧೨೭ ॥

ತೀರ್ಥಾಂಬುಪೂರ್ಣಕುಂಭಾಂತರ್ಗತಮಸ್ಮೈ ದದೌ ಸುರಃ ।
ತತೋನುಜಲಧಿಂ ಗತ್ವಾ ವೈಜಯಂತಾಖ್ಯಗೋಪುರೇ ॥ ೧೧೨೮ ॥

ವಶೀಕೃತ್ಯ ಯಥಾಪ್ರಾಚ್ಯಂ ತಥಾ ವರತನುಂ ಚ ತಮ್ ।
ಕಟಕಂ ಸಾಂಗದಂ ಚೂಡಾಮಣಿಂ ಮೌಲಿವಿಭೂಷಣಮ್ ॥ ೧೧೨೯ ॥

ಗ್ರೈವೇಯಕಂ ತತಶ್ಚಕ್ರೀ ಕಟೀಸೂತ್ರಂ ಚ ಲಬ್ಧವಾನ್ ।
ತತಃ ಪ್ರತೀಚೀಮಾಗತ್ಯ ಸಬಲಃ ಸಿಂಧುಗೋಪುರೇ ॥ ೧೧೩೦ ॥

ಪ್ರವಿಶ್ಯಾಬ್ಧಿಂ ಪ್ರಭಾಸಂ ಚ ವಿನತೀಕೃತ್ಯ ಪೂರ್ವವತ್ ।
ಮಾಲಾಂ ಸಂತಾನಕಾಖ್ಯಾನಾಂ ಮುಕ್ತಾಜಾಲಪ್ರಲಂಬಕಮ್ ॥ ೧೧೩೧ ॥

ಶ್ವೇತಚ್ಛತ್ರಂ ತತೋ ಭೂಷಣಾನ್ಯನ್ಯಾನ್ಯಪಿ ಚಾದದೌ ।
ತತಃ ಸಿಂಧೋಸ್ತಟೇ ಗಚ್ಛನ್ ಪ್ರತೀಚೀಖಂಡವಾಸಿನಃ ॥ ೧೧೩೨ ॥

ಸ್ವಕೀಯಾಂ ಶ್ರಾವಯಿತ್ವಾಜ್ಞಾಂ ಸಾರವಸ್ತೂನಿ ಚಾದದತ್ ।
ಐಂದ್ರಾಶಾಭಿಮುಖೋ ಭೂತ್ವಾ ವಿಜಯಾರ್ಧನಿವಾಸಿನಃ ॥ ೧೧೩೩ ॥

ವಿನಮಯ್ಯ ಗಜಾಶ್ವಾಸ್ತ್ರವಿದ್ಯಾಧರಕುಮಾರಿಕಾಃ ।
ರತ್ನಾನಿ ಚಾತ್ಮಸಾತ್ಕೃತ್ಯ ಪೂರ್ವಖಂಡನಿವಾಸಿನಃ ॥ ೧೧೩೪ ॥

ವಿಧಾಯ ಕರದಾನ್ಮ್ಲೇಚ್ಛಾನ್ ವಿಜಯೀ ನಿರ್ಗತಸ್ತತಃ ।
ದ್ವಿಗುಣಾಷ್ಟಸಹಸ್ರಾಣಿ ಪಟ್ಟಬಂಧಾನ್ಮಹೀಭುಜಃ ॥ ೧೧೩೫ ॥

ದಶೋತ್ತರಶತಖ್ಯಾತಪುರಾಧೀಶಾನ್ ಖಗೇಶಿನಃ ।
ತ್ರಿಖಂಡವಾಸಿದೇವಾಂಶ್ಚ ವಿಧಾಯಾಜ್ಞಾವಿಧಾಯಿನಃ ॥ ೧೧೩೬ ॥

ದ್ವಾಚತ್ವಾರಿಂಶದಬ್ದಾಂತೇ ಪರಿನಿಷ್ಠಿತದಿಗ್ಜಯಃ ।
ಕೃತಾಂಜಲಿಭಿರಾಸೇವ್ಯೋ ದೇವಖೇಚರಭೂಚರೈಃ ॥ ೧೧೩೭ ॥

ಅಗ್ರಜಾಗ್ರೇಸರಶ್ಚಕ್ರೀ ಸಚಕ್ರಃ ಸರ್ವಪೂಜಿತಃ ।
ಕೃತಮಂಗಲನೇಪಥ್ಯಾಂ ಪ್ರಾರ್ಥ್ಯಮಾನಸಮಾಗಮಾಮ್ ॥ ೧೧೩೮ ॥

ಕಾಂತಾಮಿವ ವಿನೀತಾಂ ತಾಂ ಶಕ್ರವತ್ಪ್ರಾವಿಶತ್ಪುರೀಮ್ ।
ಲಗ್ನಗೋಚರಸಂಶುದ್ಧಶುಭವೇಲಾದಿಸನ್ನಿಧೌ ॥ ೧೧೩೯ ॥

ನರವಿದ್ಯಾಧರವ್ಯಂತರಾಧಿಪಪ್ರಮುಖಾಃ ಸಮಮ್ ।
ಸಿಂಹಾಸನಂ ಸಮಾರೋಪ್ಯ ಶ್ರೀಮಂತೌ ರಾಮಲಕ್ಷ್ಮಣೌ ॥ ೧೧೪೦ ॥

ತೀರ್ಥಾಂಬುಪೂರ್ಣಸೌವರ್ಣಸಹಸ್ರಾಷ್ಟಮಹಾಘಟೈಃ ।
ಅಭಿಷಿಚ್ಯ ತ್ರಿಖಂಡಾಧಿರಾಜೌ ಸಂಪೂಜಿತೌ ಯುವಾಮ್ ॥ ೧೧೪೧ ॥

ಪ್ರವರ್ಧಮಾನಲಕ್ಷ್ಮೀಕಾವಾಶಾರುದ್ಧಯಶೋಜುಷೌ ।
ಇತ್ಯಾರೋಪಿತರತ್ನೋರುಮುಕುಟೌ ಮಣಿಭೂಷಣೈಃ ॥ ೧೧೪೨ ॥

ಅಲಂಕೃತ್ಯ ಮಹಾಶೀರ್ಭಿರ್ವರ್ಧಯಾಮಾಸುರುತ್ಸುಕಾಃ ।
ಪೃಥಿವೀಸುಂದರೀಮುಖ್ಯಾಃ ಕೇಶವಸ್ಯ ಮನೋರಮಾಃ ॥ ೧೧೪೩ ॥

ದ್ವಿಗುಣಾಷ್ಟಸಹಸ್ರಾಣಿ ದೇವ್ಯಃ ಸತ್ಯೋಭವನ್ ಶ್ರಿಯಃ ।
ಸೀತಾದ್ಯಷ್ಟಸಹಸ್ರಾಣಿ ರಾಮಸ್ಯ ಪ್ರಾಣವಲ್ಲಭಾಃ ॥ ೧೧೪೪ ॥

ಅಲ್ಲಿಯೇ ಸಮಸ್ತತೀರ್ಥಜಲಗಳಿಂದ ತುಂಬಲ್ಪಟ್ಟಿರುವುವೂ ದೇವರ್ಕಳಿಂದಲೂ ವಿದ್ಯಾಧರಾಧಿಪತಿಗಳಿಂದಲೂ ಸ್ವಹಸ್ತದಿಂದ ಎತ್ತಲ್ಪಟ್ಟಿರುವುವೂ ದೊಡ್ಡವೂ ಆದ ಸಾವಿರದೆಂಟು ಸುವರ್ಣಕಲಶಗಳಿಂದ ಸಂತೋಷದಿಂದ ಅಭಿಷೇಕವನ್ನು ಹೊಂದಿದರು. ರಾಘವನ ಅನುಜನು ಆ ಪರ್ವತದಲ್ಲಿ ಕೋಟಿಕವೆಂಬ ಶಿಲೆಯನ್ನೆತ್ತಿದನು. ಆ ಮಹಿಮೆಯಿಂದ ಸಂತುಷ್ಟವಾಗಿ ಸೈನ್ಯವು ಸಿಂಹನಾದವನ್ನು ಮಾಡಿತು. ಆ ಪರ್ವತನಿವಾಸಿಯಾದ ಸುನಂದನೆಂಬ ಯಕ್ಷನು ಸಂತೋಷದಿಂದ ಆ ರಾಮಲಕ್ಷ್ಮಣರನ್ನು ಪೂಜಿಸಿ ಚಕ್ರವರ್ತಿ–ಲಕ್ಷ್ಮಣನಿಗೆ ಮಾನದೊಡನೆ ಸೌನಂದಕವೆಂಬ ಖಡ್ಗವನ್ನು ಕೊಟ್ಟನು. ಅಲ್ಲಿಂದ ಗಂಗೆಯನ್ನನುಸರಿಸಿ ಹೋಗಿ ಗಂಗಾದ್ವಾರದ ಸಮೀಪದಲ್ಲಿರುವ ವನದಲ್ಲಿ ಸೈನ್ಯವನ್ನಿರಿಸಿ ಚಕ್ರವರ್ತಿ–ಲಕ್ಷ್ಮಣನು ರಥವನ್ನೇರಿ ಗೋಪುರದಿಂದ ಸಮುದ್ರವನ್ನು ಪ್ರವೇಶಿಸಿ ಕಾಲನ್ನು ಸಂಕೋಚಗೊಳಿಸಿದವನಾಗಿ ತನ್ನ ಹೆಸರಿನ ಗುರುತುಳ್ಳ ಬಾಣವನ್ನು ಮಾಗಧದೇವನ ವಾಸಸ್ಥಾನಕ್ಕೆ ಗುರಿಯಿಟ್ಟು ಬಿಟ್ಟನು. ಮಾಗಧಾಮರನೂ ಬಾಣವನ್ನು ನೋಡಿ ತನ್ನನ್ನು ಸ್ವಲ್ಪಪುಣ್ಯವುಳ್ಳವನನ್ನಾಗಿ ತಿಳಿದು ಚಕ್ರವರ್ತಿಯು ಮಹಾಪುಣ್ಯವುಳ್ಳವನೆಂದು ಲಕ್ಷ್ಮಣನನ್ನು ಸ್ತುತಿಸುವವನಾಗಿ ರತ್ನಹಾರವನ್ನೂ ಕಿರೀಟವನ್ನೂ ಕುಂಡಲವನ್ನೂ ತೀರ್ಥಜಲದಿಂದ ತುಂಬಿದ ಕುಂಭದೊಳಗಿರುವ ಈ ಚಕ್ರಿಬಾಣವನ್ನೂ ಸಂತೋಷದಿಂದ ಈ ಲಕ್ಷ್ಮಣನಿಗೆ ಕೊಟ್ಟನು. ಅಲ್ಲಿಂದ ಸಮುದ್ರವನ್ನನುಸರಿಸಿ ಹೋಗಿ ವೈಜಯಂತ ಗೋಪುರದಲ್ಲಿ ಮೊದಲಿನಂತೆ ವರತನುದೇವನನ್ನೂ ವಶಮಾಡಿ ಅವನಿಂದ ಚಕ್ರವರ್ತಿಯು ಕಡಗವನ್ನೂ ಕಂಠಾಭರಣವನ್ನೂ ಉಡುದಾರವನ್ನೂ ಪಡೆದನು. ಅಲ್ಲಿಂದ ಬಲಸಮೇತನಾಗಿ ಪಶ್ಚಿಮದಿಕ್ಕಿಗೆ ಬಂದು ಸಿಂಧುಗೋಪುರದಲ್ಲಿ ಸಮುದ್ರವನ್ನು ಪ್ರವೇಶಿಸಿ ಮೊದಲಿನಂತೆ ಪ್ರಭಾಸದೇವನನ್ನು ವಿನಮ್ರನನ್ನಾಗಿ ಮಾಡಿ ಅವನಿಂದ ಸಂತಾನಕವೆಂಬ ಮಾಲೆಯನ್ನೂ ಮುತ್ತುಗಳ ಸರಗಳು ಜೋಲುತ್ತಿರುವ ಶ್ವೇತಛತ್ರವನ್ನೂ ಆಭರಣಗಳನ್ನೂ ಬೇರೆ ವಸ್ತುವನ್ನೂ ತೆಗೆದುಕೊಂಡನು. ಅಲ್ಲಿಂದ ಸಮುದ್ರತೀರದಲ್ಲಿ ಪ್ರಯಾಣಮಾಡುವವನಾಗಿ ಪಶ್ಚಿಮಖಂಡದಲ್ಲಿ ವಾಸಮಾಡುವವರಿಗೆ ತನ್ನ ಆಜ್ಞೆಯನ್ನು ಕೇಳಿಸಿ ಅವರಿಂದ ಸಾರವಸ್ತುಗಳನ್ನು ತೆಗೆದುಕೊಂಡನು. ಇಂದ್ರದಿಕ್ಕಿಗೆ ಅಭಿಮುಖನಾಗಿ ವಿಜಯಾರ್ಧಪರ್ವತನಿವಾಸಿಗಳನ್ನು ವಿನೀತರನ್ನಾಗಿ ಮಾಡಿ ಅವರಿಂದ ಆನೆಗಳನ್ನೂ ಕುದುರೆಗಳನ್ನೂ ಅಸ್ತ್ರಗಳನ್ನೂ ವಿದ್ಯಾಧರಕುಮಾರಿಯರನ್ನೂ ರತ್ನಗಳನ್ನೂ ಸ್ವಾಧೀನಪಡಿಸಿಕೊಂಡು ಪೂರ್ವಖಂಡನಿವಾಸಿಗಳಾದ ಮ್ಲೇಚ್ಛರನ್ನು ಕಂದಾಯಕೊಡುವವರನ್ನಾಗಿ ಮಾಡಿ ಜಯಶೀಲನಾಗಿ ಅಲ್ಲಿಂದ ಹೊರಟನು. ಹದಿನಾರು ಸಹಸ್ರ ಮುಕುಟಬದ್ಧರಾಜರುಗಳನ್ನೂ ನೂರಹತ್ತು ಪಟ್ಟಣಗಳ ದೊರೆಗಳಾದ ಖೇಚರಾಧಿಪತಿಗಳನ್ನೂ ತ್ರಿಖಂಡಗಳಲ್ಲಿ ವಾಸಮಾಡುವ ದೇವರ್ಕಳನ್ನೂ ಆಜ್ಞಾಧಾರಕರನ್ನಾಗಿ ಮಾಡಿ ನಾಲ್ವತ್ತೆರಡು ವರ್ಷಗಳ ಕೊನೆಯಲ್ಲಿ ದಿಗ್ವಿಜಯವನ್ನು ಪೂರ್ತಿಮಾಡಿದವನೂ ಕೈಮುಗಿದಿರುವ ದೇವರ್ಕಳಿಂದಲೂ ಖೇಚರರಿಂದಲೂ ಭೂಚರರಿಂದಲೂ ಚೆನ್ನಾಗಿ ಸೇವಿಸಲ್ಪಡುವವನೂ ಅಗ್ರೇಸರನಾದ ಅಣ್ಣನುಳ್ಳವನೂ ಚಕ್ರಸಹಿತನೂ ಎಲ್ಲರಿಂದಲೂ ಪೂಜಿಸಲ್ಪಟ್ಟವನೂ ಆಗಿ ಮಂಗಲಾಲಂಕಾರಗಳುಳ್ಳವಳೂ ಸಮಾಗಮವನ್ನು ಪ್ರಾರ್ಥಿಸುವವಳೂ ವಿನಯವುಳ್ಳವಳೂ ಆದ ಸ್ತ್ರೀಯನ್ನು ಹೊಂದುವಂತೆ, ಮಂಗಲಾಲಂಕಾರಗಳುಳ್ಳದೂ ಸಮಾಗಮವನ್ನು ಪ್ರಾರ್ಥಿಸುವುದೂ ಆದ ಆ ಅಯೋಧ್ಯಾಪುರವನ್ನು, ಇಂದ್ರನಂತೆ ಪ್ರವೇಶಿಸಿದನು. ದಿಗ್ವಿಜಯವನ್ನು ಮಾಡಿಕೊಂಡು ಬಂದು ಲಕ್ಷ್ಮಣನು ಅಣ್ಣನೊಡನೆ ಪುರಪ್ರವೇಶವನ್ನು ಮಾಡಿದನೆಂದು ಭಾವವು. ಲಗ್ನಗೋಚಾರಗಳಿಂದ ಪರಿಶುದ್ಧವಾದ ಶುಭಮುಹೂರ್ತಾದಿಗಳ ಸಾನ್ನಿಧ್ಯದಲ್ಲಿ ನರೇಂದ್ರರು ವಿದ್ಯಾಧರೇಂದ್ರರು ವ್ಯಂತರೇಂದ್ರರು ಮೊದಲಾದವರು ಸೇರಿ ಉತ್ಸುಕರಾಗಿ ಶ್ರೀಮಂತರಾದ ರಾಮಲಕ್ಷ್ಮಣರನ್ನು ಸಿಂಹಾಸನವನ್ನೇರಿಸಿ ತೀರ್ಥಜಲಗಳಿಂದ ಪೂರ್ಣರಾದ ಸಾವಿರದೆಂಟು ಸುವರ್ಣಮಹಾಕುಂಭಗಳಿಂದ ಅಭಿಷೇಕವನ್ನು ಮಾಡಿ ''ನೀವುಗಳು ತ್ರಿಖಂಡಾಧಿಪತಿಗಳೂ ಪೂಜಿಸಲ್ಪಟ್ಟವರೂ ಹೆಚ್ಚುತ್ತಿರುವ ಸಂಪತ್ತಿಯುಳ್ಳವರೂ ದಿಕ್ಕುಗಳಲ್ಲಿ ವ್ಯಾಪ್ತವಾದ ಯಶಸ್ಸನ್ನು ಹೊಂದಿರುವವರೂ ಆಗಿರುತ್ತೀರಿ'' ಎಂದು

ತಲೆಯ ಮೇಲಿರಿಸಲ್ಪಟ್ಟ ರತ್ನಖಚಿತವಾದ ಮಹಾಕೀರಿಟಗಳುಳ್ಳವರನ್ನಾಗಿ ಮಾಡಿ ರತ್ನಾಭರಣಗಳಿಂದ ಅಲಂಕರಿಸಿ ಮಹಾಶೀರ್ವಾದಗಳಿಂದ ವೃದ್ಧಿಹೊಂದಿಸಿದರು. ಕೇಶವನಿಗೆ ಮನೋಹರರೂ ಪತಿವ್ರತೆಯರೂ ಲಕ್ಷ್ಮಿಯಂತಿರುವವರೂ ಆದ ಪೃಥಿವೀಸುಂದರಿಯೇ ಮೊದಲಾದ ಪತ್ನಿಯರು ಹದಿನಾರುಸಾವಿರ ಮಂದಿಗಳಿದ್ದರು. ರಾಮನಿಗೆ ಸೀತೆಯೇ ಮೊದಲಾದ ಪ್ರಾಣವಲ್ಲಭೆಯರು ಎಂಟುಸಾವಿರ ಮಂದಿಗಳಿದ್ದರು.

ದ್ವಿಗುಣಾಷ್ಟಸಹಸ್ರಾಣಿ ದೇಶಾಸ್ತನ್ಮಾ ಮಹೀಭುಜಃ ।
ಶೂನ್ಯಪಂಚಾಷ್ಟರಂಧ್ರೋಕ್ತಾಃ ಖ್ಯಾತಾ ದ್ರೋಣಾಮುಖಾಃ ಸ್ಮೃತಾಃ ॥

ಪತ್ತನಾನಿ ಸಹಸ್ರಾಣಿ ಪಂಚವಿಂಶತಿಸಂಖ್ಯಯಾ ।
ಖರ್ವಡಾಃ ಖತ್ರಯದ್ವ್ಯೇಕಪ್ರಮಿತಾಃ ಪ್ರಾರ್ಥಿತಾರ್ಥದಾಃ ॥ ೧೧೪೬ ॥

ಮಡಂಬಾಸ್ತತ್ಪ್ರಮಾಣಾಃ ಸ್ಯುಃ ಸಹಸ್ರಾಣ್ಯಷ್ಟಖೇಟಕಾಃ ।
ಶೂನ್ಯಸಪ್ತಕವಸ್ವಬ್ಧಿಮಿತಾ ಗ್ರಾಮಾ ಮಹಾಫಲಾಃ ॥ ೧೧೪೭ ॥

ಅಷ್ಟದ್ವಿಸಮ್ಮಿತಾ ದ್ವೀಪಾಃ ಸಮುದ್ರಾಂತರವರ್ತಿನಃ ।
ಶೂನ್ಯಪಂಚಕಪಕ್ಷಾಬ್ಧಿಮಿತಾಸ್ತುಂಗಾ ಮತಂಗಜಾಃ ॥ ೧೧೪೮ ॥

ಆ ರಾಮಲಕ್ಷ್ಮಣರಿಗೆ ೧೬ ಸಹಸ್ರದೇಶಗಳೂ ೧೬ ಸಹಸ್ರ ಅಧೀನರಾಜರುಗಳೂ ಒಂಬತ್ತುಸಾವಿರದ ಎಂಟುನೂರೈವತ್ತು ಪ್ರಸಿದ್ಧವಾದ ದ್ರೋಣಾಮುಖಗಳೂ ೨೫ ಸಹಸ್ರ ಪಟ್ಟಣಗಳೂ ಇಷ್ಟಾರ್ಥವನ್ನು ಕೊಡುವ ೧೨ ಸಹಸ್ರ ಖರ್ವಡಗಳೂ ೧೨ ಸಹಸ್ರ ಮಡಂಬಗಳೂ ೮ ಸಹಸ್ರ ಖೇಟಗಳೂ ಇದ್ದುವು. ಮಹಾಫಲಗಳುಳ್ಳ ೪೮ ಕೋಟಿ ಗ್ರಾಮಗಳಿದ್ದುವು. ಸಮುದ್ರದೊಳಗಿರುವ ದ್ವೀಪಗಳು ೨೮ ಇದ್ದುವು. ೪೨ ಲಕ್ಷ ಉನ್ನತವಾದ ಆನೆಗಳಿದ್ದುವು.

ರಥವರ್ಯಾಶ್ಚ ತಾವಂತೋ ನವಕೋಟ್ಯಸ್ತುರಂಗಮಾಃ ।
ಖಸಪ್ತಕದ್ವಿವಾರ್ಧ್ಯುಕ್ತಯುದ್ಧಶೌಂಡಾಃ ಪದಾತಯಃ ॥ ೧೧೪೯ ॥

ಶ್ರೇಷ್ಠವಾದ ರಥಗಳೂ ೪೨ ಲಕ್ಷ ಪರಿಮಿತವಾಗಿದ್ದುವು. ೯ ಕೋಟಿ ಅಶ್ವಗಳಿದ್ದುವು. ೪೨ ಕೋಟಿ ಯುದ್ಧವಿಶಾರದರಾದ ಪದಾತಿಸೈನಿಕರಿದ್ದರು.

ದೇವಾಶ್ಚಾಷ್ಟಸಹಸ್ರಾಣಿ ಗಣಬದ್ಧಾಭಿಧಾನಕಾಃ ।
ಹಲಾಯುಧಂ ಮಹಾರತ್ನಮಪರಾಜಿತನಾಮಕಮ್ ॥ ೧೧೫೦ ॥

ಅಮೋಘಾಖ್ಯಾಃ ಶರಾಸ್ತೀಕ್ಷ್ಣಾಃ ಸಂಜ್ಞಯಾ ಕೌಮುದೀ ಗದಾ ।
ರತ್ನಾವತಂಸಿಕಾ ಮಾಲಾ ಚತ್ವಾರ್ಯೇತಾನಿ ಸೀರಿಣಃ ॥ ೧೧೫೧ ॥

ತಾನಿ ಯಕ್ಷಸಹಸ್ರೇಣ ರಕ್ಷಿತಾನಿ ಪೃಥಕ್ ಪೃಥಕ್ ।
ಚಕ್ರಂ ಸುದರ್ಶನಾಖ್ಯಾನಂ ಕೌಮುದೀತ್ಯುದಿತಾ ಗದಾ ॥ ೧೧೫೨ ॥

ಅಸಿಃ ಸೌನಂದಕೋಮೋಘಮುಖೀ ಶಕ್ತಿಃ ಶರಾಸನಮ್ ।
ಶಾರ್ಙ್ಗಂ ಪಂಚಮುಖಃ ಪಾಂಚಜನ್ಯಃ ಶಂಖೋ ಮಹಾಧ್ವನಿಃ ॥

ಕೌಸ್ತುಭಂ ಸ್ವಪ್ರಭಾಭಾರಭಾಸಮಾನಂ ಮಹಾಮಣಿಃ ।
ರತ್ನಾನ್ಯೇತಾನಿ ಸಪ್ತೈವ ಕೇಶವಸ್ಯ ಪೃಥಕ್ ಪೃಥಕ್ ॥ ೧೧೫೪ ॥

ಸದಾ ಯಕ್ಷಸಹಸ್ರೇಣ ರಕ್ಷಿತಾನ್ಯಮಿತದ್ಯುತೇಃ ।
ಏವಂ ತಯೋರ್ಮಹಾಭಾಗಧೇಯಯೋರ್ಭೋಗಸಂಪದಾ। ೧೧೫೫ ॥

ನಿಮಗ್ನಯೋಃ ಸುಖಾಂಭೋಧೌ ಕಾಲೇ ಗಚ್ಛತ್ಯಥಾನ್ಯದಾ ।
ಜಿನಂ ಮನೋಹರೋದ್ಯಾನೇ ಶಿವಗುಪ್ತಸಮಾಹ್ವಯಮ್ ॥ ೧೧೫೬ ॥

ವಿನಯೇನ ಸಮಾಸಾದ್ಯ ಪೂಜಯಿತ್ವಾಭಿವಂದ್ಯ ತಮ್ ।
ಶ್ರದ್ಧಾಲುರ್ಧರ್ಮಮಪ್ರಾಕ್ಷೀದ್ಧಿಯಾ ರಾಮಃ ಸಕೇಶವಃ ॥ ೧೧೫೭ ॥

ಪ್ರತ್ಯಾಸನ್ನಾತ್ಮನಿಷ್ಠತ್ವಾನ್ನಿಷ್ಠಿತಾರ್ಥಂ ನಿರಂಜನಮ್ ।
ಭವ್ಯಾನುಗ್ರಹಮುಖ್ಯಾತ್ಮಪ್ರವೃತ್ತಿಃ ಸೋಽಭ್ಯಭಾಷತ ॥ ೧೧೫೮ ॥

ಸ್ವವಾಕ್ಪ್ರಸರಸಜ್ಜ್ಯೋತ್ಸ್ನಾಸಮಾಹ್ಲಾದಿತತತ್ಸಭಃ ।
ಪ್ರಮಾಣನಯನಿಕ್ಷೇಪಾನುಯೋಗೈರ್ಜ್ಞಾನಹೇತುಭಿಃ ॥ ೧೧೫೯ ॥

ಗುಣಮುಖ್ಯನಯಾದಾನವಿಶೇಷಬಲಲಾಭತಃ ।
ಸ್ಯಾಚ್ಛಬ್ದಲಾಂಛಿತಾಸ್ತಿತ್ವನಾಸ್ತಿತ್ವಾದ್ಯಂತಸಂತತಮ್ ॥ ೧೧೬೦ ॥

ಜೀವಾದೀನಾಂ ಪದಾರ್ಥಾನಾಂ ತತ್ತ್ವಮಾಪ್ತಸ್ಯ ಲಕ್ಷಣಮ್ ।
ಮಾರ್ಗಣಾಗುಣಜೀವಾನಾಂ ಸಮಾಸಂ ಸಂಸೃತೇಃ ಸ್ಥಿತಿಮ್॥ ೧೧೬೧ ॥

ಅನ್ಯಚ್ಚ ಧರ್ಮಸಂಬಂಧಂ ವ್ಯಕ್ತಂ ಯುಕ್ತಿಸಮಾಶ್ರಿತಮ್ ।
ಕರ್ಮಭೇದಾನ್ ಫಲಂ ತೇಷಾಂ ಸುಖದುಃಖಾದಿಭೇದನಮ್ ॥

ಬಂಧಮೋಚನಯೋರ್ಹೇತುಂ ಸ್ವರೂಪಂ ಮುಕ್ತಮುಕ್ತಯೋಃ ।
ಇತಿ ಧರ್ಮವಿಶೇಷಂ ತಂ ತತಃ ಶ್ರುತ್ವಾ ಮನೀಷಿಣಃ ॥ ೧೧೬೩ ॥

ಸರ್ವೇ ರಾಮಾದಯೋಽಭೂವನ್ ಗೃಹೀತೋಪಾಸಕವ್ರತಾಃ ।
ನಿದಾನಶಲ್ಯದೋಷೇಣ ಭೋಗಾಸಕ್ತಃ ಸ ಕೇಶವಃ ॥ ೧೧೬೪ ॥

ಬಧ್ವಾಯುರ್ನಾರಕಂ ಘೋರಂ ನಾಗ್ರಹೀದ್ದರ್ಶನಾದಿಕಮ್ ।
ಏವಂ ಸಂವತ್ಸರಾನ್ನೀತ್ವಾ ಸಾಕೇತೇ ಕತಿಚಿತ್ಸುಖಮ್ ॥ ೧೧೬೫ ॥

ತದಾಧಿಪತ್ಯಂ ಭರತಶತ್ರುಘ್ನಾಭ್ಯಾಂ ಪ್ರದಾಯ ತೌ ।
ಸ್ವಯಂ ಸ್ವಪರಿವಾರೇಣ ಗತ್ವಾ ವಾರಾಣಸೀಂ ಪುರೀಮ್ ॥ ೧೧೬೬ ॥

ಪ್ರಾವಿಕ್ಷ್ಯೇತಾಮಧಿಕ್ಷಿಪ್ಯ ಶಕ್ರಲೀಲಾಂ ಸ್ವಸಂಪದಾ ।
ಸುತೋ ವಿಜಯರಾಮಾಖ್ಯೋ ರಾಮಸ್ಯಾಮರಸನ್ನಿಭಃ ॥ ೧೧೬೭ ॥

ಗಣಬದ್ಧದೇವರ್ಕಳು ಎಂಟುಸಾವಿರ ಮಂದಿಗಳಿದ್ದರು. ಬಲಭದ್ರನಾದ ರಾಮನಿಗೆ ಅಪರಾಜಿತವೆಂಬ ಮಹಾರತ್ನಮಯವಾದ ನೇಗಿಲಿನ ಆಯುಧ, ಅಮೋಘಗಳೆಂಬ ಹರಿತವಾದ ಬಾಣಗಳು ಕೌಮುದಿಯೆಂಬ ಗದೆ, ರತ್ನಾವತಂಸಿಕೆಯೆಂಬ ಮಾಲೆ ಇವು ನಾಲ್ಕು ರತ್ನಗಳಿದ್ದುವು. ಅವು ಬೇರೆ ಬೇರೆಯಾಗಿ ಸಹಸ್ರಯಕ್ಷರಿಂದ ರಕ್ಷಿತಗಳಾಗಿದ್ದುವು. ಅಪರಿಮಿತವಾದ ಕಾಂತಿಯುಳ್ಳ ಕೇಶವನಿಗೆ ಸುದರ್ಶನವೆಂಬ ಚಕ್ರ, ಕೌಮುದಿಯೆಂಬ ಗದೆ, ಸೌನಂದಕವೆಂಬ ಖಡ್ಗ, ಅಮೋಘಮುಖಿಯೆಂಬ ಶಕ್ತಿ, ಶಾರ್ಙ್ಗವೆಂಬ ಧನುಸ್ಸು, ಐದು ಮುಖಗಳುಳ್ಳದೂ ಮಹಾಧ್ವನಿಯುಳ್ಳದೂ ಆದ ಪಾಂಚಜನ್ಯವೆಂಬ ಶಂಖ, ತನ್ನ ಪ್ರಭೆಯ ಭಾರದಿಂದ ಪ್ರಕಾಶಮಾನವಾದ ಕೌಸ್ತುಭವೆಂಬ ಮಹಾರತ್ನ ಇವು ಏಳೇ ರತ್ನಗಳಿದ್ದುವು. ಅವು ಬೇರೆಬೇರೆಯಾಗಿ–ಪ್ರತಿಯೊಂದೂ ಸಹಸ್ರಯಕ್ಷರಿಂದ ರಕ್ಷಿತಗಳಾಗಿದ್ದುವು. ಮಹಾಭಾಗ್ಯವುಳ್ಳವರೂ ಭೋಗಸಂಪತ್ತಿಯಿಂದ ಸುಖವೆಂಬ ಸಮುದ್ರದಲ್ಲಿ ಮುಳುಗಿರುವವರೂ ಆದ ಆ ರಾಮಲಕ್ಷ್ಮಣರ ಕಾಲವು ಈ ರೀತಿಯಾಗಿ ಕಳೆಯುತ್ತಿರಲು ಅನಂತರದಲ್ಲಿ ಮತ್ತೊಂದು ಕಾಲದಲ್ಲಿ ಮನೋಹರೋದ್ಯಾನದಲ್ಲಿ ಶಿವಗುಪ್ತನೆಂಬ ಜಿನನನ್ನು ವಿನಯದಿಂದ ಹೊಂದಿ ಸಮೀಪಿಸಿರುವ ಆತ್ಮನಿಷ್ಠತೆಯಿಂದ ಕೃತಕೃತ್ಯನೂ ಮೋಹನೀಯಾದಿಕರ್ಮರಹಿತನೂ ಆದ ಆ ಶಿವಗುಪ್ತಜಿನನನ್ನು ಪೂಜಿಸಿ ಅಭಿವಂದಿಸಿ ಶ್ರದ್ಧೆಯುಳ್ಳವನಾದ ರಾಮನು ಕೇಶವಸಹಿತನಾಗಿ ಬುದ್ಧಿಯಿಂದ ಧರ್ಮಸ್ವರೂಪವನ್ನು ಕೇಳಿದನು. ಭವ್ಯಾನುಗ್ರಹವೇ ಮುಖ್ಯವಾದ ಆತ್ಮಪ್ರವತ್ತಿಯಾಗಿರುವ ಆ ಶಿವಗುಪ್ತಜಿನನೂ ತನ್ನ ವಚನವೆಂಬ ಪ್ರಸರಿಸುತ್ತಿರುವ ಉತ್ತಮವಾದ ಬೆಳದಿಂಗಳಿನಿಂದ ಆ ಸಭೆಯನ್ನು ಸಂತೋಷಗೊಳಿಸಿದವನಾಗಿ ಈ ಮುಂದೆ ಹೇಳುವಂತೆ ಮಾತನಾಡಿದನು. ಜ್ಞಾನಹೇತುಗಳಾದ ಪ್ರಮಾಣ ನಯ ನಿಕ್ಷೇಪ

ಅನುಯೋಗಗಳಿಂದ ಗೌಣನಯ ಮುಖ್ಯನಯಗಳ ಸ್ವೀಕಾರರೂಪವಾದ ವಿಶೇಷ ಶಕ್ತಿಲಾಭದಿಂದ 'ಸ್ಯಾತ್' ಶಬ್ದದಿಂದ ಗುರುತಾಗಿರುವ ಅಸ್ತಿತ್ವ ನಾಸ್ತಿತ್ವವೇ ಮೊದಲಾದ ಭಂಗಗಳಿಂದ ಚೆನ್ನಾಗಿ ವ್ಯಾಪ್ತವಾಗಿರುವ ಜೀವಾದಿಪದಾರ್ಥಗಳ ಸ್ವರೂಪವನ್ನೂ ಆಪ್ತ–ದೇವರ ಲಕ್ಷಣವನ್ನೂ ಮಾರ್ಗಣಾಸ್ಥಾನ ಗುಣಸ್ಥಾನಗಳುಳ್ಳ ಜೀವಗಳ ಸಮಾಸವನ್ನೂ ಸಂಸಾರದ ಸ್ಥಿತಿಯನ್ನೂ ವ್ಯಕ್ತವಾದ ಮತ್ತು ಯುಕ್ತಿ ಸಂಗತವಾದ ಬೇರೆ ಧರ್ಮಸಂಬಂಧವನ್ನೂ ಕರ್ಮಭೇದಗಳನ್ನೂ ಅವುಗಳ ಸುಖದುಃಖಾದಿಗಳುಳ್ಳ ಫಲವನ್ನೂ ಬಂಧಮೋಕ್ಷಗಳ ಕಾರಣವನ್ನೂ ಮುಕ್ತಿಯ ಮತ್ತು ಮುಕ್ತನ ಸ್ವರೂಪವನ್ನೂ ಈ ರೀತಿಯಾದ ಆ ಧರ್ಮವಿಶೇಷವನ್ನು ಶಿವಗುಪ್ತಜಿನನಿಂದ ಕೇಳಿ ರಾಮನೇ ಮೊದಲಾದ ಆ ಪ್ರಾಜ್ಞರೆಲ್ಲರೂ ಶ್ರಾವಕ ವ್ರತಗಳನ್ನು ಗ್ರಹಣಮಾಡಿದವರಾದರು. ನಿದಾನಶಲ್ಯದ ದೋಷದಿಂದ ಭೋಗಾಸಕ್ತನಾದ ಆ ಕೇಶವನು ಘೋರವಾದ ನರಕಾಯುಷ್ಯವನ್ನು ಕಟ್ಟಿಕೊಂಡು ಸಮ್ಯಗ್ದರ್ಶನವೇ ಮೊದಲಾದುದನ್ನು ಗ್ರಹಣಮಾಡಲಿಲ್ಲ. ಈ ರೀತಿಯಾಗಿ ಅಯೋಧ್ಯಾ ನಗರದಲ್ಲಿ ಕೆಲವು ವರ್ಷಗಳನ್ನು ಸುಖವಾಗಿ ಕಳೆದು ಆ ಅಯೋಧ್ಯೆಯ ಆಧಿಪತ್ಯವನ್ನು ಭರತಶತ್ರುಘ್ನರಿಗಿತ್ತು ಆ ರಾಮಲಕ್ಷ್ಮಣರು ತಾವು ತಮ್ಮ ಪರಿವಾರದೊಡನೆ ತಮ್ಮ ಸಂಪತ್ತಿಯಿಂದ ಇಂದ್ರನ ಲೀಲೆಯನ್ನು ಆಕ್ರಮಿಸಿ–ತಿರಸ್ಕರಿಸಿ ವಾರಾಣಸೀನಗರವನ್ನು ಪ್ರವೇಶಿಸಿದರು. ರಾಮನಿಗೆ ದೇವಸದೃಶನಾದ ವಿಜಯರಾಮನೆಂಬ ಪುತ್ರನು ಜನಿಸಿದನು.

**ಪೃಥಿವೀಸುಂದರ್ಯಾಂಚಾಭೂಚ್ಚಂದ್ರಾಭಃ ಕೇಶವಪ್ರಭೋಃ ।**
**ಅನ್ಯೈಶ್ಚ ಪುತ್ರಪೌತ್ರಾದ್ಯೈಃ ಪರೀತೌ ತೌ ಧೃತೋದಯೌ ॥ ೧೧೬೮ ॥**

**ನಯತಃ ಸ್ಮ ಸುಖಂ ಕಾಲಂ ತ್ರಿವರ್ಗಫಲಶಾಲಿನೌ ।**
**ಕದಾಚಿಲ್ಲಕ್ಷ್ಮಣೋ ನಾಗವಾಹಿನೀಶಯನೇ ಸುಖಮ್ ॥ ೧೧೬೯ ॥**

**ಸುಪ್ತೋ ನ್ಯಗ್ರೋಧವೃಕ್ಷಸ್ಯ ಭಂಜನಂ ಮತ್ತದಂತಿನಾ ।**
**ಸೈಂಹಿಕೇಯನಿಗೀರ್ಣಾರ್ಕರಸಾತಲನಿವೇಶನಮ್ ॥ ೧೧೭೦ ॥**

**ಸುಧಾಧವಲಿತೋತ್ತುಂಗಪ್ರಾಸಾದೈಕಾಂಶವಿಚ್ಯುತಿಮ್ ।**
**ಸ್ವಪ್ನೇ ದೃಷ್ಟ್ವಾ ಸಮುತ್ಥಾಯ ಸಮಾಸಾದ್ಯ ನಿಜಾಗ್ರಜಮ್ ॥ ೧೧೭೧ ॥**

**ಸ್ವಪ್ನಾನ್ ಸಪ್ರಶ್ರಯಂ ಸರ್ವಾನ್ ಯಥಾದೃಷ್ಟಂ ನ್ಯವೇದಯತ್ ।**
**ಪುರೋಹಿತಸ್ತದಾಕರ್ಣ್ಯ ಫಲಂ ತತ್ರೇತ್ಥಮಬ್ರವೀತ್ ॥ ೧೧೭೨ ॥**

ಕೇಶವ–ಲಕ್ಷ್ಮಣನಿಗೆ ಪೃಥಿವೀಸುಂದರಿಯಲ್ಲಿ ಚಂದ್ರಾಭನೆಂಬ ಪುತ್ರನು ಜನಿಸಿದನು. ಬೇರೆ ಮಕ್ಕಳು ಮೊಮ್ಮಕ್ಕಳು ಮೊದಲಾದವರಿಂದ ಸುತ್ತುವರಿಯಲ್ಪಟ್ಟ ಆ ರಾಮಲಕ್ಷ್ಮಣರು ಉನ್ನತಿಯನ್ನು ಹೊಂದುತ್ತಿರುವವರಾಗಿಯೂ ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗಫಲಗಳಿಂದ ಶೋಭಿಸುವವರಾಗಿಯೂ ಸುಖವಾಗಿ ಕಾಲವನ್ನು ಕಳೆದರು. ಒಂದಾನೊಂದು ಕಾಲದಲ್ಲಿ ನಾಗವಾಹಿನಿಯೆಂಬ ಸರ್ಪಶಯನದಲ್ಲಿ ಸುಖವಾಗಿ ಮಲಗಿದ್ದ ಲಕ್ಷ್ಮಣನು ಸ್ವಪ್ನದಲ್ಲಿ ಮದಗಜವು ಆಲದ ಮರವನ್ನು ಮುರಿಯುವುದನ್ನೂ ರಾಹುವಿನಿಂದ ನುಂಗಲ್ಪಟ್ಟ ಸೂರ್ಯನ ರಸಾತಲನಿವಾಸವನ್ನೂ ಸುಣ್ಣದಿಂದ ಬೆಳ್ಳಗಾದ ಮತ್ತು ಉನ್ನತವಾದ ಅರಮನೆಯ ಒಂದು ಭಾಗದ ನಾಶವನ್ನೂ ಕಂಡು ಎದ್ದು ತನ್ನ ಅಣ್ಣನನ್ನು ಕಂಡು ಎಲ್ಲಾ ಸ್ವಪ್ನಗಳನ್ನು ಕಂಡಹಾಗೆಯೇ ವಿನಯದೊಡನೆ ತಿಳಿಸಿದನು. ಅಲ್ಲಿ ಪುರೋಹಿತನು ಅದನ್ನು ಕೇಳಿ ಫಲವನ್ನು ಈ ರೀತಿಯಾಗಿ ಹೇಳಿದನು.

**ನ್ಯಗ್ರೋಧೋನ್ಮೂಲನಾದ್ವ್ಯಾಧಿಮಸಾಧ್ಯಂ ಕೇಶವೋ ವ್ರಜೇತ್ ।**
**ರಾಹುಗ್ರಸ್ತಾರ್ಕಸಂಪಾತಾದ್ಭೋಗ್ಯಭೋಗಾಯುಷಾಂ ಕ್ಷಯಃ॥ ೧೧೭೩ ॥**

**ತುಂಗಪ್ರಾಸಾದಭಂಗೇನ ತ್ವಂ ಪ್ರಯಾತಾ ತಪೋವನಮ್ ।**
**ಇತ್ಯೇಕಾಂತೇ ವಚಸ್ತಸ್ಯ ಶ್ರುತ್ವಾ ರಾಮೋ ಯಥಾರ್ಥವಿತ್ ॥ ೧೧೭೪ ॥**

**ಧೀರೋದಾತ್ತತಯಾ ನಾಯಾನ್ಮನಾಗಪಿ ಮನಃಕ್ಷತಿಮ್ ।**
**ಲೋಕದ್ವಯಹಿತಂ ಮತ್ವಾ ಕಾರಯಾಮಾಸ ಘೋಷಣಮ್॥ ೧೧೭೫ ॥**

**ಪ್ರಾಣಿನೋ ನ ಹಿ ಹಂತವ್ಯಾಃ ಕೈಶ್ಚಿಚ್ಚೇತಿ ದಯೋದ್ಧತಃ ।**
**ಚಕಾರ ಶಾಂತಿಪೂಜಾಂ ಚ ಸರ್ವಜ್ಞಸವನಾವಧಿಮ್ ॥ ೧೧೭೬ ॥**

"ಆಲದ ಮರವನ್ನು ಕಿತ್ತ ಕನಸನ್ನು ನೋಡಿದುದರಿಂದ ಕೇಶವನು ಅಸಾಧ್ಯವಾದ ವ್ಯಾಧಿಯನ್ನು ಹೊಂದುವನು. ರಾಹುವಿನಿಂದ ನುಂಗಲ್ಪಟ್ಟ ಸೂರ್ಯನ ಪತನದಿಂದ ಭೋಗ್ಯವಸ್ತುಗಳ ಭೋಗದ ಮತ್ತು ಆಯುಷ್ಯದ ಕ್ಷಯವಾಗುವುದು. ಎತ್ತರವಾದ ಅರಮನೆಯ ಭಂಗದಿಂದ ನೀನು ತಪೋವನಕ್ಕೆ ಹೋಗುವೆ" ಈ ರೀತಿಯಾಗಿ ಏಕಾಂತದಲ್ಲಿ ಆ ಪುರೋಹಿತನ ಮಾತನ್ನು ಕೇಳಿ ಯಥಾರ್ಥವನ್ನು ತಿಳಿಯುವವನಾದ ರಾಮನು ಧೀರೋದಾತ್ತತೆಯಿಂದ ಸ್ವಲ್ಪವೂ ಮನಃಖೇದವನ್ನು ಹೊಂದಲಿಲ್ಲ. ದಯೆಯಿಂದ ಪ್ರೇರಿತನಾಗಿ ಇಹಪರಲೋಕಗಳಲ್ಲಿ ಹಿತವಾದುದೆಂದು ತಿಳಿದು "ಯಾರೂ ಪ್ರಾಣಿಗಳನ್ನು ಕೊಲ್ಲಬಾರದು" ಎಂದು ಘೋಷಣೆಯನ್ನು ಮಾಡಿಸಿದನು. ಸರ್ವಜ್ಞ–ದೇವರ ಅಭಿಷೇಕಪರ್ಯಂತವಾದ ಶಾಂತಿಪೂಜೆಯನ್ನೂ ಮಾಡಿದನು.

**ದದೌ ದಾನಂ ಚ ದೀನೇಭ್ಯೋ ಯೇನ ಯದ್ಯದಭೀಪ್ಸಿತಮ್ ।**
**ಬಭೂವ ಕ್ಷೀಣಪುಣ್ಯಸ್ಯ ತತಃ ಕತಿಪಯೈರ್ದಿನೈಃ ॥ ೧೧೭೭ ॥**

**ಕೇಶವಸ್ಯ ಮಹಾನ್ ವ್ಯಾಧಿರಸಾತೋದಯಚೋದಿತಃ ।**
**ದುಸ್ಸಾಧ್ಯೇನಾಮಯೇನಾಸೌ ಮಾಘೇ ಮಾಸ್ಯಸಿತೇಂತಿಮೇ ॥ ೧೧೭೮ ॥**

**ದಿನೇ ತೇನಾಗಮಚ್ಚಕ್ರೀ ಪೃಥ್ವೀಂ ಪಂಕಪ್ರಭಾಭಿಧಾಮ್ ।**
**ತದ್ವಿಯೋಗೇನ ಶೋಕಾಗ್ನಿಸಂತಪ್ತಹೃದಯೋ ಬಲಃ ॥ ೧೧೭೯ ॥**

**ಕಥಂಕಥಮಪಿ ಜ್ಞಾನಾತ್ಸಂಧಾರ್ಯಾತ್ಮಾನಮಾತ್ಮನಾ ।**
**ಕೃತ್ವಾ ಶರೀರಸಂಸ್ಕಾರಮನುಜಸ್ಯ ಯಥಾವಿಧಿ ॥ ೧೧೮೦ ॥**

**ಸರ್ವಾಂತಃಪುರದುಃಖಂ ಚ ಪ್ರಶಮಯ್ಯ ಪ್ರಸನ್ನವಾಕ್ ।**
**ಸರ್ವಪ್ರಕೃತಿಸಾನ್ನಿಧ್ಯೇ ಪೃಥಿವೀಸುಂದರೀಸುತೇ ॥ ೧೧೮೧ ॥**

**ಜ್ಯೇಷ್ಠೇ ರಾಜ್ಯಂ ವಿಧಾಯೋಚ್ಚೈಃ ಸಪಟ್ಟಂ ಕೇಶವಾತ್ಮಜೇ ।**
**ಅಷ್ಟೌ ವಿಜಯರಾಮಾದ್ಯಾಃ ಸೀತಾಯಾಃ ಸಾತ್ತ್ವಿಕಾಃ ಸುತಾಃ॥ ೧೧೮೨ ॥**

**ಲಕ್ಷ್ಮೀಮನಭಿವಾಂಛತ್ಸು ತೇಷಾಂ ಜ್ಯೇಷ್ಠೇಷು ಸಪ್ತಸು ।**
**ದತ್ವಾಜಿತಂಜಯಾಖ್ಯಾಯ ಯೌವರಾಜ್ಯಂ ಕನೀಯಸೇ ॥ ೧೧೮೩ ॥**

**ಮಿಥಿಲಾಮರ್ಪಯಿತ್ವಾಸ್ಮೈ ತ್ರಿನಿರ್ವೇದಪರಾಯಣಃ ।**
**ಸಾಕೇತಪುರಮಭ್ಯೇತ್ಯ ವನೇ ಸಿದ್ಧಾರ್ಥನಾಮನಿ ॥ ೧೧೮೪ ॥**

**ವೃಷಭಸ್ವಾಮಿನಿಷ್ಕ್ರಾಂತಿತೀರ್ಥಭೂಮೌ ಮಹೌಜಸಃ ।**
**ಶಿವಗುಪ್ತಾಭಿಧಾನಸ್ಯ ಸಮೀಪೇ ಕೇವಲೇಶಿನಃ ॥ ೧೧೮೫ ॥**

ಬಡವರಿಗೆ, ಯಾವನು ಯಾವಯಾವುದನ್ನು ಇಚ್ಛಿಸಿದನೋ ಅದನ್ನು ದಾನ ಮಾಡಿದನು. ಬಳಿಕ ಪುಣ್ಯಕ್ಷಯವನ್ನು ಹೊಂದಿದ ಕೇಶವನಿಗೆ ಕೆಲವು ದಿನಗಳಿಂದ ಅಸಾತಾವೇದನೀಯಕರ್ಮದ ಉದಯದಿಂದ ಪ್ರೇರಿತವಾದ ಮಹಾವ್ಯಾಧಿಯುಂಟಾಯಿತು. ದುಸ್ಸಾಧ್ಯವಾದ ಆ ರೋಗದಿಂದ ಈ ಚಕ್ರಿಯು–ಲಕ್ಷ್ಮಣನು ಮಾಘಮಾಸದ ಕೃಷ್ಣಪಕ್ಷದಲ್ಲಿ ಕೊನೆಯ–ಅಮಾವಾಸ್ಯೆಯ ದಿನದಲ್ಲಿ ಸತ್ತು ಪಂಕಪ್ರಭೆಯೆಂಬ ಪೃಥ್ವಿಯನ್ನು (ನಾಲ್ಕನೆಯ ನರಕವನ್ನು) ಹೊಂದಿದನು. ಆತನ ವಿಯೋಗದಿಂದ ಶೋಕಾಗ್ನಿಸಂತಪ್ತಚಿತ್ತನಾದ ಬಲಭದ್ರನು ಹೇಗೆ ಹೇಗೋ ತನ್ನಿಂದ ತನ್ನನ್ನು ಜ್ಞಾನದಿಂದ ಧಾರಣಮಾಡಿ ವಿಧಿಗನುಸಾರವಾಗಿ ತಮ್ಮನ ದೇಹಸಂಸ್ಕಾರವನ್ನು ಮಾಡಿ ಪ್ರಸನ್ನವಾದ ವಚನವುಳ್ಳವನಾಗಿ ಅಂತಃಪುರದವರೆಲ್ಲರ ದುಃಖವನ್ನು ಉಪಶಮನಮಾಡಿ ಸಕಲಪ್ರಜೆಗಳ ಸಾನ್ನಿಧ್ಯದಲ್ಲಿ ಪೃಥಿವೀಸುಂದರಿಯ ಪುತ್ರನೂ ಹಿರಿಯನೂ ಆದ ಕೇಶವಪುತ್ರನಲ್ಲಿ ಚೆನ್ನಾಗಿ ಪಟ್ಟಸಹಿತವಾದ ರಾಜ್ಯವನ್ನು ವಹಿಸಿದನು. ಸೀತೆಗೆ ವಿಜಯರಾಮನೇ ಮೊದಲಾದ ಸಾತ್ತ್ವಿಕರಾದ ಎಂಟು ಮಂದಿ ಮಕ್ಕಳು. ಅವರಲ್ಲಿ ಹಿರಿಯರಾದ ಏಳು ಮಂದಿಗಳು ರಾಜ್ಯ ಸಂಪತ್ತಿಯನ್ನು

ಇಚ್ಛಿಸದಿರುತ್ತಿರಲು ಕಿರಿಯನಾದ ಅಜಿತಂಜಯನೆಂಬವನಿಗೆ ಯುವರಾಜಪದವನ್ನು ಕೊಟ್ಟು ಇವನಿಗೆ ಮಿಥಿಲಾದೇಶವನ್ನು ಕೊಟ್ಟು ಸಂಸಾರ ಶರೀರ ಭೋಗ ವೈರಾಗ್ಯಪರಾಯಣನಾಗಿ ಅಯೋಧ್ಯಾನಗರಕ್ಕೆ ಬಂದು ಸಿದ್ಧಾರ್ಥವೆಂಬ ವನದಲ್ಲಿ ವೃಷಭಸ್ವಾಮಿಯು ಪರಿನಿಷ್ಕ್ರಾಂತಿಯನ್ನು (ದೀಕ್ಷೆಯನ್ನು) ಹೊಂದಿದ ತೀರ್ಥ ಭೂಮಿಯಲ್ಲಿ ಮಹಾತೇಜಸ್ವಿಯಾದ ಶಿವಗುಪ್ತನೆಂಬ ಕೇವಲಿಯ ಬಳಿಯಲ್ಲಿ ಸಂಸಾರದ ಮತ್ತು ಮೋಕ್ಷದ ಕಾರಣವನ್ನೂ ಫಲವನ್ನೂ ಚೆನ್ನಾಗಿ ತಿಳಿದನು.

ಸಂಸಾರಮೋಕ್ಷಯೋರ್ಹೇತುಫಲೇ ಸಮ್ಯಕ್ಪ್ರಬುದ್ಧವಾನ್ ।
ನಿದಾನಶಲ್ಯದೋಷೇಣ ಚತುರ್ಥೀಂ ನಾರಕೀಂ ಭುವಮ್ ॥ ೧೧೮೬ ॥

ಕೇಶವಃ ಪ್ರಾಪ್ತ ಇತ್ಯೇತದ್ಬುಧ್ವಾಸ್ಮಾದೇವ ಶುದ್ಧಧೀಃ ।
ನಿರಸ್ತತದ್ಗತಸ್ನೇಹವಿಧಿರಾಭಿನಿಬೋಧಿಕಾತ್ ॥ ೧೧೮೭ ॥

ವೇದಾತ್ಪ್ರಾದುರ್ಭವದ್ಬೋಧಿಃ ಸುಗ್ರೀವಾಣುಮದಾದಿಭಿಃ ।
ವಿಭೀಷಣಾದಿಭಿಶ್ಚಾಮಾ ಭೂಮಿಪೈಃ ಪಂಚಭಿಃ ಶತೈಃ ॥ ೧೧೮೮ ॥

ಅಶೀತಿಶತಪುತ್ರೈಶ್ಚ ಸಹ ಸಂಯುತಮಾಪ್ತವಾನ್ ।
ತಥಾ ಸೀತಾಮಹಾದೇವೀ ಪೃಥಿವೀಸುಂದರೀಯುತಾಃ ॥ ೧೧೮೯ ॥

ದೇವ್ಯಃ ಶ್ರುತವತಿಕ್ಷಾಂತಿನಿಕಟೇ ತಪಸಿ ಸ್ಥಿತಾಃ ।
ತೌ ರಾಜಯುವರಾಜೌ ಚ ಗೃಹೀತಶ್ರಾವಕವ್ರತೌ ॥ ೧೧೯೦ ॥

ಜಿನಾಂಘ್ರಿಯುಗ್ಮಮಾನಮ್ಯ ಸಮ್ಯಕ್ಪ್ರಾವಿಶತಾಂ ಪುರೀಮ್ ।
ಮೋಕ್ಷಮಾರ್ಗಮನುಷ್ಠಾಯ ಯಥಾಶಕ್ತಿ ಯಥಾವಿಧಿ ॥ ೧೧೯೧ ॥

ರಾಮಾಣುಮಂತೌ ಸಂಜಾತೌ ಶ್ರುತಕೇವಲಿನೌ ಮುನೀ ।
ಜಾತಾಃ ಶೇಷಾಶ್ಚ ಬುದ್ಧ್ಯಾದಿಸಪ್ತರ್ದ್ಧ್ಯಾವಿಷ್ಕೃತೋದಯಾಃ ॥ ೧೧೯೨ ॥

ಕೇಶವನು ನಿದಾನಶಲ್ಯದೋಷದಿಂದ ನಾಲ್ಕನೆಯ ನರಕಭೂಮಿಯನ್ನು ಹೊಂದಿದನೆಂಬುದನ್ನು ಈ ಶಿವಗುಪ್ತಕೇವಲಿಯಿಂದಲೇ ತಿಳಿದು ಶುದ್ಧಬುದ್ಧಿಯುಳ್ಳವನಾಗಿಯೂ ಅವನಲ್ಲಿರುವ ಸ್ನೇಹವನ್ನು ದೂರಮಾಡಿದವನಾಗಿಯೂ ಆಭಿನಿಬೋಧಿಕ–ಮತಿಜ್ಞಾನದಿಂದ ಪ್ರಾದುರ್ಭವಿಸಿದ ರತ್ನತ್ರಯಪ್ರಾಪ್ತಿಯುಳ್ಳವನಾಗಿಯೂ ಸುಗ್ರೀವ ಅಣುಮಾನ್ ಮೊದಲಾದರೊಡನೆಯೂ ವಿಭೀಷಣನೇ ಮೊದಲಾದ ಐದುನೂರು ಮಂದಿ ದೊರೆಗಳೊಡನೆಯೂ ಎಂಟುಸಹಸ್ರ ಪುತ್ರರೊಡನೆಯೂ ವ್ರತವನ್ನು ತೆಗೆದುಕೊಂಡು ಮುನಿಯಾದನು. ಹಾಗೆಯೇ ಸೀತಾಮಹಾದೇವೀ ಪೃಥಿವೀಸುಂದರೀಸಹಿತರಾದ ದೇವಿಯರು ಶ್ರುತವತಿಕ್ಷಾಂತಿಯೆಂಬ ಆರ್ಯಿಕೆಯ ಬಳಿಯಲ್ಲಿ ತಪಸ್ಸಿನಲ್ಲಿದ್ದರು. ಆ ರಾಜನೂ ಯುವರಾಜನೂ (ರಾಮಲಕ್ಷ್ಮಣಪುತ್ರರೂ) ಶ್ರಾವಕವ್ರತವನ್ನು ಗ್ರಹಣಮಾಡಿದವರಾಗಿ ಜಿನಪಾದಯುಗಲವನ್ನು ಚೆನ್ನಾಗಿ ನಮಸ್ಕರಿಸಿ ನಗರವನ್ನು ಪ್ರವೇಶಿಸಿದರು. ರಾಮಮುನಿಯೂ ಅಣುಮನ್ಮುನಿಯೂ ಶಕ್ತಿಗನುಸಾರವಾಗಿಯೂ ವಿಧಿಗನುಸಾರವಾಗಿಯೂ ಮೋಕ್ಷಮಾರ್ಗವನ್ನು ಅನುಷ್ಠಿಸಿ ಶ್ರುತಕೇವಲಿಗಳಾದರು. ಉಳಿದವರೂ ಬುದ್ಧಿಋದ್ಧಿಯೇ ಮೊದಲಾದ ಸಪ್ತರ್ದ್ಧಿಗಳಿಂದ ಉನ್ನತಿಯನ್ನು ಪ್ರಕಟಿಸಿದವರಾದರು.

ಏವಂ ಛದ್ಮಸ್ಥಕಾಲೇಸ್ಯ ಪಂಚಾಬ್ದೇನ ಚತುಃಶತೇ ।
ವ್ಯತೀತವತಿ ಸದ್ಧ್ಯಾನವಿಶೇಷಾದ್ಧತಘಾತಿನಃ ॥ ೧೧೯೩ ॥

ರಾಮಸ್ಯ ಕೇವಲಜ್ಞಾನಮುದಪಾದ್ಯರ್ಕಬಿಂಬವತ್ ।
ಸಮುದ್ಗತೈಕಚ್ಛತ್ರಾದಿಪ್ರಾತಿಹಾರ್ಯವಿಭೂಷಿತಃ ॥ ೧೧೯೪ ॥

ಅಸಿಂಚದ್ಭವ್ಯಸಸ್ಯಾನಾಂ ವೃಷ್ಟಿಂ ಧರ್ಮಮಯೀಮಸೌ ।
ಏವಂ ಕೇವಲಬೋಧೇನ ನೀತ್ವಾ ಷಟ್ಛತವತ್ಸರಾನ್ ॥ ೧೧೯೫ ॥

ಫಾಲ್ಗುನೇ ಮಾಸಿ ಪೂರ್ವಾಹ್ಣೇ ಶುಕ್ಲಪಕ್ಷಚತುರ್ದಶೀ– ।
ದಿನೇ ಸಮ್ಮೇದಗಿರ್ಯಗ್ರೇ ತೃತೀಯಂ ಶುಕ್ಲಮಾಶ್ರಿತಃ ॥ ೧೧೯೬ ॥

ಯೋಗತ್ರಿತಯಮಾರುಧ್ಯ ಸಮುಚ್ಛಿನ್ನಕ್ರಿಯಾಶ್ರಯಃ ।
ನಿಶ್ಶೇಷಾಪಹೃತಾಘಾತಿಕರ್ಮಾ ಸೋಣುಮದಾದಿಭಿಃ ॥ ೧೧೯೭ ॥

ಶರೀರತ್ರಿತಯಾಪಾಯಾದವಾಪತ್ಪದಮುತ್ತಮಮ್ ।
ವಿಭೀಷಣಾದಯಃ ಕೇಚಿತ್ಪ್ರಾಪನ್ನನುದಿಶಂ ಕ್ಷಯಃ ॥ ೧೧೯೮ ॥

ರಾಮಚಕ್ರ್ಯಗ್ರದೇವ್ಯಾದ್ಯಾಃ ಕಾಶ್ಚಿದೀಯುರಿತೋಚ್ಯುತಮ್ ।
ಶೇಷಾಃ ಕಲ್ಪೇಭವನ್ನಾದೌ ಲಕ್ಷ್ಮಣಶ್ಚಾಗತಃ ಕ್ರಮಾತ್ ॥ ೧೧೯೯ ॥

ನರಕಾತ್ಸಂಯಮಂ ಪ್ರಾಪ್ಯ ಮೋಕ್ಷಲಕ್ಷ್ಮೀಮವಾಪ್ಸ್ಯತಿ ।
ವಿನಯಾತ್ತಸ್ಯ ಜಂತೂನಾಂ ಭವೇ ವೈಚಿತ್ರ್ಯಮೀದೃಶಮ್ ॥ ೧೨೦೦ ॥

ಈ ರೀತಿಯಾಗಿ ಮೂರುನೂರ ತೊಂಬತ್ತೈದು ವರ್ಷ ಪರಿಮಿತವಾದ ಛದ್ಮಸ್ಥಕಾಲವು ಕಳೆಯುತ್ತಿರಲು ಉತ್ತಮ ಧ್ಯಾನವಿಶೇಷದಿಂದ ಘಾತಿಕರ್ಮಗಳನ್ನು ನಾಶಮಾಡಿದ ಈ ರಾಮಮುನಿಪುಂಗವನಿಗೆ, ಸೂರ್ಯಬಿಂಬದಂತೆ, ಕೇವಲಜ್ಞಾನವುದಯಿಸಿತು. ಪ್ರಾಪ್ತವಾದ ಏಕಚ್ಛತ್ರವೇ ಮೊದಲಾದ ಪ್ರಾತಿಹಾರ್ಯಗಳಿಂದ ವಿಭೂಷಿತನಾದ ಈ ರಾಮಕೇವಲಿಯು ಭವ್ಯರೆಂಬ ಸಸ್ಯಗಳಿಗೆ ಧರ್ಮಮಯವಾದ ಮಳೆಯನ್ನು ಸೇಚಿಸಿದನು. ಈ ರೀತಿಯಾಗಿ ಕೇವಲಜ್ಞಾನದಿಂದ ಆರುನೂರು ವರುಷಗಳನ್ನು ಕಳೆದು ಫಾಲ್ಗುನಮಾಸದಲ್ಲಿ ಶುಕ್ಲಪಕ್ಷದ ಚತುರ್ದಶೀ ದಿನದಲ್ಲಿ ಪ್ರಾತಃಕಾಲದಲ್ಲಿ ಸಮ್ಮೇದಗಿರಿಯ ತುದಿಯಲ್ಲಿ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಮೂರನೆಯ ಶುಕ್ಲಧ್ಯಾನವನ್ನು ಆಶ್ರಯಿಸಿದವನೂ ಮನೋವಾಕ್ಕಾಯಯೋಗಗಳನ್ನು ತಡೆದು ಸಮುಚ್ಛಿನ್ನಕ್ರಿಯೆಯೆಂಬ ಚತುರ್ಥಶುಕ್ಲಧ್ಯಾನಾಶ್ರಯವುಳ್ಳವನೂ ಅಘಾತಿಕರ್ಮಗಳನ್ನು ನಿಶ್ಶೇಷವಾಗಿ ನಾಶಮಾಡಿದವನೂ ಆದ ಆ ರಾಮಕೇವಲಿಯು ಅಣುಮಾನ್ ಮೊದಲಾದವರೊಡನೆ ಔದಾರಿಕ ತೈಜಸ ಕಾರ್ಮಣ ಶರೀರಗಳ ನಾಶದಿಂದ ಪರಮಪದವನ್ನು–ಮುಕ್ತಿಯನ್ನು ಹೊಂದಿದನು. ವಿಭೀಷಣನೇ ಮೊದಲಾದ ಕೆಲವರು ಆಯುಷ್ಯಾವಸಾನದಲ್ಲಿ ಮಡಿದು ಅನುದಿಶ ವಿಮಾನವನ್ನು ಹೊಂದಿದರು. ಇತ್ತ ರಾಮನ ಮತ್ತು ಚಕ್ರಿಯ ಪಟ್ಟಮಹಿಷಿಯರೇ ಮೊದಲಾದ ಕೆಲವು ದೇವಿಯರು ಆಯುಷ್ಯಾವಸಾನದಲ್ಲಿ ಮಡಿದು ಅಚ್ಯುತಸ್ವರ್ಗವನ್ನು ಹೊಂದಿದರು. ಉಳಿದವರು ಮೊದಲನೆಯ–ಸೌಧರ್ಮಕಲ್ಪದಲ್ಲಿ ಹುಟ್ಟಿದರು. ಲಕ್ಷ್ಮಣನೂ ಕಾಲಕ್ರಮದಿಂದ ನರಕದಿಂದ ಬಂದವನಾಗಿ ಅವನ ವಿನಯದಿಂದ ಸಂಯಮವನ್ನು ಹೊಂದಿ ಮುಂದೆ ಮೋಕ್ಷಲಕ್ಷ್ಮಿಯನ್ನು ಪಡೆಯುವನು. ಸಂಸಾರದಲ್ಲಿ ಪ್ರಾಣಿಗಳ ವೈಚಿತ್ರ್ಯವು ಈ ಪ್ರಕಾರವಾದುದು.

ಪ್ರೋಲ್ಲಂಘ್ಯ ಗೋಷ್ಪದಮಿವಾಂಬುನಿಧಿಂ ಸ್ವಸೈನ್ಯೈ– ।
ರುಧ್ವಾ ರಿಪೋಃ ಪುರಮಗಾರಮಿವೈಕಮಲ್ಪಮ್ ॥
ನಿರ್ಮೂಲ್ಯ ವೈರಿಕುಲಮಾಶ್ವಿವ ಸಸ್ಯಮೀಷ– ।
ಲ್ಲಕ್ಷ್ಮ್ಯಾ ಸಹ ಕ್ಷಿತಿಸುತಾಮಪಹೃತ್ಯ ಶತ್ರೋಃ ॥ ೧೨೦೧ ॥

ಗೋವಿನ ಹಜ್ಜೆಯನ್ನು ದಾಟುವಂತೆ ಸಮುದ್ರವನ್ನು ದಾಟಿ ತಮ್ಮ ಸೈನ್ಯಗಳಿಂದ ಒಂದು ಸಣ್ಣಮನೆಯನ್ನು ಮುತ್ತುವಂತೆ ಶತ್ರುವಿನ ಪುರವನ್ನು ಮುತ್ತಿ ಸ್ವಲ್ಪ ಸಸ್ಯವನ್ನು (ಬೆಳೆಯನ್ನು) ನಿರ್ಮೂಲಮಾಡುವಂತೆ ಶೀಘ್ರವಾಗಿ ಶತ್ರುವಂಶವನ್ನು ನಿರ್ಮೂಲಮಾಡಿ ಶತ್ರುವಿನ ಸಂಪತ್ತಿಯೊಡನೆ ಭೂಮಿಪುತ್ರಿ–ಜಾನಕಿಯನ್ನು ಅಪಹರಿಸಿ

ಆನಮ್ರಾಮರಭೂನಭಶ್ಚರಶಿರಃಪೀಠೋದ್ಧೃತಾಂಘ್ರಿದ್ವಯೌ ।
ನಿಷ್ಕಂಟೀಕೃತದಕ್ಷಿಣಾರ್ಧಭರತಾಖಂಡತ್ರಿಖಂಡಾಧಿಪೌ ॥
ಸಾಕೇತಂ ಸಮಧಿಷ್ಠಿತೌ ಹತಶುಚಪ್ರೋದ್ಭಾಸಿಭಾಸ್ವತ್ಪ್ರಭೌ ।
ದಿಕ್ಪ್ರಾಂತದ್ವಿಪದರ್ಪಸರ್ಪಶಮನವ್ಯಗ್ರೋಗ್ರವೀರಶ್ರಿಯೌ ॥ ೧೨೦೨ ॥

ಸೀರಾದಿಪ್ರಭೃತಿಪ್ರಸಿದ್ಧವಿಲಸದ್ರತ್ನಾವಲೀರಂಜಿತ– ।
ಶ್ರೀಸಂಪಾದಿತಭೋಗಯೋಗಸುಖಿತೌ ಸರ್ವಾರ್ಥಿಸಂತರ್ಪಕೌ ।
ಚಂದಾರ್ಕಾವಿವ ತೇಜಸಾ ಸ್ವಯಶಸಾ ವಿಶ್ವಂ ಪ್ರಕಾಶ್ಯ ಸ್ಫುಟಂ ।
ಶ್ರೀಮಂತೌ ಬಲಕೇಶವೌ ಕ್ಷಿತಿಮಿಮಾಂ ಸಂಪಾಲ್ಯ ಸಾರ್ಧಂ ಚಿರಮ್ ॥

ಏಕಸ್ತ್ರಿಲೋಕಶಿಖರಂ ಸುಖಮಧ್ಯತಿಷ್ಠ– ।
ದನ್ಯಶ್ಚತುರ್ಥನರಕಾವನಿನಾಯಕೋಭೂತ್ ॥
ಭೋಗ್ಯೇ ಸಮೇಽಪಿ ಪರಿಣಾಮಕೃತಾದ್ವಿಶೇಷಾ– ।
ನ್ನಾ ತದ್ವಿಧಾದಬುಧವತ್ಸುಬುಧೋ ನಿದಾನಮ್ ॥ ೧೨೦೪ ॥

ಚೆನ್ನಾಗಿ ನಮ್ರರಾದ ದೇವರ್ಕಳ ಭೂಚರರ ಮತ್ತು ಖೇಚರರ ಮಸ್ತಕಗಳೆಂಬ ಪೀಠಗಳಿಂದ ಧರಿಸಲ್ಪಟ್ಟಿರುವ ಎರಡು ಚರಣಗಳುಳ್ಳವರೂ ನಿಷ್ಕಂಟಕವಾಗಿ ಮಾಡಲ್ಪಟ್ಟ ದಕ್ಷಿಣಾರ್ಧಭರತಕ್ಷೇತ್ರದ ಅಖಂಡವಾದ ತ್ರಿಖಂಡಗಳಿಗೆ ಅಧಿಪತಿಗಳೂ ಅಯೋಧ್ಯಾನಗರದಲ್ಲಿ ವಾಸಮಾಡಿರುವವರೂ ಜ್ಯೇಷ್ಠಮಾಸದಲ್ಲಿ ಪ್ರಕಾಶಮಾನವಾದ ಸೂರ್ಯನ ಪ್ರಭೆಯನ್ನು ನಾಶಮಾಡಿರುವವರೂ ದಿಗಂತಗಜಗಳ ಗರ್ವವೆಂಬ ಸರ್ಪದ ಶಮನದಲ್ಲಿ ವ್ಯಗ್ರವೂ ಉಗ್ರವೂ ಆದ ವೀರಲಕ್ಷ್ಮಿಯುಳ್ಳವರೂ ನೇಗಿಲೇ ಮೊದಲಾದ ಪ್ರಸಿದ್ಧವೂ ಪ್ರಕಾಶಮಾನವೂ ಆದ ರತ್ನಗಳ ಸಮೂಹದಿಂದ ಯುಕ್ತವಾದ ಸಂಪತ್ತಿಯಿಂದುಂಟಾದ ಭೋಗಗಳ ಸಂಬಂಧದಿಂದ ಸುಖಿಗಳಾಗಿರುವವರೂ ಸಮಸ್ತ ಯಾಚಕರನ್ನು ತೃಪ್ತಿಪಡಿಸುವವರೂ ಚಂದ್ರಸೂರ್ಯರು ತೇಜಸ್ಸಿನಿಂದ ಜಗತ್ತನ್ನು ಪ್ರಕಾಶಪಡಿಸುವಂತೆ, ತಮ್ಮ ಯಶಸ್ಸಿನಿಂದ ಜಗತ್ತನ್ನು ಸ್ಫುಟವಾಗಿ ಪ್ರಕಾಶಪಡಿಸಿ ಶ್ರೀಮಂತರೂ ಆದ ಬಲಭದ್ರಕೇಶವರು ಬಹುಕಾಲದವರೆಗೆ ಜೊತೆಯಾಗಿ ಈ ಪೃಥ್ವಿಯನ್ನು ಪಾಲಿಸಿ ಭೋಗ್ಯವಸ್ತುವು ಸಮಾನವಾಗಿದ್ದರೂ ಆ ವಿಧವಾದ ಪರಿಣಾಮಕೃತವಾದ ವಿಶೇಷದಿಂದ ಅವರಲ್ಲಿ ಒಬ್ಬನು ತ್ರಿಲೋಕಶಿಖರದಲ್ಲಿ ಸುಖವಾಗಿದ್ದನು. ಇನ್ನೊಬ್ಬನು ನಾಲ್ಕನೆಯ ನರಕಭೂಮಿಯ ನಾಯಕನಾದನು. ಅಜ್ಞನಂತೆ ಸುಜ್ಞನು ನಿದಾನಶಲ್ಯವನ್ನು ಹೊಂದಬಾರದು.

ದೇಶೇ ಸಾರಸಮುಚ್ಚಯೇ ನರಪತಿರ್ದೇವೋ ನರಾದಿಸ್ತತಃ ।
ಸೌಧರ್ಮೇಽನಿಮಿಶೋಭವತ್ಸುಖನಿಧಿಸ್ತಸ್ಮಾಚ್ಚ್ಯುತೋಽಸ್ಮಿನ್ನಭೂತ್ ॥
ಆಕ್ರಾಂತಾಖಿಲಖೇಚರೋಜ್ಜ್ವಲಶಿರೋಮಾಲೋ ವಿನಮ್ಯನ್ವಯೇ ।
ಸ್ತ್ರೀಲೋಲೋ ನಿಜವಂಶಕೇತುರಹಿತಾಚಾರಾಗ್ರಣೀ ರಾವಣಃ ॥ ೧೨೦೫ ॥

ರಾವಣನು ಮೊದಲು ಸಾರಸಮುಚ್ಚಯದೇಶದಲ್ಲಿ ನರದೇವನೆಂಬ ನರಪತಿಯಾಗಿದ್ದು ಬಳಿಕ ಸೌಧರ್ಮಸ್ವರ್ಗದಲ್ಲಿ ಸುಖನಿಧಿಯಾದ ದೇವನಾದನು. ಅಲ್ಲಿಂದ ಚ್ಯುತನಾಗಿ ಈ ವಿನಮಿವಂಶದಲ್ಲಿ ಸಮಸ್ತಖೇಚರರ ಪ್ರಕಾಶಮಾನವಾದ ಶಿರಸ್ಸುಗಳ ಮಾಲೆಯನ್ನಾಕ್ರಮಿಸಿದವನೂ ಸ್ತ್ರೀಲಂಪಟನೂ ತನ್ನ ವಂಶಕ್ಕೆ ಧ್ವಜಪ್ರಾಯನೂ ಅಹಿತಾಚರಣೆಯಲ್ಲಿ ಮುಂದಾಳುವೂ ಆದ ರಾವಣನಾದನು.

ಆಸೀದಿಹೈವ ಮಲಯೇ ವಿಷಯೇ ಮಹೀಶ– ।
ಸ್ಸುತ್ ಚಂದ್ರಚೂಲ ಇತಿ ದುಶ್ಚರಿತಃ ಸಮಾಪ್ಯ ॥
ಪಶ್ಚಾತ್ತಪೋಜನಿ ಸುರಃ ಸ ಸನತ್ಕುಮಾರೇ ।
ತಸ್ಮಾದಿಹೈತ್ಯ ಸಮಭೂದ್ವಿಭುರರ್ಧಚಕ್ರೀ ॥ ೧೨೦೬ ॥

ಲಕ್ಷ್ಮಣನು ಮೊದಲು ಈ ಭರತಕ್ಷೇತ್ರದಲ್ಲೇ ಮಲಯದೇಶದ ದೊರೆಯ ಚಂದ್ರಚೂಲನೆಂಬ ದುರಾಚಾರಿಯಾದ ಪುತ್ರನಾಗಿದ್ದು ಬಳಿಕ ತಪಸ್ಸನ್ನು ಮಾಡಿ ಅವನು ಸನತ್ಕುಮಾರಸ್ವರ್ಗದಲ್ಲಿ ದೇವನಾಗಿ ಜನಿಸಿದನು. ಅಲ್ಲಿಂದ ಚ್ಯುತನಾಗಿ ಇಲ್ಲಿ ಬಂದು ಪ್ರಭುವಾದ ಅರ್ಧಚಕ್ರಿಯಾದನು.

ಮಣಿಮತಿಃ ಖಚರೀ ಗುಣಭೂಷಣಾ ಕೃತನಿದಾನಮೃತೇರತಿಕೋಪಿನೀ ।
ತತಯಶಾಃ ಸಮಭೂದಿಹ ಸುವ್ರತಾ ಪತಿರತಾ ಜನಕೇಶಸುತಾ ಸತೀ ॥

ಸೀತಾದೇವಿಯು ಮೊದಲು ಗುಣಾಭರಣವುಳ್ಳ ಮಣಿಮತಿಯೆಂಬ ಖೇಚರಿಯಾಗಿದ್ದು ಬಹುಕೋಪವುಳ್ಳವಳಾಗಿ ನಿದಾನಶಲ್ಯವನ್ನು ಮಾಡಿ ಮರಣವನ್ನು ಹೊಂದಿದುದರಿಂದ ಇಲ್ಲಿ ವಿಸ್ತೃತವಾದ ಯಶಸ್ಸುಳ್ಳವಳೂ ಉತ್ತಮವ್ರತಗಳುಳ್ಳವಳೂ ಪತಿಯಲ್ಲಿ ಆಸಕ್ತಳೂ ಪತಿವ್ರತೆಯೂ ಆದ ಜನಕರಾಜಪುತ್ರಿಯಾಗಿ ಜನಿಸಿದಳು.

ಇಹ ಸಚಿವತನೂಜಶ್ಚಂದ್ರಚೂಲಸ್ಯ ಮಿತ್ರಮ್ ।
ವಿಜಯವಿದಿತನಾಮಾಜಾಯತ ಸ್ವಸ್ತೃತೀಯೇ ॥
ಕಥಿತಕನಕಚೂಲೋ ಲಾಲಿತೋ ದಿವ್ಯಭೋಗೈ– ।
ರಭವದಮಿತವೀರ್ಯಃ ಸೂರ್ಯವಂಶೇ ಸ ರಾಮಃ ॥ ೧೨೦೮ ॥

ರಾಮಚಂದ್ರನು ಮೊದಲು ಇಲ್ಲಿ ವಿಜಯನೆಂಬ ಮಂತ್ರಿಪುತ್ರನಾಗಿ ಚಂದ್ರಚೂಲನೆಂಬ ರಾಜಪುತ್ರನಿಗೆ ಮಿತ್ರನಾದನು. ಬಳಿಕ ಮೂರನೆಯ ಸ್ವರ್ಗದಲ್ಲಿ ದಿವ್ಯಭೋಗಗಳಿಂದ ಪೋಷಿತನಾದ ಕನಕಚೂಲನೆಂಬ ದೇವನಾದನು. ಅಲ್ಲಿಂದ ಚ್ಯುತನಾಗಿ ಅವನು ಸೂರ್ಯವಂಶದಲ್ಲಿ ಅಪರಿಮಿತಶಕ್ತಿಯುಳ್ಳವನಾದ ರಾಮನಾಗಿ ಹುಟ್ಟಿದನು.

ಜನಯತು ಬಲದೇವೋ ದೇವದೇವೋ ದುರಂತಾ– ।
ದ್ದುರಿತದುರುದಯೋತ್ಥಾದ್ದೂಷ್ಯದುಃಖಾದ್ವಿಯಾನ್ ॥
ಅವನತಭುವನೇಶೋ ವಿಶ್ವದೃಶ್ವಾ ವಿರಾಗೋ ।
ನಿಖಿಲಸುಖನಿವಾಸಃ ಸೋಽಷ್ಟಮೋಽಭೀಷ್ಟಮಸ್ಮಾತ್ ॥ ೧೨೦೯ ॥

ಪಾಪದ ದುಷ್ಟವಾದ ಉದಯದಿಂದುಂಟಾದ ಈ ದುರಂತದುಃಖದಿಂದ ದೂರನೂ ಲೋಕಾಧಿಪತಿಗಳಿಂದ ನಮಸ್ಕರಿಸಲ್ಪಟ್ಟವನೂ ವಿಶ್ವದರ್ಶಿಯೂ ರಾಗರಹಿತನೂ ಸಕಲಸುಖಗಳಿಗೆ ವಾಸಸ್ಥಾನನೂ ದೇವಾಧಿದೇವನೂ ಆದ ಆ ಎಂಟನೆಯ ಬಲದೇವ–ರಾಮನು ಅಭೀಷ್ಟವನ್ನುಂಟುಮಾಡಲಿ.

ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಮುನಿಸುವ್ರತತೀರ್ಥಂಕರ ಹರಿಷೇಣಚಕ್ರವರ್ತಿ ರಾಮಬಲದೇವ ಲಕ್ಷ್ಮೀಧರಕೇಶವ ಸೀತಾ ರಾವಣಪುರಾಣಂ ನಾಮಾಷ್ಟಷಷ್ಟಂ ಪರ್ವ ॥

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೋಳ್" ಮುನಿಸುವ್ರತತೀರ್ಥಕರ ಹರಿಷೇಣಚಕ್ರವರ್ತಿ ರಾಮಬಲದೇವ ಲಕ್ಷ್ಮೀಧರಕೇಶವ ಸೀತಾ ರಾವಣಪುರಾಣವೆಂಬ ಅರವತ್ತೆಂಟನೆಯ ಪರ್ವವು ಸಮಾಪ್ತವಾದುದು.

---

# ಅಥ ನಮಿತೀರ್ಥಕರಪುರಾಣಂ

**ಯಸ್ಯ ನಾಮಾಪಿ ಭರ್ತೄಣಾಂ ಮುಕ್ತ್ಯೈ ಹೃದಯಪಂಕಜೇ ।**
**ನಮಿರ್ನಮಯತಾನ್ನಮ್ರಾಲ್ಲಕ್ಷ್ಮೀಂ ಮೋಕ್ಷೀ ಸ ಮಂಕ್ಷು ನಃ ॥ ೧ ॥**

ಯಾವನ ಹೆಸರೂ ಅದನ್ನು ಹೃದಯಕಮಲದಲ್ಲಿ ಧರಿಸುವವರಿಗೆ ಮುಕ್ತಿಗೆ ಕಾರಣವಾಗುವುದೋ ಮೋಕ್ಷವುಳ್ಳವನಾದ ಆ ನಮಿಯು ನಮ್ಮಗಳಿಗೆ ಶೀಘ್ರವಾಗಿ ಲಕ್ಷ್ಮಿಯನ್ನು ಹಬ್ಬೆಗಿಡಕ್ಕಿಂತ ಬಗ್ಗಿಸಲಿ. ಸಂಪತ್ತಿಯನ್ನುಂಟುಮಾಡಲೆಂದು ಭಾವವು.

**ದ್ವೀಪೇಸ್ಮಿನ್ ಭಾರತೇ ವರ್ಷೇ ವಿಷಯೇ ವತ್ಸನಾಮನಿ ।**
**ಕೌಶಾಂಬ್ಯಾಂ ನಗರೇ ರಾಜಾ ಪಾರ್ಥಿವಾಖ್ಯೋ ವಿಭುರ್ವಿಶಾಮ್॥ ೨ ॥**

ಈ ಜಂಬೂದ್ವೀಪದ ಭಾರತವರ್ಷದಲ್ಲಿ ವತ್ಸದೇಶದಲ್ಲಿ ಕೌಶಾಂಬೀನಗರದಲ್ಲಿ ವೈಶ್ಯಪತಿಯಾದ ಪಾರ್ಥಿವನೆಂಬ ರಾಜನಿದ್ದನು.

**ಚಕ್ಷುರಿಕ್ಷ್ವಾಕುವಂಶಸ್ಯ ಲಕ್ಷ್ಮೀಂ ವಕ್ಷಃಸ್ಥಲೇದಧತ್ ।**
**ಸಾಕ್ಷಾಚ್ಚಕ್ರೀವ ದಿಕ್ಚಕ್ರಮಾಕ್ರಮ್ಯಾ ಭಾತ್ಸವಿಕ್ರಮೀ ॥ ೩ ॥**

ಇಕ್ಷ್ವಾಕುವಂಶಕ್ಕೆ ಕಣ್ಣಾದ ಆ ಪಾರ್ಥಿವರಾಜನು ವಕ್ಷಃಸ್ಥಲದಲ್ಲಿ ಲಕ್ಷ್ಮಿಯನ್ನು ಧರಿಸಿದನು. ಸಾಕ್ಷಾತ್ ಚಕ್ರವರ್ತಿಯಂತೆ ಪರಾಕ್ರಮಿಯಾಗಿ ದಿಕ್ಚಕ್ರವನ್ನು ಆಕ್ರಮಿಸಿ ಪ್ರಕಾಶಿಸಿದನು.

**ತನೂಜಸ್ತಸ್ಯ ಸುಂದರ್ಯಾಂ ದೇವ್ಯಾಂ ಸಿದ್ಧಾರ್ಥನಾಮಭಾಕ್ ।**
**ಮುನಿಂ ಮನೋಹರೋದ್ಯಾನೇ ಪರಮಾವಧಿವೀಕ್ಷಣಮ್ ॥ ೪ ॥**

**ದೃಷ್ಟ್ವಾ ಮುನಿವರಾಖ್ಯಾನಂ ಕದಾಚಿದ್ವಿನಯಾನತಃ ।**
**ಸಂಪೃಚ್ಛ್ಯ ಧರ್ಮಸದ್ಭಾವಂ ಯಥಾವತ್ತದುದೀರಿತಮ್ ॥ ೫ ॥**

**ಸಮಾಕರ್ಣ್ಯ ಸಮುತ್ಪನ್ನಸಂವೇಗಃ ಸ ಮಹೀಪತಿಃ ।**
**ಮೃತಿಮೂಲಧನೇನಾಧಮರ್ಣೋ ಮೃತ್ಯೋರಿಹಾಸುಭೃತ್ ॥ ೬ ॥**

**ವಹನ್ ದುಃಖಾನಿ ತದ್ವೃದ್ಧಿಂ ಸರ್ವೋ ಜನ್ಮನಿ ದುರ್ಗತಃ ।**
**ರತ್ನತ್ರಯಂ ಸಮಾವರ್ಜ್ಯ ತಸ್ಮೈ ಯಾವನ್ನ ದಾಸ್ಯತಿ ॥ ೭ ॥**

**ಋಣಂ ಸವೃದ್ಧಿಕಂ ತಾವತ್ಕುತಃ ಸ್ವಾಸ್ಥ್ಯಂ ಕುತಃ ಸುಖಮ್ ।**
**ಇತಿ ನಿಶ್ಚಿತ್ಯ ಕರ್ಮಾರೀನ್ನಿಹಂತುಂ ವಿಹಿತೋದ್ಯಮಃ ॥ ೮ ॥**

**ಸುತಾಯ ಶ್ರುತಶಾಸ್ತ್ರಾಯ ಪ್ರಜಾಪಾಲನಶಾಲಿನೇ ।**
**ಸಿದ್ಧಾರ್ಥಾಯ ಸಮರ್ಥಾಯ ದತ್ವಾ ರಾಜ್ಯಂ ಮುದಾತ್ತಧೀಃ ॥ ೯ ॥**

**ಪ್ರಾವ್ರಾಜೀತ್ಪೂಜ್ಯಪಾದಸ್ಯ ಮುನೇರ್ಮುನಿವರಶ್ರುತೇಃ ।**
**ಪಾದಮೂಲಂ ಸಮಾಸಾದ್ಯ ಸತಾಂ ಸಾ ವೃತ್ತಿರೀದೃಶೀ ॥ ೧೦ ॥**

ಆ ಪಾರ್ಥಿವರಾಜನಿಗೆ ಸುಂದರೀದೇವಿಯಲ್ಲಿ ಸಿದ್ಧಾರ್ಥನೆಂಬ ಪುತ್ರನು ಜನಿಸಿದನು. ಒಂದಾನೊಂದು ಕಾಲದಲ್ಲಿ ಆ ರಾಜನು ಮನೋಹರೋದ್ಯಾನದಲ್ಲಿ ಅವಧಿಜ್ಞಾನಿಯಾದ ಮುನಿವರನೆಂಬ ಮುನಿಯನ್ನು ನೋಡಿ ವಿನಯದಿಂದ ಬಗ್ಗಿದವನಾಗಿ ಧರ್ಮಸ್ವರೂಪವನ್ನು ಪ್ರಶ್ನೆಮಾಡಿ ಅವನು ಹೇಳಿದುದನ್ನು ಸರಿಯಾಗಿ ಕೇಳಿ ಧರ್ಮದಲ್ಲಿಯೂ ಅದರ ಫಲದಲ್ಲಿಯೂ ಉತ್ಪನ್ನವಾದ ಪ್ರೀತಿಯುಳ್ಳವನಾಗಿ "ಈ ಲೋಕದಲ್ಲಿ ಮರಣಕ್ಕೆ ಮೂಲವಾದ ಧನದಿಂದ ಮೃತ್ಯುವಿಗೆ ಸಾಲಗಾರವೂ ದೀನವೂ ಜನ್ಮದಲ್ಲಿ ಆ ಸಾಲದ ವೃದ್ಧಿಯನ್ನೂ ದುಃಖಗಳನ್ನೂ ವಹಿಸಿರುವುದೂ ಆದ ಸರ್ವಪ್ರಾಣಿಯು ರತ್ನತ್ರಯವನ್ನು ಸಂಪಾದಿಸಿ ಆ ಮೃತ್ಯುವಿಗೆ ಬೆಳೆಯುತ್ತಿರುವ ಋಣವನ್ನು ಕೊಡುವವರೆಗೆ ಸ್ವಸ್ಥತೆಯೂ ಸುಖವೂ ಎಲ್ಲಿಂದುಂಟಾಗುವುವು ?" ಈ ಪ್ರಕಾರವಾಗಿ ನಿಶ್ಚಯಿಸಿ ಕರ್ಮಶತ್ರುಗಳನ್ನು ಕೊಲ್ಲುವುದಕ್ಕೆ ಪ್ರಯತ್ನಿಸಿದವನಾಗಿ ಶಾಸ್ತ್ರಗಳನ್ನು ಕೇಳಿರುವವನೂ ಪ್ರಜಾಪಾಲನಶೀಲನೂ ಸಮರ್ಥನೂ ಪುತ್ರನೂ ಆದ ಸಿದ್ಧಾರ್ಥನಿಗೆ ಸಂತೋಷದಿಂದ ರಾಜ್ಯವನ್ನು ಕೊಟ್ಟು ಜ್ಞಾನಪ್ರಾಪ್ತಿಯುಳ್ಳವನಾಗಿ ಪೂಜ್ಯಪಾದನಾದ ಮುನಿವರನೆಂಬ ಮುನಿಯ ಪಾದಮೂಲವನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡನು. ಸತ್ಪುರುಷರ ಆ ನಡತೆಯು ಈ ಪ್ರಕಾರವಾಗಿರುವುದು.

**ಸಿದ್ಧಾರ್ಥೋಪ್ಯಾಪ್ತಸಮ್ಯಕ್ತ್ವೋ ಗೃಹೀತಾಣುವ್ರತಾದಿಕಃ ।**
**ಭೋಗಾನ್ ಸುಖೇನ ಭುಂಜಾನಃ ಪ್ರಚಂಡೋಪಾಲಯತ್ಪ್ರಜಾಃ॥ ೧೧ ॥**

ಪ್ರಾಪ್ತವಾದ ಸಮ್ಯಕ್ತ್ವವುಳ್ಳವನೂ ಅಣುವ್ರತಾದಿಗಳನ್ನು ಗ್ರಹಣಮಾಡಿದವನೂ ಪ್ರಚಂಡನೂ ಆದ ಸಿದ್ಧಾರ್ಥನು ಸುಖದಿಂದ ಭೋಗಗಳನ್ನನುಭವಿಸುವವನಾಗಿ ಪ್ರಜೆಗಳನ್ನು ಪಾಲಿಸಿದನು.

**ಕಾಲೇ ಗಚ್ಛತಿ ತಸ್ಯೈವಂ ಕದಾಚಿತ್ಸ್ವಗುರೋರ್ಮುನೇಃ ।**
**ಶ್ರುತ್ವಾ ಶರೀರಸನ್ನ್ಯಾಸಂ ವಿಚ್ಛಿನ್ನವಿಷಯಸ್ಪೃಹಃ ॥ ೧೨ ॥**

**ಸದ್ಯೋ ಮನೋಹರೋದ್ಯಾನೇ ಬುದ್ಧತತ್ತ್ವಾರ್ಥವಿಸ್ತೃತಿಃ ।**
**ಮಹಾಬಲಾಭಿಧಾತ್ಖ್ಯಾತಾತ್ಕೇವಲಾವಗಮೇಕ್ಷಣಾತ್ ॥ ೧೩ ॥**

**ರಾಜ್ಯಭಾರಂ ಸಮಾರೋಪ್ಯ ಶ್ರೀದತ್ತೇ ಸ್ವಸುತೇ ಸತಿ ।**
**ಲಬ್ಧಕ್ಷಾಯಿಕಸಮ್ಯಕ್ತ್ವಃ ಶಮೀ ಸಂಯಮಮಾದದೇ ॥ ೧೪ ॥**

ಈ ರೀತಿಯಾಗಿ ಅವನ ಕಾಲವು ಕಳೆಯುತ್ತಿರಲು ಒಂದಾನೊಂದು ಕಾಲದಲ್ಲಿ ತನ್ನ ತಂದೆಯಾದ ಮುನಿಯ ಶರೀರತ್ಯಾಗ(ಮೃತ್ಯು)ವನ್ನು ಕೇಳಿ ವಿಷಯಾಭಿಲಾಷೆಯನ್ನು ನಾಶಮಾಡಿದವನಾಗಿಯೂ ತತ್ಕ್ಷಣದಲ್ಲಿ ಮನೋಹರೋದ್ಯಾನದಲ್ಲಿ ಕೇವಲಜ್ಞಾನವೆಂಬ ನೇತ್ರವುಳ್ಳವನೂ ಪ್ರಖ್ಯಾತನೂ ಆದ ಮಹಾಬಲನೆಂಬ ಕೇವಲಿಯಿಂದ ವಿಸ್ತೃತವಾದ ತತ್ತ್ವಾರ್ಥಗಳನ್ನು ತಿಳಿದವನಾಗಿಯೂ ಕ್ಷಾಯಿಕ ಸಮ್ಯಕ್ತ್ವವನ್ನು ಪಡೆದವನಾಗಿಯೂ ಶಾಂತಿಯುಳ್ಳವನಾಗಿಯೂ ತನ್ನ ಪುತ್ರನೂ ಸತ್ಪುರುಷನೂ ಆದ ಶ್ರೀದತ್ತನಲ್ಲಿ ರಾಜ್ಯಭಾರವನ್ನಿರಿಸಿ ತಾನು ಸಂಯಮವನ್ನು ಸ್ವೀಕರಿಸಿದನು– ಮುನಿಯಾದನು.

**ಸ ಧರ್ತ್ಯೈಕಾದಶಾಂಗಾನಾಂ ಬದ್ಧ್ವಾ ಷೋಡಶಕಾರಣೈಃ ।**
**ಅಂತ್ಯನಾಮಾದಿಕರ್ಮಾಣಿ ಪುಣ್ಯಾನಿ ಪುರುಷೋತ್ತಮಃ ॥ ೧೫ ॥**

**ಸ್ವಾಯುರಂತೇ ಸಮಾರಾಧ್ಯ ವಿಮಾನೇ ಲವಸತ್ತಮಃ ।**
**ದೇವೋಪರಾಜಿತೇ ಪುಣ್ಯಾದುತ್ತರೇನುತ್ತರೇಭವತ್ ॥ ೧೬ ॥**

**ತ್ರಯಸ್ತ್ರಿಂಶತ್ಪಯೋಧ್ಯಾಯುರೇಕಾರತ್ನಿಸಮುಚ್ಛ್ರಿತಃ ।**
**ನಿಃಶ್ವಾಸಾಹಾರಲೇಶ್ಯಾದಿಭಾವ್ಯೈಃ ಸೂತ್ರೋದಿತೈರ್ಯುತಃ ॥ ೧೭ ॥**

ಏಕಾದಶಾಂಗಶಾಸ್ತ್ರಗಳ ಧಾರಕನೂ ಪುರುಷೋತ್ತಮನೂ ಆದ ಆ ಸಿದ್ಧಾರ್ಥ ಮುನಿಯು ದರ್ಶನವಿಶುದ್ಧ್ಯಾದಿ ಷೋಡಶಕಾರಣಗಳಿಂದ ತೀರ್ಥಕರನಾಮವೇ ಮೊದಲಾದ ಪುಣ್ಯಕರ್ಮಗಳನ್ನು ಬಂಧಿಸಿ ತನ್ನ ಆಯುಷ್ಯಾವಸಾನದಲ್ಲಿ ಚೆನ್ನಾಗಿ ಜ್ಞಾನಾದ್ಯಾರಾಧನೆಗಳನ್ನು ಆರಾಧಿಸಿ ಸತ್ತು ಪುಣ್ಯದಿಂದ ಶ್ರೇಷ್ಠವಾದ ಅಪರಾಜಿತವೆಂಬ ಅನುತ್ತರವಿಮಾನದಲ್ಲಿ ಮೂವತ್ತುಮೂರು ಸಾಗರೋಪಮವರ್ಷಾ

ಯುಷ್ಯವುಳ್ಳವನೂ ಒಂದು ಗುಡ್ಡುಮೊಳದಷ್ಟು ಶರೀರೋನ್ನತನೂ ಸೂತ್ರದಲ್ಲಿ ಹೇಳಲ್ಪಟ್ಟಿರುವ ನಿಃಶ್ವಾಸ ಭೋಜನ ಲೇಶ್ಯಾದಿ ಭಾವಗಳಿಂದ ಕೂಡಿರುವವನೂ ಆದ ಲವಸತ್ತಮನೆಂಬ ಅಹಮಿಂದ್ರದೇವನಾದನು.

**ಜೀವಿತಾಂತೇಹಮಿಂದ್ರೇಸ್ಮಿನ್ ಷಣ್ಮಾಸೈರಾಗಮಿಷ್ಯತಿ ।**
**ಜಂಬೂಪಲಕ್ಷಿತೇ ದ್ವೀಪೇ ವಿಷಯೇ ವಂಗನಾಮನಿ ॥ ೧೮ ॥**

**ಮಿಥಿಲಾಯಾಂ ಮಹೀಪಾಲಃ ಶ್ರೀಮಾನ್ ಗೋತ್ರೇಣ ಕಾಶ್ಯಪಃ ।**
**ವಿಜಯಾದಿಮಹಾರಾಜೋ ವಿಖ್ಯಾತೋ ವೃಷಭಾನ್ವಯೇ ॥ ೧೯ ॥**

**ಅನುರಕ್ತಂ ವ್ಯಧಾತ್ಕೃತ್ಸ್ನಮುದ್ಯನ್ನಿವ ರವಿರ್ಜಗತ್ ।**
**ಸ್ವವಿರಾಗಾದ್ವಿರಕ್ತಂ ತತ್ತೋತಪನ್ನಾಸ್ಯ ತಾದೃಶಮ್ ॥ ೨೦ ॥**

ಆಯುಷ್ಯಾವಸಾನದಲ್ಲಿ ಆರುತಿಂಗಳುಗಳಿಂದ ಈ ಅಹಮಿಂದ್ರನು ಭೂಮಿಗೆ ಬರುತ್ತಿರಲು ಜಂಬೂದ್ವೀಪದ ವಂಗದೇಶದಲ್ಲಿ ಮಿಥಿಲಾನಗರದಲ್ಲಿ ದೊರೆಯೂ ಶ್ರೀಮಂತನೂ ಗೋತ್ರದಿಂದ ಕಾಶ್ಯಪನೂ ವೃಷಭಾನ್ವಯದಲ್ಲಿ ಪ್ರಖ್ಯಾತನೂ ಆದ ವಿಜಯಮಹಾರಾಜನು, ಉದಯಿಸಿದ ಸೂರ್ಯನಂತೆ, ಸಕಲಜಗತ್ತನ್ನು ಅನುರಾಗವುಳ್ಳುದನ್ನಾಗಿಯೂ ಅವನು ತನ್ನ ವಿರಕ್ತಿಯಿಂದ ಜಗತ್ತನ್ನು ವಿರಕ್ತಿಯುಳ್ಳುದನ್ನಾಗಿಯೂ ಮಾಡಿದನು. ಈ ಜಗತ್ತಿಗೆ ಸೂರ್ಯನಂತಹ ತಾಪವನ್ನುಂಟುಮಾಡಲಿಲ್ಲ.

**ಅವ್ವಣೀತ ಗುಣಾಲಿಸ್ತಂ ಲಕ್ಷ್ಮೀಶ್ಚ ಸುಕೃತೋದಯಾತ್ ।**
**ಪುಷ್ಕಲಾವಿಷ್ಕೃಯಂ ತಸ್ಮಿನ್ ಪುರುಷಾರ್ಥತ್ರಯಂ ತತಃ ॥ ೨೧ ॥**

ಗುಣಸಮೂಹವು ಆ ವಿಜಯಮಹಾರಾಜನನ್ನು ವರಿಸಿತು. ಪುಣ್ಯೋದಯದಿಂದ ಲಕ್ಷ್ಮಿಯೂ ಅವನನ್ನು ವರಿಸಿದಳು. ಆದುದರಿಂದ ಅವನಲ್ಲಿ ಧರ್ಮ ಅರ್ಥ ಕಾಮಗಳೆಂಬ ಮೂರು ಪುರುಷಾರ್ಥಗಳು ಸಂಪೂರ್ಣವಾಗಿ ಪ್ರಕಟವಾದುವು.

**ತಸ್ಯ ರಾಜ್ಯೇ ರವಾವೇವ ತಾಪಃ ಕೋಪೋಪಿ ಕಾಮಿಷು ।**
**ವಿಗ್ರಹಾಖ್ಯಾ ತನುಷ್ವೇವ ಮುನಿಷ್ವೇವ ವಿರಾಗಿತಾ ॥ ೨೨ ॥**

**ಪರಾರ್ಥಗ್ರಹಣಂ ನಾಮ ಕುಕವಿಷ್ವೇವ ಬಂಧನಮ್ ।**
**ಕಾವ್ಯೇಷ್ವೇವ ವಿವಾದಶ್ಚ ವಿದ್ವತ್ಸ್ವೇವ ಜಯಾರ್ಥಿಷು ॥ ೨೩ ॥**

**ಶರವ್ಯಾಪ್ತಿಃ ಸರಿತ್ಸ್ವೇವ ಜ್ಯೋತಿಷ್ವೇವಾನವಸ್ಥಿತಿಃ ।**
**ಕ್ರೌರ್ಯಂ ಕ್ರೂರಗ್ರಹೇಷ್ವೇವ ದೇವೇಷ್ವೇವ ಪಿಶಾಚತಾ ॥ ೨೪ ॥**

ಅವನ ರಾಜ್ಯದಲ್ಲಿ ಸೂರ್ಯನಲ್ಲೇ ತಾಪವಿದ್ದಿತು. ಕೋಪವೂ ಕಾಮುಕರಲ್ಲೇ ಇದ್ದಿತು. ವಿಗ್ರಹ(ಕಲಹ)ವೆಂಬುದು ಶರೀರಗಳಲ್ಲೇ ಇದ್ದಿತು. ರಾಗರಾಹಿತ್ಯವು ಮುನಿಗಳಲ್ಲೇ ಇದ್ದಿತು. ಬೇರೆಯವರ ಅರ್ಥಗ್ರಹಣವೆಂಬುದು ದುಷ್ಟಕವಿಗಳಲ್ಲೇ ಇದ್ದಿತು. ಬಂಧನವು ಕಾವ್ಯಗಳಲ್ಲೇ ಇದ್ದಿತು. ವಿವಾದವೂ ಜಯದ ಇಚ್ಛೆಯುಳ್ಳ ವಿದ್ವಾಂಸರುಗಳಲ್ಲೇ ಇದ್ದಿತು. ಶರಗಳ (ಕಾಚಿ ಹುಲ್ಲುಗಳ) ವ್ಯಾಪ್ತಿಯು ನದಿಗಳಲ್ಲೇ ಇದ್ದಿತು. ಹೆಚ್ಚು ಕಡಮೆಯಾಗಿರುವಿಕೆಯು ಜ್ಯೋತಿರ್ದೇವತೆಗಳಲ್ಲೇ ಇದ್ದಿತು. ಕ್ರೂರತ್ವವು ಗ್ರಹಗಳಲ್ಲೇ ಇದ್ದಿತು. ಪಿಶಾಚತ್ವವು ದೇವರ್ಕಳಲ್ಲೇ ಇದ್ದಿತು. ಅವನ ರಾಜ್ಯದಲ್ಲಿ ತಾಪವೂ ಕೋಪವೂ ವಿರಾಗತ್ವವೂ ಪರದ್ರವ್ಯಗ್ರಹಣವೂ ಬಂಧನವೂ ಜಗಳವೂ ಬಾಣಗಳ ವ್ಯಾಪನವೂ ನ್ಯೂನಾಧಿಕ್ಯವೂ ಕ್ರೂರತ್ವವೂ ಪಿಶಾಚತ್ವವೂ ಮೇಲೆ ಹೇಳಲ್ಪಟ್ಟ ಸೂರ್ಯಾದಿಗಳಲ್ಲಿ ಹೊರತು ಬೇರೆಕಡೆಗಳಲ್ಲಿರಲಿಲ್ಲವೆಂದು ಭಾವವು.

**ಪಿಪ್ಪಲಾ ತನ್ಮಹಾದೇವೀ ವಸುಧಾರಾದಿಪೂಜಿತಾ ।**
**ಶ್ರೀಹ್ರೀಧೃತ್ಯಾದಿಭಿಃ ಸೇವ್ಯಾ ಸುಖಸುಪ್ತಾ ನಿಶಾವಧೌ ॥ ೨೫ ॥**

**ಶರದಾದಿದ್ವಿತೀಯಾಯಾಂ ನಕ್ಷತ್ರೇಷ್ವಾದಿಮೇ ಸತಿ ।**
**ಸ್ವರ್ಗಾವತರಣೇ ಭರ್ತುರ್ದೃಷ್ಟ್ವಾ ಸ್ವಪ್ನಾನ್ಪುರೋದಿತಾನ್ ॥ ೨೬ ॥**

**ಸ್ವವಕ್ತ್ರಾಬ್ಜಪ್ರವಿಷ್ಟೇಭಮಪ್ಯಾಲೋಕ್ಯ ವಿನಿದ್ರಿಕಾ ।**
**ಪ್ರಭಾತಪಟಹಧ್ವಾನಶ್ರವಣಾವಿಷ್ಕೃತೋತ್ಸವಾ ॥ ೨೭ ।**

**ಅಪೃಚ್ಛತ್ಫಲಮೇತೇಷಾಂ ನೃಪಂ ದೇಶಾವಧೀಕ್ಷಣಮ್ ।**
**ಸೋಪ್ಯವಾದೀದ್ಭವದ್ಗರ್ಭೇ ಭಾವಿತೀರ್ಥಕೃದಿತ್ಯತಃ ॥ ೨೮ ।**

**ತದೈವಾಗತ್ಯ ದೇವೇಂದ್ರಾಃ ಸ್ವರ್ಗಾವತರಣೋತ್ಸವಮ್ ।**
**ವಿಧಾಯ ಸ್ವನಿಯೋಗೇನ ನಿಜಧಾಮಾಗಮನ್ಸಮಮ್ ॥ ೨೯**

ಆ ವಿಜಯಮಹಾರಾಜನ ಪತ್ನಿಯಾದ ಪಿಪ್ಪಲಾದೇವಿಯು ವಸುಧಾರಾ[illegible] ಗಳಿಂದ ಪೂಜಿತಳೂ ಶ್ರೀಹ್ರೀಧೃತಿ ಮೊದಲಾದ ದೇವಿಯರಿಂದ ಸೇವಿಸಲ್ಪ[illegible] ತಕ್ಕವಳೂ ಸುಖವಾಗಿ ಮಲಗಿರುವವಳೂ ರಾತ್ರಿಯ ಅವಧಿಯಲ್ಲಿ (ಬೆಳಗಿ ಜಾವದಲ್ಲಿ) ಆಶ್ವಯುಜಮಾಸದ ಕೃಷ್ಣಪಕ್ಷದ ದ್ವಿತೀಯೆಯಲ್ಲಿ ನಕ್ಷತ್ರಗಳ[illegible] ಶ್ರೇಷ್ಠವಾದ ಮೊದಲನೆಯ– ಅಶ್ವಿನೀನಕ್ಷತ್ರದಲ್ಲಿ ಸ್ವಾಮಿಯ ಸ್ವರ್ಗಾವತರ[illegible] ಕಾಲದಲ್ಲಿ ಮೊದಲು ಹೇಳಲ್ಪಟ್ಟಿರುವ ಹದಿನಾರು ಸ್ವಪ್ನಗಳನ್ನೂ ತನ್ನ ಮುಖವನ ಪ್ರವೇಶಿಸಿದ ಆನೆಯ ಸ್ವಪ್ನವನ್ನೂ ಕಂಡು ಎಚ್ಚತ್ತವಳೂ ಪ್ರಭಾತಕಾಲದ ತಮ್ಮಟೆ[illegible] ಧ್ವನಿಯ ಶ್ರವಣದಿಂದುಂಟಾದ ಉತ್ಸವವುಳ್ಳವಳೂ ಆಗಿ ದೇಶಾವಧಿಜ್ಞಾ ನೇತ್ರವುಳ್ಳ ರಾಜನನ್ನು ಕುರಿತು ಈ ಸ್ವಪ್ನಗಳ ಫಲವನ್ನು ಕೇಳಿದಳು. ಆ ವಿಜ[illegible] ಮಹಾರಾಜನೂ'' ನಿನ್ನ ಗರ್ಭದಲ್ಲಿ ಭವಿಷ್ಯತ್ತೀರ್ಥಕರನು ಅವತರಿಸಿದ್ದಾ[illegible] ಎಂದು ಹೇಳಿದನು. ಬಳಿಕ ಆಗಲೇ ದೇವೇಂದ್ರರು ಬಂದು ತಮ್ಮ ಸೇವೆಯಿ[illegible] ಸ್ವರ್ಗಾವತರಣೋತ್ಸವವನ್ನು ಮಾಡಿ ಒಟ್ಟಿಗೆ ತಮ್ಮ ಸ್ಥಾನಗಳಿಗೆ ಹೊರ[illegible] ಹೋದರು.

**ಆಷಾಢೇ ಸಾಶ್ವಿಯೋಗೇ ತಂ ಕೃಷ್ಣಪಕ್ಷೇ ಮಹೌಜಸಮ್ ।**
**ದಶಮ್ಯಾಂ ವಿಶ್ವಲೋಕೇಶಮಸೂತ ಮನುಜೋತ್ತಮಮ್ ॥ ೩[illegible]**

ಆಕೆಯು ಆಷಾಢಮಾಸದ ಕೃಷ್ಣಪಕ್ಷದ ದಶಮೀತಿಥಿಯಲ್ಲಿ ಅಶ್ವಿಯೋಗ[illegible] ಮಹಾತೇಜಸ್ವಿಯೂ ಸಮಸ್ತಲೋಕಾಧಿಪತಿಯೂ ಮನುಷ್ಯಶ್ರೇಷ್ಠನೂ ಆದ ದ[illegible] ನನ್ನು ಹಡೆದಳು.

**ದೇವಾ ದ್ವಿತೀಯಕಲ್ಯಾಣಮಪ್ಯಭ್ಯೇತ್ಯ ತದಾ ವ್ಯಧುಃ ।**
**ನಮಿನಾಮಾನಮಪ್ಯೇನಂ ವ್ಯಾಹರನ್ಮೋಹಭೇದಿನಮ್ ॥ ೩[illegible]**

ಆಗ ಇಂದ್ರಾದಿದೇವರ್ಕಳು ಬಂದು ಎರಡನೆಯದಾದ ಜನ್ಮಾಭಿಷೇಕಕ[illegible] ವನ್ನು ಮಾಡಿದರು. ಅಜ್ಞಾನವನ್ನು ನಾಶಮಾಡುವ ಈ ಸ್ವಾಮಿಗೆ '' ನಮಿ'' ಎ[illegible] ನಾಮಕರಣವನ್ನೂ ಮಾಡಿ ಕರೆದರು.

**ಮುನಿಸುವ್ರತತೀರ್ಥೇಶಸಂತಾನೇ ವರ್ಷಮಾನತಃ ।**
**ಗತೇಷು ಷಟ್ಸು ಲಕ್ಷೇಷು ನಮಿನಾಥಸಮುದ್ಭವಃ ॥ [illegible]**

ಮುನಿಸುವ್ರತತೀರ್ಥಂಕರರ ಪರಂಪರೆಯಲ್ಲಿ ವರ್ಷಪರಿಮಾಣದಿಂದ ಲಕ್ಷವರ್ಷಗಳು ಕಳೆಯುತ್ತಿರಲು ನಮಿನಾಥನ ಉತ್ಪತ್ತಿಯಾಗಿರುವುದು.

**ಆಯುರ್ದಶಸಹಸ್ರಾಣಿ ವರ್ಷಾಣಾಂ ಪರಮಂ ಮತಮ್ ।**
**ಉತ್ಸೇಧೋ ಧನುಷಾಂ ಪಂಚದಶ ಚಾಸ್ಯಾಭಿಧೀಯತೇ ॥**

ಈ ನಮಿನಾಥರ ಪರಮಾಯುಷ್ಯವು ಹತ್ತು ಸಹಸ್ರವರ್ಷಗಳೆಂದೂ ಹ[illegible] ಬಿಲ್ಲುಗಳ ಶರೀರೋತ್ಸೇಧವೆಂದೂ ಹೇಳಲ್ಪಡುತ್ತದೆ.

**ಜಾತರೂಪದ್ಯುತಿಃ ಸಾರ್ಧದ್ವಿಸಹಸ್ರಾಬ್ದಸಮ್ಮಿತೇ ।**
**ಗತೇ ಕುಮಾರಕಾಲೇಭಿಷೇಕಮಾಪತ್ಸ ರಾಜ್ಯಜಮ್ ॥**

ಸುವರ್ಣದಂತೆ ದೇಹಕಾಂತಿ. ಎರಡುವರೆ ಸಹಸ್ರ ವರ್ಷಪರಿಮಿತವಾದ ಕ[illegible] ಕಾಲವು ಕಳೆಯುತ್ತಿರಲು ಆ ನಮಿನಾಥರು ರಾಜ್ಯಾಭಿಷೇಕವನ್ನು ಹೊಂದಿ[illegible]

**ರಾಜ್ಯೇ ಪಂಚಸಹಸ್ರಾಣಿ ವತ್ಸರಾಣಾಮಗುರ್ವಿಭೋಃ ।**
**ತದಾ ಪ್ರಾವೃಡ್ಘನಾಟೋಪಸಂಕಟೇ ಗಗನಾಂಗಣೇ ॥**



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಮಿಥಿಲಾಪುರೀಪಟ್ಟಣದಲ್ಲಿ ವಿಜಯಮಹಾರಾಜಂಗಂ ವರ್ಪಿಲಾಮಹಾದೇವಿಗಂ ಅಶ್ವಿನೀನಕ್ಷತ್ರದಲ್ಲುದಯಿಸಿದ ಕನಕವರ್ಣಮನುಳ್ಳ ಹದಿನೈದುಬಿಲ್ಲುತ್ಸೇಧಮನುಳ್ಳ ಹತ್ತುಸಾಸಿರ ವರ್ಷಾಯುಷ್ಯಮನುಳ್ಳ ಇಕ್ಷ್ವಾಕುವಂಶಮನುಳ್ಳ ನೈದಿಲೆಯ ಲಾಂಛನಮನುಳ್ಳ ಭ್ರುಕುಟಿಚಾಮುಂಡೀ–ಯಕ್ಷಯಕ್ಷಿಯರನುಳ್ಳ ಸಮ್ಮೇದಗಿರಿಯ ಮಿತ್ರಧರಕೂಟದಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ನಮಿತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

**ಏನಂ ವನವಿಹಾರಾಯ ಗತವಂತಂ ಮಹೋದಯಮ್ ।**
**ಗಜಸ್ಕಂಧಸಮಾರೂಢಂ ಭಾನುಮಂತಮಿವಾಪರಮ್ ॥ ೩೬ ॥**

**ನಭಸ್ಥಲಗತೌ ದೇವಕುಮಾರೌ ವಿಹಿತಾನತೀ ।**
**ಏವಂ ವಿಜ್ಞಾಪಯಾಮಾಸತುರ್ಬದ್ಧಕರಪಂಕಜೌ ॥ ೩೭ ॥**

ರಾಜ್ಯದಲ್ಲಿ ಸ್ವಾಮಿಗೆ ಐದು ಸಹಸ್ರವರ್ಷಗಳು ಕಳೆದುವು. ಆಗ ಆಕಾಶಪ್ರದೇಶವು ವರ್ಷಾಕಾಲದ ಮೇಘದ ರಭಸದಿಂದ ನಿಬಿಡವಾಗಿರುತ್ತಿರಲು ವನವಿಹಾರಕ್ಕೋಸ್ಕರ ಹೋದವರೂ ಇನ್ನೊಬ್ಬ ಸೂರ್ಯನೋ ಎಂಬಂತೆ ಮಹೋನ್ನತಿಯುಳ್ಳವರೂ ಆನೆಯ ಹೆಗಲನ್ನು ಹತ್ತಿರುವವರೂ ಆದ ಈ ನಮಿನಾಥರನ್ನು ಗಗನತಲದಲ್ಲಿರುವ ದೇವಕುಮಾರರೀರ್ವರು ನಮಸ್ಕರಿಸಿದವರಾಗಿಯೂ ಹಸ್ತಕಮಲಗಳನ್ನು ಜೋಡಿಸಿದವರಾಗಿಯೂ ಈ ಮುಂದೆ ಹೇಳುವಂತೆ ವಿಜ್ಞಾಪಿಸಿದರು.

**ದ್ವೀಪೇಸ್ಮಿನ್ ಪ್ರಾಗ್ವಿದೇಹೇಸ್ತಿ ವಿಷಯೋ ವತ್ಸಕಾವತೀ ।**
**ಸುಸೀಮಾ ನಗರೀ ತತ್ರ ವಿಮಾನಾದಪರಾಜಿತಾತ್ ॥ ೩೮ ॥**

**ಅವತೀರ್ಯ ಸಮುತ್ಪನ್ನಸ್ತೀರ್ಥನಾಥೋಽಪರಾಜಿತಃ ।**
**ತಸ್ಯ ಕೇವಲಪೂಜಾರ್ಥಂ ದೇವೇಂದ್ರಾಃ ಸಮುಪಾಗತಾಃ ॥ ೩೯ ॥**

"ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿ ವತ್ಸಕಾವತಿಯೆಂಬ ದೇಶವಿದೆ. ಅಲ್ಲಿ ಸುಸೀಮಾನಗರವಿದೆ. ಅಪರಾಜಿತನು ಅಪರಾಜಿತವಿಮಾನದಿಂದ ಅವತರಿಸಿ ತೀರ್ಥನಾಯಕನಾಗಿ ಜನಿಸಿದನು. ಅವನ ಕೇವಲಜ್ಞಾನಪೂಜೆಗೋಸ್ಕರ ದೇವೇಂದ್ರರು ಬಂದರು.

**ತತ್ಸಭಾಯಾಮಭೂತ್ಪ್ರಶ್ನಃ ಕಿಮಸ್ತಿ ಭರತೇಽಧುನಾ ।**
**ಕಶ್ಚಿತ್ತೀರ್ಥಕೃದಿತ್ಯಾಹ ಸೋಽಪ್ಯೇವಂ ಸಕಲಾರ್ಥದೃಕ್ ॥ ೪೦ ॥**

**ವಂಗಾಖ್ಯದೇಶೇ ಮಿಥಿಲಾನಗರೇ ನಮಿನಾಯಕಃ ।**
**ಭಾವಿತೀರ್ಥಕರಃ ಪುಣ್ಯಾದವತೀರ್ಣೋಽಪರಾಜಿತಾತ್ ॥ ೪೧ ॥**

**ದೇವೋಪನೀತಭೋಗಾನಾಂ ಭೋಕ್ತಾ ಸಂಪ್ರತಿ ಸಾಧ್ವಿತಿ ।**
**ತಪಃ ಪ್ರಾಗ್ಧಾತಕೀಖಂಡೇ ಕೃತ್ವಾ ಸೌಧರ್ಮನಾಮನಿ ॥ ೪೨ ॥**

**ಸಂಭೂಯೇತೋ ದ್ವಿತೀಯೇಽಹ್ನಿ ಗತ್ವಾ ತದ್ವಚನಶ್ರುತೇಃ ।**
**ಭವಂತಮೀಕ್ಷಿತುಂ ಪೂಜ್ಯಮಾವಾಮ್ಯೈವ ಸಕೌತುಕೌ ॥ ೪೩ ॥**

ಆ ಅಪರಾಜಿತತೀರ್ಥೇಶ್ವರನ ಸಮವಸರಣಸಭೆಯಲ್ಲಿ 'ಈಗ ಭರತಕ್ಷೇತ್ರದಲ್ಲಿ ಯಾವನಾದರೂ ತೀರ್ಥಕರನಿದ್ದಾನೋ ?' ಎಂದು ಪ್ರಶ್ನೆಯುಂಟಾಯಿತು. ಸಕಲಪದಾರ್ಥದರ್ಶಿಯಾದ ಆ ಅಪರಾಜಿತತೀರ್ಥೇಶ್ವರನೂ 'ವಂಗದೇಶದಲ್ಲಿ ಮಿಥಿಲಾನಗರದಲ್ಲಿ ಮುಂದೆ ತೀರ್ಥಕರನಾಗುವ ನಮಿನಾಥನು ಪುಣ್ಯದಿಂದ ಅಪರಾಜಿತವಿಮಾನದಿಂದ ಅವತರಿಸಿದವನಾಗಿ ಈಗ ದೇವರ್ಕಳು ತಂದುಕೊಡುತ್ತಿರುವ ಭೋಗಗಳನ್ನು ಚೆನ್ನಾಗಿ ಭೋಗಿಸುತ್ತಿರುವನು' ಹೀಗೆಂದು ಹೇಳಿದನು. ನಾವುಗಳು ಮೊದಲು ಧಾತಕೀಖಂಡದ್ವೀಪದಲ್ಲಿ ತಪಸ್ಸನ್ನುಮಾಡಿ ಸೌಧರ್ಮವೆಂಬ ಸ್ವರ್ಗದಲ್ಲಿ ಹುಟ್ಟಿ ಇಲ್ಲಿಂದ ಎರಡನೆಯ ದಿವಸದಲ್ಲಿ ಹೋಗಿ ಆ ಅಪರಾಜಿತೇಶ್ವರನ ವಚನವನ್ನು ಕೇಳಿದುದರಿಂದ ಪೂಜ್ಯರಾದ ತಮ್ಮನ್ನು ನೋಡುವುದಕ್ಕೋಸ್ಕರ ಕುತೂಹಲವುಳ್ಳವರಾಗಿ ಬಂದೆವು."

**ಇತಿ ಸೋಽಪಿ ಸಮಾಸನ್ನಕೇವಲಾವಗಮೋದಯಃ ।**
**ಚಿತ್ತೇ ವಿಧಾಯ ತತ್ಸರ್ವಂ ಮಹೀಶಃ ಪ್ರಾವಿಶತ್ಪುರಮ್ ॥ ೪೪ ॥**

ಈ ರೀತಿಯಾಗಿ ಸಮೀಪಿಸಿರುವ ಕೇವಲಜ್ಞಾನೋದಯವುಳ್ಳವನೂ ಪೃಥಿವೀಪತಿಯೂ ಆದ ಆ ನಮಿನಾಥನೂ ಆ ದೇವಕುಮಾರರು ಹೇಳಿದುದನ್ನು ಮನಸ್ಸಿನಲ್ಲಿಟ್ಟು ನಗರವನ್ನು ಪ್ರವೇಶಿಸಿದನು.

**ತತ್ರ ಸ್ವಭವಸಂಬಂಧಂ ಸ್ಮೃತ್ವಾ ತೀರ್ಥಕರಂ ಚ ತಮ್ ।**
**ಆಜವಂಜವಸಂಜಾತಸದ್ಭಾವಂ ಭಾವಯನ್ ಮುಹುಃ ॥ ೪೫ ॥**

**ಅನಾದಿಬಂಧನೈರ್ಗಾಢಂ ಬಧ್ವಾತ್ಮಾತ್ಮಾನಮಾತ್ಮನಾ ।**
**ಕಾಯಕಾರಾಗೃಹೇ ಸ್ಥಿತ್ವಾ ಪಾಪೀ ಪಕ್ಷೀವ ಪಂಜರೇ ॥ ೪೬ ॥**

**ಕುಂಜರೋ ವಾರ್ಪಿತಾಲಾನೋಽಕಲಯನ್ಬಲಮಾತ್ಮನಃ ।**
**ನಾನಾದುಃಖಾನಿ ಭುಂಜಾನೋ ಭೂಯಸ್ತೈರೇವ ರಂಜಿತಃ ॥ ೪೭ ॥**

**ಇಂದ್ರಿಯಾರ್ಥೇಷು ಸಂಸಕ್ತೋ ರತಿತೀವ್ರತರೋದಯಾತ್ ।**
**ಅಶುಚಿಷ್ವೇವ ಸಂವೃದ್ಧತೃಷ್ಣೋಽವಸ್ಕರಕೀಟವತ್ ॥ ೪೮ ॥**

**ಬಿಭ್ಯನ್ಮೃತ್ಯೋಸ್ತಮಾಧಾವನ್ ವರ್ಜ್ಯದುಃಖಸ್ತದರ್ಜಯನ್ ।**
**ವಿಪರ್ಯಸ್ತಮತಿಃ ಕಷ್ಟಮಾರ್ತರೌದ್ರಾಹಿತಾಶಯಃ ॥ ೪೯ ॥**

**ಭವೇ ಭ್ರಾಮ್ಯತ್ಯವಿಶ್ರಾಮ್ಯನ್ ಪ್ರತಾಮ್ಯನ್ ಪಾಪಪಾಕತಃ ।**
**ದೃಢಾಭಿರೂಢಾಂ ಧಿಙ್ಮೂಢಿಮಭೀಷ್ಟಾರ್ಥವಿಘಾತಿನೀಮ್ ॥ ೫೦ ॥**

**ಇತಿ ನಿರ್ವೇಗಸಂಯೋಗಾದ್ಭೋಗರಾಗಾದಿದೂರಗಃ ।**
**ಸಾರಸ್ವತಾದಿಸರ್ವಾಪರಾಗಾಮರಸಮರ್ಚಿತಃ ॥ ೫೧ ॥**

**ಕ್ಷಯೋಪಶಮಸಂಪ್ರಾಪ್ತಶಸ್ತಸಂಜ್ವಲನೋದಯಃ ।**
**ಲಬ್ಧಬೋಧಿಃ ಸುತಂ ರಾಜ್ಯೇ ನಿಜೇ ಸಂಯೋಜ್ಯ ಸುಪ್ರಭಮ್ ॥ ೫೨ ॥**

**ಸಾಭಿಷೇಕಂ ಸುರೈಃ ಪ್ರಾಪ್ತಪರಿನಿಷ್ಕ್ರಾಂತಿಪೂಜನಃ ।**
**ಯಾನಮುತ್ತರಕುರ್ವಾಖ್ಯಂ ಸಮಾರುಹ್ಯ ಮನೋಹರಮ್ ॥ ೫೩ ॥**

**ಗತ್ವಾ ಚಿತ್ರವನೋದ್ಯಾನಂ ಷಷ್ಠೋಪವಸನಂ ಶ್ರಿತಃ ।**
**ಆಷಾಢಕಾಲಪಕ್ಷೇಶ್ವಿನಕ್ಷತ್ರೇ ದಶಮೀದಿನೇ ॥ ೫೪ ॥**

**ಅಪರಾಹ್ಣೇ ಸಹಸ್ರೇಣ ಕ್ಷತ್ರಿಯಾಣಾಂ ಸಹಾಗ್ರಹೀತ್ ।**
**ಸಂಯಮಂ ಸಂಯಮಾಪಾದ್ಯಂ ಸಂಜ್ಞಾನಂ ಚ ಚತುರ್ಥಕಮ್ ॥ ೫೫ ॥**

ಅಲ್ಲಿ ತನ್ನ ಪೂರ್ವಭವಸಂಬಂಧವನ್ನೂ ಆ ತೀರ್ಥಕರನನ್ನೂ ಸ್ಮರಿಸಿ ಸಂಸಾರಜನ್ಯವಾದ ಸದ್ಭಾವವನ್ನು ಪುನಃ ಪುನಃ ಭಾವಿಸುವವನಾಗಿ "ಅನಾದಿಕರ್ಮಬಂಧನಗಳಿಂದ ಪಾಪಿಯಾದ ಆತ್ಮನು ಆತ್ಮನನ್ನು ಆತ್ಮನಿಂದ ದೃಢವಾಗಿ ಬಂಧಿಸಿ, ಪಂಜರದಲ್ಲಿ ಪಕ್ಷಿಯಿರುವಂತೆ, ಶರೀರವೆಂಬ ಸೆರೆಮನೆಯಲ್ಲಿದ್ದು, ಗೂಟಕ್ಕೆ ತನ್ನನ್ನು ಒಡ್ಡಿದ ಆನೆಯಂತೆ, ತನ್ನ ಶಕ್ತಿಯನ್ನು ವಿಚಾರಮಾಡದೆ ವಿವಿಧದುಃಖಗಳನ್ನನುಭವಿಸುವವನಾಗಿಯೂ ಮತ್ತೆ ಆ ದುಃಖಗಳಿಂದಲೇ ರಾಗವಿಶಿಷ್ಟನಾಗಿಯೂ ರತಿಯ ಬಹುತೀವ್ರವಾದ ಉದಯದಿಂದ ಇಂದ್ರಿಯ ವಿಷಯಗಳಲ್ಲಿ ಆಸಕ್ತನಾಗಿಯೂ ಅಮೇಧ್ಯದಲ್ಲಿರುವ ಕ್ರಿಮಿಯಂತೆ, ಅಶುಚಿ ವಸ್ತುಗಳಲ್ಲೇ ಹೆಚ್ಚಾದ ಆಶೆಯುಳ್ಳವನಾಗಿಯೂ ಮೃತ್ಯುವಿಗೆ ಹೆದರುವವನಾಗಿ ಆ ಮೃತ್ಯುವನ್ನು ಹಿಂಬಾಲಿಸಿ ಓಡುವವನಾಗಿಯೂ ತ್ಯಜಿಸಲ್ಪಡತಕ್ಕ ದುಃಖವುಳ್ಳವನಾಗಿ ಆ ದುಃಖವನ್ನು ಸಂಪಾದಿಸುವವನಾಗಿಯೂ ವಿಪರೀತವಾದ ಬುದ್ಧಿಯುಳ್ಳವನಾಗಿಯೂ ಆರ್ತಧ್ಯಾನದಿಂದಲೂ ರೌದ್ರಧ್ಯಾನದಿಂದಲೂ ಯುಕ್ತವಾದ ಚಿತ್ತವುಳ್ಳವನಾಗಿಯೂ ವಿಶ್ರಾಂತಿಯಿಲ್ಲದವನಾಗಿಯೂ ಪಾಪದ ಪರಿಪಾಕದಿಂದ ಖೇದಪಡುವವನಾಗಿಯೂ ಭವದಲ್ಲಿ ತಿರುಗುತ್ತಾನೆ. ದೃಢವಾಗಿ ಬೆಳೆದಿರುವುದೂ ಅಭೀಷ್ಟವಾದ ಪ್ರಯೋಜನವನ್ನು ವಿಘಾತ ಮಾಡುವುದೂ ಆದ ಮೂಢತೆಯನ್ನು ಧಿಕ್ಕರಿಸು" ಈ ರೀತಿಯಾಗಿ ವೈರಾಗ್ಯ ಸಂಬಂಧದಿಂದ ಭೋಗವಸ್ತುಗಳಲ್ಲಿ ರಾಗಾದಿಗಳಿಂದ ದೂರನಾಗಿಯೂ ರಾಗರಹಿತರಾದ ಸಾರಸ್ವತಾದಿ ಸಕಲದೇವರ್ಕಳಿಂದ ಪೂಜಿತನಾಗಿಯೂ ಕ್ಷಯೋಪಶಮದಿಂದ ಪ್ರಾಪ್ತವಾದ ಪ್ರಶಸ್ತ ಸಂಜ್ವಲನಕರ್ಮದ ಉದಯವುಳ್ಳವನಾಗಿಯೂ ರತ್ನತ್ರಯಪ್ರಾಪ್ತಿಯುಳ್ಳವನಾಗಿಯೂ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕಸಹಿತವಾಗಿ ಸುಪ್ರಭನೆಂಬ ಪುತ್ರನನ್ನಿರಿಸಿ ದೇವರ್ಕಳಿಂದ ಪರಿನಿಷ್ಕ್ರಮಣಕಲ್ಯಾಣಪೂಜೆಯನ್ನು ಹೊಂದಿದವನಾಗಿಯೂ

ಮನೋಹರವಾದ ಉತ್ತರಕುರುವೆಂಬ ಯಾನವನ್ನು– ಪಲ್ಲಕ್ಕಿಯನ್ನೇರಿ ಚಿತ್ರ ವನೋದ್ಯಾನಕ್ಕೆ ಹೋಗಿ ಆರು ಉಪವಾಸಗಳನ್ನು ಮಾಡಿದವನಾಗಿಯೂ ಆಷಾಢ ಮಾಸದ ಕೃಷ್ಣಪಕ್ಷದ ದಶಮೀದಿನದಲ್ಲಿ ಅಶ್ವಿನೀನಕ್ಷತ್ರದಲ್ಲಿ ಸಾಯಂಕಾಲದಲ್ಲಿ ಸಾವಿರಮಂದಿ ದೊರೆಗಳೊಡನೆ ಸಂಯಮವನ್ನೂ ಆ ಸಂಯಮದಿಂದ ಪಡೆಯ ಲ್ಪಡತಕ್ಕ ನಾಲ್ಕನೆಯದಾದ ಉತ್ತಮಜ್ಞಾನವನ್ನೂ ಪಡೆದನು.

**ಭೋಕ್ತುಂ ವೀರಪುರಂ ತಸ್ಮೈ ದತ್ತೋ ಗತವತೇ ನೃಪಃ ।**
**ಸುವರ್ಣವರ್ಣೋ ದತ್ವಾನ್ನಮವಾಪಾಶ್ಚರ್ಯಪಂಚಕಮ್ ॥ ೫೬ ॥**

ಆಹಾರಕ್ಕೋಸ್ಕರ ವೀರಪುರಕ್ಕೆ ಹೋದ ಆ ಸ್ವಾಮಿಗೆ ಸುವರ್ಣವರ್ಣವುಳ್ಳ ದತ್ತರಾಜನು ಆಹಾರವನ್ನು ಕೊಟ್ಟು ಪಂಚಾಶ್ಚರ್ಯವನ್ನು ಪಡೆದನು.

**ಛಾದ್ಮಸ್ಥ್ಯೇನ ತತಃ ಕಾಲೇ ಪ್ರಯಾತೇ ನವವತ್ಸರೇ ।**
**ನಿಜದೀಕ್ಷಾವನೇ ರಮ್ಯೇ ಮೂಲೇ ವಕುಲಭೂರುಹಃ ॥ ೫೭ ॥**

**ತಸ್ಯ ಷಷ್ಠೋಪವಾಸಸ್ಯ ನಕ್ಷತ್ರೇಶ್ವಭಿಧಾನಕೇ ।**
**ಮಾರ್ಗಶೀರ್ಷೇ ಶುಭೇ ಪಕ್ಷೇ ದಿನಾಂತೇ ಕೇವಲಂ ವಿಭೋಃ ॥ ೫೮ ॥**

**ದಿನೇ ತೃತೀಯನಂದಾಯಾಮಭೂದಖಿಲಗೋಚರಮ್ ।**
**ನಾಕನಾಯಕಸಂಚಾರ್ಯತುರ್ಯಕಲ್ಯಾಣಭಾಗಿನಃ ॥ ೫೯ ॥**

ಬಳಿಕ ಛದ್ಮಸ್ಥಾವಸ್ಥೆಯಿಂದ ಒಂಬತ್ತು ವರ್ಷಕಾಲವು ಕಳೆಯುತ್ತಿರಲು ತಮ್ಮ ದೀಕ್ಷಾವನದಲ್ಲಿ ರಮಣೀಯವಾದ ಸುರಗಿಯ ಗಿಡದ ಬುಡದಲ್ಲಿ ಆರು ಉಪವಾಸ ಗಳುಳ್ಳವನೂ ದೇವೇಂದ್ರನಿಂದ ಆಚರಿಸಲ್ಪಡತಕ್ಕ ನಾಲ್ಕನೆಯ ಕಲ್ಯಾಣಭಾಗಿಯೂ ಆದ ಆ ಸ್ವಾಮಿಗೆ ಮಾರ್ಗಶಿರಮಾಸದ ಶುಕ್ಲಪಕ್ಷದ ತೃತೀಯನಂದಾತಿಥಿಯ ದಿನದಲ್ಲಿ ಬೆಳಗಿನ ಜಾವದಲ್ಲಿ ಸಕಲವಿಷಯಗಳನ್ನು ತಿಳಿಯುವ ಕೇವಲಜ್ಞಾನ ವುಂಟಾಯಿತು.

**ಸುಪ್ರಭಾರ್ಯಾದಯಃ ಸಪ್ತದಶಾಸನ್ ಗಣನಾಯಕಾಃ ।**
**ಚತುಃಶತಾನಿ ಪಂಚಾಶತ್ಸರ್ವಪೂರ್ವಧರಾ ಮತಾಃ ॥ ೬೦ ॥**

ಆ ಸ್ವಾಮಿಗೆ ಸುಪ್ರಭಾರ್ಯನೇ ಮೊದಲಾದ ಹದಿನೇಳುಮಂದಿ ಗಣಧರ ರಿದ್ದರು. ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಜ್ಞರಾದ ಮುನಿಪುಂಗವರು ನಾಲ್ಕು ನೂರೈವತ್ತು ಮಂದಿಗಳಿದ್ದರು.

**ಶಿಕ್ಷಕಾಃ ಷಟ್ಛತದ್ವಾದಶಸಹಸ್ರಾಣಿ ಸದ್ವ್ರತಾಃ ।**
**ತ್ರಿಜ್ಞಾನಧಾರಿಣಾಂ ಸಂಖ್ಯಾ ಸಹಸ್ರಂ ಷಟ್ಛತಾದಿಕಮ್ ॥ ೬೧ ॥**

ಶ್ರೇಷ್ಠವಾದ ವ್ರತವುಳ್ಳ ಶಿಕ್ಷಕಮುನಿಗಳು ಹನ್ನೆರಡುಸಾವಿರದ ಆರುನೂರು ಮಂದಿಗಳಿದ್ದರು. ಮತಿಶ್ರುತಾವಧಿಜ್ಞಾನಧಾರಿಗಳಾದ ಮುನಿಗಳ ಸಂಖ್ಯೆಯು ಸಾವಿರದ ಆರುನೂರು.

**ತಾವಂತಃ ಪಂಚಮಜ್ಞಾನಾ ಮುನಯೋ ವಿಕ್ರಿಯರ್ದ್ಧಿಕಾಃ ।**
**ಸರ್ವೇ ಸಾರ್ಧಂ ಸಹಸ್ರಂ ತು ಮನಃಪರ್ಯಯಬೋಧನಾಃ ॥ ೬೨ ॥**

**ಶೂನ್ಯಪಂಚದ್ವಿಕೈಕೋಕ್ತಾಸ್ತ್ವಕ್ತಸಂಗಾಃ ಪ್ರಕೀರ್ತಿತಾಃ ।**
**ಸಹಸ್ರಂ ವಾದಿನಾಂ ಸಂಖ್ಯಾ ತೇ ಸರ್ವೇಽಪಿ ಸಮುಚ್ಚಿತಾಃ ॥ ೬೩ ॥**

**ವಿಂಶತಿಃ ಸ್ಯುಃ ಸಹಸ್ರಾಣಿ ಮಂಗಿನೀಪ್ರಮುಖಾರ್ಯಿಕಾಃ ।**
**ಚತ್ವಾರಿಂಶತ್ಸಹಸ್ರಾಣಿ ತದಷ್ಟಾಂಶಾಧಿಕಾ ಮತಾಃ ॥ ೬೪ ॥**

ಸಾವಿರದ ಆರುನೂರು ಮಂದಿಗಳು ಕೇವಲಜ್ಞಾನಿಗಳಿದ್ದರು. ವಿಕ್ರಿಯರ್ದ್ಧಿ ಯುಳ್ಳ ಎಲ್ಲಾ ಮುನಿಗಳು ಸಾವಿರದೈದುನೂರು ಮಂದಿಗಳಿದ್ದರು. ಪರಿಗ್ರಹತ್ಯಾಗಿ ಗಳಾದ ಮನಃಪರ್ಯಯಜ್ಞಾನಿಗಳು ಸಾವಿರದಿನ್ನೂರೈವತ್ತು ಮಂದಿಗಳಿದ್ದರೆಂದು ಹೇಳಲ್ಪಟ್ಟಿದ್ದಾರೆ. ವಾದಿಗಳ ಸಂಖ್ಯೆಯು ಸಹಸ್ರವಾಗಿದ್ದಿತು. ಆ ಮುನಿಶ್ರೇಷ್ಠ ರೆಲ್ಲರೂ ಸೇರಿ ಇಪ್ಪತ್ತೈದುಸಾವಿರ ಮಂದಿಗಳಿದ್ದರು. ಮಂಗಿನಿಯೇ ಮೊದಲಾದ ಆರ್ಯಿಕೆಯರು ನಲ್ವತ್ತೈದುಸಾವಿರ ಮಂದಿಗಳಿದ್ದರು.

**ಶ್ರಾವಕಾ ಲಕ್ಷಮೇಕಂ ತು ತ್ರಿಗುಣಾಃ ಶ್ರಾವಿಕಾಸ್ತತಃ ।**
**ದೇವಾ ದೇವ್ಯೋಽಪ್ಯಸಂಖ್ಯಾತಾಸ್ತಿರ್ಯಂಚಃ ಸಂಖ್ಯಯಾ ಮಿತಾಃ ॥ ೬೫ ॥**

ಒಂದು ಲಕ್ಷ ಶ್ರಾವಕರಿದ್ದರು. ಮೂರು ಲಕ್ಷ ಶ್ರಾವಿಕೆಯರಿದ್ದರು. ದೇವರ್ಕಳೂ ದೇವಿಯರೂ ಅಸಂಖ್ಯಾತಮಂದಿಗಳಿದ್ದರು. ಸಂಖ್ಯೆಯಿಂದ ಪರಿಮಿತವಾದ ತಿರ್ಯ ಕ್ಪ್ರಾಣಿಗಳಿದ್ದುವು.

**ಏವಂ ದ್ವಾದಶಸಂಖ್ಯಾನಗಣೈರ್ನಮ್ಯೈರ್ನಮೀಶ್ವರಃ ।**
**ಸದ್ಧರ್ಮದೇಶನಂ ಕುರ್ವನ್ನಾರ್ಯಕ್ಷೇತ್ರಾಣಿ ಸರ್ವತಃ ॥ ೬೬ ॥**

**ವಿಹೃತ್ಯ ವಿಹೃತಿಂ ತ್ಯಕ್ತ್ವಾ ಮಾಸಂ ಸಮ್ಮೇದಪರ್ವತೇ ।**
**ಸಹಸ್ರಮುನಿಭಿಃ ಸಾರ್ಧಂ ಪ್ರತಿಮಾಯೋಗಮಾಸ್ಥಿತಃ ॥ ೬೭ ॥**

**ವೈಶಾಖಮಾಸಿ ಕೃಷ್ಣಾಯಾಂ ಚತುರ್ದಶ್ಯಾಂ ನಿಶಾತ್ಯಯೇ ।**
**ಮುಕ್ತಿಮಶ್ವಾಹ್ವನಕ್ಷತ್ರೇ ನಮಿತೀರ್ಥಕರೋಗಮತ್ ॥ ೬೮ ॥**

ಈ ರೀತಿಯಾಗಿ ನಮ್ರಗಳಾದ ದ್ವಾದಶಗಣಗಳೊಡನೆ ನಮೀಶ್ವರರು ಆರ್ಯ ಕ್ಷೇತ್ರಗಳಲ್ಲೆಲ್ಲ ವಿಹರಿಸಿ ಸದ್ಧರ್ಮೋಪದೇಶವನ್ನು ಮಾಡುವವರಾಗಿ ವಿಹಾರವನ್ನು ತ್ಯಜಿಸಿ ಸಮ್ಮೇದಪರ್ವತದಲ್ಲಿ ಸಹಸ್ರಮುನಿಗಳೊಡನೆ ಒಂದು ತಿಂಗಳವರೆಗೆ ಪ್ರತಿಮಾಯೋಗದಲ್ಲಿದ್ದ ಶ್ರೀ ನಮಿತೀರ್ಥಕರು ವೈಶಾಖಮಾಸದಲ್ಲಿ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಬೆಳಗಿನ ಜಾವದಲ್ಲಿ ಅಶ್ವಿನೀನಕ್ಷತ್ರದಲ್ಲಿ ಮುಕ್ತಿಯನ್ನು ಹೊಂದಿದರು.

**ಅಕುರ್ವನ್ ಪಂಚಮಂ ದೇವಾಃ ಕಲ್ಯಾಣಂ ಚಾಖಿಲೇಶಿನಃ ।**
**ಸ್ವಂ ಸ್ವಮೋಕಶ್ಚ ಸಂಪ್ರಾಪ್ತಪುಣ್ಯಪಣ್ಯಾಃ ಪ್ರಪೇದಿರೇ ॥ ೬೯ ॥**

ಇಂದ್ರಾದಿದೇವರ್ಕಳು ಸರ್ವಜ್ಞ–ನಮಿತೀರ್ಥೇಶ್ವರನ ಐದನೆಯ–ನಿರ್ವಾಣ ಕಲ್ಯಾಣವನ್ನು ಮಾಡಿದರು. ಪುಣ್ಯವೆಂಬ ಬೆಲೆಗೆ ಕೊಂಡ ವಸ್ತುವನ್ನು ಪಡೆದವರಾಗಿ ತಂತಮ್ಮ ನಿವಾಸವನ್ನೂ ಹೊಂದಿದರು–ಹೊರಟುಹೋದರು.

**ಕನತ್ಕನಕವಿಗ್ರಹೋ ವಿಹಿತವಿಗ್ರಹೋ ಘಾತಿಭಿಃ ।**
**ಸಹಾಹಿತಜಯೋ ಜಯೇತಿ ವಿನುತೋ ನತೈರ್ನಾಕಿಭಿಃ ॥**
**ಭಿಯಂ ಭವಭವಾಂ ಬಹುಂ ನಯತು ನಃ ಕ್ಷಯಂ ನಾಯಕೋ ।**
**ವಿನೇಯವಿದುಷಾಂ ಸ್ವಯಂ ವಿಹತವಿಗ್ರಹೋಂತೇ ನಮಿಃ ॥ ೭೦ ॥**

ಪ್ರಕಾಶಮಾನವಾದ ಸುವರ್ಣವರ್ಣದ ದೇಹವುಳ್ಳವನೂ ಘಾತಿಕರ್ಮಗಳೊಡನೆ ಕದನವನ್ನು ಮಾಡಿದವನೂ ಜಯವನ್ನು ಹೊಂದಿದವನೂ ನಮ್ರರಾದ ಸ್ವರ್ಗಿಕರಿಂದ ''ಜಯ'' ಎಂದು ಅಧಿಕವಾಗಿ ಸ್ತುತಿಸಲ್ಪಟ್ಟವನೂ ಕೊನೆಯಲ್ಲಿ ತಾನು ವಿಗ್ರಹ– ದೇಹವನ್ನು ನಾಶಮಾಡಿದವನೂ ಆದ ನಮಿನಾಯಕನು ವಿನೇಯಪ್ರಾಜ್ಞರಾದ ನಮ್ಮಗಳ ಭವಜನ್ಯವಾದ ಬಹುಭಯವನ್ನು ನಾಶಮಾಡಲಿ.

**ಕೌಶಾಂಬ್ಯಾಂ ಪ್ರಥಿತಸ್ತೃತೀಯಜನನೇ ಸಿದ್ಧಾರ್ಥನಾಮಾ ನೃಪಃ ।**
**ಕೃತ್ವಾ ತತ್ರ ತಪೋತಿಘೋರಮಭವತ್ಸುರ್ಯೋಽಧಿಪೋಽನುತ್ತರೇ ॥**
**ತಸ್ಮಾದೇತ್ಯ ಪುರೇ ಬಭೂವ ಮಿಥಿಲಾನಾಮ್ನೀಂದ್ರವಂದ್ಯೋ ನಮಿ- ।**
**ಸ್ತೀರ್ಥೇಶಸ್ತ್ರಿಜಗದ್ಧಿತಾರ್ಥವಚನೋ ವ್ಯಕ್ತೈಕವಿಂಶೋ ಜಿನಃ ॥ ೭೧ ॥**

ನಮಿನಾಥನು ಮೊದಲು ಕೌಶಾಂಬಿಯಲ್ಲಿ ಮೂರನೆಯ ಜನ್ಮದಲ್ಲಿ ಸಿದ್ಧಾರ್ಥ ನೆಂಬ ರಾಜನಾಗಿ ಪ್ರಸಿದ್ಧನಾದನು. ಅಲ್ಲಿ ಬಹುಘೋರತಪಸ್ಸನ್ನು ಮಾಡಿ ಸತ್ತು ಅಪರಾಜಿತವೆಂಬ ನಾಲ್ಕನೆಯದಾದ ಅನುತ್ತರವಿಮಾನದಲ್ಲಿ ಅಧಿಕನಾದ– ಅಹಮಿಂದ್ರ ದೇವನಾದನು. ಅಲ್ಲಿಂದ ಬಂದು ಮಿಥಿಲಾನಗರದಲ್ಲಿ ಇಂದ್ರ ವಂದ್ಯನೂ ಮೂರು ಲೋಕಗಳಿಗೆ ಹಿತವಾದ ಪ್ರಯೋಜನವನ್ನುಂಟುಮಾಡುವ ವಚನವುಳ್ಳವನೂ ವ್ಯಕ್ತನಾದ ಇಪ್ಪತ್ತೊಂದನೆಯ ತೀರ್ಥೇಶ್ವರನೂ ಆದ ನಮಿ ಜಿನನಾದನು.

**ನಮಿರ್ನಮಿತಸಾಮರಾಮರಪತಿಃ ಪತಚ್ಚಾಮರೋ ।**
**ಭ್ರಮದ್ಭ್ರಮರವಿಭ್ರಮಭ್ರಮಿತಪುಷ್ಪವೃಷ್ಟ್ಯುತ್ಕರಃ ॥**
**ಕರೋತು ಚರಣಾರವಿಂದಮಕರಂದಸಂಪಾಯಿನಾಂ ।**
**ವಿನೇಯಮಧುಪಾಯಿನಾಮವಿರತೋರುತೃಪ್ತಿಂ ಜಿನಃ ॥ ೭೨ ॥**

ಅಮರರು ಸಹಿತವಾಗಿ ನಮಸ್ಕರಿಸಿದ ದೇವೇಂದ್ರನುಳ್ಳವನೂ ಬೀಸಲ್ಪಡುವ ಚಾಮರಗಳುಳ್ಳವನೂ ಸುತ್ತುತ್ತಿರುವ ದುಂಬಿಗಳ ವಿನೋದಚೇಷ್ಟೆಯಿಂದ ಸುತ್ತ ಲ್ಪಟ್ಟ ಪುಷ್ಪವೃಷ್ಟಿಸಮೂಹವುಳ್ಳವನೂ ಆದ ನಮಿಜಿನನು ತನ್ನ ಚರಣಕಮಲದ ಮಕರಂದವನ್ನು ಚೆನ್ನಾಗಿ ಪಾನಮಾಡುವ ವಿನೇಯ–ಭವ್ಯಶಿಷ್ಯರೆಂಬ ದುಂಬಿಗಳಿಗೆ ಎಡೆಬಿಡದೆ ವಿಶೇಷವಾದ ತೃಪ್ತಿಯನ್ನುಂಟುಮಾಡಲಿ.

**ಜಗತ್ತ್ರಯಜಯೋತ್ಸಿಕ್ತಮೋಹಮಾಹಾತ್ಮ್ಯಮರ್ದನಾತ್ ।**
**ಏಕವಿಂಶೋ ಜಿನೋ ಲಬ್ಧಲಕ್ಷ್ಮೀರ್ಲಕ್ಷ್ಮೀಂ ದಧಾತು ನಃ ॥ ೭೩ ॥**

ಮೂರು ಲೋಕಗಳ ಜಯದಿಂದ ಗರ್ವಿತವಾದ ಮೋಹದ ಮಹಿಮೆಯನ್ನು ಮರ್ದಿಸಿರುವುದರಿಂದ ಪಡೆದ ಸಂಪತ್ತಿಯುಳ್ಳವನಾದ ಇಪ್ಪತ್ತೊಂದನೆಯ ಜಿನನು ನಮ್ಮಗಳಿಗೆ ಸಂಪತ್ತಿಯನ್ನು ಕೊಡಲಿ.

**ದ್ವೀಪೇಽಸ್ಮಿನ್ನುತ್ತರೇ ಭಾಗೇ ಮಹತ್ಯೈರಾವತಾಹ್ವಯೇ ।**
**ಲಕ್ಷ್ಮೀವಾನ್ ಶ್ರೀಪುರಾಧೀಶೋ ವಸುಂಧರಮಹೀಪತಿಃ ॥ ೭೪ ॥**

**ಪದ್ಮಾವತೀವಿಯೋಗೇನ ಭೃಶಂ ನಿರ್ವಿಣ್ಣಮಾನಸಃ ।**
**ವನೇ ಮನೋಹರೋದ್ಯಾನೇ ವರಧರ್ಮಾಖಿಲೇಕ್ಷಿಣಃ ॥ ೭೫ ॥**

**ನಿರ್ಣೀಯ ಧರ್ಮಸದ್ಭಾವಂ ತನಯೇ ವಿನಯಂಧರೇ ।**
**ನಿವೇಶಿತಾತ್ಮಭಾರಃ ಸನ್ ಬಹುಭಿರ್ಭೂಭುಜೈಃ ಸಮಮ್ ॥ ೭೬ ॥**

**ಸಂಯಮಂ ಸಮ್ಯಗಾದಾಯ ಚಾರಿತ್ರಂ ದುಶ್ಚರಂ ಚರನ್ ।**
**ಸ್ವಾರಾಧನಾವಿಧಾನೇನ ಮಹಾಶುಕ್ರೇ ಸುರೋಽಭವತ್ ॥ ೭೭ ॥**

ಈ ಜಂಬೂದ್ವೀಪದ ಉತ್ತರಭಾಗದಲ್ಲಿರುವ ದೊಡ್ಡದಾದ ಐರಾವತವೆಂಬ ಭೂಭಾಗದಲ್ಲಿ ಶ್ರೀಪುರಾಧಿಪತಿಯೂ ಸಂಪತ್ತಿಯುಳ್ಳವನೂ ಆದ ವಸುಂಧರನೆಂಬ ರಾಜನು ತನ್ನ ಪತ್ನಿಯಾದ ಪದ್ಮಾವತಿಯ ವಿಯೋಗದಿಂದ ಬಹಳವಾಗಿ ವಿರಕ್ತವಾದ ಚಿತ್ತವುಳ್ಳವನಾಗಿ ಮನೋಹರೋದ್ಯಾನವನದಲ್ಲಿ ವರಧರ್ಮನೆಂಬ ಸರ್ವದರ್ಶಿ–ಕೇವಲಿಯ ದೆಸೆಯಿಂದ ಧರ್ಮದ ಸದ್ಭಾವವನ್ನು ಕೇಳಿ ನಿರ್ಣಯಿಸಿ ವಿನಯಂಧರ ನೆಂಬ ಪುತ್ರನಲ್ಲಿ ತನ್ನ ರಾಜ್ಯಭಾರವನ್ನಿರಿಸಿದವನಾಗಿಯೂ ಅನೇಕ ರಾಜರುಗಳೊಡನೆ ಸಂಯಮ–ದೀಕ್ಷೆಯನ್ನು ತೆಗೆದುಕೊಂಡು ಆಚರಿಸುವುದಕ್ಕೆ ಕಷ್ಟವಾದ ಚಾರಿತ್ರ ವನ್ನು ಚೆನ್ನಾಗಿ ಆಚರಿಸುವವನಾಗಿಯೂ ಆತ್ಮಾರಾಧನೆಯ ವಿಧಾನದಿಂದ ಸತ್ತು ಮಹಾಶುಕ್ರವೆಂಬ ಹತ್ತನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

**ಷೋಡಶಾಬ್ಧ್ಯುಪಮಸ್ವಾಯುರ್ದಿವ್ಯಭೋಗಾನ್ ಸುಭುಜ್ಯ ಸಃ ।**
**ತತಃ ಪ್ರಚ್ಯುತ್ಯ ತತ್ತೀರ್ಥೇ ವತ್ಸಾಖ್ಯವಿಷಯೇಜನಿ ॥ ೭೮ ॥**

**ನೃಪಸ್ಯೇಕ್ಷ್ವಾಕುವಂಶಸ್ಯ ಕೌಶಾಂಬೀನಗರೇಶಿನಃ ।**
**ತನೂಜೋ ವಿಜಯಾಖ್ಯಸ್ಯ ಪ್ರಭಂಕರ್ಯಾಂ ಪ್ರಭಾಧಿಕಃ ॥ ೭೯ ॥**

**ಸರ್ವಲಕ್ಷಣಸಂಪೂರ್ಣೋ ಜಯಸೇನಸಮಾಹ್ವಯಃ ।**
**ತ್ರಿಸಹಸ್ರಶರಜ್ಜೀವೀ ಷಷ್ಟಿಹಸ್ತಸಮುಚ್ಛ್ರಿತಿಃ ॥ ೮೦ ॥**

**ತಪ ಚಾಮೀಕರಚ್ಛಾಯಃ ಸ ಚತುರ್ದಶರತ್ನಭಾಕ್ ।**
**ನಿಧಿಭಿರ್ನವಭಿಃ ಸೇವ್ಯೋ ಭೋಗೈರ್ದಶವಿಧೈಃ ಸುಖಮ್ ॥ ೮೧ ॥**

**ಚರಮೇಕಾದಶಶ್ಚಕ್ರಧರಃ ಕಾಲಮಜೀಗಮತ್ ।**
**ಅನ್ಯೇದ್ಯುಸ್ತುಂಗಸೌಧಾಗ್ರೇ ಸಸುತಾಂತಃಪುರಾವೃತಃ ॥ ೮೨ ॥**

**ಕುರ್ವನ್ಪರ್ವಶಶಾಂಕಾಭೋ ದಿಗಂತರವಿಲೋಕನಮ್ ।**
**ಉಲ್ಕಾಭಿಪತನಂ ವೀಕ್ಷ್ಯ ಸುನಿರ್ವೇಗಪರಾಯಣಃ ॥ ೮೩ ॥**

**ಉಚ್ಚೈಃ ಸ್ಥಿತಮಿದಂ ಪಶ್ಯ ಭಾಸ್ವರಂ ಪರ್ಯಯದ್ವಯಮ್ ।**
**ಪರಿತ್ಯಜ್ಯಾಶು ಸಂಪ್ರಾಪದಧೋಗತಿಮಪಪ್ರಭಮ್ ॥ ೮೪ ॥**

**ಉನ್ನತ್ಯಮೂರ್ಜಿತಂ ತೇಜೋ ಮಮೇತಿ ಮದಮಾವಹನ್ ।**
**ಅನಾಚರನ್ ಹಿತಂ ಮೂಢಃ ಪಾರಲೌಕಿಕಮಾತ್ಮನೇ ॥ ೮೫ ॥**

**ವಿಷಯೇಷು ವಿಷಕ್ತಃ ಸನ್ನಧ್ರುವೇಷ್ವವಿತರ್ಪಿಷು ।**
**ಪ್ರಯಾತಿ ಗತಿಮೇತಸ್ಯ ಪರೋಽಪ್ಯತ್ರ ಪ್ರಮಾದವಾನ್ ॥ ೮೬ ॥**

**ಇತ್ಯಾಕಲಯ್ಯ ಕಾಲಾದಿಲಬ್ಧ್ಯಾ ಚಕ್ರೇಡವಕ್ರಧೀಃ ।**
**ತ್ಯಕ್ತುಂ ಚಕ್ರಾದಿಸಾಮ್ರಾಜ್ಯಂ ಪರಿಚ್ಛೇದ್ಯೋಚ್ಛ್ರಿತೇಚ್ಛಯಾ ॥ ೮೭ ॥**

**ತುಕ್ಷು ರಾಜ್ಯಮನಿಚ್ಛತ್ಸು ಮಹೀಯಸ್ಸು ಕನೀಯಸೇ ।**
**ದತ್ವಾ ಪುತ್ರಾಯ ಸಾಮ್ರಾಜ್ಯಂ ವರದತ್ತಾಭಿಧಾಯಿನಃ ॥ ೮೮ ॥**

**ಕೇವಲಾವಗಮಾತ್ಪ್ರಾಪ್ಯ ಸಂಯಮಂ ಬಹುಭಿಃ ಸಮಮ್ ।**
**ಶ್ರುತಬುದ್ಧಿತಪೋವಿಕ್ರಿಯೌಷಧರ್ದ್ಧಿವಿಭೂಷಿತಃ ॥ ೮೯ ॥**

**ಚಾರಣತ್ವಮಪಿ ಪ್ರಾಪ್ಯ ಪ್ರಾಯೋಪಗಮನಂ ಶ್ರಿತಃ ।**
**ಸಮ್ಮೇದೇ ಚಾರಣೋತ್ತುಂಗಕೂಟೇ ಸ್ವಾರಾಧನಾವಿಧಿಃ ॥ ೯೦ ॥**

**ಜಯಂತೇಽನುತ್ತರೇ ಜಾತೋ ವಿಮಾನೇ ಲವಸತ್ತಮಃ ।**
**ಪೂರ್ಣ್ಯೋತ್ತಮಾನುಭಾಗೋತ್ಥಮನ್ವಭೂತ್ಸುಚಿರಂ ಸುಖಮ್ ॥ ೯೧ ॥**

ಹದಿನಾರು ಸಾಗರೋಪಮವರ್ಷಾಯುಷ್ಯವುಳ್ಳವನಾದ ಆ ದೇವನು ದಿವ್ಯ ಭೋಗಗಳನ್ನು ಚೆನ್ನಾಗಿ ಅನುಭವಿಸಿ ಆಯುಷ್ಯವು ತೀರಿದ ಮೇಲೆ ಅಲ್ಲಿಂದ ಚ್ಯುತನಾಗಿ ಆ ನಮಿತೀರ್ಥಂಕರರ ತೀರ್ಥಕಾಲದಲ್ಲಿ ವತ್ಸವೆಂಬ ದೇಶದಲ್ಲಿ ಕೌಶಾಂಬೀನಗರಾಧಿಪತಿಯೂ ಇಕ್ಷ್ವಾಕುವಂಶವುಳ್ಳವನೂ ಆದ ವಿಜಯನೆಂಬ ರಾಜನಿಗೆ ಪ್ರಭಂಕರೀದೇವಿಯಲ್ಲಿ ಅಧಿಕವಾದ ಪ್ರಭೆಯುಳ್ಳವನೂ ಸರ್ವಲಕ್ಷಣ ಸಂಪೂರ್ಣನೂ ಮೂರು ಸಹಸ್ರ ವರ್ಷಗಳವರೆಗೆ ಜೀವಿಸುವವನೂ ಅರುವತ್ತು ಹಸ್ತ ದೇಹೋನ್ನತಿಯುಳ್ಳವನೂ ಕಾಯಿಸಲ್ಪಟ್ಟ ಚಿನ್ನದ ಕಾಂತಿಯಂತೆ ಕಾಂತಿಯುಳ್ಳ ವನೂ ಆದ ಜಯಸೇನನೆಂಬ ಪುತ್ರನಾಗಿ ಜನಿಸಿದನು. ಹದಿನಾಲ್ಕು ರತ್ನಗಳನ್ನು ಪಡೆದಿರುವವನೂ ನವನಿಧಿಗಳಿಂದ ಸೇವಿಸಲ್ಪಡತಕ್ಕವನೂ ಹನ್ನೊಂದನೆಯ ಚಕ್ರವರ್ತಿಯೂ ಆದ ಆ ಜಯಸೇನನು ದಶವಿಧಭೋಗಗಳಿಂದ ಸುಖವಾಗಿ ಬಹು ಕಾಲವನ್ನು ಕಳೆದನು. ಮತ್ತೊಂದು ದಿವಸ ಉನ್ನತವಾದ ಅರಮನೆಯ ಮೇಲ್ಗಡೆ ಯಲ್ಲಿ ಮಕ್ಕಳಿಂದಲೂ ಅಂತಃಪುರಸ್ತ್ರೀಯರಿಂದಲೂ ಆವರಿಸಲ್ಪಟ್ಟವನೂ ಪೌರ್ಣಮಿಯ ಚಂದ್ರನಿಗೆ ಸಮಾನನೂ ದಿಕ್ಪ್ರದೇಶಗಳನ್ನು ನೋಡುವವನೂ ಉಲ್ಕಾ ಪಾತವನ್ನು ನೋಡಿ ಚೆನ್ನಾಗಿ ವೈರಾಗ್ಯಪರಾಯಣನೂ ಆಗಿ "ಎತ್ತರದಲ್ಲಿದ್ದುದೂ ಪ್ರಕಾಶಮಾನವೂ ಆದ ಇದನ್ನು ನೋಡು. ಉನ್ನತಸ್ಥಾನ ಮತ್ತು ಪ್ರಕಾಶ ರೂಪವಾದ ಎರಡು ಪರ್ಯಾಯಗಳನ್ನು ಪರಿತ್ಯಜಿಸಿ ಇದು ಶೀಘ್ರವಾಗಿ ಕಾಂತಿ ಹೀನವಾಗಿ ಅಧೋಗತಿಯನ್ನು ಹೊಂದಿತು. ನನಗೆ ಉನ್ನತಿಯೂ ಊರ್ಜಿತವಾದ ತೇಜಸ್ಸೂ ಇದೆಯೆಂದು ಅಹಂಕಾರವನ್ನು ಹೊಂದಿರುವವನೂ ಪ್ರಮಾದವುಳ್ಳ ವನೂ ಆದ ಬೇರೆ ಮೂಢನು ತನಗೆ ಪರಲೋಕಸಂಬಂಧವಾದ ಹಿತವನ್ನು ಆಚರಿಸ ದಿರುವವನಾಗಿ ಅಸ್ಥಿರವೂ ತೃಪ್ತಿಯನ್ನುಂಟುಮಾಡದಿರುವುವೂ ಆದ ವಿಷಯಗಳಲ್ಲಿ ಮಗ್ನನಾಗಿ ಈ ಲೋಕದಲ್ಲಿ ಈ ಉಲ್ಕದ ಗತಿಯನ್ನು ಹೊಂದುತ್ತಾನೆ" ಈ ರೀತಿಯಾಗಿ ಯೋಚಿಸಿ ಸರಳವಾದ ಬುದ್ಧಿಯುಳ್ಳ ಆ ಜಯಸೇನಚಕ್ರವರ್ತಿಯು ಕಾಲವೇ ಮೊದಲಾದ ಲಬ್ಧಿಯಿಂದ ಚಕ್ರಾದಿ ಸಾಮ್ರಾಜ್ಯವನ್ನು ತ್ಯಜಿಸುವುದ ಕ್ಕೋಸ್ಕರ ನಿಶ್ಚಯಿಸಿ ಉನ್ನತಿಯ ಇಚ್ಛೆಯಿಂದ ಹಿರಿಯಮಕ್ಕಳು ರಾಜ್ಯವನ್ನಿಚ್ಛಿಸ ದಿರುತ್ತಿರಲು, ಕಿರಿಯನಾದ ಪುತ್ರನಿಗೆ ಸಾಮ್ರಾಜ್ಯವನ್ನು ಕೊಟ್ಟು ವರದತ್ತನೆಂಬ ಕೇವಲಜ್ಞಾನಿಯಿಂದ ಅನೇಕರೊಡನೆ ಸಂಯಮವನ್ನು ಹೊಂದಿ ಶಾಸ್ತ್ರಜ್ಞಾನ,

ತಪಋದ್ಧಿ, ವಿಕ್ರಿಯರ್ದ್ಧಿ, ಔಷಧರ್ದ್ಧಿಗಳಿಂದ ವಿಭೂಷಿತನಾಗಿಯೂ ಆಕಾಶ ಚಾರಣತ್ವವನ್ನೂ ಪಡೆದು ಪ್ರಾಯೋಪಗಮನವನ್ನು ಹೊಂದಿದವನಾಗಿಯೂ ಸಮ್ಮೇದಪರ್ವತದಲ್ಲಿ ಚಾರಣೋತ್ತುಂಗಕೂಟದಲ್ಲಿ ಆತ್ಮಾರಾಧನಾವಿಧಿಯುಳ್ಳವನಾಗಿ ಸತ್ತು ಜಯಂತವೆಂಬ ಅನುತ್ತರವಿಮಾನದಲ್ಲಿ ಲವಸತ್ತಮನೆಂಬ ಅಹಮಿಂದ್ರ ದೇವನಾಗಿ ಹುಟ್ಟಿ ಉತ್ತಮಪುಣ್ಯದ ಅನುಭಾಗಬಂಧದಿಂದುಂಟಾದ ಸುಖವನ್ನು ಬಹುಕಾಲದವರೆಗೆ ಅನುಭವಿಸಿದನು.

**ವಸುಂಧರಮಹೀಪತಿಃ ಪ್ರಥಮಜನ್ಮನಿ ಪ್ರಾಪ್ತಸ- ।**
**ತ್ತಪಾಃ ಸಮುಜನಿಷ್ಟ ಷೋಡಶಸಮುದ್ರಮಿತ್ಯಾಯುಷಾ ॥**

**ಸುರೋಜನಿ ಜನೇಶ್ವರೋತ್ರ ಜಯಸೇನನಾಮಾ ತತೋ ।**
**ಬಭೂವ ಲವಸತ್ತಮಃ ಸುಖನಿಧಿರ್ಜಯಂತೇ ವಿಭುಃ ॥ ೯೨ ॥**

ಪ್ರಥಮಜನ್ಮದಲ್ಲಿ ವಸುಂಧರರಾಜನು ಶ್ರೇಷ್ಠವಾದ ತಪಸ್ಸನ್ನು ಹೊಂದಿದವನಾಗಿ ಹದಿನಾರು ಸಾಗರೋಪಮವರ್ಷಪರಿಮಿತವಾದ ಆಯುಷ್ಯದಿಂದ ಮಹಾಶುಕ್ರ ಸ್ವರ್ಗದಲ್ಲಿ ದೇವನಾಗಿ ಜನಿಸಿದನು. ಬಳಿಕ ಇಲ್ಲಿ ಜಯಸೇನನೆಂಬ ನರೇಶ್ವರನಾಗಿ ಜನಿಸಿದನು. ಆ ರಾಜನು ಜಯಂತವಿಮಾನದಲ್ಲಿ ಸುಖಕ್ಕೆ ನಿಧಿಯಾದ ಲವಸತ್ತಮನೆಂಬ ದೇವನಾದನು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ನಮಿತೀರ್ಥಕರ ಜಯಸೇನಚಕ್ರವರ್ತಿಪುರಾಣಂ ನಾಮೈಕಾನ್ನಸಪ್ತತಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ನಮಿತೀರ್ಥಕರ ಜಯಸೇನಚಕ್ರವರ್ತಿಪುರಾಣವೆಂಬ ಆರುವತ್ತೊಂಬತ್ತನೆಯ ಪರ್ವವು ಸಮಾಪ್ತವಾದುದು.

---

# ಅಥ ನೇಮಿತೀರ್ಥಕರಪುರಾಣಂ

**ಕ್ಷಾಂತ್ಯಾದಿದಶಧರ್ಮಾರಾಲಂಬನಂ ಯಮುದಾಹರನ್ ।**
**ಸಂತಃ ಸದ್ಧರ್ಮಚಕ್ರಸ್ಯ ಸ ನೇಮಿಃ ಶಂಕರೋಸ್ತು ನಃ ॥ ೧ ॥**

ಸತ್ಪುರುಷರು ಯಾವನನ್ನು ಕ್ಷಮೆಯೇ ಮೊದಲಾದ ದಶಧರ್ಮಗಳೆಂಬ ಚಕ್ರದ ಕಾಲುಗಳಿಗೆ ಆಶ್ರಯನನ್ನಾಗಿ ಉದಾಹರಿಸಿದರೋ ಸದ್ಧರ್ಮವೆಂಬ ಚಕ್ರಕ್ಕೆ ನೇಮಿಯಾಗಿರುವ (ಚಕ್ರದ ಕಣ್ಣಿನ ಬಳೆಯಾಗಿರುವ) ಆ ನೇಮಿಜಿನನು ನಮ್ಮಗಳಿಗೆ ಸುಖವನ್ನು ಮಾಡುವವನಾಗಿರಲಿ.

**ಸಂವೇಗಜನನಂ ಪುಣ್ಯಂ ಪುರಾಣಂ ಜಿನಚಕ್ರಿಣಾಮ್ ।**
**ಬಲಿನಾಂ ಚ ಶ್ರುತಜ್ಞಾನಮೇತದ್ವಂದೇ ತ್ರಿಶುದ್ಧಯೇ ॥ ೨ ॥**

ಜಿನರ ಚಕ್ರವರ್ತಿಗಳ ಮತ್ತು ಬಲಭದ್ರರ ಪುರಾಣವು ಧರ್ಮದಲ್ಲಿಯೂ ಅದರ ಫಲದಲ್ಲಿಯೂ ಪ್ರೀತಿರೂಪವಾದ ಸಂವೇಗವನ್ನುಂಟುಮಾಡುವುದೂ ಪುಣ್ಯಕರವೂ ಆಗಿರುತ್ತದೆ. ಮನೋವಾಕ್ಕಾಯಶುದ್ಧಿಗೋಸ್ಕರ ಈ ಶ್ರುತಜ್ಞಾನವನ್ನು ವಂದಿಸುತ್ತೇನೆ.

**ಪೂರ್ವಾನುಪೂರ್ವ್ಯಾ ವಕ್ಷ್ಯೇಹಂ ಕೃತಮಂಗಲಸತ್ಕ್ರಿಯಃ ।**
**ಪುರಾಣಂ ಹರಿವಂಶಾಖ್ಯಂ ಯಥಾವೃತ್ತಂ ಯಥಾಶ್ರುತಮ್ ॥ ೩ ॥**

ನಾನು ಮಂಗಲಸತ್ಕ್ರಿಯೆಯನ್ನು ಮಾಡಿದವನಾಗಿ ಹರಿವಂಶವೆಂಬ ಪುರಾಣವನ್ನು ಪೂರ್ವಪರಂಪರೆಯಿಂದ ನಡೆದ ಹಾಗೆ ಮತ್ತು ನಾನು ಕೇಳಿದ ಹಾಗೆ ಹೇಳುವೆನು.

**ಅಥ ಜಂಬೂಮತಿ ದ್ವೀಪೇ ವಿದೇಹೇಪರನಾಮನಿ ।**
**ಸೀತೋದೋದಕ್ತಟೇ ದೇಶೇ ಸುಗಂಧಿಲಸಮಾಹ್ವಯೇ ॥ ೪ ॥**

**ಪುರೇ ಸಿಂಹಪುರೇ ಖ್ಯಾತೋ ಭೂಪೋರ್ಹದ್ದಾಸಸಂಜ್ಞಕಃ ।**
**ದೇವ್ಯಸ್ಯ ಜಿನದತ್ತಾಖ್ಯಾ ತಯೋಃ ಪೂರ್ವಭವಾರ್ಜಿತಾತ್ ॥ ೫ ॥**

**ಪುಣ್ಯೋದಯಾತ್ಸಮುದ್ಭೂತಕಾಮಭೋಗೈಃ ಸುತೃಪ್ತಯೋಃ ।**
**ಕಾಲೇ ಗಚ್ಛತ್ಯಥಾನ್ಯೇದ್ಯುರರ್ಹತಾಂ ಪರಮೇಷ್ಠಿನಾಮ್ ॥ ೬ ॥**

**ಅಷ್ಟಾಹ್ನಿಕಮಹಾಪೂಜಾಂ ವಿಧಾಯ ನರಪಪ್ರಿಯಾ ।**
**ಕುಲಸ್ಯ ತಿಲಕಂ ಪುತ್ರಂ ಲಪ್ಸೀಯಾಹಮಿತಿ ಸ್ವಯಮ್ ॥ ೭ ॥**

**ಆಶಾಸ್ಯಾಸೌ ಸುಖಂ ಸುಪ್ತಾ ನಿಶಾಯಾಂ ಸುಪ್ರಸನ್ನಧೀಃ ।**
**ಸಿಂಹೇಭಾರ್ಕೇಂದುಪದ್ಮಾಭಿಷೇಕಾನ್ಯೈಕ್ಷಿಷ್ಟ ಸುವ್ರತಾ ॥ ೮ ॥**

ಬಳಿಕ ಜಂಬೂದ್ವೀಪದಲ್ಲಿ ಅಪರವಿದೇಹದಲ್ಲಿ ಸೀತೋದಾನದಿಯ ಉತ್ತರ ತೀರದಲ್ಲಿರುವ ಸುಗಂಧಿಲವೆಂಬ ದೇಶದಲ್ಲಿ ಸಿಂಹಪುರದಲ್ಲಿ ಅರ್ಹದ್ದಾಸನೆಂಬ ಪ್ರಖ್ಯಾತನಾದ ದೊರೆಯಿದ್ದನು. ಜಿನದತ್ತೆಯೆಂಬವಳು ಈ ಅರ್ಹದ್ದಾಸನ ಪತ್ನಿ. ಪೂರ್ವಭವಾರ್ಜಿತವಾದ ಪುಣ್ಯೋದಯದಿಂದುಂಟಾದ ಕಾಮಭೋಗಗಳಿಂದ ಚೆನ್ನಾಗಿ ತೃಪ್ತರಾದ ಆ ದಂಪತಿಗಳ ಕಾಲವು ಕಳೆಯುತ್ತಿರಲು ತರುವಾಯ ಮತ್ತೊಂದು ದಿವಸ ಆ ರಾಜಪತ್ನಿಯು ಅರ್ಹತ್ಪರಮೇಷ್ಠಿಗಳ ಅಷ್ಟಾಹ್ನಿಕ ಮಹಾಪೂಜೆಯನ್ನು ಮಾಡಿ "ವಂಶಕ್ಕೆ ತಿಲಕನಾದ ಪುತ್ರನನ್ನು ಪಡೆಯುವೆನು" ಎಂದು ತಾನು ಬಯಸಿ ಬಹು ಪ್ರಸನ್ನವಾದ ಬುದ್ಧಿಯುಳ್ಳವಳೂ ಶ್ರೇಷ್ಠವಾದ ವ್ರತವುಳ್ಳವಳೂ ಆದ ಈಕೆಯು ರಾತ್ರಿಯಲ್ಲಿ ಸುಖವಾಗಿ ಮಲಗಿದ್ದು ಸ್ವಪ್ನದಲ್ಲಿ ಸಿಂಹವನ್ನೂ ಆನೆಯನ್ನೂ ಸೂರ್ಯಚಂದ್ರರನ್ನೂ ಲಕ್ಷ್ಮಿಯ ಅಭಿಷೇಕವನ್ನೂ ಕಂಡಳು.

**ಸ್ವಪ್ನಾನಂತರಮೇವಾಸ್ಯಾ ಗರ್ಭೇ ಪ್ರಾದುರಭೂತ್ಕೃತೀ ।**
**ನವಮಾಸಾವಸಾನೇಸಾವಸೂತ ಸುತಮೂರ್ಜಿತಮ್ ॥ ೯ ॥**

ಸ್ವಪ್ನಾನಂತರದಲ್ಲೇ ಈಕೆಯ ಗರ್ಭದಲ್ಲಿ ಪುಣ್ಯಶಾಲಿಯು ಪ್ರಾದುರ್ಭವಿಸಿದನು. ಒಂಬತ್ತುತಿಂಗಳ ಕೊನೆಯಲ್ಲಿ ಈಕೆಯು ಉತ್ತಮಪುತ್ರನನ್ನು ಹಡೆದಳು.

**ತಜ್ಜನ್ಮನಃ ಪ್ರಭೃತ್ಯನ್ಯೈರಜಯ್ಯಸ್ತತ್ಪಿತಾಭವತ್ ।**
**ತತೋಪರಾಜಿತಾಖ್ಯಾನಮಕುರ್ವಂಸ್ತಸ್ಯ ಬಾಂಧವಾಃ ॥ ೧೦ ॥**

ಆ ಪುತ್ರನ ಜನ್ಮದಿಂದ ಮೊದಲುಗೊಂಡು ಅವನ ತಂದೆಯು ಬೇರೆಯವರಿಂದ ಜಯಿಸಲ್ಪಡದಿರುವವನಾದನು. ಆದುದರಿಂದ ಬಂಧುಗಳು ಆ ಮಗುವಿಗೆ ಅಪರಾಜಿತನೆಂದು ನಾಮಕರಣವನ್ನು ಮಾಡಿದರು.

**ರೂಪಾದಿಗುಣಸಂಪತ್ತ್ಯಾ ಸಾರ್ಧಂ ವೃದ್ಧಿಮಸಾವಗಾತ್ ।**
**ಆಯೌವನಂ ಮನೋಹಾರೀ ಸುರೇಂದ್ರೋ ವಾ ದಿವೌಕಸಾಮ್ ॥**

ಸ್ವರ್ಗಿಕರಿಗೆ ದೇವೇಂದ್ರನಂತೆ ಈ ಅಪರಾಜಿತನು ಯೌವನವನ್ನು ಹೊಂದುವವರೆಗೆ ಮನೋಹರನಾಗಿ ರೂಪಾದಿಗುಣಸಂಪತ್ತಿಯೊಡನೆ ವೃದ್ಧಿಯನ್ನು ಹೊಂದಿದನು.

**ತದಾ ಮನೋಹರೋದ್ಯಾನಗತಂ ವಿಮಲವಾಹನಮ್ ।**
**ತೀರ್ಥಕರ್ತಾರಮಾಕರ್ಣ್ಯ ವನಪಾಲಮುಖಾನ್ನೃಪಃ ॥ ೧೨ ॥**

**ಸ್ವಾಂತಃಪುರಪರೀವಾರಪರೀತೋ ಭಕ್ತಿಚೋದಿತಃ ।**
**ಗತ್ವಾ ಪ್ರದಕ್ಷಿಣೀಕೃತ್ಯ ಮುಹುರ್ಮುಕುಲಿತಾಂಜಲಿಃ ॥ ೧೩ ॥**

**ಪ್ರಪ್ರಣಮ್ಯ ಸಮಭ್ಯರ್ಚ್ಯ ಗಂಧಪುಷ್ಪಾಕ್ಷತಾದಿಭಿಃ ।**
**ಪೀತಧರ್ಮಾಮೃತಸ್ತಸ್ಮಾದಕಸ್ಮಾದ್ಭೋಗನಿಸ್ಪೃಹಃ ॥ ೧೪ ॥**

**ತುಜೇಪರಾಜಿತಾಖ್ಯಾಯ ದತ್ವಾ ಸಪ್ತಾಂಗಸಂಪದಮ್ ।**
**ತಪೋಗ್ರ್ಯಂ ಸಮುಪಾದತ್ತ ಪಂಚಭಿರ್ಭೂಭುಜೈಃ ಶತೈಃ ॥ ೧೫ ॥**

ಆಗ ಅರ್ಹದ್ದಾಸರಾಜನು ಮನೋಹರೋದ್ಯಾನವನ್ನು ಸೇರಿರುವ ವಿಮಲವಾಹನತೀರ್ಥಂಕರರನ್ನು ವನಪಾಲಕನ ಮುಖದಿಂದ ಕೇಳಿ ಭಕ್ತಿಯಿಂದ ಪ್ರೇರಿತನೂ ತನ್ನ ಅಂತಃಪುರ ಪರಿವಾರಗಳಿಂದ ಸುತ್ತಲ್ಪಟ್ಟವನೂ ಆಗಿ ಹೋಗಿ ಪ್ರದಕ್ಷಿಣೆಮಾಡಿ ಪುನಃ ಪುನಃ ಕೈಗಳನ್ನು ಜೋಡಿಸಿ ಚೆನ್ನಾಗಿ ನಮಸ್ಕರಿಸಿ ಗಂಧಪುಷ್ಪಾಕ್ಷತಾದಿಗಳಿಂದ ಚೆನ್ನಾಗಿ ಪೂಜಿಸಿ ಆ ವಿಮಲವಾಹನಜಿನರಿಂದ ಧರ್ಮಾಮೃತವನ್ನು ಪಾನಮಾಡಿ ಅಕಸ್ಮಾತ್ತಾಗಿ ಭೋಗಗಳಲ್ಲಿ ನಿಸ್ಪೃಹನಾಗಿ ಸಪ್ತಾಂಗಸಂಪತ್ತಿಯನ್ನು ಅಪರಾಜಿತನೆಂಬ ಪುತ್ರನಿಗಿತ್ತು ಐದುನೂರು ಮಂದಿ ದೊರೆಗಳೊಡನೆ ಶ್ರೇಷ್ಠವಾದ ತಪಸ್ಸನ್ನು ಗ್ರಹಣಮಾಡಿದನು.

**ಕುಮಾರೋಪಿ ಗೃಹೀತಾಣುವ್ರತಾದಿಃ ಶುದ್ಧದರ್ಶನಃ ।**
**ಪ್ರಾವಿಶಲ್ಲಕ್ಷಿತೋ ಲಕ್ಷ್ಮ್ಯಾ ಸಾಕ್ಷಾದಿವ ಪುರಂ ಹರಿಃ ॥ ೧೬ ॥**

ಅಪಾರಜಿತಕುಮಾರನೂ ಅಣುವ್ರತಾದಿಗಳನ್ನು ಗ್ರಹಣಮಾಡಿದವನೂ ಶುದ್ಧ ಸಮ್ಯಗ್ದರ್ಶನವುಳ್ಳವನೂ ಲಕ್ಷ್ಮಿಯಿಂದ ಕೂಡಿದವನೂ ಆಗಿ ಸಾಕ್ಷಾತ್ ದೇವೇಂದ್ರನಂತೆ ಪಟ್ಟಣವನ್ನು ಪ್ರವೇಶಿಸಿದನು.

ತಂತ್ರಾವಾಪಗತಾಂ ಚಿಂತಾಂ ನಿಧಾಯ ನಿಜಮಂತ್ರಿಷು ।
ಸಕ್ತಃ ಶಾಸ್ತ್ರೋಕ್ತಮಾರ್ಗೇಣ ಸದಾಸೌ ಧರ್ಮಕಾಮಯೋಃ ॥ ೧೭ ॥

ಕದಾಚಿನ್ನಿಜಪಿತ್ರಾಮಾ ಜಿನಂ ವಿಮಲವಾಹನಮ್ ।
ಮುಕ್ತ್ಯಾ ವಶೀಕೃತಂ ಶ್ರುತ್ವಾ ಗಂಧಮಾದನಪರ್ವತೇ ॥ ೧೮ ॥

ಅನಿರೀಕ್ಷ್ಯ ನ ಭೋಕ್ಷ್ಯೇಹಂ ಜಿನಂ ವಿಮಲವಾಹನಮ್ ।
ಇತಿ ಪ್ರತಿಜ್ಞಯಾಷ್ಟೋಪವಾಸ್ಯಾಸೀದಪರಾಜಿತಃ ॥ ೧೯ ॥

ಈ ಅಪರಾಜಿತನು ರಾಜತಂತ್ರಶಾಸ್ತ್ರಗತವಾದ ಚಿಂತೆಯನ್ನು ತನ್ನ ಮಂತ್ರಿಗಳಲ್ಲಿರಿಸಿ ತಾನು ಯಾವಾಗಲೂ ಶಾಸ್ತ್ರೋಕ್ತಮಾರ್ಗದಿಂದ ಧರ್ಮಕಾಮಗಳಲ್ಲಿ ಆಸಕ್ತನಾಗಿ ಒಂದಾನೊಂದು ಕಾಲದಲ್ಲಿ ಮುಕ್ತಿಯಿಂದ ವಶೀಕೃತನಾದ ವಿಮಲವಾಹನಜಿನನು ತನ್ನ ತಂದೆ-ಅರ್ಹದ್ದಾಸಮುನಿಯೊಡನೆ ಗಂಧಮಾದನಪರ್ವತದಲ್ಲಿ ಬಂದಿದ್ದಾನೆಂದು ಕೇಳಿ "ವಿಮಲವಾಹನಜಿನನನ್ನು ನೋಡದೆ ನಾನು ಭೋಜನಮಾಡುವುದಿಲ್ಲ" ಎಂಬ ಪ್ರತಿಜ್ಞೆಯಿಂದ ಎಂಟು ಉಪವಾಸಗಳುಳ್ಳವನಾದನು.

ತದಾ ಶಕ್ರಾಜ್ಞಯಾ ಯಕ್ಷಪತಿರ್ವಿಮಲವಾಹನಮ್ ।
ತಸ್ಯ ಸಂದರ್ಶಯಾಮಾಸ ಸಾಕ್ಷಾತ್ಕೃತ್ವಾ ಮಹಾಶುಚಃ ॥ ೨೦ ॥

ಆಗ ಇಂದ್ರನ ಆಜ್ಞೆಯಿಂದ ಯಕ್ಷೇಂದ್ರನು ಮಹಾಶೋಕವುಳ್ಳವನಾದ ಆ ಅಪರಾಜಿತನಿಗೆ ವಿಮಲವಾಹನ ಜಿನನನ್ನು ಸಾಕ್ಷಾತ್ಕರಿಸಿ ತೋರಿಸಿದನು.

ಜೈನಗೇಹೇ ಸಮಭ್ಯರ್ಚ್ಯ ತಂ ಸೋಪಿ ಕೃತವಂದನಃ ।
ಭುಙ್ಕ್ತೇ ಸ್ಮ ಸ್ನೇಹಶೋಕಾರ್ತಚೇತಸಾಂ ಕಾ ವಿಚಾರಣಾ ॥ ೨೧ ॥

ಜೈನಮಂದಿರದಲ್ಲಿ ಆ ವಿಮಲವಾಹನಜಿನನನ್ನು ಚೆನ್ನಾಗಿ ಪೂಜಿಸಿ ವಂದನೆಯನ್ನು ಮಾಡಿದವನಾಗಿ ಅಪರಾಜಿತನು ಊಟಮಾಡಿದನು. ಸ್ನೇಹದಿಂದಲೂ ಶೋಕದಿಂದಲೂ ಪೀಡಿತವಾದ ಚಿತ್ತವುಳ್ಳವರಿಗೆ, ಯಾವ ವಿಚಾರಣೆಯಿರುವುದು ?

ವಸಂತಸಮಯೇನ್ಯೇದ್ಯುರ್ನಂದೀಶ್ವರದಿನೇಷ್ವಸೌ ।
ಜಿನಚೈತ್ಯಾನಿ ಸಂಪೂಜ್ಯ ತತ್ಸಂಸ್ತವನಪೂರ್ವಕಮ್ ॥ ೨೨ ॥

ಪ್ರೀತಿಮತ್ಯಾದಿದೇವೀನಾಂ ಕುರ್ವನ್ ಧರ್ಮೋಪದೇಶನಮ್ ।
ಚಾರಣದ್ವಂದ್ವಮಾಯಾತಂ ದೃಷ್ಟ್ವಾಭ್ಯುತ್ಥಾನಪೂರ್ವಕಮ್ ॥ ೨೩ ॥

ಪ್ರಣಿಪತ್ಯ ತಯೋರ್ದೇವತಾಸ್ತವಾವಸಿತೌ ನೃಪಃ ।
ಸೋಪಚಾರಂ ಸಮಭ್ಯೇತ್ಯ ಶ್ರುತ್ವಾ ಧರ್ಮಮಭಾಷತ ॥ ೨೪ ॥

ಭಗವಂತಾವಹಂ ಪೂಜ್ಯೌ ಕ್ವಚಿತ್ಪ್ರಾಗ್ದೃಷ್ಟವಾನಿತಿ ।
ಜ್ಯೇಷ್ಠೋ ಮುನಿರುವಾಚೈವಂ ಸತ್ಯಮಾವಾಂ ತ್ವಯೇಕ್ಷಿತೌ ॥ ೨೫ ॥

ತ್ವದ್ದರ್ಶನಪ್ರದೇಶಂ ಚ ವಕ್ಷ್ಯಾಮಿ ಶೃಣು ಭೂಪತೇ ।
ಪುಷ್ಕರಾರ್ಧಾಪರಾದ್ರೀಂದ್ರಾಪರಭಾಗೇ ಮಹಾಸರಿತ್ ॥ ೨೬ ॥

ತಸ್ಯಾಶ್ಚಾಸ್ತ್ಯುತ್ತರೇ ಭಾಗೇ ಗಂಧಿಲೋ ವಿಷಯೋ ಮಹಾನ್ ।
ತತ್ಖಗಾದ್ರ್ಯುತ್ತರಶ್ರೇಣ್ಯಾಂ ಸೂರ್ಯಪ್ರಭಪುರಾಧಿಪಃ ॥ ೨೭ ॥

ರಾಜಾ ಸೂರ್ಯಪ್ರಭಸ್ತಸ್ಯ ಧಾರಿಣೀ ಪ್ರಾಣವಲ್ಲಭಾ ।
ತಯೋಶ್ಚಿಂತಾಗತಿರ್ಜ್ಯೇಷ್ಠಸ್ತನೂಜೋನುಮನೋಗತಿಃ ॥ ೨೮ ॥

ತತಶ್ಚಪಲಗತ್ಯಾಖ್ಯಸ್ತ್ರಿಭಿಸ್ತೈಸ್ತೌ ಮುದಂ ಗತೌ ।
ಚಿರಂ ಧರ್ಮಾರ್ಥಕಾಮೈರ್ವಾ ಕೇ ನ ತುಷ್ಯಂತಿ ಸತ್ಸುತೈಃ ॥ ೨೯ ॥

ಮತ್ತೊಂದು ದಿವಸ ಈ ಅಪರಾಜಿತನು ವಸಂತಋತುವಿನ ಸಮಯದಲ್ಲಿ ನಂದೀಶ್ವರಾಷ್ಟಾಹ್ನಿಕದಿನಗಳಲ್ಲಿ ಜಿನಬಿಂಬಗಳನ್ನು ಅವುಗಳ ಸ್ತುತಿಪೂರ್ವಕವಾಗಿ ಪೂಜಿಸಿ ಪ್ರೀತಿಮತಿಯೇ ಮೊದಲಾದ ಪತ್ನಿಯರಿಗೆ ಧರ್ಮೋಪದೇಶವನ್ನು ಮಾಡುವವನಾಗಿ, ಅಲ್ಲಿಗೆ ಬಂದ ಚಾರಣಮುನಿಯುಗ್ಮವನ್ನು ಕಂಡು ಮೊದಲು ಎದ್ದು ಇದಿರಾಗಿ ಹೋಗಿ ನಮಸ್ಕರಿಸಿ ಆ ಮುನಿಗಳ ದೇವತಾಸ್ತೋತ್ರವು ಪೂರ್ತಿಯಾದಮೇಲೆ ದೊರೆಯು ಉಪಚಾರಸಹಿತವಾಗಿ ಅವರುಗಳ ಸಮೀಪಕ್ಕೆಹೋಗಿ ಧರ್ಮಶ್ರವಣವನ್ನು ಮಾಡಿ "ಪೂಜ್ಯರಾದ ತಮ್ಮಗಳನ್ನು ನಾನು ಎಲ್ಲಿಯೋ ಮೊದಲು ನೋಡಿದ್ದೇನೆ" ಎಂದು ಮಾತನಾಡಿದನು. ಆಗ ಅವರಲ್ಲಿ ಜ್ಯೇಷ್ಠಮುನಿಯು "ದೊರೆಯೆ ! ನೀನು ನಮ್ಮಗಳನ್ನು ನೋಡಿರುತ್ತಿ. ನಿಜ. ನೀನು ನೋಡಿರುವ ಪ್ರದೇಶವನ್ನೂ ಹೇಳುವೆನು, ಕೇಳು. ಪುಷ್ಕರಾರ್ಧದ್ವೀಪದ ಪಶ್ಚಿಮದಿಕ್ಕಿನಲ್ಲಿರುವ ಮೇರುವಿನ ಪಶ್ಚಿಮವಿದೇಹದಲ್ಲಿ ಮಹಾನದಿಯಿರುತ್ತದೆ. ಆ ನದಿಯ ಉತ್ತರಭಾಗದಲ್ಲಿ ದೊಡ್ಡದಾದ ಗಂಧಿಲದೇಶವಿದೆ. ಅದರ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿ ಸೂರ್ಯಪ್ರಭಪುರಾಧಿಪತಿ ಸೂರ್ಯಪ್ರಭರಾಜ. ಅವನ ಪ್ರಾಣಪ್ರಿಯೆಯು ಧಾರಿಣಿ. ಆ ದಂಪತಿಗಳಿಗೆ ಚಿಂತಾಗತಿಯೆಂಬವನು ಜ್ಯೇಷ್ಠಪುತ್ರ. ಮನೋಗತಿಯೆಂಬವನು ಎರಡನೆಯ ಪುತ್ರ. ಬಳಿಕ ಚಪಲಗತಿಯೆಂಬವನು ಮೂರನೆಯ ಪುತ್ರ. ಧರ್ಮ ಅರ್ಥ ಕಾಮಪುರುಷಾರ್ಥಗಳಿಂದ ಸಂತೋಷಪಡುವಂತೆ ಆ ಮೂರು ಮಂದಿ ಪುತ್ರರಿಂದ ಆ ದಂಪತಿಗಳು ಬಹುಕಾಲದವರೆಗೆ ಸಂತೋಷವನ್ನು ಹೊಂದಿದರು. ಸತ್ಪುತ್ರರಿಂದ ಯಾರುತಾನೆ ಸಂತೋಷವನ್ನು ಹೊಂದುವುದಿಲ್ಲ ?

ತಸ್ಯಾಮೇವೋತ್ತರಶ್ರೇಣ್ಯಾಮರಿಂದಮಪುರೇಶ್ವರಾತ್ ।
ಅರಿಂಜಯಾಖ್ಯಾದಜಿತಸೇನಾಯಾಮುಭವತ್ಸುತಾ ॥ ೩೦ ॥

ಸತೀ ಪ್ರೀತಿಮತೀ ಮೇರುಗಿರೇಃ ಸಕಲಖೇಚರಾನ್ ।
ತ್ರಿಭ್ರಾಂತ್ಯಾ ಸಾಜಯಚ್ಚಿಂತಾಗತಿಂ ಮುಕ್ತ್ವಾ ಸ್ವವಿದ್ಯಯಾ ॥ ೩೧ ॥

ಅದೇ ಉತ್ತರಶ್ರೇಣಿಯಲ್ಲಿ ಅರಿಂದಮಪುರಾಧಿಪತಿಯಾದ ಅರಿಂಜಯನ ದೆಸೆಯಿಂದ ಅವನ ಪತ್ನಿಯಾದ ಅಜಿತಸೇನೆಯಲ್ಲಿ ಪ್ರೀತಿಮತಿಯೆಂಬ ಪುತ್ರಿಯು ಜನಿಸಿದಳು. ಸಾಧ್ವಿಯಾದ ಆಕೆಯು ಮೇರುಗಿರಿಯ ಮೂರು ಭ್ರಮಣದಿಂದ ಚಿಂತಾಗತಿಯನ್ನು ಬಿಟ್ಟು ಉಳಿದ ಎಲ್ಲಾ ಖೇಚರರನ್ನು ತನ್ನ ವಿದ್ಯೆಯಿಂದ ಜಯಿಸಿದಳು. ಮೇರುವಿಗೆ ಮೂರು ಸುತ್ತು ಆಕೆಯೊಡನೆ ಓಡಲಾರದೆ ಚಿಂತಾಗತಿಯ ಹೊರತು ಬೇರೆ ಖೇಚರರೆಲ್ಲರೂ ಸೋತುಹೋದರೆಂದು ಭಾವವು.

ಜಿತ್ವಾ ಚಿಂತಾಗತಿರ್ವೇಗಾತ್ತಾಂ ಪಶ್ಚಾದಿತಿ ಚಾಬ್ರವೀತ್ ।
ಸಂಭಾವಯ ಕನೀಯಾಂಸಂ ಮಮ ತ್ವಂ ರತ್ನಮಾಲಯಾ ॥ ೩೨ ॥

ಚಿಂತಾಗತಿಯು ವೇಗದಿಂದ ಆಕೆಯನ್ನು ಜಯಿಸಿ ಬಳಿಕ ಆಕೆಯನ್ನು ಕುರಿತು "ನೀನು ನನ್ನ ತಮ್ಮನನ್ನು ರತ್ನಮಾಲೆಯಿಂದ ಸಂಭಾವಿಸು-ವರಿಸು" ಎಂದು ಹೇಳಿದನು.

ಶ್ರುತತದ್ವಚನಾ ಸಾಹ ನಾಹಂ ಜಿತವತೋಪರೇ ।
ಮಾಲಾಮಿಮಾಂ ಕ್ಷಿಪಾಮೀತಿ ಸ ತಾಮಿತ್ಯಬ್ರವೀತ್ಪುನಃ ॥ ೩೩ ॥

ಗತಿಯುದ್ಧಂ ತ್ವಯಾ ಪೂರ್ವಮನುಜಾಭ್ಯಾಂ ಕೃತಂ ಮಮ ।
ಅಭಿಲಾಷಾತ್ತತಸ್ತ್ಯಾಜ್ಯಾ ತ್ವಂ ಮಯಾ ತದ್ವಚಃಶ್ರುತೇಃ ॥ ೩೪ ॥

ನಿರ್ವಿಣ್ಣಾ ಸಾ ನಿವೃತ್ತಾರ್ಯಿಕಾಭ್ಯಾಸೇಗಾತ್ತಪಃ ಪರಮ್ ।
ತದ್ವೀಕ್ಷ್ಯ ಬಹವಸ್ತತ್ರ ನಿರ್ವಿದ್ಯ ತಪಸಿ ಸ್ಥಿತಾಃ ॥ ೩೫ ॥

ಆ ಮಾತನ್ನು ಕೇಳಿದ ಆಕೆಯು "ನಾನು ನನ್ನನ್ನು ಜಯಿಸಿದವನಿಗಿಂತ ಬೇರೆಯವನಲ್ಲಿ ಈ ಮಾಲೆಯನ್ನು ಹಾಕುವುದಿಲ್ಲ" ಎಂದಳು. ಪುನಃ ಆ ಚಿಂತಾಗತಿಯು ಪ್ರೀತಿಮತಿಯನ್ನು ಕುರಿತು "ನೀನು ಮೊದಲು ನನ್ನ ತಮ್ಮಂದಿರೊಡನೆ ಗತಿಯುದ್ಧವನ್ನು ಮಾಡಿರುತ್ತಿ. ಆ ಅಭಿಲಾಷೆಯಿಂದ ನೀನು ನನಗೆ ತ್ಯಾಜ್ಯಳು" ಎಂದು ಹೇಳಿದನು. ಆ ಮಾತನ್ನು ಕೇಳಿದುದರಿಂದ ವಿರಕ್ತಳಾದ ಆಕೆಯು ನಿವೃತ್ತೆಯೆಂಬ ಆರ್ಯಿಕೆಯ ಬಳಿಯಲ್ಲಿ ಉತ್ಕೃಷ್ಟವಾದ ತಪಸ್ಸನ್ನು ಗ್ರಹಣಮಾಡಿದಳು. ಅದನ್ನು ನೋಡಿ ಅಲ್ಲಿ ಅನೇಕರು ವೈರಾಗ್ಯವನ್ನು ಹೊಂದಿ ತಪಸ್ವಿನಲ್ಲಿದ್ದರು.

**ಅನುಜಾಭ್ಯಾಂ ಸಮಂ ಚಿಂತಾಗತಿಶ್ಚಾಲೋಕ್ಯ ಸಾಹಸಮ್ ।**
**ಕನ್ಯಾಯಾ ಜಾತಸಂವೇಗೋ ಗುರುಂ ದಮವರಾಭಿಧಮ್ ॥ ೩೬ ॥**

**ಸಂಪ್ರಾಪ್ಯ ಸಂಯಮಂ ಪ್ರಾಪ್ಯ ಶುದ್ಧ್ಯಷ್ಟಕಮಧಿಷ್ಠಿತಃ ।**
**ಪ್ರಾಂತೇ ಸಾಮಾನಿಕಸ್ತುರ್ಯಕಲ್ಪೇಜಾಯತ ಸಾನುಜಃ ॥ ೩೭ ॥**

ಚಿಂತಾಗತಿಯೂ ತಮ್ಮಂದಿರೊಡನೆ ಆ ಕನ್ಯೆಯ ಸಾಹಸವನ್ನು ನೋಡಿ ಧರ್ಮದಲ್ಲಿಯೂ ಅದರ ಫಲದಲ್ಲಿಯೂ ಪ್ರೀತಿರೂಪವಾದ ಸಂವೇಗೋತ್ಪತ್ತಿಯುಳ್ಳವನಾಗಿ ದಮವರನೆಂಬ ಗುರುವನ್ನು ಕಂಡು ಸಂಯಮವನ್ನು ಗ್ರಹಣಮಾಡಿ ಅಷ್ಟಶುದ್ಧಿಗಳನ್ನು ಹೊಂದಿದವನಾಗಿ ಆಯುಷ್ಯಾವಸಾನದಲ್ಲಿ ಸತ್ತು ತಮ್ಮಂದಿರೊಡನೆ ನಾಲ್ಕನೆಯ ಕಲ್ಪದಲ್ಲಿ ಸಾಮಾನಿಕದೇವನಾಗಿ ಜನಿಸಿದನು.

**ತತ್ರ ಭೋಗಾನ್ಬಹೂನ್ ಭುಕ್ತ್ವಾ ಸಪ್ತಾಬ್ಧಿಪರಮಾಯುಷಃ ।**
**ತತಸ್ತಾವನುಜೌ ಜಂಬೂದ್ವೀಪಪೂರ್ವವಿದೇಹಗೇ ॥ ೩೮ ॥**

**ವಿಷಯೇ ಪುಷ್ಕಲಾವತ್ಯಾಂ ವಿಜಯಾರ್ಧೋತ್ತರೇ ತಟೇ ।**
**ರಾಜಾ ಗಗನಚಂದ್ರಾಖ್ಯಃ ಪುರೇ ಗಗನವಲ್ಲಭೇ ॥ ೩೯ ॥**

**ಸುತೋ ಗಗನಸುಂದರ್ಯಾಂ ತಸ್ಯಾಮಿತಗತಿಸ್ತತಃ ।**
**ಆವಾಮಮಿತತೇಜಾಶ್ಚ ಜಾತೌ ವಿದ್ಯಾತ್ರಯಾನ್ವಿತೌ ॥ ೪೦ ॥**

ಅಲ್ಲಿ ಏಳು ಸಾಗರೋಪಮವರ್ಷಪರಮಾಯುಷ್ಯವುಳ್ಳವರಾಗಿ ಅನೇಕ ಭೋಗಗಳನ್ನನುಭವಿಸಿ ಅಲ್ಲಿಂದ ಚ್ಯುತರಾದ ಆ ತಮ್ಮಂದಿರು ಜಂಬೂದ್ವೀಪದ ಪೂರ್ವವಿದೇಹದಲ್ಲಿರುವ ಪುಷ್ಕಲಾವತೀದೇಶದ ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಗಗನವಲ್ಲಭಪುರದ ಗಗನಚಂದ್ರನೆಂಬ ರಾಜನ ಪತ್ನಿಯಾದ ಗಗನಸುಂದರಿಯಲ್ಲಿ ಅಮಿತಗತಿಯೆಂಬ ಪುತ್ರನೂ ಬಳಿಕ ಅಮಿತತೇಜನೆಂಬ ಪುತ್ರನೂ ಆಗಿ ನಾವುಗಳು ಆನ್ವೀಕ್ಷಿಕೀ ದಂಡನೀತಿ ತರ್ಕವಿದ್ಯೆಗಳೆಂಬ ವಿದ್ಯಾತ್ರಯದಿಂದ ಕೂಡಿದವರಾಗಿ ಜನಿಸಿದೆವು.

**ಅನ್ಯೇದ್ಯುಃ ಪುಂಡರೀಕಿಣ್ಯಾಮಾವಾಭ್ಯಾಂ ಜನ್ಮ ಪೂರ್ವಜಮ್ ।**
**ಆವಯೋಃ ಪರಿಪೃಷ್ಟೇನ ಜನ್ಮತ್ರಿತಯವೃತ್ತಕಮ್ ॥ ೪೧ ॥**

**ಸರ್ವಂ ಸ್ವಯಂಪ್ರಭಾಖ್ಯೇನ ತೀರ್ಥನಾಥೇನ ಭಾಷಿತಮ್ ।**
**ತತೋಽಸ್ಮದಗ್ರಜಃ ಕ್ವಾದ್ಯೇತ್ಯಾವಯೋರನುಯೋಜನೇ ॥ ೪೨ ॥**

**ಭೂಮೌ ಸಿಂಹಪುರೇ ಜಾತೋ ರಾಜತೇ ಸೋಽಪರಾಜಿತಃ ।**
**ನಾಮ್ನಾ ರಾಜ್ಯಂ ಸಮಾಸಾದ್ಯ ಸ್ವಯಮಿತ್ಯಾರ್ಹತೋದಿತಾತ್ ॥ ೪೩ ॥**

**ತತ್ಸಮೀಪೇ ಸಮಾದಾಯ ಸಂಯಮಂ ತ್ವಾಂ ವಿಲೋಕಿತುಮ್ ।**
**ತ್ವಯಾ ಜನ್ಮಾಂತರಸ್ನೇಹಾದಿಹಾಗಮನಮಾವಯೋಃ ॥ ೪೪ ॥**

**ಪುಣ್ಯೋದಯೋದಿತಾನ್ ಭೋಗಾನ್ಸರ್ವಾನ್ ಭೂಯೋತ್ರ ಭುಕ್ತವಾನ್ ।**
**ಮಾಸಪ್ರಮಾಣಜೀವೀ ತ್ವಂ ಹಿತಮದ್ಯ ಸ್ಮರಾಶ್ವಿತಿ ॥ ೪೫ ॥**

**ಶ್ರುತ್ವಾ ತದ್ವಚನಂ ರಾಜಾ ವಂದಿತ್ವಾ ತೌ ಮುನೀಶ್ವರೌ ।**
**ಯುವಾಂ ಜನ್ಮಾಂತರಸ್ನೇಹಾನ್ನಿಸ್ಸಂಗತ್ವಂ ಗತಾವಪಿ ॥ ೪೬ ॥**

**ಉಪಕಾರಂ ಮಹಾಂತಂ ಮೇ ಕೃತವಂತೌ ಹಿತೈಷಿಣೌ ।**
**ಇತ್ಯಾಖ್ಯತ್ಸ ತತಃ ಪ್ರೀತೌ ತೌ ನಿಜಸ್ಥಾನಮೀಯತುಃ ॥ ೪೭ ॥**

ಮತ್ತೊಂದು ದಿವಸ ನಾವುಗಳು ಪುಂಡರೀಕಿಣಿಯಲ್ಲಿ ಸ್ವಯಂಪ್ರಭ ತೀರ್ಥಂಕರರಲ್ಲಿ ನಮ್ಮಗಳ ಪೂರ್ವಜನ್ಮವನ್ನು ಪ್ರಶ್ನೆಮಾಡಿದೆವು. ಅವರು ಮೂರು ಜನ್ಮಗಳ ಸಮಾಚಾರವೆಲ್ಲವನ್ನೂ ಹೇಳಿದರು. ಬಳಿಕ 'ಈಗ ನಮ್ಮ ಅಣ್ಣನು ಎಲ್ಲಿರುತ್ತಾನೆ ?' ಎಂದು ನಮ್ಮಗಳ ಪ್ರಶ್ನೆಯುಂಟಾಗುತ್ತಿರಲು 'ಅವನು ಭೂಮಿಯಲ್ಲಿ ಸಿಂಹಪುರದಲ್ಲಿ ಹುಟ್ಟಿದ್ದಾನೆ. ತಾನು ರಾಜ್ಯವನ್ನು ಹೊಂದಿ ಅಪರಾಜಿತನೆಂಬ ಹೆಸರಿನಿಂದ ಶೋಭಿಸುತ್ತಾನೆ' ಎಂಬೀ ಆರ್ಹತವಚನದಿಂದ ತಿಳಿದು ಅವರ ಸಮೀಪದಲ್ಲಿ ನಾವುಗಳು ಸಂಯಮ–ದೀಕ್ಷೆಯನ್ನು ತೆಗೆದುಕೊಂಡು ನಿನ್ನೊಡನೆ ಜನ್ಮಾಂತರ ಸ್ನೇಹದಿಂದ ನಿನ್ನನ್ನು ನೋಡುವುದಕ್ಕೋಸ್ಕರ ಇಲ್ಲಿ ನಮ್ಮಗಳ ಆಗಮನ. ನೀನು ಪುಣ್ಯೋದಯದಿಂದುಂಟಾದ ಎಲ್ಲ ಭೋಗಗಳನ್ನು ಪುನಃ ಪುನಃ ಭೋಗಿಸಿದೆ. ಇನ್ನೊಂದು ತಿಂಗಳ ಆಯುಷ್ಯವುಳ್ಳವನಾಗಿರುತ್ತಿ. ಈಗ ಶೀಘ್ರವಾಗಿ ಆತ್ಮಹಿತವನ್ನು ಸ್ಮರಿಸು'' ಈ ರೀತಿಯಾಗಿ ಆ ಚಾರಣಮುನಿವಚನವನ್ನು ಕೇಳಿ ಆ ರಾಜನು ಆ ಮುನೀಶ್ವರರನ್ನು ವಂದಿಸಿ ''ನೀವುಗಳು ನಿಸ್ಸಂಗತ್ವವನ್ನು ಹೊಂದಿದವರಾಗಿದ್ದರೂ ಜನ್ಮಾಂತರಸ್ನೇಹದಿಂದ ನನಗೆ ಹಿತೈಷಿಗಳಾಗಿ ಮಹೋಪಕಾರವನ್ನು ಮಾಡಿದಿರಿ'' ಎಂದು ಹೇಳಿದನು. ಬಳಿಕ ಪ್ರೀತಿಯುಳ್ಳವರಾದ ಆ ಚಾರಣಮುನಿಗಳು ತಮ್ಮ ಸ್ಥಾನವನ್ನು ಸೇರಿದರು.

**ತದೈವ ಸ ಮಹೀಶೋಽಪಿ ದತ್ವಾ ರಾಜ್ಯಂ ಯಥಾವಿಧಿ ।**
**ಪ್ರೀತಿಂಕರಕುಮಾರಾಯ ಕೃತ್ವಾಷ್ಟಾಹ್ನಿಕಪೂಜನಮ್ ॥ ೪೮ ॥**

**ಬಂಧೂನ್ವಿಸೃಜ್ಯ ಪ್ರಾಯೋಪಗಮಸನ್ನ್ಯಾಸಮುತ್ತಮಮ್ ।**
**ವಿಧಾಯ ಷೋಡಶೇ ಕಲ್ಪೇ ದ್ವಾವಿಂಶತ್ಯಬ್ಧಿಜೀವಿತಃ ॥ ೪೯ ॥**

**ಸಾತಂಕರವಿಮಾನೇಭೂದಚ್ಯುತೇಂದ್ರೋ ಮಹರ್ದ್ಧಿಕಃ ।**
**ದಿವ್ಯಭೋಗಾಂಶ್ಚಿರಂ ಭುಕ್ತ್ವಾ ತತಃ ಪ್ರಚ್ಯುತ್ಯ ಪುಣ್ಯಭಾಕ್ ॥ ೫೦ ॥**

**ದ್ವೀಪೇಸ್ಮಿನ್ ಭಾರತೇ ಕ್ಷೇತ್ರೇ ವಿಷಯೇ ಕುರುಜಾಂಗಲೇ ।**
**ಹಾಸ್ತಿನಾಖ್ಯಪುರಾಧೀಶಃ ಶ್ರೀಚಂದ್ರಸ್ಯ ಮಹೀಪತೇಃ ॥ ೫೧ ॥**

**ಶ್ರೀಮತ್ಯಾಃ ಸುಪ್ರತಿಷ್ಠಾಖ್ಯಃ ಸುಪ್ರತಿಷ್ಠಃ ಸುತೋಽಭವತ್ ।**
**ಆಪೂರ್ಣಯೌವನಸ್ಯಾಸ್ಯ ಸುನಂದಾಸೀತ್ಸುಖಪ್ರದಾ ॥ ೫೨ ॥**

ಆಗಲೇ ಆ ಅಪರಾಜಿತಮಹಾರಾಜನೂ ವಿಧಿಪ್ರಕಾರವಾಗಿ ರಾಜ್ಯವನ್ನು ಪ್ರೀತಿಂಕರಕುಮಾರನಿಗೆ ಕೊಟ್ಟು ಅಷ್ಟಾಹ್ನಿಕಪೂಜೆಯನ್ನು ಮಾಡಿ ಬಂಧುಗಳನ್ನು ಬಿಟ್ಟು ಉತ್ತಮವಾದ ಪ್ರಾಯೋಪಗಮನವೆಂಬ ಸನ್ನ್ಯಾಸವನ್ನು ಮಾಡಿ ಸತ್ತು ಹದಿನಾರನೆಯ ಕಲ್ಪದಲ್ಲಿ ಸಾತಂಕರವಿಮಾನದಲ್ಲಿ ಇಪ್ಪತ್ತೆರಡು ಸಾಗರೋಪಮ ವರ್ಷಾಯುಷ್ಯವುಳ್ಳ ಅಚ್ಯುತೇಂದ್ರಮಹರ್ದ್ಧಿಕದೇವನಾದನು. ಅಲ್ಲಿ ಬಹುಕಾಲದ ವರೆಗೆ ಆ ಪುಣ್ಯಶಾಲಿಯು ದಿವ್ಯಭೋಗಗಳನ್ನನುಭವಿಸಿ ಅಲ್ಲಿಂದ ಚ್ಯುತನಾಗಿ ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕುರುಜಾಂಗಲದೇಶದಲ್ಲಿ ಹಸ್ತಿನಾಪುರದ ಶ್ರೀಚಂದ್ರರಾಜನಿಗೂ ಅವನ ಪತ್ನಿಯಾದ ಶ್ರೀಮತಿಗೂ ಉತ್ತಮಪ್ರತಿಷ್ಠೆಯುಳ್ಳ ಸುಪ್ರತಿಷ್ಠನೆಂಬ ಪುತ್ರನಾದನು. ಪರಿಪೂರ್ಣವಾದ ಯೌವನವುಳ್ಳ ಈ ಸುಪ್ರತಿಷ್ಠನಿಗೆ ಸುನಂದೆಯೆಂಬವಳು ಸುಖವನ್ನು ಕೊಡುವ – ಪತ್ನಿಯಾದಳು.

**ಸುತಂ ಯೋಗ್ಯತಮಂ ಮತ್ವಾ ಶ್ರೀಚಂದ್ರಧರಣೀಶ್ವರಃ ।**
**ದತ್ತರಾಜ್ಯೋಗ್ರಹೀದ್ದೀಕ್ಷಾಂ ಸುಮಂದಿರಯತಿಂ ಶ್ರಿತಃ ॥ ೫೩ ॥**

ಶ್ರೀಚಂದ್ರರಾಜನು ಪುತ್ರನನ್ನು ಬಹುಯೋಗ್ಯನನ್ನಾಗಿ ತಿಳಿದು ಅವನಿಗೆ ರಾಜ್ಯವನ್ನು ಕೊಟ್ಟು ತಾನು ಸುಮಂದರಯತಿಯನ್ನು ಹೊಂದಿದವನಾಗಿ ದೀಕ್ಷೆಯನ್ನು ತೆಗೆದುಕೊಂಡನು.

**ಸುಪ್ರತಿಷ್ಠೋಽಪಿ ತದ್ರಾಜ್ಯೇ ನಿಷ್ಕ್ರೋಪೇ ಸುಪ್ರತಿಷ್ಠಿತಃ ।**
**ಯಶೋಧರಮುನೇರ್ದಾನಾದವಾಪಾಶ್ಚರ್ಯಪಂಚಕಮ್ ॥ ೫೪ ॥**

ಸುಪ್ರತಿಷ್ಠನೂ ಕೋಪಾದಿ ದೋಷರಹಿತವಾದ ಆ ರಾಜ್ಯದಲ್ಲಿ ಚೆನ್ನಾಗಿ ಪ್ರತಿಷ್ಠಿತನಾಗಿ ಯಶೋಧರಮುನಿಗೆ ಕೊಟ್ಟ ಆಹಾರದಾನದಿಂದ ಪಂಚಾಶ್ಚರ್ಯವನ್ನು ಪಡೆದನು.

**ಅಂತಃಪುರಾನ್ವಿತೋಽನ್ಯೇದ್ಯುಃ ಶಶಾಂಕಕರನಿರ್ಮಲೇ ।**
**ರಮ್ಯೇ ಹರ್ಮ್ಯತಲೇ ಸ್ಥಿತ್ವಾ ಕುರ್ವನ್ದಿಗವಲೋಕನಮ್ ॥ ೫೫ ॥**

**ಉಲ್ಕಾಪತನಮಾಲೋಕ್ಯ ಭಂಗುರಂ ಭಾವಯನ್ ಜಗತ್ ।**
**ಸುದೃಷ್ಟೇರ್ಜ್ಯೇಷ್ಠಪುತ್ರಸ್ಯ ಕೃತ್ವಾ ರಾಜ್ಯಾಭಿಷೇಚನಮ್ ॥ ೫೬ ॥**

**ಸುಮಂದಿರಜಿನಾಭ್ಯಾಸೇ ಲಬ್ಧಬೋಧಿರದೀಕ್ಷತ ।**
**ಕ್ರಮೇಣೈಕಾದಶಾಂಗಾನಾಂ ಪಾರಗೋ ಭಾವನಾಪರಃ ॥ ೫೭ ॥**

**ಸಮ್ಯಕ್ತ್ವಾದಿಷು ಬಧ್ವಾಸೌ ತೀರ್ಥಕೃತ್ಕರ್ಮ ನಿರ್ಮಲಮ್ ।**
**ಸ್ವಾಯುರಂತೇ ಸಮಾಧಾಯ ಮಾಸಂ ಸನ್ನ್ಯಾಸಮಾಸ್ಥಿತಃ ॥ ೫೮ ॥**

**ಅನುತ್ತರೇ ಜಯಂತಾಖ್ಯೇ ಸಂಪ್ರಾಪದಹಮಿಂದ್ರತಾಮ್ ।**
**ತ್ರಯಸ್ತ್ರಿಂಶತ್ಸಮುದ್ರೋಪಮಾಯುರ್ಹಸ್ತತನೂಚ್ಛೃತಿಃ ॥ ೫೯ ॥**

**ಸಾರ್ಧಷೋಡಶಮಾಸಾಂತನಿಃಶ್ವಾಸೋಽಶ್ನನ್ನಿರಾಕುಲಃ ।**
**ತ್ರಯಸ್ತ್ರಿಂಶತ್ಸಹಸ್ರಾಬ್ದವ್ಯತೀತೌ ಭೋಗಸಂಪದಮ್ ॥ ೬೦ ॥**

**ಭುಂಜಾನೋ ನಿಷ್ಪ್ರವೀಚಾರಾಂ ಲೋಕನಾಲೀಗತಾವಧಿಃ ।**
**ಬಲದೀಪ್ತಿವಿಕಾರಾದಿಗುಣೈಸ್ತತ್ಕ್ಷೇತ್ರಮಾತ್ರಕಃ ॥ ೬೧ ॥**

ಮತ್ತೊಂದು ದಿವಸ ಚಂದ್ರನ ಕಿರಣದಂತೆ ನಿರ್ಮಲವೂ ರಮಣೀಯವೂ ಆದ ಅರಮನೆಯ–ಉಪ್ಪರಿಗೆಯಲ್ಲಿ ಅಂತಃಪುರಸಹಿತನಾಗಿದ್ದು ದಿಕ್ಕುಗಳ ಅವಲೋಕನವನ್ನು ಮಾಡುವವನಾಗಿ ಉಲ್ಕಾಪತನವನ್ನು ನೋಡಿ ಜಗತ್ತು ನಶ್ವರವಾದುದೆಂದು ಭಾವಿಸುವವನಾಗಿ ತನ್ನ ಜ್ಯೇಷ್ಠಪುತ್ರನಾದ ಸುದೃಷ್ಟಿಗೆ ರಾಜ್ಯಾಭಿಷೇಕವನ್ನು ಮಾಡಿ ಸುಮಂದರಜಿನರ ಬಳಿಯಲ್ಲಿ ರತ್ನತ್ರಯಪ್ರಾಪ್ತಿಯುಳ್ಳವನಾಗಿ ದೀಕ್ಷೆಯನ್ನು ಗ್ರಹಣಮಾಡಿದನು. ಕ್ರಮದಿಂದ ಏಕಾದಶಾಂಗಶಾಸ್ತ್ರಗಳ ಪಾರಗಾಮಿಯೂ ಸಮ್ಯಗ್ದರ್ಶನಾದಿಗಳಲ್ಲಿ ಭಾವನಾಪರನೂ ಆದ ಈ ಸುಪ್ರತಿಷ್ಠಮುನಿಯು ನಿರ್ಮಲವಾದ ತೀರ್ಥಕರನಾಮಕರ್ಮವನ್ನು ಬಂಧಿಸಿ ತನ್ನ ಆಯುಷ್ಯಾವಸಾನದಲ್ಲಿ ಒಂದು ತಿಂಗಳವರೆಗೆ ಸನ್ಯಾಸವನ್ನು ಮಾಡಿ–ನಿರಾಹಾರಿಯಾಗಿದ್ದು ಮಡಿದು ಜಯಂತವೆಂಬ ಅನುತ್ತರವಿಮಾನದಲ್ಲಿ ಅಹಮಿಂದ್ರತ್ವವನ್ನು ಪಡೆದನು. ಅವನು ಮೂವತ್ತುಮೂರು ಸಾಗರೋಪಮ ವರ್ಷಾಯುಷ್ಯವುಳ್ಳವನೂ ಒಂದು ಹಸ್ತ ಶರೀರೋತ್ಸೇಧವುಳ್ಳವನೂ ಹದಿನಾರುವರೆ ತಿಂಗಳಿಗೊಮ್ಮೆ ನಿಃಶ್ವಾಸವುಳ್ಳವನೂ ನಿರಾಕುಲನೂ ಮುವತ್ತುಮೂರು ಸಹಸ್ರವರ್ಷಗಳಿಗೊಮ್ಮೆ ಭುಂಜಿಸುವವನೂ ಕಾಮಸೇವನೆಯಿಲ್ಲದಿರುವ ಭೋಗಸಂಪತ್ತಿಯನ್ನನುಭವಿಸುವವನೂ ಲೋಕನಾಡಿಯನ್ನು ಹೊಂದಿರುವ ಅವಧಿಜ್ಞಾನವುಳ್ಳವನೂ ಬಲ ದೀಪ್ತಿ ವಿಕ್ರಿಯಾದಿಗುಣಗಳಿಂದ ಆ ಲೋಕನಾಡೀಕ್ಷೇತ್ರಪರಿಮಿತನೂ ಆಗಿದ್ದನು.

**ಏವಂ ದೇವಗತೌ ದಿವ್ಯಸುಖಂ ಸುಖಮಹಾಂಬುಧಿಃ ।**
**ಸಂಪ್ರಾಪ್ಯ ಜಾತಸಂತೃಪ್ತಿಃ ಸ್ಥಿತಶ್ಚಿರಸುಖಾಯುಷಾ ॥ ೬೨ ॥**

ಈ ರೀತಿಯಾಗಿ ದೇವಗತಿಯಲ್ಲಿ ಸುಖವೆಂಬ ಮಹಾಸಮುದ್ರವುಳ್ಳವನಾಗಿಯೂ ದಿವ್ಯಸುಖವನ್ನು ಪಡೆದು ಚಿರಸುಖವುಳ್ಳ ಆಯುಷ್ಯದಿಂದ ಬಹುತೃಪ್ತಿಯುಳ್ಳವನಾಗಿಯೂ ಇದ್ದನು.

**ಅತಃ ಪರಂ ತದುದ್ಭೂತೇಃ ಕ್ರಿಯತೇ ವಂಶವರ್ಣನಮ್ ।**
**ದ್ವೀಪೇ ಜಂಬೂಮತಿ ಕ್ಷೇತ್ರೇ ಭರತೇ ವತ್ಸದೇಶಜೇ ॥ ೬೩ ॥**

**ಕೌಶಾಂಬ್ಯಾಖ್ಯೇ ಭುವಿ ಖ್ಯಾತೋ ನಗರೇ ಮಘವಾನ್ನೃಪಃ ।**
**ತದ್ದೇವೀ ವೀತಶೋಕಾಭೂತ್ಸುತಃ ಖ್ಯಾತೋ ರಘುಸ್ತಯೋಃ ॥ ೬೪ ॥**

ಇಲ್ಲಿಂದ ಮುಂದೆ ಅವನ ಉತ್ಪತ್ತಿಯ ವಂಶವರ್ಣನವು ಮಾಡಲಾಗುವುದು. ಜಂಬೂದ್ವೀಪದ ಭರತಕ್ಷೇತ್ರದಲ್ಲಿ ವತ್ಸದೇಶದಲ್ಲಿರುವ ಕೌಶಾಂಬಿಯೆಂಬ ನಗರದಲ್ಲಿ ಭೂಮಿಯಲ್ಲಿ ಪ್ರಸಿದ್ಧನಾದ ಮಘವಾನ್ ರಾಜನಿದ್ದನು. ವೀತಶೋಕೆಯೆಂಬವಳು ಅವನ ಪತ್ನಿಯಾಗಿದ್ದಳು. ಆ ದಂಪತಿಗಳಿಗೆ ಪ್ರಖ್ಯಾತನಾದ ರಘುವೆಂಬ ಪುತ್ರನಾದನು.

**ಸುಮುಖೋ ನಾಮ ತತ್ರೈವ ಜಾತಃ ಶ್ರೇಷ್ಠೀ ಮಹರ್ದ್ಧಿಕಃ ।**
**ಇತಃ ಕಲಿಂಗವಿಷಯೇ ಪುರಾದ್ದಂತಪುರಾಹ್ವಯಾತ್ ॥**

**ಸಾರ್ಥೇನ ಸಮಮಾಗಚ್ಛನ್ವೀರದತ್ತೋ ವಣಿಕ್ಸುತಃ ।**
**ನಾಮ್ನಾ ವ್ಯಾಧಭಯಾದೇತ್ಯ ಭಾರ್ಯಯಾ ವನಮಾಲಯಾ ॥**

**ಕೌಶಾಂಬೀನಗರಂ ತತ್ರ ಸುಮುಖಾಖ್ಯಂ ಸಮಾಶ್ರಯತ್ ।**
**ವನಮಾಲಾಂ ಸಮಾಲೋಕ್ಯ ಸ ಶ್ರೇಷ್ಠೀ ವಿಹರನ್ವನೇ ॥**

**ವಿಕಾಯಸಾಯಕೈಸ್ತೀಕ್ಷ್ಣೈಃ ಕದಾಚಿಚ್ಛರಧೀಕೃತಃ ।**
**ಮಾಯಾವೀ ವೀರದತ್ತಂ ತಂ ಪಾಪೀ ವಾಣಿಜ್ಯಹೇತುನಾ ॥**

**ಪ್ರಾಹಿಣೋದ್ದ್ವಾದಶಾಬ್ದಾನಾಂ ದತ್ವಾ ಪುಷ್ಕಲಜೀವಿಕಾಮ್ ।**
**ಸ್ವೀಚಕಾರ ಮಹಾಕೀರ್ತ್ಯಾ ವನಮಾಲಾಂ ವಿಲೋಭಿತಾಮ್ ॥**

ಆ ನಗರದಲ್ಲಿಯೇ ಬಹುಸಂಪತ್ತಿಯುಳ್ಳವನಾದ ಸುಮುಖನೆಂಬ
ಯಿದ್ದನು. ಇತ್ತ ಕಲಿಂಗದೇಶದಲ್ಲಿ ದಂತಪುರವೆಂಬ ಪುರದಿಂದ ವರ್ತಕರ ಸ
ದೊಡನೆ ಬರುತ್ತಿರುವ ವೀರದತ್ತನೆಂಬ ವೈಶ್ಯಪುತ್ರನು ಬೇಡರ ಭಂ
ವನಮಾಲೆಯೆಂಬ ಪತ್ನಿಯೊಡನೆ ಕೌಶಾಂಬಿಗೆ ಬಂದು ಅಲ್ಲಿ ಆ ಸುಮು
ಶ್ರೇಷ್ಠಿಯನ್ನಾಶ್ರಯಿಸಿದನು. ಒಂದಾನೊಂದು ದಿವಸ ವನದಲ್ಲಿ ವಿಹರಿಸುತ್ತಿ
ಸುಮುಖಶ್ರೇಷ್ಠಿಯು ವನಮಾಲೆಯನ್ನು ನೋಡಿ ಹರಿತವಾದ ಕಾಮಬಾ
ಬತ್ತಳಿಕೆಯಾಗಿ ಮಾಡಲ್ಪಟ್ಟವನೂ ಮಾಯಾವಿಯೂ ಪಾಪಿಯೂ
ವೀರದತ್ತನನ್ನು ವ್ಯಾಪಾರನಿಮಿತ್ತದಿಂದ ಹನ್ನೆರಡು ವರ್ಷಗಳ ಹೇ
ಜೀವಿಕೆಯನ್ನು (ಹನ್ನೆರಡು ವರ್ಷಗಳಿಗೆ ಬೇಕಾಗುವಷ್ಟು ದ್ರವ್ಯವನ್ನು)
ಕಳುಹಿಸಿದನು. ಹೆಚ್ಚು ಲೋಭವುಳ್ಳವಳಾದ ವನಮಾಲೆಯನ್ನು ಮಹಾ
ಯೊಡನೆ ಸ್ವೀಕರಿಸಿದನು.

**ಅತಿವಾಹ್ಯಾಗತೋ ವೀರದತ್ತೋ ದ್ವಾದಶವತ್ಸರಾನ್ ।**
**ತದ್ವಿಕ್ರಿಯಾಂ ಸಮಾಕರ್ಣ್ಯ ಸ್ಮರನ್ ಸಂಸಾರದುಃಸ್ಥಿತಿಮ್**

**ಶೋಕಾಕುಲಃ ಸ ನಿರ್ವಿಣ್ಣಃ ಕ್ಷೀಣಪುಣ್ಯೋ ನಿರಾಶ್ರಯಃ ।**
**ವಣಿಕ್ಸಮಗ್ರಹೀದ್ದೀಕ್ಷಾಂ ಪ್ರೋಷ್ಠಿಲಾಖ್ಯಮುನಿಂ ಶ್ರಿತಃ ।**

ವೀರದತ್ತನು ಹನ್ನೆರಡು ವರ್ಷಗಳನಂತರ ಬಂದನು. ಆ ಸುಮ
ಮಾಲೆಯರ ವಿಕಾರವನ್ನು ಕೇಳಿ ಸಂಸಾರದ ದುಃಸ್ಥಿತಿಯನ್ನು ಸ್ಮರಿಸ
ಶೋಕವ್ಯಾಕುಲನೂ ವಿರಕ್ತನೂ ಪುಣ್ಯಕ್ಷಯವುಳ್ಳವನೂ ಆಶ್ರಯವಿಲ್ಲದವ
ವೀರದತ್ತವೈಶ್ಯನು ಪ್ರೋಷ್ಠಿಲನೆಂಬ ಮುನಿಯನ್ನಾಶ್ರಯಿಸಿದವನಾಗಿ ದೀ
ತೆಗೆದುಕೊಂಡನು.

**ಜೀವಿತಾಂತೇ ಸ ಸನ್ನ್ಯಸ್ಯ ಕಲ್ಪೇ ಸೌಧರ್ಮನಾಮನಿ ।**
**ಜಾತಶ್ಚಿತ್ರಾಂಗದೋ ದೇವಃ ಪ್ರವೀಚಾರಸುಖಾಕರಃ**

ಅವನು ಆಯುಷ್ಯಾವಸಾನದಲ್ಲಿ ಮಡಿದು ಸೌಧರ್ಮವೆಂಬ ಕಲ್ಪದ
ಸುಖಕ್ಕೆ ಸ್ಥಾನನಾದ ಚಿತ್ರಾಂಗದನೆಂಬ ದೇವನಾಗಿ ಜನಿಸಿದನು

**ಸ ಶ್ರೇಷ್ಠೀ ವನಮಾಲಾ ಚ ಧರ್ಮಸಿಂಹತಪೋಭೃತೇ ।**
**ದತ್ವಾ ಪ್ರಾಸುಕಮಾಹಾರಂ ನಿಂದಿತ್ವಾ ನಿಜದುಷ್ಕೃತಮ್**

**ಅನ್ಯೇದ್ಯುರಶನೇಃ ಪಾತಾತ್ಸಂಪ್ರಾಪ್ಯ ಮರಣಂ ಸಮಮ್ ।**
**ಭರತೇ ಹರಿವರ್ಷಾಖ್ಯೇ ದೇಶೇ ಭೋಗಪುರೇಶಿನಃ ।**

**ಪ್ರಭಂಜನಾಖ್ಯನೃಪತೇರ್ಮೃಕಂಡ್ವಾಖ್ಯಾ ಮನೋರಮಾ ।**
**ಹರಿವಂಶೇಜನಿ ಶ್ರೇಷ್ಠೀ ಸಿಂಹಕೇತುಸ್ತಯೋಃ ಸುತಃ ।**

ಆ ಸುಮುಖಶ್ರೇಷ್ಠಿಯೂ ವನಮಾಲೆಯೂ ತಮ್ಮ ದುಷ್ಕೃತ್ಯವನ್ನು ನಿಂದಿಸಿ ಧರ್ಮಸಿಂಹನೆಂಬ ತಪಸ್ವಿಗೆ ಪ್ರಾಸುಕವಾದ ಆಹಾರವನ್ನು ಕೊಟ್ಟು ಮತ್ತೊಂದು ದಿವಸ ಸಿಡಿಲಿನ ಬಡಿತದಿಂದ ಅವರೀರ್ವರೂ ಒಟ್ಟಿಗೆ ಮರಣವನ್ನು ಹೊಂದಿ ಭರತಕ್ಷೇತ್ರದಲ್ಲಿ ಹರಿವರ್ಷವೆಂಬ ದೇಶದಲ್ಲಿ ಭೋಗಪುರಾಧಿಪತಿಯಾದ ಪ್ರಭಂಜನನೆಂಬ ರಾಜನಿಗೂ ಆತನ ಪತ್ನಿಯಾದ ಮೃಕಂಡುವಿಗೂ ಹರಿವಂಶದಲ್ಲಿ ಆ ಸುಮುಖಶ್ರೇಷ್ಠಿಯು ಸಿಂಹಕೇತುವೆಂಬ ಪುತ್ರನಾಗಿ ಜನಿಸಿದನು.

**ವಸ್ವಾಲಯಪುರಾಧೀಶೋ ವಜ್ರಚಾಪಮಹೀಪತೇಃ ।**
**ತತ್ರೈವಾಸೌ ಶುಭಾಯಾಶ್ಚ ವನಮಾಲಾ ಸುರೂಪಿಣೀ ॥ ೭೬ ॥**

**ವಿದ್ಯುನ್ಮಾಲೇತಿ ಭೂತ್ವಾ ತುಕ್ ವಿದ್ಯುದುದ್ಯೋತಭಾಸಿನೀ ।**
**ಆಪೂರ್ಣಯೌವನಸ್ಯಾಸೀತ್ಸಿಂಹಕೇತೋ ರತಿಪ್ರದಾ ॥ ೭೭ ॥**

ಆ ದೇಶದಲ್ಲಿಯೇ ವಸ್ವಾಲಯಪುರಾಧಿಪತಿಯಾದ ವಜ್ರಚಾಪರಾಜನಿಗೂ ಆತನ ಪತ್ನಿಯಾದ ಶುಭಾದೇವಿಗೂ ಈ ವನಮಾಲೆಯು ಉತ್ತಮರೂಪವುಳ್ಳವಳೂ ಮಿಂಚಿನ ಪ್ರಕಾಶದಂತೆ ಪ್ರಕಾಶಿಸುವವಳೂ ಆದ ವಿದ್ಯುನ್ಮಾಲೆಯೆಂಬ ಪುತ್ರಿಯಾಗಿ ಸಂಪೂರ್ಣಯೌವನವುಳ್ಳವನಾದ ಸಿಂಹಕೇತುವಿಗೆ ರತಿಸುಖವನ್ನು ಕೊಡುವವಳಾದಳು.

**ಜಾತು ತೌ ದಂಪತೀ ದೃಷ್ಟ್ವಾ ದೇವೇ ವಿಹರಣೇ ವನೇ ।**
**ಚಿತ್ರಾಂಗದೇ ಸಮುದ್ಧೃತ್ಯ ಹನಿಷ್ಯಾಮೀತಿ ಗಚ್ಛತಿ ॥ ೭೮ ॥**

**ರಘುಃ ಪುರಾತನೋ ಭೂಪಃ ಸುಮುಖಸ್ಯ ಸಖಾ ಪ್ರಿಯಃ ।**
**ಅಣುವ್ರತಫಲೇನಾಭೂತ್ಕಲ್ಪೇ ಸೌಧರ್ಮನಾಮನಿ ॥ ೭೯ ॥**

**ವರ್ಯಃ ಸೂರ್ಯಪ್ರಭೋ ನಾಮ ವೀಕ್ಷ್ಯ ಚಿತ್ರಾಂಗದಂ ತದಾ ।**
**ಶೃಣು ಮದ್ವಚನಂ ಭದ್ರ ಫಲಂ ಕಿಂ ತೇನಯೋರ್ಮೃತೇಃ ॥ ೮೦ ॥**

**ಪಾಪಾನುಬಂಧಿ ಕರ್ಮೇದಮಯುಕ್ತಂ ಯುಕ್ತಕಾರಿಣಾಮ್ ।**
**ಸಂಸಾರದ್ರುಮದುಃಖಾಭಿಧಾನದುಷ್ಟಫಲಪ್ರದಮ್ ॥ ೮೧ ॥**

**ತತೋ ಮಿಥುನಮೇತತ್ತ್ವಂ ವಿಸೃಜೇತ್ಯಭ್ಯಧಾನ್ಮುಹುಃ ।**
**ಶ್ರುತ್ವಾ ತಜ್ಜಾತಕಾರುಣ್ಯಸ್ತದಮುಂಚದಸೌ ಸುರಃ ॥ ೮೨ ॥**

ಒಂದಾನೊಂದು ಕಾಲದಲ್ಲಿ ಚಿತ್ರಾಂಗದದೇವನು ವನವಿಹಾರದಲ್ಲಿ ಆ ದಂಪತಿಗಳನ್ನು ನೋಡಿ ಎತ್ತಿಕೊಂಡು ಕೊಲ್ಲುವೆನೆಂದು ಹೋಗುತ್ತಿರಲು ಸುಮುಖನ ಪೂರ್ವದ ಪ್ರಿಯಮಿತ್ರನಾದ ರಘುರಾಜನು ಅಣುವ್ರತಫಲದಿಂದ ಸೌಧರ್ಮವೆಂಬ ಕಲ್ಪದಲ್ಲಿ ಶ್ರೇಷ್ಠನಾದ ಸೂರ್ಯಪ್ರಭನೆಂಬ ದೇವನಾಗಿದ್ದು ಆಗ ಅವನು ಚಿತ್ರಾಂಗದನನ್ನು ನೋಡಿ ''ಅಯ್ಯಾ ! ನನ್ನ ಮಾತನ್ನು ಕೇಳು. ಇವರ ಮರಣದಿಂದ ನಿನಗೇನು ಪ್ರಯೋಜನ ? ಪಾಪಬಂಧನವನ್ನು ಮಾಡುವುದೂ ಸಂಸಾರವೆಂಬ ವೃಕ್ಷದ ದುಃಖವೆಂಬ ದುಷ್ಟಫಲವನ್ನು ಕೊಡುವುದೂ ಆದ ಈ ಕಾರ್ಯವು ಯುಕ್ತವಾದ ಕಾರ್ಯವನ್ನು ಮಾಡುವವರಿಗೆ ಅಯುಕ್ತವಾದುದು. ಆದುದರಿಂದ ನೀನು ಈ ಯುಗ್ಮವನ್ನು ಬಿಡು'' ಎಂದು ಪುನಃ ಪುನಃ ಹೇಳಿದನು. ಆ ಮಾತನ್ನು ಕೇಳಿ ಕಾರುಣ್ಯವುಳ್ಳವನಾದ ಈ ದೇವನು ಆ ಯುಗಲವನ್ನು ಬಿಟ್ಟನು.

**ತೌ ಸಂಬೋಧ್ಯ ಸಮಾಶ್ವಾಸ್ಯ ತಯೋಶ್ಚಂಪಾಪುರೇ ವನೇ ।**
**ಸುಖಾಪ್ತಿಂ ಭಾವಿನೀಂ ಬುಧ್ವಾ ಸೂರ್ಯತೇಜಾ ವ್ಯಸರ್ಜಯತ್॥ ೮೩ ॥**

ಸೂರ್ಯಪ್ರಭದೇವನು ಆ ದಂಪತಿಗಳನ್ನು ಸಂಬೋಧಿಸಿ ಸಮಾಧಾನಪಡಿಸಿ ಅವರಿಗೆ ಮುಂದಾಗುವ ಸುಖಪ್ರಾಪ್ತಿಯನ್ನು ತಿಳಿದು ಚಂಪಾಪುರದ ವನದಲ್ಲಿ ಬಿಟ್ಟನು.

**ತತ್ಪುರಾಧೀಶ್ವರೇ ಚಂದ್ರಕೀರ್ತಿನಾಮ್ನಿ ಮಹೀಭುಜಿ ।**
**ವಿಪುತ್ರೇ ಮರಣಂ ಪ್ರಾಪ್ತೇ ರಾಜ್ಯಸಂತತಿಸಂಸ್ಥಿತೇಃ ॥ ೮೪ ॥**

**ಸಪುಣ್ಯಂ ಯೋಗ್ಯಮನ್ವೇಷ್ಟುಂ ವಾರಣಂ ಭದ್ರಲಕ್ಷಣಮ್ ।**
**ಗಂಧಾದಿಭಿಃ ಸಮಭ್ಯರ್ಚ್ಯ ವ್ಯಮುಂಚನ್ಮಂತ್ರಿಮಂಡಲಮ್ ॥ ೮೫ ॥**

ಆ ನಗರಾಧಿಪತಿಯಾದ ಚಂದ್ರಕೀರ್ತಿಯೆಂಬ ರಾಜನು ಅಪುತ್ರನಾಗಿದ್ದು ಮರಣವನ್ನು ಹೊಂದುತ್ತಿರಲು ರಾಜ್ಯಸಂತತಿಯ ಸ್ಥಿತಿಗೆ-ರಕ್ಷಣೆಗೆ ಮಂತ್ರಿಮಂಡಲವು ಪುಣ್ಯವಂತನೂ ಯೋಗ್ಯನೂ ಆದ ಮನುಷ್ಯನನ್ನು ಹುಡುಕುವುದಕ್ಕೋಸ್ಕರ ಶುಭಲಕ್ಷಣಗಳುಳ್ಳ ಆನೆಯನ್ನು ಗಂಧಾದಿಗಳಿಂದ ಪೂಜಿಸಿ ಬಿಟ್ಟಿತು.

**ಸೋಪಿ ದಿವ್ಯೋ ಗಜೋ ಗತ್ವಾ ವನಂ ಪುಣ್ಯವಿಪಾಕತಃ ।**
**ತಾವುದ್ಧೃತ್ಯ ನಿಜಸ್ಕಂಧಮಾರೋಪ್ಯ ಪುರಮಾಗಮತ್ ॥ ೮೬ ॥**

ಆ ದಿವ್ಯಗಜವೂ ವನಕ್ಕೆ ಹೋಗಿ ಪುಣ್ಯಪರಿಪಾಕದಿಂದ ಆ ದಂಪತಿಗಳನ್ನೆತ್ತಿ ತನ್ನ ಹೆಗಲಿನ ಮೇಲೆ ಹತ್ತಿಸಿ ಪಟ್ಟಣಕ್ಕೆ ಬಂದಿತು.

**ಸಿಂಹಕೇತೋರ್ವಿಧಾಯಾಭಿಷೇಕಂ ಮಂತ್ರ್ಯಾದಯಸ್ತದಾ ।**
**ರಾಜ್ಯಾಸನಂ ಸಮಾರೋಪ್ಯ ಬಧ್ವಾ ಪಟ್ಟಂ ಸಸಂಮದಾಃ ॥ ೮೭ ॥**

**ತ್ವಂ ಕಸ್ಮಾತ್ಕಾಗತಃ ಕಸ್ಮಾದಿತ್ಯಾಹುಃ ಸೋಽಬ್ರವೀದಿದಮ್ ।**
**ಪ್ರಭಂಜನಃ ಪಿತಾ ಮಾತಾ ಮೃಕಂಡೂರ್ಮಂಡಿತಾ ಗುಣೈಃ ॥ ೮೮ ॥**

**ಹರಿವಂಶಾಮಲವ್ಯೋಮಸೋಮೋಹಮಿಹ ಕೇನ ಚಿತ್ ।**
**ಸುರೇಣಾನೀಯ ಮುಕ್ತಃ ಸನ್ ಸಹ ಪತ್ನ್ಯಾ ವನೇ ಸ್ಥಿತಃ ॥ ೮೯ ॥**

ಆಗ ಮಂತ್ರಿಗಳೇ ಮೊದಲಾದವರು ಸಂತೋಷಯುಕ್ತರಾಗಿ ಸಿಂಹಕೇತುವಿಗೆ ಅಭಿಷೇಕವನ್ನು ಮಾಡಿ ರಾಜ್ಯಪೀಠವನ್ನೇರಿಸಿ ಪಟ್ಟವನ್ನು ಕಟ್ಟಿ ''ನೀನು ಯಾವನ ಮಗ ? ಇಲ್ಲಿಗೆ ಎಲ್ಲಿಂದ ಬಂದೆ ?'' ಎಂದರು. ಆಗ ಆ ಸಿಂಹಕೇತುವು ಈ ಮಾತನ್ನು ಹೇಳಿದನು- ''ಪ್ರಭಂಜನನು ನನ್ನ ತಂದೆ. ಗುಣಗಳಿಂದ ಭೂಷಿತಳಾದ ಮೃಕಂಡುವು ತಾಯಿ. ಹರಿವಂಶವೆಂಬ ನಿರ್ಮಲವಾದ ಆಕಾಶಕ್ಕೆ ಚಂದ್ರನಾದ ನಾನು ನನ್ನ ಪತ್ನಿಯೊಡನೆ ಯಾವನೋ ದೇವನಿಂದ ತರಲ್ಪಟ್ಟು ವನದಲ್ಲಿ ಬಿಡಲ್ಪಟ್ಟವನಾಗಿದ್ದೇನೆ.''

**ಇತಿ ತದ್ವಚನಂ ಶ್ರುತ್ವಾ ಮೃಕಂಡ್ವಾಸ್ತನಯೋ ಯತಃ ।**
**ಮಾರ್ಕಂಡೇಯೋಸ್ತು ನಾಮ್ನೈಷ ಇತಿ ತೇ ತಮುದಾಹರನ್ ॥ ೯೦ ॥**

ಈ ರೀತಿಯಾಗಿ ಅವನ ಮಾತನ್ನು ಕೇಳಿ ಆ ಮಂತ್ರಿಗಳೇ ಮೊದಲಾದವರು ''ಇವನು ಮೃಕಂಡುವಿನ ಪುತ್ರನಾಗಿರುವುದರಿಂದ ಹೆಸರಿನಿಂದ ಮಾರ್ಕಂಡೇಯನಾಗಿರಲಿ'' ಎಂದು ಅವನನ್ನು ಕರೆದರು.

**ಏಷ ದೈವೋಪನೀತಂ ತದ್ರಾಜ್ಯಂ ಸುಚಿರಮನ್ವಭೂತ್ ।**
**ಸಂತಾನೇ ತಸ್ಯ ಗಿರ್ಯಂತೋ ಹರಿರ್ಹಿಮಗಿರಿಃ ಪರಃ ॥ ೯೧ ॥**

**ತೃತೀಯೋ ವಸುಗಿರ್ಯಾಖ್ಯಃ ಪುರೇಪಿ ಬಹವೋ ಗತಾಃ ।**
**ತದಾ ಕಶಾರ್ಥವಿಷಯೇ ತದ್ವಂಶಾಂಬರಭಾಸ್ವತಃ ॥ ೯೨ ॥**

**ಅವಾರ್ಯನಿಜಶೌರ್ಯೇಣ ನಿರ್ಜಿತಾಶೇಷವಿದ್ವಿಷಃ ।**
**ಖ್ಯಾತಃ ಶೌರ್ಯಪುರಾಧೀಶಃ ಶೂರಸೇನಮಹೀಪತೇಃ ॥ ೯೩ ॥**

**ಸುತಸ್ಯ ಶೂರವೀರಸ್ಯ ಧಾರಿಣ್ಯಾಶ್ಚ ತನೂದ್ಭವೌ ।**
**ವಿಖ್ಯಾತೋಂಧಕವೃಷ್ಟಿಶ್ಚ ಪತಿರ್ವೃಷ್ಣಿರ್ನರಾದಿವಾಕ್ ॥ ೯೪ ॥**

ಈ ಸಿಂಹಕೇತು- ಮಾರ್ಕಂಡೇಯನು ದೈವದಿಂದ ಒದಗಿಸಲ್ಪಟ್ಟ ಆ ರಾಜ್ಯವನ್ನು ಬಹುಕಾಲದವರೆಗೆ ಅನುಭವಿಸಿದನು. ಅವನ ಸಂತಾನ- ಪರಂಪರೆಯಲ್ಲಿ ಕ್ರಮವಾಗಿ ಹರಿಗಿರಿ, ಮತ್ತೊಬ್ಬ ಹಿಮಗಿರಿ ಮೂರನೆಯವನು ವಸುಗಿರಿಯೆಂಬವರಾದರು. ಮುಂದೆಯೂ ಅನೇಕರು ಆಗಿ ಹೋದರು. ಆಗ ಕಶಾರ್ಥವೆಂಬ ದೇಶದಲ್ಲಿ ಆ ಹರಿವಂಶವೆಂಬ ಆಕಾಶಕ್ಕೆ ಸೂರ್ಯನೂ ತಡೆಯಲ್ಪಡದ ತನ್ನ ಶೌರ್ಯ

ದಿಂದ ಎಲ್ಲಾ ಶತ್ರುಗಳನ್ನು ಜಯಿಸಿರುವವನೂ ಪ್ರಸಿದ್ಧವಾದ ಶೌರ್ಯಪುರದ ದೊರೆಯೂ ಆದ ಶೂರಸೇನಮಹಾರಾಜನ ಪುತ್ರನಾದ ಶೂರವೀರನಿಗೂ ಆತನ ಪತ್ನಿಯಾದ ಧಾರಿಣಿಗೂ ಪ್ರಖ್ಯಾತನಾದ ಅಂಧಕವೃಷ್ಟಿಯೂ ನರಪತಿವೃಷ್ಟಿಯೂ ಪುತ್ರರಾದರು.

**ಧರ್ಮಾ ವಾಂಧಕವೃಷ್ಟೇಶ್ಚ ಸುಭದ್ರಾಯಾಶ್ಚ ತುಗ್ವರಾಃ ।**
**ಸಮುದ್ರವಿಜಯೋಕ್ಶೋಭ್ಯಸ್ತತಸ್ತಿಮಿತಸಾಗರಃ ॥ ೯೫ ॥**

**ಹಿಮವಾನ್ವಿಜಯೋ ವಿದ್ವಾನಚಲೋ ಧರಣಾಹ್ವಯಃ ।**
**ಪೂರಣಃ ಪೂರಿತಾರ್ಥೀಚ್ಛೋ ನವಮೋಪ್ಯಭಿನಂದನಃ ॥ ೯೬ ॥**

**ವಸುದೇವೋಂತಿಮಸ್ತ್ವೇವಂ ದಶಾಭೂವನ್ ಶಶಿಪ್ರಭಾಃ ।**
**ಕುಂತೀ ಮಾದ್ರೀ ಚ ಮೋಮೇ ವಾ ಸುತೇ ಪ್ರಾದುರ್ಬಭೂವತುಃ ॥**

ಅಂಧಕವೃಷ್ಟಿಗೂ ಆತನ ಪತ್ನಿಯಾದ ಸುಭದ್ರೆಗೂ ಸಮುದ್ರವಿಜಯ ಅಕ್ಶೋಭ್ಯ, ಬಳಿಕ ಸ್ತಿಮಿತಸಾಗರ, ಹಿಮವಾನ್, ವಿಜಯ, ಪ್ರಾಜ್ಞನಾದ ಅಚಲ, ಧರಣ, ಯಾಚಕರ ಇಚ್ಛೆಯನ್ನು ಪೂರ್ತಿಮಾಡಿರುವ ಪೂರಣ, ಒಂಬತ್ತನೆಯವನು ಅಭಿನಂದನ, ಕೊನೆಯವನು ವಸುದೇವ. ಹೀಗೆ ಚಂದ್ರನಂತೆ ಪ್ರಭೆಯುಳ್ಳ ಪುತ್ರಶ್ರೇಷ್ಠರು ದಶಧರ್ಮಗಳಂತೆ ಹತ್ತು ಮಂದಿಗಳಾದರು. ಲಕ್ಷ್ಮೀ ಪಾರ್ವತಿಯರಂತೆ, ಕುಂತೀ ಮಾದ್ರಿಯರೆಂಬೀರ್ವರು ಪುತ್ರಿಯರು ಪ್ರಾದುರ್ಭವಿಸಿದರು.

**ಸಮುದ್ರವಿಜಯಾದೀನಾಂ ನವಾನಾಂ ಸುರತಪ್ರದಾಃ ।**
**ಶಿವದೇವ್ಯನು ತಸ್ಯಾ ಧೃತೀಶ್ವರಾಥ ಸ್ವಯಂಪ್ರಭಾ ॥ ೯೮ ॥**

**ಸುನೀತಾಖ್ಯಾ ಸಸೀತಾ ಚ ಪ್ರಿಯವಾಕ್ ಚ ಪ್ರಭಾವತೀ ।**
**ಕಾಲಿಂಗೀಸುಪ್ರಭೇ ಚೇತಿ ಬಭೂವುರ್ಭುವನೋತ್ತಮಾಃ ॥ ೯೯ ॥**

ಸಮುದ್ರವಿಜಯನೇ ಮೊದಲಾದ ಒಂಬತ್ತು ಮಂದಿ ಮಕ್ಕಳಿಗೆ ಯಥಾಕ್ರಮವಾಗಿ ಸುರತಸುಖವನ್ನು ಕೊಡುವವರೂ ಲೋಕೋತ್ತಮರೂ ಆದ ಶಿವದೇವಿ, ಆಕೆಯನಂತರ ಧೃತೀಶ್ವರಾದೇವಿ, ಬಳಿಕ ಸ್ವಯಂಪ್ರಭಾದೇವಿ, ಸುನೀತಾದೇವಿ, ಸೀತಾದೇವಿ, ಪ್ರಿಯವಾಗ್ದೇವಿ, ಪ್ರಭಾವತೀದೇವಿ, ಕಾಲಿಂಗೀದೇವಿ, ಸುಪ್ರಭಾದೇವಿ ಈ ಒಂಬತ್ತು ಮಂದಿ ಹೆಂಡತಿಯರಾದರು.

**ಪದ್ಮಾವತ್ಯಾಂ ದ್ವಿತೀಯಸ್ಯ ವೃಷ್ಟೇಶ್ಚ ತನಯಾಸ್ತ್ರಯಃ ।**
**ಉಗ್ರದೇವಮಹಾದ್ಯುಕ್ತಿಸೇನಾ ನಾನಾಗುಣಾನ್ವಿತಾಃ ॥ ೧೦೦ ॥**

**ಗಾಂಧಾರೀ ಚ ಸುತಾ ಪ್ರಾದುರಭವನ್ ಶುಭದಾಯಿನಃ ।**
**ಅಥ ಕೌರವಮುಖ್ಯಸ್ಯ ಹಾಸ್ತಿನಾಖ್ಯಪುರೇಶಿನಃ ॥ ೧೦೧ ॥**

**ಶಕ್ತಿನಾಮಮಹೀಶಸ್ಯ ಶತಕ್ಯಾಶ್ಚ ಪರಾಶರಃ ।**
**ತಸ್ಯ ಮತ್ಸ್ಯಕುಲೋತ್ಪನ್ನರಾಜಪುತ್ರ್ಯಾಂ ಸುತೋಭವತ್ ॥ ೧೦೨ ॥**

**ಸತ್ಯವತ್ಯಾಂ ಸುಧೀರ್ವ್ಯಾಸಃ ಪುನರ್ವ್ಯಾಸಸುಭದ್ರಯೋಃ ।**
**ಧೃತರಾಷ್ಟ್ರೋ ಮಹಾನ್ ಪಾಂಡುರ್ವಿದುರಶ್ಚ ಸುತಾಸ್ತ್ರಯಃ ॥ ೧೦೩ ॥**

ಎರಡನೆಯವನಾದ ನರಪತಿವೃಷ್ಟಿಗೆ ಆತನ ಪತ್ನಿಯಾದ ಪದ್ಮಾವತಿಯಲ್ಲಿ ವಿವಿಧಗುಣಯುಕ್ತರೂ ಶುಭದಾಯಕರೂ ಆದ ಉಗ್ರಸೇನ ದೇವಸೇನ ಮಹಾಸೇನರೆಂಬ ಮೂರು ಮಂದಿ ಗಂಡುಮಕ್ಕಳೂ ಗಾಂಧಾರಿಯೆಂಬ ಹೆಣ್ಣುಮಗಳೂ ಪ್ರಾದುರ್ಭವಿಸಿದರು. ಬಳಿಕ ಕೌರವಕುಲದಲ್ಲಿ ಮುಖ್ಯನೂ ಹಸ್ತಿನಾಪುರಾಧಿಪತಿಯೂ ಆದ ಶಕ್ತಿಯೆಂಬ ರಾಜನಿಗೂ ಆತನ ಪತ್ನಿಯಾದ ಶತಕಿಗೂ ಪರಾಶರನೆಂಬ ಪುತ್ರನು ಜನಿಸಿದನು. ಅವನಿಗೆ ಮತ್ಸ್ಯಕುಲೋತ್ಪನ್ನರಾಜಪುತ್ರಿಯಾದ ಸತ್ಯವತಿಯೆಂಬ ಪತ್ನಿಯಲ್ಲಿ ಪ್ರಾಜ್ಞನಾದ ವ್ಯಾಸನೆಂಬ ಪುತ್ರನು ಜನಿಸಿದನು. ಪುನಃ ಆ ವ್ಯಾಸನಿಗೂ ಅವನ ಪತ್ನಿಯಾದ ಸುಭದ್ರೆಗೂ ಧೃತರಾಷ್ಟ್ರ ಪಾಂಡು ವಿದುರರೆಂಬ ಮೂರು ಮಂದಿ ಮಕ್ಕಳು ಹುಟ್ಟಿದರು.

**ಅಥಾತ್ರೈತ್ಯ ವಿಹಾರಾರ್ಥಂ ಕದಾಚಿದ್ವಜ್ರಮಾಲಿನಿ ।**
**ನಭೋಯಾಯಿನಿ ವಿಸ್ಮೃತ್ಯ ಗತೇ ಹಸ್ತಾಂಗುಲೀಯಕಮ್ ॥ ೧೦೪ ॥**

**ವಿಲೋಕ್ಯ ಪಾಂಡುಭೂಪಾಲೋ ಗಹನೇ ತತ್ಸಮಗ್ರಹೀತ್ ।**
**ಸ್ಮೃತ್ವಾ ಖಗಂ ನಿವೃತ್ಯೈತ್ಯ ಮುದ್ರಿಕಾಂ ತಾಮಿತಸ್ತತಃ ॥ ೧೦೫ ॥**

**ಅನ್ವಿಚ್ಛಂತಂ ವಿಲೋಕ್ಯಾಹ ಪಾಂಡುಃ ಕಿಂ ಮೃಗ್ಯತೇ ತ್ವಯಾ ।**
**ಇತಿ ತದ್ವಚನಂ ಶ್ರುತ್ವಾ ವಿದ್ಯಾಧೃನ್ಮಮ ಮುದ್ರಿಕಾ ॥ ೧೦೬ ॥**

**ವಿನಷ್ಟೇತ್ಯವದತ್ತಸ್ಯ ಪಾಂಡುಶ್ಚೈತಾಮದರ್ಶಯತ್ ।**
**ಪುನಃ ಕಿಮನಯಾ ಕೃತ್ಯಮಿತಿ ತಸ್ಯಾನುಯೋಜನಾತ್ ॥ ೧೦೭ ॥**

**ಭದ್ರೈಷಾ ಕಾಮರೂಪಸ್ಯ ಸಾಧನೀತ್ಯಬ್ರವೀತ್ಖಗಃ ।**
**ಯದ್ಯೇವಂ ಕಾನಿಚಿದ್ವಾತ್ರರ್ದಿನಾನ್ಯೇಷಾಸ್ತು ಮತ್ಕರೇ ॥ ೧೦೮ ॥**

**ಪ್ರಭಾವಮಸ್ಯಾಃ ಪಶ್ಯಾಮೀತ್ಯರ್ಥಿತಸ್ತೇನ ಸೋಪ್ಯದಾತ್ ।**
**ಪಾಂಡುಶ್ಚ ತತ್ಕೃತಾದೃಶ್ಯನಿಜರೂಪೇಣ ಸಂಗಮಮ್ ॥ ೧೦೯ ॥**

**ಕುಂತ್ಯಾ ಸಹಾಕೃತೋತ್ಪನ್ನಸ್ತತ್ರ ಕರ್ಣಾಹ್ವಯಃ ಸುತಃ ।**
**ತತಃ ಪರೈರವಿದಿತಂ ಮಂಜೂಷಾಸ್ಥಂ ಸಕುಂಡಲಮ್ ॥ ೧೧೦ ॥**

**ಸರತ್ನಕವಚಂ ಲೇಖಪತ್ರಕೇಣ ಸಹಾರ್ಭಕಮ್ ।**
**ಕುಂತ್ಯಾಃ ಪರಿಜನಃ ಕಾಲಿಂದ್ಯಾಃ ಪ್ರವಾಹೇ ಮುಮೋಚ ತಮ್ ॥**

ಅನಂತರದಲ್ಲಿ ಒಂದಾನೊಂದು ಕಾಲದಲ್ಲಿ ವಜ್ರಮಾಲಿನಿಯೆಂಬ ಖೇಚರನು ಇಲ್ಲಿ ವಿಹಾರಕ್ಕೋಸ್ಕರ ಬಂದು ತನ್ನ ಕೈ ಬೆರಲಿನ ಉಂಗುರವನ್ನು ಮರೆತುಬಿಟ್ಟು ಹೋಗಿರಲು ವನದಲ್ಲಿ ಪಾಂಡುರಾಜನು ಅದನ್ನು ನೋಡಿ ತೆಗೆದುಕೊಂಡನು. ಸ್ಮರಿಸಿಕೊಂಡು ಹಿಂದಿರುಗಿ ಬಂದು ಆ ಉಂಗುರವನ್ನು ಈಕಡೆ ಆಕಡೆ ಹುಡುಕುತ್ತಿರುವ ಆ ಖೇಚರನನ್ನು ನೋಡಿ ಪಾಂಡುವು ''ನೀನು ಏನನ್ನು ಹುಡುಕುತ್ತಿರುವೆ ?'' ಎಂದು ಕೇಳಿದನು. ಆ ಮಾತನ್ನು ಕೇಳಿ ವಿದ್ಯಾಧರನು ''ನನ್ನ ಮುದ್ರಿಕೆಯು ನಷ್ಟವಾಯಿತು'' ಎಂದು ಹೇಳಿದನು. ಪಾಂಡುವು ಈ ಮುದ್ರಿಕೆಯನ್ನು ಆ ಖೇಚರನಿಗೆ ತೋರಿಸಿದನು. ''ಈ ಮುದ್ರಿಕೆಯಿಂದೇನು ಕಾರ್ಯ ?'' ಎಂದು ಪುನಃ ಪಾಂಡುವಿನ ಪ್ರಶ್ನೆಯಿಂದ ಖೇಚರನು ''ಅಯ್ಯಾ ! ಇದು ಇಚ್ಛಿಸಿದ ರೂಪವನ್ನು ಸಾಧಿಸುವುದಾಗಿದೆ'' ಎಂದು ಹೇಳಿದನು. ಹೀಗಾದರೆ ಸಹೋದರನೆ ! ಕೆಲವು ದಿನಗಳವರೆಗೆ ಇದು ನನ್ನ ಕೈಯಲ್ಲಿರಲಿ. ಇದರ ಪ್ರಭಾವವನ್ನು ನೋಡುತ್ತೇನೆ'' ಎಂದು ಪಾಂಡುವು ಕೇಳಿದನು. ಆಗ ಖೇಚರನು ಅದನ್ನು ಪಾಂಡುವಿಗೆ ಕೊಟ್ಟನು. ಪಾಂಡುವೂ ಆ ಮುದ್ರಿಕೆಯಿಂದ ಅದೃಶ್ಯವಾಗಿ ಮಾಡಲ್ಪಟ್ಟ ತನ್ನ ರೂಪದಿಂದ ಕುಂತಿಯೊಡನೆ ಸಂಗಮವನ್ನು ಮಾಡಿದನು. ಅಲ್ಲಿ ಕರ್ಣನೆಂಬ ಪುತ್ರನು ಹುಟ್ಟಿದನು. ಬಳಿಕ ಕುಂತಿಯ ಪರಿಜನರು ಬೇರೆಯವರಿಗೆ ತಿಳಿಯದಂತೆ ಪೆಟ್ಟಿಗೆಯಲ್ಲಿರುವುದೂ ಕುಂಡಲಸಹಿತವೂ ರತ್ನಕವಚಯುಕ್ತವೂ ಆದ ಆ ಮಗುವನ್ನು ಲೇಖಪತ್ರದೊಡನೆ ಕಾಲಿಂದಿಯ ಪ್ರವಾಹದಲ್ಲಿ ಬಿಟ್ಟರು.

**ಚಂಪಾಪುರೇಶ್ವರೋ ಯಾಂತೀಮಾನಾಯ್ಯಾದಿತ್ಯನಾಮಕಃ ।**
**ಬಾಲಭಾನುಮಿವಾಂತಃಸ್ಥಂ ಬಾಲಕಂ ಸ ಸವಿಸ್ಮಯಃ ॥ ೧೧೨ ॥**

**ಪಶ್ಯನ್ ಸ್ವದೇವ್ಯೈ ರಾಧಾಯ್ಯೈ ತುಕ್ತೇ ಸ್ಯಾದಿತಿ ಭಾವವಿತ್ ।**
**ದತ್ವಾಸಕೃದ್ವಿಲೋಕ್ಯೈನಂ ರಾಜಾ ಕರ್ಣೌ ಪರಿಸ್ಪೃಶನ್ ॥ ೧೧೩ ॥**

**ಅಸ್ತು ಕರ್ಣಾಭಿಧಾನೋಯಮಿತಿ ಸಾದರಮಬ್ರವೀತ್ ।**
**ಪಾಂಡೋಃ ಕುಂತ್ಯಾ ಚ ಮದ್ರ್ಯಾ ಚ ಪಾಣಿಗ್ರಹಣಪೂರ್ವಕಮ್ ॥**

**ಪ್ರಾಜಾಪತ್ಯೇನ ಸಂಬಂಧೋ ವಿವಾಹೇನಾಭವತ್ಪುನಃ ।**
**ಕುಂತ್ಯಾಮಜನಿ ಧರ್ಮಿಷ್ಠೋ ಧರ್ಮಪುತ್ರೋ ನರಾಧಿಪಃ ॥ ೧೧೫ ॥**

**ಭೀಮಸೇನೋನು ಪಾರ್ಥಶ್ಚ ತ್ರಯೋ ವರ್ಗತ್ರಯೋಪಮಾಃ ।**
**ಮದ್ರ್ಯಾಂ ಚ ನಕುಲೋ ಜ್ಯೇಷ್ಠಃ ಸಹದೇವಸ್ತತೋನ್ವಭೂತ್ ॥ ೧೧೬ ॥**

ಚಂಪಾಪುರಾಧಿಪತಿಯಾದ ಆದಿತ್ಯನೆಂಬ ರಾಜನು ಪ್ರವಾಹದಲ್ಲಿ ಹೋಗುತ್ತಿದ್ದ ಆ ಪೆಟ್ಟಿಗೆಯನ್ನು ತರಿಸಿ ಬಾಲಸೂರ್ಯನಂತೆ ಒಳಗಿರುವ ಬಾಲಕನನ್ನು ನೋಡಿ ಆಶ್ಚರ್ಯಯುಕ್ತನೂ ಮುಂದಿನ ವಿಷಯವನ್ನು ತಿಳಿಯುವವನೂ ಆಗಿ ತನ್ನ ಪತ್ನಿಯಾದ ರಾಧೆಗೆ ''ನಿನಗೆ ಮಗನಾಗಿರಲಿ'' ಎಂದು ಕೊಟ್ಟು ರಾಜನು ಈ ಬಾಲಕನನ್ನು ಪದೇಪದೇ ನೋಡಿ ಕಿವಿಗಳನ್ನು ಮುಟ್ಟಿದವನಾಗಿ ''ಇವನು ಕರ್ಣನೆಂಬ ಹೆಸರುಳ್ಳವನಾಗಿರಲಿ'' ಎಂದು ಪ್ರೀತಿಯುಕ್ತವಾಗಿ ಹೇಳಿದನು. ಪಾಂಡುವಿಗೆ ಕುಂತಿಯೊಡನೆಯೂ ಮಾದ್ರಿಯೊಡನೆಯೂ ಪಾಣಿಗ್ರಹಣ ಪೂರ್ವಕವಾಗಿ ಪ್ರಾಜಾಪತ್ಯ ವಿವಾಹದಿಂದ ಪುನಃ ಸಂಬಂಧವಾಯಿತು. ಕುಂತಿಯಲ್ಲಿ ಧರ್ಮಿಷ್ಠನೂ ನರಾಧಿಪನೂ ಆದ ಧರ್ಮಪುತ್ರನೂ ಭೀಮಸೇನನೂ ಬಳಿಕ ಪಾರ್ಥನೂ ಧರ್ಮ ಅರ್ಥ ಕಾಮ ಸಮಾನರಾದ ಮೂರು ಮಂದಿ ಮಕ್ಕಳಾದರು. ಮಾದ್ರಿಯಲ್ಲಿಯೂ ಹಿರಿಯನಾದ ನಕುಲನೂ ತರುವಾಯ ಸಹದೇವನೂ ಹುಟ್ಟಿದರು.

**ಧೃತರಾಷ್ಟ್ರಾಯ ಗಾಂಧಾರೀ ದತ್ತಾ ದುರ್ಯೋಧನೋಜನಿ ।**
**ತಯೋರ್ದುಃಶಾಸನಃ ಪಶ್ಚಾದಥ ದುರ್ಮರ್ಷಣಸ್ತತಃ ॥ ೧೧೭ ॥**

**ದುರ್ಧರ್ಷಣಾದ್ಯಾಃ ಸರ್ವೇಽಪಿ ಶತಮೇಕಂ ಮಹೌಜಸಃ ।**
**ಏವಂ ಸುಖೇನ ಸರ್ವೇಷಾಂ ಕಾಲೇ ಗಚ್ಛತಿ ಲೀಲಯಾ ॥ ೧೧೮ ॥**

**ಅನ್ಯೇದ್ಯುಃ ಸುಪ್ರತಿಷ್ಠಾಖ್ಯೋ ಮುನೀಂದ್ರೋ ಗಂಧಮಾದನೇ ।**
**ಗಿರೌ ಸನ್ನಿಹಿತಃ ಶೂರವೀರಾಖ್ಯೋ ವಂದಿತುಂ ನಿಜೈಃ ॥ ೧೧೯ ॥**

**ಪುತ್ರಪೌತ್ರಾದಿಭಿಃ ಸಾರ್ಧಂ ಗತ್ವಾಭ್ಯರ್ಚ್ಯಾಭಿನುತ್ಯ ತಮ್ ।**
**ಶ್ರುತ್ವಾ ಧರ್ಮಂ ತದುದ್ದಿಷ್ಟಂ ಸ ಸಂವೇಗಪರಾಯಣಃ ॥ ೧೨೦ ॥**

**ಕೃತ್ವಾಭಿಷೇಚನಂ ದತ್ವಾ ರಾಜ್ಯಮಂಧಕವೃಷ್ಟಯೇ ।**
**ಯೋಗ್ಯೋಽಯಮಿತಿ ಸಂಯೋಜ್ಯ ಯೌವರಾಜ್ಯಂ ಕನೀಯಸಿ ॥ ೧೨೧ ॥**

**ಸಂಯಮಂ ಸ್ವಯಮಾದಾಯ ತಪಾಂಸ್ಯುಚ್ಚೈಃ ಸಮಾಚರತ್ ।**
**ಗತೇಷು ದ್ವಾದಶಾಬ್ದೇಷು ಪರ್ವತೇ ಗಂಧಮಾದನೇ ॥ ೧೨೨ ॥**

**ಪ್ರತಿಮಾಯೋಗಮಾಲಂಬ್ಯ ಸುಪ್ರತಿಷ್ಠಸ್ಯ ತಿಷ್ಠತಃ ।**
**ದೇವಃ ಸುದರ್ಶನೋ ನಾಮ ಚಕಾರೋಪದ್ರವಂ ಕ್ರುಧಾ ॥ ೧೨೩ ॥**

ಧೃತರಾಷ್ಟ್ರನಿಗೆ ಗಾಂಧಾರಿಯು ಕೊಡಲ್ಪಟ್ಟಳು. ಆ ದಂಪತಿಗಳಿಗೆ ದುರ್ಯೋಧನ, ದುಃಶಾಸನ, ದುರ್ಮರ್ಷಣ, ದುರ್ಧರ್ಷಣ ಮೊದಲಾದ ಮಹಾ ತೇಜಸ್ವಿಗಳಾದ ನೂರೊಂದು ಮಂದಿ ಮಕ್ಕಳಾದರು. ಈ ರೀತಿಯಾಗಿ ಸುಖದಿಂದಲೂ ವಿನೋದದಿಂದಲೂ ಎಲ್ಲರ ಕಾಲವು ಕಳೆಯುತ್ತಿರಲು ಮತ್ತೊಂದು ದಿವಸ ಗಂಧಮಾದನಪರ್ವತದಲ್ಲಿ ಸುಪ್ರತಿಷ್ಠನೆಂಬ ಮುನೀಂದ್ರನು ಬಂದಿದ್ದನು. ಅವನನ್ನು ವಂದಿಸುವುದಕ್ಕೋಸ್ಕರ ಶೂರವೀರನೆಂಬ ರಾಜನು ತನ್ನ ಮಕ್ಕಳು ಮೊಮ್ಮಕ್ಕಳೊಡನೆ ಹೋಗಿ ಪೂಜಿಸಿ ಸ್ತುತಿಸಿ ಅವನು ಹೇಳಿದ ಧರ್ಮವನ್ನು ಕೇಳಿ ಅವನು ಸಂವೇಗಪರಾಯಣನಾಗಿ ಇವನು ಯೋಗ್ಯನೆಂದು ಅಂಧಕವೃಷ್ಟಿಗೆ ಪಟ್ಟಾಭಿಷೇಕವನ್ನು ಮಾಡಿ ರಾಜ್ಯವನ್ನು ಕೊಟ್ಟು ಕಿರಿಯನಾದ ನರಪತಿವೃಷ್ಟಿಯಲ್ಲಿ ಯುವರಾಜಪದವಿಯನ್ನು ಸಂಯೋಜಿಸಿ ತಾನು ಸಂಯಮವನ್ನು ಸ್ವೀಕರಿಸಿ ಶ್ರೇಷ್ಠವಾದ ತಪಸ್ಸುಗಳನ್ನಾಚರಿಸಿದನು. ಗಂಧಮಾದನಪರ್ವತದಲ್ಲಿ ಪ್ರತಿಮಾಯೋಗವನ್ನಾಶ್ರಯಿಸಿ ನಿಂತಿರುವ ಸುಪ್ರತಿಷ್ಠಮುನಿಪುಂಗವನಿಗೆ ಹನ್ನೆರಡು ವರ್ಷಗಳು ಕಳೆಯುತ್ತಿರಲು ಸುದರ್ಶನನೆಂಬ ದೇವನು ಬಂದು ಕೋಪದಿಂದ ಅವನಿಗೆ ಉಪದ್ರವವನ್ನು ಮಾಡಿದನು.

**ಉಪಸರ್ಗಂ ವಿಜಿತ್ಯಾಸ್ಯ ಸೋಢ್ವಾಶೇಷಪರೀಷಹಾನ್ ।**
**ಧ್ಯಾನೇನಾಹತ್ಯ ಘಾತೀನಿ ಪ್ರಾದುರಾಸೀತ್ಸ ಕೇವಲೀ ॥ ೧೨೪ ॥**

ಆ ಮುನಿಯು ಈ ದೇವನ ಉಪಸರ್ಗವನ್ನು ಜಯಿಸಿ ಸಮಸ್ತಪರೀಷಹಗಳನ್ನು ಸಹಿಸಿ ಧ್ಯಾನದಿಂದ ಘಾತಿಕರ್ಮಗಳನ್ನು ನಾಶಮಾಡಿ ಕೇವಲಿಯಾಗಿ ಪ್ರಾದುರ್ಭವಿಸಿದನು.

**ದೇವೈರಂಧಕವೃಷ್ಟಿಶ್ಚ ಸಹ ಪೂಜಾರ್ಥಮಾಗತಃ ।**
**ಅಪೃಚ್ಛದೇವಂ ದೇವಾಯಂ ದೇವಸ್ತೇ ಕೇನ ಹೇತುನಾ ॥ ೧೨೫ ॥**

**ಮಹೋಪಸರ್ಗಂ ಪೂಜ್ಯಸ್ಯ ಕೃತವಾನಿತಿ ವಿಸ್ಮಯಾತ್ ।**
**ತದುಕ್ತ್ಯವಸಿತೌ ವ್ಯಕ್ತಂ ಜಿನೇಂದ್ರೋಪ್ಯೇವಮಬ್ರವೀತ್ ॥ ೧೨೬ ॥**

ಆಗ ದೇವರ್ಕಳೊಡನೆ ಅಂಧಕವೃಷ್ಟಿಯೂ ಪೂಜೆಗೋಸ್ಕರ ಬಂದು ''ಸ್ವಾಮಿಯೆ ! ಪೂಜ್ಯನಾದ ನಿನಗೆ ಈ ದೇವನು ಯಾವ ಕಾರಣದಿಂದ ಹೀಗೆ ಮಹೋಪಸರ್ಗವನ್ನು ಮಾಡಿದನು ?'' ಎಂದು ಆಶ್ಚರ್ಯದಿಂದ ಪ್ರಶ್ನೆ ಮಾಡಿದನು. ಅವನ ಮಾತು ಮುಗಿಯುತ್ತಿರಲು ಸುಪ್ರತಿಷ್ಠಜಿನೇಶ್ವರನೂ ವ್ಯಕ್ತವಾಗಿ ಈ ರೀತಿಯಾಗಿ ಹೇಳಿದನು.

**ದ್ವೀಪೇಸ್ಮಿನ್ ಭಾರತೇ ಕ್ಷೇತ್ರೇ ಕಲಿಂಗವಿಷಯೇ ಪುರೇ ।**
**ಕಾಂಚ್ಯಾಂ ವಣಿಕ್ಸುತಾ ಶೂರದತ್ತೋನ್ಯಶ್ಚ ಸುದತ್ತವಾಕ್ ॥ ೧೨೭ ॥**

''ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕಲಿಂಗದೇಶದ ಕಾಂಚೀಪುರದಲ್ಲಿ ಶೂರದತ್ತಸುದತ್ತರೆಂಬೀರ್ವರು ವೈಶ್ಯಪುತ್ರರಿದ್ದರು.

**ಲಂಕಾದ್ವೀಪಾದಿಷು ಸ್ವೈರಂ ಸಮಾವರ್ಜ್ಯ ನಿಜಂ ಧನಮ್ ।**
**ಪುರೋ ನ್ಯಕ್ಷಿಪತಾಂ ಗೂಢಂ ಪ್ರವೇಶೇ ಶುಲ್ಕಭೀಲುಕೌ ॥ ೧೨೮ ॥**

**ಮೂಲೇ ಕ್ಷುಪವಿಶೇಷಸ್ಯ ಸಾಭಿಜ್ಞಾನಮುಭಾನ್ಯದಾ ।**
**ಕಶ್ಚಿನ್ಮದ್ಯಪ್ರಯೋಗಾರ್ಥಂ ವನೇ ತದ್ಯೋಗ್ಯಭೂರುಹಾಮ್ ॥ ೧೨೯ ॥**

**ಮೂಲಾನ್ಯುತ್ಖನ್ಯ ಸಂಗೃಹ್ಣನ್ ವಿಲೋಕ್ಯ ಬಹು ತದ್ಧನಮ್ ।**
**ಕಿಮನೇನ ವೃಥಾ ಮೂಲಖನನೇನಾಲ್ಪಹೇತುನಾ ॥ ೧೩೦ ॥**

**ಸುಪ್ರಭೂತಮಿದಂ ಲಬ್ಧಂ ಧನಂ ದಾರಿದ್ರ್ಯವಿದ್ರುತಿವ್ ।**
**ವಿದಧಾತ್ಯಾಮೃತೇರ್ಭೋಗ್ಯೈರಿತ್ಯಾದಾಯ ಗತಸ್ತತಃ ॥ ೧೩೧ ॥**

ಅವರು ಲಂಕೆಯೇ ಮೊದಲಾದ ದ್ವೀಪಗಳಲ್ಲಿ ಯಥೇಚ್ಛವಾಗಿ ದ್ರವ್ಯವನ್ನು ಸಂಪಾದಿಸಿಕೊಂಡು ಬಂದು ಪುರಪ್ರವೇಶದಲ್ಲಿ ಸುಂಕದ ಭಯವುಳ್ಳವರಾಗಿ ತಮ್ಮ ಆ ಧನವನ್ನು ಗುಪ್ತವಾಗಿ ಒಂದು ಸಣ್ಣಮರದ ಬುಡದಲ್ಲಿ ಗುರುತಿನೊಡನೆ ಕೂಡಿರುವಂತೆ ಹುಗಿದಿಟ್ಟರು. ಬಳಿಕ ಮತ್ತೊಂದು ದಿವಸ ಒಬ್ಬಾನೊಬ್ಬ ಮನುಷ್ಯನು (ಈಡಿಗರವನು) ಹೆಂಡದ ಪ್ರಯೋಗಕ್ಕೋಸ್ಕರ ವನದಲ್ಲಿ ಆ ಹೆಂಡಕ್ಕೆ ಯೋಗ್ಯವಾದ ಮರಗಳ ಬುಡಗಳನ್ನು ಅಗೆದು ಹೆಂಡವನ್ನು ಸಂಗ್ರಹಿಸುವಾಗ ಆ ಬಹುದ್ರವ್ಯವನ್ನು ನೋಡಿ ''ವ್ಯರ್ಥವಾಗಿ ಸ್ವಲ್ಪಪ್ರಯೋಜನವುಳ್ಳ ಈ ಮರದ ಬುಡವನ್ನಗೆಯುವುದರಿಂದೇನು ? ಅಧಿಕವಾಗಿ ದೊರೆತಿರುವ ಈ ದ್ರವ್ಯವು ಸಾಯುವವರೆಗೂ ಭೋಗಗಳಿಂದ ಬಡತನವನ್ನು ಓಡಿಸುತ್ತದೆ'' ಎಂದಂದುಕೊಂಡು ಆ ಧನವನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಹೋದನು.

**ತದಾಗತ್ಯ ವಣಿಕ್ಪುತ್ರೌ ತತ್ಪ್ರದೇಶೇ ನಿಜಂ ಧನಮ್ ।**
**ಅನರೀಕ್ಷ್ಯ ಮೃತೌ ಹತ್ವಾ ಶ್ರದ್ದಧಾನೌ ಪರಸ್ಪರಮ್ ॥ ೧೩೨ ॥**

**ಬಧ್ವಾಯುಃ ಕ್ರೋಧಲೋಭಾಭ್ಯಾಮಾದ್ಯಂ ನರಕಮೀಯತುಃ ।**
**ತತ್ರ ದುಃಖಂ ಚಿರಂ ಭುಕ್ತ್ವಾ ತತೋ ವಿಂಧ್ಯಾದ್ರಿಕಂದರೇ ॥ ೧೩೩ ॥**

**ಜಾತೌ ಮೇಷೌ ಪುನಸ್ತತ್ರಾಪ್ಯನ್ಯೋನ್ಯವಧಕಾರಿಣೌ ।**
**ಗೋಕುಲೇ ವೃಷಭೌ ಜಾತೌ ಗಂಗಾತಟನಿವಾಸಿನಿ ॥ ೧೩೪ ॥**

ಆಗ ಆ ವೈಶ್ಯಪುತ್ರರು ಬಂದು ಆ ಪ್ರದೇಶದಲ್ಲಿ ತಮ್ಮ ದ್ರವ್ಯವನ್ನು ಕಾಣದೆ ಪರಸ್ಪರವಾಗಿ ಅವರೇ ಅಪಹರಿಸಿದರೆಂದು ನಂಬುವವರಾಗಿ ಹೊಡೆದುಕೊಂಡು ಮೃತರಾಗಿ ಕ್ರೋಧದಿಂದಲೂ ಲೋಭದಿಂದಲೂ ಆಯುಷ್ಯವನ್ನು ಬಂಧಿಸಿಕೊಂಡು ಮೊದಲನೆಯ ನರಕವನ್ನು ಸೇರಿದರು. ಅಲ್ಲಿ ಬಹುಕಾಲದವರೆಗೆ ದುಃಖವನ್ನನು ಭವಿಸಿ ಅಲ್ಲಿಂದ ಬಂದು ವಿಂಧ್ಯಪರ್ವತದ ಗುಹೆಯಲ್ಲಿ ಕುರಿ–ಟಗರುಗಳಾಗಿ ಹುಟ್ಟಿದುವು. ಪುನಃ ಅಲ್ಲಿಯೂ ಪರಸ್ಪರವಾಗಿ ವಧೆಯನ್ನು ಮಾಡಿಕೊಂಡವುಗಳಾಗಿ ಗಂಗಾನದೀತೀರದಲ್ಲಿರುವ ಗೋಕುಲದಲ್ಲಿ ಗೂಳಿಗಳಾಗಿ ಹುಟ್ಟಿದುವು.

**ತತ್ರ ಜನ್ಮಾಂತರದ್ವೇಷಾತ್ಕೃತಯುದ್ಧೌ ಗತಾಸುಕೌ ।**
**ಸಮ್ಮೇದಪರ್ವತೇ ಜಾತೌ ವಾನರೌ ವಾ ನರೌ ಧಿಯಾ ॥ ೧೩೫ ॥**

ಅಲ್ಲಿ ಜನ್ಮಾಂತರದ್ವೇಷದಿಂದ ಕಾದಾಡಿದುವುಗಳಾಗಿ ಸತ್ತು ಸಮ್ಮೇದಪರ್ವತದಲ್ಲಿ, ಬುದ್ಧಿಯಿಂದ ಮನುಷ್ಯರಂತೆ, ಕಪಿಗಳಾಗಿ ಹುಟ್ಟಿದುವು.

**ಶಿಲಾಸಲಿಲಹೇತೋಸ್ತೌ ಕಲಹಂ ಖಲು ಚಕ್ರತುಃ ।**
**ಮೃತಸ್ತಯೋಃ ಸಪದ್ಯೇಕಃ ಪರಃ ಕಂಠಗತಾಸುಕಃ ॥ ೧೩೬ ॥**

ಅಲ್ಲಿ ಕಲ್ಲಿನಿಂದ ಹೊರಡುವ ಜಲದ ನಿಮಿತ್ತದಿಂದ ಆ ಕಪಿಗಳು ಕಾದಾಡಿದುವು. ಅವುಗಳಲ್ಲಿ ಒಂದು ತತ್ಕ್ಷಣದಲ್ಲಿ ಸತ್ತಿತು. ಮತ್ತೊಂದು ಕಂಠಗತಪ್ರಾಣವಾಯಿತು.

**ಸುರದೇವಾದಿಗುರ್ವಂತಚಾರಣಾಭ್ಯಾಂ ಸಮುತ್ಸುಕಃ ।**
**ಶ್ರುತ್ವಾ ಪಂಚನಮಸ್ಕಾರಂ ಧರ್ಮಶ್ರುತಿಪುರಸ್ಸರಮ್ ॥ ೧೩೭ ॥**

**ಸೌಧರ್ಮಕಲ್ಪೇ ಚಿತ್ರಾಂಗದಾಖ್ಯೋ ದೇವೋಜನಿಷ್ಟ ಸಃ ।**
**ತತೋ ನಿರ್ಗತ್ಯ ಜಂಬ್ವಾದಿದ್ವೀಪೇ ಭರತಮಧ್ಯಗೇ ॥ ೧೩೮ ॥**

**ಸುರಮ್ಯವಿಷಯೇ ಪೌದನೇಶಃ ಸುಸ್ಥಿತಭೂಪತೇಃ ।**
**ಸುಲಕ್ಷಣಾಯಾಂ ಪುತ್ರೋಭೂತ್ಸುಪ್ರತಿಷ್ಠೋ ವರಿಷ್ಠಧೀಃ ॥ ೧೩೯ ॥**

ಅದು ಸುರಗುರು ದೇವಗುರುಗಳೆಂಬೀರ್ವರು ಚಾರಣಮುನಿಗಳಿಂದ ಧರ್ಮಶ್ರವಣಪೂರ್ವಕವಾಗಿ ಪಂಚನಮಸ್ಕಾರವನ್ನು ಕುತೂಹಲವುಳ್ಳುದಾಗಿ ಕೇಳಿ ಸತ್ತು ಸೌಧರ್ಮಕಲ್ಪದಲ್ಲಿ ಚಿತ್ರಾಂಗದನೆಂಬ ದೇವನಾಗಿ ಜನಿಸಿತು. ಆಯುಷ್ಯಾವಸಾನದಲ್ಲಿ ಅಲ್ಲಿಂದ ಹೊರಟು ಜಂಬೂದ್ವೀಪದ ಭರತಕ್ಷೇತ್ರದ ಮಧ್ಯದಲ್ಲಿರುವ ಸುರಮ್ಯದೇಶದಲ್ಲಿ ಪೌದನಾಧಿಪತಿಯಾದ ಸುಸ್ಥಿತನೆಂಬ ರಾಜನಿಗೆ ಆತನ ಪತ್ನಿಯಾದ ಸುಲಕ್ಷಣಾದೇವಿಯಲ್ಲಿ ಉತ್ಕೃಷ್ಟವಾದ ಬುದ್ಧಿಯುಳ್ಳ ಸುಪ್ರತಿಷ್ಠನೆಂಬ ಪುತ್ರನಾದನು.

**ಕದಾಚಿತ್ಪ್ರಾವೃಡಾರಂಭೇ ಗಿರಾವಸಿತನಾಮನಿ ।**
**ಯುದ್ಧಂ ಮರ್ಕಟಯೋರ್ವೀಕ್ಷ್ಯ ಸ್ಮೃತಪ್ರಾಗ್ಜನ್ಮಚೇಷ್ಟಿತಃ ॥ ೧೪೦ ॥**

**ಸುಧರ್ಮಾಚಾರ್ಯಮಾಸಾದ್ಯ ದೀಕ್ಷಿತ್ವಾಭವಮೀದೃಶಃ ।**
**ಶೂರದತ್ತಚರಃ ಸೋಹಂ ಸುದತ್ತೋಪ್ಯನುಜೋ ಭವೇ ॥ ೧೪೧ ॥**

**ಭ್ರಾಂತ್ವಾತ್ರ ಸಿಂಧುತೀರಸ್ಥಮೃಗಾಯಣತಪಸ್ವಿನಃ ।**
**ವಿಶಾಲಾಯಾಶ್ಚ ತೋಕೋಭೂದ್ಗೌತಮಾಖ್ಯಃ ಕುದರ್ಶನಾತ್॥ ೧೪೨ ॥**

**ತಪಃ ಪಂಚಾಗ್ನಿಮಧ್ಯೇಸೌ ವಿಧಾಯ ಜ್ಯೋತಿಷಾಂ ಗಣೇ ।**
**ದೇವಃ ಸುದರ್ಶನೋ ನಾಮ್ನಾ ಭೂತ್ವಾ ಪ್ರಾಗ್ಜನ್ಮವೈರತಃ ॥ ೧೪೩ ॥**

**ಮಮಾಯಮಕರೋದೀದೃಗಿತಿ ತದ್ವಾಕ್ಯಮಾದರಾತ್ ।**
**ಶ್ರುತ್ವಾ ಸುದರ್ಶನೋ ಮುಕ್ತವೈರಃ ಸದ್ಧರ್ಮಮಗ್ರಹೀತ್ ॥ ೧೪೪ ॥**

ಅವನು ಒಂದಾನೊಂದು ಕಾಲದಲ್ಲಿ ವರ್ಷಋತುವಿನ ಆರಂಭದಲ್ಲಿ ಅಸಿತವೆಂಬ ಪರ್ವತದಲ್ಲಿ ಎರಡು ಕಪಿಗಳ ಕಾದಾಟವನ್ನು ನೋಡಿ ಪೂರ್ವಜನ್ಮದ ಚೇಷ್ಟೆಯನ್ನು ಸ್ಮರಿಸಿಕೊಂಡವನಾಗಿ ಸುಧರ್ಮಾಚಾರ್ಯನನ್ನು ಕಂಡು ದೀಕ್ಷೆಯನ್ನು ತೆಗೆದುಕೊಂಡು ಇಂಥವನಾದೆನು. ನಾನು ಮೊದಲು ಆ ಶೂರದತ್ತವೈಶ್ಯನಾಗಿದ್ದವನು. ತಮ್ಮನಾಗಿದ್ದ ಸುದತ್ತನೂ ಸಂಸಾರದಲ್ಲಿ ತಿರುಗಿ ಇಲ್ಲಿ ಸಿಂಧುನದೀತೀರದಲ್ಲಿರುವ ಮೃಗಾಯಣನೆಂಬ ತಪಸ್ವಿಗೂ ಆತನ ಪತ್ನಿಯಾದ ವಿಶಾಲೆಗೂ ಗೌತಮನೆಂಬ ಪುತ್ರನಾದನು. ಇವನು ಮಿಥ್ಯಾದರ್ಶನದಿಂದ ಪಂಚಾಗ್ನಿಮಧ್ಯದಲ್ಲಿ ತಪಸ್ಸನ್ನು ಮಾಡಿ ಸತ್ತು ಜ್ಯೋತಿರ್ದೇವರ್ಕಳ ಸಮೂಹದಲ್ಲಿ ಹೆಸರಿನಿಂದ ಸುದರ್ಶನನೆಂಬ ದೇವನಾಗಿ ಪೂರ್ವಜನ್ಮವೈರದಿಂದ ಇವನು ನನಗೆ ಇಂತಹ ಉಪಸರ್ಗವನ್ನು ಮಾಡಿದನು'' ಈ ಪ್ರಕಾರವಾಗಿ ಆ ಸುಪ್ರತಿಷ್ಠಕೇವಲಿಯ ವಾಕ್ಯವನ್ನು ಪ್ರೀತಿಯಿಂದ ಕೇಳಿ ಆ ಸುದರ್ಶನದೇವನು ವೈರವನ್ನು ತ್ಯಜಿಸಿದವನಾಗಿ ಸದ್ಧರ್ಮವನ್ನು ಗ್ರಹಣ ಮಾಡಿದನು.

**ಅಥಾತೋಂಧಕವೃಷ್ಟಿಶ್ಚ ಶ್ರುತ್ವಾ ಮುಕುಲಯನ್ಕರೌ ।**
**ಸ್ವಪೂರ್ವಭವಸಂಬಂಧಮಪೃಚ್ಛಜ್ಜಿನಪುಂಗವಮ್ ॥ ೧೪೫ ॥**

ಬಳಿಕ ಅಂಧಕವೃಷ್ಟಿಯೂ ಈ ಸುಪ್ರತಿಷ್ಠಕೇವಲಿಯಿಂದ ಧರ್ಮವನ್ನು ಕೇಳಿ ಕೈಗಳನ್ನು ಮುಗಿದವನಾಗಿ ತನ್ನ ಪೂರ್ವಸಂಬಂಧವನ್ನು ಕುರಿತು ಜಿನೇಶ್ವರನನ್ನು ಪ್ರಶ್ನೆಮಾಡಿದನು.

**ವೀತರಾಗೋಪಿ ಸೋಪ್ಯಾಹ ತತ್ಪೃಷ್ಟಂ ಮೃಷ್ಟಗೀರ್ಗುಣಃ ।**
**ನಿರ್ನಿಮಿತ್ತಹಿತಾಖ್ಯಾನಂ ನಾಮ ತೇಷು ನಿಸರ್ಗಜಮ್ ॥ ೧೪೬ ॥**

ವೀತರಾಗನಾಗಿದ್ದರೂ ಆ ಸುಪ್ರತಿಷ್ಠಕೇವಲಿಯೂ ಮಧುರವಾದ ವಚನಗುಣವುಳ್ಳವನಾಗಿ ಅಂಧಕವೃಷ್ಟಿಯು ಕೇಳಿದುದನ್ನು ಹೇಳಿದನು. ಜಿನರಲ್ಲಿ ನಿರ್ನಿಮಿತ್ತವಾಗಿ ಹಿತವನ್ನು ಹೇಳುವಿಕೆಯೆಂಬುಂದು ಸ್ವಾಭಾವಿಕವಾದುದು.

**ದ್ವೀಪೇತ್ರೈವ ವಿನೀತಾಯಾಂ ನರೇಂದ್ರೋನಂತವೀರ್ಯವಾಕ್ ।**
**ಸುರೇಂದ್ರದತ್ತಸ್ತತ್ರೈವ ವೈಶ್ಯೋ ವೈಶ್ರವಣೋಪಮಃ ॥ ೧೪೭ ॥**

''ಇದೇ ಜಂಬೂದ್ವೀಪದ ಅಯೋಧ್ಯಾನಗರದಲ್ಲಿ ಅನಂತವೀರ್ಯನೆಂಬ ರಾಜನಿದ್ದನು. ಅದೇ ನಗರದಲ್ಲಿ ಕುಬೇರನಿಗೆ ಸಮಾನನಾದ ಸುರೇಂದ್ರದತ್ತನೆಂಬ ವೈಶ್ಯನಿದ್ದನು.

**ದಶಭಿರ್ನಿತ್ಯಪೂಜಾಯಾಮಷ್ಟಮ್ಯಾಂ ದ್ವಿಗುಣೈಸ್ತತಃ ।**
**ಚತುರ್ಗುಣೈರಮಾವಾಸ್ಯಾಯಾಂ ಪರ್ವಣ್ಯಷ್ಟಭಿರ್ಗುಣೈಃ ॥ ೧೪೮ ॥**

**ದೀನಾರೈರರ್ಹತಾಂ ಪೂಜಾಂ ಕರೋತಿ ವಿಹಿತವ್ಯಯೈಃ ।**
**ಸಹಿತಃ ಪಾತ್ರದಾನೇನ ಸಶೀಲಃ ಸೋಪವಾಸಕಃ ॥ ೧೪೯ ॥**

ಅವನು ಹತ್ತು ಸುವರ್ಣಮುದ್ರೆಗಳನ್ನು ವೆಚ್ಚಮಾಡಿ (ನಾಣ್ಯಗಳ ವ್ಯಯದಿಂದ) ಅರ್ಹತ್ಪರಮೇಶ್ವರರ ನಿತ್ಯಪೂಜೆಯನ್ನೂ ಅಷ್ಟಮಿಯಲ್ಲಿ ಇಪ್ಪತ್ತು ಸುವರ್ಣಮುದ್ರೆಗಳಿಂದಲೂ ಅಮಾವಾಸ್ಯೆಯಲ್ಲಿ ನಲ್ವತ್ತು ಸುವರ್ಣಮುದ್ರೆಗಳಿಂದಲೂ ಪರ್ವ–ಚತುರ್ದಶಿಯಲ್ಲಿ ಎಂಬತ್ತು ಸುವರ್ಣಮುದ್ರೆಗಳಿಂದಲೂ ಅರ್ಹತ್ಪರಮೇಶ್ವರರ ಪೂಜೆಯನ್ನು ಪಾತ್ರದಾನದೊಡನೆ ಸಹಿತನಾಗಿಯೂ ಶೀಲೋಪವಾಸಸಹಿತನಾಗಿಯೂ ಮಾಡುತ್ತಾನೆ.

**ಧರ್ಮಶೀಲ ಇತಿ ಖ್ಯಾತಿಂ ಸ ಸಮಾಪಾಪಪಾಪಕಃ ।**
**ಗಂತುಂ ವಾರಿಪಥಂ ವಾಂಛನ್ನನ್ಯೇದ್ಯುರ್ವಣಿಜಾಂ ವರಃ ॥ ೧೫೦ ॥**

**ದ್ವಾದಶಾಬ್ದೈಃ ಸಮಾವರ್ಜ್ಯ ಧನಮಾಗಂತುಕಃ ಪುರಮ್ ।**
**ಜಿನಪೂಜಾವ್ಯಯಾಯಾರ್ಥಂ ದ್ವಾದಶಾಬ್ದನಿಬಂಧನಮ್ ॥ ೧೫೧ ॥**

**ಮಿತ್ರಸ್ಯ ರುದ್ರದತ್ತಸ್ಯ ಬ್ರಾಹ್ಮಣಸ್ಯ ಕರೇ ನ್ಯಧಾತ್ ।**
**ಅನೇನ ಜಿನಪೂಜಾದಿ ಕುರ್ವಹಂ ವಾ ತ್ವಮಿತ್ಯಸೌ ॥ ೧೫೨ ॥**

ವೈಶ್ಯಶ್ರೇಷ್ಠನೂ ಪಾಪರಹಿತನೂ ಆದ ಆ ಸುರೇಂದ್ರದತ್ತನು "ಧರ್ಮಶೀಲ" ಎಂಬ ಖ್ಯಾತಿಯನ್ನು ಪಡೆದನು. ಮತ್ತೊಂದು ದಿವಸ ಇವನು ಸಮುದ್ರ ಪ್ರಯಾಣ ವನ್ನು ಮಾಡಿ ಹನ್ನೆರಡು ವರ್ಷಗಳಿಂದ ಧನವನ್ನು ಸಂಪಾದಿಸಿ ಪಟ್ಟಣಕ್ಕೆ ಬರ ಬೇಕೆಂದು ಇಚ್ಛೆಯುಳ್ಳವನಾಗಿ ಜಿನಪೂಜೆಯ ವೆಚ್ಚಕ್ಕೋಸ್ಕರ ಹನ್ನೆರಡು ವರ್ಷ ಗಳಿಗೆ ಬೇಕಾಗುವ ದ್ರವ್ಯವನ್ನು ತನ್ನ ಮಿತ್ರನಾದ ರುದ್ರದತ್ತನೆಂಬ ಬ್ರಾಹ್ಮಣನ ಕೈಯಲ್ಲಿ " ಈ ದ್ರವ್ಯದಿಂದ ನೀನು ನನ್ನಂತೆ ಜಿನಪೂಜಾದಿಕಾರ್ಯವನ್ನು ಮಾಡು" ಎಂದು ಹೇಳಿ ಕೊಟ್ಟನು.

**ತಸ್ಮಿನ್ ಗತೇ ಸ ವಿಪ್ರೋಽಪಿ ಸ್ತ್ರೀದ್ಯೂತವ್ಯಸನಾದಿಭಿಃ ।**
**ಧನಂ ಕತಿಪಯೈರೇವ ದಿನೈರ್ವ್ಯಯಮನೀನಯತ್ ॥ ೧೫೩ ॥**

ಸುರೇಂದ್ರದತ್ತನು ಹೊರಟುಹೋದ ಮೇಲೆ ಆ ಬ್ರಾಹ್ಮಣನು ಕೆಲವೇ ದಿನ ಗಳಲ್ಲಿ ಸ್ತ್ರೀವ್ಯಸನದ್ಯೂತವ್ಯಸನಾದಿಗಳಿಂದ ಆ ದ್ರವ್ಯವನ್ನು ವೆಚ್ಚಮಾಡಿದನು.

**ತತಶ್ಚೌರ್ಯಾದಿದುಷ್ಕರ್ಮಸಕ್ತಂ ತಲವರೋ ದ್ವಿಜಮ್ ।**
**ಶ್ಯೇನಕಾಖ್ಯೋ ಭ್ರಮನ್ ದೃಷ್ಟ್ವಾ ರಾತ್ರೌ ತ್ವಾಂ ಹನ್ಮ್ಯಹಂ ನ ಹಿ ॥**

**ದ್ವಿಜಾಖ್ಯಾಧಾರಿಣಂ ಯಾಹಿ ನಗರಾದ್ದೃಕ್ಷ್ಯಸೇ ಯದಿ ।**
**ಪುನಃ ಕೃತಾಂತವಕ್ತ್ರಂ ತ್ವಂ ನೇಷ್ಯಸೇ ದುಷ್ಕ್ರಿಯೋ ಮಯಾ ॥ ೧೫೫ ॥**

**ಇತ್ಯತ್ಯತರ್ಜಯತ್ಸೋಽಪಿ ಕಾಲಕಾಖ್ಯೇನ ಪಾಪಿನಾ ।**
**ಸಮಮುಲ್ಕಾಮುಖೀವ್ಯಾಧನಿವಾಸಪತಿನಾಗಮತ್ ॥ ೧೫೬ ॥**

ತರುವಾಯ ಕಳ್ಳತನವೇ ಮೊದಲಾದ ದುಷ್ಕಾರ್ಯದಲ್ಲಿ ಆಸಕ್ತನಾದ ಆ ಬ್ರಾಹ್ಮಣನನ್ನು ರಾತ್ರಿಯಲ್ಲಿ ಸಂಚರಿಸುತ್ತಿದ್ದ ಶ್ಯೇನಕನೆಂಬ ತಳವಾರನು ಕಂಡು "ಬ್ರಾಹ್ಮಣನೆಂಬ ಹೆಸರನ್ನು ಧರಿಸಿರುವ ನಿನ್ನನ್ನು ನಾನು ಕೊಲ್ಲುವುದಿಲ್ಲ. ಪಟ್ಟಣ ದಿಂದ ಹೊರಟುಹೋಗು. ದುಷ್ಕಾರ್ಯವುಳ್ಳ ನೀನು ಪುನಃ ಕಾಣಿಸಿಕೊಂಡರೆ ಯಮನ ಬಾಯಿಗೆ ನನ್ನಿಂದ ಒಯ್ಯಲ್ಪಡುವೆ" ಎಂದು ಗದರಿಸಿದನು. ಆ ರುದ್ರ ದತ್ತನೂ ಹೋಗಿ ಉಲ್ಕಾಮುಖಿಯೆಂಬ ಬೇಡರ ನಿವಾಸದ ಅಧಿಪತಿಯೂ ಪಾಪಿಯೂ ಆದ ಕಾಲಕನೆಂಬವನೊಡನೆ ಸೇರಿದನು.

**ಸ ಕದಾಚಿದಯೋಧ್ಯಾಯಾಂ ಗೋಕುಲಾಪಹೃತೌ ದ್ವಿಜಃ ।**
**ಶ್ಯೇನಕೇನ ಹತೋಽಯಾಸೀನ್ಮಹಾಪಾಪಾದಧೋಗತಿಮ್ ॥ ೧೫೭ ॥**

ಒಂದಾನೊಂದು ಕಾಲದಲ್ಲಿ ಆ ಬ್ರಾಹ್ಮಣನು ಅಯೋಧ್ಯಾನಗರದಲ್ಲಿ ಗೋವುಗಳ ಅಪಹರಣದಲ್ಲಿ ಸಿಕ್ಕಿಬಿದ್ದು ಶ್ಯೇನಕ–ತಳವಾರನಿಂದ ಕೊಲ್ಲಲ್ಪಟ್ಟು ಮಹಾಪಾಪ ದಿಂದ ಅಧೋಗತಿಯನ್ನು ಪಡೆದನು.

**ತತಶ್ಚ್ಯುತ್ವಾ ಮಹಾಮತ್ಸ್ಯೋ ಹರಿರ್ದೃಷ್ಟಿವಿಷೋರಗಃ ।**
**ಶಾರ್ದೂಲಃ ಪಕ್ಷಿಣಾಮೀಶೋ ವ್ಯಾಲೋ ವ್ಯಾಧಶ್ಚ ಸಂಭವನ್ ॥**

**ಪ್ರವಿಶ್ಯಾಧೋಗತೀಃ ಸರ್ವಾಃ ಕೃಚ್ಛ್ರಾತ್ತಾಭ್ಯೋ ವಿನಿರ್ಗತಃ ।**
**ತ್ರಸಸ್ಥಾವರಭಾವೇನ ಚಿರಕಾಲಂ ಪರಿಭ್ರಮನ್ ॥ ೧೫೯ ॥**

**ಜಂಬೂಪಲಕ್ಷಿತೇ ದ್ವೀಪೇ ಭರತೇ ಕುರುಜಾಂಗಲೇ ।**
**ಹಾಸ್ತಿನಾಖ್ಯಪುರಂ ಪಾತಿ ಧರಾಧೀಶೇ ಧನಂಜಯೇ ॥ ೧೬೦ ॥**

**ಸುತೋ ಗೌತಮಗೋತ್ರಸ್ಯ ಸಂಬಭೂವ ದ್ವಿಜನ್ಮನಃ ।**
**ಕಪಿಷ್ಠಲಸ್ಯ ನಿಃಶ್ರೀಕಃ ಸೋಽನುಂದರ್ಯಾಶ್ಚ ಗೌತಮಃ ॥ ೧೬೧ ॥**

ಅಲ್ಲಿಂದ ಚ್ಯುತನಾಗಿ ಯಥಾಕ್ರಮವಾಗಿ ಮಹಾಮತ್ಸ್ಯವಾಗಿಯೂ ಸಿಂಹ ವಾಗಿಯೂ ದೃಷ್ಟಿವಿಷವುಳ್ಳ ಸರ್ಪವಾಗಿಯೂ ಹುಲಿಯಾಗಿಯೂ ಗರುಡಪಕ್ಷಿ ಯಾಗಿಯೂ ಸರ್ಪವಾಗಿಯೂ ಬೇಡರವನಾಗಿಯೂ ಹುಟ್ಟಿ ಎಲ್ಲಾ ನೀಚಗತಿ ಗಳನ್ನು ಪ್ರವೇಶಿಸಿ ಕಷ್ಟದಿಂದ ಅವುಗಳಿಂದ ಹೊರಟು ತ್ರಸಜೀವ ಸ್ಥಾವರಜೀವಭಾವ ದಿಂದ ಬಹುಕಾಲದವರೆಗೆ ತಿರುಗಿ ಬಳಿಕ ಅವನು ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕುರುಜಾಂಗಲದೇಶದಲ್ಲಿ ಧನಂಜಯನೆಂಬ ರಾಜನು ಹಸ್ತಿನಾಪುರವನ್ನು ಪರಿ ಪಾಲಿಸುತ್ತಿರಲು ಅಲ್ಲಿಗೆ ಗೌತಮಗೋತ್ರಜನಾದ ಕಪಿಷ್ಠಲನೆಂಬ ಬ್ರಾಹ್ಮಣನಿಗೂ ಆತನ ಪತ್ನಿಯಾದ ಅನುಂದರಿಗೂ ದರಿದ್ರನಾದ ಗೌತಮನೆಂಬ ಪುತ್ರನಾಗಿ ಜನಿಸಿದನು.

**ತತ್ಸಮುತ್ಪತ್ತಿಮಾತ್ರೇಣ ತಚ್ಛೇಷಮಭವತ್ಕುಲಮ್ ।**
**ಅಲಬ್ಧಾಂಧಾಃ ಕೃಶೀಭೂತಜಠರಃ ಪ್ರಕಟಾಸ್ಥಿಕಃ ॥ ೧೬೨ ॥**

**ಸಿರಾವನದ್ಧದುಷ್ಕಾಯೋ ಯೂಕಾಚಿತಶಿರೋರುಹಃ ।**
**ಶಯಾನಶ್ಚೈವ ಸರ್ವೈಶ್ಚ ತರ್ಜಿತೋ ಯತ್ರ ತತ್ರ ವಾ ॥ ೧೬೩ ॥**

**ಕರಾಗ್ರಕರ್ಪರೇಣೋಪಲಕ್ಷ್ಯಮಾಣೋಽನಪಾಯಿನಾ ।**
**ಸುಮಿತ್ರೇಣೇವ ಸರ್ವತ್ರ ಶರೀರಸ್ಥಿತಿಹೇತುನಾ ॥ ೧೬೪ ॥**

**ವಾಂಛಿತೇನ ರಸೇನೇವ ದೇಹೀತಿ ವಚಸಾ ತದಾ ।**
**ಲೋಲುಪೋ ನಿರ್ವೃತಿಂ ಪ್ರಾಪ್ತುಂ ಭಿಕ್ಷಾಮಾತ್ರೇಣ ದುರ್ವಿಧಃ ॥**

**ಕಾಕವತ್ಪರ್ವಸು ಸ್ನಾತಃ ಪಶ್ಯನ್ ಬಲಿವಿಸರ್ಜನಮ್ ।**
**ಅನಾಶ್ವಾನಿವ ಶೀತೋಷ್ಣವಾತಬಾಧಾಃ ಸಹನ್ ಮುಹುಃ ॥ ೧೬೬ ॥**

**ಮಲಧಾರೀ ಪರಿಭ್ರಷ್ಟಶೇಷೇಂದ್ರಿಯವಿಜೃಂಭಣಃ ।**
**ಜಿಹ್ವಾವಿಷಯಮೇವೇಚ್ಛನ್ ದಂಡಧಾರೀವ ಭೂಪತಿಃ ॥ ೧೬೭ ॥**

**ತಮಸ್ತಮಃಪ್ರಭಾಜಾನಾಂ ರೂಪಮೀದೃಗ್ಭವೇದಿತಿ ।**
**ವೇಧಸೇವ ಸ್ಫುಟೀಕರ್ತುಮಿಹಸ್ಥಾನಾಂ ವಿನಿರ್ಮಿತಃ ॥ ೧೬೮ ॥**

**ದಧನ್ನಾಷಮಷೀವರ್ಣಮರ್ಕಭೀತ್ಯಾ ತಮಶ್ಚಯಃ ।**
**ನರರೂಪಧರೋ ವಾತಿಜಿಗುಪ್ಸ್ಯಃ ಪಾಪಭಾಕ್ಕ್ವಚಿತ್ ॥ ೧೬೯ ॥**

**ಆಕಂಠಪೂರ್ಣಾಹಾರೋಽಪಿ ನಯನಾಭ್ಯಾಮತೃಪ್ನುವನ್ ।**
**ಪರಿವೀತಕಟೀ ಜೀರ್ಣಚ್ಛಿದ್ರಿತಾಶುಭಕರ್ಪಟ್ಯೈಃ ॥ ೧೭೦ ॥**

**ವ್ರಣವೈಗಂಧ್ಯಸಂಸಕ್ತಮಕ್ಷಿಕೌಘೈರಿತಸ್ತತಃ ।**
**ಕುಥಚ್ಛವವದಾಲಕ್ಷ್ಯೋ ಮುಖರೈರನಪಾಯಿಭಿಃ ॥ ೧೭೧ ॥**

**ಪೌರಬಾಲಕಸಂಘಾತೈರನುಯಾತೈರನುಕ್ಷಣಮ್ ।**
**ಉಪಲಾದಿಪ್ರಹಾರೇಣ ತಾಡ್ಯಮಾನಃ ಪ್ರಕೋಪವಾನ್ ॥ ೧೭೨ ॥**

**ಅನುಧಾವನ್ಪತನ್ನೇವಂ ದುಃಖೈಃ ಕಾಲಮಜೀಗಮತ್ ।**
**ಕದಾಚಿಲ್ಲಬ್ಧಕಾಲಾದಿರನುಯಾತೋ ಮಹಾಮುನಿಮ್ ॥ ೧೭೩ ॥**

**ಸಮುದ್ರಸೇನನಾಮಾನಂ ಪರ್ಯಟಂತಂ ತನುಸ್ಥಿತೇಃ ।**
**ವಣಿಗ್ವೈಶ್ರವಣಾಗಾರೇ ತೇನಾಕಂಠಮಭೋಜ್ಯತ ॥ ೧೭೪ ॥**

ಅವನ ಉತ್ಪತ್ತಿಮಾತ್ರದಿಂದ ಆ ವಂಶವು ಅವನು ಮಾತ್ರ ಉಳಿದುದಾಯಿತು. ಬಳಿಕ ಅವನು ಅನ್ನವಿಲ್ಲದವನೂ ಕೃಶವಾದ ಹೊಟ್ಟೆಯುಳ್ಳವನೂ ಕಾಣಿಸಿಕೊಂಡ ಎಲುಬುಗಳುಳ್ಳವನೂ ನರಗಳಿಂದ ಕಟ್ಟಲ್ಪಟ್ಟ ಕೆಟ್ಟ ಮೈಯುಳ್ಳವನೂ ಹೇನುಗಳಿಂದ ತುಂಬಿರುವ ತಲೆಗೂದಲುಗಳುಳ್ಳವನೂ ಎಲ್ಲೆಲ್ಲೋ ಮಲಗುವವನೂ ಎಲ್ಲ ರಿಂದಲೂ ತಿರಸ್ಕರಿಸಲ್ಪಡುವವನೂ, ಎಲ್ಲಾಕಡೆಗಳಲ್ಲಿ ಅಪಾಯವಿಲ್ಲದಿರುವ ಒಳ್ಳೆಯ ಮಿತ್ರನೊಡನೆ ಕೂಡಿರುವಂತೆ, ಎಲ್ಲಾ ಕಡೆಗಳಲ್ಲಿ ಅಪಾಯವಿಲ್ಲ ದಿರುವುದೂ ಶರೀರಸ್ಥಿತಿಗೆ ಕಾರಣವೂ ಆದ ಕೈಯಲ್ಲಿರುವ ಭಿಕ್ಷಾಪಾತ್ರೆಯಿಂದ ಕೂಡಿರುವವನೂ ಆಗ ಇಷ್ಟವಾದ ರಸದಂತಿರುವ "ದೇಹಿ" ಎಂಬ ವಚನದಿಂದ ಭಿಕ್ಷಾಮಾತ್ರದಿಂದ ಸುಖವನ್ನು ಹೊಂದುವುದಕ್ಕೆ ಆಶೆಯುಳ್ಳವನೂ ದೀನನೂ ಪರ್ವಗಳಲ್ಲಿ ಕಾಗೆಯಂತೆ ಸ್ನಾನಮಾಡುವವನೂ ಬಲಿಯ ವಿಸರ್ಜನೆಯನ್ನು

(ಯಾರಾದರೂ ಅನ್ನವನ್ನು ಬಿಸಾಡುವುದನ್ನು) ನೋಡುವವನೂ ತಪಸ್ವಿಯಂತೆ ಪುನಃ ಪುನಃ ಶೀತಬಾಧೆಯನ್ನೂ ಉಷ್ಣಬಾಧೆಯನ್ನೂ ಗಾಳಿಯ ಬಾಧೆಯನ್ನೂ ಸಹಿಸುವವನೂ ಕೊಳಕನೂ ನಾಲಗೆಯ ವಿಷಯವನ್ನೇ ಇಚ್ಛಿಸುವವನೂ ಬೇರೆ ಇಂದ್ರಿಯಗಳ ಲವಲವಿಕೆಯನ್ನು ಕಳೆದುಕೊಂಡಿರುವವನೂ ಶಿಕ್ಷೆ–ದಂಡಧಾರಿ ಯಾದ ರಾಜನಂತೆ, ದಂಡವನ್ನು(ಕೋಲನ್ನು) ಹಿಡಿದುಕೊಂಡಿರುವವನೂ ''ತಮಸ್ತಮಃಪ್ರಭೆಯೆಂಬ ಏಳನೆಯ ನರಕದಲ್ಲಿ ಹುಟ್ಟಿರುವವರ ರೂಪವು ಇಂತಹದು'' ಎಂದು ಇಲ್ಲಿರುವವರಿಗೆ ವ್ಯಕ್ತಮಾಡುವುದಕ್ಕೋಸ್ಕರವೋ ಎನ್ನುವಂತೆ ಬ್ರಹ್ಮನಿಂದ ನಿರ್ಮಿಸಲ್ಪಟ್ಟಿರುವವನೂ ಸೂರ್ಯನ ಭಯದಿಂದ ಕತ್ತಲೆಯ ಸಮೂಹವು ಮನುಷ್ಯರೂಪವನ್ನು ಧರಿಸಿದೆಯೋ ಎಂಬಂತೆ ಉದ್ದಿನ ಮತ್ತು ಮಸಿಯ ಬಣ್ಣವನ್ನು ಧರಿಸಿರುವವನೂ ಬಹುಜಿಗುಪ್ಸೆಪಡುವುದಕ್ಕೆ ಯೋಗ್ಯನೂ ಪಾಪಿಯೂ ಎಲ್ಲಿಯಾದರೂ ಕಂಠದವರೆಗೆ ಪೂರ್ತಿಯಾದ ಆಹಾರವುಳ್ಳವನಾದರೂ ಕಣ್ಣುಗಳಿಂದ ತೃಪ್ತಿಯಿಲ್ಲದವನೂ (ದೈನ್ಯವನ್ನು ತೋರಿಸುವವನೂ) ಹಳೆಯದೂ ತೂತಾಗಿರುವುದೂ ಅಮಂಗಲವೂ ಆದ ಬಟ್ಟೆಗಳನ್ನು ಸೊಂಟಕ್ಕೆ ಸುತ್ತಿರುವವನೂ ಶಬ್ದಮಾಡುತ್ತಿರುವುವೂ ಅಪಾಯವಿಲ್ಲದುವೂ ವ್ರಣಗಳ ದುರ್ಗಂಧದಲ್ಲಿ ಆಸಕ್ತವಾಗಿರುವುವೂ ಆದ ನೊಣಗಳ ಸಮೂಹಗಳಿಂದ ಈಕಡೆ ಆಕಡೆ ನಾರುತ್ತಿರುವ ಹೆಣದಂತೆ ತೋರುವವನೂ ಪ್ರತಿಕ್ಷಣದಲ್ಲಿ ಹಿಂಬಾಲಿಸುತ್ತಿರುವ ಪಟ್ಟಣದ ಬಾಲಕರ ಸಮೂಹಗಳಿಂದ ಕಲ್ಲು ಮೊದಲಾದುವುಗಳ ಹೊಡೆತದಿಂದ ಹೊಡೆಯಲ್ಪಟ್ಟವನೂ ಬಹುಕೋಪವುಳ್ಳವನೂ ಬಾಲಕರನ್ನು ಹಿಂಬಾಲಿಸಿ ಓಡುವವನೂ ಬೀಳುವವನೂ ಆಗಿ ಈ ರೀತಿಯಾಗಿ ದುಃಖಗಳಿಂದ ಕಾಲವನ್ನು ಕಳೆದನು. ಒಂದಾನೊಂದು ಕಾಲದಲ್ಲಿ ಕಾಲಲಬ್ಧಿಯೇ ಮೊದಲಾದ ಲಬ್ಧಿಗಳನ್ನು ಪಡೆದವನಾಗಿ ಶರೀರ ರಕ್ಷಣೆಗೆ ಸಂಚರಿಸುವ ಸಮುದ್ರಸೇನನೆಂಬ ಮಹಾಮುನಿಯನ್ನು ಹಿಂಬಾಲಿಸಿದನು. ವೈಶ್ಯನಾದ ವೈಶ್ರವಣನ ಮನೆಯಲ್ಲಿ ಅವನು ಕಂಠಪೂರ್ತಿಯಾಗಿ ಈ ಗೌತಮನಿಗೆ ಊಟಮಾಡಿಸಿದನು. ಮುನಿಗೆ ಆಹಾರದಾನವನ್ನು ಕೊಟ್ಟು ಬಳಿಕ ಗೌತಮನಿಗೆ ಊಟಮಾಡಿಸಿದನೆಂದು ಭಾವವು.

**ಪುನರ್ಮುನ್ಯಾಶ್ರಮಂ ಗತ್ವಾ ಕುರು ತ್ವಾಮಿವ ಮಾಮಪಿ ।**
**ಇತ್ಯವಾದೀದಸೌ ಚಾಸ್ತು ಭವ್ಯೋಯಮಿತಿ ನಿಶ್ಚಯಾತ್ ॥ ೧೭೫ ॥**

ಮತ್ತೆ ಗೌತಮನು ಮುನಿಯ ಆಶ್ರಮಕ್ಕೆ ಹೋಗಿ ''ನನ್ನನ್ನೂ ನಿನ್ನಂತೆ ಮಾಡು'' ಎಂದು ಹೇಳಿದನು. ಈ ಸಮುದ್ರಸೇನಮುನಿಯೂ ''ಇವನು ಭವ್ಯನು'' ಎಂಬ ನಿಶ್ಚಯದಿಂದ ''ಆಗಲಿ'' ಎಂದನು.

**ದಿವಸೈಃ ಸಹವಾಸೇನ ಕೈಶ್ಚಿಲ್ಲಕ್ಷಿತತನ್ಮನಾಃ ।**
**ಅಗ್ರಾಹಯನ್ಮುನಿಸ್ತೇನ ಸಂಯಮಂ ಶಮಸಾಧನಮ್ ॥ ೧೭೬ ॥**

ಸಹವಾಸದಿಂದ ಕೆಲವು ದಿನಗಳಿಂದ ಅವನ ಮನಸ್ಸನ್ನು ಕಂಡುಹಿಡಿದ ಆ ಮುನಿಯು ಶಾಂತಿಗೆ ಸಾಧನವಾದ ಸಂಯಮವನ್ನು ಅವನಿಂದ ಗ್ರಹಣಮಾಡಿಸಿದನು.

**ಬುದ್ಧ್ಯಾದಿಕರ್ದ್ಧಯಸ್ತಸ್ಯ ಜಾತಾಃ ಸಂವತ್ಸರಾದತಃ ।**
**ಸ ಶ್ರೀಗೌತಮನಾಮ್ನಾಮಾ ಗುರುಸ್ಥಾನಮವಾಪ ಸಃ ॥ ೧೭೭ ॥**

**ಜೀವಿತಾಂತೇ ಗುರುಸ್ತಸ್ಯ ಮಧ್ಯಗ್ರೈವೇಯಕೋರ್ಧ್ವಗೇ ।**
**ವಿಮಾನೇ ಸುವಿಶಾಲಾಖ್ಯೇ ಸಮುತ್ಪನ್ನಃ ಸುರೋತ್ತಮಃ ॥ ೧೭೮ ॥**

ಒಂದು ವರ್ಷದನಂತರ ಅವನಿಗೆ ಬುದ್ಧಿಋದ್ಧಿಯೇ ಮೊದಲಾದ ಋದ್ಧಿಗಳು ಪ್ರಾಪ್ತವಾದುವು. ಆಗ ಅವನು 'ಶ್ರೀಗೌತಮ' ಎಂಬ ಹೆಸರಿನೊಡನೆ ಗುರುಪದವಿಯನ್ನು ಪಡೆದನು. ಅವನ ಆ ಗುರುವು ಆಯುಷ್ಯಾವಸಾನದಲ್ಲಿ ಸತ್ತು ಮಧ್ಯಗ್ರೈವೇಯಕದ ಮೇಲಿನ ಸುವಿಶಾಲವೆಂಬ ವಿಮಾನದಲ್ಲಿ ಉತ್ತಮದೇವನಾಗಿ ಹುಟ್ಟಿದನು.

**ಸ ಶ್ರೀಗೌತಮನಾಮಾಪಿ ವಿಹಿತಾರಾಧನಾವಿಧಿಃ ।**
**ಸಮ್ಯಕ್ಪನ್ನಸ್ಯ ತತ್ರೈವ ಸಂಪ್ರಾಪದಹಮಿಂದ್ರತಾಮ್ ॥ ೧೭೯ ॥**

ಆ ಶ್ರೀಗೌತಮನೂ ಆರಾಧನಾವಿಧಿಯನ್ನು ಮಾಡಿದವನಾಗಿ ಚೆನ್ನಾಗಿ ಸಮಾಧಿಮರಣವನ್ನು ಹೊಂದಿ ಅದೇ ಮಧ್ಯಗ್ರೈವೇಯಕದ ಸುವಿಶಾಲವಿಮಾನದಲ್ಲಿ ಅಹಮಿಂದ್ರತ್ವವನ್ನು ಪಡೆದನು.

**ತತ್ರ ದಿವ್ಯಸುಖಂ ಭುಕ್ತ್ವಾ ತಸ್ಮಾದ್ವಿಪ್ರಚರೋ ಮುನಿಃ ।**
**ಅಷ್ಟಾವಿಂಶತಿವಾರ್ಧ್ಯಾಯುರತಿಕ್ರಾಂತೌ ಚ್ಯುತೋ ಭವಾನ್ ॥ ೧೮೦ ॥**

**ಅಜನ್ಯಂಧಕವೃಷ್ಟ್ಯಾಖ್ಯ ಇತಿ ತದ್ಭಾವಯನ್ ಸುಧೀಃ ।**
**ಸ್ವಪುತ್ರಭವಸಂಬಂಧಂ ಸೋಽನ್ವಯುಙ್ಕ್ತ ಪುನರ್ಜಿನಮ್ ॥ ೧೮೧ ॥**

ವಿಪ್ರನಾಗಿದ್ದ ಆ ಮುನಿಯು ಆ ವಿಮಾನದಲ್ಲಿ ದಿವ್ಯಸುಖವನ್ನನುಭವಿಸಿ ಇಪ್ಪತ್ತೆಂಟು ಸಾಗರೋಪಮವರ್ಷಾಯುಷ್ಯವು ಕಳೆಯುತ್ತಿರಲು ಆ ವಿಮಾನದಿಂದ ಚ್ಯುತನಾಗಿ ನೀನು ಅಂಧಕವೃಷ್ಟಿಯಾಗಿ ಜನಿಸಿರುತ್ತಿ.'' ಈ ರೀತಿಯಾಗಿ ಹೇಳಿದ ಆ ವಿಷಯವನ್ನು ಭಾವಿಸುವವನೂ ಪ್ರಾಜ್ಞನೂ ಆದ ಆ ಅಂಧಕವೃಷ್ಟಿಯು ತನ್ನ ಮಕ್ಕಳ ಪೂರ್ವಭವಸಂಬಂಧವನ್ನು ಕುರಿತು ಪುನಃ ಜಿನೇಶ್ವರನನ್ನು ಪ್ರಶ್ನೆಮಾಡಿದನು.

**ಸರ್ವಭಾಷಾಸ್ವಭಾವೇನ ಧ್ವನಿನಾ ನಿಜಗಾದ ಸಃ ।**
**ಜಂಬೂಪಲಕ್ಷಿತೇ ದ್ವೀಪೇ ವಿಷಯೇ ಮಲಯಾಹ್ವಯೇ ॥ ೧೮೨ ॥**

**ನೃಪೋ ಮೇಘರಥೋ ನಾಮ್ನಾ ಪುರೇ ಭದ್ರಿಲನಾಮನಿ ।**
**ಸುಭದ್ರಾಯಾಂ ಸುತಸ್ತಸ್ಯ ರಥಾಂತದೃಢಸಂಜ್ಞಕಃ ॥ ೧೮೩ ॥**

ಆ ಸುಪ್ರತಿಷ್ಠಜಿನರು ಸರ್ವಭಾಷಾಸ್ವಭಾವವುಳ್ಳ ಧ್ವನಿಯಿಂದ ಈ ಮುಂದಿನ ವಿಷಯವನ್ನು ಹೇಳಿದರು. ''ಜಂಬೂದ್ವೀಪದ ಮಲಯವೆಂಬ ದೇಶದಲ್ಲಿ ಭದ್ರಿಲವೆಂಬ ಪುರದಲ್ಲಿ ಮೇಘರಥನೆಂಬ ರಾಜನಿದ್ದನು. ಅವನಿಗೆ ಸುಭದ್ರೆಯೆಂಬ ಪತ್ನಿಯಲ್ಲಿ ದೃಢರಥನೆಂಬ ಪುತ್ರನು ಜನಿಸಿದನು.

**ಪಟ್ಟಬಂಧಂ ಸ್ವಪುಣ್ಯೇನ ಯೌವರಾಜ್ಯಸ್ಯ ಸೋಬಿಭಃ ।**
**ತತ್ರ ನಂದಯಶೋನಾಮ್ನ್ಯಾಂ ಧನದತ್ತವಣಿಕ್ಪತೇಃ ॥ ೧೮೪ ॥**

**ಧನಾದಿದೇವಪಾಲಾಖ್ಯೌ ದೇವಪಾಲೌ ಜಿನಾದಿಕೌ ।**
**ಅರ್ಹಂತೌ ದತ್ತದಾಸಾಂತೌ ಜಿನದತ್ತಶ್ಚ ಸಪ್ತಮಃ ॥ ೧೮೫ ॥**

**ಪ್ರಿಯಮಿತ್ರೋಽಷ್ಟಮೋ ಧರ್ಮರುಚಿಶ್ಚಾಂತ್ಯೋಽಭವನ್ಸುತಾಃ ।**
**ಪ್ರಿಯದರ್ಶನಾ ಜ್ಯೇಷ್ಠಾ ಚ ಜಾತೇ ದುಹಿತರೌ ತತಃ ॥ ೧೮೬ ॥**

ಅವನು ತನ್ನ ಪುಣ್ಯದಿಂದ ಯುವರಾಜಪದವಿಯ ಪಟ್ಟಬಂಧವನ್ನು ಧರಿಸಿದನು. ಆ ಭದ್ರಿಲಪುರದಲ್ಲಿ ಧನದತ್ತನೆಂಬ ವೈಶ್ಯನಾಯಕನಿಗೆ ನಂದಯಶೆಯೆಂಬವಳಲ್ಲಿ ಧನದೇವ, ಧನಪಾಲ, ಜಿನದೇವ, ಜಿನಪಾಲ, ಅರ್ಹದ್ದತ್ತ, ಅರ್ಹದ್ದಾಸ, ಏಳನೆಯವನು ಜಿನದತ್ತ, ಎಂಟನೆಯವನು ಪ್ರಿಯಮಿತ್ರ, ಕೊನೆಯವನು ಧರ್ಮರುಚಿಯೆಂಬೀ ಮಕ್ಕಳಾದರು. ಬಳಿಕ ಪ್ರಿಯದರ್ಶನಾ ಜ್ಯೇಷ್ಠಾ ಎಂಬೀರ್ವರು ಹೆಣ್ಣುಮಕ್ಕಳು ಹುಟ್ಟಿದರು.

**ನೃಪಃ ಸುದರ್ಶನೋದ್ಯಾನೇ ಮಂದಿರಸ್ಥವಿರಾಂತಿಕೇ ।**
**ಕದಾಚಿದ್ವಣಿಗೀಶಶ್ಚ ಪುತ್ರಾದಿಪರಿವಾರಿತೌ ॥ ೧೮೭ ॥**

**ಸತ್ಕ್ರಿಯಂ ಧರ್ಮಮಾಕರ್ಣ್ಯ ನಿರ್ವಿಣ್ಣಃ ಸ ಮಹೀಪತಿಃ ।**
**ದತ್ವಾ ದೃಢರಥಾಯಾಭಿಷೇಕಪೂರ್ವಂ ಸ್ವಸಂಪದಮ್ ॥ ೧೮೮ ॥**

**ಆದದೇ ಸಂಯಮಂ ಪಶ್ಚಾಚ್ಛ್ರೇಷ್ಠೀ ಚ ನವಭಿಃ ಸುತೈಃ ।**
**ತತೋ ನಂದಯಶಾ ಪುತ್ರಿಕಾದ್ವಯೇನಾಗಮತ್ತಪಃ ॥ ೧೮೯ ॥**

**ಸುದರ್ಶನಾರ್ಯಿಕಾಭ್ಯರ್ಣೇ ತೂರ್ಣಂ ನಿರ್ಣೀತಸಂಸೃತಿಃ ।**
**ಕ್ರಮಾದ್ವಾರಾಣಸೀಬಾಹ್ಯೇ ಕೇವಲಜ್ಞಾನಿನೋಽಭವನ್ ॥ ೧೯೦ ॥**

**ವನೇ ಪ್ರಿಯಂಗುಷಂಡಾಖ್ಯೇ ಮನೋಹರತಮದ್ರುಮೇ ।**
**ಗುರುರ್ಮೇಘರಥೋ ಧ್ಯಾತ್ವಾ ಧನದತ್ತಶ್ಚ ತೇ ತ್ರಯಃ ॥ ೧೯೧ ॥**

**ಧರ್ಮಾಮೃತಮಯೀಂ ವೃಷ್ಟಿಮುದ್ಗಿರಂತೋ ನಿರಂತರಮ್ ।**
**ಜೀವಿತಾಂತೇ ತಲೇ ಸಿದ್ಧಶಿಲಾಯಾಃ ಸಿದ್ಧಿಮವ್ರಜನ್ ॥ ೧೯೨ ॥**

**ಪುರೇ ರಾಜಗೃಹೇ ಪೂಜ್ಯಾಂಸ್ತ್ರಿಜಗಜ್ಜನನಾಯಕೈಃ ।**
**ಧನದೇವಾದಿಕಾಂಸ್ತಸ್ಮಿನ್ನೇವಾನ್ಯೇದ್ಯುಃ ಶಿಲಾತಲೇ ॥ ೧೯೩ ॥**

**ನವಾಪಿ ವಿಧಿನಾ ಸನ್ನ್ಯಸ್ಯತೋ ವೀಕ್ಷ್ಯ ಸುತಾಯುತಾ ।**
**ನಿದಾನಮಕರೋನ್ನಂದಯಶಾ ಮೇ ಜನ್ಮನೀಹ ವಾ ॥ ೧೯೪ ॥**

**ಪರತ್ರಾಪ್ಯೇವಮೇವೈಭಿರ್ಬಂಧುತ್ವಂ ಭವತಾದಿತಿ ।**
**ಸ್ವಯಂ ಚ ಕೃತಸನ್ನ್ಯಾಸಾ ತೈಃ ಸಹಾನತಕಲ್ಪಜೇ ॥ ೧೯೫ ॥**

**ಸಾತಂಕರೇ ಸಮುತ್ಪದ್ಯ ವಿಮಾನೇ ಭೋಗಮನ್ವಭೂತ್ ।**
**ವಿಂಶತ್ಯಂಭೋಧಿಮಾನಾಯುಸ್ತತಃ ಪ್ರಚ್ಯುತ್ಯ ಸಾ ತವ ॥ ೧೯೬ ॥**

**ಪ್ರಿಯಾಜನಿ ಸುಭದ್ರಾಖ್ಯಾ ಧನದೇವಾದಯಃ ಸುತಾಃ ।**
**ಪ್ರಖ್ಯಾತಪೌರುಷಾ ಜಾತಾಃ ಸಮುದ್ರವಿಜಯಾದಯಃ ॥ ೧೯೭ ॥**

ಒಂದಾನೊಂದು ಕಾಲದಲ್ಲಿ ಸುದರ್ಶನೋದ್ಯಾನದಲ್ಲಿ ಮಂದಿರಸ್ಥವಿರನೆಂಬ ಮುನಿಯ ಬಳಿಯಲ್ಲಿ ಮೇಘರಥರಾಜನೂ ಧನದತ್ತವೈಶ್ಯನೂ ಮಕ್ಕಳೇ ಮೊದಲಾದವರಿಂದ ಆವರಿಸಲ್ಪಟ್ಟವರಾಗಿ ಕ್ರಿಯಾಸಹಿತವಾದ ಧರ್ಮವನ್ನು ಕೇಳಿ ಆ ಮೇಘರಥರಾಜನು ವಿರಕ್ತನಾಗಿ ಪಟ್ಟಾಭಿಷೇಕ ಪೂರ್ವಕವಾಗಿ ದೃಢರಥನಿಗೆ ತನ್ನ ಸಂಪತ್ತಿಯನ್ನು ಕೊಟ್ಟು ಬಳಿಕ ಸಂಯಮವನ್ನು ಗ್ರಹಣಮಾಡಿದನು. ಧನದತ್ತ ಶ್ರೇಷ್ಠಿಯೂ ತನ್ನ ಒಂಬತ್ತು ಮಂದಿ ಮಕ್ಕಳೊಡನೆ ಸಂಯಮವನ್ನು ಗ್ರಹಣ ಮಾಡಿದನು. ಬಳಿಕ ನಂದಯಶೆಯು ತನ್ನ ಹೆಣ್ಣುಮಕ್ಕಳೊಡನೆ ಸುದರ್ಶನಾರ್ಯಿಕೆಯ ಬಳಿಯಲ್ಲಿ ಸಂಸಾರಸ್ವರೂಪವನ್ನು ನಿರ್ಣಯಿಸಿದವಳಾಗಿ ಶೀಘ್ರವಾಗಿ ತಪಸ್ಸನ್ನು ಹೊಂದಿದಳು. ಕ್ರಮದಿಂದ ವಾರಾಣಸಿಯ ಹೊರಗಿನ ಉದ್ಯಾನದಲ್ಲಿ ಪ್ರಿಯಂಗುಷಂಡವೆಂಬ ವನದಲ್ಲಿ ಮನೋಹರವಾದ ವೃಕ್ಷದ ಬುಡದಲ್ಲಿ ಗುರು–ಮಂದಿರಸ್ಥವಿರನೂ ಮೇಘರಥನೂ ಧನದತ್ತನೂ ಧ್ಯಾನಿಸಿ ಕೇವಲ ಜ್ಞಾನಿಗಳಾದರು. ತ್ರಿಜಗಜ್ಜನರ ಅಧಿಪತಿಗಳಿಂದ ಪೂಜ್ಯರಾದ ಅವರು ಮೂವರು ಎಡಬಿಡದೆ ಧರ್ಮಾಮೃತಮಯವಾದ ವೃಷ್ಟಿಯನ್ನು ಸುರಿದು ಆಯುಷ್ಯಾವಸಾನದಲ್ಲಿ ರಾಜಗೃಹನಗರದಲ್ಲಿ ಸಿದ್ಧಶಿಲೆಯ ಪ್ರದೇಶದಲ್ಲಿ ಮುಕ್ತಿಯನ್ನು ಪಡೆದರು. ಮತ್ತೊಂದು ದಿವಸ ಅದೇ ಶಿಲಾತಲದಲ್ಲಿ ಸಮಾಧಿಮರಣವನ್ನು ಹೊಂದುತ್ತಿರುವ ಧನದೇವನೇ ಮೊದಲಾದ ಒಂಬತ್ತು ಮಂದಿ ಮಕ್ಕಳನ್ನೂ ನೋಡಿ ಪುತ್ರಿಯರೊಡನೆ ಕೂಡಿರುವ ನಂದಯಶೆಯು "ಈ ಜನ್ಮದಲ್ಲಿ ನನಗೆ ಇವರೊಡನೆ ಬಂಧುತ್ವವಿರುವಂತೆ ಪರಜನ್ಮದಲ್ಲಿಯೂ ಹೀಗೆಯೇ ಇವರೊಡನೆ ಬಂಧುತ್ವವಾಗಲಿ" ಎಂದು ನಿದಾನಶಲ್ಯವನ್ನು ಮಾಡಿದಳು. ತಾನೂ ಅವರೊಡನೆ ಸಮಾಧಿಮರಣವನ್ನು ಹೊಂದಿದವಳಾಗಿ ಆನತಕಲ್ಪದಲ್ಲಿರುವ ಸಾತಂಕರ ವಿಮಾನದಲ್ಲಿ ಇಪ್ಪತ್ತು ಸಾಗರೋಪಮವರ್ಷಾಯುಷ್ಯವುಳ್ಳವಳಾಗಿ ಹುಟ್ಟಿ ಭೋಗ–ಸುಖವನ್ನನುಭವಿಸಿದಳು. ಆಯುಷ್ಯವು ಮುಗಿದ ಮೇಲೆ ಅಲ್ಲಿಂದ ಚ್ಯುತಳಾಗಿ ಆಕೆಯು ನಿನಗೆ(ಅಂಧಕವೃಷ್ಟಿಗೆ) ಪ್ರಿಯೆಯಾದ ಸುಭದ್ರೆಯಾಗಿ ಹುಟ್ಟಿದಳು. ಧನದೇವನೇ ಮೊದಲಾದವರು ಪ್ರಖ್ಯಾತವಾದ ಪೌರುಷವುಳ್ಳ ಸಮುದ್ರವಿಜಯನೇ ಮೊದಲಾದ ಒಂಬತ್ತು ಮಂದಿ ಮಕ್ಕಳಾಗಿ ಜನಿಸಿದರು.

**ಪ್ರಿಯದರ್ಶನಾ ಜ್ಯೇಷ್ಠಾ ಚ ಕುಂತೀ ಮಾದ್ರೀತಿ ವಿಶ್ರುತೇ ।**
**ಅಥಾಪೃಚ್ಛನ್ಮಹೀಪಾಲೋ ವಸುದೇವಭವಾವಲೀಮ್ ॥ ೧೯೮ ॥**

ಆ ಪ್ರಿಯದರ್ಶನೆಯೂ ಜ್ಯೇಷ್ಠೆಯೂ ಪ್ರಸಿದ್ಧರಾದ ಕುಂತೀ ಮಾದ್ರಿಯರೆಂಬ ಹೆಣ್ಣುಮಕ್ಕಳಾಗಿ ಜನಿಸಿದರು." ಜಿನೇಶ್ವರರು ಈ ರೀತಿಯಾಗಿ ಹೇಳಿದ ಬಳಿಕ ಅಂಧಕವೃಷ್ಟಿಮಹೀಪಾಲನು ವಸುದೇವನ ಭವಪರಂಪರೆಯನ್ನು ಕೇಳಿದನು.

**ಜಿನೇಂದ್ರೋಪ್ಯಬ್ರವೀದಿತ್ಥಂ ಶುಂಭದ್ಗಂಭೀರಭಾಷಯಾ ।**
**ಪ್ರಕೃತಿಸ್ತಾದೃಶೀ ತೇಷಾಂ ಯಥಾ ಭವ್ಯೇಷ್ವನುಗ್ರಹಃ ॥ ೧೯೯ ॥**

ಜಿನೇಶ್ವರರೂ ಪ್ರಕಾಶಮಾನವೂ ಗಂಭೀರವೂ ಆದ ಭಾಷೆಯಿಂದ ಈ ರೀತಿಯಾಗಿ ಹೇಳಿದರು. ಭವ್ಯರಲ್ಲಿ ಅನುಗ್ರಹಿಸುವಂಥಾದ್ದೇ ಆ ಜಿನೇಶ್ವರರ ಸ್ವಭಾವ.

**ಗ್ರಾಮೇ ಪಲಾಶಕೂಟಾಖ್ಯೇ ವಿಷಯೇ ಕುರುನಾಮನಿ ।**
**ದುರ್ಗತಃ ಸೋಮಶರ್ಮಾಖ್ಯೋ ದ್ವಿಜಸ್ತಸ್ಯ ಸುತೋಭವತ್ ॥ ೨೦೦ ॥**

**ನಾಮ್ನಾ ನಂದೀತ್ಯಸೌ ದೇವಶರ್ಮಣಃ ಸತತಾನುಗಃ ।**
**ಮಾತುಲಸ್ಯಾಭಿಲಾಷೇಣ ತತ್ಸುತಾಸು ವಿಪುಣ್ಯಕಃ ॥ ೨೦೧ ॥**

"ಕುರುವೆಂಬ ದೇಶದಲ್ಲಿರುವ ಪಲಾಶಕೂಟವೆಂಬ ಗ್ರಾಮದಲ್ಲಿ ಸೋಮಶರ್ಮನೆಂಬ ದರಿದ್ರನಾದ ಬ್ರಾಹ್ಮಣನಿದ್ದನು. ಅವನಿಗೆ ನಂದಿಯೆಂಬ ಪುತ್ರನಿದ್ದನು. ಈ ಪುಣ್ಯಹೀನನು ತನ್ನ ಮಾವನಾದ ದೇವಶರ್ಮನ ಪುತ್ರಿಯರಲ್ಲಿ ಅಭಿಲಾಷೆಯಿಂದ ಅವನನ್ನು ಯಾವಾಗಲೂ ಅನುಸರಿಸುವವನಾಗಿದ್ದನು.

**ಪುತ್ರಿಕಾಸ್ತಸ್ಯ ಸಪ್ತಾಸನ್ ಸೋದಾದನ್ಯೇಭ್ಯ ಏವ ತಾಃ ।**
**ತದಲಾಭಾತ್ಸ ನಂದೀ ಚ ಮಹಾದುಃಖಕೃಶೀಕೃತಃ ॥ ೨೦೨ ॥**

ಆ ದೇವಶರ್ಮನಿಗೆ ಏಳುಮಂದಿ ಹೆಣ್ಣು ಮಕ್ಕಳಿದ್ದರು. ಅವನು ಅವರುಗಳನ್ನು ಬೇರೆಯವರಿಗೇ ಕೊಟ್ಟನು. ಆ ಪುತ್ರಿಯರ ಅಪ್ರಾಪ್ತಿಯಿಂದ ಆ ನಂದಿಯೂ ಮಹಾದುಃಖದಿಂದ ಕೃಶವಾದನು.

**ಅಥಾನ್ಯೇದ್ಯುರ್ನಟಪ್ರೇಕ್ಷಾಂ ವೀಕ್ಷಿತುಂ ಕೌತುಕಾದ್ಗತಃ ।**
**ಬಲವದ್ಭಟಸಂಘಟ್ಟಮಪತತ್ಸೋಢುಮಕ್ಷಮಃ ॥ ೨೦೩ ॥**

ಬಳಿಕ ಮತ್ತೊಂದು ದಿವಸ ನಟರ ದೃಶ್ಯ–ನರ್ತನವನ್ನು ನೋಡುವುದಕ್ಕೋಸ್ಕರ ಕುತೂಹಲದಿಂದ ಹೋದನು. ಅಲ್ಲಿ ಬಲಿಷ್ಠರಾದ ಭಟರ ಒತ್ತಾಟವನ್ನು ಸಹಿಸುವುದಕ್ಕೆ ಅಸಮರ್ಥನಾಗಿ ಬಿದ್ದುಬಿಟ್ಟನು.

**ಸಮೀಕ್ಷ್ಯ ತಜ್ಜನೇನ್ಯೋನ್ಯಕರಾಗ್ರಾಸ್ಫಾಲನಾನ್ವಿತಮ್ ।**
**ಹಸತ್ಯಾಪನ್ನಲಜ್ಜಃ ಸನ್ ಭೃಗುಪಾತೇ ಕೃತೋದ್ಯಮಃ ॥ ೨೦೪ ॥**

ಅದನ್ನು ನೋಡಿ ಜನರು ಒಬ್ಬರಿಗೊಬ್ಬರು ಕೈಚಪ್ಪಾಳೆಯಿಂದ ಕೂಡಿ ನಗುತ್ತಿರಲು ನಂದಿಯು ನಾಚಿಕೆಯುಳ್ಳವನಾಗಿ ಬೆಟ್ಟದ ತಪ್ಪಲಿನಿಂದ ಬೀಳುವುದರಲ್ಲಿ ಉದ್ಯುಕ್ತನಾದನು. ಆತ್ಮಹತ್ಯವನ್ನು ಮಾಡಿಕೊಳ್ಳಲು ಪ್ರಯತ್ನಿಸಿದನೆಂದು ಭಾವವು.

**ಅದ್ರಿಮಸ್ತಕಮಾರುಹ್ಯ ಟಂಕಚ್ಛಿನ್ನೇ ಸ ತಸ್ಥಿವಾನ್ ।**
**ಪಾತೋನ್ಮುಖೋ ಭಯಾತ್ಕುರ್ವನ್ ಪ್ರವರ್ತನನಿವರ್ತನೇ ॥ ೨೦೫ ॥**

ಬೆಟ್ಟದ ತುದಿಯನ್ನು ಹತ್ತಿ ಚೇಣದಿಂದ ಗುರುತಾದ ಸ್ಥಳದಲ್ಲಿ ನಿಂತು ಆ ನಂದಿಯು ಬೀಳುವುದಕ್ಕೆ ಅಭಿಮುಖನೂ ಭಯದಿಂದ ನಿವರ್ತನವನ್ನೂ ಪ್ರವರ್ತನವನ್ನೂ ಮಾಡುವವನೂ ಆಗಿದ್ದನು. ಬೀಳುವುದಕ್ಕೆ ಉದ್ಯುಕ್ತನಾಗುತ್ತಲೂ ಭಯದಿಂದ ಹಿಂದಕ್ಕೆ ಹೋಗುತ್ತಲೂ ಇದ್ದನೆಂದು ಭಾವವು.

**ಶಂಖನಿರ್ನಾಮಿಕಾಖ್ಯಾಭ್ಯಾಂ ಸಂಯತಾಭ್ಯಾಂ ಧರಾತಲೇ ।**
**ಸುಸ್ಥಿತಾಭ್ಯಾಮಿಯಂ ಛಾಯಾ ಪೃಷ್ಟಃ ಕಸ್ಯೇತಿ ಸಾದರಮ್ ॥ ೨೦೬ ॥**

**ಸ್ವಗುರುರ್ದ್ರುಮಸೇನಾಖ್ಯಃ ಸ ತ್ರಿಬೋಧೋಬ್ರವೀದಿತಿ ।**
**ಭವೇ ಭಾವಿತೃತೀಯೇಸ್ಮಾಚ್ಛಾಯೇಯಂ ಯುವಯೋಃ ಪಿತುಃ ॥**

ಕೆಳಗೆ ಭೂಮಿಯಲ್ಲಿ ಕುಳಿತಿದ್ದ ಶಂಖ ನಿರ್ನಾಮಿಕರೆಂಬೀರ್ವರು ಮುನಿಗಳು "ಇದು ಯಾವನ ನೆರಳು ?" ಎಂದು ಪ್ರೀತಿಪೂರ್ವಕವಾಗಿ ದ್ರುಮಸೇನನೆಂಬ ತಮ್ಮ ಗುರುವನ್ನು ಕೇಳಿದರು. ಮತಿಶ್ರುತಾವಧಿಜ್ಞಾನಗಳುಳ್ಳ ಆ ದ್ರುಮಸೇನನು "ಈ ಭವದಿಂದ ಮುಂದೆ ಮೂರನೆಯ ಭವದಲ್ಲಿ ನಿಮ್ಮಗಳ ತಂದೆಯ ನೆರಳಿದು" ಎಂದು ಹೇಳಿದನು.

**ಶ್ರುತ್ವಾ ತತ್ತೌ ಚ ಗತ್ವೈನಂ ನಂದಿನಂ ಭಾವಿನಂದನೌ ।**
**ಕುತಸ್ತೇ ಮೃತಿನಿರ್ಬಂಧೋ ಬಂಧೋ ವಿರಮ ನಿಷ್ಫಲಾತ್ ॥ ೨೦೮ ॥**

**ಅಮುಷ್ಮಾನ್ಮರಣಾದ್ಭೋಗ್ಯಸೌಭಾಗ್ಯಾದಿ ತ್ವಯೇಪ್ಸಿತಮ್ ।**
**ಭವಿಷ್ಯತಿ ತಪಃಸಿದ್ಧೇರಿತ್ಯಗ್ರಾಹಯತಾಂ ತಪಃ ॥ ೨೦೯ ॥**

ಆ ಮಾತನ್ನು ಕೇಳಿ ಮುಂದೆ ಪುತ್ರರಾಗುವವರಾದ ಆ ಶಂಖ ನಿರ್ನಾಮಿಕರು ಹೋಗಿ ಈ ನಂದಿಯನ್ನು ಕುರಿತು ''ಬಂಧುವೆ ! ಯಾವ ಕಾರಣದಿಂದ ನಿನಗೆ ಮರಣದ ನಿರ್ಬಂಧ ? ನಿಷ್ಪ್ರಯೋಜನವಾದ ಈ ಮರಣದಿಂದ ವಿರಾಮವನ್ನು ಹೊಂದು. ನಿನ್ನಿಂದ ಇಚ್ಛಿಸಲ್ಪಟ್ಟ ಭೋಗಾರ್ಹವಾದ ಸೌಭಾಗ್ಯವೇ ಮೊದಲಾದುದು ತಪಸ್ಸಿದ್ಧಿಯಿಂದಾಗುವುದು'' ಎಂದು ಹೇಳಿ ಅವನಿಂದ ತಪಸ್ಸನ್ನು ಗ್ರಹಣ ಮಾಡಿಸಿದರು.

**ಚಿರಂ ಸೋಪಿ ತಪಃ ಕೃತ್ವಾ ಮಹಾಶುಕ್ರೇಮರೋಜನಿ ।**
**ತತ್ರ ಷೋಡಶವಾರ್ಧ್ಯಾಯುರನುಭೂಯಾಭಿವಾಂಛಿತಮ್ ॥ ೨೧೦ ॥**

**ಪ್ರಾದುರಾಸೀತ್ತತಶ್ಚ್ಯುತ್ವಾ ವಸುದೇವೋ ವಸುಂಧರಾಮ್ ।**
**ವಶೀಕರ್ತುಮಯಂ ಯಸ್ಮಾದ್ಭಾವಿನೌ ಬಲಕೇಶವೌ ॥ ೨೧೧ ॥**

ಅವನೂ ಬಹುಕಾಲದವರೆಗೆ ತಪಸ್ಸನ್ನು ಮಾಡಿ ಆಯುಷ್ಯಾವಸಾನವಲ್ಲಿ ಸತ್ತು ಮಹಾಶುಕ್ರವೆಂಬ ಹತ್ತನೆಯ ಸ್ವರ್ಗದಲ್ಲಿ ದೇವನಾಗಿ ಪ್ರಾದುರ್ಭವಿಸಿದನು. ಅಲ್ಲಿ ಹದಿನಾರು ಸಾಗರೋಪಮವರ್ಷಾಯುಷ್ಯವುಳ್ಳವನಾಗಿ ಇಚ್ಛಿತವಾದ ಸುಖವನ್ನನುಭವಿಸಿ ಅಲ್ಲಿಂದ ಚ್ಯುತನಾಗಿ ಯಾವನಿಂದ ಮುಂದೆ ಬಲಭದ್ರನೂ ಕೇಶವನೂ ಪ್ರಾದುರ್ಭವಿಸುವರೋ ಅಂತಹ ಈ ವಸುದೇವನಾಗಿ ವಸುಂಧರೆ–ಭೂಮಿಯನ್ನು ವಶಮಾಡುವುದಕ್ಕೋಸ್ಕರ ಪ್ರಾದುರ್ಭವಿಸಿದನು.''

**ಇತಿ ಸರ್ವಮಿದಂ ಶ್ರುತ್ವಾ ಸ ಸಂವೇಗಪರಾಯಣಃ ।**
**ಸುಪ್ರಶ್ರೇಷ್ಠೋಂಧಕವೃಷ್ಟ್ಯಾಖ್ಯಃ ಸ್ವೀಚಿಕೀರ್ಷುಃ ಪರಂ ಪದಮ್ ॥ ೨೧೨ ॥**

**ಸಮುದ್ರವಿಜಯಾಖ್ಯಾಯ ದತ್ವಾಭಿಷವಪೂರ್ವಕಮ್ ।**
**ರಾಜ್ಯಮುಜ್ಝಿತಸಂಗಃ ಸನ್ ಶಮಸಂಗಸ್ತಪೋಗ್ರಹೀತ್ ॥ ೨೧೩ ॥**

**ಸುಪ್ರತಿಷ್ಠಜಿನಾಭ್ಯರ್ಣೇ ರಾಜಭಿರ್ಬಹುಭಿಃ ಸಮಮ್ ।**
**ಸಂಯಮಾಂತೇ ಸ ಸನ್ನ್ಯಸ್ಯ ವಿನ್ಯಾಸಂ ನಿರ್ವೃತೇರಗಾತ್ ॥ ೨೧೪ ॥**

ಈ ರೀತಿಯಾಗಿ ಇದೆಲ್ಲವನ್ನೂ ಸುಪ್ರತಿಷ್ಠಜಿನರಿಂದ ಕೇಳಿ ಸಂವೇಗಪರಾಯಣನೂ ಬಹುಶ್ರೇಷ್ಠನೂ ಆದ ಆ ಅಂಧಕವೃಷ್ಟಿಯು ಉತ್ಕೃಷ್ಟವಾದ–ಮುಕ್ತಿಪದವನ್ನು ಹೊಂದಬೇಕೆಂಬ ಇಚ್ಛೆಯುಳ್ಳವನೂ ಸಮುದ್ರವಿಜಯನಿಗೆ ಅಭಿಷೇಕಪೂರ್ವಕವಾಗಿ ರಾಜ್ಯವನ್ನು ಕೊಟ್ಟು ಪರಿಗ್ರಹಗಳನ್ನು ತ್ಯಜಿಸಿದವನೂ ಶಾಂತಿಯನ್ನು ಹೊಂದಿದವನೂ ಆಗಿ ಅನೇಕ ರಾಜರುಗಳೊಡನೆ ಸುಪ್ರತಿಷ್ಠಜಿನರ ಬಳಿಯಲ್ಲಿ ತಪಸ್ಸನ್ನು ಮಾಡಿ ಕೊನೆಯಲ್ಲಿ ಸಮಾಧಿಮರಣವನ್ನು ಹೊಂದಿ ಮುಕ್ತಿಯ ರಚನೆಯನ್ನು ಪಡೆದನು. ಮುಕ್ತನಾದನೆಂದು ಭಾವವು.

**ಸಮುದ್ರವಿಜಯೇ ಪಾತಿ ಕ್ಷಿತಿಂ ವರ್ಣಾಶ್ರಮಾಃ ಸುಖಮ್ ।**
**ಸ್ವಧರ್ಮಕರ್ಮಸು ಸ್ವೈರಂ ಪ್ರಾವರ್ತಂತ ಯಥೋದಿತಮ್ ॥ ೨೧೫ ॥**

ಸಮುದ್ರವಿಜಯನೂ ಪೃಥ್ವಿಯನ್ನು ಪಾಲಿಸುತ್ತಿರಲು ವರ್ಣಾಶ್ರಮಗಳುಳ್ಳವರು ತಮ್ಮ ಧರ್ಮಕಾರ್ಯಗಳಲ್ಲಿ ಶಾಸ್ತ್ರೋಕ್ತಪ್ರಕಾರವಾಗಿಯೂ ಸುಖವಾಗಿಯೂ ಯಥೇಚ್ಛವಾಗಿಯೂ ಪ್ರವರ್ತಿಸಿದರು.

**ರಾಜ್ಯಂ ವಿಭಜ್ಯ ದಿಕ್ಪಾಲೈರಿವ ಭ್ರಾತೃಭಿರಷ್ಟಭಿಃ ।**
**ಸಹಾನ್ವಭೂತ್ಸ ಭೂಪಾಲಃ ಸಕಲಂ ಸರ್ವಸೌಖ್ಯದಮ್ ॥ ೨೧೬ ॥**

ಆ ರಾಜನು ಎಲ್ಲರಿಗೂ ಸುಖಪ್ರದವಾದ ಸಕಲರಾಜ್ಯವನ್ನು ವಿಭಾಗಿಸಿ ದಿಕ್ಪಾಲಕರಂತಿರುವ ಎಂಟು ಮಂದಿ ಸಹೋದರರೊಡನೆ ಅನುಭವಿಸಿದನು.

**ಏವಂ ಸುಖೇನ ಸರ್ವೇಷಾಂ ಕಾಲೇ ಗಚ್ಛತ್ಯಯೋದಯಾತ್ ।**
**ಚತುರಂಗಬಲೋಪೇತೋ ವಸುದೇವೋ ಯುವಾಗ್ರಣೀಃ ॥ ೨೧೭ ॥**

**ಗಂಧವಾರಣಮಾರುಹ್ಯ ಸಂಚರಚ್ಚಾಮರಾವಲಿಃ ।**
**ವಾದ್ಯಮಾನಾಖಿಲಾತೋದ್ಯಧ್ವನಿನಿರ್ಭಿನ್ನದಿಕ್ತಟಃ ॥ ೨೧೮ ॥**

**ವಂದಿಮಾಗಧಸೂತಾದಿಸೂದ್ಯಮಾನಾಂಕಮಾಲಕಃ ।**
**ನಾನಾಭರಣಭಾಭಾರಭಾಸಮಾನಸ್ವವಿಗ್ರಹಃ ॥ ೨೧೯ ॥**

**ನಿಗ್ರಹೀತುಮಿವೋಗ್ರಾಂಶುಮುದ್ಯತೋ ನಿಜತೇಜಸಾ ।**
**ಅಧೋವಿಧಾತುಮೇವೈಷ ಭೂಷಣಾಂಗಾಮರದ್ರುಮಮ್ ॥ ೨೨೦ ॥**

**ಅಮರಾಣಾಂ ಕುಮಾರೋ ವಾ ಕುಮಾರಃ ಪ್ರತ್ಯಹಂ ಬಹಿಃ ।**
**ನಿರ್ಗಚ್ಛತಿ ಪುರಾತ್ಸ್ವೈರಂ ಸ್ವಲೀಲಾದರ್ಶನೋತ್ಸುಕಃ ॥ ೨೨೧ ॥**

ಈ ರೀತಿಯಾಗಿ ಪುಣ್ಯೋದಯದಿಂದ ಎಲ್ಲರ ಕಾಲವೂ ಸುಖದಿಂದ ಕಳೆಯುತ್ತಿರಲು ಚತುರಂಗಬಲಸಮೇತನೂ ಯುವಕರಲ್ಲಿ ಮುಂದಾಳುವೂ ಆದ ವಸುದೇವನು ಮದಗಜವನ್ನೇರಿ ಚೆನ್ನಾಗಿ ಚಲಿಸುತ್ತಿರುವ ಚಾಮರಗಳ ಸಾಲುಗಳುಳ್ಳವನೂ ಧ್ವನಿಮಾಡುತ್ತಿರುವ ತತ ಮುರಜ ಸುಷಿರ ಘನಗಳೆಂಬ ವಾದ್ಯಗಳ ಶಬ್ದದಿಂದ ಭೇದಿಸಲ್ಪಟ್ಟ ದಿಕ್ಪ್ರದೇಶಗಳುಳ್ಳವನೂ ವಂದಿ ಮಾಗಧ ಸಾರಥಿ ಮೊದಲಾದವರಿಂದ ಚೆನ್ನಾಗಿ ಉಚ್ಚರಿಸಲ್ಪಟ್ಟ ಅಂಕಮಾಲೆ(ಪ್ರಶಸ್ತಿ ಮಾಲೆ) ಯುಳ್ಳವನೂ ವಿವಿಧಭೂಷಣಗಳ ಕಾಂತಿಯ ಭಾರದಿಂದ ಪ್ರಕಾಶಮಾನವಾದ ದೇಹವುಳ್ಳವನೂ ತನ್ನ ತೇಜಸ್ಸಿನಿಂದ ಸೂರ್ಯನನ್ನು ನಿಗ್ರಹಿಸುವುದಕ್ಕೋಸ್ಕರ ಉದ್ಯುಕ್ತನಂತಿರುವವನೂ ಭೂಷಣಾಂಗಕಲ್ಪವೃಕ್ಷವನ್ನು ಕೀಳುಮಾಡುವುದಕ್ಕೋಸ್ಕರವೇ ದೇವರ್ಕಳ ಕುಮಾರನಂತೆ ಈ ವಸುದೇವಕುಮಾರನು ಪ್ರತಿದಿವಸ ತನ್ನ ಲೀಲೆಯನ್ನು ನೋಡುವುದರಲ್ಲಿ ಕುತೂಹಲವುಳ್ಳವನಾಗಿ ಪಟ್ಟಣದಿಂದ ಯಥೇಚ್ಛವಾಗಿ ಹೊರಕ್ಕೆ ಹೊರಡುತ್ತಾನೆ.

**ವಿಸಸ್ಮರುರ್ನಿರೀಕ್ಷ್ಯೈನಂ ಸ್ವವ್ಯಾಪಾರಾನ್ ಪುರಸ್ತ್ರಿಯಃ ।**
**ನಿರಾದರಾ ಬಭೂವುಶ್ಚ ಮಾತುಲಾನ್ಯಾದಿವಾರಣೇ ॥ ೨೨೨ ॥**

ನಗರದ ಸ್ತ್ರೀಯರು ಈ ವಸುದೇವನನ್ನು ನೋಡಿ ತಮ್ಮ ಕಾರ್ಯಗಳನ್ನು ಮರೆತರು. ಅತ್ತೆಯೇ ಮೊದಲಾದವರ ನಿವಾರಣೆಯಲ್ಲಿ ನಿರಾದರವುಳ್ಳವರಾಗಿಯೂ ಆದರು. ಸೋದರಮಾವನ ಹೆಂಡತಿ–ಅತ್ತೆಯೇ ಮೊದಲಾದ ಬಂಧುಗಳು ತಡೆದರೂ ಲಕ್ಷಿಸಲಿಲ್ಲವೆಂದು ಭಾವವು.

**ನಿರ್ಗಮೇಥ ಕುಮಾರಸ್ಯ ವಿಷಣ್ಣಾ ನಾಗರಾಸ್ತದಾ ।**
**ಗತ್ವಾ ವಿಜ್ಞಾಪಯಾಮಾಸುಸ್ತದ್ವೃತ್ತಾಂತಂ ಮಹೀಪತಿಮ್ ॥ ೨೨೩ ॥**

ಅನಂತರದಲ್ಲಿ ವಸುದೇವಕುಮಾರನು ಹೊರಗೆ ಹೊರಟಾಗ ಪುರನಿವಾಸಿಗಳು ಖಿನ್ನರಾಗಿ ಹೋಗಿ ಆ ಸಮಾಚಾರವನ್ನು ದೊರೆಗೆ ವಿಜ್ಞಾಪಿಸಿದರು.

**ಶ್ರುತ್ವಾವಧಾರ್ಯ ತದ್ರಾಜಾ ಸಹಜಸ್ನೇಹನಿರ್ಭರಃ ।**
**ಪ್ರಕಾಶಪ್ರತಿಷೇಧೇನ ಕದಾಚಿದ್ವಿಮುಖೋ ಭವೇತ್ ॥ ೨೨೪ ॥**

**ಕುಮಾರ ಇತಿ ಸಂಚಿಂತ್ಯ ತಮಾಹೂಯ ಮಿಥೋಬ್ರವೀತ್ ।**
**ಕುಮಾರ ತವ ಕಾಯಸ್ಯ ಚ್ಛಾಯಾದ್ಯೇಯಮಿವಾನ್ಯಥಾ ॥ ೨೨೫ ॥**

**ವೃಥಾಟನಂ ಪರಿತ್ಯಾಜ್ಯಂ ಶೀತವಾತಾದಿಷು ತ್ವಯಾ ।**
**ವಿಹರ್ತುಂ ತವ ವಾಂಛಾ ಚೇತ್ಪರಿತೋ ರಾಜಮಂದಿರಮ್ ॥ ೨೨೬ ॥**

**ಧಾರಾಗೃಹೇ ವನೇ ರಮ್ಯೇ ಹರ್ಮ್ಯೇ ವಿಹಿತಪರ್ವತೇ ।**
**ಮಂತ್ರಿಸಾಮಂತಯೌಧಾಗ್ರಮಹಾಮಾತ್ರಾತ್ಮಜೈಃ ಸಮಮ್ ॥ ೨೨೭ ॥**

ಯಥೇಷ್ಟವಮಾಚರೇತ್ಯೇತಚ್ಛ್ರುತ್ವಾ ಸೋಪಿ ತಥಾಚರತ್ ।
ಆದದತ್ಯಮೃತಂ ವಾಪ್ತವಚನಂ ಶುದ್ಧಬುದ್ಧಯಃ ॥ ೨೨೮ ॥

ದೊರೆಯು ಆ ಮಾತನ್ನು ಕೇಳಿ ನಿಶ್ಚಯಿಸಿ ತಮ್ಮನಲ್ಲಿ ಪ್ರೇಮಪೂರ್ಣನಾಗಿ ಪ್ರಕಟವಾಗಿ ತಡೆಯುವುದರಿಂದ ಎಂದಾದರೂ ಕುಮಾರನು ವಿಮುಖನಾಗುವನೆಂದು ಯೋಚಿಸಿ ಅವನನ್ನು ಕರೆದು ರಹಸ್ಯವಾಗಿ ''ಕುಮಾರನೆ! ಇಂದು ನಿನ್ನ ಶರೀರದ ಈ ಕಾಂತಿಯು ಬೇರೆಯಾಗಿರುವಂತಿದೆ. ತಂಗಾಳಿಯೇ ಮೊದಲಾದುವುಗಳಲ್ಲಿ ನೀನು ವ್ಯರ್ಥವಾದ ಅಲೆದಾಟವನ್ನು ಬಿಟ್ಟುಬಿಡಬೇಕು. ವಿಹರಿಸುವುದಕ್ಕೆ ನಿನಗೆ ಇಚ್ಛೆಯಿದ್ದರೆ ಅರಮನೆಯ ಸುತ್ತಲೂ ಜಲಧಾರೆಯ ಗೃಹದಲ್ಲಿಯೂ ರಮಣೀಯವಾದ ವನದಲ್ಲಿಯೂ ಅರಮನೆಯಲ್ಲಿಯೂ ಕೃತಕಪರ್ವತದಲ್ಲಿಯೂ ಮಂತ್ರಿಪುತ್ರರೊಡನೆಯೂ ಸಾಮಂತರಾಜಪುತ್ರರೊಡನೆಯೂ ಉತ್ತಮಭಟರ ಪುತ್ರರೊಡನೆಯೂ ಮಹಾಪರಿವಾರಜನರ ಪುತ್ರರೊಡನೆಯೂ ವಿಹರಿಸು'' ಎಂದು ಹೇಳಿದನು. ಈ ಮಾತನ್ನು ಕೇಳಿ ಆ ವಸುದೇವಕುಮಾರನೂ ಹಾಗೆಯೇ ಆಚರಿಸಿದನು. ಶುದ್ಧವಾದ ಬುದ್ಧಿಯುಳ್ಳವರು, ಅಮೃತವನ್ನು ಗ್ರಹಣ ಮಾಡುವಂತೆ, ಆಪ್ತರ ಮಾತನ್ನು ಗ್ರಹಣಮಾಡುತ್ತರೆ.

ಏವಂ ವಿಹರಮಾಣಂ ತಂ ವಾಚಾಟಶ್ಚೇಟಕೋಪರಃ ।
ನಾಮ್ನಾ ನಿಪುಣಮತ್ಯಾಖ್ಯೋ ಯಥೇಷ್ಟಚರಣೋತ್ಸುಕಃ ॥ ೨೨೯ ॥

ರಾಜ್ಞಾ ತ್ವಂ ಪ್ರತಿಷಿದ್ಧೋಸಿ ಸೋಪಾಯಂ ನಿರ್ಗಮಂ ಪ್ರತಿ ।
ಇತ್ಯವಾದೀತ್ಯಸೌ ಚಾಹ ಕಿಮರ್ಥಮಿತಿ ಚೇಟಕಮ್ ॥ ೨೩೦ ॥

ಸೋಬ್ರವೀತ್ತವ ನಿರ್ಯಾಣಕಾಲೇ ರೂಪವಿಲೋಕನಾತ್ ।
ಪುರೇ ಶಿಥಿಲಚಾರಿತ್ರಾ ಮನ್ಮಥೇನಾಕುಲೀಕೃತಾಃ ॥ ೨೩೧ ॥

ವೀತಲಜ್ಜಾ ವಿಮರ್ಯಾದಾ ವಿಪರೀತವಿಚೇಷ್ಟಿತಾಃ ।
ಪೀತಾಸವಸಮಾಃ ಕನ್ಯಾಃ ಸಧವಾ ವಿಧವಾಶ್ಚ ತಾಃ ॥ ೨೩೨ ॥

ಕಾಶ್ಚಿತ್ಪ್ರಸ್ವಿನ್ನಸರ್ವಾಂಗ್ಯಃ ಕಾಶ್ಚಿದ್ವ್ಯಾತ್ತಾಸ್ಯಲೋಚನಾಃ ।
ಕಾಶ್ಚಿತ್ಸಂತ್ಯಕ್ತಸಂವ್ಯಾನಾಃ ಕಾಶ್ಚಿತ್ತ್ಯಕ್ತಾರ್ಧಭೋಜನಾಃ ॥ ೨೩೩ ॥

ಅವಮತ್ಯ ಗುರೂನ್ ಕಾಶ್ಚಿತ್ಕಾಶ್ಚಿನ್ನಿರ್ಭರ್ತ್ಸ್ಯ ರಕ್ಷಕಾನ್ ।
ಭರ್ತೄನವಿಗಣಯ್ಯಾನ್ಯಾಃ ಪುತ್ರಾಂಶ್ಚಾನ್ಯಾಃ ಸ್ವಪುತ್ರಕಾನ್ ॥ ೨೩೪ ॥

ಮತ್ವಾ ಮರ್ಕಟಕಾನ್ ಕಾಶ್ಚಿತ್ಸಮುತ್ಕ್ಷಿಪ್ಯ ಸಮಾಕುಲಾಃ ।
ಕಂಬಲಂ ಪರಿಧಾಯಾನ್ಯಾ ವಿಚಿಂತ್ಯೋತ್ಕೃಷ್ಟವಾಸಸೀ ॥ ೨೩೫ ॥

ಅಂಗರಾಗಂ ಸಮಾಲೋಚ್ಯ ಕಾಶ್ಚಿದಾಲಿಪ್ಯ ಕರ್ದಮಮ್ ।
ಲೋಚನೇ ಸ್ವೇ ಸಮಾಲೋಚ್ಯ ಲಲಾಟೇ ನ್ಯಸ್ತಕಜ್ಜಲಾಃ ॥ ೨೩೬ ॥

ಸ್ವಾಃ ಸ್ವಾಸ್ತಥಾವಿಧಾಃ ಸರ್ವಾಃ ಸರ್ವೈರುದ್ವಿಗ್ನಮಾನಸೈಃ ।
ನಿರೀಕ್ಷ್ಯ ಪೌರೈರೈಕ್ಯೇನ ಜ್ಞಾಪಿತೋಯಂ ನರೇಶ್ವರಃ ॥ ೨೩೭ ॥

ತವೇದೃಶೀಮುಪಾಯೇನ ವ್ಯವಸ್ಥಾಂ ಪರ್ಯಕಲ್ಪಯತ್ ।
ಇತಿ ಸಂಶ್ರುತ್ಯ ತೇನೋಕ್ತಂ ಕುಮಾರಸ್ತತ್ಪರೀಕ್ಷಿತುಮ್ ॥ ೨೩೮ ॥

ರಾಜಗೇಹಾದ್ವಿನಿರ್ಗಂತುಕಾಮೋ ದೌವಾರಿಕೈಸ್ತದಾ ।
ತವಾಗ್ರಜಸ್ಯ ದೇವಸ್ಯ ನಿದೇಶೋಸ್ಮಾಕಮೀದೃಶಃ ॥ ೨೩೯ ॥

ಬಹಿಸ್ತ್ವಯಾ ನ ಗಂತವ್ಯಮಿತಿ ರುದ್ಧಃ ಸ್ಥಿತೋನ್ಯದಾ ।
ಸಮುದ್ರವಿಜಯಾದೀನಾಮನುಕ್ತ್ವಾ ಯಶಸೋಭಯಾತ್ ॥ ೨೪೦ ॥

ವಸುದೇವೋಮುತೋ ಗತ್ವಾ ವಿದ್ಯಾಸಂಸಾಧನಚ್ಛಲಾತ್ ।
ಶ್ಮಶಾನಭೂಮಾವೇಕಾಕೀ ಮಹಾಜ್ವಾಲೇ ಹುತಾಶನೇ ॥ ೨೪೧ ॥

ನಿಪತ್ಯಾಕೀರ್ತಿಭೀರ್ಮಾತುರಿತಿ ಪತ್ರಂ ವಿಲಿಖ್ಯ ತತ್ ।
ಕಂಠೇ ನಿಬಧ್ಯ ವಾಹಸ್ಯ ಮುಕ್ತ್ವಾ ತತ್ರೈವ ತಂ ಸ್ವಯಮ್ ॥ ೨೪೨ ॥

ವಹ್ನಿಂ ಪ್ರದಕ್ಷಿಣೀಕೃತ್ಯ ದಹ್ಯಮಾನಶವಾನ್ವಿತಮ್ ।
ಅಗಾದಲಕ್ಷಮಾರ್ಗಃ ಸನ್ ರಾತ್ರಾವೇವ ದ್ರುತಂ ತತಃ ॥ ೨೪೩ ॥

ಈ ರೀತಿಯಾಗಿ ವಿಹರಿಸುತ್ತಿರುವ ಆ ವಸುದೇವಕುಮಾರನನ್ನು ಕುರಿತು ಬಹು ನಿಂದ್ಯವಾದ ಮಾತುಳ್ಳವನೂ ಹೆಸರಿನಿಂದ ನಿಪುಣಮತಿಯೆಂಬವನೂ ಇಚ್ಛೆಬಂದಂತೆ ನಡೆಯುವುದರಲ್ಲಿ ಕುತೂಹಲವುಳ್ಳವನೂ ಆದ ಬೇರೊಬ್ಬ ಭೃತ್ಯನು ''ಹೊರಕ್ಕೆ ಹೊರಡುವಿಕೆಯನ್ನು ಕುರಿತು ರಾಜನು ಉಪಾಯವಾಗಿ ನಿನ್ನನ್ನು ತಡೆದಿದ್ದಾನೆ'' ಎಂದು ಹೇಳಿದನು. ಆ ಮಾತನ್ನು ಕೇಳಿ ಈ ವಸುದೇವಕುಮಾರನು ''ಏತಕ್ಕೋಸ್ಕರ?'' ಎಂದು ಭೃತ್ಯನನ್ನು ಕುರಿತು ಹೇಳಿದನು. ಆಗ ಆ ಭೃತ್ಯನು ಕುಮಾರನನ್ನು ಕುರಿತು ''ನೀನು ಹೊರಡುವ ಕಾಲದಲ್ಲಿ ನಿನ್ನ ರೂಪವನ್ನು ನೋಡುವುದರಿಂದ ನಗರದಲ್ಲಿ ಕನ್ಯೆಯರೂ ಸಧವೆಯರೂ ವಿಧವೆಯರೂ ಶಿಥಿಲ ಚಾರಿತ್ರವುಳ್ಳವರಾಗಿಯೂ ಕಾಮನಿಂದ ವ್ಯಾಕುಲರಾಗಿಯೂ ಲಜ್ಜೆಯಿಲ್ಲದವರಾಗಿಯೂ ಮರ್ಯಾದೆಯಿಲ್ಲದವರಾಗಿಯೂ ವಿಪರೀತ ವ್ಯಾಪಾರವುಳ್ಳವರಾಗಿಯೂ ಮದ್ಯಪಾನವನ್ನು ಮಾಡಿದವರಿಗೆ ಸಮಾನರಾಗಿಯೂ ಆಗುತ್ತಾರೆ. ಅವರು ಕೆಲವರು ಬೆವರಿದ ಸರ್ವಾಂಗವುಳ್ಳವರಾಗಿಯೂ ಕೆಲವರು ಬಾಯಿಕಣ್ಣುಗಳನ್ನು ತೆರದವರಾಗಿಯೂ ಕೆಲವರು ಮೇಲ್ಮುಸುಕಿನ ವಸ್ತ್ರವನ್ನು ತ್ಯಜಿಸಿದವರಾಗಿಯೂ ಕೆಲವರು ಅರ್ಧವಾಗಿ ಭೋಜನವನ್ನು ತ್ಯಜಿಸಿದವರಾಗಿಯೂ ಆಗುತ್ತಾರೆ. ಕೆಲವರು ಹಿರಿಯರನ್ನು ತಿರಸ್ಕರಿಸಿ ಕೆಲವರು ರಕ್ಷಕರನ್ನು ಗದರಿಸಿ ಬೇರೆ ಹೆಂಗಸರು ಗಂಡಂದಿರನ್ನು ಲೆಕ್ಕಿಸದೆ ಮತ್ತೆ ಬೇರೆ ಹೆಂಗಸರು ಪುತ್ರರನ್ನು ಲೆಕ್ಕಿಸದೆ ಕೆಲವು ಸ್ತ್ರೀಯರು ಕಪಿಗಳನ್ನು ತಮ್ಮ ಪುತ್ರರನ್ನಾಗಿ ತಿಳಿದು ಎತ್ತಿಕೊಂಡು ವ್ಯಾಕುಲರಾಗಿಯೂ ಬೇರೆ ಸ್ತ್ರೀಯರು ಕಂಬಳಿಯನ್ನು ವಸ್ತ್ರಗಳನ್ನಾಗಿ ಯೋಚಿಸಿ ಧರಿಸಿಕೊಂಡು, ಕೆಲವು ಸ್ತ್ರೀಯರು ಕೆಸರನ್ನು ಅಂಗರಾಗವನ್ನಾಗಿ ಯೋಚಿಸಿ ಮೈಗೆ ಬಳಿದುಕೊಂಡು, ಕೆಲವು ಸ್ತ್ರೀಯರು ತಮ್ಮ ಕಣ್ಣೆಂದು ಯೋಚಿಸಿ ಹಣೆಯಲ್ಲಿ ಕಪ್ಪನ್ನು ಹಚ್ಚಿಕೊಂಡವರಾಗಿಯೂ ಆಗಿರುತ್ತಾರೆ. ಆ ವಿಧವಾದ ತಂತಮ್ಮ ಎಲ್ಲಾ ಸ್ತ್ರೀಯರನ್ನು ನೋಡಿ ಭೀತವಾದ ಮನಸ್ಸುಳ್ಳವರಾದ ಎಲ್ಲಾ ಪುರನಿವಾಸಿಗಳಿಂದ ಐಕ್ಯದಿಂದ ವಿಜ್ಞಾಪಿಸಲ್ಪಟ್ಟ ಈ ಸಮುದ್ರವಿಜಯಮಹಾರಾಜನು ಉಪಾಯದಿಂದ ನಿನಗೆ ಈ ರೀತಿಯಾದ ವ್ಯವಸ್ಥೆಯನ್ನು ಮಾಡಿದನು.'' ಎಂದು ಹೇಳಿದನು. ಆ ನಿಪುಣಮತಿಭೃತ್ಯನು ಹೇಳಿದುದನ್ನು ಕೇಳಿ ವಸುದೇವಕುಮಾರನು ಅದನ್ನು ಪರೀಕ್ಷಿಸುವುದಕ್ಕೋಸ್ಕರ ಆಗ ಅರಮನೆಯಿಂದ ಹೊರಡಬೇಕೆಂಬ ಇಚ್ಛೆಯುಳ್ಳವನಾಗಿ ದ್ವಾರಪಾಲಕರಿಂದ '' ಎಲೈ ದೇವನೆ! ನೀನು ಹೀಗೆ ಹೊರಗೆ ಹೋಗಬಾರದೆಂದು ನಮಗೆ ನಿನ್ನ ಅಣ್ಣನ ಆಜ್ಞೆಯಾಗಿದೆ'' ಎಂದು ತಡೆಯಲ್ಪಟ್ಟವನಾಗಿ ಇದ್ದುಬಿಟ್ಟನು. ಮತ್ತೊಂದು ಕಾಲದಲ್ಲಿ ವಸುದೇವನು ಅಪಯಶಸ್ಸಿನ ಭಯದಿಂದ ಸಮುದ್ರವಿಜಯನೇ ಮೊದಲಾದವರಿಗೆ ಹೇಳದೆ ಈ ನಗರದಿಂದ ಹೊರಟು ಹೋಗಿ ವಿದ್ಯಾಸಾಧನದ ನೆವದಿಂದ ಶ್ಮಶಾನಭೂಮಿಯಲ್ಲಿ ಏಕಾಕಿಯಾಗಿ ''ಅಪಕೀರ್ತಿಯ ಭಯವುಳ್ಳವನು ಮಹಾಜ್ವಾಲೆಯುಳ್ಳ ಬೆಂಕಿಯಲ್ಲಿ ಬಿದ್ದ'' ಎಂದು ತಾಯಿಗೆ ಕಾಗದವನ್ನು ಬರೆದು ಅದನ್ನು ಕುದುರೆಯ ಕೊರಳಿಗೆ ಕಟ್ಟಿ ಅದನ್ನು ಅಲ್ಲೇ ಬಿಟ್ಟು ತಾನು ಸುಡುತ್ತಿರುವ ಹೆಣವುಳ್ಳ ಬೆಂಕಿಯನ್ನು ಪ್ರದಕ್ಷಿಣೆಮಾಡಿ ಗುರುತಿಸಲ್ಪಡದ ದಾರಿಯುಳ್ಳವನಾಗಿ ರಾತ್ರಿಯಲ್ಲಿಯೇ ಶೀಘ್ರವಾಗಿ ಅಲ್ಲಿಂದ ಹೊರಟುಹೋದನು.

ಇತಃ ಸೂರ್ಯೋದಯೇ ರಾಜಗೃಹೇ ತದ್ರಕ್ಷಕಾಗ್ರಣೀಃ ।
ಅನಿರೀಕ್ಷ್ಯಾನುಜಂ ರಾಜ್ಞೋ ರಾಜಾದೇಶಾದಿತಸ್ತತಃ ॥ ೨೪೪ ॥

ಪರ್ಯಟನ್ಬಹುಭಿಃ ಸಾರ್ಧಂ ತಮನ್ವೇಷ್ಟುಮಥೈಕ್ಷತ ।
ಭಸ್ಮೀಭೂತಂ ಶವಂ ತತ್ರ ಭ್ರಾಮ್ಯಂತಂ ಚ ತುರಂಗಮಮ್ ॥ ೨೪೫ ॥

ಇತ್ತಕಡೆ ಸೂರ್ಯೋದಯಸಮಯದಲ್ಲಿ ಅರಮನೆಯಲ್ಲಿ ಅದರ ಕಾವಲುಗಾರರಲ್ಲಿ ಮುಖ್ಯನಾಗಿರುವವನು ರಾಜನ ತಮ್ಮನನ್ನು ಕಾಣದೆ ರಾಜನ ಅಪ್ಪಣೆಯಿಂದ ಅವನನ್ನು ಹುಡುಕುವುದಕ್ಕೋಸ್ಕರ ಅನೇಕರೊಡನೆ ಈಕಡೆ ಆಕಡೆ ಅಲೆದಾಡುವವನಾಗಿ ಬಳಿಕ ಆ ಶ್ಮಶಾನದಲ್ಲಿ ಬೂದಿಯಾದ ಶವವನ್ನೂ ಸುತ್ತಾಡುತ್ತಿರುವ ಕುದುರೆಯನ್ನೂ ಕಂಡನು.

**ತತ್ಕಂಠಪತ್ರಮಾದಾಯ ನೀತ್ವಾ ರಾಜ್ಞೇ ಸಮಾರ್ಪಯತ್ ।**
**ತತ್ಪತ್ರಾರ್ಥಂ ಸಮಾಕರ್ಣ್ಯ ಸಮುದ್ರವಿಜಯಾದಯಃ ॥ ೨೪೬ ॥**

**ಮಹೀಭುಜಃ ಪರೇ ಚಾತಿಶೋಕಸಂತಪ್ತಚೇತಸಃ ।**
**ನೈಮಿತ್ತಿಕೋಕ್ತ ತದ್ಯೋಗಕ್ಷೇಮಜ್ಞಾಃ ಶಮಮಾಗತಾಃ ॥ ೨೪೭ ॥**

ಆ ಕುದುರೆಯ ಕೊರಳಿನಲ್ಲಿದ್ದ ಪತ್ರವನ್ನು ತೆಗೆದುಕೊಂಡು ಹೋಗಿ ಅದನ್ನು ದೊರೆಗೆ ಸಮರ್ಪಿಸಿದನು. ಆ ಪತ್ರದ ಅರ್ಥವನ್ನು ಕೇಳಿ ಸಮುದ್ರವಿಜಯನೇ ಮೊದಲಾದ ರಾಜರೂ ಬೇರೆಯವರೂ ಅಧಿಕಶೋಕಸಂತಪ್ತವಾದ ಮನಸ್ಸುಳ್ಳವರಾಗಿ ನೈಮಿತ್ತಿಕನಿಂದ ಹೇಳಲ್ಪಟ್ಟ ಅವನ ಯೋಗಕ್ಷೇಮವನ್ನು ತಿಳಿದು ಶಾಂತಿ–ಸಮಾಧಾನವನ್ನು ಹೊಂದಿದರು.

**ಭೃತ್ಯಾನ್ಮಹೀಪತಿಃ ಸ್ನೇಹಾತ್ಸ ತದೈವ ಸಮಂತತಃ ।**
**ತಂ ಗವೇಷಯಿತುಂ ದಕ್ಷಾನ್ ಪ್ರಾಹಿಣೋತ್ಸ್ವಹಿತಾನ್ ಬಹೂನ್ ॥**

ಆಗಲೇ ಆ ಸಮುದ್ರವಿಜಯಮಹಾರಾಜನು ಪ್ರೇಮದಿಂದ ಆ ವಸುದೇವನನ್ನು ಹುಡುಕುವುದಕ್ಕೋಸ್ಕರ ಸಮರ್ಥರೂ ತನಗೆ ಹಿತಕಾರಿಗಳೂ ಆದ ಅನೇಕ ಭೃತ್ಯರನ್ನು ಎಲ್ಲಾಕಡೆಗಳಿಗೆ ಕಳುಹಿಸಿಕೊಟ್ಟನು.

**ವಿಜಯಾಖ್ಯಂ ಪುರಂ ಗತ್ವಾ ಸೋಪ್ಯಶೋಕಮಹೀರುಹಃ ।**
**ಮೂಲೇ ವಿಶ್ರಾಂತಯೇ ತಸ್ಥೌ ತರುಚ್ಛಾಯಾಮವಸ್ಥಿತಾಮ್ ॥ ೨೪೯ ॥**

ಆ ವಸುದೇವನೂ ವಿಜಯವೆಂಬ ಪಟ್ಟಣಕ್ಕೆ ಹೋಗಿ ಅಶೋಕವೃಕ್ಷದ ಬುಡದಲ್ಲಿ ವಿಶ್ರಾಂತಿಗೋಸ್ಕರ ಇದ್ದನು. ಆಗ ಆ ಮರದ ನೆರಳು ಚಲಿಸದೆ–ಸ್ಥಿರವಾಗಿದ್ದಿತು.

**ಸಮೀಕ್ಷ್ಯಾದೇಶಿಕಪ್ರೋಕ್ತಮಭೂದವಿತಥಂ ವಚಃ ।**
**ಇತ್ಯುದ್ಯಾನಪತಿರ್ಗತ್ವಾ ಮಗಧೇಶಮಬೂಬುಧತ್ ॥ ೨೫೦ ॥**

ಅದನ್ನು ನೋಡಿ ಉದ್ಯಾನಾಧಿಪತಿಯು "ನೇಮಿತ್ತಿಕನು ಹೇಳಿದ ಮಾತು ಸತ್ಯವಾಯಿತು" ಎಂದು ಹೋಗಿ ಆ ವಿಷಯವನ್ನು ಮಗಧಾಧಿಪತಿಗೆ ತಿಳಿಸಿದನು.

**ರಾಜಾಪಿ ಶ್ಯಾಮಲಾಖ್ಯಾಂ ಸ್ವಾಂ ಸುತಾಂ ತಸ್ಮೈ ಸಮಾರ್ಪಯತ್ ।**
**ದಿನಾನಿ ಕಾನಿಚಿತ್ತತ್ರ ವಿಶ್ರಮ್ಯ ಗತವಾಂಸ್ತತಃ ॥ ೨೫೧ ॥**

ದೊರೆಯೂ ಶ್ಯಾಮಲೆಯೆಂಬ ತನ್ನ ಪುತ್ರಿಯನ್ನು ವಸುದೇವನಿಗೆ ಕೊಟ್ಟು –ವಿವಾಹಮಾಡಿದನು. ಅವನು ಕೆಲವು ದಿನಗಳವರೆಗೆ ಅಲ್ಲಿ ವಿಶ್ರಮಿಸಿದ್ದು ಬಳಿಕ ಅಲ್ಲಿಂದ ಹೊರಟು ಹೋದನು.

**ದೇವದಾರುವನೇ ಪುಷ್ಕರಮ್ಯಾಖ್ಯೇ ವನಜಾಕರೇ ।**
**ಅರಣ್ಯವಾರಣೇನಾಸೌ ಕ್ರೀಡಿತ್ವಾರುಹ್ಯ ತಂ ಮುಹುಃ ॥ ೨೫೨ ॥**

**ಶ್ಲಾಘ್ಯಮಾನಃ ಸ್ವಯಂ ಕೇನಚಿತ್ಖಗೇನ ಗಜಾಧಿಪಾತ್ ।**
**ಅಪಾಸ್ಯ ಸಹಸಾನೀತಃ ಖೇಚರಾದ್ರಿಂ ಕೃತೀ ಪುರಃ ॥ ೨೫೩ ॥**

**ಪತ್ಯುಃ ಕಿನ್ನರಗೀತಸ್ಯ ದ್ವಿತೀಯಾಂ ವಾ ರತಿಂ ಸತೀಮ್ ।**
**ಸುತಾಮಶನಿವೇಗಸ್ಯ ದತ್ತಾಂ ಶಾಲ್ಮಲಿಪೂರ್ವಿಕಾಮ್ ॥ ೨೫೪ ॥**

**ಜಾತಾಂ ಪವನವೇಗಾಯಾಮಾದಿಷ್ಟಾಂ ಪರಿಣೀತವಾನ್ ।**
**ತಯಾ ಸಹ ಸ್ಮರಸ್ಯಾಪಿ ಸುಖಂ ಸ್ಮರ್ತುಮಗೋಚರಮ್ ॥ ೨೫೫ ॥**

**ಅನುಭೂಯ ದಿನಾನ್ಯತ್ರ ವಿಶ್ರಾಂತಃ ಕಾನಿಚಿತ್ಪುನಃ ।**
**ತತೋಪಸರ್ತುಕಾಮಂ ತಂ ಸಮೀಕ್ಷ್ಯಾಂಗಾರವೇಗಕಃ ॥ ೨೫೬ ॥**

**ಉದ್ಧೃತ್ಯಾಶನಿವೇಗಸ್ಯ ದಾಯಾದೋಭೂನ್ನಭಸ್ಥಲೇ ।**
**ಜ್ಞಾತ್ವಾ ದತ್ತಾಂತಶಾಲ್ಮಲ್ಯಾ ಸಮುದ್ಗೀರ್ಣಾಸಿಹಸ್ತಯಾ ॥ ೨೫೭ ॥**

**ಸೋನ್ವಿತಸ್ತದ್ಭಯಾನ್ಮುಕ್ತ್ವಾ ತಂ ತಸ್ಮಾತ್ಪಪಲಾಯಿತಃ ।**
**ವಿದ್ಯಯಾ ಪರ್ಣಲಘ್ವ್ಯಾಸೌ ಪ್ರಿಯಾಪ್ರಹಿತಯಾ ತಯಾ ॥ ೨೫೮ ॥**

**ಚಂಪಾಪುರಸಮೀಪಸ್ಥಸರೋಮಧ್ಯೇ ಶನೈಃ ಶನೈಃ ।**
**ದ್ವೀಪೇ ನಿಪಾತಿತೋಪೃಚ್ಛದ್ದೇಹಿನಸ್ತೀರವರ್ತಿನಃ ॥ ೨೫೯ ॥**

**ದ್ವೀಪಾದಮುಷ್ಮಾನ್ನಿರ್ಗಂತುಂ ಕಿಂ ತೀರ್ಥಂ ವದತೇತಿ ಯಾನ್ ।**
**ಅವದಂಸ್ತೇಪಿ ಕಿಂ ಭದ್ರ ಪತಿತಃ ಖಾತ್ತ್ವಮಿತ್ಯಮುಮ್ ॥ ೨೬೦ ॥**

ದೇವದಾರುವೃಕ್ಷಗಳ ವನದಲ್ಲಿರುವ ಪುಷ್ಕರಮ್ಯವೆಂಬ ಕಮಲಸರೋವರದಲ್ಲಿ ಈ ವಸುದೇವನು ಕಾಡಾನೆಯೊಡನೆ ಆಟವಾಡಿ ಪುನಃ ಪುನಃ ಅದನ್ನು ಹತ್ತಿ ಒಬ್ಬಾನೊಬ್ಬ ಖೇಚರನಿಂದ ತಾನು ಹೊಗಳಲ್ಪಟ್ಟವನಾಗಿ ಆನೆಯಿಂದ ಬಿಡಿಸಿ ಶೀಘ್ರವಾಗಿ ಅವನಿಂದ ವಿಜಯಾರ್ಧಪರ್ವತಕ್ಕೆ ಒಯ್ಯಲ್ಪಟ್ಟನು. ಅಲ್ಲಿ ಕಿನ್ನರ ಗೀತವೆಂಬ ಪುರದ ದೊರೆಯಾದ ಅಶನಿವೇಗನಿಗೆ ಅವನ ಪತ್ನಿಯಾದ ಪವನ ವೇಗೆಯಲ್ಲಿ ಜನಿಸಿದ ಪುತ್ರಿಯೂ ಎರಡನೆಯ ರತಿಯೋ ಎಂಬಂತಿರುವವಳೂ ವಸುದೇವನಿಗೆ ಕೊಡಲ್ಪಟ್ಟವಳೂ ಆದ ಶಾಲ್ಮಲಿದತ್ತೆಯನ್ನು ಆ ಪುಣ್ಯಶಾಲಿಯಾದ ವಸುದೇವನು ವಿವಾಹಮಾಡಿಕೊಂಡನು. ಅಲ್ಲಿ ವಿಶ್ರಾಂತನಾಗಿ ಆಕೆಯೊಡನೆ ಕಾಮನಿಗೂ ಸ್ಮರಿಸುವುದಕ್ಕೆ ಅಗೋಚರವಾದ ಸುಖವನ್ನು ಕೆಲವು ದಿನಗಳವರೆಗೆ ಅನುಭವಿಸಿ ಪುನಃ ಅಲ್ಲಿಂದ ಹೊರಟುಹೋಗಬೇಕೆಂದು ಇಚ್ಛೆಯುಳ್ಳ ಆ ವಸುದೇವನನ್ನು ಕಂಡು ಅಶನಿವೇಗನ ದಾಯಾದನಾದ ಅಂಗಾರವೇಗನು ಅವನನ್ನು ಎತ್ತಿಕೊಂಡು ಆಕಾಶಪ್ರದೇಶದಲ್ಲಿದ್ದನು. ಅದನ್ನು ತಿಳಿದು ಶಾಲ್ಮಲಿದತ್ತೆಯು ಒರೆಯಿಂದ ಖಡ್ಗವನ್ನು ಹಿರಿದು ಕೈಯಲ್ಲಿ ಹಿಡಿದುಕೊಂಡು ಆ ಅಂಗಾರವೇಗನನ್ನು ಹಿಂಬಾಲಿಸಿದಳು. ಅವನು ಆಕೆಯ ಭಯದಿಂದ ವಸುದೇವನನ್ನು ಆಕಾಶದಲ್ಲಿ ಬಿಟ್ಟು ಅಲ್ಲಿಂದ ಓಡಿಹೋದನು. ಈ ವಸುದೇವನು ಆ ಪ್ರಿಯೆಯಿಂದ ಕಳುಹಿಸಲ್ಪಟ್ಟ ಪರ್ಣಲಘುವಿದ್ಯೆಯಿಂದ ಚಂಪಾಪುರದ ಸಮೀಪದಲ್ಲಿರುವ ಸರೋವರದ ಮಧ್ಯದ ದ್ವೀಪದಲ್ಲಿ ಮೆಲ್ಲಮೆಲ್ಲನೆ ಕೆಡಹಲ್ಪಟ್ಟವನಾಗಿ ಆ ಸರೋವರದ ತೀರದಲ್ಲಿರುವ ಯಾವ ಮನುಷ್ಯರನ್ನು "ಈ ದ್ವೀಪದಿಂದ ಹೊರಟು ಹೋಗುವುದಕ್ಕೆ ದಾರಿ ಯಾವುದು ?" ಎಂದು ಕೇಳಿದನೋ ಅವರೂ "ಏನಯ್ಯಾ ! ನೀನು ಆಕಾಶದಿಂದ ಬಿದ್ದೆಯೋ ?" ಎಂದು ಇವನನ್ನು ಕುರಿತು ಹೇಳಿದರು.

**ಸಮ್ಯಗ್ಭವದ್ಭಿರ್ವಿಜ್ಞಾತಮಿತಿ ತೇನಾನುಭಾಷಿತಾಃ ।**
**ಪ್ರಹಸ್ಯಾನೇನ ಮಾರ್ಗೇಣ ಜಲಾನ್ನಿರ್ಗಮ್ಯತಾಮಿತಿ ॥ ೨೬೧ ॥**

**ನ್ಯದಿಶನ್ನಿರ್ಗತಸ್ತಸ್ಮಾತ್ಪ್ರವಿಶ್ಯ ನಗರಂ ಗುರುಮ್ ।**
**ದೃಷ್ಟ್ವಾ ಗಂಧರ್ವವಿದ್ಯಾಯಾ ಮನೋಹರಸಮಾಹ್ವಯಮ್ ॥ ೨೬೨ ॥**

**ಉಪವಿಶ್ಯ ತದಭ್ಯಾಸೇ ವೀಣಾವಾದನಶಿಕ್ಷಕಾನ್ ।**
**ತತ್ರ ಗಂಧರ್ವದತ್ತಾಯಾಃ ಸ್ವಯಂವರವಿಧಿಂ ಪ್ರತಿ ॥ ೨೬೩ ॥**

**ದೃಷ್ಟ್ವಾ ನಿಗೂಢತಜ್ಞಾನೋ ವಸುದೇವೋ ವಿಮೂಢವತ್ ।**
**ಅಹಂ ಚೈಭಿಃ ಸಹಾಭ್ಯಾಸಂ ಕರೋಮಿತ್ಯಾತ್ತವಲ್ಲಕಿಃ ॥ ೨೬೪ ॥**

**ಆದಾವೇವಾಚ್ಛಿನತ್ತಂತ್ರೀಸ್ತುಂಬೀಜಂ ಚಾಭಿನತ್ಫಲಮ್ ।**
**ವೈಯಾತ್ಯಂ ಪಶ್ಯತಾಸ್ಯಾಲಂ ದೃಷ್ಟ್ವಾ ತತ್ತೇಹಸನ್ ಭೃಶಮ್ ॥ ೨೬೫ ॥**

**ಭರ್ತಾ ಗಂಧರ್ವದತ್ತಾಯಾಸ್ತ್ವಮೇವೈವಂ ವಿಚಕ್ಷಣಃ ।**
**ಗೀತವಾದ್ಯವಿಶೇಷೇಷು ಸರ್ವಾನಸ್ಮಾನ್ ಜಯೇರಿತಿ ॥ ೨೬೬ ॥**

"ತಾವುಗಳು ಚೆನ್ನಾಗಿ ಸರಿಯಾಗಿ ತಿಳಿದಿರಿ" ಎಂದು ಆ ವಸುದೇವನಿಂದ ಮರು ಮಾತನಾಡಿಸಲ್ಪಟ್ಟವರಾದ ಆ ಮನುಷ್ಯರು ನಕ್ಕು "ಈ ಮಾರ್ಗದಿಂದ ನೀರಿನಿಂದ ಹೊರಟು ಹೋಗು" ಎಂದು ಹೇಳಿದರು. ಅಲ್ಲಿಂದ ಹೊರಟವನಾಗಿ ನಗರವನ್ನು ಪ್ರವೇಶಿಸಿ ಗಾಯನವಿದ್ಯೆಯ ಗುರುವಾದ ಮನೋಹರನೆಂಬವನನ್ನು ನೋಡಿ ಅವನ ಸಮೀಪದಲ್ಲಿ ಕುಳಿತು ಅಲ್ಲಿ ಗಂಧರ್ವದತ್ತೆಯ ಸ್ವಯಂವರವಿಧಿಯನ್ನು ಕುರಿತು

ವೀಣೆಬಾರಿಸುವುದನ್ನು ಕಲಿಯುವವರನ್ನು ನೋಡಿ ಗುಪ್ತವಾದ ವೀಣಾಜ್ಞಾನವುಳ್ಳ ವಸುದೇವನು ತಿಳಿಯದವನಂತೆ "ನಾನೂ ಇವರೊಡನೆ ವೀಣಾಭ್ಯಾಸವನ್ನು ಮಾಡುತ್ತೇನೆ" ಎಂದು ವೀಣೆಯನ್ನು ತೆಗೆದುಕೊಂಡವನಾಗಿ ಮೊದಲೇ ತಂತಿಗಳನ್ನು ಹರಿದು–ಕಿತ್ತುಹಾಕಿದನು. ಸೋರೆಯಿಂದುಂಟಾದ ಕಾಯಿಯನ್ನೂ ಒಡೆದುಹಾಕಿದನು. ಅದನ್ನು ನೋಡಿ ಅವರು "ಇವನ ದಡ್ಡತನವನ್ನು ನೋಡಿರಿ. ಸಾಕು. ಪ್ರಾಜ್ಞನಾದ ನೀನೇ ಗಂಧರ್ವದತ್ತೆಯ ಗಂಡನು. ಗೀತವಿಶೇಷಗಳಲ್ಲಿಯೂ ವಾದ್ಯ ವಿಶೇಷಗಳಲ್ಲಿಯೂ ನಮ್ಮೆಲ್ಲರನ್ನೂ ನೀನು ಹೀಗೆ ಜಯಿಸುವೆ" ಎಂದು ಬಹಳವಾಗಿ ನಕ್ಕರು.

**ಏವಂ ತತ್ರ ಸ್ಥಿತೇ ತಸ್ಮಿನ್ ಧರಾಗಗನಗೋಚರಾಃ ।**
**ಪ್ರಾಪುರ್ಗಂಧರ್ವದತ್ತಾಯಾಃ ಸ್ವಯಂವರಸಮುತ್ಸುಕಾಃ ॥ ೨೬೭ ॥**

ಹೀಗೆ ಆ ವಸುದೇವನು ಅಲ್ಲಿರುತ್ತಿರುವ ಭೂಚರರೂ ಖೇಚರರೂ ಗಂಧರ್ವದತ್ತೆಯ ಸ್ವಯಂವರದಲ್ಲಿ ಕುತೂಹಲವುಳ್ಳವರಾಗಿ ಆ ನಗರವನ್ನು ತಲುಪಿದರು.

**ತಾನ್ಸ್ವಯಂವರಶಾಲಾಯಾಂ ಬಹೂನ್ ಜಿತವತೀ ಸ್ವಯಮ್ ।**
**ತದಾನೀಂ ಗೀತವಾದ್ಯಾಭ್ಯಾಂ ತತ್ಕಲಾ ರೂಪಧಾರಿಣೀ ॥ ೨೬೮ ॥**

**ಚಾರುದತ್ತಾದಿಭಿಃ ಶ್ರೋತೃಪದಮಧ್ಯಾಸಿತೈಃ ಸ್ತುತಾ ।**
**ಕಲಾಕೌಶಲಮೇತಸ್ಯಾ ವಿಲಕ್ಷಣಮಿತಿ ಸ್ಫುಟಮ್ ॥ ೨೬೯ ॥**

ಆಗ ರೂಪವನ್ನು ಧರಿಸಿರುವ ಆ ವೀಣಾಕಲೆಯಾದ ಗಂಧರ್ವದತ್ತೆಯು ಸ್ವಯಂವರಶಾಲೆಯಲ್ಲಿ ಅವರೆಲ್ಲರನ್ನೂ ಗೀತವಾದ್ಯಗಳಿಂದ ತಾನು ಜಯಿಸಿದವಳಾಗಿ ಶ್ರೋತೃಪದವನ್ನು ಹೊಂದಿರುವ ಚಾರುದತ್ತನೇ ಮೊದಲಾದವರಿಂದ "ಈಕೆಯ ಕಲಾಕೌಶಲವು ವಿಲಕ್ಷಣವಾದುದು" ಎಂದು ಸ್ಫುಟವಾಗಿ ಸ್ತುತಿಸಲ್ಪಟ್ಟಳು.

**ಸ್ವೋಪಾಧ್ಯಾಯಂ ತದಾಪೃಚ್ಛ್ಯ ಕನ್ಯಾಭ್ಯರ್ಣಮುಪಾಗತಃ ।**
**ವಸುದೇವೋಭಣೀದ್ವೀಣಾಂ ವಿದೋಷಾಮಾನಯಂತ್ವಿತಿ ॥ ೨೭೦ ॥**

ಆಗ ತನ್ನ ಉಪಾಧ್ಯಾಯನನ್ನು ಕೇಳಿ ಕನ್ಯೆಯ ಸಮೀಪಕ್ಕೆ ಬಂದ ವಸುದೇವನು "ದೋಷವಿಲ್ಲದಿರುವ ವೀಣೆಯನ್ನು ತೆಗೆದುಕೊಂಡು ಬನ್ನಿರಿ" ಎಂದು ಹೇಳಿದನು.

**ತೇಪಿ ತಿಸ್ರಶ್ಚತಸ್ರಶ್ಚ ಹಸ್ತೇ ವೀಣಾಃ ಸಮಾರ್ಪಯನ್ ।**
**ತಾಸಾಂ ತಂತ್ರೀಷು ಲೋಮಾಂಶಂ ಶಲ್ಯಂ ಚಾಲೋಕ್ಯ ಸಸ್ಮಿತಮ್ ॥**

**ತುಂಬೀಫಲೇಷು ದಂಡೇಷು ಶಲ್ಯಪಾಷಾಣಮಪ್ಯಸೌ ।**
**ಸ್ಫುಟೀಚಕಾರ ತದ್ದೃಷ್ಟ್ವಾ ತ್ವದಿಷ್ಟಾ ಕೀದೃಶೀ ಭವೇತ್ ॥ ೨೭೨ ॥**

**ವೀಣೇತಿ ಕನ್ಯಯಾ ಪ್ರೋಕ್ತೋ ಮದಿಷ್ಟಾಯಾಃ ಸಮಾಗಮಃ ।**
**ಈದೃಗ್ವಿಧ ಇತಿ ಪ್ರಾಹ ತತ್ರಾರ್ಥಾಖ್ಯಾನಮಿದೃಶಮ್ ॥ ೨೭೩ ॥**

ಅವರೂ ಮೂರು ನಾಲ್ಕು ವೀಣೆಗಳನ್ನು ಕೈಯಲ್ಲಿ ಕೊಟ್ಟರು. ಆ ವೀಣೆಗಳ ತಂತಿಗಳಲ್ಲಿ ಕೂದಲಿನ ಚೂರನ್ನೂ ಮುಳ್ಳುಗೋಲನ್ನೂ ಕಂಡು ಇವನು ಮುಗುಳ್ನಗೆಯೊಡನೆ ಸೋರೇಕಾಯಿಗಳಲ್ಲಿಯೂ ದಂಡಗಳಲ್ಲಿಯೂ ಚೂರುಕಲ್ಲನ್ನೂ ವ್ಯಕ್ತಪಡಿಸಿದನು. ಅದನ್ನು ನೋಡಿ ಕನ್ಯೆಯು "ನಿನಗಿಷ್ಟವಾದ ವೀಣೆಯು ಎಂತಹದಿರುವುದು ?" ಎಂದು ಕೇಳಿದಳು. ಅದಕ್ಕೆ ವಸುದೇವನು "ನನಗೆ ಇಷ್ಟವಾದುದರ ಸಮಾಗಮವು ಈ ಪ್ರಕಾರವಾದುದು" ಎಂದು ಹೇಳಿದನು. ಅದರಲ್ಲಿ ಅರ್ಥವಿವರಣೆಯು ಈ ಮುಂದೆ ಹೇಳುವಂತಿರುವುದು.

**ಹಾಸ್ತಿನಾಖ್ಯಪುರಾಧೀಶೋ ರಾಜ್ಞೋ ಮೇಘರಥಶ್ರುತೇಃ ।**
**ಪದ್ಮಾವತ್ಯಾಶ್ಚ ಸಂಜಾತೌ ವಿಷ್ಣುಪದ್ಮರಥೌ ಸುತೌ ॥ ೨೭೪ ॥**

**ಸಹ ವಿಷ್ಣುಕುಮಾರೇಣ ಭೂಪತೌ ತಪಸಿ ಸ್ಥಿತೇ ।**
**ಪಶ್ಚಾತ್ಪದ್ಮರಥೇ ರಾಜ್ಯಮಲಂಕುರ್ವತ್ಯಥಾನ್ಯದಾ ॥ ೨೭೫ ॥**

**ಪ್ರತ್ಯಂತವಾಸಿಸಂಕ್ಷೋಭೇ ಸಂಜಾತೇ ಸಚಿವಾಗ್ರಣೀಃ ।**
**ಸಾಮಾದಿಭಿರುಪಾಯೈಸ್ತಂ ಪ್ರಶಾಂತಿಂ ಸಮಜೀಗಮತ್ ॥ ೨೭೬ ॥**

"ಹಸ್ತಿನಾಪುರಾಧಿಪತಿಯಾದ ಮೇಘರಥನೆಂಬ ರಾಜನಿಗೂ ಅವನ ಪತ್ನಿಯಾದ ಪದ್ಮಾವತಿಗೂ ವಿಷ್ಣು ಪದ್ಮರಥರೆಂಬೀರ್ವರು ಪುತ್ರರು ಜನಿಸಿದರು. ವಿಷ್ಣುಕುಮಾರನೊಡನೆ ಮೇಘರಥರಾಜನು ದೀಕ್ಷೆಯನ್ನು ತೆಗೆದುಕೊಂಡು ತಪಸ್ಸಿನಲ್ಲಿರುತ್ತಿರಲು ಬಳಿಕ ಪದ್ಮರಥನು ರಾಜ್ಯವನ್ನು ಅಲಂಕರಿಸುತ್ತಿರಲು ತರುವಾಯ ಮತ್ತೊಂದು ದಿವಸ ಮ್ಲೇಚ್ಛದೇಶನಿವಾಸಿಯಾದ ರಾಜನಿಂದ ಕ್ಷೋಭೆಯುಂಟಾಗುತ್ತಿರಲು ಮುಖ್ಯಮಂತ್ರಿಯು ಅವನನ್ನು ಸಾಮದಾನಾದ್ಯುಪಾಯಗಳಿಂದ ಉಪಶಾಂತಿಯನ್ನು ಹೊಂದಿಸಿದನು.

**ರಾಜ್ಞಾ ತುಷ್ಟವತಾವಾದಿ ತ್ವಯೇಷ್ಟಂ ವಾಚ್ಯತಾಮಿತಿ ।**
**ರಾಜ್ಯಂ ಸಪ್ತದಿನಂ ಕರ್ತುಮಿಚ್ಛಾಮೀತ್ಯಬ್ರವೀದ್ಬಲೀ ॥ ೨೭೭ ॥**

ಸಂತುಷ್ಟನಾದ ಪದ್ಮರಥರಾಜನು "ನಿನಗೆ ಇಷ್ಟವಾದುದನ್ನು ಹೇಳು" ಎಂದು ಮಂತ್ರಿಯನ್ನು ಕುರಿತು ಹೇಳಿದನು. ಬಲಿ–ಮಂತ್ರಿಯು "ಏಳು ದಿನಗಳವರೆಗೆ ರಾಜ್ಯಭಾರವನ್ನು ಮಾಡುವುದಕ್ಕಿಚ್ಛಿಸುತ್ತೇನೆ" ಎಂದು ಹೇಳಿದನು.

**ದತ್ತಂ ಜರತ್ತೃಣಂ ಮತ್ವಾ ತೇನ ತಸ್ಮೈ ತದೂರ್ಜಿತಮ್ ।**
**ಕೃತೋಪಕಾರಿಣೇ ದೇಯಂ ಕಿಂ ನ ತತ್ತ್ವತವೇದಿಭಿಃ ॥ ೨೭೮ ॥**

ಪದ್ಮರಥನು ಆ ಉತ್ಕೃಷ್ಟವಾದ ರಾಜ್ಯವನ್ನು ಹಳೆಯದಾದ ಹುಲ್ಲನ್ನಾಗಿ ತಿಳಿದು ಆ ಮಂತ್ರಿಗೆ ಕೊಟ್ಟನು. ಉಪಕಾರವನ್ನು ಮಾಡಿದವನಿಗೆ ಅದನ್ನು ತಿಳಿದವರಿಂದ ಯಾವುದು ತಾನೆ ಕೊಡಲ್ಪಡತಕ್ಕುದಲ್ಲ ?

**ತತ್ರಾಕಂಪನಗುರ್ವಾದ್ಯಮಾಗತ್ಯ ಮುನಿಮಂಡಲಮ್ ।**
**ಅಗ್ರಹೀದಾತಪೇ ಯೋಗಂ ಸರ್ವಂ ಸೌಮ್ಯಮಹೀಭೃತಿ ॥ ೨೭೯ ॥**

**ನಿರ್ಜಿತಃ ಪ್ರಾಗ್ವಿದುಷ್ವಿಣ್ಯಾಮಕಂಪನಮುನೀಶಿನಾ ।**
**ವಾದೇ ಸಭಾಯಾಂ ತತ್ಕೋಪಾತ್ತಂ ಜಿಘಾಂಸುರಘಾತ್ಮಕಃ ॥ ೨೮೦ ॥**

**ಯಾಗವ್ಯಾಜಂ ಸಮಾರಭ್ಯ ಸ ಮಂತ್ರೀ ಪರಿತೋ ಗಿರಿಮ್ ।**
**ಅರ್ಥಿತಾಹಾರದಾನಾರ್ಥಂ ದೇವಸಂತರ್ಪಣಾಯ ಚ ॥ ೨೮೧ ॥**

**ಪಾಕಂ ಪ್ರಕಲ್ಪಯಾಮಾಸ ಧೂಮಜ್ವಾಲಾಗ್ನಿಸಂತತಮ್ ।**
**ಜ್ಞಾತ್ವಾ ವಿಷ್ಣುಕುಮಾರಸ್ತಮುಪಸರ್ಗಂ ಮುನೀಶ್ವರಃ ॥ ೨೮೨ ॥**

**ಗತ್ವಾ ಪದ್ಮರಥಾಭ್ಯರ್ಣಂ ವೀತರಾಗಾಸನೇ ಸ್ಥಿತಃ ।**
**ರಾಜ್ಞಾಭಿವಂದ್ಯ ಸಂಪೂಜ್ಯ ಕಿಂ ಕೃತ್ಯಮಿತಿ ಭಾಷಿತಃ ॥ ೨೮೩ ॥**

**ಉಪಸರ್ಗಂ ವ್ಯಧಾನ್ಮಂತ್ರೀ ತವಾತ್ರಾತಪಯೋಗಿನಾಮ್ ।**
**ನಿವಾರ್ಯತಾಮಸಾವಾಶು ತ್ವಯೇತ್ಯಾಹ ಮಹೀಪತಿಮ್ ॥ ೨೮೪ ॥**

ಅಲ್ಲಿಗೆ ಅಕಂಪನ ಗುರುವೇ ಮೊದಲಾದ ಮುನಿಸಮೂಹವು ಬಂದು ಬಿಸಿಲಿನಲ್ಲಿ ಸಮಸ್ತಯೋಗವನ್ನು ಗ್ರಹಣಮಾಡಿತು. ಮೊದಲು ಸೌಮ್ಯರಾಜನಲ್ಲಿ ವಿದ್ವತ್ಸಭೆಯಲ್ಲಿ ಅಕಂಪನಮುನಿಯೊಡನೆ ವಾದದಲ್ಲಿ ಬಲಿಯು ಸೋತಿದ್ದನು. ಆ ಕೋಪದಿಂದ ಪಾಪಸ್ವರೂಪನಾದ ಆ ಮಂತ್ರಿಯು ಆ ಅಕಂಪನಮುನಿಯನ್ನು ಕೊಲ್ಲಬೇಕೆಂಬ ಇಚ್ಛೆಯುಳ್ಳವನಾಗಿ ಯಾಗದ ನೆವವನ್ನು ಮಾಡಿ ಪರ್ವತದ ಸುತ್ತಲೂ ಪ್ರಾರ್ಥಿಸಲ್ಪಟ್ಟ ಆಹಾರದಾನಕ್ಕೋಸ್ಕರವೂ ದೇವಸಂತರ್ಪಣೆಗೋಸ್ಕರವೂ ಹೊಗೆಯಿಂದಲೂ ಬೆಂಕಿಯ ಜ್ವಾಲೆಯಿಂದಲೂ ಚೆನ್ನಾಗಿ ವ್ಯಾಪ್ತವಾದ ಪಾಕವನ್ನು ಮಾಡಿಸಿದನು. ವಿಷ್ಣುಕುಮಾರ ಮುನೀಶ್ವರನು ಆ ಉಪಸರ್ಗವನ್ನು ತಿಳಿದು ಪದ್ಮರಥನ ಬಳಿಗೆ ಹೋಗಿ ವಿರಾಗಾಸನದಲ್ಲಿ ಕುಳಿತವನಾಗಿಯೂ ರಾಜನಿಂದ ವಂದಿಸಿ ಪೂಜಿಸಿ "ಏನು ಕಾರ್ಯ ?" ಎಂದು ಮಾತನಾಡಿಸಲ್ಪಟ್ಟವನಾಗಿಯೂ "ಇಲ್ಲಿ ನಿನ್ನ ಮಂತ್ರಿಯು ಆತಪಯೋಗಧಾರಿಗಳಾದ ಮುನಿಗಳಿಗೆ ಉಪಸರ್ಗವನ್ನು ಮಾಡಿದನು. ಶೀಘ್ರವಾಗಿ ನೀನು ಅವನನ್ನು ತಡೆಮಾಡು" ಎಂದು ಪದ್ಮರಥರಾಜನನ್ನು ಕುರಿತು ಹೇಳಿದನು.

ಪ್ರತಿಪನ್ನಂ ಮಯಾ ತಸ್ಮೈ ರಾಜ್ಯಂ ಸಪ್ತದಿನಾವಧಿ ।
ನ ನಿವಾರಯಿತುಂ ಶಕ್ಯಃ ಸತ್ಯಭೇದಭಯಾದಸೌ ॥ ೨೮೫ ॥

ತತೋ ಭವದ್ಭಿರೇವಾರ್ಯಾ ನಿವಾರ್ಯೋ ದುರ್ಜನೋಧುನಾ ।
ನ ವಿದಂತಿ ಖಲಾಃ ಸ್ವೈರಾ ಯುಕ್ತಾಯುಕ್ತವಿಚೇಷ್ಟಿತಮ್ ॥ ೨೮೬ ॥

ಇತ್ಯವೋಚದಸೌ ಚೈತದವಗಮ್ಯ ಮುನೀಶ್ವರಃ ।
ಪ್ರತಿಷಿಧ್ಯಾಮಿ ಪಾಪಿಷ್ಠಮಹಮೇವಾಶು ನಶ್ವರಮ್ ॥ ೨೮೭ ॥

ಇತಿ ವಾಮನರೂಪೇಣ ಬ್ರಾಹ್ಮಣಾಕಾರಮಾಗತಃ ।
ಸಂಪ್ರಾಪ್ಯ ಬಲಿನೋಭ್ಯರ್ಣಂ ಸ್ವಸ್ತಿವಾದಪುರಸ್ಸರಮ್ ॥ ೨೮೮ ॥

ಮಹಾಭಾಗಾಹಮರ್ಥಿತ್ವಾದ್ದಾತೃಮುಖ್ಯಮುಪಾಗಮಮ್ ।
ದೇಯಂ ತ್ವಯೇತ್ಯವಾದೀತ್ಸೋಪ್ಯಭೀಷ್ಟಂ ಪ್ರತಿಪನ್ನವಾನ್ ॥ ೨೮೯ ॥

ಅಭಾಷತ ದ್ವಿಜೋ ರಾಜನ್ ದೇಯಂ ಮೇ ವಿಕ್ರಮೈಸ್ತ್ರಿಭಿಃ ।
ಪ್ರಮಿತಂ ಕ್ಷೇತ್ರಮಿತ್ಯಲ್ಪಂ ಕಿಮೇತದಭಿಯಾಚಿತಮ್ ॥ ೨೯೦ ॥

ಗೃಹಾಣೇತಿ ಬಲೀ ಪಾಣಿಜಲಸೇಕಸಮನ್ವಿತಮ್ ।
ಅದಿತಾಸ್ಮೈ ಮುನಿಶ್ಚಾಪ್ತವಿಕ್ರಿಯರ್ದ್ಧಿರ್ನಿಜಕ್ರಮಮ್ ॥ ೨೯೧ ॥

ನ್ಯಧಾದೇಕಂ ಪ್ರಸಾರ್ಯೋಚ್ಚೈರ್ಮಾನುಷೋತ್ತರಮೂರ್ಧನಿ ।
ದ್ವಿತೀಯಮಪಿ ದೇವಾದ್ರಿಚೂಲಿಕಾಯಾಂ ಸ್ಫುರದ್ದ್ಯುತಿಃ ॥ ೨೯೨ ॥

ಅವನು ವಿಷ್ಣುಕುಮಾರಮುನಿಯನ್ನು ಕುರಿತು "ನಾನು ಆ ಬಲಿಗೆ ಏಳು ದಿನಗಳ ವರೆಗೆ ರಾಜ್ಯವನ್ನು ಕೊಟ್ಟಿದ್ದೇನೆ. ಸತ್ಯವು ನಷ್ಟವಾಗುವ ಭಯದಿಂದ ಇವನನ್ನು ತಡೆಯುವುದಕ್ಕೆ ಶಕ್ಯವಿಲ್ಲ. ಆದುದರಿಂದ ಪೂಜ್ಯರೆ! ತಾವೇ ಈಗ ಈ ದುಷ್ಟನನ್ನು ತಡೆಯಬೇಕು. ಸ್ವೇಚ್ಛಾಚಾರಿಗಳಾದ ದುಷ್ಟರು ಯುಕ್ತಾಯುಕ್ತಕಾರ್ಯವನ್ನು ತಿಳಿಯುವುದಿಲ್ಲ" ಎಂದು ಹೇಳಿದನು. ಈ ವಿಷ್ಣುಕುಮಾರಮುನಿಯೂ ಇದನ್ನು ತಿಳಿದು "ನಾಶವಾಗುವ ಪಾಪಿಷ್ಠನನ್ನು ನಾನೇ ಶೀಘ್ರವಾಗಿ ನಿಷೇಧಿಸುತ್ತೇನೆ" ಎಂದು ವಾಮನರೂಪದಿಂದ ಬ್ರಾಹ್ಮಣಾಕಾರವನ್ನು ಹೊಂದಿ ಸ್ವಸ್ತಿವಚನಪೂರ್ವಕವಾಗಿ ಬಲಿಯ ಸಮೀಪಕ್ಕೆ ಬಂದವನಾಗಿ ಅವನನ್ನು ಕುರಿತು "ಮಹಾಪುಣ್ಯಶಾಲಿಯೆ! ನಾನು ಯಾಚಿಸುವವನಾಗಿರುವುದರಿಂದ ದಾತೃಮುಖ್ಯನಾದ ನಿನ್ನನ್ನು ಹೊಂದಿದೆನು. ನೀನು ಕೊಡಬೇಕು" ಎಂದು ಹೇಳಿದನು. ಆ ಬಲಿಯೂ ಇಚ್ಛಿಸಿದುದನ್ನು ಕೊಡಲೊಪ್ಪಿದನು. ಆಗ ಆ ವಾಮನ–ದ್ವಿಜನು ಬಲಿಯನ್ನು ಕುರಿತು "ರಾಜನೆ! ನನ್ನ ಮೂರು ಹಜ್ಜೆಗಳಿಂದ ಪರಿಮಿತವಾದ ಕ್ಷೇತ್ರವನ್ನು ನನಗೆ ಕೊಡಬೇಕು" ಎಂದು ಹೇಳಿದನು. "ಇದೇನು ಬಹುಸ್ವಲ್ಪವಸ್ತುವನ್ನು ಕೇಳಿದೆ? ಪರಿಗ್ರಹಿಸು" ಎಂದು ಹೇಳಿ ಬಲಿಯು ಹಸ್ತೋದಕಸೇಚನಯುಕ್ತವಾದ ಆ ಕ್ಷೇತ್ರವನ್ನು ಈ ವಾಮನ–ದ್ವಿಜನಿಗೆ ಕೊಟ್ಟನು. ಆಗ ಮುನಿಯೂ ವಿಕ್ರಿಯರ್ದ್ಧಿಯನ್ನು ಹೊಂದಿದವನಾಗಿ ತನ್ನ ಒಂದು ಕಾಲನ್ನು ಉನ್ನತವಾಗಿ ನೀಡಿ ಮಾನುಷೋತ್ತರ ಪರ್ವತದ ಮಸ್ತಕದಲ್ಲಿರಿಸಿದನು. ಪ್ರಕಾಶಮಾನವಾದ ಕಾಂತಿಯುಳ್ಳವನಾಗಿ ಎರಡನೆಯ ಕಾಲನ್ನು ಮಹಾಮೇರುಪರ್ವತದ ಚೂಲಿಕೆಯಲ್ಲಿರಿಸಿದನು.

ತದಾ ವಿದ್ಯಾಧರಾ ಭೂಮಿಗೋಚರಾಶ್ಚಾರ್ಯ ಸಂಹರ ।
ಚರಣೌ ಸಂಸೃತೇರ್ಹೇತುಂ ಕ್ರೋಧಂ ಮಾ ಸ್ಮ ಕೃಥಾ ವೃಥಾ ॥ ೨೯೩ ॥

ಇತಿ ಸಂಗೀತವೀಣಾದಿಮುಖರಾ ಮುನಿಸತ್ತಮಮ್ ।
ಸದ್ಯಃ ಪ್ರಸಾದಯಾಮಾಸುಃ ಸೋಪ್ಯಂಘ್ರೀ ಸ್ವೌ ಸಮಾಹರತ್ ॥ ೨೯೪ ॥

ಆಗ ವಿದ್ಯಾಧರರೂ ಭೂಚರರೂ "ಪೂಜ್ಯನೆ! ಕಾಲುಗಳನ್ನು ಸಂಕೋಚ ಮಾಡು. ವ್ಯರ್ಥವಾಗಿ ಸಂಸಾರಕ್ಕೆ ಕಾರಣವಾದ ಕೋಪವನ್ನು ಮಾಡಬೇಡ" ಎಂದು ಸಂಗೀತವೀಣಾದಿಧ್ವನಿಗಳುಳ್ಳವರಾಗಿ ತತ್ಕ್ಷಣದಲ್ಲಿ ಮುನಿಶ್ರೇಷ್ಠನನ್ನು ಸಮಾಧಾನ ಪಡಿಸಿದರು. ಆ ಮುನಿಯು ತನ್ನ ಕಾಲುಗಳನ್ನು ಸಂಕೋಚಪಡಿಸಿದನು.

ಶ್ರುತ್ವಾ ಲಕ್ಷಣವತ್ತೇಷಾಂ ತದಾ ಗೀತಂ ಸುಧಾಶಿನಃ ।
ತುಷ್ಟ್ವಾ ಘೋಷಾಸುಘೋಷಾಖ್ಯೇ ಮಹಾಘೋಷಾಂ ಚ ಸುಸ್ವರಾಮ್ ॥ ೨೯೫ ॥

ವೀಣಾಂ ಘೋಷಾವತೀಂ ಚಾಸು ದದತಿ ಸ್ಮ ಸುಸಂಗತಾಮ್ ।
ವಿದ್ಯಾಧರೇಭ್ಯೋ ದ್ವೇ ದ್ವೇ ಚ ಭೂಚರೇಭ್ಯೋ ಯಥಾಕ್ರಮಮ್ ॥

ಆಗ ಆ ಖೇಚರರ ಭೂಚರರ ಲಕ್ಷಣವಾದ ಗೀತವನ್ನು ಕೇಳಿ ದೇವರ್ಕಳು ಸಂತೋಷಪಟ್ಟು ಘೋಷಾ ಸುಘೋಷಗಳೆಂಬ ವೀಣೆಗಳನ್ನೂ ಸುಸ್ವರವುಳ್ಳ ಮಹಾಘೋಷವೆಂಬ ವೀಣೆಯನ್ನೂ ಉತ್ತಮವಾದ ಘೋಷಾವತೀವೀಣೆಯನ್ನೂ ಅವುಗಳಲ್ಲಿ ಯಥಾಕ್ರಮವಾಗಿ ವಿದ್ಯಾಧರರಿಗೆ ಎರಡು ವೀಣೆಗಳನ್ನೂ ಭೂಚರರಿಗೆ ಎರಡು ವೀಣೆಗಳನ್ನೂ ಕೊಟ್ಟರು.

ವೃಥಾ ತ್ವಂ ಯಾಚಿತೋ ವಿಪ್ರವರೇಣಾಪಿ ಮಯಾಧುನಾ ।
ನಾವಕಾಶಸ್ತೃತೀಯಸ್ಯ ಚರಣಸ್ಯೇತಿ ಸತ್ವರಮ್ ॥ ೨೯೭ ॥

ಬಧ್ವಾ ಬಲಿನಮುದ್ವೃತ್ತಂ ಬಲೀ ವಿಷ್ಣುಮುನೀಶ್ವರಃ ।
ದುಃಸಹಂ ತಂ ನಿರಾಕಾರ್ಷೀದುಪಸರ್ಗಂ ಮುನೀಶಿನಾಮ್ ॥ ೨೯೮ ॥

"ದ್ವಿಜೋತ್ತಮನಾದ ನಾನೂ ನಿನ್ನನ್ನು ಈಗ ವ್ಯರ್ಥವಾಗಿ ಬೇಡಿದೆನು. ಮೂರನೆಯ ಕಾಲಿಗೆ ಅವಕಾಶವಿಲ್ಲ" ಎಂದು ಹೇಳಿ ಬಲಿಷ್ಠನಾದ ವಿಷ್ಣುಮುನೀಶ್ವರನು ಸೊಕ್ಕಿದವನೂ ದುಸ್ಸಹನೂ ಆದ ಆ ಬಲಿಯನ್ನು ಶೀಘ್ರವಾಗಿ ಕಟ್ಟಿ ಮುನೀಶ್ವರರ ಉಪಸರ್ಗವನ್ನು ದೂರಮಾಡಿದನು.

ಬದ್ಧಂ ಬಲಿನಮಾಹಂತುಂ ಸಮುದ್ಯುಕ್ತಂ ಮಹೀಪತಿಮ್ ।
ಪ್ರತಿಷಿಧ್ಯ ಪ್ರಸನ್ನಾತ್ಮಾ ಸದ್ಧರ್ಮಂ ತಮಜಿಗ್ರಹತ್ ॥ ೨೯೯ ॥

ಕಟ್ಟಲ್ಪಟ್ಟ ಬಲಿಯನ್ನು ಕೊಲ್ಲುವುದಕ್ಕೋಸ್ಕರ ಉದ್ಯುಕ್ತನಾದ ಪದ್ಮರಥ ಮಹಾರಾಜನನ್ನು ತಡೆದು ಪ್ರಸನ್ನವಾದ ಆತ್ಮನುಳ್ಳ ವಿಷ್ಣುಕುಮಾರ ಮುನಿಯು ಅವನಿಗೆ ಸದ್ಧರ್ಮವನ್ನು ಗ್ರಹಣಮಾಡಿಸಿದನು.

ಏವಂ ಮಹಾಮುನಿಸ್ತತ್ರ ಕೃತಧರ್ಮಪ್ರಭಾವನಃ ।
ಪೂಜ್ಯಃ ಪದ್ಮರಥೇನಾಸ್ಥಾತ್ಸ್ವಸ್ಥಾನಮಗಮತ್ಸುಧೀಃ ॥ ೩೦೦ ॥

ಈ ರೀತಿಯಾಗಿ ಪದ್ಮರಥನಿಂದ ಪೂಜ್ಯನೂ ಪ್ರಾಜ್ಞನೂ ಆದ ಆ ವಿಷ್ಣುಕುಮಾರ ಮಹಾಮುನಿಯು ಅಲ್ಲಿ ಧರ್ಮಪ್ರಭಾವನೆಯನ್ನು ಮಾಡಿದವನಾಗಿ ಈ ಸ್ಥಳದಿಂದ ಹೊರಟು ತನ್ನ ಸ್ಥಳಕ್ಕೆ ಹೋದನು.

ತಾಸು ಘೋಷಾವತೀ ನಾಮ ವೀಣಾ ವಂಶೇತ್ರ ಸನ್ನಿಧಿಮ್ ।
ಸಮಾಗಮದ್ಭವದ್ಭಿಸ್ತತ್ಸಾ ಮಮಾನೀಯತಾಂ ಶುಭಾ ॥ ೩೦೧ ॥

ಆ ವೀಣೆಗಳಲ್ಲಿ ಘೋಷಾವತಿಯೆಂಬ ವೀಣೆಯು ಈ ವಂಶದಲ್ಲಿ ಸಾನ್ನಿಧ್ಯವನ್ನು ಹೊಂದಿದೆ. ಆದುದರಿಂದ ತಾವುಗಳು ಶುಭವಾದ ಆ ವೀಣೆಯನ್ನು ನನಗೆ ತಂದುಕೊಡಿ"

ಏವಮುಕ್ತವತೇ ತಸ್ಮೈ ತಾಮೇವಾನೀಯ ತೇ ದದುಃ ।
ತಯಾಸೌ ಗೀತವಾದ್ಯಾಭ್ಯಾಂ ಶ್ರೋತೃಚೇತೋಭಿರಂಜನಮ್ ॥ ೩೦೨ ॥

ಸಮಾಪಾದಯದಾಕರ್ಣ್ಯ ತದ್ವೀಣಾಕೌಶಲಂ ಮಹತ್ ।
ಪ್ರೀತಾ ಗಂಧರ್ವದತ್ತಾಪಿ ಸ್ವಾಂ ವಾ ಮಾಲಾಂ ಸಮಾರ್ಪಯತ್ ॥

ತಸ್ಯ ಕಂಠೇ ಸುಕಂಠಸ್ಯ ಕುಂಠಿತಾಖಿಲಭೂಭುಜಃ ।
ನನು ಪ್ರಾಕ್ಕೃತಪುಣ್ಯಾನಾಂ ಸ್ವಯಂ ಸಂತಿ ಮಹರ್ದ್ಧಯಃ ॥ ೩೦೪ ॥

ಈ ರೀತಿಯಾಗಿ ಹೇಳಿದ ಆ ವಸುದೇವನಿಗೆ ಅವರು ಆ ವೀಣೆಯನ್ನೇ ತಂದುಕೊಟ್ಟರು. ಅದರಿಂದ ಇವನು ಗೀತದಿಂದಲೂ ವಾದ್ಯದಿಂದಲೂ ಶ್ರೋತೃಗಳ

ಮನಸ್ಸಿಗೆ ಸಂತೋಷವನ್ನುಂಟುಮಾಡಿದನು. ಮಹತ್ತಾದ ಅವನ ವೀಣಾ ಚಾತುರ್ಯವನ್ನು ಕೇಳಿ ಪ್ರೀತಳಾದ ಗಂಧರ್ವದತ್ತೆಯೂ ಉತ್ತಮಕಂಠವುಳ್ಳವನೂ ಸಕಲರಾಜರುಗಳನ್ನು ಜಯಿಸಿದವನೂ ಆದ ಆ ವಸುದೇವನ ಕಂಠದಲ್ಲಿ, ತನ್ನನ್ನು ಸಮರ್ಪಿಸಿದಂತೆ, ಸ್ವಯಂವರಮಾಲೆಯನ್ನು ಸಮರ್ಪಿಸಿದಳು. ಪೂರ್ವದಲ್ಲಿ ಪುಣ್ಯವನ್ನು ಮಾಡಿರುವವರಿಗೆ ಮಹಾಸಂಪತ್ತಿಗಳು ತಾವಾಗಿರುತ್ತವಲ್ಲವೇ ?

**ತತಃ ಸರ್ವೇ ಪ್ರಹೃಷ್ಟಾಸ್ಯ ಕಲ್ಯಾಣಾಭಿಷವಂ ವ್ಯಧುಃ ।**
**ಏವಂ ವಿದ್ಯಾಧರಶ್ರೇಣ್ಯಾಂ ಲಂಭಾಸ್ಸಪ್ತಶತಾನ್ಯಸೌ ॥ ೩೦೫ ॥**

**ಸಂಪ್ರಾಪ್ಯ ಖೇಚರೇಶೇಭ್ಯಸ್ತತ್ಕನ್ಯಾದಾನಮಾನತಃ ।**
**ತತೋ ನಿವೃತ್ಯ ಭೂಭಾಗಮಾಗತ್ಯ ಪರಮೋದಯಃ ॥ ೩೦೬ ॥**

ತರುವಾಯ ಎಲ್ಲರೂ ಸಂತೋಷಪಟ್ಟು ಇವನಿಗೆ ಕಲ್ಯಾಣಾಭಿಷೇಕವನ್ನು ಮಾಡಿದರು. ಈ ರೀತಿಯಾಗಿ ಈ ವಸುದೇವನು ವಿದ್ಯಾಧರ ಶ್ರೇಣಿಯಲ್ಲಿ ಖೇಚರಾಧಿಪತಿಗಳಿಂದ ಅವರ ಕನ್ಯಾದಾನದ ಸನ್ಮಾನದಿಂದ ಏಳುನೂರು ಸ್ತ್ರೀಯರನ್ನು ಹೊಂದಿ ಅಲ್ಲಿಂದ ಹಿಂದಿರುಗಿ ಭೂಭಾಗಕ್ಕೆ ಬಂದು ಉತ್ಕೃಷ್ಟವಾದ ಅಭ್ಯುದಯವುಳ್ಳವನಾದನು.

**ಹಿರಣ್ಯವರ್ಮಣೋರಿಷ್ಟಪುರಾಧೀಶೋ ಮಹೀಪತೇಃ ।**
**ಪದ್ಮಾವತ್ಯಾಮಭೂತ್ಪುತ್ರೀ ರೋಹಿಣೀ ರೋಹಿಣೀವ ಸಾ ॥ ೩೦೭ ॥**

**ಸ್ವಸ್ಯಾಃ ಸ್ವಯಂವರಾಯೈತ್ಯ ಶಿಕ್ಷಕಾಗ್ರ್ಯಾನ್ ಕಲಾಗುಣಾನ್ ।**
**ವಸುದೇವಮುಪಾಧ್ಯಾಯತಯಾ ಬೋಧಯಿತುಂ ಸ್ಥಿತಮ್ ॥ ೩೦೮ ॥**

**ಸ್ವಬಾಹುಲತಯೇವೈನಂ ರೋಹಿಣೀ ರತ್ನಮಾಲಯಾ ।**
**ಆಶ್ಲಿಷ್ಟಕಂಠಮಕರೋದುತ್ಕಂಠಾಕುಂಠಿಚೇತಸಾ ॥ ೩೦೯ ॥**

ಅರಿಷ್ಟನಗರಾಧಿಪತಿಯಾದ ಹಿರಣ್ಯವರ್ಮರಾಜನಿಗೆ ಅವನ ಪತ್ನಿಯಾದ ಪದ್ಮಾವತಿಯಲ್ಲಿ ರೋಹಿಣಿಯೋ ಎಂಬಂತಿರುವ ರೋಹಿಣಿಯೆಂಬ ಪುತ್ರಿಯು ಜನಿಸಿದಳು. ಆಕೆಯು ತನ್ನ ಸ್ವಯಂವರಕ್ಕೋಸ್ಕರ ಶ್ರೇಷ್ಠಶಿಕ್ಷಕರನ್ನು ಕುರಿತು ಕಲಾಗುಣಗಳನ್ನು ಬೋಧಿಸುವುದಕ್ಕೋಸ್ಕರ ಉಪಾಧ್ಯಾಯಭಾವದಿಂದ (ಗುರುಗಳಿಗೆಲ್ಲ ಗುರುವಾಗಿದ್ದ) ಈ ವಸುದೇವನನ್ನು ಕುತೂಹಲದಿಂದ ಪರವಶವಾದ ಮನಸ್ಸಿನಿಂದ ರೋಹಿಣಿಯು ತನ್ನ ಬಾಹುಲತೆಯಿಂದಲೋಪಾದಿಯಲ್ಲಿ ರತ್ನಮಾಲೆಯಿಂದ ಆಲಿಂಗಿತವಾದ ಕಂಠವುಳ್ಳವನನ್ನಾಗಿ ಮಾಡಿದಳು. ರೋಹಿಣಿಯು ವಸುದೇವನ ಕೊರಳಿಗೆ ಮಾಲೆಯನ್ನು ಹಾಕಿ ವರಿಸಿದಳೆಂದು ಭಾವವು.

**ತತೋ ವಿಭಿನ್ನಮರ್ಯಾದಾಃ ಸಮುದ್ರವಿಜಯಾದಯಃ ।**
**ಸಮುದ್ರ ಇವ ಸಂಹಾರೇ ಪ್ರಕ್ಷೋಭಮುಪಗಮ್ಯ ತಾಮ್ ॥ ೩೧೦ ॥**

**ಆಹರ್ತುಮುದ್ಯತಾಃ ಸರ್ವೇ ದೃಷ್ಟ್ವಾ ತಾನ್ ದುಷ್ಟಚೇತಸಃ ।**
**ಯೋದ್ಧುಂ ಹಿರಣ್ಯವರ್ಮಾಪಿ ಸಸ್ವಬಂಧುಃ ಸಮುದ್ಯಯೌ ॥ ೩೧೧ ॥**

ಬಳಿಕ ನಷ್ಟವಾದ ಮರ್ಯಾದೆಯುಳ್ಳವರಾದ ಸಮುದ್ರವಿಜಯನೇ ಮೊದಲಾದ ಎಲ್ಲಾ ರಾಜರು ಪ್ರಳಯದಲ್ಲಿ ಸಮುದ್ರದಂತೆ ಕ್ಷೋಭೆಯನ್ನು–ಚಿತ್ತಕಾಲುಷ್ಯವನ್ನು ಹೊಂದಿ ಆಕೆಯನ್ನು ಅಪಹರಿಸುವುದಕ್ಕೆ ಉದ್ಯುಕ್ತರಾದರು. ದುಷ್ಟಹೃದಯವುಳ್ಳವರಾದ ಅವರನ್ನು ನೋಡಿ ಹಿರಣ್ಯವರ್ಮನೂ ಯುದ್ಧಮಾಡುವುದಕ್ಕೋಸ್ಕರ ತನ್ನ ಬಂಧುಸಮೇತನಾಗಿ ಉದ್ಯುಕ್ತನಾದನು.

**ವಸುದೇವಕುಮಾರೋಪಿ ನಿಜನಾಮಾಕ್ಷರಾಂಕಿತಮ್ ।**
**ಪ್ರಜಿಘಾಯ ಶರಂ ಸದ್ಯಃ ಸಮುದ್ರವಿಜಯಂ ಪ್ರತಿ ॥ ೩೧೨ ॥**

ವಸುದೇವಕುಮಾರನೂ ತತ್ಕ್ಷಣದಲ್ಲಿ ತನ್ನ ಹೆಸರಿನ ಅಕ್ಷರಗಳಿಂದ ಅಂಕಿತವಾದ ಬಾಣವನ್ನು ಸಮುದ್ರವಿಜಯನನ್ನು ಕುರಿತು ಹೊಡೆದನು.

**ನಾಮಾಕ್ಷರಾಣಿ ತಸ್ಯಾಸೌ ವಾಚಯಿತ್ವಾ ಸವಿಸ್ಮಯಃ ।**
**ವಸುದೇವಕುಮಾರೋತ್ರ ಪುಣ್ಯಾತ್ಸಂಭಾವಿತೋನಯಾ ॥ ೩೧೩ ॥**

**ಇತಿ ತುಷ್ಟ್ವಾ ನಿವಾರ್ಯಾ ದ್ರಾಕ್ಸಂಗ್ರಾಮಂ ಸಮುಪಾಗಮತ್ ।**
**ಸಹಾನುಜೈಃ ಕನೀಯಾಂಸಮನುಜಂ ಜಿತಮನ್ಮಥಮ್ ॥ ೩೧೪ ॥**

ಈ ಸಮುದ್ರವಿಜಯಮಹಾರಾಜನು ವಸುದೇವನ ಹೆಸರಿನ ಅಕ್ಷರಗಳನ್ನು ಓದಿಸಿ ಆಶ್ಚರ್ಯಯುಕ್ತನಾಗಿ "ಇಲ್ಲಿ ಪುಣ್ಯದಿಂದ ವಸುದೇವಕುಮಾರನು ಈ ರೋಹಿಣಿಯಿಂದ ವರಿಸಲ್ಪಟ್ಟನು" ಎಂದು ಸಂತೋಷಪಟ್ಟು ಶೀಘ್ರವಾಗಿ ಯುದ್ಧವನ್ನು ತಡೆದು ಕಾಮನನ್ನು ಜಯಿಸಿರುವ ಕಿರಿಯ ತಮ್ಮನನ್ನು ತಮ್ಮಂದಿರೊಡನೆ ಹೊಂದಿದನು.

**ಸಮುದ್ರವಿಜಯಾಧೀಶಂ ವಸುದೇವಃ ಕೃತಾಂಜಲಿಃ ।**
**ಪ್ರಣಮ್ಯ ಪ್ರೀಣಯಾಮಾಸ ಶೇಷಾನಪಿ ನಿಜಾಗ್ರಜಾನ್ ॥ ೩೧೫ ॥**

ವಸುದೇವನು ಕೈಗಳನ್ನು ಜೋಡಿಸಿದವನಾಗಿ ಸಮುದ್ರವಿಜಯಮಹಾರಾಜನನ್ನೂ ಬೇರೆ ತನ್ನ ಅಣ್ಣಂದಿರನ್ನೂ ನಮಸ್ಕರಿಸಿ ಸಂತೋಷಪಡಿಸಿದನು.

**ಭೂಖೇಚರಾಃ ಕುಮಾರೇಣ ತದಾ ಸರ್ವೇ ನಿಜಾತ್ಮಜಾಃ ।**
**ಪರಿಣೀತಾಃ ಪುರಾನೀಯ ಸಮುದಃ ಸಮಜೀಗಮನ್ ॥ ೩೧೬ ॥**

ಆಗ ಭೂಚರಖೇಚರರೆಲ್ಲರೂ ಮೊದಲು ಕುಮಾರನಿಂದ ವಿವಾಹಿತರಾಗಿದ್ದ ತಮ್ಮ ಪುತ್ರಿಯರನ್ನು ಕರೆದುಕೊಂಡು ಬಂದು ಬಿಟ್ಟು ಸಂತೋಷಸಹಿತರಾಗಿ ಹೊರಟುಹೋದರು.

**ಕುಮಾರೇಣ ಸಮಂ ಗತ್ವಾ ಸ್ವಪುರಂ ವಿಹಿತೋತ್ಸವಮ್ ।**
**ದಶಾರ್ಹಾಃ ಸ್ವೇಪ್ಸಿತಂ ಸೌಖ್ಯಮನ್ವಭೂವನ್ನನಾರತಮ್ ॥ ೩೧೭ ॥**

ಉತ್ಸವವುಳ್ಳದಾದ ತಮ್ಮ ಪಟ್ಟಣಕ್ಕೆ ವಸುದೇವಕುಮಾರನೊಡನೆ ಹೋಗಿ ಅರ್ಹರಾದ ಆ ಹತ್ತು ಮಂದಿ ಅಣ್ಣತಮ್ಮಂದಿರು ತಮಗಿಷ್ಟವಾದ ಸುಖವನ್ನು ಅವಿಚ್ಛಿನ್ನವಾಗಿ ಅನುಭವಿಸಿದರು.

**ಏವಂ ಕಾಲೇ ಪ್ರಯಾತ್ಯೇಷಾಂ ಶ್ಲಾಘ್ಯೈರ್ಭೋಗೈರಭಂಗುರೈಃ ।**
**ಮಹಾಶುಕ್ರಾತ್ಸಮುತ್ತೀರ್ಯ ಶಂಖಾಖ್ಯಃ ಪ್ರಾಕ್ತನೋ ಮುನಿಃ ॥ ೩೧೮ ॥**

**ರೋಹಿಣ್ಯಾಃ ಪುಣ್ಯಭಾಕ್ಪದ್ಮನಾಮಾಸೌ ಸಮಜಾಯತ ।**
**ಪ್ರತೋಷಂ ಬಂಧುವರ್ಗೇಷು ವರ್ಧಯನ್ನವಮೋ ಬಲಃ ॥ ೩೧೯ ॥**

ಈ ರೀತಿಯಾಗಿ ಇವರುಗಳ ಕಾಲವು ಶ್ಲಾಘ್ಯವೂ ನಾಶರಹಿತವೂ ಆದ ಭೋಗಗಳಿಂದ ಕಳೆಯುತ್ತಿರಲು ಮೊದಲಿನ ಶಂಖನೆಂಬ ಮುನಿಯು ಮಹಾಶುಕ್ರಸ್ವರ್ಗದಿಂದ ಅವತರಿಸಿ ಇವನು ಪುಣ್ಯಭಾಗಿಯೂ ಬಂಧುಸಮೂಹಗಳಲ್ಲಿ ಸಂತೋಷವನ್ನು ಹೆಚ್ಚಿಸುವವನೂ ಆದ ಪದ್ಮನೆಂಬ ಒಂಬತ್ತನೆಯ ಬಲಭದ್ರನಾಗಿ ರೋಹಿಣಿಯ ದೆಸೆಯಿಂದ ಜನಿಸಿದನು.

**ಸಪ್ರತಾಪಾ ಪ್ರಭೇವಾಭಾತ್ಸೂರೇ ಧೀರಸ್ಯ ನಿರ್ಮಲಾ ।**
**ಶರದಾ ಪ್ರಾಪ್ಯ ಸಂಸ್ಕಾರಂ ಶ್ರುತ್ವಾ ಪದ್ಮೋದ್ಭವಾವಹಾ ॥ ೩೨೦ ॥**

ಸೂರ್ಯನ ಸಂಬಂಧಿಯೂ ನಿರ್ಮಲವೂ ಕಮಲೋತ್ಪತ್ತಿಯನ್ನುಂಟುಮಾಡುವುದೂ ಪ್ರತಾಪಸಹಿತವೂ ಆದ ಪ್ರಭೆಯು ಶರದೃತುವಿನಿಂದ ಸಂಸ್ಕಾರವನ್ನು ಹೊಂದಿ ಪ್ರಕಾಶಿಸುವಂತೆ, ಪ್ರಾಜ್ಞನಾದ ಆ ಪದ್ಮನ ಪ್ರತಾಪಸಹಿತವೂ ನಿರ್ಮಲವೂ ಲಕ್ಷ್ಮಿಯ ಉತ್ಪತ್ತಿಯನ್ನುಂಟುಮಾಡುವುದೂ ಆದ ಪ್ರಭೆಯು ಶಾಸ್ತ್ರದಿಂದ ಸಂಸ್ಕಾರವನ್ನು ಹೊಂದಿ ಪ್ರಕಾಶಿಸಿತು.

**ದುರ್ವಾರೋ ದುಷ್ಟವಿಧ್ವಂಸೀ ವಿಶಿಷ್ಟಪ್ರತಿಪಾಲಕಃ ।**
**ತತ್ಪ್ರತಾಪಃ ಕಥಂ ಸೌರಮಪಿ ಸಾರಂ ನ ಲಂಘತೇ ॥ ೩೨೧ ॥**

ತಡೆಯುವುದಕ್ಕೆ ಕಷ್ಟಸಾಧ್ಯವೂ ದುಷ್ಟರನ್ನು ನಿಗ್ರಹಿಸುವುದೂ ಶಿಷ್ಟರನ್ನು ಪಾಲಿಸುವುದೂ ಆದ ಅವನ ಪ್ರತಾಪವು ಸೂರ್ಯನ ಸಂಬಂಧವಾದ ಸಾರವನ್ನು (ಪ್ರತಾಪವನ್ನು) ಹೇಗೆ ಮೀರುವುದಿಲ್ಲ ?

**ಇತಃ ಪ್ರಕೃತಮನ್ಯತ್ತು ವೃತ್ತಕಂ ತನ್ನಿಗದ್ಯತೇ ।**
**ಗಂಗಾಗಂಧಾವತೀನದ್ಯೋಃ ಸಂಗಮೇ ಸಫಲದ್ರುಮೇ ॥ ೩೨೨ ॥**

**ತಾಪಸಾನಾಮಭೂತ್ಪಲ್ಲೀ ನಾಮ್ನಾ ಜಠರಕೌಶಿಕಮ್ ।**
**ವಶಿಷ್ಠೋ ನಾಯಕಸ್ತತ್ರ ಪಂಚಾಗ್ನಿವ್ರತಮಾಚರನ್ ॥ ೩೨೩ ॥**

**ಭದ್ರಾಂತಗುಣವೀರಾಭ್ಯಾಂ ಚಾರಣಾಭ್ಯಾಮಿದಂ ತಪಃ ।**
**ಅಜ್ಞಾನಕೃತಮಿತ್ಯುಕ್ತಮಾಕರ್ಣ್ಯಾಪೃಚ್ಛದಜ್ಞತಾ ॥ ೩೨೪ ॥**

**ಕುತೋ ಮಮೇತಿ ಸಕ್ರೋಧಂ ಕುಧೀಃ ಸ್ಥಿತ್ವಾ ತಯೋಃ ಪುರಃ ।**
**ಆದ್ಯೋಽತ್ರ ವಕ್ತುಮುದ್ಯುಕ್ತಃ ಸಂತೋ ಹಿ ಹಿತಭಾಷಿಣಃ ॥ ೩೨೫ ॥**

ಇಲ್ಲಿಂದ ಮುಂದೆ ಬೇರೆ ಸಮಾಚಾರವು ಪ್ರಕೃತವಾಗಿರುವುದು. ಅದು ಹೇಳಲ್ಪಡುತ್ತದೆ. ಗಂಗಾನದೀ ಗಂಧಾವತೀನದಿಗಳ ಫಲವೃಕ್ಷಸಹಿತವಾದ ಸಂಗಮದಲ್ಲಿ ತಾಪಸರ ಜಠರಕೌಶಿಕವೆಂಬ ಹಳ್ಳಿಯಿತ್ತು. ಅಲ್ಲಿಯ ಅಧಿಪತಿಯಾದ ವಶಿಷ್ಠನು ಪಂಚಾಗ್ನಿವ್ರತವನ್ನಾಚರಿಸುವವನೂ ಗುಣಭದ್ರ ವೀರಭದ್ರರೆಂಬೀರ್ವರು ಚಾರಣ ಮುನಿಗಳು ''ಈ ತಪಸ್ಸು ಅಜ್ಞಾನಕೃತವಾದುದು'' ಎಂದು ಹೇಳಿದುದನ್ನು ಕೇಳಿ ದುರ್ಬುದ್ಧಿಯುಳ್ಳವನೂ ಆಗಿ ''ಯಾವ ಕಾರಣದಿಂದ ನನ್ನ ಅಜ್ಞತೆ ?'' ಎಂದು ಕ್ರೋಧದೊಡನೆ ಕೂಡಿ ಅವರುಗಳ ಮುಂದೆ ನಿಂತು ಕೇಳಿದನು. ಅವರಲ್ಲಿ ಮೊದಲನೆಯವನು ಉತ್ತರವನ್ನು ಹೇಳುವುದಕ್ಕೆ ಉದ್ಯುಕ್ತನಾದನು. ಸತ್ಪುರುಷರು ಹಿತಭಾಷಿಗಳಾಗಿಯೇ ಇರುತ್ತಾರೆ.

**ಜಟಾಕಲಾಪಸಂಭೂತಲಿಕ್ಷಾಯೂಕಾಭಿಘಟ್ಟನಮ್ ।**
**ಸಂತತಸ್ನಾನಸಂಲಗ್ನಜಟಾಂತರ್ಮೃತಮೀನಕಾನ್ ॥ ೩೨೬ ॥**

**ದಹ್ಯಮಾನೇಂಧನಾಂತಸ್ಥಸ್ಫುರದ್ವಿವಿಧಕೀಟಕಾನ್ ।**
**ಸಂದರ್ಶ್ಯೇದಂ ತವಾಜ್ಞಾನಮಿತಿ ತಂ ಸಮಬೋಧಯತ್ ॥ ೩೨೭ ॥**

ಜಡೆಯ ಗಂಟಿನಲ್ಲಿ ಹುಟ್ಟಿದ ಸೀರು ಹೇನುಗಳ ಒತ್ತಾಟವನ್ನೂ ಯಾವಾಗಲೂ ಸ್ನಾನದಿಂದ ಜಡೆಯೊಳಗೆ ಸೇರಿಕೊಂಡು ಸತ್ತ ಮೀನುಗಳನ್ನೂ ಸುಡುತ್ತಿರುವ ಕಟ್ಟಿಗೆಯೊಳಗಿರುವ ಪ್ರಕಾಶಮಾನವಾದ ನಾನಾಕೀಟಗಳನ್ನೂ ತೋರಿಸಿ ''ಇದು ನಿನ್ನ ಅಜ್ಞಾನ'' ಎಂದು ಆ ವಶಿಷ್ಠನನ್ನು ಬೋಧಿಸಿದನು.

**ಕಾಲಲಬ್ಧಿಂ ಸಮಾಶ್ರಿತ್ಯ ವಶಿಷ್ಠೋಽಪಿ ವಿಶಿಷ್ಟಧೀಃ ।**
**ದೀಕ್ಷಿತ್ವಾತಪಯೋಗಸ್ಥಃ ಸೋಪವಾಸಂ ತಪೋ ವ್ಯಧಾತ್ ॥ ೩೨೮ ॥**

ಕಾಲಲಬ್ಧಿಯನ್ನು ಹೊಂದಿ ವಿಶಿಷ್ಟವಾದ ಬುದ್ಧಿಯುಳ್ಳ ವಶಿಷ್ಠನೂ ಜಿನ ದೀಕ್ಷೆಯನ್ನು ತೆಗೆದುಕೊಂಡು ಆತಪಯೋಗದಲ್ಲಿದ್ದು ಉಪವಾಸಯುಕ್ತವಾದ ತಪಸ್ಸನ್ನು ಮಾಡಿದನು.

**ತಪೋಮಾಹಾತ್ಮ್ಯತಸ್ತಸ್ಯ ಸಪ್ತ ವ್ಯಂತರದೇವತಾಃ ।**
**ಮುನೀಶ ಬ್ರೂಹಿ ಸಂದೇಶಮಿಷ್ಟಮಿತ್ಯಗ್ರತಃ ಸ್ಥಿತಾಃ ॥ ೩೨೯ ॥**

ತಪೋಮಹಿಮೆಯಿಂದ ಅವನಿಗೆ ಏಳು ವ್ಯಂತರದೇವತೆಗಳು ''ಮುನೀಶ್ವರನೆ ! ಇಷ್ಟವಾದ ಸಂದೇಶವನ್ನು ಹೇಳು'' ಎಂದು ಮುಂದೆ ಬಂದು ನಿಂತುವು.

**ದೃಷ್ಟ್ವಾ ತಾಃ ಸ ಮುನಿಃ ಪ್ರಾಹ ಭವತೀಭಿಃ ಪ್ರಯೋಜನಮ್ ।**
**ನಾಸ್ತ್ಯತ್ರಾಗಚ್ಛತಾನ್ಯಸ್ಮಿನ್ ಯೂಯಂ ಜನ್ಮನಿ ಮಾಮಿತಿ ॥ ೩೩೦ ॥**

ಆ ಮುನಿಯು ಆ ವ್ಯಂತರದೇವತೆಗಳನ್ನು ನೋಡಿ ''ನಿಮ್ಮಗಳಿಂದ ಇಲ್ಲಿ ಪ್ರಯೋಜನವಿಲ್ಲ. ನೀವುಗಳು ಇನ್ನೊಂದು ಜನ್ಮದಲ್ಲಿ ನನ್ನ ಬಳಿಗೆ ಬನ್ನಿರಿ'' ಎಂದು ಹೇಳಿದನು.

**ಕ್ರಮೇಣೈವಂ ತಪಃ ಕುರ್ವನ್ನಾಗಮನ್ಮಧುರಾಪುರೀಮ್ ।**
**ತತ್ರ ಮಾಸೋಪವಾಸೀ ಸನ್ನಾತಪಂ ಯೋಗಮಾಚರನ್ ॥ ೩೩೧ ॥**

ಕ್ರಮದಿಂದ ಈ ರೀತಿಯಾಗಿ ತಪಸ್ಸನ್ನು ಮಾಡುವವನಾಗಿ ಮಧುರಾನಗರಕ್ಕೆ ಬಂದನು. ಅಲ್ಲಿ ಮಾಸೋಪವಾಸಿಯಾಗಿ ಆತಪಯೋಗವನ್ನಾಚರಿಸುತ್ತಿದ್ದನು.

**ಅಥಾನ್ಯೇದ್ಯುರ್ವಿಲೋಕ್ಯೈನಮುಗ್ರಸೇನಮಹೀಪತಿಃ ।**
**ಭಕ್ತ್ಯಾ ಮದ್ಗೇಹ ಏವಾಯಂ ಭಿಕ್ಷಾಂ ಗೃಹ್ಣಾತು ನಾನ್ಯತಃ ॥ ೩೩೨ ॥**

**ಚಕಾರ ಘೋಷಣಾಂ ಪುರ್ಯಾಮಿತಿ ಸರ್ವನಿಷೇಧಿನೀಮ್ ।**
**ಸ್ವಪಾರಣಾದಿನೇ ಸೋಽಪಿ ಭಿಕ್ಷಾರ್ಥಂ ಪ್ರಾವಿಶತ್ಪುರೀಮ್ ॥ ೩೩೩ ॥**

ಬಳಿಕ ಮತ್ತೊಂದು ದಿವಸ ಅಲ್ಲಿಯ ಉಗ್ರಸೇನರಾಜನು ಈ ವಶಿಷ್ಠ ಮುನಿಯನ್ನು ನೋಡಿ ಭಕ್ತಿಯಿಂದ ''ಈ ಮುನಿಯು ನನ್ನ ಮನೆಯಲ್ಲೇ ಭಿಕ್ಷೆಯನ್ನು ತೆಗೆದುಕೊಳ್ಳಲಿ. ಬೇರೆ ಕಡೆಯಿಂದ ತೆಗೆದುಕೊಳ್ಳಬಾರದು'' ಎಂದು ನಗರದಲ್ಲಿ ಭಿಕ್ಷೆಕೊಡುವುದಕ್ಕೆ ಎಲ್ಲರನ್ನೂ ನಿಷೇಧಿಸುವ ಘೋಷಣೆಯನ್ನು ಮಾಡಿದನು. ತನ್ನ ಪಾರಣೆಯ ದಿನದಲ್ಲಿ ಆ ಮುನಿಯೂ ಭಿಕ್ಷೆಗೋಸ್ಕರ ನಗರವನ್ನು ಪ್ರವೇಶಿಸಿದನು.

**ಉದತಿಷ್ಠತ್ತದೈವಾಗ್ನೀ ರಾಜಗೇಹೇ ನಿರೀಕ್ಷ್ಯ ತಮ್ ।**
**ಮುನೀಶ್ವರೋ ನಿವರ್ತ್ಯಾಯಾನ್ನಿರಾಹಾರಸ್ತಪೋವನಮ್ ॥ ೩೩೪ ॥**

ಆಗಲೇ ಅರಮನೆಯಲ್ಲಿ ಬೆಂಕಿಯೆದ್ದಿತು. ಅದನ್ನು ನೋಡಿ ಮುನೀಶ್ವರನು ನಿರಾಹಾರಿಯಾಗಿ ಹಿಂದಿರುಗಿ ತಪೋವನಕ್ಕೆ ಹೋದನು.

**ತತಃ ಪುನರ್ಗತೇ ಮಾಸೇ ಬುಭುಕ್ಷುಃ ಕ್ಷೀಣದೇಹಕಃ ।**
**ಪ್ರವಿಶ್ಯ ನಗರೀಂ ವೀಕ್ಷ್ಯ ಕ್ಷೋಭಣಂ ಯಾಗಹಸ್ತಿನಃ ॥ ೩೩೫ ॥**

**ಸದ್ಯೋ ನಿವರ್ತತೇಽಸ್ಮಾಸ್ಮಾನ್ಮಾಸಮಾತ್ರಾಶನವ್ರತಃ ।**
**ಮಾಸಾಂತೇ ಪುನರನ್ಯೇದ್ಯುಃ ಶರೀರಸ್ಥಿತಯೇ ಗತಃ ॥ ೩೩೬ ॥**

**ರಾಜಗೇಹಂ ಜರಾಸಂಧಮಹೀಟ್ಪ್ರಹಿತಪತ್ರಕಮ್ ।**
**ಸಮಾಕರ್ಣ್ಯ ಮಹೀಪಾಲೇ ವ್ಯಾಕುಲೀಕೃತಚೇತಸಿ ॥ ೩೩೭ ॥**

**ತತೋ ನಿವರ್ತಮಾನೋಽಸೌ ಕ್ಷೀಣಾಂಗೋ ಜನಜಲ್ಪಿತಮ್ ।**
**ನ ದದಾತಿ ಸ್ವಯಂ ಭಿಕ್ಷಾಂ ನಿಷಿಧ್ಯತಿ ಪರಾನಪಿ ॥ ೩೩೮ ॥**

**ಕೋಽಭಿಪ್ರಾಯೋ ಮಹೀಶಸ್ಯ ನ ವಿದ್ಮೋ ವಯಮಿತ್ಯದಃ ।**
**ಶ್ರುತ್ವಾ ಪಾಪೋದಯಾತ್ಕ್ರುಧ್ವಾ ನಿದಾನಮಕರೋನ್ಮುನಿಃ ॥ ೩೩೯ ॥**

**ಪುತ್ರೋ ಭೂತ್ವಾಸ್ಯ ಭೂಪಸ್ಯ ಮದುಗ್ರತಪಸಃ ಫಲಾತ್ ।**
**ನಿಗೃಹ್ಯೈನಮಿದಂ ರಾಜ್ಯಂ ಗೃಹ್ಣಾಮೀತಿ ದುರ್ಮತಿಃ ॥ ೩೪೦ ॥**

ಬಳಿಕ ಮತ್ತೊಂದು ತಿಂಗಳು ಕಳೆಯುತ್ತಿರಲು ಭೋಜನಮಾಡಬೇಕೆಂಬ ಇಚ್ಛೆಯುಳ್ಳವನೂ ಕೃಶವಾದ ಶರೀರವುಳ್ಳವನೂ ಆಗಿ ನಗರವನ್ನು ಪ್ರವೇಶಿಸಿ ಯಾಗ ಹಸ್ತಿಯ ಕ್ಷೋಭೆಯನ್ನು (ಗಲಿಬಿಲಿಯನ್ನು) ನೋಡಿ ತತ್ಕ್ಷಣದಲ್ಲಿ ಒಂದು ತಿಂಗಳ ಮೇಲೆ ಭೋಜನಮಾಡುವ–ಮಾಸೋಪವಾಸವ್ರತವುಳ್ಳವನಾಗಿ ಹಿಂದಿರುಗಿದನು. ತಿಂಗಳ ಕೊನೆಯಲ್ಲಿ ಪುನಃ ಮತ್ತೊಂದು ದಿವಸ ಶರೀರಸ್ಥಿತಿ–ಆಹಾರಕ್ಕೋಸ್ಕರ ಅರಮನೆಗೆ ಹೋದನು. ಆಗ ಜರಾಸಂಧಮಹಾರಾಜನಿಂದ ಕಳುಹಿಸಲ್ಪಟ್ಟಿದ್ದ ಪತ್ರವನ್ನು ಕೇಳಿ ಉಗ್ರಸೇನರಾಜನು ವ್ಯಾಕುಲವಾದ ಮನಸ್ಸುಳ್ಳವನಾಗಿರುತ್ತಿರಲು ಅಲ್ಲಿಂದ ಹಿಂದಿರುಗುತ್ತಿರುವವನೂ ಕ್ಷೀಣದೇಹವುಳ್ಳವನೂ ಆದ ಈ ವಶಿಷ್ಠ

ಮುನಿಯು "ದೊರೆಯು ತಾನು ಭಿಕ್ಷೆಯನ್ನು ಕೊಡುವುದಿಲ್ಲ. ಬೇರೆಯವರೂ ಕೊಡದಂತೆ ಅವರನ್ನು ತಡೆಯುತ್ತಾನೆ. ರಾಜನ ಅಭಿಪ್ರಾಯವಾವುದೋ ನಾವರಿಯೆವು" ಈ ರೀತಿಯಾದ ಜನರ ಮಾತನ್ನು ಕೇಳಿ ಪಾಪದ ಉದಯದಿಂದ ಅವನು ಕೋಪಗೊಂಡು ದುರ್ಬುದ್ಧಿಯುಳ್ಳವನಾಗಿ "ನನ್ನ ಉಗ್ರತಪಸ್ಸಿನ ಫಲದಿಂದ ನಾನು ಈ ಉಗ್ರಸೇನನಿಗೆ ಮಗನಾಗಿ ಇವನನ್ನು ನಿಗ್ರಹಿಸಿ ಈ ರಾಜ್ಯವನ್ನು ತೆಗೆದುಕೊಳ್ಳವೆನು" ಎಂದು ನಿದಾನಶಲ್ಯವನ್ನು ಮಾಡಿದನು.

**ಏವಂ ದುಷ್ಪರಿಣಾಮೇನ ಮುನಿಃ ಪ್ರಾಪ್ಯ ಪರಾಸುತಾಮ್ ।**
**ಜಾತಃ ಪದ್ಮಾವತೀಗರ್ಭೇ ಭೂರಿವೈರಾನುಬಂಧತಃ ॥ ೩೪೧ ॥**

ಹೀಗೆ ದುಷ್ಪರಿಣಾಮದಿಂದ ಮುನಿಯು ಸತ್ತು ಅಧಿಕವಾದ ವೈರಸಂಬಂಧದಿಂದ ಉಗ್ರಸೇನನ ಪತ್ನಿಯಾದ ಪದ್ಮಾವತಿಯ ಗರ್ಭದಲ್ಲಿ ಜನಿಸಿದನು.

**ಸಾಪಿ ಗರ್ಭಾರ್ಭಕಕ್ರೌರ್ಯಾನ್ನೃಪೋಭೃದ್ವ್ಯದಯಾಮಿಷಮ್ ।**
**ಅಭೂದಭಿಲಷಂತ್ಯಾರ್ತಾ ತದ್ಜ್ಞಾತ್ವಾ ಮಂತ್ರಿಣಸ್ತದಾ ॥ ೩೪೨ ॥**

**ಪ್ರಯೋಗವಿಹಿತಂ ಭರ್ತುರ್ಹೃನ್ಮಾಂಸಮಿತಿ ದೌಹೃದಮ್ ।**
**ಸ್ವಬುದ್ಧ್ಯಾಪೂರಯಂಸ್ತಸ್ಯಾಃ ಕಿಂ ನ ಕುರ್ವಂತಿ ಧೀಧನಾಃ ॥ ೩೪೩ ॥**

ಆಕೆಯೂ ಗರ್ಭದಲ್ಲಿರುವ ಮಗುವಿನ ಕ್ರೂರತೆಯಿಂದ ರಾಜನ ಎದೆಯ ಮಾಂಸವನ್ನು ಇಚ್ಛಿಸುವವಳೂ ಮನೋವ್ಯಥೆಯುಳ್ಳವಳೂ ಆದಳು. ಆಗ ಮಂತ್ರಿಗಳು ಆ ವಿಷಯವನ್ನು ತಿಳಿದು ತಮ್ಮ ಬುದ್ಧಿಯಿಂದ "ಇದು ದೊರೆಯ ಎದೆಯ ಮಾಂಸ" ಎಂದು ಪ್ರಯೋಗದಿಂದ ಮಾಡಲ್ಪಟ್ಟ-ಕೃತ್ರಿಮವಾದ ಮಾಂಸವನ್ನು ಕೊಟ್ಟು ಆಕೆಯ ಬಯಕೆಯನ್ನು ಪೂರ್ತಿಮಾಡಿದರು. ಪ್ರಾಜ್ಞರು ಏನನ್ನು ತಾನೆ ಮಾಡುವುದಿಲ್ಲ?

**ನಿರ್ದೌಹೃದಾ ಕ್ರಮೇಣಾಸಾವಲಬ್ಧ ಸುತಪಾತಕಮ್ ।**
**ದಷ್ಟೋಷ್ಠಂ ನಿಷ್ಠುರಾಲೋಕಂ ಕೃತಭ್ರೂಭಂಗಸಂಗಮಮ್ ॥ ೩೪೪ ॥**

ಬಯಕೆಯಿಲ್ಲದವಳಾದ ಈ ಪದ್ಮಾವತಿಯು ಕ್ರಮದಿಂದ ತುಟಿಯನ್ನು ಕಚ್ಚಿರುವವನೂ ನಿಷ್ಠುರವಾದ ನೋಟವುಳ್ಳವನೂ ಹುಬ್ಬುಗಳನ್ನು ಗಂಟಿಕ್ಕಿರುವವನೂ ಆದ ಆ ಪಾತಕಪುತ್ರನನ್ನು ಪಡೆದಳು.

**ದೃಷ್ಟ್ವಾ ತಂ ಪಿತರೌ ತಸ್ಯ ನಾತ್ರ ವಿಸ್ರಭ್ಯ ಪೋಷಣೇ ।**
**ಯೋಗ್ಯೋಯಮಿತಿ ಸಂಸ್ಮೃತ್ಯ ವಿಧಿಂ ತಸ್ಯ ವಿಸರ್ಜನೇ ॥ ೩೪೫ ॥**

**ಮಂಜೂಷಾಯಾಂ ವಿನಿಕ್ಷಿಪ್ಯ ಕಂಸಮಯ್ಯಾಂ ಸಪತ್ರಕಮ್ ।**
**ತೋಕಂ ಕಲಿಂದಕನ್ಯಾಯಾಃ ಪ್ರವಾಹೇ ಮುಂಚತಃ ಸ್ಮ ತೌ ॥ ೩೪೬ ॥**

ಅವನ ಆ ತಂದೆತಾಯಿಗಳು ಅವನನ್ನು ನೋಡಿ "ಇವನಲ್ಲಿ ವಿಶ್ವಾಸವನ್ನು ಮಾಡಿ ಪೋಷಣೆಯಲ್ಲಿ ಇವನು ಯೋಗ್ಯನಲ್ಲ-ಪೋಷಣೆಗೆ ಯೋಗ್ಯನಲ್ಲ" ಎಂದು ಅವನನ್ನು ತ್ಯಜಿಸುವುದರಲ್ಲಿ ವಿಧಿಯನ್ನು(ತ್ಯಜಿಸುವ ರೀತಿಯನ್ನು) ಯೋಚಿಸಿ ಕಂಚಿನ ಪೆಟ್ಟಿಗೆಯಲ್ಲಿ ಪರಿಚಯಪತ್ರದೊಡನೆ ಪುತ್ರನನ್ನಿರಿಸಿ ಕಾಲಿಂದೀನದಿಯ ಪ್ರವಾಹದಲ್ಲಿ ಬಿಟ್ಟರು.

**ಅಸ್ತಿ ಮಂಡೋದರೀ ನಾಮ ಕೌಶಾಂಬ್ಯಾಂ ಶೌಂಡಕಾರಿಣೀ ।**
**ತಯಾ ಪ್ರವಾಹೇ ಮಂಜೂಷಾ ಮಧ್ಯಸ್ಥೋಸೌ ವ್ಯಲೋಕ್ಯತ ॥ ೩೪೭ ॥**

ಕೌಶಾಂಬಿಯಲ್ಲಿ ಮಂಡೋದರಿಯೆಂಬ ಹೆಂಡಮಾರುವವಳು ಇರುತ್ತಾಳೆ. ಆಕೆಯು ಪ್ರವಾಹದಲ್ಲಿ ಪೆಟ್ಟಿಗೆಯ ಮಧ್ಯದಲ್ಲಿರುವ ಈ ಮಗುವನ್ನು ನೋಡಿದಳು.

**ಅವೀವೃಧದ್ಗೃಹೀತ್ವೈನಮಿವ ಸಾ ಸ್ವಸುತಂ ಹಿತಾ ।**
**ಕಿಂ ನ ಕುರ್ವಂತಿ ಪುಣ್ಯಾನಿ ಹೀನಾನ್ಯಪಿ ತಪಸ್ವಿನಾಮ್ ॥ ೩೪೮ ॥**

ಆಕೆಯು ಈ ಮಗುವನ್ನು ಗ್ರಹಣಮಾಡಿ ಹಿತಕರಳಾಗಿ ತನ್ನ ಪುತ್ರನನ್ನು ಬೆಳೆಸುವಂತೆ ಬೆಳೆಸಿದಳು. ತಪಸ್ವಿಗಳ ಹೀನಪುಣ್ಯಗಳಾದರೂ ಅವು ಏನನ್ನುತಾನೆ ಮಾಡುವುದಿಲ್ಲ?

**ಅಹೋಭಿಃ ಕೈಶ್ಚಿದಾಸಾದ್ಯ ಲಂಘನಾದಿಸಹಂ ವಯಃ ।**
**ಆಕ್ರೀಡಮಾನಾನ್ನಿರ್ಹೇತು ಸಮಂ ಸಕಲಬಾಲಕಾನ್ ॥ ೩೪೯ ॥**

**ಚಪೇಟಮುಷ್ಟಿದಂಡಾದಿಪ್ರಹಾರೈರ್ಬಾಧತೇ ಸದಾ ।**
**ತದ್ದುರಾಚಾರನಿರ್ವಿಣ್ಣಾತ್ಯಜನ್ಮಂಡೋದರೀ ಚ ತಮ್ ॥ ೩೫೦ ॥**

ಕೆಲವು ದಿನಗಳಿಂದ ಆ ಬಾಲಕನು ಲಂಘನಾದಿಗಳನ್ನು ಸಹಿಸತಕ್ಕ ವಯಸ್ಸನ್ನು ಹೊಂದಿ ಆಟವಾಡುತ್ತಿರುವ ಎಲ್ಲಾ ಬಾಲಕರನ್ನು ನಿಷ್ಕಾರಣವಾಗಿ ಒಟ್ಟಿಗೆ ಅಂಗೈಯ ಪೆಟ್ಟುಗಳಿಂದಲೂ ಮುಷ್ಟಿಯ ಪೆಟ್ಟುಗಳಿಂದಲೂ ಕೋಲಿನ ಪೆಟ್ಟುಗಳಿಂದಲೂ ಯಾವಾಗಲೂ ಬಾಧಿಸುತ್ತಾನೆ. ಅವನ ದುರಾಚಾರದಿಂದ ಪ್ರೀತಿಯಿಲ್ಲದವಳಾದ ಮಂಡೋದರಿಯೂ ಅವನನ್ನು ಪರಿತ್ಯಜಿಸಿದಳು.

**ಸೋಪಿ ಶೌರ್ಯಪುರಂ ಗತ್ವಾ ವಸುದೇವಮಹೀಪತೇಃ ।**
**ಪ್ರತಿಪದ್ಯ ಪದಾತಿತ್ವಂ ತತ್ಸೇವಾತತ್ಪರೋಭವತ್ ॥ ೩೫೧ ॥**

ಅವನು ಶೌರ್ಯಪುರಕ್ಕೆ ಹೋಗಿ ವಸುದೇವರಾಜನ ಪದಾತಿತ್ವವನ್ನು ಹೊಂದಿ-ಭೃತ್ಯನಾಗಿ ಅವನ ಸೇವಾತತ್ಪರನಾದನು.

**ಅತೋನ್ಯತ್ಪ್ರಕೃತಂ ಬ್ರೂಮೋ ಜರಾಸಂಧಮಹೀಪತಿಃ ।**
**ನಿರ್ಜಿತಾಶೇಷಭೂಪಾಲಃ ಕದಾಚಿತ್ಕಾರ್ಯಶೇಷವಾನ್ ॥ ೩೫೨ ॥**

**ಸುರಮ್ಯವಿಷಯಾಂತಸ್ಥಪೌದನಾಖ್ಯಪುರಾಧಿಪಮ್ ।**
**ರಿಪುಂ ಸಿಂಹರಥಂ ಜಿತ್ವಾ ಬಲಾದ್ಯುದ್ಧೇ ಮಮಾಂತಿಕಮ್ ॥ ೩೫೩ ॥**

**ಬಧ್ವಾನೀತವತೇ ದೇಶಸ್ಯಾರ್ಧಂ ಮತ್ಪುತ್ರಿಕಾಮಪಿ ।**
**ಕಾಲಿಂದಸೇನಾಸಂಭೂತಾಂ ಸತೀಂ ಜೀವದ್ಯಶೋಭಿಧಾಮ್ ॥ ೩೫೪ ॥**

**ದಾಸ್ಯಾಮೀತ್ಯಖಿಭೂಪಾಲಾನ್ಪ್ರಾಹಿಣೋತ್ಪತ್ರಮಾಲಿಕಾಃ ।**
**ವಸುದೇವಕುಮಾರಸ್ತತ್ಪರಿಗೃಹ್ಯ ಪ್ರತಾಪವಾನ್ ॥ ೩೫೫ ॥**

**ವಾಜಿನಃ ಸಿಂಹಮೂತ್ರೇಣ ಭಾವಯಿತ್ವಾ ರಥಂ ಸ ತೈಃ ।**
**ವಾಹ್ಯಮಾರುಹ್ಯ ಸಂಗ್ರಾಮೇ ಜಿತ್ವಾ ಸಿಂಹರಥಂ ಪೃಥುಮ್ ॥ ೩೫೬ ॥**

**ಕಂಸೇನ ನಿಜಭೃತ್ಯೇನ ಬಂಧಯಿತ್ವಾ ಮಹೀಪತೇಃ ।**
**ಸ್ವಯಂ ಸಮರ್ಪಯಾಮಾಸ ಸೋಪಿ ತುಷ್ಟ್ವಾ ಸುತಾಂ ನಿಜಾಮ್ ॥**

**ದೇಶಾರ್ಧೇನ ಸಮಂ ತಸ್ಮೈ ಪ್ರತಿಪನ್ನಾಂ ಪ್ರದತ್ತವಾನ್ ।**
**ವಸುದೇವೋಪಿ ತಾಂ ದುಷ್ಟಲಕ್ಷಣಾಂ ವೀಕ್ಷ್ಯ ನೋ ಮಯಾ ॥ ೩೫೮ ॥**

**ಬದ್ಧಃ ಸಿಂಹರಥಃ ಕರ್ಮ ಕಂಸೇನಾನೇನ ತತ್ಕೃತಮ್ ।**
**ಕನ್ಯಾ ಪ್ರದೀಯತಾಮಸ್ಮೈ ಭವತ್ಪ್ರೇಷಣಕಾರಿಣೇ ॥ ೩೫೯ ॥**

**ಇತ್ಯಾಹ ತದ್ವಚಃ ಶ್ರುತ್ವಾ ಜರಾಸಂಧನರೇಶ್ವರಃ ।**
**ಕುಲಂ ಕಂಸಸ್ಯ ವಿಜ್ಞಾತುಂ ದೂತಂ ಮಂಡೋದರೀಂ ಪ್ರತಿ ॥ ೩೬೦ ॥**

**ಪ್ರೇಷಯಾಮಾಸ ತಂ ದೃಷ್ಟ್ವಾ ಕಿಂ ತತ್ರಾಪ್ಯಪರಾಧವಾನ್ ।**
**ಮತ್ಪುತ್ರ ಇತಿ ಭೀತ್ವಾಸೌ ಸಮಂಜೂಷಾಗಮತ್ಸ್ವಯಮ್ ॥ ೩೬೧ ॥**

ತರುವಾಯ ಪ್ರಕೃತವಾದ ಮತ್ತೊಂದು ವಿಷಯವನ್ನು ಹೇಳುತ್ತೇವೆ– ಸಮಸ್ತ ರಾಜರನ್ನು ಜಯಿಸಿರುವ ಜರಾಸಂಧರಾಜನು ಒಂದಾನೊಂದು ಕಾಲದಲ್ಲಿ ಅವಶಿಷ್ಟವಾದ ಕಾರ್ಯವುಳ್ಳವನಾಗಿ ''ಸುರಮ್ಯದೇಶದ ಮಧ್ಯದಲ್ಲಿರುವ ಪೌದನಾಪುರದ ದೊರೆಯೂ ಶತ್ರುವೂ ಆದ ಸಿಂಹರಥನನ್ನು ಯುದ್ಧದಲ್ಲಿ ಬಲದಿಂದ ಜಯಿಸಿ ಕಟ್ಟಿ ನನ್ನ ಬಳಿಗೆ ತರುವವನಿಗೆ ನನ್ನ ಅರ್ಧದೇಶವನ್ನೂ ಕಾಲಿಂದಸೇನೆಯೆಂಬ ಪತ್ನಿಯಲ್ಲಿ ಜನಿಸಿರುವವಳೂ ಸಾಧ್ವಿಯೂ ಜೀವದ್ಯಶೆಯೆಂಬ ಹೆಸರುಳ್ಳವಳೂ ಆದ ನನ್ನ ಮಗಳನ್ನೂ ಕೊಡುವೆನು'' ಎಂದು ರಾಜರುಗಳಿಗೆ ಪತ್ರಗಳನ್ನು ಕಳುಹಿಸಿದನು. ಪ್ರತಾಪವುಳ್ಳವನಾದ ವಸುದೇವಕುಮಾರನು ಆ ಪತ್ರವನ್ನು ತೆಗೆದುಕೊಂಡು ಅವನು ಕುದುರೆಗಳನ್ನು ಸಿಂಹದ ಮೂತ್ರದಿಂದ ಭಾವನೆ ಮಾಡಿ(ನೆನಿಸಿ) ಅವುಗಳಿಂದ ಒಯ್ಯಲ್ಪಡುವ ರಥವನ್ನೇರಿ ಹೋಗಿ ಬಲಿಷ್ಟನಾದ ಸಿಂಹರಥವನ್ನು ಯುದ್ಧದಲ್ಲಿ ಜಯಿಸಿ ತನ್ನ ಭೃತ್ಯನಾದ ಕಂಸನಿಂದ ಕಟ್ಟಿಸಿ ತಾನು ಜರಾಸಂಧರಾಜನಿಗೆ ಸಮರ್ಪಿಸಿದನು. ಅವನೂ ಸಂತೋಷಪಟ್ಟು ತಾನು ಕೊಡಲೊಪ್ಪಿದ್ದ ತನ್ನ ಪುತ್ರಿಯನ್ನು ಅರ್ಧದೇಶದೊಡನೆ ಆ ವಸುದೇವನಿಗೆ ಕೊಟ್ಟನು. ವಸುದೇವನೂ ದುಷ್ಟಲಕ್ಷಣವುಳ್ಳ ಆಕೆಯನ್ನು ನೋಡಿ ''ಸಿಂಹರಥನು ನನ್ನಿಂದ ಕಟ್ಟಲ್ಪಡಲಿಲ್ಲ. ಆ ಕಾರ್ಯವು ಈ ಕಂಸನಿಂದ ಮಾಡಲ್ಪಟ್ಟಿತು. ತಾವು ಹೇಳಿ ಕಳುಹಿಸಿರುವ ಕಾರ್ಯವನ್ನು ಮಾಡಿರುವ ಈ ಕಂಸನಿಗೆ ಕನ್ಯೆಯು ಕೊಡಲ್ಪಡಲಿ'' ಎಂದು ಹೇಳಿದನು. ಆ ಮಾತನ್ನು ಕೇಳಿ ಜರಾಸಂಧಮಹಾರಾಜನು ಕಂಸನ ಕುಲವನ್ನು ತಿಳಿಯುವುದಕ್ಕೋಸ್ಕರ ಮಂಡೋದರಿಯ ಬಳಿಗೆ ದೂತನನ್ನು ಕಳುಹಿಸಿಕೊಟ್ಟನು. ಆ ದೂತನನ್ನು ನೋಡಿ ಈಕೆಯು ''ಅಲ್ಲಿಯೂ ನನ್ನ ಮಗನು ಅಪರಾಧಿಯಾಗಿದ್ದಾನೇನು ?'' ಎಂದು ಹೆದರಿ ಪೆಟ್ಟಿಗೆಯನ್ನೂ ತೆಗೆದುಕೊಂಡು ತಾನು ಹೋದಳು.

**ಆಗತ್ಯ ನೃಪತೇರಗ್ರೇ ಮಾತಾಸ್ಯೇಯಮಿತಿ ಕ್ಷಿತೌ ।**
**ನಿಕ್ಷಿಪ್ಯ ಕಂಸಮಂಜೂಷಾಂ ಪ್ರಣಿಪತ್ಯೈವಮಬ್ರವೀತ್ ॥ ೩೬೨ ॥**

**ಆಗತಃ ಕಂಸಮಂಜೂಷಾಮಧಿಷ್ಠಾಯಾಯಮರ್ಭಕಃ ।**
**ಜಲೇ ಕಲಿಂದಕನ್ಯಾಯಾ ಮಯಾದಾಯಾಭಿವರ್ಧಿತಃ ॥ ೩೬೩ ॥**

**ಕಂಸನಾಮ್ನಾ ಸಮಾಹೂತಸ್ತತ ಏವ ಪುರೋದ್ಭವೈಃ ।**
**ನಿಸರ್ಗಶೌರ್ಯದರ್ಪಿಷ್ಠಃ ಶೈಶವೇಪಿ ನಿರರ್ಗಲಃ ॥ ೩೬೪ ॥**

ಬಂದು ರಾಜನ ಮುಂದುಗಡೆಯಲ್ಲಿ ''ಇದು ಇವನ ತಾಯಿ'' ಎಂದು ಹೇಳಿ ಕಂಚಿನ ಪೆಟ್ಟಿಗೆಯನ್ನು ಭೂಮಿಯಲ್ಲಿರಿಸಿ ನಮಸ್ಕರಿಸಿ ''ಕಂಚಿನ ಪೆಟ್ಟಿಗೆಯಲ್ಲಿದ್ದು ಕಾಲಿಂದೀನದಿಯ ನೀರಿನಲ್ಲಿ ಬಂದ ಈ ಮಗುವನ್ನು ನಾನು ತೆಗೆದುಕೊಂಡು ಬೆಳೆಸಿದೆನು. ಆದುದರಿಂದಲೇ ನಾಗರಿಕರು ಇವನನ್ನು ಕಂಸನೆಂಬ ಹೆಸರಿನಿಂದ ಕರೆದರು. ಸ್ವಾಭಾವಿಕವಾದ ಶೌರ್ಯದಿಂದ ಅಹಂಕಾರಿಯಾದ ಇವನು ಶೈಶವಾವಸ್ಥೆಯಲ್ಲಿಯೂ ನಿರರ್ಗಲನಾಗಿದ್ದನು'' ಎಂದು ಹೇಳಿದಳು.

**ಇತಿ ತದ್ವಚನಂ ಶ್ರುತ್ವಾ ಮಂಜೂಷಾಂತಸ್ಥಪತ್ರಕಮ್ ।**
**ಗೃಹೀತ್ವಾ ವಾಚಯಿತ್ವೋಚ್ಚೈರುಗ್ರಸೇನಮಹೀಪತೇಃ ॥ ೩೬೫ ॥**

**ಪದ್ಮಾವತ್ಯಾಶ್ಚ ಪುತ್ರೋಽಯಮಿತಿ ಜ್ಞಾತ್ವಾ ಮಹೀಪತಿಃ ।**
**ವಿತತಾರ ಸುತಾಂ ತಸ್ಮೈ ರಾಜ್ಯಾರ್ಧಂ ಚ ಪ್ರತುಷ್ಟವಾನ್ ॥ ೩೬೬ ॥**

ಈ ರೀತಿಯಾಗಿ ಆಕೆಯ ಮಾತನ್ನು ಕೇಳಿ ಪೆಟ್ಟಿಗೆಯೊಳಗಿದ್ದ ಪತ್ರವನ್ನು ತೆಗೆದುಕೊಂಡು ಚೆನ್ನಾಗಿ ಓದಿಸಿ'' ಇವನು ಉಗ್ರಸೇನರಾಜನ ಮತ್ತು ಪದ್ಮಾವತಿಯ ಪುತ್ರನಾಗಿದ್ದಾನೆ'' ಎಂದು ತಿಳಿದು ಬಹುಸಂತೋಷವುಳ್ಳವನಾದ ಜರಾಸಂಧಮಹಾರಾಜನು ಅವನಿಗೆ ಮಗಳನ್ನೂ ಅರ್ಧರಾಜ್ಯವನ್ನೂ ಕೊಟ್ಟನು.

**ಕಂಸೋಽಪ್ಯುತ್ಪತ್ತಿಮಾತ್ರೇಣ ಸ್ವಸ್ಯ ನದ್ಯಾಂ ವಿಸರ್ಜನಾತ್ ।**
**ಪ್ರವೃದ್ಧಪೂರ್ವವೈರಃ ಸನ್ ಕುಪಿತೋ ಮಧುರಾಪುರಮ್ ॥ ೩೬೭ ॥**

**ಸ್ವಯಮಾದಾಯ ಬಂಧಸ್ಥೌ ಗೋಪುರೇ ಪಿತರೌ ನ್ಯಧಾತ್ ।**
**ವಿಚಾರವಿಕಲಾಃ ಪಾಪಾಃ ಕೋಪಿತಾಃ ಕಿಂ ನ ಕುರ್ವತೇ ॥ ೩೬೮ ॥**

ಕಂಸನೂ ತನ್ನ ಜನನಮಾತ್ರದಿಂದ ನದಿಯಲ್ಲಿ ವಿಸರ್ಜಿಸಿದುದರಿಂದ ಕೋಪವುಳ್ಳವನೂ ವೃದ್ಧಿಯನ್ನು ಹೊಂದಿದ ಪೂರ್ವವೈರವುಳ್ಳವನೂ ಆಗಿ ಮಧುರಾಪುರವನ್ನು ತಾನು ತೆಗೆದುಕೊಂಡು ತಂದೆ ತಾಯಿಗಳನ್ನು ಗೋಪುರದಲ್ಲಿ ಸೆರೆಯಲ್ಲಿಟ್ಟನು. ವಿಚಾರಶೂನ್ಯರೂ ಪಾಪಿಗಳೂ ಕೋಪವುಳ್ಳವರೂ ಆದ ಮನುಷ್ಯರು ಯಾವ ಕಾರ್ಯವನ್ನು ತಾನೆ ಮಾಡುವುದಿಲ್ಲ ?

**ಅಥ ಸ್ವಪುರಮಾನೀಯ ವಸುದೇವಮಹೀಪತಿಮ್ ।**
**ದೇವಸೇನಸುತಾಮಸ್ಮೈ ದೇವಕೀಮನುಜಾಂ ನಿಜಾಮ್ ॥ ೩೬೯ ॥**

**ವಿಭೂತಿಮದ್ವಿತೀರ್ಯೈವಂ ಕಾಲೇ ಕಂಸಸ್ಯ ಗಚ್ಛತಿ ।**
**ಅನ್ಯೇದ್ಯುರತಿಮುಕ್ತಾಖ್ಯಮುನಿರ್ಭಿಕ್ಷಾರ್ಥಮಾಗಮತ್ ॥ ೩೭೦ ॥**

**ರಾಜಗೇಹಂ ಸಮೀಕ್ಷ್ಯೈನಂ ಹಾಸಾಜ್ಜೀವದ್ಯಶಾ ಮುದಾ ।**
**ದೇವಕೀ ಪುಷ್ಪಜಾನಂದವಸ್ತ್ರಮೇತತ್ತವಾನುಜಾ ॥ ೩೭೧ ॥**

**ಸ್ವಸ್ಯಾಶ್ಚೇಷ್ಟಿತಮೇತೇನ ಪ್ರಕಾಶಯತಿ ತೇ ಮುನೇ ।**
**ಇತ್ಯವೋಚತ್ತದಾಕರ್ಣ್ಯ ಸಕೋಪಃ ಸೋಽಪಿ ಗುಪ್ತಿಭಿತ್ ॥ ೩೭೨ ॥**

**ಸುತೋಽಸ್ಯಾಸ್ತವ ಭರ್ತಾರಂ ಭಾವ್ಯವಶ್ಯಂ ಹನಿಷ್ಯತಿ ।**
**ಇತ್ಯವೋಚತ್ತತಃ ಕ್ರುದ್ಧ್ವಾ ಸಾ ತದ್ವಸ್ತ್ರಂ ದ್ವಿಧಾ ವ್ಯಧಾತ್ ॥ ೩೭೩ ॥**

ಬಳಿಕ ಕಂಸನು ವಸುದೇವರಾಜನನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡು ಬಂದು ಇವನಿಗೆ ದೇವಸೇನನ (ತನ್ನ ಚಿಕ್ಕತಂದೆಯ) ಪುತ್ರಿಯೂ ತನ್ನ ತಂಗಿಯೂ ಆದ ದೇವಕಿಯನ್ನು ವೈಭವವುಳ್ಳಂತೆ ಕೊಟ್ಟು ಹೀಗೆ ಕಂಸನ ಕಾಲವು ಕಳೆಯುತ್ತಿರಲು ಮತ್ತೊಂದು ದಿವಸ ಅತಿಮುಕ್ತನೆಂಬ ಮುನಿಯು(ದೇವಕಿಯ ಅಣ್ಣನು) ಭಿಕ್ಷೆಗೋಸ್ಕರ ಅರಮನೆಗೆ ಬಂದನು. ಇವನನ್ನು ನೋಡಿ ಜೀವದ್ಯಶೆಯು ಪರಿಹಾಸ್ಯದಿಂದ ಹರ್ಷದಿಂದ ''ಮುನಿಯೇ ! ಇದು ದೇವಕಿಯ ಮುಟ್ಟಿನಿಂದಾದ ಆನಂದದ ವಸ್ತ್ರವಾಗಿದೆ. ನಿನ್ನ ತಂಗಿಯು ತನ್ನ ಕೃತ್ಯವನ್ನು ಈ ವಸ್ತ್ರದಿಂದ ನಿನಗೆ ಪ್ರಕಾಶಪಡಿಸುತ್ತಾಳೆ'' ಎಂದು ಹೇಳಿದಳು. ಆ ಮಾತನ್ನು ಕೇಳಿ ಕೋಪವುಳ್ಳವನೂ ವಚನಗುಪ್ತಿಯನ್ನು ನಾಶಮಾಡಿದವನೂ ಆದ ಆ ಅತಿಮುಕ್ತಮುನಿಯೂ ''ಈಕೆಯ ಮಗನು ಮುಂದೆ ನಿನ್ನ ಗಂಡನನ್ನು ಅವಶ್ಯವಾಗಿ ಕೊಲ್ಲುವನು'' ಎಂದು ಹೇಳಿದನು. ಅದರಿಂದ ಆಕೆಯು ಕೋಪಗೊಂಡು ಆ ವಸ್ತ್ರವನ್ನು ಎರಡು ಭಾಗವಾಗಿ ಮಾಡಿದಳು.

**ಪತಿಮೇವ ನ ತೇ ತೇನ ಪಿತರಂ ಚ ಹನಿಷ್ಯತಿ ।**
**ಇತ್ಯುಕ್ತಾ ಸಾ ಪುನಃ ಕ್ರುದ್ಧ್ವಾ ಪಾದಾಭ್ಯಾಂ ತದ್ವ್ಯಮರ್ದಯತ್॥ ೩೭೪ ॥**

ಅದರಿಂದ ''ನಿನ್ನ ಗಂಡನನ್ನೇ ಅಲ್ಲ, ನಿನ್ನ ತಂದೆಯನ್ನೂ ಕೊಲ್ಲುವನು'' ಎಂದು ಮುನಿಯಿಂದ ಹೇಳಲ್ಪಟ್ಟ ಆಕೆಯು ಪುನಃ ಕೋಪಗೊಂಡು ಆ ವಸ್ತ್ರವನ್ನು ಪಾದಗಳಿಂದ ಮರ್ದಿಸಿ–ಕಸಕಿದಳು.

**ತದ್ವಿಲೋಕ್ಯ .ಮುನಿರ್ದೇವಕೀಸುತಃ ಸಾಗರಾವಧಿಮ್ ।**
**ಪಾಲಯಿಷ್ಯತಿ ಭೂನಾರೀಂ ನಾರೀಂ ವೇತ್ಯಬ್ರವಿತ್ಸ ತಾಮ್ ॥ ೩೭೫ ॥**

ಅದನ್ನು ನೋಡಿ ಆ ಮುನಿಯು ''ದೇವಕಿಯ ಪುತ್ರನು, ಸ್ತ್ರೀಯನ್ನು ಪಾಲಿಸುವಂತೆ, ಸಮುದ್ರಪರ್ಯಂತವಾದ ಭೂಮಿಯೆಂಬ ಸ್ತ್ರೀಯನ್ನು ಪಾಲಿಸುವನು'' ಎಂದು ಆಕೆಯನ್ನು ಕುರಿತು ಹೇಳಿದನು.

**ಜೀವದ್ಯಶಾಶ್ಚ ತತ್ಸರ್ವಮವಧಾರ್ಯ ಯಥಾಶ್ರುತಮ್ ।**
**ಗತ್ವಾ ಬುದ್ಧಿಮತೀ ಕಂಸಂ ಮಿಥಃ ಸಮವಬೋಧಯತ್ ॥ ೩೭೬ ॥**

ಪ್ರಾಜ್ಞಳಾದ ಜೀವದ್ಯಶೆಯೂ ಅದೆಲ್ಲವನ್ನೂ ಕೇಳಿದ ಹಾಗೆ ನೆನಪಿಟ್ಟುಕೊಂಡು ಹೋಗಿ ಕಂಸನಿಗೆ ರಹಸ್ಯವಾಗಿ ಚೆನ್ನಾಗಿ ಬೋಧಿಸಿದಳು.

**ಹಾಸೇನಾಪಿ ಮುನಿಪ್ರೋಕ್ತಮವಂಧ್ಯಮಿತಿ ಭೀತಿಮಾನ್ ।**
**ವಸುದೇವಮಹೀಶಂ ಸ ಸ್ನೇಹಾದಿದಮಯಾಚತ ॥ ೩೭೭ ॥**

**ಪ್ರಸೂತಿಸಮಯೇವಾಪ್ಯ ದೇವಕೀ ಮದ್ಗೃಹಾಂತರಮ್ ।**
**ಪ್ರಸೂತಿವಿಧಿಪರ್ಯಾಪ್ತಿಂ ವಿದಧ್ಯಾತ್ತ್ವನ್ಮತಾದಿತಿ ॥ ೩೭೮ ॥**

"ಹಾಸ್ಯದಿಂದಲೂ ಮುನಿಯಿಂದ ಹೇಳಲ್ಪಟ್ಟ ವಚನವು ನಿಷ್ಫಲವಾಗುವುದಿಲ್ಲ" ಎಂದು ಭೀತಿಯುಳ್ಳವನಾದ ಆ ಕಂಸನು ವಸುದೇವರಾಜನನ್ನು ಕುರಿತು ಸ್ನೇಹದಿಂದ "ದೇವಕಿಯು ಹೆರಿಗೆಯ ಸಮಯದಲ್ಲಿ ನಿನ್ನ ಒಪ್ಪಿಗೆಯಿಂದ ನನ್ನ ಮನೆಗೆ ಬಂದು ಪ್ರಸವವಿಧಿಯ ಪೂರ್ತಿಯನ್ನು ಮಾಡಲಿ-ನನ್ನ ಮನೆಯಲ್ಲಿ ಪ್ರಸವಿಸಲಿ" ಎಂಬೀ ವಿಷಯವನ್ನು ಯಾಚಿಸಿದನು-ಕೇಳಿಕೊಂಡನು.

**ಸೋಪಿ ತೇನೋಪರುದ್ಧಃ ಸಂಸ್ತಥಾಸ್ತ್ವಿತ್ಯನ್ವಮಂಸ್ತ ತತ್ ।**
**ಅವಶ್ಯಂ ಭಾವಿಕಾರ್ಯೇಷು ಮುಹ್ಯಂತ್ಯಪಿ ಮುನೀಶ್ವರಾಃ ॥ ೩೭೯ ॥**

ಆ ವಸುದೇವನೂ ಕಂಸನಿಂದ ನಿರ್ಬಂಧಿಸಲ್ಪಟ್ಟವನಾಗಿ "ಹಾಗೆಯೇ ಆಗಲಿ" ಎಂದು ಅದನ್ನು ಒಪ್ಪಿಕೊಂಡನು. ಅವಶ್ಯವಾಗಿ ಆಗುವ ಕಾರ್ಯಗಳಲ್ಲಿ ಮುನೀಶ್ವರರೂ ಮೋಹಗೊಳ್ಳುತ್ತಾರೆ.

**ಭಿಕ್ಷಾರ್ಥಂ ದೇವಕೀಗೇಹಂ ಸ ಪುನಶ್ಚ ಪ್ರವಿಷ್ಟವಾನ್ ।**
**ಪ್ರತ್ಯುತ್ಥಾಯ ಯಥೋಕ್ತೇನ ವಿಧಿನಾ ಪ್ರತಿಗೃಹ್ಯ ತಮ್ ॥ ೩೮೦ ॥**

**ದೇವಕೀ ವಸುದೇವಶ್ಚ ದೀಕ್ಷಾತ್ರ ಸ್ಯಾನ್ನ ವಾವಯೋಃ ।**
**ಕಿಮಿತಿ ಚ್ಛದ್ಮನಾಬ್ರೂತಾಂ ಜ್ಞಾತ್ವಾ ಸೋಪಿ ತದಿಂಗಿತಮ್ ॥ ೩೮೧ ॥**

**ಸಪ್ತ ಪುತ್ರಾಃ ಸಮಾಪ್ಸ್ಯಂತೇ ಭವದ್ಭ್ಯಾಂ ತೇಷು ಷಟ್ಸುತಾಃ ।**
**ಪರಸ್ಥಾನೇಷು ವರ್ಧಿತ್ವಾ ಯಾಸ್ಯಂತಿ ಪರಮಾಂ ಗತಿಮ್ ॥ ೩೮೨ ॥**

**ಸಪ್ತಮಃ ಸಕಲಾಂ ಪೃಥ್ವೀಂ ಸ್ವಚ್ಛತ್ರಚ್ಛಾಯಯಾ ಚಿರಮ್ ।**
**ಪಾಲಯಿಷ್ಯತಿ ನಿರ್ವಾಪ್ಯ ಚಕ್ರವರ್ತೀತ್ಯಭಾಷತ ॥ ೩೮೩ ॥**

ಆ ಅತಿಮುಕ್ತಮುನಿಯು ಭಿಕ್ಷೆಗೋಸ್ಕರ ಪುನಃ ದೇವಕಿಯ ಮನೆಯನ್ನು ಪ್ರವೇಶಿಸಿದನು. ದೇವಕಿಯೂ ವಸುದೇವನೂ ಎದ್ದು ಶಾಸ್ತ್ರೋಕ್ತವಾದ ವಿಧಿಯಿಂದ ಆ ಮುನಿಯನ್ನು ಕರೆದುಕೊಂಡು ಬಂದು ಭಿಕ್ಷೆಯಾದನಂತರ "ಇಲ್ಲಿ ನಮಗೆ ದೀಕ್ಷೆಯಾಗುವುದೋ ?" ಎಂದು ನೆಪದಿಂದ ಕೇಳಿದರು. ಆ ಮುನಿಯೂ ಅವರ ಮನೋಗತವನ್ನು ತಿಳಿದು "ನೀವುಗಳು ಏಳು ಪುತ್ರರನ್ನು ಪಡೆಯುವಿರಿ. ಅವರಲ್ಲಿ ಆರು ಮಂದಿಗಳು ಪರಸ್ಥಲಗಳಲ್ಲಿ ಬೆಳೆದು ಪರಮಗತಿ-ಮುಕ್ತಿಯನ್ನು ಪಡೆಯುವರು. ಏಳನೆಯವನು ಚಕ್ರವರ್ತಿಯಾಗಿ ಸಮಸ್ತಪೃಥ್ವಿಯನ್ನು ತನ್ನ ಛತ್ರಚ್ಛಾಯೆಯಿಂದ ಬಹುಕಾಲದವರೆಗೆ ಶಾಂತಗೊಳಿಸಿ ಕಾಪಾಡುವನು" ಎಂದು ಹೇಳಿದನು.

**ದೇವಕೀ ಚ ಮುದಾ ಪಶ್ಚಾತ್ತ್ರಿಷ್ಕೃತ್ವಾಪ್ರವತೀ ಯಮಾನ್ ।**
**ಚರಮಾಂಗಾನಿಮಾನ್ ಜ್ಞಾತವತಾ ಶಕ್ರೇಣ ಚೋದಿತಃ ॥ ೩೮೪ ॥**

**ದಿವಿಜೋ ನೈಗಮರ್ಷಾಖ್ಯೋ ಭದ್ರಿಲಾಖ್ಯಪುರೇಲಕಾ- ।**
**ವಣಿಕ್ಸುತಾಯಾ ನಿಕ್ಷಿಪ್ಯ ಪುರಸ್ತಾತ್ತತ್ಸುತಾನ್ ಮೃತಾನ್ ॥ ೩೮೫ ॥**

**ತದಾ ತದೈವ ಸಂಭೂಯ ಗೃಹೀತ್ವಾ ತ್ರಿರ್ಮಿತಾನ್ಯಮಾನ್ ।**
**ತಾನ್ ಪುರಸ್ತಾನ್ನಿಚಿಕ್ಷೇಪ ದೇವಕ್ಯಾ ಗೂಢಕೃತ್ಯವಿತ್ ॥ ೩೮೬ ॥**

ಬಳಿಕ ದೇವಕಿಯು ಸಂತೋಷದಿಂದ ಮೂರುಸಲ ಅವಳಿಮಕ್ಕಳನ್ನು ಪಡೆದಳು. ಈ ಮಕ್ಕಳು ಚರಮಶರೀರಿಗಳೆಂದು ತಿಳಿದ ದೇವೇಂದ್ರನಿಂದ ಪ್ರೇರಿತನೂ ಗುಪ್ತಕಾರ್ಯವನ್ನು ತಿಳಿದವನೂ ಆದ ನೈಗಮರ್ಷನೆಂಬ ದೇವನು ಭದ್ರಿಲವೆಂಬ ನಗರದಲ್ಲಿ ಅಲಕೆಯೆಂಬ ವೈಶ್ಯಪುತ್ರಿಯ ಮುಂದಿರಿಸಿ ಆಕೆಯ ಆಗಾಗಲೇ ಹುಟ್ಟಿ ಸತ್ತ ಮೂರುಜತೆ ಅವಳಿ ಮಕ್ಕಳನ್ನು ತೆಗೆದುಕೊಂಡು ಬಂದು ಅವುಗಳನ್ನು ದೇವಕಿಯ ಮುಂದಿರಿಸಿದನು.

**ಯಮಾನ್ ಸೋಪಿ ಗತಪ್ರಾಣಾನ್ ಕ್ರಮಾತ್ಕಂಸಃ ಸಮೀಕ್ಷ್ಯ ತಾನ್ ।**
**ಕಿಮೇಭಿರ್ಮೇ ಗತಪ್ರಾಣೈರಭೂನ್ಮುನಿರಸತ್ಯವಾಕ್ ॥ ೩೮೭ ॥**

**ಇತಿ ಮತ್ವಾಪಿ ಸಾಶಂಕಃ ಶಿಲಾಪಟ್ಟೇ ನ್ಯಪಾತಯತ್ ।**
**ಪಶ್ಚಾತ್ಸಾ ಸಪ್ತಮೇ ಮಾಸ ಏವ ಸ್ವಸ್ಯ ನಿಕೇತನೇ ॥ ೩೮೮ ॥**

**ನಿರ್ನಾಮಕಮಲಬ್ಧೋಕ್ತಂ ಮಹಾಶುಕ್ರಾಚ್ಚ್ಯುತಂ ಸುತಮ್ ।**
**ಕಂಸಾನವಗಮೇನೈವ ನಂದಗೋಪಗೃಹೇ ಸುಖಮ್ ॥ ೩೮೯ ॥**

**ಬಾಲಕಂ ವರ್ಧಯಿಷ್ಯಾವ ಇತಿ ನೀತಿವಿಶಾರದೌ ।**
**ಪಿತಾ ಭ್ರಾತಾ ಚ ತದ್ದೇವಕೀಂ ವಿಜ್ಞಾಪ್ಯ ತತೋ ಬಲಃ ॥ ೩೯೦ ॥**

**ತಮುದ್ದಧ್ರೇ ಪಿತಾ ಚಾಸ್ಯ ದಧಾರಾತಪವಾರಣಮ್ ।**
**ಜ್ವಲನ್ನಿಶಾತಶೃಂಗಾಗ್ರವಿಲಸನ್ಮಣಿದೀಪಿಕಾ- ॥ ೩೯೧ ॥**

**ನಿರಸ್ತತಿಮಿರಾಟೋಪೋ ವೃಷಭೋಭೂತ್ತದಾಗ್ರತಃ ।**
**ತಥಾ ವಿಕೃತಿಮಾಪನ್ನಾ ತತ್ಪುಣ್ಯಾತ್ಪುರದೇವತಾ ॥ ೩೯೨ ॥**

ಕ್ರಮದಿಂದ ಆ ಕಂಸನೂ ಪ್ರಾಣವಿಲ್ಲದ ಆ ಅವಳಿ ಮಕ್ಕಳನ್ನು ಚೆನ್ನಾಗಿ ನೋಡಿ "ಪ್ರಾಣವಿಲ್ಲದ ಈ ಮಕ್ಕಳಿಂದ ನನಗೇನಾಗುವುದು ? ಮುನಿಯು ಅಸತ್ಯವುಳ್ಳವನಾದನು" ಎಂದು ತಿಳಿದರೂ ಸಂದೇಹವುಳ್ಳವನಾಗಿ ಚಪ್ಪಟೆಯಾದ ಕಲ್ಲಿನಲ್ಲಿ ಅವುಗಳನ್ನು ಕೆಡವಿಸಿದನು. ತರುವಾಯ ಆ ದೇವಕಿಯು ಏಳನೆಯ ತಿಂಗಳಲ್ಲೇ ತನ್ನ ಮನೆಯಲ್ಲಿ ಮಹಾಸ್ವರ್ಗದಿಂದ ಚ್ಯುತನಾದ ಆ ನಿರ್ನಾಮಕನನ್ನು ಪುತ್ರನನ್ನಾಗಿ ಪಡೆದಳು. "ಕಂಸನಿಗೆ ಗೊತ್ತಾಗದ ರೀತಿಯಿಂದಲೇ ನಂದಗೋಪನ ಮನೆಯಲ್ಲಿ ಈ ಬಾಲಕನನ್ನು ಸುಖವಾಗಿ ಬೆಳೆಯಿಸುವೆವು" ಎಂದು ನೀತಿನಿಪುಣರಾದ ತಂದೆಯೂ ಒಡಹುಟ್ಟಿದವನೂ(ವಸುದೇವ ಬಲಭದ್ರರು) ಆ ವಿಷಯವನ್ನು ದೇವಕಿಗೆ ವಿಜ್ಞಾಪಿಸಿ ಬಳಿಕ ಬಲಭದ್ರನು ರಾತ್ರಿಯಲ್ಲಿ ಆ ಮಗುವನ್ನೆತ್ತಿಕೊಂಡನು. ತಂದೆಯು ಇವನಿಗೆ ಕೊಡೆಯನ್ನು ಹಿಡಿದನು. ಪ್ರಕಾಶಿಸುತ್ತಿರುವ ಹರಿತವಾದ ಕೊಂಬುಗಳ ತುದಿಗಳಲ್ಲಿ ಪ್ರಕಾಶಿಸುವ ರತ್ನದೀಪಿಕೆಯಿಂದ ಕತ್ತಲೆಯನ್ನು ಹೋಗಲಾಡಿಸಿರುವ ಒಂದು ಎತ್ತು ಅವರುಗಳ ಮುಂದಾಯಿತು. ಆ ಮಗುವಿನ ಪುಣ್ಯದಿಂದ ಪುರದೇವತೆಯು ಹಾಗೆ ವೃಷಭವಿಕಾರವನ್ನು ಹೊಂದಿತು.

**ಸದ್ಯಸ್ತದಾಸ್ಯ ಬಾಲಸ್ಯ ಚರಣಸ್ಪರ್ಶಸಂಗಮಾತ್ ।**
**ಉದ್ಘಾಟಿತಕವಾಟಂ ತದ್ಬಭೂವ ಪುರಗೋಪುರಮ್ ॥ ೩೯೩ ॥**

ಆಗ ಈ ಬಾಲಕನ ಪಾದಸ್ಪರ್ಶಸಂಬಂಧದಿಂದ ಆ ಪುರದ ಗೋಪುರವು ತತ್ಕ್ಷಣದಲ್ಲಿ ಬಾಗಿಲನ್ನು ತೆರೆದುದಾಯಿತು.

**ಉಗ್ರಸೇನಸ್ತದಾಲೋಕ್ಯ ಬಂಧನಸ್ಥಃ ಸಮಬ್ರವೀತ್ ।**
**ಕವಾಟೋದ್ಘಾಟನಂ ಕೋತ್ರ ಕರೋತೀತ್ಯತಿಸಂಭ್ರಮಾತ್ ॥ ೩೯೪ ॥**

ಬಂಧನದಲ್ಲಿರುವ ಉಗ್ರಸೇನನು ಅದನ್ನು ನೋಡಿ "ಇಲ್ಲಿ ಬಾಗಿಲನ್ನು ಯಾವನು ತೆರೆಯುತ್ತಾನೆ ?" ಎಂದು ಬಹುಸಂಭ್ರಮದಿಂದ ಹೇಳಿದನು.

**ತದಾಕರ್ಣ್ಯೈಷ ಬಂಧಾತ್ತ್ವಾಮಚಿರಾನ್ಮೋಚಯಿಷ್ಯತಿ ।**
**ತೂಷ್ಣೀಮುಪವಿಶೇತ್ಯುಕ್ತೋ ಬಲೇನ ಮಧುರಾಧಿಪಃ ॥ ೩೯೫ ॥**

**ತಥಾಸ್ತ್ವಿತಿ ತಮಾಶೀರ್ಭಿಃ ಪ್ರತೋಷಾದಭ್ಯನಂದಯತ್ ।**
**ತೌ ಚ ತಸ್ಮಾದ್ವಿನಿರ್ಗತ್ಯ ಯಮುನಾಂ ಪ್ರಾಪತುರ್ನಿಶಿ ॥ ೩೯೬ ॥**

ಆ ಮಾತನ್ನು ಕೇಳಿ "ಇವನು ನಿನ್ನನ್ನು ಶೀಘ್ರವಾಗಿ ಬಂಧನದಿಂದ ಬಿಡಿಸುವನು. ಸುಮ್ಮನೆ ಕುಳಿತಿರು" ಎಂದು ಬಲಭದ್ರನಿಂದ ಹೇಳಲ್ಪಟ್ಟ ಮಧುರಾಪುರಾಧಿಪತಿ-ಉಗ್ರಸೇನನು ಬಹುಸಂತೋಷದಿಂದ "ಹಾಗೆಯೇ ಆಗಲಿ" ಎಂದು ಅವನನ್ನು ಆಶೀರ್ವಾದಗಳಿಂದ ಸಮೃದ್ಧಿಗೊಳಿಸಿದನು-ಹರಸಿದನು. ಆ ವಸುದೇವ ಬಲಭದ್ರರೂ ರಾತ್ರಿಯಲ್ಲಿ ಅಲ್ಲಿಂದ ಹೊರಟು ಯಮುನಾನದಿಯನ್ನು ತಲುಪಿದರು.

ಭಾವಿಚಕ್ರಿಪ್ರಭಾವೇನ ದತ್ತಮಾರ್ಗಾ ದ್ವಿಧಾಭವತ್ ।
ಸಾ ಸವರ್ಣಾಶ್ರಿತಃ ಕೋ ವಾ ನಾರ್ದ್ರಾತ್ಮಾ ಬಂಧುತಾಂ ವ್ರಜೇತ್ ॥

ಆ ನದಿಯು ಮುಂದಿನ ಚಕ್ರವರ್ತಿಯ ಪ್ರಭಾವದಿಂದ ದಾರಿಯನ್ನು ಕೊಟ್ಟುದುದಾಗಿ ಎರಡು ಭಾಗವಾಯಿತು. ಸಮಾನವಾದ ವರ್ಣವನ್ನು ಹೊಂದಿರುವವನು ಯಾವನು ತಾನೆ ದ್ರವಿಸಿದ ಆತ್ಮನುಳ್ಳವನಾಗಿ (ದಯಾರ್ದ್ರಹೃದಯನಾಗಿ) ಬಂಧುತ್ವವನ್ನು ಹೊಂದುವುದಿಲ್ಲ? (ಆ ಬಾಲಕನ ಮೈಬಣ್ಣವೂ ಯಮುನಾ ನದಿಯ ಬಣ್ಣವೂ ಕಪ್ಪು).

ಸವಿಸ್ಮಯೌ ವಿಲಂಘ್ಯೈನಾಂ ಗಚ್ಛಂತೌ ನಂದಗೋಪತಿಮ್ ।
ಉದ್ಧೃತ್ಯ ಬಾಲಿಕಾಂ ಯತ್ನೇನಾಗಚ್ಛಂತಮದರ್ಶತಾಮ್ ॥ ೩೯೮ ॥

ವಸುದೇವ ಬಲಭದ್ರರು ಆಶ್ಚರ್ಯಸಹಿತರಾಗಿ ಈ ಯಮುನಾನದಿಯನ್ನು ದಾಟಿ ಹೋಗುವವರಾಗಿ ಅಲ್ಲಿ ಯತ್ನದಿಂದ ಬಾಲಿಕೆಯನ್ನೆತ್ತಿಕೊಂಡು ಬರುತ್ತಿರುವ ನಂದಗೋಪತಿಯನ್ನು ಕಂಡರು.

ದೃಷ್ಟ್ವಾ ತಾಭ್ಯಾಂ ಕುತೋ ಭದ್ರ ರಾತ್ರಾವಾಗಮನಂ ತವ ।
ನಿಃಸಖಸ್ಯೇತಿ ಸಂಪೃಷ್ಟಃ ಸ ಪ್ರಣತ್ಯಾಭ್ಯಭಾಷತ ॥ ೩೯೯ ॥

ಮತ್ಪ್ರಿಯಾ ಪುತ್ರಲಾಭಾರ್ಥಂ ಭವತೋಃ ಪರಿಚಾರಿಕಾ ।
ಗಂಧಾದಿಭಿಃ ಸಮಭ್ಯರ್ಚ್ಯ ಶ್ರದ್ಧಾನಾದ್ಭೂತದೇವತಾಃ ॥ ೪೦೦ ॥

ಆಶಾಸ್ಯ ಸ್ತ್ರೀತ್ವವದ್ರಾತ್ರಾವದ್ಯಾಪತ್ಯಮವಾಪ್ಯ ಸಾ ।
ಸಶೋಕಾ ದೀಯತಾಮೇತತ್ತಾಭ್ಯ ಏವೇತಿ ಮಾಬ್ರವೀತ್ ॥ ೪೦೧ ॥

ತದರ್ಪಯಿತುಮಾಯಾಸೋ ಮಮಾಯಂ ಸ್ವಾಮಿನಾವಿತಿ ।
ತದ್ವಚಃ ಸಮ್ಯಗಾಕರ್ಣ್ಯ ಸಿದ್ಧಮಸ್ಮತ್ಪ್ರಯೋಜನಮ್ ॥ ೪೦೨ ॥

ಇತಿ ಸಂತುಷ್ಯ ತತ್ಸರ್ವಮವಬೋಧ್ಯ ಪ್ರವೃತ್ತಕಮ್ ।
ತದಪತ್ಯಂ ಸಮಾದಾಯ ದತ್ವಾ ತಸ್ಮೈ ಸ್ವಮರ್ಭಕಮ್ ॥ ೪೦೩ ॥

ಭಾವಿಚಕ್ರಧರಂ ವಿದ್ಧಿ ಬಾಲಮಿತ್ಯಭಿಧಾಯ ಚ ।
ಅನನ್ಯವಿದಿತೌ ಗೂಢಂ ತೌ ತದಾವಿಶತಾಂ ಪುರಮ್ ॥ ೪೦೪ ॥

ಅವನನ್ನು ನೋಡಿ "ಅಯ್ಯಾ! ರಾತ್ರಿಯಲ್ಲಿ ಸ್ನೇಹಿತನಿಲ್ಲದ–ಒಂಟಿಯಾಗಿರುವ ನಿನ್ನ ಆಗಮನವು ಯಾವ ಕಾರಣದಿಂದ?" ಎಂದು ಆ ವಸುದೇವ ಬಲಭದ್ರರಿಂದ ಕೇಳಲ್ಪಟ್ಟ ಆ ನಂದಗೋಪನು ನಮಸ್ಕಾರದೊಡನೆ "ಪ್ರಭುಗಳಿರಾ, ತಮ್ಮಗಳ ಸೇವಕಿಯಾದ ನನ್ನ ಪ್ರಿಯೆಯು ಪುತ್ರಲಾಭಕ್ಕೋಸ್ಕರ ನಂಬಿಕೆಯಿಂದ ಭೂತ ದೇವತೆಗಳನ್ನು ಗಂಧಾದಿಗಳಿಂದ ಪೂಜಿಸಿ ಆಸೆಪಟ್ಟು ಆಕೆಯು ಈ ದಿವಸ ರಾತ್ರಿಯಲ್ಲಿ ಹೆಣ್ಣುಮಗುವನ್ನು ಪಡೆದು ಶೋಕವುಳ್ಳವಳಾಗಿ 'ಈ ಮಗುವು ಆ ದೇವತೆಗಳಿಗೇ ಕೊಡಲ್ಪಡಲಿ' ಎಂದು ನನ್ನನ್ನು ಕುರಿತು ಹೇಳಿದಳು. ಅದನ್ನು ಅರ್ಪಿಸುವುದಕ್ಕೋಸ್ಕರ ನನ್ನದೀ ಆಯಾಸ" ಎಂದು ಮಾತನಾಡಿದನು. ಆ ಮಾತನ್ನು ಚೆನ್ನಾಗಿ ಕೇಳಿ "ನಮ್ಮ ಪ್ರಯೋಜನವು ಸಿದ್ಧವಾಯಿತು" ಎಂದು ಸಂತೋಷಪಟ್ಟು ಆ ಸಮಾಚಾರವನ್ನೆಲ್ಲ ಅವನಿಗೆ ತಿಳಿಸಿ ಅವನ ಹೆಣ್ಣುಮಗುವನ್ನು ತೆಗೆದುಕೊಂಡು ತಮ್ಮ ಮಗುವನ್ನು ಅವನಿಗೆ ಕೊಟ್ಟು "ಈ ಬಾಲಕನು ಮುಂದೆ ಚಕ್ರವರ್ತಿಯಾಗುವವನೆಂದು ತಿಳಿ" ಎಂದು ಹೇಳಿಯೂ ಬೇರೆಯಾರಿಂದಲೂ ತಿಳಿಯಲ್ಪಡದವರಾದ ಆ ವಸುದೇವ ಬಲರಾಮರು ಆಗ ಗುಪ್ತವಾಗಿ ನಗರವನ್ನು ಪ್ರವೇಶಿಸಿದರು.

ನಂದಗೋಪೋಪಿ ತಂ ಬಾಲಮಾದಾಯ ಗೃಹಮಾಗತಃ ।
ತುಭ್ಯಂ ಸುತಂ ಮಹಾಪುಣ್ಯಂ ಪ್ರಸನ್ನಾ ದೇವತಾ ದದುಃ ॥ ೪೦೫ ॥

ಇತ್ಯುದೀರ್ಯಾರ್ಪಯಾಮಾಸ ಸ್ವಪ್ರಿಯಾಯೈ ಶ್ರಿಯಃ ಪತಿಮ್ ।
ಕಂಸೋಪಿ ದೇವಕೀ ಸ್ತ್ರೀತ್ವವದಪತ್ಯಮಸೂಯತ ॥ ೪೦೬ ॥

ಇತಿ ಶ್ರುತ್ವಾ ಸಮಾಗತ್ಯ ತಾಂ ವ್ಯಧಾದ್ಭುಗ್ನನಾಸಿಕಾಮ್ ।
ಭೂಮಿಗೇಹೇ ಪ್ರಯತ್ನೇನ ಮಾತ್ರಾ ಸಾಧ್ವಭಿವರ್ಧಿತಾ ॥ ೪೦೭ ॥

ಸಾ ಸುವ್ರತಾರ್ಯಿಕಾಭ್ಯರ್ಣೇ ಶೋಕಾತ್ಸ್ವವಿಕೃತಾಕೃತೇಃ ।
ಗೃಹೀತದೀಕ್ಷಾ ವಿಂಧ್ಯಾದ್ರೌ ಸ್ಥಾನಯೋಗಮುಪಾಶ್ರಿತಾ ॥ ೪೦೮ ॥

ನಂದಗೋಪನೂ ಆ ಮಗುವನ್ನು ತೆಗೆದುಕೊಂಡು ಮನೆಗೆ ಬಂದವನಾಗಿ "ಪ್ರಸನ್ನರಾದ ದೇವತೆಗಳು ನಿನಗೆ ಮಹಾಪುಣ್ಯವುಳ್ಳ ಈ ಪುತ್ರನನ್ನು ಕೊಟ್ಟರು" ಎಂದು ಹೇಳಿ ಲಕ್ಷ್ಮೀಪತಿಯಾದ ಆ ಮಗುವನ್ನು ತನ್ನ ಪತ್ನಿಗೆ ಕೊಟ್ಟನು. ಇತ್ತ ಕಂಸನೂ "ದೇವಕಿಯು ಹೆಣ್ಣುಮಗುವನ್ನು ಹಡೆದಳು" ಎಂದು ಕೇಳಿ ಬಂದು ಆ ಮಗುವಿನ ಮೂಗನ್ನು ಒತ್ತಿ ಅದನ್ನು ಹಳ್ಳವಾದ ಮೂಗುಳ್ಳುದನ್ನಾಗಿ ಮಾಡಿದನು. ಭೂಗೃಹದಲ್ಲಿ ತಾಯಿಯಿಂದ ಪ್ರಯತ್ನದಿಂದ ಬೆಳೆಸಲ್ಪಟ್ಟ ಆಕೆಯು ತನ್ನ ವಿಕಾರವಾದ ಆಕೃತಿಯ ಶೋಕದಿಂದ ಸುವ್ರತೆಯೆಂಬ ಆರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡವಳಾಗಿ ವಿಂಧ್ಯಪರ್ವತದಲ್ಲಿ ಸ್ಥಾನಯೋಗವನ್ನು ಹೊಂದಿದಳು. ನಿಂತುಕೊಂಡು ಧ್ಯಾನಾರೂಢಳಾದಳೆಂದು ಭಾವವು.

ದೇವತೇತಿ ಸಮಭ್ಯರ್ಚ್ಯ ಗತೇಷು ವನವಾಸಿಷು ।
ವ್ಯಾಘ್ರೇಣ ಭಕ್ಷಿತಾ ಮಂಕ್ಷು ಸ್ವರ್ಗಲೋಕಮುಪಾಗಮತ್ ॥ ೪೦೯ ॥

ಆಕೆಯನ್ನು ದೇವತೆಯೆಂದು ತಿಳಿದು ವನವಾಸಿಗಳು ಚೆನ್ನಾಗಿ ಪೂಜಿಸಿ ಹೊರಟು ಹೋಗುತ್ತಿರಲು ಹುಲಿಯಿಂದ ಭಕ್ಷಿಸಲ್ಪಟ್ಟವಳಾಗಿ ಶೀಘ್ರವಾಗಿ ಸ್ವರ್ಗಲೋಕವನ್ನು ಪಡೆದಳು.

ಅಪರಸ್ಮಿನ್ದಿನೇ ವ್ಯಾಧೈರ್ದೃಷ್ಟ್ವಾ ಹಸ್ತಾಂಗುಲಿತ್ರಯಮ್ ।
ತಸ್ಯಾಃ ಕ್ಷೀರಾಂಗರಾಗಾದಿಪೂಜಿತಂ ದೇಶವಾಸಿನಃ ॥ ೪೧೦ ॥

ಮೂಢಾತ್ಮಾನಃ ಸ್ವಯಂ ಚೈತದಾರ್ಯಾಸೌ ವಿಂಧ್ಯವಾಸಿನೀ ।
ದೇವತೇತಿ ಸಮಭ್ಯರ್ಚ್ಯ ತದಾರಭ್ಯಾಪ್ರಮಾಣಯನ್ ॥ ೪೧೧ ॥

ಮರುದಿವಸದಲ್ಲಿ ವ್ಯಾಧರು ನೋಡಿ ಆಕೆಯ ಮೂರು ಬೆರಲ್ಗಳನ್ನು ಹಾಲು ಅಂಗರಾಗ ಮೊದಲಾದುವುಗಳಿಂದ ಪೂಜಿಸಿದರು. ಮೂರ್ಖಸ್ವಭಾವದವರಾದ ದೇಶವಾಸಿಗಳು ತಾವೂ "ಪೂಜ್ಯಳಾದ ಈಕೆಯು ವಿಂಧ್ಯವಾಸಿನಿಯಾದ ದೇವತೆ" ಎಂದು ಈ ಅಂಗುಲಿತ್ರಯವನ್ನು (ಮೂರು ಬೆರಲ್ಗಳನ್ನು) ಪೂಜಿಸಿ ಅಂದಿನಿಂದ ನಂಬಿದರು.

ಅಥಾಕಸ್ಮಾತ್ಪುರೇ ತಸ್ಮಿನ್ಮಹೋತ್ಪಾತವಿಜೃಂಭಣೇ ।
ವರುಣಾಖ್ಯಂ ನಿಮಿತ್ತಜ್ಞಂ ದ್ರಾಕ್ಕಂಸಃ ಪರಿಪೃಷ್ಟವಾನ್ ॥ ೪೧೨ ॥

ಕಿಮೇತೇಷಾಂ ಫಲಂ ಬ್ರೂಹಿ ಯಥಾರ್ಥಮಿತಿ ಸೋಬ್ರವೀತ್ ।
ತವ ಶತ್ರುಃ ಸಮುತ್ಪನ್ನೋ ಮಹಾನಿತಿ ನಿಮಿತ್ತವಿತ್ ॥ ೪೧೩ ॥

ಬಳಿಕ ಆ ಮಧುರಾನಗರದಲ್ಲಿ ಅಕಸ್ಮಾತ್ತಾಗಿ ಮಹೋತ್ಪಾತಗಳ ವಿಜೃಂಭಣೆಯುಂಟಾಗುತ್ತಿರಲು ಕಂಸನು "ಇವುಗಳ ನಿಜವಾದ ಫಲವೇನು? ಶೀಘ್ರವಾಗಿ ಹೇಳು" ಎಂದು ವರುಣನೆಂಬ ನಿಮಿತ್ತಜ್ಞಾನಿಯನ್ನು ಕೇಳಿದನು. ನಿಮಿತ್ತವನ್ನು ತಿಳಿದಿರುವ ಆ ವರುಣನು "ನಿನಗೆ ಮಹಾಶತ್ರುವು ಹುಟ್ಟಿದ್ದಾನೆ" ಎಂದು ಹೇಳಿದನು.

ತದಾಕರ್ಣ್ಯ ಮಹೀನಾಥಂ ಚಿಂತಯಂತಂ ಚಿರಂತನಾಃ ।
ದೇವತಾಸ್ತಮವೋಚಂಸ್ತಾಃ ಕಿಂ ಕರ್ತವ್ಯಮಿತಿ ಶ್ರಿತಾಃ ॥ ೪೧೪ ॥

ಆ ಮಾತನ್ನು ಕೇಳಿ ಚಿಂತಿಸುತ್ತಿರುವ ಆ ಕಂಸಭೂಪತಿಯನ್ನು ಹೊಂದಿದ ಪುರಾತನರಾದ (ಪೂರ್ವಜನ್ಮದ) ಆ ದೇವತೆಗಳು "ಏನು ಕಾರ್ಯವಿದೆ?" ಎಂದು ಹೇಳಿದುವು.

**ಶತ್ರುಂ ಮಮ ಸಮುತ್ಪನ್ನಮನ್ವಿಷ್ಯಾಹತ ಪಾಪಿನಮ್ ।**
**ಇತ್ಯಸೌ ಪ್ರೇಷಯಾಮಾಸ ತಾಃ ಸಪ್ತಾಪಿ ತಥಾಸ್ತ್ವಿತಿ ॥ ೪೧೫ ॥**

**ಅಗಮನ್ಪೂತನಾ ತಾಸು ವಾಸುದೇವಂ ವಿಭಂಗತಃ ।**
**ವಿಜ್ಞಾಯಾದಾಯ ತನ್ಮಾತೃರೂಪಂ ಹಂತುಮುಪಾಗತಾ ॥ ೪೧೬ ॥**

**ವಿಷಸ್ತನಪಯಃಪಾಯನೋಪಾಯೇನ ಖಲಾಗ್ರಣೀಃ ।**
**ತದ್ಬಾಲಪಾಲನೋದ್ಯುಕ್ತಾ ಕಾಪ್ಯನ್ಯಾಗತ್ಯ ದೇವತಾ ॥ ೪೧೭ ॥**

**ಸ್ತನಯೋರ್ಬಲವತ್ಪೀಡಾಂ ತತ್ಪಾನಸಮಯೇ ವ್ಯಧಾತ್ ।**
**ಪ್ರಪಲಾಯತ ಸಾಕ್ರುಶ್ಯ ತತ್ಪೀಡಾಂ ಸೋಢುಮಕ್ಷಮಾ ॥ ೪೧೮ ॥**

"ನನಗೆ ವೈರಿಯಾಗಿ ಜನಿಸಿರುವ ಪಾಪಿಯನ್ನು ಹುಡುಕಿ ಕೊಂದುಬಿಡಿ" ಎಂದು ಈ ಕಂಸನು ಕಳುಹಿಸಿದನು. ಆ ಏಳು ದೇವತೆಗಳೂ "ಹಾಗೆಯೇ ಆಗಲಿ" ಎಂದು ಹೊರಟು ಹೋದುವು. ಅವುಗಳಲ್ಲಿ ಪೂತನೆಯೆಂಬ ದುಷ್ಟಾಗ್ರೇಸರವಾದ ದೇವತೆಯು ವಿಭಂಗಜ್ಞಾನದಿಂದ ವಾಸುದೇವನನ್ನು ತಿಳಿದು ಅವನ ತಾಯಿಯ ರೂಪವನ್ನು ಸ್ವೀಕರಿಸಿ ವಿಷಮಯವಾದ ಕುಚಗಳ ಹಾಲನ್ನು ಕುಡಿಸುವಿಕೆಯ ಉಪಾಯದಿಂದ ಕೊಲ್ಲುವುದಕ್ಕೆ ಬಂದುದಾಗಿ ಆ ಬಾಲಕನ ರಕ್ಷಣೆಯಲ್ಲಿ ಉದ್ಯುಕ್ತವಾಯಿತು. ಯಾವುದೋ ಬೇರೊಂದು ಅವನ ಪುಣ್ಯದೇವತೆಯು ಬಂದು ಆ ಸ್ತನ್ಯವನ್ನು ಕುಡಿಯುವ ಸಮಯದಲ್ಲಿ ಕುಚಗಳಿಗೆ ಬಲವಾದ ಬಾಧೆಯನ್ನು ಮಾಡಿತು. ಆ ಪೂತನಾದೇವತೆಯು ಆ ಬಾಧೆಯನ್ನು ಸಹಿಸುವುದಕ್ಕೆ ಅಸಮರ್ಥವಾಗಿ ಅರಚಿಕೊಂಡು ಓಡಿಹೋಯಿತು.

**ಶಕಟಾಕಾರಮಾದಾಯ ಪುನರನ್ಯಾಪಿ ದೇವತಾ ।**
**ಬಾಲಸ್ಯೋಪರಿ ಧಾವಂತೀ ಪಾದಾಭ್ಯಾಂ ತೇನ ಸಾ ಹತಾ ॥ ೪೧೯ ॥**

ಪುನಃ ಮತ್ತೊಂದು ದೇವತೆಯು ಗಾಡಿಯ ಆಕಾರವನ್ನು ಮಾಡಿಕೊಂಡು ಬಾಲಕನ ಮೇಲೆ ಓಡಿತು. ಅದನ್ನು ಅವನು ಕಾಲುಗಳಿಂದ ಒದ್ದು ನಾಶ ಮಾಡಿದನು.

**ಅನ್ಯೇದ್ಯುರ್ನಂದಗೋಪ್ಯಸ್ಯ ಬಧ್ವಾ ಕಟ್ಯಾಮುಲೂಖಲಮ್ ।**
**ಅಗಚ್ಛಜ್ಜಲಮಾನೇತುಮನ್ವಗಚ್ಛತ್ತಥಾಪ್ಯಸೌ ॥ ೪೨೦ ॥**

ಮರುದಿವಸ ನಂದಗೋಪಿಯು ಈ ಬಾಲಕನ ಸೊಂಟದಲ್ಲಿ ಒರಳು ಕಲ್ಲನ್ನು ಕಟ್ಟಿ ನೀರನ್ನು ತರುವುದಕ್ಕೋಸ್ಕರ ಹೋದಳು. ಹಾಗಾದರೂ ಈ ಬಾಲಕನು ಆಕೆಯನ್ನು ಹಿಂಬಾಲಿಸಿ ಹೋದನು.

**ಪರಿಪೀಡಯಿತುಂ ಬಾಲಂ ತದಾ ಕಕುಭಪಾದಪೌ ।**
**ಭೂತ್ವಾ ಶ್ರಿತೌ ಸರೀಭೇದೌ ಸ ಮೂಲಾದುದಪಾಟಯತ್ ॥ ೪೨೧ ॥**

ಆಗ ಬಾಲಕನನ್ನು ಪೀಡಿಸುವುದಕ್ಕೋಸ್ಕರ ಮತ್ತಿಮರಗಳಾಗಿ ಹೊಂದಿದ ಎರಡು ದೇವತಾಭೇದಗಳನ್ನು ಅವನು ಬುಡದಿಂದ ಸೀಳಿದನು.

**ತಚ್ಚಂಕ್ರಮಣವೇಲಾಯಾಂ ತಾಲಸ್ಯಾಕೃತಿಮಾಸ್ಥಿತಾ ।**
**ಏಕಾ ಫಲಾನಿ ತನ್ಮೂರ್ಧ್ನಿ ಪ್ರಪಾತಯಿತುಮುದ್ಯತಾ ॥ ೪೨೨ ॥**

ಒಂದು ದೇವತೆಯು ಅವನ ಸಂಚಾರಕಾಲದಲ್ಲಿ ತಾಳೆಯ ಮರದ ಆಕೃತಿಯನ್ನು ಹೊಂದಿದುದಾಗಿ ಅವನ ತಲೆಯ ಮೇಲೆ ಫಲಗಳನ್ನು ಕೆಡಹುವುದಕ್ಕೆ ತೊಡಗಿತು.

**ರಾಸಭೀರೂಪಮಾಪಾದ್ಯ ತಂ ದಷ್ಟುಮುಪರಾಗತಾ ।**
**ಚರಣೇ ರಾಸಭೀಂ ವಿಷ್ಣುರ್ಗೃಹೀತ್ವಾಹನ್ಸ ತಂ ದ್ರುಮಮ್ ॥ ೪೨೩ ॥**

ಮತ್ತೊಂದು ದೇವತೆಯು ಹೆಣ್ಣು ಕತ್ತೆಯ ರೂಪವನ್ನು ಮಾಡಿಕೊಂಡು ಅವನನ್ನು ಕಚ್ಚುವುದಕ್ಕೆ ಬಂದಿತು. ಆ ವಿಷ್ಣುವು ಕತ್ತೆಯನ್ನು ಅದರ ಕಾಲಿನಲ್ಲಿ ಹಿಡಿದು ಆ ತಾಳೆಯ ಮರವನ್ನು ಹೊಡೆದನು.

**ಅನ್ಯೇದ್ಯುರ್ದೇವತಾನ್ಯಾಪಿ ವಿಕೃತ್ಯ ತುರಗಾಕೃತಿಮ್ ।**
**ತಂ ಹಂತುಂ ಪ್ರಸ್ಥಿತಾ ತಸ್ಯ ಸೋದಲದ್ವದನಂ ರುಷಾ ॥ ೪೨೪ ॥**

ಮತ್ತೊಂದು ದಿವಸ ಇನ್ನೊಂದು ದೇವತೆಯು ಕುದುರೆಯ ಆಕೃತಿಯನ್ನು ಮಾಡಿಕೊಂಡು ಅವನನ್ನು ಕೊಲ್ಲುವುದಕ್ಕೆ ಹೊರಟಿತು. ಅವನು ಕೋಪದಿಂದ ಅದರ ಬಾಯನ್ನು ಸೀಳಿದನು.

**ಆಹಂತುಮಸಮರ್ಥಾಃ ಸ್ಮ ಇತ್ಯುಕ್ತ್ವಾ ಸಪ್ತ ದೇವತಾಃ ।**
**ಕಂಸಾಭ್ಯಾಸಂ ಸಮಾಗತ್ಯ ವಿಲೀನಾ ಇವ ವಿದ್ಯುತಃ ॥ ೪೨೫ ॥**

ಆ ಏಳು ದೇವತೆಗಳು ಕಂಸನ ಸಮೀಪಕ್ಕೆ ಬಂದು "ನಾವು ಆ ಬಾಲಕನನ್ನು ಕೊಲ್ಲುವುದಕ್ಕೆ ಅಸಮರ್ಥರಾಗಿದ್ದೇವೆ" ಎಂದು ಹೇಳಿ ಮಿಂಚುಗಳಂತೆ ಲಯವಾದುವು.

**ಶಕ್ತಯೋ ದೇವತಾನಾಂ ಚ ನಿಸ್ಸಾರಾಃ ಪುಣ್ಯವಜ್ಜನೇ ।**
**ಆಯುಧಾನಾಮಿವೇಂದ್ರಾಸ್ತ್ರೇ ಪರಸ್ಮಿನ್ ದೃಷ್ಟಕರ್ಮಣಾಮ್ ॥ ೪೨೬ ॥**

ಪರವಸ್ತುವಿನಲ್ಲಿ ಕಾರ್ಯವನ್ನು ತೋರಿಸಿರುವ ಆಯುಧಗಳ ಶಕ್ತಿಗಳು ಇಂದ್ರಾಯುಧದಲ್ಲಿ ನಿಸ್ಸಾರಗಳಾಗುವಂತೆ, ದೇವತೆಗಳ ಶಕ್ತಿಗಳೂ ಪುಣ್ಯವುಳ್ಳ ಜನರಲ್ಲಿ ನಿಸ್ಸಾರವಾಗುತ್ತವೆ.

**ಅರಿಷ್ಟಾಖ್ಯಸುರೋನ್ಯೇದ್ಯುರ್ವೀಕ್ಷಿತುಂ ತತ್ಪರಾಕ್ರಮಮ್ ।**
**ಆಯಾತ್ಕೃಷ್ಣವೃಷಾಕಾರಸ್ತದ್ಗ್ರೀವಾಭಂಜನೋದ್ಯತಮ್ ॥ ೪೨೭ ॥**

**ತಸ್ಯ ಮಾತಾಭಿತರ್ಜ್ಯೈನಂ ವಿರಮಾಫಲಚೇಷ್ಟಿತಾತ್ ।**
**ಪುತ್ರ್ಯೈವಮಾದಿನಃ ಕ್ಲೇಶಾಂತರಸಂಪಾದಿಕಾದಿತಿ ॥ ೪೨೮ ॥**

**ಭೂಯೋ ನಿವಾರಯಾಮಾಸ ತಥಾಪ್ಯೇತನ್ಮದೋದ್ಧುರಃ ।**
**ಸೋಽನ್ವತಿಷ್ಠನ್ನಿವಾರ್ಯಂತೇ ನಾಪದಾನೇ ಮಹೌಜಸಃ ॥ ೪೨೯ ॥**

ಮತ್ತೊಂದು ದಿವಸ ಅರಿಷ್ಟನೆಂಬ ದೇವನು ಆ ಬಾಲಕನ ಪರಾಕ್ರಮವನ್ನು ನೋಡುವುದಕ್ಕೋಸ್ಕರ ಕಪ್ಪು ಬಣ್ಣದ ಎತ್ತಿನ ಆಕಾರವುಳ್ಳವನಾಗಿ ಬಂದನು. ಅದರ ಕೊರಳನ್ನು ಮುರಿಯುವುದರಲ್ಲಿ ಉದ್ಯುಕ್ತನಾದ ಈ ಬಾಲಕನನ್ನು ಅವನ ತಾಯಿಯು ಗದರಿಸಿ "ಮಗನೆ ! ಮತ್ತೊಂದು ದುಃಖವನ್ನುಂಟುಮಾಡುವ ಇದೇ ಮೊದಲಾದ ನಿಷ್ಪ್ರಯೋಜನಕಾರ್ಯದಿಂದ ವಿರಾಮವನ್ನು ಹೊಂದು" ಎಂದು ಪುನಃ ತಡೆದಳು. ಹಾಗಾದರೂ ಮದದಿಂದ ಕೊಬ್ಬಿದವನಾದ ಅವನು ಈ ಕಾರ್ಯವನ್ನು ಮಾಡಿದನು. ಮಹಾತೇಜಸ್ವಿಗಳು ಮೊದಲು ನಡೆದ ತಮ್ಮ ಕಾರ್ಯದಲ್ಲಿ ನಿವಾರಿಸಲ್ಪಡುವುದಿಲ್ಲ.

**ಶ್ರುತ್ವಾ ತತ್ಪೌರುಷಂ ಖ್ಯಾತಂ ಜನಜಲ್ಪೈಃ ಸಮುತ್ಸುಕೌ ।**
**ಗೋಮುಖೀನಾಮಧೇಯೋಪವಾಸವ್ಯಾಜಮುಪಾಗತೌ ॥ ೪೩೦ ॥**

**ದೇವಕೀ ವಸುದೇವಶ್ಚ ವಿಭೂತ್ಯಾ ಸಹ ಸೀರಿಣಾ ।**
**ವ್ರಜಂ ಗೋಧಾವನಂ ಯಾತೌ ಪರಿವಾರಪರಿಷ್ಕೃತೌ ॥ ೪೩೧ ॥**

ಆ ಬಾಲಕನ ಪ್ರಖ್ಯಾತವಾದ ಪೌರುಷವನ್ನು ಜನರ ಮಾತುಗಳಿಂದ ಕೇಳಿ ಕುತೂಹಲವುಳ್ಳವರೂ ಗೋಮುಖಿಯೆಂಬ ಹೆಸರುಳ್ಳ ಉಪವಾಸದ ನೆಪವನ್ನು ಹೊಂದಿದವರೂ ಪರಿವಾರಜನರಿಂದ ಸುತ್ತಲ್ಪಟ್ಟವರೂ ಆದ ದೇವಕಿಯೂ ವಸುದೇವನೂ ಬಲರಾಮನೊಡನೆ ವೈಭವದಿಂದ ಗೋಧಾವನವೆಂಬ ಗೋಸ್ಥಾನಕ್ಕೆ ಹೋದರು.

**ತತ್ರ ಕೃಷ್ಣಂ ಸಮಾಲಂಬ್ಯ ಸ್ಥಿತವಂತಂ ಮಹಾಬಲಮ್ ।**
**ದರ್ಪಿಣೋ ವೃಷಭೇಂದ್ರಸ್ಯ ಗ್ರೀವಾಂ ಭಂಕ್ತ್ವಾ ತದೈವ ತೌ ॥ ೪೩೨ ॥**

ವಿಲೋಕ್ಯ ಗಂಧಮಾಲ್ಯಾದಿಮಾನನಾನಂತರಂ ಪುನಃ ।
ಪ್ರೀತ್ಯಾ ಭೂಷಯತಃ ಸ್ಮಾತಃ ಕುರ್ವತ್ಯಾ ದ್ರಾಕ್ ಪ್ರದಕ್ಷಿಣಮ್ ॥

ದೇವಕ್ಯಾಃ ಸ್ತನಯೋಃ ಶಾತಕುಂಭಕುಂಭಾಭಯೋಃ ಪಯಃ ।
ನಿರ್ಗಲನ್ನ್ಯಪತನ್ಮೂರ್ಧ್ನಿ ಕೃಷ್ಣಸ್ಯೇವಾಭಿಷೇಚನಮ್ ॥ ೪೩೪ ॥

ಸೀರಪಾಣಿಸ್ತದನ್ವೀಕ್ಷ್ಯ ಮಂತ್ರಭೇದಭಯಾದ್ದ್ರುತಮ್ ।
ಉಪವಾಸಪರಿಶ್ರಾಂತಾ ಮೂರ್ಛಿತೇತಿ ವದನ್ಸುಧೀಃ ॥ ೪೩೫ ॥

ಕುಂಭಪೂರ್ಣಪಯೋಭಿಸ್ತಾಮಭ್ಯಷಿಂಚತ್ಸಮಂತತಃ ।
ತತೋ ವ್ರಜಾಧಿಪಾದೀನಾಮಪಿ ತದ್ಯೋಗ್ಯಪೂಜನಮ್ ॥ ೪೩೬ ॥

ಕೃತ್ವಾ ಕೃಷ್ಣಂ ಚ ಗೋಪಾಲಕುಮಾರೈರ್ಜಾತಸಂಮದೌ ।
ಭೋಜಯಿತ್ವಾ ಸ್ವಯಂ ಚಾತ್ರ ಭುಕ್ತ್ವಾ ಪುರಮವಿಕ್ಷತಾಮ್ ॥ ೪೩೭ ॥

ಅಲ್ಲಿ ಅವರು ಕೊಬ್ಬಿದ ಎತ್ತಿನ ಕೊರಳನ್ನು ಆಶ್ರಯಿಸಿ ಆಗ ತಾನೆ ಮುರಿದು ನಿಂತಿರುವವನೂ ಮಹಾಬಲವುಳ್ಳವನೂ ಆದ ಕೃಷ್ಣನನ್ನು ನೋಡಿ ಗಂಧ ಪುಷ್ಪ ಮಾಲೆ ಮೊದಲಾದುವುಗಳಿಂದ ಅವನನ್ನು ಸನ್ಮಾನಿಸಿದ ಬಳಿಕ ಪುನಃ ಅವನನ್ನು ಪ್ರೀತಿಯಿಂದ ಅಲಂಕರಿಸಿದರು. ತರುವಾಯ ಶೀಘ್ರವಾಗಿ ಪ್ರದಕ್ಷಿಣೆಯನ್ನು ಮಾಡುತ್ತಿರುವ ದೇವಕಿಯ ಬಂಗಾರದ ಕಲಶಗಳಿಗೆ ಸಮಾನಗಳಾದ ಕುಚಗಳಲ್ಲಿ ಸುರಿದ ಹಾಲು ಕೃಷ್ಣನ ತಲೆಯ ಮೇಲೆ ಅಭಿಷೇಕದಂತೆ ಬಿದ್ದಿತು. ಪ್ರಾಜ್ಞನಾದ ಬಲರಾಮನು ಅದನ್ನು ನೋಡಿ ಗುಟ್ಟು ರಟ್ಟಾಗುವುದೆಂಬ ಭಯದಿಂದ ಶೀಘ್ರವಾಗಿ ''ಉಪವಾಸದಿಂದ ಬಳಲಿದವಳಾಗಿ ಮೂರ್ಛಿತಳಾದಳು'' ಎಂದು ಹೇಳುವವನಾಗಿ ಕುಂಭಗಳಲ್ಲಿ ತುಂಬಿರುವ ನೀರುಗಳಿಂದ ಸುತ್ತಲೂ ಆಕೆಗೆ ಅಭಿಷೇಕವನ್ನು ಮಾಡಿದನು. ಬಳಿಕ ಗೋಸ್ಥಾನದ ಗೋಸಮೂಹದ ಅಧಿಪತಿಗಳಿಗೂ ಅವರಿಗೆ ಯೋಗ್ಯವಾದ ಸನ್ಮಾನವನ್ನು ಮಾಡಿ ಗೋಪಾಲಕರ ಕುಮಾರರೊಡನೆ ಕೃಷ್ಣನನ್ನೂ ಸನ್ಮಾನಿಸಿ ಹರ್ಷೋತ್ಪತ್ತಿಯುಳ್ಳವರಾಗಿ ಅವರೆಲ್ಲರಿಗೂ ಭೋಜನಮಾಡಿಸಿ ತಾವೂ ಅಲ್ಲಿ ಭೋಜನವನ್ನು ಮಾಡಿ ಬಳಿಕ ನಗರವನ್ನು ಪ್ರವೇಶಿಸಿದರು.

ಸ ಕದಾಚಿನ್ಮಹಾವರ್ಷಾಪಾತೇ ಗೋವರ್ಧನಾಹ್ವಯಮ್ ।
ಹರಿಃ ಪರ್ವತಮುದ್ಧೃತ್ಯ ಚಕಾರಾವರಣಂ ಗವಾಮ್ ॥ ೪೩೮ ॥

ಒಂದಾನೊಂದು ಕಾಲದಲ್ಲಿ ಆ ಹರಿಯು ಹೆಚ್ಚು ಮಳೆಯು ಬಿದ್ದ ಹೊತ್ತಿನಲ್ಲಿ ಗೋವರ್ಧನವೆಂಬ ಪರ್ವತವನ್ನೆತ್ತಿ ಗೋವುಗಳಿಗೆ ಆವರಣವನ್ನು ಮಾಡಿದನು. ಬೆಟ್ಟವನ್ನೆತ್ತಿ ಅದರಡಿಯಲ್ಲಿ ಗೋವುಗಳನ್ನು ಕಾಪಾಡಿದನೆಂದು ಭಾವವು.

ತೇನ ಜ್ಯೋತ್ಸ್ನೇವ ತತ್ಕೀರ್ತಿರ್ವ್ಯಾಪ್ನೋತಿ ಸ್ಮಾಖಿಲಂ ಜಗತ್ ।
ಅರಾತಿವದನಾಂಭೋಜರಾಜಿಸಂಕೋಚಕಾರಿಣೀ ॥ ೪೩೯ ॥

ಅದರಿಂದ ಅವನ ಕೀರ್ತಿಯು, ಬೆಳದಿಂಗಳಿನಂತೆ, ಶತ್ರುಗಳ ಮುಖಗಳೆಂಬ ಕಮಲಗಳ ಸಮೂಹವನ್ನು ಮುಚ್ಚಿಸುವುದಾಗಿ ಸಕಲಜಗತ್ತನ್ನು ವ್ಯಾಪಿಸಿತು.

ತತ್ಪುರಸ್ಥಾಪನಾಹೇತುಭೂತಜೈನಾಲಯಾಂತಿಕೇ ।
ಶಕ್ರದಿಗ್ದೇವತಾಗಾರೇ ಹರೇಃ ಪುಣ್ಯಾತಿರೇಕತಃ ॥ ೪೪೦ ॥

ಸರ್ಪಶಯ್ಯಾ ಧನುಃ ಶಂಖೋ ರತ್ನತ್ರಿತಯಮುದ್ಯಯೌ ।
ದೇವತಾರಕ್ಷಿತಂ ಲಕ್ಷ್ಮೀಂ ಭಾವಿನೀಮಸ್ಯ ಸೂಚಯತ್ ॥ ೪೪೧ ॥

ಆ ಮಧುರಾನಗರದ ಸ್ಥಾಪನೆಗೆ ಕಾರಣಭೂತವಾದ ಜೈನಮಂದಿರದ ಸಮೀಪದಲ್ಲಿ ಪೂರ್ವದಿಕ್ಕಿನ ದೇವತಾನಿಲಯದಲ್ಲಿ ಹರಿಯ ಪುಣ್ಯಾತಿಶಯದಿಂದ ದೇವತಾರಕ್ಷಿತವೂ ಇವನಿಗೆ ಮುಂದೆ ಪ್ರಾಪ್ತವಾಗುವ ಲಕ್ಷ್ಮಿ–ಸಾಮ್ರಾಜ್ಯಸಂಪತ್ತಿಯನ್ನು ಸೂಚಿಸುವುದೂ ಆದ ಸರ್ಪಶಯ್ಯೆ ಧನುಸ್ಸು ಶಂಖಗಳೆಂಬೀ ರತ್ನತ್ರಯವು ಉದ್ಭವಿಸಿತು.

ಸಭಯಸ್ತಾನಿ ದೃಷ್ಟ್ವಾಖ್ಯದ್ವರುಣಂ ಮಧುರಾಪತಿಃ ।
ಪ್ರಾದುರ್ಭವನಮೇತೇಷಾಂ ಕಿಂ ಫಲಂ ಕಥಯೇತಿ ತಮ್ ॥ ೪೪೨ ॥

ಅವುಗಳನ್ನು ನೋಡಿ ಭಯಸಹಿತನಾದ ಮಧುರಾಧಿಪತಿ–ಕಂಸನು ನೈಮಿತ್ತಿಕನಾದ ಆ ವರುಣನನ್ನು ಕುರಿತು ''ಇವುಗಳ ಪ್ರಾದುರ್ಭಾವವು ಯಾವ ಫಲವುಳ್ಳುದು ? ಹೇಳು'' ಎಂದನು.

ರಾಜನ್ನೇತಾನಿ ಶಾಸ್ತ್ರೋಕ್ತವಿಧಿನಾ ಸಾಧಯೇತ್ಸ ಯಃ ।
ರಾಜ್ಯಂ ಚಕ್ರೇಣ ಸಂಲಕ್ಷ್ಯಮಾಪ್ಸ್ಯತೀತ್ಯಭ್ಯಧಾದಸೌ ॥ ೪೪೩ ॥

ಈ ವರಣನು ''ರಾಜನೇ ! ಯಾವನು ಇವುಗಳನ್ನು ಶಾಸ್ತ್ರೋಕ್ತವಿಧಿಯಿಂದ ಸಾಧಿಸುವನೋ ಅವನು ಚಕ್ರದಿಂದ ಕೂಡಿರುವ ರಾಜ್ಯವನ್ನು ಹೊಂದುವನು'' ಎಂದು ಹೇಳಿದನು.

ಕಂಸಸ್ತದ್ವಚನಂ ಶ್ರುತ್ವಾ ಸ ಸಿಸಾಧಯಿಷುಃ ಸ್ವಯಮ್ ।
ತಾನ್ಯಶಕ್ತೋ ಮನಾಕ್ ಖಿನ್ನೋ ವಿರತಃ ಸಾಧನೋದ್ಯಮಾತ್॥ ೪೪೪ ॥

ಆ ಮಾತನ್ನು ಕೇಳಿ ಆ ಕಂಸನು ತಾನು ಅವುಗಳನ್ನು ಸಾಧಿಸಬೇಕೆಂಬ ಇಚ್ಛೆಯುಳ್ಳವನಾಗಿಯೂ ಅಸಮರ್ಥನಾಗಿಯೂ ಖಿನ್ನನಾಗಿಯೂ ಸಾಧನ ಪ್ರಯತ್ನದಿಂದ ವಿರಾಮವನ್ನು ಹೊಂದಿದನು.

ಅಧಿರುಹ್ಯಾಹಿಜಾಂ ಶಯ್ಯಾಂ ಶಂಖಮೇಕಕರೇಣ ಯಃ ।
ಪೂರಯತ್ಯಪಿ ಯಶ್ಚಾಪಂ ಚಾರೋಪಯತಿ ಹೇಲಯಾ ॥ ೪೪೫ ॥

ಪರೇಣ ತಸ್ಮೈ ಭೂಭರ್ತಾ ಸ್ವಸುತಾಂ ದಾಸ್ಯತೀತಿ ತಮ್ ।
ಪರಿಜ್ಞಾತುಂ ಸ ಸಾಶಂಕೋ ಘೋಷಣಾಂ ಪುರ್ಯಕಾರಯತ್ ॥

ಸಂದೇಹವುಳ್ಳವನಾದ ಆ ಕಂಸನು ''ಯಾವನು ಸರ್ಪಶಯ್ಯೆಯನ್ನೇರಿ ಒಂದು ಕೈಯಿಂದ ಶಂಖವನ್ನು ಹಿಡಿದು ಊದುತ್ತಾನೋ ಯಾವನು ಮತ್ತೊಂದು ಕೈಯಿಂದ ಬಿಲ್ಲನ್ನು ಲೀಲೆಯಿಂದ ಆರೋಪಿಸುತ್ತಾನೋ ಅವನಿಗೆ ದೊರೆಯು ತನ್ನ ಪುತ್ರಿಯನ್ನು ಕೊಡುವನು'' ಎಂದು ಆ ವೀರನನ್ನು ತಿಳಿಯುವುದಕ್ಕೋಸ್ಕರ ಪಟ್ಟಣದಲ್ಲಿ ಘೋಷಣೆಯನ್ನು ಮಾಡಿಸಿದನು.

ತದ್ವಾರ್ತಾಶ್ರವಣಾದ್ವಿಶ್ವಮಹೀಶಾಃ ಸಹಸಾಗಮನ್ ।
ತಥಾ ರಾಜಗೃಹಾತ್ಕಂಸಮೈಥುನೋ ಭಾನುಸನ್ನಿಭಮ್ ॥ ೪೪೭ ॥

ಸುಭಾನುರ್ಭಾನುನಾಮಾನಂ ಸ್ವಸೂನುಂ ಸರ್ವಸಂಪದಾ ।
ಸಮಾದಾಯ ಸಮಾಗಚ್ಛನ್ನಿವೇಷ್ಟುಮಭಿಲಾಷವಾನ್ ॥ ೪೪೮ ॥

ಗೋಧಾವನಮಹಾನಾಗನಿವಾಸಸರಸಸ್ತಟೇ ।
ವಿನಾ ಕೃಷ್ಣೇನ ವಾರ್ಯಸ್ಮಾದಾನೇತುಂ ಸರಸಃ ಪರೈಃ ॥ ೪೪೯ ॥

ಅಶಕ್ಯಮಿತಿ ಗೋಪಾಲಕುಮಾರೋಕ್ತ್ಯಾ ಮಹೀಪತಿಃ ।
ತಮಾಹೂಯ ಬಲಂ ತತ್ರ ಯಥಾಸ್ಥಾನಂ ನ್ಯವೀವಿಶತ್ ॥ ೪೫೦ ॥

ಆ ಸಮಾಚಾರವನ್ನು ಕೇಳಿದುದರಿಂದ ಎಲ್ಲಾ ರಾಜರುಗಳು ಶೀಘ್ರವಾಗಿ ಮಧುರೆಗೆ ಬಂದರು. ಹಾಗೆಯೇ ರಾಜಗೃಹನಗರದಿಂದ ಕಂಸನ ಮೈದುನನಾದ ಸುಭಾನುಮಹೀಪತಿಯು ಸೂರ್ಯನಿಗೆ ಸಮಾನನಾದ ಭಾನುವೆಂಬ ತನ್ನ ಪುತ್ರನನ್ನು ಸರ್ವಸಂಪತ್ತಿಯೊಡನೆ ಕರೆದುಕೊಂಡು ಬರುವವನಾಗಿಯೂ ಗೋಧಾವನದಲ್ಲಿ ಮಹಾಸರ್ಪಗಳ ನಿವಾಸವಾದ ಸರೋವರದ ತೀರದಲ್ಲಿ ಬೀಡು ಬಿಡುವುದಕ್ಕೆ ಅಭಿಲಾಷೆಯುಳ್ಳವನಾಗಿಯೂ ''ಕೃಷ್ಣನಿಂದ ಹೊರತು ಈ ಸರೋವರದಿಂದ ನೀರನ್ನು ತರುವುದಕ್ಕೆ ಬೇರೆಯವರಿಂದ ಶಕ್ಯವಿಲ್ಲ'' ಎಂದು ಗೋಪಾಲಕುಮಾರರ ಮಾತಿನಿಂದ ತಿಳಿದು ಬಲಶಾಲಿಯಾದ ಆ ಕೃಷ್ಣನನ್ನು ಕರೆಯಿಸಿ ಅಲ್ಲಿ ಅವನ ಸಹಾಯದಿಂದ ಉಚಿತಸ್ಥಾನದಲ್ಲಿ ಪ್ರವೇಶಿಸಿ–ವಾಸಮಾಡಿದನು.

**ಕ್ವ ಗಮ್ಯತೇ ತ್ವಯಾ ರಾಜನ್ನಿತಿ ಕೃಷ್ಣೇನ ಭಾಷಿತಃ ।**
**ಸುಭಾನುರ್ಮಧುರಾಯಾನಪ್ರಯೋಜನಮಬೂಬುಧತ್ ॥ ೪೫೧ ॥**

"ರಾಜನೇ ನೀನು ಎಲ್ಲಿಗೆ ಹೋಗುತ್ತಿ ?" ಎಂದು ಕೃಷ್ಣನಿಂದ ಮಾತನಾಡಿಸಲ್ಪಟ್ಟ ಸುಭಾನುವು ಮಧುರೆಗೆ ಹೋಗುವ ಪ್ರಯೋಜನವನ್ನು ಹೇಳಿದನು.

**ಶ್ರುತ್ವೈತತ್ಕರ್ಮ ಕಿಂ ಕರ್ತುಂ ಸ್ಯಾತ್ತದಸ್ಮದ್ವಿಧೈರಪಿ ।**
**ಇತಿ ಕೃಷ್ಣಪರಿಪ್ರಶ್ನೇ ವೀಕ್ಷ್ಯ ಪುಣ್ಯಾಧಿಕಃ ಶಿಶುಃ ॥ ೪೫೨ ॥**

**ನ ಕೇವಲೋಯಮಿತ್ಯೇಹಿ ಶಕ್ತಶ್ಚೇತ್ತಸ್ಯ ಕರ್ಮಣಃ ।**
**ಇತ್ಯಾದಾಯ ಸ್ವಪುತ್ರಂ ವಾ ಸುಭಾನುಸ್ತಂ ಪುರೀಮಗಾತ್ ॥ ೪೫೩ ॥**

ಅದನ್ನು ಕೇಳಿ "ಆ ಈ ಕಾರ್ಯವನ್ನು ಮಾಡುವುದಕ್ಕೆ ನಮ್ಮಂಥವರಿಂದಲೂ ಆಗಬಹುದೋ ?" ಎಂದು ಕೃಷ್ಣನ ಪ್ರಶ್ನೆಯುಂಟಾಗುತ್ತಿರಲು "ಇವನು ಸಾಮಾನ್ಯನಲ್ಲ-ಅಧಿಕಪುಣ್ಯವುಳ್ಳ ಶಿಶುವಾಗಿದ್ದಾನೆ" ಎಂದು ನೋಡಿ "ಆ ಕಾರ್ಯಕ್ಕೆ ಸಮರ್ಥನಾಗಿರುವೆಯಾದರೆ ಬಾ" ಎಂದು ಸುಭಾನುವು ತನ್ನ ಪುತ್ರನನ್ನೋಪಾದಿಯಲ್ಲಿ ಆ ಕೃಷ್ಣನನ್ನೂ ಕರೆದುಕೊಂಡು ಮಧುರಾನಗರಕ್ಕೆ ಹೋದನು.

**ಕಂಸಂ ಯಥಾರ್ಹಮಾಲೋಕ್ಯ ತತ್ಕರ್ಮಘಟಕಾನ್ಬಹೂನ್ ।**
**ಭಗ್ನಮಾನಾಂಶ್ಚ ಸಂವೀಕ್ಷ್ಯ ಕೃತ್ವಾ ಭಾನುಂ ಸಮೀಪಗಮ್ ॥ ೪೫೪ ॥**

**ಯುಗಪತ್ತ್ರಿತಯಂ ಕರ್ಮ ಸಮಾಪ್ತಿಮನಯದ್ಧರಿಃ ।**
**ತತಃ ಸುಭಾನುನಾದಿಷ್ಟೋ ದಿಷ್ಟ್ಯಾ ಕೃಷ್ಣೋಗಮದ್ವ್ರಜಮ್ ॥ ೪೫೫ ॥**

ಕಂಸನನ್ನು ಯೋಗ್ಯತಾನುಸಾರವಾಗಿ ನೋಡಿ ಆ ಸಾಹಸಕಾರ್ಯಗಳನ್ನು ಮಾಡಿ ಭಗ್ನರಾಗುತ್ತಿರುವ ಅನೇಕರನ್ನು ನೋಡಿ ಹರಿಯು ಭಾನುವನ್ನು ಸಮೀಪದಲ್ಲಿರಿಸಿಕೊಂಡು ಏಕಕಾಲದಲ್ಲಿ ಆ ಮೂರು ಕಾರ್ಯಗಳನ್ನೂ ಪೂರ್ತಿಮಾಡಿದನು. ಬಳಿಕ ಸುಭಾನುವಿನಿಂದ ಆಜ್ಞಾಪಿಸಲ್ಪಟ್ಟವನಾಗಿ ಕೃಷ್ಣನು ಸಂತೋಷದಿಂದ ತನ್ನ ಸ್ಥಾನಕ್ಕೆ-ಗೋಧಾವನಕ್ಕೆ ಹೊರಟುಹೋದನು.

**ತತ್ಕೃತಂ ಭಾನುನೈವೇತಿ ಕೈಶ್ಚಿತ್ಕಂಸೋ ನಿಬೋಧಿತಃ ।**
**ಕೈಶ್ಚಿನ್ನ ಭಾನುನಾನ್ಯೇನ ಕುಮಾರೇಣೇತಿ ರಕ್ಷಕೈಃ ॥ ೪೫೬ ॥**

ಆ ಸಾಹಸ ಕಾರ್ಯವನ್ನು ಭಾನುವೇ ಮಾಡಿದನೆಂದು ಕೆಲವರು ಕಂಸನಿಗೆ ತಿಳಿಸಿದರು. "ಭಾನುವು ಆ ಕಾರ್ಯವನ್ನು ಮಾಡಲಿಲ್ಲ. ಬೇರೊಬ್ಬ ಕುಮಾರನು ಮಾಡಿದನು" ಎಂದು ಕೆಲವರು ಕಾವಲುಗಾರರು ತಿಳಿಸಿದರು.

**ತಚ್ಛ್ರುತ್ವಾನ್ವಿಷ್ಯತಾಂ ಸೋನ್ಯಸ್ತಸ್ಮೈ ಕನ್ಯಾ ಪ್ರದೀಯತೇ ।**
**ಸ ಕಸ್ಯ ಕಿಂ ಕುಲಂ ಕಸ್ಮಿನ್ನಿತಿ ರಾಜಾಬ್ರವೀದಿದಮ್ ॥ ೪೫೭ ॥**

ಆ ಮಾತನ್ನು ಕೇಳಿ ರಾಜನು "ಅವನನ್ನು ಹುಡುಕಿರಿ. ಅವನಿಗೆ ಕನ್ಯೆಯು ಕೊಡಲ್ಪಡುತ್ತಾಳೆ. ಅವನು ಯಾವನ ಮಗ ?ಅವನ ಕುಲವಾವುದು ?ಯಾವ ದೇಶದಲ್ಲಿರುವವನು ?" ಎಂಬೀ ಮಾತನ್ನು ಹೇಳಿದನು.

**ಅವಧಾರ್ಯ ಸ್ವಪುತ್ರೇಣ ಸಮ್ಯಕ್ಕರ್ಮ ಸಮರ್ಥಿತಮ್ ।**
**ಗೋಮಂಡಲೇನ ಭೀತ್ವಾಮಾ ನಂದಗೋಪಃ ಪಲಾಯತ ॥ ೪೫೮ ॥**

ನಂದಗೋಪನು ತನ್ನ ಪುತ್ರ-ಕೃಷ್ಣನು ಈ ಕಾರ್ಯವನ್ನು ಚೆನ್ನಾಗಿ ಮಾಡಿದನೆಂದು ನಿಶ್ಚಯಿಸಿ ಹೆದರಿ ಗೋವುಗಳ ಸಮೂಹದೊಡನೆ ಓಡಿಹೋದನು.

**ಶೈಲಸ್ತಂಭಂ ಸಮುದ್ಧರ್ತುಂ ತತ್ರ ಸರ್ವೇನ್ಯದಾಗತಾಃ ।**
**ನಾಶಕ್ನುವನ್ ಸಮೇತ್ಯೈತೇ ಕೃಷ್ಣೇನೈವ ಸಮುದ್ಧೃತಃ ॥ ೪೫೯ ॥**

ಮತ್ತೊಂದು ಕಾಲದಲ್ಲಿ ಎಲ್ಲರೂ ಸೇರಿ ಕಲ್ಲಿನ ಕಂಬವನ್ನು ಎತ್ತುವುದಕ್ಕೋಸ್ಕರ ಅಲ್ಲಿ ಬಂದರು. ಇವರು ಅದನ್ನು ಎತ್ತಲು ಅಸಮರ್ಥರಾದರು. ಕೃಷ್ಣನೇ ಅದನ್ನು ಎತ್ತಿದನು.

**ಪ್ರಹೃಷ್ಯ ಸಾಹಸಾತ್ತಸ್ಮಾದ್ವಿಸ್ಮಿತಾ ಜನಸಂಹತಿಃ ।**
**ಪರಾರ್ಧ್ಯವಸ್ತ್ರಭೂಷಾದಿದಾನೇನ ತಮಪೂಜಯತ್ ॥ ೪೬೦ ॥**

ಆ ಸಾಹಸದಿಂದ ವಿಸ್ಮಿತವಾದ ಜನಸಮೂಹವು ಸಂತೋಷಪಟ್ಟು ಉತ್ತಮವಾದ ವಸ್ತ್ರಾಭರಣಾದಿಗಳ ದಾನದಿಂದ ಕೃಷ್ಣನನ್ನು ಸನ್ಮಾನಿಸಿತು.

**ಪಿತಾಮುಷ್ಯ ಪ್ರಭಾವೇನ ಕುತಶ್ಚಿದಪಿ ಮೇ ಭಯಮ್ ।**
**ನೇತಿ ಪ್ರಾಕ್ತನಮೇವಾಸೌ ಸ್ಥಾನಂ ವ್ರಜಮವಾಪಯತ್ ॥ ೪೬೧ ॥**

ತಂದೆಯು " ಇವನ ಪ್ರಭಾವದಿಂದ ನನಗೆ ಯಾವುದರಿಂದಲೂ ಭಯವಿಲ್ಲ" ಎಂದು ಇವನು ತನ್ನ ಗೋಸಮೂಹವನ್ನು ಮೊದಲನೆಯ ಸ್ಥಾನವನ್ನೇ ಹೊಂದಿಸಿದನು. ಗೋಧಾವನಕ್ಕೇ ತಂದನೆಂದು ಭಾವವು.

**ನಂದಗೋಪಸ್ಯ ಪುತ್ರೋಸೌ ಯಸ್ತ್ರಿತಯಕರ್ಮಕೃತ್ ।**
**ಇತ್ಯನ್ವೇಷ್ಟುಂ ಗತೈಃ ಸಮ್ಯಕ್ ಜ್ಞಾಪಿತೇನಾಪ್ಯನಿಶ್ಚಿತೇಃ ॥ ೪೬೨ ॥**

**ಸಹಸ್ರಪತ್ರಮಂಭೋಜಮನ್ಯದಾಹೀಂದ್ರರಕ್ಷಿತಮ್ ।**
**ಪ್ರಹೀಯತಾಮಿತಿ ಪ್ರೋಕ್ತೋ ರಾಜ್ಞಾ ಜಿಜ್ಞಾಸಯಾ ರಿಪುಮ್॥ ೪೬೩ ॥**

ಆ ಸಾಹಸಿಯನ್ನು ಹುಡುಕುವುದಕ್ಕೆ ಹೋದವರಿಂದ "ಈ ಮೂರು ಕಾರ್ಯಗಳನ್ನು ಮಾಡಿರುವವನು ನಂದಗೋಪನ ಈ ಪುತ್ರನು" ಎಂದು ಚೆನ್ನಾಗಿ ಜ್ಞಾಪಿಸಲ್ಪಟ್ಟವನಾದರೂ ರಾಜನು ಅನಿಶ್ಚಯದಿಂದ (ನಂಬದೆ) ಶತ್ರುವನ್ನು ತಿಳಿಯಬೇಕೆಂಬ ಇಚ್ಛೆಯಿಂದ ಮತ್ತೊಂದು ದಿವಸ "ಸರ್ಪರಾಜನಿಂದ ರಕ್ಷಿತವಾದ ಸಹಸ್ರಪತ್ರಗಳುಳ್ಳ ಕಮಲವನ್ನು ಕಳುಹಿಸಿಕೊಡು" ಎಂದು ನಂದಗೋಪನಿಗೆ ಹೇಳಿದನು.

**ಶ್ರುತ್ವಾ ತದ್ಗೋಪತಿಃ ಶೋಕಾದಾಕುಲಃ ಕಿಲ ಭೂಭುಜಃ ।**
**ಪ್ರಜಾನಾಂ ರಕ್ಷಿತಾರಸ್ತೇ ಕಷ್ಟಮದ್ಯ ಹಿ ಮಾರಕಾಃ ॥ ೪೬೪ ॥**

**ಇತಿ ನಿರ್ವಿದ್ಯ ಯಾಹ್ಯಂಗ ರಾಜಾದಿಷ್ಟಿರ್ಮಮೇದೃಶೀ ।**
**ತ್ವಯೈವಾಂಬುರುಹಾಣ್ಯುಗ್ರಸರ್ಪರಕ್ಷ್ಯಾಣಿ ಭೂಭುಜಃ ॥ ೪೬೫ ॥**

**ನೇಯಾನೀತ್ಯಭ್ರವೀತ್ಕೃಷ್ಣಂ ಸೋಪಿ ಕಿಂ ವಾತ್ರ ದುಷ್ಕರಮ್ ।**
**ನೇಷ್ಯಾಮೀತಿ ಮಹಾನಾಗಸರಃ ಕ್ಷಿಪ್ರತರಂ ಯಯೌ ॥ ೪೬೬ ॥**

ಅದನ್ನು ಕೇಳಿ ಶೋಕದಿಂದ ವ್ಯಾಕುಲನಾದ ಗೋಪತಿ-ನಂದಗೋಪನು "ರಾಜರು ಪ್ರಜೆಗಳ ರಕ್ಷಕರಂತೆ. ಅವರೇ ಇಂದು ಪ್ರಜೆಗಳನ್ನು ಕೊಲ್ಲುವವರಾಗಿದ್ದಾರೆ. ಕಷ್ಟ !" ಎಂದು ವಿಷಾದಗೊಂಡು "ಮಗುವೆ !ಹೋಗು. ನನಗೆ ದೊರೆಯ ಅಪ್ಪಣೆಯು ಈ ಪ್ರಕಾರವಾಗಿದೆ. ಉಗ್ರವಾದ ಸರ್ಪದಿಂದ ರಕ್ಷಿಸಲ್ಪಡತಕ್ಕ ತಾವರೆಗಳು ರಾಜನಿಗೆ ನಿನ್ನಿಂದಲೇ ತರಲ್ಪಡತಕ್ಕುವಾಗಿವೆ" ಎಂದು ಕೃಷ್ಣನಿಗೆ ಹೇಳಿದನು. ಆ ಕೃಷ್ಣನೂ ಆ ಮಾತನ್ನು ಕೇಳಿ "ಯಾವುದು ತಾನೆ ಇಲ್ಲಿ ಮಾಡುವುದಕ್ಕೆ ಕಷ್ಟವಾದುದು ? ತರುವೆನು" ಎಂದು ಮಹಾಸರ್ಪಸರೋವರಕ್ಕೆ ಶೀಘ್ರವಾಗಿ ಹೋದನು.

**ಅವಿಶಚ್ಚಾಪಿ ನಿಃಶಂಕಂ ತದ್ಜ್ಞಾತ್ವಾ ಕೋಪದೀಪಿತಃ ।**
**ಸ್ವನಿಃಶ್ವಾಸಸಮುದ್ಭೂತಜ್ವಲಜ್ಜ್ವಾಲಾಕಣಾನ್ ಕಿರನ್ ॥ ೪೬೭ ॥**

**ಚೂಡಾಮಣಿಪ್ರಭಾಭಾಸಿಸ್ಫುಟಾಟೋಪಭಯಂಕರಃ ।**
**ಚಲಜ್ಜಿಹ್ವಾದ್ವಯಃ ಸ್ಫೂರ್ಜದ್ವೀಕ್ಷಣೇತ್ಯುಗ್ರವೀಕ್ಷಣಃ ॥ ೪೬೮ ॥**

**ಪ್ರತ್ಯುತ್ಥಾಯ ಯಮಾಕಾರೋ ನಿರ್ಗಲೀತುಂ ತಮುದ್ಯತಃ ।**
**ಸೋಪಿ ಮದ್ವಸನಸ್ಯೈಷಾ ಸ್ಫಟಾ ಶುದ್ಧಶಿಲಾಸ್ತ್ವಿತಿ ॥ ೪೬೯ ॥**

**ಪೀತಾಂಬರಂ ಸಮ್ಮುದ್ಧೃತ್ಯ ಜಲಾರ್ದ್ರಂ ಮಧುಸೂದನಃ ।**
**ಸ್ಫಟಾಮಾಸ್ಫಾಲಯಾಮಾಸ ಪಕ್ಷಕೇನೇವ ಪಕ್ಷಿರಾಟ್ ॥ ೪೭೦ ॥**

ನಿಸ್ಸಂದೇಹವಾಗಿ ಸರಸ್ಸಿಗೆ ಪ್ರವೇಶವನ್ನೂ ಮಾಡಿದನು. ಅದನ್ನು ತಿಳಿದು ಕೋಪದಿಂದ ಪ್ರಜ್ವಲಿತವೂ, ತನ್ನ ಉಸಿರಿನಿಂದುಂಟಾದುದೂ ಪ್ರಕಾಶಮಾನವೂ ಆದ ಜ್ವಾಲೆಯ ಕಿಡಿಗಳನ್ನು ಎರಚುವುದೂ, ಚೂಡಾರತ್ನದ ಪ್ರಭೆಯಿಂದ ಪ್ರಕಾಶ ಮಾನವೂ ಸ್ಫುಟವೂ ಆದ ರಭಸದಿಂದ ಭಯಂಕರವೂ, ಚಲಿಸುತ್ತಿರುವ ಎರಡು ನಾಲಗೆಗಳಿಂದ ಪ್ರಕಾಶಮಾನವಾದ ನೋಟವುಳ್ಳುದೂ, ಭಯಂಕರವಾದ ನೋಟ ವುಳ್ಳುದೂ ಯಮನ ಆಕಾರವುಳ್ಳುದೂ ಆದ ಆ ಮಹಾಸರ್ಪವು ಇದಿರಾಗಿ ಎದ್ದು ಕೃಷ್ಣನನ್ನು ನುಂಗುವುದಕ್ಕೋಸ್ಕರ ಉದ್ಯುಕ್ತವಾಯಿತು. ಆ ಮಧುಸೂದನನೂ ''ಈ ಹೆಡೆಯು ನನ್ನ ಬಟ್ಟೆಗೆ ಸಿದ್ಧವಾಗಿರುವ ಶಿಲೆಯಾಗಲಿ'' ಎಂದು ನೀರಿನಿಂದ ನೆನೆದಿರುವ ಪೀತಾಂಬರವನ್ನು ಎತ್ತಿ ಅದರಿಂದ, ಗರುಡನು ರೆಕ್ಕೆಯಿಂದ ಹೊಡೆ ಯುವಂತೆ, ಹೆಡೆಯನ್ನು ಹೊಡೆದನು.

**ವಜ್ರಪಾತಾಯಿತಾತ್ತಸ್ಮಾದ್ವಸ್ತ್ರಾಪಾತಾದ್ವಿಭೀತವಾನ್ ।**
**ಪೂರ್ವಪುಣ್ಯೋದಯಾಚ್ಚಾಸ್ಯ ಫಣೀಂದ್ರೋದೃಶ್ಯತಾಮಗಾತ್ ॥ ೪೭೧ ॥**

ವಜ್ರಪಾತದಂತಾದ ಆ ವಸ್ತ್ರದ ಪತನದಿಂದಲೂ ಈ ಕೃಷ್ಣನ ಪೂರ್ವ ಪುಣ್ಯೋದಯದಿಂದಲೂ ಆ ಫಣಿರಾಜನು ಅದೃಶ್ಯತ್ವವನ್ನು ಹೊಂದಿದನು.

**ಹರಿರ್ಯಥೇಷ್ಟಮಬ್ಜಾನಿ ಸಮಾದಾಯ ನಿಜದ್ವಿಷಃ ।**
**ಸಮೀಪಂ ಪ್ರಾಪಯತ್ತಾನಿ ದೃಷ್ಟ್ವಾರಿಂ ದೃಷ್ಟವಾನಿವ ॥ ೪೭೨ ॥**

**ನಂದಗೋಪಸಮೀಪೇಸ್ಥಾನ್ಮಚ್ಛತ್ರುರಿತಿ ನಿಶ್ಚಯಾತ್ ।**
**ಕದಾಚಿನ್ನಂದಗೋಪಾಲಂ ಮಲ್ಲಯುದ್ಧಂ ನಿರೀಕ್ಷಿತುಮ್ ॥ ೪೭೩ ॥**

**ನಿಜಮಲ್ಲೈಃ ಸಹಾಗಚ್ಛೇದಿತಿ ಸನ್ದಿಶತಿ ಸ್ಮ ಸಃ ।**
**ಸೋಪಿ ಕೃಷ್ಣಾದಿಭಿರ್ಮಲ್ಲೈಃ ಸಹ ಪ್ರಾವಿಕ್ಷದಕ್ಷಯಮ್ ॥ ೪೭೪ ॥**

ಬಳಿಕ ಹರಿಯು ಯಥೇಷ್ಟವಾಗಿ ಕಮಲಗಳನ್ನು ತೆಗೆದುಕೊಂಡು ತನ್ನ ಶತ್ರುವಿನ ಬಳಿಗೆ ಕಳುಹಿಸಿದನು. ಆ ಕಮಲಗಳನ್ನು ನೋಡಿ ತನ್ನ ಶತ್ರುವನ್ನು ನೋಡಿದ ವನಂತಿರುವವನಾದ ಕಂಸನು ''ನಂದಗೋಪನ ಸಮೀಪದಲ್ಲಿ ನನ್ನ ಶತ್ರುವಿದ್ದನು'' ಎಂಬ ನಿಶ್ಚಯದಿಂದ ಒಂದಾನೊಂದು ಕಾಲದಲ್ಲಿ ''ಮಲ್ಲಯುದ್ಧವನ್ನು ನೋಡು ವುದಕ್ಕೋಸ್ಕರ ತನ್ನ ಮಲ್ಲರೊಡನೆ ನಂದಗೋಪನು ಬರಲಿ'' ಎಂದು ಹೇಳಿ ಕಳುಹಿಸಿದನು. ಆ ನಂದಗೋಪನೂ ಕೃಷ್ಣನೇ ಮೊದಲಾದ ಮಲ್ಲರೊಡನೆ ಅಕ್ಷಯ ವಾಗಿರುವಂತೆ ಪ್ರವೇಶಿಸಿದನು.

**ಕಂಚಿನ್ಮತ್ತಗಜಂ ವೀತಬಂಧನಂ ಯಮಸನ್ನಿಭಮ್ ।**
**ಮದಗಂಧಸಮಾಕೃಷ್ಟರುವದ್ಭ್ರಮರಸೇವಿತಮ್ ॥ ೪೭೫ ॥**

**ವಿನಯಚ್ಯುತಭೂಪಾಲಕುಮಾರಂ ವಾ ನಿರಂಕುಶಮ್ ।**
**ರದನಾಘಾತನಿರ್ಭಿನ್ನಸುಧಾಭವನಭಿತ್ತಿಕಮ್ ॥ ೪೭೬ ॥**

**ಆಧಾವಂತಂ ವಿಲೋಕ್ಯಾಸೌ ಪ್ರತೀತ್ಯೋತ್ಪಾಟ್ಯಭೀಷಣಃ ।**
**ರದಮೇಕಂ ಕುಮಾರಸ್ತಂ ತೇನೈವ ಸಮತಾಡಯತ್ ॥ ೪೭೭ ॥**

ಭಯಂಕರನಾದ ಈ ಕೃಷ್ಣಕುಮಾರನು ಕಟ್ಟನ್ನು ಬಿಚ್ಚಿಕೊಂಡಿರುವುದೂ ಯಮನಿಗೆ ಸಮಾನವೂ ಮದಜಲದ ಪರಿಮಳದಿಂದ ಆಕರ್ಷಿಸಲ್ಪಟ್ಟಿರುವುವೂ ಧ್ವನಿ ಮಾಡುತ್ತಿರುವುವೂ ಆದ ದುಂಬಿಗಳಿಂದ ಸೇವಿಸಲ್ಪಡುವುದೂ ವಿನಯವಿಲ್ಲದ ರಾಜ ಕುಮಾರನಂತೆ ನಿರಂಕುಶವೂ ಸುಣ್ಣದಿಂದ ಲೇಪಿಸಲ್ಪಟ್ಟ ಮನೆಯ ಗೋಡೆಯನ್ನು ದಂತಾಘಾತದಿಂದ ಭೇದಿಸಿರುವುದೂ ಓಡಿಬರುತ್ತಿರುವುದೂ ಆದ ಒಂದು ಮದಿಸಿದ ಆನೆಯನ್ನು ನೋಡಿ ಇದಿರುಹೋಗಿ ಅದರ ಒಂದು ಹಲ್ಲನ್ನು ಕಿತ್ತು ಅದರಿಂದಲೇ ಆ ಆನೆಯನ್ನು ಚೆನ್ನಾಗಿ ಹೊಡೆದನು.

**ಸೋಪಿ ಭೀತೋ ಗತೋ ದೂರಂ ತತಸ್ತುಷ್ಟ್ವಾ ಹರಿರ್ಭೃಶಮ್ ।**
**ಜಯೋನೇನ ನಿಮಿತ್ತೇನ ಸ್ಫುಟಂ ವಃ ಪ್ರಕಟೀಕೃತಃ ॥ ೪೭೮ ॥**

**ಇತಿ ಗೋಪಾನ್ ಸಮುತ್ಸಾಹ್ಯ ಪ್ರಾವಿಶತ್ಕಂಸಸಂಸದಮ್ ।**
**ವಸುದೇವಮಹೀಪೋಪಿ ಕಂಸಾಭಿಪ್ರಾಯವಿತ್ತದಾ ॥ ೪೭೯ ॥**

**ಸ್ವಸೈನ್ಯಂ ಸಮುಪಾಯೇನ ಸನ್ನಾಹ್ಯೈಕತ್ರ ತಸ್ಥಿವಾನ್ ।**
**ಸೀರಪಾಣಿಃ ಸಮುತ್ಥಾಯ ಕೃತದೋಃಸ್ಫಾಲನಧ್ವನಿಃ ॥ ೪೮೦ ॥**

**ಕೃಷ್ಣೇನ ಸಹ ರಂಗಂ ವಾ ಸಮಂತಾತ್ಸ ಪರಿಭ್ರಮನ್ ।**
**ಕಂಸಂ ನಾಶಯಿತುಂ ಕಾಲಸ್ತವೇತ್ಯಾಖ್ಯಾಯ ನಿರ್ಗತಃ ॥ ೪೮೧ ॥**

ಆ ಆನೆಯೂ ಹೆದರಿದುದಾಗಿ ದೂರಕ್ಕೆ ಹೋಯಿತು. ಅದರಿಂದ ಹರಿಯು ಬಹಳವಾಗಿ ಸಂತೋಷಪಟ್ಟು ''ಈ ನಿಮಿತ್ತದಿಂದ ನಿಮಗೆ ಜಯವು ವ್ಯಕ್ತವಾಗಿ ಪ್ರಕಟಿಸಲ್ಪಟ್ಟಿತು'' ಎಂದು ಗೋಪಾಲಕರುಗಳನ್ನು ಪ್ರೋತ್ಸಾಹಿಸಿ ಕಂಸನ ಸಭೆಯನ್ನು ಪ್ರವೇಶಿಸಿದನು. ಆಗ ಕಂಸನ ಅಭಿಪ್ರಾಯವನ್ನು ತಿಳಿದವನಾದ ವಸುದೇವ ಮಹೀಪತಿಯೂ ಉಪಾಯದಿಂದ ತನ್ನ ಸೈನ್ಯವನ್ನು ಸಜ್ಜುಗೊಳಿಸಿ ಒಂದು ಕಡೆಯಲ್ಲಿದ್ದನು. ಬಲರಾಮನು ಎದ್ದು ಭುಜಗಳ ಹೊಡೆತದ ಶಬ್ದವನ್ನು ಮಾಡಿದವನಾಗಿ ಕೃಷ್ಣನೊಡನೆ ರಂಗದ ಸುತ್ತಲೂ ತಿರುಗುವವನಂತೆ ''ಕಂಸನನ್ನು ನಾಶಮಾಡುವುದಕ್ಕೆ ನಿನಗಿದೇ ಕಾಲ'' ಎಂದು ಕೃಷ್ಣನಿಗೆ ಗುಟ್ಟಾಗಿ ಹೇಳಿ ಅವನು ಹೊರಟುಹೋದನು.

**ತದಾ ಕಂಸಾಜ್ಞಯಾ ವಿಷ್ಣುವಿಧೇಯಾ ಗೋಪಸೂನವಃ ।**
**ದರ್ಪಿಣೋ ಭುಜಮಾಸ್ಫಾಲ್ಯ ಧೃತಮಲ್ಲಪರಿಚ್ಛದಾಃ ॥ ೪೮೨ ॥**

**ಶ್ರವಣಾಹ್ಲಾದಿವಾದಿತ್ರಚಟುಲಧ್ವನಿಸಂಗತಾಃ ।**
**ಕ್ರಮೋತ್ಕ್ಷೇಪವಿನಿಕ್ಷೇಪಾಃ ಪ್ರೋನ್ನತಾಂಸದ್ವಯೋದ್ಧುರಾಃ ॥ ೪೮೩ ॥**

**ಪರ್ಯಾಯನರ್ತಿತಪ್ರೇಕ್ಷ್ಯಭ್ರೂಭಂಗಾ ಭೀಷಣಾ ರವಾಃ ।**
**ನಿವರ್ತನೈಃ ಸಮಾವರ್ತನೈಃ ಸಂಭ್ರಮಣವಲ್ಗನೈಃ ॥ ೪೮೪ ॥**

**ಪ್ಲವನೈಃ ಸಮವಸ್ಥಾನೈರನ್ಯೈಶ್ಚ ಕರಣೈಃ ಸ್ಫುಟೈಃ ।**
**ರಂಗಾಭ್ಯರ್ಣಮಲಂಕೃತ್ಯ ತಸ್ಥುರ್ನೇತ್ರಮನೋಹರಾಃ ॥ ೪೮೫ ॥**

ಆಗ ಕಂಸನ ಆಜ್ಞೆಯಿಂದ ವಿಷ್ಣುವಿನ ವಿಧೇಯರಾದ ಗೋಪಪುತ್ರರು ಗರ್ವಿತರೂ ಭುಜವನ್ನು ತಟ್ಟಿ ಜಟ್ಟಿಗಳ ಉಡುಪನ್ನು ಧರಿಸಿಕೊಂಡವರೂ ಕಿವಿಗಳಿಗೆ ಸಂತೋಷಕರವಾದ ವಾದ್ಯಗಳ ಹೆಚ್ಚಾದ ನಾದದೊಡನೆ ಸೇರಿಕೊಂಡಿರುವವರೂ ಪಾದಗಳನ್ನು ಎತ್ತುವವರೂ ಇರಿಸುವವರೂ ಉನ್ನತವಾದ ಎರಡು ಭುಜಶಿರ ಸ್ಸುಗಳಿಂದ ಕೊಬ್ಬಿರುವವರೂ ಕ್ರಮವಾದ ನರ್ತನವೂ ನೋಡುವುದಕ್ಕೆ ಯೋಗ್ಯ ವಾದ ಹುಬ್ಬುಗಂಟೂ ಉಳ್ಳವರೂ ಭಯಂಕರವಾದ ಶಬ್ದವುಳ್ಳವರೂ ನೇತ್ರಗಳನ್ನೂ ಮನಸ್ಸನ್ನೂ ಹರಣಮಾಡುವವರೂ ಆಗಿ ಹಿಂದಿರುಗುವಿಕೆಗಳಿಂದಲೂ ಸುತ್ತುವಿಕೆ ಗಳಿಂದಲೂ ಚೆನ್ನಾಗಿ ಭ್ರಮಣಗಳಿಂದಲೂ ಕುಣಿತಗಳಿಂದಲೂ ಹಾರುವಿಕೆ ಗಳಿಂದಲೂ ಸರಿಯಾಗಿ ನಿಲ್ಲುವಿಕೆಗಳಿಂದಲೂ ಸ್ಫುಟವಾದ ಇತರ ಕಾರಣಗಳಿಂದಲೂ ರಂಗಸ್ಥಳದ ಸಮೀಪವನ್ನು ಅಲಂಕರಿಸಿ ನಿಂತರು.

**ಪ್ರೋದ್ವೃಪ್ತಾಃ ಕಂಸಮಲ್ಲಾಶ್ಚ ಚಾಣೂರಪ್ರಮುಖಾಸ್ತಥಾ ।**
**ರಂಗಾಭ್ಯಾಸಂ ಸಮಾಕ್ರಮ್ಯ ವಿಕ್ರಮೈಕರಸಾಃ ಸ್ಥಿತಾಃ ॥ ೪೮೬ ॥**

ಹಾಗೆಯೇ ಚೆನ್ನಾಗಿ ಕೊಬ್ಬಿರುವವರೂ ಪರಾಕ್ರಮವೇ ಮುಖ್ಯವಾದ ರಸ ವಾಗಿರುವವರೂ ಚಾಣೂರನೇ ಮೊದಲಾದವರೂ ಆದ ಕಂಸನ ಜಟ್ಟಿಗಳೂ ರಂಗದ ಸಮೀಪವನ್ನಾಕ್ರಮಿಸಿ ನಿಂತರು.

**ಮಧ್ಯೇರಂಗಮುದಾತ್ತಚಿತ್ತವಿಸರೋ ವೀರೋರುಮಲ್ಲಾಗ್ರಣೀಃ ।**
**ಪ್ರಾಗೇವ ಪ್ರತಿಮಲ್ಲಯುದ್ಧವಿಜಯಂ ಪ್ರಾಪ್ಯೇವ ದೀಪ್ರದ್ಯುತಿಃ ॥**
**ಭಾಸ್ವಂತಂ ಚ ದಿವೋವತೀರ್ಣಮಧುನಾ ಯೋದ್ಧುಂ ಗತಂ ಮಲ್ಲತಾಂ ।**
**ಜ್ಯೇಷ್ಠಾಮೀತಿ ವಿವೃದ್ಧವಿಕ್ರಮರಸಃ ಸಂಭಾವಯನ್ಸ ಸ್ವಯಮ್॥ ೪೮೭ ॥**

ಘನಧೃತಪರಿಧಾನೋ ಬದ್ಧಕೇಶೋ ವಿಕೂರ್ಚಃ ।
ಸಹಜಮಸೃಣಗಾತ್ರಶ್ಶಿತ್ತವೃತ್ತಿಪ್ರವೀಣಃ ॥
ಸತತಕೃತನಿಯೋಗಾದ್ಗೋಪಮಲ್ಲೈರಮಲ್ಲೈ– ।
ರವಿಕಲಜಯಲಂಭಃ ಸರ್ವಸಂಭಾವಿತೌಜಾಃ ॥ ೪೮೮ ॥

ಸ್ಥಿರಚರಣನಿವೇಶೋ ವಜ್ರಸಾರಾಸ್ಥಿಬಂಧೋ ।
ಭುಜಪರಿಘವಿಧಾಯೀ ಮುಷ್ಟಿಸಂಮಾಯ್ಯಮಧ್ಯಃ ॥
ಕಠಿನಪೃಥುಲವಕ್ಷಾಃ ಸ್ಥೂಲನೀಲಾದ್ರಿತುಂಗ– ।
ಸ್ತ್ರಿಗುಣಿತನಿಜಮೂರ್ತಿರ್ದರ್ಪಸರ್ಪಾದ್ದುರೀಕ್ಷಃ ॥ ೪೮೯ ॥

ಜ್ವಲಿತಚಲಿತನೇತ್ರೋ ನಿಷ್ಠುರಾಬದ್ಧಮುಷ್ಟಿಃ ।
ಪರಿಣತಕರಣೌಘೇ ಮಂಕ್ಷು ಸಂಚಾರದಕ್ಷಃ ॥
ಭೃಶಮಶನಿರಿವೋಗ್ರೋ ನಂದಸೂನುಃ ಸ್ಥಿತಃ ಸನ್ ।
ಭಯಮುವಹದಸಹ್ಯಂ ಪ್ರೇತನಾಥಸ್ಯ ಚೋಚ್ಚೈಃ ॥ ೪೯೦ ॥

ಉದಾತ್ತವಾದ ಹೃದಯದ ಪ್ರಸರಣೆಯುಳ್ಳವನೂ ವೀರರಾದ ದೊಡ್ಡ ಜಟ್ಟಿಗಳಲ್ಲಿ ಶ್ರೇಷ್ಠನೂ ಮೊದಲೇ ಇದಿರಾಳಿಯಾದ ಜಟ್ಟಿಯ ಕಾಳಗದಲ್ಲಿ ಜಯವನ್ನು ಹೊಂದಿರುವಂತೆ, ಪ್ರಕಾಶಮಾನವಾದ ಕಾಂತಿಯುಳ್ಳವನೂ "ಈಗ ಯುದ್ಧಮಾಡುವುದಕ್ಕೋಸ್ಕರ ಜಟ್ಟಿಯ ರೂಪವನ್ನು ಹೊಂದಿ ಆಕಾಶದಿಂದ ಇಳಿದಿರುವ ಸೂರ್ಯನನ್ನೂ ಜಯಿಸುವೆನು" ಎಂದು ವೃದ್ಧಿಯನ್ನು ಹೊಂದಿರುವ ಪರಾಕ್ರಮರಸವುಳ್ಳವನಾಗಿ ತನ್ನನ್ನು ತಿಳಿಯುವವನೂ ದಟ್ಟವಾದ ಉಡುಪನ್ನು ಧರಿಸಿರುವವನೂ ತಲೆಗೂದಲುಗಳನ್ನು ಕಟ್ಟಿರುವವನೂ ಗಡ್ಡಮೀಸೆಗಳಿಲ್ಲದವನೂ ಸಹಜವಾಗಿ ನುಣುಪಾದ ಶರೀರವುಳ್ಳವನೂ ಮನೋವೃತ್ತಿಯಲ್ಲಿ ನಿಪುಣನೂ ಯಾವಾಗಲೂ ಮಾಡಲ್ಪಟ್ಟ ಅಪ್ಪಣೆಯಿಂದ ಪ್ರತಿಯಾದ ಮಲ್ಲರಿಲ್ಲದ ಗೋಪಮಲ್ಲರಿಂದ ಸಂಪೂರ್ಣವಾದ ಜಯದ ಪ್ರಾಪ್ತಿಯುಳ್ಳವನೂ ಎಲ್ಲರಿಂದಲೂ ಸನ್ಮಾನಿತವಾಗಿರುವ ತೇಜಸ್ಸುಳ್ಳವನೂ ಸ್ಥಿರವಾಗಿ ಕಾಲನ್ನಿಡುವವನೂ ವಜ್ರದಂತೆ ಸಾರವಾದ ಎಲುಬುಗಳ ಕಟ್ಟುಳ್ಳವನೂ ಭುಜಗಳನ್ನು ಅಗಳಿನಂತೆ ಮಾಡುವವನೂ ಮುಷ್ಟಿಯಲ್ಲಿ ಅಡಕವಾಗುವ ಸೊಂಟವುಳ್ಳವನೂ ಕಠಿನವೂ ದಪ್ಪವೂ ಆದ ಎದೆಯುಳ್ಳವನೂ ಸ್ಥೂಲವಾದ ನೀಲಪರ್ವತದಂತೆ ಉನ್ನತವೂ ಮೂರು ಪಾಲು ಹೆಚ್ಚಾಗಿ–ಉಬ್ಬಿದ ತನ್ನ ಆಕೃತಿಯುಳ್ಳವನೂ ದರ್ಪವೆಂಬ ಸರ್ಪದಿಂದ ದುಷ್ಪವಾದ ನೋಟವುಳ್ಳವನೂ ಜ್ವಲಿಸುವುವೂ ಚಲಿಸುವುವೂ ಆದ ಕಣ್ಣುಗಳುಳ್ಳವನೂ ಒರಟಾದ ಮುಷ್ಟಿಬಂಧವುಳ್ಳವನೂ ಪರಿಪುಷ್ಟವಾದ ಮಲ್ಲಯುದ್ಧಸಲಕರಣಗಳ ಸಮೂಹದಲ್ಲಿ ಶೀಘ್ರವಾಗಿ ಸಂಚಾರಸಮರ್ಥನೂ ಸಿಡಿಲಿನಂತೆ ಅಧಿಕವಾಗಿ ಭಯಂಕರನೂ ಆದ ನಂದಗೋಪನ ಪುತ್ರನು ರಂಗಮಧ್ಯದಲ್ಲಿ ನಿಂತಿರುವವನಾಗಿ ಪ್ರೇತನಾಥನಾದ ಯಮನಿಗೂ ಸಹಿಸಲಾಗದ ಭಯವನ್ನು ಹೆಚ್ಚಾಗಿ ಉಂಟು ಮಾಡಿದನು.

ರೂಪೀವ ಶೌರ್ಯಮಖಿಲಂ ಮಿಲಿತಂ ಬಲಂ ವಾ ।
ರಂಹಃ ಸಮಸ್ತಮಪಿ ಸಂಹತಿಮೀಯಿವದ್ವಾ ॥
ಸಿಂಹಾಕೃತಿಃ ಸ ಸಹಸಾ ಕೃತಸಿಂಹನಾದೋ ।
ರಂಗಾದಲಂಘತ ನಭೋಂಕಣಮಂಕಣಂ ವಾ ॥ ೪೯೧ ॥

ಸಮಸ್ತಶೌರ್ಯವು ರೂಪವನ್ನು ಹೊಂದಿದೆಯೋ ಎಂಬಂತಿರುವವನೂ ಸೇರಿರುವ ಬಲವೋ ಎಂಬಂತಿರುವವನೂ ಸಮಸ್ತವೇಗವು ಸಮೂಹವನ್ನು ಹೊಂದಿದೆಯೋ ಎಂಬಂತಿರುವವನೂ ಸಿಂಹಾಕೃತಿಯುಳ್ಳವನೂ ಆದ ಆ ಕೃಷ್ಣನು ಶೀಘ್ರವಾಗಿ ಸಿಂಹನಾದವುಳ್ಳವನಾಗಿ ರಂಗದಿಂದ, ಮನೆಯ ಅಂಕಣಕ್ಕೆ ಹಾರುವಂತೆ, ಆಕಾಶಾಂಕಣಕ್ಕೆ ಹಾರಿದನು.

ಆಪತ್ಯ ಖಾದಶನಿವದ್ಭುವಮಾತ್ಮಪಾದ– ।
ಪಾತಾಭಿಘಾತಚಲಿತಾಚಲಸಂಧಿಬಂಧಃ ॥
ವಲ್ಗನ್ಮುಹುಃ ಪರಿಸರತ್ಪವಿಜೃಂಭಮಾಣಃ ।
ಸಿಂದೂರರಂಜಿತಭುಜೌ ಚಲಯನ್ನುದಗ್ರೌ ॥ ೪೯೨ ॥

ಕ್ರುದ್ಧಃ ಕಟೀದ್ವಿತಯಪಾರ್ಶ್ವವಿಲಂಬಿಪೀತ– ।
ವಸ್ತ್ರೋ ನಿಯುದ್ಧಕುಶಲಂ ಪ್ರತಿಮಲ್ಲಮುಗ್ರಮ್ ॥
ಚಾಣೂರಮದ್ರಿಶಿಖರೋನ್ನತಮಾಪತಂತ– ।
ಮಾಸಾದ್ಯ ಸಿಂಹವದಿಭಂ ಸಹಸಾ ಬಭಾಸೇ ॥ ೪೯೩ ॥

ಆಕಾಶದಿಂದ ಸಿಡಿಲಿನಂತೆ ಭೂಮಿಯನ್ನು ಹೊಂದಿ ತನ್ನ ಪಾದಗಳ ಪೆಟ್ಟಿನಿಂದ ಪರ್ವತಗಳ ಸಂಧಿಗಳನ್ನು ಅಲ್ಲಾಡಿಸಿದವನೂ ಪುನಃ ಪುನಃ ಕುಪ್ಪಳಿಸುವವನೂ ಸುತ್ತುತ್ತಿರುವವನೂ ಅಭಿವೃದ್ಧಿಯನ್ನು ಹೊಂದುತ್ತಿರುವವನೂ ಸಿಂಧೂರದಿಂದ ಲಿಪ್ತವೂ ಉನ್ನತವೂ ಆದ ಭುಜಗಳನ್ನು ಕುಣಿಸುವವನೂ ಕೋಪಗೊಂಡಿರುವವನೂ ಸೊಂಟದ ಎರಡು ಕಡೆಗಳಲ್ಲಿ ಜೋಲುತ್ತಿರುವ ಹಳದಿಬಟ್ಟೆಯುಳ್ಳವನೂ ಬಾಹುಯುದ್ಧದಲ್ಲಿ ನಿಪುಣನೂ ಇದಿರಾಳಿಯಾದ ಜಟ್ಟಿಯೂ ಭಯಂಕರನೂ ಗಿರಿಶಿಖರದಂತೆ ಉನ್ನತನೂ ಹಾಯ್ದು ಬರುತ್ತಿರುವವನೂ ಆದ ಚಾಣೂರಮಲ್ಲನನ್ನು, ಆನೆಯನ್ನು ಸಿಂಹದಂತೆ, ಶೀಘ್ರವಾಗಿ ಕೊಂದು ಪ್ರಕಾಶಿಸಿದನು.

ದೃಷ್ಟ್ವೈನಂ ರುಧಿರೋದ್ಗಮೋಗ್ರನಯನೋ ಯೋದ್ಧುಂ ಸ್ವಯಂ ಮಲ್ಲತಾಂ ।
ಸಂಪ್ರಾಪ್ಯಾಪತದುಗ್ರಸೇನತನಯೋ ಜನ್ಮಾಂತರದ್ವೇಷತಃ ॥
ತಂ ವ್ಯೋಮ್ನಿ ಭ್ರಮಯನ್ನರೇಣ ಚರಣೇ ಸಂಗೃಹ್ಯ ವಾಲ್ಯಾಂಡಜಂ ।
ಭೂಮೌ ನೇತುಮುಪಾಂತಮಂತಕವಿಭೋಃ ಕೃಷ್ಣಃ ಸಮಾಸ್ಫಾಲಯತ್॥

ಇವನನ್ನು ನೋಡಿ ರಕ್ತವು ಹೊರಡುವಂತೆ–ಕೆಂಪಾದ ಉಗ್ರನೇತ್ರವುಳ್ಳವನಾದ ಉಗ್ರಸೇನನ ಪುತ್ರ–ಕಂಸನು ಜನ್ಮಾಂತರದ್ವೇಷದಿಂದ ಯುದ್ಧಮಾಡುವುದಕ್ಕೋಸ್ಕರ ತಾನು ಜಟ್ಟಿಯ ರೂಪವನ್ನು ಹೊಂದಿ ಕೃಷ್ಣನ ಮೇಲೆ ಹಾಯ್ದು ಬಂದನು. ಅವನನ್ನು ಕೃಷ್ಣನು ಕೈಯಿಂದ ಅವನ ಕಾಲಿನಲ್ಲಿ ಹಿಡಿದು, ಪಕ್ಷಿಯನ್ನು ತಿರುಗಿಸುವಂತೆ, ಆಕಾಶದಲ್ಲಿ ತಿರುಗಿಸುವವನಾಗಿ ಯಮರಾಜನ ಬಳಿಗೆ ಹೊಂದಿಸುವುದಕ್ಕೋಸ್ಕರ ಭೂಮಿಯಲ್ಲಿ ಅಪ್ಪಳಿಸಿದನು.

ಆಪೇತುರ್ನಭಸಸ್ತದಾ ಸುಮನಸೋ ದೇವಾನಕೈರ್ದಧ್ವನೇ ।
ಸ್ವಾರಾವೋ ವಸುದೇವಸೈನ್ಯಜಲಧೌ ಪ್ರಕ್ಷೋಭಣಾದುದ್ಗತಃ ॥
ಸೀರೀ ವೀರವರೋ ವಿರುದ್ಧನೃಪತೀನಾಕ್ರಮ್ಯ ರಂಗೇ ಸ್ಥಿತಃ ।
ಸ್ವೀಕೃತ್ಯಾಪ್ರತಿಮಲ್ಲಮಾಪ್ತ ವಿಜಯಂ ಶೌರ್ಯೋರ್ಜಿತಂ ಸ್ವಾನುಜಮ್॥

ಆಗ ಆಕಾಶದಿಂದ ಪುಷ್ಪಗಳು ಬಿದ್ದುವು (ಪುಷ್ಪವೃಷ್ಟಿಯಾಯಿತು) ದೇವದುಂದುಭಿಗಳಿಂದ ಧ್ವನಿಮಾಡಲ್ಪಟ್ಟಿತು. ವಸುದೇವನ ಸೈನ್ಯವೆಂಬ ಸಮುದ್ರದಲ್ಲಿ ಕ್ಷೋಭೆಯಿಂದ ಶ್ರೇಷ್ಠವಾದ (ಜಯಕಾರ) ಶಬ್ದವುಂಟಾಯಿತು. ವೀರಶ್ರೇಷ್ಠನಾದ ಬಲರಾಮನು ಪ್ರತಿಮಲ್ಲನಿಲ್ಲದಿರುವವನೂ ವಿಜಯವನ್ನು ಪಡೆದವನೂ ಶೌರ್ಯದಿಂದ ವೃದ್ಧಿಹೊಂದಿರುವವನೂ ಆದ ತನ್ನ ತಮ್ಮನನ್ನು ಸ್ವೀಕರಿಸಿ– ಕರೆದುಕೊಂಡು ಕಂಸನ ಕಡೆಯ ವಿರುದ್ಧ ರಾಜರುಗಳನ್ನು ಆಕ್ರಮಿಸಿ ರಂಗದಲ್ಲಿ ನಿಂತನು.

ಅತುಲಜಲಮಲಂಘ್ಯಾರಾತಿಮತ್ತೇಭಘಾತಾ– ।
ತ್ಪ್ರಕುಪಿತಹರಿಸಮಾನಂ ಮಾನನೀಯಾಪದಾನಮ್ ॥
ಸಪದಿ ಸಮುಪಯಾತಾ ವಂದಿಭಿರ್ವಂದ್ಯಮಾನಂ ।
ಜನಿತಸಕಲರಾಗಂ ತಂ ಹರಿಂ ವೀರಲಕ್ಷ್ಮೀಃ ॥ ೪೯೬ ॥

ವೀರಲಕ್ಷ್ಮಿಯು ಅಸದೃಶವಾದ ಬಲವುಳ್ಳವನೂ ಮೀರಲಾಗದ ಶತ್ರುಗಳೆಂಬ ಆನೆಗಳ ಘಾತದಿಂದ ಕೋಪಗೊಂಡಿರುವ ಸಿಂಹಕ್ಕೆ ಸಮಾನನೂ ಮಾನನೀಯವಾದ ಕಾರ್ಯವನ್ನು ನಡೆಸಿದವನೂ ಸ್ತುತಿಪಾಠಕರಿಂದ ವಂದಿಸಲ್ಪಡು(ಸ್ತುತಿಸಲ್ಪಡು)ವವನೂ ಎಲ್ಲರಿಗೂ ಪ್ರೀತಿಯನ್ನುಂಟುಮಾಡುವವನೂ ಆದ ಆ ಹರಿಯನ್ನು ಶೀಘ್ರವಾಗಿ ಹೊಂದಿದಳು.

**ದೂತೀವ ಮೇ ಶ್ರಿತವತೀ ವರವೀರಲಕ್ಷ್ಮೀ- ।**
**ರೇತಸ್ಯ ದಕ್ಷಿಣಭುಜಂ ವಿಜಯೈಕಗೇಹಮ್ ॥**
**ಪ್ರಾಪ್ತಂ ಪತಿಂ ಚಿರತರಾದಿತಿ ತಂ ಕಟಾಕ್ಷೈ- ।**
**ರೈಕ್ಷಿಷ್ಟ ರಾಗತರಲೈರ್ಭರತಾರ್ಧಲಕ್ಷ್ಮೀಃ ॥ ೪೯೭ ॥**

"ಶ್ರೇಷ್ಠಳಾದ ವೀರಲಕ್ಷ್ಮಿಯು ನನ್ನ ದೂತಿಯಂತೆ ಈ ಕೃಷ್ಣನ ವಿಜಯಕ್ಕೆ ಮುಖ್ಯಗೃಹವಾದ ಬಲದ ಭುಜವನ್ನು ಆಶ್ರಯಿಸಿದಳು" ಎಂದು ಅರ್ಧಭರತ ಕ್ಷೇತ್ರದ ರಾಜ್ಯಲಕ್ಷ್ಮಿಯು ಬಹುಕಾಲದಿಂದ ಪ್ರಾಪ್ತನಾದ ಆ ಪತಿಯನ್ನು–ಕೃಷ್ಣನನ್ನು ರಾಗದಿಂದ ಚಂಚಲವಾದ ಕಡೆಗಣ್ಣಿನ ನೋಟಗಳಿಂದ ನೋಡಿದಳು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ನೇಮಿಸ್ವಾಮಿಚರಿತೇ ಕೃಷ್ಣವಿಜಯೋ ನಾಮ ಸಪ್ತತಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ
"ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ನೇಮಿಸ್ವಾಮಿಚರಿತೆಯಲ್ಲಿ ಕೃಷ್ಣವಿಜಯವೆಂಬ
ಎಪ್ಪತ್ತನೆಯ ಪರ್ವವು ಸಮಾಪ್ತವಾದುದು.

---

# ಅಥ ಸಪ್ತತಿತಮಂ ಪರ್ವ

(ಶ್ರೀ ನೇಮಿತೀರ್ಥಂಕರಪುರಾಣ ಮುಂದುವರೆದದ್ದು)

**ಅಥ ಕಂಸವಧೂಮುಕ್ತಲೋಚನಾಂಭಃಪ್ರಪಾಯಿನಃ ।**
**ಭೂಭೂರುಹಾತ್ಸಮುತ್ಪನ್ನಾಃ ಸಮಂತಾದುತ್ಸವಾಂಕುರಾಃ ॥ ೪೯೮ ॥**

ಅನಂತರದಲ್ಲಿ ಕಂಸನ ಪತ್ನಿಯಿಂದ ಬಿಡಲ್ಪಟ್ಟ ಕಣ್ಣೀರನ್ನು ಕುಡಿದ ಭೂಮಿಯೆಂಬ ವೃಕ್ಷದಿಂದ ಎಲ್ಲಾಕಡೆಗಳಲ್ಲಿ ಉತ್ಸವಗಳೆಂಬ ಅಂಕುರಗಳುಂಟಾದುವು. ಕಂಸನ ವಿನಾಶದಿಂದ ಭೂಮಿಯಲ್ಲಿ ಎಲ್ಲಾಕಡೆಗಳಲ್ಲಿ ಜನರು ಉತ್ಸವಗಳನ್ನು ಮಾಡಿದರೆಂದು ಭಾವವು.

**ವಸುದೇವಮಹೀಶಸ್ಯ ಕಿಲೈಷ ಕೃತಿನಃ ಸುತಃ ।**
**ವ್ರಜೇ ಕಂಸಭಯಾದ್ವೃದ್ಧಿಂ ಶೂರಃ ಪ್ರಚ್ಛನ್ನಮಾಪ್ತವಾನ್ ॥ ೪೯೯ ॥**

"ಶೂರನಾದ ಇವನು ಪುಣ್ಯಶಾಲಿಯಾದ ವಸುದೇವಮಹೀಪಾಲನ ಮಗನಂತೆ. ಕಂಸನ ಭಯದಿಂದ ಗೋಕುಲದಲ್ಲಿ ಗುಪ್ತವಾಗಿ ವೃದ್ಧಿಯನ್ನು ಹೊಂದಿದನು.

**ವೃದ್ಧಿರಸ್ಯ ಸ್ವಪಕ್ಷಸ್ಯ ವೃದ್ಧಯೇ ನೈವ ಕೇವಲಮ್ ।**
**ಜಗತಶ್ಚ ತುಷಾರಾಂಶೋರಿವ ವೃದ್ಧಿಶ್ಚಿತಾ ಕ್ರಮಾತ್ ॥ ೫೦೦ ॥**

ಇವನ ವೃದ್ಧಿಯು ತನ್ನ ಪಕ್ಷದ ವೃದ್ಧಿಗೋಸ್ಕರವೇ ಅಲ್ಲ. ಇವನಿಂದ, ಚಂದ್ರನಿಂದ ಲೋಪಾದಿಯಲ್ಲಿ, ಜಗತ್ತಿನ ವೃದ್ಧಿಯೂ ಕ್ರಮದಿಂದ ಸಂಗ್ರಹಿಸಲ್ಪಡುವುದು."

**ಇತ್ಯಭಿಷ್ಟೂಯಮಾನಸ್ಯ ಪೌರತದ್ದೇಶವಾಸಿಭಿಃ ।**
**ವಿಪಾಶಿತೋಗ್ರಸೇನಾಖ್ಯಮಹೀಶಸ್ಯ ಮಹಾತ್ಮನಃ ॥ ೫೦೧ ॥**

**ವಿಸರ್ಜಿತವತೋ ನಂದಗೋಪಾಂಶ್ಚಾಪೂಜ್ಯ ಸದ್ಧನೈಃ ।**
**ಪ್ರವಿಶ್ಯ ಬಂಧುಭಿಃ ಸಂಗತಸ್ಯ ಶೌರ್ಯಪುರಂ ಹರೇಃ ॥ ೫೦೨ ॥**

**ಕಾಲೇ ಸುಖೇನ ಯಾತ್ಯೇವಂ ದೇವೀ ಜೀವದ್ಯಶಾಸ್ತತಃ ।**
**ದುಃಖಿತಾ ಮರಣಾತ್ಪತ್ಯುರ್ಜರಾಸಂಧಮುಪೇತ್ಯ ಸಾ ॥ ೫೦೩ ॥**

**ತತ್ರ ಪ್ರವೃತ್ತವೃತ್ತಾಂತಮಶೇಷಂ ತಮಬೂಬುಧತ್ ।**
**ಶ್ರುತ್ವಾಸೌ ಚ ರುಷಾ ಪುತ್ರಾನಾದಿಶದ್ಯಾದವಾನ್ ಪ್ರತಿ ॥ ೫೦೪ ॥**

ಈ ಪ್ರಕಾರವಾಗಿ ಪುರನಿವಾಸಿಗಳಿಂದಲೂ ಆ ದೇಶವಾಸಿಗಳಿಂದಲೂ ಸ್ತುತಿಸಲ್ಪಟ್ಟವನೂ ಉಗ್ರಸೇನಮಹಾರಾಜನ ಬಂಧನವನ್ನು ಬಿಡಿಸಿದವನೂ ಮಹಾತ್ಮನೂ ನಂದಗೋಪರನ್ನು ಶ್ರೇಷ್ಠವಾದ ದ್ರವ್ಯಗಳಿಂದ ಪೂಜಿಸಿ ವಿಸರ್ಜಿಸಿದವನೂ ಶೌರ್ಯಪುರವನ್ನು ಪ್ರವೇಶಿಸಿ ಬಂಧುಗಳೊಡನೆ ಸೇರಿದವನೂ ಆದ ಹರಿಯ ಕಾಲವು ಈ ರೀತಿಯಾಗಿ ಸುಖದಿಂದ ಕಳೆಯುತ್ತಿರಲು ಪತಿಯ ಮರಣದಿಂದ ದುಃಖಿತಳಾದ ಆ ಜೀವದ್ಯಶೆಯು ಅಲ್ಲಿಂದ ಹೋಗಿ ಜರಾಸಂಧನನ್ನು ಕಂಡು ಅಲ್ಲಿ ನಡೆದ ಎಲ್ಲಾ ವಾರ್ತೆಯನ್ನು ಅವನಿಗೆ ತಿಳಿಸಿದಳು. ಇವನೂ ಅದನ್ನು ಕೇಳಿ ಕೋಪದಿಂದ ಯಾದವರನ್ನು ಕುರಿತು ದಂಡೆತ್ತಿ ಹೋಗುವಂತೆ ಪುತ್ರರಿಗೆ ಅಪ್ಪಣೆಮಾಡಿದನು.

**ತೇಽಪಿ ಸನ್ನಾಹ್ಯ ಸೈನ್ಯಂ ಸ್ವಂ ಗತ್ವಾ ಯುಧ್ವಾ ರಣಾಂಗಣೇ ।**
**ಭಂಗಮಾಪನ್ನ ಕೇ ವಾಪುರ್ದೈವೇ ವೈಮುಖ್ಯಮೀಯುಷಿ ॥ ೫೦೫ ॥**

ಅವರೂ ತಮ್ಮ ಸೈನ್ಯವನ್ನು ಅಣಿಮಾಡಿಕೊಂಡು ಹೋಗಿ ರಣಾಂಗಣದಲ್ಲಿ ಯುದ್ಧವನ್ನು ಮಾಡಿ ಭಂಗವನ್ನು ಹೊಂದಿದರು–ಸೋತರು. ದೈವವು ವಿಮುಖತ್ವವನ್ನು ಹೊಂದುತ್ತಿರಲು ಯಾರುತಾನೆ ಭಂಗವನ್ನು ಹೊಂದಿಲ್ಲ ?

**ಪ್ರಾಹಿಣೋತ್ಪ ಪುನಃ ಕೋಪಾತ್ತನೂಜಮಪರಾಜಿತಮ್ ।**
**ಮತ್ವೈವಾನ್ವರ್ಥನಾಮಾನಂ ತದ್ವಿಷಾಮಂತಕೋಪಮಮ್ ॥ ೫೦೬ ॥**

ಜರಾಸಂಧನು ಪುನಃ ಕೋಪದಿಂದ ಆ ಶತ್ರುಗಳಿಗೆ ಯಮಸಮಾನನಾದ ಅಪರಾಜಿತಪುತ್ರನನ್ನು ಅನ್ವರ್ಥವಾದ ಹೆಸರುಳ್ಳವನನ್ನಾಗಿಯೇ ತಿಳಿದು ಕಳುಹಿಸಿದನು.

**ಶತತ್ರಯಂ ಸಷಟ್ಚತ್ವಾರಿಂಶತ್ಸೋಽಪಿ ಮಹಾಬಲಃ ।**
**ಚಿರಂ ವಿಧಾಯ ಯುದ್ಧಾನಾಂ ವಿಪುಣ್ಯೋಭೂತ್ಪರಾಙ್ಮುಖಃ ॥ ೫೦೭ ॥**

ಮಹಾಬಲವುಳ್ಳವನಾದ ಆ ಅಪರಾಜಿತನೂ ಬಹುಕಾಲದವರೆಗೆ ಮೂರುನೂರ ನಲ್ವತ್ತಾರುಸಲ ಯುದ್ಧಗಳನ್ನು ಮಾಡಿ ಪುಣ್ಯಹೀನನೂ ಪರಾಙ್ಮುಖನೂ ಆದನು.

**ಪುನಃ ಪಿತೃನಿದೇಶೇನ ಪ್ರಸ್ಥಾನಮಕರೋದ್ಯಮೀ ।**
**ಯಾದವಾನುದ್ಧರಾಮೀತಿ ತುಕ್ಕಾಲಯವನಾಭಿಧಃ ॥ ೫೦೮ ॥**

ಪುನಃ ತಂದೆಯ ಅಪ್ಪಣೆಯಿಂದ "ಯಾದವರನ್ನು ಎತ್ತಿಹಾಕುತ್ತೇನೆ" ಎಂದು ವ್ರತನಿಯಮವುಳ್ಳವನಾದ ಕಾಲಯವನನೆಂಬ ಪುತ್ರನು ಪ್ರಯಾಣವನ್ನು ಮಾಡಿದನು.

**ಯಾದವಾಶ್ಚ ತದಾಯಾನಮಾಕರ್ಣ್ಯಾಗಾಮಿವೇದಿನಃ ।**
**ಜಹುಃ ಶೌರ್ಯಪುರಂ ಹಾಸ್ತಿನಾಖ್ಯಯಂ ಮಧುರಾಮಪಿ ॥ ೫೦೯ ॥**

ಆ ಕಾಲಯವನನ ಆಗಮನವನ್ನು ಕೇಳಿ ಮುಂದಿನ ವಿಷಯವನ್ನು ತಿಳಿದವರಾದ ಯಾದವರು ಶೌರ್ಯಪುರವನ್ನೂ ಹಸ್ತಿನಾಪುರವನ್ನೂ ಮಧುರಾನಗರವನ್ನೂ ತ್ಯಜಿಸಿದರು.

**ಮಾರ್ಗೇ ಸ್ಥಿತಾಂ ತದಾ ಯಾದವೇಶಿನಾಂ ಕುಲದೇವತಾಮ್ ।**
**ವಿವಿಧೇಂಧನಸಂವೃದ್ಧಜ್ವಾಲಮುತ್ಥಾಪ್ಯ ಪಾವಕಮ್ ॥ ೫೧೦ ॥**

**ಧೃತವೃದ್ಧಾಕೃತಿಂ ವೀಕ್ಷ್ಯ ತಾಂ ಕಾಲಯವನೋ ಯುವಾ ।**
**ಕಿಮೇತದಿತಿ ಪಪ್ರಚ್ಛ ಸಾಪ್ಯಾಹ ಶೃಣು ಭೂಪತೇ ॥ ೫೧೧ ॥**

**ಅಸ್ಮಿನ್ ಜ್ವಾಲಾಕರಾಲಾಗ್ನೌ ಸರ್ವೇಽಪಿ ಮಮ ಸೂನವಃ ।**
**ಭಯೇನ ಭವತೋಭೂವನ್ ವ್ಯಸವೋ ಯಾದವೈಃ ಸಹ ॥ ೫೧೨ ॥**

ಆಗ ಮಾರ್ಗದಲ್ಲಿದ್ದುದೂ ನಾನಾವಿಧವಾದ ಕಟ್ಟಿಗೆಗಳಿಂದ ವೃದ್ಧಿಯಾದ ಜ್ವಾಲೆಯುಳ್ಳ ಬೆಂಕಿಯನ್ನುಂಟುಮಾಡಿ ಮುದುಕಿಯ ಆಕಾರವನ್ನು ಧರಿಸಿದುದೂ ಆದ ಯಾದವರಾಜರುಗಳ ಕುಲದೇವತೆಯನ್ನು ನೋಡಿ ಯುವಕನಾದ ಕಾಲಯವನನು "ಇದೇನು ?" ಎಂದು ಆ ಮುದುಕಿಯನ್ನು ಕೇಳಿದನು. ಆ ಮುದುಕಿಯೂ "ರಾಜನೆ !ಕೇಳು. ನಿನ್ನ ಭಯದಿಂದ ಈ ಜ್ವಾಲೆಯಿಂದ ಭಯಂಕರವಾದ ಬೆಂಕಿಯಲ್ಲಿ ಬಿದ್ದು ನನ್ನ ಮಕ್ಕಳೆಲ್ಲರೂ ಯಾದವರೊಡನೆ ಪ್ರಾಣರಹಿತರಾದರು–ಸತ್ತರು" ಎಂದಳು.

**ಇತಿ ತದ್ವಚನಾತ್ಸೋಽಪಿ ಮದ್ಭಯಾತ್ಕಿಲ ಶತ್ರವಃ ।**
**ಪ್ರಾವಿಶನ್ನಗ್ನಿತಾಪಾಶುಶುಕ್ಷಣಿಂ ವಾಶುಶುಕ್ಷಣಿಮ್ ॥ ೫೧೩ ॥**

ಈ ಪ್ರಕಾರವಾಗಿ ಆಕೆಯ ಮಾತಿನಿಂದ ಆ ಕಾಲಯವನನೂ "ನನ್ನ ಭಯದಿಂದ ಶತ್ರುಗಳು ನನ್ನ ಪ್ರತಾಪವೆಂಬ ಅಗ್ನಿಯನ್ನು ಪ್ರವೇಶಿಸುವಂತೆ ಅಗ್ನಿಯನ್ನು ಪ್ರವೇಶಿಸಿದರಂತೆ."

**ಇತಿ ಪ್ರತಿನಿವೃತ್ತ್ಯಾಶು ಮಿಥ್ಯಾಗರ್ವಂ ಸಮುದ್ವಹನ್ ।**
**ಜಗಾಮ ಪಿತುರಭ್ಯಾಸಂ ಧಿಗನೀಕ್ಷಿತಚೇಷ್ಟಿತಮ್ ॥ ೫೧೪ ॥**

ಎಂದು ಶೀಘ್ರವಾಗಿ ಹಿಂದಿರುಗಿ ಮಿಥ್ಯಾಗರ್ವವನ್ನು ಧರಿಸಿರುವವನಾಗಿ ತಂದೆಯ ಬಳಿಗೆ ಹೋದನು. ನೋಡದೆ–ವಿಚಾರಮಾಡದೆ ಮಾಡುವ ಕಾರ್ಯಕ್ಕೆ ಧಿಕ್ಕಾರವಿರಲಿ.

**ಇತೋ ಜಲನಿಧೇಸ್ತೀರೇ ಬಲೇ ಯಾದವಭೂಭುಜಾಮ್ ।**
**ನಿವಿಷ್ಟವತಿ ನಿರ್ಮಾಪಯಿತುಂ ಸ್ಥಾನೀಯಮಾತ್ಮನಃ ॥ ೫೧೫ ॥**

**ಅಷ್ಟೋಪವಾಸಮಾದಾಯ ವಿಧಿಮಂತ್ರಪುರಸ್ಸರಮ್ ।**
**ಕಂಸಾರಿಃ ಶುದ್ಧಭಾವೇನ ದರ್ಭಶಯ್ಯಾತಲಂ ಗತಃ ॥ ೫೧೬ ॥**

ಇತ್ತ ಕಂಸವೈರಿಯಾದ ಕೃಷ್ಣನು ಸಮುದ್ರತೀರದಲ್ಲಿ ಯಾದವರಾಜರುಗಳ ಸೈನ್ಯವು ಪ್ರೇವೇಶಿಸುತ್ತಿರಲು ತನಗೆ ಸ್ಥಾನವನ್ನು ನಿರ್ಮಾಣಮಾಡಿಸುವುದಕ್ಕೋಸ್ಕರ ವಿಧಿಪುರಸ್ಸರವಾಗಿಯೂ ಮಂತ್ರಪರಸ್ಸರವಾಗಿಯೂ ಎಂಟು ಉಪವಾಸವನ್ನು ಕೈಕೊಂಡು ಶುದ್ಧಭಾವದಿಂದ ದರ್ಭಶಯ್ಯಾತಲವನ್ನು ಹೊಂದಿದನು.

**ಅಶ್ವಾಕೃತಿಧರಂ ದೇವಂ ಮಾಮಾರುಹ್ಯ ಪಯೋನಿಧೇಃ ।**
**ಗಚ್ಛತಸ್ತೇ ಭವೇನ್ಮಧ್ಯೇ ಪುರಂ ದ್ವಾದಶಯೋಜನಮ್ ॥ ೫೧೭ ॥**

"ಕುದುರೆಯ ಆಕಾರವನ್ನು ಧರಿಸಿರುವ ದೇವನಾದ ನನ್ನನ್ನು ಹತ್ತಿ ಸಮುದ್ರಕ್ಕೆ ಹೋಗುವ ನಿನಗೆ ಮಧ್ಯದಲ್ಲಿ ಹನ್ನೆರಡು ಯೋಜನವಿಸ್ತಾರವಾದ ನಗರವಾಗುವುದು."

**ಇತ್ಯುಕ್ತೋ ನೈಗಮಾಖ್ಯೇನ ಸುರೇಣ ಮಧುಸೂದನಃ ।**
**ಚಕ್ರೇ ತಥೈವ ನಿಶ್ಚಿತ್ಯ ಸತಿ ಪುಣ್ಯೇ ನ ಕಃ ಸಖಾ ॥ ೫೧೮ ॥**

ಹೀಗೆ ನೈಗಮನೆಂಬ ದೇವನು ಮಧುಸೂದನನಿಗೆ ಹೇಳಿದನು. ಅವನು ಹಾಗೆಯೇ ನಿಶ್ಚಯಿಸಿ ಮಾಡಿದನು. ಪುಣ್ಯವಿರುತ್ತಿರಲು ಯಾವನುತಾನೆ ಮಿತ್ರನಲ್ಲ?

**ಪ್ರಾಪ್ತವೇಗೋದ್ಧತೌ ತಸ್ಮಿನ್ನಾರೂಢೇ ತುರಗದ್ವಿಷಾ ।**
**ಹಯೇ ಧಾವತಿ ನಿರ್ದ್ವಂದ್ವಂ ನಿಶ್ಚಲತ್ಕರ್ಣಚಾಮರೇ ॥ ೫೧೯ ॥**

**ದ್ವೇಧಾ ಭೇದಮಯಾದ್ವಾರ್ಧಿರ್ಭಯಾದಿವ ಹರೇರಯಾತ್ ।**
**ಭೇದ್ಯೋ ಧೀಶಕ್ತಿಯುಕ್ತೇನ ಸಂಘಾತೋಪಿ ಜಲಾತ್ಮನಾಮ್ ॥ ೫೨೦ ॥**

ಪ್ರಾಪ್ತವಾದ ವೇಗದಿಂದ ಉದ್ಧತವೂ ಕೃಷ್ಣನಿಂದ ಹತ್ತಲ್ಪಟ್ಟುದೂ ನಿಶ್ಚಲವಾದ ಕಿವಿಗಳೆಂಬ ಚಾಮರವುಳ್ಳುದೂ ಆದ ಕುದುರೆಯು ಅದ್ವಿತೀಯವಾಗಿ ಓಡುತ್ತಿರಲು ಹರಿಯ ಪುಣ್ಯದಿಂದ ಸಮುದ್ರವು ಭಯದಿಂದಲೋ ಎಂಬಂತೆ ಎರಡಾಗಿ ಭಾಗವನ್ನು ಹೊಂದಿತು. ಬುದ್ಧಿಶಕ್ತಿಯುಕ್ತನಾದ ಮನುಷ್ಯನಿಂದ ಜಲಸ್ವರೂಪರಾಗಿರುವವರ ಜಡಸ್ವರೂಪರಾಗಿರುವವರ ಸಮೂಹವೂ ಭೇದಿಸಲ್ಪಡತಕ್ಕುದಾಗಿರುತ್ತದೆ.

**ಶಕ್ರಾಜ್ಞಯಾ ತದಾ ತತ್ರ ನಿಧೀಶೋ ವಿಧಿವರ್ಧಿತಮ್ ।**
**ಸಹಸ್ರಕೂಟಂ ವ್ಯಾಭಾಸಿ ಭಾಸ್ವದ್ರತ್ನಮಯಂ ಮಹತ್ ॥ ೫೨೧ ॥**

**ಕೃತ್ವಾ ಜಿನಗೃಹಂ ಪೂರ್ವಂ ಮಂಗಲಾನಾಂ ಚ ಮಂಗಲಮ್ ।**
**ವಪ್ರಪ್ರಾಕಾರಪರಿಖಾಗೋಪುರಾಟ್ಟಾಲಕಾದಿಭಿಃ ॥ ೫೨೨ ॥**

**ರಾಜಮಾನಾಂ ಹರೇಃ ಪುಣ್ಯಾತ್ತೀರ್ಥೇಶಸ್ಯ ಚ ಸಂಭವಾತ್ ।**
**ನಿರ್ಮಮೇ ನಗರೀಂ ರಮ್ಯಾಂ ಸಾರಪುಣ್ಯಸಮನ್ವಿತಾಮ್ ॥ ೫೨೩ ॥**

ಆಗ ಅಲ್ಲಿ ದೇವೇಂದ್ರನ ಆಜ್ಞೆಯಿಂದ ಕುಬೇರನು ಶಾಸ್ತ್ರವಿಧಿಯಿಂದ ಬೆಳೆಸಲ್ಪಟ್ಟುದೂ ಸಹಸ್ರಕೂಟಗಳುಳ್ಳುದೂ ಪ್ರಕಾಶಮಾನವೂ ಪ್ರಕಾಶಮಾನವಾದ ರತ್ನಮಯವೂ ಮಂಗಲಗಳಿಗೆಲ್ಲ ಮಂಗಲವೂ ಆದ ದೊಡ್ಡದೊಂದು ಜಿನಮಂದಿರವನ್ನು ಮೊದಲು ಮಾಡಿ ಬಳಿಕ ಅಗಳು ಕೋಟೆ ಕಂದಕ ಅಟ್ಟಳಿಗೆಯೇ ಮೊದಲಾದುವುಗಳಿಂದ ಪ್ರಕಾಶಮಾನವೂ ರಮಣೀಯವೂ ಹರಿಯಪುಣ್ಯದಿಂದಲೂ ತೀರ್ಥೇಶ್ವರರ ಉತ್ಪತ್ತಿಯಿಂದಲೂ ಸಾರವಾದ ಪುಣ್ಯದಿಂದ ಯುಕ್ತವೂ ಆದ ನಗರಿಯನ್ನು ನಿರ್ಮಿಸಿದನು.

**ಸರಿತ್ಪತಿಮಹಾವೀಚೀಭುಜಾಲಿಂಗಿತಗೋಪುರಾಮ್ ।**
**ದೀಪ್ತ್ಯಾ ದ್ವಾರವತೀಸಂಜ್ಞಾಂ ಹಸಂತೀಂ ವಾಮರೀಂ ಪುರೀಮ್ ॥**

**ಸಪಿತಾ ಸಾಗ್ರಜೋ ವಿಷ್ಣುಸ್ತಾಂ ಪ್ರವಿಶ್ಯ ಯಥಾಸುಖಮ್ ।**
**ಲಕ್ಷ್ಮೀಕಟಾಕ್ಷಸಂವೀಕ್ಷ್ಯಸ್ತಸ್ಥಿವಾನ್ಯಾದವೈಃ ಸಹ ॥ ೫೨೫ ॥**

ತಂದೆಯೊಡನೆಯೂ ಅಣ್ಣನೊಡನೆಯೂ ಸಮೇತನೂ ಲಕ್ಷ್ಮಿಯ ಕಟಾಕ್ಷಗಳಿಂದ ನೋಡಲ್ಪಡತಕ್ಕವನೂ ಆದ ಹರಿಯು ಸಮುದ್ರದ ದೊಡ್ಡತೆರೆಗಳೆಂಬ ತೋಳುಗಳಿಂದ ಅಪ್ಪಿಕೊಳ್ಳಲ್ಪಟ್ಟ ಗೋಪುರಗಳುಳ್ಳುದೂ ದ್ವಾರವತಿಯೆಂಬ ಹೆಸರುಳ್ಳುದೂ ದೀಪ್ತಿಯಿಂದ ಅಮರಪುರಿಯನ್ನು ನೋಡಿ ನಗುವಂತಿರುವುದೂ ಆದ ಆ ಪುರವನ್ನು ಪ್ರವೇಶಿಸಿ ಯಾದವರೊಡನೆ ಸುಖವಾಗಿದ್ದನು.

**ಅಥಾತೋ ಭುವನಾಧೀಶೇ ಜಯಂತಾದಾಗಮಿಷ್ಯತಿ ।**
**ವಿಮಾನಾದಹಮಿಂದ್ರೇಮಾಂ ಮಹೀಂ ಮಾಸ್ಯೈಃ ಷಡುನ್ಮಿತೈಃ ॥ ೫೨೬ ॥**

**ರಾಜ್ಞಃ ಕಾಶ್ಯಪಗೋತ್ರಸ್ಯ ಹರಿವಂಶಶಿಖಾಮಣೇಃ ।**
**ಸಮುದ್ರವಿಜಯಾಖ್ಯಸ್ಯ ಶಿವದೇವೀ ಮನೋರಮಾ ॥ ೫೨೭ ॥**

**ದೇವತೋಪಾಸ್ಯಮಾನಾಂಘ್ರಿರ್ವಸುಧಾರಾಭಿವಂದಿತಾ ।**
**ಷಣ್ಮಾಸಾವಸಿತೌ ಮಾಸೇ ಕಾರ್ತಿಕೇ ಶುಕ್ಲಪಕ್ಷಗೇ ॥ ೫೨೮ ॥**

**ಷಷ್ಠ್ಯಾಮಥೋತ್ತರಾಷಾಢೇ ನಿಶಾಂತೇ ಸ್ವಪ್ನಮಾಲಿಕಾಮ್ ।**
**ಆಲೋಕತಾನುವಕ್ತ್ರಾಬ್ಜಂ ಪ್ರವಿಷ್ಟಂ ಚ ಗಜಾಧಿಪಮ್ ॥ ೫೨೯ ॥**

ಬಳಿಕ ಅಹಮಿಂದ್ರನಾದ ಲೋಕಾಧಿಪತಿಯು ಜಯಂತವಿಮಾನದಿಂದ ಈ ಭೂಮಿಗೆ ಆರುತಿಂಗಳುಗಳಿಂದ ಬರುವವನಾಗಿರುತ್ತಿರಲು ಕಾಶ್ಯಪಗೋತ್ರಜನೂ ಹರಿವಂಶಶಿಖಾಮಣಿಯೂ ಆದ ಸಮುದ್ರವಿಜಯರಾಜನ ಮನೋರಮಾ–ಪತ್ನಿಯಾದ ಶಿವದೇವಿಯು ದೇವತೆಗಳಿಂದ ಸೇವಿಸಲ್ಪಟ್ಟ ಚರಣಗಳುಳ್ಳವಳೂ ಧನವೃಷ್ಟಿಯಿಂದ ಅಭಿನಂದಿಸಲ್ಪಟ್ಟವಳೂ ಆಗಿ ಆರುತಿಂಗಳುಗಳು ಪೂರ್ತಿಯಾದಂದು ಕಾರ್ತಿಕಮಾಸದಲ್ಲಿ ಶುಕ್ಲಪಕ್ಷವನ್ನು ಹೊಂದಿರುವ ಉತ್ತರಾಷಾಢನಕ್ಷತ್ರದಲ್ಲಿ ಷಷ್ಠೀತಿಥಿಯಲ್ಲಿ ಬೆಳಗಿನ ಜಾವದಲ್ಲಿ ಸ್ವಪ್ನಮಾಲಿಕೆಯನ್ನೂ ಮುಖಕಮಲವನ್ನು ಪ್ರವೇಶಿಸಿದ ಗಜೇಂದ್ರನನ್ನೂ ನೋಡಿದಳು.

**ತತೋ ವಂದಿವಚೋಯಾಮಭೇರೀಧ್ವನಿವಿಬೋಧಿತಾ ।**
**ಕೃತಮಂಗಲಸುಸ್ನಾನಾ ಧೃತಪುಣ್ಯಪ್ರಸಾಧನಾ ॥ ೫೩೦ ॥**

**ಉಪಚಾರವದಭ್ಯೇತ್ಯ ನೃಪಮರ್ಧಾಸನೇ ಸ್ಥಿತಾ ।**
**ಸ್ವದೃಷ್ಟಸ್ವಪ್ನಸಾಫಲ್ಯಮನ್ವಯುಙ್ಕ್ತ ಶ್ರುತಾಗಮಮ್ ॥ ೫೩೧ ॥**

ಬಳಿಕ ಸ್ತುತಿಪಾಠಕರ ವಚನದಿಂದಲೂ ಯಾಮಭೇರಿಯ ಧ್ವನಿಯಿಂದಲೂ ಎಚ್ಚರಿಸಲ್ಪಟ್ಟವಳೂ ಮಂಗಲಸ್ನಾನವನ್ನು ಮಾಡಿದವಳೂ ಪುಣ್ಯಕರವಾದ ಮಂಗಲಾಲಂಕಾರಗಳನ್ನು ಧರಿಸಿರುವವಳೂ ಆಗಮಶ್ರವಣವನ್ನು ಮಾಡಿರುವ ಸಮುದ್ರವಿಜಯಮಹಾರಾಜನನ್ನು ಉಪಚಾರದಂತೆ ಹೊಂದಿ ಅರ್ಧಾಸನದಲ್ಲಿ ಕುಳಿತವಳೂ ಆಗಿ ತಾನು ಕಂಡ ಕನಸುಗಳ ಸಫಲತೆಯನ್ನು ಪ್ರಶ್ನೆಮಾಡಿದಳು.

**ಸಂಕಲಯ್ಯ ನರೇಂದ್ರೋಪಿ ಫಲಂ ತೇಷಾಮಭಾಷತ ।**
**ತ್ವದ್ಗರ್ಭೇ ವಿಶ್ವಲೋಕೇಶೋವತೀರ್ಣ ಇತಿ ಸೂಕ್ಷ್ಮಧೀಃ ॥ ೫೩೨ ॥**

ಸೂಕ್ಷ್ಮಬುದ್ಧಿಯುಳ್ಳವನಾದ ಸಮುದ್ರವಿಜಯಮಹಾರಾಜನೂ ಆ ಕನಸುಗಳ ಫಲವನ್ನು ಸಂಗ್ರಹಿಸಿ "ನಿನ್ನ ಗರ್ಭದಲ್ಲಿ ಸಕಲಲೋಕಾಧಿಪತಿಯು ಅವತರಿಸಿದನು" ಎಂದು ಹೇಳಿದನು.

**ಶ್ರುತ್ವಾ ತದ್ಯೈವ ತಂ ಲಬ್ಧವತೀವಾತುಷದಪ್ಯಸೌ ।**
**ಜ್ಞಾತ್ವಾ ಸ್ವಚಿಹ್ನೈರ್ದೇವೇಂದ್ರಾಃ ಸಂಭೂಯಾಗತ್ಯ ಸಂಮದಾತ್॥ ೫೩೩ ॥**

**ಸ್ವರ್ಗಾವತಾರಕಲ್ಯಾಣಮಹೋತ್ಸವವಿಧಾಯಿನಃ ।**
**ಸ್ವೇಷಾಂ ಪುಣ್ಯಂ ಚ ನಿರ್ವರ್ತ್ಯ ಸ್ವಧಾಮ ಸಮುಪಾಗಮನ್ ॥ ೫೩೪ ॥**

ಈ ಶಿವದೇವಿಯೂ ಆ ಮಾತನ್ನು ಕೇಳಿ ಸ್ವಾಮಿಯನ್ನು ಆಗಲೇ ಪಡೆದಳೋ ಎಂಬಂತೆ ಸಂತೋಷಪಟ್ಟಳು. ದೇವೇಂದ್ರರು ಆ ವಿಷಯವನ್ನು ತಮ್ಮ ಚಿಹ್ನೆಗಳಿಂದ ತಿಳಿದು ಸಂತೋಷದಿಂದ ಸೇರಿ ಬಂದು ಸ್ವರ್ಗಾವತರಣಕಲ್ಯಾಣ ಮಹೋತ್ಸವವನ್ನು ಮಾಡಿದವರಾಗಿ ತಮಗೆ ಪುಣ್ಯವನ್ನೂ ಗಳಿಸಿಕೊಂಡು ತಮ್ಮ ಸ್ಥಾನವನ್ನು ಹೊಂದಿದರು. ತಂತಮ್ಮಸ್ಥಾನಕ್ಕೆ ಹೊರಟುಹೋದರೆಂದು ಭಾವವು.

**ಸ ಪುನಃ ಶ್ರಾವಣೇ ಶುಕ್ಲಪಕ್ಷೇ ಷಷ್ಠೀದಿನೇ ಜಿನಃ ।**
**ಜ್ಞಾನತ್ರಿತಯಭೃತ್ತ್ವಷ್ಟ್ರಯೋಗೇ ತುಷ್ಟ್ಯಾಮಜಾಯತ ॥ ೫೩೫ ॥**

ಬಳಿಕ ಶ್ರಾವಣಮಾಸದ ಶುಕ್ಲಪಕ್ಷದ ಷಷ್ಠೀದಿನದಲ್ಲಿ ಬ್ರಹ್ಮಯೋಗದಲ್ಲಿ ಮತಿ ಶ್ರುತಾವಧಿಜ್ಞಾನತ್ರಯಧಾರಿಯಾದ ಆ ಜಿನನು ಸಂತೋಷದಲ್ಲಿ ಜನಿಸಿದನು.

**ಅಥ ಸ್ವವಿಷ್ಟರಾಕಂಪಸಮುತ್ಪನ್ನಾವಧೀಕ್ಷಣಾಃ ।**
**ಬುಧ್ವಾ ಭಗವದುತ್ಪತ್ತಿಂ ಸೌಧರ್ಮೇಂದ್ರಪುರಸ್ಸರಾಃ ॥ ೫೩೬ ॥**

**ಸಂಜಾತಸಂಮದಾಃ ಪ್ರಾಪ್ಯ ಪರಿವೇಷ್ಟ್ಯ ಪುರಂ ಸ್ಥಿತಾಃ ।**
**ಐರಾವತಗಜಸ್ಕಂಧಮಾರೋಪ್ಯ ಭುವನಪ್ರಭುಮ್ ॥ ೫೩೭ ॥**

**ಸೌಧರ್ಮಾಧಿಪತಿರ್ಭಕ್ತ್ಯಾ ನೀಲಾಂಭೋಜದಲದ್ಯುತಿಮ್ ।**
**ಈಶಮೀಶಾನಕಲ್ಪೇಶಧೃತಾತಪನಿವಾರಣಮ್ ॥ ೫೩೮ ॥**

**ನಮುಚ್ಚಮರವೈರೋಚನೋದ್ಧೂತಚಮರೀರುಹಮ್ ।**
**ಧನೇಶನಿರ್ಮಿತತ್ರೇಧಾಮಣಿಸೋಪಾನಮಾರ್ಗಗಃ ॥ ೫೩೯ ॥**

**ನೀತ್ವಾ ಪಯೋದಮಾರ್ಗೇಣ ಗಿರೀಶೇಶಾನದಿಗ್ಗತೇ ।**
**ಪಾಂಡುಕಾಖ್ಯಶಿಲಾಗ್ರಸ್ಥಮಣಿಸಿಂಹಧೃತಾಸನೇ ॥ ೫೪೦ ॥**

**ಅನಾದಿನಿಧನೇ ಬಾಲಮಾರೋಪ್ಯಾತ್ಯರ್ಕತೇಜಸಮ್ ।**
**ಕ್ಷೀರಾಂಭೋಧಿಪಯಃಪೂರ್ಣಸುವರ್ಣಕಲಶೋತ್ತಮೈಃ ॥ ೫೪೧ ॥**

**ಅಷ್ಟಾಧಿಕಸಹಸ್ರೇಣ ಪ್ರಮಿತೈರಮಿತಪ್ರಭೈಃ ।**
**ಹಸ್ತಾದ್ಧಸ್ತಂ ಕ್ರಮೇಣಾಮರಾಧಿನಾಥಸಮರ್ಪಿತೈಃ ॥ ೫೪೨ ॥**

**ಅಭಿಷಿಚ್ಯ ಯಥಾಕಾಮಮಲಂಕೃತ್ಯ ಯಥೋಚಿತಮ್ ।**
**ನೇಮಿಂ ಸದ್ಧರ್ಮಚಕ್ರಸ್ಯ ನೇಮಿನಾಮ್ನಾ ತಮಭ್ಯಧಾತ್ ॥ ೫೪೩ ॥**

ತರುವಾಯ ತಮ್ಮ ಆಸನಕಂಪದಿಂದುಂಟಾದ ಅವಧಿಜ್ಞಾನದಿಂದ ನೋಡಿದವರಾದ ಸೌಧರ್ಮೇಂದ್ರನೇ ಮೊದಲಾದ ದೇವರ್ಕಳು ಭಗವಂತನ ಉತ್ಪತ್ತಿಯನ್ನು ತಿಳಿದು ಸಂತೋಷೋತ್ಪತ್ತಿಯುಳ್ಳವರಾಗಿ ದ್ವಾರಾವತೀಪುರವನ್ನು ಸೇರಿ ಆವರಿಸಿ ನಿಂತರು. ಸೌಧರ್ಮೇಂದ್ರನು ಭಕ್ತಿಯಿಂದ ನೀಲಕಮಲದ ಎಸಳಿನಂತೆ ಕಾಂತಿಯುಳ್ಳವನೂ ಲೋಕಾಧಿಪತಿಯೂ ಈಶಾನಕಲ್ಪೇಂದ್ರನಿಂದ ಕೊಡೆಯನ್ನು ಹಿಡಿಸಿಕೊಂಡಿರುವವನೂ ನಮಸ್ಕರಿಸುತ್ತಿರುವ ಚಮರ ವೈರೋಚನೇಂದ್ರರಿಂದ ಚಾಮರಗಳನ್ನು ಬೀಸಿಸಿಕೊಳ್ಳುವವನೂ ಆದ ಸ್ವಾಮಿಯನ್ನು ಐರಾವತಗಜದ ಹೆಗಲನ್ನು ಹತ್ತಿಸಿ ಕುಬೇರನಿರ್ಮಿತವಾದ ಮೂರು ವಿಧವಾದ ಮಣಿಮಯ ಸೋಪಾನಮಾರ್ಗವನ್ನು ಹೊಂದಿದವನಾಗಿ ಮೇಘಮಾರ್ಗದಿಂದ ತೆಗೆದುಕೊಂಡು ಹೋಗಿ ಮೇರುಗಿರಿಯ ಈಶಾನದಿಕ್ಕನ್ನು ಹೊಂದಿರುವುದೂ ಅನಾದಿನಿಧನವೂ ಪಾಂಡುಕವೆಂಬ ಶಿಲೆಯ ತುದಿಯಲ್ಲಿರುವ ರತ್ನಮಯವಾದ ಸಿಂಹದಿಂದ ಧರಿಸಲ್ಪಟ್ಟಿರುವುದೂ ಆದ ಪೀಠದಲ್ಲಿ ಸೂರ್ಯತೇಜಸ್ಸನ್ನು ಮೀರಿರುವ ಆ ಜಿನಬಾಲಕನನ್ನು ಹತ್ತಿಸಿ ಅಪರಿಮಿತವಾದ ಕಾಂತಿಯುಳ್ಳವೂ ಕ್ರಮದಿಂದ ಕೈಯಿಂದ ಕೈಗೆ ದೇವೇಂದ್ರರಿಂದ ಕೊಡಲ್ಪಟ್ಟುವೂ ಕ್ಷೀರಸಮುದ್ರದ ಜಲದಿಂದ ತುಂಬಿರುವುವೂ ಆದ ಸಾವಿರದೆಂಟು ಶ್ರೇಷ್ಠ ಸುವರ್ಣಕಲಶಗಳಿಂದ ಯಥೇಚ್ಛವಾಗಿ ಅಭಿಷೇಕವನ್ನು ಮಾಡಿ ಬಳಿಕ ಯಥೋಚಿತವಾಗಿ ಅಲಂಕರಿಸಿ ಸದ್ಧರ್ಮವೆಂಬ ಚಕ್ರಕ್ಕೆ ನೇಮಿ(ಬಳೆ)ಯಾಗಿರುವ ಆ ಸ್ವಾಮಿಯನ್ನು ನೇಮಿಯೆಂಬ ಹೆಸರಿನಿಂದ ಕರೆದನು. ಸೌಧರ್ಮೇಂದ್ರನು ಆ ಜಿನಬಾಲಕನಿಗೆ ನೇಮಿನಾಥನೆಂದು ನಾಮಕರಣವನ್ನು ಮಾಡಿದನೆಂದು ಭಾವವು.

**ತಸ್ಮಾದಾನೀಯ ಮೌಲೀಂದ್ರಮಾನನೀಯಮಹೋದಯಮ್ ।**
**ಮಾತಾಪಿತ್ರೋಃ ಪುನರ್ದತ್ವಾ ವಿಧಾಯಾನಂದನಾಟಕಮ್ ॥ ೫೪೪ ॥**

**ವಿಕೃತ್ಯ ವಿವಿಧಾನ್ಬಾಹೂನ್ ರಸಭಾವನಿರಂತರಮ್ ।**
**ಸ್ವಾವಾಸಮುಗಮತ್ಸರ್ವೈರಾದಿಮೇಂದ್ರಃ ಸಹಾಮರೈಃ ॥ ೫೪೫ ॥**

ಪ್ರಥಮಸ್ವರ್ಗದ ದೇವೇಂದ್ರನು ಇಂದ್ರಕಿರೀಟಗಳಿಂದ ಮಾನನೀಯವಾದ ಮಹೋದಯವುಳ್ಳ ಸ್ವಾಮಿಯನ್ನು ಆ ಮೇರುಪರ್ವತದಿಂದ ತಂದು ಪುನಃ ತಾಯಿತಂದೆಗಳಿಗೆ ಕೊಟ್ಟು ರಸಭಾವಗಳಿಂದ ಎಡೆಬಿಡದಿರುವ ಆನಂದನಾಟಕವನ್ನು ಮಾಡಿ ವಿವಿಧಭುಜಗಳನ್ನು ವಿಗುರ್ವಿಸಿ ಎಲ್ಲಾ ದೇವರ್ಕಳೊಡನೆ ತನ್ನ ವಾಸಸ್ಥಾನಕ್ಕೆ ಹೋದನು.

**ನಮೇರ್ಭಗವತಸ್ತೀರ್ಥಸಂತಾನಸಮಯಸ್ಥಿತೇಃ ।**
**ಪಂಚಲಕ್ಷಸಮಾಪ್ರಾಂತೇ ತದಂತರ್ಗತಜೀವಿತಃ ॥ ೫೪೬ ॥**

**ಜಿನೋ ನೇಮಿಃ ಸಮುತ್ಪನ್ನಃ ಸಹಸ್ರಾಬ್ದಾಯುರನ್ವಿತಃ ।**
**ದಶಚಾಪಸಮುತ್ಸೇಧಃ ಶಸ್ತಸಂಸ್ಥಾನಸಂಹತಿಃ ॥ ೫೪೭ ॥**

**ತ್ರಿಲೋಕನಾಯಕಾಭ್ಯರ್ಚ್ಯಃ ಸ್ವಭ್ಯರ್ಣೀಕೃತನಿರ್ವೃತಿಃ ।**
**ತಸ್ಥೌ ಸುಖಾನಿ ದಿವ್ಯಾನಿ ತಸ್ಮಿನ್ನನುಭವಂಶ್ಚಿರಮ್ ॥ ೫೪೮ ॥**

ನಮಿಭಗವಂತನ ತೀರ್ಥಪರಂಪರೆಯ ಕಾಲಸ್ಥಿತಿಯ ಐದುಲಕ್ಷ ವರ್ಷಗಳ ಕೊನೆಯಲ್ಲಿ ಹುಟ್ಟಿದವನೂ ಆ ಅವಧಿಯೊಳಗೆ ಜೀವಿಸಿದವನೂ ಸಹಸ್ರವರ್ಷಾಯುಷ್ಯವುಳ್ಳವನೂ ಹತ್ತು ಧನುಸ್ಸು ಶರೀರೋತ್ಸೇಧವುಳ್ಳವನೂ ಸಮಚತುರಸ್ರ ಸಂಸ್ಥಾನ ವಜ್ರವೃಷಭನಾರಾಚಸಂಹನನಗಳುಳ್ಳವನೂ ತ್ರಿಲೋಕಾಧಿಪತಿಗಳಿಂದ ಪೂಜಿಸಲ್ಪಡತಕ್ಕವನೂ ಬಹುಸಮೀಪವಾಗಿ ಮಾಡಲ್ಪಟ್ಟ ಮುಕ್ತಿಯುಳ್ಳವನೂ ಆದ ನೇಮಿಜಿನನು ಆ ದ್ವಾರಾವತಿಯಲ್ಲಿ ಬಹುಕಾಲದವರೆಗೆ ದಿವ್ಯಸುಖಗಳನ್ನನುಭವಿಸುವವನಾಗಿದ್ದನು.

**ಗಚ್ಛತ್ಯೇವಂ ಕ್ಷಣೇ ವಾಸ್ಯ ಕಾಲೇ ಬಹುತರೇನ್ಯದಾ ।**
**ಆತ್ತವಾರಿಪಥೋದ್ಯೋಗಾ ನಷ್ಟದಿಕ್ಕಾ ವಣಿಕ್ಸುತಾಃ ॥ ೫೪೯ ॥**

**ಪ್ರಾಪ್ಯ ದ್ವಾರಾವತೀಂ ಕೇಚಿತ್ಪುಣ್ಯಾನ್ಮಗಧವಾಸಿನಃ ।**
**ರಾಜ್ಯಲೀಲಾಂ ವಿಲೋಕ್ಯಾತ್ರ ವಿಭೂತಿಂ ಚ ಸವಿಸ್ಮಯಾಃ ॥ ೫೫೦ ॥**

**ಬಹೂನಿ ರತ್ನಾನ್ಯಾದಾಯ ಸಾರಭೂತಾನಿ ತತ್ಪುರಾತ್ ।**
**ಗತ್ವಾ ರಾಜಗೃಹಂ ಪ್ರಾಪ್ತಚಕ್ರರತ್ನಂ ಮಹೀಪತಿಮ್ ॥ ೫೫೧ ॥**

**ರತ್ನಾನ್ಯುಪಾಯನೀಕೃತ್ಯ ಪುರಸ್ಕೃತ್ಯ ವಣಿಕ್ಪತಿಮ್ ।**
**ದದೃಶುಃ ಕೃತಸನ್ಮಾನಸ್ತಾನಪೃಚ್ಛತ್ಪಜೇಶ್ವರಃ ॥ ೫೫೨ ॥**

**ಭೋ ಭವದ್ಭಿಃ ಕುತೋ ಲಬ್ಧಮಿದಂ ರತ್ನಕದಂಬಕಮ್ ।**
**ಉದಂಶುಭಿರಿವೋನ್ಮೀಲಿತೇಕ್ಷಣಂ ಕೌತುಕಾದಿತಿ ॥ ೫೫೩ ॥**

ಈ ಪ್ರಕಾರವಾಗಿ ಈನೇಮಿಸ್ವಾಮಿಯ ಬಹುತರವಾದ ಕಾಲವು, ಕ್ಷಣದಂತೆ, ಕಳೆಯುತ್ತಿರಲು ಮತ್ತೊಂದು ದಿವಸ ಜಲಮಾರ್ಗದ-ಸಮುದ್ರಯಾನದ ಉದ್ಯೋಗವನ್ನು ಗ್ರಹಣಮಾಡಿರುವವರೂ ದಿಕ್ಕುತಪ್ಪಿದವರೂ ಮಗಧದೇಶ ವಾಸಿಗಳೂ ಆದ ಕೆಲವು ವೈಶ್ಯಪುತ್ರರು ಪುಣ್ಯದಿಂದ ದ್ವಾರಾವತಿಯನ್ನು ಸೇರಿ ಇಲ್ಲಿ ರಾಜ್ಯಲೀಲೆಯನ್ನೂ ರಾಜನನ್ನೂ ನೋಡಿ ಆಶ್ಚರ್ಯಯುಕ್ತರಾಗಿ ಆ ನಗರದಿಂದ ಸಾರಭೂತವಾದ ಅನೇಕರತ್ನಗಳನ್ನು ತೆಗೆದುಕೊಂಡು ರಾಜಗೃಹಕ್ಕೆ ಹೋಗಿ ಚಕ್ರರತ್ನವನ್ನು ಪಡೆದಿರುವ ರಾಜನನ್ನು ವೈಶ್ಯರಪ್ರಮುಖನನ್ನು ಮುಂದೆ ಮಾಡಿಕೊಂಡು ರತ್ನಗಳನ್ನು ಕೈಗಾಣಿಗೆ ಕೊಟ್ಟು ಕಂಡರು. ಪ್ರಜಾಧಿಪತಿ-ರಾಜನು ಅವರಿಗೆ ಸನ್ಮಾನವನ್ನು ಮಾಡಿದವನಾಗಿ ''ಎಲೈ ವರ್ತಕರೆ ! ನೀವುಗಳು ಹೆಚ್ಚಾದ ಕಿರಣಗಳಿಂದ ಕುತೂಹಲದಿಂದ ತೆರೆದ ಕಣ್ಣಿನಂತಿರುವ ಈ ರತ್ನಸಮೂಹವನ್ನು ಎಲ್ಲಿಂದ ಪಡೆದಿರಿ ?'' ಎಂದು ಅವರನ್ನು ಕೇಳಿದನು.

**ಶೃಣು ದೇವ ಮಹಚ್ಚಿತ್ರಮೇತದಸ್ಮದ್ವಿಲೋಕಿತಮ್ ।**
**ಪಾತಾಲಾದೇತ್ಯ ವಾದೃಷ್ಟಪೂರ್ವಮುರ್ವೀಮುಪಸ್ಥಿತಮ್ ॥ ೫೫೪ ॥**

**ಸಂಕುಲೀಕೃತಸೌಧೋರುಭವನತ್ವಾದಿವಾಂಬುಧೇಃ ।**
**ಫೇನರಾಶಿಸ್ತದಾಕಾರಪರಿಣಾಮಮುಪಾಗತಃ ॥ ೫೫೫ ॥**

**ಅಲಂಘ್ಯತ್ವಾತ್ಪರೈಃ ಪುಣ್ಯಂ ವಾಪರಂ ಭರತೇಶಿತುಃ ।**
**ನೇಮಿಸ್ವಾಮಿಸಮುತ್ಪತ್ತಿಹೇತುತ್ವಾನ್ನಗರೋತ್ತಮಮ್ ॥ ೫೫೬ ॥**

**ಅಸಂಹತಮನಾಸೇವ್ಯಮರ್ಥಿಭಿರ್ವೀತಗೌರವಮ್ ।**
**ಶರದಬ್ದಕುಲಂ ತಿಷ್ಠತ್ಯುಪರ್ಯೇತನ್ಮಮೇತಿ ವಾ ॥ ೫೫೭ ॥**

**ಸೌಧಾಗ್ರಾಂದೋಲಿತಾಲೋಲಪತಾಕಾಬಹುಬಾಹುಭಿಃ ।**
**ನಿರಾಚಿಕೀರ್ಷು ಸಂಘರ್ಷಾದ್ದೂರಮಭ್ರಪಥೋಚ್ಛ್ರಿತಮ್ ॥ ೫೫೮ ॥**

**ಪರಾರ್ಧ್ಯಭೂರಿರತ್ನತ್ವಾತ್ಕೃಷ್ಣತೇಜೋವಿರಾಜನಾತ್ ।**
**ಸದಾ ಗಂಭೀರಶಬ್ದತ್ವಾದಂಭೋಧಿಜಲಸನ್ನಿಭಮ್ ॥ ೫೫೯ ॥**

**ನವಯೋಜನವಿಸ್ತಾರಂ ದೈರ್ಘ್ಯದ್ವಾದಶಯೋಜನಮ್ ।**
**ಪುರಂ ದ್ವಾರವತೀನಾಮ ಯಾದವಾನಾಂ ಪಯೋನಿಧೇಃ ॥ ೫೬೦ ॥**

**ಮಧ್ಯೇ ಪ್ರವರ್ತತೇ ತಸ್ಮಾದೇತದ್ರತ್ನಕದಂಬಕಮ್ ।**
**ಲಬ್ಧಮಸ್ಮಾಭಿರಿತ್ಯೇವಮಬ್ರುವಂಸ್ತೇಪಿ ಭೂಪತಿಃ ॥ ೫೬೧ ॥**

**ಶ್ರುತ್ವಾ ತದ್ವಚನಂ ಕ್ರೋಧೇನಾಂಧೀಭೂತೋಗ್ರವೀಕ್ಷಣಃ ।**
**ಜರಾಸಂಧೋ ಧಿಯಾಪ್ಯಂಧೋ ದರ್ಪೀ ದೈವಾತಿಸಂಧಿತಃ ॥ ೫೬೨ ॥**

**ಚಚಾಲಾಕಾಲಕಾಲಾಂತಚಲಿತಾತ್ಮಬಲಾಂಬುಧಿಃ ।**
**ಕರ್ತುಂ ಯಾದವಲೋಕಸ್ಯ ವಿಲಯಂ ವಾವಿಲಂಬಿತಮ್ ॥ ೫೬೩ ॥**

ಆ ವೈಶ್ಯಪುತ್ರರೂ ರಾಜನನ್ನು ಕುರಿತು ''ಸ್ವಾಮಿಯೆ ! ನಾವುಗಳು ನೋಡಿದ ಈ ಮಹದಾಶ್ಚರ್ಯವನ್ನು ಕೇಳು. ಪಾತಾಳದಿಂದ ಬಂದೋ ಎಂಬಂತೆ ಮೊದಲು ನೋಡಲ್ಪಡದಿರುವುದೂ ಭೂಮಿಯನ್ನು ಹೊಂದಿರುವುದೂ ಸಮೂಹವಾಗಿ ಮಾಡಲ್ಪಟ್ಟ ಅರಮನೆಗಳಿರುವುದರಿಂದಲೂ ದೊಡ್ಡಮನೆಗಳಿರುವುದರಿಂದಲೂ ಸಮುದ್ರದ ನೊರೆಗಳ ರಾಶಿಯು ಅವುಗಳ ಆಕಾರವನ್ನು ಹೊಂದಿದೆಯೋ ಎಂಬಂತಿರುವುದೂ ಬೇರೆಯವರಿಂದ ದಾಟಲಶಕ್ಯವಾಗಿರುವುದರಿಂದ ಭರತಾಧಿಪತಿ-ಕೃಷ್ಣನ ಬೇರೊಂದು ಪುಣ್ಯವೋ ಎಂಬಂತಿರುವುದೂ ನೇಮಿಸ್ವಾಮಿಯ ಉತ್ಪತ್ತಿಗೆ ಕಾರಣವಾಗಿರುವುದರಿಂದ ಉತ್ತಮನಗರವೂ ಒತ್ತಾಟವಿಲ್ಲದಿರುವುದೂ ಯಾಚಕರಿಂದ ಸೇವಿಸಲ್ಪಡತಕ್ಕುದಲ್ಲದುದೂ ''ಗೌರವ-ಭಾರವಿಲ್ಲದಿರುವ ಈ ಶರತ್ಕಾಲದ ಮೇಘಸಮೂಹವು ನನ್ನ ಮೇಲೆ ನಿಂತಿರುತ್ತದೆ'' ಎಂದು ಅರಮನೆಗಳ ಮೇಲೆ ಹಾರಾಡುತ್ತಿರುವ ಚಂಚಲವಾದ ಬಾವುಟಗಳೆಂಬ ಅನೇಕಭುಜಗಳಿಂದ ಉಜ್ಜುವುದರಿಂದ ಮೇಘಮಾರ್ಗದ ಉನ್ನತಿಯನ್ನು ದೂರವಾಗಿ ನಿರಾಕರಿಸುವುದಕ್ಕೆ ಇಚ್ಛಿಸುವಂತಿರುವುದೂ ಉತ್ಕೃಷ್ಟವೂ ಅಧಿಕವೂ ಆದ ರತ್ನಗಳಿರುವುದರಿಂದಲೂ ಕೃಷ್ಣನ ತೇಜಸ್ಸಿನ ವಿರಾಜಿಸುವಿಕೆಯಿಂದಲೂ ಯಾವಾಗಲೂ ಗಂಭೀರವಾದ ಶಬ್ದವಿರುವುದರಿಂದಲೂ ಸಮುದ್ರದ ನೀರಿಗೆ ಸಮಾನವೂ ಒಂಬತ್ತು ಯೋಜನವಿಸ್ತಾರವೂ ಹನ್ನೆರಡು ಯೋಜನದೀರ್ಘವೂ ಆದ ದ್ವಾರಾವತಿಯೆಂಬ ಯಾದವರನಗರವು ಸಮುದ್ರದ ಮಧ್ಯದಲ್ಲಿರುತ್ತದೆ. ಆ ಪಟ್ಟಣದಿಂದ ನಾವುಗಳು ಈ ರತ್ನಸಮೂಹವನ್ನು ಪಡೆದೆವು'' ಎಂದು ಈ ರೀತಿಯಾಗಿ ಹೇಳಿದರು. ಆ ಮಾತನ್ನು ಕೇಳಿ ಕೋಪದಿಂದ ಕುರುಡಾದ ಉಗ್ರದೃಷ್ಟಿಯುಳ್ಳವನೂ ಬುದ್ಧಿಯಿಂದಲೂ ಅಂಧನೂ ಅಹಂಕಾರಿಯೂ ದೈವದಿಂದ ವಂಚಿತನೂ ಆದ ಜರಾಸಂಧ ರಾಜನು ಅಕಾಲದಲ್ಲಿ ಪ್ರಳಯಕಾಲದಲ್ಲಿ ಚಲಿಸಿದ ತನ್ನ ಸೈನ್ಯವೆಂಬ ಸಮುದ್ರವುಳ್ಳವನಾಗಿ ಯಾದವಲೋಕದ ನಾಶವನ್ನು ಶೀಘ್ರವಾಗಿ ಮಾಡುವುದಕ್ಕೋಸ್ಕರವೋ ಎಂಬಂತೆ ನಡೆದನು. ಜರಾಸಂಧನು ಮಹಾಸೈನ್ಯಸಮೇತನಾಗಿ ಯಾದವರೊಡನೆ ಯುದ್ಧಕ್ಕೆ ಹೊರಟನೆಂದು ಭಾವವು.

**ನಾರದಸ್ತತ್ತದಾ ಜ್ಞಾತ್ವಾ ನಿರ್ಹೇತುಸಮರಪ್ರಿಯಃ ।**
**ಹರಿಂ ಸತ್ವರಮಭ್ಯೇತ್ಯ ತದ್ವಿಕಾರಂ ನ್ಯವೇದಯತ್ ॥ ೫೬೪ ॥**

ಆಗ ನಿಷ್ಕಾರಣವಾದ ಯುದ್ಧದಲ್ಲಿ ಪ್ರಿಯನಾದ ನಾರದನು ಅದನ್ನು ತಿಳಿದು ಶೀಘ್ರವಾಗಿ ಹರಿಯನ್ನು ಕಂಡು ಜರಾಸಂಧನ ವಿಕಾರವನ್ನು ತಿಳಿಸಿದನು.

**ಶ್ರುತ್ವಾ ಶಾರ್ಙ್ಗಧರಃ ಶತ್ರುಸಮುತ್ಥಾನಮನಾಕುಲಮ್ ।**
**ಕುಮಾರಂ ನೇಮಿಮಭ್ಯೇತ್ಯ ಪ್ರಶಾಧಿ ತ್ವಮಿದಂ ಪುರಮ್ ॥ ೫೬೫ ॥**

**ವಿಜಿಗೀಷುಃ ಕಿಲಾದ್ಯಾಭೂತ್ತತ್ರಸ್ಮಾನ್ಮಗಧಾಧಿಪಃ ।**
**ಭನಜ್ಮಿ ತಮಹಂ ಜೀರ್ಣಂ ದ್ರುಮಂ ವಾ ಘುಣಭಕ್ಷಿತಮ್ ॥ ೫೬೬ ॥**

**ತೂರ್ಣಂ ಭವತ್ಪ್ರಭಾವೇನ ಗತ್ವೇತ್ಯವದದೂರ್ಜಿತಮ್ ।**
**ಪ್ರಸನ್ನಚೇತಾಸ್ತಚ್ಛ್ರುತ್ವಾ ಸಸ್ಮಿತೋ ಮಧುರೇಕ್ಷಣಃ ॥ ೫೬೭ ॥**

**ಸಾವಧಿರ್ವಿಜಯಂ ತೇನ ವಿನಿಶ್ಚಿತ್ಯ ವಿರೋಧಿನಾಮ್ ।**
**ಸ್ಫುರದ್ದಂತರುಚಿರ್ವಿಷ್ಣುಂ ನೇಮಿರೋಮಿತ್ಯಭಾಷತ ॥ ೫೬೮ ॥**

ಶಾರ್ಙ್ಗಧರನಾದ ಕೃಷ್ಣನು ಶತ್ರುವಿನ ಏಳುವಿಕೆಯನ್ನು ಕೇಳಿ ವ್ಯಾಕುಲವಿಲ್ಲದ ರೀತಿಯಾಗಿ ನೇಮಿಕುಮಾರನ ಬಳಿಗೆ ಹೋಗಿ ''ನೀನು ಈ ನಗರವನ್ನು ಆಳು. ಇಂದು ಮಗಧಾಧಿಪತಿಯು ನಮ್ಮಗಳನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಾದನಂತೆ. ನಾನು ಶೀಘ್ರವಾಗಿ ಹೋಗಿ ಕುಟ್ಟೆಹುಳದಿಂದ ಭಕ್ಷಿತವೂ ಶಿಥಿಲವೂ ಆದ ಮರವನ್ನು ಮುರಿಯುವಂತೆ ನಿನ್ನ ಪ್ರಭಾವದಿಂದ ಆ ಜರಾಸಂಧನನ್ನು ಮುರಿಯುತ್ತೇನೆ'' ಎಂದು ತೀವ್ರವಾಗಿ ನುಡಿದನು. ಆ ಮಾತನ್ನು ಕೇಳಿ ಪ್ರಸನ್ನವಾದ ಚಿತ್ತವುಳ್ಳವನೂ ಮುಗುಳ್ನಗೆಯುಳ್ಳವನೂ ಮಧುರವಾದ ದೃಷ್ಟಿಯುಳ್ಳವನೂ ಅವಧಿಜ್ಞಾನಯುಕ್ತನೂ ಆ ಜ್ಞಾನದಿಂದ ಶತ್ರುಗಳ ವಿಜಯವನ್ನು ಚೆನ್ನಾಗಿ ನಿಶ್ಚಯಿಸಿ ಪ್ರಕಾಶಮಾನವಾದ ದಂತಕಾಂತಿಯುಳ್ಳವನೂ ಆದ ನೇಮಿಕುಮಾರನು ''ಅಹುದು'' ಎಂದು ನುಡಿದನು.

**ಸ್ಮಿತಾದ್ಯೈಃ ಸ್ವಂ ಜಯಂ ಸೋಪಿ ನಿಶ್ಚಿಚಾಯ ಜಗತ್ಪ್ರಭೋಃ ।**
**ಜೈನೋ ವಾದೀವ ಪಕ್ಷಾದ್ಯೈರೇಕಲಕ್ಷಣಭೂಷಣೈಃ ॥ ೫೬೯ ॥**

ಜೈನವಾದಿಯು ಅನ್ಯಥಾನುಪಪತ್ತಿರೂಪವಾದ ಒಂದು ಲಕ್ಷಣವೇ ಭೂಷಣವಾಗಿರುವ ಪಕ್ಷವೇ ಮೊದಲಾದುವುಗಳಿಂದ ತನ್ನ ಜಯವನ್ನು ನಿಶ್ಚಯಿಸುವಂತೆ ಆ ಕೃಷ್ಣನೂ ಜಗತ್ಪ್ರಭುವಿನ ಮುಗುಳ್ನಗೆಯೇ ಮೊದಲಾದುವುಗಳಿಂದ ತನ್ನ ಜಯವನ್ನು ನಿಶ್ಚಯಿಸಿದನು.

**ಅಥ ಶತ್ರೂನ್ ಸಮುಜ್ಜೇತುಂ ಜಯೇನ ವಿಜಯೇನ ಚ ।**
**ಸಾರಣೇನಾಂಗದಾಖ್ಯೇನ ದವಾಹ್ವೇನೋದ್ಧವೇನ ಚ ॥ ೫೭೦ ॥**

**ಸಮುಖಾಕ್ಷರಪದ್ಮೈಶ್ಚ ಜರಾಖ್ಯೇನ ಸುದೃಷ್ಟಿನಾ ।**
**ಪಾಂಡವೈಃ ಪಂಚಭಿಃ ಸತ್ಯಕೇನಾಥ ದ್ರುಪದೇನ ಚ ॥ ೫೭೧ ॥**

**ಯಾದವೈಃ ಸವಿರಾಟಾಖ್ಯೈರಪ್ರಮೇಯೈರ್ಮಹಾಬಲೈಃ ।**
**ಧೃಷ್ಟಾರ್ಜುನೋಗ್ರಸೇನಾಖ್ಯಾಂ ಚಮರೇಣ ರಣೇಪುನಾ ॥ ೫೭೨ ॥**

**ವಿದುರೇಣ ನೃಪೈರನ್ಯೈಶ್ಚಾನ್ವಿತೌ ಬಲಕೇಶವೌ ।**
**ಸನ್ನದ್ಧಾವುದ್ಧತೌ ಯೋದ್ಧುಂ ಕುರುಕ್ಷೇತ್ರಮುಪಾಗತೌ ॥ ೫೭೩ ॥**

ಅನಂತರದಲ್ಲಿ ಶತ್ರುಗಳನ್ನು ಚೆನ್ನಾಗಿ ಜಯಿಸುವುದಕ್ಕೋಸ್ಕರ ಜಯ, ವಿಜಯ, ಸಾರಣ, ಅಂಗದ, ದವ, ಉದ್ಧವ, ಸುಮುಖ, ಅಕ್ಷರ, ಪದ್ಮ, ಜರ, ಸುದೃಷ್ಟಿ, ಪಂಚ ಪಾಂಡವರು, ಸತ್ಯಕ, ದುಪ್ರದ, ಯಾದವರು, ವಿರಾಟರು, ತಿಳಿಯುವುದಕ್ಕಶಕ್ಯವಾದ ಮಹಾಸೈನ್ಯಗಳು, ದಿಟ್ಟತನವುಳ್ಳ ಅರ್ಜುನ, ಉಗ್ರಸೇನ, ಯುದ್ಧವನ್ನಿಚ್ಛಿಸುವ ಚಮರ, ವಿದುರ ಇವರುಗಳೊಡನೆಯೂ ಇತರ ರಾಜರುಗಳೊಡನೆಯೂ ಕೂಡಿರುವವರೂ ಅಣಿಯಾಗಿರುವವರೂ ಉದ್ಧತರೂ ಆದ ಬಲರಾಮಕೇಶವರು ಯುದ್ಧ ಮಾಡುವುದಕ್ಕೋಸ್ಕರ ಕುರುಕ್ಷೇತ್ರವನ್ನು ಸೇರಿದರು.

**ಜರಾಸಂಧೋಽಪಿ ಯುದ್ಧೇಚ್ಛುರ್ಭೀಷ್ಮೇಣಾವಿಷ್ಕೃತೋಷ್ಮಣಾ ।**
**ಸದ್ರೋಣೇನ ಸಕರ್ಣೇನ ಸಾಶ್ವತ್ಥಾಮೇನ ರುಗ್ಮಿಣಾ ॥ ೫೭೪ ॥**

**ಶಲ್ಯೇನ ವೃಷಸೇನೇನ ಕೃಪೇಣ ಕೃಪವರ್ಮಣಾ ।**
**ರುದಿರೇಣೇಂದ್ರಸೇನೇನ ಜಯದ್ರಥಮಹೀಭೃತಾ ॥ ೫೭೫ ॥**

**ಹೇಮಪ್ರಭೇಣ ಭೂಭರ್ತ್ರಾ ದುರ್ಯೋಧನಧರೇಶಿನಾ ।**
**ದುಶ್ಶಾಸನೇನ ದುರ್ಮರ್ಷಣೇನ ದುರ್ಧರ್ಷಣೇನ ಚ ॥ ೫೭೬ ॥**

**ದುರ್ಜಯೇನ ಕಲಿಂಗೇಶಾ ಭಗದತ್ತೇನ ಭೂಭುಜಾ ।**
**ಪರೈಶ್ಚ ಭೂರಿಭೂಪಾಲೈರಾಜಗಾಮ ಸ ಕೇಶವಮ್ ॥ ೫೭೭ ॥**

ಆ ಜರಾಸಂಧನೂ ಯುದ್ಧೇಚ್ಛೆಯುಳ್ಳವನಾಗಿ ಉಷ್ಣವನ್ನು ( ಕೋಪವನ್ನು) ಹೊರಗೆಡಹಿದ ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮ, ರುಗ್ಮಿ, ಶಲ್ಯ, ವೃಷಸೇನ, ಕೃಪ, ಕೃಪವರ್ಮ, ರುದಿರ, ಇಂದ್ರಸೇನ ಜಯದ್ರಥರಾಜ, ಹೇಮಪ್ರಭರಾಜ, ದುರ್ಯೋಧನಭೂಪತಿ, ದುಶ್ಶಾಸನ, ದುರ್ಮರ್ಷಣ, ದುರ್ಧರ್ಷಣ, ದುರ್ಜಯನಾದ ಕಲಿಂಗರಾಜ, ಭಗದತ್ತರಾಜ ಇವರುಗಳೊಡನೆಯೂ ಇತರ ಅನೇಕ ರಾಜರುಗಳೊಡನೆಯೂ ಕೇಶವನನ್ನು ಕುರಿತು ಬಂದನು. ಕೃಷ್ಣನಿಗಿದಿರಾಗಿ ಯುದ್ಧಕ್ಕೆ ಬಂದನೆಂದು ಭಾವವು.

**ತದಾ ಹರಿಬಲೇ ಯುದ್ಧದುಂದುಭಿಧ್ವನಿರುಚ್ಚರನ್ ।**
**ಶೂರಚೇತೋ ರಸೋ ವಾಸಃ ಕೌಸುಂಭೋ ವಾನ್ವರಂಜಯತ್ ॥**

ಆಗ ಹರಿಯಸೈನ್ಯದಲ್ಲಿ ಯುದ್ಧಭೇರಿಯ ಶಬ್ದವುಂಟಾಗಿ ಕುಸುಂಬೆಯ ರಸವು ವಸ್ತ್ರವನ್ನು ಕೆಂಪಾಗಿ ಮಾಡುವಂತೆ, ಶೂರರ ಚಿತ್ತವನ್ನು ಕೆಂಪಾಗಿ ಮಾಡಿತು (ಉದ್ರೇಕಗೊಳಿಸಿತು).

**ತದಾಕರ್ಣ್ಯ ನೃಪಾಃ ಕೇಚಿತ್ಪೂಜಯಂತಿ ಸ್ಮ ದೇವತಾಃ ।**
**ಅಹಿಂಸಾದಿವ್ರತಾನ್ಯನ್ಯೇ ಜಗೃಹುರ್ಗುರುಸನ್ನಿಧೌ ॥ ೫೭೯ ॥**

ಅದನ್ನು ಕೇಳಿ ಕೆಲವು ರಾಜರು ದೇವತೆಗಳನ್ನು ಪೂಜಿಸಿದರು. ಬೇರೆಯವರು ಗುರುಸನ್ನಿಧಿಯಲ್ಲಿ ಅಹಿಂಸಾದಿ ವ್ರತಗಳನ್ನು ಗ್ರಹಣಮಾಡಿದರು.

**ಪರೇ ನಿಸ್ತಾರಕೇಷ್ವರ್ಥಾನ್ವಿತರಂತಿ ಸ್ಮ ಸಾತ್ತ್ವಿಕಾಃ ।**
**ಆಮುಂಚತ ತನುತ್ರಾಣಂ ಗೃಹೀತಾಸಿಲತಾಂ ಶಿತಾಮ್ ॥ ೫೮೦ ॥**

**ಆರೋಪಯತ ಚಾಪೌಘಾನ್ ಸನ್ನಹ್ಯಂತಾಂ ಗಜಾಗ್ರಿಮಾಃ ।**
**ಹರಯೋ ಬದ್ಧಪರ್ಯಾಣಾಃ ಕ್ರಿಯಂತಾಮಧಿಕಾರಿಷು ॥ ೫೮೧ ॥**

**ಸಮರ್ಪ್ಯಂತಾಂ ಕಲತ್ರಾಣಿ ಯುಜ್ಯಂತಾಂ ವಾಜಿಭೀ ರಥಾಃ ।**
**ಭೋಗೋಪಭೋಗವಸ್ತೂನಿ ಭುಜ್ಯಂತಾಮನಿವಾರಿತಮ್ ॥ ೫೮೨ ॥**

**ವಂದಿಮಾಗಧವೃಂದೇನ ವಂದ್ಯಂತಾಂ ನಿಜವಿಕ್ರಮಾಃ ।**
**ಇತಿ ಕೇಚಿಜ್ಜಗುರ್ಭೃತ್ಯಾನ್ ನೃಪಾಃ ಸಂಗ್ರಾಮಸಮ್ಮುಖಾಃ ॥ ೫೮೩ ॥**

ಸಾತ್ತ್ವಿಕರಾದ ಬೇರೆಯವರು ತಮ್ಮನ್ನು ಭವಸಮುದ್ರದಿಂದ ದಾಟಿಸುವವರಲ್ಲಿ ದ್ರವ್ಯಗಳನ್ನು ಕೊಟ್ಟರು. ತಮ್ಮ ದ್ರವ್ಯಗಳನ್ನು ಸತ್ಪಾತ್ರಗಳಿಗೆ ದಾನಮಾಡಿದರೆಂದು ಭಾವವು. ಯುದ್ಧಾಭಿಮುಖರಾದ ತಮ್ಮ ಭೃತ್ಯರನ್ನು ಕುರಿತು ಕೆಲವರು ''ಕವಚವನ್ನು ಚೆನ್ನಾಗಿ ಬಿಚ್ಚಿರಿ. ಹರಿತವಾದ ಖಡ್ಗವೆಂಬ ಲತೆಯನ್ನು ಹಿಡಿದುಕೊಳ್ಳಿರಿ. ಧನುಸ್ಸಮೂಹಗಳನ್ನು ಆರೋಪಿಸಿರಿ–ಹೆದೆಯೇರಿಸಿರಿ. ಶ್ರೇಷ್ಠವಾದ ಆನೆಗಳು ಸಿದ್ಧಗೊಳಿಸಲ್ಪಡಲಿ. ಕುದುರೆಗಳು ಜೀನುಗಳಿಂದ ಬಿಗಿಯಲ್ಪಡಲಿ. ಪತ್ನಿಯರು ಅಧಿಕಾರಿಗಳಲ್ಲಿ ಸಮರ್ಪಿಸಲ್ಪಡಲಿ. ಕುದುರೆಗಳಿಂದ ರಥಗಳು ಹೂಡಲ್ಪಡಲಿ. ಭೋಗೋಪಭೋಗವಸ್ತುಗಳು ತಡೆಯಿಲ್ಲದೆ ಭೋಗಿಸಲ್ಪಡಲಿ. ವಂದಿಮಾಗಧರ ಸಮೂಹದಿಂದ ತಮ್ಮ ಪರಾಕ್ರಮಗಳು ಹೊಗಳಲ್ಪಡಲಿ'' ಎಂದು ಹೇಳಿದರು.

**ಪತಿಭಕ್ತ್ಯಾ ನಿಸರ್ಗಾತ್ಮಪೌರುಷೇಣ ವಿರೋಧಿನಾಮ್ ।**
**ಮಾತ್ಸರ್ಯೇಣ ಯಶೋಹೇತೋಃ ಶೂರಲೋಕಸಮೀಪ್ಸಯಾ ॥**

**ನಿಜಾನ್ವಯಾಭಿಮಾನೇನ ಪರೈಶ್ಚ ರಣಕಾರಣೈಃ ।**
**ಸಮಜಾಯಂತ ರಾಜಾನಃ ಪ್ರಾಣವ್ಯಯವಿಧಾಯಿನಃ ॥ ೫೮೫ ॥**

ರಾಜರುಗಳು ಸ್ವಾಮಿಭಕ್ತಿಯಿಂದಲೂ ಸ್ವಾಭಾವಿಕವಾದ ತಮ್ಮ ಪೌರುಷದಿಂದಲೂ ಶತ್ರುಗಳ ವಿಷಯಕವಾದ ಮಾತ್ಸರ್ಯದಿಂದಲೂ ಯಶಸ್ಸಿನ ನಿಮಿತ್ತದಿಂದಲೂ ಶೂರಲೋಕವನ್ನು ಹೊಂದಬೇಕೆಂಬ ಇಚ್ಛೆಯಿಂದಲೂ ತಮ್ಮ ವಂಶದ ಅಭಿಮಾನದಿಂದಲೂ ಬೇರೆ ಯುದ್ಧಕಾರಣಗಳಿಂದಲೂ ಪ್ರಾಣಗಳನ್ನು ಕೊಡುವವರಾಗಿ ಪ್ರಾದುರ್ಭವಿಸಿದರು.

**ವಸುದೇವಸುತೋಽಪ್ಯಾಪ್ತಗರ್ವಃ ಸರ್ವವಿಭೂಷಣಃ ।**
**ಕುಂಕುಮಾಂಕಿತಗಾತ್ರತ್ವಾದಿವ ಸಿಂದೂರಿತದ್ವಿಪಃ ॥ ೫೮೬ ॥**

**ಜಯ ಜೀವೇತಿ ವಂದಾರುವೃಂದೇನ ಕೃತಮಂಗಲಃ ।**
**ನವೋ ವಾಂಭೋಧರಶ್ಚಾರುಚಾತಕಧ್ವನಿಲಕ್ಷಿತಃ ॥ ೫೮೭ ॥**

**ಸಜ್ಜನಾವರ್ಜ್ಯನಿರ್ಣಿಕ್ತಸೌವರ್ಣೋರುಗಲಂತಿಕಾ- ।**
**ಜಲೈರಾಚಮ್ಯ ಶುದ್ಧಾಚ್ಛಕ್ಷಿಪ್ರಪೂರ್ಣಜಲಾಂಜಲಿಃ ॥ ೫೮೮ ॥**

**ಗಂಧಪುಷ್ಪಾದಿಭಿರ್ವಿಘ್ನವಿನಾಯಕಮನಾಯಕಮ್ ।**
**ಭಕ್ತ್ಯಾ ಜಿನೇಂದ್ರಮಭ್ಯರ್ಚ್ಯ ಭವ್ಯಕಲ್ಪಮಹೀರುಹಮ್ ॥ ೫೮೯ ॥**

**ಅಭಿವಂದ್ಯಾಪ್ತಸಾಮಂತೈಃ ಸಮಂತಾತ್ಪರಿವಾರಿತಃ ।**
**ಪ್ರತಿಪಕ್ಷಮುಪಕ್ಷೇಪ್ತುಂ ನ್ಯಕ್ಷೇಣಾಭಿಮುಖಂ ಯಯೌ ॥ ೫೯೦ ॥**

ವಸುದೇವನ ಪುತ್ರನೂ ಗರ್ವವನ್ನು ಹೊಂದಿದವನಾಗಿಯೂ ಸಮಸ್ತಭೂಷಣಗಳುಳ್ಳವನಾಗಿಯೂ ಕುಂಕುಮದಿಂದ ಗುರುತಾದ ಮೈಯುಳ್ಳವನಾದುದರಿಂದ ಸಿಂದೂರದಿಂದ ಲಿಪ್ತವಾದ ಆನೆಯಂತಿರುವವನಾಗಿಯೂ ಸುಂದರವಾದ ಚಾತಕ ಪಕ್ಷಿಗಳ ಧ್ವನಿಯಿಂದ ಕೂಡಿದ ನೂತನವಾದ ಮೇಘದಂತೆ, ''ಜಯಿಸು, ಜೀವಿಸು'' ಎಂದು ಸ್ತುತಿಪಾಠಕರ ಸಮೂಹದಿಂದ ಮಾಡಲ್ಪಟ್ಟ ಮಂಗಲವುಳ್ಳವನಾಗಿಯೂ ಸಜ್ಜನರಿಂದ ತ್ಯಾಜ್ಯವಲ್ಲದುದೂ ಶೋಧಿಸಲ್ಪಟ್ಟಿರುವುದೂ ಆದ ಬಂಗಾರದ ದೊಡ್ಡದಾದ ಜಲಪಾತ್ರವಿಶೇಷದ ನೀರಿನಿಂದ ಆಚಮನವನ್ನು ಮಾಡಿ ಶುದ್ಧವೂ ನಿರ್ಮಲವೂ ಶೀಘ್ರವಾಗಿ ಪೂರ್ಣವೂ ಆದ ಜಲಾಂಜಲಿಯುಳ್ಳವನಾಗಿಯೂ ವಿಘ್ನ ವಿನಾಯಕನೂ ತನಗೆ ನಾಯಕ(ಶ್ರೇಷ್ಠ)ನಿಲ್ಲದವನೂ ಭವ್ಯರಿಗೆ ಕಲ್ಪವೃಕ್ಷವೂ ಆದ ಜಿನೇಶ್ವರನನ್ನು ಗಂಧಪುಷ್ಪಾದಿಗಳಿಂದ ಭಕ್ತಿಯಿಂದ ಪೂಜಿಸಿ ಅಭಿವಂದಿಸಿ ಆಪ್ತರಾದ ಸಾಮಂತರಿಂದ ಸುತ್ತಲೂ ಆವರಿಸಲ್ಪಟ್ಟವನಾಗಿಯೂ ಪ್ರತಿಪಕ್ಷವನ್ನು ಸಂಪೂರ್ಣತೆಯಿಂದ ನಾಶಮಾಡುವುದಕ್ಕೋಸ್ಕರ ಇದಿರಾಗಿ ಹೋದನು.

**ತತಃ ಕೃಷ್ಣೇನ ನಿರ್ದಿಷ್ಟಾಃ ಪ್ರಶಾಸ್ತೃಪರಿಚಾರಿಣಃ ।**
**ಸೈನ್ಯಂ ಯಥೋಕ್ತವಿನ್ಯಾಸಂ ರಚಯಂತಿ ಸ್ಮ ರಾಗಿಣಃ ॥ ೫೯೧ ॥**

ಬಳಿಕ ಕೃಷ್ಣನಿಂದ ಆಜ್ಞಪ್ತರಾದ ಉತ್ತಮಶಾಸಕರೂ(ಅಧಿಕಾರಿಗಳೂ) ಪರಿಚಾರಕರೂ ಅನುರಾಗವುಳ್ಳವರಾಗಿ ಸೈನ್ಯವನ್ನು ಯಥಾಕ್ರಮವಾದ ವಿನ್ಯಾಸ–ರಚನೆಯುಳ್ಳುದನ್ನಾಗಿ ರಚಿಸಿದರು. ಕ್ರಮವಾಗಿ ಸೈನ್ಯವನ್ನು ನಿಲ್ಲಿಸಿದರೆಂದು ಭಾವವು.

**ಜರಾಸಂಧೋಪಿ ಸಂಗ್ರಾಮರಂಗಮಧ್ಯಮಧಿಷ್ಠಿತಃ ।**
**ಸ್ವಸೈನ್ಯಂ ನಿಷ್ಠುರಾರಾವೈರಧ್ಯಕ್ಷೈರನ್ವಯೋಜಯತ್ ॥ ೫೯೨ ॥**

ಜರಾಸಂಧನೂ ಯುದ್ಧರಂಗದ ಮಧ್ಯದಲ್ಲಿರುವವನಾಗಿ ತನ್ನ ಸೈನ್ಯವನ್ನು ಕಠೋರವಾದ ಶಬ್ದಗಳುಳ್ಳ ಅಧಿಕಾರಿಗಳೊಡನೆ ಸೇರಿಸಿದನು. ಅಧಿಕಾರಿಗಳಿಗೆ ಸೈನ್ಯವನ್ನೊಪ್ಪಿಸಿದನೆಂದು ಭಾವವು.

**ಇತಿ ವಿನ್ಯಾಸಿತೇ ಸೈನ್ಯೇ ದಧ್ವನೇ ಸಮರಾನಕೈಃ ।**
**ಶೂರಧಾನುಷ್ಕನಿರ್ಮುಕ್ತಶರನಾರಾಚಸಂಕುಲಮ್ ॥ ೫೯೩ ॥**

**ನಭೋ ನ್ಯರುಣದುಷ್ಣಾಂಶುಪ್ರಸರತ್ಕರಸಂತತಿಮ್ ।**
**ವಿಯೋಗಮಗಮನ್ಮೋಹಾತ್ತದಾಸ್ತಮಯಶಂಕಯಾ ॥ ೫೯೪ ॥**

**ಕೋಕಯುಗ್ಮಂ ವಿಹಂಗಾಶ್ಚ ರುವಂತೋ ನೀಡಮಾಶ್ರಯನ್ ।**
**ನೇಕ್ಷಂತೇ ಸ್ಮ ಭಟಾ ಯೋದ್ಧುಮನ್ಯೋನ್ಯಂ ಸಮರಾಂಗಣೇ ॥ ೫೯೫ ॥**

ಈ ರೀತಿಯಾಗಿ ಸ್ಥಾಪಿಸಲ್ಪಟ್ಟ ಸೈನ್ಯದಲ್ಲಿ ಯುದ್ಧಭೇರಿಗಳಿಂದ ಶಬ್ದವಾಯಿತು. ಶೂರರಾದ ಧನುರ್ಧಾರಿಗಳಿಂದ ಬಿಡಲ್ಪಟ್ಟ ಬಾಣಗಳ ನಿಡಿಗೋಲುಗಳಿಂದ ವ್ಯಾಪ್ತವಾದ ಆಕಾಶವು ಸೂರ್ಯನ ಪಸರಿಸುವ ಕಿರಣಗಳ ಸಮೂಹವನ್ನು ಆವರಿಸಿತು. ಆಗ ಚಕ್ರವಾಕಪಕ್ಷಿಗಳ ಯುಗ್ಮವು ಸೂರ್ಯಾಸ್ತಮಾನದ ಸಂದೇಹದಿಂದ ಅಜ್ಞಾನದಿಂದ ವಿಯೋಗವನ್ನು ಹೊಂದಿತು. ಪಕ್ಷಿಗಳೂ ಕೂಗುವವುಗಳಾಗಿ ಗೂಡನ್ನು ಆಶ್ರಯಿಸಿದುವು. ಭಟರು ಯುದ್ಧಾಂಗಣದಲ್ಲಿ ಪರಸ್ಪರವಾಗಿ ಯುದ್ಧ ಮಾಡುವುದಕ್ಕೆ ಕಾಣಲಿಲ್ಲ.

**ಸಂಕ್ರುದ್ಧಮತ್ತಮಾತಂಗದಂತಸಂಘಟ್ಟಜನ್ಮನಾ ।**
**ಸಪ್ತಾರ್ಚಿಷಾ ವಿಧೂತೇಂಧಕಾರೇ ದಿಗವಲೋಕನಾತ್ ॥ ೫೯೬ ॥**

**ಪುನಃ ಪ್ರವೃತ್ತಸಂಗ್ರಾಮಾಃ ಸರ್ವಶಸ್ತ್ರವಿಚಕ್ಷಣಾಃ ।**
**ನದೀ ರಕ್ತಮಯೀಶ್ಚಕ್ರುರ್ವೀರಾಃ ವೀರ್ಯೈಕರಸಾಃ ಕ್ಷಣಮ್ ॥ ೫೯೭ ॥**

ಚೆನ್ನಾಗಿ ಕೋಪಗೊಂಡ ಮತ್ತಗಜಗಳ ದಂತಗಳ ಸಂಘರ್ಷಣೆಯಿಂದುಂಟಾದ ಬೆಂಕಿಯಿಂದ ಕತ್ತಲೆಯು ದೂರವಾಗುತ್ತಿರಲು ದಿಕ್ಕುಗಳು ಕಾಣಿಸಿ ಕೊಂಡುದುದರಿಂದ ಸಮಸ್ತ ಶಸ್ತ್ರಗಳಲ್ಲಿ ನಿಪುಣರೂ ಪರಾಕ್ರಮವೇ ಮುಖ್ಯವಾದ ರಸವಾಗಿರುವವರೂ ಆದ ವೀರಭಟರು ಪುನಃ ಯುದ್ಧವನ್ನಾರಂಭಿಸಿದವರಾಗಿ ಒಂದು ಕ್ಷಣಕಾಲದವರೆಗೆ ನದಿಗಳನ್ನು ರಕ್ತಮಯಗಳನ್ನಾಗಿ ಮಾಡಿದರು.

**ಕರಾಲಕರವಾಲಾಗ್ರನಿಕೃತ್ತಚರಣದ್ವಯಾಃ ।**
**ತುರಂಗಮಾ ಗತಿಂ ಪ್ರಾಪುರ್ವನೇ ನಷ್ಟತಪೋಧನಾಃ ॥ ೫೯೮ ॥**

ಭಯಂಕರವಾದ ಖಡ್ಗಗಳ ತುದಿಯಿಂದ ಕತ್ತರಿಸಲ್ಪಟ್ಟ ಎರಡು ಕಾಲುಗಳುಳ್ಳ ಕುದುರೆಗಳು ವನದಲ್ಲಿ ತಪಸ್ಸೆಂಬ ಧನವನ್ನು ಕಳೆದುಕೊಂಡವರು ಯಾವ ಗತಿಯನ್ನು ಹೊಂದಿದರೋ ಆ ಗತಿಯನ್ನು ಹೊಂದಿದುವು. ನಡೆಯಲಾರದಾದುವೆಂದು ಭಾವವು.

**ವಿಚ್ಛಿನ್ನಚರಣಾಃ ಪೇತುರ್ದ್ವಿಪಾಃ ಪ್ರಾಂತಮಹಾಮರು– ।**
**ನ್ನಿರ್ಮೂಲಪಾತಿತಾನೀಲವಿಪುಲಾಚಲಲೀಲಯಾ ॥ ೫೯೯ ॥**

ಕತ್ತರಿಸಲ್ಪಟ್ಟ ಕಾಲುಗಳುಳ್ಳ ಆನೆಗಳು ಪ್ರಲಯಕಾಲದ ಮಹಾಮಾರುತದಿಂದ ನಿರ್ಮೂಲವಾಗಿ ಬೀಳಿಸಲ್ಪಟ್ಟುದೂ ಚೆನ್ನಾಗಿ ಕಪ್ಪಾಗಿರುವುದೂ ಆದ ವಿಪುಲಾಚಲದ ಲೀಲೆಯಿಂದ ಬಿದ್ದುವು. ಪ್ರಳಯಕಾಲದ ಬಿರುಗಾಳಿಯಿಂದ ಬಿದ್ದ ವಿಪುಲಾಚಲದಂತೆ ಕಾಲುಮುರಿಯಲ್ಪಟ್ಟ ಆನೆಗಳು ಬಿದ್ದುವೆಂದು ಭಾವವು.

**ಪಾತಿತಾನಾಂ ಪರೈಃ ಸ್ತೂಯಮಾನಸಾಹಸಕರ್ಮಣಾಮ್ ।**
**ಪ್ರಸಾದವಂತಿ ವಕ್ತ್ರಾಣಿ ಸ್ಥಲಪದ್ಮಶ್ರಿಯಂ ದಧುಃ ॥ ೬೦೦ ॥**

ಬೇರೆಯವರಿಂದ ಹೊಗಳಲ್ಪಟ್ಟ ಸಾಹಸಕಾರ್ಯಗಳುಳ್ಳವರಾದ ಬೀಳಿಸಲ್ಪಟ್ಟವರುವವರ ಪ್ರಸನ್ನವಾದ ಮುಖಗಳು ನೆಲದಾವರೆಯ ಶೋಭೆಯನ್ನು ಧರಿಸಿದುವು.

**ಭಟೈಃ ಪರಸ್ಪರಾಸ್ತ್ರಾಣಿ ಖಂಡಿತಾನಿ ಸ್ವಕೌಶಲಾತ್ ।**
**ತತ್ಖಂಡೈಸ್ತತ್ರ ಪಾರ್ಶ್ವಸ್ಥಾ ಬಹವೋ ವ್ಯಸವೋಭವನ್ ॥ ೬೦೧ ॥**

ಭಟರಿಂದ ತಮ್ಮ ಕುಶಲತೆಯಿಂದ ಪರಸ್ಪರವಾದ ಅಸ್ತ್ರಗಳು ತುಂಡು ಮಾಡಲ್ಪಟ್ಟುವು. ಆ ತುಂಡುಗಳಿಂದ ಅಲ್ಲಿ ಹತ್ತಿರದಲ್ಲಿದ್ದ ಅನೇಕರು ಸತ್ತರು.

**ನ ಮತ್ಸರೇಣ ನ ಕ್ರೋಧಾನ್ನ ಖ್ಯಾತ್ಯೈ ನ ಫಲೇಚ್ಛಯಾ ।**
**ಭಟಾಃ ಕೇಚಿದಯುಧ್ಯಂತ ನ್ಯಾಯೋಯಮಿತಿ ಕೇವಲಮ್ ॥ ೬೦೨ ॥**

ಕೆಲವರು ಭಟರು ಮತ್ಸರದಿಂದಲಾಗಲಿ ಕೋಪದಿಂದಲಾಗಲಿ ಖ್ಯಾತಿಗೋಸ್ಕರವಾಗಲಿ ಫಲೇಚ್ಛೆಯಿಂದಲಾಗಲಿ ಯುದ್ಧ ಮಾಡಲಿಲ್ಲ. ''ಇದು ನ್ಯಾಯ'' ವೆಂದು ಮಾತ್ರವೇ ಯುದ್ಧವನ್ನು ಮಾಡಿದರು.

**ಸರ್ವಶಸ್ತ್ರಸಮುದ್ಭಿನ್ನಶರೀರಾ ವೀರಯೋಧನಾಃ ।**
**ಪರಿಚ್ಯುತಾ ಗಜಸ್ಕಂಧಾತ್ಪುಲಕಾಲಿಂಗಿತಾಂಘ್ರಯಃ ॥ ೬೦೩ ॥**

**ಚಿರಂ ಪರಿಚಿತಸ್ಥಾನಂ ಪರಿತ್ಯಕ್ತುಮಿವಾಕ್ಷಮಾಃ ।**
**ಪ್ರಲಂಬಂತೇ ಸ್ಮ ಕರ್ಣಾಗ್ರಮವಲಂಬ್ಯಾನತಾನನಾಃ ॥ ೬೦೪ ॥**

ಸಮಸ್ತ ಶಸ್ತ್ರಗಳಿಂದ ಭಿನ್ನವಾದ ದೇಹವುಳ್ಳ ವೀರಭಟರು ರೋಮಾಂಚದಿಂದ ಆಲಿಂಗಿತವಾದ(ವ್ಯಾಪ್ತವಾದ) ಕಾಲುಗಳುಳ್ಳವರಾಗಿಯೂ ಆನೆಯ ಹೆಗಲಿನಿಂದ ಜಾರಿ–ಬಿದ್ದವರಾಗಿಯೂ ಬಹುಕಾಲ ಪರಿಚಿತವಾದ ಸ್ಥಾನವನ್ನು ಬಿಡುವುದಕ್ಕೆ ಅಸಮರ್ಥರಾಗಿಯೋ ಎಂಬಂತೆ ಬಗ್ಗಿದ ಮುಖವುಳ್ಳವರಾಗಿಯೂ ಆನೆ ಕಿವಿಯ ತುದಿಯನ್ನು ಅವಲಂಬಿಸಿ ಜೋಲಾಡಿದರು.

**ಕೇಚಿದ್ವಾಮಕರೋಪಾತ್ತಚಿತ್ರದಂಡಸ್ವರಕ್ಷಣಾಃ ।**
**ದಕ್ಷಿಣಾಸ್ತ್ರಭುಜೇನಾಘ್ನನ್ ಭಟಾಶ್ಚಟುಲಚಾರಿಣಃ ॥ ೬೦೫ ॥**

ಚುರುಕಾಗಿ ಸಂಚರಿಸುವ ಕೆಲವು ಭಟರು ಎಡಗೈಯಿಂದ ತೆಗೆದುಕೊಳ್ಳಲ್ಪಟ್ಟ ಚಿತ್ರವಾದ ದಂಡದಿಂದ ಆತ್ಮರಕ್ಷಣೆಯುಳ್ಳವರಾಗಿ ಅಸ್ತ್ರವುಳ್ಳ ಬಲದ ಭುಜದಿಂದ ಇದಿರಾಳುಗಳನ್ನು ವಧಿಸಿದರು.

**ತತ್ರ ವಾಚ್ಯೋ ಮನುಷ್ಯಾಣಾಂ ಮೃತ್ಯೋರುತ್ಕೃಷ್ಟಸಂಚಯಃ ।**
**ಕದಲೀಘಾತಜಾತಸ್ಯೇತ್ಯುಕ್ತಿಮತ್ತದ್ರಣಾಂಗಣಮ್ ॥ ೬೦೬ ॥**

''ಕದಲೀಘಾತ(ಬಾಳೆಯ ಘಾತ)ದಿಂದುಟಾದ ಮನುಷ್ಯರ ಮರಣದ ಉತ್ಕೃಷ್ಟವಾದ ಸಮೂಹವು ಆ ರಣಾಂಗಣದಲ್ಲಿ ಹೇಳಲ್ಪಡತಕ್ಕುದಾಗಿದೆ'' ಎಂಬ ವಚನವುಳ್ಳುದಾಯಿತು ಆ ರಣಾಂಗಣ. ಬಿರುಗಾಳಿಗೆ ಬಾಳೆಯ ಗಿಡಗಳು ಒಟ್ಟಿಗೆ ಬೀಳುವುದಕ್ಕೆ ಕದಲೀಘಾತವೆಂದು ಹೆಸರು. ಅದರಂತೆ ಅನೇಕಮನುಷ್ಯರು ಒಟ್ಟಿಗೆ ಸಾಯುವುದಕ್ಕೆ ''ಕದಲೀಘಾತಮರಣ'' ವೆಂದು ಹೆಸರು. ಆ ಮಾತು ಆ ರಣಾಂಗಣದಲ್ಲಿ ಸಾರ್ಥಕವಾಗಿದ್ದಿತೆಂದು ಭಾವವು.

**ಏವಂ ತುಮುಲಯುದ್ಧೇನ ಪ್ರವೃತ್ತೇ ಸಂಗರೇ ಚಿರಮ್ ।**
**ಸೇನಯೋರಂತಕಸ್ಯಾಪಿ ಸಂತೃಪ್ತಿಃ ಸಮಜಾಯತ ॥ ೬೦೭ ॥**

ಈ ರೀತಿಯಾಗಿ ಉಭಯಸೇನೆಗಳಲ್ಲಿ ಬಿಕ್ಕಟ್ಟಾದ ಯುದ್ಧದಿಂದ ಬಹುಕಾಲದವರೆಗೆ ಯುದ್ಧವು ನಡೆಯುತ್ತಿರಲು ಯಮನಿಗೂ ಚೆನ್ನಾಗಿ ತೃಪ್ತಿಯುಂಟಾಯಿತು.

**ವಿಲಂಘಿತಂ ಬಲಂ ವಿಷ್ಣೋರ್ಬಲೇನ ದ್ವಿಷತಾಂ ತಥಾ ।**
**ಯಥಾ ಕ್ಷುದ್ರಸರಿದ್ವಾರಿವಾಹಃ ಸಿಂಧುಪ್ಲವಾಂಬುನಾ ॥ ೬೦೮ ॥**

ಸಮುದ್ರದ ಹರಿಯುವ ನೀರು ಸಣ್ಣಹೊಳೆಗಳ ಜಲಪ್ರವಾಹಗಳನ್ನು ಹೇಗೆ ಮೀರುತ್ತದೋ ಹಾಗೆ ಶತ್ರುಗಳ ಸೈನ್ಯವು ವಿಷ್ಣುವಿನ ಸೈನ್ಯವನ್ನು ಮೀರಿತು.

**ತದಾಲೋಕ್ಯ ಹರಿಃ ಕ್ರುದ್ಧೋ ಹರಿರ್ವಾ ಕರಿಣಾಂ ಕುಲಮ್ ।**
**ಸಾಮಂತಬಲಸಂದೋಹಸಹಿತೋ ಹಂತುಮುದ್ಯತಃ ॥ ೬೦೯ ॥**

ಅದನ್ನು ನೋಡಿ ಕುಪಿತನಾದ ಹರಿಯು ಸಾಮಂತರಾಜರುಗಳ ಸೇನಾಸಮೂಹ ಸಹಿತನಾಗಿ, ಸಿಂಹವು ಆನೆಗಳ ಸಮೂಹವನ್ನು ಕೊಲ್ಲುವುದಕ್ಕೆ ತೊಡಗುವಂತೆ, ಶತ್ರುಸೈನ್ಯವನ್ನು ಕೊಲ್ಲುವುದಕ್ಕೆ ತೊಡಗಿದನು.

**ಭಾಸ್ಕರಸ್ಯೋದಯಾದ್ವಾಂಧಕಾರಂ ಶತ್ರುಬಲಂ ತದಾ ।**
**ವಿಲೀನಂ ತನ್ನಿರೀಕ್ಷ್ಯೈತ್ಯ ಜರಾಸಂಧೋನ್ವಿತಃ ಕ್ರುಧಾ ॥ ೬೧೦ ॥**

**ದ್ಯೋತಿತಾಖಿಲದಿಕ್ಚಕ್ರಂ ಚಕ್ರಮಾದಾಯ ವಿಕ್ರಮಾತ್ ।**
**ತ್ರಿವಿಕ್ರಮಂ ಸಮುದ್ದಿಶ್ಯ ನ್ಯಕ್ಷಿಪದ್ರೂಕ್ಷವೀಕ್ಷಣಃ ॥ ೬೧೧ ॥**

ಆಗ, ಸೂರ್ಯನ ಉದಯದಿಂದ ಕತ್ತಲೆಯು ನಾಶವಾಗುವಂತೆ, ಶತ್ರುಸೈನ್ಯವು ನಾಶವಾಯಿತು. ಅದನ್ನು ನೋಡಿ ಕೋಪದಿಂದ ಕೂಡಿದ ಜರಾಸಂಧನು ಬಂದು ಕ್ರೂರವಾದ ದೃಷ್ಟಿಯುಳ್ಳವನಾಗಿ ಸಮಸ್ತದಿಕ್ಕುಗಳನ್ನು ಬೆಳಗುವುದಾದ ಚಕ್ರವನ್ನು ತೆಗೆದುಕೊಂಡು ತ್ರಿವಿಕ್ರಮ–ಕೃಷ್ಣನನ್ನು ಕುರಿತು ಪರಾಕ್ರಮದಿಂದ ಪ್ರಯೋಗಿಸಿದನು.

**ತತ್ತಂ ಪ್ರದಕ್ಷಿಣೀಕೃತ್ಯ ಸ್ಥಿತವದ್ದಕ್ಷಿಣೇ ಭುಜೇ ।**
**ತದೇವಾದಾಯ ಕಂಸಾರಿರ್ಮಗಧೇಶೋಚ್ಛಿನಚ್ಛಿರಃ ॥ ೬೧೨ ॥**

ಆ ಚಕ್ರವು ಅವನನ್ನು ಪ್ರದಕ್ಷಿಣೆಮಾಡಿ ಬಲದ ಭುಜದಲ್ಲಿ ನಿಂತಿತು. ಕಂಸರಿಪುವಾದ ಕೃಷ್ಣನು ಆ ಚಕ್ರವನ್ನೇ ತೆಗೆದುಕೊಂಡು ಮಗಧಾಧಿಪತಿ–ಜರಾಸಂಧನ ತಲೆಯನ್ನು ಕತ್ತರಿಸಿದನು.

**ಸದ್ಯೋ ಜಯಾನಕಾನೀಕಂ ನದತಿ ಸ್ಮಾಗಲನ್ ದಿವಃ ।**
**ಸುರದ್ರುಮಪ್ರಸೂನಾನಿ ಸಹ ಗಂಧಾಂಬುಬಿಂದುಭಿಃ ॥ ೬೧೩ ॥**

ತತ್ಕ್ಷಣದಲ್ಲಿ ಜಯಭೇರಿಸಮೂಹವೂ ಧ್ವನಿಮಾಡಿತು. ಆಕಾಶದಿಂದ ಕಲ್ಪವೃಕ್ಷಗಳ ಪುಷ್ಪಗಳು ಗಂಧೋದಕಬಿಂದುಗಳೊಡನೆ ಸುರಿದುವು.

**ಚಕ್ರೀ ಚಕ್ರಂ ಪುರಸ್ಕೃತ್ಯ ವಿಜಿಗೀಷುರ್ದಿಶೋ ಭೃಶಮ್ ।**
**ಪ್ರಸ್ಥಾನಮಕರೋತ್ಸಾರ್ಧಂ ಬಲೇನ ಸ್ವಬಲೇನ ಚ ॥ ೬೧೪ ॥**

ಚಕ್ರವರ್ತಿಯಾದ ಕೃಷ್ಣನು ಚಕ್ರವನ್ನು ಮುಂದುಮಾಡಿಕೊಂಡು ಚೆನ್ನಾಗಿ ದಿಕ್ಕುಗಳನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಾಗಿ ಬಲರಾಮನೊಡನೆಯೂ ತನ್ನ ಸೈನ್ಯದೊಡನೆಯೂ ಪ್ರಯಾಣವನ್ನು ಮಾಡಿದನು.

**ಮಾಗಧಾದೀನ್ಸುರಾನ್ ಜಿತ್ವಾ ವಿಧೇಯೀಕೃತ್ಯ ವಿಶ್ರುತಾನ್ ।**
**ಗೃಹೀತ್ವಾ ಸಾರರತ್ನಾನಿ ತದ್ದತ್ತಾನ್ಯೂರ್ಜಿತೋದಯಃ ॥ ೬೧೫ ॥**

**ಸಿಂಧುಸಿಂಧುಖಗಾದ್ರ್ಯಂತರಾಲವ್ಯಾಧಧರಾಧಿಪಾನ್ ।**
**ಸ್ವಪಾದನಖಭಾಭಾರವಮಾನಮಯ್ಯೋದವಾಹಯನ್ ॥ ೬೧೬ ॥**

ಪ್ರಸಿದ್ಧರಾದ ಮಾಗಧನೇ ಮೊದಲಾದ ದೇವರ್ಕಳನ್ನು ಜಯಿಸಿ ವಿಧೇಯರನ್ನಾಗಿ ಮಾಡಿ ಅವರಿಂದ ಕೊಡಲ್ಪಟ್ಟ ಸಾರವಾದ ರತ್ನಗಳನ್ನು ಗ್ರಹಣಮಾಡಿ ಅಧಿಕವಾದ ಉನ್ನತಿಯುಳ್ಳವನಾಗಿ ಸಮುದ್ರ ಸಿಂಧುನದೀ ವಿಜಯಾರ್ಧಗಿರಿಗಳ ಮಧ್ಯದಲ್ಲಿರುವ ಕಿರಾತರಾಜರುಗಳನ್ನು ಬಗ್ಗಿಸಿ ತನ್ನ ಕಾಲಿನ ಉಗುರುಗಳ ಕಾಂತಿಯ ಭಾರವನ್ನು ಹೊರಿಸಿದನು. ಕಾಲುಗಳಿಗೆರಗಿಸಿಕೊಂಡನೆಂದು ಭಾವವು.

**ಖೇಚರಾಚಲವಾರಾಶಿಗಂಗಾಮಧ್ಯಗತಾನ್ ಪುನಃ ।**
**ವಶೀಕೃತ್ಯ ವಶೀ ತೂರ್ಣಂ ಮ್ಲೇಚ್ಛರಾಜಾನ್ ಸಖೇಚರಾನ್ ॥ ೬೧೭ ॥**

**ಭರತಾರ್ಧಮಹೀನಾಥೋ ದೂರೋಚ್ಛ್ರಿತಪತಾಕಿಕಾಮ್ ।**
**ಉದ್ಬದ್ಧತೋರಣಾಂ ದ್ವಾರವತೀಂ ಹೃಷ್ಟೋ ವಿವೇಶ ಸಃ ॥ ೬೧೮ ॥**

ಜಿತೇಂದ್ರಿಯನೂ ಭರತಾರ್ಧಮಹೀಪತಿಯೂ ಆದ ಆ ಕೃಷ್ಣನು ಪುನಃ ವಿಜಯಾರ್ಧಗಿರಿ ಸಮುದ್ರ ಗಂಗಾನದಿಗಳ ಮಧ್ಯದಲ್ಲಿರುವ ಖೇಚರಸಹಿತರಾದ ಮ್ಲೇಚ್ಛರಾಜರುಗಳನ್ನು ಶೀಘ್ರವಾಗಿ ವಶಮಾಡಿಕೊಂಡು ದೂರವಾಗಿ ಉನ್ನತವಾಗಿರುವ ಬಾವುಟಗಳುಳ್ಳುದೂ ಎತ್ತಿ ಕಟ್ಟಲ್ಪಟ್ಟ ತೋರಣಗಳುಳ್ಳುದೂ ಆದ ದ್ವಾರವತೀನಗರವನ್ನು ಸಂತುಷ್ಟನಾಗಿ ಪ್ರವೇಶಮಾಡಿದನು.

**ಪ್ರವಿಷ್ಟವಂತಂ ತಂ ದೇವವಿದ್ಯಾಧರಧರಾಧಿಪಾಃ ।**
**ತ್ರಿಖಂಡಾಧಿಪತಿಷ್ವಕ್ರೀತ್ಯಭ್ಯಷಿಂಚನ್ನಯಾಂಚಿತಮ್ ॥ ೬೧೯ ॥**

ಹಾಗೆ ನಗರ ಪ್ರವೇಶವನ್ನು ಮಾಡಿದವನೂ ಪುಣ್ಯದಿಂದ ಕೂಡಿದವನೂ ಆದ ಆ ಕೃಷ್ಣನನ್ನು ದೇವರ್ಕಳೂ ವಿದ್ಯಾಧರೇಶ್ವರರೂ "ತ್ರಿಖಂಡಾಧಿಪತಿಯಾದ ಚಕ್ರವರ್ತಿ" ಎಂದು ಅಭಿಷೇಕವನ್ನು ಮಾಡಿದರು.

**ಸ ಸಹಸ್ರಸಮಾಯುಷ್ಕೋ ದಶಚಾಪಸಮುಚ್ಛ್ರಿತಿಃ ।**
**ಲಸನ್ನೀಲಾಬ್ಜವರ್ಣಾಭೋ ಲಕ್ಷ್ಮ್ಯಾಲಿಂಗಿತವಿಗ್ರಹಃ ॥ ೬೨೦ ॥**

ಆ ಕೃಷ್ಣನು ಸಹಸ್ರವರ್ಷಾಯುಷ್ಯವುಳ್ಳವನೂ ಹತ್ತು ಬಿಲ್ಲುಗಳ ಶರೀರೋನ್ನತಿಯುಳ್ಳವನೂ ಪ್ರಕಾಶಮಾನವಾದ ನೀಲಕಮಲದ ವರ್ಣಕ್ಕೆ ಸಮಾನವಾದ ಮೈಬಣ್ಣವುಳ್ಳವನೂ ಲಕ್ಷ್ಮಿಯಿಂದ ಆಲಿಂಗಿತವಾದ ದೇಹವುಳ್ಳವನೂ ಆಗಿದ್ದನು.

**ಚಕ್ರಂ ಶಕ್ತಿರ್ಗದಾ ಶಂಖೋ ಧನುರ್ದಂಡಃ ಸನಂದಕಃ ।**
**ಬಭೂವುಃ ಸಪ್ತ ರತ್ನಾನಿ ರಕ್ಷ್ಯಾಣ್ಯಸ್ಯಾಕ್ಷಪಾಲಕೈಃ ॥ ೬೨೧ ॥**

ಈ ಕೃಷ್ಣನಿಗೆ ದೇವರ್ಕಳಿಂದ ರಕ್ಷಿಸಲ್ಪಡತಕ್ಕ ಚಕ್ರ, ಶಕ್ತಿ, ಗದಾ, ಶಂಖ, ಧನುಸ್ಸು, ದಂಡ, ನಂದಕವೆಂಬ ಕೌಸ್ತುಭಮಣಿ ಈ ಏಳು ರತ್ನಗಳಿದ್ದುವು

**ರತ್ನಮಾಲಾ ಗದಾ ಸೀರೋ ಮುಸಲಂ ಚ ಹಲೇಶಿನಃ ।**
**ಮಹಾರತ್ನಾನಿ ಚತ್ವಾರಿ ಸ್ಫುರತ್ತ್ವಿಂಷ್ಯಭವನ್ ವಿಭೋಃ ॥ ೬೨೨ ॥**

ಪ್ರಭುವೂ ಹಲಾಯುಧಾಧಿಪತಿಯೂ ಆದ ಬಲರಾಮನಿಗೆ ಪ್ರಕಾಶಮಾನವಾದ ಕಾಂತಿಯುಳ್ಳ ರತ್ನಮಾಲೆ, ಗದೆ, ನೇಗಿಲು, ಒನಕೆಗಳೆಂಬ ನಾಲ್ಕು ಮಹಾರತ್ನಗಳಿದ್ದುವು.

**ರುಗ್ಮಿಣೀ ಸತ್ಯಭಾಮಾ ಚ ಸತೀ ಜಂಬಾವತೀತಿ ಚ ।**
**ಸುಸೀಮಾ ಲಕ್ಷ್ಮಣಾ ಗಾಂಧಾರೀ ಗೌರೀ ಸಪ್ತಮೀ ಪ್ರಿಯಾಃ ॥ ೬೨೩ ॥**

**ಪದ್ಮಾವತೀ ಚ ದೇವ್ಯೋಮೂರಷ್ಟೌ ಪಟ್ಟಪ್ರಸಾಧನಾಃ ।**
**ಸರ್ವಾ ದೇವ್ಯಃ ಸಹಸ್ರಾಣಿ ಚಾಣೂರಾಂತಸ್ಯ ಷೋಡಶ ॥ ೬೨೪ ॥**

ಚಾಣೂರಮಲ್ಲನನ್ನು ಕೊನೆಗಾಣಿಸಿದ ಕೃಷ್ಣನಿಗೆ ರುಗ್ಮಿಣೀ, ಸತ್ಯಭಾಮಾ, ಸಾಧ್ವಿಯಾದ ಜಂಬಾವತೀ, ಸುಸೀಮಾ, ಲಕ್ಷ್ಮಣಾ, ಗಾಂಧಾರೀ, ಏಳನೆಯ ಪ್ರಿಯೆಯು ಗೌರೀ, ಪದ್ಮಾವತೀ ಈ ಎಂಟು ಮಂದಿ ದೇವಿಯರು ಪಟ್ಟಾಲಂಕಾರವುಳ್ಳವರಾಗಿದ್ದರು. ಕೃಷ್ಣನಿಗೆ ಎಲ್ಲಾ ದೇವಿಯರು ಹದಿನಾರು ಸಾವಿರ ಮಂದಿಗಳಿದ್ದರು.

**ಬಲಸ್ಯಾಪ್ಯಷ್ಟಸಹಸ್ರಾಣಿ ದೇವ್ಯೋಭೀಷ್ಟಸುಖಪ್ರದಾಃ ।**
**ತಾಭಿಸ್ತಾವಾಮರಂ ಸೌಖ್ಯಮಾಪ್ತೌ ವಾ ಪ್ರೀತಿಮೀಯತುಃ ॥ ೬೨೫ ॥**

ಬಲರಾಮನಿಗೆ ಅಭೀಷ್ಟ ಸುಖವನ್ನುಕೊಡುವ ದೇವಿಯರು ಎಂಟುಸಾವಿರ ಮಂದಿಗಳಿದ್ದರು. ಆ ದೇವಿಯರುಗಳೊಡನೆ ಆ ಬಲರಾಮಕೃಷ್ಣರು, ದೇವರ್ಕಳ ಸಂಬಂಧವಾದ ಸುಖವನ್ನು ಹೊಂದಿದವರಂತೆ, ಸಂತೋಷವನ್ನು ಹೊಂದಿದರು.

**ಸ್ವಪೂರ್ವಕೃತಪುಣ್ಯಸ್ಯ ಪರಿಪಾಕೇನ ಪುಷ್ಕಲಾನ್ ।**
**ಭೋಗಾನ್ಸ್ವಾಪ್ನುವತಸ್ತಸ್ಯ ಕಾಲೇ ಗಚ್ಛತಿ ಶಾರ್ಙ್ಗಿಣಃ ॥ ೬೨೬ ॥**

**ಅನ್ಯೇದ್ಯುರ್ವಾರಿದಾಂತೇಂತಃಪುರೇಣಾವಾ ಸರೋವರೇ ।**
**ಮನೋಹರಾಭಿಧಾನೇಭೂಜ್ಜಲಕೇಲೀ ಮನೋಹರಾ ॥ ೬೨೭ ॥**

ತನ್ನ ಪೂರ್ವಜನ್ಮಕೃತವಾದ ಪುಣ್ಯದ ಪರಿಪಾಕದಿಂದ ಅಧಿಕವಾದ ಭೋಗಗಳನ್ನು ಹೊಂದಿರುವವನಾದ ಆ ಶಾರ್ಙ್ಗಿ–ಕೃಷ್ಣನ ಕಾಲವು ಕಳೆಯುತ್ತಿರಲು ಮತ್ತೊಂದು ದಿವಸ ವರ್ಷಋತುವಿನ ಕೊನೆಯಲ್ಲಿ–ಶರದೃತುವಿನ ಆರಂಭದಲ್ಲಿ ಅಂತಃಪುರ ದೊಡನೆ ಮನೋಹರವೆಂಬ ಸರೋವರದಲ್ಲಿ ಮನೋಹರವಾದ ಜಲಕ್ರೀಡೆ ಯುಂಟಾಯಿತು.

**ತತ್ರ ನೇಮೀಶಿತುಃ ಸತ್ಯಭಾವಾಯಾಶ್ಚಾಂಬುಸೇಚನಾತ್ ।**
**ಸಲ್ಲಾಪೋಭವದಿತ್ಯುಚ್ಚೈಶ್ಚತುರೋಕ್ತ್ಯಾ ಮನೋಹರಃ ॥ ೬೨೮ ॥**

ಅಲ್ಲಿ ನೇಮೀಶ್ವರನಿಗೂ ಸತ್ಯಭಾಮೆಗೂ ಜಲಸೇಚನೆಯಿಂದ ಮುಂದೆ ಹೇಳು ವಂತೆ ಮನೋಹರವಾದ ವಿಶೇಷಸಲ್ಲಾಪವು ಚತುರವಚನದಿಂದುಂಟಾಯಿತು.

**ತ್ವತ್ಪ್ರಿಯಾವತ್ಕುತೋ ರಂತಾ ಮಯಿ ತ್ವಂ ಕಿಂ ಮಮಾಪ್ರಿಯಾ ।**
**ಪ್ರಿಯಾಸ್ಮಿ ಚೇತ್ತವ ಭ್ರಾತಾ ಯಾತು ಕಾಂ ಕಾಮದಾಯಿನೀಮ್ ॥**

**ಕಾಸೌ ಕಿಂ ತಾಂ ನ ವೇತ್ಸಿ ತ್ವಂ ಸಮ್ಯಕ್ತ್ವಾ ವೇದಯಿಷ್ಯತಿ ।**
**ವದಂತಿ ತ್ವಾಮೃಜುಂ ಸರ್ವೇ ಕುಟಿಲಸ್ತ್ವಂ ತಥಾಪಿ ಚ ॥ ೬೩೦ ॥**

"ನಿನ್ನ ಪ್ರಿಯಳಲ್ಲಿ ಕ್ರೀಡಿಸುವಂತೆ ನನ್ನಲ್ಲಿ ಏತಕ್ಕೆ ಕ್ರೀಡಿಸುವೆ ?" ಎಂದು ಸತ್ಯ ಭಾಮೆಯು ನೇಮೀಶ್ವರನಿಗೆ ಹೇಳಿದಳು. ಅದಕ್ಕೆ ಅವನು "ನೀನೇನು ನನಗೆ ಅಪ್ರಿಯಳೇ ?" ಎಂದು ಸತ್ಯಭಾಮೆಯನ್ನು ಕುರಿತು ಹೇಳಿದನು. ಅದಕ್ಕೆ ಸತ್ಯ ಭಾಮೆಯು "ನಾನು ನಿನಗೆ ಪ್ರಿಯೆಯಾದರೆ ನಿನ್ನ ಸಹೋದರನು ಕಾಮ ಸುಖವನ್ನು ಕೊಡುವ ಯಾವಳನ್ನು ಹೊಂದಬೇಕು ? ಯಾವಳು ಇವಳು ?" ಎಂದಳು. ನೇಮೀಶ್ವರನು "ಆಕೆಯನ್ನು ನೀನು ತಿಳಿಯುವುದಿಲ್ಲವೇನು ? ಆಕೆಯು ಚೆನ್ನಾಗಿ ನಿನಗೆ ತಿಳಿಸುವಳು" ಎಂದನು. ಸತ್ಯಭಾಮೆಯು "ಎಲ್ಲರೂ ನಿನ್ನನ್ನು ಸರಳ ನನ್ನಾಗಿ ಹೇಳುತ್ತಾರೆ. ಆದರೂ ನೀನು ಕುಟಿಲನಾಗಿರುತ್ತಿ" ಎಂದು ನೇಮೀಶ್ವರನಿಗೆ ಹೇಳಿದಳು.

**ಪುನಃ ಸ್ನಾನವಿನೋದಾವಸಾನೇ ತಾಮೇವಮಬ್ರವೀತ್ ।**
**ಸ್ನಾನವಸ್ತ್ರಂ ತ್ವಯಾ ಗ್ರಾಹ್ಯಂ ನೀಲೋತ್ಪಲವಿಲೋಚನೇ ॥ ೬೩೧ ॥**

**ತಸ್ಯ ಮೇ ಕಿಂ ಕರೋಮ್ಯೇತತ್ಪ್ರಕ್ಷಾಲಯ ಹರಿರ್ಭವಾನ್ ।**
**ಯೋ ನಾಗಶಯ್ಯಾಮಾಸ್ಥಾಯ ದಿವ್ಯಂ ಶಾರ್ಙ್ಗಂ ಶರಾಸನಮ್ ॥**

**ಹೇಲಯಾರೋಪ್ಯ ಯದ್ದಕ್ಷ ಪ್ರಪೂರಿತದಿಗಂತರಮ್ ।**
**ಶಂಖಮಾಪೂರಯತ್ಕಿಂ ತತ್ಸಾಹಸಂ ನೋ ಭವೇತ್ತ್ವಯಾ ॥ ೬೩೩ ॥**

ಸ್ನಾನವಿನೋದದ ಕೊನೆಯಲ್ಲಿ ನೇಮೀಶ್ವರನು ಪುನಃ ಸತ್ಯಭಾಮೆಯನ್ನು ಕುರಿತು "ಕನ್ನೈದಿಲೆಯಂತೆ ನೇತ್ರವುಳ್ಳವಳೇ, ನೀನು ನನ್ನ ಸ್ನಾನವಸ್ತ್ರವನ್ನು ಹಿಡಿದುಕೊ" ಎಂದನು. ಸತ್ಯಭಾಮೆಯು "ಅದನ್ನು ನಾನೇನುಮಾಡುವೆನು ?" ಎಂದಳು. ನೇಮೀಶ್ವರನು "ಈ ವಸ್ತ್ರವನ್ನು ಪ್ರಕ್ಷಾಲಿಸು–ಒಗಿ" ಎಂದನು. ಅದಕ್ಕೆ ಸತ್ಯಭಾಮೆಯು ನೇಮೀಶ್ವರನನ್ನು ಕುರಿತು "ಯಾವನು ಸರ್ಪಶಯ್ಯೆಯಲ್ಲಿದ್ದು ಶಾರ್ಙ್ಗಧನುಸ್ಸನ್ನು ಲೀಲೆಯಿಂದ ಆರೋಪಿಸಿದನೋ ಯಾವನು ದಿಗಂತರವನ್ನು ತುಂಬಿದ ಶಂಖವನ್ನೂದಿದನೋ ಅಂತಹ ಹರಿಯೋ ನೀನು ? ಆ ಸಾಹಸವು ನಿನ್ನಿಂದಾಗದು" ಎಂದಳು.

**ಕಾರ್ಯಂ ಸಾಧು ಕರಿಷ್ಯಾಮೀತ್ಯುಕ್ತ್ವಾ ಗರ್ವಪ್ರಚೋದಿತಃ ।**
**ತತಃ ಪುರಂ ಸಮಭ್ಯೇತ್ಯ ವಿಧಾತುಂ ಕರ್ಮ ಸೋದ್ಭುತಮ್ ॥ ೬೩೪ ॥**

**ಸಂಪ್ರವಿಶ್ಯಾಯುಧಾಗಾರಂ ನಾಗಶಯ್ಯಾಮಧಿಷ್ಠಿತಃ ।**
**ಸ್ವಾಂ ಶಯ್ಯಾಮಿವ ನಾಗೇಂದ್ರಮಹಾಮಣಿವಿಭಾಸ್ವರಾಮ್ ॥ ೬೩೫ ॥**

**ಭೂಯೋ ವಿಸ್ಫಾಲನೋನ್ನಾದಜ್ವಾಲತಂ ಚ ಶರಾಸನಮ್ ।**
**ಆರೋಪಯತ್ಸ್ವಯೋಜಂ ಚ ದಧ್ಮೌ ರುದ್ಧದಿಗಂತರಮ್ ॥ ೬೩೬ ॥**

ಆ ನೇಮೀಶ್ವರನು "ಈ ಕಾರ್ಯವನ್ನು ಚೆನ್ನಾಗಿ ಮಾಡುವೆನು" ಎಂದು ಹೇಳಿ ಗರ್ವದಿಂದ ಪ್ರೇರಿತನಾಗಿ ಆ ಅದ್ಭುತಕಾರ್ಯವನ್ನು ಮಾಡುವುದಕ್ಕೋಸ್ಕರ ಅಲ್ಲಿಂದ ಪಟ್ಟಣಕ್ಕೆ ಹೋಗಿ ಆಯುಧಶಾಲೆಯನ್ನು ಪ್ರವೇಶಿಸಿ, ತನ್ನ ಹಾಸಿಗೆಯನ್ನು ಹತ್ತುವಂತೆ, ಸರ್ಪರಾಜನ ಮಹಾರತ್ನದಿಂದ ಪ್ರಕಾಶಮಾನವಾದ ನಾಗಶಯ್ಯೆ ಯನ್ನು ಹತ್ತಿದವನಾಗಿ ಬಳಿಕ ಹೊಡೆತದಿಂದ ನಾದವುಳ್ಳುದಾದ ಸಿಂಜಿನಿಯುಳ್ಳ ಧನುಸ್ಸನ್ನು ಆರೋಪಿಸಿ ದಿಗಂತರವನ್ನು ಆವರಿಸಿದ ಶಂಖವನ್ನೂ ಊದಿದನು.

**ತದಾ ಸಂಭಾವಯಾಮಾಸ ಸ್ವಂ ಸಮಾವಿಷ್ಕೃತೋನ್ನತಿಮ್ ।**
**ರಾಗಾಹಂಕಾರಯೋರ್ಲೇಶೋಪ್ಯವಶ್ಯಂ ವಿಕೃತಿಂ ನಯೇತ್ ॥ ೬೩೭ ॥**

ಆಗ ನೇಮೀಶ್ವರನು ಚೆನ್ನಾಗಿ ತೋರ್ಪಡಿಸಿದ ಉನ್ನತಿಯುಳ್ಳವನನ್ನಾಗಿ ತನ್ನನ್ನು ಭಾವಿಸಿದನು. ತನ್ನ ಉನ್ನತಿಯನ್ನು ಚೆನ್ನಾಗಿ ತೋರ್ಪಡಿಸಿದನೆಂದು ಭಾವಿಸಿ ದನೆಂದು ಭಾವವು. ರಾಗಾಹಂಕಾರಗಳ ಲೇಶವೂ ಅವಶ್ಯವಾಗಿ ವಿಕಾರವನ್ನು ಹೊಂದಿಸುವುದು.

**ಸಹಸೇತ್ಯದ್ಭುತಂ ಕರ್ಮ ಶ್ರುತ್ವಾಧ್ಯಾಸ್ಯ ಸಭಾವನಿಮ್ ।**
**ಹರಿಃ ಕುಸುಮಚಿತ್ರಾಖ್ಯಾಮಾಕುಲಾಕುಲಮಾನಸಃ ॥ ೬೩೮ ॥**

**ಉದ್ಭೂತವಿಸ್ಮಯೋಪ್ಯುತ್ಪತ್ತಿಮೇತದಿತಿ ಕಿಂಕರಾನ್ ।**
**ತೇಪಿ ತತ್ಸಮ್ಯಗನ್ವಿಷ್ಯ ಚಕ್ರನಾಥಂ ವ್ಯಜಿಜ್ಞಪನ್ ॥ ೬೩೯ ॥**

ಕುಸುಮಚಿತ್ರವೆಂಬ ಸಭಾಭೂಮಿಯಲ್ಲಿದ್ದು ಹರಿಯು ಹೀಗೆ ಅಕಸ್ಮಾತ್ ಉಂಟಾದ ಅದ್ಭುತಕಾರ್ಯವನ್ನು ಕೇಳಿ ವ್ಯಾಕುಲವಾದ ಮನಸ್ಸುಳ್ಳವನಾಗಿಯೂ ಆಶ್ಚರ್ಯೋತ್ಪತ್ತಿಯುಳ್ಳವನಾಗಿಯೂ "ಇದೇನು ?" ಎಂದು ಸೇವಕರನ್ನು ಕೇಳಿದನು. ಅವರೂ ಚೆನ್ನಾಗಿ ಹುಡುಕಿ ಆ ಕಾರ್ಯವನ್ನು ಚಕ್ರಾಧಿಪತಿಗೆ ವಿಜ್ಞಾಪಿ ಸಿದರು.

**ಶ್ರುತ್ವಾ ತದ್ವಚನಂ ಚಕ್ರೀ ಸಾವಧಾನಂ ವಿತರ್ಕಯನ್ ।**
**ರಾಗಿ ಚೇತಃ ಕುಮಾರಸ್ಯ ಚಿರಾಚ್ಚಿತ್ರಮಜಾಯತ ॥ ೬೪೦ ॥**

**ಅಭೂತ್ಕಲ್ಯಾಣಯೋಗ್ಯೋಯಮಾರೂಢನವಯೌವನಃ ।**
**ಬಾಧಾ ಖಲೇನ ಕಾಮೇನ ಕಸ್ಯ ನ ಸ್ಯಾತ್ಸಕರ್ಮಣಃ ॥ ೬೪೧ ॥**

ಆ ಮಾತನ್ನು ಕೇಳಿ ಚಕ್ರವರ್ತಿಯು ಸಾವಧಾನವಾಗಿ ಊಹಿಸುವವನಾಗಿ "ನೇಮೀಕುಮಾರನ ಚಿತ್ತವು ಬಹುಕಾಲದಿಂದ ರಾಗವುಳ್ಳುದಾಗಿ ಆಯಿತು. ಆಶ್ಚರ್ಯ. ನವಯೌವನಪ್ರಾಪ್ತಿಯುಳ್ಳವನಾದ ಇವನು ವಿವಾಹ–ಕಲ್ಯಾಣ ಯೋಗ್ಯನಾದನು. ದುಷ್ಟನಾದ ಕಾಮನಿಂದ ಕಾರ್ಯಪರನಾದ ಯಾವನಿಗೆ ತಾನೆ ಬಾಧೆಯುಂಟಾಗುವುದಿಲ್ಲ ?"

**ಇತ್ಯುಗ್ರವಂಶವಾರ್ಧೀಂದೋರುಗ್ರಸೇನಮಹೀಭುಜಃ ।**
**ಜಯವತ್ಯಾಶ್ಚ ಸರ್ವಾಂಗಶಸ್ತಾ ರಾಜಮತಿಃ ಸುತಾ ॥ ೬೪೨ ॥**

ಈ ರೀತಿಯಾಗಿ ಯೋಚಿಸಿದನು. ಉಗ್ರವಂಶವೆಂಬ ಸಮುದ್ರಕ್ಕೆ ಚಂದ್ರನಾದ ಉಗ್ರಸೇನರಾಜನಿಗೂ ಆತನ ಪತ್ನಿಯಾದ ಜಯವತಿಗೂ ಪುತ್ರಿಯಾದ ರಾಜಮತಿಯು ಸರ್ವಾಂಗಗಳಲ್ಲಿ ಸ್ತುತ್ಯಳಾಗಿದ್ದಳು.

**ತದ್ಗೃಹಂ ತಾಂ ಸ್ವಯಂ ಗತ್ವಾ ಕನ್ಯಾಂ ಮಾನ್ಯಾಮಯಾಚತ ।**
**ತ್ರಿಲೋಕಸ್ವಾಮಿನೋ ನೇಮೇಃ ಪ್ರಿಯಾಸ್ತ್ವೇಷೇತಿ ಸಾದರಮ್ ॥**

ಕೃಷ್ಣನು ತಾನೇ ಅವನ ಮನೆಗೆ ಹೋಗಿ "ತ್ರಿಲೋಕಾಧಿಪತಿಯಾದ ನೇಮಿಗೆ ಈಕೆಯು ಪ್ರಿಯಳಾಗಿರಲಿ" ಎಂದು ಮಾನ್ಯಳಾದ ಆ ಕನ್ಯೆಯನ್ನು ಪ್ರೀತಿಯಾಗಿ ಬೇಡಿದನು.

**ತ್ರಿಖಂಡಜಾತರತ್ನಾನಾಂ ತ್ವಂ ಪತಿರ್ನೋ ವಿಶೇಷತಃ ।**
**ದೇವ ತ್ವಮೇವ ನಾಥೋಽಸಿ ಪ್ರಸ್ತುತಾರ್ಥಸ್ಯ ಕೇ ವಯಮ್ ॥ ೬೪೪ ॥**

**ಇತ್ಯುಗ್ರಸೇನವಾಚೋದ್ಯತ್ಸಂಮದೋ ಯಾದವಾಧಿಪಃ ।**
**ಶುಭೇಽಹನಿ ಸಮಾರಭ್ಯ ವಿಧಾತುಂ ಸ ತದುತ್ಸವಮ್ ॥ ೬೪೫ ॥**

**ಪಂಚರತ್ನಮಯಂ ರಮ್ಯಂ ಸಮಾನಯದನುತ್ತರಮ್ ।**
**ವಿವಾಹಮಂಡಪಂ ತಸ್ಯ ಮಧ್ಯಸ್ಥೇ ಜಗತೀತಲೇ ॥ ೬೪೬ ॥**

**ನವಮುಕ್ತಾಫಲಾಲೋಲರಂಗವಲ್ಲೀವಿರಾಜಿನಿ ।**
**ಮಂಗಲಾಮೋದಿಪುಷ್ಪೋಪಹಾರಾಸಾರವಿಲಾಸಿನಿ ॥ ೬೪೭ ॥**

**ವಿಸ್ತೃತಾಭಿನವಾನರ್ಘ್ಯವಸ್ತ್ರೇಽಸೌ ಭರ್ಮಪಟ್ಟಕೇ ।**
**ವಧ್ವಾ ಸಹ ಸಮಾಪಾದ್ರ್ರತಂಡುಲಾರೋಪಣಂ ವರಃ ॥ ೬೪೮ ॥**

"ಪ್ರಭುವೆ ! ತ್ರಿಖಂಡಗಳಲ್ಲಿ ಜನಿಸಿರುವ ರತ್ನಗಳಿಗೆ ನೀನು ಒಡೆಯ. ನಮಗಂತು ವಿಶೇಷವಾಗಿ ಒಡೆಯ. ಪ್ರಕೃತವಾದ ವಿಷಯಕ್ಕೆ ನೀನೇ ಪ್ರಭುವಾಗಿರುತ್ತಿ. ನಾವಾರು ?" ಎಂದು ಉಗ್ರಸೇನನ ಮಾತಿನಿಂದುಂಟಾದ ಸಂತೋಷವುಳ್ಳ ಆ ಯಾದವಾಧಿಪತಿಯು ಶುಭದಿನದಲ್ಲಿ ಆ ವಿವಾಹಮಹೋತ್ಸವವನ್ನು ಮಾಡುವುದಕ್ಕೋಸ್ಕರ ಪ್ರಾರಂಭಿಸಿ ಪಂಚರತ್ನಮಯವೂ ರಮಣೀಯವೂ ಅದ್ವಿತೀಯವೂ ಆದ ವಿವಾಹಮಂಡಪವನ್ನು ಮಾಡಿಸಿದನು. ಆ ಮಂಡಪದ ಮಧ್ಯದಲ್ಲಿರುವುದೂ ನೂತನವಾದ ಮುಕ್ತಾಫಲಗಳಿಂದ ಚಲಿಸುತ್ತಿರುವ ರಂಗವಲ್ಲಿಯಿಂದ ಪ್ರಕಾಶಿಸುವುದೂ ಮಂಗಲಕರವೂ ಪರಿಮಳವುಳ್ಳುದೂ ಆದ ಪುಷ್ಪಗಳ ಚಿಕ್ಕ ಹಾರಗಳ ಚಾಚುವಿಕೆಯಿಂದ ಶೋಭಾಯಮಾನವೂ ಆದ ಜಗತಿಯ ತಳದಲ್ಲಿ ವಿಸ್ತೃತವೂ ನೂತನವೂ ಆದ ವಸ್ತ್ರವುಳ್ಳ ಬಂಗಾರದ ಮಣೆಯಲ್ಲಿ ಈ ವರನು ವಧುವಿನೊಡನೆ ನೆನೆದಕ್ಕಿಯ ಮೇಲೆ ನಿಲ್ಲುವ ವಿಧಿಯನ್ನು ಹೊಂದಿದನು.

**ಪರೇದ್ಯುಃ ಸಮಯೇ ಪಾಣಿಜಲಸೇಕಸ್ಯ ಮಾಧವಃ ।**
**ಯಿಯಾಸುರ್ದುರ್ಗತಿಂ ಲೋಭಸುತೀವ್ರಾನುಭವೋದಯಾತ್ ॥**

**ದುರಾಶಯಃ ಸುರಾಧೀಶಪೂಜ್ಯಸ್ಯಾಪಿ ಮಹಾತ್ಮನಃ ।**
**ಸ್ವರಾಜ್ಯಾದಾನಮಾಶಂಕ್ಯ ನೇಮೇರ್ಮಾಯಾವಿದಾಂ ವರಃ ॥ ೬೫೦ ॥**

**ನಿರ್ವೇದಕಾರಣಂ ಕಿಂಚಿನ್ನಿರೀಕ್ಷ್ಯೈಷ ವಿರಂಸ್ಯತಿ ।**
**ಭೋಗೇಭ್ಯ ಇತಿ ಸಂಚಿಂತ್ಯ ತದುಪಾಯವಿಧಿತ್ಸಯಾ ॥ ೬೫೧ ॥**

**ವ್ಯಾಧಾಧಿಪೈರ್ಧೃತಾನೀತಂ ನಾನಾಮೃಗಕದಂಬಕಮ್ ।**
**ವಿಧಾಯೈಕತ್ರ ಸಂಕೀರ್ಣಾಂ ವೃತಿಂ ತತ್ಪರಿತೋ ವ್ಯಧಾತ್ ॥ ೬೫೨ ॥**

ಎರಡನೆಯ ದಿವಸ ಲೋಭಕಷಾಯದ ಬಹುತೀವ್ರಾನುಭವದ ಉದಯದಿಂದ ದುರ್ಗತಿಯನ್ನು ಹೊಂದುವವನೂ ಮಾಯಾವಿಗಳಲ್ಲಿ ಶ್ರೇಷ್ಠನೂ ಆದ ಮಾಧವನು ಪಾಣಿಜಲಸೇಚನದ(ಪಾಣಿಗ್ರಹಣದ) ಸಮಯದಲ್ಲಿ ದುರಭಿಪ್ರಾಯವುಳ್ಳವನಾಗಿ ದೇವೇಂದ್ರನಿಂದ ಪೂಜಿಸಲ್ಪಡತಕ್ಕವನೂ ಮಹಾತ್ಮನೂ ಆದ ನೇಮೀಶ್ವರನ ದೆಸೆಯಿಂದಲೂ ತನ್ನ ರಾಜ್ಯವನ್ನು ತೆಗೆದುಕೊಳ್ಳುವನೆಂದು ಸಂದೇಹಪಟ್ಟು "ಇವನು ಯಾವುದಾದರೂ ವೈರಾಗ್ಯದ ಕಾರಣವನ್ನು ಕಂಡು ಭೋಗಗಳಿಂದ ವಿರಾಮವನ್ನು ಹೊಂದುವನು" ಎಂದು ಚೆನ್ನಾಗಿ ಯೋಚಿಸಿ ಅದರ ಉಪಾಯವನ್ನು ಮಾಡುವ ಇಚ್ಛೆಯಿಂದ ಪ್ರಮುಖರಾದ ಕಿರಾತರಿಂದ ಹಿಡಿದು ತರಲ್ಪಟ್ಟ ವಿವಿಧಮೃಗಗಳ ಸಮೂಹವನ್ನು ಒಂದು ಕಡೆಯಲ್ಲಿ ಮಾಡಿ ಅದರ ಸುತ್ತಲೂ ಕಿರಿದಾದ ಬೇಲಿಯನ್ನು ಮಾಡಿದನು.

**ಅಶಿಕ್ಷಯಚ್ಚ ತದ್ರಕ್ಷಾಧ್ಯಕ್ಷಾನ್ಯದಿ ಸಮೀಕ್ಷಿತುಮ್ ।**
**ಧೀಶೋ ನೇಮೀಶ್ವರೋಽಭ್ಯೇತಿ ಭವದ್ಭಿಃ ಸೋಽಭಿಧೀಯತಾಮ್ ॥**

**ತ್ವದ್ವಿವಾಹೇ ವ್ಯಯೀಕರ್ತುಂ ಚಕ್ರಿಣೈಷ ಮೃಗೋತ್ಕರಃ ।**
**ಸಮಾನೀತ ಇತಿ ವ್ಯಕ್ತಂ ಮಹಾಪಾಪೋಪಲೇಪಕಃ ॥ ೬೫೪ ॥**

"ಪ್ರಾಜ್ಞನಾದ ನೇಮೀಶ್ವರನು ನೋಡುವುದಕ್ಕೋಸ್ಕರ ಬಂದರೆ ನೀವುಗಳು ಅವನಿಗೆ 'ನಿನ್ನ ವಿವಾಹದಲ್ಲಿ ವ್ಯಯಮಾಡುವುದಕ್ಕೋಸ್ಕರ ಚಕ್ರಿಯು ಈ ಮೃಗಸಮೂಹವನ್ನು ತಂದನು' ಎಂದು ವ್ಯಕ್ತವಾಗಿ ಹೇಳಿರಿ" ಎಂಬುದಾಗಿ ಮಹಾಪಾಪದ ಲೇಪವುಳ್ಳವನಾಗಿ ಆ ಮೃಗಸಮೂಹವನ್ನು ಕಾಯುವವರಾದ ಪ್ರಮುಖರಿಗೆ ಹೇಳಿಯೂ ಕೊಟ್ಟನು.

**ಅಥ ನೇಮಿಕುಮಾರೋಽಪಿ ನಾನಾಭರಣಭಾಸುರಃ ।**
**ಸಹಸ್ರಕುಂತಲೋ ರಕ್ತೋತ್ಪಲಮಾಲಾದ್ಯಲಂಕೃತಃ ॥ ೬೫೫ ॥**

**ತುರಂಗಮಖುರೋದ್ಧೂತಧೂಲೀಲಿಪ್ತದಿಗಾನನಃ ।**
**ಸವಯೋಭಿರತಿಪ್ರೀತೈರ್ಮಹಾಸಾಮಂತಸೂನುಭಿಃ ॥ ೬೫೬ ॥**

**ಪರೀತಃ ಶಿಬಿಕಾಂ ಚಿತ್ರಾಮಾರುಹ್ಯ ನಯನಪ್ರಿಯಃ ।**
**ದಿಶೋ ವಿಲೋಕಿತುಂ ಗಚ್ಛಂಸ್ತತ್ರಾಲೋಕ್ಯ ಯದೃಚ್ಛಯಾ ॥ ೬೫೭ ॥**

**ಮೃಗಾನಿತಸ್ತತೋ ಘೋರಂ ರುದಿತ್ವಾ ಕರುಣಸ್ವನಮ್ ।**
**ಭ್ರಮತಸ್ತೃಷಿತಾನ್ ದೀನದೃಷ್ಟೀನತಿಭಯಾಕುಲಾನ್ ॥ ೬೫೮ ॥**

**ಕಿಮರ್ಥಮಿದಮೇಕತ್ರ ನಿರುದ್ಧಂ ತೃಣಭುಕ್ಕುಲಮ್ ।**
**ಇತ್ಯನ್ವಯುಂಕ್ತ ತದ್ರಕ್ಷಾನಿಯುಕ್ತಾನನುಕಂಪಯಾ ॥ ೬೫೯ ॥**

ಬಳಿಕ ವಿವಿಧಾಭರಣಗಳಿಂದ ಪ್ರಕಾಶಮಾನನೂ ಸಾವಿರತಲೆಗೂದಲುಗಳುಳ್ಳವನೂ ಕೆಂಪುನೈದಿಲೆ ಹೂಗಳ ಮಾಲೆಯೇ ಮೊದಲಾದುವುಗಳಿಂದ ಭೂಷಿತನೂ ಕುದುರೆಗಳ ಗೊರಸುಗಳಿಂದ ಮೇಲಕ್ಕೆದ್ದ ಧೂಳಿಯಿಂದ ಲೇಪಿಸಲ್ಪಟ್ಟ ದಿಙ್ಮುಖಗಳುಳ್ಳವನೂ ಸಮವಯಸ್ಕರೂ ಬಹುಪ್ರೀತಿಯುಳ್ಳವರೂ ಆದ ಮಹಾಸಾಮಂತರಾಜಪುತ್ರರಿಂದ ಸುತ್ತಲ್ಪಟ್ಟವನೂ ನೇತ್ರಗಳಿಗೆ ಪ್ರಿಯನೂ ಆದ ನೇಮೀಕುಮಾರನೂ ವಿವಿಧವರ್ಣಗಳುಳ್ಳ ಪಲ್ಲಕ್ಕಿಯನ್ನೇರಿ ದಿಕ್ಕುಗಳನ್ನು ನೋಡುವುದಕ್ಕೋಸ್ಕರ ಹೋಗುವವನಾಗಿ ಅಲ್ಲಿ ಭಯಂಕರವಾಗಿಯೂ ಕರುಣಧ್ವನಿಯಿರುವಂತೆಯೂ ಕೂಗಿ ಈಕಡೆ ಆಕಡೆ ತಿರುಗಾಡುವುವೂ ಬಾಯಾರಿದುವೂ ದೀನವಾದ ನೇತ್ರಗಳುಳ್ಳುವೂ ಬಹುಭಯದಿಂದ ಕೂಡಿರುವುವೂ ಆದ ಮೃಗಗಳನ್ನು ಆಕಸ್ಮಾತ್ತಾಗಿ ನೋಡಿ "ಹುಲ್ಲನ್ನು ತಿನ್ನುವ ಪ್ರಾಣಿಗಳ ಈ ಸಮೂಹವು ಏತಕ್ಕೋಸ್ಕರ ಒಂದು ಕಡೆಯಲ್ಲಿ ತಡೆದಿರಿಸಲ್ಪಟ್ಟಿದೆ ?" ಎಂದು ಆ ಪ್ರಾಣಿಗಳ ರಕ್ಷಣೆಯಲ್ಲಿ ನೇಮಿಸಲ್ಪಟ್ಟಿರುವವರನ್ನು ದಯೆಯಿಂದ ಪ್ರಶ್ನೆಮಾಡಿದನು.

**ದೇವೈತದ್ವಾಸುದೇವೇನ ತ್ವದ್ವಿವಾಹಮಹೋತ್ಸವೇ ।**
**ವ್ಯಯೀಕರ್ತುಮಿಹಾನೀತಮಿತ್ಯಭಾಷಂತ ತೇಽಪಿ ತಮ್ ॥ ೬೬೦ ॥**

"ಸ್ವಾಮಿಯೆ ! ಈ ಮೃಗಸಮೂಹವನ್ನು ನಿನ್ನ ವಿವಾಹಮಹೋತ್ಸವದಲ್ಲಿ ವ್ಯಯಮಾಡುವುದಕ್ಕೋಸ್ಕರ ವಾಸುದೇವನು ಇಲ್ಲಿಗೆ ತಂದನು" ಎಂದು ಅವರೂ ಆ ನೇಮೀಕುಮಾರನನ್ನು ಕುರಿತು ಮಾತನಾಡಿದರು.

ವಸಂತ್ಯರಣ್ಯೇ ಖಾದಂತಿ ತೃಣಾನ್ಯನಪರಾಧಕಾಃ ।
ಕಿಲೈತಾಂಶ್ಚ ಸ್ವಭೋಗಾರ್ಥಂ ಪೀಡಯಂತಿ ಧಿಗೀದೃಶಾನ್ ॥ ೬೬೧ ॥

ಕಿಂ ನ ಕುರ್ವಂತ್ಯಮೀ ಮೂಢಾಃ ಪ್ರೌಢಮಿಥ್ಯಾತ್ವಚೇತಸಃ ।
ಪ್ರಾಣಿನಃ ಪ್ರಾಣಿತುಂ ಪ್ರಾಣೈರ್ನಿರ್ಘೃಣಾಃ ಸ್ವೈರ್ವಿನಶ್ವರೈಃ ॥ ೬೬೨ ॥

ಸ್ವರಾಜ್ಯಗ್ರಹಣೇ ಶಂಕಾಂ ವಿಧಾಯ ಮಯಿ ದುರ್ಮತಿಃ ।
ವ್ಯಧಾತ್ಕಪಟಮೀದೃಕ್ಷಂ ಕಷ್ಟಂ ದುಷ್ಟವಿಚೇಷ್ಟಿತಮ್ ॥ ೬೬೩ ॥

''ನಿರಪರಾಧಿಗಳಾದ ಈ ಮೃಗಗಳು ಕಾಡಿನಲ್ಲಿ ವಾಸಮಾಡುತ್ತವೆ; ಹುಲ್ಲುಗಳನ್ನು ತಿನ್ನುತ್ತವೆ. ಇಂತಹ ಪ್ರಾಣಿಗಳನ್ನೂ ತಮ್ಮ ಭೋಗಕ್ಕೋಸ್ಕರ ಪೀಡಿಸುತ್ತಾರೆ. ಧಿಕ್ಕಾರ. ತೀವ್ರಮಿಥ್ಯಾತ್ವದಿಂದ ಯುಕ್ತವಾದ ಬುದ್ಧಿಯುಳ್ಳವರೂ ಮೂರ್ಖರೂ ನಿರ್ದಯರೂ ಆದ ಈ ಪ್ರಾಣಿಗಳು ವಿನಶ್ವರವಾದ ತಮ್ಮ ಪ್ರಾಣಗಳಿಂದ ಜೀವಿಸುವುದಕ್ಕೋಸ್ಕರ ಏನನ್ನು ತಾನೆ ಮಾಡುವುದಿಲ್ಲ ?ನನ್ನಲ್ಲಿ ತನ್ನ ರಾಜ್ಯ ಗ್ರಹಣದಲ್ಲಿ ಸಂದೇಹವನ್ನು ಮಾಡಿ ( ನಾನು ಅವನ ರಾಜ್ಯವನ್ನು ಗ್ರಹಣ ಮಾಡುತ್ತೇನೆಂದು ಸಂದೇಹಪಟ್ಟು) ದುರ್ಬುದ್ಧಿಯುಳ್ಳ ಕೃಷ್ಣನು ಇಂತಹ ಕಪಟವನ್ನು ಮಾಡಿದನು. ದುಷ್ಟರ ವ್ಯಾಪಾರವು ಕಷ್ಟಕರವಾದುದು.''

ಇತಿ ನಿಧ್ಯಾಯ ನಿರ್ವಿದ್ಯ ನಿವೃತ್ಯ ನಿಜಮಂದಿರಮ್ ।
ಪ್ರವಿಶ್ಯಾವಿರ್ಭವದ್ಬೋಧಿಸ್ತತ್ಕಾಲೋಪಗತಾಮರೈಃ ॥ ೬೬೪ ॥

ಬೋಧಿತಃ ಸಮತೀತಾತ್ಮಭವಾನುಸ್ಮೃತಿವೇಪಿತಃ ।
ತದೈವಾಗತ್ಯ ದೇವೇಂದ್ರೈಃ ಕೃತನಿಷ್ಕ್ರಮಣೋತ್ಸವಃ ॥ ೬೬೫ ॥

ಶಿಬಿಕಾಂ ದೇವಕುರ್ವಾಖ್ಯಾಮಾರುಹ್ಯಾಮರವೇಷ್ಟಿತಃ ।
ಸಹಸ್ರಾಮ್ರವಣೇ ಷಷ್ಠಾನಶನಃ ಶ್ರಾವಣೇ ಸಿತೇ ॥ ೬೬೬ ॥

ಪಕ್ಷೇ ಚಿತ್ರಾಖ್ಯನಕ್ಷತ್ರೇ ಷಷ್ಠ್ಯಾಂ ಸಾಯಾಹ್ನಮಾಶ್ರಿತಃ ।
ಶತತ್ರಯಕುಮಾರಾಬ್ದವ್ಯತೀತೌ ಸಹ ಭೂಭುಜಾಮ್ ॥ ೬೬೭ ॥

ಸಹಸ್ರೇಣ ಸಮಾದಾಯ ಸಂಯಮಂ ಪ್ರತ್ಯಪದ್ಯತ ।
ಚತುರ್ಥಜ್ಞಾನಧಾರೀ ಚ ಬಭೂವಾಸನ್ನಕೇವಲಃ ॥ ೬೬೮ ॥

ಈ ಪ್ರಕಾರವಾಗಿ ಯೋಚಿಸಿ ವಿರಕ್ತಿಯನ್ನು ಹೊಂದಿ ಹಿಂದಿರುಗಿ ಬಂದು ತನ್ನ ಮನೆಯನ್ನು ಪ್ರವೇಶಿಸಿ ಆವಿರ್ಭವಿಸಿದ ಭೇದವಿಜ್ಞಾನವುಳ್ಳವನೂ ತತ್ಕಾಲದಲ್ಲಿ ಬಂದ ಲೌಕಾಂತಿಕದೇವರ್ಕಳಿಂದ ಬೋಧಿಸಲ್ಪಟ್ಟವನೂ ಕಳೆದುಹೋದ ತನ್ನ ಭವಗಳಸ್ಮರಣೆಯಿಂದ ನಡುಗಿದವನೂ ಆಗಲೇ ಬಂದು ದೇವೇಂದ್ರರಿಂದ ಮಾಡಲ್ಪಟ್ಟ ಪರಿನಿಷ್ಕ್ರಮಣಕಲ್ಯಾಣೋತ್ಸವವುಳ್ಳವನೂ ದೇವಕುರುವೆಂಬ ಪಲ್ಲಕ್ಕಿಯನ್ನೇರಿ ದೇವರ್ಕಳಿಂದ ಆವರಿಸಲ್ಪಟ್ಟವನೂ ಸಹಸ್ರಾಮ್ರವಣದಲ್ಲಿ ಹೋಗಿ ಆರು ಉಪವಾಸಗಳನ್ನು ಕೈಕೊಂಡವನೂ ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಷಷ್ಠೀತಿಥಿಯಲ್ಲಿ ಚಿತ್ರಾನಕ್ಷತ್ರದಲ್ಲಿ ಸಾಯಂಕಾಲವನ್ನು ಹೊಂದಿದವನೂ ಆಗಿ ಮೂರು ನೂರು ವರ್ಷಗಳ ಕುಮಾರಕಾಲವು ಕಳೆಯುತ್ತಿರಲು ಸಾವಿರಮಂದಿ ದೊರೆಗಳೊಡನೆ ಸಂಯಮವನ್ನು ಗ್ರಹಣಮಾಡಿ ನಾಲ್ಕನೆಯದಾದ ಮನಃಪರ್ಯಯ ಜ್ಞಾನವುಳ್ಳವನಾದನು. ಸಮೀಪಿಸಿದ ಕೇವಲಜ್ಞಾನವುಳ್ಳವನಾಗಿಯೂ ಆದನು.

ಸಂಧ್ಯೇವ ಭಾನುಮಸ್ತಾದ್ರಾವನು ರಾಜಮತಿಶ್ಚ ತಮ್ ।
ಯಯೌ ವಾಚಾಪಿ ದತ್ತಾನಾಂ ನ್ಯಾಯೋಯಂ ಕುಲಯೋಷಿತಾಮ್ ॥

ಸಾಯಂಸಂಧ್ಯೆಯು ಅಸ್ತಾಚಲದಲ್ಲಿ ಸೂರ್ಯನನ್ನು ಹಿಂಬಾಲಿಸಿ ಹೋಗುವಂತೆ ರಾಜಮತಿಯೂ ಆ ನೇಮಿಸ್ವಾಮಿಯನ್ನು ಹಿಂಬಾಲಿಸಿ ಹೋದಳು. ರಾಜಮತಿಯೂ ದೀಕ್ಷೆಯನ್ನು ತೆಗೆದುಕೊಂಡಳೆಂದು ಭಾವವು. ವಚನದಿಂದಲೂ ಕೊಡಲ್ಪಟ್ಟವರಾದ ಕುಲಸ್ತ್ರೀಯರಿಗೆ ಇದು ನ್ಯಾಯವಾಗಿದೆ.

ಸ್ವದುಃಖೇನಾಪಿ ನಿರ್ವಿಣ್ಣಃ ಶ್ರೂಯತೇ ನ ಜನಃ ಪರಃ ।
ಪರದುಃಖೇನ ಸಂತೋಮೀ ತ್ಯಜಂತ್ಯೇವ ಮಹಾಶ್ರಿಯಮ್ ॥ ೬೭೦ ॥

ಬೇರೆ ಜನರು ತಮ್ಮ ದುಃಖದಿಂದಲೂ ವಿರಕ್ತರಾಗಿರುವುದು ಕೇಳಲ್ಪಡುವುದಿಲ್ಲ. ಇಂತಹ ಸತ್ಪುರುಷರು ಪರಪ್ರಾಣಿಗಳ ದುಃಖದಿಂದ ವಿರಕ್ತರಾಗಿ ಮಹಾ ಸಂಪತ್ತಿಯನ್ನು ಬಿಟ್ಟೇಬಿಡುತ್ತಾರೆ.

ಬಲಕೇಶವಮುಖ್ಯಾವನೀಶಾಃ ಸಂಪೂಜ್ಯ ಸಂಸ್ತವೈಃ ।
ಸಸುರೇಶಾಸ್ತಮೀಶಾನಂ ಸ್ವಧಾಮ ಸಮುಪಾಶ್ರಯನ್ ॥ ೬೭೧ ॥

ದೇವೇಂದ್ರಸಹಿತರಾದ ಬಲರಾಮ ಕೇಶವ ಮೊದಲಾದ ರಾಜರುಗಳು ಆ ನೇಮಿಸ್ವಾಮಿಯನ್ನು ಸ್ತೋತ್ರಗಳೊಡನೆ ಪೂಜಿಸಿ ತಂತಮ್ಮ ಸ್ಥಾನಗಳನ್ನು ಸೇರಿದರು.

ಪಾರಣಾದಿವಸೇ ತಸ್ಮೈ ವರದತ್ತೋ ಮಹೀಪತಿಃ ।
ಕನಕಾಭಃ ಪ್ರವಿಷ್ಟಾಯ ಪುರೀಂ ದ್ವಾರಾವತೀಂ ಸತೇ ॥ ೬೭೨ ॥

ಶ್ರದ್ಧಾದಿಗುಣಸಂಪನ್ನಃ ಪ್ರತೀಚ್ಛಾದಿನವಕ್ರಿಯಃ ।
ಅದಿತಾನ್ನಂ ಮುನಿಗ್ರಾಹ್ಯಂ ಪಂಚಾಶ್ಚರ್ಯಾಣಿ ಚಾಪ ಸಃ ॥ ೬೭೩ ॥

ಪಾರಣೆಯ ದಿವಸದಲ್ಲಿ ದ್ವಾರಾವತೀನಗರವನ್ನು ಪ್ರವೇಶಿಸಿದವನೂ ಸತ್ಪುರುಷನೂ ಆದ ಆ ನೇಮೀಶ್ವರನಿಗೆ ಸುವರ್ಣಕಾಂತಿಯುಳ್ಳವನೂ ಶ್ರದ್ಧಾ ಶಕ್ತಿ ಭಕ್ತಿ ವಿಜ್ಞಾನಾದಿ ಗುಣಸಂಪನ್ನನೂ ಪ್ರತೀಚ್ಛೆ ಉಚ್ಚಸ್ಥಾನ ಪಾದೋದಕಾದಿ ನವ ವಿಧ ಕ್ರಿಯೆಗಳುಳ್ಳವನೂ ಆದ ವರದತ್ತರಾಜನು ಮುನಿಗ್ರಾಹ್ಯವಾದ ಶುದ್ಧಾಹಾರವನ್ನು ಕೊಟ್ಟನು. ಅವನು ಪಂಚಾಶ್ಚರ್ಯಗಳನ್ನೂ ಪಡೆದನು.

ಕೋಟೀರ್ದ್ವಾದಶ ರತ್ನಾನಾಂ ಸಾರ್ಧಾಃ ಸುರಕರಚ್ಯುತಾಃ ।
ವೃಷ್ಟಿಂ ಸೌಮನಸೀಂ ವಾಯುಂ ಮಾಂದ್ಯಾದಿತ್ರಿಗುಣಾನ್ವಿತಮ್॥ ೬೭೪ ॥

ಘನಾಂತರಿತಕಾಯಾಮರಾಭಿತಾಡಿತದುಂದುಭಿ- ।
ಧ್ವಾನಂ ಮನೋಹರಂ ಸಾಧುದಾನಘೋಷಣಪೂರ್ವಕಮ್ ॥ ೬೭೫ ॥

ದೇವತೆಗಳ ಹಸ್ತಗಳಿಂದ ಜಾರಿದ ಹನ್ನೆರಡುವರೆ ಕೋಟಿರತ್ನಗಳನ್ನೂ ಪುಷ್ಪವೃಷ್ಟಿಯನ್ನೂ ಶೈತ್ಯ ಸೌರಭ ಮಾಂದ್ಯಗುಣಯುಕ್ತವಾದ ಗಾಳಿಯನ್ನೂ ಮೇಘದಿಂದ ಮರೆಯಾದ ದೇಹವುಳ್ಳ ದೇವರ್ಕಳಿಂದ ದೇವದುಂದುಭಿಧ್ವನಿಯನ್ನೂ ''ಸಾಧುದಾನ'' ವೆಂದು ಘೋಷಣ ಪೂರ್ವಕವಾದ ಮನೋಹರಧ್ವನಿಯನ್ನೂ ಹೊಂದಿದನು (ಇವೇ ಪಂಚಾಶ್ಚರ್ಯಗಳು).

ಏವಂ ತಪಸ್ಯತಸ್ತಸ್ಯ ಷಟ್ಪಂಚಾಶದ್ದಿನಪ್ರಮೇ ।
ಛದ್ಮಸ್ಥಸಮಯೇ ಯಾತೇ ಗಿರೌ ರೈವತಕಾಭಿಧೇ ॥ ೬೭೬ ॥

ಷಷ್ಠೋಪವಾಸಯುಕ್ತಸ್ಯ ಮಹಾವೇಣೋರಧಃ ಸ್ಥಿತೇಃ ।
ಪೂರ್ವಾಹ್ಣೇಶ್ವಯುಜೇ ಮಾಸಿ ಶುಕ್ಲಪಕ್ಷಾದಿಮೇ ದಿನೇ ॥ ೬೭೭ ॥

ಚಿತ್ರಾಯಾಂ ಕೇವಲಜ್ಞಾನಮುದಪದ್ಯತ ಸರ್ವಗಮ್ ।
ಪೂಜಯಂತಿ ಸ್ಮ ತಂ ದೇವಾಃ ಕೇವಲಾವಗಮೋತ್ಸವೇ ॥ ೬೭೮ ॥

ಈ ರೀತಿಯಾಗಿ ತಪಸ್ಸನ್ನು ಮಾಡುವವನೂ ಐವತ್ತಾರು ದಿನಪರಿಮಿತವಾದ ಛದ್ಮಸ್ಥಕಾಲವು ಕಳೆಯುತ್ತಿರಲು ರೈವತಕವೆಂಬ ಪರ್ವತದಲ್ಲಿ ಆರು ಉಪವಾಸಗಳುಳ್ಳವನೂ ದೊಡ್ಡ ಬಿದಿರಿನ ಕೆಳಗೆ ತಪಸ್ಸಿಗೆ ನಿಂತಿರುವವನೂ ಆದ ನೇಮಿಸ್ವಾಮಿಗೆ ಆಶ್ವಯುಜಮಾಸದಲ್ಲಿ ಶುಕ್ಲಪಕ್ಷದ ಮೊದಲನೆಯ ದಿನದಲ್ಲಿ ಪ್ರಾತಃಕಾಲದಲ್ಲಿ ಚಿತ್ರಾ ನಕ್ಷತ್ರದಲ್ಲಿ ಸರ್ವವ್ಯಾಪಕವಾದ ಕೇವಲಜ್ಞಾನವು ಉತ್ಪನ್ನವಾಯಿತು. ದೇವರ್ಕಳು ಕೇವಲಜ್ಞಾನೋತ್ಸವದಲ್ಲಿ ಆ ಸ್ವಾಮಿಯನ್ನು ಪೂಜಿಸಿದರು.

**ವರದತ್ತಾದಯೋಽಭೂವನ್ನೇಕಾದಶ ಗಣೇಶಿನಃ ।**
**ಚತುಃಶತಾನಿ ಪೂರ್ವಜ್ಞಾಃ ಶ್ರುತಜ್ಞಾನಾಬ್ಧಿಪಾರಗಾಃ ॥ ೬೭೯ ॥**

ಆ ಸ್ವಾಮಿಗೆ (ಸಮವಸರಣದಲ್ಲಿ) ವರದತ್ತನೇ ಮೊದಲಾದ ಹನ್ನೊಂದು ಮಂದಿಗಳು ಗಣಧರರಿದ್ದರು. ಶ್ರುತಜ್ಞಾನವೆಂಬ ಸಮುದ್ರದ ಪಾರವನ್ನು ಹೊಂದಿರುವ ಏಕಾದಶಾಂಗ ಚತುರ್ದಶಪೂರ್ವಶಾಸ್ತ್ರಜ್ಞರು ನಾಲ್ಕುನೂರು ಮಂದಿಗಳಿದ್ದರು.

**ಶೂನ್ಯದ್ವಿತಯವಸ್ವೈಕೈಕಮಿತಾಸ್ತಸ್ಯ ಶಿಕ್ಷಕಾಃ ।**
**ಶೂನ್ಯದ್ವಿತಯಪಂಚೈಕಮಿತಾಸ್ತ್ರಿಜ್ಞಾನಲೋಚನಾಃ ॥ ೬೮೦ ॥**

ಹನ್ನೊಂದು ಸಾವಿರದ ಎಂಟುನೂರು ಮಂದಿಗಳು ಶಿಕ್ಷಕಮುನಿಗಳಿದ್ದರು. ಮತಿ ಶ್ರುತಾವಧಿಗಳೆಂಬ ಜ್ಞಾನತ್ರಯಲೋಚನರಾದ ಮುನಿಗಳು ಸಾವಿರದೈದುನೂರು ಮಂದಿಗಳಿದ್ದರು.

**ತಾವಂತಃ ಪಂಚಮಜ್ಞಾನಾ ವಿಕ್ರಿಯರ್ದ್ಧಿಸಮನ್ವಿತಾಃ ।**
**ಶತಾಧಿಕಸಹಸ್ರಂ ತು ಮನಃಪರ್ಯಾಯಬೋಧನಾಃ ॥ ೬೮೧ ॥**

**ಶತಾನಿ ನವ ವಿಜ್ಞೇಯಾ ವಾದಿನೋಽಷ್ಟಶತಾನಿ ಚ ।**
**ಅಷ್ಟಾದಶಸಹಸ್ರಾಣಿ ತೇ ಸರ್ವೇಽಪಿ ಸಮುಚ್ಚಿತಾಃ ॥ ೬೮೨ ॥**

ಕೇವಲಜ್ಞಾನಿಗಳು ಸಾವಿರದೈದುನೂರು ಮಂದಿಗಳಿದ್ದರು. ವಿಕ್ರಿಯರ್ದ್ಧಿ ಯುಕ್ತರಾದ ಮುನಿಗಳು ಸಾವಿರದ ನೂರುಮಂದಿಗಳಿದ್ದರು. ಮನಃಪರ್ಯಯ ಜ್ಞಾನಿಗಳು ಒಂಬತ್ತುನೂರು ಮಂದಿಗಳಿದ್ದರೆಂದು ತಿಳಿಯಬೇಕು. ವಾದಿಮುನಿಗಳು ಎಂಟುನೂರು ಮಂದಿಗಳಿದ್ದರು. ಆ ಮುನಿಶ್ರೇಷ್ಠರೆಲ್ಲರೂ ಸೇರಿ ಹದಿನೆಂಟುಸಾವಿರ ಮಂದಿಗಳಿದ್ದರು.

**ಯಕ್ಷೀ ರಾಜಮತಿಃ ಕಾತ್ಯಾಯನ್ಯನ್ಯಾಶ್ಚಾಖಿಲಾರ್ಯಿಕಾಃ ।**
**ಚತ್ವಾರಿಂಶತ್ಸಹಸ್ರಾಣಿ ಶ್ರಾವಕಾ ಲಕ್ಷಯೋಕ್ಷಿತಾಃ ॥ ೬೮೩ ॥**

ಯಕ್ಷಿಯೂ ರಾಜಮತಿಯೂ ಕಾತ್ಯಾಯನಿಯೂ ಬೇರೆ ಎಲ್ಲಾ ಆರ್ಯಿಕೆಯರೂ ನಾಲ್ವತ್ತುಸಾವಿರ ಮಂದಿಗಳಿದ್ದರು. ಶ್ರಾವಕರು ಒಂದು ಲಕ್ಷಜನರು ಕಾಣಲ್ಪಟ್ಟರು.

**ತ್ರಿಲಕ್ಷಾಃ ಶ್ರಾವಿಕಾ ದೇವಾ ದೇವ್ಯಶ್ಚಾಸಂಖ್ಯಯೋದಿತಾಃ ।**
**ತಿರ್ಯಂಚಃ ಸಂಖ್ಯಯಾ ಪ್ರೋಕ್ತಾ ಗಣೈರೇಭಿರ್ದ್ವಿಷಣ್ಮಿತೈಃ ॥ ೬೮೪ ॥**

**ಪರೀತೋ ಭವ್ಯಪದ್ಮಾನಾಂ ವಿಕಾಸಂ ಜನಯನ್ಮುಹುಃ ।**
**ಧರ್ಮೋಪದೇಶನಾರ್ಕಾಂಶುಪ್ರಸರೇಣಾಘನಾಶಿನಾ ॥ ೬೮೫ ॥**

**ವಿಶ್ವಾನ್ ದೇಶಾನ್ ವಿಹೃತ್ಯಾಂತೇ ಪ್ರಾಪ್ಯ ದ್ವಾರಾವತೀಂ ಕೃತೀ ।**
**ಸ್ಥಿತೋ ರೈವತಕೋದ್ಯಾನೇ ತನ್ನಿಶಮ್ಯಾಂತ್ಯಕೇಶವಃ ॥ ೬೮೬ ॥**

**ಬಲದೇವಶ್ಚ ಸಂಪ್ರಾಪ್ಯ ಸ್ವಸರ್ವರ್ದ್ಧಿಸಮನ್ವಿತೌ ।**
**ವಂದಿತ್ವಾ ಶ್ರುತಧರ್ಮಾಣೌ ಪ್ರೀತವಂತೌ ತತೋ ಹರಿಃ ॥ ೬೮೭ ॥**

**ಪ್ರಾಹುರ್ನಾಸ್ತೀತಿ ಯಂ ಕೇಚಿತ್ಕೇಚನ್ನಿತ್ಯಂ ಕ್ಷಣಸ್ಥಿತಿಮ್ ।**
**ಕೇಚಿತ್ಕೇಚಿದಣುಂ ಚಾಣೋಃ ಕೇಚಿಚ್ಛ್ಯಾಮಾಕಸಮ್ಮಿತಮ್ ॥ ೬೮೮ ॥**

**ಕೇಚಿದಂಗುಷ್ಠಮಾತ್ರವ್ಯಂ ಯೋಜನಾನಾಂ ಸಮುಚ್ಛ್ರಿತಮ್ ।**
**ಕೇಚಿಚ್ಛತಾನಿ ಪಂಚೈವ ಕೇಚಿದ್ಗಗನವದ್ವಿಭುಮ್ ॥ ೬೮೯ ॥**

**ಕೇಚಿದೇಕಂ ಪರೇ ನಾನಾ ಪರೇಽಜ್ಞಮಪರೇಽನ್ಯಥಾ ।**
**ತಂ ಜೀವಾಖ್ಯಂ ಪ್ರತಿ ಪ್ರಾಯಃ ಸಂದೇಹೋಽಸ್ತೀತ್ಯಧೀಶ್ವರಮ್॥ ೬೯೦ ॥**

**ಪಪ್ರಚ್ಛ ಸೋಽಪಿ ನೈತೇಷು ಕೋಽಪಿ ವಿದ್ಧ್ಯಸ್ಯ ಲಕ್ಷಣಮ್ ।**
**ಧ್ರೌವ್ಯೋತ್ಪಾದವ್ಯಯಾತ್ಮಾಸೌ ಗುಣೀ ಸೂಕ್ಷ್ಮಃ ಸ್ವಕೃತ್ಯಭುಕ್ ॥ ೬೯೧ ॥**

**ಜ್ಞಾತಾತ್ತದೇಹಸಮ್ಮೇಯಃ ಸ್ವಸಂವೇದ್ಯಃ ಸುಖಾದಿಭಿಃ ।**
**ಅನಾದಿಕರ್ಮಸಂಬಂಧಃ ಸರನ್ ಗತಿಚತುಷ್ಟಯೇ ॥ ೬೯೨ ॥**

**ಕಾಲಾದಿಲಬ್ಧಿಮಾಸಾದ್ಯ ಭವ್ಯೋ ನಷ್ಟಾಷ್ಟಕರ್ಮಕಃ ।**
**ಸಮ್ಯಕ್ತ್ವಾದ್ಯಷ್ಟಕಂ ಪ್ರಾಪ್ಯ ಪ್ರಾಗ್ದೇಹಪರಿಮಾಣಧೃತ್ ॥ ೬೯೩ ॥**

**ಊರ್ಧ್ವವ್ರಜ್ಯಾಸ್ವಭಾವತ್ವಾಜ್ಜಗನ್ಮೂರ್ಧನಿ ತಿಷ್ಠತಿ ।**
**ಇತಿ ಜೀವಸ್ಯ ಸದ್ಭಾವಂ ಜಗಾದ ಜಗತಾಂ ಗುರುಃ ॥ ೬೯೪ ॥**

ಮೂರು ಲಕ್ಷ ಶ್ರಾವಿಕೆಯರಿದ್ದರು. ದೇವರ್ಕಳೂ ದೇವಿಯರೂ ಅಸಂಖ್ಯೆಯಿಂದ ಹೇಳಲ್ಪಟ್ಟಿದ್ದಾರೆ. ತಿರ್ಯಕ್ಪ್ರಾಣಿಗಳು ಸಂಖ್ಯಾತಪರಿಮಿತಿಯಿಂದ ಹೇಳಲ್ಪಟ್ಟಿವೆ. ಈ ದ್ವಾದಶಗಣಗಳಿಂದ ಪರಿವೇಷ್ಟಿತನಾದ ಪುಣ್ಯಶಾಲಿ–ಸ್ವಾಮಿಯು ಪಾಪನಾಶಕವಾದ ಧರ್ಮೋಪದೇಶವೆಂಬ ಸೂರ್ಯಕಿರಣಪ್ರಸಾರದಿಂದ ಭವ್ಯರೆಂಬ ಕಮಲಗಳಿಗೆ ಪುನಃ ಪುನಃ ವಿಕಾಸವನ್ನುಂಟುಮಾಡುವವನಾಗಿ ಎಲ್ಲಾ ದೇಶಗಳನ್ನು ವಿಹರಿಸಿ ಕೊನೆಯಲ್ಲಿ ದ್ವಾರಾವತಿಯನ್ನು ಪ್ರವೇಶಿಸಿ ರೈವತಕಪರ್ವತದ ಉದ್ಯಾನದಲ್ಲಿದ್ದನು. ಅದನ್ನು ಕೇಳಿ ಕೊನೆಯ ಕೇಶವನೂ ಬಲದೇವನೂ ತಮ್ಮ ಸರ್ವವೈಭವಯುಕ್ತರಾಗಿ ಹೋಗಿ ಸ್ವಾಮಿಯನ್ನು ಕಂಡು ವಂದಿಸಿ ಧರ್ಮಶ್ರವಣವನ್ನು ಮಾಡಿದವರಾಗಿ ಪ್ರೀತಿಯುಳ್ಳವರಾದರು. ಬಳಿಕ ಹರಿಯು "ಕೆಲವರು ಯಾವ ಜೀವನನ್ನು ಇಲ್ಲವೆಂದೂ ಕೆಲವರು ನಿತ್ಯನನ್ನಾಗಿಯೂ ಕೆಲವರು ಕ್ಷಣ ಸ್ಥಿತಿಯುಳ್ಳವನನ್ನಾಗಿಯೂ ಕೆಲವರು ಅಣುವಿಗಿಂತ ಅಣು–ಸೂಕ್ಷ್ಮನನ್ನಾಗಿಯೂ ಕೆಲವರು ಸಾಮೆಯ (ಧಾನ್ಯವಿಶೇಷದ) ಪರಿಮಾಣವುಳ್ಳವನನ್ನಾಗಿಯೂ ಕೆಲವರು ಅಂಗುಷ್ಠ ಪರಿಮಿತನನ್ನಾಗಿಯೂ ಕೆಲವರು ಐದುನೂರೇ ಯೋಜನಗಳ ಉನ್ನತ್ತಿಯುಳ್ಳವನನ್ನಾಗಿಯೂ ಕೆಲವರು ಆಕಾಶದಂತೆ ವಿಭುವನ್ನಾಗಿಯೂ ಕೆಲವರು ಒಬ್ಬನನ್ನಾಗಿಯೂ ಬೇರೆಯವರು ಅನೇಕನನ್ನಾಗಿಯೂ ಬೇರೆಯವರು ಅಜ್ಞನನ್ನಾಗಿಯೂ ಇತರರು ಜ್ಞಾನಿಯನ್ನಾಗಿಯೂ ಹೇಳಿರುತ್ತಾರೋ ಅಂತಹ ಜೀವನನ್ನು ಕುರಿತು ಪ್ರಾಯಿಕವಾಗಿ ಸಂದೇಹವಿದೆ" ಎಂದು ನೇಮಿಸ್ವಾಮಿಯನ್ನು ಪ್ರಶ್ನೆ ಮಾಡಿದನು. ಜಗದ್ಗುರುವಾದ ಆ ಸ್ವಾಮಿಯೂ ಕೃಷ್ಣನಿಗೆ "ಈ–ಮೇಲೆ ಹೇಳಲ್ಪಟ್ಟ ಲಕ್ಷಣಗಳಲ್ಲಿ ಯಾವ ಜೀವನೂ ಇಲ್ಲ. ಈ ಜೀವದ ಲಕ್ಷಣವನ್ನು ಮುಂದೆ ಹೇಳುವಂತೆ ತಿಳಿ. ಈ ಭವ್ಯಜೀವನು ಸ್ಥಿರತ್ವ, ಉತ್ಪತ್ತಿ, ವಿನಾಶಸ್ವರೂಪವುಳ್ಳವನೂ ಗುಣಗಳುಳ್ಳವನೂ ಸೂಕ್ಷ್ಮನೂ ತಾನು ಮಾಡಿದ ಕಾರ್ಯದ ಫಲವನ್ನನುಭವಿಸುವವನೂ ತಿಳಿಯುವವನೂ ಸ್ವೀಕೃತದೇಹಪರಿಮಿತನೂ ಸುಖದುಃಖಾದಿಗಳಿಂದ ತನ್ನಿಂದ ತಾನು ತಿಳಿಯಲ್ಪಡತಕ್ಕವನೂ ಅನಾದಿಕಾಲದಿಂದ ಕರ್ಮಸಂಬಂಧವುಳ್ಳವನೂ ನರಕಾದಿಚತುರ್ಗತಿಗಳಲ್ಲಿ ಗಮನಮಾಡುವವನೂ ಕಾಲವೇ ಮೊದಲಾದ ಲಬ್ಧಿಯನ್ನು ಹೊಂದಿ ಅಷ್ಟಕರ್ಮಗಳನ್ನು ನಾಶಮಾಡುವವನೂ ಸಮ್ಯಕ್ತ್ವ ಜ್ಞಾನ ದರ್ಶನ ಮೊದಲಾದ ಎಂಟು ಗುಣಗಳನ್ನು ಹೊಂದಿ ಮೊದಲನೆಯ (ಚರಮ)ದೇಹದ ಪರಿಮಾಣವನ್ನು ಧರಿಸಿರುವವನೂ ಆಗಿ 'ಊರ್ಧ್ವಗಮನ ಸ್ವಭಾವವಿರುವುದರಿಂದ ಲೋಕದ ತುದಿಯಲ್ಲಿರುತ್ತಾನೆ" ಈ ರೀತಿಯಾಗಿ ಜೀವದ ಸದ್ಭಾವವನ್ನು ಹೇಳಿದನು.

**ತನ್ನಿಶಮ್ಯಾಸ್ತಿಕಾಃ ಸರ್ವೇ ತಥೇತಿ ಪ್ರತಿಪೇದಿರೇ ।**
**ಅಭವ್ಯಾ ದೂರಭವ್ಯಾಶ್ಚ ಮಿಥ್ಯಾತ್ವೋದಯದೂಷಿತಾಃ ॥ ೬೯೫ ॥**

**ನಾಮುಂಚನ್ನೇಚನಾನಾದಿವಾಸನಾಂ ಭವವರ್ಧನೀಮ್ ।**
**ದೇವಕೀ ಚ ತಥಾಪೃಚ್ಛದ್ವರದತ್ತಗಣೇಶಿನಮ್ ॥ ೬೯೬ ॥**

**ಭಗವನ್ ಮದ್ಗೃಹಂ ದ್ವೌ ದ್ವೌ ಭೂತ್ವಾ ಭಿಕ್ಷಾರ್ಥಮಾಗತಾಃ ।**
**ಬಾಂಧವೇಷ್ವಿವ ಷಟ್ಸ್ವೇಷು ಸ್ನೇಹಃ ಕಿಮಿತಿ ಜಾತವಾನ್ ॥ ೬೯೭ ॥**

**ಇತಿ ಸೋಽಪಿ ಕಥಾಮಿತ್ಥಂ ವಕ್ತುಂ ಪ್ರಾರಬ್ಧವಾನ್ಗಣೀ ।**
**ಜಂಬೂಪಲಕ್ಷಿತೇ ದ್ವೀಪೇ ಕ್ಷೇತ್ರೇಽಸ್ಮಿನ್ಮಧುರಾಪುರೇ ॥ ೬೯೮ ॥**

**ಶೌರ್ಯದೇಶಾಧಿಪಃ ಶೂರಸೇನೋ ನಾಮ ಮಹೀಪತಿಃ ।**
**ತತ್ರೈವ ಭಾನುದತ್ತಾಖ್ಯಶ್ರೇಷ್ಠಿನಃ ಸಪ್ತ ಸೂನವಃ ॥ ೬೯ ॥**

**ಮಾತೈಷಾಂ ಯಮುನಾದತ್ತಾ ಸುಭಾನುಃ ಸಕಲಾಗ್ರಿಮಃ ।**
**ಭಾನುಕೀರ್ತಿಸ್ತತೋ ಭಾನುಷೇಣೋಭೂದ್ಭಾನುಶೂರವಾಕ್ ॥ ೨೦೦ ॥**

**ಪಂಚಮಃ ಶೂರದೇವಾಖ್ಯಃ ಶೂರದತ್ತಸ್ತತೋಪ್ಯಭೂತ್ ।**
**ಸಪ್ತಮಃ ಶೂರಸೇನಾಖ್ಯಃ ಪುತ್ರೈಸ್ತ್ಯೆಸ್ತಾವಲಂಕೃತೌ ॥ ೨೦೧ ॥**

**ಸ್ವಪುಣ್ಯಫಲಸಾರೇಣ ಜಗೃತುರ್ಗೃಹಮೇಧಿತಾಮ್ ।**
**ಧರ್ಮಮನ್ಯೇದ್ಯುರಭ್ಯರ್ಣಾದಾಚಾರ್ಯಾಭಯನಂದಿನಃ ॥ ೨೦೨ ॥**

**ಶ್ರುತ್ವಾ ನೃಪೋ ವಣಿಙ್ಮುಖ್ಯೋಪ್ಯಗ್ರಹೀಷ್ಟಾಂ ಸುಸಂಯಮಮ್ ।**
**ಜಿನದತ್ತಾರ್ಯಿಕಾಭ್ಯರ್ಣೇ ಶ್ರೇಷ್ಠಿಭಾರ್ಯಾ ಚ ದೀಕ್ಷಿತಾ ॥ ೨೦೩ ॥**

ಆ ವಚನವನ್ನು ಕೇಳಿ ಆಸ್ತಿಕರೆಲ್ಲರೂ ''ಹಾಗೆಯೇ ಸರಿ'' ಎಂದು ಒಪ್ಪಿದರು. ಮಿಥ್ಯಾತ್ವದ ಉದಯದಿಂದ ದೂಷಿತರಾದ ಕೆಲವರು ಅಭವ್ಯರೂ ದೂರಭವ್ಯರೂ ಭವವನ್ನು ವೃದ್ಧಿಗೊಳಿಸುವ ಅನಾದಿವಾಸನೆಯನ್ನು ಬಿಡಲಿಲ್ಲ. ಹಾಗೆಯೇ ದೇವಕಿಯೂ ವರದತ್ತಗಣಧರನನ್ನು ''ಭಗವನ್! ನನ್ನ ಮನೆಗೆ ಇಬ್ಬಿಬ್ಬರಾಗಿ ಭಿಕ್ಷೆಗೋಸ್ಕರ ಬಂದರು. ಬಾಂಧವರಲ್ಲಿ ಪ್ರೀತಿಯುಂಟಾಗುವಂತೆ ಈ ಆರು ಜನರಲ್ಲಿ ಏತಕ್ಕೆ ನನಗೆ ಪ್ರೀತಿಯುಂಟಾಯಿತು ?'' ಎಂದು ಪ್ರಶ್ನೆಮಾಡಿದಳು. ಆ ಗಣಧರನೂ ಈ ಮುಂದೆ ಹೇಳುವ ರೀತಿಯಾಗಿ ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು. ''ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಥುರಾಪುರದಲ್ಲಿ ಶೌರ್ಯದೇಶಾಧಿಪತಿಯಾದ ಶೂರಸೇನನೆಂಬ ದೊರೆಯಿದ್ದನು. ಆ ನಗರದಲ್ಲಿಯೇ ಭಾನುದತ್ತ ಶ್ರೇಷ್ಠಿಗೆ ಏಳುಮಂದಿ ಮಕ್ಕಳಿದ್ದರು. ಯಮುನಾದತ್ತೆಯು ಇವರುಗಳ ತಾಯಿ. ಸುಭಾನುವು ಎಲ್ಲರಿಗೂ ಜ್ಯೇಷ್ಠನಾಗಿದ್ದನು. ಎರಡನೆಯವನು ಭಾನುಕೀರ್ತಿ. ಬಳಿಕ ಭಾನುಷೇಣ. ಭಾನುಶೂರ. ಶೂರದೇವನೆಂಬವನು ಐದನೆಯವನು. ಆಮೇಲೆ ಶೂರದತ್ತನಾದನು. ಶೂರಸೇನನೆಂಬವನು ಏಳನೆಯವನು. ಆ ಪುತ್ರರಿಂದ ಆ ಭಾನುದತ್ತನೂ ಯಮುನಾದತ್ತೆಯೂ ಅಲಂಕೃತರಾಗಿ ತಮ್ಮ ಪುಣ್ಯಫಲದ ಸಾರದಿಂದ ಗೃಹಸ್ಥತ್ವವನ್ನು ಹೊಂದಿದರು. ಮತ್ತೊಂದು ದಿವಸ ಅಭಯ ನಂದ್ಯಾಚಾರ್ಯರ ಬಳಿಯಿಂದ ಧರ್ಮವನ್ನು ಕೇಳಿ ಶೂರಸೇನರಾಜನೂ ವೈಶ್ಯ ಶ್ರೇಷ್ಠನಾದ ಭಾನುದತ್ತನೂ ಶ್ರೇಷ್ಠವಾದ ಸಂಯಮವನ್ನು ಗ್ರಹಣಮಾಡಿದರು. ಆ ಭಾನುದತ್ತಶ್ರೇಷ್ಠಿಯ ಪತ್ನಿಯಾದ ಯಮುನಾದತ್ತೆಯು ಜಿನದತ್ತಾರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡಳು.

**ಸಪ್ತವ್ಯಸನಸಂಪನ್ನಾ ಜಾತಾಃ ಸಪ್ತಾಪಿ ತತ್ಸುತಾಃ ।**
**ಪಾಪಾನ್ಮೂಲಹರಾ ಭೂತ್ವಾ ರಾಜ್ಞಾ ನಿರ್ವಾಸಿತಾಃ ಪುರಾತ್ ॥ ೨೦೪ ॥**

ಆ ವೈಶ್ಯಪುತ್ರರು ಏಳುಮಂದಿಗಳೂ ಸಪ್ತವ್ಯಸನಸಂಪನ್ನರಾಗಿಯೂ ಪಾಪದಿಂದ ಮೂಲವನ್ನು(ಪಿತ್ರಾರ್ಜಿತಧನವನ್ನು) ನಾಶಮಾಡಿದವರಾಗಿಯೂ ಆಗಿ ರಾಜ ನಿಂದ ಪಟ್ಟಣದಿಂದ ಹೊರಡಿಸಲ್ಪಟ್ಟರು.

**ಅವಂತಿವಿಷಯಂ ಗತ್ವಾ ವಿಶಾಲಾಯಾಃ ಶ್ಮಶಾನಕೇ ।**
**ಶೂರಸೇನಮವಸ್ಥಾಪ್ಯ ಶೇಷಾಶ್ಚೋರಯಿತುಂ ಪುರಮ್ ॥ ೨೦೫ ॥**

**ಪ್ರಾವಿಶನ್ನಕೃತಂ ತಸ್ಮಿನ್ನಿದಮನ್ಯದುಪಸ್ಥಿತಮ್ ।**
**ತತ್ಪುರಾಧಿಪತಿರ್ಭೂಪೋ ಬಭೂವ ವೃಷಭಧ್ವಜಃ ॥ ೨೦೬ ॥**

ಅವರು ಅವಂತಿದೇಶವನ್ನು ಪ್ರವೇಶಿಸಿ ವಿಶಾಲನಗರಿಯ ಶ್ಮಶಾನದಲ್ಲಿ ಶೂರ ಸೇನನ್ನಿರಿಸಿ ಉಳಿದವರು ಕದಿಯುವುದಕ್ಕೋಸ್ಕರ ನಗರವನ್ನು ಪ್ರವೇಶಿಸಿದರು. ಆ ನಗರದಲ್ಲಿ ಮತ್ತೊಂದು ಈ ಪ್ರಕೃತವಿಷಯವು ಒದಗಿತು. ವೃಷಭಧ್ವಜನು ಆ ನಗರದ ಅಧಿಪತಿಯಾದ ದೊರೆಯಾಗಿದ್ದನು.

**ಭೃತ್ಯೋ ದೃಢಪ್ರಹಾರ್ಯಾಖ್ಯಃ ಸ ಸಹಸ್ರಭಟಃ ಪಟುಃ ।**
**ವಪ್ರಶ್ರೀರಸ್ಯ ಜಾಯಾಸೀದ್ವಜ್ರಮುಷ್ಟಿಸ್ತಯೋಃ ಸುತಃ ॥ ೨೦೭ ॥**

ಅವನಿಗೆ ದೃಢಪ್ರಹಾರಿಯೆಂಬ ಭೃತ್ಯನಿದ್ದನು. ಅವನು ಚತುರನಾದ ಸಹಸ್ರ ಭಟನಾಗಿದ್ದನು. ಈ ಭಟನಿಗೆ ವಪ್ರಶ್ರೀಯು ಪತ್ನಿಯಾಗಿದ್ದಳು. ಆ ದಂಪತಿಗಳಿಗೆ ವಜ್ರಮುಷ್ಟಿಯೆಂಬ ಮಗನಿದ್ದನು.

**ವಿಮಲಾಯಾಃ ಸುತಾ ಮಂಗೀ ವಿಮಲೇಂದುವಿಶಿಷ್ಟ ಸಾ ।**
**ತತ್ಪ್ರಿಯಾ ಭೂಭುಜಾ ಸಾರ್ಧಂ ವಸಂತೇ ವನಮನ್ಯದಾ ॥ ೨೦೮ ॥**

**ವಿಹರ್ತುಮುದ್ಯತಾಃ ಸರ್ವೇ ತತ್ಕಾಲಸುಖಲಿಪ್ಸಯಾ ।**
**ವಪ್ರಶ್ರೀಃ ಸಹ ಮಾಲಾಭಿಃ ಕಾಲಾಹಿಂ ಕಲಶೇಕ್ಷಿಪತ್ ॥ ೨೦೯ ॥**

**ಸ್ನುಷಾಭ್ಯಸೂಯಯಾಕಾರ್ಯಂ ನಾಮ ನಾಸ್ತಿ ಹಿ ಯೋಷಿತಾಮ್ ।**
**ಮಂಗೀ ಚೋದ್ಯಾನಯಾನಾರ್ಥಂ ಮಾಲಾದಾನಸಮುದ್ಯತಾ ॥ ೨೧೦ ॥**

**ದಷ್ಟಾ ವಸಂತಕಾಲೋಗ್ರವಿಷೇಣ ವಿಷಭರ್ತೃಣಾ ।**
**ವಿಷವ್ಯಾಪ್ತಶರೀರತ್ವಾದಸ್ಪಂದಾಭೂದಸೌ ತದಾ ॥ ೨೧೧ ॥**

ವಿಮಲೇಂದುವೆಂಬ ವೈಶ್ಯನಿಗೂ ಆತನ ಪತ್ನಿಯಾದ ವಿಮಲೆಗೂ ಪುತ್ರಿಯಾದ ಮಂಗಿಯು ಆ ವಜ್ರಮುಷ್ಟಿಯ ಪತ್ನಿಯಾಗಿದ್ದಳು. ಮತ್ತೊಂದು ಕಾಲದಲ್ಲಿ ವಸಂತ ಋತುವಿನಲ್ಲಿ ಆ ಕಾಲದ ಸುಖವನ್ನು ಹೊಂದಬೇಕೆಂಬ ಇಚ್ಛೆಯಿಂದ ಎಲ್ಲರೂ ರಾಜನೊಡನೆ ವನವಿಹಾರವನ್ನು ಮಾಡುವುದಕ್ಕೋಸ್ಕರ ಉದ್ಯುಕ್ತರಾದರು. ವಪ್ರಶ್ರೀಯು ಸೊಸೆಯಲ್ಲಿ ಅಸೂಯೆಯಿಂದ ಕಲಶದಲ್ಲಿ ಪುಷ್ಪಮಾಲೆಗಳೊಡನೆ ಕೃಷ್ಣಸರ್ಪವನ್ನು ಹಾಕಿದಳು. ಸ್ತ್ರೀಯರಿಗೆ ಅಕಾರ್ಯವೆಂಬುದೇ ಇಲ್ಲ. ಮಂಗಿಯೂ ಉದ್ಯಾನಕ್ಕೆ ಹೋಗುವುದಕ್ಕೋಸ್ಕರ ಪುಷ್ಪಮಾಲೆಯನ್ನು ತೆಗೆದುಕೊಳ್ಳುವುದಕ್ಕೆ ಉದ್ಯುಕ್ತಳಾಗಿ ವಸಂತಕಾಲದ ತೀವ್ರವಿಷವುಳ್ಳ ವಿಷಧರ-ಸರ್ಪದಿಂದ ಕಚ್ಚಲ್ಪಟ್ಟಳು. ಆಗ ಶರೀರವು ವಿಷವ್ಯಾಪ್ತವಾದುದರಿಂದ ಈಕೆಯು ಚಲನೆಯಿಲ್ಲದವಳಾದಳು.

**ಪಲಾಲವರ್ತ್ಯಾ ಸಾವೇಷ್ಟ್ಯ ಸ್ನುಷಾಂ ಪ್ರೇತವನೇತ್ಯಜತ್ ।**
**ವಜ್ರಮುಷ್ಟಿರ್ವನಕ್ರೀಡಾವಿರಾಮೇಭ್ಯೇತ್ಯ ಪೃಷ್ಟವಾನ್ ॥ ೨೧೨ ॥**

**ಮಂಗೀ ಕ್ವೇತ್ಯಾಕುಲೋ ಮಾತಾಪ್ಯಸದ್ವಾರ್ತಾಂ ನ್ಯವೇದಯತ್ ।**
**ಸಶೋಕಃ ಸ ಸಮುತ್ಖಾತನಿಶಾತಕರವಾಲಧೃತ್ ॥ ೨೧೩ ॥**

**ತಾಮನ್ವೇಷ್ಟುಂ ವ್ರಜನ್ರಾತ್ರೌ ಶ್ಮಶಾನೇ ಯೋಗಮಾಸ್ಥಿತಮ್ ।**
**ವರಧರ್ಮಮುನಿಂ ದೃಷ್ಟ್ವಾನಮದ್ಭಕ್ತ್ಯಾ ಕೃತಾಂಜಲಿಃ ॥ ೨೧೪ ॥**

ಈ ವಪ್ರಶ್ರೀಯು ಸೊಸೆಯನ್ನು ನಿಷ್ಪ್ರಯೋಜನವಾದ-ಜಳ್ಳುಹುಲ್ಲಿನ ಬತ್ತಿ-ಹಗ್ಗದಿಂದ ಸುತ್ತಿ ಸುಡುಗಾಡಿನಲ್ಲಿ ತ್ಯಜಿಸಿದಳು. ವಜ್ರಮುಷ್ಟಿಯು ವನಕ್ರೀಡಾ ಪೂರ್ತಿಯಾದ ನಂತರದಲ್ಲಿ ಬಂದು ''ಮಂಗಿಯೆಲ್ಲಿ ?'' ಎಂದು ಆಕುಲನಾಗಿ ಕೇಳಿದನು. ತಾಯಿಯೂ ಕೆಟ್ಟಸುದ್ದಿಯನ್ನು ತಿಳಿಸಿದಳು. ಅದನ್ನು ಕೇಳಿ ಶೋಕವುಳ್ಳವನಾದ ಆ ವಜ್ರಮುಷ್ಟಿಯು ಹರಿತವಾದ ಕತ್ತಿಯನ್ನು ಹಿರಿದು ಕೈಯಲ್ಲಿ ಧರಿಸಿ ಆಕೆಯನ್ನು ಹುಡುಕುವುದಕ್ಕೋಸ್ಕರ ರಾತ್ರಿಯಲ್ಲಿ ಹೋಗುತ್ತ ಸುಡುಗಾಡಿನಲ್ಲಿ ಯೋಗಧಾರಣವನ್ನು ಮಾಡಿದ್ದ ವರಧರ್ಮಮುನಿಯನ್ನು ಕಂಡು ಭಕ್ತಿಯಿಂದ ಕೈಜೋಡಿಸಿ ನಮಸ್ಕರಿಸಿದನು.

**ಯದಿ ಪೂಜ್ಯ ಪ್ರಿಯಾಂ ಪ್ರೇಕ್ಷೇ ಸಹಸ್ರದಲವಾರಿಜೈಃ ।**
**ತ್ವಾಂ ಸಮಭ್ಯರ್ಚಯಿಷ್ಯಾಮೀತ್ಯಾಶಾಸ್ಯ ಗತವಾಂಸ್ತದಾ ॥ ೨೧೫ ॥**

**ವೀಕ್ಷತೇ ಸ್ಮ ಪ್ರಿಯಾಮೀಷಚ್ಚೇತನಾಂ ವಿಷದೂಷಿತಾಮ್ ।**
**ಪಲಾಲವರ್ತಿಂ ಮುಕ್ತ್ವಾಶು ಸಮಾನೀಯಾಂತಿಕಂ ಮುನೇಃ ॥ ೨೧೬ ॥**

**ತೇನ ತತ್ಪಾದಸಂಸ್ಪರ್ಶಭೇಷಜೇನಾವಿಷೀಕೃತಾ ।**
**ಸಾಪಿ ಸದ್ಯಃ ಸಮುತ್ಥಾಯ ಪ್ರಿಯಸ್ಯ ಪ್ರೀತಿಮಾತನೋತ್ ॥ ೨೧೭ ॥**

"ಪೂಜ್ಯನೆ! ನಾನು ಪ್ರಿಯೆಯನ್ನು ಕಂಡರೆ ಸಾವಿರ ಎಸಳಿನ ತಾವರೆಗಳಿಂದ ನಿನ್ನನ್ನು ಪೂಜಿಸುವೆನು" ಎಂದು ಹರಿಕೆಕಟ್ಟಿ ಹೋದನು. ಆಗ ಸ್ವಲ್ಪ ಚೈತನ್ಯ ವುಳ್ಳವಳೂ ವಿಷದಿಂದ ದೂಷಿತಳೂ ಆದ ಪ್ರಿಯೆಯನ್ನು ಕಂಡನು. ಜಳ್ಳುಹುಲ್ಲಿನ ಬತ್ತಿಯನ್ನು ಶೀಘ್ರವಾಗಿ ಬಿಚ್ಚಿ ಮುನಿಯ ಬಳಿಗೆ ತಂದು ಆ ಮುನಿಯ ಪಾದಸಂಸ್ಪರ್ಶವೆಂಬ ಔಷಧದಿಂದ ವಿಷರಹಿತಳಾಗಿ ಮಾಡಲ್ಪಟ್ಟ ಆ ಮಂಗಿಯು ತತ್ಕ್ಷಣದಲ್ಲಿ ಎದ್ದು ಗಂಡನಿಗೆ ಸಂತೋಷವನ್ನುಂಟುಮಾಡಿದಳು.

**ಗುರುಪ್ರೀತಮನಸ್ಯಸ್ಮಿನ್ನಂಭೋಜಾರ್ಥಂ ಗತೇ ಸತಿ ।**
**ಶೂರಸೇನಸ್ತದಾ ಸರ್ವಂ ತತ್ಕರ್ಮಾಂತರ್ಹಿತೋ ದ್ರುಮೈಃ ॥ ೭೧೮ ॥**

**ವೀಕ್ಷ್ಯ ಮಂಗ್ಯಾಃ ಪರೀಕ್ಷಾರ್ಥಂ ತದಭ್ಯರ್ಣಮುಪಾಗತಃ ।**
**ಸ್ವಾಂಗಸಂದರ್ಶನಂ ಕೃತ್ವಾ ಮಧುರಾಲಾಪಚೇಷ್ಟಿತೈಃ ॥ ೭೧೯ ॥**

**ಲೀಲಾವಲೋಕನೈರ್ಹಾಸೈರ್ವ್ಯಧಾದ್ವಿಸ್ರಂಭಣಂ ಭೃಶಮ್ ।**
**ಸಾಪ್ಯಾಹ ಭವತಾ ಸಾರ್ಧಮಾಗಮಿಷ್ಯಾಮಿ ಮಾಂ ಭವಾನ್ ॥ ೭೨೦ ॥**

**ಗೃಹೀತ್ವಾ ಯಾತ್ವಿತಿ ವ್ಯಕ್ತಂ ಶ್ರುತ್ವಾ ತತ್ತ್ವತ್ಪತೇರಹಮ್ ।**
**ಬಿಭೇಮಿ ತನ್ನ ವಕ್ತವ್ಯಮಿತಿ ತೇನಾಭಿಭಾಷಿತಾ ॥ ೭೨೧ ॥**

**ಮಾಭೈಷೀಸ್ತ್ವಂ ವರಾಕೋಸೌ ಕಿಂ ಕರಿಷ್ಯತಿ ಭೀಲುಕಃ ।**
**ತತೋ ಯೇನ ತವಾಪಾಯೋ ನ ಸ್ಯಾತ್ತತ್ಕ್ರಿಯತೇ ಮಯಾ॥ ೭೨೨ ॥**

**ಇತ್ಯನ್ಯೋನ್ಯಕಥಾಕಾಲೇ ಹಸ್ತಾನೀತಸರೋರುಹಃ ।**
**ವಜ್ರಮುಷ್ಟಿಃ ಸಮಾಗತ್ಯ ಕರವಾಲಂ ಪ್ರಿಯಾಕರೇ ॥ ೭೨೩ ॥**

**ನಿಧಾಯ ಮುನಿಪಾದಾಬ್ಜದ್ವಯಮಭ್ಯರ್ಚ್ಯ ಭಕ್ತಿತಃ ।**
**ಆನಮತ್ತಂ ಪ್ರಿಯಾ ತಸ್ಯ ಪ್ರಹರ್ತುಮಸಿಮುದ್ದಧೇ ॥ ೭೨೪ ॥**

**ಕರೇಣ ಶೂರಸೇನೋಽಹಂಸ್ತತ್ಕರಾಸಿಂ ತದೈವ ಸಃ ।**
**ಆಚ್ಛಿದ್ಯ ನ್ಯಪತದ್ಭೂಮೌ ಶೂರಸೇನಕರಾಂಗುಲಿಮ್ ॥ ೭೨೫ ॥**

ಗುರುವಿನಲ್ಲಿ ಪ್ರೀತಿಯುಳ್ಳುದಾದ ಮನಸ್ಸುಳ್ಳ ಈ ವಜ್ರಮುಷ್ಟಿಯು ಕಮಲ ಗಳನ್ನು ತರುವುದಕ್ಕೋಸ್ಕರ ಹೋಗುತ್ತಿರಲು ಆಗ ಮರಗಳಿಂದ ಮರೆಯಾಗಿದ್ದ ಶೂರಸೇನನು ಆ ಎಲ್ಲ ಕಾರ್ಯವನ್ನು ನೋಡಿ ಮಂಗಿಯ ಪರೀಕ್ಷೆಗೋಸ್ಕರ ಆಕೆಯ ಹತ್ತಿರಕ್ಕೆ ಬಂದು ತನ್ನ ಮೈಯನ್ನು ತೋರಿಸಿ ಮಧುರಭಾಷಣಗಳಿಂದಲೂ ಚೇಷ್ಟೆಗಳಿಂದಲೂ ವಿನೋದವಾದ ನೋಟಗಳಿಂದಲೂ ಬಹಳವಾಗಿ ವಿಶ್ವಾಸವನ್ನು ಮಾಡಿದನು. ಆಕೆಯೂ ಶೂರಸೇನನನ್ನು ಕುರಿತು "ನಾನು ನಿನ್ನೊಡನೆ ಬರುವೆನು. ನೀನು ನನ್ನನ್ನು ಕರೆದುಕೊಂಡು ಹೋಗು" ಎಂದು ವ್ಯಕ್ತವಾಗಿ ಹೇಳಿದಳು. ಆ ಮಾತನ್ನು ಕೇಳಿ "ನಾನು ನಿನ್ನ ಗಂಡನ ದೆಸೆಯಿಂದ ಹೆದರುತ್ತೇನೆ. ಕರೆದು ಕೊಂಡುಹೋಗಬೇಕೆಂದು ಹೇಳುವ ಮಾತು ಹೇಳತಕ್ಕುದಲ್ಲ" ಎಂದು ಅವನಿಂದ ಹೇಳಲ್ಪಟ್ಟವಳಾಗಿ "ನೀನು ಹೆದರಬೇಡ. ಶೋಚನೀಯನೂ ಹೆದರಿಕೆಯುಳ್ಳವನೂ ಆದ ಇವನು ಏನುಮಾಡುವನು? ಅವನಿಂದ ನಿನಗೆ ಅಪಾಯವಾಗದಿರುವ ಕಾರ್ಯವನ್ನು ನಾನು ಮಾಡುತ್ತೇನೆ" ಎಂದು ಪರಸ್ಪರವಾಗಿ ಮಾತನಾಡುತ್ತಿರುವ ಕಾಲದಲ್ಲಿ ಕೈಗಳಲ್ಲಿ ಕಮಲಗಳನ್ನು ತಂದ ವಜ್ರಮುಷ್ಟಿಯು ಬಂದು ಖಡ್ಗವನ್ನು ಪ್ರಿಯೆಯ ಕೈಯಲ್ಲಿರಿಸಿ ಭಕ್ತಿಯಿಂದ ಮುನಿಯ ಚರಣಕಮಲವನ್ನು ಪೂಜಿಸಿ ಮುನಿಯನ್ನು ನಮಸ್ಕರಿಸಿದನು. ಆಗ ಅವನ ಹೆಂಡತಿಯು ಅವನನ್ನು ಹೊಡೆಯು ವುದಕ್ಕೋಸ್ಕರ ಕತ್ತಿಯನ್ನೆತ್ತಿದಳು. ಆಗಲೇ ಆ ಶೂರಸೇನನು ಆಕೆಯ ಕೈಯ ಕತ್ತಿಯನ್ನು ತನ್ನ ಕೈಯಿಂದ ಹೊಡೆದನು. ಆ ಕತ್ತಿಯು ಶೂರಸೇನನ ಕೈಯ ಬೆರಳನ್ನು ಕತ್ತರಿಸಿ ಭೂಮಿಯಲ್ಲಿ ಬಿದ್ದಿತು.

**ವಜ್ರಮುಷ್ಟಿಸ್ತದಾಲೋಕ್ಯ ಮಾಭೈಷೀರಿತ್ಯಭಾಷತ ।**
**ಭೀತಾಹಮಿತಿ ಸಾ ಶಾಠ್ಯಾದದಿತಾಸ್ಮೈ ವೃಥೋತ್ತರಮ್ ॥ ೭೨೬ ॥**

ವಜ್ರಮುಷ್ಟಿಯು ಅದನ್ನು ನೋಡಿ ಮಂಗಿಗೆ "ಹೆದರಬೇಡ" ಎಂದು ಹೇಳಿದನು. "ನಾನು ಹೆದರಿದೆನು" ಎಂದು ಆಕೆಯು ಅವನಿಗೆ ದೌಷ್ಟ್ಯದಿಂದ ಸುಮ್ಮನೆ ಉತ್ತರವನ್ನು ಕೊಟ್ಟಳು.

**ತದೈವ ಶೂರಸೇನೋಽಪಿ ಭ್ರಾತೃಭಿರ್ಲಬ್ಧವಿತ್ತಕೈಃ ।**
**ಚೌರ್ಯೇಣಾಂಗ ಭವದ್ಭಾಗಂ ಗೃಹಾಣೇತ್ಯುದಿತಃ ಪೃಥಕ್ ॥ ೭೨೭ ॥**

**ಸ ಭವ್ಯೋಽತಿವಿರಕ್ತಃ ಸನ್ನ ಧನೇನ ಪ್ರಯೋಜನಮ್ ।**
**ಸಂಸಾರಾದತಿಭೀತೋಽಹಂ ತದ್ಗ್ರಹಿಷ್ಯಾಮಿ ಸಂಯಮಮ್ ॥ ೭೨೮ ॥**

**ಇತ್ಯಬ್ರವೀದಯಂ ಹೇತುಃ ಕಸ್ತಪೋಗ್ರಹಣೇ ತವ ।**
**ವದೇತ್ಯುಕ್ತಃ ಸ ತೈಶ್ಛಿನ್ನನಿಜಹಸ್ತಾಂಗುಲಿವ್ರಣಮ್ ॥ ೭೨೯ ॥**

**ದರ್ಶಯಿತ್ವಾವದತ್ಸರ್ವಮಾತ್ಮಮಂಗೀವಿಚೇಷ್ಟಿತಮ್ ।**
**ತತ್ಸುಭಾನುಃ ಸಮಾಕರ್ಣ್ಯ ಸ್ತ್ರೀನಿಂದಾಮಕರೋದಿತಿ ॥ ೭೩೦ ॥**

ಆಗಲೇ ಶೂರಸೇನನೂ ಕಳುವಿನಿಂದ ದ್ರವ್ಯವನ್ನು ಪಡೆದಿರುವ ಸಹೋದರರಿಂದ "ಮಗುವೆ! ಬೇರೆಯಾದ ನಿನ್ನ ಭಾಗವನ್ನು ಸ್ವೀಕರಿಸು" ಎಂದು ಹೇಳಲ್ಪಟ್ಟನು. ಭವ್ಯನಾದ ಆ ಶೂರಸೇನನು ಬಹುವಿರಕ್ತನಾಗಿ "ದ್ರವ್ಯದಿಂದ ಪ್ರಯೋಜನವಿಲ್ಲ. ಸಂಸಾರದಿಂದ ನಾನು ಬಹಳ ಭೀತನಾಗಿದ್ದೇನೆ. ಆದುದರಿಂದ ಸಂಯಮವನ್ನು ಸ್ವೀಕರಿಸುವೆನು" ಎಂದು ಹೇಳಿದನು. "ತಪಸ್ಸನ್ನು ಸ್ವೀಕರಿಸುವುದಕ್ಕೆ ನಿನಗೆ ಕಾರಣವಾವುದು ?ಹೇಳು" ಎಂದು ಆ ಸಹೋದರರಿಂದ ಹೇಳಲ್ಪಟ್ಟ ಶೂರಸೇನನು ಕತ್ತರಿಸಲ್ಪಟ್ಟಿರುವ ತನ್ನ ಕೈಬೆರಳಿನ ಗಾಯವನ್ನು ತೋರಿಸಿ ತನಗೂ ಮಂಗಿಗೂ ನಡೆದ ಚೇಷ್ಟೆಯೆಲ್ಲವನ್ನೂ ಹೇಳಿದನು. ಅದನ್ನು ಸುಭಾನುವು ಕೇಳಿ ಈ ಮುಂದೆ ಹೇಳುವ ರೀತಿಯಾಗಿ ಸ್ತ್ರೀನಿಂದೆಯನ್ನು ಮಾಡಿದನು.

**ಸ್ಥಾನಂ ತಾ ಏವ ನಿಂದಾಯಾಃ ಪರತ್ರಾಸಕ್ತಿಮಾಗತಾಃ ।**
**ವರ್ಣಮಾತ್ರೇಣ ರಾಜಂತ್ಯೋ ರಂಜಯಂತ್ಯೋಽಪರಾನ್ ಭೃಶಮ್ ॥**

"ಪರಪುರುಷರಲ್ಲಿ ಆಸಕ್ತಿಯನ್ನು ಹೊಂದಿರುವವರೂ ರೂಪಮಾತ್ರದಿಂದ ಪ್ರಕಾಶಿಸುವವರೂ ಬೇರೆಯವರನ್ನು ಅಧಿಕವಾಗಿ ಅನುರಾಗಗೊಳಿಸುವವರೂ ಆದ ಆ ಸ್ತ್ರೀಯರೇ ನಿಂದೆಗೆ ಪಾತ್ರರು.

**ಆದಾಯ ಕೃತ್ರಿಮಂ ರಾಗಂ ರಾಗಿಣಾಂ ನಯನಪ್ರಿಯಾಃ ।**
**ಬಿಭ್ರತೀಹ ಭೃಶಂ ಭೂಷಾರಮ್ಯಾಶ್ಚಿತ್ರಾಕೃತೀಃ ಸ್ತ್ರಿಯಃ ॥ ೭೩೨ ॥**

ಕೃತ್ರಿಮವಾದ ಅನುರಾಗವನ್ನು ಸ್ವೀಕರಿಸಿ ಪ್ರೀತಿಸುವವರ ನೇತ್ರಗಳಿಗೆ ಪ್ರಿಯರಾದ ಸ್ತ್ರೀಯರು ಈ ಲೋಕದಲ್ಲಿ ಅಲಂಕಾರದಿಂದ ರಮಣೀಯಗಳಾದ ಚಿತ್ರಾಕೃತಿಗಳನ್ನು ಧರಿಸಿರುತ್ತಾರೆ. ಚಿತ್ರಾಕೃತಿಗಳಂತೆ ರಮಣೀಯರಾಗಿದ್ದರೂ ಅವುಗಳಂತೆ ಗುಣ ರಹಿತರಾಗಿರುತ್ತಾರೆಂದು ಭಾವವು.

**ಸುಖಂ ವಿಷಯಜಂ ಪ್ರಾಪ್ತುಂ ಪ್ರಾಪ್ತಮಾಧುರ್ಯಮಾಲಿಕಾಃ ।**
**ಕಿಂಪಾಕಫಲಮಾಲಾ ವಾ ಕಾನ್ನ ಹನ್ಯುರ್ಮನೋರಮಾಃ ॥ ೭೩೩ ॥**

ವಿಷಯಜನ್ಯವಾದ ಸುಖವನ್ನು ಹೊಂದುವುದುಕ್ಕೋಸ್ಕರ ದೊರೆತ ಮಾಧು ರ್ಯದ ಮಾಲಿಕೆಯರಾದ ಮನೋರಮೆಯರು–ಸ್ತ್ರೀಯರು, ವಿಷವೃಕ್ಷದ ಫಲಗಳ ಮಾಲೆಗಳಂತೆ, ಯಾರನ್ನುತಾನೆ ಕೊಲ್ಲದಿರುವರು ?

**ಮಾತರಃ ಕೇವಲಂ ನೈತಾಃ ಪ್ರಜಾನಾಮೇವ ಯೋಷಿತಃ ।**
**ದೋಷಾಣಾಮಪಿ ದುಃಶಿಕ್ಷಾ ದುರ್ವಿದ್ಯಾ ಇವ ದುಃಖದಾಃ ॥ ೭೩೪ ॥**

ದುಷ್ಟಶಿಕ್ಷಣಗಳುಳ್ಳ ದುರ್ವಿದ್ಯೆಗಳಂತೆ, ದುಃಖವನ್ನು ಕೊಡುವ ಈ ಸ್ತ್ರೀಯರು ಪ್ರಜೆಗಳಿಗೇ ಮಾತ್ರ ತಾಯಂದಿರಲ್ಲ–ದೋಷಗಳಿಗೂ ತಾಯಂದಿರಾಗಿರುತ್ತಾರೆ.

**ಮೃದವಃ ಶೀತಲಾಃ ಶ್ಲಕ್ಷ್ಣಾಃ ಪ್ರಾಯಃ ಸ್ಪರ್ಶಸುಖಪ್ರದಾಃ ।**
**ಭುಜಂಗ್ಯೋ ವಾಂಗನಾಃ ಪ್ರಾಣಹಾರಿಣ್ಯಃ ಪಾಪರೂಪಿಕಾಃ ॥ ೭೩೫ ॥**

ನುಣುಪಾಗಿರುವುವೂ ಶೀತಗಳೂ ಕೃಶಗಳೂ ಪ್ರಾಯಿಕವಾಗಿ ಸ್ಪರ್ಶಸುಖವನ್ನು ಕೊಡುವುವೂ ಪ್ರಾಣಾಪಹಾರಿಗಳೂ ಪಾಪರೂಪಗಳೂ ಆದ ಸ್ತ್ರೀಸರ್ಪಗಳಂತೆ, ಕೋಮಲರೂ ಶಾಂತರಾಗಿರುವವರೂ ಕೃಶವಾಗಿರುವವರೂ ಪ್ರಾಯಿಕವಾಗಿ ಸ್ಪರ್ಶ ಸುಖವನ್ನು ಕೊಡುವವರೂ ಪಾಪಸ್ವರೂಪರೂ ಆದ ಸ್ತ್ರೀಯರು ಪ್ರಾಣಾಪ ಹಾರಿಣಿಯರಾಗಿರುತ್ತಾರೆ.

**ಹನ್ಯಾದ್ದಂತಾಂತಸಂಕ್ರಾಂತಂ ವಿಷಂ ವಿಷಭೃತಾಂ ನ ವಾ ।**
**ಸರ್ವಾಂಗಂ ಸಹಜಾಹಾರ್ಯಂ ಕಾಂತಾನಾಂ ಹಂತಿ ಸಂತತಮ್ ॥**

ಸರ್ಪಗಳ ಹಲ್ಲುಗಳ ಮಧ್ಯದಲ್ಲಿ ಸಂಬಂಧಿಸಿಕೊಂಡಿರುವ ವಿಷವು ಕೊಲ್ಲು ವುದೂ ಕೊಲ್ಲದಿರುವುದೂ ಉಂಟು. ಸ್ತ್ರೀಯರ ಸಹಜವೂ ನಿವಾರಿಸಲ್ಪಡತಕ್ಕು ದಲ್ಲದುದೂ ಆದ ಸರ್ವಾಂಗವಿಷವು ಯಾವಾಗಲೂ ಕೊಲ್ಲುವುದು.

**ಪರೇಷಾಂ ಪ್ರಾಣಪರ್ಯಂತಾಃ ಪಾಪಿನಾಮಪ್ಯಪಕ್ರಿಯಾಃ ।**
**ಹಿಂಸಾನಾಮಿವ ಕಾಂತಾನಾಮಂತಾತೀತಾ ದಯಾದ್ವಿಷಾಮ್ ॥ ೭೩೭ ॥**

ಪಾಪಿಗಳಾದರೂ ಬೇರೆಯವರ ಅಪಕಾರಗಳು ಪ್ರಾಣಗಳಿರುವವರೆಗೆ- ಜೀವಿತ ಕಾಲದವರೆಗಿರುತ್ತವೆ. ದಯೆಯನ್ನು ದ್ವೇಷಿಸುವ-ನಿರ್ದಯರಾದ ಸ್ತ್ರೀಯರ ಅಪಕಾರಗಳಾದರೋ, ದಯಾದ್ವೇಷಿಗಳಾದ ಹಿಂಸೆಗಳ ಅಪಕಾರಗಳಂತೆ, ಕೊನೆ ಯಿಲ್ಲದುವಾಗಿರುತ್ತವೆ.

**ಜಾತಿಮಾತ್ರೇಣ ಸರ್ವಾಶ್ಚ ಯೋಷಿತೋ ವಿಷಮೂರ್ತಯಃ ।**
**ನ ಜ್ಞಾತಮೇತನ್ನೀತಿಜ್ಞೈಃ ಕುರ್ವದ್ಭಿರ್ವಿಷಕನ್ಯಕಾಃ ॥ ೭೩೮ ॥**

ಜನನಮಾತ್ರದಿಂದ ಎಲ್ಲಾ ಸ್ತ್ರೀಯರೂ ವಿಷಮೂರ್ತಿಗಳಾಗಿರುತ್ತಾರೆ. ಈ ವಿಷಯವು ವಿಷಕನ್ಯೆಯರನ್ನು ಮಾಡುವ ನೀತಿಜ್ಞರಿಗೆ ಗೊತ್ತಿಲ್ಲ. ಹಾಗೆ ಗೊತ್ತಿದ್ದಿದ್ದರೆ ವ್ಯರ್ಥವಾಗಿ ಶ್ರಮಪಡುತ್ತಿರಲಿಲ್ಲವೆಂದು ಭಾವವು.

**ಕೌಟಿಲ್ಯಕೋಟಯಃ ಕ್ರೌರ್ಯಪರ್ಯಂತಾಃ ಪಂಚಪಾತಕಾಃ ।**
**ನಾರ್ಯೋನಾರ್ಯಾಃ ಕಥಂ ನ ಸ್ಯುರಸ್ಯುದ್ಯತವಿಚೇಷ್ಟಿತಾಃ ॥ ೭೩೯ ॥**

ಅನೇಕ ಕುಟಿಲತೆಯುಳ್ಳವರೂ ಕ್ರೂರತೆಯ ತುತ್ತತುದಿಯಾಗಿರುವವರೂ ಪಂಚ ಪಾತಕಗಳುಳ್ಳವರೂ ಅನಾರ್ಯರೂ ಆದ ನಾರಿಯರು ಕತ್ತಿಯನ್ನೆತ್ತುವ ವ್ಯಾಪಾರ ವುಳ್ಳವರಾಗಿ ಹೇಗೆ ಆಗಲಾರರು ?".

**ತತೋ ನಿರ್ವಿದ್ಯ ಸಂಸಾರಾತ್ಸಾನುಜಃ ಸ ನಿಜಾರ್ಜಿತಮ್ ।**
**ಧನಂ ದತ್ವಾ ಸ್ವಕಾಂತಾಭ್ಯೋ ವರಧರ್ಮಾತ್ತಪೋಗಮತ್ ॥ ೭೪೦ ॥**

ಅನಂತರದಲ್ಲಿ ಆ ಸುಭಾನುವು ತಮ್ಮಂದಿರು ಸಹಿತನಾಗಿ ಸಂಸಾರದಿಂದ ವಿರಕ್ತಿಯನ್ನು ಹೊಂದಿ ತಾನು ಸಂಪಾದಿಸಿದ ದ್ರವ್ಯವನ್ನು ಸ್ವಪತ್ನಿಯರಿಗೆ ಕೊಟ್ಟು ವರಧರ್ಮಮುನಿಯ ದೆಸೆಯಿಂದ ತಪಸ್ಸನ್ನು ಸ್ವೀಕರಿಸಿದನು. ಏಳುಮಂದಿ ಅಣ್ಣತಮ್ಮಂದಿರೂ ದೀಕ್ಷೆಯನ್ನು ತೆಗೆದುಕೊಂಡರೆಂದು ಭಾವವು.

**ಜಿನದತ್ತಾರ್ಯಿಕಾಭ್ಯಾಸೇ ತದ್ಭಾರ್ಯಾಶ್ಚ ತಪೋ ಯಯುಃ ।**
**ಹೇತುರಾಸನ್ನಭವ್ಯಾನಾಂ ಕೋ ವಾ ನ ಸ್ಯಾತ್ತಪೋಗ್ರಹೇ ॥ ೭೪೧ ॥**

ಅವರುಗಳ ಪತ್ನಿಯರೂ ಜಿನದತ್ತಾರ್ಯಿಕೆಯ ಬಳಿಯಲ್ಲಿ ತಪಸ್ಸನ್ನು ಹೊಂದಿ ದರು. ಆಸನ್ನಭವ್ಯರಿಗೆ ತಪೋಗ್ರಹಣದಲ್ಲಿ ಯಾವುದು ತಾನೆ ಕಾರಣವಾಗದು ?

**ಸಪ್ತಾಪಿ ಕಾನನೇನ್ಯೇದ್ಯುರುಜ್ಜಯಿನ್ಯಾಃ ಪ್ರತಿಷ್ಠಿತಾನ್ ।**
**ವಜ್ರಮುಷ್ಟಿಃ ಸಮಾಸಾದ್ಯ ಪ್ರಣಮ್ಯ ವಿಧಿಪೂರ್ವಕಮ್ ॥ ೭೪೨ ॥**

**ಹೇತುನಾ ಕೇನ ದೀಕ್ಷೇಯಂ ಭವತಾಮಿತ್ಯಸೌ ಜಗೌ ।**
**ತೇಪಿ ನಿರ್ವರ್ಣಯಾಮಾಸುರ್ದೀಕ್ಷಾಹೇತುಂ ಯಥಾಗತಮ್॥ ೭೪೩ ॥**

ಮತ್ತೊಂದು ದಿವಸ ಉಜ್ಜಯಿನಿಯ ಕಾಡಿನಲ್ಲಿರುವ ಆ ಏಳುಮಂದಿಗಳನ್ನೂ ವಜ್ರಮುಷ್ಟಿಯು ಕಂಡು ವಿಧಿಪೂರ್ವಕವಾಗಿ ನಮಸ್ಕರಿಸಿ "ಯಾವ ಕಾರಣದಿಂದ ತಮ್ಮುಗಳ ದೀಕ್ಷೆಯಿದು ?" ಎಂದು ಇವನು ಕೇಳಿದನು. ಅವರೂ ದೀಕ್ಷೆಯ ಕಾರಣ ವನ್ನು ಯಥಾಪ್ರಕಾರವಾಗಿ (ನಡೆದ ಹಾಗೆಯೇ) ವರ್ಣಿಸಿದರು.

**ಆರ್ಯಿಕಾಣಾಂ ಚ ದೀಕ್ಷಾಯಾಃ ಪೃಷ್ಟ್ವಾ ಮಂಗ್ಯಪಿ ಕಾರಣಮ್ ।**
**ಉಪಾದದೇ ತದಭ್ಯರ್ಣೇ ಪ್ರವ್ರಜ್ಯಾಮಾಪ್ತಬೋಧಿಕಾ ॥ ೭೪೪ ॥**

ಮಂಗಿಯೂ ಆರ್ಯಿಕೆಯರ ದೀಕ್ಷೆಯ ಕಾರಣವನ್ನು ಕೇಳಿ ರತ್ನತ್ರಯವನ್ನು ಪಡೆದವಳಾಗಿ ಅವರ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡಳು.

**ವರಧರ್ಮಯತೇರ್ವಜ್ರಮುಷ್ಟಿಃ ಶಿಷ್ಯತ್ವಮೇಯಿವಾನ್ ।**
**ಪ್ರಾಂತೇ ಸನ್ನ್ಯಸ್ಯ ಸಪ್ತಾಸಂಸ್ತ್ರಾಯಸ್ತ್ರಿಂಶಾಃ ಸ್ವರಾದಿಮೇ ॥ ೭೪೫ ॥**

**ದ್ವಿಸಾಗರೋಪಮಾಯುಷ್ಯಾಸ್ತತಶ್ಚ್ಯುತ್ವಾ ಸ್ವಪುಣ್ಯತಃ ।**
**ಭರತೇ ಧಾತಕೀಖಂಡೇ ಪ್ರಾಚ್ಯವಾಕ್ಶ್ರೇಣಿವಿಶ್ರುತೇ ॥ ೭೪೬ ॥**

**ನಿತ್ಯಾಲೋಕಪುರೇ ಶ್ರೀಮಚ್ಚಂದ್ರಚೂಲಮಹೀಪತೇಃ ।**
**ಜ್ಯಾಯಾನ್ ದೇವ್ಯಾಂ ಮನೋಹರ್ಯಾಂ ಸೂನುಶ್ಚಿತ್ರಾಂಗದೋ ಭವತ್ ॥ ೭೪೭ ॥**

ವಜ್ರಮುಷ್ಟಿಯು ವರಧರ್ಮಯತಿಯ ಶಿಷ್ಯತ್ವವನ್ನು ಹೊಂದಿದನು. ಆಯುಷ್ಯಾವಸಾನದಲ್ಲಿ ಆ ಸುಭಾನುವೇ ಮೊದಲಾದ ಏಳುಮಂದಿಗಳು ಸಮಾಧಿ ಮರಣವನ್ನು ಹೊಂದಿ ಮೊದಲನೆಯ ಸ್ವರ್ಗದಲ್ಲಿ ಎರಡು ಸಾಗರೋಪಮ ವರ್ಷಾಯುಷ್ಯವುಳ್ಳ ತ್ರಾಯಸ್ತ್ರಿಂಶದೇವರ್ಕಳಾದರು. ಆಯುಷ್ಯವು ಪೂರ್ತಿಯಾದ ಮೇಲೆ ಅಲ್ಲಿಂದ ಚ್ಯುತರಾಗಿ ತಮ್ಮ ಪುಣ್ಯದಿಂದ ಧಾತಕೀಖಂಡದ ಪೂರ್ವಭರತ ಕ್ಷೇತ್ರದಲ್ಲಿ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ಪ್ರಸಿದ್ಧವಾದ ನಿತ್ಯಾಲೋಕ ಪುರದಲ್ಲಿ ಚಂದ್ರಚೂಲರಾಜನಿಗೆ ಮನೋಹರೀದೇವಿಯಲ್ಲಿ ಸುಭಾನುವು ಚಿತ್ರಾಂಗ ದನೆಂಬ ಪುತ್ರನಾದನು.

**ಇತರೇಪಿ ತಯೋರೇವ ತ್ರಯಸ್ತೇ ಜಜ್ಞಿರೇ ಯಮಾಃ ।**
**ಧ್ವಜವಾಹನಶಬ್ದಾಂತಗರುಡೌ ಮಣಿಚೂಲಕಃ ॥ ೭೪೮ ॥**

**ಪುಷ್ಪಚೂಲಾಹ್ವಯೋ ನಂದನಚರೌ ಗಗನಾದಿಕೌ ।**
**ತತ್ರೈವ ದಕ್ಷಿಣಶ್ರೇಣ್ಯಾಂ ನೃಪೋ ಮೇಘಪುರಾಧಿಪಃ ॥ ೭೪೯ ॥**

**ಧನಂಜಯೋಸ್ಯ ಸರ್ವಶ್ರೀರ್ಜಾಯಾ ತಸ್ಯಾಃ ಸುತಾಭವತ್ ।**
**ಧನಶ್ರೀಃ ಶ್ರೀರಿವಾನ್ಯೈಷಾ ತತ್ರೈವಾನ್ಯೋ ಮಹೀಪತಿಃ ॥ ೭೫೦ ॥**

**ಖ್ಯಾತೋ ನಂದಪುರಾಧೀಶೋ ಹರಿಷೇಣೋ ಹರಿದ್ವಿಷಾಮ್ ।**
**ಶ್ರೀಕಾಂತಾಸ್ಯ ಪ್ರಿಯಾ ತಸ್ಯಾಂ ಸುತೋಭೂದ್ಧರಿವಾಹನಃ ॥ ೭೫೧ ॥**

**ಧನಶ್ರಿಯೋಯಂ ಬಂಧೇನ ಮೈಥುನಃ ಪ್ರಥಿತೋ ಗುಣೈಃ ।**
**ತತ್ರೈವ ಭರತೇಯೋಧ್ಯಾಯಾಂ ಸ್ವಯಂವರಕರ್ಮಣಿ ॥ ೭೫೨ ॥**

**ಮಾಲಾಂ ಸಂಪ್ರಾಪಯತ್ಪ್ರೀತ್ಯಾ ಧನಶ್ರೀರ್ಹರಿವಾಹನಮ್ ।**
**ಚಕ್ರವಾಂಸ್ತದಯೋಧ್ಯಾಯಾಂ ಪುಷ್ಪದಂತಮಹೀಪತಿಃ ॥ ೭೫೩ ॥**

**ತಸ್ಯ ಪ್ರೀತಿಂಕರೀ ದೇವೀ ತತ್ಸೂನುಃ ಪಾಪಪಂಡಿತಃ ।**
**ಧನಶ್ರಿಯಂ ಸುದತ್ತೋಲಾನ್ನಿಹತ್ಯ ಹರಿವಾಹನಮ್ ॥ ೭೫೪ ॥**

ಆ ಬೇರೆ ಆರುಮಂದಿಗಳೂ ಆ ದಂಪತಿಗಳಿಗೆ ಗರುಡಧ್ವಜ-ಗರುಡವಾಹನ, ಮಣಿಚೂಲ-ಪುಷ್ಪಚೂಲ, ಗಗನನಂದನ-ಗಗನಚರರೆಂಬ ಮೂರುಜತೆ-ಅವಳಿ ಮಕ್ಕಳಾಗಿ ಜನಿಸಿದರು. ಅಲ್ಲಿಯೇ ದಕ್ಷಿಣಶ್ರೇಣಿಯಲ್ಲಿ ಮೇಘಪುರಾಧಿಪತಿಯಾದ ಧನಂಜಯನೆಂಬ ರಾಜನಿದ್ದನು. ಇವನಿಗೆ ಸರ್ವಶ್ರೀಯು ಪತ್ನಿಯಾಗಿದ್ದಳು. ಆಕೆಗೆ

ಧನಶ್ರೀಯೆಂಬ ಪುತ್ರಿಯಿದ್ದಳು. ಈಕೆಯು ಬೇರೊಬ್ಬಳು ಲಕ್ಷ್ಮಿಯಂತಿದ್ದಳು. ಅಲ್ಲಿಯೇ ಪ್ರಸಿದ್ಧನೂ ನಂದಪುರಾಧಿಪತಿಯೂ ಶತ್ರುಗಳಿಗೆ ಸಿಂಹಪ್ರಾಯನೂ ಆದ ಹರಿಷೇಣನೆಂಬ ಮತ್ತೊಬ್ಬ ರಾಜನಿದ್ದನು. ಇವನಿಗೆ ಶ್ರೀಕಾಂತೆಯು ಪತ್ನಿಯಾಗಿದ್ದಳು. ಆಕೆಯಲ್ಲಿ ಹರಿವಾಹನನೆಂಬ ಪುತ್ರನು ಜನಿಸಿದನು.' ಗುಣಗಳಿಂದ ಪ್ರಸಿದ್ಧನಾದ ಈ ಹರಿವಾಹನನು ಧನಶ್ರೀಗೆ ಸಂಬಂಧದಿಂದ ಮೈದುನನಾಗಿದ್ದನು. ಆ ಭರತಕ್ಷೇತ್ರದಲ್ಲೇ ಅಯೋಧ್ಯಾನಗರದಲ್ಲಿ ನಡೆದ ಸ್ವಯಂವರಕಾರ್ಯದಲ್ಲಿ ಧನಶ್ರೀಯು ಪ್ರೀತಿಯಿಂದ ಹರಿವಾಹನನಿಗೆ ಮಾಲೆಯನ್ನು ಹೊಂದಿಸಿದಳು (ಹಾಕಿದಳು). ಆ ಅಯೋಧ್ಯೆಯಲ್ಲಿ ಪುಷ್ಪದಂತರಾಜನು ಚಕ್ರವರ್ತಿಯಾಗಿದ್ದನು. ಪ್ರೀತಿಂಕರಿಯು ಅವನ ಪತ್ನಿಯಾಗಿದ್ದಳು. ಆಕೆಯ ಪುತ್ರನೂ ಪಾಪಕಾರ್ಯದಲ್ಲಿ ಪಂಡಿತನೂ ಆದ ಸುದತ್ತನು ಹರಿವಾಹನನನ್ನು ಕೊಂದು ಧನಶ್ರೀಯನ್ನು ತೆಗೆದುಕೊಂಡನು (ಲಾ–ಆದಾನೆ).

**ತನ್ನಿರ್ವೇಗೇಣ ಚಿತ್ರಾಂಗದಾದ್ಯಾಃ ಸಪ್ತಾಪಿ ಸಂಯಮಮ್ ।**
**ಭೂತಾನಂದಾಖ್ಯತೀರ್ಥೇಶಪಾದಮೂಲೇ ಸಮಾಶ್ರಯನ್ ॥ ೨೫೫ ॥**

ಆ ವೈರಾಗ್ಯದಿಂದ ಚಿತ್ರಾಂಗದನೇ ಮೊದಲಾದ ಏಳು ಮಂದಿಗಳೂ ಭೂತಾನಂದರೆಂಬ ತೀರ್ಥೆಶ್ವರರ ಪಾದಮೂಲದಲ್ಲಿ ಸಂಯಮವನ್ನು ಹೊಂದಿದರು.

**ತೇ ಕಾಲಾಂತೇಭವನ್ ಕಲ್ಪೇ ತುರ್ಯೇ ಸಾಮಾನಿಕಾಃ ಸುರಾಃ ।**
**ಸಪ್ತಾಬ್ಧ್ಯಾಯುಃಸ್ಥಿತಿಪ್ರಾಂತೇ ತತಃ ಪ್ರಚ್ಯುತ್ಯ ಭಾರತೇ ॥ ೨೫೬ ॥**

**ಕುರುಜಾಂಗಲದೇಶೇಸ್ಮಿನ್ ಹಾಸ್ತಿನಾಖ್ಯಪುರೇಭವತ್ ।**
**ಬಂಧುಮತ್ಯಾಂ ಸುತಃ ಶ್ವೇತವಾಹನಾಖ್ಯವಣಿಕ್ಪತೇಃ ॥ ೨೫೭ ॥**

**ಶಂಖೋ ನಾಮ ಧನದ್ಧ್ಯಾಸೌ ಸುಭಾನುರ್ಧನದಃ ಸ್ವಯಮ್ ।**
**ತತ್ಪುರಾಧಿಪತೇರ್ಗಂಗದೇವನಾಮಧರೇಶಿನಃ ॥ ೨೫೮ ॥**

**ತದ್ದೇವ್ಯಾ ನಂದಯಶಸಃ ಶೇಷಾಸ್ತೇ ಯಮಲಾಸ್ತ್ರಯಃ ।**
**ಗಂಗಾಖ್ಯೋ ಗಂಗದೇವಶ್ಚ ಗಂಗಮಿತ್ರಶ್ಚ ನಂದವಾಕ್ ॥ ೨೫೯ ॥**

**ಸುನಂದೋ ನಂದಿಷೇಣಶ್ಚ ಜಾತಾಃ ಸ್ನಿಗ್ಧಾಃ ಪರಸ್ಪರಮ್ ।**
**ಗರ್ಭೇನ್ಯಸ್ಮಿನ್ ಮಹೀನಾಥಸ್ತಸ್ಯಾಮಾಸೀನ್ನಿರುತ್ಸುಕಃ ॥ ೨೬೦ ॥**

ಅವರು ತಮ್ಮ ಆಯುಷ್ಯಾವಸಾನದಲ್ಲಿ ಸತ್ತು ನಾಲ್ಕನೆಯ ಕಲ್ಪದಲ್ಲಿ ಸಾಮಾನಿಕ ದೇವರ್ಕಳಾದರು. ಏಳು ಸಾಗರೋಪಮ ವರ್ಷಾಯುಷ್ಯಸ್ಥಿತಿಯ ಕೊನೆಯಲ್ಲಿ ಅಲ್ಲಿಂದ ಚ್ಯುತರಾಗಿ ಭರತಕ್ಷೇತ್ರದಲ್ಲಿ ಕುರುಜಾಂಗಲದೇಶದಲ್ಲಿ ಈ ಹಸ್ತಿನಾಪುರದಲ್ಲಿ ಶ್ವೇತವಾಹನನೆಂಬ ವೈಶ್ಯೋತ್ತಮನಿಗೆ ಆತನ ಪತ್ನಿಯಾದ ಬಂಧುಮತಿಯಲ್ಲಿ ಸುಭಾನುವು ಶಂಖನೆಂಬ ಪುತ್ರನಾದನು. ಇವನು ಧನಸಂಪತ್ತಿಯಿಂದ ತಾನು ಕುಬೇರನಾಗಿದ್ದನು. ಆ ಹಸ್ತಿನಾಪುರಾಧಿಪತಿಯಾದ ಗಂಗದೇವನೆಂಬ ರಾಜನಿಗೂ ಅವನ ಪತ್ನಿಯಾದ ನಂದಯಶೆಗೂ ಆ ಉಳಿದ ಆರುಮಂದಿಗಳು ಗಂಗ–ಗಂಗದೇವ, ಗಂಗಮಿತ್ರ–ನಂದ, ಸುನಂದ–ನಂದಿಷೇಣರೆಂಬ ಮೂರು ಅವಳಿಮಕ್ಕಳಾಗಿಯೂ ಪರಸ್ಪರ ಪ್ರೇಮವುಳ್ಳವರಾಗಿಯೂ ಜನಿಸಿದರು. ಮತ್ತೊಂದು ಗರ್ಭವುಂಟಾಗುತ್ತಿರಲು ದೊರೆಯು ಆ ನಂದಯಶೆಯಲ್ಲಿ ಕುತೂಹಲವಿಲ್ಲದವನಾದನು.

**ತದೌದಾಸೀನ್ಯಮುತ್ಪನ್ನಪುತ್ರಹೇತುಕಮಿತ್ಯಸೌ ।**
**ನ್ಯದಿಶದ್ರೇವತೀಂ ಧಾತ್ರೀಂ ತದಪತ್ಯನಿರಾಕೃತೌ ॥ ೨೬೧ ॥**

ಅವನ ಉದಾಸೀನತೆಗೆ ಗರ್ಭದಲ್ಲಿ ಜನಿಸಿರುವ ಮಗುವು ಕಾರಣವೆಂದು ತಿಳಿದು ಈ ನಂದಯಶೆಯು ಆ ಮಗುವನ್ನು ತ್ಯಜಿಸುವುದರಲ್ಲಿ ರೇವತಿಯೆಂಬ ದಾದಿಗೆ ಆಜ್ಞೆಮಾಡಿದಳು.

**ತಂ ಸಾ ನಂದಯಶೋ ಜ್ಯೇಷ್ಠಬಂಧುಮತ್ಯೈ ಸಮಾರ್ಪಯತ್ ।**
**ನಿರ್ನಾಮಕಾಖ್ಯಾಂ ತತ್ರಾಪ್ಯ ಪರೇದ್ಯುರ್ನಂದನೇ ವನೇ ॥ ೨೬೨ ॥**

**ಪ್ರವಿಶ್ಯನ್ ಸಹ ಭುಂಜಾನಾನ್ ಷಣ್ಮಹೀಶಸುತಾನ್ ಸಮಮ್ ।**
**ತ್ವಮಪ್ಯಮೀಭಿರ್ಭುಂಕ್ಷ್ವೇತಿ ಶಂಖೇನ ಸಮುದಾಹೃತಮ್ ॥ ೨೬೩ ॥**

ಆಕೆಯು ಆ ಮಗುವನ್ನು ನಂದಯಶೆಯ ಅಕ್ಕನಾದ ಬಂಧುಮತಿಗೆ ತೆಗೆದುಕೊಂಡು ಹೋಗಿ ಸಮರ್ಪಿಸಿದಳು. ಅಲ್ಲಿ ನಿರ್ನಾಮಕನೆಂದು ಹೆಸರನ್ನು ಪಡೆದು ಮತ್ತೊಂದು ದಿವಸ ನಂದನವನದಲ್ಲಿ ಒಟ್ಟಿಗೆ ಭೋಜನಮಾಡುತ್ತಿರುವ ಆ ಆರುಮಂದಿ ರಾಜಪುತ್ರರನ್ನು ನೋಡುವವನಾಗಿ "ನೀನೂ ಇವರುಗಳೊಡನೆ ಭೋಜನಮಾಡು" ಎಂದು ನಿರ್ನಾಮಕನಿಗೆ ಶಂಖನು ಹೇಳಿದನು.

**ಸ್ಥಿತೋ ಭೋಕ್ತುಮಸೌ ನಂದಯಶಾಸ್ತಂ ವೀಕ್ಷ್ಯ ಕೋಪಿನೀ ।**
**ಕಸ್ಯಾಯಮಿತಿ ಪಾದೇನಾಹಂಸ್ತಾವನ್ವೀಯತುಃ ಶುಚಮ್ ॥ ೨೬೪ ॥**

ಈ ನಿರ್ನಾಮಕನು ಭೋಜನಮಾಡುವುದಕ್ಕೋಸ್ಕರ ಕುಳಿತನು. ನಂದಯಶೆಯು ಅವನನ್ನು ನೋಡಿ ಕೋಪವುಳ್ಳವಳಾಗಿ "ಯಾವನ ಮಗನಿವನು ?" ಎಂದು ಕಾಲಿನಿಂದ ಒದೆದಳು. ಅದರಿಂದ ಆ ಶಂಖನಿರ್ನಾಮಕರು ಶೋಕವನ್ನು ಹೊಂದಿದರು.

**ಶಂಖನಿರ್ನಾಮಕೌ ರಾಜ್ಞಾ ಕದಾಚಿತ್ಸಹ ವಂದಿತುಮ್ ।**
**ದ್ರುಮಸೇನಮುನಿಂ ಯಾತಾವವಧಿಜ್ಞಾನಲೋಚನಮ್ ॥ ೨೬೫ ॥**

ಒಂದಾನೊಂದು ಕಾಲದಲ್ಲಿ ಶಂಖನಿರ್ನಾಮಕರು ರಾಜನೊಡನೆ ಅವಧಿಜ್ಞಾನವೆಂಬ ನೇತ್ರವುಳ್ಳವನಾದ ದ್ರುಮಸೇನಮುನಿಯನ್ನು ವಂದಿಸುವುದಕ್ಕೋಸ್ಕರ ಹೋದರು.

**ಅಭಿವಂದ್ಯ ತತೋ ಧರ್ಮಶ್ರವಣಾನಂತರಂ ಪುನಃ ।**
**ನಿರ್ನಾಮಕಾಯ ಕಿಂ ನಂದಯಶಾಃ ಕುಪ್ಯತ್ಯಕಾರಣಮ್ ॥ ೨೬೬ ॥**

**ಇತಿ ಶಂಖೇನ ಪೃಷ್ಟೋಸೌ ಮುನಿರೇವಮಭಾಷತ ।**
**ಸುರಾಷ್ಟ್ರವಿಷಯೇ ರಾಜಾ ಗಿರ್ಯಾದಿನಗರಾಧಿಪಃ ॥ ೨೬೭ ॥**

**ಅಭೂಚ್ಚಿತ್ರರಥೋ ನಾಮ ತಸ್ಯಾಮೃತರಸಾಯನಃ ।**
**ಸೂಪಕಾರಃ ಪಲಂ ಪಕ್ತುಂ ಕುಶಲೋಸ್ಮೈ ಪ್ರತುಷ್ಟವಾನ್ ॥ ೨೬೮ ॥**

**ಅದಿತ ದ್ವಾದಶ ಗ್ರಾಮಾನ್ ಮಹೀಶೋ ಮಾಂಸಲೋಲುಪಃ ।**
**ಸ ಕದಾಚಿತ್ಸುಧರ್ಮಾಖ್ಯಯತ್ಯಭ್ಯಾಸೇ ಶ್ರುತಾಗಮಃ ॥ ೨೬೯ ॥**

**ಶ್ರದ್ಧಾಯ ಬೋಧಿಮಾಸಾದ್ಯ ರಾಜ್ಯಂ ಮೇಘರಥೇ ಸುತೇ ।**
**ನಿಯೋಜ್ಯ ಸಂಯತೋ ಜಾತಃ ಸುತೋಪಿ ಶ್ರಾವಕೋಜನಿ ॥ ೨೭೦ ॥**

ಮುನಿಗೆ ಅಭಿವಂದಿಸಿ ಅವನಿಂದ ಧರ್ಮಶ್ರವಣವನ್ನು ಮಾಡಿದ ನಂತರದಲ್ಲಿ ಪುನಃ ಶಂಖನಿಂದ "ನಂದಯಶೆಯು ನಿರ್ನಾಮಕನಿಗಾಗಿ ಏನು ಕಾರಣವಾಗಿ ಕೋಪಿಸುತ್ತಾಳೆ ?" ಎಂದು ಪ್ರಶ್ನೆಮಾಡಲ್ಪಟ್ಟ ಈ ದ್ರುಮಸೇನಮುನಿಯು ಈ ರೀತಿಯಾಗಿ ಹೇಳಿದನು. 'ಸುರಾಷ್ಟ್ರದೇಶದಲ್ಲಿ ಗಿರಿನಗರಾಧಿಪತಿಯಾದ ಚಿತ್ರರಥನೆಂಬ ದೊರೆಯಿದ್ದನು. ಅವನ ಅಮೃತರಸಾಯನನೆಂಬ ಅಡಿಗೆಯವನು ಮಾಂಸವನ್ನು ಬೇಯಿಸುವುದಕ್ಕೆ ಚತುರನಾಗಿದ್ದನು. ಸಂತೋಷವುಳ್ಳವನೂ ಮಾಂಸಲೋಲುಪನೂ ಆದ ಆ ದೊರೆಯು ಈ ಅಮೃತರಸಾಯನನಿಗೆ ಹನ್ನೆರಡು ಗ್ರಾಮಗಳನ್ನು ಕೊಟ್ಟನು. ಒಂದಾನೊಂದು ಕಾಲದಲ್ಲಿ ಆ ರಾಜನು ಸುಧರ್ಮನೆಂಬ ಯತಿಯ ಸಮೀಪದಲ್ಲಿ ಆಗಮಶ್ರವಣವನ್ನು ಮಾಡಿದವನಾಗಿ ನಂಬಿ ರತ್ನತ್ರಯವನ್ನು ಪಡೆದು ರಾಜ್ಯವನ್ನು ಮೇಘರಥನೆಂಬ ಪುತ್ರನಲ್ಲಿರಿಸಿ ತಾನು ಸಂಯತ–ಮುನಿಯಾದನು. ಪುತ್ರನೂ ಶ್ರಾವಕನಾದನು.

**ತತಃ ಸೂಪಕರಗ್ರಾಮಾನೇಕಶೇಷಂ ಸಮಾಹರತ್ ।**
**ಸೋನ್ಯೇದ್ಯುರ್ಬದ್ಧವೈರಃ ಸನ್ ಸರ್ವಸಂಭಾರಸಂಸ್ಕೃತಮ್ ॥ ೨೭೧ ॥**

**ಕೋಶಾತಕೀಫಲಂ ಪಕ್ವಂ ಮುನೀಂದ್ರಂ ತಮಭೋಜಯತ್ ।**
**ಊರ್ಜಯಂತಗಿರೌ ಸೋಽಪಿ ತನ್ನಿಮಿತ್ತಂ ಗತಾಸುಕಃ ॥ ೭೭೨ ॥**

**ಸಮ್ಯಗಾರಾಧ್ಯ ಸಂಭೂತಃ ಕಲ್ಪಾತೀತೇಽಪರಾಜಿತೇ ।**
**ಜಘನ್ಯತದ್ಗತಾಯುಃ ಸನ್ನಹಮಿಂದ್ರೋ ಮಹರ್ದ್ಧಿಕಃ ॥ ೭೭೩ ॥**

ಬಳಿಕ ಅವನು ಅಡಿಗೆಯವನ ಗ್ರಾಮಗಳನ್ನು, ಒಂದನ್ನು ಬಿಟ್ಟು, ಅಪಹರಿಸಿದನು. ಅದರಿಂದ ಆ ಅಡಿಗೆಯವನು ಮುನಿಯಲ್ಲಿ ಬದ್ಧವೈರವುಳ್ಳವನಾಗಿ ಮತ್ತೊಂದು ದಿವಸ ಎಲ್ಲಾ ಸಂಭಾರಗಳನ್ನು ಹಾಕಿ ಸಿದ್ಧಮಾಡಲ್ಪಟ್ಟ ಪಕ್ವವಾದ ಪಡವಲಕಾಯನ್ನು(ವಿಷಫಲವನ್ನು) ಆ ಮುನೀಶ್ವರನಿಗೆ ಭೋಜನಮಾಡಿಸಿದನು. ಅದರ ನಿಮಿತ್ತವಾಗಿ ಆ ಮುನಿಯು ಊರ್ಜಯಂತಪರ್ವತದಲ್ಲಿ ಚೆನ್ನಾಗಿ ದರ್ಶನಜ್ಞಾನಾದ್ಯಾರಾಧನೆಗಳನ್ನು ಆರಾಧಿಸಿ ಸತ್ತು ಕಲ್ಪಾತೀತವಾದ ಅಪರಾಜಿತವೆಂಬ ಅನುತ್ತರವಿಮಾನದಲ್ಲಿ ಅದರಲ್ಲಿಯ ಜಘನ್ಯಾಯುಷ್ಯವುಳ್ಳ ಅಹಮಿಂದ್ರ ಮಹರ್ದ್ಧಿಕದೇವನಾಗಿ ಜನಿಸಿದನು.

**ಸೂಪಕಾರೋಽಪಿ ಕಾಲಾಂತೇ ತೃತೀಯನರಕಂ ಗತಃ ।**
**ತತೋ ನಿರ್ಗತ್ಯ ಸಂಸಾರೇ ಸುದುಃಖಃ ಸುಚಿರಂ ಭ್ರಮನ್ ॥ ೭೭೪ ॥**

**ದ್ವೀಪೇಽಸ್ಮಿನ್ ಭಾರತೇ ಕ್ಷೇತ್ರೇ ವಿಷಯೇ ಮಂಗಲಾಹ್ವಯೇ ।**
**ಪಲಾಶಕೂಟಗ್ರಾಮಸ್ಯ ಯಕ್ಷದತ್ತಗೃಹೇಶಿನಃ ॥ ೭೭೫ ॥**

**ಸುತೋ ಯಕ್ಷಾದಿದತ್ತಾಯಾಂ ಯಕ್ಷನಾಮಾ ಬಭೂವ ಸಃ ।**
**ತಯೋರ್ಯಕ್ಷಿಲಸಂಜ್ಞಶ್ಚ ಸೂನುರನ್ಯೋಽನ್ವಜಾಯತ ॥ ೭೭೬ ॥**

ಆ ಅಡಿಗೆಯವನು ಕಾಲಾಂತರದಲ್ಲಿ ಸತ್ತು ಮೂರನೆಯ ನರಕವನ್ನು ಹೊಂದಿದನು. ಅಲ್ಲಿಂದ ಹೊರಟು ಬಹುದುಃಖವುಳ್ಳವನೂ ಬಹುಕಾಲದವರೆಗೆ ಸಂಸಾರದಲ್ಲಿ ತಿರುಗುವವನೂ ಆದ ಅವನು ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಂಗಲವೆಂಬ ದೇಶದಲ್ಲಿ ಪಲಾಶಕೂಟಗ್ರಾಮದ ಯಕ್ಷದತ್ತನೆಂಬ ಗೃಹಸ್ಥನಿಗೆ ಅವನ ಯಕ್ಷದತ್ತೆಯೆಂಬ ಪತ್ನಿಯಲ್ಲಿ ಯಕ್ಷನೆಂಬ ಪುತ್ರನಾಗಿ ಹುಟ್ಟಿದನು. ಬಳಿಕ ಆ ದಂಪತಿಗಳಿಗೆ ಯಕ್ಷಿಲನೆಂಬ ಮತ್ತೊಬ್ಬ ಮಗನೂ ಹುಟ್ಟಿದನು.

**ತಯೋಃ ಸ್ವಕರ್ಮಣಾ ಜ್ಯೇಷ್ಠೋ ನಾಮ್ನಾ ನಿರನುಕಂಪನಃ ।**
**ಸಾನುಕಂಪೋಽಪರೋಜ್ಞಾಯಿ ಜನೈರರ್ಥಾನುಸಾರಿಭಿಃ ॥ ೭೭೭ ॥**

ಅವರೀರ್ವರು ಮಕ್ಕಳಲ್ಲಿ ಹಿರಿಯನು ತನ್ನ ಕರ್ಮದಿಂದ ನಿರನುಕಂಪನೆಂಬ ಹೆಸರಿನಿಂದಲೂ ಇನ್ನೊಬ್ಬನು ಸಾನುಕಂಪನೆಂಬ ಹೆಸರಿನಿಂದಲೂ ಅರ್ಥಾನುಸಾರಿಗಳಾದ ಜನರಿಂದ ತಿಳಿಯಲ್ಪಟ್ಟರು. ಹಿರಿಯನು ನಿರ್ದಯನೂ ಕಿರಿಯನು ದಯಾಪರನೂ ಆಗಿದ್ದರೆಂದೂ ಹಾಗೆಯೇ ಜನರು ಅವರನ್ನು ತಿಳಿದರೆಂದೂ ಭಾವವು.

**ಕದಾಚಿತ್ಸಾನುಕಂಪೇನ ವಾರ್ಯಮಾಣೋಽಪಿ ಸೋಽಪರಃ ।**
**ಮಾರ್ಗಸ್ಥಿತಾಂಧಸರ್ಪಸ್ಯ ದಯಾದೂರೋ ವೃಥೋಪರಿ ॥ ೭೭೮ ॥**

**ಶಕಟಂ ಭಾಂಡಸಂಪೂರ್ಣಂ ಬಲೀವರ್ದೈರಯೋಜಯತ್ ।**
**ಸರ್ಪಸ್ತನ್ಮರ್ದಿತೋಽಕಾಮನಿರ್ಜರೋ ವಿಗತಾಸುಕಃ ॥ ೭೭೯ ॥**

ಒಂದಾನೊಂದು ಕಾಲದಲ್ಲಿ ಸಾನುಕಂಪನಿಂದ ತಡೆಯಲ್ಪಟ್ಟವನಾದರೂ ದಯಾರಹಿತನಾದ ಆ ನಿರನುಕಂಪನು ದಾರಿಯಲ್ಲಿದ್ದ ಕುರುಡುಕಣ್ಣಿನ ಹಾವಿನ ಮೇಲೆ ಭಾಂಡಗಳಿಂದ ತುಂಬಿರುವ ಗಾಡಿಯನ್ನು ಎತ್ತುಗಳಿಂದ ವ್ಯರ್ಥವಾಗಿ ಹೂಡಿಸಿದನು. ನಿಷ್ಕಾರಣವಾಗಿ ಹಾವಿನ ಮೇಲೆ ಗಾಡಿಯನ್ನು ಎಳೆಯಿಸಿದನೆಂದು ಭಾವವು. ಅದರಿಂದ ಮರ್ದಿಸಲ್ಪಟ್ಟ ಹಾವು ಅಕಾಮ–ಇಚ್ಛೆಯಿಲ್ಲದ ಕರ್ಮನಿರ್ಜರೆಯುಳ್ಳುದಾಗಿ ಪ್ರಾಣಗಳನ್ನು ಬಿಟ್ಟಿತು.

**ಪುರೇ ಶ್ವೇತವಿಕಾನಾಮ್ನಿ ವಾಸವಸ್ಯ ಮಹೀಪತೇಃ ।**
**ವಸುಂದರ್ಯಾಂ ಸುತಾ ನಂದಯಶಾಃ ಸಮುದಪಾದ್ಯಸೌ ॥ ೭೮೦ ॥**

ಅದು ಶ್ವೇತವಿಕವೆಂಬ ನಗರದಲ್ಲಿ ವಾಸವನೆಂಬ ರಾಜನಿಗೆ ಆತನ ಪತ್ನಿಯಾದ ವಸುಂದರಿಯಲ್ಲಿ ಈ ನಂದಯಶೆಯೆಂಬ ಪುತ್ರಿಯಾಗಿ ಹುಟ್ಟಿತು.

**ಪುನರ್ನಿರನುಕಂಪಶ್ಚ ಭ್ರಾತ್ರಾ ದುಃಖನಿಮಿತ್ತಕಮ್ ।**
**ತ್ವಯೇದೃಶಂ ನ ಕರ್ತವ್ಯಮಿತ್ಯುಕ್ತಃ ಶಮಮಾಗತಃ ॥ ೭೮೧ ॥**

**ಸ್ವಾಯುರಂತೇ ಸಮುತ್ಪನ್ನಃ ಸೋಽಯಂ ನಿರ್ನಾಮಕಾಖ್ಯಯಾ ।**
**ತತಃ ಪೂರ್ವಭವೋಪಾತ್ತಪಾಪಸ್ಯ ಪರಿಪಾಕತಃ ॥ ೭೮೨ ॥**

**ಜಾಯತೇ ನಂದಯಶಸಃ ಕೋಪೋ ನಿರ್ನಾಮಕಂ ಪ್ರತಿ ।**
**ಇತಿ ತಸ್ಯ ವಚಃ ಶ್ರುತ್ವಾ ತೇ ನಿರ್ವೇಗಪರಾಯಣಾಃ ॥ ೭೮೩ ॥**

**ನರೇಂದ್ರಪಟ್ಸುತಾ ದೀಕ್ಷಾಂ ಶಂಖೋ ನಿರ್ನಾಮಕೋಽಪ್ಯಯುಃ ।**
**ತಥಾ ನಂದಯಶಾ ರೇವತೀನಾಮಾದಿತ ಸಂಯಮಮ್ ॥ ೭೮೪ ॥**

**ಸುವ್ರತಾಖ್ಯಾರ್ಯಿಕಾಭ್ಯಾಸೇ ಪುತ್ರಸ್ನೇಹಾಹಿತೇಚ್ಛಯಾ ।**
**ಅನ್ಯಜನ್ಮನಿ ಚಾಮೀಷಾಮೇವ ಲಾಭೇ ಚ ವರ್ಧನೇ ॥ ೭೮೫ ॥**

**ತೇ ನಿದಾನಂ ವಿಮೂಢತ್ವಾದುಭೇ ಚಾಕುರತಾಂ ಸಮಮ್ ।**
**ತತಃ ಸರ್ವೇ ತಪಃ ಕೃತ್ವಾ ಸಮಾರಾಧ್ಯ ಯಥೋಚಿತಮ್ ॥ ೭೮೬ ॥**

**ಮಹಾಶುಕ್ರೇ ಸಮುತ್ಪನ್ನಾಃ ಪ್ರಾಂತೇ ಸಾಮಾನಿಕಾಃ ಸುರಾಃ ।**
**ಷೋಡಶಾಬ್ಧ್ಯುಪಮಾಯುಷ್ಕಾ ದಿವ್ಯಭೋಗವಶೀಕೃತಾಃ ॥ ೭೮೭ ॥**

ಇತ್ತ ತಮ್ಮನಿಂದ ''ನೀನು ಇಂತಹ ದುಃಖನಿಮಿತ್ತವನ್ನು ಮಾಡಬಾರದು'' ಎಂದು ಪುನಃ ಹೇಳಲ್ಪಟ್ಟ ಆ ನಿರನುಕಂಪನು ಶಾಂತತೆಯನ್ನು ಹೊಂದಿದವನಾಗಿ ತನ್ನ ಆಯುಷ್ಯಾವಸಾನದಲ್ಲಿ ಸತ್ತು ಇವನು ನಿರ್ನಾಮಕನೆಂಬ ಹೆಸರಿನಿಂದ ಹುಟ್ಟಿದನು. ಆದುದರಿಂದ ಪೂರ್ವಭವದಲ್ಲಿ ಉಪಾರ್ಜಿತವಾದ ಪಾಪದ ಪರಿಪಾಕದಿಂದ ನಂದಯಶೆಗೆ ನಿರ್ನಾಮಕನನ್ನು ಕುರಿತು ಕೋಪವುಂಟಾಗುತ್ತದೆ'. ಈ ರೀತಿಯಾಗಿ ಆ ದ್ರುಮಸೇನಮುನಿಯ ಮಾತನ್ನು ಕೇಳಿ ವೈರಾಗ್ಯಪರಾಯಣರಾದ ಆ ಆರುಮಂದಿ ರಾಜಪುತ್ರರೂ ಶಂಖನೂ ನಿರ್ನಾಮಕನೂ ದೀಕ್ಷೆಯನ್ನು ಪಡೆದರು. ಹಾಗೆಯೇ ನಂದಯಶೆಯೂ ರೇವತಿಯೆಂಬವಳೂ (ನಂದಯಶೆಯ ದಾದಿ) ಸುವ್ರತೆಯೆಂಬ ಆರ್ಯಿಕೆಯ ಬಳಿಯಲ್ಲಿ ಸಂಯಮವನ್ನು ಗ್ರಹಣಮಾಡಿದರು. ಪುತ್ರಪ್ರೇಮದಿಂದುಂಟಾದ ಇಚ್ಛೆಯಿಂದ ಮುಂದಿನ ಜನ್ಮದಲ್ಲಿಯೂ ಈ ಪುತ್ರರ ಪ್ರಾಪ್ತಿಯಲ್ಲಿಯೂ ಪೋಷಣೆಯಲ್ಲಿಯೂ ಅವರೀರ್ವರೂ ಅಜ್ಞಾನದಿಂದ ಒಟ್ಟಿಗೆ ನಿದಾನಶಲ್ಯವನ್ನು ಮಾಡಿದರು. ನಂದಯಶೆಯು ಈ ಪುತ್ರರನ್ನೇ ಮುಂದಿನ ಜನ್ಮದಲ್ಲಿಯೂ ಪಡೆಯಬೇಕೆಂದೂ ರೇವತಿಯು ತಾನು ಪೋಷಣೆ ಮಾಡಬೇಕೆಂದೂ ಬಯಸಿದರೆಂದು ಭಾವವು. ಬಳಿಕ ಎಲ್ಲರೂ ತಪಸ್ಸನ್ನು ಮಾಡಿ ಯಥೋಚಿತವಾಗಿ ಚೆನ್ನಾಗಿ ಆರಾಧಿಸಿ ಆಯುಷ್ಯಾವಸಾನದಲ್ಲಿ ಸತ್ತು ಮಹಾಶುಕ್ರಸ್ವರ್ಗದಲ್ಲಿ ಹದಿನಾರು ಸಾಗರೋಪಮವರ್ಷಾಯುಷ್ಯವುಳ್ಳವರೂ ದಿವ್ಯಭೋಗದಿಂದ ವಶೀಕೃತರೂ ಆದ ಸಾಮಾನಿಕದೇವರ್ಕಳಾಗಿ ಹುಟ್ಟಿದರು.

**ತತಃ ಪ್ರಚ್ಯುತ್ಯ ಶಂಖೋಽಭೂದ್ಬಲದೇವೋ ಹಲಾಯುಧಃ ।**
**ಮೃಗಾವತ್ಯಾಖ್ಯವಿಷಯೇ ದಶಾರ್ಣಪುರಭೂಪತೇಃ ॥ ೭೮೮ ॥**

**ದೇವಸೇನಸ್ಯ ಚೋತ್ಪನ್ನಾ ಧನದೇವ್ಯಾಶ್ಚ ದೇವಕೀ ।**
**ತ್ವಂ ಸಾ ನಂದಯಶಾಃ ಸ್ತ್ರೀತ್ವಮುಪಗಮ್ಯ ನಿದಾನತಃ ॥ ೭೮೯ ॥**

ಶಂಖನು ಅಲ್ಲಿಂದ ಚ್ಯುತನಾಗಿ ನೇಗಿಲು ಆಯುಧವಾಗಿರುವ ಬಲದೇವನಾದನು. ಮೃಗಾವತಿಯೆಂಬ ದೇಶದಲ್ಲಿ ದಶಾರ್ಣಪುರದ ದೊರೆಯಾದ ದೇವಸೇನನಿಗೂ ಆತನ ಪತ್ನಿಯಾದ ಧನದೇವಿಗೂ ಆ ನಂದಯಶೆಯು ಸಾಮಾನಿಕದೇವನಾಗಿದ್ದು ನಿದಾನಶಲ್ಯದಿಂದ ಸ್ತ್ರೀತ್ವವನ್ನು ಹೊಂದಿ ನೀನು ದೇವಕಿಯಾಗಿ ಹುಟ್ಟಿರುತ್ತಿ.

ಭದ್ರಿಲಾಖ್ಯಪುರೇ ದೇಶೇ ಮಲಯೇಜನಿ ರೇವತೀ ।
ಸುದೃಷ್ಟೇಃ ಶ್ರೇಷ್ಠಿನಃ ಶ್ರೇಷ್ಠಾ ಶ್ರೇಷ್ಠಿನೀ ಸಾಲಕಾಖ್ಯಯಾ ॥ ೭೮೦ ॥

ಆ ರೇವತಿಯು ಮಲಯದೇಶದಲ್ಲಿ ಭದ್ರಿಲವೆಂಬ ಪುರದಲ್ಲಿ ಸುದೃಷ್ಟಿಯೆಂಬ ಶ್ರೇಷ್ಠಿಗೆ ಅಲಕೆಯೆಂಬ ಹೆಸರಿನಿಂದ ಶ್ರೇಷ್ಠಳಾದ ಶ್ರೇಷ್ಠಿನಿಯಾದಳು.

ಪ್ರಾಕ್ತನಾಃ ಷಟ್ಕುಮಾರಾಶ್ಚ ಯಮಾ ಭೂತಾಸ್ತವ ತ್ರಯಃ ।
ತದಾನೀಮೇವ ಶಕ್ರಸ್ಯ ನಿದೇಶಾತ್ಕಂಸತೋ ಭಯಾತ್ ॥ ೭೮೧ ॥

ತೇ ನೈಗಮರ್ಷಿಣಾ ನೀತಾಃ ಶ್ರೇಷ್ಠಿನ್ಯಾಸ್ತ್ವಲಕಾಖ್ಯಯಾ ।
ವರ್ಧಿತಾ ದೇವದತ್ತಶ್ಚ ದೇವಪಾಲೋನುಜಸ್ತತಃ ॥ ೭೮೨ ॥

ಅನೀಕದತ್ತಶ್ಚಾನೀಕಪಾಲಃ ಶತ್ರುಘ್ನಸಂಜ್ಞಕಃ ।
ಜಿತಶತ್ರುಶ್ಚ ಜನ್ಮನ್ಯೇವಾತ್ರ ನಿರ್ವೃತಿಗಾಮಿನಃ ॥ ೭೮೩ ॥

ಮೊದಲಿನ ಆರುಮಂದಿ ಕುಮಾರರೂ ನಿನಗೆ (ದೇವಕಿಗೆ) ಮೂರು ಅವಳಿ ಮಕ್ಕಳಾದರು. ಆಗಲೇ ದೇವೇಂದ್ರನ ಅಪ್ಪಣೆಯಿಂದ ಕಂಸನ ದೆಸೆಯಿಂದ ಭಯದಿಂದ ನೈಗಮರ್ಷಿದೇವನಿಂದ ಒಯ್ಯಲ್ಪಟ್ಟ ಆ ದೇವದತ್ತ–ದೇವಪಾಲ, ಅನೀಕದತ್ತ–ಅನೀಕಪಾಲ, ಶತ್ರುಘ್ನ–ಜಿತಶತ್ರು ಈ ಆರುಮಂದಿಗಳು ಅಲಕೆಯೆಂಬ ಶ್ರೇಷ್ಠಿನಿಯಿಂದ ಬೆಳೆಸಲ್ಪಟ್ಟವರಾಗಿ ಈ ಜನ್ಮದಲ್ಲೇ ಮೋಕ್ಷಗಾಮಿಗಳಾಗಿರುತ್ತಾರೆ.

ನವೇ ವಯಸಿ ದೀಕ್ಷಿತ್ವಾ ಭಿಕ್ಷಾರ್ಥಂ ಪುರಮಾಗತಾಃ ।
ತ್ವಯಾ ದೃಷ್ಟಾಸ್ತತಸ್ತೇಷು ಸ್ನೇಹೋ ಜನ್ಮಾಂತರಾಗತಃ ॥ ೭೮೪ ॥

ನೂತನವಯಸ್ಸಿನಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಭಿಕ್ಷೆಗೋಸ್ಕರ ಪಟ್ಟಣಕ್ಕೆ ಬಂದವರಾಗಿ ನಿನ್ನಿಂದ (ದೇವಕಿಯಿಂದ) ನೋಡಲ್ಪಟ್ಟರು. ಆದುದರಿಂದ ಅವರಲ್ಲಿ ನಿನಗೆ ಸ್ನೇಹವು ಜನ್ಮಾಂತರದಿಂದ ಬಂದುದಾಗಿದೆ.

ಸ್ವಯಂಭೂಕೇಶವೈಶ್ವರ್ಯಂ ತಪಃ ಕಾಲೇ ನಿರೀಕ್ಷ್ಯ ಸಃ ।
ನಿರ್ನಾಮಕಸುತಸ್ತೇದ್ಯ ಕಂಸಶತ್ರುರಜಾಯತ ॥ ೭೮೫ ॥

ಆ ನಿರ್ನಾಮಕಪುತ್ರನು ತಪಸ್ಸನ್ನು ಮಾಡುತ್ತಿದ್ದ ಕಾಲದಲ್ಲಿ ಸ್ವಯಂಭೂಕೇಶವನ ಐಶ್ವರ್ಯವನ್ನು ನೋಡಿ ನಿದಾನಶಲ್ಯವನ್ನು ಮಾಡಿದ್ದುದರಿಂದ ಈಗ ನಿನಗೆ ಕಂಸವೈರಿಯಾದ ಕೃಷ್ಣನಾಗಿ ಜನಿಸಿದನು.

ತ್ವಂ ಕುತಸ್ತೇ ಕುತಃ ಕೋಯಂ ಸಂಬಂಧೋ ನಿರ್ನಿಬಂಧನಃ ।
ವಿಧೇರ್ವಿಲಸಿತಂ ಚಿತ್ರಮಗಮ್ಯಂ ಯೋಗಿನಾಮಪಿ ॥ ೭೮೬ ॥

ನೀನು ಎಲ್ಲಿಂದ ಬಂದವಳು ? ಅವರು ಎಲ್ಲಿಂದ ಬಂದವರು ? ನಿಬಂಧನವಿಲ್ಲದಿರುವ ಈ ಸಂಬಂಧವಾವುದು ? ವಿಧಿಯ–ಕರ್ಮದ ಆಶ್ಚರ್ಯಕರವಾದ ವಿಲಾಸವು ಯೋಗಿಗಳಿಗೂ ಅಗೋಚರವಾಗಿರುತ್ತದೆ.''

ಇತಿ ನೈಸರ್ಗಿಕಾಶೇಷಭವ್ಯಾನುಗ್ರಹಭಾವುಕಃ ।
ನ್ಯಗದದ್ಭಗವಾನೇವಂ ಭಕ್ತ್ಯಾವಂದತ ದೇವಕೀ ॥ ೭೮೭ ॥

ಈ ಪ್ರಕಾರವಾಗಿ ಸ್ವಾಭಾವಿಕವೂ ಸಮಸ್ತಭವ್ಯರಿಗೆ ಅನುಗ್ರಹವನ್ನು ಮಾಡುವುದೂ ಆದ ಶುಭಭಾವನೆಯುಳ್ಳ ಭಗವಂತನು–ಗಣಧರನು ಈ ಪ್ರಕಾರವಾಗಿ ಹೇಳಿದನು. ದೇವಕಿಯು ಭಕ್ತಿಯಿಂದ ವಂದಿಸಿದಳು.

ಅಥಾನಂತರಮೇವೈನಂ ಸತ್ಯಭಾಮಾಪಿ ಭಾಕ್ತಿಕೀ ।
ಸ್ವಪೂರ್ವಭವಸಂಬಂಧಮಪ್ರಾಕ್ಷೀದಕ್ಷರಾವಧಿಮ್ ॥ ೭೮೮ ॥

ಬಳಿಕ ಒಡನೆಯೇ ಭಕ್ತಿಯುಳ್ಳವಳಾದ ಸತ್ಯಭಾಮೆಯೂ ಈ ಗಣಧರನನ್ನು ತನ್ನ ಪೂರ್ವಭವಸಂಬಂಧವನ್ನು ಕುರಿತು ಪ್ರಶ್ನೆಮಾಡಿದಳು.

ಸೋಪಿ ವ್ಯಾಪಾರಯಾಮಾಸ ತದಭೀಷ್ಟನಿವೇದನೇ ।
ನ ಹೇತುಃ ಕೃತಕೃತ್ಯಾನಾಮನ್ಯಸ್ತ್ವನ್ಯೋನುಗ್ರಹಾದ್ವಿನಾ ॥ ೭೮೯ ॥

ಆ ಗಣಧರನೂ ಆಕೆಯ ಅಭೀಷ್ಟವನ್ನು ಹೇಳುವುದರಲ್ಲಿ ನಾಶರಹಿತವಾದ ಅವಧಿಜ್ಞಾನವನ್ನು ಪ್ರಯೋಗಿಸಿದರು. ಕೃತಕೃತ್ಯರಾಗಿರುವವರಿಗೆ ಪರಾನುಗ್ರಹದಿಂದ ಹೊರತು ಬೇರೆ ಕಾರಣವಿರುವುದಿಲ್ಲ.

ಶೀತಲಾಖ್ಯಜಿನಾಧೀಶತೀರ್ಥೇ ಧರ್ಮೇ ವಿನಂಕ್ಷ್ಯತಿ ।
ಭದ್ರಿಲಾಖ್ಯಪುರಾಧೀಶೋ ನಾಮ್ನಾ ಮೇಘರಥೋ ನೃಪಃ ॥ ೮೦೦ ॥

ಪ್ರೇಯಸೀ ತಸ್ಯ ನಂದಾಖ್ಯಾ ಭೂತಿಶರ್ಮಾ ದ್ವಿಜಾಗ್ರಣೀಃ ।
ತಸ್ಯಾಸೀತ್ಕಮಲಾ ಪತ್ನೀ ಮುಂಡಶಾಲಾಯನಸ್ತಯೋಃ ॥ ೮೦೧ ॥

ತನುಜೋ ವೇದವೇದಾಂಗಪಾರಗೋ ಭೋಗಸಕ್ತಧೀಃ ।
ವೃಥಾ ತಪಃಪರಿಕ್ಲೇಶೋ ಮೂರ್ಖೈರೇಷ ಪ್ರಕಲ್ಪಿತಃ ॥ ೮೦೨ ॥

ನಿರ್ಧನೈಃ ಪರಲೋಕಾರ್ಥಂ ಸ್ವಯಂ ಸಾಹಸಶಾಲಿಭಿಃ ।
ಭೂಸುವರ್ಣಾದಿದಾನೇನ ಸುಖಮಿಷ್ಟಮವಾಪ್ಯತೇ ॥ ೮೦೩ ॥

ಇತೀತ್ಯಾದಿಕುದೃಷ್ಟಾಂತಕುಹೇತುನಿಪುಣೈರ್ನೃಪಮ್ ।
ಕಾಯಕ್ಲೇಶಾಸಹಂ ವಾಕ್ಯೈರಯಥಾರ್ಥಮಬೂಬುಧತ್ ॥ ೮೦೪ ॥

''ಶೀತಲಜಿನೇಶ್ವರರ ತೀರ್ಥದಲ್ಲಿ ಧರ್ಮವು ವಿನಾಶವಾಗುತ್ತಿರಲು ಭದ್ರಿಲವೆಂಬ ನಗರದ ದೊರೆಯಾದ ಹೆಸರಿನಿಂದ ಮೇಘರಥನೆಂಬ ರಾಜನಿದ್ದನು. ಆತನಿಗೆ ನಂದೆಯೆಂಬವಳು ಪತ್ನಿಯಾಗಿದ್ದಳು. ಅಲ್ಲಿ ಭೂತಿಶರ್ಮನೆಂಬ ಬ್ರಾಹ್ಮಣೋತ್ತಮನಿದ್ದನು. ಅವನಿಗೆ ಕಮಲೆಯೆಂಬ ಪತ್ನಿಯಿದ್ದಳು. ಆ ದಂಪತಿಗಳಿಗೆ ವೇದವೇದಾಂಗ ಪಾರಂಗತನೂ ಭೋಗಾಸಕ್ತವಾದ ಬುದ್ಧಿಯುಳ್ಳವನೂ ಆದ ಮುಂಡಶಾಲಾಯನನೆಂಬ ಪುತ್ರನಿದ್ದನು. ಅವನು 'ನಿರ್ಧನರಾದ ಮೂರ್ಖರಿಂದ ಪರಲೋಕಕ್ಕೋಸ್ಕರ ಈ ತಪಸ್ಸಿನ ಪರಿಕ್ಲೇಶವು ವ್ಯರ್ಥವಾಗಿ ಕಲ್ಪಿಸಲ್ಪಟ್ಟಿದೆ. ಸಾಹಸಶಾಲಿಗಳು ತಾವು ಸುವರ್ಣಾದಿದಾನದಿಂದ ಇಷ್ಟವಾದ ಸುಖವನ್ನು ಹೊಂದುತ್ತಾರೆ.' ಎಂದು ಇವೇ ಮೊದಲಾದ ಕುದೃಷ್ಟಾಂತ ದುಷ್ಟಹೇತು ನಿಪುಣವಾದ ವಾಕ್ಯಗಳಿಂದ ಕಾಯಕ್ಲೇಶವನ್ನು ಸಹಿಸದಿರುವ ರಾಜನಿಗೆ ಮಿಥ್ಯಾ ವಿಷಯವನ್ನು ಬೋಧಿಸಿದನು.

ತಥಾ ಪರಾಂಶ್ಚ ದುರ್ಬುದ್ಧೀನ್ ಬೋಧಯನ್ ಜೀವಿತಾವಧೌ ।
ಭೂತ್ವಾ ಸಪ್ತಸ್ವಧೋಭೂಮಿಷ್ವತಸ್ತಿರ್ಯಕ್ಷು ಚ ಕ್ರಮಾತ್ ॥ ೮೦೫ ॥

ಗಂಧಮಾದನಕುದ್ರೋತ್ಥಮಹಾಗಂಧವತೀ ನದೀ ।
ಸಮೀಪಗತಭಲ್ಲಂಕೀನಾಮಪಲ್ಲ್ಯಾಂ ಸ್ವಪಾಪತಃ ॥ ೮೦೬ ॥

ಜಾತೋ ವನೇಚರಃ ಕಾಲಸಂಜ್ಞಃ ಸ ತು ಕದಾಚನ ।
ವರಧರ್ಮಯತಿಂ ಪ್ರಾಪ್ಯ ಮಧ್ವಾದಿವಿನಿವೃತ್ತಿತಃ ॥ ೮೦೭ ॥

ವಿಜಯಾರ್ಧೇಲಕಾಪುರ್ಯಾಃ ಪತ್ಯುಃ ಪುರುಬಲಸ್ಯ ಚ ।
ಜ್ಯೋತಿರ್ಮಾಲಾಭಿಧಾಯಾಶ್ಚ ಸುತೋ ಹರಿಬಲೋಭವತ್ ॥ ೮೦೮ ॥

ಹಾಗೆಯೇ ದುರ್ಬುದ್ಧಿಯುಳ್ಳ ಬೇರೆಯವರಿಗೂ ಬೋಧಿಸುವವನಾಗಿ ಆಯುಷ್ಯಾವಸಾನದಲ್ಲಿ ಸತ್ತು ಕೆಳಗಿನ ಏಳು ನರಕಭೂಮಿಗಳಲ್ಲಿ ಯಥಾಕ್ರಮವಾಗಿ ಹುಟ್ಟಿ ಅಲ್ಲಿಂದ ತಿರ್ಯಕ್ಪ್ರಾಣಿಗಳಲ್ಲಿ ಹುಟ್ಟಿ ಕ್ರಮದಿಂದ ಗಂಧಮಾದನಪರ್ವತದಿಂದ ಹುಟ್ಟಿದ ಮಹಾಗಂಧವತೀನದಿಯ ಸಮೀಪದಲ್ಲಿರುವ ಭಲ್ಲಂಕಿಯೆಂಬ ಹಳ್ಳಿಯಲ್ಲಿ ತನ್ನ ಪಾಪದಿಂದ ಕಾಲನೆಂಬ ಬೇಡನಾಗಿ ಹುಟ್ಟಿದನು. ಅವನು ಒಂದಾನೊಂದು ಕಾಲದಲ್ಲಿ ವರಧರ್ಮಯತಿಯನ್ನು ಹೊಂದಿ ಮಧುಮಾಂಸಾದಿಗಳ ತ್ಯಾಗದಿಂದ ಆಯುಷ್ಯವು ತೀರಿದ ಮೇಲೆ ಸತ್ತು ವಿಜಯಾರ್ಧಪರ್ವತದಲ್ಲಿ ಅಲಕಾನಗರದ ದೊರೆಯಾದ ಪುರುಬಲನಿಗೂ ಆತನ ಪತ್ನಿಯಾದ ಜ್ಯೋತಿರ್ಮಾಲೆಯೆಂಬ ವಳಿಗೂ ಹರಿಬಲನೆಂಬ ಪುತ್ರನಾದನು.

ಅನಂತವೀರ್ಯಯತ್ಯಂತೇ ಗೃಹೀತ್ವಾ ದ್ರವ್ಯಸಂಯಮಮ್ ।
ಸೌಧರ್ಮಕಲ್ಪೇ ಸಂಭೂಯ ಕಾಲಾಂತೇ ಪ್ರಚ್ಯುತಸ್ತತಃ ॥ ೧೦೯ ॥

ಸುಕೇತೋರ್ವಿಜಯಾರ್ಧಾದ್ರೌ ರಥನೂಪುರಭೂಪತೇಃ ।
ಸುತಾ ಸ್ವಯಂಪ್ರಭಾಯಾಶ್ಚ ಸತ್ಯಭಾಮಾ ತ್ವಮಿತ್ಯಭೂಃ ॥ ೧೧೦ ॥

ಅವನು ಅನಂತವೀರ್ಯಯತಿಯ ಬಳಿಯಲ್ಲಿ ದ್ರವ್ಯಸಂಯಮವನ್ನು ಗ್ರಹಣ ಮಾಡಿ ಆಯುಷ್ಯವು ತೀರಿದ ಮೇಲೆ ಸತ್ತು ಸೌಧರ್ಮಕಲ್ಪದಲ್ಲಿ ಹುಟ್ಟಿ ಕಾಲಾಂತರದಲ್ಲಿ ಅಲ್ಲಿಂದ ಚ್ಯುತನಾಗಿ ವಿಜಯಾರ್ಧಪರ್ವತದಲ್ಲಿ ರಥನೂಪುರ ನಗರಾಧಿಪತಿಯಾದ ಸುಕೇತುವಿಗೂ ಆತನ ಪತ್ನಿಯಾದ ಸ್ವಯಂಪ್ರಭೆಗೂ ನೀನು ಈ ರೀತಿಯಾಗಿ ಸತ್ಯಭಾಮೆಯೆಂಬ ಪುತ್ರಿಯಾದೆ.

ಪಿತ್ರಾ ತೇ ಮೇನ್ಯದಾ ಕಸ್ಯ ಸುತಾ ಪತ್ನೀ ಭವಿಷ್ಯತಿ ।
ಇತ್ಯುಕ್ತೋನು ನಿಮಿತ್ತಾದಿಕುಶಲಾಖ್ಯೋರ್ಧಚಕ್ರಿಣಃ ॥ ೧೧೧ ॥

ಭವಿಷ್ಯತಿ ಮಹಾದೇವೀತ್ಯಾಖ್ಯನ್ನೈಮಿತ್ತಿಕೋತ್ತಮಃ ।
ಇತ್ಯುದೀರಿತಮಾಕರ್ಣ್ಯ ಸತ್ಯಭಾಮಾತುಷತ್ತರಾಮ್ ॥ ೧೧೨ ॥

ಮತ್ತೊಂದು ಕಾಲದಲ್ಲಿ ನಿನ್ನ ತಂದೆಯಿಂದ 'ನನ್ನ ಮಗಳು ಯಾವನ ಹೆಂಡತಿಯಾಗುವಳು.' ಎಂದು ಕೇಳಲ್ಪಟ್ಟ ನಿಮಿತ್ತಕುಶಲನೆಂಬ ಉತ್ತಮನೈಮಿತ್ತಿಕನು 'ಅರ್ಧಚಕ್ರಿಯ ಮಹಾದೇವಿಯಾಗುವಳು' ಎಂದು ಹೇಳಿದನು'' ಈ ರೀತಿಯಾಗಿ ಗಣಧರರಿಂದ ಹೇಳಲ್ಪಟ್ಟ ವಿಷಯವನ್ನು ಕೇಳಿ ಸತ್ಯಭಾಮೆಯು ಬಹಳವಾಗಿ ಸಂತೋಷಪಟ್ಟಳು.

ರುಗ್ಮಿಣ್ಯಾಥ ಮಹಾದೇವ್ಯಾ ಪ್ರಣಮ್ಯ ಸ್ವಭವಾಂತರಮ್ ।
ಪರಿಪೃಷ್ಟಃ ಪರಾರ್ಥೇಹೋ ವ್ಯಾಜಹಾರೇತಿ ತದ್ಭವಾನ್ ॥ ೧೧೩ ॥

ಬಳಿಕ ರುಗ್ಮಿಣೀಮಹಾದೇವಿಯಿಂದ ನಮಸ್ಕರಿಸಿ ತನ್ನ ಭವಾಂತರವನ್ನು ಕುರಿತು ಪ್ರಶ್ನೆಮಾಡಲ್ಪಟ್ಟವರೂ, ಪರಪ್ರಯೋಜನದಲ್ಲಿ ಇಚ್ಛೆಯುಳ್ಳವರೂ ಆದ ಗಣಧರರು ಆಕೆಯ ಭವಗಳನ್ನು ಈ ರೀತಿಯಾಗಿ ಹೇಳಿದರು.

ದ್ವೀಪೇಸ್ಮಿನ್ ಭಾರತೇ ಕ್ಷೇತ್ರೇ ಮಗಧಾಂತರವರ್ತಿನಿ ।
ಲಕ್ಷ್ಮೀಗ್ರಾಮೇ ದ್ವಿಜಃ ಸೋಮೋಸ್ಯಾಭೂಲ್ಲಕ್ಷ್ಮೀಮತಿಃ ಪ್ರಿಯಾ ॥

''ಈ ಜಂಬುದ್ವೀಪದ ಭರತಕ್ಷೇತ್ರದಲ್ಲಿ ಮಗಧದೇಶಮಧ್ಯದಲ್ಲಿರುವ ಲಕ್ಷ್ಮೀಗ್ರಾಮದಲ್ಲಿ ಸೋಮನೆಂಬ ಬ್ರಾಹ್ಮಣನಿದ್ದನು. ಇವನಿಗೆ ಲಕ್ಷ್ಮೀಮತಿಯೆಂಬ ಪತ್ನಿಯಿದ್ದಳು.

ಪ್ರಸಾಧಿತಾಂಗೀ ಸಾನ್ಯೇದ್ಯುರ್ದರ್ಪಣಾಲೋಕನೋದ್ಯತಾ ।
ಸಮಾಧಿಗುಪ್ತಮಾಲೋಕ್ಯ ಮುನಿಂ ಭಿಕ್ಷಾರ್ಥಮಾಗತಮ್ ॥ ೧೧೫ ॥

ಪ್ರಸ್ವೇದಮಲದಿಗ್ಧಾಂಗೋ ದುರ್ಗಂಧೋಯಮಿತಿ ಕ್ರುಧಾ ।
ವಿಚಿಕಿತ್ಸಾಪರಾ ಸಾಧಿಕ್ಷೇಪಾತ್ಯುದ್ಗಾರಿಣೀ ತದಾ ॥ ೧೧೬ ॥

ಸಹಸೋದುಂಬರಾಖ್ಯೇನ ಕುಷ್ಠೇನ ವ್ಯಾಪ್ತದೇಹಿಕಾ ।
ಶುನೀವ ತರ್ಜ್ಯಮಾನಾ ಸಾ ಜನೈಃ ಪರುಷಭಾಷಿತೈಃ ॥ ೧೧೭ ॥

ಶೂನ್ಯಗೇಹೇತಿದುಃಖೇನ ಮೃತ್ವಾ ಸ್ನೇಹಾಹಿತಾಶಯಾ ।
ಗೇಹೇಸ್ಯೈವ ದ್ವಿಜಸ್ಯಾಭೂದ್ದುರ್ಗಂಧಶ್ಚಿತ್ಯುರಾಖುಕಃ ॥ ೧೧೮ ॥

ತಸ್ಯೋಪರಿ ಮುಹುರ್ಧಾವಂಸ್ತೇನ ಕೋಪವತಾ ಬಹಿಃ ।
ಗೃಹೀತ್ವಾ ನಿಷ್ಠುರಂ ಕ್ಷಿಪ್ತೋ ಮೃತಾಂಧಾಹಿರಜಾಯತ ॥ ೧೧೯ ॥

ತತ್ರೈವಾಸೌ ಪುನರ್ಮೃತ್ವಾ ಗರ್ದಭೋಭೂತ್ಸ್ವಪಾಪತಃ ।
ಮುಹುರ್ಮುಹುರ್ಗೃಹಂ ಗಚ್ಛಂಸ್ತದೈವ ಕುಪಿತೈರ್ದ್ವಿಜೈಃ ॥ ೧೨೦ ॥

ಹತೋ ಲಕುಟಪಾಷಾಣೈರ್ಭಗ್ನಪಾದಃ ಕ್ರಿಮಿವ್ರಣೈಃ ।
ಆಕುಲಃ ಪತಿತಃ ಕೂಪೇ ದುಃಖಿತೋ ಮೃತಿಮಾಗತಃ ॥ ೧೨೧ ॥

ಮತ್ತೊಂದು ಕಾಲದಲ್ಲಿ ಶರೀರಾಲಂಕಾರವನ್ನು ಮಾಡಿಕೊಳ್ಳುವವಳಾದ ಆಕೆಯು ಕನ್ನಡಿಯಲ್ಲಿ ತನ್ನನ್ನು ನೋಡುವುದರಲ್ಲಿ ಉದ್ಯುಕ್ತಳಾಗಿ ಭಿಕ್ಷೆಗೋಸ್ಕರ ಬಂದ ಸಮಾಧಿಗುಪ್ತಮುನಿಯನ್ನು ಕಂಡು 'ಇವನು ಬೆವರಿನ ಕೊಳೆಯಿಂದ ಯುಕ್ತವಾದ ದೇಹವುಳ್ಳವನೂ ದುರ್ವಾಸನೆಯುಳ್ಳವನೂ ಆಗಿರುತ್ತಾನೆ' ಎಂದು ಕೋಪದಿಂದ ಜುಗುಪ್ಸಾಪರಳೂ ತಿರಸ್ಕರಿಸುವವಳೂ ಬಹಳವಾಗಿ ಕೂಗಾಡುವವಳೂ ಆದಳು. ಆಗ ಶೀಘ್ರವಾಗಿ ಉದುಂಬರವೆಂಬ ಕುಷ್ಠದಿಂದ ವ್ಯಾಪ್ತವಾದ ದೇಹವುಳ್ಳವಳೂ ಕಠಿನವಚನವುಳ್ಳ ಜನರಿಂದ, ಹೆಣ್ಣುನಾಯಿಯಂತೆ, ತಿರಸ್ಕರಿಸಲ್ಪಡುವವಳೂ ಆದ ಆಕೆಯು ಶೂನ್ಯಗೃಹದಲ್ಲಿದ್ದು ಬಹುದುಃಖದಿಂದ ಪತಿಸ್ನೇಹಯುಕ್ತವಾದ ಮನಸ್ಸಿನಿಂದ ಸತ್ತು ಇದೇ ಸೋಮಬ್ರಾಹ್ಮಣನ ಮನೆಯಲ್ಲಿ ದುರ್ವಾಸನೆಯುಳ್ಳ ಚಿತ್ಕುರವೆಂಬ ಇಲಿಯಾಗಿ ಹುಟ್ಟಿ ಆ ಬ್ರಾಹ್ಮಣನ ಮೇಲೆ ಪುನಃ ಪುನಃ ಓಡಿಬರುವುದಾಗಿ ಕೋಪವುಳ್ಳ ಆ ಬ್ರಾಹ್ಮಣನಿಂದ ಅದನ್ನು ಹಿಡಿದು ಹೊರಗೆ ನಿಷ್ಠುರವಾಗಿ ಎಸೆಯಲ್ಪಟ್ಟಿತು. ಇದು ಸತ್ತು ಅಲ್ಲಿಯೇ ಅಂಧಸರ್ಪವಾಗಿ ಹುಟ್ಟಿತು. ಪುನಃ ಸತ್ತು ಪಾಪದಿಂದ ಕತ್ತೆಯಾಗಿ ಹುಟ್ಟಿತು. ಅದು ಪುನಃ ಪುನಃ ಆ ಬ್ರಾಹ್ಮಣನ ಮನೆಗೆ ಹೋಗುವುದಾಗಿಯೂ ಆಗಲೇ ಕುಪಿತರಾದ ಬ್ರಾಹ್ಮಣರಿಂದ ದೊಣ್ಣೆಯಿಂದಲೂ ಕಲ್ಲುಗಳಿಂದಲೂ ಹೊಡೆಯಲ್ಪಟ್ಟು ಕಾಲುಮುರಿಯಲ್ಪಟ್ಟುದಾಗಿಯೂ ಕ್ರಿಮಿವ್ರಣಗಳಿಂದ ವ್ಯಾಕುಲವಾಗಿಯೂ ದುಃಖವುಳ್ಳುದಾಗಿಯೂ ಬಾವಿಯಲ್ಲಿ ಬಿದ್ದು ಮರಣವನ್ನು ಹೊಂದಿತು.

ತತೋಂಧಾಹಿಃ ಸಮುತ್ಪನ್ನೋ ಮೃತ್ವಾಂಧಶ್ಚಾಥ ಸೂಕರಃ ।
ಗ್ರಾಮೇ ಯೋ ಭಕ್ಷಿತೋ ಮೃತ್ವಾ ಸೋಪಿ ಶ್ವಭಿರತೋಮುತಃ ॥

ಮತ್ಸ್ಯಸ್ಯ ಮಂದಿರಗ್ರಾಮೇ ನದ್ಯುತ್ತರಣಕಾರಿಣಃ ।
ಮಂಡೂಕ್ಯಾಶ್ಚ ಸುತಾ ಜಾತಾ ಪೂತಿಕಾನಾಮ ಪಾಪಿನೀ ॥ ೧೨೩ ॥

ತರುವಾಯ ಅಂಧಸರ್ಪವಾಗಿ ಹುಟ್ಟಿತು. ಅದು ಸತ್ತು ಕುರುಡು ಹಂದಿಯಾಗಿ ಹುಟ್ಟಿತು. ಅದೂ ಗ್ರಾಮದಲ್ಲಿ ಈಕಡೆ ಆಕಡೆ ಸುತ್ತುವ ನಾಯಿಗಳಿಂದ ತಿನ್ನಲ್ಪಟ್ಟು ಸತ್ತು ಮಂದಿರವೆಂಬ ಗ್ರಾಮದಲ್ಲಿ ಹೊಳೆಯನ್ನು ದಾಟಿಸುವವನಾದ ಮತ್ಸ್ಯನೆಂಬ ಬೆಸ್ತರವನಿಗೂ ಆತನ ಹೆಂಡತಿಯಾದ ಮಂಡೂಕಿಗೂ ಪಾಪಿಷ್ಠಳಾದ ಪೂತಿಕೆಯೆಂಬ ಮಗಳಾಗಿ ಹುಟ್ಟಿದಳು.

ಸ್ವೋತ್ಪತ್ತ್ಯನಂತರಂ ಲೋಕಾಂತರಂ ಯಾತಃ ಪಿತಾ ತತಃ ।
ಮಾತಾ ಚ ಪೋಷಿತಾ ಮಾತಾಮಹ್ಯಾ ಸರ್ವಾಶುಭಾಖಿಲೈಃ ॥ ೧೨೪ ॥

ವಿಚಿಕಿತ್ಸ್ಯಾ ನದೀತೀರವರ್ತಿನೀ ಸಾ ಕದಾಚನ ।
ಸಮಾಧಿಗುಪ್ತಮಾಲೋಕ್ಯ ನದೀತೀರೇ ಪುರಾತನಮ್ ॥ ೧೨೫ ॥

ಕಾಲಲಬ್ಧ್ವಾ ಸಮಾಸಾದ್ಯ ಪ್ರತಿಮಾಯೋಗಧಾರಿಣಮ್ ।
ಗೃಹೀತೋಪಶಮಾ ಯೋಗಿದೇಹಸ್ಥಮಶಕಾದಿಕಮ್ ॥ ೧೨೬ ॥

ಅಪಾಸ್ಯಂತೀ ಪ್ರಯತ್ನೇನ ನಿಶಾಂತೇ ಯೋಗನಿಷ್ಠಿತಾ ।
ಉಪವಿಷ್ಟಸ್ಯ ಪಾದಾಬ್ಜಮುಪಾಶ್ರಿತ್ಯೋದಿತಂ ಮುನೇಃ ॥ ೧೨೭ ॥

ಶ್ರುತ್ವಾ ಧರ್ಮಧಿಯಾದತ್ತ ಪರ್ವೋಪವಸತಿಂ ಸುಧೀಃ ।
ಪರೇದ್ಯುರ್ಜಿನಪೂಜಾರ್ಥಂ ಗಚ್ಛಂತೀ ವೀಕ್ಷ್ಯ ಸಾರ್ಯಿಕಾಮ್ ॥

ಗ್ರಾಮಾಂತರಂ ಸಮಂ ಗತ್ವಾ ತದಾನೀತಾಂಧಸಾ ಸದಾ ।
ಪ್ರಾಣಸಂಧಾರಣಂ ಕೃತ್ವಾ ಕಸ್ಮಿಂಶ್ಚಿದ್ಭೂಭೃತೋ ಬಿಲೇ ॥ ೧೨೯ ॥

ಉಪವಿಷ್ಟಾ ನಿಜಾಚಾರಂ ಪಾಲಯಂತೀ ಭಯಾದಘಾತ್ ।
ಸಮ್ಯಗ್ಜ್ಞಾತ್ವಾರ್ಯಿಕಾಖ್ಯಾನಾತ್ಸ್ವವೃತ್ತಾಂತಂ ಸಕೌತುಕಾತ್ ॥ ೧೩೦ ॥

**ಚಿತ್ರಂ ನೀಚಕುಲೋತ್ಪನ್ನಾಪ್ಯೇವಂ ವೃತ್ತೇತಿ ಸಾದರಮ್ ।**
**ಪೂಜಾಂ ನಿರ್ವರ್ತಿಕಾಂ ದ್ರಷ್ಟುಂ ಸ್ವಾಂ ವಾತ್ಸಲ್ಯಾದುಪಾಗತಾಮ್ ॥**

**ಅಭಿಧಾಯಾಂಬ ಪಾಪಿಷ್ಠಾಂ ಮಾಂ ತ್ವಂ ಪುಣ್ಯವತೀ ಕುತಃ ।**
**ಪಶ್ಯಸೀತಿ ನಿಜಾತೀತಭವಾನ್ ಜ್ಞಾತಾನ್ ಯತೀಶ್ವರಾತ್ ॥ ೮೩೨ ॥**

**ತಸ್ಯಾ ವ್ಯಾವರ್ಣಯತ್ಸಾಪಿ ವಯಸ್ಯಾಸ್ಯಾಃ ಪುರಾತನೀ ।**
**ತಯೈತದವಬುಧ್ಯಾಯಾನ್ಮಾರ್ಗಂ ಜೈನಮಘಕ್ಷಯಾತ್ ॥ ೮೩೩ ॥**

ತಾನು ಹುಟ್ಟಿದನಂತರ ತಂದೆಯು ಲೋಕಾಂತರವನ್ನು ಹೊಂದಿದನು. ಆಮೇಲೆ ತಾಯಿಯೂ ಸತ್ತುಹೋದಳು. ತಾಯಿಯ ತಾಯಿ–ಅಜ್ಜಿಯಿಂದ ಪೋಷಿತಳೂ ಎಲ್ಲವೂ ಅಶುಭವಾಗಿರುವವಳೂ ಎಲ್ಲರಿಂದಲೂ ಜುಗುಪ್ಸಿಸಲ್ಪಡತಕ್ಕವಳೂ ಹೊಳೆಯ ದಡದಲ್ಲಿರುವವಳೂ ಆದ ಆ ಪೂತಿಕೆಯು ಒಂದಾನೊಂದು ಕಾಲದಲ್ಲಿ ನದೀತೀರದಲ್ಲಿ ಪುರಾತನನೂ ಪ್ರತಿಮಾಯೋಗಧಾರಿಯೂ ಆದ ಸಮಾಧಿಗುಪ್ತ ಮುನಿಯನ್ನು ಕಂಡು ಅವನನ್ನು ಹೊಂದಿ ಕಾಲಲಬ್ಧಿಯಿಂದ ಉಪಶಮ ಭಾವವನ್ನು ಹೊಂದಿದವಳಾಗಿಯೂ ಯೋಗಿಯ ದೇಹದಲ್ಲಿರುವ ನೊಣವೇ ಮೊದಲಾದುದನ್ನು ಪ್ರಯತ್ನದಿಂದ ದೂರಮಾಡುವವಳಾಗಿಯೂ ರಾತ್ರಿಯ ಕೊನೆಯಲ್ಲಿ–ಪ್ರಾತಃಕಾಲದಲ್ಲಿ ಧ್ಯಾನವು ಪೂರ್ತಿಯಾದಾಗ ಕುಳಿತಿರುವ ಆ ಮುನಿಯ ಚರಣ ಕಮಲವನ್ನು ಆಶ್ರಯಿಸಿ ಉಪದೇಶವನ್ನು ಕೇಳಿ ಪ್ರಾಜ್ಞಳಾಗಿಯೂ ಧರ್ಮ ಬುದ್ಧಿಯಿಂದ ಪರ್ವೋಪವಾಸವನ್ನು ಕೈಕೊಂಡಳು. ಮರುದಿವಸ ಜಿನಪೂಜೆ ಗೋಸ್ಕರ ಹೋಗುವವಳಾಗಿ ಆರ್ಯಿಕೆಯನ್ನು ನೋಡಿ ಅಂದಿನಿಂದ ಯಾವಾಗಲೂ ಆಕೆಯೊಡನೆ ಗ್ರಾಮಾಂತರಕ್ಕೆ ಹೋಗಿ ಆಗ ತರುತ್ತಿದ್ದ ಅನ್ನದಿಂದ ಪ್ರಾಣ ಧಾರಣವನ್ನು ಮಾಡಿ ಕೌತುಕವುಳ್ಳುದಾದ ಆರ್ಯಿಕೆಯ ಹೇಳಿಕೆಯಿಂದ ತನ್ನ ಸಮಾಚಾರವನ್ನು ಚೆನ್ನಾಗಿ ತಿಳಿದು ಪಾಪಭೀತಿಯಿಂದ ತನ್ನ ಆಚಾರವನ್ನು ಪಾಲಿಸುವವಳಾಗಿ ಪರ್ವತದ ಯಾವುದೋ ಗುಹೆಯಲ್ಲಿ ಕುಳಿತವಳಾಗಿ "ನೀಚಕುಲೋತ್ಪನ್ನಳಾದರೂ ಹೀಗಾದಳು. ಆಶ್ಚರ್ಯ" ಎಂದು ಪೂಜೆಯನ್ನು ನೆರವೇರಿಸುತ್ತಿದ್ದ ತನ್ನನ್ನು(ಪೂತಿಕೆಯನ್ನು) ನೋಡುವುದಕ್ಕೋಸ್ಕರ ವಾತ್ಸಲ್ಯದಿಂದ ಪ್ರೀತಿಪೂರ್ವಕವಾಗಿ ಬಂದವಳನ್ನು ಕುರಿತು ಪೂತಿಕೆಯು "ತಾಯಿಯೆ ! ಪುಣ್ಯವತಿಯಾದ ನೀನು ಪಾಪಿಷ್ಠಳಾದ ನನ್ನನ್ನು ಏತಕ್ಕೆ ನೋಡುತ್ತಿ ?" ಎಂದು ಹೇಳಿ ಮುನೀಶ್ವರರಿಂದ ತಿಳಿದಿದ್ದ ತನ್ನ ಕಳೆದು ಹೋದ ಭವಗಳನ್ನು ಆಕೆಗೆ ವರ್ಣಿಸಿದಳು. ಆಕೆಯೂ ಈ ಪೂತಿಕೆಯ ಪುರಾತನಳಾದ (ಲಕ್ಷ್ಮೀಮತಿಜನ್ಮದ) ಸಖಿಯಾಗಿದ್ದಳು. ಆ ಪೂತಿಕೆಯಿಂದ ಈ ವಿಷಯವನ್ನು ತಿಳಿದು ಆ ಸಖಿ(ಶ್ರೀಮತಿ)ಯು ಪಾಪಕ್ಷಯದಿಂದ ಜೈನಮಾರ್ಗವನ್ನು ಹೊಂದಿದಳು.

**ಪ್ರಾಗ್ಜನ್ಮಾರ್ಜಿತಪಾಪಸ್ಯ ಪರಿಪಾಕಾದ್ವಿರೂಪಿತಾ ।**
**ರೋಗವತ್ತ್ವಂ ಕುಗಂಧತ್ವಂ ನಿರ್ಧನತ್ವಾದಿಕಂ ಚ ಕೈಃ ॥ ೮೩೪ ॥**

**ನ ಪ್ರಾಪ್ಯತೇತ್ರ ಸಂಸಾರೇ ತತ್ತ್ವಂ ಭೂರ್ಮಾಹಿತಾ ಶುಚಾ ।**
**ತ್ವಯಾತ್ತಂ ವ್ರತಶೀಲೋಪವಾಸಾದಿ ಪರಜನ್ಮನೇ ॥ ೮೩೫ ॥**

**ಪಾಥೇಯಂ ದುರ್ಲಭಂ ತಸ್ಮಾನ್ಮಾಭೈಷೀಸ್ತ್ವಮತಃ ಪರಮ್ ।**
**ಇತಿ ಪ್ರೋತ್ಸಾಹಿತಾ ಸಖ್ಯಾ ಸಾ ಸನ್ನ್ಯಸ್ಯ ಸಮಾಧಿನಾ ॥ ೮೩೬ ॥**

**ಚ್ಯುತಪ್ರಾಣಾಚ್ಯುತೇಂದ್ರಸ್ಯ ವಲ್ಲಭಾಭೂದತಿಪ್ರಿಯಾ ।**
**ಪಲ್ಯಾನಾಂ ಪಂಚಪಂಚಾಶತಂ ತತ್ರಾಚ್ಛಿನ್ನಸೌಖ್ಯಭಾಕ್ ॥ ೮೩೭ ॥**

ಪೂರ್ವಜನ್ಮದಲ್ಲಿ ಸಂಪಾದಿಸಿದ ಪಾಪದ ಪರಿಪಾಕದಿಂದ ವಿಕಾರರೂಪತ್ವವೂ ರೋಗತ್ವವೂ ದುರ್ಗಂಧತ್ವವೂ ದಾರಿದ್ರ್ಯವೇ ಮೊದಲಾದುದೂ ಈ ಸಂಸಾರದಲ್ಲಿ ಯಾರು ತಾನೆ ಹೊಂದುವುದಿಲ್ಲ ? ಆದುದರಿಂದ ನೀನು ಶೋಕದಿಂದ ಕೂಡಿದವಳಾಗಿ ಆಗಬೇಡ. ನೀನು ಸ್ವೀಕರಿಸಿರುವ ವ್ರತಶೀಲೋಪವಾಸವೇ ಮೊದಲಾದುದು ಪರಜನ್ಮಕ್ಕೋಸ್ಕರ ದುರ್ಲಭವಾದ ಬುತ್ತಿಯಾಗಿರುತ್ತದೆ. ಆದುದರಿಂದ ನೀನು ಇಲ್ಲಿಂದ ಮುಂದೆ ಹೆದರಬೇಡ" ಈ ರೀತಿಯಾಗಿ ಆ ಸಖಿಯಿಂದ ಪ್ರೋತ್ಸಾಹಿಸಲ್ಪಟ್ಟವಳಾದ ಆ ಪೂತಿಕೆಯು ಸಮಾಧಿವಿಧಿಯಿಂದ ಮಡಿದು ಅಚ್ಯುತ ಸ್ವರ್ಗದಲ್ಲಿ ಜನಿಸಿ ಅಚ್ಯುತೇಂದ್ರನಿಗೆ ಬಹುಪ್ರಿಯಳಾದ ಪತ್ನಿಯಾದಳು. ಅಲ್ಲಿ ಐವತ್ತೈದು ಪಲ್ಯಸಂಖ್ಯಾಕಾಲದವರೆಗೆ ಅಖಂಡಿತವಾದ ಸೌಖ್ಯಭಾಗಿನಿಯಾದಳು.

**ಚ್ಯುತ್ವಾ ತತೋ ವಿದರ್ಭಾಖ್ಯವಿಷಯೇ ಕುಂಡಲಾಹ್ವಯೇ ।**
**ಪುರೇ ವಾಸವಭೂಭರ್ತುಃ ಶ್ರೀಮತ್ಯಾಶ್ಚ ಸುತಾಭವಃ ॥ ೮೩೮ ॥**

**ರುಗ್ಮಿಣ್ಯಥ ಪುರಃ ಕೌಸಲಾಖ್ಯಾಯಾ ಭೂಪತೇಃ ಸುತಃ ।**
**ಭೇಷಜಸ್ಯಾಭವನ್ಮದ್ರ್ಯಾಂ ಶಿಶುಪಾಲಸ್ತ್ರಿಲೋಚನಃ ॥ ೮೩೯ ॥**

ಆ ಸ್ವರ್ಗದಿಂದ ಆಯುಷ್ಯವು ತೀರಿದ ಮೇಲೆ ಚ್ಯುತಳಾಗಿ ವಿದರ್ಭವೆಂಬ ದೇಶದಲ್ಲಿ ಕುಂಡಲಪುರದಲ್ಲಿ ವಾಸವರಾಜನಿಗೂ ಆತನ ಪತ್ನಿಯಾದ ಶ್ರೀಮತಿಗೂ ನೀನು ರುಗ್ಮಿಣಿ–ಪುತ್ರಿಯಾಗಿರುತ್ತಿ. ಅನಂತರದಲ್ಲಿ ಕೌಸಲವೆಂಬ ಪುರದ ದೊರೆಯಾದ ಭೇಷಜನಿಗೆ ಆತನ ಪತ್ನಿಯಾದ ಮದ್ರಿಯಲ್ಲಿ ಮೂರು ಕಣ್ಣುಗಳುಳ್ಳ ಶಿಶುಪಾಲನೆಂಬ ಪುತ್ರನು ಜನಿಸಿದನು.

**ಅಭೂತಪೂರ್ವಮೇತತ್ತು ಮನುಷ್ಯೇಷ್ವಸ್ಯ ಕಿಂ ಫಲಮ್ ।**
**ಇತಿ ಭೂಪತಿನಾ ಪೃಷ್ಟಃ ಸ್ಪಷ್ಟಂ ನೈಮಿತ್ತಿಕೋವದತ್ ॥ ೮೪೦ ॥**

**ತೃತೀಯಂ ನಯನಂ ಯಸ್ಯ ದರ್ಶನಾದಸ್ಯ ನಶ್ಯತಿ ।**
**ಅಯಂ ಹನಿಷ್ಯತೇ ತೇನ ಸಂಶಯೋ ನೇತ್ಯದೃಷ್ಟವಿತ್ ॥ ೮೪೧ ॥**

'ಈ ಮೂರು ಕಣ್ಣುಗಳಿರುವಿಕೆಯಾದರೋ ಮನುಷ್ಯರಲ್ಲಿ ಅಭೂತಪೂರ್ವವಾದುದು. ಇದರ ಫಲವೇನು ?' ಎಂದು ದೊರೆಯು ನೈಮಿತ್ತಿಕನನ್ನು ಕೇಳಿದನು. 'ಇವನ ಮೂರನೆಯ ಕಣ್ಣು ಯಾವನನ್ನು ನೋಡುವುದರಿಂದ ನಾಶವಾಗುವುದೋ ಅವನಿಂದ ಇವನು ಕೊಲ್ಲಲ್ಪಡುವನು. ಸಂಶಯವಿಲ್ಲ' ಎಂದು ಅದೃಷ್ಟವನ್ನು ತಿಳಿದಿರುವ ಆ ನೈಮಿತ್ತಿಕನು ಸ್ಪಷ್ಟವಾಗಿ ಹೇಳಿದನು.

**ಕದಾಚಿದ್ಭೇಷಜೋ ಮದ್ರೀ ಶಿಶುಪಾಲಃ ಪರೇಪಿ ಚ ।**
**ಗತ್ವಾ ದ್ವಾರವತೀಂ ದ್ರಷ್ಟುಂ ವಾಸುದೇವಂ ಸಮುತ್ಸುಕಾಃ ॥ ೮೪೨ ॥**

**ಅದೃಶ್ಯತಾಮಗಾನ್ನೇತ್ರಂ ಜರಾಸಂಧಾರಿವೀಕ್ಷಣಾತ್ ।**
**ತೃತೀಯಂ ಶಿಶುಪಾಲಸ್ಯ ವಿಚಿತ್ರಾ ದ್ರವ್ಯಶಕ್ತಯಃ ॥ ೮೪೩ ॥**

ಒಂದಾನೊಂದು ಕಾಲದಲ್ಲಿ ಭೇಷಜನೂ ಮದ್ರಿಯೂ ಶಿಶುಪಾಲನೂ ಬೇರೆಯವರೂ ವಾಸುದೇವನನ್ನು ನೋಡುವುದಕ್ಕೆ ಕುತೂಹಲವುಳ್ಳವರಾಗಿ ದ್ವಾರಾವತಿಗೆ ಹೋಗಿ ಜರಾಸಂಧನ ವೈರಿಯನ್ನು ನೋಡಿದುದರಿಂದ ಶಿಶುಪಾಲನ ಆ ಮೂರನೆಯ ಕಣ್ಣು ಅದೃಶ್ಯತ್ವವನ್ನು ಹೊಂದಿತು. ಪದಾರ್ಥದ ಶಕ್ತಿಗಳು ವಿಚಿತ್ರವಾಗಿರುತ್ತವೆ.

**ವಿಜ್ಞಾತಾದೇಶಯಾ ಮದ್ರ್ಯಾ ತದ್ವಿಲೋಕ್ಯ ಹರಿರ್ಭಿಯಾ ।**
**ದದಸ್ವ ಪೂಜ್ಯ ಮೇ ಪುತ್ರಭಿಕ್ಷಾಮಿತ್ಯಭ್ಯಯಾಚತ ॥ ೮೪೪ ॥**

ನೈಮಿತ್ತಿಕನು ಹೇಳಿದ್ದ ವಿಷಯವನ್ನು ತಿಳಿದಿದ್ದ ಮದ್ರಿಯು ಶಿಶುಪಾಲನ ಮೂರನೆಯ ಕಣ್ಣು ಕೃಷ್ಣನನ್ನು ನೋಡಿದುದರಿಂದ ಅದೃಶ್ಯವಾದುದನ್ನು ನೋಡಿ ಭಯದಿಂದ "ಪೂಜ್ಯನೆ ! ನನಗೆ ಪುತ್ರಭಿಕ್ಷೆಯನ್ನು ಕೊಡು" ಎಂದು ಹರಿಯನ್ನು ಬೇಡಿದಳು.

**ಶತಾಪರಾಧಪರ್ಯಂತಮಂತರೇಣಾಂಬ ಮದ್ಭಯಮ್ ।**
**ನಾಸ್ಯಾಸ್ತೀತಿ ಹರೇರ್ಲಬ್ಧವರಾಸೌ ಸ್ವಾಂ ಪುರೀಮಗಾತ್ ॥ ೮೪೫ ॥**

"ತಾಯಿಯೆ ! ನೂರು ತಪ್ಪುಗಳ ವರೆಗಲ್ಲದೆ ಇವನಿಗೆ ನನ್ನ ಭಯವಿಲ್ಲ (ನೂರು ತಪ್ಪುಗಳವರೆಗೆ ಭಯವಿಲ್ಲ)" ಎಂದು ಹರಿಯ ವರವನ್ನು ಪಡೆದ ಈ ಮದ್ರಿಯು ತನ್ನ ಪಟ್ಟಣಕ್ಕೆ ಹೋದಳು. .

**ವಿಶುದ್ಧಮಂಡಲೋ ನಿತ್ಯಮುದ್ಯನ್ ಧ್ವಸ್ತದ್ವಿಷತ್ತಮಾಃ ।**
**ಪದ್ಮಾಹ್ಲಾದಕರಸ್ತೀಕ್ಷ್ಣಕರಃ ಕ್ರೂರಃ ಪ್ರತಾಪವಾನ್ ॥ ೩೪೬ ॥**

**ಪ್ರಚ್ಛಾದ್ಯ ಪರತೇಜಾಂಸಿ ಭೂಭೃನ್ಮೂರ್ಧಸ್ಥಪಾದಕಃ ।**
**ಶೈಶವೇ ಶಿಶುಪಾಲೋಽಸೌ ಭಾಸತೇ ಸ್ಮೇವ ಭಾಸ್ಕರಃ ॥ ೩೪೭ ॥**

ವಿಶುದ್ಧಮಂಡಲವುಳ್ಳವನೂ ನಿತ್ಯವೂ ಉದಯಿಸುವವನೂ ದ್ವೇಷಿಸುವ ಕತ್ತಲೆಯನ್ನು ನಾಶಮಾಡಿರುವವನೂ ಕಮಲಗಳಿಗೆ ಸಂತೋಷವನ್ನುಂಟುಮಾಡುವ ಕಿರಣವುಳ್ಳವನೂ ತೀಕ್ಷ್ಣವಾದ ಕಿರಣವುಳ್ಳವನೂ ಕ್ರೂರನೂ ಪ್ರತಾಪವುಳ್ಳವನೂ ಪರಪದಾರ್ಥಗಳ ತೇಜಸ್ಸುಗಳನ್ನು ಮರೆಮಾಡಿ ಪರ್ವತಗಳ ಶಿಖರದಲ್ಲಿರುವ ಕಿರಣಗಳುಳ್ಳವನೂ ಆದ ಸೂರ್ಯನಂತೆ, ವಿಶುದ್ಧವಾದ ದೇಹವುಳ್ಳವನೂ ನಿತ್ಯವೂ ವೃದ್ಧಿಯನ್ನು ಹೊಂದುತ್ತಿರುವವನೂ ಹೆಚ್ಚು ವೈರಿಗಳಾಗಿರುವವರನ್ನು ನಾಶಮಾಡಿರುವವನೂ ಲಕ್ಷ್ಮಿಗೆ ಸಂತೋಷವನ್ನುಂಟುಮಾಡುವವನೂ ಹೆಚ್ಚಾದ ಕಂದಾಯವುಳ್ಳವನೂ ಕ್ರೂರನೂ ಪ್ರತಾಪವುಳ್ಳವನೂ ಬೇರೆಯವರ ತೇಜಸ್ಸುಗಳನ್ನು ಮರೆಮಾಡಿ ರಾಜರುಗಳ ಮಸ್ತಕದಲ್ಲಿರುವ ಪಾದಗಳುಳ್ಳವನೂ ಆದ ಈ ಶಿಶುಪಾಲನು ಶೈಶವದಲ್ಲಿ ಪ್ರಕಾಶಿಸಿದನು.

**ಹರಿಂ ಹರಿರಿವಾಕ್ರಮ್ಯ ವಿಕ್ರಮೇಣಾಕ್ರಮೈಷಿಣಾ ।**
**ರಾಜಕಂಠೀರವತ್ವೇನ ಸೋಽವಾಂಛದ್ವರ್ತಿತುಂ ಸ್ವಯಮ್ ॥ ೩೪೮ ॥**

ಆ ಶಿಶುಪಾಲನು ಆಕ್ರಮಣವನ್ನಿಚ್ಛಿಸುವ ಪರಾಕ್ರಮದಿಂದ ಸಿಂಹದಂತೆ ಕೃಷ್ಣನನ್ನು ಆಕ್ರಮಿಸಿ ತಾನು ರಾಜಶ್ರೇಷ್ಠತೆಯಿಂದ ವರ್ತಿಸುವುದಕ್ಕೆ ಇಚ್ಛಿಸಿದನು.

**ದರ್ಪಿಣಾಯಶಸಾ ವಿಶ್ವಸರ್ಪಿಣಾ ಸ್ವಾಯುರರ್ಪಿಣಾ ।**
**ಶತಂ ತೇನಾಪರಾಧಾನಾಂ ವ್ಯಧಾಯಿ ಮಧುವಿದ್ವಿಷಃ ॥ ೩೪೯ ॥**

ಅಹಂಕಾರಿಯೂ ಜಗತ್ತನ್ನು ವ್ಯಾಪಿಸುವ ಅಪಯಶಸ್ಸಿನಿಂದ ತನ್ನ ಆಯುಷ್ಯವನ್ನರ್ಪಿಸುವವನೂ ಆದ ಆ ಶಿಶುಪಾಲನು ಮಧುವೈರಿಯಾದ ಕೃಷ್ಣನಿಗೆ ನೂರು ಅಪರಾಧಗಳನ್ನು ಮಾಡಿದನು.

**ಸ್ವಮೂರ್ಧೀಕೃತ್ಯ ಮೂರ್ಧನ್ಯಃ ಕೃತ್ಯಪಕ್ಷೋಽಪ್ಯಲಕ್ಷಿತಃ ।**
**ಅಧೋಕ್ಷಜಮಧಿಕ್ಷಿಪ್ಯ ಲಕ್ಷ್ಮೀಮಾಕ್ಷೇಪ್ತುಮುದ್ಯಯೌ ॥ ೩೫೦ ॥**

ತನ್ನನ್ನು ಮೇಲೆ–ಶ್ರೇಷ್ಠನನ್ನಾಗಿ ಮಾಡಿಕೊಂಡು ಶ್ರೇಷ್ಠನಾಗಿರುವವನೂ ಛೇದಿಸುವುದಕ್ಕೆ ಯೋಗ್ಯವಾದ ಪಕ್ಷವಾಗಿರುವವನಾದರೂ ಕೃಷ್ಣನಿಂದ ಅಲಕ್ಷಿಸಲ್ಪಟ್ಟವನೂ ಆದ ಶಿಶುಪಾಲನು ವಿಷ್ಣುವನ್ನು ತಿರಸ್ಕರಿಸಿ ಅವನ ರಾಜ್ಯಲಕ್ಷ್ಮಿಯನ್ನು ಕಿತ್ತುಕೊಳ್ಳುವುದಕ್ಕೆ ಉದ್ಯುಕ್ತನಾದನು.

**ಸಂಘಃ ಶಾಂತೋಽಪಿ ಶತ್ರೂಣಾಂ ಹಂತ್ಯೇವೇವಾಘಸಂಚಯಃ ।**
**ವಿಜಿಗೀಷುಸ್ತಮುತ್ಕ್ಷೇಪ್ತುಂ ಕ್ಷೇಪಕೃನ್ನ ಮುಮುಕ್ಷುವತ್ ॥ ೩೫೧ ॥**

ಶತ್ರುಗಳ ಸಮೂಹವು ಶಾಂತವಾದರೂ ಅದು, ಪಾಪಸಮೂಹದಂತೆ, ಹಿಂಸೆಯನ್ನು ಮಾಡಿಯೇ ಮಾಡುವುದು. ಮುಮುಕ್ಷುವು ಪಾಪಸಮೂಹವನ್ನು ನಾಶಮಾಡುವುದಕ್ಕೆ ಸಾವಕಾಶವನ್ನು ಮಾಡದಿರುವಂತೆ ಜಯಿಸಲಿಚ್ಛಿಸುವವನೂ ಆ ಶತ್ರು ಸಮೂಹವನ್ನು ನಾಶಮಾಡುವುದಕ್ಕೆ ಕಾಲಕ್ಷೇಪವನ್ನು–ವಿಲಂಬವನ್ನು ಮಾಡುವುದಿಲ್ಲ.

**ಏವಂ ಪ್ರಯಾತಿ ಕಾಲೇ ತ್ವಾಂ ಶಿಶುಪಾಲಾಯ ತೇ ಪಿತಾ ।**
**ದಾತುಂ ಸಮುದ್ಯತಃ ಪ್ರೀತ್ಯಾ ತಚ್ಛ್ರುತ್ವಾ ಯುದ್ಧಕಾಂಕ್ಷಿಣಾ ॥ ೩೫೨ ॥**

**ನಾರದೇನ ಹರಿಃ ಸರ್ವಂ ತತ್ಕಾರ್ಯಮವಬೋಧಿತಃ ।**
**ಷಡಂಗಬಲಸಂಪನ್ನೋ ಗತ್ವಾ ಹತ್ವಾ ತಮೂರ್ಜಿತಮ್ ॥ ೩೫೩ ॥**

**ಆದಾಯ ತ್ವಾಂ ಮಹಾದೇವೀಪಟ್ಟಬಂಧೇ ನ್ಯಯೋಜಯತ್ ।**
**ಶ್ರುತ್ವಾ ತದ್ವಚನಂ ತಸ್ಯಾಃ ಪರಿತೋಷಃ ಪರೋಽಜನಿ ॥ ೩೫೪ ॥**

**ಇತ್ಥಂ ವೃತ್ತಕಮಾಕರ್ಣ್ಯ ಕಃ ಕರೋತಿ ಜುಗುಪ್ಸನಮ್ ।**
**ಮತ್ವಾ ಮಲೀಮಸಾನ್ನೋ ಚೇದ್ಯದಿ ದುರ್ಧೀರ್ಮುನೀಶ್ವರಾನ್ ॥**

ಈ ರೀತಿಯಾಗಿ ಕಾಲವು ಕಳೆಯುತ್ತಿರಲು ನಿನ್ನ ತಂದೆಯು ನಿನ್ನನ್ನು ಪ್ರೀತಿಯಿಂದ ಶಿಶುಪಾಲನಿಗೆ ಕೊಡುವುದಕ್ಕೆ ಉದ್ಯುಕ್ತನಾದನು. ಅದನ್ನು ಕೇಳಿ ಕಲಹಪ್ರಿಯನಾದ ನಾರದನು ಆ ಎಲ್ಲ ಕಾರ್ಯವನ್ನು ಕೃಷ್ಣನಿಗೆ ತಿಳಿಸಿದನು. ಅವನು ಷಡಂಗ ಬಲಸಂಪನ್ನನಾಗಿ ಹೋಗಿ ಊರ್ಜಿತನಾದ ಆ ಶಿಶುಪಾಲನನ್ನು ಕೊಂದು ನಿನ್ನನ್ನು ತೆಗೆದುಕೊಂಡು ಮಹಾದೇವಿಯ ಪಟ್ಟಬಂಧದಲ್ಲಿ ಸೇರಿಸಿದನು.'' ಈ ರೀತಿಯಾಗಿ ಆ ಗಣಧರರ ವಚನವನ್ನು ಕೇಳಿ ಆ ರುಗ್ಮಿಣಿಗೆ ಬಹುಸಂತೋಷವುಂಟಾಯಿತು. ಈ ಪ್ರಕಾರವಾದ ಸಮಾಚಾರವನ್ನು ಕೇಳಿ, ದುರ್ಬುದ್ಧಿಯುಳ್ಳವನಲ್ಲದಿದ್ದರೆ, ಯಾವನು ತಾನೆ ಜುಗುಪ್ಸೆಯನ್ನು ಹೊಂದುವನು ?

**ಅಥ ಜಾಂಬವತೀ ನತ್ವಾ ಮುನಿಂ ಸ್ವಭವಸಂತತಿಮ್ ।**
**ಪೃಚ್ಛತಿ ಸ್ಮಾದರಾದೇವಮುವಾಚ ಭಗವಾನಪಿ ॥ ೩೫೬ ॥**

ಆಮೇಲೆ ಜಾಂಬವತಿಯು ಗಣಧರಮುನಿಯನ್ನು ನಮಸ್ಕರಿಸಿ ಪ್ರೀತಿಯಿಂದ ತನ್ನ ಭವಪರಂಪರೆಯನ್ನು ಕೇಳಿದಳು. ಗಣಧರಭಗವಂತನೂ ಈ ರೀತಿಯಾಗಿ ಹೇಳಿದನು.

**ದ್ವೀಪೇಽಸ್ಮಿನ್ ಪ್ರಾಗ್ವಿದೇಹೇಽಸ್ತಿ ವಿಷಯಃ ಪುಷ್ಕಲಾವತೀ ।**
**ವೀತಶೋಕಪುರಂ ತತ್ರ ದಮಕೋ ವೈಶ್ಯವಂಶಜಃ ॥ ೩೫೭ ॥**

''ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪುಷ್ಕಲಾವತೀ ದೇಶವಿದೆ. ಅಲ್ಲಿ ವೀತಶೋಕವೆಂಬ ನಗರವಿದೆ. ಆ ನಗರದಲ್ಲಿ ವೈಶ್ಯವಂಶಜನಾದ ದಮಕನೆಂಬವನಿದ್ದನು.

**ಪತ್ನೀ ದೇವಮತಿಸ್ತಸ್ಯ ಸುತಾಸೀದ್ದೇವಿಲಾ ತಯೋಃ ।**
**ದತ್ತಾಸೌ ವಸುಮಿತ್ರಾಯ ವಿಧವಾಭೂದನಂತರಮ್ ॥ ೩೫೮ ॥**

**ನಿರ್ವಿಣ್ಣಾ ಜಿನದೇವಾಖ್ಯಯತಿಮೇತ್ಯಾಹಿತವ್ರತಾ ।**
**ಅಗಾದ್ವ್ಯಂತರದೇವೀತ್ವಂ ಮಂದರೇ ನಂದನೇ ವನೇ ॥ ೩೫೯ ॥**

ದೇವಮತಿಯು ಅವನ ಹೆಂಡತಿಯಾಗಿದ್ದಳು. ಆ ದಂಪತಿಗಳ ದೇವಿಲೆಯೆಂಬ ಮಗಳು ವಸುಮಿತ್ರನೆಂಬವನಿಗೆ ಕೊಡಲ್ಪಟ್ಟವಳಾಗಿ ವಿಧವೆಯಾದಳು. ಬಳಿಕ ವಿರಕ್ತಳಾಗಿ ಜಿನದೇವನೆಂಬ ಯತಿಯನ್ನು ಹೊಂದಿ ವ್ರತಗಳನ್ನು ಸ್ವೀಕರಿಸಿದವಳಾಗಿ ಆಯುಷ್ಯಾವಸಾನದಲ್ಲಿ ಸತ್ತು ಮಂದರಪರ್ವತದಲ್ಲಿ ನಂದನವನದಲ್ಲಿ ವ್ಯಂತರ ದೇವೀತ್ವವನ್ನು ಹೊಂದಿದಳು–ವ್ಯಂತರ ದೇವಿಯಾದಳು.

**ತತಶ್ಚತುರಶೀತ್ಯುಕ್ತಸಹಸ್ರಾಬ್ದಾಯುಷಶ್ಚ್ಯುತೌ ।**
**ವಿಷಯೇ ಪುಷ್ಕಲಾವತ್ಯಾಂ ಪುರೇ ವಿಜಯನಾಮನಿ ॥ ೩೬೦ ॥**

**ಮಧುಷೇಣಾಖ್ಯವೈಶ್ಯಸ್ಯ ಬಂಧುಮತ್ಯಾಶ್ಚ ಬಂಧುರಾ ।**
**ಸುತಾ ಬಂಧುಯಶಾ ನಾಮ ಬಭೂವಾಭ್ಯುದಯೋನ್ಮುಖೀ ॥ ೩೬೧ ॥**

ಅಲ್ಲಿಂದ ಎಂಬತ್ತುನಾಲ್ಕು ಸಹಸ್ರವರ್ಷಾಯುಷ್ಯವು ಕಳೆಯುತ್ತಿರಲು ಪುಷ್ಕಲಾವತೀದೇಶದಲ್ಲಿ ವಿಜಯವೆಂಬ ನಗರದಲ್ಲಿ ಮಧುಷೇಣನೆಂಬ ವೈಶ್ಯನಿಗೂ ಆತನ ಪತ್ನಿಯಾದ ಬಂಧುಮತಿಗೂ ಮನೋಹರಳಾದ ಬಂಧುಯಶೆಯೆಂಬ ಅಭ್ಯುದಯಾಭಿಮುಖಳಾದ ಮಗಳಾದಳು.

**ಜಿನದೇವಭುವಾ ಸಖ್ಯಾ ಸಹಾಸೌ ಜಿನದತ್ತಯಾ ।**
**ಸಮುಪೋಷ್ಯಾದಿಮೇ ಕಲ್ಪೇ ಕುಬೇರಸ್ಯಾಭವತ್ಪ್ರಿಯಾ ॥ ೩೬೨ ॥**

ಈಕೆಯು ಜಿನದೇವನೆಂಬವನ ಪುತ್ರಿಯಾದ ಜಿನದತ್ತೆಯೆಂಬ ಸಖಿಯೊಡನೆ ಉಪವಾಸವ್ರತವನ್ನು ಮಾಡಿ ಆಯುಷ್ಯಾವಸಾನದಲ್ಲಿ ಸತ್ತು ಮೊದಲನೆಯ ಕಲ್ಪದಲ್ಲಿ ಜನಿಸಿ ಕುಬೇರನಿಗೆ ಪತ್ನಿಯಾದಳು.

**ತತಶ್ಚ್ಯುತ್ವಾಭವತ್ಪುಂಡರೀಕಿಣ್ಯಾಂ ವಜ್ರನಾಮಧೃತ್ ।**
**ವೈಶ್ಯಸ್ಯ ಸುಪ್ರಭಾಯಾಶ್ಚ ಸುಮತಿಃ ಸುತಸತ್ತಮಾ ॥ ೮೬೩ ॥**

ಅಲ್ಲಿಯ ಆಯುಷ್ಯವು ತೀರಿದಮೆಲೆ ಚ್ಯುತಳಾಗಿ ಪುಂಡರೀಕಿಣಿಯಲ್ಲಿ ವಜ್ರನೆಂಬ ವೈಶ್ಯನಿಗೂ ಆತನ ಪತ್ನಿಯಾದ ಸುಪ್ರಭೆಗೂ ಸುಮತಿಯೆಂಬ ಶ್ರೇಷ್ಠಪುತ್ರಿಯಾದಳು.

**ಸಾ ತತ್ರ ಸುವ್ರತಾಖ್ಯಾರ್ಯಿಕಾಹಾರಾರ್ಪಣಪೂರ್ವಕಮ್ ।**
**ರತ್ನಾವಲೀಮುಪೋಷ್ಯಾಭೂದ್ಬ್ರಹ್ಮಲೋಕೇಪ್ಸರೋವರಾ ॥ ೮೬೪ ॥**

ಅಲ್ಲಿ ಆಕೆಯು ಸುವ್ರತೆಯೆಂಬ ಆರ್ಯಿಕೆಗೆ ಆಹಾರವನ್ನು ಕೊಟ್ಟು ಬಳಿಕ ರತ್ನಾವಲಿಯೆಂಬ ಉಪವಾಸವ್ರತವನ್ನಾಚರಿಸಿ ಆಯುಷ್ಯಾವಸಾನದಲ್ಲಿ ಸತ್ತು ಬ್ರಹ್ಮಲೋಕದಲ್ಲಿ ಶ್ರೇಷ್ಠಳಾದ ಅಪ್ಸರಸ್ತ್ರೀಯಾದಳು.

**ಚಿರಾತ್ತತೋ ವಿನಿಷ್ಕ್ರಮ್ಯ ದ್ವೀಪೇಸ್ಮಿನ್ ಖೇಚರಾಚಲೇ ।**
**ಉದಕ್ಶ್ರೇಣ್ಯಾಂ ಪುರೇ ಜಾಂಬವಾಖ್ಯೇ ಜಾಂಬವಭೂಪತೇಃ ॥ ೮೬೫ ॥**

**ಅಭೂಸ್ತ್ವಂ ಜಂಬುಷೇಣಾಯಾಂ ಸತೀ ಜಾಂಬವತೀ ಸುತಾ ।**
**ಸೂನುಃ ಪವನವೇಗಸ್ಯ ಶ್ಯಾಮಲಾಯಾಶ್ಚ ಕಾಮುಕಃ ॥ ೮೬೬ ॥**

**ಭವತ್ಯಾಃ ಸ ನಮಿರ್ನಾಮ್ನಾ ಮೈಥುನೋಶಿಥಿಲೇಚ್ಛಯಾ ।**
**ಜ್ಯೋತಿರ್ವನೇನ್ಯದಾ ಸ್ಥಿತ್ವಾ ದೇಯಾ ಜಾಂಬವತೀ ನ ಚೇತ್॥ ೮೬೭ ॥**

**ಆಚ್ಛಿದ್ಯಾಹಂ ಗ್ರಹೀಷ್ಯಾಮೀತ್ಯವೋಚಜ್ಜಾಂಬವಃ ಕ್ರುಧಾ ।**
**ಖಾದಿತುಂ ಪ್ರೇಷಯಾಮಾಸ ವಿದ್ಯಾಂ ಮಾಕ್ಷಿಕಲಕ್ಷಿತಾಮ್ ॥ ೮೬೮ ॥**

ಬಹುಕಾಲದ ಮೇಲೆ-ಅಲ್ಲಿಯ ಆಯುಷ್ಯವು ತೀರಿದಮೇಲೆ ಅಲ್ಲಿಂದ ಹೊರಟು ಈ ಜಂಬೂದ್ವೀಪದ ವಿಜಯಾರ್ಧಪರ್ವತದಲ್ಲಿ ಉತ್ತರಶ್ರೇಣಿಯಲ್ಲಿ ಜಾಂಬವವೆಂಬ ನಗರದಲ್ಲಿ ಜಾಂಬವರಾಜನಿಗೆ ಆತನ ಪತ್ನಿಯಾದ ಜಂಬುಷೇಣೆಯಲ್ಲಿ ನೀನು ಸಾಧ್ವಿಯಾದ ಜಾಂಬವತಿಯೆಂಬ ಪುತ್ರಿಯಾದೆ. ಪವನವೇಗನಿಗೂ ಆತನ ಪತ್ನಿಯಾದ ಶ್ಯಾಮಲೆಗೂ ಪುತ್ರನೂ ಕಾಮುಕನೂ ನಿನ್ನ ಮೈದುನನೂ ಆದ ನಮಿಯೆಂಬವನು ಶಿಥಿಲವಲ್ಲದ-ಅಧಿಕವಾದ ಇಚ್ಛೆಯಿಂದ ಮತ್ತೊಂದು ಕಾಲದಲ್ಲಿ ಜ್ಯೋತಿರ್ವನದಲ್ಲಿದ್ದು "ಜಾಂಬವತಿಯನ್ನು ಕೊಡದಿದ್ದರೆ ನಾನು ನಿನ್ನನ್ನು ಕತ್ತರಿಸಿ ಆಕೆಯನ್ನು ಗ್ರಹಣಮಾಡುವೆನು" ಎಂದು ಜಾಂಬವರಾಜನಿಗೆ ಹೇಳಿದನು. ಜಾಂಬವನು ಕೋಪದಿಂದ ಅವನನ್ನು ಭಕ್ಷಿಸುವುದಕ್ಕೋಸ್ಕರ ನೊಣದ ರೂಪವಾದ-ಮಾಕ್ಷಿಕವಿದ್ಯೆಯನ್ನು ಕಳುಹಿಸಿದನು.

**ತದಾ ನಮಿಕುಮಾರಸ್ಯ ಕಿನ್ನರಾಖ್ಯಪುರಾಧಿಪಃ ।**
**ಮಾತುಲೋ ಯಕ್ಷಮಾಲೀ ತಾಮಚ್ಛೈತ್ಸೀತ್ಖೇಚರೇಶ್ವರಃ ॥ ೮೬೯ ॥**

**ಸರ್ವವಿದ್ಯಾಚ್ಛಿದಾ ಶ್ರುತ್ವಾ ತಜ್ಜಾಂಬವತನೂದ್ಭವೇ ।**
**ಬಲೇನಾಕ್ರಮ್ಯ ಸಂಪ್ರಾಪ್ತೇ ಕುಮಾರೇ ಜಂಬುನಾಮನಿ ॥ ೮೭೦ ॥**

**ಪಲಾಯತ ನಿಜಸ್ಥಾನಾನ್ನಮಿರ್ಭೀತ್ವಾ ಸಮಾತುಲಃ ।**
**ಅನಾಲೋಚಿತಕಾರ್ಯಾಣಾಂ ಕಿಂ ಮುಕ್ತ್ವಾನ್ಯತ್ಪರಾಭವಮ್ ॥ ೮೭೧ ॥**

ಆಗ ಆ ನಮಿಕುಮಾರನ ಸೋದರಮಾವನೂ ಕಿನ್ನರಪುರದ ದೊರೆಯೂ ಆದ ಯಕ್ಷಮಾಲಿಯೆಂಬ ಖೇಚರಾಧಿಪತಿಯು ಸರ್ವವಿದ್ಯಾಛೇದಿನಿಯೆಂಬ ವಿದ್ಯೆಯಿಂದ ಆ ಮಾಕ್ಷಿಕವಿದ್ಯೆಯನ್ನು ಛೇದಿಸಿದನು. ಅದನ್ನು ಕೇಳಿ ಜಾಂಬವನ ಪುತ್ರನಾದ ಜಂಬುಕುಮಾರನು ಸೈನ್ಯದಿಂದ ಆಕ್ರಮಿಸಿ ತನ್ನನ್ನು ಹೊಂದುತ್ತಿರಲು ಆ ನಮಿಯು ಹೆದರಿ ಮಾವನೊಡನೆ ತನ್ನ ಸ್ಥಾನದಿಂದ ಓಡಿಹೋದನು. ಆಲೋಚಿಸಲ್ಪಡದಿರುವ ಕಾರ್ಯವುಳ್ಳವರಿಗೆ ತಿರಸ್ಕಾರವನ್ನು ಬಿಟ್ಟು ಮತ್ತಾವುದಿರುವುದು ?

**ನಾರದಸ್ತದ್ವಿದಿತ್ವಾಶು ಸಂಪ್ರಾಪ್ಯ ಕಮಲೋದರಮ್ ।**
**ವರ್ಣಯಾಮಾಸ ಜಾಂಬವತೀರೂಪಮತಿಸುಂದರಮ್ ॥ ೮೭೨ ॥**

ನಾರದನು ಆ ವಿಷಯವನ್ನು ತಿಳಿದು ಶೀಘ್ರವಾಗಿ ಕಮಲೋದರ-ಕೃಷ್ಣನನ್ನು ಕಂಡು "ಜಾಂಬವತಿಯ ರೂಪವು ಬಹುಸುಂದರವಾದುದು" ಎಂದು ವರ್ಣಿಸಿದನು.

**ಹಠಾತ್ಕೃಷ್ಣಸ್ತದಾಕರ್ಣ್ಯ ಹರಿಷ್ಯಾಮೀತಿ ತಾಂ ಸತೀಮ್ ।**
**ಸನ್ನದ್ಧಬಲಸಂಪತ್ತ್ಯಾ ಗತ್ವಾ ಖಗನಗಾಂತಿಕೇ ॥ ೮೭೩ ॥**

**ನಿವಿಷ್ಟೋ ಮನಸಾಲೋಚ್ಯ ಜ್ಞಾತ್ವಾ ತತ್ಕರ್ಮ ದುಷ್ಕರಮ್ ।**
**ಉಪೋಷ್ಯಾಚಿಂತಯದ್ರಾತ್ರೌ ಕೇನೇದಂ ಸೇತ್ಸ್ಯತೀತ್ಯಸೌ ॥ ೮೭೪ ॥**

**ಪ್ರಸಾಧಿತತ್ರಿಖಂಡೋಪಿ ತತ್ರಾಭೂತ್ಖಂಡಿತಾಯತಿಃ ।**
**ತದ್ವಿಪಕ್ಷಖಗೇಂದ್ರಸ್ಯ ಪುಣ್ಯಂ ಕಿಮಪಿ ತಾದೃಶಮ್ ॥ ೮೭೫ ॥**

ಕೃಷ್ಣನು ಹಠಾತ್ತಾಗಿ ಆ ಮಾತನ್ನು ಕೇಳಿ "ಸಾಧ್ವಿಯಾದ ಆಕೆಯನ್ನು ಹರಣ ಮಾಡುವೆನು" ಎಂದು ಸಿದ್ಧವಾದ ಸೈನ್ಯಸಂಪತ್ತಿಯೊಡನೆ ವಿಜಯಾರ್ಧಪರ್ವತದ ಸಮೀಪದಲ್ಲಿ ಹೋಗಿ ಬೀಡು ಬಿಟ್ಟವನಾಗಿ ಮನಸ್ಸಿನಿಂದ ಆಲೋಚಿಸಿ ಆ ಕಾರ್ಯವು ಕಷ್ಟಕರವಾದುದೆಂದು ತಿಳಿದು ಉಪವಾಸವನ್ನು ಮಾಡಿ ರಾತ್ರಿಯಲ್ಲಿ "ಈ ಕಾರ್ಯವು ಯಾವುದರಿಂದ ಸಿದ್ಧಿಸುವುದು ?" ಎಂದು ಯೋಚಿಸಿದನು. ಈ ಕೃಷ್ಣನು ತ್ರಿಖಂಡಗಳನ್ನು ಸಾಧಿಸಿದವನಾದರೂ ಅಲ್ಲಿ ಖಂಡಿಸಲ್ಪಟ್ಟ ಪ್ರಯತ್ನವುಳ್ಳವನಾದನು. ಅವನ ಪ್ರತಿಪಕ್ಷದವನಾದ ಖೇಚರೇಶ್ವರನ ಯಾವುದೋ ಪುಣ್ಯವು ಅಂತಹದಾಗಿದ್ದಿತು.

**ಯಕ್ಷಿಲಾಖ್ಯೋನುಜಸ್ತಸ್ಯ ಪ್ರಾಕ್ತನಸ್ತಪಸಾವಸನ್ ।**
**ಮಹಾಶುಕ್ರೇ ತದೈತ್ಯೈತೇ ವಿದ್ಯೇ ದ್ವೇ ಸಾಧಯೇತಿ ತೇ ॥ ೮೭೬ ॥**

**ದತ್ವಾ ತತ್ಸಾಧನೋಪಾಯಮಭಿಧಾಯ ಗತೋ ದಿವಮ್ ।**
**ಸ ಕ್ಷೀರಸಾಗರಂ ಕೃತ್ವಾ ತತ್ರಾಹಿಶಯನೇ ಸ್ಥಿತಃ ॥ ೮೭೭ ॥**

**ಸಾಧಯಾಮಾಸ ಮಾಸಾಂಸ್ತೇ ಚತುರೋ ವಿಧಿಪೂರ್ವಕಮ್ ।**
**ಸಿಂಹಾಹಿವೈರಿವಾಹಿನ್ಯೌ ವಿದ್ಯೇ ಹಲಿಹರೀ ಗತೌ ॥ ೮೭೮ ॥**

**ಆರುಹ್ಯ ಜಾಂಬವಂ ಯುದ್ಧೇ ವಿಜಿತ್ಯಾದಾಯ ತತ್ಸುತಾಮ್ ।**
**ಮಹಾದೇವೀಪದೇ ಪ್ರೀತ್ಯಾ ತ್ವಾಮಕಾರ್ಷೀತ್ಕ್ಷಿತೀಡಿತಿ ॥ ೮೭೯ ॥**

ಆ ಕೃಷ್ಣನ ಪೂರ್ವಜನ್ಮದ ಯಕ್ಷಿಲನೆಂಬ ತಮ್ಮನು ತಪಸ್ಸಿನಿಂದ ಮಹಾಶುಕ್ರಸ್ವರ್ಗದಲ್ಲಿ ವಾಸಮಾಡುವವನಾಗಿದ್ದು ಆಗ ಬಂದು "ಈ ಎರಡು ವಿದ್ಯೆಗಳನ್ನು ಸಾಧಿಸು" ಎಂದು ಅವುಗಳನ್ನು ಕೊಟ್ಟು ಸಾಧಿಸುವ ಉಪಾಯವನ್ನು ಹೇಳಿ ಸ್ವರ್ಗಕ್ಕೆ ಹೋದನು. ಆ ಕೃಷ್ಣನು ಅಲ್ಲಿ ಕ್ಷೀರಸಮುದ್ರವನ್ನು ಮಾಡಿ (ದೊಡ್ಡದಾದ ಸರೋವರವನ್ನು ರಚಿಸಿ) ಸರ್ಪಶಯನದಲ್ಲಿ ನಾಲ್ಕು ತಿಂಗಳುಗಳವರೆಗಿದ್ದು ವಿಧಿಪೂರ್ವಕವಾಗಿ ಆ ವಿದ್ಯೆಗಳನ್ನು ಸಾಧಿಸಿದನು. ಸಿಂಹವಾಹಿನೀ ಗರುಡವಾಹಿನಿಗಳೆಂಬ ವಿದ್ಯೆಗಳನ್ನು ಹೊಂದಿದ ಬಲರಾಮನೂ ಕೃಷ್ಣನೂ ಅವುಗಳನ್ನು ಹತ್ತಿಕೊಂಡು ಹೋಗಿ ಯುದ್ಧದಲ್ಲಿ ಜಾಂಬವರಾಜನನ್ನು ಜಯಿಸಿ ಆತನ ಪುತ್ರಿಯಾದ ನಿನ್ನನ್ನು ಕ್ಷಿತೀಶ್ವರನಾದ ಕೃಷ್ಣನು ಪ್ರೀತಿಯಿಂದ ಹೀಗೆ ಮಹಾದೇವಿಯ ಪದವಿಯಲ್ಲಿರಿಸಿದನು."

**ಶ್ರುತಂ ವಕ್ತೃವಿಶೇಷೇಣ ಯದ್ಯಪ್ಯಸ್ಪಷ್ಟತರ್ಕಣಮ್ ।**
**ತದ್ದೃಷ್ಟಮಿವ ವಿಸ್ಪಷ್ಟಂ ಸರ್ವಂ ತಸ್ಯಾಸ್ತದಾಭವತ್ ॥ ೮೮೦ ॥**

ವಿಶಿಷ್ಟನಾದ ಹೇಳುವವನಿಂದ ಕೇಳಲ್ಪಟ್ಟ ವಿಷಯವಾದರೂ ಅಸ್ಪಷ್ಟವಾದ ತರ್ಕಣ-ಊಹೆಯುಳ್ಳುದಾಗಿರುತ್ತದೆ. ಹೇಳುವವನು ಪ್ರಾಜ್ಞನಾದರೂ ಅವನು ಹೇಳಿದುದು ಊಹೆಯಲ್ಲಿ ಅಸ್ಪಷ್ಟವಾಗಿರುವುದೆಂದು ಭಾವವು. ಅಂತಹ ವಿಷಯವೆಲ್ಲವೂ ಆಗ ಜಾಂಬವತಿಗೆ ಪ್ರತ್ಯಕ್ಷವಾಗಿ ನೋಡಿದಂತೆ ಸ್ಪಷ್ಟವಾಯಿತು.

**ಅಥಾನಂತರಮೇವೈನಂ ಮುನೀಂದ್ರಂ ಗಣನಾಯಕಮ್ ।**
**ಸುಸೀಮಾ ಭವಸಂಬಂಧಮಾತ್ಮನಃ ಪೃಚ್ಛತಿ ಸ್ಮ ಸಾ ॥ ೮೮೧ ॥**

ಆಮೇಲೆ ಅನಂತರದಲ್ಲೇ ಆ ಸುಸೀಮಾದೇವಿಯು ಮುನೀಶ್ವರರಾದ ಈ ಗಣಧರರನ್ನು ತನ್ನ ಭವಸಂಬಂಧವನ್ನು ಕೇಳಿದಳು. ಗಣಧರರಲ್ಲಿ ತನ್ನ ಭವಸಂಬಂಧವನ್ನು ಪ್ರಶ್ನೆಮಾಡಿದಳೆಂದು ಭಾವವು.

**ಸ್ವವಾಕ್ಕಿರಣಜಾಲೇನ ಬೋಧಯಂಸ್ತನ್ಮನೋಂಬುಜಮ್ ।**
**ಇತ್ಯುವಾಚ ವಿನೇಯಾನಾಂ ನಿರ್ನಿಮಿತ್ತೈಕಬಾಂಧವಃ ॥ ೮೮೨ ॥**

ವಿನೇಯ–ಭವ್ಯರಿಗೆ ನಿಮಿತ್ತವಿಲ್ಲದ ಮುಖ್ಯಬಂಧುವಾದ ಗಣಧರರು ತಮ್ಮ ವಚನಗಳೆಂಬ ಕಿರಣಗಳ ಸಮೂಹದಿಂದ ಆ ಸುಸೀಮಾದೇವಿಯ ಮನಸ್ಸೆಂಬ ಕಮಲವನ್ನು ಅರಳಿಸುವವರಾಗಿ ಈ ರೀತಿಯಾಗಿ ಹೇಳಿದರು.

**ಧಾತಕೀಖಂಡಪೂರ್ವಾರ್ಧಪ್ರಾಗ್ವಿದೇಹೇತಿವಿಶ್ರುತಃ ।**
**ಭೋಗಾಂಗಮಂಗಿನಾಮೇಕೋ ವಿಷಯೋ ಮಂಗಲಾವತೀ ॥ ೮೮೩ ॥**

"ಧಾತಕೀಖಂಡದ್ವೀಪದ ಪೂರ್ವಾರ್ಧದ ಪೂರ್ವವಿದೇಹದಲ್ಲಿ ಬಹುಪ್ರಸಿದ್ಧವೂ ಪ್ರಾಣಿಗಳಿಗೆ ಮುಖ್ಯವಾದ ಭೋಗಾಂಗವೂ ಆದ ಮಂಗಲಾವತಿಯೆಂಬ ದೇಶವಿದೆ.

**ರತ್ನಸಂಚಯನಾಮಾತ್ರ ಪುರಂ ತತ್ಪತಿಪಾಲಕಃ ।**
**ವಿಶ್ವದೇವಃ ಪ್ರಿಯಾಸ್ಯಾಸೀದ್ದೇವೀ ಧೀಮತ್ಯನುಂದರೀ ॥ ೮೮೪ ॥**

ಇಲ್ಲಿ ರತ್ನಸಂಚಯವೆಂಬ ನಗರವಿದೆ. ವಿಶ್ವದೇವನೆಂಬವನು ಆ ನಗರದ ರಕ್ಷಕನಾದ ದೊರೆ. ಇವನಿಗೆ ಬುದ್ಧಿಮತಿಯಾದ ಅನುಂದರಿಯು ಪ್ರಿಯಪತ್ನಿಯಾಗಿದ್ದಳು.

**ತಮಯೋಧ್ಯಾಪತೌ ಯುದ್ಧೇ ಹತವತ್ಯತಿಶೋಕತಃ ।**
**ಸಾ ಮಂತ್ರಿಭಿರ್ನಿಷಿದ್ಧಾಪಿ ಪ್ರವಿಶ್ಯ ಹುತಭೋಜಿನಮ್ ॥ ೮೮೫ ॥**

**ವಿಜಯಾರ್ಧೇಸುರೀ ಭುತ್ವಾ ವ್ಯಂತರೇಷ್ವಯುತಾಯುಷಾ ।**
**ಜೀವಿತ್ವಾ ತತ್ರ ತಸ್ಯಾಂತೇ ಭವೇ ಭ್ರಾಂತ್ವಾ ಯಥೋಚಿತಮ್ ॥ ೮೮೬ ॥**

**ದ್ವೀಪೇಸ್ಮಿನ್ ಭಾರತೇ ಶಾಲಿಗ್ರಾಮೇ ಯಕ್ಷಸ್ಯ ಗೇಹಿನೀ ।**
**ದೇವಸೇನಾನಯೋರ್ಯಕ್ಷದೇವೀ ಜಾತಾ ಸುತಾ ಸುಧೀಃ ॥ ೮೮೭ ॥**

ಆ ವಿಶ್ವದೇವನನ್ನು ಅಯೋಧ್ಯೆಯ ರಾಜನು ಯುದ್ಧದಲ್ಲಿ ಕೊಲ್ಲುತ್ತಿರಲು ಆ ಅನುಂದರಿಯು ಮಂತ್ರಿಗಳಿಂದ ನಿಷೇಧಿಸಲ್ಪಟ್ಟವಳಾದರೂ ಬಹುಶೋಕದಿಂದ ಅಗ್ನಿಯನ್ನು ಪ್ರವೇಶಿಸಿ ಸತ್ತು ವಿಜಯಾರ್ಧಪರ್ವತದಲ್ಲಿ ಅಯುತಸಂಖ್ಯಾ ಪರಿಮಿತವಾದ ಆಯುಷ್ಯದಿಂದ ವ್ಯಂತರಜಾತಿಯ ದೇವರ್ಕಳಲ್ಲಿ ದೇವತೆಯಾಗಿ ಜೀವಿಸಿದ್ದು ಅಲ್ಲಿ ಆಯುಷ್ಯಾವಸಾನದಲ್ಲಿ ಸತ್ತು ಯಥೋಚಿತವಾಗಿ–ಕರ್ಮಾನುಸಾರವಾಗಿ ಭವದಲ್ಲಿ ತಿರುಗಿ ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಶಾಲಿಗ್ರಾಮದಲ್ಲಿ ಯಕ್ಷನೆಂಬ ಗೃಹಸ್ಥನಿಗೂ ಆತನ ದೇವಸೇನೆಯೆಂಬ ಪತ್ನಿಗೂ ಪ್ರಾಜ್ಞಳಾದ ಯಕ್ಷದೇವಿಯೆಂಬ ಪುತ್ರಿಯಾಗಿ ಜನಿಸಿದಳು.

**ಕದಾಚಿದ್ಧರ್ಮಸೇನಾಖ್ಯಮುನಿಂ ಸಂಶ್ರಿತ್ಯ ಸದ್ವ್ರತಾ ।**
**ಮಾಸೋಪವಾಸಿನೇ ತಸ್ಮೈ ದತ್ವಾ ಕಾಯಸ್ಯ ಸಂಸ್ಥಿತಿಮ್ ॥ ೮೮೮ ॥**

**ಸಾ ಕದಾಚಿದ್ವನೇ ರಂತುಂ ಗತ್ವಾ ವರ್ಷಭಯಾದ್ಗುಹಾಮ್ ।**
**ಪ್ರವಿಷ್ಟಾಜಗರಾಗೀರ್ಣಾ ಹರಿವರ್ಷೇ ತನುಂ ಶ್ರಿತಾ ॥ ೮೮೯ ॥**

ಆ ಯಕ್ಷದೇವಿಯು ಒಂದಾನೊಂದು ಕಾಲದಲ್ಲಿ ಧರ್ಮಸೇನನೆಂಬ ಮುನಿಯನ್ನಾಶ್ರಯಿಸಿ ಶ್ರೇಷ್ಠವಾದ ವ್ರತಗಳುಳ್ಳವಳಾಗಿ ಮಾಸೋಪವಾಸಿಯಾದ ಆ ಮುನಿಗೆ ಶರೀರದ ಸ್ಥಿತಿಯನ್ನು–ಆಹಾರವನ್ನು ಕೊಟ್ಟು ಒಂದಾನೊಂದು ಕಾಲದಲ್ಲಿ ವನದಲ್ಲಿ ವಿನೋದಪಡುವುದಕ್ಕೋಸ್ಕರ ಹೋಗಿ ಮಳೆಯ ಭಯದಿಂದ ಗುಹೆಯನ್ನು ಪ್ರವೇಶಿಸಿದವಳಾಗಿಯೂ, ಹೆಬ್ಬಾವಿನಿಂದ ನುಂಗಲ್ಪಟ್ಟವಳಾಗಿಯೂ ಸತ್ತು ಹರಿವರ್ಷ–ಮಧ್ಯಮಭೋಗಭೂಮಿಯಲ್ಲಿ ಶರೀರವನ್ನು ಪಡೆದಳು.

**ನಿರ್ವಿಶ್ಯ ತದ್ಗತಾನ್ ಭೋಗಾನ್ ನಾಗೀ ಜಾತಾ ತತಶ್ಚ್ಯುತಾ ।**
**ಚ್ಯುತಾ ತತೋ ವಿದೇಹೇಸ್ಮಿನ್ ಪುಷ್ಕಲಾವತ್ಯುದೀರಿತೇ ॥ ೮೯೦ ॥**

**ವಿಷಯೇ ಪುಂಡರೀಕಿಣ್ಯಾಮಶೋಕಾಖ್ಯಮಹೀಪತೇಃ ।**
**ಸೋಮಶ್ರಿಯಶ್ಚ ಶ್ರೀಕಾಂತಾ ಸುತಾ ಭೂತ್ವಾ ಕದಾಚನ ॥ ೮೯೧ ॥**

**ಜಿನದತ್ತಾರ್ಯಿಕೋಪಾಂತೇ ದೀಕ್ಷಾಮಾದಾಯ ಸುವ್ರತಾ ।**
**ತಪಸ್ಯಂತೀ ಚಿರಂ ಘೋರಮುಪೋಷ್ಯ ಕನಕಾವಲೀಮ್ ॥ ೮೯೨ ॥**

**ಮಾಹೇಂದ್ರೇ ದಿವಿಜೀ ಭೂತ್ವಾ ಭುಕ್ತ್ವಾ ಭೋಗಾನ್ ದಿವೌಕಸಾಮ್ ।**
**ಆಯುರಂತೇ ತತಶ್ಚ್ಯುತ್ವಾ ಸುಜ್ಯೇಷ್ಠಾಯಾಂ ಸುತಾಭವಃ ॥ ೮೯೩ ॥**

**ಸುರಾಷ್ಟ್ರವರ್ಧನಾಖ್ಯಸ್ಯ ನೃಪಸ್ಯ ತ್ವಂ ಸುಲಕ್ಷಣಾ ।**
**ಹರೇರ್ದೇವೀ ಪ್ರಮೋದೇನ ವರ್ಧಸೇ ವಲ್ಲಭಾ ಸತೀ ॥ ೮೯೪ ॥**

ಆ ಭೋಗಭೂಮಿಸಂಬಂಧವಾದ ಭೋಗಗಳನ್ನನುಭವಿಸಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತಳಾಗಿ ಭವನವಾಸಿದೇವಜಾತಿಯಲ್ಲಿ ನಾಗಕುಮಾರಿಯಾಗಿ ಹುಟ್ಟಿದಳು. ಆಯುಷ್ಯವು ತೀರಿದಮೇಲೆ ಅಲ್ಲಿಂದ ಚ್ಯುತಳಾಗಿ ಈ ವಿದೇಹಕ್ಷೇತ್ರದಲ್ಲಿ ಪುಷ್ಕಲಾವತಿಯೆಂಬ ದೇಶದಲ್ಲಿ ಪುಂಡರಿಕಿಣೀನಗರಿಯಲ್ಲಿ ಅಶೋಕನೆಂಬ ರಾಜನಿಗೂ ಆತನ ಪತ್ನಿಯಾದ ಸೋಮಶ್ರೀಗೂ ಶ್ರೀಕಾಂತೆಯೆಂಬ ಪುತ್ರಿಯಾಗಿ ಒಂದಾನೊಂದು ಕಾಲದಲ್ಲಿ ಜಿನದತ್ತೆಯೆಂಬ ಆರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಶ್ರೇಷ್ಠವಾದ ವ್ರತಗಳುಳ್ಳವಳಾಗಿಯೂ ಬಹುಕಾಲದವರೆಗೆ ಘೋರವಾಗಿ ತಪಸ್ಸನ್ನು ಮಾಡುವವಳಾಗಿಯೂ ಕನಕಾವಲಿಯೆಂಬ ವ್ರತೋಪವಾಸವನ್ನು ಮಾಡಿ ಸತ್ತು ಮಹೇಂದ್ರಕಲ್ಪದಲ್ಲಿ ದೇವಿಯಾಗಿ ಜನಿಸಿ ಸ್ವರ್ಗಿಕರ ಭೋಗಗಳನ್ನನುಭವಿಸಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತಿಯನ್ನು ಹೊಂದಿ ಸುರಾಷ್ಟ್ರವರ್ಧನನೆಂಬ ರಾಜನಿಗೆ ಅತನ ಪತ್ನಿಯಾದ ಸುಜ್ಯೇಷ್ಠೆಯಲ್ಲಿ ನೀನು ಉತ್ತಮಲಕ್ಷಣಗಳುಳ್ಳ ಪುತ್ರಿಯಾಗಿ–ಜನಿಸಿದೆ. ಹರಿಗೆ ಸಾಧ್ವಿಯಾದ ಪ್ರಿಯಪತ್ನಿಯಾಗಿ ಸಂತೋಷದಿಂದ ವೃದ್ಧಿಯನ್ನು ಹೊಂದುತ್ತಿ."

**ಸ್ವಭವಾಂತರಸಂಬಂಧಮಾಕರ್ಣ್ಯೈಷಾಪ ಸಂಮುದಮ್ ।**
**ಕೋ ನ ಗಚ್ಛತಿ ಸಂತೋಷಮುತ್ತರೋತ್ತರವೃದ್ಧಿತಃ ॥ ೮೯೫ ॥**

ಈ ಸುಸೀಮಾದೇವಿಯು ತನ್ನ ಭವಾಂತರಸಂಬಂಧವನ್ನು ಕೇಳಿ ಸಂತೋಷವನ್ನು ಹೊಂದಿದಳು. ತನ್ನ ಉತ್ತರೋತ್ತರವೃದ್ಧಿಯಿಂದ ಯಾವನುತಾನೆ ಸಂತೋಷವನ್ನು ಹೊಂದುವುದಿಲ್ಲ?

**ಲಕ್ಷ್ಮಣಾಪಿ ಮುನಿಂ ನತ್ವಾ ಶುಶ್ರೂಷುಃ ಸ್ವಭವಾನಭೂತ್ ।**
**ಅಭಾಷತೈವಮೇತಸ್ಯಾಶ್ಚಿಕೀರ್ಷುಃ ಸೋಪ್ಯನುಗ್ರಹಮ್ ॥ ೮೯೬ ॥**

ಲಕ್ಷ್ಮಣಾದೇವಿಯೂ ಗಣಧರಮುನಿಗೆ ನಮಸ್ಕರಿಸಿ ತನ್ನ ಭವಗಳನ್ನು ಕೇಳಬೇಕೆಂಬ ಇಚ್ಛೆಯುಳ್ಳವಳಾದಳು. ಆ ಗಣಧರಮುನಿಯು ಈಕೆಗೆ ಅನುಗ್ರಹವನ್ನು ಮಾಡಬೇಕೆಂದು ಇಚ್ಛೆಯುಳ್ಳವನಾಗಿ ಈ ರೀತಿಯಾಗಿ ಹೇಳಿದನು.

**ಇಹ ಪೂರ್ವವಿದೇಹೇಸ್ತಿ ವಿಷಯಃ ಪುಷ್ಕಲಾವತೀ ।**
**ತತ್ರಾರಿಷ್ಟಪುರಾಧೀಶೋ ವಾಸವಸ್ಯ ಮಹೀಪತೇಃ ॥ ೮೯೭ ॥**

**ವಸುಮತ್ಯಾಮಭೂತ್ಸೂನುಃ ಸುಷೇಣಾಖ್ಯೋ ಗುಣಾಕರಃ ।**
**ಕೇನಚಿಜ್ಜಾತನಿರ್ವೇಗೋ ವಾಸವೋ ನಿಕಟೇಗ್ರಹೀತ್ ॥ ೮೯೮ ॥**

**ದೀಕ್ಷಾಂ ಸಾಗರಸೇನಸ್ಯ ತತ್ಪ್ರಿಯಾ ಸುತಮೋಹಿತಾ ।**
**ಗೇಹವಾಸಂ ಪರಿತ್ಯಕ್ತುಮಸಮರ್ಥಾ ಕುಚೇಷ್ಟಯಾ ॥ ೮೯೯ ॥**

**ವೃತ್ವಾ ಪುಲಿಂದೀ ಸಂಜಾತಾ ಸಾನ್ಯೇದ್ಯುರ್ನಂದಿವರ್ಧನಮ್ ।**
**ಮುನಿಂ ಚಾರಣಮಾಶ್ರಿತ್ಯ ಗೃಹೀತೋಪಾಸಕವ್ರತಾ ॥ ೯೦೦ ॥**

**ಮೃತ್ವಾ ಜಾತಾಷ್ಟಮೇ ಕಲ್ಪೇ ನರ್ತಕೀಂದ್ರಸ್ಯ ಹೃತ್ಪ್ರಿಯಾ ।**
**ಅವತೀರ್ಯ ತತೋ ದ್ವೀಪೇ ಭರತೇಸ್ಮಿನ್ ಖಗಾಚಲೇ ॥ ೯೦೧ ॥**

**ಖಗೇಶೋ ದಕ್ಷಿಣಶ್ರೇಣ್ಯಾಂ ಜಾತಾ ಚಂದ್ರಪುರೇಶಿನಃ ।**
**ಮಹೇಂದ್ರಸ್ಯ ಸುತಾನುಂದರ್ಯಾಶ್ಚ ನೇತ್ರಮನೋಹರಾ ॥ ೯೦೨ ॥**

**ಮಾಲಾಂತಕನಕಾ ಸಿದ್ಧವಿದ್ಯಾ ಖ್ಯಾತೇ ಸ್ವಯಂವರೇ ।**
**ಮಾಲಯಾ ಸ್ವೀಚಕಾರಾಸೌ ಕುಮಾರಂ ಹರಿವಾಹನಮ್ ॥ ೯೦೩ ॥**

''ಇಲ್ಲಿ ಪೂರ್ವವಿದೇಹದಲ್ಲಿ ಪುಷ್ಕಲಾವತಿಯೆಂಬ ದೇಶವಿದೆ. ಅಲ್ಲಿ ಅರಿಷ್ಟ ಪುರಾಧಿಪತಿಯಾದ ವಾಸವರಾಜನಿಗೆ ಆತನ ಪತ್ನಿಯಾದ ವಸುಮತಿಯಲ್ಲಿ ಗುಣ ಗಳಿಗೆ ಗಣಿಯಾದ ಸುಷೇಣನೆಂಬ ಪುತ್ರನಾದನು. ಯಾವುದೋ ಕಾರಣದಿಂದ ವೈರಾಗ್ಯೋತ್ಪತ್ತಿಯುಳ್ಳವನಾದ ವಾಸವರಾಜನು ಸಾಗರಸೇನಮುನಿಯ ಬಳಿಯಲ್ಲಿ ದೀಕ್ಷೆಯನ್ನು ಸ್ವೀಕರಿಸಿದನು. ಆತನ ಪತ್ನಿಯು ಪುತ್ರಮೋಹವುಳ್ಳವಳೂ ಮನೆಯ ವಾಸವನ್ನು ಬಿಡುವುದಕ್ಕೆ ಅಸಮರ್ಥಳೂ ಆಗಿದ್ದು ಕುಚೇಷ್ಟೆಯಿಂದ ಸತ್ತು ಬೇಡರವಳಾಗಿ ಹುಟ್ಟಿದಳು. ಆಕೆಯು ಮತ್ತೊಂದು ದಿವಸ ನಂದಿವರ್ಧನನೆಂಬ ಚಾರಣಮುನಿಯನ್ನು ಆಶ್ರಯಿಸಿ ಶ್ರಾವಕವ್ರತಗಳನ್ನು ಗ್ರಹಣಮಾಡಿದವಳಾಗಿ ಆಯುಷ್ಯಾವಸಾನದಲ್ಲಿ ಸತ್ತು ಎಂಟನೆಯ ಕಲ್ಪದಲ್ಲಿ ಇಂದ್ರನಿಗೆ ಮನಃಪ್ರಿಯಳಾದ ನರ್ತಕಿಯಾಗಿ ಹುಟ್ಟಿದಳು. ಆಯುಷ್ಯವು ತೀರಿದ ಮೇಲೆ ಅಲ್ಲಿಂದ ಇಳಿದು ಜಂಬೂ ದ್ವೀಪದ ಈ ಭರತಕ್ಷೇತ್ರದಲ್ಲಿ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ಖೇಚರೇಶ್ವರನೂ ಚಂದ್ರಪುರಾಧಿಪತಿಯೂ ಆದ ಮಹೇಂದ್ರನಿಗೂ ಆತನ ಪತ್ನಿ ಯಾದ ಅನುಂದರಿಗೂ ನೇತ್ರಮನೋಹರಳೂ ಸಿದ್ಧವಾದ ವಿದ್ಯೆಯುಳ್ಳವಳೂ ಆದ ಕನಕಮಾಲೆಯೆಂಬ ಪುತ್ರಿಯಾಗಿ ಈಕೆಯು ಪ್ರಸಿದ್ಧವಾದ ಸ್ವಯಂವರದಲ್ಲಿ ಮಾಲೆ ಯಿಂದ ಹರಿವಾಹನಕುಮಾರನನ್ನು ಸ್ವೀಕರಿಸಿದಳು.

**ಅನ್ಯೇದ್ಯುಃ ಸಿದ್ಧಕೂಟಸ್ಥಗುರುಂ ಯಮಧರಾಹ್ವಯಮ್ ।**
**ಸಮುಪೇತ್ಯ ಸಮಾಕರ್ಣ್ಯ ಸ್ವಭವಾಂತರಸಂತತಿಮ್ ॥ ೯೦೪ ॥**

**ಮುಕ್ತಾವಲೀಮುಪೋಷ್ಯಾಸೀತ್ತೃತೀಯೇಂದ್ರಮನಃಪ್ರಿಯಾ ।**
**ನವಪಲ್ಯೋಪಮಾಯುಷ್ಕಾ ಕಾಲಾಂತೇಸೌ ತತಶ್ಚ್ಯುತಾ ॥ ೯೦೫ ॥**

**ಸುಪ್ರಕಾರಪುರಾಧೀಶಃ ಶಂಬರಾಖ್ಯಮಹೀಪತೇಃ ।**
**ಶ್ರೀಮತ್ಯಾಶ್ಚ ಸುತಾಸೀಸ್ತ್ವಂ ಶ್ರೀಪದ್ಮಧ್ರುವಸೇನಯೋಃ ॥ ೯೦೬ ॥**

**ಕನೀಯಸೀ ಗುಣೈರ್ಜ್ಯೇಷ್ಠಾ ಲಕ್ಷ್ಮಣಾ ಸರ್ವಲಕ್ಷಣಾ ।**
**ತಾಂ ತ್ವಾಂ ಪವನವೇಗಾಖ್ಯಖೇಚರಃ ಕಮಲೋದರಮ್ ॥ ೯೦೭ ॥**

**ಸಮುಪೇತ್ಯ ರಥಾಂಗೇಶ ವಾಯುಮಾರ್ಗಸ್ಯ ನಿರ್ಮಲಾ ।**
**ಲಸಂತೀ ಚಂದ್ರಲೇಖೇವ ತವ ಯೋಗ್ಯಾ ಖಗೇಶಿನಃ ॥ ೯೦೮ ॥**

**ತನಯಾ ಲಕ್ಷ್ಮಣಾ ಕಾಮೋದ್ದೀಪನೇತಿ ಜಗಾದ ಸಃ ।**
**ತದ್ವಚಃಶ್ರವಣಾನಂತರಂ ತ್ವಮೇವಾನಯೇತಿ ತಮ್ ॥ ೯೦೯ ॥**

**ಪ್ರೇಷಯಾಮಾಸ ಕಂಸಾರಿಃ ಸೋಪಿ ಗತ್ವಾವಿಲಂಬಿತಮ್ ।**
**ತ್ವತ್ಪಿತ್ರೋರನುಮತ್ಯಾ ತ್ವಾಮರ್ಪಯಾಮಾಸ ಚಕ್ರಿಣೇ ॥ ೯೧೦ ॥**

ಮತ್ತೊಂದು ದಿವಸ ಈಕೆಯು ಸಿದ್ಧಕೂಟದಲ್ಲಿರುವ ಗುರುವಾದ ಯಮಧರ ನೆಂಬವನನ್ನು ಹೊಂದಿ ತನ್ನ ಭವಪರಂಪರೆಯನ್ನು ಕೇಳಿ ಮುಕ್ತಾವಲೀ ಉಪವಾಸ ವನ್ನು ಮಾಡಿ ಆಯುಷ್ಯಾವಸಾನದಲ್ಲಿ ಸತ್ತು ಮೂರನೆಯ ಸ್ವರ್ಗದಲ್ಲಿ ಇಂದ್ರನಿಗೆ ಮನಃಪ್ರಿಯಳೂ ಒಂಬತ್ತು ಪಲ್ಯೋಪಮವರ್ಷಾಯುಷ್ಯವುಳ್ಳವಳೂ ಆಗಿದ್ದು ಕಾಲಾಂತದಲ್ಲಿ ಅಲ್ಲಿಂದ ಚ್ಯುತಳಾಗಿ ಸುಪ್ರಕಾರಪುರಾಧಿಪತಿಯಾದ ಶಂಬರನೆಂಬ ರಾಜನಿಗೂ ಆತನ ಪತ್ನಿಯಾದ ಶ್ರೀಮತಿಗೂ ನೀನು ಶ್ರೀಪದ್ಮನಿಗೂ ಧ್ರುವಸೇನನಿಗೂ ಕಿರಿಯಳೂ ಗುಣಗಳಿಂದ ಹಿರಿಯಳೂ ಸಮಸ್ತಲಕ್ಷಣಗಳು ಳ್ಳವಳೂ ಆದ ಲಕ್ಷ್ಮಣೆಯೆಂಬ ಪುತ್ರಿಯಾದೆ. ಅಂತಹ ನಿನ್ನನ್ನು ಪವನವೇಗನೆಂಬ ಖೇಚರನು ಕಮಲೋದರ–ಕೃಷ್ಣನನ್ನು ಕಂಡು 'ಚಕ್ರೇಶ್ವರನೆ! ಆಕಾಶದ ನಿರ್ಮಲ ವೂ ಪ್ರಕಾಶಮಾನವೂ ಆದ ಚಂದ್ರರೇಖೆಯಂತಿರುವವಳೂ ಖೇಚರೇಶ್ವರನ ಪುತ್ರಿಯೂ ಕಾಮೋದ್ದೀಪನವನ್ನು ಮಾಡುವವಳೂ ಆದ ಲಕ್ಷ್ಮಣೆಯು ನಿನಗೆ ಯೋಗ್ಯಳಾಗಿರುತ್ತಾಳೆ' ಎಂದು ಹೇಳಿದನು. ಆ ಕಂಸಾರಿ–ಕೃಷ್ಣನು ಆ ಮಾತನ್ನು ಕೇಳಿದ ಬಳಿಕ 'ನೀನೇ ಕರೆದುಕೊಂಡು ಬಾ' ಎಂದು ಆ ಪವನವೇಗನನ್ನು ಕಳುಹಿಸಿದನು. ಅವನೂ ಶೀಘ್ರವಾಗಿ ಹೋಗಿ ನಿನ್ನ ತಂದೆತಾಯಿಗಳ ಅನುಮತಿ ಯಿಂದ ನಿನ್ನನ್ನು ಕರೆತಂದು ಚಕ್ರಿಗೆ ಅರ್ಪಿಸಿದನು.

**ತೇನಾಪಿ ಪಟ್ಟಬಂಧೇನ ತ್ವಮೇವಮಸಿ ಮಾನಿತಾ ।**
**ಇತಿ ಶ್ರುತ್ವಾತ್ಮಜನ್ಮಾಂತರಾವಲಿಂ ಸಾಗಮನ್ಮುದಮ್ ॥ ೯೧೧ ॥**

ಆ ಚಕ್ರಿಯಿಂದಲೂ ನೀನು ಹೀಗೆ ಪಟ್ಟಬಂಧದಿಂದ ಮಾನಿತಳಾಗಿರುತ್ತಿ'' ಈ ರೀತಿಯಾದ ತನ್ನ ಜನ್ಮಾಂತರಸಮೂಹವನ್ನು ಕೇಳಿ ಆ ಲಕ್ಷ್ಮಣಾದೇವಿಯು ಸಂತೋಷವನ್ನು ಪಡೆದಳು.

**ಗಾಂಧಾರೀಗೌರೀಪದ್ಮಾವತೀನಾಂ ಜನ್ಮಾಂತರಾವಲಿಮ್ ।**
**ಗಣೇಂದ್ರೋ ವಾಸುದೇವೇನ ಪೃಷ್ಟೋಸಾವಿತ್ಯಭಾಷತ ॥ ೯೧೨ ॥**

ಗಾಂಧಾರೀ ಗೌರೀ ಪದ್ಮಾವತಿಯರ ಜನ್ಮಾಂತರಸಮೂಹವನ್ನು ವಾಸುದೇವ ನಿಂದ ಕೇಳಲ್ಪಟ್ಟ ಈ ಗಣಧರನು ಈ ರೀತಿಯಾಗಿ ಹೇಳಿದನು.

**ಇಹ ಜಂಬೂಮತಿ ದ್ವೀಪೇ ವಿಷಯೋಸ್ತಿ ಸುಕೌಶಲಃ ।**
**ತತ್ರಾಯೋಧ್ಯಾಪುರಾಧೀಶೋ ರುದ್ರನಾಮ್ನೋ ಮನೋರಮಾ॥ ೯೧೩ ॥**

**ವಿನಯಶ್ರೀರಿತಿ ಖ್ಯಾತಾ ಸಿದ್ಧಾರ್ಥಾಖ್ಯವನೇನ್ಯದಾ ।**
**ಬುದ್ಧಾರ್ಥಮುನಯೇ ದತ್ತದಾನಾ ಸ್ವಾಯುಃಪರಿಕ್ಷಯೇ ॥ ೯೧೪ ॥**

**ಉದಕ್ಕುರುಷು ನಿರ್ವಿಷ್ಟಭೋಗಾ ತಸ್ಮಾತ್ಪರಿಚ್ಯುತಾ ।**
**ಇಂದೋಶ್ಚಂದ್ರವತೀ ದೇವೀ ಭೂತ್ವಾತೋಪ್ಯಾಯುಷೋವಧೌ ॥**

**ದ್ವೀಪೇತ್ರ ಖಗಭೂಭರ್ತುರಪಾಕ್ಶ್ರೇಣ್ಯಾಂ ಖಗೇಶಿನಃ ।**
**ವಿದ್ಯುದ್ವೇಗಸ್ಯ ಸದ್ದೀಪ್ತೇಃ ಪುರೇ ಗಗನವಲ್ಲಭೇ ॥ ೯೧೬ ॥**

**ಸುರೂಪಾಖ್ಯಸುತಾ ವಿದ್ಯುದ್ವೇಗಾಯಾಮಜನಿಷ್ಟ ಸಾ ।**
**ನಿತ್ಯಾಲೋಕಪುರಾಧೀಶೇ ವಿದ್ಯಾವಿಕ್ರಮಶಾಲಿನೇ ॥ ೯೧೭ ॥**

**ಮಹೇಂದ್ರವಿಕ್ರಮಾಯೈಷಾ ದತ್ತಾನ್ಯೇದ್ಯುರ್ಮರುದ್ಗಿರಿಮ್ ।**
**ತೌ ಗತೌ ಚೈತ್ಯಗೇಹೇಷು ಜಿನಪೂಜಾರ್ಥಮುತ್ಸುಕೌ ॥ ೯೧೮ ॥**

**ವಿನೀತಚಾರಣಾಸ್ಯೇಂದುಸ್ರುತಂ ಧರ್ಮಮಿವಾಮೃತಮ್ ।**
**ಪೀತ್ವಾ ಶ್ರವಣಯುಗ್ಮೇನ ಪರಾಂ ತೃಪ್ತಿಮವಾಪತುಃ ॥ ೯೧೯ ॥**

''ಈ ಜಂಬೂದ್ವೀಪದಲ್ಲಿ ಸುಕೌಶಲವೆಂಬ ದೇಶವಿದೆ. ಅಲ್ಲಿ ಅಯೋಧ್ಯಾ ನಗರಾಧಿಪತಿಯಾದ ರುದ್ರನೆಂಬ ರಾಜನಿಗೆ ಪ್ರಖ್ಯಾತಳಾದ ವಿನಯಶ್ರೀಯೆಂಬವಳು ಪತ್ನಿಯಾಗಿದ್ದಳು. ಮತ್ತೊಂದು ಕಾಲದಲ್ಲಿ ಸಿದ್ಧಾರ್ಥವೆಂಬ ವನದಲ್ಲಿ ಬುದ್ಧಾರ್ಥ ನೆಂಬ ಮುನಿಗೆ ಆಹಾರದಾನವನ್ನು ಕೊಟ್ಟವಳಾಗಿ ತನ್ನ ಆಯುಷ್ಯಾವಸನದಲ್ಲಿ ಉತ್ತರಕುರು–ಭೋಗಭೂಮಿಯಲ್ಲಿ ಜನಿಸಿ ಭೋಗಗಳನ್ನನುಭವಿಸಿದವಳಾಗಿ ಆಯುಷ್ಯವು ತೀರಿದ ಬಳಿಕ ಅಲ್ಲಿಂದ ಚ್ಯುತಳಾಗಿ ಚಂದ್ರನಿಗೆ ಚಂದ್ರವತಿದೇವಿಯಾಗಿ ಇಲ್ಲಿಂದಲೂ ಆಯುಷ್ಯಾವಧಿಯಲ್ಲಿ ಚ್ಯುತಳಾಗಿ ಈ ಜಂಬೂದ್ವೀಪದಲ್ಲಿ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ಗಗನವಲ್ಲಭನಗರದಲ್ಲಿ ಖೇಚರಾಧಿ ಪತಿಯೂ ಶ್ರೇಷ್ಠವಾದ ಕಾಂತಿಯುಳ್ಳವನೂ ಆದ ಮಿದ್ಯುದ್ವೇಗನಿಗೆ ಅವನ

ಪತ್ನಿಯಾದ ವಿದ್ಯುದ್ವೇಗೆಯಲ್ಲಿ ಆಕೆಯು ಸುರೂಪೆಯೆಂಬ ಪುತ್ರಿಯಾಗಿ ಜನಿಸಿ ಈಕೆಯು ನಿತ್ಯಾಲೋಕಪುರಾಧಿಪತಿಯೂ ವಿದ್ಯಾಪರಾಕ್ರಮಶಾಲಿಯೂ ಆದ ಮಹೇಂದ್ರವಿಕ್ರಮನಿಗೆ ಕೊಡಲ್ಪಟ್ಟವಳಾಗಿ ಮತ್ತೊಂದು ದಿವಸ ಚೈತ್ಯಾಲಯಗಳಲ್ಲಿ ಜಿನಪೂಜೆಗೋಸ್ಕರ ಕುತೂಹಲವುಳ್ಳವರಾದ ಆ ದಂಪತಿಗಳು ಮಹಾಮೇರುವಿಗೆ ಹೋದರು. ಅಲ್ಲಿ ವಿನೀತನೆಂಬ ಚಾರಣಮುನಿಯ ಮುಖವೆಂಬ ಚಂದ್ರನಿಂದ ದ್ರವಿಸಿದ–ಹೊರಟ ಧರ್ಮವನ್ನು, ಅಮೃತವನ್ನು ಪಾನಮಾಡುವಂತೆ, ಶ್ರೋತ್ರ ಯುಗ್ಮದಿಂದ ಪಾನಮಾಡಿ ಅಧಿಕತೃಪ್ತಿಯನ್ನು ಹೊಂದಿದರು.

**ತಯೋರ್ನರಪತಿರ್ದೀಕ್ಷಾಮಾದಾತ್ತಚ್ಚಾರಣಾಂತಿಕೇ ।**
**ಸುಭದ್ರಾಪಾದಮಾಸಾದ್ಯ ಸಾಪಿ ಸಂಯಮಮಾದದೇ ॥ ೯೨೦ ॥**

ಆ ದಂಪತಿಗಳಲ್ಲಿ ರಾಜನು ಆ ಚಾರಣಮುನಿಗಳ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡನು. ಆಕೆಯೂ ಸುಭದ್ರೆಯೆಂಬ ಆರ್ಯಿಕೆಯ ಚರಣವನ್ನು ಹೊಂದಿ ಸಂಯಮವನ್ನು ಗ್ರಹಣಮಾಡಿದಳು.

**ಸೌಧರ್ಮಕಲ್ಪೇ ದೇವೀತ್ವಮುಪಗಮ್ಯೋಪಸಂಚಿತ– ।**
**ಸ್ವಾಯುಃಪಲ್ಯೋಪಮಪ್ರಾಂತೇ ಕ್ರಮಾನ್ನಿಷ್ಕ್ರಮ್ಯ ತದ್ಗತೇಃ ॥ ೯೨೧ ॥**

**ಗಾಂಧಾರವಿಷಯೇ ಪುಷ್ಕಲಾವತೀನಗರೇಶಿತುಃ ।**
**ನೃಪಸ್ಯೇಂದ್ರಗಿರೇರ್ಮೇರುಮತ್ಯಾಶ್ಚ ತನಯಾಭವತ್ ॥ ೯೨೨ ॥**

**ಗಾಂಧಾರೀತ್ಯಾಖ್ಯಯಾ ಖ್ಯಾತಾ ಪ್ರದಾತುರ್ಮ್ಯೋಘುನಾಯ ತಾಮ್ ।**
**ಪಿತುಃ ಪಾಪಮತಿಃ ಶ್ರುತ್ವಾ ಪ್ರಾರಂಭಂ ನಾರದಸ್ತದಾ ॥ ೯೨೩ ॥**

**ಸದ್ಯಸ್ತ್ವಾಮೇತ್ಯ ತತ್ಕರ್ಮ ನ್ಯಗದಜ್ಜಗದಪ್ರಿಯಃ ।**
**ತದುಕ್ತಾನಂತರಂ ಪ್ರೇಮವಶಃ ಸನ್ನದ್ಧಸೈನ್ಯಕಃ ॥ ೯೨೪ ॥**

**ಯುದ್ಧೇ ಭಂಗಂ ವಿಧಾಯೇಂದ್ರಗಿರೇಶ್ಚಾನ್ಯಮಹೀಭುಜಾಮ್ ।**
**ಆದಾಯ ತಾಂ ಮಹಾದೇವೀಪಟ್ಟಶ್ಚೈವಂ ತ್ವಯಾ ಕೃತಃ ॥ ೯೨೫ ॥**

ಆಯುಷ್ಯಾವಸಾನದಲ್ಲಿ ಸತ್ತು ಆಕೆಯು ಸೌಧರ್ಮಕಲ್ಪದಲ್ಲಿ ದೇವೀತ್ವವನ್ನು ಹೊಂದಿ ತಾನು ಸಂಪಾದಿಸಿದ್ದ ತನ್ನ ಪಲ್ಯೋಪಮಾಯುಷ್ಯದ ಕೊನೆಯಲ್ಲಿ ಆ ದೇವಗತಿಯಿಂದ ಕ್ರಮದಿಂದ ಹೊರಟು ಗಾಂಧಾರದೇಶದಲ್ಲಿ ಪುಷ್ಕಲಾವತೀ ನಗರಾಧಿಪತಿಯಾದ ಇಂದ್ರಗಿರಿರಾಜನಿಗೂ ಆತನ ಪತ್ನಿಯಾದ ಮೇರುಮತಿಗೂ ಗಾಂಧಾರಿಯೆಂಬ ಹೆಸರಿನಿಂದ ಪ್ರಖ್ಯಾತಳಾದ ಪುತ್ರಿಯಾದಳು. ಆಕೆಯನ್ನು ಮೈದುನನಿಗೆ ಕೊಡುವ ಆಕೆಯ ತಂದೆಯ ಕಾರ್ಯಾರಂಭವನ್ನು ಆಗ ಪಾಪ ಮತಿಯೂ ಜಗತ್ತಿಗೆ ಅಪ್ರಿಯನೂ ಆದ ನಾರದನು ಕೇಳಿ ತತ್ಕ್ಷಣದಲ್ಲಿ ನಿನ್ನನ್ನು (ಕೃಷ್ಣನನ್ನು) ಹೊಂದಿ ಆ ಕಾರ್ಯವನ್ನು ತಿಳಿಸಿದನು. ಅವನ ವಚನಾನಂತರದಲ್ಲಿ ಪ್ರೇಮಪರವಶನೂ ಅಣಿಯಾದ ಸೈನ್ಯವುಳ್ಳವನೂ ಆದ ನೀನು ಯುದ್ಧದಲ್ಲಿ ಇಂದ್ರಗಿರಿಗೂ ಇತರ ರಾಜರುಗಳಿಗೂ ಭಂಗವನ್ನು ಮಾಡಿ ಆಕೆಯನ್ನು ತೆಗೆದು ಕೊಂಡು ಹೀಗೆ ನೀನು ಮಹಾದೇವೀಪಟ್ಟವನ್ನು ಮಾಡಿದೆ.

**ಅಥ ಗೌರೀಭವಂ ಚೈವಂ ವದಾಮಿ ಶೃಣು ಮಾಧವ ।**
**ಅಸ್ತಿ ದ್ವೀಪೇತ್ರ ವಿಖ್ಯಾತಂ ಪುನ್ನಾಗಾಖ್ಯಪುರಂ ಪುರು ॥ ೯೨೬ ॥**

ಮಾಧವನೆ! ಬಳಿಕ ಗೌರಿಯ ಭವವನ್ನೂ ಹೇಳುತ್ತೇನೆ. ಕೇಳು. ಈ ಜಂಬೂ ದ್ವೀಪದಲ್ಲಿ ಪುನ್ನಾಗವೆಂಬ ದೊಡ್ಡದಾದ ಪ್ರಸಿದ್ಧನಗರವಿದೆ.

**ಪಾಲಕಸ್ತಸ್ಯ ಹೇಮಾಭೋ ದೇವೀ ತಸ್ಯ ಯಶಸ್ವತೀ ।**
**ಸಾನ್ಯೇದ್ಯುಶ್ಚಾರಣಂ ದೃಷ್ಟ್ವಾ ಯಶೋಧರಮುನೀಶ್ವರಮ್ ॥ ೯೨೭ ॥**

**ಸ್ಮೃತಪೂರ್ವಭವಾ ರಾಜ್ಞಾ ಪೃಷ್ಟೈವಂ ಪ್ರತ್ಯಭಾಷತ ।**
**ಸ್ವಭವಂ ದಶನೋದ್ದೀಪ್ತ್ಯಾ ಸ್ನಾಪಯಂತೀ ಮನೋರಮಮ್॥ ೯೨೮ ॥**

**ಧಾತಕೀಖಂಡಪ್ರಾಙ್ಮಂದರಾಪರಸ್ಥವಿದೇಹಗಮ್ ।**
**ನಾಮ್ನಾಶೋಕಪುರಂ ತತ್ರ ವಾಸ್ತವ್ಯೋ ವಣಿಜಾಂ ವರಃ ॥ ೯೨೯ ॥**

**ಆನಂದಸ್ತಸ್ಯ ಭಾರ್ಯಾಯಾಂ ಜಾತಾ ನಂದಯಶಃಶ್ರುತಿಃ ।**
**ದತ್ವಾ ಜಾತ್ವಮಿತಾದ್ಯಾಕ್ಸಾಗರಾಯ ತನುಸ್ಥಿತಿಮ್ ॥ ೯೩೦ ॥**

**ಆಶ್ಚರ್ಯಪಂಚಕಂ ಪ್ರಾಪ್ಯ ತತ್ಪುಣ್ಯಾಜ್ಜೀವಿತಾವಧೌ ।**
**ಉದಕ್ಕುರುಷು ಸಂಭೂಯ ಭುಕ್ತ್ವಾ ತತ್ರ ಸುಖಂ ತತಃ ॥ ೯೩೧ ॥**

**ಭೂತ್ವಾ ಭವನವಾಸೀಂದ್ರಭಾರ್ಯೇಹಾಸ್ಮೀತಿ ಸಂಮುದಾತ್ ।**
**ತತಃ ಕದಾಚಿತ್ಸಿದ್ಧಾರ್ಥವನೇ ಸಾಗರಸಂಜ್ಞಕಮ್ ॥ ೯೩೨ ॥**

**ಗುರುಮಾಶ್ರಿತ್ಯ ಸಂಭಾವಿತೋಪವಾಸಾ ಭವಾವಧೌ ।**
**ದೇವೀ ಜಾತಾದಿಮೇ ಕಲ್ಪೇ ತತ್ರ ನಿರ್ವರ್ತಿತಸ್ಥಿತಿಃ ॥ ೯೩೩ ॥**

**ದ್ವೀಪೇಸ್ಮಿನ್ನೇವ ಕೌಶಾಂಬ್ಯಾಂ ಸುಮತಿಶ್ರೇಷ್ಠಿನೋಭವತ್ ।**
**ಸುಭದ್ರಾಯಾಂ ಸುತಾ ಧಾರ್ಮಿಕೇತಿ ಸಂಶಬ್ದಿತಾ ಜನೈಃ ॥ ೯೩೪ ॥**

ಹೇಮಾಭನು ಆ ನಗರದ ದೊರೆ. ಯಶಸ್ವತಿಯು ಅವನ ಪತ್ನಿ. ಆಕೆಯು ಮತ್ತೊಂದು ದಿವಸ ಯಶೋಧರನೆಂಬ ಚಾರಣಮುನಿಪತಿಯನ್ನು ಕಂಡು ಪೂರ್ವ ಭವಸ್ಮರಣೆಯುಳ್ಳವಳೂ ರಾಜನಿಂದ ಕೇಳಲ್ಪಟ್ಟವಳೂ ಹಲ್ಲುಗಳ ಹೆಚ್ಚಾದ ಕಾಂತಿಯಿಂದ ಸ್ನಾನಮಾಡಿಸುವವಳೂ ಆಗಿ ಮನೋಹರವಾದ ತನ್ನ ಭವವನ್ನು 'ಧಾತಕೀಖಂಡದ ಪೂರ್ವಮೇರುವಿನ ಪಶ್ಚಿಮವಿದೇಹವನ್ನು ಹೊಂದಿರುವ ಅಶೋಕಪುರವೆಂಬ ನಗರದಲ್ಲಿ ಆನಂದನೆಂಬ ವೈಶ್ಯಪತಿಯು ವಾಸವಾಗಿದ್ದನು. ಅವನ ಪತ್ನಿಯಲ್ಲಿ ನಂದಯಶೆಯೆಂಬವಳು ಜನಿಸಿದಳು. ಆಕೆಯು ಒಂದಾನೊಂದು ಕಾಲದಲ್ಲಿ ಅಮಿತಸಾಗರಮುನಿಗೆ ಶರೀರಸ್ಥಿತಿ–ಆಹಾರವನ್ನು ಕೊಟ್ಟು ಪಂಚಾ ಶ್ಚರ್ಯವನ್ನು ಹೊಂದಿ ಆಹಾರದಾನದ ಪುಣ್ಯದಿಂದ ಆಯುಷ್ಯಾವಸಾನದಲ್ಲಿ ಉತ್ತರಕುರು–ಭೋಗಭೂಮಿಯಲ್ಲಿ ಹುಟ್ಟಿ ಅಲ್ಲಿ ಸುಖವನ್ನನುಭವಿಸಿ ಅಲ್ಲಿಂದ ಭವನವಾಸಿದೇವೇಂದ್ರನ ಪತ್ನಿಯಾಗಿದ್ದು ಈಗ ಇಲ್ಲಿ ಹುಟ್ಟಿರುತ್ತೇನೆ' ಎಂದು ಸಂತೋಷದಿಂದ ಈ ರೀತಿಯಾಗಿ ಹೇಳಿದಳು. ಬಳಿಕ ಒಂದಾನೊಂದು ಕಾಲದಲ್ಲಿ ಸಿದ್ಧಾರ್ಥವನದಲ್ಲಿ ಸಾಗರನೆಂಬ ಗುರುವನ್ನು ಹೊಂದಿ ಉಪವಾಸವನ್ನಾಚರಿಸಿ ದವಳಾಗಿ ಜೀವಿತಾವಧಿಯಲ್ಲಿ ಸತ್ತು ಮೊದಲನೆಯ–ಸೌಧರ್ಮಕಲ್ಪದಲ್ಲಿ ದೇವಿ ಯಾಗಿ ಜನಿಸಿದಳು. ಅಲ್ಲಿ ಆಯುಷ್ಯಸ್ಥಿತಿಯನ್ನು ಪೂರ್ತಿಮಾಡಿದವಳಾಗಿ ಇದೇ ಜಂಬೂದ್ವೀಪದ ಕೌಶಾಂಬೀನಗರದಲ್ಲಿ ಸುಮತಿಶ್ರೇಷ್ಠಿಗೆ ಆತನ ಪತ್ನಿಯಾದ ಸುಭದ್ರೆ, ಯಲ್ಲಿ ಜನರಿಂದ 'ಧಾರ್ಮಿಕೆ' ಯೆಂದು ಕರೆಯಲ್ಪಟ್ಟ ಪುತ್ರಿಯಾಗಿ ಜನಿಸಿದಳು.

**ಪುನರ್ಜಿನಮತಿಕ್ಷಾಂತಿದತ್ತಾಂ ಜಿನಗುಣಾದಿಕಾಮ್ ।**
**ಸಂಪತ್ತಿಂ ಸಾಧು ನಿರ್ಮಾಪ್ಯ ಮಹಾಶುಕ್ರೇಭವತ್ಸುರೀ ॥ ೯೩೫ ॥**

ಪುನಃ ಜಿನಮತಿಯೆಂಬ ಆರ್ಯಿಕೆಯಿಂದ ಕೊಡಲ್ಪಟ್ಟ ಜಿನಗುಣಸಂಪತ್ತಿಯನ್ನು ಚೆನ್ನಾಗಿ ಪೂರ್ತಿಮಾಡಿ ಆಯುಷ್ಯಾವಸಾನದಲ್ಲಿ ಸತ್ತು ಮಹಾಶುಕ್ರಸ್ವರ್ಗದಲ್ಲಿ ದೇವಸ್ತ್ರೀಯಾಗಿ ಜನಿಸಿದಳು.

**ಚಿರಾತ್ತತೋ ವಿನಿರ್ಗತ್ಯ ವೀತಶೋಕಪುರೇಶಿನಃ ।**
**ಮಹೀಶೋ ಮೇರುಚಂದ್ರಸ್ಯ ಚಂದ್ರವತ್ಯಾಮಜಾಯತ ॥ ೯೩೬ ॥**

**ಗೌರೀತಿ ರೂಪಲಾವಣ್ಯಕಾಂತ್ಯಾದೀನಾಮಸೌ ಖನಿಃ ।**
**ವಿಜಯಾಖ್ಯಪುರಾಧೀಶೋ ವಿಭುರ್ವಿಜಯನಂದನಃ ॥ ೯೩೭ ॥**

**ವತ್ಸಲಸ್ತುಭ್ಯಮಾನೀಯ ತಾಮದತ್ತ ತ್ವಯಾಪಿ ಸಾ ।**
**ಪಟ್ಟೇ ನಿಯೋಜಿತೇತ್ಯಾಖ್ಯತ್ತತೋ ಹರಿರಗಾನ್ಮುದಮ್ ॥ ೯೩೮ ॥**

ಬಹಳಕಾಲದನಂತರ ಅಲ್ಲಿಂದ ಹೊರಟು ವೀತಶೋಕಪುರಾಧಿಪತಿಯಾದ ಮೇರುಚಂದ್ರರಾಜನಿಗೆ ಆತನ ಪತ್ನಿಯಾದ ಚಂದ್ರವತಿಯಲ್ಲಿ ರೂಪ ಲಾವಣ್ಯ ಕಾಂತಿ

ಮೊದಲಾದ ಗುಣಗಳಿಗೆ ಗಣಿಯಾಗಿರುವ ಈ ಗೌರಿಯು ಜನಿಸಿದಳು. ವಿಜಯವೆಂಬ ಪುರದ ಅಧಿಪತಿಯೂ ನಿನ್ನಲ್ಲಿ ಪ್ರೀತಿಯುಳ್ಳವನೂ ಆದ ವಿಜಯನಂದನನು ಆಕೆಯನ್ನು ತಂದು ನಿನಗೆ ಕೊಟ್ಟನು. ನೀನೂ ಆಕೆಯನ್ನು ಪಟ್ಟದಲ್ಲಿ ಸೇರಿಸಿದೆ.'' ಹೀಗೆಂದು ಗಣಧರರು ಹೇಳಿದರು. ಬಳಿಕ ಕೃಷ್ಣನು ಸಂತೋಷವನ್ನು ಹೊಂದಿದನು.

**ತತಃ ಪದ್ಮಾವತೀಜನ್ಮಸಂಬಂಧಂ ಗಣನಾಯಕಃ ।**
**ಗುಣಾನಾಮಾಕರೋವಾದೀದಿತ್ಥಂ ಜನಮನೋಹರಮ್ ॥ ೯೩೯ ॥**

ಬಳಿಕ ಗುಣಗಳಿಗೆ ಉತ್ಪತ್ತಿಸ್ಥಾನರಾದ ಗಣಧರರು ಜನಮನೋಹರವಾದ ಪದ್ಮಾವತಿಯ ಜನ್ಮಸಂಬಂಧವನ್ನು ಈ ರೀತಿಯಾಗಿ ಹೇಳಿದರು.

**ಅಸ್ಮಿನ್ನೇವೋಜ್ಜಯಿನ್ಯಾಖ್ಯನಗರೀನಾಯಕೋ ನೃಪಃ ।**
**ವಿಜಯಸ್ತಸ್ಯ ವಿಕ್ರಾಂತಿರಿವ ದೇವ್ಯಪರಾಜಿತಾ ॥ ೯೪೦ ॥**

''ಇದೇ ಭರತಕ್ಷೇತ್ರದಲ್ಲಿ ಉಜ್ಜಯಿನಿಯೆಂಬ ನಗರಾಧಿಪತಿಯಾದ ವಿಜಯನೆಂಬ ರಾಜನ ಪರಾಕ್ರಮವೋ ಎಂಬಂತೆ ಅವನಿಗೆ ಅಪರಾಜಿತೆಯೆಂಬ ಪತ್ನಿಯಿದ್ದಳು.

**ವಿನಯಶ್ರೀಃ ಸುತಾ ತಸ್ಯಾ ಹಸ್ತಶೀರ್ಷಪುರೇಶಿನಃ ।**
**ಹರಿಷೇಣಸ್ಯ ದೇವ್ಯಾಸೀದ್ದತ್ವಾ ದಾನಮಸೌ ಮುದಾ ॥ ೯೪೧ ॥**

**ಸಮಾಧಿಗುಪ್ತಯೋಗೀಶೇ ಭೂತ್ವಾ ಹೈಮವತೇ ಚಿರಮ್ ।**
**ಭುಕ್ತ್ವಾ ಭೋಗಾನ್ ಭವಪ್ರಾಂತೇ ಜಾತಾ ಚಂದ್ರಸ್ಯ ರೋಹಿಣೀ ॥**

ಆಕೆಯ ಪುತ್ರಿಯಾದ ವಿನಯಶ್ರೀಯು ಹಸ್ತಶೀರ್ಷಪುರಾಧಿಪತಿಯಾದ ಹರಿಷೇಣನ ಪತ್ನಿಯಾಗಿದ್ದಳು. ಈಕೆಯು ಸಂತೋಷದಿಂದ ಸಮಾಧಿಗುಪ್ತಯೋಗೀಶ್ವರನಿಗೆ ಆಹಾರದಾನವನ್ನು ಕೊಟ್ಟು ಆಯುಷ್ಯವು ತೀರಿದಮೇಲೆ ಸತ್ತು ಹೈಮವತವೆಂಬ ಜಘನ್ಯಭೋಗಭೂಮಿಯಲ್ಲಿ ಜನಿಸಿ ಬಹುಕಾಲದವರೆಗೆ ಭೋಗಗಳನ್ನನುಭವಿಸಿ ಆ ಭವದ ಕೊನೆಯಲ್ಲಿ ಸತ್ತು ಜ್ಯೋತಿರ್ಲೋಕದಲ್ಲಿ ಚಂದ್ರನಿಗೆ ರೋಹಿಣಿಯಾದಳು.

**ಪಲ್ಯೋಪಮಾಯುಷ್ಕಾಲಾಂತೇ ವಿಷಯೇ ಮಗಧಾಭಿಧೇ ।**
**ವಸತಃ ಶಾಲ್ಮಲಿಗ್ರಾಮೇ ಪದ್ಮದೇವೀ ಸುತಾಜನಿ ॥ ೯೪೩ ॥**

**ಸತೀ ವಿಜಯದೇವಸ್ಯ ದೇವಿಲಾಯಾಂ ಕದಾಚನ ।**
**ವರಧರ್ಮಯತೇಃ ಸನ್ನಿಧಾನೇ ಸಾ ವ್ರತಮಗ್ರಹೀತ್ ॥ ೯೪೪ ॥**

**ಅವಿಜ್ಞಾತಫಲಾಭಕ್ಷಣಂ ಕೃಚ್ಛ್ರೇಪಿ ದೃಢವ್ರತಾ ।**
**ವನೇಚರೈಃ ಕದಾಚಿತ್ಸ ಗ್ರಾಮೋವಸ್ಕಂದಘಾತಿಭಿಃ ॥ ೯೪೫ ॥**

**ವಿಲೋಪಿತಸ್ತದಾ ಪದ್ಮದೇವೀಂ ಸಿಂಹರಥಾದ್ಭಯಾತ್ ।**
**ನೀತ್ವಾ ಮಹಾಟವೀಂ ಸರ್ವೇ ಜನಾಃ ಕ್ಷುತ್ಪರಿಪೀಡಿತಾಃ ॥ ೯೪೬ ॥**

**ವಿಷವಲ್ಲೀಫಲಾನ್ಯಾಶು ಭಕ್ಷಯಿತ್ವಾ ಮೃತಿಂ ಯಯುಃ ।**
**ವ್ರತಭಂಗಭಯಾತ್ತಾನಿ ಸಾ ವಿಹಾಯಾಹೃತೇರ್ವಿನಾ ॥ ೯೪೭ ॥**

**ಮೃತ್ವಾ ಹೈಮವತೇ ಭೂತ್ವಾ ಜೀವಿತಾಂತೇ ತತಶ್ಚ್ಯುತಾ ।**
**ದ್ವೀಪೇ ಸ್ವಯಂಪ್ರಭೇ ಜಾತಾ ದೇವೀ ಸದ್ಯಃ ಸ್ವಯಂಪ್ರಭಾ ॥ ೯೪೮ ॥**

**ಸ್ವಯಂಪ್ರಭಾಖ್ಯದೇವಸ್ಯ ತತೋ ನಿರ್ಗತ್ಯ ಸಾ ಪುನಃ ।**
**ದ್ವೀಪೇಸ್ಮಿನ್ ಭಾರತೇ ಕ್ಷೇತ್ರೇ ಜಯಂತಪುರಭೂಪತೇಃ ॥ ೯೪೯ ॥**

**ಶ್ರೀಧರಸ್ಯ ಸುತಾ ಭೂತ್ವಾ ಶ್ರೀಮತ್ಯಾಂ ಸುಂದರಾಕೃತಿಃ ।**
**ವಿಮಲಶ್ರೀರಭೂತ್ಪತ್ನೀ ಭದ್ರಿಲಾಖ್ಯಪುರೇಶಿನಃ ॥ ೯೫೦ ॥**

**ನೃಪಸ್ಯ ಮೇಘನಾದಸ್ಯ ಸಮೀಪ್ಸಿತಸುಖಪ್ರದಾ ।**
**ರಾಜಾ ಧರ್ಮಮುನೇಸ್ತ್ಯಕ್ತ್ವಾ ರಾಜ್ಯಂ ಪ್ರವ್ರಜ್ಯ ಶುದ್ಧಧೀಃ ॥ ೯೫೧ ॥**

**ಜಾತೋ ವ್ರತಧರಸ್ತಸ್ಮಿನ್ ಸಹಸ್ರಾರಪತೌ ಸತಿ ।**
**ಅಷ್ಟಾದಶಸಮುದ್ರಾಯುರ್ಭಾಜಿ ಭಾಸುರದೀಧಿತೌ ॥ ೯೫೨ ॥**

**ಸಾಪಿ ಪದ್ಮಾವತೀಕ್ಷಾಂತಿಂ ಸಂಪ್ರಾಪ್ಯಾದಾಯ ಸಂಯಮಮ್ ।**
**ಆಚಾಮ್ಲವರ್ಧನಾಮಾನಂ ಸಮುಪೋಷ್ಯಾಯುಷಾವಧೌ ॥ ೯೫೩ ॥**

**ತತ್ರೈವ ಕಲ್ಪೇ ದೇವೀತ್ವಂ ಪ್ರತಿಪದ್ಯ ನಿಜಾಯುಷಃ ।**
**ಪ್ರಾಂತೇರಿಷ್ಟಪುರಾಧೀಶಃ ಶ್ರೀಮತ್ಯಾಂ ತನಯಾಜನಿ ॥ ೯೫೪ ॥**

**ಹಿರಣ್ಯವರ್ಮಣಃ ಪದ್ಮಾವತೀತ್ಯೇಷಾ ಸ್ವಯಂವರೇ ।**
**ಸಂಭಾವ್ಯ ಸಂಭೃತಸ್ನೇಹಾ ಭವಂತಂ ರತ್ನಮಾಲಯಾ ॥ ೯೫೫ ॥**

**ಶೀಲಾವಹಾ ಮಹಾದೇವೀಪಟ್ಟಂ ಪ್ರಾಪದಿತಿ ಸ್ಫುಟಮ್ ।**
**ತಾಸ್ತಿಸ್ರೋಪಿ ಸ್ವಜನ್ಮಾನಿ ಶ್ರುತ್ವಾ ಮುದಮಯುರ್ಹರೇಃ ॥ ೯೫೬ ॥**

ಆಕೆಯು ಪಲ್ಯೋಪಮವರ್ಷಾಯುಷ್ಯಕಾಲದ ಕೊನೆಯಲ್ಲಿ ಮಡಿದು ಮಗಧದೇಶದಲ್ಲಿ ಶಾಲ್ಮಲಿಗ್ರಾಮದಲ್ಲಿ ವಾಸಮಾಡುವ ವಿಜಯದೇವನ ಪತ್ನಿಯಾದ ದೇವಿಲೆಯಲ್ಲಿ ಸಾಧ್ವಿಯಾದ ಪದ್ಮದೇವಿಯೆಂಬ ಪುತ್ರಿಯಾಗಿ ಜನಿಸಿದಳು. ಒಂದಾನೊಂದುಕಾಲದಲ್ಲಿ ಆಕೆಯು ವರಧರ್ಮಯತಿಯ ಸನ್ನಿಧಿಯಲ್ಲಿ ಗೊತ್ತಿಲ್ಲದ ಫಲವನ್ನು ತಿನ್ನುವುದಿಲ್ಲವೆಂಬ ವ್ರತವನ್ನು ಗ್ರಹಣಮಾಡಿದಳು. ಕಷ್ಟದಲ್ಲಿಯೂ ದೃಢವ್ರತವುಳ್ಳವಳಾಗಿದ್ದಳು. ಒಂದಾನೊಂದುಕಾಲದಲ್ಲಿ ಆಕ್ರಮಣದಿಂದ ಘಾತಮಾಡುವವರಾದ ಬೇಡರಿಂದ ಆ ಗ್ರಾಮವು ದೋಚಲ್ಪಟ್ಟಿತು– ನಾಶಮಾಡಲ್ಪಟ್ಟಿತು. ಆಗ ಸಿಂಹರಥನ (ಬೇಡರ ಯಜಮಾನನ) ಭಯದಿಂದ ಪದ್ಮದೇವಿಯನ್ನು ದೊಡ್ಡಕಾಡಿಗೊಯ್ದು ಎಲ್ಲಾ ಜನರು ಹಸಿವಿನಿಂದ ಪೀಡಿತರಾಗಿ ವಿಷಲತೆಯ ಫಲಗಳನ್ನು ತಿಂದು ಶೀಘ್ರವಾಗಿ ಮರಣವನ್ನು ಹೊಂದಿದರು. ಆ ಪದ್ಮದೇವಿಯು ವ್ರತಭಂಗಭಯದಿಂದ ಆ ಫಲವನ್ನು ತಿನ್ನದೆ ಬಿಟ್ಟು ಕಾಲಾಂತರದಲ್ಲಿ ಸತ್ತು ಹೈಮವತವೆಂಬ ಜಘನ್ಯಭೋಗಭೂಮಿಯಲ್ಲಿ ಹುಟ್ಟಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತಳಾಗಿ ತತ್ಕ್ಷಣದಲ್ಲಿ ಸ್ವಯಂಪ್ರಭದ್ವೀಪದಲ್ಲಿ ಸ್ವಯಂಪ್ರಭನೆಂಬ ವ್ಯಂತರದೇವನಿಗೆ ಸ್ವಯಂಪ್ರಭೆಯೆಂಬ ಪತ್ನಿಯಾದಳು. ಆಕೆಯು ಆಯುಷ್ಯಾವಸಾನದಲ್ಲಿ ಅಲ್ಲಿಂದ ಹೊರಟು ಪುನಃ ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಜಯಂತಪುರದ ದೊರೆಯಾದ ಶ್ರೀಧರನಿಗೆ ಆತನ ಪತ್ನಿಯಾದ ಶ್ರೀಮತಿಯಲ್ಲಿ ಸುಂದರಾಕಾರವುಳ್ಳ ವಿಮಲಶ್ರೀಯೆಂಬ ಪುತ್ರಿಯಾಗಿ ಭದ್ರಿಲವೆಂಬ ನಗರದ ದೊರೆಯಾದ ಮೇಘನಾದನಿಗೆ ಇಚ್ಛಿತಸುಖವನ್ನು ಕೊಡುವ ಪತ್ನಿಯಾದಳು. ಧರ್ಮಮುನಿಯ ದೆಸೆಯಿಂದ ಶುದ್ಧಬುದ್ಧಿಯುಳ್ಳವನಾದ ಮೇಘನಾದರಾಜನು ರಾಜ್ಯವನ್ನು ತ್ಯಜಿಸಿ ದೀಕ್ಷೆಯನ್ನು ತೆಗೆದುಕೊಂಡು ವ್ರತಗಳನ್ನು ಧರಿಸಿದವನಾದನು. ಹದಿನೆಂಟು ಸಾಗರೋಪಮವರ್ಷಾಯುಷ್ಯವನ್ನು ಹೊಂದಿರುವವನೂ ಪ್ರಕಾಶಮಾನವಾದ ಕಾಂತಿಯುಳ್ಳವನೂ ಆದ ಆ ಮೇಘನಾದ ಮುನಿಯು ಸತ್ತು ಸಹಸ್ರಾರವೆಂಬ ಹನ್ನೆರಡನೆಯ ಸ್ವರ್ಗದ ಇಂದ್ರನಾಗಿ ಜನಿಸುತ್ತಿರಲು ಆ ವಿಮಲಶ್ರೀಯೂ ಪದ್ಮಾವತಿಯೆಂಬ ಆರ್ಯಿಕೆಯನ್ನು ಹೊಂದಿ ಸಂಯಮವನ್ನು ಗ್ರಹಣಮಾಡಿ ಆಚಾಮ್ಲವರ್ಧವೆಂಬ ವ್ರತದ ಉಪವಾಸವನ್ನು ಮಾಡಿ ಆಯುಷ್ಯಾವಸಾನದಲ್ಲಿ ಸತ್ತು ಅದೇ ಸಹಸ್ರಾರಕಲ್ಪದಲ್ಲಿ ದೇವೀತ್ವವನ್ನು ಹೊಂದಿ ತನ್ನ ಆಯುಷ್ಯದ ಕೊನೆಯಲ್ಲಿ ಚ್ಯುತಳಾಗಿ ಅರಿಷ್ಟಪುರಾಧಿಪತಿಯಾದ ಹಿರಣ್ಯವರ್ಮನಿಗೆ ಆತನ ಪತ್ನಿಯಾದ ಶ್ರೀಮತಿಯಲ್ಲಿ ಪದ್ಮಾವತಿಯೆಂಬ ಪುತ್ರಿಯಾಗಿ ಜನಿಸಿದಳು. ನಿನ್ನಲ್ಲಿ ಸಂಪೂರ್ಣವಾದ ಪ್ರೇಮವುಳ್ಳವಳೂ ಶೀಲವತಿಯೂ ಆದ ಈಕೆಯು ಸ್ವಯಂವರದಲ್ಲಿ ರತ್ನಮಾಲೆಯಿಂದ ನಿನ್ನನ್ನು ಗೌರವಿಸಿ–ವರಿಸಿ ಮಹಾದೇವಿಯ ಪಟ್ಟವನ್ನು ಹೊಂದಿದಳು'' ಹೀಗೆ ಕೃಷ್ಣನ ಆ ಮೂವರು ಪತ್ನಿಯರೂ ಗಣಧರರಿಂದ ತಮ್ಮ ಜನ್ಮಗಳನ್ನು ಕೇಳಿ ಸಂತೋಷವನ್ನು ಹೊಂದಿದರು.

ಇತ್ಯುಚ್ಚೈರ್ಗಣನಾಯಕೋ ಗುಣನಿಧಿಃ ಪ್ರಸ್ಪಷ್ಟಮೃಷ್ಟಾಕ್ಷರೈಃ ।
ಸಾಕ್ಷಾತ್ಕೃತ್ಯ ಭವಾವಲೀವಿಲಸಿತಂ ವ್ಯಾವರ್ಣಯನ್ನಿರ್ಣಯಮ್ ॥
ಸಾಧ್ವಾಕರ್ಣ್ಯ ಚಿರಂ ಸುಖಾಸುಖಮಯೀಃ ಸ್ವೇಷ್ಟಾಷ್ಟದೇವೀಕಥಾಃ ।
ಸಂತುಷ್ಟಿಂ ಸ ಮುರಾರಿರಾರ ಸುತರಾಂ ಪ್ರಾಂತೇ ಪ್ರವೃದ್ಧಿಪ್ರದಾಃ ॥

ಈ ಪ್ರಕಾರವಾಗಿ ಗುಣಗಳಿಗೆ ನಿಧಿಯಾದ ಗಣಧರರು ಬಹುಸ್ಪಷ್ಟವೂ ಮಧುರವೂ ಆದ ಅಕ್ಷರಗಳಿಂದ ಭವಪಂಪರೆಯಿಂದ ಪ್ರಕಾಶಮಾನವಾದ ನಿರ್ಣಯವನ್ನು ಚೆನ್ನಾಗಿ ಸಾಕ್ಷಾತ್ಕರಿಸಿ ವರ್ಣಿಸಿದರು. ಆ ಮುರರಿಪುವಾದ ಕೃಷ್ಣನು ಸುಖದುಃಖಮಯಗಳೂ ಕೊನೆಯಲ್ಲಿ ವಿಶೇಷವೃದ್ಧಿಯನ್ನು ಕೊಡುವುವೂ ಆದ ತನ್ನ ಎಂಟು ಜನ ಪ್ರಿಯಪತ್ನಿಯರ ಕಥೆಗಳನ್ನು ಬಹುಕಾಲದವರೆಗೆ ಚೆನ್ನಾಗಿ ಕೇಳಿ ಅಧಿಕವಾಗಿ ಸಂತೋಷವನ್ನು ಹೊಂದಿದನು.

ದೇವ್ಯೋಪಿ ದಿವ್ಯವಚನಂ ಮುನಿಪುಂಗವಸ್ಯ ।
ಭಂಗಾವಹಂ ಬಹುಭವಾತ್ತನಿಜಾಂಹಸಾಂ ತತ್ ॥
ಕೃತ್ವಾ ಹೃದಿ ಪ್ರಮುದಿತಾಃ ಪೃಥುಶರ್ಮಸಾರೇ ।
ಧರ್ಮೇರ್ಹತೋ ಹಿತತಮೇ ಸ್ವಮತಿಂ ಪ್ರತೇನುಃ ॥ ೯೫೮ ॥

ದೇವಿಯರೂ ಅನೇಕಭವಗಳಿಂದ ಗ್ರಹಣಮಾಡಿದ ತಮ್ಮ ಕರ್ಮಗಳಿಗೆ ಭಂಗವನ್ನುಂಟುಮಾಡುವ ಮುನಿಶ್ರೇಷ್ಠನ ಆ ದಿವ್ಯವಚನವನ್ನು ಚಿತ್ತದಲ್ಲಿ ಧರಿಸಿ ಬಹುಸಂತೋಷವುಳ್ಳವರಾಗಿ ಅಧಿಕಸುಖದ ಸಾರವೂ ಬಹುಹಿತಕಾರಿಯೂ ಆದ ಅರ್ಹತಧರ್ಮದಲ್ಲಿ ತಮ್ಮ ಬುದ್ಧಿಯನ್ನು ವಿಸ್ತರಿಸಿದರು.

ನ ಹಿ ಹಿತಮಿಹ ಕಿಂಚಿದ್ಧರ್ಮಮೇಕಂ ವಿಹಾಯ ।
ವ್ಯವಹಿತಮಸುಮದ್ಭ್ಯೋ ಧಿಗ್ವಿಮುಗ್ಧಾತ್ಮವೃತ್ತಮ್ ।
ಇತಿ ವಿಹಿತವಿತರ್ಕಾಃ ಸರ್ವಸಭ್ಯಾಶ್ಚ ಧರ್ಮಂ ।
ಸಮುಪಯಯುರಪಾಪಾಃ ಸ್ವಾಮಿನಾ ನೇಮಿನೋಕ್ತಮ್ ॥ ೯೫೯ ॥

"ಈ ಜಗತ್ತಿನಲ್ಲಿ ಧರ್ಮಒಂದನ್ನು ಬಿಟ್ಟು ಪ್ರಾಣಿಗಳಿಗೆ ಹಿತವಾದುದಾವುದೂ ಇಲ್ಲ. ಅಂತಹ ಧರ್ಮದಿಂದ ರಹಿತವಾಗಿರುವ ಮೂರ್ಖರ ಆತ್ಮಚರಿತ್ರವನ್ನು ಧಿಕ್ಕರಿಸು." ಎಂದು ಊಹಿಸಿರುವವರೂ ಪಾಪರಹಿತರೂ ಆದ ಎಲ್ಲಾ ಸಭ್ಯರೂ ನೇಮಿಸ್ವಾಮಿಯಿಂದ ಹೇಳಲ್ಪಟ್ಟ ಧರ್ಮವನ್ನು ಗ್ರಹಿಸಿದರು.

ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ನೇಮಿಸ್ವಾಮಿಚರಿತೇ ಭವಾಂತರವ್ಯಾವರ್ಣನಂ ನಾಮೈಕಸಪ್ತತಿತಮಂ ಪರ್ವ ॥

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ನೇಮಿಸ್ವಾಮಿಚರಿತೆಯಲ್ಲಿ ಭವಾಂತರವ್ಯಾವರ್ಣನವೆಂಬ ಎಪ್ಪತ್ತೊಂದನೆಯ ಪರ್ವವು ಸಮಾಪ್ತವಾದುದು.

॥ ಶ್ರೀ ನೇಮಿಜಿನಾಯ ನಮಃ ॥

# ಅಥ ದ್ವಿಸಪ್ತತಿತಮಂ ಪರ್ವ

(ಶ್ರೀ ನೇಮಿತೀರ್ಥಕರಪುರಾಣ ಮುಂದುವರೆದದ್ದು)

**ಅಥ ಸ್ವಜ್ಞಾತಪೂರ್ವಂ ಚ ಜಗತ್ತ್ರಯಸಭಾವನೌ ।**
**ಪ್ರಕಾಶಯಿತುಕಾಮೇನ ಬಲದೇವೇನ ಧೀಮತಾ ॥ ೯೬೦ ॥**

**ಪ್ರದ್ಯುಮ್ನಶಂಭವೋತ್ಪತ್ತಿಸಂಬಂಧಃ ಪೃಚ್ಛ್ಯತೇ ಸ್ಮ ಸಃ ।**
**ವರದತ್ತಗಣೇಂದ್ರೋನು ರುಂದ್ರಬುದ್ಧ್ಯೇತ್ಥಮಬ್ರವೀತ್ ॥ ೯೬೧ ॥**

ಅನಂತರದಲ್ಲಿ ತ್ರಿಜಗತ್ಸಭಾಭೂಮಿಯಲ್ಲಿ–ಸಮವಸರಣದಲ್ಲಿ ತಾನು ಪೂರ್ವದಲ್ಲಿ ತಿಳಿದಿರುವ ವಿಷಯವನ್ನೂ ಪ್ರಕಾಶಪಡಿಸಬೇಕೆಂಬ ಇಚ್ಛೆಯುಳ್ಳವನೂ ಪ್ರಾಜ್ಞನೂ ಆದ ಬಲರಾಮನು ಮನ್ಮಥನ ಮತ್ತು ಶಂಭವನ ಉತ್ಪತ್ತಿ ಸಂಬಂಧವನ್ನು ಪ್ರಶ್ನೆಮಾಡಿದನು. ಅದನ್ನನುಸರಿಸಿ ಆ ವರದತ್ತಗಣಧರರು ವಿಶಾಲವಾದ ಬುದ್ಧಿಯಿಂದ ಈ ಪ್ರಕಾರವಾಗಿ ಹೇಳಿದರು.

**ದ್ವೀಪೇಸ್ಮಿನ್ ಮಗಧೇ ದೇಶೇ ಶಾಲಿಗ್ರಾಮನಿವಾಸಿನಃ ।**
**ದ್ವಿಜಸ್ಯ ಸೋಮದೇವಸ್ಯ ಭಾರ್ಯಾಭೂದಗ್ನಿಲಾಖ್ಯಯಾ ॥ ೯೬೨ ॥**

''ಈ ಜಂಬೂದ್ವೀಪದ ಮಗಧದೇಶದಲ್ಲಿ ಶಾಲಿಗ್ರಾಮನಿವಾಸಿಯಾದ ಸೋಮದೇವನೆಂಬ ದ್ವಿಜನಿಗೆ ಅಗ್ನಿಲೆಯೆಂಬ ಹೆಸರಿನ ಪತ್ನಿಯಿದ್ದಳು (ಅಗ್ನಿಲೆಯೆಂಬ ಪತ್ನಿಯಿದ್ದಳು).

**ಅಗ್ನಿಭೂತಿರಭೂತ್ಸೂನುರ್ವಾಯುಭೂತಿಸ್ತಯೋರನು ।**
**ತಾವನ್ಯೇದ್ಯುಃ ಪುರೇ ನಂದಿವರ್ಧನಾಖ್ಯೇ ಮನೋಹರೇ ॥ ೯೬೩ ॥**

**ನಂದನೇ ನಂದಿಘೋಷಾಖ್ಯೇ ವನೇ ಮುನಿಮಪಶ್ಯತಾಮ್ ।**
**ನಂದಿವರ್ಧನನಾಮಾನಂ ಮುನಿಸಂಘವಿಭೂಷಣಮ್ ॥ ೯೬೪ ॥**

ಆ ದಂಪತಿಗಳಿಗೆ ಅಗ್ನಿಭೂತಿ ವಾಯುಭೂತಿಗಳೆಂಬೀರ್ವರು ಮಕ್ಕಳಿದ್ದರು. ಆ ಮಕ್ಕಳು ಮತ್ತೊಂದು ದಿವಸ ಮನೋಹರವಾದ ನಂದಿವರ್ಧನವೆಂಬ ಪುರದಲ್ಲಿ ನಂದಿಘೋಷವೆಂಬ ನಂದನವನದಲ್ಲಿ ಮುನಿಸಂಘಕ್ಕೆ ಭೂಷಣನಾದ ನಂದಿವರ್ಧನನೆಂಬ ಮುನಿಯುನ್ನು ಕಂಡರು.

**ದುಷ್ಟಾವುಪಾಗತೌ ದೃಷ್ಟ್ವಾ ತೌ ಮುನೀಂದ್ರೋಬ್ರವೀನ್ಮುನೀನ್ ।**
**ವಿಸಂವದಿತುಮಾಯಾತಾವೇತೌ ಮಿಥ್ಯಾತ್ವದೂಷಿತೌ ॥ ೯೬೫ ॥**

**ಭವದ್ಭಿಃ ಕೈಶ್ಚಿದಪ್ಯಾಭ್ಯಾಂ ನ ಕಾರ್ಯಾ ಸಹ ಸಂಕಥಾ ।**
**ಏತನ್ನಿಬಂಧನೋ ಭೂಯಾನುಪಸರ್ಗೋ ಭವಿಷ್ಯತಿ ॥ ೯೬೬ ॥**

ಸಮೀಪಕ್ಕೆ ಬಂದ ಆ ದುಷ್ಟರನ್ನು ನೋಡಿ ನಂದಿವರ್ಧನಮುನೀಶ್ವರನು ತನ್ನ ಸಂಘದ ಮುನಿಗಳನ್ನು ಕುರಿತು 'ಮಿಥ್ಯಾತ್ವದಿಂದ ದೂಷಿತರಾದ ಇವರುಗಳು ವಿರೋಧವಚನವನ್ನಾಡುವುದಕ್ಕೋಸ್ಕರ ಬಂದವರಾಗಿದ್ದಾರೆ. ನೀವುಗಳಾರೂ ಇವರುಗಳೊಡನೆ ಮಾತನಾಡಬಾರದು. ಇವರ ನಿಮಿತ್ತದಿಂದ ಮಹೋಪಸರ್ಗವಾಗುವುದು' ಎಂದು ಹೇಳಿದನು.

**ಇತಿ ತದ್ವಚನಂ ಶ್ರುತ್ವಾ ಗುರುಶಾಸನಕಾರಿಣಃ ।**
**ಮೌನವ್ರತೇನ ಸರ್ವೇಪಿ ಸ್ಥಿತಾಃ ಸಂಯಮಿನಸ್ತದಾ ॥ ೯೬೭ ॥**

ಈ ಪ್ರಕಾರವಾಗಿ ಆ ನಂದಿವರ್ಧನಮುನಿಯ ಮಾತನ್ನು ಕೇಳಿ ಗುರುವಿನ ಆಜ್ಞಾಪಾಲಕರಾದ ಎಲ್ಲಾ ಮುನಿಗಳು ಆಗ ಮೌನವ್ರತದಿಂದಿದ್ದರು.

**ದೃಷ್ಟ್ವಾ ತಾವೇತ್ಯ ಸರ್ವೇಷಾಂ ಮೂಕೀಭೂಯ ವ್ಯವಸ್ಥಿತಿಮ್ ।**
**ಕೃತಾಪಹಾಸೌ ಸ್ವಂ ಗ್ರಾಮಂ ಗಚ್ಛಂತಾವಶಿತುಂ ಗತಮ್ ॥ ೯೬೮ ॥**

**ಗ್ರಾಮಾಂತರಾತ್ಸಮಾಯಾತಂ ಮುನಿಮಾಲೋಕ್ಯ ಸತ್ಯಕಮ್ ।**
**ತತ್ಸಮೀಪಮಹಂಕಾರಪ್ರೇರಿತಾವುಪಗಮ್ಯ ತಮ್ ॥ ೯೬೯ ॥**

**ನಾಸ್ತ್ಯಾಪ್ತೋ ನಾಗಮೋ ನೈವ ಪದಾರ್ಥೋ ನಗ್ನ ಕೇವಲಮ್ ।**
**ಕಿಂ ಕ್ಲಿಶ್ನಾಸಿ ವೃಥೋನ್ಮಾರ್ಗೇ ಮೂಢೋ ದೃಷ್ಟವಿನಾಶಿನಿ ॥ ೯೭೦ ॥**

**ಇತ್ಯಧ್ಯಕ್ಷಿಪತಾಂ ಸೋಪಿ ಜಿನವಕ್ತ್ರವಿನಿರ್ಗತಮ್ ।**
**ವಿವಕ್ಷಿತೇತರಾನೇಕಸ್ವರೂಪಾಂತಸಮಾಶ್ರಯಮ್ ॥ ೯೭೧ ॥**

**ದ್ರವ್ಯತತ್ತ್ವಂ ಯಥಾದೃಷ್ಟಂ ಕಥಯಂತಂ ಸಹೇತುಕಮ್ ।**
**ಸ್ಯಾದ್ವಾದಮವಲಂಬ್ಯೋಚ್ಚೈಸ್ತತ್ಪ್ರಣೇತೃಪ್ರಮಾಣತಾಮ್ ॥ ೯೭೨ ॥**

**ಪ್ರಸಾಧ್ಯಾದೃಷ್ಟಭಾಗೇಪಿ ತದುಕ್ತಾಗಮಸುಸ್ಥಿತಿಮ್ ।**
**ನಿರೂಪ್ಯ ವಾದಕಂಡೂತಿಮಪನೀಯ ದುರಾತ್ಮನೋಃ ॥ ೯೭೩ ॥**

**ತಯೋರ್ಜಯಧ್ವಜಂ ಪ್ರಾಪದ್ವಿದ್ವಜ್ಜನಸಮರ್ಪಿತಮ್ ।**
**ತೌ ಮಾನಭಂಗಸಂಭೂತಕ್ರೋಧೌ ನಿಶಿ ಶಿತಾಯುಧೌ ॥ ೯೭೪ ॥**

**ಪರೇದ್ಯುಃ ಪಾಪಕರ್ಮಾಣೌ ವಿಜನೇ ಶುದ್ಧಚೇತಸಮ್ ।**
**ಪ್ರತಿಮಾಯೋಗಮಾಪನ್ನಂ ಸತ್ಯಕಂ ಮುನಿಪುಂಗವಮ್ ॥ ೯೭೫ ॥**

**ಶಸ್ತ್ರೇಣಾಹಂತುಮುದ್ಯುಕ್ತಾವನ್ಯಾಯೋಯಮಿತಿ ಕ್ರುಧಾ ।**
**ದ್ವಿಜೌ ಸುಧರ್ಮಯಕ್ಷೇಣ ಸ್ತಂಭಿತೌ ಕೀಲಿತಾವಿವ ॥ ೯೭೬ ॥**

**ತದಾ ಶರಣಮಾಯಾತಾಸ್ತನ್ಮಾತೃಪಿತೃಬಾಂಧವಾಃ ।**
**ಮುನೀನಾಮಾಕುಲೀಭೂಯ ಯಕ್ಷಸ್ತಾನವದತ್ಸುಧೀಃ ॥ ೯೭೭ ॥**

**ಹಿಂಸಾಧರ್ಮಂ ಪರಿತ್ಯಜ್ಯ ಯದಿ ಜೈನೇಶ್ವರಂ ಮತಮ್ ।**
**ಭವಂತಃ ಸ್ವೀಕರಿಷ್ಯಂತಿ ಭವೇನ್ಮೋಕ್ಷೋನಯೋರಿತಿ ॥ ೯೭೮ ॥**

ಆ ಅಗ್ನಿಭೂತಿ ವಾಯುಭೂತಿಗಳು ಬಂದು ಎಲ್ಲಾ ಮುನಿಗಳು ಮೂಕರಾಗಿರುವುದನ್ನು ನೋಡಿ ಪರಿಹಾಸ್ಯವನ್ನು ಮಾಡಿ ತಮ್ಮ ಗ್ರಾಮಕ್ಕೆ ಹೋದರು. ಭೋಜನಕ್ಕೋಸ್ಕರ ಹೋಗಿ ಗ್ರಾಮಾಂತರದಿಂದ ಬರುತ್ತಿರುವ ಸತ್ಯಕನೆಂಬ ಮುನಿಯನ್ನು ಕಂಡು ಅವರು ಅಹಂಕಾರದಿಂದ ಪ್ರೇರಿತರಾಗಿ ಆ ಮುನಿಯ ಸಮೀಪವನ್ನು ಸೇರಿ ಆ ಮುನಿಯನ್ನು ''ಬೆತ್ತಲೆಯುವನೆ !ದೇವರೂ ಆಗಮವೂ ಪದಾರ್ಥವೂ ಇಲ್ಲವೇ ಇಲ್ಲ. ಮೂರ್ಖನಾಗಿ ಪ್ರತ್ಯಕ್ಷವಾದ ವಿಷಯವನ್ನು ವಿನಾಶಮಾಡುವ ದುರ್ಮಾರ್ಗದಲ್ಲಿ ವ್ಯರ್ಥವಾಗಿ ಸುಮ್ಮನೆ ಏತಕ್ಕೆ ಕ್ಲೇಶಪಡುತ್ತಿ ?'' ಎಂದು ಆಕ್ಷೇಪಿಸಿದರು. ಆ ಸತ್ಯಕಮುನಿಯೂ ಜಿನಮುಖದಿಂದ ಹೊರಟಿರುವುದೂ ವಿವಕ್ಷಿತ ಅವಿವಕ್ಷಿತ ಮೊದಲಾದ ಅನೇಕಸ್ವರೂಪವಾದ ಧರ್ಮವನ್ನು ಹೊಂದಿರುವುದೂ ಆದ ದ್ರವ್ಯತತ್ತ್ವವನ್ನೂ ಕಂಡ ಹಾಗೆಯೇ ಕಾರಣಸಹಿತವಾಗಿ ಸ್ಯಾದ್ವಾದವನ್ನು ಅವಲಂಬಿಸಿ ಹೇಳುವವನನ್ನೂ(ಆಪ್ತನನ್ನೂ) ಅದೃಷ್ಟಭಾಗದಲ್ಲಿಯೂ (ಪರೋಕ್ಷ ವಿಷಯದಲ್ಲಿಯೂ) ಆಗಮಕರ್ತನ ಪ್ರಮಾಣತ್ವವನ್ನೂ ಆಪ್ತನಿಂದ ಹೇಳಲ್ಪಟ್ಟ ಆಗಮದ ಇರುವಿಕೆಯನ್ನೂ(ಆಪ್ತ ಆಗಮ ಪದಾರ್ಥಗಳನ್ನು) ನಿರೂಪಣಮಾಡಿ ಚೆನ್ನಾಗಿ ಸಾಧಿಸಿ ದುರಾತ್ಮರಾದ ಅವರುಗಳ ವಾದದ ನವೆಯನ್ನು ಹೋಗಲಾಡಿಸಿ ವಿದ್ವಜ್ಜನರಿಂದ ಕೊಡಲ್ಪಟ್ಟ ಜಯಧ್ವಜವನ್ನು ಹೊಂದಿದನು. ಮಾನಭಂಗದಿಂದುಟಾದ ಕ್ರೋಧವುಳ್ಳವರಾದ ಆ ಅಗ್ನಿಭೂತಿ ವಾಯುಭೂತಿದ್ವಿಜರು ಮರುದಿವಸ ರಾತ್ರಿಯಲ್ಲಿ ಹರಿತವಾದ ಆಯುಧವುಳ್ಳವರೂ ಪಾಪಕಾರ್ಯವುಳ್ಳವರೂ ಆಗಿ ನಿರ್ಜನಪ್ರದೇಶದಲ್ಲಿ ಪ್ರತಿಮಾಯೋಗವನ್ನು ಹೊಂದಿರುವವನೂ ಶುದ್ಧಚಿತ್ತವುಳ್ಳವನೂ ಆದ ಸತ್ಯಕಮುನಿಪುಂಗವನನ್ನು ಶಸ್ತ್ರದಿಂದ ಕೊಲ್ಲುವುದಕ್ಕೆ ಉದ್ಯುಕ್ತರಾದರು. ಸುಧರ್ಮಯಕ್ಷನು ಕೋಪದಿಂದ 'ಇದು ಅನ್ಯಾಯ' ಎಂದು

ಅವರನ್ನು, ಕೀಲಿಸಲ್ಪಟ್ಟವರಂತೆ, ಸ್ತಂಭಿತರನ್ನಾಗಿ ಮಾಡಿದನು. ಆಗ ಅವರ ತಾಯಿ ತಂದೆಗಳೂ ಬಂಧುಗಳೂ ಆಕುಲರಾಗಿ ಮುನಿಗಳಿಗೆ ಶರಣಾದರು. ಪ್ರಾಜ್ಞನಾದ ಯಕ್ಷನು ಅವರನ್ನು ಕುರಿತು "ನೀವುಗಳು ಹಿಂಸಾಧರ್ಮವನ್ನು ಪರಿತ್ಯಜಿಸಿ ಜಿನೇಶ್ವರಮತವನ್ನು ಸ್ವೀಕರಿಸುವಿರಾದರೆ ಈ ಅಗ್ನಿಭೂತಿ ವಾಯುಭೂತಿಗಳಿಗೆ ಬಿಡುಗಡೆಯಾಗುವುದು" ಎಂದು ಹೇಳಿದನು.

**ತೇಽಪಿ ಭೀತಾಸ್ತಥಾ ಬಾಢಂ ಕರಿಷ್ಯಾಮ ಇತಿ ದ್ರುತಮ್ ।**
**ಮುನಿಂ ಪ್ರದಕ್ಷಿಣೀಕೃತ್ಯ ಪ್ರಣಮ್ಯ ವಿಧಿಪೂರ್ವಕಮ್ ॥ ೯೭೯ ॥**

**ಮಿಥ್ಯೈವ ಪ್ರತ್ಯಪದ್ಯಂತ ಧರ್ಮಂ ಶ್ರಾವಕಪಾಲಿತಮ್ ।**
**ತತಸ್ತತ್ಸ್ತಂಭನಾಪಾಯೇ ಸತಿ ತೈಸ್ತಾವುದೀರಿತೌ ॥ ೯೮೦ ॥**

**ವಿರಂತವ್ಯಮಿತೋ ಧರ್ಮಾದಸ್ಮಾದ್ಧೇತೋರುಪಾಸಿತಾತ್ ।**
**ಇತಿ ನಾತ್ಮಾತ್ತಸನ್ಮಾರ್ಗಾಚ್ಚೇಲತುಃ ಕಾಲಲಬ್ಧಿತಃ ॥ ೯೮೧ ॥**

ಭೀತರಾದ ಅವರುಗಳೂ ಹಾಗೆಯೇ ಚೆನ್ನಾಗಿ ಮಾಡುವೆವು ಎಂದು ಮುನಿಯನ್ನು ಪ್ರದಕ್ಷಿಣೆಮಾಡಿ ವಿಧಿಪೂರ್ವಕವಾಗಿ ನಮಸ್ಕರಿಸಿ ಶ್ರಾವಕರಿಂದ ಪಾಲಿಸಲ್ಪಡುವ ಧರ್ಮವನ್ನು ಸುಳ್ಳಾಗಿಯೇ ಒಪ್ಪಿಕೊಂಡರು. ಬಳಿಕ ಅವರ ಸ್ತಂಭನವು ನಿವೃತ್ತಿಯಾಗುತ್ತಿರಲು ಆ ತಂದೆ ತಾಯಿ ಮೊದಲಾದವರು ಅಗ್ನಿಭೂತಿ ವಾಯುಭೂತಿಯರನ್ನು ಕುರಿತು ಈ ಬಿಡುಗಡೆಯ ನಿಮಿತ್ತದಿಂದ ಭಜಿಸಲ್ಪಟ್ಟ ಈ ಜೈನ ಧರ್ಮದಿಂದ ವಿರಾಮವನ್ನು ಹೊಂದಬೇಕು ಎಂದು ಹೇಳಿದರು. ಆದರೆ ಅವರು ಕಾಲಲಬ್ಧಿಯಿಂದ ತಾವು ಸ್ವೀಕರಿಸಿದ ಸನ್ಮಾರ್ಗದಿಂದ ಚಲಿಸಲಿಲ್ಲ.

**ತೇನ ಸಂಕ್ರುಧ್ಯ ತೇ ತಾಭ್ಯಾಂ ಮೃತ್ವಾ ಪಾಪವಿಪಾಕತಃ ।**
**ಅಭ್ರಾಮ್ಯನ್ ಕುಗತೀರ್ದೀರ್ಘಂ ತೌ ಚ ಬ್ರಾಹ್ಮಣಪುತ್ರಕೌ ॥ ೯೮೨ ॥**

**ಸವ್ರತೌ ಜೀವಿತಸ್ಯಾಂತೇ ಕಲ್ಪೇ ಸೌಧರ್ಮನಾಮನಿ ।**
**ಪಂಚಪಲ್ಯೋಪಮಾಯುಷ್ಕೌ ಜಾತೌ ಪಾರಿಷದಾಗ್ರಿಮೌ ॥ ೯೮೩ ॥**

ಅದರಿಂದ ಆ ಬಂಧುಗಳು ಅವರೊಡನೆ ಕೋಪಿಸಿಕೊಂಡು ಪಾಪಪರಿಪಾಕದಿಂದ ಬಹುಕಾಲದವರೆಗೆ ದುರ್ಗತಿಗಳನ್ನು ಸುತ್ತಿದರು. ಆ ಬ್ರಾಹ್ಮಣಪುತ್ರರೂ ವ್ರತ ಸಹಿತರಾಗಿ ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮಕಲ್ಪದಲ್ಲಿ ಐದು ಪಲ್ಯೋಪಮಾಯುಷ್ಯವುಳ್ಳವರೂ ಪಾರಿಷದರೆಂಬ ದೇವರ್ಕಳಲ್ಲಿ ಶ್ರೇಷ್ಠರೂ ಆಗಿ ಜನಿಸಿದರು.

**ತತ್ರಾನುಭೂಯ ಸದ್ಭೋಗಾನ್ ದ್ವೀಪೇಽಸ್ಮಿನ್ ಕೌಶಲೇ ಪುರೇ ।**
**ಸಾಕೇತೇಽರಿಂಜಯೋ ರಾಜಾ ಸಶೌರ್ಯೋಽಭೂದರಿಂ ಜಯನ್॥ ೯೮೪ ॥**

**ತತ್ರಾರ್ಹದ್ದಾಸವಾಕ್ಶ್ರೇಷ್ಠೀ ವಪ್ರಶ್ರೀಸ್ತನ್ಮನಃಪ್ರಿಯಾ ।**
**ಅಗ್ನಿಭೂತಿಸ್ತಯೋಃ ಪೂರ್ಣಭದ್ರೋಽನ್ಯೋ ಮಾಣಿಭದ್ರಕಃ ॥ ೯೮೫ ॥**

**ಸುತೌ ಸಮುದಭೂತಾಂ ತಾವನ್ಯೇದ್ಯುಃ ಸ ಮಹೀಪತಿಃ ।**
**ಸಿದ್ಧಾರ್ಥವನಮಧ್ಯಸ್ಥಮಹೇಂದ್ರಗುರುಸನ್ನಿಧಿಮ್ ॥ ೯೮೬ ॥**

**ಬಹುಭಿಃ ಸಹ ಸಂಪ್ರಾಪ್ಯ ಶ್ರುತ್ವಾ ಧರ್ಮಂ ವಿಶುದ್ಧಧೀಃ ।**
**ಅರಿಂದಮೇ ಸಮಾರೋಪ್ಯ ರಾಜ್ಯಭಾರಂ ಭರಕ್ಷಮೇ ॥ ೯೮೭ ॥**

**ಅರ್ಹದ್ದಾಸಾದಿಭಿಃ ಸಾರ್ಧಂ ಸಂಯಮಂ ಪ್ರತ್ಯಪದ್ಯತ ।**
**ತತ್ರೈವ ಪೂರ್ಣಭದ್ರೇಣ ಪ್ರಾಕ್ತನಂ ಮದ್ಗುರುದ್ವಯಮ್ ॥ ೯೮೮ ॥**

**ಕ್ವಾದ್ಯ ವರ್ತತ ಇತ್ಯೇತತ್ಪರಿಪೃಷ್ಟೋ ಮುನಿರ್ಜಗೌ ।**
**ಜಿನಧರ್ಮವಿರುದ್ಧತ್ವಾತ್ಕೃತಪಾಪೋಽಭವನ್ಮೃತಃ ॥ ೯೮೯ ॥**

**ರತ್ನಪ್ರಭಾಬಿಲೇ ಸರ್ವಾವರ್ತನಾಮ್ನಿ ತತೋಽಜನಿ ।**
**ಮಾತಂಗಃ ಕಾಕಜಂಘಾಖ್ಯಃ ಸೋಮದೇವೋಽಭವತ್ಪಿತಾ ॥ ೯೯೦ ॥**

ಈ ಜಂಬೂದ್ವೀಪದ ಕೌಶಲದೇಶದಲ್ಲಿ ಅಯೋಧ್ಯಾನಗರದಲ್ಲಿ ಶತ್ರುವನ್ನು ಜಯಿಸುವವನೂ ಶೌರ್ಯಯುಕ್ತನೂ ಆದ ಅರಿಂಜಯನೆಂಬ ರಾಜನಿದ್ದನು. ಅಲ್ಲಿ ಅರ್ಹದ್ದಾಸನೆಂಬ ಶ್ರೇಷ್ಠಿಯೂ ವಪ್ರಶ್ರೀಯೆಂಬ ಅವನ ಪತ್ನಿಯೂ ಇದ್ದರು. ಅಗ್ನಿಭೂತಿ ವಾಯುಭೂತಿಗಳು ಆ ಸ್ವರ್ಗದಲ್ಲಿ ಉತ್ತಮಭೋಗಗಳನ್ನನುಭವಿಸಿ ಬಂದು ಆ ವೈಶ್ಯದಂಪತಿಗಳಲ್ಲಿ ಅಗ್ನಿಭೂತಿಯು ಪೂರ್ಣಭದ್ರನೆಂಬ ಪುತ್ರನಾಗಿಯೂ ವಾಯುಭೂತಿಯು ಮಾಣಿಭದ್ರನೆಂಬ ಪುತ್ರನಾಗಿಯೂ ಅವರು ಉದ್ಭವಿಸಿದರು. ಮತ್ತೊಂದು ದಿವಸ ಆ ಅರಿಂಜಯರಾಜನು ಅನೇಕರೊಡನೆ ಸಿದ್ಧಾರ್ಥವನದ ಮಧ್ಯದಲ್ಲಿ ಮಹೇಂದ್ರನೆಂಬ ಗುರುವಿನ ಸಮೀಪವನ್ನು ಹೊಂದಿ ಧರ್ಮವನ್ನು ಕೇಳಿ ವಿಶುದ್ಧವಾದ ಬುದ್ಧಿಯುಳ್ಳವನಾಗಿ ರಾಜ್ಯಭಾರವನ್ನು ವಹಿಸಲು ಸಮರ್ಥನಾದ ಅರಿಂದಮನೆಂಬ ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ಅರ್ಹದ್ದಾಸನೇ ಮೊದಲಾದವರೊಡನೆ ಸಂಯಮವನ್ನು ಹೊಂದಿದನು. ಅಲ್ಲಿಯೇ ಪೂರ್ಣಭದ್ರನಿಂದ ಪೂರ್ವಭವದ ನನ್ನ ತಂದೆತಾಯಿಗಳು ಈಗ ಎಲ್ಲಿದ್ದಾರೆ ? ಎಂದು ಪ್ರಶ್ನೆಮಾಡಲ್ಪಟ್ಟ ಆ ಮಹೇಂದ್ರಮುನಿಯು 'ಜಿನಧರ್ಮಕ್ಕೆ ವಿರುದ್ಧವಾಗಿದ್ದುರಿಂದ ಪಾಪವನ್ನು ಮಾಡಿದ ನಿನ್ನ ತಂದೆಯಾದ ಸೋಮದೇವನು ಮೃತನಾಗಿ ಸರ್ವಾವರ್ತವೆಂಬ ರತ್ನಪ್ರಭಾನರಕಬಿಲದಲ್ಲಿ ಹುಟ್ಟಿದನು. ಅಲ್ಲಿಂದ ಬಂದು ಕಾಕಜಂಘನೆಂಬ ಮಾದಿಗನಾಗಿ ಜನಿಸಿದನು.

**ಮಾತಾಗ್ನಿಲಾ ಚ ತಸ್ಯೈವ ಜಾಯತೇ ಸ್ಮ ಶುನೀ ಗೃಹೇ ।**
**ಇಹೇತ್ಯಾಕರ್ಣ್ಯ ತತ್ಪ್ರೋಕ್ತಂ ತೇನ ತೌ ಪರಿಬೋಧಿತೌ ॥ ೯೯೧ ॥**

**ಸಂಪ್ರಾಪ್ಯೋಪಶಮಂ ಭಾವಂ ಸನ್ನ್ಯಸ್ಯ ವಿಧಿನಾ ಮೃತಃ ।**
**ಕಾಕಜಂಘೋಽಭವನ್ನಂದೀಶ್ವರದ್ವೀಪೇ ನಿಧೀಶ್ವರಃ ॥ ೯೯೨ ॥**

ತಾಯಿಯಾದ ಅಗ್ನಿಲೆಯೂ ಇಲ್ಲಿ ಆ ಕಾಕಜಂಘನ ಮನೆಯಲ್ಲೇ ಹೆಣ್ಣುನಾಯಿಯಾಗಿ ಜನಿಸಿದಳು' ಈ ಪ್ರಕಾರವಾಗಿ ಆ ಮಹೇಂದ್ರಮುನಿಯ ವಚನವನ್ನು ಕೇಳಿ ಪೂರ್ಣಭದ್ರನಿಂದ ಆ ಕಾಕಜಂಘನೂ ನಾಯಿಯೂ ಬೋಧಿಸಲ್ಪಟ್ಟು ಉಪಶಮಭಾವವನ್ನು ಹೊಂದಿ ವಿಧಿಯಿಂದ ಆಹಾರಾದಿಗಳನ್ನು ತ್ಯಜಿಸಿ ಮೃತನಾದ ಕಾಕಜಂಘನು ನಂದೀಶ್ವರದ್ವೀಪದಲ್ಲಿ ಕುಬೇರನೆಂಬ ವ್ಯಂತರದೇವನಾಗಿ ಜನಿಸಿದನು.

**ತತ್ಪುರಾಧೀಶ್ವರಾರಿಂದಮಾಖ್ಯಭೂಭೃತ್ಪತೇಃ ಸುತಾ ।**
**ಶ್ರೀಮತ್ಯಾಶ್ಚ ಶುನೀ ಸುಪ್ರಬುದ್ಧಾಖ್ಯಾಜಾಯತ ಪ್ರಿಯಾ ॥ ೯೯೩ ॥**

ಆ ಹೆಣ್ಣುನಾಯಿಯು ಆ ನಗರದ ದೊರೆಯಾದ ಅರಿಂದಮರಾಜನಿಗೂ ಅವನ ಪತ್ನಿಯಾದ ಶ್ರೀಮತಿಗೂ ಸುಪ್ರಬುದ್ಧೆಯೆಂಬ ಪ್ರಿಯಪುತ್ರಿಯಾಗಿ ಜನಿಸಿದಳು.

**ಸಂಪೂರ್ಣಯೌವನಾ ಯಾಂತೀ ಸಾ ಸ್ವಯಂವರಮಂಡಪಮ್ ।**
**ಯಕ್ಷೇಣ ಬೋಧಿತಾ ದೀಕ್ಷಾಮಿತ್ವಾಪ್ಯ ಪ್ರಿಯದರ್ಶನಾಮ್ ॥ ೯೯೪ ॥**

**ಜೀವಿತಾಂತೇಽಭವದ್ದೇವೀ ಮಣಿಚೂಲೇತಿ ರೂಪಿಣೀ ।**
**ಸೌಧರ್ಮಾಧಿಪತೇಃ ಪೂರ್ಣಭದ್ರಸ್ತದನುಜೋಽಪಿ ಚ ॥ ೯೯೫ ॥**

**ಸಪ್ತಸ್ಥಾನಗತೌ ಖ್ಯಾತಶ್ರಾವಕೌ ತೌ ದೃಢವ್ರತೌ ।**
**ಪ್ರಾಂತೇ ಸಾಮಾನಿಕೌ ದೇವೌ ಜಾತೌ ಸೌಧರ್ಮನಾಮನಿ ॥ ೯೯೬ ॥**

ಸಂಪೂರ್ಣ ಯೌವನವತಿಯಾದ ಆಕೆಯು ಸ್ವಯಂವರ ಮಂಡಪವನ್ನು ಹೊಂದಿದವಳೂ ಆ ಕುಬೇರಯಕ್ಷನಿಂದ ಬೋಧಿಸಲ್ಪಟ್ಟವಳೂ ಆಗಿ ಪ್ರಿಯದರ್ಶನೆಯೆಂಬ ಆರ್ಯಿಕೆಯನ್ನು ಹೊಂದಿ ದೀಕ್ಷೆಯನ್ನು ಪಡೆದು ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮಕಲ್ಪದ ಇಂದ್ರನಿಗೆ ರೂಪವತಿಯಾದ ಮಣಿಚೂಲಾದೇವಿಯಾದಳು. ಪೂರ್ಣಭದ್ರನೂ ಅವನ ತಮ್ಮನಾದ ಮಾಣಿಭದ್ರನೂ ದರ್ಶನಿಕಾದಿ ಸಪ್ತಸ್ಥಾನಗಳನ್ನು(ಶ್ರಾವಕರ ನೆಲೆಗಳನ್ನು) ಹೊಂದಿದವರೂ ಪ್ರಖ್ಯಾತರಾದ ಶ್ರಾವಕರೂ ದೃಢವ್ರತವುಳ್ಳವರೂ ಆಗಿ ಅವರು ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮ ಸ್ವರ್ಗದಲ್ಲಿ ಸಾಮಾನಿಕದೇವರ್ಕಳಾಗಿ ಜನಿಸಿದರು.

**ದ್ವಿಸಾಗರೋಪಮಾತೀತೌ ದ್ವೀಪೇಽತ್ರ ಕುರುಜಾಂಗಲೇ ।**
**ಹಾಸ್ತಿನಾಖ್ಯಪುರಾಧೀಶಸ್ಯಾರ್ಹದ್ದಾಸಮಹೀಪತೇಃ ॥ ೯೯೭ ॥**

**ಕಾಶ್ಯಪಾಯಾಶ್ಚ ಪುತ್ರೌ ತೌ ಮಧುಕ್ರೀಡವನಾಮಕೌ ।**
**ಸಮಭೂತಾಂ ತಯೋ ರಾಜಾ ರಾಜತ್ವಯುವರಾಜತೇ ॥ ೯೯೮ ॥**

**ವಿಧಾಯ ವಿಮಲಾಂ ಪ್ರಾಪದ್ವಿಮಲಪ್ರಭಶಿಷ್ಯತಾಮ್ ।**
**ಕಂಠಾಂತಾಮಲಕಾಖ್ಯಸ್ಯ ಪುರಸ್ಯೇಶಃ ಕದಾಚನ ॥ ೯೯೯ ॥**

**ರಥಾಂತಕನಕಸ್ಯ ಸ್ವಂ ಸಮಾಯಾತಸ್ಯ ಸೇವಿತುಮ್ ।**
**ಕಾಂತಾಂ ಕನಕಮಾಲಾಖ್ಯಾಂ ಸಮೀಕ್ಷ್ಯ ಮದನಾತುರಃ ॥ ೧೦೦೦ ॥**

**ಸ್ವೀಚಕಾರ ಮಧುಃ ಶೋಕಾದ್ರಥಾಂತಕನಕಾಹ್ವಯಃ ।**
**ಪಾರ್ಶ್ವೇ ಜಟಿಲಸಂಜ್ಞಸ್ಯ ತಾಪಸವ್ರತಮಾದದೇ ॥ ೧೦೦೧ ॥**

ಎರಡು ಸಾಗರೋಪಮವರ್ಷಾಯುಷ್ಯವು ಪೂರ್ತಿಯಾಗುತ್ತಿರಲು ಅಲ್ಲಿಂದ ಚ್ಯುತರಾಗಿ ಈ ಜಂಬೂದ್ವೀಪದ ಕುರುಜಾಂಗಲ ದೇಶದಲ್ಲಿ ಹಸ್ತಿನಾಪುರದ ದೊರೆಯಾದ ಅರ್ಹದ್ದಾಸರಾಜನಿಗೂ ಆತನ ಪತ್ನಿಯಾದ ಕಾಶ್ಯಪೆಗೂ ಮಧು ಕ್ರೀಡವರೆಂಬ ಪುತ್ರರಾಗಿ ಜನಿಸಿದರು. ಅವರಲ್ಲಿ ರಾಜನು ಯಥಾಕ್ರಮವಾಗಿ ರಾಜ ಪದವಿಯನ್ನೂ ಯುವರಾಜಪದವಿಯನ್ನೂ ವಹಿಸಿ ತಾನು ನಿರ್ಮಲವಾದ ವಿಮಲಪ್ರಭಮುನಿಯ ಶಿಷ್ಯತ್ವವನ್ನು ಹೊಂದಿದನು. ಒಂದಾನೊಂದು ಕಾಲದಲ್ಲಿ ಮಧುರಾಜನು ಅಮಲಕಂಠವೆಂಬ ನಗರದ ಅಧಿಪತಿಯೂ ತನ್ನನ್ನು ಸೇವಿಸು ವುದಕ್ಕೋಸ್ಕರ ಬಂದವನೂ ಆದ ಕನಕರಥನ ಪತ್ನಿಯಾದ ಕನಕಮಾಲೆಯೆಂಬ ವಳನ್ನು ನೋಡಿ ಕಾಮಾತುರನಾಗಿ ಆಕೆಯನ್ನು ಸ್ವೀಕರಿಸಿದನು. ಕನಕರಥನು ಶೋಕ ದಿಂದ ಜಟಿಲನೆಂಬ ತಪಸ್ವಿಯ ಬಳಿಯಲ್ಲಿ ತಾಪಸವ್ರತವನ್ನು ಕೈಕೊಂಡನು.

**ಮಧುಕ್ರೀಡವಯೋರೇವಂ ಕಾಲೇ ಗಚ್ಛತ್ಯಥಾನ್ಯದಾ ।**
**ಸಮ್ಯಗಾಕರ್ಣ್ಯ ಸದ್ಧರ್ಮಂ ಮಧುರ್ವಿಮಲವಾಹನಾತ್ ॥ ೧೦೦೨ ॥**

**ಗರ್ಹಣಂ ಸ್ವದುರಾಚಾರೇ ಕೃತ್ವಾ ಕ್ರೀಡವಸಂಯುತಃ ।**
**ಸಂಯಮಂ ಸಮವಾಪ್ಯಾಂತೇ ಸಂಶ್ರಿತ್ಯಾರಾಧನಾವಿಧಿಮ್ ॥ ೧೦೦೩ ॥**

**ಅನ್ವಭೂತ್ಸ ಮಹಾಶುಕ್ರಸ್ಯಾಧಿಪತ್ಯಂ ಸಹಾನುಜಃ ।**
**ಸ್ವಾಯುರಂತೇ ತತಶ್ಚ್ಯುತ್ವಾ ಸ್ವಾವಶೇಷಶುಭೋದಯಾತ್ ॥ ೧೦೦೪ ॥**

**ಸುಸ್ವಪ್ನಪೂರ್ವಕಂ ಜ್ಯೇಷ್ಠೋ ರುಗ್ಮಿಣ್ಯಾಮಭವತ್ಸುತಃ ।**
**ದುರಾಚಾರಾರ್ಜಿತಂ ಪಾಪಂ ಸಚ್ಚಾರಿತ್ರೇಣ ನಶ್ಯತಿ ॥ ೧೦೦೫ ॥**

ಮಧು ಕ್ರೀಡವರ ಕಾಲವು ಈ ರೀತಿಯಾಗಿ ಕಳೆಯುತ್ತಿರಲು ಬಳಿಕ ಮತ್ತೊಂದು ಕಾಲದಲ್ಲಿ ಮಧುರಾಜನು ವಿಮಲವಾಹನಮುನಿಯಿಂದ ಚೆನ್ನಾಗಿ ಧರ್ಮವನ್ನು ಕೇಳಿ ತನ್ನ ದುರಾಚಾರವಿಷಯದಲ್ಲಿ ತನ್ನನ್ನು ತಾನು ನಿಂದನೆಯನ್ನು ಮಾಡಿ ಕ್ರೀಡವಸಹಿತನಾಗಿ ದೀಕ್ಷೆಯನ್ನು ತೆಗೆದುಕೊಂಡು ಆಯುಷ್ಯಾವಸಾನದಲ್ಲಿ ಆರಾಧನಾವಿಧಿಯನ್ನು ಹೊಂದಿ ಸತ್ತು ಅವನು ತಮ್ಮನೊಡನೆ ಮಹಾಶುಕ್ರಸ್ವರ್ಗದ ಆಧಿಪತ್ಯವನ್ನು ಅನುಭವಿಸಿದನು. ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತನಾಗಿ ತನ್ನ ಅವಶಿಷ್ಟವಾದ ಪುಣ್ಯೋದಯದಿಂದ ಹಿರಿಯನು ಸುಸ್ವಪ್ನಪೂರ್ವಕವಾಗಿ ರುಗ್ಮಿಣಿ ಯಲ್ಲಿ ಪ್ರದ್ಯುಮ್ನನೆಂಬ ಪುತ್ರನಾಗಿ ಜನಿಸಿದನು. ದುರಾಚಾರದಿಂದ ಸಂಪಾದಿಸಿದ ಪಾಪವು ಉತ್ತಮಚಾರಿತ್ರದಿಂದ ನಾಶವಾಗುವುದು.

**ದ್ವಿತೀಯೇಹನಿ ತದ್ಬಾಲಸಂಚಿತೋಗ್ರಾಘಸನ್ನಿಭಃ ।**
**ದೇವೋ ಜ್ಯೋತಿರ್ಗಣೇ ಜಾತೋ ಧೂಮಕೇತುಸಮಾಹ್ವಯಃ ॥**

**ಗಚ್ಛನ್ಯದೃಚ್ಛಯಾ ವ್ಯೋಮ್ನಿ ವಿಹರ್ತುಂ ವಾತರಂಹಸಾ ।**
**ವಿಮಾನೇ ಸ್ವೇ ಧೃತೇ ವಾನ್ಯೈಃ ಪ್ರದ್ಯುಮ್ನಸ್ಯೋಪರಿ ಸ್ಥಿತೇ ॥ ೧೦೦೭ ॥**

**ಚರಮಾಂಗಸ್ಯ ಕೇನೇದಂ ಕೃತಮಿತ್ಯುಪಯುಕ್ತವಾನ್ ।**
**ವಿಭಂಗಾದಾತ್ಮನಃ ಶತ್ರುಂ ಜ್ಞಾತ್ವಾ ಪ್ರಾಕ್ತನಜನ್ಮನಿ ॥ ೧೦೦೮ ॥**

**ರಥಾಂತಕನಕಸ್ಯಾಯಂ ದರ್ಪಾದ್ದಾರಾನ್ಸಮಾಹರತ್ ।**
**ತತ್ಫಲಂ ಪ್ರಾಪಯಾಮ್ಯೇನಮಿತಿ ವೈರಾಗ್ನಿನಾ ಜ್ವಲನ್ ॥ ೧೦೦೯ ॥**

**ವಿಧಾಯ ಸ ಮಹಾನಿದ್ರಾಮಂತಃಪುರನಿವಾಸಿನಾಮ್ ।**
**ತಮುದ್ಧೃತ್ಯಾಬ್ದಮಾರ್ಗೇಣ ದೂರಂ ನೀತ್ವಾ ಯಥಾ ಚಿರಮ್ ॥**

**ಅನುಭೂಯ ಮಹಾದುಃಖಂ ಕುರ್ಯಾತ್ಪ್ರಾಣವಿಮೋಚನಮ್ ।**
**ಕರಿಷ್ಯಾಮಿ ತಥೇತ್ಯಸ್ಯ ಪುಣ್ಯೇನೈವಂ ಪ್ರಚೋದಿತಃ ॥ ೧೦೧೧ ॥**

**ಅವರುಹ್ಯ ನಭೋಭಾಗಾದ್ವನೇ ಖದಿರನಾಮನಿ ।**
**ಶಿಲಾಯಾಸ್ತಕ್ಷಕಾಖ್ಯಾಯಾಃ ಕ್ಷಿಪ್ತ್ವಾಧಸ್ತಾದಮುಂ ಗತಃ ॥ ೧೦೧೨ ॥**

ಇತ್ತ ತಾಪಸನಾಗಿದ್ದ ಕನಕರಥನು ಸತ್ತು ಜ್ಯೋತಿರ್ದೇವರ್ಕಳ ಸಮೂಹದಲ್ಲಿ ಆ ಪ್ರದ್ಯುಮ್ನಬಾಲಕನ ಪೂರ್ವಸಂಚಿತವಾದ ತೀವ್ರಪಾಪಕ್ಕೆ ಸದೃಶನಾದ ಧೂಮ ಕೇತುವೆಂಬ ದೇವನಾಗಿ ಜನಿಸಿದ್ದು ಅವನು ಆ ಮಗುವು ಹುಟ್ಟಿದ ಎರಡನೆಯ ದಿವಸದಲ್ಲಿ ಅಕಸ್ಮಾತ್ತಾಗಿ ಆಕಾಶದಲ್ಲಿ ವಿಹರಿಸುವುದಕ್ಕೋಸ್ಕರ ವಾಯುವೇಗದಿಂದ ಹೋಗುವವನಾಗಿ ತನ್ನ ವಿಮಾನವು ಬೇರೆಯವರಿಂದ ಹಿಡಿಯಲ್ಪಟ್ಟಿತೋ ಎನ್ನುವಂತೆ ಚರಮಶರೀರಿಯಾದ ಪ್ರದ್ಯುಮ್ನನ ಮೇಲೆ–ಆಕಾಶದಲ್ಲಿ ನಿಂತಿರು ತ್ತಿರಲು 'ಯಾವನಿಂದ ಈ ಕಾರ್ಯವು ಮಾಡಲ್ಪಟ್ಟಿತು' ಎಂದು ಜ್ಞಾನದ ಉಪ ಯೋಗವುಳ್ಳವನಾಗಿ ವಿಭಂಗಜ್ಞಾನದಿಂದ ತನ್ನ ಶತ್ರುವನ್ನು ತಿಳಿದು 'ಪೂರ್ವ ಜನ್ಮದಲ್ಲಿ ಕನಕರಥನಾಗಿದ್ದ ನನ್ನ ಪತ್ನಿಯನ್ನು ಇವನು ಅಹಂಕಾರದಿಂದ ಅಪಹರಿಸಿದನು. ಅದರ ಫಲವನ್ನು ಇವನಿಗೆ ಹೊಂದಿಸುತ್ತೇನೆ' ಎಂದು ವೈರವೆಂಬ ಅಗ್ನಿಯಿಂದ ಜ್ವಲಿಸುವವನಾಗಿ ಆ ದೇವನು ಅಂತಃಪುರನಿವಾಸಿಗಳಿಗೆ ಮಹಾ ನಿದ್ರೆಯನ್ನುಂಟುಮಾಡಿ ಆ ಬಾಲಕನನ್ನೆತ್ತಿಕೊಂಡು ಮೇಘಮಾರ್ಗದಿಂದ ದೂರವಾಗಿ ಒಯ್ದು 'ಇವನು ಬಹುಕಾಲದವರೆಗೆ ಮಹಾದುಃಖವನ್ನನುಭವಿಸಿ ಸಾಯುವಂತೆ ಮಾಡುವೆನು' ಎಂದು ಈ ಪ್ರದ್ಯುಮ್ನನ ಪುಣ್ಯದಿಂದ ಹೀಗೆ (ಕೊಲ್ಲ ಲ್ಪಡದೆ) ಪ್ರೇರಿತನಾಗಿ ಆಕಾಶಭಾಗದಿಂದಿಳಿದು ಖದಿರವನದಲ್ಲಿ ತಕ್ಷಶಿಲೆಯ ಕೆಳಗೆ ಇವನನ್ನು ಎಸೆದು ಹೊರಟುಹೋದನು.

**ತದೈವ ವಿಜಯಾರ್ಧಾದ್ರಿದಕ್ಷಿಣಶ್ರೇಣಿಭೂಷಣೇ ।**
**ವಿಷಯೇಮೃತವತ್ಯಾಖ್ಯೇ ಮೇಘಕೂಟಪುರಾಧಿಪಃ ॥ ೧೦೧೩ ॥**

**ಕಾಲಶಂಬರವಿದ್ಯಾಧರೇಶಃ ಕಾಂಚನಮಾಲಯಾ ।**
**ಸಹ ಜೈನೇಶ್ವರೀರರ್ಚಾಃ ಪ್ರಿಯಯಾ ಪ್ರಾರ್ಚಿತುಂ ಪ್ರಯಾನ್ ॥**

**ಮಹಾಶಿಲಾಖಿಲಾಂಗಾತಿಚಲನಂ ವೀಕ್ಷ್ಯ ವಿಸ್ಮಯಾತ್ ।**
**ಸಮಂತಾದ್ವೀಕ್ಷ್ಯಮಾಣೋಸೌ ದೃಷ್ಟ್ವಾ ಬಾಲಂ ಜ್ವಲತ್ಪ್ರಭಮ್ ॥**

**ಪ್ರಾಕೃತೋಯಂ ನ ಕೇನಾಪಿ ಕೋಪಾತ್ಪಾಪ್ಯಗ್ಜನ್ಮವೈರಿಣಾ ।**
**ನಿಕ್ಷಿಪ್ತಃ ಪಾಪಿನಾಮುಷ್ಮಿನ್ ಪಶ್ಯ ಬಾಲಾರ್ಕಭಾಸ್ವರಃ ॥ ೧೦೧೬ ॥**

**ತಸ್ಮಾತ್ತವಾಸ್ತು ಪುತ್ರೋಯಂ ಗೃಹಾಣಾಮುಂ ಮನೋರಮೇ ।**
**ಇತ್ಯಾಹೋವಾಚ ಸಾಪ್ಯಸ್ಮೈ ಯೌವರಾಜ್ಯಂ ದದಾಸಿ ಚೇತ್ ॥ ೧೦೧೭ ॥**

**ಗೃಹೀಷ್ಯಾಮೀತಿ ತೇನಾಪಿ ಪ್ರತಿಪದ್ಯ ತಥಾಸ್ತ್ವಿತಿ ।**
**ತತ್ಕರ್ಣಗತಸೌವರ್ಣಪತ್ರೇಣಾರಚಿ ಪಟ್ಟಕಃ ॥ ೧೦೧೮ ॥**

ಆಗಲೇ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಗೆ ಭೂಷಣವಾದ ಅಮೃತವತಿ ಯೆಂಬ ದೇಶದಲ್ಲಿ ಮೇಘಕೂಟಪುರಾಧಿಪತಿಯಾದ ಕಾಲಶಂಬರನೆಂಬ ವಿದ್ಯಾಧರೇ ಶ್ವರನು ತನ್ನ ಪತ್ನಿಯಾದ ಕಾಂಚನಮಾಲೆಯೊಡನೆ ಜಿನೇಶ್ವರಬಿಂಬಗಳನ್ನು ಪೂಜಿಸು ವುದಕ್ಕೋಸ್ಕರ ಹೋಗುವವನಾಗಿ ಆ ದೊಡ್ಡಕಲ್ಲಿನ ಎಲ್ಲಾ ಭಾಗಗಳ ಚಲನೆಯನ್ನು ನೋಡಿ ಆಶ್ಚರ್ಯದಿಂದ ಸುತ್ತಲೂ ನೋಡುವವನಾಗಿ ಈ ಖೇಚರನು ಪ್ರಕಾಶಿಸುತ್ತಿರುವ ಪ್ರಭೆಯುಳ್ಳ ಬಾಲಕನನ್ನು ನೋಡಿ 'ಇವನು ಸಾಮಾನ್ಯನಲ್ಲ. ಪೂರ್ವಜನ್ಮಶತ್ರುವಾದ ಯಾವನೋ ಪಾಪಿಯು ಕೋಪದಿಂದ ಈ ಕಲ್ಲಿನಲ್ಲಿ ಇವನನ್ನು ಹಾಕಿದ್ದಾನೆ. ನೋಡು. ಆದುದರಿಂದ ಬಾಲಸೂರ್ಯನಂತೆ ಪ್ರಕಾಶ ಮಾನನಾದ ಇವನು ನಿನಗೆ ಪುತ್ರನಾಗಿರಲಿ. ಮನೋಹರಳೆ–ಪ್ರಿಯೆ! ಇವನನ್ನು ಪರಿಗ್ರಹಿಸು.' ಎಂದು ಹೆಂಡತಿಗೆ ಹೇಳಿದನು. ಆಕೆಯೂ 'ಇವನಿಗೆ ಯುವರಾಜ ಪದವನ್ನು ಕೊಡುವೆಯಾದರೆ ಪರಿಗ್ರಹಿಸುವೆನು' ಎಂದು ಹೇಳಿದಳು. ಆ ಕಾಲ ಶಂಬರನೂ 'ಹಾಗೆಯೇ ಆಗಲಿ' ಎಂದು ಒಪ್ಪಿ ಅವನ ಕಿವಿಯಲ್ಲಿದ್ದ ಬಂಗಾರದ ತಗಡಿನಿಂದ ಪಟ್ಟವನ್ನು ರಚಿಸಿದನು.

**ತೌ ತಂ ಬಾಲಂ ಸಮಾದಾಯ ಪುರಮಾವಿಷ್ಕೃತೋತ್ಸವಮ್ ।**
**ಪ್ರವಿಶ್ಯ ದೇವದತ್ತಾಖ್ಯಾಂ ವ್ಯಧಾತಾಂ ವಿಧಿಪೂರ್ವಕಮ್ ॥ ೧೦೧೯ ॥**

ಆ ದಂಪತಿಗಳು ಆ ಬಾಲಕನನ್ನು ತೆಗೆದುಕೊಂಡು ಪ್ರಕಟಿಸಲ್ಪಟ್ಟ ಉತ್ಸವವುಳ್ಳ ತಮ್ಮ ಪಟ್ಟಣವನ್ನು ಪ್ರವೇಶಿಸಿ ಆ ಮಗುವಿಗೆ ವಿಧಿಪೂರ್ವಕವಾಗಿ 'ದೇವದತ್ತ' ಎಂಬ ನಾಮಕರಣವನ್ನು ಮಾಡಿದರು.

**ತದ್ಬಾಲಲಾಲನಾಲೀಲಾವಿಲಾಸೈರ್ಹೃಷ್ಟಚೇತಸೋಃ ।**
**ತಯೋರ್ಗಚ್ಛತಿ ನಿರ್ವ್ಯಾಜಂ ಕಾಲೇ ಸುಸುಖಭಾಗಿನೋಃ ॥ ೧೦೨೦ ॥**

**ಇತಃ ಸುತವಿಯೋಗೇನ ರುಗ್ಮಿಣೀ ಶೋಕವಹ್ನಿನಾ ।**
**ದಹ್ಯಮಾನಾ ಸ್ಥಲಾಂಭೋಜವಲ್ಲೀವ ವನವಹ್ನಿನಾ ॥ ೧೦೨೧ ॥**

**ಸಂಪತ್ತಿರ್ವಾಚರಿತ್ರಸ್ಯ ದಯಾಭಾವವಿವರ್ಜಿತಾ ।**
**ಕಾರ್ಯಾಕಾರ್ಯವಿಚಾರೇಷು ಮಂದಮಂದೇವ ಶೇಮುಷೀ ॥**

**ಮೇಘಮಾಲೇವ ಕಾಲೇನ ನಿರ್ಗಲಜ್ಜಲಸಂಚಯಾ ।**
**ನಾಬಭಾಸೇ ಗತೇ ಪ್ರಾಣೇ ಕ್ವ ಭವೇತ್ಸುಪ್ರಭಾ ತನೋಃ ॥ ೧೦೨೩ ॥**

ಆ ಬಾಲಕನ ಪಾಲನಪೋಷಣವಿಲಾಸಗಳಿಂದ ಸಂತುಷ್ಟವಾದ ಚಿತ್ತವುಳ್ಳವರೂ ಉತ್ತಮಸುಖಭಾಗಿಗಳೂ ಆದ ಆ ದಂಪತಿಗಳ ಕಾಲವು ನಿರಾಯಾಸವಾಗಿ ಕಳೆಯುತ್ತಿರಲು ಇತ್ತ ಪುತ್ರವಿಯೋಗದಿಂದ ರುಗ್ಮಿಣಿಯು, ಕಾಳ್ಗಿಚ್ಚಿನಿಂದ ಸುಡಲ್ಪಡುವ ನೆಲದಾವರೆಯ ಬಳ್ಳಿಯಂತೆ, ಶೋಕಾಗ್ನಿಯಿಂದ ದಹಿಸಲ್ಪಡುವವಳಾಗಿ, ಆಚರಣೆಯಿಲ್ಲದವನ ದಯಾರಹಿತವಾದ ಸಂಪತ್ತಿಯಂತೆಯೂ ಕಾರ್ಯಾಕಾರ್ಯವಿಚಾರಗಳಲ್ಲಿ ಅತ್ಯಂತಮಂದವಾದ ಬುದ್ಧಿಯಂತೆಯೂ ಕಾಲದಿಂದ ಸುರಿದುಹೋದ ಜಲರಾಶಿಯುಳ್ಳ ಮೇಘಮಾಲೆಯಂತೆಯೂ, ಪ್ರಕಾಶಿಸಲಿಲ್ಲ. ಪ್ರಾಣವು ಹೊರಟು ಹೋಗುತ್ತಿರಲು ಶರೀರದ ಉತ್ತಮಕಾಂತಿಯು ಎಲ್ಲಿರುವುದು ?

**ತದೈವ ವಾಸುದೇವೋಪಿ ತದ್ವಿಯೋಗಾದಗಾಚ್ಛುಚಮ್ ।**
**ಪೃಥಕ್ತರುಲತಾಯೋಗೇ ನ ವಜ್ರಪರಿತಾಡನಮ್ ॥ ೧೦೨೪ ॥**

ಆಗಲೇ ವಾಸುದೇವನೂ ಆ ಮಗುವಿನ ವಿಯೋಗದಿಂದ ಶೋಕವನ್ನು ಹೊಂದಿದನು. ಮರವೂ ಬಳ್ಳಿಯೂ ಸೇರಿರುವ ಸಂಬಂಧದಲ್ಲಿ ಬೇರೆ ಬೇರೆಯಾಗಿ ಸಿಡಿಲು ಬಡೆಯುವುದಿಲ್ಲ. ಸೇರಿರುವ ಮರಬಳ್ಳಿಗಳಿಗೆ ಒಟ್ಟಿಗೆ ಸಿಡಿಲು ಬಡೆಯುವಂತೆ ಆ ದಂಪತಿಗಳಿಗೀರ್ವರಿಗೂ ದುಃಖವುಂಟಾಯಿತೆಂದು ಭಾವವು.

**ಜಲಾಶಯಸ್ತೃಷಾರ್ತಸ್ಯ ಕೇಕಿನೋ ಜಲದಾಗಮಃ ।**
**ಯಥಾ ತಥಾಸ್ಯ ಸಂತೃಪ್ತ್ಯೈ ಸನ್ನಿಧಿಂ ನಾರದೋಗಮತ್ ॥ ೧೦೨೫ ॥**

ಬಾಯಾರಿಕೆಯಿಂದ ಪೀಡಿತನಾದವನಿಗೆ ಸರೋವರವೂ ನವಿಲಿಗೆ ಮೇಘಗಳ ಆಗಮನವೂ ಹೇಗೆ ಸಂತೃಪ್ತಿಗೆ ಕಾರಣವಾಗುವುದೋ ಹಾಗೆ ಈ ಕೃಷ್ಣನ ಸಂತೃಪ್ತಿ ಗೋಸ್ಕರ ನಾರದನು ಸಮೀಪಕ್ಕೆ ಬಂದನು.

**ತಂ ವೀಕ್ಷ್ಯ ಬಾಲವೃತ್ತಾಂತಂ ಹರಿರುಕ್ತ್ವಾಭ್ಯಧಾದಿದಮ್ ।**
**ತ್ವಯಾ ಕೇನಾಪ್ಯುಪಾಯೇನ ಕ್ವಾಪಿ ಸೋನ್ವಿಷ್ಯತಾಮಿತಿ ॥ ೧೦೨೬ ॥**

ಹರಿಯು ಆ ನಾರದನನ್ನು ನೋಡಿ ಮಗುವಿನ ಸಮಾಚಾರವನ್ನು ಹೇಳಿ 'ನೀನು ಯಾವುದಾದರೂ ಉಪಾಯದಿಂದ ಆ ಮಗುವನ್ನು ಎಲ್ಲಿಯಾದರೂ ಹುಡುಕು' ಎಂಬೀ ಮಾತನ್ನು ಹೇಳಿದನು.

**ನಾರದಸ್ತತ್ಸಮಾಕರ್ಣ್ಯ ಶೃಣು ಪೂಜ್ಯ ವಿದೇಹಜೇ ।**
**ನಗರೇ ಪುಂಡರೀಕಿಣ್ಯಾಂ ಮಯಾ ತೀರ್ಥಕೃತೋ ಗಿರಾ ॥ ೧೦೨೭ ॥**

**ಸ್ವಯಂಪ್ರಭಸ್ಯ ಜ್ಞಾತಾನಿ ವಾರ್ತಾಂ ಬಾಲಸ್ಯ ಪೃಚ್ಛತಾ ।**
**ಭವಾಂತರಾಣಿ ತದ್ವೃದ್ಧಿಸ್ಥಾನಂ ಲಾಭೋ ಮಹಾನಪಿ ॥ ೧೦೨೮ ॥**

**ಸಹ ಯೋಗೋ ಯುವಾಭ್ಯಾಂ ಚ ತಸ್ಯ ಷೋಡಶವತ್ಸರೈಃ ।**
**ಇತ್ಯಸೌ ವಾಸುದೇವಂ ಚ ರುಗ್ಮಿಣೀಂ ಚ ಯಥಾಶ್ರುತಮ್ ॥ ೧೦೨೯ ॥**

**ಪ್ರಾಬೋಧಯತ್ತಯೋಸ್ತಸ್ಮಾತ್ಸುರಸೇನಾನ್ಯಲೋಕಯೋಃ ।**
**ಪ್ರಾದುರ್ಭಾವಾಜ್ಜಿನಸ್ಯೇವ ಪ್ರಮೋದಃ ಪರಮೋಭವತ್ ॥ ೧೦೩೦ ॥**

ಈ ನಾರದನು ಆ ಮಾತನ್ನು ಕೇಳಿ 'ಪೂಜ್ಯನೆ ! ಕೇಳು. ವಿದೇಹದಲ್ಲಿರುವ ಪುಂಡರೀಕಿಣೀನಗರದಲ್ಲಿ ಮಗುವಿನ ಸಮಾಚಾರವನ್ನು ಕೇಳಿದ ನಾನು ಸ್ವಯಂಪ್ರಭತೀರ್ಥಂಕರರ ವಚನದಿಂದ ಅವನ ಭವಾಂತರಗಳನ್ನೂ ಅವನು ಬೆಳೆಯುವ ಸ್ಥಾನವನ್ನೂ ಮಹಾಲಾಭವನ್ನೂ ತಿಳಿದೆನು. ಅವನ ಹದಿನಾರು ವರ್ಷಗಳಿಂದ ನಿಮ್ಮಗಳೊಡನೆ ಸಂಬಂಧವಾಗುವುದು' ಎಂದು ವಾಸುದೇವನಿಗೂ ರುಗ್ಮಿಣಿಗೂ ತಾನು ಕೇಳಿದಂತೆಯೇ ಚೆನ್ನಾಗಿ ಬೋಧಿಸಿದನು. ಜಿನೇಶ್ವರನ ಪ್ರಾದುರ್ಭಾವದಿಂದ ದೇವರ್ಕಳ ಸೈನ್ಯಕ್ಕೂ ಮನುಷ್ಯಲೋಕಕ್ಕೂ ಸಂತೋಷವಾಗುವಂತೆ ಆ ಮಗುವಿನ ಸಮಾಚಾರವನ್ನು ಕೇಳಿದುದರಿಂದ ಆ ವಾಸುದೇವ ರುಗ್ಮಿಣಿಯರಿಗೆ ಪರಮ ಸಂತೋಷವಾಯಿತು.

**ಕ್ರಮೇಣ ಕೃತಪುಣ್ಯೋಸೌ ತತ್ರ ಸಂಪೂರ್ಣಯೌವನಃ ।**
**ಕದಾಚಿದಾಜ್ಞಯಾ ರಾಜ್ಞಃ ಪ್ರದ್ಯುಮ್ನಃ ಸಬಲೋ ಬಲೀ ॥ ೧೦೩೧ ॥**

**ಗತ್ವಾ ದ್ವಿಷೋಗ್ನಿರಾಜಸ್ಯ ವಿಕ್ರಮಾದುಪರಿ ಸ್ವಯಮ್ ।**
**ನಿಷ್ಪ್ರತಾಪಂ ವಿಧಾಯೈನಂ ಯುದ್ಧೇ ಜಿತ್ವಾರ್ಪಯತ್ಪಿತುಃ ॥ ೧೦೩೨ ॥**

ಪುಣ್ಯವನ್ನು ಗಳಿಸಿರುವ ಈ ಪ್ರದ್ಯುಮ್ನನು ಅಲ್ಲಿ ಕ್ರಮದಿಂದ ಸಂಪೂರ್ಣ ಯೌವನವುಳ್ಳವನಾಗಿ ಒಂದಾನೊಂದು ಕಾಲದಲ್ಲಿ ರಾಜನ ಆಜ್ಞೆಯಿಂದ ಸೈನ್ಯ ಸಮೇತನೂ ಬಲಶಾಲಿಯೂ ಆಗಿ ತಾನು ಶತ್ರುವಾದ ಅಗ್ನಿರಾಜನ ಮೇಲೆ ಪರಾಕ್ರಮದಿಂದ ಹೋಗಿ ಇವನನ್ನು ಪ್ರತಾಪರಹಿತನನ್ನಾಗಿ ಮಾಡಿ ಯುದ್ಧದಲ್ಲಿ ಜಯಿಸಿ ಸೆರೆಹಿಡಿದು ತಂದು ತಂದೆಗರ್ಪಿಸಿದನು.

**ತದಾ ದೃಷ್ಟಾಪದಾನಸ್ಯ ಪ್ರದ್ಯುಮ್ನಸ್ಯ ಖಗಾಧಿಪಃ ।**
**ಪರಾರ್ಧ್ಯವಸ್ತುದಾನೇನ ಮಹತೀಂ ಮಾನನಾಂ ವ್ಯಧಾತ್ ॥ ೧೦೩೩ ॥**

ಆಗ ಖೇಚರಾಧಿಪತಿ–ಕಾಲಶಂಬರನು ಸಾಹಸಕಾರ್ಯವನ್ನು ತೋರಿಸಿದ ಪ್ರದ್ಯುಮ್ನನಿಗೆ ಉತ್ತಮವಸ್ತುಗಳ ದಾನದಿಂದ ಅಧಿಕವಾದ ಸನ್ಮಾನವನ್ನು ಮಾಡಿದನು.

**ಅವತೀರ್ಣಮಿವ ಸ್ವರ್ಗಾದ್ಯೌವನೈಕವಿಭೂಷಣಮ್ ।**
**ಭುವಂ ಕದಾಚಿತ್ತದ್ರೂಪಮಾಹಾರ್ಯೈಃಶ್ಚಾತಿಭಾಸ್ವರಮ್ ॥ ೧೦೩೪ ॥**

**ಅವಲೋಕ್ಯ ಸ್ಮರಾಕ್ರಾಂತಬುದ್ಧ್ಯಾ ಕಾಂಚನಮಾಲಯಾ ।**
**ಜನ್ಮಾಂತರಾಗತಸ್ನೇಹಕೃತಾನೇಕವಿಕಾರಯಾ ॥ ೧೦೩೫ ॥**

**ಪ್ರಕಾಶಯಂತ್ಯಾ ಸ್ವಾಂತಃಸ್ಥಂ ಭಾವಂ ಪಾಪಪರೀತಯಾ ।**
**ಕುಮಾರ ತುಭ್ಯಂ ಮದ್ದೇಯಾಂ ಗೃಹಾಣ ವಿಧಿಪೂರ್ವಕಮ್ ॥**

**ಪ್ರಜ್ಞಪ್ತಿವಿದ್ಯಾಮಿತ್ಯುಕ್ತಸ್ತಯಾ ಮಾಯಾಮಯೇಹಯಾ ।**
**ಸೋಪಿ ಮಾತಸ್ತಥೈವಾಹಂ ಕರಿಷ್ಯಾಮೀತಿ ಸಮ್ಮದಾತ್ ॥ ೧೦೩೭ ॥**

**ಆದಾಯ ಧೀಮಾಂಸ್ತಾಂ ವಿದ್ಯಾಂ ಸಿದ್ಧಕೂಟಮುಪಾಗಮತ್ ।**
**ಕೃತ್ವಾ ತತ್ರ ನಮಸ್ಕಾರಂ ಚಾರಣೌ ಮುನಿಪುಂಗವೌ ॥ ೧೦೩೮ ॥**

**ಶ್ರಿತ್ವಾ ಶ್ರುತ್ವಾ ತತೋ ಧರ್ಮಂ ಜ್ಞಾತ್ವಾ ವಿದ್ಯಾಪ್ರಸಾಧನೇ ।**
**ಹೇತುಂ ತದುಪದೇಶೇನ ಸಂಜಯಂತಂ ಸಮಾಶ್ರಯತ್ ॥ ೧೦೩೯ ॥**

**ಆಕರ್ಣ್ಯ ತತ್ಪುರಾಣಂ ಚ ತದರ್ಚಾಪಾದಸಂಶ್ರಯಾತ್ ।**
**ವಿದ್ಯಾಂ ಸಂಸಾಧ್ಯ ಸಂಜಾತಸಮ್ಮದಃ ಪುರಮಾಗಮತ್ ॥ ೧೦೪೦ ॥**

ಒಂದಾನೊಂದು ಕಾಲದಲ್ಲಿ ಯೌವನವೇ ಮುಖ್ಯವಾದ ಭೂಷಣವಾಗಿರುವುದೂ ಸ್ವರ್ಗದಿಂದ ಭೂಮಿಗೆ ಅವತರಿಸಿದಂತಿರುವುದೂ ಆಭರಣಗಳಿಂದಲೂ ಹೆಚ್ಚಾಗಿ ಪ್ರಕಾಶಮಾನವೂ ಆದ ಆ ಪ್ರದ್ಯುಮ್ನನರೂಪವನ್ನು ನೋಡಿ ಜನ್ಮಾಂತರದಿಂದ ಬಂದ ಸ್ನೇಹದಿಂದಾದ ಅನೇಕ ವಿಕಾರಗಳುಳ್ಳವಳೂ ತನ್ನೊಳಗಿರುವ ಭಾವವನ್ನು ಪ್ರಕಾಶಪಡಿಸುವವಳೂ ಪಾಪದಿಂದ ಆವರಿಸಲ್ಪಟ್ಟವಳೂ ಮಾಯಾಮಯವಾದ ಇಚ್ಛೆಯುಳ್ಳವಳೂ ಆದ ಆ ಕಾಂಚನಮಾಲೆಯು ಕಾಮಾಕ್ರಾಂತವಾದ ಬುದ್ಧಿಯಿಂದ 'ಕುಮಾರನೆ! ನನ್ನಿಂದ ಕೊಡಲ್ಪಡತಕ್ಕುದಾದ ಪ್ರಜ್ಞಪ್ತಿ ವಿದ್ಯೆಯನ್ನು ವಿಧಿಪೂರ್ವಕವಾಗಿ ಗ್ರಹಣಮಾಡು' ಎಂದು ಹೇಳಿದಳು. ಪ್ರಾಜ್ಞನಾದ ಆ ಪ್ರದ್ಯುಮ್ನನೂ 'ತಾಯಿಯೆ! ನಾನು ಹಾಗೆಯೇ ಮಾಡುವೆನು' ಎಂದು ಸಂತೋಷದಿಂದ ಆ ವಿದ್ಯೆಯನ್ನು ತೆಗೆದುಕೊಂಡು ಸಿದ್ಧಕೂಟವನ್ನು ಸೇರಿದನು. ಅಲ್ಲಿ ದೇವರಿಗೆ ನಮಸ್ಕಾರವನ್ನು ಮಾಡಿ ಇಬ್ಬರು ಚಾರಣಮುನಿಗಳನ್ನು ಕಂಡು ಅವರಿಂದ ಧರ್ಮವನ್ನು ಕೇಳಿ ವಿದ್ಯಾಸಾಧನದಲ್ಲಿ ಸಂಜಯಂತಮುನಿಯನ್ನು ಕಾರಣನನ್ನಾಗಿ ತಿಳಿದು ಆ ಚಾರಣಮುನಿಗಳ ಉಪದೇಶದಿಂದ ಸಂಜಯಂತ ಮುನಿಯ ಪುರಾಣವನ್ನೂ ಕೇಳಿ ಆ ಸಂಜಯಂತಮುನಿಯನ್ನು ಹೊಂದಿದನು. ಅವನ ಪೂಜಾಪುರಸ್ಸರವಾಗಿ ಪಾದಾಶ್ರಯದಿಂದ ವಿದ್ಯೆಯನ್ನು ಸಾಧಿಸಿ ಸಂತೋಷೋತ್ಪತ್ತಿಯುಳ್ಳವನಾಗಿ ಪಟ್ಟಣಕ್ಕೆ ಬಂದನು.

**ದೃಷ್ಟ್ವಾ ದ್ವಿಗುಣಿತಾಕಾರಶೋಭಂ ತಂ ಕಾಮಕಾತರಾ ।**
**ಪ್ರಾರ್ಥಯಂತೀ ಬಹೂಪಾಯೈರನಿಚ್ಛಂತಂ ಮಹಾಮತಿಮ್ ॥ ೧೦೪೧ ॥**

**ಪುರುಷವ್ರತಸಂಪನ್ನಮತಿದ್ವೇಷಾದಬೂಬುಧತ್ ।**
**ಕುಮಾರಃ ಸಹವಾಸಸ್ಯ ಯೋಗ್ಯೋ ನಾಯಂ ಕುಚೇಷ್ಟಿತಃ ॥ ೧೦೪೨ ॥**

**ಜಾನಾಮ್ಯನಭಿಜಾತತ್ವಮಸ್ಯೇತಿ ಖಚರಾಧಿಪಮ್ ।**
**ವಿಚಾರವಿಕಲಃ ಸೋಪಿ ತದುಕ್ತಂ ತತ್ತ್ವತೀತವಾನ್ ॥ ೧೦೪೩ ॥**

**ವಿದ್ಯುದ್ದಂಷ್ಟ್ರಾದಿಕಾನ್ಪಂಚಶತಾನಿ ತನುಜಾನ್ಮಿಥಃ ।**
**ಆಹೂಯ ದೇವದತ್ತೋಯಂ ದೌಷ್ಟ್ಯೋಪಾಂಶುವಧೋಚಿತಃ ॥**

**ತತಃ ಕೇನಾಪ್ಯುಪಾಯೇನ ಭವದ್ಭಿಃ ಕ್ರಿಯತಾಂ ವ್ಯಸುಃ ।**
**ಇತ್ಯಾಹ ಖಚರಾಧೀಶೋ ಲಬ್ಧಾಜ್ಞಾಸ್ತೇಪಿ ಕೋಪಿನಃ ॥ ೧೦೪೪ ॥**

**ಸ್ವಯಂ ಪ್ರಾಗಪಿ ತಂ ಹಂತುಂ ಕೃತಮಂತ್ರಾಃ ಪರಸ್ಪರಮ್ ।**
**ತಥೇತಿ ಪ್ರತಿಪದ್ಯಾತೋ ನಿರ್ಯಯುಸ್ತಚ್ಚಿಕೀರ್ಷವಃ ॥ ೧೦೪೬ ॥**

ದ್ವಿಗುಣಿತಾಕಾರವಾದ ಶೋಭೆಯುಳ್ಳ ಆ ಪ್ರದ್ಯುಮ್ನನನ್ನು ನೋಡಿ ಕಾಮಾತುರಳಾದ ಕಾಂಚನಮಾಲೆಯು ವಿವಿಧೋಪಾಯಗಳಿಂದ ಪ್ರಾರ್ಥಿಸುವವಳಾಗಿ ಇಚ್ಛಿಸದಿರುವವನನ್ನಾಗಿಯೂ ಮಹಾಪ್ರಾಜ್ಞನನ್ನಾಗಿಯೂ ಪುರುಷರ ವ್ರತ (ಸ್ವದಾರಸಂತೋಷ-ಪರದಾರ ನಿವೃತ್ತಿ) ವಿಶಿಷ್ಟನನ್ನಾಗಿಯೂ ತಿಳಿದು ಬಹು ದ್ವೇಷದಿಂದ ಖೇಚರಾಧಿಪತಿ-ಕಾಲಶಂಬರನನ್ನು ಕುರಿತು 'ಕುಚೇಷ್ಟೆಯುಳ್ಳವನಾದ ಈ ಕುಮಾರನು ಸಹವಾಸಕ್ಕೆ ಯೋಗ್ಯನಲ್ಲ. ಇವನ ಸತ್ಕುಲಪ್ರಸೂತತ್ವವನ್ನು (ಉತ್ತಮಕುಲದಲ್ಲಿ ಹುಟ್ಟಿರುವಿಕೆಯನ್ನು) ನಾನು ತಿಳಿಯುವುದಿಲ್ಲ' ಎಂದು ಬೋಧಿಸಿದಳು. ವಿಚಾರಶೂನ್ಯನಾದ ಆ ಖೇಚರಾಧಿಪತಿಯೂ ಆಕೆಯು ಹೇಳಿದ ಆ ಮಾತನ್ನು ನಂಬುವವನಾಗಿ ವಿದ್ಯುದ್ದಂಷ್ಟ್ರನೇ ಮೊದಲಾದ ಐದುನೂರುಮಂದಿ ಪುತ್ರರನ್ನು ಗುಪ್ತವಾಗಿ ಕರೆದು 'ಈ ದೇವದತ್ತನು ದೌಷ್ಟ್ಯದಿಂದ ರಹಸ್ಯದಲ್ಲಿ ವಧೆಗೆ ಉಚಿತನಾಗಿದ್ದಾನೆ. ಆದುದರಿಂದ ನೀವುಗಳು ಯಾವುದಾದರೂ ಉಪಾಯದಿಂದ ಕೊಂದುಬಿಡಿ' ಎಂದು ಹೇಳಿದನು. ಅಜ್ಞೆಯನ್ನು ಪಡೆದವರೂ ತಾವು ಮೊದಲೂ ಕೋಪವುಳ್ಳವರೂ ಆಗಿದ್ದ ಆ ಮಕ್ಕಳೂ ಅವನನ್ನು ಕೊಲ್ಲುವುದಕ್ಕೆ ಪರಸ್ಪರವಾಗಿ ಪರ್ಯಾಲೋಚಿಸಿದವರಾಗಿ 'ಹಾಗೆಯೇ ಆಗಲಿ' ಎಂದು ಒಪ್ಪಿ ಆ ಕಾರ್ಯವನ್ನು ಮಾಡಬೇಕೆಂಬ ಇಚ್ಛೆಯುಳ್ಳವರಾಗಿ ಹೊರಟರು.

**ಹಿಂಸಾಪ್ರಧಾನಶಾಸ್ತ್ರಾದ್ವಾ ರಾಜ್ಯಾದ್ವಾ ನಯವರ್ಜಿತಾತ್ ।**
**ತಪಸೋ ವಾಪಮಾರ್ಗಸ್ಥಾದ್ದುಷ್ಕಲತ್ರಾದ್ಧ್ರುವಂ ಕ್ಷತಿಃ ॥ ೧೦೪೭ ॥**

ಹಿಂಸಾಪ್ರಧಾನವಾದ ಶಾಸ್ತ್ರದಿಂದಾಗಲಿ ನಯರಹಿತವಾದ ರಾಜ್ಯದಿಂದಾಗಲಿ ತಪ್ಪುದಾರಿಯಲ್ಲಿರುವ ತಪಸ್ಸಿನಿಂದಾಗಲಿ ದುಷ್ಟಪತ್ನಿಯಿಂದಾಗಲಿ ನಿಶ್ಚಯವಾಗಿ ಹಾನಿಯುಂಟಾಗುವುದು.

**ಚಾಲಯಂತಿ ಸ್ಥಿರಾಮೃಜ್ವೀಂ ನಯಂತಿ ವಿಪರೀತತಾಮ್ ।**
**ಛಾದಯಂತಿ ಮತಿಂ ದೀಪ್ತಾಂ ಸ್ತ್ರಿಯೋ ವಾ ದೋಷವಿಕ್ರಿಯಾಃ ॥**

ದೋಷವಿಕಾರಗಳಂತೆ, ಸ್ತ್ರೀಯರು ಸ್ಥಿರವಾದ ಬುದ್ಧಿಯನ್ನು ಚಲನೆಮಾಡಿಸುತ್ತಾರೆ. ಸರಳವಾದ ಬುದ್ಧಿಯನ್ನು ವಕ್ರವನ್ನಾಗಿ ಮಾಡುತ್ತಾರೆ. ಪ್ರಕಾಶಮಾನವಾದ ಬುದ್ಧಿಯನ್ನು ಮುಚ್ಚುತ್ತಾರೆ.

**ತದ್ವೈವ ತೋಷೋ ರೋಷಶ್ಚ ಪಾಪಿನೀನಾಂ ಪ್ರಿಯಾನ್ ಪ್ರತಿ ।**
**ನ ಹೇತುಸ್ತತ್ರ ಕೋಪ್ಯನ್ಯೋ ಲಾಭಾಲಾಭದ್ವಯಾದ್ವಿನಾ ॥ ೧೦೪೯ ॥**

ಪಾಪವತಿಯರಾದ ಸ್ತ್ರೀಯರಿಗೆ ಪ್ರಾಣಕಾಂತರನ್ನು ಕುರಿತು ಆಗಲೇ ಸಂತೋಷವೂ ಕೋಪವೂ ಉಂಟಾಗುವುವು. ಆ ತೋಷರೋಷಗಳಲ್ಲಿ ಯಥಾಕ್ರಮವಾಗಿ ಲಾಭವೂ ಅಲಾಭವೂ ಹೊರತು ಮತ್ತಾವುದೂ ಕಾರಣವಲ್ಲ.

**ಅಕಾರ್ಯಮವಶಿಷ್ಟಂ ಯತ್ತನ್ನಾಸ್ತೀಹ ಕುಯೋಷಿತಾಮ್ ।**
**ಮುಕ್ತ್ವಾ ಪುತ್ರಾಭಿಲಾಷಿತ್ವಮೇತದಪ್ಯೇತಯಾ ಕೃತಮ್ ॥ ೧೦೫೦ ॥**

ಈ ಲೋಕದಲ್ಲಿ ದುಷ್ಟಸ್ತ್ರೀಯರಿಗೆ ಪುತ್ರನ ಬಯಸುವಿಕೆಯನ್ನು ಬಿಟ್ಟು ಮತ್ತಾವ ಅಕಾರ್ಯವೂ ಉಳಿದಿಲ್ಲ. ಈ ಕಾಂಚನಮಾಲೆಯು ಪುತ್ರಾಭಿಲಾಷೆಯನ್ನೂ ಮಾಡಿಬಿಟ್ಟಳು.

**ಯೋಷಿತ್ಸು ವ್ರತಶೀಲಾದಿಸತ್ಕ್ರಿಯಾಶ್ಚಾಪ್ನುವಂತಿ ಚೇತ್ ।**
**ನ ಶುದ್ಧಿಂ ತಾಃ ಸ್ವಪರ್ಯಂತಂ ಕಥಂ ನಾಯಾಂತ್ಯಸತ್ಕ್ರಿಯಾಃ ॥**

ಸ್ತ್ರೀಯರಲ್ಲಿ ವ್ರತಶೀಲವೇ ಮೊದಲಾದ ಸತ್ಕ್ರಿಯೆಗಳು ಶುದ್ಧಿಯನ್ನು ಹೊಂದುವುದಿಲ್ಲವಾದರೆ ಅವು ಅಸತ್ಕ್ರಿಯೆಗಳಾಗಿ ತಮ್ಮ ಅವಸಾನವನ್ನು ಹೇಗೆ ಹೊಂದದಿರಬೇಕು? ಸ್ತ್ರೀಯರಲ್ಲಿ ವ್ರತಶೀಲಾದಿಕ್ರಿಯೆಗಳು ಶುದ್ಧವಾಗಿರುವುದಿಲ್ಲವೆಂದು ಭಾವವು.

**ಅಂಭೋ ವಾಂಭೋಜಪತ್ರೇಷು ಚಿತ್ತಂ ತಾಸಾಂ ನ ಕೇಷು ಚಿತ್ ।**
**ಸ್ಥಾಸ್ನು ತಿಷ್ಠದಪಿ ಸ್ಪೃಷ್ಟ್ವಾಪ್ಯಸ್ಪೃಷ್ಟವದತಃ ಪೃಥಕ್ ॥ ೧೦೫೨ ॥**

ತಾವರೆಯ ಎಲೆಗಳಲ್ಲಿ ನೀರಿನಂತೆ, ಆ ಸ್ತ್ರೀಯರ ಚಿತ್ತವು ಯಾರಲ್ಲಿಯೂ ಇದ್ದರೂ ಸ್ಥಿರವಾಗಿರುವುದಿಲ್ಲ. ಮುಟ್ಟಿಯೂ ಮುಟ್ಟದಂತೆ ಬೇರೆಯಾಗಿರುವುದು.

**ಸರ್ವದೋಷಮಯೋ ಭಾವೋ ದುರ್ಲಕ್ಷ್ಯಃ ಸರ್ವಯೋಷಿತಾಮ್ ।**
**ದುಃಸಾಧಶ್ಚ ಮಹಾಮೋಹಾವಹೋಸೌ ಸನ್ನಿಪಾತವತ್ ॥ ೧೦೫೩ ॥**

ಸಮಸ್ತಸ್ತ್ರೀಯರ ಸಕಲದೋಷಮಯವಾದ ಭಾವವು ಕಷ್ಟದಿಂದ ಕಂಡುಹಿಡಿಯಲ್ಪಡತಕ್ಕುದಾಗಿಯೂ ಸನ್ನಿಪಾತದಂತೆ ಮಹಾಮೂರ್ಛೆ-ಬುದ್ಧಿಭ್ರಮೆಯನ್ನುಂಟುಮಾಡುವುದಾಗಿಯೂ ಕಷ್ಟದಿಂದ ಸಾಧಿಸಲ್ಪಡುವುದಾಗಿಯೂ ಇರುತ್ತದೆ.

**ಕಃ ಕಂ ಕಿಂ ವಕ್ತಿ ಕೇನೇತಿ ವಿಚಾರ್ಯಂ ಕಾರ್ಯಕಾರಿಣಾ ।**
**ಐಹಿಕಾಮುತ್ರಿಕಾರ್ಥೇಷು ತತೋಯಂ ನೈತಿ ವಂಚನಾಮ್ ॥ ೧೦೫೪ ॥**

ಕಾರ್ಯವನ್ನು ಮಾಡುವವನು ಯಾವನು ಯಾವನನ್ನು ಕುರಿತು ಯಾವ ನೊಡನೆ ಏನನ್ನು ಹೇಳುತ್ತಾನೆ? ಎಂದು ವಿಚಾರಮಾಡಬೇಕು. ಆದರಿಂದ ಈ ಕಾರ್ಯಕಾರಿಯಾದ ಮನುಷ್ಯನು ಐಹಿಕಾಮುಷ್ಮಿಕಪದಾರ್ಥಗಳಲ್ಲಿ ಮೋಸ ಹೋಗುವುದಿಲ್ಲ.

**ಪ್ರಮಾಣವಚನಃ ಕಿಂ ವಾ ನೇತಿ ವಕ್ತಾ ಪರೀಕ್ಷ್ಯತಾಮ್ ।**
**ವಿದುಷಾ ತಸ್ಯ ವೃತ್ತೇನ ಪರಿಜ್ಞಾನೇನ ಚ ಸ್ಫುಟಮ್ ॥ ೧೦೫೫ ॥**

ಹೇಳುವವನು ನಂಬತಕ್ಕ ಮಾತುಳ್ಳವನೋ ? ಅಲ್ಲವೋ ? ಎಂದು ಅವನ ನಡತೆಯಿಂದಲೂ ಅವನ ತಿಳುವಳಿಕೆಯಿಂದಲೂ ಪ್ರಾಜ್ಞನು ಸ್ಫುಟವಾಗಿ ಪರೀಕ್ಷಿಸಬೇಕು.

**ಏತಸ್ಮಿನ್ ಸಂಭವೇದೇತನ್ನ ವೇತಿ ನಯವೇದಿನಾ ।**
**ತದಾಚಾರೈಃ ಪರೀಕ್ಷ್ಯಃ ಪ್ರಾಗ್ಯಮುದ್ದಿಶ್ಯ ವಚಸ್ಸ ಚ ॥ ೧೦೫೬ ॥**

ಮೊದಲು ಯಾವನನ್ನು ಕುರಿತು ವಚನವುಂಟಾಗುವುದೋ ಅವನೂ 'ಇವನಲ್ಲಿ ಇದು ಸಂಭವಿಸಬಹುದೋ ? ಇಲ್ಲವೋ ? ' ಎಂದು ಅವನ ಆಚಾರಗಳಿಂದ ನಯವನ್ನು ತಿಳಿದ–ಪ್ರಾಜ್ಞನಿಂದ ಪರೀಕ್ಷಿಸಲ್ಪಡತಕ್ಕವನಾಗಿರುತ್ತಾನೆ.

**ಕಿಂ ಪ್ರತ್ಯೇಯಮಿದಂ ನೇತಿ ಶಬ್ದೇನಾರ್ಥೇನ ಚ ಧ್ರುವಮ್ ।**
**ಉಕ್ತಂ ವ್ಯಕ್ತಂ ಪರೀಕ್ಷ್ಯಂ ತತ್ಸಮೀಕ್ಷಾಪೂರ್ವಕಾರಿಭಿಃ ॥ ೧೦೫೭ ॥**

ವಿಚಾರಪೂರ್ವಕವಾಗಿ ಕಾರ್ಯವನ್ನು ಮಾಡುವವರು ಶಬ್ದದಿಂದಲೂ ಅರ್ಥದಿಂದಲೂ 'ಇದು ಸ್ಥಿರವಾಗಿ ನಂಬತಕ್ಕುದೋ ? ಅಲ್ಲವೋ ?' ಎಂದು ಮಾತನ್ನು ಚೆನ್ನಾಗಿ ಪರೀಕ್ಷಿಸಬೇಕು.

**ಭಿಯಾ ಸ್ನೇಹೇನ ಲೋಭೇನ ಮಾತ್ಸರ್ಯೇಣ ಕ್ರುಧಾ ಹ್ರಿಯಾ ।**
**ಕಿಮಬೋಧೇನ ಬೋಧೇನ ಪರೇಷಾಂ ಪ್ರೇರಣೇನ ವಾ ॥ ೧೦೫೮ ॥**

**ವಕ್ತೀತ್ಯೇತನ್ನಿಮಿತ್ತಾನಿ ಪರೀಕ್ಷ್ಯಾಣಿ ಸುಮೇಧಸಾ ।**
**ಏವಂ ಪ್ರವರ್ತಮಾನೋಽಯಂ ವಿದ್ವಾನ್ವಿದ್ವತ್ಸು ಚೇಷ್ಯತೇ ॥ ೧೦೫೯ ॥**

'ಇವನು ಭಯದಿಂದ ಮಾತನಾಡುತ್ತಾನೋ ? ಸ್ನೇಹದಿಂದ ಮಾತನಾಡುತ್ತಾನೋ ? ಲೋಭದಿಂದ ಮಾತನಾಡುತ್ತನೋ ? ಮಾತ್ಸರ್ಯದಿಂದ ಮಾತನಾಡುತ್ತನೋ ? ಕೋಪದಿಂದ ಮಾತನಾಡುತ್ತಾನೋ ? ಲಜ್ಜೆಯಿಂದ ಮಾತನಾಡುತ್ತಾನೋ ? ಅಜ್ಞಾನದಿಂದ ಮಾತನಾಡುತ್ತಾನೋ ? ತಿಳುವಳಿಕೆಯಿಂದ ಮಾತನಾಡುತ್ತಾನೋ ? ಬೇರೆಯವರ ಪ್ರೇರಣೆಯಿಂದ ಮಾತನಾಡುತ್ತಾನೋ ?' ಎಂಬುದಾಗಿ ಪ್ರಾಜ್ಞನು ಈ ನಿಮಿತ್ತಗಳನ್ನು ಪರೀಕ್ಷಿಸಬೇಕು. ಈ ರೀತಿಯಾಗಿ ಪ್ರವರ್ತಿಸುವ ಈ ಮನುಷ್ಯನು ವಿದ್ವಾಂಸರುಗಳಲ್ಲಿಯೂ ಪ್ರಾಜ್ಞನೆಂದು ಪರಿಗಣಿಸಲ್ಪಡುತ್ತಾನೆ.

**ಸಾ ಸ್ತ್ರೀತ್ವಾನ್ನಾವಬುಧ್ಯೇತ ದುಷ್ಟಾ ಕಷ್ಟಮಯಂ ಚ ತತ್ ।**
**ಶಿಷ್ಟಾಶಿಷ್ಟಾನುಸಂಶಿಷ್ಟೌ ಶಿಷ್ಟಃ ಸಂಮೋಮುಹೀತಿ ಯತ್ ॥ ೧೦೬೦ ॥**

ಶಿಷ್ಟನಿಗೂ ಅಶಿಷ್ಟನಿಗೂ ಸಂಬಂಧವಾಗುತ್ತಿರಲು ಶಿಷ್ಟನು ವಿಶೇಷವಾಗಿ ಮೋಹಗೊಳ್ಳುವುದು ಯಾವುದುಂಟೋ ಕಷ್ಟಮಯವಾದ ಅದನ್ನು ದುಷ್ಟಳಾದ ಆ ಕಾಂಚನಮಾಲೆಯು ಸ್ತ್ರೀಯಾಗಿರುವುದರಿಂದ ತಿಳಿಯುವುದಿಲ್ಲ.

**ತದೈವ ತಂ ಸಮುತ್ಸಾಹ್ಯ ವಿಹರ್ತುಂ ತೇ ವನಂ ಗತಾಃ ।**
**ಅಗ್ನಿಕುಂಡಂ ಪ್ರದರ್ಶ್ಯಾಸ್ಯ ಪತಂತ್ಯಸ್ಮಿನ್ನಭೀರವಃ ॥ ೧೦೬೧ ॥**

**ಇತ್ಯಾಹುಃ ಸೋಽಪಿ ತಚ್ಛ್ರುತ್ವಾ ನ್ಯಪತತ್ತತ್ರ ನಿರ್ಭಯಃ ।**
**ವಿಚಾರಯತಿ ಧೀಮಾಂಶ್ಚ ನ ಕಾರ್ಯಂ ದೈವಚೋದಿತಃ ॥ ೧೦೬೨ ॥**

ಆಗಲೇ ಆ ವಿದ್ಯುದ್ದಂಷ್ಟ್ರನೇ ಮೊದಲಾದವರು ಪ್ರದ್ಯುಮ್ನನನ್ನು ಪ್ರೋತ್ಸಾಹಿಸಿ ವಿಹರಿಸುವುದಕ್ಕೋಸ್ಕರ ವನಕ್ಕೆ ಹೋಗಿ ಅಲ್ಲಿ ಅವನಿಗೆ ಅಗ್ನಿಕುಂಡವನ್ನು ತೋರಿಸಿ 'ಇದರಲ್ಲಿ ಭೀತಿಯಿಲ್ಲದವರು ಬೀಳುತ್ತಾರೆ' ಎಂದು ಹೇಳಿದರು. ಪ್ರದ್ಯುಮ್ನನೂ ಆ ಮಾತನ್ನು ಕೇಳಿ ಆ ಅಗ್ನಿಕುಂಡದಲ್ಲಿ ನಿರ್ಭಯನಾಗಿ ಬಿದ್ದನು. ಪ್ರಾಜ್ಞನು ಕೂಡ ದೈವ ಪ್ರೇರಿತನಾಗಿ ಕಾರ್ಯವನ್ನು ವಿಚಾರಮಾಡುವುದಿಲ್ಲ.

**ದೇವ್ಯೈಷೋಽತ್ರ ನಿವಾಸಿನ್ಯಾ ಪ್ರತಿಗೃಹ್ಯಾಭಿಪೂಜಿತಃ ।**
**ಕನಕಾಂಬರಭೂಷಾದಿದಾನೇನಾಸ್ಮಾದ್ವಿನಿರ್ಯಯೌ ॥ ೧೦೬೩ ॥**

ಈ ಅಗ್ನಿಕುಂಡದಲ್ಲಿ ವಾಸವಾಗಿದ್ದ ದೇವಿಯು ಪ್ರದ್ಯುಮ್ನನನ್ನು ಇದಿರ್ಗೊಂಡು ಸುವರ್ಣವಸ್ತ್ರಾಭರಣಾದಿವಸ್ತುಗಳನ್ನು ಕೊಟ್ಟು ಪೂಜಿಸಿದಳು. ಬಳಿಕ ಈ ಅಗ್ನಿಕುಂಡದಿಂದ ಹೊರಟನು.

**ತಸ್ಮಾದ್ವಿಸ್ಮಯಮಾಪನ್ನಾ ಗತ್ವಾ ತೇನ್ಯತ್ರ ತಂ ಪುನಃ ।**
**ಪ್ರೋತ್ಸಾಹ್ಯ ಮೇಷಭೂಭೃತ್ರೋರ್ಮಧ್ಯಂ ಪ್ರಾವೇಶಯನ್ಖಲಾಃ ॥**

ಅದರಿಂದ ಆಶ್ಚರ್ಯವನ್ನು ಹೊಂದಿದವರಾದ ಆ ದುಷ್ಟರು ಬೇರೆಕಡೆಗೆ ಹೋಗಿ ಅವನನ್ನು ಪುನಃ ಪ್ರೋತ್ಸಾಹಿಸಿ ಟಗರುಬೆಟ್ಟಗಳ ಮಧ್ಯವನ್ನು ಪ್ರವೇಶಗೊಳಿಸಿದರು.

**ಪರ್ವತೌ ಮೇಷರೂಪೇಣ ಪತಂತೌ ಭುಜಶಾಲಿನಮ್ ।**
**ತನ್ನಿರುಧ್ಯ ಸ್ಥಿತಂ ದೃಷ್ಟ್ವಾ ತುಷ್ಟಾ ತದ್ಗತದೇವತಾ ॥ ೧೦೬೫ ॥**

**ತಸ್ಮೈ ದಿವ್ಯೇ ದದೌ ರತ್ನಕುಂಡಲೇ ಮಕರಾಂಕಿತೇ ।**
**ತತೋ ನಿರ್ಗತವಾನ್ಭೂಯಸ್ತನ್ನಿದೇಶಾದ್ವಿಶನ್ ಬಿಲಮ್ ॥ ೧೦೬೬ ॥**

**ವರಾಹಾದ್ರೇರಸಾವುಗ್ರಮಾಪತಂತಂ ವರಾಹಕಮ್ ।**
**ಕರೇಣೈಕೇನ ದಂಷ್ಟ್ರಾಯಾಂ ಧೃತ್ವಾನ್ಯೇನಾಸ್ಯ ಮಸ್ತಕಮ್ ॥ ೧೦೬೭ ॥**

**ಪ್ರಹೃತ್ಯ ಹೇಲಯಾ ತಸ್ಥೌ ತಸ್ಯಾಸಾಧಾರಣೇಹಿತಮ್ ।**
**ಸಮೀಕ್ಷ್ಯ ದೇವತಾತ್ರಸ್ಥಾ ರುಗ್ಮಿಣೀಪ್ರಿಯಸೂನವೇ ॥ ೧೦೬೮ ॥**

**ಶಂಖಂ ವಿಜಯಘೋಷಾಖ್ಯಂ ಮಹಾಜಾಲಮಪಿ ದ್ವಯಮ್ ।**
**ದದಾತಿ ಸ್ಮ ಸುಪುಣ್ಯಾನಾಂ ಕ್ವ ವಾ ಲಾಭೋ ನ ಜಾಯತೇ ॥ ೧೦೬೯ ॥**

ಟಗರುಗಳ ರೂಪದಿಂದ ತಾಕಲಾಡುವ ಎರಡು ಬೆಟ್ಟಗಳನ್ನು ತಡೆದು ನಿಂತಿರುವ ಬಾಹುಬಲಶಾಲಿಯಾದ ಪ್ರದ್ಯುಮ್ನನನ್ನು ನೋಡಿ ಸಂತುಷ್ಟವಾದ ಆ ಪರ್ವತ ನಿವಾಸಿಯಾದ ದೇವತೆಯು ಅವನಿಗೆ ಮಕರಚಿಹ್ನೆಯುಳ್ಳ ದಿವ್ಯವಾದ ಎರಡು ರತ್ನ ಕುಂಡಲಗಳನ್ನು ಕೊಟ್ಟಿತು. ಆ ಪ್ರದೇಶದಿಂದ ಹೊರಟು ಪುನಃ ವರಾಹಪರ್ವತದ ಬಿಲವನ್ನು ಪ್ರವೇಶಿಸುವವನಾದ ಈ ಪ್ರದ್ಯುಮ್ನನು ಭಯಂಕರವಾಗಿ ಹಾಯ್ದು ಬರುತ್ತಿರುವ ಹಂದಿಯನ್ನು ಒಂದು ಕೈಯಿಂದ ಅದರ ಕೋರೆ ಹಲ್ಲಿನಲ್ಲಿ ಹಿಡಿದು ನಿಲ್ಲಿಸಿ ಮತ್ತೊಂದು ಕೈಯಿಂದ ಇದರ ಮಸ್ತಕಕ್ಕೆ ಹೊಡೆದು ಲೀಲೆಯಿಂದಿದ್ದನು. ಅವನ ಅಸಾಧಾರಣವಾದ ಅಭಿಲಾಷೆಯನ್ನು ಕಂಡು ಈ ಬಿಲದಲ್ಲಿರುವ ದೇವತೆಯು ರುಗ್ಮಿಣಿಯ ಪ್ರಿಯಪುತ್ರನಿಗೆ ವಿಜಯಘೋಷವೆಂಬ ಶಂಖವನ್ನೂ ದೊಡ್ಡದಾದ ಬಲೆಯನ್ನೂ ಕೊಟ್ಟಿತು. ಉತ್ತಮಪುಣ್ಯವುಳ್ಳವರಿಗೆ ಎಲ್ಲಿತಾನೆ ಲಾಭವಾಗುವುದಿಲ್ಲ ?

**ತಥಾ ಕಾಲಗುಹಾಯಾಂ ಚ ಮಹಾಕಾಲಾಖ್ಯರಾಕ್ಷಸಾತ್ ।**
**ವೃಷಭಾಖ್ಯಂ ರಥಂ ರತ್ನಕವಚಂ ಚಾಪ ನಿರ್ಜಿತಾತ್ ॥ ೧೦೭೦ ॥**

ಹಾಗೆಯೇ ಕಾಲಗುಹೆಯಲ್ಲಿ ಜಯಿಸಲ್ಪಟ್ಟ ಮಹಾಕಾಲನೆಂಬ ರಾಕ್ಷಸನಿಂದ ವೃಷಭವೆಂಬ ರಥವನ್ನೂ ರತ್ನಕವಚವನ್ನೂ ಪಡೆದನು.

**ವಿದ್ಯಾಧರೇಣ ಕೇನಾಪಿ ಖಚರಃ ಕೋಽಪಿ ಕೀಲಿತಃ ।**
**ತರುದ್ವಯೇ ಸ ಕಾಮಸ್ಯ ದೃಷ್ಟಿಗೋಚರಮಾಪತತ್ ॥ ೧೦೭೧ ॥**

ಯಾವನೋ ವಿದ್ಯಾಧರನಿಂದ ಎರಡು ಮರಗಳಲ್ಲಿ ಕೀಲಿಸಲ್ಪಟ್ಟಿದ್ದ ಒಬ್ಬಾನೊಬ್ಬ ಖೇಚರನು ಪ್ರದ್ಯಮ್ನನಿಗೆ ದೃಷ್ಟಿಗೋಚರನಾದನು.

**ಅಸಹ್ಯವೇದನಾರ್ತಸ್ಯ ತಸ್ಯ ಖೇಟಕವೀಕ್ಷಣಾತ್ ।**
**ಇಂಗಿತಜ್ಞೋ ಹರೇಃ ಪುತ್ರೋ ಗುಲಿಕಾಂ ಬಂಧಮೋಚನೀಮ್ ॥**

**ಖೇಟಕಸ್ಥಾಂ ಸಮಾದಾಯ ಸಮಭ್ಯರ್ಚ್ಯ ವಿಲೋಚನೇ ।**
**ಕೃತೋಪಕಾರಃ ಸಂಪ್ರಾಪತ್ತಸ್ಮಾದ್ವಿದ್ಯಾತ್ರಯಂ ಮಹತ್ ॥ ೧೦೭೩ ॥**

ಸುರೇಂದ್ರಜಾಲಂ ಜಾಲಾಂತನರೇಂದ್ರಂ ಪ್ರಸ್ತರಂ ಚ ಸಃ ।
ಪುನಃ ಸಹಸ್ರವಕ್ತ್ರಾಹಿಭವನೇ ಶಂಖಪೂರಣಾತ್ ॥ ೧೦೭೪ ॥

ಬಿಲಾನ್ನಿರ್ಗತ್ಯ ನಾಗಶ್ಚ ನಾಗೀ ಚ ಮಕರಧ್ವಜಮ್ ।
ಚಿತ್ರವರ್ಣಂ ಧನುರ್ನಂದಕಾಖ್ಯಾಸಿಂ ಕಾಮರೂಪಿಣೀಮ್ ॥ ೧೦೭೫ ॥

ಮುದ್ರಿಕಾಂ ಚ ಪ್ರಸನ್ನೌ ತೌ ಸಮಂ ತಸ್ಮೈ ವಿತೇರತುಃ ।
ಕಂಪನೇನ ಕಪಿತ್ಥಾಂಘ್ರಿಪಸ್ಯಾಪ್ತಂ ಪಾದುಕದ್ವಯಮ್ ॥ ೧೦೭೬ ॥

ತೇನಾನರ್ಘ್ಯಂ ನಭೋಯಾಯಿ ದೇವತಾಯಾಸ್ತಪಶ್ರಿಯಃ ।
ಸುವರ್ಣಕಕುಭೇ ಪಂಚಫಣಾಹಿಪತಿನಾರ್ಪಿತಾನ್ ॥ ೧೦೭೭ ॥

ತರ್ಪಣಸ್ತಾಪನೋ ಮೋಹನಾಭಿಧಾನೋ ವಿಲಾಪನಃ ।
ಮಾರಣಶ್ಚೇತಿ ಪಂಚೈತಾನ್ ಶರಾನ್ ಸಂಪ್ರಾಪ್ಯ ಪುಣ್ಯಭಾಕ್ ॥ ೧೦೭೮ ॥

ಮೌಲಿಮೌಷಧಿಮಾಲಾಂ ಚ ಛತ್ರಂ ಚಾಮರಯುಗ್ಮಕಮ್ ।
ದತ್ತಂ ಕ್ಷೀರವನೇ ಮರ್ಕಟೇನಾಸ್ಮೈ ಪರಿತೋಷಿಣಾ ॥ ೧೦೭೯ ॥

ವೇದನೆಯಿಂದ ದುಃಖಿಪಡುತ್ತಿದ್ದ ಆ ಖೇಚರನು ಹತ್ತಿರದಲ್ಲಿದ್ದ ತನ್ನ ಗುರಾಣಿಯನ್ನು ನೋಡಿದುದರಿಂದ ಅವನ ಮನೋಭಿಪ್ರಾಯವನ್ನು ತಿಳಿದ ಹರಿಯ ಆ ಪುತ್ರ-ಪ್ರದ್ಯುಮ್ನನು ಆ ಗುರಾಣಿಯಲ್ಲಿದ್ದ ಬಂಧಮೋಚನಿಯೆಂಬ ಗುಳಿಗೆಯನ್ನು ತೆಗೆದುಕೊಂಡು ಚೆನ್ನಾಗಿ ಪೂಜಿಸಿ ಅವನ ಕಣ್ಣಿನಲ್ಲಿ ಉಪಕರಿಸಿ-ಹಚ್ಚಿದವನಾಗಿ (ಅವನನ್ನು ಬಂಧಮುಕ್ತನನ್ನಾಗಿ ಮಾಡಿ) ಅವನಿಂದ ಸುರೇಂದ್ರಜಾಲ ನರೇಂದ್ರ ಜಾಲ ಪ್ರಸ್ತರಗಳೆಂಬೀ ಮೂರು ಮಹಾವಿದ್ಯೆಗಳನ್ನು ಪಡೆದನು. ಪುನಃ ಸಹಸ್ರ ಮುಖಗಳುಳ್ಳ ಸರ್ಪರಾಜನ ನಿಲಯದಲ್ಲಿ (ಹುತ್ತದಲ್ಲಿ) ಪ್ರವೇಶಿಸಿ ಶಂಖವನ್ನೂದಿದುದರಿಂದ ಸರ್ಪವೂ ಸರ್ಪಿಣಿಯೂ ಬಿಲದಿಂದ ಹೊರಟು ಬಂದು ಮಕರಧ್ವಜನಾದ ಪ್ರದ್ಯುಮ್ನನನ್ನು ಕುರಿತು ಪ್ರಸನ್ನಗಳಾದ ಆ ನಾಗದಂಪತಿಗಳು ಚಿತ್ರವರ್ಣವೆಂಬ ಧನುಸ್ಸನ್ನೂ ನಂದಕವೆಂಬ ಖಡ್ಗವನ್ನೂ ಕಾಮರೂಪಿಣಿಯೆಂಬ ಮುದ್ರಿಕೆಯನ್ನೂ ಒಟ್ಟಿಗೆ ಅವನಿಗೆ ಕೊಟ್ಟುವು. ಬೇಲದ ಮರದ ಕಂಪನದಿಂದ (ಅಲ್ಲಾಡಿಸಿದುದರಿಂದ) ಅವನು ತಪಸ್ಸಂಪತ್ತಿಯುಳ್ಳ ದೇವತೆಯ ಅನರ್ಘ್ಯವೂ ಆಕಾಶದಲ್ಲಿ ಗಮನಮಾಡುವುದೂ ಆದ ಎರಡು ಪಾದುಕೆಗಳನ್ನು ಪಡೆದನು. ಸುವರ್ಣವರ್ಣವುಳ್ಳ ಅರ್ಜುನವೃಕ್ಷದಲ್ಲಿರುವ ಐದು ಹೆಡೆಗಳುಳ್ಳ ಸರ್ಪರಾಜನಿಂದ ತರ್ಪಣ, ತಾಪನ, ಮೋಹನ, ವಿಲಾಪನ, ಮಾರಣಗಳೆಂಬ ಐದು ಬಾಣಗಳನ್ನು ಆ ಪುಣ್ಯಶಾಲಿಯು ಪಡೆದನು. ಕ್ಷೀರವನದಲ್ಲಿ ಸಂತುಷ್ಟವಾದ ಒಂದು ಕಪಿಯು ಕಿರೀಟವನ್ನೂ ಔಷಧಿಮಾಲೆಯನ್ನೂ ಛತ್ರವನ್ನೂ ಎರಡು ಚಾಮರಗಳನ್ನೂ ಈ ಪ್ರದ್ಯುಮ್ನನಿಗೆ ಕೊಟ್ಟಿತು.

ಸ ಕದಂಬಮುಖೀವಾಪ್ಯಾಂ ನಾಗಪಾಶಮವಾಪ್ತವಾನ್ ।
ಅಸ್ಯ ವೃದ್ಧೇರಸೋಢಾರಃ ಸರ್ವೇ ತೇ ಖಗಸೂನವಃ ॥ ೧೦೮೦ ॥

ಯಃ ಪಾತಾಲಮುಖೀವಾಪ್ಯಾಂ ಪತೇತ್ಸ ಸಕಲೇಶ್ವರಃ ।
ಭವೇದಿತ್ಯವದನ್ನಾಮೋಽಪ್ಯವಗಮ್ಯ ತದಿಂಗಿತಮ್ ॥ ೧೦೮೧ ॥

ಪ್ರಜ್ಞಪ್ತಿಂ ನಿಜರೂಪೇಣ ತಸ್ಯಾಂ ವಾಪ್ಯಾಮಪೀಪತತ್ ।
ಸ್ವಯಂ ಪಾರ್ಶ್ವೇ ತಿರೋಧಾಯ ಸ್ವರೂಪಂ ನಯವಿತ್ಸ್ಥಿತಃ ॥ ೧೦೮೨ ॥

ಅವನು ಕದಂಬಮುಖಿಯೆಂಬ ಬಾವಿಯಲ್ಲಿ ನಾಗಪಾಶವನ್ನು ಹೊಂದಿದನು. ಈ ಪ್ರದ್ಯುಮ್ನನ ವೃದ್ಧಿಯಿಂದ ಸಹನವಿಲ್ಲದವರಾದ ಆ ಖೇಚರಪುತ್ರರೆಲ್ಲರೂ 'ಯಾವನು ಪಾತಾಲಮುಖಿಯೆಂಬ ಬಾವಿಯಲ್ಲಿ ಬೀಳುವನೋ ಅವನು ಎಲ್ಲರಿಗೂ ಅಧಿಪತಿಯಾಗುವನು' ಎಂದು ಹೇಳಿದರು. ಕಾಮನೂ ಅವರುಗಳ ಇಂಗಿತ-ಮನೋಭಿಪ್ರಾಯವನ್ನು ತಿಳಿದು ಪ್ರಜ್ಞಪ್ತಿಯೆಂಬ ವಿದ್ಯೆಯನ್ನು ತನ್ನ ರೂಪದಿಂದ ಆ ಬಾವಿಯಲ್ಲಿ ಬೀಳಿಸಿದನು. ನಯವನ್ನು ತಿಳಿದವನಾದ ತಾನು ಪಕ್ಕದಲ್ಲಿ ನಿಜರೂಪವನ್ನು ಮರೆಮಾಡಿದ್ದನು.

ಮಹಾಶಿಲಾಭಿಸ್ತೈಃ ಸರ್ವೈರ್ವಿಧೇಯಂ ವಧಮಾತ್ಮನಃ ।
ವಿದಿತ್ವಾ ಕೋಪಸಂತಪ್ತೋ ವಿದ್ಯುದ್ದಂಷ್ಟ್ರಾದಿವಿದ್ವಿಷಃ ॥ ೧೦೮೩ ॥

ಗಾಢಂ ಪಾಶೇನ ಬದ್ಧ್ವಾಧೋಮುಖಾನ್ ಪ್ರಕ್ಷಿಪ್ಯ ತತ್ರ ಸಃ ।
ಕೃತ್ವಾ ಶಿಲಾಪಿಧಾನಂ ಚ ಪ್ರಹಿತ್ಯ ನಗರಂ ಪ್ರತಿ ॥ ೧೦೮೪ ॥

ಜ್ಯೋತಿಷ್ಪ್ರಭಂ ಕನೀಯಾಂಸಂ ತೇಷ್ವಾಕ್ರಮ್ಯ ಶಿಲಾಂ ಸ್ಥಿತಃ ।
ಪಾಪಿನೋ ಹಿ ಸ್ವಪಾಪೇನ ಪ್ರಾಪ್ನುವಂತಿ ಪರಾಭವಮ್ ॥ ೧೦೮೫ ॥

ಅವರೆಲ್ಲರೂ ದೊಡ್ಡಕಲ್ಲುಗಳಿಂದ ಮಾಡುತ್ತಿದ್ದ ತನ್ನ ವಧೆಯನ್ನು ತಿಳಿದು (ತನ್ನನ್ನು ಕೊಲ್ಲುವುದಕ್ಕಾಗಿ ಆ ಬಾವಿಯೊಳಕ್ಕೆ ದೊಡ್ಡ ಕಲ್ಲುಗಳನ್ನು ಹಾಕುತ್ತಿದ್ದುದನ್ನು ತಿಳಿದು) ಕೋಪಸಂತಪ್ತನಾದ ಅವನು ವಿದ್ಯುದ್ದಂಷ್ಟ್ರನೇ ಮೊದಲಾದ ಶತ್ರುಗಳನ್ನು ಅಲ್ಲಿ ದೃಢವಾಗಿ ನಾಗಪಾಶದಿಂದ ಕಟ್ಟಿ ಅಧೋಮುಖರನ್ನಾಗಿ ತಳ್ಳಿ ಕಲ್ಲಿನಮುಚ್ಚುವಿಕೆಯನ್ನೂ ಮಾಡಿ(ಕಲ್ಲನ್ನು ಮುಚ್ಚಿ) ಅವರಲ್ಲಿ ಕಿರಿಯನಾದ ಜ್ಯೋತಿಷ್ಪ್ರಭನನ್ನು ಪಟ್ಟಣಕ್ಕೆ ಕಳುಹಿಸಿ ತಾನು ಆ ಕಲ್ಲನ್ನಾಕ್ರಮಿಸಿ ನಿಂತನು. ಪಾಪಿಗಳು ತಮ್ಮ ಪಾಪದಿಂದ ತಿರಸ್ಕಾರವನ್ನು ತಪ್ಪದೆ ಹೊಂದುತ್ತಾರೆ.

ಅಥಾತ್ರ ನಾರದಂ ಕಾಮಚಾರಿಣಂ ನಭಸಃ ಸ್ಥಲಾತ್ ।
ಆಗಚ್ಛಂತಂ ನಿಜಸ್ಥಾನಂ ಹರಿಸೂನುರಲೋಕತ ॥ ೧೦೮೬ ॥

ಅನಂತರದಲ್ಲಿ ಹರಿಯ ಪುತ್ರನು ಇಚ್ಛಾನುಸಾರವಾಗಿ ಸಂಚರಿಸುವವನೂ ಆಕಾಶ ಪ್ರದೇಶದಿಂದ ತನ್ನ ಸ್ಥಾನಕ್ಕೆ ಬರುತ್ತಿರುವವನೂ ಆದ ನಾರದನನ್ನು ನೋಡಿದನು.

ಯಥಾವಿಧಿ ಪ್ರತೀಕ್ಷ್ಯೈನಮಭ್ಯುತ್ಥಾನಪುರಸ್ಸರಮ್ ।
ಕೃತಸಂಭಾಷಣಸ್ತೇನ ಪ್ರಣೀತಾತ್ಮಪ್ರಪಂಚಕಃ ॥ ೧೦೮೭ ॥

ಸಮ್ಯಕ್ ಶ್ರದ್ಧಾಯ ತತ್ಸರ್ವಂ ಪ್ರಹೃಷ್ಟೋರಿಬಲಾಗಮಮ್ ।
ದೃಷ್ಟ್ವಾಸ್ತ ವಿಸ್ಮಿತಸ್ತಾವದ್ಬಲಂ ತಂ ಖೇಚರೇಶಿತುಃ ॥ ೧೦೮೮ ॥

ಸಹಸಾವೇಷ್ಟತೇವಾರ್ಕಂ ಪ್ರಾವೃಡಂಭೋದಜಾಲಕಮ್ ।
ಕಾಲಶಂಬರಮುಖ್ಯಂ ತತ್ಸ ಯುದ್ಧ್ವಾ ಭಂಗಮಾಪಯತ್ ॥ ೧೦೮೯ ॥

ಎದ್ದು ವಿಧಿಪ್ರಕಾರವಾಗಿ ಈ ನಾರದನನ್ನು ಇದಿರಾಗಿ ಹೋಗಿ ಕಂಡು ಸಂಭಾಷಣವನ್ನು ಮಾಡಿದವನೂ ಅವನಿಂದ ವಿವರಿಸಲ್ಪಟ್ಟ ತನ್ನ ವಿಸ್ತೃತ ಚರಿತ್ರವುಳ್ಳವನೂ (ನಾರದನಿಂದ ತನ್ನ ಚರಿತ್ರವನ್ನೆಲ್ಲ ತಿಳಿದವನೂ) ಅದೆಲ್ಲವನ್ನೂ ಚೆನ್ನಾಗಿ ನಂಬಿ ಸಂತುಷ್ಟನೂ ಆಗಿ ಶತ್ರುಸೈನ್ಯದ ಬರುವಿಕೆಯನ್ನು ನೋಡಿ ವಿಸ್ಮಿತನಾಗಿದ್ದನು. ವರ್ಷಾಕಾಲದ ಮೇಘಸಮೂಹವು ಸೂರ್ಯನನ್ನು ಮುತ್ತುವಂತೆ ಅದು ಪ್ರದ್ಯುಮ್ನನನ್ನು ಮುತ್ತಿತು. ಅವನು ಕಾಲಶಂಬರನೇ ಮುಖ್ಯನಾಗಿರುವ ಆ ಖೇಚರಾಧಿಪತಿಯ ಸೈನ್ಯವನ್ನು ಯುದ್ಧಮಾಡಿ ಭಂಗವನ್ನು ಹೊಂದಿಸಿದನು.

ತಂ ಸೂನುಕೃತವೃತ್ತಾಂತಂ ಬೋಧಯಿತ್ವಾ ಖಗಾಧಿಪಮ್ ।
ಅಪನೀಯ ಶಿಲಾಂ ನಾಗಪಾಶಂ ಚೈತಾನ್ವ್ಯಪಾಶಯತ್ ॥ ೧೦೯೦ ॥

ಪ್ರದ್ಯುಮ್ನನು ಕಾಲಶಂಬರನ ಪುತ್ರರ ಸಂಬಂಧವಾದ ಸಮಾಚಾರವನ್ನು ಆ ಖೇಚರಾಧಿಪತಿಗೆ ತಿಳಿಸಿ ಆ ಕಲ್ಲನ್ನೂ ನಾಗಪಾಶವನ್ನೂ ತೆಗೆದು ಇವರುಗಳನ್ನು ಬಂಧವಿಮುಕ್ತರನ್ನಾಗಿ ಮಾಡಿದನು.

ನಾರದಾಗಮಹೇತುಂ ಚ ಜ್ಞಾಪಯಿತ್ವಾ ಸವಿಸ್ತರಮ್ ।
ಆಪೃಚ್ಛ್ಯಾನುಮತಸ್ತೇನ ರಥಂ ವೃಷಭನಾಮಕಮ್ ॥ ೧೦೯೧ ॥

ನಾರದೇನ ಸಮಾರುಹ್ಯ ಪ್ರಯಾನ್ ದ್ವಾರವತೀಂ ಪ್ರತಿ ।
ಸ್ವಪೂರ್ವಭವಸಂಬಂಧಂ ಶೃಣ್ವಂಸ್ತೇನ ನಿರೂಪಿತಮ್ ॥ ೧೦೯೨ ॥

ಹಾಸ್ತಿನಾಖ್ಯಪುರಂ ಪ್ರಾಪ್ಯ ಧುರ್ಯೋಧನಮಹೀಭೃತಃ ।
ಜಲಧೇಶ್ಚ ಸುತಾಂ ಕನ್ಯಾಂ ಮಾನ್ಯಾಮುದಧಿಸಂಜ್ಞಯಾ ॥ ೧೦೯೩ ॥

ದಾತುಂ ಭಾನುಕುಮಾರಾಯ ಮಹಾಭಿಷವಣೋತ್ಸವಮ್ ।
ವಿಧೀಯಮಾನಂ ವೀಕ್ಷ್ಯಾಸೌ ರಥೇ ಪ್ರಸ್ತರವಿದ್ಯಯಾ ॥ ೧೯೯೪ ॥

ನಾರದಂ ಶಿಲಯಾಚ್ಛಾದ್ಯ ತಸ್ಮಾದುತ್ತೀರ್ಯ ಭೂತಲಮ್ ।
ಬಹುಪ್ರಕಾರಂ ಹಾಸಾನಾಂ ತತ್ರ ಕೃತ್ವಾ ತತೋ ಗತಃ ॥ ೧೯೯೫ ॥

ಮಧುರಾಯಾ ಬಹಿರ್ಭಾಗೇ ಪಾಂಡವಾನ್ ಸ್ವಪ್ರಿಯಾಂ ಸುತಾಮ್ ।
ಪ್ರದಿತ್ಸೂನ್ ಗಚ್ಛತೋ ಭಾನುಕುಮಾರಾಯಾಭಿವೀಕ್ಷ್ಯ ಸಃ ॥ ೧೯೯೬ ॥

ಸಮಾರೋಪಿತಕೋದಂಡಹಸ್ತೋ ವ್ಯಾಧಾಕೃತಿಮ್ ದಧತ್ ।
ತೇಷಾಂ ಕದರ್ಥನಂ ಕೃತ್ವಾ ನಾನಾ ದ್ವಾರವತೀಮಿತಃ ॥ ೧೯೯೭ ॥

ನಾರದನ ಆಗಮನಕ್ಕೆ ಕಾರಣವನ್ನೂ ಸವಿಸ್ತರವಾಗಿ ಕಾಲಶಂಬರನಿಗೆ ತಿಳಿಸಿ ಕೇಳಿಕೊಂಡು ಅವನಿಂದ ಅನುಮತಿಸಲ್ಪಟ್ಟವನಾಗಿ ವೃಷಭವೆಂಬ ರಥವನ್ನು ನಾರದನೊಡನೆ ಹತ್ತಿ ದ್ವಾರಾವತಿಯನ್ನು ಕುರಿತು ಪ್ರಯಾಣಮಾಡುವವನಾಗಿಯೂ ಅವನಿಂದ ಹೇಳಲ್ಪಟ್ಟ ತನ್ನ ಪೂರ್ವಭವಸಂಬಂಧವನ್ನು ಕೇಳುವವನಾಗಿಯೂ ಹಸ್ತಿನಾಪುರವನ್ನು ಪ್ರವೇಶಿಸಿ ದುರ್ಯೋಧನರಾಜನ ಮತ್ತು ಆತನ ಪತ್ನಿಯಾದ ಜಲಧಿಯ ಪುತ್ರಿಯೂ ಉದಧಿಯೆಂಬ ಹೆಸರಿನಿಂದ ಮಾನ್ಯಳೂ ಆದ ಕನ್ಯೆಯನ್ನು ಭಾನುಕುಮಾರ(ಸತ್ಯಭಾಮೆಯ ಪುತ್ರ)ನಿಗೆ ಕೊಡುವುದಕ್ಕೋಸ್ಕರ ಮಾಡಲ್ಪಡುತ್ತಿದ್ದ ಮಹಾಭಿಷೇಕೋತ್ಸವವನ್ನು ನೋಡಿ ಇವನು ನಾರದನನ್ನು ರಥದಲ್ಲಿ ಪ್ರಸ್ತರವೆಂಬ ವಿದ್ಯೆಯಿಂದ ಕಲ್ಲಿನಿಂದ ಮುಚ್ಚಿ ಅಲ್ಲಿಂದ ಭೂತಲಕ್ಕಿಳಿದು ಅಲ್ಲಿ ಅನೇಕ ವಿಧವಾದ ಪರಿಹಾಸಗಳನ್ನು ಮಾಡಿ ಅಲ್ಲಿಂದ ಹೋಗಿ ಮಧುರಾನಗರದ ಹೊರಗಿನಭಾಗದಲ್ಲಿ ತಮ್ಮ ಪ್ರಿಯಪುತ್ರಿ(ಆ ಉದಧಿಕುಮಾರಿ)ಯನ್ನು ಭಾನುಕುಮಾರನಿಗೆ ಕೊಡುವುದಕ್ಕೆ ಇಚ್ಛೆಯುಳ್ಳವರಾಗಿ ಹೋಗುತ್ತಿರುವ ಪಾಂಡವರನ್ನು ನೋಡಿ ಅವನು ಹೆದೆಯೇರಿಸಲ್ಪಟ್ಟ ಬಿಲ್ಲು ಕೈಯಲ್ಲಿರುವವನೂ ಬೇಡರವನ ಆಕೃತಿಯನ್ನು ಧರಿಸಿದವನೂ ಆಗಿ ಆ ಪಾಂಡವರಿಗೆ ಹಲವು ಕಿರುಕುಳವನ್ನು ಮಾಡಿ ದ್ವಾರವತಿಯನ್ನು ತಲುಪಿದನು.

ವಿಧಾಯ ವಿದ್ಯಯಾ ಪ್ರಾಗ್ವನ್ನಾರದಾಸ್ಪಂದನಸ್ಥಿತಿಮ್ ।
ಏಕಾಕೀ ಸ್ವಯಮಾಗತ್ಯ ವಿದ್ಯಾಶಾಖಾಮೃಗಾಕೃತಿಃ ॥ ೧೯೯೮ ॥

ಬಭಂಜ ಸತ್ಯಭಾಮಾಯಾ ನಂದನಂ ವಾ ವನಂ ವನಮ್ ।
ತತ್ಪಾನವಾಪೀನಿಃಶೇಷಜಲಪೂರ್ಣಕಮಂಡಲುಃ ॥ ೧೯೯೯ ॥

ತತೋ ಗತ್ವಾಂತರಂ ಕಿಂಚಿತ್ಸ್ಯಂದನೋರಭ್ರರಾಸಭಾನ್ ।
ವಿಪರ್ಯಾಸಂ ಸಮಾಯೋಜ್ಯ ಮಾಯಾರೂಪಧರಃ ಸ್ಮರಃ ॥ ೧೧೦೦ ॥

ಪುರಗೋಪುರನಿರ್ಯಾಣಪ್ರವೇಶನಗತಾನ್ ಜನಾನ್ ।
ಸಪ್ರಹಾಸಾನ್ ಸಮಾಪಾದ್ಯ ಪ್ರವಿಶ್ಯ ನಗರಂ ಪುನಃ ॥ ೧೧೦೧ ॥

ಶಾಲಾಖ್ಯವೈದ್ಯವೇಷೇಣ ಸ್ವಂ ಪ್ರತ್ಯಾಯ್ಯ ಸ್ವವಿದ್ಯಯಾ ।
ವಿಚ್ಛಿನ್ನಕರ್ಣಸಂಧಾನವೇದಿತ್ವಾದಿ ಪ್ರಘೋಷಯನ್ ॥ ೧೧೦೨ ॥

ಪ್ರಾಪ್ಯ ಭಾನುಕುಮಾರಾಯ ದಾತುಮಾನೀತಕನ್ಯಕಾಃ ।
ತತ್ರಾವಿರ್ಭಾವಿತಾನೇಕಧಾ ಹಾಸ್ಯೋನು ದ್ವಿಜಾಕೃತಿಃ ॥ ೧೧೦೩ ॥

ಸತ್ಯಭಾಮಾಗೃಹಂ ಗತ್ವಾ ಭೋಜನಾವಸರೇ ದ್ವಿಜಾನ್ ।
ವಿಪ್ರಕೃತ್ಯ ಸ್ವಧಾರ್ಷ್ಟ್ಯೇನ ಭುಕ್ತ್ವಾ ಸ್ವೀಕೃತದಕ್ಷಿಣಃ ॥ ೧೧೦೪ ॥

ತತಃ ಕ್ಷುಲ್ಲಕವೇಷೇಣ ಸಮುಪೇತ್ಯ ಸ್ವಮಾತರಮ್ ।
ಬುಭುಕ್ಷಿತೋಹಂ ಸದ್ದೃಷ್ಟೇ ಸಮ್ಯಗ್ಭೋಜಯ ಮಾಮಿತಿ ॥ ೧೧೦೫ ॥

ಸಂಪ್ರಾರ್ಥ್ಯ ವಿವಿಧಾಹಾರಾನ್ ಭುಕ್ತ್ವಾ ತೃಪ್ತಿಮನಾಪ್ತವಾನ್ ।
ಕುರು ಮೇ ದೇವಿ ಸಂತೃಪ್ತಿಮಿತಿ ವ್ಯಾಕುಲತಾಂ ನಯನ್ ॥ ೧೧೦೬ ॥

ತದ್ವಿತೀರ್ಣಮಹಾಮೋದಕೋಪಯೋಗಾತ್ಸುತೃಪ್ತವಾನ್ ।
ಇವ ಶಾಂತಮನಾಸ್ತತ್ರ ಸುಖಂ ಸಮುಪವಿಷ್ಟವಾನ್ ॥ ೧೧೦೭ ॥

ಮೊದಲಿನಂತೆ ವಿದ್ಯೆಯಿಂದ ನಾರದನಿಗೆ ನಿಶ್ಚಲವಾದ ಸ್ಥಿತಿಯನ್ನು ಕಲ್ಪಿಸಿ ತಾನು ಒಬ್ಬನೇ ಬಂದು ವಿದ್ಯೆಯಿಂದ ಕಪಿಯ ಆಕೃತಿಯುಳ್ಳವನಾಗಿ ಸತ್ಯಭಾಮೆಯ ನಂದನದಂತಿರುವುದೂ ಜಲವುಳ್ಳುದೂ ಆದ ವನವನ್ನು ಮುರಿದಿಕ್ಕಿದನು. ಆ ವನದಲ್ಲಿರುವ ಕುಡಿಯುವನೀರಿನ ಬಾವಿಯ ನೀರನ್ನೆಲ್ಲ ಕಮಂಡಲುವಿನಲ್ಲಿ ತುಂಬಿದವನಾಗಿ ಅಲ್ಲಿಂದ ಸ್ವಲ್ಪದೂರ ಹೋಗಿ ರಥಕ್ಕೆ ಕುರಿಗಳನ್ನೂ ಕತ್ತೆಗಳನ್ನೂ ಹಿಂದು ಮುಂದಾಗಿ ಸೇರಿಸಿ–ಹೂಡಿ ಮಾಯಾರೂಪಧಾರಿಯಾದ ಕಾಮನು ನಗರದ ಗೋಪುರದಿಂದ ಹೋಗುವವರೂ ಪ್ರವೇಶಿಸುವವರೂ ಆದ ಜನರನ್ನು ನಗುವವರನ್ನಾಗಿ ಮಾಡಿ ತನ್ನ ವಿದ್ಯೆಯಿಂದ ಶಸ್ತ್ರವೈದ್ಯನ ವೇಷದಿಂದ ಪುನಃ ಪಟ್ಟಣವನ್ನು ಪ್ರವೇಶಿಸಿ ಜನರಿಗೆ ತನ್ನಲ್ಲಿ ನಂಬಿಕೆಯನ್ನುಂಟುಮಾಡಿ ಕತ್ತರಿಸಲ್ಪಟ್ಟಿರುವ ಕಿವಿಯ ಸೇರಿಸುವಿಕೆ (ಸರಿಮಾಡುವಿಕೆ)ಯನ್ನು ತಿಳಿದಿರುವಿಕೆಯೇ ಮೊದಲಾದುದನ್ನು ಪ್ರಕಟಿಸುವವನಾಗಿಯೂ ಭಾನುಕುಮಾರನಿಗೆ ಕೊಡುವುದಕ್ಕೋಸ್ಕರ ತರಲ್ಪಟ್ಟ ಕನ್ಯೆಯರನ್ನು ಹೊಂದಿ ಅಲ್ಲಿ ಅನೇಕವಿಧವಾಗಿ ಹಾಸ್ಯಗಳನ್ನು ತೋರಿಸಿದವನಾಗಿಯೂ ಬಳಿಕ ಬ್ರಾಹ್ಮಣಾಕೃತಿಯುಳ್ಳವನಾಗಿಯೂ ಭೋಜನಸಮಯದಲ್ಲಿ ಸತ್ಯಭಾಮೆಯ ಮನೆಗೆ ಹೋಗಿ ತನ್ನ ದಿಟ್ಟತನದಿಂದ ಬ್ರಾಹ್ಮಣರುಗಳನ್ನು ತಳ್ಳಿ ಭೋಜನಮಾಡಿ ದಕ್ಷಿಣೆಯನ್ನು ಸ್ವೀಕರಿಸಿದವನಾಗಿಯೂ ಅಲ್ಲಿಂದ ಕ್ಷುಲ್ಲಕವೇಷದಿಂದ ತನ್ನ ತಾಯಿಯ ಬಳಿಗೆ ಹೋಗಿ 'ಸಮ್ಯಗ್ದೃಷ್ಟಿಯೆ! ನಾನು ಹೊಟ್ಟೆಹಸಿವುಳ್ಳವನಾಗಿದ್ದೇನೆ. ಚೆನ್ನಾಗಿ ನನಗೆ ಭೋಜನಮಾಡಿಸು' ಎಂದು ಪ್ರಾರ್ಥಿಸಿ ವಿವಿಧಾಹಾರಗಳನ್ನು ಭುಂಜಿಸಿ ತೃಪ್ತಿಯನ್ನು ಹೊಂದದಿರುವವನಾಗಿಯೂ 'ದೇವಿಯೆ! ನನಗೆ ತೃಪ್ತಿಯನ್ನುಂಟುಮಾಡು' ಎಂದು ಆಕೆಗೆ ವ್ಯಾಕುಲತೆಯನ್ನುಂಟುಮಾಡುವವನಾಗಿಯೂ ಆಕೆಯು ಕೊಟ್ಟ ಮಹಾಮೋದಕದ(ಮಿಟಾಯಿಯ) ಉಪಯೋಗದಿಂದ ಚೆನ್ನಾಗಿ ತೃಪ್ತಿಯುಳ್ಳವನಾಗಿಯೂ ಶಾಂತವಾದ ಮನಸ್ಸುಳ್ಳವನಂತೆ ಅಲ್ಲಿ ಸುಖವಾಗಿ ಕುಳಿತನು.

ಅಕಾಲೇ ಚಂಪಕಾಶೋಕಪುಷ್ಪಾಣ್ಯಭಿಸಮೀಕ್ಷ್ಯ ಸಾ ।
ಕಲಾಲಿಕೋಕಿಲಾಲಾಪವಾಚಾಲಿತವನಾಂತರೇ ॥ ೧೧೦೮ ॥

ತದಾ ವಿಸ್ಮಯಮಾಪನ್ನಾ ಮುದಾ ಪಪ್ರಚ್ಛ ಕಿಂ ಭವಾನ್ ।
ಭದ್ರಾಸೌ ಮತ್ಸುತೋ ನಾರದೋಕ್ತಕಾಲೇ ಸಮಾಗತಃ ॥ ೧೧೦೯ ॥

ಆಗ ಭ್ರಮರಗಳ ಮತ್ತು ಕೋಗಿಲೆಗಳ ಮಧುರವಾದ ಆಲಾಪದಿಂದ ಶಬ್ದವುಳ್ಳುದಾದ ವನಮಧ್ಯದಲ್ಲಿ ಅಕಾಲದಲ್ಲಿ ಸಂಪಗೆಯ ಹೂವುಗಳನ್ನೂ ಅಶೋಕ ಪುಷ್ಪಗಳನ್ನೂ ನೋಡಿ ಆ ಈ ರುಗ್ಮಿಣಿಯು ಆಶ್ಚರ್ಯವನ್ನು ಹೊಂದಿದವಳಾಗಿ ಸಂತೋಷದಿಂದ 'ಅಯ್ಯಾ! ನೀನು ನಾರದನಿಂದ ಹೇಳಲ್ಪಟ್ಟಿರುವ ಕಾಲದಲ್ಲಿ ಬಂದ ನನ್ನ ಮಗನೇನು ?' ಎಂದು ಕೇಳಿದಳು.

ಇತಿ ತಸ್ಯಾಃ ಪರಿಪ್ರಶ್ನೇ ಸ್ವಂ ರೂಪಂ ಸಂಪ್ರಕಾಶಯನ್ ।
ಕೃತ್ವಾ ಶಿರಸಿ ತತ್ಪಾದನಖದೀಧಿತಿಮಂಜರೀಃ ॥ ೧೧೧೦ ॥

ಅಭಿಧಾಯ ಸ್ವವೃತ್ತಾಂತಮಶೇಷಂ ಪರಿಬೋಧಯನ್ ।
ಜನನೀಂ ಸಹ ಸಂಭುಜ್ಯ ತಯಾ ತದಭಿವಾಂಛಿತೈಃ ॥ ೧೧೧೧ ॥

ಬಾಲಕ್ರೀಡಾವಿಶೇಷೈಸ್ತಾಂ ಪರಾಂ ಪ್ರೀತಿಮವಾಪಯನ್ ।
ಪ್ರಾಗ್ಜನ್ಮೋಪಾರ್ಜಿತಾಪೂರ್ವಪುಣ್ಯೋದಯ ಇವ ಸ್ಥಿತಃ ॥ ೧೧೧೨ ॥

ಈ ರೀತಿಯಾಗಿ ಆಕೆಯ ಪ್ರಶ್ನೆಯುಂಟಾಗುತ್ತಿರಲು ತನ್ನ ರೂಪವನ್ನು ಚೆನ್ನಾಗಿ ಪ್ರಕಾಶಪಡಿಸುವವನಾಗಿಯೂ ಆಕೆಯ ಪಾದದ ಉಗುರುಗಳ ಕಿರಣಗಳೆಂಬ ಗೊಂಚಲುಗಳನ್ನು ತನ್ನ ಮಸ್ತಕದಲ್ಲಿ ಮಾಡಿ ಎಲ್ಲಾ ತನ್ನ ವೃತ್ತಾಂತವನ್ನು ಹೇಳಿ ತಾಯಿಯನ್ನು ಬೋಧಿಸುವವನಾಗಿಯೂ ಆಕೆಯೊಡನೆ ಭೋಜನವನ್ನು ಮಾಡಿ ಆಕೆಗೆ ಅಭೀಷ್ಟವಾದ ಬಾಲಕ್ರೀಡಾವಿಶೇಷಗಳಿಂದ ಆಕೆಗೆ ಬಹಳ ಪ್ರೀತಿಯನ್ನುಂಟುಮಾಡುವವನಾಗಿಯೂ ಪೂರ್ವಜನ್ಮದಲ್ಲಿ ಸಂಪಾದಿಸಿದ ಅಪೂರ್ವವಾದ ಪುಣ್ಯದ ಉದಯವೋ ಎಂಬಂತೆ ಕುಳಿತಿದ್ದನು.

**ತದಾ ನಾಪಿತಕಃ ಕೋಪಿ ರುಗ್ಮಿಣೀಂ ಸಮುಪಾಗತಃ ।**
**ಹರಿಪ್ರಶ್ನಾತ್ಸುತೋತ್ಪತ್ತಿಂ ವಿಜ್ಞಾಯ ವಿನಯಂಧರಾತ್ ॥ ೧೧೧೩ ॥**

**ಮುನೀಂದ್ರಾದಾವಯೋರ್ಯಸ್ಯಾಃ ಪ್ರಾಗ್ಜಃ ಸ್ತೋಽಪಯಮೋಲಕಮ್ ।**
**ಸ್ನಾತ್ವನ್ಯಸ್ಯಾಃ ಸ ಹೃತ್ವೇತಿ ಯುವಾಭ್ಯಾಂ ವಿಹಿತಾ ಸ್ಥಿತಿಃ ॥ ೧೧೧೪ ॥**

**ತಸ್ಮಾದ್ದೇವ್ಯಲಕಾಲೀ ತೇ ದೀಯತಾಂ ತನ್ನಿಬಂಧನಮ್ ।**
**ಸ್ಮೃತ್ವಾ ಭಾನುಕುಮಾರಸ್ಯ ಸ್ನಾನಾರ್ಥಂ ಸತ್ಯಭಾಮಯಾ ॥ ೧೧೧೫ ॥**

**ಪ್ರಹಿತೋಽಹಂ ವಿವಾಹೇದ್ಯ ದ್ರುತಮಿತ್ಯಬ್ರವೀದಿದಮ್ ।**
**ಕಿಮೇತದಿತಿ ಸಂಪ್ರಷ್ಟಾ ಕಾಮೇನ ತವ ಜನ್ಮನಾ ॥ ೧೧೧೬ ॥**

**ಸಮಂ ಭಾನುಶ್ಚ ಸಂಜಾತಸ್ತದಾವಾಭ್ಯಾಂ ಯುವಾಂ ಹರೇಃ ।**
**ನೀತೌ ದರ್ಶಯಿತುಂ ಸುಪ್ತೇ ತಸ್ಮಿಂಸ್ತ್ವಂ ಪಾದಸನ್ನಿಧೌ ॥ ೧೧೧೭ ॥**

**ಸ್ಥಾಪಿತಃ ಸ ಶಿರೋಭಾಗೇ ಪ್ರಬುಧ್ಯ ತ್ವಾಂ ಪುರಾ ಹರಿಃ ।**
**ವಿಲೋಕ್ಯ ಜ್ಯೇಷ್ಠತಾಂ ತೇದಾದಿತಿ ಮಾತಾಭ್ಯಧಾತ್ತತಃ ॥ ೧೧೧೮ ॥**

**ಸ ನಾಪಿತಂ ವಿಕಾರಾಣಾಮಕರೋದಾಕರಂ ಪುನಃ ।**
**ಆಗತಾಂಶ್ಚ ವ್ಯಧಾದ್ಭೃತ್ಯಾನ್ ಗೋಪುರೇಧಃ ಸ್ಥಿತಾನನಾನ್ ॥ ೧೧೧೯ ॥**

**ವಾಸುದೇವಸ್ಯ ರೂಪೇಣಾತರ್ಜಯಚ್ಚ ವಿದೂಷಕಮ್ ।**
**ದೀರ್ಘೀಕೃತಸ್ವಪಾದೇನ ಜರಾಖ್ಯಂ ಚ ಮಹತ್ತರಮ್ ॥ ೧೧೨೦ ॥**

ಆಗ ಒಬ್ಬಾನೊಬ್ಬ ಕ್ಷೌರಿಕನು ರುಗ್ಮಿಣಿಯ ಬಳಿಗೆ ಬಂದವನಾಗಿ ''ದೇವಿಯೆ! ಹರಿಯ ಪ್ರಶ್ನೆಯಿಂದ ಯಮಧರಮುನೀಂದ್ರರಿಂದ ಪುತ್ರೋತ್ಪತ್ತಿಯನ್ನು ತಿಳಿದು 'ನಮ್ಮಿರ್ವರಲ್ಲಿ ಯಾವಳ ಪುತ್ರನು ಮೊದಲು ಜನಿಸಿದವನೋ ಅವನು ತನ್ನ ವಿವಾಹದಲ್ಲಿ ಮತ್ತೊಬ್ಬಳ ತಲೆಗೂದಲನ್ನು ಹರಣಮಾಡಿ ಸ್ನಾನಮಾಡಬೇಕು' ಎಂದು ನಿನ್ನಿಂದಲೂ ಸತ್ಯಭಾಮೆಯಿಂದಲೂ ನಿಬಂಧನವು ಮಾಡಲ್ಪಟ್ಟಿತ್ತು. ಆ ನಿಬಂಧನವನ್ನು ಸ್ಮರಿಸಿಕೊಂಡು ಈದಿನ ಭಾನುಕುಮಾರನ ವಿವಾಹದಲ್ಲಿ ಸ್ನಾನಕ್ಕೋಸ್ಕರ ಸತ್ಯಭಾಮೆಯಿಂದ ನಾನು ಶೀಘ್ರವಾಗಿ 'ಕಳುಹಿಸಲ್ಪಟ್ಟಿರುತ್ತೇನೆ. ಆದುದರಿಂದ ನಿನ್ನ ತಲೆಗೂದಲುಗಳ ಸಮೂಹವನ್ನು ಕೊಡು'' ಎಂದು ಹೇಳಿದನು. ಆಗ ಕಾಮನು ''ಇದೇನು ?'' ಎಂದು ರುಗ್ಮಿಣಿಯನ್ನು ಕೇಳಿದನು. ''ನಿನ್ನ ಜನ್ಮದೊಡನೆ (ನೀನು ಹುಟ್ಟಿದಾಗಲೇ) ಭಾನುಕುಮಾರನೂ ಹುಟ್ಟಿದನು. ಆಗ ನಾನೂ ಸತ್ಯಭಾಮೆಯೂ ನಿಮ್ಮಗಳನ್ನು ಹರಿಗೆ ತೋರಿಸುವುದಕ್ಕೋಸ್ಕರ ತೆಗೆದುಕೊಂಡು ಹೋದೆವು. ಆಗ ಹರಿಯು ಮಲಗಿರಲು ನೀನು ಅವನ ಪಾದಸಮೀಪದಲ್ಲಿರಿಸಲ್ಪಟ್ಟೆ. ಆ ಭಾನುಕುಮಾರನು ಅವನ ಶಿರೋಭಾಗದಲ್ಲಿ ರಿಸಲ್ಪಟ್ಟನು. ಹರಿಯು ಎಚ್ಚತ್ತು ಮೊದಲು ನಿನ್ನನ್ನು ನೋಡಿ ಹಿರಿತನವನ್ನು ನಿನಗೆ ಕೊಟ್ಟನು'' ಎಂದು ತಾಯಿಯು ಹೇಳಿದಳು. ಬಳಿಕ ಪ್ರದ್ಯುಮ್ನನು ಆ ಕ್ಷೌರಿಕನನ್ನು ವಿಕಾರಗಳಿಗೆ ಗಣಿಯನ್ನಾಗಿ ಮಾಡಿದನು. ನಾನಾವಿಕಾರಗಳನ್ನುಂಟುಮಾಡಿದನೆಂದು ಭಾವವು. ಪುನಃ ಬಂದ ಭೃತ್ಯರನ್ನೂ ಗೋಪುರದಲ್ಲಿ ಅಧೋಮುಖರನ್ನಾಗಿ ಮಾಡಿದನು. ವಾಸುದೇವನ ರೂಪದಿಂದ ವಿದೂಷಕನನ್ನೂ ಉದ್ದವಾಗಿ ನೀಡಲ್ಪಟ್ಟ ತನ್ನಪಾದದಿಂದ ಜರನೆಂಬ ಮಹತ್ತರ–ಪ್ರಮುಖನನ್ನೂ ತಿರಸ್ಕರಿಸಿದನು.

**ಮೇಷರೂಪೇಣ ಸಂಪಾತಾತ್ಪಾತಯನ್ ಸ್ವಪಿತಾಮಹಮ್ ।**
**ಹಲಿನಂ ಚ ಹರಿರ್ಭೂತ್ವಾ ನಿಗೀರ್ಯ ತ್ವಮದೃಶ್ಯತಾಮ್ ॥ ೧೧೨೧ ॥**

**ಗತ್ವಾತ್ರ ಸುಖಮಾಸ್ವಾಂಬೇತ್ಯಭಿಧಾಯ ಸ್ವವಿದ್ಯಯಾ ।**
**ರುಗ್ಮಿಣೀರೂಪಮಾಪಾದ್ಯ ನಿರ್ವಿಶೇಷಂ ಮನೋಹರಮ್ ॥ ೧೧೨೨ ॥**

**ವಿಮಾನೇ ಸ್ಥಾಪಯಿತ್ವಾಶು ಗಚ್ಛನ್ಸ ಸಬಲಂ ಹರಿಮ್ ।**
**ಪ್ರಾಪ್ತವಂತಂ ಸಮಾಹಂತುಮಾಕಾಲಿಕಯಮೋಪಮಮ್ ॥ ೧೧೨೩ ॥**

**ಜಿತ್ವಾ ನರೇಂದ್ರಜಾಲಾಖ್ಯವಿದ್ಯಾವಿಹಿತಮಾಯಯಾ ।**
**ತಸ್ಥೌ ನಿಷ್ಪ್ರತಿಪಕ್ಷಃ ಸನ್ವೀಕ್ಷಣಾಭೀಲವಿಗ್ರಹಃ ॥ ೧೧೨೪ ॥**

ಟಗರಿನ ರೂಪದಿಂದ ಬೀಳುವುದರಿಂದ (ಹಾಯುವುದರಿಂದ) ತನ್ನ ತಾತ–ವಸುದೇವನನ್ನು ಬೀಳಿಸುವವನಾಗಿ ಸಿಂಹವಾಗಿ ಬಲರಾಮನನ್ನು ನುಂಗಿ ಅದೃಶ್ಯತ್ವವನ್ನು ಹೊಂದಿ ತಾಯಿಯ ಬಳಿಗೆ ಹೋಗಿ ''ತಾಯಿಯೆ! ನೀನು ಇಲ್ಲಿ ಸುಖವಾಗಿರು'' ಎಂದು ಹೇಳಿ ತನ್ನ ವಿದ್ಯೆಯಿಂದ ಸಮಾನವೂ ಮನೋಹರವೂ ಆದ ರುಗ್ಮಿಣಿಯ ರೂಪವನ್ನುಂಟುಮಾಡಿ ವಿಮಾನದಲ್ಲಿ ಸ್ಥಾಪಿಸಿ ಶೀಘ್ರವಾಗಿ ಹೋಗುವವನಾದ ಆ ಪ್ರದ್ಯುಮ್ನನು ಸೇನಾಸಮೇತನೂ ಅಕಾಲದಲ್ಲಿ ಹುಟ್ಟಿದ ಯಮನಿಗೆ ಸಮಾನನೂ ಕೊಲ್ಲುವುದಕ್ಕೋಸ್ಕರ ಬಂದವನೂ ಆದ ಹರಿಯನ್ನು ನರೇಂದ್ರಜಾಲವೆಂಬ ವಿದ್ಯೆಯಿಂದ ಮಾಡಲ್ಪಟ್ಟ ಮಾಯೆಯಿಂದ ಜಯಿಸಿ ಶತ್ರುಪಕ್ಷವಿಲ್ಲದವನೂ ನೋಟಕ್ಕೆ ಕಿರಾತದೇಹವುಳ್ಳವನೂ ಆಗಿದ್ದನು.

**ನಾರದಃ ಸ ತದಾಗತ್ಯ ತನೂಜಸ್ಯಾದ್ಯ ವೀಕ್ಷಣಮ್ ।**
**ಯುವಯೋರೀದೃಶಂ ಲಬ್ಧವಿದ್ಯಸ್ಯೇತ್ಯಭ್ಯಧಾದ್ಧಸನ್ ॥ ೧೧೨೫ ॥**

ಆಗ ಆ ನಾರದನು ಬಂದು ''ಈ ದಿವಸ ನಿಮ್ಮಗಳಿಗೆ (ಕೃಷ್ಣಬಲರಾಮರಿಗೆ) ವಿದ್ಯಾಪ್ರಾಪ್ತಿಯುಳ್ಳವನಾದ ಪುತ್ರನ ನೋಟವು ಇಂತಹದಾಗಿದೆ'' ಎಂದು ನಗುತ್ತ ಹೇಳಿದನು.

**ಸೋಽಪಿ ಪ್ರಕಟಿತಾತ್ಮೀಯರೂಪಃ ಪಂಚಶರೋ ಬಲಮ್ ।**
**ಹರಿಂ ಚ ಸ್ವಶಿರೋನ್ಯಸ್ತತತ್ಕ್ರಮಾಬ್ಜೋತ್ಯಮಾನಯತ್ ॥ ೧೧೨೬ ॥**

ತನ್ನ ನಿಜರೂಪವನ್ನು ಪ್ರಕಟಿಸಿದ ಆ ಪ್ರದ್ಯುಮ್ನನೂ ಬಲರಾಮನನ್ನೂ ಕೃಷ್ಣನನ್ನೂ ಅವರ ಚರಣಕಮಲಗಳನ್ನು ತನ್ನ ಮಸ್ತಕದಲ್ಲಿರಿಸಿದವನಾಗಿ ಅಧಿಕವಾಗಿ ಸನ್ಮಾನಿಸಿದನು.

**ತತಶ್ಚಕ್ರಧರೋನಂಗಂ ಪ್ರೇಮಾಲಿಂಗಿತವಿಗ್ರಹಃ ।**
**ಆರೋಪ್ಯ ಸ್ವಗಜಸ್ಕಂಧಂ ಪ್ರಹೃಷ್ಟಃ ಪ್ರಾವಿಶತ್ಪುರಮ್ ॥ ೧೧೨೭ ॥**

ಬಳಿಕ ಪ್ರೇಮದಿಂದ ಆಲಿಂಗಿಲಸಲ್ಪಟ್ಟ ದೇಹವುಳ್ಳ ಚಕ್ರಧರನು ಪ್ರದ್ಯುಮ್ನನನ್ನು ತನ್ನ ಆನೆಯ ಮೇಲೆ ಕುಳ್ಳಿರಿಸಿ ಸಂತುಷ್ಟನಾಗಿ ನಗರವನ್ನು ಪ್ರವೇಶಿದನು.

**ಸತ್ಯಭಾಮಾಸುತೋದ್ದಿಷ್ಟಕನ್ಯಕಾಭಿಃ ಸಹ ಸ್ಮರಃ ।**
**ಕಲ್ಯಾಣಾಭಿಷವಂ ದಿಷ್ಟ್ಯಾ ಸಂಪ್ರಾಪತ್ಸರ್ವಸಮ್ಮತಃ ॥ ೧೧೨೮ ॥**

ಪ್ರದ್ಯುಮ್ನನು ಸತ್ಯಭಾಮೆಯ ಪುತ್ರನಿಗೆಂದು ಉದ್ದೇಶಿಸಲ್ಪಟ್ಟಿದ್ದ ಕನ್ನೆಯರೊಡನೆ ಸರ್ವಸಮ್ಮತನಾಗಿ ಅದೃಷ್ಟದಿಂದ ಕಲ್ಯಾಣ–ವಿವಾಹಾಭಿಷೇಕವನ್ನು ಹೊಂದಿದನು.

**ಏವಂ ಪ್ರಯಾತಿ ಕಾಲೇಸ್ಯ ಸ್ವರ್ಗಾದಾಗತ್ಯ ಕಶ್ಚನ ।**
**ತನೂಜಃ ಕಾಮಸೋದರ್ಯೋ ಹರೇಃ ಪ್ರಾಚ್ಯೋ ಭವಿಷ್ಯತಿ ॥**

**ಇತ್ಯಾದೇಶಂ ಸಮಾಕರ್ಣ್ಯ ಸತ್ಯಭಾಮಾತ್ಮನಃ ಪತಿಮ್ ।**
**ಯಥಾ ಸ್ಯಾತ್ತತ್ಸಮುತ್ಪತ್ತಿಃ ಸ್ವಸ್ಯಾಸ್ತಾದೃಗಯಾಚತ ॥ ೧೧೩೦ ॥**

ಈ ರೀತಿಯಾಗಿ ಈ ಪ್ರದ್ಯುಮ್ನನ ಕಾಲವು ಕಳೆಯುತ್ತಿರಲು ''ಕಾಮನ ಪೂರ್ವಭವದ ಸೋದರನೊಬ್ಬನು ಹರಿಗೆ ಪುತ್ರನಾಗುವನು'' ಎಂಬ ವಿಷಯವನ್ನು ಕೇಳಿ ಸತ್ಯಭಾಮೆಯು ತನಗೆ ಆ ಪುತ್ರನ ಉತ್ಪತ್ತಿಯಾಗುವಂತೆ ಅನುಗ್ರಹಿಸಬೇಕೆಂಬ ತನ್ನ ಪತಿಯನ್ನು ಬೇಡಿಕೊಂಡಳು.

**ತಚ್ಛ್ರುತ್ವಾ ರುಗ್ಮಿಣೀ ಚಾಹ ಕಾಮಂ ಜಾಂಬವತೀ ಯಥಾ ।**
**ಲಪ್ಸ್ಯತೇ ತೇನುಜಂ ಪ್ರಾಚ್ಯಂ ತಥಾ ಕುರ್ವಿತಿ ಸಾದರಮ್ ॥ ೧೧೩೧ ॥**

ಆ ಮಾತನ್ನು ಕೇಳಿ ರುಗ್ಮಿಣಿಯು ಕಾಮನಿಗೆ ''ನಿನ್ನ ಪೂರ್ವಭವದ ತಮ್ಮನನ್ನು ಜಾಂಬವತಿಯು ಪಡೆಯುವಂತೆ ಮಾಡು'' ಎಂದು ಪ್ರೀತಿಯಾಗಿ ಹೇಳಿದಳು.

**ಸೋಽಪ್ಯದಾನ್ಮುದ್ರಿಕಾಂ ಕಾಮರೂಪಿಣೀಂ ತಾಮವಾಪ್ಯ ಸಾ ।**
**ಸತ್ಯಭಾಮಾಕೃತಿಂ ಗತ್ವಾ ಪತಿಸಂಯೋಗತಃ ಸುಖಮ್ ॥ ೧೧೩೨ ॥**

**ಕ್ರೀಡವಂ ಜಾಂಬವತ್ಯಾಪ ಶಂಭವಾಖ್ಯಂ ದಿವಶ್ಚ್ಯುತಮ್ ।**
**ಸುಭಾನುಂ ಸತ್ಯಭಾಮಾ ಚ ಜಾತಮತ್ಸರಯೋಸ್ತಯೋಃ ॥ ೧೧೩೩ ॥**

**ಗಾಂಧರ್ವಾದಿವಿವಾದೇಷು ಸುಭಾನುಂ ಶಂಭವೋಽಜಯತ್ ।**
**ಸರ್ವತ್ರ ಪುಣ್ಯಪಣ್ಯಾನಾಂ ವಿಜಯೋ ನೈವ ದುರ್ಲಭಃ ॥ ೧೧೩೪ ॥**

ಆ ಪ್ರದ್ಯುಮ್ನನೂ ತನ್ನ ಕಾಮರೂಪಿಣೀಮುದ್ರಿಕೆಯನ್ನು ಜಾಂಬವತಿಗೆ ಕೊಟ್ಟನು. ಆಕೆಯು ಆ ಮುದ್ರಿಕೆಯನ್ನು ಹೊಂದಿ ಸತ್ಯಭಾಮೆಯ ಆಕೃತಿಯನ್ನು ಪಡೆದು ಪತಿಸಂಯೋಗದಿಂದ ಸುಖವಾಗಿ ಸ್ವರ್ಗದಿಂದ ಚ್ಯುತನಾದ ಕ್ರೀಡವನನ್ನು ಶಂಭವನೆಂಬ ಪುತ್ರನನ್ನಾಗಿ ಪಡೆದಳು. ಬಳಿಕ ಸತ್ಯಭಾಮೆಯು ಸುಭಾನುವೆಂಬ ಪುತ್ರನನ್ನು ಪಡೆದಳು. ಗಾಂಧರ್ವಾದಿ ವಿದ್ಯೆಗಳಲ್ಲಿ ಉಂಟಾದ ಮತ್ಸರವುಳ್ಳ ಆ ಶಂಭ ವಸುಭಾನುಗಳಲ್ಲಿ ಶಂಭವನು ಸುಭಾನುವನ್ನು ಗೆದ್ದನು. ಪುಣ್ಯವೆಂಬ ಬೆಲೆಗೆ ಕೊಳ್ಳತಕ್ಕುದಾದ ವಸ್ತುವುಳ್ಳವರಿಗೆ ಎಲ್ಲಾಕಡೆಗಳಲ್ಲಿ ವಿಜಯವು ದುರ್ಲಭವಲ್ಲವು.

**ರುಗ್ಮಿಣೀ ಸತ್ಯಭಾಮಾ ಚ ಗತಮಾತ್ಸರ್ಯಬಂಧನೇ ।**
**ಪರಸ್ಪರಗತಾಂ ಪ್ರೀತಿಮನ್ವಭೂತಾಮತಃ ಪರಮ್ ॥ ೧೧೩೫ ॥**

ಮಾತ್ಸರ್ಯಬಂಧನವನ್ನು ಹೊಂದಿರುವ ರುಗ್ಮಿಣಿಯೂ ಸತ್ಯಭಾಮೆಯೂ ಇಲ್ಲಿಂದ ಮುಂದೆ ಪರಸ್ಪರಗತವಾದ ಪ್ರೀತಿಯನ್ನನುಭವಿಸಲಿ.''

**ಇತ್ಯಶೇಷಂ ಗಣೇಶೋಕ್ತಮಾಕರ್ಣ್ಯ ಸಕಲಂ ಸದಃ ।**
**ನನಾಮ ಮುಕುಲೀಭೂತಕರಾಬ್ಜಂ ತತ್ಕ್ರಮಾಬ್ಜಯೋಃ ॥ ೧೧೩೬ ॥**

ಈ ರೀತಿಯಾಗಿ ಗಣಧರರಿಂದ ಹೇಳಲ್ಪಟ್ಟ ಎಲ್ಲಾ ವಿಷಯವನ್ನು ಕೇಳಿ ಎಲ್ಲಾ ಸಭೆಯು ಕರಕಮಲಗಳನ್ನು ಜೋಡಿಸಿದುದಾಗಿ ಆ ಗಣಧರರ ಪಾದಕಮಲಗಳಿಗೆ ನಮಸ್ಕಾರವನ್ನು ಮಾಡಿತು.

**ಅಥಾನ್ಯದಾ ಜಿನಂ ನೇಮಿಂ ಸೀರಪಾಣಿಃ ಕೃತಾಂಜಲಿಃ ।**
**ಅವನಮ್ಯಾನ್ವಯುಂಕ್ತೈವಂ ಹರಿಸ್ನೇಹಾತ್ತಮಾನಸಃ ॥ ೧೧೩೭ ॥**

ಅನಂತರದಲ್ಲಿ ಮತ್ತೊಂದು ಕಾಲದಲ್ಲಿ ಹರಿಯ ಸ್ನೇಹದಿಂದ ಕೂಡಿದ ಮನಸ್ಸುಳ್ಳವನಾದ ಬಲರಾಮನು ಕೈಗಳನ್ನು ಜೋಡಿಸಿದವನಾಗಿ ನೇಮಿಜಿನನನ್ನು ವಂದಿಸಿ ಈ ರೀತಿಯಾಗಿ ಪ್ರಶ್ನೆಮಾಡಿದನು.

**ಭಗವನ್ ವಾಸುದೇವಸ್ಯ ರಾಜ್ಯಂ ಪ್ರಾಜ್ಯಮಹೋದಯಮ್ ।**
**ಪ್ರವರ್ತತೇಽಪ್ರತೀಪಂ ಮೇ ಬ್ರೂಹೀದಂ ಚ ಕಿಯಚ್ಚಿರಮ್ ॥ ೧೧೩೮ ॥**

''ಭಗವಂತನೆ ! ವಾಸುದೇವನ ಶ್ರೇಷ್ಠವಾದ ಮಹಾಭ್ಯುದಯವುಳ್ಳ ರಾಜ್ಯವು ಶತ್ರುರಹಿತವಾಗಿ ಎಷ್ಟು ದೀರ್ಘಕಾಲದವರೆಗೆ ನಡೆಯುವುದು ? ಇದನ್ನೂ ನನಗೆ ಹೇಳು.''

**ಭದ್ರ ದ್ವಾದಶವರ್ಷಾಂತೇ ನಙ್ಕ್ಷ್ಯತ್ಯಮದ್ಯನಿಮಿತ್ತಕಮ್ ।**
**ದ್ವೀಪಾಯನೇನ ನಿರ್ಮೂಲಮಿಯಂ ದ್ವಾರಾವತೀಪುರೀ ॥ ೧೧೩೯ ॥**

ನೇಮಿಸ್ವಾಮಿಯು ಬಲರಾಮನಿಗೆ ''ಅಯ್ಯಾ! ಹನ್ನೆರಡು ವರ್ಷಗಳ ಕೊನೆಯಲ್ಲಿ ಮದ್ಯನಿಮಿತ್ತವಾಗಿ ದ್ವೀಪಾಯನನಿಂದ ಈ ದ್ವಾರಾವತೀನಗರವು ನಿರ್ಮೂಲವಾಗಿ ನಾಶವಾಗುವುದು.

**ವಿಷ್ಣೋರ್ಜರತ್ಕುಮಾರೇಣ ಗತ್ಯಂತರಗತಿರ್ಭವೇತ್ ।**
**ಸ ಏಷ ಪ್ರಥಮಾಂ ಪೃಥ್ವೀಂ ಪ್ರವಿಶ್ಯಾಬ್ಧ್ಯುಪಮಾಯುಷಃ ॥ ೧೧೪೦ ॥**

**ಪ್ರಾಂತೇ ತಸ್ಮಾದ್ವಿನಿರ್ಗತ್ಯ ತೀರ್ಥೇಶೋಽತ್ರ ಭವಿಷ್ಯತಿ ।**
**ತ್ವಮಪ್ಯೇತದ್ವಿಯೋಗೇನ ಷಣ್ಮಾಸಕೃತಶೋಚನಃ ॥ ೧೧೪೧ ॥**

**ಸಿದ್ಧಾರ್ಥಸುರಸಂಬೋಧನಾಪಾಸ್ತಾಖಿಲದುಃಖಕಃ ।**
**ದೀಕ್ಷಾಮಾದಾಯ ಮಾಹೇಂದ್ರಕಲ್ಪೇ ದೇವೋ ಜನಿಷ್ಯಸೇ ॥ ೧೧೪೨ ॥**

ವಿಷ್ಣುವಿಗೆ ಜರತ್ಕುಮಾರನಿಂದ ಅನ್ಯಗತಿಯ ಗಮನ (ಮರಣ) ವಾಗುವುದು. ಆ ಈ ವಿಷ್ಣುವು ಪ್ರಥಮನರಕಭೂಮಿಯನ್ನು ಪ್ರವೇಶಿಸಿ ಸಾಗರೋಪಮಾಯುಷ್ಯದ ಕೊನೆಯಲ್ಲಿ ಅಲ್ಲಿಂದ ಹೊರಟು ಈ ಭರತಕ್ಷೇತ್ರದಲ್ಲಿ ತೀರ್ಥೇಶ್ವರನಾಗುವನು. ನೀನೂ ಇವನ ವಿಯೋಗದಿಂದ ಆರು ತಿಂಗಳವರೆಗೆ ಶೋಕವನ್ನು ಮಾಡುವವನೂ ಸಿದ್ಧಾರ್ಥನೆಂಬ ದೇವನ ಬೋಧನೆಯಿಂದ ಸಮಸ್ತದುಃಖಗಳನ್ನು ದೂರಮಾಡಿದವನೂ ಆಗಿ ದೀಕ್ಷೆಯನ್ನು ತೆಗೆದುಕೊಂಡು ಆಯುಷ್ಯಾವಸಾನದಲ್ಲಿ ಸತ್ತು ಮಾಹೇಂದ್ರಕಲ್ಪದಲ್ಲಿ ದೇವನಾಗಿ ಜನಿಸುವೆ.

**ಉತ್ಕೃಷ್ಟಾಯುಃಸ್ಥಿತಿಸ್ತತ್ರ ಭುಕ್ತಭೋಗೋಽತ್ರ ತೀರ್ಥಕೃತ್ ।**
**ಭೂತ್ವಾ ನಿರ್ದಗ್ಧಕರ್ಮಾರಿರ್ದೇಹಮುಕ್ತೋ ಭವಿಷ್ಯಸಿ ॥ ೧೧೪೩ ॥**

ಅಲ್ಲಿ ಉತ್ಕೃಷ್ಟಾಯುಷ್ಯಸ್ಥಿತಿಯುಳ್ಳವನೂ ಭೋಗಗಳನ್ನನುಭವಿಸಿದವನೂ ಇಲ್ಲಿ ತೀರ್ಥಂಕರನಾಗಿ ಕರ್ಮಶತ್ರುವನ್ನು ದಹಿಸಿದವನೂ ದೇಹವಿನಿರ್ಮುಕ್ತನೂ ಆಗುವೆ.''

**ಇತಿ ತೀರ್ಥೇಶಿನಾ ಪ್ರೋಕ್ತಂ ಶ್ರುತ್ವಾ ದ್ವೀಪಾಯನಾಹ್ವಯಃ ।**
**ಸದ್ಯಃ ಸಂಯಮಮಾದಾಯ ಪ್ರಾಯಾಜ್ಜನಪದಾಂತರಮ್ ॥ ೧೧೪೪ ॥**

ಈ ರೀತಿಯಾಗಿ ನೇಮಿತೀರ್ಥೇಶ್ವರರಿಂದ ಹೇಳಲ್ಪಟ್ಟುದನ್ನು ಕೇಳಿ ದ್ವೀಪಾಯನನೆಂಬವನು ತತ್ಕ್ಷಣದಲ್ಲಿ ಸಂಯಮವನ್ನು ತೆಗೆದುಕೊಂಡು ದೇಶಾಂತರಕ್ಕೆ ಹೋದನು.

**ತಥಾ ಜರತ್ಕುಮಾರಶ್ಚ ಕೌಶಾಂಬ್ಯಾರಣ್ಯಮಾಶ್ರಯತ್ ।**
**ಪ್ರಾಗ್ಬದ್ಧನರಕಾಯುಷ್ಕೋ ಹರಿರಪ್ಯಾಪ್ತದರ್ಶನಃ ॥ ೧೧೪೫ ॥**

**ಭಾವ್ಯಮಾನಾಂತ್ಯನಾಮಾಸೌ ನಾಹಂ ಶಕ್ನೋಮಿ ದೀಕ್ಷಿತುಮ್ ।**
**ಶಕ್ತಾನ್ನ ಪ್ರತಿಬಧ್ನಾಮೀತ್ಯಾಸ್ತ್ರೀಬಾಲಮಘೋಷಯತ್ ॥ ೧೧೪೬ ॥**

ಹಾಗೆಯೇ ಜರತ್ಕುಮಾರನೂ ಕೌಶಾಂಬಿಯ ಅರಣ್ಯವನ್ನಾಶ್ರಯಿಸಿದನು. ಮೊದಲು ಬದ್ಧವಾದ ನರಕಾಯುಷ್ಯವುಳ್ಳವನೂ ಆಮೇಲೆ ಸಮ್ಯಗ್ದರ್ಶನವನ್ನು ಹೊಂದಿದವನೂ ತೀರ್ಥಕರತ್ವವೆಂಬ ಕೊನೆಯದಾದ ನಾಮವನ್ನು ಭಾವಿಸಿದವನೂ ಆದ ಈ ಹರಿಯು 'ನಾನು ದೀಕ್ಷೆಯನ್ನು ತೆಗೆದುಕೊಳ್ಳುವುದಕ್ಕೆ ಶಕ್ತನಾಗಿಲ್ಲ. ಶಕ್ತರಾಗಿರುವವರನ್ನು ತಡೆಯುವುದಿಲ್ಲ' ಎಂದು ಹೆಂಗಸರ ಮತ್ತು ಮಕ್ಕಳವರೆಗೂ ಘೋಷಣವನ್ನು ಮಾಡಿಸಿದನು.

**ಪ್ರದ್ಯುಮ್ನಾದಿಸುತಾ ದೇವ್ಯೋ ರುಗ್ಮಿಣ್ಯಾದ್ಯಾಶ್ಚ ಚಕ್ರಿಣಮ್ ।**
**ಬಂಧೂಂಶ್ಚಾಪೃಚ್ಛ್ಯ ತೈರ್ಮುಕ್ತಾಃ ಪ್ರತ್ಯಪದ್ಯಂತ ಸಂಯಮಮ್ ॥**

ಪ್ರದ್ಯುಮ್ನನೇ ಮೊದಲಾದ ಪುತ್ರರೂ ರುಗ್ಮಿಣಿಯೇ ಮೊದಲಾದ ದೇವಿಯರೂ ಚಕ್ರವರ್ತಿಯನ್ನೂ ಬಂಧುಗಳನ್ನೂ ಕೇಳಿ ಅವರುಗಳಿಂದ ಬಿಡಲ್ಪಟ್ಟವರಾಗಿ ಸಂಯಮವನ್ನು ಹೊಂದಿದರು.

**ದ್ವೀಪಾಯನನಿದಾನಾವಸಾನೇ ಜಾಂಬವತೀಸುತಃ ।**
**ಅನಿರುದ್ಧಶ್ಚ ಕಾಮಸ್ಯ ಸುತಃ ಸಂಪ್ರಾಪ್ಯ ಸಂಯಮಮ್ ॥ ೧೧೪೮ ॥**

**ಪ್ರದ್ಯುಮ್ನಮುನಿನಾ ಸಾರ್ಧಮೂರ್ಜಯಂತಾಚಲಾಗ್ರತಃ ।**
**ಕೂಟತ್ರಯಂ ಸಮಾರುಹ್ಯ ಪ್ರತಿಮಾಯೋಗಧಾರಿಣಃ ॥ ೧೧೪೯ ॥**

**ಶುಕ್ಲಧ್ಯಾನಂ ಸಮಾಪೂರ್ಯ ತ್ರಯಸ್ತೇ ಘಾತಿಘಾತಿನಃ ।**
**ಕೈವಲ್ಯನವಕಂ ಪ್ರಾಪ್ಯ ಪ್ರಾಪನ್ಮುಕ್ತಿಮಥಾನ್ಯದಾ ॥ ೧೧೫೦ ॥**

ದ್ವೀಪಾಯನಮುನಿಯು ನಿದಾನಶಲ್ಯವನ್ನು ಮಾಡಿದಾಗ ಕೊನೆಯಲ್ಲಿ ಜಾಂಬವತಿಯ ಪುತ್ರನಾದ ಶಂಭವ(ಜಾಂಬವ)ನೂ ಕಾಮನ ಪುತ್ರನಾದ ಅನಿರುದ್ಧನೂ ಸಂಯಮವನ್ನು ಹೊಂದಿ ಪ್ರದ್ಯುಮ್ನಮುನಿಯೊಡನೆ ಊರ್ಜಯಂತ ಗಿರಿಯ ತುದಿಯಿಂದ ಮೂರು ಶಿಖರವನ್ನೇರಿ ಪ್ರತಿಮಾಯೋಗಧಾರಿಗಳಾಗಿ ಶುಕ್ಲಧ್ಯಾನವನ್ನು ಪೂರ್ತಿಮಾಡಿ ಘಾತಿಕರ್ಮಗಳನ್ನು ನಾಶಮಾಡಿದ ಆ ಮೂವರು ಮುನಿಗಳು ಸಮ್ಯಕ್ತ್ವಾದಿನವಕೇವಲಲಬ್ಧಿಗಳನ್ನು ಪಡೆದು ಬಳಿಕ ಮತ್ತೊಂದು ಕಾಲದಲ್ಲಿ ಮುಕ್ತಿಯನ್ನು ಹೊಂದಿದರು.

**ಪುಣ್ಯಘೋಷಣಕೃದ್ಯಕ್ಷಧೃತಚಕ್ರಪುರಸ್ಸರಃ ।**
**ಪಾದನ್ಯಾಸೇ ಪುರಃ ಪಶ್ಚಾತ್ಸರೋಜೈಃ ಸಪ್ತಭಿಃ ಪೃಥಕ್ ॥ ೧೧೫೧ ॥**

**ಕೃತಶೋಭೋ ಜಗನ್ನಾಥಶ್ಛತ್ರಾದಿಪ್ರಾತಿಹಾರ್ಯಕಃ ।**
**ಮರುನ್ಮಾರ್ಗಗತಾಶೇಷಸುರಖೇಚರಸೇವಿತಃ ॥ ೧೧೫೨ ॥**

**ಪೃಥ್ವೀಪಥಪ್ರವೃತ್ತಾನ್ಯವಿನೇಯಜನತಾನುಗಃ ।**
**ಪವನಾಮರನಿರ್ಧೂತಧೂಲೀಕಂಟಕಭೂತಲಃ ॥ ೧೧೫೩ ॥**

**ಮೇಘಾಮರಕುಮಾರೋಪಸಿಕ್ತಗಂಧಾಂಬುಸತ್ಕ್ಷಿತಿಃ ।**
**ಇತ್ಯಾದ್ಯಾಶ್ಚರ್ಯಸಂಪನ್ನಃ ಸರ್ವಪ್ರಾಣಿ ಮನೊಹರಃ ॥ ೧೧೫೪ ॥**

**ಧರ್ಮಾಮೃತಮಯೀಂ ವೃಷ್ಟಿಮಭಿಷಿಂಚನ್ ಜಿನೇಶ್ವರಃ ।**
**ವಿಶ್ವಾನ್ ದೇಶಾನ್ ವಿಹೃತ್ಯಾಯಾತ್ಸ ದೇಶಂ ಪಲ್ಲವಾಹ್ವಯಮ್ ॥**

ಪುಣ್ಯಘೋಷವನ್ನು ಮಾಡುವ ಯಕ್ಷನಿಂದ ಧರಿಸಲ್ಪಟ್ಟ ಚಕ್ರವು ಮುಂದಾಗಿರುವವನೂ ಪಾದನಿಕ್ಷೇಪದಲ್ಲಿ ಮುಂದೆಯೂ ಹಿಂದೆಯೂ ಬೇರೆ ಬೇರೆಯಾಗಿ ಏಳೇಳು ಕಮಲಗಳಿಂದ ಮಾಡಲ್ಪಟ್ಟ ಶೋಭೆಯುಳ್ಳವನೂ ಜಗತ್ತಿಗೆ ಅಧಿಪತಿಯೂ ಛತ್ರವೇ ಮೊದಲಾದ ಪ್ರಾತಿಹಾರ್ಯಗಳುಳ್ಳವನೂ ಆಕಾಶದಲ್ಲಿರುವ ಸಕಲದೇವರ್ಕಳಿಂದಲೂ ಖೇಚರರಿಂದಲೂ ಸೇವಿಸಲ್ಪಟ್ಟವನೂ ಭೂಮಾರ್ಗದಿಂದ ಹಿಂಬಾಲಿಸಿ ಬರುವ ಭವ್ಯಜನರ ಸಮೂಹವುಳ್ಳವನೂ ವಾಯುಕುಮಾರದೇವನಿಂದ ಧೂಳಿಯೂ ಮುಳ್ಳೂ ಹೋಗಲಾಡಿಸಲ್ಪಟ್ಟಿರುವ ಭೂಪ್ರದೇಶವುಳ್ಳವನೂ ಮೇಘಕುಮಾರದೇವನಿಂದ ಸೇಚಿಸಲ್ಪಟ್ಟ ಗಂಧೋದಕವುಳ್ಳ ಉತ್ತಮಭೂಮಿಯುಳ್ಳವನೂ ಇವೇ ಮೊದಲಾದ ಆಶ್ಚರ್ಯಗಳುಳ್ಳವನೂ ಸಮಸ್ತಪ್ರಾಣಿಗಳ ಮನೋಹರನೂ ಆದ ಆ ನೇಮಿಜಿನೇಶ್ವರನು ಧರ್ಮಾಮೃತಮಯವಾದ ಮಳೆಯನ್ನು ಸುರಿಯುವವನಾಗಿ ಎಲ್ಲಾ ದೇಶಗಳನ್ನು ವಿಹರಿಸಿ ಪಲ್ಲವವೆಂಬ ದೇಶವನ್ನು ತಲುಪಿದನು.

**ಅತ್ರ ಪಾಂಡುತನೂಜಾನಾಂ ಪ್ರಪಂಚೋಲ್ಪಃ ಪ್ರಭಾಷ್ಯತೇ ।**
**ಗ್ರಂಥವಿಸ್ತರಭೀರೂಣಾಮಾಯುರ್ಮೇಧಾನುರೋಧತಃ ॥ ೧೧೫೬ ॥**

ಇಲ್ಲಿ ಗ್ರಂಥವಿಸ್ತರಭಯವುಳ್ಳವರಿಗೆ ಅವರ ಆಯುಷ್ಯಬುದ್ಧಿಗಳ ಅನುಸರಣೆಯಿಂದ ಪಾಂಡುಪುತ್ರರ ವಿಷಯವು ಸ್ವಲ್ಪವಾಗಿ ಹೇಳಲ್ಪಡುತ್ತದೆ.

**ಕಾಂಪಿಲ್ಯಾಯಾಂ ಧರಾಧೀಶೋ ನಗರೇ ದ್ರುಪದಾಹ್ವಯಃ ।**
**ದೇವೀ ದೃಢರಥಾ ತಸ್ಯ ದ್ರೌಪದೀ ತನಯಾ ತಯೋಃ ॥ ೧೧೫೭ ॥**

ಕಾಂಪಿಲ್ಯನಗರದಲ್ಲಿ ದ್ರುಪದನೆಂಬ ದೊರೆಯಿರುತ್ತಾನೆ. ದೃಢರಥೆಯು ಆತನ ಪತ್ನಿ. ದ್ರೌಪದಿಯು ಆ ದಂಪತಿಗಳ ಪುತ್ರಿ.

**ಸ್ತ್ರೀಗುಣೈಃ ಸಕಲೈಃ ಶಸ್ತಾ ಬಭೂವ ಭುವನಪ್ರಿಯಾ ।**
**ತಾಂ ಪೂರ್ಣಯೌವನಾಂ ವೀಕ್ಷ್ಯ ಪಿತ್ರಾ ಕಸ್ಮೈ ಸಮರ್ಪ್ಯತಾಮ್ ॥**

**ಇಯಂ ಕನ್ಯೇತಿ ಸಂಪೃಷ್ಟಾ ಮಂತ್ರಿಣೋ ಮಂತ್ರಚರ್ಚಯಾ ।**
**ಪ್ರಾಭಾಷಂತ ಪ್ರಚಂಡೇಭ್ಯಃ ಪಾಂಡವೇಭ್ಯಃ ಪ್ರದೀಯತಾಮ್ ॥**

**ಏತಾನ್ ಸಹಜಶತ್ರುತ್ವಾದ್ದುರ್ಯೋಧನಮಹೀಪತಿಃ ।**
**ಪಾಂಡುಪುತ್ರಾನುಪಾಯೇನ ಲಾಕ್ಷಾಲಯಮವೀವಿಶತ್ ॥ ೧೧೬೦ ॥**

**ಹಂತುಂ ತತ್ತೇಪಿ ವಿಜ್ಞಾಯ ಸ್ವಪುಣ್ಯಪರಿಚೋದಿತಾಃ ।**
**ಪ್ರದ್ರುತಾಃ ಪಯಸಿ ಕ್ಷ್ಮಾಜಸ್ಯಾಧಸ್ತಾತ್ಕಿಲ್ಬಿಷಂ ಸ್ವಯಮ್ ॥ ೧೧೬೧ ॥**

**ಅಪಹೃತ್ಯ ಸುರಂಗಾಪಾತೇನ ದೇಶಾಂತರಂ ಗತಾಃ ।**
**ಸ್ವಸಂಬಂಧಾದಿಡುಂಬಸ್ಯ ಚೇಡುಂಬಾಯಾಶ್ಚ ಪಾಂಡವಾಃ ॥ ೧೧೬೨ ॥**

ಸಮಸ್ತಸ್ತ್ರೀಗುಣಗಳಿಂದ ಸ್ತುತ್ಯಳಾದ ಆ ದ್ರೌಪದಿಯು ಲೋಕಪ್ರಿಯಳಾಗಿದ್ದಳು. ಪೂರ್ಣಯೌವನವತಿಯಾದ ಆಕೆಯನ್ನು ನೋಡಿ ತಂದೆಯು 'ಈ ಕನ್ಯೆಯನ್ನು ಯಾವನಿಗೆ ಸಮರ್ಪಿಸುವುದು ?' ಎಂದು ಮಂತ್ರಿಗಳನ್ನು ಕೇಳಿದನು. ಅವರು ವಿಚಾರಚರ್ಚೆಯಿಂದ ''ಪ್ರಚಂಡರಾದ ಪಾಂಡುಪುತ್ರರಿಗೆ ಕೊಡಲ್ಪಡಲಿ. ದುರ್ಯೋಧನರಾಜನು ಸಹಜಶತ್ರುತ್ವವಿರುವುದರಿಂದ ಈ ಪಾಂಡುಪುತ್ರರನ್ನು ಉಪಾಯದಿಂದ ಕೊಲ್ಲುವುದಕ್ಕೋಸ್ಕರ ಅರಗಿನ ಮನೆಗೆ ಪ್ರವೇಶಮಾಡಿಸಿದನು. ಅದನ್ನು ತಮ್ಮ ಪುಣ್ಯದಿಂದ ಪ್ರೇರಿತರಾದ ಆ ಪಾಂಡವರು ತಿಳಿದು ಶೀಘ್ರತೆಯುಳ್ಳವರಾಗಿ ನೀರಿನಲ್ಲಿ ಮರದಡಿಯಲ್ಲಿದ್ದ ಕಿಲ್ಬಿಷವನ್ನು (ಕೆಸರನ್ನು) ತಾವೇ ದೂರಮಾಡಿ ಅಲ್ಲಿ ಸುರಂಗವನ್ನು ಕೊರೆದು ಆ ದಾರಿಯಿಂದ ದೇಶಾಂತರವನ್ನು ಹೊಂದಿರುತ್ತಾರೆ. ಪಾಂಡವರು ತಮ್ಮ ಸಂಬಂಧದಿಂದ ಇಡುಂಬ(ಹಿಡಿಂಬ)ನಿಗೂ ಇಡುಂಬೆ(ಹಿಡಿಂಬೆ)ಗೂ ಗತಿಯನ್ನು ಕಾಣಿಸಿದ್ದಾರೆ. (ಭೀಮನು ಹಿಡಿಂಬವನದಲ್ಲಿ ರುಧಿರೋದ್ಗಾರಿಯೆಂಬ ಗದೆಯನ್ನು ಸಾಧಿಸಿ ಆ ಗದೆಯನ್ನು ಸಾಧಿಸುತ್ತಿದ್ದ ಹಿಡಿಂಬನನ್ನು ಸಂಹರಿಸಿ ಹಿಡಿಂಬೆ(ಸುಕೇಶಿ)ಯನ್ನು ವಿವಾಹಮಾಡಿಕೊಂಡನೆಂಬುದಿಲ್ಲಿ ಕಥಾಸಂಬಂಧ).

**ಪೌದನಾಖ್ಯಪುರೇ ಚಂದ್ರದತ್ತನಾಮಮಹೀಪತೇಃ ।**
**ದೇವಿಲಾಯಾಶ್ಚ ಪುತ್ರಂ ತೇ ಕಲಾಗುಣವಿಶಾರದಮ್ ॥ ೧೧೬೩ ॥**

**ವಿಧಾಯ ನಿಹತಸ್ಥೂಣಗಂಧಾ ರಾಜ್ಯಂ ವ್ಯತಾರಿಷುಃ ।**
**ಅಥೇಂದ್ರವರ್ಮಣೇ ಪ್ರಿತ್ಯೇತ್ಯೇಷಾ ವಾರ್ತಾ ಶ್ರುತಾ ಚರಾತ್ ॥**

**ಇಹಾಪ್ಯವಶ್ಯಮೇಷ್ಯಂತಿ ವಿಧೀಯಸ್ತತ್ಸ್ವಯಂವರಃ ।**
**ನ ಕೇನಚಿದ್ವಿರೋಧೋಯಮಿತಿ ತದ್ವಚನಶ್ರುತೇಃ ॥ ೧೧೬೫ ॥**

**ವಸಂತೇಚೀಕರದ್ರಾಜಾ ಸ ಸ್ವಯಂವರಮಂಡಪಮ್ ।**
**ತತ್ರ ಸರ್ವಮಹೀಪಾಲಾಃ ಸಂಪ್ರಾಪನ್ ಪಾಂಡವೇಷು ಚ ॥ ೧೧೬೬ ॥**

**ಭೀಮಸ್ಯ ಭೋಜನಾದ್ಗಂಧಗಜಸ್ಯ ಕರತರ್ಜನಾತ್ ।**
**ಪಾರ್ಥಸ್ಯ ಮತ್ಸ್ಯನಿರ್ಭೇದಾಚ್ಚಾಪರೋಹಣಸಾಹಸಾತ್ ॥ ೧೧೬೭ ॥**

**ನಾರದಾಗಮನಾಚ್ಚಾಪಿ ಲಕ್ಷ್ಯಮಾಣೇಷು ನಿಶ್ಚಿತಮ್ ।**
**ಸಮಾಗತೇಷು ಸತ್ಸ್ವರ್ಹನ್ಮಹಾಪೂಜಾಪುರಸ್ಸರಮ್ ॥ ೧೧೬೮ ॥**

**ಪ್ರವಿಶ್ಯ ಭೂಷಿತಾ ರತ್ನೈಃ ಸಾ ಸ್ವಯಂವರಮಂಡಪಮ್ ।**
**ಭೂಮಿಪಾನ್ ಕುಲರೂಪಾದಿಗುಣೈಃ ಸಿದ್ಧಾರ್ಥನಾಮನಿ ॥ ೧೧೬೯ ॥**

**ಪುರೋಧಸಿ ಕ್ರಮಾತ್ಸರ್ವಾನ್ ಕಥಯತ್ಯತಿಲಂಘ್ಯ ತಾನ್ ।**
**ಕನ್ಯಾ ಸಂಭಾವಯಾಮಾಸ ಮಾಲಯೋಜ್ಜ್ವಲಯಾರ್ಜುನಮ್ ॥**

ಪೌದನಾಪುರದಲ್ಲಿ ಚಂದ್ರದತ್ತನೆಂಬ ರಾಜನಿಗೂ ಆತನ ಪತ್ನಿಯಾದ ದೇವಿಲೆಗೂ ಪುತ್ರನಾದ ಇಂದ್ರವರ್ಮನನ್ನು ಕಲಾಗುಣನಿಪುಣನನ್ನಾಗಿ ಮಾಡಿ ಆ ಪಾಂಡವರು ಸ್ಥೂಣಗಂಧನನ್ನು ನಾಶಮಾಡಿದವರಾಗಿ ಬಳಿಕ ಆ ಇಂದ್ರವರ್ಮನಿಗೆ ಪ್ರೀತಿಯಿಂದ ರಾಜ್ಯವನ್ನು ಕೊಡಿಸಿದರು. ಹೀಗೆಂಬ ಸಮಾಚಾರವು ಭೃತ್ಯನಿಂದ ಕೇಳಲ್ಪಟ್ಟಿದೆ. ಇಲ್ಲಿಗೂ ಆ ಪಾಂಡವರು ಅವಶ್ಯವಾಗಿ ಬರುವರು. ಆದುದರಿಂದ ಸ್ವಯಂವರವು ಮಾಡಲ್ಪಡತಕ್ಕುದಾಗಿದೆ. ಇದು ಯಾವನೊಡನೆಯೂ ವಿರೋಧ

ವಲ್ಲ. ಸ್ವಯಂವರವನ್ನು ಮಾಡಿದರೆ ಯಾರೊಡನೆಯೂ ವಿರೋಧಕ್ಕೆ ಕಾರಣವಾಗುವುದಿಲ್ಲವೆಂದು ಭಾವವು" ಈ ರೀತಿಯಾಗಿ ಹೇಳಿದರು. ಆ ಮಂತ್ರಿಗಳ ಮಾತನ್ನು ಕೇಳಿದುದರಿಂದ ಆ ದ್ರುಪದರಾಜನು ವಸಂತಋತುವಿನಲ್ಲಿ ಸ್ವಯಂವರಮಂಡಪವನ್ನು ಮಾಡಿಸಿದನು. ಅಲ್ಲಿ ಎಲ್ಲಾ ರಾಜರೂ ಸ್ವಯಂವರಮಂಡಪದಲ್ಲಿ ಸೇರಿದರು. ಭೀಮನು ಭೋಜನದಿಂದಲೂ ಮದಗಜವನ್ನು ಕೈಯಿಂದ ಹೊಡೆದು– ಬೆದರಿಸಿದುದರಿಂದಲೂ ಪಾರ್ಥನು ಮತ್ಸ್ಯಯಂತ್ರಭೇದನದಿಂದಲೂ ಧನುಸ್ಸನ್ನೆತ್ತಿದ ಸಾಹಸದಿಂದಲೂ ನಾರದನ ಆಗಮನದಿಂದಲೂ ನಿಶ್ಚಿತವಾಗಿ ಗುರುತಿಸಲ್ಪಟ್ಟ ಪಾಂಡವರೂ ಬಂದಿರಲು ರತ್ನಗಳಿಂದ ಭೂಷಿತಳಾದ ಆ ದ್ರೌಪದಿಯು ಅರ್ಹತ್ಪರಮೇಶ್ವರರ ಮಹಾಪೂಜಾಪುರಸ್ಸರವಾಗಿ ಸ್ವಯಂವರಮಂಡಪವನ್ನು ಪ್ರವೇಶಿಸಿ ಸಿದ್ಧಾರ್ಥನೆಂಬ ಪುರೋಹಿತನು ಕುಲರೂಪಾದಿಗುಣಗಳಿಂದ ಸಮಸ್ತ ರಾಜರುಗಳನ್ನು ಕ್ರಮವಾಗಿ ತೋರಿಸಿ ಪರಿಚಯವನ್ನು ಹೇಳುತ್ತಿರಲು ಅವರುಗಳನ್ನು ಮೀರಿ–ಹೋಗಿ ಕನ್ನೆಯು ಉಜ್ಜ್ವಲವಾದ ಮಾಲೆಯಿಂದ ಅರ್ಜುನನನ್ನು ಗೌರವಿಸಿ–ವರಿಸಿದಳು.

**ದ್ರುಪದಾದ್ಯುಗ್ರವಂಶೋತ್ಥಮಹೀಶಾಃ ಕುರುವಂಶಜಾಃ ।**
**ಅನ್ಯೇಪಿ ಚಾನುರೂಪೋಽಯಮಿತಿ ತುಷ್ಟಿಂ ಸಮಾಗಮನ್ ॥ ೧೧೭೧ ॥**

ದ್ರುಪದನೇ ಮೊದಲಾದ ಉಗ್ರವಂಶೋತ್ಪನ್ನರಾದ ರಾಜರುಗಳೂ ಕುರುವಂಶೋತ್ಪನ್ನರೂ ಬೇರೆಯವರೂ "ಇದು ಅನುರೂಪವಾದ ಸಂಬಂಧವಾಗಿದೆ" ಎಂದು ಸಂತೋಷವನ್ನು ಹೊಂದಿದರು.

**ಏವಂ ಸಂಪ್ರಾಪ್ತಕಲ್ಯಾಣಾಃ ಪ್ರವಿಶ್ಯ ಪುರಮಾತ್ಮನಃ ।**
**ಗಮಯಂತಿ ಸ್ಮ ಸೌಖ್ಯೇನ ಕಾಲಂ ದೀರ್ಘಮಿವ ಕ್ಷಣಮ್ ॥ ೧೧೭೨ ॥**

ಈ ರೀತಿಯಾಗಿ ಪಡೆದ ಮಂಗಲಗಳುಳ್ಳವರಾದ ಪಾಂಡವರು ತಮ್ಮ ನಗರವನ್ನು ಪ್ರವೇಶಿಸಿ ಸೌಖ್ಯದಿಂದ ದೀರ್ಘವಾದ ಕಾಲವನ್ನು, ಕ್ಷಣಕಾಲವನ್ನು ಕಳೆಯುವಂತೆ, ಕಳೆದರು.

**ತತಃ ಪಾರ್ಥಾತ್ಸುಭದ್ರಾಯಾಮಭಿಮನ್ಯುರಭೂತ್ಸುತಃ ।**
**ದ್ರೌಪದ್ಯಾಂ ಪಂಚ ಪಾಂಚಾಲನಾಮಾನೋಽನ್ವಭವನ್ ಕ್ರಮಾತ್ ॥**

ಆಮೇಲೆ ಪಾರ್ಥನಿಂದ ಸುಭದ್ರೆಯಲ್ಲಿ ಅಭಿಮನ್ಯುಪುತ್ರನೂ ದ್ರೌಪದಿಯಲ್ಲಿ ಪಾಂಚಾಲರೆಂಬ ಐದುಮಂದಿ ಪುತ್ರರೂ ಯಥಾಕ್ರಮವಾಗಿ ಜನಿಸಿದರು.

**ದ್ಯೂತಂ ಯುಧಿಷ್ಠಿರಸ್ಯಾತ್ರ ದುರ್ಯೋಧನಮಹೀಭುಜಾ ।**
**ಭುಜಂಗಶೈಲಪುರ್ಯಾಂ ಯತ್ಕೀಚಕಾನಾಂ ವಿನಾಶನಮ್ ॥ ೧೧೭೪ ॥**

**ವಿರಾಟಭೂಪತೇರ್ಭೂರಿಗೋಮಂಡಲನಿವರ್ತನಮ್ ।**
**ಅನುಯಾನೇನ ಭೂಪಸ್ಯ ವಿರಾಟಸ್ಯ ಸುಶರ್ಮಣಃ ॥ ೧೧೭೫ ॥**

**ಅಲ್ಪಗೋಮಂಡಲಸ್ಯಾರ್ಜುನೋತ್ತರಾಭ್ಯಾಂ ನಿವರ್ತನಮ್ ।**
**ಪುರಾಣವೇದಿಭಿರ್ವಾಚ್ಯಂ ವಿಸ್ತರೇಣ ಯಥಾಶ್ರುತಮ್ ॥ ೧೧೭೬ ॥**

ಇಲ್ಲಿ ಯುಧಿಷ್ಠಿರನಿಗೆ ದುರ್ಯೋಧನ ರಾಜನೊಡನೆ ನಡೆದ ಜೂಜನ್ನೂ ಭುಜಂಗಪುರದಲ್ಲಿ ಭೀಮನಿಂದ ಕೀಚಕವಿನಾಶನವನ್ನೂ ವಿರಾಟರಾಜನ ಅಪಹೃತವಾದ ಗೋಸಮೂಹವನ್ನು ಹಿಂದಿರುಗಿ ತಂದುದನ್ನೂ ವಿರಾಟರಾಜನ ಅನುಸರಣೆಯಿಂದ (ಪಕ್ಷವನ್ನು ವಹಿಸಿದುದರಿಂದ) ಸುಶರ್ಮನೆಂಬವನ ಅಪಹೃತವಾದ ಸ್ವಲ್ಪ ಗೋಸಮೂಹವನ್ನು ಅರ್ಜುನನೂ ಉತ್ತರಕುಮಾರನೂ ಹಿಂದಕ್ಕೆ ತಂದುದನ್ನೂ ಪುರಾಣವನ್ನು ತಿಳಿದವರು, ತಾವು ಕೇಳಿರುವಂತೆ, ವಿಸ್ತರದಿಂದ ಹೇಳಬೇಕು.

**ಅಥ ಯುದ್ಧೇ ಕುರುಕ್ಷೇತ್ರೇ ಪ್ರವೃತ್ತೇ ಕೌರವೈಃ ಸಮಮ್ ।**
**ಪಾಂಡವಾನಾಂ ವಿನಿರ್ಜಿತ್ಯ ದುರ್ಯೋಧನಧರಾಧಿಪಮ್ ॥ ೧೧೭೭ ॥**

**ಯುಧಿಷ್ಠಿರಃ ಸಮಸ್ತಸ್ಯ ವಿಷಯಸ್ಯಾಭವದ್ವಿಭುಃ ।**
**ವಿಭಜ್ಯ ಸ್ವಾನುಜೈರ್ಲಕ್ಷ್ಮೀಂ ಭುಂಜಾನೋರಂಜಯಜ್ಜನಮ್॥ ೧೧೭೮ ॥**

ಬಳಿಕ ಕುರುಕ್ಷೇತ್ರದಲ್ಲಿ ಕೌರವರೊಡನೆ ಪಾಂಡವರಿಗೆ ಯುದ್ಧವುಂಟಾಗುತ್ತಿರಲು ದುರ್ಯೋಧನರಾಜನನ್ನು ಜಯಿಸಿ ಯುಧಿಷ್ಠಿರನು ಸಮಸ್ತದೇಶಕ್ಕೆ ಅಧಿಪತಿಯಾದನು. ತನ್ನ ತಮ್ಮಂದಿರೊಡನೆ ರಾಜ್ಯಸಂಪತ್ತಿಯನ್ನು ವಿಭಾಗಿಸಿ ಅನುಭವಿಸುವವನಾಗಿ ಜನರನ್ನು ಸಂತೋಷಪಡಿಸಿದನು.

**ಏವಂ ಸ್ವಕೃತಪುಣ್ಯಸ್ಯ ತೇ ಸರ್ವೇ ಪರಿಪಾಕಜಮ್ ।**
**ಸುಖಂ ನಿಖಿಲಮವ್ಯಗ್ರಮನ್ವಭೂವನ್ನನಾರತಮ್ ॥ ೧೧೭೯ ॥**

ಈ ರೀತಿಯಾಗಿ ಅವರೆಲ್ಲರೂ ತಾವು ಮಾಡಿದ ಪುಣ್ಯದ ಪರಿಪಾಕದಿಂದುಂಟಾದುದೂ ನಿರ್ಬಾಧವೂ ಆದ ಸಕಲಸುಖವನ್ನು ಎಡೆಬಿಡದೆ ಅನುಭವಿಸಿದರು.

**ತದಾ ದ್ವಾರವತೀದಾಹಃ ಕೌಶಾಂಬೀಗಹನಾಂತರೇ ।**
**ಮೃತಿರ್ಜರತ್ಕುಮಾರೇಣ ವಿಷ್ಣೋರ್ಜ್ಯೇಷ್ಠಸ್ಯ ಸಂಯಮಃ ॥ ೧೧೮೦ ॥**

**ಭವಿಷ್ಯತೀತಿ ಯತ್ಪ್ರೋಕ್ತಂ ದ್ವಾರಾವತ್ಯಾಂ ಜಿನೇಶಿನಾ ।**
**ನಿರ್ವೃತ್ತಂ ತತ್ರ ತತ್ಸರ್ವಂ ನ ಮಿಥ್ಯಾವಾದಿನೋ ಜಿನಾಃ ॥ ೧೧೮೧ ॥**

ಆಗ ದ್ವಾರಾವತಿಯ ದಹನವೂ ಕೌಶಾಂಬಿಯ ವನಮಧ್ಯದಲ್ಲಿ ಜರತ್ಕುಮಾರನಿಂದ ವಿಷ್ಣುವಿನ ಮರಣವೂ ಬಲರಾಮನ ದೀಕ್ಷಾಗ್ರಹಣವೂ ಆಗುವುವೆಂದು ದ್ವಾರಾವತಿಯಲ್ಲಿ ನೇಮಿಜಿನೇಶ್ವರರಿಂದ ಯಾವುದು ಹೇಳಲ್ಪಟ್ಟಿದ್ದಿತೋ ಅಲ್ಲಿ ಅದೆಲ್ಲವೂ ನಡೆಯಿತು. ಜಿನರು ಮಿಥ್ಯಾವಾದಿಗಳಲ್ಲ.

**ತಾದೃಶಂ ತಾದೃಶಾಮಾಸೀದ್ಧಿಗ್ಧಿಗ್ದುಷ್ಕರ್ಮಣಾಂ ಗತಿಮ್ ।**
**ನಿರ್ಮೂಲಯಂತಿ ಕರ್ಮಾಣಿ ತತ ಏವ ಹಿ ಧೀಧನಾಃ ॥ ೧೧೮೨ ॥**

ಅಂಥವರಿಗೂ ಅಂತಹ ಕಾರ್ಯವಾಯಿತು. ದುಷ್ಕರ್ಮಗಳ ಗತಿಯನ್ನು ಧಿಕ್ಕರಿಸು, ಧಿಕ್ಕರಿಸು. ಆದುದರಿಂದಲೇ ಪ್ರಾಜ್ಞರು ಕರ್ಮಗಳನ್ನು ನಿರ್ಮೂಲ ಮಾಡುತ್ತಾರೆ."

**ತತ್ಸರ್ವಂ ಪಾಂಡವಾಃ ಶ್ರುತ್ವಾ ತದಾಪನ್ಮಧುರಾಧಿಪಾಃ ।**
**ಸ್ವಾಮಿಬಂಧುವಿಯೋಗೇನ ನಿರ್ವಿದ್ಯ ತ್ಯಕ್ತರಾಜ್ಯಕಾಃ ॥ ೧೧೮೩ ॥**

**ಮಹಾಪ್ರಸ್ಥಾನಕರ್ಮಾಣಿ ಪ್ರಾಪ್ಯ ನೇಮಿಜಿನೇಶ್ವರಮ್ ।**
**ತತ್ಕಾಲೋಚಿತಸತ್ಕರ್ಮ ಸರ್ವಂ ನಿರ್ಮಾಪ್ಯ ಭಾಕ್ತಿಕಾಃ ॥ ೧೧೮೪ ॥**

**ಸ್ವಪೂರ್ವಭವಸಂಬಂಧಮಪೃಚ್ಛನ್ ಸಂಸೃತೇರ್ಭಯಾತ್ ।**
**ಅವೋಚದ್ಭಗವಾನಿತ್ಥಮಪ್ರತರ್ಕ್ಯಮಹೋದಯಃ ॥ ೧೧೮೫ ॥**

ಈ ರೀತಿಯಾಗಿ ಗಣಧರರು ಹೇಳಿದ ವಿಷಯವೆಲ್ಲವನ್ನೂ ಮಧುರಾನಗರಾಧಿಪತಿಗಳಾದ ಪಾಂಡವರು ಕೇಳಿ ಆಗ ಪ್ರಭು–ಕೃಷ್ಣನ ಮತ್ತು ಬಂಧುಗಳ ವಿಯೋಗದಿಂದ ವೈರಾಗ್ಯವನ್ನು ಹೊಂದಿ ರಾಜ್ಯವನ್ನು ತ್ಯಜಿಸಿದವರಾಗಿ ಮಹಾಪ್ರಯಾಣ ಕಾರ್ಯಗಳನ್ನು ಹೊಂದಿದರು. ನೇಮಿಜಿನೇಶ್ವರರನ್ನು ಸೇರಿ ಆ ಕಾಲಕ್ಕುಚಿತವಾದ ಕಾರ್ಯವೆಲ್ಲವನ್ನೂ ಮಾಡಿ ಭಕ್ತಿಯುಳ್ಳವರಾಗಿ ಸಂಸಾರದ ಭೀತಿಯಿಂದ ತಮ್ಮ ಪೂರ್ವಭವಸಂಬಂಧವನ್ನು ಕೇಳಿದರು. ಊಹೆಗೆ ನಿಲುಕದ ಮಹೋನ್ನತಿಯುಳ್ಳ ಭಗವಂತನು ಈ ರೀತಿಯಾಗಿ ಹೇಳಿದನು.

**ಜಂಬೂಸಂಭಾವಿತೇ ದ್ವೀಪೇ ಭರತೇಂಗೇ ಪುರೀ ಪರಾ ।**
**ಚಂಪಾಖ್ಯಾ ಕೌರವಸ್ತತ್ರ ಮಹೀಶೋ ಮೇಘವಾಹನಃ ॥ ೧೧೮೬ ॥**

"ಸಂಭಾವಿತವಾದ ಜಂಬೂದ್ವೀಪದಲ್ಲಿ ಭರತಕ್ಷೇತ್ರದಲ್ಲಿ ಅಂಗದೇಶದಲ್ಲಿ ಶ್ರೇಷ್ಠವಾದ ಚಂಪಾಪುರವಿದೆ. ಅಲ್ಲಿ ಕುರುವಂಶಜನಾದ ಮೇಘವಾಹನನೆಂಬ ರಾಜನಿದ್ದನು.

**ಸೋಮದೇವೋ ದ್ವಿಜೋತ್ರೈವ ಬ್ರಾಹ್ಮಣೀ ತಸ್ಯ ಸೋಮಿಲಾ ।**
**ತಯೋಃ ಸುತಾಸ್ತ್ರಯಃ ಸೋಮದತ್ತ ಸೋಮಿಲನಾಮಕಃ ॥ ೧೧೮೭ ॥**

**ಸೋಮಭೂತಿಶ್ಚ ವೇದಾಂಗಪಾರಗಾಃ ಪರಮದ್ವಿಜಾಃ ।**
**ಅಮೀಷಾಂ ಮಾತುಲಸ್ಯಾಗ್ನಿಭೂತೇಸ್ತಿಸ್ರೋಭವನ್ ಸುತಾಃ ॥ ೧೧೮೮ ॥**

**ಅಗ್ನಿಲಾಯಾಂ ಧನಶ್ರೀಮಿತ್ರಶ್ರೀನಾಗಶ್ರಿಯಃ ಪ್ರಿಯಾಃ ।**
**ತೇಭ್ಯೋ ಯಥಾಕ್ರಮಂ ದತ್ತಾಸ್ತಾಃ ಪಿತೃಭ್ಯಾಂ ಸುಲಕ್ಷಣಾಃ ॥ ೧೧೮೯ ॥**

ಈ ನಗರದಲ್ಲೇ ಸೋಮದೇವನೆಂಬ ಬ್ರಾಹ್ಮಣನಿದ್ದನು. ಅವನ ಬ್ರಾಹ್ಮಣಿಯು-ಪತ್ನಿಯು ಸೋಮಿಲೆ. ಆ ದಂಪತಿಗಳಿಗೆ ಸೋಮದತ್ತ ಸೋಮಿಲ ಸೋಮಭೂತಿಗಳೆಂಬ ಮೂವರು ಮಕ್ಕಳಿದ್ದರು. ಅವರು ವೇದಾಂಗಪಾರಂಗತರೂ ಉತ್ತಮಬ್ರಾಹ್ಮಣರೂ ಆಗಿದ್ದರು. ಇವರುಗಳ ಸೋದರದ ಮಾವನಾದ ಅಗ್ನಿಭೂತಿಗೆ ಆತನ ಪತ್ನಿಯಾದ ಅಗ್ನಿಲೆಯಲ್ಲಿ ಧನಶ್ರೀ ಮಿತ್ರಶ್ರೀ ನಾಗಶ್ರೀಯರೆಂಬೀ ಮೂವರು ಪ್ರಿಯಪುತ್ರಿಯರಾದರು. ಆ ಸೋಮದತ್ತ ಸೋಮಿಲ ಸೋಮಭೂತಿಗಳಿಗೆ ಉತ್ತಮಲಕ್ಷಣಗಳುಳ್ಳವರಾದ ಆ ಪುತ್ರಿಯರು ಯಥಾಕ್ರಮವಾಗಿ ತಂದೆತಾಯಿಗಳಿಂದ ಕೊಡಲ್ಪಟ್ಟರು.

**ಸೋಮದೇವಃ ಸುನಿರ್ವಿದ್ಯ ಸುಧೀಃ ಕೇನಾಪಿ ಹೇತುನಾ ।**
**ಪ್ರಾವ್ರಾಜೀದನ್ಯದಾ ಧರ್ಮರುಚಿನಾಮತಪೋಧನಮ್ ॥ ೧೧೯೦ ॥**

**ಪ್ರವಿಶಂತಂ ಗೃಹಂ ಭಿಕ್ಷಾಕಾಲೇ ವೀಕ್ಷ್ಯಾನುಕಂಪಯಾ ।**
**ಸೋಮದತ್ತಃ ಪ್ರತೀಕ್ಷ್ಯೈನಮಾಹ ಪತ್ನೀಂ ಕನೀಯಸಃ ॥ ೧೧೯೧ ॥**

**ನಾಗಶ್ರೀ ವಿತರಾಸ್ಮೈ ತ್ವಂ ಭಿಕ್ಷಾಮಿತಿ ಕೃತಾದರಮ್ ।**
**ಮಾಮೇವ ಸರ್ವದಾ ಸರ್ವಮೇಷ ಪ್ರೇಷಯತೀತಿ ಸಾ ॥ ೧೧೯೨ ॥**

**ಕುಪಿತ್ವಾ ವಿಷಸಮ್ಮಿಶ್ರಂ ದದಾವನ್ನಂ ತಪೋಭೃತೇ ।**
**ಸ ಸನ್ನ್ಯಸ್ಯ ಸಮಾರಾಧ್ಯ ಪ್ರಾಪದಂತ್ಯಮನುತ್ತರಮ್ ॥ ೧೧೯೩ ॥**

ಪ್ರಾಜ್ಞನಾದ ಸೋಮದೇವಬ್ರಾಹ್ಮಣನು ಯಾವುದೋ ಕಾರಣದಿಂದ ಚೆನ್ನಾಗಿ ವಿರಕ್ತಿಯನ್ನು ಹೊಂದಿ ದೀಕ್ಷೆಯನ್ನು ತೆಗೆದುಕೊಂಡನು. ಮತ್ತೊಂದು ದಿವಸ ಭಿಕ್ಷಾಕಾಲದಲ್ಲಿ ಮನೆಗೆ ಪ್ರವೇಶಿಸುತ್ತಿರುವ ಧರ್ಮರುಚಿಯೆಂಬ ತಪೋಧನನನ್ನು ನೋಡಿ ಕೃಪೆಯಿಂದ ಸೋಮದತ್ತನು ಈ ಮುನಿಯನ್ನು ಇದಿರ್ಗೊಂಡು ಚಿಕ್ಕತಮ್ಮನ ಪತ್ನಿಯಾದ ನಾಗಶ್ರೀಯನ್ನು ಕುರಿತು 'ನಾಗಶ್ರೀಯೆ ! ನೀನು ಇವನಿಗೆ ಭಿಕ್ಷೆಯನ್ನು ಕೊಡು' ಎಂದು ಆದರಪೂರ್ವಕವಾಗಿ ಹೇಳಿದನು. ಆಕೆಯು 'ಯಾವಾಗಲೂ ಇವನು ಎಲ್ಲಾ ಕಾರ್ಯಕ್ಕೆ ನನ್ನನ್ನೇ ಕಳುಹಿಸುತ್ತಾನೆ' ಎಂದು ಕೋಪಿಸಿ ಆ ತಪಸ್ವಿಗೆ ವಿಷಮಿಶ್ರವಾದ ಅನ್ನವನ್ನು ಕೊಟ್ಟಳು. ಆ ಮುನಿಯು ಚೆನ್ನಾಗಿ ಆರಾಧಿಸಿ ಸಮಾಧಿಮರಣವನ್ನು ಹೊಂದಿ ಕೊನೆಯದಾದ ಅನುತ್ತರ ವಿಮಾನವನ್ನು- ಸರ್ವಾರ್ಥಸಿದ್ಧಿಯನ್ನು ಹೊಂದಿದನು.

**ನಾಗಶ್ರೀವಿಹಿತಾಕೃತ್ಯಂ ಜ್ಞಾತ್ವಾ ತೇ ಭ್ರಾತರಸ್ತ್ರಯಃ ।**
**ಸಮೀಪೇ ವರುಣಾರ್ಯಸ್ಯ ದೀಕ್ಷಾಂ ಮೋಕ್ಷೀಂ ಸಮಾಯಯುಃ ॥**

ನಾಗಶ್ರೀಯಿಂದ ಮಾಡಲ್ಪಟ್ಟ ಅಕೃತ್ಯವನ್ನು ತಿಳಿದು ಆ ಮೂವರು ಸಹೋದರರು ವರುಣಮುನಿಯ ಸಮೀಪದಲ್ಲಿ ಮೋಕ್ಷಕಾರಣವಾದ ದೀಕ್ಷೆಯನ್ನು ಹೊಂದಿದರು.

**ಗುಣವತ್ಯಾರ್ಯಿಕಾಭ್ಯಾಸೇ ಬ್ರಾಹ್ಮಣ್ಯಾವಿತರೇ ತದಾ ।**
**ಈಯತುಃ ಸಂಯಮಂ ವೃತ್ತಮೀದೃಕ್ಸದಸತಾಮಿದಮ್ ॥ ೧೧೯೫ ॥**

ಆಗ ಇನ್ನಿರ್ವರು ಬ್ರಾಹ್ಮಣಿಯರು ಗುಣವತ್ಯಾರ್ಯಿಕೆಯ ಬಳಿಯಲ್ಲಿ ಸಂಯಮವನ್ನು ಹೊಂದಿದರು. ಸುಜನ ದುರ್ಜನರ ಈ ನಡವಳಿಕೆಯು ಈ ರೀತಿಯಾಗಿರುವುದು.

**ಪಂಚಾಪ್ಯಾರಾಧ್ಯ ತೇಭೂವನ್ನಾರಣಾಚ್ಯುತಕಲ್ಪಯೋಃ ।**
**ಸಾಮಾನಿಕಾಮರಾ ದ್ವಾವಿಂಶತಿಸಾಗರಜೀವಿನಃ ॥ ೧೧೯೬ ॥**

ಆ ಐದುಮಂದಿಗಳೂ ಆರಾಧಿಸಿ ಸತ್ತು ಆರಣಕಲ್ಪದಲ್ಲಿಯೂ ಅಚ್ಯುತಕಲ್ಪದಲ್ಲಿಯೂ ಇಪ್ಪತ್ತೆರಡು ಸಾಗರೋಪಮವರ್ಷಾಯುಷ್ಯವುಳ್ಳ ಸಾಮಾನಿಕದೇವರ್ಕಳಾದರು.

**ಅನ್ವಭೂವಂಶ್ಚಿರಂ ಭೋಗಾಂಸ್ತತ್ರ ಸಪ್ರವಿಚಾರಕಾನ್ ।**
**ನಾಗಶ್ರೀರಪಿ ಪಾಪೇನ ಪಂಚಮೀಂ ಪೃಥಿವೀಮಗಾತ್ ॥ ೧೧೯೭ ॥**

ಅಲ್ಲಿ ಅವರು ಪ್ರವಿಚಾರ-ಕಾಮಸೇವನೆಯುಳ್ಳ ಭೋಗಗಳನ್ನು ಬಹುಕಾಲದವರೆಗೆ ಅನುಭವಿಸಿದರು. ನಾಗಶ್ರೀಯು ಪಾಪದಿಂದ ಐದನೆಯ ನರಕಭೂಮಿಯನ್ನು ಹೊಂದಿದಳು.

**ದುಃಖಂ ತತ್ರಾನುಭೂಯಾಂತೇ ಸ್ವಾಯುಷೋಸೌ ತತಶ್ಚ್ಯುತಾ ।**
**ಅಭೂತ್ಸ್ವಯಂಪ್ರಭದ್ವೀಪೇ ಸರ್ಪೋ ದೃಷ್ಟಿವಿಷೋ ಮೃತಃ॥ ೧೧೯೮ ॥**

**ದ್ವಿತೀಯನರಕಂ ಗತ್ವಾ ತ್ರಿಸಮುದ್ರೋಪಮಾಯುಷಾ ।**
**ಭುಕ್ತ್ವಾ ದುಃಖಂ ವಿನಿರ್ಗತ್ಯ ತ್ರಸಸ್ಥಾವರಯೋನಿಷು ॥ ೧೧೯೯ ॥**

**ದ್ವಿಸಾಗರೋಪಮಂ ಕಾಲಂ ಪರಿಭ್ರಮ್ಯ ಭವಾರ್ಣವೇ ।**
**ಚಂಪಾಪುರೇ ಸಮುತ್ಪನ್ನಾ ಮಾತಂಗೀ ಮಂದಪಾಪತಃ ॥ ೧೨೦೦ ॥**

ಈಕೆಯು ಅಲ್ಲಿ ದುಃಖವನ್ನನುಭವಿಸಿ ತನ್ನ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತಳಾಗಿ ಸ್ವಯಂಪ್ರಭದ್ವೀಪದಲ್ಲಿ ದೃಷ್ಟಿವಿಷವುಳ್ಳ ಸರ್ಪವಾದಳು. ಅದು ಸತ್ತು ಎರಡನೆಯ ನರಕವನ್ನು ಹೊಂದಿ ಮೂರು ಸಾಗರೋಪಮವರ್ಷಾಯುಷ್ಯದಿಂದ ದುಃಖವನ್ನನುಭವಿಸಿ ಅಲ್ಲಿಂದ ಹೊರಟು ತ್ರಸಜೀವಗಳ ಮತ್ತು ಸ್ಥಾವರಜೀವಗಳ ಯೋನಿಗಳಲ್ಲಿ ಎರಡು ಸಾಗರೋಪಮವರ್ಷಕಾಲದವರೆಗೆ ಭವಸಮುದ್ರದಲ್ಲಿ ಪರಿಭ್ರಮಿಸಿ ಮಂದಪಾಪದಿಂದ ಚಂಪಾಪುರದಲ್ಲಿ ಮಾದಿಗಳಾಗಿ ಹುಟ್ಟಿದಳು.

**ಸಮಾಧಿಗುಪ್ತನಾಮಾನಂ ಮುನಿಮಾಸಾದ್ಯ ಸಾನ್ಯದಾ ।**
**ವಂದಿತ್ವಾ ಧರ್ಮಮಾಕರ್ಣ್ಯ ಮಧುಮಾಂಸನಿವೃತ್ತಿತಃ ॥ ೧೨೦೧ ॥**

**ತಸ್ಮಿನ್ನೇವ ಪುರೇ ಮೃತ್ವಾ ಸುತೇಭ್ಯಸ್ಯಾಭವತ್ಸತೀ ।**
**ಸುಬಂಧೋರ್ಧನದೇವ್ಯಾಶ್ಚ ಸುದುರ್ಗಂಧಶರೀರಿಕಾ ॥ ೧೨೦೨ ॥**

ಆಕೆಯು ಮತ್ತೊಂದು ಕಾಲದಲ್ಲಿ ಸಮಾಧಿಗುಪ್ತನೆಂಬ ಮುನಿಯನ್ನು ಕಂಡು ನಮಸ್ಕರಿಸಿ ಧರ್ಮವನ್ನು ಕೇಳಿ ಮಧುಮಾಂಸತ್ಯಾಗದಿಂದ ಸತ್ತು ಅದೇ ನಗರದಲ್ಲಿ ಆಢ್ಯನಾದ ಸುಬಂಧುವಿಗೂ ಆತನ ಪತ್ನಿಯಾದ ಧನದೇವಿಗೂ ಸಾಧ್ವಿಯೂ ಬಹು ದುರ್ಗಂಧವಾದ ಶರೀರವುಳ್ಳವಳೂ ಆದ ಪುತ್ರಿಯಾಗಿ ಜನಿಸಿದಳು.

**ಸುಕುಮಾರೀತಿ ಸಂಜ್ಞಾಸ್ಯಾವಿಹಿತಾರ್ಥಾನುಯಾಯಿನೀ ।**
**ಪುರೇಸ್ಮಿನ್ನೇವ ವೈಶ್ಯಸ್ಯ ಧನದೇವಸ್ಯ ಪುತ್ರತಾಮ್ ॥ ೧೨೦೩ ॥**

**ಪ್ರಾಪ್ತಾವಶೋಕದತ್ತಾಯಾಂ ದೇವದತ್ತೌ ಜಿನಾದಿಕೌ ।**
**ಸಂಪ್ರಧಾರ್ಯ ಸ್ವಬಂಧೂನಾಮಾದಾನಂ ಸ್ವಸ್ಯ ವೇದಿತಾ ॥ ೧೨೦೪ ॥**

**ಸುಕುಮಾರ್ಯಾಃ ಸುದೌರ್ಗಂಧ್ಯಾಜ್ಜಿನದೇವೋ ಜುಗುಪ್ಸಯನ್ ।**
**ಸುವ್ರತಾಖ್ಯಮುನೇರಂತೇವಾಸಿತ್ವಂ ಸಮವಾಪ ಸಃ ॥ ೧೨೦೫ ॥**

ಈಕೆಗೆ ವಿಹಿತದ್ರವ್ಯಾನುಸಾರವಾದ (ಧನವಿದ್ದುದರಿಂದ) ಸುಕುಮಾರಿಯೆಂಬ ಹೆಸರಿದ್ದಿತು. ಇದೇ ನಗರದಲ್ಲಿ ಧನದೇವನೆಂಬ ವೈಶ್ಯನಿಗೆ ಆತನ ಪತ್ನಿಯಾದ ಅಶೋಕದತ್ತೆಯಲ್ಲಿ ಜಿನದೇವ ಜಿನದತ್ತರೆಂಬೀರ್ವರು ಪುತ್ರತ್ವವನ್ನು ಹೊಂದಿದರು. ಪುತ್ರರು ಜನಿಸಿದರೆಂದು ಭಾವವು. ತನ್ನ ಬಂಧುಗಳು ತನಗೆ ಸುಕುಮಾರಿಯ ತರುವಿಕೆಯನ್ನು(ಸುಕುಮಾರಿಯನ್ನು ತನಗೆ ವಿವಾಹಮಾಡುವರೆಂದು) ನಿರ್ಧರಿಸಿ ತಿಳಿದ ಆ ಜಿನದೇವನು ಆಕೆಯ ಬಹುದುರ್ಗಂಧದಿಂದ ಕೊಕ್ಕರಿಸುವವನಾಗಿ ಸುವ್ರತನೆಂಬ ಮುನಿಯ ಶಿಷ್ಯತ್ವವನ್ನು ಹೊಂದಿದನು. ಮನೆಯನ್ನು ಬಿಟ್ಟುಹೋಗಿ ಮುನಿಯಾದನೆಂದು ಭಾವವು.

**ಕನೀಯಾನ್ ಜಿನದತ್ತೋಥ ಪ್ರೇರಿತೋ ಬಂಧುಭಿರ್ಮುಹುಃ ।**
**ಆಪ್ತಬಂಧುಸುತಾ ನಾವಮಾನಯೋಗ್ಯೇತಿ ತದ್ಭಯಾತ್ ॥ ೧೨೦೬ ॥**

ಗೃಹೀತ್ವಾ ತಾಮಸೌ ಕ್ರುದ್ಧಫಣಿನೀಮಿವ ನಾಗಮತ್ ।
ಸ್ವಪ್ನೇಪ್ಯಸ್ಯ ವಿರಕ್ತತ್ವಾನ್ನಿಂದಂತೀ ಸ್ವಾಂ ವಿಪುಣ್ಯತಾಮ್ ॥ ೧೨೦೭ ॥

ಗೃಹೀತಾನಶನಾನ್ಯೇದ್ಯುರಾರ್ಯಿಕಾಭಿಃ ಸಹಾಗತಾಮ್ ।
ಸ್ವಗೇಹಂ ಸುವ್ರತಾಕ್ಷಾಂತಿಮಭಿವಂದ್ಯ ವದಾರ್ಯಿಕೇ ॥ ೧೨೦೮ ॥

ಇಮೇ ದ್ವೇ ದೀಕ್ಷಿತೇ ಕೇನ ಹೇತುನೇತ್ಯನ್ವಯುಙ್ಕ್ತ ತಾಮ್ ।
ಅಥ ಸಾಪ್ಯಬ್ರವೀದೇವಂ ಕ್ಷಾಂತಿಃ ಕಲ್ಯಾಣನಾಮಿಕೇ ॥ ೧೨೦೯ ॥

ಶ್ರುಣ್ವೇತೇ ಜನ್ಮನಿ ಪ್ರಾಚಿ ಸೌಧರ್ಮಾಧಿಪತೇಃ ಪ್ರಿಯೇ ।
ವಿಮಲಾ ಸುಪ್ರಭಾ ಚೇತಿ ದೇವ್ಯೌ ಸೌಧರ್ಮಸಂಯುತೇ ॥ ೧೨೧೦ ॥

ಗತ್ವಾ ನಂದೀಶ್ವರದ್ವೀಪೇ ಜಿನಗೇಹಾರ್ಚನಾವಿಧೇಃ ।
ತತ್ರ ಸಂವಿಗ್ನಚಿತ್ತತ್ವಾತ್ಸಂಪ್ರಾಪ್ಯಾಸ್ಮಾನ್ಮನುಷ್ಯತಾಮ್ ॥ ೧೨೧೧ ॥

ಆವಾಂ ತಪಃ ಕರಿಷ್ಯಾವ ಇತ್ಯನ್ಯೋನ್ಯಂ ವ್ಯವಸ್ಥಿತಿಮ್ ।
ಅಕುರ್ವತಾಂ ತತಶ್ಚ್ಯುತ್ವಾ ಸಾಕೇತನಗರೇಶಿನಃ ॥ ೧೨೧೨ ॥

ಶ್ರೀಷೇಣಾಖ್ಯಮಹೀಶಸ್ಯ ಶ್ರೀಕಾಂತಾಯಾಶ್ಚ ತೇ ಸುತೇ ।
ಹರಿಶ್ರೀಪೂರ್ವಸೇನಾಖ್ಯೇ ಸಂಭೂಯ ಪ್ರಾಪ್ತಯೌವನೇ ॥ ೧೨೧೩ ॥

ಸ್ವಯಂವರವಿವಾಹೋರುಮಂಡಪಾಭ್ಯಂತರೇ ಸ್ಥಿತೇ ।
ನಿಜಪೂರ್ವಭವಂ ಸ್ಮೃತ್ವಾ ಸಂಸ್ಥಾಂ ಚ ಪ್ರಾಕ್ತನೀಂ ಕೃತಾಮ್॥ ೧೨೧೪ ॥

ವಿಸರ್ಜ್ಯ ಬಂಧುವರ್ಗೇಣ ಸಮಂ ನೃಪಕುಮಾರಕಾನ್ ।
ಇತೇ ದೀಕ್ಷಾಮಿತಿ ಕ್ಷಾಂತಿವಚನಾಕರ್ಣನೇನ ಸಾ ॥ ೧೨೧೫ ॥

ಸುಕುಮಾರೀ ಚ ನಿರ್ವಿಣ್ಣಾ ಸಮ್ಮತಾ ನಿಜಬಾಂಧವೈಃ ।
ತತ್ಸಮೀಪೇಗಮದ್ದೀಕ್ಷಾಮನ್ಯೇದ್ಯುರ್ವನಮಾಗತಾಮ್ ॥ ೧೨೧೬ ॥

ವೇಶ್ಯಾಂ ವಸಂತಸೇನಾಖ್ಯಾಮಾವೃತ್ಯ ಬಹುಭಿರ್ವಿಟೈಃ ।
ಸಂಪ್ರಾರ್ಥ್ಯಮಾನಾಮಾಲೋಕ್ಯ ಹ್ಯಮಾಪ್ಯೇವಂ ಭವೇದಿತಿ ॥ ೧೨೧೭ ॥

ನಿದಾನಮಕರೋಜ್ಜೀವಿತಾಂತೇ ಪ್ರಾಕ್ತನಜನ್ಮನಃ ।
ಸೋಮಭೂತೇರಭೂದ್ದೇವೀ ಪ್ರಾಂತಕಲ್ಪನಿವಾಸಿನಃ ॥ ೧೨೧೮ ॥

ಬಳಿಕ ಕಿರಿಯನಾದ ಜಿನದತ್ತನು "ಆಪ್ತಬಂಧುವಿನ ಪುತ್ರಿಯು ಅವಮಾನ ಪಡಿಸುವುದಕ್ಕೆ ಯೋಗ್ಯಳಲ್ಲ" ಎಂದು ಬಂಧುಗಳಿಂದ ಪುನಃ ಪುನಃ ಪ್ರೇರಿತನಾಗಿ ಆ ಭಯದಿಂದ ಇವನು ಆಕೆಯನ್ನು ಪರಿಗ್ರಹಿಸಿ ಕುಪಿತವಾದ ಹೆಣ್ಣು ಹಾವನ್ನು ಹೊಂದದಿರುವಂತೆ ಆಕೆಯನ್ನು ಸ್ವಪ್ನದಲ್ಲಿಯೂ ಹೊಂದಲಿಲ್ಲ. ಆಕೆಯ ಸಂಗಮವನ್ನು ಮಾಡಲಿಲ್ಲವೆಂದು ಭಾವವು. ಇವನ ವಿರಕ್ತತೆಯಿಂದ ಆ ಸುಕುಮಾರಿಯು ತನ್ನ ಪುಣ್ಯಹೀನತೆಯನ್ನು ನಿಂದಿಸುವವಳೂ ಉಪವಾಸವನ್ನು ಕೈಕೊಂಡವಳೂ ಆಗಿ ಮತ್ತೊಂದು ದಿವಸ ಆರ್ಯಿಕೆಯರೊಡನೆ ತನ್ನ ಮನೆಗೆ ಬಂದ ಸುವ್ರತೆಯೆಂಬ ಆರ್ಯಿಕೆಯನ್ನು ವಂದಿಸಿ "ಆರ್ಯಿಕೆಯೆ! ನಿನ್ನೊಡನಿರುವ ಈರ್ವರು ಆರ್ಯಿಕೆಯರು ಯಾವ ಕಾರಣದಿಂದ ದೀಕ್ಷಿತರಾದರು ? ಹೇಳು" ಎಂದು ಆಕೆಯನ್ನು ಪ್ರಶ್ನೆಮಾಡಿದಳು. ಅನಂತರದಲ್ಲಿ ಆ ಆರ್ಯಿಕೆಯೂ ಈ ರೀತಿಯಾಗಿ ಹೇಳಿದಳು. "ಶುಭನಾಮವುಳ್ಳವಳೆ! ಕೇಳು. ಇವರೀರ್ವರು ಪೂರ್ವಜನ್ಮದಲ್ಲಿ ಸೌಧರ್ಮೇಂದ್ರನಿಗೆ ಪ್ರಿಯರಾದ ವಿಮಲಾ ಮತ್ತು ಸುಪ್ರಭೆಯೆಂಬ ದೇವಿಯರಾಗಿದ್ದು ಸೌಧರ್ಮೇಂದ್ರನೊಡನೆ ಕೂಡಿಕೊಂಡು ನಂದೀಶ್ವರದ್ವೀಪದಲ್ಲಿ ಜಿನಮಂದಿರದ ಪೂಜಾವಿಧಿಗೆ ಹೋಗಿ ಅಲ್ಲಿ ಮನಸ್ಸಿನಲ್ಲಿ ವಿರಕ್ತಿಯುಂಟಾದುದರಿಂದ "ನಾವುಗಳು ಈ ಜನ್ಮದಿಂದ ಮನುಷ್ಯತ್ವವನ್ನು ಪಡೆದು ತಪಸ್ಸನ್ನು ಮಾಡುವೆವು" ಎಂದು ಪರಸ್ಪರವಾಗಿ ವ್ಯವಸ್ಥೆಯನ್ನು ಮಾಡಿದರು. ಅಲ್ಲಿಂದ ಚ್ಯುತರಾಗಿ ಅವರು ಅಯೋಧ್ಯಾನಗರಾಧಿಪತಿಯಾದ ಶ್ರೀಷೇಣನೆಂಬ ರಾಜನಿಗೂ ಆತನ ಪತ್ನಿಯಾದ ಶ್ರೀಕಾಂತೆಗೂ ಹರಿಶ್ರೀ ಪೂರ್ವಸೇನೆಯರೆಂಬ ಪುತ್ರಿಯರಾಗಿ ಜನಿಸಿ ಯೌವನವನ್ನು ಹೊಂದಿದವರಾಗಿಯೂ ಸ್ವಯಂವರವಿವಾಹಮಂಡಪದ ಮಧ್ಯದಲ್ಲಿರುವವರಾಗಿಯೂ ತಮ್ಮ ಪೂರ್ವಭವವನ್ನೂ ಪೂರ್ವದಲ್ಲಿ ಮಾಡಿದ್ದ ಪ್ರತಿಜ್ಞೆಯನ್ನೂ ಸ್ಮರಿಸಿಕೊಂಡು ಬಂಧುಸಮೂಹದೊಡನೆ ರಾಜಕುಮಾರರುಗಳನ್ನು ಪರಿತ್ಯಜಿಸಿ ದೀಕ್ಷೆಯನ್ನು ಪಡೆದರು" ಈ ರೀತಿಯಾಗಿ ಆರ್ಯಿಕೆಯ ಮಾತನ್ನು ಕೇಳಿದುದರಿಂದ ಆ ಸುಕುಮಾರಿಯೂ ವಿರಕ್ತಳಾಗಿಯೂ ತನ್ನ ಬಂಧುಗಳಿಂದ ಸಮ್ಮತಿಸಲ್ಪಟ್ಟವಳಾಗಿಯೂ ಆ ಸುವ್ರತಾರ್ಯಿಕೆಯ ಬಳಿಯಲ್ಲಿ ದೀಕ್ಷೆಯನ್ನು ಪಡೆದಳು. ಮತ್ತೊಂದು ದಿವಸ ವನಕ್ಕೆ ಬಂದವಳೂ ಅನೇಕ ವಿಟಪುರುಷರಿಂದ ಆವರಿಸಲ್ಪಟ್ಟು ಪ್ರಾರ್ಥಿಸಲ್ಪಡುತ್ತಿರುವವಳೂ ಆದ ವಸಂತಸೇನೆಯೆಂಬ ವೇಶ್ಯೆಯನ್ನು ನೋಡಿ ಈ ಸುಕುಮಾರಿಯು "ನನಗೂ ಮುಂದಿನ ಭವದಲ್ಲಿ ಹೀಗಾಗಲಿ" ಎಂದು ನಿದಾನಶಲ್ಯವನ್ನು ಮಾಡಿದಳು. ಆಯುಷ್ಯಾವಸಾನದಲ್ಲಿ ಸತ್ತು ಪೂರ್ವಜನ್ಮದ (ನಾಗಶ್ರೀ ಜನ್ಮದ)ಪತಿಯೂ ಅಚ್ಯುತಕಲ್ಪನಿವಾಸಿಯೂ ಆದ ಸೋಮಭೂತಿಯಾಗಿದ್ದ ದೇವನಿಗೆ ದೇವಿಯಾಗಿ ಹುಟ್ಟಿದಳು.

ಉತ್ಕೃಷ್ಟಜೀವಿತಂ ತತ್ರ ಗಮಯಿತ್ವಾ ತ್ರಯೋಪಿ ತೇ ।
ಸೋದರ್ಯಾಃ ಪ್ರಚ್ಯುತಾ ಯೂಯಂ ಜಾತಾ ರತ್ನತ್ರಯೋಪಮಾಃ ॥

ಧರ್ಮಜೋ ಭೀಮಸೇನಶ್ಚ ಪಾರ್ಥಶ್ಚಾಖ್ಯಾತಪೌರುಷಾಃ ।
ಧನಮಿತ್ರಶ್ರಿಯೌ ಚಾಸ್ಮಿನ್ನಭೂತಾಂ ಸ್ತುತವಿಕ್ರಮೌ ॥ ೧೨೨೦ ॥

ನಕುಲಃ ಸಹದೇವಶ್ಚ ಚಂದ್ರಾದಿತ್ಯಸಮಪ್ರಭೌ ।
ಸುಕುಮಾರೀ ಚ ಕಾಂಪಿಲ್ಯಪುರೇ ದ್ರುಪದಭೂಪತೇಃ ॥ ೧೨೨೧ ॥

ಸುತಾ ದೃಢರಥಾಯಾಶ್ಚ ದ್ರೌಪದ್ಯಾಖ್ಯಾಜನಿಷ್ಟ ಸಾ ।
ಇತಿ ನೇಮೀಶ್ವರಪ್ರೋಕ್ತಮಾಕರ್ಣ್ಯ ಬಹುಭಿಃ ಸಮಮ್ ॥ ೧೨೨೨ ॥

ಪಾಂಡವಾಃ ಸಂಯಮಂ ಪ್ರಾಪನ್ ಸತಾಮೇಷಾ ಹಿ ಬಂಧುತಾ ।
ಕುಂತೀಸುಭದ್ರಾದ್ರೌಪದ್ಯಶ್ಚ ದೀಕ್ಷಾಂ ತಾಃ ಪರಾಂ ಯಯುಃ ॥

ನಿಕಟೇ ರಾತ್ರಿಮತ್ಯಾಖ್ಯಗಣಿನ್ಯಾ ಗುಣಭೂಷಣಾಃ ।
ತಾಸ್ತಿಸ್ರಃ ಷೋಡಶೇ ಕಲ್ಪೇ ಭೂತ್ವಾ ತಸ್ಮಾತ್ಪರಿಚ್ಯುತಾಃ ॥ ೧೨೨೪ ॥

ವಿಶ್ವಕರ್ಮಮಲೈರ್ಮುಕ್ತಾ ಮುಕ್ತಿಮೇಷ್ಯಂತ್ಯಸಂಶಯಮ್ ।
ಪಂಚಾಪಿ ಪಾಂಡವಾ ನೇಮಿಸ್ವಾಮಿನಾಮೋದಿತರ್ದ್ಧಯಃ ॥ ೧೨೨೫ ॥

ವಿಹೃತ್ಯ ಭಾಕ್ತಿಕಾಃ ಕಾಶ್ಚಿತ್ಸಮಾಃ ಸಂಪ್ರಾಪ್ಯ ಭೂಧರಮ್ ।
ಶತ್ರುಂಜಯಂ ಸಮಾದಾಯ ಯೋಗಮಾತಪಮಾಸ್ಥಿತಾಃ ॥ ೧೨೨೬ ॥

ಅಲ್ಲಿ ಉತ್ಕೃಷ್ಟಜೀವಿತವನ್ನು ಪೂರ್ತಿಮಾಡಿ ಆ ಮೂವರು (ಸೋಮದತ್ತ ಸೋಮಿಲ ಸೋಮಭೂತಿ) ಸಹೋದರರೂ ಅಲ್ಲಿಂದ ಚ್ಯುತರಾಗಿ ರತ್ನತ್ರಯಸಮಾನರೂ ಪ್ರಖ್ಯಾತವಾದ ಪೌರುಷವುಳ್ಳವರೂ ಆದ ನೀವುಗಳು–ಧರ್ಮಜ ಭೀಮಸೇನ ಪಾರ್ಥರಾಗಿ ಜನಿಸಿರುತ್ತೀರಿ. ಧನಶ್ರೀ ಮಿತ್ರಶ್ರೀಯರು (ಆರಣಕಲ್ಪದಲ್ಲಿ ದೇವರ್ಕಳಾಗಿದ್ದು ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತರಾಗಿ) ಈ–ನಿಮ್ಮ ವಂಶದಲ್ಲಿ ಹೊಗಳಲ್ಪಟ್ಟ ಪರಾಕ್ರಮವುಳ್ಳವರೂ ಚಂದ್ರಸೂರ್ಯರಿಗೆ ಸಮಾನವಾದ ಪ್ರಭೆಯುಳ್ಳವರೂ ಆದ ನಕುಲನೂ ಸಹದೇವನೂ ಆಗಿ ಜನಿಸಿದರು. ಆ ಸುಕುಮಾರಿಯೂ ಕಾಂಪಿಲ್ಯನಗರದಲ್ಲಿ ದ್ರುಪದರಾಜನಿಗೂ ಆತನ ಪತ್ನಿಯಾದ ದೃಢರಥೆಗೂ ದ್ರೌಪದಿಯೆಂಬ ಪುತ್ರಿಯಾಗಿ ಜನಿಸಿದಳು." (ದ್ರೌಪದಿಯು ಸ್ವಯಂವರದಲ್ಲಿ ರಾಜಕುಮಾರರುಗಳಿಂದ ಆವರಿಸಲ್ಪಡುವುದಕ್ಕೂ ಪಂಚಪಾಂಡವರು ಪತಿಗಳೆಂಬ ಮಿಥ್ಯಾಪ್ರಸಿದ್ಧಿಗೂ ಪೂರ್ವಜನ್ಮದ ನಿದಾನಶಲ್ಯವು ಕಾರಣವೆಂದು ತಿಳಿಯಬೇಕು) ಈ ರೀತಿಯಾಗಿ ನೇಮೀಶ್ವರರಿಂದ ಹೇಳಲ್ಪಟ್ಟುದನ್ನು ಕೇಳಿ ಪಾಂಡವರು ಅನೇಕರೊಡನೆ ಸಂಯಮವನ್ನು ಪಡೆದರು. ದೀಕ್ಷೆಯನ್ನು ತೆಗೆದುಕೊಂಡರೆಂದು ಭಾವವು. ಸತ್ಪುರುಷರಿಗೆ ಇದೇ ಬಂಧುತ್ವವೆಂಬುದು. ಆ ಕುಂತೀ ಸುಭದ್ರಾ ದ್ರೌಪದೀದೇವಿಯರೂ ರಾತ್ರಿಮತಿಯೆಂಬ ಪ್ರಮುಖಾರ್ಯಿಕೆಯ ಬಳಿಯಲ್ಲಿ ಉತ್ಕೃಷ್ಟವಾದ ದೀಕ್ಷೆಯನ್ನು ಪಡೆದರು. ಗುಣಭೂಷಣೆಯರಾದ ಆ ಮೂವರೂ ಆಯುಷ್ಯಾವಸಾನದಲ್ಲಿ ಸತ್ತು ಹದಿನಾರನೆಯ– ಅಚ್ಯುತಕಲ್ಪದಲ್ಲಿ ಜನಿಸಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತರಾಗಿ ಬಂದು ಸಕಲ ಕರ್ಮಮಲಗಳಿಂದ ಮುಕ್ತರಾಗಿ ನಿಸ್ಸಂಶಯವಾಗಿ ಮುಕ್ತಿಯನ್ನು ಪಡೆಯುವರು. ಉತ್ಪನ್ನವಾದ ಋದ್ಧಿ–ತಪೋತಿಶಯಗಳುಳ್ಳವರೂ ಭಕ್ತಿಯುಳ್ಳವರೂ ಆದ ಪಂಚಪಾಂಡವರೂ ನೇಮಿಸ್ವಾಮಿಯೊಡನೆ ಕೆಲವು ವರ್ಷಗಳವರೆಗೆ ವಿಹರಿಸಿ ಬಳಿಕ



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಶೌರೀಪುರ–ಪಟ್ಟಣದಲ್ಲಿ ಸಮುದ್ರವಿಜಯಮಹಾರಾಜಂಗಂ ಶಿವದೇವೀಮಹಾದೇವಿಗಂ ಚಿತ್ತಾನಕ್ಷತ್ರದಲ್ಲುದಯಿಸಿದ ಶ್ಯಾಮವರ್ಣಮನುಳ್ಳ ಹರಿವಂಶಮನುಳ್ಳ ಹತ್ತುಬಿಲ್ಲುತ್ಸೇಧಮನುಳ್ಳ ಸಾಸಿರವರ್ಷ ಆಯುಷ್ಯಮನುಳ್ಳ ಶಂಖಲಾಂಛನಮನುಳ್ಳ ಸರ್ವಾಹ್ಣಯಕ್ಷಕೂಷ್ಮಾಂಡಿನೀ–ಯಕ್ಷಯಕ್ಷಿಯರನುಳ್ಳ ಊರ್ಜಯಂತಗಿರಿಯಲ್ಲಿ ಕರ್ಮಕ್ಷಯಮಂ ಮಾಡಿದ ಶ್ರೀ ನೇಮಿತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

ಶತ್ರುಂಜಯಪರ್ವತವನ್ನು ತಲುಪಿ ಆತಪಯೋಗವನ್ನು ಸ್ವೀಕರಿಸಿ-ಧ್ಯಾನಾರೂಢ ರಾಗಿದ್ದರು.

**ತತ್ರ ಕೌರವನಾಥಸ್ಯ ಭಾಗಿನೇಯೋ ನಿರೀಕ್ಷ್ಯ ತಾನ್ ।**
**ಕ್ರೂರಃ ಕುರ್ಯುವರಃ ಸ್ಮೃತ್ವಾ ಸ್ವಮಾತುಲವಧಂ ಕ್ರುಧಾ ॥ ೧೨೨೭ ॥**

**ಆಯಸಾನ್ಯಗ್ನಿತಪ್ತಾನಿ ಮುಕುಟಾದೀನಿ ಪಾಪಭಾಕ್ ।**
**ತೇಷಾಂ ವಿಭೂಷಣಾನೀತಿ ಶರೀರೇಷು ನಿಧಾಯ ಸಃ ॥ ೧೨೨೮ ॥**

**ಉಪಸರ್ಗಂ ವ್ಯಧಾತ್ತೇಷು ಕೌಂತೇಯಾಃ ಶ್ರೇಣಿಮಾಶ್ರಿತಾಃ ।**
**ಶುಕ್ಲಧ್ಯಾನಾಗ್ನಿನಿರ್ದಗ್ಧಕರ್ಮೈಧಾಃ ಸಿದ್ಧಿಮಾಪ್ನುವನ್ ॥ ೧೨೨೯ ॥**

ಅಲ್ಲಿ ಕೌರವರಾಜನ ಸಹೋದರಿಯ ಪುತ್ರನೂ ಕ್ರೂರನೂ ಆದ ಕುರ್ಯವರನು ಆ ಪಾಂಡವಮುನಿಗಳನ್ನು ನೋಡಿ ತನ್ನ ಸೋದರಮಾವನ ವಧೆಯನ್ನು ಸ್ಮರಿಸಿಕೊಂಡು ಕೋಪದಿಂದ ಪಾಪಭಾಗಿಯಾದ ಅವನು ಲೋಹದಿಂದ ನಿರ್ಮಿತ ಗಳೂ ಬೆಂಕಿಯಿಂದ ಕಾಯಿಸಲ್ಪಟ್ಟವೂ ಆದ ಕಿರೀಟವೇ ಮೊದಲಾದುವುಗಳನ್ನು "ಆಭರಣಗಳು" ಎಂದು ಅವರುಗಳ ಆಯಾ ಅಂಗಗಳಲ್ಲಿರಿಸಿ ಉಪಸರ್ಗವನ್ನು ಮಾಡಿದನು. ಆ ಕುಂತೀಪುತ್ರರು-ಪಾಂಡವಮುನಿಗಳು (ಉಪಸರ್ಗವನ್ನು ಸಹಿಸಿ) ಕ್ಷಪಕಶ್ರೇಣಿಯನ್ನಾಶ್ರಯಿಸಿದವರೂ ಶುಕ್ಲಧ್ಯಾನವೆಂಬ ಅಗ್ನಿಯಿಂದ ಕರ್ಮಗಳೆಂಬ ಕಟ್ಟಿಗೆಗಳನ್ನು ಸುಟ್ಟವರೂ ಆಗಿ ಸಿದ್ಧಿಯನ್ನು ಪಡೆದರು-ಮುಕ್ತರಾದರು.

**ನಕುಲಃ ಸಹದೇವಶ್ಚ ಪಂಚಮಾನುತ್ತರಂ ಯಯೌ ।**
**ಭಟ್ಟಾರಕೋಽಪಿ ಸಂಪ್ರಾಪದೂರ್ಜಯಂತಂ ಧರಾಧರಮ್ ॥ ೧೨೩೦ ॥**

ನಕುಲನೂ ಸಹದೇವನೂ ಐದನೆಯ ಅನುತ್ತರವಿಮಾನವಾದ ಸರ್ವಾರ್ಥ ಸಿದ್ಧಿಯನ್ನು ಹೊಂದಿದರು. ನೇಮಿಸ್ವಾಮಿಯೂ ಊರ್ಜಯಂತಪರ್ವತವನ್ನು ಪ್ರವೇಶಿಸಿದರು.

**ನವರಂಧ್ರರ್ತುವರ್ಷೇಷು ಚತುರ್ದಿವಸಸಂಯುತೈಃ ।**
**ಯುತೇಷು ನವಭಿರ್ಮಾಸೈರ್ವಿಹಾರವಿಧಿವಿಚ್ಯುತೌ ॥ ೧೨೩೧ ॥**

**ಪಶ್ಚಾತ್ಪಂಚಶತೈಃ ಸಾರ್ಧಂ ಸಂಯತೈಸ್ತ್ರಿಂಶತಾ ತ್ರಿಭಿಃ ।**
**ಮಾಸಂ ಯೋಗಂ ನಿರುಧ್ಯಾಸೌ ಹತಾಘಾತಿಚತುಷ್ಕಕಃ ॥ ೧೨೩೨ ॥**

**ಆಷಾಢಮಾಸಿ ಜ್ಯೋತ್ಸ್ನಾಯಾಃ ಪಕ್ಷೇ ಚಿತ್ರಾಸಮಾಗಮೇ ।**
**ಶೀತಾಂಶೋಃ ಸಪ್ತಮೀಪೂರ್ವರಾತ್ರೌ ನಿರ್ವಾಣಮಾಪ್ತವಾನ್ ॥**

ಒಂಬತ್ತುತಿಂಗಳೂ ನಾಲ್ಕು ದಿವಸಗಳಿಂದ ಯುಕ್ತವಾದ ಆರು ನೂರ ತೊಂಬತ್ತೊಂಬತ್ತು ವರ್ಷಗಳಲ್ಲಿ ವಿಹಾರವಿಧಿಯು ಕೊನೆಯಾಗುತ್ತಿರಲು ಬಳಿಕ ಐದುನೂರ ತೊಂಬತ್ತು ಮಂದಿ ಸಂಯತರೊಡನೆ ಈ ಸ್ವಾಮಿಯು ಒಂದು ತಿಂಗಳವರೆಗೆ ಯೋಗನಿರೋಧವನ್ನು ಮಾಡಿ ನಾಲ್ಕು ಅಘಾತಿಕರ್ಮಗಳನ್ನು ನಾಶ ಮಾಡಿದವರಾಗಿ ಆಷಾಢಮಾಸದ ಶುಕ್ಲಪಕ್ಷದಲ್ಲಿ ಚಂದ್ರನಿಗೆ ಚಿತ್ರಾನಕ್ಷತ್ರದ ಸಮಾಗಮದಲ್ಲಿ ಸಪ್ತಮಿಯ ದಿವಸ ಪೂರ್ವರಾತ್ರಿಯಲ್ಲಿ- ಮೊದಲಿನ ಜಾವದಲ್ಲಿ ಮುಕ್ತಿಯನ್ನು ಹೊಂದಿದರು.

**ತದಾ ಸುರಾಧಿಪಾಃ ಪ್ರಾಪ್ಯ ಕಲ್ಯಾಣಂ ಪಂಚಮಂ ಪರಮ್ ।**
**ವಿಧಾಯ ವಿಧಿವದ್ಭಕ್ತ್ಯಾ ಸ್ವಂ ಸ್ವಮೋಕಃ ಪುನರ್ಯಯುಃ ॥ ೧೨೩೪ ॥**

ಆಗ ದೇವೇಂದ್ರರು ಬಂದು ಭಕ್ತಿಯಿಂದ ವಿಧಿಗನುಸಾರವಾಗಿ ಉತ್ಕೃಷ್ಟವಾದ ಐದನೆಯದಾದ ನಿರ್ವಾಣಕಲ್ಯಾಣಮಹೋತ್ಸವವನ್ನು ಮಾಡಿ ಪುನಃ ತಂತಮ್ಮ ಸ್ಥಾನಕ್ಕೆ ಹೋದರು.

**ಶಕ್ರಾದ್ಯಾ ವ್ಯೋಮ್ನಿ ದೂರಾದಮರಪರಿವೃಢಾ ವಾಹನೇಭ್ಯೋಽವ ತೀರ್ಣಾ- ।**
**ಸ್ತೂರ್ಣಂ ಮೂರ್ಧಾವನಮ್ರಾಃ ಸ್ತುತಿಮುಖರಮುಖಾಃ ಕುಡ್ಮಲೀ ಭೂತಹಸ್ತಾಃ ॥**

**ಧ್ವಸ್ತಾಂತರ್ಧ್ವಾಂತಧಾಮ್ನಃ ಪ್ರಣಿಹಿತಮನಸೋ ಯಸ್ಯ ಪಾದೌ ಪ್ರಣೇಮುಃ ।**
**ಕ್ಷೇಮಂ ಶ್ರೀಮಾನ್ ಸ ನೇಮಿರ್ಝಟಿತಿ ಘಟಯತು ಪ್ರಾಂತಬೋಧ ಪ್ರಸಿದ್ಧ್ಯೈ ॥ ೧೨೩೫ ॥**

ಆಕಾಶದಲ್ಲಿ ದೂರದಿಂದ ತಮ್ಮ ವಾಹನಗಳಿಂದ ಇಳಿದವರೂ ಶೀಘ್ರವಾಗಿ ತಲೆಬಾಗಿಸಿದವರೂ ಸ್ತುತಿಯಿಂದ ಶಬ್ದಾಯಮಾನವಾದ ಮುಖಗಳುಳ್ಳವರೂ ಮೊಗ್ಗಿನಂತೆ ಜೋಡಿಸಿದ ಕೈಗಳುಳ್ಳವರೂ ಒಳಗಿನ ಕತ್ತಲೆಯನ್ನು-ಅಜ್ಞಾನವನ್ನು ನಾಶಮಾಡಿದ ತೇಜಸ್ಸುಳ್ಳವರೂ ದತ್ತಚಿತ್ತವುಳ್ಳವರೂ ಆದ ದೇವೇಂದ್ರನೇ ಮೊದಲಾದ ದೇವಾಧಿಪತಿಗಳು ಯಾವನ ಪಾದಗಳನ್ನು ನಮಸ್ಕರಿಸಿದರೋ ಅಂತಹ ಶ್ರೀಮಾನ್ ನೇಮಿಸ್ವಾಮಿಯು ಕೊನೆಯದಾದ ಕೇವಲಜ್ಞಾನದ ಪ್ರಸಿದ್ಧಿಗೋಸ್ಕರ ಶೀಘ್ರವಾಗಿ ಕ್ಷೇಮವನ್ನುಂಟುಮಾಡಲಿ.

**ಪ್ರಾಕ್ ಚಿಂತಾಗತಿರಾಬಭಾವನು ತತಃ ಕಲ್ಪೇ ಚತುರ್ಥೇಽಮರೋ ।**
**ಜಜ್ಞೇಽಸ್ಮಾದಪರಾಜಿತಃ ಕ್ಷಿತಿಪತಿರ್ಜಾತೋಽಚ್ಯುತೇಂದ್ರಸ್ತತಃ ॥**
**ತಸ್ಮಾತ್ಸೋಽಜನಿ ಸುಪ್ರತಿಷ್ಠನೃಪತಿರ್ದೇವೋ ಜಯಂತೇಽನ್ವಭೂ- ।**
**ದಾಸೀದತ್ರ ಮಹೋದಯೋ ಹರಿಕುಲವ್ಯೋಮಾಮಲೇಂದುರ್ಜಿನಃ ॥**

ನೇಮಿಸ್ವಾಮಿಯು ಮೊದಲು ಚಿಂತಾಗತಿಯಾಗಿ ಪ್ರಕಾಶಿಸಿದನು. ಅನಂತರದಲ್ಲಿ ನಾಲ್ಕನೆಯ ಕಲ್ಪದಲ್ಲಿ ದೇವನಾಗಿ ಜನಿಸಿದನು. ಇಲ್ಲಿಂದ ಚ್ಯುತನಾಗಿ ಅಪರಾಜಿತ ರಾಜನಾದನು. ತರುವಾಯ ಅಚ್ಯುತೇಂದ್ರನಾದನು. ಅಲ್ಲಿಂದ ಚ್ಯುತನಾಗಿ ಸುಪ್ರತಿಷ್ಠ ರಾಜನಾಗಿ ಜನಿಸಿದನು. ಆಮೇಲೆ ಜಯಂತವೆಂಬ ಅನುತ್ತರವಿಮಾನದಲ್ಲಿ ದೇವ ನಾದನು. ಅಲ್ಲಿಂದ ಚ್ಯುತನಾಗಿ ಇಲ್ಲಿ ಮಹೋನ್ನತಿಯುಳ್ಳವನೂ ಹರಿವಂಶವೆಂಬ ಆಕಾಶಕ್ಕೆ ನಿರ್ಮಲನಾದ ಚಂದ್ರನೂ ಆದ ಜಿನನಾದನು.

**ಸಾ ಲಕ್ಷ್ಮೀಃ ಸಕಲಾಮರಾರ್ಚಿತಪದಾಂಭೋಜೋ ಯಯಾಽಯಂ ವಿಭು- ।**
**ಸ್ತತ್ಕೌಮಾರಮಮೇಯರೂಪವಿಭವಂ ಕನ್ಯಾ ಚ ಸಾತಿಸ್ತುತಿಃ ॥**
**ಧೀಮಾನ್ಸರ್ವಮಿದಂ ಜರತ್ತೃಣಸಮಂ ಮತ್ವಾಗ್ರಹೀತ್ಸಂಯಮಂ ।**
**ಧತ್ತಾಂ ಕೇನ ನ ಧರ್ಮಚಕ್ರಮಭಿತೋ ನೇಮೀಶ್ವರೋ ನೇಮಿತಾಮ್ ॥ ೧೨೩೭ ॥**

ಯಾವ ಸಂಪತ್ತಿಯಿಂದ ಈ ಸ್ವಾಮಿಯು ಸಮಸ್ತದೇವರ್ಕಳಿಂದ ಪೂಜಿತವಾದ ಪಾದಕಮಲಗಳುಳ್ಳವನಾದನೋ ಅಂತಹ ಸಂಪತ್ತಿ, ತಿಳಿಯಲಶಕ್ಯವಾದ ರೂಪ ಸಂಪತ್ತಿಯುಳ್ಳ ಆ ಕೌಮಾರ, ಸ್ತುತಿಗೆ ನಿಲುಕದ ಆ ಕನ್ಯಾ-ರಾಜಮತಿ, ಪ್ರಾಜ್ಞನಾದ ನೇಮೀಶ್ವರನು ಇದೆಲ್ಲವನ್ನೂ ಹಳೆಯ ಹುಲ್ಲಿಗೆ ಸಮಾನವನ್ನಾಗಿ ತಿಳಿದು ಸಂಯಮ-ದೀಕ್ಷೆಯನ್ನು ಗ್ರಹಣಮಾಡಿದನು. ನೇಮೀಶ್ವರನು ಧರ್ಮಚಕ್ರದ ಸುತ್ತಲೂ ಚಕ್ರದ ಕಣ್ಣಿನ ಬಳೆಯ ಭಾವವನ್ನು ಯಾವ ಕಾರಣದಿಂದ ಧರಿಸ ದಿರುವನು ? ನೇಮೀಶ್ವರನು ಧರ್ಮವೆಂಬ ಚಕ್ರಕ್ಕೆ ಅದರ ಕಣ್ಣಿನ ಬಳೆಯಂತಿ ದ್ದನೆಂದು ಭಾವವು.

**ಸುಭಾನುರಭವತ್ತತಃ ಪ್ರಥಮಕಲ್ಪಜೋಽಸ್ಮಾಚ್ಚ್ಯುತಃ ।**
**ಖಗಾಧಿಪತಿರನ್ವತೋಽಜನಿ ಚತುರ್ಥಕಲ್ಪೇಽಮರಃ ।**
**ವಣೇಡಜನಿ ಶಂಖವಾಗನು ಸುರೋ ಮಹಾಶುಕ್ರಜ- ।**
**ಸ್ತತೋಽಪಿ ನವಮೋ ಬಲೋಽನು ದಿವಿಜಸ್ತತಸ್ತೀರ್ಥಕೃತ್ ॥ ೧೨೩೮ ॥**

ಬಲರಾಮನು ಮೊದಲು ಸುಭಾನುವಾಗಿದ್ದನು. ಬಳಿಕ ಪ್ರಥಮಕಲ್ಪ-ಸ್ವರ್ಗದಲ್ಲಿ ದೇವನಾದನು. ಇಲ್ಲಿಂದ ಚ್ಯುತನಾಗಿ ಖೇಚರಾಧಿಪತಿಯಾದನು. ತರುವಾಯ ನಾಲ್ಕನೆಯ ಕಲ್ಪ-ಸ್ವರ್ಗದಲ್ಲಿ ದೇವನಾದನು. ಆಮೇಲೆ ಶಂಖನೆಂಬ ವೈಶ್ಯಪತಿಯಾಗಿ ಜನಿಸಿದನು. ಅನಂತರದಲ್ಲಿ ಮಹಾಶುಕ್ರಸ್ವರ್ಗದಲ್ಲಿ ದೇವನಾದನು. ಅಲ್ಲಿಂದಲೂ ಚ್ಯುತನಾಗಿ ಒಂಬತ್ತನೆಯ ಬಲಭದ್ರನಾದನು. ಬಳಿಕ ಸ್ವರ್ಗದಲ್ಲಿ ದೇವ ನಾದನು. ಅಲ್ಲಿಂದ ಚ್ಯುತನಾಗಿ ತೀರ್ಥಂಕರನಾಗುವನು.

**ಪ್ರಾಗಾಸೀದಮೃತರಸಾಯನಸ್ತ್ರತೀಯೇ ಶ್ವಭ್ರೇಭೂದನು ಭವವಾರಿಧೌ ಭ್ರಮಿತ್ವಾ ।**
**ಭೂಯೋಭೂದ್ಗೃಹಪತಿರತ್ರ ಯಕ್ಷನಾಮಾನಿರ್ನಾಮಾ ನೃಪತಿಸುತ ಸ್ತತೋಮೃತಾಶೀ ॥ ೧೨೩೯ ॥**

ಕೃಷ್ಣನು ಮೊದಲು ಅಮೃತರಸಾಯನನೆಂಬ ಅಡುಗೆಯವನಾಗಿದ್ದನು. ಬಳಿಕ ಮೂರನೆಯ ನರಕದಲ್ಲಿ ಹುಟ್ಟಿದನು. ಆಮೇಲೆ ಭವಸಮುದ್ರದಲ್ಲಿ ತಿರುಗಿ ಪುನಃ ಇಲ್ಲಿ ಯಕ್ಷನೆಂಬ ಗೃಹಸ್ಥನಾದನು. ತರುವಾಯ ನಿರ್ನಾಮಕನೆಂಬ ರಾಜಪುತ್ರ ನಾದನು. ಆಮೇಲೆ ಸ್ವರ್ಗದಲ್ಲಿ ದೇವನಾದನು.

**ತಸ್ಮಾದಭೂನ್ಮುರರಿಪುಃ ಕೃತದುರ್ನಿದಾನಾ- ।**
**ಚ್ಚಕ್ರೇಶ್ವರೋ ಹತವಿರುದ್ಧಜರಾದಿಸಂಧಃ ॥**
**ಘರ್ಮೋದ್ಭವಾದನುಭವನ್ ಬಹುದುಃಖಮಸ್ಮಾ- ।**
**ನ್ನಿರ್ಗತ್ಯ ತೀರ್ಥಕೃದನರ್ಥವಿಘಾತಕೃತ್ಸಃ ॥ ೧೨೪೦ ॥**

ಅನಂತರದಲ್ಲಿ ಮುರವೈರಿಯೂ ಶತ್ರುವಾದ ಜರಾಸಂಧನನ್ನು ಕೊಂದವನೂ ಆದ ಕೃಷ್ಣ–ಚಕ್ರವರ್ತಿಯಾದನು. ದುಷ್ಟವಾದ ನಿದಾನಶಲ್ಯವನ್ನು ಮಾಡಿದ್ದುದ ರಿಂದ ಬಳಿಕ ಘರ್ಮಾವೆಂಬ ಪ್ರಥಮನರಕದಲ್ಲಿ ಜನಿಸಿದುದರಿಂದ ಬಹುದುಃಖವನ್ನ ನುಭವಿಸುವವನಾಗಿ ಈ ನರಕದಿಂದ ಹೊರಟು ಅವನು ಅನರ್ಥವನ್ನು ನಾಶ ಮಾಡುವ ತೀರ್ಥಂಕರನಾಗುವನು.

**ದ್ರೋಹಾನ್ಮುನೇಃ ಪಲವಚಃ ಸ ಕುಧೀರಧೋಗಾ- ।**
**ತ್ತದ್ವೀಜ ಏವ ತಪಸಾಪ್ಯ ಚ ಚಕ್ರಲಕ್ಷ್ಮೀಮ್ ॥**
**ಧ್ವಂಸಂ ಸಮಾಪ ತದಪಾಸ್ತಪರಿಗ್ರಹಾಣಾಂ ।**
**ಮಾಕೃಧ್ವಮಲ್ಪಮಪಿ ಪಾಪಧಿಯಾಪಕಾರಮ್ ॥ ೧೨೪೧ ॥**

ಮುನಿಗೆ ದ್ರೋಹವನ್ನು ಮಾಡಿದುದರಿಂದ ದುರ್ಬುದ್ಧಿಯುಳ್ಳವನಾದ ಆ ಮಾಂಸಪಾಚಕ–ಚಂಡಾಲನು ಕೆಳಕ್ಕೆ– ನರಕಕ್ಕೆ ಹೋದನು. ಆ ಕಾರಣದಲ್ಲೇ ತಪಸ್ಸಿನಿಂದ ಚಕ್ರಸಂಪತ್ತಿಯನ್ನು ಪಡೆದು ನಾಶವನ್ನು ಹೊಂದಿದನು. ಆದುದರಿಂದ ಪರಿಗ್ರಹತ್ಯಾಗಿಗಳಿಗೆ ಪಾಪಬುದ್ಧಿಯಿಂದ ಸ್ವಲ್ಪವಾದ ಅಪಕಾರವನ್ನೂ ಮಾಡ ಬೇಡಿರಿ.

**ಚಾಣೂರಮೇಣಮಿವ ಯೋ ಹತವಾನ್ ಹರಿರ್ವಾ ।**
**ಕಂಸಂ ಚ ಕಂಸಮಿವ ವಾಶನಿರನ್ವಭೈತ್ಸೀತ್ ॥**
**ಮೃತ್ಯುರ್ಯಥಾಹೃತಶಿಶುಂ ಶಿಶುಪಾಲಮಾಜೌ ।**
**ತೇಜಸ್ವಿನಾಂ ಕಥಮಿಹಾಸ್ತು ನ ಸೋಗ್ರಗಣ್ಯಃ ॥ ೧೨೪೨ ॥**

ಸಿಂಹವು ಜಿಂಕೆಯನ್ನು ಕೊಲ್ಲುವಂತೆ ಯಾವನು ಚಾಣೂರಮಲ್ಲನನ್ನು ಕೊಂದನೋ ಸಿಡಿಲು ತೇಜಸುಳ್ಳ ವಸ್ತುವನ್ನು– ಕಂಚನ್ನು ನಾಶಮಾಡುವಂತೆ ಯಾವನು ಕಂಸನನ್ನು ನಾಶಮಾಡಿದನೋ ಮೃತ್ಯುವು ಅಪಹರಿಸಿದ ಶಿಶುವನ್ನು ತಾನು ಭೇದಿಸುವಂತೆ ಯಾವನು ಯುದ್ಧದಲ್ಲಿ ಶಿಶುಪಾಲನನ್ನು ಭೇದಿಸಿದನೋ ಅಂತಹ ಕೃಷ್ಣನು ಈ ಲೋಕದಲ್ಲಿ ತೇಜಸ್ವಿಗಳಲ್ಲಿ ಹೇಗೆ ಅಗ್ರಗಣ್ಯನಲ್ಲ ?

**ಜರಾಸಂಧಂ ಹತ್ವೋರ್ಜಿತಮಿವ ಗಜಂ ಶೌರ್ಯಜಲಧಿ- ।**
**ರ್ಗಜಾರಿರ್ವಾ ಗರ್ಜನ್ ಪ್ರತಿರಿಪುಜಯಾದ್ವಿಶ್ವವಿಜಯೀ ॥**
**ತ್ರಿಖಂಡಾಂ ನಿಷ್ಖಂಡಾಂ ಕರವಿಧೃತದಂಡೋಪ್ರತಿಹತಾಂ ।**
**ಯಥಾಪಾದ್ಬಾಲ್ಯೇ ಗಾಃ ಕಿಲ ಖಲು ಸ ಗೋಪೋನ್ವಪಿ ತತಃ ॥**

ಶೌರ್ಯಸಮುದ್ರವಾದ ಸಿಂಹವು ಗರ್ಜಿಸುವುದಾಗಿ ಆನೆಯನ್ನು ಕೊಲ್ಲುವಂತೆ ಶೌರ್ಯಸಮುದ್ರನಾದ ಯಾವನು ಗರ್ಜಿಸುವವನಾಗಿ ಊರ್ಜಿತನಾದ ಜರಾಸಂಧ ನನ್ನು ಕೊಂದು ಪ್ರತಿಶತ್ರುಗಳ ಜಯದಿಂದ ಲೋಕವಿಜಯಿಯಾದನೋ ಹಸ್ತದಲ್ಲಿ ದಂಡವನ್ನು ಧರಿಸಿದವನಾಗಿ ಯಾವನು ಅಪ್ರತಿಹತವಾದ ತ್ರಿಖಂಡವನ್ನು ಅಖಂಡ ವನ್ನಾಗಿ (ತನ್ನ ಏಕಾಧಿಪತ್ಯವುಳ್ಳುದನ್ನಾಗಿ) ಮಾಡಿದನೋ ಯಾವನು ಬಾಲ್ಯದಲ್ಲಿ ಹೇಗೆ ಗೋವುಗಳನ್ನು ಪಾಲಿಸಿ ಗೋಪನಾಗಿದ್ದನೋ ಅನಂತರದಲ್ಲಿಯೂ ಆ ಕೃಷ್ಣನು ಚೆನ್ನಾಗಿ ಗೋಪ–ಪೃಥ್ವೀಪಾಲಕನಾದನಲ್ಲವೇ ?

**ಕ್ವ ಸಕಲಪೃಥುಶತ್ರುಧ್ವಂಸನಾತ್ಸಾದ್ಭುತಶ್ರೀಃ ।**
**ಕ್ವ ಚ ಸ ಭುವನಬಾಹ್ಯೋ ಹೀ ಹರೇರ್ಮೂಲನಾಶಃ ॥**
**ಸ್ವಕೃತವಿಧಿವಿಧಾನಾತ್ಕಸ್ಯ ಕಿಂ ವಾತ್ರ ನಸ್ಯಾ- ।**
**ದ್ಭ್ರಮತಿ ಹಿ ಭವಚಕ್ರಂ ಚಕ್ರನೇಮಿಕ್ರಮೇಣ ॥ ೧೨೪೪ ॥**

ಹರಿಯ ಸಮಸ್ತಮಹಾಶತ್ರುಧ್ವಂಸದಿಂದುಂಟಾದ ಆ ಅದ್ಭುತಸಂಪತ್ತಿಯೆಲ್ಲಿ ? ಹರಿಯ ಲೋಕಬಾಹ್ಯವಾದ ಆ ಮೂಲನಾಶವೆಲ್ಲಿ ? ತಾನು ಮಾಡಿದ ವಿಧಿಯ– ಪುಣ್ಯಪಾಪದ ವಿಧಾನದಿಂದ ಈ ಲೋಕದಲ್ಲಿ ಯಾವನಿಗೆ ಏನಾಗುವುದಿಲ್ಲ ? ಭವವೆಂಬ ಚಕ್ರವು ಚಕ್ರದ ಕಣ್ಣಿನ ಬಳೆಯ ಕ್ರಮದಿಂದ ತಿರುಗುತ್ತಿದೆ.

**ಬದ್ಧ್ವಾಯುರಾಪ ದೃಶಮಗ್ರ್ಯಮಥಾಂತ್ಯನಾಮ ।**
**ಚಾಸ್ಮಾದಧೋಗಮದಸೌ ಧೃತರಾಜ್ಯಭಾರಃ ॥**
**ತದ್ಧೀಧನಾಃ ಕುರುತ ಯತ್ನಮಖಂಡಮಾಯು- ।**
**ರ್ಬಂಧಂ ಪ್ರತಿ ಪ್ರತಿಪದಂ ಸುಖಲಿಪ್ಸವಶ್ಚೇತ್ ॥ ೧೨೪೫ ॥**

ಹರಿಯು ನರಕಾಯುಷ್ಯವನ್ನು ಬಂಧಿಸಿ ಬಳಿಕ ಶ್ರೇಷ್ಠವಾದ ಸಮ್ಯಗ್ದರ್ಶನವನ್ನೂ ಕೊನೆಯ–ತೀರ್ಥಕರನಾಮವನ್ನೂ ಹೊಂದಿದನು. ಆದುದರಿಂದ ಬುದ್ಧಿಯೇ ಧನವಾಗಿರುವ– ಪ್ರಾಜ್ಞರೆ ! ನೀವುಗಳು ಸುಖವನ್ನು ಪಡೆಯಲಿಚ್ಛಿಸುವವರಾದರೆ ಅಖಂಡವಾದ ಆಯುಷ್ಯವನ್ನು ಕುರಿತು ಹಜ್ಜೆ ಹಜ್ಜೆಯಲ್ಲಿಯೂ ಯತ್ನವನ್ನು ಮಾಡಿರಿ.

**ಅಸ್ಯೈವ ತೀರ್ಥಸಂತಾನೇ ಬ್ರಹ್ಮಣೋ ಧರಣೀಶಿತುಃ ।**
**ಚೂಡಾದೇವ್ಯಾಶ್ಚ ಸಂಜಜ್ಞೇ ಬ್ರಹ್ಮದತ್ತೋ ನಿಧೀಶಿನಾಮ್ ॥ ೧೨೪೬ ॥**

**ದ್ವಾದಶೋ ನಾಮತಃ ಸಪ್ತಚಾಪಃ ಸಪ್ತಶತಾಬ್ದಕೈಃ ।**
**ಪರಿಚ್ಛಿನ್ನಪ್ರಮಾಣಾಯುಸ್ತದಂತಾಶ್ಚಕ್ರವರ್ತಿನಃ ॥ ೧೨೪೭ ॥**

ಈ ನೇಮೀಶ್ವರರ ತೀರ್ಥಪರಂಪರೆಯಲ್ಲೇ ಭೂಮೀಶ್ವರನಾಗಿದ್ದ ಬ್ರಹ್ಮನೆಂಬ ರಾಜನಿಗೂ ಆತನ ಪತ್ನಿಯಾದ ಚೂಡಾದೇವಿಗೂ ನಿಧೀಶ್ವರ–ಚಕ್ರವರ್ತಿಗಳಲ್ಲಿ ಹನ್ನೆರಡನೆಯವನೂ ಏಳು ಧನುಸ್ಸುಗಳಷ್ಟು ಶರೀರಪರಿಮಾಣವುಳ್ಳವನೂ ಏಳು ನೂರು ವರ್ಷಗಳಿಂದ ಪರಿಮಿತವಾದ ಆಳತೆಯುಳ್ಳ ಆಯುಷ್ಯವುಳ್ಳವನೂ ಹೆಸರಿ ನಿಂದ ಬ್ರಹ್ಮದತ್ತನೂ ಆದ ಚಕ್ರವರ್ತಿಯು ಪ್ರಾದುರ್ಭವಿಸಿದನು. ಚಕ್ರವರ್ತಿಗಳಲ್ಲಿ ಅವನೇ ಕೊನೆಯಾಗಿರುವವನು. ಚಕ್ರವರ್ತಿಗಳಲ್ಲಿ ಬ್ರಹ್ಮದತ್ತನೇ ಕೊನೆಯವ ನೆಂದು ಭಾವವು.

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ನೇಮಿತೀರ್ಥಕರ ಪದ್ಮನಾಮಬಲದೇವ ಕೃಷ್ಣನಾಮಾರ್ಧಚಕ್ರಿ ಜರಾಸಂಧಪ್ರತಿವಾಸುದೇವ ಬ್ರಹ್ಮದತ್ತಸಕಲಚಕ್ರವರ್ತಿಪುರಾಣಂ ನಾಮ ದ್ವಿಸಪ್ತತಿಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ "ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ನೇಮಿತೀರ್ಥಕರ ಪದ್ಮ ಬಲದೇವ ಕೃಷ್ಣನೆಂಬ ಅರ್ಧಚಕ್ರಿ ಜರಾಸಂಧಪ್ರತಿವಾಸುದೇವ ಬ್ರಹ್ಮದತ್ತ ಸಕಲಚಕ್ರವರ್ತಿಪುರಾಣವೆಂಬ ಎಪ್ಪತ್ತೆರಡನೆಯ ಪರ್ವವು ಸಮಾಪ್ತವಾದುದು.

॥ ಶ್ರೀ ಪಾರ್ಶ್ವಜಿನಾಯ ನಮಃ ॥

# ಅಥ ಪಾರ್ಶ್ವತೀರ್ಥಕರಪುರಾಣಂ

**ಸ ಪಾತು ಪಾರ್ಶ್ವನಾಥೋಸ್ಮಾನ್ ಯನ್ಮಹಿಮ್ನೈವ ಭೂಧರಃ ।**
**ನ್ಯಷೇಧಿ ಕೇವಲಂ ಭಕ್ತಿಭೋಗಿನೀಛತ್ರಧಾರಣಮ್ ॥ ೧ ॥**

ಯಾವನ ಮಹಿಮೆಯಿಂದಲೇ (ಕಮಠ–ಶಂಬರದೇವನಿಂದ ಮೇಲೆಹಾಕಲ್ಪಟ್ಟ) ಪರ್ವತವು ತಡೆಯಲ್ಪಟ್ಟಿತೋ ಸ್ತ್ರೀಸರ್ಪದ (ಪದ್ಮಾವತೀದೇವಿಯ) ಛತ್ರಧಾರಣವು ಕೇವಲ ಭಕ್ತಿಯಾಗಿದ್ದಿತೋ ಅಂತಹ ಪಾರ್ಶ್ವನಾಥನು ನಮ್ಮಗಳನ್ನು ರಕ್ಷಿಸಲಿ.

**ಧರ್ಮಶ್ವೇತಾಪತ್ರಂ ತೇ ಸೂತೇ ವಿಶ್ವವಿಸರ್ಪಿಣೀಮ್ ।**
**ಛಾಯಾಂ ಪಾಪಾತಪಪ್ಲುಷ್ಟಾಸ್ತಥಾಪಿ ಕಿಲ ಕೇಚನ ॥ ೨ ॥**

ಪಾರ್ಶ್ವನಾಥ–ಸ್ವಾಮಿಯೇ ! ನಿನ್ನ ಧರ್ಮವೆಂಬ ಶ್ವೇತಛತ್ರವು ಲೋಕವನ್ನು ವ್ಯಾಪಿಸುವ ನೆರಳನ್ನುಂಟುಮಾಡುತ್ತದೆ. ಆದರೂ ಕೆಲವರು ಪಾಪವೆಂಬ ಬಿಸಿಲಿನಿಂದ ಸುಡಲ್ಪಟ್ಟಿರುತ್ತಾರಂತೆ.

**ಸರ್ವಭಾಷಾಂ ಭವದ್ಭಾಷಾಂ ಸತ್ಯಾಂ ಸರ್ವೋಪಕಾರಿಣೀಮ್ ।**
**ಸಂತಃ ಶೃಣ್ವಂತಿ ಸಂತುಷ್ಟಾಃ ಖಲಾಸ್ತಾಂ ಚ ನ ಜಾತುಚಿತ್ ॥ ೩ ॥**

ಸರ್ವಭಾಷೆಗಳನ್ನೊಳಗೊಂಡಿರುವುದೂ ಸತ್ಯವೂ ಎಲ್ಲರಿಗೂ ಉಪಕಾರವನ್ನು ಮಾಡುವುದೂ ಆದ ತಮ್ಮ ಭಾಷೆ(ದಿವ್ಯಧ್ವನಿ)ಯನ್ನು ಸತ್ಪುರುಷರು ಸಂತುಷ್ಟರಾಗಿ ಕೇಳುತ್ತಾರೆ. ದುಷ್ಟರು ಅಂತಹ ಭಾಷೆಯನ್ನೂ ಎಂದೂ ಕೇಳುವುದಿಲ್ಲ.

**ಅನಭಿವ್ಯಕ್ತಮಾಹಾತ್ಮ್ಯಾ ದೇವ ತೀರ್ಥಕರಾಃ ಪರೇ ।**
**ತ್ವಮೇವ ವ್ಯಕ್ತಮಾಹಾತ್ಮ್ಯೋ ವಾಚ್ಯಾ ತೇ ಸಾಧು ತತ್ಕಥಾ ॥ ೪ ॥**

ದೇವನೆ ! ಇತರ ತೀರ್ಥಂಕರರು ತಮ್ಮ ಮಾಹಾತ್ಮ್ಯವನ್ನು ಅಭಿವ್ಯಕ್ತಮಾಡದಿರುವವರಾಗಿರುತ್ತಾರೆ. ನೀನೇ ಅಭಿವ್ಯಕ್ತಪಡಿಸಿದ ಮಾಹಾತ್ಮ್ಯವುಳ್ಳವನಾಗಿರುತ್ತಿ . ಆದುದರಿಂದ ನಿನ್ನ ಕಥೆಯು ಚೆನ್ನಾಗಿ ಹೇಳಲ್ಪಡತಕ್ಕುದಾಗಿದೆ.

**ಕುಮಾರ್ಗವಾರಿಣೀ ಯಸ್ಮಾದ್ಯಸ್ಮಾತ್ಸನ್ಮಾರ್ಗಧಾರಿಣೀ ।**
**ತತ್ತೇ ಧರ್ಮ್ಯಾಂ ಕಥಾಂ ವಕ್ಷ್ಯೇ ಭವ್ಯಾನಾಂ ಮೋಕ್ಷಗಾಮಿನಾಮ್ ॥**

ಯಾವ ಕಾರಣದಿಂದ ನಿನ್ನ ಕಥೆಯು ದುರ್ಮಾರ್ಗವನ್ನು ತಡೆಯುವುದಾಗಿಯೂ ಯಾವ ಕಾರಣದಿಂದ ಸನ್ಮಾರ್ಗವನ್ನು ಧರಿಸಿರುವುದಾಗಿಯೂ ಇರುತ್ತದೋ ಆ ಕಾರಣದಿಂದ ಧರ್ಮಯುಕ್ತವಾದ ನಿನ್ನ ಕಥೆಯನ್ನು ಮೋಕ್ಷಗಾಮಿಗಳಾದ ಭವ್ಯರಿಗೆ ಹೇಳುವೆನು.

**ಜಂಬೂವಿಭೂಷಣೇ ದ್ವೀಪೇ ಭರತೇ ದಕ್ಷಿಣೇ ಮಹಾನ್ ।**
**ಸುರಮ್ಯೋ ವಿಷಯಸ್ತತ್ರ ವಿಸ್ತೀರ್ಣಂ ಪೌದನಂ ಪುರಮ್ ॥ ೬ ॥**

ಜಂಬೂವಿಭೂಷಣವಾಗಿರುವ ದ್ವೀಪದಲ್ಲಿ ದಕ್ಷಿಣಭರತಕ್ಷೇತ್ರದಲ್ಲಿ ಸುರಮ್ಯವೆಂಬ ಮಹಾದೇಶವಿದೆ. ಅಲ್ಲಿ ವಿಶಾಲವಾದ ಪೌದನಪುರವಿದೆ.

**ರಕ್ಷಿತಾಸ್ಯಾರವಿಂದಾಖ್ಯೋ ವಿಖ್ಯಾತೋ ವಿಕ್ರಮಾದಿಭಿಃ ।**
**ಪಿಪ್ರಿಯುಸ್ತಂ ಸಮಾಶ್ರಿತ್ಯ ಪ್ರಜಾಪತಿಮಿವ ಪ್ರಜಾಃ ॥ ೭ ॥**

ಪರಾಕ್ರಮಾದಿಗಳಿಂದ ಪ್ರಖ್ಯಾತನಾದ ಅರವಿಂದನೆಂಬವನು ಈ ನಗರದ ರಕ್ಷಕನು. ಪ್ರಜೆಗಳು, ಬ್ರಹ್ಮನನ್ನು ಹೊಂದಿ ಸಂತೋಷಪಡುವಂತೆ, ಆ ಅರವಿಂದನನ್ನು ಆಶ್ರಯಿಸಿ ಸಂತೋಷಪಟ್ಟರು.

**ತತ್ರೈವ ವಿಶ್ವಭೂತ್ಯಾಖ್ಯೋ ಬ್ರಾಹ್ಮಣಃ ಶ್ರುತಿಶಾಸ್ತ್ರವಿತ್ ।**
**ಬ್ರಾಹ್ಮಣ್ಯನುಂದರೀ ತಸ್ಯ ಪ್ರೀತ್ಯೈ ಶ್ರುತಿರಿವಾಪರಾ ॥ ೮ ॥**

ಅಲ್ಲಿಯೇ ಶ್ರುತಿಶಾಸ್ತ್ರವನ್ನು ತಿಳಿದ ವಿಶ್ವಭೂತಿಯೆಂಬ ಬ್ರಾಹ್ಮಣನಿದ್ದನು. ಬೇರೊಂದು ಶ್ರುತಿಯೋ ಎನ್ನುವಂತೆ ಅವನ ಪ್ರೀತಿಗೋಸ್ಕರ ಅನುಂದರಿಯೆಂಬ ಬ್ರಾಹ್ಮಣಿಯಿದ್ದಳು. ಅನುಂದರಿಯು ವಿಶ್ವಭೂತಿಯ ಪತ್ನಿಯಾಗಿದ್ದಳೆಂದು ಭಾವವು.

**ಅಭೂತಾಮೇತಯೋಃ ಪುತ್ರೌ ವಿಷಾಮೃತಕೃತೋಪಮೌ ।**
**ಕಮಠೋ ಮರುಭೂತಿಶ್ಚ ಪಾಪಧರ್ಮಾವಿವಾಪರೌ ॥ ೯ ॥**

ಈ ದಂಪತಿಗಳಲ್ಲಿ ವಿಷದ ಮತ್ತು ಅಮೃತದ ಸಾದೃಶ್ಯವುಳ್ಳವರೂ ಬೇರೆಯಾದ ಪಾಪ ಮತ್ತು ಧರ್ಮಗಳೋ ಎಂಬಂತಿರುವವರೂ ಆದ ಕಮಠ ಮರುಭೂತಿಗಳೆಂಬೀರ್ವರು ಪುತ್ರರು ಜನಿಸಿದರು. ಕಮಠನು ವಿಷದಂತೆಯೂ ಪಾಪದಂತೆಯೂ ಇದ್ದನೆಂದೂ ಮರುಭೂತಿಯು ಅಮೃತದಂತೆಯೂ ಧರ್ಮದಂತೆಯೂ ಇದ್ದನೆಂದೂ ಭಾವವು.

**ವರುಣಾ ಜ್ಯಾಯಸೋ ಭಾರ್ಯಾ ದ್ವಿತೀಯಸ್ಯ ವಸುಂಧರೀ ।**
**ಮಂತ್ರಿಣೌ ತೌ ಮಹೀಪಸ್ಯ ಕನೀಯಾನ್ನೀತಿವಿತ್ತಯೋಃ ॥ ೧೦ ॥**

ವರುಣೆಯು ಹಿರಿಯನಾದ ಕಮಠನ ಹೆಂಡತಿಯಾಗಿದ್ದಳು. ವಸುಂಧರಿಯು ಎರಡನೆಯವನ ಹೆಂಡತಿಯಾಗಿದ್ದಳು. ಆ ಕಮಠ ಮರುಭೂತಿಗಳು ಅರವಿಂದ ರಾಜನ ಮಂತ್ರಿಗಳಾದರು. ಅವರೀರ್ವರಲ್ಲಿ ಕಿರಿಯನು ನೀತಿಜ್ಞನಾಗಿದ್ದನು.

**ವಸುಂಧರೀನಿಮಿತ್ತೇನ ಸದಾಚಾರಂ ಸತಾಂ ಮತಮ್ ।**
**ಮರುಭೂತಿಂ ದುರಾಚಾರೋ ಜಘಾನ ಕಮಠೋಧಮಃ ॥ ೧೧ ॥**

ದುರಾಚಾರವುಳ್ಳವನೂ ಅಧಮನೂ ಆದ ಕಮಠನು ಸದಾಚಾರವುಳ್ಳವನೂ ಸತ್ಪುರುಷರಿಗೆ ಸಮ್ಮತನೂ ಆದ ಮರುಭೂತಿಯನ್ನು ವಸುಂಧರಿಯ ನಿಮಿತ್ತದಿಂದ ಕೊಂದನು.

**ಮಲಯೇ ಕುಬ್ಜಕಾಖ್ಯಾನೇ ವಿಪುಲೇ ಸಲ್ಲಕೀವನೇ ।**
**ಮರುಭೂತಿರಭೂನ್ಮೃತ್ವಾ ವಜ್ರಘೋಷೋ ದ್ವಿಪಾಧಿಪಃ ॥ ೧೨ ॥**

ಆ ಅಪಘಾತದಿಂದ ಮರುಭೂತಿಯು ಸತ್ತು ಮಲಯದೇಶದಲ್ಲಿ ವಿಶಾಲವಾದ ಕುಬ್ಜಕವೆಂಬ ಆನೆಬೇಲದ ಗಿಡಗಳ ವನದಲ್ಲಿ ವಜ್ರಘೋಷವೆಂಬ ದೊಡ್ಡ ಆನೆ–ಸಲಗವಾಗಿ ಹುಟ್ಟಿದನು.

**ವರುಣಾ ಚ ಮೃತಾ ತಸ್ಯ ಕರೇಣುರಭವತ್ಪ್ರಿಯಾ ।**
**ತಯೋಸ್ತಸ್ಮಿನ್ವನೇ ಪ್ರೀತ್ಯಾ ಕಾಲೇ ಗಚ್ಛತ್ಯತುಚ್ಛಕೇ ॥ ೧೩ ॥**

**ಅರವಿಂದಮಹಾರಾಜಸ್ತ್ಯಕ್ತ್ವಾ ರಾಜ್ಯಂ ವಿರಜ್ಯ ಸಃ ।**
**ಸಂಪ್ರಾಪ್ಯ ಸಂಯಮಂ ಸಾರ್ಥೇನಾಮಾ ಸಮ್ಮೇದಮೀಡಿತುಮ್ ॥**

**ವ್ರಜನ್ವನೇ ಸ್ವವೇಲಾಯಾಂ ಪ್ರತಿಮಾಯೋಗಮಾಗಮತ್ ।**
**ನೋಲ್ಲಂಘತೇ ನಿಯೋಗಂ ಸ್ವಂ ಮನಾಗಪಿ ಮನಸ್ವಿನಃ ॥ ೧೪ ॥**

ವರುಣೆಯೂ ಸತ್ತು ಆ ಆನೆಗೆ ಪ್ರಿಯವಾದ ಹೆಣ್ಣಾನೆಯಾಗಿ ಹುಟ್ಟಿದಳು. ಆ ವನದಲ್ಲಿ ಆ ಆನೆಗಳ ಶ್ರೇಷ್ಠವಾದ ಕಾಲವು ಪ್ರೀತಿಯಿಂದ ಕಳೆಯುತ್ತಿರಲು ಆ ಅರವಿಂದಮಹಾರಾಜನು ವಿರಕ್ತಿಯನ್ನು ಹೊಂದಿ ರಾಜ್ಯವನ್ನು ತ್ಯಜಿಸಿ ಸಮೂಹ ದೊಡನೆ ಸಂಯಮವನ್ನು ಹೊಂದಿ ಸ್ತುತಿಸುವುದಕ್ಕೋಸ್ಕರ ಸಮ್ಮೇದಪರ್ವತಕ್ಕೆ ಹೋಗುವವನಾಗಿ ಆ ಕುಬ್ಜಕವನದಲ್ಲಿ ತನ್ನ ಧ್ಯಾನಸಮಯದಲ್ಲಿ ಪ್ರತಿಮಾ ಯೋಗವನ್ನು ಹೊಂದಿದನು. ಮನೋನಿಗ್ರಹವನ್ನು ಮಾಡಿರುವವರು ತಮ್ಮ ಕರ್ತವ್ಯವನ್ನು ಸ್ವಲ್ಪವೂ ಮೀರುವುದಿಲ್ಲ.

**ವಿಲೋಕ್ಯ ತಂ ಮಹಾನಾಗಸ್ತ್ರಿಪ್ರಸ್ರುತಮದೋದ್ಧತಃ ।**
**ಹಂತುಮಭ್ಯುದ್ಯತಸ್ತಸ್ಯ ಪ್ರತಿಮಾಯೋಗಧಾರಿಣಃ ॥ ೧೬ ॥**

ಮೂರು ಕಡೆಗಳಲ್ಲಿ (ಲಿಂಗ ಕಪೋಲದ್ವಯ) ಸುರಿಯುತ್ತಿರುವ ಮದಜಲದಿಂದ ಉದ್ಧತವಾದ ಆ ದೊಡ್ಡಆನೆಯು ಆ ಅರವಿಂದಮುನಿಯನ್ನು ನೋಡಿ ಪ್ರತಿಮಾ ಯೋಗಧಾರಿಯಾದ ಆ ಮುನಿಯನ್ನು ಕೊಲ್ಲುವುದಕ್ಕೋಸ್ಕರ ಇದಿರಾಗಿ ಹೋಗಿ ಉದ್ಯುಕ್ತವಾಯಿತು.

**ವೀಕ್ಷ್ಯ ವಕ್ಷಃಸ್ಥಲೇ ಸಾಕ್ಷಾನ್ಮಂಕ್ಷು ಶ್ರೀವತ್ಸಲಾಂಛನಮ್ ।**
**ಸ್ವಪೂರ್ವಭವಸಂಬಂಧಂ ಪ್ರತ್ಯಕ್ಷೀಕೃತ್ಯ ಚೇತಸಾ ॥ ೧೭ ॥**

**ತಸ್ಮಿನ್ಪ್ರಾಕ್ತನಸೌಹಾರ್ದಾತ್ತುತೋಷೀ ಜೋಷಮಾಸ್ತ ಸಃ ।**
**ತಿರ್ಯಂಚೋಪಿ ಸುಹೃದ್ಭಾವಂ ಪಾಲಯಂತ್ಯೇವ ಬಂಧುಷು ॥ ೧೮ ॥**

ಅರವಿಂದಮುನಿಯ ಎದೆಯಲ್ಲಿದ್ದ ಶ್ರೀವತ್ಸಲಾಂಛನವನ್ನು ಶೀಘ್ರವಾಗಿ ಸಾಕ್ಷಾತ್ತಾಗಿ ನೋಡಿ ತನ್ನ ಪೂರ್ವಭವಸಂಬಂಧವನ್ನು ಮನಸ್ಸಿನಿಂದ ಪ್ರತ್ಯಕ್ಷೀಕರಿಸಿ ಅದು ಅವನಲ್ಲಿ ಮೊದಲಿನ ಸೌಹಾರ್ದದಿಂದ ಸಂತೋಷವುಳ್ಳುದಾಗಿ ಸುಮ್ಮ ನಿದ್ದಿತು. ತಿರ್ಯಕ್ಪ್ರಾಣಿಗಳೂ ಬಂಧುಗಳಲ್ಲಿ ಸ್ನೇಹಭಾವವನ್ನು ಅವಶ್ಯವಾಗಿ ಪಾಲಿಸು ತ್ತವೆ.

**ಧರ್ಮತತ್ತ್ವಂ ಮುನೇಃ ಸಮ್ಯಗ್ಜ್ಞಾತ್ವಾ ತಸ್ಮಾತ್ಸಹೇತುಕಮ್ ।**
**ಸ ಪ್ರೋಷಧೋಪವಾಸಾದಿ ಶ್ರಾವಕವ್ರತಮಗ್ರಹೀತ್ ॥ ೧೯ ॥**

ಆ ಆನೆಯು ಆ ಮುನಿಯ ದೆಸೆಯಿಂದ ಕಾರಣ ಸಹಿತವಾದ ಧರ್ಮಸ್ವರೂಪ ವನ್ನು ಚೆನ್ನಾಗಿ ತಿಳಿದು ಪ್ರೋಷಧೋಪವಾಸವೇ ಮೊದಲಾದ ಶ್ರಾವಕವ್ರತವನ್ನು ಗ್ರಹಣಮಾಡಿತು.

**ತದಾಪ್ರಭೃತಿ ನಾಗೇಂದ್ರೋ ಭಗ್ನಶಾಖಾಃ ಪರೈರ್ದ್ವಿಪೈಃ ।**
**ಖಾದಂಸ್ತೃಣಾನಿ ಶುಷ್ಕಾಣಿ ಪತ್ರಾಣಿ ಚ ಭಯಾದಘಾತ್ ॥ ೨೦ ॥**

**ಉಪಲಾಸ್ಫಾಲನಾಕ್ಷೇಪದ್ವಿಪಸಂಘಾತಘಟ್ಟಿತಮ್ ।**
**ಪಿಬಂಸ್ತೋಯಂ ನಿರಾಹಾರಃ ಪಾರಣಾಯಾಂ ಮಹಾಬಲಃ ॥ ೨೧ ॥**

**ಚಿರಮೇವಂ ತಪಃ ಕುರ್ವನ್ ಕ್ಷೀಣದೇಹಪರಾಕ್ರಮಃ ।**
**ಕದಾಚಿತ್ಪಾತುಮಾಯಾತೋ ವೇಗವತ್ಯಾ ಹ್ರದೇಪತತ್ ॥ ೨೨ ॥**

**ಪಂಕೇ ಪುನಃ ಸಮುತ್ಥಾತುಂ ವಿಹಿತೇಹೋಪ್ಯಶಕ್ನುವನ್ ।**
**ಕಮಠೇನ ಕುವೃತ್ತೇನ ಕುಕ್ಕುಟಾಹಿತ್ವಮೀಯುಷಾ ॥ ೨೩ ॥**

**ಪೂರ್ವವೈರಾನುಬಂಧೇನ ದಷ್ಟೋ ನಿರ್ನಷ್ಟಜೀವಿತಃ ।**
**ಅಭೂತ್ಕಲ್ಪೇ ಸಹಸ್ರಾರೇ ಷೋಡಶಾಬ್ಧ್ಯುಪಮಾಯುಷಾ ॥ ೨೪ ॥**

ಮಹಾಶಕ್ತಿಯುಳ್ಳ ಗಜೇಂದ್ರನು ಅಂದಿನಿಂದ ಪಾಪಭಯದಿಂದ ನಿರಾಹಾರಿ ಯಾಗಿಯೂ ಪಾರಣೆಯಲ್ಲಿ ಒಣಗಿದ ಎಲೆಗಳನ್ನೂ ಹುಲ್ಲುಗಳನ್ನೂ ಬೇರೆ ಆನೆಗಳಿಂದ ಮುರಿಯಲ್ಪಟ್ಟ ಮರದ ಕೊಂಬೆಗಳನ್ನೂ ತಿನ್ನುವುದಾಗಿಯೂ ಕಲ್ಲುಗಳ ಹೊಡೆತದ ಘರ್ಷಣೆಯಿಂದಲೂ ಆನೆಗಳ ಗುಂಪಿನಿಂದಲೂ ಹೊಡೆಯಲ್ಪಟ್ಟ– ಶುದ್ಧವಾದ ನೀರನ್ನು ಕುಡಿಯುವುದಾಗಿಯೂ ಈ ರೀತಿಯಾಗಿ ಬಹುಕಾಲದವರೆಗೆ ತಪಸ್ಸನ್ನು ಮಾಡುತ್ತಿರುವುದಾಗಿಯೂ ಕ್ಷೀಣವಾದ ದೇಹವೂ ಪರಾಕ್ರಮವೂ ಉಳ್ಳುದಾಗಿಯೂ ಒಂದಾನೊಂದು ಕಾಲದಲ್ಲಿ ನೀರನ್ನು ಕುಡಿಯುವುದಕ್ಕೋಸ್ಕರ ಬಂದುದಾಗಿಯೂ ವೇಗವತೀನದಿಯ ಮಡುವಿನಲ್ಲಿ ಕೆಸರಿನಲ್ಲಿ ಬಿದ್ದಿತು. ಪುನಃ ಏಳುವುದಕ್ಕೆ ಇಚ್ಛಿಸಿದುದಾದರೂ ಅಸಮರ್ಥವಾಗಿಯೂ ದುರಾಚಾರಿಯೂ ಕುಕ್ಕುಟಸರ್ಪಪರ್ಯಾಯವನ್ನು ಹೊಂದಿರುವವನೂ ಆದ ಕಮಠನಿಂದ ಪೂರ್ವ ವೈರಸಂಬಂಧದಿಂದ ಕಚ್ಚಲ್ಪಟ್ಟುದಾಗಿಯೂ ನಷ್ಟವಾದ ಜೀವಿತವುಳ್ಳುದಾಗಿಯೂ ಸಹಸ್ರಾರಕಲ್ಪದಲ್ಲಿ ಹದಿನಾರು ಸಾಗರೋಪಮಾಯುಷ್ಯದಿಂದ ದೇವನಾಗಿ ಹುಟ್ಟಿತು.

**ತತ್ರ ಭೋಗಾನ್ಯಥಾಯೋಗ್ಯಂ ಭುಕ್ತ್ವಾ ಪ್ರಾಂತೇ ತತಶ್ಚ್ಯುತಃ ।**
**ದ್ವೀಪೇಸ್ಮಿನ್ ಪ್ರಾಗ್ವಿದೇಹೇಸ್ತಿ ವಿಷಯಃ ಪುಷ್ಕಲಾವತೀ ॥ ೨೫ ॥**

**ತತ್ಖೇಚರಾಚಲೇ ರಾಜಾ ತ್ರಿಲೋಕೋತ್ತಮನಾಮನಿ ।**
**ಪುರೇ ವಿದ್ಯುದ್ಗತಿರ್ವಿದ್ಯಾಧರೇಶಸ್ತಸ್ಯ ವಲ್ಲಭಾ ॥ ೨೬ ॥**

**ವಿದ್ಯುನ್ಮಾಲಾ ತಯೋಃ ಸೂನೂ ರಶ್ಮಿವೇಗಾಖ್ಯಯಾಜನಿ ।**
**ಸಂಪೂರ್ಣಯೌವನೋ ಧೀಮಾನ್ಪ್ರತ್ಯಾಸನ್ನಭವಾವಧಿಃ ॥ ೨೭ ॥**

**ಸಮಾಧಿಗುಪ್ತಮಾಸಾದ್ಯ ಮುನಿಂ ಸಂಪ್ರಾಪ್ಯ ಸಂಯಮಮ್ ।**
**ಗೃಹೀತಸರ್ವತೋಭದ್ರಪ್ರಭೃತ್ಯುದ್ಘೋಪವಾಸಕಃ ॥ ೨೮ ॥**

**ಪರೇದ್ಯುರ್ಹಿಮಗಿರ್ಯದ್ರಿಗುಹಾಯಾಂ ಯೋಗಮಾದಧತ್ ।**
**ಪ್ರಾಪ್ತಧೂಮಪ್ರಭಾದುಃಖಕುಕ್ಕುಟೋರಗಪಾಪಿನಾ ॥ ೨೯ ॥**

**ತತಶ್ಚ್ಯುತೇನ ಭೂತ್ವಾಜಗರೇಣಾಲೋಕ್ಯ ಪಾಪಿನಾ ।**
**ನಿಗೀರ್ಣೋಽಚ್ಯುತಕಲ್ಪೇ ಸ್ಥೇ ವಿಮಾನೇ ಪುಷ್ಕರೇಭವತ್ ॥ ೩೦ ॥**

**ದ್ವಾವಿಂಶತ್ಯಬ್ಧಿಮಾನಾಯುಸ್ತದಂತೇ ಪುಣ್ಯಸಾರಥಿಃ ।**
**ದ್ವೀಪೇಪರೇ ವಿದೇಹೇಸ್ಮಿನ್ ವಿಷಯೇ ಪದ್ಮಸಂಜ್ಞಕೇ ॥ ೩೧ ॥**

**ಮಹೀಶೋಶ್ವಪುರಾಧೀಶೋ ವಜ್ರವೀರ್ಯಸ್ಯ ಭೂಪತೇಃ ।**
**ವಿಜಯಾಯಾಶ್ಚ ತದ್ದೇವ್ಯಾ ವಜ್ರನಾಭಿಃ ಸುತೋಭವತ್ ॥ ೩೨ ॥**

ಅಲ್ಲಿ ಯಥೋಚಿತವಾದ ಭೋಗಗಳನ್ನನುಭವಿಸಿ ಆ ದೇವನು ಕೊನೆಯಲ್ಲಿ ಅಲ್ಲಿಂದ ಚ್ಯುತನಾಗಿ ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪುಷ್ಕಲಾವತೀ ದೇಶದ ವಿಜಯಾರ್ಧಪರ್ವತದಲ್ಲಿರುವ ತ್ರಿಲೋಕೋತ್ತಮವೆಂಬ ನಗರದಲ್ಲಿ ದೊರೆಯಾದ ವಿದ್ಯುದ್ಗತಿಯೆಂಬ ವಿದ್ಯಾಧರಾಧಿಪತಿಗೂ ಆತನ ಪತ್ನಿಯಾದ ವಿದ್ಯುನ್ಮಾಲೆಗೂ ರಶ್ಮಿವೇಗನೆಂಬ ಪುತ್ರನಾಗಿ ಜನಿಸಿದನು. ಸಂಪೂರ್ಣ ಯೌವನಾ ವಸ್ಥೆಯನ್ನು ಹೊಂದಿದವನೂ ಪ್ರಾಜ್ಞನೂ ಸಮೀಪಿಸಿರುವ ಭವದ ಅವಧಿ ಯುಳ್ಳವನೂ ಆದ ಆ ರಶ್ಮಿವೇಗನು ಸಮಾಧಿಗುಪ್ತಮುನಿಯನ್ನು ಕಂಡು ಸಂಯಮ ವನ್ನು ಪಡೆದು ಸರ್ವತೋಭದ್ರವೇ ಮೊದಲಾದ ಶ್ರೇಷ್ಠವಾದ ಉಪವಾಸಗಳನ್ನು ಗ್ರಹಣಮಾಡಿದವನಾಗಿ ಮತ್ತೊಂದು ದಿವಸ ಹಿಮಗಿರಿಯೆಂಬ ಪರ್ವತದ ಗುಹೆ ಯಲ್ಲಿ ಯೋಗವನ್ನು ಧಾರಣಮಾಡಿದನು. ಧೂಮಪ್ರಭೆಯೆಂಬ ಐದನೆಯ ನರಕದ ದುಃಖವನ್ನು ಹೊಂದಿದ ಆ ಕುಕ್ಕುಟಸರ್ಪವೆಂಬ ಪಾಪಿಯು ಆ ನರಕದಿಂದ ಚ್ಯುತವಾಗಿ ಆ ಗುಹೆಯಲ್ಲಿ ಹೆಬ್ಬಾವಾಗಿ ಹುಟ್ಟಿತ್ತು. ಆ ಪಾಪಿಯಾದ ಹೆಬ್ಬಾವು ರಶ್ಮಿವೇಗಮುನಿಯನ್ನು ಕಂಡು ನುಂಗಿತು. ಅವನು ಸತ್ತು ಅಚ್ಯುತಕಲ್ಪದಲ್ಲಿರುವ ಪುಷ್ಕರವಿಮಾನದಲ್ಲಿ ಇಪ್ಪತ್ತೆರಡು ಸಾಗರೋಪಮವರ್ಷಾಯುಷ್ಯವುಳ್ಳ ಅಚ್ಯು ತೇಂದ್ರನಾಗಿ ಹುಟ್ಟಿದನು. ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತನಾಗಿಯೂ ಪುಣ್ಯ ವೆಂಬ ಸಾರಥಿಯುಳ್ಳವನಾಗಿಯೂ ಈ ಜಂಬೂದ್ವೀಪದಲ್ಲಿ ಅಪರವಿದೇಹದಲ್ಲಿ ಪದ್ಮವೆಂಬ ದೇಶದಲ್ಲಿ ಅಶ್ವಪುರಾಧಿಪತಿಯಾದ ವಜ್ರವೀರ್ಯರಾಜನಿಗೂ ಆತನ ಪತ್ನಿಯಾದ ವಿಜಯಾದೇವಿಗೂ ವಜ್ರನಾಭಿಯೆಂಬ ಪುತ್ರನಾದನು.

**ಕುಮಾರೋಽಪಿ ವಿದಿತ್ವೈತದ್ಬಲಾಧಿಕಪುರಸ್ಸರೈಃ ।**
**ವಿದ್ಯಾಧರೈಃ ಸಮಂ ಗಂಧಗಜಂ ಜಯಗಿರಿಶ್ರುತಿಮ್ ॥ ೮೯೦ ॥**

**ಆರುಹ್ಯ ಶತ್ರುಸೈನ್ಯಸ್ಯ ಪ್ರತೀಪಮಗಮತ್ಕ್ರುಧಾ ।**
**ತದಾ ಗರುಡವೇಗಾಖ್ಯವಿದ್ಯಾಧರಧರಾಧಿಪಃ ॥ ೮೯೧ ॥**

**ಪಿತಾ ಗಂಧರ್ವದತ್ತಾಯಾ ಗತ್ವಾ ಮಧ್ಯಸ್ಥತಾಂ ತಯೋಃ ।**
**ಉಪಾಯಕುಶಲಃ ಶತ್ರುಬಲಂ ಪ್ರಶಮಮಾನಯತ್ ॥ ೮೯೨ ॥**

ಜೀವಂಧರಕುಮಾರನೂ ಇದನ್ನು ತಿಳಿದು ಕೋಪದಿಂದ ಜಯಗಿರಿಯೆಂಬ ಮದಗಜವನ್ನೇರಿ ಅಧಿಕಸೈನ್ಯಪುರಸ್ಸರರಾದ ವಿದ್ಯಾಧರರೊಡನೆ ಶತ್ರುಸೈನ್ಯಕ್ಕೆ ಪ್ರತಿಕೂಲವಾಗಿ–ಇದಿರಾಗಿ ಹೋದನು. ಆಗ ಉಪಾಯನಿಪುಣನೂ ಗಂಧರ್ವದತ್ತೆಯ ತಂದೆಯೂ ಆದ ಗರುಡವೇಗನೆಂಬ ವಿದ್ಯಾಧರಭೂಮೀಶ್ವರನು ಆ ಜೀವಂಧರಕುಮಾರ ಕಾಲಾಂಗಾರಿಕರ ಮಧ್ಯಸ್ಥತ್ವವನ್ನು ಹೊಂದಿ ಶತ್ರುಸೈನ್ಯವನ್ನು ಶಾಂತಗೊಳಿಸಿದನು.

**ತತಸ್ತಯೋರ್ವಿವಾಹೇನ ವಿಧಾಯಾಸೌ ಸಮಾಗಮಮ್ ।**
**ಕೃತಾರ್ಥೋಽಭೂತ್ಪಿತುರ್ನಾನ್ಯತ್ಕಾರ್ಯಂ ಕನ್ಯಾಸಮರ್ಪಣಾತ್ ॥ ೮೯೩ ॥**

ಬಳಿಕ ಈ ಗರುಡವೇಗನು ವಿವಾಹದಿಂದ ಆ ಜೀವಂಧರಕುಮಾರ ಗಂಧರ್ವದತ್ತೆಯರ ಸಮಾಗಮವನ್ನು ಮಾಡಿ ಕೃತಾರ್ಥನಾದನು. ತಂದೆಗೆ ಕನ್ಯಾಸಮರ್ಪಣಕ್ಕಿಂತ ಹೆಚ್ಚಿನ ಕಾರ್ಯವಿಲ್ಲ.

**ತಯೋಃ ಪರಸ್ಪರಪ್ರೇಮಪ್ರವೃದ್ಧಸುಖಯೋರಗಾತ್ ।**
**ನಿರ್ವೃತಿಃ ಪರಮಾಂ ಕಾಷ್ಠಾಂ ಸಮಸಂಯೋಗಸಂಭವಾ ॥ ೮೯೪ ॥**

ಅನ್ಯೋನ್ಯವಾದ ಪ್ರೇಮದಿಂದ ಬೆಳೆದ ಸುಖವುಳ್ಳವರಾದ ಆ ಜೀವಂಧರ ಕುಮಾರ ಗಂಧರ್ವದತ್ತೆಯರ ಅನುರೂಪವಾದ ಸಂಬಂಧದಿಂದುಂಟಾದ ಸುಖವು ತುತ್ತತುದಿಯನ್ನು ಹೊಂದಿತು.

**ಅಥಾನ್ಯದಾ ಮಧೌ ಮಾಸೇ ಮದನೋದಯಸಾಧನೇ ।**
**ಸುರಾದಿಮಲಯೋದ್ಯಾನೇ ವನಕ್ರೀಡಾನಿಮಿತ್ತಕಮ್ ॥ ೮೯೫ ॥**

**ನೃಪೇಣ ಸಹ ಸರ್ವೇಷು ಪೌರೇಷು ಸುಖಲಿಪ್ಸಯಾ ।**
**ಆವಿಷ್ಕೃತಸ್ವಸಂಪತ್ಸು ಯಾತೇಷು ಪರಮೋತ್ಸವಾತ್ ॥ ೮೯೬ ॥**

**ಪುರೇ ತಸ್ಮಿನ್ ವಣಿಙ್ಮುಖ್ಯೋಽಭೂದ್ವೈಶ್ರವಣದತ್ತವಾಕ್ ।**
**ತನೂಜಾ ಚೂತಮಂಜರ್ಯಾಂ ತಸ್ಯಾಸೀತ್ಸುರಮಂಜರೀ ॥ ೮೯೭ ॥**

ತರುವಾಯ ಮತ್ತೊಂದು ದಿವಸ ಕಾಮಾವಿರ್ಭಾವಕ್ಕೆ ಸಾಧನವಾದ ಚೈತ್ರಮಾಸದಲ್ಲಿ ಸುರಮಲಯೋದ್ಯಾನದಲ್ಲಿ ಎಲ್ಲಾ ಪುರನಿವಾಸಿಗಳು ರಾಜನೊಡನೆ ವನಕ್ರೀಡಾನಿಮಿತ್ತವಾಗಿ ಸುಖವನ್ನು ಹೊಂದಬೇಕೆಂಬ ಇಚ್ಛೆಯಿಂದ ಪ್ರಕಟಗೊಳಿಸಲ್ಪಟ್ಟ ಸಂಪತ್ತಿಯುಳ್ಳವರಾಗಿ ಪರಮೋತ್ಸವದಿಂದ ಹೋಗುತ್ತಿರಲು ಆ ನಗರದಲ್ಲಿ ವೈಶ್ರವಣನೆಂಬ ವೈಶ್ಯೋತ್ತಮನಿದ್ದನು, ಅವನ ಪತ್ನಿಯಾದ ಚೂತಮಂಜರಿಯಲ್ಲಿ ಸುರಮಂಜರಿಯೆಂಬ ಪುತ್ರಿಯಿದ್ದಳು.

**ತಸ್ಯಾಃ ಶ್ಯಾಮಲತಾ ಚೇಟಕ್ಯಸೌ ಚಂದ್ರೋದಯಾಹ್ವಯಃ ।**
**ಚೂರ್ಣವಾಸೋಽಯಮಸ್ತ್ಯನ್ಯೋ ನಾಸ್ಮಾದ್ಗಂಧೇನ ಬಂಧುರಃ ॥ ೮೯೮ ॥**

**ಇತ್ಯಾತ್ಮಸ್ವಾಮಿನೀದಾಕ್ಷ್ಯಪ್ರಕಾಶನಪರಾಯಣಾ ।**
**ಇತಸ್ತತಸ್ಸಮುದ್ಘುಷ್ಯ ವಿಚಚಾರ ಜನಾಂತರೇ ॥ ೮೯೯ ॥**

ಆಕೆಗೆ ಶ್ಯಾಮಲತೆಯೆಂಬ ಸೇವಕಿಯಿದ್ದಳು. ಈಕೆಯು ''ಇದು ಚಂದ್ರೋದಯವೆಂಬ ಗಂಧಚೂರ್ಣವು. ಪರಿಮಳದಿಂದ ಇದಕ್ಕಿಂತ ಸೊಗಸಾದುದು ಬೇರೊಂದಿಲ್ಲ'' ಎಂದು ತನ್ನ ಯಜಮಾನಿಯ ದಕ್ಷತೆಯನ್ನು ಪ್ರಕಾಶನ ಮಾಡುವುದರಲ್ಲಿ ಆಸಕ್ತಳಾಗಿ ಆ ಉತ್ಸವದಲ್ಲಿ ಇತ್ತತ್ತ ಜನರ ಮಧ್ಯದಲ್ಲಿ ಉದ್ಘೋಷಿಸುತ್ತ ಸಂಚರಿಸಿದಳು.

**ಕುಮಾರದತ್ತವೈಶ್ಯಸ್ಯ ವಿಮಲಾಯಾಂ ಸುತಾಭವತ್ ।**
**ಗುಣಮಾಲಾಮಲಾ ತಸ್ಯಾಶ್ಚೇಟಿಕೀ ಪಟುಭಾಷಿಣೀ ॥ ೯೦೦ ॥**

**ವಿದ್ಯುಲ್ಲತಾಭಿಧಾ ಚೂರ್ಣವಾಸೋಽಯಂ ಷಟ್ಪದಾವೃತಃ ।**
**ವರ್ಯಃ ಸೂರ್ಯೋದಯೋ ನಾಮ ನೇದೃಕ್ಸ್ವರ್ಗೇಽಪಿ ವಿದ್ಯತೇ ॥**

**ಇತಿ ವಿದ್ವತ್ಸಭಾಮಧ್ಯೇ ಭೂಯಃ ಸ್ವಸ್ವಾಮಿನೀಗುಣಮ್ ।**
**ವಿದ್ಯೋತಯಂತೀ ಬಭ್ರಾಮ ಸುಭ್ರೂರ್ಗರ್ವಗ್ರಹಾಹಿತಾ ॥ ೯೦೨ ॥**

ಆ ನಗರದಲ್ಲಿ ಕುಮಾರದತ್ತನೆಂಬ ವೈಶ್ಯನಿಗೆ ಆತನ ಪತ್ನಿಯಾದ ವಿಮಲೆಯಲ್ಲಿ ನಿರ್ಮಲಳಾದ ಗುಣಮಾಲೆಯೆಂಬ ಪುತ್ರಿಯಿದ್ದಳು. ಆಕೆಗೆ ಪಟುವಾಗಿ ಮಾತನಾಡುವ ವಿದ್ಯುಲ್ಲತೆಯೆಂಬ ಸೇವಕಿಯಿದ್ದಳು. ಉತ್ತಮವಾದ ಹುಬ್ಬುಗಳುಳ್ಳವಳೂ ಗರ್ವವೆಂಬ ಗ್ರಹದಿಂದ ಯುಕ್ತಳೂ ಆದ ಆ ಸೇವಕಿಯು ''ಭ್ರಮರಗಳಿಂದ ಮುತ್ತಲ್ಪಟ್ಟಿರುವ ಈ ಸೂರ್ಯೋದಯವೆಂಬ ಗಂಧಚೂರ್ಣವು ಶ್ರೇಷ್ಠವಾದುದು. ಇಂತಹ ಚೂರ್ಣವು ಸ್ವರ್ಗದಲ್ಲಿಯೂ ಇಲ್ಲ'' ಹೀಗೆಂದು ವಿದ್ವತ್ಸಭಾಮಧ್ಯದಲ್ಲಿ ಮತ್ತೆ ಮತ್ತೆ ತನ್ನ ಯಜಮಾನಿಯ ಗುಣವನ್ನು ಪ್ರಕಾಶಪಡಿಸುವವಳಾಗಿ ಸಂಚರಿಸಿದಳು.

**ಏವಂ ತಯೋಃ ಸಮುದ್ಭೂತಮಾತ್ಸರ್ಯಾಹಿತಚೇತಸೋಃ ।**
**ವಿವಾದೇ ಸತಿ ತದ್ವಿದ್ಯಾವೇದಿನಸ್ತತ್ಪರೀಕ್ಷಿತುಮ್ ॥ ೯೦೩ ॥**

**ಅಭೂವನ್ನ ಕ್ಷಮಾಸ್ತತ್ರ ಜೀವಂಧರಯುವೇಶ್ವರಃ ।**
**ಪರೀಕ್ಷ್ಯ ತತ್ಸ್ವಯಂ ಸಮ್ಯಕ್ಶ್ರೇಷ್ಠಶ್ಚಂದ್ರೋದಯೋಽನಯೋಃ ॥ ೯೦೪ ॥**

**ಪ್ರತ್ಯಯಃ ಕೋಽಸ್ಯ ಚೇದ್ವ್ಯಕ್ತಂ ದರ್ಶಯಾಮೀತಿ ತದ್ದ್ವಯಮ್ ।**
**ಅವಷ್ಟಭ್ಯ ಸ್ವಹಸ್ತಾಭ್ಯಾಂ ವಿಚಿಕ್ಷೇಪ ತತೋ ದ್ರುತಮ್ ॥ ೯೦೫ ॥**

**ಚಂದ್ರೋದಯಮಲಿವ್ರಾತೋ ಗಂಧೋತ್ಕರ್ಷಾತ್ಪರೀತವಾನ್ ।**
**ದೃಷ್ಟ್ವಾ ಸರ್ವೇಽಪಿ ತತ್ರಸ್ಥಾಸ್ತತ್ತಮೇವಾಸ್ತುವನ್ವಿದಃ ॥ ೯೦೬ ॥**

ಈ ರೀತಿಯಾಗಿ ಉಂಟಾದ ಮಾತ್ಸರ್ಯದಿಂದ ಕೂಡಿದ ಚಿತ್ತವುಳ್ಳವರಾದ ಆ ಸುರಮಂಜರೀ ಗುಣಮಾಲೆಯರಲ್ಲಿ ವಿವಾದವಿರುತ್ತಿರಲು ಆ ವಿದ್ಯೆಯನ್ನು ತಿಳಿದವರು ಅದನ್ನು ಪರೀಕ್ಷಿಸುವುದಕ್ಕೋಸ್ಕರ ಸಮರ್ಥರಾಗಲಿಲ್ಲ. ಅಲ್ಲಿ ಜೀವಂಧರಯುವಕಶ್ರೇಷ್ಠನು ಅದನ್ನು ತಾನು ಚೆನ್ನಾಗಿ ಪರೀಕ್ಷಿಸಿ ''ಈ ಚೂರ್ಣಗಳಲ್ಲಿ ಚಂದ್ರೋದಯವು ಶ್ರೇಷ್ಠವಾದುದು ಇದರ ನಂಬಿಕೆಯೇನೆಂದರೆ, ಸ್ಫುಟವಾಗಿ ತೋರಿಸುತ್ತೇನೆ'' ಎಂದು ಅವೆರಡನ್ನೂ ಕೈಗಳಿಂದ ಹಿಡಿದು ಎರಚಿದನು. ಬಳಿಕ ಶೀಘ್ರವಾಗಿ ಭ್ರಮರಗಳ ಸಮೂಹವು ಚಂದ್ರೋದಯಚೂರ್ಣವನ್ನು ಗಂಧಾಧಿಕ್ಯದಿಂದ ಮುತ್ತಿತು. ಅಲ್ಲಿದ್ದ ಪ್ರಾಜ್ಞರೆಲ್ಲರೂ ಅದನ್ನು ನೋಡಿ ಆ ಚೂರ್ಣವನ್ನೇ ಹೊಗಳಿದರು.

**ತದಾಪ್ರಭೃತಿ ತೇ ಕನ್ಯೇ ಪರಸ್ಪರನಿಬಂಧನಮ್ ।**
**ವಿದ್ಯಾವಿಹಿತಸಂಘರ್ಷಂ ತ್ಯಜತಃ ಸ್ಮಾತ್ತಸಂಗರೇ ॥ ೯೦೭ ॥**

ಪ್ರತಿಜ್ಞೆಯುಳ್ಳವರಾಗಿದ್ದ ಆ ಕನ್ಯೆಯರು ಆ ಮೊದಲುಗೊಂಡು ಪರಸ್ಪರ ಸಂಬಂಧವಾದ ವಿದ್ಯೆಯಿಂದಾದ ಹೋರಾಟವನ್ನು ಬಿಟ್ಟರು.

**ತಥಾತ್ರ ನಾಗರೇಷ್ವಾತ್ಮವಾಂಛಯಾ ಕ್ರೀಡನಂ ವನೇ ।**
**ಕುರ್ವತ್ಸ್ವೇಕಂ ಸಮಾಲೋಕ್ಯ ಕುಕ್ಕುರಂ ಖಲಬಾಲಕಾಃ ॥ ೯೦೮ ॥**

**ಭರ್ತ್ಸಯಂತಿ ಸ್ಮ ಚಾಪಲ್ಯಾತ್ಸೋಽಪಿ ಧಾವನ್ ಭಯಾಕುಲಃ ।**
**ಹ್ರದೇ ನಿಪತ್ಯ ತತ್ರೈವ ಪ್ರಾಣಮೋಕ್ಷೋನ್ಮುಖೋಽಭವತ್ ॥ ೯೦೯ ॥**

ಆಮೇಲೆ ಈ ವನದಲ್ಲಿ ನಾಗರಿಕರು ತಮ್ಮ ಅಭಿಲಾಷೆಯಿಂದ (ಇಚ್ಛಾನುಸಾರವಾಗಿ) ಕ್ರೀಡೆಯನ್ನು ಮಾಡುತ್ತಿರಲು ದುಷ್ಟಬಾಲಕರು ಒಂದು ನಾಯಿಯನ್ನು ನೋಡಿ ಚಾಪಲ್ಯದಿಂದ ಅದನ್ನು ಬೆದರಿಸಿದರು. ಭಯದಿಂದ ಆಕುಲವಾದ ಅದೂ ಓಡುವುದಾಗಿ ಮಡುವಿನಲ್ಲಿ ಬಿದ್ದು ಅಲ್ಲಿಯೇ ಪ್ರಾಣತ್ಯಾಗಕ್ಕೆ ಅಭಿಮುಖವಾಯಿತು.

**ಭೃತ್ಯೈಸ್ತತಸ್ಸಮಾನಾಯ್ಯ ಜೀವಂಧರಕುಮಾರಕಃ ।**
**ಕರ್ಣೇ ತಸ್ಯ ನಮಸ್ಕಾರಪದ್ಯೈಃ ಸಂಪರ್ಯಪೂರಯತ್ ॥ ೯೧೦ ॥**

ತರುವಾಯ ಜೀವಂಧರಕುಮಾರನು ಭೃತ್ಯರಿಂದ ಆ ನಾಯಿಯನ್ನು ತರಿಸಿ ಪಂಚನಮಸ್ಕಾರಪದಗಳಿಂದ ಅದರ ಕಿವಿಗಳನ್ನು ಚೆನ್ನಾಗಿ ತುಂಬಿದನು.

**ಪ್ರತಿಗೃಹ್ಯ ನಮಸ್ಕಾರಂ ಚಂದ್ರೋದಯಗಿರಾವಭೂತ್ ।**
**ಯಕ್ಷಃ ಸುದರ್ಶನೋ ನಾಮ ಸ್ಮೃತಪೂರ್ವಭವಸ್ತದಾ ॥ ೯೧೧ ॥**

**ಪ್ರತ್ಯಾಗತ್ಯ ಕುಮಾರಂ ತಂ ತ್ವತ್ಪ್ರಸಾದಾನ್ಮಯೇದೃಶೀ ।**
**ಲಬ್ಧಾ ವಿಭೂತಿರಿತ್ಯುಚ್ಚೈಃ ಸ್ತುತ್ವಾ ಸಂಪಾದ್ಯ ವಿಸ್ಮಯಮ್ ॥ ೯೧೨ ॥**

**ಸರ್ವೇಷಾಂ ದಿವ್ಯಭೂಷಾಭಿಃ ಕೃತವಿತ್ತಮಪೂಜಯತ್ ।**
**ಇತಃ ಪ್ರಭೃತ್ಯಹಂ ಸ್ಮರ್ಯೋ ವ್ಯಸನೋತ್ಸವಯೋಸ್ತ್ವಯಾ ॥ ೯೧೩ ॥**

**ಕುಮಾರೇತಿ ತಮಭ್ಯರ್ಥ್ಯ ಸ್ವಂ ಧಾಮೈವ ಜಗಾಮ ಸಃ ।**
**ಅಕಾರಣೋಪಕಾರಾಣಾಮವಶ್ಯಂಭಾವಿ ತತ್ಫಲಮ್ ॥ ೯೧೪ ॥**

ಅದು ನಮಸ್ಕಾರ–ಮಂತ್ರವನ್ನು ಪರಿಗ್ರಹಿಸಿ ಸತ್ತು ಚಂದ್ರೋದಯಪರ್ವತದಲ್ಲಿ ಸುದರ್ಶನನೆಂಬ ಯಕ್ಷನಾಗಿ ಹುಟ್ಟಿತು. ಆಗ ತನ್ನ ಪೂರ್ವಭವವನ್ನು ಸ್ಮರಿಸಿದ ಆ ಯಕ್ಷನು ಹಿಂದಿರುಗಿ ಬಂದು ಆ ಜೀವಂಧರಕುಮಾರನನ್ನು "ನಿನ್ನ ಪ್ರಸಾದದಿಂದ ಈ ರೀತಿಯಾದ ವಿಭೂತಿ–ಸಂಪತ್ತಿಯು ನನ್ನಿಂದ ಪಡೆಯಲ್ಪಟ್ಟಿತು" ಹೀಗೆಂದು ಅಧಿಕವಾದ ಸ್ತುತಿಯಿಂದ ಎಲ್ಲರಿಗೆ ಆಶ್ಚರ್ಯವನ್ನುಂಟುಮಾಡಿ ಕೃತಜ್ಞನಾದ ಅವನು ದಿವ್ಯಭೂಷಣಗಳಿಂದ ಆ ಜೀವಂಧರಕುಮಾರನನ್ನು ಪೂಜಿಸಿದನು. "ಕುಮಾರನೆ! ಈ ಮೊದಲುಗೊಂಡು (ಇಂದಿನಿಂದ) ನಾನು ವ್ಯಸನದಲ್ಲಿಯೂ ಉತ್ಸವದಲ್ಲಿಯೂ ನಿನ್ನಿಂದ ಸ್ಮರಿಸಲ್ಪಡತಕ್ಕವನಾಗಿದ್ದೇನೆ" ಎಂದು ಅವನನ್ನು ಪ್ರಾರ್ಥಿಸಿ ಆ ಯಕ್ಷನು ತನ್ನ ಮಂದಿರಕ್ಕೇ ಹೋದನು. ಅಕಾರಣವಾದ ಉಪಕಾರವುಳ್ಳವರಿಗೆ (ಅಕಾರಣವಾಗಿ ಉಪಕಾರವನ್ನು ಮಾಡುವವರಿಗೆ) ಅದರ ಫಲವು ಅವಶ್ಯವಾಗಿ ಆಗುವುದು.

**ಚಿರಂ ವನೇ ವಿಹೃತ್ಯೈವಂ ನಿವೃತ್ತೌ ಗಂಧವಾರಣಃ ।**
**ತನ್ಮಹೀಶಸ್ಯ ನಾಮ್ನಾಶನಿಘೋಷೋ ಜನಘೋಷತಃ ॥ ೯೧೫ ॥**

**ಸಮುದ್ಭ್ರಾಂತೋನಿವಾರ್ಯೋನ್ಯೈರಧಾವತ್ಸ್ಯಂದನಂ ಪ್ರತಿ ।**
**ಸುದೃಪ್ತಃ ಸುರಮಂಜರ್ಯಾಃ ಸ ಕುಮಾರೋ ವಿಲೋಕ್ಯ ತಮ್ ॥**

**ವಿನಯೋನ್ನಯನಿರ್ಣೀತಕ್ರಿಯಃ ಸಂಪ್ರಾಪ್ಯ ಹೇಲಯಾ ।**
**ಕೃತ್ವಾ ಪರಿಶ್ರಮಂ ತಸ್ಯ ದ್ವಾತ್ರಿಂಶತ್ಕೇಲಿಭಿಃ ಸ್ವಯಮ್ ॥ ೯೧೭ ॥**

**ವೀತಶ್ರಮಸ್ತಮಸ್ಪಂದಂ ಹೇಲಯಾಲಾನಮಾಪಯತ್ ।**
**ದೃಷ್ಟ್ವಾಸ್ಯ ಗಜವಿಜ್ಞಾನಂ ಪುರಂ ಶಂಸನ್ ಜನೋವಿಶತ್ ॥ ೯೧೮ ॥**

ಆ ರೀತಿಯಾಗಿ ಬಹುಸಮಯದವರೆಗೆ ವನವಿಹಾರವನ್ನು ಮಾಡಿ ಹಿಂದಿರುಗುವಲ್ಲಿ ಆ ಕಾಷ್ಠಾಂಗಾರಿಕರಾಜನ ಅಶನಿಘೋಷವೆಂಬ ಮದಗಜವು ಜನರ ಘೋಷಣೆಯಿಂದ ಭ್ರಮಿಸಿ–ಬೆದರಿದುದೂ ಚೆನ್ನಾಗಿ ಮದಿಸಿದುದೂ ಬೇರೆಯವರಿಂದ ನಿವಾರಿಸಲ್ಪಡತಕ್ಕುದಲ್ಲದುದೂ ಆಗಿ ಸುರಮಂಜರಿಯ ರಥವನ್ನು ಕುರಿತು (ಗಾಡಿಗಿದಿರಾಗಿ) ಓಡಿತು. ಅದನ್ನು ನೋಡಿ ಆ ಕುಮಾರನು ನಯದಿಂದಲೂ ಉನ್ನಯದಿಂದಲೂ (ಮೇಲಕ್ಕೆ ಎತ್ತುವಿಕೆ ಅಥವಾ ಊಹಿಸುವಿಕೆಯಿಂದಲೂ) ನಿರ್ಣಯಿಸಲ್ಪಟ್ಟ ಕ್ರಿಯೆಯುಳ್ಳವನಾಗಿ ಲೀಲೆಯಿಂದ ಹೊಂದಿ ಮೂವತ್ತೆರಡು ಆಟಗಳಿಂದ ಅದಕ್ಕೆ ಪರಿಶ್ರಮವನ್ನು ಮಾಡಿ–ಆಯಾಸಗೊಳಿಸಿ ತಾನು ಶ್ರಮವಿಲ್ಲದವನಾಗಿ ನಿಶ್ಚಲವಾದ ಆ ಆನೆಯನ್ನು ಲೀಲೆಯಿಂದ ಅದನ್ನು ಕಟ್ಟುವ ಕಂಬವನ್ನು ಹೊಂದಿಸಿದನು. ಈ ಜೀವಂಧರಕುಮಾರನ ಗಜವಿಜ್ಞಾನವನ್ನು ನೋಡಿ ಜನರು ಪ್ರಶಂಸಿಸುವವರಾಗಿ ನಗರವನ್ನು ಪ್ರವೇಶಿಸಿದರು.

**ತದಾಪ್ರಭೃತ್ಯಗಾತ್ಕಾಮವ್ಯಾಮೋಹಂ ಸುರಮಂಜರೀ ।**
**ಜೀವಂಧರಕುಮಾರಾವಲೋಕನಾಕುಲಿತಾಶಯಾ ॥ ೯೧೯ ॥**

ಅಂದಿನಿಂದ ಸುರಮಂಜರಿಯು ಜೀವಂಧರಕುಮಾರನನ್ನು ನೋಡಿದುದರಿಂದ ಆಕುಲಿತವಾದ ಚಿತ್ತವುಳ್ಳವಳಾಗಿ ಕಾಮವ್ಯಾಮೋಹವನ್ನು ಹೊಂದಿದಳು.

**ಇಂಗಿತೈಶ್ಚೇಷ್ಟಿತೈಸ್ತಸ್ಯಾಃ ಸಂಕಥಾಭಿಶ್ಚ ಯುಕ್ತಿತಃ ।**
**ಮಾತಾ ಪಿತಾ ಚ ಜೀವಂಧರಾಭಿಲಾಷಪರಾಯಣಾಮ್ ॥ ೯೨೦ ॥**

**ವಿಜ್ಞಾಯ ತಾಂ ನಿವೇದ್ಯೈತತ್ತತ್ಪಿತ್ರೇ ತದನುಜ್ಞಯಾ ।**
**ವಿಭೂತಿಮತ್ಕುಮಾರಾಯ ಶುಭಯೋಗೇ ವಿತೇರತುಃ ॥ ೯೨೧ ॥**

ಆ ಸುರಮಂಜರಿಯ ತಾಯಿಯೂ ತಂದೆಯೂ ಆಕೆಯ ಇಂಗಿತ ವ್ಯಾಪಾರಗಳಿಂದಲೂ ಸಂಭಾಷಣಗಳಿಂದಲೂ ಯುಕ್ತಿಯಿಂದ ಆಕೆಯನ್ನು ಜೀವಂಧರನಲ್ಲಿ ಅಭಿಲಾಷಾಸಕ್ತಳನ್ನಾಗಿ ತಿಳಿದು ಇವನ್ನು ಅವನ ತಂದೆಗೆ ತಿಳುಹಿ ಅವನ ಒಪ್ಪಿಗೆಯಿಂದ ಶುಭಯೋಗದಲ್ಲಿ ವಿಭೂತಿ–ಸಂಪತ್ತಿಯುಳ್ಳವನಾದ ಜೀವಂಧರ ಕುಮಾರನಿಗೆ ಆಕೆಯನ್ನು ಕೊಟ್ಟರು.

**ತತಃ ಸಮುಚಿತಪ್ರೇಮ್ಣಾ ಸ ಕಾಮಂ ಸುಖಮನ್ವಭೂತ್ ।**
**ತತ್ರ ತಚ್ಛೌರ್ಯಸದ್ಭಾಗ್ಯಸಂಕಥಾಂ ಸಂತತಂ ಜನೈಃ ॥ ೯೨೨ ॥**

**ಕ್ರಿಯಮಾಣಾಂ ದುರಾತ್ಮಾಸೌ ಕಾಷ್ಠಾಂಗಾರಿಕಭೂಪತಿಃ ।**
**ಕೋಪಾದಶಕ್ನುವನ್ ಸೋಢುಂ ಮದ್ಗಂಧಗಜಬಾಧನಮ್ ॥ ೯೨೩ ॥**

**ಕೃತ್ವಾ ಜೀವಂಧರಸ್ತಸ್ಯ ಪರಿಭೂತಿಂ ವ್ಯಧಾದಧೀಃ ।**
**ಪಥ್ಯಾಮಲಕಶುಂಠ್ಯಾದಿದಾನಗ್ರಹಣಕರ್ಮಣಃ ॥ ೯೨೪ ॥**

**ನಿಜಜಾತ್ಯನುರೂಪಾದ್ಯೋ ವಿಮುಖಃ ಸುಷ್ಠು ಗರ್ವಿತಃ ।**
**ರಾಜಪುತ್ರೋಚಿತೇ ವೃತ್ತೇ ವಿಷಕ್ತೋಯಂ ವರಾಟಜಃ ॥ ೯೨೫ ॥**

**ಕೃತಾಂತವದನಂ ಸದ್ಯಃ ಪ್ರಾಪಯೇಮಂ ಕುಚೇಷ್ಟಿತಮ್ ।**
**ಇತ್ಯಾಖ್ಯಚ್ಚಂಡದಂಡಾಖ್ಯಂ ಮುಖ್ಯಂ ತತ್ಪುರರಕ್ಷಿಣಾಮ್ ॥ ೯೨೬ ॥**

ತರುವಾಯ ಆ ಜೀವಂಧರಕುಮಾರನು ಸಮುಚಿತವಾದ ಪ್ರೇಮದಿಂದ ಅಲ್ಲಿ ಸುಖವನ್ನನುಭವಿಸಿದನು. ಯಾವಾಗಲೂ ಜನರಿಂದ ಮಾಡಲ್ಪಡುತ್ತಿರುವ ಆ ಜೀವಂಧರಕುಮಾರನ ಶೌರ್ಯದ ಮತ್ತು ಉತ್ತಮಭಾಗ್ಯದ ಕಥೆಯನ್ನು ಈ ದುರಾತ್ಮನಾದ ಕಾಷ್ಠಾಂಗಾರಭೂಪತಿಯು ಕೋಪದಿಂದ–ಸಹಿಸುವುದಕ್ಕೆ ಅಶಕ್ತನಾಗಿ "ಬುದ್ಧಿಯಿಲ್ಲದ ಜೀವಂಧರನು ನನ್ನ ಮದಗಜಕ್ಕೆ ಬಾಧೆಯನ್ನು ಮಾಡಿ ಅದಕ್ಕೆ ಅಪಮಾನವನ್ನು ಮಾಡಿದನು. ತನ್ನ ವೈಶ್ಯಜಾತಿಗೆ ಅನುರೂಪವಾದ ಪಥ್ಯವಾದ ನೆಲ್ಲಿ ಶುಂಠಿಯೇ ಮೊದಲಾದ ಪದಾರ್ಥಗಳನ್ನು ಕೊಡುವಿಕೆಯ ಮತ್ತು ತೆಗೆದುಕೊಳ್ಳುವಿಕೆಯ ಕಾರ್ಯದಿಂದ ವಿಮುಖನೂ ರಾಜಪುತ್ರನಿಗೆ ಉಚಿತವಾದ ಕಾರ್ಯದಲ್ಲಿ ಆಸಕ್ತನೂ ಆದ ಈ ವೈಶ್ಯಪುತ್ರನು ಬಹಳ ಗರ್ವಿತನಾಗಿದ್ದಾನೆ. ಕುಚೇಷ್ಟೆಯುಳ್ಳ ಇವನನ್ನು ತಕ್ಷಣದಲ್ಲಿ ಯಮನ ಬಾಯಿಯನ್ನು ಹೊಂದಿಸು" ಎಂದು ಆ ಪುರರಕ್ಷಕರಲ್ಲಿ ಮುಖ್ಯನಾದ ಚಂಡದಂಡನೆಂಬವನನ್ನು ಕುರಿತು ಹೇಳಿದನು.

**ಸ ಸನ್ನದ್ಧಬಲೋಧಾವದಭಿಜೀವಂಧರಂ ಕ್ರುಧಾ ।**
**ಸ ಕುಮಾರೋಪಿ ತದ್ಜ್ಞಾತ್ವಾ ಸಸಹಾಯೋ ಯುಯುತ್ಸಯಾ ॥ ೯೨೭ ॥**

**ದೃಷ್ಟ್ವಾ ಸಾಗರಸೇನಾಖ್ಯಂ ತತ್ಸಮೀಪೇ ಜಿನೋದಿತಮ್ ।**
**ಶ್ರುತ್ವಾ ಧರ್ಮಂ ಪರಿತ್ಯಜ್ಯ ಮಧುಮಾಂಸಾದಿಭಕ್ಷಣಮ್ ॥ ೧೫೬೪ ॥**

**ತಸ್ಮಿನ್ ಗುರೌ ತತಃ ಸುಪ್ರತಿಷ್ಠಾಖ್ಯನಗರಂ ಗತೇ ।**
**ಶಾರ್ದೂಲೋಪದ್ರವಾನ್ಮೃತ್ವಾ ದೇವಭೂಯಂ ಗತಾವಿದಮ್॥ ೧೫೬೫ ॥**

**ಸರ್ವಮೇತದ್ಗುರೋರಾತ್ತವ್ರತಾದಿತ್ಯಭಿಮತ್ಯ ತಮ್ ।**
**ಗತ್ವಾ ಸಂಪ್ರಾಪ್ಯ ಸಂಪೂಜ್ಯ ಕಿಮಾವಾಭ್ಯಾಂ ನಿದೇಶನಮ್ ॥ ೧೫೬೬ ॥**

**ಕರ್ತವ್ಯಮಿತಿ ಸಂಪೃಷ್ಟೋ ಮುನಿನಾಥೋಬ್ರವೀದಸೌ ।**
**ಅತಃ ಪರಂ ದಿನೈಃ ಕೈಶ್ಚಿತ್ಕರ್ತವ್ಯಂ ಯದ್ಭವಿಷ್ಯತಿ ॥ ೧೫೬೭ ॥**

**ಭವದ್ಭ್ಯಾಮೇವ ತದ್ಜ್ಞಾತ್ವಾ ವಿಧೇಯಮಿತಿ ಸಾದರಮ್ ।**
**ಸ ಏಷ ತಸ್ಯ ಸಂದೇಶ ಇತಿ ಪತ್ರಂ ಪ್ರದರ್ಶ್ಯ ತತ್ ॥ ೧೫೬೮ ॥**

**ದ್ರವ್ಯೇಣ ಬಹುನಾ ಸಾರ್ಧಂ ವಿಮಾನಮಧಿರೋಪ್ಯ ತಮ್ ।**
**ಸುಪ್ರತಿಷ್ಠಪುರಾಭ್ಯರ್ಣಗಿರಿಂ ಧರಣಿಭೂಷಣಮ್ ॥ ೧೫೬೯ ॥**

**ಸದ್ಯಃ ಪ್ರಾಪಯತಃ ಸ್ಮೈತೌ ಕಿಂ ನ ಕುರ್ಯಾದಯೋದಯಃ ।**
**ತದಾಗಮನಮಾಕರ್ಣ್ಯ ಭೂಪತಿಸ್ತಸ್ಯ ಬಾಂಧವಾಃ ॥ ೧೫೭೦ ॥**

**ನಾಗರಾಶ್ಚ ವಿಭೂತ್ಯೈನಂ ಸಮ್ಮದಾತ್ಸಮುಪಾಗತಾಃ ।**
**ತೇಭ್ಯಃ ಪ್ರೀತಿಂಕರಂ ದತ್ವಾ ಸ್ವಾವಾಸಂ ಜಗ್ಮತುಃ ಸುರೌ ॥ ೧೫೭೧ ॥**

ಇತ್ತಕಡೆ ಧಾನ್ಯಪುರದ ಸಮೀಪದಲ್ಲಿರುವ ಶಿಖಿಭೂಧರವೆಂದು ಹೆಸರುಳ್ಳ ಪರ್ವತದಲ್ಲಿ ಶಾರ್ದೂಲವೇ ಮೊದಲಾದ ದುಷ್ಟಮೃಗಗಳು ಮುನಿ ಮಹಿಮೆಯಿಂದ ಯಾರನ್ನೂ ಬಾಧಿಸುವುದಿಲ್ಲವೆಂದು ಜನರ ಮಾತಿನಿಂದ ಕೇಳಿ ನಾವುಗಳು ಆ ಪರ್ವತದಲ್ಲಿ ವಾಸಮಾಡಿದವರಾಗಿ ಅಲ್ಲಿ ಸಾಗರಸೇನನೆಂಬ ಅಧಿಕತಪೋಧನನನ್ನು ನೋಡಿ ಅವನ ಸಮೀಪದಲ್ಲಿ ಜಿನೋದಿತವಾದ ಧರ್ಮವನ್ನು ಕೇಳಿ ಮಧುಮಾಂಸವೇ ಮೊದಲಾದುವುಗಳ ಭಕ್ಷಣವನ್ನು ಪರಿತ್ಯಜಿಸಿ ಆ ಸಾಗರಸೇನ ಗುರುವು ಅಲ್ಲಿಂದ ಸುಪ್ರತಿಷ್ಠವೆಂಬ ನಗರವನ್ನು ಹೊಂದುತ್ತಿರಲು ನಾವುಗಳು ಶಾರ್ದೂಲದ ಉಪದ್ರವದಿಂದ ಸತ್ತು ಈ ದೇವತ್ವವನ್ನು ಹೊಂದಿದೆವು. ಇದೆಲ್ಲವೂ ಗುರುವಿನ ದೆಸೆಯಿಂದ ಪಡೆದ ವ್ರತದಿಂದ' ಎಂದು ಒಪ್ಪಿ ಹೋಗಿ ಆ ಕುಮಾರನನ್ನು ಕಂಡು ಪೂಜಿಸಿ 'ನಮ್ಮಗಳಿಂದ ತಮ್ಮ ಯಾವ ಅಪ್ಪಣೆಯು ಮಾಡಲ್ಪಡತಕ್ಕುದು ?' ಎಂದು ಪ್ರಶ್ನೆಮಾಡಲ್ಪಟ್ಟ ಈ ಮುನೀಶ್ವರನು 'ಇಲ್ಲಿಂದ ಮುಂದೆ ಕೆಲವು ದಿನಗಳಿಂದ ನಿಮ್ಮಗಳಿಂದ ಯಾವ ಕಾರ್ಯವು ಮಾಡಲ್ಪಡತಕ್ಕುದಾಗುವುದೋ ಅದನ್ನು ತಿಳಿದು ಮಾಡತಕ್ಕುದು' ಎಂದು ಆದರಯುಕ್ತವಾಗಿ ಹೇಳಿದನು. ಅವನ ಆ ಸಂದೇಶವಿದು'' ಎಂದು ಆ ಪತ್ರವನ್ನು ಕುಮಾರನಿಗೆ ತೋರಿಸಿ ಅಧಿಕವಾದ ದ್ರವ್ಯದೊಡನೆ ಅವನನ್ನು ವಿಮಾನವನ್ನು ಹತ್ತಿಸಿ ತತ್ಕ್ಷಣದಲ್ಲಿ ಈ ದೇವರ್ಕಳು ಸುಪ್ರತಿಷ್ಠನಗರದ ಬಳಿಯಲ್ಲಿರುವ ಧರಣಿಭೂಷಣಪರ್ವತವನ್ನು ಸೇರಿಸಿದರು. ಪುಣ್ಯದ ಉದಯವು ಏನನ್ನುತಾನೆ ಮಾಡದು ? ಅವನ ಆಗಮನವನ್ನು ಕೇಳಿ ದೊರೆಯೂ ಅವನ ಬಂಧುಗಳೂ ಪುರನಿವಾಸಿಗಳೂ ವೈಭವದಿಂದ ಬಂದು ಸಂತೋಷದಿಂದ ಇವನನ್ನು ಸೇರಿದರು. ಪ್ರೀತಿಂಕರನನ್ನು ಅವರಿಗೆ ಕೊಟ್ಟು ದೇವರ್ಕಳು ತಮ್ಮ ಸ್ಥಾನವನ್ನು ಕುರಿತು ಹೋದರು.

**ಪುರಂ ಪ್ರವಿಶ್ಯ ಸದ್ರತ್ನೈಃ ಸ ಮಹೀಶಮಪೂಜಯತ್ ।**
**ಸೋಪಿ ಸಂಭಾವ್ಯ ತಂ ಸ್ಥಾನಮಾನಾದಿಭಿರತೋಷಯತ್ ॥ ೧೫೭೨ ॥**

ಆ ಕುಮಾರನು ಪುರವನ್ನು ಪ್ರವೇಶಿಸಿ ಶ್ರೇಷ್ಠವಾದ ರತ್ನಗಳಿಂದ ದೊರೆಯನ್ನು ಪೂಜಿಸಿದನು. ಆ ದೊರೆಯೂ ಅವನನ್ನು ಸ್ಥಾನಮಾನಾದಿಗಳಿಂದ ಸನ್ಮಾನಿಸಿ ಸಂತೋಷಪಡಿಸಿದನು.

**ಅಥಾನ್ಯೇದ್ಯುಃ ಕುಮಾರಸ್ಯ ಜ್ಯಾಯಸೀಂ ಪ್ರಿಯಮಿತ್ರಿಕಾಮ್ ।**
**ಮಾತರಂ ಸ್ವತನೂಜಸ್ಯ ಪ್ರಾಪ್ತೇ ಪರಿಣಯೋತ್ಸವೇ ॥ ೧೫೭೩ ॥**

**ಆತ್ಮಸ್ನುಷಾಮಲಂಕರ್ತುಂ ರತ್ನಾಭರಣಸಂಹತಿಮ್ ।**
**ಗೃಹೀತ್ವಾ ರಥಮಾರುಹ್ಯ ಮಹಾದರ್ಶನಕರ್ಮಣೇ ॥ ೧೫೭೪ ॥**

**ಯಾಂತೀಂ ದ್ರಷ್ಟುಂ ಸಮಾಯಾತಾ ರಥ್ಯಾಯಾಂ ಮೂಕಿಕಾ ಸ್ವಯಮ್ ।**
**ವೀಕ್ಷ್ಯ ಸ್ವಭೂಷಾಸಂದೋಹಂ ಸ್ಪಷ್ಟಮಂಗುಲಿಸಂಜ್ಞಯಾ ॥ ೧೫೭೫ ॥**

**ಮದೀಯಮೇತದಿತ್ಯುಕ್ತ್ವಾ ಜನಾನ್ ಸಾ ತಾಂ ರಥಸ್ಥಿತಾಮ್ ।**
**ರುದ್ಧ್ವಾ ಸ್ಥಿತವತೀ ಸಾಪಿ ಪ್ರಾಹೈಷಾ ಗ್ರಹಿಲೇತಿ ತಾಮ್ ॥ ೧೫೭೬ ॥**

**ತದ್ಜ್ಞಾಶ್ಚ ಮಂತ್ರತಂತ್ರಾದಿವಿಧಿಭಿಃ ಸುಪ್ರಯೋಜಿತೈಃ ।**
**ಪರೀಕ್ಷ್ಯೇಯಂ ನ ಭೂತೋಪಸ್ಪೃಷ್ಟೇತಿ ವ್ಯಕ್ತಮಬ್ರುವನ್ ॥ ೧೫೭೭ ॥**

ಅನಂತರದಲ್ಲಿ ಮರು ದಿವಸ ಪ್ರೀತಿಂಕರಕುಮಾರನ ದೊಡ್ಡತಾಯಿ (ನಾಗದತ್ತನ ಹೆಂಡತಿ) ಪ್ರಿಯಮಿತ್ರಿಕೆಯು ತನ್ನ ಪುತ್ರನ ವಿವಾಹೋತ್ಸವವು ಪ್ರಾಪ್ತವಾಗುತ್ತಿರಲು ತನ್ನ ಸೊಸೆಯನ್ನು ಅಲಂಕರಿಸುವುದಕ್ಕೋಸ್ಕರ ರತ್ನಾಭರಣಗಳ ಸಮೂಹವನ್ನು ತೆಗೆದುಕೊಂಡು ರಥವನ್ನೇರಿ ದೊಡ್ಡವರಿಗೆ ತೋರಿಸುವ ಕಾರ್ಯಕ್ಕೋಸ್ಕರ ಹೋಗುತ್ತಿದ್ದಳು. ಆಕೆಯನ್ನು ನೋಡುವುದಕ್ಕೋಸ್ಕರ ಬೀದಿಯಲ್ಲಿ ಬಂದ ಮೂಗಿಯು (ವಸುಂಧರೆಯು) ತಾನು ತನ್ನ ಆಭರಣಗಳ ಸಮೂಹವನ್ನು ನೋಡಿ ಬೆರಳಿನ ಸಂಜ್ಞೆಯಿಂದ 'ಇದು ನನ್ನದು' ಎಂದು ಜನರಿಗೆ ಸ್ಪಷ್ಟವಾಗಿ ಹೇಳಿ ರಥದಲ್ಲಿರುವ ಆ ಪ್ರಿಯಮಿತ್ರಿಕೆಯನ್ನು ತಡೆದು ನಿಂತಳು. ಆ ಪ್ರಿಯಮಿತ್ರಿಕೆಯೂ ''ಇವಳು ಗ್ರಹದಿಂದ ಹಿಡಿಯಲ್ಪಟ್ಟವಳು'' ಎಂದು ಹೇಳಿದಳು. ಅದನ್ನು ತಿಳಿದವರೂ ಚೆನ್ನಾಗಿ ಪ್ರಯೋಗಿಸಲ್ಪಟ್ಟ ಮಂತ್ರತಂತ್ರವೇ ಮೊದಲಾದ ವಿಧಿಗಳಿಂದ ಆಕೆಯನ್ನು ಪರೀಕ್ಷಿಸಿ ''ಈಕೆಯು ಭೂತದಿಂದ ಹಿಡಿಯಲ್ಪಟ್ಟಿಲ್ಲ'' ಎಂದು ವ್ಯಕ್ತವಾಗಿ ಹೇಳಿದರು.

**ಕುಮಾರೋಪಿ ತದಾಕರ್ಣ್ಯ ನ ಬಿಭೇತು ಕುಮಾರಿಕಾ ।**
**ರಾಜಾಭ್ಯಾಶಂ ಸಮಭ್ಯೇತು ತತ್ರಾಹಂ ಚಾಸ್ಮ್ಯುಪಸ್ಥಿತಃ ॥ ೧೫೭೮ ॥**

**ಇತ್ಯಸ್ಯಾಃ ಪ್ರಾಹಿಣೋತ್ಪತ್ರಂ ಗೂಢಂ ತದ್ವೀಕ್ಷ್ಯ ತತ್ತಥಾ ।**
**ಶ್ರದ್ಧಾಯಾಹ್ವಾಯಿತಾ ರಾಜ್ಞಃ ಸಮೀಪಮಗಮನ್ಮುದಾ ॥ ೧೫೭೯ ॥**

ಪ್ರೀತಿಂಕರಕುಮಾರನೂ ಆ ಮಾತನ್ನು ಕೇಳಿ ''ಕುಮಾರಿಕೆಯು ಹೆದರದಿರಲಿ. ದೊರೆಯ ಬಳಿಗೆ ಬರಲಿ. ಅಲ್ಲಿ ನಾನೂ ಬಂದಿರುತ್ತೇನೆ'' ಎಂದು ಈಕೆಗೆ ಗುಟ್ಟಾಗಿ ಪತ್ರವನ್ನು ಕಳುಹಿಸಿದನು.ಅದನ್ನು ನೋಡಿ ಆಕೆಯು ಅದನ್ನು ಹಾಗೆಯೇ ನಂಬಿ ಕರೆಯಲ್ಪಟ್ಟವಳಾಗಿ ರಾಜನ ಸಮೀಪವನ್ನು ಸಂತೋಷದಿಂದ ತಲುಪಿದಳು.

**ತದಾಭರಣವೃತ್ತಾಂತಪರಿಚ್ಛೇದಾಯ ಭೂಪತಿಃ ।**
**ಧರ್ಮಾಧ್ಯಕ್ಷಾನ್ ಸಮಾಹೂಯ ವಿಚಾರಾಯ ನ್ಯಯೋಜಯತ್ ॥**

ಆಗ ರಾಜನು ಆಭರಣದ ಸಮಾಚಾರವನ್ನು ತಿಳಿಯುವುದಕ್ಕೋಸ್ಕರ ಧರ್ಮಾಧಿಕಾರಿಗಳನ್ನು ಕರೆದು ವಿಚಾರಣೆಗೋಸ್ಕರ ನೇಮಿಸಿದನು.

**ವಸುಂಧರಾಂ ಚ ತತ್ರೈವ ಕೃತ್ವಾ ಸನ್ನಿಹಿತಾಂ ತದಾ ।**
**ರಾಜಾ ಕುಮಾರಮಪ್ರಾಕ್ಷೀದ್ವೇತ್ಸೀದಂ ಕಿಂ ಭವಾನಿತಿ ॥ ೧೫೮೧ ॥**

ಆಗ ರಾಜನು ವಸುಂಧರೆಯನ್ನೂ ಅಲ್ಲೇ ಸಮೀಪಸ್ಥಳನ್ನಾಗಿ ಮಾಡಿ ಪ್ರೀತಿಂಕರಕುಮಾರನನ್ನು ''ಇದನ್ನು ನೀನು ಬಲ್ಲೆಯಾ ?'' ಎಂದು ಪ್ರಶ್ನೆಮಾಡಿದನು.

**ಅಭಿಧಾಯ ಸ್ವವಿಜ್ಞಾತಂ ಶೇಷಂ ವೇತ್ತೀಯಮೇವ ತತ್ ।**
**ದೇವತಾ ನಾಹಮಿತ್ಯೇವಂ ಸೋಪಿ ಭೂಪಮಬೋಧಯತ್॥ ೧೫೮೨ ॥**

ಅವನೂ ತನ್ನಿಂದ ತಿಳಿಯಲ್ಪಟ್ಟುದನ್ನು ಹೇಳಿ ಉಳಿದುದನ್ನು ಈ ದೇವತೆಯೇ ತಿಳಿಯುತ್ತಾಳೆ. ಅದನ್ನು ನಾನು ತಿಳಿಯೆನು'' ಹೀಗೆಂದು ದೊರೆಯನ್ನು ಕುರಿತು ಬೋಧಿಸಿದನು.

**ಗಂಧಾದಿಭಿಃ ಸಮಭ್ಯರ್ಚ್ಯ ತಾಂ ಪಟಾಂತರಿತಾಂ ನೃಪಃ ।**
**ದೇವತೇ ಬ್ರೂಹಿ ಯದ್ದೃಷ್ಟಂ ತತ್ತಥೇತ್ಯನುಯುಕ್ತವಾನ್ ॥ ೧೫೮೩ ॥**

ದೊರೆಯು ಬಟ್ಟೆಯ ಮರೆಯಲ್ಲಿರುವ ಆಕೆಯನ್ನು ಗಂಧಾದಿಗಳಿಂದ ಪೂಜಿಸಿ ''ದೇವತೆಯೆ ! ನೋಡಿದುದನ್ನು ನೋಡಿದಂತೆಯೇ ಹೇಳು'' ಎಂದು ಕೇಳಿದನು.

**ಸಾ ನಾಗದತ್ತದುಶ್ಚೇಷ್ಟಾಂ ಮಹೀನಾಥಮಬೂಬುಧತ್ ।**
**ಶ್ರುತ್ವಾ ತತ್ಸುವಿಚಾರ್ಯಾಸ್ಮೈ ಕುಪಿತ್ವಾನೇನ ಪಾಪಿನಾ ॥ ೧೫೮೪ ॥**

**ಕೃತಃ ಪುತ್ರವಧಃ ಸ್ವಾಮಿದ್ರೋಹಶ್ಚೇತಿ ಮಹೀಪತಿಃ ।**
**ಸರ್ವಸ್ವಹರಣಂ ಕೃತ್ವಾ ನಿಗ್ರಹೀತುಂ ತಮುದ್ಯತಃ ॥ ೧೫೮೫ ॥**

ಆಕೆಯು ನಾಗದತ್ತನ ದುಶ್ಚೇಷ್ಟೆಯನ್ನು ದೊರೆಗೆ ತಿಳಿಸಿದಳು. ಅದನ್ನು ಕೇಳಿ ಚೆನ್ನಾಗಿ ವಿಚಾರಮಾಡಿ ಈ ನಾಗದತ್ತನಿಗೆ ಕೋಪಿಸಿಕೊಂಡು ''ಈ ಪಾಪಿಯಿಂದ ಪುತ್ರವಧೆಯೂ ಮಾಡಲ್ಪಟ್ಟಿತು. ಸ್ವಾಮಿದ್ರೋಹವೂ ಮಾಡಲ್ಪಟ್ಟಿತು.'' ಹೀಗೆಂದು ದೊರೆಯು ಸರ್ವಸ್ವಹರಣವನ್ನು ಮಾಡಿ ಅವನನ್ನು ನಿಗ್ರಹಿಸುವುದಕ್ಕೆ ತೊಡಗಿದನು.

**ಪ್ರತಿಷಿದ್ಧಃ ಕುಮಾರೇಣ ನೈತದ್ಯುಕ್ತಂ ತವೇತಿ ಸಃ ।**
**ಸೌಜನ್ಯತಸ್ತದಾ ಸ್ತುತ್ವಾ ಕುಮಾರಾಯ ನಿಜಾತ್ಮಜಾಮ್ ॥ ೧೫೮೬ ॥**

**ಪೃಥಿವೀಸುಂದರೀಂ ನಾಮ್ನಾ ಕನ್ಯಕಾಂ ಚ ವಸುಂಧರಾಮ್ ।**
**ದ್ವಾತ್ರಿಂಶದ್ವೈಶ್ಯಪುತ್ರೀಶ್ಚ ಕಲ್ಯಾಣವಿಧಿನಾ ದದೌ ॥ ೧೫೮೭ ॥**

**ಸಹ ಪೂರ್ವಧನಸ್ಥಾನಮರ್ಧರಾಜ್ಯಂ ಚ ಮಾವತೇ ।**
**ಪುರಾ ವಿಹಿತಪುಣ್ಯಾನಾಂ ಸ್ವಯಮಾಯಾಂತಿ ಸಂಪದಃ ॥ ೧೫೮೮ ॥**

ಆಗ ಕುಮಾರನಿಂದ ''ಇದು ನಿನಗೆ ಯುಕ್ತವಾದುದಲ್ಲ'' ಎಂದು ಸೌಜನ್ಯದಿಂದ ತಡೆಯಲ್ಪಟ್ಟ ಆ ರಾಜನು ಕುಮಾರನನ್ನು ಹೊಗಳಿ ಲಕ್ಷ್ಮೀವಂತನಾದ ಅವನಿಗೆ ತನ್ನ ಪುತ್ರಿಯೂ ಹೆಸರಿನಿಂದ ಪೃಥಿವೀಸುಂದರಿಯೂ ಆದ ಕನ್ಯೆಯನ್ನೂ ವಸುಂಧರೆಯನ್ನೂ ಮೂವತ್ತೆರಡು ಮಂದಿ ವೈಶ್ಯಪುತ್ರಿಯರನ್ನೂ ವಿವಾಹವಿಧಿಯೊಡನೆ ಕೊಟ್ಟನು. ಮೊದಲಿನ–ಪಿತ್ರಾರ್ಜಿತವಾದ ಧನವಿರುವ ಸ್ಥಾನವನ್ನೂ ಅರ್ಧರಾಜ್ಯವನ್ನೂ ಕೊಟ್ಟನು. ಪೂರ್ವದಲ್ಲಿ ಪುಣ್ಯವನ್ನು ಮಾಡಿರುವವರಿಗೆ ಸಂಪತ್ತಿಗಳು ತಾವಾಗಿ ಬರುತ್ತವೆ.

**ಪ್ರೀತಃ ಪ್ರೀತಿಂಕರಸ್ತತ್ರ ಕಾಮಭೋಗಾನ್ ಸಮೀಪ್ಸಿತಾನ್ ।**
**ಸ್ವೇಚ್ಛಯಾ ವರ್ಧಮಾನೇಚ್ಛಶ್ಚಿರಾಯಾನುಬಭೂವ ಸಃ ॥ ೧೫೮೯ ॥**

ಪ್ರೀತಿಯುಳ್ಳವನಾದ ಆ ಪ್ರೀತಿಂಕರಕುಮಾರನು ಅಲ್ಲಿ ಸ್ವೇಚ್ಛೆಯಿಂದ ವೃದ್ಧಿಯಾಗುತ್ತಿರುವ ಇಚ್ಛೆಯುಳ್ಳವನಾಗಿ ಇಚ್ಛಿತವಾದ ಕಾಮಭೋಗಗಳನ್ನು ಬಹುಕಾಲದವರೆಗೆ ಅನುಭವಿಸಿದನು.

**ಮುನೌ ಸಾಗರಸೇನಾಖ್ಯೇ ಸನ್ನ್ಯಸ್ಯಾನ್ಯೇದ್ಯುರೀಯುಷಿ ।**
**ಲೋಕಾಂತರಂ ತದಾಗತ್ಯ ಚಾರಣೌ ಸಮುಪಸ್ಥಿತೌ ॥ ೧೫೯೦ ॥**

**ಋಜುಶ್ಚ ವಿಪುಲಾಖ್ಯಶ್ಚ ಮತ್ಯಂತೌ ಮತಿಭೂಷಣೌ ।**
**ರಮ್ಯೇ ಮನೋಹರೋದ್ಯಾನೇ ಗತ್ವಾ ಸ್ತುತ್ವಾ ವಣಿಗ್ವರಃ ॥ ೧೫೯೧ ॥**

**ಧರ್ಮಂ ಸಮನ್ವಯುಂಕ್ತೈತಾವಿತ್ಯಾಹರ್ಜುಮತಿಸ್ತಯೋಃ ।**
**ಧರ್ಮೋಽಪಿ ದ್ವಿವಿಧೋ ಜ್ಞೇಯಃ ಸಗೃಹಾಗೃಹಭೇದತಃ ॥ ೧೫೯೨ ॥**

**ಏಕಾದಶವಿಧಸ್ತತ್ರ ಧರ್ಮೋ ಗೃಹನಿವಾಸಿನಾಮ್ ।**
**ಶ್ರದ್ಧಾನವ್ರತಭೇದಾದಿಃ ಶೇಷೋ ದಶವಿಧಃ ಸ್ಮೃತಃ ॥ ೧೫೯೩ ॥**

**ಕ್ಷಾಂತ್ಯಾದಿಃ ಕರ್ಮವಿಧ್ವಂಸೀ ತಚ್ಛ್ರುತ್ವಾ ತದನಂತರಮ್ ।**
**ಸ್ವಪೂರ್ವಭವಸಂಬಂಧಂ ಪಪ್ರಚ್ಛೈವಂ ಚ ಸೋಽಬ್ರವೀತ್ ॥ ೧೫೯೪ ॥**

**ಶೃಣು ಸಾಗರಸೇನಾಖ್ಯಮುನಿಮಾತಪಯೋಗಿನಮ್ ।**
**ಪುರೇಽಸ್ಮಿನ್ನೇವ ಭೂಪಾಲಪ್ರಮುಖಾ ವಂದಿತುಂ ಗತಾಃ ॥ ೧೫೯೫ ॥**

ಮತ್ತೊಂದು ದಿವಸ ಸಾಗರಸೇನನೆಂಬ ಮುನಿಯು ಸನ್ಯಾಸವನ್ನು ಹೊಂದಿ ಲೋಕಾಂತರವನ್ನು ಹೊಂದುತ್ತಿರಲು ಆಗ ಬುದ್ಧಿಯೇ ಭೂಷಣವಾಗಿರುವ ಋಜುಮತಿ ವಿಪುಲಮತಿಗಳೆಂಬೀರ್ವರು ಚಾರಣಮುನಿಗಳು ರಮಣೀಯವಾದ ಮನೋಹರೋದ್ಯಾನದಲ್ಲಿ ಬಂದರು. ವೈಶ್ಯೋತ್ತಮನಾದ ಪ್ರೀತಿಂಕರಕುಮಾರನು ಹೋಗಿ ಅವರನ್ನು ಸ್ತುತಿಸಿ ಇವರಲ್ಲಿ ಧರ್ಮವನ್ನು ಕೇಳಿದನು. ಅವರಲ್ಲಿ ಋಜುಮತಿಯು ಇಂತೆಂದನು. ''ಧರ್ಮವು ಸಗೃಹಧರ್ಮವೆಂದೂ ಅಗೃಹಧರ್ಮವೆಂದೂ ಭೇದದಿಂದ ಎರಡು ವಿಧವಾಗಿ ತಿಳಿಯತಕ್ಕುದು. ಅವೆರಡರಲ್ಲಿ ಗೃಹಸ್ಥರ ಧರ್ಮವು ಶ್ರದ್ಧಾನ ವ್ರತಭೇದ ಮೊದಲಾದ ಹನ್ನೊಂದು ವಿಧವಾಗಿದೆ. (ದರ್ಶನಿಕ ವ್ರತಿಕ ಸಾಮಾಯಿಕ ಪ್ರೋಷಧೋಪವಾಸಿ ಮೊದಲಾದ ಹನ್ನೊಂದು ನೆಲೆಗಳಿವೆ.) ಉಳಿದುದು ಉತ್ತಮಕ್ಷಮಾ ಉತ್ತಮಮಾರ್ದವ ಉತ್ತಮಾರ್ಜವ ಮೊದಲಾದ ಕರ್ಮವಿನಾಶಕವಾದ ಮುನಿಧರ್ಮವು ಹತ್ತುವಿಧವಾಗಿ ಸ್ಮರಿಸಲ್ಪಟ್ಟಿದೆ.'' ಆ ಮಾತನ್ನು ಕೇಳಿ ತದನಂತರ ಅವನು ತನ್ನ ಪೂರ್ವಭವ ಸಂಬಂಧವನ್ನು ಪ್ರಶ್ನೆಮಾಡಿದನು. ಆ ಮುನಿಯು ಇಂತೆಂದನು. ''ಅಯ್ಯಾ ! ಕೇಳು. ಇದೇ ನಗರದಲ್ಲಿ ಆತಪಯೋಗಿಯಾದ ಸಾಗರಸೇನನೆಂಬ ಮುನಿಯನ್ನು ವಂದಿಸುವುದಕ್ಕೋಸ್ಕರ ರಾಜನೇ ಮೊದಲಾದವರು ಹೋದರು.

**ನಾನಾವಿಧಾರ್ಚನಾದ್ರವ್ಯೈಃ ಸಂಪೂಜ್ಯ ಪುರಮಾಗತಾಃ ।**
**ಸಂಖತೂರ್ಯಾದಿನಿಧ್ವಾನಂ ಶ್ರುತ್ವೈಕಮಿಹ ಜಂಬುಕಮ್ ॥ ೧೫೯೬ ॥**

**ಕಶ್ಚಿಲ್ಲೋಕಾಂತರಂ ಯಾತಃ ಪುರೇದ್ಯೈತಂ ಜನೋ ಬಹಿಃ ।**
**ಕ್ಷಿಪ್ತ್ವಾ ಯಾತು ತತೋ ಭಕ್ಷಯಿಷ್ಯಾಮ್ಯಾತ್ಯಾಗತಂ ಮುನಿಃ ॥ ೧೫೯೭ ॥**

**ಭವ್ಯೋಽಯಂ ವ್ರತಮಾದಾಯ ಮುಕ್ತಿಮಾಶು ಗಮಿಷ್ಯತಿ ।**
**ಇತಿ ಮತ್ವಾ ತಮಾಸನ್ನಮಸಾವೇವಮಭಾಷತ ॥ ೧೫೯೮ ॥**

ಅವರು ನಾನಾವಿಧವಾದ ಪೂಜಾದ್ರವ್ಯಗಳಿಂದ ಮುನಿಯನ್ನು ಪೂಜಿಸಿ ಪಟ್ಟಣಕ್ಕೆ ಬಂದರು. ಆಗ ಶಂಖಧ್ವನಿಯನ್ನೂ ತಮ್ಮಟೆಯೇ ಮೊದಲಾದ ವಾದ್ಯಗಳ ಧ್ವನಿಯನ್ನೂ ಕೇಳಿ ''ಈ ಪಟ್ಟಣದಲ್ಲಿ ಈ ದಿವಸ ಯಾವನೋ ಲೋಕಾಂತರವನ್ನು ಹೊಂದಿದನು (ಸತ್ತನು). ಇವನನ್ನು ಜನರು ಹೊರಕ್ಕೆ ಎಸೆದು ಬರಲಿ. ಬಳಿಕ ಅವನನ್ನು ತಿನ್ನುವೆನು.'' ಎಂದು ಯೋಚಿಸಿಕೊಂಡು ಬಂದ ಒಂದು ನರಿಯನ್ನು ನೋಡಿ ಮುನಿಯು ''ಇದು ಭವ್ಯಪ್ರಾಣಿಯಾಗಿದೆ. ವ್ರತವನ್ನು ತೆಗೆದುಕೊಂಡು ಶೀಘ್ರವಾಗಿ ಮುಕ್ತಿಗೆ ಹೋಗುವುದು.'' ಹೀಗೆಂದು ತಿಳಿದು ಸಮೀಪದಲ್ಲಿರುವ ಆ ನರಿಯನ್ನು ಕುರಿತು ಈ ಸಾಗರಸೇನಮುನಿಯು ಇಂತೆಂದನು.

**ಪ್ರಾಗ್ಜನ್ಮಕೃತಪಾಪಸ್ಯ ಫಲೇನಾಭೂಃ ಸೃಗಾಲಕಃ ।**
**ಇದಾನೀಂ ಚ ಕುಧೀಃ ಸಾಧುಸಮಾಯೋಗೇಽಪಿ ಮನ್ಯಸೇ ॥ ೧೫೯೯ ॥**

**ದುಷ್ಕರ್ಮ ವಿರಮ್ಯೈತಸ್ಮಾದ್ದುರಂತದುರಿತಾವಹಾತ್ ।**
**ಗೃಹಾಣ ವ್ರತಮಬ್ಯೇಹಿ ಪರಿಣಾಮಂ ಶುಭಾವಹಮ್ ॥ ೧೬೦೦ ॥**

''ಪೂರ್ವಜನ್ಮದಲ್ಲಿ ಮಾಡಿದ ಪಾಪದ ಫಲದಿಂದ ನೀನು ನರಿಯಾಗಿ ಹುಟ್ಟಿದೆ. ಈಗಲೂ ದುರ್ಬುದ್ಧಿಯುಳ್ಳವನಾಗಿ ಸಾಧುವಿನ ಸಮಾಗಮದಲ್ಲಿಯೂ ದುಷ್ಕಾರ್ಯವನ್ನು ಯೋಚಿಸುತ್ತಿರುತ್ತಿ. ದುರಂತವಾದ ಪಾಪವನ್ನುಂಟುಮಾಡುವ ಈ ಕಾರ್ಯದಿಂದ ವಿರಾಮವನ್ನು ಹೊಂದು. ವ್ರತವನ್ನು ಗ್ರಹಣಮಾಡು. ಶುಭಕರವಾದ ಪರಿಣಾಮವನ್ನು ಹೊಂದು.''

ಕರ್ಣಪ್ರಾವರಣಾ ಲಂಬಕರ್ಣಕಾಶ್ಚಾದಿಕರ್ಣಕಾಃ ।
ಅಶ್ವಸಿಂಹಮುಖಾಶ್ಚಾನ್ಯೇ ದುಷ್ಪ್ರೇಕ್ಷ್ಯಾ ಮಹಿಷಾನನಾಃ ॥ ೧೭೪೩ ॥

ಕ್ರೋಡವ್ಯಾಘ್ರಮುಖಾಶ್ಚೈವಮುಲೂಕಮುಖನಾಮಕಾಃ ।
ಶಾಖಾಮೃಗಮುಖಾ ಮತ್ಸ್ಯಮುಖಾಃ ಕಾಲಮುಖಾಸ್ತಥಾ ॥ ೧೭೪೪ ॥

ಗೋಮೇಷಮೇಘವಕ್ತ್ರಾಶ್ಚ ವಿದ್ಯುದಾದರ್ಶವಕ್ತ್ರಕಾಃ ।
ಹಸ್ತಿವಕ್ತ್ರಾಃ ಕುಮಾನುಷ್ಯಜಾ ಲಾಂಗೂಲವಿಷಾಣಿನಃ ॥ ೧೭೪೫ ॥

ಏತೇ ಚ ನೀಚಕಾ ಯಸ್ಮಾದಂತರದ್ವೀಪವಾಸಿನಃ ।
ಮ್ಲೇಚ್ಛಖಂಡೇಷು ಸರ್ವೇಷು ವಿಜಯಾರ್ಧೇಷು ಚ ಸ್ಥಿತಿಃ ॥ ೧೭೪೬ ॥

ತೀರ್ಥಕೃತ್ಕಾಲವದ್ವೃದ್ಧಿಹ್ರಾಸವತ್ಕರ್ಮಭೂಮಿಷು ।
ಇದಂ ಚ ಶ್ರೇಣಿಕಪ್ರಶ್ನಾದಿಂದ್ರಭೂತಿರ್ಗಣಾಧಿಪಃ ॥ ೧೭೪೭ ॥

ಇತ್ಯಾಹ ವಚನಾಭೀಷುನಿರಸ್ತಾಂತಸ್ತಮಸ್ತತಿಃ ।
ಇಹಾಂತ್ಯತೀರ್ಥನಾಥೋಽಪಿ ವಿಹೃತ್ಯ ವಿಷಯಾನ್ ಬಹೂನ್॥ ೧೭೪೮ ॥

ಕ್ರಮಾತ್ಪಾವಾಪುರಂ ಪ್ರಾಪ್ಯ ಮನೋಹರವನಾಂತರೇ ।
ಬಹೂನಾಂ ಸರಸಾಂ ಮಧ್ಯೇ ಮಹಾಮಣಿಶಿಲಾತಲೇ ॥ ೧೭೪೯ ॥

ಸ್ಥಿತ್ವಾ ದಿನದ್ವಯಂ ವೀತವಿಹಾರೋ ವೃದ್ಧನಿರ್ಜರಃ ।
ಕೃಷ್ಣಕಾರ್ತ್ತಿಕಪಕ್ಷಸ್ಯ ಚತುರ್ದಶ್ಯಾಂ ನಿಶಾತ್ಯಯೇ ॥ ೧೭೫೦ ॥

ಸ್ವಾತಿಯೋಗೇ ತೃತೀಯೇದ್ಧಶುಕ್ಲಧ್ಯಾನಪರಾಯಣಃ ।
ಕೃತತ್ರಿಯೋಗಸಂರೋಧಃ ಸಮುಚ್ಛಿನ್ನಕ್ರಿಯಂ ಶ್ರಿತಃ ॥ ೧೭೫೧ ॥

ಹತಾಘಾತಿಚತುಷ್ಕಃ ಸನ್ನಶರೀರೋ ಗುಣಾತ್ಮಕಃ ।
ಗಂತಾ ಮುನಿಸಹಸ್ರೇಣ ನಿರ್ವಾಣಂ ಸರ್ವವಾಂಛಿತಮ್ ॥ ೧೭೫೨ ॥

ಅವರು ತಂತಮ್ಮ ಆಚಾರಗಳಿಗೆ ವಶೀಕೃತರಾಗಿ (ಮೋಕ್ಷಗತಿಸಹಿತವಾದ) ಐದುಗತಿಗಳನ್ನೂ ಹೊಂದುತ್ತಾರೆ. ಕರ್ಮಭೂಮಿಗಳಲ್ಲಿ ಹುಟ್ಟಿದ ಮನುಷ್ಯರೂ ಸಂಜ್ಞಿತಿರ್ಯಂಚಗಳೂ ಎಲ್ಲಾ ಭೋಗಭೂಮಿಗಳಲ್ಲಿ ಉತ್ಪತ್ತಿಯನ್ನು ಹೊಂದುತ್ತವೆ. ಅವರೆಲ್ಲರೂ ಜೀವಿತಾಂತದಲ್ಲಿ–ಸತ್ತು ನಿಯಮದಿಂದ ಯಥೋಚಿತವಾಗಿ– ಮೊದಲನೆಯ ಎರಡು ಕಲ್ಪಗಳಲ್ಲಿಯೂ ಭವನ ವ್ಯಂತರ ಜ್ಯೋತಿಷ್ಕಲ್ಪದೇವಗಳಲ್ಲಿಯೂ ದೇವರ್ಕಳಾಗುವರು. ಮನುಷ್ಯರಲ್ಲಿ ಭೋಗಭೂಮಿಜರು– ಆರ್ಯರು ಉತ್ತಮರು. ಕರ್ಮಭೂಮಿಜರಾದ ಆ ಮನುಷ್ಯರು ತಮ್ಮ ಆಚಾರ ವಿಶೇಷದಿಂದ (ನಡೆವಳಿಕೆಗನುಸಾರವಾಗಿ) ಉತ್ತಮ ಮಧ್ಯಮ ಜಘನ್ಯರಾಗಿರುತ್ತಾರೆಂದು ಹೇಳಲ್ಪಟ್ಟಿರುತ್ತಾರೆ. ಅವವು ಶಲಾಕಾಪುರುಷರೂ ಮನ್ಮಥರೂ ಖೇಚರರೂ ದೇವ ಪೂಜಿತರಾದ ಇತರ ಸತ್ಪುರುಷರೂ ದಿವ್ಯಮನುಷ್ಯರೂ–ಆರ್ಯರೂ ಆಗಿರುವರು. ದುಷ್ಷಮದುಷ್ಷಮಾವೆಂಬ ಆರನೆಯ ಕಾಲವುಳ್ಳ ಕನಿಷ್ಠಮನುಷ್ಯರೂ ಉತ್ಸರ್ಪಿಣಿಯ ಪ್ರಥಮಕಾಲದ ಕನಿಷ್ಠಮನುಷ್ಯರೂ(ಕನಿಷ್ಠಕಶಬ್ದದಿಂದ ಅಧ್ಯಾಹೃತವಾಗವುದೀ ಅರ್ಥ) ಅಂತರ್ದ್ವೀಪವಾಸಿಗಳಾದ ಒಂದು ತೊಡೆ–ಕಾಲುಳ್ಳ ಮನುಷ್ಯರೂ ಹಾಗೆಯೇ ಭಾಷಾರಹಿತರಾದ ಮನುಷ್ಯರೂ ಶಂಖದಂತೆ ಕಿವಿಯುಳ್ಳ ಮನುಷ್ಯರೂ ಕಿವಿಯೇ ಹೊದಿಕೆಯಾಗಿರುವ ಮನುಷ್ಯರೂ ಉದ್ದವಾದ ಕಿವಿಯುಳ್ಳ ಮನುಷ್ಯರೂ ಮೊಲದ ಕಿವಿಯಂತೆ ಕಿವಿಯುಳ್ಳ ಮನುಷ್ಯರೂ ಕುದುರೆಯೇ ಮೊದಲಾದ ಪ್ರಾಣಿಗಳ ಕಿವಿಗಳಂತೆ ಕಿವಿಗಳುಳ್ಳ ಮನುಷ್ಯರೂ ಕುದುರೆಯ ಮತ್ತು ಸಿಂಹದ ಮುಖದಂತೆ ಮುಖವುಳ್ಳ ಮನುಷ್ಯರೂ ನೋಟಕ್ಕೆ ಚೆನ್ನಾಗಿಲ್ಲದ ಇತರ ಮನುಷ್ಯರೂ ಕೋಣದ ಮುಖದಂತೆ ಮುಖವುಳ್ಳ ಮನುಷ್ಯರೂ ಕಾಡುಹಂದಿಯ ಮುಖದಂತೆ ಮುಖವುಳ್ಳ ಮನುಷ್ಯರೂ ಹುಲಿಯ ಮುಖದಂತೆ ಮುಖವುಳ್ಳ ಮನುಷ್ಯರೂ ಹೀಗೆ ಗೂಬೆಯ ಮುಖದಂತೆ ಮುಖವುಳ್ಳ (ಉಲೂಕ ಮುಖರೆಂಬ) ಮನುಷ್ಯರೂ ಕಪಿಯ ಮುಖದಂತೆ ಮುಖವುಳ್ಳ ಮನುಷ್ಯರೂ ಮೀನಿನ ಮುಖದಂತೆ ಮುಖವುಳ್ಳ ಮನುಷ್ಯರೂ ಕಪ್ಪಾದ ಮುಖವುಳ್ಳ ಮನುಷ್ಯರೂ ಹಾಗೆಯೇ ಗೋವಿನ ಮತ್ತು ಕುರಿಯ ಮುಖದಂತೆ ಮುಖವುಳ್ಳ ಮನುಷ್ಯರೂ ಮೇಘದಂತೆ ಕಪ್ಪಾದ ಮುಖವುಳ್ಳ ಮನುಷ್ಯರೂ ಮಿಂಚಿನಂತೆ ಹೊಳಪಾದ ಕನ್ನಡಿಯಂತೆ ಚಪ್ಪಟೆಯಾದ ಮುಖವುಳ್ಳ ಮನುಷ್ಯರೂ ಆನೆಯ ಮುಖದಂತೆ ಮುಖವುಳ್ಳ ಮನುಷ್ಯರೂ ಬಾಲವೂ ಕೊಂಬೂ ಉಳ್ಳ ಮನುಷ್ಯರೂ ದುಷ್ಟ ಮನುಷ್ಯತ್ವದಲ್ಲಿ ಜನಿಸಿದ ಈ ಮನುಷ್ಯರೆಲ್ಲರೂ ನೀಚರಾಗಿರುತ್ತಾರೆ. ಎಲ್ಲಾ ಮ್ಲೇಚ್ಛಖಂಡಗಳಲ್ಲಿಯೂ ವಿಜಯಾರ್ಧಪರ್ವತಗಳಲ್ಲಿಯೂ ಕರ್ಮಭೂಮಿಗಳಲ್ಲಿ ತೀರ್ಥಂಕರರ ಕಾಲವುಳ್ಳ ವೃದ್ಧಿಹಾನಿಗಳಂತೆ ಸ್ಥಿತಿಯಿರುವುದು. ತೀರ್ಥಂಕರರ ಕಾಲಗಳಲ್ಲಿ ಕರ್ಮಭೂಮಿಜರಲ್ಲಾಗುವ ಹಾನಿವೃದ್ಧಿಗಳಿಗನುಸಾರವಾಗಿ ಮ್ಲೇಚ್ಛಖಂಡ ನಿವಾಸಿಗಳಲ್ಲಿಯೂ ವಿಜಯಾರ್ಧಗಿರಿ ನಿವಾಸಿಗಳಲ್ಲಿಯೂ ಹಾನಿವೃದ್ಧಿಗಳಾಗುತ್ತವೆಂದು ಭಾವವು. ಇಂದ್ರಭೂತಿ ಗಣಾಧಿಪತಿಯು ಶ್ರೇಣಿಕನ ಪ್ರಶ್ನೆಯಿಂದ ಈ ಮುಂದೆ ಹೇಳುವುದನ್ನೂ ವಚನಗಳೆಂಬ ಕಿರಣಗಳಿಂದ ಅಂತರಂಗದ ಕತ್ತಲೆಯ ಸಮೂಹವನ್ನು ಹೋಗಲಾಡಿಸಿದವನಾಗಿ ಇಂತೆಂದನು. ''ಈ ಭಾರತವರ್ಷದಲ್ಲಿ ಕೊನೆಯ ತೀರ್ಥೇಶ್ವರರೂ ಬಹುದೇಶಗಳನ್ನು ವಿಹರಿಸಿ ಕ್ರಮದಿಂದ ಪಾವಾಪುರವನ್ನು ತಲುಪಿ ಮನೋಹರವನಮಧ್ಯದಲ್ಲಿ ಅನೇಕ ಸರೋವರಗಳ ಮಧ್ಯದಲ್ಲಿ ದೊಡ್ಡದಾದ ಮಣಿಶಿಲಾಪ್ರದೇಶದಲ್ಲಿ ಎರಡು ದಿನಗಳವರೆಗೆ ವಿಹಾರವಿಲ್ಲದವರೂ ವೃದ್ಧಿಯಾದ ನಿರ್ಜರೆಯುಳ್ಳವರೂ ಕಾರ್ತ್ತಿಕಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ರಾತ್ರಿಯ ವಿನಾಶದಲ್ಲಿ(ಬೆಳಗಿನ ಜಾವದಲ್ಲಿ) ಸ್ವಾತಿನಕ್ಷತ್ರದಲ್ಲಿ ಸೂಕ್ಷ್ಮಕ್ರಿಯಾ ಪ್ರತಿಪಾತಿಯೆಂಬ ಪ್ರಕಾಶಮಾನವಾದ ಮೂರನೆಯ ಶುಕ್ಲಧ್ಯಾನಪರಾಯಣರೂ ಮನೋವಾಕ್ಕಾಯ ಯೋಗಗಳನ್ನು ತಡೆದವರೂ ಸಮುಚ್ಛಿನ್ನ ಕ್ರಿಯೆಯೆಂಬ ನಾಲ್ಕನೆಯ ಶುಕ್ಲಧ್ಯಾನವನ್ನಾಶ್ರಯಿಸಿದವರೂ ನಾಲ್ಕು ಅಘಾತಿಕರ್ಮಗಳನ್ನು ನಾಶ ಮಾಡಿದವರೂ ಶರೀರರಹಿತರೂ ಗುಣಸ್ವರೂಪರೂ ಆಗಿ ಸಹಸ್ರಮುನಿಗಳೊಡನೆ ಎಲ್ಲರಿಂದಲೂ ಇಚ್ಛಿಸಲ್ಪಟ್ಟಿರುವ ಮುಕ್ತಿಯನ್ನು ಪಡೆಯುವರು.

ತದೇವ ಪುರಷಾರ್ಥಸ್ಯ ಪರ್ಯಂತೋಽನಂತಸೌಖ್ಯಕೃತ್ ।
ಅಥ ಸರ್ವೇಽಪಿ ದೇವೇಂದ್ರಾ ವಹ್ನೀಂದ್ರಮುಕುಟಸ್ಫುರತ್– ॥ ೧೭೫೩ ॥

ಹುತಾಶನಶಿಖಾನ್ಯಸ್ತತದ್ದೇಹಾ ಮೋಹವಿದ್ವಿಷಮ್ ।
ಅಭ್ಯರ್ಚ್ಯ ಗಂಧಮಾಲ್ಯಾದಿದ್ರವ್ಯೈರ್ದಿವ್ಯೈರ್ಯಥಾವಿಧಿ ॥ ೧೭೫೪ ॥

ವಂದಿಷ್ಯಂತೇ ಭವಾತೀತಮರ್ತ್ಯೈರ್ವಂದಾರವಃ ಸ್ತವೈಃ ।
ವೀರನಿರ್ವೃತಿಸಂಪ್ರಾಪ್ತದಿನ ಏವಾಸ್ತಘಾತಿಕಃ ॥ ೧೭೫೫ ॥

ಭವಿಷ್ಯಾಮ್ಯಹಮಪ್ಯುದ್ಯತ್ಕೇವಲಜ್ಞಾನಲೋಚನಃ ।
ಭವ್ಯಾನಾಂ ಧರ್ಮದೇಶೇನ ವಿಹೃತ್ಯ ವಿಷಯಾಂಸ್ತತಃ ॥ ೧೭೫೬ ॥

ಗತ್ವಾ ವಿಪುಲಶಬ್ದಾದಿಗಿರೌ ಪ್ರಾಪ್ಸ್ಯಾಮಿ ನಿರ್ವೃತಿಮ್ ।
ಮನ್ನಿರ್ವೃತಿದಿನೇ ಲಬ್ಧಾ ಸುಧರ್ಮಃ ಶ್ರುತಪಾರಗಃ ॥ ೧೭೫೭ ॥

ಲೋಕಾಲೋಕಾವಲೋಕೈಕಾಲೋಕಮಂತ್ಯವಿಲೋಚನಮ್ ।
ತನ್ನಿರ್ವಾಣಕ್ಷಣೇ ಭಾವೇ ಜಂಬೂನಾಮಾತ್ತಕೇವಲಃ ॥ ೧೭೫೮ ॥

ಅಂತ್ಯಃ ಕೇವಲಿನಾಮಸ್ಮಿನ್ ಭರತೇ ಸ ಪ್ರರೂಪ್ಯತೇ ।
ನಂದೀ ಮುನಿಸ್ತತಃ ಶ್ರೇಷ್ಠೋ ನಂದಿಮಿತ್ರೋಽಪರಾಜಿತಃ ॥ ೧೭೫೯ ॥

ಗೋವರ್ಧನಶ್ಚತುರ್ಥೋಽನ್ಯೋ ಭದ್ರಬಾಹುರ್ಮಹಾತಪಾಃ ।
ನಾನಾನಯವಿಚಿತ್ರಾರ್ಥಸಮಸ್ತಶ್ರುತಪೂರ್ಣತಾಮ್ ॥ ೧೭೬೦ ॥

ಏತೇ ಕ್ರಮೇಣ ಪಂಚಾಪಿ ಪ್ರಾಪ್ಸ್ಯಂತ್ಯಾಪ್ತವಿಶುದ್ಧಯಃ ।
ತತೋ ಭಾವೀ ವಿಶಾಖಾರ್ಯಃ ಪ್ರೋಷ್ಠಿಲಃ ಕ್ಷತ್ರಿಯಾಂತಕಃ॥ ೧೭೬೧ ॥

ಜಯನಾಮಾನು ನಾಗಾಹ್ವಃ ಸಿದ್ಧಾರ್ಥೋ ಧೃತಿಷೇಣಕಃ ।
ವಿಜಯೋ ಬುದ್ಧಿಲೋ ಗಂಗದೇವಶ್ಚ ಕ್ರಮತೋ ಮತಾಃ ॥ ೧೭೬೨ ॥

ಏಕಾದಶ ಸಹ ಶ್ರೀಮದ್ಧರ್ಮಸೇನೇನ ಧೀಮತಾ ।
ದ್ವಾದಶಾಂಗಾರ್ಥಕುಶಲಾ ದಶಪೂರ್ವಧರಾಶ್ಚ ತೇ ॥ ೧೭೬೩ ॥

**ಭ್ರಾಂತ್ವಾ ತತೋ ವಿನಿರ್ಗತ್ಯ ಸ್ಥಾವರಾಖ್ಯೋ ದ್ವಿಜೋಭವತ್ ।**
**ತತಶ್ಚತುರ್ಥಕಲ್ಪೇಭೂದ್ವಿಶ್ವನಂದೀ ತತಶ್ಚ್ಯುತಃ ॥ ೧೭೭೮ ॥**

ಮತ್ತೆ ಮಾಹೇಂದ್ರಕಲ್ಪದಲ್ಲಿ ಹುಟ್ಟಿದನು. ಬಳಿಕ ಅಲ್ಲಿಂದ ಚ್ಯುತನಾಗಿ ಮನುಷ್ಯನಾದನು. ನರಕಗಳಲ್ಲಿಯೂ ತ್ರಸಸ್ಥಾವರಗಳಲ್ಲಿಯೂ ಅಸಂಖ್ಯಾತವರ್ಷಗಳವರೆಗೆ ತಿರುಗಿ ಅಲ್ಲಿಂದ ಹೊರಟು ಸ್ಥಾವರನೆಂಬ ದ್ವಿಜನಾದನು. ಆಮೇಲೆ ಚತುರ್ಥಕಲ್ಪದಲ್ಲಿ ದೇವನಾದನು. ಅಲ್ಲಿಂದ ಚ್ಯುತನಾಗಿ ವಿಶ್ವನಂದಿಯಾದನು.

**ಮಹಾಶುಕ್ರೇ ತತೋ ದೇವಸ್ತ್ರಿಖಂಡೇಶಸ್ತ್ರಿಪೃಷ್ಠವಾಕ್ ।**
**ಸಪ್ತಮೇ ನರಕೇ ತಸ್ಮಾತ್ತಸ್ಮಾಚ್ಚ ಗಜವಿದ್ವಿಷಃ ॥ ೧೭೭೯ ॥**

ಅನಂತರ ಮಹಾಶುಕ್ರಕಲ್ಪದಲ್ಲಿ ದೇವನಾದನು. ಬಳಿಕ ತ್ರಿಖಂಡಾಧಿಪತಿಯಾದ ತ್ರಿಪೃಷ್ಠನಾದನು. ಅಲ್ಲಿಂದ ಏಳನೆಯ ನರಕದಲ್ಲಿ ಜನಿಸಿದನು. ಅಲ್ಲಿಂದಲೂ ಬಂದು ಸಿಂಹವಾದನು.

**ಆದಿಮೇ ನರಕೇ ತಸ್ಮಾತ್ಸಿಂಹಃ ಸದ್ಧರ್ಮನಿರ್ಮಲಃ ।**
**ತತಃ ಸೌಧರ್ಮಕಲ್ಪೇಭೂತ್ಸಿಂಹಕೇತುಃ ಸುರೋತ್ತಮಃ ॥ ೧೭೮೦ ॥**

ಅಲ್ಲಿಂದ ಪ್ರಥಮನರಕದಲ್ಲಿ ಹುಟ್ಟಿದನು. ಅಲ್ಲಿಂದ ಬಂದು ಸಿಂಹವಾಗಿ ಹುಟ್ಟಿ ಸದ್ಧರ್ಮದಿಂದ ನಿರ್ಮಲನಾಗಿ ಬಳಿಕ ಸೌಧರ್ಮಕಲ್ಪದಲ್ಲಿ ಸಿಂಹಕೇತುವೆಂಬ ದೇವೋತ್ತಮನಾದನು.

**ಕನಕೋಜ್ಜ್ವಲನಾಮಾಭೂತ್ತತೋ ವಿದ್ಯಾಧರಾಧಿಪಃ ।**
**ದೇವಃ ಸಪ್ತಮಕಲ್ಪೇನು ಹರಿಷೇಣಸ್ತತೋ ನೃಪಃ ॥ ೧೭೮೧ ॥**

ಅಲ್ಲಿಂದ ಚ್ಯುತನಾಗಿ ಕನಕೋಜ್ವಲನೆಂಬವನಾದನು. ಬಳಿಕ ವಿದ್ಯಾಧರಾಧಿಪತಿಯಾದನು. ತರುವಾಯ ಏಳನೆಯ ಕಲ್ಪದಲ್ಲಿ ದೇವನಾದನು. ಅಲ್ಲಿಂದ ಚ್ಯುತನಾಗಿ ಹರಿಷೇಣರಾಜನಾದನು.

**ಮಹಾಶುಕ್ರೇ ತತೋ ದೇವಃ ಪ್ರಿಯಮಿತ್ರೋನು ಚಕ್ರಭೃತ್ ।**
**ಸ ಸಹಸ್ರಾರಕಲ್ಪೇಭೂದ್ದೇವಃ ಸೂರ್ಯಪ್ರಭಾಹ್ವಯಃ ॥ ೧೭೮೨ ॥**

ಆಮೇಲೆ ಮಹಾಶುಕ್ರದಲ್ಲಿ ದೇವನಾದನು. ತರುವಾಯ ಪ್ರಿಯಮಿತ್ರ ಚಕ್ರವರ್ತಿಯಾದನು. ಅವನು ಸತ್ತು ಸಹಸ್ರಾರಕಲ್ಪದಲ್ಲಿ ಸೂರ್ಯಪ್ರಭನೆಂಬ ದೇವನಾದನು.

**ರಾಜಾ ನಂದಾಭಿಧಸ್ತಸ್ಮಾತ್ಪುಷ್ಪೋತ್ತರವಿಮಾನಜಃ ।**
**ಅಚ್ಯುತೇಂದ್ರಸ್ತತಶ್ಚ್ಯುತ್ವಾ ವರ್ಧಮಾನೋ ಜಿನೇಶ್ವರಃ ॥ ೧೭೮೩ ॥**

ಅಲ್ಲಿಂದ ಚ್ಯುತನಾಗಿ ನಂದನೆಂಬ ರಾಜನಾದನು. ಅಲ್ಲಿಂದ ಅಚ್ಯುತಕಲ್ಪದಲ್ಲಿ ಪುಷ್ಪೋತ್ತರವಿಮಾನದಲ್ಲಿ ಜನಿಸಿದ ಅಚ್ಯುತೇಂದ್ರನಾದನು. ಅಲ್ಲಿಂದ ಚ್ಯುತನಾಗಿ ವರ್ಧಮಾನಜಿನೇಶ್ವರನಾದನು.

**ಪ್ರಾಪ್ತಪಂಚಮಹಾಕಲ್ಯಾಣರ್ದ್ಧಿಃ ಪ್ರಾಸ್ತುತಸಿದ್ಧಿಭಾಕ್ ।**
**ಪ್ರದಿಶ್ಯಾದ್ಗುಣಭದ್ರೇಭ್ಯಃ ಸ ವಿಭುಃ ಸರ್ವಮಂಗಲಮ್ ॥ ೧೭೮೪ ॥**

ಪಂಚಮಹಾಕಲ್ಯಾಣಸಂಪತ್ತಿಯನ್ನು ಪಡೆದವನೂ ಬಹುಸ್ತುತ್ಯವಾದ ಸಿದ್ಧಿಯನ್ನು ಹೊಂದಿದವನೂ ಆದ ಆ ಸ್ವಾಮಿಯು ಗುಣಗಳಿಂದ ಮಂಗಲಸ್ವರೂಪರಾಗಿರುವವರಿಗೆ ಗುಣಭದ್ರರಿಗೆ ಸರ್ವಮಂಗಲವನ್ನು ಕೊಡಲಿ."

**ಇತ್ಥಂ ಗೌತಮವಕ್ತ್ರವಾರಿಜಲಸದ್ವಾಗ್ವಲ್ಲಭಾವಾಙ್ಮಯೈಃ ।**
**ಪೀಯೂಷೈಃ ಸುಕಥಾರಸಾತಿಮಧುರೈರ್ಭಕ್ತ್ಯೋಪಯುಕ್ತೈಶ್ಚಿರಮ್ ॥**
**ಸಾ ಸಂಸನ್ಮಗಧಾಧಿಪಶ್ಚ ಮಹತೀ ತುಷ್ಟಿಂ ಸಮಂ ಜಗ್ಮತುಃ ।**
**ಪುಷ್ಟಿಂ ದೃಷ್ಟಿವಿಬೋಧಯೋರ್ವಿದಧತೀಂ ಸರ್ವಾರ್ಥಸಂಪತ್ಕರೀಮ್ ॥**

ಈ ರೀತಿಯಾಗಿ ಉತ್ತಮಕಥೆಯೆಂಬ ರಸದಿಂದ ಬಹುಮಧುರವೂ ಭಕ್ತಿಯಿಂದ ಉಪಯೋಗಿಸಲ್ಪಟ್ಟಿರುವುದೂ ಗೌತಮರಮುಖಕಮಲದಲ್ಲಿ ಪ್ರಕಾಶಮಾನಳಾದ ಸರಸ್ವತಿಯೆಂಬ ಪ್ರಿಯೆಯ ವಚನಮಯವೂ ಆದ ಅಮೃತಗಳಿಂದ ಆ ಸಮವಸರಣಸಭೆಯೂ ಮಗಧೇಶ್ವರ-ಶ್ರೇಣಿಕನೂ ಬಹುಕಾಲದವರೆಗೆ ಸಮ್ಯಗ್ದರ್ಶನಜ್ಞಾನಗಳಿಗೆ ಪುಷ್ಟಿಯನ್ನುಂಟುಮಾಡುವುದೂ ಸಮಸ್ತ ಪ್ರಯೋಜನವನ್ನೂ ಸಂಪತ್ತನ್ನೂ ಉಂಟುಮಡುವುದೂ ಆದ ಅಧಿಕಸಂತೋಷವನ್ನು ಒಟ್ಟಿಗೆ ಹೊಂದಿದರು.

**ಶ್ರೀವರ್ಧಮಾನಮಜಿತಂ ಜಿನ ವರ್ಧಮಾನಂ ।**
**ತ್ವಾಂ ತಂ ನಯೇ ಸ್ತುತಿಪಥೇ ಪಥಿ ಸಂಪ್ರಧೌತೇ ॥**
**ಯೋಂತ್ಯೋಪಿ ತೀರ್ಥಕರಮಗ್ರಿಮಮಪ್ಯಜೈಷೀ- ।**
**ತ್ಕಾಲೇ ಕಲೌ ಚ ಪೃಥುಲೀಕೃತಧರ್ಮತೀರ್ಥಃ ॥ ೧೭೮೬ ॥**

ಯಾವನು ತೀರ್ಥಂಕರರುಗಳಲ್ಲಿ ಕೊನೆಯವನಾದರೂ ಕಲಿಕಾಲದಲ್ಲಿಯೂ ಧರ್ಮವೆಂಬ ತೀರ್ಥವನ್ನು ಹೆಚ್ಚಿಸಿದವನಾಗಿ ಪ್ರಥಮತೀರ್ಥಂಕರನನ್ನು ಜಯಿಸಿದನೋ ಜಿನನೇ ! ಅಂತರಂಗ ಬಹಿರಂಗ ಸಂಪತ್ತಿಯಿಂದ ವೃದ್ಧಿಯನ್ನು ಹೊಂದುವವನೂ ಬೇರೆಯವರಿಂದ ಜಯಿಸಲ್ಪಡದವನೂ ಆದ ಅಂತಹ ವರ್ಧಮಾನನಾದ ನಿನ್ನನ್ನು ಚೆನ್ನಾಗಿ ಪ್ರಕ್ಷಾಲಿತವಾದ-ಶುದ್ಧವಾದ ಸ್ತುತಿರೂಪವಾದ ಮಾರ್ಗವುಳ್ಳ ಪದ್ಧತಿಯಲ್ಲಿ ಒಯ್ಯುತ್ತೇನೆ. ಸ್ತುತಿಸುತ್ತೇನೆಂದು ಭಾವವು.

**ಸ್ತುತ್ಯಂ ಪ್ರಸಾದಯಿತುಮರ್ಥಿಜನೋ ವಿನೌತಿ ।**
**ನ ತ್ವಯ್ಯದಸ್ತವ ಸ ಮೋಹಜಯಸ್ತವೋಯಮ್ ॥**
**ತನ್ನಾರ್ಥಿನಃ ಸ್ತುತಿರಿಹೇಶ ಮಮಾಸ್ತಿ ಬಾಧಮ್ ।**
**ಸ್ತುತ್ಯಸ್ತುತಿಪ್ರಣಯಿನೋರ್ಥಪರಾಙ್ಮುಖಸ್ಯ ॥ ೧೭೮೭ ॥**

ದೇವನೇ ! ಲೋಕದಲ್ಲಿ ಯಾಚಕಜನವು ಸ್ತುತಿಗೆ ಯೋಗ್ಯನಾದವನನ್ನು ಒಲಿಸುವುದಕ್ಕೋಸ್ಕರ ಸ್ತುತಿಸುತ್ತದೆ. ನಿನ್ನಲ್ಲಿ ಈ ಒಲಿಯುವಿಕೆಯು-ಪ್ರೇಮವು ಇಲ್ಲ. ಇದು ನಿನ್ನ ಆ ಮೋಹಕರ್ಮಜಯದ ಸ್ತೋತ್ರವಾಗಿದೆ. ಆದುದರಿಂದ ಸ್ತುತ್ಯನಾಗಿರುವವನ ಸ್ತುತಿಯಲ್ಲಿ ಪ್ರೀತಿಯುಳ್ಳವನೂ ಅರ್ಥ-ಯಾಚನೆಯಲ್ಲಿ ವಿಮುಖನೂ ಆದ ನನ್ನ ಸ್ತುತಿಯು ನಿಜವಾಗಿಯೂ ಅರ್ಥಿ-ಯಾಚಕನ ಸ್ತುತಿಯಲ್ಲ.

**ಯೇಷಾಂ ಪ್ರಮೇಯವಿಮುಖಂ ಸುಮುಖ ಪ್ರಮಾಣಂ ।**
**ತೇ ನ ಸ್ತುತೇರ್ಹಿತಜುಷಾಂ ವಿಷಯೀಭವೇಯುಃ ॥**
**ತ್ವಂ ವಿಶ್ವಭಾವವಿಹಿತಾವಗಮಾತ್ಮಕೋರ್ಹನ್ ।**
**ವಕ್ತಾ ಹಿತಸ್ಯ ತತ ಏವ ಹಿತೈಷಿವಂದ್ಯಃ ॥ ೧೭೮೮ ॥**

ಸುಮುಖನೇ ! ಯಾರ ಪ್ರಮಾಣವು-ಜ್ಞಾನವು ಪ್ರಮೇಯಗಳಿಂದ (ತಿಳಿಯಲ್ಪಡತಕ್ಕ ವಸ್ತುಗಳಿಂದ) ವಿಮುಖವಾಗಿದೆಯೋ-ತಿಳಿಯುವುದಿಲ್ಲವೋ ಅಂಥವರು ಹಿತವನ್ನು ಬಯಸುವವರ ಸ್ತುತಿಗೆ ವಿಷಯರಾಗಲಾರರು. ಅರ್ಹತ್ಪರಮೇಶ್ವರನೇ ! ಸಮಸ್ತಪದಾರ್ಥಗಳಲ್ಲಿ ಮಾಡಲ್ಪಟ್ಟ(ವ್ಯಾಪಕವಾದ) ಜ್ಞಾನಸ್ವರೂಪಿಯಾದ ನೀನು ಹಿತವನ್ನು ಹೇಳುವವನಾಗಿರುತ್ತಿ. ಆದುದರಿಂದಲೇ ಹಿತವನ್ನು ಬಯಸುವವರಿಂದ ವಂದಿಸಲ್ಪಡತಕ್ಕವನಾಗಿರುತ್ತಿ.

**ದಾತಾಸಿ ನ ಸ್ತುತಿಫಲಂ ಸಮುಪೈತ್ಯವಶ್ಯಂ ।**
**ಸ್ತೋತಾ ಮಹಚ್ಚಟಿತಿ ಶುಭ್ರಮಯಾಚಿತೋಗ್ರ್ಯಮ್ ॥**
**ಕುರ್ಯಾಂ ಕುತಸ್ತವ ನ ಸಂಸ್ತವನಂ ಜಿನೇಶ ।**
**ದೈನ್ಯಾತಿಭೀರುರಹಮುಗ್ರ್ಯಫಲಾಭಿಲಾಷೀ ॥ ೧೭೮೯ ॥**

ಜಿನೇಶ್ವರನೇ ! ನೀನು ಸ್ತೋತ್ರದ ಫಲವನ್ನು ಕೊಡುವವನಲ್ಲ. ಆದರೆ ಸ್ತುತಿಸುವವನು ಬೇಡಲ್ಪಡದಿರುವುದೂ ಉತ್ಕೃಷ್ಟವೂ ಅಧಿಕವೂ ಆದ ಸ್ತುತಿಫಲವನ್ನು ಅವಶ್ಯವಾಗಿಯೂ ಶೀಘ್ರವಾಗಿಯೂ ಹೊಂದುತ್ತಾನೆ. ದೈನ್ಯವುಳ್ಳವನೂ ಬಹುಭಯವುಳ್ಳವನೂ ಉತ್ಕೃಷ್ಟಫಲವನ್ನು ಬಯಸುವವನೂ ಆದ ನಾನೇಕೆ ನಿನ್ನ ಸ್ತೋತ್ರವನ್ನು ಮಾಡುವುದಿಲ್ಲ ?

**ಇತಿ ಕತಿಪಯವಾಗ್ಭಿರ್ವರ್ಧಮಾನಂ ಜಿನೇಂದ್ರಮ್ ।**
**ಮಗಧಪತಿರುದೀರ್ಣಶ್ರದ್ಧಯಾ ಸಿದ್ಧಕೃತ್ಯಃ ॥**
**ಗಣಧೃತಮಪಿ ನುತ್ವಾ ಗೌತಮಂ ಧರ್ಮಧುರ್ಯಃ ।**
**ಸ್ವಪುರಮವಿಶದುದ್ಯತ್ತುಷ್ಟಿರಾಗಾಮಿಸಿದ್ಧಿಃ ॥ ೧೮೧೭ ॥**

ಸಿದ್ಧವಾದ ಕಾರ್ಯವುಳ್ಳವನೂ ಧರ್ಮಧುರಂಧರನೂ ಸಂತೋಷೋತ್ಪತ್ತಿಯುಳ್ಳವನೂ ಮುಂದಾಗುವ ಸಿದ್ಧಿಯುಳ್ಳವನೂ ಆದ ಮಗಧೇಶ್ವರ–ಶ್ರೇಣಿಕನು ಉತ್ಪನ್ನವಾದ ಶ್ರದ್ಧೆಯಿಂದ ಈ ರೀತಿಯಾಗಿ ಕೆಲವು ವಚನಗಳಿಂದ ವರ್ಧಮಾನ ಜಿನೇಶ್ವರನನ್ನೂ ಗೌತಮಗಣಧರನನ್ನೂ ಸ್ತುತಿಸಿ ತನ್ನ ಪಟ್ಟಣವನ್ನು ಪ್ರವೇಶಿಸಿದನು.

**(ಅನುಷ್ಟುಪ್ಛಂದಸಾ ಜ್ಞೇಯಾ ಗ್ರಂಥಸಂಖ್ಯಾ ತು ವಿಂಶತಿಃ ।**

**ಸಹಸ್ರಾಣಾಂ ಪುರಾಣಸ್ಯ ವ್ಯಖ್ಯಾತೃಶ್ರೋತೃಲೇಖಕೈಃ ॥)**

(ಮಹಾಪುರಾಣದ ವ್ಯಾಖ್ಯಾನಕಾರರೂ ಶ್ರೋತೃಗಳೂ ಲೇಖಕರೂ ಅನುಷ್ಟುಪ್ಛಂದಸ್ಸಿನಿಂದ ಮಹಾಪುರಾಣಗ್ರಂಥದ ಸಂಖ್ಯೆಯು ಇಪ್ಪತ್ತುಸಾವಿರವೆಂದು ತಿಳಿಯಬೇಕು).

**ಇತ್ಯಾರ್ಷೇ ಭಗವದ್ಗುಣಭದ್ರಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಶ್ರೀವರ್ಧಮಾನಸ್ವಾಮಿಪುರಾಣಂ ನಾಮ ಷಟ್ಸಪ್ತತಿತಮಂ ಪರ್ವ ॥**

ಋಷಿಪ್ರಣೀತವೂ ಭಗವದ್ಗುಣಭದ್ರಾಚಾರ್ಯವಿರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಶ್ರೀವರ್ಧಮಾನಸ್ವಾಮಿಪುರಾಣವೆಂಬ
ಎಪ್ಪತ್ತಾರನೆಯ ಪರ್ವವು ಸಮಾಪ್ತವಾದುದು.

---

**ಕವಿಪರಮೇಶ್ವರ** – ಗದ್ಯಕಥೆಯ ರೂಪದಲ್ಲಿ ಇವರು ಹೇಳಿದ ಪುರುಚರಿತೆಯನ್ನು ಜಿನಸೇನಾಚಾರ್ಯರು ಛಂದಸ್ಸಿನಲ್ಲಿ ಹೇಳಿದರು **೭೭** : ೧೭, ನೋ : ಕವಿ ಪರಮೇಷ್ಠಿ.

**ಕಪಿಲ** – ಧರಣೀಜಟನ ದಾಸೀ ಪುತ್ರ **೬೨** : ೩೨೪, ಸೂಕ್ಷ್ಮ ಬುದ್ಧಿಯವನು. ಅಪ್ರತ್ಯಕ್ಷವಾಗಿ ವೇದಾಧ್ಯಯನ ಮಾಡುವುದನ್ನು ಒಡೆಯ ತಿಳಿದು ಮನೆಯಿಂದ ಹೊರಹಾಕಿದ. ರತ್ನಪುರಕ್ಕೆ ಹೋದ : ೩೨೪–೬, ಸತ್ಯಭಾಮೆಯೊಡನೆ ವಿವಾಹ : ೩೨೭, ಆಕೆಗೆ ದೀರ್ಘಸಂದೇಹ : ೩೨೯, ಧರಣೀಜಟನಿಂದ ಇವನ ಹುಟ್ಟಿನ ಗುಟ್ಟು ಬಯಲಾಯಿತು : ೩೩೪–೬. ಇವನ ಉತ್ತರ ಭವಗಳು : ಕಪಿಲ – ಮೃಗಶೃಂಗ – ಅಶನಿಘೋಷ : ೩೭೯–೮೦.

**ಕಪಿಲ** – ಮರೀಚಿಯ ಶಿಷ್ಯ. ಇವನಿಗೆ ತತ್ತ್ವಾಭಾಸವನ್ನು ಮರೀಚಿ ಬೋಧಿಸಿದನು **೭೪** : ೬೬.

– ಅಯೋಧ್ಯೆಯ ಬ್ರಾಹ್ಮಣ. ಪತ್ನಿ ಕಾಲಿ, ಪುತ್ರ ಜಟಿಲ **೭೪** : ೬೭–೮.

– ಇವನ ದರ್ಶನದ ಖಂಡನೆ **೭೬** : ೧೮೦೮. ಋಷಿ **೪೯** : ೨೨.

**ಕಪಿಷ್ಠಿಲ** – ಅಯೋಧ್ಯೆಯ ಗೌತಮಗೋತ್ರದ ಬ್ರಾಹ್ಮಣ. ಪತ್ನಿ ಅನುಂದರಿ. ಪುತ್ರ ಗೌತಮ **೭೦** : ೧೬೧.

**ಕಮಠ** – ವಿಶ್ವಭೂತಿ, ಅನುಂದರಿಯರ ಮಗ. ಮರುಭೂತಿಯ ಅಣ್ಣ **೭೩** : ೯, ಪತ್ನಿ ವರುಣೆ. ಅರವಿಂದನ ಮಂತ್ರಿ : ೧೦, ತಮ್ಮನ ಹೆಂಡತಿಗಾಗಿ ಮರುಭೂತಿಯನ್ನು ಕೊಂದನು : ೧೧.

**ಕಮಲಕೇತು** – ರಾಮ ರಾವಣರ ಯುದ್ಧದಲ್ಲಿ ರಾಮನ ಪಕ್ಷದ ಇವನು ಖರನೊಡನೆ ಯುದ್ಧಮಾಡುತ್ತಾನೆ **೬೮** : ೧೦೯೮.

**ಕರ್ಣ** – ಕುಂತಿಯ ಮಗ. ಜನನ **೭೦** : ೧೧೦.

**ಕಲಿಂಗರಾಜ** – ಕುರುಕ್ಷೇತ್ರ ಯುದ್ಧದಲ್ಲಿ ಜರಾಸಂಧನ ಕಡೆಯಿಂದ ಯುದ್ಧ ಮಾಡಿದನು **೭೧** : ೫೭೭.

**ಕಲ್ಕಿ** – ಪಾಟಲೀಪುತ್ರದ ರಾಜ ಶಿಶುಪಾಲ ಹಾಗೂ ಪೃಥಿವೀಸುಂದರಿಯ ಮಗ. ದುರ್ಜನರಲ್ಲಿ ಮೊದಲಿಗ **೭೬** : ೧೬೩೯.

**ಕಲ್ಕಿ** – ಇವರು ಇಪ್ಪತ್ತುಮಂದಿ. ಪ್ರತಿ ಸಹಸ್ರವರ್ಷಕ್ಕೊಬ್ಬ. ಕೊನೆಯವನು ಜಲಮಂಥ ಕಲ್ಕಿ **೭೬** : ೧೬೭೧.

**ಕಾಕಜಂಘ** – ಒಬ್ಬ ಮಾತಂಗ. ಹಿಂದೆ ಬ್ರಾಹ್ಮಣನಾಗಿದ್ದ ಸೋಮದೇವ ಪಾಪಮಾಡಿ ನಾರಕಿಯಾಗಿ, ಅನಂತರ ಕಾಕಜಂಘನಾದ **೭೨** : ೯೯೦, ಪೂರ್ವಭವ ಪುತ್ರನಿಂದ ಬೋಧಿಸಲ್ಪಟ್ಟು, ಉಪಶಮಭಾವ ಹೊಂದಿ ಮುಂದೆ ವ್ಯಂತರ ದೇವನಾದ : ೯೯೨.

**ಕಾಣಭಿಕ್ಷುಮುನಿ** – ಪುರಾಣದ ಆರಂಭದಲ್ಲಿ ಜಿನಸೇನಾಚಾರ್ಯರು ಇವರನ್ನು ಸ್ಮರಿಸಿದ್ದಾರೆ **೧** : ೫೧.

**ಕಾಮ** – ಪ್ರದ್ಯುಮ್ನ **೭೨** : ೧೧೧೬.

**ಕಾಮದೇವ** – ವೃಷಭನಾಥನ ೮೩ನೇ ಗಣಧರ **೪೩** : ೬೬.

**ಕಾಪಿಲ** – ಸಾಂಖ್ಯಮತ ಪ್ರವರ್ತಕ **೨೧** : ೨೫೧.

**ಕಾಲಕ** – ಬೇಡರ ನಾಯಕ **೭೦** : ೧೫೬.

– ಬೇಡ. ಇವನಿಗೆ ಚಂದನೆ ತನ್ನ ಉತ್ಕೃಷ್ಟ ಆಭರಣಗಳನ್ನು ಕೊಟ್ಟಳು **೭೫** : ೫೯೫.

**ಕಾಲಕೂಟ** – ಕಿರಾತ. ಗೋಗ್ರಹಣದಲ್ಲಿ ಇವನನ್ನು ಜೀವಂಧರ ಜಯಿಸಿದನು **೭೫** : ೮೩೬–೪೬.

**ಕಾಲಯವನ** – ಜರಾಸಂಧನ ಪುತ್ರ. ಯಾದವರ ಮೇಲೆ ದಂಡೆತ್ತಿ ಹೋದನು. ಯಾದವರ ಕುಲದೇವತೆಯಿಂದ ವಂಚಿತನಾದನು **೭೧** : ೫೦೮–೧೪.

**ಕಾಲಶಂಬರ** – ಮೇಘಕೂಟಪುರದ ವಿದ್ಯಾಧರರಾಜ. ಪತ್ನಿ ಕಾಂಚನಮಾಲೆ **೭೨** : ೧೦೧೪, ಪ್ರದ್ಯುಮ್ನನ ಸಾಕು ತಂದೆ. ಪತ್ನಿಯ ಇಚ್ಛೆಯಂತೆ ಶಿಶುವಿಗೆ ಯುವರಾಜಪಟ್ಟ ನೀಡಿದನು : ೧೦೧೮, ಇವನಿಗೆ ವಿದ್ಯುದ್ದಂಷ್ಟ್ರ ಮೊದಲಾದ ೫೦೦ ಪುತ್ರರು. ಇವರಿಗೆ ಪ್ರದ್ಯುಮ್ನನನ್ನು ಕೊಲ್ಲಲು ಸೂಚನೆ : ೧೦೪೪, : ೧೦೮೭–೯.

**ಕಾಲಸೌಕಾರಿಕ** – ರಾಜಗೃಹದವನು. ಅಧೋಗತಿಗೆ ಹೋಗುವನು **೭೪** : ೪೫೫–೬೦.

**ಕಾಲಾಂಗಾರಿಕ** – ಕಾಷ್ಠಾಂಗಾರಿಕನ ಪುತ್ರ. ತಂದೆ ಯುದ್ಧದಲ್ಲಿ ಸೋತು ಓಡಿದಾಗ, ಇವನು ಮುನ್ನುಗ್ಗಿ ಗೆದ್ದನು **೭೫** : ೭೭೦, ಗಂಧರ್ವದತ್ತೆಯನ್ನು ಪಡೆಯಲು ಯುದ್ಧಕ್ಕೆ ಉದ್ಯುಕ್ತನಾದ : ೮೪೯.

**ಕಾಶಿರಾಜ** – ಸುಲೋಚನೆಯ ತಂದೆ **೪೫** : ೧೬೯.

**ಕಾಶ್ಯಪ** – ಇವನನ್ನು ವೃಷಭನಾಥನು ಸನ್ಮಾನಿಸಿ ಮಹಾಮಂಡಲಿಕ ರಾಜನನ್ನಾಗಿ ಮಾಡಿದನು **೧೬** : ೨೫೬, ಮಘವನೆಂಬ ಹೆಸರು ಪಡೆದು ಉಗ್ರವಂಶಕ್ಕೆ ಶ್ರೇಷ್ಠನಾದನು : ೨೬೧.

**ಕಾಷ್ಠಾಂಗಾರ** – ಸತ್ಯಂಧರನ ಮಂತ್ರಿ **೭೫** : ೭೩೯, ರುದ್ರದತ್ತನ ದುರ್ಬೋಧನೆಗೆ ಒಳಗಾದ : ೭೫೬–೬೫, ಯುದ್ಧದಲ್ಲಿ ಸೋತು ಓಡಿಹೋದ : ೭೬೯, ಸತ್ಯಂಧರನ ರಾಜ್ಯವನ್ನು ಅಪಹರಿಸಿದ ಇವನನ್ನು ಜೀವಂಧರನು ಸಂಹರಿಸಿದನು. **೭೫** : ೧೧೮೭–೯೧, : ೧೨೦೪, : ೧೨೧೪–೬.

**ಕಿನ್ನರಮಿತ್ರ, ಯಕ್ಷಮಿತ್ರ** – ಶ್ರೀಚಂದ್ರೆಯ ಸಹೋದರರು. ಇವರು ಲೋಹಜಂಘ ಹಾಗೂ ಶ್ರೀಷೇಣರಿಗೆ ಪರಾಜಿತರಾಗುತ್ತಾರೆ **೭೫** : ೧೦೪೦–೨.

**ಕೀಚಕ** – ಭುಜಂಗಪುರದಲ್ಲಿ ಇವನನ್ನು ಭೀಮ ಸಂಹರಿಸುತ್ತಾನೆ **೭೨** : ೧೧೭೪.

**ಕೀರ್ತಿಧರ** – ದಮಿತಾರಿಯ ತಂದೆ. ಕನಕಪುಂಖ ಹಾಗೂ ಜಯದೇವಿಯ ಪುತ್ರ. ಜಿನೇಶ್ವರ **೬೨** : ೪೮೬–೮.

**ಕುಂಥು** – ಶ್ರೇಯಾಂಸನಾಥರ ಮುಖ್ಯ ಗಣಧರ **೫೭** : ೫೪.

**ಕುಂಥುನಾಥ** – ೧೭ನೇ ತೀರ್ಥಂಕರ. ನೋಡಿ : ಪರ್ವ **೬೪**.

**ಕುಂಭ** – ಸಿಂಹಪುರದ ರಾಜ, ನರಮಾಂಸ ಭಕ್ಷಕ **೬೨** : ೨೦೫, ಅಡಿಗೆಯವನನ್ನು ಕೊಂದ, ರಾಕ್ಷಸನನ್ನು ವಶಪಡಿಸಿಕೊಂಡ. ಜನರನ್ನು ಹಿಂಬಾಲಿಸಿ ಕಾರಟಕ ನಗರಕ್ಕೆ ಹೋದ. ಆಹಾರ ಒಪ್ಪಂದ ಇತ್ಯಾದಿ **೬೨** : ೨೦೬–೧೦.

**ಕುಂಭ, ಭೀಮ** – ಸಿಂಹಪುರದ ದೊರೆಗಳು **೬೨** : ೨೦೩.

**ಕುಂಭಕರ್ಣ** – ರಾವಣನ ತಮ್ಮ **೬೮** : ೯೦೮, ಸೀತೆ ಎಂಬ ಸ್ತ್ರೀ ಎಂಜಲು. ಆಕೆಯನ್ನು ಬಿಟ್ಟುಬಿಡು ಎಂದು ರಾವಣನಿಗೆ ಸಲಹೆ ನೀಡುತ್ತಾನೆ **೬೮** : ೯೫೧.

**ಕುಂಭಸೇನ** – ವೃಷಭನಾಥರ ೨ನೇ ಗಣಧರ **೪೩** : ೫೪.

**ಕುಂಭಾರ್ಯ** – ಅರತೀರ್ಥಂಕರರ ಮುಖ್ಯಗಣಧರ **೬೫** : ೩೯.

**ಕುಣಿಕ** – ರಾಜ. ಶ್ರೇಣಿಕನ ತಂದೆ. ಪತ್ನಿ ಶ್ರೀಮತಿ **೭೪** : ೪೧೮, ಉತ್ತರಾಧಿಕಾರಿ ಶ್ರೇಣಿಕನನ್ನು ರಾಜ್ಯದಿಂದ ಓಡಿಸಿದ : ೪೨೧, ರಾಜ್ಯ ತ್ಯಜಿಸಿದ : ೪೨೬.

– ಚೇಲಿನಿಯ ಪುತ್ರ. ರಾಜಗೃಹದ ಅಧಿಪತಿ **೭೫** : ೧೨೮೧; **೭೬** : ೧೩೫೩.

**ಕುನಾಲ** – ಪೃಥ್ವೀಪಾಲಕ. ತೀರ್ಥಂಕರರ ಸಮವಸರಣದಲ್ಲಿ ಶ್ರೋತೃಮುಖ್ಯ **೭೬** : ೧೭೭೧.

**ಕುಬೇರ** – ಧಾನ್ಯನಗರದ ವೈಶ್ಯ. ಇವನ ಮಗ ನಾಗದತ್ತ **೮** : ೨೨೯; ವೈಶ್ಯ. ಕುಬೇರದತ್ತೆಯ ತಂದೆ **೬೭** : ೯೩.

**ಕುಬೇರಕಾಂತ** – ಕುಬೇರ ಮಿತ್ರ, ಧನವತಿಯರ ಮಗ **೪೬** : ೩೧, ಏಕಪತ್ನೀ ಅಪೇಕ್ಷೆ : ೪೦. ಹಿಂದಿನ ಜನ್ಮದ ಶಕ್ತಿಷೇಣ : ೧೩೧, ರತಿಷೇಣನ ಪತ್ನಿ ಗಾಂಧಾರಿ ಇವನಲ್ಲಿ ಕಾಮವಿಕಾರ ತೋರಿದಾಗ **೪೬** : ೨೨೯–೩೨. ದೀಕ್ಷೆ : ೨೪೪, ಸತ್ತು ಲೌಕಾಂತಿಕದೇವನಾದ **೪೭** : ೧೮೫.

**ಕುಬೇರದಯಿತ** – ಕುಬೇರಕಾಂತನ ಐವರು ಪುತ್ರರಲ್ಲಿ ಒಬ್ಬ **೪೬** : ೨೩೪.

**ಕುಬೇರದತ್ತ** – ಪುಂಡರೀಕಿಣಿಯ ವರ್ತಕ. ಪತ್ನಿ ಅನಂತಮತಿ. ಪುತ್ರ ಧನದೇವ **೧೧** : ೧೪.

– ಹಿಂದಿನ ಜನ್ಮದ ಸತ್ಯದೇವ **೪೬** : ೧೩೧.

– ಕುಬೇರಕಾಂತನ ಪುತ್ರ : ೨೩೪.

– ನೋ : ಕನಕಶ್ರೀ **೭೬** : ೧೨೮೭.

– ಸಾಗರದತ್ತನ ಪುತ್ರ, ನಾಗದತ್ತನ ತಮ್ಮ **೭೬** : ೧೪೫೪, ಅಣ್ಣನನ್ನು ಶ್ರಾವಕನನ್ನಾಗಿಸಿದ : ೧೪೭೦–೬, ಪತ್ನಿ ಧನಮಿತ್ರೆ : ೧೪೭೭, ಮಗ ಚರಮದೇಹಿಯಾದ ಪ್ರೀತಿಂಕರ : ೧೪೮೧.

**ಕುಬೇರದೇವ** – ಕುಬೇರಕಾಂತನ ಪುತ್ರ **೪೬** : ೨೩೪.

**ಕುಬೇರಪ್ರಿಯ** – ಕುಬೇರಕಾಂತನ ಪುತ್ರ **೪೬** : ೨೩೫. ಪುಂಡರೀಕಿಣಿಯ ಮಹಾವೈಶ್ಯ **೪೬** : ೨೯೮, ತನ್ನ ವರದಿಂದ ವಧೆಯಾಗುತ್ತಿದ್ದ ಪೃಥುಧೀಯನ್ನು ಬಿಡಿಸಿದನು : ೩೧೫.

**ಕುಬೇರಮಿತ್ರ** – ಇವನ ಸೋದರಳಿಯ ರಾಜ ಲೋಕಪಾಲ. ಕರೆಯದೆ ಆಸ್ಥಾನಕ್ಕೆ ಬರದಿರುವಂತೆ ಅಪ್ಪಣೆ **೪೬** : ೫೭, ಪುಂಡರೀಕಿಣಿಯ ರಾಜಶ್ರೇಷ್ಠಿ. ಧನವತಿ ಮೊದಲಾದ ೩೨ ಜನ ಪತ್ನಿಯರಿದ್ದರು **೪೬** : ೨೧.

**ಕುಬೇರಯಕ್ಷ** – ಇವನು ಸ್ವಯಂವರಮಂಟಪದ ಸುಪ್ರಬುದ್ಧೆಗೆ ಬೋಧಿಸಿದುದರಿಂದ ಆಕೆ ದೀಕ್ಷಿತಳಾದಳು **೭೨** : ೯೯೪.

**ಕುಮಾರದತ್ತ** – ಒಬ್ಬ ವೈಶ್ಯ. ಗುಣಮಾಲೆಯ ತಂದೆ **೭೫** : ೮೭೦.

**ಕುಮುದ** – ದೂತನಾದ ಅಣುಮಂತನಿಗೆ ಸಹಾಯಕರಾದ ನಾಲ್ವರಲ್ಲಿ ಒಬ್ಬ **೬೮** : ೮೬೪.

**ಕುರಂಗ** – ಬೇಡ. ಕಮಠನ ಜೀವ. ವಜ್ರನಾಭಿ ಮುನಿಗೆ ಉಪಸರ್ಗ ಮಾಡಿದನು **೭೩** : ೩೭–೯.

**ಕುರುವಿಂದ** – ವಿದ್ಯಾಧರರಾಜನಾದ ಅರವಿಂದನ ಇಬ್ಬರು ಪುತ್ರರಲ್ಲಿ ಒಬ್ಬ **೫** : ೯೧.

**ಕುರ್ಯವರ** – ಕೌರವನ ಸೋದರಿಯ ಪುತ್ರ. ಕ್ರೂರಿ. ಸೋದರಮಾವನಾದ ಕೌರವನ ವಧೆಯನ್ನು ಸ್ಮರಿಸಿ ಪಂಚಪಾಂಡವ ಮುನಿಗಳಿಗೆ ಶತ್ರುಂಜಯಗಿರಿಯಲ್ಲಿ ಉಪಸರ್ಗ ಉಂಟುಮಾಡಿದನು **೭೨** : ೧೨೨೭–೮.

**ಕುಲಪುತ್ರ** – ಭವಿಷ್ಯತ್ಕಾಲದ ೭ನೇ ತೀರ್ಥಂಕರ **೭೬** : ೧೭೧೮.

**ಕುಲವಾಣಿಜ** – ನಂದಿಗ್ರಾಮ ನಿವಾಸಿ. ಇವನು ನಾಗದತ್ತನ ತಂಗಿ ಅರ್ಥಸ್ವಾಮಿನಿಯನ್ನು ವಿವಾಹವಾದ **೭೫** : ೬೫೨–೪.

**ಕುಶಲಮತಿ** – ಜನಕರಾಜನ ಸೇನಾಪತಿ **೬೭** : ೧೬೯, ಯಾಗದ ವಿಷಯದಲ್ಲಿ ನಾಗದೇವತೆಗಳಿಗೂ ಅಸುರದೇವತೆಗಳಿಗೂ ಇರುವ ಮಾತ್ಸರ್ಯದ ಕಾರಣ ತಿಳಿಸುತ್ತಾನೆ : ೧೬೯–೭೮.

**ಕೂಲ** – ಕೂಲಗ್ರಾಮದ ರಾಜ. ನವಣೆಯ ಹೂವಿನ ಕಾಂತಿ. ಮಹಾವೀರಸ್ವಾಮಿಗೆ ಆಹಾರದಾನವನ್ನು ಮಾಡಿ ಪಂಚಾಶ್ಚರ್ಯ ಹೊಂದಿದ **೭೪** : ೩೧೯–೨೨.

**ಕೃತಮಾಲ** – ವಿಜಯಾರ್ಧಪರ್ವತದಿಂದ ಇಳಿದು ಬಂದನು. ಚಂಪಕಮಾಲೆ ಧರಿಸಿದ್ದನು. ಭರತೇಶನಲ್ಲಿಗೆ ಆಗಮಿಸಿದನು **೩೧** : ೯೩–೪, ವಿಜಯಾರ್ಧಗಿರಿಯ ರಹಸ್ಯ ಅರಿತವನು : ೧೦೦, ತಿಲಕ ಮೊದಲಾದ ೧೪ ರತ್ನಗಳನ್ನು ಕೊಟ್ಟನು : ೧೧೪, ಪರ್ವತದ ಗುಹೆಯ ಬಾಗಿಲು ತೆರೆಯಿಸುವ ಉಪಾಯ ತಿಳಿಸಿದನು : ೧೧೭; **೩೫** : ೭೩.

**ಕೃತವರ್ಮ** – ಕಾಂಪಿಲ್ಯ ನಗರದ ರಾಜ. ಪತ್ನಿ ಜಯಶ್ಯಾಮ **೫೯** : ೧೫, ವಿಮಲ ತೀರ್ಥಂಕರರ ತಂದೆ.

**ಕೃತವೀರ** – ಸಹಸ್ರಬಾಹು, ಚಿತ್ರಮತಿಯರ ಪುತ್ರ **೬೫** : ೫೮ ಜಮದಗ್ನಿಯ ಜ್ಞಾತಿ. ಕಾಮಧೇನುವನ್ನು ಬಲಾತ್ಕಾರವಾಗಿ ವಶಪಡಿಸಿಕೊಂಡ. ಅಡ್ಡಬಂದ ಜಮದಗ್ನಿಯನ್ನು ಕೊಂದ : ೯೯–೧೦೬ ಪರಶುರಾಮನಿಗೆ ಬಲಿಯಾದ.

**ಕೃಪ** – ಜರಾಸಂಧನ ಪಕ್ಷದಿಂದ ಯುದ್ಧ ಮಾಡಿದನು **೭೧** : ೫೭೫.

**ಕೃಪವರ್ಮ** – ಜರಾಸಂಧನ ಪಕ್ಷದವನು **೭೧** : ೫೭೫.

**ಕೃಷ್ಣ** – ಬಾಲಕ ಕೃಷ್ಣನನ್ನು ಕೊಲ್ಲಲು ಬಂದ ಸಪ್ತ ದೇವತೆಗಳು ಅಸಮರ್ಥರಾದುದು **೭೦** : ೪೧೫–೨೫, ಇವನ ಪುಣ್ಯದಿಂದ ಮಧುರೆಯ ದೇವಾಲಯದಲ್ಲಿ ಸರ್ಪಶಯ್ಯೆ, ಧನಸ್ಸು, ಶಂಖ ಉದ್ಭವವಾದುದು : ೪೪೧, ಅರಿಷ್ಟದೇವನ ಪರೀಕ್ಷೆ : ೪೨೭–೯, ಗೋಧಾವನದಲ್ಲಿ ದೇವಕಿಯ ಭೇಟಿ : ೪೩೭, ಗೋವರ್ಧನಧಾರಿ : ೪೩೮, ಕಲ್ಲಿನ ಕಂಬ ಎತ್ತಿ ಬಲಪ್ರದರ್ಶನ : ೪೫೯, ಮಹಾಸರ್ಪ ಅದೃಶ್ಯವಾದುದು : ೪೭೧, ಮಧುರೆಯಲ್ಲಿ ಆನೆಯ ದಂತ ಕಿತ್ತುದು : ೪೭೭, ಚಾಣೂರನ ಸಂಹಾರ : ೪೯೩, ಕಂಸನ ಸಂಹಾರ : ೪೯೪; ಸಾಗರದಲ್ಲಿ ನಗರ ರಚನೆ **೭೧** : ೫೧೬, ದ್ವಾರವತಿ : ೫೨೫, ಸಹಸ್ರಕೂಟ ಜಿನಮಂದಿರ : ೫೨೩, ಕುರುಕ್ಷೇತ್ರದಲ್ಲಿ ಜರಾಸಂಧನ ಸಂಹಾರ : ೬೧೨, ದಿಗ್ವಿಜಯ : ೬೧೪–೯, ಆಯುಷ್ಯ, ಎತ್ತರ, ವರ್ಣ : ೬೨೦, ಸಪ್ತರತ್ನಗಳು : ೬೨೧, ಅಷ್ಟಮಹಿಷಿಯರು : ೬೨೩–೪, ೧೬ ಸಾವಿರ ಪತ್ನಿಯರು : ೬೨೪, ತೀವ್ರಲೋಭಕಷಾಯದಿಂದ ನೇಮೀಶ್ವರರಲ್ಲಿ ವೈರಾಗ್ಯ ಮೂಡುವಂತೆ ಉಪಾಯಮಾಡಿದುದು **೭೧** : ೬೪೯, ಶಿಶುಪಾಲನ ೩ನೇ ಕಣ್ಣು ಅದೃಶ್ಯವಾದುದು, ಹಾಗೂ ಅವನ ಸಂಹಾರ : ೮೩೮–೫೩. ಚಾಣೂರಮಲ್ಲ, ಕಂಸ, ಶಿಶುಪಾಲನನ್ನು ಕೊಂದುದು **೭೨** : ೧೨೪೨, ಜರಾಸಂಧನ ವಧೆ, ತ್ರಿಖಂಡ ವಿಜಯ : ೧೨೪೩–೫.

ಜಾಂಬವತಿಯನ್ನು ಪಡೆದುದು : ೮೭೫–೯, ಜರತ್ಕುಮಾರನಿಂದ ಇವನ ಮರಣ, ನರಕಗತಿ, ಭಾವಿ ತೀರ್ಥಂಕರ **೭೨** : ೧೧೪೦–೧.

ಭವಮಾಲೆ : ಅಮೃತರಸಾಯನನೆಂಬ ಬಾಣಸಿಗ – ೩ ನೇ ನರಕ –XXX– ಯಕ್ಷನೆಂಬ ಗೃಹಸ್ಥ – ನಿರ್ನಾಮಕ – ಸ್ವರ್ಗದದೇವ – ಕೃಷ್ಣಚಕ್ರವರ್ತಿ – ನಾರಕಿ – ಭಾವಿ ತೀರ್ಥಂಕರ **೭೨** : ೧೨೩೯–೪೦.

**ಕೃಷ್ಣಾಚಾರ್ಯ** – ಮುನಿ. ಇವರಲ್ಲಿ ಸುಮಿತ್ರನೆಂಬ ರಾಜ ದೀಕ್ಷಿತನಾದ **೬೧** : ೬೨.

**ಕೇಸರಿವಿಕ್ರಮ** – ಸುರಕಾಂತಾರದ ರಾಜ. ವಿದ್ಯಾಧರ. ಕೇಶವತಿಯ ಅಣ್ಣ. ಸಮ್ಮೇದಗಿರಿಯಲ್ಲಿ ಸಿಂಹವಾಹಿನಿ, ಗರುಡವಾಹಿನಿ ವಿದ್ಯೆಯನ್ನು ಸಾಧಿಸಿದ್ದನು. ಇವನ್ನು ನಂದಿಮಿತ್ರ ಹಾಗೂ ದತ್ತನಿಗೆ ಕೊಟ್ಟನು **೬೬** : ೧೧೨–೬.

**ಕೇಶವ** – ಸುವಿಧಿ, ಮನೋರಮೆಯರ ಪುತ್ರ. ಭವಮಾಲೆ : ಶ್ರೀಮತಿ – ಸ್ವಯಂಪ್ರಭದೇವ – ಕೇಶವ **೧೦** : ೧೪೫–೬ ಅಚ್ಯುತಕಲ್ಪದ ಪ್ರತೀಂದ್ರನಾದನು : ೧೭೧.

**ಕೌಶಿಕ** – ಭೂತರಮಣ ವನದಲ್ಲಿದ್ದ ತಾಪಸ. ಪತ್ನಿ ಚಪಲವೇಗೆ. ಪುತ್ರ ಮೃಗಶೃಂಗ **೬೨** : ೩೭೮.

**ಕ್ರೀಡವ** – ಅರ್ಹದ್ದಾಸ, ಕಾಶ್ಯಪೆಯರ ಇಬ್ಬರು ಪುತ್ರರಲ್ಲಿ ಕಡೆಯವನು **೭೨** · ೯೯೭.

**ಕ್ಷತ್ರಿಯ** – ಭವಿಷ್ಯತ್ಕಾಲದಲ್ಲಿ ೬ನೇ ತೀರ್ಥಂಕರನಾಗುವ ವ್ಯಕ್ತಿ ೭೬ : ೧೭೧೨.

**ಕ್ಷತ್ರಿಯಾಚಾರ್ಯ** – ಪ್ರೋಷ್ಠಿಲಾಚಾರ್ಯರ ನಂತರ ೧೧ ಅಂಗ, ೧೦ ಪೂರ್ವವನ್ನು ತಿಳಿದಿದ್ದ ಆಚಾರ್ಯರು **೨** : ೧೪೩.

**ಕ್ಷೀರಕದಂಬ** – ಸ್ವಸ್ತಿಕಾವತಿ ನಗರದಲ್ಲಿದ್ದ ಗುರು. ಮಗ ಪರ್ವತ. ಶಿಷ್ಯರು : ವಸು ಮತ್ತು ನಾರದ **೬೭** : ೨೫೮–೯. ಶ್ರುತಧರ ಗುರುವಿನ ಮೂವರು ಮುನಿಗಳ ಪರೀಕ್ಷೆಯನ್ನು ಮರದ ಮರೆಯಲ್ಲಿದ್ದು ವೀಕ್ಷಿಸಿ, ತನ್ನ ಶಿಷ್ಯರ ಯೋಗ್ಯತೆ ಅರಿತನು **೬೭** : ೨೬೯–೭೪, ಸಮಾಧಿಮರಣ : ೩೨೭–೮.

**ಕ್ಷೇಮಂಕರ** – ೩ನೇ ಮನು. ಕ್ರೂರವಾದ ಸಿಂಹ ಮೊದಲಾದ ಪ್ರಾಣಿಗಳಿಂದ ದೂರವಿರಲು ತಿಳಿಸಿದನು **೩** : ೯೦–೧೦೨.

**ಕ್ಷೇಮಂಕರ** – ರತ್ನಸಂಚಯನಗರದ ರಾಜ. ಪತ್ನಿ ಕನಕಚಿತ್ರೆ, ಪುತ್ರ ವಜ್ರಾಯುಧ **೬೩** : ೫೪೯, ರಾಜ್ಯತ್ಯಾಗ : ೫೮೨, ಕೇವಲಜ್ಞಾನ : ೫೮೬, ಇವರಲ್ಲಿ ವಜ್ರನಾಭಿ ಧರ್ಮವನ್ನು ಕೇಳಿ ವಿರಕ್ತನಾದ **೭೩** : ೩೪, ಪ್ರಿಯಮಿತ್ರರಾಜ ಇವರಲ್ಲಿ ಧರ್ಮವನ್ನು ಕೇಳಿ ದೀಕ್ಷಿತನಾದ **೭೪** : ೨೩೮.

**ಕ್ಷೇಮಂಧರ** – ಕ್ರೂರಮೃಗಗಳಿಂದ ಆತ್ಮರಕ್ಷಣೆ ಮಾಡಿಕೊಳ್ಳುವ ಉಪಾಯ ಬೋಧಿಸಿದ ೪ನೇ ಮನು **೩** : ೧೦೩–೬.

**ಖದಿರಸಾಗರ** – ಕಿರಾತ. ಕುಟಜವನದಲ್ಲಿದ್ದ. ಮುನಿಗಳಲ್ಲಿ ಕಾಗೆಮಾಂಸ ತಿನ್ನದ ವ್ರತ ಸ್ವೀಕರಿಸಿದ **೭೪** : ೩೮೬–೯೫, ಶ್ರಾವಕವ್ರತ ಸ್ವೀಕಾರ : ೪೧೦, ಸೌಧರ್ಮಕಲ್ಪದ ದೇವ : ೪೧೦, ಇವನ ಕಥೆ **೭೪** : ೩೮೬–೪೧೬.

**ಖರ** – ರಾವಣನ ಕಡೆಯವನು **೬೮**–೯೦೯.

**ಗಂಗ, ಗಂಗದೇವ** – ಹಸ್ತಿನಾಪುರದ ರಾಜ ಗಂಗದೇವನ ಮೊದಲನೇ ಅವಳಿ ಮಕ್ಕಳು **೭೧** : ೭೫೯.

**ಮೇಘಸೇನ** – ಮೇಘರಥನ ಪುತ್ರ **೬೩** : ೮೨೧.

**ಮೇಘಸ್ವರ** – ಮೇಘಮುಖನೆಂಬ ನಾಗದೇವತೆಯನ್ನು ಜಯಕುಮಾರ ಜಯಿಸಿದುದರಿಂದ ಅವನಿಗೆ ಪ್ರಾಪ್ತವಾದ ಹೆಸರು **೩೨** : ೭೧, **೪೩** : ೩೧೩.

**ಮೇರು** – ವಿಮಲನಾಥರ ಗಣಧರರಲ್ಲಿ ಒಬ್ಬ **೫೯** : ೧೦೮.

– ಅನಂತವೀರ್ಯನ ಮೇರುಮಾಲಿನಿಯಲ್ಲಿ ಜನಿಸಿದ ಪುತ್ರ. ಪೂರ್ವಭವದ ಆದಿತ್ಯಾಭದೇವ **೫೯** : ೩೦೧.

– ವೃಷಭ ತೀ.ರ ೨೨ನೇ ಗಣಧರ **೪೩** : ೫೭.

**ಮೇರು ಗಣಧರ** – ಭವಮಾಲೆ : ಮಧುರೆ – ರಾಮದತ್ತೆ – ಭಾಸ್ಕರದೇವ – ಶ್ರೀಧರೆ – ದೇವ – ರತ್ನಮಾಲೆ – ಅಚ್ಯುತದೇವ – ವೀತಭಯ – ಆದಿತ್ಯಾಭದೇವ – ವಿಮಲ ತೀ.ರ ಗಣಧರನಾದ ಮೇರು **೫೯** : ೩೦೬–೯.

**ಮೇರುಚಂದ್ರ** – ವೀತಶೋಕ ಪುರಾಧಿಪತಿ. ಪತ್ನಿ ಚಂದ್ರವತಿ. ಪುತ್ರಿ ಗೌರಿ **೭೧** : ೯೩೬–೭.

**ಮೇರುದತ್ತ** – ವರ್ತಕರ ಅಧಿಪತಿ. ಪತ್ನಿ ಧಾರಿಣಿ. ನಾಲ್ವರು ಮಂತ್ರಿಗಳು : ಭೂತಾರ್ಥ, ಶಕುನಿ, ಬೃಹಸ್ಪತಿ, ಧನ್ವಂತರಿ **೪೬** : ೧೧೨–೩, ಅಟವಿಶ್ರೀ, ಶ್ರೀಷೇಣರು ಮುಂದಿನ ಜನ್ಮದಲ್ಲಿ ಮಕ್ಕಳಾಗಲಿ ಎಂದು ನಿದಾನ : ೧೨೫.

**ಮೇರುಧನ** – ವೃಷಭ ತೀ.ರ ೨೩ನೇ ಗಣಧರ **೪೩** : ೫೭.

**ಮೇರುಭೂತಿ** – ವೃಷಭ ತೀ.ರ ೨೪ನೇ ಗಣಧರ **೪೩** : ೫೭.

**ಮೈತ್ರೇಯ** – ಮಹಾವೀರರ ೧೨ ಮಂದಿ ಗಣಧರರಲ್ಲಿ ಒಬ್ಬ **೭೪** : ೩೭೩.

**ಮೌರ್ಯ** – ಮಹಾವೀರರ ೧೨ ಮಂದಿ ಗಣಧರರಲ್ಲಿ ಒಬ್ಬ **೭೪** : ೩೭೩.

**ಯಕ್ಷ** – ಯಕ್ಷದತ್ತ ಗೃಹಸ್ಥನ ಮಗ. ಹಿಂದಿನ ಜನ್ಮದಲ್ಲಿ ಅಮೃತರಸಾಯನನೆಂಬ ಮಾಂಸದಡುಗೆಯವನಾಗಿದ್ದ **೭೧** : ೭೭೬, ನಿರನುಕಂಪನೆನಿಸಿದ್ದನು : ೭೭೭, ಕುರುಡಾಗಿದ್ದ ಹಾವಿನ ಮೇಲೆ ಗಾಡಿಯನ್ನು ಬಿಡಿಸಿದ್ದನು : ೭೭೯. ಶಾಲೀಗ್ರಾಮದ ಗೃಹಸ್ಥ **೭೧** : ೮೮೭.

**ಯಕ್ಷದತ್ತ** – ಪಲಾಶಗ್ರಾಮದ ಒಬ್ಬ ಗೃಹಸ್ಥ. ಇವನ ಮಗ ಯಕ್ಷ **೭೧** : ೭೭೬.

**ಯಕ್ಷಮಾಲಿ** – ಕಿನ್ನರಪುರದ ದೊರೆ. ನಮಿಯ ಸೋದರ ಮಾವ. ಸರ್ವವಿದ್ಯಾಛೇದಿನಿ ಎಂಬ ವಿದ್ಯೆಯಿಂದ ಮಾಕ್ಷಿಕ ವಿದ್ಯೆಯನ್ನು ಛೇದಿಸಿದನು **೭೧** : ೮೬೯.

**ಯಕ್ಷಿಲ** – ಯಕ್ಷದತ್ತನ ಇನ್ನೊಬ್ಬ ಮಗ. ಸಾನುಕಂಪ ಎನಿಸಿದ್ದನು **೭೧** : ೭೭೭.

– ಕೃಷ್ಣನ ಪೂರ್ವಭವದ ಸಹೋದರ. ಈತ ಮಹಾಶುಕ್ರ ಸ್ವರ್ಗದಲ್ಲಿದ್ದಾಗ ಕೃಷ್ಣನಿಗೆ ಎರಡು ವಿದ್ಯೆಗಳನ್ನು ಸಾಧಿಸುವ ಉಪಾಯ ತಿಳಿಸಿದನು **೭೧** : ೮೭೬.

**ಯತಿವೃಷಭ** – ಋಷಿ. ಇವರಲ್ಲಿ ಸಿಂಹರಥ ಧರ್ಮವನ್ನು ಕೇಳಿ ಮುನಿಯಾದ **೬೪** : ೭.

**ಯಮಧರ** – ಮುನಿ. ವಜ್ರಬಾಹು ಇವರಲ್ಲಿ ದೀಕ್ಷೆ ಪಡೆದನು **೮** : ೫೭.

**ಯಶಸ್ವಾನ್** – ಒಂಬತ್ತನೇ ಮನು. ಇವನ ಕಾಲದಲ್ಲಿ ಪ್ರಜೆಗಳು ತಮ್ಮ ಮಕ್ಕಳ ಮುಖವನ್ನು ನೋಡಿ ಆಶೀರ್ವಾದವನ್ನು ಮಾಡಿ ಸ್ವಲ್ಪ ಹೊತ್ತು ಇದ್ದು ಪರಲೋಕವನ್ನು ಹೊಂದುತ್ತಿದ್ದರು. ಈ ಮನು ಮಕ್ಕಳಿಗೆ ಆಶೀರ್ವಾದ ಮಾಡುವುದನ್ನು ಬೋಧಿಸಿದನು **೩** : ೧೨೫–೮.

**ಯಶೋಬಾಹು** – ವೃಷಭ ತೀ.ರ ೧೧ನೇ ಗಣಧರ **೪೩** : ೫೫.

**ಯಶೋಬಾಹು** – ಇವರನ್ನು ಗುಣಭದ್ರಾಚಾರ್ಯರು ಸ್ಮರಿಸಿದ್ದಾರೆ **೭೬** ; ೧೭೬೫. ಇವರ ಸ್ಥಾನದಲ್ಲಿ 'ಭದ್ರಬಾಹು'ವನ್ನು ಜೀನಸೇನಾಚಾರ್ಯರು ಸ್ಮರಿಸಿದ್ದಾರೆ **೨** : ೧೪೯. ಈ ಆಚಾರ್ಯರು ಪ್ರಥಮಾಂಗಶಾಸ್ತ್ರ ಪಾರಗಾಮಿಗಳು.

**ಯಶೋಭದ್ರ** – ಇವರನ್ನು ಜಿನಸೇನ ಮತ್ತು ಗುಣಭದ್ರಾಚಾರ್ಯರು ಸ್ಮರಿಸಿದ್ದಾರೆ. ಇವರು ಆಚಾರಾಂಗ ಶಾಸ್ತ್ರಜ್ಞರು **೨** : ೧೪೯; **೭೬** : ೧೭೬೫.

**ಯಶೋಧರ** – ಕೇವಲಿ **೬** : ೮೫. ಇವರಿಗೆ ಪುಂಡರೀಕಿಣಿ ಪುರದಲ್ಲಿ ಕೇವಲಜ್ಞಾನವಾಯಿತು. ಇವರನ್ನು ಪೂಜಿಸಲು ಬಂದ ದೇವತೆಗಳನ್ನು ನೋಡಿದಾಗಲೇ ಶ್ರೀಮತಿಗೆ ಪೂರ್ವಭವದ ಸ್ಮರಣೆ ಆಯಿತು **೬** : ೯೧, ಇವರ ಪೂಜೆಗೆ ವಜ್ರದಂತ ಚಕ್ರವರ್ತಿ ಹೋದಾಗ, ಆತನಿಗೆ ಅವಧಿಜ್ಞಾನ ಪ್ರಾಪ್ತವಾಯಿತು **೭** : ೫.

– ವಜ್ರದಂತ ಚಕ್ರವರ್ತಿಯ ತಂದೆ **೭** : ೧೦೨.

– ಮುನಿ. ಜಯಸೇನರಾಜ ಇವರಲ್ಲಿ ದೀಕ್ಷಿತನಾದ **೪೮** : ೬೭.

– ಮುನಿ. ಇವರಲ್ಲಿ ಬಲಭದ್ರನಾದ ಅಪರಾಜಿತನು ದೀಕ್ಷಿತನಾದ **೬೩** : ೫೩೭.

– ಮುನಿ. ಇವರಿಗೆ ಸುಪ್ರತಿಷ್ಠನು ಆಹಾರದಾನ ನೀಡಿ ಪಂಚಾಶ್ಚರ್ಯ ಹೊಂದಿದ. **೭೪** : ೫೪.

– ಚಾರಣಮುನಿ **೭೧** : ೯೨೭.

**ಯಶಃಪಾಲ** – ಪುಂಡರೀಕಿಣಿಯ ಪ್ರಭು **೪೭** : ೧೯೧.

– ಗುಣಪಾಲ ಕೇವಲಿಯ ಗಣಧರ **೪೭** : ೧೮೮.

**ಯುಗಂಧರ** – ತೀರ್ಥಂಕರ. ಇವರ ಸಮವಸರಣದಲ್ಲಿ ಆದಿತ್ಯಗತಿ, ಅರಿಂಜಯರೆಂಬ ಚಾರಣಮುನಿಗಳಿದ್ದರು **೫** : ೧೯೪.

– ಮುನಿ. ಇವರಲ್ಲಿ ಶ್ರೀವರ್ಮ ದೀಕ್ಷಿತನಾದ **೭** : ೨೨.

– ಅಜಿತಂಜಯ, ವಸುಮತಿಯರ ಮಗ ತೀರ್ಥಂಕರನಾದ. ಪೂರ್ವಭವ : ಪ್ರಹಸಿತ – ಇಂದ್ರ – ಮಹಾಬಲ – ಇಂದ್ರ – ಜಯಸೇನ – ಅಹಮಿಂದ್ರದೇವ – ಯುಗಂಧರ **೭** : ೯೩.

– ಈ ತೀರ್ಥಂಕರ ಚರಿತ್ರೆಯನ್ನು ಅಚ್ಯುತೇಂದ್ರನು, ಬ್ರಹ್ಮೇಂದ್ರ – ಲಾಂತವೇಂದ್ರರಿಗೂ, ಸ್ವಯಂಪ್ರಭಾ – ಲಲಿತಾಂಗ ದಂಪತಿಗಳಿಗೂ ಹೇಳಿದನು **೭** : ೫೯,೯೪.

– ಮನೋಹರ ಪರ್ವತದಲ್ಲಿದ್ದ ಜಿನರು. ಇವರನ್ನು ಪದ್ಮೋತ್ತರ ಮಹಾರಾಜ ಸ್ತುತಿಸಿದ **೫೮** : ೮.

**ಯುಧಿಷ್ಠಿರ** – ಪಾಂಡವರಲ್ಲಿ ಒಬ್ಬ. ಕುರುಕ್ಷೇತ್ರ ಯುದ್ಧದಲ್ಲಿ ದುರ್ಯೋಧನನ್ನು ಜಯಿಸಿದ ಮೇಲೆ ಸಮಸ್ತ ದೇಶಕ್ಕೆ ಅಧಿಪತಿಯಾದನು **೭೨** : ೧೧೭೭–೮.

**ರಂಗತೇಜ** – ಒಬ್ಬ ನಟ **೭೫** : ೧೦೧೬.

**ರತಿಕೂಲ** – ಮಣಿನಾಗನ ಪುತ್ರ **೪೬** : ೩೬೩.

**ರತಿಪಿಂಗಳ** – ವೈಶ್ಯನ ರತ್ನವನ್ನು ಕದ್ದು ವೇಶ್ಯೆಗೆ ಕೊಟ್ಟದ್ದರಿಂದ ಶೂಲಕ್ಕೇರಿಸಲ್ಪಟ್ಟನು **೪೬** : ೨೭೬.

**ರತಿವರ್ಮ** – ರಾಜಶ್ರೇಷ್ಠಿ. ಪುಣ್ಯಹೀನ ಭವದೇವನ ತಂದೆ **೪೬** : ೧೦೪.

**ರತಿವರ** – ಮುನಿ. ಇವರಲ್ಲಿ ಸರ್ವದಯಿತ ಶ್ರೇಷ್ಠಿ ದೀಕ್ಷಿತನಾದ **೪೭** : ೨೨೩.

– ಮುನಿ. ಸಗರರಾಜನ ಯಾಗದಿಂದ ೭ನೇ ನರಕಪ್ರಾಪ್ತಿಯನ್ನು ತಿಳಿಸಿದನು. ೭ನೇ ದಿನ ಸಿಡಿಲು ಬಡಿಯುವುದನ್ನು ಸೂಚಿಸಿದನು **೬೭** : ೩೬೭–೯.

**ರತಿಷೇಣ** – ಮಹಾವತ್ಸ ದೇಶದ ರಾಜ. ಪತ್ನಿ ಚಂದ್ರಮತಿ, ಪುತ್ರ ಚಿತ್ರಾಂಗದ **೧೦** : ೧೫೧.

– ಗಾಂಧಾರ ನಗರದವನು. ಪತ್ನಿ ಗಾಂಧಾರಿ **೪೬** : ೨೨೮.

– ಜಯಸೇನ, ಜಯಸೇನೆಯರ ಪುತ್ರ **೪೮** : ೫೯, ಸಾವು : ೬೧.

– ಪುಂಡರೀಕಿಣಿ ನಗರದ ರಾಜ **೫೧** : ೩, ವೈರಾಗ್ಯ : ೮-೧೦, ಅರ್ಹನ್ನಂದನರಲ್ಲಿ ದೀಕ್ಷೆ : ೧೩, ತೀರ್ಥಂಕರತ್ವದ ಪುಣ್ಯ : ೧೪, ಅಹಮಿಂದ್ರನಾದ : ೧೫.

**ರತ್ನಗ್ರೀವ** – ಅಶ್ವಗ್ರೀವ, ಕನಕಚಿತ್ರೆಯರ ಐದುನೂರು ಮಂದಿ ಮಕ್ಕಳಲ್ಲಿ ಒಬ್ಬ **೬೨** : ೬೦.

**ರತ್ನಚೂಲ** – ನೋ. ರತ್ನಗ್ರೀವ **೬೨** : ೬೦.

**ರತ್ನತೇಜ** – ರಾಜಪುರದ ಶ್ರೇಷ್ಠಿ. ಪತ್ನಿ ರತ್ನಮಾಲೆ. ಪುತ್ರಿ ಅನುಪಮೆ **೭೫** : ೧೦೦೦.

**ರತ್ನರಥ** – ಅಶ್ವಗ್ರೀವ, ಕನಕಚಿತ್ರೆಯರ ಮಗ **೬೨** : ೬೦.

**ರತ್ನಸೇನ** – ರತ್ನಪುರದ ಅಧಿಪತಿ. ಕನಕಶಾಂತಿಮುನಿಗೆ ಆಹಾರದಾನ ಮಾಡಿದ **೬೩** : ೬೩೮.

**ರತ್ನಾಂಗದ** – ಅಶ್ವಗ್ರೀವನ ೫೦೦ ಮಕ್ಕಳಲ್ಲಿ ಒಬ್ಬ **೬೨** : ೬೦.

**ರತ್ನಾಯುಧ** – ವಜ್ರಾಯುಧ, ರತ್ನಮಾಲೆಯರ ಪುತ್ರ. ಪೂರ್ವಭವದಲ್ಲಿ ಯಶೋಧರೆ(ವಾರುಣಿ)ಯಾಗಿದ್ದ ಜೀವ **೫೯** : ೨೪೩. ಮುಂದೆ ವಿಭೀಷಣ(ಕೇಶವ)ನಾಗಿ ಜನಿಸಿದ. ೩ನೇ ನಾರಕಿಯಾದ : ೨೭೮.

**ರತ್ನಾಯುಧ ರಾಜ** – ಮೇಘವಿಜಯ ಭದ್ರಗಜದ ಪೂರ್ವವೃತ್ತಾಂತವನ್ನು ಕೇಳಿ ಧರ್ಮಪರನಾದನು. ಸಂಯಮ ವ್ರತದಿಂದ ಸತ್ತು ದೇವನಾದನು **೫೯** : ೨೭೦–೧.

**ರಮಣ** – ಧನದತ್ತ, ಜಿನದತ್ತೆಯರ ಪುತ್ರ. ಚೋರಶಾಸ್ತ್ರ ಬಲದಿಂದ ಪರದ್ರವ್ಯಾಪಹರಣದಲ್ಲಿ ಆಸಕ್ತನಾಗಿ ಪಾಪಿಯಾದ **೭೬** : ೧೫೫೯.

**ರವಿಕೀರ್ತಿ** – ರಾವಣನ ಸೇನಾಪತಿ **೬೮** : ೧೦೦೯.

– ಜಯಕುಮಾರನೊಡನೆ ದೀಕ್ಷೆ ಪಡೆದ ಒಬ್ಬ ರಾಜಪುತ್ರ **೪೭** : ೨೮೧.

**ರವಿವೀರ್ಯ** – ಜಯಕುಮಾರನೊಡನೆ ದೀಕ್ಷೆ ಪಡೆದ ರಾಜಪುತ್ರ **೪೭** : ೨೮೩.

**ರವಿಗತಿ** – ದೂತನಾದ ಅಣುಮಂತನಿಗೆ ಸಹಾಯಕನಾದ ನಾಲ್ವರಲ್ಲಿ ಒಬ್ಬ **೬೮** : ೮೬೪.

**ರವಿಚೂಲ** – ಪೂರ್ವಭವದ ಅಮಿತತೇಜ **೬೨** : ೪೦೮.

**ರವಿಪ್ರಭ** – ಸ್ವರ್ಗದ ದೇವ. ಜಯಕುಮಾರ ಹಾಗೂ ಸುಲೋಚನೆಯರ ಶೀಲವನ್ನು ಪರೀಕ್ಷಿಸಲು ಕಾಂಚನಾದೇವಿಯನ್ನು ಕಳಿಸುತ್ತಾನೆ **೪೭** : ೨೬೧.

**ರಶ್ಮಿವೇಗ** – ಸೂರ್ಯಾವರ್ತ, ಶ್ರೀಧರೆಯರ ಪುತ್ರ. ಭವಮಾಲೆ : ರಾಜಸಿಂಹಸೇನ – ಆನೆ ಅಶನಿಘೋಷ – ಶ್ರೀಧರದೇವ – ರಶ್ಮಿವೇಗ **೫೯** : ೨೩೧, ದೀಕ್ಷಿತನಾಗಿ ಆಕಾಶಚಾರಣತ್ವ ಹೊಂದಿದ : ೨೩೪, ಅರ್ಕಪ್ರಭದೇವನಾದ : ೨೩೮.

– ವಿದ್ಯುದ್ಗತಿ ಎಂಬ ವಿದ್ಯಾಧರ ರಾಜನ ಮಗ. ಪೂರ್ವಭವದ ಮರುಭೂತಿ, ವಜ್ರಘೋಷನೆಂಬ ಗಜ **೭೩** : ೨೭.

**ರಸಾಯನಪಾಕ** – ಕುಂಭರಾಜನ ಮಾಂಸದಡಿಗೆಯವನು. ಮಾಂಸ ಸಿಕ್ಕದಿದ್ದಾಗ ಸತ್ತ ಮಗುವಿನ ಮಾಂಸವನ್ನು ಬೇಯಿಸಿದನು **೬೨** : ೨೦೪.

**ರಾಘವ** – ರಾಮ **೬೮** : ೯೦೨.

**ರಾಜಸಿಂಹ** – ಪೃಥವೀಪತಿ. ಮಲ್ಲಯುದ್ಧ ಜ್ಞಾನಿ **೬೧** : ೫೯, ಸುಮಿತ್ರನನ್ನು ಜಯಿಸಿದ : ೬೦.

**ರಾಮ** – ವಾರಾಣಸಿ ನಗರದ ರಾಜ ದಶರಥ ಹಾಗೂ ಸುಬಾಲೆಯ ಮಗ. ಹಲಧರ. ಫಾಲ್ಗುನ, ಕೃಷ್ಣ, ತ್ರಯೋದಶಿ, ಮಾಘ ನಕ್ಷತ್ರದಲ್ಲಿ ಜನನ. ಪೂರ್ವಭವದ ಸ್ವರ್ಣ(ಕನಕ)ಚೂಲ **೬೭** : ೧೪೮–೯, : ೧೫೩ ಸೀತೆಯೊಡನೆ ವಿವಾಹ **೬೮** : ೫೦೫–೮, ಅಯೋಧ್ಯೆಯ ಪ್ರವೇಶ : ೫೧೨, ಮತ್ತೆ ೭ ಕನ್ಯೆಯರೊಂದಿಗೆ ವಿವಾಹ : ೫೨೧, ವಾರಾಣಸಿ ನಗರ ಅಭಿವೃದ್ಧಿಗೊಳಿಸಲು ಅಪ್ಪಣೆ ಬೇಡುತ್ತಾರೆ : ೫೨೫–೬, ದಶರಥನಲ್ಲಿ ರಾಜನೀತಿ ನಿವೇದಿಸುತ್ತಾನೆ : ೫೨೬–೫೦. ವಾಲಿಗೆ ಪ್ರತ್ಯುತ್ತರವಾಗಿ ಮಹಾಮೇಘವೆಂಬ ಗಜವನ್ನು ಕೊಡಲು ಹೇಳಿಕಳಿಸುತ್ತಾನೆ **೬೮** : ೯೨೬–೭.

ತಾಲಧ್ವಜ; ಅಂಜನಪರ್ವತವೆಂಬ ಆನೆಯನ್ನೇರಿ ಯುದ್ಧಕ್ಕೆ ಹೊರಟ **೬೮** : ೧೦೨೨, ಎಂಟುಸಾವಿರ ಪತ್ನಿಯರು : ೧೧೪೪, ಬಲಭದ್ರನಾದ ಇವನ ನಾಲ್ಕು ರತ್ನಗಳು – ಅಪರಾಜಿತ (ನೇಗಿಲಿನ ಆಯುಧ), ಅಮೋಘ (ಹರಿತವಾದ ಬಾಣ), ಕೌಮುದಿ (ಗದೆ), ರತ್ನಾವತಂಸಿಕೆ (ಮಾಲೆ) : ೧೧೫೦–೧, ಸಮ್ಮೇದಗಿರಿಯಲ್ಲಿ ಮುಕ್ತಿ : ೧೧೯೬. ಭವಮಾಲೆ : ವಿಜಯನೆಂಬ ಮಂತ್ರಿಪುತ್ರ – ಸ್ವರ್ಗದ ಕನಕಚೂಲ – ರಾಮ : ೧೨೦೮.

**ರಾಮಲಕ್ಷ್ಮಣರು** – ವಾರಾಣಸಿಪುರಕ್ಕೆ ಪ್ರಯಾಣ **೬೮** : ೫೫೧–೪, ಪತ್ನಿಯರೊಂದಿಗೆ ಚಿತ್ರಕೂಟ ವನದಲ್ಲಿ ಸರಸ ಸಲ್ಲಾಪ : ೬೦೦–೨೨.

**ರಾವಣ** – ಭವಮಾಲೆ **೬೮** : ೪೭೭–, ಸೀತಾಪಹರಣದ ಕಾರ್ಯಾಚರಣೆ : ೫೮೯–೬೮೫, ಆಯುಧಾಗಾರದಲ್ಲಿ ಚಕ್ರರತ್ನದ ಉದಯ : ೭೦೧, ದೂತನಾದ ಅಣುಮಂತನೊಡನೆ ಸಂವಾದ **೬೮** : ೮೮೧–೯೧೦, ಇವನ ಕಡೆಯವರು : ಕುಂಭ, ನಿಕುಂಭ, ಕುಂಭಕರ್ಣ, ಇಂದ್ರಜಿತ್, ಇಂದ್ರಧರ್ಮ, ಅತಿಕಾಯಾರ್ಕ, ಖರದೂಷಣರು, ದುರ್ಮುಖ, ಮಹಾಮುಖ **೬೮** : ೯೦೮–೯; **೬೮** : ೧೦೧೧–೩; ಮಾಯೆಯಿಂದ ಸೀತೆಯ ಶಿರಶ್ಛೇದವನ್ನು ರಾಮನಿಗೆ ತೋರಿಸಿದನು : ೧೦೮೯. ಭವಮಾಲೆ : ಸಾರಸಮುಚ್ಚಯ ದೇಶದ ನರದೇವ – ಸೌಧರ್ಮ ಸ್ವರ್ಗದದೇವ – ರಾವಣ **೬೮** : ೧೨೦೫.

**ರಾಷ್ಟ್ರಕೂಟ** – ಮಗಧದೇಶದ ವೃದ್ಧಗ್ರಾಮದವನು. ಇವನ ಪತ್ನಿ ರೇವತಿ. ಭಗದತ್ತ, ಭವದೇವರು ಇವನ ಪುತ್ರರು **೭೬** : ೧೩೯೩.

**ರಿಪುಜಯ** – ಜಯಕುಮಾರನೊಂದಿಗೆ ದೀಕ್ಷಿತನಾದ ರಾಜ **೪೭** : ೨೮೧.

**ರುಗ್ಮಿ** – ಜರಾಸಂಧನ ಕಡೆಯ ರಾಜ **೭೧** : ೫೭೪.

**ರುಚಕಪ್ರಭದೇವ** – ಭವಮಾಲೆ **೫೯** : ೩೧೦–೧೨. ಪೂರ್ವಭವದ ವಾರುಣಿ, ಉತ್ತರಭವದ ಮಂದರಗಣಧರ.

**ರುದಿರ** – ಜರಾಸಂಧನ ಕಡೆಯ ರಾಜ **೭೧** : ೫೭೫.

**ರುದ್ರ** – ದ್ವಾರಾವತಿಯ ರಾಜ. ಪತ್ನಿ ಸುಭದ್ರೆ, ಮಗ ಧರ್ಮ(ಬಲಭದ್ರ) **೫೯** : ೭೧.

– ಅಯೋಧ್ಯೆಯ ರಾಜ. ಪತ್ನಿ ವಿನಯಶ್ರೀ **೭೧** : ೯೧೩.

– ಕ್ಷುದ್ರದೇವ. ತನ್ನ ವಿದ್ಯೆಯಿಂದ ಮಹಾವೀರನಿಗೆ ಉಪಸರ್ಗವುಂಟುಮಾಡಿ ಪರೀಕ್ಷಿಸಿದ **೭೪** : ೩೩೧–೭.

**ರುದ್ರದತ್ತ** – ಬ್ರಾಹ್ಮಣ. ಧರ್ಮಶೀಲನಾದ ಸುರೇಂದ್ರದತ್ತನ ಗೆಳೆಯ **೭೦** : ೧೫೨, ಜಿನಪೂಜೆಗಾಗಿ ಕೊಟ್ಟ ದ್ರವ್ಯವನ್ನು ವ್ಯಸನಾದಿಗಳಲ್ಲಿ ವ್ಯಯಿಸಿ, ಕಡೆಗೆ ಬೇಡರಲ್ಲಿ ಸೇರಿದ : ೧೫೬, ತಳವಾರನಿಂದ ಸಾವು : ೧೫೭.

– ಸತ್ಯಂಧರ ರಾಜನ ಪುರೋಹಿತ **೭೫** : ೭೩೯. ಕಾಷ್ಠಾಂಗಾರನಿಗೆ ರಾಜನನ್ನು ಕೊಲ್ಲುವ ಸಲಹೆ ಮಾಡಿದ ಪಾಪದ ಪರಿಪಾಕದಿಂದ ೩ ದಿನದಲ್ಲೆ ಮರಣಹೊಂದಿದ : ೭೫೬–೬೫.

**ರೈದತ್ತ** – ಪತ್ನಿ ಧನಶ್ರೀ, ಪುತ್ರಿ ರೂಪಶ್ರೀ. ಪೂರ್ವಭವದ ಶ್ರೀದತ್ತ **೭೬** : ೧೨೮೮.

**ರೈವತ** – ಭವಿಷ್ಯತ್ಕಾಲದ ೧೫ನೇ ತೀರ್ಥಂಕರನಾಗುವವನು **೭೬** : ೧೭೧೩.

**ರೋಣ** – ಭವಿಷ್ಯತ್ಕಾಲದ ೧೪ನೇ ತೀ. ಆಗುವವನು **೭೬** : ೧೭೧೩.

**ಲಕ್ಷ್ಮಣ** – ದಶರಥ, ಸುಮಿತ್ರಾದೇವಿಯರ ಪುತ್ರ. ಮಾಘ, ಶುಕ್ಲ, ಪ್ರಥಮೆ, ವಿಶಾಖ ನಕ್ಷತ್ರದಲ್ಲಿ ಜನನ. ಚಕ್ರದ ಗುರುತು. ಪೂರ್ವಭವದ ಮಣಿಚೂಲ ದೇವ **೬೭** : ೧೪೧–೫೩, ಜನಕರಾಜನು ಪೃಥ್ವೀದೇವಿ ಮೊದಲಾದ ೧೬ ಕನ್ಯೆಯರೊಂದಿಗೆ ವಿವಾಹ ಮಾಡಿಸಿದ **೬೮** : ೫೨೨, ವಾಲಿಯನ್ನು ಸಂಹರಿಸಿದ **೬೮** : ೯೪೨.

ಪ್ರಜ್ಞಪ್ತಿವಿದ್ಯೆಯನ್ನು ಸಾಧಿಸಿದ : ೯೪೩–೬, ಗರುಡಧ್ವಜವುಳ್ಳವನು, ವಿಜಯಪರ್ವತ ಗಜವನ್ನು ಹತ್ತಿ ಯುದ್ಧಕ್ಕೆ ಹೊರಟನು : ೧೦೨೨, ಮಾಗಧಾಮರನನ್ನು ಜಯಿಸಿದ : ೧೧೨೫–೭, ವರತನುದೇವ ಶರಣಾದ : ೧೧೨೯, ದಿಗ್ವಿಜಯ : ೧೧೨೦–೪೪; ಪತ್ನಿಯರು ೧೬೦೦೦, ರಾಜ್ಯವೈಭವ : ೧೧೪೪–೫೦, ಏಳು ರತ್ನಗಳು : ೧೧೫೧–೪, ವ್ಯಾಧಿಯಿಂದ ಸಾವು : ೧೧೭೯, ಭವಮಾಲೆ : ಚಂದ್ರಚೂಲ ದೊರೆ – ಸನತ್ಕುಮಾರ ಸ್ವರ್ಗದ ದೇವ – ಲಕ್ಷ್ಮಣ : ೧೨೦೬. ಚಕ್ರದಿಂದ ರಾವಣನನ್ನು ಕೊಂದ **೬೮** : ೧೧೦೯; ನಿದಾನಶಲ್ಯ **೬೮** : ೧೧೬೪.

**ಲಲಿತಘಟ** – ಲೋಕಪಾಲ ದೊರೆಯ ಸಮವಯಸ್ಕರ ಗುಂಪು **೪೬** : ೫೮.

**ಲಲಿತಾಂಗ** – ಈಶಾನಕಲ್ಪದ ಶ್ರೀಪ್ರಭವಿಮಾನದ ದೇವ. ಪೂರ್ವಭವದ ಮಹಾಬಲ **೫** : ೨೫೪, ವರ್ಣನೆ ಇತ್ಯಾದಿ : ೨೫೫–೮೫, ನಾಲ್ವರು ಪಟ್ಟಮಹಿಷಿಯರು – ಸ್ವಯಂಪ್ರಭಾದೇವಿ, ಕನಕಪ್ರಭಾದೇವಿ, ಕನಕಲತಾದೇವಿ, ವಿದ್ಯುಲತಾದೇವಿ : ೨೮೩. ಪ್ರಾಣವಲ್ಲಭೆ ಸ್ವಯಂಪ್ರಭಾದೇವಿಯ ಆಗಮನ : ೨೮೬, ಸ್ವರ್ಗಭೋಗದ ವರ್ಣನೆ **೬** : ೧–೮, ಸಾಮಾನಿಕ ದೇವತೆಗಳ ಹಿತವಚನ **೬** : ೯–೨೨, ಅವಸಾನ **೬** : ೨೫.

**ಲಲಿತಾಂಗ** – ಈಶಾನಕಲ್ಪದ ದೇವ. ಪೂರ್ವಭವದ ಮನೋಹರಾದೇವಿ **೭** : ೧೮ ಶ್ರೀವರ್ಮನಿಗೆ ಬೋಧನೆ : ೧೯–೨೦.

– ಸ್ವರ್ಗದ ದೇವ. ಪೂರ್ವಭವದ ವಜ್ರಜಂಘ **೮** : ೧೮೪.

**ಲಲಿತಾಂಗದ** – ತ್ರಿಪುರದ ಖೇಚರ **೬೨** : ೬೭.

**ಲೋಕಪಾಲ** – ಒಂದು ವಿಧದ ದೇವತೆಗಳು. ವಿ. **೨೨** : ೨೮.

– ಪ್ರಜಾಪಾಲನ ಮಗ **೪೬** : ೪೮, ತಂಗಿಯರು : ೪೫, ಕುಬೇರಮಿತ್ರನ ಬುದ್ಧಿಬಲದಿಂದ ಇವನ ಉನ್ನತಿ : ೫೦, ದುಷ್ಟ ಚಪಲಮತಿ ಮಂತ್ರಿಯ ಸಂಚು : ೫೧–೫೬.

– ವ್ಯಂತರದೇವ. ಪೂರ್ವಭವದಲ್ಲಿ ಪುತ್ರ ಮೋಹದಿಂದ ನಿದಾನಶಲ್ಯದಿಂದ ಸತ್ತ ಸತ್ಯಕ **೪೬** : ೧೨೦–೨.

**ಲೋಕಸೇನ** – ಮುನೀಶ್ವರ. ಗುಣಭದ್ರಾಚಾರ್ಯರ ಶಿಷ್ಯ. ಪುರಾಣ ರಚನೆಯ ಕಾಲದಲ್ಲಿ ಸಹಾಯ ಮಾಡಿದರು **೭೭** : ೨೮.

**ಲೋಕಾದಿತ್ಯ** – ಮಯೂರಧ್ವಜವುಳ್ಳವನು. ಚೇಲ್ಲಧ್ವಜನೆಂಬ ಅನುಜ, ಚೇಲ್ಲ ಕೇತನನೆಂಬ ತನುಜ. ಇವನ ತಂದೆ ವಂಕ. ತಂದೆಯ ಹೆಸರಿನ ಪಟ್ಟಣ ವಂಕಾಪುರ. ವನವಾಸ ದೇಶವನ್ನು ಆಳುತ್ತಿದ್ದ ರಾಜ. ಇವನನ್ನು ಗುಣಭದ್ರಾಚಾರ್ಯರು ಸ್ಮರಿಸಿದ್ದಾರೆ. **೭೭** : ೩೨–೪.

**ಲೋಲುಪ** – ಸುಪ್ರತಿಷ್ಠ ನಗರದಲ್ಲಿದ್ದ ಧನಲೋಭಿ. ಮಿಠಾಯಿ ವ್ಯಾಪಾರಿ. ದೇವಾಲಯದ ಇಟ್ಟಿಗೆಗಳನ್ನು ಲಂಚಕೊಟ್ಟು ಸಂಗ್ರಹಿಸುತ್ತಿದ್ದ. ಆರ್ತ ಧ್ಯಾನದಿಂದ ಸತ್ತು ಮುಂಗುಸಿಯಾದ **೮** : ೨೩೪–೪೧.

**ಲೋಹ** – ಭೂಮಿಯ ಲೋಭದಿಂದ ಶಿಕ್ಷೆಗೆ ಒಳಗಾದವನು **೪೬** : ೨೭೮.

**ಲೋಹಜಂಘ, ಶ್ರೀಷೇಣ** – ವನರಾಜನ ಮಿತ್ರರು. ಶ್ರೀಚಂದ್ರೆಯನ್ನು ಅಪಹರಿಸಿ ಮಿತ್ರನಿಗೆ ಅರ್ಪಿಸುತ್ತಾರೆ **೭೫** : ೧೦೩೮.

**ಲೋಹಾಚಾರ್ಯ** – ಪ್ರಥಮಾಂಗ ಶಾಸ್ತ್ರಜ್ಞರು. ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ **೨** : ೧೪೯. ಆಚಾರಾಂಗ ಶಾಸ್ತ್ರಜ್ಞರೆಂದು ಗುಣಭದ್ರಾಚಾರ್ಯರು ಇವರನ್ನು ಸ್ಮರಿಸಿದ್ದಾರೆ **೭೬** : ೧೭೬೬.

**ವಂಕ** – ರಾಜ ಲೋಕಾದಿತ್ಯನ ತಂದೆ. ಚಾರಿತ್ರಿಕ ವ್ಯಕ್ತಿ **೭೭** : ೩೪.

**ವಕುಲ** – ಸತ್ಯಂಧರಮಹಾರಾಜನ ಅನಂಗಪತಾಕೆ ಎಂಬ ರಾಣಿಯಲ್ಲಿ ಜನಿಸಿದವನು. **೭೫** : ೮೦೪. ಗಂಧೋತ್ಕಟನಿಂದ ಪೋಷಿತನಾದ.

**ವಜ್ರ** – ಪುಂಡರೀಕಿಣಿ ಪುರದ ವೈಶ್ಯ. ಸುಮತಿ ಎಂಬವಳ ತಂದೆ **೭೧** : ೮೬೩.

**ವಜ್ರಕೇತು** – ದೇವತಾಗ್ರಹದ ಕುಕ್ಕುಟವನ್ನು ಕೊಂದನು **೪೬** : ೨೭೩.

**ವಜ್ರಕಂಠ** – ಮಯೂರಗ್ರೀವನ ೫ನೇ ಮಗ **೬೨** : ೫೮.

**ವಜ್ರಘೋಷ** – ಒಂದು ಸಲಗನ ಹೆಸರು. ಪೂರ್ವಭವದ ಮರುಭೂತಿ **೭೩** : ೧೨.

**ವಜ್ರಚಮರ** – ಚಂದ್ರಪ್ರಭ ತೀ.ರ ಗಣಧರ **೫೨** : ೫೮.

**ವಜ್ರಜಂಘ** – ವಜ್ರಬಾಹು, ವಸುಂಧರೆಯರ ಮಗ. ಸ್ವರ್ಗಚ್ಯುತನಾದ ಲಲಿತಾಂಗ. ಇವನ ಕಣಕಾಲು ವಜ್ರದಂತೆ ದೃಢವಾಗಿದ್ದುದರಿಂದ ಈ ಹೆಸರು ಬಂದಿತು **೬** : ೨೮–೯ ವರ್ಣನೆ : ೩೦–೪೮.

ವಜ್ರದಂತಚಕ್ರವರ್ತಿಯ ಸೋದರಳಿಯ. ಶ್ರೀಮತಿಯ ಪತಿ. ಜಿನಾಲಯದಲ್ಲಿ ಶ್ರೀಮತಿಯ ಚಿತ್ರಗಳನ್ನು ನೋಡಿದ **೭** : ೧೧೮–೩೫, ಶ್ರೀಮತಿಯೊಡನೆ ವಿವಾಹ : ೨೨೪–೭೦, ಜಿನಸ್ತುತಿ : ೨೭೮–೩೧೬, ಉತ್ಪಲಖೇಟದಿಂದ ಪುಂಡರೀಕಿಣಿ ನಗರಕ್ಕೆ ಪ್ರಯಾಣ **೮** : ೧೦೪–, ದಂಪತಿಗಳ ಸುಖದ ವರ್ಣನೆ **೯** : ೨–೩೦, ಭವಾವಳಿಯನ್ನು ದಮಧರ ಮುನಿಗಳು ಹೇಳಿದರು. (ಶ್ರೀಷೇಣನ ಜ್ಯೇಷ್ಠ ಪುತ್ರ – ಮಹಾಬಲರಾಜ – ಲಲಿತಾಂಗದೇವ – ವಜ್ರಜಂಘ ರಾಜ) **೮** : ೧೭೯–೮೫, ಆಹಾರದಾನದ ಸ್ಥಳದಲ್ಲಿದ್ದ ಮುಂಗುಸಿ, ಹುಲಿ, ಕೋತಿ, ಹಂದಿ ಇವುಗಳ ಬಗ್ಗೆ ಮುನಿಗಳಲ್ಲಿ ಪ್ರಶ್ನಿಸಿದ **೮** : ೨೨೦–೧.

**ವಜ್ರದಂತ** – ಪುಂಡರೀಕಿಣಿಯ ರಾಜ. ಲಕ್ಷ್ಮೀಮತಿಯ ಪತಿ **೬** : **೫೯**. ಶ್ರೀಮತಿಯ ತಂದೆ. ಚಕ್ರೋತ್ಪತ್ತಿ : ೧೦೩, ಅವಧಿಜ್ಞಾನ ಪ್ರಾಪ್ತಿ : ೧೧೦.

ಚಕ್ರವರ್ತಿಯ ವರ್ಣನೆ **೬** : ೧೯೪–೨೦೪, ಅವಧಿಜ್ಞಾನದಿಂದ ಪೂರ್ವ ವೃತ್ತಾಂತ ಹೇಳುವುದು **೭** : ೭–೧೦೨. ವೈರಾಗ್ಯ ೮ : ೬೪–೭೭.

– ವಜ್ರನಾಭಿಯ ಮಗ **೧೧** : ೬೧.

– ಮುನಿ. ಮೇಘವಿಜಯವೆಂಬ ಆನೆಯ ಪೂರ್ವವೃತ್ತಾಂತ ತಿಳಿಸುತ್ತಾನೆ **೫೯** : ೨೫೪–೬೯.

**ವಜ್ರದಂತ** – ಪುಂಡರೀಕಿಣಿ ನಗರದ ದೊರೆ. ಪತ್ನಿ ಯಶೋಧರೆ. ಪುತ್ರ ಸಾಗರದತ್ತ **೭೬** : ೧೩೭೯.

**ವಜ್ರದಂಷ್ಟ್ರ** – ಗಗನವಲ್ಲಭಪುರದ ವಿದ್ಯಾಧರರಾಜ. ಪತ್ನಿ ವಿದ್ಯುತ್ಪ್ರಭೆ, ಪುತ್ರ ವಿದ್ಯುದ್ದಂಷ್ಟ್ರ **೫೯** : ೨೯೦–೧.

**ವಜ್ರನಾಭಿ** – ವಜ್ರಸೇನ, ಶ್ರೀಕಾಂತೆಯರ ಮಗ (ತೀ.ಜೀವ). ತಮ್ಮಂದಿರು ವಿಜಯ, ವೈಜಯಂತ, ಜಯಂತ, ಅಪರಾಜಿತ **೧೧** : ೯–೧೦, ಇತರ ಸಹೋದರರು : ೧೨–೧೩, ವರ್ಣನೆ : ೧೫–೩೬ ಪಟ್ಟ : ೩೯, ಚಕ್ರೋದ್ಭವ : ೫೪, ಮಗ ವಜ್ರದಂತ, ದೀಕ್ಷೆ : ೬೧–೬೨.

– ಅಭಿನಂದನ ತೀ.ರ ಗಣಧರ **೫೦** : ೫೭.

– ಅಶ್ವಪುರದ ವಜ್ರವೀರ್ಯನ ಪುತ್ರ. ಪೂರ್ವಭವದ ಮರುಭೂತಿ **೭೩** : ೩೨. ಮುನಿಯಾದ : ೩೫, ಕುರಂಗನ ಉಪಸರ್ಗ : ೩೯, ನಾಕಗತಿ : ೪೦.

**ವಜ್ರಬಾಹು** – ವಜ್ರಜಂಘನ ತಂದೆ. ವಜ್ರದಂತ ಚಕ್ರಿಯ ಸೋದರಿಯಾದ ವಸುಂಧರೆಯ ಪತಿ **೭** : ೧೭೯ ವಜ್ರದಂತನೊಡನೆ ನಡೆದ ಸಂಭಾಷಣೆ : ೧೮೩–೨೦೩. ವೈರಾಗ್ಯ **೮** : ೫೦–೫. ಮೋಕ್ಷ **೮** : **೫೯**.

– ಅಯೋಧ್ಯೆಯ ರಾಜ. ಪತ್ನಿ ಪ್ರಭಂಕರೀ. ಪುತ್ರ ಆನಂದ **೭೩** : ೪೨.

**ವಜ್ರಚಾಪು** – ರಾಜ. ಪತ್ನಿ ಶುಭಾದೇವಿ. ಪುತ್ರಿ ವಿದ್ಯುನ್ಮಾಲೆ **೭೦** : ೭೬.

**ವಜ್ರಮಾಲಿನಿ** – ವಿದ್ಯಾಧರ. ಇವನು ಸ್ವಲ್ಪ ಸಮಯ ಕಾಮಮುದ್ರಿಕೆಯನ್ನು ಪಾಂಡುವಿಗೆ ಕೊಡುತ್ತಾನೆ **೭೦** : ೧೦೪.

**ವಜ್ರಮುಷ್ಟಿ** – ಜಟ್ಟಿ. ರಾಜನ ಆಜ್ಞೆಯಂತೆ ನ್ಯಾಸಾಪಹರಣಮಾಡಿದ ಸತ್ಯಘೋಷ ಮಂತ್ರಿಗೆ ೩೦ ಪೆಟ್ಟುಗಳನ್ನು ಕೊಟ್ಟನು **೫೯** : ೧೭೫.

– ಮಂಗಿಯ ಪತಿ. ಇವರಿಗೆ ಸಂಬಂಧಿಸಿದ ಕಥೆ **೭೧** : ೭೦೭–೨೬, ಸುಭಾನು ಮೊದಲಾದ ಮುನಿಗಳ ದೀಕ್ಷೆಯ ಕಥನವನ್ನು ಕೇಳಿ ವಿರಾಗಿಯಾಗಿ ವರಧರ್ಮ ಯತಿಗಳಲ್ಲಿ ದೀಕ್ಷಿತನಾದ : ೭೪೫.

**ವಜ್ರವೀರ್ಯ** – ಅಶ್ವಪುರದ ರಾಜ. ಪುತ್ರ ವಜ್ರನಾಭಿ **೭೩** : ೩೨.

**ವಜ್ರ** – ವೃಷಭ ತೀ.ರ ಗಣಧರ **೪೩** : ೬೪.

**ವಜ್ರಸಾಲ** – ವೃಷಭ ತೀ.ರ ಗಣಧರ **೪೩** : ೬೪.

**ವಜ್ರಸೇನ** – ಪುಂಡರೀಕಿಣಿ ನಗರದ ರಾಜ. ಪತ್ನಿ ಶ್ರೀಕಾಂತೆ. ಮಗ ವಜ್ರನಾಭಿ **೧೧** : ೯.

– ಅಯೋಧ್ಯೆಯ ರಾಜ. ಪುತ್ರ ಹರಿಷೇಣ **೭೪** : ೨೩೧.

**ವಜ್ರಾಂಗದ** – ತ್ರಿಪುರಾಧಿಪತಿ. ವಜ್ರಮಾಲಿನಿಯ ಪತಿ. ಅಪಹರಿಸಿದ್ದ ಕನ್ಯೆಯನ್ನು ಹೆಂಡತಿಯ ಭಯದಿಂದ ಬಿಟ್ಟು ಬಿಟ್ಟ **೬೩** : ೫೨೬–೮.

**ವಜ್ರಾಯುಧ** – ಚಕ್ರಾಯುಧ, ಚಿತ್ರಮಾಲೆಯ ಪುತ್ರ **೫೯** : ೨೪೦, ರಾಣಿ ರತ್ನಮಾಲೆ : ೨೪೨, ರತ್ನಾಯುಧನಿಗೆ ರಾಜ್ಯ ಹಾಗೂ ದೀಕ್ಷೆ : ೨೪೬. ಭವಮಾಲೆ : ಸಿಂಹಸೇನ – ಅಶನಿಘೋಷ – ಶ್ರೀಧರದೇವ – ರಶ್ಮಿವೇಗ – ಅರ್ಕಪ್ರಭದೇವ – ವಜ್ರಾಯುಧ **೫೯** : ೩೦೬.

– ಕ್ಷೇಮಂಕರ, ಕನಕಚಿತ್ರೆಯರ ಪುತ್ರ **೬೩** : ೫೪೯, ವರ್ಣನೆ : ೫೫೦–೪, ಸ್ವರ್ಗದ ದೇವ ಇವನನ್ನು ಪರೀಕ್ಷಿಸಲು ಬಂದನು : ೫೬೦. ಸಂತಾನವಾದ ಖಂಡಿಸಿದ : ೫೭೯, ಶಿಲೆಯನ್ನು ಅಂಗೈನಲ್ಲಿ ಚೂರುಮಾಡಿದ : ೫೪೯–೯೪, ಅವಧಿಜ್ಞಾನಿ. ಶಾಂತಿಮತಿಯ ವಿದ್ಯಾಸಾಧನೆಯ ವಿಘ್ನ ಕಾರಣ ತಿಳಿದಿದ್ದನು. ಆದರ ನಿರೂಪಣೆ **೬೩** : ೬೦೯–೨೫. ವೈರಾಗ್ಯ, ಸಿದ್ಧಗಿರಿಯಲ್ಲಿ ಪ್ರತಿಮಾಯೋಗ : ೬೪೩.

**ವಜ್ರಾಯುಧ, ಸಹಸ್ರಾಯುಧ** – ವೈಭಾರಗಿರಿಯಲ್ಲಿ ತಪಗೈದು ಮಹರ್ಧಿಕ ದೇವರಾಗಿ ಜನಿಸಿದರು **೬೩** : ೬೫೨.

**ವಟವೃಕ್ಷ** – ಹರಿವಿಕ್ರಮ ಎಂಬ ವನಾಧಿಪತಿಯ ಸೇವಕರಲ್ಲಿ ಒಬ್ಬ **೭೫** : ೧೦೨೯.

**ವನರಾಜ** – ಹರಿವಿಕ್ರಮ, ಸುಂದರಿಯರ ಪುತ್ರ. ಇವನ ಮಿತ್ರರು ಲೋಹಜಂಘ, ಶ್ರೀಷೇಣ. ಇವರು ಶ್ರೀಚಂದ್ರೆಯನ್ನು ಅಪಹರಿಸಿ ಮಿತ್ರನಿಗೆ ಅರ್ಪಿಸುತ್ತಾರೆ **೭೫**

: ೧೧೩೦–೫, ಜೀವಂಧರನಿಗೆ ಬಂಧಿತನಾದ : ೧೦೫೮. ಶ್ರೀಚಂದ್ರೆಯ ಆಸಕ್ತಿಯ ಬಗ್ಗೆ ವಿವರಣೆ ನೀಡಿದ : ೧೦೬೪–೬.

**ವರ್ಧಮಾನ** – ೨೪ನೇ ತೀರ್ಥಂಕರ. ಸಿದ್ಧಾರ್ಥ ಮತ್ತು ಪ್ರಿಯಕಾರಿಣಿಯ ಪುತ್ರ. ಮತ್ತೊಂದು ಹೆಸರು ವೀರ **೭೪** : ೨೭೬. ಸಂಜಯ, ವಿಜಯ ಚಾರಣರು ಸನ್ಮತಿ ಎಂದು ಹೆಸರಿಸಿದರು : ೨೮೩. ಸಂಗಮದೇವ ಮಾಡಿದ ಪರೀಕ್ಷೆಗಳು : ೨೮೯, ಮಹಾವೀರ ಎಂದು ಹೆಸರಿಸಿದನು : ೨೯೫.

**ವರಕೀರ್ತಿ** – ಜಯವೆಂಬ ನಗರದ ರಾಜ. ಪತ್ನಿ ಕೀರ್ತಿಮತಿ. ಆದೇಶವಚನವಿದ್ದ ಇವರ ಪುತ್ರಿಯನ್ನು ಶ್ರೀಪಾಲ ಲಗ್ನವಾಗುತ್ತಾನೆ **೪೭** : ೧೪೦–೧.

**ವರಚಂದ್ರ** – ಭವಿಷ್ಯತ್ಕಾಲದ ತೀ. ರಲ್ಲಿ ಒಬ್ಬ **೭೬** : ೧೭೨೬.

**ವರತನು** – ವ್ಯಂತರಾಧಿಪತಿ. ವರತನು ಎಂಬ ದ್ವೀಪದ ರಾಜ **೨೯** : ೧೬೬. ನಾಲ್ಕು ರತ್ನಗಳು : ೧೬೭.

**ವರತನುದೇವ** – ವೈಜಯಂತಗೋಪುರದ ದೇವ. ಚಕ್ರಿಗೆ ವಶನಾದ **೬೮** : ೧೧೨೯.

**ವರದತ್ತ** – ವಿಭೀಷಣರಾಜ, ಪ್ರಿಯದತ್ತೆಯರ ಪುತ್ರ. ಮೊದಲು ಹುಲಿಯಾಗಿದ್ದು, ಅನಂತರ ಚಿತ್ರಾಂಗದ ದೇವನಾಗಿದ್ದ ಜೀವ **೧೦** : ೧೪೯ ವಿಮಲವಾಹನ ಜಿನರಲ್ಲಿ ದೀಕ್ಷಿತನಾದ : ೧೫೪.

- ಭಗೀರಥನು ಇವನಿಗೆ ರಾಜ್ಯಭಾರ ವಹಿಸಿ ತಾನು ದೀಕ್ಷಿತನಾದ **೪೮** : ೧೩೮.
- ಕೇವಲಜ್ಞಾನಿ. ಇವರಲ್ಲಿ ಜಯಸೇನ ಎಂಬ ೧೧ ನೇ ಚಕ್ರವರ್ತಿ ದೀಕ್ಷೆ ಹೊಂದಿದ **೬೯** : ೮೮.
- ರಾಜ. ದ್ವಾರಾವತಿನಗರದಲ್ಲಿ ನೇಮೀಶ್ವರರಿಗೆ ಆಹಾರದಾನ ನೀಡಿದ **೭೧** : ೬೭೨ ನೇಮಿ ತೀ.ರ ಗಣಧರರಲ್ಲಿ ಒಬ್ಬ **೭೨** : ೯೬೧.
- ನೋ. ಧನಪಾಲ **೭೫** : ೮೦೩–೧೦.

**ವರಧರ್ಮ** – ಯತಿ. ವಿಮಲ ಎಂಬ ಪರ್ವತದಲ್ಲಿದ್ದರು. ಭದ್ರಮಿತ್ರ ಇವರಲ್ಲಿ ಧರ್ಮಶ್ರವಣ ಮಾಡಿ, ಧನದಾನ ಮಾಡಿದ **೫೯** : ೧೮೯.

- ಅವಧಿಜ್ಞಾನಿಯಾದ ಚಾರಣಮುನಿ **೬೨** : ೭೩. ಇವರಲ್ಲಿ ಮೇಘವಾಹನ ತನ್ನ ಮಗ ವಿದ್ಯುತ್ಪ್ರಭನ ಪೂರ್ವಭವ ಕೇಳುತ್ತಾನೆ : ೭೫.
- ಒಬ್ಬ ಯತಿ **೭೧** : ೮೦೭.
- ಯತಿ. ಇವರಲ್ಲಿ ಜೀವಂಧರ ಧರ್ಮವನ್ನು ತಿಳಿದು ವ್ರತ ಸ್ವೀಕರಿಸಿದ **೭೫** : ೧೨೨೪.

**ವರವೀರ** – ಭರತನ ತಮ್ಮ. ಪೂರ್ವಭವದ ಅಪರಾಜಿತ **೧೬** : ೩.

**ವರಸೇನ** – ನಾಗದತ್ತ , ಸುರತಿಯರ ಮಗ **೬** : ೧೨೯.

- ರಾಜನಂದಿಷೇಣ, ಅನಂತಮತಿಯ ಮಗ. ಭವಮಾಲೆ : ಹಂದಿ – ಮಣಿಕುಂಡಲದೇವ – ವರಸೇನ **೧೦** : ೧೫೦. ವಿಮಲವಾಹನ ಜಿನರಲ್ಲಿ ದೀಕ್ಷಿತನಾದ : ೧೫೪.
- ವಿಮಲವೆಂಬ ನಗರದ ರಾಜಪುತ್ರ. ಶ್ರೀಪಾಲನ ದಾಹಕ್ಕಾಗಿ ನೀರು ತರಲು ಯತ್ನಿಸಿದನು **೪೭** : ೧೧೮.
- ಧೃಡರಥ, ಸುಮತಿಯರ ಪುತ್ರ **೬೩** : ೬೪೯.
- ಚಕ್ರಪುರದ ಅಧಿಪತಿ. ಇಕ್ಷ್ವಾಕುವಂಶ **೬೫** : ೧೭೬, ಇಬ್ಬರು ರಾಣಿಯರು – ವೈಜಯಂತಿದೇವಿ, ಲಕ್ಷ್ಮೀಮತಿದೇವಿ.
- ಅಲಕಾಪುರದ ಮಹಾಸೇನನ ಇಬ್ಬರು ಮಕ್ಕಳಲ್ಲಿ ಒಬ್ಬ **೭೬** : ೧೫೦೫.

**ವರುಣ** – ಕಂಸನ ನಿಮಿತ್ತಜ್ಞಾನಿ. ಮಧುರಾನಗರದಲ್ಲಿ ಮಹಾ ಉತ್ಪಾತಗಳು ಸಂಭವಿಸಿದಾಗ ಶತ್ರು ಜನನದ ಸಂಗತಿ ತಿಳಿಸುತ್ತಾನೆ **೭೦** : ೪೧೨–೩, ಚಕ್ರವರ್ತಿಯ ಬಗ್ಗೆ : ೪೩೩.

- ಮುನಿ. ಇವರಲ್ಲಿ ಸೋಮದತ್ತ, ಸೋಮಿಲ, ಸೋಮಭೂತಿ ಸೋದರರು ದೀಕ್ಷಿತರಾದರು **೭೨** : ೧೧೯೪.

**ವಶಿಷ್ಠ** – ಜಠರ ಕೌಶಿಕ ಗ್ರಾಮದ ಅಧಿಪತಿ. ಪಂಚಾಗ್ನಿ ವ್ರತಾಚಾರಿ. ಗುಣಭದ್ರ, ವೀರಭದ್ರ, ಚಾರಣಮುನಿಗಳಿಂದ ತನ್ನ ಅಜ್ಞಾನದ ತಪಸ್ಸನ್ನು ತಿಳಿದು ದೀಕ್ಷಿತನಾದ. ತಪೋಮಹಿಮೆಗೆ ಏಳು ವ್ಯಂತರದೇವತೆಗಳು ಪ್ರತ್ಯಕ್ಷ **೭೦** : ೩೨೨–೩೦. ಮಧುರಾನಗರಕ್ಕೆ ಆಗಮನ, ಉಗ್ರಸೇನ ರಾಜನ ಬಗ್ಗೆ ಕೋಪ ಬೆಳೆದುದು. ನಿದಾನಶಲ್ಯದಿಂದ ಮಡಿದನು. ಮುಂದೆ ಕಂಸನಾಗಿ ಜನಿಸಿದನು : ೩೩೦–೪೧.

**ವಸುಂಧರ** – ತ್ರಿಪುರದ ಅಧಿಪತಿ. ಪತ್ನಿ ಪದ್ಮಾವತಿ. ಇವಳ ವಿಯೋಗದಿಂದ ವಿರಕ್ತನಾದ **೬೯** : ೭೪–೫.

**ವಸುಂಧರಕುಮಾರ** – ಜೀವಂಧರ, ಗಂಧರ್ವದತ್ತೆಯ ಪುತ್ರ. ಇವನಿಗೆ ರಾಜ್ಯ ಒಪ್ಪಿಸಿ ಜೀವಂಧರ ದೀಕ್ಷಿತನಾದ **೭೫** : ೧೨೩೦.

**ವಸು** – ಪೃಥುದೀಯ ತಮ್ಮ. ಇವನಿಗೆ ಕಾಮುಮುದ್ರಿಕೆಯನ್ನು ಪೃಥುದೀ ತೊಡಿಸಿ ಶ್ರೇಷ್ಠಿಗೆ ಕೇಡು ಬಗೆಯಲು ಬಳಸಿಕೊಳ್ಳುತ್ತಾನೆ **೪೬** : ೩೧೮–೨೨.

**ವಸು** – ವಿಶ್ವಾವಸು ರಾಜನ ಮಗ. ಗುರು ಕ್ಷೀರಕದಂಬನ ಶಿಷ್ಯ. ಇವನ ಸಹಪಾಠಿಗಳು ಪರ್ವತ ಮತ್ತು ನಾರದ **೬೭** : ೨೫೮–೬೦. ಹಿಂಸೆಯನ್ನು ಧರ್ಮವಾಗಿ ಸ್ವೀಕರಿಸಿ ನಾರಕಿಯಾಗುವನು ಎಂದು ಆತ್ಮಜ್ಞಾನಿ ಮುನಿ ನಿಮಿತ್ತ ನುಡಿದನು : ೨೬೫. ಆಕಾಶಸ್ಫಟಿಕ ಸ್ತಂಭವನ್ನು ತನ್ನ ಸಿಂಹಾಸನಕ್ಕೆ ಗುಟ್ಟಾಗಿ ಜೋಡಿಸುತ್ತಾನೆ. ಇದರಿಂದ ಇವನ ಆಸನ ಅಂತರಿಕ್ಷದಲ್ಲಿರುವಂತೆ ಕಾಣುತ್ತದೆ. ಇದರಿಂದ ಅತಿಶಯತೆ ಹೊಂದುತ್ತಾನೆ: ೨೭೯–೮೧. ಪರ್ವತ ಹಾಗೂ ಅವನ ತಾಯಿಯನ್ನು ಸಲಹುವ ಜವಾಬ್ದಾರಿ : ೩೨೩–೬ ಅಧರ್ಮದ ತೀರ್ಪಿತ್ತು ನರಕವನ್ನು ಸೇರಿದನು.

**ವಸುಗಿರಿ** – ಹರಿವಂಶದ ಒಬ್ಬ ರಾಜ **೭೦** : ೯೨.

**ವಸುದೇವ** – ಪೂರ್ವಭವದ ನಂದಿಯೆಂಬ ದರಿದ್ರ ಬ್ರಾಹ್ಮಣ. ಆತ್ಮಹತ್ಯೆ ಮಾಡಿಕೊಳ್ಳುವಾಗ, ಉತ್ತರಭವದಲ್ಲಿ ಪುತ್ರರಾಗುವವರು ಇವನಿಗೆ ಬೋಧಿಸಿ ಮುನಿಯನ್ನಾಗಿ ಮಾಡುವರು. ಸ್ವರ್ಗದ ದೇವನಾದ. ಅಲ್ಲಿಂದ ಚ್ಯುತನಾಗಿ ವಸುದೇವನಾದ **೭೦** : ೨೦೦–೧೧. ಇವನ ನಗರ ಸಂಚಾರದ ಬಗ್ಗೆ ಪುರಜನರಿಂದ ದೂರು **೭೦** : ೨೧೭–೨೩. ನಗರವಿಹಾರ ಹೋಗದಂತೆ ಸಮುದ್ರವಿಜಯನ ಉಪಾಯ : ೨೨೪–೮. ಶ್ಮಶಾನದಲ್ಲಿ ಸತ್ತಂತೆ ಮಾಡಿ ದೇಶಾಟನೆಗೆ ಹೊರಟಿದ್ದು : ೨೪೩. ಶ್ಯಾಮಲೆಯೊಡನೆ ವಿವಾಹ : ೨೫೧. ಶಾಲ್ಮಲಿದತ್ತೆಯೊಡನೆ ಲಗ್ನ : ೨೫೪. ಅಂಗಾರವೇಗನಿಂದ ಅಪಹರಣ, ಚಂಪಾಪುರದಲ್ಲಿ : ೨೫೬–೯. ದೋಷರಹಿತ ವೀಣೆಗಾಗಿ ವಿನಂತಿ : ೨೭೦. ಗಂಧರ್ವದತ್ತೆಯೊಡನೆ ವಿವಾಹ : ೩೦೪–೫. ರೋಹಿಣಿ ಸ್ವಯಂವರದಲ್ಲಿ ಬಂಧುಗಳೊಡನೆ ಸಮಾಗಮ : ೩೦೭–೧೪.

**ವಸುಪಾಲ** – ಪುಂಡರೀಕಿಣಿ ನಗರದ ರಾಜ. ಗುಣಪಾಲರಾಜನ ಪುತ್ರ **೪೬** : ೨೮೯. ವಾರಿಷೇಣೆ ಮೊದಲಾದ ಕನ್ಯೆಯರನ್ನು ಲಗ್ನವಾದ **೪೭** : ೧೭೯. ಪೂರ್ವಭವದ ಜಯಧಾಮ **೪೭** : ೨೨೪.

**ವಸುಪೂಜ್ಯ** – ಚಂಪಾನಗರದ ರಾಜ. ಇಕ್ಷ್ವಾಕುವಂಶ. ಕಾಶ್ಯಪ ಗೋತ್ರ. ಪತ್ನಿ ಜಯಾವತಿ. ವಾಸುಪೂಜ್ಯ ತೀ.ರ ತಂದೆ **೫೮** : ೧೭.

**ವಸುಮಿತ್ರ** – ಅಯೋಧ್ಯಾ ನಗರದ ರಾಜ. ಪತ್ನಿ ಭದ್ರಾದೇವಿ. ಮಘವನ ತಂದೆ **೬೧** : ೯೨.

**ವಸುಷೇಣ** – ಪೌದನಪುರದ ರಾಜ. ರಾಣಿ ನಂದೆ **೬೦** : ೫೦, ಐದುನೂರು ರಾಣಿಯರು : ೫೧.

**ವಾಗಲಿ** – ಭವಿಷ್ಯತ್‌ಕಾಲದ ತೀ. ಆಗುವವರಲ್ಲಿ ೧೯ ನೆಯವನು **೭೬** : ೧೭೧೪.

**ವಾದೀಭಸಿಂಹ** – ಜಿನಸೇನಾಚಾರ್ಯರು ಇವರನ್ನು ಸ್ಮರಿಸಿದ್ದಾರೆ **೧** : ೫೪.

**ವಾಯುಭೂತಿ** – ಸೋಮದೇವ ಬ್ರಾಹ್ಮಣನ ಪುತ್ರ **೭೨** : ೯೬೩.

- ಮಹಾವೀರರ ೧೨ ಮಂದಿ ಗಣಧರರಲ್ಲಿ ಒಬ್ಬರು **೭೪** : ೩೭೩.

**ವಾಯುರಥ** – ಭೋಗಪುರದ ವಿದ್ಯಾಧರರಾಜ. ರಾಣಿ ಸ್ವಯಂಪ್ರಭಾದೇವಿ. ಪುತ್ರಿ ಪ್ರಭಾವತಿ **೪೬** : ೧೪೭–೮, **೪೭** : ೧೮೫.

- ಮಹಾಪುರದ ರಾಜ **೫೮** : ೮೦. ಸುವ್ರತ ಅರ್ಹತ್ ಪರಮೇಶ್ವರರಲ್ಲಿ ಧರ್ಮಶ್ರವಣ ಮಾಡಿ ದೀಕ್ಷಿತನಾದ : ೮೧.

**ವಾಯುಶರ್ಮ** – ವೃಷಭ ತೀ.ರ ಗಣದಲ್ಲಿ ಒಬ್ಬ **೪೩** : ೫೫.

**ವಾಲಿ** – ಬಲೀಂದ್ರನ ಮಗ. ಕಿಲಕಿಲ ನಗರದ ದೊರೆ. ಲೋಭಿಯಾಗಿ ತಮ್ಮನಾದ ಸುಗ್ರೀವನನ್ನು ರಾಜ್ಯದಿಂದ ಓಡಿಸಿದ **೬೮** : ೭೪೮. ಸಾಮೋಪಾಯದ ಮಾತುಗಳನ್ನು ರಾಮನಿಗೆ ಹೇಳಿ ಕಳಿಸುತ್ತಾನೆ **೬೮** : ೯೧೭–೨೦. ಲಕ್ಷ್ಮಣ ವಾಲಿಯನ್ನು ಸಂಹರಿಸಿದನು : ೯೪೨.

**ವಾಲಿ, ಸುಗ್ರೀವ** – ಬಲೀಂದ್ರ ಪ್ರಿಯಂಗ ದಂಪತಿಗಳ ಪುತ್ರರು. ಕಿಲಕಿಲ ನಗರದ ರಾಜ, ಯುವರಾಜರು **೮೬** : ೭೪೬.

**ವಾಯುವೇಗ** – ಇಂದ್ರದತ್ತ, ಯಶೋಧರೆಯರ ಮಗ. ವಜ್ರಾಯುಧನ ಆಸ್ಥಾನಕ್ಕೆ ಗದೆ ಹಿಡಿದು ಬಂದ ಮುದುಕ **೬೩** : ೫೯೯–೬೦೩. ಪತ್ನಿ ಸುಕಾಂತೆ : ೬೦೪.

**ವಾಸವ** – ವಿದ್ಯಾಧರ ರಾಜ. ಮಹೀಧರನ ತಂದೆ **೭** : ೨೯.

– ಸ್ತ್ರೀವೇಷ ಧರಿಸಿದ ಪ್ರಸಿದ್ಧ ನಟ **೪೭** : ೧೮.

– ಶ್ವೇತವಿಕ ನಗರದ ರಾಜ. ನಂದಯಶೆಯ ತಂದೆ **೭೧** : ೭೮೦.

– ಕುಂಡಲಪುರದ ರಾಜ. ರುಗ್ಮಿಣಿಯ ತಂದೆ **೭೧** : ೮೩೮.

– ಅರಿಷ್ಟಪುರದ ರಾಜ. ಪುತ್ರ ಸುಷೇಣ **೭೧** : ೮೯೮. ಸಾಗರಸೇನ ಮುನಿಗಳಲ್ಲಿ ದೀಕ್ಷೆ : ೮೯೯.

**ವಾಸವ, ದುರ್ದಾಂತ** – ಶ್ರೀಮತಿ ಬರೆದ ಚಿತ್ರಗಳನ್ನು ಜಿನಾಲಯದಲ್ಲಿ ನೋಡಿದ ದುಷ್ಟರು **೭** : ೧೧೩.

**ವಾಸುದೇವ** – ಕೃಷ್ಣ. ಇವನ ದರ್ಶನದಿಂದ ಶಿಶುಪಾಲನ ಮೂರನೆ ನೇತ್ರ ಮಾಯವಾಯಿತು **೭೧** : ೮೪೩. ಮುಂದೆ ೧೬ನೇ ತೀ.ಆಗುವನು **೭೬** : ೧೭೧೩.

**ವಾಸುಪೂಜ್ಯ** – ತೀರ್ಥಂಕರ. ತಂದೆ ವಸುಪೂಜ್ಯ. ತಾಯಿ ಜಯಾವತಿ **೫೮** : ೨೨, ವೈರಾಗ್ಯ **೩೦** : ೫, ದೀಕ್ಷೆ : ೩೮. ಭವಮಾಲೆ : ಪದ್ಮೋತ್ತರ ರಾಜ –ಮಹಾ ಶುಕ್ರೇಂದ್ರ – ವಾಸುಪೂಜ್ಯ **೫೮** : ೫೮.

**ವ್ಯಾಸ** – ಪರಾಶರ, ಸತ್ಯವತಿಯರ ಪ್ರಾಜ್ಞನಾದ ಪುತ್ರ **೭೦** : ೧೦೩, ಪತ್ನಿ ಸುಭದ್ರೆ. ಮಕ್ಕಳು ಧೃತರಾಷ್ಟ್ರ, ಪಾಂಡು ಮತ್ತು ವಿದುರ : ೧೦೩.

**ವಿಂಧ್ಯಕೇತು** – ವಿಂಧ್ಯಪುರದ ರಾಜ. ಪತ್ನಿ ಪ್ರಿಯಾಂಗುಶ್ರೀ. ಪುತ್ರಿ ವಿಂಧ್ಯಶ್ರೀ **೪೫** : ೧೫೩.

**ವಿಂಧ್ಯವಾಸಿನಿ ದೇವತೆ** – ಶಿಶುಕೃಷ್ಣನ ಸ್ಥಾನದಲ್ಲಿ ದೇವಕಿಯ ಮಡಿಲಿಗೆ ನಂದಗೋಪನ ಸ್ತ್ರೀ ಶಿಶು ಬಂದಾಗ, ಆ ಹೆಣ್ಣುಮಗುವಿನ ಮೂಗನ್ನು ಕಂಸನು ಒತ್ತಿ ವಿಕಾರಗೊಳಿಸಿದ. ಆಕೆ ಮುಂದೆ ದೀಕ್ಷಿತಳಾಗಿ ವಿಂಧ್ಯಗಿರಿಯಲ್ಲಿ ಧ್ಯಾನಾರೂಢಳಾದಳು. ಹುಲಿ ಭಕ್ಷಿಸಿತು. ಮೂಢವ್ಯಾಧರು ಆಕೆಯನ್ನು ದೇವತೆಯೆಂದು ಭಾವಿಸಿ, ಆಕೆಯ ಮೂರು ಬೆರಳುಗಳನ್ನು ಕ್ಷೀರಾಂಗರಾಗ ದಿಂದ ಪೂಜಿಸಿದರು **೭೦** : ೪೦೫–೧೧.

**ವಿಂಧ್ಯಶಕ್ತಿ** – ವಿಂಧ್ಯಪುರದ ರಾಜ. ಕನಕಪುರಾಧಿಪತಿ ಸುಷೇಣನ ನರ್ತಕಿ ಗುಣಮಂಜರಿಯನ್ನು ಬಯಸಿದ **೫೮** : ೬೩–೪. ಯುದ್ಧದಲ್ಲಿ ಆತನನ್ನು ಸೋಲಿಸಿ ಆಕೆಯನ್ನು ಅಪಹರಿಸಿದ : ೭೩.

**ವಿಂಧ್ಯಸೇನ** – ವಿಂಧ್ಯಪುರದ ರಾಜ. ಪತ್ನಿ ಸುಲಕ್ಷಣೆ. ಪುತ್ರ ನಲಿನಕೇತು **೬೩** : ೬೧೦–೧.

**ವಿಕಸಿದ** – ಪ್ರಹಸಿತ ಎಂಬ ವಿದ್ವಾಂಸನ ಮಿತ್ರ **೭** : ೬೩.

**ವಿಚಿತ್ರಚೂಲ** – ವಜ್ರಾಯುಧನನ್ನು ಪರೀಕ್ಷಿಸಲು ಸ್ವರ್ಗದಿಂದ ಬಂದ ದೇವ **೬೩** : ೫೬೦–೮೧.

**ವಿಚಿತ್ರಾಂಗದ** – ಸೌಧರ್ಮಕಲ್ಪದ ಅವಧಿಜ್ಞಾನವುಳ್ಳ ದೇವ. ಸುಲೋಚನೆಯ ಸ್ವಯಂವರ ನೋಡಲು ಬಂದು, ಸರ್ವತೋಭದ್ರ ಎಂಬ ಭವನವನ್ನು, ಸ್ವಯಂವರ ಸಭಾಗೃಹವನ್ನು ರಚಿಸಿಕೊಡುತ್ತಾನೆ **೪೩** : ೨೦೪–೧೩.

**ವಿಚಿತ್ರಮತಿ** – ಮಂತ್ರಿಪುತ್ರ. ತಂದೆ ಚಿತ್ರವತಿ **೫೯** : ೨೫೬. ರಾಜಪುತ್ರನೊಂದಿಗೆ ಧರ್ಮರುಚಿಮುನಿಯಲ್ಲಿ ತಪಗೈದರು : ೨೫೭, ಸಾಕೇತನಗರದಲ್ಲಿ ಬುದ್ಧಿಷೇಣೆ ವೇಶ್ಯೆಗೆ ಕಾಮರಾಗದ ಕಥೆಯನ್ನು ಹೇಳಿ ತಿರಸ್ಕೃತನಾದ : ೨೬೫, ಮುನಿವೇಷವನ್ನು ಬಿಟ್ಟು ವೇಶ್ಯೆಯನ್ನು ವಶಪಡಿಸಿಕೊಂಡ. ಸತ್ತು ಮೇಘ ವಿಜಯನೆಂಬ ಆನೆಯಾದನು : ೨೬೬–೭.

**ವಿಚಿತ್ರವಾಹನ** – ಭರತಾದಿ ೧೨ ಜನ ಚಕ್ರವರ್ತಿಗಳಲ್ಲಿ ಒಬ್ಬ **೭೬** : ೧೭೨೪.

**ವಿಜಯ** – ಸೋಮಪ್ರಭರಾಜನ ೧೫ ಜನ ಪುತ್ರರಲ್ಲಿ ಒಬ್ಬ **೪೩** : ೮೦.

– ಜಯಕುಮಾರನ ತಮ್ಮ **೪೭** : ೨೫೬.

– ಪೌದನಾಪುರದ ಪ್ರಜಾಪತಿ, ಜಯಾವತಿ ರಾಣಿಯ ಪುತ್ರ. ಪೂರ್ವಭವದ ವಿಶಾಖಭೂತಿ **೫೭** : ೮೬, ಮೊದಲನೇ ಬಲಭದ್ರ : ೮೯. ನಾಲ್ಕು ರತ್ನಪ್ರಾಪ್ತಿ : ೯೩.

– ಪ್ರಜಾಪತಿ, ಭದ್ರಾದೇವಿಯರ ಜ್ಯೇಷ್ಠಪುತ್ರ. ಸಹೋದರ ತ್ರಿಪೃಷ್ಠ. **೬೨** : ೯೧.

– ಜಿನೇಶ್ವರ. ಇವರ ಸಮವಸರಣ ಸಭೆಗೆ ಅಮಿತತೇಜ ಅಶನಿಘೋಷ ಮೊದಲಾದವರು ಪ್ರವೇಶಿಸಿದರು **೬೨** : ೨೭೮–೮೦.

**ವಿಜಯ, ಜಯಂತ** – ಅಭಯಘೋಷ ಹಾಗೂ ಸುವರ್ಣತಿಲಕೆಯರ ಮಕ್ಕಳು **೬೩** : ೬೮೦.

**ವಿಜಯ** – ಯುವರಾಜ. ಇವನಿಗೆ ಮುನಿಸುವ್ರತ ರಾಜ್ಯಭಾರ ವಹಿಸಿದರು **೬೭** : ೩೯.

– ಮಂತ್ರಿಯ ಮಗ. ರಾಜಪುತ್ರ ಚಂದ್ರಚೂಲನೊಂದಿಗೆ ಸ್ನೇಹ **೬೭** : ೯೧.

– ದೂತನಾದ ಅಣುಮಂತನಿಗೆ ಸಹಾಯಕರಾದ ನಾಲ್ವರಲ್ಲಿ ಒಬ್ಬ **೬೮** : ೮೬೪.

– ಮಿಥಿಲಾನಗರದ ಮಹಾರಾಜ. ಕಾಶ್ಯಪಗೋತ್ರ, ವೃಷಭಾನ್ವಯ **೬೯** : ೧೯. ಇವನ ಪತ್ನಿ ಪಿಪ್ಪಿಲಾದೇವಿಯಲ್ಲಿ ನಮಿ ತೀ.ರ ಜನನ **೬೯** : ೨೫. ಇವನ ಪ್ರಭಂಕರಿದೇವಿ ರಾಣಿಯಲ್ಲಿ ಜಯಸೇನನೆಂಬ ೧೧ ನೇ ಚಕ್ರವರ್ತಿಯ ಜನನ **೬೯** : ೭೯.

– ಅಂಧಕವೃಷ್ಣಿಯ ೫ನೇ ಮಗ **೭೦** : ೯೬.

**ವಿಜಯ** – ಉಜ್ಜಯಿನಿಯ ರಾಜ. ಪತ್ನಿ ಅಪರಾಜಿತೆ. ಪುತ್ರಿ ವಿನಯಶ್ರೀ **೭೧** : ೯೪೦.

– ಪ್ರಜಾಪತಿ ಹಾಗೂ ಜಯಾವತಿಯರ ರಾಜಪುತ್ರ. ಪೂರ್ವಭವ : ವಿಶಾಖಭೂತಿ – ಮಹಾಶುಕ್ರದೇವ **೭೪** : ೧೨೦.

**ವಿಜಯಗುಪ್ತ** – ವೃಷಭ ತೀ.ರ ಗಣಧರ **೪೩** : ೫೮.

**ವಿಜಯದೇವ** – ಶಾಲ್ಮಲಿ ಗ್ರಾಮದವನು. ಪತ್ನಿ ದೇವಿಲೆ **೭೧** : ೯೪೪.

**ವಿಜಯನಂದನ** – ವಿಜಯಪುರದ ರಾಜ. ಕೃಷ್ಣನಲ್ಲಿ ಪ್ರೀತಿಯುಳ್ಳವನು. ಆದ್ದರಿಂದ ಕೃಷ್ಣನಿಗೆ ಗೌರಿ ದೊರೆಯಲು ಸಹಾಯಕನಾದ **೭೧** : ೯೩೮.

**ವಿಜಯಭದ್ರ** – ನಂದನ, ಜಯಸೇನರ ರಾಜಪುತ್ರ **೬೨** : ೭೬, ವೈರಾಗ್ಯ: ೭೬ – ೭, ದೇವನಾದ : ೭೮, ಅನಂತರ ಮೇಘವಾಹನನ ಪುತ್ರ ವಿದ್ಯುತ್ಪ್ರಭನಾದನು : ೭೯.

– ತ್ರಿಪೃಷ್ಠ ಮೂವರು ಮಕ್ಕಳಲ್ಲಿ ಎರಡನೆಯವನು **೬೨** : ೧೫೧.

**ವಿಜಯಮತಿ** – ಶ್ರಾವಕ. ಸತ್ಯಂಧರನ ಸೇನಾಪತಿ. ಪತ್ನಿ ಜಯಾವತಿ. ಇವರ ಪುತ್ರ ದೇವಸೇನ **೭೫** : ೮೦೩–೧೦.

**ವಿಜಯಮಿತ್ರ** – ವೃಷಭ ತೀ.ರ ಗಣಧರ **೪೩** : ೫೯.

**ವಿಜಯರಾಮ** – ರಾಮನ ಪುತ್ರ **೬೮** : ೧೧೬೭.

**ವಿಜಯಾಚಾರ್ಯ** – ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ. ಇವರು ದಶಾಂಗ, ಏಕಾದಶಪೂರ್ವ ತಿಳಿದಿದ್ದರು **೨** : ೧೪೪.

**ವಿಜಯಾರ್ಧದೇವ** – ವಿಜಯಾರ್ಧಗಿರಿಯ ಅಧಿಪತಿ **೩೧** : ೩೮–೪೫. ಭರತನಿಗೆ ರತ್ನದ ಗಿಂಡಿ, ಶ್ವೇತಛತ್ರ, ೨ ಚಾಮರ, ಸಿಂಹಪೀಠ ಕೊಟ್ಟನು : ೪೯.

**ವಿಜಯಿಲ** – ವೃಷಭ ತೀ.ರ ಗಣಧರ **೪೩** : ೫೯.

**ವಿದರ್ಭ** – ಪುಷ್ಪದಂತ ತೀ.ರ ಮುಖ್ಯ ಗಣಧರ **೫೫** : ೫೨.

**ವಿದುರ** – ವ್ಯಾಸ ಮತ್ತು ಸುಭದ್ರೆಯರ ಮಗ. ಧೃತರಾಷ್ಟ್ರ ಪಾಂಡುವಿನ ತಮ್ಮ **೭೦** : ೧೦೩.

**ವಿದ್ಯುಚ್ಚೋರ** – ಇವನ ನಿಜವಾದ ಹೆಸರು ವಿದ್ಯುತ್ಪ್ರಭ. ನೋ. ವಿದ್ಯುತ್ಪ್ರಭ **೭೬** : ೧೨೯೩–೬. ಜಿನದಾಸಿಯ ಭೇಟಿ : ೧೨೯೭–೯. ಜಂಬುಕುಮಾರನಿಗೆ ಅನೇಕ ಕಥೆಗಳನ್ನು ಹೇಳಿದ : ೧೩೦೪–೩೩, ವೈರಾಗ್ಯ : ೧೩೪೮.

– ಹಿಂದೆ ಬೆಕ್ಕಿನ ಭವ ಹೊಂದಿದ್ದವನು. ಹಿರಣ್ಯವರ್ಮ ಮುನಿಯನ್ನು ಪ್ರಭಾವತ್ಯಾರ್ಯಿಕೆಯನ್ನು ಒಂದೇ ಚಿತೆಯಲ್ಲಿರಿಸಿ ಸುಟ್ಟನು **೪೬** : ೨೪೮–೫೫.

**ವಿದ್ಯುತ್ಪ್ರಭ** – ಮೇಘವಾಹನನ ಪುತ್ರ. ಜ್ಯೋತಿರ್ಮಾಲೆಯ ಸೋದರ **೬೨** : ೭೨. ವರಧರ್ಮ ಮುನಿ ಇವನ ಪೂರ್ವಭವ ಹೇಳುತ್ತಾನೆ : ೭೫–೯.

– ನೋ. ವಿದ್ಯುನ್ಮಾಲಿದೇವ **೭೬** : ೧೨೭೩.

– ಪೌದನಪುರದ ವಿದ್ಯುದ್ರಾಜ ಮತ್ತು ವಿಮಲವತಿಯರ ಮಗ. ವಿದ್ಯುಚ್ಚೋರ ಎಂಬುದು ಮತ್ತೊಂದು ಹೆಸರು. ಚೋರ ಶಾಸ್ತ್ರಜ್ಞ. ಜಂಬುಕುಮಾರನ ಮನೆಯಲ್ಲಿ ಕದಿಯಲು ಬರುತ್ತಾನೆ **೭೬** : ೧೨೯೩–೬.

**ವಿದ್ಯುದಂಷ್ಟ್ರ** – ವಜ್ರದಂಷ್ಟ್ರನೆಂಬ ವಿದ್ಯಾಧರ ರಾಜನ ಮಗ. ಪೂರ್ವಭವದ ಸತ್ಯಘೋಷ **೫೯** : ೨೯೦–೧.

– ವಿದ್ಯಾಧರ. ಸಂಜಯಂತ ಮುನಿಗೆ ಪಂಚನದಿಗಳ ನಡುವೆ ಎಸೆಯುವುದರ ಮೂಲಕ ಉಪಸರ್ಗ ಉಂಟುಮಾಡಿದ **೫೯** : ೧೧೭. ಭವಮಾಲೆ : ೩೧೩–೫.

**ವಿದ್ಯುದ್ದಂಷ್ಟ್ರ** – ಅಲಕಾನಗರದ ಅಧಿಪತಿ. ಪತ್ನಿ ಅನಿಲವೇಗೆ, ಪುತ್ರ ಸಿಂಹರಥ **೬೩** : ೭೫೨. ಮುಂದೆ ದುಷ್ಟ ವಿದ್ಯಾಧರನಾಗಿ ವಜ್ರಾಯುಧನನ್ನು ನಾಗಪಾಶದಿಂದ ಕಟ್ಟಿ ಹಾಕುತ್ತಾನೆ **೬೩** : ೫೯೫.

– ಖೇಚರಾಧಿಪತಿ ಕಾಲಶಂಬರನ ಮಗ. ಇವನಿಗೆ ಪ್ರದ್ಯುಮ್ನನನ್ನು ಕೊಲ್ಲಲು ಆದೇಶ ದೊರೆಯುತ್ತದೆ **೭೨** : ೧೦೪೮.

**ವಿದ್ಯುದ್ಗತಿ** – ತ್ರಿಲೋಕೋತ್ತಮನಗರದ ವಿಧ್ಯಾಧರಾಧಿಪತಿ. ಪತ್ನಿ ವಿದ್ಯುನ್ಮಾಲೆ. ಪುತ್ರ ರಶ್ಮಿವೇಗ **೭೩** : ೨೬.

**ವಿದ್ಯುದ್ರಾಜ** – ಪೌದನದ ರಾಜ. ವಿದ್ಯುತ್ಪ್ರಭನ ತಂದೆ **೭೬** : ೧೨೯೩.

**ವಿದ್ಯುದ್ವೇಗ** – ಪುಂಡರೀಕಿಣಿಪುರದ ಚೋರ **೪೬** : ೨೯೦.

– ಗಗನವಲ್ಲಭಪುರದ ಖೇಚರರಾಜ. ಸುರೂಪೆಯ ತಂದೆ **೭೧** : ೯೧೬.

– ನೋ. ವಿದ್ಯುನ್ಮಾಲಿದೇವ **೭೬** : ೧೨೭೩.

**ವಿದ್ಯುನ್ಮಾಲಿದೇವ** – ಬ್ರಹ್ಮಕಲ್ಪದ ದೇವ. ಇವನಿಗೆ ನಾಲ್ವರು ಪ್ರಮುಖ ದೇವಿಯರು. ಇವನೇ ಮುಂದೆ ಜಂಬೂಕುಮಾರನಾಗುತ್ತಾನೆ **೭೬** : ೧೨೭೨.

**ವಿನಮಿ** – ಮಹಾಕಚ್ಛನ ಪುತ್ರ **೧೮** : ೯೨. ವೃಷಭ ತೀ. ರ ಗಣಧರ **೪೩** : ೬೫.

**ವಿನಯಂಧರ** – ಒಬ್ಬಯೋಗಿ **೭** : ೩೪.

– ತ್ರಿಪುರಾಧಿಪತಿಯಾದ ವಸುಂಧರನ ಮಗ **೬೯** : ೭೬.

**ವಿನಯಂಧರ** – ಒಬ್ಬ ಮುನಿ. ಇವರು ರುಗ್ಮಿಣಿ ಹಾಗೂ ಸತ್ಯಭಾಮೆಯರ ಪುತ್ರೋತ್ಪತ್ತಿಯ ವಿಷಯ ತಿಳಿಸಿದರು **೭೨** : ೧೧೧೩.

**ವಿನೀತ** – ಮಹಾಮೇರುವಿನಲ್ಲಿದ್ದ ಚಾರಣಮುನಿ **೭೧** : ೯೧೯.

**ವಿಪುಲ** – ಮಹಾಪದ್ಮಾದಿ ಭಾವಿ ತೀ.ರಲ್ಲಿ ಒಬ್ಬ **೭೬** : ೧೭೧೯.

**ವಿಪುಲಮತಿ** – ಚಾರಣಮುನಿ **೪೬** : ೭೬.

**ವಿಪುರಮತಿ** – ಗಣಧರ. ಜಿನಬಿಂಬದ ಪೂಜೆಯಿಂದ ಪುಣ್ಯ ಹೇಗೆ ಲಭಿಸುವುದು ಎಂದು ಆನಂದ ಮಹಾರಾಜ ಪ್ರಶ್ನಿಸುತ್ತಾನೆ **೭೩** : ೪೫–೫೫, ಸೂರ್ಯ ವಿಮಾನದ ಜಿನಭವನದ ವಿಷಯ ತಿಳಿಸುತ್ತಾನೆ : ೫೪.

**ವಿಭೀಷಣ** – ಶ್ರೀಧರ, ಮನೋರಮಾ ದಂಪತಿಗಳ ಪುತ್ರ. ಆ ಕಾಲದ ನಾರಾಯಣ, ಶ್ರೀವರ್ಮನ ತಮ್ಮ **೭** : ೧೫.

– ಮಹಾವತ್ಸ ದೇಶದ ರಾಜ. ಪತ್ನಿ ಪ್ರಿಯದತ್ತೆ. ಪುತ್ರ ವರದತ್ತ **೧೦** : ೧೪೯.

– ರಾಜ ಅರ್ಹದ್ದಾಸ, ಜಿನದತ್ತೆಯರ ಪುತ್ರ. ಪೂರ್ವಭವದ ವಜ್ರಾಯುಧ **೫೯** : ೨೭೮, ಆದಿತ್ಯಾಭನಿಂದ ನರಕದಲ್ಲಿದ್ದ ಆತ್ಮಕ್ಕೆ ಬೋಧನೆ: ೨೮೧, ಭವಮಾಲೆ : **೫೯** : ೩೧೦–೨.

– ರಾವಣನ ತಮ್ಮ, ಅಣುಮಂತ ಇವನನ್ನು ಭೇಟಿಯಾದುದು **೬೮** : ೮೭೧–೮೦. ರಾವಣನಿಗೆ ಬುದ್ಧಿವಾದ : ೯೫೫–೭೦, ದೇಶಭ್ರಷ್ಟನಾದ : ೯೭೬. ರಾಮನ ಪಕ್ಷ ಸೇರಿದ : ೯೭೩–೮೦, ಮಾಯಾ ಸೀತೆಯ ಶಿರಶ್ಛೇದನದ ಸಂದರ್ಭದಲ್ಲಿ ರಾಮನಿಗೆ ಸೂಕ್ತ ಸಲಹೆ : ೧೦೮೯–೯೨.

**ವಿಮತಿ** – ಕಳ್ಳ ವಿದ್ಯುದ್ವೇಗನಿಂದ ದ್ರವ್ಯವನ್ನು ಸ್ವೀಕರಿಸಿ, ಸ್ವೀಕರಿಸಿಲ್ಲವೆಂದು ಸುಳ್ಳು ಹೇಳಿದುದಕ್ಕೆ ಶಿಕ್ಷೆ ಅನುಭವಿಸಿದನು **೪೬** : ೨೯೦–೩.

**ವಿಮಲಕೀರ್ತಿ** – ಕ್ಷೇಮಪುರದ ರಾಜ ವಿಮಲವಾಹನ ತನ್ನ ರಾಜ್ಯಭಾರವನ್ನು ಇವನಿಗೆ ನೀಡಿದನು **೪೯** : ೭.

**ವಿಮಲನಾಥ** – ತೀರ್ಥಂಕರ. ಮತ್ತೊಂದು ಹೆಸರು ವಿಮಲವಾಹನ. ನೋ : ಪರ್ವ **೫೯**.

**ವಿಮಲಪ್ರಭ** – ಮುನಿ. ರಾಜಕುಮಾರ ಕನಕಶಾಂತಿ ಈ ಮುನಿಯನ್ನು ಕಾನನದಲ್ಲಿ ಕಂಡನು **೬೩** : ೬೩೩.

– ಮುನಿ. ಇವರಲ್ಲಿ ರಾಜ ಅರ್ಹದ್ದಾಸ ದೀಕ್ಷಿತನಾದ **೭೨** : ೯೯೯.

**ವಿಮಲಮತಿ** – ಮುನೀಶ್ವರರು **೭೨** : ೮೦೫.

**ವಿಮಲವಾಹನ** – ಏಳನೇ ಮನು. ಆನೆ, ಕುದುರೆ ಮೊದಲಾದ ವಾಹನ ಹತ್ತುವುದನ್ನು, ಕೊಡಲಿ, ಅಂಕುಶ ಮೊದಲಾದುವನ್ನು ಉಪಯೋಗಿಸುವ ವಿಧಿಯನ್ನು ಉಪದೇಶಿಸಿದನು **೩** : ೧೧೬–೯.

– ಸುಸೀಮಾನಗರದ ರಾಜ **೪೮** : ೪, ವೈರಾಗ್ಯ : ೮–೧೦ ನಾಕಗತಿ ಪ್ರಾಪ್ತಿ : ೧೩.

– ಮಹಾಬಲರಾಜನ ದೀಕ್ಷಾಗುರು **೫೦** : ೧೧.

– ವಿಮಲನಾಥ ತೀ.ರಿಗೆ ದೇವೇಂದ್ರನು ಇಟ್ಟ ಹೆಸರು **೫೯** : ೨೨. ತಂದೆ ಕೃತವರ್ಮ, ತಾಯಿ ಜಯಶ್ಯಾಮಾದೇವಿ. ಭವಮಾಲೆ : ಪದ್ಮಸೇನರಾಜ – ಅನೇ ಇಂದ್ರ – ವಿಮಲಜಿನ : ೬೦.

– ಮುನಿ. ಇವನಲ್ಲಿ ಮೇರು ಮತ್ತು ಮಂದರರು ತಮ್ಮ ಭವಸಂಬಂಧ ಕೇಳಿ ಗಣಧರರಾದರು **೫೯** : ೩೦೪.

– ತೀರ್ಥಂಕರ. ಇವರಲ್ಲಿ ಸಿಂಹಪುರದ ಅರ್ಹದ್ದಾಸ ದೀಕ್ಷಿತನಾದ **೭೦** : ೧೪.

– ಮುನಿ. ಇವರಲ್ಲಿ ಮಧುರಾಜ ಧರ್ಮವನ್ನು ಕೇಳಿ, ತನ್ನ ದುರಾಚಾರಕ್ಕೆ ಸ್ವನಿಂದೆ ಮಾಡಿಕೊಂಡು ದೀಕ್ಷಿತನಾದ **೭೨** : ೧೦೦೩.

– ಶ್ವೇತವಾಹನ ರಾಜನ ಮಗ **೭೬** : ೧೨೫೦.

**ವಿಮಲಸೇನ** – ರಾಜ . ಕಮಲಾವತಿಯ ತಂದೆ **೪೭** : ೧೧೪.

**ವಿಮಲೇಂದು** – ವೈಶ್ಯ. ಪತ್ನಿ ವಿಮಲೆ, ಪುತ್ರಿ ಮಂಗಿ **೭೧** : ೭೦೮.

**ವಿರಾಟರಾಜ** – ಕೃಷ್ಣನ ಪಕ್ಷದ ರಾಜ **೭೨** : ೧೧೭೫.

**ವಿಷ್ಣು** – ಸಿಂಹಪುರದ ರಾಜ. ಇಕ್ಷ್ವಾಕು ವಂಶ. ರಾಣಿ ನಂದೆ **೫೭** : ೧೮. ಶ್ರೇಯಾಂಸ ತೀ.ರ ತಂದೆ.

– ಹಸ್ತಿನಾಪುರದ ರಾಜ ಮೇಘರಥನ ಮಗ. ತಂದೆಯ ಜೊತೆಯಲ್ಲಿ ದೀಕ್ಷಿತನಾದ **೭೦** : ೨೭೪–೫. ಅಕಂಪನ ಮುನಿಗೆ ಉಂಟಾದ ಉಪಸರ್ಗ ತಡೆಯಲು ಯತ್ನ : ೨೮೨. ವಾಮನರೂಪ – ಮೂರು ಹೆಜ್ಜೆ ಕ್ಷೇತ್ರದಾನ – ಒಂದು ಪಾದ ಮಾನುಷೋತ್ತರ ಪರ್ವತಕ್ಕೆ – ಮತ್ತೊಂದು ಮೇರುಪರ್ವತಕ್ಕೆ – ಕೋಪ ಶಾಂತಗೊಳಿಸಲು ವೀಣಾದಿ ವಾದನ : ೨೯೩–೪.

**ವಿಶ್ವಭೂ** – ಸಗರರಾಜನ ಮಂತ್ರಿ. ಸ್ವಯಂವರದಲ್ಲಿ ಸುಲಸೆಯು ಸಗರನಲ್ಲಿ ಸುಮುಖಿವಾಗುವಂತೆ ಚಾತುರ್ಯ ಮಾಡುತ್ತಾನೆ **೬೭** : ೨೧೮–೯. 'ಸ್ವಯಂವರ ವಿಧಾನ' ಗ್ರಂಥವನ್ನು ಉದ್ಯಾನದಲ್ಲಿ ಹೂತಿಟ್ಟನು : ೨೨೮–೩೧. ಇವನನ್ನು ಶಿಕ್ಷಿಸಲು ಮಹಾಕಾಲನು ಸಗರ ಹಾಗೂ ಸುಲಸಾದೇವಿ ವಿಮಾನದಲ್ಲಿ

ಸ್ವರ್ಗಕ್ಕೆ ಹೋಗುವುದನ್ನು ಉಪಾಯದಿಂದ ತೋರಿಸಿದನು : ೩೮೨, ಪ್ರಯಾಗ ದಲ್ಲಿ ರಾಜಸೂಯಯಾಗ ಮಾಡಿದನು : ೪೪೧–೩.

**ವಿಶ್ವಭೂತಿ** – ರಾಜಗೃಹದ ರಾಜ. ಪತ್ನಿ ಜೈನಿ. ಪುತ್ರ ವಿಶ್ವನಂದಿ. ತಮ್ಮ ವಿಶಾಖಭೂತಿ **೫೭** : ೭೧–೩, **೭೪** : ೮೬–೯.

– ಪೌದನಪುರದ ಅರವಿಂದ ಮಹಾರಾಜನ ಪುರೋಹಿತ. ಬ್ರಾಹ್ಮಣಿ ಅನುಂದರಿ **೭೩** : ೮.

**ವಿಶ್ವದೇವ** – ರತ್ನಸಂಚಯ ನಗರದ ದೊರೆ. ಪತ್ನಿ ಅನುಂದರಿ **೭೧** : ೪೮೪.

**ವಿಶ್ವನಂದಿ** – ವಿಶ್ವಭೂತಿ, ಜೈನಿಯರ ರಾಜಪುತ್ರ **೫೭** : ೭೨, ನಂದನವನದಲ್ಲಿ ಮೋಹ : ೭೫, ವಿಶಾಖನಂದಿಯೊಡನೆ ಯುದ್ಧ, ವೈರಾಗ್ಯ : ೭೬–೮. ವಿಶ್ವಭೂತಿಯ ಪುತ್ರ **೭೪** : ೮೬. ಭವಮಾಲೆ : ಮರೀಚಿ – ಜಟಿಲ – ಪುಷ್ಪಮಿತ್ರ – ಭಾರದ್ವಾಜ – ಸ್ಥಾವರ – ವಿಶ್ವನಂದಿ. ಯುವರಾಜನಾದ : ೮೯. ಶತ್ರು ಸಂಹಾರಕ್ಕೆ ಪ್ರಯಾಣ : ೯೯, ವಿಶಾಖನಂದನ ಬಗ್ಗೆ ಕೋಪ : ೧೦೫, ವೈರಾಗ್ಯ : ೧೦೩–೧೧, ನಿದಾನಶಲ್ಯ : ೧೧೭–೮.

– ತ್ರಿಪೃಷ್ಠನ ಪೂರ್ವಭವ **೬೨** : ೪೦೪.

**ವಿಶ್ವಸೇನ** – ಹಸ್ತಿನಾಪುರದ ಅಜಿತಸೇನ, ಪ್ರಿಯದರ್ಶನೆಯರ ಪುತ್ರ **೬೩** : ೮೯೩–೪, ಪತ್ನಿ ಐರಾದೇವಿ : ೮೯೬, ಪುತ್ರ ಶಾಂತಿನಾಥ : ೯೦೯, ಇನ್ನೊಬ್ಬ ಪತ್ನಿ ಯಶಸ್ವತೀದೇವಿ, ಇವಳ ಪುತ್ರ ಚಕ್ರಾಯುಧ : ೯೨೫.

– ವಾರಾಣಸಿಯ ರಾಜ. ಪತ್ನಿ ಬ್ರಾಹ್ಮಿ. ಪುತ್ರ ಪಾರ್ಶ್ವನಾಥ **೭೩** : ೭೫.

**ವಿಶಾಖ** – ಮಲ್ಲಿ ತೀ.ರ ಗಣಧರ **೬೬** : ೫೪.

**ವಿಶಾಖಭೂತಿ** – ವಿಶ್ವಭೂತಿ ರಾಜನ ತಮ್ಮ. ಪತ್ನಿ ಲಕ್ಷ್ಮಣೆ. ಪುತ್ರ ವಿಶಾಖನಂದಿ **೫೭** : ೭೩, ರಾಜನಾದ : ೭೪. ಪುತ್ರ ಸ್ನೇಹದಿಂದ ವಂಚನೆ : ೧೦೦.

**ವಿಶಾಖನಂದಿ** – ವಿಶಾಖಭೂತಿಯ ಪುತ್ರ **೫೭** : ೭೩. ನಂದನವನವನ್ನು ಬಲಾತ್ಕಾರವಾಗಿ ಪಡೆದ : ೭೬. ಯುದ್ಧದಲ್ಲಿ ಸೋತ : ೭೭, ಮಧುರೆಯಲ್ಲಿ ವಿಶ್ವನಂದಿ ಮುನಿಯನ್ನು ಚೇಡಿಸಿದ : ೮೧. ವಿಶಾಖಭೂತಿ, ಲಕ್ಷ್ಮಣೆಯರ ಪುತ್ರ **೭೪** : ೮೮, ಹೇಡಿತನ : ೧೦೬, ಪರಿಹಾಸ್ಯ : ೧೧೫–೬.

**ವಿಶಾಖರಾಜ** – ಅನಂತಜಿನರಿಗೆ ಆಹಾರದಾನ ಮಾಡಿ ಪಂಚಾಶ್ಚರ್ಯ ಹೊಂದಿದನು **೬೦** : ೩೪.

**ವಿಶಾಖಾಚಾರ್ಯ** – ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ. ದಶಾಂಗ, ಏಕಾದಶಪೂರ್ವ ತಿಳಿದವರು **೨** : ೧೪೩. ಗುಣಭದ್ರಾಚಾರ್ಯರು ಸಹ ಸ್ಮರಿಸಿದ್ದಾರೆ **೭೬** : ೧೭೬೧.

**ವಿಶಾರದ** – ಪುರೋಹಿತ ಬೃಹಸ್ಪತಿಯ ಶಿಷ್ಯ. ಇವನಲ್ಲಿ ನೈಮಿತ್ತಿಕ ಅಮೋಘ ಜಿಹ್ವ ಎಂಬುವನು ಅಷ್ಟಾಂಗ ನಿಮಿತ್ತವನ್ನು ಅಧ್ಯಯನ ಮಾಡಿದ **೬೨** : ೧೭೭.

**ವಿಶಾಲ** – ಧಾನ್ಯಪುರದ ರಾಜ. ಮಗಳು ವಿಮಲಸೇನೆ **೪೭** : ೧೪೭.

**ವಿಶಾಲಾಕ್ಷ** – ವೃಷಭ ತೀ.ರ ಗಣಧರ **೪೩** : ೬೪.

**ವಿಶ್ವಾವಸು** – ಸ್ವಸ್ತಿಕಾವತಿ ನಗರದ ರಾಜ. ಪತ್ನಿ ಶ್ರೀಮತಿ. ಮಗ ವಸು **೬೭** : ೨೫೭. ಹರಿವಂಶ. ಇವನ ಪೂರ್ವಜರು ಅಹಿಂಸಾಧರ್ಮರಕ್ಷಕರು – ಹಿಮಗಿರಿ, ಮಹಾಗಿರಿ, ಸಮಗಿರಿ, ವಸುಗಿರಿ **೬೭** : ೪೧೯–೨೨.

**ವಿಷ್ಣುಕುಮಾರ** – ರಾಜ ಮೇಘರಥ ರಾಣಿ ಪದ್ಮಾವತಿಯರ ಪುತ್ರ. ಮುನಿಯಾದ. ಬಲಿಯನ್ನು ನಿಗ್ರಹಿಸಿದ **೭೦** : ೨೭೩–೩೦೬.

**ವೀರಂಜಯ** – ಜಯಕುಮಾರನೊಡನೆ ದೀಕ್ಷೆಯನ್ನು ಪಡೆದ ಚಕ್ರವರ್ತಿಯ ಪುತ್ರ **೪೭** : ೨೮೨.

**ವೀರ** – ಮಹಾವೀರರ ಮತ್ತೊಂದು ಹೆಸರು.

– ಭರತನ ತಮ್ಮ. ಪೂರ್ವಭವದ ಜಯಂತ **೧೬** : ೩.

**ವೀರನಂದಿ** – ಮುನಿ. ಇವರಲ್ಲಿ ಆರ್ಯವರ್ಮ ದೀಕ್ಷಿತನಾದ **೭೫** : ೮೩೦.

**ವೀರಭದ್ರ** – ಚಾರಣಮುನಿ. ಪಂಚಾಗ್ನಿವ್ರತಿಯಾದ ವಶಿಷ್ಠನಿಗೆ ಮಿಥ್ಯಾತಪಸ್ಸಿನ ಬಗ್ಗೆ ಎಚ್ಚರಿಸಿದರು **೭೦** : ೩೨೪.

**ವೀತಭಯ** – ರಾಜ ಅರ್ಹದ್ದಾಸನ ಪುತ್ರ. ಹಿಂದೆ ರತ್ನಮಾಲೆಯಾಗಿದ್ದ ಜೀವ **೫೯** : ೨೭೮. ಸತ್ತ ನಂತರ ಲಾಂತವ ಸ್ವರ್ಗ : ೨೮೦, ಬಲಭದ್ರ. ಇವನ ತಮ್ಮ (ಕೇಶವನಾದ) ವಿಭೀಷಣ : ೨೭೮ ಭವಮಾಲೆ : ೩೦೬–೯.

**ವೀರದತ್ತ** – ದಂತಪುರದ ವೈಶ್ಯಪುತ್ರ. ವನಮಾಲೆಯ ಪತಿ **೭೦** : ೬೬. ತನ್ನ ಪತ್ನಿ ಆಶ್ರಯದಾತನ ವಶವಾದುದನ್ನು ಕೇಳಿ ದೀಕ್ಷಿತನಾದ : ೭೧.

**ವೀರಬಾಹು** – ಶ್ರೀಮತಿ, ವಜ್ರಜಂಘರ ಮಗ. ಅಜ್ಜ ವಜ್ರಬಾಹುವಿನೊಂದಿಗೆ ದೀಕ್ಷಿತನಾಗುತ್ತಾನೆ **೮** : ೫೮.

**ವೀರಸೇನರು** – ಆಚಾರ್ಯರು. ಜಿನಸೇನಾಚಾರ್ಯರ ಗುರುಗಳು. ನಾಲ್ಕು ಶ್ಲೋಕಗಳಲ್ಲಿ ಇವರನ್ನು ಸ್ಮರಿಸಲಾಗಿದೆ. ಇವರಿಗೆ ಭಟ್ಟಾರಕರೆಂದು ಮಹಾ ಪ್ರಸಿದ್ಧಿ. ಇವರಲ್ಲಿ ಕವಿತ್ವವೂ ಲೋಕಸ್ವರೂಪಜ್ಞಾನವೂ ಇದ್ದವು. ಸಿದ್ಧಾಂತದ ವ್ಯಾಖ್ಯಾನಕಾರರು. ಧವಳ ರಚನಾಕಾರರು **೧** : ೫೫–೮, ಗುಣಭದ್ರಾ ಚಾರ್ಯರು ಸಹ ಇವರನ್ನು ಸ್ಮರಿಸಿದ್ದಾರೆ **೭೪** : ೩–೮, **೭೬** : ೧೭೬೮.

**ವೀರಾಂಗದ** – ಮುನಿ. ಇಂದ್ರಾಂಗಜರ ಶಿಷ್ಯ. ಮುನಿಗಳಲ್ಲಿ ಕೊನೆಯವರು **೭೬** : ೧೬೭೨.

**ವೃಷಭನಾಥ** – ಪ್ರಥಮ ತೀರ್ಥಂಕರ. ನಾಮಕರಣ **೧೪** : ೧೬೦–೨, ಶರೀರ ವರ್ಣನೆ **೧೫** : ೧–೨೯, ಶುಭಲಕ್ಷಣ : ೩೭–೪೪, ಯಶಸ್ವತಿ, ಸುನಂದೆಯರೊಡನೆ ವಿವಾಹ : ೭೦. ಕುಮಾರಕಾಲ **೧೬** : ೧೨೯. ಜನತೆಗೆ ಷಟ್ಕರ್ಮ ಬೋಧನೆ : ೧೮೦–೮೨, ಕ್ಷತ್ರಿಯ, ವೈಶ್ಯ, ಶೂದ್ರ ಮೂರು ವರ್ಣಾಶ್ರಮ ನಿರ್ಮಾಣ : ೧೮೩, ತಪಸ್ಸು **೧೮** : ೧–೧೪, : ೬೪–೯೦ : ೯೯–೧೦೫, ಆಹಾರಕ್ಕಾಗಿ ವಿಹಾರ **೨೦** : ೧೦–೧೦೦, ತತ್ತ್ವೋಪದೇಶ **೨೪** : ೮೬–, ಸಹಸ್ರನಾಮಾವಲಿ **೨೫** : ೧೦೦–೨೧೬. ವಿಹಾರ ಮಾಡಿದ ೧೬ ದೇಶಗಳ ಪಟ್ಟಿ **೨೫** : ೨೮೬. ಸ್ತುತಿ **೪೩** : ೧–೮, ೮೪ ಜನ ಗಣಧರರು **೪೩** : ೫೪–೬೭, ಧರ್ಮೋಪದೇಶ **೪೭** : ೩೦೨–೧೮,

ಭವಮಾಲೆ : ಜಯವರ್ಮ, ಮಹಾಬಲ, ಲಲಿತಾಂಗ, ವಜ್ರಜಂಘ, ಭೋಗ ಭೂಮಿಜ, ಶ್ರೀಧರ, ಸುವಿಧಿ, ಅಚ್ಯುತಸ್ವರ್ಗದ ದೇವೇಂದ್ರ, ವಜನಾಭಿರಾಮ, ಸರ್ವಾರ್ಥಸಿದ್ಧಿ, ಅಹಮಿಂದ್ರ, ವೃಷಭನಾಥ **೪೭** : ೩೫೭–೯.

**ವೃಷಭದತ್ತ** – ವೈಶ್ಯ. ವ್ಯಾಧನಿಂದ ಚಂದನೆಯನ್ನು ಕೊಂಡನು **೭೪** : ೩೪೦.

– ರಾಜಪುರದ ಶ್ರೇಷ್ಠಿ. ಪತ್ನಿ ಪದ್ಮಾವತಿ. ಪುತ್ರ ಜಿನದತ್ತ. ಗರುಡವೇಗನ ಮಿತ್ರ. ಗುಣಪಾಲ ಮುನಿಯಲ್ಲಿ ದೀಕ್ಷಿತನಾದ **೭೫** : ೮೬೩–೮.

**ವೃಷಭಧ್ವಜ** – ವಿಶಾಲನಗರಿಯ ಅಧಿಪತಿ **೭೧** : ೭೦೬.

**ವೃಷಭಸೇನ** – ವೃಷಭನಾಥನ ಪುತ್ರ. ಭರತನ ತಮ್ಮ. ವಜ್ರನಾಭಿಗೆ ಬಂಧು ವಾಗಿದ್ದು ಪೀಠನೆಂಬುವನು ಅಹಮಿಂದ್ರನಾಗಿದ್ದನು **೧೬** : ೨; ತಂದೆಯಿಂದ ಗಂಧರ್ವಶಾಸ್ತ್ರ ಕಲಿತನು **೧೬** : ೧೨೦. ಪುರಿಮತಾಲ ನಗರದ ಪ್ರಭು. ದೀಕ್ಷೆ ಪಡೆದು ಗಣಧರನಾದನು **೨೪** : ೧೭೨; ೧–೧೯೩; **೩೩** : ೧೯೯, **೪೭** : ೩೫೬.

ಭವಮಾಲೆ : ಮಂತ್ರಿ, ಭೋಗಭೂಮಿಜ, ಕನಕಪ್ರಭದೇವ, ಆನಂದನೆಂಬ ಪುರೋಹಿತ, ಅಹಮಿಂದ್ರದೇವ, ವೃಷಭಸೇನ **೪೭** : ೩೬೭–೮.

**ವೃಷಭಸೇನ** – ಪೂರ್ವಭವದಲ್ಲಿ ನಾಗದತ್ತನ ತಂದೆಯಾಗಿದ್ದ ಧನದೇವ **೭೫** : ೭೨೩.

**ವೈಜಯಂತ** – ಸಂಜಯಂತನ ಮಗ **೫೯** : ೧೧೨.

**ವೈಡೂರ್ಯದೇವ** – ಭವಮಾಲೆ **೫೯** : ೩೧೦–೨.

**ವೈಶ್ರವಣ** – ವೀತಶೋಕಪುರದ ರಾಜ **೬೬** : ೩, ವನದಲ್ಲಿ ಆಲದಮರದ ವಿಕ್ಷಣೆ, ವೈರಾಗ್ಯ : ೮–೧೨, ದೀಕ್ಷಿತನಾಗಿ, ದೇವನಾದ : ೧೩–೧೬.

– ಇವನ ಸತಿ ಗೌತಮೆ. ಸುತ ಶ್ರೀದತ್ತ **೬೭** : ೯೩.

– ವೈಶೋತ್ತಮ. ಪತ್ನಿ ಚೂತಮಂಜರಿ. ಪುತ್ರಿ ಸುರಮಂಜರಿ **೭೫** : ೮೯೭.

– ನೋ. ವಿನಯಶ್ರೀ **೭೬** : ೧೨೮೮.

**ವೈಶ್ರವಣದತ್ತ** – ಸಾಗರಸೇನೆಯಲ್ಲಿ ಸರ್ವಸಮೃದ್ಧನಿಂದ ಜನಿಸಿದ ಮಗ **೪೭** : ೧೯೫–೭. ಇವನು ಸೋದರತ್ತೆ ಮಗಳು ಸಾಗರದತ್ತೆಯನ್ನು ಲಗ್ನವಾದ : ೧೯೯, ಸರ್ವದಯಿತ ಶ್ರೇಷ್ಠಿಯಲ್ಲಿ ಕೋಪಗೊಂಡು ತಪಸ್ವಿಯಾದನು : ೨೧೬.

**ವ್ಯೋದ್ರಕ** – ಚೇಟಕನ ಪುತ್ರಿಯರನ್ನು ಅಪಹರಿಸುವ ಸಮಯದಲ್ಲಿ ಅಭಯ ಕುಮಾರ ವೈಶ್ಯವೇಷ ಧರಿಸಿ ಈ ಹೆಸರಿಟ್ಟುಕೊಂಡ **೭೫** : ೫೭೮.

**ಶಂಖ** – ಮಂದರನಗರದ ಅಧಿಪತಿ. ಪತ್ನಿ ಜಯದೇವಿ. ಪುತ್ರಿ ಪೃಥ್ವೀತಿಲಕೆ **೬೩** : ೬೮೧.

– ಶ್ವೇತವಾಹನ ವೈಶ್ಯನ ಮಗ. ಪೂರ್ವಭವದ ಸುಭಾನು **೭೧** : ೭೫೮.

– ದೇವಗತಿಯಿಂದ ಚ್ಯುತನಾಗಿ ಬಲದೇವನಾದನು **೭೧** : ೭೮೮.

**ಶಂಖ, ನಿರ್ನಾಮಿಕರು** – ಇವರು ದ್ರುಮಸೇನ ಗುರುವಿನ ಶಿಷ್ಯರು . ಮುಂದೆ ೩ನೇ ಭವದಲ್ಲಿ ತಂದೆಯಾಗುವ ನಂದಿಯನ್ನು, ಆತ್ಮಹತ್ಯೆ ಮಾಡಿಕೊಳ್ಳದಂತೆ ತಡೆದು, ಬೋಧಿಸಿ ತಪಸ್ವಿಯನ್ನಾಗಿ ಮಾಡುತ್ತಾರೆ **೭೦** : ೨೦೮–೯.

**ಶಂಬರದೇವ** – ಪೂರ್ವಭವದ ಕಮಠ. ಪಾರ್ಶ್ವಮುನಿಗೆ ಉಪಸರ್ಗ **೭೩** : ೧೩೭. ಶಾಂತಭಾವ ಹೊಂದಿದನು : ೧೪೫. ಭವಮಾಲೆ : ಕಮಠ– ಕುಕ್ಕುಟಸರ್ಪ– ನಾರಕಿ – ಅಜಗರ – ನಾರಕಿ – ಬೇಡ – ನಾರಕಿ – ಮಹೀ ಪಾಲರಾಜ – ಶಂಬರ **೭೩** : ೧೭೦.

**ಶಂಭವ** – ೩ನೇ ತೀರ್ಥಂಕರ. ಭವಪರಂಪರೆ : ವಿಮಲವಾಹನ – ಅಹಮಿಂದ್ರ – ಶಂಭವ **೪೯** : ೫೯.

**ಶಂಭವ** – ಜಾಂಬವತಿಯ ಪುತ್ರ. ಪ್ರದ್ಯುಮ್ನನ ಪೂರ್ವಭವದ ಸೋದರ **೭೨** : ೧೧೩೩. ಭವಮಾಲೆ : ವಾಯುಭೂತಿ – ದೇವಗತಿ – ಮಣಿಭದ್ರ – ದೇವ ಗತಿ – ಕ್ರೀಡ – ದೇವಗತಿ – ಶಂಭವ. ಗಂಧರ್ವಾದಿ ವಿದ್ಯೆಯಲ್ಲಿ ಸತ್ಯಭಾಮೆಯ ಪುತ್ರ ಸುಭಾನುವನ್ನು ಸೋಲಿಸಿದನು : ೧೧೩೪ (ಜಾಂಬವ) ಊರ್ಜಯಂತ ಗಿರಿಯಲ್ಲಿ ನಿರ್ವಾಣ **೭೨** : ೧೧೫೦.

**ಶಕ್ತಿ** – ಹಸ್ತಿನಾಪುರದ ರಾಜ. ಪತ್ನಿ ಶತಕಿ, ಪುತ್ರ ಪರಾಶರ **೭೦** : ೧೦೨.

**ಶಕ್ತಿಷೇಣ** – ಮುನಿಗಳಿಗೆ ಆಹಾರದಾನ ಮಾಡಿ ಪಂಚಾಶ್ಚರ್ಯ ಹೊಂದಿದನು. **೪೬** : ೧೨೪.

– ಪ್ರಜಾಪಾಲನ ಸಾಮಂತರಾಜ. ಪತ್ನಿ ಅಟವೀಶ್ರೀ **೪೬** : ೯೬. ಮುನಿ ಭಿಕ್ಷಾ ಸಮಯ ಕಳೆದ ಮೇಲೆ ಭೋಜನ ಸ್ವೀಕರಿಸುವ ವ್ರತ ಪಡೆದ : ೯೮.

**ಶಕ್ತಿಸೇನ, ವರಸೇನ** – ಅಯೋಧ್ಯೆ ನಗರದ ರಾಜಪುತ್ರರು. ಇವರಲ್ಲಿ ಪೂರ್ವ ಭವದ ಕೋಣಗಳು, ಟಗರುಗಳಾಗಿ ಹುಟ್ಟಿದವು. ಕಾದಾಡಿ ಸತ್ತು ಮುಂದೆ ಕೋಳಿಗಳಾಗಿ ಜನಿಸಿದವು. **೬೩** : ೬೭೩– ೪.

**ಶಕುನಿ** – ವರ್ತಕರ ಸಂಘಾಧಿಪತಿಯಾದ ಮೇರುದತ್ತನ ಮಂತ್ರಿ **೪೬** : ೧೧೩, ಅಂಗಹೀನನಾಗಿ ಹುಟ್ಟಲು ಜನನಕಾಲದ ದುಷ್ಟಶಕುನ ಕಾರಣವೆನ್ನುತ್ತಾನೆ : ೧೧೪.

**ಶತಗ್ರೀವ** – ಲಂಕಾಪುರಿಯನ್ನು ೨೫ ಸಹಸ್ರವರ್ಷ ಆಳಿದ **೬೮** : ೪೮೪, ಮಗ ಪಂಚಶದ್ಗ್ರೀವ.

**ಶತಘೋಷ** – ಅಶನಿಘೋಷನ ಮಗ **೬೨** : ೨೭೪.

**ಶತಧನು** – ವೃಷಭನಾಥರ ಗಣಧರರಲ್ಲಿ ಒಬ್ಬ **೪೩** : ೫೪.

**ಶತಬಲ** – ಮಹಾಬಲನ ತಾತ. ಈತನ ವಿಷಯವನ್ನು ಸ್ವಯಂಬುದ್ಧನು ಮಹಾಬಲನಿಗೆ ಹೇಳುತ್ತಾನೆ **೫** : ೧೩೯– ೧೪೫. ಧರ್ಮಧ್ಯಾನದಿಂದ ಈತ ದೇವನಾದ **೫** : ೧೫೩.

**ಶತಬಲಿ** – ಬಲೀಂದ್ರನ ಮಗ. ಬಲಭದ್ರನಾದ ನಂದಿಮಿತ್ರನು ಯುದ್ಧದಲ್ಲಿ ಇವನನ್ನು ಕೊಂದನು **೬೬** : ೧೧೮.

– ಸಹಸ್ರಾಯುಧನ ಪುತ್ರ **೬೩** : ೬೪೯.

**ಶತಬಿಂದು** – ಸಹಸ್ರಬಾಹುವಿನ ಚಿಕ್ಕಪ್ಪ. ಜಮದಗ್ನಿರಾಮನೆಂಬ ಪುತ್ರ **೬೫** : ೫೯.

– ಅಶ್ವಗ್ರೀವನ ನೈಮಿತ್ತಿಕ. ಉತ್ಪಾತದ ಅರ್ಥ ಹೇಳುತ್ತಾನೆ **೬೨** : ೧೧೮.

**ಶತಮತಿ** – ಮಹಾಬಲ ಮಹಾರಾಜನ ಮಂತ್ರಿ **೪** : ೧೯೧, ರಾಜನಿಗೆ ಶೂನ್ಯವಾದವನ್ನು ಹೇಳುವುದು **೫** : ೪೪ – ೮. ನಾರಕಿಯಾಗಿದ್ದನು. ಶ್ರೀಧರ ದೇವನ ಉಪದೇಶದಿಂದ ಸಮ್ಯಕ್ತ್ವವನ್ನು ಗ್ರಹಣ ಮಾಡಿದನು **೧೦** : ೧೧೩.

**ಶತಾನೀಕ** – ಕೌಶಂಬಿಯ ದೊರೆ. ಚಂದ್ರವಂಶ. ಚೇಟಕರಾಜನ ಮಗಳು ಮೃಗಾವತಿಯ ಪತಿ **೭೫** : ೫೫೮.

**ಶತ್ರುಘ್ನ** – ದಶರಥ ಹಾಗೂ ಕೈಕೇಯಿಯರ ಮಗ **೬೭** : ೧೬೫.

– ದೇವಕಿಯ ಪುತ್ರ. ಅಲಕೆಯೆಂಬ ಶ್ರೇಷ್ಠಿನಿ ಬೆಳೆಸುತ್ತಾಳೆ **೭೧** : ೭೯೩.

**ಶತ್ರುಮರ್ದನ** – ವಟವೃಕ್ಷ ಎಂಬ ವನಾಧಿಪತಿಯ ಸೇವಕರಲ್ಲಿ ಒಬ್ಬ **೭೫** : ೧೦೩೦.

**ಶರ್ಮಿಲ** – ವೃಷಭನಾಥರ ಗಣಧರರಲ್ಲಿ ಒಬ್ಬ **೪೩** : ೬೦.

**ಶಲ್ಯ** – ಜರಾಸಂಧನ ಪಕ್ಷದಿಂದ ಯುದ್ಧಮಾಡಿದ ರಾಜ **೭೧** : ೫೭೫.

**ಶಶಾಂಕ** – ಭವಿಷ್ಯತ್ತಿನಲ್ಲಿ ೧೧ನೇ ತೀರ್ಥಂಕರನಾಗುವವನು **೭೬** : ೧೭೧೩.

**ಶಾಂಡಿಲ** – ರಾಜಗೃಹದ ಬ್ರಾಹ್ಮಣ. ಪತ್ನಿ ಪಾರಶರಿ. ಪುತ್ರ ಸ್ಥಾವರ **೭೪** : ೮೨– ೩.

**ಶಾಂಡಿಲ್ಯ** – ತಾಪಸ. ಚಿತ್ರಮತಿಯ ಅಣ್ಣ. ಮಹಾಬುದ್ಧಿಶಾಲಿ. ಸಹಸ್ರಬಾಹುವಿನ ಪಟ್ಟಮಹಿಷಿಯಾದ ಗರ್ಭಿಣಿ ಚಿತ್ರಮತಿಯನ್ನು ಗುಪ್ತ ಮಾರ್ಗದಲ್ಲಿ ಕರೆತಂದು ಸುಸ್ನಿಗ್ಧ ಎಂಬ ನಿರ್ಗ್ರಂಥ ಮುನಿಯಲ್ಲಿ ರಕ್ಷಣೆಗೆ ಬಿಡುತ್ತಾನೆ **೬೫** : ೧೧೪– ೬.

**ಶಾಂತವ , ರವಣ** – ವಾರಾಣಸಿ ನಗರದ ಧನದೇವ ಶ್ರೇಷ್ಠಿಯ ಪುತ್ರರು. ಶಾಸ್ತ್ರಜ್ಞರು. ಚೋರಶಾಸ್ತ್ರದ ಬಲದಿಂದ ಪಾಪಿಗಳಾದರು. ತಂದೆ ಇವರನ್ನು ತಿದ್ದಲು ಅಸಮರ್ಥನಾಗಿ ದೀಕ್ಷಿತನಾದ. **೭೬** : ೧೫೫೪– ೬೧. ಸಾಗರಸೇನ ಮುನಿಯಿಂದ ಧರ್ಮಪರರಾದರು : ೧೫೬೩.

**ಶಾಂತಿಕರ** – ಮುನೀಶ್ವರ. ಇವರ ಬಳಿ ಕೀರ್ತಿಧರ ದೀಕ್ಷಿತನಾದ **೬೨** : ೪೮೮.

**ಶಾಂತಿನಾಥ** – ತೀರ್ಥಂಕರ. ನಾಮಕರಣ **೬೩** : ೯೧೭, ತಂದೆ ವಿಶ್ವಸೇನ, ತಾಯಿ ಐರಾದೇವಿ. ಬಾಲ್ಯದ ವರ್ಣನೆ : ೯೨೬– ೬೨. ವೈರಾಗ್ಯ : ೯೭೪. ಭವಮಾಲೆ : ಶ್ರೀಷೇಣ – ಭೋಗಭೂಮಿಜ – ಖೇಚರ – ದೇವ – ಬಲಭದ್ರ – ದೇವ – ವಜ್ರಾಯುಧ ಚಕ್ರಿ – ಅಹಮಿಂದ್ರ – ಮೇಘರಥ – ಸರ್ವಾರ್ಥಸಿದ್ಧಿದೇವ – ಶಾಂತೀಶ್ವರ **೬೩** : ೧೦೧೫.

**ಶಾಲಂಕಾಯನ** – ಮಂದಿರ ನಗರದವನು. ಪತ್ನಿ ಮಂದಿರೆ. ಪುತ್ರ ಭಾರದ್ವಾಜ **೭೪** : ೭೮.

**ಶಿಖಿಕಂಠ** – ೬ ನೇ ಪ್ರತಿಕೇಶವ **೭೬** : ೧೭೨೭– ೯.

**ಶಿವ** – ಒಬ್ಬ ವಿದ್ಯಾಧರ ರಾಜ **೪೭** : ೧೭೫.

**ಶಿವಕುಮಾರ** – ರಾಜಪುತ್ರ. ಮುಖ ವಕ್ರವಾಗಿತ್ತು. ಅದು ಸಿದ್ಧಪುರುಷ ಶ್ರೀಪಾಲನ ಸಾಮೀಪ್ಯದಿಂದ ಸರಿಹೊಂದಿತು **೪೭** : ೧೦೦– ೧.

– ಮಹಾಪದ್ಮರಾಜನ ಪುತ್ರ **೭೬** : ೧೩೭೧. ಭವಮಾಲೆ : ಭವದೇವ – ಸಾಮಯಿಕ ದೇವ – ಶಿವಕುಮಾರ **೭೬** : ೧೪೪೦. ಪ್ರಾಸುಕ ಆಹಾರವನ್ನು ೧೨ ವರ್ಷ ಸೇವಿಸಿ, ಸತ್ತು ಬ್ರಹ್ಮೇಂದ್ರ ಕಲ್ಪದಲ್ಲಿ ಹುಟ್ಟಿ ಅನಂತರ ವಿದ್ಯುನ್ಮಾಲಿಯಾದ **೭೬** : ೧೪೪೦– ೯.

**ಶಿವಕೋಟಿಮುನೀಶ್ವರ** – ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ **೧** : ೪೯.

**ಶಿವಗುಪ್ತ** – ಜಿನ. ಇವರ ಬಳಿ ಸನತ್ಕುಮಾರ ದೀಕ್ಷಿತನಾದ **೬೧** : ೧೧೮.

– ಮುನೀಶ್ವರ. ಇವನಲ್ಲಿ ಪ್ರಜಾಪಾಲರಾಜ ದೀಕ್ಷಿತನಾದ **೬೬** : ೭೩.

– ಮುನಿ. ೭ನೇ ಬಲಭದ್ರ ಕೇಶವರಾದ ನಂದಿಮಿತ್ರ ಹಾಗೂ ದತ್ತ ಅವರು ತಮ್ಮ ೩ನೇ ಪೂರ್ವಭವದಲ್ಲಿ ರಾಜಪುತ್ರರಾಗಿದ್ದಾಗ, ಈ ಮುನಿಯಲ್ಲಿ ದೀಕ್ಷಿತರಾದರು **೬೬** : ೧೦೫.

– ಜಿನರು. ಮನೋಹರ ಉದ್ಯಾನದಲ್ಲಿದ್ದಾಗ ರಾಮನಿಗೆ ಧರ್ಮೋಪದೇಶ ನೀಡಿದರು **೬೮** : ೧೧೫೬.

**ಶಿವಘೋಷ** – ಯತಿ. ಇವರಲ್ಲಿ ನಂದಿಷೇಣನೆಂಬ ಬಲಭದ್ರನು ದೀಕ್ಷಿತನಾದನು. **೬೫** : ೧೯೦.

– ಮುನಿ. ಇವರ ಮೋಕ್ಷಸ್ಥಾನ ಜಗತ್ಪಾದಗಿರಿ **೬೮** : ೯೪೫.

**ಶಿವಭೂತಿ** – ಅಗ್ನಿಭೂತಿಯ ಬ್ರಾಹ್ಮಣ ಪತ್ನಿಯಲ್ಲಿ ಜನಿಸಿದವನು **೭೫** : ೬೨, ಪತ್ನಿ ಸೋಮಿಲೆ : ೬೨೨, ಪತ್ನಿಯಿಂದಲೇ ಮಿಥ್ಯಾದೂಷಣೆಗೆ ಒಳಗಾದ : ೬೨೬, ಮುನಿಗಳ ಆಹಾರದಾನವನ್ನು ಅನುಮೋದಿಸಿದ : ೬೨೭.

**ಶಿವಸೇನ** – ಶ್ರೇಯಃಪುರದ ರಾಜ **೪೭** : ೧೪೨.

**ಶಿಶುಪಾಲ** – ಕೌಸಲದ ರಾಜ ಭೇಷಜ ಹಾಗೂ ಮಾದ್ರಿಯರ ಪುತ್ರ. ಹುಟ್ಟಿದಾಗ ಮೂರು ಕಣ್ಣುಗಳಿದ್ದವು. ದ್ವಾರಾವತಿಯಲ್ಲಿ ಕೃಷ್ಣನನ್ನು ನೋಡಿದಾಗ ಇವನ ಮೂರನೇ ಕಣ್ಣು ಅದೃಶ್ಯವಾಯಿತು. ಇವನ ನೂರು ತಪ್ಪು ಕ್ಷಮಿಸುವುದಾಗಿ ಇವನ ತಾಯಿಗೆ ಕೃಷ್ಣ ವಚನವಿತ್ತನು **೭೧** : ೮೩೮ – ೪೫, ಶೈಶವ : ೮೪೭ ಪೂರ್ಣವೃತ್ತಾಂತ **೭೧** : ೮೩೮ – ೫೩.

– ಪಾಟಲಿಪುತ್ರದ ರಾಜ. ಪತ್ನಿ ಪೃಥಿವೀ ಸುಂದರಿ. ಪುತ್ರ ಕಲ್ಕಿ **೭೬** : ೧೬೩೮.

**ಶೀತಲ** – ತೀರ್ಥಂಕರ **೫೬** : ೧, ತಂದೆ ದೃಢರಥ, ಭದ್ರಪುರದ ರಾಜ. ತಾಯಿ ಸುನಂದೆ **೫೬** : ೨೪,೨೯. ವೈರಾಗ್ಯ , ಅನುಪ್ರೇಕ್ಷೆ : ೩೬– ೪೨, ಮುಕ್ತಿ : ೫೦ – ೮, ೧೦ನೇ ತೀ. ಭವಮಾಲೆ : ಪದ್ಮಗುಲ್ಮ – ಆರಣೇಂದ್ರ – ಶೀತಲ : ೬೨.

– ಜಿನೇಶ್ವರರು **೭೧** : ೮೦೦.

**ಶೀಲಗುಪ್ತ** – ಮಹಾಮುನಿ. ಇವರಲ್ಲಿ ಜಯಕುಮಾರ ಧರ್ಮವನ್ನು ಕೇಳಿದ. ಅವನೊಡನೆ ವನದಲ್ಲಿದ್ದ ಎರಡು ಸರ್ಪಗಳೂ ಧರ್ಮವನ್ನು ಕೇಳಿದವು. **೪೩** : ೮೯– ೯೦.

– ಗುರು. ಇವರಲ್ಲಿ ಪ್ರಜಾಪಾಲರಾಜ ದೀಕ್ಷಿತನಾದ **೪೬** : ೪೮.

– ಗುರು. ಇವರಲ್ಲಿ ಧನಮಿತ್ರೆ ಶ್ರಾವಕವ್ರತ ಸ್ವೀಕರಿಸಿದಳು, ಇವರಲ್ಲಿ ನಾಗದತ್ತ ಶಾಸ್ತ್ರಪಾರಂಗತನಾದ **೭೫** : ೬೪೯– ೫೦.

**ಶೀಲದತ್ತ** – ಗುರು. ಇವರಲ್ಲಿ ನಾಗದತ್ತ ಶಾಸ್ತ್ರಾಭ್ಯಾಸ ಮಾಡಿದ **೭೫** : ೬೪೯.

**ಶೂರದತ್ತ** – ಕಾಂಚೀಪುರದ ವೈಶ್ಯ. ಸುದತ್ತನ ಸೋದರ **೭೦** : ೧೨೭, ಇವರ ಕಥೆ : ೧೨೭– .

**ಶೂರದೇವ** – ಭಾನುದತ್ತ ಶ್ರೇಷ್ಠಿಯ ೫ನೇ ಪುತ್ರ **೭೧** : ೭೦೧.

**ಶೂರವೀರ** – ಶೂರಸೇನ ಮಹಾರಾಜನ ಮಗ. ಇವನ ಪತ್ನಿ ಧಾರಿಣಿ. ಇವನ ಮಕ್ಕಳು ಅಂಧಕವೃಷ್ಟಿ ಮತ್ತು ನರಪತಿವೃಷ್ಟಿ **೭೦** : ೯೪.

**ಶೂರಸೇನ** – ಹಸ್ತಿನಾಪುರದ ರಾಜ. ಕುರುವಂಶ. ಕಾಶ್ಯಪ ಗೋತ್ರ. ಪತ್ನಿ ಶ್ರೀಕಾಂತೆ **೬೪** : ೧೨– ೩.

– ಶೌರ್ಯಪುರದ ರಾಜ. ಪತ್ನಿ ಧಾರಿಣಿ. ಇವನ ಮಗ ಶೂರವೀರ **೭೦** : ೯೪, **೭೧** : ೬೯೯.

**ಶೂರಸೇನ** – ಭಾನುದತ್ತ ಶ್ರೇಷ್ಠಿಯ ಸಪ್ತಪುತ್ರರಲ್ಲಿ ಕೊನೆಯವನು. ಮಂಗಿಯನ್ನು ಪರೀಕ್ಷಿಸಲು ಹೋಗಿ ವಿರಕ್ತನಾದ **೭೧** : ೭೩೧– ೪೦.

– ಕಿರಾತ ಖದಿರಸಾಗರನ ಮೈದುನ. ಸಾರಸೌಖ್ಯಪುರದವನು **೭೪** : ೪೦೧, ವ್ರತ ಸ್ವೀಕಾರಮಾಡಿದ : ೪೧೬.

**ಶೃಗಾಲವಕ** – ಒಬ್ಬ ವ್ಯಾಧ **೫೯** : ೨೨೧.

**ಶ್ರೀಕಂಠ** – ಮೊದಲನೇ ಪ್ರತಿಕೇಶವ **೭೬** : ೧೭೨೭– ೯.

**ಶ್ರೀಕಾಂತ** – ಅಕಂಪನರ ಸಹಸ್ರ ಪುತ್ರರಲ್ಲಿ ಒಬ್ಬ **೪೩** : ೧೩೪.

– ಶ್ರೀವರ್ಮನ ಪುತ್ರ **೫೪** : ೮೦.

**ಶ್ರೀಗೌತಮ** – ಸಮುದ್ರಸೇನ ಮುನಿಯಿಂದ ದೀಕ್ಷಿತನಾದ. ಬುದ್ಧಿ ಋದ್ಧಿಯಿಂದ ಶ್ರೀಗೌತಮನಾದ. ಉತ್ತರಭವದಲ್ಲಿ ಅಂಧಕವೃಷ್ಟಿಯಾದ **೭೦** : ೧೭೯.

**ಶ್ರೀಚಂದ್ರ** – ಹಸ್ತಿನಾಪುರದ ರಾಜ. ಪತ್ನಿ ಶ್ರೀಮತಿ. ಪುತ್ರ ಸುಪ್ರತಿಷ್ಠ **೭೦** : ೫೨, ಸುಮಂದರ ಯತಿಯಲ್ಲಿ ದೀಕ್ಷಿತನಾದ **೭೦** : ೫೩.

**ಶ್ರೇಣಿಕ** – ಗೌತಮ ಗಣಧರರಲ್ಲಿ ಪುರಾಣವನ್ನು ಗ್ರಂಥ ರೂಪದಲ್ಲಿ ಹೇಳಲು ಪ್ರಾರ್ಥಿಸಿದನು **೧** : ೨– ೨೫. ಮಗಧ ದೇಶಾಧಿಪತಿ **೪೩** : ೪೭, ೭೧, ೭೩. ಶ್ರೇಣಿಕನ ಪೂರ್ವಭವ ಚರಿತ್ರ **೭೪** : ೩೮೮ – ೪೧೮. ಕುಣಿಕರಾಜ ಮತ್ತು ಶ್ರೀಮತಿಯರ ಪುತ್ರ **೭೪** : ೪೧೮. ದಾಯಾದಿಗಳ ಅಪಾಯದಿಂದ ರಕ್ಷಿತನಾಗಲು ದೇಶಭ್ರಷ್ಟಗೊಂಡ : ೪೨೦. ಬ್ರಾಹ್ಮಣ ಪುತ್ರಿಯನ್ನು ಲಗ್ನವಾದ **೭೪** : ೪೨೩– ೫. ಮಗ ಅಭಯಕುಮಾರ. ಇವನ ಯುಕ್ತಿಯಿಂದ ಚೇಳಿನಿಯನ್ನು ಮದುವೆಯಾದ. ನೋಡಿ : ಅಭಯಕುಮಾರ.

**ಶ್ರೀದತ್ತ** – ವೈಶ್ರವಣ ಮತ್ತು ಗೌತಮೆಯರ ಪುತ್ರ. ಇವನ ವಧು ಕುಬೇರದತ್ತೆ **೬೭** : ೯೩– ೪.

– ಮೃಗಾಲವತಿ ನಗರದ ಶ್ರೇಷ್ಠಿ. ಪತ್ನಿ ವಿಮಲಶ್ರೀ. ಪುತ್ರಿ ರತಿವೇಗೆ **೪೬** : ೧೦೫.

– ಕೌಶಂಬಿಯ ರಾಜ ಸಿದ್ಧಾರ್ಥನ ಮಗ **೬೯** : ೧೪.

**ಶ್ರೀದತ್ತ** – ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ. ಪರವಾದಿ ವಿಜಯಿ. ತಪಃಪ್ರಭಾವದಿಂದ ಹೊಳೆಯುತ್ತಿದ್ದರು **೧** : ೪೫.

– ಶ್ರೀವಿಜಯನ ಮಗ **೬೨** : ೪೦೬.

**ಶ್ರೀಧರ** – ರತ್ನಸಂಚಯ ನಗರದ ರಾಜ. ಶ್ರೀವರ್ಮನ ತಂದೆ **೭** : ೧೪.

– ಈಶಾನ ಸ್ವರ್ಗದ ಶ್ರೀಪ್ರಭವಿಮಾನದ ದೇವ. ಪೂರ್ವಭವದ ವಜ್ರಜಂಘಾರ್ಯ **೯**– ೧೮೫.

– ಪ್ರೀತಿಂಕರ ಕೇವಲಿಯಿಂದ ನರಕದ ವರ್ಣನೆ ಕೇಳಿದುದು **೧೦** : ೧೧– ೧೦೪, ೨ನೇ ನರಕದಲ್ಲಿದ್ದ ಶತಮತಿಗೆ ಬೋಧಿಸಿದುದು : ೧೧೧– ೩, ಮತ್ತೆ ಜಯಸೇನನಾಗಿ ಜನಿಸಿದ. ಶತಮತಿಗೆ ಬೋಧನೆ : ೧೧೬.

**ಶ್ರೀಧರ** – ಜಯಕುಮಾರನ ಪಕ್ಷದ ರಾಜ **೪೪** : ೧೦೬.

– ಶ್ರೀಪುರದ ರಾಜ, ಪತ್ನಿ ಶ್ರೀಮತಿ, ಪುತ್ರಿ ಜಯವತಿ **೪೭** : ೧೪.

– ಮುನಿ. ಸಿದ್ಧವನದಲ್ಲಿ ಇವರಿಗೆ ಕೇವಲಜ್ಞಾನವಾಯಿತು **೪೮** : ೭೯.

– ಸ್ವರ್ಗದ ದೇವ. ಪೂರ್ವಭವದ ಶ್ರೀವರ್ಮರಾಜ **೫೪** : ೮೨.

– ಜಿನ. ಇವರ ಬಳಿ ಧರ್ಮವನ್ನು ಕೇಳಿ ಕನಕಪ್ರಭ ಮಹಾರಾಜ ದೀಕ್ಷಿತನಾದ **೫೪** : ೧೪೩.

– ಭೋಗವರ್ಧನ ನಗರದ ರಾಜ. ಪುತ್ರ ತಾರಕ **೫೮** : ೯೧. ಭವಮಾಲೆ **೫೯** : ೩೦೬.

– ಜಯಂತಪುರದ ರಾಜ. ಪತ್ನಿ ಶ್ರೀಮತಿ **೭೧** : ೯೫೦.

– ಮುನಿ. ರಾಜ ವಿಶಾಖಭೂತಿಗೆ ದೀಕ್ಷೆ ನೀಡಿದವರು **೭೪** : ೯೧.

– ತೀರ್ಥೇಶ್ವರ. ಇವರಿಂದ ಅಜಿತಂಜಯರೆಂಬ ಚಾರಣಮುನಿ ತ್ರಿಪೃಷ್ಠನ ಪೂರ್ವೋತ್ತರ ಭವಗಳನ್ನು ತಿಳಿದು ಸಿಂಹಕ್ಕೆ ಪ್ರತಿಬೋಧಿಸಿದರು **೭೪** : ೨೦೪.

**ಶ್ರೀಧಾಮ** – ಶ್ರೀವರ್ಮ, ಸುಸೀಮೆಯರ ಪುತ್ರ. ಹಿಂದೆ ವಿಭೀಷಣನೆಂಬ ಕೇಶವನಾಗಿದ್ದು, ನಂತರ ನಾರಕಿಯಾಗಿ, ಅಲ್ಲಿ ಬೋಧಿಸಲ್ಪಟ್ಟ ಆತ್ಮ **೫೯** : ೨೮೩, ಅನಂತರ ಸ್ವರ್ಗದ ದೇವನಾದ : ೨೮೪, ಭವಮಾಲೆ **೫೯** : ೩೧೦ – ೨.

**ಶ್ರೀನಾಗ** – ಯತಿ. ಇವನಲ್ಲಿ ವೈಶ್ರವಣರಾಜ ದೀಕ್ಷಿತನಾದ **೬೬** : ೧೩.

**ಶ್ರೀಪದ್ಮ** – ಶಂಬರರಾಜನ ಮಗ. ಲಕ್ಷ್ಮಣಾದೇವಿಯ ಸೋದರರಲ್ಲಿ ಒಬ್ಬ **೭೧** : ೯೦೬.

**ಶ್ರೀಪ್ರಭಜಿನ** – ಇವರಲ್ಲಿ ಶ್ರೀಷೇಣರಾಜ ದೀಕ್ಷಿತನಾದ **೫೪** : ೭೬. ಶ್ರೀವರ್ಮನೂ ದೀಕ್ಷಿತನಾದ : ೮೧.

**ಶ್ರೀಪಾಲ** – ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ **೧** : ೫೩.

**ಶ್ರೀಪಾಲ** – ಶ್ರೀಪುರದಲ್ಲಿದ್ದ ಗುರು. ಇವರಲ್ಲಿ ಹಿರಣ್ಯವರ್ಮ ದೀಕ್ಷಿತನಾದ **೪೬** : ೨೧೭.

– ಗುಣಪಾಲ ರಾಜನ ಮಗ. ಯುವರಾಜನಾಗುತ್ತಾನೆ **೪೬** : ೩೪೦, ಸ್ತ್ರೀವೇಷದಲ್ಲಿ ಪುರುಷನು ನರ್ತನ ಮಾಡುತ್ತಿದ್ದುದನ್ನು ಗುರುತಿಸಿದನು

**೪೭ :** ೯ – ೧೬, ಕುದುರೆಯ ರೂಪದಲ್ಲಿದ್ದ ಅಶನಿವೇಗ ಖೇಚರ ಆಕಾಶದಿಂದ ಇವನನ್ನು ಕೆಡವಿದನು : ೨೧, ಪರ್ಣಲಘುವಿದ್ಯೆಯ ಸಹಾಯ : ೨೨, ಕನ್ಯೆಯರನ್ನು ಸ್ವೀಕರಿಸುವ ಬಗ್ಗೆ ವ್ರತ : ೪೧, ಭೇರುಂಡ ಪಕ್ಷಿ ಇವನನ್ನು ಸಿದ್ಧಕೂಟದಲ್ಲಿ ಬಿಡುವುದು : ೪೫, ಸ್ತುತಿಗೆ ಜಿನಾಲಯದ ಬಾಗಿಲು ತೆರೆಯಿತು : ೪೭, ಮುದುಕಿಯ ರೂಪ : ೫೪, ಸಮಸ್ತವ್ಯಾಧಿ ನಾಶಮಾಡುವ ವಿದ್ಯೆ ಪ್ರಾಪ್ತಿ : ೬೨, ಯಕ್ಷಿಯ ಸಹಾಯ : ೧೫೩– ೪, ಚಕ್ರರತ್ನ ಪ್ರಾಪ್ತಿ : ೧೫೭– ೮, ಜಯವತಿ ಮೊದಲಾದ ೮೪ ಕನ್ಯೆಯರನ್ನು ಲಗ್ನವಾದ : ೧೭೦, ಜಯವತಿಯಲ್ಲಿ ಜನಿಸಿದ ಪುತ್ರ ಗುಣಪಾಲ : ೧೭೨, ಗುಣಪಾಲ ಕೇವಲಿ ಇವನ ಭವಸಂಬಂಧ ಹೇಳಿದರು **೪೭ :** ೧೮೯.

– ಪೂರ್ವಭವದ ಸರ್ವದಯಿತ **೪೭ :** ೨೨೯, ವೈರಾಗ್ಯ : ೨೩೫– ೪೨, ಮೋಕ್ಷ : ೨೪೬– ೯.

**ಶ್ರೀಭೂತಿ** – ಸಿಂಹಸೇನ ರಾಜನ ಮಂತ್ರಿ. ಜ್ಞಾನಿಯಾದ ಬ್ರಾಹ್ಮಣ **೫೯ :** ೧೪೭ (ಇವನೇ ಸತ್ಯಘೋಷ). ಭವಮಾಲೆ **೫೯ :** ೩೧೩– ೫.

**ಶ್ರೀಮಂಕರ** – ಮುನಿ. ಇವರಲ್ಲಿ ನಲಿನಕೇತು ದೀಕ್ಷಿತನಾದ **೬೩ :** ೬೧೯.

**ಶ್ರೇಯಸ್ಕರ** – ಶ್ರೇಯಾಂಸನಾಥರ ಪುತ್ರ **೫೭ :** ೪೬.

**ಶ್ರೇಯಾಂಸ** – ದೀಕ್ಷಿತನಾಗಿ ಗಣಧರನಾದನು **೨೪ :** ೧೭೪.

**ಶ್ರೇಯಾಂಸನಾಥ** – ಭವಮಾಲೆ : ನಳಿನಪ್ರಭ – ರಾಜ – ದೇವೇಂದ್ರ – ಶ್ರೇಯಾಂಸಜಿನ **೫೭ :** ೬೬.

**ಶ್ರೇಯಾಂಸ** – ಭವಮಾಲೆ : ಧನಶ್ರೀ – ನಿರ್ನಾಮಿಕೆ – ಸ್ವಯಂಪ್ರಭೆ – ಶ್ರೀಮತಿ – ಭೋಗಭೂಮಿಜೆ – ಸ್ವಯಂಪ್ರಭದೇವ – ಕೇಶವರಾಜ – ಪ್ರತೀಂದ್ರ – ಧನದತ್ತ ಶ್ರೇಷ್ಠಿ – ಅಹಮಿಂದ್ರತ್ವ – ಶ್ರೇಯಾನ್‌ರಾಜ **೪೭ :** ೩೬೦ – ೨.

**ಶ್ರೇಯಾನ್** – ತೀರ್ಥಂಕರ. ತಂದೆ ವಿಷ್ಣು, ತಾಯಿ ನಂದೆ **೫೩ :** ೩೩. ನೋಡಿ : **೫೩**ನೇ ಪರ್ವ.

– ಸೋಮಪ್ರಭ ರಾಜನ ತಮ್ಮ **೪೩ :** ೮೨, ೮೬.

**ಶ್ರೇಯಾನ್ಕುಮಾರ** – ಹಸ್ತಿನ ನಗರದ ಸೋಮಪ್ರಭ ರಾಜನ ತಮ್ಮ. ಪೂರ್ವ ಭವದ ಧನದೇವ ಶ್ರೇಷ್ಠಿ **೨೦ :** ೩೧–೨, ಸ್ವಪ್ನ : ೩೩, ಜಾತಿಸ್ಮರಣೆ : ೭೮, ಆಹಾರದಾನ : ೧೦೦, ಕುರುವಂಶ ಶ್ರೇಷ್ಠ : ೧೧೧, ಭರತನಿಗೆ ದಾನವಿಚಾರ ಹೇಳಿದನು : ೧೩೦ – ೫೦.

**ಶ್ರೇಯೋ** – ರಾಜ. ವೃಷಭಸ್ವಾಮಿಗೆ ಆಹಾರದಾನ ಮಾಡಿದನು **೧ :** ೧೧.

**ಶ್ರೇಯೋ ಗಣಧರ** – ಇವರಲ್ಲಿ ವಸುಷೇಣ ದೀಕ್ಷಿತನಾದ **೬೦ :** ೫೫.

**ಶ್ರೇಷ್ಠಿ** – ಭವಿಷ್ಯತ್ತಿನಲ್ಲಿ ೭ನೇ ತೀರ್ಥಂಕರನಾಗುವವನು **೭೬ :** ೧೭೧೨.

**ಶ್ರೀವರ್ಮ**– ಶ್ರೀಷೇಣ, ಶ್ರೀಕಾಂತೆಯರ ಪುತ್ರ **೫೪ :** ೬೮, ವೈರಾಗ್ಯ : ೮೦.

– ಅಯೋಧ್ಯೆಯ ರಾಜ. ಪತ್ನಿ ಸುಸೀಮೆ, ಪುತ್ರ ಶ್ರೀಧಾಮ **೫೯ :** ೨೮೩.

– ಶ್ರೀಷೇಣ, ಸುಂದರಿಯರ ಕಿರಿಯ ಮಗ. ಜನರಲ್ಲಿ ಪ್ರಿಯನಾಗಿದ್ದುದರಿಂದ ಇವನಿಗೆ ರಾಜಪಟ್ಟ ದೊರಕಿತು. ಇದರಿಂದ ಇವನ ಅಣ್ಣ ಜಯವರ್ಮ ವೈರಾಗ್ಯ ಹೊಂದಿದನು **೫ :** ೨೦೫–೮.

**ಶ್ರೀವಿಜಯ** – ತ್ರಿಪೃಷ್ಠ, ಸ್ವಯಂಪ್ರಭೆಯರ ಜ್ಯೇಷ್ಠಪುತ್ರ **೬೨ :** ೧೫೧, ನೈಮಿತ್ತಕರು ಪೌದನಾಧಿಪತಿಯ ತಲೆಯ ಮೇಲೆ ಸಿಡಿಲು ಬೀಳುವುದು ಎನ್ನುವ ಪ್ರಸಂಗ : ೧೭೦–೬, (ವೈತಾಲಿ ವಿದ್ಯೆಯ) ಪತ್ನಿಯೊಡನೆ ಚಿತೆಯೇರಿದನು : ೨೩೫, ಭವಮಾಲೆ : ಅನಿಂದಿತೆ – ಆರ್ಯ – ವಿಮಲಪ್ರಭ – ಶ್ರೀ ವಿಜಯ : ೩೭೨–೭.

**ಶ್ರೀಷೇಣ** – ಗಂಧಿಲದೇಶದ ಸಿಂಹಪುರದ ರಾಜ **೫ :** ೨೦೪. ಪಟ್ಟಮಹಿಷಿ ಸುಂದರಿ. ಮಕ್ಕಳು ಜಯವರ್ಮ, ಶ್ರೀವರ್ಮ.

– ಸಿಂಹಪುರದ ರಾಜ. ಇವನ ಜ್ಯೇಷ್ಠ ಪುತ್ರನಾಗಿ ವಜ್ರಜಂಘ ಜನಿಸಿದನು **೮ :** ೧೮೧.

– ಭವಮಾಲೆ : ಹರಿವಾಹನ – ಭೋಗಭೂಮಿಯಲ್ಲಿ ಹಂದಿ – ಮಣಿಕುಂಡಲಿ – ದೇವ – ವರಸೇನ – ರಾಜಪುತ್ರ – ಸ್ವರ್ಗದ ದೇವ – ವಿಜಯನೆಂಬ ರಾಜಪುತ್ರ – ಅಹಮಿಂದ್ರ – ಶ್ರೀಷೇಣ ಗಣಧರ **೫೭ :** ೩೭೨–೩.

– ಶ್ರೀಪುರದ ರಾಜ **೫೪ :** ೩೬, ಪತ್ನಿ ಶ್ರೀಕಾಂತೆ, ಸಂತತಿಗಾಗಿ ಚಿಂತೆ : ೪೫–೬. ಶ್ರೀವರ್ಮನ ತಂದೆ : ೬೮.

– ರತ್ನಪುರದ ಅರಸು. ಇಬ್ಬರು ರಾಣಿಯರು – ಸಿಂಹನಂದಿತೆ, ಅನಿಂದಿತೆ **೬೨ :** ೩೩೭, **೬೩ :** ೮೪೪, ಮೇಘರಥ ಮುನಿಗೆ ಆಹಾರದಾನ ನೀಡಿ ಪಂಚಾಶ್ಚರ್ಯ ಹೊಂದಿದನು **೬೩ :** ೮೪೬.

– ಅಯೋಧ್ಯಾನಗರದ ರಾಜ. ಹರಿಶ್ರೀ, ಪೂರ್ವಸೇನೆ ಇವನ ಮಕ್ಕಳು **೭೨ :** ೨೨೧೩.

– ಚಂಪಾನಗರದ ರಾಜ. ಪತ್ನಿ ಧನಶ್ರೀ, ಪುತ್ರಿ ಕನಕಲತೆ **೭೫ :** ೬೩೨.

**ಶ್ರುತಕೀರ್ತಿ** – ವಜ್ರಜಂಘನ ಪುರೋಹಿತನಾದ ಆನಂದನ ತಂದೆ **೮ :** ೨೧೭.

– ಶ್ರಾವಕ ವ್ರತ ಸ್ವೀಕರಿಸಿದ ಗೃಹಸ್ಥರಲ್ಲಿ ಮುಖ್ಯನಾದವನು **೨೪ :** ೧೭೮.

**ಶ್ರುತಧರ** – ಗುರು. ಮೂವರು ಮುನಿಗಳು ಇವರಲ್ಲಿ ಅಷ್ಟಾಂಗನಿಮಿತ್ತ ಶಾಸ್ತ್ರವನ್ನು ಕಲಿತರು. ಇವರನ್ನು ಪರೀಕ್ಷಿಸಲು, ವನದಲ್ಲಿ ದರ್ಭೆ ಸಂಗ್ರಹಿಸುತ್ತಿದ್ದ ವಸು, ಪರ್ವತ, ನಾರದ ಇವರ ಭವಿಷ್ಯ ಹೇಳಲು ಆಜ್ಞಾಪಿಸಿದರು **೬೭ :** ೨೬೨–೪.

**ಶ್ರುತಸಾಗರ** – ಜ್ವಲನಜಟಿಯ ನಾಲ್ವರು ಮಂತ್ರಿಗಳಲ್ಲಿ ಒಬ್ಬ **೬೨ :** ೬೯, ಅವನ ಸೂಚನೆ : ೮೦.

– ಗುರು. ಇವರಲ್ಲಿ ಹರಿಷೇಣ ದೀಕ್ಷಿತನಾದ **೭೪ :** ೨೩೩.

**ಶ್ರುತಾರ್ಥ** – ಅಕಂಪನ ರಾಜನ ನಾಲ್ವರು ಮಂತ್ರಿಗಳಲ್ಲಿ ಒಬ್ಬ **೪೩ :** ೧೮೩, ಸುಲೋಚನೆಯನ್ನು ಅರ್ಕಕೀರ್ತಿಗೆ ಕೊಡಲು ಸಲಹೆ ನೀಡುತ್ತಾನೆ : ೧೮೩–೭.

**ಶ್ವೇತರಾಮ** – ಜಮದಗ್ನಿ, ರೇಣುಕಿಯರ ಇಬ್ಬರು ಪುತ್ರರಲ್ಲಿ ಒಬ್ಬ **೬೫ :** ೯೨.

**ಶ್ವೇನಕ** – ಒಬ್ಬ ತಳವಾರ. ರುದ್ರದತ್ತನೆಂಬ ಬ್ರಾಹ್ಮಣನಿಗೆ ಎಚ್ಚರಿಕೆ ಕೊಟ್ಟು ಅಯೋಧ್ಯೆಯಿಂದ ಹೊರಹಾಕಿದ **೭೦ :** ೧೫೫.

**ಶ್ವೇತವಾಹನ** – ಚಂಪಾನಗರದ ರಾಜ. ವೀರಜಿನನ ಸನ್ನಿಧಿಯಲ್ಲಿ ದೀಕ್ಷಿತನಾದ **೭೬ :** ೧೨೫೦. ಮತ್ತೊಂದು ಹೆಸರು ಧರ್ಮರುಚಿ : ೧೨೫೧, ಮೂವರು ಮನುಷ್ಯ ಲಕ್ಷಣಶಾಸ್ತ್ರ ತಿಳಿದವರು ಆಡಿದ ಮಾತಿನಿಂದ ರೌದ್ರಧ್ಯಾನದಲ್ಲಿ ಮಗ್ನನಾದ : ೧೨೫೩–೬೩, ಶ್ರೇಣಿಕ ಇವನ ರೌದ್ರಧ್ಯಾನ ಹೋಗಲಾಡಿಸಿದ : ೧೨೬೮.

– ಹಸ್ತಿನಾಪುರದ ವೈಶ್ಯ. ಇವನಿಗೆ ಪೂರ್ವಭವದ ಸುಭಾನು, ಶಂಖನೆಂಬ ಪುತ್ರನಾದ **೭೧ :** ೭೫೮.

**ಸಂಗಮ** – ದೇವ. ಮಹಾವೀರಸ್ವಾಮಿಯು ಶೂರನೆಂಬ ದೇವಸಭೆಯ ಅಭಿಪ್ರಾಯವನ್ನು ಪರೀಕ್ಷಿಸಲು ಬಂದವನು **೭೪ :** ೨೮೯.

**ಸಂಜಯ, ವಿಜಯ** – ಚಾರಣಮುನಿಗಳು. ಇವರ ಅರ್ಥಸಂದೇಹವು ಬಾಲಕ ವರ್ಧಮಾನನನ್ನು ದರ್ಶನ ಮಾಡಿದಾಗಲೇ ನಿವಾರಣೆಗೊಂಡಿತು. ಅವರು ಬಾಲಕನನ್ನು 'ಸನ್ಮತಿ' ಎಂದು ಹೆಸರಿಸಿದರು **೭೪ :** ೨೮೦–೩.

**ಸಂಜಯಂತ** – ವೈಜಯಂತ ರಾಜನ ಪುತ್ರ **೫೯ :** ೧೧೦. ವಿದ್ಯುದ್ದಂಷ್ಟ್ರನಿಂದ ಉಪಸರ್ಗ : ೧೧೬–೨೫, ಮುಕ್ತನಾದ : ೧೨೬. ಭವಮಾಲೆ : ಸಿಂಹಸೇನ – ಅಶನಿಘೋಷ (ಆನೆ) – ಶ್ರೀಧರ – ರಶ್ಮಿವೇಗ – ಅರ್ಕಪ್ರಭ, ವಜ್ರಾಯುಧರಾಜ – ಅಹಮಿಂದ್ರದೇವ – ಸಂಜಯಂತ **೫೯ :** ೩೧೬–೮.

– ಮುನಿ. ಇವನನ್ನು ಆಶ್ರಯಿಸಿ ಪ್ರದ್ಯುಮ್ನ ವಿದ್ಯೆಯನ್ನು ಸಾಧಿಸಿದನು **೭೨ :** ೧೧೩೯.

**ಸಂಡಿಲ** – ಭೌಮೋಪಾಧ್ಯಾಯನ ಶಿಷ್ಯ. ಹಾಗೆಂದು ಮಹಾಕಾಲಾಸುರನು ಪರ್ವತನಿಗೆ ಹೇಳುತ್ತಾನೆ **೬೭ :** ೩೪೮.

**ಸಂಭೂತ** – ವಿಶ್ವನಂದಿ ಇವರಲ್ಲಿ ದೀಕ್ಷಿತನಾದ **೭೪ :** ೧೧೦.

– ಗುರು. ಇವರಲ್ಲಿ ವಿಶ್ವನಂದಿ ಹಾಗೂ ವಿಶಾಖಭೂತಿ ದೀಕ್ಷಿತರಾದರು **೫೭ :** ೭೮.

**ಸಂಭಿನ್ನಮತಿ** – ಮಹಾಬಲ ಮಹಾರಾಜನ ಮಂತ್ರಿ **೪** : ೧೯೧, ರಾಜನಿಗೆ ವಿಜ್ಞಾನಾದ್ವೈತವಾದದ ಬೋಧನೆ **೫** : ೩೬-೪೩.

**ಸಂಭಿನ್ನಶ್ರೋತೃ** – ಜ್ವಲನಜಟಿಯ ನೈಮಿತ್ತಿಕ. ಸ್ವಯಂಪ್ರಭೆಯ ವರನ ಬಗ್ಗೆ ಇವನ ಅಭಿಪ್ರಾಯ **೬೨** : ೮೩–೯೫; **೭೪** : ೧೩೯.

**ಸಂಭಿನ್ನ** – ಖೇಚರ. ಜ್ಯೋತಿಪ್ಪ್ರಭಪುರದ ರಾಜ. ಹೆಂಡತಿ ಸರ್ವಕಲ್ಯಾಣಿ, ಪುತ್ರ ದೀಪಶಿಖ **೬೨** : ೨೪೦.

**ಸಂವರ** – ವೃಷಭನಾಥರ ಗಣಧರರಲ್ಲಿ ಒಬ್ಬ **೪೩** : ೬೧.

**ಸಗರ** – ಎರಡನೇ ಚಕ್ರವರ್ತಿ. ಅಜಿತತೀರ್ಥಕಾಲದಲ್ಲಿ ಇದ್ದನು **೪೮** : ೫೭, ತಂದೆ ಸಮುದ್ರವಿಜಯ, ತಾಯಿ ಸುಬಲಾದೇವಿ. ವಂಶ ಇಕ್ಷ್ವಾಕು : ೭೧–೨, ಚಕ್ರವರ್ತಿ : ೭೪–೭, ೬೦ ಸಾವಿರಪುತ್ರರು : ೭೮, ಕೈಲಾಸದ ಜಿನ ಮಂದಿರಗಳಿಗೆ ಸುತ್ತಲೂ ಗಂಗಾನದಿಯನ್ನು ಕಂದಕವನ್ನಾಗಿ ಮಾಡಿರಿ ಎಂದು ಸುತರಿಗೆ ಕಾರ್ಯ ನೀಡಿದ **೪೮** : ೧೦೬–೮. ಭವಪರಂಪರೆ : ಜಯಸೇನ – ಮಹಾಬಲದೇವ – ಸಗರ ಚಕ್ರವರ್ತಿ **೪೮** : ೧೪೩.

**ಸಗರ** – ಇವನ ಕಥೆಯನ್ನು ಕೇಳಿ ದಶರಥ ತನ್ನ ರಾಜಧಾನಿಯನ್ನು ವಾರಾಣಸಿಯಿಂದ ಅಯೋಧ್ಯೆಗೆ ಬದಲಾಯಿಸಿದ **೬೭** : ೧೫೭–೬೩. ಸುಲಸೆಯ ಸ್ವಯಂವರದಲ್ಲಿ ಮಧುಪಿಂಗಲನನ್ನು ನಿರಾಕರಿಸಿದನು. ಅವನು ಮಹಾಕಾಲನೆಂಬ ಅಸುರನಾಗಿ, ಇವನು ನರಕಭೂಮಿ ಸೇರುವಂತೆ ಮಾಡಿದನು : ೧೬೩, ಅಯೋಧ್ಯೆಯ ರಾಜ. ಬಿಳಿಕೂದಲು ನೋಡಿ ವಿರಾಗಿಯಾಗಿ, ಅನಂತರ ಸರಾಗಿಯಾದ. ನರೆಗೂದಲು ದ್ರವ್ಯಲಾಭದ ಸೂಚನೆ ಎಂದು ಮಂಡೋದರಿದಾದಿ ಹೇಳುತ್ತಾಳೆ. ವಿಶ್ವಭೂಮಂತ್ರಿ ಸುಲಸೆಯನ್ನು ಪಡೆಯುವ ಉಪಾಯವನ್ನು ತಿಳಿಸುತ್ತಾನೆ **೬೭** : ೨೧೮–೯. ಧರ್ಮಾಧರ್ಮದ ದ್ವಂದ್ವ. ರತಿವರ ಮುನಿಯ ದರ್ಶನ. ೭ನೇ ನರಕಪ್ರಾಪ್ತಿಯ ಬಗ್ಗೆ ಕಳವಳ : ೩೬೭.

**ಸತ್ಯಂಧರ** – ರಾಜಪುರದ ದೊರೆ. ಜೀವಂಧರನ ತಂದೆ **೭೫** : ೭೩೭, ಗರುಡಯಂತ್ರದಲ್ಲಿ ರಾಣಿಯನ್ನು ಅರಮನೆಯಿಂದ ಹೊರಗೆ ಕಳುಹಿಸಿದ, ಯುದ್ಧದಲ್ಲಿ ಕಾಷ್ಠಾಂಗಾರನನ್ನು ಓಡಿಸಿದನು : ೭೬೯, ಆದರೆ ಯುದ್ಧದಲ್ಲಿ ಅಸು ನೀಗಿದನು : ೭೭೦.

**ಸತ್ಯಕ** – ರತ್ನಪುರದ ವಿಪ್ರ. ಕಪಿಲನಿಗೆ ತನ್ನ ಮಗಳನ್ನು ಕೊಟ್ಟನು **೬೨** : ೩೨೭.
- ಮುನಿ. ಇವರಲ್ಲಿ ದುಷ್ಟರಾದ ಅಗ್ನಿಭೂತಿ, ವಾಯುಭೂತಿ ವಾದಮಾಡಿ ಸೋತು ಭಂಗ ಹೊಂದಿದರು **೭೨** : ೯೬೯–೭೩.
- ಮಹೀಪುರದ ರಾಜ. ಚೇಟಕನ ಪುತ್ರಿ, ಜ್ಯೇಷ್ಠೆಗಾಗಿ ಯುದ್ಧಮಾಡಿ ಸೋತು ದೀಕ್ಷಿತನಾದ **೭೫** : ೫೬೨–೩.
- ಸತ್ಯದೇವನ ತಂದೆ. ಮಗನನ್ನು ಹುಡುಕಿಕೊಂಡು ಸರ್ಪಸರೋವಣಕ್ಕೆ ಬಂದನು. ಮಗ ತನ್ನ ಜೊತೆ ಬಾರದಾದಾಗ, ನಿದಾನಶಲ್ಯದಿಂದ ಪುತ್ರಮೋಹದಿಂದ ಸತ್ತು ಲೋಕಪಾಲನೆಂಬ ವ್ಯಂತರ ದೇವನಾದನು **೪೬** : ೧೨೦–೨.

**ಸತ್ಯಕಿಪುತ್ರ** – ಭವಿಷ್ಯತ್ಕಾಲದಲ್ಲಿ ೨೩ನೇ ತೀರ್ಥಂಕರನಾಗುವ ವ್ಯಕ್ತಿ **೭೬** : ೧೭೧೪.

**ಸತ್ಯಕೀರ್ತಿ** – ಮಂತ್ರಿ. ಮೇಘರಥ ರಾಜನು ಮುಂಡಶಲಾಯನನಿಗೆ ಸುವರ್ಣ ಭೂಮಿಯನ್ನು ದಾನಮಾಡಿದಾಗ ಪ್ರತಿಬೋಧಿಸುತ್ತಾನೆ **೫೬** : ೮೮–೯೦. ಶ್ರೇಷ್ಠದಾನದ ವಿಷಯವನ್ನು ರಾಜನಿಗೆ ನಿರೂಪಿಸುತ್ತಾನೆ **೫೬** : ೬೪–೭.

**ಸತ್ಯಗುಪ್ತ** – ವೃಷಭನಾಥರ ಗಣಧರರಲ್ಲಿ ಒಬ್ಬ **೪೩** : ೬೦.

**ಸತ್ಯಘೋಷ** – ಇವನ ಕಥೆ **೫೯** : ೧೪೬–, ಸಿಂಹಸೇನನ ಮಂತ್ರಿ ಶ್ರೀಭೂತಿಯ ಉಪನಾಮ : ೧೪೭, ಭದ್ರಮಿತ್ರನ ರತ್ನಗಳನ್ನು ನ್ಯಾಸಾಪಹರಣ ಮಾಡಿದ. ರಾಜನಿಂದ ಶಿಕ್ಷಿತನಾದ : ೧೭೬. ಭವಮಾಲೆ: ಶ್ರೀಭೂತಿ (ಸತ್ಯಘೋಷ)– ಸರ್ಪ–ಚಮರಮೃಗ–ಕುಕ್ಕುಟಸರ್ಪ–೩ನೇ ನರಕ–ಹೆಬ್ಬಾವು–೪ನೇ ನರಕ– ತ್ರಸ ಮತ್ತು ಸ್ಥಾವರ ಜೀವ– ಅತಿದಾರುಣ – ೭ನೇ ನರಕ – ಸರ್ಪ– ನಾರಕಿ – ಅನೇಕ ಯೋನಿಗಳಲ್ಲಿ ಭ್ರಮಣ – ಮೃಗಶೃಂಗ – ವಿದ್ಯುದ್ದಂಷ್ಟ್ರ **೫೯** : ೩೧೩–೫.

**ಸತ್ಯದೇವ** – ಶಕ್ತಿಷೇಣ, ಅಟವೀಶ್ರೀ ಅವರ ಸ್ವೀಕೃತ ಪುತ್ರ **೪೬** : ೯೬. ಪಂಚಪರಮೇಷ್ಠಿ ಸ್ತವನದ ವ್ರತಸ್ವೀಕಾರ : ೧೦೦, ಸತ್ಯಕನ ಮಗ. ತನ್ನನ್ನು ಹುಡುಕಿಕೊಂಡು ಬಂದ ತಂದೆಯ ಜೊತೆ ಹೋಗುವುದಿಲ್ಲ : ೧೨೦–೨.

**ಸತ್ಯಮಿತ್ರ** – ವೃಷಭನಾಥರ ಗಣಧರರಲ್ಲಿ ಒಬ್ಬ **೪೩** : ೬೦.

**ಸತ್ಯವೀರ್ಯ** – ಸಮವಸರಣ ಸಭೆಯಲ್ಲಿ ಶ್ರೋತೃಮುಖ್ಯನಾದವನು **೭೬** : ೧೭೬೯.

**ಸನತ್ಕುಮಾರ** – ಅನಂತವೀರ್ಯ, ಸಹದೇವಿಯರ ಪುತ್ರ. ಚಕ್ರವರ್ತಿ. ಇವನ ಪುರಾಣ **೬೧** : ೧೦೪– ೨೩೦, ವೈರಾಗ್ಯ : ೧೧೦ – ೮.

**ಸನ್ಮತಿ** – ವರ್ಧಮಾನ ತೀ. ರ ಮತ್ತೊಂದು ಹೆಸರು **೭೪** : ೨೮೩.
- ಎರಡನೇ ಮನುವಿನ ಹೆಸರು. ಜ್ಯೋತಿರಂಗ ಕಲ್ಪವೃಕ್ಷದ ಪ್ರಭೆಯು ಸಂಪೂರ್ಣವಾಗಿ ನಾಶವಾಗಿ ರಾತ್ರಿಯ ಕತ್ತಲಲ್ಲಿ ನಕ್ಷತ್ರಗಳನ್ನು ಕಂಡು ಜನ ಹೆದರಿದರು. ಆಗ ಈ ಮನುವು ಜ್ಯೋತಿಶ್ಚಕ್ರದ ವಿಷಯ ತಿಳಿಸಿ ಜನರ ಭಯವನ್ನು ಪರಿಹರಿಸಿದನು **೩** : ೭೭– ೮೯.

**ಸಮಂತಭದ್ರ** – ಜಿನಸೇನಾಚಾರ್ಯರು ಎರಡು ಶ್ಲೋಕಗಳಲ್ಲಿ ಇವರನ್ನು ಸ್ಮರಿಸಿದ್ದಾರೆ. ಕವಿ ಬ್ರಹ್ಮರು. ಮಿಥ್ಯಾಮತವನ್ನು ಚೂರು ಮಾಡಿದರು. ಅನೇಕ ವಿಷಯಗಳಲ್ಲಿ ಚೂಡಾರತ್ನದಂತಿದ್ದರು **೧** : ೪೩– ೪.

**ಸಮಾಧಿಗುಪ್ತ** – ಮುನಿ. ಇವರಲ್ಲಿ ಧನಗುಪ್ತ ದೀಕ್ಷಿತನಾಗಿ ನಾಕದಲ್ಲಿ ಬ್ರಹ್ಮೇಂದ್ರನಾದನು. ಚ್ಯುತನಾಗಿ ಸಿಂಹರಥನಾದನು **೬೩** : ೭೬೦.
- ಮುನಿ. ಇವರಲ್ಲಿ ರಶ್ಮಿವೇಗ ಸಂಯಮ ಧಾರಣಮಾಡಿದ **೭೩** : ೨೮.
- ಮುನಿ. ಇವರಲ್ಲಿ ಶ್ರೀಚಂದ್ರೆಯ ತಂದೆ ತನ್ನ ಮಗಳ ಪೂರ್ವಭವದ ಪತಿ ಎಲ್ಲಿದ್ದಾನೆಂದು ವಿಚಾರಿಸುತ್ತಾನೆ **೭೫** : ೧೦೨೦.
- ಮುನಿ **೭೧** : ೯೪೨.
- ಮುನಿ. ಮಾತಂಗಿಯೊಬ್ಬಳು (ಪೂರ್ವಭವದ ನಾಗಶ್ರೀ) ಮಧುಮಾಂಸ ತ್ಯಾಗಮಾಡಿ ಧನಿಕನ ಪುತ್ರಿಯಾದಳು **೭೨** : ೧೨೦೧.
- ಮುನಿ ಇವರಲ್ಲಿ ಕನಕಪ್ರಭ ವ್ರತಸ್ಥನಾದ **೪೭** : ೧೮೩.

**ಸಮಾಧಿಗುಪ್ತ** – ಜೀನೇಶ್ವರ. ಇವರಲ್ಲಿ ಪದ್ಮಚಕ್ರವರ್ತಿ ದೀಕ್ಷಿತನಾದ **೬೬** : ೯೫.
- ಮುನಿ. ಇವರ ಬಗ್ಗೆ ಅಸಹ್ಯಪಟ್ಟ ಲಕ್ಷ್ಮೀಮತಿ ಎಂಬ ಬ್ರಾಹ್ಮಣಿತಿ ಕುಷ್ಠ ರೋಗಿಯಾಗುತ್ತಾಳೆ **೭೧** : ೮೧೫.
- ಮುನಿ. ಇವರಲ್ಲಿ ಮಹಾಬಲ ದೀಕ್ಷಿತನಾದ **೭** : ೮೩.
- ಮುನಿ. ಸತ್ತ ನಾಯಿಯ ದುರ್ಗಂಧಶರೀರವನ್ನು ಈ ಮುನಿಯ ಸಮೀಪ ಹಾಕಿ, ಧನಶ್ರೀ ಎಂಬುವಳು, ಮುಂದೆ ದಾರಿದ್ರ್ಯಕುಲದಲ್ಲಿ ನಿರ್ನಾಮೆ ಯಾಗಿ ಜನಿಸುತ್ತಾಳೆ **೬** : ೧೩೬.
- ಖದಿರಸಾಗರನಿಗೆ ಕಾಕಮಾಂಸ ತಿನ್ನದಿರುವ ವ್ರತ ಕೊಟ್ಟವರು **೭೪** : ೩೯೦ ಶೂರಸೇನನಿಗೆ ವ್ರತಕೊಟ್ಟರು : ೪೧೫.

**ಸಮುದ್ರದತ್ತ** – ಸಾಗರಸೇನ, ದೇವಶ್ರೀಯರ ಮತ್ತೊಬ್ಬ ಮಗ **೪೭** : ೧೯೬ ಪತ್ನಿ ಸರ್ವದಯಿತೆ : ೧೯೮, ವ್ಯಾಪಾರಕ್ಕೆ ಹೊರಟವನು ರಾತ್ರಿ ಹೊತ್ತಿನಲ್ಲಿ ಹಿಂದಿರುಗಿ ಬಂದು ಗುಟ್ಟಾಗಿ ಪತ್ನಿಯ ಸಂಪರ್ಕ ಹೊಂದುತ್ತಾನೆ : ೨೦೩.
- ಧನವತಿಯ ಸಹೋದರ. ಪ್ರಿಯದತ್ತೆಯ ತಂದೆ **೪೬** : ೪೧, ೧೮೫.
- ಜೂಜಿನಲ್ಲಿ ಸೋತು ಕೊಡಲು ಹಣವಿಲ್ಲದೆ ಶಿಕ್ಷೆಗೆ ಗುರಿಯಾದನು **೪೬** : ೨೭೯.

**ಸಮುದ್ರವಿಜಯ**– ಅಯೋಧ್ಯೆಯ ರಾಜ. ಇಕ್ಷ್ವಾಕುವಂಶ. ಪತ್ನಿ ಸುಬಲಾದೇವಿ. ಪುತ್ರ ಸಗರ **೪೮** : ೬೯– ೭೨.

**ಸಮುದ್ರಸೇನ** – ವಸ್ವೋಕಸೇನ ನಗರದ ರಾಜ, ಪತ್ನಿ ಜಯಸೇನೆ, ಪುತ್ರಿ ವಸಂತಸೇನೆ **೬೩** : ೬೨೯.
- ಮುನಿ. ದರಿದ್ರನಾದ ಗೌತಮ ಇವರನ್ನು ಅನುಸರಿಸಿ ಶ್ರೀಗೌತಮನಾದನು **೭೦** : ೧೭೩– ೭೭.

**ಸರ್ವಗುಪ್ತ** – ಕೇವಲಿ. ಇವರಲ್ಲಿ ಪದ್ಮಸೇನ ಧರ್ಮಸ್ವರೂಪವನ್ನು ಮತ್ತು ಮುಂದಿನ ಎರಡು ಭವಗಳನ್ನು ತಿಳಿದು ತಪಸ್ವಿಯಾದ **೫೯** : ೭–೮.

**ಸರ್ವದಯಿತ** – ಸರ್ವಸಮೃದ್ಧ, ಧನಶ್ರೀಯರ ಪುತ್ರ. ರಾಜಶ್ರೇಷ್ಠಿ ; ತಂಗಿ ಸರ್ವದಯಿತೆ **೪೭** : ೧೯೩. ಪತ್ನಿಯರು– ಜಯಸೇನೆ ಜಯದತ್ತೆ : ೧೯೪, ಜಿತಶತ್ರುವನ್ನು ತನ್ನ ಸೋದರಿಯ ಮಗನೆಂದು ಗುರುತಿಸಿ, ತನ್ನ ಮಗಳು ಸರ್ವಶ್ರೀಯನ್ನು ಧಾರೆಯೆರೆದು ಶ್ರೇಷ್ಠಿಪದವಿನೀಡಿ, ವಿರಕ್ತನಾದನು : ೨೧೯– ೨೩. ರತಿವರನಲ್ಲಿ ದೀಕ್ಷಿತನಾದ, ಸ್ವರ್ಗದಲ್ಲಿ ಜನಿಸಿದ.

**ಸರ್ವದೇವ**– ವೃಷಭ ತೀರ್ಥಂಕರರ ಗಣಧರರಲ್ಲಿ ಒಬ್ಬ **೪೩** : ೫೮.

**ಸರ್ವಪ್ರಿಯ**– ವೃಷಭ ತೀ. ರ ಗಣಧರರಲ್ಲಿ ಒಬ್ಬ **೪೩** : ೫೮.

**ಸರ್ವಯಜ್ಞ**– ವೃಷಭ ತೀ. ರ ಗಣಧರರಲ್ಲಿ ಒಬ್ಬ **೪೩** : ೫೭.

**ಸರ್ವವಿಜಯ**– ವೃಷಭ ತೀ. ರ ಗಣದರರಲ್ಲಿ ಒಬ್ಬ **೪೩** : ೫೮.

**ಸರ್ವಸಂಘ**– ವೃಷಭ ತೀ. ರ ಗಣಧರರಲ್ಲಿ ಒಬ್ಬ **೪೩** : ೬೩.

**ಸರ್ವಮಿತ್ರ**– ಪ್ರಿಯಮಿತ್ರ ರಾಜನ ಮಗ **೭೪** : ೨೩೯.

**ಸರ್ವಯಶ** – ಶಂಖಶೈಲದಲ್ಲಿದ್ದ ಮುನಿ. ಇವರನ್ನು ಕಂಡು ಶ್ರೀದತ್ತೆ ಶಾಂತ ಭಾವವನ್ನು ಹೊಂದಿದಳು **೬೨** : ೪೯೫.

**ಸರ್ವರಕ್ಷಿತ**– ತಳವಾರ. ಇವನನ್ನು ವೇಶ್ಯೆ ಉತ್ಪಲಮಾಲೆ ಪೆಟ್ಟಿಗೆಯಲ್ಲಿ ಬಚ್ಚಿಟ್ಟು ಸಾಕ್ಷಿಯಾಗಿ ಬಳಸಿಕೊಂಡಳು **೪೬** : ೩೦೩– ೪.

**ಸರ್ವಸಮೃದ್ಧ**– ಪುಂಡರೀಕಿಣಿಯ ವರ್ತಕ. ಪ್ರಿಯಪತ್ನಿ ಧನಶ್ರೀ **೪೭** : ೧೯೧– ೨, ಇವನ ತಂಗಿ ದೇವಶ್ರೀ : ೧೯೫, ಪುತ್ರ ಸರ್ವದಯಿತ : ೧೯೨– ೩.

– ಒಬ್ಬ ವೈಶ್ಯ **೭೬** : ೧೪೦೮.

**ಸರ್ವಾತ್ಮಭೂತ**– ಭವಿಷ್ಯತ್ಕಾಲದ ಜಿನೇ ತೀ. ರ ಹೆಸರು **೭೬** : ೧೭೧೮.

**ಸರ್ವಾರ್ಥ**– ಅಕಂಪನರಾಜನ ನಾಲ್ವರು ಮಂತ್ರಿಗಳಲ್ಲಿ ಒಬ್ಬ **೪೩** : ೧೮೩. ಸುಲೋಚನೆಯನ್ನು ವಿದ್ಯಾಧರರಿಗೆ ಕೊಡುವುದೆಂದು ಸೂಚಿಸುತ್ತಾನೆ : ೧೯೨ – ೩.

**ಸಹದೇವ** – ಪಾಂಡು ಮಾದ್ರಿಯರ ಮಗ **೭೦** : ೧೧೬.

– ಪೂರ್ವಭವದ ಮಿತ್ರಶ್ರೀ **೭೨** : ೧೨೨೧.

– ಧನದೇವನ ಪುತ್ರ. ನಾಗದತ್ತನ ದಾಯಾದಿ **೭೫** : ೬೨೫.

**ಸಹಸ್ರಗ್ರೀವ** – ಲಂಕಾಪುರಿಯ ದೊರೆ. ೩೦ ಸಾವಿರವರ್ಷ ಆಳಿದ. ಇವನ ಮಗ ಶತಗ್ರೀವ **೬೮** : ೮೮೩.

**ಸಹಸ್ರಘೋಷ**– ಅಶನಿಘೋಷನ ಮಗ **೬೨** : ೨೭೪.

**ಸಹಸ್ರಬಲ**– ಮಹಾಬಲನ ಮುತ್ತಾತ. ಇವನ ವೃತ್ತಾಂತವನ್ನು ಸ್ವಯಂಬುದ್ಧನು ಮಹಾಬಲನಿಗೆ ಹೇಳುತ್ತಾನೆ **೫** : ೧೪೬– ೯, ಶುಕ್ಲಧ್ಯಾನದಿಂದ ಇವನು ಮೋಕ್ಷಹೊಂದಿದ : ೧೫೩.

**ಸಹಸ್ರಬಾಹು**– ಕೋಸಲದೇಶದ ಅಯೋಧ್ಯೆಯ ರಾಜ. ಇಕ್ಷ್ವಾಕು ವಂಶ. ಪತ್ನಿ ಚಿತ್ರಮತಿ **೬೫** : ೫೭.

**ಸಹಸ್ರರಶ್ಮಿ**– ಅಮಿತತೇಜನ ಮಗ **೬೨** : ೨೭೧.

**ಸಹಸ್ರಾಯುಧ**– ವಜ್ರಾಯುಧ, ಲಕ್ಷ್ಮೀಮತಿಯರ ಪುತ್ರ. ಪೂರ್ವಭವದಲ್ಲಿ ಅನಂತವೀರ್ಯನಾಗಿದ್ದ ಪ್ರತೀಂದ್ರ. ಪತ್ನಿ ಶ್ರೀಷೇಣೆ **೬೩** : ೫೫೬– ೭.

**ಸಾಗರ**– ಒಬ್ಬ ಗುರು **೭೧** : ೯೩೩.

– ಶ್ರಾವಕ. ಸತ್ಯಂಧರನ ಪುರೋಹಿತ. ಪತ್ನಿ ಶ್ರೀಮತಿ. ಮಗ ಬುದ್ಧಿಷೇಣ **೭೫** : ೮೦೩– ೧೦.

**ಸಾಗರದತ್ತ**– ಹಸ್ತಿನಾಪುರದ ಶ್ರೇಷ್ಠಿ. ಉಗ್ರಸೇನನ ತಂದೆ **೮** : ೨೨೩.

– ಸಾಗರಸೇನ, ದೇವಶ್ರೀಯರ ಮಗ **೪೭** : ೧೯೫. ಪತ್ನಿ ವೈಶ್ರವಣದತ್ತೆ : ೧೯೮.

– ರಾಜಪುರದ ವೈಶ್ಯ. ವಿಮಲೆಯ ತಂದೆ **೭೫** : ೧೧೩೫.

– ನೋಡಿ : ಪದ್ಮಶ್ರೀ **೭೬** : ೧೨೮೬.

– ಮುನಿ. ದೀಪ್ತವೆಂಬ ತಪಸ್ಸು ಮಾಡಿದನು **೭೬** : ೧೩೭೪–೮೨, ವಜ್ರದಂತ, ಯಶೋಧರೆಯರ ಪುತ್ರ : ೧೩೭೯– ೮೦. ವೈರಾಗ್ಯ : ೧೩೮೪– ೬, ಅಮಿತಸಾಗರರಲ್ಲಿ ದೀಕ್ಷೆ : ೧೩೮೭– ೯.

– ಸುಪ್ರತಿಷ್ಠ ನಗರದ ಶ್ರೇಷ್ಠಿ. ಪತ್ನಿ ಪ್ರಭಾಕರಿ, ಪುತ್ರ ನಾಗದತ್ತ **೭೬** : ೧೪೫೭– ೮, ಮುನಿಯಿಂದ ಆಯುಷ್ಯದ ಅವಧಿ ಮೂವತ್ತು ದಿನಗಳೆಂದು ತಿಳಿದ : ೧೪೬೮, ನಾಕಗತಿ.

**ಸಾಗರಸೇನ** – ಚಾರಣಮುನಿ. ವಜ್ರಜಂಘನಿಂದ ಕಾಂತಾರ ಭಿಕ್ಷೆ ಪಡೆದರು **೮** : ೧೬೯– ೭೩.

– ಜಯಸೇನೆಯ ತಂದೆ. ಸರ್ವದಯಿತ ಶ್ರೇಷ್ಠಿಯ ಮಾವ **೪೭** : ೧೯೩ ದೇವಶ್ರೀಯ ಪತಿ. ಸಾಗರದತ್ತ, ಸಮುದ್ರದತ್ತ, ಸಾಗರದತ್ತೆಯರ ತಂದೆ : ೧೯೪. ಇವನ ತಂಗಿ ಸಾಗರಸೇನೆ. ಇವನು ಸರ್ವಸಮೃದ್ಧನ ಭಾವ ಮೈದುನ : ೧೯೬.

– ಪದ್ಮಿನೀಖೇಟನಗರದ ವರ್ತಕ. ಪತ್ನಿ ಅಮಿತಮತಿ. ಇಬ್ಬರು ಲೋಭಿ. ಪುತ್ರರು – ಧನಮಿತ್ರ, ನಂದಿಷೇಣ **೬೩** : ೭೭೪– ೫.

– ಮುನಿ. ಇವರಲ್ಲಿ ವಾಸವರಾಜ ದೀಕ್ಷಿತನಾದ **೭೧** : ೪೯೯.

**ಸಾಗರಸೇನ**– ಮುನಿ. ಇವರನ್ನು ಮೃಗವೆಂದು ಭಾವಿಸಿ ಪುರೂರವ ಬೇಡ ಕೊಲ್ಲಲು ಯತ್ನಿಸಿದಾಗ, ಅವನ ಪತ್ನಿ ತಡೆಯುತ್ತಾಳೆ. ಅವರ ಬೋಧನೆ ಕೇಳಿ ಮಧು, ಮದ್ಯಮಾಂಸ ತ್ಯಜಿಸುತ್ತಾನೆ **೭೪** : ೧೭– ೨೧.

– ಇವರ ಕೇವಲಜ್ಞಾನ ಪೂಜೆಯಲ್ಲಿ ಗರುಡವೇಗ, ವೃಷಭದತ್ತ ಸ್ನೇಹಿತ ರಾಗಿದ್ದರು **೭೫** : ೮೬೫.

– ಮುನಿ. ಇವರು ಜಯಸೇನರಾಜನಿಗೆ ನೀಡಿದ ಧರ್ಮೋಪದೇಶ **೭೬** : ೧೪೬೨– ೬.

– ಮುನಿ. ಇವರಿಂದ ರಾತ್ರಿ ಭೋಜನ ತ್ಯಾಗದ ವ್ರತವನ್ನು ಸ್ವೀಕರಿಸಿದ ನರಿ, ಉತ್ತರಭವದಲ್ಲಿ ಪ್ರೀತಿಂಕರನಾಯಿತು **೭೬** : ೧೫೪೪– ೧೬೧೦.

**ಸಾಧುಸೇಣ**– ವೃಷಭನಾಥರ ಗಣಧರ **೪೩** : ೫೯.

**ಸಾನುಕಂಪ**– ಯಕ್ಷಿಲನ ಮತ್ತೊಂದು ಹೆಸರು **೭೧** : ೭೭೭.

**ಸಾಮುಸಮೃದ್ಧ**– ಶ್ರೇಷ್ಠಿ. ಆಹಾರ ದಾನದಿಂದ ಪಂಚಾಶ್ಚರ್ಯ ಹೊಂದಿದ **೭೬** : ೧೩೭೫.

**ಸಾರಣ**– ಕೃಷ್ಣನ ಪಕ್ಷದ ರಾಜ **೭೧** : ೫೭೦.

**ಸಾರಸ್ವತ**– ಬ್ರಹ್ಮಲೋಕದ ದೇವರ್ಷಿ **೪೮** : ೩೪.

**ಸ್ಥಾವರ**– ಶಾಂಡಿಲ, ಪಾರಶರಿಯರ ಪುತ್ರ. (ಪೂರ್ವಭವ : ಮರೀಚಿ– ಜಟಿಲ– ಭಾರದ್ವಾಜ), ವೇದವೇದಾಂಗ ಪಾರಗಾಮಿ. ಪಾಪಭಾಜನ **೭೪** : ೮೨– ೩.

**ಸ್ವಾಮಹಿತ**– ಆನಂದರಾಜನ ಮಂತ್ರಿ. ಆಷ್ಟಾಹ್ನಿಕ ಪೂಜೆಮಾಡಲು ರಾಜನನ್ನು ಪ್ರೇರೇಪಿಸಿದ **೭೩** : ೪೪.

**ಸಿಂಹ** – ಒಬ್ಬ ಕಿರಾತರಾಜನ ಹೆಸರು. ಭೀಮಕೂಟಪರ್ವತದ ಬಳಿಯಿದ್ದನು. ಕಾಲಕನೆಂಬ ಬೇಡನು ಇವನಿಗೆ ಚಂದನೆಯನ್ನು ಒಪ್ಪಿಸಿದ **೭೫** : ೫೯೬, ಕಾಮುಕನಾಗಿ ಆಕೆಯೊಡನೆ ವರ್ತಿಸಲು ಉದ್ಯುಕ್ತನಾದಾಗ ಆತನ ತಾಯಿ ತಡೆದಳು : ೬೦೦.

**ಸಿಂಹಕೇತು**– ಹರಿವಂಶದ ಪ್ರಭಂಜನನ ಪುತ್ರ. ಪೂರ್ವಭವದ ಸುಮುಖಶ್ರೇಷ್ಠಿ **೭೦** : ೭೫, ಪತ್ನಿ ವಿದ್ಯುನ್ಮಾಲೆ (ಪೂರ್ವಭವದ ವನಮಾಲೆ) : ೭೭, ಚಿತ್ರಾಂಗದ ದೇವನಿಂದ ಉಪಸರ್ಗ : ೭೮, ಆನೆಯ ಮೂಲಕ ಚಂಪಾಪುರದ ಅರಸ : ೮೬, ಮೃಕಂಡುವಿನ ಮಗನಾದುದರಿಂದ ಮಾರ್ಕಂಡೇಯ : ೯೦.

**ಸಿಂಹಚಂದ್ರ**– ಸಿಂಹಸೇನ, ರಾಮದತ್ತೆಯರ ಮಗ, ಪೂರ್ವಭವದ ಭದ್ರಮಿತ್ರ ಶ್ರೇಷ್ಠಿ **೫೯** : ೧೯೨, ಇವನ ತಮ್ಮ ಪೂರ್ಣಚಂದ್ರ. ವೈರಾಗ್ಯ : ೨೦೧, ತಾಯಿಗೆ ತಮ್ಮನ ಪೂರ್ವಭವದ ಕಥೆ : ೨೦೬– ೨೬, ಅಹಮಿಂದ್ರನಾದ : ೨೨೭.

**ಸಿಂಹಪುರುಷ**– ಧರ್ಮತೀರ್ಥಂಕರರ ಕಾಲದಲ್ಲಿದ್ದ ಒಬ್ಬ ಕೇಶವ (ನಾರಾಯಣ) **೬೧** : ೫೬.

**ಸಿಂಹಭದ್ರ**– ಚೇಟಕನ ದಶಪುತ್ರರಲ್ಲಿ ಒಬ್ಬ **೭೫** : ೫೫೪.

**ಸಿಂಹರಥ**– ಗಗನವಲ್ಲಭ ಪುರದ ಪ್ರಭು **೬೨** : ೬೬.

– ಕುಂಡಲಪುರದ ರಾಜ. ಇವನ ಪುರೋಹಿತ ಬೃಹಸ್ಪತಿ **೬೨** : ೧೭೭.

– ವಿದ್ಯುದ್ದಂಷ್ಟ್ರ, ಅನಿಲವೇಗೆಯರ ಪುತ್ರ **೬೩** : ೭೫೨, ಇವನು ಮೇಘರಥ ಕುಳಿತಿದ್ದ ಶಿಲೆಯನ್ನು ಎತ್ತಲು ಪ್ರಯತ್ನಿಸಿದ : ೭೫೫, ಮೇಘರಥ ಇವನ ಪೂರ್ವಭವದ ಕಥೆಯನ್ನು ಪ್ರಿಯಮಿತ್ರೆಗೆ ಹೇಳುತ್ತಾನೆ : ೭೫೫– ೬೨. ಭವಮಾಲೆ : ಧನಗುಪ್ತ, ಬ್ರಹ್ಮೇಂದ್ರ, ಸಿಂಹರಥ. ಇವನು ಘನರಥ ಜಿನರಲ್ಲಿ ದೀಕ್ಷಿತನಾದ : ೭೬೪.

– ಸುಸೀಮಾನಗರದ ರಾಜ **೬೪** : ೩ ವೈರಾಗ್ಯ : ೬.

– ಪೌದನಪುರದ ರಾಜ. ಜರಾಸಂಧನ ಶತ್ರು. ಇವನನ್ನು ವಸುದೇವನು ಜಯಿಸಿ, ತನ್ನ ಭೃತ್ಯ ಕಂಸನಿಂದ ಕಟ್ಟಿಸಿದನು **೭೦** : ೩೫೫– ೫೭.

**ಸಿಂಹವಿಕ್ರಮ** – ಭಗಲಿದೇಶದ ರಾಜ. ಸಗರನ ಪತ್ನಿ ವಿದರ್ಭೆಯ ತಂದೆ **೪೮** : ೧೨೭.

**ಸಿಂಹಸೇನ** – ಸಿಂಹಪುರದ ರಾಜ. ಪತ್ನಿ ರಾಮದತ್ತೆ **೫೯** : ೧೪೬. ಮಂತ್ರಿ ಶ್ರೀ ಭೂತಿ : ೧೪೭, ಮಂತ್ರಿಯನ್ನು ಪರೀಕ್ಷಿಸಿ ಶಿಕ್ಷಿಸಿದ, ಅನಂತರ ಭದ್ರಮಿತ್ರನಿಗೆ ಮಂತ್ರಿ ಪದವಿ ನೀಡಿದ : ೧೭೪. ಭವಮಾಲೆ **೫೯** : ೩೦೬.

– ಅಯೋಧ್ಯೆಯ ದೊರೆ. ಇಕ್ಷ್ವಾಕು ವಂಶ, ಕಾಶ್ಯಪಗೋತ್ರ. ಪತ್ನಿ ಜಯಶ್ಯಾಮಾದೇವಿ **೬೦** : ೧೩– ೭.

– ಖಗಪುರದ ಅಧಿಪತಿ. ಇಕ್ಷ್ವಾಕು ವಂಶ. ಪತ್ನಿ ವಿಜಯಾದೇವಿ. ಪುತ್ರ ಸುದರ್ಶನ **೬೧** : ೬೯– ೭೦.

– ಪುಂಡರೀಕಿಣಿಯ ಅರಸ. ಸಮ್ಯಗ್ದೃಷ್ಟಿ. ಮೇಘರಥ ಮುನಿಗೆ ಆಹಾರ ದಾನ ನೀಡಿ ಪಂಚಾಶ್ಚರ್ಯ ಹೊಂದಿದ **೬೩** : ೮೪೫– ೬.

**ಸಿದ್ಧಸೇನ** – ಇವರು ಪದ್ಮರಾಗ ರತ್ನದಂತೆ ಶ್ರೇಷ್ಠರಾದ ಕವಿಗಳು. ವಾದಿ . ನಯ ಹಾಗೂ ಸಪ್ತಭಂಗಿಯಲ್ಲಿ ತೀಕ್ಷ್ಣರು. ಇವರನ್ನು ಜಿನಸೇನಾಚಾರ್ಯರು ಸ್ಮರಿಸಿದ್ದಾರೆ.

**ಸಿದ್ಧಾರ್ಥ** – ದ್ವಾರಪಾಲಕ. ವೃಷಭಸ್ವಾಮಿ ಆಹಾರಕ್ಕಾಗಿ ರಾಜಭವನಕ್ಕೆ ಬಂದುದನ್ನು ಸೋಮಪ್ರಭ ಹಾಗೂ ಶ್ರೇಯಾಂಸರಿಗೆ ತಿಳಿಸುತ್ತಾನೆ **೨೦** : ೬೯.

– ಅಕಂಪನ ರಾಜನ ನಾಲ್ವರು ಮಂತ್ರಿಗಳಲ್ಲಿ ಒಬ್ಬ **೪೩** : ೧೮೩, ಸುಲೋಚನೆಯನ್ನು ಪ್ರಭಂಜನ, ರಥವರ, ಬಲಿ, ವಜ್ರಾಯುಧ, ಮೇಘಸ್ವರ, ಭೀಮಭುಜ. ಇವರಲ್ಲಿ ಯಾರಿಗಾದರು ಕೊಡಬಹುದೆಂದು ಸಲಹೆ ನೀಡುತ್ತಾನೆ : ೧೮೯– ೯೧.

– ಕೌಶಂಭಿಯ ಪಾರ್ಥಿವ ರಾಜನ ಮಗ. ತಾಯಿ ಸುಂದರಿದೇವಿ **೬೯** : ೪, ತಂದೆ ತಪಸ್ಸಿಗೆ ತೆರಳಿದ ಮೇಲೆ ರಾಜನಾದ **೬೯** : ೯, ತಂದೆಯ ಶರೀರ ತ್ಯಾಗವನ್ನು ಕೇಳಿ ಮುನಿಯಾದನು : ೧೪, ಅಹಮಿಂದ್ರನಾದ : ೧೭, ತೀ. ನಾಮಕರ್ಮದ ಬಂಧ : ೧೫.

**ಸಿದ್ಧಾರ್ಥ**– ದೇವ. ತಮ್ಮನ ಸಾವಿಗೆ ದುಃಖಿತನಾದ ಬಲರಾಮನನ್ನು ಪ್ರತಿ ಬೋಧಿಸಿದನು **೭೨** : ೧೧೪೨.

– ದ್ರೌಪದಿಗೆ ಆಕೆಯ ಸ್ವಯಂವರದಲ್ಲಿ ರಾಜರನ್ನು ಪರಿಚಯಿಸಿದ ಪುರೋಹಿತ **೭೨** : ೧೧೮೯–೭೦.

**ಸಿದ್ಧಾರ್ಥ**– ಕುಂಡಪುರದ ರಾಜ **೭೪** : ೨೫೨, ಪತ್ನಿ ಪ್ರಿಯಕಾರಿಣಿ : ೨೫೬ ; **೭೫** : ೫೫೭ ; ಭಗವಾನ್ ಮಹಾವೀರರ ತಂದೆ.

**ಸ್ತಿಮಿತಸಾಗರ**– ಪ್ರಭಾಕರಿ ನಗರಿಯ ದೊರೆ. ಪತ್ನಿ ವಸುಂಧರಿ **೬೨** : ೪೧೦. ನಿದಾನಶಲ್ಯದಿಂದ ಸತ್ತು ಧರಣೇಂದ್ರ ಪದವಿ ಹೊಂದಿದನು : ೪೨೩.

– ಅಂಧಕವೃಷ್ಟಿಯ ಮೂರನೇ ಮಗ **೭೦** : ೯೫.

**ಸೀಮಂಕರ**– ಐದನೇ ಮನು. ಮಾತಿನಿಂದ ಎಲ್ಲೆಗಳನ್ನು ಮಾಡಿ ಅಲ್ಪ ಫಲಗಳನ್ನು ನೀಡುವ ಕಲ್ಪವೃಕ್ಷಗಳನ್ನು ಹಂಚಿಕೊಟ್ಟನು **೩** : ೧೦೭–೧೧.

**ಸೀಮಂಧರ** – ಆರನೇ ಮನು. ಗಿಡ ಪೊದರು ಮೊದಲಾದ ಗುರುತಗಳುಳ್ಳ ಸೀಮೆ(ಎಲ್ಲೆ) ಯನ್ನು ಮಾಡಿಕೊಟ್ಟನು **೩** : ೧೧೨–೫.

– ಪೂರ್ವವಿದೇಹದ ತೀರ್ಥಂಕರ **೭** : ೮೮.

**ಸುಂದರ**– ಮಹಾನಗರದ ರಾಜ. ವಾಸುಪೂಜ್ಯರಿಗೆ ಆಹಾರದಾನ ಮಾಡಿ ಪಂಚಾಶ್ಚರ್ಯ ಹೊಂದಿದ **೫೮** : ೪೦.

**ಸುಕಂಠ** – ಮಯೂರ ಗ್ರೀವನ ಆನೇ ಮಗ **೬೨** : ೫೮.

– ಅಶ್ವಗ್ರೀವನ ತಮ್ಮ. ಅಸುರತ್ವ ಹೊಂದಿದನು. ಮೇಘನಾದ ಮುನಿಗೆ ಉಪಸರ್ಗ ಉಂಟುಮಾಡಿ, ಅವರನ್ನು ಅಲ್ಲಾಡಿಸಲಾಗದೆ ಲಜ್ಜಿತನಾದನು **೬೩** : ೫೪೩–೬.

**ಸುಕಾಂತ** – ಅಕಂಪನನ ಸಹಸ್ರ ಪುತ್ರರಲ್ಲಿ ಒಬ್ಬ **೪೩** : ೧೩೪.

– ರತಿವರ ಎಂಬ ಗಂಡು ಪಾರಿವಾಳದ ಪೂರ್ವಭವದ ಹೆಸರು **೪೬** : ೮೭.

– ಅಶೋಕದೇವ, ಜಿನದತ್ತೆಯರ ಪುತ್ರ **೪೬** : ೧೦೬.

– ಹಿರಣ್ಯವರ್ಮನ ಸೇವಕ **೪೬** : ೧೬೪.

**ಸುಕುಂಡಲಿ** – ಆದಿತ್ಯಾಭಪುರದ ರಾಜ. ಪತ್ನಿ ಅಮಿತಸೇನೆ, ಪುತ್ರ ಮಣಿಕುಂಡಲ **೬೨** : ೩೬೦.

**ಸುಕೇತ** – ರಾಜ. ಜಯಕುಮಾರನ ಪಕ್ಷದವನು **೪೪** : ೧೦೬.

**ಸುಕೇತು** – ಅನುಕಂಪನನ ಸಹಸ್ರ ಪುತ್ರರಲ್ಲಿ ಒಬ್ಬ **೪೩** : ೧೩೪.

– ಮೃಣಾಲವತಿ ನಗರದ ರಾಜ **೪೬** : ೧೦೪ ; **೪೬** : ೩೬೪.

– ನಿದಾನಶಲ್ಯದಿಂದ ಮರಣ **೫೯** : ೮೫.

– ಖೇಚರಾಧಿಪತಿಯಾದ ಪದ್ಮಚಕ್ರಿಯ ಕಾಲದಲ್ಲಿದ್ದನು **೬೬** : ೮೦. ಅಮಾತ್ಯ , ಶೂನ್ಯವಾದಿ : ೮೩, ಶೂನ್ಯವಾದ : ೮೫–೮೯.

**ಸುಕೇತು** – ರಥನೂಪುರ ನಗರದ ರಾಜ. ಸತ್ಯಭಾಮೆಯ ತಂದೆ **೭೧** : ೮೧೧.

– ಸ್ವಾವಸ್ತಿಯ ರಾಜ **೫೯** : ೭೨, ದ್ಯೂತವ್ಯಸನಿ : ೭೫–೮೧.

**ಸುಗ್ರೀವ** – ಕಾಕನಂದೀ ನಗರದ ರಾಜ. ಇಕ್ಷ್ವಾಕು ವಂಶ. ಕಾಶ್ಯಪ ಗೋತ್ರ. ಪತ್ನಿ ಜಯರಾಮಾದೇವಿ **೫೫** : ೨೪.

– ಬಲೀಂದ್ರನ ಮಗ. ವಾಲಿಯ ತಮ್ಮ. ದೇಶಭ್ರಷ್ಟ. ಅಣುಮಾನನ ಸಖ **೬೮** : ೭೫೧–೪, ಅಧಿರಾಜಪಟ್ಟ : ೮೫೬. ತಾನು ಸಾಧಿಸಿದ ಕೆಲವು ವಿದ್ಯೆಗಳನ್ನು ರಾಮಲಕ್ಷ್ಮಣರಿಗೆ ಕೊಟ್ಟನು **೬೮** : ೯೯೩–೧೦೦೦.

**ಸುಘೋಷ** – ಅಶನಿಘೋಷನ ಮಗ **೬೨** : ೨೭೪.

**ಸುಘೋಷ, ವಿದ್ಯುದ್ದಂಷ್ಟ್ರ** – ಕನಕಶ್ರೀಯ ಸಹೋದರರು. ದಮಿತಾರಿಯ ಪುತ್ರರು **೬೨** : ೫೦೧, ಅನಂತಸೇನನೊಡನೆ ಯುದ್ಧಮಾಡುತ್ತಿದ್ದ ಇವರನ್ನು ಬಲಭದ್ರ ಕೇಶವರು ಹಿಂಸಿಸಿದರು. ಇದನ್ನು ಕೇಶವನ ಪ್ರಿಯೆಯಾದ ಕನಕಶ್ರೀ ಕಂಡು ಕಾಂತಿಹೀನಳಾದಳು : ೫೦೧–೩.

**ಸುಚಂದ್ರ** – ಬಲಭದ್ರರಲ್ಲಿ ಒನೆಯವನು **೭೬** : ೧೭೨೬.

**ಸುದತ್ತ** – ಪದ್ಮಷಂಡಪುರದ ಶ್ರೇಷ್ಠಿ. ಪತ್ನಿ ಸುಮಿತ್ರೆ **೫೯** : ೧೪೮.

– ಧನಮಿತ್ರ, ಶ್ರೀದತ್ತೆ ದಂಪತಿಗಳ ಪುತ್ರ **೬೩** : ೬೧೨, ಪತ್ನಿ ಪ್ರಿಯಂಕರೆ, ಪತ್ನಿಯ ಅಪಹರಣದಿಂದ ವಿರಕ್ತನಾದ, ಈಶಾನಕಲ್ಪದ ದೇವನಾದ : ೬೧೫, ಉತ್ತರ ಭವದ ಅಜಿತಸೇನ : ೬೧೭.

– ಕಾಂಚೀಪುರದ ವೈಶ್ಯ. ಸೋದರ ಶೂರದತ್ತ **೭೦** : ೧೨೭, ಇವರ ಕಥೆ : ೧೨೭.

– ಪುಷ್ಪದಂತ ಚಕ್ರವರ್ತಿಯ ಮಗ. ಅಯೋಧ್ಯೆಯಲ್ಲಿ ಜರುಗಿದ ಸ್ವಯಂವರದಲ್ಲಿ ಧನಶ್ರೀಯು ಹರಿವಾಹನನನ್ನು ವರಿಸಿದಳು. ಅವನನ್ನು ಸುದತ್ತನು ಕೊಂದು ಧನಶ್ರೀಯನ್ನು ಪಡೆದನು **೭೧** : ೭೫೪.

– ಚೇಟಕನ ದಶಪುತ್ರರಲ್ಲಿ ಒಬ್ಬ **೭೫** : ೫೫೩.

**ಸುದೃಷ್ಟಿ** – ಸುಸೀಮಾ ನಗರದ ರಾಜ. ಪತ್ನಿ ಸುಂದರ ನಂದೆ, ಪುತ್ರಿ ಸುವಿಧಿ **೧೦** : ೧೨೨.

– ಸುಪ್ರತಿಷ್ಠನ ಜೇಷ್ಠ ಪುತ್ರ **೭೦** : ೫೬.

– ಭದ್ರಿಲನಗರದ ಶ್ರೇಷ್ಠಿ. ಪತ್ನಿ ಅಲಕೆ **೭೧** : ೭೯೦.

**ಸುದರ್ಶನ** – ಆಚಾರ್ಯರು. ಇವರಲ್ಲಿ ಸುಕೇತುರಾಜ ದೀಕ್ಷಿತನಾದ **೫೯** : ೮೨.

– ಧರ್ಮತೀರ್ಥಂಕರರ ಕಾಲದ ಬಲಭದ್ರ **೬೧** : ೫೬, ಸಿಂಹಸೇನ, ವಿಜಯಾದೇವಿಯರ ಪುತ್ರ : ೭೦. ಭವಮಾಲೆ : ನರವೃಷಭ – ದೇವ – ಖಗಪುರದಲ್ಲಿ ಸುದರ್ಶನ (ಬಲಭದ್ರ) **೬೧** : ೮೭.

– ಹಸ್ತಿನಾಪುರದ ರಾಜ. ಪತ್ನಿ ಮಿತ್ರಸೇನಾ, ಪುತ್ರ ಅರ ತೀರ್ಥಂಕರ **೬೫** : ೧೪–೫.

**ಸುದರ್ಶನ** – ದೇವ. ಸುಪ್ರತಿಷ್ಠ ಮುನೀಂದ್ರರಿಗೆ ಉಪಸರ್ಗ ಮಾಡಿದ **೭೦** : ೧೨೩, ಇವನ ಪೂರ್ವ ಕಥೆ : ೧೨೪– ; **೭೦** : ೧೪೩.

– ಯಕ್ಷ. ಚಂದ್ರೋದಯ ಗಿರಿಯ ನಿವಾಸಿ. ಪೂರ್ವಭವದಲ್ಲಿ ನಾಯಿಯಾಗಿದ್ದಾಗ ಸಾಯುವ ಸಮಯದಲ್ಲಿ ಜೀವಂಧರನಿಂದ ಪಂಚನಮಸ್ಕಾರ ಮಂತ್ರ ಪರಿಗ್ರಹಿಸಿದುದರಿಂದ ಯಕ್ಷನಾದ **೭೫** : ೯೧೧.

**ಸುಧರ್ಮ**– ಮಹಾವೀರರ ಗಣಧರ. ಅರ್ಥರೂಪವಾಗಿ ತಿಳಿದ ಪುರಾಣವನ್ನು ಇವರು ಜಂಬೂಸ್ವಾಮಿಗೆ ತಿಳಿಸಿದರು **೧** : ೧೯೯, ಗೌತಮ ಗಣಧರರು ಮುಕ್ತಿ ಹೊಂದಿದಾಗ ಇವರಿಗೆ ಕೇವಲಜ್ಞಾನ ಪ್ರಾಪ್ತಿ ಆಯಿತು **೭೬** : ೧೭೫೭, **೭೪** : ೩೭೩.

– ಮುನಿ. ಇವರಲ್ಲಿ ಶ್ರೀಧರರಾಜ ದೀಕ್ಷೆ ಹೊಂದಿದ **೭** : ೧೬–೧೭.

– ಆಚಾರ್ಯ. ಇವರಲ್ಲಿ ಸುಪ್ರತಿಷ್ಠ ರಾಜಕುಮಾರ ದೀಕ್ಷಿತನಾದ **೭೦** : ೧೪೧.

– ಮುನಿ. ಮಾಂಸಾಸಕ್ತನಾದ ಚಿತ್ರರಥ ದೊರೆ ಇವರಲ್ಲಿ ಆಗಮಶ್ರವಣ ಮಾಡಿ ಮುನಿಯಾದನು **೭೧** : ೨೭೯.

– ಯಕ್ಷ. ಸತ್ಯಕ ಮುನಿಗೆ ಅಗ್ನಿಭೂತಿ, ವಾಯುಭೂತಿಯಿಂದ ಉಂಟಾದ ಉಪಸರ್ಗವನ್ನು ನಿವಾರಿಸಿದನು **೭೧** : ೯೭೬–೮೦.

**ಸುನಂದ** – ಯಕ್ಷ. ಪೀಠಗಿರಿ ನಿವಾಸಿ. ಲಕ್ಷ್ಮಣನಿಗೆ ಸೌನಂದಕ ಎಂಬ ಖಡ್ಗವನ್ನು ನೀಡಿ ಗೌರವಿಸಿದ **೬೮** : ೧೧೨೩–೪.

**ಸುನಂದ, ನಂದಿಷೇಣ** – ಹಸ್ತಿನಾಪುರದ ರಾಜ ಗಂಗದೇವನ ೩ನೇ ಅವಳಿ ಮಕ್ಕಳು **೭೧** : ೭೫೯.

**ಸುನಮಿಕುಮಾರ** – ವಿಜಯಾರ್ಧಗಿರಿಯ ದಕ್ಷಿಣಶ್ರೇಣಿಯ ದೊರೆ ನಮಿಯ ಪುತ್ರ. ಸುಲೋಚನೆಯ ಸ್ವಯಂವರಕ್ಕೆ ಬಂದಿದ್ದ ಕನ್ಯಾರ್ಥಿ **೪೩** : ೩೦೨.

**ಸುಪಾರ್ಶ್ವ** – ಜಿನ. ತಂದೆ ಸುಪ್ರತಿಷ್ಠ. ಕಾಶಿರಾಜ. ತಾಯಿ ಪೃಥವೀಷೇಣಾದೇವಿ **೫೩** : ೨೨, ವೈರಾಗ್ಯ : ೩೮, ನಿರ್ವಾಣ : ೫೪, ಭವಮಾಲೆ : (ಕ್ಷೇಮಪುರದರಾಜ ನಂದಿಷೇಣ – ಅಹಮಿಂದ್ರದೇವ – ಸುಪಾರ್ಶ್ವ) : ೫೬.

**ಸುಪುತ್ರ** – ನಳಿನಪ್ರಭು ರಾಜನ ಮಗ **೫೭** : ೧೨.

**ಸುಪ್ರಭ** – ಅನಂತನಾಥ ತೀರ್ಥಕಾಲದಲ್ಲಿದ್ದ ಬಲಭದ್ರ **೬೦** : ೪೯, ದ್ವಾರವತಿ ರಾಜದಂಪತಿಗಳಾದ ಸೋಮಪ್ರಭ, ಜಯವತಿಯರ ಪುತ್ರ **೬೦** : ೬೩, ಇವನ ಶುಭ್ರತ್ವ : ೬೪, ಮೋಕ್ಷ : ೮೧.

– ಸೋಮಪ್ರಭ ಹಾಗೂ ಅವನ ಹಿರಿಯ ಪತ್ನಿ ಸುದರ್ಶನೆಯರ ಮಗ **೬೭** : ೧೪೨.

**ಸುಪ್ರಭ, ಪುರುಷೋತ್ತಮ** – ಬಲಭದ್ರ ಕೇಶವರು. ವರ್ಣನೆ **೬೦** : ೬೮–೯.

**ಸುಪ್ರತಿಷ್ಠ** – ಕಾಶಿಯ ಮಹಾರಾಜ. ಪತ್ನಿ ಪೃಥವೀಷೇಣಾದೇವಿ. ಸುಪಾರ್ಶ್ವ ತೀ. ರ ತಂದೆ **೫೩** : ೧೯.

**ಸುಪ್ರತಿಷ್ಠ** – ಹಸ್ತಿನಾಪುರದ ಶ್ರೀಚಂದ್ರ, ಶ್ರೀಮತಿಯರ ಪುತ್ರ **೭೦** : ೫೨, ಪತ್ನಿ ಸುನಂದೆ : ೫೩, ಯಶೋಧರ ಮುನಿಗೆ ಆಹಾರದಾನ ಮಾಡಿದುದರಿಂದ ಪಂಚಾಶ್ಚರ್ಯ : ೫೪, ಉಲ್ಕಾಪಾತ ದರ್ಶನದಿಂದ ವೈರಾಗ್ಯ : ೫೬, ಸುಮಂದರ ಜಿನರ ಬಳಿ ದೀಕ್ಷೆ : ೫೭, ತೀರ್ಥಂಕರನಾಮಕರ್ಮದ ಬಂಧ **೭೦** : ೫೯.

– ಒಬ್ಬ ಮುನಿ. ಇವರಲ್ಲಿ ಶೂರವೀರರಾಜ ಧರ್ಮವನ್ನು ಕೇಳಿ, ತನ್ನ ಮಗ ಅಂಧಕವೃಷ್ಟಿಗೆ ಪಟ್ಟಕಟ್ಟಿ ತಪಸ್ವಿಯಾದ **೭೦** : ೧೧೯–೨೧. ಸುದರ್ಶನದೇವನ ಉಪಸರ್ಗ : ೧೨೩, ಕೇವಲಿ : ೧೨೪, ಸುದರ್ಶನನ ವೃತ್ತಾಂತ **೭೦** : ೧೨೫.

– ಪೌದನಪುರದ ರಾಜ ಸುಸ್ಥಿತ ಹಾಗೂ ಸುಲಕ್ಷಣೆಯರ ಮಗ **೭೦** : ೧೩೯, ಇವನ ಪೂರ್ವಭವ ಚರಿತ್ರೆ : ೧೨೭–೩೯, ಅಂಧಕವೃಷ್ಟಿಯ ಪೂರ್ವಭವ ಹೇಳುತ್ತಾರೆ : ೧೪೭–೮೦, ಅಂಧಕವೃಷ್ಟಿಯ ಪತ್ನಿ ಸುಭದ್ರೆ ಹಾಗೂ ಮಕ್ಕಳ ಪೂರ್ವಭವ : ೧೮೭–೧೯೮, ವಸುದೇವನ ಭವ ಪರಂಪರೆ : ೧೯೯.

**ಸುಬಂಧು** – ಚಂಪಾಪುರದ ಧನಿಕ. ಪತ್ನಿ ಧನದೇವಿ. ಪುತ್ರಿ ಸುಕುಮಾರಿ **೭೨** : ೧೨೦೨.

**ಸುಬಾಹು** – ಮತಿವರ ಮಂತ್ರಿ ಸ್ವರ್ಗದಲ್ಲಿ ಅಹಮಿಂದ್ರನಾಗಿದ್ದವನು ಚ್ಯುತನಾಗಿ ವಜ್ರನಾಭಿಯ ಸಹೋದರನಾದನು **೧೧** : ೧೨.

**ಸುಬುದ್ಧಿ** – ಶ್ರೀವಿಜಯನ ಸಚಿವ. ಪೌದನಾಧಿಪತಿಯನ್ನು ರಕ್ಷಿಸುವ ಉಪಾಯ ಸೂಚಿಸಿದನು **೬೨** : ೧೯೯.

**ಸುಭದ್ರ** – ಕ್ಷೇಮನಗರದ ಶ್ರೇಷ್ಠಿ **೭೫** : ೯೫೯, ತನ್ನ ಮಗಳು ಕ್ಷೇಮಸುಂದರಿಯನ್ನು ಜೀವಂಧರನಿಗೆ ಕೊಟ್ಟನು. ಅಲ್ಲದೆ ಸತ್ಯಂಧರನು ಕೊಟ್ಟಿದ್ದ ಬಿಲ್ಲುಬಾಣಗಳನ್ನು ಜೀವಂಧರನಿಗೆ ಕೊಟ್ಟನು : ೯೫೮–೬೫.

**ಸುಭಾನು** – ರಾಜಗೃಹದ ರಾಜ. ಕಂಸನ ಮೈದುನ. ಇವನ ಮಗ ಭಾನು. ಗೋಧಾವನದಲ್ಲಿ ಕೃಷ್ಣನನ್ನು ಕಂಡು, ಇವನು ಸಾಮಾನ್ಯನಲ್ಲವೆಂದು ಭಾವಿಸುತ್ತಾನೆ. ಸರ್ಪಶಯ್ಯೆ ಸಾಧಿಸಲು ಕೃಷ್ಣನನ್ನು ಮಧುರೆಗೆ ಕರೆದೊಯ್ಯುತ್ತಾನೆ **೭೦** : ೪೫೨–೩.

– ಭಾನುದತ್ತ ಶ್ರೇಷ್ಠಿಯ ಸಪ್ತಪುತ್ರರಲ್ಲಿ ಜೇಷ್ಠ. ಈತನು ಮಾಡುವ ಸ್ತ್ರೀನಿಂದೆ **೭೧** : ೭೩೧–೯, ಸಪ್ತವ್ಯಸನಿಯಾಗಿ ಅನಂತರ ಮಂಗಿಕಥನ ಕೇಳಿ ವರಧರ್ಮ ಮುನಿಗಳಲ್ಲಿ ಸಪ್ತ ಸಹೋದರರೊಂದಿಗೆ ದೀಕ್ಷೆ ಹೊಂದಿದನು : ೭೪೦. ಮುಂದಿನ ಜನ್ಮದ ಚಿತ್ರಾಂಗದ **೭೧** : ೭೪೭, ಮುಂದೆ ಶ್ವೇತವಾಹನನಿಗೆ ಶಂಖನೆಂಬ ಮಗನಾಗುತ್ತಾನೆ : ೭೫೮.

– ಸತ್ಯಭಾಮೆಯ ಪುತ್ರ **೭೨** : ೧೧೩೨, ಗಂಧರ್ವಾದಿ ವಿದ್ಯೆಯಲ್ಲಿ ಶಂಭವನಿಗೆ ಸೋತನು : ೧೧೩೪.

**ಸುಭೌಮ** – ಚಕ್ರವರ್ತಿ. ಅರ ತೀರ್ಥಂಕರರ ತೀರ್ಥಕಾಲದಲ್ಲಿದ್ದನು **೬೫** : ೫೧, ಭವಮಾಲೆ : ಅಸಹ್ಯ ತಪಸ್ಸು ಮಾಡಿದ ಭೂಪಾಲರಾಜ – ಮಹಾಶುಕ್ರನಾಕದ ದೇವ – ಸಕಲ ಚಕ್ರವರ್ತಿಯೂ ಜಮದಗ್ನಿ ಪುತ್ರರನ್ನು ಕೊಂದ ಸುಭೌಮ – ನಾರಕಿಯಾದ **೬೫** : ೧೭೩.

– ರಾಜ. ಪಾರ್ಶ್ವನಾಥನ ಸಖಿ. ಮಹೀಪಾಲ ಮತ್ತು ಸುಭೌಮ ಇವರ ನಡುವಿನ ಸಂವಾದ **೭೩** : ೧೦೪–೧೪.

**ಸುಮಂದರ** – ಯತಿ. ಶ್ರೀಚಂದ್ರರಾಜನಿಗೆ ದೀಕ್ಷೆ ನೀಡಿದರು **೭೦** : ೫೩, ಇವರಲ್ಲಿ ಸುಪ್ರತಿಷ್ಠರಾಜ ದೀಕ್ಷಿತನಾದ **೭೦** : ೫೭.

**ಸುಮತಿನಾಥ** – ತೀರ್ಥಂಕರ. ತಂದೆ ಮೇಘರಥ, ತಾಯಿ ಮಗಲಾದೇವಿ **೫೧** : ೨೦–೪. ಭವಮಾಲೆ : ರತಿಷೇಣ – ಅಹಮಿಂದ್ರದೇವ – ಸುಮತಿ ತೀ. : ೮೬.

**ಸುಮತಿ** – ಪುಷ್ಪದಂತರ ಪುತ್ರ **೫೫** : ೪೫.

– ಜ್ವಲನಜಟಿಯ ನಾಲ್ವರು ಸಚಿವರಲ್ಲಿ ಒಬ್ಬ. ಇವನು ಸ್ವಯಂವರ ವಿಧಿ ಸೂಚಿಸಿದನು **೬೨** : ೮೧–೨.

– ಶ್ರೀವಿಜಯನ ಮಂತ್ರಿ. ಪೌದನಾಧಿಪತಿಯನ್ನು ರಕ್ಷಿಸುವ ಉಪಾಯ ಸೂಚಿಸಿದ **೬೨** : ೧೯೮.

– ಕೌಶಂಬಿಯ ಶ್ರೇಷ್ಠಿ. ಪತ್ನಿ ಸುಭದ್ರೆ, ಪುತ್ರಿ 'ಧಾರ್ಮಿಕೆ' **೭೧** : ೯೩೪.

**ಸುಮಿತ್ರ** – ಅಪರಾಜಿತರಾಜನ ಪುತ್ರ **೫೨** : ೧೨.

– ರಾಜಗೃಹದ ರಾಜ. ಜಟ್ಟಿಗಳನ್ನು ಜಯಿಸಿದನು. ದುಷ್ಟಗಜದಂತೆ ಮದಿಸಿದನು **೬೧** : ೫೭–೮. ಭವಮಾಲೆ : ೮೫.

– ಪುಂಡರೀಕಿಣಿಯ ರಾಜ. ಇವನ ಮಗ ಪ್ರಿಯಮಿತ್ರ **೭೪** : ೨೩೬.

– ನಗರಶೋಭೆ ಎಂಬ ನಗರದ ರಾಜ. ಇವನ ಪುತ್ರಿ ಶ್ರೀಚಂದ್ರೆ **೭೫** : ೯೮೮.

**ಸುಮುಖ** – ಅಕಂಪನನ ದೂತ. ಸ್ವಯಂವರ ಸಂದರ್ಭದ ದುರ್ಘಟನೆಯನ್ನು ಭರತಚಕ್ರಿಗೆ ತಿಳಿಸಲು, ಅವನ ಅನುಗ್ರಹ ಪಡೆಯಲು ನಿಯುಕ್ತನಾಗಿದ್ದನು **೪೫** : ೩೫.

– ಕೌಶಂಬಿಯ ಶ್ರೇಷ್ಠಿ **೭೦** : ೬೫, ವೀರದತ್ತ, ವನಮಾಲೆಯರಿಗೆ ಆಶ್ರಯ ನೀಡಿದ : ೬೭, ಪರಪತ್ನಿ ವನಮಾಲೆಯನ್ನು ಸ್ವೀಕರಿಸಿದ : ೬೯.

**ಸುಯೋಧನ** – ಚಾರಣಯುಗಲ ನಗರದ ರಾಜ. ಪತ್ನಿ 'ಅತಿಥಿ' ಪುತ್ರಿ ಸುಲಸೆ **೬೭** : ೨೧೪.

**ಸುರಕೀರ್ತಿ** – ಶಾಂತಿನಾಥರ ಸಮವಸರಣದ ಶ್ರೇಷ್ಠ ಶ್ರಾವಕ **೬೩** : ೧೦೦೫.

**ಸುರಗುರು, ಅಮರಗುರು** – ಚಾರಣಮುನಿಗಳು **೬೩** : ೫೪೩.

**ಸುರಗುರು, ದೇವಗುರು** – ಚಾರಣಮುನಿಗಳು. ಇವರು ಸಮ್ಮೇದಗಿರಿಯಲ್ಲಿ ಸಾಯುತ್ತಿದ್ದ ಕಪಿಗೆ ಪಂಚನಮಸ್ಕಾರವನ್ನು ಉಪದೇಶಿಸಿದರು **೭೦** : ೧೩೭.

**ಸುರದೇವ** – ಜಯಕುಮಾರನ ಶಕುನಜ್ಞಾನಿ **೪೫** : ೧೪೧.

– ಪುಂಡರೀಕಿಣಿಯ ರಾಜ. ಇವನಿಗೆ ನಾಲ್ವರು ಪ್ರಿಯಪತ್ನಿಯರು : ವಸುಷೇಣಾ, ವಸುಂಧರಾ, ಧಾರಿಣೀ, ಪೃಥವೀ. ಇವರಿಗೆ ನಾಲ್ವರು ದಾಸಿಯರು : ಶ್ರೀಮತಿ, ವೀತಶೋಕೆ, ವಿಮಲಾ, ವಸಂತಿಕಾ. ಇವರೆಲ್ಲ ದಾನಾದಿ ಧರ್ಮ ಸ್ವೀಕರಿಸಿ ಸ್ವರ್ಗದಲ್ಲಿ ಜನಿಸಿದರು. ರಾಜ ಸತ್ತು ಪಿಂಗಳನೆಂಬ ತಳವಾರನಾದ **೪೬** : ೩೫೪–೬, ಪಿಂಗಳ ದೀಕ್ಷಿತನಾಗಿ ಸ್ವರ್ಗದ ದೇವನಾದ : ೩೬೦.

**ಸುರಾಷ್ಟ್ರವರ್ಧನ** – ಸುಸೀಮಾದೇವಿಯ ತಂದೆ **೭೧** : ೮೯೪.

**ಸುರೇಂದ್ರದತ್ತ** – ದೊರೆ. ಶಂಭವನಾಥರಿಗೆ ಆಹಾರ ದಾನಮಾಡಿ ಪಂಚಾಶ್ಚರ್ಯ ಹೊಂದಿದ **೪೯** : ೩೯.

– ಅಯೋಧ್ಯೆಯ ಶ್ರೀಮಂತ ವೈಶ್ಯ. ಮಹಾಧರ್ಮಿಷ್ಠ **೭೦** : ೧೪೯, ಜಿನಪೂಜಾದಿ ಕಾರ್ಯಗಳಿಗೆ ಹಣವನ್ನು ರುದ್ರದತ್ತನೆಂಬ ಬ್ರಾಹ್ಮಣನಿಗೆ ಕೊಟ್ಟು ಸಮುದ್ರಯಾನ ಮಾಡುತ್ತಾನೆ : ೧೫೨.

**ಸುವರ್ಣಕುಂಭ** – ಮುನಿ. ಇವರಲ್ಲಿ ಬಲಭದ್ರನಾದ ವಿಜಯನು ದೀಕ್ಷಿತನಾದ **೬೨** : ೧೬೬, ಮುಕ್ತಿ : ೧೬೭.

– ಯೋಗಿ. ಮೊದಲನೇ ಬಲಭದ್ರನಾದ ವಿಜಯನು ದೀಕ್ಷಿತನಾದ **೫೭** : ೯೬.

**ಸುವರ್ಣತಿಲಕ** – ಸಿಂಹಥರನ ಪುತ್ರ **೬೩** : ೭೬೩.

**ಸುವರ್ಣತೇಜ** – ರಾಜಪುರದ ಕನಕತೇಜನ ಮಗ. ದರಿದ್ರನು, ಬುದ್ಧಿಯಿಲ್ಲದವನು. ಆದ್ದರಿಂದಲೇ ಅನುಪಮೆಯನ್ನು ಅವಳ ಮಾತಾಪಿತರು ಕೊಡಲಿಲ್ಲ **೭೫** : ೧೦೦೨, ಹೆಣ್ಣು ಬೆಕ್ಕಿನ ಪರ್ಯಾಯ ಹೊಂದಿದ : ೧೦೦೮, ಅನಂತರ 'ವನರಾಜ'ನಾದ : ೧೦೩೫.

**ಸುವರ್ಣದಾರುಕ** – ಒಬ್ಬ ಮದ್ದಳೆಯವನು ಇವನ ಕತೆಯನ್ನು ಕಳ್ಳ, ಜಂಬುಕುಮಾರನಿಗೆ ಹೇಳುತ್ತಾನೆ **೭೬** : ೧೩೨೯–೩೩.

**ಸುವರ್ಣನಾಭ** – ರಾಜ ಪದ್ಮನಾಭನ ಮಗ **೫೪** : ೧೪೧.

**ಸುವರ್ಣವರ್ಮ** – ಹಿರಣ್ಯವರ್ಮನ ಮಗ **೪೬** : ೨೧೬. ಮುನಿಯಾದ ತನ್ನ ತಂದೆಯನ್ನು ಜೀವಂತ ಸುಟ್ಟು ವಿದ್ಯುಚ್ಚೋರನನ್ನು ವಧಿಸಲು ಪ್ರತಿಜ್ಞೆ ಮಾಡಿದನು. ಅವನ ಕೋಪವನ್ನು ಹೋಗಲಾಡಿಸಲು ಸ್ವರ್ಗದಿಂದ ಅವನ ಪೂರ್ವಭವದ ತಂದೆತಾಯಿಯರು ಪ್ರತಿಗಳ ರೂಪದಲ್ಲಿ ಬಂದು ಬೋಧಿಸಿದರು **೪೬** : ೨೫೨–೫.

– ಕಾಂತಪುರದ ಅಧಿಪತಿ. ಪತ್ನಿ ವಿದ್ಯುಲ್ಲೇಖೆ, ಪುತ್ರ ಮಹಾಬಲ **೭೫** : ೬೩೦.

**ಸುವಿಧಿ** – ಸುದೃಷ್ಟಿರಾಜ, ಸುನಂದೆಯರ ಮಗ. ಪೂರ್ವಭವದ ಶ್ರೀಧರದೇವ **೧೦** : ೧೨೨, ಇವನ ವರ್ಣನೆ : ೧೨೩–೪೩, ಮನೋರಮೆಯೊಡನೆ ವಿವಾಹ : ೧೪೩, ಇವರ ಮಗ ಕೇಶವ (ಪೂರ್ವಭವದ ಶ್ರೀಮತಿ) : ೧೪೫ ಧರ್ಮಾಚರಣೆ : ೧೫೮–೭೯, ಅಚ್ಯುತೇಂದ್ರನಾದ : ೧೭೦. ಉತ್ತರಭವದ ವೃಷಭನಾಥ.

**ಸುವಿನಮಿಕುಮಾರ** – ವಿಜಯಾರ್ಧಗಿರಿ ಉತ್ತರಶ್ರೇಣಿಯ ದೊರೆ ವಿನಮಿಯ ಪುತ್ರ. ಸುಲೋಚನೆಯ ಸ್ವಯಂವರಕ್ಕೆ ಆಗಮಿಸಿದ್ದ ರಾಜ **೪೩** : ೩೦೩.

**ಸುವಿಶಾಲ** – ವೃಷಭನಾಥರ ಗಣಧರ **೪೩** : ೬೪.

**ಸುವೇಗ** – ಅಮಿತತೇಜನ ಪುತ್ರರಲ್ಲಿ ಒಬ್ಬ **೬೨** : ೨೭೦.

**ಸುವ್ರತ** – ಯೋಗಿ. ಇವರಲ್ಲಿ ಸುಷೇಣರಾಜ ದೀಕ್ಷಿತನಾದ **೫೮** : ೭೬.

– ಅರ್ಹತ್ ಪರಮೇಶ್ವರ. ಇವರಲ್ಲಿ ರಾಜ ವಾಯುರಥ ಧರ್ಮಶ್ರವಣ ಮಾಡಿದ **೫೮** : ೮೦.

– ಇವರಲ್ಲಿ ಮಿತ್ರನಂದಿರಾಜ ದೀಕ್ಷಿತನಾದ **೫೯** : ೭೮.

– ರಾಜಗೃಹದ ರಾಜ. ಮಗಧರಾಜ್ಯಾಧಿಪತಿ. ಮುನಿಸುವ್ರತರ ತಂದೆ. ಪತ್ನಿ ಗೋಮಾದೇವಿ **೬೭** : ೨೦–೧.

– ಮುನಿ. ಇವರಲ್ಲಿ ಜಿನದೇವನು ದೀಕ್ಷಿತನಾದ **೭೨** : ೧೨೦೫.

**ಸುಶರ್ಮ** – ಇವನ ಅಪಹೃತ ಗೋವುಗಳನ್ನು ಅರ್ಜುನ ಹಾಗೂ ಉತ್ತರಕುಮಾರ ಹಿಂದಕ್ಕೆ ತರುತ್ತಾರೆ **೭೨** : ೧೧೭೬.

**ಸುಶ್ರುತ** – ಜ್ವಲನಜಟಿಯ ಮಂತ್ರಿ **೬೨** : ೫೭, ರಾಜಕುಮಾರಿಗೆ ವರ (ಅಶ್ವಗ್ರೀವ)ನನ್ನು ಸೂಚಿಸುತ್ತಾನೆ : ೫೮–೬೨.

– ಅಕಂಪನನ ಸಚಿವ **೪೫** : ೮.

**ಸುಷೇಣ** – ಕನಕಪುರಾಧಿಪತಿ. ಇವನ ನರ್ತಕಿ ಗುಣಮಂಜರಿ **೫೮** : ೬೧, ಯುದ್ಧದಲ್ಲಿ ಆದ ಮಾನಭಂಗವೇ ವೈರಾಗ್ಯಕ್ಕೆ ನಿಮಿತ್ತವಾಯಿತು : ೭೫, ನಿದಾನಶಲ್ಯದಿಂದ ಮರಣ : ೭೫–೯.

**ಸುಸ್ಥಿತ** – ಪೌದನಪುರದ ರಾಜ. ಇವನ ಪುತ್ರ ಸುಪ್ರತಿಷ್ಠ **೭೦** : ೧೩೯೪.

– ಗುರು. ಇವರಲ್ಲಿ ಭಗದತ್ತ ದೀಕ್ಷಿತನಾದ **೭೬** : ೧೩೯೪.

**ಸುಸ್ನಿಗ್ಧ** – ನಿರ್ಗ್ರಂಥಮುನಿ. ಸಹಸ್ರಬಾಹುವಿನ ಪಟ್ಟಮಹಿಷಿಯೂ ಗರ್ಭಿಣಿಯೂ ಆದ ಚಿತ್ರಮತಿಯನ್ನು ಶಾಂಡಿಲ್ಯ ತಾಪಸಿ ಇವನ ಆಶ್ರಮದಲ್ಲಿ ಬಿಟ್ಟು ಹೋಗುತ್ತಾನೆ **೬೫** : ೧೧೬, ಬೇಯುತ್ತಿರುವ ಕಜ್ಜಾಯವನ್ನು ತೆಗೆದುಕೊಂಡು ತಿನ್ನುವುದೇ ಚಿತ್ರಮತಿಯ ಮಗ ಚಕ್ರವರ್ತಿಯಾಗುವ ಗುರುತು ಎಂದು ಹೇಳುತ್ತಾನೆ : ೧೨೧–೩.

**ಸೂರ್ಯಪ್ರಭ** – ಸೂರ್ಯಪ್ರಭ ಎಂಬ ನಗರದ ರಾಜ. ಇವನ ರಾಣಿ ಧಾರಿಣಿ **೭೦** : ೨೮.

– ಸೌಧರ್ಮಕಲ್ಪದ ದೇವ. ಪೂರ್ವಭವದ ರಘುರಾಜ. ಅಣುವ್ರತ ಫಲದಿಂದ ದೇವನಾದ. ಪೂರ್ವಜನ್ಮದ ವೈರದಿಂದ ಸಿಂಹಕೇತು, ವಿದ್ಯುನ್ಮಾಲೆಯನ್ನು ಕೊಲ್ಲಲು ಉದ್ಯುಕ್ತನಾಗಿದ್ದ ಮಿತ್ರ ಚಿತ್ರಾಂಗದದೇವನಿಗೆ ಪ್ರತಿಬೋಧಿಸಿದ **೭೦** : ೭೮–೮೨.

– ಸಹಸ್ರಾರಕಲ್ಪದ ದೇವನ ಹೆಸರು. ಪೂರ್ವಭವ : ಮರೀಚಿ – ತ್ರಿ ಪೃಷ್ಠ –ಪ್ರಿಯಮಿತ್ರ – ಸೂರ್ಯಪ್ರಭ **೭೪** : ೨೪೧.

**ಸೂರ್ಯಮಿತ್ರ** – ಜಯಕುಮಾರನ ಪಕ್ಷದ ರಾಜ **೪೪** : ೧೦೬.

**ಸೂರ್ಯಾವರ್ತ** – ಪುಷ್ಕರ ನಗರದ ರಾಜ. ಶ್ರೀಧರೆಯ ಪತಿ **೫೯** : ೨೩೦. ಮುನಿಚಂದ್ರಯತಿಯಿಂದ ಯತಿಧರ್ಮ ಹೊಂದಿದ : ೨೩೧.

**ಸೇವಕ** – ಇವನು ಭವಿಷ್ಯತ್ಕಾಲದ ೧೨ ನೇ ತೀ.ಆಗುವವನು **೭೬** : ೧೭೧೩.

**ಸೋಮ** – ಸಿಂಹಪುರದ ಸಂನ್ಯಾಸಿ. ವಾದದಲ್ಲಿ ಜಿನದಾಸನಿಗೆ ಸೋತನು. ಉತ್ತರಭವದಲ್ಲಿ ಕೋಣ, ಅನಂತರ ರಾಕ್ಷಸನಾದ **೬೨** : ೨೦೨–೩.

– ತಾಪಸ, ಪತ್ನಿ ಶ್ರೀದತ್ತೆ, ಪುತ್ರ ಚಂದ್ರ **೬೩** : ೭೭೭.

– ಲಕ್ಷ್ಮೀಗ್ರಾಮದ ಬ್ರಾಹ್ಮಣ. ಪತ್ನಿ ಲಕ್ಷ್ಮೀಮತಿ **೭೧** : ೮೧೪.

**ಸೋಮದತ್ತ** – ವರ್ಧಮಾನ ನಗರದ ರಾಜ. ಚಂದ್ರಪ್ರಭಸ್ವಾಮಿಗೆ ಆಹಾರದಾನ ಮಾಡಿ ಪಂಚಾಶ್ಚರ್ಯ ಹೊಂದಿದ **೫೨** : ೫೪.

– ನಳಿನಪುರದ ರಾಜ. ಚಂದ್ರಪ್ರಭ ಜಿನರಿಗೆ ಆಹಾರದಾನ ಮಾಡಿ ಪಂಚಾಶ್ಚರ್ಯ ಹೊಂದಿದ **೫೪** : ೨೧೯.

– ಸೋಮದೇವ ಬ್ರಾಹ್ಮಣನ ಮೂವರು ಮಕ್ಕಳಲ್ಲಿ ಒಬ್ಬ. ಪತ್ನಿ ಧನಶ್ರೀ **೭೨** : ೧೧೮೭–೯.

**ಸೋಮದೇವ** – ಶಾಲಿಗ್ರಾಮದ ಬ್ರಾಹ್ಮಣ. ಪತ್ನಿ ಅಗ್ನಿಲೆ. ಪುತ್ರರು ಅಗ್ನಿಭೂತಿ, ವಾಯುಭೂತಿ **೭೨** : ೯೬೨–೩. ಪಾಪಮಾಡಿ ನಾರಕಿಯಾಗಿ, ಅನಂತರ ಕಾಕಜಂಘ(ನೆಂಬ ಮಾದಿಗ)ನಾದ : ೯೧೦, ವ್ಯಂತರದೇವನಾದ : ೯೧೨.

– ಚಂಪಾಪುರದ ಬ್ರಾಹ್ಮಣ. ಇವನ ಮಕ್ಕಳು : ಸೋಮದತ್ತ, ಸೋಮಿಲ, ಸೋಮಭೂತಿ **೭೨** : ೧೧೮೭, ದೀಕ್ಷಿತನಾದ : ೧೧೯೦.

**ಸೋಮಪ್ರಭ** – ಇವನನ್ನು ವೃಷಭನಾಥರು ಸನ್ಮಾನಿಸಿ ಮಹಾಮಂಡಲಿಕ ರಾಜನನ್ನಾಗಿ ಮಾಡಿದರು **೧೬** : ೨೫೬, ಕುರುವಂಶದವರಿಗೆ ಅಧಿರಾಜನಾದ : ೨೫೮.

- ಶ್ರೇಯಾಂಸನ ಅಣ್ಣ. ದೀಕ್ಷಿತನಾಗಿ ಗಣಧರನಾದನು **೨೪** : ೧೭೪.
- ರಾಜ. ಇವನ ಮಕ್ಕಳು ಉತ್ತರ ಭಾರತವನ್ನು ಭರತ ಚಕ್ರವರ್ತಿ ಜಯಿಸುವಾಗ ಸಹಾಯ ಮಾಡಿದರು.
- ಕುರುಜಾಂಗಲ ದೇಶದ ರಾಜ **೪೩** : ೭೭, ಪತ್ನಿ ಲಕ್ಷ್ಮೀಮತಿ : ೭೮, ಪುತ್ರ ಜಯ : ೭೯, ಹದಿನೈದು ಜನ ಮಕ್ಕಳು : ೮೦, ಶ್ರೇಯಾನ್ ಆತನ ಶ್ರೇಷ್ಠ ಸೋದರ : ೮೨.
- ದ್ವಾರವತಿಯ ರಾಜ. ಪತ್ನಿ ಜಯವತಿ. ಪುತ್ರ ಸುಪ್ರಭ **೬೦** : ೬೩.
- ಖಡ್ಗಪುರದ ರಾಜ. ಸುದರ್ಶನೆ, ಸೀತೆ ಇಬ್ಬರು ಪತ್ನಿಯರು **೬೭** : ೧೪೧.

**ಸೋಮಭೂತಿ** – ಸೋಮದೇವ ಬ್ರಾಹ್ಮಣನ ಮೂವರು ಮಕ್ಕಳಲ್ಲಿ ಕೊನೆಯವನು **೭೨** : ೧೧೮೭, ಪತ್ನಿ ನಾಗಶ್ರೀ : ೧೧೮೯.

**ಸೋಮಶರ್ಮ** – ನೈಮಿತ್ತಿಕನ ಮಾವ. ಪತ್ನಿ ಹಿರಣ್ಯಲೋಮೆ **೬೨** : ೧೯೦.

- ದರಿದ್ರ ಬ್ರಾಹ್ಮಣ. ಪಲಾಶಕೂಟ ಗ್ರಾಮದವನು **೭೦** : ೨೦೦.
- ಬ್ರಾಹ್ಮಣ. ಸೋಮಿಲೆ ಹಾಗೂ ದೇವಶರ್ಮ ಇವನ ಮಕ್ಕಳು **೭೫** : ೬೨೨.

**ಸೋಮಿಲ** – ಸೋಮದೇವ ಬ್ರಾಹ್ಮಣನ ಮೂವರು ಮಕ್ಕಳಲ್ಲಿ ಎರಡನೆಯವನು **೭೨** : ೧೧೮೭, ಪತ್ನಿ ಮಿತ್ರಶ್ರೀ : ೧೧೮೯.

**ಸೌಧರ್ಮೇಂದ್ರ** – ಸ್ವರ್ಗದ ಈ ಇಂದ್ರನ ಸಭೆಯಲ್ಲಿ ಶರೀರ ಸೌಂದರ್ಯದ ಚರ್ಚೆ **೬೧** : ೧೧೦–೧೨.

**ಸೌಮ್ಯ** – ರಾಜ. ಇವನ ಆಸ್ಥಾನದಲ್ಲಿ ಅಕಂಪನ ಮುನಿಗೆ ವಿದ್ವತ್ ಸಭೆಯಲ್ಲಿ ಬಲಿ ವಾದದಲ್ಲಿ ಪರಾಜಿತನಾದನು **೭೦** : ೨೮೦.

**ಸ್ತನಿತವೇಗ** – ರಾಗಪುರದ ರಾಜ. ಪತ್ನಿ ಜ್ಯೋತಿರ್ವೇಗೆ. ಪುತ್ರ ಅಶನಿವೇಗ, ಪುತ್ರಿ ವಿದ್ಯುದ್ವೇಗೆ **೪೭** : ೨೯–೩೦.

**ಸ್ವರ್ಣಚೂಲ** – ಕನಕಪ್ರಭ ವಿಮಾನದ ದೇವ **೬೭** : ೧೪೬.

**ಸ್ವಯಂಬುದ್ಧ** – ಮಹಾಬಲನಿಗೆ ಉಪದೇಶಿಸಿದ ಮಂತ್ರಿ **೭** : ೫೫. ಆತ್ಮ ಸ್ವರೂಪವನ್ನು ರಾಜನಿಗೆ ತಿಳಿಸಿದನು **೮** : ೧೮೪. ಮಹಾಬಲನ ಮರಣದ ನಂತರ ದೀಕ್ಷಿತನಾಗಿ ಸೌಧರ್ಮಕಲ್ಪದ ಮಣಿಚೂಲ ದೇವನಾದ **೯** : ೧೦೬.

**ಸ್ವಯಂಭು** – ವಿಮಲನಾಥ ತೀರ್ಥಕಾಲದಲ್ಲಿದ್ದ ಕೇಶವ **೫೯** : ೬೩. ರುದ್ರರಾಜನ ಮತ್ತೊಬ್ಬ ಪತ್ನಿ ಪೃಥವಿಯ ಪುತ್ರ. ಪೂರ್ವಭವದ ಸುಕೇತು : ೮೬, ಪ್ರತಿಕೇಶವನಾದ ಮಧುವನ್ನು ಕೊಂದನು : ೯೭, ನಾರಕಿಯಾದ : ೧೦೦. ಭವಮಾಲೆ : ಸುಕೇತುದೇವ – ಸ್ವಯಂಭು : ೧೦೭.

- ತೀರ್ಥಂಕರ. ಅಶೋಕವನದಲ್ಲಿದ್ದಾಗ ಸಂಜಯಂತ, ಜಯಂತರು ಧರ್ಮ ಶ್ರವಣ ಮಾಡಿ ವಿರಕ್ತರಾದರು **೫೯** : ೧೧೨.
- ಪಾರ್ಶ್ವನಾಥರ ಗಣಧರ **೭೩** : ೧೪೯.

**ಸ್ವಯಂಭೂ** – ಕೇಶವ. ಇವನ ಐಶ್ವರ್ಯವನ್ನು ತಪಸ್ವಿಯಾಗಿದ್ದ ನಿರ್ನಾಮಿಕನು ನೋಡಿ ನಿದಾನಶಲ್ಯದಿಂದ ಸತ್ತು ಕೃಷ್ಣನಾದನು **೭೧** : ೭೯೫.

**ಸ್ವಯಂಪ್ರಭ** – ಇವರಿಂದ ಜಯವರ್ಮ ಮುನಿದೀಕ್ಷೆ ಹೊಂದಿದನು **೫** : ೨೦೮.

- ಜಿನ. ಇವರಲ್ಲಿ ಪ್ರೀತಿಂಕರ ಹಾಗೂ ಪ್ರೀತಿದೇವರು ದೀಕ್ಷಿತರಾಗಿ ತಪಸ್ಸಿನ ಬಲದಿಂದ ಅವಧಿಜ್ಞಾನ ಹಾಗೂ ಗಗನಸಂಚಾರ ಶಕ್ತಿ ಹೊಂದಿದರು **೯** : ೧೧೦.
- ಸ್ವಯಂಪ್ರಭವಿಮಾನದ ದೇವ. ಪೂರ್ವಭವದ ಶ್ರೀಮತ್ಯಾರ್ಯೆ **೯** : ೧೮೬.
- ಜಿನ. ಇವರಲ್ಲಿ ವಿಮಲವಾಹನ ದೀಕ್ಷಿತನಾದ **೪೯** : ೭.
- ತೀರ್ಥೇಶ. ಇವರ ಬಳಿ ಅಜಿತಂಜಯ ಮಹಾರಾಜ ದೀಕ್ಷಿತನಾದ **೫೪** : ೯೪.
- ಜಿನ. ಇವರಲ್ಲಿ ಪದ್ಮರಥ ರಾಜನು ಧರ್ಮವನ್ನು ಆಲಿಸಿದನು **೬೦** : ೬, ಇವರ ಬಳಿ ಸ್ತಿಮಿತಸಾಗರ ಸಂಯಮ ಹೊಂದಿದ **೬೨** : ೪೨೨.

**ಸ್ವಯಂಪ್ರಭ** – ತೀರ್ಥೇಶ್ವರ. ಇವರಲ್ಲಿ ಕನಕಶ್ರೀ ಧರ್ಮವನ್ನು ಕೇಳಿದಳು **೬೨** : ೫೦೫.

- ಒಂದು ದ್ವೀಪದ ವ್ಯಂತರದೇವ **೭೧** : ೯೪೮.
- ಪುಂಡರೀಕಿಣಿ ನಗರದಲ್ಲಿದ್ದ ತೀರ್ಥಂಕರ. ಇವರಲ್ಲಿ ನಾರದ ಅಪಹೃತ ಪ್ರದ್ಯುಮ್ನನ ವಿಚಾರವನ್ನು ತಿಳಿದನು **೭೨** : ೧೦೨೮.

**ಸ್ವಯಂವರ** – ಅಯೋಧ್ಯೆಯ ರಾಜ. ಇಕ್ಷ್ವಾಕು ವಂಶ. ಕಾಶ್ಯಪ ಗೋತ್ರ. ಪತ್ನಿ ಸಿದ್ಧಾರ್ಥೆ **೫೦** : ೧೭. ಅಭಿನಂದನ ತೀ. ರ ತಂದೆ.

**ಸ್ವಾಮಿಹಿತ** – ಆನಂದರಾಜನ ಮಂತ್ರಿ. ಈತನ ಸಲಹೆಯಂತೆ ಅಷ್ಟಾಹ್ನಿಕ ಪೂಜೆಯನ್ನು ನಡೆಸುತ್ತಾನೆ **೭೩** : ೪೪.

**ಸ್ಥೂಣಗಂಧ** – ಇವನನ್ನು ಪಾಂಡವರು ನಾಶಮಾಡಿ ಇಂದ್ರವರ್ಮನನ್ನು ರಾಜ್ಯದಲ್ಲಿ ಕೂಡಿಸಿದರು **೭೨** : ೧೧೬೪.

**ಹಯಗ್ರೀವ** – ಮಯೂರಗ್ರೀವ ರಾಜನ ಪುತ್ರ. ಪೂರ್ವಭವದ ವಿಶಾಖನಂದಿ. ಪ್ರತಿಕೇಶವ **೫೭** : ೮೮ ; **೭೬** : ೧೭೨೭–೯.

**ಹರಿ** – ಇವನನ್ನು ವೃಷಭನಾಥರು ಸನ್ಮಾನಿಸಿ ಮಹಾಮಂಡಲಿಕ ರಾಜನನ್ನಾಗಿ ಮಾಡಿದರು **೧೬** : ೨೫೬, ಇವನು ಹರಿಕಾಂತನೆಂಬ ಹೆಸರಿನಿಂದ ಹರಿವಂಶವನ್ನು ಅಲಂಕರಿಸಿದನು : ೨೫೯.

**ಹರಿಸ್ಮಶ್ರು** – ಅಶ್ವಗ್ರೀವನ ಶಾಸ್ತ್ರಜ್ಞನಾದ ಮಂತ್ರಿ **೬೨** : ೬೧.

**ಹರಿಕಾಂತ** – ಮೂಲ ಹೆಸರು ಹರಿ. ಹರಿವಂಶವನ್ನು ಅಲಂಕರಿಸಿದನು **೧೬** : ೨೫೯. ನೋಡಿ : ಹರಿ.

**ಹರಿಕೇತು** – ಅನಿಲವೇಗ ರಾಜನ ಪುತ್ರ. ಭೋಗವತಿಯ ಸಹೋದರ. ಸಮಸ್ತ ವ್ಯಾಧಿ ನಾಶಮಾಡುವ ವಿದ್ಯೆ ನಿನಗೆ ವಶವಾಗಿದೆ ಎಂದು ಶ್ರೀಪಾಲನಿಗೆ ಹೇಳಿದನು **೪೭** : ೬೨.

**ಹರಿಗಿರಿ** – ಹರಿವಂಶದ ಒಬ್ಬ ರಾಜ **೭೦** : ೯೧.

**ಹರಿಚಂದ್ರ** – ಅರವಿಂದ ವಿದ್ಯಾಧರ ರಾಜನ ಇಬ್ಬರು ಮಕ್ಕಳಲ್ಲಿ ಒಬ್ಬ **೫** : ೯೧.

- ಚಾರಣಮುನಿ. ಇವರಲ್ಲಿ ರಶ್ಮಿವೇಗ ಸಂಯಮ ಧರಿಸಿದ **೫೯** : ೨೩೪.

**ಹರಿಬಲ** – ಅಲಕಾನಗರದ ರಾಜ ಪುರುಬಲನ ಪುತ್ರ. ಪೂರ್ವಭವದಲ್ಲಿ ಬೇಡನಾಗಿದ್ದ. ಮಧುಮಾಂಸ ತ್ಯಾಗದಿಂದ ರಾಜಪುತ್ರನಾದ **೭೧** : ೮೦೮; ಅನಂತವೀರ್ಯ ಯತಿಯಲ್ಲಿ ದ್ರವ್ಯಸಂಯಮ – ಸೌಧರ್ಮಕಲ್ಪ – ಸತ್ಯಭಾಮೆಯಾದ : ೮೧೦.

- ಅಲಕಾನಗರದವನು. ಇವನ ತಮ್ಮಂದಿರು ಮಹಾಸೇನ ಮತ್ತು ಭೂತಿಲಕ. ಶ್ರೀಮತಿಯೆಂಬ ಮತ್ತೊಬ್ಬ ಪತ್ನಿಯ ಮಗ ಹಿರಣ್ಯವರ್ಮ : ೧೫೦೪, ಹಿರಣ್ಯವರ್ಮನಿಗೆ ತನ್ನ ವಿದ್ಯೆಯನ್ನು, ಭೀಮಕನಿಗೆ ಅಲಕಾಪುರವನ್ನು ಕೊಟ್ಟು ದೀಕ್ಷಿತನಾಗಿ ಮುಕ್ತನಾದ : ೧೫೦೯–೧೧.

**ಹರಿವರ್ಮ** – ಬ್ರಾಹ್ಮಣ. ದೃಢಗ್ರಾಹಿ ರಾಜನ ಸ್ನೇಹ **೬೫** : ೬೧, ತಾಪಸ ವ್ರತಗ್ರಹಣ : ೬೩, ಸತ್ತು ಜ್ಯೋತಿರ್‌ಲೋಕದ ದೇವನಾದ : ೬೪, ಸ್ತ್ರೀಕೀಚಕ ಪಕ್ಷಿಯಾಗಿ ಜಮದಗ್ನಿ ರಾಮನ ಗಡ್ಡದ ಗೂಡಿನಲ್ಲಿ ನೆಲಸಿದ : ೬೯.

- ಚಂಪಾಪುರದ ಅಧಿಪತಿ. ಮುನಿಸುವ್ರತ ತೀರ್ಥಂಕರರ ೩ನೇ ಜನ್ಮದ ಹೆಸರು **೬೭** : ೨, ಅನಂತವೀರ್ಯ ಎಂಬ ಅನಗಾರರ ದರ್ಶನ : ೩, ಧರ್ಮೋಪದೇಶ : ೫–೧೦, ದೀಕ್ಷಿತನಾಗಿ ಸತ್ತು ೧೪ನೇ ಸ್ವರ್ಗದ ಇಂದ್ರನಾದ : ೧೫, ಅನಂತರ ಮುನಿಸುವ್ರತನಾದ.

**ಹರಿವರ** – ಕೋಪದಿಂದ ಶ್ರೀಪಾಲನನ್ನು ಮಹಾಕಾಲವೆಂಬ ಗುಹೆಯಲ್ಲಿರಿಸಿದನು **೪೭** : ೧೦೩–೪.

- ಪುರೂರವನ ಪ್ರಿಯಪುತ್ರ. ಪೂರ್ವಭವದ ಸಾಗರದತ್ತ **೪೭** : ೨೨೭.

**ಹರಿವಾಹನ** – ರಾಜ ಮಹಾನಂದ ಹಾಗೂ ವಸಂತಸೇನೆಯ ಮಗ. ಅಪ್ರತ್ಯಾಖ್ಯಾನ ಮಾನಕಷಾಯಕ್ಕೆ ಇವನು ದೃಷ್ಟಾಂತ. ಮೂಳೆಗೆ ಸಮಾನವಾದ ಮಾನವುಳ್ಳವನು. ತಂದೆತಾಯಿಯರ ಆಜ್ಞೆಯನ್ನು ಮೀರಿ ಓಡುತ್ತಾ ಕಲ್ಲಿನ ಕಂಬಕ್ಕೆ ತಲೆ ತಗುಲಿ ಸತ್ತು ಹಂದಿಯಾದ **೮** : ೨೨೭–೮.

**ಹರಿವಿಕ್ರಮ** – ಪ್ರಸಿದ್ಧ ಕಿರಾತ. ವನರಾಜ ಎಂಬುವನು ಇವನ ಪುತ್ರ **೭೫** : ೧೦೨೭.

**ಹರಿಷೇಣ** – ಮುನಿಸುವ್ರತ ತೀರ್ಥಕಾಲದಲ್ಲಿದ್ದ ಚಕ್ರವರ್ತಿ. ಭೋಗಪುರಾಧಿಪತಿ. ಇಕ್ಷ್ವಾಕುವಂಶ. ಪದ್ಮನಾಭ ಮತ್ತು ಐರಾದೇವಿಯರ ಪುತ್ರ **೬೭** : ೬೧–೪. ಅನಂತವೀರ್ಯ ಜಿನರಲ್ಲಿ ಶ್ರಾವಕವ್ರತ : ೬೬. ಚಕ್ರೋತ್ಪತ್ತಿ : ೭೯, ವೈರಾಗ್ಯ : ೮೦–೨, ಶ್ರೀ ನಾಗಜಿನರಲ್ಲಿ ದೀಕ್ಷೆ : ೮೫, ಸರ್ವಾರ್ಥಸಿದ್ಧಿಯ ದೇವನಾದ : ೮೭.

– ಗುರು. ಇವರಲ್ಲಿ ಮಧುಪಿಂಗಲ ದೀಕ್ಷಿತನಾದ **೬೭** : ೨೩೬.

– ನಂದಪುರದ ರಾಜ. ಪತ್ನಿ ಶ್ರೀಕಾಂತೆ. ಪುತ್ರ ಹರಿವಾಹನ. ಧನಶ್ರೀ ಮೈದುನ **೭೧** : ೭೫೧–೨.

– ಅಯೋಧ್ಯೆಯ ರಾಜ. ವಜ್ರಸೇನನ ಪುತ್ರ. ಪೂರ್ವಭವ : ಮರೀಚಿ – ತ್ರಿಪೃಷ್ಠ – ಕನಕೋಜ್ಜ್ವಲ – ಹರಿಷೇಣ **೭೪** : ೨೩೨.

**ಹಲಭೃತ್** – ವೃಷಭನಾಥರ ಗಣಧರ **೪೩** : ೫೬.

**ಹಿಮಗಿರಿ** – ಹರಿವಂಶದ ಒಬ್ಬ ರಾಜ **೭೦** : ೯೧.

**ಹಿಮವದ್ದೇವ** – ಹಿಮವತ್ ಶಿಖರದಲ್ಲಿ ವಾಸನಾಗಿದ್ದ ದೇವ. ಭರತಚಕ್ರಿಗೆ ಕಾಣಿಕೆಯನ್ನು ಅರ್ಪಿಸಿದ **೩೨** : ೯೦.

**ಹಿರಣ್ಯವರ್ಮ** – ಆದಿತ್ಯಗತಿ ಮತ್ತು ಶಶಿಪ್ರಭೆಯರ ರಾಜಪುತ್ರ. ಪೂರ್ವಭವದ ರತಿವರನೆಂಬ ಪಾರಿವಾಳ **೪೬** : ೧೪೬, ಗತಿಯುದ್ಧ ವಿಶಾರದನಾದ ಇವನು ಪ್ರಭಾವತಿಯನ್ನು (ಪೂರ್ವಭವದ ರತಿಷೇಣೆಯನ್ನು) ವಿವಾಹವಾದ : ೧೬೦. ವೈರಾಗ್ಯ : ೧೮೬– ಇವನ ಪೂರ್ವಭವ ತಿಳಿದು ವಿದ್ಯುಚ್ಚೋರನು, ಪ್ರಭಾವತಿ ಆರ್ಯಿಕೆಯೊಡನೆ ಈ ಮುನಿಯನ್ನು ಸುಟ್ಟುಬಿಟ್ಟನು **೪೬** : ೨೪೭–೫೨.

– ಅರಿಷ್ಟನಗರದ ಅಧಿಪತಿ. ಪತ್ನಿ ಪದ್ಮಾವತಿ, ಪುತ್ರಿ ರೋಹಿಣಿ **೭೦** : ೩೦೭. ಕೃಷ್ಣನ ಪತ್ನಿ ಪದ್ಮಾವತಿಯ ತಂದೆ **೭೧** : ೯೫೫.

– ಹರಿಬಲ ವಿದ್ಯಾಧರನ ಎರಡನೇ ಪತ್ನಿಯಾದ ಶ್ರೀಮತಿಯ ಮಗ **೭೬** : ೧೫೦೪.

**ಹಿಮವಾನ್** – ಅಂಧಕವೃಷ್ಣಿಯ ೮ನೇ ಮಗ **೭೦** : ೯೬.

**ಹೇಮಪ್ರಭ** – ಜರಾಸಂಧನ ಪಕ್ಷದ ರಾಜ **೭೧** : ೫೭೬.

**ಹೇಮಾಂಗದ** – ಅಕಂಪನನ ಸಹಸ್ರಪುತ್ರರಲ್ಲಿ ಒಬ್ಬ **೪೩** : ೧೩೪, ೨೦೧, ೨೭೯.

**ಹೇಮಾಭ** – ಪುನ್ನಾಗ ನಗರದ ರಾಜ. ಪತ್ನಿ ಯಶಸ್ವತಿ **೭೧** : ೯೨೯.

## ಸ್ತ್ರೀ ನಾಮ ಸೂಚಿ.

**ಅಂಜನಾದೇವಿ** – ಖೇಚರ ರಾಜ ಪ್ರಭಂಜನನ ಪತ್ನಿ. ಅಮಿತವೇಗನ (ಆಣುಮಂತನ) ತಾಯಿ **೬೮** : ೭೫೦.

**ಅಂಬಿಕಾದೇವಿ** – ಸಿಂಹಸೇನ ರಾಜನ ಪತ್ನಿ, ಪುತ್ರ ಸುಮಿತ್ರ **೬೧** : ೭೦.

**ಅಕ್ಷಮಾಲೆ** – ಅಕಂಪನಮಹಾರಾಜನ ದ್ವಿತೀಯ ಪುತ್ರಿಯಾದ ಲಕ್ಷ್ಮೀಮತಿಯ ಮತ್ತೊಂದು ಹೆಸರು. ಸುಲೋಚನೆಯ ತಂಗಿ **೪೫** : ೨೧, ಅರ್ಕಕೀರ್ತಿ ವಿವಾಹವಾಗುತ್ತಾನೆ : ೨೬–೩೦.

**ಅಗ್ನಿಲೆ** – ಅಗ್ನಿಭೂತಿಯ ಪತ್ನಿ. ಧನಶ್ರೀ, ಮಿತ್ರಶ್ರೀ, ನಾಗಶ್ರೀಯರ ತಾಯಿ **೭೨** : ೧೧೮೮.

**ಅಗ್ನಿಲೆ** – ಸೋಮದೇವ ಬ್ರಾಹ್ಮಣನ ಪತ್ನಿ **೭೨** : ೯೬೨. ಹೆಣ್ಣು ನಾಯಿಯಾದಳು : ೯೯೧. ಸುಪ್ರಬುದ್ಧೆ ರಾಜಕುಮಾರಿಯಾದಳು : ೯೯೩.

**ಅಗ್ನಿಲೆ** – ಧರಣೀಜಟನ ಪತ್ನಿ. ಇಬ್ಬರು ಪುತ್ರರು **೭೨** : ೩೨೪.

**ಅಜಿತಾದೇವಿ** – ರಾಜ ಅಜಿತಂಜಯನ ರಾಣಿ. ಐರಾದೇವಿಯ ತಾಯಿ **೬೩** : ೮೯೫.

**ಅಜಿತಸೇನೆ** – ಅಜಿತಂಜಯ ರಾಜನ ಪತ್ನಿ **೫೪** : ೮೭.

**ಅಟವೀಶ್ರೀ** – ಶಕ್ತಿಷೇಣ ಸಾಮಂತರಾಜನ ಪತ್ನಿ **೪೬** : ೯೬. ಅನುಪ್ರವೃದ್ಧ ಕಲ್ಯಾಣ ಎಂಬ ಉಪವಾಸ ಸ್ವೀಕರಿಸಿದಳು : ೯೯–೧೦೦.

**ಅತಿಥಿ** – ಸುಯೋಧನ ರಾಜನ ಪತ್ನಿ. ಪುತ್ರಿ ಸುಲಸೆ **೬೭** : ೨೧೪.

**ಅತಿರೂಪಾ, ಸುರೂಪಾ** – ದೇವಿಯರು. ಮೇಘರಥರಾಜನನ್ನು ಪರೀಕ್ಷಿಸಲು ಬಂದವರು **೬೩** : ೭೯೬–೮.

**ಅನಂಗಪತಾಕೆ** – ಸತ್ಯಂಧರನ ಇನ್ನೊಬ್ಬ ಪತ್ನಿ. ಇವಳ ಮಗ ವಕುಲ **೭೫** : ೮೦೩.

**ಅನಂಗಪತಾಕೆ** – ವಿದ್ಯುದ್ವೇಗೆಯ ಸಖಿ **೪೭** : ೩೪–೪೧.

**ಅನಂತಮತಿ** – ಭರತಚಕ್ರಿಯ ಪತ್ನಿಯರಲ್ಲಿ ಒಬ್ಬಳು. ಮರೀಚಿಯ ತಾಯಿ **೭೪** : ೫೦–೧.

**ಅನಂತಮತಿ** – ವಜ್ರಜಂಘನ ಪುರೋಹಿತನಾದ ಆನಂದನ ತಾಯಿ **೮** : ೨೧೭.

– ಅನಂತವೀರ್ಯ ರಾಜನ ಇನ್ನೊಬ್ಬ ಪತ್ನಿ. ಇವರ ಮಗ ಮಂದರ **೫೯** : ೩೦೩.

– ಶ್ರೀಕಾಂತೆಯ ಸಾಮಾನ್ಯ ಸ್ತ್ರೀ. ಇವಳ ನಿಮಿತ್ತ ಇಂದ್ರಸೇನ, ಉಪೇಂದ್ರ ಸೇನರಲ್ಲಿ ಯುದ್ಧದ ಪ್ರಯತ್ನ ನಡೆಯಿತು **೬೨** : ೩೫೧–೨. ಈಕೆಯು ನಿಮ್ಮ ತಂಗಿ ಎಂದ ಒಬ್ಬ ಖೇಚರನಿಂದ ಯುದ್ಧ ತಪ್ಪಿತು : ೩೫೭, ಇವಳ ಪೂರ್ವಭವದ ಕಥೆ : ೩೫೮–೭೯.

– ನಂದಿಷೇಣರಾಜನ ಪತ್ನಿ. ವರಸೇನನ ತಾಯಿ **೧೦** : ೧೫೦.

– ಸುವಿಧಿಯ ಮಗನಾದ ಕೇಶವನ ಪೂರ್ವಭವದ ಧನದೇವನ ತಾಯಿ **೧೧** : ೧೪.

**ಅನಂತಮತಿ** – ಅಮಿತವಿಕ್ರಮನ ಪತ್ನಿ. ಧನಶ್ರೀ, ಅನಂತಶ್ರೀಯರ ತಾಯಿ **೬೩** : ೫೨೪.

**ಅನಂತಶ್ರೀ** – ಅಮಿತವಿಕ್ರಮ, ಅನಂತಮತಿಯರ ಪುತ್ರಿ **೬೩** : ೫೨೪.

**ಅನಂತಸೇನೆ** – ಭರತಚಕ್ರಿಯ ಮಗ ಮರೀಚಿಯ ತಾಯಿ **೬೨** : ೮೮.

**ಅನಂತಾರ್ಯೆ** – ಸುಮತಿನಾಥರ ಮುಖ್ಯ ಆರ್ಯಿಕೆ **೫೧** : ೮೧.

**ಅನಿಂದಿತೆ** – ಶ್ರೀಷೇಣನ ಪತ್ನಿ. ಉಪೇಂದ್ರಸೇನನ ತಾಯಿ **೬೨** : ೩೩೮. ಭವಮಾಲೆ : **೬೩** : ೧೧೧೬–೮.

**ಅನಿಲವೇಗೆ** – ಮಹೇಂದ್ರವಿಕ್ರಮನ ಪತ್ನಿ **೬೩** : ೬೧೭.

– ವಿದ್ಯುದ್ದಂಷ್ಟ್ರನ ಪತ್ನಿ. ಸಿಂಹರಥನ ತಾಯಿ **೬೩** : ೭೫೨.

**ಅನುಂದರಿ** – ವಜ್ರಜಂಘನ ತಂಗಿ. ಅಮಿತತೇಜನ ಪತ್ನಿ **೮** : ೩೩, ೨೫೨.

– ವಿಶ್ವದೇವ ರಾಜನ ಪತ್ನಿ. ಪತಿ ಯುದ್ಧದಲ್ಲಿ ಸಾಯುವಾಗ ಈಕೆ ಅಗ್ನಿ ಪ್ರವೇಶ ಮಾಡಿದಳು. ವ್ಯಂತರ ದೇವತೆಯಾದಳು **೭೧** : ೮೮೪–೫.

– ಮಹೇಂದ್ರರಾಜನ ಪತ್ನಿ. ಕನಕಮಾಲೆಯ ತಾಯಿ **೭೧** : ೯೦೨.

– ವಿಶ್ವಭೂತಿ ಪುರೋಹಿತನ ಬ್ರಾಹ್ಮಣಿ **೬೩** : ೮.

**ಅನುಪಮಾ** – ನೋ. ಮತಿಸಾಗರ **೭೫** : ೮೦೩–೧೦.

**ಅನುಪಮೆ** – ರಾಜಪುರದ ಶ್ರೇಷ್ಠಿ ರತ್ನತೇಜನ ಪುತ್ರಿ **೭೫** : ೧೦೦೦, ದರಿದ್ರನೂ ಬುದ್ಧಿಯಿಲ್ಲದವನೂ ಆದ ಸುವರ್ಣತೇಜನಿಗೆ ಇವಳನ್ನು ಕೊಡದೆ, ಗುಣ ಮಿತ್ರನಿಗೆ ಕೊಟ್ಟರು : ೧೦೦೨–೩, ಗುಣಮಿತ್ರ ಸಿಕ್ಕಿದ ಸುಳಿಯಲ್ಲೇ ಇವಳೂ ಬಿದ್ದು ಸತ್ತಳು : ೧೦೦೪.

**ಅನುಮತಾದೇವಿ** – ಸ್ತಿಮಿತಸಾರನ ಪತ್ನಿ. ಅನಂತವೀರ್ಯನ ತಾಯಿ **೬೨** : ೪೧೧.

**ಅಪರಾಜಿತೆ** – ವಿಜಯರಾಜನ ಮಡದಿ **೭೧** : ೯೪೦.

**ಅಮಲೆ** – ವೈಶ್ಯ ಸಾಗರದತ್ತನ ಹೆಂಡತಿ. ವಿಮಲೆಯ ತಾಯಿ **೭೫** : ೧೧೩೬.

**ಅಮಿತಮತಿ, ಅನಂತಮತಿ** – ಆರ್ಯಿಕೆಯರು. ಇವರಲ್ಲಿ ಪ್ರಜಾಪಾಲನ ಪುತ್ರಿಯರಾದ ಗುಣವತಿ, ಯಶಸ್ವತಿಯರು ವ್ರತ ಧರಿಸಿದರು **೪೬** : ೪೭, ೧೩೫.

**ಅಮಿತಮತಿ** – ಸಾಗರಸೇನ ವಣಿಕನ ಪತ್ನಿ **೬೩** : ೭೭೪.

**ಅಮಿತಸೇನೆ** – ಸುಕುಂಡಲಿ ರಾಜನ ಪತ್ನಿ. ಮಣಿಕುಂಡಲಿಯ ತಾಯಿ **೬೨** : ೩೬೦, ಆರ್ಯಿಕೆ : ೩೬೫.

**ಅರ್ಹಸ್ವಾಮಿನಿ** – ಧನದೇವ ಶ್ರೇಷ್ಠಿಯ ಪುತ್ರಿ. ನಾಗದತ್ತನ ತಂಗಿ **೭೫** : ೬೪೬.

**ಅರ್ಹದ್ದಾಸಿ** – ಶಾಂತಿನಾಥರ ಸಮವಸರಣದಲ್ಲಿದ್ದ ಮುಖ್ಯ ಶ್ರಾವಕಿ **೬೩** : ೧೧೦೫.

**ಅಲಕಸುಂದರಿ** – ತಿಲಕಚಂದ್ರಿಕೆಯ ಪುತ್ರಿ. ಶ್ರೀಚಂದ್ರೆಯ ಸಖಿ. ಶ್ರೀಚಂದ್ರೆಯ ಮೂರ್ಛೆಯ ಕಾರಣವನ್ನು ವಿಚಾರಿಸುತ್ತಾಳೆ **೭೫** : ೯೯೩.

**ಅಲಕೆ** – ಭದ್ರಿಲನಗರದಲ್ಲಿದ್ದ ವೈಶ್ಯಪುತ್ರಿ. ಇವಳ ಸತ್ತ ೩ ಜೋಡಿ ಶಿಶುಗಳನ್ನು ನೈಗಮರ್ಷನೆಂಬ ದೇವ, ದೇವಕಿಯ ಹತ್ತಿರ ಇರಿಸಿ, ಅವಳ ಚರಮದೇಹಿ ಶಿಶುಗಳನ್ನು ಕಾಪಾಡುತ್ತಾನೆ **೭೦** : ೩೮೪–೬.

– ಸುದೃಷ್ಟಿ ಶ್ರೇಷ್ಠಿಯ ಪತ್ನಿ. ದೇವಕಿಗೆ ಹುಟ್ಟಿದ ಮೂರು ಅವಳಿ ಮಕ್ಕಳನ್ನು ಪೂರ್ವಭವದ ನಿದಾನಶಲ್ಯದಿಂದ ಸಾಕುತ್ತಾಳೆ. ಹಿಂದಿನ ಜನ್ಮದಲ್ಲಿ ರೇವತಿ ದಾದಿಯಾಗಿದ್ದಳು **೭೧** : ೭೯೦–೩.

**ಅಶೋಕದತ್ತೆ** – ಶ್ರೇಷ್ಠಿ ಧನದೇವನ ಪತ್ನಿ **೭೨** : ೧೨೦೪.

**ಅರ್ಜವೆ** – ವಜ್ರಜಂಘನ ಸೇನಾಪತಿಯಾದ ಅಕಂಪನನ ತಾಯಿ **೮** : ೨೧೬.

**ಆಸುರಿ** – ಇಂದ್ರಾಶನಿಯ ಪತ್ನಿ. ಅಶನಿಘೋಷನ ತಾಯಿ **೬೨** : ೨೭೭. ಸುತಾರೆಯನ್ನು ಶ್ರೀವಿಜಯನಿಗೆ ಅರ್ಪಿಸಿ ಕ್ಷಮೆ ಕೋರಿದಳು : ೨೮೨ – ೩.

**ಇಡುಂಬೆ (ಹಿಡಿಂಬೆ)** – ಭೀಮ ಇವಳನ್ನು ವಿವಾಹವಾದ **೭೨** : ೧೧೬೨.

**ಉತ್ತಮೆ** – ರಾಜ ಧನಪತಿಯ ಪತ್ನಿ. ಇವಳ ಪುತ್ರಿ ಪದ್ಮೋತ್ತಮೆ **೭೫** : ೯೪೦.

**ಉತ್ಪಲಮಾಲೆ** – ರಾಜಾಸ್ಥಾನದ ವೇಶ್ಯೆ. ನಾಟ್ಯಮಾಲಿಕೆಯ ನಾಟ್ಯ ಆಶ್ಚರ್ಯವಾದುದಲ್ಲ ಕುಬೇರಪ್ರಿಯ ಶ್ರೇಷ್ಠಿಯ ಅಚಂಚಲ ಮನಸ್ಸು ಆಶ್ಚರ್ಯವಾದುದು ಎಂದಳು. ರಾಜನಿಂದ ಶೀಲರಕ್ಷಣವೆಂಬ ವರ ಪಡೆದಳು **೪೬** : ೩೦೧–೨.

**ಉದಧಿ** – ದುರ್ಯೋಧನ, ಜಲಧಿಯರ ಪುತ್ರಿ. ಸತ್ಯಭಾಮೆಯ ಪುತ್ರ ಭಾನುಕುಮಾರನಿಗೆ ಕೊಡಲು ನಿಶ್ಚಯವಾಗಿತ್ತು. ಆಗ ಪ್ರದ್ಯುಮ್ನನ ಕೀಟಲೆ ಇತ್ಯಾದಿ **೭೨** : ೧೦೯೩–೧೨೪.

**ಉಮಾದೇವಿ** – ದ್ವಾರಾವತಿಯ ಬ್ರಹ್ಮರಾಜನ ೨ನೇ ಪತ್ನಿ. ದ್ವಿಪೃಷ್ಠನ ತಾಯಿ **೫೮** : ೮೪.

**ಐರಾದೇವಿ** – ಪದ್ಮನಾಭ ರಾಜನ ಪತ್ನಿ. ಹರಿಷೇಣನ ತಾಯಿ **೬೭** : ೬೪.

**ಐರಾದೇವಿ** – ಅಜಿತಂಜಯ, ಅಜಿತಾದೇವಿಯರ ಪುತ್ರಿ. ವಿಶ್ವಸೇನನ ಪತ್ನಿ **೬೩** : ೮೯೫, ಹದಿನಾರು ಸ್ವಪ್ನ : ೮೯೬, ಜಿನಜನನಿ : ೮೯೯, ಶಾಂತಿಜಿನನ ತಾಯಿ.

**ಕನಕಚಿತ್ರೆ** – ಅಶ್ವಗ್ರೀವನ ಪತ್ನಿ **೬೨** : ೬೦, ಇವರಿಗೆ ರತ್ನಗ್ರೀವಾದಿ ೫೦೦ ಮಂದಿ ಮಕ್ಕಳು : ೬೧.

– ಕ್ಷೇಮಂಕರ ರಾಜನ ಪತ್ನಿ. ಇವರ ಪುತ್ರ ವಜ್ರಾಯುಧ **೬೩** : ೫೪೯.

**ಕನಕಪ್ರಭೆ** – ಕನಕರಥನ ಪತ್ನಿ. ಪುತ್ರ ಕನಕಪ್ರಭ **೪೭** : ೧೮೧.

**ಕನಕಮಾಲೆ** – ಪ್ರಜಾಪಾಲನ ಪತ್ನಿ **೪೬** : ೪೯.

– ರಾಜ ಚಕ್ರಧ್ವಜನ ಪತ್ನಿ **೬೨** : ೩೬೩, ಉತ್ತರಭವದಲ್ಲಿ ಸ್ವರ್ಗದಿಂದ ಚ್ಯುತಿಹೊಂದಿ ಮಣಿಕುಂಡಲಿ ಆದಳು : ೩೬೭.

– ಮೇಘವಾಹನನ ಪುತ್ರಿ. ಕನಕಶಾಂತಿಯನ್ನು ಮದುವೆಯಾದಳು **೬೩** : ೬೨೬–೮.

– ಮಹೇಂದ್ರರಾಜನ ಪುತ್ರಿ. ಸ್ವಯಂವರವಿಧಿಯಿಂದ ಹರಿವಾಹನಕುಮಾರನನ್ನು ವರಿಸಿದಳು **೭೧** : ೯೦೩. ಮುಕ್ತಾವಲಿ ಉಪವಾಸವನ್ನು ಆಚರಿಸಿ ಸ್ವರ್ಗದಲ್ಲಿ ಜನಿಸಿದಳು : ೯೦೫.

– ಕನಕರಥರಾಜನ ಪತ್ನಿ. ಇವಳನ್ನು ಮಧುರಾಜನು ವಶಪಡಿಸಿಕೊಂಡನು. ಆಗ ಇವಳ ಪತಿ ತಾಪಸಿಯಾದ **೭೨** : ೧೦೦೧.

– ಕನಕಪುಂಖ ವಿದ್ಯಾಧರರಾಜನ ರಾಣಿ. ಕನಕೋಜ್ವಲನ ತಾಯಿ **೭೪** : ೨೨೨.

– ನೋಡಿ : ಕನಕಶ್ರೀ **೭೬** : ೧೨೮೭.

**ಕನಕಲತೆ, ಪದ್ಮಲತೆ** – ಚಕ್ರಧ್ವಜನ ಪುತ್ರಿಯರು **೬೨** : ೩೬೩. ಉತ್ತರಭವದಲ್ಲಿ ಇಂದ್ರಸೇನ , ಉಪೇಂದ್ರಸೇನರಾದರು : ೩೬೭.

**ಕನಕಲತೆ** – ಶ್ರೀಷೇಣ ಹಾಗೂ ಧನಶ್ರೀಯರ ಪುತ್ರಿ. ಪೂರ್ವಭವದ ಸೋಮಿಲೆ **೭೫** : ೬೩೨. ವಿವಾಹ ಪೂರ್ವದಲ್ಲೇ ಮಹಾಬಲನೊಂದಿಗೆ ದೇಹಸಂಬಂಧ – ದೇಶಾಂತರ – ಮುನಿಗುಪ್ತರಿಗೆ ಆಹಾರದಾನ – ಸತ್ತ ಗಂಡನನ್ನು ನೋಡಿ ಆತ್ಮಹತ್ಯೆ : ೬೩೩–೪೩.

**ಕನಕವತಿ** – ಕನಕೋಜ್ವಲ ವಿದ್ಯಾಧರನ ಪತ್ನಿ **೭೪** : ೨೨೩.

**ಕನಕಶ್ರೀ** – ರಾಜಶ್ರೇಷ್ಠಿ ರತಿವರ್ಮನ ಪತ್ನಿ. ಪುಣ್ಯಹೀನ ಭವದೇವನ ತಾಯಿ **೪೬** : ೧೦೪.

– ದಮಿತಾರಿಯ ಪುತ್ರಿ. ನರ್ತಕಿ ವೇಷದ ಅಪರಾಜಿತ, ಅನಂತವೀರ್ಯರ ಶಿಷ್ಯೆ **೬೨** : ೪೫೫–೬೩. ಅವಳ ಮುಂದೆ ಅನಂತವೀರ್ಯನ ಗುಣಗಾನ : ೪೬೫. ಭಾವಾವಳಿ **೬೨** : ೪೯೨ – ೯೯, ಬಲಭದ್ರ ಕೇಶವರನ್ನು ಪ್ರಾರ್ಥಿಸಿ, ತನ್ನ ಸೋದರರ ಬಂಧವಿಮೋಚನೆ ಮಾಡಿಸಿ ತಾನು ದೀಕ್ಷಿತಳಾದಳು. ಸೌಧರ್ಮಕಲ್ಪದ ದೇವನಾದಳು : ೫೦೪–೬.

– ಕುಬೇರದತ್ತ, ಕನಕಮಾಲೆಯ ಪುತ್ರಿ **೭೬** : ೧೨೮೭, ಜಂಬುಕುಮಾರನ ಪತ್ನಿ : ೧೨೯೦.

**ಕಮಲೆ** – ಚಿತ್ರಮತಿ ಮಂತ್ರಿಯ ಪತ್ನಿ **೫೯** : ೨೫೫.

**ಕಮಲಾವತಿ** – ವಿಮಲಸೇನ ರಾಜನ ಮಗಳು. ಇವಳಿಗೆ ಹಿಡಿದಿದ್ದ ಗ್ರಹವನ್ನು ಶ್ರೀಪಾಲನು ಬಿಡಿಸಿದನು **೪೭** : ೧೧೪.

**ಕಾಂಚನಮಾಲೆ** – ರತಿವೇಗನ ಪತ್ನಿ. ಇವರ ಪುತ್ರಿಯರು – ಕಾಂತೆ, ಸುಕಾಂತೆ, ರತಿಕಾಂತೆ, ಕಾಂತವತಿ **೪೭** : ೧೨೩–೪.

– ಕಾಲಶಂಬರ ವಿದ್ಯಾಧರರಾಜನ ಪತ್ನಿ. ಪ್ರದ್ಯುಮ್ನನ ಸಾಕುತಾಯಿ **೭೨** : ೧೦೧೮. ಪ್ರದ್ಯುಮ್ನನಿಗೆ ಪ್ರಜ್ಞಪ್ತಿವಿದ್ಯೆ ನೀಡಿದಳು : ೧೦೩೭. ಪುರುಷ ಪ್ರತಿಯಾದ ಪ್ರದ್ಯುಮ್ನನ ಬಗ್ಗೆ ಚಾಡಿ : ೧೦೪೨.

**ಕಾಂಚನಲತೆ** – ಪಲಾಶನಗರದ ಮಹಾಬಲರಾಜನ ಪತ್ನಿ. ಪದ್ಮಲತೆಯ ತಾಯಿ **೭೫** : ೬೪೭.

**ಕಾಂಚನಾದೇವಿ** – ಜಯಕುಮಾರನನ್ನು ಪರೀಕ್ಷಿಸಲು ಸ್ವರ್ಗದಿಂದ ಬಂದ ದೇವಿ **೪೭** : ೨೬೧.

**ಕಾಂಚನೆ** – ಮೇಘರಥನ ಕಿರಿಯ ಹೆಂಡತಿ. ಮನೋರಮೆಯ ಸಖಿ. ಕೋಳಿ ಕಾಳಗಕ್ಕೆ 'ವಜ್ರತುಂಡ' ಹೆಸರಿನ ಕೋಳಿಯನ್ನು ಬಿಟ್ಟಳು **೬೩** : ೬೬೩.

**ಕಾಂತವತಿ** – ರತಿವೇಗ ಹಾಗೂ ಕಾಂಚನಮಾಲೆಯರ ಪುತ್ರಿ **೪೭** : ೧೨೩–೪.

**ಕಾಂತೆ** – ರತಿವೇಗ, ಕಾಂಚನಮಾಲೆಯರ ಪುತ್ರಿ **೪೭** : ೧೨೪.

**ಕಾತ್ಯಾಯನಿ** – ನೇಮಿನಾಥರ ಸಮವಸರಣದಲ್ಲಿದ್ದ ೪೦ ಸಾವಿರ ಆರ್ಯಿಕೆಯರಲ್ಲಿ ಒಬ್ಬಳು **೭೧** : ೬೮೩.

**ಕಾಲಿ** – ಗಂಗಾನದಿಯ ಒಬ್ಬ ಜಲದೇವತೆ **೪೩** : ೯೫.

– ಒಬ್ಬ ದೇವಿ (ಕೇರೆಹಾವಿನ ಆತ್ಮ). ಮೊಸಳೆ ಆಕಾರ ಧರಿಸಿ ಜಯಕುಮಾರನ ಆನೆಯನ್ನು ಹಿಡಿದ[illegible] : ೧೪೪.

– ಅಯೋಧ್ಯೆಯ ಬ್ರಾಹ್ಮಣ ಕಪಿಲನ [illegible] ಜಟಿಲನ ತಾಯಿ **೭೪** : ೬೮.

**ಕಾಲಿಕೆ** – ಬೇಡರ ದೊರೆ ಪುರೂರವನ ಪತ್ನಿ **೭೪** : ೧೬.

**ಕಾಲಿಂಗಿ** – ಅಂಧಕವೃಷ್ಟಿಯ ೯ನೇ ಸೊಸೆ. ಅಭಿನಂದನನ ಪತ್ನಿ **೭೦** : ೯೯.

**ಕಾಲಿಂದಸೇನೆ** – ಜರಾಸಂಧನ ಪತ್ನಿ. ಜೀವದ್ಯಶೆಯ ತಾಯಿ **೭೦** : ೩೫೪.

**ಕಾಶ್ಯಪೆ** – ರಾಜ ಅರ್ಹದ್ದಾಸನ ಪತ್ನಿ **೭೨** : ೯೯೮. ಮಧು, ಕ್ರೀಡವರ ತಾಯಿ.

**ಕೀರ್ತಿಮತಿ** – ವರಕೀರ್ತಿರಾಜನ ಪ್ರಿಯಪತ್ನಿ **೪೭** : ೧೪೧.

**ಕುಂತಿ** – ಕರ್ಣನನ್ನು ಪಡೆಯುವುದು **೭೦** : ೧೧೦. ಪಾಂಡುವಿನೊಡನೆ ವಿವಾಹ : ೧೧೫. ರಾತ್ರಿಮತಿ ಆರ್ಯಿಕೆಯಲ್ಲಿ ದೀಕ್ಷಿತಳಾದಳು **೭೨** : ೧೨೨೩–೪.

**ಕುಬೇರದತ್ತೆ** – ಶ್ರೀದತ್ತನ ಪತ್ನಿ. ಕುಬೇರನ ಪುತ್ರಿ. ಈಕೆಯ ರೂಪಾತಿಶಯವನ್ನು ಕೇಳಿ ಚಂದ್ರಚೂಲ ರಾಜಕುಮಾರನು ಈಕೆಯನ್ನು ಸ್ವಾಧೀನಪಡಿಸಿಕೊಳ್ಳಲು ಉದ್ಯುಕ್ತನಾದನು **೬೭** : ೯೩–೯೬.

**ಕುಬೇರಮಿತ್ರೆ** – ಕುಬೇರಮಿತ್ರನ ಸಹೋದರಿ. ಪ್ರಿಯದತ್ತೆಯ ತಾಯಿ **೪೬** : ೪೧.

**ಕುಬೇರಸೇನೆ** – ಅಮಿತಮತಿ, ಅನಂತಮತಿ, ಆರ್ಜಿಕೆಯರ ತಾಯಿ. ದೀಕ್ಷಿತಳಾದಳು **೪೬** : ೧೪೨.

**ಕುಬೇರಶ್ರೀ** – ಕುಬೇರಕಾಂತನ ಮಗಳು **೪೬** : ೨೩೬.

**ಕುಸುಮಶ್ರೀ** – ರಾಜಪುರದ ಪುಷ್ಪದಂತನ ಪತ್ನಿ. ಇವಳ ಮಗನೇ ಜಾತಿಭಟ **೭೫** : ೧೦೭೭.

**ಕೇಶವತಿ** – ಅಗ್ನಿಶಿಖನ ಕಿರಿಯ ಪತ್ನಿ. ದತ್ತನೆಂಬುವನ ತಾಯಿ **೬೬** : ೧೦೭, ಕೇಸರಿ ವಿಕ್ರಮನ ತಂಗಿ : ೧೧೫.

**ಕೈಕೇಯಿ** – ದಶರಥನ ಪತ್ನಿ. ಭರತ ಶತ್ರುಘ್ನರ ತಾಯಿ **೬೭** : ೧೬೫.

**ಕೌಶಕಿ** – ಗೌತಮನ ಪತ್ನಿ. ಅಗ್ನಿಮಿತ್ರನ ತಾಯಿ **೭೪** : ೭೭.

**ಕ್ಷೇಮಸುಂದರಿ** – ಸುಭದ್ರಶ್ರೇಷ್ಠಿಯ ಪುತ್ರಿ. ಇವಳನ್ನು ಜೀವಂಧರ ಶಾಸ್ತ್ರೋಕ್ತವಾಗಿ ವಿವಾಹವಾದ **೭೫** : ೯೬೪.

**ಗಂಧರ್ವದತ್ತೆ** – ಗರುಡವೇಗನ ಪುತ್ರಿ. ಇವಳ ಲಗ್ನದ ಬಗ್ಗೆ ಒಂದು ಸಿದ್ಧಾದೇಶವಿತ್ತು **೭೫** : ೮೫೩–೫. ವೀಣಾಸ್ವಯಂವರದಲ್ಲಿ ಜೀವಂಧರನನ್ನು ವರಿಸಿದಳು : ೮೭೯–೮೮೫.

**ಗಂಗಾ, ಸಿಂಧೂ ದೇವಿಯರು** – **೩೫** : ೭೭.

**ಗಂಗಾದೇವಿ** – ಗಂಗಾನದಿಯ ದೇವಿ. ಭರತಚಕ್ರಿಗೆ ಸನ್ಮಾನಿಸಿದಳು **೩೨** : ೧೬೬.

**ಗಂಗಾಧಿದೇವತೆ** – ದೇವೇಂದ್ರನ ಪತ್ನಿ. ಕಾಲಿದೇವಿಯಿಂದ ಜಯಕುಮಾರನಿಗೆ ಸಂಭವಿಸಿದ ಜಲಕಂಟಕವನ್ನು ನಿವಾರಿಸಿದಳು. ಪೂರ್ವಭವದಲ್ಲಿ ಪಂಚನಮಸ್ಕಾರವನ್ನುಪದೇಶಿಸಿ ಉಪಕರಿಸಿದ ಸುಲೋಚನೆಯನ್ನು ಸನ್ಮಾನಿಸಿದಳು **೪೫** : ೧೪೮–೯, ೧೫೦–೫.

**ಗಾಂಧಾರಿ** – ರತಿಷೇಣನ ಪತ್ನಿ. ಹಾವು ಕಚ್ಚಿತು ಎಂದು ಪುಂಡರೀಕಿಣಿಯಲ್ಲಿದ್ದಳು. ಪತಿ ವಿಷಾಪಹರಣ ಔಷಧ ತರಲು ಹೋದಾಗ, ಕುಬೇರಕಾಂತ ಶ್ರೇಷ್ಠಿಯಲ್ಲಿ ಕಾಮವಿಕಾರ ತೋರಿದಳು **೪೬** : ೨೨೮–೩೨.

**ಗಾಂಧಾರಿ** – ನರಪತಿವೃಷ್ಟಿಯ ಮಗಳು. ಉಗ್ರಸೇನನ ತಂಗಿ **೭೦** : ೧೦೧. ಧೃತರಾಷ್ಟ್ರನ ಪತ್ನಿ : ೧೧೭. ನೂರೊಂದು ಜನ ಮಕ್ಕಳು : ೧೧೭–೮.

– ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩. ತಂದೆ ಇಂದ್ರಗಿರಿರಾಜ. ತಾಯಿ ಮೇರುಮತಿ. ಇವಳ ಭವಪರಂಪರೆ : ವಿನಯಶ್ರೀ – ಉತ್ತರಕುರುವಿನಲ್ಲಿ ಜನನ – ಚಂದ್ರವತೀದೇವಿ – ಸುರೂಪೆ – ಸೌಧರ್ಮಕಲ್ಪದಲ್ಲಿ ಜನನ – ಗಾಂಧಾರಿ **೭೧** : ೯೧೨–೫.

**ಗಗನಸುಂದರಿ** – ಗಗನಚಂದ್ರರಾಜನ ಪತ್ನಿ. ಇವಳ ಮಕ್ಕಳು ಅಮಿತಗತಿ, ಅಮಿತತೇಜ **೭೦** : ೪೦.

**ಗುಣಕಾಂತೆ** – ಪ್ರಜಾಪತಿ ಮಹಾರಾಜನ ಪತ್ನಿ. ಇವಳ ಪುತ್ರ ಚಂದ್ರಚೂಲ **೬೭** : ೯೧.

**ಗುಣದೇವಿ** – ಧರ್ಮಪ್ರಿಯವೈಶ್ಯನ ಹೆಂಡತಿ. ಮಗ ಅರ್ಹದ್ದಾಸ **೭೬** : ೧೩೬೪.

**ಗುಣಮಾಲೆ** – ಕುಮಾರದತ್ತನ ಮಗಳು. ಇವಳ ಸೇವಕಿ ವಿದ್ಯುಲ್ಲತೆ **೭೫** : ೮೯೦.

**ಗುಣಮಂಜರಿ** – ಕನಕಪುರದ ಸುಷೇಣನ ನರ್ತಕಿ **೫೮** : ೬೧–೨.

**ಗುಣಮಾಲೆ** – ಕುಬೇರದತ್ತನ ಮಗಳು. ಇವಳ ಸೇವಕಿ ವಿದ್ಯುಲ್ಲತೆ. ಸೂರ್ಯೋದಯಚೂರ್ಣದ ಶ್ರೇಷ್ಠತೆಯನ್ನು ಸಾರುತ್ತಾಳೆ **೭೫** : ೯೦೦–೨, ಮನುಷ್ಯದ್ವೇಷಿಯಾಗಿದ್ದ ಇವಳನ್ನು ಜೀವಂಧರ ವಶಪಡಿಸಿಕೊಂಡನು **೭೫** : ೧೧೪೨–೪೬.

**ಗುಣವತಿ** – ಪ್ರಜಾಪಾಲರಾಜನ ಪುತ್ರಿ. ಅಮಿತಮತಿ, ಅನಂತಮತಿ ಆರ್ಯಿಕೆಯರ ಬಳಿ ಉತ್ಕೃಷ್ಟ ವ್ರತವನ್ನು ಧರಿಸಿದಳು **೪೬** : ೪೬–೭.

– ಆರ್ಜಿಕೆ. ಇವರಲ್ಲಿ ಹಿರಣ್ಯವರ್ಮನ ತಾಯಿ ಪ್ರಭಾವತಿ, ಶಶಿಪ್ರಭೆಯೊಡನೆ ದೀಕ್ಷಿತಳಾದಳು **೪೬** : ೨೧೯.

**ಗುಣವತಿ** – ಆರ್ಯಿಕೆ. ಇವರಲ್ಲಿ ಯಶೋಧರೆ, ಶ್ರೀಧರೆಯರು ದೀಕ್ಷಿತರಾದರು **೫೯** : ೨೩೨.

– ಆರ್ಯಿಕೆ **೬೨** : ೧೧೯೫.

– ಆರ್ಯಿಕೆ. ಇವರಿಗೆ ಸುವ್ರತ ಆರ್ಯಿಕೆ ಒಂದು ಅರ್ಥಾಖ್ಯಾನವನ್ನು ಹೇಳಿದರು **೭೬** : ೧೪೦೭.

**ಗೋದಾವರಿ** – ಗೋಪೇಂದ್ರನ ಪುತ್ರಿ. ಕಾಲಕೂಟ ಕಿರಾತನನ್ನು ಸೋಲಿಸಿದ ಮೇಲೆ, ಜೀವಂಧರನ ಸೂಚನೆಯಂತೆ ನಂದಾಢ್ಯ ಇವಳನ್ನು ವಿವಾಹವಾದ **೭೫** : ೮೪೦, ೮೪೪.

**ಗೋಪಶ್ರೀ** – ಗೋಪೇಂದ್ರನ ಪತ್ನಿ. ಇವಳ ಪುತ್ರಿ ಗೋದಾವರಿ **೭೫** : ೮೪೦.

**ಗೌತಮಿ** – ಶ್ವೇತಕಿಪುರದ ಅಗ್ನಿಭೂತಿಯ ಪತ್ನಿ. ಅಗ್ನಿಸಹನ ತಾಯಿ **೭೪** : ೭೪.

**ಗೌತಮೆ** – ವೈಶ್ರವಣನ ಪತ್ನಿ. ಇವರ ಪುತ್ರ ಶ್ರೀದತ್ತ **೬೭** : ೯೩.

**ಗೌರಿ** – ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩, ತಂದೆ ವೀತಶೋಕಪುರದ ಮೇರುಚಂದ್ರ, ತಾಯಿ ಚಂದ್ರವತಿ. ಇವಳ ಭವಪರಂಪರೆ : ನಂದಯಶೆ –ಭೋಗಭೂಮಿಜೆ–ದೇವೇಂದ್ರನ ಪತ್ನಿ–ರಾಣಿ ಯಶಸ್ವತಿ–ಸೌಧರ್ಮ ಕಲ್ಪದ ದೇವಿ – ಧಾರ್ಮಿಕೆ – ದೇವಸ್ತ್ರೀ – ಗೌರಿ **೭೧** : ೯೨೬–೩೮.

**ಘೋಷಾರ್ಯೆ** – ಪುಷ್ಪದಂತ ತೀರ್ಥಂಕರರ ಸಭೆಯ ಮುಖ್ಯ ಆರ್ಯಿಕೆ **೫೫** : ೫೬.

**ಚಂದನೆ** – ಚೇಟಕ ಮಹಾರಾಜನ ಸಪ್ತ ಪುತ್ರಿಯರಲ್ಲಿ ಕೊನೆಯವಳು **೭೫** : ೫೫೬, **೭೪** : ೩೩೮, ಒಬ್ಬ ಖೇಚರ ಇವಳನ್ನು ಅಪಹರಿಸಿದ, ಆದರೆ ತನ್ನ ಪತ್ನಿಗೆ ಹೆದರಿ ಕಾಡಿನಲ್ಲಿ ಬಿಟ್ಟುಬಿಟ್ಟ : ೩೩೮, ಬೇಡರವನು ವೈಶ್ಯನಿಗೆ ಮಾರಿದ : ೩೭೯, ಮಹಾವೀರಸ್ವಾಮಿಗೆ ಆಹಾರದಾನ : ೩೪೩–೭, ಪಂಚಾಶ್ಚರ್ಯ ಹೊಂದಿದ ಇವಳನ್ನು ಅಕ್ಕ ಮೃಗಾವತಿ ಗುರುತಿಸಿದಳು. ಮಹಾವೀರಸ್ವಾಮಿಗೆ ವಂದಿಸಲು ಹೋದಾಗ ವಿರಕ್ತಳಾಗಿ, ಗಣಿನಿಯಾದಳು **೭೫** : ೬೧೭, ಇಹದ ಕಥೆ **೭೫** : ೫೮೫–೬೧೭, ಪೂರ್ವಭವದ ಕಥೆ : ೬೨೦–೭೩೧, ಉತ್ತರಭವ : ೭೨೪–೬. ಭವಮಾಲೆ : ಸೋಮಿಲೆ – ಕನಕಲತೆ – ಪದ್ಮಲತೆ – ನಾಕಗತಿ – ಚಂದನೆ **೭೫** : ೭೧೯.

**ಚಂದ್ರಮತಿ** – ರತಿಷೇಣ ರಾಜನ ಪತ್ನಿ, ಚಿತ್ರಾಂಗದನ ತಾಯಿ **೧೦** : ೧೫೧.

**ಚಂದ್ರಮಾಲೆ** – ಕನಕತೇಜ ವೈಶ್ಯನ ಹೆಂಡತಿ. ಮಗ ಸುವರ್ಣತೇಜ **೭೫** : ೧೦೦೧.

**ಚಂದ್ರವತಿ** – ಚಂದ್ರರಾಜನ ಪತ್ನಿ **೭೧** : ೯೧೫.

– ಮೇರುಚಂದ್ರ ರಾಜನ ಮಡದಿ. ಕೃಷ್ಣನ ಪಟ್ಟಮಹಾದೇವಿ ಗೌರಿಯ ತಾಯಿ **೭೧** : ೯೩೬.

**ಚಂದ್ರಾನನೆ** – ಸೋಮಶರ್ಮ, ಹಿರಣ್ಯಲೋಮೆಯ ಪುತ್ರಿ. ನೈಮಿತ್ತಿಕ ಅಮೋಘಜಿಹ್ವೆಯ ಪತ್ನಿ **೬೨** : ೧೯೦.

**ಚಂಪಕತಿಲಕೆ** – ಸುವರ್ಣತಿಲಕೆಯ ದೂತಿ. ವನವಿಹಾರದ ವಿಷಯವನ್ನು ಅಭಯಘೋಷನಿಗೆ ತಿಳಿಸುತ್ತಾಳೆ **೬೩** : ೬೮೩.

**ಚಪಲವೇಗೆ** – ಕೌಶಿಕತಾಪಸನ ಪತ್ನಿ. ಮೃಗಶೃಂಗನ ಮಾತೆ **೬೨** : ೩೭೮.

**ಚಿತ್ರಮತಿ** – ಸಹಸ್ರಬಾಹುವಿನ ಪತ್ನಿ. ಕನ್ಯಾಕುಬ್ಜದ ದೊರೆ ಪಾರತನ ಪುತ್ರಿ **೬೫** : ೫೭–೮, ಶಾಂಡಿಲ್ಯ ತಾಪಸಿಯ ಸಹಾಯದಿಂದ ಸುಸ್ಥಿಗ್ದ ನಿರ್ಗ್ರಂಥಮುನಿಯ ಆಶ್ರಯ ಹೊಂದುತ್ತಾಳೆ. ವನದಲ್ಲಿ ಚಕ್ರವರ್ತಿ ಪುತ್ರನನ್ನು ಹಡೆಯುತ್ತಾಳೆ : ೧೧೫–೯.

**ಚಿತ್ರಮಾಲಿನಿ** – ಪ್ರಭಂಜನರಾಜನ ಪತ್ನಿ. ಪ್ರಶಾಂತಮದನನ ತಾಯಿ **೧೦** : ೧೫೨.

**ಚಿತ್ರಮಾಲೆ** – ಚಕ್ರಾಯುಧನ ಪತ್ನಿ **೫೯** : ೨೪೦.

**ಚಿತ್ರವೇಗೆ** – ವ್ಯಂತರದೇವತೆ. ಪೂರ್ವಭವದಲ್ಲಿ ದಾಸಿಯಾಗಿದ್ದು , ತನ್ನ ಒಡತಿಯೊಡನೆ ಧರ್ಮವನ್ನು ಆಚರಿಸಿದ್ದಳು **೪೬** : ೯೫೫.

**ಚಿತ್ರಸೇನೆ** – ಅಗ್ನಿಭೂತಿಯ ವೈಶ್ಯ ಪತ್ನಿಯಲ್ಲಿ ಜನಿಸಿದವಳು **೭೫** : ೬೨೧, ದೇವಶರ್ಮನ ಪತ್ನಿ : ೬೨೨, ವಿಧವೆ, ಅಣ್ಣನ ಆಶ್ರಯ, ನಿದಾನಶಲ್ಯ : ೬೨೭.

**ಚಿಲಾತಿಕೆ** – ಅಪರಾಜಿತ ಅನಂತವೀರ್ಯರ ಆಸ್ಥಾನದ ನರ್ತಕಿ. ಇವಳ ಸಖಿ ಬರ್ಬರಿ **೬೨** : ೪೨೭.

**ಚೂಡಾದೇವಿ** – ಬ್ರಹ್ಮರಾಜನ ಪತ್ನಿ. ೧೨ನೇ ಚಕ್ರವರ್ತಿ ಬ್ರಹ್ಮದತ್ತನ ತಾಯಿ **೭೨** : ೧೨೪೬.

**ಚೂತಮಂಜರಿ** – ವೈಶ್ರವಣ ವೈಶ್ಯನ ಪತ್ನಿ. ಪುತ್ರಿ ಸುರಮಂಜರಿ **೭೫** : ೮೯೭.

**ಚೇಲಕೆ** – ಕಲ್ಕಿರಾಜನ ಮಗನಾದ ಅಜಿತಂಜಯನ ಪತ್ನಿ **೭೬** : ೧೬೬೮.

**ಚೇಲಿನಿ** – ಚೇಟಕರಾಜನ ಸಪ್ತ ಪುತ್ರಿಯರಲ್ಲಿ ಐದನೆಯವಳು **೭೫** : ೫೫೬, ಕುಟಿಲೆ, ಜ್ಯೇಷ್ಠೆಯನ್ನು ವಂಚಿಸಿ ಶ್ರೇಣಿಕನನ್ನು ಸೇರಿದಳು **೭೫** : ೫೭೯–೮೧.

**ಜಂಬಾವತಿ** – ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩.

**ಜಂಬುಷೇಣೆ** – ಜಾಂಬವರಾಜನ ಪತ್ನಿ. ಜಾಂಬವತಿಯ ತಾಯಿ **೭೧** : ೮೬೬.

**ಜಂಬೂ** – ರತ್ನಪುರದ ಸತ್ಯಕನ ಪತ್ನಿ **೬೨** : ೩೨೭.

**ಜಯದತ್ತೆ** – ಧನಂಜಯನ ಪುತ್ರಿ, ಸರ್ವದಯಿತನ ದ್ವಿತೀಯ ಪತ್ನಿ **೪೭** : ೧೯೪.

**ಜಯದೇವಿ** – ಕನಕಪುಂಖನ ಪತ್ನಿ **೬೨** : ೪೮೬.
 – ಶಂಖಮಹಾರಾಜನ ಮಡದಿ **೬೩** : ೬೮೧.

**ಜಯಭಾಮೆ** – ಜಯಧಾಮನ ಪತ್ನಿ. ಉತ್ತರಭವದ ಶ್ರೀಪಾಲನ ಪಟ್ಟಮಹಿಷಿಯಾದ ಜಯವತಿ **೪೭** : ೨೧೦, ಸಾಕು ಮಗ ಜಿತಶತ್ರು : ೨೧೧.

**ಜಯರಾಮಾದೇವಿ** – ಕಾಕನಂದಿ ನಗರಾಧೀಶನಾದ ಸುಗ್ರೀವನ ಪತ್ನಿ. ಪುಷ್ಪದಂತ ಜಿನರ ಜನನಿ **೫೫** : ೨೪.

**ಜಯವತಿ** – ಶ್ರೀಪುರದ ರಾಜ ಶ್ರೀಧರನ ಪುತ್ರಿ. ಜನಿಸಿದಾಗ ಚಕ್ರವರ್ತಿಯ ಪಟ್ಟಮಹಿಷಿಯಾಗುವಳೆಂದು ಬುಧರು ತಿಳಿಸಿದ್ದರು **೪೭** : ೧೫, ಶ್ರೀಪಾಲನ ೮೪ ಇಷ್ಟ ರಾಣಿಯರಲ್ಲಿ ಮೊದಲನೆಯವಳು. ಇವಳ ಮಗ ಗುಣಪಾಲ **೪೭** : ೧೭೨, ಇವಳ ಸಹೋದರ ಜಯವರ್ಮ : ೧೭೪; ಪೂರ್ವಭವದ ಜಯಭಾಮೆ **೪೭** : ೨೨೪–೫.
 – ರಾಜ ಪ್ರಜಾಪತಿಯ ಮತ್ತೊಬ್ಬ ರಾಣಿ. ಮಗ ವಿಜಯ **೫೭** : ೮೬.
 – ಸೋಮಪ್ರಭ ರಾಜನ ಪತ್ನಿ. ಸುಪ್ರಭನ ತಾಯಿ **೬೦** : ೬೩.
 – ಉಗ್ರಸೇನ ರಾಜನ ಪತ್ನಿ. ರಾಜಮತಿಯ ತಾಯಿ **೭೧** : ೬೪೨.

**ಜಯಶ್ಯಾಮಾದೇವಿ** – ಕೃತವರ್ಮನ ಮಹಾದೇವಿ **೫೯** : ೧೫, ವಿಮಲ ತೀರ್ಥಂಕರರ ಜನನಿ **೬೦** : ೧೭, ಸಿಂಹಸೇನ ರಾಜನ ಪತ್ನಿ.

**ಜಯಸೇನಾದೇವಿ** – ಧನಂಜಯನ ರಾಣಿ. ಅತಿಬಲನ ತಾಯಿ **೭** : ೮೨.

**ಜಯಸೇನೆ** – ಜಯವರ್ಮನ ಪುತ್ರಿ **೪೭** : ೧೭೪; ಶ್ರೀಪಾಲನ ಮಗ ಗುಣಪಾಲನನ್ನು ವರಿಸಿದಳು : ೧೭೫.
 – ಸಾಗರಸೇನನ ಪುತ್ರಿ. ಸರ್ವದಯಿತನ ಪ್ರಿಯಪತ್ನಿ **೪೭** : ೧೯೪.
 – ಸಮುದ್ರಸೇನ ರಾಜನ ಮಡದಿ **೬೩** : ೬೨೯.

**ಜಯಾವತಿ** – ಪೌದನಪುರದ ರಾಜ ಪ್ರಜಾಪತಿಯ ಪತ್ನಿ. ವಿಜಯನ ತಾಯಿ **೭೪** : ೧೨೦; ನೋಡಿ : ವಿಜಯಮತಿ **೭೫** : ೮೦೩–೧೦.
 – ಜಯಂಧರ ರಾಜನ ಪತ್ನಿ. ಪುತ್ರ ಜಯದ್ರಥ **೭೫** : ೧೦೮೩.

**ಜಯಾವತಿ** – ವಸುಪೂಜ್ಯನ ರಾಣಿ. ವಾಸುಪೂಜ್ಯ ಜಿನನ ಜನನಿ **೫೮** : ೧೮.

**ಜಲಧಿ** – ದುರ್ಯೋಧನನ ಪತ್ನಿ. ಉದಧಿಯ ತಾಯಿ **೭೨** : ೧೦೯೩.

**ಜಾಂಬವತಿ** – ಜಾಂಬವರಾಜನ ಪುತ್ರಿ. ಕೃಷ್ಣನ ಪತ್ನಿ **೭೧** : ೮೬೬, ಭವಮಾಲೆ : ದೇವಿಲೆ – ವ್ಯಂತರದೇವಿ – ಬಂಧುಯಶೆ – ಕುಬೇರನ ಪತ್ನಿ – ಸುಮತಿ – ಜಾಂಬವತಿ : ೮೫೬–೭೯.

**ಜಾನಕಿ** – ನೋಡಿ : ಸೀತೆ.

**ಜಿನದತ್ತಾರ್ಯಿಕೆ** – ಇವರಲ್ಲಿ ಭಾನುದತ್ತ ಶ್ರೇಷ್ಠಿಯ ಪತ್ನಿ ಯಮುನಾದತ್ತೆ ದೀಕ್ಷಿತಳಾದಳು **೭೧** : ೭೦೩.

**ಜಿನದತ್ತೆ** – ಅಶೋಕದೇವನ ಪತ್ನಿ. ಸುಕಾಂತನ ತಾಯಿ **೪೬** : ೧೦೬.
 – ರಾಜ ಅರ್ಹದ್ದಾಸನ ಪತ್ನಿ. ಪುತ್ರ ವಿಭೀಷಣ **೫೯** : ೨೭೮.
 – ಸಿಂಹಪುರದ ಅರ್ಹದ್ದಾಸನ ಪತ್ನಿ. ಪುತ್ರಪ್ರಾಪ್ತಿಗಾಗಿ ಅಷ್ಟಾಹ್ನಿಕ ಮಹಾ ಪೂಜೆ **೭೦** : ೭, ಸ್ವಪ್ನ : ೮, ಮಗ ಅಪರಾಜಿತ : ೧೦.

**ಜಿನದತ್ತೆ** – ಜಿನದೇವನ ಪುತ್ರಿ. ಬಂಧುಯಶೆಯ ಸಖಿ. ವ್ರತಾಚರಣೆಯಲ್ಲಿ ಆಕೆಯ ಸಂಗಾತಿ **೭೧** : ೮೬೨
 – ವಾರಾಣಸಿಯ ವೈಶ್ಯ ಧನದೇವನ ಪತ್ನಿ **೭೬** : ೧೫೫೯.

**ಜಿನದಾಸಿ** – ಅರ್ಹದ್ದಾಸನ ಪತ್ನಿ. ಜಂಬೂಕುಮಾರನ ಜನನಿ **೭೬** : ೧೨೭೬.

**ಜಿನಮತಿ** – ಆರ್ಯಿಕೆ **೭೧** : ೯೩೫.

**ಜೀವದ್ಯಶೆ** – ಜರಾಸಂಧ, ಕಾಲಿಂದಿಸೇನೆಯರ ಪುತ್ರಿ. ಶತ್ರು ಸಿಂಹರಥನನ್ನು ಯುದ್ಧದಲ್ಲಿ ಜಯಿಸಿದ ವೀರನಿಗೆ ಇವಳನ್ನು ಕೊಡುವ ಘೋಷಣೆ **೭೦** : ೩೫೪ ಕಂಸನ ಪತ್ನಿ : ೩೬೬, ಕಂಸನ ವಧೆಯ ನಂತರ ಜರಾಸಂಧನಲ್ಲಿಗೆ ಹೋಗಿ ಯಾದವರ ವಿರುದ್ಧ ದಂಡೆತ್ತಿ ಹೋಗುವಂತೆ ಮಾಡಿದಳು **೭೧** : ೫೦೪.

**ಜೈನಿ** – ವಿಶ್ವವಿಭೂತಿಯ ರಾಣಿ. ಮಗ ವಿಶ್ವನಂದಿ **೫೭** : ೭೨; **೭೪** : ೮೬.

**ಜ್ಯೇಷ್ಠಾ** – ಧನದತ್ತನ ಮಗಳು **೭೦** : ೧೮೬.
 – ಚೇಟಕನ ಸಪ್ತಪುತ್ರಿಯರಲ್ಲಿ ಆರನೆಯವಳು **೭೬** : ೫೫೬, ಚೇಲಿನಿಯಿಂದ ವಂಚಿತಳಾಗಿ ದೀಕ್ಷಿತಳಾದಳು : ೫೮೦–೧.

**ಜ್ಯೋತಿರ್ಮಾಲೆ** – ರಾಜ ಪುರುಬಲನ ಪತ್ನಿ **೭೧** : ೮೦೮.

**ಜ್ಯೋತಿರ್ವೇಗೆ** – ಸ್ತನಿತವೇಗ ರಾಜನ ಪತ್ನಿ. ಅಶನಿವೇಗ ಖೇಚರರಾಜನ ತಾಯಿ **೪೭** : ೨೯.

**ಜ್ಯೋತಿಷ್ಪ್ರಭೆ** – ತ್ರಿಪೃಷ್ಠನ ಮಗಳು **೬೨** : ೧೫೧. ಭವಮಾಲೆ : ಸಿಂಹನಂದಿತೆ – ಆರ್ಯೆ – ವಿದ್ಯುತ್ಪ್ರಭಾದೇವಿ – ಜ್ಯೋತಿಷ್‌ಪ್ರಭೆ : ೩೭೨–೭.

**ತಿಲೋತ್ತಮೆ** – ವಜ್ರಾಯುಧ ಮುನಿಯನ್ನು ರಂಭೆ, ತಿಲೋತ್ತಮೆಯರು ಗಂಧಾದಿಗಳಿಂದ ಪೂಜಿಸಿದರು **೬೩** : ೬೪೭.

**ದಾಂತಮತಿ, ಹಿರಣ್ಯಮತಿ** – ಆರ್ಯಿಕೆಯರು. ಇವರಲ್ಲಿ ರಾಮದತ್ತೆ ಸಂಯಮ ಧರಿಸಿದಳು **೫೯** : ೨೦೦.

**ದುಷ್ಟಖೇಚರಿ** – ಮನೋಹರಪುರದ ಶ್ಮಶಾನದಲ್ಲಿ ಇವಳು ತನ್ನ ಪುತ್ರಿಯನ್ನು ಸುಪ್ರೀತಗೊಳಿಸಲು ಅಳಿಯನನ್ನು ನಾಯಿಯನ್ನಾಗಿ ಮಾಡಿ ಮಗಳ ಎರಡು ಕಾಲುಗಳ ಸುತ್ತಲೂ ಹೊರಳಾಡುವಂತೆ ಮಾಡಿದಳು **೪೭** : ೫೫–೭.

**ದೃಢರಥೆ** – ದ್ರುಪದನ ಪತ್ನಿ. ದ್ರೌಪದಿಯ ತಾಯಿ **೭೨** : ೧೧೫೭, ೧೨೨೨.

**ದೇವಕಿ** – ದೇವಸೇನನ ಪುತ್ರಿ. ವಾವೆಯಲ್ಲಿ ಕಂಸನ ತಂಗಿ. ಕಂಸ ಇವಳನ್ನು ವಸುದೇವನಿಗೆ ಕೊಟ್ಟು ಲಗ್ನಮಾಡಿಸಿದ **೭೦** : ೩೬೯, ಭಿಕ್ಷೆಗೆ ಬಂದವರಲ್ಲಿ ಬಾಂಧವರಂತೆ ಪ್ರೀತಿಯುಂಟಾಗಲು ಕಾರಣವೇನು ? ಎಂದು ವರದತ್ತ ಗಣಧರರಲ್ಲಿ ಪ್ರಶ್ನಿಸಿದಳು **೭೧** : ೬೯೭, ದಶಾರ್ಣವಪುರದ ದೇವಸೇನ, ಧನದೇವಿಯ ಪುತ್ರಿ. ನಿದಾನಶಲ್ಯೆಯಿಂದ ಜನಿಸಿದ ನಂದಯಶೆ **೭೧** : ೭೮೯.

**ದೇವಮತಿ** – ದಮಕನೆಂಬ ವೈಶ್ಯನ ಪತ್ನಿ. ಪುತ್ರಿ ದೇವಿಲೆ **೭೧** : ೮೫೮.

**ದೇವಿಶ್ರೀ** – ಶೋಭಾ ನಗರದ ಪ್ರಜಾಪಾಲ ದೊರೆಯ ಪತ್ನಿ **೪೬** : ೯೫.
 – ಶ್ರೀಪಾಲನ ದೊಡ್ಡಮ್ಮ. ಯಕ್ಷಿಯಾದಳು. ಕಷ್ಟಕಾಲದಲ್ಲಿ ಶ್ರೀಪಾಲನಿಗೆ ಸಹಾಯ ಮಾಡಿದಳು **೪೭** : ೧೫೩–೪.
 – ಸರ್ವಸಮೃದ್ಧ ವರ್ತಕನ ತಂಗಿ. ಪತಿ ಸಾಗರಸೇನ. ಮಕ್ಕಳು ಸಾಗರದತ್ತ, ಸಮುದ್ರದತ್ತ ಹಾಗೂ ಸಾಗರದತ್ತೆ **೪೭** : ೧೯೫–೬.

**ದೇವಸೇನೆ** – ಯಕ್ಷ ಎಂಬ ಗೃಹಸ್ಥನ ಪತ್ನಿ **೭೧** : ೮೮೭.

**ದೇವಿಲೆ** – ದಮಕನ ಪುತ್ರಿ. ವಸುಮಿತ್ರನ ಪತ್ನಿ. ವಿಧವೆಯಾದಳು. ವಿರಕ್ತಳಾಗಿ ಸತ್ತು ವ್ಯಂತರದೇವಿಯಾದಳು **೭೧** : ೮೫೮–೯.
 – ಶಾಲ್ಮಲಿ ಗ್ರಾಮದ ವಿಜಯದೇವನ ಪತ್ನಿ **೭೧** : ೯೪೪.
 – ಚಂದ್ರದತ್ತ ರಾಜನ ಪತ್ನಿ **೭೨** : ೧೧೬೩.

**ದ್ರೌಪದಿ** – ಕಾಂಪಿಲ್ಯ ನಗರದ ದೊರೆ ದ್ರುಪದನ ಸುತೆ. ಇವಳ ತಾಯಿ ದೃಢರಥೆ. **೭೨** : ೧೧೫೭. ಭವಮಾಲೆ : ನಾಗಶ್ರೀ – ನಾರಕಿ – ಸರ್ಪ – ನಾರಕಿ – ತ್ರಸಸ್ಥಾವರ ಜೀವಿ – ಮಾತಂಗಿ – ದುರ್ಗಂಧಯುಕ್ತಳಾದ ಸುಕುಮಾರಿ – ಅಚ್ಯುತಕಲ್ಪದ ದೇವ – ದ್ರೌಪದಿ **೭೨** : ೧೨೨೨, ದೀಕ್ಷೆ : ೧೨೨೩.

**ಧನದತ್ತೆ** – ವಜ್ರಜಂಘನ ರಾಜಶ್ರೇಷ್ಠಿಯಾದ ಧನಮಿತ್ರನ ತಾಯಿ **೮** : ೨೧೮.

**ಧನಮಿತ್ರೆ** - ಕುಬೇರದತ್ತನ ಪತ್ನಿ. ಮಗ ಚರಮದೇಹಿಯಾದ ಪ್ರೀತಿಂಕರ **೭೬** : ೧೪೭೭.

– ಧನದೇವನ ಶ್ರೇಷ್ಠಿನಿ. ಮಗ ಧನದತ್ತ. **೭೫** : ೬೪೫, ಮಗಳು ಅರ್ಥಸ್ವಾಮಿನಿ : ೬೪೬, ಪತಿಯಿಂದ ಪರಿತ್ಯಕ್ತಳು : ೬೪೮, ಶೀಲದತ್ತ ಗುರುವಿನಲ್ಲಿ ಶ್ರಾವಕವ್ರತ : ೬೪೯.

**ಧನವತಿ** – ಸಾಗರದತ್ತ ಶ್ರೇಷ್ಠಿಯ ಪತ್ನಿ **೮** : ೨೨೩, ಉಗ್ರಸೇನನ ತಾಯಿ.

– ಕುಬೇರಮಿತ್ರನ ೩೨ ಜನ ಪತ್ನಿಯರಲ್ಲಿ ಒಬ್ಬಳು **೪೬** : ೨೧.

**ಧನಶ್ರೀ** – ದೇವಿಲ, ಸುಮತಿಯರ ಪುತ್ರಿ. ಪೂರ್ವಭವದ ನಿರ್ನಾಮೆ. ಮುನಿಗಳ ಶಾಸ್ತ್ರಸ್ವಾಧ್ಯಾಯಕ್ಕೆ ವಿಘ್ನವುಂಟು ಮಾಡುವುದರಿಂದ ಮುಂದೆ ದಾರಿದ್ರ್ಯ ಕುಲದಲ್ಲಿ ಜನಿಸುತ್ತಾಳೆ **೬** : ೧೩೫–೯.

– ಸರ್ವಸಮೃದ್ಧನ ಪತ್ನಿ. ಧನಂಜಯನ ತಂಗಿ **೪೭** : ೧೯೨, ಮಗ ಸರ್ವದಯಿತ : ೧೯೩.

– ಧನಂಜಯ, ಸರ್ವಶ್ರೀಗಳ ಪುತ್ರಿ **೭೧** : ೭೫೦, ಸ್ವಯಂವರದಲ್ಲಿ ಹರಿವಾಹನನನ್ನು ವರಿಸಿದಳು. ಈ ಹರಿವಾಹನನನ್ನು ಕೊಂದ ಚಕ್ರ ವರ್ತಿಯ ಮಗನಿಗೆ ವಶವಾದಳು : ೭೫೪.

**ಧನಶ್ರೀ, ಅನಂತಶ್ರೀ** – ಅಮಿತವಿಕ್ರಮ, ಅನಂತಮತಿಯರ ಪುತ್ರಿಯರು **೬೩** : ೫೨೪, ನಂದಯಶೆಯ ದರ್ಶನ, ವ್ರತಸ್ಥರು : ೫೨೫, ಅಪಹರಣ, ಸಮಾಧಿ ಮರಣ : ೫೨೮.

**ಧನಶ್ರೀ** – ಅಗ್ನಿಭೂತಿ, ಅಗ್ನಿಲೆಯರ ಪುತ್ರಿ **೭೨** : ೧೧೮೮, ಸೋಮದತ್ತನ ಪತ್ನಿ : ೧೧೮೯.

– ಶ್ರೀಷೇಣರಾಜನ ಪತ್ನಿ. ಸುವರ್ಣವರ್ಮ ರಾಜನ ಸೋದರಿ **೭೫** : ೬೩೧.

– ನೋ. ರೂಪಶ್ರೀ **೭೬** : ೧೨೮೮.

**ಧನದೇವಿ** – ದೇವಸೇನನ ರಾಣಿ. ದೇವಕಿಯ ತಾಯಿ **೭೧** : ೭೮೯.

– ಧನಿಕ ಸುಬಂಧುವಿನ ಪತ್ನಿ. ಸುಕುಮಾರಿಯ ತಾಯಿ **೭೨** : ೧೨೦೨.

**ಧರ್ಮಾರ್ಯೆ** – ಶಂಭವ ತೀರ್ಥಂಕರರ ಮುಖ್ಯ ಆರ್ಯಿಕೆ **೪೯** : ೫೪.

**ಧಾರ್ಮಿಕಿ** – ಸುಮತಿ ಶ್ರೇಷ್ಠಿಯ ಪುತ್ರಿ **೭೧** : ೯೩೪.

**ಧಾರಣಾ** – ಶೀತಲ ತೀರ್ಥಂಕರರ ಮುಖ್ಯ ಆರ್ಯಿಕೆ **೫೬** : ೫೪.

– ಶ್ರೇಯಾಂಸನಾಥರ ಮುಖ್ಯ ಆರ್ಯಿಕೆ **೫೭** : ೫೮.

**ಧಾರುಣಿ** – ವಜ್ರಾಯುಧನ ಪತ್ನಿ **೬೩** : ೫೯೧.

– ಸ್ವಯಂಪ್ರಭರಾಜನ ಮಡದಿ. ಪುತ್ರರು : ಚಿಂತಾಗತಿ, ಮನೋಗತಿ ಮತ್ತು ಚಪಲಗತಿ **೭೦** : ೨೭.

– ಶೂರವೀರನ ಪತ್ನಿ **೭೦** : ೯೪.

– ನೋಡಿ ಗರುಡವೇಗ **೭೫** : ೮೫೨.

– ಅಲಕಾನಗರದ ಹರಿಬಲನ ಪತ್ನಿ. ಮಗ ಭೀಮಕ **೭೬** : ೧೫೦೩.

**ಧೃತಿಷೇಣೆ** – ಗರುಡವೇಗನ ಪತ್ನಿ **೬೩** : ೬೭೬.

**ಧೃತೀಶ್ವರಾದೇವಿ** – ಅಂಧಕವೃಷ್ಟಿ ರಾಜನ ೨ನೇ ಸೊಸೆ. ಅಕ್ಷೋಭ್ಯನ ಪತ್ನಿ **೭೦** : ೯೮.

**ನಂದಗೋಪಿ** – ಕೃಷ್ಣನ ತಾಯಿ. ಬಾಲಕೃಷ್ಣನ ಸೊಂಟಕ್ಕೆ ಒರಳು ಕಲ್ಲನ್ನು ಕಟ್ಟಿ ನೀರು ತರುವುದಕ್ಕೆ ಹೋದಳು **೭೦** : ೪೨೦.

**ನಂದಯಶೆ** – ಧನದತ್ತ ವೈಶ್ಯನಾಯಕನ ಪತ್ನಿ **೭೦** : ೧೮೪, ಒಂಬತ್ತು ಪುತ್ರರು, ಇಬ್ಬರು ಪುತ್ರಿಯರು : ೧೮೪–೬, ಸುದರ್ಶನಾರ್ಯಿಕೆಯರಲ್ಲಿ ದೀಕ್ಷೆ : ೧೯೦, ನಿದಾನಶಲ್ಯೆ : ೧೯೪, ಉತ್ತರಭವದ ಅಂಧಕವೃಷ್ಟಿಯ ಪತ್ನಿ ಸುಭದ್ರೆ : ೧೯೭.

– ಹಸ್ತಿನಾಪುರದ ರಾಜ ಗಂಗದೇವನ ಪತ್ನಿ. ಇವಳಿಗೆ ಮೂರು ಅವಳಿ ಮಕ್ಕಳು **೭೧** : ೭೫೯.

– ಆನಂದ ವೈಶ್ಯಪತಿಯ ಪತ್ನಿ. ಅಮಿತಸಾಗರಮುನಿಗೆ ಆಹಾರದಾನ. ಉತ್ತರೋತ್ತರ ಭವದ ಗೌರೀ (ಕೃಷ್ಣನ ಮಹಾದೇವಿ) **೭೧** : ೯೩೦–೨.

**ನಂದಿನಿ** – ಧನದತ್ತನ ಪತ್ನಿ. ಚಂದ್ರಾಭನ ತಾಯಿ **೭೫** : ೧೦೭೭.

**ನಂದೆ** – ರಾಜ ವಸುಷೇಣನ ಪತ್ನಿ **೬೦** : ೫೦.

– ಮೇಘರಥನ ರಾಣಿ **೭೧** : ೮೦೧.

– ಸಿಂಹಪುರದ ರಾಜ ವಿಷ್ಣುವಿನ ರಾಣಿ. ಶ್ರೇಯಾಂಸಜಿನನ ಜನನಿ **೫೭** : ೧೮.

– ಗಂಧೋತ್ಕಟನ ಪತ್ನಿ **೭೫** : ೭೯೭.

**ನಲಿನೆ** – ದೃಢಮಿತ್ರರಾಜನ ಪತ್ನಿ. ಹೇಮಾಭೆಯ ತಾಯಿ **೭೫** : ೯೭೦.

**ನತುಲ** – ಪೂರ್ವಜನ್ಮದ ಧನಶ್ರೀ **೭೨** : ೧೨೨೧.

**ನವಮಿಕಾದೇವಿ** – ಪೂರ್ವಭವದ ಧನಶ್ರೀ. ಸೌಧರ್ಮೇಂದ್ರನ ದೇವಿ **೬೩** : ೫೨೯.

**ನಾಟ್ಯಮಾಲಿಕೆ** – ಗುಣಪಾಲ ಮಹಾರಾಜನ ಆಸ್ಥಾನದ ನಾಟಕಾಚಾರ್ಯನ ಪುತ್ರಿ. ಇವಳ ನಾಟ್ಯ ರಾಜನನ್ನು ಆಶ್ಚರ್ಯಗೊಳಿಸಿತು **೪೬** : ೨೯೯, ೩೦೧.

**ನಾಗಶ್ರೀ** – ಅಗ್ನಿಭೂತಿ, ಅಗ್ನಿಲೆಯರ ಕಿರಿಯ ಮಗಳು **೭೨** : ೧೧೮೮, ಸೋಮಭೂತಿಯ ಪತ್ನಿ : ೧೧೮೯, ಮುನಿಗೆ ವಿಷಪೂರಿತ ಆಹಾರ : ೧೧೯೨, ೫ನೇ ನರಕ ಪ್ರಾಪ್ತಿ : ೧೧೯೭, ಮುನಿಗೆ ವಿಷಪೂರಿತ ಆಹಾರ ನೀಡಿದುದರಿಂದ ಇವಳ ಸಹೋದರರು ದೀಕ್ಷಿತರಾದರು : ೧೧೯೪.

**ನಾಗಶ್ರೀ** – ದುರ್ಮರ್ಷಣ, ನಾಗವಸುವಿನ ಪುತ್ರಿ. ಭವದೇವನ ಪತ್ನಿ **೭೬** : ೧೩೯೬–೭, ೧೪೩೭.

**ನಾಗವಸು** – ದುರ್ಮರ್ಷಣನ ಪತ್ನಿ. ನಾಗಶ್ರೀಯ ತಾಯಿ **೭೬** : ೧೩೯೬.

**ನಿಪುಣಮತಿ** - ಅರಮನೆಯ ದಾದಿ. ಇವಳ ಮೂಲಕ ಸತ್ಯಘೋಷನ ಮನೆಯಿಂದ ಭದ್ರಮಿತ್ರನ ಕರಡಿಗೆಯನ್ನು ರಾಜನು ತರಿಸಿದ **೫೯** : ೧೬೮.

**ನಿರ್ನಾಮೆ** – ಶ್ರೀಮತಿ ಪೂರ್ವಭವದ ಹೆಸರು. ನಾಗದತ್ತ, ಸರತಿ ಎಂಬ ವರ್ತಕ ದಂಪತಿಗಳ ಪುತ್ರಿ **೬** : ೧೩೦. ಇವಳ ಪೂರ್ವಭವ ವೃತ್ತಾಂತ : ೧೩೩–೫೭.

**ನಿರ್ನಾಮಿಕೆ** – ವಣಿಕ ಪುತ್ರಿ. ಶ್ರೀಮತಿಯ ಪೂರ್ವಭವದ ಹೆಸರು **೮** : ೧೮೭ ಈಕೆ ಪಿಹಿತಾಸ್ರವ ಮುನಿಗಳಿಂದ ಜಿನಗುಣ ಸಂಪತ್ತಿವ್ರತ ಹಾಗೂ ಶ್ರುತಜ್ಞಾನ ವ್ರತವನ್ನು ಪಡೆಯುತ್ತಾಳೆ.

**ನಿರ್ವೃತಿ** – ಕ್ಷೇಮಸಾಗರ ಸುಭದ್ರ ಶ್ರೇಷ್ಠಿಯ ಪತ್ನಿ. ಕ್ಷೇಮಸುಂದರಿಯ ತಾಯಿ **೭೫** : ೯೫೯.

**ನಿವೃತ್ತೆ** – ಆರ್ಯಿಕೆ. ಇವರಲ್ಲಿ ವಿರಕ್ತೆಯಾದ ಪ್ರೀತಿಮತಿ ತಪಸ್ಸನ್ನು ಗ್ರಹಣ ಮಾಡಿದಳು **೭೦** : ೩೫.

**ನೀಲಾಂಜನೆ** – ದೇವನರ್ತಕಿ. ಅಲ್ಪಾಯುಷ್ಯ. ನರ್ತನಗೈಯುತ್ತಅದೃಶ್ಯವಾದಳು. ವೃಷಭನಾಥನ ವೈರಾಗ್ಯಕ್ಕೆ ನಿಮಿತ್ತವಾದಳು **೧೭** : ೭.

– ಅಲಕಾನಗರಿಯ ಮಯೂರಗ್ರೀವ ರಾಜನ ಪತ್ನಿ. ಐವರು ಮಕ್ಕಳು **೬೨** : ೫೮–೯. ಅಶ್ವಗ್ರೀವನ ತಾಯಿ **೭೪** : ೧೨೮.

**ಪಂಡಿತೆ** – ಶ್ರೀಮತಿಯ ದಾದಿಯ ಹೆಸರು **೬** : ೧೦೨, ಶ್ರೀಮತಿಯನ್ನು ಬೋಧಿಸಿದುದು : ೧೧೪–೨೦, ಚತುರಳು : ೧೧೫, ಶ್ರೀಮತಿಗೆ ಸಮಾಧಾನ : ೧೭೩–೮, ಚಿತ್ರಪಟ ಪ್ರದರ್ಶನ : ೧೯೧, ಜಿನಾಲಯದಲ್ಲಿ ನಡೆದ ಘಟನೆಯ ನಿರೂಪಣೆ **೭** : ೧೦೯–೫೮, ಶ್ರೀಮತಿಗೆ ಸಮಯೋಚಿತ ಮಾತು : ೧೬೪–೭೬; **೮** : ೪೮; ದೀಕ್ಷೆ ಪಡೆದಳು : ೮೬.

**ಪದ್ಮದೇವಿ** – ಶಾಲ್ಮಲಿಗ್ರಾಮದ ವಿಜಯದೇವನ ಪುತ್ರಿ. ಅವಿಜ್ಞಾತ ಫಲಾಭಕ್ಷಣ ವ್ರತದಿಂದ ಸದ್ಗತಿ ಪಡೆದಳು **೭೧** : ೯೪೫.

**ಪದ್ಮಲತೆ** – ಪಲಾಶನಗರದ ರಾಜನ ಮಗಳು. ಭವಮಾಲೆ : ಸೋಮಿಲೆ – ಕನಕಲತೆ – ಪದ್ಮಲತೆ **೭೫** : ೬೪೭.

– ಚಕ್ರಧ್ವಜನೆಂಬ ರಾಜನ ಪತ್ನಿ. ಕನಕಮಾಲೆಯಲ್ಲಿ ಜನಿಸಿದ ಇಬ್ಬರು ಪುತ್ರಿಯರಲ್ಲಿ ಒಬ್ಬಳು **೬೨** : ೩೬೩.

**ಪದ್ಮಶ್ರೀ** – ಸಾಗರದತ್ತ, ಪದ್ಮಾವತಿಯರ ಪುತ್ರಿ **೭೬** : ೧೨೮೬, ಜಂಬೂ ಕುಮಾರನ ಪತ್ನಿ : ೧೨೯೦.

**ಪದ್ಮಾ** – ವಿಮಲನಾಥರ ಮುಖ್ಯ ಆರ್ಯಿಕೆ **೫೯** : ೫೨.

**ಪದ್ಮಾವತಿ** – ಒಬ್ಬ ಆರ್ಜಿಕೆ. ಇವರಲ್ಲಿ ಪ್ರಭಾವತಿ ದೀಕ್ಷಿತಳಾದಳು **೭** : ೩೧.

– ಚಕ್ರಧ್ವಜ, ವಿದ್ಯುನ್ಮತಿಯರ ಪುತ್ರಿ **೬೨** : ೩೬೪ ಅಪ್ಸರಸ್ತ್ರೀ ಆದಳು : ೩೬೬, ಅನಂತರ ಅನಂತಮತಿ ಆದಳು : ೩೬೮.

– ಉಪೇಂದ್ರಸೇನನ ಮಗಳು. ಕೇಶವನಾದ ಪುಂಡರೀಕನನ್ನು ವಿವಾಹವಾದಳು **೬೫** : ೧೭೯.

– ಅಂಧಕವೃಷ್ಣಿಯ ತಮ್ಮನಾದ ನರಪತಿವೃಷ್ಣಿಯ ಪತ್ನಿ. ಉಗ್ರಸೇನ, ದೇವಸೇನ, ಮಹಾಸೇನ – ಎಂಬ ಗಂಡುಮಕ್ಕಳು, ಗಾಂಧಾರಿ ಎಂಬ ಹೆಣ್ಣು ಮಗಳು **೭೦** : ೧೦೦–೧.

– ಮೇಘರಥ ರಾಜನ ಪತ್ನಿ **೭೦** : ೨೭೪.

– ಉಗ್ರಸೇನನ ಪತ್ನಿ. ಇವಳಲ್ಲಿ ನಿದಾನಶಲ್ಯದಿಂದ ಸತ್ತ ವಶಿಷ್ಠಮುನಿಯು ಕಂಸನಾಗಿ – ಪಾತಕ ಪುತ್ರನಾಗಿ–ಜನಿಸಿದ. ಈತ ಗರ್ಭದಲ್ಲಿದ್ದಾಗ ಈಕೆಗೆ ಕ್ರೂರ ಬಯಕೆಗಳಾದವು **೭೦** : ೩೪೧–೪, ಪುತ್ರತ್ಯಾಗ : ೩೪೬.

– ಹಿರಣ್ಯವರ್ಮನ ರಾಣಿ **೭೦** : ೩೦೭.

– ಕೃಷ್ಣನ ಪಟ್ಟಮಹಿಷಿಯರಲ್ಲಿ ಒಬ್ಬಳು. ಸ್ವಯಂವರ ವಿಧಿಯಲ್ಲಿ ಲಗ್ನವಾದಳು. ತಂದೆ ಹಿರಣ್ಯವರ್ಮ, ತಾಯಿ ಶ್ರೀಮತಿ. ಭವಮಾಲೆ : ವಿನಯಶ್ರೀ – ಭೋಗಭೂಮಿಜೆ – ರೋಹಿಣಿ – ಪದ್ಮದೇವಿ – ಭೋಗಭೂಮಿಜೆ – ಸ್ವಯಂಪ್ರಭೆ – ವಿಮಲಶ್ರೀ – ಸಹಸ್ರಾರ ಕಲ್ಪ – ಪದ್ಮಾವತಿ **೭೧** : ೯೩೯–೫೬; **೭೧** : ೬೨೪.

– ಆರ್ಯಿಕೆ **೭೧** : ೯೫೩.

– ವೃಷಭದತ್ತನ ಪತ್ನಿ. ಸುವ್ರತಾರ್ಯಿಕೆಯಲ್ಲಿ ದೀಕ್ಷೆ **೭೫** : ೮೬೩–೮.

– ನೋ. ಪದ್ಮಶ್ರೀ **೭೬** : ೧೨೮೬.

**ಪದ್ಮೋತ್ತಮೆ** – ಧನಪತಿರಾಜ ಹಾಗೂ ಉತ್ತಮೆಯರ ಪುತ್ರಿ. ಹಾವು ಕಚ್ಚಿದ್ದ ಇವಳನ್ನು ಬದುಕಿಸಿ ಜೀವಂಧರ ಮದುವೆಯಾದ **೭೫** : ೯೪೦–೭.

**ಪವನವೇಗೆ** – ಅಶನಿವೇಗನ ಪತ್ನಿ, ಶಾಲ್ಮಲಿದತ್ತೆಯ ತಾಯಿ **೭೦** : ೨೫೫.

**ಪಾರ್ವತಿ** – ರುದ್ರನ ಪತ್ನಿ **೭೪** : ೩೩೭.

**ಪಾರಶರಿ** – ರಾಜಗೃಹದ ಶಾಂಡಿಲನ ಪತ್ನಿ. ಸ್ಥಾವರನ ತಾಯಿ **೭೪** : ೮೨–೩.

**ಪಿಪ್ಪಲೆ** – ಅಕಂಪನ ರಾಜನ ಪುತ್ರಿ. ಇವಳ ಬಳಿ ಚಿತ್ರಕಂಬಲವು ನಿಮಿತ್ತವಶದಿಂದ ಇತ್ತು. ಕಂಬಲಿ ಒಡೆಯನ ಬಗ್ಗೆ ಚಿಂತಿತಳಾಗಿದ್ದಳು **೪೭** : ೭೬–೭.

– ಪೂರ್ವಭವದ ಜಯಸೇನೆ **೪೭** : ೨೨೫.

– ವಿಜಯ ಮಹಾರಾಜನ ಪತ್ನಿ. ನಮಿತೀರ್ಥಂಕರನ ಮಾತೆ **೬೯** : ೨೫–೯.

**ಪ್ರೀತಿಂಕರಿ** – ಪುಷ್ಪದಂತ ಚಕ್ರವರ್ತಿಯ ಪತ್ನಿ. ಪುತ್ರ ಸುದತ್ತ **೭೧** : ೭೫೫.

**ಪುಷ್ಪಪಾಲಿತೆ** – ಹಾವಿನ ವಿಷದಿಂದ ಸತ್ತು ಇಂದ್ರನ ಸತಿ ಶಚಿದೇವಿಯಾದಳು **೪೬** : ೨೫೮.

**ಪುಷ್ಪವತಿ** – ಹಾವಿನ ವಿಷದಿಂದ ಸತ್ತು ಇಂದ್ರನ ಮತ್ತೊಬ್ಬ ಸತಿ ಮೇನಕೆಯಾದಳು **೪೬** : ೨೫೮.

**ಪೂತನೆ** – ಕಂಸನ ಪೂರ್ವಜನ್ಮದ ವ್ಯಂತರದೇವತೆಗಳಲ್ಲಿ ಒಂದು. ವಾಸುದೇವನಿಗೆ ಮೊಲೆಹಾಲು ಕುಡಿಸುವುದರ ಮೂಲಕ ಕೊಲ್ಲಲು ಪ್ರಯತ್ನಿಸಿತು **೭೦** : ೪೧೫–೮.

**ಪೂತಿಕೆ** – ಮತ್ಸ್ಯ, ಮಂಡೂಕಿ ಎಂಬ ಬೆಸ್ತ ದಂಪತಿಗಳ ಪುತ್ರಿ. ಪಾಪಿಷ್ಠೆ. ಇವಳು ಜನಿಸಿದಾಗಲೆ ತಂದೆ ಮೃತನಾದ. ತಾಯಿ ಸತ್ತಳು. ಅಜ್ಜಿಯ ಆಶ್ರಯ. ಮುನಿಯನ್ನು ಕಂಡು ಉಪಶಮಭಾವ ಹೊಂದಿ, ದೇವಗತಿ ಪಡೆದಳು **೭೧** : ೮೨೩–೩೪.

**ಪೂರ್ವಸೇನೆ** – ಶ್ರೀಷೇಣನ ಪುತ್ರಿ. ಹಿರಿಯ ಸೋದರಿ ಹರಿಶ್ರೀ. ಇಬ್ಬರು ಸ್ವಯಂವರ ಮಂಟಪದಲ್ಲಿ ವಿರಕ್ತರಾಗಿ ದೀಕ್ಷಿತರಾದರು **೭೨** : ೧೨೧೩.

**ಪೃಥವೀ** – ಸುರದೇವನ ನಾಲ್ವರು ಪತ್ನಿಯರಲ್ಲಿ ಒಬ್ಬಳು **೪೬** : ೩೫೨.

**ಪೃಥವೀದೇವಿ** – ರುದ್ರರಾಜನ ಪತ್ನಿ. ಪುತ್ರ ಸ್ವಯಂಭು **೫೯** : ೮೬.

**ಪೃಥವೀಷೇಣಾದೇವಿ** – ಸುಪ್ರತಿಷ್ಠರಾಜನ ರಾಣಿ. ಸುಪಾರ್ಶ್ವಜಿನನ ಜನನಿ **೫೩** : ೧೯.

**ಪೃಥವೀತಿಲಕೆ** – ಶಂಖ, ಜಯದೇವಿಯರ ಪುತ್ರಿ **೬೩** : ೬೮೧, ಅಭಯ ಘೋಷನ ಪ್ರಾಣಪ್ರಿಯೆ : ೬೮೨, ವನವಿಹಾರಕ್ಕೆ ಹೊರಟ ಪತಿಯನ್ನು ತಡೆಯಲು ಅಸಮರ್ಥಳಾಗಿ, ಸುಮತಿ ಆರ್ಯಿಕೆಯಲ್ಲಿ ದೀಕ್ಷೆ ಪಡೆದಳು : ೬೮೬.

**ಪೃಥ್ವೀಸುಂದರಿ** – ಖೇಚರಾಧಿಪತಿ ಸುಕೇತುವಿನ ಪುತ್ರಿ. ಪದ್ಮಚಕ್ರಿಯ ಸೊಸೆ **೬೬** : ೮೦.

– ವಿದೇಹರಾಜ ಗೋಪೇಂದ್ರನ ಪತ್ನಿ. ಪುತ್ರಿ ರತ್ನವತಿ **೭೫** : ೧೧೯೩.

– ಪಾಟಲಿಪುತ್ರದ ರಾಜ ಶಿಶುಪಾಲನ ಸತಿ. ಕಲ್ಕಿ ಹಾಗೂ ಚತುರ್ಮುಖರ ಮಾತೆ **೭೬** : ೧೬೩೮.

**ಪೌರುಷೇಣಾ** – ಅಭಿನಂದನ ತೀ. ಸಭೆಯ ಮುಖ್ಯ ಆರ್ಯಿಕೆ **೫೦** : ೬೨.

**ಪ್ರಜಾವತಿ** – ಕುಂಭನ ಮಹಾದೇವಿ. ಮಲ್ಲಿತೀರ್ಥಂಕರರ ಜನನಿ **೬೬** : ೨೧.

**ಪ್ರಭಂಕರಿ** – ವಜ್ರಬಾಹುವಿನ ಸತಿ. ಆನಂದನ ತಾಯಿ **೭೩** : ೪೩.

**ಪ್ರಭಾಕರಿ** – ಸಾಗರದತ್ತನ ಪತ್ನಿ, ನಾಗದತ್ತನ ತಾಯಿ **೭೬** : ೧೪೫೭–೮.

**ಪ್ರಭಾವತೀ** – ರಾಣಿ. ವಾಸವ ವಿದ್ಯಾಧರನ ಪತ್ನಿ. ಮಹೀಧರನ ತಾಯಿ **೭** : ೨೯.

– ವಾಯುರಥನ ಪುತ್ರಿ. ಪೂರ್ವಭವದ ರತಿಷೇಣೆ ಪಾರಿವಾಳ **೪೬** : ೧೪೮, ಗತಿಯುದ್ದದಲ್ಲಿ ಗೆದ್ದ ಹಿರಣ್ಯವರ್ಮನನ್ನು ಮದುವೆಯಾದಳು : ೧೬೦.

– ಅಂಧಕವೃಷ್ಣಿಯ ಆನೇ ಸೊಸೆ. ಪೂರಣನ ಪತ್ನಿ **೭೦** : ೯೯.

**ಪ್ರಭಾವತಿ** – ಚೇಟಕನ ಸಪ್ತ ಪುತ್ರಿಯರಲ್ಲಿ ನಾಲ್ಕನೆಯವಳು **೭೫** : ೫೫೫, ರೋರುಕ ನಗರದ ರಾಜ ಉದಯನ ಪತ್ನಿ : ೫೬೦, ಶೀಲವತಿಯೆಂಬ ಖ್ಯಾತಿ : ೫೬೧.

**ಪ್ರಭೆ** – ವಾರಾಣಸಿಯ ಪ್ರಭು ಅಕಂಪನನ ಪತ್ನಿ **೪೩** : ೧೩೧.

**ಪ್ರಾಕುಬ್ಜಾ** – ಅಜಿತನಾಥರ ಸಮವಸರಣದ ಆರ್ಯಿಕಾ ನಾಯಕಿ **೪೮** : ೪೭.

**ಪ್ರಿಯಂಗು** – ಬಲೀಂದ್ರನ ಪತ್ನಿ. ವಾಲಿ ಸುಗ್ರೀವರ ತಾಯಿ **೬೮** : ೭೪೬.

**ಪ್ರಿಯಂಗುಶ್ರೀ** – ವಿಂಧ್ಯಕೇತುವಿನ ಪತ್ನಿ **೪೫** : ೧೫೩.

**ಪ್ರಿಯಂಗುಸುಂದರಿ** – ಬಲೀಂದ್ರನ ಪತ್ನಿ **೬೮** : ೭೪೬.

**ಪ್ರಿಯಕಾರಿಣಿ** – ಪ್ರಭಾವತಿಯ ಸಖಿ **೪೬** : ೧೫೫.

– ಅತಿವೇಗನರಾಣಿ. ಪುತ್ರಿ ರತ್ನಮಾಲೆ **೫೯**–೨೪೧.

**ಪ್ರಿಯಕಾರಿಣಿ** – ಸಿದ್ಧಾರ್ಥರಾಜನ ಪತ್ನಿ. ಭಗವಾನ್ ಮಹಾವೀರರ ತಾಯಿ **೭೪** : ೨೫೬, ಚೇಟಕರಾಜನ ಸಪ್ತ ಪುತ್ರಿಯರಲ್ಲಿ ಹಿರಿಯಳು **೭೫** : ೫೫೫, ಸಿದ್ಧಾರ್ಥನ ಸತಿ : ೫೫೭.

**ಪ್ರಿಯದತ್ತೆ** – ವಿಭೀಷಣ ರಾಜನ ಪತ್ನಿ. ವರದತ್ತನ ತಾಯಿ **೧೧** : ೧೪೯.

– ಸಮುದ್ರದತ್ತ, ಕುಬೇರಮಿತ್ರೆಯರ ಪುತ್ರಿ **೪೬** : ೪೨, ಯಶಸ್ವತಿ, ಗುಣವತಿ ಆರ್ಯಿಕೆಯರ ದೀಕ್ಷೆಯ ಕಾರಣವನ್ನು ವಿಚಾರಿಸುತ್ತಾಳೆ : ೧೪೦, ತನ್ನ ಪತಿ ಕುಬೇರಕಾಂತನ ಸಮಾಚಾರ ಹೇಳಿದುದು : ೨೨೮–೩೮; ಗಾಂಧಾರಿಗೆ ತನ್ನನ್ನು ಬಿಟ್ಟು ಉಳಿದವರಿಗೆ ತನ್ನ ಪತಿ ನಪುಂಸಕ ಎಂದು ಹೇಳಿದಳು **೪೬** : ೨೩೭, ದೀಕ್ಷೆ : ೨೪೬. ಪೂರ್ವಭವದ ಆಟವೀಶ್ರೀ : ೧೨೯.

**ಪ್ರಿಯದರ್ಶನಾ** – ಧನದತ್ತ ವೈಶ್ಯನ ಪುತ್ರಿ **೭೦** : ೧೮೬.

– ವಿದ್ಯುನ್ಮಾಲಿದೇವನ ನಾಲ್ವರು ಪ್ರಮುಖದೇವಿಯರಲ್ಲಿ ಒಬ್ಬಳು **೭೬** : ೧೨೭೩.

**ಪ್ರಿಯದರ್ಶನೆ** – ರಾಜ ಅಜಿತಸೇನನ ಪತ್ನಿ. ವಿಶ್ವಸೇನನ ತಾಯಿ **೬೩** : ೮೯೩–೪.

– ಆರ್ಯಿಕೆ **೭೨** : ೯೯೪.

**ಪ್ರಿಯಮಿತ್ರಿಕೆ** – ನಾಗದತ್ತನ ಸತಿ. ಪ್ರೀತಿಂಕರನ ದೊಡ್ಡಮ್ಮ **೭೬** : ೧೫೭೩.

**ಪ್ರಿಯಮಿತ್ರೆ** – ಮೇಘರಥನ ರಾಣಿ **೬೩** : ೬೫೮. ಇವಳ ರೂಪವನ್ನು ಪರೀಕ್ಷಿಸಲು ರತಿಷೇಣಾ, ರತಿಯೆಂಬ ದೇವಿಯರು ಬರುತ್ತಾರೆ : ೭೯೯–೮೦೬.

**ಪ್ರಿಯರತಿ** – ಮದನವೇಗೆ ನರ್ತಕಿಯ ತಾಯಿ. ಶ್ರೀಪಾಲನಿಗೆ ಜಯವತಿಯ ಸಂಗತಿ ತಿಳಿಸುತ್ತಾಳೆ **೪೭** : ೧೭.

**ಪ್ರಿಯವಾಗ್ದೇವಿ** – ಅಂಧಕವೃಷ್ಟಿಯ ೬ನೇ ಸೊಸೆ. ಅಚಲನ ಪತ್ನಿ **೭೦** : ೯೯ (ಪ್ರಿಯವಾಕ್).

**ಪ್ರೀತಿಂಕರೆ** – ಸುದತ್ತನ ಸತಿ **೬೩** : ೬೧೨, ರಾಜಕುಮಾರ ನಲಿನಕೇತು ಇವಳನ್ನು ಅಪಹರಿಸಿದ : ೬೧೩, ಸುವ್ರತ ಆರ್ಯಿಕೆಯಲ್ಲಿ ದೀಕ್ಷಿತಳಾದಳು : ೬೨೧, ಉತ್ತರಭವದ ಶಾಂತಿಮತಿ : ೬೨೨.

**ಪ್ರಿಯವ್ರತೆ** – ಅಣುವ್ರತ ಸ್ವೀಕರಿಸಿದ ಸ್ತ್ರೀಯರಲ್ಲಿ ಮುಖ್ಯಳು **೨೪** : ೧೭೯.

**ಪ್ರೀತಿಮತಿ** – ಅಪರಾಜಿತನ ರಾಣಿ **೭೦** : ೨೩.

– ಅರಿಂಜಯ, ಅಜಿತಸೇನೆಯರ ಪುತ್ರಿ. ಚಿಂತಾಗತಿ ಒಬ್ಬನನ್ನು ಬಿಟ್ಟು ಉಳಿದ ಖೇಚರರು ಮೇರುಪರ್ವತವನ್ನು ಮೂರು ಸುತ್ತು ಓಡಿ ಬರಲಾರದೆ ಸೋಲುತ್ತಾರೆ **೭೦** : ೩೧.

**ಫಲ್ಗುಸೇನೆ** – ಪಂಚಮಕಾಲದ ಅಂತಿಮ ವ್ರತಸ್ಥ ಶ್ರಾವಕಿ **೭೬** : ೧೬೭೩.

**ಬಂಧುಮತಿ** – ಶ್ವೇತವಾಹನ ವೈಶ್ಯನ ಪತ್ನಿ **೭೧** : ೭೫೮, ರೇವತಿದಾದಿ ತಂದುಕೊಟ್ಟ ನಂದಯಶೆ ರಾಣಿಯ ಮಗುವನ್ನು 'ನಿರ್ನಾಮಕ' ಹೆಸರಿನಲ್ಲಿ ಸಾಕಿದಳು : ೭೬೨.

– ವೈಶ್ಯನಾದ ಮಧುಷೇಣನ ಪತ್ನಿ. ಬಂಧುಯಶೆಯ ತಾಯಿ **೭೧** : ೮೬೧.

**ಬಂಧುಯಶೆ** – ಮಧುಷೇಣ, ಬಂಧುಮತಿಯರ ಪುತ್ರಿ. ಪೂರ್ವಭವದ ದೇವಿಲೆ **೭೧** : ೮೬೧, ಉಪವಾಸ ವ್ರತಮಾಡಿ ಸತ್ತು ಕುಬೇರನ ಪತ್ನಿಯಾದಳು. ಇವಳ ಸಖಿ ಜಿನದತ್ತೆ : ೮೬೨.

**ಬಂಧುಶ್ರೀ** – ದೇವಿಲ ವೈಶ್ಯನ ಪತ್ನಿ **೬೨** : ೪೯೩.

**ಬಂಧುಷೇಣೆ** – ಮಲ್ಲಿನಾಥರ ಸಮವಸರಣದ ಮುಖ್ಯ ಆರ್ಯಿಕೆ **೬೬** : ೫೮.

**ಬರ್ಬರಿ, ಚಿಲಾತಿಕೆ** – ಅಪರಾಜಿತ, ಅನಂತವೀರ್ಯರ ಆಸ್ಥಾನದಲ್ಲಿದ್ದ ನರ್ತಕಿಯರು **೬೨** : ೪೨೭, ಈ ನರ್ತಕಿಯರ ಸಂಗತಿಯನ್ನು ದಮಿತಾರಿಗೆ ನಾರದನು ತಿಳಿಸಿದನು : ೪೩೭, ಆ ನರ್ತಕಿಯರಿಗೆ ದಮಿತಾರಿ ಹೇಳಿಕಳಿಸಿದನು : ೪೪೨.

**ಬುದ್ಧಿಷೇಣೆ** – ಸಾಕೇತನಗರದ ವೇಶ್ಯೆ **೫೯** : ೨೪೯, ಪ್ರೀತಿಂಕರ ಮುನಿಗೆ ಶ್ರೇಷ್ಠ ಕುಲ ರೂಪಾದಿಗಳು ಯಾವುದರಿಂದ ಉಂಟಾಯಿತು ? ಎಂದು ಪ್ರಶ್ನಿಸಿದಳು : ೨೬೦, ಕಾಮರಾಗಕಥೆ ಬಿತ್ತರಿಸಿದ ವಿಚಿತ್ರಮತಿ ಮುನಿಯನ್ನು ತಿರಸ್ಕರಿಸಿದಳು : ೨೬೫, ಆತನೇ ಮುಂದೆ ಇವಳನ್ನು ವಶಪಡಿಸಿಕೊಂಡನು : ೨೬೭.

**ಬ್ರಾಹ್ಮಿ** – ವೃಷಭನಾಥ, ಯಶಸ್ವತಿಯರ ಪುತ್ರಿ. ಭರತನ ಸಹೋದರಿ **೧೬** : ೫, ವೃಷಭನಾಥರಿಂದ ಅಕ್ಷರಮಾಲಿಕೆ ಕಲಿತಳು : ೧೦೭–೮, ಮುಖ್ಯ ಆರ್ಯಿಕೆ ಯಾದಳು **೨೪** : ೧೭೫.

**ಬ್ರಾಹ್ಮಿ, ಸುಂದರಿ** – ವೃಷಭನಾಥರ ಪುತ್ರಿಯರು. ಇವರ ವರ್ಣನೆ **೧೬** : ೭೪–೯೩.

**ಭದ್ರಾದೇವಿ** – ಪ್ರಜಾಪತಿರಾಜನ ಇನ್ನೊಬ್ಬ ಪತ್ನಿ. ವಿಜಯನ ತಾಯಿ **೬೨** : ೯೧.

**ಭದ್ರೆ** – ವೃಷಭಸೇನ ಶ್ರೇಷ್ಠಿಯ ಪತ್ನಿ. ಚಂದನೆಯ ರೂಪಕ್ಕೆ ಹೆದರಿ ಆಕೆಯನ್ನು ಬಂಧನದಲ್ಲಿ ಇರಿಸುತ್ತಾಳೆ **೭೫** : ೬೦೫.

– ನಿದಾನಶಲ್ಯೆಯಿಂದ ಸತ್ತ ಸೋಮಿಲೆ **೭೫** : ೭೨೪.

**ಭಾಮಾರತಿ** – ಸತ್ಯಂಧರನ ಕಿರಿಯ ಮಡದಿ. ಇವಳ ಮಗ ಮಧುರ **೭೫** : ೮೦೩.

**ಭಾವಿತಾರ್ಯೆ** – ಕುಂಥುತೀರ್ಥಂಕರರ ಸಭೆಯ ಮುಖ್ಯ ಆರ್ಯಿಕೆ **೬೪** : ೪೯.

**ಭೋಗವತಿ** – ಅನಿಲವೇಗ ರಾಜನ ಪುತ್ರಿ. ಇವಳನ್ನೇ ಶ್ರೀಪಾಲ 'ಭುಜಂಗಿ' ಎಂದು ಕರೆದುದು **೪೭** : ೫೦–೧. ಕೆಟ್ಟಕನಸಿನ ಪರಿಹಾರಾರ್ಥವಾಗಿ ಸಿದ್ಧಕೂಟ ಜಿನಾಲಯದಲ್ಲಿ ಪೂಜೆಗಾಗಿ ಬಂದಳು. ಆಗ ಅವಳ ಜೊತೆಯಲ್ಲಿ ಅವಳ ತಾಯಿ ಕಾಂತವತಿ, ರತ್ನವೇಗಾ ಮೊದಲಾದ ಸ್ತ್ರೀಯರಿದ್ದರು : ೯೭–೮.

**ಮಂಗಲಾದೇವಿ** – ಮೇಘರಥರಾಜನ ಪತ್ನಿ. ಸುಮತಿ ತೀ. ರ ತಾಯಿ **೫೧** : ೨೦.

**ಮಂಗಿ** – ದಾರುಣ ವ್ಯಾಧನ ಪತ್ನಿ. ಅತಿ ದಾರುಣನ ತಾಯಿ **೫೯** : ೨೭೨–೩.

– ವಿಮಲೇಂದು ವೈಶ್ಯನ ಪುತ್ರಿ. ವಜ್ರಮುಷ್ಟಿಯ ಪತ್ನಿ. ಅತ್ತೆ ವಪ್ರಶ್ರೀಯ ಸಂಚಿನಿಂದ ಹಾವು ಕಚ್ಚಿತು. ಗಂಡನ ದೆಸೆಯಿಂದ ವಿಷಮುಕ್ತಳಾದಳು. ಈಕೆಯನ್ನು ಪರೀಕ್ಷಿಸಲು ಬಂದ ಶೂರಸೇನನಲ್ಲಿ ಮೋಹಗೊಂಡಳು. ಸ್ತ್ರೀ ದುಶ್ಚರಿತಕ್ಕೆ ನಿದರ್ಶನವಾದಳು **೭೧** : ೭೦೬–೨೬.

**ಮಂಗಿನಿ** – ನಮಿ ತೀ.ರ ಸಮವಸರಣ ಸಭೆಯ ಮುಖ್ಯ ಆರ್ಯಿಕೆ **೬೯** : ೬೪.

**ಮಂಜರಿಕೆ** – ದೂತಿ. ಇವಳು ರಾವಣನ ಪರವಾಗಿ ಸೀತೆಯಲ್ಲಿ ಮಾತನಾಡುತ್ತಾಳೆ **೬೮** : ೭೯೫–೯.

**ಮಂಡೂಕಿ** – ಮತ್ಸ್ಯನೆಂಬ ಬೆಸ್ತನ ಹೆಂಡತಿ **೭೧** : ೮೨೩.

**ಮಂಡೋದರಿ** – ಸಗರ ರಾಜನನ್ನು ಸಾಕಿದ ದಾದಿ. ನೆರೆಗೂದಲು ದ್ರವ್ಯಲಾಭ ಸೂಚಿಸುತ್ತದೆ ಎನ್ನುತ್ತಾಳೆ. ಅಲ್ಲದೆ ಸ್ವಯಂವರ ವಧು ಸುಲಸೆಯಲ್ಲಿ ಸಗರನ ಗುಣಗಾನ ಮಾಡುತ್ತಾಳೆ **೬೭** : ೨೧೮–೨೨.

– ರಾವಣನ ಪತ್ನಿ. ಪೂರ್ವಭವದ ಮಣಿಮತಿ ಇವಳಿಗೆ ಮಗಳಾಗಿ ಜನಿಸುತ್ತಾಳೆ (ಅವಳೇ ಸೀತೆ). ಜನನಕಾಲದ ಅಪಶಕುನದ ಕಾರಣ ಹೆಣ್ಣು ಮಗುವನ್ನು ತ್ಯಜಿಸುತ್ತಾಳೆ **೬೮** : ೪೯೧–೯. ಸೀತೆಯ ಬಗೆಗಿನ ರಾವಣನ ಕೋಪವನ್ನು ಶಾಂತಗೊಳಿಸಿದಳು **೬೮** : ೮೧೪, ಸೀತೆಯನ್ನು ಕಂಡಾಗ ಇವಳ ಸ್ತನದಲ್ಲಿ ಹಾಲು ಸುರಿಯಿತು : ೮೨೮, ಆಹಾರ ಸೇವಿಸಲು ಆಗ್ರಹಪಡಿಸಿದಳು : ೮೩೧–೪.

– ಕೌಶಂಬಿಯಲ್ಲಿದ್ದ ಹೆಂಡಮಾರುವವಳು. ಕಾಲಿಂದಿಯಲ್ಲಿ ತೇಲಿಬಂದ ಕಂಸ ಶಿಶುವನ್ನು ಸಾಕಿದಳು. ಬಾಲಕನ ದುರಾಚಾರಕ್ಕೆ ಹೇಸಿ ಅವನನ್ನು ತ್ಯಜಿಸಿದಳು **೭೦** : ೩೪೭–೫೦. ಜರಾಸಂಧನಿಗೆ ಕಂಸನು ನದಿಯಲ್ಲಿ ತೇಲಿಬಂದ ಮಂಜೂಷವನ್ನು ತೋರಿಸಿದುದರಿಂದ ಆತನ ವಂಶ ತಿಳಿಯಿತು : ೩೬೧.

**ಮಂದರಮಾಲಿನಿ** – ದಮಿತಾರಿಯ ಒಬ್ಬ ಪತ್ನಿ. ಮಗಳು ಶ್ರೀದತ್ತೆ **೬೨** : ೪೯೯.

**ಮಂದಿರೆ** – ಶಾಲಂಕಾಯನನ ಪತ್ನಿ. ಜಗತ್‌ಖ್ಯಾತಿಯ ಭಾರದ್ವಾಜನ – ತಾಯಿ **೭೪** : ೭೯.

**ಮಣಿಚೂಲಾದೇವಿ** – ಸೌಧರ್ಮಕಲ್ಪದ ಇಂದ್ರನ ಸತಿ. ಹಿಂದೆ ಅಗ್ನಿಲೆ, ಸುಪ್ರಬುದ್ಧೆಯಾಗಿದ್ದಳು **೭೨** : ೯೯೫.

**ಮಣಿವತಿ** – ಅಮಿತವೇಗನ ಪುತ್ರಿ. ವಿದ್ಯಾಸಾಧನೆಯಲ್ಲಿ ಆಸಕ್ತಳು. ರಾವಣನು ಇವಳನ್ನು ವಶಪಡಿಸಿಕೊಳ್ಳಲು ಇವಳ ವಿದ್ಯಾಸಿದ್ಧಿಯನ್ನು ನಾಶಮಾಡಿದನು. ೧೨ವರ್ಷ ಉಪವಾಸದ ಕ್ಲೇಶದಿಂದ ಕೃಶವಾದಳು. ನಿದಾನಶಲ್ಯದಿಂದ ರಾವಣನಿಗೆ ಮಗಳಾಗಿ ಜನಿಸಿ, ಅವನ ಸಾವಿಗೆ ನಿಮಿತ್ತವಾದಳು **೬೮** : ೪೮೮–೯೨.

**ಮದನಕಾಂತಾ** – ನಾಗದತ್ತ ಸುರತಿಯರ ಪುತ್ರಿ **೬** : ೧೩೦.

**ಮದನವತಿ** – ಪೂರ್ವಭವದ ಜಯದತ್ತೆ **೪೭** : ೨೨೫.

**ಮದನಲತೆ**– ಒಬ್ಬ ನಟಿ **೭೫** : ೧೦೧೬.

**ಮದನಾವತಿ** – ಪಿಪ್ಪಲೆಯ ಸಖಿ. ಕಾಂಚನ ಪುರದವಳು. ಪಿಪ್ಪಲೆಯ ಹತ್ತಿರವಿದ್ದ ಚಿತ್ರಕಂಬಲದ ಸೆರಗಿನಲ್ಲಿ ಕಟ್ಟಿದ್ದ ರತ್ನಮುದ್ರಿಕೆಯಲ್ಲಿ ಶ್ರೀಪಾಲನ ಹೆಸರನ್ನು ನೋಡಿ ಕಾಮವಿಕಾರ ಹೊಂದಿದಳು **೪೭** : ೭೮–೯.

**ಮದನವೇಗೆ** – ಇಂದ್ರಕೇತು, ಸುಪ್ರಭಾದೇವಿಯರ ಪುತ್ರಿ. ಸಿಂಹರಥನ ಹೆಂಡತಿ. ಮೇಘರಥನಲ್ಲಿ ಪತಿಭಿಕ್ಷೆ ಬೇಡಿದಳು. ಭವಮಾಲೆ : ಶಂಬಿಕೆ – ದೇವಲೋಕ – ಮದನವೇಗೆ **೬೩** : ೭೫೫–೬೨. ಪ್ರಿಯಮಿತ್ರ ಆರ್ಯಿಕೆಯಲ್ಲಿ ದೀಕ್ಷಿತಳಾದಳು : ೭೬೫.

– ನರ್ತಕಿ. ತಾಯಿ ಪ್ರಿಯರತಿ **೪೭** : ೧೭.

**ಮದ್ರಿ** – ಭೇಷಜ ರಾಜನ ಪತ್ನಿ. ಶಿಶುಪಾಲನ ತಾಯಿ **೭೧** : ೮೩೯.

**ಮಧುರೆ** – ವೃದ್ಧಗ್ರಾಮದ ಮೃಗಾಯಣ ವಿಪ್ರನ ಪತ್ನಿ **೫೯** : ೨೦೭, ಉತ್ತರ ಭವಮಾಲೆ : ಮಧುರೆ – ರಾಮದತ್ತೆ – ಭಾಸ್ಕರದೇವ – ಶ್ರೀಧರೆ – ದೇವ – ರತ್ನಮಾಲೆ – ಅಚ್ಯುತದೇವ – ವೀತಭಯ – ಆದಿತ್ಯಾಭ – ಮೇರು ಗಣಧರ **೫೯** : ೩೦೬–೯.

**ಮನೋರಮಾ** – ರಾಣಿ. ಶ್ರೀಧರನ ಎರಡನೆಯ ಪತ್ನಿ. ವಿಭೀಷಣನ ತಾಯಿ **೭** : ೧೫.

**ಮನೋರಮೆ** – ಮೇಘರಥನ ಒಬ್ಬ ಪತ್ನಿ **೬೩** : ೬೫೮.
– ಅಭಯಘೋಷ ಚಕ್ರವರ್ತಿಯ ಪುತ್ರಿ. ಸುವಿಧಿಯನ್ನು ವಿವಾಹವಾದಳು **೧೦** : ೧೪೩.

**ಮನೋವೇಗೆ** – ಖೇಚರಾಧಿಪತಿ ಮನೋವೇಗನ ಪತ್ನಿ **೭೫** : ೫೮೫. ಪೂರ್ವಭವದಲ್ಲಿ ನಾಗದತ್ತನ ತಂಗಿಯಾಗಿದ್ದ ಅರ್ಥಸ್ವಾಮಿನಿ : ೭೧೬.

**ಮನೋಹರಾ** – ಅಲಕಾಪುರದ ರಾಜನಾದ ಅತಿಬಲ ವಿದ್ಯಾಧರನ ಪುತ್ರಿ **೪** : ೧೩೧–೨.
– ರಾಣಿ ಶ್ರೀಧರನ ಪತ್ನಿ. ಶ್ರೀವರ್ಮನ ತಾಯಿ **೭** : ೧೫.

**ಮನೋಹರಾದೇವಿ** – ಘನರಥನ ರಾಣಿ. ಮೇಘರಥನ ತಾಯಿ **೬೩** : ೬೫೪.

**ಮನೋಹರಿ** – ಚಂದ್ರಚೂಲನ ರಾಣಿ. ಇವಳ ಪುತ್ರ ಚಿತ್ರಾಂಗದ **೭೧** : ೭೪೭.

**ಮರುದೇವಿ** – ನಾಭಿರಾಜನ ಪತ್ನಿ. ಜಿನಜನನಿ **೧೨** : ೧೨. ವರ್ಣನೆ : ೧೩–೨೭, ಹದಿನಾರು ಸ್ವಪ್ನ : ೧೦೪ ಗರ್ಭವತಿ **೧೨** : ೧೬೪–೫, ದೇವಸ್ತ್ರೀಯರೊಡನೆ ಚಮತ್ಕಾರದ ಪ್ರಶ್ನೋತ್ತರ ಕ್ರೀಡೆ : ೨೨೫–೬೧, ಪುತ್ರನ ಜನನ **೧೩** : ೨, ವೃಷಭನಾಥನ ತಾಯಿ.

**ಮಾದ್ರಿ** – ಕುಂತಿಯ ತಂಗಿ. ಪಾಂಡುವಿನೊಡನೆ ವಿವಾಹ **೭೦** : ೧೧೫. ಪಾಂಡುವಿನಿಂದ ನಕುಲ, ಸಹದೇವರ ಜನನ : ೧೧೬.

**ಮಿತ್ರಶ್ರೀ** – ಅಗ್ನಿಭೂತಿ, ಅಗ್ನಿಲೆಯರ ಮೂವರು ಪುತ್ರಿಯರಲ್ಲಿ ಎರಡನೆಯವಳು **೭೨** : ೧೧೮೮, ಸೋಮಿಲನ ಪತ್ನಿ : ೧೧೮೯.

**ಮಿತ್ರಸೇನೆ** – ಸುದರ್ಶನ ಮಹಾರಾಜನ ಮಹಾದೇವಿ. ಅರಜಿನನ ತಾಯಿ **೬೫** : ೧೫.

**ಮೀನಾರ್ಯೆ** – ಸುಪಾರ್ಶ್ವ ತೀ.ರ ಮುಖ್ಯ ಆರ್ಯಿಕೆ **೫೩** : ೫೦.

**ಮೃಕಂಡು** – ಭೋಗಪುರದ ರಾಜ. ಪ್ರಭಂಜನನ ಪತ್ನಿ. ಸಿಂಹಕೇತುವಿನ ತಾಯಿ **೭೦** : ೭೫.

**ಮೃಗಾವತಿ** – ಪ್ರಜಾಪತಿರಾಜನ ಪತ್ನಿ. ತ್ರಿಪೃಷ್ಠನ ತಾಯಿ **೫೭** : ೮೫, **೬೨** : ೯೦, **೭೪** : ೧೨೨.
– ಚೇಟಕನ ಸಪ್ತ ಪುತ್ರಿಯರಲ್ಲಿ ದ್ವಿತೀಯಳು **೭೫** : ೫೫೫, ಪತಿ ಕೌಶಂಬಿಯ ರಾಜ ಶತಾನೀಕ : ೫೫೮.

**ಮೇಘಮಾಲಿನಿ** – ಮೇಘವಾಹನನ ಮಡದಿ. ವಿದ್ಯುತ್ಪ್ರಭನ ತಾಯಿ **೬೨** : ೭೧–೨; **೬೩** : ೫೪೧.
– ಹೇಮಾಂಗದರಾಜನ ಪತ್ನಿ. ಘನರಥನ ತಾಯಿ **೬೩** : ೬೯೨.

**ಮೇಘಶ್ರೀ** – ಪೌಲಸ್ತ್ಯನ ಪತ್ನಿ. ದಶಾನನ ತಾಯಿ **೬೮** : ೪೮೬.

**ಮೇನಕೆ** – ಇಂದ್ರನ ಪತ್ನಿಯರಲ್ಲಿ ಒಬ್ಬಳು. ಪೂರ್ವಭವದ ಪುಷ್ಪವತಿ **೪೬** : ೨೫೭.

**ಮೇರುಮತಿ** – ಇಂದ್ರಗಿರಿರಾಜನ ಪತ್ನಿ. ಕೃಷ್ಣನ ಪತ್ನಿ ಗಾಂಧಾರಿಯ ತಾಯಿ **೭೧** : ೯೨೨.

**ಮೇರುಮಾಲಿನಿ** – ಅನಂತವೀರ್ಯರಾಜನ ಪತ್ನಿ. ಪುತ್ರ ಮೇರು **೫೯** : ೩೦೨.

**ಯಕ್ಷದತ್ತೆ** – ಯಕ್ಷದತ್ತನೆಂಬ ಗೃಹಸ್ಥನ ಪತ್ನಿ **೭೧** : ೭೭೬.

**ಯಕ್ಷಿ** – ನೇಮಿನಾಥರ ಸಮವಸರಣದಲ್ಲಿದ್ದ ನಲವತ್ತು ಸಾವಿರ ಆರ್ಯಿಕೆಯರಲ್ಲಿ ಒಬ್ಬಳು **೭೧** : ೬೮೩.
– ಓರ್ವ ವ್ಯಂತರದೇವತೆ. ಉಪಕಾರ ಮನೋಧರ್ಮ **೭೫** : ೭೫೫. ಶ್ಮಶಾನದಲ್ಲಿ ವಿಜಯಾದೇವಿಗೆ ಸಹಾಯಕಳಾಗಿದ್ದು ಸಮಾಧಾನ ಪಡಿಸುತ್ತಾಳೆ : ೭೭೯ – ೮೯, ಶೋಕ ಹೋಗಲಾಡಿಸುವ ಕಥೆಗಳನ್ನು, ಸಂಸಾರದ ಸ್ಥಿತಿಯನ್ನು, ಧರ್ಮಮಾರ್ಗವನ್ನು ನಿರೂಪಿಸುತ್ತಾಳೆ : ೮೦೦–೨.

**ಯಕ್ಷಿದೇವಿ** – ಯಕ್ಷನೆಂಬ ಗೃಹಸ್ಥನ ಪುತ್ರಿ **೭೧** : ೮೮೭ (ಹಿಂದಿನ ಜನ್ಮದ ಅನುಂದರಿ). ಧರ್ಮಸೇನ ಮುನಿಯಲ್ಲಿ ವ್ರತಸ್ಥಳಾದಳು. ಸತ್ತು ಹರಿವರ್ಷ ಭೋಗಭೂಮಿಯಲ್ಲಿ ಜನಿಸಿದಳು : ೮೮೯. ನಾಗಕುಮಾರಿಯಾದಳು : ೮೯೦.

**ಯಮುನಾದತ್ತೆ** – ಮಧುರಾನಗರದ ಭಾನುದತ್ತ ಶ್ರೇಷ್ಠಿಯ ಪತ್ನಿ. ಏಳು ಮಕ್ಕಳು. ಜಿನದತ್ತಾರ್ಯಿಕೆಯರಲ್ಲಿ ದೀಕ್ಷಿತಳಾದಳು **೭೧** : ೭೦೦–೩.

**ಯಶಸ್ವತೀ, ಸುನಂದೆ** – ಕಚ್ಛ, ಮಹಾಕಚ್ಛ ರಾಜರ ಸಹೋದರಿಯರು. ವೃಷಭನಾಥನ ಪತ್ನಿಯರು **೧೫** : ೭೦. ವರ್ಣನೆ : ೭೭ – ೯೯. ಗರ್ಭವತಿಯಾದ ಯಶಸ್ವತಿಯ ಸ್ವಭಾವ **೧೫** : ೧೨೯.

**ಯಶಸ್ವತಿ** – ಪ್ರಜಾಪಾಲರಾಜನ ಪುತ್ರಿ. ಗುಣವತಿಯ ಸೋದರಿ. ಆರ್ಯಿಕೆಯರಲ್ಲಿ ವ್ರತಪಡೆದಳು **೪೬** : ೪೬–೭.
– ಹೇಮಾಭರಾಜನ ಪತ್ನಿ. ಯಶೋಧರ ಚಾರಣಮುನಿಯ ದರ್ಶನ ಪಡೆದು ಪೂರ್ವಭವಸ್ಮರಣೆ ಹೊಂದಿದಳು **೭೧** : ೯೨೭.
– ಆರ್ಯಿಕೆ. ಜ್ಯೇಷ್ಠೆಯ ಅತ್ತೆ (ಅಂದರೆ ಚೇಟಕನ ಸೋದರಿ( ?)) **೭೫** : ೫೮೧, ಇವರಲ್ಲಿ ಚಂದನೆ ಶ್ರಾವಕ ವ್ರತವನ್ನು ಸ್ವೀಕರಿಸಿದಳು : ೫೮೪.

**ಯಶಸ್ವತೀದೇವಿ** – ಧನಂಜಯನ ರಾಣಿ. ಮಹಾಬಲನ ತಾಯಿ **೭** : ೮೨.
– ವಿಶ್ವಸೇನ ಮಹಾರಾಜನ ದ್ವಿತೀಯ ಪತ್ನಿ. ಪುತ್ರ ಚಕ್ರಾಯುಧ. ಪೂರ್ವಭವದ ದೃಢವ್ರತ **೬೩** : ೯೨೫.

**ಯಶೋಧರೆ** – ದರ್ಶಕ, ಶ್ರೀಧರೆಯರ ಪುತ್ರಿ. ಭವಮಾಲೆ : ವಾರುಣಿ – ಪೂರ್ಣಚಂದ್ರ – ವೈಡೂರ್ಯದೇವ – ಯಶೋಧರೆ **೫೯** : ೨೩೦, ಪತಿ ಸೂರ್ಯಾವರ್ತ : ೨೩೦, ದೀಕ್ಷೆ : ೨೩೨.
– ವಜ್ರದಂತರಾಜನ ರಾಣಿ. ಸಾಗರದತ್ತನ ತಾಯಿ **೭೬** : ೧೩೭೯–೮೦.

**ರಂಭೆ** – ವಜ್ರಾಯುಧ ಮುನಿಯ ತಪಸ್ಸಿಗೆ ವಿಘ್ನ ಉಂಟುಮಾಡಲು ಇಚ್ಛಿಸಿದ ಅತಿಬಲ, ಮಹಾಬಲ ಅಸುರದೇವತೆಗಳನ್ನು ರಂಭೆ, ತಿಲೋತ್ತಮೆಯರು ತಿರಸ್ಕರಿಸಿದರು **೬೩** : ೬೪೭.

**ರಕ್ಷಿಲೆ** – ಅರಜಿನೇಶ್ವರರ ಮುಖ್ಯ ಆರ್ಯಿಕೆ **೬೫** : ೪೩.

**ರತ್ನಮಾಲೆ** – ಅತಿವೇಗ, ಪ್ರಿಯಕಾರಿಣಿಯರ ರಾಜಪುತ್ರಿ. ಪೂರ್ವಭವದ ಶ್ರೀಧರೆ. ವಜ್ರಾಯುಧನ ರಾಣಿ **೫೯** : ೨೪೧–೨. ಉತ್ತರ ಭವದ ವೀತಭಯ ರಾಜಕುಮಾರ : ೨೭೮–೮೦. ಭವಮಾಲೆ **೫೯** : ೩೦೬–೯.
– ಶ್ರೇಷ್ಠಿ ರತ್ನತೇಜನ ಹೆಂಡತಿ. ಪುತ್ರಿ ಅನುಪಮೆ **೭೫** : ೧೦೦೦.

**ರತ್ನವತಿ** – ವಿದೇಹದ ರಾಜ ಗೋಪೇಂದ್ರನ ಪುತ್ರಿ **೭೫** : ೧೧೯೩, ವಿವಾಹ ಪ್ರತಿಜ್ಞೆ : ೧೧೯೪.

**ರಾಜಮತಿ** – ಉಗ್ರಸೇನರಾಜನ ಪುತ್ರಿ. ನೇಮೀಶ್ವರರಿಗೆ ಕೃಷ್ಣ ನಿಶ್ಚಯಿಸಿದ ವಧು **೭೧** : ೬೪೨, ದೀಕ್ಷೆ : ೬೬೯, ಆರ್ಯಿಕೆ : ೬೮೩.

**ರಾತ್ರಿಮತಿ** – ನೇಮೀಶ್ವರರ ಪ್ರಮುಖ ಆರ್ಯಿಕೆ. ಇವರಲ್ಲಿ ಕುಂತಿ, ಸುಭದ್ರೆ, ದ್ರೌಪದಿಯರು ದೀಕ್ಷಿತರಾದರು **೭೨** : ೧೨೨೪.

**ರಾಧೆ** – ಆದಿತ್ಯರಾಜನ ಪತ್ನಿ. ಕರ್ಣನ ಸಾಕುತಾಯಿ **೭೦** : ೧೧೩.

**ರಾಮದತ್ತೆ** – ಸಿಂಹಸೇನನ ರಾಣಿ **೫೯** : ೧೪೬. ಭದ್ರಮಿತ್ರ ಹುಚ್ಚನಲ್ಲನೆಂದು ಭಾವಿಸಿದಳು : ೧೬೬, ಉಪಾಯದಿಂದ ಸತ್ಯಘೋಷನ ವಂಚನೆ ಬಯಲಾಯಿತು : ೧೬೭–೯, ವ್ರತಿಯಾದಳು : ೨೦೦, ನಿದಾನಶಲ್ಯ : ೨೨೫, ಭಾಸ್ಕರದೇವ ಆದಳು : ೨೨೬. ಭವಮಾಲೆ : **೫೯** : ೩೦೬–೯.

**ರತಿ** – ಕುಬೇರನ ರತಿ ಎಂಬ ಹೆಸರಿನ ದೇವಿ. ಪೂರ್ವಭವದ ಅನಂತಶ್ರೀ **೬೩** : ೫೩೦.

**ರತಿಕಾಂತೆ** – ರತಿವೇಗ, ಕಾಂಚನಮಾಲೆಯರ ನಾಲ್ವರು ಪುತ್ರಿಯರಲ್ಲಿ ಮೂರನೆಯವಳು **೪೭** : ೧೨೩.

**ರತಿಕಾರಿಣಿ** – ಪ್ರಿಯದತ್ತೆಯ ಸಖಿ **೪೬** : ೪೨.

**ರತಿಪ್ರಭಾ** – ಆದಿತ್ಯಗತಿ, ಪ್ರಭಾವತಿಯರ ಪುತ್ರಿ. ಚಿತ್ರರಥ ಇವಳನ್ನು ವಿವಾಹವಾದ **೪೬** : ೧೮೦.

**ರತಿವಿಮಲೆ** – ಶಿಲ್ಪಪುರದ ರಾಜ ನಗರಪತಿಯ ಮಗಳು. ಮುರುಟಿದ ಬೆರಳುಳ್ಳವನ ಬೆರಳುಗಳು ನೇರವಾದಾಗ, ಶ್ರೀಪಾಲ ಈಕೆಯನ್ನು ವಿವಾಹವಾಗುವನೆಂಬ ಆದೇಶ ವಚನ **೪೭** : ೧೪೪–೫.

**ರತಿವೇಗೆ** – ಮೃಣಾಲವತಿ ನಗರದ ಶ್ರೇಷ್ಠಿ ಶ್ರೀದತ್ತನ ಪುತ್ರಿ **೪೬** : ೧೦೫, ದ್ರವ್ಯಾರ್ಥಿಯಾಗಿ ವ್ಯಾಪಾರಕ್ಕೆ ಹೋಗಿದ್ದ ಭವದೇವ (= ದುರ್ಮುಖ) ೧೨ ವರ್ಷ ಅವಧಿ ಮುಗಿದರೂ ಬಾರದಿದ್ದಾಗ ಸುಕಾಂತನೊಡನೆ ವಿವಾಹ ಜರುಗಿತು : ೧೦೮, ಶಕ್ತಿಷೇಣ ರಾಜನ ಆಶ್ರಯ : ೧೦೯.

**ರತಿಷೇಣಾ** – ಚಂದ್ರಪ್ರಭಾ ತೀ.ರ ಆರ್ಯಿಕೆಯರಲ್ಲಿ ನಾಯಕಿ **೫೨** : ೬೩.

– ಸುಲೋಚನೆಯ ಪೂರ್ವಭಾವ **೪೬** : ೨೯.

**ರತಿಷೇಣಾ, ರತಿ** – ಇಬ್ಬರು ದೇವಿಯರು. ಈಶಾನೇಂದ್ರನು ಪ್ರಿಯಮಿತ್ರೆಯ ರೂಪವನ್ನು ಹೊಗಳಿದಾಗ, ಈ ದೇವಿಯರು ಪರೀಕ್ಷಿಸಲು ಬಂದರು **೬೩** : ೮೦೦.

**ರುಗ್ಮಿಣಿ** – ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩. ಭವಮಾಲೆ : ಲಕ್ಷ್ಮೀಮತಿ – ಯತಿಯ ಬಗ್ಗೆ ಜುಗುಪ್ಸೆ – ಇಲಿ – ಅಂಧಸರ್ಪ – ಕತ್ತೆ – ಅಂಧಸರ್ಪ – ಅಂಧಸೂಕರ – ಪೂತಿಕೆ – ನಾಕಗತಿ – ರುಗ್ಮಿಣಿ : ೮೧೩–೮೩೮.

**ರೂಪಶ್ರೀ** – ರೈದತ್ತ ಮತ್ತು ಧನಶ್ರೀಯ ಪುತ್ರಿ **೭೬** : ೧೨೮೮, ಜಂಬುಕುಮಾರನ ಪತ್ನಿ : ೧೨೯೦.

**ರೇಣುಕಿ** – ಜಮದಗ್ನಿಯ ಪತ್ನಿ. ಪಾರತರಾಜನ ಕಿರಿಯ ಪುತ್ರಿ. ಇಂದ್ರರಾಮ, ಶ್ವೇತರಾಮ ಎಂಬ ಮಕ್ಕಳು **೬೫** : ೯೦–೨, ಪತಿಯಿಂದ ಪ್ರೇರಿತಳಾಗಿ ಅಣ್ಣನಾದ ಅತಿಂಜಯ ಮುನಿಯಲ್ಲಿ ಮದುವೆ ಉಡುಗೊರೆ ಕೇಳುತ್ತಾಳೆ. ಆತ ಸಮ್ಯಕ್ತ್ವವನ್ನು ಕೊಡುತ್ತಾನೆ : ೯೪–೭, ಹಾಗೂ ಕಾಮಧೇನು ವಿದ್ಯೆ, ಮಂತ್ರದಕೊಡಲಿ ಕೊಡುತ್ತಾನೆ : ೯೮.

**ರೇವತಿ** – ಹಸ್ತಿನಾಪುರದ ರಾಣಿ ನಂದಯಶೆಯ ದಾದಿ. ನಂದಯಶೆ ತ್ಯಜಿಸಿದ ಮಗುವನ್ನು ತನ್ನ ಅಕ್ಕ ಬಂಧುಮತಿಗೆ ನೀಡಿದಳು **೭೧** : ೭೬೧–೨.

– ರಾಷ್ಟ್ರಕೂಟನ ಹೆಂಡತಿ. ಇವರ ಮಕ್ಕಳು ಭಗದತ್ತ, ಭವದೇವ **೭೬** : ೧೩೯೩.

**ರೋಹಿಣಿ** – ಹಿರಣ್ಯವರ್ಮನ ಪುತ್ರಿ. ಈಕೆ ಸ್ವಯಂವರದಲ್ಲಿ ವಸುದೇವನನ್ನು ವರಿಸಿದಳು **೭೦** : ೩೦೭–೯, ಆಗ ಉದ್ರಿಕ್ತರಾಗಿ ಯುದ್ಧಕ್ಕೆ ಬಂದ ಸಮುದ್ರ ವಿಜಯಾದಿಗಳಿಗೆ ತನ್ನ ಹೆಸರಿನ ಬಾಣಬಿಟ್ಟು ತನ್ನನ್ನು ಪರಿಚಯಿಸಿಕೊಂಡನು : ೩೧೦–೪, ಈಕೆಗೆ ಪದ್ಮನೆಂಬ ೯ನೇ ಬಲಭದ್ರ ಜನಿಸಿದ : ೩೧೯.

– ಜ್ಯೋತಿರ್ಲೋಕದ ಚಂದ್ರನ ಪತ್ನಿ **೭೧** : ೯೪೨.

**ಲಕ್ಷ್ಮಣಾದೇವಿ** – ಮಹಾಸೇನರಾಜನ ಪತ್ನಿ. ಚಂದ್ರಪ್ರಭ ತೀ.ರ ಜನನಿ **೫೪** : ೧೬೪.

**ಲಕ್ಷ್ಮಣೆ** – ವಿಶಾಖಭೂತಿಯ ಪತ್ನಿ. ವಿಶಾಖನಂದಿಯ ತಾಯಿ **೫೭** : ೭೩; **೭೪** : ೮೮.

**ಲಕ್ಷ್ಮಣಾ(ಣೆ)** – ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩, ಸಪ್ರಕಾರ ಪುರದ ರಾಜನಾದ ಶಂಬರನಿಗೂ ಶ್ರೀಮತಿಗೂ ಜನಿಸಿದವಳು. ಶ್ರೀಪದ್ಮಾ ಹಾಗೂ ಧ್ರುಮಸೇನರ ಕಿರಿಯ ಸಹೋದರಿ : ೯೦೬. ಭವಪರಂಪರೆ : **೭೧** : ೮೯೬–೯೧೧.

**ಲಕ್ಷ್ಮೀ** – ಉದ್ಯೋಗಶೀಲ ಪುರುಷನನ್ನು ಹುಡುಕುತ್ತಾಳೆ **೬** : ೧೭೫, ಸಮುದ್ರದಲ್ಲಿ ಜನಿಸಿದಳು **೪೩** : ೨೯೫.

– ಪದ್ಮೋತ್ತರ ರಾಜನ ಪತ್ನಿ **೫೮** : ೬.

– ರವಿಪ್ರಭದೇವನ ಪತ್ನಿ **೪೭** : ೨೬೦.

**ಲಕ್ಷ್ಮೀಮತಿ** – ವಜ್ರದಂತನ ಪತ್ನಿ **೬** : ೫೯, ಶ್ರೀಮತಿಯ ತಾಯಿ **೮** : ೨೫೨.

– ಸೋಮಪ್ರಭರಾಜನ ಪತ್ನಿ. ಜಯಕುಮಾರನ ಮಾತೆ **೪೩** : ೭೭–೮.

– ಅಕಂಪನ ರಾಜನ ಮಗಳು. ಸುಲೋಚನೆಯ ಸಹೋದರಿ. ಅರ್ಕಕೀರ್ತಿಯೊಡನೆ ವಿವಾಹ **೪೩** : ೧೩೫.

– ವಜ್ರಾಯುಧನ ಪತ್ನಿ. ಪುತ್ರ ಸಹಸ್ರಾಯುಧ **೬೩** : ೫೫೬.

– ಸೋಮನೆಂಬ ವಿಪ್ರನ ಪತ್ನಿ. ಸಮಾಧಿಗುಪ್ತಮುನಿಯ ಬಗ್ಗೆ ಜುಗುಪ್ಸೆ – ಉದುಂಬರ ಕುಷ್ಠ – ಇಲಿಯಾದಳು **೭೧** : ೮೧೫–೮.

**ವಜ್ರಮಾಲಿನಿ** – ವಜ್ರಾಂಗದ ಖೇಚರನ ಪತ್ನಿ **೬೩** : ೫೨೬.

**ವಪ್ರಶ್ರೀ** – ದೃಢಪ್ರಹಾರಿ ಭೃತ್ಯನ ಪತ್ನಿ. ಮಂಗಿಯ ಅತ್ತೆ. **೭೧** : ೨೦೭–೮.

– ಅಯೋಧ್ಯೆಯ ಅರ್ಹದ್ದಾಸ ಶ್ರೇಷ್ಠಿಯ ಪತ್ನಿ **೭೨** : ೯೮೫.

**ವನದೇವತೆ** – ವೃಷಭನಾಥನೊಡನೆ ತಪಸ್ಸನ್ನು ಸ್ವೀಕರಿಸಿದ ರಾಜರು ಶೀಘ್ರವೇ ವ್ರತಭ್ರಷ್ಟರಾಗಿ ವನಫಲ, ಜಲಗಳನ್ನು ಸ್ವೀಕರಿಸುವಾಗ, ಮುನಿರೂಪದಲ್ಲಿ ಹೀಗೆ ಮಾಡಬೇಡಿ ಎಂದು ಎಚ್ಚರಿಸಿದ ದೇವತೆ **೧೮** : ೫೨–೩.

**ವನಮಾಲೆ** – ವೀರದತ್ತ ಶ್ರೇಷ್ಠಿಯ ಪತ್ನಿ **೭೦** : ೬೬, ಸುಮುಖ ಶ್ರೇಷ್ಠಿಗೆ ವಶವಾದಳು : ೭೯.

– ಮಹಾಪದ್ಮರಾಜನ ಪತ್ನಿ. ಪುತ್ರ ಶಿವಕುಮಾರ **೭೬** : ೧೩೭೧.

**ವನಯಕ್ಷಿ** – **೭೪** : ೪೦೩, ಉಪಾಯದಿಂದ ಖದಿರಸಾಗರನ ವ್ರತಭಂಗವಾಗದಂತೆ ನೋಡಿಕೊಳ್ಳುತ್ತಾಳೆ. ವ್ಯಂತರದೇವತೆ : ೪೧೩, ಉಪಕಾರಬುದ್ಧಿ : ೪೧೬.

**ವರುಣಾ** – ಚಂದ್ರಪ್ರಭ ತೀ.ರ ಸಭೆಯಲ್ಲಿದ್ದ ಪ್ರಮುಖ ಆರ್ಯಿಕೆ **೫೪** : ೨೮೮.

**ವರುಣಿ** – ಕಮಠನ ಪತ್ನಿ **೭೩** : ೧೦, ಸತ್ತು ವಜ್ರಘೋಷವೆಂಬ ಆನೆಗೆ ಪ್ರಿಯವಾದ ಹೆಣ್ಣಾನೆ ಆದಳು : ೧೩.

**ವಸಂತಸೇನೆ** – ಮಹಾನಂದರಾಜನ ಪತ್ನಿ. ಹರಿವಾಹನನ ತಾಯಿ **೮** : ೨೨೭.

– ಸಮುದ್ರಸೇನ ಹಾಗೂ ಜಯಸೇನರ ರಾಜಕುಮಾರಿ. ಕನಕಶಾಂತಿಯ ಕಿರಿಯ ಹೆಂಡತಿ **೬೩** : ೭೨೯–೩೦.

– ಒಬ್ಬ ವೇಶ್ಯೆ. ವಿಟರೊಂದಿಗೆ ಇದ್ದ ಇವಳನ್ನು ನೋಡಿ, ಸುಕುಮಾರಿ ಆರ್ಯಿಕೆ ನಿದಾನಶಲ್ಯ ಹೊಂದಿದಳು **೭೨** : ೧೨೧೭.

**ವಸಂತಿಕೆ** – ಸುರದೇವನ ಪತ್ನಿ ಪೃಥಿವಿಯ ದಾಸಿ **೪೬** : ೩೫೨.

**ವಸುಂಧರಾದೇವಿ** – ವಜ್ರದಂತಚಕ್ರವರ್ತಿಯ ತಾಯಿ. ಯಶೋಧರರಾಜನ ಪತ್ನಿ **೭** : ೧೦೨.

**ವಸುಂಧರಿ** – ಸ್ತಿಮಿತಸಾಗರನ ಪತ್ನಿ. ಮಗ ಅಪರಾಜಿತ **೬೨** : ೪೧೧.

– ವಾಸವರಾಜನ ಪತ್ನಿ. ನಂದಯಶೆಯ ತಾಯಿ **೭೧** : ೭೮೦.

– ಮರುಭೂತಿಯ ಪತ್ನಿ **೭೩** : ೧೦.

**ವಸುಂಧರೆ** – ಸುಮಿತ್ರರಾಜನ ಪತ್ನಿ. ಶ್ರೀಚಂದ್ರೆಯ ತಾಯಿ **೬೫** : ೯೮೭.

– ಅಲಕಾಪುರದ ಮಹಾಸೇನನ ಪುತ್ರಿ. ಉಗ್ರಸೇನ, ವರಸೇನರ ತಂಗಿ **೭೬** : ೧೫೧೫. ವಸುನಂದ ಖಡ್ಗದಿಂದ ಭೀಮಕನನ್ನು ಕೊಂದು ಭೂತಿಲಕ ನಗರದಲ್ಲಿ ಏಕಾಂಗಿಯಾಗಿದ್ದ ಇವಳನ್ನು ಪ್ರೀತಿಂಕರ ರಕ್ಷಿಸಿದ : ೧೫೨೯, ಹಡಗಿನಲ್ಲಿ ಮೌನ ವ್ರತ : ೧೫೪೩, ನಾಗದತ್ತನ ಪತ್ನಿ ಪ್ರಿಯಮಿತ್ರೆಯನ್ನು ತಡೆದು ನಿಲ್ಲಿಸುತ್ತಾಳೆ : ೧೫೭೩.

**ವಸುಧಾದೇವಿ** – ಜನಕರಾಜನ ಪತ್ನಿ. ಪುತ್ರಿ ಸೀತೆ **೬೭** : ೧೬೭.

**ವಸುಮತಿ** – ಪ್ರಜಾಪಾಲ ಮಹಾರಾಜನ ಸೊಸೆ. ಲೋಕಪಾಲರಾಜನ ಪತ್ನಿ. ಕಾಮಕ್ರೀಡೆಯಲ್ಲಿ ತನ್ನ ಪತಿಯನ್ನು ಕಾಲಿನಿಂದ ಒದ್ದಳು **೪೪** : ೬೨–೩, ಪೂರ್ವಭವದ ದೇವಶ್ರೀ **೪೬** : ೨೨೭–೩೧.

– ಅರಿಷ್ಟಪುರಾಧಿಪತಿ ವಾಸವರಾಜನ ಪತ್ನಿ. ಪುತ್ರಮೋಹದಿಂದ ವಿರಕ್ತಳಾಗದೆ, ಕುಚೇಷ್ಟೆಯಿಂದ ಸತ್ತು ಬೇಡತಿಯಾದಳು **೭೧** : ೯೦೦.

**ವಸುಷೇಣಾ** – ಸುರದೇವರಾಜನ ನಾಲ್ವರು ಪತ್ನಿಯರಲ್ಲಿ ಮೊದಲನೆಯವಳು **೪೬** : ೩೫೧.

**ವಾಗ್ದೇವಿ** – ಅಂಧಕವೃಷ್ಟಿಯ ೭ನೇ ಸೊಸೆ. ಧರಣನ ಪತ್ನಿ **೭೦** : ೯೯.

**ವಾಯುವೇಗೆ** – ಚಂದ್ರಾಭನ ಪುತ್ರಿ **೬೨** : ೩೭, ಜ್ವಲನಜಟಿಗೆ ಪತ್ನಿಯಾದಳು : ೩೮, ಪತಿವ್ರತೆ : ೪೧, ಪುತ್ರ ಅರ್ಕಕೀರ್ತಿ : ೪೩, ಪುತ್ರಿ ಸ್ವಯಂಪ್ರಭೆ : ೪೪. ತಾಯಿ ಸುಭದ್ರೆ **೭೪** : ೧೩೪.

**ವಾರಿಷೇಣೆ** – ಕುಬೇರಪ್ರಿಯ ಶ್ರೇಷ್ಠಿಯ ಪುತ್ರಿ. ಗುಣಪಾಲ ಮಹಾರಾಜನ ಮಗ ವಸುಪಾಲನು ಲಗ್ನವಾದನು **೪೬** : ೩೩೨, **೪೭** : ೧೬೯.

**ವಾರುಣಿ** – ಮೃಗಾಯಣ ವಿಪ್ರನ ಪುತ್ರಿ **೫೯** : ೨೦೭, ಇವಳೇ ರಾಮದತ್ತೆಯ ಮಗ ಪೂರ್ಣಚಂದ್ರ ಆದಳು : ೨೧೧, ಭವಮಾಲೆ : ವಾರುಣಿ – ಪೂರ್ಣಚಂದ್ರ ವೈಡೂರ್ಯದೇವ – ಯಶೋಧರೆ – ರುಚಕಪ್ರಭದೇವ – ರತ್ನಾಯುಧ –

ಅಚ್ಯುತಕಲ್ಪದದೇವ – ವಿಭೀಷಣ – ೨ನೇ ನಾರಕಿ – ಶ್ರೀಧಾಮ – ದೇವ – ಜಯಂತ – ಧರಣೇಂದ್ರ – ಮಂದರ ಗಣಧರ **೫೯** : ೩೧೦–೨.

**ವಿಂಧ್ಯಶ್ರೀ** – ವಿಂಧ್ಯಕೇತು ಹಾಗೂ ಪ್ರಿಯಂಗುಶ್ರೀ ರಾಜದಂಪತಿಗಳ ಪುತ್ರಿ. ಇವಳು ಸುಲೋಚನೆಯ ಜೊತೆಯಲ್ಲಿ ಬೆಳೆಯುತ್ತಿರುವಾಗ ಹಾವು ಕಚ್ಚಿತು. ಆಗ ಸುಲೋಚನೆಯು ಪಂಚನಮಸ್ಕಾರವನ್ನು ಬೋಧಿಸಿದುದರಿಂದ ಮುಂದಿನ ಭವದಲ್ಲಿ ಗಂಗಾಧಿದೇವತೆಯಾದಳು **೪೫** : ೧೫೦–೫.

**ವಿಜಯಸೇನೆ** – ಜಿತಶತ್ರುವಿನ ರಾಣಿ. ಅಜಿತ ತೀರ್ಥಂಕರರ ತಾಯಿ **೪೮** : ೨೧–೩.

**ವಿಜಯಾದೇವಿ** – ಸಿಂಹಸೇನನ ಪತ್ನಿ. ಸುದರ್ಶನನ ತಾಯಿ **೬೧** : ೬೯–೭೦.
- – ಬಲಭದ್ರನಾದ ಅಪರಾಜಿತನ ಪತ್ನಿ. ಇವರ ಪುತ್ರಿ ಸುಮತಿ **೬೩** : ೫೧೫.
- – ವಜ್ರವೀರ್ಯರಾಜನ ಪತ್ನಿ. ವಜ್ರನಾಭಿಯ ತಾಯಿ **೬೩** : ೩೨.
- – ಜೀವಂಧರನ ತಾಯಿ. ದಂಡಕಾರಣ್ಯದಲ್ಲಿ ಹೇಮಾಭ ನಗರಕ್ಕೆ ಹೊರಟ ಜೀವಂಧರನ ಮಿತ್ರರೊಡನೆ ಭೇಟಿ **೭೫** : ೧೧೦೨–೮. ಸತ್ಯಂಧರನ ಪತ್ನಿ **೭೫** : ೭೩೮, ಗರುಡ ಯಂತ್ರದಲ್ಲಿ ಪಲಾಯನ : ೭೬೮, ಸ್ಮಶಾನದಲ್ಲಿ ಪುತ್ರನನ್ನು ಹಡೆದಳು : ೭೭೭, ಗಂಧೋತ್ಕಟನಿಗೆ ತನ್ನ ಶಿಶುವನ್ನು ನೀಡಿದಳು : ೭೯೪.

**ವಿದರ್ಭೆ** – ಸಗರನ ಪತ್ನಿ. ಭಗೀರಥನ ತಾಯಿ **೪೮** : ೧೨೭.

**ವಿದ್ಯುತ್ಪ್ರಭೆ** – ಪಿಂಗಲಗಾಂಧಾರ ಎಂಬ ರಾಜನ ಪುತ್ರಿ. ನಮಿರಾಜನ ಪತ್ನಿ **೪೭** : ೨೬೩.
- – ವಿದ್ಯಾಧರರಾಜ ವಜ್ರದಂಷ್ಟ್ರನ ಪತ್ನಿ. ಪುತ್ರ ವಿದ್ಯುದಂಷ್ಟ್ರ **೫೯** : ೨೯೦–೧.

**ವಿದ್ಯುದ್ವೇಗೆ** – ವಿದ್ಯಾಧರಿ. ಶ್ರೀಪಾಲನನ್ನು ಕೊಲ್ಲಲು ಇವಳನ್ನು ಅಶನಿವೇಗನು ನೇಮಿಸಿದ್ದನು. ಆದರೆ ಇವಳು ಶ್ರೀಪಾಲನನ್ನು ಕಂಡು ಕಾಮವಿಕಾರಕ್ಕೆ ತುತ್ತಾದಳು **೪೭** : ೨೮.
- – ಪೂರ್ವಭವದ ವೈಶ್ರವಣದತ್ತೆ **೪೭** : ೨೨೬.
- – ವಿದ್ಯುದ್ವೇಗ ಖೇಚರನ ಪತ್ನಿ. ಸುರೂಪೆಯ ತಾಯಿ **೭೧** : ೯೧೬.

**ವಿದ್ಯುನ್ಮಾಲೆ** – ಚಕ್ರಧ್ವಜನ ಇನ್ನೊಬ್ಬ ಪತ್ನಿ. ಮಗಳು ಪದ್ಮಾವತಿ **೬೨** : ೩೬೪.
- – ವಜ್ರಬಾಹು ಮತ್ತು ಶೋಭಾದೇವಿಯ ಮಗಳು. ಸಿಂಹಕೇತುವಿನ ಪತ್ನಿ. ಪೂರ್ವಭವದ ವನಮಾಲೆ **೭೦** : ೭೭.
- – ವಿದ್ಯುದ್ಗತಿ ವಿದ್ಯಾಧರ ರಾಜನ ಪತ್ನಿ **೬೩** : ೨೭.

**ವಿದ್ಯುಲ್ಲತೆ** – ಗುಣಮಾಲೆಯ ಸೇವಕಿ. ತನ್ನ ಒಡತಿಯ ಸೂರ್ಯೋದಯ ಎಂಬ ಗಂಧಚೂರ್ಣವೇ ಶ್ರೇಷ್ಠವೆಂದು ಸಾರುತ್ತಿದ್ದಳು **೭೫** : ೮೯೧.

**ವಿದ್ಯುಲ್ಲೇಖೆ** – ಕಾಂತಪುರದ ರಾಜ ಸುವರ್ಣವರ್ಮನ ಪತ್ನಿ. ಮಗ ಮಹಾಬಲ **೭೫** : ೬೩೦.

**ವಿನಯವತಿ** – ನೋ: ವಿನಯಶ್ರೀ **೭೬** : ೧೨೮೮.

**ವಿನಯಶ್ರೀ** – ಅಯೋಧ್ಯೆಯ ರಾಜ ರುದ್ರನ ಮಡದಿ **೭೧** : ೯೧೩, ಬುದ್ಧಾರ್ಥ ಎಂಬ ಮುನಿಗೆ ಆಹಾರದಾನ ಮಾಡಿದುದರ ಫಲವಾಗಿ ಭೋಗಭೂಮಿಯಲ್ಲಿ ಹುಟ್ಟಿದಳು : ೯೧೪.
- – ವಿಜಯರಾಜನ ಪುತ್ರಿ. ಹರಿಷೇಣನ ಪತ್ನಿ. ಮುನಿಗೆ ಆಹಾರ ನೀಡಿದಳು. ಉತ್ತರಭವದ ಚಂದ್ರನ ಪತ್ನಿ ರೋಹಿಣಿ **೭೧** : ೯೪೧–೨.
- – ವೈಶ್ರವಣ ಮತ್ತು ವಿನಯವತಿಯ ಪುತ್ರಿ **೭೬** : ೧೨೮೮, ಜಂಬು ಕುಮಾರನ ಪತ್ನಿ : ೧೨೯೦.

**ವಿಪುಲಮತಿ** – ಚಾರಣಮುನಿ. ಪ್ರಿಯದತ್ತೆಗೆ ಮಕ್ಕಳಾಗುವುದನ್ನು ಸೂಚಿಸಿದರು **೪೬** : ೭೮–೯.
- – ಚಾರಣಮುನಿ. ಇವರಲ್ಲಿ ಹರಿಬಲ ದೀಕ್ಷಿತನಾದ **೭೬** : ೧೫೧೦.

**ವಿಪುಲಮತಿ, ವಿಮಲಮತಿ** – ಮುನೀಶ್ವರರು. ಇವರಲ್ಲಿ ಅಮಿತತೇಜ ಹಾಗೂ ಶ್ರೀವಿಜಯ ತಮ್ಮ ಆಯುಷ್ಯ ಇನ್ನೊಂದು ತಿಂಗಳಿದೆ ಎಂಬುದನ್ನು ತಿಳಿದರು. **೬೨** : ೪೦೫.

**ವಿಪುಲವತಿ** – ಚಾರಣಮುನಿ. ಅವಧಿಜ್ಞಾನಿ. ವೀಣಾ ಸ್ವಯಂವರದಲ್ಲಿ ಸತ್ಯಂಧರನ ಪುತ್ರನಿಗೆ ಗಂಧರ್ವದತ್ತೆ ಸತಿಯಾಗುವಳು ಎಂದು ಪ್ರಶ್ನಿಸಿದ ಮತಿಸಾಗರ ಮಂತ್ರಿಗೆ ತಿಳಿಸುತ್ತಾರೆ **೭೫** : ೮೫೯–೬೨.

**ವಿಮಲಮತಿ** – ಆರ್ಯಿಕೆ. ಇವಳಲ್ಲಿ ಕನಕಶಾಂತಿಯ ಇಬ್ಬರು ಪತ್ನಿಯರು ದೀಕ್ಷಿತರಾದರು **೬೩** : ೬೩೫.

**ವಿಮಲವತಿ** – ನೋ. ವಿದ್ಯುತ್ಪ್ರಭ **೭೬** : ೧೯೨೪.

**ವಿಮಲಸೇನೆ** – ಧಾನ್ಯಪುರದ ವಿಶಾಲನೆಂಬ ರಾಜನ ಪುತ್ರಿ. ವಜ್ರಮಣಿ ಪಾಕದ ಆದೇಶವು ಶ್ರೀಪಾಲನೊಡನೆ ಇವಳ ಲಗ್ನದ ಕುರುಹಾಗಿತ್ತು **೪೭** : ೧೪೮.

**ವಿಮಲಶ್ರೀ** – ಶ್ರೀದತ್ತ ಶ್ರೇಷ್ಠಿಯ ಪತ್ನಿ. ರತಿವೇಗೆಯ ತಾಯಿ **೪೬** : ೧೦೫.
- – ಶ್ರೀಧರನ ಪುತ್ರಿ. ಮೇಘನಾದನ ಪತ್ನಿ. ಆಚಾಮ್ಲವರ್ಧನ ವ್ರತಾಚರಣೆಯಿಂದ ಸದ್ಗತಿ ಹೊಂದಿದಳು **೭೧** : ೯೫೦–೪.

**ವಿಮಲಾ, ಸುಪ್ರಭೆ** – ಸೌಧರ್ಮೇಂದ್ರನ ದೇವಿಯರು. ಜಿನಪೂಜೆ ಸಮಯದಲ್ಲಿ ವಿರಕ್ತರಾಗಿ, ಮನುಷ್ಯತ್ವವನ್ನು ಹೊಂದಿ ತಪಸ್ಸುಮಾಡಲು ನಿಶ್ಚಯಿಸುತ್ತಾರೆ. ಅನಂತರ ಹರಿಶ್ರೀ, ಪೂರ್ವಸೇನೆಯರಾಗಿ ಜನಿಸಿ ದೀಕ್ಷಿತರಾಗುತ್ತಾರೆ **೭೨** : ೧೨೧೦–೩.

**ವಿಮಲೆ** – ರಾಜ ಮೇಘವಾಹನನ ಪತ್ನಿ. ಕನಕಮಾಲೆಯ ತಾಯಿ **೬೩** : ೬೨೮.
- – ಕುಮಾರದತ್ತ ವೈಶ್ಯನ ಪತ್ನಿ **೭೫** : ೮೯೦.
- – ರಾಜಪುರದ ಸಾಗರದತ್ತ ವೈಶ್ಯನ ಪುತ್ರಿ. ಆದೇಶ ನಿರ್ದಿಷ್ಟನಾದ ಜೀವಂಧರನಿಗೆ ಕೊಡುತ್ತಾರೆ **೭೫** : ೧೧೩೬.

**ವಿಶಾಲೆ** – ಮೃಗಾಯಣ ತಪಸ್ವಿಯ ಪತ್ನಿ. ಗೌತಮನ ತಾಯಿ **೭೦** : ೧೧೨.

**ವೀತಶೋಕೆ** – ಶ್ರೇಯಃಪುರದ ರಾಜ ಶಿವಸೇನನ ಪುತ್ರಿ. ಇವಳನ್ನು ಶ್ರೀಪಾಲ ವಿವಾಹವಾಗುವಾಗ, ಹುಟ್ಟುಮೂಗ ಮಾತನಾಡುವನೆಂಬ ಆದೇಶ ವಚನ ವಿತ್ತು **೪೭** : ೧೪೩.
- – ರಾಜ ಮೇಘವಾಹನನ ಪತ್ನಿ. ರಘುವಿನ ತಾಯಿ **೭೦** : ೬೪.

**ವೀರವತಿ** – ನಂದಿವರ್ಧನರಾಜನ ಪತ್ನಿ **೭೪** : ೨೪೩.

**ವೈಜಯಂತಿ** – ಚಕ್ರಪುರದ ಅಧಿಪತಿಯಾದ ವರಸೇನನ ಒಬ್ಬ ರಾಣಿ. ಇವಳ ಮಗ ನಂದಿಷೇಣ **೭೫** : ೧೭೭.

**ವೈಶ್ರವಣದತ್ತೆ** – ಸಾಗರಸೇನ ಹಾಗೂ ಸರ್ವಸಮೃದ್ಧರ ಪುತ್ರಿ **೪೭** : ೧೯೭, ಸಾಗರದತ್ತನ ಪತ್ನಿ : ೧೯೮.

**ಶಂಖಿಕೆ** – ಗೋಶೃಂಗ ತಾಪಸನ ಪತ್ನಿ. ಪುತ್ರ ಮೃಗಶೃಂಗ **೫೯** : ೨೮೯.
- – ರಾಜ ಧನಗುಪ್ತನ ಹೆಂಡತಿ **೬೩** : ೭೫೮, ಆಹಾರದಾನ : ೭೫೯, ಉಪವಾಸ : ೭೫೮, ದೇವಲೋಕ – ಮದನವೇಗೆ ಆದಳು : ೭೬೨.

**ಶಚಿ, ಮೇನಕೆ** – ಇಂದ್ರನ ಪತ್ನಿಯರು. ಪೂರ್ವಭವದಲ್ಲಿ ಪುಷ್ಪಪಾಲಿತ ಹಾಗೂ ಪುಷ್ಪವತಿಯರಾಗಿದ್ದರು. ಹೂ ಕೀಳುವಾಗ ಹಾವಿನ ವಿಷದಿಂದ ಸತ್ತು ದೇವಿಯರಾದರು **೪೬** : ೨೫೭–೯.

**ಶತಕಿ** – ಶಕ್ತಿರಾಜನ ಪತ್ನಿ. ಪರಾಶರನ ತಾಯಿ **೭೦** : ೧೦೨.

**ಶಶಿಪ್ರಭೆ** – ಆದಿತ್ಯಗತಿ ರಾಜನ ಪತ್ನಿ **೪೬** : ೧೪೬.

**ಶಾಂತಿಮತಿ** – ಶುಕಪ್ರಭ ನಗರದ ವಾಯುವೇಗರಾಜನ ಮಗಳು. ವಿದ್ಯೆ ಸಾಧಿಸಲು ಮುನಿಸಾಗರ ಪರ್ವತಕ್ಕೆ ಹೋದಳು **೬೩** : ೬೦೫, ವಿದ್ಯಾಘಾತ ಮಾಡಲು ಬಂದ ವಿದ್ಯಾಧರ(ಅಜಿತಸೇನ)ನ ಸಂಬಂಧ ತಿಳಿದು ವಿರಕ್ತಳಾಗಿ, ಸುಲಕ್ಷಣ ಆರ್ಯಿಕೆಯಲ್ಲಿ ದೀಕ್ಷೆ ಪಡೆದಳು. ಈಶಾನಕಲ್ಪದ ದೇವ ಆದಳು : ೬೨೪.

**ಶಾಲ್ಮಲೀದತ್ತೆ** – ಅಶನಿವೇಗನ ಪುತ್ರಿ. ವಸುದೇವನನ್ನು ಲಗ್ನವಾಗುತ್ತಾಳೆ **೭೦** : ೨೫೪.

**ಶ್ಯಾಮಲತೆ** – ಸುರಮಂಜರಿಯ ಸೇವಕಿ **೭೫** : ೮೯೮. ಚಂದ್ರೋದಯವೆಂಬ ಗಂಧಚೂರ್ಣವನ್ನು ಹೊಗಳುತ್ತಿದ್ದಳು.

**ಶ್ಯಾಮಲೆ** – ಮಗಧಾಧಿಪತಿಯ ಪುತ್ರಿ. ವಸುದೇವನನ್ನು ಲಗ್ನವಾದಳು **೭೦** : ೨೫೧.
- – ಪವನವೇಗನ ಪತ್ನಿ. ನಮಿಯ ತಾಯಿ **೭೧** : ೮೬೬.

**ಶಿವದೇವಿ** – ಸಮುದ್ರವಿಜಯನ ಪತ್ನಿ. ನೇಮೀಶ್ವರರ ಜನನಿ **೭೧** : ೫೨೬–೯.

**ಶಿವಶಂಕರೆ** – ಜಯಕುಮಾರನ ಅನೇಕ ಪತ್ನಿಯರಲ್ಲಿ ಒಬ್ಬಳು. ಸುಲೋಚನೆಯ ಸವತಿ **೪೬** : ೧೦, ಮಗ ಅನಂತವೀರ್ಯ **೪೭** : ೨೭೬.

**ಶೀಲವತಿ** – ಅಯೋಧ್ಯೆಯ ರಾಜ ವಜ್ರಸೇನನ ಪತ್ನಿ. ಹರಿಷೇಣನ ತಾಯಿ **೭೪** : ೨೩೧.

**ಶುಕ್ಲಪ್ರಭೆ** – ವಿಮಲಪ್ರಭವಿಮಾನದ ದೇವಿ. ಪೂರ್ವಭವದ ಸತ್ಯಭಾಮೆ **೬೨** : ೩೭೪.

**ಶುಭಾದೇವಿ** – ವಜ್ರಚಾಪರಾಜನ ಪತ್ನಿ **೭೦** : ೭೬.

**ಶುಭೆ** – ರಾಜಗೃಹದ ಬ್ರಾಹ್ಮಣನ ಪುತ್ರಿ. ಅಧೋಗತಿಗೆ ಹೋದಳು ೭೪ : ೪೬೧–೩.

**ಶೂರ್ಪಣಖಾ** – ರಾವಣನ ಪರವಾಗಿ ಸೀತೆಯನ್ನು ಒಲಿಸಿಕೊಳ್ಳಲು ವಾರಾಣಸೀಪುರಕ್ಕೆ ಪ್ರಯಾಣ **೬೮** : ೫೭೭–೯, ಮುದುಕಿಯಾದುದು : ೮೨೬, ಸೀತೆಯ ಪಾದಕ್ಕೆ ನಮಸ್ಕಾರ : ೬೫೩, ಶೀಲವತಿಯ ಗುಣಗಾನ : ೬೬೩–೪.

**ಶ್ರೀಕಾಂತಾ** – ನಾಗದತ್ತ, ಸುರತಿಯರ ಪುತ್ರಿ **೬** : ೧೩೦.

**ಶ್ರೀಕಾಂತೆ** – ವಜ್ರಸೇನನ ಪತ್ನಿ. ವಜ್ರನಾಭಿಯ ತಾಯಿ ೧೧ : ೯.

– ಶ್ರೀಪುರದ ರಾಜ ಶ್ರೀಷೇಣನ ಪತ್ನಿ **೫೪** : ೩೯, ಸ್ವಪ್ನ : ೫೧.

– ರಾಜ ಮಹಾಬಲನ ಪುತ್ರಿ **೬೨** : ೩೪೯, ಇಂದ್ರಸೇನನ ಪತ್ನಿ : ೩೫೦.

– ಹರಿಷೇಣ ರಾಜನ ಸತಿ. ಪುತ್ರ ಹರಿವಾಹನ **೭೧** : ೭೫೧.

– ಅಶೋಕರಾಜನ ಸುತೆ. ಜಿನದತ್ತಾರ್ಯಿಕೆಯಲ್ಲಿ ದೀಕ್ಷೆ. ಕನಕಾವಲಿ ಎಂಬ ವ್ರತ. ಮಹೇಂದ್ರಕಲ್ಪದಲ್ಲಿ ಜನನ **೭೧** : ೮೯೩.

– ಶ್ರೀಷೇಣರಾಜನ ಪತ್ನಿ **೭೨** : ೧೨೧೩.

**ಶ್ರೀಚಂದ್ರೆ** – ಸುಮಿತ್ರನ ಪುತ್ರಿ. ರೂಪವಿಜ್ಞಾನ ಸಂಪನ್ನಳು **೭೫** : ೯೮೮. ಇವಳ ಪೂರ್ವಭವ ವೃತ್ತಾಂತ : ೧೦೦೬–೧೩, ವನರಾಜನಿಗಾಗಿ ಅಪಹೃತಳಾದಳು : ೧೦೨೭–೩೮, ಮೌನಧಾರಣೆ : ೧೦೪೦, ಸುದರ್ಶನ ಯಕ್ಷನಿಂದ ಬಂಧ ಮುಕ್ತಿ : ೧೦೫೬, ನಂದಾಢ್ಯನೊಡನೆ ವಿವಾಹ : ೧೦೭೦.

**ಶ್ರೀದತ್ತೆ** – ಉತ್ತರಭವದ ಕನಕಶ್ರೀ. ದೇವಿಲ, ಬಂಧುಶ್ರೀಯರ ಸುತೆ. ಇವಳಿಗೆ ಆರು ಜನ ತಂಗಿಯರು (ಕುಂಡಿ, ಕುಂಟಿ, ಕುಣೀ, ಕಿವುಡಿ, ಗಿಡ್ಡಿ, ಕುರುಡಿ) **೬೨** : ೪೯೩–೪. ಸುವ್ರತೆ ಆರ್ಯಿಕೆಗೆ ಆಹಾರದಾನ ನೀಡಿದ ಫಲದಿಂದ ಸಾಮಾಯಿಕ ದೇವಿ ಆದಳು : ೪೯೭.

– ಧನಮಿತ್ರ ವೈಶ್ಯನ ಮಡದಿ. ಮಗ ಸುದತ್ತ **೬೩** : ೬೧೧–೨.

– ಸೋಮನೆಂಬ ತಾಪಸನ ಪತ್ನಿ **೬೩** : ೭೭೮.

– ನೋಡಿ : ಧನಪಾಲ **೭೫** : ೮೦೩–೧೦.

**ಶ್ರೀಧರೆ** – ಖೇಚರ ಅತಿವೇಗನ ಪುತ್ರಿ. (ಮಧುರೆ – ರಾಮದತ್ತೆ – ಭಾಸ್ಕರದೇವ – ಶ್ರೀಧರೆ). ದರ್ಶಕನ ಸತಿಯಾದಳು **೫೯** : ೨೨೯. ಪತಿ ಯಶೋಧರ : ೨೩೦. ಭವಮಾಲೆ **೫೯** : ೩೦೬–೯.

**ಶ್ರೀದೇವಿ** – ಹಿಮವತ್‌ಪರ್ವತದಲ್ಲಿ ವಾಸ **೩೨** : ೧೨೦.

**ಶ್ರೀಮತಿ** – ವಜ್ರದಂತ, ಲಕ್ಷ್ಮೀಮತಿಯರ ಪುತ್ರಿ. ಸ್ವರ್ಗದಿಂದ ಚ್ಯುತಳಾಗಿ ಬಂದ ಸ್ವಯಂಪ್ರಭೆ **೬** : ೬೦, ವರ್ಣನೆ : ೬೧–೮೨, ಪೂರ್ವಭವ ಸ್ಮರಣೆ : ೯೧, ಪಂಡಿತೆಗೆ ತನ್ನ ಮೌನದ ಕಾರಣ ತಿಳಿಸಿದುದು : ೧೨೩–೬೫, ಪಂಡಿತೆಯೊಡನೆ ಪೂರ್ವಭವದ ಲಲಿತಾಂಗನನ್ನು ಹುಡುಕುವ ಸಮಾಲೋಚನೆ : ೧೬೬–೭೨, ಪಂಡಿತೆಯ ಸಮಾಧಾನ : ೧೭೩–೫.

ನಲವತ್ತೊಂಬತ್ತು ಅವಳಿ ಮಕ್ಕಳು **೮** : ೪೯. ಇವಳ ಭವಾವಳಿಯನ್ನು ದಮಧರ ಮುನಿ ಹೇಳಿದರು (ದೇವಿಲನ ಪುತ್ರಿ – ನಿರ್ನಾಮಿಕೆ – ಸ್ವಯಂಪ್ರಭೆ – ಶ್ರೀಮತಿ) **೮** : ೧೮೫–೮.

ವಜ್ರಜಂಘನ ಪತ್ನಿ. ವಜ್ರಜಂಘ ವೃಷಭನಾಥನಾದಾಗ, ಶ್ರೀಮತಿ ದಾನತೀರ್ಥ ಪ್ರವರ್ತಕನಾದ ಶ್ರೇಯಾಂಸರಾಜನಾಗುವಳು **೮** : ೨೪೬.

– ವಜ್ರಜಂಘನ ಮಂತ್ರಿ ಮತಿವರನ ಮಾತೆ **೮** : ೨೧೫.

– ಜಯಕುಮಾರನ ಪತ್ನಿ. ಇವಳಿಗೆ ಹೆಣ್ಣುಹಾವಿನ ಚೇಷ್ಟೆಯನ್ನು ಜಯಕುಮಾರ ಹೇಳುತ್ತಾನೆ **೪೩** : ೧೦೦–೨; **೪೬** : ೧೦.

– ಶ್ರೀಧರರಾಜನ ಮಡದಿ. ಜಯವತಿಯ ತಾಯಿ **೪೭** : ೧೪.

– ಕೌಶಂಬಿಯ ಭೂಪ ಮಹಾಬಲನ ರಾಣಿ **೬೨** : ೩೪೯.

– ಪಾರತರಾಜನ ಸಹೋದರಿ. ಶತಬಿಂದುವಿನ ಪತ್ನಿ. ಜಮದಗ್ನಿರಾಮನ ತಾಯಿ **೬೫** : ೬೦.

– ವಿಶ್ವಾವಸುರಾಜನ ಪತ್ನಿ. ವಸುವಿನ ತಾಯಿ **೬೭** : ೨೫೭.

– ಹಸ್ತಿನಾಪುರದ ಶ್ರೀಚಂದ್ರರಾಜನ ಸತಿ. ಸುಪ್ರತಿಷ್ಠನ ತಾಯಿ **೭೦** : ೫೨.

– ವಾಸವರಾಜನ ಪತ್ನಿ. ರುಗ್ಮಿಣಿಯ ತಾಯಿ **೭೧** : ೮೩೯.

– ಶಂಬರರಾಜನ ಪತ್ನಿ. ಕೃಷ್ಣನ ಪತ್ನಿಯಾದ ಲಕ್ಷ್ಮಣಾದೇವಿಯ ತಾಯಿ **೭೧** : ೯೦೬.

– ಶ್ರೀಧರರಾಜನ ಮಡದಿ **೭೧** : ೯೫೦.

– ಹಿರಣ್ಯವರ್ಮನ ರಾಣಿ. ಪದ್ಮಾವತಿಯ ಮಾತೆ **೭೧** : ೯೫೪.

– ಅರಿಂದಮ ಪ್ರಭುವಿನ ಪತ್ನಿ. ಸುಪ್ರಬುದ್ಧೆಯ ತಾಯಿ **೭೨** : ೯೯೩.

– ಕುಣಿಕರಾಜನ ಸತಿ. ಶ್ರೇಣಿಕನ ತಾಯಿ **೭೪** : ೪೧೮.

– ನೋಡಿ : ಸಾಗರ **೭೫** : ೮೦೩–೧೦.

– ಹರಿಬಲ ವಿದ್ಯಾಧರನ ಮತ್ತೊಬ್ಬ ಪತ್ನಿ. ಇವಳ ಮಗ ಹಿರಣ್ಯವರ್ಮ **೭೬** : ೧೫೦೪.

**ಶ್ರೀಷೇಣೆ** – ಸಹಸ್ರಾಯುಧನ ಪತ್ನಿ. ಪುತ್ರ ಕನಕಶಾಂತ **೬೩** : ೫೫೭.

**ಶ್ರುತವತಿಕ್ಷಾಂತಿ** – ಆರ್ಯಿಕೆ. ಇವರ ಸಮೀಪ ಸೀತೆ ಹಾಗೂ ಪೃಥಿವೀಸುಂದರಿ ಮೊದಲಾದವರು ದೀಕ್ಷಿತರಾದರು **೬೮** : ೧೧೮೯.

**ಸತ್ಯಭಾಮಾ** – ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩.

**ಸತ್ಯಭಾಮೆ** – ಅಮೃತಮತಿ ಎಂಬ ಮಂತ್ರಿಯ ಪತ್ನಿ **೭** : ೬೨, ಮಗ ಪ್ರಹಸಿತ : ೬೩.

**ಸತ್ಯಭಾಮೆ** – ಕಪಿಲನ ಹೆಂಡತಿ. ಗಂಡನ ದುರಾಚಾರದಿಂದ ಆತನ ಬಗ್ಗೆ ಸಂದೇಹಗೊಂಡಳು **೬೨** : ೩೨೯, ಧರಣೀಜಟನಿಗೆ ದ್ರವ್ಯಕೊಟ್ಟು ಗಂಡನ ಕುಲದ ರಹಸ್ಯ ತಿಳಿದಳು. ಸ್ವಾನ್ವಯ ಮಾನಿನಿಯಾದ ಇವಳು ಕಪಿಲನ ಸ್ನೇಹ ಬಯಸದೆ ರಾಜನಿಗೆ ಶರಣಾದಳು : ೩೪೦, ಆಹಾರದಾನದ ಅನುಮೋದನೆ : ೩೪೮, ಉತ್ತರ ಭವಮಾಲೆ : ಸತ್ಯಭಾಮೆ – ಆರ್ಯೆ – ಶುಕ್ಲಪ್ರಭೆ – ಸುತಾರೆ **೬೨** : ೩೭೨–೭, ಪೂರ್ವಭವ ಸಂಬಂಧ **೭೧** : ೭೯೮–೮೧೨ (ಮುಂಡಶಾಲಾಯನನೆಂಬ ಮಿಥ್ಯಾದೃಷ್ಟಿಯ ಬ್ರಾಹ್ಮಣ – ನಾರಕಿ – ತಿರ್ಯಕ್‌ಪ್ರಾಣಿ – ಬೇಡ – ಹರಿಬಲ – ದೇವಗತಿ – ಸತ್ಯಭಾಮೆ).

**ಸತ್ಯವತಿ** – ಮತ್ಸ್ಯ ಕುಲೋತ್ಪನ್ನೆ. ಪರಾಶರನ ಪತ್ನಿ. ವ್ಯಾಸನ ತಾಯಿ **೭೦** : ೧೦೩.

**ಸರ್ವಕಲ್ಯಾಣಿ** – ಸಂಭಿನ್ನ ಖೇಚರರಾಜನ ಪತ್ನಿ **೬೨** : ೨೪೦.

**ಸರ್ವದಯಿತೆ** – ಸರ್ವದಯಿತ ರಾಜಶ್ರೇಷ್ಠಿಯ ತಂಗಿ **೪೭** : ೧೯೩, ಸೋದರತ್ತೆಯ ಮಗ ಸಮುದ್ರದತ್ತನನ್ನು ಲಗ್ನವಾದಳು : ೧೯೮, ಗುಟ್ಟಾಗಿ ಪತಿಯ ಸಂಪರ್ಕ ಹೊಂದಿ ಗರ್ಭಧರಿಸಿದ್ದಾಗ ಆರೋಪಕ್ಕೆ ತುತ್ತಾಗಿ ಗೃಹ ತ್ಯಾಗಿಯಾದಳು : ೨೦೩–೫, ಅಣ್ಣನ ಗೃಹದಲ್ಲೂ ಸ್ಥಳವಿಲ್ಲ : ೨೦೬, ಜನಿಸಿದ ಶಿಶು ಜಯಧಾಮ ಖೇಚರನ ವಶ : ೨೧೦, ಮುಂದೆ ಪುರುಷಜನ್ಮ ಹೊಂದಿದಳು : ೨೧೨.

**ಸರ್ವಯಶಾ** – ಪೌದನಪುರದ ತೃಣಪಿಂಗಲನ ಪತ್ನಿ. ಮಧುಪಿಂಗಲನ ತಾಯಿ **೬೭** : ೨೨೩–೬.

**ಸರ್ವಶ್ರೀ** – ಜಿತಶತ್ರುವಿನ ಪತ್ನಿ. ಸರ್ವದಯಿತನ ಪುತ್ರಿ ೪೭ : ೨೨೦.

– ವೈಜಯಂತ ರಾಜನ ಪತ್ನಿ **೫೯** : ೧೧೦.

– ಧನಂಜಯ ರಾಜನ ರಾಣಿ **೭೧** : ೭೫೦.

– ಅಂತಿಮ ಆರ್ಯಿಕೆ **೭೬** : ೧೬೭೩.

**ಸಹದೇವಿ** – ಅನಂತವೀರ್ಯರಾಜನ ಹೆಂಡತಿ. ಸನತ್ಕುಮಾರ ಚಕ್ರವರ್ತಿಯ ಮಾತೆ **೬೧** : ೧೦೫.

**ಸಾಗರದತ್ತೆ** – ಸಾಗರಸೇನ, ದೇವಶ್ರೀಯರ ಪುತ್ರಿ **೪೭** : ೧೯೫, ಪತಿ ವೈಶ್ರವಣ ದತ್ತ : ೧೯೯.

**ಸಾಗರಸೇನೆ** – ಸಾಗರಸೇನನ ತಂಗಿ. ಸರ್ವಸಮೃದ್ಧನ ಪತ್ನಿ. ಮಕ್ಕಳು ವೈಶ್ರವಣ ದತ್ತ ಹಾಗೂ ವೈಶ್ರವಣದತ್ತೆ **೪೭** : ೧೯೫–೭.

**ಸಿಂಧೂದೇವಿ** – ಸಿಂಧೂನದಿಯ ದೇವತೆ **೩೨** : ೭೯, ಭರತಚಕ್ರಿಯನ್ನು ಸತ್ಕರಿಸಿ ಭದ್ರಾಸನವನ್ನು ನೀಡಿದಳು : ೮೦–೩.

**ಸಿಂಹನಂದಿತೆ** – ರತ್ನಪುರದ ರಾಜ ಶ್ರೀಷೇಣನ ಪತ್ನಿ **೬೨** : ೩೩೭.

**ಸಿದ್ಧಾರ್ಥೆ** – ಅಯೋಧ್ಯೆಯ ರಾಜ ಸ್ವಯಂವರನ ಮುಖ್ಯಪತ್ನಿ **೫೦** : ೧೭.

**ಸೀತಾದೇವಿ** – ಸೋಮಪ್ರಭರಾಜನ ಇನ್ನೊಬ್ಬ ಪತ್ನಿ. ಇವಳ ಮಗ ಪುರು ಷೋತ್ತಮ **೬೦** : ೬೬, **೬೭** : ೧೪೧, ೧೪೩.

**ಸೀತೆ** – ರಾಜ ಜನಕ ಹಾಗೂ ವಸುಧಾದೇವಿಯರ ಪುತ್ರಿ **೬೭** : ೧೬೭, ಮಂಡೋದರಿಗೆ ಜನಿಸಿದಳು. ತಾಯಿ ತಂದೆಯರಿಂದ ಪರಿತ್ಯಕ್ತೆ **೬೮** : ೪೯೯, ಮಿಥಿಲೆಯಲ್ಲಿ ಭೂಮಿಶೋಧನೆಯ ಸಂದರ್ಭದಲ್ಲಿ ಈ ಶಿಶು ಲಭಿಸಿತು. ಸೀತೆ ಎಂದು ಹೆಸರಿಟ್ಟು, ವಸುಧೆಗೆ ಸಾಕಲು ಜನಕರಾಜ ಕೊಟ್ಟನು : ೫೦೦–೧, ಪೂರ್ವಭವದ ಮಣಿಮತಿ : ೪೮೮–೯೧, ಸ್ತ್ರೀತ್ವದ ಕಷ್ಟವನ್ನು ಮುದುಕಿ ವೇಷದ ಶೂರ್ಪಣಖಿಗೆ ತಿಳಿಸಿದಳು, ಪತಿವ್ರತತ್ವವನ್ನು ಶ್ಲಾಘಿಸಿದಳು **೬೮** : ೬೩೮–೫೧, ಲಂಕೆಯಲ್ಲಿ ಇವಳ ಧೋರಣೆ : ೭೯೩–,

ಇವಳಿಗೆ ವಿಜಯರಾಮ ಮೊದಲಾದ ಎಂಟು ಮಂದಿ ಮಕ್ಕಳು. ಮೊದಲ ೭ ಜನ ರಾಜ್ಯವನ್ನು ಬಯಸಲಿಲ್ಲ. ೭ನೆಯವನಾದ ಅಜಿತಂಜಯ ಯುವರಾಜ ನಾದ **೬೮** : ೧೧೮೨–೩.

**ಸೀತೆ** – ಅಂಧಕವೃಷ್ಣಿಯ ೫ನೇ ಸೊಸೆ. ವಿಜಯನ ಪತ್ನಿ **೭೦** : ೯೯.

**ಸುಕಾಂತೆ** – ಚಿತ್ರಚೂಲರಾಜನ ಪುತ್ರಿ. ವಾಯುವೇಗನ ಪತ್ನಿ.

**ಸುಕುಮಾರಿ** – ಚಂಪಾಪುರದ ಧನಿಕನ ಪುತ್ರಿ. ದುರ್ಗಂಧೆ. ಪೂರ್ವಜನ್ಮದ ನಾಗಶ್ರೀ **೭೨** : ೧೨೦೩. ಇವಳನ್ನು ಜಿನದೇವ ವಿವಾಹವಾಗಲಿಲ್ಲ. ಆದರೆ ಜಿನದತ್ತ ಬಲವಂತಕ್ಕೆ ವಿವಾಹವಾದರೂ ಅವಳ ಸಂಪರ್ಕ ಹೊಂದಲಿಲ್ಲ **೭೨** : ೧೨೦೩–೬. ಸುವ್ರತಾರ್ಯಿಕೆಯ ಶಿಷ್ಯರ ವೃತ್ತಾಂತವನ್ನು ಕೇಳಿ ತಾನು ದೀಕ್ಷಿತಳಾದಳು : ೧೨೧೬, ವೇಶ್ಯೆಯನ್ನು ನೋಡಿ ನಿದಾನಶಲ್ಯೆ ಹೊಂದಿದಳು : ೧೨೧೭, ನಾಕಗತಿ : ೧೨೧೮.

**ಸುಖಾವತಿ** – ಭೂತವನದಲ್ಲಿ ವೃದ್ಧೆಯ ರೂಪದಲ್ಲಿ ಇರುತ್ತಾಳೆ. ಧರಣಿಕಂಪನ ಪುತ್ರಿ. ಜಾತಿ, ಕುಲ, ಸಾಧಿತ ಎಂಬ ಮೂರು ಪ್ರಕಾರದ ಮಹಾವಿದ್ಯೆಗಳನ್ನು ಬಲ್ಲಳು. ಪುಂಡರೀಕಿಣೀ ನಗರಕ್ಕೆ ಶ್ರೀಪಾಲನನ್ನು ಕರೆತರುತ್ತಾಳೆ **೪೭** : ೭೩–೯೪, ಶ್ರೀಪಾಲನ ಬಾಯಾರಿಕೆಯನ್ನು ಪುಷ್ಪಮಾಲೆಯ ಸ್ಪರ್ಶದಿಂದ ಹೋಗಲಾಡಿಸಿ ಕನ್ಯೆಯನ್ನಾಗಿ ಮಾಡಿದಳು **೪೭** : ೧೧೯.

– ಶ್ರೀಪಾಲ ಚಕ್ರಿಯ ಪತ್ನಿ. ಮಗ ನರಪಾಲ **೪೭** : ೨೪೪.

**ಸುಜ್ಯೇಷ್ಠೆ** – ಸುರಾಷ್ಟ್ರವರ್ಧನ ರಾಜನ ಪತ್ನಿ. ಸುಸೀಮಾದೇವಿಯ ತಾಯಿ **೭೧** : ೪೯೩.

**ಸುತಾರೆ** – ಸ್ವಯಂವರ ವಿಧಿಯಿಂದ ತ್ರಿಪೃಷ್ಠನ ಪುತ್ರ ಶ್ರೀವಿಜಯನನ್ನು ಲಗ್ನ ವಾದಳು **೬೨** : ೧೬೧. ಜ್ಯೋತಿರ್ವನದಲ್ಲಿ ಕೃತಕ ಹರಿಣವನ್ನು ಶ್ರೀವಿಜಯ ಬೆನ್ನಟ್ಟಿ ಹೋದಾಗ, ಆತನ ವೇಷದಲ್ಲಿ ಅಶನಿಘೋಷ ಆಗಮಿಸಿ ಅಪಹರಿಸಿದ **೬೨** : ೨೨೮–೩೦.

– ಅರ್ಕಕೀರ್ತಿ, ಜ್ಯೋತಿರ್ಮಾಲೆಯರ ಪುತ್ರಿ. ಅಮಿತತೇಜನ ಸೋದರಿ **೬೩** : ೧೫೦.

**ಸುಂದರಿ** – ಮಂದರಮಾಲಿ ವಿದ್ಯಾಧರ ರಾಜನ ಪತ್ನಿ **೮** : ೯೨.

– ಪುಂಡರೀಕಿಣಿಯರಾಜ ಪ್ರಿಯಸೇನನ ರಾಣಿ. ಪ್ರೀತಿಂಕರನ ತಾಯಿ **೯** : ೧೦೯.

– ಮಹೀಧರ ಚಕ್ರವರ್ತಿಯ ಪತ್ನಿ **೧೦** : ೧೧೫.

– ವೃಷಭನಾಥ ಹಾಗೂ ಸುನಂದೆಯರ ಪುತ್ರಿ. ಬಾಹುಬಲಿಯ ಸಹೋದರಿ **೧೬** : ೭, ವಜ್ರಜಂಘ ಭವದಲ್ಲಿ ಸೋದರಿಯಾಗಿದ್ದ ಅನುಂಧರಿ. ತಂದೆಯಿಂದ ಗಣಿತವನ್ನು ಕಲಿತಳು **೧೬** : ೧೦೮, ವೃಷಭಸ್ವಾಮಿಯಿಂದ ದೀಕ್ಷಿತಳಾದಳು **೨೪** : ೧೭೭.

– ಅಪರಾಜಿತರಾಜನ ಪತ್ನಿ **೫೯** : ೨೩೯.

– ಪ್ರೀತಿಭದ್ರ ರಾಜನ ಪತ್ನಿ. ಪುತ್ರ ಪ್ರೀತಿಂಕರ **೫೯** : ೨೫೪–೫.

– ಹರಿವಿಕ್ರಮ ಎಂಬ ಕಿರಾತನ ಪತ್ನಿ **೭೫** : ೧೦೨೮.

– ಮಹಾಸೇನನ ಪತ್ನಿ. ಇವರ ಪುತ್ರರು ಉಗ್ರಸೇನ ಹಾಗೂ ವರಸೇನ **೭೬** : ೧೫೧೦೫.

**ಸುಂದರಿದೇವಿ** – ಸಿಂಹಪುರದ ಶ್ರೀಷೇಣರಾಜನ ಪತ್ನಿ **೮** : ೧೮೦.

**ಸುಂದರನಂದೆ** – ಸುದೃಷ್ಟಿರಾಜನ ಪತ್ನಿ. ಸುವಿಧಿಯ ಮಾತೆ **೧೦** : ೧೨೨, ಅಭಯಘೋಷ ಚಕ್ರಿಯ ಸೋದರಿ : ೧೪೩.

**ಸುದತ್ತೆ** – ಕುಬೇರ ಎಂಬ ವೈಶ್ಯನ ಪತ್ನಿ. ನಾಗದತ್ತನ ತಾಯಿ **೮** : ೨೩೧.

**ಸುದರ್ಶನ** – ಸುಪ್ರಭಾದೇವಿಗೆ ದೀಕ್ಷೆ ನೀಡಿದ ಆರ್ಜಿಕೆ **೭** : ೪೪.

– ವಿದ್ಯುನ್ಮಾಲಿದೇವ ನೋಡಿ: **೭೬** : ೧೨೭೩.

**ಸುದರ್ಶನೆ** – ವಜ್ರಾಯುಧನ ಅರಮನೆಯ ಸೇವಕಿ **೬೩** : ೫೯೧.

– ಸೋಮಪ್ರಭರಾಜನ ಇಬ್ಬರು ಪತ್ನಿಯರಲ್ಲಿ ಒಬ್ಬಳು **೬೭** : ೧೪೧, ಪುತ್ರ ಸುಪ್ರಭ : ೧೪೨.

**ಸುದರ್ಶನಾರ್ಯಿಕೆ** – ಮಂದಿರಸ್ಥವಿರ ಮುನಿಯ ಸಂಘದಲ್ಲಿದ್ದ ಆರ್ಯಿಕೆ **೭೦** : ೧೯೦.

**ಸುನಂದೆ** – ದೃಢರಥನ ಪತ್ನಿ. ಶೀತಲ ತೀ.ರ ಜನನಿ **೫೬** : ೨೪.

**ಸುನೀತಾ** – ಅಂಧಕವೃಷ್ಣಿರಾಜನ ೪ನೇ ಸೊಸೆ. ಹಿಮವಾನನ ಪತ್ನಿ **೭೦** : ೯೯.

**ಸುಪುಬುದ್ಧೆ** – ಅರಿಂದಮ ಹಾಗೂ ಶ್ರೀಮತಿಯ ಪುತ್ರಿ. ಹಿಂದೆ ಅಗ್ನಿಲೆಯಾಗಿದ್ದಾಗ ಮಾಡಿದ ಪಾಪದಿಂದ ಹೆಣ್ಣುನಾಯಾಗಿ, ಅನಂತರ ಉಪಶಮ ಭಾವದಿಂದ ರಾಜಕುಮಾರಿಯಾದಳು **೭೨** : ೯೯೩, ಮುಂದೆ ಮಣಿಚೂಲ ದೇವಿಯಾದಳು : ೯೯೫.

**ಸುಪ್ರಭಾ** – ಭಾನುಮಹಾರಾಜನ ರಾಣಿ. ಧರ್ಮ ತೀ.ರ ಜನನಿ **೬೧** : ೧೪.

– ಅಂಧಕವೃಷ್ಣಿಯ ೧೦ನೇ ಸೊಸೆ. ವಸುದೇವನ ಪತ್ನಿ **೭೦** : ೯೯.

– ಚೇಟಕನ ಸಪ್ತ ಪುತ್ರಿಯರಲ್ಲಿ ಮೂರನೆಯವಳು **೭೫** : ೫೫೫, ಪತಿ ಹೇಮಕಚ್ಛಪುರದ ರಾಜ ದಶರಥ : ೫೫೯.

**ಸುಪ್ರಭಾದೇವಿ** – ಜಯವರ್ಮನ ರಾಣಿ **೭** : ೪೧, ರತ್ನಾವಲಿ ತಪಸ್ಸು ಮಾಡುತ್ತಾಳೆ : ೪೪.

– ಇಂದ್ರಕೇತುವಿನ ಪತ್ನಿ **೬೩** : ೭೬೨.

**ಸುಪ್ರಭೆ** – ಪಿಂಗಲಗಾಂಧಾರರಾಜನ ಪತ್ನಿ **೪೭** : ೨೬೨. ಪುತ್ರಿ ವಿದ್ಯುತ್ಪ್ರಭೆ : ೨೬೩.

– ಆರ್ಯಿಕೆ. ಇವರಲ್ಲಿ ಕನಕಶ್ರೀ ದೀಕ್ಷಿತಳಾದಳು **೬೨** : ೫೦೬.

– ವಜ್ರನೆಂಬ ವೈಶ್ಯನ ಪತ್ನಿ. ಸುಮತಿಯ ತಾಯಿ **೭೧** : ೮೬೩.

**ಸುಬಲಾದೇವಿ** – ಸಮುದ್ರವಿಜಯನ ರಾಣಿ. ಸಗರನ ತಾಯಿ **೪೮** : ೭೧–೨.

**ಸುಭಗೆ** – ಅಚ್ಯುತಕಲ್ಪದ ದೇವಿ. ಪೂರ್ವಭವದ ಪೃಥವೀ **೪೬** : ೯೫೫.

**ಸುಭದ್ರೆ** – ನಮಿರಾಜನ ಸಹೋದರಿ. ಭರತಚಕ್ರಿಯನ್ನು ವಿವಾಹವಾದಳು **೩೨** : ೧೮೩–೪, ಅಂಗಾಂಗ ವರ್ಣನೆ **೩೭** : ೮೯–೧೦೦.

– ದ್ವಾರಾವತಿಯ ರಾಜ ಬ್ರಹ್ಮನ ಪತ್ನಿ **೫೮** : ೮೩.

– ಚಂದ್ರಾಭನ ಪತ್ನಿ. ವಾಯುವೇಗೆಯ ತಾಯಿ **೬೨** : ೩೭.

– ಅಂಧಕವೃಷ್ಣಿಯ ಪತ್ನಿ. ಕುಂತಿ, ಮಾದ್ರಿ ಹಾಗೂ ಸಮುದ್ರವಿಜಯಾದಿ ದಶಪುತ್ರರ ತಾಯಿ **೭೦** : ೯೫–೭.

– ವ್ಯಾಸನ ಪತ್ನಿ. ಧೃತರಾಷ್ಟ್ರ, ಪಾಂಡು ಹಾಗೂ ವಿದುರ ಇವರ ಮಕ್ಕಳು **೭೦** : ೧೦೩.

– ಮೇಘರಥ ರಾಜನ ಪತ್ನಿ. ದೃಢರಥನ ತಾಯಿ **೭೦** : ೧೮೩.

– ಆರ್ಯಿಕೆ. ಇವರಲ್ಲಿ ಸುರೂಪೆ ಸಂಯಮ ಧರಿಸಿದಳು **೭೧** : ೯೨೦.

– ಕೌಶಂಬಿಯ ಶ್ರೇಷ್ಠಿ ಸುಮತಿಯ ಪತ್ನಿ **೭೧** : ೯೩೪.

– ರಾತ್ರಿಮತಿ ಆರ್ಯಿಕೆಯಲ್ಲಿ ದೀಕ್ಷೆ **೬೨** : ೧೨೩–೪.

– ದ್ಯುತಿಲಕ ನಗರದ ಚಂದ್ರಾಭರಾಜನ ಪತ್ನಿ **೭೪** : ೧೩೪.

– ವೃಶ್ಯ ವೃಷಭದತ್ತನ ಪತ್ನಿ. ಇವಳು ಚಂದನೆಯನ್ನು ಶಂಕಿಸಿ ಸಂಕಲೆಯಲ್ಲಿ ಬಂಧಿಸಿದಳು **೭೪** : ೩೪೧–೨.

– ಪೂರ್ವಭವದ ನಾಗದತ್ತ. ತಾಯಿ ಧನದತ್ತೆ **೭೫** : ೭೧೮.

**ಸುಮತಿ** – ಸುಲೋಚನೆಯ ದಾದಿ **೪೩** : ೧೩೭.

– ಆದಿತ್ಯಬಲರಾಜನ ರಾಣಿ. ಹಿರಣ್ಯಮತಿಯ ತಾಯಿ **೫೯** : ೨೦೮.

– ಬಲಭದ್ರನಾದ ಅಪರಾಜಿತನ ಪತ್ನಿಯಾದ ವಿಜಯದೇವಿಯ ಸುತೆ **೬೩** : ೫೧೫, ಆಹಾರದಾನದಿಂದ ಪಂಚಾಶ್ಚರ್ಯ : ೫೧೭, ಪೂರ್ವ ವೃತ್ತಾಂತ : ೫೨೩–೩೩, ಸುವ್ರತ ಆರ್ಯಿಕೆಯಲ್ಲಿ ದೀಕ್ಷೆ, ಸತ್ತು ದೇವ ನಾದಳು : ೫೩೪–೫.

– ದೃಢರಥನ ಪತ್ನಿ **೬೩** : ೬೫೮.

– ಆರ್ಯಿಕೆ. ಇವರಲ್ಲಿ ಪೃಥ್ವೀತಿಲಕೆ ದೀಕ್ಷಿತಳಾದಳು **೬೩** : ೬೮೬.

– ವೈಶ್ಯನಾದ ವಜ್ರನ ಪುತ್ರಿ. ಪೂರ್ವಭವ : ದೇವಿಲೆ – ಬಂಧುಯಶೆ – ಕುಬೇರನ ಪತ್ನಿ **೭೧** : ೮೬೩, ರತ್ನಾವಲಿ ಉಪವಾಸವ್ರತ ಆಚರಿಸಿ ಅಪ್ಸರಸ್ತ್ರೀ ಆದಳು : ೮೬೪.

**ಸುಮಿತ್ರೆ** – ಸುದತ್ತ ಶ್ರೇಷ್ಠಿಯ ಪತ್ನಿ. ಪುತ್ರ ಭದ್ರಮಿತ್ರ **೫೯** : ೧೪೮, ಪುತ್ರನ ದಾನವನ್ನು ಸಹಿಸದೆ ಹೆಣ್ಣು ಹುಲಿಯಾಗಿ ಹುಟ್ಟಿದಳು : ೧೯೦, ಮಗನನ್ನೇ ತಿಂದಿತು : ೧೯೧.

**ಸುಮಿತ್ರಾದೇವಿ** – ದಶರಥನ ಪತ್ನಿ. ಲಕ್ಷ್ಮಣನ ಜನನಿ **೬೭** : ೧೫೨.

**ಸುರತಿ** – ಪಾಟಲಿ ಗ್ರಾಮದ ನಾಗದತ್ತ ವರ್ತಕನ ಪತ್ನಿ **೬** : ೧೨೮.

**ಸುರಮಂಜರಿ** – ವೈಶ್ರವಣ ವೈಶ್ಯನ ಪುತ್ರಿ. ಇವಳ ಸೇವಕಿ ಶ್ಯಾಮಲತೆ **೭೫** : ೮೯೭.

**ಸುರೂಪೆ** – ವಿದ್ಯುದ್ವೇಗ ಖೇಚರ ರಾಜನ ಪುತ್ರಿ. ಮಹೇಂದ್ರ ವಿಕ್ರಮನ ಪತ್ನಿ. ದೀಕ್ಷಿತಳಾಗಿ ಮಹೇಂದ್ರ ಕಲ್ಪದಲ್ಲಿ ಜನಿಸಿದಳು **೭೧** : ೯೧೭–೨೦.

**ಸುಲಕ್ಷಣೆ** – ಅತಿವೇಗ ಖೇಚರನ ಪತ್ನಿ. ಶ್ರೀಧರೆಯ ತಾಯಿ **೫೯** : ೨೨೯.

– ಆರ್ಯಿಕೆ. ಇವರಲ್ಲಿ ಶಾಂತಿಮತಿ ದೀಕ್ಷಿತಳಾದಳು **೬೩** : ೬೨೩.

**ಸುಲಕ್ಷಣಾ** – ಪೌದನಾಪುರದ ರಾಜನಾದ ಸುಸ್ಥಿತನ ರಾಣಿ. ಇವರ ಮಗನೇ ಸುಪ್ರತಿಷ್ಠ **೭೦** : ೧೩೯.

**ಸುಲಸೆ** – ಇವಳ ಸ್ವಯಂವರದಲ್ಲಿ ಸಗರ, ಮಧುಪಿಂಗಲನನ್ನು ಅವಲಕ್ಷಣ ದವನೆಂದು ನಿರಾಕರಿಸಿದನು **೬೭** : ೧೫೮–೯. ರಾಜ ಸುಯೋಧನ ಹಾಗೂ ಅತಿಥಿಯರ ಪುತ್ರಿ. ಈಕೆಯ ಸ್ವಯಂವರ : ೨೧೪.

**ಸುಲೋಚನಾ** – ವಾರಾಣಸಿಯ ಪುರಾಧಿಪತಿ ಅಕಂಪನ ಮತ್ತು ಪ್ರಭಾದೇವಿಯ ಮಗಳು **೪೩** : ೧೩೫. ಈಕೆಯ ದಾದಿ ಸುಮತಿ : ೧೩೭, ಸ್ತ್ರೀ ವರ್ಣನೆ : ೧೩೬–೭೯. ಜಿನೇಂದ್ರನಿಗೆ ಅಭಿಮುಖವಾಗಿ ನಿಂತು ಆಹಾರ ಪರಿತ್ಯಾಗ ಮಾಡಿ, ಯುದ್ಧ ಮುಗಿಯುವವರೆಗೂ ಧ್ಯಾನದಲ್ಲಿದ್ದಳು **೪೫** : ೩, ಪಂಚ ನಮಸ್ಕಾರದೊಡನೆ ಗಂಗಾನದಿ ಪ್ರವೇಶಿಸಿದಳು : ೧೪೭, ಪತಿ ವಿಯೋಗದಿಂದ ದುಃಖಿತಳಾದ ಇವಳಿಗೆ ಭರತ ಚಕ್ರವರ್ತಿಯ ಪತ್ನಿ ಸುಭದ್ರಾದೇವಿ ಸಮಾಧಾನ ಮಾಡುತ್ತಾಳೆ. ಬ್ರಾಹ್ಮಿ ಆರ್ಯಿಕೆಯಲ್ಲಿ ದೀಕ್ಷೆ. ಸ್ತ್ರೀದೇಹ ತ್ಯಜಿಸಿ ಅಚ್ಯುತ ಕಲ್ಪದ ದೇವನಾದಳು **೪೭** : ೨೮೯. ಭವಮಾಲೆ : ರತಿವೇಗೆ – ರತಿಷೇಣೆ (ಪಾರಿವಾಳ) – ಪ್ರಭಾವತಿ – ಸುಲೋಚನೆ **೪೬** : ೧೮೪.

**ಸುವರ್ಣತಿಲಕೆ** – ಅಭಯಘೋಷರಾಜನ ಪತ್ನಿ **೬೩** : ೬೮೦.

**ಸುವ್ರತೆ** – ರಾಜ ಅರ್ಹದ್ದಾಸನ ಪತ್ನಿ. ವೀತಭಯ ರಾಜನ ತಾಯಿ **೫೯** : ೨೭೬–೭.

– ಆರ್ಯಿಕೆ. ಇವರಿಗೆ ಶ್ರೀದತ್ತೆ ಆಹಾರದಾನ ಮಾಡಿದಳು. ವಮನ ವಾಯಿತು. ಶ್ರೀದತ್ತೆಗೆ ಸಮ್ಯಕ್ತ್ವವಿಲ್ಲದುದರಿಂದ ಅಸಹ್ಯಪಟ್ಟಳು **೬೨** : ೪೯೬–೭.

– ಆರ್ಯಿಕೆ. ಕಂಸನಿಂದ ವಿಕಾರಗೊಳಿಸಲ್ಪಟ್ಟ ದೇವಕಿಯ ಸಾಕುಮಗಳು, ಇವರಲ್ಲಿ ದೀಕ್ಷಿತಳಾದಳು **೭೦** : ೪೦೮.

– ಆರ್ಯಿಕೆ. ಇವರಲ್ಲಿ ನಂದಯಶೆ ಹಾಗೂ ರೇವತಿದಾದಿ ಸಂಯಮಗ್ರಹಣ ಮಾಡಿದರು **೭೧** : ೭೮೪.

– ಆರ್ಯಿಕೆ. ಇವರಿಗೆ ಸುಮತಿ ಆಹಾರದಾನ ನೀಡಿ ಉಪವಾಸವ್ರತ ಹಿಡಿದಳು **೭೧** : ೮೬೪.

– ಆರ್ಯಿಕೆ. ಸುಕುಮಾರಿಗೆ ತನ್ನ ಶಿಷ್ಯೆಯರ ಪೂರ್ವಜನ್ಮ ವೃತ್ತಾಂತ ಹೇಳುತ್ತಾಳೆ **೭೨** : ೧೨೦೮.

– ಪುಂಡರೀಕಿಣಿಯ ರಾಜ ಸುಮಿತ್ರನ ಹೆಂಡತಿ **೭೪** : ೨೩೬.

– ಆರ್ಯಿಕೆ. ಇವರಲ್ಲಿ ಪದ್ಮಾವತಿ ಶ್ರೇಷ್ಠಿನಿ ದೀಕ್ಷಿತಳಾದಳು **೭೫** : ೮೬೮.

– ಆರ್ಯಿಕೆ. ಭವದೇವ ಮುನಿ ನಾಗಶ್ರೀಯನ್ನು ಇವರಲ್ಲಿ ವಿಚಾರಿಸುತ್ತಾರೆ **೭೬** : ೧೪೦೫.

**ಸುವೇಗೆ** – ಪವನವೇಗ ಎಂಬ ವಿದ್ಯಾಧರ ರಾಜನ ಪತ್ನಿ. ಮಗ ಮನೋವೇಗ **೭೫** : ೭೧೪.

**ಸುಷೀಮಾದೇವಿ** – ಧರಣ ಮಹಾರಾಜನ ಪತ್ನಿ. ಚಂದ್ರಪ್ರಭ ತೀ.ರ ತಾಯಿ **೫೨** : ೧೯.

**ಸುಷೇಣಾದೇವಿ** – ಶ್ರಾವಸ್ತಿಯ ದೊರೆ ದೃಢರಾಜನ ಪತ್ನಿ. ಶಂಭವ ತೀ.ರ ತಾಯಿ **೪೯** : ೧೫.

**ಸುಷೇಣೆ** – ಪ್ರಿಯಮಿತ್ರೆಯ ಸಖಿ. ಕೋಳಿಕಾಳಗಕ್ಕೆ 'ಘನತುಂಡ' ಹೆಸರಿನ ಕೋಳಿಯನ್ನು ಬಿಟ್ಟಳು **೬೩** : ೬೬೧–೨.

**ಸುಸೀಮೆ** – ರಾಜ ಶ್ರೀವರ್ಮನ ಪತ್ನಿ. ಇವಳ ಪುತ್ರ ಶ್ರೀಧಾಮ **೫೯** : ೨೮೩.

– ಅಚ್ಯುತಕಲ್ಪದ ದೇವಿ. ಪುನರ್ಭವದ ವಸುಂಧರಾ **೪೬** : ೩೫೪.

**ಸುಸೀಮಾ** – ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು **೭೧** : ೬೨೩.

**ಸುಸೀಮಾದೇವಿ** – ಇವಳ ಭವಬಂಧ **೭೧** : ೮೮೧–೯೪ (ಅನುಂದರಿ – ವ್ಯಂತರದೇವತೆ – ಯಕ್ಷದೇವಿ – ಭೋಗಭೂಮಿಜೆ – ನಾಗಕುಮಾರಿ – ಶ್ರೀಕಾಂತೆ – ಮಹೇಂದ್ರಕಲ್ಪದ ದೇವಿ – ಸುಸೀಮಾದೇವಿ).

**ಸೇನಾ** – ವಾಸುಪೂಜ್ಯರ ಮುಖ್ಯ ಆರ್ಯಿಕೆ **೫೮** : ೪೮.

**ಸೋಮಪ್ರಭಾದೇವಿ** – ರಾಜ ಪದ್ಮನಾಭನ ಪತ್ನಿ **೫೪** : ೧೪೧.

**ಸೋಮಶ್ರೀ** – ಚಂಡಕೌಶಿಕನ ಪತ್ನಿ **೬೨** : ೨೦೨.

– ಅಶೋಕರಾಜನ ಪತ್ನಿ **೭೧** : ೮೯೧.

**ಸೋಮಶ್ರೀ** – ಬ್ರಾಹ್ಮಣಿ. ಸೋಮದೇವನ ಪತ್ನಿ **೭೨** : ೧೧೮೭.

– ಸೋಮಶರ್ಮನ ಪುತ್ರಿ. ಶಿವಭೂತಿಯ ಪತ್ನಿ. ಅಣ್ಣ–ತಂಗಿಯರಿಗೆ ಸಂಬಂಧ ಕಲ್ಪಿಸಿ ದೂಷಣೆ ಮಾಡಿದಳು **೭೫** : ೬೨೨–೬. ಶಿವಗುಪ್ತ ಮುನೀಶ್ವರರಿಗೆ ಆಹಾರದಾನ ಮಾಡಿದಳು : ೬೨೭.

**ಸೋಮಾದೇವಿ** – ರಾಜಗೃಹದ ಸುಮಿತ್ರರಾಜನ ಪತ್ನಿ. ಮುನಿ ಸುವ್ರತನಾಥರ ಜನನಿ **೬೭** : ೨೧.

**ಸೋಮಿಲೆ** – ಚಂಪಾಪುರದ ಸೋಮದೇವನೆಂಬ ಬ್ರಾಹ್ಮಣನ ಪತ್ನಿ. ಇವರ ಮಕ್ಕಳು – ಸೋಮದತ್ತ, ಸೋಮಿಲ, ಸೋಮಭೂತಿ **೭೨** : ೧೧೮೭.

**ಸ್ವಯಂಪ್ರಭಾದೇವಿ** – ಲಲಿತಾಂಗದೇವನ ಪತ್ನಿ. ಇವರ ದುಃಖ **೬** : ೫೦–೭.

– ವಾಯುರಥ ವಿದ್ಯಾಧರ ರಾಜನ ಪಟ್ಟಮಹಿಷಿ. ಪ್ರಭಾವತಿಯ ತಾಯಿ **೪೬** : ೧೪೮.

**ಸ್ವಯಂಪ್ರಭೆ** – ತ್ರಿಪೃಷ್ಠನ ಮಹಾದೇವಿ **೫೭** : ೯೪.

– ಜ್ವಲನಜಟಿ, ವಾಯುವೇಗೆಯರ ಪುತ್ರಿ. ಅರ್ಕಕೀರ್ತಿಯ ತಂಗಿ **೬೨** : ೪೩–೪, ವರ್ಣನೆ : ೪೫–೯.

– ಪುಂಡರೀಕಿಣಿಯಲ್ಲಿದ್ದ ತೀರ್ಥಂಕರರು **೭೦** : ೪೧.

– ಅಂಧಕವೃಷ್ಟಿ ರಾಜನ ೩ನೇ ಸೊಸೆ. ಸ್ತಿಮಿತಸಾಗರನ ಪತ್ನಿ **೭೦** : ೯೮.

**ಸ್ವಯಂಪ್ರಭೆ** – ರಾಜ ಸುಕೇತುವಿನ ಪತ್ನಿ. ಸತ್ಯಭಾಮೆಯ ತಾಯಿ **೭೧** : ೮೧೧.

– ಸ್ವಯಂಪ್ರಭ ಎಂಬ ವ್ಯಂತರದೇವನ ಪತ್ನಿ **೭೧** : ೯೪೮.

– ರಥನೂಪುರ ಚಕ್ರವಾಲನಗರದ ಜ್ವಲನಜಟಿಯ ಪುತ್ರಿ **೬೪** : ೧೩೪, ತ್ರಿಪೃಷ್ಠನ ಪತ್ನಿಯಾದಳು : ೧೫೫.

**ಹರಿಷೇಣೆ** – ಶಾಂತಿ ತೀ.ರ ಮುಖ್ಯ ಆರ್ಯಿಕೆ **೬೩** : ೧೦೦೪.

**ಹರಿಶ್ರೀ** – ಶ್ರೀಷೇಣರಾಜನ ಪುತ್ರಿ. ಇವಳ ಸೋದರಿ ಪೂರ್ವಸೇನೆ. ಇಬ್ಬರೂ ಸ್ವಯಂವರ ಮಂಟಪದಲ್ಲಿ ವಿರಕ್ತರಾಗಿ ಸುವ್ರತೆ ಆರ್ಯಿಕೆಯಲ್ಲಿ ಶಿಷ್ಯೆಯರಾಗುತ್ತಾರೆ **೭೨** : ೧೨೧೩.

**ಹಿರಣ್ಯಮತಿ** – ಆದಿತ್ಯಬಲರಾಜನ ಪುತ್ರಿ. ಪೂರ್ಣಚಂದ್ರನ ಪತ್ನಿ **೫೯** : ೨೦೯.

**ಹಿರಣ್ಯಲೋಮೆ** – ಸೋಮಶರ್ಮನ ಪತ್ನಿ. ಚಂದ್ರಾನನೆಯ ತಾಯಿ **೬೨** : ೧೯೦.

**ಹೇಮಾಭೆ** – ಹೇಮಾಭೆ ನಗರದ ರಾಜಪುತ್ರಿ. ಆದೇಶಕ್ಕೆ ಅನುಸಾರವಾಗಿ ಜೀವಂಧರನನ್ನು ಮದುವೆಯಾಗುತ್ತಾಳೆ. ಗುಣಮಿತ್ರ, ಬಹುಮಿತ್ರ, ಸುಮಿತ್ರ, ಧನಮಿತ್ರ – ಇವರು ಅವಳ ಸಹೋದರರು. ಇವರನ್ನು ಸಕಲ ವಿಜ್ಞಾನ ನಿಪುಣರನ್ನಾಗಿ ಜೀವಂಧರ ಮಾಡುತ್ತಾನೆ.

## ದೇಶನಾಮ ಸೂಚಿ.

**(ಕಂಸದಲ್ಲಿರುವ ಮಾಹಿತಿಗಳನ್ನು 'ಮಹಾಪುರಾಣ ಸಾರ' ಎಂಬ ಗ್ರಂಥದ ಪರಿಶಿಷ್ಟ–೧ ರಿಂದ ಸಂಗ್ರಹಿಸಲಾಗಿದೆ. ನ = ನಗರ)**

**ಅಂಗ** – ಭರತಕ್ಷೇತ್ರದ ಒಂದು ದೇಶ. ಇದರ ನಗರ ಚಂಪಾ. (ಮಗಧ ದೇಶದ ಪೂರ್ವಭಾಗಕ್ಕೆ ಅಂಗವೆನ್ನುತ್ತಿದ್ದರು) **೨೯** : ೩೮, **೫೮** : ೧೭, **೬೭** : ೨, **೭೨** : ೧೧೮೬, **೭೫** : ೬೩೧, **೭೬** : ೧೨೪೮.

**ಅಂಗರ** – **೨೯** : ೪೩, **೭೦** : ೩೩೨.

**ಅಂತರಪಾಂಡ್ಯ** – **೨೯** : ೮೦.

**ಅಪರವಿದೇಹ** – ಜಂಬೂದ್ವೀಪದಲ್ಲಿದೆ **೭೦** : ೪.

**ಅಪರಾಂತಕ** – **೧೬** : ೧೫೨–೬.

**ಅಭಿಸಾರ** – **೧೬** : ೧೫೨–೬.

**ಅಮೃತವತಿ** – ವಿಜಯಾರ್ಧಗಿರಿಯ ದಕ್ಷಿಣ ಶ್ರೇಣಿಯ ದೇಶ. ಇದರ ನಗರ ಮೇಘಕೂಟ **೭೨** : ೧೦೧೩.

**ಅಲಕ** – ಭರತಕ್ಷೇತ್ರದಲ್ಲಿದೆ **೫೪** : ೮೬.

**ಅವಂತಿ** – **೭೧** : ೭೦೫ (ಉಜ್ಜಯಿನಿಯ ಸುತ್ತಲೂ ಇರುವ ಪ್ರದೇಶಕ್ಕೆ ಅವಂತಿ ಎಂದು ಹೆಸರು. ಉಜ್ಜಯಿನಿಗೆ ಅವಂತಿ ನಗರವೆಂದು ಹೆಸರಿದೆ) **೭೫** : ೬೪೪.

**ಅಶ್ಮಕ** – **೧೬** : ೧೫೨–೬.

**ಆಂಧ್ರ** – **೧೬** : ೧೫೨–೬ ; **೨೯** : ೭೯. (ಗೋದಾವರಿ, ಕೃಷ್ಣಾ ನದಿಗಳ ಮಧ್ಯದ ಭಾಗ. ಇದರ ರಾಜಧಾನಿ ಶ್ರೀಆಂಧ್ರ ನಗರ (ವೆಂಗಿ). ಇದರ ಬಹುಭಾಗ ಭಾಗ್ಯಪುರ ಸೀಮೆಗೆ ಸೇರಿತ್ತು. ಇದಕ್ಕೇನೇ ತ್ರೈಲಿಂಗ (ತೆಲಂಗ) ದೇಶವೆಂದು ಹೇಳುವರು).

**ಆವರ್ತ** – **೧೬** : ೧೫೨–೬ (ಗುರ್ಜರ–ಗುಜರಾಥ–ದಲ್ಲಿ ಹಿಂದಿನ ಕಾಲದಲ್ಲಿ ಮೂರು ಭಾಗಗಳು ಇದ್ದುವು: ೧ ಆನರ್ತ. ೨ ಸುರಾಷ್ಟ್ರ(ಕಾಠೇವಾಡ) ಮತ್ತು ೩ ಲಾಟ. ಆನರ್ತವು ಗುಜರಾಥದ ಉತ್ತರ ಭಾಗವಾಗಿದೆ. ದ್ವಾರಾವತಿಯು ಇದರ ಮುಖ್ಯ ನಗರ).

**ಆಭೀರ** – **೧೬** : ೧೫೨–೬.

**ಆರಟ್ಟ** – **೧೬** : ೧೫೨–೬ ; ಈ ದೇಶ ಕುದುರೆಗಳಿಗೆ ಪ್ರಸಿದ್ಧಿ **೩೦** : ೧೦೭.

**ಆವರ್ತ** – ೩೨ ಪ್ರಖ್ಯಾತ ದೇಶಗಳಲ್ಲಿ ಒಂದು **೬೩** : ೭೧೯–೨೩.

**ಉತ್ತರಕುರು** – ಇಂದೊಂದು ಉತ್ತಮ ಭೋಗಭೂಮಿ. ಮಹಾಮೇರು ಪರ್ವತದ ಉತ್ತರ ದಿಕ್ಕಿನಲ್ಲಿದೆ **೯** : ೩೪. ವರ್ಣನೆ **೯** : ೫೨–೮೯.

**ಉತ್ಪಲಖೇಟ** – **೮** : ೨೫೪.

**ಉಶೀನರ** – **೨೯** : ೪೨.

**ಐರಾವತಕ್ಷೇತ್ರ** – **೬೨** : ೧೯, ನಗರ ಪದ್ಮಿನೀಖೇಟ **೬೩** : ೭೭೩–೪, ಸಪ್ತಕ್ಷೇತ್ರಗಳಲ್ಲಿ ಒಂದು **೬೩** : ೭೦೨.

**ಐರಾವತ** – ಧಾತಕೀಖಂಡ ದ್ವೀಪದ ದೇಶ. ಇದರ ನಗರ ಶಂಖಪುರ **೬೩** : ೭೫೭; ಜಂಬೂದ್ವೀಪದ ಉತ್ತರ ಭಾಗದ ಒಂದು ಭೂಭಾಗ **೬೯** : ೭೪.

**ಓಂಡ್ರ** – **೨೯** : ೪೧, ೭೯.

**ಓಲಿಕ** – **೨೯** : ೮೦.

**ಕಚ್ಛ** – ಪೂರ್ವವಿದೇಹದ ದೇಶ. ಆದರ ನಗರ ಅರಿಷ್ಟ ೫–೧೯೩, **೨೯** : ೪೧, ೭೯. (ಪಶ್ಚಿಮ ಸಮುದ್ರದ ತೀರಪ್ರದೇಶಕ್ಕೆ ಕಚ್ಛವೆಂದು ಹೆಸರಿತ್ತು. ಇದು ಕಾಠೇವಾಡ ಎಂಬ ಹೆಸರಿನಿಂದ ಈಗಲೂ ಪ್ರಸಿದ್ಧವಾಗಿದೆ), ಪೂರ್ವವಿದೇಹದ ಸೀತಾನದಿಯ ಉತ್ತರ ದಿಕ್ಕಿನ ತಟದಲ್ಲಿರುವ ದೇಶ. ಇದರ ನಗರ ಕ್ಷೇಮಪುರ **೪೯** : ೨, **೬೫** : ೨ ; ಇದರ ನಗರ ರೋರುಕ **೭೫** : ೫೬೦.

**ಕಚ್ಛಕಾವತಿ** – ಇದರ ನಗರ ವೀತಶೋಕಪುರ **೬೬** : ೨, **೪೭** : ೭೫.

**ಕರ್ಣಾಟ** – **೧೬** : ೧೫೨–೬ (ಇದು ಆಂಧ್ರದೇಶದ ದಕ್ಷಿಣ ಹಾಗೂ ಪಶ್ಚಿಮ ಭಾಗಗಳಲ್ಲಿ ಹಬ್ಬಿತ್ತು. ಬನವಾಸ ಮತ್ತು ಮಹಿಷಗ ಇದರಲ್ಲಿ ಸಮಾವೇಶವಾಗುತ್ತಿದ್ದವು).

**ಕರ್ಣಾಟಕ** – **೨೯** : ೯೧.

**ಕರಹಾಟ** – **೧೬** : ೧೫೨–೬.

**ಕಲಿಂಗ** – ಇದರ ನಗರ ದಂತಪುರ **೭೦** : ೬೫ ; **೨೯** : ೩೮,೪೩ ; **೭೦** : ೧೨೭, ೩೩೨. (ಮದ್ರಾಸ ಪ್ರಾಂತದ ಉತ್ತರ ಭಾಗ ಮತ್ತು ಉತ್ಕಲದ (ಓಡಿಸಾ) ದಕ್ಷಿಣ ಭಾಗ ಸೇರಿ ಪ್ರಾಚೀನ ಕಾಲದ ಕಳಿಂಗ ದೇಶವಾಗಿತ್ತು. ಇದರ ರಾಜಧಾನಿ ಕಲಿಂಗ ನಗರ. ಆದಕ್ಕೆ ಈಗ ರಾಜಮಹೇಂದ್ರಿ ಎಂದೂ ಹೆಸರು).

**ಕಶಾರ್ಥ** – ಇದರ ಪ್ರಸಿದ್ಧ ನಗರ ಶೌರ್ಯಪುರ **೭೦** : ೯೨.

**ಕಾಂಭೋಜ** – **೧೬** : ೧೫೨–೬ ; ಕುದುರೆಗಳಿಗೆ ಪ್ರಸಿದ್ಧಿ **೩೦** : ೧೦೬–೮. (ಇದರ ಈಗಿನ ಹೆಸರು ಬಲೂಚಿಸ್ತಾನ).

**ಕಾಮರೂಪ** – **೨೯** : ೪೨.

**ಕಾಲಕೂಟ** – **೨೯** : ೪೮.

**ಕಾಶಿ** – ಭರತಕ್ಷೇತ್ರದ ದೇಶ **೨೯** : ೪೦, **೪೩** : ೧೨೧, ಇದರ ನಗರ ವಾರಾಣಸಿ **೪೩** : ೧೨೪, **೫೩** : ೧೮, **೬೦** : ೭೦, **೭೩** : ೭೪.

**ಕಾಶ್ಮೀರ** – **೨೯** : ೪೨.

**ಕಾಲಿಂದ** – **೨೯** : ೪೮.

**ಕಿರಾತ** – **೨೯** : ೪೮.

**ಕುನಾಲ** – ಭರತವರ್ಷದಲ್ಲಿದೆ. ಇದರ ನಗರ ಸ್ರಾವಸ್ತಿ **೫೯** : ೭೨.

**ಕುಡುಂಬ** – **೨೯** : ೮೦.

**ಕುಮುದಾ** – ೩೨ ಪ್ರಖ್ಯಾತ ದೇಶಗಳಲ್ಲಿ ಒಂದು **೬೩** : ೭೧೯–೨೩.

**ಕುರು** – **೨೯** : ೪೦, **೭೦** : ೨೦೦ (ಇದು ಸರಸ್ವತಿ ನದಿಯ ಎಡ ದಂಡೆಯ ಮೇಲೆ ಹಬ್ಬಿದ ವಿಶಾಲವಾದ ಪ್ರದೇಶವಾಗಿದೆ. ಇದಕ್ಕೆ ಕುರುಜಾಂಗಲವೆಂದೂ ಹೆಸರಿದೆ. ಇದರ ರಾಜಧಾನಿ ಹಸ್ತಿನಾಪುರ).

**ಕುರುಜಾಂಗಲ** – **೨೦** : ೨೯ (ನೋ : ಕುರು) **೪೩** : ೭೪, **೪೫** : ೧೬೯, **೬೧** : ೭೪, **೬೩** : ೮೫೩. ವರ್ಣನೆ : ೮೫೪–೭೪, **೬೪** : ೧೨, **೭೧** : ೭೫೭.

**ಕೇಕಯ** – **೧೬** : ೧೫೨–೬ (ಪಂಜಾಬ ಪ್ರಾಂತದ ವಿತಸ್ತಾ (ಝೇಲಮ್) ಹಾಗೂ ಚಂದ್ರಭಾಗಾ (ಚನಾಬ) ನದಿಗಳ ಮಧ್ಯಭಾಗವು ಮೊದಲು ಕೇಕಯ ಎಂದು ಹೆಸರಾಗಿತ್ತು. ಇಂದಿನ ಜಲಾಲಪುರವು ಗಿರಿವ್ರಜವೆಂಬ ಹೆಸರಿನಿಂದ ಅಂದಿನ ರಾಜಧಾನಿ ಆಗಿತ್ತು).

**ಕೇರಲ** – **೨೯** : ೭೯, **೪೩** : ೨೬೯ (ಕೃಷ್ಣಾ ಹಾಗೂ ತುಂಗಭದ್ರಾ ನದಿಗಳ ದಕ್ಷಿಣ ಭಾಗದಲ್ಲಿರುವ ಭೂ ಪ್ರದೇಶ. ಇದಕ್ಕೆ ಪ್ರಾಚೀನ ಕಾಲದಲ್ಲಿ ಪಾಂಡ್ಯ, ಕೇರಳ, ಸತೀಪುತ್ರ ಎಂಬ ಹೆಸರುಗಳಿದ್ದವು).

